



| ಸಂಪುಟ ೮ | ಧಾರವಾಡ ತಾರೀಖು ೧೬-೧೧-೧೯೨೯; ಕಾರ್ತೀಕ ಶು|೧೫ ಚಾ. ವಿಕ್ರಮ ವರ್ಷ ೮೫೪<br>ಗೌರೀಹುಣ್ಣಿವೆ. | ಸಂಚಿಕೆ ೧ |
|---|---|---|

ಸಂಸ್ಥಾಪಕರು :— ಶ್ರೀ ಆಲೂರ ವೆಂಕಟರಾಯರು, ಎಲ್ ಎಲ್. ಬಿ.

ಸಂಪಾದಕರು :— ಬೇಂದ್ರೆ ದತ್ತರಾಯರು, ಬಿ. ಎ.

# ವಿಷಯಾನುಕ್ರಮಣಿಕೆ

# ಜಯಕರ್ನಾಟಕ

## ನವೆಂಬರ ೧೯೩೦ರಿಂದ ೯ನೆಯ ವರುಷ ಆರಂಭವಾಯಿತು

### ಮುಂದಿನ ವರುಷದ ವಿಶೇಷವೇನು ?

೧ ಹೊಸ ಹೊಸ ಚಿತ್ರಗಳು ! ಕನ್ನಡ ಶಿಲ್ಪಿಗಳ ಚಿತ್ರಕೌಶಲ್ಯ !

೨ ಕನ್ನಡ ನುಡಿಯಲ್ಲಿಯೆ ಹೊಸಬಗೆಯವೆನಿಸುವ ವಿವಿಧ ಹಾಸ್ಯವಿನೋದದ ಲೇಖಗಳು.

೩ ಪ್ರಪಂಚ ಪರಿಚಯದಲ್ಲಿ ಕನ್ನಡ, ಇಂಗ್ಲಿಷ, ಮರಾಠಿ, ಹಿಂದೀ, ಮತ್ತು ಬಂಗಾಳಿ ಭಾಷೆಗಳ ಮಹತ್ವದ ಪತ್ರಿಕೆಯೊಳಗಿನ ಸ್ಮರಣೀಯಾಂಶಗಳನ್ನು ಸಂಗ್ರಹಿಸಿ ಪ್ರತಿತಿಂಗಳೂ ಕೊಡಲಾಗುವುದು. ಈ ವಿಭಾಗವನ್ನಷ್ಟೇ ಓದಿದರೂ ಸಹ ಅನೇಕ ವಿಷಯಗಳ ಜ್ಞಾನವಾಗುವುದು. ೫॥ ರೂ.ಗಳಲ್ಲಿ ಇಷ್ಟು ಪತ್ರಿಕೆಗಳ ಪರಿಚಯದ ಲಾಭವು ಎಂದೂ ಸಿಗಲಾರದು.

೪ ಅಖಿಲ ಕರ್ನಾಟಕದ ವಿದ್ವಾಂಸರ ಮಹತ್ವದ ಲೇಖಗಳು ! ಇದಲ್ಲದೆ ಬರುವ ವರುಷದಿಂದ ಜರ್ಮನಿಯ ಮತ್ತು ಇಂಗ್ಲಂಡದ ನಮ್ಮ ಸ್ನೇಹಿತರಿಂದ ಮಹತ್ವದ ಲೇಖಗಳು ಬರಲಿವೆ.

ನಾಳಿನ ೧ನೆಯ ( ನವಂಬರ ) ಸಂಚಿಕೆಯನ್ನು ಓದಲು ಮರೆಯಬೇಡಿರಿ. ವಿವಿಧ ಚಿತ್ರಗಳು, ವಿವಿಧ ಲೇಖಗಳು ಬರಲಿವೆ. ವಾರ್ಷಿಕ ಚಂದಾ ೫—೮—೦; ೬ ತಿಂಗಳಿಗೆ ೩—೦—೦

### ಜಯಕರ್ನಾಟಕದ ಬಗ್ಗೆ ಕೆಲವು ಅಭಿಪ್ರಾಯಗಳು

"ಜಯಕರ್ನಾಟಕವು ನಮ್ಮ ನಾಡಿನ ಸಂಸ್ಕೃತಿಪುನರುದ್ಧಾರದ ಕಾರ್ಯವನ್ನು ಕೈಕೊಂಡು ಸುಂದರವಾಗಿ ಕೆಲಸವನ್ನು ನಡಿಸಿದೆ." —ಮುಂಬೈ ಕ್ರಾನಿಕಲ್ ಪತ್ರಿಕೆ

ಮದರಾಸಿನ ತ್ರಿವೇಣಿ ಎಂಬ ಇಂಗ್ಲಿಷ ಪತ್ರಿಕೆಯ ಮಾನ್ಯ ಸಂಪಾದಕರಾದ ಕೆ. ರಾಮಕೋಟೇಶ್ವರರಾಯರು B. A. B. L. ಇವರು ಅಬಿಪ್ರಾಯ ಪಡುವುದೇನಂದರೆ:—

"ಕೆಲವು ಗೆಳೆಯರು ಕೂಡಿ, ಒಳ್ಳೆ ಸ್ವಾರ್ಥತ್ಯಾಗದಿಂದ ಈ ಪತ್ರಿಕೆಯನ್ನು ನಡಿಸಿದ್ದಾರೆ. ಇಂಗ್ಲಿಷ ಭಾಷೆಯೊಳಗಿನ ಶ್ರೇಷ್ಠ ಪತ್ರಿಕೆಗಳ ಮಾಲಿಕೆಯಲ್ಲಿ ಎಣಿಸಲ್ಪಡುವಂತೆ ಸರ್ವಾಂಗ ಸುಂದರವಾಗಿ ನಡಿಸಿದ ಈ ಪತ್ರಿಕೆಯು ಯಶಸ್ವಿಯಾಗಲೆಂದು ಹಾರೈಸುತ್ತೇವೆ." —Triveni ( Madras )

ಅಲ್ಲದೆ ಲಂಡನ್, ಕಲಕತ್ತಾ, ರಂಗೂನ, ಆಗ್ರಾ, ಕಾಶಿ, ಕಾನಪೂರ ಮೊದಲಾದ ಸ್ಥಳಗಳಲ್ಲಿರುವ ಹಲವು ಸದ್ಗೃಸ್ಥರ ಪ್ರಶಂಸಾಪರ ಪತ್ರಗಳೂ ಬಂದಿವೆ.

---

### ನಮ್ಮ ಚಂದಾದಾರರಲ್ಲಿ ಪ್ರಾರ್ಥನೆ

ಈ ಸಂಚಿಕೆಗೆ ೮ ನೆಯ ಸಂಪುಟದ ೧೨ ಸಂಚಿಕೆಗಳು ಹೊರಟಂತಾಯಿತು. ೧೨ ನೆಯ ಸಂಚಿಕೆಗೆ ಚಂದಾ ಮುಗಿಯುವವರೆಲ್ಲ ರೂ. ೫—೮—೦ ಹಣವನ್ನು ಅಕ್ಟೋಬರ ೨೫ ರೊಳಗಾಗಿ ಮುಂಗಡವಾಗಿ ಮನಿಆರ್ಡರದಿಂದ ಕಳಿಸಬೇಕೆಂದು ಪ್ರಾರ್ಥಿಸುತ್ತೇವೆ. ಇಲ್ಲದಿದ್ದರೆ ೧ ನೆಯ ಸಂಚಿಕೆಯು ವ್ಹಿ ಪಿ ಯಿಂದ ಕಳಿಸಲಾಗುವದು. ದಯವಿಟ್ಟು ಸ್ವೀಕರಿಸಬೇಕು.

ವ್ಯವಸ್ಥಾಪಕ— ಜಯಕರ್ನಾಟಕ ಕಾರ್ಯಾಲಯ, ಧಾರವಾಡ

# ನಂಮ ಬಳಗ

( ಬರೆಹಗಾರರು )

---

# ಬರೆಹಗಳು

# ಈ ವರ್ಷದ ಚಿತ್ರಗಳು

( ಮೊದಲಿದ್ದುದು ಆ ಆ ಸಂಚಿಕೆಯ ಮುಖಚಿತ್ರವು )

ಸಂಚಿಕೆ ೭

ಮಹಾತ್ಮಾ ಗಾಂಧಿಯವರು (ನಗುತ್ತಿರುವುದು)



ಸಂಚಿಕೆ ೮

ಮಹಾರಾಣಾ ಪ್ರತಾಪಸಿಂಹ

ಶಿಲ್ಪಿ: ಶ್ರೀ. ಶಿವರಾಮಶಾಸ್ತ್ರಿ (ಕೊಪ್ಪಳ)



ಸಂಚಿಕೆ ೯

ಮಯೂರ ನಾಟ್ಯ

ಶಿಲ್ಪಿ: ಶ್ರೀ ನಾರಾಯಣ ಸಾಗವ (ಶಾಂತಿನಿಕೇತನ)



ಸಂಚಿಕೆ ೧೦

ಕೇದಿಗೆಯ ಬನದಲ್ಲಿ

ಚಿತ್ರಶಿಲ್ಪಿ: ಹಂಜಿ ರುದ್ರಪ್ಪನವರು (ಶಾಂತಿನಿಕೇತನ)



ಸಂಚಿಕೆ ೧೧

ಶ್ರೀಮದಾದ್ಯ ಶಂಕರಾಚಾರ್ಯರು

ಮೂರ್ತಿಶಿಲ್ಪಿ: ಶ್ರೀ. ಎನ್. ಎನ್. ಹಂಪಸಾಗರ (ರಾಣಿಬೆನ್ನೂರ)

ಓಂ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು

---

ಆಧುನಿಕ ಔದ್ಯೋಗಿಕ ಯಂತ್ರಗಳು

## ಆಡ್‌ಲರ

ಶಿಂಪಿಗತನ ಮತ್ತು ಶಿಲ್ಪಿಗತನಕ್ಕಾಗಿ

ನಾಮನ್ ಹೊಲಿಗೆಯ ಯಂತ್ರಗಳು

ಸಿಂಗರ, ಕಾಫ ಮತ್ತು ಉಳಿದ ಪ್ರತಿಯೊಂದು ಪ್ರಕಾರದ ಯಂತ್ರಗಳ ಬಿಡಿಭಾಗಗಳು ದೊರೆವ ಮುಖ್ಯ ಸ್ಥಳ.

**ಎಸ್, ಪಾಂಡುರಂಗ ಮತ್ತು ಕಂ.**

ಗಿರಗಾಂವ, ಮುಂಬೈ

(ಪತ್ರವ್ಯವಹಾರ ಇಂಗ್ಲಿಷ, ಹಿಂದಿ, ಗುಜರಾತಿ, ಮರಾಠಿ)

## ಆಡ್‌ಲರ ಹೊಲಿಗೆ ಯಂತ್ರಗಳು

ಇವನ್ನೇ ಪ್ರತಿಯೊಬ್ಬರು ಪಾಸ ಮಾಡುತ್ತಾರೆ

ಏಜನ್ಸಿ ಸಲುವಾಗಿ ದಾಖಲೆ ಸಹಿತ ಬರೆಯಿರಿ

ಉತ್ತಮ ಉಕ್ಕಿನ ಕತ್ತರಿಗಳು, ಚಾಕು, ಚೂರಿ, ರೇಝುರು (ಕತ್ತಿ)

ಕಿರುಕುಳ ಅಥವಾ ತೋಕ

**ದಿ. ಬೊಂಬೆ ಸೋಯಿಂಗ ಮಸಿನ ಮಾರ್ಟ**

ಕಾಳಬಾದೇವಿ ರೋಡ, ಮುಂಬೈ ನಂ ೩

(ಪತ್ರವ್ಯವಹಾರ ಇಂಗ್ಲಿಷ, ಮರಾಠಿ, ಗುಜರಾಥಿ, ಹಿಂದಿ)

## ವಿಶ್ವಕರ್ಣಾಟಕ

ಸಂಪಾದಕ:—ತಿರುಮಲೆ ತಾತಾಚಾರ್ಯ ಶರ್ಮ

ಭವ್ಯ ಕರ್ನಾಟಕದ ವಿಶ್ವರೂಪ ದರ್ಶನಕ್ಕಾಗಿ ಹೆಣಗಾಡುತ್ತಿರುವ ವಾರಪತ್ರಿಕೆ ಭಾರತೀಯ ಸ್ವಾತಂತ್ರ್ಯಕ್ಕಾಗಿ ಸನೆಯುತ್ತಿರುವ ರಾಷ್ಟ್ರೀಯ ಪತ್ರಿಕೆ. ಮೈಸೂರು ಸೀಮೆಯ ವೃತ್ತಾಂತ ವಿಶೇಷಗಳನ್ನು ನಿರ್ಭಯವಾಗಿ ಚರ್ಚಿಸುವ ಪ್ರಧಾನ ಪತ್ರಿಕೆ.

**ವಿಶ್ವಕರ್ಣಾಟಕ ಕಾರ್ಯಾಲಯ,**

ಬೆಂಗಳೂರು ನಗರ

ಅಂದವಾದ ಮುದ್ರಣ ಸುಂದರವಾದ ಭಾಷೆ

## ರಾಷ್ಟ್ರಬಂಧು

(ಉಜ್ವಲ ವಿಚಾರಗಳ ರಾಷ್ಟ್ರೀಯ ವಾರ ಪತ್ರಿಕೆ)

**ಸುಪ್ರಸಿದ್ಧ ಕವಿಗಳೂ ಸಾಹಿತಿಗಳೂ ಶ್ರೀ ಕ. ಶಂಕರ ಭಟ್ಟರು, ಸಂಪಾದಕರು:—**ಕರ್ನಾಟಕದ ಎಲ್ಲ ಭಾಗಗಳ ಸುದ್ದಿಯೋಲೆಗಳು ಬರುವವು. ಮಹತ್ವದ ವಿಮರ್ಶೆ, ಕಥೆ, ಕವಿತೆಗಳನ್ನುಳ್ಳ ಸಾಹಿತ್ಯದ ಮೇಲ್ಸಂಚಿಕೆಯು ಕೊಡಲ್ಪಡುವುದು. ವಾರ್ಷಿಕ ಚಂದಾ ೩ರೂ. ೮ ಆಣೆ ಮಾತ್ರ.

ವ್ಯವಸ್ಥಾಪಕ, ರಾಷ್ಟ್ರಬಂಧು ಕಾರ್ಯಾಲಯ, ಮಂಗಳೂರ

ಬೆಲೆ ೦-೬-೦ ಮಾತ್ರ

## ಸರಸ್ವತಿಯ ವಿಶೇಷ ಸಂಚಿಕೆ

ಟಪ್ಪಾಲ ಹಾಸಲು ಪ್ರತ್ಯೇಕ

"ಸರಸ್ವತಿಯು" ವಿಶೇಷ ಸಂಚಿಕೆಯೊಂದು ಆಶ್ವಯುಜ ಮಾಸದಲ್ಲಿ ನವರಾತ್ರಿಯ "ಸರಸ್ವತೀ ಪೂಜೆ"ಯ ದಿನ ಪ್ರಕಟಿಸಲ್ಪಡುವುದು. ಭರತಖಂಡದ ಪ್ರಖ್ಯಾತ ಮಹಿಳೆಯರ ಭಾವಚಿತ್ರಗಳಿಂದಲೂ ಉತ್ತಮ ಲೇಖನಗಳಿಂದಲೂ ಕೂಡಿ ಮನೋಹರವಾಗಿರುವುದು. ಶ್ರೀ ಪಡುಕೋಣೆ ಸೀತಾದೇವಿ, ಡಾಕ್ಟರ ಮುತ್ತುಲಕ್ಷ್ಮಿ ರೆಡ್ಡಿಯವರು, ಶ್ರೀ. ಸಿ. ಕೆ. ವೆಂಕಟರಾಮಯ್ಯ ಎಂ. ಎ. ಬಿ. ಎಲ್. ಅವರು, ಶ್ರೀ. ಬೇಂದ್ರೆ ದತ್ತಾತ್ರೇಯರಾಯರು, ಶ್ರೀ. ಕಡೆಂಗೋಡ್ಲು ಶಂಕರಭಟ್ಟರು, ಪಂಡಿತ ತಾರಾನಾಥರು, ಇವರೇ ಮೊದಲಾದ ಕರ್ನಾಟಕದ ಸುಪ್ರಸಿದ್ಧ ಲೇಖಕ ಲೇಖಿಕೆಯರಿಂದ ಬರೆಯಲ್ಪಟ್ಟ ಲೇಖನಗಳು ಪ್ರಕಟವಾಗುವವು. "ಸರಸ್ವತಿ"ಯು ಭರತಖಂಡದ ಎಲ್ಲ ಭಾಗಗಳಲ್ಲಿಯೂ ಪ್ರಚಾರದಲ್ಲಿರುವುದರಿಂದಲೂ, ವಿಶೇಷ ಸಂಚಿಕೆಯು ಸಾವಿರಾರು ಮಂದಿಯ ಕೈಸೇರುವುದರಿಂದಲೂ ಪ್ರಕಟನೆಗೆ ಅತ್ಯುತ್ತಮವಾದದ್ದು.

ಜಾಹೀರಾತಿನ ದರ ೧ ಪುಟಕ್ಕೆ ೧೪ ರೂ, ಕಾಲು ಪುಟಕ್ಕೆ ೪ ರೂ, ೩ ಪುಟಕ್ಕೆ ೮ ರೂ, ವಿಳಾಸ ಮಾತ್ರಕ್ಕೆ ೨ ರೂ. ಒಟ್ಟಿನ ಮೇಲೆ ಮತ್ತು ಇತರ ಭಾಗಗಳಲ್ಲಿಯ ಪ್ರಕಟನೆಗೆ ಹೆಚ್ಚು ಕೊಡಬೇಕು. ಕೂಡಲೇ ಬರೆಯಿರಿ.

ವಿಳಾಸ— ಸರಸ್ವತೀ ಕಾರ್ಯಾಲಯ, ಚಾಮರಾಜಪೇಟೆ, ಬೆಂಗಳೂರು ನಗರ

ಮುದ್ರಕರು—ಖಂ. ರಾ. ಭಿಸೆ, ಕ. ಪ್ರಿಂ. ವ. ಧಾರವಾಡ, ೯೨೫, ೩೦



ಒಡನಾಡಿಗಳು

ಶಿಲ್ಪಿ :—ಶ್ರೀ ಕೇಶವರಾವ (ಶಾಂತಿನಿಕೇತನ)

Jai Karnatak


# ಜಯ ಕರ್ನಾಟಕ




ॐ सहनाववतु सहनौ भुनक्तु । सह वीर्यं करवावहै ॥
तेजस्विना वधीतमस्तु मा विद्विषावहै ॥ ॐ शान्ति ॥ ३ ॥

— श्रुति


ಸಂಪುಟ ೮ 8 | ಶುಕ್ಲನಾಮ ಸಂವತ್ಸರ, ಗೌರಿಯ ಹುಣ್ಣಿವೆ
ಚಾಲುಕ್ಯವಿಕ್ರಮ ವರ್ಷ ೮೫೪, ೧೬ನೆಯ ನವ್ಹೆಂಬರ ೧೯೨೯. 1929 | ಸಂಚಿಕೆ ೧


## ಹಕ್ಕಿಹಾರುತಿದೆ ನೋಡಿದಿರಾ ?

ಇರುಳಿರುಳಳಿದೂ ದಿನದಿನ ಬೆಳಗೆ
ಸುತ್ತು ಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿಹಾರುತಿದೆ ನೋಡಿದಿರಾ ?

ಕರಿನೆರೆ ಬಣ್ಣದ ಪುಚ್ಚಗಳುಂಟು
ಬಿಳಿಹೊಳೆ ಬಣ್ಣದ ಗರಿಗರಿಯುಂಟು
ಕೆನ್ನನ ಹೊನ್ನನ ಬಣ್ಣಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿಹಾಡುತಿದೆ ನೋಡಿದಿರಾ ?

ನೀಲ ಮೇಘಮಂಡಲ ಸಮಬಣ್ಣ.
ಮುಗಿಲಿಗೆ ರೆಕ್ಕೆಗಳೊಡೆದುವೊ ಅಣ್ಣಾ
ಚಿಕ್ಕೆಯ ಮಾಲೆಯ ಸೆಕ್ಕಿಸಿಕೊಂಡು
ಸೂರ್ಯ ಚಂದ್ರರನು ಮಾಡಿದೆಕಣ್ಣಾ
ಹಕ್ಕಿಹಾರುತಿದೆ ನೋಡಿದಿರಾ ?

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲಗಿಂಡಲಗಳ ಗಡಮುಕ್ಕಿ
ತೇಲಿಸಿ ಮುಳುಗಿಸಿ ಖಂಡ ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿಹಾರುತ್ತಿದೆ ನೋಡಿದಿರಾ ?

ಯುಗಯುಗಗಳ ಹಣೆ ಬರಹವ ಒರಿಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸು ಮಕ್ಕಳ ಹರಸಿ
ಹಕ್ಕಿಹಾರುತಿದೆ ನೋಡಿದಿರಾ ?

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳನೂರಿನ ನೀರಸು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳ ಲೋಕದ ಅಂಗಳಕೇರಿ
ಹಕ್ಕಿಹಾರುತಿದೆ ನೋಡಿದಿರಾ ?

ಮುಟ್ಟದೆ ದಿಙ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನ್ನು ಒಡೆಯಲು ಎಂದೊ ?
ಬಲ್ಲರು ಯಾರಾ ಹಾಕಿದ ಹೊಂಚ
ಹಕ್ಕಿಹಾಡುತಿದೆ ನೋಡಿದಿರಾ ?

— ಅಂಬಿಕಾತನಯದತ್ತ,

# ನಮ್ಮ ಗುರಿ

ಲೇಖಕ:— ದ. ರಾ. ಬೇಂದ್ರೆ, ಸಂಪಾದಕ.

'ಜಯಕರ್ನಾಟಕ'ದ ಪುನರ್ಜನ್ಮ:— ಆ ಮಾತಿಗೆ ಈಗ ಏಳು ವರ್ಷಗಳಾದವು; ಪಂಪನ ಜನ್ಮಕ್ಕಾಗಿ ಹೆಸರಾದ ದುಂದುಭಿ ಸಂವತ್ಸರ. ಪ್ರಖ್ಯಾತ ಲೇಖಕರ ಲೇಖನಗಳನ್ನು ಅಣಿಮಾಡಿಕೊಂಡು ಶ್ರೀಮಾನ್ ಆಲೂರ ವೆಂಕಟರಾಯರು ಹಸುಗೂಸನ್ನು ತೊಡೆಯಲ್ಲಿರಿಸಿದ ಕೂಸಿನ-ತಾಯಿಯಂತೆ ಹರ್ಷ-ಗಾಂಭೀರ್ಯಾದಿಗಳಿಂದೊಡಗೂಡಿ ಸಾಧನಕೇರಿಯ ತಮ್ಮ ಸಂಪಾದಕೀಯ ಪ್ರಸೂತಿಗ್ರಹದಲ್ಲಿ ಕುಳಿತಿದ್ದಾರೆ. ಸುತ್ತಲೂ ಈಗಿನ 'ಜಯಕರ್ನಾಟಕ' ಮಂಡಲದ ಬಳಗ. ಎಲ್ಲರಿಗೂ ಒಂದೇ ಚಿಂತೆ, ಒಂದೇ ವಿಚಾರ: ಈ ಕೂಸಿಗೆ ಹೆಸರನ್ನೇನಿಡಬೇಕು ? ಆ ಹೆಸರಾಯಿತು, ಈ ಹೆಸರಾಯಿತು. ಹೆಸರಿಗೆ, ಮಂದಿ ಹೆಸರಿಡಬಾರದು. ತನ್ನ ಹೆಸರಿನಿಂದ ಇದು ಸಾರ್ಥವಾಗಿ ನಾಮಾಂಕಿತವಾಗಬೇಕು; ಇದರ ಹೆಸರು ರೂಢಿಯ ರೂಢನಾಮವಾಗಬಾರದು ? ಹೀಗೆ ಧೇನಿಸುತ್ತಿರುವಾಗ ಧಾರವಾಡದಲ್ಲಿ ಕೂಡಿದ ಅಖಿಲ ಕರ್ನಾಟಕದ ಪ್ರಥಮ ರಾಜಕೀಯ ಪರಿಷತ್ತಿನಲ್ಲಿ ಸಹಸ್ರಶೀರ್ಷ ಸಹಸ್ರಾಕ್ಷವಾಗಿ ನಿಂತ ಕರ್ನಾಟಕದಿದಿರು ಶ್ರೀಮಾನ್ ದಿವಾಣ ಮಾಧವರಾಯರು 'ಜಯಕರ್ನಾಟಕ'ವೆಂದು ಘೋಷಿಸಿದ್ದುದು ಎಲ್ಲರಿಗೂ ನೆನಪಾಯಿತು. ಪರಸ್ಥಳದಲ್ಲಿದ್ದ ನಮ್ಮ ಆಪ್ತೇಷ್ಟರ ಬಾಯಿಂದಲೂ 'ಜಯಕರ್ನಾಟಕ'ವೆಂಬ ಗರ್ಜನೆಯೇ ಕೇಳಬಂದಿತು. ಎಲ್ಲರೂ ಕೂಸಿನ ಕಿವಿಯಲ್ಲಿ ಕೂಗಿದೆವು. 'ಜಯಕರ್ನಾಟಕ' 'ಜಯಕರ್ನಾಟಕ'ವೆಂದು. ಅಂದು ಕಿವಿಯಲ್ಲಾಡಿದ ಮಾತು ಇಂದು ಎಲ್ಲರ ಬಾಯಲ್ಲೂ ಮೂಡುತ್ತಿದೆ, ಮೊಳಗುತ್ತಿದೆ. 'ಜಯಕರ್ನಾಟಕ'ಕ್ಕೆ ಈಗ ಏಳು ತುಂಬಿ ಎಂಟರಲ್ಲಿ. ಉಪನಯನ ಸಮಯ. ಅಂತೆಯೆ ಸಮಯೋಚಿತವಾಗಿ 'ಜಯಕರ್ನಾಟಕ' ಬಾಲಕನಿಗೆ ಗುಪ್ತವಾಗಿ ಸರ್ವಲೋಕರಕ್ಷಕವಾದ 'ಗಾಯತ್ರಿ' ಮಂತ್ರವನ್ನೂ ಪ್ರಕಟವಾಗಿ ಮುದ್ದಣನ ನಂಬಿಗೆಯ ಸಪ್ತಾಕ್ಷರಿ ಮಂತ್ರವಾದ 'ಭವತಿ ಬಿಕ್ಷಾಂದೇಹಿ'ಯನ್ನೂ ಚೆನ್ನಾಗಿ ಕಲಿಸಿ ಈ ಶುದ್ಧ ಬಟುವನ್ನು 'ಜಯಕರ್ನಾಟಕ ಮಂಡಲ'ದ ಗುರುಕುಲವಾಸಕ್ಕೆ ಕಳುಹಿದ್ದಾರೆ. ಇದು 'ಜಯಕರ್ನಾಟಕ'ದ ಬ್ರಹ್ಮಚರ್ಯೆ ವಿದ್ಯಾರ್ಜನೆಗಳ ಕಾಲ; ಹನ್ನೆರಡು ವರ್ಷಗಳ ಜ್ಞಾನತಪಸ್ಸಿನ ಕಾಲ; ಪುನರ್ಜನ್ಮದ ಕಾಲ.

'ಕನ್ನಡ ಕನ್ನಡ':— ಈ ಜನ್ಮ ಪುನರ್ಜನ್ಮ ಗಳಿಗೆ ಪೂರ್ವಜನ್ಮವೊಂದಿದೆ. ಶರಣರಿಂದಲೂ ದಾಸರಿಂದಲೂ ಮಹಾಕವಿ ಮಹಾರಾಜರುಗಳಿಂದಲೂ ಸಂರಕ್ಷಿತ ಸಂವರ್ಧಿತವಾದ ಕನ್ನಡತಿ ಯಾವ ಪುರಾಕ್ರಮದಿಂದಲೋ ಎಂಬಂತೆ ಕನ್ನಡಿಗರಿಗೆ ಪರಕೀಯವಾಗಿದ್ದ ಕಾಲವೊಂದಾಗಿ ಹೋಯಿತು. ಆ ಭಾಷಾತ್ಯಾಗದೊಡನೆ ಕರ್ನಾಟಕದ ಜೀವಾಳದ ಕಾವೂ ಕಡಿಮೆಯಾಗಿತ್ತು. ದೇಹಕ್ಕೆ ರುಂಡವಿದ್ದಂತೆ ನಾಡಿಗೆ ಅದರ ನುಡಿ ಎಂಬ ಮಾತು ಮನಸ್ಸಿನ ಮರೆಯಾಗಿತ್ತು. ನಾಟಕದಲ್ಲಿ 'ಮುಖ' ( Mask ) ದಿಂದ ಕೆಲಸ ಸಾಗಿದರೂ ಜೀವನದಲ್ಲಿ ಮುಖವಿಲ್ಲದೆ ಕೆಲಸವಿಲ್ಲ. ಎಂಬುದು ಇನ್ನೂ ಕೆಲವರಿಗೆ ಮನವರಿಕೆಯಾಗಿಲ್ಲ; ಆಗಂತೂ ಎಷ್ಟೋ ಜನರಿಗೆ ಅದರ ಅರಿವೇ ಇರಲಿಲ್ಲ. ಹೀಗಾಗಿ ಕನ್ನಡದ ಸಂಸಾರವು ಅಡಿಗೆ ಮನೆಯನ್ನು ಆಶ್ರಯಿಸಿತ್ತು. ಅಂಥ ಕಾಲಕ್ಕೆ ಸ್ವಾರ್ಥಪರಾರ್ಥಗಳಿಗಾಗಿ ಕೆಲವರು ಕನ್ನಡವನ್ನೆತ್ತಿ ಹಿಡಿದರು. ಬರಬರುತ್ತ 'ಪದವೀಧರ'ರೂ ಕೂಡ ಕನ್ನಡ ನುಡಿಗೆ ತಮ್ಮ ನಾಲಿಗೆಯನ್ನಿತ್ತರು. ಶಾಂತಕವಿಗಳು ಇದನ್ನೆ ಕಂಡು 'ಧರೆಯೊಳುದಿಸಿದ ಕಾರ್ಯ ಸಫಲವಾಯ್ತು' ಎಂದು ಹರ್ಷನಿರ್ಭರರಾಗಿ ಹಾಡಿದರು. ತಮ ಮುಪ್ಪಿನ ಕಾಲದಲ್ಲಿಯೂ 'ಎದ್ದರೆ ಕನ್ನಡ ಕುಳಿತರೆ ಕನ್ನಡ' ಮಾಡಿದರು. ಕನ್ನಡಕ್ಕೆ ಅನ್ನಛತ್ರದ ನೆರಳು ಬಿಟ್ಟು ತನ್ನ ಛತ್ರದ ನೆರಳಿನಲ್ಲಿ ನಿಲ್ಲುವ ಶಕ್ತಿ ಬಂದಿದೆ. ಆದರೆ ಕರ್ನಾಟಕದಲ್ಲಿ ಕನ್ನಡಕ್ಕೆ ಏಕಛತ್ರವಾದ ದಿವಸವೇ ಸುದಿವಸ. ಆ ದಿವಸವು ಸಮೀಪವಾಗುವಂತೆ ಮಾಡುವದು 'ಜಯಕರ್ನಾಟಕ'ದ ಒಂದು ಗುರಿ.

'ಕರ್ನಾಟಕ':—'ಕನ್ನಡ ಕನ್ನಡ' ಎಂದು ಪೂರ್ವಜನ್ಮದಲ್ಲಿ ಜಪಿಸಿದ ಜೀವವೇ ಶ್ರೀಮಾನ್ ಆಲೂರ ವೆಂಕಟರಾಯ

ರಲ್ಲಿ ನಿಂತು 'ಕರ್ನಾಟಕ ಕರ್ನಾಟಕ' ಎಂದು ಉದ್ಘೋಷಿಸಿತು. ಅಖಿಲ ಕರ್ನಾಟಕ ಪ್ರಥಮ ರಾಜಕೀಯ ಪರಿಷತ್ತಿನ ಗೊತ್ತುಗಳ ಪಟ್ಟಿಯೊಂದನ್ನು ಓದಿದವರಿಗೆ ಶ್ರೀ. ಆಲೂರವರ ದೃಷ್ಟಿಪಥದಲ್ಲಿರುವ 'ಕರ್ನಾಟಕ'ದ ವಿರಾಟ ಸಂಸಾರದ ಕಲ್ಪನೆಯು ಬರುವಂತಿದೆ. 'ಆಡುಮುಟ್ಟದ ಗಿಡವಿಲ್ಲ' ಎನ್ನುವಂತೆ ಕರ್ನಾಟಕದಲ್ಲಿ ಶ್ರೀ. ಆಲೂರವರು ಮುಟ್ಟದ ಕೆಲಸವಿಲ್ಲ ಎಂದು ಹೇಳಬಹುದು. 'ಕರ್ನಾಟಕದ ಕುಲಪುರೋಹಿತ'ರು ಎಂದು ಕೆಲವರು ಅವರಿಗೆ ಚೇಷ್ಟೆಮಾಡುವರು. ಸ್ತುತಿಯು ಅನಿವಾರ್ಯವಾಯಿತೆಂದರೆ ಕೆಲವೊಂದು ಸ್ವಭಾವದವರಲ್ಲಿ ಅದು ಹಾಸ್ಯೋಕ್ತಿಯಾಗಿ ಹೊರಬೀಳುವದು. ಅಣಕಿಸಲಿ ಅಥವಾ ಅನುಕರಿಸಲಿ ಮೂಲದಲ್ಲಿ ಆಕರ್ಷಕ ಗುಣವಿರಲೇಬೇಕು. ಅವರು ಅಲ್ಲಲ್ಲಿ ನೆಟ್ಟ ಸಸಿಗಳು ಇಂದು ಗಿಡಗಳಾಗಲಿವೆ. 'ಕರ್ನಾಟಕ, ಕರ್ನಾಟಕ' ಎಂಬ ಸೊಲ್ಲು ಇಂದು ದಿಗಂತಗಳಲ್ಲಿ ವ್ಯಾಪಿಸಲಿದೆ. ಸಣ್ಣ ಕೆಲಸವೇ ಇರಲಿ ದೊಡ್ಡ ಕೆಲಸವೇ ಇರಲಿ ಸ್ವಾರ್ಥದ್ದೇ ಇರಲಿ ಪರಾರ್ಥದ್ದೇ ಇರಲಿ ತಮ್ಮ ಕಾರ್ಯಕ್ಕೆ 'ಕರ್ನಾಟಕ'ವೆಂಬ ಸೊಲ್ಲು ಎಲ್ಲಿಯಾದರೂ ಸೋಂಕಬೇಕು ಎಂದು ಹಿರಿಯರಿಂದ ಕಿರಿಯರ ವರೆಗೆ ಇಂದು ಎಲ್ಲರ ಹಂಬಲ. 'ಜಯಕರ್ನಾಟಕ'ದ ಏಳು ವರ್ಷಗಳ ಸಂಚಿಕೆಗಳಲ್ಲಿ 'ಕರ್ನಾಟಕ'ವು 'ಸಂಯುಕ್ತ ಕರ್ನಾಟಕ'ವಾಗಿ ಒಡಮೂಡಿ ಕಾಣುವಷ್ಟು ಮತ್ತೆ ಬೇರೆ ಯಾವ ಕಾರ್ಯಗಳಲ್ಲಿಯೂ ಸದ್ಯಕ್ಕೆ ಕಾಣುವಂತಿಲ್ಲ. ಇದೊಂದೆ ಮಾತು 'ಜಯಕರ್ನಾಟಕ'ದ ಬಾಲ್ಯದ ಸಾರ್ಥಕತೆಯನ್ನು ಸಾರಲು ಸಾಕು. ಆದರೆ ಎಂದಿನ ವರೆಗೆ ಕರ್ನಾಟಕಕ್ಕೆ ಪ್ರತ್ಯೇಕ ದೇಹವು ಸಿದ್ಧವಾಗಿಲ್ಲವೊ ಅಂದಿನ ವರೆಗೆ 'ಜಯಕರ್ನಾಟಕ'ಕ್ಕೆ ವಿಶ್ರಾಂತಿಯಿಲ್ಲ. ಯಾಕಂದರೆ ಅದೂ ಒಂದು ಅದರ ಗುರಿ.

**'ಕನ್ನಡಿಗರು'**:--ಭಾಷೆಯಾಯಿತು, ದೇಶವಾಯಿತು. ಆದರೆ ದೇಶದಲ್ಲಿ ವಾಸಿಸುವವರಲ್ಲಿಯೆ ಒಡಕು ಇದ್ದರೆ, ಒಡಕು ಗಡಿಗೆಯಲ್ಲಿ ನೀರು ಸುರುವಿದಂತೆಯೆ ಈ ದೇಶ-ಭಾಷೆಗಳ ಕಾರ್ಯ. ಆ ದೇಹಕ್ಕೆ ದೇಶವು ಬೇಕು, ಮನಕ್ಕೆ ಭಾಷೆಯು ಬೇಕು. ಕನ್ನಡಿಗರು ಸಹಸ್ರಶೀರ್ಷ ಸಹಸ್ರಾಕ್ಷರಾದರೂ ಒಂದು ದೇಹ ಒಂದು ಮನಸ್ಸು ಬೇಕು. ಅಂದರೆಯೆ ಆ ದೇಶದ ಆ ಭಾಷೆಯ ಉಪಯೋಗ. ಕರ್ನಾಟಕವು ದೊಡ್ಡದೆಂದು ಕನ್ನಡಿಗರ ಕೂಟವಾಗಬೇಕು, ದೇಶಭಾಷೆಗಳಲ್ಲಿ ನಾವು ದೊರಕಿಸಲಿರುವ ಐಕ್ಯವು ಪ್ರತಿಯೊಬ್ಬ ಕರ್ನಾಟಕನ ಅಂತಃಕರಣದಲ್ಲಿರದಿದ್ದರೆ ಆ ಬಾಹ್ಯ ಐಕ್ಯವು ಏನು ಪಡೆಯಲು ಸಾಧ್ಯ? ಸನ್ಯಾಸ ದೀಕ್ಷೆಯನ್ನು ವಹಿಸಿದವರು ಪೂರ್ವಾಶ್ರಮದ ಹೆಸರಿನ ಸಂಬಂಧವನ್ನು ಬಿಡುವಂತೆ 'ಕರ್ನಾಟಕತ್ವ'ದ ದೀಕ್ಷೆಯನ್ನು ವಹಿಸಿದವರು 'ಕನ್ನಡಿಗ'ರಾದವರು ತಮ್ಮ ಐಕ್ಯದ ಯಜ್ಞದಲ್ಲಿ ಪೂರ್ವಗ್ರಹ ದುರಾಗ್ರಹಗಳನ್ನೆಲ್ಲ ಒಂದೊಂದಾಗಿ ಆಹುತಿ ಕೊಡಲು ಬೇಕು. ಈ ಸ್ವಾಹಾಕಾರವು ತೀರದ ವರೆಗೆ ನಮ್ಮ ಹಾಹಾಕಾರವು ನಿಲ್ಲದು. 'ಜಯಕರ್ನಾಟಕ ಮಂಡಲ'ವು 'ಜಯಕರ್ನಾಟಕ'ದ ಮುಖಾಂತರವಾಗಿಯೂ ಬೇರೆ ಯತ್ನ ಪ್ರಯತ್ನಗಳಿಂದಲೂ ಆ ಐಕ್ಯವು ಉಂಟಾಗುವಂತೆ ವಿಚಾರಗಳನ್ನು ಜನರಿದಿರಿಡಲೂ ಆಚಾರಗಳನು, ಪ್ರವರ್ತಿಸಲೂ ಹೆಣಗುವದು. ಇದೇ 'ಜಯಕರ್ನಾಟಕ'ದ ಇನ್ನು ಮುಂದಿನ ಗುರುಕುಲವಾಸ, ಬ್ರಹ್ಮಚರ್ಯ, ವಿದ್ಯಾರ್ಜನೆ, ತಪಸ್ಸು. ಇದೂ ನಮ್ಮ ಗುರಿ.

**ನಾಡಿನ ಮುಪ್ಪುರಿ**:--ಭಾಷೆ-ದೇಶ-ಜನರು ಒಂದಾದರೆ ಪ್ರತಿ ಸೃಷ್ಟಿಯನ್ನು ರಚಿಸಬಹುದು. ರಾಷ್ಟ್ರವನ್ನು ನಿರ್ಮಿಸುವದು ಪ್ರತಿ ಸೃಷ್ಟಿಯನ್ನು ರಚಿಸಿದಂತೆಯೆ ಸೈ. ಅದು ಸಾಮಾನ್ಯವಾದ ಕೆಲಸವಲ್ಲ; ಸಾಮಾನ್ಯರ ಕೆಲಸವು ಅಲ್ಲ. ಅಸಾಮಾನ್ಯರಾದ ಒಬ್ಬಿಬ್ಬರ ಕೆಲಸವೂ ಅಲ್ಲ. ಅದು ಜನರ ಮತ್ತು ಜನರ ಹೃದಯದಲ್ಲಿದ್ದ ಜನಾರ್ದನನ ಸಂಕಲ್ಪವನ್ನು ಅವಲಂಬಿಸಿ ಇದೆ. ಆ ಸಂಕಲ್ಪವನ್ನು ನಾವು ಎಚ್ಚರಿಸಬೇಕು, ಎಚ್ಚತ್ತ ಆ ಜನತೆಯು "ಸಹನಾವವತು...... ಸಹ ವೀರ್ಯಂಕರವಾವಹೈ" ಎಂದು ಹಾಡಬೇಕು. ಆಗ್ಗೆ ಸಮುದ್ರ ಮಂಥನದಲ್ಲೆದ್ದ ಅಮೃತದಂತೆ ಆ ವಾಣಿಯು ನಮ್ಮನ್ನು ಅಮರರನ್ನಾಗಿ ಮಾಡುವದು. ಆಗ್ಗೆ ಆ ಭಾಷೆ, ಆ ದೇಶ, ಆ ಜನರು ಮಾನವ ಹಿತವನ್ನು ಸಾಧಿಸುವ ಸಿದ್ಧ ಯಂತ್ರಗಳಂತಾಗುವರು. ಭಾಷೆ-ದೇಶ-ಜನ ಈ ಮುಪ್ಪುರಿಯಿಂದ ನಾಡನ್ನು ಕಟ್ಟುವದಾದರೂ ಇದಕ್ಕಾಗಿಯೇ. ಹೀಗೆ ಕಟ್ಟುವ ಪೂರ್ವದಲ್ಲಿ ಮಾತೃಭಾಷೆ, ಪಿತೃಭೂಮಿ, ಸ್ವಾಮಿ, ಮತ, ಸಾಮ್ರಾಜ್ಯಗಳ ಹಂಬಲ ಬಿಟ್ಟು ದೇಶಭಾಷೆ, ಮಾತೃಭೂಮಿ, ಜನ, ಭೂತದಯೆ, ಸ್ವರಾಜ್ಯಗಳಿಗೆ ತನುಮನಧನಗಳನ್ನು ಅರ್ಪಿಸಬೇಕಾಗುವದು. ನಾಡಿನ ಹುರಿಯೊಳಗಿನ ಎಳೆಗಳೇ ಇವು. ಇವೇ ಸಡಿಲಾದರೆ ನಾಡೂ ಇಲ್ಲ; ಕಟ್ಟೋಣ ಇಲ್ಲ.

**ನಮ್ಮ 'ಪ್ರಾಂತೀಯತೆ' :**—'ಅಯ್ಯೋ ಇದೆಲ್ಲ ಪ್ರಾಂತೀಯತೆ!' ಎಂದು ಒಂದು ಪಂಗಡದ ರಾಜಕೀಯ ವೇದಾಂತಿಗಳು ಮೂಗುಮುರಿಯುವರು: ಧಾರ್ಮಿಕ ವೇದಾಂತಿಗಳು ತಮ್ಮನ್ನು ಬಿಟ್ಟು ಉಳಿದವರನ್ನು ಕಂಡು 'ಲೌಕಿಕ'ರು ಎಂದು ಮೂಗುಮುರಿಯುವಂತೆ. ಆದರೆ ಅಟ್ಟ ಹಾರಲು ಬರದೆ ಬೆಟ್ಟ ಹಾರುವ ಅವರ ಸಾಹಸವನ್ನು ಕಂಡು ಇವೆಲ್ಲ (ಅವರ ಬಯಕೆ) ಸಫಲವಾಗದಲ್ಲಾ ಎಂದು ನಮಗೆ ವ್ಯಸನವಾಗುತ್ತದೆ. ಇದಲ್ಲದೆ ಹಿಂದುಸ್ಥಾನಕ್ಕೆ ಇವರು ದೊರಕಿಸಲು ಹೊರಟ ಸ್ವರಾಜ್ಯವು ಅಥವಾ ಸ್ವಾತಂತ್ರ್ಯವು ಅಥವಾ ಮುಕ್ತಿಯು ಮುಂದುವರಿದ ಒಂದು ವರ್ಗಕ್ಕೆ ಮಾತ್ರವಲ್ಲ ಎಂಬುದನ್ನು ಮರೆಯುವರೇಂತೊ ? ಮೇಲಾಗಿ ನಾವು ಮೇಲೆ ಬಣ್ಣಿಸಿದ ಬಗೆಯ ನಾಡಕಟ್ಟು ಭಾರತ ರಾಷ್ಟ್ರೀಯತ್ವಕ್ಕೆ ಹೇಗೆ ಪ್ರತಿರೋಧಿಯೋ ನಾವಂತೂ ಕಾಣೆವು. ಸಾಮಾನ್ಯವಾದ ಆಹಾರವೂ ದಕ್ಕದ ಅಶಕ್ತನ ಆರೋಗ್ಯಕ್ಕೆ ಲಕ್ಷ್ಯಕೊಟ್ಟು ಅವನಿಗೆ ನಾವು ತವುಡಿನ ರೊಟ್ಟಿಯನ್ನು ತಿನ್ನಲು ಹೇಳಿರಲು ಅದರ ಉಪಹಾಸ ಮಾಡಿ 'ಕಣಕದ ಕೂಳು ತಿನ್ನಯ್ಯ ಪ್ರಚಂಡ ಶಕ್ತಿ ಬರುವದು' ಎಂದು ತಾವು ಹೇಳಿ ಪ್ರಾಣದಾನ ಮಾಡಿದೆವೆಂದು ತಿಳಿಯುವ ಇವರ ಪಾಂಡಿತ್ಯಕ್ಕೆ ಹೇಗೆ ಮೆಚ್ಚಬೇಕೋ ತಿಳಿಯದು. ನಮ್ಮ 'ಪ್ರಾಂತೀಯತೆ'ಯು ಸುಳ್ಳಾದರೆ ಇವರ 'ರಾಷ್ಟ್ರೀಯತೆ'ಯು ಎಂದಿಗೂ ಸತ್ಯವಾಗಲರಿಯದು. ಈ 'ಪ್ರಾಂತೀಯತೆ'ಗೆ ಸುಳ್ಳೆ ಅಡ್ಡ ಬಂದು "ಆ ರಾಷ್ಟ್ರೀಯತೆಯನ್ನೆ ನಾವು ಸಾಧಿಸತಕ್ಕವರು" ಎಂದು ಅವರಂದರೆ ಏಕಜಾತಿ, ಏಕಭಾಷೆ, ಏಕಧರ್ಮ ಎಂಬ ದುಃಸಾಧ್ಯ ಅಸಾಧ್ಯ ಅಸಂಭವಗಳ ಹಾದಿಯಿಂದ ಈ ಬಗೆಯ ಅವರ ಪ್ರಯತ್ನಗಳು ಗೊತ್ತಿಗೆ ಮುಟ್ಟದೆ ಹೋಗತಕ್ಕವುಗಳು, ಆದರೆ ನಮ್ಮ 'ಪ್ರಾಂತೀಯತೆ'ಯು ಭಾರತವನ್ನು 'ಅಂತರಾತ್ಮ'ವನ್ನಾಗಿ ಮಾಡಿಕೊಂಡು ನರ ನಾರಾಯಣನ ಸೇವೆಗೆ ಹೊರಟಿದೆ. ನಿಜವಾಗಿ ನಮ್ಮದೇ 'ರಾಷ್ಟ್ರೀಯತೆ'! ನಾಳಿನ ಭಾರತವೆಂಬ ನಾಡಿನ ಬಳಗವಲ್ಲಿ 'ಕರ್ನಾಟಕ'ವೂ ಒಂದು 'ರಾಷ್ಟ್ರ'ವೆಂದು ಸಮಾನಸ್ಕಂಧವಾಗಿ ಸಲ್ಲತಕ್ಕದಾಗಿದೆ. ಇದನ್ನು ಯಾವ ಬ್ರಹ್ಮದೇವನೂ ತಪ್ಪಿಸಲರಿಯನು. ಏಕೆಂದರೆ ಇದೂ ಅವನ ಸಂಕಲ್ಪವೇ ಎಂಬುದು ಒಡೆದುಕಾಣುತ್ತಲಿದೆ.

**ಹೊಸ ಕಟ್ಟು:**—ಇನ್ನು ಮುಂದೆ ಕರ್ನಾಟಕದ ಬುದ್ಧಿ, ಕರ್ನಾಟಕದ ಪರಾಕ್ರಮ, ಕರ್ನಾಟಕದ ಸಂಪತ್ತು, ಕರ್ನಾಟಕದ ಶಕ್ತಿ ಕರ್ನಾಟಕಕ್ಕೇ ವೆಚ್ಚವಾಗಬೇಕು. ಕರ್ನಾಟಕವು ಏನಾದರೂ ತ್ಯಾಗವನ್ನೆ ಮಾಡುವದಾದರೆ ಅದನ್ನು ಆಹುತಿಯಾಗಿ ಕೊಡಬೇಕೇ ಹೊರತು ಬಲಿಯಾಗಬಾರದು. ಕರ್ನಾಟಕವು ಯಾವದೇ ಕೆಲಸವನ್ನು ಕೈಕೊಳ್ಳಲಿ ಅದನ್ನು ಸಹಕಾರದಿಂದ ಕೊನೆಗಾಣಿಸಬೇಕು. ನಮಗೆ ಬೇಕಾದುದು ಏರಾಟವಲ್ಲ, ಒಡನಾಟ; ಪ್ರತಿ ಸ್ಪರ್ಧೆಯಲ್ಲ, ಸಹಕಾರ.

**'ಜಯ ಕರ್ನಾಟಕ'**— ಕನ್ನಡಿಗರ ಬೆಂಬಲದಿಂದಲೂ, ಅನೇಕ ಸಂಸ್ಥೆ, ಸಮಾಜ, ಸಂಘ, ಗುಂಪು, ಕೂಟ, ಮಟ, ತಂಡಗಳ ಸಹಕಾರದಿಂದಲೂ ಕೈಕೊಂಡ ಕಾರ್ಯವನ್ನು ಸಾಂಗೋಪಾಂಗವಾಗಿ ಸಾಗಿಸಲು ನಾವು ಸಮರ್ಥರಾಗುವೆವೆಂಬ ನಂಬುಗೆಯಿಂದ 'ಜಯಕರ್ನಾಟಕ'ವೆಂದು ಕಾರ್ಯಕ್ಕೆ ತೊಡಗಿರುವೆವು. ನಮ್ಮ ಅಲ್ಪ ಶಕ್ತಿಗೆ ಯಾವ ಜಯಾಪಜಯವು ಬಂದರೂ ಕರ್ನಾಟಕದ ಜಯವು ಕಟ್ಟಿಟ್ಟದ್ದು.

---

# ಸರಾಯಿಯ ಸುರಿಮಳೆ



ಲೇಖಕ:-ಶ್ರೀ. ಗು. ಕೃ. ವಾಳವೇಕರ ಬಿ. ಎ., ಎಲ್ ಎಲ್. ಬಿ., ಹುಬ್ಬಳ್ಳಿ

ಹಿಂದುಸ್ಥಾನದಲ್ಲಿಯ ಸರಾಯಿಯ ಸುರಿಮಳೆಯನ್ನು ನಿಲ್ಲಿಸುವ ಕುರಿತು ದ್ವಿಮತಗಳಿಲ್ಲ. ಎಲ್ಲ ಪಂಗಡದವರು, ಎಲ್ಲ ಮತಸ್ಥರು ಮತ್ತು ಎಲ್ಲ ಪಕ್ಷದವರು ಸರಾಯಿಯ ಸೇವನದ ಕೆಲಸವನ್ನು ನಿಲ್ಲಿಸಿ ಬಿಡಬೇಕೆಂದು ಪರಿಪರಿಯಾಗಿ ಹೇಳುತ್ತ ಬಂದಿರುತ್ತಾರೆ. ಸರಾಯಿಯ ವ್ಯಸನವು ಹಬ್ಬುವದರಿಂದ, ಸರಕಾರದ ಕೀರ್ತಿಯು ಕಳೆಗುಂದುತ್ತದೆಂದು ಕಂಪನಿ ಸರಕಾರದ ಕಾಲದಿಂದ ಯುರೋಪಿಯನ್ನರು ಸಹ ಸರಕಾರಕ್ಕೆ ಸಾರಿ ಹೇಳುತ್ತ ಬಂದಿದ್ದಾರೆ. ಆಳರಸರ ಕಿವಿಗಳು ಜನತೆಯ ಕಷ್ಟಗಳನ್ನು ಕೇಳಲು ಕಿವುಡಾಗಿವೆ. ಕೈ. ನಾಮದಾರ ಗೋಖಲೆಯವರು ಸ್ಟೇಟ ಸೆಕ್ರೆಟರಿಗಳಿಗೆ ಹಿಂದೀ ಜನರ ಮೇಲೆ ಮದ್ಯದಿಂದಾದ ದುಷ್ಪರಿಣಾಮವನ್ನು ಮನವರಿಕೆಯಾಗುವಂತೆ ತಿಳಿಸಿ ಹೇಳಿದರು. ಆದರೆ ಹೀಗೆ ಮಾಡುವದರಿಂದ ನಮ್ಮ ಹಳೇ ಇತಿಹಾಸದೊಂದಿಗೆ ನಮ್ಮ ದೈನ್ಯದ ಹಾಗೂ ದಾಸ್ಯದ ನೆನಪು ಮಾಡಿಕೊಳ್ಳುವದಷ್ಟೇ ಹೊರ್ತು ಹೆಚ್ಚಿನ ಉಪಾಯವನ್ನೇನೂ ಮಾಡಿದಂತೆ ಆಗುವದಿಲ್ಲ.

ನಮ್ಮ ಸದ್ಯದ ಸ್ಥಿತಿಯು ಆಗಿನಕಿಂತ ಹೆಚ್ಚು ಅವನತಿಯದಾಗಿದೆ. ೧೯೨೫ನೇ ಇಸ್ವಿಯ ಸಪ್ಟಂಬರ ತಿಂಗಳ ೨ನೇ ತಾರೀಖಿನ ದಿವಸ ದಿಲ್ಲಿಯ ವರಿಷ್ಠ ಕಾಯಿದೆ ಮಂಡಲದಲ್ಲಿ ಈ ವಿಷಯದ ಬಗ್ಗೆ ಚರ್ಚೆ ನಡೆದಾಗ ಹಿಂದುಸ್ಥಾನ ಸರಕಾರದ ಕೋಶಾಧಿಕಾರಿಗಳಾದ ಸರ ಬೆಸಿಲ್ ಬ್ಲಾಕೆಟ (Sir Basil Blackett) ಸಾಹೇಬರು ಹೀಗೆ ಮಾತನಾಡಿದರು:

"I am told that the code of Manu did prohibit the use of alcoholic liquor by Brahmins....... There is no turpitude in drinking wine, but a virtuous abstinence will reap its reward." "I am inclined to agree that if a policy of local option or prohibition is going to be attempted by Local Governments with any great vigour, the Government of India will not be able merely to look on."

ಸಾರಾಂಶ:- "ಮನುಸ್ಮೃತಿಯಲ್ಲಿ ಬ್ರಾಹ್ಮಣರು ಸರಾಯಿಯನ್ನು ಕುಡಿಯಬಾರದೆಂದು ಹೇಳಿದೆಯೆಂಬ ನಾನು ಕೇಳಿಬಲ್ಲೆ. ಆದರೆ ಸರಾಯಿ ಕುಡಿಯುವದು ನೀತಿಬಾಹ್ಯವಲ್ಲ. ಕುಡಿಯದಿರುವದರಿಂದ ಫಲ ದೊರೆಯದೆ ಮಾತ್ರ ಇರದು. ಸ್ಥಾನಿಕ ಸರಕಾರದವರು ಮದ್ಯಪಾನ ನಿಷೇಧದ, ಇಲ್ಲವೆ ಮದ್ಯಪಾನ ನಿಷೇಧಕ್ಕೆ ಸಂಬಂಧಿಸಿದ ಸ್ಥಾನಿಕ ಮತ-ಸ್ವಾತಂತ್ರ್ಯದ ಬಗ್ಗೆ ಬಹಳ ಪರಿಶ್ರಮ ಬಟ್ಟರೆ ಹಿಂದುಸ್ಥಾನ ಸರಕಾರದವರು ಇದನ್ನು ನೋಡಿ ಸುಮ್ಮನೆ ಮಾತ್ರ ಕೂತುಕೊಳ್ಳಲಾರರು." ಮುಂದೆ ೧೯೨೬ನೇ ಇಸ್ವಿಯ ಅಗಸ್ಟ ತಿಂಗಳ ೧೯ನೇ ತಾರೀಖಿನ ದಿವಸ ವರಿಷ್ಠ ಕಾಯದೇ ಮಂಡಲದ ಸಭಾಸದರೊಬ್ಬರು, ಸರಾಯಿಯ ಬಂದಿಯ ಬಗ್ಗೆ ಸದರ ಕಾಯದೇ ಮಂಡಲದಲ್ಲಿ ೧೯೨೫ರಲ್ಲಿ ಆದ ನಿರ್ಣಯವನ್ನು ಕಾರ್ಯ ರೂಪದಲ್ಲಿ ತರಲಿಕ್ಕೆ ಸರಕಾರದವರು ಏನು ಮಾಡಿರುವರೆಂದು ಕೇಳಿದರು. ಅದಕ್ಕೆ "ನಾನು ೧೯೨೫ನೇ ಇಸ್ವಿಯ ಸಪ್ಟಂಬರ ತಿಂಗಳಲ್ಲಿ ಮಾಡಿದ ಭಾಷಣದಲ್ಲಿ ಹೇಳಿದ ಕಾರಣಗಳ ಸಲುವಾಗಿ ಸರಕಾರದವರಿಂದ ಮದ್ಯಪಾನ ಪ್ರತಿಬಂಧದ ವಿಷಯದಲ್ಲಿ ಏನೂ ಮಾಡಲಾಗುವದಿಲ್ಲ" ಎಂದು ಬ್ಲ್ಯಾಕೆಟ್ ಸಾಹೇಬರು ಉತ್ತರ ಕೊಟ್ಟರು. ೧೯೨೭ರಲ್ಲಿ ಮತ್ತೆ ಕೇಳಿದ ಪ್ರಶ್ನೆಗೆ ಇದೇ ಉತ್ತರ ದೊರೆಯಿತು.

ಹಿಂದುಸ್ಥಾನ ಸರಕಾರದ ಧೋರಣವನ್ನು ಮೇಲೆ ನಿವೇದಿಸಿದ್ದಾಯಿತು. ಪ್ರಾಂತಿಕ ಸರಕಾರಗಳ ಧೋರಣವನ್ನು ಕುರಿತು ವಿಚಾರಿಸುವ! ಆಸಾಮುಪ್ರಾಂತವೊಂದನ್ನು ಬಿಟ್ಟು ಬೇರೆ ಎಲ್ಲ ಪ್ರಾಂತಗಳಲ್ಲಿ ಮಾದಕ ಪದಾರ್ಥಗಳ ಖಾತೆಯು (Excise-department) ಮಂತ್ರಿಗಳ ಸ್ವಾಧೀನಕ್ಕೆ ಒಪ್ಪಿಸಲ್ಪಟ್ಟದೆ. ಇದು ಕಾದಿಟ್ಟ ಖಾತೆಯಲ್ಲ; ಹೀಗಿದ್ದರೂ ಮದ್ಯಪಾನ ಪ್ರತಿಬಂಧದ ವಿಷಯದಲ್ಲಿ ಪ್ರಾಂತಿಕ ಸರಕಾರಗಳಿಂದ ಆಗಬೇಕಾದಷ್ಟು ಕೆಲಸವು ಆಗಿಲ್ಲ. ಯಾಕೆ ಆಗಲಿಲ್ಲೆಂಬ ಪ್ರಶ್ನೆಗೆ ರೆವ್ಹರಂಡ ಜೆ. ಎಫ್. ಎಡ್ವರ್ಡರು (The Rev. J. F. Edwards) ಹೀಗೆ ಉತ್ತರ ಕೊಟ್ಟಿದ್ದಾರೆ:

" Dominated by the British view of the moderate use of alcoholic liquors, and influenced possibly by the political power of the liquor trade in Britain the British element in the Provincial Governments have exercised a far-reaching effect on the excise policy of these Governments."

ಸಾರಾಂಶ:–"ಸ್ವಲ್ಪಪ್ರಮಾಣದಿಂದ ಮಾದಕ ಪೇಯಗಳನ್ನು ತಕ್ಕೊಳ್ಳುವದು ಅನೀತಿಕರವಲ್ಲವೆಂಬ ಬ್ರಿಟಿಶರ ಅಭಿಪ್ರಾಯಕ್ಕೆ ಒಳಪಟ್ಟು, ಬ್ರಿಟನವಲ್ಲಿ ಸರಾಯಿಯ ವ್ಯಾಪಾರದ ರಾಜಕೀಯ ಬಲಕ್ಕೆ ಬಗ್ಗಿ ಸ್ಥಾನಿಕ ಸರಕಾರಗಳಲ್ಲಿ ಇರುವ ಬ್ರಿಟಿಶ ಅಧಿಕಾರಿಗಳು ಮಾದಕ ಪದಾರ್ಥಗಳ ಧೋರಣವನ್ನು ತಮ್ಮ ಇಚ್ಛಾನುಸಾರ ಇಟ್ಟುಕೊಂಡಿದ್ದಾರೆ" ಸರಾಯಿಯ ಪ್ರಸಾರದಿಂದ ಸರಕಾರಕ್ಕೆ ಬಹಳ ಉತ್ಪನ್ನ ಬರುತ್ತದೆ. ಅದನ್ನು ಕಳಕೊಂಡರೆ ಸರಕಾರದ ಕೆಲಸ ಹೇಗೆ ಸಾಗಬೇಕೆಂದು ಭಯಗ್ರಸ್ತರಾದ ಮಂತ್ರಿಗಳಿಂದ ಮದ್ಯಪಾನ ಪ್ರತಿಬಂಧದ ಕೆಲಸವಾಗುವಂತಿಲ್ಲ. ಅಮೇರಿಕೆಯಲ್ಲಿ ಸರಾಯಿ ನಿಲ್ಲಿಸಿಬಿಟ್ಟ ಮೊದಲನೆಯ ವರ್ಷ ಸರಕಾರಕ್ಕೆ ಸರಾಯಿಯ ಉತ್ಪನ್ನವಾಗದೆ ಹತ್ತು ಲಕ್ಷ ಪೌಂಡು ( one million pounds ) ನಷ್ಟವಾಯಿತು. ಆದರೆ ಆ ವರ್ಷದ ಒಟ್ಟು ಉತ್ಪನ್ನವು ( ಈ ನಷ್ಟ ಕಳೆದು ) ಹೆಚ್ಚಾಯಿತು. ಜನರಿಗೆ ಇತ್ತ ಸರಾಯಿ ಕುಡಿಸಿ ಇತ್ತ ಶಿಕ್ಷಣ ಕೊಡುವ ಹಂಬಲವನ್ನು ನಮ್ಮ ಮಂತ್ರಿಗಳು ಬಿಡಬೇಕು. ಸರಾಯಿಯಂಥ ದುರ್ವ್ಯಸನದಿಂದ ಬಂದ ಹಣದಿಂದ ಶಿಕ್ಷಣಪ್ರಸಾರದಂಥ ಪವಿತ್ರ ಕಾರ್ಯವು ಎಂದೂ ಸಾಧ್ಯವಾಗಲರಿಯದು. ಸರಾಯಿ ಕುಡಿಯಲೆಂದು ಶಿಕ್ಷಣಕೊಟ್ಟ ಪಾತಕವು ಮಾತ್ರ ಪವರಿನಲ್ಲಿ ಬೀಳದೆ ಇರದು. ಬೇರೆ ಪ್ರಾಂತಗಳಲ್ಲಿಯ ಪರಿಸ್ಥಿತಿಯ ಬಗ್ಗೆ ಬರೆದು ಈ ಲೇಖವನ್ನು ಬೆಳೆಸದೆ ಕರ್ನಾಟಕಕ್ಕೆ ಸಂಬಂಧಪಟ್ಟ ಎರಡು ಇಲಾಖೆಗಳ ಬಗ್ಗೆ ಮಾತ್ರ ಬರೆಯುವದು ಯುಕ್ತ ಕಾಣುತ್ತದೆ.

ಮದ್ರಾಸ ಇಲಾಖೆಯಲ್ಲಿ ೨೦ ವರ್ಷಗಳಲ್ಲಿ ಮದ್ಯ ಪ್ರತಿಬಂಧದ ಕಾರ್ಯವು ಸಂಪೂರ್ಣವಾಗಬೇಕೆಂದು ಕಾಯಿದೆ ಮಂಡಲದಲ್ಲಿ ಪಾಸಾದ ನಿರ್ಣಯವನ್ನು ಸರಕಾರದವರು ಕಿತ್ತೊಗೆದರು.

ಇನ್ನು ಮುಂಬಯಿಯ ಇಲಾಖೆಯಲ್ಲಿಯ ಸಂಗತಿಯೆಂದರೆ ಇಲ್ಲಿ ಕೆಲವು ಕಾಲದಿಂದ Rationing ( ಕ್ರಮೇಣ ) ಪರಿಮಾಣ ಕಡಿಮೆಮಾಡುವ ಪದ್ಧತಿಯು ಅಮಲಿನಲ್ಲಿದೆ. ಈ ಪದ್ಧತಿಯನ್ನು ಅಮಲಿನಲ್ಲಿ ತರಹಚ್ಚಿದ ಶ್ರೇಯಸ್ಸು ಸರ ಚುನಿಲಾಲ ಮೆಹತಾ ಇವರಿಗೆ ಸಲ್ಲುತ್ತದೆ. Rationing ಪದ್ಧತಿಯೆಂದರೆ ಗುತ್ತೇದಾರರ ಕೆಡೆಗೆ ಪ್ರತಿವರ್ಷ ಕೊಡುವ ಸರಾಯಿಯ ಪರಿಮಾಣವನ್ನು ಕ್ರಮೇಣ ಕಡಿಮೆ ಮಾಡುತ್ತ ಹೋಗುವ ಪದ್ಧತಿ. ೧೯೨೧ನೇ ಇಸ್ವಿಯ ಮಾರ್ಚ ೨೫ನೇ ತಾರೀಖಿನ ದಿವಸ ಮುಂಬಯಿ ಕಾಯಿದೇ ಮಂಡಳದ ಅಧಿವೇಶನ ಕಾಲಕ್ಕೆ ಈ ಪದ್ಧತಿ ಹಾಗೂ ತಮ್ಮ ಧೋರಣಗಳನ್ನು ಕುರಿತು ಸರ ಚುನಿಲಾಲ ಮೆಹತಾ ಇವರು ಹೀಗೆ ಮಾತನಾಡಿದ್ದಾರೆ:

" The figures of the latest year will be taken as maximum and no more supplies will be issued. The supplies will be made at as short intervals as practicable, weekly or fortnightly, and according to the sale of the previous years, the principle being that if people have been satisfied to drink a certain quantity that quantity shall not be increased and may be curtailed as experience shows."

"ಯಾವ ಕಾಲಕ್ಕೂ ಹಿಂದಿನ ವರ್ಷದ ಸರಾಯಿಯ ಪರಿಮಾಣವನ್ನು ತಿಳಿದು ಅದಕ್ಕೂ ಹೆಚ್ಚಿಗೆ ಸರಾಯಿಯನ್ನು ಕೊಡತಕ್ಕದ್ದಿಲ್ಲ. ಹಿಂದಿನ ಅನುಭವಕ್ಕನುಸರಿಸಿ ಪ್ರತಿವಾರಕ್ಕೆ, ಪ್ರತಿ ಪಕ್ಷಕ್ಕೊಮ್ಮೆ ಇಲ್ಲವೆ ಆದಷ್ಟು ಕಡಿಮೆ ದಿವಸಗಳ ಅವಧಿಗೊಮ್ಮೆ ಸರಾಯಿಯನ್ನು ಪೂರೈಸುವದರಲ್ಲಿ ಬರುತ್ತದೆ. ಇದರಲ್ಲಿಯ ಮುಖ್ಯ ತತ್ವವೆಂದರೆ ಇಂತಿಷ್ಟು ಸರಾಯಿಯನ್ನು ಜನರು ಕುಡಿಯುತ್ತಾರೆಂದು ಗೊತ್ತಾದಬಳಿಕ ಆ ಮರ್ಯಾದೆಯನ್ನು ಮೀರುವಂತಿಲ್ಲ. ಆದರೆ ಅನುಭವದ ಮೇಲಿಂದ ಅದನ್ನು ಕಡಿಮೆ ಮಾಡುವದರಲ್ಲಿ ಬರುವದು." ಇದರಿಂದ ಹಿಂದುಸ್ಥಾನದಲ್ಲಿ ತಯಾರಾಗುವ ಸರಾಯಿಯ ವಿಕ್ರಯವು ಅರ್ಧದಷ್ಟು ಕಡಿಮೆಯಾಗಿದೆ. ೧೯೨೦-೨೧ರಲ್ಲಿ ೩೬,[illegible], ೭೮೯ ಪ್ರೂಫ್ ಗ್ಯಾಲನ್ ಸರಾಯಿ ಖರ್ಚು ಆಗಿತ್ತು. ಆದರೆ ೧೯೩೬-೩೭ರಲ್ಲಿ ೧೩,೦೩,೬೭೯ ಗ್ಯಾಲನ್ನಿಗೆ ಇಳಿಯಿತು. ಆದರೆ ಈಗ ಈ ಪದ್ಧತಿಯು ತೆಗೆದುಹಾಕಲ್ಪಟ್ಟದೆಯಂತೆ! ಏಕೋ ತಿಳಿಯದು. ಈ ಖಾತೆಯನ್ನು ಬೇರೆ ಬೇರೆ ಮಂತ್ರಿಗಳ ಸ್ವಾಧೀನಕ್ಕೆ ಒಪ್ಪಿಸುವದರಿಂದ ಹೀಗಾಗುತ್ತದೆ. ಒಂದೇ

ತರದ ಧೋರಣವು ಉಳಿಯಬೇಕಾದರೆ ಆ ಧೋರಣಕ್ಕನುಸರಿಸಿ ಕಾಯದೆಯಾಗಬೇಕು. ೧೯೩೭ನೇ ಇಸ್ವಿಯ ಜನವರಿ ತಿಂಗಳಿಂದ ೧೯೩೮ರ ಸಪ್ಟೆಂಬರ ತಿಂಗಳ ವರೆಗೆ ಅಬಕಾರೀ ಖಾತೆಯನ್ನು ಆಳುವ ಐದು ಮಂತ್ರಿಗಳಾದರು. Rationing ಪದ್ಧತಿಯು ಅಮಲಿನಲ್ಲಿದ್ದ ಕಾಲಕ್ಕೆ ದೇಶೀ ಸರಾಯಿಯ ಖರ್ಚು ಹೇಗೆ ಇಳಿಯುತ್ತ ನಡೆದಿತ್ತೆಂಬವು ಕೆಳಗೆ ಕೊಟ್ಟ ಅಂಕಿಗಳಿಂದ ಒಡೆದು ಕಾಣುತ್ತದೆ.

| ವರ್ಷ | ಗ್ಯಾಲನ್ನಗಳು |
|---|---|
| ೧೯೧೯-೨೦ | ೨೬,೪೧೦೦೦ |
| ೧೯೨೦-೨೧ | ೨೬,೧೫೦೦೦ |
| ೧೯೨೧-೨೨ | ೨೧,೦೧೦೦೦ |
| ೧೯೨೨-೨೩ | ೧೭,೯೨೦೦೦ |
| ೧೯೨೩-೨೪ | ೧೭,೦೮೦೦೦ |

ನಮ್ಮ ಕರ್ನಾಟಕದ ನಾಲ್ಕು ಜಿಲ್ಹೆಗಳ ಅಂಕೆಗಳು ಕೆಳಗೆ ಬರೆದಂತೆ ಇವೆ:

| ಜಿಲ್ಹೆ | ಎಲ್ಲಕ್ಕೂ ಹೆಚ್ಚು ಸರಾಯಿ ಕೊಡಬಹುದಾದ ಗ್ಯಾಲನ್ನಗಳ ಸಂಖ್ಯೆ | ಪ್ರತ್ಯಕ್ಷ ಕೊಟ್ಟ ಗ್ಯಾಲನ್ನಗಳ ಸಂಖ್ಯೆ |
|---|---|---|
| ಧಾರವಾಡ | ೫೩೦೦೦ | ೩೫೦೦೦ |
| ಬೆಳಗಾವಿ | ೫೮೦೦೦ | ೪೯೦೦೦ |
| ವಿಜಾಪುರ | ೨೬೦೦೦ | ೧೦೦೦೦ |
| ಕಾರವಾರ | ೧೧೦೦೦ | ೭೨೦೦ |

ಈ ಅಂಕೆಗಳನ್ನು ನೋಡಿದಲ್ಲಿ ಅಬಕಾರೀ ಖಾತೆಯವರು ಕುಡಿಸಬೇಕೆನ್ನುವಷ್ಟು ಸರಾಯಿಯನ್ನು ಕೂಡ ಕುಡುಕರು ಕುಡಿಯಲೊಲ್ಲರೆಂಬುದು ತೋರುತ್ತದೆ.

೭೦ ವರ್ಷಗಳ ಹಿಂದೆ ಬ್ರಿಟಿಷ ಸರಕಾರದ ಸರಾಯಿಯ ಉತ್ಪನ್ನವು ಒಂದುಕೋಟಿ ರೂಪಾಯಿಯಿತ್ತು. ೧೯೦೦ರಲ್ಲಿ ಆರು ಕೋಟಿಯಾಗಿ ೧೯೩೮ರಲ್ಲಿ ೩೪ಕೋಟಿಗೆ ಮಿಕ್ಕಿದೆ. ಈ ಉತ್ಪನ್ನದ ದೊಡ್ಡ ಭಾಗವು ಬಡವರ ಮೇಲೆ ಬೀಳುತ್ತದೆ. ಮುಂಬಯಿ ಇಲಾಖೆಯ ಅಬಕಾರಿ ಉತ್ಪನ್ನವು ೪ಕೋಟಿ ರೂಪಾಯಿ ಇತ್ತು. ದಾರಿದ್ರ್ಯಗ್ರಸ್ತರಾದ ಈ ಜನರಿಗೆ ೪ ಕೋಟಿಯೆಂದರೆ ಕಾಮಧೇನು ಕಲ್ಪತರುವಿನ ಬೆಲೆಯೇ ಸರಿ! ಮತ್ತೊಂದು ದುರ್ದೈವದ ಸಂಗತಿಯೆಂದರೆ ನಮ್ಮ ಮುಂಬಯಿ ಇಲಾಖೆಯಲ್ಲಿ ಎಲ್ಲ ಇಲಾಖೆಗಳಲ್ಲಿ ಇತರ ಅಬಕಾರೀ ತಲೆಪಟ್ಟಿಯು ಹೆಚ್ಚು ಇದೆಯೆಂಬ ಮಾತು ಕೆಳಗೆ ಕೊಟ್ಟ ಅಂಕಿಗಳ ಮೇಲಿಂದ ಸ್ಪಷ್ಟವಾಗುತ್ತದೆ.

| ಪ್ರಾಂತ | ಪ್ರತಿಯೊಬ್ಬನ ಪಾಲಿಗೆ ಬೀಳುವ ತಲೆಪಟ್ಟಿ |
|---|---|
| ಮುಂಬಯಿ | ೨-೫-೧ |
| ಸಿಂಧ | ೧-೪-೧೦ |
| ಮದ್ರಾಸ | ೧-೨-೫ |
| ಮಧ್ಯಪ್ರಾಂತ | ೧-೦-೬ |
| ಆಸಾಮ | -೧೪-೨ |
| ಪಂಜಾಬ | -೯-೧ |
| ಬಂಗಾಲ | -೭-೪ |
| ವಾಯುವ್ಯಪ್ರಾಂತ | -೪-೬ |

ಮದ್ಯಪಾನ ನಿಷೇಧದಂಥ ಮಹತ್ಕಾರ್ಯವನ್ನು ಜನರಿಗೆ ಬೋಧಿಸಿ ಸಾವಿರಾರು ಜನರನ್ನು ಈ ದುರ್ವ್ಯಸನದಿಂದ ಪರಾವೃತ್ತರನ್ನಾಗಿ ಮಾಡಿದ ಶ್ರೀ. ಠಕ್ಕರ, ಸರದಾರ ವಲ್ಲಭಭಾಯಿ ಪಟೇಲ ಹಾಗೂ ಶ್ರೀ ರಾಜಗೋಪಾಲಾಚಾರ್ಯರಂಥ ಮುಖಂಡರನ್ನು ಎಷ್ಟು ಹಾಡಿ ಹರಿಸಿದರೂ ಕಡಿಮೆಯೇ!

ಆದರೆ ಇಂಥ ಆಳರಸರಿಗೆ ಬೇಡಾದ ಜನರ ಅನುಭವವನ್ನು ಕೊಡುವ ಗೋಜಿಗೆ ನಾವು ಹೋಗದೆ, ಆಳರಸರ, ಹಾಗೂ ಅವರ ಪ್ರೀತಿಗೆ ಪಾತ್ರರಾದವರ ಪುರಾವೆಯು ಅನೇಕರ ದೃಷ್ಟಿಗೆ ಮಹತ್ವದ್ದೆಂದು ತೋರುವದರಿಂದ ಅವನ್ನೇ ಇಲ್ಲಿ ಕೊಡುತ್ತೇವೆ. ಈ ದುರ್ವ್ಯಸನವು ದೊಡ್ಡ ಪಟ್ಟಣ ಹಾಗೂ ಹಳ್ಳಿಗಳನ್ನು ಹಿಂಡಿ ಹಿಪ್ಪೆಮಾಡಿ ವ್ಯಾಪಾರೋದ್ಯೋಗಗಳನ್ನು ಮುರಿಬಡಿಯುತ್ತದೆಂಬ ಮಾತು ಎಲ್ಲರಿಗೂ ಗೊತ್ತುಂಟು. ಮುಂಬಯಿಯಲ್ಲಿಯ, ಸರಕಾರದವರ ಸಹಾಯದಿಂದ ಕೆಲಸಗಾರರ ಕಚೇರಿಯವರು ಸುಮಾರು ೨೫೦೦ ಕೆಲಸಗಾರರ ಮನೆತನಗಳ ಆಯವ್ಯಯಗಳನ್ನು ಪರೀಕ್ಷಿಸಿ ೧೦೦ಕ್ಕೆ ೭೦ ಮನೆತನಗಳು ಕುಡುಕರವಿರುತ್ತವೆಂದೂ, ಒಂಟಿಗರಾಗಿರುವ ೭೦೩ಜನರ ಆಯವ್ಯಯಗಳನ್ನು ಪರೀಕ್ಷಿಸಿ ೧೦೦ಕ್ಕೆ ೯೧ ಜನರು ಮದಿರಾಸಕ್ತರಿರುವರೆಂದೂ ೧೯೩೮ರಲ್ಲಿ ಗೊತ್ತುಪಡಿಸಿದ್ದಾರೆ. ಮುಂಬಯಿ ಇಲಾಖೆಯ ಶೇತಕೀ ಖಾತೆಯ ಮುಖ್ಯಾಧಿಕಾರಿ (Director of Agriculture) ಗಳಾದ ಡಾಕ್ಟರ ಮ್ಯಾನ್ (Dr. Mann) ಸಾಹೇಬರು ಟ್ಯಾಕ್ಸೇರನ್ನ ಕಸೊ

ಟಿಯ ಎದುರಿಗೆ ಕೊಟ್ಟ ತಮ್ಮ ಸಾಕ್ಷಿಯಲ್ಲಿ ಹೀಗೆ ಹೇಳಿದ್ದಾರೆ. ಸುರತ ಜಿಲ್ಹೆಯಲ್ಲಿ ಬೆಲೆಯುಳ್ಳ ಭೂಮಿಗಳು ರೈತರ ಕೈಬಿಡ ಹತ್ತಿವೆ. ಏಕೆಂದರೆ ರೈತರು ಕುಡುಕರಾಗಿದ್ದಾರೆ. ಇದೇ ಕಾರಣದಿಂದ ಅವರು ಅಶಕ್ತರಾಗಿದ್ದಾರೆ ಹಾಗೂ ಸಾಲದ ಹೊರೆ ಹೊತ್ತು ಬಳಲುತ್ತಿದ್ದಾರೆ. ಶ್ರೀ. ಜಿ. ಕೇ. ದೇವಧರರು ಕೊಂಕಣದಲ್ಲಿಯ ರೈತರ ಸ್ಥಿತಿಯನ್ನು ಪರಿಶೀಲಿಸಿ ಹೀಗೆ ಬರೆದಿದ್ದಾರೆ—

"Their financial position is not as good as it should be because of the habit of drink to which they are generally addicted".

ಸಾರಾಂಶ ಕೊಂಕಣದಲ್ಲಿಯ ಜನರು ಮದಿರಾಸಕ್ತರಾಗಿದ್ದುದರಿಂದ ಅವರ ಸಾಂಪತ್ತಿಕ ಸ್ಥಿತಿಯು ಇರಬೇಕಾದಷ್ಟು ಚೆನ್ನಾಗಿಲ್ಲ. ಮುಂಬಯಿಯ ಮುಖ್ಯ ದೈನಿಕ ಪತ್ರವಾದ ಟಾಯಿಮ್ಸ್ ಆಫ್ ಇಂಡಿಯಾದ ಒಂದು ಕಾಲಕ್ಕೆ ಸಂಪಾದಕರಿದ್ದ ಸರ್ ಸ್ಟ್ಯಾನ್ಲೆರೀಡ (Sir Stauley Read) ಇವರ ಅಧ್ಯಕ್ಷತೆಯಲ್ಲಿ ಕೂಡಿದ Industrial Disputes Committee ಯವರು ತಮ್ಮ ವರದಿಯಲ್ಲಿ ಹೀಗೆ ಬರೆದಿದ್ದಾರೆ.

"Eevery witness has borne testimony to the demoralisation caused by the drink habit."

ಸಾರಾಂಶ–ಸರಾಯಿಯ ವ್ಯಸನದಿಂದ ಜನತೆಯ ಅಧೋಗತಿಯಾಗಿದೆಯೆಂದು ಪ್ರತಿಯೊಬ್ಬ ಸಾಕ್ಷಿದಾರನು ಹೇಳಿದ್ದಾನೆ.

ಪರದೇಶಗಳಿಂದ ಬರುವ ಸರಾಯಿಯ ಸಡಗರವನ್ನು ಕೆಳಗೆ ಕೊಟ್ಟ ಅಂಕಿಗಳು ಸಾರುತ್ತವೆ.

| ವರ್ಷ. | ಬೀರ ಹಾಗೂ ಬೇರೆ ಫರ್ಮೆಂಟೆಡ್ ಲಿಕರಗಳು ಗ್ಯಾ. | ವಾಯಿನಗಳು ಗ್ಯಾ. | ಸ್ಪಿರಿಟುಗಳು ( ಡಿನೇಚರ್ಡ ಹೊರ್ತುಪಡಿಸಿ ) ಗ್ಯಾ. | ಡಿನೇಚರ್ಡ ಸ್ಪಿರಿಟುಗಳು ಗ್ಯಾ |
|---|---|---|---|---|
| ೧೯೨೩–೨೪ | ೨೮,೬೬,೩೧೬ | ೨,೨೫,೩೩೬ | ೧೩,೦೦,೨೪೯ | ೩,೬೬,೩೫೮ |
| ೧೯೨೪–೨೫ | ೩೩,೫೧,೭೮೪ | ೩,೦೯,೭೩೦ | ೧೩,೨೮,೭೩೮ | ೩,೩೦,೩೮೧ |
| ೧೯೨೫–೨೬ | ೩೫,೧೦,೭೬೯ | ೨,೭೪,೪೪೫ | ೧೪,೨೭,೦೦೧ | ೪,೮೨,೦೮೧ |
| ೧೯೨೬–೨೭ | ೩೮,೩೦,೦೩೦ | ೨,೯೫,೭೨೦ | ೧೪,೭೩,೭೫೪ | ೬,೬೧,೭೩ |
| ೧೯೨೭–೨೮ | ೪೪,೯೯,೮೧೪ | ೩,೦೪,೧೪೧ | ೧೪,೦೩,೩೮೮ | ೯,೧೧,೧೨೫ |

ನಾನಾ ವಿಧವಾದ ನಾಮಾಭಿಧಾನಗಳನ್ನು ಧರಿಸಿಕೊಂಡು ಪರದೇಶಗಳಿಂದ ಬರುವ ಸರಾಯಿಗಳಿಗೆ ನಮ್ಮ ವಾಙ್ಮಯದಲ್ಲಿ ಹೆಸರುಗಳಿಲ್ಲ. ಈ ಸರಾಯಿಗಳನ್ನು ಬಣ್ಣಿಸಿ ಹೇಳುವದರಿಂದ ಪ್ರಯೋಜನವಿಲ್ಲೆಂದು ಅದರ ಗೋಜಿಗೆ ಹೋಗದೆ ಪರದೇಶಿಯರು ಇಟ್ಟ ಹೆಸರಿನಿಂದಲೇ ನಾವೂ ಕರೆದಿದ್ದೇವೆ.

ಪರದೇಶಿ ಸರಾಯಿಗಳಿಂದ ಬರುವ ಜಕಾತಿಯ ಉತ್ಪನ್ನವನ್ನು ನೋಡಿರಿ.

| ವರ್ಷ. | ಎಲ್ಲ ತರದ ಪೇಯ (Potable) ಸರಾಯಿಗಳು ಇದರಲ್ಲಿ ಸುವಾಸಿಕ ಸರಾಯಿಗಳು ಸಹ ಕೂಡಿವೆ. | ಡಿನೇಚರ್ಡ ಸ್ಪಿರಿಟ್. |
|---|---|---|
| ೧೯೨೩–೨೪ | ೨,೨೫,೫೨,೮೭೮ | ೬೫,೯೩೦ |
| ೧೯೨೪–೨೫ | ೨,೪೯,೯೦,೧೧೫ | ೪೨,೦೮೬ |
| ೧೯೨೫–೨೬ | ೨,೫೩,೩೫,೯೪೦ | ೬೩,೦೯೫ |
| ೧೯೨೬–೨೭ | ೨,೬೦,೪೭,೭೭೦ | ೮೩,೭೧೪ |
| ೧೯೨೭–೨೮ | ೨,೫೪,೯೮,೬೭೨ | ೯೯,೪೩೬ |

ಪರದೇಶಗಳಿಂದ ಬರುವ ಸರಾಯಿಯು ಅರ್ಧದಷ್ಟಕ್ಕೆ ಕೇವಲ ಹಿಂದೀಜನರು ಗಿರಾಕಿಗಳಿದ್ದಾರೆಂದು ತಜ್ಞರ ಮತ! ಪರಕೀಯರಲ್ಲಿಯ ಅವಗುಣಗಳನ್ನಷ್ಟು ಅನುಕರಿಸುವ ಗುಣವು ಬಹು ಕಾಲದಿಂದ ದಾಸ್ಯದಲ್ಲಿದ್ದ ಸ್ವಾಭಿಮಾನಶೂನ್ಯರಾದ ಹಿಂದೀಜನರಲ್ಲಿ ದೃಢವಾಗಿ ನೆಲೆಗೊಂಡುದರಿಂದ ಪರದೇಶೀಯ ಮದ್ಯದ ಸೇವನದ ವ್ಯಸನವು ಇವರಲ್ಲಿ (ಅದರಲ್ಲಿ ವಿಶೇಷತಃ ಸುಶಿಕ್ಷಿತರಲ್ಲಿ) ಹೆಚ್ಚು ಹಬ್ಬಿದೆ. ಸ್ಟೇಟ ಸೆಕ್ರೆಟರಿಯವರುರ್ಗಗಳರಲ್ಲಿಯೇ ಹೀಗೆ ಉದ್ಗಾರ ತೆಗೆದಿದ್ದಾರೆ:—

There is some evidence among the educated classes that the tendency to imitate western manners may serve to weaken the influence of traditional restrictions"

ಸಾರಾಂಶ: ಹಿಂದೀ ಸುಶಿಕ್ಷಿತ ಜನರು ಪಾಶ್ಚಾತ್ಯರ ಅನುಕರಣ ಮಾಡುವದರಿಂದ ಸರಾಯಿಯ ಸೇವನದ ನಿಷೇಧದ ಬಗ್ಗೆ ಇದ್ದ ಪೂರ್ವಪರಂಪರೆಯ ವರ್ಚಸ್ಸು ಕಳೆಗುಂದಹತ್ತಿದೆ.

ಹೊಸ ಸುಧಾರಣೆಗಳಿಂದ ಪರದೇಶಗಳಿಂದ ಬರುವ ಸರಾಯಿಯ ಮೇಲಿನ ಆಧಿಪತ್ಯವು ಪ್ರಾಂತಿಕ ಸರಕಾರದ ಕಡೆಗಿಲ್ಲ. ಅದನ್ನು ಹಿಂದುಸ್ಥಾನ ಸರಕಾರದವರು ತಮ್ಮಕಡೆಗೆ ಇಟ್ಟುಕೊಂಡಿದ್ದಾರೆ. ಇದರ ಕಾರಣವೇನು? ಈ ಲೇಖಕ್ಕೆ ಕೆಲವುಮಟ್ಟಿಗೆ ಆಧಾರಭೂತವಾದ ದಿ ರೆವ್ಹರಂಡ ಎಡ್ವರ್ಡರ ಲೇಖದಲ್ಲಿ ಅವರು ಈ ಪ್ರಶ್ನೆಗೆ ಕೊಟ್ಟ ಉತ್ತರವನ್ನೇ ಇಲ್ಲಿ ಕೊಡುವೆವು. ಅವರ ಎಲ್ಲ ಅನುಮಾನಗಳು ಹಾಗೂ ಎಲ್ಲ ಮತಗಳು ಈ ಬರಹಗಾರರಿಗೆ ಸಮ್ಮತವಿಲ್ಲ. ಆದರೂ ಅವುಗಳು ವಿಚಾರಾರ್ಹವಿರುವದರಿಂದ ಇಲ್ಲಿ ಅವುಗಳನ್ನು ಕೊಡುತ್ತೇವೆ. ಹೊಸ ಸುಧಾರಣೆಗಳ ಕರ್ತರಾದ ಮಾಂಟೆಗ್ಯೂ. ಜೇಮ್ಸಫರ್ಡರು ಪರದೇಶಗಳಿಂದ ಬರುವ ಸರಾಯಿಯ ಮೇಲಿನ ಜಕಾತಿಯ ಒಡೆತನವನ್ನು ಹಿಂದುಸ್ಥಾನ ಸರಕಾರಕ್ಕೆ ಕೊಟ್ಟ ಮುಖ್ಯ ಉದ್ದೇಶವು ಸುಧಾರಣೆಯು ಮಾತ್ರವಲ್ಲ. ಪರದೇಶೀ ಸರಾಯಿಯು ಪರಕೀಯರಿಗೆ ಅಂದರೆ ಯುರೋಪಿಯನ್ನರಿಗೆ ಬೇಕಾಗುತ್ತದೆ. ಅವರಿಗೆ ಬೇಕಾದಷ್ಟೇ ಸರಾಯಿಯು ಮಾತ್ರ ಪರದೇಶಗಳಿಂದ ಬರಬೇಕೆಂದಿದೆ. ಆದರೆ ಪರದೇಶಿ ಸರಾಯಿಯ ಆಯತವು ಬೆಳೆದಂತೆ ಬ್ರಿಟಿಷ ದ್ವೀಪಸಲ್ಲಿ ಖರ್ಚಾಗುವ ಸರಾಯಿ ಪ್ರಮಾಣವು ಕಡಿಮೆಯಾಗುತ್ತ ನಡೆದಿದೆ. ಇದರಿಂದ ಹಿಂದೀಜನರಿಗೆ ಪರದೇಶಿ ಸರಾಯಿಯ ಸವಿಯು ಚನ್ನಾಗಿ ಹತ್ತಿದೆಯೆಂದು ತೋರುತ್ತದೆ. ಪರದೇಶೀ ಸರಾಯಿ ನಿಯಂತ್ರಣವನ್ನು ಕೂಡ ಮಂತ್ರಿಗಳ ಸ್ವಾಧೀನಕ್ಕೆ ಕೊಡಬೇಕು. ಇಲ್ಲದಿದ್ದರೆ ಇತ್ತ ಪ್ರಾಂತಿಕ ಸರಕಾರದವರು ದೇಶೀ ಸರಾಯಿಯ ಖರ್ಚನ್ನು ನಿಲ್ಲಿಸಿಬಿಡಲು ತೊಡಗಿದರು. ಅತ್ತ ಹಿಂದುಸ್ಥಾನ ಸರಕಾರದವರು ಪರದೇಶೀ ಸರಾಯಿಯು ಮೊದಲಿನಂತೆ ಬರಲಿಕ್ಕೆ ಮುಕ್ತದ್ವಾರ ಮಾಡುವರು. ಹೀಗಾಗಿ ಪರದೇಶೀ ಸರಾಯಿಗೆ ಹೆಚ್ಚು ಉತ್ತೇಜನ ಕೊಟ್ಟಂತಾಗುತ್ತದೆ.

ಮದ್ಯಪಾನ ನಿಷೇಧದ ವಿಷಯವಾಗಿ ಇದ್ದ ಸರಕಾರೀ ಧೋರಣವನ್ನು ನಿಷೇಧಿಸುವದಕ್ಕಾಗಿ ಮುಂಬಯಿ ಕಾಯಿದೆ ಮಂಡಲದಲ್ಲಿ ಅಬಕಾರೀ ಖಾತೆಯ ಖರ್ಚಿನಲ್ಲಿ ೧೦೦ ಕಡಿಮೆ ಮಾಡಬೇಕೆಂದು ಧಾರವಾಡದ ಶ್ರೀ **ಜೋಗರವರು** ತಂದ ಸೂಚನೆಯು ಮಂಜೂರಾಯಿತು. ಆದರೆ ಹಿಂದೂಧರ್ಮದಲ್ಲಿ ಸಂಪೂರ್ಣ ಶ್ರದ್ಧೆಯುಳ್ಳ, ಶ್ರೀ ಸಿದ್ಧಾರೂಢಸ್ವಾಮಿಗಳ ಪ್ರಿಯ ಶಿಷ್ಯರಾದ, ಸರಕಾರದ ಪ್ರೀತಿ ಹಾಗೂ ಆದರಕ್ಕೆ ಪಾತ್ರರಾದ ಸರ ವಸಂತರಾವ ದಾಭೋಳಕರ ಇವರು ಈ ಸೂಚನೆಯನ್ನು ವಿರೋಧಿಸಿದರು. ಮತ್ತು ಆಗ ಮುತ್ತಿನಂಥ ಭಾಷಣವನ್ನು ಮಾಡುವಾಗ ಹಿಂದೂಧರ್ಮವು ಸರಾಯಿಯನ್ನು ಕುಡಿಯಬಾರದೆಂದು ಹೇಳುವದಿಲ್ಲೆಂದು ಸಾರಿದರು. ದೇವತೆಗಳಿಗೆ ಸಹ ಸುರೆಯನ್ನು ಅರ್ಪಿಸುವ ಪರಿಪಾಠವಿದೆಯೆಂದು ಗದ್ದರಿಸಿದರು. ಆದರೆ ಇವರಂತೆಯೇ ಸರಕಾರದ ನಂಬಿಗೆಯನ್ನು ದೊರಕಿಸಿದ ಕರಾಚಿಯವರಾದ ನೂರಮುಹಮ್ಮದ ಸಾಹೇಬರು ಸರಾಯಿಯ ಪ್ರಸಾರವನ್ನು ಮುಸಲ್ಮಾನ ಸಭಾಸದರಲ್ಲಿ ಒಬ್ಬನು ಸಹ ಸಮರ್ಥಿಸುವದು ಶಕ್ಯವಿಲ್ಲೆಂದು ಗರ್ಜಿಸಿದರು. ಆಳರಸರ ಧೋರಣದ ದಾಸರಾದ ನಿಸ್ತೇಜ ಬಲಹೀನರಾದ ಜನಗಳಿಂದ ಮದ್ಯಪಾನ ನಿಷೇಧದಂಥ ಕೆಲಸವು ಕೊನೆಗಾಣುವದಿಲ್ಲ. ಮಹಾತ್ಮಾಜಿಯವರ ಶಾಲೆಯಲ್ಲಿ ಕಲಿತು ಪರೀಕ್ಷೆಕೊಟ್ಟು ತೇರ್ಗಡೆ ಹೊಂದಿದ, ಉಜ್ವಲ ಚಾರಿತ್ರ್ಯದ ಚಿಲಕತ್ತನ್ನು ತೊಟ್ಟ ಹಿಂದೂ ಮುಖಂಡರು ಮುಂದಾಗಿ ಈ ಅತ್ಯಂತ ಘಾತಕ ವ್ಯಸನವನ್ನು ನಿಲ್ಲಿಸಲಿಕ್ಕೆ ಪ್ರಯತ್ನಿಸಬೇಕು. ಅಂಥ ಮುಂದಾಳುಗಳ ಹೇಳಿಕೆಯಂತೆ ಕೆಲಸ ಮಾಡಲಿಕ್ಕಾದರೂ, ಸಾಮಾನ್ಯಜನರು ಸಿದ್ಧರಾದರೆ ಸಮಾಜದ ಉದ್ಧಾರವಾಗಲಿಕ್ಕೆ ವಿಳಂಬವಾಗಲಿಕ್ಕಿಲ್ಲ.

# ನಾರಣದೇವ ಕವಿ

( ಸು. ೧೧೦೮ )



ಲೇಖಕ:- ಪ್ರೊ, ಕೇ. ಜಿ. ಕುಂದಣಗಾರ ಎಮ್. ಎ., ರಾಜಾರಾಮಕಾಲೇಜ, ಕೊಲ್ಹಾಪೂರ.

ಈತನು ಹಾವೇರಿಯ ಶಾಶನವನ್ನು ಬರೆದಿದ್ದಾನೆ. "ವಿಪ್ರ ವಂಶಾಗ್ರಣಿ" "ಪಾರ್ವತೀ ವಲ್ಲಭ ಪದಯುಗಳಾರಾಧಕಂ" ಎಂದು ಹೇಳಿಕೊಂಡಿರುವುದರಿಂದ ಸ್ಮಾರ್ತ ಬ್ರಾಹ್ಮಣನು ವಿಶ್ವಾಮಿತ್ರ ಗೋತ್ರದವನು. ಪವಿತ್ರವಾದ ಅಂತಃಕರಣವುಳ್ಳವನು. "ಸತ್ಕವೀಂದ್ರ ಸ್ತುತಂ" ಎಂದು ಹೇಳಿಕೊಂಡಿರುವುದರಿಂದ ಪ್ರಸಿದ್ಧನಾದ ಕವಿಯಾಗಿರಬೇಕು. ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು. ಹಾವೇರಿಯ ಶಾಸನವನ್ನು ಬರೆದಿದ್ದಾನೆ. ಈ ಸಂಗತಿಗಳೆಲ್ಲ ಅದರಲ್ಲಿನ ಕೊನೆಯ ಪದ್ಯದಿಂದ ತಿಳಿಯುತ್ತವೆ. ಅದನ್ನು ಇಲ್ಲಿ ಉದಹರಿಸುತ್ತೇನೆ.

" ಪ್ರಣುತಾರ್ಥಂ ಹೃದ್ಯಮೀಪದ್ಯನಿಚಯಮೆನೆ
ಪೇಳ್ದಂ ಮನಂಗೊಂಡು ವಿದ್ವತ್
ಗಣಮತ್ಯಾನಂದದಿಂ ಬಣ್ಣಿಸೆ ಬರೆದನಿದಂ
ಸತ್ಕವೀಂದ್ರಸ್ತುತಂ ನಾ॥
ರಣದೇವಂ ಪಾರ್ವತೀವಲ್ಲಭ ಪದಯುಗಳಾರಾಧಕಂ
ವಿಪ್ರವಂಶಾ
ಗ್ರಣಿ ವಿಶ್ವಾಮಿತ್ರ ಗೋತ್ರಾಂಬುರುಹವನ
ಪತಂಗಂ ವಿಶುದ್ಧಾನ್ತರಂಗಂ॥

ಈತನು ಚಾಲುಕ್ಯ ವಿಕ್ರಮರಾಜನ ಕಾಲದವನು. ಬನವಾಸೀ ದೇಶದವನು. ಬನವಾಸೀ ದೇಶವು ( ಬನವಸೆ ೧೨೦೦೦ ) ಆ ಕಾಲದಲ್ಲಿ ನಿಂಬರಸನೆಂಬ ಅಧಿಕಾರಿಯ ಆಡಳಿತೆಗೆ ಒಳಪಟ್ಟಿದ್ದರೂ ಕದಂಬ ತೈಲಪನು ಆ ಭಾಗದ ಮಹಾಮಂಡಲೇಶ್ವರನಾಗಿದ್ದನು. ಪ್ರಸ್ತುತ ಶಾಸನದಲ್ಲಿ ನಿಂಬರಾಜನೇ ವರ್ಣಿತನಾಗಿದ್ದಾನೆ. ಈ ಶಾಸನವು ಶಕ ೧೦೩೦ ಅಂದರೆ ಕ್ರಿ. ಶಕದ ೧೧೦೮ರ ಸರ್ವಧಾರಿ ಸಂವತ್ಸರದಲ್ಲಿ ಬರೆದುದು.

ಈ ಶಾಸನದಿಂದ ಕೆಲವು ಪದ್ಯಗಳನ್ನು ಆಯ್ದು ಕೆಳಗೆ ಕೊಡುತ್ತೇವೆ.

### ಮಾಧವಭಟ್ಟ

ಈ ಧರಣೀತಳಂ ಪ್ರತಿದಿನಂ ಸಲೆ ಬಣ್ಣಿಸುಗುಂ ಪ್ರಚಂಡ ದಂ
ಡಾಧಿಪನಂ ವಿದಗ್ಧಬುಧಮಾಗಧ ರಕ್ಷಕನಂ ವಿವೇಕ ವಿ॥
ದ್ಯಾಧರನಂ ಮಹಾಮಹಿಮನಂ ಸುಚರಿತ್ರ,
ಪವಿತ್ರಗಾತ್ರನಂ
ಮಾಧವಭಟ್ಟನಂ ಬುಧಲಲಾಟಸ್ಥಿತ ರತ್ನಪಟ್ಟನಂ ॥ ೧ ॥
ಪ್ರಭುಲಕ್ಷಣದೊಳ್ ಸಂತತ
ವಿಭವದೊಳಭಿಮಾನದೊಳ್ ವಿಶುದ್ಧಜ್ಞಾನ ॥
ಪ್ರಭೆಯೊಳ್ ವಾಕ್‌ಶ್ರೀರಮಣೀ
ವಿಭು ಮಾಧವಭಟ್ಟನೆಸೆದನಖಿಳೋರ್ವರೆಯೊಳ್ ॥ ೨ ॥
ಅವಿದಗ್ಧಮುಗ್ಧಗಣಿಕಾ ಮನೋಜನ ಮನೋನಯನ
ವಲ್ಲಭೆ ಕಾಳಿಕಬ್ಬೆ;—
ರತಿಗಮರುಂಧತಿಗಂ ವಾಕ್
ಸತಿಗಂ ರೂಪಿನೊಳುದಾತ್ತ ಪತಿಭಕ್ತಿಯೊಳ
ನ್ವಿತ ಸಕಳಕಳಾಗಮ ಪರಿ
ಣತಿಯೊಳ್ ಸತಿ ಕಾಳಿಕಬ್ಬೆ ಮಿಗಿಲೆನೆ ನೆಗಳ್ದಳ್ ॥ ೩ ॥
ಸರಸಿಜಸಂಭವಂ ಬರೆದು ನಿರ್ಮಿಸಿದಂ ಸ್ಮರನಳ್ಕರಿಂದೆ
ವಿಸ್ತರಿಸಿದನೆಯ್ದೆ ಸಂಪದಮನುದ್ಭವಮುಂ ಸುಭಗಂ
ವಿಳಾಸಮಂ ॥
ಸರಸಕಳಾಪ್ರವೀಣತೆಯನೆಂಬಿನಮುನ್ನತಿವೆತ್ತ ಕಾಳಿಕ
ಬ್ಬರಸಿಯ ರೂಪನಾಂ ನೆರೆಯೆ ಬಣ್ಣಿಪೆನೆಂಬವನೆಗ್ಗ
ನಲ್ಲನೆ ॥ ೪ ॥
ಅವರ್ಗಳ ತನಯಂ ನಿಂಬಂ;
ಅನ್ತವರ್ಗೆ ಮುದಮುಮೊಳ್ಪಂ
ಸನ್ತತಮಭಿವೃದ್ಧಿಯುಂ ಮಹಾವಿಭವಮುಮ ॥
ನ್ತೆಂತಂ ಜನಯಿಸೆ ಜನಯಿಸಿ
ದಂ ತನಯಂ ನಿಂಬನಧಿಕಮಹಿಮಾಳಂಬಂ ॥ ೫ ॥
ಹರಚರಣ ಸ್ಮರಣಾಂತಃ
ಕರಣಂ ಸಾಕ್ಷರಿಕ ಜನಸಮುದ್ಧರಣನಿವಂ ॥
ಪರಮಾರ್ಥಮೆಂದು ಸತಿನಿಂ
ಬರಸನನುತ್ಕೃಷ್ಟಶಿಷ್ಟನಿಕರಂ ಪೊಗಳ್ಗುಂ ॥ ೬ ॥
ಪತಿಹಿತನೇ ? ಮರುತ್ತನಯ,– ಸಾಹಸಧೀರನೆ ?
ಸವ್ಯಸಾಚಿ, ವಿ

ಕ್ಕತಿಶಯರೂಪನೇ ? ಕುಸುಮಸಾಯಕನುನ್ನತನೇ ?
ಸುರಾಚಳಂ, ॥
ನಿತರಣಶೀಳನೇ ? ರವಿಜನುತ್ತಮನೆ ?
ಮನುಮಾರ್ಗನೆಂದು ಪಂ
ಡಿತಜನಮೆಯ್ಸೆ ಬಂಣಿಪುದು ನಿಂಬನನೀವಸುಧಾತಳಾ
ಗ್ರದೊಳ್ ॥ ೭ ॥

ಧುರದೊಳಿದಿರಾದ ವೈರಿಗೆ
ಪುರಹರನಿಟಿಳಾಂಬಕಾನಳಂ, ಶರಣೆಂದಾ ॥
ದ್ಪುಸಿದಡಂಬುಧಿ, ವಂದಿಗೆ
ಸುರತರು, ಸರಿ ಸಾಟಿ ಸಮನೆನಿಸ್ಪಂ ನಿಂಬಂ ॥ ೮ ॥

ಪಂಬಲಿಸಲ್ಕೆವೇಡ ಸಿರಿ–ಭಾನುಸುತ–ಪ್ರಭುಖೇಚರಾಧಿರಾ
ಜಂ ಬಲಿಯೆಂಬ ದಾನಿಗಳಸಾದರದಿಂದಮೆ
ವಂದಿ ಬೇಡು ನೀಂ ॥
ಸಂಬರಸೂದನಪ್ರತಿಮರೂಪನನಪ್ರತಿಮಪ್ರತಾಪನಂ
ನಿಂಬನನಾನತ............ನುದ್ಘ ಗುಣಾವಳಂಬನಂ ॥ ೯ ॥

ಕಂಬುಗ್ರೀವದ ಪೀನನಿ
ತಂಬದ ತೆಳ್ಪಸಿರ ಪಲ್ಲವಾಧರದ ಚಕೋ ॥
ರಾಂಬಕಯುಗಳದ ಸುವತಿಗೆ
ಸಂಬರಹರಶರಸಮಾನನಲ್ಲನೆ ನಿಂಬಂ ॥ ೧೦ ॥

ನಿಂಬರಾಜನು "ಸಾಕ್ಷರಿಕ ಜನಸಮುದ್ಧರಣಂ" ಎಂದು ಸಂಬೋಧಿಸಲ್ಪಟ್ಟಿರುವದರಿಂದ ಈತನ ಆಸ್ಥಾನದಲ್ಲಿ ಅನೇಕ ಪಂಡಿತರೂ ಕವಿಗಳೂ ಇದ್ದರೆಂಬುದು ಸಿದ್ಧ. ಆದರೆ ಅವರ ಹೆಸರುಗಳಾವುವೂ ದೊರೆತಿಲ್ಲ. ಅವರ ಕಾವ್ಯಗಳೂ ದೊರೆತಿಲ್ಲ. ಇದಕ್ಕೆ ಕಾರಣವೆಂದರೆ ಆ ಕಾಲದಲ್ಲಿ ಚೋಳರು ಮಾಡಿದ ಉಪಟಳವು. ಕದಂಬರಾಜರ ಆಶ್ರಯದಲ್ಲಿದ್ದ ಕವಿಗಳ ಹೆಸರುಗಳು ಕವಿಚರಿತೆಯಲ್ಲಿ ತೀರ ಕಡಿಮೆಯಾಗಿವೆ. ರಾಜರು ಮಾತ್ರ ಕವಿಗಳಿಗೆ ಆಶ್ರಯ ಕೊಡುತ್ತಿದ್ದರೆಂದೂ, ಕೆಲವು ರಾಜರೂ ಕವಿಗಳಾಗಿದ್ದರೆಂದೂ ಶಾಸನಗಳಿಂದ ತಿಳಿಯುತ್ತಲಿದೆ. ನಾರಣದೇವನ ಸಮಕಾಲೀನನಾದ ಕಂದರ್ಪದೇವನೊಬ್ಬನು ಹಳ್ಳಿಹಾಳದ ಒಂದು ಶಾಸನವನ್ನು ಬರೆದಿದ್ದಾನೆ. ಕವಿಚರಿತೆಯ ಮೂರನೆಯ ಭಾಗದಲ್ಲಿ ಈತನ ಹೆಸರು ಬಂದಿದೆಯಾದ್ದರಿಂದ ಈತನ ವಿಷಯವನ್ನು ಇಲ್ಲಿ ಎತ್ತುವದಿಲ್ಲ. ಈ ಶಾಸನದಿಂದ ಪದ್ಯಗಳನ್ನು ಆಯ್ದುಕೊಳ್ಳಬೇಕೆಂದರೆ ಅವು ಬಹಳ ಅಶುದ್ಧವಾಗಿವೆ.

ಈ ಶಾಸನಗಳ ಪ್ರತಿಗಳನ್ನು ನನ್ನ ಕಡೆಗೆ ಕಳುಹಿದುದಕ್ಕಾಗಿ ಮತ್ತು ಈ ಪುಟ್ಟ ಕವಿಚರಿತೆಯನ್ನು ಓದುಗರ ಮುಂದಿಡಲು ಒಪ್ಪಿಗೆಯನ್ನು ಕೊಟ್ಟುದಕ್ಕಾಗಿ ಹಾವೇರಿಯ ಅಯ್ಯನವರ ಗುಂಪಿಗೂ ವಂದನೆಗಳನ್ನರ್ಪಿಸುತ್ತೇನೆ.

# ಕೊಳಗುಳದ ಮನವಿ*



ಕವಿ:-ಶ್ರೀ ಗೋವಿಂದ ಪೈ, ಮಂಜೇಶ್ವರ.

೧

ಕರೆವೆ ನಾ ನಿನ್ನನೊಡೆಯಾ !
ನಿನ್ನ ಹೆಸರು ಕೊಂಡು ಸಿಂದೆನಿದೊ ಸಿಡಿಗುಂಡು
ನೂರ್ಪ ಮಾರ್ಪೊರಸೆ ಕಾರ್ಮೊಳಗನುರ್ವರಿಯಿಂ,
ಕಿಸುಬಾಯನಾಕಳಿಸಿ, ದೆಸೆಗಳಂ ಬಾಗುಳಿಸಿ,
ಮಿಂಚೆರಂಚಿ ಪಳಂಚಿ ಮುಂಚೆ ದಳ್ಳುರಿಯಿಂ-
ಪ್ರೋಚ್ಚಂಡ ತಾಂಡವಮೊ ನಿನ್ನದೊಡೆಯಾ ?
ನಿನಗೆ ಮಣಿವ.ಣಿವೆನೊಡೆಯಾ ॥

೨

ನಿನಗೆ ಮಣಿಮಣಿವೆನೊಡೆಯಾ !
ಕಾಳೆಗಳ ಭೋಂಕಾರ, ಢೋಲ್ಗಳ ಧಳಂಕಾರ,
ಹೊಂದುತಿದೆ ಮಂಗಲಾಮಂಗಲಮೊ ತೂರ್ಯಂ ?
ಇದೊ ನಿಶಾಂತ ತುತೂರಿಯೂದಲಿಂತೆದೆ ತೂರಿ-
'ಪರಧುರ್ಯರಿತಿಕಾರ್ಯಮನಿವಾರ್ಯ ಶೌರ್ಯ'
ಜೀವಂತ ಕೋವಿಯಾನೀವೆನೊಡೆಯಾ ?
ಕಾಣಿಸಾಣತಿಯನೊಡೆಯಾ !

೩

ಕಾಣಿಸಾಣತಿಯನೊಡೆಯಾ !
ನಮ್ಮ ಬಾಯಿಂ ತುತ್ತ ಕಸಿವ ಹಸಿವಿಂ ಕುತ್ತ
ಮೆಂತಂತು ಸಂಗ್ರಾಮಸಂಭ್ರಮಾಹ್ವಾನಂ,
ಗೃಹಲಕ್ಷ್ಮಿ ಕೊರಳಾಂತು ಸುರಿದ ನೀರವವೆಂತು
ಅಂತೀ ರಣಾಂಗಣ ಘನಾಘನಧ್ವಾನಂ-
ನಿನ್ನ ನಿಶ್ಶಂಕ ಸಂಕಲ್ಪವೊಡೆಯಾ !
ನೀಡ ರಣದೀಕ್ಷೆಯೊಡೆಯಾ !

೪

ನೀಡ ರಣದೀಕ್ಷೆಯೊಡೆಯಾ !
ವಶಗೆಯ್ಯಲಿಳೆಯೆಲ್ಲ ಮಸಗಿ ಕಾದುವೆನಲ್ಲ-
ಸ್ವಾರಾಜ್ಯವರ್ಜ್ಯಮನ್ಯರ ರಾಜ್ಯಮೇಕೆ ?
ತಾಯ ಸೆರೆಯುಂ ಸವತಳೆಂಮ ವೆರಪಿೂ ಬವರ--
ದಬ್ಬಾಳಿಕೆಯ ಮೆಟ್ಟಡಿಯ ತಬ್ಬಬೇಕೆ ?
ವಿಸ್ಫಾರಿಸೆನ್ನೆದೆಯ ಧಮನಿಯೊಡೆಯಾ !
ತಾರ ಸಮರಾಜ್ಞೆಯೊಡೆಯಾ!

೫

ತಾರ ಸಮರಾಜ್ಞೆಯೊಡೆಯಾ !
ಅನ್ಯದೇಶಾಕ್ರಾಂತಿ-ಸ್ವಪರನಾಶಭ್ರಾಂತಿ
-ಯಿಂ ದ್ವಿಪಕ್ಷದ ರಕ್ಷೆಗೀಕ್ಷಿಸದೆ ಬಗೆಯುಂ,
ರಣಮೊಂದೆ ಶರಣೆಂವೆ ಬಂವೆ, ಮುಂನೆವೆನಿಂವೆ
ತೊಳೆದು ಕಂಬನಿಯೊಳಿಮರಾಳಿಗಳ ಹಗೆಯು:
ಸನ್ನದ್ಧನಾಂ ಧರ್ಮಯುದ್ಧಕೊಡೆಯಾ !
ಬೆಂಬಲಿಸು ನನ್ನೊಡೆಯಾ !

೬

ಬೆಂಬಲಿಸು ನನ್ನನೊಡೆಯಾ !
ಎನ್ನವರೆಗೀ ಪ್ರಾಣಮೆನ್ನವರೆಗೆ ಕೃಪಾಣ
-ಮನ್ನೆಗಂ ಕಾದೆಂದು ಬೀಳ್ಕೊಡೀದೆನ್ನ !
ನೀನೆ ವಿಜಯಧ್ವಜಂ ! ನೀನೆ ಹೃದಯಸ್ರಜಂ
ನೀನೆ, ವಿಷ್ವಕ್ಸೇನ, ಸೇನಾನಿಯೆನ್ನ !-
ಸೋಲುಗೆಲವನ್ನದೇಂ ? ನಿನ್ನದೊಡೆಯಾ !
ಕಾದುವುದೆ ನನ್ನದೊಡೆಯಾ !

೭

ಕಾದುವುದೆ ನನ್ನದೊಡೆಯಾ !
ಸರ್ವಭಾರಮನಂದು ನಿನಗಿರಿಸಿ ತರಿಸಂದು
ನಿನ್ನ ಹೆಸರೆತ್ತುತೆತ್ತುವೆ ಕತ್ತಿಯನ್ನ !
ನಿನ್ನಿಚ್ಛೆ ಎಂತಂತು ಬೆಸಸೆನ್ನನಂತಂತು-
ಜಯಕೆ ಮುನ್ನಡೆಮಿಸಥವಾ ಮರಣಕೆನ್ನ !
ಮರಣಮೆ ವರಂ ಪರಾಶ್ರಯದಿನೊಡೆಯಾ !
ಮುನ್ನಡೆಯಿಸೆನ್ನನೊಡೆಯಾ !

---

* 'Theodor Korner' ಎಂಬ ಜರ್ಮನ್ ಕವಿಯ "Gebet Wahrend der schlacht" (Prayer during the battle) ಎಂಬ ಕವಿತೆಯಿಂದ ಪ್ರೇರಿತವಾದುದು.

೮

ಮುನ್ನಡೆಯಿಸೆನ್ನನೊಡೆಯಾ
ಇಂದು ಜೀವಮನೆನ್ನ ತೆತ್ತೆ ಕೆಯ್ಗಿದೊ ನಿನ್ನ-
ನೀನಿದಂ ನನಗಿತ್ತೆ, ನೀನೆ ಕೊಳಬಲ್ಲೆ !
ಹರಸೆನ್ನನುಳಿಯೆಂದೊ, ಹರಸೆನ್ನನಳಿಯೆಂದೊ-
ಅಳುವ ತಾಯಿಳೆಯೊಳೆನ್ನಳಿವುಳಿವನೊಲ್ಲೆ!
ಇದೆ ಜಲಾಂಜಲಿ ಜೀವಿತಾಶೆಗೊಡೆಯಾ !
ನಿನಗೆನ್ನನಿತ್ತೆನೊಡೆಯಾ !

೯

ನಿನಗೆನ್ನನಿತ್ತೆನೊಡೆಯಾ !
ಸಿಡಿಲ ಸನ್ನೆಯಿನೆನ್ನನಂತಕಂ ಕರೆವನ್ನ,
ಕೆಯ್ಮುಗಿಯುವಲಿ ನಿನಗೆ ಕಣ್ಮುಗಿಯುವೆನ್ನ,
ಜೀವನಂ ಬಸಿವನ್ನ, ಭಾವನಂ ನಸಿವನ್ನ,
ಮೂರ್ಛೆಯಿಂ ನಿನ್ನ ಹೆಸರುಚ್ಚರಿಸದನ್ನ,
ಸ್ವಾಗತಮೆ ತವ ಪದಾಗತನಿಗೊಡೆಯಾ !
ಇದೆ ಕೊನೆಯ ಮನವಿಯೊಡೆಯಾ !

೧೦

ಇದೆ ಕೊನೆಯ ಮನವಿಯೊಡೆಯಾ!
ತಾಯ ಸಂಕಲೆ ಕಡಿಯೆ ಸಂಗಳಿಸದಾಂ ಮಡಿಯೆ,
ನೀನದಂ ತವಕದಿಂ ತರಿವೆಂದು ಬಲ್ಲೆ!
ಮಡಿಯೆ ಜನಿತವ್ಯಕ್ತಿ, ಮಡಿವುದೇನನುರಕ್ತಿ ?-
ತಾಯೊಸಗೆ ತರ್ವಿನಂ ಸ್ವರ್ಗಸುಖವೊಲ್ಲೆ!
ಭವಭವಮನೆನಗಿಲ್ಲಿ ಸಲ್ಲಿಸೊಡೆಯಾ !
ಕರೆವೆ ನಾ ನಿನ್ನನೊಡೆಯಾ !

---

# ತಿರುಳಿಲ್ಲದ ನರಳಾಟ

ಲೇಖಕ:—ಪಂಡಿತ ತಾರಾನಾಥರು, ಸಂಪಾದಕ ಪ್ರೇಮ, ತುಂಗಭದ್ರೆ.

ಲೆಜಿಸಲೆಟಿವ್ ಅಸೆಂಬ್ಲಿಯ ಸದಸ್ಯರಾದ ಎಮ್. ಕೆ. ಆಚಾರ್ಯರು ಶಾರದಾಬಿಲ್ಲು 'ಪಾಸ್' ಆದಂದಿನಿಂದ ಬಹಳ ಕಳವಳಗೊಳ್ಳುತ್ತಿದ್ದಾರೆ. ಸನಾತನ ಧರ್ಮವನ್ನು ಕಾಪಾಡುವದಕ್ಕಾಗಿ ಬಹಳ ಕಷ್ಟಪಡುತ್ತಿದ್ದಾರೆ. ಅಕ್ಟೋಬರ ೩ಲಕ್ಕೆ ಮದ್ರಾಸ ನೇಶನಲ್ ಕಾಲೇಜ ಹಾಲಿನಲ್ಲಿ ದಿವಾನ ಬಹಾದ್ದೂರ ಜಿ. ಆರ್. ರಾಮಚಂದ್ರ ಅಯ್ಯರ್‌ರ ಅಧ್ಯಕ್ಷತೆಯಲ್ಲಿ ಒಂದು ಉಪನ್ಯಾಸವನ್ನು ಕೊಟ್ಟರು. ಅದರ ಸಾರಾಂಶ:—

ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡೋಣದರಿಂದ ಆಗುವ ಹಿತವನ್ನು ತೋರಿಸುವದಕ್ಕೂ ವಯಸ್ಸು ಹೋಗಿ ಮದುವೆ ಮಾಡೋಣದರಿಂದ ಆಗುವ ಅನಾಹುತಗಳನ್ನು ತೋರಿಸುವದಕ್ಕೂ ಕೆಲವು ಲೆಕ್ಕಾಚಾರಗಳನ್ನು ವಿವರಿಸಿದರು. ಇಂಗ್ಲಂಡ, ಅಮೇರಿಕಾ, ಫ್ರಾನ್ಸ, ಜಪಾನ ಮುಂತಾದ ದೇಶಗಳಲ್ಲಿ ಚಿಕ್ಕ ಹುಡುಗಿಯರಿಗೆ ಮದುವೆ ಇಲ್ಲದ್ದರಿಂದ ಮದುವೆಗೆ ಮೊದಲೇ ಎಷ್ಟು ಮಂದಿಗೆ ಮಕ್ಕಳು ಹುಟ್ಟುತ್ತವೆ, ಎಂಬದನ್ನು ಮುಂದಿಟ್ಟರು. ಆ ದೇಶಗಳಲ್ಲಿ ಪ್ರೇಮವೆಂಬದು ಮದುವೆಯಾಗುವವರೆಗೆ ಮಾತ್ರ. ನಮ್ಮಲ್ಲಿಯೋ ಮದುವೆಯೇ ಪ್ರೇಮದ ಮೂಲ ಮತ್ತು ಪ್ರಾರಂಭವೆಂದರು. ವಯಸ್ಸು ಹೋಗಿ ಮದುವೆಯಾಗೋಣದರಿಂದ ಜನತೆಯು ನಾಶವಾಗಿ ಹೋಗುವದು. ೧೩ಕ್ಕೊಳಗಾಗಿಯೇ ಹುಡುಗಿಯರ ಲಗ್ನ ಮಾಡಿದರೆ ಪ್ರೇಮವು ಸಹಜವಾಗಿಯೇ ಬೆಳೆಯುವದು. ಅದನ್ನು ಬಿಟ್ಟು ಪಾಶ್ಚಿಮಾತ್ಯರ ವಿನಾಶಕ ಮಾರ್ಗವನ್ನು ಹಿಂದುಗಳಾದ ನಾವು ಹಿಡಿಯತೊಡಗಿದ್ದೇವೆ. ಅವರಂತೆಯೇ ನಾವೂ ಹಾಳಾಗುವೆವು. ನಮ್ಮ ಧರ್ಮವೂ ಹಾಳಾಗುವದು...ಎಂದರಂತೆ.

ಇವರ ಮಾತುಗಳಿಗೆ ಪರಸ್ಪರ ಸಂಬಂಧವೇ ಇಲ್ಲ. ಇವುಗಳಲ್ಲಿ ವಿಚಾರಿಸತಕ್ಕ ವಿಷಯಗಳು:—

೧. ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾಗೋಣದರಿಂದ ವ್ಯಭಿಚಾರವು ನಡೆಯುವದಿಲ್ಲ. ವಯಸ್ಸು ಹೋಗಿ ಮದುವೆ ಮಾಡೋಣದರಿಂದ ವ್ಯಭಿಚಾರವು ಇತರ ದೇಶಗಳಲ್ಲಿ ಹೆಚ್ಚಿದೆ.

೨. ಆ ದೇಶಗಳಲ್ಲಿ ಪ್ರೇಮವೆಂಬದು ಮದುವೆಯಾಗುವವರೆಗೆ ಮಾತ್ರ. ನಮ್ಮ ದೇಶದಲ್ಲಿಯೋ ಮದುವೆಯೇ ಪ್ರೇಮದ ಮೂಲ ಮತ್ತು ಪ್ರಾರಂಭ.

೩. ಇತರ ದೇಶಗಳ ಹಾದಿ ಹಿಡಿಯೋಣದರಿಂದ ಅವರಂತೆ ನಾವೂ ನಾಶವಾಗುವೆವು. ಅವರಂತೆ ನಾವು ಮದುವೆಯನ್ನು ಹುಡುಗಿಯರು ಬೆಳೆದ ಮೇಲೆ ಮಾಡಿದರೆ ಅಂಥ ಮದುವೆಯು ನಮ್ಮಲ್ಲಿ ನೀಚಾವಸ್ಥೆಯನ್ನುಂಟುಮಾಡುವದು. ( Late marriage will bring about degeneration.)

೪. ಸನಾತನ ಧರ್ಮವು ಕೆಟ್ಟಿತು.

ಇವುಗಳಲ್ಲಿ ಒಂದೊಂದನ್ನೇ ವಿಮರ್ಶಿಸೋಣ.

೧. ವ್ಯಭಿಚಾರವನ್ನು ಮಾಡಲಿಕ್ಕೆ ವಯಸ್ಸಿನ ಪ್ರೇರಣೆಯು ಬೇಕು. ಅನುಕೂಲ ಸಂದರ್ಭಗಳು ಬೇಕು. ಇವೆರಡು ಇದ್ದು ಎಲ್ಲಿ ಜೀವಿತದ ಕಾಮಾಂಗವು ನಿಷ್ಕಾಪರವಾಗಿರುತ್ತದೋ ಅಲ್ಲಿ ವ್ಯಭಿಚಾರವಿಲ್ಲವೆಂದರೆ ನ್ಯಾಯ. ಇವೆರಡೂ ಇಲ್ಲದೆ ಹೊಟ್ಟೆಬಟ್ಟೆಗಳಿಗೆ ಸಹ ಪರಾಧೀನರಾಗಿರುವ ಹುಡುಗಿಯರ ಗುಣವನ್ನು ವರ್ಣಿಸುವದಕ್ಕಿಂತಲೂ ಅವರ ಗೋಳನ್ನು ಕಂಡು ಪರಿಶೀಲಿಸುವದುತ್ತಮ. ಹೊಟ್ಟೆ ಬಟ್ಟೆಗಳ ಚಿಂತೆ, ಅಶಿಕ್ಷಿತ ಬುದ್ಧಿ, ಗಂಡನ ಪ್ರೀತಿಗಿಂತಲೂ ಹೆಚ್ಚಾದ ಭೀತಿ, ಸಂಘದ ದಬ್ಬಾಳಿಕೆ, ಕಾನೂನಿನಲ್ಲಿ ಅಗೌರವ ಸಮಾಜದ ಅಪರಿಚಯ, ಚಿಕ್ಕಂದಿನಿಂದಲೂ ಮನದಲ್ಲಿ ಮನೆ ಮಾಡಿಕೊಂಡ ಮೂಢ ಭಕ್ತಿ ಇವೆಲ್ಲವುಗಳ ಮೂರ್ತಿಯಾದ ಹುಡುಗಿಯರನ್ನು ಸಕಲ ಸ್ವಾತಂತ್ರ್ಯ ಸೌಕರ್ಯಗಳೂ ಉಳ್ಳ ಪಾಶ್ಚಿಮಾತ್ಯ ಹುಡುಗಿಯರೊಡನೆ ಸರಿ ಹೋಲಿಸುವದು ಯುಕ್ತವೇ ಅಲ್ಲ. ಚಿಕ್ಕ ಹುಡುಗಿಯರ ವಿಷಯದಲ್ಲಿ ವ್ಯಭಿಚಾರದ ಪ್ರಶ್ನೆಯೇ ಏಳುವದಿಲ್ಲ. ಅವರಂತೆ ಇವರೂ ಇದ್ದರೆ ಹೇಗಿರುವರೋ ಮುಂದೆ ನೋಡಬೇಕು.

ಅಂದರೆ ಮೊದಲು ಹಾಳಾಗಗೊಡಬೇಕೋ, ನಮ್ಮ ಹುಡುಗಿಯರನ್ನು — ಎಂದು ಒಂದು ಪ್ರಶ್ನೆಯು ಸಹಜವಾಗಿ ಬರಬಹುದು. ಅದಕ್ಕಿನ್ನೊಂದು ಪ್ರಶ್ನೆಯೇ ಉತ್ತರ. ೧೨ ವರ್ಷಗಳೊಳಗೆ ಮದುವೆಯಾಗುವದಿಲ್ಲವಾದರೆ ವ್ಯಭಿಚಾರಕ್ಕೆ ಮೊದಲಾಗುತ್ತದೆ ಎಂದಲ್ಲವೆ ಆಚಾರ್ಯರು ಹೇಳುವದು? ಅಂದರೆ ನಮ್ಮ ದೇಶದಲ್ಲಿಯೇ ಆ ರೀತಿ ಮದುವೆಯಾಗದವರು ಎಷ್ಟೋ ಹುಡುಗಿಯರು; ಅವರಲ್ಲಿ ವ್ಯಭಿಚಾರವು ಧಾರಾಳವಾಗಿದೆಯೋ ಹಾಗಾದರೆ? ದೇಶೋದ್ಧಾರಕರಿಗೆ ದೇಶದ ಮಾಹಿತಿಯೆಲ್ಲವೂ ಇರಬೇಕಲ್ಲವೆ? ಹಾಗಾದರೆ ನಮ್ಮ ದೇಶದಲ್ಲಿ ೧೪೦೦೦,೦೦೦ ಜನರು ಮಾತ್ರ ಬ್ರಾಹ್ಮಣರು. ಇವರಲ್ಲಿ ಮಾತ್ರವೇ ಹೆಚ್ಚಾಗಿ ಬಾಲ್ಯ ವಿವಾಹವು ನಡೆಯುವದು. ಅದು ಇವರಲ್ಲಿಯೂ ಸುಶಿಕ್ಷಣದಿಂದಲೋ, ದುಡ್ಡಿಲ್ಲದೆಯೋ ಇತ್ತೀಚೆಗೆ ಕಡಿಮೆಯಾಗುತ್ತಿದೆ. ಧೈರ್ಯದಿಂದ ಹುಡುಗಿಯ ಲಗ್ನವನ್ನು ಮಾಡಿಕೊಡದೆ ಇರುವವರು ಹಲಕೆಲವರು, ಹುಡುಗಿಗೆ ಮೈನೆರೆಯುವ ವಯಸ್ಸಿನ್ನೂ ಆಗಲಿಲ್ಲ ಎಂದು ಸುಳ್ಳು ಹೇಳಿ ಮಾಡದವರು ಎಷ್ಟೋ ಮಂದಿ. ಹಾಗೂ ಹೀಗೂ ಈ ಪುಟ್ಟ ಬ್ರಾಹ್ಮಣ ಸಂಖ್ಯೆಯಲ್ಲಿಯೂ ಬಾಲ್ಯ ವಿವಾಹವು ಕಡಿಮೆಯಾಗುತ್ತಲೇ ಇದೆ. ಇವರ ಹುಡುಗಿಯರೆಲ್ಲರೂ ಪವಿತ್ರರೆಂದೆನ್ನೋಣ. ಆದರೆ ಇವರು ೧೪,೦೦೦,೦೦೦ ಇದ್ದರೆ ಬ್ರಾಹ್ಮಣೇತರರು ೧೬೩,೫೦೦,೦೦೦ ಇದ್ದಾರಲ್ಲವೇ? ಇವರಲ್ಲಿ ಬ್ರಾಹ್ಮಣರಂತೆ ಬಾಲ್ಯವಿವಾಹವನ್ನಿಟ್ಟುಕೊಂಡ ವೈಶ್ಯರು, ಅಕ್ಕಸಾಲಿಗರು ಮುಂತಾದ ಹಲಕೆಲವರನ್ನು ತೆಗೆದರೂ ಬ್ರಾಹ್ಮಣರಿಗಿಂತ ಸುಮಾರು ೧೦ರಷ್ಟು ಜನರಿರುತ್ತಾರಷ್ಟೆ ಸನಾತನ ಧರ್ಮಕ್ಕೆ ಸೇರಿದವರು? ಇವರಲ್ಲಿ ಬಾಲ್ಯ ವಿವಾಹವಿಲ್ಲ. ಅಂದಮೇಲೆ ಆಚಾರ್ಯರ ತೀರ್ಮಾನದಂತೆ ಇವರಲ್ಲಿ ವ್ಯಭಿಚಾರವು ತುಂಬಿರಬೇಕಲ್ಲವೆ ಮತ್ತೆ? ಚಿಕ್ಕ ವಯಸ್ಸಿನಲ್ಲಿ ಹುಡುಗಿಯರ ಮದುವೆಯನ್ನು ಮಾಡದ ಜನಸಂಖ್ಯೆಗಾಗಿ ಫ್ರಾನ್ಸ್, ಇಂಗ್ಲಂಡ, ಜಪಾನಿನವರೆಗೇತಕ್ಕೆ ಹೋಗಬೇಕು! ಇಲ್ಲಿಯೇ ಇರುವ ಸಂಖ್ಯೆಯನ್ನು ನೋಡಲಿ ಸನಾತನ ಧರ್ಮಾಭಿಮಾನಿಗಳಾದ ಎಸ್. ಕೆ. ಆಚಾರ್ಯರೂ ಅವರ ಅನುಯಾಯಿಗಳೂ.

| | |
|---|---|
| ಬಾಲ್ಯವಿವಾಹವಿಲ್ಲದ ಜನಾಂಗ ಬ್ರಾಹ್ಮಣೇತರರು (ಸನಾತನ ಧರ್ಮಾವಲಂಬಿಗಳು) | ೧೪,೩೫,೦೦,೦೦ |
| ಬಾಲ್ಯ ವಿವಾಹವನ್ನಿಟ್ಟುಕೊಂಡ ಭಾಗ | ೧೪,೦೦೦,೦೦೦ |
| ಆರ್ಯ ಸಮಾಜಗಳು | ೪,೬೮,೦೦೦ |
| ಬ್ರಹ್ಮ | ೬,೦೦೦ |
| ಸಿಖರು | ೩೨,೩೯,೦೦೦ |
| *ಜೈನರು | ೧೧,೭೮,೦೦೦ |
| *ಬೌದ್ಧರು | ೧,೧೫,೭೧,೦೦೦ |

| | |
|---|---|
| ಇರಾಣಿಗಳು | ೧,೦೨,೦೦೦ |
| ಸಿಮೆಟಿಕ್ | ೭,೩೫,೧೧,೦೦೦ |
| ಮುಸಲ್ಮಾನರು | ೬,೮೭,೩೫,೦೦೦ |
| ಕ್ರೈಸ್ತರು | ೪೭,೫೪,೦೦೦ |
| ಯಹೂದಿಗಳು | ೨೨,೦೦೦ |
| ಇತರ ಹಿಂದುಗಳು | ೯,೭೭೫,೦೦೦ |
| ಇತರರು | ೧೮,೦೦೦ |

ಈ ಮೊದಲನೆಯ ಪಟ್ಟಿಗೆ ಸೇರಿದವರಲ್ಲಿ ಜೈನರಲ್ಲಿ ಮತ್ತು ಕೆಲವು ಹಿಂದುಗಳಲ್ಲಿ ಹಲವು ಕಡೆ ಬಾಲ್ಯವಿವಾಹವಿದೆ. ಅದರೆ ಹಿಂದುಸ್ಥಾನದ ಒಟ್ಟು ಜನಸಂಖ್ಯೆಯು ಸುಮಾರು ೩೨೬,೦೦೦,೦೦೦. ಇದರಲ್ಲಿ ಅಲ್ಲಲ್ಲಿ ಬಾಲ್ಯ ವಿವಾಹವು ಇದ್ದುದಕ್ಕಾಗಿ ಬ್ರಾಹ್ಮಣರ ಸಂಖ್ಯೆಯನ್ನು ಸುಮಾರು ಇಮ್ಮಡಿಯಾಗಿ ಮಾಡೋಣ ಬೇಕಾದರೆ. ಆದರೂ ಹೆಚ್ಚುಕಡಿಮೆ ೩೦ ಕೋಟಿ ಜನರುಳಿಯುತ್ತಾರಲ್ಲವೆ ? ಈ ಸಂಖ್ಯೆಗೆ ಸೇರಿದ ಹುಡುಗಿಯರಲ್ಲಿ ವ್ಯಭಿಚಾರವೇ ಹೆಚ್ಚಾಗಿದೆಯೆಂದು ಹೇಳುವರೋ ಆಚಾರ್ಯರು ?

ಇನ್ನೊಂದು ಲೆಕ್ಕದಿಂದ ನೋಡೋಣ. ನಮ್ಮಲ್ಲಿ ೨೦ ವರ್ಷಗಳ ಕೆಳಗೆ ಎಷ್ಟು ಮಂದಿ ಹುಡುಗಿಯರಿಗೆ ಲಗ್ನವಾಗಿದೆಯೆಂದು ನೋಡೋಣ. ಹನ್ನೆರಡಲ್ಲ ಇಪ್ಪತ್ತು ವಯಸ್ಸು ಎಂಬದನ್ನು ಇಲ್ಲಿ ಗಮನಿಸಬೇಕಿಲ್ಲ.

| | | | |
|---|---|---|---|
| ಸನಾತನ ಧರ್ಮೀಯರು | ೧೦೦ ಹುಡುಗಿಯರಿಗೆ | ೪೪ | ಪ್ರಕಾರ |
| ಆರ್ಯ ಸಮಾಜ | ,, | ೫೩ | ,, |
| ಬ್ರಹ್ಮ ,, | ,, | ೧೧ | ,, |
| ಸೀಖ ,, | ,, | ೨೨ | ,, |
| ಜೈನ ,, | ,, | ೨೯ | ,, |
| ಬೌದ್ಧ ,, | ೨೦೦ ಹುಡುಗಿಯರಿಗೆ | ೧ | ,, |

ಆಚಾರ್ಯರ ಲೆಕ್ಕ ಹಾಕಿದರೆ ಬಾಕಿಯ ಹುಡುಗಿಯರ ಗತಿಯೇನೆನ್ನಬೇಕು ? ಇತರ ದೇಶಗಳ ನಿಂದೆಯನ್ನು ಮಾಡುವ ಆಚಾರ್ಯರಿಗೆ ನಮ್ಮ ದೇಶದಲ್ಲಿಯೇ ಎಷ್ಟೋ ಕೋಟಿ ಅವಿವಾಹಿತ ಹುಡುಗಿಯರಿದ್ದಾರೆಂಬುದರ ಸುದ್ದಿಯಿಲ್ಲ. ರಾಷ್ಟ್ರದ ಮಂತ್ರಾಲೋಚನಸಭೆಗೆ ಅರ್ಹರೇ !!!

೨. ನಮ್ಮ ಹೆಂಗಸರಿಗೆ ಅನ್ನವಸ್ತ್ರಗಳಿಗೆ ಪರಾಧೀನತೆಯಿದ್ದಲ್ಲಿ ಪ್ರೇಮದ ಹೆಸರನ್ನೇ ತಕ್ಕೊಳ್ಳಲಿಕ್ಕವಕಾಶವಿಲ್ಲ. ಹಾಗೆ ನೋಡಿದರೆ ಮನೆಯೊಳಗೆ ಸಾಕಿದ ನಾಯಿ, ಬೆಕ್ಕು, ದನಕರುಗಳನ್ನೂ ಸಾಕುವದರಲ್ಲಿ ಪ್ರೇಮವಿದೆಯೆನ್ನಬಹುದು. ಎಲ್ಲಿ, **ತನು ಮನಗಳನ್ನು ಕೊಡುವದಕ್ಕೂ ಹಾಗೆಯೇ ಕೊಡದಿರುವದಕ್ಕೂ ಸಂಪೂರ್ಣ ಸ್ವಾತಂತ್ರ್ಯವು ಇದೆಯೋ ಅಲ್ಲಿಯೇ ಪ್ರೇಮದ ಲೀಲೆಯೂ ಪರೀಕ್ಷೆಯೂ ಆಗುವದು.** ಪರಾಧೀನತೆಯಿರುವಲ್ಲಿ ಇರುವದು ಪ್ರೇಮದ ನಟನೆ ಮಾತ್ರವೇ. ಇಲ್ಲವಾದರೆ ಪಶುಗಳಿಗೆ ಸಹಜವಾಗಿರುವ ಮೋಹ. ಮನೆಯಲ್ಲಿ ಕಾಳೇ ಇಲ್ಲದಿದ್ದರೆ ಉಪವಾಸವಿದ್ದರೂ ಏಕಾದಶಿವ್ರತವೆಲ್ಲಿಂದ ಬಂತು? ಪರಾಧೀನತೆಗೆ ಬಿಡಲಾರದೆ ಒಳಪಟ್ಟಿರುವಲ್ಲಿ ವ್ಯಭಿಚಾರಕ್ಕೆ ಹ್ಯಾಗೆ ಅವಕಾಶವೇ ಇಲ್ಲವೋ ಹಾಗೆಯೇ ಸದಾಚಾರಕ್ಕೂ ಮಾನ್ಯತೆಯ ಅಧಿಕಾರವಿಲ್ಲ. **ಅನಿವಾರ್ಯವಾದ** ಅನುಕೂಲ ವರ್ತನಕ್ಕೆ ಸದ್ಗುಣವೆಂಬ ಹೆಸರನ್ನು ಕೊಡುವದು ಅಯುಕ್ತ. ಶುದ್ಧ ಅನ್ಯಾಯ.

ನಮ್ಮಲ್ಲಿ ಮದುವೆಯಾದಂದಿನಿಂದ ಪ್ರೇಮವು ಮೊದಲಾಗಿ ಬೆಳೆಯುವದಂತೆ ! ಪ್ರೇಮಕ್ಕೂ ಅನ್ನ ವಸ್ತ್ರ ಮಾನ ಪರಿಪೋಷಣ ಇತ್ಯಾದಿ ನೆಲ ನೀರು ಗೊಬ್ಬರಗಳ ಅವಶ್ಯಕತೆಯಿದೆಯೋ ಭಳರೆ ! ಒಂದೊಂದು ಶಬ್ದಕ್ಕೆ ಜನರು ಕೊಡುತ್ತಿರುವ ಅರ್ಥದಿಂದಲೇ ಅವರ ಮನೋಗತಿಯನ್ನು ತಿಳಿಯಬಹುದು !!

ಮೇಲೆ ಜಪಾನ್, ಇಂಗ್ಲಂಡ ಮುಂತಾದ ದೇಶಗಳಲ್ಲಿ ಮದುವೆಯೇ ಪ್ರೇಮದ ಸಮಾಪ್ತಿಯಂತೆ ! ಈ ಮಾತೇನೂ ಆಚಾರ್ಯರು ಹೊಸದಾಗಿ ಹೇಳಿದ್ದಲ್ಲ. ಇದೊಂದು ಹಳೆಯ ಸುದ್ದಿ. ಅನುಕೂಲ್ಯಪ್ರಿಯರಾದ ಅನೇಕ ಭಾರತೀಯರೂ ದಾಂಪತ್ಯದಲ್ಲಿ ಸುಖವಿಲ್ಲದ ಹಲಕೆಲವು ಪಾಶ್ಚಿಮಾತ್ಯರೂ ಈ ಸುದ್ದಿಯನ್ನು ಎಷ್ಟೋ ದಿನಗಳಿಂದ ಹಾಡುತ್ತ ಬಂದಿದ್ದಾರೆ !

ಮದುವೆಯಾದೊಡನೆ ಪ್ರೇಮಕ್ಕೇ ರಜೆಯಾಗುವಂತಿದ್ದರೆ ಆ ದೇಶದಲ್ಲಿನ್ನು ಪ್ರತಿವರ್ಷವೂ ಇಷ್ಟು ಮದುವೆಗಳೇತಕ್ಕಾಗುತ್ತವೋ ? ಅವರು ನಮ್ಮಂತೆ ರೂಢಿಭೀರುಗಳಲ್ಲ. ಧರ್ಮ ಧರ್ಮವೆಂದಿಟ್ಟುಕೊಂಡು ಹಳೇ ಗ್ರಂಥಗಳ ವಾಕ್ಯಗಳನ್ನು ಈಗಲೂ ನಡಿಸಲು ಯತ್ನಿಸುವವರಲ್ಲ. ಅವರು ಸಂಘ ಸಂರಕ್ಷಣಕ್ಕಾಗಿ ಮಾಡಿದ ಬದಲಾವಣೆಗಳನ್ನು ನೋಡಿದರೆ ಅವರ ಧರ್ಮಗ್ರಂಥವು ಬೈಬಲ್ ಹೌದೋ ಅಲ್ಲವೋ ಎಂಬದನ್ನು ತಿಳಿಯುವದು ಸಹ ಕಷ್ಟ. ಹೀಗೆ ಜೀವನ ಸಂಗ್ರಾಮದಲ್ಲಿ ಗೆಲ್ಲುವದಕ್ಕಾಗಿ ಧೈರ್ಯದಿಂದಲೂ ಸ್ವತಂತ್ರ ಬುದ್ಧಿಯಿಂದಲೂ

ಸ್ವಾನುಭವದ ಪ್ರೇರೇಪಣೆಯಿಂದಲೂ ಊಹಿಸಲಿಕ್ಕೆ ಸಹ ಅಸಾಧ್ಯವಾದ ಏರ್ಪಾಟು ಮಾರ್ಪಾಟುಗಳನ್ನು ಮಾಡಿ ಮಾಡುತ್ತಲಿರುವ ಜನತೆಗೆ ದುರ್ಧರವಾದ ಪ್ರೇಮಾಂತಕವಾದ ಮದುವೆಗೇ ರಜಾ ಕೊಡುವದು ಕಷ್ಟವಾಯಿತೋ ? ಆಚಾರ್ಯರ ಹಾಡು ಅಲ್ಲಿಯ ನಿಜಸ್ಥಿತಿಯ ವರ್ಣನವಲ್ಲ. ಅಂಥ ಹಾಡುಗಳನ್ನು ಹಾಡುವ ತಮ್ಮ ಚಟದ ಲಕ್ಷಣ, ಸತ್ಯಶೋಧದ ಏರಿಕೆಯೇ ಇಲ್ಲದೆ ತಮ್ಮ ಮನಸ್ಸಿಗೆ ಶಾಂತಿಯನ್ನು ಕೊಡುವ ಸುಲಭೋಪಾಯ.

ಮೊನ್ನೆ ನಡೆದ ಘೋರಯುದ್ಧದಲ್ಲಿ ತಮ್ಮ ಗಂಡಂದಿರನ್ನೂ ಅಣ್ಣ ತಮ್ಮಂದಿರನ್ನೂ ಮಗಂದಿರನ್ನೂ ದೇಶಪ್ರೇಮಕ್ಕಾಗಿ ರಣರಂಗದಲ್ಲಿ ತಾಂಡವನನ್ನಾಡುವ ಮೃತ್ಯುವಿಗೆ ತುತ್ತಾಗಿ ಕೊಟ್ಟು ಕಳಿಸಿದ ಹೆಂಗಸರ ಸಾಹಸದಲ್ಲಿ ಧರ್ಮವಿಲ್ಲವೋ ? ಗಂಡಸರು ರಾಜ್ಯದಲ್ಲಿ ಅನೇಕ ಇಲಾಖೆಗಳಲ್ಲಿ ದಿನಾಲೂ ಮಾಡುತ್ತಿದ್ದ ಕೆಲಸಗಳನ್ನು ಅವರು ರಣರಂಗಕ್ಕಿಳಿದೊಡನೆ ತಾವು ಕೈಕೊಂಡು ನಡೆಸಿದ ಆ ಹೆಂಗಸರಲ್ಲಿ ಆಚಾರ್ಯರಿಗೂ ಅವರಂತೆ ನೋಡುವವರಿಗೂ ಕಂಡುಬರುವದು ವ್ಯಭಿಚಾರ ಒಂದೇನೋ ? ಅವರ ಅದ್ಭುತ ಸಾಹಸಕ್ಕೆ ಇತಿಹಾಸವು ಸಾಕ್ಷಿ. ಆದರೆ ವ್ಯಭಿಚಾರದಿಂದ ತನು ಮನಸ್ಸುಗಳ ಶಕ್ತಿಗಳೂ ಕುಂದಿ ಹೋಗುತ್ತವೆ ಎಂಬವು ಆರೋಗ್ಯ ಶಾಸ್ತ್ರ ಸಿದ್ಧಾಂತ, ಜನ ಸಾಮಾನ್ಯದ ಅನುಭವ. ಅಂಥ ದುರಾಚಾರ ಪ್ರಿಯರಿಗೆ ಇಂತಹ ಅವರ್ಣನೀಯವಾದ ಧೈರ್ಯ ಸಾಹಸಗಳು ಹೇಗೆಲ್ಲಿಂದ ಬಂದವು ಮತ್ತೆ ? ನಮ್ಮಲ್ಲಿ ಸದ್ಗುಣ ಶಿಖಾಮಣಿಗಳಾಗಿದ್ದು ಗಂಡಸರಿಗೆ ಕಾವ್ಯಸ್ಫೂರ್ತಿಯನ್ನು ಕೊಡುವ ಹೆಂಗಸರಲ್ಲಿ ಎಷ್ಟು ಮಂದಿ ಅವರ ಸ್ವಾರ್ಥತ್ಯಾಗವನ್ನೂ ದೇಶಾಭಿಮಾನವನ್ನೂ ನಿರ್ಭಯ ಮನೋಗತಿಯನ್ನೂ ತೋರಿಸಬಲ್ಲರು ? ಅವರ ಆ ಗುಣಗಳು ಧರ್ಮದ ಮುಖ್ಯಾಂಗವಲ್ಲವೋ ? ಹಾಗಿದ್ದರೆ ದುರಾಚಾಗದಿಂದ ಅವರಿಗೆ ಬಂದ ಧರ್ಮ ಬುದ್ಧಿ ಸಾಹಸಗಳು ನಮ್ಮ ಸದಾಚಾರದ ಘನಮೂರ್ತಿಗಳಾಗಿರುವ ಹೆಂಗಸರಿಗೆ ಅನೇಕೆ ಗಂಡಸರಿಗೂ ಬರಬಾರದು ? ಅಥವಾ ಸದಾಚಾರ ದುರಾಚಾರ ಎಂಬ ಶಬ್ದಗಳನ್ನು ತಿಳಿದುಕೊಳ್ಳುವದರಲ್ಲಿ ನಮ್ಮ ಬುದ್ಧಿಯೇ ವ್ಯಂಗವಾಗಿದೆಯೋ ? ನಮ್ಮ ತಿಳುವಳಿಕೆಯಲ್ಲಿಯೇ ತಪ್ಪಿದೆಯೋ ? ಹೆಂಡಂದಿರಿಂದಾಗುವ ಗಂಡಸರ ಅನನುಕೂಲತೆಗೆ ವ್ಯಭಿಚಾರವೆಂದೆನ್ನಬೇಕೋ ? ಸುಖಾನುಕೂಲ್ಯಗಳಿಗೆ ಮಾತ್ರ ಪಾತಿವ್ರತ್ಯವೆನ್ನಬೇಕೋ ? ಸಂಘಹಿತಕ್ಕಾಧಾರವಾಗಿರುವ ಗುಣಗಳಿಗೆ ತಿಲಾಂಜಲಿಯನ್ನು ಕೊಟ್ಟು ಒಬ್ಬ ಸ್ವನಿರ್ಮಿತ ಯಜಮಾನನ ಇಂದ್ರಿಯ ಸುಖಕ್ಕೆ ಅನುಕೂಲವಾಗಿರುವ ಗುಣಗಳಿಗೆ ಮಾತ್ರ ಸದ್ಗುಣಗಳೆನ್ನಬೇಕೋ, ಸ್ತ್ರೀಧರ್ಮವೆನ್ನಬೇಕೋ ?

೩. ಇತರ ದೇಶಗಳ ಹಾದಿ ಹಿಡಿಯೋಣವರಿಂದ ಅವರಂತೆ ನಾವೂ ಹಾಳಾಗುವೆವಂತೆ, ನಮ್ಮ ವಿಶಾಲವಾದೀ ದೇಶವನ್ನು ೩೨ ಚಿಲ್ಲರೆ ಕೋಟಿ ಜನರನ್ನು ಅಡಿಯಾಳುಗಳಾಗಿಟ್ಟುಕೊಂಡು ಸುಲಲಿತವಾಗಿ ರಾಜ್ಯವನ್ನು ನಡೆಸುವ ಚಿಕ್ಕ ಜನಸಂಖ್ಯೆಯು ನೀಚಸ್ಥಿತಿಯಲ್ಲಿದೆ ಎಂದು ತಿಳಕೊಳ್ಳುವದು ನ್ಯಾಯ ಬದ್ಧಿಗೆ ಅಸಾಧ್ಯವಾದ ವಿಷಯ, ಪಾಶವೀ ಬಲದಿಂದ ನಮ್ಮನ್ನು ಬಿಗಿಟ್ಟದ್ದಾರೆಂದು ಕೆಲವರು ಒನಕೆ ಹಾಡಿನ ಪಲ್ಲವಿಯನ್ನು ಹೇಳುವದಕ್ಕೆ ನಮ್ಮ ಅಧ್ಯಾತ್ಮ ಶಕ್ತಿಯು ಎಲ್ಲಿದೆಯೋ ಹಾಗಾದರೆ? ಯಾವದಾದರೂ ಒಂದು ಭೂಮಿಕೆಯಲ್ಲಿಯಾದರೂ ಆತ್ಮಜ್ಯೋತಿಯು ಹಣಕಿ ನೋಡಬೇಕಲ್ಲವೆ ? ಆರ್ಥಿಕ ಭೂಮಿಕೆಯಲ್ಲಿ ದಿವಾಳಿ; ದೇಹ ಭೂಮಿಕೆಯಲ್ಲಿ ಕ್ಷಯರೋಗಗಳು; ಮನೋಭೂಮಿಕೆಯಲ್ಲಿ ಅಜ್ಞಾನ ಅಂಧಶ್ರದ್ಧೆ; ಸಂಘ ಭೂಮಿಕೆಯಲ್ಲಿ ಮತಮತಾಂತರಗಳ ಒಡಕುಗಳು—ನಮ್ಮ ಧನವಾಗಿರುವ ಇವೆಲ್ಲವೂ ಅಧ್ಯಾತ್ಮ ಜೀವನದ ಕಿರಣಗಳೋ, ಆತ್ಮವಂಚನದಿಂದ ಸದ್ದಿಲ್ಲದೆ ನಡೆಯುವ ಮರಣಗಳೋ ? ಆ ದೇಶದ ಮುಮುಕರ ಬಲವು ನಮ್ಮ ಯುವಕರಲ್ಲಿಲ್ಲ. ಅವರಲ್ಲಿ ಸಾಮಾನ್ಯವಾಗಿರುವ ಓದು ಬರೆಹಗಳು ನಮ್ಮಲ್ಲೆಲ್ಲಿವೆ ? ೧೦೦ ಕ್ಕೆ ಸರಾಸರಿ ೯೮ಕ್ಕೆ ಕಡಿಮೆಯಾಗದಂತೆ ಅವರಲ್ಲಿ ಓದು ಬಲ್ಲವರಿದ್ದರೆ ನಮ್ಮಲ್ಲಿ ೮ ಸಹ ಇಲ್ಲ. ವ್ಯಕ್ತಿಯೊಂದರ ಸಂಪಾದನೆಯನ್ನು ನೋಡಿದರೆ ಅಲ್ಲಿಗೊ ಇಲ್ಲಿಗೊ ಅಜಗಜಾಂತರ. ಶ್ರೀ ಆಚಾರ್ಯರು ಉಚ್ಚರಿಸಿದ ಒಂದೊಂದು ದೇಶದ ಸರಾಸರಿ ಉತ್ಪತ್ತಿಯು ಕೆಲವು ವರ್ಷಗಳ ಹಿಂದೆಯೇ ಹೇಗಿತ್ತೆಂದು ನೋಡೋಣ.

| ದೇಶ | ಒಬ್ಬನ ಸರಾಸರಿ ಸಂಪಾದನೆ ವರ್ಷಕ್ಕೆ |
|---|---|
| ಬ್ರಿಟನ್ | ೩೫೦ ರೂಪಾಯಿಗಳು. |
| ಸಂಯುಕ್ತ ಅಮೇರಿಕಾ | ೧೦೫೦ ,, |
| ಜರ್ಮನಿ | ೪೫೦ ,, |
| ಫ್ರಾನ್ಸ್ | ೫೭೦ ,, |

ಜಪಾನ್ ೯೦ ,,

ಹಿಂದುಸ್ಥಾನ ३೬ ,,

ಇತ್ತೀಚೆಗೆ ಆ ದೇಶಗಳ ಉತ್ಪತ್ತಿಯು ಇನ್ನೂ ಹೆಚ್ಚಿದೆ. ನಮ್ಮಲ್ಲಿ ಅದೂ ಅಷ್ಟಾಗಿ ಹೆಚ್ಚಲಿಲ್ಲ. ಧರ್ಮದ ಡಂಭಾಚಾರದಿಂದ ನಮಗೆ ಲಭಿಸಿದ್ದು ಎಲ್ಲ ಕಡೆಯಲ್ಲಿಯೂ ಅಧೋಗತಿಯೊಂದೇ. ೫,೩೬,೦೦,೦೦೦, ಅಸ್ಪೃಶ್ಯರು ನಮ್ಮ ಸನಾತನ ಧರ್ಮದ ಔದಾರ್ಯಲಕ್ಷಣಗಳು ೧೯೧೧ ರಲ್ಲಿದ್ದ ೭೭,೪೭, ೯೦೮ ಕ್ರೈಸ್ತರ ಸಂಖ್ಯೆಯು ೧೯೩೧ರಲ್ಲಿ ೯೪,೬೬,೩೯೮ ಕ್ಕೆ ಏರಿದ್ದು ಸನಾತನ ಧರ್ಮದ ಜ್ಞಾನ ಪ್ರಚಾರ ಶಿಕ್ಷಣ ಅಭಿಮಾನಗಳ ಚಿನ್ಹವೇ ಸರಿ! ನಮ್ಮಲ್ಲಿಯ ೭,೩೬,೨೪೭ ಬಾಲ ವಿಧವೆಯರು ಬಾಲ್ಯವಿವಾಹ ಧರ್ಮದ ಸತ್ಫಲಗಳೇ!! ಆಚಾರ್ಯರು ಹೇಳಿದಂತೆ ಆ ದೇಶಗಳ ಅನುಕರಣದಿದ ನಾವು ಹಾಳಾಗುವೆವಲ್ಲವೆ? ಈಗಿರುವ ಸ್ಥಿತಿಯು ಸುಖಸೌಭಾಗ್ಯಗಳ ಶಿಖರವೋ ಏನೋ ಅವರ ಧರ್ಮಮಯವೃಷ್ಟಿಗೆ! ಇಂಥ ಮಾತುಗಳಿಗೆ ಮೋಸವೆನ್ನಬೇಕೋ ಅಜ್ಞಾನವೆನ್ನಬೇಕೋ? ಏನೇ ಇರಲಿ. ನಮ್ಮ ಧರ್ಮದ ದೊಡ್ಡಸ್ತಿಕೆಯನ್ನು ಹಾಡುತ್ತ ಕೂತರೆ ಸಾಲದು. ಅದರ ಪುರಾತನ ವೈಭವದ ಸ್ತೋತ್ರಸ್ತವನಗಳಿಂದ ಮಾತ್ರ ಉಬ್ಬುವದರಿಂದ ಉಪಯೋಗವಿರಲಾರದು. ಅದರ ತತ್ವ್ತೋದ್ದೇಶಗಳನ್ನು ತಿಳಿದು ಅವುಗಳನ್ನು ಈ ದೇಶ ಕಾಲ ಪರಿಸ್ಥಿತಿಗನುಗುಣವಾಗಿ ರೂಪುಗೊಳಿಸುವದಕ್ಕೆ ಅವಶ್ಯಕವಾದ ವಿಚಾರಾಚರಣ ಸಂಸ್ಕರಣಗಳನ್ನು ಯುವಕ ಯುವತಿಯರು ನಿರ್ಭೀತರಾಗಿ, ನಿರ್ದಾಕ್ಷಿಣ್ಯರಾಗಿ, ಉತ್ಸಾಹಭರಿತರಾಗಿ ಗೆಲವು ಸೋಲುಗಳಿಗೆ ಹಿಗ್ಗದೆ ಕುಗ್ಗದೆ ನಡಿಸಬೇಕು. ಸುಳ್ಳು ಸ್ತುತಿಯು ಸಾಕು. ಟೊಳ್ಳು ಹೆಮ್ಮೆಯು ಸಾಕು. ಸ್ವಪರ ವಂಚನವು ಸಾಕು. ಈಗ ಬೇಕಾದ್ದು ಕಣ್ಣಿನಲ್ಲಿ ಆದರ್ಶ, ಕೈಯಲ್ಲಿ ಕೆಲಸ.

## ವೇದ

ಸನಾತನ ಧರ್ಮವು ಮುಣುಗಿತಂತೆ! ಅದು ಹೇಗೋ?

ಸ್ಮೃತಿಗಳಿಗಿಂತ ಶೃತಿಗಳಿಗೆ ಅಧಿಕಾರವು ಹೆಚ್ಚು. ವೇದಕ್ಕೆ ಎರಡು ವಿಭಾಗಗಳು. ವೇದವಿಧಿ ಮೊದಲನೆಯ ವೇದಲಿಂಗ. ಎರಡನೆಯದು ವೇದವಿಧಿಗಳೇ ಸನಾತನ ಧರ್ಮಾವಲಂಬಿಗಳಿಗೆ ಅಧಿಕಾರವಾಣಿ. ಋಗ್ವೇದ ವಿಧಿಯನ್ನು ನೋಡೋಣ. ೩ನೇ ಮಂಡಲದಲ್ಲಿ ೩೫ನೇ ಸೂತ್ರದ ೫ನೇ ಮಂತ್ರವು ಏನೆನ್ನುತ್ತದೆ? **ನದಿಗಳು ಸಮುದ್ರವನ್ನು ಸೇರಿದಂತೆ ಯುವತಿಯು ಯುವಕನನ್ನು ಸೇರಬೇಕು.** ಅಂತೆ ನಿಘಂಟುಗಳಲ್ಲಿಯೂ ಶಾಸ್ತ್ರಗಳಲ್ಲಿಯೂ **ಯುವತಿಯ** ಅರ್ಥವೇನಿದೆ? ३೦ ವರ್ಷಕ್ಕಿಂತ ಕೆಳಗಿನ ವಯಸ್ಸಿನವಳು **ಯುವತಿ** ೧೬ ಕ್ಕಿಂತ ಕೆಳಗಿನವಳು **ಬಾಲಾ** ಎಂದು ಅವು ತೋರುತ್ತವೆ.

ಅದೇ ವೇದದ ೫ನೇ ಮಂಡಲದಲ್ಲಿ ೬೭ನೇ ಸೂತ್ರದ ३ನೇ ಮಂತ್ರವನ್ನು ನೋಡುವ. **ಹೆಂಗಸು ಗಂಡನನ್ನು ಹುಡುಕಿಕೊಂಡು ಹೋಗುತ್ತಾಳೆ** ಎಂದು ಅದೆನ್ನುತ್ತದೆ. ಹಾಗೆ ಹುಡುಕಿಕೊಂಡು ಹೋಗುವದು ವಿವಾಹದ ಮೂಲವೆಂದಮೇಲೆ ಚಿಕ್ಕ ಹುಡುಗಿಯು ಹಾಗೆಂದಾದರೂ ಹೋದಾಳೋ? ಕಾಮವಾಸನೆಯು ಪ್ರಬಲವಾಗಿ ಪ್ರೇರೇಪಿಸದೆ ಹೋದರೆ ಹಾಗೆ ಹುಡುಕಿಕೊಂಡು ಹೋಗುವದು ಸಾಧ್ಯವೋ? ಅಂಥ ಪ್ರಾಬಲ್ಯವು ಚಿಕ್ಕ ವಯಸ್ಸಿನಲ್ಲಿ ಹುಟ್ಟುವದು ಸಾಧ್ಯವೋ?

**ಬ್ರಹ್ಮಚರ್ಯವನ್ನು ಪಾಲಿಸಿದ ಕನ್ಯೆಯು ಯುವಕನನ್ನು ಪತಿಯನ್ನಾಗಿ ತಕ್ಕೊಳ್ಳುವಳು** – ಎಂದು ಇನ್ನೊಂದು ವೇದವು ಹೇಳುತ್ತದೆ. ಇಲ್ಲಿ ಕನ್ಯೆ ಎಂಬ ಪದಕ್ಕೆ ಚಿಕ್ಕಹುಡುಗಿಯೆಂಬರ್ಥವನ್ನು ಮಾಡಿದೆ. ಆಕೆಗೆ ಆ ವಯಸ್ಸಿನಲ್ಲಿ ಬ್ರಹ್ಮಚರ್ಯಪಾಲನೆ ಎಲ್ಲಿಂದ ಬಂತು? ಚಿಕ್ಕ ಹುಡುಗಿಗೆ ಯುವಕನನ್ನು ಪತಿಯನ್ನಾಗಿ ತಕ್ಕೊಳ್ಳುವ ಯೋಗ್ಯತೆಯಾದರೂ ಎಲ್ಲಿಂದ ಬಂತು? ಅಷ್ಟೇ ಅಲ್ಲ. ವ್ಯಾಸಸ್ಮೃತಿಯು ಕನ್ಯೆಯೆಂದರೆ ವಯಸ್ಸಿಗೆ ಪೂರ್ತಿಯಾಗಿ ಬಂದು ಪವಿತ್ರಳಾಗಿರುವ ಹುಡುಗಿ–ಎಂದು ಸ್ಪಷ್ಟವಾಗಿ ಹೇಳುತ್ತದೆ.

ಇನ್ನೂ ಎಷ್ಟೋ ಆಧಾರಗಳನ್ನು ಈ ರೀತಿಯಾಗಿ ಕೊಡಬಹುದು. ಹಿಂದೆ "ಪ್ರೇಮ" ದಲ್ಲಿ ಇದನ್ನು ಕುರಿತು ಒಂದು ಪ್ರಕರಣವೇ ಅಚ್ಚಾಗಿದೆ. ಆದರೆ ಇಷ್ಟೊಂದು ಸಿ.ಜ. ಚಿಕ್ಕ ಹುಡುಗಿಯರ ಮದುವೆಗೆ ವೇದಗಳ ಆಧಾರವೇ ಇಲ್ಲ.

## ವಿವಾಹ ಮಂತ್ರಗಳು

ವಿವಾಹ ಮಂತ್ರಗಳನ್ನೇ ಪರಿಶೀಲಿಸೋಣ! ಪೂರ್ವಾಚಾರ್ಯರು ಉಪಯೋಗಿಸುವ "ಕನ್ಯಾದಾನ"ವೆಂಬ ಪದಕ್ಕೆ ಅರ್ಥವನ್ನು ಮಾಡಿದರೆ ಕನ್ಯಾ ಎಂದರೆ ಚನ್ನಾಗಿ ವಯಸ್ಸಿಗೆ ಬಂದ ಕನ್ನಿಕೆ ಎಂದು ಮೇಲೆ ಬರೆದಂತಾಗುತ್ತದೆ. ಸುಮುವೆಸು

ಎರಡನೆಯ ಭಾಗವಾದ ಪಾಣಿಗ್ರಹಣದಲ್ಲಿ ಮದುವೆಯ ಮುಖ್ಯಾಂಗವಾದ **ಸಪ್ತಪದಿಯು** ಬರುತ್ತದೆ. ಇಲ್ಲಿ ಯುವಕಯುವತಿಯರಿಬ್ಬರೂ ಒಬ್ಬರಿಗಿನ್ನೊಬ್ಬರು ಬಹು ಗಹನವಾದ ಗಂಭೀರವಾದ ಪ್ರತಿಜ್ಞೆಗಳನ್ನು ಮಾಡುತ್ತಾರೆ. ಚಿಕ್ಕ ಹುಡುಗಿಯರಿಗೀ ವಿಚಾರಗರ್ಭಿತವಾದ ಪ್ರತಿಜ್ಞೆಗಳು ಸಾಧ್ಯವೋ ? ಮೂರನೆಯ ಭಾಗವಾದ **ಗೃಹಪ್ರವೇಶವನ್ನು** ನೋಡೋಣ. ಮದುವಣಿಗನು ತನ್ನ ಹೆಂಡತಿಗೆ ತನ್ನ ತಾಯಿ ತಂದೆ ಅಣ್ಣ ತಮ್ಮ, ಅಕ್ಕತಂಗಿಯರ ಪರಿಚಯವನ್ನು ಮಾಡಿಕೊಟ್ಟು ಮನೆ ಮಾರು ಮುಂತಾದ ಆಸ್ತಿಯನ್ನು ತೋರಿಸಿ **ಗೃಹಸರ್ವಸ್ವದ ಯಜಮಾನಿಕೆಯನ್ನು** ಆಕೆಗೆ ಒಪ್ಪಿಸುತ್ತಾನೆ. ಚಿಕ್ಕಹುಡುಗಿಯ ಕೈಯಲ್ಲಿ ಇಂಥ ಯಜಮಾನಿಕೆಯನ್ನು ಕೊಟ್ಟುಬಿಟ್ಟರೆ ಮಂಗನ ಕೈಯ್ಯಲ್ಲಿ ಮಾಣಿಕ್ಯ ಕೊಟ್ಟಂತೆಯೇ ಅಲ್ಲವೆ ಮತ್ತೆ? ನಾಲ್ಕನೆಯ ಭಾಗವಾದ **ಗರ್ಭಾದಾನ** ಮಂತ್ರಗಳನ್ನು ನೋಡಿದರೆ ಅದರಲ್ಲಿ ಸಂಭೋಗದ ವಿಷಯವೂ ಇರೋಣದರಿಂದ ಹೆಂಡತಿಯು ಚಿಕ್ಕವಳಲ್ಲಿ, ವಯಸ್ಸಿಗೆ ಬಂದು ಸಂಭೋಗಕ್ಕೆ ಯೋಗ್ಯಳಾಗಿದ್ದವಳೇ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

## ಸ್ಮೃತಿಗಳು

ಮಗಳು ತನ್ನ ಆಯುಷ್ಯವನ್ನೆಲ್ಲ ತಂದೆಯ ಮನೆಯಲ್ಲಿ ಕಳೆಯಬಹುದು; ಆದರೆ **ಗುಣಹೀನನ ಹೆಂಡತಿಯಾಗಬಾರದು**–ಎಂದು ಮನು ಹೇಳುತ್ತಾನೆ. ಅಂಥವನ ಹೆಂಡತಿಯಾಗುವದಕ್ಕಿಂತಲೂ ಹುಡುಗಿಯು ತಂದೆಯಲ್ಲಿಯೇ ಇರುವದು ಮೇಲು. ವಯಸ್ಸಿಗೆ ಬಂದು ಮೂರು ವರ್ಷಗಳಾದ ಮೇಲೆ ಆಕೆಯು ತನಗೆ ಬೇಕಾದ ಗಂಡನನ್ನು ಮಾಡಿಕೊಳ್ಳಬಹುದು. ಅಷ್ಟೇ ಅಲ್ಲ. ಹುಡುಗಿಯು ಹಾಗೆಯೇ ಇರೋಣದರಿಂದ ಆಕೆಗಾಗಲಿ ಆಕೆಯ ಗಂಡನಿಗಾಗಲಿ ಯಾವ ವಿಧವಾದ ಪಾಪವೂ ತಟ್ಟಲಾರದು—ಎಂದು ಸಹ ಆ ಮನುವೇ ಹೇಳುತ್ತಾನೆ. ಈ ಮನು ಕೊಟ್ಟ ಅಧಿಕಾರವನ್ನು ಹುಡುಗಿಯರ ತಂದೆಯರು ಈಗ ನಡೆಸಿದರೆ ಈಗಿರುವ ಗುಣಹೀನ ಅಳಿಯಂದಿರ ಸಂಖ್ಯೆಯು ಕಡಿಮೆಯಾಗಲೇಬೇಕು. **ಕನ್ಯೆಯಾಗಿದ್ದು ಅಕ್ಷತಯೋನಿಯಾಗಿದ್ದವಳೇ ಬ್ರಹ್ಮವಿವಾಹಕ್ಕೆ ಸರ್ವೋತ್ಕೃಷ್ಟಳು** ಎಂದು ಮನುಸ್ಮೃತಿಯು ಹೇಳುತ್ತದೆ. ಕನ್ಯಾ ಇದರರ್ಥವು ಮೇಲೆಯೇ ಬರೆದಿದೆ. ಈಗ ಅಕ್ಷತಯೋನಿ ಎಂದರೇನೆಂದು ನೋಡುವ. ಇದು ಮೈನೆರೆಯದ ಹುಡುಗಿಯ ಹೆಸರಲ್ಲ, ಮೈನೆರೆದಮೇಲೂ ಪ್ರಥಮ ಸಂಭೋಗದಲ್ಲಿ ಸಹಜವಾಗಿ ಹರಿಯುವಂಥ ಯೊಳಗಣ ತೆಳ್ಳಗಾದ ಪರೆದೆಯು ಯಾವ ಕನ್ಯೆಯಲ್ಲಿ ಹ ರಿಲ್ಲವೋ ಅಂಥ ಹುಡುಗಿಗೆ, ಅಂದರೆ ಮೈನೆರೆತರೂ ಕಾ ಭೋಗವನ್ನು ಮಾಡದಿರುವ ಕನ್ಯೆಗೆ ಅಕ್ಷತಯೋನಿ ಹೆಸರು. ಈಗ ಚಿಕ್ಕವಯಸ್ಸಿಗೆ ಆಧಾರವೆಲ್ಲಿಂದ? ಕೆಲವು ಸ್ಮೃತಿಗಳನ್ನು ನೋಡೋಣ. ಹುಡುಗಿಯು ಮೈ ತಮೇಲೆ ಲಗ್ನವಾಗತಕ್ಕದ್ದು ಎಂದು ಜೈಮಿನಿ ಸೂತ್ರ ಮೈನೆರೆತವಳ ವಿವಾಹ ಮಾಡಿಕೊಡಬೇಕು ಎಂದು ಗೋ ಗೃಹ್ಯಪರಿಶಿಷ್ಟವು ಹೇಳುತ್ತದೆ. ಎಲ್ಲಿ ಒಬ್ಬ ಗಂಡಸು ಹೆಂಗಸು ಒಬ್ಬರನ್ನೊಬ್ಬರು ಪ್ರೀತಿಸಿ ಮೋಹಿಸುತ್ತಿದ್ದಾ ಅಲ್ಲಿ ಧರ್ಮ, ಅರ್ಥ, ಕಾಮಗಳು ಮೂರು ಇವೆ– ಬ್ರಹತ್‌ಪರಾಶರ ವಾಕ್ಯವಿದೆ.

ಹೀಗೆ ಒಂದಲ್ಲ ಎರಡಲ್ಲ–ಎಷ್ಟೋ ಆಧಾರಗಳಿವೆ ಪ್ರೌ ವಿವಾಹಕ್ಕೆ. ಆದರೆ ಜಣರೂಢಿಗೇ ಧರ್ಮವೆನ್ನುವ ಏನು ಹೇಳಬೇಕು ?

ಇನ್ನೊಂದು ಯೋಚಿಸತಕ್ಕ ವಿಷಯವಿದೆ ಇಲ್ಲಿ. ಪೂರ್ ಆಧಾರಗಳನ್ನೇ ಅನುಸರಿಸಿ ಈಗಲೂ ನಡೆಯಬೇಕೋ ಆ ಕಾಲದ ಪರಿಸ್ಥಿತಿಯು ಈಗಿದೆಯೋ ಹಾಗೆಯೇ ನಡೆ ಲಿಕ್ಕೆ ? ಧರ್ಮದ ಮೂಲವು ತ್ರಿಕಾಲಾಬಾಧಿತವಾದ ಸ ಸಮ್ಮತವಾದ ತತ್ವಗಳು. ಅವುಗಳನ್ನು ತಿಳಿದು ದೇಶ ಕಾ ಪರಿಸ್ಥಿತಿಯೊಡನೆ ಅವನ್ನು ಹೊಂದಿಸುವದು ಸಂಘಧರ್ಮ ಕರ್ತವ್ಯ. ಈಗಿನ ದೇಶಕಾಲ ಪರಿಸ್ಥಿತಿಗಳ ಸುದ್ದಿ ಎಲ್ಲಿಯಾದ ಹಳೇ ಗ್ರಂಥಗಳಲ್ಲಿದೆಯೋ ? ಇಲ್ಲವಾದರೆ ಆ ಕಾಲ ಹೊಂ ಸಂಘಧರ್ಮಗಳನ್ನು ಈ ಕಾಲಕ್ಕೆ ಹಿಡಿಪೆಳೆಯುವದು ಎಷ್ಟ ನ್ಯಾಯ ? ಸಾಧ್ಯವೋ ? ತತ್ವಗಳ ಸಾರಾಂಶ 'ಜಗದ್ಧಿ ಆತ್ಮನೋ ಮೋಕ್ಷಾಯ' ಒಂದೇ; ಪರಿಸ್ಥಿತಿಯು ಅವರಿಗೆ ಯದ್ದು ಈಗಿನದು ಅಂದಮೇಲೆ ಈಗಿನವರೇ ಅಲ್ಲವೇ ಅವನ್ನ ಹೊಂದಿಸಬೇಕಾದ್ದು ?

ಸನಾತನಧರ್ಮದಲ್ಲಿ ಬದಲಾವಣೆಗಳಾಗಲಿಲ್ಲವೋ ? ಯ ಸಹಜಗತಿ ಸಮಾಯೋಗಗಳಿಗೆ ಜಾಗೆಯಿಲ್ಲವೋ ಸ ತನ ಧರ್ಮದಲ್ಲಿ ? ಇವು ಜೀವಿಗೆ ನೈಸರ್ಗಿಕವೂ ಅನಿವಾರ್ಯ ವೂ ಆಗಿರುವ ವಿಷಯಗಳಲ್ಲವೋ ಜೀವನ ಸಂಗ್ರಾಮ

ಈಗಿನ ಪರಿಸ್ಥಿತಿಯ ರೂಪಸಮ್ಮಿಶ್ರತೆಗಳೇ ಬೇರೆ. ಅಂದ ಮೇಲೆ ಹೊಂದಿಕೆಯಿಂದ ನವೀನಸಂಸ್ಕೃತಿಯಲ್ಲಿಯೂ ವ್ಯತ್ಯಾಸವಿರಲೇ ಬೇಕು. ವ್ಯತ್ಯಾಸವನ್ನು ಮಾಡುವ ಅಧಿಕಾರವು ಈಗಿನವರಿಗಿಲ್ಲ ಎಂದು ಪೂರ್ವಾಚಾರವಂತರು ಹೇಳುತ್ತಾರೆ. ಅದೇಕೆ? ಶಕ್ತಿಯಿದ್ದಲ್ಲಿ ಅಧಿಕಾರವೂ ಇದೆ. ಅದು ಕೆಟ್ಟರೆ, ಏತಕ್ಕೆ ಕೆಟ್ಟಿತು? ಅದನ್ನು ಹಾಗೆಯೇ ಬಿಟ್ಟರೆ ಮುಂದೇನುಗತಿ? **ಪರಿಸ್ಥಿತಿ ವ್ಯತ್ಯಾಸವಿದ್ದರೆ ಸಹಜಗತಿ ಸವಿಯೋಗಗಳಲ್ಲಿಯೂ ವ್ಯತ್ಯಾಸವು ಇರಲೇ ಬೇಕು. ಇಲ್ಲವಾದರೆ ಮರಣವೇ ಗತಿಯೆಂಬದು ನಿಸರ್ಗದ ತೀರ್ಮಾನ.**

With change of environments should go a change of course and adjustment If not, death is inevitable; for such is the decree of Nature.

ಧರ್ಮವನ್ನು ಕಾಪಾಡುವವರು ಜನತೆಯನ್ನು ಯಮನಬಾಯಿಗೆ ಕೊಡಬೇಕೇ? ಇಲ್ಲವಾದರೆ ಈ ಸ್ವನಿರ್ಮಿತ ಧರ್ಮಾತ್ಮರು ತಮ್ಮ ಮಬ್ಬಿಗೇ ಧರ್ಮವೆಂಬ ಶುಭನಾಮವನ್ನಿಟ್ಟುಕೊಂಡು ಸ್ವಾರ್ಥವನ್ನು ಸಾಧಿಸುತ್ತಿದ್ದಾರೋ?

---

# ಆಧುನಿಕರ ದೃಷ್ಟಿಯಲ್ಲಿ ಸನಾತನ ಧರ್ಮದ ಮೂಲತತ್ತ್ವಗಳು

ಲೇಖಕ—ಪ್ರೊ. ಆರ್. ಎಸ್. ಇನಾಮದಾರ. ಹಿಂದೂ ವಿಶ್ವವಿದ್ಯಾಲಯ ಬನಾರಸ.

ಸನಾತನ ಧರ್ಮದ ಮೂಲತತ್ತ್ವಗಳನ್ನು ಹೇಳುವಾಗ ನಾವು ಬಲು ಎಚ್ಚರದಿಂದಿರಬೇಕಾಗುತ್ತದೆ. ಏಕೆಂದರೆ, ಸನಾತನ ಧರ್ಮದ ಮೂಲತತ್ತ್ವಗಳನ್ನು ಹೇಳುವದೆಂದೊಡನೆಯೆ ಸಮಾಜವನ್ನು ಹಿಂದಿನಕಾಲಕ್ಕೆ ಎಳೆದೊಯ್ಯುವುದು ಎಂದು ಕೆಲವರು ಅರ್ಥಮಾಡುತ್ತಾರೆ. ಆದರೆ, ಹಾಗೆ ನನ್ನ ತಿಳವಳಿಕೆಯಿರುವುದಿಲ್ಲ. ಜಾತಿಗಳನ್ನಾಗಲಿ, ಅಥವಾ ಹಳೆಯ ಕಿಗ್ಗಳ ಕೆಲವು ಧರ್ಮವಿಧಿಗಳನ್ನಾಗಲಿ ಇಡಲೇಬೇಕೆಂದು ನಾನು ಹೇಳುವುದಿಲ್ಲ. ಆದರೆ, ಇಂಥ ಹಲವು ಹಳೆಯಪದ್ಧತಿಗಳನ್ನು ಬಿಟ್ಟುಕೊಟ್ಟರೂ — ಈ ಪದ್ಧತಿಗಳು ಆಯಾಕಾಲದ ಕೊರತೆಗಳಿಗೆ ತಕ್ಕಂತೆ ಬದಲಾಗತಕ್ಕವುಗಳೇ. ಸನಾತನಧರ್ಮಗಳ ಮೂಲತತ್ವಗಳು ಎರಡು ದೃಷ್ಟಿಯಿಂದ ನಮಗೆ ಅತ್ಯಂತ ಉಪಯೋಗವುಳ್ಳವುಗಳಾಗಿವೆ. ಅವು ಯಾವವೆಂದರೆ—(೧) ವಿಶ್ವದ ಗೂಢದ ವಿಷಯವಾಗಿ ಸನಾತನ ಧರ್ಮವು ಹೇಳಿರುವ ತತ್ವಜ್ಞಾನಯುಕ್ತವಾದ ಶಾಸ್ತ್ರೀಯ (Philosophico Scientific) ಸಿದ್ಧಾಂತಗಳು. (೨) ಮತ್ತು ಸಮಾಜದ ರಚನೆಯನ್ನೆಲ್ಲ ಚೆನ್ನಾಗಿ ವ್ಯಾಪಿಸಿದಂಥ ಒಂದು ವಿಶಿಷ್ಟ ಧ್ಯೇಯವನ್ನು ಸಮಾಜದ ಮುಂದೆ ಇಟ್ಟು ಅದಕ್ಕನುಸಾರವಾಗಿ ಸಮಾಜದ ಕಾರ್ಯಗಳೆಲ್ಲವೂ ಸುಲಲಿತವಾಗಿ ನಡೆಯುವಂತೆ ಮುಂದಿನ ಸಮಾಜರಚನೆಗೆ ತಳಗಟ್ಟನ್ನು ಹಾಕಿಕೊಡುವ ದೃಷ್ಟಿಯಿಂದಲೂ ಅದಕ್ಕೆ ಮಹತ್ತ್ವವಿರುತ್ತದೆ. ಇವೆರಡು ವಿಷಯಗಳು ಈ ಸನಾತನ ಧರ್ಮದಲ್ಲಿ ಬಹಳ ಸೂಕ್ಷ್ಮವಾಗಿ ಸಮ್ಮಿಶ್ರವಾಗಿ ಹೋಗಿರುವದರಿಂದ ಅವುಗಳನ್ನು ಒಂದರಿಂದೊಂದನ್ನು ಅಗಲಿಸುವುದು ಕಠಿಣವು.

**ಸನಾತನಧರ್ಮದ ವಿಶ್ವವ್ಯಾಪಕತ್ವವು** — ಸನಾತನ ಧರ್ಮದ ವ್ಯಾಖ್ಯೆಯನ್ನು ನಿರ್ಣಯಿಸುವ ಮಹತ್ವಾಕಾಂಕ್ಷೆಯು ನನಗೆ ಬೇಡ. ಏಕೆಂದರೆ ಅದರ ವ್ಯಾಖ್ಯೆಯನ್ನು ನಿರ್ಣಯಿಸಬೇಕಾದರೆ ಹಿಂದುಸ್ಥಾನದಲ್ಲಿ ಧರ್ಮದ ವಿಚಾರದ ಬೆಳೆವಣಿಗೆಯು ನೂರಾರು ಶತಮಾನಗಳಿಂದ ಯಾವಪ್ರಕಾರವಾಗಿ ಆಗುತ್ತ ಬಂದಿತೆಂಬುದನ್ನೂ ರಾಜ್ಯಪದ್ಧತಿ ಮುಂತಾದ ಸಮಾಜರಚನೆಯ ವಿಕಾಸವು ಹೇಗೆ ಆಗಿರುತ್ತ ಬಂದಿತೆಂಬುದನ್ನೂ ನಾವು ಯೋಚಿಸಬೇಕಾಗುತ್ತದೆ. ಸನಾತನಧರ್ಮವೆಂದರೆ ಕೇವಲ ಧಾರ್ಮಿಕನಿಯಮಗಳದೊಂದು ಅಥವಾ ಪ್ರಾರ್ಥನೆ, ಅಹಿಂಸೆ, ಸತ್ಯಮುಂತಾದ ನೈತಿಕ ನಿಯಮಗಳದೊಂದು ಕಟ್ಟುಮಾತ್ರವೇ ಅಲ್ಲವೆಂಬುದನ್ನು ಯಾರೂ ಮರೆಯಕೂಡದು. ಆದರೆ ವಿಶ್ವದ ಗೂಢವನ್ನು ಬಿಡಿಸುವ ಅಥವಾ ಬಿಡಿಸಲು ಯತ್ನಿಸುವ ವ್ಯಾಪಕವಾದ ತತ್ತ್ವಗಳನ್ನು

ಕೇಳುವ, ಮತ್ತು ಆ ತತ್ವಗಳನ್ನು ವ್ಯಕ್ತಿಗೂ ಸಮಾಜಕ್ಕೂ ಆರ್ಥಿಕ-ರಾಜಕೀಯ ಮತ್ತು ಸಾಮಾಜಿಕ ದೃಷ್ಟಿಯಿಂದ ಅನ್ವಯಿಸಿ ತೋರಿಸುವ, ಹಾಗು ಧರ್ಮಬದ್ಧವಾದ ಸಾಮಾಜಿಕ ಸಿದ್ಧಾಂತಿಗಳಿಂದೊಡಗೂಡಿದ ಒಂದು ಉದ್ಗ್ರಂಥವೇ ಆಗಿರುತ್ತದೆಂದು ಹೇಳಬಹುದು. ಋಷಿಗಳು ಮನುವಿಗೆ ಧರ್ಮವೆಂದರೇನೆಂಬನ್ನು ಕುರಿತು ಪ್ರಶ್ನೆಮಾಡಿದ್ದರ ಮೇಲಿಂದ ಸನಾತನ ಧರ್ಮವು ಎಷ್ಟು ವ್ಯಾಪಕವಾಗಿರುತ್ತದೆಂಬುದು ಗೊತ್ತಾಗುತ್ತದೆ. ಆ ಪ್ರಶ್ನೆಯು ಸಂಸ್ಕೃತದಲ್ಲಿ ಹೀಗೆ ಇದೆ—

भगवन् सर्वं वर्णानां यथा वद्नुपूर्वशः ।
अन्तरप्रभवाणां च धर्मान्नो वक्तुमर्हसि ॥
जरायुजाण्डजानां च तथा संस्वेदनोद्भिदाम् ।
भूतग्रामस्य सर्वस्य प्रभवं प्रलयं तथा ।
आचारांश्चैव सर्वेषां कार्याकार्यविनिर्णयम् ।
यथाकामं यथायोग्यं वक्तुमर्हस्यशेषतः ॥

ಧರ್ಮದ ಸಂಪೂರ್ಣ ಚಿತ್ರವನ್ನು ತಿಳಿದುಕೊಳ್ಳಬೇಕೆಂದು ಇಲ್ಲಿ ಭಗವಾನ್ ಮನುವಿಗೆ ಋಷಿಗಳು ಅನೇಕ ಪ್ರಶ್ನೆಗಳನ್ನು ಕೇಳಿರುವರು. ಆ ಪ್ರಶ್ನೆಗಳಲ್ಲಿ, ವಿಶ್ವದ ಗೂಢವನ್ನು ಮೊದಲುಮಾಡಿಕೊಂಡು ಸಮಾಜದಲ್ಲಿಯ ವ್ಯಕ್ತಿಯ ಆಚರಣೆಯವರೆಗಿನ ಯಾವತ್ತೂ ಪ್ರಶ್ನೆಗಳು ಸಮಾವಿಷ್ಟವಾಗಿರುತ್ತವೆ. ಆ ವ್ಯಾಪಕವಾದ ಪ್ರಶ್ನೆಗಳಿಗೆ ಸಮಾಧಾನಕಾರಕವಾದ ಉತ್ತರವನ್ನು ಕೊಡುವುದಕ್ಕೋಸ್ಕರ ಆ ಮನುಮುನಿಯು ಹಿಮಾಲಯ ಪರ್ವತದ ಎತ್ತರವಾದ ಅಜ್ಞಾತ ಪ್ರದೇಶಗಳಿಗೆ ನಮ್ಮನ್ನು ಕರೆದೊಯ್ದು ಅಲ್ಲಿಂದ ನಡು ನಡುವೆ ಪೃಥ್ವೀತಲಕ್ಕೆ ಕರೆತಂದು ಮತ್ತೆ ನಮ್ಮನ್ನು ಆ ಅಜ್ಞಾತ ಪ್ರದೇಶಕ್ಕೆ ಒಯ್ದು ತಲುಪಿಸುತ್ತಾನೆ. ಆತನು ನಮ್ಮನ್ನು ಪೃಥ್ವೀತಲಕ್ಕೆ ತಂದಾಗ, ಆ ಅಜ್ಞಾತ ಪ್ರದೇಶದಲ್ಲಿ ತಾನು ಕಂಡ ಕೆಲವು ತತ್ವಗಳನ್ನು ಕೇವಲ ಜ್ಞಾನಿಗಳ ಅಥವಾ ಜ್ಞಾನೇಚ್ಛುಗಳ ಕುತೂಹಲವನ್ನು ತಣಿಸುವಮಟ್ಟಿಗೆ ಮಾತ್ರವೇ ಅವುಗಳನ್ನು ಹೇಳದೆ, ತಾನು ಕಂಡುಹಿಡಿದ ಆ ಅಗಾಧ ತತ್ವಗಳನ್ನು ಸಮಾಜದ ಪ್ರತಿಯೊಂದು ತರಗತಿಯ ವ್ಯಕ್ತಿಯು ಹೇಗೆ ಅನ್ವಯಿಸಿಕೊಳ್ಳಬಹುದೆಂಬವನ್ನೂ ಆತನು ಸ್ಪಷ್ಟವಾಗಿ ತಿಳಿಸುತ್ತಾನೆ. ವಿಶ್ವಧರ್ಮಗಳು ಮನುಷ್ಯನ ಆಧ್ಯಾತ್ಮಿಕ ಉನ್ನತಿಗೋಸ್ಕರ ವಿಧಿನಿಷೇಧಗಳನ್ನೂ ಆಜ್ಞೆಗಳನ್ನೂ ಇಷ್ಟೇ ಹಾಕಿ ಕೊಟ್ಟಿದ್ದಾರೆ ಆದರೆ ಸನಾತನಧರ್ಮವು ಹಾಗಲ್ಲ. ಈ ಧರ್ಮವು ತನ್ನ ತತ್ವಗಳನ್ನು ಮನುಷ್ಯನ ಜೀವಿತದೊಡನೆ ಸೂಕ್ಷ್ಮವಾಗಿಯೂ ಸಂಪೂರ್ಣವಾಗಿಯೂ ಬೆರಸಿಬಿಟ್ಟಿರುತ್ತವೆ. ಆದುದರಿಂದ, ಈ ಮಾನವ ಸಮಾಜದ ಪ್ರತಿಯೊಂದು ಅಂಗವನ್ನು ತತ್ವಗಳು ವ್ಯಾಪಿಸಿಕೊಂಡಿರುತ್ತವೆ. ಅದರಿಂದ ಆ ಸಮಾಜದ ಜೀವಿತದ ಮೇಲೆ ಜ್ಞಾನಯುಕ್ತವಾದ ಭಕ್ತಿಯ ಪರಿಣಾಮವು ವಿಲಕ್ಷಣವಾಗಿ ಆಗಿರುತ್ತದೆ. ವ್ಯಷ್ಟಿ ಸಮಷ್ಟಿಗಳ ಸಮನ್ವಯವಾಗಿರುತ್ತದೆ. ಆದಕಾರಣ ಮನುಷ್ಯನು ಹೆಚ್ಚಿಗೆ ಉನ್ನತವಾದ ಸ್ಥಿತಿಯನ್ನು ಹೊಂದಲಿಕ್ಕೆ ಅವಕಾಶವುಂಟಾಗಿರುತ್ತದೆ.

ಸನಾತನ ಧರ್ಮದ ಈ ವ್ಯಾಪಕತ್ವವೇ ಅದರ ಬಲವು ಮತ್ತು ಅದೇ ಅದರ ಬಿರುಕು. ಏಕೆಂದರೆ, ಆ ಧರ್ಮವು ನಮ್ಮ ಪ್ರತಿನಿತ್ಯದ ಜೀವಿತವನ್ನು ಒಂದು ಜೀವಂತ ಸಂಸ್ಥೆಯನ್ನಾಗಿ ಮಾಡಿದುದೇನೋ ನಿಜ. ಆದರೆ ಹಾಗೆ ಮಾಡುವುದಕ್ಕೆ ಅದಕ್ಕೆ ಅನೇಕ ಧಾರ್ಮಿಕ ಸಾಮಾಜಿಕ ವಿಧಿಗಳನ್ನೂ ಆಚಾರಗಳನ್ನೂ ಸಾಂಪ್ರದಾಯಗಳನ್ನೂ ಕಲ್ಪಿಸಬೇಕಾದುದರಿಂದ ಮುಂದೆ ಅವೆಲ್ಲವುಗಳು ಕೆಟ್ಟುಹೋದಾಗ ಅವುಗಳೊಡನೆಯೇ ಆ ಧರ್ಮಕ್ಕೆ ಹೋರಾಡಬೇಕಾಗುತ್ತದೆ. ಸನಾತನಧರ್ಮದ ಅಭಿಮಾನಿಗಳೂ ಟೀಕಾಕಾರರೂ ಧರ್ಮತತ್ವ ಹಾಗೂ ಧಾರ್ಮಿಕವಿಧಿ ಇವುಗಳೊಳಗಿನ ಭೇದವನ್ನು ಕಂಡುಹಿಡಿಯುವ ಮೂಲಕ ಅನೇಕಸಲ ದಿಗ್ಭ್ರಾಂತರಾಗಿ ಧಾರ್ಮಿಕ ವಿಧಿಗಳಿಗೆ ಇಬ್ಬರೂ ಇಲ್ಲದ ಮಹತ್ವವನ್ನು ಕೊಡುತ್ತಾರೆ. ಆದುದರಿಂದ ಈ ಗೊಂದಲದಲ್ಲಿ ಸನಾತನಧರ್ಮದ ನಿಜವಾದ ಮೂಲತತ್ವಗಳೇ ಮೂಲೆಗುಂಪಾಗಿ ಹೋಗುವವು. ಆದುದರಿಂದ ಈ ಧರ್ಮದ ನಿಜವಾದ ಮೂಲತತ್ವಗಳು ಯಾವುವೆಂಬುದನ್ನು ನಾವು ತಿಳಿದುಕೊಳ್ಳುವುದು ಬಹಳ ಅವಶ್ಯವಾಗಿದೆ. ಹಾಗೆ ಮಾಡುವುದರಿಂದ, ಅನೇಕ ವಿಷಯಗಳಲ್ಲಿ ನಮ್ಮ ವಿಚಾರಕ್ಕೆ ಸ್ಫೂರ್ತಿ ದೊರೆಯುತ್ತದೆ. ಈಗಿನ ಕಾಲಕ್ಕಂತೂ ಈ ಪ್ರಶ್ನೆಗೆ ಬಹಳೇ ಮಹತ್ವವುಂಟು. ಅದೇಕೆಂದರೆ ಅನೇಕತರಹದ ಸಮಾಜರಚನೆಗಳಲ್ಲಿ ಯಾವುದು ಇದೇ ಜಗತ್ತಿಗೆ ಹೆಚ್ಚು ಕಲ್ಯಾಣಪ್ರದವಾದುದು; ಸಮಾಜದ ಪುನರ್ಘಟನೆಯನ್ನು ಹೇಗೆ ಮಾಡಬೇಕು ಎಂಬ ಪ್ರಶ್ನೆಗಳನ್ನು ಜನತೆಯು ವಿಶೇಷವಾಗಿ ಚರ್ಚಿಸಹತ್ತಿದೆ. ಈ ತರಹದ ಶಾಶ್ವತವಾದ ಸಮಾಜರಚನೆಯೊಂದನ್ನು ನಮ್ಮ ಪೂರ್ವಜರು ಕಂಡುಹಿಡಿದಿದ್ದರೆಂಬುದನ್ನು, ಈಗ ಪುನಃ ಆ ರೀತಿಯಿಂದ ಸಮಾಜದ ಪುನರ್ಘಟನೆ

ಯನ್ನು ಮಾಡುವುದು ಶಕ್ಯವಿರುತ್ತನೆಂಬುದನ್ನು ನಾವು ಮರೆಯಬಾರದು. ಆದರೆ ಈ ವ್ಯಾವಹಾರಿಕ ಪ್ರಶ್ನೆಯನ್ನು ಕುರಿತು ವಿಚಾರಮಾಡುವದಕ್ಕಿಂತ ಮೊದಲು ತತ್ವಜ್ಞಾನದ ಕ್ಷೇತ್ರವನ್ನು ಒಂದಿಷ್ಟು ಗಮನಿಸುವದವಶ್ಯವಿದೆ.

## ಸನಾತನ ಧರ್ಮದ ತಾತ್ತ್ವಿಕಸಿದ್ಧಾಂತಗಳು

ಈ ತತ್ತ್ವಜ್ಞಾನವೇ ಸನಾತನ ಧರ್ಮಕ್ಕೆ ವಿಶಿಷ್ಟಬಗೆಯ, ವ್ಯಾವಹಾರಿಕ ಸ್ವರೂಪವನ್ನು ಕೊಟ್ಟಿದೆ. ನಮ್ಮ ಸುತ್ತಲು ಕಂಡುಬರುವ ಸೃಷ್ಟಿಯಲ್ಲಿಯ ಸಂಗತಿಗಳನ್ನವಲೋಕಿಸಿ ವಿಶೇಷಾನುಸಂಧಾನ ಪೂರ್ವಕವಾದ ಸಾಮಾನ್ಯಾನುಮಾನ (Induction) ದಿಂದಲೂ ಸಾಮಾನ್ಯಾನುಸಂಧ್ಯಾನುಪೂರ್ವಕ ವಿಶೇಷಾನುಮಾನ (Deduction) ದಿಂದಲೂ ಈ ತತ್ವಗಳು ನಿಶ್ಚಯಿಸಲ್ಪಟ್ಟಿವೆ. ಈ ಸೃಷ್ಟಿಯಲ್ಲಿ ವಿವಿಧತೆಯುಂಟು. ಆ ವಿವಿಧತೆಯಲ್ಲಿ ನಾನಾತರದ ಕುಂದುಗಳೂ ಭೇದಗಳೂ ತಾರತಮ್ಯಗಳೂ ಅನೇಕ ಪ್ರಮಾಣಗಳಲ್ಲಿ ಕಂಡುಬರುತ್ತವೆ. ಸೃಷ್ಟಿಯಲ್ಲಿ ಕಂಡುಬರುವ ಈ ವಿಷಮತೆಯ ಮೂಲಕ, ನಾವು ಎಲ್ಲಿಂದ ಬಂದೆವು, ಎಲ್ಲಿಗೆ ಹೋಗುತ್ತಿರುವೆವು ಎಂಬ ತಾತ್ವಿಕ ಪ್ರಶ್ನೆಯೂ, ಮತ್ತು ಈ ಜಗತ್ತಿನಲ್ಲಿ ಕಂಡುಬರುವ ಈ ವಿವಿಧ ಸಂಗತಿಗಳಿಗೆ ಅವುಗಳ ತಾರತಮ್ಯದ ಪ್ರಕಾರ ಯಾವಸ್ಥಾನವನ್ನು ನಾವು ಕೊಡಬೇಕೆಂಬ ವ್ಯಾವಹಾರಿಕ ಪ್ರಶ್ನೆಯೂ ನಮ್ಮ ಮನಸ್ಸಿನಲ್ಲಿ ಹುಟ್ಟುತ್ತವೆ. ಈ ಪ್ರಶ್ನೆಗಳಿಗೆ ಉತ್ತರಕೊಡಬೇಕಾದರೆ, ತೋರಿಬರುವಮಟ್ಟಿಗಾದರೂ ಸತ್ಯವಾಗಿಯೇ ಇರುವ ಈ ಭೇದಗಳ ಮತ್ತು ವಿವಿಧತೆಯ ಬುಡದಲ್ಲಿ ಯಾವ ತತ್ವವಿರುತ್ತನೆಂಬವನ್ನು ತಿಳಿದುಕೊಳ್ಳಬೇಕಾಗುವವಲ್ಲದೆ, ನಿಜವಾದ ಐಕ್ಯ ಮತ್ತು ಪೂರ್ಣತೆ ಎಂದರೇನು ಎಂಬುದನ್ನೂ ತಿಳಿದುಕೊಳ್ಳಬೇಕಾಗುತ್ತದೆ. ಏಕೆಂದರೆ, ಎಲ್ಲರೂ ಆ ಐಕ್ಯವನ್ನೂ ಪೂರ್ಣತೆಯನ್ನೂ ಧ್ಯೇಯಗಳಾಗಿ ಇಟ್ಟುಕೊಂಡು ಅವುಗಳನ್ನು ಸಂಪಾದಿಸಲು ಹವಣಿಸಬೇಕಾಗುತ್ತದೆ. ಆ ಧ್ಯೇಯವಾವುದೆಂಬ ಬಗ್ಗೆ ಯೋಚಿಸಿದರೆ, ಬಾಹ್ಯಪದಾರ್ಥಗಳಲ್ಲಿರುವ ಆತ್ಮವಿಕಾಸವನ್ನು ಕಂಡುಹಿಡಿಯುತ್ತ, ತನ್ನ ಆತ್ಮವನ್ನೂ ವಿಕಾಸಪಡಿಸುತ್ತ ಹೋಗಿ ಕಟ್ಟಕಡೆಗೆ ಬಾಹ್ಯಪದಾರ್ಥಗಳಿಗೂ ತನಗೂ ಇದ್ದ ಭೇದವು ತೋರದಷ್ಟು ವ್ಯಾಪಕವಾದ ಐಕ್ಯದಲ್ಲಿ ಪರಿಣಮಿಸುವಂತೆ ಮಾಡುವುದೇ ನಮ್ಮ ಮುಖ್ಯ ಧ್ಯೇಯವಾಗಿರಬೇಕೆಂಬುದನ್ನು ಸನಾತನ ಧರ್ಮವು ಗುರುತಿಸಿದೆ. ಸತ್ (ಅದೇ ಸತ್ಯವು) ತತ್ತ್ವಮಸಿ (ಅದೇ ಇದು) ಮತ್ತು ಏಕಮೇವಾದ್ವಿತೀಯಮ್ (ಅದ್ವಿತೀಯವಾದುದು ಒಂದೇ ಒಂದು) ಈ ಸತ್ಯವನ್ನು ಕಂಡುಹಿಡಿದ ಬಳಿಕ ಮನುಷ್ಯನು ಈ ಉತ್ಕ್ರಾಂತಿಯು ಹೇಗೆ ಉಂಟಾಗುತ್ತದೆಂಬುವನ್ನು ವಿಚಾರಮಾಡತೊಡಗುತ್ತಾನೆ. ಆಗ, ಈ ಉತ್ಕ್ರಾಂತಿಯು ಕೇವಲ ತನ್ನ ವಶದಲ್ಲಿಯೇ ಇರುತ್ತದೆಂದೂ ಪ್ರಗತಿ ವ್ಯಾವರ್ತನಗಳು ಸಾಮಾನ್ಯ ಮತ್ತು ತಪ್ಪಿಸಲಶಕ್ಯವಾದ ಕೆಲವು ಸೃಷ್ಟಿಯ ನಿಯಮಗಳನ್ನು ಅವಲಂಬಿಸಿರುತ್ತವೆಯೆಂದೂ ಆತನಿಗೆ ಗೊತ್ತಾಗುತ್ತದೆ. ಆ ನಿಯಮಗಳು ಯಾವವೆಂದರೆ—ತನ್ನ ಸ್ವಂತ ಕರ್ಮಗಳ ಮೂಲಕ ನಿರ್ಮಿಸಲ್ಪಡುವ ಕಾರ್ಯಕಾರಣ ಸಂಬಂಧದ ನಿಯಮಗಳು. ಆತನಿಗೆ ಗೊತ್ತಾಗುವ ಮೂರನೆಯ ಸಿದ್ಧಾಂತವೆಂದರೆ– ಈ ಭೌತಿಕ ಜಗತ್ತೇ ತನ್ನ ಕರ್ಮಭೂಮಿ; ತನ್ನ ವಿಕಾಸವನ್ನು ಮಾಡಿಕೊಳ್ಳುವುದಕ್ಕೆ ಅಥವಾ ಬಿಡುವುದಕ್ಕೆ ತಾನೇ ಬಾಧ್ಯನು.

ತನ್ನ ಪೂರ್ವ ಕರ್ಮದಿಂದ ಮರ್ಯಾದಿತವಾದ ಆ ಕ್ಷೇತ್ರದಲ್ಲಿ ಆತನಿಗೆ ಪೂರ್ಣ ಸ್ವಾತಂತ್ರ್ಯವಿರುತ್ತದೆ. ಆತನಿಗೆಗೊತ್ತಾಗುವ ಈ ಸಿದ್ಧಾಂತಗಳಿಂದ, ಜಗತ್ತಿನಲ್ಲಿ ಕಂಡುಬರುವವಿಷಮತೆಗೂ ಭೇದಕ್ಕೂ ಕರ್ಮ ಮತ್ತು ಪುನರ್ಜನ್ಮ ಇವೇ ಮೂಲ ಕಾರಣಗಳೆಂದೂ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಪಡೆಯುವದಕ್ಕಾಗಿ ಸಮಾಜದಲ್ಲಿ ನಾಲ್ಕು ಆಶ್ರಮ ನಾಲ್ಕು ವರ್ಣಗಳನ್ನು ಕಲ್ಪಿಸುವದೇ ಆತ್ಮನು ಪೂರ್ಣ ವಿಕಾಸಹೊಂದುವುದಕ್ಕೆ ವ್ಯಾವಹಾರಿಕ ಉಪಾಯವೆಂದೂ ಸನಾತನ ಧರ್ಮಿಯನು ತಿಳಿದುಕೊಂಡನು. ನಾಲ್ಕು ಆಶ್ರಮಗಳೆಂದರೆ, ಜೀವಿತದ ನಾಲ್ಕು ಮೆಟ್ಟಲುಗಳು; ನಾಲ್ಕು ವರ್ಣಗಳೆಂದರೆ, ಸಮಾಜದ ಅಂಗಗಳಾದ ವ್ಯಕ್ತಿಗಳನ್ನು ಅವರವರ ಮೂಲವೃತ್ತಿಗಳಿಗನುಸಾರವಾಗಿ ನಾಲ್ಕು ವರ್ಣಗಳನ್ನು ಮಾಡುವುದು.

**ಪುನರ್ಜನ್ಮದ ಸಿದ್ಧಾಂತ**––ಇದು ಹಿಂದೂತತ್ವಜ್ಞಾನದ ಮೂಲತತ್ವಗಳಲ್ಲೊಂದು. ವಿಶ್ವದ ಗೂಢವನ್ನು ಈ ಧರ್ಮವು ತತ್ವಜ್ಞಾನಯುಕ್ತವಾದ ಶಾಸ್ತ್ರೀಯ ರೀತಿಯಿಂದ ಬಿಡಿಸಿರುತ್ತದೆಂಬುದೇ ಈ ಧರ್ಮದ ವೈಶಿಷ್ಟ್ಯವೆಂಬುದನ್ನು ಮೇಲೆ ಹೇಳಿದೆಯಷ್ಟೆ. ಸೃಷ್ಟಿಯೊಳಗಿನ ವಿವಿಧತೆಯೇ ತತ್ವಜ್ಞಾನಿಗೂ ಶಾಸ್ತ್ರಜ್ಞನಿಗೂ ಸಮಾಜ ಶಾಸ್ತ್ರಜ್ಞನಿಗೂ ಚನ್ನಾಗಿ ಆಕಲನವಾಗದಿರುವ ದೊಡ್ಡ ಗೂಢವು. ಈ ಗೂಢವನ್ನು ಬಿಡಿಸುವುದರಲ್ಲಿ ಸನಾತನ ಧರ್ಮಿಯನು ತೋರಿಸಿದ ಬುದ್ಧಿ ಪ್ರಾವವೇ ಆತನ ಹೆಚ್ಚಿನ ಗುಣವು ಅದೇ ತತ್ವಜ್ಞಾನವೂ

ಕರ್ಮವೂ ಮುಖ್ಯ ತತ್ವಗಳು. ಈ ತತ್ವಗಳ ಮೂಲಕ, ಇತ್ತ ಒಂದು ದೃಷ್ಟಿಯಿಂದ ವಿಷಮತೆಯನ್ನು ಸಂಪೂರ್ಣವಾಗಿ ಅಳಿಸಿಬಿಟ್ಟದ್ದರೂ ಇತ್ತ ಜಗತ್ತಿನಲ್ಲಿಯ ಈ ವಿಷಮತೆಯ ಸತ್ಯತೆಯನ್ನು ಒಪ್ಪಿಕೊಂಡು, ಅವರ ಆಧಾರದಮೇಲೆ ಶಕ್ಯವಿದ್ದಷ್ಟು ಉಚ್ಚ ಸ್ಥಳವನ್ನಾಕ್ರಮಿಸುವುದಕ್ಕೆ ವ್ಯಕ್ತಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿರುವುದರಲ್ಲಿ ಸನಾತನ ಧರ್ಮವು ಲೋಕವಿಲಕ್ಷಣವಾದ ಬುದ್ಧಿಪ್ರಭಾವವನ್ನು ತೋರಿಸಿವದ್ದಾನೆ. ಕಾರ್ಯಕಾರಣ ಸಂಬಂಧದ ಅಚೇತನ ತತ್ವದ ಆಧಾರದಮೇಲೆ ಸಚೇತನ ಜೀವನ ಜನ್ಮಾಂತರದ ಸಿದ್ಧಾಂತವನ್ನು ಪ್ರಸ್ಥಾಪಿಸುವುದು ತೀರ ಹೊಸ ಕಲ್ಪನೆಯು. ಇದು ನಮ್ಮ ದೇಶದ ಹೊರ್ತು ಮತ್ತಾವ ದೇಶದಲ್ಲಿಯೂ ಕಂಡುಬರುವುದಿಲ್ಲ. ಈ ಸಿದ್ಧಾಂತವು ಸಾಂಖ್ಯ ಶಾಸ್ತ್ರದಲ್ಲಿ ಅತ್ಯಂತ ಸೂಕ್ಷ್ಮವಾಗಿ ವಿವೇಚಿಸಲ್ಪಟ್ಟದ್ದು ವೇದಾಂತಶಾಸ್ತ್ರದಲ್ಲಿ ಅದು ಒಳ್ಳೇ ಮಾರ್ಮಿಕವಾಗಿ ಗ್ರಹಿಸಲ್ಪಟ್ಟಿರುವುದು. ಹೀಗೆ ಮಾಡುವುದರಲ್ಲಿ ನಮ್ಮ ಜನರು ತೋರಿಸಿದ ಕೇವಲ ಬುದ್ಧಿಕುಶಲತೆಯನ್ನು ಕಂಡು ಎಲ್ಲರೂ ಬೆರಗಾಗುವಂತೆ ಇದೆ. ಆದರೆ ಆ ಬೌದ್ಧಿಕ ಕುಶಲತೆಯನ್ನು ವರ್ಣಿಸುವುದು ಒಂದು ಸ್ವತಂತ್ರ ವಿಷಯವೇ ಸರಿ. ಬೌದ್ಧಿಕ ದೃಷ್ಟಿಯಿಂದ ಅದರ ಬೆಲೆಯು ನಿಜವಿರಲಿ ಇರದಿರಲಿ, ಅದರಿಂದ ಮನುಷ್ಯನ ಜೀವಿತದ ಮೇಲೆ ಉಂಟಾದ ಪರಿಣಾಮವನ್ನಂತೂ ಯಾರೂ ಅಲ್ಲಗಳೆಯುವಂತಿಲ್ಲ. ಕರ್ಮದ ಸಿದ್ಧಾಂತವು ಮನುಷ್ಯನನ್ನು ಕೇವಲ ದೈವವಾದಿಯನ್ನಾಗಿ ಮಾಡುತ್ತದೆಂದು ಅದನ್ನು ಅನೇಕರು ತೀಕ್ಷ್ಣವಾಗಿ ಟೀಕಿಸಿರುತ್ತಾರೆ. ಅದರ ನಿಜವಾದ ಮರ್ಮವನ್ನು ತಿಳಿದರೆ, ಹಾಗೆ ಪರಿಣಾಮವಾಗಲು ಏನೂ ಕಾರಣವಿಲ್ಲ. ತದ್ವಿರುದ್ಧವಾಗಿ, ಮನುಷ್ಯನು ತನ್ನ ದೈವಕ್ಕೆ ತಾನೇ ಮೂಲಕಾರಣನೆಂದು ಅದು ಹೇಳುವುದರಿಂದ ಎಂಥ ಎಡರುಗಳಿದ್ದರೂ ಆತನು ಅವುಗಳನ್ನೆಲ್ಲ ಇಂದಿಲ್ಲ ನಾಳೆ ದೂರಮಾಡಬಲ್ಲೆನೆಂಬ ಭರವಸೆಯಿಂದ ಮನುಷ್ಯನು ಹೆಚ್ಚು ಹೆಚ್ಚು ಪ್ರಯತ್ನವಾದಿಯಾಗುವುದಕ್ಕೆ ಅದು ಸ್ಫೂರ್ತಿಯನ್ನು ಕೊಡುತ್ತದೆ. ಇದಕ್ಕಿಂತ ವಿಶೇಷವಾದ ಸಂಗತಿಯೇನಂದರೆ—ಸಮಾಜದಲ್ಲಿ ಕಂಡುಬರುವ ವಿಷಮತೆಗೆ ಈ ಪುನರ್ಜನ್ಮ ಸಿದ್ಧಾಂತವು ಉತ್ತಮವಾದ ಔಷಧವಾಗಿದೆ. ಅದರ ಮೂಲಕ, ಮನುಷ್ಯನ ಮನಸ್ಸಿಗೆ ಸಮಾಧಾನವಾಗುತ್ತದೆ. ಅವನ್ನು ನಾವು ಮುಂದೆ ವರ್ಣಾಶ್ರಮವನ್ನು ಕುರಿತು ಹೇಳುವಾಗ ಹೆಚ್ಚಿಗೆ ಚರ್ಚಿಸುವೆವು.

---

# ಮಂಗನ ಶಿಕ್ಷಣ

ಕವಿ:—ಶ್ರೀ ಮಲ್ಹಾರಿ ಬಾಲಕೃಷ್ಣ ಕೆ. ಬರ್ಗಿ, ಗೈಲಸೂಗಲ.

ತಿರುದುಂಬುವದಕೆ ತಿರುಕನು ಕೋತಿಗೆ ।
ತರತರದಾಟವ ಕಲಿಸಿದರೂ ।
ಹೊಸ । ಅರಿವೆಯ ಅಂಗಿಯ ತೊಡಿಸಿದರೂ ।
ಬಲು । ಕಿರಿಗೆಜ್ಜೆಗಳನು ಇಡಿಸಿದರೂ ।
ತಿರೆಯೊಳಗದು ಅಪಮಾನವ ಹೊಂದುತೆ ।
ಪರಿತಾಪದೊಳೇ ಸಾಯುವದು ॥ ೧ ॥

ಗೊಲ್ಲನು ಸಾಕಿದ ಮಂಗನ ಕಲಿಕೆಯು ।
ಗೊಲ್ಲನಿಗೋಸುಗ ಇರುತಿಹುದು ।
ಅದ । ಕಿಲ್ಲದ ಬಂಧನ ಹಾಕುವದು ।
ಕುಲ । ವೆಲ್ಲವನದು ದೂರ್ ಮಾಡುವದು ।
ಮೆಲ್ಲಮೆಲ್ಲನೇ ಮತಿಗೆಡಿಸುತೆ ಮುಂ ।
ದೆಲ್ಲ ಶಕ್ತಿಯನು ಕಳೆಯುವದು ॥ ೨ ॥

ಮನುಜಜನ ಸಮಾನನಾದರೆ ಮಂಗನು ।
ಮನುಜಜನ ಸೆರೆಯಾಳಾದೀತೇ ?
ಅದು ಮನೆ ಮನೆ ಲಾಗವ ಹೊಡೆದೀತೇ ?
ಆ । ವನಚರನೊಡಲಿಗೆ ತಿರುಗೀತೇ ? ।
ಇನಿತಿರೆ ಆತನ ಶಿಕ್ಷಣದೊಳು ಕಪಿ ।
ಘನತೆಯನೆಂತದು ಪೊಂದುವುದು ॥ ೩ ॥

ಎಲೆ ಎಲೆ ! ತಿಮ್ಮನೆ ನಿಮ್ಮ ಜಾತಿಗೀ ।
ಕಲಿಕೆಯು ಮೊದಲಿಗೆ ಬರುತಿತ್ತೇ ?
ಅದು । ಚಲುವಾದುಡುಪಸು ಕೊಡುತಿತ್ತೇ ?
ಚಹ । ದೆಲೆ ನೀರನು ಕುಡಿಯುತಲಿತ್ತೇ ?
ಒಲಿದಿವನೆಲ್ಲವ ಕಲಿಸಿದುಕೆನ್ನೊಳೆ ।
ಸಲಿಪಿರು ನಿನಗದು ಸುಖವಹುದು ॥ ೪ ॥

ಕೇಳಿಲೆ ಕೋತಿಯೆ ಎನ್ನನು ತೊರೆದರೆ ।
ಕೂಳನು ನಿನಗಾರಿಕ್ಕುವರು ?
ಬಲೆ । ಜೀಳಲು ಕಾಪಾಡುವರಾರು ?
ನಿ । ನ್ನೇಳಿಗೆಯನು ಬಯಸುವರಾರು ?
ಊಳಿಗತನವನು ಮಾಡದಿರೆನ್ನೊಳು ।
ಬಾಳಿಕೆ ಎಂತದು ಆಗುವದು ? ॥ ೫ ॥

ನಿನ್ನ ಸುಖದ ಸಲುವಾಗಿಯೆ ಈ ಪರಿ ।
ನಿನ್ನನು ಕೈಯೊಳು ಹಿಡಿದಿಹೆನು ।
ನಾ । ಅನ್ಯರ ಹಿತಕೇ ಬಳಲುವೆನು ।
ನೀ । ಎನ್ನೊಳು ಇಡು ನಂಬುಗೆಯನ್ನು ।
ಎನ್ನಲಿಂತು ಆ ಗೊಲ್ಲನು ಆದನೇ ।
ನನ್ನಿಯೆಂದು ಕಪಿ ತಿಳಿಯುವದು ॥ ೬ ॥

ಎನಿತಿದು ಸೋಜಿಗ ನೋಡಿರಿ ಚದುರರೆ ।
ತನಗಿಹ ಬಳಗವನೊಡಗೂಡಿ ।
ವನ । ವನದೊಳು ಮನೆದೊಲು ತಿರುಗಾಡಿ ।
ಮಿಗೆ । ತನಿವಣ್ಣುಗಳನು ತಿಂದಾಡಿ ।
ಘನಸುಖವನು ಪಡೆಯುವದನು ತೊರೆದು ।
ಅನುದಿನ ತಿರಿದುಣಲೆಳಸುವದು ॥ ೭ ॥

ಕೋತಿಯೆ ಕೇಳಲೆ, ಮಹಾಸಾಗರವ ।
ಕಾತರಿಸದೆ ಜಿಗಿದವರಾರು ? ।
ಮೇಣ್ । ಸೇತುವೆಯನು ಕಟ್ಟಿದರಾರು ? ।
ದನು । ಜಾತರ ಪುರ ಸುಟ್ಟವರಾರು ? ।
ಈ ತೆರ ಶಕ್ತಿಯ ತೋರಿದ ಹಿರಿಯರ ।
ಐತಿಹ್ಯವ ತುಸು ನೋಡುವದು ॥ ೮ ॥

ಸೀತೆಯ ಹುಡುಕುವ ಕಾಲದೆ ಹೆಣ್ಣಿನ ।
ಜಾತಿಗೆ ಮನಸೋಲದೆ ಇಹುದು ।
"ಸೀವ್ । ಮಾತೆಯು ಸರಿ" ಎಂದುಸುರುವದು ।
ಒಣ । ಮಾತಾಡದೆ ಕೃತಿ ಮಾಡುವದು ।
ನೀತಿಯಿದೆಲ್ಲವ ಕಲಿತ ನಿಮ್ಮ ಕುಲ ।
ದೈತಿಹ್ಯವ ತುಸು ನೋಡುವದು ॥ ೯ ॥

ಹಿಂದಿನದೇಶಕೆ ನಿನ್ನ ಸುತ್ತಲಿಹ ।
ಇಂದಿನ ಜನರನೆ ನೋಡಿದರೂ ।
ನಿ । ನ್ನಂದದೆ ಪರವಶತೆಯೊಳಾರು ? ।
ಮತಿ । ಮಂದರು ತಿಳಿಯದೆ ಬಳಲುವರು ? ।
ಎಂದೂ ಯಾರೂ ಹೆರವರ ಕಲಿಕೆಗೆ ।
ಮುಂದಾಗರು ಸಿದ್ಧಾಂತವಿದು ॥ ೧೦ ॥

ಪರತಂತ್ರತೆಯೊಳು ದೊರೆಯುವ ಶಿಕ್ಷಣ ।
ಪರಕೀಯರಿಗಾಗಿರುತಿಹುದು ॥
ಅದು । ಪರವಶತೆಯ ದೃಢಪಡಿಸುವದು ।
ಬಹು । ಪರಿಯಿಂದವನತಿಗೆಳೆಸುವದು ।
ಅರಿವನು ಮರೆಯಿಸಿ ಇರುವ ಶಕ್ತಿಯನು ।
ದುರಿತ ಕರ್ಮದೊಳೆ ತೊಡಗಿಪುದು ॥ ೧೧ ॥

# ಕರ್ನಾಟಕ ಇತಿಹಾಸದ ವಸ್ತುಸ್ಥಿತಿ

ಲೇಖಕ:— ಶ್ರೀ ನರಗುಂದಕರ ರಾಮರಾಯರು ಬಿ.ಎ., ಎಲ್‌ಎಲ್.ಬಿ., ಧಾರವಾಡ

ನಮ್ಮ ಪೂರ್ವಜರು ಶಾಸ್ತ್ರೀಯ ದೃಷ್ಟಿಯಿಂದ ಯೋಗ್ಯವಾದ ವೇದಾಂತ ಗ್ರಂಥಗಳನ್ನು ಬರೆದಿಟ್ಟಂತೆ ಇತಿಹಾಸ ಭೂಗೋಲಗಳ ಗ್ರಂಥಗಳನ್ನು ಬರೆದಿಟ್ಟಿಲ್ಲ. ರಾಜತರಂಗಿಣಿ, ಹರ್ಷಚರಿತ್ರ, ಪೃಥ್ವೀ ರಾಜರಾಸಾ, ಕಂಠೀರವ ನರಸರಾಜ ವಿಜಯ, ಚಿಕದೇವರಾಯ ಚರಿತ್ರೆ, ಶಿವಭಾರತ ಮುಂತಾದ ಗ್ರಂಥಗಳೇನೋ ಹಲಕೆಲವಿದ್ದರೂ ಅವು ಪ್ರಮಾಣ ಗ್ರಂಥಗಳಲ್ಲ. ಹಿಂದಿನವರ ಲಕ್ಷವು ಈ ವಿಷಯದಲ್ಲಿ ಹೋಗದಿದ್ದುದರ ಫಲವನ್ನು ಇಂದಿನವರಾದ ನಾವು ಉಣ್ಣಬೇಕಾಗಿದೆ. ಹೀಗಾಗಿ ಇತಿಹಾಸ ಭೂಗೋಲಶಾಸ್ತ್ರಗಳ ಅಭ್ಯಾಸವು ನಮಗೆ ಇರದ್ದರಿಂದ ಈ ವಿಷಯಗಳಲ್ಲಿ ಅನುಭವ ಜನ್ಯ ಜ್ಞಾನಕ್ಕೆ ನಾವು ಎರವಾಗಿದ್ದೇವೆ. ಏಶಿಯದ ಪೂರ್ವದ್ವೀಪ ಸಮೂಹಗಳಲ್ಲಿ ಇಂದಿಗೆ ೮–೧೦ ಶತಮಾನಗಳ ಪೂರ್ವದಲ್ಲಿ ಹಿಂದೀ ಜನರು ಸಾಮ್ರಾಜ್ಯಗಳನ್ನು ಸ್ಥಾಪಿಸಿದ ಸಂಗತಿಗಳು ನಮಗೆ ನಿಜವೆಂದು ತೋರುವದಿಲ್ಲ. ಚೀನ ಜಪಾನಾದಿ ದೇಶಗಳಲ್ಲಿ ೨೮–೨೫ ಶತಮಾನಗಳ ಪೂರ್ವದಲ್ಲಿ ನಮ್ಮ ಜನರು ಬುದ್ಧ ದೇವನ ವಿಶ್ವಮೈತ್ರಿ ಧರ್ಮವನ್ನು ಪ್ರಚಾರಗೊಳಿಸಿದುದರ ಇತಿಹಾಸವು ನಮಗೆ ಗೊತ್ತಿಲ್ಲ. ಆ ದೇಶಗಳಲ್ಲೆಲ್ಲ ಭವ್ಯ ದಿವ್ಯ ದೇವಾಲಯ ವಿಹಾರಾದಿಗಳನ್ನು ನಮ್ಮವರು ಕಟ್ಟಿರುವರೆಂಬುದನ್ನು ಪರದೇಶೀಯ ವಿದ್ವಜ್ಜನರು ಇಂದು ನಮಗೆ ಹೇಳಬೇಕಾಗಿದೆ. ಅದಿರಲಿ.

ನಮ್ಮ ಕರ್ನಾಟಕದಲ್ಲಿಯೇ ದೊರೆಯುವ ಅನೇಕ ಸಾಧನಗಳ ಸಹಾಯದಿಂದ ಕನ್ನಡಿಗರ ಸ್ವತಂತ್ರ ಇತಿಹಾಸವನ್ನು ಬರೆಯುವಂತಿದೆ. ದೇಶದ ತುಂಬ ಎತ್ತ ನೋಡಿದತ್ತ ಶಿಲಾಶಾಸನಗಳೂ ವೀರಬಸ್ತಿಗಳೂ ಗುಡಿಗೋಪುರಗಳೂ ಇವತ್ತಿಗೂ ಕಣ್ಣಿಗೆ ಕಾಣುತ್ತವೆ. ಹಳೇ ಗ್ರಂಥಗಳ ಸಮೃದ್ಧಿಯೂ ಇದೆ. ಇವುಗಳಲ್ಲಿ ಈ ನಾಡಿನಲ್ಲಾಳಿದ ಹಿಂದಿನ ಅರಸು ಮನೆತನಗಳ ಸಾಮ್ರಾಜ್ಯಗಳ ಇತಿಹಾಸವು ನಮಗೆ ವಿಪುಲವಾಗಿ ದೊರೆಯುವದು. ಕದಂಬ–ಉಭಯಚಾಲುಕ್ಯ–ರಾಷ್ಟ್ರಕೂಟ–ಉಭಯಯಾದವ–ವಿಜಯನಗರಾದಿ ಅಚ್ಚ ಕನ್ನಡ ರಾಜ್ಯದ ರಮಣೀಯವಾದ ಇತಿಹಾಸವು ಈ ಶಾಸನಗಳಲ್ಲಿ ಅಡಕವಾಗಿದೆ. ನಮ್ಮ ಹಿಂದುಸ್ಥಾನದ ಪೂರ್ವಪರಂಪರೆಯನ್ನು ಕಾಯ್ದುಕೊಂಡು ೬ನೆಯ ಶತಮಾನದಿಂದ ೧೬ನೆಯ ಶತಮಾನದ ಮಧ್ಯದ ವರೆಗೂ ಕರ್ನಾಟಕ ರಾಷ್ಟ್ರವು ಚಕ್ರವರ್ತಿತ್ವದ ವೈಭವದಿಂದ ಮೆರೆಯುತ್ತಿದ್ದುದರ ಅಭ್ಯಾಸವನ್ನು ನಾವು ಮಾಡಬೇಕಾಗಿದೆ. ಪರಂಪರೆಯನ್ನು ಕಾಪಾಡುವದರಲ್ಲಿ ಕನ್ನಡಿಗರು ಎಚ್ಚರದಿಂದಿರುತ್ತಿದ್ದರೆಂದು ತೋರುತ್ತದೆ; ಏಕೆಂದರೆ ಕಲ್ಯಾಣದ ಚಾಲುಕ್ಯರು ಹತಪ್ರಭರಾದರೂ ದೇವಗಿರಿಯವರೂ ಹೊಯ್ಸಳರೂ ತಾವು ಅವರ ಅಂಕಿತರೆಂದು ಮುಂದೆ ಕೆಲವು ಕಾಲ ತಮ್ಮನ್ನು ಕರೆದುಕೊಂಡರು. ವಿಜಯನಗರದವರಂತೂ ಚಾಲುಕ್ಯರ ಧ್ವಜಚಿನ್ಹವನ್ನು ಸ್ವೀಕರಿಸಿದರು. ತಾಳೀಕೋಟೆಯ ಕಾಳಗದ ತರುವಾಯ ಸಹ ಬಿದನೂರವರೂ ಮೈಸೂರವರೂ ವಿಜಯನಗರ ಸಾಮ್ರಾಜ್ಯದ ಮನೆತನದ ಅಂಕಿತರೆಂದು ಹೇಳಿಕೊಳ್ಳುತ್ತಿದ್ದರು.

ತಾಳೀಕೋಟೆಯ ಕಾಳಗದಲ್ಲಿ ವಿಜಯನಗರ ರಾಜ್ಯವು ಹಾಳಾಗಲಿಲ್ಲವಾದರೂ ಕರ್ನಾಟಕ ರಾಷ್ಟ್ರವು ಹಾಳಾಯಿತು. ಜರಾಸಂಧನ ತುಂಡುಗಳಂತೆ ಅದರ ಸ್ಥಿತಿಯಾಯಿತು. ವಿಜಯನಗರದ ಅರಸುಮನೆತನದವರು ಆ ಮುಂದೆ ದಕ್ಷಿಣ ದೇಶಕ್ಕೆ ಹೋಗಿ ಅಲ್ಲಿ ನಿಂತು ರಾಜ್ಯವನ್ನಾಳಿದರು; ಆದರೆ ಆ ತರುವಾಯ ಅವರು ಅಚ್ಚ ತೆಲಗರಾದರು. ಕರ್ನಾಟಕ ರಾಷ್ಟ್ರಶ್ರೀಯು ತಾಳೀಕೋಟೆಯಲ್ಲಿಯೇ ಅದೃಶ್ಯವಾಯಿತು. ನಾಡೆಲ್ಲ ತುಂಡುತುಂಡಾಗಿ ಅನೇಕ ಪಾಳೆಯಗಾರರ ಕೈಯಲ್ಲಿ ಸಿಕ್ಕು ನೋಡಿದತ್ತ ಅಂತಃಕೋಲಾಹಲವೆದ್ದಿತು. ದಕ್ಷಿಣದಲ್ಲಿ ಮೈಸೂರವರೂ ಬಿದನೂರವರೂ ಕರ್ನಾಟಕ ಸಿಂಹಾಸನದ ಸಲುವಾಗಿ ಕಾದಾಡಿದರೂ ಕನ್ನಡ ಸಿರಿಯನ್ನು ಕಾಡುವ ಪ್ರಯತ್ನವನ್ನಾದರೂ ಮಾಡಿದರು. ಉತ್ತರದಲ್ಲಂತೂ ಹೇಳುವವರಿಲ್ಲ ಕೇಳುವವರಿಲ್ಲ; ಹೀಗಾಗಿ ಈ ನಾಡು ದಿನೇದಿನೇ ಅನ್ಯರ ಪಾಲಾಗಿ ಇದ್ದ ಅಲ್ಪ ಚೈತನ್ಯವನ್ನೂ ಕಳೆದುಕೊಂಡಿತು.

ಆ ಹಾಡೇ ಇಂದಿನ ವರೆಗೂ ಸಾಗಿ ಬಂದಿದೆ. ರಾಷ್ಟ್ರದ ಸ್ವಾತಂತ್ರ್ಯ ಪಾರತಂತ್ರ್ಯಗಳು ದೈವಾಧೀನವೆಂದು ಭಾವಿಸಿದರೂ 'ಸ್ವತ್ವ'ವನ್ನು ಕಾಯ್ದುಕೊಳ್ಳುವದು ಆ ರಾಷ್ಟ್ರದ ಜನರ ಕೈಯಲ್ಲಿಯೇ ಇದೆ. ಆದರೆ ಅದನ್ನೂ ನಾವು ಕಳೆದುಕೊಂಡೆವೆಂಬದಕ್ಕೆ ಕನ್ನಡಿಗರೆಂದು ನಮ್ಮನ್ನು ಕರೆದುಕೊಳ್ಳಲಿಕ್ಕೆ ಇಷ್ಟು ದಿವಸ ನಾವು ಹೇಸಿದ್ದೂ ೧೯೨೧–೧೧ರಲ್ಲಿ ಕನ್ನಡಿಗರ ಜನಸಂಖ್ಯೆಯು ಕಡಿಮೆಯಾದದ್ದೂ ಸಾಕ್ಷಿಗಳಾಗಿವೆ. ೧೯೩೧ರಿಂದ ಸ್ಥಿತಿಯು ಮಾರ್ಪಡಿಸಹತ್ತಿದೆಯೆಂಬುದು ಇದ್ದದ್ದರಲ್ಲಿ ಸಂತೋಷದ ಮಾತೇ ಸರಿ.

ತಾಳೀಕೋಟೆಯಲ್ಲಿ ಸಂಭವಿಸಿದ ಆ ದೈವದುರ್ವಿಪಾಕದ ನಂತರದ ಈ ೩–೪ ಶತಮಾನಗಳ ಕಾಲಾವಧಿಯಲ್ಲಿ ಕನ್ನಡನಾಡಿನಂತೆ ಹಿಂದುಸ್ಥಾನದ ಮಿಕ್ಕ ದೇಶಗಳಲ್ಲಿಯೂ ಅನೇಕ ಪರಿವರ್ತನೆಗಳುಂಟಾದವು. ದೇಶವೆಲ್ಲ ಇಂಗ್ಲಿಷರ ಕೈವಶವಾಯಿತು. ಅವರ ರಾಜ್ಯವು ನೆಲೆಗೊಂಡು ಸಹ ೧೦೦–೧೫೦ ವರ್ಷಗಳಾಗಿ ಹೋದವು. ರಾಜ್ಯವು ಸ್ಥಿರವಾದೊಡನೆ ದೇಶದಲ್ಲಿ ಕಲಕತ್ತಾ–ಮುಂಬಯಿ–ಮದ್ರಾಸ ಮೊದಲಾದ ವಿಶ್ವವಿದ್ಯಾಲಯಗಳು ಸ್ಥಾಪಿತವಾದವು. ಅವುಗಳಲ್ಲಿ ಇತಿಹಾಸ ಭೂಗೋಲಾದಿ ಶಾಸ್ತ್ರಗಳ ಅಭ್ಯಾಸವು ಪ್ರಾರಂಭವಾಯಿತು. ೧೮ನೇ ಶತಮಾನದ ಈಚೆಗೆ ಇಂಗ್ಲಿಷ ಹಾಗು ಇತರ ಯುರೋಪಿಯನ್ ವಿದ್ವಾಂಸರು ಈ ದೇಶದಲ್ಲಿ ದೊರೆಯುವ ಅನೇಕ ಐತಿಹಾಸಿಕ ಸಾಧನಗಳನ್ನು ಸಂಗ್ರಹಿಸಿ ಈ ವಿಷಯದ ಅಭ್ಯಾಸಕ್ಕೆ ತೊಡಗಿದರು. ನೂರಾರು ವರ್ಷಗಳ ವರೆಗೆ ಮೂಲೆಗುಂಪಾಗಿ ಹೋಗಿ ಹಳ್ಳಿಯ ಹೆಂಗಸರು ಕುಳ್ಳು ಹಚ್ಚಲಿಕ್ಕೆ ಉಪಯೋಗಿಸುತ್ತಿದ್ದ ಶಿಲಾಶಾಸನಗಳು ಆ ಪರಕೀಯ ಜನರಿಗೆ ಅಮೌಲ್ಯವಸ್ತುಗಳೆಂದು ತೋರಹತ್ತಿದವು. ಆ ಕಲ್ಲು ಕಂಬಗಳನ್ನು ತೊಳೆದು ಕಾದಿಟ್ಟು ಅವುಗಳೊಳಗಿಂದ ಹಳೇ ಇತಿಹಾಸವನ್ನು ಹುಡುಕಹತ್ತಿದರು. ಹದ್ದು ಗೂಗೆ ಕಣಕಪ್ಪಡಿಗಳ ಗೂಡು ಕಟ್ಟಿಕೊಂಡಿದ್ದ ಹಾಳು ಗುಡಿಗೋಪುರಗಳಲ್ಲಿ ತಿರುಗಾಡತೊಡಗಿದರು. ಅವರಿಗೆ ಆ ಗುಡಿಗುಂಡಾರಗಳ ಮೂಕ ಹಾಡುಗಳು ಕೇಳಿಸಹತ್ತಿದವು. ಇಂಥ ಜನರಲ್ಲಿ ಬಟ್ಲರ–ಇಲಿಯಟ್–ಕನಿಂಗಹ್ಯಾಮ–ಕಿಟೆಲ್ ಫ್ಲೀಟ–ರೈಸ–ಕಿಲ್‌ಹಾರ್ನ ಹುಲ್ಟ್ಜ (Kielhorn Hultzsch) ಮೊದಲಾದವರ ನಾಮನಿರ್ದೇಶವನ್ನು ಮಾಡರ್ಬೇಕಾದವಶ್ಯವಿದೆ. ಈ ಯುರೋಪ್ಯ ಜನರೊಡನೆ ಮುಂಬಯಿ ಇಲಾಖೆಯಲ್ಲಿ ಡಾ. ಭಾಂಡಾರಕರ. ಪಂಡಿತ ಭಗವಾನಲಾಲ ಇಂದ್ರಜಿತ್. ಶ್ರೀ ತೇಲಂಗ ಮೊದಲಾದ ಹಿಂದೀ ವಿದ್ವಾಂಸರೂ ನಮ್ಮ ಇತಿಹಾಸದ ಅಭ್ಯಾಸವನ್ನು ಮಾಡಹತ್ತಿದರು.

ಡಾ. ಭಾಂಡಾರಕರರು ಮಹಾರಾಷ್ಟ್ರ ಇತಿಹಾಸದ ಒಳ್ಳೇ ಅಭಿಮಾನಿಗಳು. ಅವರ ಕಾಲದಲ್ಲಿ ಮೇಲೆ ಹೇಳಿದ ಅನೇಕ ವಿದ್ವಜ್ಜನರ ಪರಿಶ್ರಮದಿಂದ ಈ ಕಲ್ಲಿನ ಕುಟ್ಟರಿಗಳೊಳಗಿಂದ ಅವರ ಮಹಾರಾಷ್ಟ್ರ ದೇಶದಲ್ಲಿ ಬಹುಕಾಲದ ವರೆಗೆ ಆಳಿದ ಚಾಲುಕ್ಯ ರಾಷ್ಟ್ರಕೂಟಾದಿ ಕನ್ನಡ ಸಾಮ್ರಾಜ್ಯಗಳ ರಾಜವಂಶಗಳ ಇತಿಹಾಸವು ದೊರೆಯಹತ್ತಿತ್ತು. ಮಹಾರಾಷ್ಟ್ರೀಯರ ಇತ್ತೀಚೆಯ ಇತಿಹಾಸವು ಜನರ ಕಣ್ಣ ಮುಂದೆ ಇತ್ತೇ ಇತ್ತು. ಚಾಲುಕ್ಯಾದಿ ಪೂರ್ವದ ರಾಜವಂಶಗಳೂ ಮಹಾರಾಷ್ಟ್ರ ರಾಜವಂಶಗಳೆಂದು ಸಾಧಿಸಿದರೆ ತಮ್ಮ ಮಹಾರಾಷ್ಟ್ರಕ್ಕೆ ಬಲವಾದ ಇತಿಹಾಸಪರಂಪರೆಯನ್ನು ದೊರಕಿಸಿದಂತಾಗುವದೆಂದು ಏನೇನೋ ಭಾವಿಸಿ ಆ ಮಹನೀಯರು ಮೆಲ್ಲಮೆಲ್ಲನೆ ಈ ರಾಜವಂಶಗಳು ಈಗಿನ ಮರಾಠಿ ಜನರ ಪೂರ್ವಜರಾದ ಹಳೇ ಮರಾಠಿ ಜನರ ರಾಜವಂಶಗಳೆಂದು ಬರೆಯಲು ಯತ್ನಿಸಿದರು. ಆದರೆ ಆರಂಭದಲ್ಲಿ ಆ ಪ್ರಕಾರದ ವಿಧಾನಗಳನ್ನು ಮಾಡಲಿಕ್ಕೆ ಅವರಿಗೆ ಅಷ್ಟೊಂದು ಧೈರ್ಯ ಸಾಲಲಿಲ್ಲ. ಏಕೆಂದರೆ ಅಷ್ಟೊತ್ತಿಗೆ ಇಂಗ್ಲಿಷ ವಿದ್ವಾಂಸರು ಹಲಕೆಲವು ಗ್ರಂಥಗಳನ್ನು ಬರೆದಿದ್ದರು.

1. Elliot's Karnataka Desh Inscriptions.
2. Hon. Mr. Hope's Incriptions in Dharwar and Mysore.
3. Fleet's 'Pali Sanscrit and Old Kanarese Inscriptions from the Bombay Presidency and part of the Madras Presidency and Mysore.
4. Dynasties of the Kanarese Districts of the Bombay Presidency.
5. Rice's Mysore Inscriptions.

ಫ್ಲೀಟ ಸಾಹೇಬರು ೧೮೮೩ರಲ್ಲಿಯೇ ತಮ್ಮ ಕಡೆಯ ಗ್ರಂಥವನ್ನು ಬರೆದಿದ್ದರು. ಇವುಗಳಲ್ಲದೆ ಇಂಡಿಯನ್ ಆ್ಯಂಟಿಕ್ವೆರಿ ಪತ್ರಿಕೆಯಲ್ಲಿ ಹೊಸ ಹೊಸ ಶಾಸನಗಳ ಭಾಷಾಂತರವು ಬರಹತ್ತಿತ್ತು. ಈ ಯಾವತ್ತೂ ಸಾಧನ ಸಾಮುಗ್ರಿಯನ್ನು ಪ

ಯೋಗಿಸಿ ಡಾ. ಭಾಂಡಾರಕರರು ತಮ್ಮ History of Deccan ಎಂಬ ಗ್ರಂಥವನ್ನು ಸನ್ ೧೮೮೪ರಲ್ಲಿ ಸಿದ್ಧಗೊಳಿಸಿದರು. ಈ ಪಂಡಿತರು ತಮ್ಮ ಇಷ್ಟು ದೊಡ್ಡ ಪುಸ್ತಕದಲ್ಲಿ ಫ್ಲೀಟ ಸಾಹೇಬರದಾಗಲಿ ಕನ್ನಡ ಶಿಲಾಶಾಸನ ಕನ್ನಡ ಶಬ್ದಗಳದಾಗಲಿ ಉಲ್ಲೇಖವನ್ನೇ ಮಾಡಿಲ್ಲ. 'ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ' ಎಂಬಂತೆ ಭಾಂಡಾರಕರರ ಇತಿಹಾಸವನ್ನು ಆಧಾರಭೂತವಾಗಿ ಹಿಡಿದು ಮಹಾರಾಷ್ಟ್ರದ ಶಾಲೋಪಯೋಗಿ ಇತಿಹಾಸ ಪುಸ್ತಕಗಳಲ್ಲಿಯೂ ಮರಾಠಿ ಗ್ರಂಥಗಳಲ್ಲಿಯೂ ಚಾಲುಕ್ಯ ರಾಷ್ಟ್ರಕೂಟರ ಮನೆತನಗಳು ಮರಾಠಾ ಮನೆತನಗಳೆಂದು ಬರೆಯುವ ರೂಢಿಗೆ ಮೊದಲಾಯಿತು.

ಈ ಡಾಕ್ಟರರ ನಂತರ ವೈದ್ಯ ಚಿಂತಾಮಣರಾಯರಂತೂ ಸ್ಪಷ್ಟವಾಗಿ ಈ ಮನೆತನಗಳು ಮರಾಟರವೆಂದೂ ಮಹಾರಾಷ್ಟ್ರ ಭಾಷೆಯನ್ನಾಡುತ್ತಿದ್ದವೆಂದೂ ತಮ್ಮ Medieval Hindu India Vol. I ದಲ್ಲಿ (ಪುಟ ೧೬೩, ೧೭೦, ೧೭೨, ೧೭೪, ೧೭೫, ೧೭೬, ೧೮೫) ಬರೆದಿದ್ದಾರೆ. ಇತ್ತೀಚೆಗೆ ಶ್ರೀ ರಾಜಪುರೋಹಿತ ಆಲೂರಾದಿ ಕನ್ನಡ ಲೇಖಕರು ಈ ಮನೆತನಗಳ ಅರಸರು ಕರ್ನಾಟಕದವರೆಂದು ಸಿದ್ಧಮಾಡಿ ತೋರಿಸಿದ್ದಕ್ಕೆ ೧ನೇ ಭಾಗದ ೧೭೪ನೇ ಪುಟದಲ್ಲಿದ್ದ ಅವಾಸ್ತವ ಟೀಕೆಯು ಅವರ ಮರಾಠಿ ಗ್ರಂಥದಲ್ಲಿಷ್ಟೇ ಇದ್ದು ಇಂಗ್ಲಿಷ ಗ್ರಂಥದಲ್ಲಿ ಕಂಡುಬರುವದಿಲ್ಲವೆಂಬದು ವಿಚಿತ್ರ ಸಂಗತಿಯೇ ಸರಿ. ಈ ವೈದ್ಯರಂತೇ ಶ್ರೀ ರಾಜವಾಡೆ ಮತ್ತು ಸರದೇಸಾಯಿಯವರೂ ಬರೆದುಕೊಂಡಿದ್ದಾರೆ. (ರಾಜವಾಡೆಯವರು ಇತ್ತೀಚೆ ಈ ಹಟವನ್ನು ಬಿಟ್ಟಿದ್ದರು). ಡಾಕ್ಟರರು ಚಾಲುಕ್ಯ ರಾಷ್ಟ್ರಕೂಟರೊಡನೆ ದಕ್ಷಿಣದ ಪಲ್ಲವ ಕದಂಬರನ್ನೂ ಮರಾಠರನ್ನು ಮಾಡಿದ್ದಾರೆ; ಸರದೇಸಾಯರಂತು ಅದಕ್ಕೂ ಮುಂದೆ ಹೋಗಿ ವಿಜಯನಗರದ ರಾಯರದ 'ಕನ್ನಡ ರಾಜ್ಯರಮಾರಮಣ' ರನು ಮರಾಠರನ್ನಾಗಿ ಶುದ್ಧೀಕರಿಸಿದ್ದಾರೆ.

ಈ ಮಹಾರಾಷ್ಟ್ರ 'ಇತಿಹಾಸಕಾರ'ರ ಲೇಖಗಳು ನಮ್ಮ ಮೈಸೂರವರ ದೃಷ್ಟಿಗೆ ಅಷ್ಟೊಂದು ಬಿದ್ದಿರಲಿಕ್ಕಿಲ್ಲ. ಆದರೆ ಮುಂಬಯಿ ಪ್ರಾಂತದಲ್ಲಿ ಅನೇಕಾನೇಕ ಜನರು ಓದುತ್ತಾರಾದ್ದರಿಂದ ಈ ಭಾಗದ ಜನರ ಮನಸ್ಸಿನಲ್ಲಿ ಅವು ನಟ್ಟುಹೋಗಿರುತ್ತವೆ. ಮರಾಠಿ ಗ್ರಂಥಕರ್ತರ ಈ ಆತ್ಮಪ್ರೌಢಿಯೂ ಗುರ್ಜರ ಕರ್ನಾಟಕ ಬಂಧುಗಳ ವಿಷಯವಾಗಿದ್ದ ತಿರಸ್ಕಾರಬುದ್ಧಿಯೂ ಮಾಡಬೇಕಾದ ಪರಿಣಾಮವನ್ನು ಮಾಡದೆ ಬಿಟ್ಟಿಲ್ಲ; ಈ ಭಾಗದ ಕನ್ನಡಿಗರಲ್ಲಿ ನೆಲೆಗೊಂಡ ಆತ್ಮಾವಹೇಲನೆಗೆ ಈ ಗ್ರಂಥಗಳೇ ಕಾರಣವಾಗಿವೆ. ಇಂಗ್ಲಿಷ ಮುಂತಾದ ಪರಕೀಯ ಜನರು ಡಾ. ಭಾಂಡಾರಕರರಂಥ ವಿದ್ವಾಂಸರ ವಿಧಾನಗಳು ಸತ್ಯವೆಂದು ಭಾವಿಸುತ್ತಾರೆ. ಅದೇನೇ ಇರಲಿ. ಈ ಎಲ್ಲ ವೈದ್ಯ ಡಾಕ್ಟರರ ವಿಧಾನಗಳು ಭಾವನಾತ್ಮಕವಾದವುಗಳೇ ಹೊರತು ಅವುಗಳಲ್ಲಿ ಸತ್ಯಾಂಶವು ಔಷಧಕ್ಕೂ ಸಿಗುವಂತಿಲ್ಲ. ಚಾಲುಕ್ಯಾದಿ ರಾಜವಂಶಗಳು ಮಹಾರಾಷ್ಟ್ರೀಯವೆಂದೆನ್ನಲಿಕ್ಕೆ ಅವರ ಆಧಾರಗಳಾದರೂ ಆವುವೆಂಬದನ್ನಿಷ್ಟು ನೋಡುವಾ.

೧ ಮರಾಠಾ ಜನರಲ್ಲಿ ಪಾಲವೆ, ಕದಮ, ಚಾಲಕೆ, ಶೇಲಾರೆ, ಜಾಧವ ಎಂಬದಾಗಿ ಅಡ್ಡಹೆಸರುಗಳುಳ್ಳವರು ಇಂದಿಗೂ ಇರುವರು ಈ ಶಬ್ದಗಳು ಪಲ್ಲವ, ಕದಂಬ, ಚಾಲುಕ್ಯ ಶಿಲಾಹಾರ, ಯಾದವ ಎಂಬವುಗಳ ಅಪಭ್ರಂಶಗಳಾಗಿದ್ದು ಈ ಅಡ್ಡಹೆಸರಿನ ಜನರು ಚಾಲುಕ್ಯಾದಿಗಳ ವಂಶಜರಿರಲಿಕ್ಕೆ ಬೇಕು.

೨ ರಟ್ಟ ಶಬ್ದದಿಂದ ರಾಷ್ಟ್ರ ಶಬ್ದವಾಗಿದ್ದು 'ಕೂಟ'ಶಬ್ದವು ಅಧಿಕಾರದ್ಯೋತಕವಾಗಿದ್ದು "ರಟ್ಟರು—ಮಹಾರಟ್ಟರು—ಮರಾಠರು" ಎಂಬದಾಗಿ ಶಬ್ದೋತ್ಪತ್ತಿಯಾದ್ದರಿಂದ ರಾಷ್ಟ್ರಕೂಟರು=ಮಹಾರಟ್ಟರು=ಮರಾಠರು.

೩ ಐಹೊಳೆಯ ಮೇಗುಟಿ ಶಿಲಾಲೇಖದಲ್ಲಿ ೨ನೇ ಪುಲಕೇಶಿಯು ಮೂರು ಮಹಾರಾಷ್ಟ್ರಗಳನ್ನು ಆಳುತ್ತಿದ್ದನೆಂದು ಹೇಳಿದೆ. ಈಗ ಮಹಾರಾಷ್ಟ್ರವೆಂದು ಕರೆಯುವ ದೇಶದ ಮೇಲೂ ಆತನು ಆಳುತ್ತಿದ್ದನಾದ್ದರಿಂದ ಅವನು ಆಳುತ್ತಿದ್ದ ದೇಶವೆಲ್ಲವೂ ಮಹಾರಾಷ್ಟ್ರವು.

೪ ಚೀನದೇಶದ ಪ್ರವಾಸಿಯಾದ ಹ್ಯೂಯೆನ್‌ತ್ಸಾಂಗನು 'ಮಹೊಲಕ್ಕ'ದಲ್ಲಿ ಪುಲಕೇಶಿಯು ಆಳುತ್ತಿದ್ದನೆಂದು ಹೇಳಿದ್ದಾನೆ. ಆದ್ದರಿಂದ ಪುಲಕೇಶಿಯಾಳಿದ ಮಹೋಲಕ್ಕವೆಂದರೆ ಮಹಾರಾಷ್ಟ್ರವು.

೫ ದೇವಗಿರಿಯ ಯಾದವ ಅರಸನಾದ ರಾಮದೇವರಾಯನ ಕಾಲದಲ್ಲಿ ಜ್ಞಾನದೇವನು ತನ್ನ ಗ್ರಂಥವನ್ನು ಮರಾಠಿಯಲ್ಲಿ ಬರೆದಿದ್ದು ಗ್ರಂಥಾಂತ್ಯದಲ್ಲಿ ರಾಮದೇವನನ್ನು ಗೌರವಿಸಿದ್ದಾನೆ.

ಈ ವಿಧಾನಗಳಿಗೆ ಉತ್ತರವೇನಂದರೆ—

೧ ಚಾಲಕೆ ಮೊದಲಾದ ಅಡ್ಡಹೆಸರುಗಳ ಮೇಲಿಂದ ಆವರು ಅರಸುಮನೆತನಗಳಿಗೆ ಸಂಬಂಧಿಸಿದವರೆಂದು ಹೇಳುವದು ಎಡೆಗಾರಿಕೆಯ ಮಾತು. ಕೇವಲ ಉಚ್ಚಾರಸಾದೃಶ್ಯದಿಂದ ಇತಿಹಾಸದ ಸಿದ್ಧಾಂತವನ್ನು ಮಾಡುವವಾದರೆ ಈಗ ಇರಾಣದಲ್ಲಿ ರಾಜ್ಯಮಾಡುವ ಪೇಹಲವಿ ಮನೆತನದ ಶಹನು ಕಾಂಚಿಯ ಪಲ್ಲವ ವಂಶಕ್ಕೆ ಸಂಬಂಧಿಸಿದವನೆಂದು ಹೇಳಿದರೆ ತಪ್ಪೇನು ?

೨ ರಟ್ಟ ಮನೆತನವು ಕರ್ನಾಟಕದ್ದೆಂದು ರಾಜತರಂಗಿಣಿಯಲ್ಲಿ ಸ್ಪಷ್ಟವಾಗಿ ಉಲ್ಲೇಖವಿದೆ.

೩ ಐಹೊಳೆಯ ಶಿಲಾಲಿಪಿಯಲ್ಲಿ ಮೂರು ಮಹಾರಾಷ್ಟ್ರಗಳ ಉಲ್ಲೇಖವಿದ್ದದ್ದು ನಿಜವಾದರೂ ಆ ಶಬ್ದದ ಅರ್ಥವು ಬೇರೆಯಾಗಿರುತ್ತದೆ; 'ದೊಡ್ಡ ನಾಡು' ಎಂದಿಷ್ಟೇ ಹೊರತು 'ಮಹಾರಾಷ್ಟ್ರ' ಶಬ್ದಕ್ಕೆ ಈಗಿನ್ನ ಅರ್ಥವು ಆಗಿದ್ದಿಲ್ಲ. ಇದೇ ಮಾತನ್ನು ಫ್ಲೀಟಸಾಹೇಬರು ವಿವರವಾಗಿ ಸ್ಪಷ್ಟಗೊಳಿಸಿದ್ದಾರೆ.

೪ ಮಹೊಲಕ್ಕಕ್ಕೂ ಮಹಾರಾಷ್ಟ್ರಕ್ಕೂ ಇದ್ದ ಸಂಬಂಧವೇನೂ ತಿಳಿದುಬಂದಿಲ್ಲ, ತಿಳಿಯುವದಿಲ್ಲ.

೫ ದೇವಗಿರಿಯ ಯಾದವರ ಸಂಬಂಧವಾಗಿ ಜ್ಞಾನೇಶ್ವರನು ಬರೆದದ್ದು ನಿಜವೇನೋ ಸರಿ. ಆದರೆ ಚಾಲುಕ್ಯರ ಕಾಲದಿಂದ ದೇವಗಿರಿಯ ಯಾದವರ ವರೆಗೂ ಅನೇಕ ರಾಜರ ಸಂಬಂಧವಾಗಿ ಕನ್ನಡ ಕವಿಗಳೂ ಉಲ್ಲೇಖಿಸಿದ್ದಾರೆ. ಶಿಲಾಶಾಸನಗಳಂತೂ ತೆರಪಿಲ್ಲದಷ್ಟಿವೆ.

ಇನ್ನು ಈ ರಾಜ್ಯಗಳು ಕರ್ನಾಟಕದವರವೆಂದೆನ್ನಲು ಬಹಳ ಆಧಾರಗಳಿವೆ. ದೇವಗಿರಿಯೊಂದನ್ನು ಬಿಟ್ಟರೆ ಉಳಿದ ಅರಸುಮನೆತನಗಳ ರಾಜಧಾನಿಗಳಾದ ಬದಾವಿ—ಮಳಖೇಡ—ಕಲ್ಯಾಣ ಮೊದಲಾದವುಗಳು ಇಂದಿಗೂ ಕನ್ನಡ ಪ್ರಾಂತದಲ್ಲಿವೆ. ಈ ರಾಜವಂಶಗಳು ಆಳಿದ ವಿಸ್ತೃತವಾದ ಮೂರು ಮಹಾರಾಷ್ಟ್ರಗಳಲ್ಲಿ ಮರಾಠಿಯಲ್ಲಾಗಲಿ ಕಡೆಗೆ ಮಹಾರಾಷ್ಟ್ರಿಯಲ್ಲಾಗಲಿ ಬರೆದ ಒಂದು ಶಿಲಾಲಿಪಿಯೂ ಕಂಡುಬರುವದಿಲ್ಲ; ಕನ್ನಡದಲ್ಲಾದರೋ ಸಹಸ್ರಾವಧಿ ಶಿಲಾಲಿಪಿಗಳು ಸಿಗುತ್ತವೆ. ವೇರೂಳ ಅಜಂಟಾದ ವರೆಗೂ ಕನ್ನಡಲಿಪಿಯಲ್ಲೂ ಕನ್ನಡಭಾಷೆಯಲ್ಲೂ ಇದ್ದ ಶಾಸನಗಳು ದೊರೆಯುತ್ತವೆ. ಮದ್ರಾಸ ಮೈಸೂರ ಪ್ರಾಂತಗಳಲ್ಲಿ ಆದಂತೆ ಮುಂಬಯಿ ಪ್ರಾಂತದಲ್ಲಿ ಶಾಸನಗಳ ಸಂಖ್ಯೆಯ ಲೆಕ್ಕವಾದರೆ ಇನ್ನೂ ಎಷ್ಟೋ ಹೊಸ ಶಾಸನಗಳು ಸಿಗುವ ಸಂಭವವಿದೆ.

ಮರಾಟರನ್ನೊಬ್ಬರನ್ನು ಬಿಟ್ಟರೆ ಉಳಿದ ಪ್ರಾಂತದವರಿಗೆ ರಾಜ್ಯವಾಳುವ ಶಕ್ತಿಯೇ ಇಲ್ಲವೆಂದೂ ರಾಜ್ಯವಾಳಿದವರೆಲ್ಲ ಮರಾಟರೆಂದೂ ಈ ವಿದ್ವಾಂಸರು ಭಾವಿಸಿದಂತೆ ತೋರುತ್ತದೆ. ಮಹಾರಾಷ್ಟ್ರಪ್ರಾಂತಮದಾಂಧರಾದ ಇವರಿಗೆ ಅನ್ಯಪ್ರಾಂತೀಯ ಜನರಲ್ಲಿಯ ಗುಣಗಳೇ ಕಾಣುವದಿಲ್ಲವೆಂದೂ ಇವರು ಇತಿಹಾಸಕಾರರೇ ಅಲ್ಲವೆಂದೂ ರಮೇಶಚಂದ್ರ ಮುಜುಮದಾರ—ಜದುನಾಥ ಸರಕಾರ ಮೊದಲಾದ ಪ್ರಸಿದ್ಧ ಬಂಗಾಳಿಯ ಇತಿಹಾಸಕಾರರು ಸ್ಪಷ್ಟವಾಗಿ ಬರೆದಿದ್ದಾರೆ.

---

# ದಕ್ಷಿಣ ಹಿಂದುಸ್ಥಾನದ ಕೆಲವು ಔಷಧೋಪಯುಕ್ತ ವನಸ್ಪತಿಗಳು

ಲೇಖಕ:- ಶ್ರೀ ಮುಪ್ಪಣ್ಣ ಚ. ತಮ್ಮಿನಕಟ್ಟಿ, ಎಂ. ಎಸ್. ಸಿ; ಪಿಎಚ್ ಡಿ. (ರಸಾಯನ ಶಾಸ್ತ್ರ) ಟಾಟಾ ರಿಸರ್ಚ ಇನ್ಸ್ಟಿಟ್ಯೂಟ ಬೆಂಗಳೂರು.

[ ಈ ವಿಷಯಕ್ಕೆ ಸಂಬಂಧಿಸಿದ ಲೇಖಗಳು ಜಯಕರ್ನಾಟಕದ ೩ನೆಯ ಸಂಪುಟದ ೧ ೪, ೭, ೧೦ ಮತ್ತು ೧೧ನೆಯ ಸಂಚಿಕೆಗಳಲ್ಲಿಯೂ, ೫ನೆಯ ಸಂಪುಟದ ೬, ಮತ್ತು ೧೧ನೆಯ ಸಂಚಿಕೆಗಳಲ್ಲಿಯೂ ಅಚ್ಚಾಗಿವೆ. ]

Ficus bengalensis, Linn, ; (The Banyan tree).

ಆಲದಮರವು. ಕ. ಆಲದಮರದ ಹಾಲನ್ನು ಹಳೇ ಮತ್ತು ಹೊಸದಾಗಿ ಆದ ಗಾಯಗಳ ಮೇಲೂ ಮತ್ತು ವಾತರೋಗ (ಕಸ) ಮುಂತಾದವುಗಳಾದ ಸ್ಥಳಗಳ ಮೇಲೂ ಹಚ್ಚುವರು. ಬಹುಮೂತ್ರ ರೋಗವನ್ನು ನಿಲ್ಲಿಸುವದಕ್ಕೆ ಈ ಮರದ ತೊಗಟೆಯನ್ನು ಉಪಯೋಗಿಸುವದಲ್ಲದೆ, ಅದರ ಕಷಾಯದಿಂದ ಬಿಳಿಸೆರಗು (Leucorrhea) ಮುಂತಾದ ವ್ರಣಗಳನ್ನು ತೊಳೆಯುವರು.

Ficus glomerata, Roxb.

ಅತ್ತೀಮರ ಮು. ಕ; ಮು. ಕ. ಈ ಮರದ ತೊಗಟೆ, ಎಲೆ, ಮತ್ತು ಬಲಿತ ಕಾಯಿಗಳನ್ನು ಅತಿಸಾರಕ್ಕೂ ಮತ್ತು ಹಣ್ಣುಗಳನ್ನು ಬಹುಮೂತ್ರರೋಗ ನಿವಾರಣೆಗಾಗಿಯೂ ಉಪಯೋಗಿಸುವರೆಂದು ಹೇಳುತ್ತಾರೆ.

Ficus hispida, Linn., F.

ಅಡವೀ ಅತ್ತೀಮರ; ಈ ಮರದ ತೊಗಟೆ ಮತ್ತು ಬೀಜಗಳಲ್ಲಿ ವಾಂತಿಕಾರಕ ಗುಣವಿರುವದು.

Foeniculum vulgare, Goertn., (Indian sweet Fennel).

ಬಡೇಸೋಪು; ಬಡೇಸೋಪಿನ ನೀರನ್ನು ಚಿಕ್ಕಮಕ್ಕಳ ಹೊಟ್ಟೆನೋವು, ವಾಯುರೋಗ ಮುಂತಾದವುಗಳನ್ನು ನಿಲ್ಲಿಸುವದಕ್ಕೆ ಉಪಯೋಗಿಸುವರು.

Garcnia indica, Cho's ; (The kokum butter tree)

ಧೂಪದ ಎಣ್ಣೆಯಮರ. ಮೇಣದಂತಿರುವ ಧೂಪದ ಎಣ್ಣೆಯನ್ನು ಪಾದಗಳು ಒಡೆದಾಗ ಸೋರುವ ರಕ್ತವನ್ನು ನಿಲ್ಲಿಸುವದಕ್ಕೆ ಉಪಯೋಗಿಸುವರು.

Garcinia morella, Desrouss ; (Gamboge tree).

ಕಣ್ಣುಕುಟಿಗಲುಮರ (ಮೈ) ಅರಿಸಿನಗರಗಿಮರ. ಈ ಮರದ ಅಂಟನ್ನು ಮನುಷ್ಯನ ದೇಹದಲ್ಲಿಯ ಹುಳುಗಳನ್ನು ಕೆಡಿಸುವ ಕ್ರಿಮಿಗಳನ್ನು ನಾಶಮಾಡುವದಕ್ಕೂ ಮತ್ತು ಭೇದಿಯನ್ನುಂಟುಮಾಡುವದಕ್ಕೂ ಉಪಯೋಗಿಸುವರು.

Grangea maderaspatana, Poir.

ಮಾಚಿಪತ್ರೆ (ಮೈ); ದೋವನ (?) ಗಂಟೆ; ಸ್ತ್ರೀಯರ ನಿಯಮಿತ ಮುಟ್ಟಾಗುವಿಕೆಯ ತೊಂದರೆಗಳ ನಿವಾರಣೆಗಾಗಿ ಈ ವನಸ್ಪತಿ ಎಲೆಗಳ ಕಷಾಯವನ್ನು ಕೊಡುವರು. ಇದಲ್ಲದೆ ತಾಜಾ ಎಲೆಗಳ ರಸವನ್ನು ಕಿವಿ ನೋವಾದಾಗ ಉಪಯೋಗಿಸುವರು.

Grewia polygama, Roxb.

ಕನ್ನಡ ಹೆಸರು (?) ಈ ಕಂಟಿಯ ಎಲೆಗಳ ಕಷಾಯವು ರಕ್ತಾತಿಸಾರಕ್ಕೆ ಬಹಳೇ ಉತ್ತಮವೆಂದು ಅನೇಕ ವೈದ್ಯರ ಅಭಿಪ್ರಾಯವುಂಟು.

Grewia tiliaefolia, Vahl.

ತಡಸಲಮರ; ಭೂತಾಳೆಮರ. ಈ ಗಿಡದ ತೊಗಟೆಯ ಚೂರ್ಣವನ್ನು ವಾಂತಿಯನ್ನು ಹುಟ್ಟಿಸುವದಕ್ಕೂ ಮತ್ತು ಅಫೀಮಿನ ಅಮಲನ್ನು ನಿಲ್ಲಿಸುವದಕ್ಕೂ ಉಪಯೋಗಿಸುವರು.

Guazuma tomentosa, Kunth, ; (The bastard cedar).

ರುದ್ರಾಕ್ಷೆಮರ (?) ಈ ಗಿಡದ ಹಳೇ ತೊಗಟೆಯ ಕಷಾಯವನ್ನು ಚರ್ಮಸಂಬಂಧದ ರೋಗಗಳಿಗೂ ಮತ್ತು ಬೆವರನ್ನು

ಹುಟ್ಟಿಸುವದಕ್ಕೂ ಉಪಯೋಗಿಸುವರು. ಇದರ ಒಳದೊಗಟೆಯು ಗಿಂಣಿರೋಗ (Elephantiasis) ಕ್ಕೆ ಬಹಳೇ ಉತ್ತಮವೆಂದು ಹೇಳುತ್ತಾರೆ.

Gymnema sylvestre, Br.

ಪುಟ್ಲಪತ್ರ (ತೆ); ಕನ್ನಡ ಹೆಸರು. (?) ಈ ಬಳ್ಳಿಯ ಬೇರಿನ ಪುಡಿಯನ್ನು ಹಾವು ಕಡಿದ ಸ್ಥಳದ ಮೇಲೆ ಹಚ್ಚಿದರೆ ಮತ್ತು ಇದರ ಕಷಾಯವನ್ನು ಹೊಟ್ಟೆಯಲ್ಲಿ ಕೊಟ್ಟರೆ ಹಾವಿನ ವಿಷವು ಇಳಿಯುವದೆಂದು ಹೇಳುತ್ತಾರೆ. ಇದರ ಎಲೆಗಳನ್ನು ಜಗಿದರೆ ಕೆಲವು ತಾಸುಗಳವರೆಗೆ ಸಿಹಿಯಾದ ಪದಾರ್ಥಗಳ ರುಚಿಯು ನಾಲಿಗೆಗೆ ತಿಳಿಯುವದಿಲ್ಲವೆಂದು ಹೇಳುತ್ತಾರೆ.

Gynandropsis pentaphylla, Dc.

ಶ್ರೀ(ಸಿರಿ) ಕಾಳೆಗಿಡ; ನಾರುವ ಬೇಳೆಗಿಡ; ತಿಲೋಣಿಗಿಡ. ಈ ಗಿಡದ ಬೀಜಗಳು ಕಾಡುಸಾಸಿವೆ ಗಿಡದ ಬೀಜಗಳಂತೆ ಇರುವದರಿಂದ ಎಷ್ಟೋ ವೈದ್ಯರು ಈ ವನಸ್ಪತಿಯಗುಣಾದಿಗಳನ್ನು ವರ್ಣಿಸುವಾಗ ಒಂದರಬದಲಾಗಿ ಮತ್ತೊಂದನ್ನು ವರ್ಣಿಸಿರುವರು. ಇದರ ಬೇರಿನ ಕಷಾಯವು ಜ್ವರಾರಿಯೆಂದು ಹೇಳುತ್ತಾರೆ. ಇದರೆಲೆಗಳ ಕಷಾಯವನ್ನು ಕಿವಿಯೊಡೆದು ಸೋರುವಾಗ ಕಿವಿಯಲ್ಲಿ ಹಿಂಡುವರು. ಇದರ ಬೀಜದಿಂದ ತೆಗೆದ ಎಣ್ಣೆಗೆ ಬೆಳ್ಳುಳ್ಳಿಯಂತೆ ವಾಸನೆಇರುವದು.

Helicteres isora, Linn.: (The East Indian Screw tree).

ಮುರುಡಿಗಿಡ; ಎಡಮುರಿಗಿಡ, (ಮೈ); ಮುರಗಿಕಾಯಿ ಗಿಡ (ದ.ಕ.) ಈ ಗಿಡದ ಕಾಯಿಗಳನ್ನು ಹೊಟ್ಟೆನೋವು, ಅತಿಸಾರ ವಾಯುರೋಗ ಮುಂತಾದವುಗಳಿಗೂ ಮತ್ತು ಕೊಂಕಣದಲ್ಲಿ ಹಾವಿನ ಕಡತಕ್ಕೂ ಮತ್ತು ಬಹುಮೂತ್ರ ರೋಗಕ್ಕೂ ಉಪಯೋಗಿಸುವರೆಂದು ಹೇಳುತ್ತಾರೆ.

Heliotropium indicum, Linn.

ಹಂಣ್ಣೆ (ಣಿ)ಯ ಗಿಡ. ಈ ಗಿಡದ ಎಲೆಗಳನ್ನು ಜ್ವರಕ್ಕೂ ಮತ್ತು ಅವುಗಳ ಸ್ವಲ್ಪ ಕಹಿಯಾದ ರಸವನ್ನು ಕುರು, ಮಡಿಬೊಕ್ಕೆ, ಚೇಳು ಕಡಿದರಿಗೆ ಮುಂತಾದವುಗಳ ಕಡತ ಮುಂತಾದವುಗಳಿಗೂ ಉಪಯೋಗಿಸುವರು.

Hemidesmus indicus, R. Br.; (Indian Sarsaparilla).

ಸೊಗದೇ (ಬೇರಿನ) ಬಳ್ಳಿ; ಸುಗಂಧಿ (ಬೇರಿನ) ಬಳ್ಳಿ; ಸುಗಂಧಪಾಲನಗಿಡ (?) ಈ ಬಳ್ಳಿಯ ತಾಜಾ ಬೇರು ಪುಷ್ಟಿಕಾರಕವಿರುವದೆಂದು ಹೇಳುತ್ತಾರೆ. ಈಬಗ್ಗೆ ವೈದ್ಯರಲ್ಲಿ ಭಿನ್ನಾಭಿಪ್ರಾಯಗಳಿರುವವು. ಗಡ್ಡೆಯು (ಬೇರು) ಒಣಗಿದಕೂಡಲೆ ಈ ಪುಷ್ಟಿಕಾರಕ ಗುಣವು ನಾಶವಾಗುವದೆಂದು ಹೇಳುತ್ತಾರೆ. ಈ ಬೇರಿನ ಕಷಾಯವನ್ನು ಬಹಳೇ ದಿವಸದ ವಾತರೋಗ, ಮೇಹ ಸಂಬಂಧದ ರೋಗ, ಬಿಳಿಶರಗು (ಕೀವಿನಂತೆ ಮಲವುಹೋಗುವರೋಗ= Leucorrhea) ಮುಂತಾದವುಗಳಿಗೆ ಉಪಯೋಗಿಸುವರು. ತಾಜಾಬೇರಿನ ರಸವನ್ನು ಕಣ್ಣುಬೇನೆಗೂ ಉಪಯೋಗಿಸುವರೆಂದು ಹೇಳುತ್ತಾರೆ.

Herpestis monniera, H. B. and Kth.

ನೀರುಬ್ರಹ್ಮೀಬಳ್ಳಿ; ಬ್ರಹ್ಮೀ (ಸ) ಈ ವನಸ್ಪತಿಯ ಬೇರು ದೇಟು, ಮತ್ತು ಎಲೆಗಳನ್ನು ಮಲಬದ್ಧಿಕೆ (Costiveness) ಯ ರೋಗಿಗಳಿಗೆ ಭೇದಿಯನ್ನು ಹುಟ್ಟಿಸುವದಕ್ಕೂ ಮತ್ತು ಮೂತ್ರವನ್ನು ಹೆಚ್ಚಿಸುವದಕ್ಕೂ ಉಪಯೋಗಿಸುವರು. ಕರ್ನಾಟಕದ ಎಷ್ಟೋ ವರ್ತಮಾನಪತ್ರ ಮತ್ತು ಮಾಸಿಕ ಪತ್ರಿಕೆಗಳ "ಜಾಹೀರಾತು" ಗಳಲ್ಲಿ ಪ್ರಸಿದ್ಧವಾದ "ಬ್ರಹ್ಮೀತೈಲ"ಕ್ಕೂ ಮತ್ತು ಈ ವನಸ್ಪತಿಗೂ ಏನಾದರೂ ಸಂಬಂಧವಿರಬಹುದೇನು?

Hibiscus abelmoschus, Linn.; (The musk Mallow).

ಕಾಡಕಸ್ತೂರಿಗಿಡ. ಈ ಗಿಡದ ಬೀಜಗಳಿಂದ ತೆಗೆದ ಎಣ್ಣೆಗೆ ಕಸ್ತೂರಿಯಂಥ ಒಂದುತರದ ಸುವಾಸನೆಯಿರುವದು. ಈ ಎಣ್ಣೆಯು ಸಟಬೇನೆಗೆ ಉತ್ತಮವೆಂದು ಹೇಳುತ್ತಾರೆ. ಇದರ ಬೇರಿನ ಮತ್ತು ಎಲೆಗಳ ಜಿಗಟಾದ ಕಷಾಯವನ್ನು, ಮೇಹಸಂಬಂಧದ ರೋಗಗಳಿಗೂ, ಮತ್ತು ತಾಜಾ ಎಲೆಗಳ ಮತ್ತು ದೇಟಿನ ರಸವನ್ನು ಜ್ವರ, ಕಫ ಮುಂತಾದವುಗಳ ನಿವಾರಣೆಗೂ ಉಪಯೋಗಿಸುವರು.

Hibiscus cannabinus, Linn.; (The Deccan hemp)

ಪುಂಡೀಗಿಡ. ಮು. ಕ; ಮು. ಕ. ಈ ಗಿಡದ ಬೀಜಗಳಲ್ಲಿ ಕಾಮೇಚ್ಛೆಯನ್ನು ಹೆಚ್ಚಿಸುವ ಗುಣವಿರುವದೆಂದು ಹೇಳುತ್ತಾರೆ. ಈ ಬೀಜಗಳನ್ನು ಜಜ್ಜಿ ಗಾಯಗಳಿಗೆ "ಪೋಟೀಸ"ನ್ನು ಹಾಕುವರು. ಈ ಗಿಡದ ಎಲೆಗಳಲ್ಲಿ ನಸುಭೇಧಿಕಾರಕ ಗುಣವಿರುವದೆಂದು ಹೇಳುತ್ತಾರೆ.

Hibiscus esculentus, Linn.; (The okra).

ಬೆಂಡೀಗಿಡ. ಮು. ಕ; ಮ. ಕ. ಬೆಂಡೀಕಾಯಿಯು ತಿಳು ಲನ್ನು ಅತಿಸಾರವನ್ನು ನಿಲ್ಲಿಸುವದಕ್ಕೆ ಉಪಯೋಗಿಸುವರಲ್ಲದೆ, ಅದು ಮೇಹಸಂಬಂಧದ ರೋಗಗಳಿಗೆ ಬಹಳೇ ಉತ್ತಮವೆಂದು ಹೇಳುತ್ತಾರೆ.

Holarrhena antidysenterica, Wall.

ಬೆಪ್ಪಾಳೆ (ಲೆ) ಗಿಡ; ಕೊಡಸಿಗೆಗಿಡ; ಕುಟಜ (ಕ) (ಸ) ಈ ಗಿಡದ ಬೇರಿನ ಮತ್ತು ಬಡ್ಡಿಯ ತೊಗಟೆಯು ಅತಿಸಾರಕ್ಕೂ ಮತ್ತು ವಿಶೇಷವಾಗಿ ರಕ್ತಾತಿಸಾರಕ್ಕೂ ದಿವ್ಯೌಷಧವೆಂದೂ ಅನೇಕ ವೈದ್ಯರು ಅಭಿಪ್ರಾಯವನ್ನು ಕೊಟ್ಟಿರುವರು. ಈ ರೋಗಗಳಿಗೆ ತೊಗಟೆಯನ್ನು ಕಷಾಯದ ರೂಪದಲ್ಲಿ ಉಪಯೋಗಿಸುವ ರೂಢಿಯುಂಟು.

Hydnocarpus wightiana, Bl.

ಕಾಡುಬಾದಾವಿ (ಮಿ)ಯ ಮರ; ಗರುಡ ಫಲದ ಮರ(?) ಕುಷ್ಟರೋಗಕ್ಕೆ ಗುಣಕಾರಿಯೆಂದು ಪ್ರಸಿದ್ಧವಾಗಿರುವ "ಚಳ್ಳ ಮುಗ್ರಾ" ಎಣ್ಣೆಯ ಗುಣಗಳು ಈ ಗಿಡದ ಎಣ್ಣೆಯಲ್ಲಿರುವವು. ಇದರ ಬೀಜಗಳನ್ನು ಕುಷ್ಟರೋಗ ಮುಂತಾದ ಚರ್ಮರೋಗಗಳ ನಿವಾರಣೆಗಾಗಿ ಉಪಯೋಗಿಸುವರು. ಮೇಹಸಂಬಂಧದ ರೋಗ, ಬಹಳೇಕಾಲದ ವಾತರೋಗ, ಮತ್ತು ಅನೇಕ ತರದ ಚರ್ಮರೋಗಗಳಿಗೆ ಇದರ ಎಣ್ಣೆಯನ್ನು ಹೊಟ್ಟೆಯಲ್ಲಿ ಕೊಡುವರು. ಪ್ರಮಾಣ ತಪ್ಪಿ ಈ ಎಣ್ಣೆಯನ್ನು ತೆಗೆದುಕೊಂಡರೆ, ವಾಂತಿಬೇಧಿಯುಂಟಾಗುವದೆಂದು ಹೇಳುತ್ತಾರೆ.

Hydrocotyle asiatica, Linn.; (Asiatic Pennywort).

ಒಂದೆಲಗಸಪ್ಪಿನ ಕಂಟೆ (ಮೈ); ಇಲಿಕಿವಿ ಬಳ್ಳಿ (ದ. ಕ.) ಮಂಡೂಕ (ಭೇಕ) ಪರ್ಣೀ (ಸ) ಈ ಗಿಡದ ಬೇರು, ಎಲೆ, ಮತ್ತು ಬೀಜಗಳನ್ನು ಒಂದಿಲ್ಲೊಂದು ರೂಪದಿಂದ ಔಷಧಿಯಲ್ಲಿ ಉಪಯೋಗಿಸುವರು. ಮೇಹಸಂಬಂಧದ ರೋಗಕ್ಕೆ ಎಲೆಗಳು ಗುಣಕಾರಿಯೆಂದು ಕೆಲವು ವೈದ್ಯರ ಅಭಿಪ್ರಾಯವುಂಟು. ಹಳೇ ಹುಣ್ಣುಗಳ ಮೇಲೆ, ಎಲೆಗಳ ಹುಡಿಯನ್ನು ಉದರಿಸಿದರೆ, ಕೂಡಲೇ ಗಾಯಗಳು ಮಾಯುವವು.

Hymenodictyon excelsum, Wall.

ವಿಲಾರಿ (ತೆ); ಬಂದರಯುಣ್ಣಿಮರ (?) ಈ ಮರದ ಕಹಿಯಾದ ಒಳತೊಗಟೆಯು ಸಾಧಾರಣವಾಗಿ ಎಲ್ಲತರದ ಜ್ವರಕ್ಕೂ ಮತ್ತು ವಿಶೇಷವಾಗಿ ಬಿಟ್ಟು ಬಿಟ್ಟು ಬರುವ ಜ್ವರಕ್ಕೂ ಗುಣಕಾರಿಯಾಗುವದು.

Ichnocarpus frutescens, R. Br.

ನಳ್ಳ (ಲ್ಲ) ತಿಗೆ (ತೆ) ಈ ಬಳ್ಳಿಯ ಎಲೆಗಳ ಮತ್ತು ದೇಟಿನ ಕಷಾಯವು ಜ್ವರಾರಿಯೆಂದು ಅನೇಕ ವೈದ್ಯರು ಅಭಿಪ್ರಾಯವನ್ನು ಕೊಟ್ಟಿರುವರು.

Indigofera aspalathoides, Vahl.

ಶಿವಮಲ್ಲಿಗಿಡ; ಶಿವಬೇವಿನಗಿಡ (?) ಇದರ ಎಲೆ ಮತ್ತು ಹೂವುಗಳ ಕಷಾಯವನ್ನು ಏಡಿ ಹುಣ್ಣು (cancer) ಕುಷ್ಟರೋಗ ಮುಂತಾದವುಗಳ ನಿವಾರಣೆಗಾಗಿ ಉಪಯೋಗಿಸುವರು. ಹಲ್ಲು ನೋವಾದಾಗ ಇದರ ಬೇರನ್ನು ಜಗಿಯುವರು. ತಲೆಯಲ್ಲಿರುವ ಹೊಟ್ಟನ್ನು ನಾಶಮಾಡುವದಕ್ಕಾಗಿ ಈ ಗಿಡದ ಬೂದಿಯನ್ನು ಕೆಲವು ವನಸ್ಪತಿಗಳೊಡನೆ ಉಪಯೋಗಿಸುವರು. ಇದರ ಬೇರಿನಿಂದ ತೆಗೆದ ಎಣ್ಣೆಯನ್ನು ಕದ್ದು (erysipelas) ಆದ ಸ್ಥಳದ ಮೇಲೆ ಸವರುವರು.

Ionidium suffruticosum, Ging.

ಪುರುಷರತ್ನಗಿಡ; ಸೂರ್ಯಕಾಂತಿ (ತೆ); ಪುರುಷರತ್ನಮ್ (ತೆ) ಉರಿಮೂತ್ರವನ್ನು ನಿಲ್ಲಿಸುವದಕ್ಕೂ ಮತ್ತು ಪ್ರಮೇಹಕ್ಕೂ ಈ ಗಿಡದ ಎಲೆಗಳ ಮತ್ತು ದೇಟಿನ ಕಷಾಯವನ್ನು ಉಪಯೋಗಿಸುವರು.

Ipomaea bona-nox, Linn; (The Moon flower).

ಚಂದ್ರಕಾಂತಿಗಿಡ ಈ ವನಸ್ಪತಿಯ ಎಲೆ, ಬೇರು, ಬೀಜ ಕಾಯಿ, ಮತ್ತು ಹೂಗಳಲ್ಲಿ ಹಾವಿನ ಕಡತದ ವಿಷಕ್ಕೆ ಉಪಶಮವನ್ನು ಕೊಡುವ ಗುಣವಿರುವದೆಂದು ಹೇಳುತ್ತಾರೆ.

Ipomaea digitata, Linn.

ಭೂಮಿ, ಚಕ್ರಗಡ್ಡೆ; ನೆಲಗುಂಬಳಕಾಯಿಯ ಬಳ್ಳಿ (?) ಅಶಕ್ತರಾಗಿ ಸೊರಗಿದ ಚಿಕ್ಕ ಮಕ್ಕಳ ದೇಹಾರೋಗ್ಯವನ್ನು ಸುಧಾರಿಸುವದಕ್ಕಾಗಿ, ಈ ಗಡ್ಡೆಯ ಚೂರ್ಣವನ್ನು ಸಕ್ಕರೆ

ಮತ್ತು ತುಪ್ಪದೊಡನೆ ಕೊಡುವರು. ಈ ಗಡ್ಡೆಯಲ್ಲಿ ಭೇದಿ ಕಾರಕ ಗುಣವಿರುವದೆಂದು ಹೇಳುತ್ತಾರೆ.

Ipomaea bederacea, Jacq.

ಗಂಡ್ರಿಗಿಡ (?) ಇವರ ಬೀಜಗಳು ಅತಿಭೇದಿಕಾರಕವಿರು ವದಾಗಿ ಪ್ರಸಿದ್ಧವಾಗಿರುವವು.

Ipomaea turpethum, Br.; (The Indian Jalap).

ತಿಗಡೇ ಬಳ್ಳಿ; ಬಿಳೇನಾಗದಂತೀ ಬಳ್ಳಿ; ಬಿಳೇತಿಗಡೀ ಬಳ್ಳಿ; ಈ ವನಸ್ಪತಿಯ ಬೇರಿನಲ್ಲಿ ಅತಿಭೇದಿಕಾರಕ ಗುಣವಿರುವದು.

Jasminum grandiflorum, Linn.; (The Spanish Jasmine).

ಜಾಜೀಮಲ್ಲಿಗೆ ಬಳ್ಳಿ; ಇದರ ತಾಜಾ ಎಲೆಗಳ ರಸವನ್ನು, ಕಾಲ್ಬೆರಳುಗಳ ಸಂದಿನಲ್ಲಿ ರಸಿಕೆಯಾಡುವಾಗ ಹಚ್ಚಿದರೆ ಗುಣ ವಾಗುವದು.

Jasminum officinale, Linn.

ಮಲ್ಲಿಗೆಬಳ್ಳಿ; ಈ ಬಳ್ಳಿಯ ಬೇರಿನ "ಮುಲಾಮು" ಗಜ ಕರ್ಣಕ್ಕೆ ಉತ್ತಮವಾದ ಗುಣಕಾರಿಯೆಂದು ಹೇಳುತ್ತಾರೆ.

Jasminum sambac, Ait.

ದುಂಡಮಲ್ಲಿಗೆ ಬಳ್ಳಿ; ಏಳುಸುತ್ತಿನ ಮಲ್ಲಿಗೆ ಬಳ್ಳಿ. ಈ ಬಳ್ಳಿಯ ಹೂಗಳನ್ನು ಜಜ್ಜಿ ಸ್ತ್ರೀಯರ ಮೊಲೆಗೆ ಕಟ್ಟಿದರೆ, ಅಲ್ಪ ದಿವಸಗಳಲ್ಲಿಯೇ ಮೊಲೆಹಾಲು ಬತ್ತುವವೆಂದು ಅನೇಕ ವೈದ್ಯರು ಅಭಿಪ್ರಾಯವನ್ನು ಕೊಟ್ಟಿರುವರು.

Jatropa curcas, Linn.

ಮರಔಡ್ಲ ಗಿಡ; ಬೆಟ್ಟದ ಹರಳಿನ ಗಿಡ; ಕಾಡುಔಡ್ಲ ಗಿಡ; ತುರುಕಹರಳಿನ ಗಿಡ.

ಇದರ ಬೀಜದಿಂದ ತೆಗೆದ ಎಣ್ಣೆಯು ಔಡ್ಲ ಎಣ್ಣೆಗಿಂತ ಹೆಚ್ಚು ಭೇದಿಕಾರಕವಿರುವದು. ಈ ಎಣ್ಣೆಯನ್ನು ಕಜ್ಜಿ, ತದ್ದು, ಇಸಬು ಮುಂತಾದ ಚರ್ಮರೋಗಗಳಾದ ಸ್ಥಳಗಳ ಮೇಲೆಹಚ್ಚಿ ದರೆ ಕೂಡಲೇ ಗುಣವಾಗುವದು. ಈ ಗಿಡದ ಬೊಡ್ಡೆಗೆ ಕಚ್ಚು ಹಾಕಿದರೆ ಹಾಲಿನಂಥ ರಸವು ಹೊರಡುವದು. ಈ ರಸವನ್ನು ಹೊಸದಾಗಿ ಆದ ಗಾಯಗಳಿಗೆ ಹಚ್ಚಿದರೆ ರಕ್ತಸ್ರಾವವುಕೂಡಲೇ ನಿಲ್ಲುವದಲ್ಲದೆ, ಗಾಯವೂ ತೀವ್ರವೇ ಮಾಯುವದು. ವಸಡಿ ಯಿಂದ ರಕ್ತವು ಸೋರುವಾಗಲೂ, ಮತ್ತು ಹಲ್ಲುನೋವಾದಾ ಗಲೂ, ಈ ಗಿಡದ ಟೊಂಗೆಯನ್ನು ಹಲ್ಲು ತಿಕ್ಕುವದಕ್ಕೂ, ಮತ್ತು ಬಾಯಿ–ಮುಕ್ಕಳಿಸುವದಕ್ಕೂ ಅದರ ರಸವನ್ನು ಉಪ ಯೋಗಿಸುವರು.

Justicia gendarussa, Linn.

ಕರೇಲಕ್ಕೀಗಿಡ ಮು ಕ; ಮ ಕ. ಇದರ ಇದರ ಎಲೆಗಳ ಕಷಾಯವನ್ನು ತಲೆನೋವು, ಅರ್ಧಾಂಗರೋಗ, ಜ್ವರಮುಂತಾದ ರೋಗಗಳ ನಿವಾರಣೆಗಾಗಿ ಉಪಯೋಗಿಸುವರು. ತಾಜಾ ಎಲೆಗಳ ರಸವನ್ನು ಕಿವಿ ನೋವಾದಾಗ ಕಿವಿಯಲ್ಲಿಯೂ, ಅರೆ ದಲೆನೋವಾದಾಗ ನೋವಾದ ಭಾಗದ ಮೂಗಿನ ಸೊರಳಿಯ ಲ್ಲಿಯೂ, ಬಿಡುವರು.

Kaempferia rotunda, Linn.

ಕುಮುದಗಡ್ಡೆಯ ಗಿಡ; ನೆಲಸಂಪಿಗೆಯ ಗಿಡ; ಭೂಸಂಪಿ ಗೆಯ ಗಿಡ; ಭೂಚಂದಕ (ಸ) ಈ ಗಿಡದ ಎಲೆಗಳಿಂದ ಇಲ್ಲವೆ ದೇಟಿನಿಂದ ಮಾಡಿದ "ಮುಲಾಮು" ಹೊಸ ಹುಣ್ಣುಗಳಿಗೆ ಬಹಳೇ ಗುಣಕಾರಿಯು. ಇದರ ಗಡ್ಡೆಯ (ಬೇರಿನ) ಪೋಟೀಸು ಮಂಗನಬಾವು, ಕಸ ಮುಂತಾದ ಬಾವುಗಳನ್ನುಕಡಿಮೆ ಮಾಡು ವದಲ್ಲದೆ ಕುರು ಮುಂತಾದ ಚರ್ಮದ ಮೇಲೆ ಆಗುವ ಬಕ್ಕೆಗ ಗಳನ್ನು ಕೂಡಲೇ ಹಣ್ಣುಮಾಡುವದು.

---

# ಜನಪದ-ಸಾಹಿತ್ಯ

[ ಕನ್ನಡ ವಾಙ್ಮಯವೃಕ್ಷದ ಬೇರು ನಮ್ಮ ಹಳ್ಳಿಯ ಹಾಡುಗಳಲ್ಲಿ. ಹೆಣ್ಣುಮಕ್ಕಳ ಗೌರೀಪದಗಳು, ಕೋಲಹಾಡುಗಳು, ಬೀಸುಕಲ್ಲ ಪದಗಳು; ಒಕ್ಕಲಿಗರ ಹಂತಿಯ ಹಾಡುಗಳು ರಾತ್ರಿಯ ಪದಗಳು, ಹೋಳೀ ಹಾಡುಗಳು; ಇನ್ನುಳಿದ ದನಗಾಹಿಗಳ ಡೊಳ್ಳು ಬಾರಿಸುವವರ ಇತ್ಯಾ ವಿವಿಧಜನರ ವಿವಿಧಜೀವನದ ಶಬ್ದಚಿತ್ರವಾದ ಈ ಸಾಹಿತ್ಯದಲ್ಲಿ ಶೃಂಗಾರಹಾಸ್ಯಕರುಣಾದಿ ರಸಗಳ ಪ್ರತಿಭೆಯಿರುವದುಂಟು. ಇಂಥ ಸಾಹಿತ್ಯವೆಲ್ಲ ಜನರ ಬಾಯಲ್ಲಿಯೇ ಉಳಿದುಬಿಟ್ಟಿದೆ. ಅದನ್ನೆಲ್ಲ ಸಂಗ್ರಹಿಸಬೇಕೆಂಬ ಇಚ್ಛೆಯಿಂದ 'ಜನಪದಸಾಹಿತ್ಯ' ವೆಂಬ ಭಾಗವನ್ನೇರ್ಪಡಿಸಿದ್ದೇವೆ. ಅಖಿಲ ಕರ್ನಾಟ ಬಂಧುಗಳು ಈ ಸಾಹಿತ್ಯವನ್ನು ನಮ್ಮೆಡೆಗೆ ಕಳುಹಬೇಕೆಂದು ಕೇಳಿಕೊಳ್ಳುತ್ತೇವೆ. ವಿಶೇಷವಾಗಿ ನಮ್ಮ ವಾಚಕರು ಇತ್ತಕಡೆಗೆ ಗಮನಿಸಬೇಕೆಂದು ಬೇಡ

—ಸಂಪಾದಕ ]

## ಡೊಳ್ಳಿನ ಪದಗಳು

೧

ಕಳಿಸಿದವರು —ಶ್ರೀ ಮಧುಲಿಂಗಪ್ಪ ಓಲೆಕಾರ, ಹಲಸಂಗಿ

[ಇದರಲ್ಲಿ ಸುಖದುಃಖಮಯ ಪ್ರಪಂಚವನ್ನು ಹಾವಿನ ಹೆಡೆಯ ರತ್ನಕ್ಕೂ ಹೈನಿನ ಸಂಪತ್ತಾದ ಎಮ್ಮೆಗೂ ಕೊರವಂಚೆವ್ವ ಎಂಬ ದೇವತೆಗೂ ಹೋಲಿಸಿದೆ ]

ಡೊಳ್ಳ ಹೊಡಿಯೋ । ಡೊಗ್ಗೀಮಗನೇ
ಡುರ್‍ರ್ಕ ಜಡಿಮಣಿ
ನಾಗರ ಹೆಡಿಮಣಿ
ಕೋಣನ ತಾಯೀ । ಕೊರವಂಚೆವ್ವಾ
ಪರಪಂಚೋ !
ಪರಪಂಚೋ !!

೨

ಕಳಿಸಿದವರು: —ಶ್ರೀ ಅಪ್ಪಯ್ಯಾಚಾರ್ಯ ರಿತ್ತಿ, ದಡ್ಡರದಡ್ಡಿ, ಮುಂಡರಗಿ

[ ಕೆಳಗಿನ ಪದದಲ್ಲಿ ಒಬ್ಬ ಸ್ವಾಮಿಯು, ಗುಜರಾಥದಿಂದ ಇಲ್ಲಿಗೆ ಬಂದಿರುವ ಗೌಳಿಗನ ಬಳಿಗೂ ಕರ್ನಾಟಕದವನೇ ಆದ ಕುರುಬನ ಬಳಿಗೂ ಹಾಲಿನ ಭಿಕ್ಷೆಗೆ ಬಂದಿರುವನೆಂದೂ ಗೌಳಿಗನು ಕರಕ್ಕೆ ಮೊದಲು ಉಣ್ಣಿಸಿ ಎಂಜಲ ಹಾಲನ್ನು ಗುರುವಿಗೆ ಕೊಡಹೋದನೆಂದೂ ಕುರುಬನು ಮರಿಗೆ ಉಣ್ಣಿಸದೆ ಮೀಸಲ ಹಾಲನ್ನು ಕೊಟ್ಟನೆಂದೂ ಗುರುವು ಗೌಳಿಗನ ಹಾಲನ್ನು ನಿರಾಕರಿಸಿ ಕುರುಬನ ಹಾಲನ್ನು ಸ್ವೀಕರಿಸಿದನೆಂದೂ ವರ್ಣಿಸಲಾಗಿದೆ. ಗೌಳಿಗರ ಸಾಂಪ್ರದಾಯಕ್ಕಿಂತ ಕುರುಬರದು ಹೆಚ್ಚಿನದೆಂಬ ಅಭಿಮಾನವು ಸೋಜಿಗವಾಗಿದೆ. ಇದೇ ಅರ್ಥದ ಒಂದು ಕಥೆಯನ್ನು ಹಳ್ಳಿಯಲ್ಲಿ ಹೇಳುವದುಂಟು. ಅದೇನೆಂದರೆ—ಒಕ್ಕಲಿಗನ—ಗೌಳಿಗನ—ಹಾರುವನ ಮನೆತನಕ್ಕೆ ಸೇರಿದ ಮೂರು ಹೋರೀಕರಗಳು ಒತ್ಟಟ್ಟಿಗೆ ಕೂಡಿದವಂತೆ. ಒಕ್ಕಲಿಗನ ಪುಷ್ಟಶರೀರದ ಕರವು ಉಳಿದವುಗಳಿಗೆ 'ನೀವಿಷ್ಟೇಕೆ ಸ... ಗಿದ್ದೀರಿ; ತಾಯಿಯ ಮೊಲೆಹಾಲು ಕುಡಿದಿಲ್ಲವೇ ' ಎಂದ ಕೇಳಲಾಗಿ ಗೌಳಿಗನ ಕರವು ' ಮೊಲೆಯಲ್ಲಿ ಹಾಲಿರುವದೇ!' ಎಂದೂ ಹಾರವನ ಕರವು 'ತಾಯಿಗೆ ಮೊಲೆಗಳು ಇರುವವೇ' ಎಂದೂ ತಿರುಗಿ ಪ್ರಶ್ನೆಮಾಡಿದವಂತೆ······ ··]

ದೇವರು ಬಂದಾರ ಬನ್ನಿರೆ—ನಮ್ಮ ಸ್ವಾಮಿ ಬಂದಾನ ಬನ್ನಿರೆ ॥ಪಲ್ಲ
ಅಂಗೈಜೋಳಿಗಿ। ಮುಂಗೈಬೆತ್ತ । ತುದಿಬೆರಳೀಬತ್ತಿ ಹಚ್ಚ್ಯಾನೆ
ತುದಿಬೆರಳೀಬತ್ತೀ ಹಚ್ಯಾನೆ । ಅವ । ಕಗ್ಗಾಲಕಣವೀ ಹಿಡಿದಾನೆ
ಕಗ್ಗಾಲಕಣವೀಹಿಡಿದಾನೆ । ಅವ । ಮುಗ್ಗಾಲದಾರಿಗೆ ಬಂದಾನೆ
ಮುಗ್ಗಾಲದಾರಿಗೆ ಬಂದಾನೆ । ಅವ । ಗೌಳೇರಣ್ಣನ ಕಂಡಾನೆ
ಗೌಳೇರಣ್ಣ । ಗೌಳೇರತಮ್ಮ । ಹಾಲಿನ ಬಿಕ್ಸಾ ನೀಡಂದಾನೆ
ಬಾರೊ ಬಾರೋ ಹೇ ನನ್ನ ಗುರುವೆ । ಕಂಬಳಿಗದ್ದುಗೆ ಮಾಡುವೆನೆ
ಕಂಬಳಿಗದ್ದುಗೆ ಮಾಡ್ಯಾನೆ । ಅವ । ಶಿವನಲ್ಲೆ ಮೂರುತನಾದಾನೆ
ಮುಂದಾಲ ಕರುಗಳ ಬಿಟ್ಟಾನೇ ಅವ । ಹಿಂಬಾಲೆ ಹಾಲ ಹಿಂಡ್ಯಾನೆ
ಕರುಉಂಡ ಹಾಲ ಎಂಜಲೆಂಜಲೆಂದ ನಮ್ಮಯ್ಯ ಹಿಂದಕೆ ಹೊಂಟಾನೆ

ನಮ್ಮಯ್ಯ ಹಿಂದಕೆ ಹೊಂಟಾನೆ । ಅವ । ಮುಗ್ಗಾಲ
ದಾರಿಗೆ ಬಂದಾನೆ ।
ಮುಗ್ಗಾಲ ದಾರಿಗೆ ಬಂದಾನೆ । ಅವ । ಕಗ್ಗಾಲ
ಕಣಿವಿಯ ಹಿಡಿದಾನೆ ।
ಕಗ್ಗಾಲ ಕಣವಿಯ ಹಿಡಿದಾನೆ । ಅವ । ಕುರುಬರಣ್ಣವ
ಕಂಡಾನೆ ।
ಕುರುಬರ ಅಣ್ಣ । ಕುರುಬರ ತಮ್ಮ । ಹಾಲಿನ ಬಿಕ್ಸಾ
ನೀಡಂದಾನೆ ।
ಬಾರೊ ಬಾರೊ ಹೇ ನನ್ನ ಗುರುವೆ । ಕಂಬಳಿಗದ್ದುಗೆ
ಮಾಡುವೆನೆ ।
ಕಂಬಳಿ ಗದ್ದುಗೆ ಮಾಡ್ಯಾನೆ । ಅವ । ಶಿವನಲ್ಲೆ
ಮೂರುತನಾದಾನೆ ।
ಮುಂದಾಲ ಹಾಲ ಹಿಂಡ್ಯಾನೆ । ಅವ । ಹಿಂದಾಲ
ಕರುಗಳ ಬಿಟ್ಟಾನೆ ।
ಹಾಲ ಉಂಡು ಹಾರೈಸುತ । ನಮ್ಮಯ್ಯ ಹಿಂದಕೆ
ಹೊಂಟಾನೆ ।
ದೇವಾರು ಬಂದಾರ ಬನ್ನಿರೆ

## ಹಂತಿಯ ಹಾಡುಗಳು

ಕೇಳಿಸಿದವರು: — ವೀರಪ್ಪಾ ಮೇಗೂರ, ಸೊರಟೂರ.

[ಒಕ್ಕಲಿಗರು ಬೆಳೆಯನ್ನು ಕೊಯ್ದ ಮೇಲೆ ಹಂತಿಯ ಹೊತ್ತಿಗೆ ಸೊಗಸಿನಿಂದ ಹೊಲಗಳಲ್ಲಿ ಈ ಹಾಡುಗಳನ್ನು ಹಾಡುವದುಂಟು. ಮೊದಲಿನ ಎರಡು ಚರಣಗಳನ್ನು ಒಬ್ಬನೂ ಎರಡನೇ ಚರಣವನ್ನೇ ಉಳ್ಳ ೩ನೇ ಮತ್ತು ೪ನೇ ಚರಣವನ್ನು ಇನ್ನೊಬ್ಬನೂ ಹೇಳುತ್ತಾರೆ. ಕೆಳಗಿನ ಪದಗಳಲ್ಲಿ ತಮ್ಮ ಹಳ್ಳಿ, ಹಳ್ಳಿಯ ದೇವರು, ಒಕ್ಕಲತನ, ಬಸವಣ್ಣ ಮೊದಲಾದವುಗಳ ಬಗ್ಗೆ ಅವರು ಎಷ್ಟೊಂದು ಅಭಿಮಾನ ಪಡುತ್ತಾರೆಂಬದನ್ನು ನೋಡಬಹುದು. ಇವುಗಳ ಮುಗಿಯುವ ಕಾಲಕ್ಕೆ ಹುಲಹುಲಗ್ಯೋ ಎಂದು ಮುಗಿಸುವರು; ಅದು ಫಲಪ್ರದವಂತೆ. ಕೆಳಗಿನ ಪದಗಳಲ್ಲಿ ಪ್ರತಿಯೊಂದೂ ತನ್ನಷ್ಟಕ್ಕೆ ಸ್ವತಂತ್ರ ಪದವು.]

೧

ಊರು ಒಳ್ಳೇದು ನಮ್ಮ ಗ್ರಾಮವು ಸೊರಟೂರು ।
ದೇವರೊಳ್ಳೆವನು ಭೈರವ !
ದೇವರೊಳ್ಳೆನ ಭೈರವನ ಮುಂದಿರೊ ।
ದೇವತಿ ಒಳ್ಳ್ಯಾಕಿ ದುರಗಮ್ಮ ॥

೨

ಹಬ್ಬಳ್ಳಿ ಹೂಬಳ್ಳಿ ಹಬ್ಬ್ಯೈತಿ ರಣಬಳ್ಳಿ ।
ತೆಗ್ಗಿನಾಗೈತಿ ಸೊರಟೂರು!
ತೆಗ್ಗಿನಾಗೈತಿ ಸೊರಟೂರ ಹನುಮನ ।
ಹುಬ್ಬಿನ್ಯಾಗೈತಿ ಎಳೆನಾಮ ॥

೩

ಹೊಟ್ಟನ ಬಣವಿಯ ಮೆಟ್ಟ ಮೆಟ್ಟ ಮೆಯ್ವ ।
ನೀನ್ಯಾರೊ ಮಗನೇ ಚೆನ್ನಬಸವಾ ?
ಕಾಲಾನ ಕೆದರುತ ಬಾಲಾನ ಬೀಸುತ ।
ಬಂದಾನ ಬಸವಾ ಬಣವೀಗೆ ॥

೪

ಸಾಂಸಿ ಕುಂದಗೋಳ ಸಾವಕಾರನ ಮಗಳು ।
ಮಾಗಳದ ಗೋದಿ ಉಡಿಯಕ್ಕಿ–
ಮಾಗಳದ ಗೋದಿ ಉಡ್ಯಕ್ಕಿ ಹಾಕ್ಕೊಂಡು ।
ನಾಗಪ್ಪಗ ಹಾಲ ಹೊಯ್ಯಾಳೋ ।

೫

ಸಾಣೀಕಲ್ಲ ಮ್ಯಾಲೆ ಜಾಣಮಗ್ಗವ ಹೂಡಿ ।
ಪ್ರಾಣೇಶ ನೆಯ್ದಾನೊ ಹುಲಹುಲಗ್ಯೋ
ದುಂಡ ಕಲ್ಲಿನ ಮ್ಯಾಲೆ ಮುಂಡಮಗ್ಗವ ಹೂಡಿ ।
ಗೊಂಡೇಶ ನೆಯ್ದಾನೊ ಹುಲಹುಲಗ್ಯೋ

## ದನಗಾಹಿಗಳ ಹಾಡುಗಳು

ಕೇಳಿಸಿದವರು: — ಶ್ರೀ. ಗೋಡಿಕಾರ ಗುರಪ್ಪ, ಮೈಸಲಗಿ.

[ದನಗಾಹಿಗಳು ದಿನಾಲು ಅಡವಿಯಿಂದ ಊರ ಕಡೆಗೆ ಬರುವಾಗಲೂ ಇಲ್ಲವೆ ಹೋಳೀ ಹುಣ್ಣಿವೆಯ ಸಮಯಕ್ಕೆ ಒಟ್ಟಟ್ಟಗೆ ನೆರೆದಾಗಲೂ ಈ ಹಾಡುಗಳನ್ನು ಹಾಡುವರು. ಹೋಳಿಯ ಹಾಡುಗಳೆಂದೂ ಇವಕ್ಕನ್ನುವರು. ದನಗಾಹಿಗಳಂಥ ಅಕ್ಷರರಹಿತರು ಆಗಿನದಾಗಲೇ ಕಟ್ಟಿ ಹಾಡುವರು. ಕೆಳಗಿನ ೨ ನುಡಿಗಳಲ್ಲಿ ಮಕ್ಕಳ ಸುಖವು ಸೀತಾದೇವಿಗೆ ಎಷ್ಟು ಬೆಲೆಯುಳ್ಳದ್ದಾಗಿತ್ತೆಂಬದು ಚಿತ್ರಿತವಾಗಿದೆ. ವೃತ್ತವು ಸರ್ವಜ್ಞನ ತ್ರಿಪದಿಯು.]

೧

ಜನಕರಾಯನ ಮಗಳು । ಬನಕ ತೊಟ್ಟಿಲ ಕಟ್ಟಿ
ಲವಕುಶರನ್ನು ತೂಗ್ಯಾಳೊ ! ಆ ಬಾಲಿ !
ನಗುತ ವನವಾಸ ಕಳದಾಳೊ!

೨

ಸೀತಾನ ಒಯ್ಯಾಗ । ಶ್ರೀರಾಮ ಸಣ್ಣಾವ
ಆಗ ಹನುಮಾನ ಹಸುಗೂಸ । ಇದ್ದರೂ
ಸೀತಾನ ಸೆರೆಯ ಬಿಡಿಸ್ಯಾನೋ !

## ಬೀಸೂಕಲ್ಲ ಪದಗಳು

ಕಳಿಸಿದವರು:- —ಶ್ರೀ. ಲಿಂಗಪ್ಪ ಸಿಂಪಿ, ಛತ್ರಗುಂಕಿ.

[ ಹೆಣ್ಣುಮಕ್ಕಳು ಬೀಸುವಾಗ ಅನೇಕ ವಿಧವಾದ ಮಟ್ಟು ಗಳಲ್ಲಿ ಪದಗಳನ್ನು ಹಾಡುವರು. ಈ ಪದಗಳಲ್ಲಿ ಮುಖ್ಯವಾಗಿ ಹಳ್ಳಿಯ ಜೀವನದ ವಿವಿಧಾಂಗಗಳನ್ನು ವರ್ಣಿಸಿರುತ್ತಾರೆ. ಇಲ್ಲಿ ಕೊಟ್ಟ ಪದಗಳಲ್ಲಿ ಸಂಸಾರ ಮಾಡುತ್ತಿರುವಾಗ್ಗೆ ಸಂಭವಿಸುವ ಹಲಕೆಲವು ಸಂಗತಿಗಳನ್ನು ತೆಗೆದುಕೊಂಡು ಕೌಶಲ್ಯದಿಂದ ಕವನ ಕಟ್ಟಿದ್ದಾಗಿದೆ. ವೃತ್ತವು ತ್ರಿಪದಿಯೇ. ]

೧

ಊರೀಗಿ ಹೋಗವರ ಮಾರ್ಯಾಕ ಬಾಡ್ಯಾವ ।
ಗೀರಗಂಧ್ಯಾಕ ಬೆವತಾವ । ಮಡದೀನ
ಬಿಟ್ಟ ಹೊಂಟಾರ ಪರನಾಡ ।

೨

ಎಂದ ಬಳತಿರಿ ನನ್ನ ಗಂಧದ ರತಿಗಾತ ।
ರುಂಬಾಲ ಎಲ್ಲ ಪರಿಮಳವಂಥ ನಲ್ಲ
ಎಂದ ಬಳತೀರಿ ನನಗ್ಹೇಳ !

೩

ಕಮಳದ ಹೂವ ನಿನ್ನ ಕಾಣಿವೆಲಾತಿ ।
ಮಲ್ಲಿಗಿ ನಿನ್ನ ಮಾಯೆ ಬಿಡಲಾತಿ । ಕೇದಿಗಿ
ಧೊರಿಯೆ ನಿನ್ನಗಲಿ ಇರಲಾತಿ !

೪

ಯಾಕವ್ವ ನನ್ನ ಜೀವ ಜಾಚೇಲಿ(?)ಬಲ್ಲದ ।
ಜಾತ್ರೀಗಿ ಹೋದವರು ಬರಲಿಲ್ಲ । ಇಂದಿನ
ರಾತ್ರೀನ ಹೇಗೆ ಕಳೆಯಲಿ ?

೫

ವಾಲೀಕಾರಾ ನಿನಗ ಒಳ್ಳೆ ಹೆಂಡತಿಯಾಕೋ,
ನೀ ಹೋದಿ ರಾಜ್ಯ ತಿರಗುತ । ಆ ಬಾಲಿ
ಬಾಡ್ಯಾಳೊ ಬಾಳಿಸುಳಿಯಾಗಿ !

೬

ಹಣಚಿಬೊಟ್ಟನವ್ಯಾಗ ಹವಿವಾಡೊ ಕುಂಕುಮ ।
ವಾರೀಗಿ ಪುರುಷ ಇದರೀಗಿ ' ಕುಂತರ
ಹೆಚ್ಚಿನ ತವರ ಮಂತೇನ !

೭

ಬಡತನ ನನಗಿರಲಿ ಥಾಳ ಮಕ್ಕಳಿರಲಿ ।
ಮ್ಯಾಗ ಗುರುವಿನ ದಯವಿರಲಿ । ನನ ಗುರುವೆ
ಬಡತನದ ಚಿಂತಿ ನಿನಗಿರಲಿ !

೮

ಅತ್ತರ ಅಳಲೆನ್ನ ಈ ಕೂಸ ನನಗಿರಲಿ ।
ಕೆಟ್ಟರ ಕೆಡಲಿ ಮನೆಗೆಲಸ । ಕಂದವ್ವ
ಅಂಥ ಮಕ್ಕಳಿರಲಿ ಮನೆತುಂಬ !

೯

ಸಾವಿರ ಕೊಟ್ಟರೂ ಸವತೀಯ ಮನಿ ಬ್ಯಾಡ ।
ಸಾವಿರದ ಮ್ಯಾಲೆ ಐನೂರ । ಕೊಟ್ಟರೂ
ಮಲಮಕ್ಕಳನುವ ಮನಿ ಬ್ಯಾಡ !

೧೦

ಆನೇರಿ ಬರ್‍ಯಾನ ನನ್ನ ಕಂದ ಅಲ್ಲಿಂದ
ಆನೀಗಿ ಅಂಕುಶ ನಡಿಸ್ಯಾನ । ನನ್ನ ಬಾಲ
ಭಂಗಾರದ ಖಡೆಯ ಜಯಿಸ್ಯಾನ ।

೧೧

ಹುಗ್ಗಿ ತುಪ್ಪುಂಡಾನ ಮಗ್ಗೆಂಗಿ ತೊಟ್ಟ್ಯಾನ ।
ಬಗ್ಗಿ ಕೂರಿಗಿ ಬಿಗಿದಾನ ನನ್ನ ಬಾಲ । ಬುದ್ಧೀಗಿ
ಭೂಮಿತಾಯಿ ಒಲದಾಳ !

೧೨

ಹಾರೈಸಿ ಹಡದವ್ವ ಒಳಗೇನ ಮಾಡತಿ
ನೋಡಬಾ ತಾಯಿ ಮಗನಾಟ । ನಿನ್ನ ಬಾಲ
ಗುಲಗಂಜಿ ಗಿಡಕ ಗುರಿಯಿಟ್ಟ !

೧೩

ಗೆಳತಿ ಮಾಡಿದ ಕುಬಸ ತಿಳಿನೀರಾಗೊಗದೇನ ।
ಬಿಳಿ ಉಸಬಿನಾಗ ಹರವೇನ । ಮಲ್ಲಾಡದ
ಗಿಣಿ ಬಂದು ಮುಗ್ಗಿ ತಗದಾವ !

೧೪

ಗೆಳದಿಯು ಕೂವಲ ಚೊಗಚಿಯು ಕಾಯ್ವಾಂಗ
ನಿಗುಚಿ ಬೈತಲ ತಗದಾಳ । ಕೆಳವವ್ವ ।
ಗೆಳತ್ಯಾರ ಬಳಗಕತಿ ಚೆಲುವಿ ।

೧೫

ಹೆಸರಿಗಿ ರಬಕವಿ ಮೊಸರಿಗಿ ನೀರಿಲ್ಲ ।
ಕುಶಲದ ಸಿಂಬಿ ಬರಿಗೊಡ । ಬಾಲ್ಯಾರ ।
ಉಸುರೆಂದು ಬಾವಿ ಇಳಿದಾರ ।

೧೬

ಚಂದಕ ನಿಂಬರಗಿ ಗಂಧಕ್ಕ ನೀರಿಲ್ಲ
ಟೆಂಗಿನ ಪರಟಿ ಬರಿಗೊಡ । ಬಾಲ್ಯಾರ ।
ರಂಭೇರ ಜಗಳ ನರತ್ಯಾಗ ।

---

# ವಸ್ತುಪಾಠ

ಕತೆಗಾರರು:—ಶ್ರೀ. ಟಿ. ಚಂದ್ರಶೇಖರ ಶರ್ಮ, ಎಮ್. ಎ., ಮುಂಬಯಿ

ಕುಡಿಯುವ ನೀರಿಗೆ ನಲ್ಲಿಯಲ್ಲದೆ ಕೆರೆ ಅಥವಾ ಕೊಳವಿರುವ ಊರಿನಲ್ಲಿ ಒಂದು ಅನುಕೂಲವುಂಟು. ಕಷ್ಟವನ್ನೂ ಬದುಕು ಬಾಳಿನಲ್ಲಿ ಬೇಸರವನ್ನೂ ಕಂಡವರು ಸುಲಭವಾಗಿ ಆತ್ಮಹತ್ಯ ಮಾಡಿಕೊಳ್ಳಬಹುದು.

ಒಂದುದಿನ ಗೌರಮ್ಮನಿಗೆ ಹಾಗೆನ್ನಿಸಿತು. ಅವಳು ನೀರು ತರುವೆನೆಂದು ನೆವಮಾಡಿಕೊಂಡು ಮನೆಯಿಂದ ಹೊರಟಳು. ನೀರುತರುವುದು ನಿತ್ಯವೂ ಮಾಡುವ ಕೆಲಸವಾದರೂ ಆ ದಿನ ಅದರಲ್ಲಿ ಹೆಚ್ಚಿನ ಶ್ರದ್ಧೆಯನ್ನು ವಹಿಸಿ, ಎಂದಿನಂತೆ ಸಂಜೆಗೆ ಬಿಸಿಲು ತಂಪಿದ ಮೇಲೆ ಹೋಗುವುದಕ್ಕೆ ಬದಲಾಗಿ ಮೂರು ಗಂಟೆಯ ಬಿಸಿಲಿನಲ್ಲಿಯೇ ಕೆರೆಯ ಕಡೆಗೆ ನಡೆದಳು. ಕೆರೆಬಿದ್ದು ಕಷ್ಟದ ಜೀವವನ್ನು ನೀಗಿಕೊಳ್ಳಬೇಕೆಂದು ಅವಳಿಗೆ ಆ ದಿನ ಬೆಳಗಿನಿಂದ ಮನಸ್ಸಿಗೆ ತೋರಿದ್ದಿತು. ಆ ಮೊದಲಾಗಿ ಅವಳ ಮನಸ್ಸಿಗೆ ವಿಶ್ರಾಂತಿಯಿರಲಿಲ್ಲ. ಬಿಸಿಲು ಜೋರಾಗಿದ್ದಾಗ ಊರ ಹೊರವಳಯದಲ್ಲಿದ್ದ ಕೊಳದಲ್ಲಿ ಜನರು ಯಾರೂ ಇರುವುದಿಲ್ಲವೆಂದು ಅವಳು ಲೆಕ್ಕಹಾಕಿದಳು.

ಅವಳ ಆ ಮನೋನಿಶ್ಚಯದಲ್ಲಿ ಉರಿಯುವ ಬಿಸಿಲು ತೋರಲಿಲ್ಲ. ಗೌರಮ್ಮನು ಸೀ ನೀರಿನ ಕೊಳವನ್ನು ತಲುಪಿ ನೀರಿಗಿಂತ ನಾಲ್ಕೇಬೆಟ್ಟು ಮೇಲಿದ್ದ ಕಡೆಯ ಮೆಟ್ಟಲಮೇಲೆ ಕೂತಳು. ಸಾಮಾನ್ಯವಾಗಿ ಅವಳು ಕಟ್ಟಕಡೆಯ ಮೆಟ್ಟಲ ಮೇಲೆ ಕೂತವಳಲ್ಲ. ಹಿಂದೆ ಎಷ್ಟೋ ಜನಗಳು ಸ್ವಲ್ಪದರಲ್ಲಿ ಕಾಲು ಜಾರಿ ನೀರೊಳಕ್ಕೆ ಬಿದ್ದಿದ್ದುದನ್ನು ಅವಳು ಕೇಳಿದ್ದಳು. ಜೀವಜಂತುಗಳಿಗೆ ಸ್ವಾಭಾವಿಕವಾದ ಪ್ರಾಣಗಳ ಮೇಲಿನ ಆಸೆಯಿಂದ ಅವಳು ತನ್ನ ಪಾತ್ರೆಗಳನ್ನು ಮೇಲೆ ತೊಳೆದು ಬಹು ಎಚ್ಚರಿಕೆಯಿಂದ ನೀರಿಗೆ ಬಗ್ಗುತ್ತಿದ್ದಳು. ಆದರೆ ಈ ದಿನ ಒಂದು ಕೆಟ್ಟ ಧೈರ್ಯ. ಸಾಯುವೆನೆಂದು ಪ್ರತಿಜ್ಞೆ ಮಾಡಿದ್ದರ ಮಹಿಮೆ ಅದು. ಕಾಲು ಜಾರಿ ಉರುಳಿದರೆ ಸಾಯುವೆನು, ಅಷ್ಟು ತಾನೇ; ಅದಕ್ಕೇ ನಾನು ಬಂದಿರುವುದು, ಎಂದುಕೊಂಡು ಅವಳು ಕಡೆಯ ಮೆಟ್ಟಲ ಮೇಲೆ ಸ್ವಲ್ಪ ಧಾರಾಳವಾಗಿಯೇ ಕೂತಳು.

ಕೊಳದ ನೀರು ನಾಲ್ಕೇನಾಲ್ಕು ಬೆಟ್ಟುಗಳ ಕೆಳಗೆ ಮಧ್ಯಾಹ್ನದ ಕಿರುಗಾಳಿಯಲ್ಲಿ ಸೊಂಪಿನಿಂದ ನಲಿಯುತ್ತ ಕಲ್ಲಿನ ದಡಕ್ಕೆ ಮೃದುವಾಗಿ ಅಪ್ಪಳಿಸುತ್ತಿದ್ದಿತು. ಆದರೂ ನಾಲ್ಕೂ ಕಡೆಗಳಲ್ಲಿ ಅದರ ಮಟ್ಟವು ಒಂದೇ ಸಮನಾಗಿದ್ದುದು ತಪ್ಪಿರಲಿಲ್ಲ. ಬಿಸಿಲಿನಿಂದ ಕಾವೂ ಕಾವಿಲ್ಲದಿದ್ದ ನೀರು ಜಲು ಮನೋಹರವಾಗಿದ್ದಿತು. ಬಿಂದಿಗೆಯನ್ನು ನಿದಾನವಾಗಿ ಉಜ್ಜುತ್ತಿದ್ದ ಗೌರಮ್ಮನ್ನ

ನೀರಿನ ಶೋಬಗನ್ನು ನೋಡಿ ಆನಂದ ಹೊಂದಿದಳು. ಅವನಿ ಯೋಚಿಸುತ್ತ ಅವಳ ಮನಸ್ಸು ನೀರಿನ ಕಡೆಗೆ ತಿರುಗಿತು. ತನ್ನನ್ನು ನುಂಗಿದ ಮೇಲೂ ಈ ಕೊಳದ ನೀರು ಪೂರ್ವದಂತೆಯೇ ನಲಿಯುವುದೆಂಬ ಯೋಚನೆ ಹುಟ್ಟಿತು. ಎಂತಹ ಕೃತ್ರಿಮ ! ಈ ಕೃತ್ರಿಮ ವಿದ್ಯೆಯಲ್ಲಿ ತನ್ನ ಅತ್ತಿಗೆಯೇ ಇದಕ್ಕೆ ಸರಿಗ್ಗೆಯಾದವಳೆಂದು ಅವಳು ಭಾವಿಸಿದಳು. ಎಂತಹ ಅತ್ತಿಗೆ, ಎಷ್ಟು ಹಿಂಸೆ ! ಮನೆಯಲ್ಲಿದ್ದವರು ಮೂರೇ ಮಂದಿ—ತಾನು, ತನ್ನಗಂಡ, ಗಂಡನ ವಿಧವೆಯಾದ ಅಕ್ಕ. ಆ ಮಹರಾಯತಿ, ಹತ್ತು ಜನ ಅತ್ತೆಯರ ಹಾಗೆ ಕಾಡುತ್ತಿದ್ದಳು. ಅತ್ತೆಯ ಕಾಟವಿಲ್ಲವೆಂದು ನೆಮ್ಮದಿಯಿಂದಿದ್ದವಳಿಗೆ ಅತ್ತಿಗೆಯೇ ಅತ್ತೆಯಂತಾದಳು. ಪ್ರಾಯಶಃ ಯಾವ ಅತ್ತೆಯೂ ಇಷ್ಟರನುಟ್ಟಿಗೆ ಸೊಸೆಯನ್ನು ಕಾಡಳು. ಆಕೆಯ ಒಂದೊಂದು ಮಾತೂ ಸಾವಿರ ಹೆಡೆಯ ಸರ್ಪವು ಕಡಿದ ಹಾಗೆ—ವಿಷವು ಉಕ್ಕಿ ಹರಿಯುತ್ತಿದ್ದಿತು. ಹೆಂಗಸರು ಒಬ್ಬರಿಗೊಬ್ಬರು ಹೀಗೇಕೆ ಶತ್ರುವಾಗಬೇಕು?

ನಿಶ್ಚಿಂತ ಭಾವದಿಂದ ನಲಿಯುತ್ತಿದ್ದ ನೀರು ಗಾಳಿಯ ಜೋರಿನಿಂದ ಒಂದಾವೃತ್ತಿ ಮೆಟ್ಟಲನ್ನು ಹತ್ತಿ ಅವಳ ಕಾಲನ್ನು ಸೋಕಿತು. ಗೌರಮ್ಮನಿಗೆ ಎಚ್ಚರವಾಯಿತು. ಪಾತ್ರೆಯನ್ನು ತೊಳೆಯಲು ಹೊರಟಳು. ತಾನು ಸತ್ತ ಮೇಲೆ ಗಂಡನ ಗತಿಯೇನಾದೀತೆಂಬ ಯೋಚನೆ ಬಂದಿತು. ಆ ಅಕ್ಕನ ಕೈಗೆ ಸಿಕ್ಕಿ ಅವರ ಪಾಡು ನಾಯಪಾಡೇ ಆದೀತು. ಆಕೆ ಯಾರನ್ನೂ ಬಾಳಿಸುವದಿಲ್ಲ. ತನಗೆ ಹಿಂಸೆ ಮಾಡುತ್ತಿದ್ದ ಹಾಗೆಯೇ ಗಂಡನ ಮೊದಲ ಹೆಂಡತಿಯನ್ನು ಆಕೆಯು ಕೊಂದು ಬಿಟ್ಟಿರಬಹುದು. ಈಗ ತಾನು ಬಲಿ. ಹೀಗೆ ಆ ಮಾರಿ ಇನ್ನು ಎಷ್ಟು ಸಾಧ್ವಿ ಹೆಂಗಸರನ್ನು ಕೊಲ್ಲಬೇಕೋ ಬಲ್ಲವರಾರು? ಎರಡನೆಯ ಹೆಂಡತಿಯೆಂದು ಎಲ್ಲರಿಗೂ ಅಸಡ್ಡೆ. ಹುಡುಗಿಯೆಂದು ತನ್ನ ಮೇಲೆ ಎಲ್ಲರದೂ ದರ್ಪ. ಮನೆಗೆ ತಾನು ಯಜಮಾನತಿಯಾದರೂ ಈ ಅಕ್ಕನ ದೆಸೆಯಿಂದ ತೊತ್ತಿನಂತಾಗಿದ್ದಳು. ಯಾವದು ಮಾಡಿದರೂ ತಪ್ಪು. ಯಾವದು ಮಾತನಾಡಿದರೂ ತಪ್ಪು. ತಾನು ಮಾಡಿದುದು ತಪ್ಪಲ್ಲವೆಂಬುವದನ್ನು ತೋರಿಸಲು ಅವಕಾಶವಿಲ್ಲವೇ ಇಲ್ಲ. ಹಾಗೆ ತೋರಿಸಲು ಯತ್ನಿಸಿದರೆ ಅದು ಎದುರು ಸವಾಲೆನ್ನಿಸಿಕೊಂಡು ತಪ್ಪೇ ಆಗುತ್ತಿದ್ದಿತು. ಆ ಮೇಲೆ ಮಾತು ಮಾತಿಗೂ ಕುಕ್ಕುಮುಳ್ಳು, ಮಾತು ಮಾತಿಗೂ ಬೈಗಳ. ಅಷ್ಟೇ ಅಲ್ಲ. ವಾಚಾಮಗೋಚರವಾಗಿಯೂ ಅಳತೆಗಗೋಚರವಾಗಿಯೂ ಅಕ್ಕನು ತಾನು ಬೈಯುತ್ತಿದ್ದಳಲ್ಲದೆ ಗಂಡನು ಕಚೇರಿಯಿಂ ಮನೆಗೆ ಬಂದ ಮೇಲೆ ಅವನೊಡನೆ ಚಾಡಿ ಹೇಳಿ ಅವನಿಂ ಬೈಸುತ್ತಿದ್ದಳು. ಎಷ್ಟೋಸಾರಿ ಹೊಡೆಯಿಸಿದ್ದಾಳೆ. ತಾನು ಅಕ್ಕ ಅಕ್ಕನೆಂದು ಅಕ್ಕರೆಯಿಂದಿದ್ದುದಕ್ಕೆ ಇದೇ ಉಪಕಾ ಇನ್ನು ಮುಂದೆ ಯಾರನ್ನು ಹೊಡೆಯಿಸುತ್ತಾಳೋ ನೋಡೋಣ ಅಂದಿಗೆ ಅವಳಿಗೆ ಪ್ರಪಂಚದ ಋಣ ತೀರಿತು. ಅಯ್ಯೋ ದೇವ ತನ್ನ ಸ್ಥಿತಿಯು ಹೀಗೂ ಆಗಬೇಕೆ ! ತಾನು ಸತ್ತ ವರ್ತಮಾನವು ಹಿರಿಯೂರಿನಲ್ಲಿರುವ ಮುದುಕಿ ತಾಯಿಗೆ ತಿಳಿದರೆ ಆ ಎಷ್ಟು ಸಂಕಟವಾಗಬೇಕು ! ಆದರೇನು ಮಾಡುವದು ! ಪ್ರಪಂಚದಲ್ಲಿ ತಾಯಿಯಾರೋ ಮಗಳು ಯಾರೋ!

ಜನಗಳು ಯಾರಾದರೂ ಬಂದರೆ ನಿಸ್ಸಂಶಯವಾಗಿ ಸಾಯುವುದಕ್ಕೆ ವಿಘ್ನಬರುವದರಿಂದ ತನ್ನ ಕೆಲಸವನ್ನು ಜಾಗ್ರತೆಯಾ ಮುಗಿಸಬೇಕೆಂಬ ಉದ್ದೇಶದಿಂದ ಗೌರಮ್ಮನು ಬಿಂದಿಗೆಯ ನೀರುತುಂಬಿ ಮೇಲಿನ ಮೆಟ್ಟಲ ಮೇಲಿಟ್ಟಳು. ಅಷ್ಟರಲ್ಲಿ ಎ ಮಾರು ದೂರದಲ್ಲಿ ಯಾರೋ ಬಿಕ್ಕಿಬಿಕ್ಕಿ ಅಳುವ ಶಬ್ದವು ಕೇ ಸಿತು. ಕೊಳದೊಳಗೆಲ್ಲಾ ತಾನೊಬ್ಬಳೇ ಇದ್ದವಳೆಂದು ದಿದ್ದವಳಿಗೆ ರೋದನ ಶಬ್ದವು ಆಶ್ಚರ್ಯವನ್ನುಂಟುಮಾಡಿ ಅವಳು ಆ ದಿಕ್ಕಿನಲ್ಲಿ ತಿರುಗಿದಳು. ಅಲ್ಲಿ ಅವಳ ಕಡೆಗೆ ಬೆ ತಿರುಗಿಸಿ ಕುಳಿತು ಹೆಂಗಸೊಬ್ಬಳು ಅಳುತ್ತಿದ್ದಳು. ಹ ನೀರಿನ ಕಪ್ಪಲೆಯಿದ್ದಿತು. ಗೌರಮ್ಮನು ಸ್ವಲ್ಪಹೊತ್ತು ನೋ ದಳು. ಆಹೆಂಗಸಿಗೆ ದುಃಖಾತಿಶಯದಲ್ಲಿ ಪ್ರಪಂಚವು ಕಣ್ಮರೆಯಾ ಗಿದ್ದಿತು. ಹೋಗಿ ಮಾತನಾಡಿಸೋಣವೆ ಎಂದು ಗೌರಮ್ಮ ಎನ್ನಿಸಿತು. ಯಾರೋ ಹೆಂಗಸು ಬಾಯಿಲೆಯಿಂದ ನರಳ ರಬಹುದು. ಆದರೆ ಬಾಯಿಲೆಯಾದವಳು ಕೊಳಕ್ಕೆ ನೀ ಹೇಗೆ ಬಂದಾಳು ? ನೆಂಟರಿಷ್ಟರು ಯಾರೋ ಸತ್ತಿರಬಹುದ ಇರಲಾರದು— ಹುಡುಗಿಯು ಇಲ್ಲಿ ಬಂದು ಬಿಕ್ಕಿಬಿಕ್ಕಿ ಅಳುವ ದೇಕೆ ? ನೆಂಟರಿಷ್ಟರಿಗಾಗಿ ಕೊರಗಲು ವಿಜನವಾದ ಪ್ರದೇ ಏಕೆ ಅರಸಬೇಕು ? ಆ ಊಹೆಯು ಸರಿಯಾದುದಲ್ಲ. ಮತ್ತೇ ರಬಹುದು ? ದುಃಖವು ದೈವಿಕವಲ್ಲದಿದ್ದ ಮೇಲೆ ಮಾನುಷಿಕ ಇರಬೇಕು. ಹುಡುಗಿಯ ಆಕಾರವನ್ನೂ ಅಂಗೋಪಾಂ ಭಾಗವನ್ನೂ ನೋಡಿದರೆ ವಯಸ್ಸಿನಲ್ಲಿ ಚಿಕ್ಕವಳಂತೆ ಕಾಣು ದ್ದಳು. ಗೌರಮ್ಮನು ಯೋಚಿಸಿದಳು. ಮನೆಯೊಳಗಿ ಹಿಂಸೆಯೆಂದು ತೋರಿತು. ಅತ್ತೆಯೋ ಅತ್ತಿಗೆಯೋ ಗಂಡನೋ

ಅಥವಾ ಮತ್ತಾರು ಹಿತೈಷಿಗಳೋ ಕಾಡುತ್ತಿರಬಹುದು ನೋಡುತ್ತಿದ್ದಹಾಗೆ ಅವಳ ಮನಸ್ಸಿನಲ್ಲಿ ಅಪ್ರಯತ್ನಪೂರ್ವಕವಾದ ಮರುಕವುಂಟಾಯಿತು. "ಪಾಪ!"ಎಂದುಕೊಂಡಳು. ಸಂಸಾರದ ಬಾಗಿಲನ್ನು ಇನ್ನೂ ದಾಟಿಲ್ಲವೆನ್ನುವಷ್ಟರೊಳಗೆ ದುಃಖವನ್ನನುಭವಿಸುವುದಾದರೆ ಜೀವನವು ಕಠಿಣವಾಗುವುದು. ಅದರೊಳಗೂ ಇಂತಹ ಸುಕುಮಾರಿಯಾದ ಹುಡುಗಿಯು ಇಷ್ಟು ಬೇಗನೇ ಕಷ್ಟಕ್ಕೊಳಗಾದುದನ್ನು ನೋಡಿ ಗೌರಮ್ಮನಿಗೆ ಅಂತಹ ಕಷ್ಟವನ್ನು ಕೊಟ್ಟ ವಿಧಿಯ ಮೇಲೂ ಕಷ್ಟದಿಂದ ಅವಳನ್ನು ದಾಟಿಸಿ ಸುಖದಿಂದಿಡದಿದ್ದ ಹೆಂಗಸಿಗೆ ಸಮನಾದ ಅವಳ ಗಂಡನ ಮೇಲೂ ಅತಿಯಾಗಿ ರೇಗಿತು. ಸಮಸ್ತವಿಧವಾಗಿಯೂ ಆಶ್ರಯನಾದ ಗಂಡನೇ ಹೀಗೆ ಸುಮ್ಮನಿದ್ದಮೇಲೆ ಹೆಂಗಸನ್ನು ಕೇಳುವವರು ಯಾರು ?

ವಿಧಿಯಮೇಲೂ ಗಂಡಸಿನ ಮೇಲೂ ರೇಗಿದಹಾಗೆ ಗೌರಮ್ಮನಿಗೆ ಆ ಹುಡುಗಿಯಲ್ಲಿ ಅಂತಃಕರಣವು ಮೃದುಲತರವಾಯಿತು. ಅವಳ ಚರಿತ್ರೆಯನ್ನು ಕೇಳಬೇಕೆಂದು ಕುತೂಹಲ ಹೊಂದಿದಳು. ಮನಸ್ಸು ತಡೆಯಲಿಲ್ಲ. ಮಾತನಾಡಿಸಿ ಸಮಾಧಾನವನ್ನಾದರೂ ಮಾಡೋಣವೆಂದು ನಿಶ್ಚಯಿಸಿಕೊಂಡು ಅವಳು, ನೀರಾಗಿದ್ದ ತನ್ನ ಕೈಯನ್ನು ಸೆರಗಿನಿಂದ ಒರಸಿಕೊಳ್ಳುತ್ತ ಹುಡುಗಿಯ ಬಳಿಗೆ ಹೋದಳು. ಹೋದರೂ ಮಾತನಾಡಿಸಲು ಮೊದಲು ಸ್ವಲ್ಪ ಸಂಕೋಚವಾಯಿತು. ಪರಿಚಯವಿಲ್ಲದುದರಿಂದ ಹುಡುಗಿಯು ತನ್ನ ಸಹಾಯ ಪ್ರಯತ್ನವನ್ನು ತಿರಸ್ಕರಿಸಿದರೆ ಹೇಗೆ ಮಾಡಲೆಂದುಕೊಂಡಳು. ಅವಳ ದೃಷ್ಟಿಯು ಹುಡುಗಿಯ ಕಡೆಗೆ ತಿರುಗಿತು. ಹುಡುಗಿಯು ದುಃಖಮಗ್ನಳಾಗಿ ಅಂತರ್ಮುಖಳಾಗಿದ್ದಳು. ಆದರೂ ಅವಳನ್ನು ಸಮಾಧಾನಪಡಿಸುವದು ಒಬ್ಬ ಹೆಂಗಸು ಇನ್ನೊಬ್ಬಳಿಗೆ ಮಾಡಬೇಕಾದ ಅವಶ್ಯಕ ಸಹಾಯವೆಂದುಕೊಂಡು ಗೌರಮ್ಮನು—

"ಯಾಕಮ್ಮ ಅಳುತ್ತೀಯೇ ? ಎಂದು ಕೇಳಿದಳು.

ದುಃಖಿತರಿಗೆ ಇತರರೊಡನೆ ಸುಲಭವಾಗಿ ಬಳಕೆ ಬಾರದು. ಪ್ರಶ್ನೆಗೆ ಉತ್ತರವು ಬರಲಿಲ್ಲ. ಒಂದು ಕ್ಷಣದಮೇಲೆ ಗೌರಮ್ಮನ ಮತ್ತೆ ಪ್ರಶ್ನೆಮಾಡಿದಳು.

ಈ ಸಾರಿ ಉತ್ತರಹೇಳದೆ ನಿರ್ವಾಹವಿರಲಿಲ್ಲ. ಆದರೆ ಉತ್ತರಹೇಳಲು ಇಷ್ಟವಿರಲಿಲ್ಲ. ಸಾಧ್ಯವೂ ಆಗುತ್ತಿರಲಿಲ್ಲ. ಕೊರಗು ಹೆಚ್ಚಿದರೆ ಮಾತು ನಿಂತುಹೋಗುತ್ತದೆ. ಅವರೂ ಎದುರಿಗೆ ನಿಂತಿದ್ದಾಕೆಯು ಅನಪೇಕ್ಷಿತ ಕುತೂಹಲವನ್ನು ತೋರಿಸುತ್ತಿದ್ದಂತೆ ಕಾಣಲಿಲ್ಲ. ಆದ್ದರಿಂದ ಅಳುತ್ತಿದ್ದವಳು ಅಳುವನ್ನು ನಿಲ್ಲಿಸಿ ಕತ್ತೆತ್ತಿ ನೋಡಿದಳು. ಧ್ವನಿಯಂತೆ ಮುಖದಲ್ಲಿಯೂ ಕೂಡ ಮರುಕವು ಹೊರದೋರಿದ್ದಿತು. ಬೇಕ-ಬೇಡದ ಈ ಮರುಕಕ್ಕೆ ಸಿಗ್ಗಿ ಸೀತೆಯು " ಏನೋ ಕಷ್ಟದ ಬಾಳನ್ನು ನೆನಸಿಕೊಂಡು ಅಳುತ್ತೇನಮ್ಮ" ಎಂದು ನೀರಸ ಧ್ವನಿಯಿಂದ ಉತ್ತರಹೇಳಿದಳು.

ಮಾತಿನ ಸಂಗಡಲೇ ದುಃಖವು ಉಕ್ಕಿಬಂದಿತು. ಸೀತೆಯು ಮತ್ತೆ ಕಣ್ಣೀರು ಸುರಿಸಲಾರಂಭಿಸಿದಳು. ಅವಳ ಅವನತಮುಖವನ್ನು ನೋಡುತ್ತ ಗೌರಮ್ಮನಿಗೂ ದುಃಖವು ಹತ್ತಿಬಂದಿತು. ಹುಡುಗಿ ಚಿಕ್ಕವಳುವರೂ ಕಷ್ಟವು ಮಿತಿಮೀರುವಷ್ಟಾಗಿರಬೇಕು; ಇಲ್ಲದಿದ್ದರೆ ಇಷ್ಟು ಕೊರಗು ಉಂಟಾಗದು ಎಂದು ನಿರ್ಧರಪಡಿಸಿಕೊಂಡು ಗೌರಮ್ಮನು "ಅಮ್ಮಾ ಹೆಂಗಸರ ಹಣೇಬರಹವೇ ಹೀಗಾಯಿತು. ದೇವರು ನಮ್ಮನ್ನು ಯಾಕೆ ಸೃಷ್ಟಿಸಿದನೋ......ಅಳಬೇಡ, ಸುಮ್ಮನಿರಮ್ಮಾ" ಎಂದಳು. ಹೇಗಾದರೂ ಮಾಡಿ ಆ ಹುಡುಗಿಗೆ ದುಃಖವನ್ನು ಮರೆಯಿಸುವದಲ್ಲದೆ ಅವಳ ಸ್ಥಿತಿಯನ್ನು ಬಾಯಿಂದ ಹೊರಡಿಸಿ ತಿಳಿದು ಕೊಳ್ಳಬೇಕೆಂಬುದು ಅವಳ ಮನೋಗತ.

ಈ ಮನೋಗತವು ಫಲಿಸಿತು. "ಹೆಂಗಸರ ಹಣೆಯ ಬರಹವೇ ಹೀಗಾಯಿತು" ಎಂದು ಆಕೆಯು ಹೇಳಿದುದು ಹುಡುಗಿಯ ಸಿಟ್ಟನ್ನು ಕೆಣಕಿತು. ಹುಡುಗಿಯು ಅಳುವನ್ನು ಬಿಟ್ಟು ಕತ್ತೆತ್ತಿ ನೋಡಿ ಕಣ್ಣನ್ನು ಒರಸಿಕೊಳ್ಳುತ್ತ " ಎಲ್ಲಾ ಹೆಂಗಸರ ಹಣೆಯಬರಹವೂ ಏಕೆ ಹಾಗಾದೀತು. ಸುಖವಾಗಿರುವವರು ಸುಖವಾಗಿಯೇ ಇರುತ್ತಾರೆ. ಅಂಥವರು ಇತರರ ಮೇಲೆ ದರ್ಪತೋರಿಸಿ ಹಿಂಸೆಮಾಡುವುದನ್ನೂ ಬಲ್ಲರು. ಎಲ್ಲಿ ಹೋದರೂ ಒಂದುಮನೆಯಲ್ಲಿ ಹುಟ್ಟಿ ಇನ್ನೊಂದು ಮನೆಯನ್ನು ಸೇರಿ ಪರಾಧೀನವಾಗುವ ಪರದೇಶಿಗಳೇ ಕಾಸಿಗೆ ಬೇಡದ ಕಸ" ಎಂದಳು.

ಹುಡುಗಿಯು ಇಷ್ಟು ಹೇಳಿ ಶೂನ್ಯದೃಷ್ಟಿಯಿಂದ ಮುಂಭಾಗವನ್ನು ನೋಡುತ್ತ ಕುಳಿತಳು.

ಗೌರಮ್ಮನು ಅವಳ ಮಾತಿನ ಗೂಢಾರ್ಥವನ್ನೂ ಅವಳಿದ್ದ ಸಂಸಾರದ ಸ್ಥಿತಿಯನ್ನೂ ಒಂದುಕ್ಷಣದಲ್ಲಿ ಊಹಿಸಿದಳು.

ಜಾತಿಯ ಮತ್ತು ಸ್ಥಿತಿಯ ಸಾಧರ್ಮ್ಯದಿಂದ ಸ್ತ್ರೀಯರಿಗೆಲ್ಲೂಹಾ ಶಕ್ತಿಯೂ ಅನುಕಂಪನವೂ ಹೆಚ್ಚು.

“ನಿಮ್ಮ ಅತ್ತೆ ಅಷ್ಟು ಹಿಂಸೆಮಾಡುತ್ತಾರೇನಮ್ಮ?” ಎಂದು ಅವಳು ಪ್ರಶ್ನೆಮಾಡಿದಳು

ಹಿಂಸೆ ಅತ್ತೆಯದೆಂದು ಸರಿಯಾಗಿ ಊಹಿಸಿದುದನ್ನುಕಂಡು ಹುಡುಗಿಯು ಕಥನಶೀಲಳಾಗುತ್ತ ಬಂದಳು. ತನ್ನೆದುರಿಗೆ ನಿಂತು ತನ್ನನ್ನು ಮಾತನಾಡಿಸುತ್ತಿದ್ದವಳು ಕುಚೋದ್ಯಗಾತಿಯ ಲ್ಲವೆಂಬುದು ದೃಢವಾಗಿ ಅವಳಿಗೆ ನಂಬಿಕೆಯು ಬೆಳೆಯಿತು. ಆಗ ಅವಳು “ಅಯ್ಯೋ ಆ ಹಿಂಸೆಯನ್ನು ಎಷ್ಟೆಂದು ಹೇಳಲಿ. ಕಂಡರೆ ಎಲ್ಲೂ ಹಿಡಿಯದ ತಿರಸ್ಕಾರ; ಆದರೆ ಎಲ್ಲರೆದುರಿಗೆ ಮಾತ್ರ ಮರ್ಯಾದೆ. ಆ ಚಿಲ್ಮಿಷ ಚಿದ್ವಿನ್ಯಗಳು ಯಾರಿಗೆ ಗೊತ್ತಾದೀತು. ಮನೆಯಲ್ಲಿ ದುಡಿಯುವವಳು ನಾನು. ನನಗೆ ಚಾಕರಿಮಾತ್ರವೇ ಲಭ್ಯ.

“ಮನೆಯಲ್ಲಿ ನೀನು ಮತ್ತು ನಿನ್ನ ಅತ್ತೆ—ಇಬ್ಬರ ಹೊರತು ಮತ್ತೆ ಯಾರೂ ಹೆಂಗಸರಿಲ್ಲವೊ?”

“ಇದಾರೆ, ಇಲ್ಲದೆ ಏನು. ಇಬ್ಬರು ಓರಗಿತ್ತಿಯರಿದ್ದಾರೆ. ಅವರಲ್ಲಿ ಎರಡನೆಯವರು ತೌರ್ಮನೆಗೆ ಹೋಗಿದ್ದಾರೆ. ಮೊದ ಲನೆಯವರು, ಅವರ ಯಜಮಾನರು, ನಾಲ್ಕು ಮಕ್ಕಳು- ಎಲ್ಲ ರೂ ನಮ್ಮ ಜೊತೆಯಲ್ಲಿಯೇ ಇದ್ದಾರಮ್ಮ.”

“ಸರಿ, ಸರಿ. ಹಿರಿಯ ಓರಗಿತ್ತಿಗೆ ತನ್ನ ಗಂಡ, ಮಕ್ಕಳು, ಸಂಸಾರ ಇವಿಷ್ಟೇ ಕೆಲಸ ಬೇಕಾದ ಹಾಗೆ ಆಗುತ್ತೆ. ಬಾಕಿಯ ಕೆಲಸ ಮಾಡಲು ಹೊತ್ತೇ ಇಲ್ಲ. ಅತ್ತೆ ವಯಸ್ಸಾದವಳು— ಕೈಲಾಗದು. ಆದ್ದರಿಂದ ವಸ್ತುತಃ ಮನೆಯ ಯಜಮಾನಿ ನೀನೇ. ಕೆಲಸ ಹೆಚ್ಚು......ಹಾಗೆ ತಾನೇ?”

“ಸಾಕು. ಆ ಯಜಮಾನಿಕೆ—ಅಡಿಗೆಯ ಕೆಲಸಕ್ಕೆಲ್ಲಾ ಅತ್ತೆ— ಹಸಿಯದು ಹುರಿದದ್ದು ಬೆಂದದ್ದು ಬೇಯದೆ ಇದ್ದದ್ದು ಎಲ್ಲ ವನ್ನೂ ಅಡಿಗೆಯ ಮನೆಯಲ್ಲೇ ಕೂತು ಬಾಯಿಗೆ ಹಾಕಿಕೊಳ್ಳ ಬಹುದಷ್ಟೆ. ದನದ ಕೆಲಸಕ್ಕೆ ಕೈಹಾಕಿ ಗೊಬ್ಬರವನ್ನೂ ಸಗ ಣಿಯನ್ನೂ ಮುಟ್ಟಿದರೆ ಓರಗಿತ್ತಿಗೆ ತಲೆನೋವು ಕಣ್ಣುಉರಿ ಎಲ್ಲಾ ಬರುತ್ತದಂತೆ. ಆದ್ದರಿಂದ ಹೊರಗಿನ ಕೆಲಸ, ಕಾಫಿ ತಿಂಡಿ—ಇದೆಲ್ಲ ಅಕ್ಕನವರದ್ದು. ಇಷ್ಟೇ ನನಗೆ ನಡೆಯುವ ಉಪಚಾರ.”

“ಈ ಒಳಗುಟ್ಟೆಲ್ಲಾ ನಿನ್ನ ಮಾವನವರಿಗೆ ಗೊತ್ತಿಲ್ಲವೋ?”

“ಗೊತ್ತಿಲ್ಲದೆ ಏನು? ನಮ್ಮ ಅತ್ತೆ, ಪಾಪ, ಎಷ್ಟು ಉಪಕಾ ರಷ್ಟೆ—ಮಾವನವರಿಗೆ ಇದನ್ನೆಲ್ಲಾ ತಪ್ಪದೆ ತಿಳಿಸುತ್ತಾರೆ. ಮನೆ ಯಲ್ಲಿ ಅಡಿಗೆಗೆ ಕಾಯಿ ಒಡೆದರೆ ಅದು ಮೂರನೆಯ ದಿನದ ಹೊತ್ತಿಗೆ ಅರಿವು ಹತ್ತದಂತೆಯೇ ಕಡಿಮೆಯಾಗಿದೆಯೆಂದು ಅವ ರಿಗೆ ತೋರಿಸುತ್ತಾರೆ. ತಾವು ಹಲ್ಲಿಲ್ಲದ ಮುದುಕಿ, ಕಾಯಿ ಕಹಿಯಾಗಿದೆಯೋ ಸಿಹಿಯಾಗಿದೆಯೋ ಕಂಡವರಲ್ಲ. ಓರಗಿ ತ್ತಿಯೂ ಓರಗಿತ್ತಿಯ ಮಕ್ಕಳೂ ಅಡಿಗೆಯ ಮನೆಯಲ್ಲ ಬೆಳ ಕಿದೆಯೋ ಕತ್ತಲೆಯೋ ಬಲ್ಲವರಲ್ಲ. ಮಾವನವರು ಕಾಯನ್ನು ಬೆಕ್ಕು ತಿಂದಿತೇನೋ ಎನ್ನುತ್ತಾರೆ—ಆದರೆ ನೆಲುವಿನ ಮೇಲಿರುವ ಕಾಯಿಗೂ ಬಡುವಿನ ಮೇಲಿರುವ ಬೆಲ್ಲಕ್ಕೂ ಬೆಕ್ಕು ಹೇಗೆ ಬರ ಬೇಕು? ಇದೇ ರೀತಿಯಲ್ಲಿ ಮನೆಯ ತಿಂಡಿ, ಮೊಸರು ಬೆಣ್ಣೆ- ಎಲ್ಲಾ ಮಾಯವಾಗುತ್ತೆ. ಪಾಪ, ಮಾವನವರಿಗೆ ಅದುವುದ ಕ್ಕಿಲ್ಲ, ಬಿಡುವುದಕ್ಕಿಲ್ಲ. ದನದ ಕೆಲಸ, ಸಗಣಿ ತಟ್ಟುವುದು ತಪ್ಪಲೆದೊಳೆಯುವುದು ಇದಕ್ಕೆಲ್ಲಾ ಆಳಿಟ್ಟರೆ ಅವನಿಗೆ ದುಡ್ಡು ಕೊಡಬೇಕಾಗುತ್ತದೆ, ಅನ್ನ ಸುರಿಯಬೇಕಾಗುತ್ತದೆ—ಮಾವನ ವರಿಗೆ ಎಲ್ಲವೂ ಗೊತ್ತಿದೆ. ತಕ್ಕಡಿಯ ಎರಡು ತಟ್ಟೆಗಳಲ್ಲಿಯೂ ತೂಕವು ಸಮವಾಗಿದೆಯೆಂದು ಭಾವಿಸಿಕೊಂಡು ಸುಮ್ಮನೆ ಇದಾರೆ. ಅಷ್ಟೇ ಒಳಗುಟ್ಟು.”

ಹುಡುಗಿಯು ತನ್ನ ಮಾತನ್ನು ನಿಲ್ಲಿಸಿ ಒಂದಾವೃತ್ತಿ ನಿಟ್ಟು ಸುರು ಹುಯ್ದಳು. ದುಃಖವು ಹೃದಯಮರ್ಮವನ್ನು ಭೇದಿಸಿ ಬರುವಂತಾಯಿತು. ಅವಳಿಗೆ ತನ್ನ ಬಾಳು ಸ್ಮರಣೆಗೆ ಬಂದಿತು. ಸಾವಿರ ವಿಷಯಗಳು ಮನಸ್ಸಿನಲ್ಲಿ ಸೂಸಿಬಂದುವು. ಅತ್ತೆಯ ಹಿಂಸೆವಿರದಿದ್ದ ವಿಷಯವೇ ಕಾಣಲಿಲ್ಲ. ಕಹಿಯಾದ ಔಷಧಿ ಯನ್ನೂ ಕುಡಿದು ಬಳಿಕ ಅದರ ರುಚಿಯನ್ನು ಸ್ಮರಿಸಿಕೊಂಡರೆ ಹೇಗೋ ಹಾಗೆ ಅವಳಿಗೆ ಶರೀರದ ದ್ಯಂತವೂ ಜುಂ ಎಂದಿತು.

ಇದು ವರೆಗೂ ಮಾತಿನಲ್ಲಿ ಮರೆತು ನಿಂತೇ ಇದ್ದ ಗೌರ ಮ್ಮನು ಮೇಲಿನ ಮೆಟ್ಟಿಲ ಮೇಲೆ ಕುಳಿತುಕೊಂಡಳು. ಅವಳ ನೋಟವು ತನ್ನ ಬಳಿಯಲ್ಲಿ ಕೂತು ಚಿಂತಿಸುತ್ತಿದ್ದ ಆ ಹುಡುಗಿಯ ಮೇಲೆ ಬಿದ್ದಿತು. ಸುಂದರವಾದ ಅವಳ ಮುಖವು ಚಿಂತೆಯ ದೆಸೆಯಿಂದ ನಿಶ್ಚಲಭಾವವನ್ನು ತಳೆದು ಪ್ರತಿಮೆಯ ಮುಖದಂತಿದ್ದಿತು. ಮರಿಯಲ್ಲಿಯೂ ಮಣ್ಣಿನಲ್ಲಿಯೂ ಸಗ ಣಿಯಲ್ಲಿಯೂ ಹೊರಳಿದ್ದರೂ ಕೂಡ ಅವಳ ಕೈಗಳ ಹೊಂಬ

ಣ್ಣವು ಮಾಸಿರಲಿಲ್ಲ. ಇವಳು ಯಾರೋ ಕುಲಸ್ಥರ ಮಗಳಿರ ಬೇಕೆಂದು ಗೌರಮ್ಮನಿಗೆ ತೋರಿತು. ಅಂಥವಳು ಹೀನಸ್ಥಿತಿ ಗೀಡಾಗುವುದನ್ನು ನೋಡಿ ಕೊರಗಿದಳು. ಆ ಚೆಲುವೆಯನ್ನು ಮದುವೆಯಾದವನು ಬಹು ಭಾಗ್ಯವಂತನಿರಬೇಕು – ಓಹೋ ಗೌರಮ್ಮನಿಗೆ ಥಟ್ಟನೆ ಜ್ಞಾಪಕಕ್ಕೆ ಬಂದಿತು. ಇದಿಷ್ಟೂ ಕಥೆಯು ಮನೆಯಲ್ಲಿ ನಡೆಯುತ್ತಿರುವಾಗ ಆ ಹುಡುಗಿಯ ಗಂಡ ನೇನು ಮಾಡುತ್ತಿದ್ದನು ? ಅದನ್ನು ತಿಳಿಯಬೇಕೆಂಬ ಕುತೂಹ ಲದಿಂದ ಅವಳು ಪ್ರಶ್ನೆಮಾಡಿದಳು.

“ಇದೆಲ್ಲಾ ನಿಮ್ಮ ಯಜಮಾನರಿಗೆ ಗೊತ್ತಿಲ್ಲವೊ ? ”

“ಇಲ್ಲವಮ್ಮಾ, ಪ್ರಾಯಶಃ ಗೊತ್ತಾಗುವುದೂ ಇಲ್ಲ. ಕಷ್ಟವನ್ನು ಅನುಭವಿಸುವವರು ಮಾತ್ರವೇ ಬಲ್ಲರು. ಇದಲ್ಲದೆ, ಇತರರಿಗೆ ನಾನು ಕಷ್ಟಪಡುತ್ತಿದೇನೆಂಬುದು ಕಾಣುವದಿಲ್ಲವಮ್ಮ. ”

“ನೀನು ಇದು ವರೆಗೂ ಒಂದು ಮಾತು ಹೇಳಿಲ್ಲವೆ; ಹೇಳದೆ ಉಂಟೆ ? ಮನೆಯ ಹಿಂಸೆ ನಿಮ್ಮವರಿಗೆ ತಿಳಿದಿದ್ದರೆ ಬೇರೆ ಏನಾ ದರೂ ಏರ್ಪಾಡು ಮಾಡುತ್ತಿದ್ದರೋ ಏನೋ ? ”

“ಹೇಳುವುದಕ್ಕೆ ಮನಸ್ಸು ಬರಲಿಲ್ಲವಮ್ಮ. ಮೊದಲೇ ಕೆಲ ಸವಿಲ್ಲದೆ ಮನೆಯಲ್ಲಿ ಕೂತಿದ್ದಾರೆ. ಬಿ. ಏ. ಪ್ಯಾಸ ಮಾಡಿ ದರೂ ಒಂದು ಕೆಲಸ ಸಿಕ್ಕುವುದು ಕಷ್ಟವಾಗಿದೆ. ತಮ್ಮ ಜೀವ ವೇ ತಮಗೆ ಭಾರವಾಗಿರಬೇಕು. ಮನೆಗೆ ಬಂದರೆ ಮುಖ ಮಂಕ ಲ್ಲದೆ ಕಳೆಯೆಂಬುದನ್ನು ಅರಿಯರು. ಇದರ ಮೇಲೆ ನಮ್ಮ ಅತ್ತೆಯವರೋ ದಿನಕ್ಕೆ ನಲವತ್ತು ಸಾರಿ, ಸಂಪಾದಿಸು ವವರು ಒಬ್ಬರು; ತಿನ್ನುವವರು ಹತ್ತುಜನ, ಎಂದು ಅನ್ನು ತ್ತಾರೆ. ಕೈಕಾಲಿನ ಶಕ್ತಿಯು ಉಡುಗಿದರೂ ಅವರ ಯಜಮಾ ನರು ತಮ್ಮ ಪಾಡಿಗೆ ತಾವು ರಾಮ, ಕೃಷ್ಣ ಎಂದುಕೊಂಡಿರದೆ ಎಲ್ಲರಿಗೂ ದುಡಿಯಬೇಕಾಗಿದೆಯಂತೆ. ಹೀಗೆ ಹೇಳುತ್ತಿದ್ದರೆ ತಿನ್ನುವುದು ಅನ್ನವಾಗುವದಿಲ್ಲ, ವಿಷವಾಗುತ್ತೆ. ಮನೆಯಲ್ಲಿ ಎಲೆಯ ಮುಂದೆ ಊಟವೇ ಮಾಡುವುದಿಲ್ಲ. ಹೀಗಿರುವಾಗ ನನ್ನ ಪುರಾಣವನ್ನೂ ಅವರಿಗೆ ಹೇಳಿ ಇನ್ನಷ್ಟು ಕಹಿ ಬೆರಸಲೆ?”

“ಏಕೆ ನಿಮ್ಮ ಭಾವನವರು ಕೆಲಸದಲ್ಲಿದ್ದುಕೊಂಡು ಸಂಪಾ ದಿಸುತ್ತಿಲ್ಲವೇ ?”

“ಸಂಪಾದಿಸುತ್ತಿದ್ದಾರೆ. ಆದರೆ ಅದು ಹೆಂಡತಿ ಮಕ್ಕಳ ಬಟ್ಟೆ, ತಿಂಡಿ, ಉಪಚಾರ ಮೊದಲಾದವುಗಳಿಗೆ ವಿನಿಯೋಗವಾಗುತ್ತದೆ.

“ಸರಿ, ಅರ್ಥವಾಯಿತು. ಆದ್ದರಿಂದ ನಿಮ್ಮ ಮಾವ ಅತ್ತೆಗೆ ಅವರ ಕಡೆಯಿಂದ ಹೊರೆಯಾವುದೂ ಇಲ್ಲ. ಎಲ್ಲಿ ಹೋದರೂ ನೀನು ಮತ್ತು ನಿಮ್ಮ ಯಜಮಾನರು. ನಿಮ್ಮಿಬ್ಬರಲ್ಲಿ ನಿನ್ನ ಯಜಮಾನರು ಮನೆಯ ಮಗ; ಹೆತ್ತವರಿಗೆ ಮಕ್ಕಳು ಎಂದಿಗೂ ಹೊರೆಯಲ್ಲ. ತಾವು ತಿನ್ನುವ ತುತ್ತಿನಲ್ಲಿಯಾದರೂ ಅರ್ಧವನ್ನು ಮಿಗಿಸಿ ಅವರು ಮಕ್ಕಳಿಗೆ ಕೊಡುತ್ತಾರೆ. ಇನ್ನು ಉಳಿದವಳು ನೀನು. ನಿನಗೆ ಅನ್ನ ಹಾಕುವುದು ಹೆಚ್ಚು. ಅದರ ದೆಸೆಯಿಂ ದಲೇ ಅವರು ಸಂಪಾದನೆ ಮಾಡಿದುದೆಲ್ಲಾ ವ್ಯರ್ಥವಾಗುತ್ತಿದೆ- ಅಷ್ಟೇ. ”

ಅತ್ತೆಯವರ ಮಾತಿನಲ್ಲಿ ಈ ಅಭಿಪ್ರಾಯವು ಸೊಸೆಗೆ ಬಹು ಹಿಂದೆಯೇ ಗೊತ್ತಾಗಿದ್ದಿತು ಅವರೊಳಗೂ ಆ ಮಾತುಗಳನ್ನು ಹೇಳುವಾಗಲೆಲ್ಲಾ ಸೊಸೆಯು ಕಡೆಗೆ ತಿರುಗಿ ಸ್ಥಿರದೃಷ್ಟಿಯಿಂದ ನೋಡುತ್ತ ಹೇಳಿದರೆ ಯಾರಿಗೆ ತಾನೇ ಅರ್ಥವಾಗದು ? ಈ ಗೂಢಾರ್ಥವನ್ನು ಗಂಡನಿಗೆ ವಿವರಿಸಿ ಹೇಳಬೇಕೆಂದು ಎಷ್ಟೋ ಸಾರಿ ಮನಸ್ಸಿನಲ್ಲಿ ಮಾಡಿಕೊಂಡರೂ ಹುಡುಗಿಯು ಗಂಡನು ಒಂದು ವೇಳೆ ನಂಬದೇ ಹೋದರೆ ಅವರ ಮನಸ್ಸು ಕೆಟ್ಟೀತೆಂದು ಹೆದರಿ ಬಾಯಿಬಿಡದೆ ಅತ್ತೆಯ ಮಾತುಗಳನ್ನು ನುಂಗಿ ಸುಮ್ಮ ನಿದ್ದಳು. ಆದರೆ ಈಗ, Telepathy ಯ ಮಹಿಮೆಯಿಂ ದಲೋ ಎಂಬಂತೆ ಎದುರಿಗೆ ಕುಳಿತಿದ್ದಾಕೆಯು ತನ್ನ ಅಂತರಂಗ ಸರಿಯಾಗಿ ಊಹಿಸಿದುದರಿಂದ ತಾನು ತಪ್ಪುತಿಳಿದುಕೊಂಡಿರ ಲಿಲ್ಲವೆಂಬುದು ಅರಿವಾದುದಕ್ಕಾಗಿಯೂ ಆಕೆಯು ಆ ಊಹೆಯ ಮೂಲಕ ತನ್ನ ಕಷ್ಟದ ಸ್ಥಿತಿಯನ್ನರಿತು ಮರುಕವನ್ನು ತೋರಿದುದಕ್ಕಾಗಿಯೂ ಹುಡುಗಿಗೆ ಬಹುಮಟ್ಟಿಗೆ ಸಮಾಧಾನ ವಾಯಿತು. ದುಃಖವು ಸ್ವಲ್ಪವೇ ಸ್ವಲ್ಪ ಮರೆಯಾಗಿ ಅದರ ಸ್ಥಾನದಲ್ಲಿ ಮಂದಹಾಸವು ತಲೆದೋರಿತು.

“ಹೌದಮ್ಮ, ನೀನು ವಿವೇಚನಶಾಲಿ. ನಿಮ್ಮ ಅತ್ತೆಯ ಚರ್ಯೆಯನ್ನು ಗಂಡನಿಗೆ ಹೇಳದೆ ಇದ್ದದ್ದೇ ಸರಿಯಾಯಿತು. ಮೊದಲೇ ಕೊರಗುತ್ತಿರುವ ಅವರ ಕೊರಗನ್ನು ಇನ್ನೂ ಯಾಕೆ ಹೆಚ್ಚಿಸಬೇಕು?..... ನೀನು ಸ್ವಲ್ಪ ಕಾಲದ ವರೆಗೆ ತಂದೆಯ ಮನೆಗೇಕೆ ಹೋಗಿರಬಾರದು— ನಿನ್ನ ಗಂಡನಿಗೆ ಎಲ್ಲಿಯಾ ದರೂ ಕೆಲಸವಾಗುವ ವರೆಗೆ ?”

“ ತಂದೆಯ ಮನೆಯಲ್ಲಿ ನನ್ನನ್ನು ಪುರಸ್ಕರಿಸುವವರು ಯಾರು ? ತಾಯಿ ಇಲ್ಲ, ತಂದೆಗೆ ಕಣ್ಣು ಕಾಣದು. ಮಲ

ತಾಯಿ ತನ್ನ ಸಂಸಾರವನ್ನು ನೋಡಿಕೊಂಡರೇ ಸಾಕಾಗಿದೆ. ನಾನು ತಂದೆಯ ಮನೆಗೆ ಹೊರಗಿನವಳಾಗಿ ಹೋದೆನು. ಆದರೆ ಇನ್ನೊಂದು ಮನೆಯಿದೆ—ಅಲ್ಲಿ ತಂದೆತಾಯಿ, ಬಂಧುಬಳಗ— ಎಲ್ಲರೂ ಇದ್ದಾರೆ. ಆ ಗಂಗಾದೇವಿಯ ಮನೆಯನ್ನು ಹೊಕ್ಕ ಮೇಲೆ ಹಿಂದಿರುಗಿ ಬರುವ ಹಾಗಿಲ್ಲ, ಆ ಮೇಲೆ ಅತ್ತೆಯೂ ಅತ್ತಿಗೆಯೂ ಖರ್ಚಿಲ್ಲದ ಹಾಗೆ ಸುಖವಾಗಿರಬಹುದು."

"ನೀನು ಹೇಳುವುದು ಅರ್ಥವಾಗಲಿಲ್ಲ. ಗಂಗಾದೇವಿಯ ಮನೆಯೆಂದರೆ ಕೊಳವನ್ನು ಬೀಳುವೆನೆಂತಲೆ? ಆತ್ಮಹತ್ಯೆ ಮಾಡಿ ಕೊಳ್ಳುವೆಯಾ?"

"ಈ ಸ್ಥಿತಿಯಲ್ಲಿ ಅದು ಸರ್ವೋತ್ತಮವಾದ ಉಪಾಯ. ಈ ಹೊತ್ತು ಕೊಳದೊಳಕ್ಕೆ ಬೀಳೋಣವೆಂತಲೇ ಬಂದಿದೇನೆ. ಮನೆಯಲ್ಲಿ ಕುಡಿಯುವ ನೀರಿಲ್ಲದೆ ಇರಲಿಲ್ಲ. ಆದರೂ ನೆವ ಮಾಡಿಕೊಂಡು ಬಂದೆ...ಇನ್ನು ಮೇಲೆ ಕಷ್ಟವಿರುವುದಿಲ್ಲ."

"ನೀನು ಜಾಣೆಯೆಂದಿದ್ದರೆ ಇದೆ ನೀನು ಮಾಡುವ ಕೆಲಸ!" ಎಂದು ಹೇಳುತ್ತ ಗೌರಮ್ಮನು ಹುಡುಗಿಯ ಕೈಯನ್ನು ಹಿಡಿದುಕೊಂಡಳು. ಅವಳು ನಿಜವಾಗಿ ಪ್ರಾಣವನ್ನು ನೀಗಿಕೊಂಡು ಬಿಡುವಳೆಂದು ಹೆದರಿ ಅವಳನ್ನು ತಪ್ಪಿಸುವುದಕ್ಕಲ್ಲ. ಹುಡುಗಿಯು ತನ್ನ ಕಣ್ಣೆದುರಿನಲ್ಲಿಯೇ ಹಾಗೆ ಮಾಡುವಳೆಂಬ ಯೋಚನೆಯೇನೂ ಅವಳಿಗಿರಲಿಲ್ಲ. ಕೇವಲ ಅನುಕಂಪನಾವಿರ್ಭಾವದಿಂದ.

"ಜಾಣೆಯೋ ಪೆದ್ದಿಯೋ ಯಾವುದಾದರೇನು. ಈ ಕಷ್ಟದ ಬಾಳನ್ನು ಬದುಕಿ ಫಲವೇನು? ಪ್ರಾಣನಿವೃತ್ತಿಯಾದರೆ ಅನೇಕರಿಗೆ ಸಮಾಧಾನ."

"ಬೇಡಮ್ಮಾ, ಹಾಗೆಲ್ಲಾ ಮಾಡಬಾರದು. ನೀನು ಇನ್ನೂ ಚಿಕ್ಕವಳು. ಸ್ವಲ್ಪ ದಿವಸದ ಸಂಕಟಕ್ಕೆ ಹೆದರಿ ಇಂತಹ ಅವಿವೇಕವನ್ನು ಎಂದಿಗೂ ನಡಿಸಬಾರದು."

"ನಿಮಗೆ ಹಾಗೆ ಹೇಳುವುದು ಸುಲಭ. ಆದರೆ ನನ್ನ ಈ ಸ್ಥಿತಿಯಲ್ಲಿ ನೀವೇ ಇದ್ದಿದ್ದರೆ ಏನು ಮಾಡುತ್ತಿದ್ದಿರಿ?"

"ನಾನು—ಸಹಿಸಿಕೊಳ್ಳುತ್ತಿದ್ದೆ—ಈ ಹೊತ್ತಿನ ಕಷ್ಟ ನಾಳೆ ಇರುವುದಿಲ್ಲವೆಂದು ಧೈರ್ಯ ಹೇಳಿಕೊಳ್ಳುತ್ತಿದ್ದೆ......ಪ್ರಾಣಹತ್ಯ ಮಾಡಿಕೊಳ್ಳುವುದು ಮಹಾಪಾಪವೆಂದು ದೊಡ್ಡವರು ಹೇಳುವುದನ್ನು ಕೇಳಿಲ್ಲವೆ?"

"ಕೇಳಿದ್ದೇನೆ"

"ಹಾಗೆ ದುರ್ಮರಣದಿಂದ ಸತ್ತವರು ಸ್ವರ್ಗವನ್ನು ಸೇರದೆ ಅಂತರಪಿಶಾಚಿಗಳಾಗಿ ತಿರುಗುತ್ತಾರಂತೆ. ಅವರು ಬಿಸಿಲು ಮಳೆ ನೋಡದಂತೆ ಅಲೆಯಬೇಕಾಗುತ್ತಂತೆ. ಆಹಾರವಾಗಲೀ ನೀರಾಗಲೀ ಕಾಣುವುದಿಲ್ಲವಂತೆ. ಇಂಥ ಅವಸ್ಥೆಗೀಡಾಗುವುದು ಯುಕ್ತವೆ?"

ಹುಡುಗಿಯು ನಕ್ಕಳು. ನಗುತ್ತ "ಯುಕ್ತವಲ್ಲದೆ ಇದ್ದರೂ ಬಹು ಜಾಣತನದ ಕೆಲಸವೇ ಆಗುತ್ತೆ. ಆ ಮೇಲೆ ಪಿಶಾಚಿಯಾಗಿ ಬಂದು ಆ ಅತ್ತೆಯನ್ನು ಕಾಡಬಹುದು." ಎಂದಳು

ಈ ಉತ್ತರವನ್ನು ಕೇಳಿ ಗೌರಮ್ಮನಿಗೂ ಸ್ವಲ್ಪ ನಗು ಬಂದಿತು. ಆದರೆ ಅದನ್ನು ನುಂಗಿ ಅಸಮಾಧಾನವೆದ್ದಿತು. "ಅದೀಗ ಒಳ್ಳೆಯ ಕೆಲಸ. ಅತ್ತೆಯ ಮೇಲಿನ ಕೋಪಕ್ಕೆ ಅವಳನ್ನು ಹಿಂಸೆ ಮಾಡಲಾರಂಭಿಸಿದರೆ ನಿನ್ನ ಗಂಡನು ಏನೆಂದು ಕೊಂಡಾರು? ಅವರೆದುರಿಗೆ ಪಿಶಾಚಿಯಾಗಿ ನಿಲ್ಲುವೆಯಾ!"

ಓಹೋ! ಈ ಯೋಚನೆಯು ಹುಡುಗಿಯ ಮನಸ್ಸಿಗೆ ಹೊಳೆದೇ ಇರಲಿಲ್ಲ. ಅವಳ ಮುಖದಲ್ಲಿ ಆ ವಿಸ್ಮಯವು ಪ್ರಕಟವಾಯಿತು. ಪತಿಗೋಸ್ಕರವೇ ಎಲ್ಲವನ್ನೂ ಸಹಿಸಿಕೊಂಡು, ಪತಿಗೋಸ್ಕರವೇ ಇನ್ನು ಎಷ್ಟು ಕಷ್ಟವನ್ನಾದರೂ ಸಹಿಸಲು ಸಿದ್ಧಳಾಗಿದ್ದ ತಾನು ಈಗ ಅತ್ತೆಯನ್ನು ಹಿಂಸಿಸುತ್ತ ಪತಿಯ ಎದುರಿಗೆ ನಿಲ್ಲುವುದು ಹೇಗೆ? ಆಗ್ಗೆ ತನ್ನ ಗುಣವಂತಹದಾದೀತು:—ಪಿಶಾಚ ಸ್ವಭಾವವೇ ಆಗುವುದಲ್ಲ! ಅದು ಘೋರ ಕೃತ್ಯವೆನ್ನಿಸಿತು. ಅದನ್ನು ನಡೆಯಿಸುವುದಿರಲಿ, ಚಿಂತಿಸುವುದೂ ಕೂಡ ಪಾಪವನ್ನುಂಟುಮಾಡುವುದು. ಪತಿಯನ್ನು ಸುಖದಿಂದಿಡುವುದಕ್ಕೆ ಬದಲಾಗಿ ದುಃಖವನ್ನುಂಟುಮಾಡುವುದು ಎಂದಿಗೂ ಕೂಡದು. ಅವನನ್ನು ಸ್ಮರಿಸಿಕೊಂಡು ಕೊರಗುತ್ತ ತನ್ನ ಸಂಕಲ್ಪವನ್ನು ಸ್ಮರಿಸಿಕೊಂಡು ತನ್ನಲ್ಲಿ ತನಗೆ ತಿರಸ್ಕಾರವೂ ಅವಳಿಗೆ ಉಂಟಾದುವು.

ಗೌರಮ್ಮನು ಈ ನಡುವೆ ಅವಳ ಮುಖವನ್ನೇ ನೋಡುತ್ತಿದ್ದಳು. ಹುಡುಗಿಯ ಅಂತರಂಗದಲ್ಲಿ ನಡೆಯುತ್ತಿದ್ದುದು ಗೋಚರವಾಯಿತು. ಅದನ್ನು ಅನುಸರಿಸಿ ಈ ರೀತಿ ಮಾತಿನಲ್ಲಿ ಹೇಳಿದಳು. "ನೋಡು, ಪತಿಯನ್ನು ನಮಗೆ ದೇವರು ಕೊಟ್ಟಿದ್ದಾನೆ. ನಮಗೆ ಪತಿಗಿಂತ ಹೆಚ್ಚಿನ ದೈವವು ಯಾವುದು. ಪತಿಗೆ ಶುಶ್ರೂಷೆ ಮಾಡಿಕೊಂಡು ಸುಖಸಂತೋಷಗಳನ್ನುಂಟು

ಮಾಡಿದರೆ ನಮ್ಮ ಜನ್ಮವು ಸಾರ್ಥಕವಾಗುವುದು. ಅದು ನಮ್ಮ ಕರ್ತವ್ಯ. ಈ ವಿಷಯವೆಲ್ಲಾ ನಿನಗೂ ತಿಳಿಯದೇ ಇಲ್ಲ. ನೋಡು, ಹುಡುಗಿ; ಬಿ. ಎ., ಪಾಸು ಮಾಡಿದರೂ ಕೆಲಸವಿಲ್ಲದೆ ನಿರುದ್ಯೋಗಿಗಳಾಗಿರುವವರಿಂದ ಸದಾ ಕೊರಗುವರೆಂದು ನೀನೇ ಹೇಳಿದೆ. ಅಂತಹ ಪತಿಯನ್ನು ಸಮಾಧಾನಪಡಿಸುವವರು ನಿಮ್ಮ ಮನೆಯಲ್ಲಿ ಸದ್ಯದಲ್ಲಿ ನೀನಲ್ಲದೆ ಇನ್ನು ಯಾರೂ ಇಲ್ಲ. ನಿಮ್ಮ ಅತ್ತೆಯ ಕಾಡು ಹರಟೆಯ ದೆಸೆಯಿಂದ ಸಂತಾಪವು ಹೆಚ್ಚೀತಲ್ಲದೆ ಕಡಿಮೆಯಾಗುವುದಿಲ್ಲ. ಗಂಡಸರಿಗೆ ಇತರರ ಕೊರಗು ಮನಸ್ಸಿಗೆ ಅತಿಯಾಗಿ ಹಿಡಿಯುವುದಿಲ್ಲ. ಆದ್ದರಿಂದ ನೀನೇ ನಿನ್ನ ಪತಿಗೆ ಹತ್ತಿರದ ಹಿತಚಿಂತಕಳು. ಈ ಸಮಯದಲ್ಲಿ ನೀನು ಇಲ್ಲದೆ ಹೋದರೆ ಅವರ ಕೊರಗನ್ನು ಧೈರ್ಯದ ಮಾತಿನಿಂದಾಗಲೀ ಮರುಕದಿಂದಾಗಲೀ ಕಡಿಮೆ ಮಾಡುವವರು ಯಾರು? ಹೀಗಿರುವಾಗ ಪ್ರಾಣವನ್ನು ಕಳೆದುಕೊಂಡರೆ ಅವರಿಗೆ ಸಂತೋಷವನ್ನುಂಟುಮಾಡಿದಂತಾಯಿತೆ, ಧೈರ್ಯ ಹೇಳಿದಂತಾಯಿತೆ? ಅಥವಾ ಅವರ ಮರ್ಯಾದೆಯು ಉಳಿಯಿತೊ? ನಿನ್ನ ಆತ್ಮಹತ್ಯೆಯಿಂದ ಕೇಡು ಉಂಟಾಗುವುದು ಅವರೊಬ್ಬರಿಗೇ. ಈ ಹುಚ್ಚನ್ನು ನಿನಗೆ ಯಾರು ಕಲಿಸಿದರು?"

ಹುಡುಗಿಯು ಮಾತನಾಡಲಿಲ್ಲ. ಗೌರಮ್ಮನಾಡಿದುದನ್ನು ಕಿವಿಗೊಟ್ಟು ಕೇಳಿದಳು. ಆಕೆಯ ಪ್ರತಿಯೊಂದು ಮಾತೂ ಸತ್ಯವಾದುದೆಂದೂ ಯುಕ್ತವಾದುದೆಂದೂ ತೋರಿತು. ತನ್ನ ಸ್ವಂತ ದಡ್ಡತನದಿಂದ ಪತಿಯನ್ನು ಎಂದೆಂದಿಗೂ ಕಳೆದುಕೊಳ್ಳುತ್ತಿದ್ದೆನೆನ್ನಿಸಿತು. ಕೈಯಲ್ಲಿದ್ದ ಮಣಿಯನ್ನು ಅಜ್ಞಾನದಿಂದ ಆಚೆಗೆಸೆದಹಾಗಾಗುತ್ತಿದ್ದಿತು. ಅವಳು ಈಗ ಅತ್ತೆಯ ಹಿಂಸೆಗಾಗಿ ಕೊರಗಲಿಲ್ಲ—ತನ್ನ ಹ್ರಸ್ವಬುದ್ಧಿಗಾಗಿ ಕೊರಗಿದಳು.

"ಹೌದಮ್ಮ, ನಿಮ್ಮ ಮಾತನ್ನು ಒಪ್ಪಿದೆ. ನಾನು ಈದಿನ ಈ ಕೆಲಸ ಮಾಡಿದ್ದರೆ ಎಷ್ಟು ನೊಂದುಕೊಳ್ಳುತ್ತಿದ್ದರೊ!"

"ನೊಂದುಕೊಳ್ಳುವುದಿರಲಿ; ನೀನು ಸಂಜೆಯಾದರೂ ಬಾರದಿರುವುದನ್ನು ನೋಡಿ ಹುಡುಕಲಾರಂಭಿಸುತ್ತಿದ್ದರು. ಈ ದಿನ ರಾತ್ರಿ ಹೊಟ್ಟೆಗೆ ಅನ್ನವಿರುತ್ತಿರಲಿಲ್ಲ, ಕಣ್ಣಿಗೆ ನಿದ್ದೆ ಇರುತ್ತಿರಲಿಲ್ಲ. ನಾಳೆ, ಕೆಲಸವನ್ನು ಹುಡುಕುವುದಕ್ಕೆ ಬದಲಾಗಿ ನಿನ್ನನ್ನು ಹುಡುಕುತ್ತಿದ್ದರು."

ಗೌರಮ್ಮನಿಗೆ ಮಾತನಾಡುತ್ತ ಆಡುತ್ತ ಉತ್ಸಾಹವು ಹೆಚ್ಚಿತು. ಅಧೋಗತಿಯನ್ನು ಹೊಂದಲೆಳಸಿದ ಜೀವವನ್ನು ಉಳಿಸಿದುದಕ್ಕಾಗಿ ಅವಳಿಗೆ ಬಹುಮಟ್ಟಿಗೆ ಸಮಾಧಾನ. ಆತ್ಮಕ್ಕೆ ಒಂದು ವಿಧವಾದ ಸಂತೋಷ. ಆ ಹುಡುಗಿಗೆ ನಾಚಿಕೆಯು ಹೆಚ್ಚಿದಹಾಗೆ ಅವಳಿಗೆ ಸಂತೋಷವು ಹೆಚ್ಚಿತು. ಆದಿನ ತಾನು ಮಾಡಿದ ಪರೋಪಕಾರವನ್ನು ಸ್ಮರಿಸಿಕೊಳ್ಳುತ್ತ ಕುಳಿತಳು.

ಅಷ್ಟು ಹೊತ್ತಿಗೆ ಬಿಸಿಲು ತಂಪಿದ್ದಿತು. ತಂಗಾಳಿಯೂ ಹೆಚ್ಚಿನ ತಂಪಿನಿಂದ ಬೀಸುತ್ತ, ಆಹ್ಲಾದವನ್ನೂ ಕೊಳದ ನೀರಿನಲ್ಲಿ ಅಲ್ಲೋಲವನ್ನೂ ಉಂಟುಮಾಡುತ್ತಿದ್ದಿತು. ನೀರು ಅಲೆಯ ರೂಪದಲ್ಲಿ ತೇಲಿ ಬಂದು ಹುಡುಗಿಯ ಕಾಲ ಮೇಲೆ ಹರಿಯಿತು. ಅವಳು ಯೋಜನೆಯನ್ನು ಬಿಟ್ಟಿದ್ದ ಬಿಂದಿಗೆಯನ್ನು ತೊಳೆಯಲಾರಂಭಿಸಿದಳು. ಗೌರಮ್ಮನು ಮುಂದಕ್ಕೆದ್ದು ಬಂದು "ನಾನು ನೀರನ್ನು ತುಂಬಿಕೊಡುತ್ತೇನೆ. ನೀನು ಶ್ರಮಪಡಬೇಡ" ಎಂದು ಹೇಳುತ್ತ ಅವಳ ಬಿಂದಿಗೆಯನ್ನು ಕೈಗೆ ತೆಗೆದುಕೊಂಡಳು. ಅವಳನ್ನು ಆತಂಕಪಡಿಸದೆ ಸುಮ್ಮನಿದ್ದ ಹುಡುಗಿಯು ನಗುತ್ತ "ನೀರಿಗೆ ಬಗ್ಗಿದರೆ ಎಲ್ಲಿಯಾದರೂ ಧುಮುಕಿಬಿಟ್ಟಾಳೆಂದು ನಿಮಗೆ ಭಯವೆ? ಪತಿಯ ಸೇವೆಯನ್ನು ಮಾಡುವ ಭಾಗ್ಯವು ಇರುವವರೆಗೂ ನಾನು ಪ್ರಾಣವನ್ನು ಕಳೆದುಕೊಳ್ಳುವುದಿಲ್ಲ. ನೀವು ಈದಿನ ತೋರಿಸಿ ಕೊಟ್ಟ ಅವಕಾಶವನ್ನು ಇನ್ನು ಉಪೇಕ್ಷಿಸಿ ಬಿಡುವೆ! ಎಂದಿಗೂ ಇಲ್ಲ!" ಎಂದಳು.

ಗೌರಮ್ಮನು ನೀರು ತುಂಬುವುದನ್ನು ಅಷ್ಟಕ್ಕೇ ನಿಲ್ಲಿಸಿ ಬಿಂದಿಗೆಯನ್ನು ಮೆಟ್ಟಿಲ ಮೇಲಿಟ್ಟು, ಹುಡುಗಿಯ ಎರಡು ಕೈಗಳನ್ನೂ ಭದ್ರವಾಗಿ ಹಿಡಿದುಕೊಂಡು, "ಇನ್ನು ಮೇಲೆ ಈ ಯೋಜನೆಯನ್ನು ಮಾಡುವುದಿಲ್ಲವೆ, ಹೇಳು—ಮಾತುಕೊಡು!" ಎಂದು ಅಪೇಕ್ಷಿಸಿದಳು.

ಹುಡುಗಿಯು ಧಾರಾಳವಾಗಿ ಮಾತುಕೊಟ್ಟಳು.

"ದೇವರ ಆಣೆಗೂ?"

"ದೇವರ ಆಣೆಗೂ ಇನ್ನು ಮೇಲೆ ಇಂತಹ ಯೋಜನೆಯನ್ನು ಮಾಡುವುದಿಲ್ಲ."

ಗೌರಮ್ಮನಿಗೆ ಬಹಳ ಸಂತೋಷವಾಯಿತು. ಅವಳು ಕೈಯಿಂದ ನೀರನ್ನು ಕಲಕುತ್ತ ನಕ್ಕಳು.

ಇಬ್ಬರೂ ನೀರನ್ನು ತುಂಬಿಕೊಂಡರು.

"ಹೋಗೋಣ; ನೀರಿಗೆ ಬಂದು ಬಹಳ ಹೊತ್ತಾಯಿತು" ಎಂದು ಹುಡುಗಿಯು ಎಚ್ಚರಿಸಿದಳು.

"ಹೌದು; ಇಲ್ಲದಿದ್ದರೆ ಮನೆಯವರು ಕಳವಳ ಹೊಂದಿ ನಮ್ಮನ್ನು ಹುಡುಕುತ್ತ ಹೊರಟಾರು."

ಇಬ್ಬರೂ ಬಿಂದಿಗೆಯನ್ನು ತಲೆಯಮೇಲಿಟ್ಟುಕೊಂಡು ಮೆಟ್ಟಲನ್ನು ಹತ್ತಿದರು. ಏಳೆಂಟು ಮೆಟ್ಟಲುಗಳನ್ನು ಹತ್ತಿದ ಮೇಲೆ ಗೌರಮ್ಮನು ಬಿಂದಿಗೆ ಹೊತ್ತಿದ್ದ ಕತ್ತನ್ನು ಹಿಂದಿರುಗಿಸಿ ಕೊಳದ ಕಡೆ ನೋಡಿದಳು. ಹತ್ತು ಹನ್ನೆರಡು ಮಂದಿ ಹೆಂಗಸರು ಅವಳಂತೆಯೇ ಅಲ್ಲಿಗೆ ನೀರಿಗೋಸ್ಕರ ಬಂದು ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿದ್ದರು. ಆದರೆ ಅವರಲ್ಲಿ ಯಾರೊಬ್ಬರು ಆತ್ಮಹತ್ಯೆಯ ಯೋಚನೆಯಲ್ಲಿದ್ದಂತೆ ಕಾಣಲಿಲ್ಲ. ಅವಳು ಜೊತೆಯ ಹುಡುಗಿಯ ಕಡೆಗೆ ತಿರುಗಿ ಒಂದಾವೃತ್ತಿ ನ[illegible] ಸಿದು ಹುಯಿದು ಮನೆಯ ದಿಕ್ಕಿನಲ್ಲಿ ನಡೆದಳು.

ಸ್ವಲ್ಪದೂರ ಹೋದ ಮೇಲೆ ಹುಡುಗಿಯು "ನಮ್ಮ[illegible] ಆ ಬೀದಿಯಲ್ಲಿ—ನಾನು ಬಲಕ್ಕೆ ತಿರುಗುತ್ತೇನೆ" ಎಂದಳು.

"ಒಳ್ಳೆಯದು. ಆದರೆ ನಾನು ಹೇಳಿದುದು ಸದಾ ಜ್ಞಾ[illegible] ದಲ್ಲಿರಲಿ. ಈದಿನವಿದ್ದ ಕಷ್ಟ ನಾಳೆಯಿರದು. ದೇವರು ಸು[illegible] ವನ್ನೂ ಸೌಭಾಗ್ಯವನ್ನೂ ಕೊಟ್ಟೇ ಕೊಡುತ್ತಾನೆ......[illegible] ಯನ್ನು ಬಿಡಬೇಡ."

ಹುಡುಗಿಯು ಪುನರುಜ್ಜೀವನದ ಹರುಷದಿಂದ ನ[illegible] "ಇನ್ನು ಮರೆಯುವೆನೆ!" ಎಂದಳು.

---

# ಪಂಪನ ಕಾವ್ಯಗಳ ಮಹಿಮೆ

(ಕದೇ ಕಾರ್ತಿಕ ಶು. ೫ ಯಲ್ಲಿ ಪುಲಿಗೆರೆಯಲ್ಲಾದ ಪಂಪೋತ್ಸವಸಭೆಯಲ್ಲಿ ಓದಿದ ನಿಬಂಧದ ಕೆಲವು ಭಾಗ.)

ಲೇಖಕರು :— ವಿದ್ವಾನ್ ಪಾಠಶಾಲಾ ಶೇಷಗಿರಿರಾಯರು, ಬೆಂಗಳೂರು.

ಕನ್ನಡದಲ್ಲಿ ಶ್ರೇಷ್ಠವಾದ ಜೈನ ಕವಿತೆಯೆಲ್ಲ ಸಂಸ್ಕೃತದ ದೊಡ್ಡಸ್ತಿಕೆಗೆ ಸ್ವಲ್ಪವೂ ಭಯಪಡದೆ ಅದನ್ನು ಆತ್ಮಸಾತ್ತಾಗಿ ಮಾಡಿಕೊಂಡು ಸಾಗುವದು. ಅಥವಾ ಈಗಿನ ಕೆಲವು ಪಂಡಿತರು ತಮ್ಮ ಮಾತುಗಳಲ್ಲಿ ಆಂಗ್ಲವನ್ನು ನಿರ್ಭಯವಾಗಿ ಸೇರಿಸುವ ರೀತಿಯೂ ಅದಾಗಿರಬಹುದು. ಜೈನರ ಶಾಸ್ತ್ರ ಗ್ರಂಥಗಳೆಲ್ಲ ಸಂಸ್ಕೃತದಲ್ಲಿಯೇ ಇರುವವು. ಅವುಗಳಲ್ಲಿ ಪರಿಣತಮತಿಗಳಾದವರು ಆ ಶಾಸ್ತ್ರಗಳ ಪರಿಭಾಷಾನುರೋಧವಾಗಿ ಅನೇಕವಾದ ಮತ್ತೆ ಕೆಲವು ಶಬ್ದಗಳನ್ನು ಸಹ ತಂದು ತಮ್ಮ ಮಾತಿನಲ್ಲಿ ಸೇರಿಸುವದು ಸಹಜ. ನಿರ್ಣಯಸಾಗರದಲ್ಲಿ ಪ್ರಸಿದ್ಧವಾದ ಕೆಲವು ಜೈನ ಸಂಸ್ಕೃತ ಕಾವ್ಯಗಳಿಗಿಂತ ಎಷ್ಟೋ ಮೇಲುತರಗತಿಯ ಕನ್ನಡ ಕಾವ್ಯಗಳು ನಮ್ಮ[illegible]ಲ್ಲಿವೆಯೆಂದು ಧೈರ್ಯವಾಗಿಯೆ ಹೇಳಬಲ್ಲವರಾಗುವ[illegible] ಅವು ಸ್ವತಂತ್ರರಚನಾಕೌಶಲವುಳ್ಳವುಗಳಾಗಿವೆ. ರಚನೆಯೆಂ[illegible] ಕಥೆಯಲ್ಲ, ನಡುನಡುವೆ ಬರುವ ಕವಿಪ್ರತಿಭೆಯನ್ನು ಕುರಿ[illegible] ನಾವು ಹೇಳುತ್ತಿರುವದು.

ಇಂತಹ ಜೈನಕವಿಮಂಡಲದಲ್ಲಿ ಪಂಪಕೃತಿಯನ್ನು ಸೇ[illegible] ದರೆ ಅದರ ಶೋಭೆಯು ಇಮ್ಮಡಿಯಾಗಿ ಕಾಣುವದು. ನಮ್ಮ[illegible] ಮಾತು ಪಂಪೈಕ ದೃಷ್ಟಿಯದಾದೀತೆಂದು ಕೆಲವು ದಿನ ಸುಮ್ಮ[illegible] ನಿದ್ದುಕೊಂಡು ನೋಡಿದಲ್ಲಿಯೂ ಪ್ರಚಂಡಕವಿಯಾ[illegible] ಪೊನ್ನನ ಕವಿತೆಯು ಪಂಪನ ಅದ್ಭುತಪ್ರತಿಭೆಯಲ್ಲಿ ಒಂದ[illegible] ಕೈ ಹಿಂದೆಯೆ ಆಗಿ ತೋರಿರುವದೆಂಬುದನ್ನಿಲ್ಲಿ ಹೇಳಬಯಸು[illegible]ತ್ತೇವೆ. ಪೊನ್ನನ ಕಾವ್ಯವನ್ನು ನೋಡುವಲ್ಲಿ ಕನ್ನಡ ಮಾತಿ[illegible]

ಆದ ಅದೊಂದು ಹೊಸ ಪ್ರವೇಶದಲ್ಲಿ ಬಂದಂತೆ ಭಾಸವಾಗಿ ಅಪೂರ್ವವಾದ ಸಂತೋಷವುಂಟಾಗುವದು. ಅತ್ತ ಪಂಪನೂ ಅಲ್ಲ, ಇತ್ತ ರನ್ನನೂ ಅಲ್ಲ, ಈ ರೀತಿಯ ನೂತನ ಮಾದರಿಯ ಅವನ ರೀತಿಯು ಆಕರ್ಷಕವೇ ಆಗಿ ತೋರುವದು. ಪೊನ್ನ, ರನ್ನ, ನೇಮಿ, ನಾಗಚಂದ್ರ, ಜನ್ನ, ಮಧುರ ಇಂತಹ ಪ್ರಚಂಡ ಕವಿಮಂಡಳಿಯಲ್ಲಿ ಅಗ್ರಸ್ಥಾನವನ್ನು ಮಂಡಿಸಿದ ಪಂಪನ 'ಅಭ್ಯುದಯ ಪ್ರಾಪ್ತಿ ನಿಮಿತ್ತ' ಕವಿತೆಯ ಸೊಬಗನ್ನು ಅದು ಅವರೆಲ್ಲರ ಕೆಲವು ಕವಿತೆಗಳಿಂದೊಡಗೂಡಿದಲ್ಲಿ ನೂತನ ಸ್ವರ್ಗದಲ್ಲಿ ಬಂದಂತೆಯೆ ಹಿಡಿಸಲಾರದಷ್ಟು ಸಂತೋಷವಾಗುವದು. ರನ್ನನ ಪ್ರತಿಕಕ್ಷಿಯಾದ ವೀರ ದುರ್ಯೋಧನನು ಅಳತೆಮೀರಿ ಮಾತನಾಡುವನು, ಪೊನ್ನನದು ಶ್ರೇಷ್ಠ ಕವಿತೆಯಾದರೂ ಚಿತ್ರವನ್ನು ಅನೇಕಾದ್ಭುತ ಕಲ್ಪನೆಗಳಿಂದ ದಂಗುಪಡಿಸುವ ಪಂಪನ ಪ್ರತಿಭೆ ಆತನಲ್ಲಿಲ್ಲ. ನಾಗಚಂದ್ರನ ಧೋರಣೆಯು ರಮ್ಯವಾದರೂ ಆತನ ರಾಮಕಥೆಯು ಸ್ವಲ್ಪ ಮಸುಕು. ನೇಮಿಯು ಪ್ರಚಂಡ ಕವಿಯೆ ಸರಿಯಾದರೂ ಅನ್ಯ ಮತದವರ ದೂಷಣೆಯು ನಾಗಚಂದ್ರನಲ್ಲಿಯಂತೆ ಆತನಲ್ಲಿಯೂ ಸ್ವಲ್ಪ ಕಂಡುಬರುವದು. ಇಂತು ಒಬ್ಬೊಬ್ಬನಲ್ಲಿ ಒಂದೊಂದು ನ್ಯೂನತೆಯು ಕಂಡುಬರುವದು. ಪಂಪನ ವಾಕ್ಪ್ರವಾಹವೇ ಮುಖ್ಯವಾಗಿ ಅತಿಶಯ ರಮ್ಯವಾದುದು. ಏನೂ ತಿಳಿಯದವರು ಸಹ ಆ ಉತ್ತಮವಾದ ಯೋಜನೆಯಿಂದಲೇ ಆತನ ಕೃತಿಯನ್ನು ಓದುತ್ತಿರುವರು. ವೀರದಲ್ಲಿ ರನ್ನನು, ವ್ಯಾಕರಣ ಶುದ್ಧತೆಯಲ್ಲಿ ಪೊನ್ನನು, ಪಂಪನಿಗಿಂತ ಶ್ರೇಷ್ಠರು. ಪಂಪನು ಸಂಸ್ಕೃತದ ಕಾವ್ಯಗಳ ಕೆಲಕೆಲವು ಭಾಗಗಳನ್ನು ಅಲ್ಲಲ್ಲಿ ಭಾಷಾಂತರಿಸಿರುವನು. ಪೊನ್ನನಾದರೋ ಕ್ರಮವಾಗಿ ರಘುವಂಶದ ಕೆಲವು ಪದ್ಯಗಳನ್ನೇ ಭಾಷಾಂತರಿಸುವನು. ಜಿನ ಧರ್ಮದ ತನ್ಮಯತೆಯಲ್ಲಿ ಭಕ್ತಿಪರವಶತೆಯಲ್ಲಿ ಪಂಪ-ಪೊನ್ನ-ರನ್ನರು ಸಮಾನರಾಗಿಯೇ ತೋರುವರು. ಹೀಗೆ ತುಲನೆ ಮಾಡಿದಲ್ಲಿ ಎಲ್ಲರಿಗಿಂತಲೂ ಹೆಚ್ಚು ಗುಣಗಳು ಪಂಪನಿಗೆ ಬಂದು ಆತನ ಅತ್ಯದ್ಭುತ ಪ್ರತಿಭೆಯು ಇನ್ನೂ ಹೆಚ್ಚಾಗಿಯೆ ತೋರುವದು. ಪಂಪನ ಕೆಲವು ಪದ್ಯಗಳಿಗೆ 'ಸುವಿಸ್ತರತರಾ ವಾಚೋ ಭಾಷ್ಯ ಭೂತಾ ಭವಂತುರಿಮೇ' ಎಂಬಂತೆ, ಭರತೇಶವೈಭವದ ವಿಸ್ತಾರವು ಕಾಣುತ್ತದೆ! ಅಕ್ಷರಗಣ ಮಂಡಿತ ಕವಿತೆಯೊಡನೆ ಉಳಿದವನ್ನು ಹೇಳುವದು ಅಷ್ಟು ಉಚಿತನಲ್ಲವೆಂದು ಆ ವ್ಯಾತಿರಿ... ಈ ... ಯಲ್ಲಿ ಮುದ್ರಿತವಾದ, ಉದ್ಧರಿಸಿ ಬಂದ ಪದ್ಯಗಳ ಕೆಲವು ಪುಸ್ತಕಗಳೊಡನೆ ಪಂಪನ ನಂತರದಲ್ಲಾದ ಮಹಾಕವಿಗಳ ಕೃತಿಗಳೊಡನೆ ಪಂಪನನ್ನಿಟ್ಟು ತುಲನೆ ಮಾಡುವವರಾದ ನಾವು ಪಂಪನ ಕಾಲದ ಹತ್ತನೆಯ ಶತಮಾನದವರಿಗಿಂತ ಹೆಚ್ಚು ಧನ್ಯರೆಂತಿಳಿದು ಬಂದು ವಿಶೇಷವಾಗಿ ಸಂತೋಷವಾಗುವದನ್ನು ಪಂಪನ ವಾಸಸ್ಥಳವಾದ ಇಲ್ಲಿ ಆಗುವ ಪ್ರಥಮ ಮಹೋತ್ಸವದಲ್ಲಿ ತಮಗೆ ಸೂಚಿಸಬೇಕೆನ್ನುತ್ತೇವೆ.

ಇನ್ನು ಸ್ವತಃ ಪಂಪನ ಕೃತಿದ್ವಯದ ವಿಚಾರ. ಅದು ಆತನ ಹೆಣ್ಣು ಗಂಡು ಮಕ್ಕಳೆಂದು ಹಿಂದಕ್ಕೆ 'ಪ್ರಬೋಧ'ದಲ್ಲಿ ಸೂಚಿಸಿಯೆ ಇರುವೆವು. ಗಂಡುಮಗುವೇ ವಿಕವಿಕ್ರಮಾಕ್ರಾಂತ ಸಕಲಭೂಮಂಡಲನಾದ ಪಂಪಭಾರತ, ಅದರ ಅಕ್ಕನೇ ಪ್ರಸನ್ನ ಚಿತ್ತವೃತ್ತಿಯ ಆದಿಪುರಾಣ. ರುಚಿಭೇದದಿಂದ ಬೇಕಾದವರಿಗೆ ಬೇಕಾದುದು ಸೇರಬಹುದು. ಹೀಗಿದ್ದರೂ ಕವಿಯು ತನ್ಮಯನಾಗಿ ಸೊಗಸಿನಿಂದ ಆರಂಭಿಸಿದ ಆದಿಪುರಾಣದ ಶೈಲಿಯು ಆತನ ಭಾರತಕ್ಕಿಂತಲೂ ಹೆಚ್ಚಾಗಿ ಹೃದಯಂಗಮವೆಂಬುದನ್ನು ಅನೇಕರು ಒಪ್ಪಿರುವರೆಂದು ಇಲ್ಲಿ ಸೂಚಿಸಬಹುದು. ಸರ್ವಾಂಗಸುಂದರವಾದ ಸ್ಫೂರ್ತಿದಾಯಕ ಗ್ರಂಥವೆಂದರೆ, ಪಂಪಭಾರತವೇ ಮೊದಲಿಗೆ ಬರುವದೆಂದು ಹೇಳಬೇಕು. ಉಪರಿನಿರ್ದಿಷ್ಟ ಶೂರನಾದ ಹುಡುಗನಂತೆಯೆ ಅದು ಚಾಪಲ್ಯದಿಂದ ಕುಣಿಕುಣಿದಾಡಿ ಹೊಸ ಹೊಸ ಉಪದೇಶವನ್ನು ನಮಗೆ ಕೊಡುವದು. ಭಾರತವರ್ಷದ ಸರ್ವಶ್ರೇಷ್ಠ ಗ್ರಂಥಗಳಲ್ಲೊಂದು ಪಂಪಭಾರತವೆಂದು ನಾವು ಘೋಷಿಸಿಯೆ ಇದ್ದೇವೆ.

ಪಡೆವಳ್ಳಂ ಗಡಮಾ ಬಲಕ್ಕೆರಲೆ ಧೃಷ್ಟದ್ಯುಮ್ನನೇ—
ಬೊಳ್ಳೆಯಾ
ಪಡೆಯೊಳ್ ಗಂಡನುಮಾಮೊಲಂ ದ್ರುಪದನುಂ
ಪೇರೊಟ್ಟೆಯಾ ಮತ್ಸ್ಯನುಂ ।
ಗಡಮಂತಾ ಬಲಕಾಳ್ದನೇನರಿಯಿರೇ ಧರ್ಮಜ್ಞನಾ
ಧರ್ಮಜಂ
ಗಡಮೇಂ ನಾಯಕರೊಳ್ಳಿವರ್ ನೆರೆವರೋ ಕಾದಲ್ಕೆ
ಮತ್ಸೈನ್ಯದೊಳ್ ॥
ಅರಿಪಿದರಾರುಮಿಲ್ಲೆಮಗೆ ನೀನೆಮಗಣ್ಣನೆಯೆಂದು
ಮುನ್ನಮಾ
ಮಣಿದೊಡೆ ಪಟ್ಟಮುಂ ನೆಲನುಮಂ ನಿನಗಿತ್ತು
ಕುರುಪ್ರಧಾನರೊಳ್ ।

ಕರುಪನೆ ನಿಚ್ಚಟಂ ಬಿಸುಟು ನಿನ್ನಯ ಪೇಳ್ದುದು
ಗೆಯ್ದುಪಾಳಿಯಂ
ಮೆರೆಯಿಪೆವೆ ಬಾಯ ತಂಬುಲದೊಳಂ ಮಡಗೂಳೊಳ-
ಮಂಗವಲ್ಲಭಾ ॥

ಇಂತಹ ವಿನೋದಯುಕ್ತ ನಿರ್ಭಯವೃತ್ತಿಯೂ ಹೃದಯವು ತಲ್ಲಣಗೊಳ್ಳುವಂತಹ ಶೋಕಾವೇಗದ ವರ್ಣನೆಗಳೂ ಅನೇಕವಾಗಿ ಅವರಲ್ಲಿ ಬರುವವು. ಯುದ್ಧಾರಂಭದಲ್ಲಿಯ ದುರ್ಯೋಧನನ ಮಾತು ಮೊದಲನೆಯದು. ಕರ್ಣನು ತಮ್ಮ ಅಣ್ಣನೆಂದು ಯುದ್ಧಾಂತ್ಯದಲ್ಲಿ ತಿಳಿದ ಧರ್ಮನ ಮಾತು ಎರಡನೆಯದರಲ್ಲಿರುವದು.

ಅತ್ಯಂತ ಸುಖದಾಯಕವಾದ ಆದಿಪುರಾಣದ ವಿಚಾರದಲ್ಲಿ ಇಲ್ಲಿ ಯಾವ ಪದ್ಯವನ್ನು ಹೇಳಬೇಕೋ ತಿಳಿಯದಾಗಿದೆ. ಈ ಮೊದಲು ಬೆಂಗಳೂರಿನ ವಿಶೇಷ ವಸ್ತುವೆಂದು ಶೀಗೆಯಕಾಯಿ ಪುಡಿಯ ಪೊಟ್ಟಣವನ್ನು ಧಾರವಾಡಕ್ಕೆ ತಂದಿರಲು ಅದು ಅಲ್ಲಿಯೂ ಸುಲಭಕ್ರಯಕ್ಕೆ ದೊರೆಯುತ್ತಿದ್ದಿತೆಂದು ನಮ್ಮ ಸ್ನೇಹಿತರು ಹಾಸ್ಯಮಾಡಿದರು. ಅದೇ ರೀತಿಯಲ್ಲಿ ಯಾವದಾದರೂ ಪದ್ಯವನ್ನು ಹೇಳುತ್ತಲೆ ಇಲ್ಲಿಯ ವಿದ್ವಾಂಸರಾದ ಸಭಿಕರು ನಗುವರೆಂದು ನಮಗೆ ಭಯ! ಶ್ರುತಿಸುಖಪ್ರದವಾದ ಸರಣಿಯು ಅವರಲ್ಲಿ ಎಲ್ಲೆಲ್ಲಿಯೂ ತುಂಬಿ ಹೋಗಿರುವದು.

"ಆ ವಸ್ತ್ರ ಭೂ। ಷಣ ಮಾಲಾದಿಗಳೆಂದು ಪಂಬಲಿಸಿ
ನಿಚ್ಚಂ ನಿಚ್ಚಮಿಾ ಪಿಷ್ಟಪೇ-
ಷಣಮಿಾ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ
ಮರುಳ್ಮಾಡಿತೋ ॥"

"ಸಹಜಾತಾಂಬರದಿವ್ಯಭೂಷಣದಳನ್ಮಂದಾರಮಾಲಾವಿಳಾ।
ಸಿ ಹಟದ್ರತ್ನಕಿರೀಟಭಾಸಿನಯನಾರ್ಥಾಲೋಕನೋದ್ಭಾಸಿ ಸ।
ಸ್ಪೃಹಸಾನಂದಸಲೀಲಸಸ್ಮಿತಮುಖವ್ಯಾಭಾಸಿ ನೋಡಿಂತು ಸ।
ನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ಮಜ್ಜೀವಿತಾ
ಧೀಶನಾ ॥"

"ಏಕೆ ಶೋಕಿಪ್ಪೆ ಮಾಣ್ಮಾಣ್ । ಮನದೊಳ್ನೀನಾರ್ಪೊಡಿಂ
ನಿನ್ನೊಡಲನೆ ಜಿನದೀಕ್ಷಾಕ್ಷಮಂ ಮಾಡ ಪುತ್ರಾ!"

ನಮ್ಮಲ್ಲಿಂದ ಸಂಸ್ಕೃತವನ್ನು ತೆಗೆದೇ ಹಾಕಿ ಬಿಡಬೇಕೆಂದು ಯೋಚಿಸುವ ನಮ್ಮ ಗೆಳೆಯರು ಹುಚ್ಚರಿರಬಹುದೇ? ಎಂದು ಈ ಅತ್ಯಂತ ಸುಂದರವಾದ ಪದ್ಯವನ್ನು ನೋಡಿ ಎನ್ನಿಸುತ್ತದೆ. ಪಂಪನ ನಂತರದಲ್ಲಾದ ಕೆಲವರು ಕವಿಗಳು ವಕ್ರಪ್ರಕಾರದಿ ಸಂಸ್ಕೃತವನ್ನು ಯೋಜಿಸಿ ಭಾಷೆಗೆ ಕೆಟ್ಟ ಹೆಸರು ತಂದ[illegible] ಪಂಪನೇನು ಮಾಡುವದು?

ಒಬ್ಬರಿಗೆ ಮಿಶನರಿ ಸಾಹೇಬರು ಉಪದೇಶಕ್ಕೆ ಆರಂಭಿಸಿದೊಡನೆ ಗೂಟಕ್ಕೆ ಹಾಕಿದ ಖಡ್ಗವನ್ನು ಆ ಗೃಹಸ್ಥರು ಕೈಯಲ್ಲಿ ಹಿಡಿದು ಅದನ್ನು ಒರೆಯಿಂದ ತೆಗೆದರಂತೆ! ಮಿಶನರಿಯವರ ಎದೆಯು ಒಡನೆ ಅವಲಕ್ಕಿ ಕುಟ್ಟಲಾರಂಭಿಸಿತು! ಅಂಜಬೇಡ[illegible]ರೆಂದು ಸಾಹೇಬರಿಗೆ ತಿಳುಹಿಸಿ, ಒರೆಯಲ್ಲಿ ಕತ್ತಿಯನ್ನು ಹಾಕಿ 'ಇದರಲ್ಲಿ ಇನ್ನೊಂದು ಕತ್ತಿಯನ್ನು ಹಾಕಬಲ್ಲಿರೋ?' ಎಂದು ಕೇಳಿದಾಗ ಸಾಹೇಬರು ಸಮಾಧಾನಕ್ಕೆ ಬಂದು ಆಗದೆಂದರು. 'ಅದರಂತೆಯೇ, ನನ್ನ ಮನಸ್ಸಿನಲ್ಲಿ ಒಂದು ಮತವಿರಲು ಇನ್ನೊಂದಾದ ನಿಮ್ಮದಕ್ಕೆ ಅವಕಾಶವಿಲ್ಲವೆಂದು ಗೃಹಸ್ಥರು ಹೇಳಿದರಂತೆ! ಈ 'ಗೃಹಸ್ಥರಂ'ತೆ ರಾಮಕೃಷ್ಣಾದಿಗಳ ಮಾತುಗಳ ಮನಸ್ಸಿನಲ್ಲಿ ಮನೆಮಾಡಿಕೊಂಡಿರುವ ಉಪನಿರ್ದಿಷ್ಟರಾ[illegible] ನಮ್ಮ ಸ್ನೇಹಿತರು 'ಅನ್ಯ' ಮಾತಿನ ವಿಚಾರಕ್ಕೆ ಅವಕಾಶವನ್ನು ಕೊಡಲಾರದಷ್ಟು ಅಶಕ್ತರಾಗಿ ಹೋಗಿರುವದು ಅವರದು ಅ[illegible]ರಿಗೂ ತಿಳಿಯದಾಗಿದೆ. ಆದಿಪುರಾಣದ ಕವಿತೆಯೆಲ್ಲವೂ ಸರಿಯೆ[illegible] ಅದರ ಕಥೆಯಲ್ಲಿ ಚಾರಿತ್ರ್ಯವೇನು? ಶೀಲವೇನು? ಉಪದೇಶವೇನು? ಇತ್ಯಾದಿಯಾಗಿ ಕೇಳುವರು! ಇವಕ್ಕಿಂತ ಆಶ್ಚರ್ಯವ[illegible] ಮತ್ತೆಲ್ಲಿಯಾದರೂ ಇರುವದೇ? ಜೈನಕವಿಗಳು ವ್ಯಾಸ ವಾಲ್ಮೀಕಿಗಳಂತೆ, ಭವ್ಯವಾಗಿ ಲೌಕಿಕ ರೀತಿಗಳನ್ನು ಸೂಚಿಸಿಲ್ಲವೆಂಬುದನ್ನು ಒಪ್ಪಿಕೊಂಡರೂ, ಹೂವಿನಲ್ಲಿ ನೊರಜು ಸಿಕ್ಕಿಕೊಂಡು ಸಾಯಲು, ಆ ದಿವಸಧೂಸರನಾದ ಚಂದ್ರನು ಕಣ್ಣಿಗೆ ಬೀಳಲು ರಾಜ್ಯವನ್ನೇ ಬಿಟ್ಟು ಹೊರಡುವಲ್ಲಿ ತ್ಯಾಗಾತ್ಮಕವಾದ ಶೀಲವಿಲ್ಲವೇ? ಎಷ್ಟೊಂದು ಆವೇಶದಿಂದ ದಿಗ್ವಿಜಯಮಾಡಿ ಬಂದ ಭರತೇಶ್ವರ ಚಕ್ರವರ್ತಿಯಾದ ಅಣ್ಣನನ್ನು ಗೆದ್ದಿದ್ದರೂ ಕೊನೆಗೆ ಪಶ್ಚಾತ್ತಾಪದಿಂದ ಭುಜಬಲಿರಾಜನು ತಾನೆಯೆ ಎಲ್ಲವನ್ನೂ ಬಿಟ್ಟು ತಪಸ್ಸಿಗೆ ಹೊರಟಲ್ಲಿ 'ರಾಮ'ನ ತ್ಯಾಗಬುದ್ಧಿಯಿಲ್ಲವೇ? ಕಥೆಯ ಸಂವಿಧಾನಕ (Plot)ದ ಮಾತು ಕವಿಗೆ ತಗಲದು. ಹೀಗಿದ್ದರೂ ಆರಂಭದ, ನಡು ನಡುವಿನ ಅನೇಕ ಉಲ್ಲೇಖನಗಳು ಆತನ ಚಾತುರ್ಯವನ್ನೂ ಅದ್ಭುತವಾದ ಪ್ರತಿಭಾಮಂಡಿತ ಶಯ್ಯೆಯನ್ನೂ ಶೀಲವಂತತೆಯನ್ನೂ, ಚೆನ್ನಾಗಿಯೇ ಎತ್ತಿ ತೋರಿಸುವವು. ಹದಿಮೂರನೆಯ ಆಶ್ವಾಸನದ ಕೊನೆಯಲ್ಲಿಯ ಜಿನಸ್ತೋತ್ರದಲ್ಲಿ ತತ್ತ್ವಜ್ಞಾನವೂ ಭಕ್ತ್ಯುದ್ರೇಕವೂ, ಸ್ವಯಂಪ್ರಭೆ ಲಲಿತಾಂಗರ ಕಥೆಯಲ್ಲಿ ಪ್ರೇಮದ ಏಕತಾನತೆಯ ಶೀಲವೂ

ತತ್ತ್ವವೂ ಇಲ್ಲವೇ ? ವನವಿಹಾರಾವಸರದಲ್ಲಿ ಹೂಗಿಡಗಳ ನಿರೂಪವನ್ನು ತೆಗೆದುಕೊಳ್ಳುವಲ್ಲಿಯ ಪದ್ಯಗಳಲ್ಲಿ ಹೃದಯವು ಉಕ್ಕಿಬರುವಷ್ಟು, ಕಂಠವು ಸದ್ಗದಿತವಾಗುವಷ್ಟು ಅಹಿಂಸಾತತ್ತ್ವವು ಹೇಳಿಲ್ಲವೇ ?

ಕೇವಲ ಕನ್ನಡದಲ್ಲಿಯೆ ಸಂಸ್ಕೃತದ ಬಾಣನ ಕಾದಂಬರಿಯ ಸೊಬಗುಂಟಾದ ಮಾತನ್ನು ೪, ೪೧ರ ಮುಂದಿನ ವಚನದಲ್ಲಿ ನೋಡಿದಲ್ಲಿ ಸಂಸ್ಕೃತದ ಆ ಆಕ್ಷೇಪಣೆಗೂ ಅವಕಾಶವಿಲ್ಲವೆಂದೆನಿಸುತ್ತದೆ. ಮದುವೆಯ ಹೆಣ್ಣು ಅಲಂಕೃತವಾದಾಗ ಮುಖವನ್ನೇ ಅರ್ಧಪುಟಕ್ಕಿಂತ ಹೆಚ್ಚಾಗಿ ಅದೆಂತಹ ಸುಂದರವಾದ ಗದ್ಯದಲ್ಲಿ ಕವಿಯು ಹೇಳಿರುವನೋ ! ವಿಸ್ತಾರದ ಭಯದಿಂದ ಅವನ್ನಿಲ್ಲಿ ಅವತರಿಸಿಲ್ಲವಷ್ಟೆ. ದಿಗ್ವಿಜಯದಲ್ಲಿಒಂದು ಕಲ್ಪನೆಯು:—

"ಪ್ರಾಚ್ಯಾರ್ಣವ ತಟನಿಕಟ ವರ್ತಿಗಳಪ್ಪತಿ ಪ್ರಚಂಡಮಂಡಳಿಕರ್ ಭರತೇಶ್ವರ ಚಕ್ರವರ್ತಿಯ ಬರವಂ ಕೇಳ್ದು ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯಸ್ವನೋತ್ಕರಮಂ ಮಾಣಿಸಿ ಹೇತಿ ಮುಕ್ತ ಭಟದೋರ್ದಂಡಾಗ್ರ ಶುಂಭದ್ಧ್ವಜೋತ್ಕರ ಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ ಪ್ರಶ್ರಯಾಕರವೇಷೋಚಿತರರ್ಘ್ಯ ಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ"

ದಿಗ್ವಿಜಯಾರಂಭದಲ್ಲಿಯ ಶರದ್ವರ್ಣನೆಯೂ ದೊರೆಯು ಪೊರಮಡುತ್ತಿರುವ ಶೋಭೆಯೂ ಅತ್ಯುತ್ತಮವಾಗಿರುವವು. ಇಷ್ಟೆಲ್ಲವೂ ಆದರೂ ಅವರಲ್ಲೇನಿದೆ ? ಎಂದು ಅಲ್ಲಲ್ಲಿ ಮಾತನಾಡಿಕೊಳ್ಳದೆ ಕೆಲವರು ಇರರು ! ಪರಕೀಯ ಭಾವನೆಯೇ ಅಲ್ಲದೆ ಮತ್ತಾವ ಕಾರಣವೂ ಅದಕ್ಕಿಲ್ಲವೆಂದು ಹೇಳಬೇಕು. ತನ್ನಂತೆ ಪರರನ್ನು ಬಗೆದ ಜಿನ್ನಣವು ಈ ಶುಭದಿನದಲ್ಲಿಯಾದರೂ ನಮ್ಮಲ್ಲಿ ಬರಲೆಂದು ಅತೀವ ನಮ್ರತೆಯಿಂದ ಪ್ರಾರ್ಥಿಸಬಹುದಲ್ಲವೇ ?

---

## ನನ್ನ ವಾಣಿ

೧

ಏತಕಿಂತು ಖಿನ್ನಳಾದೆ,
ನನ್ನ ವಾಣಿಯೆ ?
ಗಾನವೆಲ್ಲ ಬರಿಯ ಗೋಳು,
ದೀನರಾಗದಲ್ಲೆ ನುಡಿವೆ.
ಕುಸಿಯಿತೇಕೆ ನಿನ್ನ ಕೊರಳು?
ಮುಸುಕಿತೇಕೆ ನಿನಗೆ ಕೊರಗು?
ನನ್ನ ವಾಣಿಯೆ !

೨

ಸುಖದ ಹೆಸರೆ ತಿಳಿಯದೇನು,
ನನ್ನ ವಾಣಿಯೇ?
ನಲಿದು, ನಕ್ಕು, ಮೆರೆಯಲೊಲ್ಲೆ,
ಗೆಲವುಗೂಡಿ ಹಾಡಲೊಲ್ಲೆ !
ಉಲ್ಲಸದಲಿ ಮುಗಿವ ಕಥೆಯೆ
ಇಲ್ಲವೇನು ಧರಣಿಯೊಳಗೆ?
ನನ್ನ ವಾಣಿಯೆ !

೩

ಅಳುವ ಹುಚ್ಚು ಹಿಡಿಯಿತೇಕೆ,
ನನ್ನ ವಾಣಿಯೆ ?
ಹೃದಯದಳಲು, ಸಾವು, ನೋವು,—
ಇದನೆ ಹುಡುಕಿ ಹಾಡುಗರೆವೆ.
ಕೊರತೆಯಲ್ಲೆ ನಿನಗೆ ರುಚಿಯೆ ?
ಹರುಷವೇನು ನಿನಗೆ ಹಗೆಯೆ ?
ನನ್ನ ವಾಣಿಯೆ ?

೪

ಇನಿಸು ಕಣ್ಣ ನೀರನೊರಸು,
ನನ್ನ ವಾಣಿಯೆ !
ಮುಖದೊಳೊಮ್ಮೆ ನಗೆಯ ತಾಳು,
ಸುಖದ ಹಾಡನೊಮ್ಮೆ ಹೇಳು.
ಬಳಿಕ,—ನಿನಗೆ ಕಾದುಕೊಂಡೆ
ಇಳೆಯೊಳಿರುವುದಲ್ಲ ಗೋಳು !
ನನ್ನ ವಾಣಿಯೆ !

—ತೀ. ನಂ. ಶ್ರೀಕಂಠಯ್ಯ

# ಶ್ರೀ. ಹರಡೇಕರ ಮಂಜಪ್ಪನವರು

( 'ನಿರೀಕ್ಷಕ' ನಿಂದ )

ಅಂಕಿತನಾಮಗಳು ಅನ್ವರ್ಥಕ ನಾಮಗಳಾಗುವ ಸಂಭವ ಬಹಳ. ಇಟ್ಟ ಹೆಸರುಗಳು ಹೆಸರಿಟ್ಟಂತೆ ಕಾಣುವವು. ನಮ್ಮ ನಮ್ಮ ಹೆಸರುಗಳು ಮಂತ್ರಗಳಂತೆ ನಮ್ಮನ್ನು ತಮ್ಮಂತೆ ಮಾಡಿಕೊಳ್ಳುವವು. 'ಹೆಸರು ಹಾಲಯ್ಯ ಮೊಸರಿಗೆ ನೀರಿಲ್ಲ' ಎಂಬ ಅನುಭವಬಂದರೂ, ಹೆಸರೂ 'ಮಧುರ' ಕೃತಿಯೂ ಮಧುರ ಎಂದು ಮಧುರ ಕವಿಯೇ ಹೇಳಿಕೊಳ್ಳುವಂತೆ ಆಗುವದೂ ಉಂಟು. ಒಮ್ಮೆ ಒಬ್ಬರು ನಗೆಯಲ್ಲಿ:—ಕೃಷ್ಣನೆಂಬ ಹೆಸರು ಕಾರಸ್ಥಾನಕ್ಕೂ ಮಧ್ವನೆಂಬ ಹೆಸರು ಪರಪಕ್ಷಖಂಡನಕ್ಕೂ ವೆಂಕಟೇಶನೆಂಬ ಹೆಸರು ಬರಿಗೈತನಕ್ಕೂ ಪ್ರವೃತ್ತಿಸುವದುಂಟು ಎಂದು ಸಿದ್ಧಾಂತಿಸಿ ಒಳ್ಳೆ ಐತಿಹಾಸಿಕರಂತೆ 'ಬೇಕಾದರೆ ಉದಾಹರಣೆಗಳನ್ನೂ ಕೊಡುವೆ' ಎಂದರು. ಆದರೆ ಇದು ಅಭಿಪ್ರಾಯ ದುರಭಿಸಂಧಾನ. ಅದನ್ನು ಬಿಟ್ಟರೂ ತಮ್ಮವರು ತೊಟ್ಟಿಲಲ್ಲಿಟ್ಟ ಹೆಸರು ಜನರು ಜಗದಲ್ಲಿಟ್ಟ ಹೆಸರಿನಂತಾಗುವ ಘಟನೆಯು ಬೆರಗುಗೊಳಿಸುವಂತಹದಾಗಿದೆ.

ಶ್ರೀಮಾನ್ ಮಂಜಪ್ಪನವರನ್ನು ನೋಡಿ ನೋಡಿದಾಗಲೆಲ್ಲ ಈ ವಿಚಾರವೇ ನನಗೆ ಹೊಳೆಯುವದು. ಅವರ ಉಡುಗೆಯ ಬಿಳಿಖಾದಿ! ಅವರ ಮೈಯ ಬಿಳಿ ಛಾಯೆ! ಅವರ ಹಣೆಯ ಬಿಳಿ ವಿಭೂತಿ! ಎಲ್ಲವೂ ಬಿಳಿದು, ಸ್ವಚ್ಛ, ಶುಭ್ರ. ನಿರ್ದುಷ್ಟವಿಚಾರಗಳ ಮೂಲಕ ಅವರ ಮಾತೂ ಬಿಳಿ; ನೀತಿ ನಿಷ್ಠೆಯ ಮೂಲಕ ಅವರ ಕೃತಿಗಳೂ ಬಿಳಿ. ಬಿಳಿಮಂಜೆ ಮೈಗೊಂಡು ಬಂದಿತೇನೊ ಎನ್ನುವಂತೆ ಅವರನ್ನು ಕಂಡಾಗಲೆಲ್ಲ ಎನಿಸುವದು. ಅವರ ನೈತಿಕ ಮತ್ತು ನೈಷ್ಠಿಕ ನಿಷ್ಠುರತೆಯ ಮೂಲಕ ಅವರ ಮಾತಿನ ಮಂಜು ಒಮ್ಮೊಮ್ಮೆ ತಣ್ಣಗೆ ಕುಳ್ಳಿರಿಸುವಂತೆ ಮಾಡಿದರೂ ಚಳಿಯು ಮೈಚಳಿ ಬಿಡಿಸಿ ಉದ್ಯೋಗ ಪ್ರಿಯತೆಯನ್ನುಂಟು ಮಾಡುವಂತೆ ಅವರ ಮಾತಿನಲ್ಲಿ ಆ ಶಕ್ತಿಯೂ ಉಂಟು. ನನ್ನ ಗೆಳೆಯರಲ್ಲಿಬ್ಬರಾದ ಶ್ರೀ. ಕೇಸರಿ ಎಲ್. ಎಲ್. ಬಿ. ಧಾರವಾಡ, ಮತ್ತು ಶ್ರೀ ಹಿರೇಮಠ ಎಲ್. ಎಲ್. ಬಿ. ಹಾವೇರಿ ಇವರಿಬ್ಬರು ಶ್ರೀ ಮಂಜಪ್ಪನವರ ಸಹವಾಸದಿಂದ ಪ್ರವರ್ತಕ ಬುದ್ಧಿಯುವರಾಗಿರುವವರನ್ನೂ ಬಲ್ಲೆ; ಅವರ ಸಂಗತಿಯಲ್ಲಿ ತಣ್ಣಗಾದವರನ್ನೂ ಬಲ್ಲೆ. ಅದು ಏನೇ ಇರಲಿ—ಶ್ರೀ ಮಂಜಪ್ಪನವರು ಬಿಳಿ ಮಂಜಿನಂತಿರುವರು. ಅವರಲ್ಲಿ ಬಿಳಿದಲ್ಲದುದು ಎಂದರೆ ಅವರ ಕಣ್ಣು ಮತ್ತು ಅವರ ಫೌಂಟನ್ ಪೆನ್ನು (Fountain pen).

ಆದರೆ ಇವೆರಡು ಕೂಡ ಅವರು ನಡೆಸಿರುವ ಶುದ್ಧೀಕರಣದ ಮುಖ್ಯ ಸಾಧನಗಳು. ಅಜ್ಞಾನದ ಕತ್ತಲೆಯನ್ನು ಹೊಡೆದೋಡಿಸಿ ಬೆಳಕನ್ನು ಬೀರುವದು—ಅಶುದ್ಧಾಚರಣೆಯನ್ನು ಕಿತ್ತುಹಾಕಿ ಶುದ್ಧಾಚರಣೆಯನ್ನು ನೆಲೆಗೊಳಿಸುವದು— ಇವೇ ಅವೆರಡರ ಕಾರ್ಯ. ಅವರು 'ಧನುರ್ಧಾರಿ'ಯ ಸಂಪಾದಕರೆ ಆಗಲಿ, 'ಖಾದಿ'ಯ ಸಂಪಾದಕರೆ ಆಗಲಿ; ಹರಿಹರದ ಬ್ರಹ್ಮಚರ್ಯಾಶ್ರಮದ ಸಂಸ್ಥಾಪಕರೇ ಆಗಲಿ, ಆಲಮಟ್ಟಿಯ ವೀರಶೈವ ವಿದ್ಯಾಲಯದ ಸಂಸ್ಥಾಪಕರೆ ಆಗಲಿ; 'ಭಾರತೀಯ ದೇಶಭಕ್ತಿ'ಯ ಲೇಖಕರೆ ಆಗಲಿ; 'ಬಸವೇಶ್ವರ ಚರಿತ್ರೆಯ' ಲೇಖಕರೆ ಆಗಲಿ-



ಅವರ ಫೌಂಟನ್ ಪೆನ್ನು ಅಸಂಸ್ಕೃತರನ್ನು ಸುಸಂಸ್ಕೃತರನ್ನಾಗಿಯೂ, ನಿರಕ್ಷರರನ್ನು ಸಾಕ್ಷರರನ್ನಾಗಿಯೂ ಬೆಳ್ಳಕ್ಕಿಗರನ್ನು ಅಕ್ಕರಿಗರನ್ನಾಗಿಯೂ ಮಾಡಲು ಕರ್ಮಯೋಗಿಯಂತೆ ತೊಡಗಿದೆ. ಮಂಜಪ್ಪನವರು ಹುಟ್ಟಾ ಬೋಧಕರು, ಶಿಕ್ಷಕರು, ಸುಧಾರಕರು. ಅವರ ನಾಡಿನವನೇ ಆದ ಸರ್ವಜ್ಞಮೂರ್ತಿಗೂ ಅವರಿಗೂ ಎಷ್ಟೋ ಸಾಮ್ಯವಿದೆ. ಒಂದು ವೈಷಮ್ಯವೂ ಇದೆ. ಅವನಲ್ಲಿದ್ದ ಹಾಸ್ಯ ಇವರಲ್ಲಿಲ್ಲ. ಸರ್ವಜ್ಞನವರು ಪದ್ಯ, ಇವರು ಗದ್ಯ. ಭೇದವು ಚಿಕ್ಕದಾದರೂ ಅಂತರವು ದೊಡ್ಡದು !

ಮಂಜಪ್ಪನವರು ಕರ್ನಾಟಕವನ್ನು ನಾಡನ್ನಾಗಿ ರಾಷ್ಟ್ರವನ್ನಾಗಿಕಟ್ಟುವವರಲ್ಲೊಬ್ಬರು. ಅವರ ಉದ್ಯೋಗವು ಅವ್ಯಾಹತ. ಅವರ ಪ್ರಯತ್ನವು ವಿರೋಧಿಗಳಿಗೆ ಹಿಂಜರಿಯದಂತಹದು, ಕಥೆಯೊಳಗಿನ ಆವಿಯಂತೆ ಸಾವಕಾಶವಾದರೂ ಸಂತತವಾಗಿ ಅವರು ಸಾಗಿರುವರು. ಅವರ ಕಾರ್ಯಗತಿಗೆ ಚಿಕ್ಕೆಗಳಂತೆ ಅವಸರವಿಲ್ಲದಿದ್ದರೂ ವಿರಾಮವೂ ಇಲ್ಲ. ಬ್ರಾಹ್ಮಣ ಬ್ರಾಹ್ಮಣೇತರ ಎಂಬೀ ಗಲಾಟೆಯ ಯುಗದಲ್ಲಿ ಅವರು ತಮ್ಮ ವೀರಶೈವ ಸಮಾಜವನ್ನು 'ಕೋಹಂ ಸೋಹಂ'ಗಳೆಂಬಾ ಗಜಿಬಜಿ ಹೊಗದ ಒಂದು ಉನ್ನತಸ್ಥಿತಿಗೆ ತರಲು ಹವಣಿಸುತ್ತಿರುವರು. ಆಲಮಟ್ಟಿಯ ವೀರಶೈವ ವಿದ್ಯಾಲಯವು ಈಗಿನ ಅವರ ಪ್ರಯೋಗಶಾಲೆ. ಅವರ ಸಿದ್ಧ ರಸಾಯನಗಳು ಹೊರಬಿದ್ದ ಮೇಲೆ ಅವುಗಳ ಉಪಯೋಗದಿಂದಾಗುವ ಅನುಭವದಿಂದಲೆ ಅವರ ಇಚ್ಛೆಯು ಎಷ್ಟು ಈಡೇರುವದು ಬಿಡುವದು ನೋಡಬೇಕಾಗಿದೆ. ಅವರಂಥ ಪ್ರಯತ್ನವು ಸಂಪೂರ್ಣವಾಗಿ ನಿಷ್ಫಲವಾಗುವದು ಅಸಂಭವ.

ಶ್ರೀ ಮಂಜಪ್ಪನವರು ಮಂಜಿನಂತೆ ಶುಭ್ರವಾಗಿ ನಿಚ್ಚಳವಾಗಿ ಇದ್ದಾರೆ. ಆದರೆ ಅದರಂತೆಯೆ ರಹಸ್ಯಮಯವಾಗಿಯೂ ಇದ್ದಾರೆ. ಅವರು ಸ್ವಭಾವತಃ ಪ್ರಯೋಗ ಶರಣರು. ಕರ್ಮಯೋಗದವರಾದರೂ ವಿಜ್ಞಾನಿಗಳಂತೆ ಪರಿಣಾಮದ ಕಡೆಗೆ ದೃಷ್ಟಿಯಿಟ್ಟು ಕೆಲಸ ಮಾಡತಕ್ಕವರು. ಮಂಜು ರೂಪವನ್ನೂ ಸ್ಥಾನವನ್ನೂ ಗಾಳಿಯ ಅನುರೋಧದಿಂದ ಬದಲಿಸುವಂತೆ ಇವರ ಕಾರ್ಯದಲ್ಲಿ ಪಲ್ಲಟಗಳಾಗಿರುವದುಂಟು. ಆದರೆ ಅದಾವುದೂ ಸ್ವಾರ್ಥದಿಂದಲ್ಲ. ಮಾನವಕುಟುಂಬದ ಹಿತವಾಗುವಂತೆ ನಾಡುನಾಡಿನಲ್ಲಿಯೂ ಐಕ್ಯಜೀವನದ ಅಸ್ತಿವಾರಕ್ಕೆ ಸಮಾಜದಲ್ಲಿ ನೆಲೆ ದೊರೆಯಬೇಕು ಎಂದು ಅವರ ಇಚ್ಛೆ; ಅವರ ಕ್ರಿಯೆ. ಅದಕ್ಕೆ ಬೇಕಾದ ಜ್ಞಾನೋದಯವೇ ನಮ್ಮ ನಾಡಿನ ಭಾಗ್ಯೋದಯ.

---

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು

ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು:—ಶ್ರೀ. ಕೃ. ಶ್ರೀ. ಬೆಟಗೇರಿ, ಬೆಂಗಳೂರು.

## ಪ್ರಥಮಖಂಡ

### ೧ನೆಯ ಪರಿಚ್ಛೇದ

ಶ್ರೀ ಭುವನೇಶ್ವರೀ ಮಂದಿರದ ಕಲ್ಲಿನ ಮೆಟ್ಟಲುಗಟ್ಟೆಯು ದೂರದ ವರೆಗೆ ಸಾಗಿ ಗೋಮತೀ ನದಿಯಲ್ಲಿ ಸೇರಿಕೊಂಡಿರುವುದು. ತ್ರಿಪುರದ ದೊರೆಯಾದ ಗೋವಿಂದ ಮಾಣಿಕ್ಯನು ಒಂದು ದಿನ ಬೇಸಗೆಯ ಬೆಳಗಿನಲ್ಲಿ ಸ್ನಾನಕ್ಕೆಂದು ಅಲ್ಲಿಗೆ ಬಂದಿರುವನು; ಆತನೊಡನೆಯೆ ಆತನ ತಮ್ಮನಾದ ನಕ್ಷತ್ರರಾಯನೂ ಬಂದಿರುವನು. ಅದೇ ವೇಳೆಯಲ್ಲಿ ಒಬ್ಬ ಚಿಕ್ಕ ಹುಡುಗಿಯು ತೀರ ಎಳೆಯನಾದ ತನ್ನ ತಮ್ಮನನ್ನು ಒಡಗೊಂಡು ಅದೇ ಸ್ನಾನದ ಮೆಟ್ಟಲುಗಟ್ಟೆಗೆ ಬಂದಳು. ಬಂದವಳೇ ದೊರೆಯ ಬಟ್ಟೆಯನ್ನು ಹಿಡಿದು ಸೆಳೆಯುತ್ತ ಕೇಳಲು ತೊಡಗಿದಳು.

" ನೀನು ಯಾರು? "

ದೊರೆಯು ಮುಗುಳುನಗೆಯಿಂದ ಮಾತನಾಡಿದನು; "ಅಮ್ಮಾ! ನಾನು ನಿನ್ನ ಮಗನು." ಹುಡುಗಿಯೆಂದಳು "ನನಗೆ ಪೂಜೆಗಾಗಿ ಹೂಗಳನ್ನು ಕೊಯ್ದುಕೊಡುವುದಿಲ್ಲವೇ?"

ದೊರೆಯು ಹೇಳಿದನು, "ಆಗಲಿ ನಡೆ ಹಾಗಾದರೆ"

ಅನುಚರರೆಲ್ಲರೂ ಬೆಚ್ಚಿ ಬೆರಗಾದರು. ದೊರೆಗೆ ಅವರೆಲ್ಲರು ಹೇಳಿದರು. "ಮಹಾರಾಜ! ತಾವೇತಕ್ಕೆ ಹೋಗಬೇಕು? ನಾವು ಕೊಯ್ದುಕೊಡುವೆವಲ್ಲ ಹೂಗಳನ್ನು!"

ದೊರೆಯು ಹೇಳಿದನು. "ಆಗದಮ. ನನಗೇ ಇವಳು ಹೇಳಿರುವಳಾದುದರಿಂದ ನಾನೇ ಕೊಯ್ದುಕೊಡುವೆನು."

ರಾಜನು ಆ ಹುಡುಗಿಯ ಮೊಗದ ಕಡೆಗೆ ನೋಡಿಯೇ ನೋಡಿದನು. ಅವಳ ಮುಖವು ಅಂದಿನ ಬೆಳಗಿನ ಉಷೆಯ ಕಾಂತಿಗೆ ಸಮಾನವಾಗಿದ್ದಿತು. ದೊರೆಯ ಕೈಯನ್ನು ಹಿಡಿದು ದೇವಾಲಯಕ್ಕೆ ಸೇರಿದ ಹೂದೋಟದಲ್ಲಿ ಸುತ್ತುತ್ತಿರುವಾಗ, ನಾಲ್ಕು ದಿಕ್ಕುಗಳಲ್ಲಿಯೂ ಅರಳಿದ ಶುಭ್ರಕುಸುಮಗಳಂತೆಯೆ ಅವಳ ಮುದ್ದುಮುದ್ದಾದ ಮುಖದಿಂದಲೂ ಒಂದು ಬಗೆಯ ವಿಮಲ ಸೌರಭ ಭಾವವು ಹೊರಹೊರಟು ಆ ಬೆಳಗಿನ ತೋಟದಲ್ಲೆಲ್ಲ ತುಂಬಿಕೊಂಡಿರುವುದೇನೋ, ಎನ್ನಿಸುವಂತಿದ್ದಿತು. ಎಳೆಯ ತಮ್ಮನೂ ಸಹ ಅಕ್ಕನ ಉಡೆಬಟ್ಟೆಯ ಸೆರಗನ್ನು ಹಿಡಿದುಕೊಂಡು ಒಡನೊಡನೆಯೆ ಸುಳಿದಾಡುತಿರುವನು. ಅವನು ತನ್ನ ಅಕ್ಕನೊಬ್ಬಳನ್ನು ಮಾತ್ರ ಅರಿತವನು. ದೊರೆಯ ವಿಷಯವಾಗಿ ಆ ಮಗುವಿನ ಮನದಲ್ಲಿ ಯಾವ ವಿಶೇಷ ತರದ ಭಾವನೆಯೂ ಉಂಟಾಗಿರಲಿಲ್ಲ.

ರಾಜನು ಹುಡುಗಿಯನ್ನು ಮಾತಾಡಿಸಿದನು. "ನಿನ್ನ ಹೆಸರೇನಮ್ಮಾ!" ಹುಡುಗಿಯೆಂದಳು "ಚೆನ್ನಿ." ಹಾಗೆಯೇ ದೊರೆಯು ಹುಡುಗನನ್ನು ಕೇಳಿದನು. "ಮಗೂ ನಿನ್ನ ಹೆಸರೇನು?" ಹುಡುಗನು ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ಹೊರಳಿಸುತ್ತ ಅಕ್ಕನ ಮುಖದ ಕಡೆಗೆ ನೋಡಲು ತೊಡಗಿದನು. ಮರುಮಾತನೇನೂ ಹೇಳಲಿಲ್ಲ.

ಚೆನ್ನಕ್ಕ ಆತನ ಮೈಮೇಲೆ ಕೈಯಿಟ್ಟು ಹೇಳಿದಳು "ತಮ್ಮಾ ಹೇಳು ನನ್ನ ಹೆಸರು ಪುಟ್ಟ ಎಂದು"

ಹುಡುಗನು ತನ್ನ ತೀರ ಚಿಕ್ಕವಾಗಿರುವ ತುಟಿಗಳೆರಡನ್ನೂ ಒಮ್ಮೆ ತೆರೆದು ಗಂಭೀರ ಭಾವದಿಂದ ತನ್ನ ಅಕ್ಕನ ಮಾತಿನ ಮರುದನಿಯೋ ಎಂಬಂತೆ ಹೇಳಿದನು. "ನನ್ನ ಎಸಲು ಪುತ್ತ" ಹೀಗೆಯೇಳುತ್ತ ತನ್ನ ಅಕ್ಕನ ಬಟ್ಟೆಯನ್ನು ಕೈಯಿಂದ ಇನ್ನಿಷ್ಟು ಗಟ್ಟಿಯಾಗಿ ಹಿಡಿದುಕೊಂಡನು. ಚೆನ್ನೆಯು ದೊರೆಯನ್ನು ಕುರಿತು ಹೇಳಿದಳು. "ಇವನು ಇರುವನಲ್ಲಾ! ಇವನು ಚಿಕ್ಕ ಮಗು; ಎಲ್ಲ ಜನರೂ ಇವನನ್ನು "ಪುಟ್ಟ" ಎಂದು ಕರೆಯುವರು." ಚಿಕ್ಕ ತಮ್ಮನ ಕಡೆಗೆ ತಿರುಗಿ ನುಡಿದಳು "ಪುಟ್ಟಾ! ಹೇಳು 'ಮಂದಿರ' ಎಂದು ಹೇಳು!"

ಹುಡುಗನು ಅಕ್ಕನ ಕಡೆಗೆ ನೋಡುತ್ತ ಹೇಳಿದನು, "ಲದಂದ" ಚೆನ್ನೆಯು ನಗುನಗುತ್ತ ಹೇಳಿದಳು. "ಪುಟ್ಟನಿಗೆ 'ಮಂದಿರ' ಎನ್ನಲಿಕ್ಕೆ ಬರುವುದಿಲ್ಲ. 'ಲದಂದ' ಎನ್ನುವನು. ಆಗಲಿ ಪುಟ್ಟಾ! "ಕಟ್ಟಾಣಿ" ಎನ್ನು ನೋಡೋಣ"

ಹುಡುಗ ಗಂಭೀರ ಭಾವದಿಂದ ನುಡಿದನು. "ಬತ್ತಾಯಿ" ಚೆನ್ನೆಯು ಮತ್ತೆ ಮತ್ತೆ ನಗುತ್ತ ಮಾತನಾಡಿದಳು. "ನಮ್ಮ ಪುಟ್ಟನಿಗೆ "ಕಟ್ಟಾಣಿ" ಎನ್ನಲಿಕ್ಕೆ ಬರುವುದೇ ಇಲ್ಲ. 'ಬತ್ತಾಯಿ' ಎನ್ನುವನು." ಎಂದು ಆತನಿಗೆ ಮುತ್ತುಗಳನ್ನು ಒಂದರ ಹಿಂದೊಂದು ಕೊಟ್ಟು ಕೊಟ್ಟು ಬೇಸರಿಸಿಬಿಟ್ಟಳು.

ಪುಟ್ಟನು ಅಕ್ಕನ ಈ ನಗೆಗೂ ಇಷ್ಟೊಂದು ಈ ಪ್ರೀತಿಗೂ ಅದಾವ ಕಾರಣವಿರಬಹುದೆಂಬುದನ್ನು ಕಂಡುಹಿಡಿಯಲು ಸಮರ್ಥನಾಗಲಿಲ್ಲ. ಅವನು ಎಡೆಬಿಡದೆ ಅರಳಿದ ಕಣ್ಣುಗಳಿಂದ ನೋಡುತ್ತ ನಿಂತುಬಿಟ್ಟಿದ್ದನು. ನಿಜವಾಗಿಯೂ 'ಮಂದಿರ' 'ಕಟ್ಟಾಣಿ' ಈ ಶಬ್ದಗಳನ್ನು ಉಚ್ಚರಿಸುವುದರ ವಿಷಯದಲ್ಲಿ ಪುಟ್ಟನಿಗೆ ತುಂಬಾ ಚಪಲವಿರುತ್ತಿದ್ದಿತು. ಅದಕ್ಕೆ ಅವನೆಂದೂ ಅಸಮ್ಮತಿಯನ್ನು ತೋರಿಸುತ್ತಿರಲಿಲ್ಲ. ಪುಟ್ಟನಷ್ಟು ವಯಸ್ಸಿನವಳಾಗಿರುವಾಗ ಚೆನ್ನೆಯು ಮಂದಿರಕ್ಕೆ ಲದಂದವೆಂದು ಹೇಳುತ್ತಿರಲಿಲ್ಲ. ಅವಳು ಮಂದಿರಕ್ಕೆ ಹೇಳುತ್ತಿದ್ದುದು "ಸಾಮೀಖ" ಎಂದು. 'ಕಟ್ಟಾಣಿ' ಯೆನ್ನುವದಕ್ಕೆ 'ಖತ್ತಾಯಿ' ಎಂದು ಹೇಳುತ್ತಿದ್ದಳೋ ಇಲ್ಲವೋ ತಿಳಿಯದು. ಆದರೆ 'ಪಾಯಸ' ಎಂದು ಹೇಳಲು 'ತ್ಯಾಸ' ಎನ್ನುವಳು. ಪುಟ್ಟನ ಈ ವಿಚಿತ್ರ ಉಚ್ಚಾರಣೆಯನ್ನು ಕೇಳಿದಾಗಲೆಲ್ಲ ಚೆನ್ನೆಗೆ ತುಂಬಾ ನಗೆ ಬರುವದು; ಇದಕ್ಕಾಗಿ ಆಶ್ಚರ್ಯಪಡಬೇಕಾದ ಕಾರಣವೇನಿದೆ! ಪುಟ್ಟನ ವಿಷಯಕವಾದ ಅನೇಕ ಸಂಗತಿಗಳನ್ನು ದೊರೆಗವಳು ಹೇಳಲು ತೊಡಗಿದಳು. "ಒಂದುಸಲ ಒಬ್ಬ ಮುದುಕಯ್ಯ ಕಂಬಳಿಯನ್ನು ಹೊದ್ದುಕೊಂಡು ಬಂದಿದ್ದ. ಪುಟ್ಟ ಅವನನ್ನು "ಕರಡಿ" ಎಂದ; ಇಷ್ಟೊಂದು ಈತನಿಗೆ ತಿಳಿಯದು. ಇನ್ನೊಂದು ಸಲ ಪುಟ್ಟನು ಗಿಡದಲ್ಲಿರುವ ಎಲೆ ಕಾಯಿಗಳನ್ನು ಪಕ್ಷಿಗಳೆಂದು ಮನ

ದಲ್ಲಿ ಭಾವಿಸಿ ತನ್ನ ಚಿಕ್ಕಚಿಕ್ಕ ಕೈಗಳಿಂದ ಗಟ್ಟಿಯಾಗಿ ಚಪ್ಪಾಳೆಯಿಕ್ಕುತ್ತ ಅವುಗಳನ್ನೆಲ್ಲ ಹಾರಿಸಿ ಬಿಡಬೇಕೆಂದು ಹವಣಿಸುತ್ತಿದ್ದ." ಇತ್ಯಾದಿ... ಚೆನ್ನೆಗಿಂತ ಪುಟ್ಟನು ಅದೆಷ್ಟೋ ದಿವಸಕ್ಕೆ ಚಿಕ್ಕವನೆಂಬುದನ್ನು ಪುಟ್ಟನ ಅಕ್ಕನು ಅನೇಕ ಉದಾಹರಣೆಗಳಿಂದ ಸಂಪೂರ್ಣವಾಗಿ ತಿಳುಹಿಸಿ ಹೇಳಿದಳು. ಪುಟ್ಟನು ತನ್ನ ಬುದ್ಧಿಯ ಪರಿಚಯದ ಕಥೆಯನೆಲ್ಲವನ್ನೂ ಒಂದೇ ಮನಸ್ಸಿನಿಂದ ಕೇಳುತ್ತಿದ್ದನು. ಆ ಕಥೆಯಲ್ಲಿ ತಾನು ಕೋಪಗೊಳ್ಳುನಂತಹ ಸಂಗತಿಯಾವುದೂ ಇಲ್ಲವೆಂಬುದು ಮಾತ್ರ ಅವನಿಗೆ ಗೊತ್ತಾಯಿತು. ಹೀಗೆಯೇ ಅಂದಿನ ಬೆಳಗಿನ ಹೂ ಕೊಯ್ಯುವ ಕೆಲಸವು ಮುಗಿಯಿತು. ಚಿಕ್ಕ ಹುಡುಗಿಯು ಉಡಿತುಂಬಾ ಹೂಗಳನ್ನು ಕೊಯ್ದುಕೊಟ್ಟು ರಾಜನು ಸಂತೃಪ್ತಮನಸ್ಕನಾಗಿ "ಇಂದಿನ ನನ್ನ ದೇವಪೂಜೆಯ ಕೆಲಸವು ಸಂದಿತು" ಎಂದುಕೊಂಡನು. ಅವೆರಡೂ ಸರಲಜೀವಗಳ ಸ್ನೇಹದ ನೋಟವನ್ನು ನೋಡಿ, ಆ ಪವಿತ್ರಹೃದಯುಗಳ ಆಶೆಯನ್ನು ತೊಲಗಿಸಿ ಹೂಗಳನ್ನು ಕೊಯ್ದು ಕೊಟ್ಟನು. ಅಷ್ಟರಿಂದಲೇ ಆತನ ದೇವರ ಪೂಜೆಯ ಕಾರ್ಯವು ಮುಗಿದುಬಿಟ್ಟಿತೆಂತೆ.

## ೨ನೆಯ ಪರಿಚ್ಛೇದ

ಮರುದಿನ ಮೊದಲುಗೊಂಡು ಇರುಳು ಮಲಗಿಕೊಂಡಿದ್ದ ದೊರೆಗೆ ಸೂರ್ಯೋದಯವಾಗಿದ್ದರೂ ಬೆಳಗಾದಂತೆ ತೋರುತಿರಲಿಲ್ಲ. ಆ ಇಬ್ಬರು ಎಳೆಯರಾದ ಅಕ್ಕತಮ್ಮಂದಿರ ಮುಖವನ್ನು ಕಂಡಾಗಲೆ ಆತನಿಗೆ ಬೆಳಗಾದಂತೆ ಎನಿಸುವದು. ದಿನದಿನವೂ ಅವರಿಗೆ ಹೂಗಳನ್ನೆತ್ತಿಕೊಟ್ಟು ಬಳಿಕ ತಾನು ಸ್ನಾನ ಮಾಡುತ್ತಿದ್ದನು. ಅಕ್ಕತಮ್ಮಂದಿರಿಬ್ಬರೂ ಮೆಟ್ಟಲುಗಟ್ಟೆಯ ಮೇಲೆ ಕುಳಿತು ಆತನ ಸ್ನಾನವನ್ನು ನೋಡುತಲಿದ್ದರು. ಈ ಹುಡುಗಹುಡುಗಿಯರು ಬಾರದೆ ಇದ್ದ ದಿವಸ ತನ್ನ ಸಂಧ್ಯಾ ಆಹ್ನಿಕಗಳು ಮುಗಿದಂತೆ ದೊರೆಗೆ ಎನಿಸುತಿರಲಿಲ್ಲ.

ಚೆನ್ನೆಗೂ ಪುಟ್ಟನಿಗೂ ತಂದೆತಾಯಿಗಳಾರೂ ಇರಲಿಲ್ಲ. ಒಬ್ಬನೇ ಒಬ್ಬ ದೊಡ್ಡಪ್ಪನಿದ್ದನು. ಆತನ ಹೆಸರು ಕೇದಾರೇಶ್ವರನೆಂದು; ಈ ಇಬ್ಬರು ಹುಡುಗಹುಡುಗಿಯರೇ ಆತನ ಜೀವನದ ಏಕಮಾತ್ರಸುಖಸ್ವರೂಪರಾಗಿದ್ದರು. ಇವರಿಗಾಗಿಯೆ ಆತನಿಗೆ ಬದುಕಿನಲ್ಲಿ ಆಶೆ.

ಒಂಬತುವರುಷ ಕಳೆದುಹೋಯಿತು. ಈಗ ಪುಟ್ಟನು ಮಂದಿರ ಎಂದು ಹೇಳಲು ಸಮರ್ಥನಾಗಿದ್ದನು; ಆದರೆ ಕಟ್ಟಾಣಿ ಎಂಬುದಕ್ಕೆ ಮಾತ್ರ 'ಖತ್ಯಾಯಿ' ಎಂತಲೇ ಹೇಳುವನು. ಆತನು ಹೆಚ್ಚಾಗಿ ಮಾತನಾಡುತಿರಲಿಲ್ಲ. ಗೋಮತೀನದಿಯ ತಡಿಯಲ್ಲಿರುವ ನಾಗಕೇಶರ ಮರದ ನೆರಳಲ್ಲಿ ಕಾಲುಗಳನ್ನು ನೀಡಿ ಕುಳಿತುಕೊಂಡು ತನ್ನ ಅಕ್ಕನು ಹೇಳುವ ಕತೆಗಳನ್ನೆಲ್ಲ ಪುಟ್ಟನು ಎವೆಯಿಕ್ಕದ ನೋಟದಿಂದ ನೋಡುತ್ತ ನಸುವೂ ಮಾತನಾಡದೆ ಕೇಳುತಿರುವನು. ಆ ಕತೆಗೇನು ಬಾಲವಿಲ್ಲ ತಲೆಯಿಲ್ಲ. ಆದರೆ ಅದರಲ್ಲಿ ಅವನೇನು ತಿಳಿದುಕೊಳ್ಳುತ್ತಿದ್ದನೋ ಅವನಿಗೇಗೊತ್ತು. ಕತೆಯನ್ನು ಕೇಳಿ, ಆ ಮರದ ಅಡಿಯಲ್ಲಿ-ಆ ಸೂರ್ಯನ ಬಿಸಿಲಿನಲ್ಲಿ ಆ ಸುಳಿಯುತಿರುವ ಬಿಡುಗಾಳಿಯಲ್ಲಿ-ಒಬ್ಬ ಎಳೆ ಮಗುವಿನ ಪುಟ್ಟ ಹೃದಯದಲ್ಲಿ ಎಷ್ಟೆಷ್ಟೋ ಸಂಗತಿಗಳು, ಎಷ್ಟೆಷ್ಟೋ ಬಗೆಯ ಬೆಳಕುಗಳು ಮೂಡಿ ಮಾಸುತಿರಬಹುದು; ಅದು ನಮಗೆ ಗೊತ್ತಾಗುವ ಬಗೆಯೆಂತು? ಪುಟ್ಟನು ಇನ್ನಾವ ಹುಡುಗರೊಡನೆಯೂ ಆಟವಾಡುತಿರಲಿಲ್ಲ. ಅಕ್ಕನಾಯಿತು ತಾನಾಯಿತು; ಅವಳ ನೆಳಲಿನಂತೆ ಯಾವಾಗಲೂ ಅವಳ ಜತೆಯಲ್ಲಿಯೇ ಸುಳಿದಾಡುತಿರುವನು.

ಆಷಾಢಮಾಸವು. ಬೆಳಗಿನಿಂದಲೂ ದಟ್ಟವಾದ ಮೋಡಗಳು ಬಾನಿನಲ್ಲಿ ತುಂಬಿಬಿಟ್ಟಿರುವವು. ಇದುವರೆಗೂ ಮಳೆಯೇನೂ ಆಗಿಲ್ಲ. ಆದರೆ ಗಾಳಿಯು ಮಳೆಯ ಪ್ರಾರಂಭವನ್ನು ಸೂಚಿಸುತ್ತಲಿದೆ. ದೂರದಲ್ಲೆಲ್ಲಿಯೋ ಮಳೆಯ ಹನಿಗಳು ಉದುರಿದುದರಿಂದ ತಂಪಾದ ಗಾಳಿಯು ಬೀಸುತಿರುವುದು. ಗೋಮತೀನದಿಯ ನೀರಿನಲ್ಲಿಯೂ ಇತ್ತಡಿಯ ಅರಣ್ಯದಲ್ಲಿಯೂ ಕಪ್ಪುಮೋಡದ ಛಾಯೆಯು ಬಿದ್ದಿರುವುದು. ನಿನ್ನೆಯರಾತ್ರಿಯು ಅಮಾವಾಸ್ಯೆಯದು. ನಿನ್ನೆ ಭುವನೇಶ್ವರಿಯ ಪೂಜೆಯು ವಿಜೃಂಭಣೆಯಿಂದ ನಡೆದು ಹೋಗಿರುವದು.

ಸರಿಯಾದ ಸಮಯಕ್ಕೆ ರಾಜನು ಚೆನ್ನೆಯ-ಪುಟ್ಟನ ಕೈಗಳನ್ನು ಹಿಡಿದುಕೊಂಡು ಸ್ನಾನಕ್ಕಾಗಿ ಹೊಳೆಗೆ ಬಂದಿರುವನು. ಒಂದು ರಕ್ತಸ್ರೋತದ ಗೆರೆಯು ಆ ಬಿಳಿಯ ಕಲ್ಲಿನ ಕಟ್ಟೆಯ ಮೆಟ್ಟಲುಗಳ ಮೇಲೆ ಹರಿದುಹೋಗಿ ಹೊಳೆಯ ನೀರಿನಲ್ಲಿ ಕೊನೆಗಂಡಿರುವುದು. ನಿನ್ನೆಯ ರಾತ್ರಿಯಲ್ಲಿ ಭುವನೇಶ್ವರಿಗೆ ಬಲಿಕೊಟ್ಟ ನೂರಾಒಂದು ಕೋಣಗಳದೇ ಈ ನೆತ್ತರಹರಿವು.

ಚೆನ್ನೆಯು ಈ ನೆತ್ತರಿನ ಗುರುತನ್ನು ನೋಡಿ ಒಂದುಬಗೆಯ ಸಂಕೋಚಭಾವದಿಂದ ಸರಿದುನಿಂತು ರಾಜನೊಡನೆ ಮಾತನಾಡಿದಳು. "ಇದೇನಪ್ಪಾ? ಇದೇತರ ಗುರುತು?"

ರಾಜನೆಂದನು “ ರಕ್ತದ ಗುರುತಮ್ಮಾ ! ”

ಅವಳು ನುಡಿದಳು. “ ಇದೇತಕ್ಕೆ ಇಷ್ಟು ರಕ್ತ ! ” ಈಗ ಒಂದು ಬಗೆಯ ಕಾತರಸ್ವರದಿಂದ ಹುಡುಗಿಯು ಕೇಳಿದಳು. “ ಇದೇತಕ್ಕೆ ಇಷ್ಟು ರಕ್ತ ! ” ಎಂದು ರಾಜನ ಹೃದಯದಲ್ಲಿಯೂ ಕ್ರಮವಾಗಿ ಇದೇ ಪ್ರಶ್ನೆಯು ಉಂಟಾಗತೊಡಗಿತು. “ ಇದೇತಕ್ಕೆ ಇಷ್ಟು ರಕ್ತ ! ” ಆಗವನ ಮೈ ಜುಮ್ಮೆಂದು ಕೂದಲು ನಿಮಿರಿ ನಿಂತುವು.

ಅನೇಕ ದಿನಗಳಿಂದಲೂ ವರುವರುಷವೂ ರಕ್ತಪ್ರವಾಹವನ್ನು ನೋಡುತ್ತ ಬಂದಿದ್ದನು; ಈಗ ಒಬ್ಬ ಚಿಕ್ಕನುಗುವಿನ ಮಾತುಗಳನ್ನು ಕೇಳಿ ರಾಜನ ಮನದಲ್ಲಿ “ಇದೇತಕ್ಕೆ ಇಷ್ಟು ರಕ್ತ !” ಎನಿಸಲು ತೊಡಗಿತು. ಅದರ ಉತ್ತರವನ್ನು ಕಾಣದಾದನು. ಹುಡುಗಿಯ ಮಾತಿಗೆ ಮರುನುಡಿಯದೆ ಇನ್ನೇನನ್ನೋ ಯೋಚಿಸುತ್ತ ಸ್ನಾನಮಾಡುತ್ತ ಚೆನ್ನೆಯ ಪ್ರಶ್ನವನ್ನೆ ಭಾವಿಸಲು ತೊಡಗಿದನು.

ಚೆನ್ನೆಯು ನೀರಿನಲ್ಲಿ ತನ್ನ ಸೆರಗನ್ನು ನೆನೆಯಿಸಿ ಮೆಟ್ಟಲಿನ ಮೇಲೆ ಕುಳಿತು ರಕ್ತದ ಗುರುತನ್ನು ಅಳಿಸಲು ತೊಡಗಿದಳು. ಅವಳನ್ನು ನೋಡುತ್ತಲೆ ಪುಟ್ಟನೂ ಸಹ ತನ್ನ ಪುಟ್ಟಪುಟ್ಟಸಾದ ಎರಡೂ ಕೈಗಳಿಂದ ಅದೇಕೆಲಸವನ್ನು ಮಾಡಲು ತೊಡಗಿದನು. ಚೆನ್ನೆಯ ಸೆರಗೆಲ್ಲ ರಕ್ತದಿಂದ ಕೆಂಪುಕೆಂಪಾಗಿ ಹೋಯಿತು. ರಾಜನು ಸ್ನಾನವನ್ನು ತೀರಿಸಿ ಮೇಲಕ್ಕೆ ಬಂದು ನೋಡುವಾಗ ಈ ಅಕ್ಕತಮ್ಮಂದಿರು ಇಬ್ಬರೂ ಸೇರಿ ರಕ್ತದ ಗುರುತನ್ನು ಪೂರ್ಣವಾಗಿ ಅಳಿಸಿಬಿಟ್ಟಿದ್ದರು.

ಆ ದಿನ ಮರಳಿ ಮನೆಗೆ ಬಂದೊಡನೆಯೆ ಚೆನ್ನೆಗೆ ಜ್ವರ ಬಂದಿತು. ಪುಟ್ಟನು ಬದಿಯಲ್ಲಿಯೇ ಕುಳಿತು ಮುದ್ದುಮುದ್ದಾದ ಎರಡೂ ಕೈಬೆರಳುಗಳಿಂದ ಅಕ್ಕನ ಮುಚ್ಚಿದ ಕಣ್ಣುಗಳ ರೆಪ್ಪೆಯನ್ನು ತೆರೆಯಿಸಲು ಹವಣಿಸುತ್ತಿದ್ದನು. ನಡುನಡುವೆ ಕೂಗುತ್ತಿದನು. “ಅಕ್ಕಮ್ಮಾ!” ಎಂದು. ಆಗ ಅಕ್ಕನು ಒಮ್ಮೊಮ್ಮೆ ಬೆಚ್ಚಿಬಿದ್ದಂತಾಗಿ ಎಚ್ಚರುಗೊಳ್ಳುತ್ತಿದ್ದಳು. “ಏನು ಪುಟ್ಟಾ ! ” ಎಂದು ಪುಟ್ಟನನ್ನು ಬಳಿಗೆ ಸೆಳೆದುಕೊಂಡು ಮೈದಡವುತ್ತಿದ್ದಳು. ಮರಳಿ ಅವಳ ಕಣ್ಣುಗಳು ತಾವಾಗಿಯೇ ಮುಗಿದುಹೋಗುತಿದ್ದುವು. ಪುಟ್ಟನು ಬಹಳ ಹೊತ್ತಿನಿಂದಲೂ ಅಕ್ಕನ ಮೊಗದ ಕಡೆಗೆ ನೋಡುತ್ತ ಸುಮ್ಮನೆ ಕುಳಿತಿದ್ದನು. ಯಾವ ಮಾತುಗಳನ್ನೂ ಆಡಲಿಲ್ಲ, ಕೊನೆಗೆ ಅದೆಷ್ಟೋ ಹೊತ್ತಿನ ಮೇಲೆ ಮೆಲ್ಲ ಮೆಲ್ಲನೆ ಅಕ್ಕನ ಕೊರಳನ್ನು ತಬ್ಬಿಕೊಂಡು, ಅವಳ ಮು... ಹತ್ತಿರಕ್ಕೆ ತನ್ನ ಮುಖವನ್ನು ತಂದು ಮಾತನಾಡಿ... “ಅಕ್ಕಮ್ಮಾ! ನೀನು ಏಳುವುದಿಲ್ಲವೇ ! ” ಚೆನ್ನೆಯು ... ಎಚ್ಚತ್ತು ಪುಟ್ಟನನ್ನು ಎದೆಗೆ ಅವಚಿಕೊಂಡು ನುಡಿದಳು. “... ಕಪ್ಪಾ ಏಳುವುದಿಲ್ಲ? ಏಳುವೆನು. ” ಆದರೆ ಅಕ್ಕನಿಗೆ ಏಳ... ಕ್ಕೀಗ ಆಗುವಂತಿರಲಿಲ್ಲ. ಪುಟ್ಟನ ಚಿಕ್ಕ ಹೃದಯದಲ್ಲಿ ಕಗ್ಗ... ಲೆಯು ಕಡಿದುಬಿದ್ದಂತಾಯಿತು. ಅವನ ಇಡೀ ದಿನದ ಆಟ... ಗಳೂ ಆನಂದದ ಆಶೆಗಳೂ ಒಮ್ಮೊಮ್ಮೊಮ್ಮೆ ಮಲಿನವಾ... ಬಿಟ್ಟವು. ಅತ್ಯಂತ ಅಂಧಕಾರದ ಆಕಾಶವು; ಮನೆಯ ... ನೆಯ ಮೇಲೆ ಮಳೆಯ ಸಪ್ಪಳು ಕ್ರಮವಾಗಿ ಕೇಳಬ... ತೊಡಗಿರುವುದು. ಬೀದಿಯಲ್ಲಿರುವ ಮರಗಳೆಲ್ಲವೂ ಮಳೆಯ... ನನೆಯತೊಡಗಿರುವವು. ದಾರಿಯಲ್ಲಿ ಪಥಿಕರಾರೂ ಕಾಣ... ಕೇದಾರೇಶ್ವರನು ಒಬ್ಬ ವೈದ್ಯನನ್ನು ಜೊತೆಗೆ ಕರೆದುಕೊ... ಬಂದನು. ವೈದ್ಯನು ಚೆನ್ನೆಯ ನಾಡಿಯನ್ನು ನೋಡಿ ಮು... ವನ್ನು ಮುದುಡಿಸಿದನು.

ಮರುದಿನ ಸ್ನಾನಕ್ಕಾಗಿ ಬಂದ ರಾಜನು ನೋಡಿದನು. ... ಅಪೇಕ್ಷೆಯಂತೆ ಅಕ್ಕತಮ್ಮಂದಿರಿಬ್ಬರೂ ಮಂದಿರದಲ್ಲಿ ಕಾ... ಲಿಲ್ಲ. ಹೆಚ್ಚಾಗಿ ಮಳೆಯು ಬೀಳುತ್ತಿರುವುದರಿಂದ ಅವ... ಬರುವುದಕ್ಕೆ ಆಗಿಲ್ಲವೇನೋ ಎಂದು ಮನದಲ್ಲಿ ಯೋಚಿಸಿ... ಸ್ನಾನತರ್ಪಣಗಳನ್ನು ನೆರವೇರಿಸಿಕೊಂಡು ದೊರೆಯು ಅ... ವನ್ನೇರಿ ಕೇದಾರೇಶ್ವರನ ಮನೆಗೆ ಹೋಗಬೇಕೆಂದು ಜೋ... ಳಿಗೆ ತಿಳುಹಿಸಿದನು. ಅನುಚರರೆಲ್ಲರಿಗೂ ಎಂದೂ ಇಲ್ಲ... ಆಶ್ಚರ್ಯ; ಆದರೆ ದೊರೆಯ ಅಪ್ಪಣೆಗೆ ಮರುನುಡಿಗೊ... ಯಾರಿಗೂ ಧೈರ್ಯವಿಲ್ಲ.

ರಾಜನ ದಂಡಿಗೆಯು ಅಂಗಳಕ್ಕೆ ತಲ್ಪುವುದರಲ್ಲಿಯೇ ... ಸಿಲಿನಲ್ಲಿ ತುಂಬಾ ಗಲಾಟೆಯಾಯಿತು. ಆ ಗಲಾಟೆಯ... ರೋಗಿಯ ರೋಗದ ಸಂಗತಿಯನ್ನು ಎಲ್ಲರೂ ಮರೆತುಬಿಟ್ಟ... ಪುಟ್ಟನು ಮಾತ್ರ ಅಲ್ಲಾಡಲಿಲ್ಲ. ಅವನು ಅರಿವು ಇಲ್ಲದೆ ... ರುವ ಅಕ್ಕನ ತೊಡೆಯ ಬಳಿಯಲ್ಲಿ ಕುಳಿತು ಅವಳ ಬಟ್ಟೆಯ... ಒಂದು ತುದಿಯನ್ನು ತನ್ನ ಮುಖದಬಳಿಯಲ್ಲಿ ಹಿಡಿದುಕೊಂಡು ಕದಲದೆ ಕುಳಿತುಬಿಟ್ಟಿದ್ದನು.

ರಾಜನು ಮನೆಯೊಳಗೆ ಬಂದುದನ್ನು ನೋಡಿ ಪುಟ್ಟನ... ಕೇಳಿದನು. “ ಏನಾಯಿತು ! ”

ರಾಜನು ಉದ್ವಿಗ್ನ ಹೃದಯದವನಾಗಿ ಉತ್ತರವನ್ನೇನೂ ಕೊಡಲಿಲ್ಲ. ಪುಟ್ಟನು ಒಮ್ಮೆಲೆ ಬೆವರಿಬಿದ್ದಂತಾಗಿ ಎದ್ದು ನಿಂತು ಮತ್ತೆ ಕೇಳಿದನು. "ಅಕ್ಕನನ್ನು ಕಳೆದುಕೊಂಡು ಹೋಗುತಾಲೇನು ?"

ಮುದುಕ ಕೇದಾರೇಶ್ವರನು ಕೊಂಚ ವಿರಕ್ತಭಾವದಿಂದ ಉತ್ತರವಿತ್ತನು. "ಅಹುದು ಕರೆದುಕೊಂಡು ಹೋಗುವರು."

ಕೂಡಲೆ ಪುಟ್ಟನು ಅಕ್ಕನ ಬಳಿಯಲ್ಲಿ ಕುಳಿತು ಅವಳ ಮುಖವನ್ನು ಎತ್ತುವದಕ್ಕೆ ಹವಣಿಸಿ ಕತ್ತನ್ನು ತಬ್ಬಿಕೊಂಡು ಕೇಳಿದನು "ಅಕ್ಕಮ್ಮಾ! ನಿನ್ನನ್ನು ಎಲ್ಲಿಗೆ ಕಲಕೊಂಡು ಹೋಗ್ತಾಲೇ ?" ಇದೇ ಸ್ಥಳದಲ್ಲಿಯೇ "ಭೂ" ಎಂದು ಮಂತ್ರಹಾಕಿ ಅಕ್ಕನ ಎಲ್ಲ ಬೇನೆಯನ್ನು ಕಳೆದುಬಿಡುವೆನು. ಎಂದು ಆತನ ಮನದ ಅಭಿಪ್ರಾಯವು. ಆದರೆ ತನ್ನ ಮಾತಿಗೆ ಅಕ್ಕನು ಉತ್ತರ ಕೊಡದಿರಲು ಪುಟ್ಟನಿಗೀಗ ಸಹಿಸುವುದಾಗಲಿಲ್ಲ. ಚಿಕ್ಕಚಿಕ್ಕ ತುಟಿಗಳೆರಡೂ ಹೆಚ್ಚು ಹೆಚ್ಚಾಗಿ ಅರಳಲು ತೊಡಗಿದುವು. ಅಭಿಮಾನದಿಂದ ಅಳುವು ಬಂದುಬಿಟ್ಟಿತು. ನಿನ್ನೆಯಿಂದಲೂ ಬಳಿಯಲ್ಲಿ ಕುಳಿತುಕೊಂಡೇ ಇರುವನು. ಒಂದು ಮಾತೂ ಇಲ್ಲ. ಪುಟ್ಟನು ಅದಾವ ಅಪರಾಧಮಾಡಿರುವನೆಂದು ಇಷ್ಟೊಂದು ಅನಾದರ ? ರಾಜನೆದುರಿನಲ್ಲಿಯೇ ನಡೆಯಿಸಿದ ಪುಟ್ಟನ ಈ ವ್ಯವಹಾರವನೆಲ್ಲ ನೋಡಿ ಕೇದಾರೇಶ್ವರನು ತಳಮಳಗೊಂಡವನಾದನು. ವಿರಕ್ತಭಾವದಿಂದ ಪುಟ್ಟನ ಕೈಯನ್ನು ಹಿಡಿದು ಬೇರೆ ಮನೆಗೆ ಎಳೆದುಕೊಂಡು ಹೋದನು. ಆಗಲೂ ಅಕ್ಕನು ಯಾವ ಮಾತನ್ನೂ ಆಡಲಿಲ್ಲ.

ರಾಜವೈದ್ಯನು ಬಂದು ಸಂದೇಹವನ್ನು ಹೊರಪಡಿಸಿ ಹೊರಟುಹೋದನು. ಸಾಯಂಕಾಲಕ್ಕೆ ರಾಜನು ಮತ್ತೆ ಚೆನ್ನೆಯನ್ನು ನೋಡಲೆಂದು ಬಂದನು. ಆಗ ಹುಡುಗಿಯು ಬಡಬಡಿಸುತ್ತಿದ್ದಳು. "ಅಮ್ಮಾ ಇದೇತಕ್ಕೆ ಇಷ್ಟು ರಕ್ತ ?"

ರಾಜನು ಹೇಳಿದನು "ಅಮ್ಮಾ ! ಈ ರಕ್ತದ ಕಾಲುವೆಯನ್ನು ನಾನಿನ್ನು ತಡೆಗಟ್ಟುವೆನು."

ಹುಡುಗಿಯೆಂದಳು, "ಬಾ ತಮ್ಮಾ! ಪುಟ್ಟಾ! ಈ ರಕ್ತದ ಕಲೆಯನ್ನು ನಾವಿಬ್ಬರೂ ಸೇರಿ ಅಳಿಸಿಬಿಡೋಣ."

ರಾಜನು ನುಡಿದನು. "ಬಾರಮ್ಮಾ! ನಾನೂ ಅಳಿಸುವೆನು."

ಸಂಜೆಯಾದ ಬಳಿಕ ಕೆಲವು ವೇಳೆಗೆ ಚೆನ್ನೆಯು ಒಮ್ಮೆ ಕಣ್ಣು ತೆರೆದಳು. ನಾಲ್ಕೂ ಕಡೆಗೂ ಒಮ್ಮೆ ನೋಡಿ ಯಾರನ್ನೋ ಹುಡುಕಿದಂತೆ ಮಾಡಿದಳು. ಆಗ ಪುಟ್ಟನು ಬೇರೆ ಮನೆಯಲ್ಲಿ ಅತ್ತತ್ತು ಬಳಲಿ ಮಲಗಿಕೊಂಡನು. ತನಗೆ ಬೇಕಾದವರು ಕಾಣದುದರಿಂದಲೋ ಏನೋ ಚೆನ್ನೆಯು ಕಣ್ಣು ಮುಚ್ಚಿಬಿಟ್ಟಳು. ಮರಳಿ ಮತ್ತೆ ಕಣ್ಣು ತೆಗೆಯಲಿಲ್ಲ. ಹನ್ನೆರಡು ಗಂಟೆ ರಾತ್ರಿಗೆ ಸರಿಯಾಗಿ ರಾಜನ ತೊಡೆಯಮೇಲೆ ಚೆನ್ನೆಯ ಪ್ರಾಣವು ಹೋಯಿತು.

ಎಂದೆಂದೂ ಮರಳಿ ಮನೆಗೆ ಬಾರದಂತೆ ಚೆನ್ನೆಯನ್ನು ಮನೆಯಿಂದ ತೆಗೆದುಕೊಂಡು ಹೋಗುವಾಗ, ಯಾವುದನ್ನೂ ಅರಿಯದ ಪುಟ್ಟನು ನಿದ್ದೆಮಾಡುತಲಿದ್ದನು. ಆಗ ಅವನು ನೋಡಿದ್ದರೆ ತಾನೂ ಅವಳೊಡನೆಯೇ ಅವಳ ಕಿರುನೆರಳಿನಂತೆ ಹೊರಟು ಹೋಗುತ್ತಿದ್ದನೋ ಏನೋ !

### ೩ನೆಯ ಪರಿಚ್ಛೇದ

ದೊರೆಯು ಓಲಗದಲ್ಲಿ ಕುಳಿತಿರುವನು. ಯಾವುದೋ ಕೆಲಸಕ್ಕಾಗಿ ಭುವನೇಶ್ವರೀಮಂದಿರದ ಪುರೋಹಿತನು ದೊರೆಯನ್ನು ಕಾಣಲು ಬಂದಿರುವನು.

ರಘುಪತಿಯೆಂದು ಪುರೋಹಿತನ ಹೆಸರು. ಈ ದೇಶದಲ್ಲಿ ಪುರೋಹಿತನಿಗೆ "ಚೋಂತಾಯೀ" ಎಂದು ಹೇಳುವರು. ಹದಿನಾಲ್ಕುದಿನ ಭುವನೇಶ್ವರೀ ದೇವಿಯ ಪೂಜೆಯು ನಡೆದು ಬಳಿಕ ಹದಿನೈದನೆಯದಿನ ಕತ್ತಲೆಯ ರಾತ್ರಿಯಲ್ಲಿ ಚತುರ್ದಶ ದೇವತೆಗಳದೊಂದು ಪೂಜೆಯಾಗುವದು. ಈ ಪೂಜೆಯ ಕಾಲದಲ್ಲಿ ಒಂದು ಹಗಲು ಎರಡುರಾತ್ರಿ ಯಾರೂ ಮನೆಯ ಹೊರಕ್ಕೆ ಕಾಲಿಕ್ಕಲಾಗದು, ರಾಜನೂ ಕೂಡ ಹೊರಕ್ಕೆ ಬರಲಾಗದು. ಅಪ್ಪಿತಪ್ಪಿ ಒಂದು ವೇಳೆ ಬಂದುದಾದರೆ ಅವನು ಚೋಂತಾಯಿಗೆ ಅರ್ಥದಂಡವನ್ನು ತೆರಬೇಕಾಗುತಿದ್ದಿತು. ಈ ಪೂಜೆಯ ರಾತ್ರಿಯಲ್ಲಿ ನರಬಲಿಯನ್ನು ಕೊಡುವರೆಂದೂ ಸುದ್ದಿಯಿದ್ದಿತು. ಈ ಪೂಜೆಗಾಗಿ ಎಲ್ಲಕ್ಕೂ ಮೊದಲು ಸಲ್ಲಿಸುವ ಪಶುಗಳ ಬಲಿಯು "ಅರಮನೆಯ ದಾನ" ಎಂದು ಎಲ್ಲರ ತಿಳುವಳಿಕೆಯಿದ್ದಿತು. ಈ ಬಲಿಯ ಪಶುಗಳನ್ನು ಕೇಳಿ ತೆಗೆದುಕೊಂಡು ಹೋಗಲೆಂದೇ ರಾಜನ ಬಳಿಗೆ ಚೋಂತಾಯಿಯು ಇಂದು ಬಂದಿರುವನು. ಪೂಜೆಗೆ ಇನ್ನು ಹನ್ನೆರಡು ದಿನಗಳೇ ಉಳಿದಿವೆ.

ರಾಜನು ಮಾತನಾಡಿದನು. "ಈ ವರುಷದಿಂದ ಇನ್ನು ಮೇಲೆ ಮಂದಿರದಲ್ಲಿ ಜೀವಬಲಿಯು ನಡೆಯಕೂಡದು.

ಸಭೆಯೆಲ್ಲವೂ ಸ್ತಬ್ಧ; ಎಲ್ಲಿಯೂ ಮಾತೇ ಇಲ್ಲ. ದೊರೆಯು ತಮ್ಮ ನಕ್ಷತ್ರರಾಯನ ತಲೆಗೂದಲು ಸಹ ನಿಮಿರಿ ನಿಂತುವು.

ಪುರೋಹಿತ ರಘುಪತಿಯು ನುಡಿದನು "ನಾನು ಇದೇನು ಕನಸನ್ನು ಕಾಣುತಿರುವೆನೇ ?"

ರಾಜನೆಂದನು. "ಇಲ್ಲ ಮಹಾಶಯ ! ಇದುವರೆಗೆ ನಾವೇ ಕನಸನ್ನು ಕಾಣುತಲಿದೆವು. ಇಂದು ನಮಗೆ ಎಚ್ಚರು ಉಂಟಾಗಿದೆ. ತಾಯಿಯು ಒಂದು ಹೆಣ್ಣು ಮಗುವಿನ ವೇಷದಿಂದ ಬಂದು ನಮಗೆ ದರ್ಶನವಿತ್ತಿರುವಳು. ಕರುಣಾಮಯಿ ಜನನಿಯಾಗಿರುವ ದೇವಿಯು ತಾನು ಜೀವಿಗಳ ರಕ್ತವನ್ನಿನ್ನು ನೋಡಿ ಸಹಿಸಲಾರಳು" ಎಂದವಳು ಹೇಳಿ ಹೋಗಿರುವಳು.

ರಘುಪತಿಯೆಂದನು. "ಹಾಗಾದರೆ ದೇವಿಯು ಅನೆಷ್ಟೋ ದಿನಗಳಿಂದಲೂ ಜೀವಿಗಳ ನೆತ್ತರನ್ನು ಕುಡಿಯುತ್ತ ಬಂದಿರುವಳಲ್ಲ ! ಅದೇತಕ್ಕೆ ?"

ರಾಜನು ಹೇಳಿದನು. "ಇಲ್ಲ ದೇವಿಯು ಅವನ್ನು ಕುಡಿದಿಲ್ಲ. ನೀವು ರಕ್ತಪಾತ ಮಾಡಿದಾಗಲೆಲ್ಲ ಅವಳು ಮೊಗವನ್ನು ತಿರುಗಿಸಿ ಕುಳಿತಿರುತ್ತಿದ್ದಳು."

ರಘುಪತಿಯೆಂದನು. "ಮಹಾರಾಜ ! ರಾಜಕಾರ್ಯದಲ್ಲಿ ತಾವು ಚೆನ್ನಾಗಿ ಬಲ್ಲವರಿರುವಿರೆಂಬುದರಲ್ಲಿ ಸಂದೇಹವಿಲ್ಲ. ಆದರೆ ಪೂಜೆಯ ವಿಷಯವು ತಮಗೆ ನಸುವೂ ತಿಳಿಯದು. ದೇವಿಯು ಏನಾದರೂ ಇದರಿಂದ ಅಸಂತುಷ್ಟಳಾದರೆ! ನಾನು ಮೊದಲೇ ತಮಗೆ ತಿಳುಹಿಸಿರುತ್ತೇನೆ."

ನಕ್ಷತ್ರರಾಯನು ತಾನೊಳ್ಳೇ ತಿಳಿದವನು ಎಂಬಂತೆ ಒಮ್ಮೆಲೇ ಎದ್ದು ನಿಂತು ಹೇಳಿದನು. "ಅಹುದು ಇದು ನಿಜವಾದ ಮಾತು. ದೇವಿಯೇನಾದರೂ ಒಂದು ವೇಳೆ ಅಸಂತುಷ್ಟಳಾದರೆ ! ಪುರೋಹಿತರು ಭವಿಷ್ಯವನ್ನು ಮೊದಲೇ ತಿಳಿಯಬಲ್ಲವರು.

ರಾಜನೆಂದನು "ಹೃದಯವು ಕಗ್ಗಲ್ಲಾಗಿ ಹೋದವರಿಗೆ ದೇವಿಯ ಮಾತುಗಳು ಕೇಳಿಸಲಾರವು."

ನಕ್ಷತ್ರರಾಯನು ಪುರೋಹಿತರ ಮುಖದ ಕಡೆಗೆ ರಾಜನ ಈ ಮಾತಿಗೆ ಆವಶ್ಯಕವಾಗಿ ಸರಿಯಾದ ಉತ್ತರವೀಯಬೇಕು, ಎಂಬ ಭಾವದಿಂದ ನೋಡಿದನು.

ರಘುಪತಿಯು ಬೆಂಕಿಯಂತೆ ಉರಿದೆದ್ದು ನುಡಿದನು. "ಮಹಾರಾಜ ! ತಾವು ಪಾಷಂಡರಾದ ನಾಸ್ತಿಕರಂತೆ ಮಾತನಾಡುತ್ತಿದ್ದೀರಿ."

ನಕ್ಷತ್ರರಾಯನೂ ಮೃದುವಾದ ಪ್ರತಿಧ್ವನಿಯಂತೆ ನುಡಿದನು. "ಅಹುದು, ನಾಸ್ತಿಕರಂತೆ ಮಾತನಾಡುತಿರುವಿರಿ."

ಗೋವಿಂದ ಮಾಣಿಕ್ಯನು ಉದ್ದೀಪ್ತ ಮೂರ್ತಿಯಾಗಿ ಪುರೋಹಿತರ ಮೋರೆಯ ಕಡೆಗೆ ನೋಡುತ್ತ ಮಾತನಾಡಿದನು "ಮಹನೀಯ! ಓಲಗದಲ್ಲಿ ಕುಳಿತು ತಾವು ವ್ಯರ್ಥವಾಗಿ ವೇಳೆಯನ್ನು ಕಳೆಯುತಿರುವಿರಿ. ಮಂದಿರದ ಕೆಲಸವು ಹಾಗೆಯೇ ಉಳಿದಿರಬಹುದು. ತಾವೀಗ ಮಂದಿರಕ್ಕೆ ಹೊರಡಿ. ಹೋಗುವಾಗ ದಾರಿಯಲ್ಲೆಲ್ಲ ಇನ್ನು ಮೇಲೆ ನಮ್ಮ ರಾಜ್ಯದಲ್ಲಿ ಯಾವುದರೂ ದೇವಿಯ ಬಳಿಯಲ್ಲಿ ಜೀವಬಲಿ ಕೊಟ್ಟರೆ ಸೀಮೆ ದಾಟಿಬಿಡುವ ಶಿಕ್ಷೆಗೆ ಗುರಿಯಾಗಬೇಕಾಗುವುದು" ಎಂಬ ಸುದ್ದಿಯನ್ನು ಸಾರಿಹೇಳುತ್ತ ಹೋಗಿರಿ.

ಕೂಡಲೆ ರಘುಪತಿಯು ನಡುನಡುಗುತ್ತ ಎದ್ದು ನಿಂತು ಕಾಲಪ್ಪಳಿಸುತ್ತ ಕೈ ಮೇಲಕೆತ್ತಿ "ಹಾಗಾದರೆ ನೀನು ಹಾಳಾಗಿ ಹೋಗು" ಎಂದನು. ನಾಲ್ಕೂ ಕಡೆಯಿಂದಲೂ ಸಭಾಸದರು ಹಾಂ! ಹಾಂ! ಎನ್ನುತ್ತ ಪುರೋಹಿತರ ಮೇಲೆ ಹೋಗಿ ಬಿದ್ದರು. ರಾಜನು ಸನ್ನೆಯಿಂದ ನಿಷೇಧಿಸಿ ಎಲ್ಲರನ್ನೂ ಹಿಂದಕ್ಕೆ ಸರಿಸಿದನು. ಎಲ್ಲರೂ ಸರಿದು ನಿಂತರು. ರಘುಪತಿಯು ಮಾತನಾಡಲು ಮೊದಲು ಮಾಡಿದನು. "ನೀನು ಅರಸು; ಮನಸ್ಸು ಮಾಡಿದರೆ ನೀನು ಪ್ರಜೆಗಳ ಸರ್ವಸ್ವವನ್ನೂ ಹರಣಮಾಡಬಲ್ಲೆ. ಆದರೆ ಇದಿಷ್ಟರಿಂದಲೆ ನೀನು ದೇವಿಯ ಬಲಿಯನ್ನು ಹರಣ ಮಾಡಲು ಸಮರ್ಥನಾಗುವೆಯೇನು ? ನೋಡುವೆ ಅದು ಹೇಗೆ ನಿನಗೆ ಸಾಧ್ಯವೆಂಬುದನ್ನು ! ನಾನು-ರಘುಪತಿಯು ದೇವಿಯ ಪಾದಸೇವಕನು ಇರುತ್ತಿರಲು ಅದು ಹೇಗೆ ನೀನು ಪೂಜೆಯನ್ನು ತಡೆಗಟ್ಟುವೆಯೋ ನೋಡುವೆನು."

ಮಂತ್ರಿಯು ರಾಜನ ಸ್ವಭಾವವನ್ನು ಸಂಪೂರ್ಣವಾಗಿ ಬಲ್ಲವನು. ಮಾಡಿದ ಸಂಕಲ್ಪದಿಂದ ರಾಜನು ಮನಸನ್ನು ಕದಲಿಸುವುದು ಎಂದೂ ಆಗದೆಂದವನು ತಿಳಿದಿದ್ದನು. ಆತನು ಮೆಲ್ಲಮೆಲ್ಲಗೆ ಹೆದರಿದವನಾಗಿ ಹೇಳಿದನು. "ಮಹಾರಾಜ ! ಪರಲೋಕಕ್ಕೆ ತೆರಳಿರುವ ತಮ್ಮ ಪಿತೃಪುರುಷಗಣವೆಲ್ಲವೂ ಸರಿಯಾಗಿ ದೇವಿಯೆದುರಿನಲ್ಲಿ ನಿಯಮಿತ ಬಲಿಯನ್ನು

ಸುತ್ತ ಬಂದಿರುವುದು. ಇದರಲ್ಲಿ ಎಂದೂ ಒಂದು ದಿನವೂ ಅವರು ತಪ್ಪಿನಡೆದಿಲ್ಲ." ಮಂತ್ರಿಯು ಅಷ್ಟಕ್ಕೇ ತಡೆದನು.

ಅರಸು ಸುಮ್ಮನೆ ಕುಳಿತಿದ್ದನು. ಮಂತ್ರಿಯೇ ಮಾತನಾಡಿದನು. "ಇಂದು ಇಷ್ಟುದಿನಗಳ ಮೇಲೆ, ಪಿತೃಪುರುಷರಿಂದ ಪ್ರತಿಷ್ಠಿತವಾಗಿರುವ ಈ ಪ್ರಾಚೀನಪದ್ಧತಿಗೆ ತಾವು ಅಡ್ಡಿಪಡಿಸಿದಲ್ಲಿ, ಸ್ವರ್ಗದಲ್ಲಿದ್ದ ಅವರು ಅಸಂತುಷ್ಟರಾಗಬಹುದು."

ದೊರೆಯು ಏನನೋ ಯೋಚಿಸಲು ತೊಡಗಿದನು. ನಕ್ಷತ್ರರಾಯನು ಮಂತ್ರಿಯ ಮಾತಿಗೆ ಸಹಕಾರಿಯಾಗಿ ನುಡಿದನು. "ಅಹುದು ಸ್ವರ್ಗದಲ್ಲಿದ್ದ ಅವರು ಅಸಂತುಷ್ಟರಾಗಬಹುದು."

ಮಂತ್ರಿಯು ಮರಳಿ ಮಾತನಾಡಿದನು. "ಮಹಾರಾಜರು ಒಂದು ಕೆಲಸ ಮಾಡುವುದಾಗಲಿ. ಒಂದು ಸಹಸ್ರಬಲಿಯು ಬೀಳುವಸ್ಥಳದಲ್ಲಿ ಒಂದು ನೂರು ಬಲಿ ಮಾತ್ರ ಬೀಳಲೆಂದು ಅಪ್ಪಣೆಕೊಡುವುದಾಗಲಿ."

ಸಭಾಸದರೆಲ್ಲರೂ ಸಿಡಿಲಿನೇಟುತಿಂದಂತೆ ಸ್ತಬ್ಧರಾಗಿ ಕುಳಿತಿದ್ದರು. ಗೋವಿಂದ ಮಾಣಿಕ್ಯನೂ ಕುಳಿತು ಆಲೋಚಿಸತೊಡಗಿದನು. ಸಿಟ್ಟುಗೊಂಡ ಪುರೋಹಿತನು ಅಧೀರನಾಗಿ ಸಭೆಯಿಂದೆದ್ದು ಹೊರಟುಹೋಗುವುದರಲ್ಲಿದ್ದನು.

ಈ ಸಮಯಕ್ಕೆ ಸರಿಯಾಗಿ ಹೇಗೆ ಹೇಗೊ ಹಂಚಿಕೆಮಾಡಿ ಪ್ರಹರಿಗಳ ಕೈಯಿಂದ ತಪ್ಪಿಸಿಕೊಂಡು ಬರಿಮೈಯ-ಬರಿಗಾಲಿನ ಚಿಕ್ಕ ಹುಡುಗನೊಬ್ಬನು ಓಲಗವನ್ನು ಪ್ರವೇಶಿಸಿದನು. ರಾಜಸಭೆಯ ನಡುವೆ ನಿಂತು ತನ್ನ ದೊಡ್ಡ ದೊಡ್ಡ ಕಣ್ಣುಗಳಿಂದ ರಾಜನ ಕಡೆಗೆ ನೋಡುತ್ತ ಅವನು ಕೇಳಿದನು. "ಅಕ್ಕ ಎಲ್ಲಿದ್ದಾಳೆ?"

ದೊಡ್ಡದಾದ ಒಡ್ಡೋಲಗವೆಲ್ಲವೂ ಒಮ್ಮೆಲೆ ನಿಶ್ಶಬ್ದವಾಗಿ ಹೋಯಿತು. ಆ ಭವ್ಯವಾದ ಓಲಗಶಾಲೆಯಲ್ಲ ಎಲ್ಲೆಲ್ಲಿಯೂ ಆ ಹುಡುಗನ ಮಾತುಗಳ ಪ್ರತಿಧ್ವನಿಯು ಉಂಟಾಗಿಬಿಟ್ಟಿತು, "ಅಕ್ಕ ಎಲ್ಲಿದ್ದಾಳೆ?" ಎಂದು. ರಾಜನು ಕೂಡಲೆ ಸಿಂಹಾಸನದಿಂದ ಕೆಳಗಿಳಿದು, ಹುಡುಗನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ನಿಶ್ಚಯಧ್ವನಿಯಿಂದ ಮಂತ್ರಿಗೆ ಹೇಳಿದನು. "ಇಂದಿನಿಂದಲೂ ನನ್ನ ರಾಜ್ಯದಲ್ಲಿ ಬಲಿದಾನವು ನಡೆಯಕೂಡದು. ಇದಕ್ಕೆ ಪ್ರತಿಯಾಗಿ ಯಾವ ಮಾತುಗಳನ್ನೂ ಆಡಲಾಗದು."

ಮಂತ್ರಿಯೆಂದನು "ಅಪ್ಪಣೆಯಂತಾಗಲಿ."

ಪುಟ್ಟನು ದೊರೆಯನ್ನು ಮರಳಿ ಕೇಳಿದನು. "ನನ್ನ ಅಕ್ಕ ಎಲ್ಲಿದ್ದಾಳೆ?"

ರಾಜನು ಹೇಳಿದನು. "ಅಮ್ಮನ ಬಳಿಯಲ್ಲಿ."

ಪುಟ್ಟನು ಅದೆಷ್ಟೋ ವೇಳೆಯವರೆಗೆ ಬಾಯಲ್ಲಿ ಬೆರಳಿಟ್ಟುಕೊಂಡು ಮಾತನಾಡದೆ ಇದ್ದನು. ತಾನು ದೊರಕಿಸಬೇಕಾಗಿದ್ದ ಸ್ಥಳವನ್ನು ದೊರಕಿಸಿದೆನು ಎಂದು ಆ ಮಗುವಿನ ಮನದ ಭಾವನೆಯಾಯಿತೇನೋ! ಇಂದಿನಿಂದಲೂ ರಾಜನು ಪುಟ್ಟನನ್ನು ತನ್ನ ಬಳಿಯಲ್ಲಿಯೇ ಇರಿಸಿಕೊಂಡನು. ಮುದುಕ ಕೇದಾರೇಶ್ವರನಿಗೂ ಅರಮನೆಯಲ್ಲಿಯೆ ಎಡೆದೊರೆಯಿತು.

ಸಭಾಸದರು ತಮ್ಮತಮ್ಮೊಳಗೆ ಮಾತನಾಡಲು ಮೊದಲು ಮಾಡಿದರು. "ಇದೇನು ಶ್ರವಣರ ನಾಡಾಗಿ ಹೋಯಿತಲ್ಲಯ್ಯಾ! ಬೌದ್ಧಧರ್ಮಿಗಳ ರಾಜ್ಯದಲ್ಲಿ ಮಾತ್ರ ರಕ್ತಪಾತವನ್ನು ನಿಲ್ಲಿಸಿದ್ದರೆಂದು ನಾವು ಕೇಳಿದ್ದೆವು. ಕೊನೆಗೆ ನಮ್ಮ ಹಿಂದುಗಳ ದೇಶದಲ್ಲಿಯೂ ಅದೇ ನಿಯಮವು ನಡೆದುಬಿಟ್ಟಿತೇನು?"

ಅವನತಿಯ ಲಕ್ಷಣಕ್ಕೆ, ಮೊದಲು ಇದೇ ಅಲ್ಲದೆ ಇನ್ನಾವುದಿರುವುದು? ಬೌದ್ಧರಿಗೂ ಹಿಂದುಗಳಿಗೂ ಭೇದವುಳಿಯಿತೆಲ್ಲಿನ್ನು? ಎಂದು ಎಲ್ಲರೂ ಯೋಚಿಸತೊಡಗಿದರು.

# ಬಿಡಿನುಡಿಗಳು

## "ಓಂ ಭವತಿ ಭಿಕ್ಷಾಂದೇಹಿ"

'ಜಯಕರ್ನಾಟಕ' ಬಟುವು ಕನ್ನಡಿಗ-ಕನ್ನಡಿತಿಯರ ಬಾಗಿಲಿಗೆ ತನ್ನ ಅಕ್ಷಯವಾದ ಭಿಕ್ಷಾಪಾತ್ರದೊಂದಿಗೆ ಬಂದಿದ್ದಾನೆ. ಕನ್ನಡನಾಡು ಸಮೃದ್ಧದೇಶವು; ಆದರಾತಿಥ್ಯಕ್ಕೆ ಹೆಸರಾದದ್ದು. ಒಂದಾನೊಂದು ಕಾಲದಲ್ಲಿ ಅಗ್ರಹಾರಗಳಿಂದಲೂ ದಾನಚಿಂತಾಮಣಿಗಳ ಕೀರ್ತಿ ಮೈವೆತ್ತು ನಿಂತಂತಿದ್ದ ಗುಡಿಗೋಪುರಗಳಿಂದಲೂ ಮೆರೆದ ನಾಡು ನಮ್ಮ ದೇಶ. ಆದರೆ ಕಾಲವೈಪರೀತ್ಯದಿಂದ ಉಳ್ಳವರು ಜಿಪುಣರಾಗಿದ್ದಾರೆ-ಅಂತೆಯೆ ಇಲ್ಲದವರಿಗೆ ತಿರುಕರ ಕಳೆ ಬಂದಿದೆ. 'ಜಯಕರ್ನಾಟಕ ಮಂಡಲ'ವು ಕನ್ನಡಿಗರ ಉದಿತೋದಿತ ಭಾಗ್ಯವನ್ನು ನಂಬಿ ದೊಡ್ಡ ಕೆಲಸಕ್ಕೆ ಕೈಹಾಕಿರುವದು. 'ಜಯಕರ್ನಾಟಕ'ವು ಒಂದು 'ಆನೆ' ನಿಜ. ಅದಕ್ಕೆ ಸರಿಯಾಗಿ ಅದರ ಹೊಟ್ಟೆ ದೊಡ್ಡದು ಇದೂ ನಿಜ. ಆದರೆ ಸಹಸ್ರಾವಧಿ ಗಜಘಟೆಗಳನ್ನು ಸಾಕಿ ಸಂವರ್ಧಿಸಿದ ಕರ್ನಾಟಕಕ್ಕೆ ಒಂದು ಆನೆ ಹೆಚ್ಚಾಯಿತೇ? ಮತ್ತು ಕನ್ನಡ ಭಾಗ್ಯಲಕ್ಷ್ಮಿಗೆ ಒಂದು ಆನೆಯೂ ಬೇಡವೇ? 'ಜಯಕರ್ನಾಟಕ'ದ ಗಂಧವಾರಣವು ಸಂಸ್ಥಾಪಕರ ಎತ್ತಾಗಿರದೆ ಸಿರಿಗನ್ನಡಿತಿಯ ವಾಹನವು. ಇದಕ್ಕೆ ಹೊಟ್ಟೆಗೆ ಹಾಕಲು ಧನವು ಬೇಕು. ಸಿಂಗರಿಸಲು ಲೇಖನಾದಿ ಭೂಷಣಗಳು ಬೇಕು. ಆದಕಾರಣ ಇದುವರೆಗು ಇದನ್ನು ಪೋಷಿಸುತ್ತ ಬಂದವರು ಇನ್ನೂ ಹೆಚ್ಚು ಬಗೆಯಿಂದ ಇದನ್ನು ಪೋಷಿಸಬೇಕೆಂದೂ, ಉದಾಸೀನರಿದ್ದವರು ಎಚ್ಚರಾಗಿ ಕೊಡುಗೈ ಚಾಚಬೇಕೆಂದೂ ಬಿನ್ನವಿಸುವೆವು. ಈಗಾಗಳೆ 'ವಸಂತ' 'ಕನ್ನಡಿಗ' 'ನವಕರ್ನಾಟಕ' ಕರ್ಮವೀರ ಮೊದಲಾದ ಪತ್ರಪತ್ರಿಕೆಗಳು ನಮ್ಮ ಬಗ್ಗೆ ಬಂಧುಭಾವದಿಂದ ಬರೆದುದಕ್ಕಾಗಿಯೂ, ದಿಲ್ಲಿ, ಹೈದ್ರಾಬಾದ, ಮೈಸೂರು, ಬೆಂಗಳೂರು, ಮಂಗಳೂರು ಕಡೆಯ ನಮ್ಮ ಹಿತಚಿಂತಕರು ನಮಗೆ ಸಹಾನುಭೂತಿಪರ ಸಂದೇಶಗಳನ್ನು ಕಳುಹಿಸ್ದಕ್ಕಾಗಿಯೂ ನಮಗೆ ಸಂತೋಷವಾಗಿದೆ. ಬಟುವು ಬಾಗಿಲಿಗೆ ಬಂದು 'ದೇಹಿ' ಎನ್ನುತ್ತಿರಲಾಗಿ ಅದನ್ನು ಕಿವುಡುಗೇಳುವ ಜನರು ಕನ್ನಡ ಮನೆಗಳಲ್ಲಿರಲಾರರೆಂದು ನಾವು ಭಾವಿಸಿದ್ದೇವೆ. ನಮ್ಮ ಭಾವನೆ ನಿಜವಾದೀತೇ? ಕನ್ನಡಿಗರು ಉತ್ತರಕೊಡಲಿ.

## ಇದ್ದಾಗಲೆ ಸ್ಮಾರಕ ಬೇಡವೇ?

'ಶ್ರಾದ್ಧದಲ್ಲಿ ಪಿತೃಗಳಿಗೆ ಹಾಕುವ ಪಿಂಡವನ್ನು ಇರುವಾಗಲೆ ಅವರಿಗೆ ಕೊಟ್ಟಿದ್ದರೆ ಅವರು ಇನ್ನೂ ನಾಲ್ಕು ದಿನ ಬಾಳಬಹುದಾಗಿತ್ತು' ಎಂದು ನಿರ್ಭರ್ತ್ಸನಾಪೂರ್ವಕವಾಗಿ ಒಬ್ಬ ಕುಲದೀಪಕನನ್ನು ಕುರಿತು ಸಮಾಜಸುಧಾರಕರೊಬ್ಬರು ಎಂದ ಮಾತು ನಮಗೆ ನೆನಪಿದೆ. ಊರಿಗೆ ಉಪಕಾರಮಾಡುವವರ ಗತಿ ಆ ನಿರ್ಭಾಗ್ಯಪಿತೃಗಳಂತೆ ಎಷ್ಟೋ ಸಲ ಆಗುವದುಂಟು. ಶಾಂತಕವಿಗಳು, ಶ್ರೀನಿವಾಸತನಯರು, ಕಾವ್ಯಾನಂದರು ಹೋದರು; ಆಮೇಲೆ ಶ್ರಾದ್ಧವಾಯಿತು, ಪಕ್ಷವಾಯಿತು! ಇದೆ ನಿತ್ಯ ನಿಯಮವಾಗಿಯೇ ಬಿಡಬೇಕೇ? ಗುಣಗ್ರಾಹಕತೆಯಿಂದ ಗುಣಿಗಳ ಯೋಗ್ಯ ಸತ್ಕಾರವನ್ನು ಅವರ ಜೀವಮಾನದಲ್ಲಿಯೇ ಮಾಡುವ ದಿನಗಳು ಇನ್ನೂ ಕರ್ನಾಟಕಕ್ಕೆ ಬಂದಿಲ್ಲವೆ! 'ಜಯಕರ್ನಾಟಕ'ವು ಕರ್ನಾಟಕ ಏಕೀಕರಣ ಕಾರ್ಯದಲ್ಲಿ ಮಹತ್ತ್ವದ ಸೇವೆಯನ್ನು ಮಾಡಿದೆ, ಮಾಡಲಿದೆ. 'ಸತ್ತ ಎಮ್ಮೆಗೆ ಸೇರು ಹಾಲು' ಎಂಬ ಗತವೈಭವದ ಹಾಡಿನ ಪಲ್ಲವಿಯನ್ನು ಹೇಳುವ ಪ್ರಸಂಗವು ಬರಬಾರದೆಂದು 'ಜಯಕರ್ನಾಟಕ ಮಂಡಲ'ವು ಶ್ರೀ ಆಲೂರರವರು ಇಳಿಸಲಿದ್ದ ಹೊರೆಯನ್ನು ಮತ್ತೆ ಹೊತ್ತುಕೊಂಡಿದೆ. ಅವರು ನೆಟ್ಟ ಗಿಡವು ಹೆಮ್ಮರವಾದರೆ ನಾಡಿಗೆ ನೆಳಲಾಗುವದು. ಅವರ ಗುಣದ ಸ್ಮಾರಕವೂ ಕನ್ನಡಿಗರ ಗುಣಗ್ರಾಹಕತೆಯ ಸ್ಮಾರಕವೂ ಆಗುವದು. ಇಂಥ ಸ್ಮಾರಕವು ಇನ್ಮುಡಿಯಾದ ಭೂಷಣವು.

ಜಯಕರ್ನಾಟಕದ ಮೊದಲಿಗರಾದ

**ಶ್ರೀ. ಆಲೂರ ವೆಂಕಟರಾಯರು**



## ಪರಂಪರಾವಿಚ್ಛೇದವು ಸಾಕು

ನಮ್ಮ ನಾಡಿನ ಅಭ್ಯುದಯಕ್ಕೆ ವಿರೋಧಿಗಳಾದ ಕಾರಣಗಳಲ್ಲೊಂದೆಂದರೆ ಪರಂಪರಾವಿಚ್ಛೇದ. ಪ್ರತ್ಯೇಕ ಪ್ರತಿಷ್ಠೆಯ ಹುಚ್ಚು ಈಗ ನಮ್ಮ ಜನರಲ್ಲಿ ಹೆಚ್ಚು. ಹೀಗೆಂದಷ್ಟಕ್ಕೆ ವಿಚಾರಸ್ವಾತಂತ್ರ್ಯವನ್ನಾಗಲಿ ಆಚಾರಸ್ವಾತಂತ್ರ್ಯವನ್ನಾಗಲಿ ನಾವು ವಿರೋಧಿಸುವೆವೆಂದು ಯಾರೂ ಭಾವಿಸಲಾಗದು. ಸ್ವಾತಂತ್ರ್ಯಮಾರ್ಗದಂತೆಯೆ ಸಾಂಪ್ರದಾಯಮಾರ್ಗವಾದರೂ ಒಂದು ಮಹತ್ತರ ಶಕ್ತಿ. ಸ್ವಾತಂತ್ರ್ಯವೇ ಒಂದು ಸಂಪ್ರದಾಯವಾಗುವ ದಿವಸಗಳು, ಮನುಷ್ಯನ ಮನಸ್ಸಿಗೆ ಮನಸ್ಸೇ ಬದಲಾದಾಗ್ಗೆ ಬರುವವು. ಸಾಂಪ್ರದಾಯದಲ್ಲಿ ಸ್ವಾತಂತ್ರ್ಯವಿರದಿದ್ದರೆ ಅದೊಂದು ಹರಿಗಡೆದ ಹಳ್ಳವು. ಸಾಂಪ್ರದಾಯದಲ್ಲಿಯೂ ಸ್ವಾತಂತ್ರ್ಯ ಬೇಕು. ಅಲ್ಲಿ ಜೀವಕಳೆಯಿದೆ. ಬರಿಯ ಸಾಂಪ್ರದಾಯದಲ್ಲಿ ಜೀವವಿಲ್ಲ; ಬರಿಯ ಸ್ವಾತಂತ್ರ್ಯದಲ್ಲಿ ಕಳೆಯಿಲ್ಲ. ಈ ತೊಡಕಿನ ಮೂಲಕವಾಗಿಯೂ ನಮ್ಮ ನಾಡಿನ ಹರಿದು ಹಂಚಿದ ಸ್ಥಿತಿಯ ಮೂಲಕವಾಗಿಯೂ, ಈಗಿನ ವಿಚಿತ್ರ ಶಿಕ್ಷಣದ ಮೂಲಕವಾಗಿಯೂ ಹಿಂದಿನದು ಹಿಂದೆ ಮುಂದಿನದು ಮುಂದೆ ಹೀಗೆ ಸ್ಥಿತಿಯಾಗಿದೆ. ಈ ಬಗೆಯ ಬಿಟ್ಟಿಯ ಕೆಲಸದಿಂದ ಯಾವತರದ ಗಟ್ಟಿಮುಟ್ಟಿಯಾದ ಕಾರ್ಯವೂ ಆಗದು. ಕರ್ನಾಟಕ ಚಳವಳದ ಗತಿಯು ಹೀಗಾಗಿದೆ. ತಲೆಗೊಂದು ಮಾತು ಕಾಲಿಗೊಂದು ಹಾದಿಯಾದರೆ ನಮ್ಮ ಉದ್ಯಮವು ಗೊತ್ತಿಗೆ ಮುಟ್ಟಲಾರದು. ಶಾಂತಕವಿಗಳಿಂದ ಮತ್ತು ಆಲೂರವರಿಂದ ಬಂದ 'ಸ್ವತ್ವವರಿಯದೆ ಸತ್ತ್ವ ಬರದು' 'ತನ್ನ ತಾನರಿತರೆ ತನ್ನರಿವೇ ಗುರು' ಎಂಬ ಹಾದಿಯನ್ನು ಕರ್ನಾಟಕೋದ್ಯಮದಲ್ಲಿ ನಾವು ಹಿಡಿದಿರುವೆವು.

---

## ಕರ್ನಾಟಕದ ಪ್ರಗತಿ

( ಆಲೂರ ವೆಂಕಟರಾಯರು ಬರೆದುದು )

ಕರ್ನಾಟಕದ ಪ್ರಗತಿಯು ಇತ್ತೀಚೆಗೆ ಹೇಗೆ ಭರದಿಂದ ಸಾಗುತ್ತ ನಡೆದಿರುವುದೆಂಬುದು ಕೆಳಗಿನ ಸಂಗತಿಗಳಿಂದ ಗೊತ್ತಾಗುವುದು. ಕರ್ನಾಟಕದಲ್ಲಿ ಇತ್ತೀಚೆಗೆ ಸಾಂಘಿಕ ಪ್ರಯತ್ನಗಳು ವಿಶೇಷವಾಗಿ ಕೈಕೊಳ್ಳಲ್ಪಡಹತ್ತಿವೆ. ದೇಶವು ಉದಯಾವಸ್ಥೆಯಲ್ಲಿದ್ದಾಗ ಈ ತರಹದ ಸಾಂಘಿಕ ಪ್ರಯತ್ನಗಳಿಗೆ ಅವಕಾಶವು ವಿಶೇಷವಿರುವದಿಲ್ಲ. ಜನತೆಯಲ್ಲಿ ಜಾಗ್ರತಿಯೇ ಇಲ್ಲದಿರುವಾಗ ಸಾಂಘಿಕ ಪ್ರಯತ್ನಗಳು ಯಶಸ್ವಿಯಾಗುವುದಕ್ಕೆ ಅವಕಾಶವೆಲ್ಲಿ ? ಆ ಸ್ಥಿತಿಯಲ್ಲಿ ಹಲಕೆಲವು ವ್ಯಕ್ತಿಗಳೇ ಮುಂದೆ ಬಂದು, ಕಷ್ಟಸಹಿಸಿ ತಮ್ಮ ಮನದಲ್ಲಿದ್ದ ವಿಚಾರಗಳನ್ನು ಜನಮನದಲ್ಲಿ ಬಿತ್ತಬೇಕಾಗುತ್ತದೆ. ಅವು ಜನಮನದಲ್ಲಿ ಮೊಳಕೆ ಒಡೆಯಹತ್ತಿದಾಗ ಸಾಂಘಿಕ ಶಕ್ತಿಯನ್ನು ಏಕೀಕರಿಸುವ ವಿಚಾರವು ಫಲಪ್ರದವಾಗುತ್ತದೆ. ಅಲ್ಲಿಯವರೆಗೆ ಅಂಥ ಪ್ರಯತ್ನಗಳೆಲ್ಲವೂ ವಿಫಲವಾಗುವುದು ಸ್ವಾಭಾವಿಕವು. ಕರ್ನಾಟಕವು ಈಗ ಮುಂದೆ ಹೆಜ್ಜೆ ಇಡುತ್ತಿರುವುದೆಂಬುದಕ್ಕೆ ಈತರಹದ ಸಾಂಘಿಕ ಪ್ರಯತ್ನಗಳು ಹೆಚ್ಚಾಗುತ್ತ ನಡೆದಿರುವುದೇ ಸಾಕ್ಷಿ. ಜಯಕರ್ನಾಟಕ ಮಂಡಲವು ಸ್ಥಾಪಿತವಾದುದೂ ಇಂಥ ಪ್ರಯತ್ನಗಳಲ್ಲಿಯೇ ಒಂದು. ಕರ್ಮವೀರ ದಿವಾಕರರೂ ರಾಷ್ಟ್ರೀಯವಾಙ್ಮಯಪ್ರಕಾಶನ ಮಂಡಲವೊಂದನ್ನು ತೆಗೆಯುವ ಪ್ರಯತ್ನದಲ್ಲಿ ಇರುವರು. ಅವರು ಆಕಸ್ಮಿಕವಾಗಿ ಜಡ್ಡುಬೀಳದಿದ್ದರೆ ಅದು ಇಷ್ಟರಲ್ಲಿ ಮೂರ್ತಸ್ವರೂಪವನ್ನು ಕಾಣಬಹುದಾಗಿತ್ತು. ಈಗ ಅವರಿಗೆ ಗುಣವಾಗುತ್ತಿರುವುದ

ರಿಂದ ತೀವ್ರವೇ ಆ ಮಂಡಲವು ಸ್ಥಾಪಿತವಾಗಿ ಕಾರ್ಯಕ್ಕೆ ಪ್ರವೃತ್ತವಾಗಬಹುದೆಂದು ಆಶಿಸುತ್ತೇವೆ. ಬೆಳಗಾಂವಿಯ 'ಸಂಯುಕ್ತಕರ್ನಾಟಕ' ಪತ್ರವೂ ಈ ತರಹದ ಸಂಘಶಕ್ತಿಯ ಫಲವೇ. ಸದ್ಬೋಧಚಂದ್ರಿಕೆ, ಪ್ರಬುದ್ಧಕರ್ನಾಟಕ, ಕರ್ಣಾಟಕ ಧುರೀಣ, ರಾಷ್ಟ್ರಬಂಧು, ಕಂಠೀರವ ಮುಂತಾದ ಪತ್ರಗಳು ಈ ಮೊದಲೇ ಸಂಘಶಕ್ತಿಯಿಂದ ನಡೆದಿರುವವು. ಅವುಗಳ ಜೊತೆಯಲ್ಲಿ ಮೇಲ್ಕಾಣಿಸಿದ ಸಂಸ್ಥೆಗಳೂ ಉತ್ಸಾಹದಿಂದಲೂ ಸಹಕಾರದಿಂದಲೂ ಕಾರ್ಯಮಾಡಿ ಕರ್ನಾಟಕದ ಉನ್ನತಿಯನ್ನು ಸಾಧಿಸಬೇಕೆಂದು ಕೋರುತ್ತೇವೆ. ಬೆಳಗಾವಿಯಲ್ಲಿ ಕಾಲೇಜಾಗುವುದಕ್ಕೆ ಈಗ ಒಂದು ಮಂಡಲವು ಸ್ಥಾಪಿತವಾಗಿರುವುದರಿಂದ, ಅದೂ ಇಡೀ ಕರ್ನಾಟಕದ ಒಂದು ಸಾಂಘಿಕ ಪ್ರಯತ್ನವೇ ಆಗಿರುವುದೆಂದು ಹೇಳಲು ಅಡ್ಡಿ ಇಲ್ಲ. ಧಾರವಾಡದ ಶಾಂತೇಶ ವಾಚನಾಲಯದವರು ಡಿಸೆಂಬರ ಕೊನೆಯ ವಾರದಲ್ಲಿ ಅಖಿಲ ಕರ್ನಾಟಕ ವಾಚನಾಲಯ ಪರಿಷತ್ತನ್ನು ಕರೆಯುವವರಿದ್ದಾರೆಂಬದೂ ವಾಚನಾಲಯಗಳ ಸಂಘಟನೆಯ ದೃಷ್ಟಿಯಿಂದ ಸಂತೋಷದ ಸಂಗತಿಯೇ.

ಕರ್ನಾಟಕ ಪ್ರಗತಿಯ ಮತ್ತೊಂದು ಕುರುಹೆಂದರೆ ರಾಷ್ಟ್ರೀಯ ಉತ್ಸವಗಳು. ಗಣೇಶೋತ್ಸವಗಳೂ ನವರಾತ್ರಿಯ ನಾಡಹಬ್ಬದ ಉತ್ಸವಗಳೂ ಈ ವರ್ಷ ಕರ್ನಾಟಕದ ೪೨ ಊರುಗಳಲ್ಲಿ ಜರುಗಿದವು. ಮಹಾಕವಿಯಾದ ಆದಿಪಂಪನ ಸ್ಮಾರಕೋತ್ಸವು ಮೊನ್ನಿನ ಕಡೆಪಂಚಮಿಯ ದಿವಸ ಲಕ್ಷ್ಮೇಶ್ವರ ಅಥವಾ ಪುಲಿಗೆರೆಯಲ್ಲಿ ಬಹಳ ವಿಜೃಂಭಣೆಯಿಂದ ಜರುಗಿತು. ಪಂಪನು ಲಕ್ಷ್ಮೇಶ್ವರದ ಅರಿಕೇಸರಿಯ ಆಶ್ರಯದಲ್ಲಿ ತನ್ನ ಆದಿಪುರಾಣವನ್ನು ಬರೆದು ಅದನ್ನು ಶಕೆ ೮೬೩(೯೪೧ಇ.) ಕಾರ್ತಿಕ ಶುದ್ಧ ಪಂಚಮಿಯ ದಿವಸ ಮುಗಿಸಿದನು. ಲಕ್ಷ್ಮೇಶ್ವರದ ಈ ಮಹೋತ್ಸವಕ್ಕೆ ಬೆಂಗಳೂರ, ಮೈಸೂರ, ಧಾರವಾಡ, ಹಾವೇರಿ, ಶಿರಹಟ್ಟಿ ಮುಂತಾದ ಸ್ಥಳಗಳಿಂದ ಕರ್ನಾಟಕ ಭಕ್ತರು ಬಂದಿದ್ದರಿಂದ ಉತ್ಸವಕ್ಕೆ ವಿಶೇಷ ಶೋಭೆಯುಂಟಾಗಿತ್ತು. ಈ ಬಗೆಯಾಗಿ ಈ ಮಹತ್ವದ ಮತ್ತು ಹೊಸದಾದ ಉತ್ಸವವನ್ನು ಪ್ರಾರಂಭಮಾಡಿದ್ದಕ್ಕಾಗಿ ನಾವು ಆ ಉತ್ಸವದ ಪ್ರವರ್ತಕರಾದ ಲಕ್ಷ್ಮೇಶ್ವರದ ಮಹಾಜನಗಳ ಉಪಕಾರವನ್ನು ಸ್ಮರಿಸುವುದು ಅವಶ್ಯವಿದೆ. ಶ್ರೀ. ಶಾಂತೇಶ ವಾಚನಾಲಯದವರು ಈಗ ೬-೭ ವರ್ಷಗಳ ಹಿಂದೆಯೇ ಪಂಪ ಉತ್ಸವವನ್ನು ಪ್ರಾರಂಭಿಸಿ ಪ್ರತಿವರ್ಷ ಜರುಗಿಸು[ತ್ತ] ಬಂದಿರುವರು. (ಈ ಶಾಂತೇಶ ವಾಚನಾಲಯದವರು [ಈ] ಇಡೀ ಕರ್ನಾಟಕದ ವಾಚನಾಲಯಗಳ ಪರಿಷತ್ತನ್ನು ಜ[ರುಗಿ]ಸುವ ಮಹಾಪ್ರಯತ್ನವನ್ನು ಕೈಕೊಂಡಿರುವುದರಿಂದ, [ಈ] ಸಾಂಘಿಕ ಪ್ರಯತ್ನವೂ ಯಶಸ್ವಿಯಾಗುವಂತೆ ಮಾಡುವ[ದು] ಕನ್ನಡಿಗರ ಕರ್ತವ್ಯ.) ಇದೇ ಬಗೆಯಾಗಿ, ಆಯಾ ಸ್ಥ[ಳದ] ಕವಿಗಳ, ಮಹಾಪುರುಷರ ಉತ್ಸವಗಳನ್ನು ಆಯಾ ಊ[ರವರು] ರಾಷ್ಟ್ರೀಯ ದೃಷ್ಟಿಯಿಂದ ಮಾಡಹತ್ತಿದರೆ, ಕರ್ನಾಟಕ[ದ] ಸರ್ವತ್ರ ಜಾಗ್ರತಿಯಾಗುವುದಕ್ಕೆ ಅನುಕೂಲವಾಗುತ್ತ[ದೆ]. ವಿಶೇಷತಃ ಈ ಬಗೆಯ ಉತ್ಸವಗಳನ್ನು ಸಂಸ್ಥಾನಗಳಲ್ಲಿಯೂ ಗಡಿನಾಡುಗಳಲ್ಲಿಯೂ ತೀವ್ರ ಪ್ರಾರಂಭಮಾಡುವುದು ಅವ[ಶ್ಯ]ವಿದೆ. ರನ್ನನ ಉತ್ಸವವು ಮುಧೋಳದಲ್ಲಿ ಪ್ರಾರಂಭವಾ[ಗ] ಬೇಕು. ಜಕ್ಕಣಾಚಾರ್ಯರ ಉತ್ಸವವು ಬೇಲೂರಲ್ಲಿ ಜ[ರುಗ] ಬೇಕು. ಸಂಸ್ಥಾನಗಳಲ್ಲಿಯೂ ಗಡಿನಾಡುಗಳಲ್ಲಿಯೂ ತೀ[ವ್ರ] ಜಾಗ್ರತಿಯಾಗುವುದು ಅವಶ್ಯ. ಯಾವಗಿ, ಬನಹಟ್ಟಿ ಮುಂತಾದ ಕೆಲವು ಊರುಗಳಲ್ಲಿ ಮಾತ್ರವೇ ಈ ತರ[ಹ] ಜಾಗ್ರತಿಯು ಈಗ ಕಂಡುಬರುತ್ತದೆ. ಮೊನ್ನೆ ಬನಹಟ್ಟಿ[ಯ]ವರು ಶ್ರೀ. ಕೃಷ್ಣರಾವ ಮುದವೇಡಕರ ಇವರನ್ನು ಕರೆಸಿಕೊಂ[ಡು] ಅದೇದಿನ ಜರುಗಿದ ತಮ್ಮೂರ ವಾಚನಾಲಯದ ವಾರ್ಷಿ[ಕೋ]ತ್ಸವದ ಕಾಲಕ್ಕೆ ಪಂಪನ ಸ್ಮರಣೆಯನ್ನು ಮಾಡಿದರು. ಇ[ದು]

ರಾಷ್ಟ್ರಪ್ರಗತಿಯ ಮೂರನೆಯ ಚಿಹ್ನವೆಂದರೆ-ವ್ಯಕ್ತಿ[ಯ] ಉತ್ಕರ್ಷ, ಇತ್ತೀಚೆಗೆ ನಮ್ಮ ಕರ್ನಾಟಕ ಪುರುಷರು ಪ್ರ[ತಿ] ಯೊಂದು ಶಾಖೆಯಲ್ಲಿ ಹೇಗೆ ಮುಂದುವರಿಯುತಿಹರೆಂಬುದ[ನ್ನು] ನೋಡಿ ನಮಗೆ ಆನಂದವಾಗುತ್ತದೆ. ಮುಂಬಯಿ ಕರ್ನಾ[ಟಕ] ದಲ್ಲಿ ಧಾರವಾಡದವರಾದ ಶ್ರೀ ಗುರುರಾವ ಜೇವೂರ ಎಂಬು[ವರು] ಆಯ. ಸಿ. ಎಸ್. ಪರೀಕ್ಷೆ ಪಾಸಾಗಿ, ಕರ್ನಾಟಕದ ಕೀ[ರ್ತಿ]ಯನ್ನು ಎಡೆಬಿಡದೆ ಹಬ್ಬಿಸುತ್ತಿರುವರು. ಇವರು ಈಗ ಮುಂ[ಬಯಿ] ಇಲಾಖೆಗೆ ಪೋಸ್ಟಮಾಸ್ತರ ಜನರಲ್‌ರಾಗಿ ನೇಮಿಸ[ಲ್ಪ]ಟ್ಟಿರುವರೆಂದು ತಿಳಿಸಲಿಕ್ಕೆ ಸಂತೋಷವಾಗುತ್ತದೆ. ಇವ[ರು] ಕರ್ನಾಟಕದ ಉಜ್ವಲ ಭಕ್ತರು. ದಾವಣಗೇರಿಯಲ್ಲಿ ಕರ್ನಾ[ಟಕ] ಸಾಹಿತ್ಯ ಸಮ್ಮೇಲನಕ್ಕೆ ಅವರು ಬಂದಾಗ, ಅವರಲ್ಲಿ ಕನ್ನ[ಡ] ಮತ್ತು ಕರ್ನಾಟಕ ಇವುಗಳ ಬಗ್ಗೆ ಎಷ್ಟು ಪ್ರೇಮವಿರುವ[ದೆಂ]ಬುದು ವ್ಯಕ್ತವಾಯಿತು. ಅಖಿಲ ಕರ್ನಾಟಕಕ್ಕೆ ಒಂದು ವಿ[ಶ್ವ] ವಿದ್ಯಾಲಯವು ಆಗಬೇಕೆಂದು ಅವರು ಹಾತೊರೆಯುತ್ತಿರುವ[ರು].

## ಶ್ರೀ. ಬೇವೂರ ಗುರುರಾಯರು



ಅವರು ವಿಜಾಪುರ ಧಾರವಾಡ ಹಾಯಸ್ಕೂಲುಗಳಲ್ಲಿ ಕಲಿತವರು. ಕಾಲೇಜದಲ್ಲಿ ವಿದ್ಯಾರ್ಥಿವೇತನಗಳನ್ನು ಪಡೆದು ಅನೇಕಸಲ ಒಂದನೇ ವರ್ಗದಲ್ಲಿ ಬಂದವರು. ೧೯೦೯ ರಲ್ಲಿ ಇಂಗ್ಲಂಡಕ್ಕೆ ಹೋಗಿ ಅಲ್ಲಿಯ ಪರೀಕ್ಷೆಗಳಲ್ಲಿಯೂ ಭಕ್ಷಿಸುಗಳನ್ನು ಪಡೆದವರು. ಅವರು ೧೯೧೨ ರಲ್ಲಿ ಆಯ. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮರಳಿ ಬಂದಬಳಿಕ, ಅವರು ಸರಕಾರೀ ನವಕರಿಯಲ್ಲಿ ದಿನದಿನಕ್ಕೆ ಉನ್ನತ ಪದವಿಗಳನ್ನು ಪಡೆದಿರುವರು. ೧೯೩೦–೩೧ ರಲ್ಲಿ ಕಲೆಕ್ಟರರಾಗಿದ್ದರು. ಸರಕಾರದ ಪ್ರತಿನಿಧಿಗಳಾಗಿ ಪರದೇಶಗಳಿಗೆ ಹೋಗಿಬಂದಿರುವರು.

ಈ ಬಗೆಯಾಗಿ ಕರ್ನಾಟಕದ ಕೀರ್ತಿಯನ್ನು ದಿಗಂತದಲ್ಲಿ ಹರಡುವ ಕರ್ನಾಟಕ ಭಕ್ತರು ಕರ್ನಾಟಕಕ್ಕೆ ಭೂಷಣರಲ್ಲವೆ? ಕರ್ನಾಟಕದ ತರುಣರು ಇತ್ತೀಚೆಗೆ ಪ್ರತಿಯೊಂದು ಶಾಖೆಯಲ್ಲಿ ಮುಂದುವರಿಯುತ್ತಿರುವರು. ಉಚ್ಚ ತರಗತಿಯ ಶಿಕ್ಷಣದಲ್ಲಿ ಮಂಗಳೂರಿನವರು ಬಹಳ ಮುಂದುವರಿದಿರುವರು. ಅಲ್ಲಿಯ ತರುಣರು ಐಯ್. ಸಿ. ಎಸ್. ಪರೀಕ್ಷೆಯಲ್ಲಿ ಪಾಸಾಗಿರುವಷ್ಟು ಮತ್ತಾವ ಭಾಗದ ಕರ್ನಾಟಕರೂ ಆಗಿರುವುದಿಲ್ಲ. ಈ ವರ್ಷವೇ, ಆಯ್. ಸಿ. ಎಸ್. ಪರೀಕ್ಷೆಯಲ್ಲಿ ಮಂಗಳೂರಿನವರು ಮೂರು ಜನರು ಉತ್ತೀರ್ಣರಾಗಿರುವರು. ಹಿಂದುಸ್ಥಾನದ ಅನೇಕ ಭಾಗಗಳಲ್ಲಿ ಮೈಸೂರಿನವರೂ ಮಂಗಳೂರಿನವರೂ ಕೊಡಗರೂ ಅನೇಕ ಸಾಹಸದ ಕಾರ್ಯಗಳನ್ನು ಕೈಕೊಂಡಿರುವರು. ಬ್ರಹ್ಮದೇಶ, ಸಿಂಹಳದ್ವೀಪ ಮುಂತಾದ ಪ್ರದೇಶಗಳಲ್ಲಿಯೂ ಕನ್ನಡ ಭಕ್ತರಾದ ಮೈಸೂರಿನವರನ್ನು ನಾವು ಕಾಣಬಹುದು. ಇಂಗ್ಲಂಡದಲ್ಲಿ ಶ್ರೀ ಮಾಲವಣಕರರೆಂಬ ಮಹಾರಾಷ್ಟ್ರ ಗೃಹಸ್ಥರು ಸುಗಂಧ ದ್ರವ್ಯಗಳ ಕಾರಖಾನೆಯನ್ನು ಈಗ ಅನೇಕ ವರುಷಗಳಿಂದ ಬಹಳ ಚೆನ್ನಾಗಿ ನಡಿಸಿದ್ದಾರೆ; ಇದರಲ್ಲಿ ಕಲಿಯಲಿಕ್ಕೆ ಹಿಂದೂ ವಿದ್ಯಾರ್ಥಿಗಳನ್ನು ಕೆಲವರನ್ನು ತಕ್ಕೊಳ್ಳಬೇಕೆಂದು ಶ್ರೀ ಮಾಲವಣಕರರು ಮೊನ್ನೆ ತಾನೆ ಗೊತ್ತುಪಡಿಸಿದ್ದಾರೆ; ಆಗ ಅನೇಕ ಮಹಾರಾಷ್ಟ್ರೀಯ ತರುಣರೂ, ಬೇರೆ ಹಲವರೂ ಮುಂದೆ ಬಂದರು; ಆದರೆ ಅಂತಹರಲ್ಲಿ ಬೆಂಗಳೂರಿನ ಶ್ರೀ ಎಸ್. ಜಿ. ಶಾಸ್ತ್ರಿ B. Sc. ಎಂಬ ತರುಣ ಕನ್ನಡಿಗರೇ ಶ್ರೀ ಮಾಲವಣಕರರ ಒರೆಗಲ್ಲಿಗೆ ಹತ್ತಿ ಅವರ ಮೆಚ್ಚುಗೆಗೆ ಮೊಟ್ಟಮೊದಲು ಪಾತ್ರರಾದುದು ಅಭಿನಂದನೀಯವು. ಈ ಬಗೆಯ ಸಾಹಸೋದ್ಯಮಗಳು ಕೊಡಗು ಮಂಗಳೂರು ಮೈಸೂರಿನವರಿಗೆ ಹೊಸವಲ್ಲ. ಕ್ಯಾಪಟನ್ ಗಣಪತರಾಯರು, ಶ್ರೀ ಬಿ. ರಾಮರಾಯರು, ಎಚ್. ನಾರಾಯಣರಾಯರು, ವ್ಹಿ. ಎನ್. ಕುಡ್ವ I. C. S, ಡಾ. ನಂಜುಂಡಯ್ಯ, ಸರದಾರ ಗೋವಿಂದರಾಯರು, ಕರ್ಪೂರ ಶ್ರೀನಿವಾಸರಾಯರು, ಸರ್ ವಿಶ್ವೇಶ್ವರಯ್ಯನವರು ಇವರೇ ಮೊದಲಾದವರ ಅವ್ಯಾಹತ ಪರಂಪರೆಯು ಹಲವು ವರುಷಗಳಿಂದ ನಡೆಯುತ್ತಬಂದಿದೆ.

ಉತ್ತರಕರ್ನಾಟಕದವರೂ ಇತ್ತೀಚೆಗೆ ಶಿಕ್ಷಣ ವಿಷಯದಲ್ಲಿ ಮುಂದುವರಿಯುತ್ತಿರುವರು. ಮುಂಬಯಿ ಜೆ. ಜೆ. ಸ್ಕೂಲ ಆಫ್. ಆರ್ಟದಲ್ಲಿ ಫೆಲೋಗಳಾಗಿದ್ದ ಧಾರವಾಡ ಜಿಲ್ಹೆಯಲ್ಲಿಯ ಮಿಶ್ರೀಕೋಟಿಯ ಶ್ರೀ. ಬಡಿಗೇರ ಎಂಬವರು ಸಿರಸಂಗಿ ಫಂಡಿನ ಸಹಾಯದಿಂದ ಪರದೇಶಕ್ಕೆ ಲಲಿತಕಲೆಗಳನ್ನು ಕಲಿಯುವುದಕ್ಕೆ ಹೋಗಿರುವರು. ಹೊಸ ದಿಲ್ಲಿಯ ಪಟ್ಟಣದಲ್ಲಿ ಚಿತ್ರಗಳನ್ನು ಬರಿಸುವುದಕ್ಕೆ ವಿಜಾಪುರದವರಾದ ಶ್ರೀ. ಮಿಣಜಿಗಿಯವರನ್ನು ಸರಕಾರದವರು ನೇಮಿಸಿದ್ದರು; ಆ ಕಾರ್ಯವನ್ನು ಅವರು ತೃಪ್ತಿಕರವಾಗಿ ಮುಗಿಸಿ ಪರದೇಶಕ್ಕೆ ಲಲಿತ

ಕಲೆಗಳಲ್ಲಿ ಹೆಚ್ಚಿನ ಶಿಕ್ಷಣವನ್ನು ಪಡೆಯುವುದಕ್ಕೆ ಹೋಗಿರುವರು. ಜಯಕರ್ನಾಟಕದ ವಾಚಕರಿಗೆಲ್ಲರಿಗೂ ಪರಿಚಿತರಾಗಿರುವ ಶ್ರೀ. ರಂಗರಾವ ಅಸುಂಡಿಯವರೂ ಶಿಕ್ಷಣದಲ್ಲಿ ಬಹಳ ಮುಂದುವರಿದಿರುವರು. ಶ್ರೀ. ರಂಗರಾಯರು ಶಾಸ್ತ್ರೀಯ ಸಂಶೋಧನಗಳನ್ನು ಮಾಡುತ್ತಿರುವರು. ಅವರು ಈಗ ಪಿ' ಎಚ್. ಡಿ. ಪರೀಕ್ಷೆಯಲ್ಲಿ ಪಾಸಾಗಿ ವಿಲಾಯತಿಯಲ್ಲಿ ಹೆಚ್ಚಿನ ಶೋಧಗಳನ್ನು ನಡೆಸಿರುವರು. ಬೆಳಗಾಂವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಶ್ರೀ. ಸಂಕಪಾಲ ಎಂಬವರು ಬಿ. ಎ., ಪರೀಕ್ಷೆಯಲ್ಲಿ ಒಂದನೇ ವರ್ಗದಲ್ಲಿ ಬಂದಿದ್ದು ಅವರು ಈಗ ಆಯ್. ಸಿ. ಎಸ್. ಪರೀಕ್ಷೆಗೋಸ್ಕರ ವಿಲಾಯತಿಗೆ ಹೋಗಿರುವರು. ಈ ಬಗೆಯಾಗಿ, ಎಲ್ಲೆಡೆಯಲ್ಲಿಯೂ ಕರ್ನಾಟಕದ ತರುಣರಲ್ಲಿ ಹೊಸ ತೇಜವು ಕಂಗೊಳಿಸಹತ್ತಿರುವುದು.

---

## ಶಾರದಾಬಿಲ್ಲು

ಬಾಲವಿವಾಹಕ್ಕೆ ಪ್ರತಿಬಂಧ! ಪ್ರೌಢವಿವಾಹಕ್ಕೆ ಪ್ರೋತ್ಸಾಹ! ಸಮಾಜ ಸುಧಾರಣೆಯಲ್ಲಿ ಮನ್ವಂತರವಾಗಲಿದೆ! ಕೆಲವರು ಬೆಪ್ಪಾಗಿದ್ದಾರೆ! ಕೆಲವರು ಬೆರಗಾಗಿದ್ದಾರೆ; ಕೆಲವರು ಉಬ್ಬಿದ್ದಾರೆ. ಪೂರ್ವಸಾಂಪ್ರದಾಯದವರಿಗೆ ಧರ್ಮ ಮುಳುಗಿತು, ಪ್ರಳಯಕಾಲ ಬಂದಿತು ಎನಿಸುತ್ತಲಿದೆ. ನವೀನರಿಗೆ—ಸುಖಸಾಮ್ರಾಜ್ಯಕ್ಕೆ ಹಾದಿಯಾಯಿತು, ಸತ್ಯಯುಗ ಬರುತ್ತಲಿದೆ ಎಂದೆನಿಸುತ್ತಿದೆ. ಮೇಲಕ್ಕೆತ್ತಿದ ಈ ಬಿಲ್ಲಿನಿಂದ ಬಾಣಗಳ ಸುರಿಮಳೆಯಾಗುವದೋ, ಏನು ಅದೇ ಭಂಗವಡೆದು ಬೀಳುವದೋ, ನೋಡಬೇಕು. 'ಆರ್ತತ್ರಾಣಾಯ ನಃ ಶಸ್ತ್ರಂ ನ ಪ್ರಹರ್ತುಮನಾಗಸಿ ' ಎಂಬದನ್ನು ಈ ಬಿಲ್ಲಿನವರೂ ನೆನಪಿಡಬೇಕು. ಅದಿರಲಿ. ಈ ಬಿಲ್ಲು ಯಾರ ಸಂರಕ್ಷಣಕ್ಕಾಗಿ ಹೋಟಿದೆ? ಈ ಶಸ್ತ್ರವನ್ನೆತ್ತಿದ್ದಾದರೂ ಯಾವ ಶಾಸ್ತ್ರದ ಬೆಂಬಲದಿಂದ ?

" ನಮ್ಮ ಸಂತತಿಯು ಅಲ್ಪಾಯುವಾಗಿದೆ. ಬಾಲ ವಿಧವೆಯರ ಗೋಳು ಸಮಾಜವನ್ನು ಸಂಕಟಕ್ಕೀಡುಮಾಡಿದೆ. ದಾಂಪತ್ಯದಲ್ಲಿ ಸುಖವು ಕಡಿಮೆಯಾಗಿದೆ. " ಎಂದು ಮೊದಲಾಗಿ ನವೀನರು ಆಕ್ರೋಶಿಸುತ್ತಿದ್ದಾರೆ. ಮೇಲಾಗಿ ಬಾಲವಿವಾಹವು ಶಾಸ್ತ್ರಸಮ್ಮತವಲ್ಲ ಎಂದು ಅವರ ಅಭಿಪ್ರಾಯ. ವೇದ ಮೊದಲುಮಾಡಿಕೊಂಡು ವೈದ್ಯಕದ ವರೆಗೆ ಅವರಿಗೆ ಆಧಾರ. ನಮ್ಮ ಈಗಿನ ದುಃಖಗಳಿಗೆ ಪ್ರೌಢವಿವಾಹವೇ ಮದ್ದು ... ಅವರ ಸಿದ್ಧಾಂತ. ತದನುರೋಧವಾಗಿ ಅವರ ಪ್ರಯ... ಅವರ ಈ ಹೊಸಧರ್ಮಕ್ಕೆ ದಂಡದ ಬೆಂಬಲ ಬೇಕಾ... ಅದೇ ಈ ಶಾರದಾಬಿಲ್ಲು.

ನವೀನರ ಎಲ್ಲ ಮಾತುಗಳಿಗೆ ಸಾಂಪ್ರದಾಯಿಕರದು ಒ... ಉತ್ತರ " ಇದು ಶಾಸ್ತ್ರವಿರುದ್ಧವಾಗುತ್ತದೆ! ಇದು ಶಾಸ್ತ್ರ... ದ್ಧವಾಗುತ್ತದೆ! " ಇಷ್ಟೊಂದು ಮಾರಿ ಕೇಳಿದರೆ " ಅಲ್ಪಾಯುಷ್ಯ... ವದು ಕಲಿಯುಗಧರ್ಮ; ವಿಧವೆಯರ ಗೋಳು ಅವರ ಪೂ... ಕರ್ಮ ಅಥವಾ ಸತಿಹೋಗದುದರ ಪರಿಣಾಮ; ದಾಂಪ... ಲ್ಲಿಯ ಅಸುಖ ನೂತನ ಪರಿಸ್ಥಿತಿಯ ಫಲ ". ಸಮಂಜಸ... ದ್ಧಿಯ ಸಂಪ್ರದಾಯಿಕರು " ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ " ಎನ್ನುವಂತೆ ಹಾಮೇರೀ ನ್ಯಾಯಕ್ಕೆ ... ದ್ದಾರೆ. ಆದರೆ ಇದು ನವೀನರಿಗೇ ಹೆಚ್ಚು ಅನುಕೂಲವಾ... ದನ್ನು ಮರೆಯಕೂಡದು. ನಮ್ಮ ಕಾಯದೇ ಮಂಡಳ... ' ಯಸ್ಯಕಸ್ಯತರೋರ್ಮೂಲಂ ' ಪದ್ಧತಿಯಿಂದಾಗಿರು... ರಿಂದ ' ಯದ್ವಾತದ್ವಾ ' ಪರಿಣಾಮವಾದರೆ ಆಶ್ಚರ್ಯವೇ...

### ವಿಚಾರಣೀಯವಾದ ಅಂಶಗಳು

ಶಾರದಾಬಿಲ್ಲಿನ ಚರ್ಚೆಯಿಂದ ಒಂದೆರಡು ವಿಚಾರಣೀ... ವಾದ ಅಂಶಗಳು ಹೊರಡುವವು. ನಮಗೆ ಸದ್ಯಕ್ಕೆ ಸಂ... ವಿಲ್ಲದ ಈ ರಾಜ್ಯಪದ್ಧತಿಯನ್ನು, ಬಹಳ ದಿನಗಳಿಂದ ನ... ಬಂದ ನಮ್ಮ ಸಮಾಜ ಪದ್ಧತಿಯ ಸಂಸ್ಕಾರಕ್ಕಾಗಲಿ ಸುಧಾ... ಣೆಗಾಗಲಿ ಆಶ್ರಯಿಸುವದುಚಿತವೇ ಅನುಚಿತವೇ ? ಸ... ನಮ್ಮಲ್ಲಿ ಕಾದಾಡುವಾಗ ಬೇಕಾದರೆ ಪ್ರೌಢವಿವಾ... ಹಿತಕರ ಪರಿಣಾಮವನ್ನೂ ಬಾಲ್ಯವಿವಾಹದ ಅನಿಷ್ಟವನ್ನು ನಮ್ಮ ಮತಗಳ ಗಮನಕ್ಕೆ ತಂದುಕೊಡುವಾ. ಬಹಿಷ್ಕಾರ... ಗಳನ್ನೂ ಲೆಕ್ಕಿಸದೇ ಪ್ರೌಢವಿವಾಹಗಳನ್ನು ಪ್ರೋತ್ಸಾ... ನಮ್ಮ ನಡತೆಯಿಂದ ಹೊಸದಾದ ಅನುಭವದಿಂದ ನಮ್ಮ ಜ... ಮನವನ್ನು ಗೆಲ್ಲುವಾ. ಆದರೆ ನಮ್ಮ ಸಂಸ್ಕೃತಿ ಪದ್ಧತಿ... ತಿರುಳರಿಯದವರು ಯಾವ ಉದ್ದೇಶದಿಂದ ಈ ಹೊಸ ಸುಧಾ... ಯನ್ನು ಪುರಸ್ಕರಿಸುವರೋ ಎಂಬುದನ್ನರಿಯದೆ ಅವರ ಶಾಸ್ತ್ರ... ನಮ್ಮನ್ನು ಒಪ್ಪಿಸಿಕೊಳ್ಳುವದು ಬೇಡ. ಪ್ರೌಢವಿವಾ... ನಿಜವಾಗಿಯೂ ಅಗತ್ಯವಿದ್ದರೆ ಜನಮನವನ್ನನುಕೂಲಿಸಿ... ಕ್ಕೊಣಾ. ಅದಕ್ಕಾಗಿ ಸಮಾಜದ ವಿರೋಧವನ್ನೂ ಕಾಟವನ್ನು...

ಸಹಿಸುವಾ. ಆದರೆ ಸಾಮಾಜಿಕ ಆಚರಣೆಯ ವಿಷಯಗಳಲ್ಲಿ ನಮ್ಮ ಧರ್ಮಶಾಸ್ತ್ರಗಳ ಪ್ರಾಯಶ್ಚಿತ್ತ ಕಾಂಡಕ್ಕೆ ವಿರುದ್ಧರಿದ್ದ ನವೀನ ಸಮಾಜಸುಧಾರಕರು ಬಾಲ್ಯವಿವಾಹ ವಿಷಯದಲ್ಲಿ ಮಾತ್ರ ಬಿಲ್ಲಿನ ಬೆಂಬಲವನ್ನೇಕೆ ಬೇಡುವರೋ ? ಇಲ್ಲಿಯೂ ಆಚಾರಕ್ಕೆ ಸ್ವಲ್ಪ ಸ್ವಾತಂತ್ರ್ಯವು ದೊರೆಯುವರಿಗೆ ಬೇಡವೇ ? ಮತ್ತೊಂದು ಮಾತು. ಬಾಲ್ಯವಿವಾಹದಿಂದ ನಮ್ಮಿಕಲಿಯು ಗದಲ್ಲಾಗುವ ದುಷ್ಪರಿಣಾಮಗಳಿಗೆ ಬಿಟ್ಟುಸಿರಿಗಿಂತ ಬೇರೆ ಯಾವ ಉಪಾಯವನ್ನು ಪೂರ್ವ ಸಂಪ್ರದಾಯ ಪುರಸ್ಕರ್ತರೂ ಮಠದ ವರೂ ಕೈಕೊಂಡಿದ್ದಾರೆ ? ರಕ್ತವು ಕೆಟ್ಟಿದೆ. ಆರೋಗ್ಯವಿಲ್ಲದೆ ಸಮಾಧಾನವಿಲ್ಲ. ಅಲೋಪಥಿಯ ಔಷಧಿಯನ್ನು ವಿಜಾತೀಯ ವೆಂದು ಬಿಡಬಹುದು; ಆಯುರ್ವೇದದ ಪ್ರಕಾರ ಉಪಾಯವಾ ದರೂ ಬೇಡವೇ ? ಅದಾಗದಿದ್ದರೆ ಯಮರಾಜನ ಮೃತ್ಯುಪಥಿ ಯೇ ಹಾದಿ. ಇನ್ನೊಂದು ಮಾತು. ಪ್ರೌಢವಿವಾಹವೊಂದು– ಒಂಟೆಯ ಮೂಗಿನಂತೆ. ತಂಡಿಯ ಬಾಧೆಗಾಗಿ ಗುಡಾರದಲ್ಲಿ ಮೂಗು ಮೊದಲು ಸೇರಿದರೂ–ಅದರ ಹಿಂದಿನಿಂದ ಒಂಟೆ ಬರ ತಕ್ಕದ್ದಿದೆ. ಅನಿವಾರ್ಯವಿದ್ದರೆ ಅದೂ ಬರಲಿ. ಅದಕ್ಕೂ ಪ್ರತ್ಯು ಪಾಯ ಯೋಜಿಸುವಾ. ಆದರೆ ಮುಗುಬಂದರೆ ಮೈಯೆಲ್ಲ ಬಂದೇತೀರುವದೆಂಬುದು ಹೇಗೆ ಎಂಬ ಮುಗ್ಧವಾದ ಬೇಡ.

---

## ಶ್ರೀ ವಿದ್ಯಾರಣ್ಯರು ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರು ಅಲ್ಲವೊ ?

(ಆಲೂರ ವೆಂಕಟರಾಯರು ಬರೆದುದು.)

ಫಾದರ್ ಹಿರಾಸ್ ಎಂಬವರು ಒಬ್ಬ ಪಾದ್ರಿಗಳು, ಪಂಡಿ ತರು; ಅವರಿಗೆ ಇತಿಹಾಸದಲ್ಲಿ ವಿಶೇಷವಾದ ಅಭಿರುಚಿ; ಅವರು ಇತ್ತೀಚೆಗೆ ಹಿಂದುಸ್ಥಾನದ ಇತಿಹಾಸದಲ್ಲಿ ಹೊಸ ಸಂಶೋಧ ನೆಗಳನ್ನು ಮಾಡುತ್ತಿರುವರು. ಸಂಶೋಧನೆಯ ಕಾರ್ಯವನ್ನು ಮಾಡುವವಕ್ಕೋಸ್ಕರ ಅವರಿಗೆ ಮುಂಬಯಿ ವಿಶ್ವವಿದ್ಯಾಲಯ ದವರು ಬಹಳ ಧನವನ್ನು ದಾನವಾಗಿ ಕೊಟ್ಟಿರುವರು. ಫಾದರ್ ಹಿರಾಸ್ ಇವರು ವಿಜಯನಗರವು ಹಾಳಾಗುವ ಸುಮಾರದ ಇತಿಹಾಸವನ್ನು ಅಂದರೆ ಪಾದ್ರಿ ಜನರು ಈ ದೇಶದಲ್ಲಿ ಕಾಲಿಟ್ಟ ಸುಮಾರದ ಇತಿಹಾಸವನ್ನು ಅತ್ಯಂತ ಪರಿಶ್ರಮಪೂರ್ವಕವಾಗಿ ಶೋಧಿಸಿ ಉತ್ಕೃಷ್ಟವಾದುದೊಂದು ಪುಸ್ತಕವನ್ನು ಬರೆದಿ ರುವರು. ಅದಲ್ಲದೆ ಇವರು ಹೋದ ವರುಷ ಮೈಸೂರಿನಲ್ಲಿ ಅಲ್ಲಿಯ ವಿಶ್ವವಿದ್ಯಾಲಯದ ಪರವಾಗಿ ಕೆಲವು ಉಪನ್ಯಾಸಗ ಳನ್ನು ಕೊಟ್ಟಿರುವರು. ಒಂದು ಉಪನ್ಯಾಸದಲ್ಲಿ ಶ್ರೀ ವಿದ್ಯಾ ರಣ್ಯರಿಗೂ ವಿಜಯನಗರ ಸಾಮ್ರಾಜ್ಯಸ್ಥಾಪನೆಗೂ ತಿಲಸ್ಟಾ ಯವೂ ಸಂಬಂಧವಿಲ್ಲವೆಂದೂ, ಶ್ರೀ ವಿದ್ಯಾರಣ್ಯರು ರಾಜಸ್ಥಾ ಪಕರೆಂಬ ಅಭುಕ್ತ ಸುಳ್ಳು ಸುದ್ದಿಯನ್ನು ಶೃಂಗೇರಿಪೀಠದ ವರು ತಮ್ಮ ಸ್ವಾರ್ಥಕ್ಕೋಸ್ಕರ ಹುಟ್ಟಿಸಿ ಅವಕ್ಕೆ ಅನುಕೂಲ ವಾಗುವಂತೆ ಸುಳ್ಳು ಪುರಾವೆಗಳನ್ನು ತಯಾರಿಸುವ ವ್ಯವಸ್ಥೆ ಮಾಡಿದರೆಂದೂ ಒಂದು ವಿಲಕ್ಷಣವಾದ ಮತ್ತು ಇಂದಿನವರೆಗಿನ ಯಾವತ್ತು ಭಾವನೆಗಳನ್ನು ಬುಡಮೇಲು ಮಾಡುವ ವಿಧಾನ ವನ್ನು ಮಾಡಿರುವರು. ಮತ್ತು ಆ ಬಗ್ಗೆ ತಮ್ಮ ದೃಷ್ಟಿಯಿಂದ ಕೆಲವು ಆಧಾರಗಳನ್ನು ಕೊಟ್ಟಿರುವರು. ಆ ಸಂಬಂಧವಾಗಿ ವಿಚಾರ ಮಾಡುವುದು ಅವಶ್ಯವಿದೆ.

ಅರ್ಥಾತ್, ಇದು ಮುಖ್ಯತಃ ಐತಿಹಾಸಿಕ ಪ್ರಶ್ನೆಯು, ಭಾವ ನೆಯ ಪ್ರಶ್ನೆಯಲ್ಲ. ಆದಕಾರಣ ನಾವು ಇದನ್ನು ಕೇವಲ ಇತಿ ಹಾಸ ದೃಷ್ಟಿಯಿಂದಲೇ ಚರ್ಚಿಸುತ್ತೇವೆ. ಫಾದರ್ ಹಿರಾಸ್ ಇವರು ಕೆಲವು ಪ್ರಕಾಶಿತವಾದ ಮತ್ತು ಅಪ್ರಕಾಶಿತವಾದ ಆಧಾರಗಳನ್ನು ಕೊಟ್ಟಿರುವುದರಿಂದ (ಇವುಗಳ ವಿಷಯವಾಗಿ ನಾವು ಅ. ಸೂರ್ಯನಾರಾಯಣರೇ ಮುಂತಾದವರಿಗೆ ಪತ್ರ ಬರೆಯುವೆವು.) ವಿಸ್ತಾರವಾಗಿ ವಿಚಾರ ಮಾಡಲು ಇಷ್ಟರಲ್ಲಿ ಅವಕಾಶವಿಲ್ಲ. ಅಲ್ಲದೆ, ಬಿಡಿನುಡಿಯಲ್ಲಿ ಸ್ಥಳವೂ ಇಲ್ಲ. ಆದ ಕಾರಣ, ಸದ್ಯಕ್ಕೆ ಈ ವಿಷಯದ ವಿಚಾರವನ್ನು ಸ್ಥೂಲಮಾನ ದಿಂದ ಮಾಡಿ, ಫಾದರ್ ಹಿರಾಸ್ ಇವರ ವಿವೇಚನೆಯಲ್ಲಿ ನಮಗೆ ಸಕೃದ್ದರ್ಶನಕ್ಕೆ ಕಂಡುಬಂದ ದೋಷಗಳನ್ನು ನಾವು ವಾಚಕರ ಮುಂದೆ ಇಡುತ್ತೇವೆ.

ಫಾದರ್ ಹಿರಾಸ್ ಇವರು ಮುಖ್ಯತಃ ಮೂರು ಆಧಾರಗಳ ಮೇಲೆ ಅವಲಂಬಿಸಿರುವರು. (೧) ಪರಂಪರಾಗತ ಕಥೆಗಳಲ್ಲಿ ಕಂಡುಬರುವ ವ್ಯತ್ಯಾಸಗಳು. (೨) ಶಾಸನಗಳಿಂದ ಸಿದ್ಧವಾ ಗುವ ಮಾತುಗಳು. (೩) ಮತ್ತು ವಿದ್ಯಾರಣ್ಯರ ಹೆಸರುಗಳ ಉಲ್ಲೇಖವಿರುವ ಶಾಸನಗಳು. ವಿಜಯನಗರ ಪಟ್ಟಣವು ಕಟ್ಟಲ್ಪಟ್ಟ ಸ್ಥಳದಲ್ಲಿ, ನಿಸರ್ಗ ನಿಯಮಕ್ಕೆ ವಿರುದ್ಧವಾಗಿ ಮೊಲವೇ ನಾಯಿಯ ಬೆನ್ನು ಹತ್ತಿತೆಂದೂ ಆದಕಾರಣವೇ ಆ ಸ್ಥಳ ವಿಶೇಷದಲ್ಲಿ ಏನೋ ವಿಶೇಷವಾದ ಮಹಿಮೆಯುಂಟೆಂದೂ

ತಿಳಿಯ ಆ ಸ್ಥಳದಲ್ಲಿ ವಿಜಯನಗರ ಪಟ್ಟಣವನ್ನು ಕಟ್ಟಿದ ಬಗ್ಗೆ ಇರುವ ಪರಂಪರಾಗತ ಕೆಲವು ಕಥೆಗಳಲ್ಲಿ ಐಕ್ಯತೆಯಿಲ್ಲವೆಂದು ಫಾದರ್ ಹಿರಾಸ್ ಇವರ ಅಂಬೋಣವು. ಪರಂಪರಾಗತ ಕಥೆಗಳೆನಿಕಗಳಲ್ಲಿ ಸಂಪೂರ್ಣ ಐಕ್ಯತೆ ಇರುವುದು ಎಂದೂ ಶಕ್ಯವಿಲ್ಲ. ಏಕೆಂದರೆ ಹೇಳಿ ಕೇಳಿ ಅವು ಪರಂಪರಾಗತ ಕಥೆಗಳು. ಆದರೆ ಸಂಪೂರ್ಣ ಐಕ್ಯತೆ ಇಲ್ಲವೆಂದು ಅವುಗಳನ್ನು ಬಿಟ್ಟುಕೊಡಲಿಕ್ಕೆ ಬರುವುದಿಲ್ಲ. ಅವುಗಳಲ್ಲಿದ್ದ ಅಲ್ಪ ಸ್ವಲ್ಪ ಐಕ್ಯವೂ ಕೂಡ ಆಧಾರವಾಗಿಯೇ ಗಣಿಸಲ್ಪಡಬೇಕು. ಹಾಗೆ ನೋಡಿದರೆ, ಆ ಸ್ಥಳವು ವಿಶೇಷ ಮಹಿಮೆಯುಳ್ಳದ್ದೆಂಬ ಮಾತು ಪ್ರತಿಯೊಂದು ಕಥೆಯಿಂದ ಗೊತ್ತಾಗುತ್ತದೆ. ಆದಕಾರಣ ಫಾದರ್ ಹಿರಾಸ್ ಇವರು ಕೊಟ್ಟಿರುವ ಈ ಆಧಾರವು ಸರಿಯಾದುದಲ್ಲ. ಇನ್ನು ಅವರು ಕೊಟ್ಟ ಎರಡನೆಯ ಬಗೆಯ ಆಧಾರದಲ್ಲಿ ಅವರು ವ್ಯವಸ್ಥಿತವಾಗಿ ಹದಿಮೂರು ಕಾರಣಗಳನ್ನು ಕೊಟ್ಟು, ಅವೆಲ್ಲವುಗಳ ಮೇಲಿಂದ, ವಿದ್ಯಾರಣ್ಯರಿಗೂ ಸಾಮ್ರಾಜ್ಯ ಸ್ಥಾಪನೆಗೂ ಸಂಬಂಧವಿದ್ದಿಲ್ಲವೆಂದು ತೋರಿಸಲಿಕ್ಕೆ ಪ್ರಯತ್ನಿಸಿರುತ್ತಾರೆ. ಆದರೆ ಅವರು ಕೊಟ್ಟ ಆ ಹದಿಮೂರು ಕಾರಣಗಳನ್ನು ಸೂಕ್ಷ್ಮವಾಗಿ ವಿಚಾರ ಮಾಡಿ ನೋಡಿದರೆ ಅವುಗಳಲ್ಲಿ ಹನ್ನೆರಡು ಕಾರಣಗಳು ನಿಜವಾಗಿ ಬೇರೆ ಬೇರೆ ಕಾರಣಗಳಾಗಿರದೆ, ಅವೆಲ್ಲವೂ ಕೂಡಿ ಒಂದೇ ಕಾರಣದಲ್ಲಿ ಸಮಾವಿಷ್ಟವಾಗುತ್ತವೆ. ಏಕೆಂದರೆ, ಹನ್ನೆರಡು ಕಾರಣಗಳ ತಳಹದಿಗೆ "ವಿದ್ಯಾರಣ್ಯರು ಸಾಮ್ರಾಜ್ಯ ಸ್ಥಾಪಕರೆಂಬ ಮಾತು ಅವುಗಳಲ್ಲಿ ಕಂಡು ಬರುವುದಿಲ್ಲವಾದುದರಿಂದ, ಅವರು ಸಾಮ್ರಾಜ್ಯಸ್ಥಾಪಕರಲ್ಲ" ಎಂಬುದೊಂದೇ ಮಾತು ಅಡಕವಾಗಿರುತ್ತದೆ. (೧) ಸೂರ್ಯನಾರಾಯಣರಾಯರೆಂಬವರು ಕೊಟ್ಟ ಒಂದು ಶಿಲಾಲಿಪಿಯ ಹೊರ್ತಾಗಿ, ವಿದ್ಯಾರಣ್ಯರು ರಾಜ್ಯವನ್ನು ಸ್ಥಾಪಿಸಿದರೆಂದು ಸ್ಪಷ್ಟವಾದ ಉಲ್ಲೇಖವಿದ್ದ ವಿದ್ಯಾರಣ್ಯರ ಕಾಲದ ಒಂದು ಲಿಪಿಯೂ ಇಲ್ಲ. (೨) ಮೊದಲನೆಯ ಹರಿಹರನು ೧೩೪೬ರಲ್ಲಿ ಭಾರತೀ ತೀರ್ಥರಿಗೆ ಕೊಟ್ಟ ದಾನಶಾಸನದಲ್ಲಿ ವಿದ್ಯಾರಣ್ಯರ ಉಲ್ಲೇಖವಿಲ್ಲ. (೩) ೧೩೫೬ರಲ್ಲಿ ಬುಕ್ಕರಾಜನು ವಿದ್ಯಾರಣ್ಯರಿಗೆ ಕೊಟ್ಟ ದಾನಶಾಸನದಲ್ಲಿ ವಿದ್ಯಾರಣ್ಯರು ರಾಜಸ್ಥಾಪಕರೆಂಬ ಉಲ್ಲೇಖವಿಲ್ಲ. (೪) ೧೩೫೬ರಲ್ಲಿ ವಿದ್ಯಾರಣ್ಯರು ಕಾಶಿಯಲ್ಲಿದ್ದಾಗ, ಬುಕ್ಕನು ಪತ್ರ ಬರೆದು ಅವರು ವಿಜಯನಗರಕ್ಕೆ ತಿರುಗಿ ಬರಬೇಕೆಂದು ಬಿನ್ನವಿಸಿಕೊಂಡನು. ಆ ಪ್ರಕಾರ, ಅವರು ಬಂದರು.

ಆದರಲ್ಲಿಯೂ ಅವರು ರಾಜ್ಯಸ್ಥಾಪಕರೆಂಬ ಉಲ್ಲೇಖವಿಲ್ಲ. (೫) ಕೆಲವು ದಿವಸಗಳ ನಂತರ ಬುಕ್ಕನು ವಿದ್ಯಾರಣ್ಯರೊಂದಿಗೆ ಶೃಂಗೇರಿಗೆ ಬಂದು ಅವರಿಗೆ ದಾನಶಾಸನವನ್ನು ಬರೆಕೊಟ್ಟನು. ಆದರಲ್ಲಿಯೂ ರಾಜ್ಯಸ್ಥಾಪಕರೆಂಬ ಉಲ್ಲೇಖವಿಲ್ಲ. (೬) ೧೩೬೮ನೆಯ ಇಸ್ವಿಯ ಶಾಸನದಲ್ಲಿ ಬುಕ್ಕನ ಮಂತ್ರಿಯಾದ ಮಾಧವನ ಉಲ್ಲೇಖವಿದೆ. ಆದರೆ ಮಾಧವ ಅಂದರೆ ವಿದ್ಯಾರಣ್ಯರು ರಾಜ್ಯಸ್ಥಾಪನೆ ಮಾಡಿದರೆಂದು ಉಲ್ಲೇಖವಿಲ್ಲ. (೭) ೧೩೮೦ರಲ್ಲಿ ಎರಡನೆಯ ಹರಿಹರನು ಬರೆದ ಶಾಸನದಲ್ಲಿ ವಿದ್ಯಾರಣ್ಯರ ಸ್ತುತಿಯುಂಟು. ಆದರೆ, ಅವರು ರಾಜ್ಯಸ್ಥಾಪಕರೆಂಬ ಉಲ್ಲೇಖವಿಲ್ಲ. (೮) ೧೩೮೪ರ ಶಾಸನದಲ್ಲಿಯೂ ಹಾಗೆ ಉಲ್ಲೇಖವಿಲ್ಲ. (೯) ಶೃಂಗೇರಿಯ ಒಂದು 'ಕಡಿತ'ದಲ್ಲಿ ವಿದ್ಯಾರಣ್ಯರು ೧೩೮೬ರಲ್ಲಿ ಮರಣಹೊಂದಿದರೆಂದು ಉಲ್ಲೇಖವಿದೆ. ಆದರೆ ಅದರಲ್ಲಿ ಅವರು ರಾಜ್ಯಸ್ಥಾಪಿಸಿದರೆಂಬ ಉಲ್ಲೇಖವಿಲ್ಲ. (೧೦) ಅದೇ ವರ್ಷದ ಮತ್ತೊಂದು ಶಾಸನದಲ್ಲಿಯೂ ಅವರು ರಾಜ್ಯಸ್ಥಾಪಕರೆಂಬ ಉಲ್ಲೇಖವಿಲ್ಲ. (೧೧) ಅಪ್ರಕಾಶಿತವಾದ ಮತ್ತೊಂದು ಶಾಸನದಲ್ಲಿಯೂ ವಿದ್ಯಾರಣ್ಯರ ಸ್ತುತಿಯಿದ್ದು, ಅದರಲ್ಲಿಯೂ ಅವರು ರಾಜ್ಯಸ್ಥಾಪಿಸಿದರೆಂದು ಉಲ್ಲೇಖವಿಲ್ಲ. (೧೨) ಹರಿಹರನ ಮಗನಾದ ಚಿಕ್ಕರಾಯನು ಕೊಟ್ಟ ದಾನಶಾಸನದಲ್ಲಿಯೂ ವಿದ್ಯಾರಣ್ಯರು ರಾಜ್ಯಸ್ಥಾಪಕರೆಂದು ಉಲ್ಲೇಖವಿರುವುದಿಲ್ಲ. ಮೇಲೆ ನಾವು ದಪ್ಪವಾದ ಅಕ್ಷರದಿಂದ ತೋರಿಸಿದ್ದರ ಮೇಲಿಂದ ಕಂಡುಬರುವುದೇನಂದರೆ– ಫಾದರ್ ಹಿರಾಸ್ ಇವರು ಬೇರೆ ಬೇರೆ ಅಂಕಿಗಳನ್ನು ಹಾಕಿದ್ದರೂ ಅವೆಲ್ಲವೂ ಕೂಡಿ, ನಿಜವಾಗಿಯೇ ಒಂದು ಕಾರಣವಾಗುತ್ತವೆ. ಶ್ರೀ ವಿದ್ಯಾರಣ್ಯರು ರಾಜ್ಯಸ್ಥಾಪಕರೆಂಬ ಉಲ್ಲೇಖವಿಲ್ಲದಿರುವುದೇ ಆ ಕಾರಣವು. ಈ ಕಾರಣದಲ್ಲಿ ವಿಶೇಷ ಹುರುಳು ಇರುವುದಿಲ್ಲ. ಇತಿಹಾಸಜ್ಞರಿಗೂ ಕೂಡ, ಮನುಷ್ಯ ಸ್ವಭಾವದ ಪರಿಚಯವೂ ದೇಶದ ಸಾಂಪ್ರದಾಯಗಳೂ ಗೊತ್ತಿರಬೇಕಾಗುತ್ತವೆ. ಅವುಗಳ ಅಜ್ಞಾನದ ಮೂಲಕವೇ ಫಾದರ್ ಹಿರಾಸ್ ಇವರಿಂದ ಇಂಥ ತಪ್ಪು ಆಗಿರುತ್ತದೆ. ಯಾವುದೊಂದು ಮನೆತನದ ಅಥವಾ ರಾಜ್ಯದ ಮೂಲಪುರುಷನು ತಾನು ಮೂಲಪುರುಷನೆಂದು ಹೇಳಿಕೊಳ್ಳುವುದಿಲ್ಲ; ಅಥವಾ ಆತನ ಸಮಕಾಲೀನರಾದವರು ಆತನನ್ನು ಹಾಗೆ ಕರೆಯುವುದೂ ತೀರ ಕಡಿಮೆ.

ಆ ಮನೆತನವು ಅಥವಾ ರಾಜ್ಯವು ಮುಂದೆ ವೈಭವಕ್ಕೆ ಬರ ಹತ್ತಿದ ಬಳಿಕ ಆ ಮಾತು ಜನರ ಧ್ಯಾನದಲ್ಲಿ ಬರುತ್ತದೆ. ಶ್ರೀ. ಶಿವಾಜಿಮಹಾರಾಜರು ಮರಾಠಾ ರಾಜ್ಯದ ಮೂಲಸ್ಥಾಪಕರೆಂದು ಹೇಳಲಿಕ್ಕೆ ಅವರ ಸಮಕಾಲೀನವಾದ ಆಧಾರಗಳು ಇಲ್ಲದ ಮಾತ್ರಕ್ಕೆ ಆತನು ರಾಜ್ಯ ಸ್ಥಾಪಿಸಿದ್ದು ಸುಳ್ಳು ಆಗುವುದೋ? ಇಲ್ಲ, ಆದಕಾರಣ ಫಾದರ್ ಹಿರಾಸ್ ಇವರು ಇಂಥ ಜೊಳ್ಳು ಆಧಾರದ ಮೇಲೆ ತಮ್ಮ ಕಟ್ಟಡವನ್ನು ಕಟ್ಟುವ ಧಾರ್ಷ್ಟ್ಯವನ್ನು ಹೇಗೆ ತೋರಿಸಿದರೋ ಎಂಬುದೇ ನಮಗೆ ಆಶ್ಚರ್ಯವಾಗುತ್ತಿದೆ. ಇವುಗಳ ಹೊರ್ತಾಗಿ ಅವರು ಕೊಟ್ಟಿರುವ ಕಾರಣವೇನೆಂದರೆ–ಹರಿಹರನ ಸಹೋದರನಾದ ಮಾರಪ್ಪನಿಗೆ ಮಾಧವನು ಮಂತ್ರಿಯಾಗಿದ್ದನು. ಮಾಧವ ಅಥವಾ ವಿದ್ಯಾರಣ್ಯರು ಹರಿಹರನಿಗೆ ರಾಜ್ಯಸ್ಥಾಪನೆಯಲ್ಲಿ ಸಹಾಯಮಾಡಿದ್ದರೆ ಹರಿಹರನು ಅವರನ್ನು ತನ್ನ ಮಂತ್ರಿಗಳಾಗಿಯೇ ಇಟ್ಟುಕೊಳ್ಳುತ್ತಿದ್ದನಲ್ಲದೆ, ಮಾರಪ್ಪನ ಮಂತ್ರಿಯಾಗಗೊಡುತ್ತಿದ್ದಿಲ್ಲ. ಈ ಕಾರಣದಲ್ಲಿಯೂ ಹೆಡಸಿಲ್ಲವೆಂಬುದನ್ನು ಹೇಳಲಿಕ್ಕೆ ಬೇಡ. ಹೀಗೆ ಫಾದರ್ ಹಿರಾಸ್ ಇವರು ಕೊಟ್ಟಿರುವ ಎರಡನೆಯ ಮುಖ್ಯ ಆಧಾರದಲ್ಲಿಯೂ ಹುರುಳಿಲ್ಲ. ಇನ್ನು ಅವರು ಕೊಟ್ಟ ಮೂರನೆಯ ಮುಖ್ಯ ಆಧಾರವೆಂದರೆ – ವಿಜಯನಗರಕ್ಕೆ ವಿದ್ಯಾರಣ್ಯಪುರವೆಂದು ಮೊದಮೊದಲು ಕರೆಯುತ್ತಿರಲಿಲ್ಲ. ಮುಂದೆ ಮುಂದೆ ಕರೆಯ ಹತ್ತಿದರೆಂದು, ಫಾದರ್ ಹಿರಾಸ್ ಇವರು ಒಟ್ಟು ೧೯೬ ಶಾಸನಗಳನ್ನು ಓದಿ, ವಿಜಯನಗರದ ಮೊದಲನೆಯ ಮತ್ತು ಎರಡನೆಯ ಮನೆತನಗಳು ಆಳುವಾಗ ವಿದ್ಯಾರಣ್ಯನಗರವೆಂಬ ಹೆಸರು ವಿಶೇಷವಾಗಿ ರೂಢಿಯಲ್ಲಿರಲಿಲ್ಲವೆಂದೂ ಮೂರನೆಯ ಮನೆತನದಿಂದ ಆ ಹೆಸರು ವಿಶೇಷವಾಗಿ ಪ್ರಚಾರದಲ್ಲಿ ಬಂತೆಂದೂ ಹೇಳಿ, ಆ ಸುಮಾರಕ್ಕೆ ಆ ಹೆಸರು ರೂಢಿಯಲ್ಲಿ ಬಂದಿರುವುದರಿಂದ ಆ ಕಾಲದಿಂದ ಮಾತ್ರ ಆ ಹೆಸರು ಏಕೆ ಬಿತ್ತೆಂಬುದು ವಿಚಾರಣೀಯವಾದ ಸಂಗತಿಯೆಂದೂ ಹೇಳಿ, ಶ್ರಿಂಗೇರಿಮಠದವರು ಅನೇಕ ಸುಳ್ಳು ಶಾಸನಗಳನ್ನು ಹುಟ್ಟಿಸಿ, ಈ ಕೃತ್ಯವನ್ನು ಮಾಡಿರುತ್ತಾರೆಂಬ ಭಯಂಕರವಾದ ಆರೋಪವನ್ನು ಈ ಪಾದ್ರಿ ಸಾಹೇಬರು ಅವರ ಮೇಲೆ ಮಾಡಿರುತ್ತಾರೆ! ವಿದ್ಯಾರಣ್ಯಪುರವೆಂಬ ಹೆಸರು ಮೊದಮೊದಲು ವಿಶೇಷವಾಗಿ ಬಂದಿರಲಿಲ್ಲವೆಂಬುದು ಮಹತ್ವದ್ದಲ್ಲ.

ಹಲಕೆಲವು ಸಲವಾದರು ಅದು ಬರಲಿಕ್ಕೆ ಕಾರಣವೇನೆಂಬುದೇ ಮಹತ್ವವಾದದ್ದು. ಅದಕ್ಕೆ ಸಮರ್ಪಕವಾದ ಕಾರಣ ಸಾಹೇಬರು ಕೊಟ್ಟಿರುವುದಿಲ್ಲ. ಹಾಗೆ ವಿಚಾರಮಾಡಿದರೆ, ವಿದ್ಯಾರಣ್ಯರಿಗೂ ಆ ಸ್ಥಾಪನೆಗೂ ಸಂಬಂಧವಿರಲೇಬೇಕೆಂದು ಸಿದ್ಧವಾಗುತ್ತದೆ. ಮೊದಲನೆಯ ಎರಡು ಮನೆತನದವರ ಒಟ್ಟು ೧೧ ಶಾಸನಗಳಲ್ಲಿ ೭ ಶಾಸನಗಳಂತೂ ನಿರ್ವಿವಾದವಾಗಿ ಖೊಟ್ಟಿ ಇರುತ್ತವೆಂದೂ ಮಿಕ್ಕ ನಾಲ್ಕು ಕೂಡ ಖೊಟ್ಟಿ ಎಂದೇ ಹೇಳಬಹುದೆಂದೂ ಅವರು ಅನ್ನುತ್ತಾರೆ. ಕೊನೆಗೆ ವಿದ್ಯಾರಣ್ಯರು ರಾಜ್ಯಸ್ಥಾಪಕರೆಂಬ ಖೊಟ್ಟಿ ಕಥೆಯನ್ನು ಹುಟ್ಟಿಸಿದವರು ಶ್ರಿಂಗೇರಿಮಠದ ಶ್ರೀರಾಮಚಂದ್ರ ಭಾರತೀಸ್ವಾಮಿಗಳೆಂದು ಇವರು ಸಿದ್ಧಾಂತ ಕಟ್ಟಿರುತ್ತಾರೆ. ಆ ಶಾಸನಗಳು ಏಕೆ ಖೊಟ್ಟಿ ಎಂಬುದಕ್ಕೆ ಅವರು ಹೆಚ್ಚಿನ ಆಧಾರಗಳನ್ನೇನೂ ಕೊಟ್ಟಿರುವುದಿಲ್ಲ. ಶ್ರೀ ವಿದ್ಯಾರಣ್ಯರು ರಾಜ್ಯಸ್ಥಾಪಕರೆಂದರೆ ಶ್ರೀ ಶಿವಾಜಿ. ಹರಿಹರರಂತೆ ರಾಜ್ಯಸ್ಥಾಪಕರಲ್ಲವೆಂದೂ ವಸಿಷ್ಠರು ಶ್ರೀರಾಮಚಂದ್ರನಿಗೆ, ಶ್ರೀಕೃಷ್ಣನು ಅರ್ಜುನನಿಗೆ ಹೇಗೆ ರಾಜಕಾರಣ ಗುರುಗಳಾಗಿದ್ದರೋ ಹಾಗೆ ಗುರುಗಳಾಗಿದ್ದರೆಂಬುದೊಂದು ಮಾತನ್ನು ಅವರು ಲಕ್ಷದಲ್ಲಿ ತಂದಿದ್ದರೆ ಒಳಿತಾಗುತ್ತಿತ್ತು. ಇರಲಿ, ಕೊನೆಗೆ ಈ ಪಾದ್ರಿಸಾಹೇಬರು ಶ್ರೀ ಶ್ರಿಂಗೇರಿ ಸ್ವಾಮಿಗಳವರಿಗೆ ಕೊಟ್ಟ ಉಡುಗರೆಯನ್ನು ನಾವು ಶ್ರೀಗಳವರಿಗೆ ಸಮರ್ಪಿಸಿ, ಅವರು ಈ ಸಾಹೇಬರ ಮೇಲೆ ಬೇಗನೆ ಅನುಗ್ರಹ ಮಾಡಬೇಕೆಂದು ಬೇಡಿಕೊಂಡು ಸದ್ಯಕ್ಕೆ ಈ ಲೇಖವನ್ನು ಮುಗಿಸುತ್ತೇವೆ.

---

## ಕರ್ನಾಟಕ ಶಿಲ್ಪಕಲೆ ಚಿತ್ರಕಲೆಗಳ ಪುನರುಜ್ಜೀವನ

ಪ್ರಾಚೀನಕಾಲದಿಂದಲೂ ನಮ್ಮ ಕನ್ನಡನಾಡು ಲಲಿತಕಲೆಗಳ ಉತ್ಕೃಷ್ಟವಾದ ಉಗಮಭೂಮಿಯಾಗಿದೆಯೆಂಬುದನ್ನು ಎಲ್ಲರೂ ಬಲ್ಲರು. ಇಲ್ಲಿಯ ಗುಡಿ-ಬಸದಿ-ಮಸೀದೆಗಳು ಶಿಲ್ಪಕಲೆಗೆ ಸಾಕ್ಷಿ; ಅಜಂತೆ ಬಾದಾಮಿ ಮೊದಲಾದ ಸ್ಥಾನಗಳು ಚಿತ್ರಕಲೆಗೆ ಸಾಕ್ಷಿ. ಈ ಕಲೆಗಳ ಪುನರುಜ್ಜೀವನವು ಕರ್ನಾಟಕದಲ್ಲಿ ಈಗ ೮–೧೦ ವರ್ಷಗಳಿಂದ ಆಗುತ್ತಿದೆಯೆಂಬದು ಕಾಣಹತ್ತಿದೆ. ಬಾಲಶಿಲ್ಪಿಗಳಾದ ಮೈಸೂರಿನ ಮಾಧವರಾಯರೂ ಶಿರಟ್ಟಿಯ ಕೇಶವರಾಯರೂ ಕರ್ನಾಟಕ ಶಿಲ್ಪಕಲಾ ನಿರ್ಮಾಣಶಕ್ತಿಯ ಅಂಕುರಗಳಾಗಿದ್ದಾರೆ. ಹುಬ್ಬಳ್ಳಿಯ ಶ್ರೀನವರಖೇಡಿಯವರ ಪ್ಲ್ಯಾಸ್ಟರ (Plaster) ಕೆಲಸವೂ ಪ್ರೇಕ್ಷಣೀಯವಾಗಿದೆ. ವಾಸ್ತುಶಿಲ್ಪದ ಅಭ್ಯಾಸವೂ ನಡೆಯುತ್ತಿದೆಯೆಂಬುದಕ್ಕೆ ಬಿ. ವೆಂಕಟೇಶಾಚಾರ್ಯರ ಪುಸ್ತಕವು ಒಳ್ಳೇ ಉದಾಹರಣೆಯು

ಇನ್ನು ಚಿತ್ರಕಲೆಯಲ್ಲಿಯೂ ಕರ್ನಾಟಕದ ಕುಸುರಿನ ಕೈಯು ಭಾರತದ ಯಾವ ಪ್ರಾಂತಕ್ಕಿಂತಲೂ ಹಿಂದಿಲ್ಲವೆಂಬುವಕ್ಕೆ ವೆಂಕಟಪ್ಪನವರೇ ಸಾಕ್ಷಿ. ಶ್ರೀ. ಮಿಣಜಿಗಿ – ಬಡಿಗೇರ ಕುಂಬಾರ – ಪಾವಂಜೆ – ಮೊದಲಾದ ಪ್ರೌಢವಯಸ್ಕರೂ ಕಾಸಸೆ–ಸಂಗಮ ಮೊದಲಾದ ಬಾಲವಯಸ್ಕರೂ ವೆಂಕಟಪ್ಪನವರ ಹಿಮ್ಮೇಳದಲ್ಲಿದ್ದಾರೆ. ಮೊನ್ನಿನ ಧಾರವಾಡದ ನಾಡಹಬ್ಬದ ಲಲಿತಕಲಾಪ್ರದರ್ಶನದಲ್ಲಿ ಪ್ರದರ್ಶಿತಗಳಾದ ವೆಂಕಟಪ್ಪನವರ ಕನ್ನಡನಾಡಿನ ಸೌಂದರ್ಯಭೂಮಿಯಾದ ನೀಲಗಿರಿಯ ಪ್ರಕೃತಿಚಿತ್ರಗಳಂತೂ ಜಗತ್ತಿನ ಯಾವ ಪ್ರದರ್ಶನದಲ್ಲಿಯೂ ಮನ್ನಣೆ ಪಡೆಯತಕ್ಕವುಗಳಾಗಿವೆ. ಈ ಬಗೆಯ ಅಭಿಪ್ರಾಯವನ್ನು ನಮ್ಮ ವೆಂಕಟಪ್ಪನವರ ಬಗ್ಗೆ ಪರದೇಶೀಯ ವಿಮರ್ಶಕರೇ ವ್ಯಕ್ತಪಡಿಸಿದ್ದಾರೆ. ಇನ್ನು ಚಿತ್ರಕಲೆಯ ಬಗ್ಗೆ ಜನರಲ್ಲಿಯೂ ಜಾಗ್ರತೆಯಾಗುತ್ತಿದೆಯೆಂಬುದು ಈ ನವರಾತ್ರಿಯಲ್ಲಿ ಧಾರವಾಡ ಗುತ್ತಲಗಳಲ್ಲಿ ನಡೆದ ಪ್ರದರ್ಶನಗಳಿಂದ ಕಂಡುಬರುವದು. ಬೆಂಗಳೂರಿನಲ್ಲಿ ಎ. ಎನ್. ಸುಬ್ರಾಯರು ಕಲಾಮಂದಿರವನ್ನೇ ಸ್ಥಾಪಿಸಿದ್ದು ' ಕಲಾನಿವೇದನ ' ಎಂಬ ಪುಸ್ತಕವನ್ನು ಪ್ರಸಿದ್ಧಿಸಿದ್ದು ಕ್ಷಿಪ್ರದಲ್ಲಿಯೇ ' ಕಲಾ ' ಎಂಬ ಮಾಸಪತ್ರಿಕೆಯನ್ನು ಹೊರಡಿಸುವರೆಂಬುದು ಆನಂದದ ಸಂಗತಿಯಲ್ಲವೇ ? ಚಿತ್ರಕಲೆಯ ವಾಙ್ಮಯವೂ ಹುಟ್ಟಹತ್ತಿದೆ. ಶ್ರೀ ಕಾರಂತರ 'ಭಾರತೀಯರ ಚಿತ್ರಕಲೆ'ಯ ಪುಸ್ತಕಕ್ಕೆ ದೇವರಾಜ ಪಾರಿತೋಷಿಕ ಸಿಕ್ಕಿದೆಯೆಂಬುದು ಬೇರೆಕಡೆಗೆ ಪ್ರಕಟವಾಗಿದೆ. ಅ. ನ. ಕೃಷ್ಣರಾಯರೂ ಒಂದು ಚಿಕ್ಕ ಪುಸ್ತಕವನ್ನು ಈ ಬಗ್ಗೆ ಬರೆದಿದ್ದಾರೆ. ರಂಗಭೂಮಿ ಪತ್ರಿಕೆಯವರು ತಮ್ಮ ೩ನೇ ಚಿತ್ರಸಂಗ್ರಹ(Album) ವನ್ನು ಶ್ರೀ. ತಾರಾನಾಥರು ಕನ್ನಡ ಇಂಗ್ಲಿಷದಲ್ಲಿ ಬರೆದ ಸುಂದರ ಮಾರ್ಮಿಕ ವರ್ಣನೆಯೊಂದಿಗೆ ಅಚ್ಚುಗೊಳಿಸಿದ್ದು ಅದರ ಬಗ್ಗೆ ಇಂಗ್ಲಂಡ ಮೊದಲಾದ ಪರದೇಶಗಳಿಂದ ಬೇಡಿಕೆಗಳು ಬಂದಿವೆಯೆಂದು ತಿಳಿದುಬರುತ್ತದೆ. ಈ ಬಗೆಯಾಗಿ ಭಾರತಕಲೆಗಳ ಪುನರುಜ್ಜೀವನದಲ್ಲಿ ಕರ್ನಾಟಕವೂ ಯೋಗ್ಯ ಕಾರ್ಯಭಾಗವನ್ನು ವಹಿಸಿದೆಯೆಂದು ಹೇಳಬಹುದು.

ಇನ್ನೊಂದು ಮಹತ್ವದ ಸುದ್ದಿಯೆಂದರೆ–ನಮ್ಮ ನಾಡಿನ ಶಿಲ್ಪಕಲೆಯನ್ನು ನೋಡಿಕೊಂಡು ಹೋಗಲಿಕ್ಕೆ ಈ ವರ್ಷ ಬೃಹತ್ತರ ಭಾರತ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಕಾಳಿದಾಸ ನಾಗ ಮಹಾಶಯರು ಬಂದು ಬಾದಾಮಿ ಪಟ್ಟದ ಕಲ್ಲಿನ ಕಲೆಯನ್ನು ಕಂಡು ಬೆರಗಾಗಿಹೋದರು; ಅವರು ಇಲ್ಲಿಂ[ದ] ಬಂಗಾಲಕ್ಕೆ ಹೋದೊಡನೆಯೇ ಕಲಕತ್ತೆಯ ಜಗತ್ಪ್ರಸಿ[ದ್ಧ] ಕಲಾಪತ್ರಿಕೆಯಾದ 'ರೂಪಂ'ದ ಸಂಪಾದಕರಾದ ಶ್ರೀ. ಓ. ಸಿ. ಗಂಗೋಲಿಯವರನ್ನು ಪಟ್ಟದಕಲ್ಲಿಗೆ ಕಳಿಸಿಕೊಟ್ಟರು. ಅವ[ರು] ಮೊನ್ನೆ ಮೊನ್ನೆ ಅಲ್ಲಿಗೆ ಬಂದು ನೋಡಿಕೊಂಡು ಹೋದರೆಂ[ಬು]ದನ್ನು ತಿಳಿಸಲು ಸಂತೋಷಪಡುತ್ತೇವೆ.

---

## ನಾದೀರಖಾನನು ಅಮೀರನಾದುದು ಅನ್ಯಾಯವೇ ?

ಒಂದೊಂದು ಪ್ರಸಂಗದಲ್ಲಿ ನ್ಯಾಯವಾವುದು ಅನ್ಯಾಯವಾವುದು ಎಂಬುದನ್ನು ಹೇಳುವುದೆ ಅಶಕ್ಯವು. ನಾದೀರಖಾನನು ಅಮೀರನಾದುದು ಇಂತಹ ಸಂದರ್ಭಗಳಲ್ಲಿಯೇ ಒಂದು. ಅಮಾನುಲ್ಲಾಖಾನನು ಪಟ್ಟದ ಬಾಧ್ಯಸ್ಥನಿರುವಾಗ ನಾದೀರಖಾನನು ಅರಸುತನವನ್ನು ಕೈಕೊಂಡದ್ದು ಅನ್ಯಾಯವಾಯಿತೆಂಬ ಕೆಲರ ಮತ. ಆದರೆ ಅಮಾನುಲ್ಲಾಖಾನನೇ ಅಮೀರನಾದ[ದ್ದು] ಯೆಂತು ? ಅಪ್ಪ ಅಣ್ಣನನ್ನೂ ಉಳಿದ ಹಕ್ಕು ಬಾಧ್ಯಸ್ಥರನ್ನೂ ಹಿಂದಕ್ಕಿಟ್ಟದ್ದಿಲ್ಲ–ಅಥವಾ ಹಿಂದಕ್ಕಟ್ಟಿದ್ದಿಲ್ಲವಾದರೆ ಅಮಾನುಲ್ಲಾನು ಅಮೀರನೇ ಆಗುತ್ತಿದ್ದಿಲ್ಲ. ಅಫಗಾಣಿಸ್ಥಾನದ ಹಿ[ತ]ಕ್ಕಾಗಿ ಅಮಾನುಲ್ಲಾನು ಇನ್ನುಳಿದ ಅಯೋಗ್ಯರಾದ, ಪಟ್ಟದ ಬಾಧ್ಯಸ್ಥರನ್ನು ಬದಿಗಿರಿಸಿ ಬಿಟ್ಟನೆನ್ನಬೇಕೇ ? ಹಾಗಾದರೆ ಇದೇ ದೃಷ್ಟಿಯಿಂದ ನಾದೀರಖಾನನು ಅರಸನಾದುದನ್ನೂ ಏಕೆ ನೋಡಬಾರದು ?

ಇನ್ನೊಂದು ಬಗೆಯಿಂದ ವಿಚಾರಿಸಿದರೂ ನಾದೀರಖಾನನು ಅರಸನಾದುದಕ್ಕೆ ಹೆಸರಿಡಲಿಕ್ಕೆ ಬರುವದಿಲ್ಲ. ಆವುದೇ ರಾ[ಜ]ರಾಗಲಿ ತಾವು ರಾಜರಾದ ಬಳಿಕ ನ್ಯಾಯ, ನೀತಿ, ಸತ್ಯಸಂಧ[ತೆ]ಗಳ ಪುರಾಣವನ್ನು ಹೇಳಲಾರಂಭಿಸುತ್ತಾರೆ. ಆದರೆ ಅವರು ರಾಜ್ಯವನ್ನು ಸಂಪಾದಿಸಿದುದು ಹೇಗೆ, ಎಂಬ ಮಾತನ್ನು ಸ್ವಲ್ಪ ತಳಸೋಸಿ ವಿಚಾರಿಸಿದರೆ ಮಾತ್ರ ಎಲ್ಲ ಹೂರಣವೂ ಹೊರ[ಬೀ]ಳುವದು. ನದೀಮೂಲ, ರಾಜರ ಮೂಲ ನೋಡಬಾರದೆಂದು ಹೇಳುವುದು ಇದಕ್ಕಾಗಿಯೆ. ಮುಂಗೈ ಕಸುವಿನ ಮೇಲೆ ಸರಿಕರನ್ನು ಹಿಂದೂಡಿ ಅದಾವನು ಮುಂದರಿದು ಬಂದು ನಿಂತು ತನ್ನ ವೈಲ್ಲೆಯನ್ನು ನಡಿಸುವನೋ ಅವನೇ ಲೋಕದ ದೃಷ್ಟಿಯಿಂದ ವಿಜಯಶಾಲಿ; ಯಶಸ್ವಿ; ರಾಜಪುರುಷ; ಒಂದು ರಾ[ಷ್ಟ್ರ]

ವನ್ನು—ರಾಜನನ್ನು ಮುರಿಬಡಿದು ನೆಲಕ್ಕುರುಳಿಸಿ ಅಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದೊಡನೆ ಆ ವಿಜಯಶಾಲಿಯೆ ರಾಜನೆನಿಸುವನು. ಇದುವೆ ಲೋಕದಲ್ಲೆಲ್ಲ ರೂಢವಾಗಿದ್ದ ನ್ಯಾಯ ನೀತಿ(?)ಗಳ ಸಂರಕ್ಷಕರಾದ ರಾಜರಾಗತಕ್ಕವರ ರಾಜಮಾರ್ಗವು. ಇದಕ್ಕನುಸರಿಸಿಯೆ ಅಮಾನುಲ್ಲಾನು ಹಿಂದಕ್ಕೆ ಅಮೀರನಾದುದು; ಇಂದು ನಾದೀರಖಾನನೂ ಅಮೀರಪಟ್ಟನನ್ನೇರಿದುದು.

ಆದರೆ ಹೀಗೆ ಏರಿ ಮುಂಗೈ ಕಸುವಿನ ಮೇಲೆ ಒಬ್ಬರನ್ನೊಬ್ಬರು ನೆಲಕ್ಕುರುಳಿಸಿ ರಾಜರಾಗುವುದು ಶುದ್ಧ ಅನ್ಯಾಯವು. ಪ್ರಜೆಗಳಿಗಾಗಿ ರಾಜನೇ ಹೊರ್ತು ರಾಜನಿಗಾಗಿ ಪ್ರಜೆಗಳಲ್ಲ. ಆದಕಾರಣ ಪ್ರಜೆಗಳಿಗೆ ಸ್ವಯಂ ನಿರ್ಣಯದ ಅಧಿಕಾರವಿರಬೇಕು. ಯಾರೂ ಯಾರ ಮೇಲೂ ಬಲುಮೆಯಿಂದ ರಾಜ್ಯವನ್ನು ಮಾಡುವ ಅಧಿಕಾರವಿಲ್ಲ; ಎಂದು ಇತ್ತೀಚೆ ಒಂದು ತತ್ತ್ವವು ಇದೀಗ ತಲೆ ಎತ್ತುತ್ತಲಿದೆ. ಆದರೆ ಈ ತತ್ತ್ವವನ್ನು ಹೇಳುವವರಲ್ಲಿ ಯಾರೂ ಆಡಿದಂತೆ ಮಾಡಿಲ್ಲ; ನುಡಿದಂತೆ ನಡೆದಿಲ್ಲ. ಕಳೆದ ಮಹಾ ಯುದ್ಧದಲ್ಲಿ ತುರ್ಕರನ್ನು ಸೋಲಿಸಿ ಅವರಿಂದ ಕಸಿದುಕೊಂಡ ಮೆಸೊಪೊಟೆಮಿಯಾ ಸಿರಿಯಾ ಪಾಲಿಸ್ಟೈನ ಮೊದಲಾದ ಭಾಗಗಳಲ್ಲಿ ಆಳಿದ ಪರಕೀಯರು ಅಲ್ಲಿಯ ಜನರಿಗೆ ಅದೆಷ್ಟು ಸ್ವಯಂನಿರ್ಣಯದ ಅಧಿಕಾರವನ್ನು ಕೊಟ್ಟರುವರೆಂಬುದು ಪ್ರಖ್ಯಾತವೆ ಇದೆ. ಆದರೆ ಈಗ ನಾದೀರಖಾನನು ಮಾತ್ರ ಅನೇಕ ರೀತಿಯಲ್ಲಿ ಅಲ್ಲಿಯ ಪ್ರಜೆಗಳ ಸ್ವಯಂನಿರ್ಣಯಕ್ಕನುಸರಿಸಿಯೇ ಅವರ ಅಮೀರನಾಗಿದ್ದಾನೆ. ಪ್ರಜೆಗಳ ಆಗ್ರಹಕ್ಕಾಗಿ ಅರಸುತನವನ್ನು ಒಪ್ಪಿಕೊಂಡಿದ್ದಾನೆ. ಅಂದ ಬಳಿಕ ಇದರಲ್ಲಿ ನಾದೀರಖಾನನು ಯಾವ ರೀತಿಯಿಂದ ತಪ್ಪುಗಾರನೋ ತಿಳಿಯದು.

ಮೀರತದ ವ್ಯಾಜ್ಯದೊಳಗಿನ ಆರೋಪಿಗಳಲ್ಲೊಬ್ಬರಾದ **ಶೌಕತ ಉಸ್ಮಾನಿ** ಎಂಬವರು 'Peshwar to Mascow' (ಪೇಶಾವರದಿಂದ ಮಾಸ್ಕೋ) ಎಂಬ ತಮ್ಮ ಪುಸ್ತಕದಲ್ಲಿ ತಾವು ಅಫಘಾನಿಸ್ತಾನದೊಳಗಿಂದ ಹಾಯ್ದು, ರಶಿಯಾದೇಶಕ್ಕೆಹೋಗುತ್ತಿರುವಾಗ, ಅಫಗಾನಿಸ್ತಾನದ ಹೊಸ ಅಮೀರರಾದ **ನಾದಿರಖಾನರ** ಭೆಟ್ಟಿಯ ಬಗ್ಗೆ ಹೀಗೆ ಬರೆದಿರುವರು:— 'ಜಲಾಲಾಬಾದದಲ್ಲಿ (ಅಫಘಾನಿಸ್ತಾನದೊಳಗಿನ ಒಂದು ಊರು) ಜೆನರಲ್ ನಾದಿರಖಾನರು ನಮ್ಮ ಪರಾಮರಿಕೆಯನ್ನು ಒಳ್ಳೆಯ ರೀತಿಯಿಂದ ಮಾಡಿದರು. ಅವರಾಗ ಅಫಘಾನಿಸ್ತಾನದ ಸಮರ ಮಂತ್ರಿಗಳೂ, ಜಲಾಲಾಬಾದದ ಗವ್ಹರ್ನರರೂ ಇದ್ದರು. ಎಲ್ಲ ಅಫಘಾನ ಅಧಿಕಾರಿಗಳಲ್ಲಿ ಅವರ ಕಡೆಗೇ ನಮ್ಮ ಮನಸ್ಸು ಎಳೆಯಿತು. ಅವರು ವಿನಯಶಾಲಿಗಳೂ, ಬಹುಶ್ರುತರೂ ಆಗಿದ್ದರು. ಅವರ ಆಕೃತಿಯು ಆಕರ್ಷಕವಾಗಿದ್ದಿತು. ಬಡಕ ಮೈಕಟ್ಟು, ಚುರುಕು ನಡತೆ, ಎತ್ತರ ನಿಲುವು ಉಳ್ಳವರಿದ್ದು ಗಿಡ್ಡ ಚಣ್ಣವನ್ನೂ, ಉದ್ದ ಲಷ್ಕರಿಬೂಟುಗಳನ್ನೂ ತೊಟ್ಟಿದ್ದರು. ಬೆಳ್ಳಿಯ ಕಿರುಗಂಟೆಯಂತಹ ಅವರ ದನಿಯು ಯಾರಲ್ಲಿಯೂ ವಿಶ್ವಾಸವನ್ನು ಹುಟ್ಟಿಸುವಂತಹದಿದ್ದಿತು, ಯಾರನ್ನೂ ವಶಪಡಿಸಿಕೊಳ್ಳುವಂತಹದಿದ್ದಿತು. ಹಿಂದುಕುಶ ಪರ್ವತದ ಅತಿದೂರದ ಗಹ್ವರಗಳಲ್ಲಿ ವಾಸಿಸುತ್ತಿದ್ದ ಅವರಿಗೆ ಅಂತರ್‌ರಾಷ್ಟ್ರೀಯ ರಾಜಕೀಯ ಚಲನವಲನೆಯ ಮತ್ತು ಯುರೋಪೀಯ ರಾಷ್ಟ್ರಗಳ ರಾಜಕಾರ್ಯದ ಸಮಗ್ರಜ್ಞಾನವಿದ್ದಿತು. ಹಿಂದುಸ್ಥಾನದ ರಾಜಕೀಯ ಪರಿಸ್ಥಿತಿಯ ಮೇಲಿನ ಅವರ ಪ್ರಭುತ್ವವಂತೂ ಬೆರಗುಗೊಳಿಸುವಂತಹದಿದ್ದಿತು. ರಾಜನೈತಿಕ ವಿಷಯಗಳ ಮೇಲೆ ನಡೆಯುವ ನಮ್ಮ ಸಂಭಾಷಣೆಯಲ್ಲಿ ಹಿಂದುಸ್ಥಾನದ ಪ್ರಶ್ನೆಗಳನ್ನು ಒಳೆಯ ಹಿಡಿತದಿಂದಲೂ ಯುಕ್ತ್ಯಯುಕ್ತವಾಗಿಯೂ ಅವರು ಚರ್ಚಿಸುವ ಬಗೆಯನ್ನು ನೋಡಿ ನಾವೆಲ್ಲರೂ ಸೈಯೆನ್ನುತ್ತಿದ್ದೆವು.

'ಅವರು ಸಮರಮಂತ್ರಿಗಳೂ ಗವ್ಹರ್ನರರೂ ಆಗಿದ್ದರಲ್ಲದೆ, ಏಶಿಯಾಖಂಡದ ಜನಾಂಗಗಳ ಸಂಘಟನೆಯನ್ನೇ ಆದ್ಯ ಉದ್ದೇಶವನ್ನಾಗಿ ಇಟ್ಟುಕೊಂಡ ಮೊಟ್ಟಮೊದಲನೆಯ ಪತ್ರಿಕೆಯ ಸಂಪಾದಕರೂ ಆಗಿದ್ದರು. ಆ ಪತ್ರಿಕೆಯ ಹೆಸರು 'ಇತಿಹಾದ—ಇ—ಮಷ್ರಾಕಿ' ಎಂದು ಇದ್ದಿತು. ಅವರ ಒಂದೆರಡು ಪುಟಗಳನ್ನು ತಿರುವಿ ಹಾಕಿದರೂ ಅದನ್ನು ಸಂಪಾದಿಸುವವರ ಯೋಗ್ಯತೆಯು ತಿಳಿಯವಂತಿದ್ದಿತು.

'ನಾದಿರಖಾನರ ಬುದ್ಧಿಯು ಅನೇಕವಿಷಯಗಳಲ್ಲಿ ಹರಿಯುತ್ತಿದೆ. ಅಫಘಾನಿಸ್ತಾನದ ಸ್ವಾತಂತ್ರ್ಯಯುದ್ಧದಲ್ಲಿ ಅವರ ಭಾಗವು ಪ್ರಮುಖವಾಗಿದ್ದಿತು.'

---

## ಲಾರ್ಡ ಅಯರ್ವಿನ್ನರು ಹೇಳಿದ್ದೇನು ?

ಕೂಲಿಕಾರ ಪಕ್ಷವು ಮಂತ್ರಿಮಂಡಳದಲ್ಲಿ ಸೇರಿದೊಡನೆ ಇಜಿಪ್ತಕ್ಕೆ ಕೆಲ ಸ್ವಾತಂತ್ರ್ಯದ ಅಧಿಕಾರಗಳು ದೊರೆತವು, ಇಜಿಪ್ತದಲ್ಲಿ ನವಾಬನಂತೆ ಮುಂಗೈ ಕಸುವಿನ ಮೇಲೆ ಮನಬಂದಂತೆ ಅಧಿಕಾರ ನಡಿಸಿದ ಜಾರ್ಜ ಲೈಡರಿಗೆ ಮನೆಗೆ ಹೋಗಲು ಅಪ್ಪಣೆ

ದೊರೆಯಿತು; ಮಹಾಯುದ್ಧದ ಕಾಲಕ್ಕೆ ಗೆದ್ದು ತಮ್ಮ ಮುಷ್ಟಿಯಲ್ಲಿಟ್ಟುಕೊಂಡು ಒತ್ತಾಯದ ಅಧಿಕಾರ ನಡಿಸಿದ್ದ ಇರಾಕ ಪ್ರಾಂತಕ್ಕೆ ರಾಷ್ಟ್ರಸಂಘದಲ್ಲಿ ಸೇರಲು ಅನುವು ಆಯಿತು. ಹೀಗೆ ಬ್ರಿಟಿಶರ ಆಡಳಿತದಲ್ಲಿ ಸ್ವಲ್ಪ ಬದಲಾದುದನ್ನು ಕಾಣುತ್ತಲೆ ಹಿಂದುಸ್ತಾನದೊಳಗಿನ ರಾಜಕೀಯ ಮುಂದಾಳುಗಳಲ್ಲಿಯೂ ಹಲಕೆಲವರಿಗೆ ಇನ್ನು ತಮ್ಮ ಭಾಗ್ಯೋದಯ ಕಾಲವೂ ಸಮೀಪಿಸಿತೆಂದೆನಿಸಿತು. ನಮ್ಮ ವೈಸರಾಯರು ೪ ತಿಂಗಳ ರಜೆಪಡೆದು ಹಿಂದುಸ್ತಾನದ ರಾಜಕೀಯ ತೊಡಕನ್ನು ಬಿಡಿಸಲು ಇಂಗ್ಲಂಡದ ಮಂತ್ರಿಮಂಡಳದೊಡನೆ ವಿಚಾರ ವಿನಿಮಯಕ್ಕಾಗಿ ವಿಲಾಯತಿಗೆ ಹೊರಡಲು ಈ ಆಶೆಯು ಮತ್ತಿಷ್ಟು ಚಿಗುರಿತು. ಇಂಗ್ಲಂಡಿನಲ್ಲಿ ಲಾರ್ಡ ಅಯರ್ವಿನ್ನರು ಅಲ್ಲಿಯ ಮಂತ್ರಿಮಂಡಳದೊಡನೆ ನಡಿಸಿದ ಕಿವಿಮಾತುಗಳನ್ನು ಅರಿತುಕೊಳ್ಳಲಿಕ್ಕೆ ಎಲ್ಲರೂ ಉತ್ಸುಕರಾಗಿದ್ದರು. ಕೂಲಿಕಾರ ಪಕ್ಷದ ಉದಾರ ಮಂತ್ರಿಗಳು ಏನು ಕೊಡುವರೊ, ವೈಸರಾಯರು ಬಂದು ಏನು ಹೇಳುವರೊ ಎಂದು ಕೇಳಬೇಕೆಂದು ಭಾರತೀಯರು ಕಿವಿ ನಿಮಿರಿಸಿ ಕುಳಿತಿರುವಾಗ ಲಾರ್ಡ ಅಯರ್ವಿನ್ನರು ೩೧-೧೦-೨೯ನೆಯ ದಿನ ಒಂದು ಪ್ರಕಟನೆಯನ್ನು ಹೊರಡಿಸಿದರು. ಭಾರತೀಯರಿಗೆ ಇಂಗ್ಲಂಡದಲ್ಲಾದ ತಮ್ಮ ಮಾತುಕಥೆಗಳ ಫಲಿತಾಂಶವನ್ನು ಅರುಹಿದರು. '೧೯೧೭ರಲ್ಲಿ ಬಾದಶರು ಹಿಂದೂಜನರಿಗೆ ಸ್ವರಾಜ್ಯಕೊಡುವುದೇ ತಮ್ಮ ಧ್ಯೇಯವಾಗಿದೆ, ಎಂದು ಕೊಟ್ಟ ವಚನವನ್ನು ಕಾಲಕ್ರಮದಲ್ಲಿ ಅನುಕೂಲತೆಯಂತೆ ಅಕ್ಷರಶಃ ನಾವು ಪಾಲಿಸುತ್ತೇವೆ' ಎಂಬುದೇ ವೈಸರಾಯರ ಪ್ರಕಟನೆಯ ಸಾರಾಂಶವು. ಹೀಗೆ ವೈಸರಾಯರು ಹೇಳಿದ ಮಾತಿನಲ್ಲಿ ಹೊಸದೇನೂ ಇಲ್ಲ. ವೈಸರಾಯರು ಹಿಂದೆ ೧೯೧೭ರಲ್ಲಿ ಹಾಡಿದ್ದನ್ನೆ ಹಾಡಿದರು.

---

## ಹಾಡಿದ್ದನ್ನೇ ಹಾಡಿದುದು ಏಕೆ?

ನಾನು ಸಂಭಾವಿತನು, ನಾನು ಸಂಭಾವಿತನು ಎಂದು ಮೇಲಿಂದ ಮೇಲೆ ಆರಾದರೂ ಹೇಳಿಕೊಳ್ಳಲಾರಭಿಸುತ್ತಲೆ ಅವರು ಆಡುವ ಆ ಮಾತಿನ ಬಗ್ಗೆ ಸಹಜವಾಗಿಯೆ ಸ್ವಲ್ಪ ಸಂದೇಹವುಂಟಾಗುತ್ತದೆ. ಇದರಂತೆ ವೈಸರಾಯರು ಹಿಂದೆ ಹಾಡಿದುದನ್ನೆ ಮತ್ತೆ ಇಂದು ಹಾಡಿದ್ದು ಕೇಳುತ್ತಲೆ ಇವರು ಹೀಗೇಕೆ ಹೇಳುವರು ಎನಿಸುವುದು. ಸ್ವರಾಜ್ಯವನ್ನು ಕೊಡುವೆವು, ಕೊಡುವೆವು ಎಂದು ಹಾಡುವುದಕ್ಕಿಂತ ಪ್ರತ್ಯಕ್ಷ ಕೊಡುವ ಕೆಲಸವನ್ನೇ ಆರಂಭಿಸಿಬಿಟ್ಟರೆ ಒಳಿತಲ್ಲವೆ? ಕೊಡುವುದಕ್ಕಿಂತ ಆಡುವುದೆ ಹೆಚ್ಚಾಗಿಬಿಟ್ಟಿದೆ. ೧೯೧೭ ರ ಬಾದಶಹರ ಆಶ್ವಾಸನವನ್ನು ಹಿಂದೀಜನರು ಮರೆತುಬಿಟ್ಟಿಲ್ಲ. ಆದರೂ ಮತ್ತೆ ಆ ಜಾಹೀರನಾಮೆಯ ಪುನರುಚ್ಚಾರಣೆಯನ್ನೇ ಮಾಡುವ ಕಾರಣವೇನಿತ್ತು? ಜನರು ಬಾದಶಹರ ಆಶ್ವಾಸನವನ್ನು ಮರೆತಿದ್ದಿಲ್ಲವಾದರೂ ಈಗಿನ ಕೂಲಿಕಾರ ಪಕ್ಷದ ಮುಂಚೆ ಇದ್ದ ಸಾಮ್ರಾಜ್ಯವಾದಿಗಳ ಮಂತ್ರಿಮಂಡಲದವರಿಗೆ ಅದರ ನೆನಪು ಹಾರಿತ್ತು. ಹಿಂದೊಮ್ಮೆ ಮಧ್ಯವರ್ತಿ ಕಾಯಿದೆ ಕೌನ್ಸಿಲಿನಲ್ಲಿ ಬಾದಶಹರ ೧೯೧೭ ರ ಆಶ್ವಾಸನದಲ್ಲಿ ನೀವು ತಿಳಕೊಂಡಿರುವ ಅರ್ಥವೇ ಇಲ್ಲವೆಂದು ಸರ ಮಾಲ್ಕಂ ಹೇಲಿಯವರು ನಮ್ಮ ರಾಜಕೀಯ ಮುಂದಾಳುಗಳಿಗೆ ಸ್ಪಷ್ಟವಾಗಿ ಹೇಳಿದ್ದರು. ಸ್ವರಾಜ್ಯಕೊಡುವುದು ನಮ್ಮ ಧ್ಯೇಯವಲ್ಲವೆಂಬುದೇ ಸರ ಹೇಲಿಯವರು ಆಡಿದ ಮಾತಿನ ಅರ್ಥವಿತ್ತು. ಆ ಮೇಲೆ ಲಾರ್ಡ ಬರ್ಕನ್ ಹೆಡ್‌ರ ಉದ್ದಾಮ ಭಾಷಣ, ಸಾಯಮನ್ ಕಮಿಶನದಲ್ಲಿ ಹಿಂದೀ ಮನುಷ್ಯನನ್ನು ಒಬ್ಬನನ್ನೂ ತಕ್ಕೊಳ್ಳದೆ ಇರುವಿಕೆ ಇವೆಲ್ಲ ಕಾರಣಗಳಿಂದ ಬ್ರಿಟಿಶ ಮಂತ್ರಿಮಂಡಲದ ವಚನದ ಪ್ರಾಮಾಣಿಕತನದ ಬಗ್ಗೆಯೆ ಹಿಂದೀಜನರಿಗೆ ಸಂಶಯವು ಉಂಟಾಗಿದ್ದರೆ ಸೋಜಿಗವೇನು? ಲಾರ್ಡ ಕರ್ಝನರು ವ್ಹಿಕ್ಟೋರಿಯಾ ಮಹಾರಾಣಿಯ ಜಾಹೀರನಾಮೆಗೆ ಹೀಗೆಯೆ ಅಪಾರ್ಥವನ್ನು ಹೇಳಿದ್ದರು. ಆದುದರಿಂದ ಬ್ರಿಟಿಶರ ವಚನವನ್ನು ನಂಬಲು ಹಿಂದೀ ಜನರು ಹಿಂದೆ ಮುಂದೆ ನೋಡುತ್ತಿರುವರೆಂಬುದನ್ನು ಅರಿತೇ ಲಾರ್ಡ ಅಯರ್ವಿನ್ನರು ಹಾಡಿದುದನ್ನೆ ಹಾಡಿರಬೇಕಲ್ಲವೆ?

---

## ನಮ್ಮ ರಾಜ್ಯಕಾರ್ಯಧುರಂಧರರು ಹಿಡಿದ ಹಾದಿ

ವೈಸರಾಯರ ಪ್ರಕಟನೆಯಿಂದ ಅಸಂತುಷ್ಟರಾಗಿ ದೂರ ಸರಿದು ನಿಂತವರಲ್ಲಿ ಶ್ರೀ ಸುಭಾಸಚಂದ್ರ ಬೋಸರು ಅಗ್ರಗಣ್ಯರು. ವೈಸರಾಯರ ಪ್ರಕಟನೆಯಿಂದ ಪರಮ ಹರುಷಗೊಂಡು ಮೈಮರೆತು ಸಂಪೂರ್ಣ ಸಹಕಾರಕ್ಕೆ ಒಮ್ಮೆಲೆ ಕೈಯೊಡ್ಡಿದವರಲ್ಲಿ ಸರ ಸೆಟಲವಾಡ ಪ್ರಭೃತಿಗಳು ಪ್ರಮುಖರು. ಆದರೆ ಇದರಲ್ಲಿ ಆತೆನಿರಾಶೆಗಳ ಅದಾವ ಎಳೆದಾಟದೊಳಗೂ ಸಿಲುಕದೆ ಹಿಂದುಮುಂದಿನ ವಿಚಾರಮಾಡಿ ಮುಂದಡಿಯಿಡಲು

ಸಿದ್ಧರಾದವರು ಮಹಾತ್ಮಾ ಗಾಂಧಿಯವರೂ ಅವರೊಡನೆ ದಿಲ್ಲಿಯಲ್ಲಿ ತಮ್ಮ ಪ್ರಕಟನೆಯನ್ನು ಹೊರಡಿಸಿದ ಡಾ. ಸಪ್ರೂ ಶಾಸ್ತ್ರಿ ಪ್ರಭೃತಿಗಳೂ. ಕೇವಲ ತರ್ಕಪದ್ಧತಿಯಿಂದಲೆ ವಿಚಾರಿಸಿದರೆ ಶ್ರೀ ಸುಭಾಸಚಂದ್ರರ ಏಕಾಂತಿ ಪಂಥವು ಸರಿಯೆಂದು ತೋರುವದು. ಆದರೆ ನಿತ್ಯದ ವ್ಯವಹಾರದಲ್ಲಿ ಕೇವಲ ಆಗ್ರಹ-ಹಟವು ಕೆಲಸಕ್ಕೆ ಬಾರದು. ಸ್ಥಳಕಾಲಗಳನ್ನರಿತುಕೊಂಡು ಕೆಲವು ಮಾತುಗಳನ್ನು ಅಲ್ಪಸ್ವಲ್ಪ ಅದಲುಬದಲು ಮಾಡಬೇಕಾಗುತ್ತದೆ ಬ್ರಿಟಿಶರ ಸಂಬಂಧವಿಲ್ಲದ ಸಂಪೂರ್ಣ ಸ್ವಾತಂತ್ರ್ಯವೇ ಸಿಕ್ಕರೆ ಯಾರಿಗೆ ಬೇಡ? ಇದೆ ನಮ್ಮ ಗುರಿಯೂ ಆಗಬಹುದು.

ಆದರೆ ಇಂದು ನಾವೆಷ್ಟು ಆರ್ಭಾಟ ಮಾಡಿದರೂ ಬೊಬ್ಬೆಯಿಟ್ಟರೂ ಬರಿದೆ ಬಾಯ್ಮಾತಿನಿಂದ-ವ್ಯಾಖ್ಯಾನ ಮಾಸಪತ್ರಿಕೆಗಳಿಂದ ಸ್ವರಾಜ್ಯ ಸ್ವಾತಂತ್ರ್ಯಗಳನ್ನು ದೊರಕಿಸುವದಂತೂ ಸಾಧ್ಯವಿಲ್ಲವಷ್ಟೆ? ಮ. ಗಾಂಧಿ ಮೊದಲಾದ ಮುಂದಾಳುಗಳಿಗೆ, ಈಗಿಂದೀಗಲೆ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವು ಸಿಕ್ಕರೆ ಬೇಕೇ ಬೇಕಾಗಿದೆ. ಆದರೆ ನಮ್ಮ ಜನಗಳು ಅದಕ್ಕೆ ಅವಶ್ಯಕವಾದಷ್ಟು ಸ್ವಾರ್ಥತ್ಯಾಗ, ಧೈರ್ಯಗಳನ್ನು ತೋರಿಸಲು ಸಿದ್ಧರಾಗಿರಬೇಕಲ್ಲವೆ? ಮ. ಗಾಂಧಿಜೀಯವರು ಹಲವು ಬಗೆಗಳಿಂದ ಹಿಂದೀ ಜನರ ಸಾಮರ್ಥ್ಯವು ಎಷ್ಟು ಮೆಟ್ಟಿನ ವರೆಗೆ ಇರುವುದೆಂದು ಅರಿತುಕೊಂಡಿದ್ದಾರೆ; ಮತ್ತು ಆ ಸಾಮರ್ಥ್ಯಕ್ಕೆ ತಕ್ಕಂತಹ ಅಷ್ಟಷ್ಟೇ ಹೆಜ್ಜೆಗಳನ್ನು ಮುಂದಿಡಬೇಕೆಂದು ಪ್ರಯತ್ನಿಸುತ್ತಿದ್ದಾರೆ. 'ಭಲಿರೆ ಜಟ್ಟಿ ಎಂದರೆ ಕೆಮ್ಮಣ್ಣು ಮುಕ್ಕಿದ'ನೆಂಬಂತೆ ನಡೆದುಕೊಳ್ಳಲು ಮ. ಗಾಂಧಿಯವರು ಎಂದೂ ಸಿದ್ಧರಿಲ್ಲ. ಆದುದರಿಂದಲೆ ಅವರು ವೈಸರಾಯರ ಪ್ರಕಟನೆಗೆ ಉತ್ತರವೆಂದು ತಮ್ಮ ಕೆಲವರ ಅಭಿಪ್ರಾಯವನ್ನೂ ಪ್ರಕಟಿಸಿದ್ದಾರೆ. ಸರಕಾರದವರು ಮುಂದಿನ ರಾಜ್ಯಘಟನೆಯ ಕಾರ್ಯದಲ್ಲಿ ಹಿಂದೀ ಜನರ ಸಹಕಾರವನ್ನು ಅಪೇಕ್ಷಿಸುತ್ತಿದ್ದರೆ ಕೆಲವು ಕರಾರುಗಳನ್ನು ಒಪ್ಪಿಕೊಳ್ಳಬೇಕೆಂದು ತಿಳಿಸಿದ್ದಾರೆ. ರಾಜಕೀಯ ಸೆರೆಯಾಳುಗಳನ್ನು ಬಂಧಮುಕ್ತ ಮಾಡಬೇಕೆಂದೂ, ರಾಜಕೀಯ ಅಪರಾಧಿಗಳ ನ್ಯಾಯಗಳನ್ನು ಈಗ ತೆಗೆದುಹಾಕಿ ಶಾಂತವಾತಾವರಣವನ್ನುಂಟುಮಾಡಬೇಕೆಂದೂ ತಿಳಿಸಿದ್ದಾರೆ. ಈ ಬಗೆಯ ಕರಾರುಗಳಿಗೆ ಒಪ್ಪಿದಲ್ಲಿ ಮ. ಗಾಂಧಿ ಪ್ರಭೃತಿಗಳು 'ಗುಂಡು ಮೇಜಿನ' ಪರಿಷತ್ತಿಗೆ ಮುಂದಿನ ರಾಜ್ಯಘಟನೆಯ ವಿಚಾರ ಮಾಡಲು ಹೋಗಲಿಕ್ಕೆ ಒಪ್ಪಿದ್ದಾರೆ.

ಸರಕಾರವು ಕರಾರುಗಳಿಗೆ ಒಪ್ಪದಿದ್ದರೆ ಡಾ. ಸಪ್ರೂ, ನಾ. ಶಾಸ್ತ್ರಿ ಮೊದಲಾದ ಯಾವಾಗಲೂ ಸರಕಾರದ ಆಶ್ರಯವನ್ನೇ ಬಯಸುವಂತಹ ಜನರನ್ನೂ ಮ. ಗಾಂಧಿಯವರು ತಮ್ಮೊಡನೆ ಕೆಲಮಟ್ಟಿಗೆ ಅಸಹಕಾರ ಮಾಡಲಿಕ್ಕೆ ಹಚ್ಚುತಕ್ಕವರಿದ್ದಾರೆ. ನಾ. ಶಾಸ್ತ್ರಿ ಸಪ್ರೂ ಪ್ರಭೃತಿ ಜನರನ್ನು ತಮ್ಮ ಪಕ್ಷಕ್ಕೆ ತಕ್ಕೊಂಡುದು ಸಣ್ಣ ಪುಟ್ಟ ಮಾತಲ್ಲ. ಆದಕಾರಣ ಮ. ಗಾಂಧಿಯವರು ಬಹಳ ದೂರ ದೃಷ್ಟಿಯಿಂದಲೆ ಅಡಿಯಿಟ್ಟಿರುವರೆಂದು ಹೇಳಬೇಕಾಗುತ್ತದೆ.

---

## ಈ ವರ್ಷದ ನೋಬೆಲ್ (Nobel) ಪಾರಿತೋಷಿಕವು

ನೋಬೆಲ್ ಪಾರಿತೋಷಿಕವು ಜಯಕರ್ನಾಟಕದ ವಾಚಕರಿಗೆ ಪರಿಚಿತವಷ್ಟೆ. ಈ ವರ್ಷ ಅದರ ವಾಙ್ಮಯ ಶಾಖೆಯ ಮೆಚ್ಚು 'ಹರ್ ಥಾಮಸ್ ಮ್ಯಾನ್ (Herr Thomas Mann) ಎಂಬ ಜರ್ಮನ್ ಗ್ರಂಥಕಾರರಿಗೆ ದೊರೆಯಿತೆಂದು ತಿಳಿದುಬರುತ್ತದೆ.

---

## ಈ ವರ್ಷದ ದೇವರಾಜ ಬಹದ್ದೂರ ಇನಾಮು

೧೯೨೮-೨೯ನೆಯ ವರುಷದ ದೇವರಾಜ ಬಹಾದ್ದೂರ ಸಾಹಿತ್ಯ ಪಾರಿತೋಷಿಕವು ಕೆಳಗೆಕಾಣಿಸಿದ ಗ್ರಂಥಕಾರರಿಗೆ ದೊರೆತಿದೆ. (೧) ವಸಂತದ ಸಂಪಾದಕರಾದ ಶ್ರೀ ಶಿವರಾಮ ಕಾರಂತರಿಗೆ ಭಾರತೀಯ ಚಿತ್ರಕಲೆ ಎಂಬ ಗ್ರಂಥದ ಬಗ್ಗೆ ೩೦೦ ರೂ|| ಶ್ರೀ ದಿವಾಕರ, ಬೇಂದ್ರೆ, ಜೋಶಿ ಶಂ. ಬಾ ಇವರಿಗೆ ಉಪನಿಷದ್ರಹಸ್ಯ ಗ್ರಂಥದ ಬಗ್ಗೆ ೨೦೦ ರೂ|| ಬರ್ನಾರ್ಡ ಮತ್ತು ಜೋಸೆಫ ಇವರಿಗೆ ಘಾಟಿಲಾ ಎಂಬ ಗ್ರಂಥದ ಬಗ್ಗೆ ೨೦೦ ರೂ|| ಗಳು, ಈ ವರುಷದ ಪುಸ್ತಕಗಳಲ್ಲಿ ಆವುದೂ ಮೊದಲನೆಯ ತರಗತಿಯ ಇನಾಮಿಗೆ ತಕ್ಕುದಿಲ್ಲವೆಂದು ಪರೀಕ್ಷಕ ಮಂಡಲದವರು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಕನ್ನಡ ಲೇಖಕರು ಇದಕ್ಕೂ ಹೆಚ್ಚು ಪರಿಶ್ರಮ ಅಭ್ಯಾಸಗಳಿಂದ ಮೇಲ್ತರಗತಿಯ ಗ್ರಂಥಗಳನ್ನು ಬರೆಯಲುಜ್ಜುಗಿಸಬೇಕೆಂದು ಬಿನ್ನಹವು.

## ಚಿತ್ರಪರಿಚಯ

'ಒಡನಾಡಿಗಳು' ಎಂಬ ಈ ಸಲದ ಮುಖಚಿತ್ರವನ್ನು ಬರೆದ ತರುಣ ಚಿತ್ರಕಾರರಾದ ಶ್ರೀ. ಕೇಶವರಾಯರು ಮೊದಲು 'ಆಂಧ್ರಕಲಾಶಾಲೆಯಲ್ಲಿ' ಅಭ್ಯಾಸವನ್ನು ಮಾಡಿ ಈಗ ಸಧ್ಯಕ್ಕೆ ಶಾಂತಿನಿಕೇತನದ ಕಲಾಭವನದಲ್ಲಿ ಶಿಕ್ಷಣವನ್ನು ಹೊಂದುತ್ತಲಿರುವರು. ಬಂಗಾಲಿಗಳಂತೆ ನಮ್ಮ ಆಂಧ್ರಬಂಧುಗಳಲ್ಲಿಯೂ ಚಿತ್ರ ಕಲೆಯಲ್ಲಿ ಪುನರುಜ್ಜೀವನವಾಗುವ ಚಿನ್ಹವಿದೊಂದು. ಧಾರವಾಡದಲ್ಲಿ ಮೊನ್ನೆ ಮಹಾನವಮಿಯ ಉತ್ಸವದ ಲಲಿತ ಕಲಾ ಉತ್ಸವದಲ್ಲಿ ಈ ಚಿತ್ರವು ಪ್ರದರ್ಶಿತವಾಗಿ ಮನ್ನಣೆಯನ್ನು ಪಡೆದಿತು. ನಮ್ಮ ರಸಿಕಮಿತ್ರರಾದ ಶ್ರೀ. ಧಾರವಾಡಕರ ವಾಮನರಾಯರು ಮೂಲಚಿತ್ರವನ್ನು ಕೊಂಡಿರುವರು. ಮೂರುಬಣ್ಣದ ಅದರ ಪ್ರತಿಚಿತ್ರಗಳನ್ನು ಮದ್ರಾಸದ ತ್ರಿವೇಣಿ ಕಾರ್ಯಾಲಯದವರು ಪೂರೈಸಿಕೊಟ್ಟರು. ಈ ಚಿತ್ರದ ಪ್ರಕಟನೆಯು ಕಾರ್ಯದಲ್ಲಿ ನೆರವಾದ ಶ್ರೀ. ಧಾರವಾಡಕರರವರಿಗೂ ತ್ರಿವೇಣಿ ಕಾರ್ಯಾಲಯದವರಿಗೂ ನಾವು ಋಣಿಗಳಾದ್ದೇವೆ. ಈ ಚಿತ್ರದಲ್ಲಿ ಕಂಡುಬರುವ ವರ್ಣಕ್ರಮವೂ ಪ್ರಾಣಿದಯಾಭಾವವೂ ಬಾಲರೂ ದೀನರೂ ಆದವರೇ ದೀನರ ಮತ್ತು ಚಿಕ್ಕವರ ಹೃದಯವನ್ನು ಬಲ್ಲರು ಎಂಬ ಧ್ವನಿಯುಳ್ಳ ವಸ್ತುಸನ್ನಿವೇಶವೂ ಪ್ರಾಣಿಗಳಲ್ಲಿಯೂ ಮನುಷ್ಯರಲ್ಲಿಯೂ ಇರುವ ಪರಸ್ಪರ ಆಕರ್ಷಣವನ್ನು ಸೂಚಿಸುವ ಪರಿವೇಷ ಸನ್ನಿವೇಶವೂ ಚನ್ನಾಗಿ ಚಿತ್ರಿತವಾಗಿವೆ.

## ಜಯಕರ್ನಾಟಕ ಮಂಡಲದ ಕಾರ್ಯಕಲಾ[illegible]

ಪುಲಿಗೆರೆಯ ಪಂಪೋತ್ಸವಕ್ಕೆ ಲಕ್ಷ್ಮೇಶ್ವರದಲ್ಲಿಯ ನ[illegible] ಮಂಡಲದ ಸದಸ್ಯರೂ ಮಿತ್ರರೂ ಇವರೇ ಮುಖ್ಯ ಕಾ[illegible] ಕಳೆದ ೭ ವರ್ಷಗಳಿಂದ ಅಂದರೆ ಪಂಪನು ತನ್ನ ಆದಿಪು[illegible]ವನ್ನು ಬರೆದ ಸುವಿಖ್ಯಾತ ದುಂದುಭಿಸಂವತ್ಸರದಿಂದ ಈ ಉ[illegible]ವನ್ನು ಧಾರವಾಡದಲ್ಲಿ ಮಾಡುತ್ತಿದ್ದೆವು. ಆದರೆ ನಿಜ[illegible] ಈ ಉತ್ಸವವು ಪಂಪನು ವಾಸಿಸಿದ ಊರಲ್ಲಿ ನಡೆಯುತ[illegible] ಹೆಚ್ಚು ಉಚಿತವೆಂದು ಆ ಬಗೆಯಿಂದ ಈಗ ೨-೩ ವರುಷಗಳ[illegible] ಪ್ರಯತ್ನವು ನಡೆದಿತ್ತು. ಆದರೆ ಈ ವರುಷ ಆ ಯೋ[illegible] ಯೋಗವು ಕೂಡಿಬಂದಿತು. ಇಂತು ಈ ಉತ್ಸವವನ್ನು ಅತ್ಯ[illegible] ಉತ್ಸಾಹದಿಂದ ನೆರವೇರಿಸಿದುದಕ್ಕಾಗಿ ಅಲ್ಲಿಯ ಜನ[illegible] ಎಷ್ಟು ಕೊಂಡಾಡಿದರೂ ಕಡಿಮೆಯೆ.

ನಮ್ಮ ಮಿತ್ರರೂ ಜಯಕರ್ನಾಟಕ ಮಂಡಲದ ಸದಸ್ಯ[illegible] ಆದ ಶ್ರೀ. ಬೆಟ್ಟಗೆರೆ ಕೃಷ್ಣರಾಯರಿಗೆ ಅವರ 'ಮುದ್ದನ ಮಾ[illegible] ಎಂಬ ಕಾವ್ಯಕ್ಕಾಗಿ ಈ ಮೊದಲು ಒಮ್ಮೆ ಮೈಸೂರಿನ ದೇವ[illegible] ಬಹದ್ದೂರ ಇನಾಮು ದೊರೆತಿತ್ತಷ್ಟೇ. ಈ ಸಲ ಉಪನಿಷ[illegible] ರಹಸ್ಯವೆಂಬ ಗ್ರಂಥಕ್ಕೂ ಇನಾಮು ಸಿಕ್ಕಿದೆ. ಈ ಬಗ್ಗೆ ಜ[illegible] ಕರ್ನಾಟಕ ಮಂಡಲಕ್ಕೆ ಅಭಿಮಾನವೆನಿಸುತ್ತದೆ. ಏಕೆಂ[illegible] ಅದನ್ನು ಬರೆದವರಲ್ಲಿ ಈ ಮಂಡಳದ ಸದಸ್ಯರಿದ್ದಾರೆ,

[ ಅರಿಕೆ:— ಮಹತ್ವದ ಕೆಲವು ಬರಹಗಳೂ ಬಿಡಿನುಡಿಗಳೂ ಬಂದದ್ದರಿಂದ ವಿವಿಧಭಾಷೆಗಳ ಪ್ರಪಂಚಪರಿಚಯ[illegible] ಸಾಹಿತ್ಯಲೋಕವೂ ಸಿದ್ಧವಿದ್ದರೂ ಸ್ಥಳಾಭಾವದ ಮೂಲಕ ಪ್ರಸಿದ್ಧವಾಗಲಿಲ್ಲ. —ಸಂ. ]

---

# ಸ್ವೀಕಾರ

**ಪುಸ್ತಕಗಳು.**

ಶ್ರೀ ಕರ್ಣಾಟಕ ವಚನ ಮಣಿಮಂಜರಿ
ಶ್ರೀ ಪ್ರಭುದೇವರ ಪದಗಳು
ದೈವವಿಲಾಸ
ವೀರ್ಯನಾಶವೇ ಮರಣ
ಖಾದಿಯ ಅರ್ಥಶಾಸ್ತ್ರ
ತುಳುವಾಲ ಬಲಿಯೇಂದ್ರೆ
Karnatak Rangabhumi Pictolial
ಸೂರ್ಯಭೇದನ ವ್ಯಾಯಾಮ

**ಕರ್ತೃಗಳು.**

ಶ್ರೀ. ಶಾ. ವೆಂಕಟರಮಣಯ್ಯ ಅಲಕಾಪುರ,
ಶ್ರೀ ಬುದ್ಧಯ್ಯಾ ಮಹೆಯ್ಯಾ ಪುರಾಣಿಕ, ತೇರದಾಳ
ಶ್ರೀ ಕೆ. ನಾರಾಯಣಶಾಸ್ತ್ರಿ, ಶಿವಮೊಗ್ಗೆ
ಶ್ರೀ ಉಡಪೀನಾಥ ಶ್ರೀನಿವಾಸರಾವ ಹೊದಲೂರ ವಿಜಾಪುರ
ಶ್ರೀ ಅನಂತ ಅಣ್ಣಾಜಿ ಚಿಕ್ಕೋಡಿ, ಬೆಳಗಾಂವಿ
ಶ್ರೀ ಎನ್. ಶೀನಪ್ಪ ಹೆಗ್ಗಡೆ, ಉಡುಪಿ
ರಂಗಭೂಮಿ ಕಾರ್ಯಾಲಯ, ಬೆಂಗಳೂರು
ಶ್ರೀ ಶ್ರೀಪಾದ ದಾಮೋದರ ಸಾತವಳೇಕರ, ಔಂಧ.

# ವಿಷಯಾನುಕ್ರಮಣಿಕೆ



## ಮುಂದೆ ಬರುವ ಲೇಖಗಳು

| | | |
|---|---|---|
| ೧ | ಮುಂಬಯಿ ಕರ್ನಾಟಕದ ಪೈರಿನ ಪೇಟಿ | ಪ್ರೊ. ಎಸ್. ಜಿ. ಬೆರಿ M. A. ಕರ್ನಾಟ ಕಾಲೇಜ ಧಾರವಾಡ |
| ೨ | ಹಾಜೀ ಬಿಲ್ಲು | ಶ್ರೀ. ಬೆಳವಿ ದತ್ತಾತ್ರೇಯ ರಾಯರು LL. B., M. L. A. ಬೆಳಗಾಂವ |
| ೩ | ಪ್ರಾಚೀನ ಜ್ಯೋತಿರ್ವಿದರು | ,, ಬಿ. ಸೂರ್ಯನಾರಾಯಣರಾವ್ B.A., M.R.A.S. etc. ಸಂಪಾದಕ Astrological Magazine, ಬೆಂಗಳೂರು |
| ೪ | ಸಂಗೀತವಾದ್ಯಗಳ ಇತಿಹಾಸವು | ,, ಹುಲಗೂರ ಕೃಷ್ಣಾಚಾರ್ಯರು ಸಂಗೀತವಿದ್ವಾನ ಹುಬ್ಬಳ್ಳಿ |
| ೫ | ಲಿಂಗವಂತಮತದ ಪೂರ್ವೇತಿಹಾಸ (೯ ವರ್ಷದ ಪರಿಶ್ರಮ ಫಲ) | ,, ಚೆನ್ನಮಲ್ಲಪ್ಪಾ ಗಲಗಲಿ, ಹಲಸಂಗಿ |
| ೬ | ಚೂರಮರಿಯವರ ಶಾಕುಂತಲ ನಾಟಕದ ಷಷ್ಟ್ಯಬ್ಧಿಪೂರ್ತಿ | ,, ಮುದವೀಡು ಕೃಷ್ಣರಾಯರು, ಧಾರವಾಡ |
| ೭ | ಮಗುಗಳ ಹುರಿಯನ್ನು ಯಾವಾಗ ಮತ್ತು ಹೇಗೆ ಕೊಯ್ಯಬೇಕು. | ಕಮಲಾಪೂರ ಶಾಂತರಾಜರು, M. B. B. S, ಧಾರವಾಡ |
| ೮ | ಪಂಪನ ಸಮಸಾಮಯಿಕ ಇತಿಹಾಸ | ,, ಗೋವಿಂದ ಪೈ ಮಂಜೇಶ್ವರ |



ಇತ್ಯಾದಿ. ಇತ್ಯಾದಿ.

# ರಾಗದ ಪೆಟ್ಟಿಗೆಗಳು

## ನಾಟಕ ಸಾಮಾನು:-ತಬಲೆ, ಡಕ್ಕೆ, ವಗೈರೆ



೧. ಕೈಪೆಟ್ಟಿಗೆ ಸಿಂಗಲ ರೂ. ೨೫, ೩೨, ೪೦, ೫೦, ೬೨.
೨. ,, ಡಬ್ಬಲ ,, ೩೦, ೪೫, ೪೦, ೬೦, ೧೧೦.
೩. ಕಾಲುಪೆಟ್ಟಿಗೆ ,, ,, ೬೫, ೭೫, ೧೦೦, ೧೩೦, ೧೪೦
೪. ತಬಲೆ (ತಾಂಬ್ರದ ಡಕ್ಕೆ ಸಹಿತ) ರೂ ೧೨, ೧೭, ೧೮, ೨೧
೫. ಫಿಟಲು—ಉತ್ತಮವಾದ ವಿಲಾಯತಿ (ಪೆಟ್ಟಿಗೆಯು ಹೊರತು) ಕಿಮ್ಮತು ರೂ. ೧೨, ೧೫, . ೨೦, ೨೫.

**ಗೋಪಾಳ ಸಖಾರಾಮ ಮತ್ತು ಕಂಪನಿ,**
೨೨೮, ವಿಠ್ಠಲವಾಡಿ ಎದುರಿಗೆ,
**ಕಾಳಬಾದೇವಿ ರೋಡ ಮುಂಬಯಿ.**

## ಡಾಕ್ಟರ ಜೀ. ಬೀ. ಯವರ

# ಸುಗಂಧ ನಶ್ಯದ ಪುಡಿ




ಲೋಕಪ್ರಸಿದ್ಧವಾದ ಈ ಸುಗಂಧ ನಶ್ಯದ ಪುಡಿಯಿಂದ ಶೀತ ಶಿ, ಒಂಟೆತಲೆನೋವು, ಮುಂತಾದ ವ್ಯಾಧಿಗಳು ಪರಿಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ಕಿ ವ್ಯಾಧಿಗಳು ಅಡಗಿ ಜ್ಞಾನಶಕ್ತಿ ಬೆಳೆಯುವದು. ಈ ಬ್ರ ನ ನಶ್ಯದ ಸಂಗಡ ಸುಗಂಧ ಪು ನಶ್ಯದ ಪುಡಿಯಲ್ಲಿ ಒಂದು ಬ ಟಕಿಯನ್ನು ಬೆರಸಿದರೆ ಎಲ್ಲವು ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳುಹಿಸಲಾದೀತು. ಬುಡ್ಡಿ ಒಂದಕ್ಕೆ ಕ್ರಯ ರೂ. ೦—೪—೦.

ವ್ಹಿ. ಪಿ. ೦-೪-೨. ಡಜನ್ ೧ಕ್ಕೆ ಕ್ರಯ ರೂ. ೨-೮-೦.
ವ್ಹಿ. ಪಿ. ಚಾರ್ಜ ೮ ಆಣೆ.

ವಿಳಾಸ—**ಗುರುಬಸವ ಆ್ಯಂಡ ಕಂಪನಿ ಲಿಮಿಟೆಡ್, ಪೋ. ಬಾ. ೫೭೦, ಮದರಾಸು.**

# ಡೊಂಗರೆ ಬಾಲಾಮೃತ



ಮಧುರವಿರುವದರಿಂದ ಮಕ್ಕಳು ಸಂತೋಷದಿಂದ ಸೇವಿಸುತ್ತಾರೆ. ಮತ್ತು ಇದನ್ನು ಸೇವಿಸುವದರಿಂದ ಶಕ್ತರಾಗುವರಲ್ಲದೆ ತೂಕವು ಹೆಚ್ಚುವದು.

ಕ್ರಯ ಬಾಟ್ಲ ೧ಕ್ಕೆ ೧೪ ಆಣೆ, ಟ. ಖ. ೯ ಆಣೆ.

**ಕೆ. ಟಿ. ಡೋಂಗರೆ ಕಂಪನಿ,**
**ಗಿರಗಾಂವ, ಮುಂಬಯಿ**

# ಅಮೃತಾಂಜನ




ಇದು ವಾತವೇದನೆ, ಉಳುಕು ಇತ್ಯಾದಿ ವ್ಯಾಧಿಗಳ ಮೇಲೆ ರಾಮ ಬಾಣದಂತಾಗಿರುವದು. ಕಳೆದ ೨೫ ವರ್ಷಗಳಿಂದ ಇದರ ಉಪಯುಕ್ತತೆಯು ಸ್ಪಷ್ಟವಾಗಿಸಿದ್ಧವಾಗಿರುತ್ತದೆ. ಲಕ್ಷಗಟ್ಲೆ ಕುಟುಂಬಗಳು ಅಮೃತಾಂಜನವನ್ನು ಉಪಯೋಗಿಸುತ್ತಿರುವರು. ಆದದರಿಂದ ಎಲ್ಲ ಪ್ರಕಾರದ ವೇದನೆಗಳು, ಕೆಮ್ಮು, ದಮ್ಮು, ಸಂಧಿವಾತ ಮೊದಲಾದ ಎಷ್ಟೋ ವ್ಯಾಧಿಗಳ ಮೇಲೆ ಇದು ಗುಣಕಾರಿಯೆಂದು ಅರಿಯುವರು. ಇದರ ಪ್ರತ್ಯಕ್ಷ ಅನುಭವದಿಂದ ಖಾತ್ರಿಮಾಡಿಕೊಳ್ಳಬಹುದು.

**ಕಿಮ್ಮತ್ತು ೧೦ ಆಣೆ, ವಿ. ಪಿ. ವೆಚ್ಚ ಬೇರೆ.**
**ಅಮೃತಾಂಜನ ಡಿಪೋ,**
**ತಂಬುಚೆಟ್ಟಿ ಸ್ಟ್ರೀಟ್, ಮದ್ರಾಸು.**

# ಜಯಕರ್ನಾಟಕ ಪತ್ರಿಕೆಯೂ ಗ್ರಂಥಮಾಲೆಯೂ

## ಜಯಕರ್ನಾಟಕ ಮಂಡಳದ ಪರವಾಗಿ ಪ್ರಕಟವಾಗುವವು!

**ಕರ್ನಾಟಕಸಂಸ್ಕೃತಿಯ ಸಂರಕ್ಷಣ ಸಂವರ್ಧನಗಳ ಕಾರ್ಯವೇ ಈ ಮಂಡಲದ ಹೆಗ್ಗುರಿಯು!**

ಮಂಡಲದವರು ಈ ವರ್ಷ ಪುನಃ ಎಂಟು ಫಾರ್ಮುಗಳನ್ನು ಮುದ್ರಿಸುವದನ್ನು ಗೊತ್ತುಮಾಡಿರುವರು. ಆರ್ಟ ಕಾಗದದ ಮೇಲೆ ಮುಖ್ಯವಾದ ಒಂದು ಚಿತ್ರವಲ್ಲದೆ ಅನೇಕ ಚಿತ್ರ ಮುಂತಾದವುಗಳನ್ನು ಹಾಕುವದನ್ನು ಗೊತ್ತುಮಾಡಿರುತ್ತಾರೆ.

ವಾರ್ಷಿಕ ಚಂದಾ ೫--೮--೦ ಮಾತ್ರ.

**ಕರ್ನಾಟಕದ ಎಲ್ಲ ಭಾಗಗಳಲ್ಲಿಯೂ ಪ್ರಸಾರವಿರುವ ಈ ಪತ್ರಿಕೆಗೆ ಬೇಗನೆ ಜಾಹೀರಾತುಗಳನ್ನು ಕಳಿಸಿರಿ.**

### ಜಾಹೀರಾತಿನ ದರಗಳು

| ಪುಟ | ೧ ತಿಂಗಳಿಗೆ | ೩ ತಿಂಗಳಿಗೆ | ೬ ತಿಂಗಳಿಗೆ | ೧೨ ತಿಂಗಳಿಗೆ |
|---|---|---|---|---|
| ೧ | ರೂ. ೧೦ | ರೂ. ೨೫ | ರೂ. ೪೫ | ರೂ. ೭೫ |
| ೧/೨ | ,, ೬ | ,, ೧೫ | ,, ೨೫ | ,, ೪೫ |
| ೧/೪ | ,, ೩½ | ,, ೮ | ,, ೧೫ | ,, ೨೫ |
| ೧/೮ | ,, ೨ | ,, ೫ | ,, ೮ | ,, ೧೫ |

೩ ತಿಂಗಳ ಹಣವನ್ನು ಮುಂಗಡಕಳಿಸಬೇಕು. ಹೊದಿಕೆಯ ಪುಟಗಳಿಗೆ ವಿಶೇಷದರಗಳು.

## ನಮ್ಮಲ್ಲಿ ದೊರೆಯುವ ಪುಸ್ತಕಗಳು!

**ಭಾರತಹುಣ್ಣಿವೆಯ ವರೆಗೆ**

ಕರ್ನಾಟಕ ಕವಿಸಾಮ್ರಾಟ್ ಪಂಪನ ಪುಣ್ಯಸ್ಮರಣಕ್ಕಾಗಿ ಜಯಕರ್ನಾಟಕ ಚಂದಾದಾರರಿಗೆ ಮಾತ್ರ ¾ ಬೆಲೆಗೆ ಸಿಗುವವು.

**ಎಲ್ಲ ಪುಸ್ತಕಗಳನ್ನಾಗಲಿ ೧೦ ರೂ. ಗಿಂತ ಹೆಚ್ಚು ಬೆಲೆಯ ಪುಸ್ತಕಗಳನ್ನಾಗಲಿ ಕೊಳ್ಳುವ ಇತರರಿಗೆ ೧೦೦ಕ್ಕೆ ೨೦ ರಂತೆ ಕಮಿಶನ್ನು.**

**ಬೇಗ ಬರೆಯಿರಿ!**

| | |
|---|---|
| ನನ್ನದು ಈ ಕನ್ನಡ ನಾಡು | ೦- ೪-೦ |
| ರಾಷ್ಟ್ರೀಯತ್ವದ ಮೀಮಾಂಸೆ | ೦- ೪-೦ |
| ಉಪನಿಷದ್ರಹಸ್ಯ | ೩- ೦-೦ |
| ಪ್ರತಿಭೆ (ಕಾವ್ಯಚರ್ಚೆ) | ೦- ೪-೦ |
| ವಿಸರ್ಜನ (ರವೀಂದ್ರರ ನಾಟಕ) | ೦- ೮-೦ |
| ಜನಜೀವನ (ನಾಟಕ) | ೦- ೮-೦ |
| ಕೃಷ್ಣಾ ಕುಮಾರಿ (ಚಿಕ್ಕ ಕಾವ್ಯ) | ೦- ೩-೭ |
| ನೌಕಾಕ್ರೀಡನ ,, | ೦- ೧-೦ |
| ಅರವಿಂದ ಘೋಷ | ೦-೧೨-೦ |
| ಸಂಸಾರವೆಂದರೆ ಸೂಜಿಗಲ್ಲು (ಕಥೆ) | ೦- ೧-೬ |
| ಅನಾಥ ಬಂಧು ,, | ೦- ೧-೬ |
| ಭಾವದೇವಿ (ಚಿಕ್ಕ ಕಾವ್ಯ) | ೦- ೨-೦ |
| ಸಂಸ್ಕಾರ ರತ್ನಾಕರ | ೨- ೮-೭ |
| ಶಿವಾದ್ವೈತ ದರ್ಪಣಃ | ೦- ೮-೦ |

**ತಟ್ಟನೆ ತರಿಸಿಕೊಳ್ಳಿರಿ!**

ಜಯಕರ್ನಾಟಕ ಗ್ರಂಥಮಾಲೆಯ ಪ್ರಥಮ ಪುಷ್ಪ

### "ಹಕ್ಕಿ ಹಾರುತಿದೆ!"

(ಅಚ್ಚಿನಲ್ಲಿದೆ)

ಇಂದಿನ ಕನ್ನಡನಾಡಿನ ನೂತನ ಜೀವನವು ಹಿಡಿದ ಹಾದಿಯ ಹೆಗ್ಗುರುತುಗಳಂತಿರುವ, ಹಾಗೂ ಈ ಹೊಸಕಾಲದಲ್ಲಿ ಉತ್ತರ ಕರ್ನಾಟಕವು ಸಾರಸ್ವತಸಾಮ್ರಾಜ್ಯದಲ್ಲಿ ಮಾಡುತ್ತಿರುವ ಕಾರ್ಯದ ಪ್ರತಿನಿಧಿಗಳಂತಿರುವ ಕೆಲವು ಕವಿಗಳ ಕವಿತಾ ಸಂಗ್ರಹವಿದು. ಕನ್ನಡನಾಡಿಗೆ ಆಗುತ್ತಿರುವ ಬಯಕೆ-ಬೇನೆಗಳ ಆವಿಷ್ಕಾರವೇ ಈ ಕಾವ್ಯಮಾಲೆಯ ತಿರುಳು. ಶ್ರೀಯುತ ದತ್ತಾತ್ರೇಯರಾಯರಿಂದ ಸಂಕಲಿತವೂ ಸಂಪಾದಿತವೂ ಆದುದು. ಒಳ್ಳೇ ಅಂಟಿಕ್ ಕಾಗದ. ಅಂದವಾದ ಅಚ್ಚು; ಚಂದವಾದ ಕಟ್ಟು. ಕ್ರೌನ ಆಕಾರದ ಸು. ೧೦೦ ಪುಟ, ಬೆಲೆ ೮ ಆಣೆ.

ಎಲ್ಲ ಪುಸ್ತಕಗಳಿಗೂ ಅಂಚೇವೆಚ್ಚ ಬೇರೆ

**ವಿಳಾಸ--ಜಯಕರ್ನಾಟಕ ಕಾರ್ಯಾಲಯ ಸಾಧನಕೇರಿ, ಧಾರವಾಡ.**

# ಶ್ರೀ ಕ್ಷೇತ್ರ ಉಡುಪಿ

## ಉತ್ತಮ ದೇವಪೂಜಾ ಸಾಮುಗ್ರಿಗಳು.

ದೇವತಾರ್ಚನೆಯ ಸೆಟ್ ಒಂದಕ್ಕೆ ರೂ. 3, 5, 8, 15 ಮತ್ತು 25. ಇವಲ್ಲದೆ, ಶ್ರೀ ಮುದ್ರೆ, ಆರತಿ, ಪಂಚಪಾತ್ರೆ ಮೊದಲಾದವು ಹಿತ್ತಾಳಿ, ತಾಂಬ್ರ ಮತ್ತು ಬೆಳ್ಳಿಯವು ಯಾವಾಗಲೂ ಕಮ್ಮಿ ಕ್ರಯಕ್ಕೆ ದೊರೆಯುತ್ತವೆ. ಸಚಿತ್ರ ಕ್ಯಾಟಲಾಗಿಗೆ ಬರೆಯಿರಿ.

ವಿ. ಸೂ. ಸ್ಪೆಶಲ್ ಕಂಚುವಿನಿಂದ ತಯಾರಿಸಿದ ಮುಚ್ಚ ಗಿಂಡಿಗೆ ರೂ. ೨ರಿಂದ ೫ರ ವರೆಗೆ.

**ಕಲ್ಮಂಜೆ ವ್ಯಾಸಾಚಾರ್ಯ,**
ಭಾಂಡೆವ್ಯಾಪಾರಿ,
**ಉಡಪಿ.**

---

# ಸುಧಾರಸ

## ಆಯುರ್ವೇದ ವೈದ್ಯಾನುಭವದಲ್ಲಿ ಅನೇಕ ವರ್ಷಗಳು ಕೃಷಿಮಾಡಿ ಪ್ರಖ್ಯಾತಿಹೊಂದಿದ

### ಡಾಕ್ಟರು—ಈ. ಪಿ. ಎಸ್. ಆರ್.

ಇವರಿಂದ ನೂತನವಾಗಿ ಕಂಡು ಹಿಡದು ತಯಾರು ಮಾಡಲ್ಪಟ್ಟ ಅಮೋಘವಾದ ಬಲವರ್ಧಕೌಷಧ. ತೀವ್ರ ದಶೆಯಲ್ಲಿದ್ದ ಸರ್ವ ವ್ಯಾಧಿಗಳನ್ನು ಸ್ವಲ್ಪ ಕಾಲದಲ್ಲಿ ನಿವಾರಣೆ ಮಾಡುವ ಶಕ್ತಿ ಇದರಲ್ಲುಂಟು. ಇದರಲ್ಲಿ ಸ್ವರ್ಣ ಮತ್ತು ಲೋಹ ಇವುಗಳ ದ್ರಾವಕಗಳು ಸೇರಿ ಇರುವದದರಿಂದ ರೋಗನಿವಾರಣೆ ಮಾಡುವದಲ್ಲದೆ ನರಗಳ ಬಲಹೀನತೆಯುಡಗಿ ವೀರ್ಯವೃದ್ಧಿಯಾಗುವದು. ಅಲ್ಲದೆ ಸಂಭೋಗಶಕ್ತಿ ಉಂಟುಮಾಡುವದು. ದೇಹದಲ್ಲಿ ಅಶುದ್ಧ ರಕ್ತವನ್ನು ಶುದ್ಧಿ ಮಾಡಿ ರಕ್ತವನ್ನು ವೃದ್ಧಿಮಾಡುವದು. ಜೀರ್ಣಕೋಶವನ್ನು ಸರಿಯಾದ ಸ್ಥಿತಿಯಲ್ಲಿ ಇಡುವ ಮೂಲಿಕಗಳು ಇದರಲ್ಲಿ ಸೇರಿ ಇರುವದರಿಂದ ಮಲಬದ್ಧಕವಾಗಲಾರದು. ವ್ಯಭಿಚಾರ ವ್ಯಾಧಿಗಳಿಗೆ ಇದನ್ನುಳಿದು ಬೇರೆ ಅವುಷಧವಿಲ್ಲವೆಂದು ದೃಢವಾಗಿ ಹೇಳುವೆವು.

ಬೆಲೆ:—ಪೂರ್ತಿನಿವಾರಣೆಗಾಗಿ ಆಗುವ ಬಾಟ್ಲಿ ೧ಕ್ಕೆ ರು. ೩-೯-೦.

ಏಜಂಟರು :—**ಎಟೋನಿಯಾ ಆ್ಯಂಡ ಕೊ,**
ಪೋಷ್ಟಬಾಕ್ಸ ನಂ. ೬೫ (ಜಿ. ಕೆ.)
**ಮದರಾಸು.**

---

## ಲಕ್ಷಗಟ್ಟಲೆ ಮಕ್ಕಳ ಪ್ರಾಣವನ್ನು ಕಾಪಾಡಿದ ವನಸ್ಪತಿಗಳ ಅದ್ಭುತ ಮಹಿಮೆ.




ಬಾಲಾರ್ಕ ಮಧು ಇದು ಮಧುರವಾಗಿದೆ ಇದನ್ನು ಚಿಕ್ಕ ಮಕ್ಕಳು ಆನಂದದಿಂದ ಸೇವಿಸುತ್ತಾರೆ ಮಕ್ಕಳಿಗೆ ಇದನ್ನು ಕೊಡುವುದರಿಂದ ಉಣಿಸುವ ಹಾಲೂ, ಅನ್ನವೂ, ಮೈಗೆ ಹತ್ತಿ ಶರೀರದಲ್ಲಿ ಪೌಷ್ಟಿಕರಸಗಳುಂಟಾಗಿ ಗೂಡುಕಟ್ಟಿಕೊಂಡಿರುವ ಎದೆಯ ಎಲುಬುಗಳ ಮಧ್ಯಮಾಂಸಬೆಳೆದು ಮಕ್ಕಳಿಗೆ ಬಹು ಶಕ್ತಿಯೂ ದೇಹದಾರ್ಢ್ಯವೂ, ಹೆಚ್ಚುವುದು. ಕೇವಲ ವೈದ್ಯರ ಹೊಗಳಿಕೆಯೆಂದು ತಾತ್ಸಾರ ಮಾಡದೆ ಒಂದೇ ಒಂದು ಶೀಸೆ ತರಿಸಿಕೊಂಡಲ್ಲಿ ಇದರ ಅಪಾರಗುಣವು ತಾನಾಗಿ ತಿಳಿಯುವದು. ಬೆಲೆ ಶೀಸೆ ೧ಕ್ಕೆ ೦-೧೨-೦ ಟ. ಖ ೦-೯-೦

**ಯಂ. ವಿ. ಪ್ರಸಾದಿಕ ಔಷಧಾಲಯ**
**ಶೀಮೊಗ್ಗಾ ಮೈಸೂರ ಶೀಮೆ**

---

## Challenge Cure for Lungacy

**ಉನ್ಮಾದ (ಹುಚ್ಚು) ರೋಗಕ್ಕೆ ಅಪ್ರತಿಮ ಚಿಕಿತ್ಸೆ**

ರೋಗವು ಎಷ್ಟೇ ಘೋರವಾಗಿರಲಿ, ಎಷ್ಟೇ ದೀರ್ಘ ಕಾಲದಿಂದ ಬಂದುದಾಗಿರಲಿ, ಗುಣವಾಗುವದರಲ್ಲಿ ಸಂಶಯವಿಲ್ಲ. ವಿವರಗಳಿಗೆ ಬರೆದುಕೊಳ್ಳಿರಿ.

**ಸೇಡಿಯಾಪು ಕೃಷ್ಣ ಭಟ್ಟ,**
ಸಿದ್ಧಭವನ, **ಕೊಡಿಯಾಲಬೈಲ್, ದಕ್ಷಿಣಕನ್ನಡ**



ಮಹಾರಾಷ್ಟ್ರದ ಸತ್ಪುರುಷರಾದ

**ಮಾಧವನಾಥ ಮಹಾರಾಜರು**

ಮೂರ್ತಿಶಿಲ್ಪಿ —ಶ್ರೀ ಬಾಳಾಚಾರ್ಯ ವಖೇಡಿ (ಹುಬ್ಬಳ್ಳಿ)

# ಜಯಕರ್ನಾಟಕ

ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

ಸಂಪುಟ ೮ } — ಶುಕ್ಲನಾಮ ಸಂವತ್ಸರ, ಹೊಸ್ತಿಲ ಹುಣ್ಣಿವೆ
ಚಾಲುಕ್ಯವಿಕ್ರಮ ವರ್ಷ ೮೫೪, ೧೬ನೆಯ ದಿಶಂಬರ ೧೯೨೯. { ಸಂಚಿಕೆ ೨

## ಕುದುರೆ

[ಶ್ರೀ ಶ್ರೀ ರವೀಂದ್ರನಾಥ ಠಾಕೂರರ 'ಲಿಪಿಕಾ' ಎಂಬ ಬಂಗಾಳೀ ಗ್ರಂಥದಲ್ಲಿಯ 'ಘೋಡಾ' ಎಂಬುದರ ಅನುಲೇಖನ; ಅವರ ಅಪ್ಪಣೆಯಿಂದ]

( ವನಮಾಲಿಯು ಕನ್ನಡಿಸಿದುದು )

೧

ಸೃಷ್ಟಿನಿರ್ಮಾಣದ ಕಾರ್ಯವೆಲ್ಲ ಮುಗಿದು ಸೂಟಿಯ ಗಂಟೆಯಾಗುವ ಹೊತ್ತಿಗೆ ಬ್ರಹ್ಮನ ತಲೆಯಲ್ಲಿ ಹೊಸದೊಂದು ಬಗೆ ಮೊಳಕೆಯೊಡೆಯಿತು.

ಪಾರುಪತ್ಯಗಾರನನ್ನು ಕರೆದು ಹೇಳಿದ "ಪಾರುಪತ್ಯಗಾರನೇ, ನನ್ನ ಕಾರಖಾನೆಯಲ್ಲಿಂದ ಸ್ವಲ್ಪ ಸ್ವಲ್ಪ ಪಂಚಮಹಾಭೂತಗಳನ್ನು ಆರಿಸಿ ತೆಗೆದುಕೊಂಡು ಬಾ. ಇನ್ನೊಂದು ಹೊಸ ಪ್ರಾಣಿಯನ್ನು ಸೃಷ್ಟಿಸಬೇಕಾಗಿದೆ."

ಕೈಮುಗಿದು ತಲೆಬಾಗಿ ಪಾರುಪತ್ಯಗಾರನೆಂದ "ಜೀಯಾ, ಮೊದಲಿಗೇ ತಾವು ಒಳ್ಳೇ ಹುರುಪುದುಂಬಿ, ಆನೆ, ತಿಮಿ, ಹಾವು, ಹೆಬ್ಬಾವು, ಹುಲಿ, ಸಿಂಹ ಮೊದಲಾದವುಗಳನ್ನು ನಿರ್ಮಿಸುವಾಗ ಸಾಮಗ್ರಿಯ ವಿಚಾರದಲ್ಲಿ ಮುಂಜಾಗ್ರತಿಯನ್ನೇ ತೆಗೆದುಕೊಳ್ಳಲಿಲ್ಲ. ಮೇಲ್ತರದ ಮಹಾಭೂತಗಳೆಲ್ಲ ಬಹಳ ಮಾಡಿ ತೀರುತ್ತ ಬಂದಿವೆ. ಪೃಥ್ವಿ, ಆಪ ತೇಜಗಳು ತಳಕ್ಕೆ ಹತ್ತಿವೆ. ಈಗಿರುವದರಲ್ಲಿ ವಾಯು ಆಕಾಶಗಳು ಬೇಕಾದಷ್ಟಿವೆ.

ಚತುರ್ಮುಖನು ಕೆಲಹೊತ್ತು ತಡೆದು, ಶಾಂತಗಾಂಭೀರ್ಯದಿಂದ, ಗಡ್ಡದಮೇಲೆ ಕೈಹಾಕುತ್ತ "ಒಳ್ಳೇದು ಭಾಂಡಾಗಾರದಲ್ಲಿ ಏನೇ ಇದ್ದುಬಿದ್ದದ್ದನ್ನು ತೆಗೆದುಕೊಂಡು ಬಾ. ನೋಡೋಣವಂತೆ". ಎಂದು ಅಪ್ಪಣೆಯಿತ್ತ.

೨

ಈ ಸಲ ಮಾತ್ರ ಈ ಪ್ರಾಣಿಯನ್ನು ನಿರ್ಮಾಣ ಮಾಡುವಾಗ ಬ್ರಹ್ಮನು, ಪೃಥ್ವಿ, ಆಪ, ತೇಜಗಳನ್ನು ಸ್ವಲ್ಪ ಕೈಬಿಗಿ ಹಿಡಿದು ವೆಚ್ಚ ಮಾಡಿದ. ಅದಕ್ಕೆ ಕೋಡುಗಳನ್ನು ಹಚ್ಚಲಿಲ್ಲ. ಹಲ್ಲುಗಳನ್ನು ಮಾಡಿದ್ದರೂ ಅವುಗಳಿಂದ ಬರೇ ಮೇಯಲಿಕ್ಕೆ ಬರುತ್ತಿತ್ತಲ್ಲದೆ ಕಡಿಯಲಿಕ್ಕೆ ಬರುತ್ತಿರಲಿಲ್ಲ. ಬ್ರಹ್ಮನು ತೇಜವನ್ನು ತಕ್ಕಮಟ್ಟಿಗೆ ಬಳಸಿದ್ದನೇನೋ ನಿಜ. ಅದರಿಂದಲೇ ಆ ಪ್ರಾಣಿಯು ಯುದ್ಧಕ್ಷೇತ್ರದಲ್ಲಿ ಕೆಲವೆಡೆಯಲ್ಲಿ ಉಪಯೋಗ ಬೀಳುವಂತಾಯಿತು. ಆದರೆ ಅದಕ್ಕೆ ಯುದ್ಧದ ಲಕ್ಷ್ಯ ಇರಲಿಲ್ಲ. ಈ ಪ್ರಾಣಿಯೇ ಕುದುರೆ. ಇದು ತತ್ತಿಗಳನ್ನಿಡುವದಿಲ್ಲ; ಆದರೂ ವಾಡಿಕೆಯಾಗಿ ಕುದುರೆಯ

ತತ್ತಿ*ಯ ಬಗ್ಗೆ ಒಂದಾನೊಂದು ವದಂತಿಯುಂಟು. ಅಂತೇ ಅದಕ್ಕೆ ದ್ವಿಜವೆಂದು ಕರೆದರೂ ನಡೆಯುವದು.

ಏನೇ ಆಗಲಿ, ಸೃಷ್ಟಿಕರ್ತನು, ಇದನ್ನು ನಿರ್ಮಿಸುವಲ್ಲಿ, ಆಕಾಶವಾಯುಗಳನ್ನು ಕೈಸಡಿಲು ಬಿಟ್ಟು ಉಪಯೋಗಿಸಿದ. ಅದರಿಂದ ಆದದ್ದೇನಂದರೆ, ಇದರ ಮನಸ್ಸೆಲ್ಲ ಹದಿನಾರಾಣೆ, ಬೀಸಾಗಿ ಹರಿದಾಡುವದರಲ್ಲಿಯೇ ನೆಟ್ಟುಕೊಂಡಿತು. ಗಾಳಿಯನ್ನೂ ಮೀರಿ ಹಾರಬೇಕೆಂದು ಇದರ ಬಯಕೆ. ಮೇರೆಯಿಲ್ಲದ ಮುಗಿಲಿನ ಪಾರು ದಾಟಬೇಕೆಂದು ಇದರ ಪಣ. ಏನಾದರೊಂದು ಕೆಲಸವಿದ್ದಲ್ಲಿ ಇನ್ನುಳಿದ ಪ್ರಾಣಿಗಳೂ ಓಡುವದುಂಟು; ಆದರೆ ಇದು ಕೆಲಸವಿಲ್ಲದೆಯೂ ಓಡುವದು. ಯಾಕಂದರೆ, ಅದಕ್ಕೆ, ತನ್ನಿಂದ ತಾನೇ ದೂರ ಓಡಿ ಹೋಗಬೇಕೆಂಬ ಬಲವಾದ ಬಯಕೆ. ಏನನ್ನೂ ಮುರಿಯಬೇಕೆಂದಲ್ಲ; ಯಾರನ್ನೂ ಇರಿಯಬೇಕೆಂದಲ್ಲ. ಸುಮ್ಮನೇ ಓಡಬೇಕೆಂದು ಓಡುವದು. ಕಿವಿಗಳಲ್ಲಿ ಗಾಳಿತುಂಬಿದಂತೆ, ಓಡಿ ಓಡಿ ತೇಕಿ ದಣಿದು ಬಾಯಿ ಬುರುಗುಗಟ್ಟಿ ಮೈಮುರಿತು ಬಿಡುವದು.

ಪಂಚಮಹಾಭೂತಗಳಲ್ಲಿ, ಪೃಥ್ವಿ ಆಪ ತೇಜಗಳಿಲ್ಲದೆ, ಬರೀ ಆಕಾಶ ವಾಯುಗಳಷ್ಟೇ ಕೂಡಿಬಿಟ್ಟರೆ ಇದೇ ಹಣೆಬರಹವೆಂದು ತಿಳಿದವರು ಹೇಳುವದುಂಟು.

ಬ್ರಹ್ಮನಿಗೆ ಬಲು ಸಂತೋಷ. ಆತ, ಬಾಳುವದಕ್ಕೆಂದು ಬೇರೆ ಕೆಲವು ಪ್ರಾಣಿಗಳಿಗೆ ಕಾಡನ್ನು ಕೊಟ್ಟಿದ್ದ; ಇನ್ನು ಕೆಲವಕ್ಕೆ ಗವಿಯನ್ನು ಕೊಟ್ಟಿದ್ದ. ಆದರೆ ಇದರ ಓಟದಲ್ಲಿ ಸಂಪ್ರೀತಿಯುಳ್ಳವನಾಗಿ ಇದಕ್ಕೆ ದೊಡ್ಡದೊಂದು ಬೀಸು ಬಯಲನ್ನೇ ಮನೆಮಾಡಿ ಕೊಟ್ಟ.

೩

ಈ ಬಯಲಿನ ಕರೆಯಲ್ಲಿಯೇ ಮನುಷ್ಯನ ಮನೆ. ಮನುಷ್ಯನು, ತಿರುಗಾಡಿ ತೊಳಲಾಡಿ ಕೂಡಿ ಹಾಕುತ್ತಿದ್ದುದೆಲ್ಲ ಒಳ್ಳೇ ಹೊರೆಯಾಗಿ ಜಿಡುತ್ತಿತ್ತು. ಬಯಲಿನಲ್ಲಿ ಬಿಚ್ಚು ಬೀಸಿನಿಂದ ಸುಮ್ಮನೆ ಚಕ್ಕಂದಕ್ಕಾಗಿ ಓಡಾಡುತ್ತಿದ್ದ ಕುದುರೆ ಆತನ ಕಣ್ಣಿಗೆ ಬಿತ್ತು. ಎಣಿಕೆ ಹಾಕಿದ " ಈ ಪ್ರಾಣಿಯನ್ನು ಏನೊಂದು ಬಗೆಯಿಂದ ಹಿಡಿದು ಹಾಕಿದರೆ, ನನ್ನ ಸಂತೆಯ ಕೆಲಸ ಎಷ್ಟು ಸುಲಭವಾದೀತಲ್ಲ!".

ಅಂತೂ ಒಮ್ಮೆ ಬಲೆಯೊಡ್ಡಿ ಅದನ್ನು ಹಿಡಿದೇ ಬಿಟ್ಟ. ಬೆನ್ನಮೇಲೆ ಮೆತ್ತನ್ನ ತಡಿ; ಬಾಯಿಗೆ ಅಂದವಾದ ಮುಳ್ಳಿನ ಕಡಿವಾಣ, ಮೈಗೆಲ್ಲ ಹಾಯಾಗಿ ಚಾಬೂಕಿನ ಹೊಡತ; ಪಕ್ಕಡಿಗಳಿಗೆ ಮುಳ್ಳುಗಾಲಿನ ಒತ್ತು; ಅಲ್ಲದೆ, ದಿನಾಲು ಮೈಗೆಲ್ಲ ಒಳಿತಾಗಿ ಖರಾರು ಮಾಡುವದಂತೂ ಇದ್ದೇ ಇದೆ.

ಬಯಲಲ್ಲಿ ಬಿಟ್ಟುಬಿಟ್ಟರೆ, ಕೈತಪ್ಪಿಸಿಕೊಂಡು, ಮೈಯುಳಿಸಿಕೊಂಡೀತೆಂದು ಅದರ ಸುತ್ತಲೂ ಗೋಡೆಯನ್ನೇರಿಸಿದ ಮನುಷ್ಯ. ಹುಲಿಯ ಅಡವಿಮನೆಯನ್ನು ಯಾರೂ ಕಿತ್ತುಕೊಳ್ಳಲಿಲ್ಲ. ಸಿಂಹದ ಗವಿಯನ್ನು ಯಾರೂ ಕಸಿದುಕೊಳ್ಳಲಿಲ್ಲ. ಆದರೆ ಕುದುರೆ ಮಾತ್ರ ತನ್ನ ಬಯಲುಮನೆಯನ್ನು ತೊರೆದು, ಹಕ್ಕೆಯಲ್ಲಿ ಬಂದು ಬೀಳಬೇಕಾಯಿತು. ಕುದುರೆಯಲ್ಲಿಯ ಆಕಾಶವಾಯುತತ್ತ್ವಗಳು ಅದರ ಮನವನ್ನೆಲ್ಲ ಬೀಸು ಬಯಲಿನ ಕಡೆಗೇ ಎಳೆಯುತ್ತಿದ್ದವು; ಆದರೇನು, ಬಂಧನದಿಂದ ತಪ್ಪಿಸಿಕೊಳ್ಳುವದಾಗಲೇ ಇಲ್ಲ.

೪

ಬಂಧನವು ತೀರ ಅಸಹ್ಯವಾಗಲು, ಕುದುರೆಯು ಗೋಡೆಗಳನ್ನೆಲ್ಲ ಒದೆಯತೊಡಗಿತು. ಅದರ ಕಾಲಿಗೆ ನೋವಾದಷ್ಟು ಗೋಡೆಗೇನು ಆಗಲಿಲ್ಲ; ಆದರೂ ಸುಣ್ಣಬಣ್ಣವೆಲ್ಲ ಉದುರಿ ಗೋಡೆಯ ಮೆರಗು ಕೆಡಹತ್ತಿತು.

ಇದರಿಂದ ಮನುಷ್ಯನ ಪಿತ್ತ ತಲೆಗೇರಿತು. 'ಇದಕ್ಕೇ ಎನ್ನುವದು ಉಪಕಾರಗೇಡಿತನವೆಂದು ! ಮೇವು, ಮಿಡಚಿ, ಹುಲ್ಲು ಹಸಿರು, ಕಾಳುನೀರು ಹಾಕಿ ಸಾಕಿ, ದೊಡ್ಡ ಸಂಬಳದ ಆಳನ್ನು ಎಂಟು ಗಂಟೆ ಇದರ ಹಿಂದೆಯೇ ಇರಿಸಿದ್ದರೂ ಇದಕ್ಕೆ ಎಳ್ಳಷ್ಟೂ ನೆಚ್ಚುಮೆಚ್ಚಿಲ್ಲವಲ್ಲ" ಎಂದು ಮನುಷ್ಯನು ಒಟಗುಟ್ಟಿಕೊಳ್ಳಹತ್ತಿದ.

ಅದನ್ನು ಈಲುಮಾಡಿಕೊಳ್ಳುವದಕ್ಕೆ ಆಳುಗಳು ಕೂತುನಿಂತಾಗೆಲ್ಲ ಹಣಿಯಹತ್ತಿದರು. ಕುದುರೆ ಹಣ್ಣುಹಣ್ಣಾಗಿ ಕೊನೆಗೆ ಒದೆತವನ್ನು ಬಿಟ್ಟುಕೊಟ್ಟಿತು. ಮನುಷ್ಯನು ತನ್ನ ನೆರೆಹೊರೆಯುವರನ್ನು ಕರೆದು ಹೇಳಿದ " ಇದು ನೋಡಿ, ನನ್ನ ಕುದುರೆಯಂಥ ನೆಚ್ಚು ಮೆಚ್ಚಿನ ಪ್ರಾಣಿಯು ಇನ್ನೊಂದಾವುದೂ ಇಲ್ಲ."

---

*ಬಂಗಾಳಿಯಲ್ಲಿ ಕುದುರೆಯ ತತ್ತಿ [illegible] ಶಶವಿಷಾಣ, ಆಕಾಶಪುಷ್ಪ ಎಂಬರ್ಥದ ವಾಕ್ಪ್ರಚಾರ.

ಅವರೂ ಒಳ್ಳೇ ಮೆಚ್ಚಿಗೆಯಿಂದ ಮಾತನಾಡಿದರು " ಆದ ಕ್ಕೆಂತಲೇ ನಿನ್ನ ಕುದುರೆ, ನೀರಿನಂತೆ, ನೀ ಮಾಡುವ ಧರ್ಮ ದಂತೆ" ತಣ್ಣಗೆ ಇದ್ದುಬಿಟ್ಟದೆ.

ಮೊದಲಿನಿಂದಲೂ ಕುದುರೆಗೆ ಉಪಯೋಗಕ್ಕೆ ಬರುವಂಥ ಹಲ್ಲು ಇಲ್ಲ; ಉಗುರು ಇಲ್ಲ; ಕೋಡು ಇಲ್ಲ; ಅಲ್ಲದೆ ಗೋಡೆ ಗೂ ಬಯಲಿಗೂ ಈಗ ಒದೆಯಲಿಕ್ಕೂ ಬರುವಂತಿಲ್ಲ. ಹಾಗೆಂದು ಮನಸ್ಸಿಗೆ ಏನೋ ಸಮಾಧಾನ ಹಚ್ಚಿಕೊಳ್ಳುವದಕ್ಕಾಗಿ ಮೋರೆಯನ್ನು ಮುಗಿಲೆಡೆಗೆ ನೀಡಿ ಹೇಕರಿಸಹತ್ತಿತು. ಇದ ರಿಂದ ಯಜಮಾನನ ನಿದ್ದೆ ಕೆಡಲಾಯಿತು. ನೆರೆಹೊರೆಯ ವರೂ ಎಂದರು— 'ಹೇಕರಿಕೆಯು ಭಕ್ತಿಪೂರ್ಣ ಗದ್ಗದ ಸ್ವರದಂತಿಲ್ಲವೇ!"

ಕುದುರೆಯ ಬಾಯಿ ಬಂದು ಮಾಡುವದಕ್ಕೆ ಹಲವು ಹಂಚಿ ಕೆಗಳು ಹೊರಟವು. ಆದರೆ ಉಸಿರುಗಟ್ಟದೆ ಬಾಯಿಕಟ್ಟು ವದು ಹೇಗೆ! ಅದರಿಂದ ಸಾಯುವವನ ಉಬ್ಬಸದಂತೆ ಕುದು ರೆಯ ಗಂಟಲದಿಂದ ಕುಗ್ಗುದನಿಯೇಳಹತ್ತಿತು.

೫

ಒಂದು ದಿನ ಹೇಕರಿಕೆಯ ದನಿ ಬ್ರಹ್ಮನ ಕಿವಿಯಮೇಲೆ ಬಿತ್ತು. ಆತ ಧ್ಯಾನಭಗ್ನನಾಗಿ ಒಮ್ಮೆಲೆ ಪೃಥ್ವಿಯ ಬಯ ಲನ್ನು ನಿಟ್ಟಿಸಿದ. ಅಲ್ಲಿಯೇನು !! ಕುದುರೆಯ ಕುರುಹು ಕೂಡ ಇಲ್ಲ !

ಬ್ರಹ್ಮನು ಯಮನನ್ನು ಕರೆಯಿಸಿ ನುಡಿದ "ಖಂಡಿತ ಇದು ನಿನ್ನದೇ ಕಾರಭಾರ ! ನನ್ನ ಕುದುರೆಯನ್ನು ತೆಗೆದುಕೊಂಡಿ ರುವಿ !"

ಯಮನು ಮಾರು ನುಡಿದ "ಒಡೆಯ, ನನ್ನಮೇಲೂ ನಿನ್ನ ದಿಷ್ಟು ಸಂದೇಹವೇ ! ಒಮ್ಮೆ ಮನುಷ್ಯನ ಹಳ್ಳಿಯಮೇಲೆ ಕಣ್ಣು ಹಾಕಿಯಾದರೂ ನೋಡು !"

ಬ್ರಹ್ಮ ನೋಡಿದ ! ತೀರ ಚಿಕ್ಕಯೆಡೆಯೇನು ! ಸುತ್ತಲೂ ಗೋಡೆಗಳೇನು !! ಅಲ್ಲಿ ನಿಂತುಕೊಂಡು ಮಿಡುಕುವದನಿಯಿಂದ ತನ್ನ ಕುದುರೆ ಹೇಕರಿಸುತ್ತಿರುವದೆಂದರೇನು !!!

ಬ್ರಹ್ಮನ ಎದೆಯೆಲ್ಲ ಕೆಳಗೆ ಮೇಲೆ ಆಯಿತು. ಮನುಷ್ಯ ನನ್ನು ಕರೆದು ಹೇಳಿದ "ನನ್ನ ಈ ಪ್ರಾಣಿಗೆ ನೀನು ಮುಕ್ತಿದಾನ ಮಾಡದಿದ್ದರೆ, ಹುಲಿಸಿಂಹಗಳಂತೆ ಅದಕ್ಕೂ ಕೋರೆದಾಡೆಗ ಳನ್ನೂ ಪಂಜರಗಳನ್ನೂ ಉಂಟುಮಾಡಿಬಿಡುವೆ, ನೋಡು ಮತ್ತೆ; ಆಮೇಲೆ ಅದು ನಿನ್ನಾವ ಕೆಲಸಗಳಿಗೂ ಬಾರದಿದ್ದೀತು"

ಮನುಷ್ಯನೆಂದ "ಛಿ, ಛಿ, ಹಾಗೆ ಮಾಡುವದುಂಟೆ ! ಅದರಿಂದ ಜಗತ್ತಿನಲ್ಲಿ ಹಿಂಸೆಗೆ ಬಹಳ ಅವಕಾಶವನ್ನುಂಟುಮಾಡಿದಂತಾ ದೀತು ! ಪಿತಾಮಹ, ಏನೇ ಎಂದರೂ ನಿನ್ನೀ ಪ್ರಾಣಿಯು ಮುಕ್ತಿಯೋಗ್ಯವೇ ಅಲ್ಲ. ಅದರ ಹಿತಕ್ಕಾಗಿ ನಾನು ಬೇಕು ಬೇಕೆಂದೇ ಬಲು ವೆಚ್ಚ ಮಾಡಿ ಲಾಯವನ್ನು ಕಟ್ಟಿಸಿರುವೆ. ಅಹಾ ! ಎಷ್ಟು ಅಂದವಾದ ಲಾಯವಿದು !!"

ಬ್ರಹ್ಮ ಬಲುಮೆಯ ಬಿರುನುಡಿಯಿಂದ "ನೀನದನ್ನು ಬಿಟ್ಟು ಬಿಡಲೇಬೇಕು" ಎಂದು ಅಪ್ಪಣೆಯಿತ್ತ.

"ಆಗಲಿ ಜೀಯಾ, ಅದನ್ನು ಬಿಟ್ಟುಕೊಡುವೆ, ಆದರೆ ಇದು ನೋಡು; ಏಳು ದಿನದ ಗಡು. ಅಷ್ಟರ ಮೇಲೂ ನನ್ನ ಲಾಯ ಕ್ಕಿಂತ ನಿನ್ನ ಬಯಲೇ ಮೇಲೆಂದು ಹೇಳಬಲ್ಲಿಯಾದರೆ ನನ್ನ ಕಿವಿಗೆ ಹರಳು ಹಚ್ಚುವಿಯಂತೆ" ಮನುಷ್ಯ ಮರುಮಾತನಾಡಿದ.

೬

ಮನುಷ್ಯ ಕುದುರೆಯನ್ನು ಬಿಚ್ಚಿಬಿಟ್ಟನೇನೋ ಸರಿ. ಆದರೆ ಅದರ ಮುಂದಿನ ಎರಡೂ ಕಾಲು ಕೂಡಿಸಿ ಹಗ್ಗ ಕಟ್ಟಿದ. ಅದ ರಿಂದ ಕುದುರೆಯ ನಡಿಗೆ ಕೆಟ್ಟು ಅಪಕ್ಕಿಂತ ಕಪ್ಪೆಯ ನಡಿಗೆ ಎಷ್ಟೋ ಪಾಲು ಬೇಕು—ಎನ್ನುವಂತಾಯಿತು.

ಬ್ರಹ್ಮನಿದ್ದುದು ಆ ದೂರದ ಸ್ವರ್ಗದಲ್ಲಿ; ಆತನಿಗೆ ಕುದು ರೆಯ ಕುಂಟು ನಡಿಗೆ ಕಾಣುತ್ತಿತ್ತು, ಆದರೆ ಕಾಲಿನ ಕಟ್ಟು ಮಾತ್ರ ಕಾಣುತ್ತಿರಲಿಲ್ಲ. ತನ್ನ ಕೀರ್ತಿಯು ನಗೆಗೀಡಾಗುವಂತೆ ಕುಂಟುತ್ತಿರುವದನ್ನು ಕಂಡು ಆತನ ಮೋರೆಯೆಲ್ಲ ಹುಚ್ಚಿ ಟ್ಟಿತು. "ಅಯ್ಯೋ ನಾನೇ ತಪ್ಪು ಮಾಡಿದೆನಲ್ಲವೇ !" ಎಂದು ಕೊಂಡ.

ಮನುಷ್ಯನು ಕೈಜೋಡಿಸಿ ನುಡಿದ "ಈಗ ಇದನ್ನು ತೆಗೆದು ಕೊಂಡು ನಾನೇನು ಮಾಡಲಿ ! ನಿನ್ನ ಸತ್ಯಲೋಕದಲ್ಲಿ ಬಯ ಲುಗಿಯಲು ಏನಾದರೂ ಇದ್ದರೆ, ನಾನಿದನ್ನು ಸಂತೋಷದಿಂದ ಕಳಿಸಿ ಕೊಡುವೆ"

ಬ್ರಹ್ಮನು ಸಿಡಿಮಿಡಿಗೊಂಡು " ಹೋಗಪ್ಪಾ ಹೋಗು ! ಇದನ್ನು ಲಾಯಕ್ಕೇ ತೆಗೆದುಕೊಂಡು ಹೋಗಿಬಿಡು " ಎಂದು ಉಸುರ್ಗರೆದ.

ಮನುಷ್ಯನೆಂದ "ಅಯ್ಯೋ ಬ್ರಹ್ಮದೇವಾ! ಮನುಷ್ಯನ ಮೇಲೆ ಇದೇನು ದೊಡ್ಡ ಹೊರೆಯನ್ನೇ ಹೇರಿಬಿಟ್ಟೆ!"

ಆದಿದೇವನು ಉತ್ತರವಿತ್ತ "ಅದಕ್ಕೇ ಅಲ್ಲವೇ ಮನುಷ್ಯನ ಮನುಷ್ಯತ್ವ !!—"

# 'ಹಿಂದೂ' ಶಬ್ದದ ಅರ್ಥವೇನು ?

ಲೇಖಕರು:—ಶ್ರೀ. ಮಂ. ಅ. ದೊರೆಸ್ವಾಮಿ ಐಯ್ಯಂಗಾರ್, M. A. B. L, ಹೈಕೋರ್ಟ್ ವಕೀಲರು, ಮೈಸೂರು.

ಲೋಕದಲ್ಲಿ ಯಾವ ಶಬ್ದವನ್ನಾದರೂ ನಿರ್ವಚನ ಮಾಡಬಹುದು. ಆದರೆ "ಹಿಂದೂ" ಎಂಬ ಪದವು ಹಿಂದೂ ಜನರ ಎಷ್ಟೋ ತತ್ವಾಭಿಪ್ರಾಯಗಳಂತೆ ಅನಿರ್ವಚನೀಯವಾಗಿರುವುದು. ಏಕೆಂದರೆ ಈ ಪದದ ಮೂಲವೂ ವ್ಯಾಪ್ತಿಯೂ ಪ್ರಯೋಗವೂ ಬಹಳ ಅಸ್ಪಷ್ಟವಾಗಿ ಕೊಡಲಾಗಿರುವುವು.

ಹಿಂದೂ ಎಂಬ ಹೆಸರು ನಾವು ಇಟ್ಟುಕೊಂಡ ಹೆಸರಲ್ಲ. ಅವನ್ನು ಪರರು ನಮಗೆ ಕೊಟ್ಟಿರುವರು. ಮುಸಲ್ಮಾನರ ಆಗಮನಕ್ಕೆ ಮೊದಲು ಈ ಹೆಸರು ಎಲ್ಲೂ ನಮ್ಮಲ್ಲಿ ದೊರೆಯುವುದಿಲ್ಲ. ಮುಸಲ್ಮಾನರು ಈ ದೇಶದಲ್ಲಿ ಪದಾಭಿಷಿಕ್ತರಾಗಿ ನಮ್ಮನ್ನು ಹಿಂದೂಗಳೆಂದು ಕರೆದ ಮೇಲೆ ಆ ಹೆಸರು ಇಲ್ಲಿ ಬಳಕೆಗೆ ಬಂದಿತು. ಮುಸಲ್ಮಾನರು ಇಲ್ಲಿಗೆ ಬಂದ ಮೇಲೆ ತಮ್ಮ ಮತೀಯರಲ್ಲದ ಈ ದೇಶದ ನಿವಾಸಿಗಳೆಲ್ಲರನ್ನೂ ಸಮಷ್ಟಿಯಾಗಿ ಹಿಂದೂಗಳು ಎಂದು ಕರೆದರು. ಅದಕ್ಕೆ ಮೊದಲು ಈ ದೇಶದ ಅಗಣಿತ ಜನಸ್ತೋಮವು ಒಂದೇ ಒಂದು ಸಮಷ್ಟಿಯ ಹೆಸರಾವುದನ್ನೂ ಕಲ್ಪಿಸಿಕೊಂಡಿರಲಿಲ್ಲ. ಮುಸಲ್ಮಾನರ ಪಾರುಪತ್ಯ ಹೆಚ್ಚಿದಾಗ ಇಲ್ಲಿನ ನಿವಾಸಿಗಳೆಲ್ಲರಿಗೂ ಅವರು ಸಮಾನವಾಗಿ ಶತ್ರುಗಳಾಗಿದ್ದುದರಿಂದ ಇವರೆಲ್ಲರೂ ಒಂದು ಸಮಷ್ಟಿ ಪಂಗಡವಾಗಿ ಐಕ್ಯಭಾವನೆ ಪಡೆದು ಒಂದು ಸಮಷ್ಟಿಯ ಹೆಸರನ್ನು ಪಡೆಯಲು ಆವಶ್ಯಕತೆಯುಂಟಾಯಿತು. ಆಗ್ಗೆ ಪರಕೀಯರು ಇವರಿಗೆ ಕೊಟ್ಟಿದ್ದ ಹಿಂದೂ ಎಂಬ ಹೆಸರು ಇವರಲ್ಲೂ ಪ್ರಚಾರಕ್ಕೆ ಬಂದಿತು. ಇದಕ್ಕೆ ಮೊದಲು ಈ ದೇಶದಲ್ಲಿ ಮತ ಪ್ರಭೇದಗಳೂ ೧ ಕುಲವ್ಯತ್ಯಾಸಗಳೂ ನಾಗರಕತೆಯ ಅಂತರಗಳೂ ಹೇರಳವಾಗಿದ್ದುದರಿಂದ ಏಕ ಸಂಸ್ಕೃತಿಯ ಪರಿಸಿತಿಯಲ್ಲಿರುತ್ತಿದ್ದರೂ ಇವರು ತಾವೆಲ್ಲರೂ ಒಂದೇ ಜನರು ಎಂದು ಭಾವಿಸಿಕೊಳ್ಳದೆ ಇದ್ದರು. ಇದು ನಮ್ಮ ದೇಶದ ಚರಿತ್ರೆಯಿಂದ ಸ್ಪಷ್ಟಪಡುವುದು. ಈಗಲೂ ನಮ್ಮ ನಾಡುಪಂಡಿತರಿಗೆ ಹಿಂದೂ ಎಂದು ಹೇಳಿದರೆ ಸರಿಯಾಗಿ ಅರ್ಥವಾಗುವುದಿಲ್ಲ.

## ಪದಮೂಲ

ಪರರು ನಮಗೆ ಕೊಟ್ಟಿರುವ ಈ ಹಿಂದೂ ಎಂಬ ಹೆಸರು ಯಾವ ಮೂಲದಿಂದ ಬಂದಿರಬಹುದು ? ಈ ವಿಚಾರವಾಗಿ ಎಷ್ಟೋ ಭಿನ್ನಾಭಿಪ್ರಾಯಗಳುಂಟು. ಸಿಂಧೂನದಿಯ ಹೆಸರಿನಿಂದ ಈ ಹಿಂದೂ ಎಂಬ ಹೆಸರು ನಮಗೆ ಹುಟ್ಟಿರುವುದೆಂದು ಬಹು ಮಂದಿ ತರ್ಕಿಸುವರು. ಉದಾಹರಣೆಗಾಗಿ, ಗುರುದಾಸ್ ಬಾನರ್ಜಿಯ ಅಭಿಪ್ರಾಯದಂತೆ "ಹಿಂದೂ"ಶಬ್ದವು ಪರಕೀಯವಾದುದು; ಸಿಂಧು ಎಂಬ ಪದದಿಂದ ಹುಟ್ಟಿರುತ್ತದೆ. ಆ ನದಿಯ ಪೂರ್ವಭಾಗದಲ್ಲಿ ವಾಸಿಸತಕ್ಕ ಜನರನ್ನು ಸಂಬೋಧಿಸಲು ಮಹಮ್ಮದೀಯರಿಂದ ಅದು ಪ್ರಯೋಗಿಸಲ್ಪಟ್ಟಿತು."[1] ಇದು ಸರಿಯೆಂದು ಹೇಳಲಾಗುವುದಿಲ್ಲ. ಮಹಮ್ಮದನು ಹುಟ್ಟುವುದಕ್ಕೆ ಮುಂಚಿನಿಂದಲೂ ಪಾರಶಿಕರೂ ಗ್ರೀಕರೂ ಈ ಪದವನ್ನು ಅರಿತಿದ್ದರು. ಅಲ್ಲದೆ ಪ್ರಾಚೀನಕಾಲದಿಂದಲೂ ಹಿಂದೂಗಳು ಸಿಂಧೂನದಿಯ ಪಶ್ಚಿಮಪ್ರಾಂತ್ಯದಲ್ಲಿ ವಾಸವಾಗಿದ್ದರು; ಈಗಲೂ ಸಹ ಇರುತ್ತಿರುವರು. ಋಗ್ವೇದದ ಸಪ್ತ ಸಿಂಧೂ ಕೂಟಕ್ಕೆ ಕಾಬೂಲ್ ನದಿ ಸಹ ಸೇರುವುದು. ಮುಸಲ್ಮಾನರು ಈಗಲೂ ಸಹ ಸಿಂಧೂನದಿ ಸಿಂಧೂಪ್ರಾಂತ್ಯ(Sind)ಗಳನ್ನು ಯಥಾವತ್ತಾಗಿ ಉಚ್ಚರಿಸುತ್ತಾರಲ್ಲದೆ ಹಿಂದೂನದಿ, ಹಿಂದ್

೧ ಮುಸಲ್ಮಾನರ ಆಗಮನಕ್ಕೆ ಹಿಂದೆಯೇ ಇಡಿಯಾ ದೇಶಕ್ಕೆಲ್ಲಾ ಒಂದೇ ಒಂದು ಹೆಸರನ್ನು ಕಲ್ಪಿಸಿಕೊಂಡು ಅಲ್ಲಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಲು ಅನೇಕಸಲ ಪ್ರಯತ್ನಿಸಿದ್ದರು. ಆದರೆ ಈ ಸಮಷ್ಟಿಭಾವನೆಯು ಬರಿ ಸಂಸ್ಕೃತಿಯಿಂದ ಹುಟ್ಟಿದ್ದುದರಿಂದ ಬಹಳ ಶಿಥಿಲವಾಗಿತ್ತು.



1. The Hindu Law of Marriage and Stridhana 3rd Edition 1913, page 15.

ಪ್ರಾಂತ್ಯ ಎಂದು ಹೇಳುತ್ತಿಲ್ಲ. ಹಾಗಿರುವಲ್ಲಿ ಹಿಂದೂ ಎಂಬ ಶಬ್ದವನ್ನು ಅವರು ಸಿಂಧೂ ಎಂಬ ಹೆಸರಿನಿಂದ ಹೊಸದಾಗಿ ಕಲ್ಪಿಸಿದರೆಂದು ಹೇಗೆ ಹೇಳಲಾದೀತು ?

ಈ ಹೆಸರನ್ನು ಮುಸಲ್ಮಾನರು ರೂಢಿಗೆ ತಂದವರೇ ಹೊರತು ಕಲ್ಪಿಸಿದವರಲ್ಲ. ಅವರು ಅದನ್ನು ಪಾರಶಿಕರಿಂದ ಕಲಿತುಕೊಂಡಿರಬೇಕು. ಪ್ರಾಚೀನ ಪಾರಶಿಕರು ನಮ್ಮ ದೇಶದ ಆರ್ಯರನ್ನು ಸಿಂಧೂನದಿಯ ಹೆಸರಿನ ಆಧಾರದಿಂದ ಹಿಂದೂ ಎಂದು ಕರೆದರೆಂದೂ ಗ್ರೀಕರು ಈ ಪದವನ್ನು ತಮ್ಮಲ್ಲಿ ಇಂಡಾಯ್ ಎಂದು ಮಾಡಿಕೊಂಡರೆಂದೂ ಬಹುಮಂದಿ ವಿದ್ವಾಂಸರು ಹೇಳುವರು. ಈ ಇಂಡಾಯ್ ಎಂಬುದರಿಂದ ಈಗಿನ ಇಂಡಿಯಾ ಎಂಬ ಪದವು ಹುಟ್ಟಿರುವುದು. ಪ್ರಾಚೀನ ಪಾರಶಿಕರ ಅವೆಸ್ತಾ ಗ್ರಂಥದಲ್ಲಿ ಹಪ್ತಹೆಂದು ಎಂಬ ಪದವು ದೊರೆಯುವುದು. ಇದು ಸಪ್ತಸಿಂಧು ಎಂಬ ವೇದಭಾಷೆಯ ಪಾರಶಿಕ ಭಾಷಾರೂಪವೆಂದು ವಿದ್ವಾಂಸರು ಊಹಿಸುವರು. ಈ ಸಪ್ತಸಿಂಧು ಎಂಬ ಪದವೇ ನಮ್ಮ ಹಿಂದೂ ಎಂಬ ಹೆಸರಿಗೆ ಮೂಲವೆಂದು, ಈ ವಿದ್ವಾಂಸರು ವಾದಿಸುವರು. ಋಗ್ವೇದದ ಕಾಲದಲ್ಲಿ ಆರ್ಯರು ಸಿಂಧೂನದಿಯ ತೀರದಲ್ಲಿದ್ದರು. ಋಗ್ವೇದದಲ್ಲಿ ಸಪ್ತಸಿಂಧು, ಸಪ್ತಸಿಂಧವಃ (ಬಹುವಚನ) ಎಂಬ ಪದಗಳು ದೊರೆಯುತ್ತವೆ. ಬಹುಕಡೆ ಈ ಪದಗಳು ನದಿ ವಾಚಕವಾಗಿ ಮಾತ್ರ ಇರುವುವು. ಒಂದು ಕಡೆ ಮಾತ್ರ ( ಋಗ್ವೇದ VIII ೨೪ ೨೭ ) ಸಪ್ತಸಿಂಧವ ಎಂಬ ಪದವು ಒಂದು ದೇಶವನ್ನು ನಿರ್ವಚಿಸುವುದು. 1 ಇದು ಯಾವ ದೇಶವೋ ಅದನ್ನು ಮಾತ್ರ ನಿಶ್ಚಯಿಸಲಾಗುವುದಿಲ್ಲ. ಈ ಪದದಲ್ಲಿ ಸೂಚಕವಾಗಿರುವ ಏಳು ನದಿಗಳೂ ಪಂಜಾಬಿನ ನದಿಗಳೇ ಎಂದು ನಿರ್ಧರಿಸಲಾಗುವುದಿಲ್ಲ. 2 ಒಂದು ಪಕ್ಷ ಹಾಗೆ ಹೇಳಿದರೂ ಈ ದೇಶವು ಸಪ್ತಸಿಂಧು ಎಂಬ ವೈದಿಕವಾದ ಹೆಸರನ್ನು ಕಳೆದುಕೊಂಡು ಬಹು ಪ್ರಾಚೀನಕಾಲದಿಂದಲೂ ಪಂಚನದ ದೇಶವೆಂದು ಏಕೆ ಹೆಸರುಪಡೆಯಿತೋ ಹೇಳಲಾಗುವುದಿಲ್ಲ. ಪಂಜಾಬಿಗೆ ಯಾವ ಹಿಂದೂ ಗ್ರಂಥದಲ್ಲೂ ಒಂದು ಕಡೆಯೂ ಈ ಸಪ್ತಸಿಂಧು ಎಂಬ ಹೆಸರು ಹೇಳಲ್ಪಟ್ಟಿಲ್ಲ. ಅಲ್ಲದೆ ಹಿಂದೂ ಗ್ರಂಥನ್ರಾಶಿಯಲ್ಲಿ ಮತ್ತಾವ ಕಡೆಯೂ ಯಾವುದೊಂದು ಪ್ರದೇಶವೂ ಸಪ್ತಸಿಂಧು ಎಂಬ ಹೆಸರಿನಿಂದ ಕರೆಯಲ್ಪಟ್ಟಿಲ್ಲ. ವೇದಯುಗವಾದೊಡನೆ ಹುಟ್ಟಿದ ಮಹಾಭಾರತ ಕಾಲದಲ್ಲಿ ಸಿಂಧುದೇಶವೆಂಬ ಪ್ರತ್ಯೇಕ ರಾಜ್ಯವಿದ್ದಿತಲ್ಲದೆ ಪಂಜಾಬು ದೇಶವು ಮ್ಲೇಚ್ಛ ಭೂಮಿಯಾಗಿದ್ದಿತು. 3 ಇದರಿಂದ ಪಂಜಾಬು ದೇಶವು ವೇದಭೂಮಿ ಎಂದು ಹೇಳುವುದು ಕಷ್ಟವೆಂದು ಈಚೆಗೆ ಕೆಲ ಪಂಡಿತರು ವಾದಿಸಲಾರಂಭಿಸಿದ್ದಾರೆ. ಈ ರೀತಿಯಾಗಿ ವೇದದ ಸಿಂಧು ಎಂಬ ಪದವು ಎಲ್ಲಾ ಕಡೆಯೂ ಪಂಜಾಬಿನ ಸಿಂಧೂನದಿಯನ್ನು ಮಾತ್ರವೇ ಸಂಬೋಧಿಸುವುದೆಂದು ಹೇಳಲು ಕಷ್ಟವಾಗುವುದು. ಅಲ್ಲದೆ, ಮೇಲೆ ಹೇಳಿದಂತೆ ಸಿಂಧು ಎಂಬುದು ಸಿಂಧೂನದಿಯೇ ಆದರೂ ಸಪ್ತಸಿಂಧು ಎಂದರೆ ಸಿಂಧೂನದೀತೀರವರ್ತಿಯಾದ ದೇಶವೆಂದು ಹೇಳುವುದು ಮತ್ತೂ ಕಷ್ಟವಾಗಿರುವುದು. ಸಿಂಧು ಎಂದರೆ ಸಮುದ್ರ ಎಂಬರ್ಥವೊಂದುಂಟು. ನಮ್ಮ ಪುರಾಣಗಳು ಸಪ್ತಸಮುದ್ರಗಳನ್ನು ವಿವರಿಸುವುವು. ಈ ನಂಬಿಕೆಯು ವೇದಕಾಲದಲ್ಲೂ ಇದ್ದಿರಬಹುದು. ಆದರೆ ಕೆಲ ಪಂಡಿತರು ವೇದಕಾಲದವರಿಗೆ ಸಮುದ್ರವೆಂಬುದೇ ಗೊತ್ತಿರಲಿಲ್ಲವೆಂದು ಹೇಳುವರು. ಅದು ಹೇಗಾದರೂ ಇರಲಿ. ಪಾರಶಿಕರು ನಮಗೆ ಕೊಟ್ಟ ಹಿಂದೂ ಎಂಬ ಹೆಸರು ಸಿಂಧೂನದಿಯ ಹೆಸರಿನಿಂದಲೇ ಹುಟ್ಟಿದ್ದೆಂದು ಹೇಳುವುದು ಬಲು ಸುಲಭವಾದದ್ದಲ್ಲವೆಂದು ಮೇಲಿನ ಚರ್ಚೆಯಿಂದ ಸ್ಪಷ್ಟಪಡುವುದು.

ಕೆಲವರು ಹಿಂದೂ, ಇಂಡಾಯವು, ಇಂಡಿಯಾ ಎಂಬ ಪದಗಳು ಸಪ್ತಸಿಂಧು ಎಂಬ ಪದದಿಂದಲ್ಲದೆ ಇಂದು ಎಂಬ ಪದದಿಂದ ಹುಟ್ಟಿರುವುದೆಂದು ಊಹಿಸುವರು. ಋಗ್ವೇದದಲ್ಲಿ ಬರುವ 'ಇಂದವಃ ಪಿತರಾದ್ಯಾಃ' ಎಂಬ ವಾಕ್ಯದಿಂದ ಕೆಲವರು

---

1 Govind Das—Hinduism 1925 P. 47.

2 B G Tilak-Arctic Home of the Vedas p. 290-1. cf. ಸಾಯಣ—ಸಪ್ತಸಿಂಧೂನ್ । ಇಮಂಮೇ ಗಂಗ ಇತ್ಯಸ್ಯಾಮೃತ್ಯಾಮ್ನಾತಾ ಗಂಗಾದ್ಯಾಃ ಸಪ್ತಸಂಖ್ಯಾಕಾ ನದೀಃ । ಋಗ್ವೇ. 1. 32. 12.

3. ಕರ್ಣ ಪರ್ವದಲ್ಲಿ ಕರ್ಣನು ಶಲ್ಯನ ಆರಟ್ಟ ಬಾಹ್ಲಿಕ ಮದ್ರ ದೇಶಗಳನ್ನು ಮ್ಲೇಚ್ಛ ವಸತಿಗಳೆಂದು ಹಿಯ್ಯಾಳಿಸುವನು. ಕೃಷ್ಣ ನಿರ್ಯಾಣಾನಂತರ ಅವನ ರಾಣಿವಾಸವನ್ನು ಮ್ಲೇಚ್ಛರು ಸೂರೆಮಾಡಿದ್ದು ಪಂಚನದ ದೇಶದಲ್ಲಿ.

# ‘ಹಿಂದೂ’ ಶಬ್ದದ ಅರ್ಥವೇನು ?

ಲೇಖಕರು:—ಶ್ರೀ. ಮಂ. ಅ. ಧೊರೆಸ್ವಾಮಿ ಐಯ್ಯಂಗಾರ್, M. A. B. L, ಹೈಕೋರ್ಟ್ ವಕೀಲರು, ಮೈಸೂರು.

ಲೋಕದಲ್ಲಿ ಯಾವ ಶಬ್ದವನ್ನಾದರೂ ನಿರ್ವಚನ ಮಾಡಬಹುದು. ಆದರೆ "ಹಿಂದೂ" ಎಂಬ ಪದವು ಹಿಂದೂ ಜನರ ಎಷ್ಟೋ ತತ್ವಾಭಿಪ್ರಾಯಗಳಂತೆ ಅನಿರ್ವಚನೀಯವಾಗಿರುವುದು. ಏಕೆಂದರೆ ಈ ಪದದ ಮೂಲವೂ ವ್ಯಾಪ್ತಿಯೂ ಪ್ರಯೋಗವೂ ಬಹಳ ಅಸ್ಪಷ್ಟವಾಗಿ ಕೊಡಲಾಗಿರುವುವು.

ಹಿಂದೂ ಎಂಬ ಹೆಸರು ನಾವು ಇಟ್ಟುಕೊಂಡ ಹೆಸರಲ್ಲ. ಅವನ್ನು ಪರರು ನಮಗೆ ಕೊಟ್ಟಿರುವರು. ಮುಸಲ್ಮಾನರ ಆಗಮನಕ್ಕೆ ಮೊದಲು ಈ ಹೆಸರು ಎಲ್ಲೂ ನಮ್ಮಲ್ಲಿ ದೊರೆಯುವುದಿಲ್ಲ. ಮುಸಲ್ಮಾನರು ಈ ದೇಶದಲ್ಲಿ ಪದಾಭಿಷಿಕ್ತರಾಗಿ ನಮ್ಮನ್ನು ಹಿಂದೂಗಳೆಂದು ಕರೆದ ಮೇಲೆ ಆ ಹೆಸರು ಇಲ್ಲಿ ಬಳಕೆಗೆ ಬಂದಿತು. ಮುಸಲ್ಮಾನರು ಇಲ್ಲಿಗೆ ಬಂದ ಮೇಲೆ ತಮ್ಮ ಮತೀಯರಲ್ಲದ ಈ ದೇಶದ ನಿವಾಸಿಗಳೆಲ್ಲರನ್ನೂ ಸಮಷ್ಟಿಯಾಗಿ ಹಿಂದೂಗಳು ಎಂದು ಕರೆದರು. ಅದಕ್ಕೆ ಮೊದಲು ಈ ದೇಶದ ಅಗಣಿತ ಜನಸ್ತೋಮವು ಒಂದೇ ಒಂದು ಸಮಷ್ಟಿಯ ಹೆಸರಾವುದನ್ನೂ ಕಲ್ಪಿಸಿಕೊಂಡಿರಲಿಲ್ಲ. ಮುಸಲ್ಮಾನರ ಪಾರುಪತ್ಯ ಹೆಚ್ಚಿದಾಗ ಇಲ್ಲಿನ ನಿವಾಸಿಗಳೆಲ್ಲರಿಗೂ ಅವರು ಸಮಾನವಾಗಿ ಶತ್ರುಗಳಾಗಿದ್ದುದರಿಂದ ಇವರೆಲ್ಲರೂ ಒಂದು ಸಮಷ್ಟಿ ಸಂಗಡವಾಗಿ ಐಕ್ಯಭಾವನೆ ಪಡೆದು ಒಂದು ಸಮಷ್ಟಿಯ ಹೆಸರನ್ನು ಪಡೆಯಲು ಆವಶ್ಯಕತೆಯುಂಟಾಯಿತು. ಆಗ್ಗೆ ಪರಕೀಯರು ಇವರಿಗೆ ಕೊಟ್ಟಿದ್ದ ಹಿಂದೂ ಎಂಬ ಹೆಸರು ಇವರಲ್ಲೂ ಪ್ರಚಾರಕ್ಕೆ ಬಂದಿತು. ಇದಕ್ಕೆ ಮೊದಲು ಈ ದೇಶದಲ್ಲಿ ಮತ ಪ್ರಭೇದಗಳೂ ೧ ಕುಲವ್ಯತ್ಯಾಸಗಳೂ ನಾಗರಕತೆಯ ಅಂತರಗಳೂ ಹೇರಳವಾಗಿದ್ದುದರಿಂದ ಏಕ ಸಂಸ್ಕೃತಿಯ ಪರಿಸ್ಥಿತಿಯಲ್ಲಿರುತ್ತಿದ್ದರೂ ಇವರು ತಾವೆಲ್ಲರೂ ಒಂದೇ ಜನರು ಎಂದು ಭಾವಿಸಿಕೊಳ್ಳದೆ ಇದ್ದರು. ಇದು ನಮ್ಮ ದೇಶದ ಚರಿತ್ರೆಯಿಂದ ಸ್ಪಷ್ಟಪಡುವುದು. ಈಗಲೂ ನಮ್ಮ ನಾಡುಪಂಡಿತರಿಗೆ ಹಿಂದೂ ಎಂದು ಹೇಳಿದರೆ ಸರಿಯಾಗಿ ಅರ್ಥವಾಗುವುದಿಲ್ಲ.

## ಪದಮೂಲ

ಪರರು ನಮಗೆ ಕೊಟ್ಟಿರುವ ಈ ಹಿಂದೂ ಎಂಬ ಹೆಸರು ಯಾವ ಮೂಲದಿಂದ ಬಂದಿರಬಹುದು ? ಈ ವಿಚಾರವಾಗಿ ಎಷ್ಟೋ ಭಿನ್ನಾಭಿಪ್ರಾಯಗಳುಂಟು. ಸಿಂಧೂನದಿಯ ಹೆಸರಿನಿಂದ ಈ ಹಿಂದೂ ಎಂಬ ಹೆಸರು ನಮಗೆ ಹುಟ್ಟಿರುವುದೆಂದು ಬಹು ಮಂದಿ ತರ್ಕಿಸುವರು. ಉದಾಹರಣೆಗಾಗಿ, ಗುರುದಾಸ ಬಾನರ್ಜಿಯ ಅಭಿಪ್ರಾಯದಂತೆ "ಹಿಂದೂ"ಶಬ್ದವು ಪರಕಲ್ಪಿತವಾದುದು; ಸಿಂಧು ಎಂಬ ಪದದಿಂದ ಹುಟ್ಟಿರುತ್ತದೆ. ಆ ನದಿಯ ಪೂರ್ವಭಾಗದಲ್ಲಿ ವಾಸಿಸತಕ್ಕ ಜನರನ್ನು ಸಂಬೋಧಿಸಲು ಮಹಮ್ಮದೀಯರಿಂದ ಅದು ಪ್ರಯೋಗಿಸಲ್ಪಟ್ಟಿತು."[1] ಇದು ಸರಿಯೆಂದು ಹೇಳಲಾಗುವುದಿಲ್ಲ. ಮಹಮ್ಮದನು ಹುಟ್ಟುವುದಕ್ಕೆ ಮುಂಚಿನಿಂದಲೂ ಪಾರಶಿಕರೂ ಗ್ರೀಕರೂ ಈ ಪದವನ್ನು ಅರಿತಿದ್ದರು. ಅಲ್ಲದೆ ಪ್ರಾಚೀನಕಾಲದಿಂದಲೂ ಹಿಂದೂಗಳು ಸಿಂಧೂನದಿಯ ಪಶ್ಚಿಮಪ್ರಾಂತ್ಯದಲ್ಲಿ ವಾಸವಾಗಿದ್ದರು; ಈಗಲೂ ಸಹ ಇರುತ್ತಿರುವರು. ಋಗ್ವೇದದ ಸಪ್ತಸಿಂಧು ಕೂಟಕ್ಕೆ ಕಾಬೂಲ್ ನದಿ ಸಹ ಸೇರುವುದು. ಮುಸಲ್ಮಾನರು ಈಗಲೂ ಸಹ ಸಿಂಧೂನದಿ ಸಿಂಧೂಪ್ರಾಂತ್ಯ(Sind)ಗಳನ್ನು ಯಥಾವತ್ತಾಗಿ ಉಚ್ಚರಿಸುತ್ತಾರಲ್ಲದೆ ಹಿಂದೂನದಿ, ಹಿಂದೂ

೧ ಮುಸಲ್ಮಾನರ ಆಗಮನಕ್ಕೆ ಹಿಂದೆಯೇ ಇಂಡಿಯಾ ದೇಶಕ್ಕೆಲ್ಲಾ ಒಂದೇ ಒಂದು ಹೆಸರನ್ನು ಕಲ್ಪಿಸಿಕೊಂಡು ಅಲ್ಲಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಲು ಅನೇಕಸಲ ಪ್ರಯತ್ನಿಸಿದ್ದರು. ಆದರೆ ಈ ಸಮಷ್ಟಿಭಾವನೆಯು ಬರಿ ಸಂಸ್ಕೃತಿಯಿಂದ ಹುಟ್ಟಿದ್ದುದರಿಂದ ಬಹಳ ಶಿಥಿಲವಾಗಿತ್ತು.

1. The Hindu Law of Marriage and Stridhana 3rd Edition 1913, page 15.

ಪ್ರಾಂತ್ಯ ಎಂದು ಹೇಳುತ್ತಿಲ್ಲ. ಹಾಗಿರುವಲ್ಲಿ ಹಿಂದೂ ಎಂಬ ಶಬ್ದವನ್ನು ಅವರು ಸಿಂಧೂ ಎಂಬ ಹೆಸರಿನಿಂದ ಹೊಸದಾಗಿ ಕಲ್ಪಿಸಿದರೆಂದು ಹೇಗೆ ಹೇಳಬಹುದು ?

ಈ ಹೆಸರನ್ನು ಮುಸಲ್ಮಾನರು ರೂಢಿಗೆ ತಂದವರೇ ಹೊರತು ಕಲ್ಪಿಸಿದವರಲ್ಲ. ಅವರು ಅದನ್ನು ಪಾರಶಿಕರಿಂದ ಕಲಿತು ಕೊಂಡಿರಬೇಕು. ಪ್ರಾಚೀನ ಪಾರಶಿಕರು ನಮ್ಮ ದೇಶದ ಆರ್ಯರನ್ನು ಸಿಂಧೂನದಿಯ ಹೆಸರಿನ ಆಧಾರದಿಂದ ಹಿಂದೂ ಎಂದು ಕರೆದರೆಂದೂ ಗ್ರೀಕರು ಈ ಪದವನ್ನು ತಮ್ಮಲ್ಲಿ ಇಂ-ಡಾಯ್ ಎಂದು ಮಾಡಿಕೊಂಡರೆಂದೂ ಬಹುಮಂದಿ ವಿದ್ವಾಂಸರು ಹೇಳುವರು. ಈ ಇಂಡಾಯ್ ಎಂಬುದರಿಂದ ಈಗಿನ ಇಂಡಿಯಾ ಎಂಬ ಪದವು ಹುಟ್ಟಿರುವುದು. ಪ್ರಾಚೀನ ಪಾರಶಿಕರ ಅವೆಸ್ತಾ ಗ್ರಂಥದಲ್ಲಿ ಹಪ್ತಹೆಂದು ಎಂಬ ಪದವು ದೊರೆಯುವುದು. ಇದು ಸಪ್ತಸಿಂಧು ಎಂಬ ವೇದಭಾಷೆಯ ಪಾರಶಿಕ ಭಾಷಾರೂಪವೆಂದು ವಿದ್ವಾಂಸರು ಊಹಿಸುವರು. ಈ ಸಪ್ತಸಿಂಧು ಎಂಬ ಪದವೇ ನಮ್ಮ ಹಿಂದೂ ಎಂಬ ಹೆಸರಿಗೆ ಮೂಲವೆಂದು ಈ ವಿದ್ವಾಂಸರು ವಾದಿಸುವರು. ಋಗ್ವೇದದ ಕಾಲದಲ್ಲಿ ಆರ್ಯರು ಸಿಂಧೂನದಿಯ ತೀರದಲ್ಲಿದ್ದರು. ಋಗ್ವೇದದಲ್ಲಿ ಸಪ್ತಸಿಂಧು, ಸಪ್ತಸಿಂಧವಃ (ಬಹುವಚನ) ಎಂಬ ಪದಗಳು ದೊರೆಯುತ್ತವೆ. ಬಹುಕಡೆ ಈ ಪದಗಳು ನದಿ ವಾಚಕವಾಗಿ ಮಾತ್ರ ಇರುವುವು. ಒಂದು ಕಡೆ ಮಾತ್ರ ( ಋಗ್ವೇದ VIII ೨೪ ೨೭ ) ಸಪ್ತಸಿಂಧವ ಎಂಬ ಪದವು ಒಂದು ದೇಶವನ್ನು ನಿರ್ವಚಿಸುವುದು. 1 ಇದು ಯಾವ ದೇಶವೋ ಅದನ್ನು ಮಾತ್ರ ನಿಶ್ಚಯಿಸಲಾಗುವುದಿಲ್ಲ. ಈ ಪದದಲ್ಲಿ ಸೂಚಕವಾಗಿರುವ ೭ ನದಿಗಳೂ ಪಂಜಾಬಿನ ನದಿಗಳೇ ಎಂದು ನಿರ್ಧರಿಸಲಾಗುವುದಿಲ್ಲ. 2 ಒಂದು ಪಕ್ಷ ಹಾಗೆ ಹೇಳಿದರೂ ಈ ದೇಶವು ಸಪ್ತಸಿಂಧು ಎಂಬ ವೈದಿಕವಾದ ಹೆಸರನ್ನು ಕಳೆದುಕೊಂಡು ಬಹು ಪ್ರಾಚೀನಕಾಲದಿಂದಲೂ ಪಂಚನದ ದೇಶವೆಂದು ಏಕೆ ಹೆಸರುಪಡೆಯಿತೋ ಹೇಳಲಾಗುವುದಿಲ್ಲ. ಪಂಜಾಬಿಗೆ ಯಾವ ಹಿಂದೂ ಗ್ರಂಥದಲ್ಲೂ ಒಂದು ಕಡೆಯೂ ಈ ಸಪ್ತಸಿಂಧು ಎಂಬ ಹೆಸರು ಹೇಳಲ್ಪಟ್ಟಿಲ್ಲ. ಅಲ್ಲದೆ ಹಿಂದೂ ಗ್ರಂಥರಾಶಿಯಲ್ಲಿ ಮತ್ತಾವ ಕಡೆಯೂ ಯಾವುದೊಂದು ಪ್ರದೇಶವೂ ಸಪ್ತಸಿಂಧು ಎಂಬ ಹೆಸರಿನಿಂದ ಕರೆಯಲ್ಪಟ್ಟಿಲ್ಲ. ವೇದಯುಗವಾದೊಡನೆ ಹುಟ್ಟಿದ ಮಹಾಭಾರತ ಕಾಲದಲ್ಲಿ ಸಿಂಧುದೇಶವೆಂಬ ಪ್ರತ್ಯೇಕ ರಾಜ್ಯವಿದ್ದಿತಲ್ಲದೆ ಪಂಜಾಬು ದೇಶವು ಮ್ಲೇಚ್ಛ ಭೂಮಿಯಾಗಿದ್ದಿತು. 3 ಇದರಿಂದ ಪಂಜಾಬು ದೇಶವು ವೇದಭೂಮಿ ಎಂದು ಹೇಳುವುದು ಕಷ್ಟವೆಂದು ಈಚೆಗೆ ಕೆಲ ಪಂಡಿತರು ವಾದಿಸಲಾರಂಭಿಸಿದ್ದಾರೆ. ಈ ರೀತಿಯಾಗಿ ವೇದದ ಸಿಂಧು ಎಂಬ ಪದವು ಎಲ್ಲಾ ಕಡೆಯೂ ಪಂಜಾಬಿನ ಸಿಂಧೂನದಿಯನ್ನು ಮಾತ್ರವೇ ಸಂಬೋಧಿಸುವುದೆಂದು ಹೇಳಲು ಕಷ್ಟವಾಗುವುದು. ಅಲ್ಲದೆ, ಮೇಲೆ ಹೇಳಿದಂತೆ ಸಿಂಧು ಎಂಬುದು ಸಿಂಧೂನದಿಯೇ ಆದರೂ ಸಪ್ತಸಿಂಧು ಎಂದರೆ ಸಿಂಧೂನದೀತೀರವರ್ತಿಯಾದ ದೇಶವೆಂದು ಹೇಳುವುದು ಮತ್ತೂ ಕಷ್ಟವಾಗಿರುವುದು. ಸಿಂಧು ಎಂದರೆ ಸಮುದ್ರ ಎಂಬರ್ಥವೊಂದುಂಟು. ನಮ್ಮ ಪುರಾಣಗಳು ಸಪ್ತಸಮುದ್ರಗಳನ್ನು ವಿವರಿಸುವುವು. ಈ ನಂಬಿಕೆಯು ವೇದಕಾಲದಲ್ಲೂ ಇದ್ದಿರಬಹುದು. ಆದರೆ ಕೆಲ ಪಂಡಿತರು ವೇದಕಾಲದವರಿಗೆ ಸಮುದ್ರವೆಂಬುದೇ ಗೊತ್ತಿರಲಿಲ್ಲವೆಂದು ಹೇಳುವರು. ಅದು ಹೇಗಾದರೂ ಇರಲಿ. ಪಾರಶಿಕರು ನಮಗೆ ಕೊಟ್ಟ ಹಿಂದೂ ಎಂಬ ಹೆಸರು ಸಿಂಧೂನದಿಯ ಹೆಸರಿನಿಂದಲೇ ಹುಟ್ಟಿದ್ದೆಂದು ಹೇಳುವುದು ಬಲು ಸುಲಭವಾದದ್ದಲ್ಲವೆಂದು ಮೇಲಿನ ಚರ್ಚೆಯಿಂದ ಸ್ಪಷ್ಟಪಡುವುದು.

ಕೆಲವರು ಹಿಂದೂ, ಇಂಡಾಯ್‌ವು, ಇಂಡಿಯಾ ಎಂಬ ಪದಗಳು ಸಪ್ತಸಿಂಧು ಎಂಬ ಪದದಿಂದಲ್ಲದೆ ಇಂದು ಎಂಬ ಪದದಿಂದ ಹುಟ್ಟಿರುವುದೆಂದು ಊಹಿಸುವರು. ಋಗ್ವೇದದಲ್ಲಿ ಬರುವ 'ಇಂದವಃ ಪಿತರಾದ್ಯಾಃ' ಎಂಬ ವಾಕ್ಯದಿಂದ ಕೆಲವರು

---

1 Govind Das—Hinduism 1925 P. 47.

2 B G Tilak-Arctic Home of the Vedas p. 290-1. et. ಸಾಯಣ—ಸಪ್ತಸಿಂಧೂನ್ । ಇಮಂಮೇ ಗಂಗ ಇತ್ಯಸ್ಯಾಮೃತ್ಯಾಮ್ನಾತಾ ಗಂಗಾದ್ಯಾಃ ಸಪ್ತಸಂಖ್ಯಾಕಾ ನದೀಃ । ಋಗ್ವೇ. 1. 32. 12.

3. ಕರ್ಣ ಪರ್ವದಲ್ಲಿ ಕರ್ಣನು ಶಲ್ಯನ ಆರಟ್ಟ ಬಾಹ್ಲಿಕ ಮದ್ರ ದೇಶಗಳನ್ನು ಮ್ಲೇಚ್ಛ ವಸತಿಗಳೆಂದು ಹಿಯ್ಯಾಳಿಸುವನು. ಕೃಷ್ಣ ನಿರ್ಯಾಣಾನಂತರ ಅವನ ರಾಣಿವಾಸವನ್ನು ಮ್ಲೇಚ್ಛರು ಸೂರೆಮಾಡಿದ್ದು ಪಂಚನದ ದೇಶದಲ್ಲಿ.

ಈ ಹೆಸರನ್ನು ಉದ್ಧರಿಸುವರು ೧ ಆದರೆ ಈ ವಾಕ್ಯದ ವಿವರಣೆಯು ಕಷ್ಟ, ಈ ದೇಶವನ್ನು ಇಂದುಕುಲದ ರಾಜನ್ಯರು ಮಹಾಖ್ಯಾತಿಯಿಂದ ಆಳಿ ಸಾಮ್ರಾಜ್ಯಗಳನ್ನು ಕಟ್ಟಿದ್ದರಿಂದ ಈ ಹೆಸರು ಬಂದಿರಬಹುದೆಂದು ಮತ್ತೊಂದು ಊಹೆಯು. ಮತ್ತು ಈ ದೇಶವು ನಮ್ಮ ಪ್ರಾಚೀನರ ಅಭಿಪ್ರಾಯದಂತೆ ಚಂದ್ರಮಂಡಲದಲ್ಲಿ ಪ್ರತಿಫಲಿತವಾಗಿ ಮೊಲದಂತೆಯೂ ಅರಳಿ ಎಲೆಯಂತೆಯೂ ಕಾಣುವುದಾದ್ದರಿಂದ ಇದಕ್ಕೆ ಇಂದುವರ್ಷ ಎಂಬ ಹೆಸರುಂಟಾಗಿ ಆ ಮೂಲಕ ಮೇಲಿನ ಹೆಸರುಗಳು ಬಂದಿರಬಹುದೆಂದು ಮತ್ತೊಂದು ಊಹೆಯು ೨ ಈ ಊಹೆಗಳಿಗೆ ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಒಂದು ಕಡೆಯೂ ತಕ್ಕ ಆಧಾರವು ದೊರೆಯುವುದಿಲ್ಲ. ಯಾವ ಕಡೆಯೂ ಇಂದುದೇಶ ಇಂದುವರ್ಷ ಎಂಬ ಪದಗಳು ದೊರೆಯುವುದಿಲ್ಲ.

ಹಿಂದೂ ಶಬ್ದದ ಮೂಲವನ್ನು ಕುರಿತು ಇವೇ ರೀತಿ ಕೃತಕವಾದ ಮತ್ತೊಂದು ಊಹೆಯು ಮೇರುತಂತ್ರವೆಂಬ ಗ್ರಂಥದಿಂದ ಶಬ್ದಕಲ್ಪದ್ರುಮದಲ್ಲಿ ಉದಾಹೃತವಾಗಿದೆ ೩ ಹಿಂದೂ ಶಬ್ದವು ಹೀನ, ದೋಷಯತಿ ಎಂಬ ಎರಡು ಪದಗಳಿಂದ ಹುಟ್ಟಿರುವುದಂತೆ. ಹಿಂದೂ ಎಂದರೆ ಹೀನವಾದ್ದನ್ನು ದೋಷಯತಿ ಎಂದರೆ ದೋಷದಿಂದ ಕಾಣತಕ್ಕವನು ಎಂದರ್ಥವಂತೆ. ಈ ಅರ್ಥವು ಅತಿಕೃತಕವಾದುದು. ಮತ್ತು ಬಹಳ ಈಚಿನದು. ಮೇರುತಂತ್ರವು ಪ್ರಾಚೀನ ಗ್ರಂಥವಲ್ಲ.

## ಪರ್ಯಾಯ ನಾಮ

ಹಿಂದೂ ಶಬ್ದವು ಪರಕೀಯವಾದ್ದರಿಂದ ಅದಕ್ಕೆ ಪವಿತ್ರವಾದ ಸಂಸ್ಕೃತ ಭಾಷೆಯಲ್ಲಿ ಮತ್ತಾವುದಾದರೂ ಪರ್ಯಾಯ ನಾಮವನ್ನು ಕಲ್ಪಿಸಬೇಕೆಂದು ಈಚೆಗೆ ಅರ್ಧಶತಮಾನದಿಂದ ಪ್ರಯತ್ನವು ನಡೆದಿದೆ. ಆದರೆ ಈ ಪ್ರಯತ್ನವು ಪಾಮರವಾದ ಸ್ವಾಭಿಮಾನದಿಂದ ಅತಿ ಕೃತಕವಾಗಿ ನಡೆದಿದೆ. ನಮ್ಮ ಚರಿತ್ರೆಯ ಆರಂಭದಿಂದಲೂ ನಾವು ಎಷ್ಟೋ ಪರಕೀಯ ವಸ್ತುಗಳನ್ನು ಸಂಗ್ರಹಿಸಿರುತ್ತೇವೆ. ಅದನ್ನು ಒಪ್ಪುವುದರಲ್ಲಿ ನಮಗೆ ನಾಚಿಕೆ ಏನೂ ಇಲ್ಲ. ಎಷ್ಟೋ ಸಂಖ್ಯೆಯ ಪರದೇಶೀಯರು ಪರಕೀ[ಯ]ಗಳವರು ಇಲ್ಲಿ ನೆಲೆಸಿ ನಮ್ಮ ಶಿಷ್ಯರಾಗಿ ಕಾಲಾನುಕಾಲ[ಕ್ಕೆ] ಹಿಂದೂ ಸಂತಾನರಾಗಿ ಮಾರ್ಪಟ್ಟಿರುವರು. ಹೀಗಿರು[ವಲ್ಲಿ] ಹಿಂದೂ ಶಬ್ದವು ಪರಕಲ್ಪಿತವಾದ ಮಾತ್ರಕ್ಕೆ ಅದನ್ನು [ನಾವು] ಅನಾದರಿಸಬೇಕು ? ಈ ಪದವನ್ನು ಈಗ ಬಿಟ್ಟರೆ ನ[ಮಗೆ] ನಿಸ್ತಾರವಿಲ್ಲ. ಇದಕ್ಕೆ ಸರಿಸಮವಾದ ಪರ್ಯಾಯ ಶ[ಬ್ದವು] ಇಲ್ಲವೇ ಇಲ್ಲ. ಇದಕ್ಕೆ ಪರ್ಯಾಯವಾಗಿ ಈಚೆಗೆ ಕ[ಲ್ಪಿತ]ವಾಗಿರುವ ಹೆಸರುಗಳನ್ನು ಪರೀಕ್ಷಿಸಿದರೆ ಇದು ಸ್ಪಷ್ಟ[ವಾಗು]ವುದು.

ವೇದಕರ್ತೃಗಳಾದ ನಮ್ಮ ಪ್ರಾಚೀನರು ತಮ್ಮ[ನ್ನು] "ಆರ್ಯ"ರೆಂದೂ ಇತರ ಜನರನ್ನು ದಾಸ, ಮ್ಲೇಚ್ಛ, ದಸ್ಯು, ಶೂದ್ರ ಎಂದೂ ಕರೆದರು. ನಮ್ಮ ಜನರಿಗೆ ಸಂಸ್ಕೃತ ಭಾ[ಷೆ]ಯಲ್ಲಿರತಕ್ಕದ್ದು ಇದೊಂದು ಹೆಸರು ಹೊರತು ಮತ್ತಾವುದೂ ಇಲ್ಲ. ಆದ್ದರಿಂದ ಅನೇಕರು ಹಿಂದೂ ಎಂಬ ಹೆಸರಿಗೆ ಬದಲು 'ಆರ್ಯ' ಎಂಬ ಹೆಸರನ್ನು ರೂಢಿಗೆ ತರಬೇಕೆಂದು ಶ್ರಮಪ[ಡು]ತ್ತಿರುವರು. ಇದು ಅಸಾಧ್ಯ. ನಮ್ಮ ಶಾಸ್ತ್ರಗಳ ಪ್ರಕಾರ ವರ್ಣತ್ರಯದವರು ಮಾತ್ರವೇ ಆರ್ಯರಾಗಿರುವರು. ಈ[ಗ] ಶುದ್ಧ ಕ್ಷತ್ರಿಯರೂ ಶುದ್ಧ ವೈಶ್ಯರೂ ಖಿಲರಾಗಿರುತ್ತಾರೆ[ಎಂಬ] ಪ್ರತೀತಿ ಇರುವುದರಿಂದ ಆರ್ಯರೆಂದರೆ ಬ್ರಾಹ್ಮಣ[ರೆಂದು] ಮಾತ್ರ ಅರ್ಥವಾಗುವುದು. ಅಲ್ಲದೆ ದ್ರಾವಿಡರು ಈ ಸಂಗ[ಕ್ಕೆ] ಸೇರುವುದಿಲ್ಲ. ನಮ್ಮ ಹಿಂದೂ ಮತ ಧರ್ಮ ತತ್ವ[ಗಳ]ಗಳನ್ನು ಗೌಡಬ್ರಾಹ್ಮಣರಿಗಿಂತಲೂ ಶ್ರದ್ಧೆಯಿಂದಲೂ [ಭಕ್ತಿ]ಯಿಂದಲೂ ಪರಿಪಾಲಿಸುತ್ತಿರುವ ದ್ರಾವಿಡ ಬ್ರಾಹ್ಮಣರು [ಸ]ಅನಾರ್ಯರಾಗಿರುವರು. ಇದಲ್ಲದೆ ಪುರಾಣಗಳಲ್ಲಿ ಆರ್ಯ ಎಂಬುದಕ್ಕೆ ಮ್ಲೇಚ್ಛ ಎಂಬುದು ಎದುರು ಶಬ್ದದ ಪದವಾಗಿ[ದೆ]. ಈ ಮ್ಲೇಚ್ಛರ ಗುಂಪಿಗೆ ಪುರಾಣಗಳು ದ್ರಾವಿಡಾಂಧ್ರರನ್ನು ತಂದೆಯ ಶಾಪಕ್ಕೆ ಗುರಿಯಾದ ಯದುತುರ್ವಸು ಮೊದಲಾದ[ವ]ವರ ಸಂತತಿಯವರನ್ನೂ ಸೇರಿಸುವುವು. ಹೀಗಾದ[ರೆ]

---

೧ A. G. Swamin—Ideals of Ind Part I.

೨ ಮಹಾಭಾರತ, ಭೀಷ್ಮಪರ್ವ—ಜಂಬೂಖಂಡ ಪರ್ವ— ಅಧ್ಯಾಯ ೫

"ಯಥಾಹಿ ಪುರುಷಃ ಪಶ್ಯೇದಾದರ್ಶೇ ಮುಖಮಾತ್ಮನಃ । ಏವಂ ಸುದರ್ಶನ ದ್ವೀಪೋ ದೃಶ್ಯತೇ ಚಂದ್ರಮಂಡಲೇ ॥ ದ್ವಿರಂಶೇ ಪಿಪ್ಪಲಸ್ತತ್ರ ದ್ವಿರಂಶೇ ಶಶೋಮಹಾನ್ । ಸರ್ವೌಷಧಿ ಸಮಾವಾಪ್ತೈಃ ಸರ್ವತಃ ಪರಿವಾರಿತಃ ॥"

೩ Gurudas Bannerjee—op. cit, p. 15.

ಸಾಕ್ಷಾತ್ತು ಶ್ರೀಕೃಷ್ಣನೂ ಯಾದವಕುಲದವರೂ ಸುಭದ್ರಾ ಸಂಬಂಧದ ದ್ವಾರಾ ಪಾಂಡವಸಂತತಿಯವರೂ ಸಹ ಮ್ಲೇಚ್ಛರಾಗುವರು. ಆದರೆ ಇವರಾರನ್ನೂ ಹಿಂದೂಕೂಟದಿಂದ ಬಿಡಲಾಗುವುದಿಲ್ಲ. ಈಗ ಇವರನ್ನೆಲ್ಲಾ ಆರ್ಯರೆಂದು ಕರೆಯುವುದಾದರೆ ಆರ್ಯಶಬ್ದಕ್ಕೆ ಅನಾದಿಯಿಂದ ಬಂದ ರೂಢ್ಯರ್ಥವನ್ನು ಈಗ ಏಕಾಏಕಿ ಬದಲಾಯಿಸಬೇಕಾಗುವುದು. ಇಂಥಾ ಇಂದ್ರಜಾಲವು ಸುಲಭವಲ್ಲ.

ಇದಿಷ್ಟೂ ನಮ್ಮದೇಶದ ಸ್ಥಿತಿಯಾಯಿತು. ಈಚೆಗೆ ಪಾಶ್ಚಾತ್ಯರು ಸಹ ಈ "ಆರ್ಯ" ಎಂಬ ಪದವನ್ನು ಪರಿಗ್ರಹಿಸಿ ವಿವಿಧಾರ್ಥದಲ್ಲಿ ಪ್ರಯೋಗಿಸಿ ಇಲ್ಲದ ಗೊಂದಲವನ್ನು ಹೂಡಿರುವರು. ಐರೋಪ್ಯರು ಸಂಸ್ಕೃತವನ್ನು ವ್ಯಾಸಂಗಿಸಲಾರಂಭಿಸಿದಾಗ ಸಂಸ್ಕೃತ, ಪಾರಶಿಕ, ಗ್ರೀಕ, ಲ್ಯಾಟಿನ್, ಇಂಗ್ಲಿಷ, ಫ್ರೆಂಚ, ಜರ್ಮನ್,ರಷ್ಯನ್ ಮೊದಲಾದ ಭಾಷೆಗಳು ಸಹೋದರ ಭಾಷೆಗಳೆಂದು ವ್ಯಕ್ತಪಟ್ಟಿತು. ಇವು ೧ ಸೋದರ ಭಾಷೆಗಳಾದರೆ ಇವುಗಳಿಗೆ ಒಂದು ಮಾತೃಭಾಷೆ ಇರಬೇಕು. ಮತ್ತು ಅಂಥಾ ಮಾತೃಭಾಷೆಯನ್ನಾಡತಕ್ಕ ಒಂದು ಮಾತೃಕುಲವು ಇರಬೇಕು. ಮ್ಯಾಕ್ಸಮುಲ್ಲರನು ಈ ಮಾತೃಭಾಷೆಯನ್ನು ಆರ್ಯಭಾಷೆ ಎಂದೂ ಅದನ್ನಾಡತಕ್ಕವರನ್ನು ಆರ್ಯರೆಂದೂ ಕರೆದನು. ಈ ಕಾರಣದಿಂದ ಮೇಲಿನ ಭಾಷೆಗಳನ್ನಾಡತಕ್ಕವರನ್ನೆಲ್ಲಾ ವಿದ್ವಾಂಸರು ಆರ್ಯಕುಲದವರು ಎಂದು ಕರೆದರು. ಜನಕುಲವೆಂದರೆ ಒಂದೇ ಪ್ರಕಾರವಾದ ದೇಹರಚನೆ ರಕ್ತಗುಣಗಳನ್ನುಳ್ಳ ಜನರೆಂದು ಅರ್ಥ. ಬಿಳಿಯ ವರ್ಣದ ಐರೋಪ್ಯರು ಆರ್ಯಕುಲಕ್ಕೆ ತಮಗೆ ಸಮಾನವಾಗಿ ಕಂದುಬಣ್ಣದ ಗುಲಾಮರಾದ ಪಾರಶಿಕರೂ ಹಿಂದುಗಳೂ ಸೇರಿದವರೆಂದು ಒಪ್ಪುವುದು ಕಷ್ಟವಾಯಿತು. ಈ ಕಾರಣದಿಂದ ಕೆಲ ಪಂಡಿತರು ಏಷ್ಯಾಖಂಡದ 'ಆರ್ಯ'ರು ಆರ್ಯ ಭಾಷೆಯನ್ನಾಡುವ ಜನರು ಮಾತ್ರವೇ ಆಗಿರುತ್ತಾರೆಂದೂ ಐರೋಪ್ಯರು ಮಾತ್ರ ಆರ್ಯಭಾಷಾ ವಾಚಕರೂ ಆರ್ಯಕುಲಸಂಭೂತರೂ ಆಗಿರುವರೆಂದೂ ವಾದಿಸಲಾರಂಭಿಸಿದರು. ಆದರೆ ಸ್ವಲ್ಪಕಾಲದಲ್ಲೇ ಐರೋಪ್ಯರಲ್ಲೂ ಹಲವು ಕುಲಪ್ರಭೇದಗಳುಂಟೆಂದೂ, ಕುಲಕ್ಕೂ ಭಾಷೆಗೂ ಯಾವ ಸಾಕ್ಷಾತ್ತಾದ ಸಂಬಂಧವೂ ಇಲ್ಲವೆಂದೂ ತಿಳಿಯಬಂದಿತು. ಆಗ್ಗೆ ಆರ್ಯರು ಎಂದರೆ (ಯಾವ ಕುಲಕ್ಕೇ ಸೇರಿರಲಿ) ಆರ್ಯಭಾಷೆಗಳನ್ನಾಡತಕ್ಕ ಜನರು ಎಂಬ ಅರ್ಥವು ಹುಟ್ಟಿತು. [1] ಹೀಗೆ ಆರ್ಯ ಎಂಬ ಪದದ ಅರ್ಥವು ನಮ್ಮಲ್ಲೂ ಪಾಶ್ಚಾತ್ಯ ಪ್ರಪಂಚದಲ್ಲೂ ಬಹು ತೊಡಕಾಗಿರುವುದು. ಇತ್ಯಾದಿ ಕಾರಣಗಳಿಂದ ಹಿಂದೂ ಎಂಬುದಕ್ಕೆ ಆರ್ಯ ಎಂಬ ಪದವನ್ನು ಪರ್ಯಾಯವಾಗಿ ಇಟ್ಟುಕೊಳ್ಳುವುದು ಅಸಾಧ್ಯವಾಗಿದೆ.

ಹಿಂದೂ ಎಂದರೆ ಹಿಂದೂ ಮತಾವಲಂಬಿ ಎಂದು ಬಹುಜನರು ತಿಳಿಯುವರು. ಹಿಂದೂಮತಕ್ಕೆ ಸಂಸ್ಕೃತದ ಹೆಸರುಗಳನ್ನಿಟ್ಟು ತನ್ಮೂಲಕ ಹಿಂದೂ ಶಬ್ದಕ್ಕೆ ಪರ್ಯಾಯನಾಮಗಳನ್ನು ಕಲ್ಪಿಸಲು ಅನೇಕರು ಪ್ರಯತ್ನಿಸಿರುವರು. ಇವೆಲ್ಲವೂ ನಿಷ್ಫಲವಾಗಿವೆ. ಈ ಹೊಸ ಪದಗಳು ಹಿಂದೂ ಶಬ್ದದಷ್ಟು ವ್ಯಾಪ್ತಿಯನ್ನೂ ಅರ್ಥಪುಷ್ಟಿಯನ್ನೂ ರೂಢಿಯನ್ನೂ ಪಡೆದಿಲ್ಲ. ಸಾರ್ವತ್ರಿಕವಾಗಿ ಬಳಕೆಗೆ—ನಮ್ಮ ದೇಶದಲ್ಲೂ ಹೊರಗಣ ಪ್ರಪಂಚದಲ್ಲೂ ಬರುವ ಸಂಭವ ಬಹು ಕಡಿಮೆ. ಹಿಂದೂ ಶಬ್ದವು ಕೇವಲ ಮತವಾಚಿಯೇ ಆಗಿಲ್ಲ. ಉದಾಹರಣೆಗಾಗಿ, ಹಿಂದೂ ಮತವನ್ನು ವೈದಿಕ ಧರ್ಮವೆಂದು ಕರೆಯಲು ಒಪ್ಪಿದರೂ ಹಿಂದೂಗಳನ್ನು ವೈದಿಕರು ಎಂದು ಕರೆಯಬೇಕಾದರೆ ನಮ್ಮ ಮನಸ್ಸು ಹಿಂತೆಗೆಯುವುದು. ಈ ಹೊಸ ಹೆಸರುಗಳನ್ನು ಪರೀಕ್ಷಿಸಿದರೆ ಇದು ವ್ಯಕ್ತಪಡುವುದು.

ಹಿಂದೂ ಮತವನ್ನು ವೈದಿಕ ಧರ್ಮ ಎಂದು ಕರೆಯಲು ಕೆಲವರು ಅಪೇಕ್ಷಿಸುವರು. ಈ ಮತಕ್ಕೆ ವೇದವೇ ಶಿರವಾಗಿಯೂ ತಳಗಲ್ಲಾಗಿಯೂ ಇರುವುದರಿಂದಲೂ ಇದರಲ್ಲಿರುವ ಒಳ ಪಂಗಡಗಳವರು ವೇದ ಪ್ರಾಧಾನ್ಯವೊಂದರಲ್ಲಿ ಮಾತ್ರವೇ ಒಗ್ಗಟ್ಟಾಗಿರುವುದರಿಂದಲೂ [2] ಈ ಹೆಸರು ಸರ್ವೋತ್ಕೃಷ್ಟವಾದುದೆಂದು

೧ ಈಚೆಗೆ ದಕ್ಷಿಣ ದೇಶದಲ್ಲಿ ಬ್ರಾಹ್ಮಣರು ಮಾತ್ರ ಆರ್ಯಕುಲದವರೆಂದೂ ಇತರರೆಲ್ಲರೂ ದ್ರಾವಿಡರೆಂದೂ ಒಂದು ವಾದವು ಹಲವು ರೂಪಗಳಲ್ಲಿ ಹುಟ್ಟಿರುತ್ತದೆ.

1 Maxmuller—Biography of Words, p. 120,24

Donald A. Mackenzie— Indian Myth and Legend 1913, XIX-XXIV.

2 ಈ ಅಂಶಗಳು ಮುಂದೆ ಚರ್ಚಿಸಲ್ಪಡುವುವು.

ಇವರು ವಾದಿಸುವರು. ಆದರೆ ಹಿಂದೂಗಳಲ್ಲಿ ವೈದಿಕರು ಎಂದರೆ ಲೌಕಿಕರಲ್ಲದ ಆಚಾರಶೀಲರು ಎಂಬ ಅರ್ಥವು ಈಗ ಹುಟ್ಟಿದೆ. ಐತಿಹಾಸಿಕವಾಗಿ ನೋಡಿದರೆ, ನಾವು ಪ್ರಥಮತಃ ವೈದಿಕರಾಗಿ ಆರಂಭಿಸಿದರೂ ಕೂಡಲೇ ನಮ್ಮಲ್ಲಿ ಒಂದು ಶಾಖೆಯವರು ಔಪನಿಷದಿಕರಾದರು. ಮುಂದೆ ವೈದಿಕಮತವು ನಾಮಾವಶೇಷವಾಗಿ ಅದರ ಸ್ಥಾನದಲ್ಲಿ ಪೌರಾಣಿಕಮತವೂ ವೇದಾಂತಮತವೂ ಸ್ಮಾರ್ತಧರ್ಮವೂ ಬೆಳೆದವು. ಈ ಮತಗಳೆಲ್ಲವನ್ನೂ ಒಳಕೊಂಡ ಒಂದು ಸಮಷ್ಟಿ ಪದವು ನಮಗೆ ಬೇಕು. ಅಲ್ಲದೆ ವೇದವನ್ನು ತಿರಸ್ಕರಿಸತಕ್ಕ ಜೈನ ಬೌದ್ಧ ಚಾರ್ವಾಕಾದಿಗಳನ್ನೂ ಹಿಂದೂ ಕೂಟದಲ್ಲಿ ಸೇರಿಸಬೇಕಾಗುವುದು. ಈ ಕಾರಣದಿಂದ ಮೇಲಿನ ಪ್ರಭೇದಗಳೆಲ್ಲವನ್ನೂ ಒಪ್ಪಿ ಅವುಗಳ ಸಮಷ್ಟಿಯನ್ನು ಸೂಚಿಸತಕ್ಕ ಪದವಾದ ಹಿಂದೂ ಧರ್ಮ ಎಂಬುದಕ್ಕೆ ವೈದಿಕ ಧರ್ಮ ಎಂಬ ಒಂದು ಪ್ರಭೇದದ ಹೆಸರು ಎಂದಿಗೂ ಪರ್ಯಾಯವಾಗಲಾರದು.

ಕೆಲವರು ಹಿಂದೂ ಧರ್ಮಕ್ಕೆ ಬ್ರಹ್ಮಧರ್ಮ, ಬ್ರಾಹ್ಮಣ ಧರ್ಮ ಎಂದು ಕರೆಯುವುದುಂಟು. ಹಿಂದೂ ಧರ್ಮಕ್ಕೆ ಬ್ರಾಹ್ಮಣರು ಮುಖಂಡರು, ಬ್ರಹ್ಮೋಪಾಸನೆಯು ಮುಖ್ಯಾಭಿಪ್ರಾಯವು. ಬ್ರಾಹ್ಮಣಧರ್ಮವೆಂದರೆ ಬ್ರಾಹ್ಮಣರ ಧರ್ಮವೆಂದರ್ಥವಲ್ಲ. ಬಹುವ್ರೀಹ್ಯರ್ಥದಲ್ಲಿ ಬ್ರಾಹ್ಮಣ ಧರ್ಮ ಎಂದರೆ ಬ್ರಾಹ್ಮಣರನ್ನು ಪ್ರಧಾನವಾಗಿ ಉಳ್ಳ ಧರ್ಮವೆಂದು ಅರ್ಥಮಾಡಿಕೊಳ್ಳಬೇಕು. ಹೀಗಾದರೂ ಈ ಹೆಸರುಗಳು ಸರಿಯಾಗಿಲ್ಲ. ಹಿಂದೂ ಧರ್ಮದಲ್ಲಿ ಬ್ರಹ್ಮಧರ್ಮವು ಶಿಖರಸ್ಥಾನದಲ್ಲಿದ್ದರೂ ಅದರಲ್ಲಿ ಅನೇಕ ಇತರ ಧರ್ಮಗಳು ಸೇರಿವೆ. ಈ ಅಂಶವನ್ನು ಹೊರಪಡಿಸುವ ಹೆಸರು ಇರಬೇಕಲ್ಲವೆ ? ಬ್ರಾಹ್ಮಣ ಪ್ರಾಧಾನ್ಯವನ್ನು ಬೌದ್ಧ ಜೈನ ಲಿಂಗಾಯತಾದಿಗಳು ಒಪ್ಪರು; ಈಗ ರಾಜಕೀಯವಾಗಿ ಇತರರೂ ಇದನ್ನು ವಿರೋಧಿಸುತ್ತಿರುವರು. ಈ ಕಾರಣದಿಂದ ಬ್ರಾಹ್ಮಣಧರ್ಮ ಎಂಬ ಹೆಸರೂ ಹಿಂದೂಧರ್ಮ ಎಂಬುದರಷ್ಟು ವ್ಯಾಪ್ತಿಯುಳ್ಳದ್ದಾಗಿಲ್ಲ. ಮಾನಿಯರ ವಿಲಿಯಮ್ಸ್ ಎಂಬ ಪಂಡಿತನು ವೈದಿಕ ಧರ್ಮವನ್ನು ಬ್ರಾಹ್ಮಣಧರ್ಮವೆಂದೂ ಅದು ಪೌರಾಣಿಕ ಧರ್ಮವಾಗಿ ಅನಂತರವಾಗಿ ಬಳೆದ ಮೇಲೆ ಅದಕ್ಕೆ ಹಿಂದೂ ಧರ್ಮವೆಂದೂ ಹೆಸರನ್ನು ಸೂಚಿಸಿರುವನು.

ಕೆಲವರು ನಮ್ಮ ಮತವನ್ನು ಮೋಕ್ಷಧರ್ಮವೆಂದು ಕರೆಯಲು ಬಯಸುವರು. ಮೋಕ್ಷವೆಂದರೆ ಪರಲೋಕ ಎಂದರ್ಥ
ವಾದರೆ ನಾಸ್ತಿಕರನ್ನುಳಿದು ಸಕಲರೂ ಮೋಕ್ಷಧರ್ಮದ
ಬೇಕಾಗುವುದು. ಆದರೆ ನಮ್ಮವರು ಮೋಕ್ಷವೆಂದರೆ ಸ್ವರ್ಗ
ಕಾಮಲೋಕಗಳಿಗಿಂತ ಮೇಲಾದ ನಿತ್ಯವಾದ ಬ್ರಹ್ಮ
ಪ್ರಾಪ್ತಿಸ್ಥಾನವೆಂದು ಏರ್ಪಡಿಸಿರುವರು. ಇಂಥಾ ವ
ಭಾವನೆಯು ಪ್ರಾಯಶಃ ಪರದೇಶಗಳಲ್ಲಿ ಪರಮತಗಳಲ್ಲಿ
ಹೀಗೆ ಮತ್ತಾರೂ ಸಾಧಿಸದ ನಮ್ಮ ಸಿದ್ಧಿಗಳಿಗೆ ಶಿ
ಪ್ರಾಯವಾದ ಈ ಮೋಕ್ಷಾಭಿಪ್ರಾಯದ ಹೆಸರನ್ನು
ಹೆಸರಿಗೆ ಮೂಲ ಮಾಡಿಕೊಳ್ಳಕೂಡದೇತಕ್ಕೆ ? ಹಾ
ನಮ್ಮನ್ನು ಸಾಲಗ್ರಾಮ ಪೂಜಕರು ಎಂದು ಸಹ ಕರೆದು
ಬಹುದು. ಮೋಕ್ಷಾಭಿಪ್ರಾಯವು ನಮ್ಮಲ್ಲಿ ಒಂದೇ
ಯಾಗಿಲ್ಲ. ಸಾಂಖ್ಯರ ಮೋಕ್ಷಕ್ಕೂ ನೈಯಾಯಿಕರ
ವೇದಾಂತಿಗಳದಕ್ಕೂ ಸಂಬಂಧವೇ ಇಲ್ಲ. ವೇದಾಂತಿಗಳಲ್ಲಿ
ಮೋಕ್ಷವು ನಿರ್ವಿಕಲ್ಪ ಸಮಾಧಿ, ನಿತ್ಯವಿಭೂತಿ, ವೈ
ಕೈಲಾಸ, ಬ್ರಹ್ಮಲೋಕ, ಬೃಂದಾವನ ಎಂದು ವಿವಿಧ
ಗಳಲ್ಲಿ ವರ್ಣಿಸಲ್ಪಟ್ಟಿದೆ. ಈ ಗಹನವಾದ ಮೋಕ್ಷಾಭಿಪ್ರಾ
ಬಹು ಜನರ ಆಚರಣೆಯಲ್ಲಿ ಮುಂಡಿಸಿಲ್ಲ. ಮಾರಿಮಸಣಿ
ಪೂಜಿಸತಕ್ಕ ಚಂಡಾಲನನ್ನೂ ಅಸಂಪ್ರಜ್ಞಾತ ಸಮಾಧಿ
ರುತ್ತಿರುವ ಪರಮಹಂಸನನ್ನೂ ಸಮಾನವಾಗಿ ಮೋಕ್ಷ
ಎಂದು ಹೇಳುವುದು ಕಷ್ಟವಾಗುವುದು.

ಹೀಗೆಯೇ ಹಿಂದೂ ಧರ್ಮಕ್ಕೆ ವರ್ಣಾಶ್ರಮ ಧ
ಎಂಬ ಹೆಸರೂ ಸಮರ್ಪಕವಾಗಿಲ್ಲ. ವರ್ಣಾಶ್ರಮ ಧ
ನಮ್ಮ ದೇಶದಲ್ಲಲ್ಲದೆ ಮತ್ತೆಲ್ಲೂ ಇಲ್ಲವೆಂಬುದು ನಿಜ.
ಸಮುದಾಯವನ್ನು ಲೋಕದ ಇತರ ಜನಸಮುದಾಯ
ಅತ್ಯಂತ ಸ್ಪಷ್ಟವಾಗಿ ವ್ಯತ್ಯಾಸಪಡಿಸತಕ್ಕ ಸಂಸ್ಥೆಯೂ
ಸರಿ, ಎಂದು ಹೇಳಬಹುದು. ಆದರೂ ಹಿಂದೂಗಳೆಲ್ಲ
ವರ್ಣಾಶ್ರಮಿ ಎಂದು ಕರೆಯಲಾಗುವುದಿಲ್ಲ. ಜೈನ
ಲಿಂಗಾಯತ ಸಿಖ ಮತಗಳೂ ಭಕ್ತಿಮತಗಳೂ ಈ
ಶ್ರಮ ಧರ್ಮವನ್ನು ಅಡಗಿಸಲು ಹುಟ್ಟಿದುವು.
ವ್ಯವಸ್ಥೆಯು ಈಚೆಗೆ ಖಿಲವಾಗಿದೆ. ಶಾಸ್ತ್ರದಲ್ಲಿ ಬರೆ
ಕ್ರಮದಲ್ಲಿ ಇದು ಯಾವ ಕಾಲದಲ್ಲೂ ನಮ್ಮಲ್ಲಿದ್ದಿ
ಹೇಳಲು ಸಾಧ್ಯವಿಲ್ಲ. ಶಾಸ್ತ್ರಗಳಲ್ಲಿರುವ ವರ್ಣಧರ್ಮ
ಈಗ ಪ್ರಚಾರದಲ್ಲಿರುವ ಜಾತಿಧರ್ಮಕ್ಕೂ ಏನೇನೂ ಸಂ
ವಿಲ್ಲ. ವರ್ಣಾಶ್ರಮಿ ಎಂದರೆ ಸುಧಾರಕರಲ್ಲದವರು;
ಶ್ರಮಧರ್ಮವನ್ನು ಒಪ್ಪತಕ್ಕವರು ಎಂದು

ಅರ್ಥವೇರ್ಪಟ್ಟಿರುವುದು. ಆದ್ದರಿಂದ ಈ ಹೆಸರು ಹಿಂದೂ ಎಂಬುದನ್ನು ತೆಗೆದು ಹಾಕಲಾರದು.

ಮತ್ತೆ ಕೆಲವರು ಹಿಂದೂ ಧರ್ಮವನ್ನು ಆರ್ಷಧರ್ಮ ಋಷಿಪ್ರಣೀತವಾದ ಧರ್ಮ ಎಂದು ಕರೆಯಲು ಆಶಿಸುವರು. ವೇದ ಇತಿಹಾಸ ಪುರಾಣ ಧರ್ಮಶಾಸ್ತ್ರಗಳೆಲ್ಲವೂ ಋಷಿಗಳ ಹೆಸರಿನಿಂದ ಪ್ರಚಾರವಾಗಿರುವುದೇನೋ ನಿಜವೇ ಸರಿ. ಆದರೆ ಭಕ್ತಿಮತವು ತಲೆದೋರಿದ ಮೇಲೆ ಹುಟ್ಟಿರುವ ಅನಂತ ಸಂಖ್ಯೆಯ ಭಕ್ತರೂ, ಮತಸಿದ್ಧರೂ ಗ್ರಂಥಕಾರರೂ ಋಷಿ ಕುಲದವರಾಗಿಲ್ಲ. ನಾಭಾಜಿಯೂ ಮಹೀಪತಿಯೂ ಇವರು ಗಳಲ್ಲಿ ಅನೇಕರು ಶುಕನಾರದಾದಿ ಋಷಿಗಳ ಅವತಾರವೆಂದು ಹೇಳಿ ಈ ಎರಡು ಶಾಖೆಗಳವರಿಗೂ ಸಂಬಂಧವನ್ನು ಕಲ್ಪಿಸಿ ದರೂ ದಕ್ಷಿಣದೇಶದ ಆಳ್ವಾರುಗಳು, ಆಚಾರ್ಯರು, ಅರವತ್ತು ಮೂವರು ಇವರಾರೂ ಸಹ ಋಷಿಗಳ ಅವತಾರವಾಗಿಲ್ಲ. ಇವರುಗಳಿಂದ ಹಿಂದೂಮತದಲ್ಲಿ ಅರ್ಧಭಾಗವು ಪ್ರಣೀತವಾಗಿ ರುವುದು. ಜೈನಬೌದ್ಧಲಿಂಗಾಯತಾದಿಗಳು ಋಷಿಪೂಜಕ ರಲ್ಲ. ಇತ್ಯಾದಿಕಾರಣಗಳಿಂದ ಈ ಹೆಸರು ಸಮರ್ಪಕವಾಗಿಲ್ಲ.

ಈ ಹೆಸರುಗಳೆಲ್ಲಕ್ಕಿಂತಲೂ ಸನಾತನಧರ್ಮವೆಂಬ ಹೆಸರು ಈಗ ವಿಶೇಷ ಪ್ರಸಿದ್ಧಿಗೆ ಬರುತ್ತಿದೆ. ಈ ಹೆಸರು ನಮ್ಮ ಹಳೆ ಗ್ರಂಥಗಳಲ್ಲಿ ಎಲ್ಲೂ ಕಂಡು ಬರುವುದಿಲ್ಲ. ಈಗಿನ ರೂಢಿಯಲ್ಲಿ ಸಹ ಈ ಹೆಸರು ಜೈನ ಬೌದ್ಧ ಶೀಖ ಆರ್ಯ ಧರ್ಮಾದಿಗಳಿಗೆ ಅನ್ವಯಿಸುವುದಿಲ್ಲ. ಆದರೆ ಅವರೆಲ್ಲರೂ ಹಿಂದೂ ಕೂಟಕ್ಕೆ ಸೇರತಕ್ಕವರಾಗಿರುವರು.

ಇನ್ನು ಕೆಲವರು ಹಿಂದೂಧರ್ಮಕ್ಕೆ ಭಾರತಧರ್ಮ ವೆಂದೂ ಹಿಂದೂಗಳಿಗೆ ಭಾರತರು, ಭಾರತೇಯರು, ಭಾರತೀ ಯರು ಎಂದೂ ಹೆಸರಿಡಲುದ್ಯಮಿಸಿರುವರು. ಈಚೆಗೆ ಕೆಲ ವರ್ಷಗಳಿಂದಲೂ ನಮ್ಮ ದೇಶದಲ್ಲಿ ಭಾರತಧರ್ಮಮಹಾ ಮಂಡಲ ಎಂಬ ಸಂಸ್ಥೆಯೊಂದುಂಟು. ಈ ಮಂಡಲಿಯವರು ಹಿಂದೂ ಎಂಬ ಹೆಸರಿಗೆ ಭಾರತ ಎಂಬುದನ್ನು ಪರ್ಯಾಯ ವಾಗಿ ಮಾಡಲು ಬಗೆದಿರುವರು. ಇಂಡಿಯಾ ದೇಶಕ್ಕೆ ಭರತಖಂಡ, ಭಾರತಭೂಮಿ, ಭಾರತದೇಶ, ಎಂಬ ಹೆಸರು ಬಹಳ ಹಿಂದಲಿಂದಲೂ ಇದ್ದಂತೆ ತೋರುತ್ತದೆ. ಈ ಹೆಸರು ಸಂಕಲ್ಪಮಂತ್ರದಲ್ಲಿ ಬರುತ್ತದೆ; ವಿಷ್ಣುಪುರಾಣದಲ್ಲಿ ಸ್ಪಷ್ಟ ವಾಗಿ ನಿರ್ವಚಿಸಲ್ಪಟ್ಟಿದೆ.* ಈ ದೇಶಕ್ಕೆ ಈ ಹೆಸರು ಬಂದು ದಕ್ಕೆ ಕಾರಣವು ಮಾತ್ರ ವಿವಿಧವಾಗಿ ಊಹಿಸಲ್ಪಟ್ಟಿದೆ. ಭರತ ಚಕ್ರವರ್ತಿಯ ದೆಸೆಯಿಂದ ಈ ಹೆಸರು ಬಂದಿತೆಂದು ಕೆಲಕಡೆ ಹೇಳಿದೆ. ಆದರೆ ಇದನ್ನು ಬೇರೆ ಬೇರೆ ಮೂರು ಮಂದಿ ಭರತ ರನ್ನು — ಶಕುಂತಲಾಪುತ್ರನಾದ ಭರತ, ಋಷಭ ದೇವನ ಪುತ್ರನಾದ ಭರತ, ಪ್ರಿಯವ್ರತರಾಯನ ಮಗ ಅಗ್ನೀಧ್ರನ ಪುತ್ರನಾದ ಭರತ ಇವರುಗಳನ್ನು ಕುರಿತು ಹೇಳಿದೆ. ಈ ಹೆಸ ರಿನ ಉತ್ಪತ್ತಿಗೆ ಮತ್ತೂ ಕೆಲ ಊಹೆಗಳುಂಟು. ನಮ್ಮ ಚರಿ ತ್ರೆಯನ್ನು ಆರಂಭಿಸತಕ್ಕ ಋಗ್ವೇದದಲ್ಲಿ ಭಾರತರು ಎಂಬು ವರು ಪ್ರಸಿದ್ಧರಾಗಿದ್ದಾರೆ. ಅವರ ರಾಜನಾದ ಸುದಾಸನು ಚಕ್ರವರ್ತಿಯಾಗಿದ್ದನೆಂದು ಹೇಳಿದೆ. ಮುಂದೆ ಪಾಂಡವರು ಭಾರತರೆಂದು ಪ್ರಸಿದ್ಧರಾಗಿದ್ದರು. ಇಂಡಿಯಾ ದೇಶವನ್ನೆಲ್ಲ ಯುಧಿಷ್ಠಿರನು ಆಳುತ್ತಿದ್ದನೆಂದು ನಮ್ಮವರು ಭಾವಿಸಿರುವರು. ಪಾಂಡವರ ಭರತಕುಲವೂ ಸುದಾಸನ ಭರತಕುಲವೂ ಒಂದೇ ಆಗಿದ್ದರೂ ಇರಬಹುದು. ಹೀಗೆ ನಮ್ಮ ಇತಿಹಾಸಕ್ಕೆ ಭಾರ ತರೇ ಮುಖ್ಯ ಕರ್ತರಾಗಿ ಈ ದೇಶವನ್ನೆಲ್ಲ ಸಾಮ್ರಾಜ್ಯವಾಗಿ ಕಟ್ಟಿ ಆಳಿದ್ದರಿಂದ ಈ ದೇಶಕ್ಕೆ ಭಾರತರ ದೇಶವೆಂದು ಹೆಸರು ಪ್ರಸಿದ್ಧವಾಗಿರಬಹುದು. ವಿಷ್ಣುಪುರಾಣವು ಇದನ್ನೇ ಸೂಚಿ ಸುವುದು, ಭಗವದ್ಗೀತೆಯಲ್ಲಿ ಜಿಜ್ಞಾಸುವು ಪದೇಪ ಭಾರತ ನೆಂದು ಸಂಬೋಧಿಸಲ್ಪಟ್ಟಿರುವನು. ಗೀತೆಯು, ವೇದದಂತೆ ಕೆಲ ವಿಶಿಷ್ಟ ಜನರಿಗೆ ಮಾತ್ರ ಉಪದೇಶವಾಗಿಲ್ಲ. ಆದರ ಉಪದೇಶಕ್ಕೆ ಜಾತಿ ಪಾಪ ಕುಲಗಳ ಅಡ್ಡಿಯಾವುದೂ ಇಲ್ಲದೆ ಅರ್ಜುನನ ದ್ವಾರಾ ಅದು ಸಮಸ್ತ ಭಾರತಪ್ರಜೆಗೂ ಪ್ರಸಾ ದಿಸಲ್ಪಟ್ಟಿದೆ. ಈ ದೃಷ್ಟಿಯಿಂದ ಭಾರತ ಎಂದರೆ ಗೀತೋಪ ದಿಷ್ಟ ಎಂದರ್ಥವಾಗುವುದು. ಭಾರತ ಶಬ್ದವು ಮೂಲತಃ ಹೇಗೆ ಹುಟ್ಟಿದ್ದರೂ ವಿಷ್ಣುಪುರಾಣದ ಕಾಲದಿಂದಲೂ ದೇಶ ವಾಚಿಯಾಗಿಯೇ ಇರುವುದರಿಂದ ಅದನ್ನು ಇಂಡಿಯಾ ಎಂಬು ದಕ್ಕೆ ಪರ್ಯಾಯವಾಗಿ ಇಟ್ಟುಕೊಳ್ಳುವುದು ಸೂಕ್ತವು. ಇಂಡಿಯಾ ದೇಶದಲ್ಲಿ ಹಿಂದೂಗಳೊಬ್ಬರೇ ಇರುತ್ತಿದ್ದಿಲ್ಲ. ಆದ್ದ

* ಉತ್ತರಂ ಯತ್ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಂ ವರ್ಷಂ। ತದ್ಭಾರತಂ ನಾಮ ಭಾರತೀ ಯತ್ರ ಸಂತತಿಃ॥
 ೨ನೇ ಅಂಶ ೩ನೇ ಅಧ್ಯಾಯ

ರಿಂದ ಭಾರತ ಶಬ್ದದಲ್ಲಿ ಹಿಂದೂಗಳೂ ನಮ್ಮ ದೇಶದ ಮುಸಲ್ಮಾನ ಕ್ರಿಸ್ತಾದಿಗಳೂ ಸಮಾನರಾಗಿ ನಿರ್ವಚಿಸಲ್ಪಡುವರು.

## ಅರ್ಥವ್ಯಾಪ್ತಿ

ಇದುವರೆಗಿನ ವಿಮರ್ಶೆಯಿಂದ 'ಹಿಂದೂ' ಎಂಬ ಹೆಸರು ಪರಕೀಯವಾಗಿದ್ದರೂ ಸದ್ಯದಲ್ಲಿ ಆ ಪದವನ್ನು ಬಿಟ್ಟು ಬೇರಾವ ಪದವನ್ನೂ ಇಟ್ಟುಕೊಳ್ಳಲಾಗುವುದಿಲ್ಲವೆಂದು ಸ್ಪಷ್ಟವಾಗಿದೆ. ಆದರೆ ಈ ಹಿಂದೂ ಎಂಬ ಪದದ ಅರ್ಥವ್ಯಾಪ್ತಿ ಎಷ್ಟು? ಇದು ದೇಶವಾಚಿಯೆ? ಜನಕುಲವಾಚಿಯೆ? ಜನಾಂಗವಾಚಿಯೆ? ಭಾಷಾವಾಚಿಯೆ? ಮತವಾಚಿಯೆ? ಸಂಸ್ಕೃತಿವಾಚಿಯೆ? ರಾಷ್ಟ್ರವಾಚಿಯೆ? ಹಿಂದೂ ಕೂಟದಲ್ಲಿ ಯಾರು ಯಾರು ಸೇರುವರು ? ಹಿಂದೂ ಎನ್ನಿಸಿಕೊಳ್ಳಬೇಕಾದರೆ ಇರಬೇಕಾದ ಗುಣಗಳೇನು? 'ಹಿಂದೂ'ವಿಗೆ ಲಕ್ಷಣಗಳೇನು? ಇವೇ ಮೊದಲಾದ ಅಂಶಗಳನ್ನು ಸ್ವಲ್ಪ ವಿಮರ್ಶಿಸಬೇಕು.

ನಮ್ಮ ದೇಶದಲ್ಲೂ ಹೊರಗೂ ಸಹ ಹಿಂದೂ ಎಂಬ ಪದವನ್ನು ಕೆಲವೇಳೆ ಸಂಕುಚಿತಾರ್ಥದಲ್ಲೂ ಕೆಲವೇಳೆ ವಿಸ್ತೃತಾರ್ಥದಲ್ಲೂ ಪ್ರಯೋಗಿಸುವರು. ಅರಬಿ ಮೊದಲಾದ ಮುಸಲ್ಮಾನ ದೇಶಗಳಲ್ಲಿ ಇಂಡಿಯಾ ದೇಶೀಯರೆಲ್ಲರನ್ನೂ ಇಲ್ಲಿನ ಮುಸಲ್ಮಾನರನ್ನೂ ಸಹ 'ಹಿಂದೂ' ಎಂದು ಕರೆಯುವರು. ಇವರಲ್ಲಿ ಈ ಪದವು ದೇಶವಾಚಿಯಾಗಿ ಭಾರತ ಎಂಬುದಕ್ಕೆ ಪರ್ಯಾಯವಾಗಿದೆ. ಆದರೆ ಈ ಅರ್ಥವು ಲೋಕಸಮ್ಮತವಾದುದಲ್ಲ. ನಮ್ಮ ದೇಶೀಯರಿಗೆ ಇತರರೆಲ್ಲರೂ. ಇಂಡಿಯನ್ನರು ಎಂದು ಹೆಸರಿಟ್ಟಿರುವರು. ಆದರೆ ಅಮೇರಿಕದ ಸಂಯುಕ್ತ ರಾಜ್ಯದಲ್ಲಿ ಅಲ್ಲಿನ ಪ್ರಾಚೀನ ನಿವಾಸಿಗಳಾದ ಕೆಂಚರಿಗೆ ಇಂಡಿಯನ್ನರು ಎಂದು ಹೆಸರಿರುವುದರಿಂದ ಇಲ್ಲಿಂದ ಅಲ್ಲಿಗೆ ಹೋಗುವ ಭಾರತೀಯರಿಗೆ ಅವರು ಬೇರೊಂದು ಹೆಸರು ಕೊಡಬೇಕಾಯಿತು. ಆ ದೇಶದಲ್ಲಿ ಕೆಲವೇಳೆ ಜಪಾನರು, ಚೀನರು, ಭಾರತೀಯರು ಮೊದಲಾದ ಸಕಲ ಏಷ್ಯಾ ದೇಶೀಯರನ್ನು "ಹಿಂದೂ" ಎಂಬ ಹೆಸರಿನಿಂದ ಕರೆಯುವುದುಂಟು. ಆದರೆ ಭಾರತೀಯರೆಲ್ಲರನ್ನೂ ಇಲ್ಲಿನ ಹಿಂ... ಮುಸಲ್ಮಾನ ಕ್ರಿಸ್ತಾದಿಗಳೆಲ್ಲರನ್ನೂ "ಹಿಂದೂ" ಎಂದು ಕ... ಯುವುದು ಸಾರ್ವತ್ರಿಕ ರೂಢಿಯಾಗಿದೆ. ಈ ಅರ್ಥವು ಲೋ... ಸಮ್ಮತವಾಗಿಲ್ಲ. ಅರಬರು ಹಿಂದೂ ಎಂದರೆ ಗು... ಎಂದು ಸಹ ಅರ್ಥವಿಟ್ಟುಕೊಂಡಿರುವರು.1

ನಮ್ಮ ದೇಶದಲ್ಲಿ ಕೆಲವೇಳೆ ಹಿಂದೂಗಳ ಗುಂಪಿನಲ್ಲಿ ಜೈ... ಬೌದ್ಧರನ್ನು ಸೇರಿಸುವುದಿಲ್ಲ. ಸಿಖರೂ ಬ್ರಹ್ಮಸಮಾ... ವರೂ ಆರ್ಯಸಮಾಜದವರೂ ಸಹ ತಾವು ಹಿಂದೂಗಳ... ವೆಂದು ಸಾರಿಕೊಳ್ಳುತ್ತಿರುವರು. ಆದರೂ ಸರ್ವರೂ ಇ... ರನ್ನು ಹಿಂದೂಗಳೆಂದೇ ಭಾವಿಸುತ್ತಿರುವರು. ಐತಿಹಾ... ವಾಗಿಯೂ ವ್ಯಾವಹಾರಿಕವಾಗಿಯೂ ಸಾತ್ವಿಕವಾಗಿ... ಜೈನಬೌದ್ಧರು ಹಿಂದೂಗಳ ಒಂದು ಶಾಖೆಯವರಾಗಿರು... ರಾಗಿ ಈ ವಿಚಾರವನ್ನು ಸರಿಯಾಗಿ ತಿಳಿಯದೆ ಇದ್ದ ಕಾ... ದಲ್ಲಿ ಐರೋಪ್ಯರು ಇವರನ್ನು ಹಿಂದೂಗಳಿಂದ ಬೇರೆ ಎ... ತಪ್ಪು ಅಭಿಪ್ರಾಯವನ್ನು ಹರಡಿದರು.2 ಈ ಮೂಢ ಭಾ... ನೆಯು ಈಗಲೂ ಈ ಜಾತಿಯ ಪಂಡಿತರಲ್ಲಿ ನಡೆದು ಬರು... ರುವುದು. ಇತರರೆಲ್ಲರೂ ಬೇರೆ ವಿಧವಾಗಿ ಭಾವಿಸುವ... ಅಬುಲ್‌ಫಜಲನು ತನ್ನ ಗ್ರಂಥದಲ್ಲಿ ಬೌದ್ಧರನ್ನು ಹಿಂದೂ... ಒಂದು ಶಾಖೆಯೆಂದು ನಿರೂಪಿಸಿರುವನು. ಈಚೆಗೆ ... ರಿಂದಲೂ ಕಾಶಿಯಲ್ಲಿ ಸ್ಥಾಪಿತವಾಗಿರುವ ಹಿಂದೂ ಮಹಾ... ಯವರು ಜೈನ ಬೌದ್ಧರನ್ನು ಹಿಂದೂಗಳೆಂದು ತಮ್ಮ ಕೂ... ಸೇರಿಸಿಕೊಂಡಿರುವರು. ಜೈನಬೌದ್ಧರು ಸಹ ಇದ... ಒಪ್ಪಿ ಈ ಸಭೆಯಲ್ಲಿ ಸಹಕರಿಸಿರುವರು. ಈ ಮಹಾಸಭೆ... ವರು ಗೊತ್ತು ಮಾಡಿಕೊಂಡಿರುವ ಹಿಂದೂ ಶಬ್ದಾರ್ಥ... ದರೆ 3 — "ಹಿಂದೂ ಎಂದರೆ ಆರಾರು ಹಿಂದೂ ಎಂ... ಕರೆದುಕೊಳ್ಳುತ್ತಿರುವರೋ ಅಥವಾ ಭಾರತೀಯ ಮೂ... ದಿಂದ ಹುಟ್ಟಿರುವ ಯಾವ ಮತವನ್ನಾದರೂ ಆರಾದು ... ಲಂಬಿಸಿರುವರೋ ಅಂತಹ ಪುರುಷನೆಂದು ಅರ್ಥ; ಇದ... ಸನಾತನೀಯರು, ಆರ್ಯಸಮಾಜಿಕರು, ಜೈನರು, ಸಿಖ...

---

1 Govind Das – Hinduism p. 48

2 ಐರೋಪ್ಯ ಪಂಡಿತರು ಜೈನರೆಂಬುವ ಜನರು ಇದ್ದಾರೆಂಬ ಅಂಶವನ್ನು ಮೊನ್ನೆಮೊನ್ನೆ ಕಂಡುಕೊಂಡರು. ಈ ಸಂಗತಿಯು ಲೋಕಕ್ಕೇ ಹೊಸದು... ಇವರು ವಿವಿಧವಾಗಿ ಬರೆದುಕೊಳ್ಳುತ್ತಿರುವರು.

3 "Hindu means any person professing to be a Hindu or following any religion of India origin, and includes Sanatanists, Aryasamajists, Jains, Sikhs, Buddhists, and Brahmos etc"

ಬೌದ್ಧರು, ಬ್ರಾಹ್ಮ ಸಮಾಜಿಕರು ಇತ್ಯಾದಿಗಳು ಸೇರಿರುವರು.

ಇವರುಗಳ ಜತೆಗೆ ಕೆಲವರು ಅಗ್ನ್ಯಾರಾಧಕರಾದ ಪಾರಶಿಕರನ್ನು ಸಹ ಹಿಂದೂಕೂಟವಲ್ಲಿ ಸೇರಿಸಬೇಕೆಂದು ಅಪೇಕ್ಷಿಸುವರು. ಈ ಪಾರಶಿಕರು ಆರ್ಯ ಸಂತಾನರು. ಇವರ ಪವಿತ್ರ ಭಾಷೆಯೂ ಋಗ್ವೇದ ಭಾಷೆಯೂ ಏಕೋದರ ಭಾಷೆಗಳು. ಋಗ್ವೇದದ ಮತಕ್ಕೂ ಸಂಸ್ಕೃತಿಗೂ ಇವರ ಮತಧರ್ಮ ಸಂಸ್ಕೃತಿಗಳಿಗೂ ಅತ್ಯಂತ ಸಮೀಪವಾದ ದಾಯಾದ್ಯಸಂಬಂಧವಿರುವುದು. ಅದ್ಯಾಪಿ ಇವರು ನಮ್ಮ ವೈದಿಕರಂತೆಯೇ ಅಗ್ನಿ ಪೂಜಕರು, ಸೂರ್ಯೋಪಾಸಕರು. ಭಾರತಕಾಲದಿಂದಲೂ ನಮ್ಮೊಡನೆ ಅವಿಚ್ಛಿನ್ನ ಐತಿಹಾಸಿಕ ಸಂಬಂಧವನ್ನು ಪಡೆದಿರುವರು. ಮಹಾಭಾರತದಲ್ಲಿ ಪಾರಶಿಕರ ಪುರೋಹಿತರನ್ನು ಮಘ ಬ್ರಾಹ್ಮಣರೆಂದು ಕರೆದಿದೆ; ಅಲ್ಲದೆ ಶ್ರೀಕೃಷ್ಣಪುತ್ರನಾದ ಸಾಂಬನು ತನ್ನ ತೊನ್ನುರೋಗ ಪರಿಹಾರಾರ್ಥವಾಗಿ ಸೂರ್ಯ ಪ್ರತಿಷ್ಠೆ ಮಾಡಲುದ್ದೇಶಿಸಿ ನಮ್ಮ ದೇಶದ ಬ್ರಾಹ್ಮಣರಿಗೆ ಈ ಆಗಮವು ತಿಳಿಯದಿದ್ದ ಪ್ರಯುಕ್ತ ಮಘಬ್ರಾಹ್ಮಣರ ಸಹಾಯದಿಂದ ಮೂಲಸ್ಥಾನ (ಮುಲ್ತಾನು) ದಲ್ಲಿ ಸೂರ್ಯದೇವಾಲಯವನ್ನು ಪ್ರತಿಷ್ಠೆ ಮಾಡಿಸಿದನಂತೆ.‡ ನಾವು ವೇದವನ್ನು ಅಪೌರುಷೇಯವಾದ ಅನೂಚಾನ ಶಬ್ದಪರಂಪರೆ ಎಂದು ಹೇಳುವಂತೆಯೇ ಪಾರಶಿಕರೂ ತಮ್ಮ ಪವಿತ್ರಗ್ರಂಥವನ್ನು ಕುರಿತು ನಂಬುವರು. ಅವರಲ್ಲಿ ನಮ್ಮಂತೆಯೇ ಉಪನಯನ ಸಂಸ್ಕಾರವೂ ಯಜ್ಞೋಪವೀತ ಮೌಂಜಿಬಂಧನಗಳೂ ಉಂಟು. ಇವರ ಆಚಾರಗಳೆಲ್ಲವೂ ಹಿಂದೂಗಳ ಆಚಾರಗಳೇ ಆಗಿವೆ. ಇವರಲ್ಲಿ ಆಚಾರಶೀಲರಾದವರು ನಲ್ಲಿ ನೀರು ಸಹ ಮುಟ್ಟುವುದಿಲ್ಲ. ನಮ್ಮ ದೇಶದಲ್ಲಿ ಬಂದು ನೆಲಸಿದ ಮೇಲೆ ಇದನ್ನೇ ಮಾತೃದೇಶವೆಂದು ಭಾವಿಸಿ ಗುಜರಾತಿಯನ್ನು ಮಾತೃಭಾಷೆಯಾಗಿ ಮಾಡಿಕೊಂಡಿರುವರು. ಶೀಲದಲ್ಲೂ ಗುಣಸ್ವಭಾವದಲ್ಲೂ ಹಿಂದೂಗಳನ್ನೇ ಹೋಲುವರು. ಇವರ ಪರಮಗುರು ಜರತುಷ್ಟ್ರನೂ ನಮ್ಮ ಋಷಿನೆಯ ವ್ಯಾಸನಾದ ಜರತ್ಕಾರುವೂ ಒಬ್ಬರೇ ಎಂದು ಸಹ ಕೆಲವರು ಊಹಿಸುವರು. ಬ್ರಿಟಿಷರು ಬೇಕೆಂದು ಪ್ರಯತ್ನ ಪೂರ್ವಕವಾಗಿ ಇವರನ್ನು ಬೇರ್ಪಡಿಸಿ ಹೊಸ ವ್ಯವಹಾರ ಧರ್ಮವನ್ನು ಕಲ್ಪಿಸಿ ಪಾರಶಿಕರು ಹಿಂದೂಗಳಲ್ಲವೆಂದು ಸಂಕೇತವೇರ್ಪಡಿಸದಿದ್ದರೆ ಇವರು ಈ ವೇಳೆಗೆ ಹಿಂದೂಪ್ರಾಕಾರದಲ್ಲೇ ಪರಿಗಣಿತರಾಗುತ್ತಿದ್ದರು. ಈ ಮೇಲಿನ ಕಾರಣಗಳಿಂದ ಇವರನ್ನು ಹಿಂದೂಪಂಗಡದಲ್ಲೇ ಸೇರಿಸುವುದು ಸೂಕ್ತವಾಗಿರುವುದು.

ಮತ್ತೆ ಕೆಲವರು ಹಿಂದೂ ಎಂಬ ಪದವನ್ನು ಭಾರತ ಎಂಬುದಕ್ಕೆ ಪರ್ಯಾಯವಾಗಿ ಮಾಡಲು ಬಗೆಯುವರು. ಈ ಅರ್ಥದ ಪ್ರಕಾರವಾಗಿ ಕ್ರಿಸ್ತಹಿಂದೂಗಳು, ಮುಸಲ್ಮಾನಹಿಂದೂಗಳು, ಬೌದ್ಧಹಿಂದೂಗಳು, ಸನಾತನೀಯಹಿಂದೂಗಳು, ಶೈವಹಿಂದೂಗಳು ಎಂದು ಮೊದಲಾಗಿ ಹಿಂದೂಕೂಟದಲ್ಲಿ ಸಕಲ ಭಾರತೀಯರೂ ಅಡಗುವರು.* ಆದರೆ ಈ ಅರ್ಥವು ಸೂಕ್ತವಾದುದಲ್ಲವೆಂದು ಮೇಲೆಯೇ ತಿಳಿಸಿದೆ.

---

‡ ಈ ಅಂಶಗಳು R. G. Bhandarkar Vaishnavism, Saivism, Saktism etc ಎಂಬ ಗ್ರಂಥದಲ್ಲಿ ವಿಸ್ತಾರವಾಗಿ ದೊರೆಯುತ್ತವೆ.

* *cf.* Census of India Vol. I Part I Report (1921, P. 113).

# ನಮ್ಮ ಕಲೆಗಳ ಗುಟ್ಟು

ಲೇಖಕರು:—ಶ್ರೀ ತಾಡಪತ್ರಿ ರಾಘವಾಚಾರ್ಯರು, ಬಿ. ಎ., ಬಿ. ಎಲ್, ಬಳ್ಳಾರಿ.

ಭಾರತೀಯರ ಮೇಲೆ ಎರಡು ಆರೋಪಗಳನ್ನು ಹೊರಿಸುತ್ತಾರೆ. ನಮ್ಮಲ್ಲಿ ನೈಜ ಕಲೆಯು ಇಲ್ಲವೆಂಬದು ಒಂದು. ನಮ್ಮ ಸಾಂಕೇತಿಕ ಕಲೆಯು ಬಹಳ ಒರಟಾಗಿದೆಯೆಂಬದು ಇನ್ನೊಂದು. ಈ ಆರೋಪಗಳು ಸರಿಯೇ ಎಂದು ವಿಚಾರಿಸಿದ್ದಲ್ಲಿ ನಮ್ಮ ಈಗಿನ ಕಲಾಪ್ರಪಂಚವನ್ನು ವಿಮರ್ಶಿಸಿದರೆ ಅವು ನಿಜವಾಗಿವೆ ಎಂಬದು ಒಡೆದು ಕಾಣುತ್ತದೆ. ಒಂದು ವಿಷಯವನ್ನು ಚನ್ನಾಗಿ ಗಮನಿಸತಕ್ಕದ್ದು. ಯಾವ ದೇಶವೂ ಇನ್ನೊಂದು ದೇಶದ ಪುರಾತನವೈಭವಕ್ಕಾಗಿ ಅದನ್ನು ಮನ್ನಿಸಲು ಸಿದ್ಧವಾಗಿಲ್ಲ. ಪೂರ್ವಕ್ಕಾಗಿ ವರ್ತಮಾನಕ್ಕೆ ಮಾನವು ಸಿಕ್ಕದು. ಅಂಥ ಮಾನವನ್ನು ಕೋರುವವರ ವರ್ತಮಾನವೇ ನೀಚಸ್ಥಿತಿಯಲ್ಲಿದೆಯೆಂಬದಕ್ಕೆ ಅವರ ಅಯುಕ್ತ ಕೋರಿಕೆಯೇ ಸಾಕ್ಷಿ. ಆದುದರಿಂದ ನಮ್ಮ ಈಗಿನ ಅವಮಾನಕ್ಕೆ ನಾವು ಅರ್ಹರಹುದೋ ಅಲ್ಲವೋ ಎಂದು ವಿವೇಚಿಸಿ ನಾವೇ ಸುಧಾರಣೆಗಳನ್ನು ನಡೆಸಬೇಕು.

ಇನ್ನೊಂದು ಮಾತು. ಹಿಂದೆ ವೈಭವವನ್ನು ನೋಡಿದ ನಾವು ಈಗ ಈ ಹಾಳುಸ್ಥಿತಿಯಲ್ಲಿದ್ದೇವೆಂದರೆ ಅದು ಇನ್ನೂ ಅವಮಾನಕರವೇ. ಯಾಕೆ? ನಮ್ಮ ಪಿತ್ರಾರ್ಜಿತವನ್ನು ಸಜ್ಜುಗೊಳಿಸುವದಂತಿರಲಿ—ಅದನ್ನು ಕಾಪಾಡಿಕೊಳ್ಳುವ ಯೋಗ್ಯತೆಯು ಸಹ ನಮಗಿಲ್ಲವೆಂಬದು ಸ್ಪಷ್ಟವಾಗುವದು. ಆದರೆ ಗತವೈಭವವು ವ್ಯರ್ಥವೋ? ಇಲ್ಲ. **ಅದರಿಂದ ನಮಗೆ ಕಾರ್ಯಸ್ಫೂರ್ತಿಯು ಉದಯಿಸುವಂತಿದ್ದರೆ ಅದು ಬೇಕು.** ಅವಕ್ಕೆ ಬೇರೆಯವರು ಕೊಡುತ್ತಿರುವ ಮಾನದಿಂದ ನಾವು ಉಬ್ಬಿಕೊಂಡು ಕೈಕಟ್ಟಿ ಕೂತುಕೊಳ್ಳುವಂತಾದರೆ ಅದು ನಮ್ಮ ವೈರಿಯೇ ಸರಿ. ಹಿಂದಿನವರ ಸೊತ್ತಿನ ಹೆಮ್ಮೆಯನ್ನು ದಿವಾಳಿಯಾದ ಇಂದಿನವರು ನಾವು ಆಡಿತೋರಿಸುವದು ಯುಕ್ತವಲ್ಲ. ಆದರೆ ಅವರ ಯೋಗ್ಯತೆಯನ್ನು ನಾವು ನಮ್ಮ ಕಾರ್ಯಕ್ಕೆ ಬೆಂಬಲವಾಗುವಂತೆ ತಕ್ಕೊಂಡರೆ ಅದು ಒಳ್ಳೆಯದು. **ಕಾರ್ಯರೀತಿ ಸ್ಫೂರ್ತಿಗಳಿಗಾಗಿಯೇ ಇತಿಹಾಸ,** ಕೈಗೆ ಬಣ್ಣದ ಬೀಸಣಿಗೆಯನ್ನು ಕೊಡುವದಕ್ಕಲ್ಲ.

ಈ ದೃಷ್ಟಿಯಿಂದ ನಾನು ಕೆಲವು ವಿಷಯಗಳನ್ನು ಹೇ[...] ಕೆಂದಿದ್ದೇನೆ. ಹೀಗೆ ಹೇಳುವದಕ್ಕೆ ಮುಖ್ಯ ಕಾರಣಗಳು: ೧ [...] ಗಿನ ಅಪವಾದಕ್ಕೆ ಈಗಿನವರ ದುರ್ಬಲತೆಯೇ, ಎಂದು ತೋ[...] ವದು. ೨. ವೈಭವಪರಿಪೂರ್ಣವಾದ ಭೂತಕ್ಕೆ ಈ ದೋ[...] ರೋಪವು ಸಲ್ಲುವದಿಲ್ಲ ಎಂದು ತೋರಿಸಿಕೊಡುವದು. [...] ರ್ಯಕ್ಕಾಗಿ ೨ನೆಯ ಭಾಗವನ್ನು ವಿವರಿಸುತ್ತೇನೆ. ಆಂಜ[...] ಯನು ಲಂಕೆಗೆ ಹೋದಾಗ ಅಲ್ಲಿಯ ಚಿತ್ರಗಳನ್ನು [...] ವರ್ಣಿಸಿದ್ದಾನೆ. ಅವುಗಳಲ್ಲಿರುವ ಮೇಘಚಿತ್ರವನ್ನು [...] ಬೆರಗಾಗಿ ಅದರಿಂದ ತನಗಾದ ನೈಜದ ಭಾಸವನ್ನು (reali[...] tic feeling) ಆತನು ಪ್ರಕಟಿಸುತ್ತ ಲಂಕೆಯನ್ನು [...] ಪುರಿಯೆಂದು ವರ್ಣಿಸಿದ್ದಾನೆ. ಒಂದು ಮಾತು—ರಾವ[...] ವೈರಿಯಾಗಿದ್ದರೂ ಆತನ ಕಲಾಭಿರುಚಿಯು ಆಂಜನೇಯ[...] ತಿರಸ್ಕೃತವಾಗಿರಲಿಲ್ಲವೆಂದು ಇದರಿಂದ ಕಾಣುತ್ತದೆ. [...] ಕಲಿಯತಕ್ಕ ಗುಣವಿದು; ಅಲ್ಲವೆ? ಮುಂದೆ ಉತ್ತರರಾಮ[...] ತ್ರದಲ್ಲಿ ಲವಕುಶರು ಅರಮನೆಗೆ ಹಿಂತಿರುಗಿದಾಗ ಅಲ್ಲಿ [...] ಆನೆಯ ಚಿತ್ರವಿತ್ತು, ಈ ಹುಡುಗರಲ್ಲಿ ಸಿಂಹದ ಮರಿಗಳ[...] ಇವು ಆ ಚಿತ್ರವನ್ನು ನಿಜವೆಂದೇ ಭಾವಿಸಿ ಆ ಆನೆಯ [...] ವನ್ನು ಸೀಳಲಿಕ್ಕೆಂದು ಎರಗಿದವಂತೆ! ಮೃಗಗಳಿಗೂ ಈ[...] ನೈಜಸಂವಿತ್ತಿ (perception or feeling of reali[...] ಯಾಗಬೇಕಾದರೆ ಚಿತ್ರಕಾರನ ಕುಶಲಕುಂಚದಲ್ಲಿದ್ದ [...] ಸಂಸಿದ್ಧಿ (illusive completion) ಯು ಹೇ[...] ಬೇಕು? ಹೇಗಿತ್ತು ಆತನ ಇಂದ್ರಜಾಲ? ಕುಶಲನೂ! [...] ಮಾಯಾವಿಯೇ ಆಗಿದ್ದನು!! ಇನ್ನೂ ಎಷ್ಟೋ ಆಧಾರ[...] ಕೊಡಬಹುದು. ಈಗ ವಾಸ್ತವಿಕವಾದ ನೈಜಕಲಾಸೃಷ್ಟಿ [...] ನಮ್ಮಲ್ಲಿರಲಿಲ್ಲ ಎಂದು ನ್ಯಾಯವಾಗಿ ಹೇಳಲಾಗುವದೋ!

ಈಗ ಸಾಂಕೇತಿಕ ವಿಭಾಗವನ್ನು ಗಮನಿಸೋಣ. [...] ಕರು ಈ ರಾಜ್ಯದಲ್ಲಿ ಸಹ ಸೃಷ್ಟಿಗೇನೂ ಕಡಿಮೆ ಮಾಡ[...] ವಿದೇಶೀಯರ ಆರೋಪವೇನೆಂದರೆ? ಕಲೆಯ ಈ ಭಾಗವು [...] ಕ್ಷಣವಾಗಿಯೂ ಅಸಂಗತವಾಗಿಯೂ ಇದೆ ಎಂಬದೇ. [...]

ಗಿಯೂ ನೋಡಿದರೆ ಈ ಅಂಗದ ತುದಿಮೊದಲು ಆದದ್ದು ನಮ್ಮಿ ದೇಶದಲ್ಲಿಯೇ. ಸಾಧಕನ ಅಂತರ್ದೃಷ್ಟಿಗೆ ಗೋಚರವಾದುದನ್ನು ಇತರರಿಗೆ ಬರಿಯ ಬಾಯಿಮಾತಿನಿಂದ ತೋರಿಸುವದು ಸಾಧ್ಯವೇ ಇಲ್ಲ. ಸಾಮಾನ್ಯನಿಗೆ ಅಗೋಚರವಾಗಿರುವದನ್ನು ತಿಳಿಸುವದಕ್ಕೆ ಆತನ ಗೋಚರಕ್ಕೆ ಬಿದ್ದ ವಸ್ತುಗಳನ್ನುಪಯೋಗಕ್ಕೆ ತಂದರೇನೇ ಆ ಕಾರ್ಯವು ಸಫಲವಾಗುವದು. ಅಂತರ್ದರ್ಶನವೇ ನಮ್ಮ ಧರ್ಮದ ಮೂಲ; ಮತ್ತು ಸಾಧನ; ಅವನ್ನು ಬೆಳೆಸಿ ವಿಕಾಸವನ್ನುಂಟುಮಾಡುವದೇ ಅವರ ಉಪದೇಶ. ಈ ದೃಷ್ಟಿಯನ್ನುದ್ದೇಶಿಸುವದಕ್ಕಾಗಿ ಅಲ್ಲಲ್ಲಿ ಮಹಾನುಭಾವರು ಮಾಡಿಟ್ಟ ಉಪಾಯವೇ ಸಾಂಕೇತಿಕ ಕಲಾ ಎಂದರೆ ಗೋಚರವಾದುದರ ಮುಖಾಂತರ ಅಗೋಚರದ ದರ್ಶನವನ್ನು ತೋರಿಸುವದು ಈ ವಿಭಾಗದ ಧ್ಯೇಯ. ಹೊರಗಣ ರೂಪದಿಂದ ಒಳಗಿನ ಅರ್ಥವನ್ನು ಹೊಳೆಯಿಸುವದು ಇದರ ಕರ್ತವ್ಯ. ಈ ಕಲೆಯೂ ರಾಮಾಯಣ ಕಾಲದಲ್ಲಿತ್ತೆಂಬುದಕ್ಕೆ ಆಂಜನೇಯನ ಇನ್ನೊಂದು ವಾಕ್ಯವೇ ಸಾಕ್ಷಿ. ಲಂಕೆಯೊಳಗೆ ಗಜಲಕ್ಷ್ಮಿಯ ಚಿತ್ರವು ಅತಿಸುಂದರವಾಗಿತ್ತಂತೆ. ಲಕ್ಷ್ಮಿಯು ಕಮಲದ ಮೇಲೆ ನಿಂತಿದ್ದಳು. ಎರಡು ಆನೆಗಳು ಎರಡು ಪಕ್ಕದಿಂದ ಆಕೆಗೆ ಅಭಿಷೇಕವನ್ನು ಮಾಡುತ್ತಿದ್ದವು. ರವಿವರ್ಮನ ಚಿತ್ರವಲ್ಲ! ಕಮಲದ ಮೇಲೆ ಲಕ್ಷ್ಮಿಯು ನಿಂತಿರುವದು ಆಕೆಯ ಚಾಂಚಲ್ಯದ ಸೂಚನೆ. ಆದರೆ ಆನೆಗಳು ಮಾಡುವ ಅಭಿಷೇಕವೋ? ಆನೆಗಳನ್ನು ಆರ್ಯಲಾಕ್ಷಣಿಕರು ಜ್ಞಾನಶಾಂತಿಗಳ ಸಂಕೇತವಾಗಿ ಧಾರಾಳವಾಗಿಟ್ಟುಕೊಂಡಿದ್ದಾರೆ. ದೃಷ್ಟಾಂತಕ್ಕೆ ಜ್ಞಾನಾಧಿದೇವತೆಯಾದ ಗಣಪತಿಯನ್ನು ಮನಸ್ಸಿಗೆ ತಂದುಕೊಂಡು ನೋಡಿರಿ. ಈಗ ಚಿತ್ರದ ಕಡೆಗೆ ಹೋಗೋಣ. ಚಂಚಲೆಯಾದ ಲಕ್ಷ್ಮಿಗೆ ಜ್ಞಾನದ ಅಭಿಷೇಕ! ಧನದ ಚಾಂಚಲ್ಯವನ್ನೂ ವಿಲೋಭನೆಗಳನ್ನೂ ಹೋಗಲಾಡಿಸುವದಕ್ಕೆ ಎಂತಹ ಉಪಾಯ ಜ್ಞಾನವೆಂಬುದು! ಧನಲಕ್ಷ್ಮಿಗೆ ವಿದ್ಯಾಲಕ್ಷ್ಮಿಯು ಸಹಕಾರಿಯಾಗಿದ್ದರೇನೇ ಅಲ್ಲವೆ ಸತ್ಕರ್ಮಕ್ಕೆ ವಿಜಯ? ವಸ್ತುತಿರಸ್ಕಾರಕ್ಕಿಂತಲೂ ಅದಕ್ಕೆ ಜ್ಞಾನಪುರಸ್ಕಾರವನ್ನು ಮಾಡುವದೇ ಮೇಲು. ವಸ್ತುವಿನ ಸದುಪಯೋಗವೇ ಯೋಗ.

ಈ ಕಲೆಯು ಧರ್ಮದ ತಿರುಳೂ ರೂಪವೂ ಎಂದು ಮೊದಲೇ ಹೇಳಿರುತ್ತೇನಷ್ಟೆ. ಆದರೆ ಬರಬರುತ್ತ ನಿರರ್ಥಕವಾದ ವಾಗ್ವೈರಾಗ್ಯವು ಹುಟ್ಟಿ ಬೆಳೆದು ಕಲೆಗೂ ಧರ್ಮಕ್ಕೂ ದೂರವಾಯಿತು. ಇವುಗಳ ಪ್ರೇಮದಾಂಪತ್ಯವಿಚ್ಛೇದನವಾಯಿತು. ತಮ್ಮ ವರ್ತನವು ಹೇಗೇ ಇರಲಿ— ಕಲೆಯು ಪ್ರವೃತ್ತಿಮಾರ್ಗವೆಂದೂ ಇಂದ್ರಿಯೋನ್ಮಾದಕವೆಂದೂ ಸಾರುವದು ಹೆಚ್ಚಾಯಿತು ನಮ್ಮಲ್ಲಿ. ಇದರಿಂದ ಸೌಂದರ್ಯೋಪಾಸನೆಗೆ ವಿಾಸಲಾಗಬೇಕಾದ ಚೈತನ್ಯಭಾಗಕ್ಕೆ ಕೆಲಸವಿಲ್ಲದಂತಾಗಿ ಅದು ಕಾಮೋಪಾಸನೆಯ ಹಾದಿಗೆ ಹರಿಯಿತು. ದೃಷ್ಟಿಯು ಬರಡಾಯಿತು, ಮನಃಸೃಷ್ಟಿಯು ಶೂನ್ಯವಾಯಿತು, ದೇಹವು ಶಿಥಿಲವಾಯಿತು, ಮೋಹವು ಹೆಚ್ಚಾಯಿತು. ಧರ್ಮದ ತಿರುಳೇ ಕೊಳೆತ ಮೇಲೆ ಧರ್ಮವೆಲ್ಲಿಂದ ಬರಬೇಕು? ಬರಿಯ ಬಾಯಿಮಾತು ಬೂಟಾಟಿಕೆಯು ಹೆಚ್ಚಾಯಿತು.

ಆದರೆ ಇಂತಹ ಸ್ವನಿರ್ಮಿತ ಮೂರ್ಖ ಧರ್ಮೋಪದೇಶಕರು ಹೇಳಿದಂತೆ ಕಲೆಯು ಧರ್ಮವೈರಿಯೋ ಎಂದು ನೋಡೋಣ. ಸಂಶಯಾಪನ್ನರಿಗೆ ಸ್ವಲ್ಪ ಕಣ್ಣುಮಾತ್ರ ತೆರೆದರೆ ಸಾಕು ಎಂದು ನನ್ನ ವಿಜ್ಞಾಪನೆ. ಅಧಿಕಸಂವೀಕ್ಷಣವು (Extreme research) ಬೇಡ. ನಮ್ಮ ಸಕಲ ದೇವತೆಗಳೂ ಕಲಾಸಂಗಿಗಳು. ವೀಣೆಯಿಲ್ಲದೆ ಸರಸ್ವತಿಯು ಇಲ್ಲ. ಗಾನವಿಲ್ಲದ ನಾರದನಿಲ್ಲ. ನರ್ತನವಿಲ್ಲದೆ ನಟರಾಜನಿಲ್ಲ. ಲಾಸ್ಯವಿಲ್ಲದ ಲಲಿತೆಯಿಲ್ಲ. ಕೊಳಲಿಲ್ಲದ ಕೃಷ್ಣನಿಲ್ಲ. ಹೇಗಿದೆ ಧರ್ಮಕಲೆಗಳ ನಿಕಟಸಂಬಂಧ! ಮೂರ್ಖರ ತಮಃಸಂವೀತ ಬುದ್ಧಿಗೆ ಇದು ಕಾಣುವದಿಲ್ಲವೋ?

ಈಗ ಶಕ್ತಿಯು ಬೇಕಾದರೆ ಧರ್ಮವು ಬೇಕು. ಧರ್ಮವು ಬೇಕಾದರೆ ಅದು ತನ್ನ ಹೃದಯವಾದ ಕಲೆಯನ್ನು ದೂರವಿಟ್ಟು ಬಿಟ್ಟುಬಿಟ್ಟು ಬರುವದೋ? ಆದರೆ ಇದನ್ನು ಯಾರು ಕಲಿಸಬೇಕು? ಶಾಲೆಗಳೋ? ಶಾಲೆಗಳಲ್ಲಿ ಇದರ ಲೋಪವಿದೆಯೆಂದನೇಕರೆನ್ನುವದು ನಿಜ. ಆದರೆ ಈ ಲೋಪವನ್ನು ಪೂರೈಸಲಿಕ್ಕೇನು ಕಷ್ಟ? **ಅದನ್ನು ಕರ್ನಾಟಕದಲ್ಲಿ ಈಗ ಅಲ್ಲಲ್ಲಿ ನಡೆಯುತ್ತಿರುವ ಕಲಾಪ್ರದರ್ಶನಗಳಿಂದ ಪೂರೈಸಬಹುದು.** ಗೃಹಶಿಕ್ಷಣದಿಂದ ಪೂರೈಸಲೇಬೇಕು. ಈ ಕಲಾಪ್ರದರ್ಶನಗಳ ಧ್ಯೇಯವು ಪೂರಕವಾಗಿದೆಯೋ ಇಲ್ಲವೋ ನೋಡಿ. ಮನೆಯೂ ಹಾಗೆಯೇ ಶಾಲೆಯ ಶಿಕ್ಷಣವನ್ನು ಪೂರೈಸುವಂಥಾದ್ದಾಗಿರಬೇಕು. ನಿಜವಾಗಿ ನೋಡಿದರೆ ಮನೆಯು ಮೊದಲನೆಯ ಶಾಲೆಯಾಗಿರಬೇಕು. ಅದಕ್ಕೆ

ವಿವಾಹವೆಂಬುದು ಜ್ಞಾನಪ್ರೇಮಪ್ರವಾಹದ ಸಂಕೇತವಾಗಿರಬೇಕು. ಅದರ ಫಲವಾದ ಮಕ್ಕಳು ಗಮ್ಯದ ವಾಸನೆಯನ್ನು ಮನೆಯ ವಾಯುಮಂಡಲದಲ್ಲಿಯೇ ಉಸಿರುತ್ತಿರಬೇಕು. ಮನೆಯೇ ಪ್ರದರ್ಶನಶಾಲೆಯಾಗಿರಬೇಕು, ಮಕ್ಕಳು ಸದ್ಗುಣಶೀಲಗಳ ಪ್ರದರ್ಶನಾರ್ಹ ಸ್ಫುರದ್ರೂಪಗಳಾಗಿರಬೇಕು. ಮನೆಯೂ ಶಾಲೆಗಳೂ ಇಂತಹ ಪ್ರದರ್ಶನಗಳೂ ಪೂರಕವಾ[ಗಿ] ಬಂದರೇನೇ ರಾಷ್ಟ್ರದಲ್ಲಿ ಸರ್ವಾಂಗಪರಿಪುಷ್ಟ ಜೀವನ. ಆ[ಂತ] ಜೀವನವೇ ಇಹಪರ ಸೂತ್ರಸಾಧನೆಗಳ ಸಾರಾಂಶ.

---

# ಅಭಿನವ ಪಂಪ ಮಹಾಕವಿಯು ಬರೆದ ಬಿಜಾಪುರದ ಶಿಲಾಲಿಪಿ



ಲೇಖಕ:— ಚೆನ್ನಮಲ್ಲಪ್ಪಾ ಗಲಗಲಿ, ಹಲಸಂಗಿ

## ಮುನ್ನುಡಿ

ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಇದುವರೆಗೂ ತೊಡಕಾಗಿ ಕುಳಿತಿರುವ ವಾದಗ್ರಸ್ತವಿಷಯಗಳಲ್ಲಿ **ಅಭಿನವಪಂಪ ನಾಗಚಂದ್ರನ** ವಾಸಸ್ಥಳವೂ ಒಂದು. ಪಂಡಿತರಲ್ಲಾದರೋ ಭಿನ್ನಾಭಿಪ್ರಾಯ; ಕವಿಯೋ ತನ್ನ **ಮಲ್ಲಿನಾಥಪುರಾಣದಲ್ಲಿ** ಧಾರಾಳವಾಗಿ ಹೇಳಿಬಿಡುತ್ತಾನೆ. ಇದೊಂದು ಮೋಜು. ಒಂದೊಂದು ನಿಟ್ಟಿನ ಪಂಡಿತರೂ ಕವಿಯ ಕೂಗನ್ನು ಕಿವಿಯಲ್ಲಿ ಕೂಡ ಹಾಕಿಕೊಳ್ಳದೆ ಅವನನ್ನು ತಮ್ಮ ನಾಡಿಗೆ ಕಾಲುಕಟ್ಟಿ ಎಳೆಯುತ್ತಿದ್ದಾರೆ. ಇದೇನೋ ಅವರವರ ಕರುಳಲ್ಲಿ ಗಟ್ಟಿಗೊಂಡ ಗುಣಪೂಜೆಯ ಮಹಿಮೆಯಾದರೂ, ಸತ್ಯವನ್ನು ಮುಚ್ಚಿ ಮರೆಮಾಡಲಿಕ್ಕಿರುವುದರಿಂದ ತ್ಯಾಜ್ಯ. ಕೊಡಗಿನವರು ತಮ್ಮವನೆಂದು ಹೇಳಿಕೊಳ್ಳುತ್ತಾರೆ; ಮಂಗಳೂರವರು ತಮ್ಮವನೆಂದು ಹೇಳಿಕೊಳ್ಳುತ್ತಾರೆ. ಆದರೆ ಕವಿಯು ತಾನೆ **ವಿಜಯಪುರದವನೆಂದು** ಕೂಗಿಕೊಳ್ಳುತ್ತಾನೆ. ಮಲ್ಲಿನಾಥಪುರಾಣವನ್ನು ಬಿಟ್ಟು ಪ್ರಮಾಣವೇನಾದರೂ ಉಂಟೇ ಎಂದರೆ, ಅದು ತಾನೆ ಬಿಜಾಪುರದ ಮ್ಯೂಜಿಯಮಿನಲ್ಲಿ ನೆಟ್ಟನೆ ನಿಂತುಕೊಂಡ ಶಿಲಾಲಿಪಿ. ಪಂಪನ ಹೆಸರು ಕೂಡ ಸಿಕ್ಕದ ಈ ಲಿಪಿಯನ್ನು ಅವನೇ ಬರೆದನೆಂದು ಹೇಳುವುದು ತಾನೆ ಹೇಗೆಂದು ಕೇಳಿದರೆ, ಹೀಗೆ ಹೇಳಬಹುದು:—

**ಪಂಪರಾಮಾಯಣದಲ್ಲಿ** ಈ ಶಿಲಾಲಿಪಿಯೊಳಗಿನ ಪದ್ಯಗಳೂ, ಪದ್ಯಾಂಶಗಳೂ ಸಿಕ್ಕುತ್ತವೆ:—

"ಪಿರಿದಾಯಾಸದಿನಿನ್ನೆಗಂ ತಳೆವ ಧಾತ್ರೀಭಾರಮಂ
ವಿಕ್ರಮಾ। ಭರಣಂಗೊಪ್ಪಿಸಿ ಬೀಳ್ವುದುಂ ಪಡೆದುವೇ
ತಾನುಂ ದಿಶಾದಂತಿ ದಿ॥ ಕ್ಕರಿಣೀಪೇಚಕಚುಂಬನೈಕ
ಸುಖಮಂ ಶೇಷೋರಗಂ ಭೋಗಿನೀ। ಪರಿರಂಭೋ
ತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ॥"

ಇದು ಲಿಪಿಯಲ್ಲಿ ೨ನೆಯ ಪದ್ಯ. ಇದಕ್ಕೆ ಸರಿಯಾದ ಮುಂ[ದಿನ] ಪದ್ಯವು ಪಂಪರಾಮಾಯಣದಲ್ಲಿದೆ. (ಷಷ್ಠಾಶ್ವಾಸ ೪೪)—

"ಧರೆಯಂ ದ್ವಾದಶ ಚಕ್ರವರ್ತಿಗಳಿಗಿತ್ತಲ್ ವೇದ[ನಿ]
ಭುಜಾ। ಪರಿಘಕ್ಕೊಪ್ಪಿಸಿ ಬೀಳ್ವುದಂ ಪಡೆದುವೆತ್ತಾನು[ಂ]
ದಿಶಾದಂತಿ ದಿ॥ ಕ್ಕರಿಣೀ ಪೇಚಕ ಚುಂಬನೈಕ ಸುಖ[ಮಂ]
ಶೇಷೋರಗಂ ಭೋಗಿನೀ। ಪರಿರಂಭೋತ್ಸವಮಂ
ಪುರಾಣಕಮಠಂ ನಿದ್ರಾಂಗನಾಸಂಗಮಂ॥"

ಮತ್ತು—

"ಆ ಕ್ಷೋಣೀಧರ ವಧುವುಂ।
ದಕ್ಷಿಣ ದಿಗ್ಮುಖದೊಳೆಸೆವ ಶಶಿಖಂಡದವೋಲ್॥
ಲೀಕ್ಷಣ ಸುಖಮಯಮಿರ್ಪುದು।
ದಕ್ಷಿಣ ಭರತತ್ರಿಖಂಡದಾರ್ಯಾಖಂಡಂ॥"

ಇದು ಲಿಪಿಯಲ್ಲಿ ೨೧ನೆಯ ಪದ್ಯ. ಇದಕ್ಕೆ ಸರಿಯಾ[ದ] ಮುಂದಿನ ಪದ್ಯವು ಪಂಪರಾಮಾಯಣದಲ್ಲಿದೆ. (ಪ್ರಥ[ಮಾ]ಶ್ವಾಸ ೪೫)—

" ಆಕ್ಷೋಣೀಧರ ವಲ್ಲಭ ।
ದಕ್ಷಿಣ ದಿಙ್ಮುಖದೊಳೆಸೆವ ಶಶಿಖಂಡದವೋ ॥
ಲೀಕ್ಷಣ ಸುಖಮಯಮಿರ್ಪುದು ।
ದಕ್ಷಿಣಭರತತ್ರಿಖಂಡದಾರ್ಯಾಖಂಡಂ ॥

ಅಲ್ಲದೆ—

" ಶ್ರೀಮಚ್ಚಲುಕ್ಯ ವಂಶಲ ।
ಲಾಮಂ **ಚತುರುದಧಿ ಮೇಖಳಾಳಂಕೃತ** ಧಾ ॥
ತ್ರೀಮಂಡಲಮಂ ವಿಕ್ರಮ ।
ಧಾಮಂ ನಿಜಭುಜಕೃಪಾಣದಿಂ ರಕ್ಷಿಸಿದಂ ॥ "

ಲಿಪಿಯಲ್ಲಿದು ಪ್ರಥಮ ಪದ್ಯ. ಇದರ 'ಚತುರುದಧಿ' ಇತ್ಯಾದಿ ಅಂಶವು ಪಂಪರಾಮಾಯಣದ ಮುಂದಣ ಎರಡು ಪದ್ಯಗಳಲ್ಲಿ ಕಾಣುತ್ತಿದೆ.

" **ಚತುರುದಧಿ ಮೇಖಲಾಲಂ** ।
**ಕೃತ** ವಸುಧಾದೇವಿಗಜ್ಜಗಾಪಿನವರ್ ದಿ ॥
ಕೃತಿಗಳೆನೆ ಸಾರ್ವಭೌಮೋ ।
ನ್ನತಿಯಂ ತಳೆದಂ ಸುಕೌಶಲಂ ಕ್ಷಿತಿನಾಥಂ ॥ "

( ದ್ವಿತೀಯಾಶ್ವಾಸ ೩೯ )

" **ಚತುರುದಧಿ ಮೇಖಲಾಲಂ** ।
**ಕೃತ** ವಸುಧೆಯನಾಳ್ದು ಪಡೆದು ಸುತರಿನ್ನರನಾ ॥
ಜಿತಶತ್ರು ವಿಜಯಸಾಗರ ।
ರತಕ್ಕೆ ಭುಜವೀರ್ಯರರಸುಗೆಯ್ಯುತ್ತಿರ್ದರ್ ॥ "

( ದಶಮಾಶ್ವಾಸ ೭೭ )

ಇಷ್ಟಕ್ಕೂ ಈ ಲಿಪಿ ಪಂಪಕೃತವೆಂದೊಪ್ಪಡೆ— " ಶ್ರವಣಬೆಳ್ಗೊಳದ ಎಷ್ಟೋ ಲಿಪಿಗಳಲ್ಲಿ ಪಂಪರಾಮಾಯಣದ ಪದ್ಯಗಳು ಸಿಕ್ಕುವುದರಿಂದ ಪಂಪನು ಅಲ್ಲಿಯವನಾಗಿರಲಾರನೇಕೆ? " ಎಂದು ಯಾರಾದರೂ ಕೇಳುವರಾದರೆ— ನಾನು ಹೀಗೆ ಹೇಳಬಲ್ಲೆನು:—

ಪಂಪನ ಜೀವಮಾನದಲ್ಲೆಲ್ಲಾ ನಡೆದುದೇನೇನೋ ನಾವು ತಿಳಿಯಲು—ಆರೆವು. ಅವನು ಯಾವ ಯಾವ ಕಾರಣದಿಂದ ಎಲ್ಲೆಲ್ಲಿ ಯಾವ ಯಾವ ಕಾಲಕ್ಕೆ ವಾಸಮಾಡಿಕೊಂಡಿದ್ದನೆಂಬುದನ್ನು ತಿಳಿಸುವ ಆಧಾರಗಳಿಲ್ಲ. ೧೮೩೮ ರಲ್ಲಿದ್ದ ದೇವಚಂದ್ರನು ತನ್ನ **ರಾಜಾವಳೀ** ಕಥೆಯಲ್ಲಿ '**ದೋರರಾಯನಾಸ್ಥಾನದ ಕನ್ನಡ ಸಂಸ್ಕೃತ ಮಹಾಕವಿಗಧಿಪಂ ಪಂಪಕವಿ**'ಯೆಂದು ಯಾವ ಆಧಾರದಿಂದ ಹೇಳಿದನೊ? ಈ ದೋರರಾಯನಾದರೋ ೧೧೦೦ ರಿಂದ ೧೧೦೬ರ ವರೆಗಾಳಿದ **ಬಲ್ಲಾಳನಾಗಿರಬೇಕೆಂದು ಕವಿಚರಿತ್ರಕಾರರ** ಊಹೆ. ಪ್ರಸ್ತುತ ಲಿಪಿಯಾದರೋ ೧೦೭೪ ( ೯೯೬ನೆಯ ಶಾ. ಶಕ. ) ರಲ್ಲಿ ಬರೆದುದು. ಈ ಕಾಲದಿಂದ ಬಲ್ಲಾಳನ ಆಸ್ಥಾನಕ್ಕೆ ಸೇರುವವರೆಗೆ ೨೫ ವರ್ಷಗಳನ್ನು ಎಲ್ಲಿ ಕಳೆದನೊ ( ಈ ಲಿಪಿಯು ಏತತ್ಕೃತವಲ್ಲವೆಂದರೂ ಪಂಪರಾಮಾಯಣವು ಇದಕ್ಕೆ ಮೊದಲೇ ರಚಿತವಾಗಿರಲಿಕ್ಕೆಸಾಕೆಂದು ಗೃಹಿತವಾಗಿಟ್ಟುಕೊಂಡು ೨೫ ವರ್ಷವೆಂದು ಹೇಳಿರುವೆನು. ) ದೋರರಾಯನ ಬಳಿಕ ಯಾರ ಆಸ್ಥಾನವನ್ನು ಸೇರಿದನೊ?

" **ನಿಜ ವಿಭವೋದಯಂ** ಸಫಲಮಾಯ್ತೆನೆ ಮಲ್ಲಿ
**ಜಿನೇಂದ್ರಗೇಹವಂ**
**ವಿಜಯಪುರ**ಕ್ಕಲಂಕರಣಮಾಗಿರೆ ಮಾಡಿಸಿ, ತಚ್ಚರಿ
**ತ್ರಮಂ**
(ಮಲ್ಲಿನಾಥಪುರಾಣವನ್ನು) ...... ಪೇಳಿ " ಕೃತಕೃತ್ಯನಾದುದು ಎಂದೊ? ದೋರನಲ್ಲಿದ್ದಾಗ ಇದೆಲ್ಲಾ ಆಯ್ತೆ? ಹಾಗಿದ್ದುದಾದರೆ ದ್ವಾರಸಮುದ್ರದಲ್ಲಿಯೇ ಯಾಕೆ ಕಟ್ಟಿಸಲಿಲ್ಲ? **ವಿಜಯಪುರದಲ್ಲಿಯೇ ಕಟ್ಟಿಸಲಿಕ್ಕೇನಾದರೂ ಕಾರಣವಿರಲಾರದೆ?** ದೋರನ ತರುವಾಯದಲ್ಲಿ ಇವನು ಜೈನಕ್ಷೇತ್ರದಲ್ಲೇನಾದರೂ ದಿವ್ಯಜೀವನಲಾಭಕ್ಕಾಗಿ ವಾಸವಾಗಿರಲಾರನೇ? ಶ್ರವಣಬೆಳ್ಗೊಳದಂಥ ಪುಣ್ಯಕ್ಷೇತ್ರವು ಇವನನ್ನು ತನ್ನೆಡೆಗೆ ಎಂದೂ ಸೆಳೆಯದೆ ಇರಬಹುದೇ? ವಿಜಯಪುರದ ಸಂಬಂಧವಿವನಿಗಿರದಿದ್ದರೆ ಮಲ್ಲಿನಾಥಜಿನಾಲಯವನ್ನು ಶ್ರವಣಬೆಳ್ಗೊಳದಲ್ಲಾದರೂ ಕಟ್ಟಿಸಬಹುದಾಗಿದ್ದಿತು. ಹೀಗೇಕೆ ಮಾಡಲಿಲ್ಲವೊ? ಇವನ ಪದ್ಯಗಳನ್ನುಳ್ಳ ಬೆಳ್ಗೊಳದ ಲಿಪಿಗಳೆಲ್ಲಾ ದೋರನಕಾಲದ ತರುವಾಯದಲ್ಲಿ ಬರೆಯಲ್ಪಟ್ಟಲ್ಲವೆ? ಪ್ರಸ್ತುತ ಲಿಪಿಯಲ್ಲಿ ರಾಮಾಯಣದ ಪದ್ಯಗಳೂ, ಪದ್ಯಾಂಶಗಳೂ ಸಿಕ್ಕುವಂತೆ ಮಲ್ಲಿನಾಥಪುರಾಣದ ಅಂಶಗಳು ಸಿಕ್ಕದಿರುವುದರಿಂದ ಈ ಪುರಾಣವು ಲಿಪಿಕಾಲದ ( ೧೦೭೪ ) ಅನಂತರದಲ್ಲಿ ಬರೆಯಲ್ಪಟ್ಟಿರಬೇಕೆಂಬ ಊಹೆಗೆ ಅವಕಾಶವಿಲ್ಲವೆ? ಪಂಪನು ಮಲ್ಲಿನಾಥಜಿನಾಲಯವನ್ನು ಕಟ್ಟಿದ '**ವಿಜಯಪುರ**'ವು ಈಗಿನ ಬಿಜಾಪುರವೇ ಆಗಿರಲಾರದೇ? ಇಲ್ಲವಾದರೆ, ಯಾವುದೋ ಒಂದು **ಅಜ್ಞಾತ ವಿಜಯಪುರ**ದಲ್ಲಿದ ವನ ಕಾವ್ಯವು ( ಪಂಪರಾಮಾಯಣವು ) ಇಷ್ಟು ಬೇಗನೆ—ಹುಟ್ಟುಹುಟ್ಟುವದರೊಳಗಾಗಿಯೇ— ಎಷ್ಟುದೂರದಲ್ಲಿಯೋ

ಇರುವ ಬಿಜಾಪುರದವರೆಗೂ ಪ್ರಚಾರವಾಗಿರುವುದು ಸಂಭವವೆ? ಅಷ್ಟೊಂದು ಪ್ರಚಾರದಲ್ಲಿರದೆ ಲಿಪಿಯಲ್ಲಿ ಶೈಲಿಸಾಮ್ಯವೂ, ಪದ ಸಾದೃಶ್ಯವೂ ಒಡಮೂಡುವುದು ಶಕ್ಯವೇ ? ಅಲ್ಲದೆ—

" ಶರಧಿ–ಸರೋವರಮನಳಂ ।
ಕರಿಸಿದ ಧರಣೀ ಸರೋಜ ಕರ್ಣ್ಣಿಕೆಯೆಂಬಂ ॥
ತಿರೆ ಕಪಿಳ ಕಿರಣದಂ ತಂ ।
ಬರಮಂ ಪಜ್ಜಳಿಸಿದತ್ತು ಮೇರು ನಗೇಂದ್ರಂ ॥ ೧೯ ॥

ಈ ಲಿಪಿಪದ್ಯವು **ಕವಿಕುಂಜರ – ನೇಮಿಚಂದ್ರನ** (ಕ್ರಿ. ಶ. ೧೧೭೦) ಅರ್ಧನೇಮಿ ಪುರಾಣದ ದ್ವಿತೀಯಾಶ್ವಾಸದಲ್ಲಿ ಅಚ್ಚಳಿಯದೆ ವಚನರೂಪವಾಗಿ ಬಂದಿದೆ. ಆದುದರಿಂದ ನೇಮಿಚಂದ್ರನು ಈ ಕವಿತೆಯನ್ನು ನೋಡಿರಲಿಕ್ಕೆ ಸಾಕು. ಎಲ್ಲಿ ನೋಡಿದನು ? ಲಿಪಿಯಲ್ಲೆ ? ಲಿಪಿಕಾರನ ಇನ್ನಾವುದೋ ಒಂದು ಕಾವ್ಯದಲ್ಲೆ ? ಲಿಪಿಯಲ್ಲಿ ನೋಡಿರುವ ಸಂಭವವು ಬಹಳ ಕಡಿಮೆ. ಹಾಗಾದರೆ ಈ ಲಿಪಿಕಾರನು ಬೇರೆ ಕಾವ್ಯಗಳನ್ನು ಬರೆದು ನೇಮಿಚಂದ್ರನಂಥ ಕವಿಕುಂಜರರನ್ನೂ ಕೂಡ ದಂಗುಬಡಿಸಿದ ಮಹಾಕವಿಯಾಗಿರಬೇಕಷ್ಟೆ. ಇಂಥವನು ಪಂಪನಲ್ಲದೆ ಇನ್ನಾವನೋ ಅಜ್ಞಾತ ಕವಿಯಾಗಿರಬಹುದೇ ? ಈ ಶಿಲಾಲಿಪಿಯಲ್ಲಿ ಮಹಾಕಾವ್ಯಕ್ರಮದಂತೆ ಸಮುದ್ರ, ಪರ್ವತ, ದೇಶ, ನಗರ ವರ್ಣನೆಗಳಿರುವುದರಿಂದಲೂ ಇದು ಮಹಾಕವಿಕೃತವಾಗಿರಬೇಕೆಂಬ ಊಹೆಗೆ ಸ್ಥಳವಿದೆ.

ಇಷ್ಟೆಲ್ಲ ವಿವರಣೆಯಿಂದ ಅಭಿನವಪಂಪನೇ ಈ ಶಿಲಾಲಿಪಿಯ ಗದ್ಯಗಳನ್ನು ರಚಿಸಿದವನೆಂದು ಧಾರಾಳವಾಗಿ ಒಪ್ಪಬಹುದು.

ಶ್ರೀಮಾನ್, ರಾ. ನರಸಿಂಹಾಚಾರ್ಯರವರಿಗೆ ಅವಲೋಕನೆಗಾಗಿ ಈ ಲಿಪಿಯನ್ನು (ನೇಲ್ಮಾಣಿಸಿದ ಮುನ್ನುಡಿಯೊಂದಿಗೆ) ಕಳುಹಿಸಲು ಅವರು ತಾವು ತಮ್ಮ ಕವಿಚರಿತ್ರೆಯ ಪರಿಶಿಷ್ಟಕ್ಕೆ ಸೇರಿಸಿಕೊಂಡು ಲಿಪಿಕರ್ತನ ವಿಷಯಕ್ಕೆ ಅದರಲ್ಲಿ ಬರೆದದ್ದೇನೆಂದರೆ—

" **ಈ ಶಾಸನವು ಬಿಜಾಪುರದೊಡನೆ ಸಂಬಂಧವುಳ್ಳ ನಾಗಚಂದ್ರನಿಂದ ರಚಿತವಾಗಿರಬಹುದೋ ಎಂಬ ಊಹೆಗೆ ಅವಕಾಶವಿದೆ.** " *

## ಈ ಶಿಲಾಲಿಪಿಯ ಗುರುತು

ಈ ಲಿಪಿಯು ಸಮಾರು ೬ಗೇಣು ಉದ್ದ; ೪ಗೇಣು ಅಗಲ; ೨ಗೇಣು ಪಿಂಡ, ನುಣುಪಾದ ಕಲ್ಲು. ಮುತ್ತಿನಂಥ ಬರಹ. ಇದಿರುಮುಗ್ಗಲ ಬಲಗಡೆಯ ಮೂಲೆಯೊಂದಿಷ್ಟು ಒ... ಹೋಗಿದೆ. ಬಿಜಾಪುರದಲ್ಲಿಯೇ ಒಂದೆಡೆ ಹಾಳು ನೆಲದಲ್ಲಿ ... ತೆಂದು ಹೇಳುತ್ತಾರೆ. ಈಗ ಗೋಲಗುಮ್ಮಟದ ... ನಗಾರಖಾನೆಯ ಕೆಳಚೌಕದಲ್ಲಿ ( ವಸ್ತುಸಂಗ್ರಹಾಲಯ... ಕಾದಿಡಲ್ಪಟ್ಟಿದೆ. ಮುಮ್ಮುಗ್ಗಲಿಗೆ ೩೦ ಪದ್ಯಗಳು. ಹಿ... ಲಿಗೆ ಉದ್ದಕ್ಕಾಗಿ ಕನ್ನಡ ವಚನ, ಸಂಸ್ಕೃತ ಗದ್ಯ... ಹಾಗು ಕೊನೆಗೆ ೩ ಕನ್ನಡ ಪದ್ಯಗಳು. ಬಲಮುಗ್ಗಲಿಗೆ ... ಗದ್ಯ ಶಾಸನ. ಇದು ಯಾದವರಾಜನಾದ ಸಿಂಘಣನ... ದಲ್ಲಿ (೧೩ಳನೆಯ ಇಸವಿಯಲ್ಲಿ) ಸರ್ವಾಧಿಕಾರಿ ಭಾಗ... ಗಳು ಬರಿಸಿದ್ದು. ಹಿಮ್ಮುಗ್ಗಲಲ್ಲಿಪ್ಪುದೆಲ್ಲಾ " ಇಂಡಿ... ಆಂಟಿಕ್ವರಿ"ಯ ೧೧ನೇ ಭಾಗದ ೧೨೭ನೆಯ ನಂಬರಿನಲ್ಲಿ... ಗಿದೆ. ಈ ಲಿಪಿಯಲ್ಲಿ " ಎ " ಕಾರದ ಸ್ವರಚಿಹ್ನವು ಅಕ್ಷ... ಹಿಂದೆಯೂ, ತಲೆಯ ಮೇಲೆಯೂ (ಎರಡೂ ವಿಧವಾಗಿ)... ಸಲ್ಪಟ್ಟಿದೆ. "ಮ"ಕಾರವು 'ವ'ದ ಮುಂದೆ ಕೊಂಬು ... ಸಿಯೂ, 'ರೆ'ಕಾರದ ಹಾಗೆಯೂ (ಎರಡೂ ವಿಧವಾಗಿ)... ಲ್ಪಟ್ಟಿದೆ. ಈ ಲಿಪಿಯ ಮುಖ್ಯ ವಿಷಯವೆಲ್ಲಾ ಹಿಮ್ಮುಗ್ಗ... ಇದೆ. ಮುಮ್ಮುಗ್ಗಲಲ್ಲಿರುವ ೩೦ ಪದ್ಯಗಳೆಲ್ಲಾ ಪ್ರಶಸ್ತಿ... ಆಗಿರಬಹುದಾಗಿ ಕಾಣುತ್ತದೆ. ಎಲ್ಲಕ್ಕಿಂತ ಕೆಳಗಿನ ಸಾ... ಚಕಳೆಹಾರಿ ಕೆಟ್ಟುಹೋಗಿರದಿದ್ದರೆ ಸರಿಯಾಗಿ ಗೊತ್ತಾ... ವಾಗಿತ್ತು.

## ಲಿಪಿಯ ಭಾಷೆ

ಭಾಷೆ ಬಿಗುವಿನ ಹಳೆಗನ್ನಡ. ಕೆತ್ತುವವನ ಕೈತಪ್ಪು... 'ಸ್ವತಂತ್ರ' ಪ್ರತ್ಯಯಗಳ ಸೇರುವೆಯೂ ಹೇರಳವಾ... ಕವಿಯು ಹಳಗನ್ನಡದಲ್ಲಿ ರಚಿಸಿರುವನಾದರೂ ಕೆತ್ತುವ... (ರೂವಾರಿಯು) ತಿಳಿಗನ್ನಡ ( ಹೊಸಗನ್ನಡದ ) ದೀಕ್ಷೆ... ಮಾಡದೆ ಬಿಟ್ಟಿಲ್ಲ. ವ್ಯಂಜನಾಂತ ಶಬ್ದಗಳನ್ನು ಎಷ್ಟೋ... ಸ್ವರಾಂತಗೊಳಿಸಿ ಆ ಕಾಲದ ಸರ್ವ–ಸಾಮಾನ್ಯದಲ್ಲಿ ಪ್ರ... ವಾಗಿರುವ ಭಾಷಾಸ್ವರೂಪವನ್ನು ತಿಳುಹಿಸಿಕೊಟ್ಟಿ... ರೂವಾರಿಯ ತಪ್ಪೂ ಕೂಡ ಒಪ್ಪಾಗಿದೆ. ಕವಿತೆಯೋ ಉದ್ದ... ಕವಿಯ ವಾಣಿ. ಆದುದರಿಂದ ಒಂದಿಷ್ಟು ಬಿಗಿ... ಸ–ರಸ.



* ಕವಿಚರಿತ್ರೆಯ ಪ್ರಥಮಸಂಪುಟದ ನವೀನಮುದ್ರಣದ ಪ್ರಸ್ತಾವನೆಯ ೨೧ನೆಯ ಪುಟದಲ್ಲಿ.

## ಲಿಪಿ-ವಿಷಯ

ಇದೀಗ ಸಂದೇಹಕ್ಕೆ ಒಂದು ಸ್ಥಳ. ಮುಮ್ಮಗ್ಗಲಿನ ಹಾಗು ಹಿಮ್ಮಗ್ಗಲಿನ ಬರೆಹವೆಲ್ಲಾ ಒಂದೇ ಶಾಸನವೇ? ಅಥವಾ ಎರಡೂ ಸ್ವತಂತ್ರಶಾಸನಗಳೇ ? ಮುಮ್ಮಗ್ಗಲು "ನಮಸ್ತುಂಗ ಶಿರಶ್ಚುಂಬಿ" ಇತ್ಯಾದಿ ಸ್ತೋತ್ರದಿಂದ ಆರಂಭವಾಗಿದ್ದುದು ಸಹಜ. ಆದರೆ ಹಿಮ್ಮಗ್ಗಲೂ ಸ್ವತಂತ್ರ ಶಾಸನದ ಮಾದರಿಯಾಗಿ "ನಮಸ್ತುಂಗ" ವೆಂಬ ಶಿವಸ್ತೋತ್ರದಿಂದಲೇ ಆರಂಭವಾಗಿದ್ದುದೊಂದು ಆಲೋಚನೆಯ ವಿಷಯ. ಮುಮ್ಮಗ್ಗಲಲ್ಲಾದರೋ **ಚಾಲುಕ್ಯ ವಿಕ್ರಮಾಂಕನ** ಶೌರ್ಯ ಸಾಹಸಾದಿಗಳ ವರ್ಣನೆ, ಅವನ ಮಗ **ಮಲ್ಲಿಕಾರ್ಜುನ ಯುವರಾಜನ** ಕೊಂಡಾಟ; ಬಳಿಕ **ಭಾಯಲದಂಡನಾಯಕನ** ವಂಶಾನುಕ್ರಮ ಮತ್ತು 'ಜನ್ಮಭೂಮಿ'ಯ ವರ್ಣನೆ ಮುಗಿದ ಬಳಿಕ "**ವಿ ಬಳನೆನಿಸಿದ ಲಕ್ಷ್ಮಿಯು ? ನವನೀತಂ ಮಲ್ಲಿಕಾರ್ಜುನಂ ಕೊಡೆ**" ಭಾಯಲದೇವನು ಧರ್ಮ್ಮವ್ಯವಸಾಯದಲ್ಲಿ ಪ್ರವೃತ್ತನಾಗಿ ಕೀರ್ತಿಹೊಂದಿದನೆಂದು ಹೇಳಿ ಮುಮ್ಮಗ್ಗಲನ್ನು ಮುಗಿಸಿ ಆಗಿದೆ.

ಹಿಮ್ಮಗ್ಗಲಿಗೆ ಮತ್ತೆ ಹೊಸ ಶಾಸನದಂತೆ ಆರಂಭಿಸಿ **ಚಾಲುಕ್ಯಭುವನೈಕಮಲ್ಲ** ( ವಿಕ್ರಮನ ಅಣ್ಣ ಸೋಮೇಶ್ವರ ) ನನ್ನು ಗದ್ಯದಲ್ಲಿ ಕೊಂಡಾಡಿ, **ತರ್ದವಾಡಿ** ಸಾಸಿರನಾಡನ್ನು ಪ್ರತಿಪಾಲಿಸುವ **ದಂಡನಾಯಕ-ನಾಕಿಮಯ್ಯಗಳು ಬಂಕಾಪುರದ ಶ್ರೀ ಬಲ್ಲವರಸರಿಗೆ** ಬಿನ್ನವಿಸಿ **ವಿಜಯಾಪುರದ ಸಿದ್ಧೇಶ್ವರ** ದೇವಾಲಯವನ್ನು ಕಟ್ಟಿಸಿ ಅಲ್ಲಿಯ ಆಚಾರ್ಯರಾದ **ಯೋಗೇಶ್ವರ ಪಂಡಿತರಿಗೆ ಕನ್ನವುರಿ** ಪನ್ನೆರಡರಲ್ಲಿರುವ **ಬಿಜ್ಜನ ಹಳ್ಳಿ**ಯಲ್ಲಿ ಮುನ್ನೂರು ಮತ್ತರು ಭೂಮಿಯನ್ನು ಕೊಟ್ಟರೆಂದು ಹೇಳಿದ ಬಳಿಕ ಯಾವನೋ ಒಬ್ಬ "**ತ್ರ್ಯಂಬಕ**" ನನ್ನು ಕೊಂಡಾಡುವ ಮೂರು ಪದ್ಯಗಳಿವೆ.

ಹಿಮ್ಮಗ್ಗಲಲ್ಲಿ ಮಿತಿಯಿದೆ; ೯೯೭ನೆಯ ಶಕದ (ಕ್ರಿ. ೧೦೭೫) ಆನಂದ ಸಂವತ್ಸರದ ಪೌಷ್ಯಶುದ್ಧ ಪಂಚಮಿ ಬೃಹಸ್ಪತಿವಾರವೆಂದು ಹೇಳಿದೆ. ಮುಮ್ಮಗ್ಗಲಿಗಿರುವುದು ಇದರ **ಸಮಕಾಲೀನ**ವಾಗಿಯೋ ಮುಂಚಿನದಾಗಿಯೋ ಇರಬೇಕು. ಮುಂಚಿನದಾಗಿದ್ದುದಾದರೆ ವಿಕ್ರಮಾಂಕನ ಯಾವುದೋ ಒಂದು ವಿಜಯವನ್ನು ಕುರಿತು ಅವನ ಮಗ ಮಲ್ಲಿಕಾರ್ಜುನನು ಸೇನಾಪತಿಗೆ ಬಹುಮಾನ ಮಾಡಿದ ನೆನಪಿಗಾಗಿ ನೆಟ್ಟ ಕಲ್ಲಾಗಿರಬೇಕು. ಆದರೆ ಶಿರೋಭಾಗದಲ್ಲಿ ಕೆತ್ತಿದ ಗೊಂಬೆಗಳನ್ನು ನೋಡಿದರೆ ಹಾಗೆನಿಸುವಂತಿಲ್ಲ; ಇದೊಂದು ದಾನವೃತ್ತವಾಗಿರಬೇಕೆಂದೇ ಭಾವನೆಯಾಗುತ್ತದೆ.

ಎರಡು ಮಗ್ಗುಲಿಗೂ ಒಂದೇ ಶಾಸನವಾದರೆ ಅಣ್ಣನಿಗಿಂತ ಮೊದಲು ತಮ್ಮನನ್ನೇಕೆ ಕೊಂಡಾಡಿದರೋ ? ಶೂರಧೀರನೆಂದೊ ? ಶಾಸನಕಾಲದಲ್ಲಿ ಇನ್ನೂ ವಿಕ್ರಮಾಂಕನು ಪಟ್ಟಾಧಿಕಾರಿಯಾಗಿರಲಿಲ್ಲ; ಮುಂದೆರಡು ವರ್ಷಕ್ಕೆ (೧೦೭೬ ಕ್ರಿ. ಶ.) ಮಾತ್ರ ವಿಕ್ರಮಾಂಕನೇ ಪೂರ್ಣಾಧಿಕಾರಿಯಾಗಿ ಸ್ವತಂತ್ರ ಶಕವನ್ನು ಸ್ಥಾಪಿಸಿದ್ದುದು ಇತಿಹಾಸಪ್ರಸಿದ್ಧ.

ಇನ್ನೊಂದು ಸಂದೇಹವೆಂದರೆ— ವಿಕ್ರಮಾಂಕನಿಗೆ **ಮಲ್ಲಿಕಾರ್ಜುನ**ನೆಂಬ ಮಗನಿದ್ದನೋ ಎಂಬುದು. ಶ್ರೀ ನರಸಿಂಹಾಚಾರ್ಯರೂ ಹೀಗೆಯೇ ಒಂದು ಪತ್ರದಲ್ಲಿ– "ವಿಕ್ರಮನಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದ ಬಗ್ಗೆ ಎಲ್ಲಿಯೂ ಬಂದಿಲ್ಲ. ಜಯಕರ್ಣನೆಂಬೊಬ್ಬ ಮಗನು ಮಾತ್ರ ಬಿಜಾಪುರದ ನಾಡಿಗೆ ಕೆಲ ದಿನಗಳಮಟ್ಟಿಗೆ ಮಾತ್ರ ಅಧಿಕಾರಿಯಾಗಿದ್ದು ೧೧೦೩ರಲ್ಲಿ ಮೃತನಾದಂತೆ ತಿಳಿಯುತ್ತದೆ" ಎಂದು ಬರೆದಿದ್ದಾರೆ. ವಿಕ್ರಮನಿಗೆ ಸೋಮೇಶ್ವರನೊಬ್ಬ ಜಯಕರ್ಣನೊಬ್ಬ ಹೀಗೆ ಇಬ್ಬರು ಮಕ್ಕಳೆಂದು ಎಲ್ಲರೂ ಒಪ್ಪುತ್ತಾರೆ; ಆದರೆ ಮಲ್ಲಿಕಾರ್ಜುನನ ಹೆಸರು ಮಾತ್ರ ಎಲ್ಲರಿಗೂ ಹೊಸದು. ಆದರೆ "**ಕರ್ನಾಟಕ ವರ್ಣನೆಯೂ ಇತಿಹಾಸವೂ**" ಎಂಬ ಪುಸ್ತಕದ ೩೯ನೆಯ ಪುಟದಲ್ಲಿ ಶ್ರೀ ಮುಗದಾಳ ವೆಂಕಟೇಶರಾಯರು ಮಾತ್ರ ಹೀಗೆ ಹೇಳುತ್ತಾರೆ–"**ಈತನಿಗೆ(ವಿಕ್ರಮನಿಗೆ) ಮೂವರು ಮಕ್ಕಳು.** ಇವರಲ್ಲಿ ೨ನೆಯವನಾದ ಸೋಮೇಶ್ವರನು ಇವನ (ವಿಕ್ರಮನ) ಬಳಿಕ ಕಲ್ಯಾಣದಲ್ಲಿ ಪಟ್ಟವೇರಿದನು." ಈ ಮೂವರೂ ಯಾರ್ಯಾರೆಂದು ನಾವು ಅವರಿಗೆ ಮೂರು ಪತ್ರ ಬರೆದರೂ ಉತ್ತರವನ್ನೇ ಕಾಣದೆ ಹೋದೆವು !!! ಆದರೂ ಇವರು ಹೇಳಿದ್ದು ಯಾವುದೋ ಒಂದು ಪ್ರಸಿದ್ಧವಾದ ಇಂಗ್ಲಿಷ ಗ್ರಂಥದ ಆಧಾರದಿಂದೆಂದು ಭಾವಿಸಿ ಪ್ರಮಾಣವಾಗಿ ಹಿಡಿಯಬಹುದು.

ಇವರೆಲ್ಲರನ್ನು ಬಿಟ್ಟರೂ, ಕಲ್ಯಾಣಪುರದ ವಿಖ್ಯಾತ ವಿಕ್ರಮನಿಗೆ ಮಲ್ಲಿಕಾರ್ಜುನನೆಂಬ ಮಗನಿದ್ದುದಾಗಿಯೂ, ಅವನು ಯುವರಾಜನಿದ್ದುದಾಗಿಯೂ ಮುತ್ತಗಿಯ ಒಂದು ಶಾಸನದಲ್ಲಿ

ಹೇಳಿದೆ. ಶಿವನ ಗುಡಿಯೊಳಗೆ ಮೂಡಲ ಗೋಡೆಯಲ್ಲಿ ನೆಟ್ಟಿರುವ ದೊಡ್ಡದಾದ ಶಿಲಾಲಿಪಿಯ ೩೭ನೆಯ ಒಳಿಯಲ್ಲಿ

"ಆತಂಗಂ ಆತನರಸಿ ಚಾಳುಕ್ಯ ಚಕ್ರವರ್ತಿಯಮಗಂ ಯುವರಾಜ ಮಲ್ಲಿಕಾರ್ಜುನ ದೇವನ ಮಗಳು ಶ್ರೀ ಮಹಾದೇವಿಗಂ ಬಿನ್ನಪಂಗೆಯ್ಯಲು—"

ಎಂದು ಸ್ಪಷ್ಟವಾಗಿ ಉಲ್ಲೇಖವಿದೆ.

ಈ ಮೂವರಲ್ಲಿ ಕೊನೆಯವನಾಗಿರಬಹುದಾದ ಜಯಕರ್ಣನಾದರೋ ತಂದೆಯಿರುವಾಗಲೇ ಸತ್ತು ಹೋದನು. ವಿಕ್ರಮನ ಆಳಿಕೆಯಾದರೋ ಈ ಲಿಪಿಕಾಲದ ಅನಂತರ (೧೧೨೬ರ ವರೆಗೆ) ೫೨ ವರುಷ. ಇಷ್ಟು ದೀರ್ಘಕಾಲದಲ್ಲಿ ಹಿರಿಯ ಮಗನಾದ ಯುವರಾಜ ಮಲ್ಲಿಕಾರ್ಜುನನೂ ಸತ್ತಿರಬಹುದು. ಅಂತೆಯೆ ನಡುವಿನ ಮಗನು ತಂದೆಯ ಅನಂತರದಲ್ಲಿ ಪಟ್ಟಕ್ಕೆ ಬರಬೇಕಾಯಿತು.

"ಎಪಿಗ್ರಾಫಿಯಾ ಕರ್ನಾಟಕ"ದ ೮ನೇ ಪುಸ್ತಕದ ೨ನೇ ಸಂಚಿಕೆಯ ಕನ್ನಡಪ್ರತಿಯ ೨೦೧ನೇ ಪುಟದಲ್ಲಿ ಸೊರಬ ತಾಲೂಕಿನ ೪೪೦ನೆಯ ಲಿಪಿಯಲ್ಲಿ—

೧ ............ ೦ ಬಿತ ಚಂದ್ರಚಾಮರ ಚಾ
೨ ............ ರಂಭ ಮೂಲಸ್ತಂಭಾಯ
೩ ............ ಸ್ತ ಪ್ರಶಸ್ತಿ ಸಹಿತಂ ಶ್ರೀ ಪ್ರಿಥ್ವೀ
೪ ............ ಧಿ ರಾಜಂ ಸತ್ಯಾಶ್ರಯ ಕುಳತಿ
೫ ............ ಮಲ್ಲಿಕಾರ್ಜುನ ದೇವವರುಷದ
೬ ೪೨ನೆಯ ಕೀ ............................

(ಅಪೂರ್ಣ)

ಸತ್ಯಾಶ್ರಯ ಕುಲ (ಚಾಳುಕ್ಯವಂಶ) ತಿಲಕನೆಂದೊಬ್ಬ ಮಲ್ಲಿಕಾರ್ಜುನನ ಹೆಸರೇನೋ ಹೇಳಿದೆ. ಆದರೆ ಇವನು ಯಾವ ಮಲ್ಲಿಕಾರ್ಜುನನೋ ತಿಳಿಯದು. ಮೇಲ್ಕಂಡ ಲಿಪಿಯಲ್ಲಿ ಕಾಣುವ ಕೀ (ಲಕ) ಸಂವತ್ಸರವಾದರೊ ಈಸವೀಯ ೧೦೬೮ ರಲ್ಲಿದ್ದಿತು. ಇಷ್ಟು ಹೊತ್ತಿಗೆ ೯೨ ವರುಷ ಅರಸೊತ್ತಿಗೆ ಮಾಡಿರುವುದು (ವಿಕ್ರಮನ ಮಗನ ಮಟ್ಟಿಗೆ) ಅಶಕ್ಯ. ಏನೋ ಚಾಲುಕ್ಯರಲ್ಲಿ ಮಲ್ಲಿಕಾರ್ಜುನನೆಂಬ ಹೆಸರಿನವರಾದರೆಂದು ಮಾತ್ರ ಈ ಲಿಪಿಯಿಂದ ಭಾವಿಸಬಹುದು. ಹೀಗೆಯೇ ಪ್ರಸ್ತುತ ಸಂಪನ ಲಿಪಿಯಲ್ಲೂ ಒಬ್ಬ ಮಲ್ಲಿಕಾರ್ಜುನನ ಹೆಸರು ಉಕ್ತವಾಗಿದೆ.

ಇನ್ನೊಂದು ಸಂದೇಹ—"ಮತ್ತರೆಂದರೆ"? ಹಿಂದಿನಕಾಲದ ಶಿಲಾಲಿಪಿಗಳಲ್ಲೂ ಧಾತು ಲಿಪಿಗಳಲ್ಲೂ ಬರುವ ಒಂದು ಶಬ್ದವೆಂದರೆ 'ಮತ್ತರು'. ಇದು ಭೂಮಿಯ ಅಳತೆಯನ್ನು ಹೇಳುವುದರಲ್ಲಿ ಬರುತ್ತದೆ. ನಿಘಂಟುಕಾರರಾದರೋ "ಮತ್ತರೆನಲ್ ನೆಲದ ಪವಣ್" ಎಂದು ಹಾರಿ ಹೋಗುತ್ತಾರೆ. ಈ ವಿಷಯವನ್ನು ಜಯಕರ್ನಾಟಕದ ಪ್ರಥಮ ಸಂಪುಟದ ೪೯೩ನೆಯ ಪುಟದಲ್ಲಿ ಅರಿಕೆ ಮಾಡಿದ್ದನಾದರೂ ಮುಂದೆ ಶ್ರೀ ತಾತರೂ ದ್ವಿತೀಯ ಸಂಪುಟದ ೬೫೨ನೆಯ ಪುಟದ ಅಡಿನೋಟದಲ್ಲಿ "ಮತ್ತರೆಂದರೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ"ಯೆಂದಿಷ್ಟೇ ಹೇಳಿಬಿಟ್ಟರು.

ಮುಂದೆ ಕೆಲವು ದಿನಗಳಲ್ಲಿ ನನ್ನ ಕೈಗೆ ಬಿದ್ದ (ಇತಿಹಾಸ ಮಂಡಲದವರ) ನರಗುಂದದ ಶಿಲಾಲಿಪಿಯ (ಅಚ್ಚೊತ್ತು) ದಲ್ಲಿ ಈ ಬಗೆಗೆ ಒಂದು ಪದ್ಯವು ಸಿಕ್ಕಿತು. ಅದು—

"ಪಡೆದಾ ಗೊಣ್ಣೆಯುಗೆಯ್ಯಸಂಸ್ಥಳದ ಮತ್ತರೊಳ್ ಬಿಟ್ಟಪಂ । ಬಡವರ್ಗನ್ನಮನಿಕ್ಕಲಯ್ದು ಖಾನೀಕಂಗಳಂ ಭಕ್ತಿಯಿಂ ॥ ತೊಡರ್ದಾ ಶಂಕರ ತಾರ್ಚನೆಗಮಯ್ದುಂ ಮತ್ತರಂ ಹೇಮರೊಳ್ । ನೊಳ್ ಕುಪ್ಪಟಯೇಚಿಸೆಟ್ಟಿಯದರಿಂದಾತಂಗೆ ಜಯಂ ॥ ೨೪ ।"

ಕುಪ್ಪಟಯೇಚಿಸೆಟ್ಟಿಯೆಂಬವನು ಬಡವರಿಗೆ ಅನ್ನ ನೀಡುವುದಕ್ಕೆಂದು ೫ ವಿಶಿಖಗಳನ್ನೂ, ಶಂಕರ ದೇವರ ಪೂಜೆಗೆಂದು ೫ ಮತ್ತರುಗಳನ್ನೂ ಹೀಗೆ ೧೦ ಮತ್ತರು ಭೂಮಿಯನ್ನು ಕೊಟ್ಟನಂತೆ. ಈ ಪದ್ಯದಲ್ಲಿ ಮತ್ತರಿಗೆ ಪರ್ಯಾಯ ಶಬ್ದವೊಂದುಂಟು; ಅದು ವಿಶಿಖ. ಈ ಶಬ್ದಕ್ಕೆ ಸಂಸ್ಕೃತದಲ್ಲಿ ಬಾಣವೆಂದರ್ಥ. ಒಂದು ಸಲ ಬಿಲ್ಲಿಗೆ ಬಾಣ ಹೂಡಿ ಬಿಟ್ಟರೆ ಅದು ಕ್ರಮಿಸುವಷ್ಟು ನೆಲಕ್ಕೊಂದು ಮತ್ತರೆಂದು ಭಾವಿಸಿದೆನು. ಆದರೂ ಸರಿಯಾದ ಅಳತೆ ಸಿಕ್ಕಲಿಲ್ಲ.

ಮೊನ್ನೆ ಮೊನ್ನೆ ಶ್ರೀ ಬಸವಣ್ಣನವರ ವಚನ ಸಂಗ್ರಹದಲ್ಲಿ ಒಂದು ವಚನವು ಕಣ್ಣಿಗೆ ಬಿತ್ತು. ಅದು —

"ಹತ್ತುಮತ್ತರು ಭೂಮಿ, ಬತ್ತದ ಹಯನ, ಸಂದಣಿಗೆಯು ನಡಸಿಹೆನೆಂಬವರ ಮುಖವ ನೋಡಲಾಗದು. ವರು) ಬಾಯಲ್ಲಿ ಮಟ್ಟ ಹುಡಿಯು ಹೊಯ್ಯದೆ ಕೂಡಲ ಸಂಗಮದೇವಾ"

ಅಚ್ಚಿನ ಪ್ರತಿಯಲ್ಲಿದು ಭಕ್ತಿಸ್ಥಳದ ೨೨೫ನೆಯ ವಚನ; ಆದರೆ ಪ್ರಾಚೀನ ಪ್ರತಿಗಳಲ್ಲಿ ೨೬೩ನೆಯ ವಚನ. ಇದಕ್ಕೆ ಪ್ರಾಚೀನ ಟೀಕೆಯೇನಿದೆಯೋ ಎಂದು ಕುತೂಹಲದಿಂದ ಕಷ್ಟಬಟ್ಟು ನನ್ನೊಬ್ಬ ಗೆಳೆಯನಿಂದ ಅಂಥ ಟೀಕೆಯನ್ನು ದೊರಕಿಸಿದೆನು. ಅದರಲ್ಲಿ "ಮತ್ತರೆಂದರೆ ನೂರುಮಾರು ಭೂಮಿ" ಎಂದು ಹೇಳಿದ್ದಿತು. ಮತ್ತರೆಂದರೆ ೧೦೦ ಮಾರಿನ ಚೌರಸಾಕೃತಿ ಎಂದರೆ ಇನ್ನೂರು ಯಾರ್ಡಿನ ಚೌರಸು. ಆದುದರಿಂದ $\left(\frac{\text{೨೦೦}\times\text{೨೦೦}}{\text{೪೮೪೦}}=\frac{\text{೪೦೦೦೦}}{\text{೪೮೪೦}}=\text{೮}\frac{\text{೩೨}}{\text{೧೨೧}}\right)$ ಒಂದು ಮತ್ತರೆಂದರೆ ಸುಮಾರು ಒಂಭತ್ತು ಎಕರೆ. ಈ ವಿಷಯದಲ್ಲಿ ಇತಿಹಾಸಜ್ಞರು ಗಮನಕೊಡುವರೆಂದು ನಂಬುಗೆ.

## ಲಿಪಿಯಲ್ಲಿ ಹೇಳಿದ ಸ್ಥಳಗಳು

**ತರ್ದವಾಡಿ ಸಾಸಿರ:—**

ಊರು, ಪಟ್ಟಣ ಮುಂತಾದವುಗಳ ಮುಂದೆ ಸೇರಿಸುವ ಸಾಸಿರ ಮುಂತಾದ ಅಂಕೆಯೇನು? ಉತ್ಪನ್ನಸೂಚಕವಾದ ವರಹಾದಿಗಳ ಸಂಖ್ಯೆಯೆ? ಅಥವಾ ಆಯಾ ನಾಡಿನ ಊರುಗಳ ಸಂಖ್ಯೆಯೆ? ಇಲ್ಲಿ ತರ್ದವಾಡಿಯ ಮುಂದೆ ಸೇರಿಸಿದ ಸಾಸಿರ ಸಂಖ್ಯೆಯು ಮಾತ್ರ ಊರುಗಳನ್ನೇ ಸೂಚಿಸುವುದು ನಿಸ್ಸಂದೇಹ. ಯಾಕೆಂದರೆ ಮುತ್ತಗೆಯ ಮಲ್ಲಿಕಾರ್ಜುನದೇವರ ಗುಡಿಯ ಪಡುವಲ ಮಗ್ಗುಲಲ್ಲಿ ಬಿದ್ದಿರುವದೊಂದು ದೊಡ್ಡ ಶಿಲಾಲಿಪಿಯಲ್ಲಿ—

"ಸಲೆ ಧನ ಧಾನ್ಯ ಜನಂಗಳಿ–।
ನಿಳೆಗೊಪ್ಪುವ ತರ್ದವಾಡಿ ನಾಡೊಳಗಣ ನಿ–॥
ಶ್ಚಲಿತ ಸಹಸ್ರ ಗ್ರಾಮಂ।
ಗಳೊಳೆಲ್ಲ ಸುಸ್ಥಮಾಗಿ ಮುತ್ತಗೆಯೆಸೆಗುಂ॥"

—ಶಾಸನದ ೧೬ನೆಯ ಪಂಗ್ತಿ

ಹೀಗೆ ಹೇಳಿರುವುದೇ ಸಾಕ್ಷಿ.

ತದ್ದೇವಾಡಿ ಎಂಬುದೊಂದು ಚಿಕ್ಕ ಹಳ್ಳಿಯು ಬಿಜಾಪುರ ಜಿಲ್ಲೆಯ ಬಡಗಣ ಮೇರೆಗೆ ಭೀಮಾತೀರದಲ್ಲಿದೆ. ಇಲ್ಲೀಗ ಯಾವ ಪೂರ್ವಚಿಹ್ನಗಳೂ ಇಲ್ಲ. ಇದು ಸಾವಿರ ಊರುಗಳ ಮುಖ್ಯಸ್ಥಳವಾಗಿದ್ದ ಬಗೆಗೆ ಬಹಳ ಶಿಲಾಲಿಪಿಗಳಲ್ಲಿ ಉಲ್ಲೇಖವುಂಟು. ಈ ತರ್ದವಾಡಿ ನಾಡೆಂಬುದು ತೆಂಕಲಿಗೆ ಕೃಷ್ಣೆಯವರೆಗೂ ಇದ್ದ ಹಾಗೆ ಆ ಕಡೆಯ ಲಿಪಿಗಳಿಂದ ಗೊತ್ತಾಗುವದು, ಉಳಿದ ಮೇರೆಗಳಿನ್ನೂ ಶಿಲಾಲಿಪಿಗಳ

ಈ ತರ್ದವಾಡಿಯು ಬಹು ಮನೋಹರವಾದ ಸ್ಥಳವಾಗಿದ್ದಿತೆಂದು ಕಾಣುತ್ತದೆ— "ಅಸ್ತಿ ಕಶ್ಚಿಜ್ಜನಪದಸ್ತರ್ದವಾಡೀತಿ ವಿಶ್ರುತಃ ಯದ್ಗ್ರಾಮಾ ಬಹಿರಂತರಶ್ಚ ನಾನಾರಾಮೋಪಶೋಭಿತಃ॥" ಎಂದೊಂದು (ಸಾಲೊಟಗಿಯ) ಪ್ರಾಚೀನ ಲಿಪಿಯಲ್ಲಿ ಹೇಳಿದೆ. ಅದೇ ಊರ ಇನ್ನೊಂದು ಲಿಪಿಯಲ್ಲಿ—

"ಮೇರುವಿನ ತೆಂಕ ದೆಸೆಯೊಳ್।
ಭಾರತ ಸುಕ್ಷೇತ್ರಮಲ್ಲಿ ಕುಂತಳ ವಿಷಯಂ॥
ಸಾರಂ ಕುಂತಳ ಭೂಮಿಯೊ।
ಳಾರಯ್ವೊಡೆ ತರ್ದವಾಡಿ ವಿಷಯಂ ಚೆಲುವಂ॥"

ಎಂದು ಬಣ್ಣಿಸಿ ಹೇಳಿದೆ. ಈ ತರ್ದವಾಡಿ ನಾಡಿಗೆ ಬಿಜಾಪುರವು ಎಂದಿನಿಂದ ರಾಜಧಾನಿಯಾಯಿತೋ ತಿಳಿಯದು. ಬಿಜಾಪುರದಲ್ಲಿ ಸಿಕ್ಕುವ ಎಲ್ಲಾ ಶಿಲಾಲಿಪಿಗಳಲ್ಲಿಯೂ "ಶ್ರೀಮದ್ರಾಜಧಾನಿ ವಿಜಯಾಪುರ" ವೆಂದೇ ಹೇಳಿದೆ. ಇದಿರಲಿ ಪ್ರಸ್ತುತ ಪಂಪನ ಶಿಲಾಲಿಪಿಯಿಂದ ಇನ್ನೊಂದು ಮಾತು ಹೊರಪಡುವಂತಿದೆ. ಅದು—

**ಬಿಜ್ಜನಹಳ್ಳಿ**– ಬಿಜಾಪುರದ ಹಳೇ ಹೆಸರು ಬಿಜ್ಜನಹಳ್ಳಿಯೆಂದು ಬಹಳ ಜನರ ಅಭಿಪ್ರಾಯವಿದೆ. ಪಾಶ್ಚಾತ್ಯರಲ್ಲದೆ ನಮ್ಮವರೂ ಕೂಡ ಹೇಳುತ್ತಿದ್ದಾರೆ. ಕೆಳದಿನೃಪವಿಜಯ ಕಾವ್ಯದಲ್ಲಿ ಲಿಂಗಣ್ಣಕವಿಯು ಬಿಜಾಪುರದ ದಂಡಿಗೆ "ಗೀಜಗನ ಹಳ್ಳಿಯ ಬಲ" ವೆನ್ನುದ್ದ ಕರೆದಿದ್ದಾನೆ. ಸಾಲೊಟಗಿಯ "ಶಿವಯೋಗೀಶ್ವರ ಪುರಾಣ" ದಲ್ಲಿಯೂ ಕೂಡ—

"ಇರದೆ ಪೋದರು ದೇವನಲ್ಲಿಗೆ।
ಧರೆಗಧಿಕ ಗೀಜಗನ ಹಳ್ಳಿಯ।
ಲಿರುವ ಪಾಚ್ಛನ ಕಂಡು ಕರಮುಗಿದವರು ನಿಂದಿರಲು॥"

ಪ್ರಾಚೀನ ಪ್ರತಿ ೧೬–೧೯

ಎಂದು ಹೇಳಿದೆ.

ಆದರೆ ಇದೀಗಿನ ಲಿಪಿಯಲ್ಲಿ ಬಿಜಾಪುರವೇ ಬಿಜ್ಜನಹಳ್ಳಿಯೆಂದು ಹೇಳದೆ ಅದೊಂದು ಬೇರೆ ಹಳ್ಳಿಯಾಗಿ ಹೇಳಿದೆ. "ರಾಜಧಾನಿ ವಿಜಯಾಪುರದ.........ಯೋಗೇಶ್ವರ ಪಂಡಿತದೇವರ......ಕಾಲಂ ಕರ್ಚಿ (= ತೊಳೆದು) ಕನ್ನವುರಿ ಪನ್ನೆರಡರ ಬಳಿಯಿರುವ ಬಿಜ್ಜನ ಹಳ್ಳಿಯಲ್ಲಿರುವ ಮತ್ತರ್ ೩೦೦ ಕೊಟ್ಟರು." ಇದನ್ನು ನೋಡಿದರೆ ಬಿಜಾಪುರವೇ ಬೇರೆ; ಬಿಜ್ಜನಹಳ್ಳಿಯೇ ಬೇರೆ. ಕನ್ನವುರಿಯೆಂಬುದು ಇದೀಗಿನ ಕನ್ನೂರು. ಇದು ಆಗ ೧೨

ಊರುಗಳ ಮುಖ್ಯಸ್ಥಳ. ಈಗ ಬಿಜಾಪುರ ತಾಲೂಕಿನಲ್ಲಿದೆ. ಇದರ ಬಳಿಯಿರುವ ಬಿಜ್ಜನಹಳ್ಳಿಯು ಈಗಿನ ಮಿಂಚನಾಳ ವಾಗಿರಬಹುದೋ ಏನೋ ಎಂಬ ಶಂಕೆಗೆ ಅವಕಾಶವಿದೆ. ಈ ಬಗೆಗೆ ಹೆಚ್ಚು ಶೋಧವಮಾಡಿ ಮುಂದೆ ಅನುಕೂಲಸಮಯದಲ್ಲಿ ಬರೆಯಬೇಕೆಂದು ಮನದ ಆಶೆ.

**ಅಂತರ್ವೇದಿ** :–ಗಂಗಾಯಮುನೆಗಳ ನಡುವಿನ ಪ್ರದೇಶ. ಅಂತರ್ವೇದಿಯ ರಾಜರ ನಾಣ್ಯಗಳೂ ಕೂಡ ಉಪಲಬ್ಧವಿರುವವೆಂದು ಬೆಂಗಾಳೀ "ಪ್ರಾಚೀನ ಮುದ್ರಾ" ಎಂಬ ಪುಸ್ತಕದಲ್ಲಿ ಉಲ್ಲೇಖವಿದೆ.

**ವಾರಿಭಟ್ಟಗ್ರಾಮು** :—ಇದು ಈಗಿನ ಸಂಯುಕ್ತಪ್ರಾಂತದಲ್ಲೇನಾದರೂ ಇರಬಹುದೇ? ಗಂಗಾಯಮುನೆಗಳ ನಡುವೆ ಕಾಶಿಯಿಂದ ಈಶಾನ್ಯದಲ್ಲಿ "ಬಾರಗಾಂವ" ಎಂಬುದೊಂದು ಊರು ಮಾತ್ರವಿದೆ. ಆದರೆ ಕಾಶಿಯಿಂದ ಮೇಲ್ಗಡೆಗ... "ವರ್ಭಾಟ" ಎಂಬದೇ "ವಾರಿಭಟ್ಟಗ್ರಾಮು" ವಾಗಿರಬ... ಇದು "ಕರಣಗ್ರಾಮು" ವೆಂದು ಶಾಸನದ ೩೩ನೆಯ ... ದಲ್ಲಿ ಹೇಳಿದೆ. ಆ ಕಾಲದ ಪಂಚಪ್ರಧಾನರಿಗೆ "ಪಂಚಕರ... ಗಳೆಂಬ ಹೆಸರಿದ್ದಿತು. ಶಾಸನದಲ್ಲಿ ನಿರ್ದಿಷ್ಟನಾದ "ಭಾಯ... ದೇವ"ನ ವಂಶಜರಿಗೆ ಕರಣಿಕೆಗಾಗಿ ಉಂಬಳಿಯಾಗಿ ... ಊರು ಸಿಕ್ಕಿರಬೇಕಾಗಿ ಕಾಣುವದು.

ಉತ್ತರಹಿಂದುಸ್ಥಾನಕ್ಕೂ ದಕ್ಷಿಣಹಿಂದುಸ್ಥಾನಕ್ಕೂ ಬ... ಮಟ್ಟಿಗೆ ರಾಜಕೀಯ ಸಂಬಂಧವಿದ್ದುದಾಗಿ ಕಾಣುವ... ಇಲ್ಲಿಯ ಎಷ್ಟೋ ಅಧಿಕಾರಿಗಳು ಉತ್ತರಹಿಂದುಸ್ಥಾನ... ಬಂದವರೂ ಆಗಿರುತ್ತಿದ್ದರು. "ಭಾಯುಲದೇವ"ನೂ ... ವರಲ್ಲಿ ಒಬ್ಬನು.

---

## ಕುಲ

೧.

ಕುಲ, ಕುಲ, ಕುಲವೆಂದೊರಲುವೆ ಏತಕೆ?
ಕೋಗಿಲೆಗಾವುದು ಕುಲವಿದೆ? ಹೇಳು!
ಕಿಲ! ಕಿಲ! ಕಿಲವೆಂದೂಳಲು ತಳಿರೊಳು
ಕೆಳಗಿವಿಗೇಳ್ವೆಯು ಕುಲವನು ನೆನೆದು!

೨.

ಬೇಸಗೆ ಸಮಯದಿ ಬೇಸರಗೊಂಡಿರೆ
ಗೊಲ್ಲನ ಕೊಳಲನು ಕೇಳಿಹೆಯೇನು?
ವೇಣುನಿನಾದವು ಕಿವಿದೆರೆಗೈತರೆ
ವಂಶದ ವಂಶವ ಹಿಕ್ಕುವೆಯೇನು?

೩.

ಎದೆಯಿಂದ್ವೈತಹ ನುಣ್ದನಿಯಿಂಪಿರೆ
ಕೋಗಿಲೆಗಾವುದು ಕುಲವಿರಲೇನು?
ವಾಣಿಯದೊಂದೇ ವಿಶ್ವವ ತುಂಬಿರೆ
ವೇಣುಗಳೆನಿತೆನಿದಾದರೆ ಏನು?

— ಕೆ. ವಿ. ಪುಟ್ಟಪ್ಪ.

## ನಂಜುಂಡ

ಜಗದ ಜೀವಿಗಳೆಲ್ಲ ನಿತ್ಯಜೀವನಕೆಳಸಿ
ಕಡಲ ಕಡೆದರು; ಕಡೆದು ಕಡೆದು ಬಳಲಿದರು.
ಕಡೆವಂದು ನಂಜುದಿಸಿ ಜಗವನುಂಗಲು ಬಯಸಿ
ಮಿಗುತ ಹರಡಲು ಜೀವಕೋಟಿಯಂಜಿದುದು.

ಅಂಜಿ ಮೊರೆಯಿಡುತಿರಲು ವಿಶ್ವೇಶ ನೀನಂದು
ದುರುಕದಲಿ ಸಂಕಟವ ಪರಿಹರಿಸಲೆಳಸಿ
ಕರೆಕರೆದು ಕೈನೀಡಿ ಕುಡಿಕುಡಿದು ನಂಜುಂಡು
ನಂಜುಂಡನೆಂಬೊಂದು ಹಿರಿಯ ಬಿರುದಾಂತೆ.

ನಾನೆ ನಂಜಿನ ಗೂಡು. ನನ್ನಲ್ಲಿ ನೀ ಬಂದು
ಸನ್ನಿಧಿಯ ಮಾಡು. ನನ್ನೆದೆಯ ತುಂಬಿರುವ
ನಂಜುಂಡು ಮತ್ತೊಮ್ಮೆ ನಂಜುಂಡನಾಗು:
ಅಂಜಿ ನೆರೆನಂಬಿರುವೆನೊಲಿದೆನ್ನ ಸಲಹು.

— ಎಲ್. ಗುಂಡಪ್ಪ

# ನಂದಾದೀಪ

( ಶ್ರೀ ಗೋವಿಂದ ಪೈ, ಮಂಜೇಶ್ವರ )

೨೬.

೧. ಇನ್ನು ನೀನೆನ್ನವನು,
ನಾನಿನ್ನು ನಿನ್ನವನು
ಇಂದಿನಿಂದೆ,
ಇಂದಿನಿಂದ ಮುಂದೆ.

೨. ನಿನ್ನ ನೆನವುವೆ ಚನ್ನ
ನಿನ್ನ ಕನವುದೆ ನನ್ನ
ಮನದ ಕೊಳು,
ನನ್ನ ದಿನದ ಬಾಳು.

೩. ಮಳೆಯೆ ಬೇಸಗೆಯಾಸೆ
ಯಂತೆ ನನ್ನ ಪಿಪಾಸೆ
ಯೆದೆಯ ನೀನೆ
ತಣಿಪ ಸೊದೆಯ ಸೋನೆ.

೪. ಮುಚ್ಚುಕಿಟಕಿಯ ಮುಂತೆ
ಕಾವ ತಂಬೆಲರಂತೆ,
ನನ್ನ ಕಾವೆ
ಮನದಿ ನಿನ್ನ ತೀವೆ.

೫. ತನ್ನ ದೃಷ್ಟಿಯ ಕಾಣ
ದಂಬಕದೊಲೇಂ ಜಾಣ
ನೆನ್ನ ಬಳಿಯೆ
ಸುಳಿವ ನಿನ್ನ ತಿಳಿಯೆ ?

೬. ಒಳಮಿಂಚು ಹೊರಮಿರುಗು
ವರಮುಂಬುದಂ ತಿರುಗು
ವಂತೆ ನಿನ್ನ
ನರಿಯುದಾಂತೆ ಬನ್ನ.

೭. ಜೇನ ಹಿಳಿಯುದ ಮುನ್ನ
ಜ್ಯೋತಿ ಮಯಣದೊಳೆನ್ನ ?
ಮನವ ತಿಳಿಸು,
ನಿನ್ನ ನೆನವ ಬೆಳಸು.

೮. ನಿನ್ನ ಗುರುತೆದೆಗಿಲ್ಲ
ದೆಡನಾಣ್ಯವಿದು ಸಲ್ಲ
ದೊತ್ತು ನಿನ್ನ
ಅಚ್ಚನೆತ್ತು ನನ್ನ.

೯. ಗವಿಯ ನೋಡಲು ರವಿಯೊ ?
ತರಲ ಜತ್ತಿಯ ಛವಿಯೊ ?
ನೋಡುವೆನ್ನ
ಮನಕೆ ಮೂಡು ಮುನ್ನ.

೧೦. ಹಗಲೊಡನೆ ಮಸೆನಂತೆ
ಇರುಳೆ ಹಗಲಿಸುವಂತೆ,
ನಿನ್ನ ಮಲೆವೆ
ನಾದಡೆನ್ನ ಕಲೆವೆ.

೧೧. ಮೂಗೆದೆಯ ಕೂಗ ಕನಿ
ಕರಿಸುವೀ ನಯುನದನಿ
ನಿನ್ನ ಸಿಡುಕೊ ?
ದೀನನೆನ್ನ ಮಿಡುಕೊ ?

೧೨. ತಂದೆ ಗದ್ದಿಸದೆನ್ನ
ತಾಯೆ ಮುದ್ದಿಸುತೆನ್ನ
ಕೇಡ ಮರೆಯ,
ನನಗೆ ನೀಡ ಮರೆಯ.

೧೩. ನಿನ್ನನಲ್ಲದೆ ಸಲ್ಲ
ದೇನ ನಿನ್ನೊಡನೆಲ್ಲ
ಬೇಡಲಿಲ್ಲ ?
ನಿನ್ನ ಕಾಡಲಿಲ್ಲ ?

೧೪. ಇಲ್ಲವೆನದದನೆಲ್ಲ
ನನಗೊದವಿಸಿದೆಯಲ್ಲ !
ಎರೆದೆನೆಂತು
ದೂರವರಿದೆನಂತು !

೧೫. ಇನ್ನಾವುದಂ ಬೇಡ
ಲೇಕೆ ? ನನಗೇಂ ಬೇಡ–
ಬೇಡಲಿಂತು
ನಿನ್ನ ನೋಡಲೆಂತು ?

೧೬. ಏನೆನಗೆ ಬೇಕಿಲ್ಲ,
ನೀನೆನಗೆ ಸಾಕಲ್ಲ ?
ನೀನೆ ಬೇಕು,
ನನಗೆ ನೀನೆ ಸಾಕು.

# ಭಾರತೀಯ ಪ್ರಜಾಧಿಕಾರಗಳು



[ ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳು ಕಲಕತ್ತೆಯಲ್ಲಿ ಮಾಡಿದ ಭಾಷಣಗಳ ಸಾರಾಂಶ ]

( ಅಗಸ್ತ್ಯಭ್ರಾತರು ಕನ್ನಡಿಸಿದುದು )

ಈ ಪ್ರಸಂಗದಲ್ಲಿ ಮೊದಲು ಪ್ರಜಾ ಎಂಬುದರ ಅರ್ಥವನ್ನು ವಿಶದಪಡಿಸಿಕೊಳ್ಳುವುದವಶ್ಯಕ. ಸಾಧಾರಣವಾಗಿ ಆಳಿಕೆಗೆ ಒಳಪಟ್ಟವರೆಲ್ಲರೂ ಪ್ರಜೆಗಳೇ ಆದರೆ ಪರಕೀಯರಿಗೆ ಸೋತು, ರಾಜ್ಯವನ್ನು ಕಳೆದುಕೊಂಡು ಪರರ ಆಡಳಿತಕ್ಕೊಳಗಾದವರು ಪ್ರಜೆಗಳೆನ್ನಿಸುವುದಿಲ್ಲ. ಮಾತಿಗೆ ಮಾತ್ರ ಅವರು ಪ್ರಜೆಗಳಾಗುವರು. ಕಾರ್ಯತಃ ಅವರು ದಾಸರಾಗಿಯೇ ಇರುತ್ತಾರೆ. ಪ್ರಕೃತದಲ್ಲಿ ಭಾರತೀಯರು ಬ್ರಿಟಿಶ್‌ಸಾಮ್ರಾಜ್ಯದ ಪ್ರಜೆಗಳೆಂದು ಅನೇಕೆಡೆಗಳಲ್ಲಿ ಸಾರಿದ್ದರೂ ಕೂಡ ಇಂಗ್ಲೆಂಡಿನಲ್ಲಿ ಪ್ರಜೆಗಳೆನಿಸಿಕೊಳ್ಳುವವರಿಗೂ ಭಾರತೀಯರಿಗೂ ಅಜಗಜನ್ಯಾಯವುಂಟು. ಆದುದರಿಂದ ಭಾರತೀಯರು ಪ್ರಜಾವರ್ಗದಲ್ಲಿ ಸೇರುವುದಿಲ್ಲ ; ದಾಸರ ವರ್ಗದಲ್ಲಿ ಸೇರಿರತಕ್ಕವರು. ಈ ಕಾರಣದಿಂದ ಭಾರತೀಯರ ಪ್ರಜಾಧಿಕಾರವನ್ನು ಕುರಿತು ಪರ್ಯಾಲೋಚಿಸುವಾಗ ಇರುವುದನ್ನು ಇರಬೇಕಾದುದರೊಂದಿಗೆ ಹೋಲಿಸಿ ದೋಷಗಳನ್ನೂ ಲೋಪಗಳನ್ನೂ ಚನ್ನಾಗಿ ಮನನಮಾಡಬೇಕಾಗಿರುತ್ತದೆ.

ಈ ಪ್ರಸಂಗದಲ್ಲಿ ಪ್ರಜೆಯೆಂದರೆ ತಕ್ಕಮಟ್ಟಿಗೆ ಪ್ರಜ್ಞೆಯನ್ನು ಪಡೆದವನೆಂದೇ ಅರ್ಥ. ಪ್ರಾಜ್ಞನಲ್ಲದವನು ಪ್ರಜೆಯಾಗಲಾರನು. ಒಂದುವೇಳೆ ಪ್ರಜ್ಞಾಹೀನರೇ ಪ್ರಜೆಗಳಾಗಿದ್ದಲ್ಲಿ ಪ್ರಜೆಗಳ ಧರ್ಮವು ಚ್ಯುತಿಯನ್ನುಹೊಂದಿ ಅನರ್ಥವು ಮಾಡುವುದು. ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ಪ್ರಜೆಯು ಯೋಗ್ಯವೆನಿಸಿಕೊಳ್ಳುವುದಕ್ಕೆ ಮೂರು ಗುಣಗಳು ನೆಲೆಸಿರಬೇಕು.

(ಅ) **ಸಮಾಜಪ್ರೀತಿ ಅಥವಾ ರಾಷ್ಟ್ರಪ್ರೀತಿ :—** ಸಮಾಜದ ಅಥವಾ ರಾಷ್ಟ್ರದ ಅನುಕೂಲಕ್ಕೂ ಅಭ್ಯುದಯಕ್ಕೂ ತನ್ನ ಸ್ವಂತ ಸುಖವನ್ನು ತ್ಯಜಿಸಿ ಕಷ್ಟವನ್ನು ಹೊರಲು ಸಿದ್ಧತೆಯಿರಬೇಕು.

(ಆ) **ಲೌಕಿಕಜ್ಞಾನ :**—ಪ್ರಜಾಭಿಮತವೇ ರಾಷ್ಟ್ರದ ರಥಕ್ಕೆ ಸಾರಥಿಯಾಗಿರುವಾಗ ಪ್ರಜೆಗೆ ಹಿತಾಹಿತಜ್ಞಾನ, ಉಚಿತಾನುಚಿತ ವಿಮರ್ಶೆ, ವಿವೇಚನೆಗಳು ಅತ್ಯಾವಶ್ಯಕ.

(ಇ) ಇವಲ್ಲದೆ ಪ್ರತಿಪ್ರಜೆಗೂ ರಾಷ್ಟ್ರದ ಸೌಭಾಗ್ಯ ಮತ್ತು ಉನ್ನತಿಗಳಿಗೆ ಅಡಿಗಲ್ಲುಗಳಂತಿರುವ ಸ್ಥಿತಿಗತಿಗಳಲ್ಲಿ ತಕ್ಕಮಟ್ಟಿಗೆ ಪರಿಜ್ಞಾನವೂ ಇರಬೇಕು. ಆ ಅಡಿಗಲ್ಲುಗಳು ಯಾವುವೆಂದರೆ:—

೧. ವೈಯುಕ್ತಿಕ ಕ್ಷೇಮ :—ಪ್ರತಿಪ್ರಜೆಯು ದೇಹ, ಸ್ವತ್ತು ಮತ್ತು ಹೆಸರು ಭದ್ರವಾಗಿರುವಿಕೆ. ಪ್ರಜೆಯೆನಿಸಿದವನು ಈ ಭದ್ರತೆಯು ತನಗೊಬ್ಬನಿಗೇ ಅಲ್ಲದೆ ಇತರರಿಗೂ ದೊರಕುವಂತೆ ಜಾಗೃತನಾಗಿರಬೇಕು.

೨. ವಾಕ್ಕರ್ಮಸ್ವಾತಂತ್ರ್ಯ

೩. ಆರೋಗ್ಯಸ್ಥಿತಿ

೪. ಸುಲಭವಾದ ಸುಶಿಕ್ಷಣ

೫. ಧರ್ಮಸಹಿಷ್ಣುತೆ

೬. ಹಗುರವಾದ, ಮತ್ತು ನ್ಯಾಯವಾದ ತೆರಿಗೆ

೭. ವ್ಯಾಪಾರೋದ್ಯೋಗಗಳಲ್ಲಿ ಸುಭಿಕ್ಷ

೮. ಸಾಮರ್ಥ್ಯವುಳ್ಳ ಆಡಳಿತ

೯. ಎಲ್ಲ ವರ್ಗಗಳ ಮಾನವಂತಜೀವನ

೧೦. ದೇಶಸಂರಕ್ಷಣೆ, ಮತ್ತು ಗೌರವರಕ್ಷಣೆ

ಪ್ರಜೆಯಾದವನು ಈ ದಶಾಂಶಗಳಲ್ಲಿ ಯೋಗ್ಯವಾದ ತಿಳುವಳಿಕೆಯನ್ನೂ ಪಡೆದು ಅವುಗಳ ರಕ್ಷಣೆಗೆ ಕಂಕಣಬದ್ಧನಾಗಬೇಕು. ಇದು ಪ್ರಜೆಯ ಧರ್ಮ.

## ಧರ್ಮ ಮತ್ತು ಅಧಿಕಾರ

ಕರ್ತವ್ಯವನ್ನು ಧರ್ಮವೆಂದೂ ಹಕ್ಕನ್ನು ಅಧಿಕಾರವೆಂದೂ ಸಾಮಾನ್ಯವಾಗಿ ವಿಂಗಡಿಸುವುದುಂಟು. ಆದರೆ ಎರಡೂ ಎಡಬಿಡದೆ ಪರಸ್ಪರಾವಲಂಬಿಗಳಾದ ಅಂಶಗಳೆಂಬುದನ್ನು ಮರೆಯಲಾಗದು. ಒಂದು ದೃಷ್ಟಿಯಿಂದ ಧರ್ಮವಾಗತಕ್ಕದ್ದು ಮತ್ತೊಂದು ದೃಷ್ಟಿಯಿಂದ ಅಧಿಕಾರವಾಗುವುದು. ಪ್ರಜೆಯೊಬ್ಬನ ಅಧಿಕಾರಕ್ಕೂ ಇತರರ ಧರ್ಮ ಬೇಕೇಬೇಕು. ತನ್ನಧಿಕಾರವನ್ನು ತಾನು ಉಪಯೋಗಿಸುವಾಗ ಇತರರು ಅದನ್ನು ಸಹಿಸಬೇಕು ತಾನೇ ? ಅವರು ಸಹಿಸುವುದು ಅವರ ಧರ್ಮ.

ಇತರರು ಅಂತಹ ಅಧಿಕಾರವನ್ನು ಉಪಯೋಗಿಸುವಾಗ ತಾನು ಅದಕ್ಕೆ ಅವಕಾಶವನ್ನು ಕೊಡುವುದು ತನ್ನ ಧರ್ಮ. ಕರ್ತವ್ಯವಿಲ್ಲದೆ ಅಧಿಕಾರವೆಂದೆಂದಿಗೂ ಹುಟ್ಟುವದಿಲ್ಲ. ಹಿಂದೂ ನೀತಿಶಾಸ್ತ್ರಗಳಲ್ಲಿ ಧರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟಿರುವುದು ಇದರಿಂದಲೇ. ಒಂದೇ ಅಂಶವು ಒಂದುದೃಷ್ಟಿಯಿಂದ ಧರ್ಮವಾಗಿಯೂ ಮತ್ತೊಂದು ದೃಷ್ಟಿಯಿಂದ ಅಧಿಕಾರವಾಗಿಯೂ ಕಾಣುವುದು. ಒತ್ತಾಯದ ಪ್ರಾಥಮಿಕಶಿಕ್ಷಣವು ಸಿದ್ಧವಾದಾಗ ಶಿಕ್ಷಣಪ್ರಾಪ್ತಿಯ ಅಧಿಕಾರವು ಪ್ರತಿಯೊಬ್ಬರಿಗೂ ಉಂಟು; ಆದರೆ ಆಗ ಶಿಕ್ಷಣವನ್ನು ಪಡೆಯದಿದ್ದರೆ ಕರ್ತವ್ಯಲೋಪವಾಗಿ ಧರ್ಮಚ್ಯುತಿಯಾಗುವುದು. ಇತರ ಅಂಶಗಳೂ ಹೀಗೆಯೇ. ಉದಾಹರಣೆಗೆ ಆಸ್ಟ್ರೇಲಿಯದಲ್ಲಿ ನೆಲೆಸಿರುವ ಭಾರತೀಯರ ಛಂದಾಧಿಕಾರವನ್ನು (Right of Voting) ನೋಡಿ. ಅಲ್ಲಿ ಪ್ರಯಾಣಕಷ್ಟದಿಂದ ಭಾರತೀಯರು ತಮ್ಮ ಛಂದಾಧಿಕಾರವನ್ನುಪಯೋಗಿಸಲಿಲ್ಲ. ಆಗ ಅಲ್ಲಿಯ ಸರಕಾರವು "ನೀವು ನಿಮ್ಮ ಛಂದಗಳನ್ನು ಕೊಡದಿದ್ದರೆ ಕರ್ತವ್ಯಭ್ರಷ್ಟರೆನಿಸಿ ಅಪರಾಧಕ್ಕೆ ಗುರಿಯಾಗುವಿರಿ" ಎಂದು ಹೇಳಿತು. ಸುವ್ಯವಸ್ಥಿತ ರಾಷ್ಟ್ರದಲ್ಲಿ ಹಕ್ಕೆಂಬುದು ಕರ್ತವ್ಯವಾಗಿ ಪರಿಣಮಿಸುವುದು; ಕರ್ತವ್ಯವು ಹಕ್ಕೆನಿಸುವುದು. ಕರ್ಮಾಧಿಕಾರವೆಂಬುದನ್ನೂ, ನಿರುದ್ಯೋಗಕಾಲದಲ್ಲಿ ಕೆಲವು ರಾಷ್ಟ್ರಗಳಲ್ಲಿ ಸರಕಾರವು ಕೊಡುವ ನಿರುದ್ಯೋಗವೇತನಗಳನ್ನೂ ಇದಕ್ಕೆ ದೃಷ್ಟಾಂತವಾಗಿಟ್ಟುಕೊಳ್ಳಬಹುದು. ಈ ವಿವರವನ್ನು ಆದ್ಯಂತವಾಗಿ ಪರೀಕ್ಷಿಸಿಯೇ ನಮ್ಮ ಪೂರ್ವಜರು ಧರ್ಮವೆನ್ನುವುದಕ್ಕೆ ಅಷ್ಟು ಪ್ರಾಶಸ್ತ್ಯವನ್ನು ಕೊಟ್ಟದ್ದು.

## ಅಧಿಕಾರ-ಲಕ್ಷಣ

ಅಧಿಕಾರವು ಧರ್ಮವಾಗಿ ಪರಿಣಮಿಸಬಹುದಾದರೂ ಅದರ ಲಕ್ಷ್ಯವೇನು ? ಧರ್ಮದ ಗುರಿಯೂ ಅಧಿಕಾರದ ಗುರಿಯೂ ಒಂದೇ. ಏನೆಂದರೆ ಪ್ರಜೆಯ ಸರ್ವಸಿದ್ಧಿ. ಜನತೆಯ ಸಿದ್ಧಿಗಾಗಿ ಅಧಿಕಾರನಿರ್ದೇಶವಾಗುವುದು. ಇದು ಪ್ರಜಾಧಿಕಾರದ ಮೊದಲನೆಯ ಲಕ್ಷಣ. ಯಾವ ಅಧಿಕಾರವಾಗಲಿ ಸರ್ವಪ್ರಜೆಗೂ ಸಾಮಾನ್ಯವಾಗಿರತಕ್ಕದ್ದು ಎರಡನೆಯ ಲಕ್ಷಣ. ಕೆಲವರಿಗೆ ಮಾತ್ರ ಅಧಿಕಾರವಿದ್ದು ಇತರರಿಗೆ ಇಲ್ಲವಾಗಿದ್ದರೆ ಅನರ್ಥಕ್ಕೆ ಕಾರಣವಾಗುವುದು. ಆದರೆ ಕೆಲವು ಅಧಿಕಾರಗಳಿಗೆ ಎಲ್ಲರಿಗೂ ಯೋಗ್ಯತೆಯಿಲ್ಲದಿರುವಾಗ ಸದ್ಯದಲ್ಲಿ ಕೆಲವರಿಗೆ ಮಾತ್ರ ಇದ್ದರೂ ಕಾಲಕ್ರಮೇಣ ಸರ್ವರಿಗೂ ಲಭಿಸುವಂತಿರಬೇಕು. ಮೂರನೆಯ ಲಕ್ಷಣವು ಮುಖ್ಯವಾದುದು. ಅಧಿಕಾರವನ್ನು ಪ್ರಜೆಯಾದವನು ಅನುಭವಿಸಲು ತಕ್ಕ ಕಾನೂನಿನ ಬಲವಿರಬೇಕು. ದೊರೆಯದ ಸಂದರ್ಭದಲ್ಲಿ ದೊರಕಿಸಿಕೊಳ್ಳಲು ಕಾನೂನಿನ ಸಹಾಯವು ಸಿದ್ಧವಾಗಿರಬೇಕು. ಮೊದಲು ಪ್ರಜಾಧಿಕಾರವು ಸಮಾಜವ್ಯಕ್ತಿಗಳ ಪ್ರಗತಿಗೆ ಅನುಕೂಲವಾಗಿರಬೇಕು. ಎರಡನೆಯದು ಎಲ್ಲರಿಗೂ ಸೇರಿದ್ದು ಅಥವಾ ಮುಂದೆ ಸೇರತಕ್ಕದ್ದಾಗಿರಬೇಕು. ಮೂರನೆಯದು ಕಾನೂನುಬಲದಿಂದ ಸ್ವಾಧೀನಪಡಿಸಿಕೊಳ್ಳುವಂತಿರಬೇಕು.

## ಅಧಿಕಾರಗಳು ಯಾವುವು ?

ಪಾಶ್ಚಾತ್ಯ ರಾಷ್ಟ್ರಗಳಲ್ಲೆಲ್ಲ ಜರ್ಮನಿಯ ಹೊಸ ಸರ್ಕಾರದಲ್ಲಿ ಪ್ರಜಾಧಿಕಾರಗಳು ಸನ್ನದುರೂಪದಿಂದ ವಿಶದೀಕರಿಸಿವೆ. ಸರಿಸುಮಾರಾಗಿ ಅದನ್ನೇ ಆದರ್ಶವೆಂದರೂ ಎನ್ನಬಹುದು. ಎಂತಹ ಅಧಿಕಾರಗಳು ಪ್ರಜೆಗೆ ಸಲ್ಲಬಹುದೆಂಬುದನ್ನು ಅದರಿಂದ ಕಾಣಬಹುದು. ಮೊದಲು ಪ್ರಜೆಗೆ ಶಾರೀರಕ ಸ್ವಾತಂತ್ರ್ಯವುಂಟು ; ಅವನ ದೇಹವನ್ನು ಬಂಧಿಸುವುದಕ್ಕೆ ಇನ್ನೊಬ್ಬರಿಂದಲಾಗಲೀ ಸರ್ಕಾರದಿಂದಲಾಗಲೀ ಆಗಲಾರದು. ಇಷ್ಟಬಂದ ಕಡೆಗೆ ಹೋಗುವ ಹಾಗೂ ಇಷ್ಟಬಂದ ಕಡೆ ನೆಲೆಸುವ ಅಧಿಕಾರವು ತರುವಾಯ ; ಇವುಗಳಲ್ಲಿ ಸರಕಾರವು ತನ್ನ ರಕ್ಷಣೆಯನ್ನು ಕೊಡತಕ್ಕದ್ದು. ಮನೆಯು ಪವಿತ್ರವಾಗಿರುವಿಕೆ, ಆಸ್ತಿಯನ್ನು ಪಡೆದಿರುವಿಕೆ, ಇಷ್ಟ ಬಂದ ಮತವನ್ನು ಅವಲಂಬಿಸುವಿಕೆ, ಬರೆದ ಕಾಗದ ಪತ್ರಗಳ ಪವಿತ್ರತೆ, ಅಭಿಮತವನ್ನು ಪ್ರಕಾಶಪಡಿಸುವಿಕೆ, ನೌಕರಿಗೆ ಅರ್ಹತೆ, ಕಾನೂನುದೃಷ್ಟಿಯಲ್ಲಿ ಸರ್ವಸಮತೆ, ಸಭೆ ಸೇರುವ ಸೇರಿಸುವ ಅಧಿಕಾರ, ಸಂಘಗಳನ್ನೇರ್ಪಡಿಸಿ ನಡೆಸುವ ಅಧಿಕಾರ, ಕಂಟ್ರಾಕ್ಟಿನ ಅಧಿಕಾರ, ವ್ಯಾಪಾರೋದ್ಯೋಗಗಳಲ್ಲಿ ಸ್ವಾತಂತ್ರ್ಯ, ಮದುವೆಯ ಸ್ವಾತಂತ್ರ್ಯ, ಛಂದಾಧಿಕಾರ, ೧೮ನೇ ವಯಸ್ಸಿನ ವರೆಗೂ ಶಿಕ್ಷಣ, ಮತ್ತು ಕರ್ಮ, ಇಷ್ಟು ಆ ಸನ್ನದಿನಲ್ಲಿ ಸೇರಿವೆ. ಪ್ರತಿಪ್ರಜೆಯೂ ತನ್ನ ಯೋಗ್ಯತೆಗೆ ತಕ್ಕಂತೆ, ಮತ್ತು ಜನಾಂಗಕ್ಕೆ ಅವನಿಂದ ನೆರವೇರಬಹುದಾದ ಉತ್ತಮತನುವಾದ ಸೇವೆಯು ಲಭಿಸುವ ರೀತಿಯಲ್ಲಿ ಕರ್ಮವನ್ನು ಕೈಕೊಳ್ಳಬೇಕು. ಈ ಕರ್ಮಾಧಿಕಾರಕ್ಕೆ ಸಂಬಂಧಪಟ್ಟ ಜೀವವಿಮೆ, ನಿರುದ್ಯೋಗಕಾಲವೇತನ, ಮುಪ್ಪಿನ ವೇತನಗಳ ಅಧಿಕಾರದೊಂದಿಗೆ ಉದ್ಯೋಗದಲ್ಲಿ ಅಧಿಕಾರವೂ ಉಂಟು. ಕೆಲವರು ಮಾತ್ರ ಧನವಂತರಾಗಿದ್ದುಕೊಂಡು ತಮ್ಮ ಧನಬಲದಿಂದ ಕಾರ್ಮಿಕರ ಕಂಟಕರಾಗಬಹುದೆಂಬ ಭೀತಿಯಿಂದ ಜರ್ಮನಿ

ಯಲ್ಲಿ ಉದ್ಯೋಗಗಳು ಕೂಡ ಸುವ್ಯವಸ್ಥಿತವಾಗಿರಬೇಕೆಂಬ ಅಭಿಲಾಷೆಯು ಉತ್ಕಟವಾಗಿರುವುದು. ಇಷ್ಟೂ ಆದಮೇಲೆ ಪ್ರಜೆಗೆ ಸ್ವಂತವೆನ್ನಿಸುವ ಮತ್ತು ತನ್ನ ಸಂಸಾರಕ್ಕೆ ಯೋಗ್ಯವಾದ ಮನೆಯಿರುವ ಅಧಿಕಾರವೂ ಇರಬೇಕೆಂಬ ಆಶೆಯೂ ಪ್ರಯತ್ನವೂ ಉಂಟು. ವಿಶೇಷವಾದ ಭೂಸ್ಥಿತಿಯನ್ನು ಅನುಭವಿಸುವುದಾಗಲಿ ವಿಶಾಲವಾದ ಮನೆಯನ್ನು ಕಟ್ಟಿಕೊಂಡು ಒಬ್ಬನೇ ಇರುವುದಾಗಲಿ ಲೋಕಸ್ಥಿತಿಗೆ ಹಾನಿಕರವೆಂಬುದು ಅವರ ಮತ

ಇಷ್ಟೂ ಜರ್ಮನಿಯಲ್ಲಿ ಪವಿತ್ರವೆನಿಸಿ ಸನ್ನದು ರೂಪವನ್ನು ಪಡೆದಿರುವ ಪ್ರಜಾಧಿಕಾರಗಳು. ಸರಕಾರದವರಾಗಲಿ ಯಾವ ಗುಂಪಿನವರಾಗಲಿ ಆ ಸನ್ನದನ್ನು ಉಲ್ಲಂಘಿಸಲು ಅವಕಾಶವಿಲ್ಲ. ಕೆಲವು ಅಧಿಕಾರಗಳು ಭಾರತೀಯರಾದ ನಮಗೆ ವಿಚಿತ್ರವಾಗಿ ಕಾಣಬಹುದು; ಜರ್ಮನಿಯ ಚರಿತ್ರೆಯನ್ನು ಸ್ವಲ್ಪ ಮಟ್ಟಿಗೆ ತಿಳಿದು ಜರ್ಮನರು ಪಟ್ಟಿರುವ ಸಂಕಟಗಳನ್ನು ಮನದೆದುರಿಗೆ ಚಿತ್ರಿಸಿಗೊಂಡರೆ ಅವೆಲ್ಲವೂ ಸಹಜವೆಂದೇ ತೋರುತ್ತವೆ.

## ಪ್ರಜಾಧರ್ಮ

ಅಧಿಕಾರಭಾಗವನ್ನು ಇಷ್ಟು ವಿವರಿಸಿ ಸ್ಥಾಪಿಸಿದ ಜರ್ಮನಿಯವರು ಧರ್ಮಭಾಗವನ್ನೂ ವಿವರಿಸಿಯೇ ಇದ್ದಾರೆ. ಪ್ರತಿ ಅಧಿಕಾರದೊಡನೆಯೂ ಇರತಕ್ಕ ಕರ್ತವ್ಯವುಂಟೇ ಉಂಟು. ಪ್ರತ್ಯೇಕವಾಗಿ ಉಚ್ಚರಿಸತಕ್ಕವು ಇವು.

೧ ತೆರಿಗೆಗಳನ್ನು ಕೊಡುವುದು.

೨ ಗೌರವ ಕಾರ್ಯವನ್ನು ಕೊಟ್ಟಾಗ ಅದನ್ನು ಸ್ವೀಕರಿಸುವುದು. ಮುನಿಸಿಪಾಲಟಿಯೇ ಆದಿಯಾಗಿ ಸಕಲ ಗೌರವ ಸ್ಥಾನಗಳಿಗೂ ಒಬ್ಬನು ಚುನಾಯಿಸಲ್ಪಟ್ಟರೆ 'ನನಗೆ ಬೇಕಿಲ್ಲ, ಇಷ್ಟವಿಲ್ಲ' ಎಂದು ಹೇಳಿ ತಪ್ಪಿಸಿಕೊಳ್ಳುವ ಹಾಗಿಲ್ಲ. ಇಂತಹ ಸಾರ್ವಜನಿಕ ಕೆಲಸಗಳಿಗೆ ಆಹ್ವಾನ ಬಂದಾಗ ಪ್ರತಿಪ್ರಜೆಗೂ ಆಹ್ವಾನವನ್ನು ಮನ್ನಿಸುವುದು ಕರ್ತವ್ಯವೆನಿಸುತ್ತದೆ.

೩ ದೇಶರಕ್ಷಣೆಗಾಗಿ ಸೈನ್ಯದಲ್ಲಿ ಸೇರಿ ರಣಶಿಕ್ಷಣವನ್ನು ಪಡೆಯುವುದು ಒಂದು ಮುಖ್ಯಕರ್ತವ್ಯ. ಪ್ರತಿ ಪ್ರಜೆಯೂ ಸೈನ್ಯದಲ್ಲಿ ಸ್ವಲ್ಪಕಾಲವಾದರೂ ಸೇರಿದ್ದು ತಕ್ಕಷ್ಟು ಅನುಭವವನ್ನು ಪಡದೇ ತೀರಬೇಕು.

ಇವಲ್ಲದೆ ಛಂದವನ್ನು ಕೊಡುವುದು, ಕರ್ಮಮಾಡುವುದು, ೧೮ನೆ ವಯಸ್ಸಿನವರೆಗೂ ಶಿಕ್ಷಣವನ್ನು ಪಡೆಯುವುದು ಮುಂತಾದುವು ಅಧಿಕಾರಗಳ ವಿವರದಿಂದಲೇ ಸೂಚಿತವಾಗುತ್ತವೆ.

ಪ್ರಜೆಯ ಧರ್ಮಾಧಿಕಾರಗಳು ಜರ್ಮನಿಯಲ್ಲಿ ಸನ್ನ[illegible] ರೂಪವನ್ನು ಪಡೆದಿರುವಂತೆಯೇ ಫ್ರಾನ್ಸ, ಅಮೇರಿಕ, [illegible]ಡು ಮುಂತಾದ ಆಧುನಿಕ ರಾಷ್ಟ್ರಗಳಲ್ಲಿಯೂ ಪಡೆದಿರು[illegible] ಇಂಗ್ಲೆಂಡಿನಲ್ಲಿ ಇವು ಒಂದು ಸನ್ನದಿನ ರೂಪದಲ್ಲಿಲ್ಲ; [illegible] ಸನ್ನದುಗಳಲ್ಲಿರುವುವು. ಹೀಗೆ ಬರೆದು ಪ್ರತಿಷ್ಠಿಸುವು[illegible] ಅನೇಕ ಗುಣಗಳುಂಟು. ಸರಕಾರದವರಿಗೆ ಇದರಿಂದ [illegible] ಮೇರೆಯು ಎಲ್ಲೆಂದು ಸ್ಪಷ್ಟವಾಗುತ್ತದೆ. ತನ್ನ ಅಧಿಕಾ[illegible] ಸ್ವಾಧೀನಪಡಿಸಿಕೊಳ್ಳಲು ಪ್ರಜೆಗೆ ಇದು ಕಾನೂನಿಗಿಂತ [illegible] ಬಲವನ್ನು ಒದಗಿಸಿಕೊಡುತ್ತದೆ.

ಜರ್ಮನಿಯ ರಾಷ್ಟ್ರ ಪ್ರತಿಷ್ಠೆಯಲ್ಲಿ ವಿವರವಾಗಿರುವ [illegible]ಕಾರಗಳಲ್ಲಿ ಅನೇಕವನ್ನು ಎಲ್ಲ ರಾಷ್ಟ್ರಗಳಿಗೂ ಎಲ್ಲ [illegible]ಗಳಿಗೂ ಅನ್ವಯಿಸುವ ಮೂಲ ಅಧಿಕಾರಗಳೆಂದು [illegible] ಬಹುದು. ಈಗ ಭಾರತೀಯರಾದ ನಾವು ಎಂತಹ [illegible]ಕಾರವನ್ನು ಪಡೆದಿರುತ್ತೇವೆಯೋ ನೋಡತಕ್ಕದ್ದು. ಪ್ರ[illegible]ವಾದ ಅಂಶಗಳನ್ನು ನೋಡಿದರೆ ಸಾಕು.

## ಭಾರತೀಯರ ಸ್ಥಾನ

ಪೃಥ್ವಿಯಲ್ಲಿ ಭಾರತೀಯರು ಭರತಖಂಡದ ನಿವಾಸಿ[illegible] ಭರತಖಂಡದ ಪ್ರಜೆಗಳು ಮತ್ತು ಬ್ರಿಟಿಷ್ ಸಾಮ್ರಾ[illegible] ಪ್ರಜೆಗಳು ಎಂಬುದಾಗಿ ಹೇಳುವುದು ವಾಡಿಕೆ. ಅ[illegible] ಅರ್ಥವನ್ನೂ ಆಧಾರವನ್ನೂ ಸರಿಯಾಗಿ ತಿಳಿದುಕೊಳ್ಳ[illegible]ವಶ್ಯಕ. ಪ್ರಜೆಯ ಗೌರವಕ್ಕೆ ಆಧಾರಭೂತವಾದ [illegible] ಅಧಿಕಾರಗಳನ್ನು ಪರೀಕ್ಷಿಸಿ ಭಾರತೀಯರಿಗೆ ಎಷ್ಟು ಅಧಿ[illegible]ವಿದೆಯೋ ಕಾಣುವ.

ಮೊದಲನೆಯದು ಪ್ರಜೆಯ ಶಾರೀರಿಕ ಸ್ವಾತಂತ್ರ್ಯ ಅಂದರೆ ಪ್ರಜೆಯ ದೇಹವನ್ನು ಬಂಧಿಸುವುದಕ್ಕೂ ಹಿಂಸಿಸು[illegible]ದಕ್ಕೂ ಯಾರಿಗೂ ಅಧಿಕಾರವಿರುವುದಿಲ್ಲವೆಂದರ್ಥ. ಈ [illegible]ಕಾರಕ್ಕೆ ನ್ಯಾಯವಾದ ಮಿತಿಗಳೂ ಎಲ್ಲೆಲ್ಲಿಯೂ ಉ[illegible] ಕಳ್ಳರನ್ನೂ ಹುಚ್ಚರನ್ನೂ ಈ ಅಧಿಕಾರಕ್ಕೆ ಸೇರಿಸಲು [illegible]ವಾದೀತೆ ? ಆದ್ದರಿಂದ ಅಪರಾಧಿಗಳಿಗೆ ಈ ಹಕ್ಕು ಇಲ್ಲವೆ[illegible]ದನ್ನು ಭಾರತೀಯರೂ ಎಲ್ಲರಂತೆಯೇ ಒಪ್ಪಬೇಕು. ಇಂ[illegible] ಸಹಜವಾದ ಅಡ್ಡಿಗಳ ವಿಷಯದಲ್ಲಿ ಅಸಮಾಧಾನ ಪಡು[illegible] ತಪ್ಪು; ಆದರೆ ಇತರ ರಾಷ್ಟ್ರಗಳಲ್ಲಿಲ್ಲದ, ನೀಚವೆನಿಸಿದ [illegible] ಬಂಧಕಗಳು ಭರತಖಂಡದ ಬ್ರಿಟಿಷ್ ರಾಷ್ಟ್ರದಲ್ಲುಂಟು. [illegible]ಖಂಡದ ಸರಕಾರದವರಿಗೆ ತಮಗೆ ತೋಚಿದಂತೆ ಯಾವ ಪ್ರ[illegible]ಯನ್ನಾಗಲಿ ಬಂಧನದಲ್ಲಿಡುವ ಅಧಿಕಾರವುಂಟು.

ತೀರ್ಮಾನ ಶಾಖೆಯವರು ಇಂತಹ ಸಂದರ್ಭಗಳಲ್ಲಿ ಸರಕಾರದ ವರನ್ನು ಪ್ರತಿಭಟಿಸುವಂತಿಲ್ಲ. ಗವ್ಹರ್ನಮೆಂಟ ಆಫ್ ಇಂಡಿಯಾ ಆಕ್ಟ ಸೆಕ್ಸೆನ್ಸ ೧೧೧ ಮತ್ತು ೧೨೬ ಪ್ರಕಾರ ಕಾರ್ಯ ನಿರ್ವಾಹಕ ಶಾಖೆಯರಿಗೆ ನಿರಂಕುಶಾಧಿಕಾರವೇ ಉಂಟು. ೭೨ನೇ ಸೆಕ್ಸೆನ್ನಿನ ಪ್ರಕಾರ ಗವರ್ನರ್ ಜನರಲ್‌ರವರಿಗೆ ಆರು ತಿಂಗಳು ಕಾಲ ಜಾರಿಯಲ್ಲಿರುವ ನಿಬಂಧನೆಯನ್ನೇ ಸ್ವಂತವಾಗಿ ರಚಿಸುವ ಅಧಿಕಾರವುಂಟು. ಈ ಅಧಿಕಾರದಿಂದಲೇ ಬ್ರಿಟಿಷ್ ಸರ್ಕಾರದವರು ದಬ್ಬಾಳಿಕೆಯೆನಿಸುವ ನೀತಿಯನ್ನವಲಂಬಿಸಿ ತಮ್ಮ ದೃಷ್ಟಿಯಲ್ಲಿ ರಾಜದ್ರೋಹವೆಂದು ಕಂಡುಬಂದಂತೆಲ್ಲ ಪ್ರಜೆಯ ಶಾರೀರಕಸ್ವಾತಂತ್ರ್ಯವನ್ನು ಲಕ್ಷ್ಯಕ್ಕೆ ತಾರದೆ ಪ್ರವರ್ತಿಸುವರು. ಕಾರಣವನ್ನು ತೋರದೆ ದಸ್ತಗಿರಿ ಮಾಡಿದಾಗ, ಮತ್ತು ನ್ಯಾಯಸ್ಥಾನದಲ್ಲಿ ವಿಚಾರಣೆಗವಕಾಶ ಕೊಡದೆ ಎಷ್ಟು ಕಾಲವಾದರೂ ನಿರ್ಬಂಧದಲ್ಲಿಟ್ಟಾಗ ಭರತಖಂಡದಲ್ಲಿ ಸಾಮಾನ್ಯವಾಗಿ ದೇಶಭಕ್ತಿಯೆನ್ನುವುದೇ ರಾಜದ್ರೋಹಕ್ಕೆ ಸಮಾನವಾಗುತ್ತದೆ. ನ್ಯಾಯಸ್ಥಾನದಲ್ಲಿ ವಿಚಾರಣೆಯು ನಡೆದರೂ ಕಾನೂನು ಪ್ರಕಾರವೇ ಸರಕಾರದವರು ನಡೆದಿರುತ್ತಾರೆಂದು ಆಗುವುದೆ' ವಿನಾ ನ್ಯಾಯವಾದ ತೀರ್ಪು ಹೊರಡುವುದು ಅಪರೂಪ.

ಈ ಪರಿಸ್ಥಿತಿಯಲ್ಲಿ ಮೂಲಾಧಿಕಾರಗಳಲ್ಲೊಂದಾದ ಶಾರೀರಕ ಸ್ವಾತಂತ್ರ್ಯವು ಭಾರತೀಯ ಪ್ರಜೆಗಿದೆಯೆಂದು ಹೇಳಲಾಗುವುದಿಲ್ಲ.

## ಸಂಚಾರಸ್ವಾತಂತ್ರ್ಯ

ಪ್ರಜೆಯಾದವನು ಸ್ವದೇಶದಲ್ಲಿ ಎಲ್ಲಿಗೆ ಬೇಕಾದರೂ, ಯಾವಾಗ ಬೇಕಾದರೂ ಹೋಗಬಹುದು, ಇಷ್ಟ ಬಂದ ಕಡೆ ನೆಲೆಸಬಹುದು ಎಂಬುದು ಇದರ ಅರ್ಥ. ಇದಕ್ಕೆ ಸಹಜವಾಗಿ ಮಿತಿಯು ಒಂದೇ. ಕ್ರಿ. ಪ್ರೊ. ಕೋಡು ೫೬೫ನೇ ಸೆಕ್ಷನ್ ಅನ್ವಯಿಸುವಾಗ ಈ ಸ್ವಾತಂತ್ರ್ಯವನ್ನು ಕೊಡುವುದು ತಪ್ಪು. ಕಳ್ಳಕಾಕರ ಗುಂಪಿಗೆ ಈ ಅಧಿಕಾರವನ್ನು ಕೊಡಲಾಗುವುದಿಲ್ಲ. ಈ ಮಿತಿಯೊಂದೇ ನ್ಯಾಯ ಸಮ್ಮತವಾದುದು.

ಭರತಖಂಡದಲ್ಲಿ ಬೇರೆ ವಿಧವಾದ ಅಡ್ಡಿಗಳೂ ಉಂಟು. ಸೆಕ್ಷನ್ ೧೨೪ (ಎ) ಎಂಬ ನಿಬಂಧನೆಗೊಳಪಟ್ಟವರು ಬರ್ಮಾ ದೇಶದಲ್ಲಿ ಕಾಲಿಡಲಾರದೆಂದು ಒಂದು ಕಾನೂನು ಹೊಸದಾಗಿ ಜಾರಿಗೆ ಬಂತು. ಎಲ್ಲರಿಗೂ ಆ ನಿಬಂಧನೆಯೆನ್ನು ದುರುಪಯೋಗವಾಗುತ್ತಿದೆಯೆಂಬುದು ಗೊತ್ತು. ದೇಶವತ್ಸಲರೇ ಬರ್ಮಾ ದೇಶದಲ್ಲಿ ಕಾಲಿಡಕೂಡದೆಂಬ ದಬ್ಬಾಳಿಕೆಯ ಏರ್ಪಾಟು ಇದರಿಂದ ಸಿದ್ಧವಾಯಿತು. ಮಹಾತ್ಮಾ ಗಾಂಧಿಯವರು ಪಂಜಾಬಿಗೆ ಪ್ರವೇಶಮಾಡಬಾರದೆಂದೂ, ಮಾಳವೀಯರು ಕಲ್ಕತ್ತೆಗೆ ಹೊರಡಕೂಡದೆಂದೂ ಸರಕಾರದವರು ಆಜ್ಞೆ ಕೊಡಲು ಸಿದ್ಧವಾಗಿರುವಾಗ ಈ ಅಧಿಕಾರವೂ ಭಾರತೀಯನಿಗಿದೆಯೆಂದು ಹೇಳಲಾಗುವುದಿಲ್ಲ.

ಭರತಖಂಡದ ಹೊರಗಡೆ ಹೋಗಿ ನೆಲೆಸುವ ವಿಚಾರವನ್ನೂ ಕಾಣಬಹುದು. ಬ್ರಿಟಿಶ್ ಸಾಮ್ರಾಜ್ಯದಲ್ಲಿ ಭೂಷಣಪ್ರಾಯವಾಗಿ ಭರತಖಂಡವಿರುವುದೆಂದೂ ಭಾರತೀಯರೆಲ್ಲರೂ ಸಾಮ್ರಾಜ್ಯದ ಪ್ರಜೆಗಳಾದುದರಿಂದ ಸಾಮ್ರಾಜ್ಯದ ಯಾವ ಭಾಗಕ್ಕಾಗಲಿ ತಡೆಯಿಲ್ಲದೆ ಹೋಗಿ ತಡೆಯಿಲ್ಲದೆ ನೆಲೆಸುವ ಅಧಿಕಾರವನ್ನು ಪಡೆದಿರತಕ್ಕವರೆಂದೂ ಸಾಮಾನ್ಯ ಭಾವನೆಯು ಇದ್ದುದಾದರೆ ಅದು ತಪ್ಪು. ಇದರ ಸಂಬಂಧವಾಗಿ ಯಾವ ಕಾನೂನೂ ಇಲ್ಲ. ಕೆನಡಾ, ದಕ್ಷಿಣ ಆಫ್ರಿಕ ಮುಂತಾದೆಡೆಗಳಲ್ಲಿ ಭಾರತೀಯರಿಗೆ ಸಲ್ಲುವ ಪದವಿಯು ಗೌರವವಾದುದಲ್ಲ; ಸ್ವಾತಂತ್ರ್ಯದ ಸಂಪರ್ಕವೇ ಇಲ್ಲ. ಆ ಪ್ರದೇಶಗಳಲ್ಲಿ ಬಿಳಿಯರು ಕರಿಯರು ಎಂಬ ಜಾತಿವಿರೋಧವು ಅತಿ ಪ್ರಬಲವಾಗಿದೆ. ಅಲ್ಲಿ ಸಾಮ್ರಾಜ್ಯದ ಪ್ರಜಾಧಿಕಾರವೆನ್ನುವುದು ನಡೆಯುವುದೇ ಇಲ್ಲ. ಈ ವರ್ಣವೈಷಮ್ಯವು ಬಹಳ ಪ್ರಬಲಿಸುತ್ತಲಿದೆ. ಭರತಖಂಡದಲ್ಲಿಯೂ ಭರತಖಂಡದ ಹೊರಗೂ ಈ ಸಂಗತಿಯೇ ಬಹುಮುಖವಾಗಿ ಕಾಣುತ್ತದೆ.

## ಮತಸ್ವಾತಂತ್ರ್ಯ

ಪೃಥ್ವಿಯ ಇತರ ದೇಶಗಳಲ್ಲಿ ಮತಭೇದವೆನ್ನುವುದು ಅನೇಕ ಅನರ್ಥಗಳಿಗೂ ಅನ್ಯಾಯಗಳಿಗೂ ಕಾರಣವಾಯಿತು. ನಾಗರಿಕತೆಯುಳ್ಳ ದೇಶಗಳೆಂದು ಹೆಸರುಗೊಂಡ ಇಂಗ್ಲೆಂಡು, ಅಮೇರಿಕ, ಫ್ರಾನ್ಸ ಮುಂತಾದೆಡೆಗಳಲ್ಲಿ ಈಚೆಗೆ ಅಂದರೆ ಸುಮಾರು ೧೦೦ ವರ್ಷಗಳಿಂದೀಚೆಗೆ ಪ್ರಜೆಗೆ ತನ್ನ ಅಂತಃಕರಣಕ್ಕೆ ತೋಚಿದ ಮತವನ್ನು ಅವಲಂಬಿಸುವ ಸ್ವಾತಂತ್ರ್ಯವು ದೊರೆತಿದೆ. ಭರತವರ್ಷದಲ್ಲಿಯಾದರೆ ಪರಧರ್ಮಸಹಿಷ್ಣುತೆಯೇ ಪ್ರಧಾನಧರ್ಮವಾಗಿತ್ತು. ಮಹಮ್ಮದೀಯರ ಕಾಲದಲ್ಲಿ ಸ್ಥಿತಿ ಬದಲಾಯಿಸಿತು; ಆದರೆ ಸಹಿಷ್ಣುತೆಯೇ ಕಡೆಗೆ ನೆಲೆಸಿತು. ಈಸಾಯಿಗಳು ಪ್ರಭುತ್ವವನ್ನು ವಹಿಸಿದಾಗ ಮತಭೇದವು ಆಡಳಿತದಲ್ಲಿ ಸ್ವಲ್ಪಕಾಲದವರೆಗೆ ನೆಲೆಸಿತ್ತು. ೧೮೫೮

ರಲ್ಲಿ ಒಂದು ಕಾನೂನು ಜಾರಿಗೆ ಬಂದಾಗಿನಿಂದ ಮತಸ್ವಾತಂತ್ರ್ಯವು ಸ್ವಲ್ಪ ಕಡಿಮೆಯಾಗಿ ಸಂಪೂರ್ಣವಾಗಿದೆ. ಕಡಿಮೆಯಾದ ಅಂಶವು ಮಿಷನರಿಗಳ ಶಾಲೆಗಳಲ್ಲಿ ಕಾಣುವುದು. ಬಲವಂತದಿಂದ ಬೈಬಲ್ ಗ್ರಂಥವನ್ನೋದಿಸುವುದು ಆ ಶಾಲೆಗಳಲ್ಲಿ ಸಂಪ್ರದಾಯವೆನಿಸಿದೆ. ಇದು ಪ್ರಜಾಸ್ವಾತಂತ್ರ್ಯಕ್ಕೆ ವಿರುದ್ಧ. ಇದೊಂದನ್ನುಳಿದು ಇತರ ಅಂಶಗಳಲ್ಲೆಲ್ಲಾ ಪ್ರಜೆಗೆ ಮತಸ್ವಾತಂತ್ರ್ಯವುಂಟು. ಪೂರ್ವಕಾಲವಲ್ಲಿ ಈ ವಿಷಯದಲ್ಲಿ ಪ್ರತಿಬಂಧಕವೇ ಭಾರತವರ್ಷದಲ್ಲಿರಲಿಲ್ಲ. ಇತರ ದೇಶಗಳಲ್ಲಿ ನಾಗರಿಕತೆ ಹೆಚ್ಚುತ್ತ ಮತವಿಷಯದಲ್ಲಿ ಸ್ವಾತಂತ್ರ್ಯವು ನೆಲೆಗೊಂಡಿತು.

## ವಾಕ್ಸ್ವಾತಂತ್ರ್ಯ

ಪ್ರಜೆಗೆ ತನ್ನ ಯೋಚನೆಗಳನ್ನೂ ಅಭಿಮತಗಳನ್ನೂ ಪ್ರಕಾಶಪಡಿಸುವ ಅಧಿಕಾರವಿರಬೇಕೆಂದು ಇದರ ಮೂಲಾಭಿಪ್ರಾಯ. ಪ್ರಕಾಶಪಡಿಸುವುದು ಭಾಷಣವಾದರೂ ಆಗಬಹುದು, ಲೇಖನವಾದರೂ ಆಗಬಹುದು. ಸಭಾಪ್ರಸಂಗ ಮತ್ತು ವೃತ್ತಪತ್ರಿಕೆಗಳೂ, ಪುಸ್ತಕಗಳೂ ಈ ವಿಚಾರದಲ್ಲಿ ಬರತಕ್ಕವು. ವೈಯಕ್ತಿಕಕಲಹ, ಮಾನರಾಹಿತ್ಯ ಇವೇ ನ್ಯಾಯವಾದ ಎಲ್ಲೆಗಳು.

ಭರತಖಂಡದಲ್ಲಿ ವೃತ್ತಪತ್ರಿಕೆಗಳಿಗೆ ಸ್ವಾತಂತ್ರ್ಯವು ಅನೇಕ ಕಾಲದವರೆಗೂ ಇರಲಿಲ್ಲ. ಈಚೆಗೆ ಪ್ರೆಸ್ ಆಕ್ಟ್ ಎಂಬುವು ಬ್ರಿಟಿಷ್ ಪ್ರದೇಶಗಳಲ್ಲಿ ರದ್ದಾಗಿದ್ದಾಗ್ಯೂ ಸರಕಾರದವರು ತಮ್ಮ ಬಲವನ್ನು ದುರುಪಯೋಗಪಡಿಸುವುದು ಸಾಧಾರಣವಾಗಿದೆ, ದೇಶಭಕ್ತಿಯು ರಾಜದ್ರೋಹವಾಗಿ ಪರಿಣಮಿಸುವ ಸ್ಥಿತಿಯಲ್ಲಿ ಸರಕಾರದ ಖಂಡನೆಯೆಲ್ಲವೂ ದಂಡನಾರ್ಹವಾಗಿಯೇ ಅಧಿಕಾರಿಗಳ ವರ್ಗಕ್ಕೆ ಕಂಡುಬರುವುದು. ಆದುದರಿಂದ ಇಂಗ್ಲೆಂಡಿನಲ್ಲಿ ಅಥವಾ ಅಮೇರಿಕದಲ್ಲಿ ಪ್ರಜೆಗಿರುವ ವಾಕ್ಸ್ವಾತಂತ್ರ್ಯವು ಭಾರತೀಯನಿಗೆ ಭರತಖಂಡದಲ್ಲಿಲ್ಲ.

## ಸರಕಾರದ ಹುದ್ದೇದಾರರಾಗುವ ಅಧಿಕಾರ

ಎಲ್ಲಾ ವರ್ಗದ ಪ್ರಜೆಗಳಿಗೂ ಸರಕಾರದಲ್ಲಿ ಹುದ್ದೇದಾರರಾಗುವ ಸ್ವಾತಂತ್ರ್ಯವಿರಬೇಕೆಂಬುದು ಇದರ ತತ್ತ್ವ. ಪ್ರತಿ ಪ್ರಜೆಯೂ ತನ್ನ ಸಂಪೂರ್ಣ ಯೋಗ್ಯತೆಯನ್ನು ಪಡೆದಾಗಲೇ ರಾಷ್ಟ್ರದ ಉನ್ನತಿಯು ನೆರವೇರುವುದಾದ್ದರಿಂದ ಯಾವ ಗುಂಪಿನ, ಯಾವ ಜಾತಿಯ, ಯಾವ ಪಕ್ಷದ, ಯಾವ ಮತದವನಾದರೂ ಯೋಗ್ಯತೆಯೊಂದಿದ್ದರೆ ಸರಕಾರೀ ಉದ್ಯೋಗಸ್ಥನಾಗಲು ಸಾಕು. ಒಂದೇ ಒಂದು ಗುಂಪಿನವರು ಉದ್ಯೋಗಗಳಿಗೆ ಅರ್ಹರಾದರೆ ಹುದ್ದೇದಾರನು ಆ ಗುಂಪಿನವರ ಸೇವೆ ಮಾಡು... ನೆಯೇ ವಿನಾ ಸಾರ್ವಜನಿಕ ಸೇವೆಯನ್ನು ಮಾಡುವ... ಆದುದರಿಂದ ಸರಕಾರೀ ಹುದ್ದೆಗಳಿಗೆ ತಕ್ಕ ಯೋಗ್ಯತೆಯ... ಪಡೆದಿದ್ದರೆ ಪ್ರಜೆಗಳೆಲ್ಲರೂ ಅಧಿಕಾರಿಗಳಾಗಿರಬೇಕು.

ನಮ್ಮ ದೇಶದ ಚರಿತ್ರೆಯಲ್ಲಿ ೧೮೩೩ರಲ್ಲಿ ಪ್ರಸಿದ್ಧ ...ವೊಂದು ಪಾರ್ಲಿಮೆಂಟಿನಿಂದ ಹೊರಟಿತು ಈ ಹಕ್ಕನ್ನು ...ವುದಕ್ಕೆ. ಆದರೆ ಕಾರ್ಯತಃ ಆ ಹಕ್ಕೂ ನೆಲೆಗೊಳ್ಳ... ಬ್ರಿಟಿಷರ ಆಳ್ವಿಕೆಯಲ್ಲಿ ಇಂಗ್ಲೀಷ್ ಜಾತಿಯವನಿಗೆ ಅಧಿ...ಯಾಗಲು ಇರುವ ಅನುಕೂಲಗಳು ಭಾರತೀಯನಿ... ಸ್ವರಾಜ್ಯವಾದವು ಹೆಚ್ಚುತ್ತ ಭಾರತೀಯರಿಗೆ ಅನುಕೂಲ... ಹೆಚ್ಚುತ್ತಿದ್ದರೂ ಇನ್ನೂ ಈ ವಿಷಯದಲ್ಲಿ ಸಮಾನಾಧಿಕಾ...ಯೆಂದಾಗಲೀ ಸರಕಾರೀ ಉದ್ಯೋಗಗಳು ದೇಶಹಿತೈಕದೃ...ಯಿಂದಲೇ ನಿರ್ವಾಣವಾಗುತ್ತಿವೆಯೆಂದಾಗಲೀ ಹೇಳಲಾ...ದಿಲ್ಲ.

ಜಾತಿಭೇದಗಳು ಮತ್ತು ಕೋಮುವಾರು ಭೇದ... ಹೇಗುಂಟೋ ಹಾಗೆಯೇ ಸರಕಾರೀ ಉದ್ಯೋಗಿಗಳಲ್ಲಿ... ಭೇದವು ನೆಲೆಸಿರಬೇಕೆಂಬ ವಾದವು ಕೂಡ ಈ ತತ್ತ್... ವಿರುದ್ಧವಾದುದೇ.

## ಸಭೆಸೇರುವ ಅಧಿಕಾರ

ಇದೂ ಒಂದು ಜನ್ಮಸಿದ್ಧ ಹಕ್ಕು. ಇದರ ಉದ್ದೇ... ಪ್ರಜಾಹಿತವೇ. ತಮ್ಮ ಅಭಿಪ್ರಾಯವನ್ನು ಜಗತ್ತಿಗೆ ತಿಳಿಸು...ದಕ್ಕೂ ಸಾಧಾರಣ ಪ್ರಜೆಗಳಿಗೆ ತಿಳಿವನ್ನುಂಟುಮಾಡುವುದ... ಇದು ಉತ್ತಮವಾದ ಸಾಧನ. ನಾಗರಿಕವೆಂಬ ಹೆಸ... ಪಡೆದ ದೇಶಗಳಲ್ಲೆಲ್ಲಾ ಈ ಅಧಿಕಾರವುಂಟು.

ನಮ್ಮ ದೇಶದಲ್ಲಿ ಸೆಡಿಷಸ್ ಮೀಟಿಂಗ್ಸ ಆಕ್ಟ್ ಎಂಬ ಕಾ...ನುಂಟು. ಅದರ ಪ್ರಕಾರ ವೈಸ್‌ರಾಯಿಯವರು, ಗವರ್ನ...ಗಳು ನಿರ್ದಿಷ್ಟವಾದೊಂದು ಪ್ರದೇಶದಲ್ಲಿ ಡಿ. ಮ್ಯಾ. ಟರ ಅ...ಮತಿಯಿಲ್ಲದೆ ಜನರು ಸಭೆಸೇರಕೂಡದೆಂದು ಸಾರಲು ಅಧಿ...ವನ್ನು ಪಡೆದಿರುತ್ತಾರೆ. ಡಿ. ಮ್ಯಾ. ಇಷ್ಟದಂತೆ ಅಲ್ಲಿಯ ಪ್ರ...ಗಳು ಪ್ರವರ್ತಿಸಬೇಕಾಗಿರುತ್ತದೆ. ಸಾಧಾರಣವಾಗಿ ... ದಬ್ಬಾಳಿಕೆಯ ರೂಪವನ್ನೇ ಪಡೆದಿರುತ್ತದೆ.

ಇದಲ್ಲದೆ ಸಭೆಗಳನ್ನು ಬಲದಿಂದ ಚದರಿಸಿ, ಗುಂಡು ಸುರಿಸುವ ಅಧಿಕಾರವೂ ಸರಕಾರಕ್ಕುಂಟು. ಇಂಗ್ಲೆಂಡಿ... ದಂಗೆಯೆನ್ನಬಹುದಾದ ಗುಂಪು ಕೂಡಿದ್ದರೆ ಡಿ. ಮ್ಯಾ. ... ಜನರಿಗೆ ಎಚ್ಚರಿಕೆಯನ್ನು ಮೊದಲು ಕೊಟ್ಟ... ಹೊರಟು...

ವನ್ನುಪಯೋಗಿಸಲಿಕ್ಕಿಲ್ಲ. ಭರತವರ್ಷದಲ್ಲಿ ಈ ವಿಚಾರದಲ್ಲಿ ಸರಕಾರದಧಿಕಾರಿಗಳ ಮೇಲೆ ವಿಚಾರಣೆಯೇ ಇಲ್ಲದಂತಿದೆ. ಯುದ್ಧಕಾಲದಲ್ಲಿ ಶತ್ರುಗಳು ಪರಸ್ಪರವಾಗಿ ಹೋರಾಡಿದಂತೆ ಶಾಂತಿಕಾಲದಲ್ಲಿಯೇ ಸರಕಾರದವರಿಗೂ ಪ್ರಜೆಗೂ ಈ ವಿಷಯದಲ್ಲಿ ವಿರೋಧವು ಬಲು ಬೇಗನೆ, ಬಲು ಸುಲಭವಾಗಿ ಮತ್ತು ಪದೇ ಪದೇ ತೋರುತ್ತಲಿರುವುದು.

## ಸಂಘಸ್ಥಾಪನಾಧಿಕಾರ

ನಾನಾ ಮುಖವಾದ ಪ್ರಜಾಹಿತವನ್ನು ಸಾಧಿಸುವುದಕ್ಕೆ ನಾನಾ ಮುಖವಾದ ಪ್ರಯತ್ನಗಳು ಬೇಕು. ಒಬ್ಬನೇ ಪ್ರಯತ್ನಪಡುವುದಕ್ಕಿಂತ ಅನೇಕರು ಸಂಘವನ್ನು ಕಟ್ಟಿಕೊಂಡು ಪ್ರಯತ್ನಿಸುವುದರಲ್ಲಿ ಹೆಚ್ಚು ಗುಣವುಂಟು. ಆದ್ದರಿಂದ ಪ್ರಜಾಭಿವೃದ್ಧಿಗೆ ವಿರೋಧವಲ್ಲದ ಯಾವ ಉದ್ದೇಶದಿಂದಲಾದರೂ ಸಂಘಸ್ಥಾಪನೆ ಮಾಡುವ ಅಧಿಕಾರ ಪ್ರಜೆಗಿರತಕ್ಕದ್ದು.

ಭರತವರ್ಷದಲ್ಲಿ ವೈಸ್ರಾಯಿಯು ತನಗೆ ತೋರಿದಂತೆ ಸಂಘಗಳು ಕಾನೂನು ವಿರುದ್ಧವೆಂದು ನಿರ್ಣಯಿಸಬಹುದು. ಆಗ ಸಂಘದ ಸದಸ್ಯರುಗಳಿಗೂ ಮತ್ತು ಸಹಾಯಕರಿಗೂ ಮೂರು ವರ್ಷದಿಂದ ಆರು ತಿಂಗಳುಗಳ ಪರ್ಯಂತ ಶಿಕ್ಷೆಯಾಗಬಹುದು. ಹೀಗೆಯೇ ದೇಶೋದ್ಧಾರಕ್ಕಾಗಿ ಸ್ಥಾಪಿತವಾದ ದೇಶಸೇವಕ ಸಂಘಗಳು ನ್ಯಾಯಬಾಹಿರಗಳೆಂದೆನಿಸಿ ಜನರು ಶಿಕ್ಷೆಗೆ ಗುರಿಯಾದರು. ಭಾರತೀಯ ಪ್ರಜೆಗೆ ಈ ಅಧಿಕಾರವು ಇಲ್ಲವೆಂದೇ ಒಟ್ಟನಲ್ಲಿ ಹೇಳಬೇಕು.

ಪ್ರತಿ ಪ್ರಜೆಗೂ ಈ ಅಧಿಕಾರಗಳು ಸಲ್ಲುವಾಗ್ಗೆ ಇವು ಎಷ್ಟು ಮಟ್ಟಿಗೆ ಅಧಿಕಾರಗಳೋ ಅಷ್ಟುಮಟ್ಟಿಗೆ ಕರ್ತವ್ಯಗಳೂ ಆಗಿ ಪರಿಣಮಿಸುತ್ತವೆ. ಪ್ರಜೆಯು ತನ್ನಂತೆಯೇ ಇತರ ಪ್ರಜೆಗೂ ಅನುಕೂಲಗಳು ಇರುವಂತೆಸಗಲು ಪ್ರಯತ್ನಪಡುವುದನ್ನು ಎಂದಿಗೂ ಮರೆಯಬಾರದು. ದೇಶದ ಸರಕಾರವು ಪ್ರಜಾಧಿಕಾರಗಳನ್ನು ಪವಿತ್ರವಾದುವೆಂದು ಗೌರವಿಸುವುದಲ್ಲದೆ ತಮ್ಮಧಿಕಾರಗಳನ್ನು ಸಮರ್ಪಕವಾಗಿ ಉಪಯೋಗಿಸುವಂತೆ ಪ್ರಜೆಗೆ ಉತ್ತೇಜನವನ್ನು ಕೊಡುತ್ತಿರಬೇಕು.

---

## ದೀನರ ಬಂಧು

೧

ದುಡಿಯುವ ದೇಹದ ಬೆವರಲಿ ಮೀವನು
ಬಡವನ ಕಂಗಳಲುದಯಿಪನು.
ಕಣ್ಣುಗಳಿಲ್ಲದ ಕುರುಡನ ನುಡಿಯೊಳು
'ಶಿವ ಶಿವ' ಎನ್ನುತಲಿರುತಿಹನು.
ಅವನಾ ಹೆಸರದು ಏನೆಂದು ?
'ದರಿದ್ರನಾರಾಯಣ'ನೆಂದು !

೨

ಕಡಲಿನ ತೆರೆಗಳ ನೊರೆಯಲಿ ತೇಲುತ
ಜೋಗುಳ ಹಾಡನು ಹಾಡುವನು;
ದೋಣಿಯೊಳೊರಗಿದ ಬೆಸ್ತರ ಮಗುವಿಗೆ
ತೊಟ್ಟಿಲ ತೂಗುತಲಿರುತಿಹನು
ಅವನಾ ಹೆಸರದು ಏನಯ್ಯ ?
'ದೀನರ ಬಂಧು' ಎನ್ನಯ್ಯಾ !

೩

'ದೇವರು ಇಲ್ಲ, ಇದ್ದರೆ ಕಾಣನೆ!'
ಎಂಬಾ ಮಾತಿಗೆ ತಿಳಿವಿಲ್ಲ;
ಕಂಗಳ ತೆರೆದರೆ ಕಾಂಬನು ದೇವ
ಬಡವರ ಬಂಧು ಮಾದೇವ.

– ದಿನಕರ್ ದೇಸಾಯಿ.

# ಮುಖ-ಜ್ಯೋತಿಷ



ಲೇಖಕರು:-- ಕೃಷ್ಣರಾವ ವಿನಾಯಕ ಗೋಕಾಕ ವಕೀಲರು, ಮು. ಸವಣೂರು

## ಪೀಠಿಕೆ

ಜನ್ಮಕಾಲವನ್ನು ಸರಿಯಾಗಿ ಬರೆದುಕೊಂಡಿದ್ದರೆ ಮುಂದೆ ಕುಂಡಲಿಯ ಆಟ. ಇಲ್ಲದಿದ್ದರೆ ಜ್ಯೋತಿಷಿಗಳ ಗಣಿತವೆಲ್ಲ ನಿಷ್ಫಲವೆಂದು ಮೇಲೆಯೇ ಕಾಣುತ್ತದೆ. ಮನುಷ್ಯನ ಆಯುಷ್ಯದ ಇತಿಹಾಸಕಥನದಲ್ಲಿ ಜ್ಯೋತಿಷ್ಯದಷ್ಟು ಉತ್ತಮವಾದ ಶಾಸ್ತ್ರವು ಇನ್ನೊಂದಿಲ್ಲವೆಂದು ಹೇಳಬಹುದು. ಬೇರೆ ಬೇರೆ ಗ್ರಂಥಕಾರರು ಈ ಶಾಸ್ತ್ರವನ್ನು ಬಹಳ ಪ್ರಕಾರದಿಂದ ವರ್ಣನೆ ಮಾಡಿದ್ದಾರೆ. ಆದರೆ ಜನ್ಮಕಾಲವು ತಪ್ಪಿದ್ದಲ್ಲಿ ಮುಂದೆಲ್ಲಿ ಶಾಸ್ತ್ರದ ಉಪಯೋಗ ?

ಇದಕ್ಕೆ ಒಂದೆಂದರೆ ಒಂದೇ ಹಾದಿಯುಂಟು. ಅದು ಮುಖಜ್ಯೋತಿಷ. ಜನ್ಮಲಗ್ನದ ವೇಳೆಯನ್ನು ನಿಶ್ಚಿತವಾಗಿ ಮಾಡದ್ದರಿಂದ ಸಂಭವಿಸುವ ದೋಷಗಳನ್ನು ಇದರಿಂದ ಪರಿಹರಿಸಬಹುದು. ಮನುಷ್ಯನ ಶರೀರದ ಮೇಲೆ ಮತ್ತು ವಿಶೇಷತಃ ಅವನ ಮುಖದ ಮೇಲೆ ಜನ್ಮಲಗ್ನದ ಮತ್ತು ಗ್ರಹಗಳ ಚಿನ್ಹಗಳಿರುತ್ತವೆ; ಅವುಗಳಿಂದ ಜನ್ಮಲಗ್ನದ ಕುಂಡಲಿಯನ್ನು ನಾವು ಪ್ರಯಾಸವಿಲ್ಲದೆ ತೆಗೆಯಬಹುದು.

ಜ್ಯೋತಿಷಿಗಳ ಪರಂಪರೆಯಿಂದ ಬಂದ ಜೋತಿಷ್ಯಶಾಸ್ತ್ರದ ಪ್ರಾದುರ್ಭಾವದ ಇತಿಹಾಸವನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳುವದು ಅತ್ಯವಶ್ಯ. ಬ್ರಹ್ಮನಲ್ಲಿ ಉದ್ಭವಿಸಿದ ಈ ಶಾಸ್ತ್ರವು ಉಪದೇಶರೂಪವಾಗಿ ಶ್ರೀ ಸೂರ್ಯನಾರಾಯಣನಲ್ಲಿ ನೆಲೆಗೊಂಡಿತೆಂದು ಶಾಸ್ತ್ರಕಾರರು ಹೇಳುತ್ತಾರೆ; ಸೂರ್ಯನಾರಾಯಣನು ಅದನ್ನು ಪರಾಶರ ಋಷಿಗಳಿಗೆ ತಿಳಿಹೇಳಿದನು. ಅವರಿಂದ ಅದನ್ನು ವೇದವ್ಯಾಸರು ತಿಳಿದರು. ಮತ್ತು ಅವರೇ ಆ ವಿಷಯದಲ್ಲಿ ಪ್ರಾವೀಣ್ಯವನ್ನು ಪಡೆದು ಅದನ್ನು ಜಗತ್ತಿಗೆಲ್ಲ ಪ್ರಕಟಮಾಡಿದರು.

ಮುಂದೆ ಬಂದ ಜ್ಯೋತಿಷಿಗಳಲ್ಲಿ ಅತಿಪ್ರಸಿದ್ಧನಾದವನೆಂದರೆ ಲೀಲಾವತಿಯನ್ನು ಬರೆದ ಭಾಸ್ಕರಪಂಡಿತನು. ಈ ಜ್ಯೋತಿಷಿಗಳೆಲ್ಲರೂ ವಿವಿಧ ರೀತಿಯಿಂದ ಆ ಶಾಸ್ತ್ರವನ್ನು ಬೆಳಿಸಿ ಕೀರ್ತಿಪಾತ್ರರಾದರು. ಆದರೆ ಈ ವರೆಗೆ ನಮಗೆ ಸಿಕ್ಕುವ ಜ್ಯೋತಿಷ್ಯ ಗ್ರಂಥಗಳಲ್ಲಿ ಒಂದಾದರೂ ಮುಖಜ್ಯೋತಿಷ್ಯವನ್ನು ಸಾಂಗವಾಗಿ ಚರ್ಚಿಸಿಲ್ಲ. ಆದರೂ ಗುರುಶಿಷ್ಯಪರಂಪರೆಯಿಂದ ಈ ಶಾಸ್ತ್ರವು ಇನ್ನೂ ಅಲ್ಲಲ್ಲಿ ಕಂಡುಬರುವದುಂಟು. ಅತ್ಯ- ಅಮೂಲ್ಯವಾದ ಈ ಶಾಸ್ತ್ರವು ಲುಪ್ತವಾಗಬಾರದೆಂಬ ಇ- ಯಿಂದಲೂ ಅನೇಕ ವರ್ಷಗಳಿಂದ ನನಗೆ ಇವರಲ್ಲಿದ್ದ ಅ- ವವು ಅನ್ಯರಿಗೂ ಉಪಯೋಗವಾಗಬೇಕೆಂಬ ಲವಲವಿಕೆ- ದಲೂ ನಾನು ಅದನ್ನು ಇಲ್ಲಿ ಬರೆಯಲು ಉಪಕ್ರಮಿಸುತ್ತೇ-

## ಮುಖವರ್ಣನೆ

ಎಷ್ಟು ತರಹದ ಜನರಿರುವರೋ ಅಷ್ಟು ತರಹದ ಮು- ಗಳಿರುವವು. ಹೀಗಿದ್ದರೂ ಕೂಡ ಯಾವ ಮುಖವೇ ಆ- ಕೆಳಗಿರುವ ನಾಲ್ಕು ಬಗೆಗಳಲ್ಲಿ ಒಂದು ಬಗೆಯದಿದ್ದೇ ಇ- ದೆಂದರೆ ವಾಚಕರಿಗೆ ಆಶ್ಚರ್ಯವಾಗಬಹುದು. ಆ ನಾ- ಆಕೃತಿಗಳು ಯಾವವೆಂದರೆ— ತ್ರಿಕೋಣ; ದೀರ್ಘ ವರ್ತು- ವರ್ತುಳ; ಚೌಕೋನ. ಅಂದರೆ ಸ್ಥೂಲಮಾನದಿಂದ ಪ್ರ- ಯೊಬ್ಬ ಮನುಷ್ಯನ ಮುಖವು ಈ ನಾಲ್ಕು ಪ್ರಕಾರ- ಒಂದು ಪ್ರಕಾರದ್ದಿದ್ದೇ ಇರುತ್ತದೆ. ಅವುಗಳ ಲಕ್ಷಣ- ಕೆಳಗೆ ಹೇಳಿದೆ.

**ತ್ರಿಕೋಣ:**— ಈ ಆಕೃತಿಯ ಮುಖವುಳ್ಳವರ ಕ- ಗಳು ದೊಡ್ಡವೇ ಇರಲಿ, ಸಣ್ಣವೇ ಇರಲಿ, ಅವರ ಹ- ಭಾಗವು ಮಾತ್ರ ಅಗಲವಾಗಿರುವದು. ಎರಡೂ ಗಲ್ಲ- ಭಾಗದ ಅಗಲು ಕಡಿಮೆ. ಇದಲ್ಲದೆ ಅವರ ಗದ್ದವು ಚೂ- ರುವದು; ಅದು ಉದ್ದವೂ ಇರಬಹುದು ಇಲ್ಲವೆ ಸಣ್ಣ- ಗಿಯೂ ಇರಬಹುದು.

**ಧೀರ್ಘವರ್ತುಳ:**— ಈ ತರಹದ ಮುಖವು- ಹಣೆಯು ಅಗಲು ಕಡಿಮೆಯಿದ್ದು ಅವರ ಮೋರೆಯು ದ- ವಾಗಿರುತ್ತದೆ; ಹಾಗು ಎರಡೂ ಗಲ್ಲಗಳೊಳಗಿನ ಭಾ- ಅಗಲವಾಗಿರುತ್ತದೆ. ಅರ್ಥಾತ್ ಇವರ ಕಣ್ಣುಮೂಗು- ಹೇಗಿದ್ದರೂ ಸರಿಯೆ ( ಅಂದರೆ ಅವು ಸಣ್ಣವಾಗಿಯೂ ಇ- ದೊಡ್ಡವಾಗಿಯೂ ಇರಬಹುದು. )

**ವರ್ತುಳ:**— ವರ್ತುಳಾಕಾರವಾಗಿದ್ದ ಮುಖದ ಲ- ಗಳೇನೆಂದರೆ— ಉಬ್ಬುಗಲ್ಲಗಳು ( ಎರಡೂ ಗಲ್ಲಗಳ-

ಭಾಗವು ಅಗಲವಾಗಿರಬೇಕು ) ವಿಶೇಷವಾಗಿ ಅಗಲಿಲ್ಲದ ಗದ್ದವು ಮತ್ತು ಹಣೆಯು.

**ಚೌಕೋನ: —** ಹಣೆಯು ಅಗಲವಾಗಿದ್ದು ಹಣೆಯ ಎರಡೂ ಬಿಂಪುಗಳ ನಡುವೆ ಸಮಾಂತರವಿರುತ್ತದೆ. ಗದ್ದವು ಅಗಲಾಗಿರುತ್ತದೆ. ಮುಖವು ಸಣ್ಣದೇ ಇರಲಿ ದೊಡ್ಡದೇ ಇರಲಿ ಅದರ ಮಧ್ಯಭಾಗವು ಚೌಕಾಗಿ ಕಾಣುತ್ತಿರುತ್ತದೆ.

## ಆಕೃತಿಯ ಮೇಲಿಂದ ರಾಶಿಗಳು

ಈಗ ಮುಖ ಲಕ್ಷಣವನ್ನು ಹೇಳಿದ್ದಾಯಿತು. ಇನ್ನು ಈ ಲಕ್ಷಣಗಳ ಮೇಲಿಂದ ಶಾಸ್ತ್ರದ ನಿಷ್ಕರ್ಷೆಯನ್ನು ಹೇಗೆ ಮಾಡ ಬೇಕೆಂಬದನ್ನು ನೋಡುವಾ. ಮುಖವು ತ್ರಿಕೋಣಾಕೃತಿ ಯಲ್ಲಿದ್ದರೆ ಮೇಷ, ವೃಶ್ಚಿಕ, ಮೀನ ಮತ್ತು ಮಕರವೆಂಬ ಲಗ್ನಗಳಲ್ಲಿ (ರಾಶಿ) ಒಂದು ಆ ಮನುಷ್ಯನದಿರುತ್ತದೆ. ಅದು ದೀರ್ಘವರ್ತುಳವಲ್ಲಿದ್ದದ್ದಾದರೆ ವೃಷಭ ಇಲ್ಲವೆ ತುಲಾ ಲಗ್ನವು ಬರುವದು. ಮಿಥುನ, ಕನ್ಯಾ ಅಥವಾ ಕುಂಭ ಲಗ್ನವು ವರ್ತು ಳಾಕಾರ ಮುಖದ್ದಿರುತ್ತದೆ. ಚೌಕೋನಾಕೃತಿಯ ಮುಖಕ್ಕೆ ಕರ್ಕ, ಸಿಂಹ ಇಲ್ಲವೆ ಧನು ಈ ಲಗ್ನಗಳು ಬರುತ್ತವೆ.

ಈ ಸರ್ವಸಾಮಾನ್ಯ ಲಕ್ಷಣಗಳನ್ನು ಕಂಡು ಹಿಡಿದಮೇಲೆ ಪ್ರತ್ಯೇಕ ಲಗ್ನದ ವಿಶಿಷ್ಟ ಲಕ್ಷಣಗಳನ್ನು ತಡವಿಲ್ಲದೆ ಗುರುತಿಸ ಬಹುದು. ಮುಖವು ತ್ರಿಕೋಣಾಕೃತಿಯಲ್ಲಿದ್ದ ಒಬ್ಬ ಮನು ಷ್ಯನ ಜನ್ಮವು ಮೇಷಲಗ್ನದಲ್ಲಿ ಇದೆ ಎಂದು ತಿಳಿಯೋಣ. (ಅದು ವೃಶ್ಚಿಕ, ಮೀನ ಇಲ್ಲವೆ ಮಕರ ಲಗ್ನದಲ್ಲಿಯೂ ಇರ ಬಹುದು. ) ಹೀಗಿದ್ದಲ್ಲಿ ಆ ಮನುಷ್ಯನ ತಲೆಯ ಆಕಾರವು ದೊಡ್ಡದಿದ್ದು ಆತನ ಮೂಗಿನ ಹೊಳ್ಳೆಗಳು ಉಬ್ಬಿದವಿರುತ್ತವೆ. ಉಬ್ಬುಗಲ್ಲಗಳೂ ತುದಿಯುಳ್ಳ ಗದ್ದವೂ ಸಹ ಆ ಮೋರೆಯ ಲಕ್ಷಣಗಳು. ಇನ್ನು ಅದೇ ಮನುಷ್ಯನ ಜನ್ಮವು ವೃಶ್ಚಿಕ ಲಗ್ನದಲ್ಲಿದ್ದದ್ದಾದರೆ ಆತನ ಮುಖವು ಸ್ವಲ್ಪ ಮುಂದೆ ಹಾದಿದ್ದು ನಾಶಿಕವು ಸರಳವಾಗಿರುತ್ತದೆ. ಆಕೃತಿಯು ಬಹು ತರವಾಗಿ ಗಿಡ್ಡವಾಗಿದ್ದು ವಿಶೇಷ ಉದ್ದವಿದ್ದ ಗದ್ದದ ತುದಿಯೂ ಅಗಲು ಹಣೆಯೂ ದೊಡ್ಡವಾದ ಅರಳೆಗಣ್ಣು ಗಳೂ ಅವನವಾಗಿ ಕಂಡು ಬರುತ್ತವೆ. ಆತನ ಮೋರೆಯ ಮೇಲೆ ಕೂದಲುಗಳು ಕಡಿಮೆ. ಇನ್ನು ಅದೇ ಮನುಷ್ಯನ ಜನ್ಮವು ಮಕರ ಲಗ್ನದಲ್ಲಿದೆಯೆಂದು ತಿಳಿಯೋಣ. ಈ ಪಕ್ಷ ದಲ್ಲಿ ಆತನ ಮೂಗು ಸರಳವಾಗಿದ್ದರೂ ಸಣ್ಣದಾಗಿರುತ್ತದೆ. ಗದ್ದವು ಸಹ ಸ್ವಲ್ಪ ಸಣ್ಣದಿದ್ದು ಆತನ ಹಣೆಯು ಮುಂದೆ ಹಾದಿರುತ್ತದೆ. ಮೀನ ಲಗ್ನದಲ್ಲಿಯೇ ಜನ್ಮವಿದ್ದದ್ದಾದರೆ ಮುಖವು ಮೊದಲಿನಂತೆ ತ್ರಿಕೋಣಾಕೃತಿಯಲ್ಲಿದ್ದರೂ ಅದು ಭವ್ಯಾಕಾರದ್ದಿರುತ್ತದೆ. ತಲೆಯಾದರೂ ದೊಡ್ಡದಾಗಿರುವದು. ಕಣ್ಣು ಸಣ್ಣವಿದ್ದು ಆತನ ಉಬ್ಬಿದ ಮೂಗಾದರೂ ಸಣ್ಣದು.

ಇನ್ನು ದೀರ್ಘವರ್ತುಳಾಕಾರದ ಮುಖವಿದ್ದ ಒಬ್ಬ ಮನುಷ್ಯನನ್ನು ಉದಾಹರಣೆಗಾಗಿ ಮುಂದಿಟ್ಟುಕೊಳ್ಳೋಣ. ಆತನ ಜನ್ಮವು ವೃಷಭ ಇಲ್ಲವೆ ತುಲಾ ಲಗ್ನದಲ್ಲಿರಬೇಕು. ವೃಷಭಲಗ್ನದಲ್ಲಿದ್ದದ್ದಾದರೆ ಮುಖವು ಉದ್ದವಾಗಿದ್ದು ಕಪ್ಪಾದ ಕಾಡಿಗೆಗಣ್ಣುಗಳು ಅವನವಿರುತ್ತವೆ. ಸಣ್ಣಾಗಿಯೂ ಸರಳವಾಗಿಯೂ ಇದ್ದ ನಾಸಿಕ, ದೊಡ್ಡ ತಲೆ, ಸಣ್ಣಕಣ್ಣು, ಮೋರೆಯ ಮೇಲೆ ಒಂದು ತರಹದ ಗರ್ವದ ಒಗರು,— ಇವೂ ಈ ಲಗ್ನದ ಲಕ್ಷಣಗಳು. ತುಲಾಲಗ್ನದ ಮುಖಕ್ಕೆ ಸಣ್ಣ ತಲೆಯೂ ಉದ್ದ ಮತ್ತು ಸರಳವಾದ ಮೂಗೂ ಇರು ವವು.

ವರ್ತುಳಾಕಾರದ ಮುಖಕ್ಕೆ ಮಿಥುನ, ಕನ್ಯಾ ಇಲ್ಲವೆ ಕುಂಭ,— ಈ ಲಗ್ನಗಳು ಬರುತ್ತವೆಯಷ್ಟೆ. ಮಿಥುನಲಗ್ನದ ಮುಖವು ದುಂಡಗಿದ್ದು ಆ ಮನುಷ್ಯನ ಆಕೃತಿಯು ಗಿಡ್ಡ ತರಹ ದ್ದಿರುತ್ತದೆ. ದೊಡ್ಡ ತಲೆ, ಸಣ್ಣ ಮೂಗು, ಉದ್ದವಾದ ಗದ್ದ, ಅಗಲವಾದ ಹಣೆ, ಹದ್ದಿನಂತಹ ದೊಡ್ಡ ಕಣ್ಣುಗಳು,— ಇವೇ ಮೊದಲಾದವುಗಳು ಆ ಮುಖದ ಲಕ್ಷಣಗಳು. ಸಣ್ಣ ತಲೆ, ದೀರ್ಘವಾಗಿಯೂ ಸರಳವಾಗಿಯೂ ಇದ್ದ ಮೂಗು, ದೊಡ್ಡ ಕಣ್ಣು, ಗಿಡ್ಡವಾದ ಗದ್ದ, ಅಗಲು ಹಣೆ, ಮೋರೆಯ ಮೇಲೆ ಸೌಮ್ಯವಾದ ಕಳೆ, ಇವು ಕನ್ಯಾಲಗ್ನದ ಲಕ್ಷಣಗಳು. ಕುಂಭಲಗ್ನವಿರುವ ಮುಖದ ತಲೆಯು ದೊಡ್ಡದಿದ್ದು ನಾಶಿ ಕವು ಸಣ್ಣಾಗಿಯೂ ಸರಳವಾಗಿಯೂ ಇರುತ್ತದೆ. ಇದಲ್ಲದೆ ಗದ್ದವು ಗಿಡ್ಡಾಗಿದ್ದು ಕಣ್ಣುಗಳು ಸಣ್ಣವಿದ್ದರೂ ಕಪ್ಪಾಗಿರು ತ್ತವೆ.

ಹಿಂದೆ ಹೇಳಿದಂತೆ ಚೌಕೋನಾಕೃತಿಯ ಮುಖಕ್ಕೆ ಕರ್ಕ, ಸಿಂಹ ಇಲ್ಲವೆ ಧನು ಲಗ್ನಗಳು ಬರುತ್ತವೆ. ಇನ್ನು ಜನ್ಮವು ಕರ್ಕಲಗ್ನದಲ್ಲಿಯೇ ಇದ್ದರೆ ಆ ಮನುಷ್ಯನ ತಲೆಯು ಸಣ್ಣ ದಿದ್ದು ನಾಸಿಕವು ಸರಳವಾಗಿಯೂ ದೀರ್ಘವಾಗಿಯೂ ಇರುವ ದಲ್ಲದೆ ಗದ್ದವು ಚೂಪಾಗಿರುತ್ತದೆ. ಹಣೆಯು ಅಗಲು ಮಾತ್ರ ಕಡಿಮೆ ಇದ್ದು ಆತನಿಗೆ ಸುಂದರ ಹಾಗು ವಿಶಾಲವಾದ ನೇತ್ರ

ಗಳಿರುತ್ತವೆ. ಸಿಂಹಲಗ್ನದ ಮುಖದ ಕಣ್ಣುಗಳು ಸಣ್ಣವು. ಮತ್ತು ತಲೆಯು ದೊಡ್ಡದಿದ್ದು ಮೂಗಿನ ಹೊಳ್ಳೆಗಳು ಅಗಲವಾಗಿದ್ದರೂ ಗದ್ದವು ಗಿಡ್ಡ. ಧನುಲಗ್ನವಿದ್ದ ಪಕ್ಷದಲ್ಲಿ ತಲೆಯು ಸಣ್ಣದಿದ್ದರೂ ಗಲ್ಲಗಳು ಅಗಲವಾಗಿದ್ದು, ಗದ್ದವು ಉದ್ದವಾಗಿರುತ್ತದೆ. ಮೂಗು ಅಗಲವೂ ಉದ್ದವೂ ಇದ್ದು ಕಣ್ಣುಗಳು ಕಪ್ಪುಬಣ್ಣವನ್ನು ಹೊಂದಿ ದೊಡ್ಡವಿರುತ್ತವೆ.

## ಅಯನ, ಪಕ್ಷ ಮತ್ತು ವೇಳೆ

ಒಂದು ವರ್ಷದಲ್ಲಿ ವಾಡಿಕೆಯಾಗಿ ದಕ್ಷಿಣಾಯನ ಮತ್ತು ಉತ್ತರಾಯಣ ಹೀಗೆ ಎರಡು ಭಾಗಗಳನ್ನು ಮಾಡುವದುಂಟು. ದಕ್ಷಿಣಾಯನವು ಕರ್ಕಸಂಕ್ರಮಣದಿಂದ ಮಕರಸಂಕ್ರಮಣದ ವರೆಗೆ (ಸುಮಾರು ಆಷಾಢದಿಂದ ಮಾರ್ಗಶಿರ್ಷ). ಉತ್ತರಾಯಣವು ಮಕರ ಸಂಕ್ರಮಣದಿಂದ ಕರ್ಕಸಂಕ್ರಮಣದವರೆಗೆ (ಸು. ಮಾರ್ಗಶೀರ್ಷದಿಂದ ಆಷಾಢದ ವರೆಗೆ). ಯಾವ ಅಯನದಲ್ಲಿ ಜನ್ಮವಾಗಿದೆಯೆಂಬವನ್ನು ತಿಳಿಯುವಲ್ಲಿ ಸಾಮುದ್ರಿಕವು ಉಪಯುಕ್ತವಾಗುವದು. ಎಲ್ಲರ ಕೈಯಲ್ಲಿ ಇರುವ ಅನೇಕ ರೇಖೆಗಳಲ್ಲಿ ಆಯುಷ್ಯ ರೇಖೆಯೆಂಬ ಹೆಸರಿನದೊಂದಿರುತ್ತದೆ. ಇದಕ್ಕೆ ಅಂತಃಕರಣರೇಷೆ ಎಂದೂ ಕರೆಯುತ್ತಾರೆ. ಕಿರುಬೆರಳಿನ ಕೆಳಗಿನಿಂದ ತರ್ಜನಿಯ ವರೆಗೆ ಇದು ಹಬ್ಬಿರುತ್ತದೆ. ಎಡಗೈಯಲ್ಲಿ ಸಹ ಈ ರೇಖೆಯು ಕ... ಬಂದರೂ ಬಲಗೈಯನ್ನೇ ನಾವು ಪರೀಕ್ಷಿಸಬೇಕು. ... ನಮ್ಮೆದುರಿಗಿರಿಸಿಕೊಂಡ ಮನುಷ್ಯನ ಜನ್ಮವು ದಕ್ಷಿಣಾ... ದಲ್ಲಿದ್ದರೆ ಮೇಲೆ ಹೇಳಿದ ರೇಖೆಯು ಕಿರುಬೆರಳಿನಿಂದ ಹೊ... ನಡುವಿನ ಬೆರಳು ಮತ್ತು ತರ್ಜನಿ ಇವುಗಳ ನಡುವೆ ಹಾ... ಹೋಗಿರುತ್ತದೆ. ಆದರೆ ಅದು ಉತ್ತರಾಯಣದಲ್ಲಿದ್ದ ಪಕ್ಷ... ಮೇಲಿನಂತೆಯೇ ಹೊರಟು ಬಲಗಡೆಗೆ ಹೆಬ್ಬೆಟ್ಟಿನ ... ಹೊರಳುವ ಒಲವು ಬಲವಾಗಿರುವದು ಕಂಡುಬರುತ್ತದೆ.

ಇನ್ನು ಜನ್ಮವಾದದ್ದು ಶುಕ್ಲಪಕ್ಷದಲ್ಲಿಯೋ ಅಥವಾ ಕೃ... ಪಕ್ಷದಲ್ಲಿಯೋ ಎಂಬದನ್ನು ತಿಳಿಯುವಾಗ ಹೆಬ್ಬೆಟ್ಟಿನ ... ರೇಖೆಯನ್ನು ನೋಡಬೇಕಾಗುವದು. ಆ ಮಧ್ಯರೇಖೆಯು ... ಗೋದಿಯ ಕಾಳಿನಂತಹ ಚಿನ್ಹವು ಇದ್ದರೆ ಶುಕ್ಲಪಕ್ಷದಲ್ಲಿ... ವೆಂದು ತಿಳಿಯಬೇಕು. ಅದೇ ರೇಖೆಯ ಕೆಳಗೆ ಆ ಚಿನ್ಹ... ಅಥವಾ ಆ ರೇಖೆಯ ಮೇಲೆ ಆ ಚಿನ್ಹವೇ ಇರದಿದ್ದರೆ ಜ... ಕೃಷ್ಣಪಕ್ಷದಲ್ಲಿ ಎಂದು ತಿಳಿಯಬೇಕು. ಇನ್ನು ಕಿವಿಯ ... ಗಳು ಅಂದರೆ ಕಿವಿಯ ಕೆಳಗಡೆಯ ಕೊನೆಯ ಭಾಗಗಳು ... ಗಳಿಂದ ಬಿಟ್ಟಂತಿದ್ದರೆ ಜನ್ಮವು ಹಗಲಿನಲ್ಲೆಂದೂ ಅವು ... ಕೊಂಡಂತಿದ್ದರೆ ಜನ್ಮವು ರಾತ್ರಿಯಲ್ಲೆಂದೂ ತಿಳಿಯಬೇಕು.

---

# ಕಸಬರಿಗೆ

[ ಕಸ-ಪೊರಕೆ ]

( ನಿರೀಕ್ಷಕನಿಂದ )

ಗಹನವಿಚಾರಗಳು ಇತ್ತೀಚೆ ಜನರ ಮನಸ್ಸಿಗೆ ಸೇರದಾಗಿವೆ; ಅಂತೆಯೆ ತಲೆಯಲ್ಲಿಯೂ ಸೇರದಾಗಿವೆ. ಮೊದಲಿನ ಜನರು ಗಹನ-ಗಿರಿ-ಗಹ್ವರಗಳಲ್ಲಿರುತ್ತಿದ್ದರು ; ಅವರ ವಿಚಾರಗಳೂ ಗಹನವಾಗಿಯೂ ದೊಡ್ಡ ಗುಡ್ಡದಂತಹುಗಳಾಗಿಯೂ ಗೂಢವಾಗಿಯೂ ಇರುತ್ತಿದ್ದವು. ನಮ್ಮ ಸುತ್ತಲಿನ ಸೃಷ್ಟಿಯು ನಮ್ಮ ಮನಸ್ಸಿಗೆ ರೂಪಗೊಡುವದು ಎಂದು ಮಾನಸಶಾಸ್ತ್ರಿಗಳು ಹೇಳುವದಿಲ್ಲವೆ? ಇತ್ತೀಚಿನ ಜನರು ಬಯಲಿನಲ್ಲಿದ್ದು ತಮ್ಮ ಮನೆಗಳಲ್ಲಿ ಗಾಳಿಬೆಳಕುಗಳಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿಕೊಡುವರು. ಅದರ ಪರಿಣಾಮವೇನೆಂದರೆ— ಅವರ ವಿಚಾರದಲ್ಲಿ ಗಾಳಿಗೆ ಗಾಳಿ, ಮನಸ್ಸಿನಲ್ಲಿ ಬಯಲಿಗೆ ಬಯಲು ; ತಲೆಯಲ್ಲಿ ಬೆಳ್ಳಂಬೆಳಕು— ಹೀಗೆ ಹೇಳಬ... ದೀತು. ಇದು ಸತ್ಯವಿರಬಹುದಾದರೂ ಅಪ್ರಿಯವಾ... ಶ್ರೇಯಸ್ಕರವಾದುದು ಪ್ರಿಯವಾಗಿರುವದು ಅಪರೂಪ. ... 'ನ ಬ್ರೂಯಾತ್ ಸತ್ಯಮಪ್ರಿಯಂ' ಎಂದು ದೊಡ್ಡ... ಹೇಳಿದ್ದಾರೆ. ಆದಕಾರಣ ಈ ವಿಚಾರವನ್ನು ಇಲ್ಲಿಗೆ ಬಿಡು...

ಈಗಿನಕಾಲ ಸ್ವಲ್ಪ ತಿರುಗುಮುರುಗು ; ಬುಡಮೇಲ... ಕಾಲ. ಹಿಂದಿನವರು ಹಾಲಿನಲ್ಲಿ ಸ್ವಲ್ಪ ನೀರು ಬೆರಸಿ ಕುಡಿ... ಇಂದಿನವರು ನೀರಿನಲ್ಲಿ ಸ್ವಲ್ಪ ಹಾಲು ಬೆರಸಿ ಕುಡಿಯು... ಅರಗಬಹುದಾದುದನ್ನೂ ದಕ್ಕಬಹುದಾದುದನ್ನೂ ತಿನ್ನಬೇ... ಕುಡಿಯಬೇಕು, ಈಗಿನವರು ಬಹಳ ವಿಚಾರಿಗಳಲ್ಲದ...

ಸ್ವಲ್ಪ ವಿವೇಕಿಗಳು. ತಮ್ಮ ತಮ್ಮ ರುಚಿ ಅವರು ಬಲ್ಲರು. ರುಚಿಸಿದ್ದಲ್ಲವೇ ಅರಗುವದು ದಕ್ಕುವದು! ಯಾವ ಪಂಡಿತರೂ ಹೇಳಲಿ. ಈಗಿನವರ ರುಚಿಯಲ್ಲಿ ಬದಲು ಇದ್ದರೂ ತಾವು ತಿಂದುಂಡದ್ದರಿಂದ ತಮಗೆ ಬಲ ಬರಬೇಕು, ಆರೋಗ್ಯವುಂಟಾಗಬೇಕು ಎಂಬ ಆಶೆಯೇನೋ ಆಗಿನವರಂತೆಯೆ ಇದೆ.

ಆಗಿನವರಂತೆ ಈಗಿನವರಿಗೂ ನಿರ್ಮಲವಿಚಾರಗಳೂ ಆಚಾರಗಳೂ ಬೇಕಾಗಿವೆ. ಆದರೆ ಅವು ರುಚಿಸಬೇಕಾದರೆ ಹೇಳುವ ರೀತಿ ಬೇರೆಯಾಗಬೇಕು. ಸತ್ತ್ವವೂ ತತ್ತ್ವವೂ ಅದೇ ಉಳಿದರೂ ರೂಪವೂ ರುಚಿಯೂ ಬದಲಾಗಬೇಕು. ಮೊನ್ನೆ ನಾನೊಬ್ಬರಿಗೆ "ನೀತಿಯೆ ಮನುಷ್ಯನನ್ನು ದೇವರನ್ನಾಗಿ ಮಾಡುವದು" ಎಂದೆ; ಅವರು ಆಕಳಿಸಿದರು. "ಸಿದ್ಧಾರ್ಥನು ಬುದ್ಧನಾದದ್ದಾದರೂ ಹೇಗೆ?" ಎಂದೆ; ಅವರು ತೂಕಡಿಸಿದರು. "ಶುದ್ಧಬ್ರಹ್ಮದ ಸಾಕಾರಮೂರ್ತಿಯೆಂಬಂತೆ ಅವನ ಚರಿತ್ರವಿತ್ತು" ಎಂದೆ; ಅವರು ನಿದ್ದೆಮಾಡತೊಡಗಿದರು. "ಅಹಂ ಬ್ರಹ್ಮಾಸ್ಮಿ ಎಂಬ ಮಹಾವಾಕ್ಯವು ಸತ್ಯವಿದ್ದಮೇಲೆ........" ಹೀಗೇನೋ ಮತ್ತೆ ಮುಂದೆ ಆಡತಕ್ಕವನಿದ್ದೆ; ಅವರು ಗುರಕೆ ಹೊಡೆಯಹತ್ತಿದ್ದರಿಂದ ನನ್ನ ಮನಸ್ಸಿನಲ್ಲಿದ್ದದ್ದನ್ನೆ ನಾನು ನಾಲಿಗೆಯಿಂದಾಡುತ್ತಿರುವೆನೊ ಇಲ್ಲವೊ ಎಂಬುದು ನನಗೇ ಕೇಳಿಸದಾಯಿತು. ಮುಂದೆ ನಾನು "ಕಸಬರಿಗೆ—" ಎನ್ನುವದೊಂದೆ ತಡ ಒಮ್ಮಿಗೆಲೆ ಕಣ್ಣುಬಿಟ್ಟು ಅವರು "ಆಂ!" ಎಂದು ಕೇಳಿದರು. ಯಾಕಂದರೆ ಅವರಿಗೆ ಅದರ ಅರ್ಥವು ತಿಳಿಯಿತು.

"ಕಸಬರಿಗೆ! ಮುಂದೇನು!" ಎಂದು ಅವರು ಬಹಳ ಉತ್ಸುಕತೆಯಿಂದ ಕೇಳಿದರು. 'ಕಸಬರಿಗೆ' ಎಂದಕೂಡಲೇ ಅವರಿಗೆ ಅಪ್ಸರೆಯರು ಬಂದು ಚಾಮರ ಬೀಸಿದಂತಾಗಿರಬೇಕು.

"ಕಸಬರಿಗೆಯನ್ನು ನೋಡಿದರೆ ನನಗೆ ದೇವರ ನೆನಪಾಗುತ್ತದೆ" ಎಂದು ನಾನಂದೆ.

"ಅದೇಕೆ ಸ್ವಾಮೀ! ಕಸಬರಿಗೆ ಎಂದರೆ ಲಕ್ಷ್ಮಿ ಎಂದು ನಮ್ಮ ತಾಯಿ ಹೇಳುತ್ತಿದ್ದರು." ಎಂದು ಅವರಂದರು.

"ಲಕ್ಷ್ಮಿಯಿರಲಿ ನಾರಾಯಣನಿರಲಿ ಅದು ದೇವರು ಇಷ್ಟು ನಿಜ" ಎಂದು ನಾನಂದೆ.

"ತಾವು ಬಲ್ಲವರಾಗಿರುವದರಿಂದ ಅದು ಹೇಗೆ ಎಂಬುದನ್ನು ದಯಮಾಡಿ ಹೇಳುವಿರಾ?" ಎಂದವರೆಂದರು.

"ಅದನ್ನೇ ಹೇಳತಕ್ಕವನಿದ್ದೆ; ತಾವು ಗುರಕೆ ಹೊಡೆಯಲಾರಂಭಿಸಿದಿರಿ" ಎಂದೆ.

"ಏನೇನೋ ನೀತಿ, ನೇತಿ, ಬುದ್ಧ, ಬ್ರಹ್ಮ ಎನ್ನಲು ಮೊದಲು ಮಾಡಿದಿರಿ. ಪುರಾಣ ಪ್ರಾರಂಭವಾದೊಡನೆ ನಿದ್ದೆ ಇದ್ದೆ ಇದೆಯಲ್ಲ?" ಎಂದರು.

"ಬುದ್ಧ, ಬ್ರಹ್ಮ ತಿಳಿಯದಿದ್ದರೆ ಕಸಬರಿಗೆಯ ಮಹಾತ್ಮೆಯಾದರೂ ತಮಗೆ ತಿಳಿಯುವದು ಹೇಗೆ? ಕಸಬರಿಗೆ ಎಂದರೆ ಕಡಮೆ ಎಂದು ತಿಳಿದಿರಾ? ಬುದ್ಧ-ಬ್ರಹ್ಮರ ಪರಿಚಯವಿಲ್ಲೆಂದು ತಿರಸ್ಕಾರ, ಕಸಬರಿಗೆಯ ಅತಿಪರಿಚಯವಾಯಿತೆಂದು ಅನುಜ್ಞೆಯೇ? 'ಹಳೆ ಪತ್ರೋಳಿ' 'ಹರಕುಮೊಚ್ಚೆ' ಗಳ ಮಾಲೆಯಲ್ಲಿಯೆ ಕಸಬರಿಗೆಯನ್ನೂ ಗಯ್ಯಾಳಿಯ ಬಾಯಿಯು ಪೋಣಿಸಿದರೇನಾಯಿತು? ಸೋಹಂಕಾರಿಗಳ ಬಾಯಲ್ಲಿ ಬ್ರಹ್ಮದ ಗತಿಯೂ ಹಾಗೆಯೆ ಆಗಿದೆ. ಹುಲ್ಲಿನಿಂದಾದುದು ಎಂದು ಇದು ಹುಲ್ಲಿಗಿಂತಲೂ ಕ್ಷುಲ್ಲಕವಾಯಿತೇ? ಕಸಬಳೆಯುವದರಿಂದ ಕಸಕ್ಕಿಂತ ಕಡೆಯಾಯಿತೇ? ಮೂಲೆಯಲ್ಲಿರುವದರಿಂದ ಮೂಲೆಗುಂಪಾದಂತಾಯಿತೇ? ಕಸಬರಿಗೆ! ಮಹಾತ್ಮರಿಗೆ ಗಾಳಿಬೀಸುವ ನೆವದಿಂದ ಅವರನ್ನು ಮರೆಮಾಡಿ ತನ್ನನ್ನೆ ಮರೆಯಿಸಿಕೊಳ್ಳುವ ಚವರಿಯನ್ನು ನಿವಾಳಿಸಬೇಕು ಈ ಕಸಬರಿಗೆಯ ಮೇಲಿಂದ! 'ಜಗತ್ತಿನ ಹೊಲಸನ್ನು ಗೂಡಿಸಿ ಕಸದ ಮೂಲೆಯಲ್ಲಿಯೂ ಏಕಾಕಿಯಾಗಿ ಕುಳಿತು ಬಿಡುವ ಅವಧೂತನೇ ನಮೋ ನಮೋ!' ಹೀಗೆಂದು ಸಾಷ್ಟಾಂಗವೆರಗಿದರೆ ತಪ್ಪೇ ಕಸಬರಿಗೆಯ ಮುಂದೆ?" ಈಗಮಾತ್ರ ನನ್ನ ಮಿತ್ರರು ಆಕಳಿಸಲಿಲ್ಲ ತೂಕಡಿಸಲಿಲ್ಲ. ನಿದ್ದೆಯಿಲ್ಲ ಗುರಕೆಯಿಲ್ಲ.

"ಸ್ವಾಮೀ, ಕಸಬರಿಗೆಯೇ ಬ್ರಹ್ಮದ ಅಪ್ಪನಾಗಿ ಬಿಟ್ಟಿತಲ್ಲ!" ಎಂದರು.

"ಅಪ್ಪನೇನು? ಅವ್ವನೇನು? ಸರ್ವಂ ಖಲ್ವಿದಂ ಬ್ರಹ್ಮಂ! ಎಲ್ಲವೂ ಬ್ರಹ್ಮ!" ಎಂದೆ.

"ಈ ಕಸಬರಿಗೆಯೇ ಬುದ್ಧನೂ ಅಹುದೇನು?" ಎಂದು ಕೇಳಿದರು.

"ಅಯ್ಯೋ! ಬುದ್ಧನೇ! ಭಾರತದ ಕಸಗೂಡಿಸಿ ತಾನು ಮೂಲೆಗುಂಪಾದ ದೇವ! ಅಯ್ಯಾ, ಬುದ್ಧದೇವನನ್ನು ಕಸಬರಿಗೆ ಮಾಡಿಬಿಟ್ಟಿರುವಿರಿ! ಕಸಬರಿಗೆಯನ್ನಾದರೂ ಬುದ್ಧದೇವನನ್ನಾಗಿ ಮಾಡಿಕೊಳ್ಳಿ!" ಎಂದು ನಾನಂದೆ.

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು:— ಶ್ರೀ. ಕೃ. ಶ್ರೀ. ಚಿಟಗೇರಿ, ಬೆಂಗಳೂರು

## ೧ನೆಯ ಪರಿಚ್ಛೇದ

ಭುವನೇಶ್ವರೀ ದೇವತೆಯ ಮಂದಿರದಲ್ಲಿ ಸೇವಕನಾಗಿರುವ ಜಯಸಿಂಹನು ಜಾತಿಯಲ್ಲಿ ರಜಪೂತನು. ಕ್ಷತ್ರಿಯನು. ಆತನ ತಂದೆಯಾದ ಸುಚೇತ್‌ಸಿಂಹನು ತ್ರಿಪುರದ ಅರಮನೆಯ ಪುರಾತನ ಸೇವಕರಲ್ಲೊಬ್ಬನಾಗಿದ್ದನು. ಸುಚೇತ್‌ಸಿಂಹನು ಸಾಯುವ ಸಮಯದಲ್ಲಿ ಜಯಸಿಂಹನು ತೀರ ಚಿಕ್ಕವನಾಗಿದ್ದನು. ಈ ದಿಕ್ಕಿಲ್ಲದ ಮಗುವನ್ನು ದೊರೆಯು ಮಂದಿರದ ಕಾರ್ಯಕ್ಕಾಗಿ ನಿಯಮಿಸಿದನು. ಪುರೋಹಿತ ರಘುಪತಿಯೇ ಜಯಸಿಂಹನನ್ನು ಸಾಕುತಿದ್ದನು. ಅವನಿಗೆ ತಕ್ಕುದಾದ ವಿದ್ಯೆಯನ್ನು ಕಲಿಸುವ ಏರ್ಪಾಡನ್ನೂ ಮಾಡಿದ್ದನು. ಚಿಕ್ಕತನದಿಂದಲೂ ಜಯಸಿಂಹನು ಮಂದಿರದಲ್ಲಿಯೆ ಬೆಳೆದವನಾದುದರಿಂದ ಮಂದಿರವನ್ನವನು ಮನೆಯಂತೆಯೇ ಭಾವಿಸಿಕೊಂಡಿದ್ದನು. ಮಂದಿರದಲ್ಲಿಯ ಪ್ರತಿಯೊಂದು ಕಟ್ಟೆಮೆಟ್ಟಲುಗಳದು ಪ್ರತಿಯೊಂದು ಕಲ್ಲಕಂಡಿಗಳದು ಕೂಡ ಅವನಿಗೆ ಪರಿಚಯವಿದ್ದಿತು. ಜಯಸಿಂಹನಿಗೆ ತಾಯಿಯಿರಲಿಲ್ಲ. ಭುವನೇಶ್ವರಿಯ ಮೂರ್ತಿಯನ್ನೇ ತನ್ನ ತಾಯಿಯೆಂದು ತಿಳಿದುಕೊಂಡಿದ್ದನು. ಮೂರ್ತಿಯ ಎದುರಿನಲ್ಲಿ ಕುಳಿತು ಅವನು ಏನೇನೋ ಮಾತನಾಡುತಿದ್ದನು. ಆದರ ಅರ್ಥವು ಇನ್ನಾರಿಗೂ ತಿಳಿಯುತಿರಲಿಲ್ಲ. ಅವನಿಗೆ ಇನ್ನು ಕೆಲವು ಒಡನಾಡಿಗಳಿದ್ದರು. ಮಂದಿರದ ತೋಟದಲ್ಲಿಯ ಅನೇಕ ಗಿಡಗಳನ್ನು ಜಯಸಿಂಹನು ತನ್ನ ಕೈಯಲ್ಲಿಯ ಮನುಷ್ಯರಂತೆ ತಿಳಿದುಕೊಂಡಿದ್ದನು. ಅಲ್ಲಿ ನಾಲ್ಕೂ ಕಡೆಗೆ ದಿನದಿನವೂ ಅವನ ಗಿಡಮರಗಳು ಬೆಳೆಯುತಲಿದ್ದುವು. ಬಳ್ಳಿಗಳು ಕುಡಿ ಒಡೆದು ಹಬ್ಬುತಲಿದ್ದುವು. ಕೊಂಬೆಗಳು ಹೂಬಿಡುತಲಿದ್ದುವು. ನೆರಳು ವಿಸ್ತಾರವಾಗುತಲಿದ್ದಿತು. ಶ್ಯಾಮಲ ಪಲ್ಲವಿಯ (ಹ... ಲದ) ಪಲ್ಲವಸ್ತಬಕದಿಂದ ತುಂಬಿಕೊಂಡು ಉದ್ಯಾನ ವ... ಯೌವನಗರ್ವದಿಂದ ಪರಿಪೂರ್ಣವಾಗುತಲಿದ್ದಿತು. ಈ... ಜಯಸಿಂಹನ ಈ ಜೀವದ ಕಥೆಯೂ ಪ್ರೇಮದ ಕಥೆಯು... ಯಾರಿಗೂ ಹೆಚ್ಚಾಗಿ ತಿಳಿಯದು. ಆದರೆ ತನ್ನ ಅತುಲವಾ... ಸಾಮರ್ಥ್ಯಸಾಹಸಗಳಿಗಾಗಿಯೇ ಅವನು ಜನರಲ್ಲಿ ಹೆ... ಹೊಂದಿದನು.

ಮಂದಿರದ ಕೆಲಸಬೊಗಸೆಗಳನ್ನೆಲ್ಲ ಮುಗಿಸಿಬಿಟ್ಟು ಜ... ಸಿಂಹನು ತನ್ನ ಗುಡಿಸಿಲಿನ ಬಾಗಿಲಲ್ಲಿ ಕುಳಿತಿರುವನು. ಎ... ನಲ್ಲಿಯೇ ಮಂದಿರದ ವನವು; ಮೋಡವು ಮುಸುಕಿ ಮಳೆ... ಗಲು ತೊಡಗಿದೆ. ಮಳೆಯ ಹೊಸ ನೀರಿನಲ್ಲಿ ಜಯಸಿಂಹ... ಗಿಡಮರಗಳು ಮೀಯುತಿರುವವು. ಮಳೆಹನಿಗಳ ಕು... ದಿಂದ ಒಂದೊಂದು ಎಲೆಗಳಲ್ಲಿಯೂ ಹೊಸ ಹುರುಪು ಉಂಟ... ಬಿಟ್ಟಿದೆ. ಮಳೆಯ ನೀರಿನಿಂದಾದ ಚಿಕ್ಕ ಚಿಕ್ಕ ನೂರ... ಹೊನಲುಗಳು ಒಂದುಗೂಡಿ ಕಲಕಲಿಸುತ್ತ ಗೋಮತಿ... ನದಿಗೆ ಬಂದು ಸೇರುತಿರುವವು. ಜಯಸಿಂಹನು ಅರಳಿದ... ಯಿಂದ ತನ್ನ ವನದ ಕಡೆಗೆ ನೋಡುತ್ತ ಸುಮ್ಮನೆ ಕುಳಿ... ವನು. ನಾಲ್ಕು ದಿಕ್ಕುಗಳಲ್ಲಿಯೂ ಮೋಡದ ನಸುಗತ್ತಲೆಯು... ವನದ ಗಿಡಮರಗಳ ನೆರಳು; ದಟ್ಟವಾದ ತಳಿರುಗಳ ಶ್ಯಾಮ... ಬನಸಿರಿಯು; ಕಪ್ಪೆಗಳ ಕೂಗಿಗಂತೂ ಕಡೆಮೊದಲಿಲ್ಲ;... ಬಿಡದೆ ಸುರಿಯುತಿರುವ ಜಡಿಮಳೆಯ 'ಝುರ್ ಝುರ್' ಸ... ಸಪ್ಪುಳು ತುಂಬಿಬಿಟ್ಟಿದೆ; ಬನದ ನಡುವೆ ನಡೆದಿರುವ... ಬಗೆಯ ಹೊಸ ಮಳೆಯ ಹೊಡೆತವನ್ನು ಕಂಡು ಜಯಸಿಂಹ... ಹೃದಯವು ಹಿಗ್ಗಿ ಹಿಗ್ಗಿ ಕುಣಿಯುತ್ತಿದೆ.

ಮಳೆಯಲ್ಲಿ ನನೆನನೆಯುತ್ತಲೆ ರಘುಪತಿಯು ಅಲ್ಲಿಗೆ ಬಂದನು. ಜಯಸಿಂಹನು ಕೂಡಲೆ ಎದ್ದು ಕಾಲು ತೊಳೆದುಕೊಳ್ಳಲು ನೀರನ್ನೂ ಒಣಗಿಸಿಟ್ಟ ಮಡಿಬಟ್ಟೆಗಳನ್ನೂ ತಂದುಕೊಟ್ಟನು.

ರಘುಪತಿಯು ಯಾವುದನ್ನೂ ಒಲ್ಲದವನಾಗಿ ಮಾತನಾಡಿದನು. "ನಿನಗೆ ಬಟ್ಟೆಗಳನ್ನು ತರುವುದಕ್ಕೆ ಯಾರು ಹೇಳಿದರು?"—ಎಂದು ಬಟ್ಟೆಗಳನ್ನು ತೆಗೆದುಕೊಂಡು ಮನೆಯೊಳಕ್ಕೆ ಎಸೆದು ಬಿಟ್ಟನು.

ಜಯಸಿಂಹನು, ಕಾಲು ತೊಳೆಯಲು ನೀರನ್ನು ತೆಗೆದುಕೊಂಡು ಮುಂದೆ ಬಂದನು. ರಘುಪತಿಯು ವಿರಕ್ತಭಾವದ ಧ್ವನಿಯಲ್ಲಿ ಮಾತನಾಡಿದನು. "ತಡೆ ತಡೆ, ನಿನ್ನ ಆ ನೀರನ್ನು ಅಲ್ಲಿಯೇ ಇಟ್ಟುಬಿಡು." ಎಂದು ನುಡಿದು ಕಾಲಿನಿಂದ ನೂಕಿ ನೀರಿನ ತಂಬಿಗೆಯನ್ನು ಉರುಳಿಸಿ ಬಿಟ್ಟನು.

ಜಯಸಿಂಹನು, ಈ ಬಗೆಯ ವ್ಯವಹಾರದ ಮೂಲ ಕಾರಣವನ್ನು ತಿಳಿದುಕೊಳ್ಳಲು ಅಸಮರ್ಥನಾಗಿ ಮಾತನಾಡದೆ ನಿಂತುಕೊಂಡನು. ಬಟ್ಟೆಗಳನ್ನು ಬಿದ್ದ ಸ್ಥಳದಿಂದೆತ್ತಿ ಸರಿಯಾದ ಸ್ಥಳದಲ್ಲಿಡಬೇಕೆಂಬ ಹವಣಿಕೆಯಲ್ಲಿದ್ದನು. ರಘುಪತಿಯು ಮರಳಿ ವಿರಕ್ತಭಾವದಿಂದಲೆ ಮಾತನಾಡಿದನು. "ತಡೆ, ನಿಲ್ಲು! ಈ ಬಟ್ಟೆಗಳನ್ನು ನಿನ್ನ ಕೈಯಿಂದ ಕೊಡಲಾಗದು" ಎಂದು ನುಡಿದು ತಾನೇ ಹೋಗಿ ಬಟ್ಟೆಗಳನ್ನು ಮಾರ್ಪಡಿಸಿದನು. ನೀರನ್ನು ತಂದು ಕಾಲು ತೊಳೆದುಕೊಂಡನು.

ಜಯಸಿಂಹನು ಮೆಲ್ಲಮೆಲ್ಲಗೆ ಮಾತನಾಡಿದನು. "ಪ್ರಭುವೇ, ನನ್ನಿಂದ ಅಪರಾಧವೇನಾದರೂ ಸಂಭವಿಸಿರುವುದೇ?"

ರಘುಪತಿಯು ಕೊಂಚ ಉಗ್ರಸ್ವರದಿಂದ ನುಡಿದನು. "ಯಾರು ಹೇಳಿದರು ನೀನು ಅಪರಾಧ ಮಾಡಿರುವೆಯೆಂದು?" ಜಯಸಿಂಹನು ಕಳವಳಗೊಂಡು ಸುಮ್ಮನೆ ಕುಳಿತು ಬಿಟ್ಟನು.

ರಘುಪತಿಯು ಬೇಸತ್ತವನಂತೆ ಗುಡಿಸಿಲಿನ ಮುಂಬದಿಯಲ್ಲಿ ಎಡೆಯಾಡಲು ತೊಡಗಿದನು. ಹೀಗೆಯೇ ಅದೆಷ್ಟೊ ಇರುಳು ಕಳೆದುಹೋಯಿತು. ಕ್ರಮವಾಗಿ ಮತ್ತೆ ಮಳೆಯು ಬೀಳಲು ತೊಡಗಿತು. ಕೊನೆಗೆ ರಘುಪತಿಯು ಜಯಸಿಂಹನ ಬೆನ್ನ ಮೇಲೆ ಕೈಯನಿಟ್ಟು ಮೆಲುನುಡಿಯಿಂದ ಹೇಳಿದನು. "ಮಗು! ಮಲಗಿಕೊಳಹೋಗು. ರಾತ್ರಿಯು ಬಹಳವಾಯಿತು."

ಜಯಸಿಂಹನು ರಘುಪತಿಯ ಸ್ನೇಹಮಯವಾದ ಸ್ವರಕ್ಕೆ ಮೆಚ್ಚಿದವನಾಗಿ ಹೇಳಿದನು. "ಪ್ರಭುವು ಮೊದಲು ಮಲಗಲಿಕ್ಕೆ ಹೋಗಲಿ. ಬಳಿಕ ನಾನು ಹೋಗುವೆನು.

ರಘುಪತಿಯೆಂದನು. "ನನಗೆ ತಡೆಯಾಗುವುದು. ನೋಡು ಮಗೂ! ನಿನ್ನ ಬಳಿಯಲ್ಲಿ ನಾನಿಂದು ಬಲು ಕಠೋರತನವನ್ನು ತೋರಿಸುತಿರುವೆನು. ಇದಕ್ಕಾಗಿ ಮನದಲ್ಲೇನೂ ಭಾವಿಸದಿರು. ನನ್ನ ಮನಸ್ಸೇತಕ್ಕೊ ಚೆನ್ನಾಗಿಲ್ಲ. ವಿಶೇಷ ಮಹತ್ತ್ವದ ಸಂಗತಿಗಳನ್ನೆಲ್ಲ ನಿನಗೆ ನಾಳೆ ಬೆಳಗಿನಲ್ಲಿ ಹೇಳುವೆನು. ಈಗ ನೀನು ಮಲಗಿಕೊಳ್ಳು!" ಜಯಸಿಂಹನು "ಅಪ್ಪಣೆಯಂತಾಗಲಿ" ಎಂದು ನುಡಿದು ಮಲಗಿಕೊಳ್ಳಲೆಂದು ಹೊರಟು ಹೋದನು. ರಘುಪತಿಯು ರಾತ್ರಿಯೆಲ್ಲವೂ ಹಾಗೆಯೆ ಎಡೆಯಾಡುತ್ತಲೆ ಇದ್ದನು.

ಬೆಳಗಿನ ಸಮಯದಲ್ಲಿ ಜಯಸಿಂಹನು ಗುರುವಿಗೆ ನಮಸ್ಕಾರ ಮಾಡಿ ನಿಂತುಕೊಂಡನು. ರಘುಪತಿಯೆಂದನು. "ಜಯಸಿಂಹ! ತಾಯಿಯ ಬಲಿಯು ಕಟ್ಟಾಗಿ ಬಿಟ್ಟದೆ." ಜಯಸಿಂಹನು ವಿಸ್ಮಿತನಾಗಿ ಕೇಳಿದನು. "ಇದೇನು ಮಾತು ಪ್ರಭುವೇ?"

ರಘುಪತಿ:— ಹೀಗೆಂದು ರಾಜನ ಅಪ್ಪಣೆಯಾಗಿದೆ.

ಜಯಸಿಂಹ:—ಯಾವ ರಾಜನದು?

ರಘುಪತಿಯು ವಿರಕ್ತಭಾವದಿಂದ ಮಾತನಾಡಿದನು. "ಈ ಸ್ಥಳದಲ್ಲಿ ರಾಜರು ಇನ್ನೆಷ್ಟು ಜನರಿರುವರು? ಮಂದಿರದಲ್ಲಿ ಜೀವಬಲಿಯು ನಡೆಯಕೂಡದೆಂದು ಮಹಾರಾಜನಾದ ಗೋವಿಂದ ಮಾಣಿಕ್ಯನೇ ಅಪ್ಪಣೆ ಮಾಡಿರುವನು.

ಜಯಸಿಂಹ:—"ನರಬಲಿಯು?"

ರಘುಪತಿ:—"ಆಃ ಎಂತಹ ಉತ್ಪಾತವು? ನಾನು ಹೇಳುತಿರುವೆನು ಜೀವಬಲಿಯೆಂದು, ನೀನು ಕೇಳುತಿರುವೆ "ನರಬಲಿಯು?" ಎಂದು.

ಜಯಸಿಂಹ:— ಯಾವ ಪ್ರಾಣಗಳ ಬಲಿಯೂ ನಡೆಯಲಾಗದಂತೇನು?"

ರಘುಪತಿ:—ಅಹುದು! ಆಗದು.

ಜಯಸಿಂಹ: — ಮಹಾರಾಜ ಗೋವಿಂದಮಾಣಿಕ್ಯನು ಹೀಗೆಂದು ಅಪ್ಪಣೆ ಮಾಡಿರುವನೇ?

ರಘುಪತಿ:—"ಅಹುದಯ್ಯಾ ಒಂದೇ ಮಾತನ್ನು ಎಷ್ಟು ಸಲ ಹೇಳಬೇಕು ? "

ನಸು ಹೊತ್ತಿನ ವರೆಗೆ ಜಯಸಿಂಹನು ಯಾವ ಮಾತನ್ನೂ ಆಡಲಿಲ್ಲ. ತನ್ನ ಮನದಲ್ಲಿಯೆ ಮಾತ್ರ ಎಂದುಕೊಂಡನು. " ಮಹಾರಾಜನೇ ! ಗೋವಿಂದಮಾಣಿಕ್ಯನೇ ! " ಚಿಕ್ಕತನ ದಿಂದಲೂ ಜಯಸಿಂಹನು ಗೋವಿಂದಮಾಣಿಕ್ಯನನ್ನು ದೇವ ರೆಂದು ತಿಳಿಯುತ್ತಿದ್ದನು. ಬಾನಿನಲ್ಲಿ ಆಡುತಿರುವ ಪೂರ್ಣ ಚಂದ್ರನಲ್ಲಿ ಚಿಕ್ಕ ಹಸುಳೆಗಳು ತೋರಿಸುವಷ್ಟು ಆಸಕ್ತಿಯನ್ನು ಜಯಸಿಂಹನು ಗೋವಿಂದಮಾಣಿಕ್ಯನಲ್ಲಿ ಇಟ್ಟುಕೊಂಡಿದ್ದನು. ಗೋವಿಂದಮಾಣಿಕ್ಯನ ಪ್ರಶಾಂತವೂ ಸುಂದರವೂ ಆದ ಮುಖ ವನ್ನು ನೋಡಿ ಜಯಸಿಂಹನು ತನ್ನ ಪ್ರಾಣವನ್ನವನಿಗೆ ಆಹುತಿ ಯಾಗಿ ಅರ್ಪಿಸುವುದಕ್ಕೂ ಸಿದ್ಧನಾಗುತಿದ್ದನು.

ರಘುಪತಿಯೆಂದನು " ಇದಕ್ಕೆ ಪ್ರತಿಕ್ರಿಯೆಯನೊಂದನ್ನು ಮಾಡಲೇಬೇಕು "

ಜಯಸಿಂಹನು ಹೇಳಿದನು. " ಅಹುದು ಅದು ಅವಶ್ಯವು. ನಾನೀಗ ಮಹಾರಾಜರ ಬಳಿಗೆ ಹೋಗುವೆನು. ಆತನಿಗೆ ಬಿನ್ನವಿಸಿ ಹೇಳಿ—"

ರಘುಪತಿ:—"ಇದು ವ್ಯರ್ಥವಾದ ಪ್ರಯತ್ನವು."

ಜಯಸಿಂಹ:—ಹಾಗಾದರೆ ನಾನೀಗ ಮಾಡಲೇನು ?

ರಘುಪತಿಯು ನಸುಹೊತ್ತು ಯೋಚಿಸಿ ಹೇಳಿದನು. "ನಾಳೆ ಬೆಳಗಿನಲ್ಲಿ ನೀನು ಕುಮಾರ ನಕ್ಷತ್ರರಾಯನ ಬಳಿಗೆ ಹೋಗಿ ಗುಪ್ತ ರೀತಿಯಿಂದ ನನ್ನನ್ನು ಕಾಣುವಂತೆ ಆತನಿಗೆ ವಿಜ್ಞಾಪಿಸು."

## ೫ನೆಯ ಪರಿಚ್ಛೇದ

ನಸುಕಿನಲ್ಲಿ ನಕ್ಷತ್ರರಾಯನು ಬಂದು ರಘುಪತಿಯನ್ನು ನಮ ಸ್ಕರಿಸಿ ಕೇಳಿದನು. " ಮಹನೀಯ ! ಅದೇತಕ್ಕಾಗಿ ಅಪ್ಪಣೆ ಮಾಡುವುದಾಗಿದೆ?"

ರಘುಪತಿಯು ಹೇಳಿದನು. " ನಿನಗೆ ದೇವಿಯ ಆಜ್ಞೆಯೂ ಗಿದೆ. ಮೊದಲು ದೇವಿಗೆ ವಂದನೆ ಮಾಡು ನಡೆ!"

ಇಬ್ಬರೂ ಮಂದಿರದೊಳಕ್ಕೆ ಹೋದರು. ಒಡನೆಯೆ ಜಯ ಸಿಂಹನೂ ಹೋದನು. ನಕ್ಷತ್ರರಾಯನು ಭುವನೇಶ್ವರಿಯ ಎದುರಿನಲ್ಲಿ ಸಾಷ್ಟಾಂಗ ಪ್ರಣಿಪಾತವನ್ನು ಮಾಡಿದನು.

ರಘುಪತಿಯು ನಕ್ಷತ್ರರಾಯನಿಗೆ ಹೇಳಿದನು, " ಕುಮಾರಾ! ನೀನು ರಾಜನಾಗುವೆ."

ನಕ್ಷತ್ರರಾಯನೆಂದನು. " ನಾನು ರಾಜನಾಗು... ಪುರೋಹಿತ ಮಹಾಶಯ ! ನೀವಾಡಿದ ಮಾತು ನಿಜ... ನನಗಂತೂ ಕಾಣುವುದಿಲ್ಲ" ಎಂದು ನುಡಿದು ನಕ್ಷತ್ರರಾ... ಗಟ್ಟಿಯಾಗಿ ನಗಲು ತೊಡಗಿದನು.

ರಘುಪತಿಯೆಂದನು " ನೀನು ರಾಜನಾಗುವೆಯೆಂದು... ಹೇಳುತ್ತೇನೆ. ನಕ್ಷತ್ರರಾಯನು ಕೇಳಿದನು " ನಾನು... ನಾಗುವೆನೆಂದು ನೀವು ಹೇಳುತ್ತೀರಿ ?" ಎಂದು ರಘುಪ... ಮುಖದ ಕಡೆಗೆ ನಿಟ್ಟಿಸಿ ನೋಡಲು ತೊಡಗಿದನು.

ರಘುಪತಿಯೆಂದನು " ಹಾಗಾದರೆ ನಾನು ಸುಳ್ಳು ಮಾ... ಡುವೆನೇ ? "

ನಕ್ಷತ್ರರಾಯನೆಂದನು "ತಾವು ಸುಳ್ಳುಮಾತನಾಡು... ಯಾರೆನ್ನುವರು ? ನೋಡುವ ! ಮಹಾಶಯ ನಿನ್ನೆ ರಾತ್ರಿ... ಕನಸನ್ನು ಕಂಡೆನು. ಕನಸಿನಲ್ಲಿ ಹಾವನ್ನು ನೋ... ಹಾವನ್ನು ಕಂಡರೆ ಏನಾಗುವುದು ಹೇಳಿ ನೋಡುವ !"

ರಘುಪತಿಯು ನಗೆಯನ್ನು ಬಿಗಿಹಿಡಿದು ಹೇಳಿದನು." ... ಹಾವಿದ್ದಿತು ಹೇಳು ? ಅದರ ತಲೆಯಮೇಲೆ ಗುರುತಿದ್ದಿ...

ನಕ್ಷತ್ರರಾಯನು ಹೆಮ್ಮೆಯಿಂದ ಮಾತನಾಡಿದನು." ... ತಲೆಯ ಮೇಲೆ ಗುರುತಿದ್ದರೆ ಬರುವುದೇನು, ಇಲ್ಲ... ಹೋಗುವುದಾದರೂ ಏನು ?

ರಘುಪತಿಯೆಂದನು " ಹಾಗಿದ್ದರೆ ನಿನಗೆ ರಾಜ್ಯಲಾಭ... ವುದು. "

ನಕ್ಷತ್ರರಾಯನೆಂದನು " ಹಾಗಿದ್ದರೆ ನನಗೆ ರಾಜ್ಯ... ಗುವುದೇ ? ತಾವೂ ಹೇಳುತಿರುವಿರಿ ನನಗೆ ರಾಜ್ಯಲಾಭವ... ದೆಂದು, ಒಂದುವೇಳೆ ಆಗದಿದ್ದರೆ ? "

ರಘುಪತಿಯು ಹೇಳಿದನು. " ಏನು ? ನನ್ನ ಮಾತು... ಯಾಗುವುದೇ ? ಏನು ಮಾತಿದು ? "

ನಕ್ಷತ್ರರಾಯನೆಂದನು " ಇಲ್ಲ ಇಲ್ಲ ! ಹಾಗೆಂದಿಗೂ... ಲಾರದು. ತಾವು ಹೇಳುತಿರುವಿರಲ್ಲವೇ ನನಗೆ ರಾಜ್ಯ... ವಾಗುವುದೆಂದು ! ಏನೋ ಕ್ಷಣಕಾಲ ಮನದಲ್ಲಿ ಭಾವಿಸಿ... ಒಂದುವೇಳೆ ರಾಜ್ಯಲಾಭವಾಗಲಿಲ್ಲ ! ಅದೃಷ್ಟದಿಂದ ಹಾಗೆ... ಆಗಲಾರದೆಂದು..."

ರಘುಪತಿಯು ನುಡಿದನು. "ಇಲ್ಲ ಇಲ್ಲ ! ಎಂದೆಂದೂ ಇದರಲ್ಲಿ ಹುಸಿಯಾಗುವಂತಿಲ್ಲ.

ನಕ್ಷತ್ರರಾಯ—"ಇದರಲ್ಲಿ ಹುಸಿಯಾಗುವಂತಿಲ್ಲವೇ? ತಾವು ಮಾತನಾಡುವ ಮಾತೆಂದೂ ಸಟೆಯಾಗಲಾರದು. ನೋಡುವಾ! ಮಹಾಶಯ ! ನಾನು ರಾಜನಾದರೆ ತಮ್ಮನ್ನು ಮಂತ್ರಿಯನ್ನಾಗಿ ಮಾಡುವೆನು."

ರಘುಪತಿ:—"ಮಂತ್ರಿತ್ವದ ಅಧಿಕಾರವನ್ನು ನಾನು ಒದ್ದು ತುಳಿದುಬಿಡುವೆನು. "

ನಕ್ಷತ್ರರಾಯನು ಉದಾರಭಾವದಿಂದ ಹೇಳಿದನು. "ಆಗಲಿ! ಜಯಸಿಂಹನನ್ನು ಮಂತ್ರಿಯನ್ನಾಗಿ ಮಾಡುವೆನು.

ರಘುಪತಿಯೆಂದನು. "ಅದು ಮುಂದಿನ ಮಾತು. ರಾಜನಾಗುವುದಕ್ಕೆ ಮೊದಲೇ ಏನು ಮಾಡಬೇಕಾಗಿದೆಯೆಂಬುದನ್ನು ಮೊದಲು ಕೇಳು! ತಾಯಿಯು ರಾಜನ ರಕ್ತವನ್ನು ನೋಡಲು ಬಯಸುತಿರುವಳು. ನನ್ನ ಕನಸಿನಲ್ಲಿ ಅವಳು ಬಂದು ನನಗೆ ಆಜ್ಞೆಮಾಡಿ ಹೋಗಿರುವಳು."

ನಕ್ಷತ್ರರಾಯನೆಂದನು. "ತಾಯಿಯು ರಾಜನ ರಕ್ತವನ್ನು ನೋಡಲು ಬಯಸುತಿರುವಳೇ ? ತಮ್ಮ ಕನಸಿನಲ್ಲಿ ಬಂದು ಆಜ್ಞೆಮಾಡಿ ಹೋಗಿರುವಳೇ ? ಇದೊಳ್ಳೆಯ ಮಾತು !"

ರಘುಪತಿಯೆಂದನು. "ನಿನಗೆ ಗೋವಿಂದ ಮಾಣಿಕ್ಯನ ನೆತ್ತರನ್ನು ತರಬೇಕಾಗಿ ಬರುವುದು."

ನಕ್ಷತ್ರರಾಯನು ಅದೆಷ್ಟೋ ಹೊತ್ತಿನವರೆಗೆ ಬಾಯಿ ತೆರೆದು ನಿಂತನು. ರಘುಪತಿಯ ಈ ಮಾತುಗಳು ಅಷ್ಟೊಂದು ಸರಿಯಾದುವುಗಳೆಂದು ಮನಸ್ಸಿಗೆನಿಸಲಿಲ್ಲ.

ತೀವ್ರ ಸ್ವರದಿಂದ ರಘುಪತಿಯು ಮತ್ತೆ ನುಡಿದನು. "ಬಹಳಮಾಡಿ ಬಂಧುಪ್ರೇಮವು ಮುಂದೆ ಬಂದು ನಿಂತಿರಬಹುದು. ಅಹುದಲ್ಲವೇ ?"

ನಕ್ಷತ್ರರಾಯನು ಕೈಗಡ ತಂದ ನಗೆಯನ್ನು ನಕ್ಕು ಮಾತನಾಡಿದನು. "ಹಾಃ ಹಾಃ ಬಂಧುಪ್ರೇಮವಂತೆ ! ಪುರೋಹಿತವರರು ಏನೇ ಆಗಲಿ ಒಳ್ಳೇ ಮಾತನ್ನು ಆಡುತಿರುವರು. ಅಂತೆ ಬಂಧುಪ್ರೇಮ !" ಇಷ್ಟೊಂದು ತಮಾಷೆಯ ಇಷ್ಟೊಂದು ನಗೆ ಬರುವ ಮಾತು ಇನ್ನಾವುದೂ ಇಲ್ಲವೋ ಎನೋ! ಎಂಬಂತೆ ನಕ್ಷತ್ರರಾಯನು ನಕ್ಕು ಬಿಟ್ಟನು. ಬಂಧು ಪ್ರೇಮವೇ? ಎಂತಹ ನಾಚಿಕೆಗೇಡಿತನದ ಮಾತು ! ಎಂದವನ ಭಾವದ ನಟನೆ. ಆದರೆ ನಕ್ಷತ್ರರಾಯನ ಜೀವದ ತೀರ ಬಳಿಯಲ್ಲಿ ಬಂಧುಪ್ರೇಮವು ಜಾಗ್ರತವಾಗಿದ್ದಿತು. ಅದನ್ನು ಬರಿ ನಗೆ ಮಾತಿನಿಂದ ಹಾರಿಸಿ ಬಿಡಲು ಬರುವಂತಿರಲಿಲ್ಲ. ಈ ಮಾತನ್ನು ಅವನ ಅಂತರ್ಯಾಮಿಯೊಬ್ಬನೇ ಬಲ್ಲನು.

ರಘುಪತಿಯೆಂದನು. "ಹಾಗಾದರೆ ನೀನೀಗ ಏನು ಮಾಡುವೆ ? ಹೇಳು !"

ನಕ್ಷತ್ರರಾಯನೆಂದನು "ಏನು ಮಾಡಲಿ? ಅಪ್ಪಣೆಯಾಗಲಿ !"

ರಘುಪತಿ:—"ಮಾತುಗಳನ್ನು ಚೆನ್ನಾಗಿ ಚಿತ್ತಗೊಟ್ಟು ಕೇಳಿಕೊಳ್ಳು ! ಗೋವಿಂದಮಾಣಿಕ್ಯನ ರಕ್ತವನ್ನು ತಾಯಿಯ ದರ್ಶನಕ್ಕೆ ತರಬೇಕು"

ನಕ್ಷತ್ರರಾಯನು ಮಂತ್ರಮುಗ್ಧನಾದವನಂತೆ ಮಾತನಾಡಿಬಿಟ್ಟನು. "ಗೋವಿಂದಮಾಣಿಕ್ಯನ ರಕ್ತವನ್ನು ತಾಯಿಯ ದರ್ಶನಕ್ಕೆ ತರಬೇಕು !"

ರಘುಪತಿಯು ಅತ್ಯಂತ ತಿರಸ್ಕಾರದಿಂದ ಮಾತನಾಡಿದನು. "ಇಲ್ಲ, ನಿನ್ನಿಂದೇನೂ ಆಗುವುದಿಲ್ಲ."

ನಕ್ಷತ್ರರಾಯನೆಂದನು "ಅದೇತಕ್ಕೆ ಆಗುವುದಿಲ್ಲ ? ಏನು ಹೇಳುವಿರೋ ಅದನ್ನು ನಾನು ಮಾಡುವೆನು. ತಾವು ಅಪ್ಪಣೆಯನ್ನಾದರೂ ದಯಪಾಲಿಸಿ !"

ರಘುಪತಿ :—"ಆಗಲಿ, ನಾನು ಅಪ್ಪಣೆಯನ್ನೇ ಮಾಡುತ್ತೇನೆ."

ನಕ್ಷತ್ರರಾಯ :—"ಏನೆಂದು ಅಪ್ಪಣೆ ಮಾಡುವಿರಿ?"

ರಘುಪತಿಯು ವಿರಕ್ತಭಾವದಿಂದ ನುಡಿದನು. "ರಾಜನ ರಕ್ತದ ದರ್ಶನವಾಗಬೇಕೆಂದು ತಾಯಿಯ ಇಚ್ಛೆಯಿದೆ. ನೀನು ಗೋವಿಂದಮಾಣಿಕ್ಯನ ರಕ್ತವನ್ನು ತೋರಿಸಿ ಆಕೆಯ ಇಚ್ಛೆಯನ್ನು ಪೂರಯಿಸಬೇಕು ! ಇದೇ ನನ್ನ ಅಪ್ಪಣೆ."

ನಕ್ಷತ್ರರಾಯ :—"ನಾನು ಇದೀಗಲೆ ಹೋಗಿ ನಂಬಿಗೆಯ ಬೇಹಾದೊಬ್ಬನನ್ನು ಈ ಕೆಲಸಕ್ಕಾಗಿ ನಿಯಮಿಸುವೆನು."

ರಘುಪತಿ :—"ಬೇಡ ಬೇಡ! ನಮ್ಮೀ ಮಾತಿನೊಳಗಿನ ಒಂದು ಅಕ್ಷರವು ಕೂಡ ಇನ್ನೊಬ್ಬರಿಗೆ ಗೊತ್ತಾಗಕೂಡದು. ಒಬ್ಬನೇ ಒಬ್ಬ ಜಯಸಿಂಹನನ್ನು ಮಾತ್ರ ನಿನ್ನ ಸಹಾಯಕ್ಕೆ ಕರೆದುಕೊಳ್ಳು! ನಾಳೆ ಬೆಳಗಿನಲ್ಲಿಯೇ ಬಂದು ಬಿಡು! ಯಾವ ಉಪಾಯದಿಂದ ಈ ಕಾರ್ಯವನ್ನು ಸಾಧಿಸಬಹುದೆಂಬುವನ್ನು ಹೇಳುವೆನು."

ನಕ್ಷತ್ರರಾಯನಿಗೆ 'ರಘುಪತಿಯ ಕೈಯಿಂದೊಮ್ಮೆ ದಾಟ ಪಾರಾದೆ' ಎನ್ನಿಸಿತು. ತನ್ನಿಂದಾದಷ್ಟು ಶೀಘ್ರವಾಗಿ ಅಲ್ಲಿಂದ ಹೊರಟು ನಡೆದನು.

## ೬ನೆಯ ಪರಿಚ್ಛೇದ

ನಕ್ಷತ್ರರಾಯನು ಹೊರಟು ಹೋಗಲು ಜಯಸಿಂಹನು ನುಡಿದನು. "ಗುರುದೇವ! ಇಂತಹ ಭಯಂಕರವಾದ ಮಾತುಗಳನ್ನು ನಾನು ಎಂದೆಂದೂ ಕೇಳಿರಲಿಲ್ಲ. ತಾವು ದೇವಿಯ ಸನ್ನಿಧಿಯಲ್ಲಿಯೇ ದೇವಿಯ ಹೆಸರಿನಿಂದಲೆ ಅಣ್ಣನ ಕೊಲೆಯ ಬಗೆಗೆ ತಮ್ಮನೊಡನೆ ಮಾತನಾಡಿದಿರಿ. ನಾನದನ್ನು ಇಲ್ಲಿಯೇ ನಿಂತುಕೊಂಡು ಕೇಳಿದೆನು."

ರಘುಪತಿಯೆಂದನು. "ಬೇರೆ ಯಾವ ಉಪಾಯವಿದೆ.? ಹೇಳು!"

ಜಯಸಿಂಹನೆಂದನು. "ಉಪಾಯವು! ಯಾವುದರ ಉಪಾಯವು?"

ರಘುಪತಿ:—"ನೀನೂ ಆ ನಕ್ಷತ್ರರಾಯನಂತೆಯೇ ಆಗಿರುವೆಯೆಂದು ಕಾಣುವುದು. ಇದುವರೆಗೂ ನೀನು ಏನು ಕೇಳಿರುವೆ?"

ಜಯಸಿಂಹ:—"ಯಾವುದನ್ನು ಕೇಳಿದೆನೋ ಅದು ಕೇಳುವುದಕ್ಕೆ ಕೂಡ ಯೋಗ್ಯವಾದುದಲ್ಲ. ಅದನ್ನು ಕೇಳುವುದರಿಂದ ಪಾಪವು ಬರುವುದು."

ರಘುಪತಿ:—"ಪಾಪ ಪುಣ್ಯಗಳು ನಿನಗೇನು ಗೊತ್ತು?"

ಜಯಸಿಂಹ:—"ಇಷ್ಟುದಿನ ತಮ್ಮ ಬಳಿಯಲ್ಲಿಯೆ ಶಿಕ್ಷಣ ಪಡೆದಿರುವೆನು. ಪಾಪ ಪುಣ್ಯಗಳ ಗೊತ್ತು ನನಗೆ ಕೊಂಚವೂ ಆಗಿಲ್ಲವೇನು?"

ರಘುಪತಿ:—"ಮಗು ಕೇಳು! ನಿನಗೆ ಈಗ ಇನ್ನೊ[illegible] ಪಾಠವನ್ನು ಕಲಿಸುವೆನು. ಜಗತ್ತಿನಲ್ಲಿ ಪಾಪವಿಲ್ಲ, ಪುಣ್ಯ[illegible] ಎಲ್ಲವೂ ಸುಳ್ಳು; ಎಲ್ಲಿಯ ತಂದೆ, ಎಲ್ಲಿಯ ತಾಯಿ, ಎಲ್ಲಿ[illegible] ಅಣ್ಣ, ಯಾರಿಗೆ ಯಾರು! ಕೊಲೆಯು ಪಾಪವಿದ್ದದ್ದು[illegible] ವಿದ್ದಲ್ಲಿ ಎಲ್ಲ ಕೊಲೆಗಳೂ ಸಮಾನವಲ್ಲವೇ? ಆದರೆ ಕೊಲೆ[illegible] ಪಾಪವೆಂದು ಹೇಳುವವರಾರು? ಕೊಲೆಯು ಪ್ರತಿದಿನ[illegible] ಪ್ರತಿಕ್ಷಣವೂ ನಡೆದೇ ಇರುವುದು.

"ಎಷ್ಟೊ ಜೀವಿಗಳು ತಲೆಯಮೇಲೆ ಬಂಡೆಬಿದ್ದು ಸ[illegible] ಹೋಗುವವು. ಇನ್ನೆಷ್ಟೋ ಜೀವಿಗಳು ಬಿರುಗಾಳಿಯಲ್ಲಿ [illegible] ಸತ್ತು ಹೋಗುವವು. ಮತ್ತೆ ಎಷ್ಟೋ ಜೀವಿಗಳು ಪ್ರಾಣಿ[illegible] ಬಾಯಲ್ಲಿ ಬಿದ್ದು ಸತ್ತುಹೋಗುವವು. ಬೇರೆ ಎಷ್ಟೋ ಜೀ[illegible]ಗಳು ಮನುಷ್ಯರ ಕತ್ತಿಯೇಟನ್ನು ತಿಂದು ಸತ್ತು ಹೋಗುವವು. ನಮ್ಮ ಹೆಜ್ಜೆಯ ಬುಡಕ್ಕೆ ಸಿಕ್ಕು ಪ್ರತಿದಿನವೂ ಅನೇಷ್ಟು [illegible]ಗಳು ಸಾಯುವುದಿಲ್ಲ? ನಾವು ಅವುಗಳಿಗಿಂತ ಇಷ್ಟೊಂ[illegible] ದೊಡ್ಡವರಾಗಿರುವೆವೇತಕ್ಕೆ? ಈ ಎಲ್ಲ ಕ್ಷುದ್ರ ಪ್ರಾಣಿ[illegible] ಜೀವನಮೃತ್ಯುಗಳ ಆಟವು ಅವಳದೇ ಅಲ್ಲವೇ? ಆ ಮ[illegible] ಶಕ್ತಿಯ ಮಾಯೆಯದೇ ಅಲ್ಲವೇ? ಕಾಲರೂಪಿಣಿಯಾದ ಮ[illegible] ಮಾಯೆಯ ಎದುರಿನಲ್ಲಿ ಪ್ರತಿದಿನ–ಪ್ರತಿನಿಮಿಷದಲ್ಲಿ[illegible] ಇಂತಹ ಲಕ್ಷ ಲಕ್ಷ ಕೋಟಿ ಕೋಟಿ ಪ್ರಾಣಿಗಳ ಬಲಿ[illegible]ವಾಗುವುದು. ಜಗತ್ತಿನ ನಾಲ್ಕು ದಿಕ್ಕುಗಳಿಂದಲೂ ಹ[illegible] ಬರುವ ಪ್ರಾಣಶೋಣಿತದ ಪ್ರವಾಹವು ಜಗತ್ತಿನ ಮ[illegible] ಖರ್ಪರವನ್ನೇ ಮುಳುಗಿಸಿಬಿಟ್ಟಿರುವುದು. ಆ ಪ್ರವಾಹ[illegible] ಮತ್ತೊಂದು ಕಣವನ್ನು ಸೇರಿಸುವುದೆಂದರೂ ನಮ್ಮಿಂದಾ[illegible] ದೇವಿಯು ತನ್ನ ಬಲಿಯನ್ನು ತಾನಾಗಿಯೇ ಏಕಕಾಲದಲ್ಲಿ[illegible] ಗ್ರಹಣಮಾಡುವಳು. ಆಗ ನಡುವೆ ನಿಂತು ತಡೆಯುವು[illegible] ನಮ್ಮಿಂದಾಗದು."

ಆಗ ಜಯಸಿಂಹನು ಮೂರ್ತಿಯ ಕಡೆಗೆ ತಿರುಗಿ ಮ[illegible]ನಾಡಲು ತೊಡಗಿದನು. "ಇದಕ್ಕಾಗಿಯೇ ಏನು ಎಲ್ಲ[illegible] ನಿನ್ನನ್ನು ತಾಯಿಯೆಂದು ಕರೆಯುವರು! ನೀನು ಇಂತ[illegible] ಪಾಷಾಣಿಯೇ? ರಾಕ್ಷಸೀ! ಎಲ್ಲ ಜಗತ್ತಿನಿಂದಲೂ ನೆತ್ತರ[illegible] ಹಿಂಡಿಕೊಂಡು ಹೊಟ್ಟೆಯಲ್ಲಿ ಸುರಿದುಕೊಳ್ಳುವುದಕ್ಕಾಗಿ[illegible] ನೀನು ಈ ಕರಾಳವಾದ ನಾಲಿಗೆಯನ್ನು ಹೊರಕ್ಕೆ ಚಾಚಿ[illegible]ವೆಯಾ? ಸ್ನೇಹ ಪ್ರೇಮ, ಮಮತೆ, ಸೌಂದರ್ಯ, ಧ[illegible]

ಇವೆಲ್ಲವೂ ಸುಳ್ಳು, ಕೊನೆಯಿಲ್ಲದ ನಿನ್ನ ಈ ರಕ್ತತೃಷೆಯು ಮಾತ್ರ ಸತ್ಯವೇ ? ನಿನ್ನ ಹೊಟ್ಟೆಯನ್ನು ತುಂಬುವುದಕ್ಕಾಗಿಯೇ ಮನುಷ್ಯರ ಕತ್ತಿನಮೇಲೆ ಮನುಷ್ಯರೇ ಕತ್ತಿಯನ್ನಿಡಬೇಕೇ ? ತಮ್ಮನು ಅಣ್ಣನ ಕೊಲೆಯನ್ನು ಮಾಡಬೇಕೇ ? ತಂದೆಮಕ್ಕಳು ಕಡಿದಾಡಬೇಕೇ ? ನಿಷ್ಠುರೇ ! ನಿಜವಾಗಿಯೂ ಇದೇ ನಿನ್ನ ಇಚ್ಛೆಯಿದ್ದಲ್ಲಿ ಮೋಡಗಳು ನೆತ್ತರ ಮಳೆಯನೇತಕ್ಕೆ ಕರೆಯ ಲೊಲ್ಲವು ? ಕರುಣಾಸ್ವರೂಪಿಣಿಗಳಾದ ನದಿಗಳು ತಮ್ಮ ನೆತ್ತರಹೊನಲುಗಳನ್ನು ತೆಗೆದುಕೊಂಡು ನೆತ್ತರಗಡಲನ್ನೇ ಏತಕ್ಕೆ ಸೇರಲೊಲ್ಲವು ? ಇಲ್ಲ ಇಲ್ಲ ! ಅಮ್ಮಾ ! ನೀನು ಗಟ್ಟಿ ಯಾಗಿ ಮಾತನಾಡು. ಈ ವಿದ್ಯೆ ಹುಸಿಯೇ ? ಈ ಶಾಸ್ತ್ರಗಳು ಸುಳ್ಳೇ? ನಮ್ಮ ತಾಯಿಯನ್ನು ತಾಯಿಯೆಂದು ಹೇಳಕೂಡದೇ– ಮಕ್ಕಳ ನೆತ್ತರವನ್ನು ಕುಡಿಯುವ ರಕ್ಕಸಿಯೆಂದು ಹೇಳ ಬಹುದೇ ? ಈ ಮಾತನ್ನು ನಾನೆಂದೂ ಕೇಳಿ ಸಹಿಸಲಾರೆ. " ಜಯಸಿಂಹನ ಕಣ್ಣುಗಳಿಂದ ಕಂಬನಿಗಳು ಹಳ್ಳವಾಗಿ ಹರಿಯು ತಿದ್ದುವು. ಅವನು ಈಗ ತಾನಾಡಿದ ಮಾತನ್ನು ನೆನೆದುಕೊಂಡು ತಾನೇ ಯೋಚಿಸತೊಡಗಿದನು. ಈ ಮಾತು ಇದಕ್ಕೆ ಮೊದಲು ಅವನ ಮನದಲ್ಲಿ ಎಂದೂ ಬಂದಿರಲಿಲ್ಲ. ರಘು ಪತಿಯು ಈ ನೂತನಶಾಸ್ತ್ರಪಾಠವನ್ನು ಹೇಳಿಕೊಡದಿದ್ದಲ್ಲಿ ಜಯಸಿಂಹನ ಮನದಲ್ಲಿ ಮುಂದೆ ಕೂಡ ಎಂದೆಂದೂ ಬರು ತ್ತಿರಲಿಲ್ಲ.

ರಘುಪತಿಯು ಕೊಂಚ ನಕ್ಕು ನುಡಿದನು. "ಹಾಗಾದರೆ ಬಲಿ ದಾನವನ್ನು ತರಗೆಲೆಯಂತೆ ಒಮ್ಮೆಲೆ ಹಾರಿಸಿ ಬಿಡಬೇಕೆನ್ನುವೆ ಯೇನು ?"

ಜಯಸಿಂಹನು ತನ್ನ ತೀರ ಎಳೆಯತನದಿಂದಲೂ ಬಲಿದಾನ ವನ್ನು ನೋಡುತ್ತ ಬಂದಿದ್ದನು. ಆದುದರಿಂದಲೆ ಈ ಬಲಿ ದಾನವು ಎಂದಾದರೂ ನಿಂತುಹೋಗಬಹುದು, ಇಲ್ಲವೆ ನಿಂತು ಹೋಗುವುದು ಸರಿಯಾದುದು, ಎಂಬ ಮಾತು ಸ್ವಲ್ಪವೂ ಆತನ ಮನಸ್ಸಿಗೆ ಹಿಡಿಯಲೊಲ್ಲದು. ಆದೇತಕ್ಕೋ ಏನೋ ಈ ಮಾತನ್ನು ನೆನಸಿದೊಡನೆಯೇ ಎದೆಗೆ ಏಟು ತಗಲಿದಂತಾ ಗುತಿದ್ದಿತು. ಆದಕ್ಕಾಗಿಯೇ ರಘುಪತಿಯ ಮಾತಿಗೆ ಮರು ಮಾತೆಂದು ಜಯಸಿಂಹನು ಹೇಳಿದನು. "ಅದರ ವಿಷಯವೇ ಬೇರೆ. ಅದಕ್ಕೆ ಇನ್ನೇನಾದರೂ ಅರ್ಥವಿರಬಹುದು. ಅದರಲ್ಲಿ ಪಾಪವೇನೂ ಇಲ್ಲವೆಂದು ನನಗೆ ತೋರುವುದು. ಆದರೆ ಹೀಗಿದ್ದ

ಮಾತ್ರಕ್ಕೇ ಅಣ್ಣನನ್ನು ತಮ್ಮನು ಕೊಲೆಮಾಡಬೇಕೇ ? ಅದ ಕ್ಕಾಗಿಯೇ ಗೋವಿಂದಮಾಣಿಕ್ಯನ... ಪ್ರಭುವೆ ! ತಮ್ಮ ಕಾಲಿಗೆ ಬಿದ್ದುಕೊಳ್ಳುವೆನು. ನನ್ನನ್ನು ವಂಚಿಸಬೇಡಿ ! ರಾಜನ ರಕ್ತವು ಸಿಕ್ಕದಿದ್ದರೆ ದೇವಿಗೆ ತೃಪ್ತಿಯಾಗುವುದಿಲ್ಲವೆಂತೆಯೇ ? ನಿಜ ವಾಗಿಯೂ ತಾಯಿಯು ಸ್ವಪ್ನದಲ್ಲಿ ಬಂದು ನಿಮಗಿದನ್ನು ಹೇಳಿದಳೇ ?"

ರಘುಪತಿಯು ಕೆಲವು ನಿಮಿಷ ಸುಮ್ಮನೆ ಇದ್ದು ಮಾತ ನಾಡಿದನು. "ತಾಯಿ ನಿಜವಾಗಿಯೂ ಹೇಳಿದಳು. ನಾನೇನು ಹುಟ್ಟಿಸಿ ಹೇಳುವೆನೇ ? ನೀನೇತಕ್ಕೆ ನನ್ನಲ್ಲಿ ಅವಿಶ್ವಾಸವನ್ನು ತೋರಿಸುತಿರುವೆ?"

ಜಯಸಿಂಹನು ರಘುಪತಿಯ ಪಾದಧೂಲಿಯನ್ನು ಕೈಗೆ ತೆಗೆದುಕೊಂಡು ಹೇಳಿದನು. "ಗುರುದೇವನ ವಿಷಯದಲ್ಲಿರುವ ನನ್ನ ನಂಬುಗೆಯೆಂದೂ ಸಡಿಲಲಾರದು. ಆದರೆ ನಕ್ಷತ್ರರಾಯ ನದೂ ರಾಜಕುಲದಲ್ಲಿಯೆ ಜನ್ಮವಾಗಿರುವುದಲ್ಲವೇ ?

ರಘುಪತಿಯೆಂದನು "ದೇವತೆಯ ಸ್ವಪ್ನವು ಕೇವಲ ಸಂಜ್ಞೆ. ಎಲ್ಲ ಸಂಗತಿಯೂ ತಿಳಿಯಲಾರದು. ಅನೇಕ ವಿಷಯವನ್ನು ಊಹಿಸಿ ತಿಳಿದುಕೊಳ್ಳಬೇಕಾಗುವುದು. ನಿಚ್ಚಳವಾಗಿಯೇ ಕಾಣುತಿರುವುದು ನೋಡು ! ಗೋವಿಂದಮಾಣಿಕ್ಯನ ಬಗೆಗೆ ದೇವಿಯು ಅಸಂತುಷ್ಟಳಾಗಿರುವಳು. ಹೀಗಿರಲು ದೇವಿಯು ರಾಜರಕ್ತವನ್ನು ಬಯಸಿದರೆ ಅದು ಗೋವಿಂದಮಾಣಿಕ್ಯನ ರಕ್ತವೆಂದೇ ತಿಳಿಯಬೇಕಲ್ಲವೇ ?"

ಜಯಸಿಂಹನೆಂದನು "ಈ ಮಾತು ನಿಜವಿದ್ದರೆ ನಾನೇ ರಾಜರಕ್ತವನ್ನು ತರುವೆನು. ನಕ್ಷತ್ರರಾಯನನ್ನು ಪಾಪದ ಕೆಸರಿ ನಲ್ಲಿ ಕುಳ್ಳಿರಿಸಬೇಡಿ. "

ರಘುಪತಿಯೆಂದನು:– "ದೇವಿಯ ಆಜ್ಞೆಯನ್ನು ಪಾಲಿಸು ತಿರುವಾಗ ಯಾವ ಪಾತಕವೂ ಬಾರದು."

ಜಯಸಿಂಹ:–"ಪುಣ್ಯಬರುವುದಲ್ಲವೇ ಪ್ರಭು ! ಹಾಗಾದರೆ ಆ ಪುಣ್ಯವನ್ನು ನಾನೇ ಸಂಪಾದಿಸುವೆನು."

ರಘುಪತಿಯೆಂದನು. "ಹಾಗಾದರೆ ನಿಜವಾದ ಮಾತನ್ನು ನಿನಗೆ ಹೇಳಲೇ ? ನಾನು ನಿನ್ನನ್ನು ಚಿಕ್ಕತನದಿಂದಲೂ ಮಗನಿ ಗಿಂತ ಹೆಚ್ಚಾದ ಆಸ್ಥೆಯಿಂದ ಪ್ರಾಣಕ್ಕಿಂತ ಹೆಚ್ಚಾದ ಪ್ರೇಮ ದಿಂದ ರಕ್ಷಿಸುತ್ತ ಬಂದಿರುವೆನು, ನಾನು ನಿನ್ನನ್ನು ಅಗಲಿರಲಾರೆ.

ನಕ್ಷತ್ರರಾಯನು ಗೋಪಿಸುವ ಮಾಣಿಕ್ಯನ ಕೊಲೆ ಮಾಡಿ ಬಂದು ವೇಳೆ ರಾಜನಾದರೆ, ಅವನಿಗೆ ಯಾರೂ ಏನನ್ನೂ ನುಡಿಯರು. ಆದರೆ ನೀನು ರಾಜನ ಮೈಮೇಲೆ ಕೈಯೆತ್ತಿದಲ್ಲಿ ನಿನ್ನನ್ನು ನಾನು ಮರಳಿ ಪಡೆಯಲಾರೆ."

ಜಯಸಿಂಹನೆಂದನು. "ನನ್ನ ಸ್ನೇಹವೇ ? ತಂದೆಯೇ, ನಾನು ಕ್ಷುದ್ರಪದಾರ್ಥವು. ನನ್ನ ಸ್ನೇಹಕ್ಕಾಗಿ ನೀನೊಂದು ಇರುವೆಯ ಹಾನಿಯನ್ನಾದರೂ ಮಾಡಕೂಡದು. ನನ್ನ ವಿಷಯಕವಾದ ಸ್ನೇಹಕ್ಕಾಗಿ ನೀನು ಪಾತಕವನ್ನು ತೊಡೆದುಕೊಂಡರೆ ನಿನ್ನಾ ಸ್ನೇಹವನ್ನು ಬಹುಕಾಲ ನಾನು ಅನುಭವಿಸಲಾರೆನೆಂದು ನನ್ನ ಭಾವನೆ, ಅಲ್ಲದೆ ಆ ಸ್ನೇಹದ ಪರಿಣಾಮವು ಎಂದೂ ಒಳ್ಳೆ... ದಾಗದೆಂದು ನನಗೆ ತೋರುತಿರುವುದು."

ರಘುಪತಿಯು ಒಮ್ಮೆಲೆ ಮಾತನಾಡಿದನು. "ಒಳ್ಳೆಯ... ಆ ವಿಷಯವನ್ನೆಲ್ಲ ಆ ಮೇಲೆ ನೋಡೋಣ. ನಾಳೆ ನಕ್ಷತ್ರ... ರಾಯನು ಬಂದನೆಂದರೆ ಏನಾದರೊಂದು ವ್ಯವಸೆಯು ಆ... ವುದು."

ಜಯಸಿಂಹನು ಮನದಲ್ಲಿಯೇ ಪ್ರತಿಜ್ಞೆ ಮಾಡಿಕೊಂಡ... "ನಾನೇ ರಾಜನ ನೆತ್ತರವನ್ನು ತರಬೇಕು. ತಾಯಿಯ ಹೆಸ... ನಲ್ಲಿಯೂ ಗುರುದೇವನ ಹೆಸರಿನಲ್ಲಿಯೂ ಭ್ರಾತೃಹತ್ಯೆ... ನಡೆಯದಂತೆ ಮಾಡಬೇಕು."

---

# ವಾದಭೂಮಿ

## ಇಂತಹರ ಪರಂಪರೆಯನ್ನು ಏಕೆ ಕಾಯಬೇಕು?

ಸಂಪಾದಕ ಮಹಾಶಯ,

ತಾವು ತಮ್ಮ ಸಂಪಾದಕತ್ವದಲ್ಲಿ ಹೊರಟ ಮೊದಲ ನೆಯ ಸಂಚಿಕೆಯ ಬಿಡಿನುಡಿಗಳಲ್ಲಿ ಬರೆದ 'ಪರಂಪರಾವಿಚ್ಛೇದವು ಸಾಕು' ಎಂಬುದನ್ನು ಓದಿದುದಾಯ್ತು. ಅದರೊಳಗಿನ ವಿಚಾರಪದ್ಧತಿಯು ನನಗೂ ಮಾನ್ಯ. ಆದರೆ ಆ ಬಿಡಿನುಡಿಯ ಅವಶ್ಯಕತೆಯು ಈಗ ಇರಲಿಲ್ಲೆಂದು ನನ್ನ ಮತ. ಏಕೆಂದರೆ ಭ್ರಮರಗಳಿಗೆ ಇಂತಹ ಹೂವನ್ನು ಹಿಂಬಾಲಿಸಿರಿ, ಎಂದು ಹೇಳುವ ಅವಶ್ಯಕತೆಯು ಎಂದಾದರೂ ಉಂಟಾಗಿಸೆಯೆ ? ಜನ-ಮನ-ಗಣ-ಅಧಿನಾಯಕರ ಪರಂಪರೆಯೂ ಸ್ಮಾರಕವೂ ಒಂದಿಲ್ಲೊಂದು ರೀತಿಯಲ್ಲಿ ಅನಾದಿಕಾಲದಿಂದಲೂ ನಡೆಯುತ್ತಬಂದ ದೃಷ್ಟಾಂತಗಳುಂಟು. ನಮ್ಮ ನಾಡಿನಲ್ಲಿ ( ಕರ್ನಾಟಕದಲ್ಲಿ ) ಹೀಗೆ ಪರಂಪರೆಯನ್ನು ಅವ್ಯಾಹತವಾಗಿ ಸಾಗಿಸಬೇಕೆಂಬುವಂತಹ ಭವ್ಯವಾದ ಲೋಕನಾಯಕನು ಇತ್ತೀಚೆಗೆ ಒಬ್ಬರೂ ಆಗಿಲ್ಲ. ಈಗ ಇರುವ ಮುಂದಾಳುಗಳಲ್ಲಿ ಎಲ್ಲರೂ ಒಂದಕ್ಕಿಂತ ಹೆಚ್ಚು ಕಾರಣಗಳಿಗೋಸ್ಕರವೇ ಜನಸಾಮಾನ್ಯರಿಂದ-ತಮ್ಮ ಅನುಯಾಯಿಗಳಿಂದ ತಿರಸ್ಕೃತರಾಗಿದ್ದಾರೆ. ಈ ಪರಿಗೆ ಆದಾವ ಮುಂದಾಳುವೂ ತನ್ನ ಪರಂಪರೆಯು ಆದಷ್ಟು ಮಟ್ಟಿಗಾದರೂ ಅವಿಚ್ಛಿನ್ನವಾಗಿ ಸಾಗಬೇಕೆಂಬುವಂತೆ ಆವ ಕೃತಿಯನ್ನು... ಮಾಡಿಲ್ಲ. ದೇ. ಭ. ಗಂಗಾಧರರಾವ ದೇಶಪಾಂಡೆಯವರನ್ನು... ಮೊದಲ್ಗೊಂಡು ಕರ್ನಾಟಕಾಭಿಮಾನಿ ಶ್ರೀ ಆಲೂರ ವೆಂಕ... ರಾಯರ ವರೆಗೆ ಒಬ್ಬರೂ ಜನತಾಹೃದಯ ಸಿಂಹಾಸನಾಧೀ... ರಾಗಿಲ್ಲ. ಇವರೆಲ್ಲ ತಮ್ಮ ತಮ್ಮ ದೃಷ್ಟಿಯಿಂದ ಏನೇನೊ ಕೆಲ... ಗಳನ್ನು ಮಾಡಿದುದು ನಿಜ. ಅದರಿಂದ ನಮ್ಮ ನಾಡಿನ ಕೆ... ವೊಂದು ಹಿತವಾದುದೂ ನಿಜ. ಅದಕ್ಕಾಗಿ ನಾವು ಅವರ ಉಪ... ಕಾರಸ್ಮರಣೆಯನ್ನು ಮಾಡುವುದೂ ಅವಶ್ಯ. ಆದರೆ ಅ... ಎಷ್ಟೊ ಅಷ್ಟೆ. ಅದು ಅಳತೆಯನ್ನು ಮೀರಬಾರದು. ಶ್ರೀ ದೇ... ಪಾಂಡೆ, ಆಲೂರ ಪ್ರಭೃತಿಗಳಿಗೆ ಕಳೆದ ೨೫-೩೦ ವರುಷ... ದೇಶಸೇವೆಯಲ್ಲಿ ತಮಗೆ ಯೋಗ್ಯತೆಯಲ್ಲಿ ಸಮಾನಸ್ಕಂಧನಾ... ವಂತಹ ಒಬ್ಬ ತರುಣನನ್ನೂ ಸಿದ್ಧಪಡಿಸಿಕೊಳ್ಳಲಿಕ್ಕೆ ಆಗಲಿಲ್ಲ... ಕೆಲವೊಂದು ಯೋಗ್ಯತೆಯ ಉತ್ಸಾಹಿತರುಣರು ಆದಾದರೂ... ಇವರ ಹತ್ತರ ನಿಂತು ಕೆಲಸ ಮಾಡೋಣವೆಂದು ಬಂ... ಅವರು ೩-೪ ವರುಷಗಳ ತನಕ ಸಹ ಇವರೊಡನೆ ಕೆಲ... ಮಾಡುವುದು ಸಾಧ್ಯವಾಗಲಿಲ್ಲ ! ಶ್ರೀ. ದೇಶಪಾಂಡೆಯವ... ಕೈಯಲ್ಲಿ ಉಜ್ಜ್ವಲ ದೇ. ಭ. ಮಜಲಿಯವರು ಮುಂದೆ ಬ... ವರು ಎಂದು ಲೆಕ್ಕ ಹಾಕುವುದರೊಳಗೆ ಅವರು ಏನೊ ಕ್ಷು...

ಹುಚ್ಚೆ ಆಯ್ತು. ಶ್ರೀ ಕೌಜಲಗಿ ಶ್ರೀನಿವಾಸರಾಯರಾದರೂ ಇವಕ್ಕೆ ಅಪವಾದವಿಲ್ಲ. ಪ್ರಸ್ತುತವಿಷಯರಾದ ಶ್ರೀ ಆಲೂರರ ಹಾಡಾದರೂ ಇದರಿಂದ ಬೇರೆಯಿಲ್ಲ. ಶ್ರೀ ಆಲೂರರ ಬಳಿಯಲ್ಲಿ ನಿಂತು ಕಲಿತು ಮುಂದೆ ಬರಬೇಕೆಂದು ಉತ್ಸಾಹದಿಂದ ಅವರೆಡೆಗೆ ಬಂದು ಕೆಲಸಮಾಡುವಷ್ಟರಲ್ಲಿ ತೀರ ನಿರಾಶಿತರಾಗಿ ತಿರುಗಿಹೋದ ಹತ್ತೆಂಟಕ್ಕಿಂತ ಹೆಚ್ಚು ಉದಾಹರಣಗಳಾದರೂ ಉಂಟು. ನಮ್ಮ ನಾಯಕರು ದೂರಿನ ಗುಡ್ಡ ಕಣ್ಣಿಗೆ ನುಣ್ಣಗೆ ಎಂಬಂತೆ ಇದ್ದಾರೆ. ಹತ್ತಿರ ಬಂದರೆ ಹುರುಳಿಲ್ಲ. ಆದುದರಿಂದ ಸಂಪಾದಕಮಹಾಶಯ, ಆರು ತಮ್ಮ ಕೈಯಿಂದ ತಾವೆ ತಮ್ಮ ಪರಂಪರಾವಿಚ್ಛೇದವನ್ನು ಮಾಡಿಕೊಂಡಿರುವರೊ-ತಮ್ಮ ಸಮೀಪಕ್ಕೆ ಬಂದ ತರುಣರಿಗೆ ಮುಂದುವರಿಯಲಿಕ್ಕೆ ಆಸ್ಪದಕೊಡದೆ ಹಿಂಮಾಡಿದರೊ ಅಂತಹರ ಪರಂಪರೆಯು ಹೇಗೆ ತಾನೆ ನಡೆಯಬೇಕು ? ಮತ್ತು ನಡೆಸುವ ಅವಶ್ಯಕತೆಯಾದರೂ ಏನು ? ಆರಾರ ಯೋಗ್ಯತೆಯು ಎಷ್ಟೊ ಅಷ್ಟು ಅಷ್ಟು ಅವರವರ ಸ್ಮಾರಕವು ಆಗುತ್ತಲೆ ಇರುತ್ತದೆ; ಮತ್ತು ಅದು ಆಗೇ ಆಗುವುದು. ಆದಕಾರಣ ಒಬ್ಬರ ಸ್ಮಾರಕ–ಪರಂಪರೆ ನಡೆಸುವ ಸಲುವಾಗಿ ಮತ್ತೊಬ್ಬರು ಮುಂದೆ ಬಂದು ಅದಕ್ಕಾಗಿ ತಮ್ಮ ಪುಣ್ಯವನ್ನು ವೆಚ್ಚಮಾಡುವುದು ಇಬ್ಬರಿಗೂ ಲಾಭದಾಯಕವಲ್ಲವೆಂದು ನನ್ನ ಅಭಿಪ್ರಾಯ. ಆದುದರಿಂದ ಇನ್ನು ಮುಂದೆ ತರುಣ ಕರ್ನಾಟಕವು ಆ ಈ ಆವ ಮುಖಂಡನ ವಂಶಾವಳಿಯನ್ನೂ ಹೇಳದೆ ಸ್ವಚ್ಛವಾಗಿ "**ಶೂನ್ಯಸಿಂಹಾಸನ**" ದಿಂದಲೇ ತನ್ನ ಪರಂಪರೆಯನ್ನು ಆರಂಭಿಸಲಿಕ್ಕೆ ಬೇಕು.

'ಯ...ಕ್ಷ'

**ಉತ್ತರ**:—ಈ 'ಯಕ್ಷ'ನು ಸಂಪಾದಕನೆಂದರೆ ಧರ್ಮರಾಜರೆಂದು ತಿಳಿದನೋ ? ಅವನು ಹೇಳುವ ಧರ್ಮಸಂಕಟವನ್ನು ಸಂಪಾದಕರು ಬಲ್ಲರು. ಸ್ವಯಂಪ್ರಭುತ್ವ, ಸ್ವಯಂಪ್ರತಿಷ್ಠೆಗಳ ಈ ಕಾಲದಲ್ಲಿ ಪರಂಪರೆಯನ್ನು ಲೆಕ್ಕಿಸುವದು ಕಡಮೆ ಎಂದು ಹೇಳಬಹುದಾದರೂ ವ್ಯಕ್ತಿಪರಂಪರೆಯನ್ನಲ್ಲದಿದ್ದರೂ ಕಾರ್ಯಪರಂಪರೆಯನ್ನೂ ತತ್ತ್ವಪರಂಪರೆಯನ್ನೂ ಕಾಯದಿದ್ದರೆ ಕಾರ್ಯಗಳು ಕೊನೆಗಾಣುವದೆಂತು ? ಮನೆತನದಲ್ಲಿ ಹೇಗೆ ಸಂತತಿಯೊ ಹಾಗೆಯೆ ಸಾಮಾಜಿಕ ಮತ್ತು ರಾಷ್ಟ್ರೀಯ ವ್ಯವಹಾರದಲ್ಲಿ ಪರಂಪರಾಪರಿಪಾಲನ. ಯಕ್ಷನು ಹೇಳುವ ತಪ್ಪನ್ನು ಹಿಂದಿನವರು ಮಾಡಿರುವರೆಂದರೂ ಇಂದಿನವರು "ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ। ಯಾನ್ಯಸ್ಮಾಕ ಸುಚರಿತಾನಿ। ತಾನಿತ್ವಯೋಪಾಸ್ಯಾನಿ। ನೋ ಇತರಾಣಿ" ಎಂದು ನಿರ್ದಿಷ್ಟವಾದ ಸುಚರಿತಗಳನ್ನು ಪಾಲಿಸಲೇ ಬೇಕು. ಇಲ್ಲದಿದ್ದರೆ ನಮ್ಮ ಸಮಾಜದ ಬೇನೆ ಹಿಮ್ಮೆಟ್ಟದು, ಹಿಂಗದು. ಹಿರಿಯರ ಆಶೀರ್ವಾದದ ಕೈಯೆಂದರೆ ಭಸ್ಮಾಸುರ ಹಸ್ತವೆಂದು 'ಯಕ್ಷ'ನು ಹೆದರಿರುವಂತೆ ತೋರುತ್ತದೆ. ಆದರೆ ಇಂದಿನ ಪರಂಪರಾಪರಿಪಾಲನವು ಕೇವಲ ತತ್ತ್ವಪರಿಪಾಲನವು; 'ಅಪ್ಪ ಹೇಳಿದ್ದೇ ಒಪ್ಪು' ಎಂಬ ಗುತ್ತಿಗೆಯ ಪರಿಪಾಲನವಲ್ಲ ಎಂದು ಯಕ್ಷನಿಗೆ ಆಶ್ವಾಸನವನ್ನು ಕೊಟ್ಟರೆ ಸಾಕು ಎಂದು ಕಾಣುವದು.

—ಸಂಪಾದಕ ಜಯಕರ್ನಾಟಕ

---

# ಪಂಪ-ಭಾರತದಲ್ಲಿ ಬಂದ ನಾಣ್ಣುಡಿಗಳು



ಲೇಖಕ:— ಶಂಕರ ಬಾಳಕೃಷ್ಣ ಜೋಶಿ, ಧಾರವಾಡ

ಪಂಪನು ತನ್ನ ವಿಕ್ರಮಾರ್ಜುನವಿಜಯವನ್ನು 'ಪುಲಿಗೆರೆಯ ತಿರುಳಕನ್ನಡದಲ್ಲಿ' 'ರಾಜಸುಧಾನಿಯಲ್ಲಿ ಕಿವಿಗೆಬೀಳುವ-ಜನರು ಮಾತಾಡುವ' ರೂಢಿಯ ಭಾಷೆಯಲ್ಲಿ ಬರೆದಿರುವೆನೆಂದು ಹೇಳುತ್ತಾನೆ (೧೪-೫೮). ಆತನ ಕಾವ್ಯದಲ್ಲಿ ಉಪಯೋಗಿಸಲ್ಪಟ್ಟಿರುವ ನಾಣ್ಣುಡಿಗಳು—ಗಾದೆಯ ಮಾತುಗಳು, ಬಳಕೆಯ ಮಾತುಗಳೇ ಇದಕ್ಕೆ ಸಾಕ್ಷಿ. ಪ್ರಾಚೀನಕವಿಗಳಲ್ಲಿ ಪಂಪನಂತೆ ಲೋಕರೂಢಿಯ ಭಾಷೆಯನ್ನು ತಮ್ಮ ಕಾವ್ಯಗಳಲ್ಲಿ ಬಳಸಿದವರು ತೀರ ಕಡಿಮೆ. ಹೀಗೆ ಮಾಡುವುದು ಕವಿರಾಜ 'ಮಾರ್ಗ' ಬಿಟ್ಟು ಅಡ್ಡದಾರಿ ಹಿಡಿದಂತೆಯೆಂದು ಬಹುತರ ಎಲ್ಲ ಕವಿಗಳ ಕಲ್ಪನೆ. ಆದುದರಿಂದಲೆ ಪಂಪ-ಭಾರತದಲ್ಲಿ ಅನುಭವಿಸಿ ಆನಂದಪಡಲಿಕ್ಕೆ ಸಿಗುವ ಕನ್ನಡದ ಕಂಪು ಇನ್ನುಳಿದ ಕಾವ್ಯಗಳಲ್ಲಿ ಅಪರೂಪ. ಪಂಪನ ಪೆಂಪು (ಮೇಲ್ಮೆ), ಪಂಪನ ಪಡೆಮಾತು (ವೈಶಿಷ್ಟ್ಯ) ಇದರಲ್ಲಿಯೆ ಇದೆ.

ಪಂಪಭಾರತದಲ್ಲಿ ಬಂದಿರುವ ಬಳಕೆಯ ಮಾತುಗಳೊಳಗೆ ೧೦೦ರಲ್ಲಿ ೯೫ಕ್ಕೆ ಹೆಚ್ಚು ಇಂದಿಗೂ ರೂಢಿಯಲ್ಲಿವೆ. ಹಿಂದಿನ ಕಾಲದ ಕನ್ನಡಿಗರ ಭಾಷೆಯು ತೀರ ಬೇರಿತ್ತೆನ್ನುವವರ ಬಾಯ್ಮಾತು ನಿರಾಧಾರವಾದುದೆಂಬುದಕ್ಕೆ ಇದೊಂದೇ ಮಾತು ಸಾಕು. ನಿಜವಾಗಿ ರಸಿಕರಿದ್ದರೂ ಹಳೆಕನ್ನಡದ ಒಂದಕ್ಷರವೂ ತಮಗೆ ತಿಳಿಯುವುದು ಅಸಂಭವವೆಂದು ಸುಮ್ಮನೆ ಕಾಲ್ಪನಿಕ ಭೀತಿಯುಕ್ತರಾಗಿ ಕನ್ನಡವಾಕ್ಯಗಳ ರಸಾಸ್ವಾದನಕ್ಕೆ ಎರವಾಗಿ ಕುಳಿತವರೆಷ್ಟೊ ಜನರುಂಟು. ಕೆಲವೊಂದು ಪ್ರತ್ಯಯಗಳನ್ನಿಷ್ಟು ಬದಲಿಸಿದರೆ ಪಂಪಭಾರತವು ಒಂದು ಸಾವಿರ ವರುಷಗಳ ಹಿಂದಿನ ಕಾವ್ಯವೆಂದು ಎದೆತಟ್ಟಿ ಹೇಳುವುದು ಕಷ್ಟಕರವಾಗಿದೆ; ಇಷ್ಟೊಂದು ಬಳಕೆಯ ಮಾತುಗಳು ಅದರಲ್ಲಿವೆ. 'ಹಲ್ಲುತಿನ್ನು', 'ಹೇಳಹೆಸರಿಲ್ಲದಂತಾಗು', 'ಹಚ್ಚಹಸಿ'(ಅತ್ಯಂತವೆಂಬರ್ಥದಲ್ಲಿ), 'ಮಯ್ನೆತ್ತರ ಕುದಿ' 'ಬಾಯ್ಮಾಡು', 'ಕೈಕಟ್ಟಿಕೊಂಡು ನಿಲ್ಲು' ಎಂಬ ಈ ಬಗೆಯ ನುಡಿಗಳಿಗೆ ಲೆಕ್ಕವಿಲ್ಲ.

ಒಂದೊಂದು ನಾಣ್ಣುಡಿಯೂ ಆಯಾ ನಾಡಿಗರ ಬು… ವಂತಿಕೆ, ಸೂಕ್ಷ್ಮ ಅವಲೋಕನ, ಅನುಭವ, ಭಾಷಾಸ… ಗಳ ನಿದರ್ಶಕವೆ ಆಗಿದೆ. ಈ ದೃಷ್ಟಿಯಿಂದ ಪಂಪಭಾ… ದೊಳಗಿನ ಗಾದೆಯಮಾತುಗಳು ಬಹಳೆ ಉಪಯುಕ್ತವಾ… ಇವೆಲ್ಲ ನಾಡನುಡಿ ಗಾದೆಯ ಮಾತುಗಳಿಂದ ಕಂಡುಬ… ಹಿಂದಿನವರ ಚಾತುರ್ಯ, ಚಾರಿತ್ರ್ಯಾದಿಗಳನ್ನು ಸಹೃದಯ… ಯದೆ ಅವುಗಳಲ್ಲಿ ಹಲವನ್ನು ಸಂಗ್ರಹಿಸಿ ಒತ್ತಟ್ಟಿಗೆ ಕೊ… ವುದೆ ಮುಖ್ಯ ಉದ್ದೇಶವಾಗಿದೆ. ಭಾಷಾಭಿಮಾನಿಗಳಾದ ಲೆ… ಕರಿಗೂ ಉಪನ್ಯಾಸಕರಿಗೂ ತಮ್ಮ ಮಾತಿನ ಕುಸುರನ್ನು ಹೆ… ಸಲು ಪಂಪನ ನಾಣ್ಣುಡಿಗಳ ಸಹಾಯವು ತುಂಬಾ ಆಗು… ತಿದೆ. ಆದುದರಿಂದ ಅವುಗಳಲ್ಲಿ ಹಲವನ್ನು ಆಯ್ದು ಕೆ… ಕೊಟ್ಟಿದೆ. ಅವುಗಳ ಅರ್ಥಸ್ಪಷ್ಟೀಕರಣವಾಗುವುದಕ್ಕೆ… ಅವಶ್ಯವೆನಿಸಿದಲ್ಲಿ ಈಗಿನ ಬಳಕೆಯ ಶಬ್ದಗಳನ್ನು ಕೂ… ಕೊಟ್ಟಿದೆ.

೧. ಮೀಸೆಹೊತ್ತವನು (ಗಂಡಸು, ಶೂರ)

೨. ಕೈಯೊಳು ಅಡಕೆಯೂ ಇಲ್ಲ; (ಬಡವ) ಹಸರು… ಇಲ್ಲ.

೩. ಕಣ್ಕುರುಡಾದರೆ ಬುದ್ಧಿ ಕುರುಡೆ?

೪. ಹಾವಿಗೆ ಹಾಲನೆರೆವರು.

೫. ಪಡೆನೋಡಲ್ಬಂದವರಂ ಗುಡಿ (ಧ್ವಜ) ಪೊರಿ… ಆಯ್ತು (ನಮಾಜಮಾಡುವುದಕ್ಕೆ ಹೋದರೆ ಮ… ಕೊರಳಿಗೆಬಿತ್ತು).

೬. ಕನಸಿನೊಳ್ ಕಂಡು ನನಸು (ಸತ್ಯ)ಎಂದು ಬಗೆ…

೭. ಹಗೆಯನು ಇರಿಯಬಂದವರ ಮೂಗನು ಅ… ಬಂದರು (ಬಾಂವಿ ತೋಡುವಾಗ ಬೇತಾಳ ಹೊ…

೮. ಉಪ್ಪಿಕ್ಕಿದೊಡೆ ತುಪ್ಪದ ಮೇಳ್ (ರುಚಿ) ಸ… (ಹೆಚ್ಚು).

೯. ಬಡಿಗಂಡುದಿಲ್ಲ ಪಾಲನೆ ಕಂಡಂ (ಘೀ ದೇಖಾ ಬಡಗಾ ದೇಖಾ ನಹಿ. ಹಾಲುಕಂಡಿತು ಕೋಲುಕಾಣಲಿಲ್ಲ).

೧೦. ತನ್ನ ಇಕ್ಕಿದ ತತ್ತಿ ಪಾವು ನೊಣೆ (ನುಂಗು) ವಂತೆ.

೧೧. ಬಂದಬಟ್ಟೆಯಿಂ ಬಿಜಯಂಗೆಯ್.

೧೨. ಆದಿತ್ಯಂಗೆ ಸೊಡರಿಡು(ಸೂರ್ಯನಿಗೆ ದೀಪತೋರಿಸು)

೧೩. ತೊರೆಗೆ ನೀರಡಕು (ನದಿಗೆ ನೀರುಹಾಕು).

೧೪. ಗಾಳಿಗೊಡ್ಡಿದ ಸೊಡರು.

೧೫. ಕುರುಡಂ ಕಣ್ಬೆತ್ತಂತೆ.

೧೬. ಮಾದೇವರ ಮುಂತಣಾತ (ಎತ್ತು, ಹುಂಬ)

೧೭. ಪೆಣನಿರಿದು ಪಗೆಗೊಂಡರು.

೧೮. ಇಳಾಧಿನಾಥರಂ ಓಲಗಿಸಿ ಬಾಳ್ವುದೆ ಕಷ್ಟಂ (ಅರಸರನ್ನು ಅನುವರ್ತಿಸುವುದೆ ಕಷ್ಟ).

೧೯. ಸೆಟ್ಟಿಯ ಒಳ್ಳ ಕಿರಿದು (ಶೆಟ್ಟಿ ತನ್ನ ಲೆಕ್ಕದಲ್ಲಿ).

೨೦. ಸೂಜಿಯ ಕೂರ್ಪು ಕುಂಬಳದೊಳಡಂಗುವಂತೆ (ಬಡವರ ಸಿಟ್ಟು ದವಡೆಗೆ ಮೂಲ).

೨೧. ಪರ್ದಿಂಗೆ ಬಿರ್ದನಿಕ್ಕು.

೨೨. ಜೇರಿಗೆ ಒಕ್ಕಲುಮಾಡು.

೨೩. ಇರುಳಂ ಪಗಲ್ ಮಾಡು.

೨೪. ಬೇಿತೊಳ್ ಬೆನ್ನೀರನು (ಎಸರ ನೀರು) ಎರೆವುದು.

೨೫. ಕಾಯ್ದ ಬೆನ್ನೀರ್ ಮನೆ ಸುಡದು.

೨೬. ಜೋಳಕ್ಕೆ ತಪ್ಪು (ಉಂಡಮನೆಗೆ ಎರಡುಬಗೆ).

೨೭. ದಾಡೆಗಳಿದ ಕುಳಿಕ (ಮಂಗ).

೨೮. ಡೊಂಬವಿದ್ದೆ; ಇಂದ್ರಜಾಲ (ನಾಟಗಾರಿಕೆ).

೨೯. ಮಾನಾಮಿ, ದೀವಳಿಗೆ ಮಾಡು.

೩೦. ಗುಡಿಗಟ್ಟಿಕೇಳು ( ಉತ್ಸಾಹಸಂತೋಷಭರಿತನಾಗಿ ಕೇಳು. )

ಇಂತಹವು ಇನ್ನೂ ಅನೇಕವಾಗಿವೆ. ಕೆಲವುಮಾತ್ರ ಸೂಚಿಸಿ ವಿಕ್ರಮಾರ್ಜುನವಿಜಯವನ್ನೆ ಒಂದು ಸಲ ಓದಲು ಬಿನ್ನವಿಸಿ ಇದನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

---

# ತಪ್ಪೇನೋ ದೇವ?

ಲೇಖಕ:—ಪಡುಕೋಣೆ ಶಿವಶಂಕರರಾವ, ಕಲಕತ್ತೆ.

ನಿನ್ನ ಬಲ್ಲವರು ಸಾರುವರು, ದೇವ,  
ನಿನ್ನನಿಚ್ಛಿಸುವವರು ಸಂಸಾರವನು ಕಾಲ್ಕೆಳಗೆ ತುಳಿಯಬೇಕೆಂದು.  
ಎನ್ನ ಮೇಲಿರಿಸಿರುವ ಮಡದಿಯ ನಿರ್ಮಲಮಮತೆಯನು ಕಾಲ್ಕೆಳಗೆ ತುಳಿಯಲೋ, ದೇವ?  
ಅರಳಿದ ಮೊಗ್ಗಿನಂದದಿ ಶೋಭಿಸುವ ಹಸುಳೆಗಳ ಮೋಹದ ಕಿರುನಗೆಯ ಕಾಲ್ಕೆಳಗೆ ತುಳಿಯಲೋ, ದೇವ?  
ಬಂಧುಬಾಂಧವರ ಇಷ್ಟಮಿತ್ರರ ವಾತ್ಸಲ್ಯವನು ಧಿಕ್ಕರಿಸಲೋ?  
ತಪ್ಪೇನೋ ಇವರೆಲ್ಲರದು—ಹೇಳಲಾರೆಯಾ ಎನಗೆ?  
ಅರುಣೋದಯದ ಚಂದವನು ನೋಡಿ, ನೋಡಿ ಆನಂದದಿ ಹಿಗ್ಗುವುದು, ತಪ್ಪೋ?  
ತಂಗಾಳಿಯ ಸ್ಪರ್ಶವು ಸಂತೋಷವೆನಿಸುವುದು ಎನಗೆ—ಅದೂ ತಪ್ಪೋ?  
ಕಿರುನದಿಯು ಕಿಲಕಿಲ ಧ್ವನಿಯಿಂದ ಕಲ್ಲುಬಂಡೆಗಳ ಮೇಲೆ ಪ್ರವಹಿಸಲು ಎನ್ನ ಮನವು ಕುಣಿದಾಡುವುದು  
ಹರ್ಷದಿ—ಅದೂ ತಪ್ಪೋ?  
ಹಸುರು ವೃಕ್ಷಗಳ, ಹಸುರು ಗಿಡ ಬಳ್ಳಿಗಳ, ಹಸುರು ಬಯಲುಗಳ ನೋಡುತ, ನೋಡುತ ಮೈಮರೆವೆನು  
ನಾನು—ಅದೂ ತಪ್ಪೋ?  
ತರತರದ ಬಣ್ಣಗಳ ಹೂವುಗಳು ಎನ್ನ ಮನವನು ಸೂರೆಗೊಳ್ಳುವವು—ಅದೂ ತಪ್ಪೋ?  
ಅಂಬುಧಿಯ ವಿಸ್ತಾರವನೀಕ್ಷಿಸುತ ಮನದಲಿ ಗಂಭೀರವಿಚಾರಗಳು ಮೊಳೆಯುವವು—ಅದೂ ತಪ್ಪೋ?  
ರವಿಚಂದ್ರನಕ್ಷತ್ರಗಳನು ಎಚ್ಚರದಲಿ ಕಾಣುತ ಕಾಣುವೆನು ತಿರಿಗೊಮ್ಮೆ ನಿದ್ದೆಯಲಿ ಸ್ವಪ್ನದಾಕಾಶದಲಿ—  
ಅದೂ ತಪ್ಪೋ?

# ಕರ್ನಾಟಕ ಕಲೆಯೂ ವಿಜ್ಞಾನವೂ

## ಮೂರ್ತಿಶಿಲ್ಪಿಗಳಾದ ಶ್ರೀ ವರ್ಖೇಡಿಯವರೂ ಯಂತ್ರವಿಜ್ಞಾನಿಗಳಾದ ಶ್ರೀ ಗಣೇಶಅಯ್ಯರವರೂ

[ ರಾಷ್ಟ್ರದ ಜೀವನಕ್ಕೆ ಕಲೆಯೂ ವಿಜ್ಞಾನವೂ ಎರಡೂ ಅವಶ್ಯಕ. ಕಲಾಕೌಶಲದಿಂದ ರಾಷ್ಟ್ರಜೀವನವು ಆನಂದಮಯವಾ... ವಿಜ್ಞಾನವೈದಗ್ಧ್ಯದಿಂದ ಶಕ್ತಿಯುತವಾಗುವದು. ಇವೆರಡೂ ಇದ್ದಲ್ಲಿಯೇ ಪೌರುಷವು. ನಮ್ಮ ಕರ್ನಾಟಕವೂ ಒಂದು ಪೌರುಷದ ರಾಷ್ಟ್ರ... ಬೇಕಾದರೆ ವಿಧವಿಧದ ಶಿಲ್ಪಿಗಳೂ ವಿಜ್ಞಾನಿಗಳೂ ಉದಯಿಸಬೇಕು. ಈ ಸಲ ಕನ್ನಡಿಗರಾದ ಶಿಲ್ಪಿವಿಜ್ಞಾನಿಗಳಿಬ್ಬರ ಪರಿಚಯವನ್ನು ... ಕೃತಿವಿಶೇಷದೊಂದಿಗೆ ಮಾಡಿಕೊಡಲು ಪ್ರಯತ್ನಿಸಿದ್ದಾಗಿದೆ. ಈ ರೀತಿ ಶಿಲ್ಪವಿಜ್ಞಾನ ಹಾಗೂ ಶಿಲ್ಪಿವಿಜ್ಞಾನಿಗಳ ವಿಷಯಕವಾದ ಲೇಖ... ಸರ್ವತೋಷದಿಂದ ಎಡೆ ಕೊಡಲಾಗುವದು.

--ಸಂ. ಜ. ಕ.]

### ೧.

### ಶ್ರೀಮಾನ್ ವರ್ಖೇಡಿಯವರು

ಶ್ರೀ. ಬಾಳಾಚಾರ್ಯ ಭೀಮಾಚಾರ್ಯ ವರ್ಖೇಡಿ ಇವರು ೧೯೦೮ರಲ್ಲಿ ಡ್ರಾಯಿಂಗ ೩ನೇ ಗ್ರೇಡ ಪರೀಕ್ಷೆಯನ್ನು ಪಾಸಾದ ಮೇಲೆ ತಮ್ಮ ಪ್ರೀತಿಯ ವಿಷಯುವಾದ ಶಿಲ್ಪಕಲೆಯ ಅಭ್ಯಾಸ ಕ್ಕೋಸ್ಕರ ೧೯೧೧ರಲ್ಲಿ ಮುಂಬಯಿಗೆ ಹೋದರು. ಅಲ್ಲಿ ಹೋದ ಸ್ವಲ್ಪ ದಿವಸಗಳಲ್ಲಿಯೇ ಇವರಿಗೆ ದೇಹಾಲಸ್ಯವಾದದ್ದರಿಂದ ಆರ್ಟಸ್ಕೂಲಿಗೆ ಸೇರುವದಾಗದೆ ಒಂದೆರಡು ತಿಂಗಳಲ್ಲಿಯೇ ಮರಳಿ ಹುಬ್ಬಳ್ಳಿಗೆ ಬರಬೇಕಾಯಿತು. ಮುಂದೆ ಪರಿಸ್ಥಿತಿಯು ಅನುಕೂಲವಾಗುವವರೆಗೆ ಹುಬ್ಬಳ್ಳಿಯಲ್ಲಿಯೇ ಆರ್ಟಸ್ಕೂಲಿನ ವಿಷಯವನ್ನು ಅಭ್ಯಾಸಮಾಡಿಕೊಂಡು ಮತ್ತೆ ೧೯೧೩ರಲ್ಲಿ ಮುಂಬಯಿಗೆ ಹೋದರು. ಆರ್ಟಸ್ಕೂಲಿನಲ್ಲಿಯ ಶಿಲ್ಪಕಲೆಯ ೪ ವರ್ಷದ ಅಭ್ಯಾಸದಲ್ಲಿ ೨ ವರ್ಷದ ಅಭ್ಯಾಸ ಕ್ರಮವನ್ನು ಇವರು ಹುಬ್ಬಳ್ಳಿಯಲ್ಲಿರುವಾಗಲೇ ಮುಗಿಸಿದ್ದರೂ ಕಲಾಶಾಲೆಯ ನಿಯಮಕ್ಕನುಸರಿಸಿ ಮೊದಲನೆಯ ವರ್ಷಕ್ಕೇ ಸೇರಬೇಕಾಗಿತ್ತು, ಆದರೆ ಆದ ವಿಷಯಗಳಲ್ಲಿಯೇ ವ್ಯರ್ಥವಾಗಿ ಕಾಲಕಳೆಯುವದು ಇವರಿಗೆ ಸರಿದೋರಲಿಲ್ಲ. ಏನೇ ಆಗಲಿ ಈ ಬಗ್ಗೆ ಪ್ರಯತ್ನಮಾಡಬೇಕೆಂದು ಆಲೋಚಿಸಿ ಆರ್ಟಸ್ಕೂಲಿನ ಪ್ರಿನ್ಸಿಪಾಲರಾದ C. L. Burns ಇವರಿಗೆ ಅರ್ಜಿಮಾಡಿಕೊಂಡರು. ಅದಕ್ಕೆ ಅವರು ಚಿತ್ರಗಳೊಂದಿಗೆ ಬಂದು ಭೆಟ್ಟಿಯಾಗಲಿಕ್ಕೆ ತಿಳಿಸಿದಂತೆ ಪ್ರಿನ್ಸಿಪಾಲರನ್ನು ಕಾಣಲಾಗಿ ಇವರು ಮಾಡಿದ ಚಿತ್ರಗಳನ್ನು ಪರೀಕ್ಷಿಸಿ, ಒಮ್ಮೆಲೆ ೩ನೆಯ ವರ್ಷಕ್ಕೆ ಇವರನ್ನು ಸೇರಿಸಿಕೊಂಡರು. ಇದರಿಂದ ಇವರಿಗೆ ಒಳ್ಳೆ ಉತ್ತೇಜನ ಸಿಕ್ಕಿತು. ೩ನೆಯ ವರ್ಷದ ವಾ... ಪರೀಕ್ಷೆಯಲ್ಲಿ ೧ನೇ ತರಗತಿಯಲ್ಲಿ ತೇರ್ಗಡೆಹೋದ್ದ... ಇವರಿಗೆ ಒಂದು "ಸ್ಕಾಲರಸಿಪ್" ದೊರಕಿತು. ಮುಂದೆ ೪ನೇ ವರ್ಷದ ಕೊನೆಯ ಪರೀಕ್ಷೆಯಲ್ಲಿ ೧ನೇ ನಂಬರ ಬಂದರು. ... ಇವರಿಗೆ ಒಂದು ಪದಕವು ( Mayo Medal )ದೊರಕಿತು.

### ಇವರ ಕೃತಿವಿಶೇಷಗಳು

ಇದೇ ಸಮಯಕ್ಕೆ ಕೈ.ವಿ.ಬ. ರೊದ್ದರಾಯರು ಕೌನ್ಸಿಲಕ್ಕೆ... ಮುಂಬಯಿಗೆ ಹೋದಾಗ್ಗೆ ಅವರ ಲೆಪ್ಪದ ಪುತ್ಥಳಿ(Plaster Bust)ಯನ್ನು ಸಿದ್ಧಗೊಳಿಸಿದರು. ಅದರಿಂದ ರೊದ್ದರಾಯ... ಒಳ್ಳೇ ಸಂತೋಷವಾಯಿತು. ಆರ್ಟಸ್ಕೂಲಿನಿಂದ ಹೊರ... ಸ್ವಲ್ಪಾವಧಿಯಲ್ಲಿಯೇ ಮುಂಬಯಿಯ ಪೋಲೀಸ ಕಮಿ... ರಾದ S. M. Edwardes ಇವರ ಬಸ್ಟಿನ ಕೆಲಸವು ... ಒಬ್ಬ ಸದ್ಗೃಹಸ್ಥರಿಂದ ಸಿಕ್ಕಿತು. ಈ ಬಸ್ಟಿನ ಕೆಲಸ... ಕಮೀಶನರಸಾಹೇಬರ ಬಂಗಲೆಯಲ್ಲಿಯೇ ಮಾಡಲ್ಪಟ್ಟಿತು. ... ಅವರ ಕಡೆಗೆ, ಅವರ ಸ್ನೇಹಿತರಾದ ಲಂಡನದ ಪ್ರಸಿದ್ಧ ಶಿಲ್ಪಿ... ಳಾದ Mr. H. Hampton ಇವರು ಬಂದಿದ್ದರು. ... ವರ್ಖೇಡಿಯವರು ತಯಾರಿಸಿದ ಬಸ್ಟನ್ನು ನೋಡಿ ... ಉತ್ತಮ ಕೆಲಸ ಮಾಡುತ್ತಾರೆಂಬ ಬಗ್ಗೆ ಮೆಚ್ಚಿಕೊಂಡಿದ್ದಾರೆ. ಈ ಬಸ್ಟನ್ನು ಅದೇ ವರ್ಷದ "ಮುಂಬಯಿ ... ಪ್ರದರ್ಶನಕ್ಕೆ" ಕಳಿಸಲು ಅದಕ್ಕೆ ಒಂದು ಇನಾಮು ... ಯಿತು. ಇದರಂತೆಯೇ ಮುಂದೆ ಮುಂಬಯಿಯಲ್ಲಿ ಕೆಲಸಗ... ಸಿಗಹತ್ತಿದವು. ವಿಚಾರಿಸಿ ನೋಡಿದರೆ ಮುಂಬಯಿ ಪಟ್ಟಣ... ಕಲಾವಿದರಿಗೆ ತವರುಮನೆಯಾಗಿದ್ದು ಜ್ಞಾನಾಭಿವೃದ್ಧಿಗೂ ...

ಗಳಿಸಲಿಕ್ಕೂ ಅಗ್ರಸಾನವು: ಆದರೆ ತಮ್ಮ ಮಾತೃಭೂಮಿ ಕರ್ನಾಟಕವನ್ನೂ ಸ್ವಜನರನ್ನೂ ಅಗಲಿರುವದು ಅವರ ಸ್ವಭಾವಕ್ಕೆ ಸರಿದೋರದ್ದರಿಂದ ಹುಬ್ಬಳ್ಳಿಯಲ್ಲಿಯೇ ತಮ್ಮ ಕಾರಖಾನೆಯನ್ನು ತೆಗೆಯಬೇಕೆಂದು ನಿಶ್ಚಯಿಸಿಕೊಂಡು ಹೆಚ್ಚಿನ ಅನುಭವಕ್ಕಾಗಿ ಮುಂಬಯಿ ಬಡೋದೆ ಮುಂತಾದ ಸ್ಥಳಗಳಲ್ಲಿ ಕೆಲವು ವರ್ಷ ನಿಂತುಕೊಂಡು ಅನಂತರ ೧೯೩೦ರಲ್ಲಿ ಹುಬ್ಬಳ್ಳಿಯಲ್ಲಿ ತಮ್ಮ ಕಾರಖಾನೆಯನ್ನು ತೆಗೆದರು. ಇಲ್ಲಿಂದ ಬಡೋದೆ ಮುಂತಾದ ಸ್ಥಳಗಳಿಂದ ಬಂದ ಕೆಲಸಗಳನ್ನು ತಯಾರಿಸಿ ಕಳಿಸಹತ್ತಿದರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ :—ಬಡೋದೆ ಸಂಸ್ಥಾನದ ದಿವಾಣರಾದ ಸರ್. ಮನುಭಾಯಿ ಮೆಹತಾ, ಅ. ದಿವಾಣ C. N. Seddon, ಸರದಾರ ಯಾದವರಾವ, ಶೇಠ ಕಿಲಾಚಂದ, ಶೇಠ ರಾ. ಬ. ಕಾ. ಟಾವಾಲಾ, ಶೇಠ ಮಂಗಳದಾಸ ಅಹಮದಾಬಾದ, ಇತ್ಯಾದಿ ಜನರ ಪ್ರತಿಮೆಗಳು. ಈವೆಲ್ಲ ಸದ್ಗೃಹಸ್ಥರೂ ಇವರ ಕೆಲಸಕ್ಕೆ ಮೆಚ್ಚಿತಲೆದೂಗಿದ್ದಾರೆ. [ಇಲ್ಲಿ ಮುದ್ರಿತವಾಗಿರುವ ಚಿತ್ರಗಳು ಆ ಆ ಪ್ರತಿಮೆ ( Paster work ) ಗಳ ಚಿತ್ರಗಳು]



ಸರ್ ಮನೂಭಾಯಿ ಮೆಹತಾ ಅವರು

ಕರ್ನಾಟಕದಲ್ಲಿ ಈ ಬಗೆಯ ಶಿಲ್ಪಕಲೆಯ ಅಭಿರುಚಿಯು ಹುಟ್ಟಬೇಕಾದರೆ ಒಂದು ಸರ್ವಜನೋಪಯೋಗಿ ಮೂರ್ತಿಯನ್ನು ಸಿದ್ಧಗೊಳಿಸಬೇಕೆಂದು ಆಲೋಚಿಸಿ ಕೈ. ಶ್ರೀ ಸಿದ್ಧಾರೂಢಸ್ವಾಮಿಗಳವರಿಗೆ ಭೆಟ್ಟಿಯಾಗಿ ತಮ್ಮ ಮನೋರಥವನ್ನು ತಿಳಿಸಲು

ಸ್ವಾಮಿಗಳವರು ತಮ್ಮ ಮೂರ್ತಿಯನ್ನು ಮಾಡುವದಕ್ಕೆ ಒಪ್ಪಿದರು. ಮುಂದೆ ಅವರಂತೆ ಮೂರ್ತಿಯು ಸಿದ್ಧವಾದೊಡನೆ ಮಠದಲ್ಲಿಯ ಒಂದು ಸಮಾರಂಭದ ಕಾಲಕ್ಕೆ ನೆರೆದ ಮಹಾಜನರಿಗೆ ತೋರಿಸಲು ಅದೇ ಮಾದರಿಯ ಮೂರ್ತಿಗಳನ್ನು ಆ ದಿವಸವೇ ಅನೇಕರು ಮಾಡ ಹೇಳಿದರು. ಸ್ವಾಮಿಗಳವರ ಇಂಥ ಮೂರ್ತಿಗಳು ಈ ವರೆಗೆ ಸಾವಿರಾರು ಮಾರಾಟವಾಗಿವೆ.



ಸಿದ್ಧಾರೂಢ ಸ್ವಾಮಿಗಳು

ಇದೇ ಪ್ರಕಾರ ಕೈ. ಲೋಕಮಾನ್ಯರ ಪ್ಲಾಸ್ಟರ ಬಸ್ಟುಗಳನ್ನೂ ವಿಕ್ರಯಕ್ಕೆ ತಯಾರಿಸಿದ್ದಾರೆ. ಈ ಎರಡೂ ಮೂರ್ತಿಗಳಿಗೆ



ಶ್ರೀಮಂತ ಪರಶುರಾಮಭಾವು ಅವರು

ಕರ್ನಾಟಕದಿಂದಲೂ ಪರಪ್ರಾಂತಗಳಿಂದಲೂ ಬೇಡಿಕೆಗಳು ಬರುತ್ತಿರುತ್ತವೆ. ಈ ಪ್ರಕಾರ ಇವರ ಕಲೆಗೆ ಉತ್ತೇಜನ ದೊರೆಯುತ, ಈಗ ೨–೩ ವರ್ಷಗಳಿಂದ ಕೈ. ದಿ. ಬ. ಕೊಪ್ಪರ್ದಿಯರ ಸಹಾಯದಿಂದ ಶ್ರೀಮಂತ ಜಮಖಂಡಿಯ ಯುವರಾಜರಿಂದ ಕಂಚಿನ ಮತ್ತು ಇತರ ಮೂರ್ತಿಗಳ ಕೆಲಸಗಳು ದೊರೆಯುತ್ತಿರುವವು. ಶ್ರೀ. ವಡೇಂಡಿಯವರು ಕಲ್ಲಿನಲ್ಲಿ ಮೂರ್ತಿಗಳನ್ನು ಕೊರೆಯುವದಲ್ಲದೆ ಧಾತುವಿನಲ್ಲಿಯೂ ಮೂರ್ತಿಗಳನ್ನು ತಯಾರಿಸಬಲ್ಲರು. ಇತ್ತೀಚೆಗೆ, ಬಾಗಲಕೋಟೆಯ ವ್ಯಾಯಾಮ ಮಂದಿರದಲ್ಲಿ ಸ್ಥಾಪಿಸಲಿರುವ ಶ್ರೀ ಭಾರತಮಾತೆಯ ಕಲ್ಲಿನ ಮೂರ್ತಿಯನ್ನು ಮಾಡುವ ಕೆಲಸವೂ, ಪುಣೆಯ ಸತ್ಪುರುಷರಾದ ಶ್ರೀಮಾಧವನಾಥ ಮಹಾರಾಜರ ಮೂರ್ತಿಗಳನ್ನು ಮಾಡುವ ಕೆಲಸವೂ ಮತ್ತೂ ಶ್ರೀಮಂತ ಬಾಳಾಸಾಹೇಬ ಘೋರ್ಪಡೆ ಇವರ ಕಡೆಯಿಂದಲೂ ಕೆಲಸಗಳು ದೊರೆತಿವೆ.



ಶ್ರೀಮತಿ ನಾಗೂಬಾಯಿಯವರು

ಹಂದಿಗನೂರ ಸಂಸ್ಥಾನದ ಗಾದಿಯ ೧೪ನೆಯ ಒಡೆಯರಾದ ಶ್ರೀಮಂತ ಸರದಾರ ಬುಳ್ಳಪ್ಪಾ ಬಸವಂತರಾವ ಮಾಮಲೆ ದೇಸಾಯರ ಧರ್ಮಪತ್ನಿಯರಾದ ಕೈ. ಶ್ರೀ. ಕುಂ. ಸೌ. ನಾಗೂಬಾಯಿಯವರ ಪ್ರತಿಮೆಯನ್ನೂ ಮಾಡಿರುವರು. ಸದ್ಯಕ್ಕೆ ಶ್ರೀ ಸರದಾರ ಹಂದಿಗನೂರ ದೇಸಾಯರ ಕಲ್ಲಿನ ಪ್ರತಿಮೆಯ ಕೆಲಸವು ನಡೆದಿದೆ,

ಈ ಸಂಚಿಕೆಯ ಮುಖಚಿತ್ರವು ಮೇಲೆ ಹೇಳಿದ ಮಹಾರಾಷ್ಟ್ರ ಸಂತರಾದ ಮಾಧವನಾಥ ಮಹಾರಾಜರ ಪ್ರತಿಮೆಯದು. ಇದರಲ್ಲಿ ತನ್ಮಯತೆಯು ಪ್ರೇಕ್ಷಣೀಯವಾದುದು. ನಿಮ್ನೋನ್ನತ ಭಾಗಗಳು ಸರಿಯಾಗಿ ಅವಯವಗಳು ಸ್ಪಷ್ಟವಾಗಿ ಮೂಡಿರುವವು. ರೇಖಾಸ್ವಾಸ್ಥ್ಯದಿಂದ ಜೀವಕಳೆಯುಂಟಾಗಿದೆ. ಇನ್ನು, ಇಲ್ಲಿ ಮುದ್ರಿತವಾದ ಕೈ. ಕಂ. ಸೌ. ನಾಗೂಬಾಯಿಯವರ ಪ್ರತಿಮೆಯ ವೈಶಿಷ್ಟ್ಯವೆಂದರೆ ನಾಗೂಬಾಯಿಯವರು ತೀರಿಕೊಂಡಮೇಲೆ ಅವರ ಮೊದಲಿನ ಕೆಲವು ಚಿತ್ರಗಳನ್ನು ನಿರೀಕ್ಷಿಸಿ ಕಲ್ಪಕಶಕ್ತಿಯಿಂದ ನಿರ್ಮಿಸಿದ ಪ್ರತಿಮೆಯದು. ಈ ಕೃತಿಯಲ್ಲಿ ಕಂಗೊಳಿಸುವ ನಾಗೂಬಾಯಿಯವರ ಮೂರ್ತಿಸಾದೃಶ್ಯವನ್ನು ಕಂಡು ಅವರ ಆಪ್ತೇಷ್ಟರೇ ಸೈ ಸೈ ಎಂದರು. ನೆನಪಿಡತಕ್ಕ ಮಾತಾಗಿದೆ. ಶ್ರೀಮಾನ್ ವರ್ಣೇಕರಿಯವರ ಕೃತಿಗಳಲ್ಲಿ ಜೀವರೇಖಾಕೌಶಲವುಂಟೆಂದು ಯಾರೂ ಹೇಳಬಲ್ಲರು. ಇಂಥ ಕನ್ನಡ ಶಿಲ್ಪಿಗಳನ್ನು ಕನ್ನಡಿಗರೆಲ್ಲ ಮುಂದಕ್ಕೆ ಕರೆಯುವರೇ? ಗುಜರಾಥ ಮಹಾರಾಷ್ಟ್ರ ಪ್ರಾಂತೀಯರು ಇವರ ಕೆಲಸಕ್ಕೆ ಮೆಚ್ಚಿದಂತೆ ಕರ್ನಾಟಕರೂ ಮೆಚ್ಚಿ ಇವರಿಗೆ ಹೆಚ್ಚು ಹೆಚ್ಚು ಪ್ರೋತ್ಸಾಹವನ್ನು ಕೊಡುತ್ತ ಹೋಗಬೇಕು.

---

## ೨.

## ಶ್ರೀಮಾನ್ ವ್ಹಿ. ಗಣೇಶ ಅಯ್ಯರವರು

ಇವರು ಇ. ಸ. ೧೯೦೭ರಲ್ಲಿ ಬೆಂಗಳೂರ ಸೆಂಟ್ರಲ್ ಕಾಲೇಜಿನ ಪದವೀಧರರಾಗಿ ಮುಂದೆ ಇ. ಸನ್ ೧೯೧೧ರಲ್ಲಿ ಮದ್ರಾಸ ಎಂಜಿನಿಯರಿಂಗ ಕಾಲೇಜಿನಲ್ಲಿ ಅಲ್ಲಿಯ ವಿದ್ಯಾಭ್ಯಾಸವನ್ನು ಮುಗಿಸಿದರು. ಅಲ್ಲಿಂದ ಏಳು ವರ್ಷಗಳವರೆಗೆ ಪಬ್ಲಿಕವರ್ಕ್ಸ ಡಿಪಾರ್ಟಮೆಂಟಿನಲ್ಲಿ ಕೆಲಸ ಮಾಡಲಾಗಿ ಮೈಸೂರು ಸರಕಾರದವರು ಇವರನ್ನು ಯುರೋಪ ಮತ್ತು ಅಮೇರಿಕಾ



ಖಂಡಗಳೊಳಗಿನ ಉದ್ಯೋಗವಿಷಯಕವಾದ ವಿದ್ಯಮಾನಗಳನ್ನು ಕಂಡು ಅಭ್ಯಾಸಮಾಡಿಕೊಂಡು ಬರಲು ಕಳುಹಿದರು. ಇ.ಸ.೧೯೨೧ರಲ್ಲಿ ಭದ್ರಾವತಿ ಕಬ್ಬಿಣದ ಕಾರಖಾನೆಯಲ್ಲಿ ಕೆಲಸ ಮಾಡಲು ಮೈಸೂರು ಸರಕಾರದವರು ಕಳಿಸಿಕೊಡಲಾಯಿತು. ಇ. ಸ. ೧೯೨೫ರಲ್ಲಿ ಮತ್ತೆ ಯುರೋಪ ಖಂಡಕ್ಕೆ ಇವರು ಹೋಗಿ ಬಂದು ಭದ್ರಾವತೀ ಕಾರಖಾನೆಯಲ್ಲಿ ಸೀ. ಆಯ್ ಪಾಯಿಪುಗಳಿಗಾಗಿ ಸುಸಜ್ಜಿತವಾದ ಯಂತ್ರವನ್ನು ಸನ್ನದ್ಧಗೊಳಿಸಿದರು. ಕಬ್ಬಿಣ ಕಾರಖಾನೆಯ ಬೋರ್ಡಿನವರು ಅನೇಕವಾದ ಮಹತ್ತ್ವದ ಸುಧಾರಣೆಗಳನ್ನು ಪ್ರಯೋಗದಲ್ಲಿ ತರಲು ಅಣಿಮಾಡುತ್ತಿರುವರು. ಶ್ರೀಮಾನ್. ವ್ಹಿ. ಗಣೇಶ ಅಯ್ಯರವರು ಲಂಡನ್ನಿನ ಇನ್ಸಿಟ್ಯೂಟ ಆಫ್ ಮೆಕ್ಯಾನಿಕಲ್ ಎಂಜಿನಿಯರ್ಸದ ಪೂರ್ಣಸದಸ್ಯರಾಗಿರುವರು.

### ಇವರ ವಿಶೇಷಕಾರ್ಯ

ಮೊನ್ನೆ ಮೊನ್ನೆ ಇವರೊಂದು ಶೋಧವನ್ನು ಮಾಡಿರುವರು. ಅದು ಪಟಲರಹಿತ ಎಂಜಿನ್ನುಗಳನ್ನು ಕುರಿತು ಇದೆ. ಈ ಸುಧಾರಣೆಯ ಮೂಲಕ ೧೨೫ ಪೌಂಡಿನ ಒತ್ತಡ (Pressure) ದಿಂದ ಉಗಿಯು ಎಂಜಿನನ್ನು ಪ್ರತಿಮಿನಿಟಿಗೆ ೨೦೦೦ ಸುತ್ತುಗಳಂತೆ ಬಲು ಒತ್ತರ(Elocity)ದಿಂದ ತಿರುಹುವದು; ರಾಟಿಯ ಕೈಯ ಬರಿಯ ಸ್ಥಾನಪಲ್ಲಟದಿಂದ ಎಂಜಿನನ್ನು ಅತ್ತೂ ಇತ್ತೂ ಅಷ್ಟೇ ವೇಗದಿಂದ ನಡೆಯಿಸಬಹುದು. ಈ ಶೋಧದಿಂದ ಉಂಟಾದ ಅನುಕೂಲ್ಯಗಳಾವವೆಂದರೆ: —

(೧) ಬಹಳೇ ಸುತ್ತು ತಿರುಗುವಿಕೆ
(೨) ಸುಲಭವಾಗಿ ವೇಗದ ದಿಕ್ಕನ್ನು ಬದಲಿಸುವದು.
(೩) ದಿಕ್ಕುಬದಲಾಯಿಸಿದರೂ ವೇಗವು ಅಷ್ಟೇ ಉಳಿಯುವದು.
(೪) ಸವಕಳಿಯಾಗುವ ಭಾಗಗಳು ತೀರಕಡಿಮೆ. ಕೇವಲ ಕೆಲಸಕ್ಕೆ ಬೇಕಾಗುವಷ್ಟೆ.
(೫) ಸಂಚಾಲಕಶಕ್ತಿಯನ್ನು ನಡುವೆ ನುಂಗುವಂಥ ಪಟಲ ಮತ್ತು ಮುರಿವು(Gear) ಮೊದಲಾದವುಗಳ ಅಭಾವ.

ಉಗಿಯು ಒಂದೇ ದಿಕ್ಕಿನಲ್ಲಿ ಹರಿಯುವಂತೆ ಯೋಜನೆಯಾಗಿರುವದರಿಂದಲೂ ಅತಿವೇಗದ ಮೂಲಕವಾಗಿಯೂ ಆರಂಭದಲ್ಲಿಯೇ ಉಗಿಯು ವ್ಯಯವಾಗುವದು ನಿಂತು ಎಂಜಿನ್ನಿನ ಉರವಲದಲ್ಲಿ ಒಳ್ಳೆಯ ಮಿತವ್ಯಯವುಂಟಾಗುವದು.

ಅಂತೂ, ಒತ್ತಡ, ಒತ್ತರಗಳೆರಡರ ಉಪಯೋಗ, ಗತಿಗೆ ಉಗಿಯ ಮತ್ತು ಗಾಳಿಯ ಸಹಾಯ, ಇದರಿಂದ ಅತಿಶಯ ಗತಿ ಆದರೆ ಉರುವಲದಲ್ಲಿ ತೀರ ಮಿತಿ ಹೀಗೆ ಅನುಕೂಲ್ಯಗಳುಂಟಾಗಿವೆ.

ಹೀಗೆ ಕನ್ನಡಿಗರೊಬ್ಬರು ಯಂತ್ರವಿಜ್ಞಾನ (Engineering) ದಲ್ಲಿ ನುರಿತವರಾಗಿ ಶೋಧಗಳನ್ನು ನಡೆಸಿರುವದು ಅಖಿಲಕರ್ನಾಟಕಕ್ಕೆ ಭೂಷಣವಲ್ಲವೆ?

---

# ಜನಪದ-ಸಾಹಿತ್ಯ

## ೧

ಸಂಗ್ರಾಹಕರು:--ಕುಕನೂರಿನ ವಿದ್ಯಾನಂದರಾಷ್ಟ್ರೀಯಶಾಲೆಯುವರು

### ಕುಟ್ಟುವ ಪದಗಳು

#### ವಿನೋದ

ದಶರಥರಾಯನ ಸೊಸಿಯು ಸೀತಾದೇವಿ:
ಬಸುರಾದರ್ಹ್ಯಾಂಗ ನಡೆದ್ಯಾಳ
ಅಕ್ಕಯ್ಯ, ಗೋದೀಯ,
ಸಸಿಯೊಳಗೆ ನವಿಲು ನಡೆಧಾಂಗ!

#### ಮಗಳ ಹೊಗಳಿಕೆ

ಕೆಲಸ ಮಾಡೀದರ ಸರಸವಾಡೀಧಾಂಗ
ಅಲಸಂದೀ ಕಾಳು ಸುಲಿಧಾಂಗ
ಏನೆನ್ನ ಕಂದವ್ವನ ಕೆಲಸ ನೋಡಿ s ಅತ್ತಿ
ಕೆಲಸ ನೋಡ್ಯತ್ತಿ ಕಳಸಲು!

#### ಸ್ತ್ರೀ ನೀತಿ

ಹೆಣ್ಣು ಆದಮೇಲೆ ಹೇಳಿಸಿಕೊಂಡರೇನು?
ತನ್ನ ಜ್ಞಾನದಲಿ ಕೆಲಸವ,
ತನ್ನ ಜ್ಞಾನದಲಿ ಕೆಲಸವ ಮಾಡಿದರ
ತನ್ನವ್ವಗೇಕೆ ಬಯ್ವರು!

#### ಬೇಸರುಗೊಂಡ ಹೆಣ್ಣುಮಗಳ ಬಾಳು

ಬಾಲಕರಿಲ್ಲದ ಬಾಲೆಯೇತರ ಜನ್ಮ;
ಬಾಡೀಗಿ ಎತ್ತು ದುಡಿಧಾಂಗ
ಅಕ್ಕ! ಬಾಳೀ ಮೇಲೆ ಹಾಸಿs ಉಂಡು
ಹಾಸ್ಯುಂಡು ಬೀಸಿ ಒಗೆಧಾಂಗ!
ಹೆಣ್ಣು ಆಗೋದಕಿಂತ ಮಣ್ಣು ಆಗೊದು ಲೇಸು
ಮಣ್ಣಿನಮೇಲೆ ಮರನಾಗಿ
ಮರನಾಗಿ ಇದ್ದರೆ ಬಂದsವರಿಗೆಲ್ಲ!
ಬಂದವರಿಗೆಲ್ಲ ನೆರಳವ್ವ!

#### ಕುಟ್ಟುವ ಬೀಸುವ ಹಾಡುಗಳ ಮೂಲವೆಲ್ಲಿ?

ಕುಟ್ಟು ಬೀಸುವ ಹಾಡು ಯಾವಾಕಿ ಕಲಿಸ್ಯಾಳೆ?
ಕೃಷ್ಣನ ತಂಗಿ ಸುಭದ್ರೆ,
ಸುಭದ್ರೆ ಕಲಿಸ್ಯಾಳ ಕೃಷ್ಣನ ಮೇಲಿನ
ಕೃಷನ ಮೇಲಿ ಪದಗಳ!

### ಜೋಗುಳಪದಗಳು

#### ಕಂದನಿಗೆ ಅಕ್ಷಯ ಆಯುಷ್ಯ

ಹುಟ್ಟಿದ ಕಂದನಿಗೆ ಆಕ್ಷಯ್ಯವಾಗಲಿ
ಕೊಟ್ಟಂಥ ಸ್ವಾಮಿ ಮರೆವನೆ?
ಆತ ನನ್ನ ಕಂದವ್ನ ಬಟ್ಟ ಬೆಟ್ವಾಗಿ ಬೆಳೆಯ
ಅಳುವ ಕೂಸಿನ ಬಿಟ್ಟು ಹೊಳೆಯು ನೀರಿಗೆ ಹೋ
ಅಳದೀರೊ ರಾಮಲಕ್ಷ್ಮಣನೆ
ಲಕ್ಷ್ಮಣ ನಿಮ್ಮವ್ವ ಗಳಿಗೆ ಮಾತ್ರೇಳಿ ಬರತಾಳ!
ಅಳಳಳ......ಅಲ್ಲಾ, ಅಲ್ಲಕ್ಕ ಅಲ್ಲ ಎಲೆ ಅಲ್ಲ!

#### ತಾಯಿಯ ಸೆರೆ ಬಿಡಿಸಿದ ಮಗು

ಮಕ್ಕಳ ತಾಯವ್ವ! ಕೆಟ್ಟೆನೆನ್ನಲು ಬೇಡ
ಪಕ್ಷಿಜಾತ್ಯಾಗ ಗರುಡನು
ಗರುಡ ತಮ್ಮವ್ವನ—ಹುಟ್ಟಿದ್ದ ಸೆರೆಯ ಬಿಡಿ
ಜೋ ಜೋ ಜೋಜೋ ಜೋ ಅವ್ವ ಜೋ
ಎಲೆ ಜೋ

#### ಮಕ್ಕಳ ಆಟ

ಆಡsಕೀ ಸಂತ್ಯಾಗ ಆಡ್ಯಾಳ ಡೊಂಬತಿ,
ನೋಡಿ ಬಂದಣ್ಣ ಉಣ್ಣಲೊಲ್ಲ!
ಏ ನನ್ನ ಡೊಂಬತಿ! ನಾಳೆ ಬಂದಾಡು ನವಿಲಾ
ಕರಿಯಂಗಿ ಕಸೂತಿ ತಲೆತುಂಬ ಜಾವುಳ,
ಅಂಗಳದಾಗ ನವಿಲಾಟ,
ನವಿಲಾಟದಕಿಂತ ರಂಗಯ್ಯನಾಟ ವಿಪರೀತ!

#### ಜೋಗುಳದ ಮಹಿಮೆ

ಜೋಗುಳ ಹಾಡಿದರ ಆಗಾಳೆ ಕೇಳ್ಯಾನೆ
ಹಾಲು ಹಂಬಲ ಮರೆತಾನೆ;
ಏ ನನ್ನ ಕಂದವ್ವ, ಜೋಗುಳದಾಗ ಅತಿ ಮುದ

## ೨

ಸಂಗ್ರಹಕಾರ:--ಆನಂದಕವಿ ಕುರಗುಂದ

( ಶ್ರೀಮತಿ ಶಿರಸಂಗಿ ಸಿದ್ಧಲಿಂಗವ್ವನವರಿಂದ ಸಂಗ್ರಹಿಸಿದ್ದು. )

### ತತ್ತ್ವಪದ

ಅಲಲಲಲಲಲಲ ಎಂಥಾದ್ದು । ಪಕ್ಷಿ ।
ಕಲಲ ಬಾಯ್ಮಾಡುವಂಥಾದ್ದು ॥
ಕಿಲಿಲಿಲಿಲಿಲಿಲಿ ನುಡಿತಯ್ತೊ ಪಕ್ಷಿ ।
ಕುಲುಲುಲುಲುಲುಲುಲು ನಗತಯ್ತೊ ॥ ಪಲ್ಲ ॥
ಸೊಕ್ಕು ಹುಕ್ಕಿ ದಿಕ್ಕಿನೊಳು ಮಿಕ್ಕುತಲಿ ಕುಲುಕುಲು ।
ನಕ್ಕು ನಕ್ಕು ಮರ್ತ್ಯಲೋಕ ಪಕ್ಷದಲ್ಲಿ ॥
ಹಕ್ಕಿಗೆರಡು ಪಕ್ಕದ ಮೇಲೆ ರೆಕ್ಕೆ ಇಲ್ಲಾ ಅವು ।
ಅಕ್ಕಾತಂಗಿ ಸಿಕ್ಕದಾರಿ ಹೋದವಲ್ಲ ॥ ೧ ॥
ಬಣ್ಣಿಸಿ ನೋಡಿದರ ಕಾಂಬುದಲ್ಲಾ । ಅದಕೆ
ಹೆಣ್ಣುಗಂಡು ಎಂಬೊವೆರಡ್ಡೆಸರಿಲ್ಲ
ಬಣ್ಣವಿಲ್ಲದ ಹಕ್ಕಿ ನೋಡು ಕಣ್ಣಿನ ಕೊನೆಯಲ್ಲಿ ।
ಸಣ್ಣಗೂಡನಿಟ್ಟು ಸುಳಿದಾಡುತಲಿ ॥ ೨ ॥

---

## ೩

ಸಂಗ್ರಾಹಕ:-ಶ್ರೀ. ಶಿವರಾಮ ಶಾಸ್ತ್ರಿ, ಕೊಪ್ಪಳ.

### ಬೀಸುವ ಪದಗಳು

#### ವಿಚಿತ್ರ ಸಂಸಾರ

ಕಿರಕಸಾಲೀಗಿಡ ನೆಲಕ ಹಬ್ಬಿದರೇನು ?
ಕರಕರಿ ಗಂಡನ ಮದಿವ್ಯಾಗಿ– ಆ ಬಾಲಿ
ಎರಕೊಂಡ ಮಡಿಯ ಬಿಚ್ಯಾಳ !
ಮದ್ದುಗುಣಕೀ ಗಿಡ ಉದ್ದ ಬೆಳೆದರೇನು ?
ಗೃಧ್ರ ಗಂಡನ ಮದಿವ್ಯಾಗಿ– ಆ ಬಾಲಿ
ಇದ್ದ ಭಂಗಾರ ಇಡವಲ್ಲಳ !

#### ಹೆಣ್ಣುಮಕ್ಕಳ ಹಾರೈಕೆ

ಕುದುರಿ ಏರಲುಬೇಕು ಕೂಸು ಮುಂದಿರಬೇಕು
ಹೌಸಿನ ಸೆಲ್ಲೆ ಹೊದಿಬೇಕು ವೆಂಕಟ್ರಮಣನ
ತಿರುಪತಿಗ್ಹೋಗಿ ಬರಬೇಕು !

#### ಹೇವದ ಪಣ

ಕಣ್ಣ ಚಿವುಟಲು ಬ್ಯಾಡ ನಿನ್ನೆಣ್ಣು ನಾನೊಲ್ಲೆ !
ಕರ್ಣಿಕರ ಮಗಳು ಅತಿ ಚಲುವಿ–ಮಾಡಿಕೊಂಡು
ನಿಮ್ಮೂರ ಮ್ಯಾಲೆ ಬರುವೇನ !

#### ಆಗದವರು

ಸವತಿ ಸಣ್ಣವಳಲ್ಲ ! ಭಾಗಾದಿ ಬಡಿವ್ಯಲ್ಲ !
ಚೇಳಿನ ಕೊಂಡಿ ರವಿಯಲ್ಲ !– ರಾಜ್ಯದಿ
ಚಿಕ್ಕಪ್ಪನ ಮಗನ ತವರಲ್ಲ !

ಆಕಳ್ಹಯನವಲ್ಲ ! ಅಳಿಯ ಪುತ್ರನಲ್ಲ !
ಕಾಡಿಗಿ ಜೋಳ ಬೆಳಸ್ಯಲ್ಲ !– ರಾಜ್ಯದಿ
ಅತ್ತೀಗಿ ಅಲ್ಲ ಹೆತ್ತವ್ವ !

---

## ೪

ಸಂಗ್ರಾಹಕರು:-ಶ್ರೀ. ಎಸ್. ಎ. ಧರಿಗೌಡ, J. B. A. ಪುಣೆ.

### ಡೊಳ್ಳಿನ ಪದಗಳು

#### ಕುರುಬರ ಬಾಳುವೆ

ಕುರಿ ಕಾಯುತ ಹೋದೀವಣ್ಣಾ ಕುಂಕುಮುದ್ಧಳ್ಯಾ
ತಂದೀವೋ ।
ಆಡು ಕಾಯುತ ಹೋದೀವಣ್ಣಾ ಜೋಡು ಮಲ್ಲಿಗೆ
ತಂದೀವೋ ॥ ೧ ॥
ತೆಗ್ಗಿನ ಕುರಿಯ ತೆವರಿಗ್ಹೊಡಿಯೋ ಮಜ್ಜಿಗೆ ಕುಡದ
ಬರತೇನೋ ।
ದಡ್ಡಿಯ ಕುರಿಯ ಮಡ್ಡಿಗ್ಹೊಡಿಯೋ ಅಂಬಲೀ ಕುಡದ
ಬರತೇನೋ ॥ ೨ ॥
ಇಪ್ಪತ್ತು ಮೊಳದ ಘೊಂಘಡಿಯೋ ಒಪ್ಪತ್ತಿನಾಗ
ನೇದಾನೋ ।
ಆರು ನೂರ ಹಿಂಡ ಕುರಿಗಳನೋ ಅರಗಳಿಗ್ಯಾಗ
ಹಿಂಡ್ಯಾನೊ ॥ ೩ ॥
ತೋಳ ಬಂದಿತೋ ತೋಳ ಬಂದಿತೊ ಬಹಳ ಜೋಕೆಲೆ
ಬೀರಣ್ಣಾ ।
ಬಾಳ್ಯಾ ಸಾವಳ್ಯಾ ನಾಯಿಗಳ ಬಿಡೋ ಗೋಳ ಮಾಡಿ
ಅವು ಬಿಡತಾವೋ ॥ ೪ ॥
ನಾಯಿಯ ನುಚ್ಚಾ ಹೊತ್ತಾಳ ಮಾಯವ್ವ ಬಾಯಿಲೆ
ಕಾಯೀ ತಿಂತಾಳೋ ।
ತೋಳಿನಾಗ ತೋಳಬಂದಿಗಿಟ್ಟಾಳ ಬಾಳವ್ವ ಗಾಳಿಗೆ
ತುರಬಾ ಉಚ್ಯಾಳೊ ॥ ೫ ॥

# ಬಿಡಿನುಡಿಗಳು

## ಎತ್ತ ಹೋದರು ಸೆಟ್ಟಿ ತನ್ನ ಲೆಕ್ಕದಲ್ಲಿ !

ಸ್ವರಾಜ್ಯ, ಸಾಮಂತಸ್ವರಾಜ್ಯ, ಎಂತಹದಾದರೂ ಆಗಲಿ ಹೆಸರಿಗಾದರೂ ಸ್ವರಾಜ್ಯ ಕೊಡಿರಿ ಎಂದು ನಮ್ಮವರ ಪ್ರಾರ್ಥನೆ. ಕೊಡತಕ್ಕ ಕೊಡುಗೈದೊರೆಗಳಾದರೊ ದಿನಕ್ಕೊಂದು ವರ, ದಿನಕ್ಕೊಂದು ವಚನ ಕೊಡುತ್ತಿದ್ದಾರೆ. ಸ್ವರಾಜ್ಯ ಕೊಡುವರೊ ಇಲ್ಲವೊ ತಿಳಿಯದು. ಸ್ವರಾಜ್ಯದಾನ ವಚನವೂ ವೇದ ವಚನದಂತೆ ಭಾಷ್ಯ ಮಾಡಿ ಅರ್ಥ ಬಿಚ್ಚಿ ಹೇಳುವವರಿಲ್ಲದೆ ತಿಳಿಯದು. ಭಾಷ್ಯಕಾರರೂ ಅನೇಕ. ವ್ಹಾಯಿಸರಾಯರು ಸ್ಟೇಟ ಸೆಕ್ರೇಟರಿಯವರು ಮಂತ್ರಿಮಂಡಲದವರು ಎಲ್ಲರು ಭಾಷ್ಯಕಾರರು. ಅವರಿಗೂ ಹಿಂದುಸ್ಥಾನಕ್ಕೂ ಬಾದರಾಯಣ ಸಂಬಂಧವಿಲ್ಲವೇ ? ಇದಲ್ಲದೆ ವಿಲಾಯತಿಯ ಸ್ವರ್ಗದೊಳಗಿನ ಪಾರ್ಲಮೆಂಟಿನ ಇಂದ್ರಸಭೆಯಲ್ಲಿ ಶ್ವೇತದೇವತೆಗಳು ಗದರಿ ಬೆದರಿಸುತ್ತಲೆ ಈ ಭಾಷ್ಯಕಾರರ ನಾಲಗೆಯು ಎತ್ತರ ತತ್ತರವಾಗುವದು. ನಾವು ಬೇಡುತ್ತಿರುವದೇನೊ ನಮಗೆ ತಿಳಿಯದು. ಅಂತೆಯೆ ಅವರು ಏನು ಕೊಡಬೇಕೆನ್ನುವರೋ ಅದು ಅವರಿಗೂ ತಿಳಿಯದು. ಸ್ವರಾಜ್ಯವು ಬೇಡಬಹುದಾದ ಅಥವಾ ಕೊಡಬಹುದಾದ ವಸ್ತುವಲ್ಲ. ಸಾಮ್ರಾಜ್ಯದ ಯಜ್ಞ ನಡೆದಿದ್ದರೆ ಭರತಖಂಡದ ಬ್ರಾಹ್ಮಣರಿಗೆ ಸ್ವರಾಜ್ಯವು ದಕ್ಷಿಣೆಯಾಗಿ ದೊರೆಯಬಹುದಾಗಿತ್ತು. ಸಾಮ್ರಾಜ್ಯವನ್ನು ಇನ್ನೂ ಅಗಲವಾಗಿ ಎತ್ತರವಾಗಿ ಕಟ್ಟಬೇಕೆಂದು ಹೊಟ್ಟೆಯಲ್ಲಿರುವ ಜನರು ಲಿಬರಲ್ಸ ಎಂದು ಹೆಸರು ಇಟ್ಟುಕೊಂಡು ಬಂದರೇನು? ಕಾಂಝರ್ವೆಟಿವ ಎಂದು ಹೆಸರಿಟ್ಟುಕೊಂಡರೇನು ? ಲೇಬರ ಪಾರ್ಟಿ ಎಂದು ಹೆಸರಿಟ್ಟುಕೊಂಡರೇನು ? ಬ್ರಾಹ್ಮದಾನದಲ್ಲಿ ಕೊಡುವವನ ಉದಾರತೆಯ ಮೇರೆಗೆ ದಾನವು ದೊರೆಯುವದು; ಕ್ಷಾತ್ರದಾನದಲ್ಲಿ ಬೇಡುವವನ ಬಲದ ಮೇರೆಗೆ ದೊರೆಯುವದು; ವೈಶ್ಯದಾನದಲ್ಲಿ ಕೊಡುವವನು ಹೆಸರುಳಿಸಿಕೊಳ್ಳುವ ಮಟ್ಟಿಗೆ; ಶೂದ್ರದಾನದಲ್ಲಿ ಕೊಡುವವ ಕೊಳ್ಳುವವರಿಬ್ಬರೂ ಸಮಾಧಾನ ಹಚ್ಚಿಕೊಳ್ಳಲಿಕ್ಕೆ. ಕೊಟ್ಟದ್ದಕ್ಕೆ ಕೊಂಡದ್ದಕ್ಕೆ ತಮ್ಮ ತಮ್ಮ ಮನಸ್ಸಿನ ಪ್ರಕಾರ ಹೆಸರಿಟ್ಟುಕೊಳ್ಳಬೇಕು, ಹೀಗಿದೆ ರೀತಿ. ಅಂತೆಯೆ ಮಾತಿನ ಸಂತೆ ನೆರೆದಿದೆ. ಎಲ್ಲಿಂದ ಬರುವದೋ ಏನಾಗಿ ಬರುವದೋ ಈ ಸ್ವರಾಜ್ಯವು ... ನಂತೆ' ಎಂದು ಎಲ್ಲರಿಗೂ ದಿಗ್ಭ್ರಾಂತಿ ! ಕೊಡುವ ಎಲ್ಲ... ಗಳ ಮಾತಿನಲ್ಲಿ ಮಾತಿಲ್ಲ. ಸ್ವರಾಜ್ಯಸಂಪಾದನೆಯು ಧ... ಧರ್ಮಕ್ಕಿಂತ ಬಲಾಬಲದ ಮಾತು. ಇಷ್ಟು ವರ್ಷಗಳ... ಕೆಯ ಅನುಭವವಿದ್ದರೂ ಆಂಗ್ಲ ಜನಾಂಗದ ಸ್ವಭಾವವು... ತಿಳಿಯದಾಗಿದೆಯೋ ಬ್ರಹ್ಮನನ್ನೂ ಗೊತ್ತುಹಚ್ಚಿದ... ಜನಾಂಗಕ್ಕೆ ! ಜಾತಿಯ ಕಸಬು ಜಾತಿಗೆ ಗೊತ್ತು. ... ಹೆಜ್ಜೆ ಅವರೇ ಬಲ್ಲರು. ಆಂಗ್ಲರೇ ಆಂಗ್ಲರ ವಿಷ... ಏನನ್ನುವರು ನೋಡಿರಿ:—

Being much more intent upon prac... results than philosophical symmetr... was and is ready to subordinate theor... facts and to accept frequent and illo... compromises. —Sir Sidney L...

“ ತಾವು ಹೇಳುವ ತತ್ತ್ವಜ್ಞಾನಕ್ಕಿಂತ ತಮ್ಮ ಕೃತಿ... ವ್ಯವಹಾರತಃ ಪರಿಣಾಮವೇನಾಗುವದೆಂಬುದನ್ನು ... ಆಂಗ್ಲನು ನಡೆದುಕೊಳ್ಳುವನು. ತನ್ನ ಮತ ಪಕ್ಷಕ್ಕಿಂತ... ವಿಕಸ್ಥಿತಿಯೇನೆಂಬುದನ್ನು ತಿಳಿದುಕೊಂಡು ಯದ್ವಾ... ಕಂಡರೂ ಅಡ್ಡಿ ಇಲ್ಲ. ಏನಾದರೂ 'ಸಪಾರ ಮುಸಾ... ಮಾಡಿ ಪಾರಾಗುವದು ಅವನ ಸ್ವಭಾವವಾಗಿದೆ” ಎಂದು... ಸಾಹೇಬರು ಹೇಳುವರು. ಆದಕಾರಣ ಈಗಿನ ಸರ್ಕಾ... ಪಕ್ಷವು ಕೂಲಿಕಾರರದೆಂದೆನಿಸಿಕೊಂಡರೂ ಹೊರಬೀಳ... ಅದು ಸಾಮ್ರಾಜ್ಯವಾದಿ ಪಕ್ಷವೇ ಆಗಿರುವದೆಂಬದನ್ನು... ಮರೆಯಕೂಡದು. ನಮ್ಮ ಭುಜಬಲವು ನಮ್ಮ ಸ... ಬೆನ್ನು ಕಟ್ಟಿರುವದಾದರೆ ಅವರು ಬಾಗತಕ್ಕವರು. ಇಲ್ಲ... ಒಳ್ಳೊಳ್ಳೆ ಮಾತನಾಡಿ-ಒಳ್ಳೆ ಹೊತ್ತಿಗೆ ಬಿಡತಕ್ಕವರು. ... ನೀತಿಯೇ ಹೀಗಿದೆ. ವಾಲ್ಲರ ಬೀಸಂಟನು ಹೇಳುತ್ತಾ...

Politics is a game of lying accusa... and impossible promises; the accusa... make you angry; the promises make ... hopeful. But you get nothing in the ... run; and you never will; because pro...

what they may, it is not laws or measures that will improve our lot; it is by our resolution that it shall be improved.

ರಾಜನೀತಿ ಒಂದು ಆಟ. ಸುಳ್ಳುಸುಳ್ಳದ ಆರೋಪಗಳನ್ನು ಮಾಡುವದೂ ಇಲ್ಲದ ಸಲ್ಲದ ವಚನಗಳನ್ನು ಕೊಡುವದೂ ಅದರ ರೀತಿ. ಆರೋಪ ಕೇಳಿ ನಮ್ಮ ಕಣ್ಣು ಕೆಂಪಗಾಗುವವು. ವಚನಕೇಳಿ ನಮ್ಮ ಬಾಯಿಗೆ ನೀರು ಬಿಡುವದು. ಆದರೆ ಕೊನೆಗೆಲ್ಲ ಗಾಳಿಗೆ ಗಾಳಿ ಬಯಲಿಗೆ ಬಯಲು! ಆಳುವವರು ಯಾವ ವಚನ ಕೊಟ್ಟರೇನು ಯಾವ ಕಟ್ಟಳೆ ಮಾಡಿದರೇನು ನಮ್ಮ ಶಕ್ತಿಯಿಷ್ಟಷ್ಟೆ ನಮಗೆ ದೊರಕಬಲ್ಲದು. ನಮ್ಮ ಸಂಕಲ್ಪದಂತೆ ನಮ್ಮ ಸಿದ್ಧಿ. ನಮ್ಮನ್ನಾಳುವವರು ತಕ್ಕಡಿ ಹಿಡಿದುಕೊಂಡು ಬಂದವರು. ತಪ್ಪು ತೂಕ ಕೊಡಬಹುದು. ತೂಕ ತಪ್ಪಿ ಕೊಡಲಾರರು. ಲೇಬರಪಕ್ಷವಾದರೇನು? ಕಾನ್ಸರ್ವೇಟಿವ್ಹ ಆದರೇನು? ಎತ್ತ ಹೋದರೂ ಸೆಟ್ಟಿ ತನ್ನ ಲೆಕ್ಕದಲ್ಲಿ!

---

## ಲಾಹೋರದ ೪೪ನೆಯ ರಾಷ್ಟ್ರೀಯಮಹಾಸಭೆ

ಪೂರ್ಣಸ್ವಾತಂತ್ರ್ಯವಾದಿಗಳೂ ಉದಿತೋದಿತಕೀರ್ತಿಯವರೂ ತರುಣರೂ ಆದ **ಪಂಡಿತ ಜವಾಹಿರಲಾಲ ನೆಹರು**



ಅವರು ಈ ಸ್ಥಲದ ಮಹಾಸಭೆಯ ಅಧ್ಯಕ್ಷರು ಅಂದ ಮೇಲೆ ಕೇಳುವದೇನು? ರಾಷ್ಟ್ರೀಯ ಸಭೆಯ ಧ್ಯೇಯವೇ ಪೂರ್ಣ ಸ್ವಾತಂತ್ರ್ಯವಾಗಿ ಬಿಡುವದೆಂದು ಕೆಲವರ ಆಶೆ. ಮಹಾತ್ಮಾ ಗಾಂಧಿಯವರು ಸರ್ವಪಕ್ಷಗಳಲ್ಲಿ ಏಕಮುಖತೆಯನ್ನುಂಟು ಮಾಡಲು ಹೆಣಗುತಿರುವ ಧೋರಣೆಯು ಇವರಿಗೆ ತೀರ ಸಪ್ಪಗೆ ಎನಿಸುವದು. ಸ್ವಾತಂತ್ರ್ಯದ ಇಚ್ಛೆಯೇನೋ ಒಳ್ಳೆಯದೇ. ಸ್ವಾತಂತ್ರ್ಯವನ್ನು ಗಳಿಸಬಲ್ಲ ಕ್ರಿಯಾಶಕ್ತಿಯು ಅದಕ್ಕೂ ಒಳ್ಳೆಯದು. ಆದರೆ ಕ್ರಿಯಾಶಕ್ತಿಯಿಲ್ಲದ ಇಚ್ಛೆಯು ಬರಿಯ ಹುಡುಗಾಟಿಕೆಯಾಗಿ ತೋರದಿರದು. ರಾಷ್ಟ್ರೀಯ ಮಹಾಸಭೆಗೆ ಒಂದು ಪುಣ್ಯಕಾರ್ಯವೆಂದು ಯಾತ್ರಿಕರ ಭಕ್ತಿಯಿಂದ ಹೋಗುವ ಮಹಾಜನರು ನಮಗೆ ವಂದ್ಯರಾಗಿರುವರಾದರೂ ಜನ ಮರುಳೋ ಜಾತ್ರೆ ಮರುಳೊ ಎಂಬಂತೆ 'ಸ್ವಾತಂತ್ರ್ಯ' ಎಂಬ ಹೆಸರಿಗೆಯೆ ಮೆಚ್ಚಿ ಕೈಲಾಗದ ಕೆಲಸಗಳಿಗೂ ಕೈಯೆತ್ತಿ ಬರುವ ಅವರ ಅಚಾತುರ್ಯವು ಹಾಸ್ಯಾಸ್ಪದವಾಗಿರುವದಲ್ಲದೆ ಭಾರತದ ಕೈಯನ್ನು ನೀಗದ ಕೆಲಸದಲ್ಲಿ ತೊಡಕಿಸುವದು.



ಮ. ಗಾಂಧಿಯವರ ಬಗ್ಗೆ ಪೂಜ್ಯಬುದ್ಧಿಯಿಂದಾಗಲಿ, ಸಾಧ್ಯಾಸಾಧ್ಯವಿವೇಕದಿಂದಾಗಲಿ, ದೂರದರ್ಶಿತ್ವದಿಂದಾಗಲಿ, ಸ್ವಾತಂತ್ರ್ಯಪಕ್ಷದ ಮುಖಂಡರಾದ ಜವಾಹಿರಲಾಲ ನೆಹರು ಮತ್ತು ಸುಭಾಷ ಬೋಸ ಇವರು ಸರ್ವಪಕ್ಷೀಯ ಏಕಮುಖತೆಗಾಗಿ ಈಗ ನಿಗ್ರಹದಿಂದಿರುವಂತೆಯೆ ಈ ಮಹಾಸಭೆಯ ಕಾಲದಲ್ಲಿಯೂ ತಮ್ಮ ಪಕ್ಷದವರನ್ನು ತಮ್ಮ ನಿಗ್ರಹದಲ್ಲಿಟ್ಟುಕೊಂಡಾದರೆ ಬೆರಗುಗೊಳಿಸುವಂತಹ ದೊಡ್ಡ ಗೊತ್ತುಗಳಾಗದಿದ್ದರೂ 'ಸೈ' ಎನ್ನಬಹುದಾದ ಕಾರ್ಯವಾಗುವ ಸಂಭವವಿದೆ. ಯಾಕಂದರೆ ಶಬ್ದದ ಸ್ವಾತಂತ್ರ್ಯಕ್ಕಿಂತ ಕೃತಿಯ ಏಕಮುಖತೆಯು ಪರಿಣಾಮಕಾರಕವಾಗಿದೆ.

ಹೀಗೆಂದಮಾತ್ರಕ್ಕೆ ಭಾರತದಲ್ಲಿ ಸ್ವಾತಂತ್ರ್ಯದ ಸೊಲ್ಲಡಗ ಬೇಕು ಎಂದು ನಮ್ಮಮತವಲ್ಲ —

"There are moments in history when nothing seems to be so brittle as the fabric of the State:— W. R. Paterson (In his article 'The destiny of Nations')"

ರಾಜ್ಯಸಾಮ್ರಾಜ್ಯಗಳ ಮಾಟವು ಮುಟ್ಟಿದರೆ ಕೆಟ್ಟು ಹೋಗುವ ಸಂದುಕಟ್ಟಿನ ಸಂದರ್ಭಗಳು ಇತಿಹಾಸದಲ್ಲಿ ಬಂದಿರುವದುಂಟು. ಇಂತಹ ಸಂದರ್ಭವು ಹಿಂದುಸ್ಥಾನದಲ್ಲಿ ಮೂಡಲಿರುವದೆಂಬುದನ್ನು ಆಂಗ್ಲರು ಅರಿಯದೆ ಇಲ್ಲ. ನಮ್ಮ ಸ್ವಾತಂತ್ರ್ಯವೆಂಬ ಇಚ್ಛಾಕಂದಕ್ರಿಯೆಯು ಒಂದೆರಡು ಮೊಳಿಕೆಗಳೊಡೆದರೂ ಅದರ ಭಯದಿಂದ ನಮ್ಮನ್ನಾಳುವವರಲ್ಲಿ ವಿವೇಕವು ಉಂಟಾಗುವಂತಿದೆ. ಈ ವಿವೇಕದ ಫಲವು ಸ್ವಾತಂತ್ರ್ಯಪಕ್ಷದವರಿಗೆ ದೊರೆಯದಿದ್ದರೂ ಭಾರತೀಯರಿಗೆ ಅದರಿಂದ ಲಾಭವಾಗದೆ ಇರದು. ಆದಕಾರಣ ನಿಜವಾದ ಸ್ವಾತಂತ್ರ್ಯಪಕ್ಷವು ಬೇಕೇಬೇಕು. ಶಬ್ದ ಶೌರ್ಯವು ಸ್ವಾತಂತ್ರ್ಯಪಕ್ಷದ ಗುರಿಯಲ್ಲ. ಜನರಲ್ಲಿ ಸಾಹಸ ಪರಾಕ್ರಮಾದಿಗಳ ಪ್ರೀತಿಯನ್ನು ಹುಟ್ಟಿಸುವದು, ಒಕ್ಕಟ್ಟನ್ನು ಬೆಳೆಯಿಸುವದು, ತ್ಯಾಗವನ್ನು ಕಲಿಯಿಸುವದು ಇದು ಅದರ ಗುರಿ. ಇದನ್ನು ಸಾಧಿಸಲು ರಾಷ್ಟ್ರೀಯಸಭೆಗಿಂತ ಜನಸಾಮಾನ್ಯದ ದೈನಂದಿನ ಜೀವನದಲ್ಲಿಯೇ ಈ ಪಕ್ಷಕ್ಕೆ ಹೆಚ್ಚು ಅನುಕೂಲತೆಗಳು ಒದಗುವವು. ಆದಕಾರಣ ಸರ್ವಪಕ್ಷಗಳ ಏಕಮುಖತೆಗೆ ಮಹಾಸಭೆಯಲ್ಲಿ ಅವಕಾಶವನ್ನು ಕಲ್ಪಿಸಿಕೊಟ್ಟರೆ ದೇಶದ ಹಿತವಾಗುವಂತೆ ತೋರುತ್ತದೆ. ಸ್ವಾತಂತ್ರ್ಯಪಕ್ಷದವರು ಹೀಗೆ ವರ್ತಿಸುವರೇ!

---

## ನಾವು ಬೇಡಲಿರುವ ಸ್ವಾತಂತ್ರ್ಯದ ಉಪಸಿದ್ಧಾಂತಗಳು

"ಸ್ವರಾಜ್ಯವು ನಮ್ಮ ಜನ್ಮಸಿದ್ಧವಾದ ಹಕ್ಕು" ಎಂಬ ಹೊಸದಾದ ಗಾಯತ್ರಿಮಂತ್ರವನ್ನು ಜಪಿಸತೊಡಗಿದಂದಿನಿಂದ ಸ್ವಾತಂತ್ರ್ಯವನ್ನು ಬೇಡುವ ಅಧಿಕಾರವು ಕೂಡ ಎಲ್ಲರಿಗೂ ಜನ್ಮಸಿದ್ಧವಾದದ್ದು ಎಂದು ಕಲ್ಪನೆಯಾಗತೊಡಗಿದೆ. ಬೇಡುವ ಅಧಿಕಾರವು ಎಲ್ಲರಿಗೂ ಇದೆ. ಕೊಡದವನೆ ಪಾಪಿ! ಬೇಡುವವನು ಬೇಡಿದ ಮಾತ್ರಕ್ಕೆ ಜ್ಞಾನಿ! 'ಅಹಂ ಬ್ರಹ್ಮಾಸ್ಮಿ' ಎಂಬ ಮಹಾವಾಕ್ಯವನ್ನು ಒತ್ತಿನುಡಿದರೆ ಸಾಕು ಮುಕ್ತಿಯ[illegible] ಬ್ರಹ್ಮನು ಕೊಡಲೇಬೇಕು ಎಂದ ಹಾಗೆ. ಭಾರತೀಯ[illegible] ಆಂಗ್ಲರಿಂದ ಸ್ವರಾಜ್ಯವನ್ನು ಬೇಡುತ್ತಲಿರುವ ಉದಾಹರಣೆ[illegible] ಅನುಪಮೇಯವಾಗಿದೆ. ಮೂವತ್ತುಮೂರುಕೋಟಿ ಜ[illegible] ಒಂದು ಖಂಡದ ಬಿಡುಗಡೆಯನ್ನು ಒಂದು ಅಜೇಯ[illegible] ಸಾರ್ವಭೌಮರಾಷ್ಟ್ರದಿಂದ ಒರಿ ವೇದಾಂತವನ್ನು ಪದ[illegible] ದೊರಕಿಸಬೇಕೆನ್ನುತ್ತಲಿರುವರು ! ತಾವು ನಿಃಶಸ್ತ್ರರು, [illegible] ಒಡಕುಳ್ಳವರು; ಆಳುವವರು ಯುದ್ಧವಿಶಾರದರು, ಭೇದ[illegible] ನಿಪುಣರು. ಹೀಗಿದ್ದೂ ನಮ್ಮ ಧಾರ್ಮಿಕ ಸಾಮಾ[illegible] ಕೌಟುಂಬಿಕ, ಶೈಕ್ಷಣಿಕ, ಆರ್ಥಿಕದೋಷಗಳನ್ನು ತಿದ್ದಿ[illegible] ಳ್ಳದೆ ಇದ್ದಕ್ಕಿದ್ದಂತೆ ನಮಗೆ ಸ್ವರಾಜ್ಯವೂ ಸ್ವಾತಂತ್ರ್ಯ[illegible] ದೊರಕಲೇಬೇಕು—ಅದೇಕೆ ದೊರಕಬಾರದು ? ಎಂದು [illegible] ಹಾಕುತ್ತಿದ್ದಾರೆ ಭಾರತೀಯರು. ಆದರೆ ಅವರ ಆ ಮರು[illegible] ಅವರಿಗೇ ತಿಳಿಯದಾಗಿದೆ. ಜವಾಹಿರ ಸುಭಾಷರಂಥವರು [illegible] "ಅದು ಬೇಕಾಗಿದ್ದರೆ ಇದು ಹೀಗಾಗಬೇಕು" ಎಂದು [illegible] ರನ್ನು ಜಾಗೃತಿಗೊಳಿಸುತಲಿದ್ದಾರೆ:—

" By freedom I mean all round freedom i.e. freedom for the individual as well as the society; freedom for man as well as woman; freedom for the rich as well as the poor; freedom for all individuals and all classes. This freedom implies not only emancipation from political bondage but also equal distribution of wealth, abolition of caste barriers and social inequities and destruction of communalism and religious intolerance."

ಸುಭಾಷಚಂದ್ರರಿಗೆ ಸ್ವಾತಂತ್ರ್ಯವು ಸರ್ವತೋಮುಖ[illegible] ದ್ದರೆ ಅದು ಸ್ವಾತಂತ್ರ್ಯವೆ ಅಲ್ಲವೆಂದು ಎನಿಸುವದು. [illegible] ಜಕ್ಕೂ ವ್ಯಕ್ತಿಗೂ, ಗಂಡಿಗೂ ಹೆಣ್ಣಿಗೂ, ಬಡವನಿಗೂ [illegible] ದನಿಗೂ, ಜಾತಿಗೂ ವ್ಯಕ್ತಿಗೂ, ಸ್ವಾತಂತ್ರ್ಯವಿದ್ದರೆ [illegible] ನಿಜವಾದ ಸ್ವಾತಂತ್ರ್ಯ. ಬರಿಯ ರಾಜಕೀಯ ಪಾರತಂತ್ರ್ಯ[illegible] ಪಾರಾದಷ್ಟಕ್ಕೆ ಸ್ವಾತಂತ್ರ್ಯ ದೊರಕಿಸಿದಂತಾಗಲಾರದು. [illegible] ತನ ದೈವುಳ್ಳತನದ ಭೇದವು ಅಳಿಯಬೇಕು; ಜಾತಿ ಜಾತಿ[illegible]

ಳಗಿನ ನಾ ಹೆಚ್ಚು ನೀ ಕಡಿಮೆ ಎಂಬ ಭಾವವು ಮಾಯುವಾಗ ಬೇಕು. ಸಮಾಜದೊಳಗಿನ ವೈಷಮ್ಯವು ಇಲ್ಲದಾಗಬೇಕು, ಕೋಮುವಾರ ಬಡೆದಾಟಗಳು ನಾಶವಾಗಬೇಕು, ಧರ್ಮಧರ್ಮಗಳೊಳಗಿನ ಅಸಹಿಷ್ಣುತೆಯು ಹೋಗಬೇಕು: ಇದು ಸ್ವಾತಂತ್ರ್ಯ ಎಂದು ಹೇಳುವದಲ್ಲದೆ :—

"We must bring about a revolution of ideas in the thought-world and intermingling of blood in the biological plane" ( Volunteer 1929 Oct.)

ಎಂದು ಇನ್ನೊಂದೆಡೆಗೆ ಹೇಳಿರುವರು. ವಿಚಾರಕ್ರಾಂತಿಯೂ ವಿಭಿನ್ನಜನಾಂಗಗಳ ರಕ್ತಸಂಬಂಧವೂ ಆದಹೊರತು ನಮ್ಮ ಬೆಳುವಣಿಗೆಯಾಗಲಾರದೆಂದು ಅವರ ಮತ. ಇವು ನಾವು ಬೇಡುವ ಸ್ವಾತಂತ್ರ್ಯದ ಉಪಸಿದ್ಧಾಂತಗಳು. ಜವಾಹಿರಲಾಲರೂ ಇದೇ ರೀತಿಯಾಗಿ ಬೇರೆ ಕಡೆಗೆ ಮಾತನಾಡಿರುವರು. ನಮಗೆ ಸ್ವಾತಂತ್ರ್ಯದ ಸಿದ್ಧಾಂತವು ಇಷ್ಟವಾದರೆ ಅದರ ಈ ಉಪಸಿದ್ಧಾಂತಗಳೂ ಇಷ್ಟವಷ್ಟೆ ? ನಮ್ಮ ಜನರು ವಿಚಾರಿಸಿ ವಿಮರ್ಶಿಸಿ ನೋಡಲಿ.

## ಹಿಂ. ಸೇ. ದಲದ 'ಮಸ್ತ'(Must) ಕಟ್ಟುಪ್ಪಣೆಗಳು

ಹಿಂದುಸ್ಥಾನೀಸೇವಾದಲದ ಹೆಸರನ್ನು ಕೇಳದಿದ್ದವರು ಸುಶಿಕ್ಷಿತರಲ್ಲಿ ವಿರಲ. ಕರ್ನಾಟಕದಲ್ಲಿ ಅದರ ಉಗಮವಾದರೂ ಅದು ಹಿಂದುಸ್ಥಾನವನ್ನು ವ್ಯಾಪಿಸಿರುವದು. ಅದೊಂದು ಸ್ವಯಂಸೇವಕರನ್ನು ಸಿದ್ಧಪಡಿಸುವ ಸಾರ್ವಜನಿಕಶಾಲೆ. ಸೈನಿಕೋಚಿತವಾದ ಯಮನಿಯಮಗಳನ್ನು ಪಾಲಿಸುವದು ಅದರ ಸಹಜಕರ್ಮವಾಗಿದೆ. ಆದರೆ ಅದರಲ್ಲಿ ಈಗ ಕೆಲಸಮಾಡುತ್ತಲಿರುವವರು ಜಾತ್ಯಾ ಸೈನಿಕೋಚಿತವಾದ ಆಚಾರದವರು ಎಂದು ಹೇಳಲು ಬರುವಂತಿಲ್ಲ. ದೇಶಭಕ್ತಿಯಿಂದ ಪ್ರೇರಿತರಾದ ಅನೇಕ ವಿಚಾರವಂತರೂ ಅವರಲ್ಲಿ ಸೇರಿಕೊಂಡಿದ್ದಾರೆ. ವಿಚಾರಸ್ವಾತಂತ್ರ್ಯ ಆಚಾರಸ್ವಾತಂತ್ರ್ಯದ ಹೆಸರಿನಲ್ಲಿ ಬಡೆದಾಡುತ್ತಿರುವ ಈ ಕಾಲದಲ್ಲಿ ಮಾತಿಗೊಂದು ( must ) ಮಸ್ತ ಹಾಕಿ ಗದ್ದರಿಸುವದರ ಔಚಿತ್ಯವು ತಿಳಿಯುವದು ಬಹಳ ಬಿಗಿ. 'Volunteer' ಪತ್ರಿಕೆಯ ೧೯೩೯ರ ಅಕ್ಟೋಬರ ಸಂಚಿಕೆಯಲ್ಲಿ ಪ್ರಕಟವಾದ ಹಿಂ. ಸೇ. ದಲದ ಪ್ರಚಾರಕರಿಗಿತ್ತ ಆಜ್ಞಾಪತ್ರದಲ್ಲಿ 'ಪ್ರಚಾರಕನು ಪಕ್ಷ, ಜಾತಿ, ಅಥವಾ ಪ್ರಾಂತಭಾವನೆಯನ್ನು ಎಂದೂ **ಹುಟ್ಟಿಸಲಾಗದು.** ಯಾವದೇ ಕಾರಣದಿಂದ ಈಬಗೆಯ ಚಳವಳದಲ್ಲಿ **ಸೇರಲಾಗದು.** ದಲದ ವಿಷಯದಲ್ಲಿ ಮಾತನಾಡುವಾಗ ಬರೆಯುವಾಗ ಬಹಳೇ ಎಚ್ಚರದಿಂದಿರಲೇಬೇಕು; ಕೃತಿಯಿಂದಾಗಲಿ ಲೇಖನದಿಂದಾಗಲಿ ದಲವನ್ನು ತೊಡಕಿನಲ್ಲಿ ಎಂದೂ **ತರಲಾಗದು.** ಕಾಂಗ್ರೆಸದ ಬಗ್ಗೆ ಮತ್ತು ದಲದ ಬಗ್ಗೆ ಹಾಗೆಯೆ ರಾಷ್ಟ್ರದ ಅಥವಾ ಪ್ರಾಂತದ ಮುಖಂಡರಬಗ್ಗೆ ತನ್ನ ವೈಯಕ್ತಿಕ ವಿಚಾರದ ಸೇರಿಕೆ ಸೇರದಿರುವಿಕೆಯನ್ನು **ಪ್ರಕಾಶಗೊಳಿಸಲಾಗದು** " ಎಂದು ಮುಂತಾಗಿ ಹೇಳಿದ್ದಲ್ಲದೆ :—

"It (Hindustani Seva Dal) has nothing to do with either communal or provincial or any other party politics"

ಎಂದು ಪ್ರಸ್ತಾಪಿಸಿ ಮುಂದೆ :—

"Propagandist must try his best to inculcate the idea of 'India first, India next and India last'."

ಎಂದು ಹೇಳಿದ್ದಾಗಿದೆ. ದಲದ ದಂಡದರ್ಪದ ಮಾತುಗಳು ಹೇಗೇ ಇದ್ದರೂ, 'ಶ್ವಾನಂ ಯುವಾನಂ ಮಘುವಾನಮಾಹ' ಎಂಬಂತೆ ಪ್ರಾಂತಾಭಿಮಾನವನ್ನು ಪ್ರತ್ಯಕ್ಷವಾಗಿ ಜಾತ್ಯಭಿಮಾನ ಪಕ್ಷಾಭಿಮಾನಗಳ ಮಾಲಿಕೆಯಲ್ಲಿಯೇ ಪೋಣಿಸಿರುವದೂ, ಅಪ್ರತ್ಯಕ್ಷವಾಗಿ ಅದು ರಾಷ್ಟ್ರಾಭಿಮಾನಕ್ಕೆ ವಿರೋಧಕವಾಗಿರುವದೆಂದು ಸೂಚಿಸಿರುವದೂ ಯೋಚನೀಯವಾಗಿದೆ.

ಪರಲೋಕಪ್ರಣಯಿಗಳಾದ ವೇದಾಂತಿಗಳು ಅಂತರ್‌ರಾಷ್ಟ್ರಾಭಿಮಾನಿಗಳೆಂದು ಮೆರೆಯುವವರನ್ನು ಕಂಡು ನಗುತ್ತಾರೆ. ಅಂತರ್‌ರಾಷ್ಟ್ರಾಭಿಮಾನಿಗಳು ರಾಷ್ಟ್ರಾಭಿಮಾನಿಗಳನ್ನು ಹೀಯಾಳಿಸುತ್ತಾರೆ. ರಾಷ್ಟ್ರಾಭಿಮಾನಿಗಳು ಪ್ರಾಂತಾಭಿಮಾನಿಗಳನ್ನು ಕಡಮೆ ಎಂದು ತಿಳಿಯುತ್ತಾರೆ ! ಈ ಅಭಿಮಾನಗಳು ಪರಸ್ಪರಪೋಷಕಗಳೋ ವಿರೋಧಕಗಳೋ ಇದನ್ನು ಹೇಗೆ ಹೇಳಬೇಕು ಒಬ್ಬರಿಗೊಬ್ಬರು ಆಗದಾದರೆ ? ಈ ಮಾತಿರಲಿ. ಪ್ರಾಂತಾಭಿಮಾನವು ಭಾರತರಾಷ್ಟ್ರಾಭಿಮಾನಕ್ಕೆ ಪೋಷಕವಾಗಿಲ್ಲವೇ ? ಪ್ರಾಂತಾಭಿಮಾನದ ತಳಹದಿಯಿಲ್ಲದೆ ರಾಷ್ಟ್ರಾಭಿಮಾನದ ಕಟ್ಟಡವನ್ನು ಕಟ್ಟಬಹುದೇ ? ಜಾತ್ಯಾಭಿಮಾನದಂತೆ ಇದು ವಿಘಾತಕವೇ ? ವಿಧಾಯಕವಲ್ಲವೇ ? ಪ್ರಾಂತೀಯತೆಯು ರಾಷ್ಟ್ರೀಯತೆಗೆ ವಿಘಾತಕವಾಗಿದ್ದರೆ, ಭಾಷಾವಾರ ಪ್ರಾಂತರಚನೆಯು

ತತ್ತ್ವವು ಮುಂದೆ ಬರುತ್ತಲಿತ್ತೆ? ಜಾತಿವಾರ ಸಂಘಟನೆಯಿಂದ ಭಾರತವು ವಿಶೀರ್ಣವಾಗುವದೆಂದು ಮನಗಂಡ ಎಲ್ಲ ವಿಚಾರಿಗಳು ಅದನ್ನು ವಿರೋಧಿಸುತ್ತಿರಲಾಗಿ, ಅದರ ಸಂಕ್ತಿಯಲ್ಲಿಯೆ ಪ್ರಾಂತೀಯತೆಯನ್ನೂ ಕುಳ್ಳಿರಿಸಿ ಸಲ್ಲದ ಕಲಂಕವನ್ನು ಅದಕ್ಕೆ ಹಚ್ಚಬಹುದೇ? ವಿಚಾರದಿಗ್ಭ್ರಾಂತರನ್ನು ಮತ್ತಿಷ್ಟು ಕಂಗೆಡುವಂತೆ ಮಾಡುವದು ತರವಲ್ಲ. ಇನ್ನು ಮೇಲಾದರೂ ಹಿಂ. ಸೇ. ದಲದ ದೂರದರ್ಶಿಗಳೂ ಕಾರ್ಯಕುಶಲರೂ ಆದ ಮುಖಂಡರು ಪ್ರಾಂತ ಮತ್ತು ರಾಷ್ಟ್ರದಲ್ಲಿ ಭೇದವಿರುವದೆಂಬ ಕಲ್ಪನೆಯನ್ನು ಜನರಲ್ಲಿ ಬಿತ್ತದೆ, ಪ್ರಾಂತದ ಸೇವೆಯನ್ನೆ ರಾಷ್ಟ್ರದ ಪ್ರಗತಿಗೆ ಅನುಕೂಲವಾಗುವಂತೆ ಜಾಣ್ಮೆಯಿಂದ ತಮ್ಮ ಕಾರ್ಯಕಲಾಪಗಳನ್ನು ಯೋಜಿಸುವರೆಂದು ನಾವು ನಂಬಿದ್ದೇವೆ. ಆ ತಾಳ್ಮೆಯನ್ನೂ ಆ ಯೋಜನಕೌಶಲವನ್ನೂ ಕರ್ನಾಟಕದೇವಿಯೂ ಭಾರತಮಾತೆಯೂ ಅವರಿಗೆ ದಯಪಾಲಿಸಲಿ.

ಅಖಿಲ ಕರ್ನಾಟಕ ಸ್ವದೇಶಿ ವಸ್ತು ಪ್ರದರ್ಶನವನ್ನೂ ಸ್ವಯಂಸೇವಕರ ಕೂಟ (Rally) ವನ್ನೂ ಬರುವ ಬೇಸಿಗೆಯಲ್ಲಿ ಸೇವಾದಲದವರು ಏರ್ಪಡಿಸುವವರಿದ್ದಾರೆಂದು ಕಾರ್ಯದರ್ಶಿಗಳು ತಿಳಿಸುತ್ತಾರೆ. ಕರ್ನಾಟಕ ಪ್ರಾಂತದ ಅಸ್ತಿತ್ವವನ್ನು ಒಪ್ಪದೆ ಇವರಿಗೆ ನಿರ್ವಾಹವಿಲ್ಲವೆಂಬದು ಒಡೆದುಕಾಣುತ್ತದೆ. ಅದೇನೇ ಇರಲಿ. ನಮ್ಮದೇ ಆದ ಈ ಸೇವಾದಲದ ಕಾರ್ಯಗಳಿಗೆ ಕರ್ನಾಟಸ್ಥರು ಆತ್ಮೀಯಭಾವದಿಂದ ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

---

## ವಿರೂಪಾಕ್ಷಪುರವೆಂದರೆ ವಿಜಯನಗರವಲ್ಲ; ಮುತ್ತಿನಪುರವು.

ಫಾದರಹೆರಾಸ ಇವರು, ವಿಭವನಾಮ ಸಂವತ್ಸರದಲ್ಲಿ ಮೈಸೂರಲ್ಲಿ "ವಿಜಯನಗರ ಪಟ್ಟಣದ ಹಾಗೂ ಸಾಮ್ರಾಜ್ಯದ ಸಂಸ್ಥಾಪಕರು ಯಾರು?" ಎಂಬ ವಿಷಯವನ್ನು ಕುರಿತು ಎರಡು ಉಪನ್ಯಾಸಗಳನ್ನು ಹೇಳಿದರು. ಈ ಉಪನ್ಯಾಸಗಳಲ್ಲಿ ಹೊಯ್ಸಳರಾಜನಾದ ವೀರಬಲ್ಲಾಳರಾಯನು (ಕ್ರಿ. ವ. ೧೨೯೧–೧೩೪೨) ವಿರೂಪಾಕ್ಷಪುರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಶಕವರ್ಷ ೧೨೬೧ರಲ್ಲಿ. ಎಂದರೆ ಕ್ರಿ. ವ. ೧೩೩೯ ರಲ್ಲಿ ಅಲ್ಲಿ ರಾಜ್ಯವನ್ನಾಳುತ್ತಿದ್ದನು" ಎಂಬ ಸಂಗತಿಯು ಹೊಸಕೋಟೆಯ ೪೩ನೆಯ ಶಾಸನದಲ್ಲಿ ಇರುತ್ತದೆಂಬುದನ್ನು ಹೇಳಿ, ವಿರೂಪಾಕ್ಷಪುರವೆಂದರೆ ವಿಜಯನಗರವೆಂದು ಊಹಿಸಿದ್ದಾರೆ. ಈ ಉಪನ್ಯಾಸಗಳನ್ನು ಪ್ರತ್ಯಕ್ಷ ಕೇಳಿದ **ಶ್ರೀಮಾನ್ ರಾಮಚಂದ್ರ ಹನುಮಂತ ದೇಶಪಾಂಡೆ ಎಮ್. ಎ, ಧಾರವಾಡ** ಇವರು, ... ಗಲಿರುವ ತಮ್ಮ ಕರ್ನಾಟಕ ಸಾಮ್ರಾಜ್ಯದ ಇತಿಹಾಸದ ... ಸಂಪುಟದ ೧ನೆಯ ಭಾಗದಲ್ಲಿ ಹೊಯ್ಸಳಯಾದವರ ಇತಿ... ವನ್ನು ಬರೆಯುವಾಗ್ಗೆ ಫಾದರಹೆರಾಸ ಇವರ ಈ ಊಹೆ... ಸಪ್ರಮಾಣವಾಗಿ ಖಂಡಿಸಿ, ವಿರೂಪಾಕ್ಷಪುರವೆಂದರೆ ಮು... ಪುರವೆಂದು ಸ್ಪಷ್ಟವಾಗಿ ಸಿದ್ಧಪಡಿಸಿದ್ದಾರೆ. ಅದು ಹೇ...

(೧) ಮೇಲೆ ಬರೆದ ಹೊಸಕೋಟೆಯ ೪೩ನೆಯ ... ದಲ್ಲಿ ಕ್ರಿ. ವ. ೧೩೩೯ ರಲ್ಲಿ ವಿರೂಪಾಕ್ಷಪುರದಲ್ಲಿ ವೀರ... ರಾಯನು ರಾಜ್ಯವನ್ನಾಳುತ್ತಿದ್ದನೆಂಬುದು ಸ್ಪಷ್ಟವಾಗಿದೆ. ... ಕಾಲಕ್ಕೆ ಎಂದರೆ ಕ್ರಿ. ವ. ೧೩೩೬ರಿಂದ ೧೩೫೩ರ ... ವಿಜಯನಗರದಲ್ಲಿ ಹರಿಹರನು ರಾಜ್ಯವನ್ನಾಳುತ್ತಿದ್ದ... ದಂತೂ ಪ್ರಸಿದ್ಧವಾಗಿಯೇ ಇದೆ. ಫಾದರಹೆರಾಸ ಇವರು ಈ ಸಂಗತಿಯನ್ನು ಒಪ್ಪುತ್ತಾರೆ. ಈ ವಿಜಯನಗರವೇ ... ಬಲ್ಲಾಳರಾಯನ ರಾಜಧಾನಿಯಾದ ವಿರೂಪಾಕ್ಷಪುರವಾ... ಒಂದೇ ಊರಲ್ಲಿ ಒಂದೇ ಕಾಲದಲ್ಲಿ ವೀರಬಲ್ಲಾಳರಾ... ಹರಿಹರನು ಇವರಿಬ್ಬರೂ ರಾಜ್ಯವನ್ನಾಳುತ್ತಿದ್ದರೆಂಬುದು ಅಸಂಭವನೀಯವಾದ ಮಾತಾಗಿರುತ್ತದೆ. ಅರ್ಥಾತ್ ... ನಗರವೇ ಬೇರೆ ವಿರೂಪಾಕ್ಷಪುರವೇ ಬೇರೆ ಎಂಬುದು ... ವ್ಯಕ್ತವಾಗುತ್ತದೆ.

(೨) ಮುಂದೆ ಮೂರು ವರ್ಷಗಳಮೇಲೆ ಕ್ರಿ. ವ. ೧೩... ಎಂದರೆ ಶಕವರ್ಷದ ೧೨೬೪ರಲ್ಲಿ ವೀರಬಲ್ಲಾಳರಾಯನು ... ಹೊಂದಲು, ಅವನ ಮಗನಾದ ವೀರ ವಿರೂಪಾಕ್ಷ ... ದೇವನು, ಶಕವರ್ಷದ ೧೨೬೫ನೆಯ ಸ್ವಭಾನು ಸಂವ... ಶ್ರಾವಣ ಬಹುಳ ೫ ಶುಕ್ರವಾರ ದಿವಸ ಸಿಂಹಾಸನವನ್ನೇ... (ಚಿಕ್ಕಮಗಳೂರು ೧೦೫ನೆಯ ಶಾಸನ). ಈ ಕಾಲದ... ಹರಿಹರನೇ ವಿಜಯನಗರದಲ್ಲಿ ರಾಜ್ಯವನ್ನಾಳುತ್ತಿದ್ದನೆಂ... ಫಾದರ ಹೆರಾಸರೇ ಒಪ್ಪಿದ್ದಾರೆ. ಇದರಿಂದಂತೂ ... ನಗರವೇ ಬೇರೆ, ವಿರೂಪಾಕ್ಷಪುರವೇ ಬೇರೆ ಎಂಬ ಸಿದ್ಧಾಂ... ಹೆಚ್ಚು ಬಲಪಡುತ್ತದೆ.

(೩) ಹಾಗಾದರೆ ವಿರೂಪಾಕ್ಷಪುರವು ಯಾವದು? ... ಮಗಳೂರು ತಾಲೂಕಿನಲ್ಲಿ ಬಿದರನಾಡು ಹೋಬಳಿಯ... ಮುತ್ತಿನಪುರಗ್ರಾಮವೇ ವಿರೂಪಾಕ್ಷಪುರವೆಂಬುದು ನಿಶ್ಚ... ವಾಗಿದೆ. ಏಕೆಂದರೆ, ಈ ಮುತ್ತಿನಪುರದಲ್ಲಿ ವಿರೂ...

ದೇವಾಲಯವಿದೆ. ಶ್ರೀ ವಿರೂಪಾಕ್ಷದೇವನ ಸಾನ್ನಿಧ್ಯದಿಂದಲೇ "ವಿರೂಪಾಕ್ಷಪುರ" ಎಂಬ ಹೆಸರು ಪ್ರಾಪ್ತವಾಗಿದೆಯೆಂಬ ತತ್ತ್ವವನ್ನು ಫಾದರಹೆರಾಸ ಇವರು ಒಪ್ಪಿದ್ದಾರೆ. ಇದಲ್ಲದೆ ಈ ಮುತ್ತಿನಪುರದ ವಿರೂಪಾಕ್ಷದೇವಾಲಯದಲ್ಲಿದ್ದ ಚಿಕ್ಕಮಗಳೂರು ತಾಲೂಕ ೧೦೩ನೆಯ ಶಿಲಾಶಾಸನದಲ್ಲಿ ಸ್ಪಷ್ಟವಾಗಿ ಹೇಳಿದ್ದೇನೆಂದರೆ– "ವೀರಬಲ್ಲಾಳರಾಯರು ಬಂದು ಈ ದೇವಾಲಯವನ್ನು ಜೀರ್ಣೋದ್ಧಾರಮಾಡಿ ನಿಲ್ಲಿಸಿ, ಶ್ರೀ ವಿರೂಪಾಕ್ಷಸ್ವಾಮಿಗೆ ಅಮೃತಪಡಿ, ನಂದಾದೀಪ, ವಾಲಗಕ್ಕೆ ಕೊಟ್ಟಂಥ ಉಂಬಳಿ ಗ್ರಾಮಗಳು– ಸುರುಗುಪ್ಪೆ, ಗಾಳಿಪೂಜಿ, ಚಂಡುಗನಹಳ್ಳಿ, ಬೊಮ್ಮನಹಳ್ಳಿ, ಅನುಗವಳ್ಳಿ, ನಾಗೇನಹಳ್ಳಿ, ಪಾಳ್ಯ, ಡಾಳಿಮಕಿ, ವಿಠಲಹಳ್ಳಿ, ಜೆಳತುರು, ಬಾಳೇಹಳ್ಳಿ" ಈ ಪ್ರಕಾರ ವೀರಬಲ್ಲಾಳರಾಯನು ಈ ಮುತ್ತಿನಪುರದಲ್ಲಿರುವ ಶ್ರೀ ವಿರೂಪಾಕ್ಷ ದೇವರಿಗೆ ೧೧ ಹಳ್ಳಿಗಳನ್ನು ಉಂಬಳಿ ಹಾಕಿಕೊಟ್ಟಿರುವದನ್ನೂ ತನ್ನ ಮಗನಿಗೆ ವಿರೂಪಾಕ್ಷದೇವನೆಂದು ಹೆಸರು ಇಟ್ಟಿರುವದನ್ನೂ ನೋಡಿದರೆ, ಈ ವೀರಬಲ್ಲಾಳರಾಯನು ಈ ಮುತ್ತಿನಪುರದ ಶ್ರೀ ವಿರೂಪಾಕ್ಷದೇವರಲ್ಲಿ ಪರಮಭಕ್ತಿ, ವಿಶ್ವಾಸಗಳನ್ನು ಇಟ್ಟಿದ್ದನೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಆದುದರಿಂದ ಈ ವಿರೂಪಾಕ್ಷದೇವಸ್ಥಾನವಿದ್ದ ಈ ವಿರೂಪಾಕ್ಷಪುರವನ್ನು (ಮುತ್ತಿನ ಪುರವನ್ನು) ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

(೪) ಈ ಮುತ್ತಿನಪುರದ ಸಮೀಪದಲ್ಲಿಯೇ ಇದ್ದ ಹಲಸುಬಾಳು ಗ್ರಾಮದ ಗೌಡರು ಈ ವೀರ ವಿರೂಪಾಕ್ಷ ಬಲ್ಲಾಳದೇವರಸನ ಪಟ್ಟಾಭಿಷೇಕದ ಕಾರ್ಯಕ್ಕೆ ಬಹಳ ಸಹಾಯ ಮಾಡಿದ್ದರಿಂದ ಈ ವೀರ ವಿರೂಪಾಕ್ಷ ಬಲ್ಲಾಳ ದೇವರಸರೂ ಬಲ್ಲಪ್ಪ ದಂಣಾಯಕರೂ ಆ ಗೌಡರಿಗೆ ಸುಖದಿಂದ ಬಾಳುವ ಹಾಗೆ ಉಂಬಳಿಯನ್ನು ಹಾಕಿಕೊಟ್ಟರೆಂದು ಹಲಸು ಬಾಳು ಗ್ರಾಮದಲ್ಲಿದ್ದ ಶಿಲಾಲೇಖದಲ್ಲಿ ಸ್ಪಷ್ಟವಾಗಿ ಹೇಳಿದೆ (ಚಿಕ್ಕಮಗಳೂರು ತಾಲೂಕ ೧೦೫ನೆಯ ಶಾಸನ). ಮತ್ತು ವೀರ ವಿರೂಪಾಕ್ಷ ಬಲ್ಲಾಳ ದೇವರಸನ ಪಟ್ಟಾಭಿಷೇಕವು ವಿರೂಪಾಕ್ಷಪುರದಲ್ಲಿಯೇ ನೆರವೇರಿತೆಂಬುದು ನಿರ್ವಿವಾದವಾಗಿದೆ. ವಿರೂಪಾಕ್ಷಪುರವೆಂದರೆ ಮುತ್ತಿನಪುರವೆಂದು ಮೇಲೆ ಸಿದ್ಧಪಡಿಸಿದ್ದೇವೆ. ಆದುದರಿಂದ ಈ ಮುತ್ತಿನಪುರದ ಹತ್ತರವೇ ಇದ್ದ ಹಲಸುಬಾಳುಗ್ರಾಮದ ಗೌಡರು, ವಿರೂಪಾಕ್ಷಪುರದಲ್ಲಿ ಜರುಗಿದ ಪಟ್ಟಾಭಿಷೇಕದ ಕಾರ್ಯಕ್ಕೆ ಸಹಾಯ ಮಾಡಿರುವದನ್ನು ನೋಡಿದರೆ ವಿರೂಪಾಕ್ಷಪುರವೆಂದರೆ ಮುತ್ತಿನಪುರವೆಂಬ ಸಿದ್ಧಾಂತವು ಮತ್ತಿಷ್ಟು ದೃಢಪಡುತ್ತದೆ.

(೫) ಹಲಸುಬಾಳುಗ್ರಾಮವು ಮುತ್ತಿನಪುರ (ವಿರೂಪಾಕ್ಷಪುರ) ದ ತೀರ ಸಮೀಪದಲ್ಲಿದ್ದುದರಿಂದ ಅಲ್ಲಿಯ ಜನರು ಈ ಪಟ್ಟಾಭಿಷೇಕದ ಕಾರ್ಯಕ್ಕೆ ಮನಮುಟ್ಟಿ ನೆರವಾಗುವದೂ ಅದಕ್ಕೋಸ್ಕರ ಅರಸನು ಅವರಿಗೆ ಉಂಬಳಿಯನ್ನು ಕೊಡುವದೂ ಸ್ವಾಭಾವಿಕವಾಗಿರುತ್ತದೆ. ಆದ್ದರಿಂದ ಈಗಿನ ಮುತ್ತಿನಪುರವೇ ಆಗಿನ ವಿರೂಪಾಕ್ಷಪುರವಾಗಿತ್ತೆಂಬುದಕ್ಕೆ ಏನೂ ಸಂದೇಹವಿಲ್ಲ.

---

## ಮೈಸೂರ ಕರ್ನಾಟಕ ಸಂಘದ ಸ್ತುತ್ಯ ಉಪಕ್ರಮವು

ಒಬ್ಬರು ಒಂದು ಒಳ್ಳೆಯ ಕೆಲಸವನ್ನು ಆರಂಭಿಸುತ್ತಲೆ ಉಳಿದವರಿಗೂ ತಾವೂ ಅಂತಹ ಕೆಲಸಗಳನ್ನು ಕೈಕೊಳ್ಳಬೇಕೆಂಬ ಸ್ಫೂರ್ತಿಯುಂಟಾಗುತ್ತದೆ. ಗೆಳೆಯರ ಗುಂಪು ತುಂಟರ ಗುಂಪು ಮಂಗಳೂರು ಕನ್ನಡಿಗರ ಕೂಟಗಳ ಪದ್ಧತಿಯಲ್ಲಿ ಅಖಿಲ ಕರ್ನಾಟಕದೊಳಗೆ ಹಲವೆಡೆಗೆ ಹೊಸ ಹೊಸ 'ಗುಂಪು' 'ತಂಡ' 'ಕೂಟ' 'ಬಳಗ' ಗಳೆಷ್ಟೋ ಆಗಿವೆ; ಆಗುತ್ತವೆ. ಇದರಂತೆಯೇ ಬೆಂಗಳೂರ ಸೆಂಟ್ರಲ್ ಕಾಲೇಜಿನ 'ಕರ್ನಾಟಕ ಸಂಘ'ದ ಅಡಿಯ ಮೇಲಡಿಯಕ್ಕಿ ಕರ್ನಾಟಕದ ಅನೇಕ ವಿದ್ಯಾನಿಲಯಗಳಲ್ಲಿ 'ಕರ್ನಾಟಕ ಸಂಘಗಳು' ಸ್ಥಾಪಿತವಾಗಿವೆ. ಇದೊಂದೇ ಮಾತು ಆ ಸಂಘದ ಮೇಲ್ಮೆಯನ್ನು ಸಿದ್ಧಪಡಿಸಲಿಕ್ಕೆ ಸಾಕಷ್ಟಿದೆ. ಕರ್ನಾಟಕ ಭಾಷೆಯ ವಿಷಯಕ್ಕೆ ಕನ್ನಡಿಗರಲ್ಲಿ ಬರಿಯ ಬಾಯ್ಮಾತಿನಲ್ಲಿಯೇ ಇದ್ದ ಅಭಿಮಾನವನ್ನು ಕೃತಿಯಲ್ಲಿಯೂ ತಂದು ತೋರಿಸಿ ಜನಸಾಮಾನ್ಯರಿಗೆ ಕನ್ನಡ ನುಡಿಯಲ್ಲಿ ಆದರಪ್ರೀತಿಗಳು ಉಂಟಾಗುವಂತೆ ಮಾಡಿದವರಲ್ಲಿ ಬೆಂಗಳೂರುಮೈಸೂರುಗಳ ಕರ್ನಾಟಕ ಸಂಘದವರು ಪ್ರಮುಖರಾಗಿದ್ದಾರೆ. ಇವರು ಮೈಸೂರಿನ ಪ್ರಾಂತಾಭಿಮಾನಕ್ಕೇ ವಿಶೇಷವಾಗಿ ಅಂಟಿಕೊಳ್ಳದೆ ಅಖಂಡ ಕರ್ನಾಟಕದ ದೃಷ್ಟಿಯಿಂದಲೂ ಕೆಲಸಮಾಡಬಲ್ಲರು; ಮತ್ತು ಆ ಪ್ರಕಾರವಾಗಿ ಕೆಲಸಕ್ಕೂ ಕೈಯಿಕ್ಕಿರುವರು ಎಂಬುದಕ್ಕೆ ಮೈಸೂರ ಕರ್ನಾಟಕ ಸಂಘದವರು ಗದುಗಿನ ನಾರಣಪ್ಪ (ಕುಮಾರವ್ಯಾಸ)ನ ಸ್ಮಾರಕಕ್ಕಾಗಿ ನಡಿಸಿದ ಸ್ತುತ್ಯವಾದ ಉಪಕ್ರಮವೆ ಸಾಕ್ಷಿ. 'ಕುಮಾರವ್ಯಾಸಕವಿಯ ಸ್ಮಾರಕ ಸಂಪುಟವು' ಬೇಗನೆ ಸಿದ್ಧವಾಗತಕ್ಕದ್ದಿದ್ದು ಅದರಲ್ಲಿ ಕನ್ನಡನಾಡಿನ ಬೇರೆ ಬೇರೆ ಭಾಗದ ವಿದ್ವಾಂಸರ ಲೇಖಗಳು ಬರತಕ್ಕವಿವೆ. ಈ ಕವಿಸ್ತವನದ ಸ್ಪರ್ಧೆಯು ಏರ್ಪಾಟು ಆಗಿದ್ದು ಅದಕ್ಕಾಗಿ ಕವಿತೆ

ಯನ್ನು ಬರೆಯತಕ್ಕವರು ಡಿಸೆಂಬರ ೩೧ನೆಯ ತಾ. ನ ಒಳಗಾಗಿ ಬರೆದು ಕರ್ನಾಟಕ ಸಂಘದ ಅಧ್ಯಕ್ಷರ ಕಡೆಗೆ ಕಳುಹಿಸಬೇಕು. ಕುಮಾರವ್ಯಾಸಜಯಂತಿಯನ್ನು ನೆರವೇರಿಸುವ ಸಂಕಲ್ಪ ಮಾಡಿದ್ದು ಆ ಕಾಲಕ್ಕೆ ಈ ಕವಿಯು ಬರೆದ ಭಾರತದ ಅಚ್ಚಿನ ಪ್ರತಿಗಳನ್ನೂ ಓಲೆಯ ಪ್ರತಿಗಳನ್ನೂ ಕರ್ನಾಟಕದ ಎಲ್ಲ ಭಾಗಗಳಿಂದಲೂ ದೊರಕಿಸಿ ಪ್ರದರ್ಶಿಸಬೇಕೆಂದಿದ್ದಾರೆ. ಆದುದರಿಂದ ಯಾರ ಹತ್ತಿರಾದರೂ ಇಂತಹ ಪ್ರತಿಗಳಿದ್ದರೆ ಅವರು ಕೂಡಲೆ ಮೈಸೂರ ಕರ್ನಾಟಕ ಸಂಘಕ್ಕೆ ಬರೆದು ತಿಳಿಸಬೇಕು. ಪ್ರದರ್ಶನಕ್ಕಾಗಿ ಕೊಟ್ಟ ಪ್ರತಿಗಳನ್ನು ಸಂಘದವರು ತಮ್ಮ ಕೆಲಸವು ತೀರುತ್ತಲೆ ತಪ್ಪದೆ ತಿರುಗಿ ಕಳುಹಲು ಬದ್ಧರಾಗಿದ್ದಾರೆ. ಆದುದರಿಂದ ಭಾಷಾಭಿಮಾನಿಗಳು ಈ ಕಾರ್ಯಕ್ಕೆ ಸಹಾಯಮಾಡುವುದು ಕರ್ತವ್ಯವಾಗಿದೆ.

---

## ವಿಶ್ವ ಕರ್ನಾಟಕ ಸಂಘ

ತಮ್ಮ ಪ್ರಾಂತವನ್ನು ಬಿಟ್ಟು ಪರಪ್ರಾಂತದಲ್ಲಿ ಹೋಗಿ ನಿಂತವರೂ, ನೆಲಸಿದವರೂ ತಮ್ಮ ತಮ್ಮ ಮೂಲ ಪ್ರಾಂತದ ಎಷ್ಟೊಂದು ಅಭಿಮಾನವನ್ನು ಹಿಡಿಯಬೇಕೆಂಬ ಬಗ್ಗೆ ಕೂಲಂಕಷವಾದ ಸಾಕಷ್ಟು ಚರ್ಚೆಯು ಇನ್ನೂ ಆಗಿಲ್ಲ. ಈಗ ಕರ್ನಾಟಕದಿಂದ ಹೊರಗೆ ಇರುವ ಕನ್ನಡಿಗರ—ಅಂದರೆ ವಿಶ್ವಕರ್ನಾಟಕಸ್ಥರ ವಿಚಾರವನ್ನೆ ತಕ್ಕೊಳ್ಳುವ. ತಮ್ಮ ಪ್ರಾಂತವನ್ನು ಬಿಟ್ಟು ಪರಸ್ಥಳಕ್ಕೆ ಹೋದವರಲ್ಲಿ ಎರಡು ಬಗೆಗಳಿವೆ. ಕೆಲವೊಂದು ಕಾಲದ ವರೆಗೆ ಕಾರ್ಯಾರ್ಥಿಗಳಾಗಿ ತಾತ್ಪೂರ್ತಿಕವಾಗಿ ಪರಪ್ರಾಂತದಲ್ಲಿ ನಿಂತವರು ಕೆಲರು; ಮೊದಲಮೊದಲು ಮರಳಿ ಬರುವ ಲೆಕ್ಕದಿಂದ ಹೋಗಿದ್ದರೂ ವಿಶೇಷ ಕಾರಣಗಳಿಗಾಗಿ ಅಲ್ಲಿಯೇ ಕಾಲೂರಿ ನಿಂತವರು—ನೆಲಸಿದವರು ಕೆಲರು. ಇವೆರಡೂ ವರ್ಗದಲ್ಲಿ ಎರಡನೆಯವರ ಕರ್ತವ್ಯವು ವಿಶೇಷ ತೊಡಕಿನದಲ್ಲ. ಯಾರು ಯಾವ ಪ್ರಾಂತದಲ್ಲಿ ಹೋಗಿ ನಿಂತು ಹೊಲಮನೆ ಮಾಡಿಕೊಂಡು ಬೇರೂರಿ ನಿಂತಿರುವರೊ ಅವರು ಆ ನಾಡನ್ನೆ ತಮ್ಮ ತಾಯ್ನಾಡು ಎಂದು ತಿಳಿದುಕೊಳ್ಳುವುದು ರಾಷ್ಟ್ರದ ದೃಷ್ಟಿಯಿಂದಲೂ ವ್ಯಕ್ತಿಯ ದೃಷ್ಟಿಯಿಂದಲೂ ಬಹಳ ಹಿತಕರವಾಗಿದೆ. ಆದುದರಿಂದ ಯಾರು ಎಲ್ಲಿ ಸ್ಥಿರವಾಗಿ ವಾಸವಾಗಿರುವರೊ ಅವರು ಅಲ್ಲಿಯ ದೇಶಸ್ಥರೊಡನೆ ಸಮರಸವಾಗುವುದು ಕರ್ತವ್ಯವು. ಇನ್ನುಳಿಯಿತು ತಾತ್ಪೂರ್ತಿಕವಾಗಿ ಪರಪ್ರಾಂತದಲ್ಲಿ ನಿಂತವರ ವಿಚಾರವು. ಈ ಬಗೆಯವರು ನಾಲ್ಕು ವರುಷಕ್ಕಾಗಲಿ ಹತ್ತು ವರುಷಕ್ಕಾಗಲೀ ತಮ್ಮ ನಾಡಿಗೆ ಬರತಕ್ಕವರೇ ಆಗಿರುವುದರಿಂದ ಇವರು ತ[illegible] ನಾಡಿನ ನಡೆನುಡಿಗಳನ್ನು ಚೆನ್ನಾಗಿ ಕಾಯ್ದುಕೊಳ್ಳಲಿಕ್ಕೆ[illegible] ಪರಪ್ರಾಂತದಲ್ಲಿ ಹೋಗಿ ದಿಕ್ಕಿಗೊಬ್ಬರಾಗಿ ನಿಂತ[illegible] ವ್ಯಕ್ತಿಶಃ ತಮ್ಮ ಸಂಸ್ಕೃತಿಸಂರಕ್ಷಣವನ್ನು ಮಾಡಿಕೊಳ್ಳು[illegible] ಬಹಳ ಕಠಿಣ. ಆದುದರಿಂದ ಇಂತಹರು ತಾವು ನಿಂತ[illegible]ಗಳಲ್ಲಿ ಒಂದೊಂದು 'ಕರ್ನಾಟಕ ಸಂಘ'ವನ್ನು ಸ್ಥಾಪಿಸು[illegible] ಅತ್ಯಗತ್ಯ. ಈ ಬಗೆಯಾಗಿ ಶಾಂತಿನಿಕೇತನ, ಲಖ್ನೌ, [illegible] ಹಿಂದೂ ವಿಶ್ವವಿದ್ಯಾಲಯ, ಮದ್ರಾಸ, ಲಂಡನ್‌ಗಳ[illegible] ಕರ್ನಾಟಕ ಸಂಘಗಳು ಇನ್ನೂ ಬೇರೆಡೆಗಳಲ್ಲಿರುವ ವಿಶ್ವ[illegible]ಟಕಸ್ಥರಿಗೆ ಒಳ್ಳೆ ಉದಾಹರಣಗಳಾಗಿವೆ. ಇಂಥ ಸ[illegible] ಕಾರ್ಯಕಲಾಪಗಳನ್ನು ನಾವು ಆನಂದದಿಂದ ಪ್ರಕಟಿಸು[illegible]

---

## ಕಲಕತ್ತೆಯ ಕನ್ನಡಿಗರು ಇತ್ತ ಗಮನಿಸುವರೆ?

ಕಲಕತ್ತೆಯ ಮಹಾರಾಷ್ಟ್ರ ಸಂಘದ ಒಂದು ಪ[illegible] ಪುಸ್ತಕವು ಮೊನ್ನೆ ತಾನೆ ಪ್ರಕಟವಾಗಿದೆ. ಅದರಲ್ಲಿ [illegible] ಬುದ್ಧಿಗಲಿಸುವಂತಹ ಹಲವು ಮಾತುಗಳಿವೆ. ಪರ[illegible]ಗಳಲ್ಲಿ ನೆಲಸಿದ ಕನ್ನಡಿಗರಂತೂ ಅದನ್ನು ಒಮ್ಮೆ ಓದಲೇ[illegible] **'ಈಗ ೧೫ ವರುಷಗಳ ಹಿಂದೆ ಕಲಕತ್ತೆಯಲ್ಲಿ [illegible] ಕರ್ನಾಟಕ ಸಂಘವು ಇತ್ತು'** ಎಂದು ಅದರಲ್ಲಿ [illegible] ಇನ್ನೂ ಆ ಸಂಘವು ಜೀವದಿಂದಿರುವುದೊ ಅಥವಾ [illegible] ಮಹಾರಾಷ್ಟ್ರ ಸಂಘದಲ್ಲಿಯೆ ಸಮಾವಿಷ್ಟವಾಗಿದೆಯೊ ತಿ[illegible] ನಿಜವಾಗಿಯೆ ಕಲಕತ್ತೆಯ ಈ ಸಂಘವು ಒಳ್ಳೆ ಊ[illegible] ಸ್ಥಿತಿಗೆ ಬಂದು ವಿಶ್ವಕರ್ನಾಟಕ ಸಂಘಗಳಿಗೆಲ್ಲ ಅದು ಮ[illegible]ದರ್ಶಕವಾಗಬೇಕಿತ್ತು. ಆದರೆ ನಮ್ಮ ಜನರ ವಿಲಕ್ಷ[illegible] ನಿರಭಿಮಾನ (ಸ್ವಾಭಿಮಾನಶೂನ್ಯತೆ!) ದ ಮೂಲಕ[illegible] ಎಷ್ಟೋ ಕೆಲಸಗಳನ್ನು ಮಹಾರಾಷ್ಟ್ರದವರಿಂದ ಮುಂಚ[illegible] ಆರಂಭ ಮಾಡಿದ್ದರೂ ಇನ್ನೂ ಅವು ಊರ್ಜಿತ ಸ್ಥಿತಿಗೆ ಬ[illegible] ಇಷ್ಟೆ ಅಲ್ಲ, ಅನೇಕ ಕನ್ನಡಿಗರು ಪ್ರಾಂತಾಭಿಮಾನವನ್ನು [illegible] ಬಿಟ್ಟು ತಮ್ಮ ಕಾರ್ಯ, ಶ್ರಮ, ಬುದ್ಧಿಮತ್ತೆಗಳಿಂದ ಪ[illegible]ಯರ ಸಂಸ್ಥೆಗಳನ್ನು ಮುಂದೆ ತಂದಿದ್ದಾರೆ; ಇನ್ನೂ ತ[illegible]ದ್ದಾರೆ. ಆದರೆ ಈ ಸಂಸ್ಥೆಗಳೇ ಮುಂದೆ ಅವರ ಊ[illegible] ಅಡ್ಡ ಬಂದ ಉದಾಹರಣಗಳುಂಟು. ಕಲಕತ್ತೆಯ [illegible]

ರಾಷ್ಟ್ರ ಸಂಘವು ೧೯೧೬ರಲ್ಲಿ ಸ್ಥಾಪಿತವಾಯ್ತು. ಕರ್ನಾಟಕ ಸಂಘವು ಇದಕ್ಕೂ ಮೊದಲೇ ೨ ವರುಷಗಳ ಹಿಂದೆ ಅಸ್ತಿತ್ವದಲ್ಲಿತ್ತು. ಅದಂತಿರಲಿ, ಈ ಮಹಾರಾಷ್ಟ್ರ ಸಂಘದ ಸಂಸ್ಥಾಪಕರು ಯಾರು ಬಲ್ಲಿರಾ? ಪರಲೋಕವಾಸಿಗಳಾದ ಶ್ರೀ **ಬಾಗಲಕೋಟೆ ಮಾಧವರಾಯರೆಂಬವರು !** ಈ ಬಾಗಲಕೋಟೆ ಮಾಧವರಾಯರೇನೊ ಸದುದ್ದೇಶದಿಂದ ಈ ಕಾರ್ಯವನ್ನು ಮಾಡಿರಬಹುದು. ಇದರೆ ಈಗ ಅದರ ಪರಿಣಾಮವು ಏನಾಗಿದೆ ? ಅಲ್ಲಿಯ ಕರ್ನಾಟಕ ಸಂಘವಂತೂ ಮೂಲೆಗುಂಪಾದಂತೆ ತೋರುತ್ತಿದೆ. ಅನೇಕ ಕನ್ನಡಿಗರು ಈ ಮಹಾರಾಷ್ಟ್ರ ಸಂಘದಲ್ಲಿಯೇ ಸೇರಿ ಬಿಟ್ಟಿದ್ದಾರೆ. ಮಹಾರಾಷ್ಟ್ರ ಸಂಘದವರೂ ಕನ್ನಡ, ತೆಲಗು, ಮೊದಲಾದ ಪರಪ್ರಾಂತೀಯರನ್ನೂ ತಮ್ಮಲ್ಲಿ ತಕ್ಕೊಂಡು ತಮ್ಮ ಸಂಘವನ್ನು ನಿಜವಾದ 'ಮಹಾರಾಷ್ಟ್ರ ಸಂಘ'ವನ್ನಾಗಿ ಮಾಡಬೇಕೆಂಬ ಧ್ಯೇಯವನ್ನು ಇಟ್ಟಿದ್ದಾರೆ. ಈ ಧ್ಯೇಯವು ಅವರ ದೃಷ್ಟಿಯಿಂದ ಚೆನ್ನಾಗಿದ್ದರೂ ಕರ್ನಾಟಕದ ಹಿತದ ದೃಷ್ಟಿಯಿಂದ ತುಂಬಾ ಅನಹಿತಕಾರಿಯಾಗಿದೆ. ಕಲಕತ್ತೆಯ ಮಹಾರಾಷ್ಟ್ರ ಸಂಘದಲ್ಲಿ ಶ್ರೀ. ಪಿ. ಅಪ್ಪಾರಾವ ಪ್ರಭೃತಿ ಕನ್ನಡ ಭಾಷೆಯನ್ನು ಚೆನ್ನಾಗಿ ಬಲ್ಲ ಗೃಹಸ್ಥರಿದ್ದಾರೆ. ಉತ್ತರ ದಕ್ಷಿಣ ಕನ್ನಡ ಜಿಲ್ಲೆಯ ಹಲವು ಕನ್ನಡಿಗರಿರುವರು. ಇವರೆಲ್ಲ ತಾವು ' **ಕನ್ನಡ** ' **ಜಿಲ್ಲೆಯವರು** ಎಂಬ ಮಾತನ್ನು ಮರೆಯುವುದು ಎಂದಾದರೂ ಯುಕ್ತವಾದೀತೆ ? ತಮ್ಮ ಪದವಿ, ಅಧಿಕಾರ, ಸಂಪತ್ತುಗಳಿಂದ ಪರಪ್ರಾಂತದಲ್ಲಿ ಯಶಸ್ಸನ್ನು ಹೊಂದಿದ ಕನ್ನಡಿಗರು ತಮ್ಮ ಕೀರ್ತಿಯಿಂದ ತಮ್ಮ ಮಾತೃಭೂಮಿಗೆ ಭೂಷಣವನ್ನು ತರುವುದು ಕರ್ತವ್ಯವಾಗಿಲ್ಲವೆ ? ಕಲಕತ್ತಾನಿವಾಸಿಗಳಾದ ನಮ್ಮ ಕಾರವಾರ ಮಂಗಳೂರಿನವರು ತಮ್ಮ ಬೆಂಬಲದಿಂದ ಮುಂದೆ ತಂದ ಮಹಾರಾಷ್ಟ್ರ ಸಂಘವು ಮಂಗಳೂರಿಗೂ ಕಾರವಾರಕ್ಕೂ ಎಂದಾದರೂ ಕೀರ್ತಿಯ ಫಲವನ್ನು ಕೊಡಲು ಸಮರ್ಥವಾದೀತೆ ? ಮಹಾರಾಷ್ಟ್ರ ಸಂಘದವರು ತಮ್ಮ ಸಂಸ್ಕೃತಿಯನ್ನು ಕಾಯ್ದು ಕೊಳ್ಳಬೇಕೆಂದು ಯತ್ನಿಸುತ್ತಿರುವಾಗ ಅದರಲ್ಲಿ ಸೇರುವ ಕನ್ನಡಿಗರಿಗೆ ತಮ್ಮ ಸಂಸ್ಕೃತಿನಡೆನುಡಿಗಳನ್ನು ಬಿಟ್ಟುಬಿಡುವ ಪ್ರಸಂಗವು ಕ್ರಮವಾಗಿ ಬರಲಿಕ್ಕಿಲ್ಲವೊ ? ಮರಾಠರಿಗೆ ತಮ್ಮ ನಾಡಿನ ಸಂಸ್ಕೃತಿಕೀರ್ತಿಗಳನ್ನು ಬೆಳೆಯಿಸಬೇಕೆಂಬ ಉತ್ಕಟವಾದ ಅಪೇಕ್ಷೆಯು ಇರುವಂತೆ ಕರ್ನಾಟಕರಿಗೂ ಅಂತಹ ಮಹತ್ವಾಕಾಂಕ್ಷೆಯಿಂದ ಪ್ರೇರಿತರಾಗುವುದು ಆವಶ್ಯವಾಗಿಲ್ಲವೆ ? ಇಂತಹ ಮಹತ್ವಾಕಾಂಕ್ಷೆಯು ನಮ್ಮ ಜನಗಳಲ್ಲಿ ಇಲ್ಲದುದರಿಂದಲೇ ನಮ್ಮ ಹಾಡು ಹೀಗಾಗಿದೆ. ಠಾಣೆ ಕುಲಾಬಾ ಜಿಲ್ಹೆಗಳಲ್ಲಿ ೧೮೩೭ನೆಯ ಇಸ್ವಿಯವರೆಗೂ ಕುಲಕರ್ಣಿಯರ ಲೆಕ್ಕಪತ್ರಗಳು ಕನ್ನಡದಲ್ಲಿದ್ದರೂ ಇಂದು ಅಲ್ಲಿ ಕನ್ನಡದ ಗ್ರಂಥವೂ ಇಲ್ಲ. ಮುಂಬೈಯಲ್ಲಿ ಮೊದಲು ವಸಾಹತು ಮಾಡಿದವರು ಅಲ್ಲಿ ನೆಲಸಿದವರು ಕನ್ನಡಿಗರೇ ಎಂದು ಇತಿಹಾಸವು ಹೇಳುತ್ತಿದ್ದರೂ ಈಗ ಅವರಿಗಲ್ಲಿ ಪ್ರಾಧಾನ್ಯವೇ ಇಲ್ಲ! ಶ್ರೀ ಕುಲಕರ್ಣಿ ಎಂಬವರು ಮುಂಬೈಯಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿ ಪ್ರಸಿದ್ಧಿಗೆ ಬಂದರು. ಆ ಮುದ್ರಣಾಲಯಕ್ಕೆ 'ಕರ್ನಾಟಕ ಪ್ರೆಸ್ಸ' ಎಂದು ಹೆಸರನ್ನೂ ಇಟ್ಟರು. ಮುಂಬೈಯ ಶ್ರೇಷ್ಠ ಮುದ್ರಣಾಲಯಗಳಲ್ಲಿ ಒಂದು. ಆದರೂ ಹೆಸರ ಕರ್ನಾಟಕ ಪ್ರೆಸ್ಸಿನಲ್ಲಿ ಕನ್ನಡ, ಕನ್ನಡತನಗಳ ಗಾಳಿಯಾದರೂ ಇರುವುದೋ ಇಲ್ಲವೊ ಎಂಬ ಸಂಶಯವಿದೆ ! ಇಂತಹ ಉದಾಹರಣಗಳು ಇನ್ನೂ ಹಲವಿವೆ. ಇದು ನಮ್ಮವರ ಸ್ವಾಭಿಮಾನ ಸ್ವಭಾಷಾಭಿಮಾನ ! ಸ್ವದೇಶಾಭಿಮಾನ ! ಸ್ವದೇಶ, ಸ್ವಭಾಷೆಗಳ ಪ್ರೀತಿಗಳಲ್ಲಿ ಇಡೀ ಹಿಂದುಸ್ಥಾನಕ್ಕೆ ಬುದ್ಧಿಗಲಿಸಿದ ಬಂಗಾಲ ಪ್ರಾಂತದಲ್ಲಿ ವಾಸಿಸುವ ನಮ್ಮ ಕರ್ನಾಟಕ ಬಂಧುಗಳು ವಿಶ್ವ ಕರ್ನಾಟಕ ಸಂಘಗಳಿಗೆಲ್ಲ ಆದರ್ಶಭೂತವಾಗುವಂತಹ ಕರ್ನಾಟಕ ಸಂಘವನ್ನು ಸ್ಥಾಪಿಸಿ ತಮಗೂ ತಮ್ಮ ನಾಡಿಗೂ ಕೀರ್ತಿಯನ್ನು ತರುವರೆಂದು ಕೋರಿಕೆ.

---

## ಆಯಾ ಪ್ರಾಂತದಲ್ಲಿ ಆಯಾ ಪ್ರಾಂತಿಕ ಭಾಷೆಗೆ ಪ್ರಾಧಾನ್ಯವಿರಬೇಕು

ಅಶಕ್ತನು ದೇವರ ದಯದಿಂದ ಸ್ವಲ್ಪ ಸಶಕ್ತನಾಗಿ ತನ್ನ ಮೊದಲಿನ ಸ್ಥಾನಮಾನಸನ್ಮಾನಗಳನ್ನು ಮೊಟ್ಟ ಮೊದಲಿನಂತೆಯೇ ಮಾಡಿಕೊಳ್ಳಬೇಕೆಂದು ಪ್ರಯತ್ನಿಸಲಾರಂಭಿಸುತ್ತಲೆ ಆ ಸ್ಥಾನವನ್ನು ಆಕ್ರಮಿಸಿದ ಅಪಹಾರಿಯ ಹೊಟ್ಟೆಯಲ್ಲಿ ಕಿಚ್ಚುಬೀಳುತ್ತದೆ. ಪ್ರತಿಯೊಂದು ಪ್ರಾಂತದಲ್ಲಿಯೂ ಆ ಪ್ರಾಂತದ ಭಾಷೆಗೆ ಪ್ರಾಧಾನ್ಯವಿರಬೇಕು ಎಂಬ ತತ್ತ್ವವು ಮರಾಠಿಗರಿಗೆ ತಮ್ಮ ಪ್ರಾಂತದಲ್ಲಿ ಮಾನ್ಯವಿದ್ದರೂ ಅದು ಕರ್ನಾಟಕದಲ್ಲಿ ಸಮ್ಮತವಿಲ್ಲ ! ಮಹಾರಾಷ್ಟ್ರದಲ್ಲಿ ವಾಸವಾದ ಗುಜ್ಜರೂ ತೆಲುಗರೂ ಕನ್ನಡಿಗರೂ ಶಾಲೆಗಳಲ್ಲಿ ಮರಾಠಿ ಭಾಷೆಯನ್ನೇ ಪ್ರಧಾನವಾಗಿ ಇಟ್ಟುಕೊಳ್ಳಬೇಕೆಂದು ಸಾಧಿಸುವವರು ಕರ್ನಾಟಕದಲ್ಲಿ ಮಾತ್ರ ಕನ್ನಡದ ವಿಷಯವಾಗಿ ಅದೇ ತತ್ತ್ವವನ್ನು

ಅನುಸರಿಸಲು ಸಿದ್ಧರಿಲ್ಲ ! ಹುಬ್ಬಳ್ಳಿ, ವಿಜಾಪುರಗಳ ಮರಾಠಿ ಶಾಲೆಗಳಲ್ಲಿ ಮರಾಠಿಯೊಂದಿಗೆ ಈ ದೇಶಭಾಷೆಯಾದ ಕನ್ನಡ ವನ್ನೂ ಕಲಿಸುವ ಏರ್ಪಾಡು ಆಗಿದೆ. ಈಗ ಬೆಳಗಾಂವಿ ಲೋಕಲಬೋರ್ಡಿನವರೂ ಈ ನ್ಯಾಯ್ಯವಾದ ಮಾರ್ಗವನ್ನೇ ಅನುಸರಿಸಬೇಕೆನ್ನುತ್ತಿದ್ದಾರೆ. ಆದರೆ ಹೀಗೆ ಮಾಡುವುದು ಮರಾಠಿಗರ ಮೇಲೆ ಬಲುಮೆಯು ಎಂದುಪುಣೆ ಮುಂಬೈ ಪತ್ರಿಕೆ ಗಳಲ್ಲಿ ಕಲ್ಪಿತ ಟೀಕೆಯು ಆರಂಭವಾಗಿದೆ. ಮರಾಠಿಗರಿಗೆ ಕನ್ನಡ ಕಲಿಯುವ ಮಹಾ ಸಂಕಷ್ಟವು ಪ್ರಾಪ್ತವಾಗಿದೆಯಂತೆ; ಏನು ಸಂಕಟವೊ ತಿಳಿಯದು. ಈ ದೇಶದಲ್ಲಿಯೆ ನೆಲಸಿ ನಿಂತು ಕೊಂಡಿರುವ ಮರಾಠಿಗರು ಕನ್ನಡ ಅಕ್ಷರಗಳ ಸಂಪರ್ಕವೂ ತನಗೆ ಆಗಬಾರದೆಂದು ಹವಣಿಸುತ್ತಿರುವುದು ತೀರ ಅಸಮಂ ಜಸವಾಗಿದೆ.

---

## ಕನ್ನಡದ ಮೇಲೆ ಟೈಮ್ಸಕಾರರ ವಕ್ರದೃಷ್ಟಿ

“ನಮ್ಮ ಕೆಲಸವು ಚೆನ್ನಾಗಿ ನಡೆದೊಡನೆ ಸಫಲವಾಗುವ ಕಾಲವು ಸಮೀಪಿಸಿದೊಡನೆ ಟೈಮ್ಸ ಆಫ್ ಇಂಡಿಯಾ (ಹಿಂದೂ ದೇಶದ ಕಾಲ) ಪತ್ರಿಕೆಯ ಶನಿದೃಷ್ಟಿಯು ಅದರ ಮೇಲೆ ಬಿತ್ತೆಂದೇ ತಿಳಿಯಬೇಕು” ಎಂದು ಲೋಕಮಾನ್ಯ ಟಿಳಕರು ಹೇಳುತ್ತಿದ್ದರು. ‘ಟೈಮ್ಸ ಪತ್ರಿಕೆಯಲ್ಲಿ ಟೀಕೆಯು ಬರಲಾರಂ ಭಿಸುತ್ತಲೆ ನಾವು ಒಳ್ಳೆಯ ಕೆಲಸವನ್ನು ನಡಿಸಿರುವೆವೆಂದು ತಿಳಿಯಬೇಕು’ ಎಂದು ಲೋಕಮಾನ್ಯರು ಸ್ವಾನುಭವದಿಂದ ಆಡಿದ್ದಾರೆ. ಇದೀಗ ಟೈಮ್ಸ ಪತ್ರಿಕೆಯು ಕನ್ನಡ ಚಳವಳಿಯ ಮೇಲೆ ಟೀಕೆ ಮಾಡುತ್ತಿರುವುದನ್ನು ನೋಡಿದರೆ ಲೋಕಮಾನ್ಯರ ಮೇಲಣ ವಚನದ ನೆನಪು ಆಗುತ್ತದೆ. ಈಗ ಟೈಮ್ಸಕಾರರು ಕನ್ನಡ ಚಳವಳವನ್ನು ಅಲ್ಲಗಳೆದು ಮರಾಠಿಗರ ಪಕ್ಷಪಾತವನ್ನು ತೋರಿಸುತ್ತಿರುವುದು ಮರಾಠಿಗರ ವಿಷಯಕ್ಕಿರುವ ಜನರ ಆದರಕ್ಕೆ ಬಾಧೆ ತರುವಂತಹದಾಗಿದೆ. ಕರ್ನಾಟಕದೊಳಗಿನ ಮರಾಠಿ ಶಾಲೆಗಳಲ್ಲಿ ಕನ್ನಡವನ್ನು ಕಲಿಸುವುದು ಅನ್ಯಾಯ ವೆಂದು ಟೈಮ್ಸ ಪತ್ರಿಕೆಯು ಮತ. ‘ಕನ್ನಡಿಗರಿಗೆ ಏಕೀಕರಣ ಕ್ಕಿಂತಲೂ ಮರಾಠಿಗರ ಸಂಬಂಧವನ್ನು ಬೇಗನೆ ಕಡಕೊಳ್ಳ ಬೇಕಾಗಿದೆ. ಆದುದರಿಂದ ಕನ್ನಡಿಗರದು ಏಕೀಕರಣ ಚಳವಳಿ ಯಲ್ಲ ; ಭಿನ್ನೀಕರಣ (Separatist Movement) ದ ಉದ್ಯಮವು’ ಎಂದು ಟೈಮ್ಸಕಾರರ ಟೀಕೆ. ಈ ಟೀಕೆಯು ಟೈಮ್ಸದ ಸಂಪಾದಕರದೇ ಆಗಿರದೆ ಅವರ ಸಂಪಾದಕವರ್ಗ ದೊಳಗಿನ ಆವನೊಬ್ಬ ಮರಾಠಿ ಗೃಹಸ್ಥನದಾಗಿರಬೇಕು ; ಅಥವಾ ಆವನೊ ಮರಾಠಿಗನಿಂದ ಪ್ರೇರಿತನಾದ [illegible] ಬರೆಯಲ್ಪಟ್ಟಿರಬೇಕು ಎಂದು ಕೆಲವರು ನುಡಿದರು. ಸ್ವದೇ ಶಾಭಿಮಾನಿಗಳಾದ ಮರಾಠರು ಸ್ವಾರ್ಥ ಸಾಧಿಸಲು ಉಭಯ ಪಕ್ಷಕ್ಕೂ ಸಾಮಾನ್ಯ ವಿರೋಧಿಯಾದ ಟೈಮ್ಸ ಕೆಯ ಬೆನ್ನಿಗೆ ಬೀಳಲಿಕ್ಕಿಲ್ಲೆಂದು ನಮಗೆನಿಸುತ್ತದೆ. ಈ ಗ್ರಹಿಕೆ ಸರಿಯಿರಲಿ ಅಥವಾ ತಪ್ಪಿರಲಿ ಟೈಮ್ಸಕಾರರು ತಮ್ಮ ಕಾರ್ಯ ಸಾಧಿಸುವದೆಂಬ ವಿಶ್ವಾಸವಿಲ್ಲದೆ ಮಂದಿಯ ಮಾತು ಕೇಳಿ ತಮ್ಮ ಪತ್ರಿಕೆಯಲ್ಲಿ ಒಂದು ವನ್ನೂ ಬರೆಯಲಾರರೆಂದು ನಿಶ್ಚಿತವಾಗಿ ಹೇಳ ಟೈಮ್ಸವು ಇದರಲ್ಲಿ ಮರಾಠಿಗರನ್ನು ಎತ್ತಿ ಹಿಡಿದಿ ಮತ್ತಿನ್ನಾವ ಉದಾತ್ತ ಉದ್ದೇಶದಿಂದಲ್ಲ, ಕೇವಲ ನಮ್ಮ ಳಗಿನ ಜಗಳಗಳನ್ನು ಹೆಚ್ಚಿಗೆ ಹೊತ್ತಿಸಬೇಕೆಂದು. ಆದ ತಾನಾಗಿಯೆ ಬಂದರೂ ಸಹ ಟೈಮ್ಸಕಾರರನ್ನು ತಮ್ಮ ತಕ್ಕೊಳ್ಳುವುದು ಮರಾಠಿಗರಿಗೆ ಭೂಷಣವಲ್ಲ.

---

## ತನ್ನ ಎಲೆಯಲ್ಲಿ ಕತ್ತೆ ಸತ್ತಿರಲು ಅನ್ಯ ಎಲೆಯೊಳಗಿನ ನೊಣ ಹಾರಿಸಿದರಂತೆ

ತನ್ನ ಭಾಷೆಸಂಸ್ಕೃತಿಗಳನ್ನು ಇಡೀ ಜಗತ್ತಿನ ಹೇರಬೇಕೆಂದು ಅವ್ಯಾಹತವಾಗಿ ಪರಿಶ್ರಮ ಮಾಡು ಆಂಗ್ಲ ಜಾತಿಗೆ ಕರ್ನಾಟಕ ಉದ್ಯಮದ ಬಗ್ಗೆ ಹೀಗೆ ಹೇಗೆ ಬಾಯಿ ಎದ್ದಿತೋ ತಿಳಿಯದು. ನಾವೇನೊ ದೇಶದಲ್ಲಿ ನಮ್ಮ ಭಾಷೆಸಂಸ್ಕೃತಿಗಳು ಉಳಿಯಬೇಕು, ಬೇಕು ಎನ್ನುತ್ತೇವೆ. ಇದಕ್ಕೂ, ಈ ಆಂಗ್ಲರ ತಾವು ಮಾಡುವ ಕಾರಭಾರವನ್ನು ತಾವು ತಿದ್ದಿಕೊಳ್ಳ ಮೇಲೆ, ನಾವು ಕೇಳುವಂತಿದ್ದರೆ ಉಪದೇಶವನ್ನು ಬರಲಿ.

---

## ಕೊಡಗಿನ ಬಂಧುಗಳ ಅಭಿನಂದನ

ಈ ತಿಂಗಳಿನಲ್ಲಿ ವ್ಹಾಯಿಸರಾಯರು ಕೊಡಗಿಗೆ ಹೋದರು. ಅವರಿಗೆ ಕೊಟ್ಟ ಮಾನಪತ್ರದಲ್ಲಿ ಗಿನ ಜಮೀನದಾರ ಸಂಘದವರು ಕೊಡಗನ್ನು ಕರ್ನಾ ಜೋಡಿಸಬೇಕೆಂಬ ಮಾತನ್ನು ಸೇರಿಸಿದ್ದರು. ವ್ಹಾ ಯರೇನೋ, ಈ ವಿಷಯವನ್ನು ಸೈಮನ್ ಸಾಹೇಬರು ಸುವರಾದ್ದರಿಂದ ಇದರಲ್ಲಿ ತಾವೇನೂ ಮಾಡುವಂತಿ ಹೇಳಿ ಮಾತಿಗೆ ಮಾತನ್ನೇ ಹಾರಿಸಿಬಿಟ್ಟರು. ಮುಂದೆ ಅದೇನೇ ಇರಲಿ, ಕೊಡಗಿನ ಬಂಧುಗಳನ್ನು ನಾವು ಅಂತ ಪೂರ್ವಕವಾಗಿ ಅಭಿನಂದಿಸುತ್ತೇವೆ.

---

## ದಿಸೆಂಬರಿನಲ್ಲಿ ಧಾರವಾಡದೊಳಗೆ ಜರುಗುವ ಸಭೆ ಸಮ್ಮೇಲನಗಳು

ಕರ್ನಾಟಕ ವಾಚನಾಲಯುಗಳ ಪರಿಷತ್ತು, ನಾಟ್ಯ ಸಮ್ಮೇಲನ ಮತ್ತು ವೈದ್ಯ ಸಮ್ಮೇಲನಗಳು ದಿಸೆಂಬರ ೨೮ರಿಂದ ೩೧ನೆಯ ತಾರೀಖಿನ ವರೆಗೆ ನೆರೆಯತಕ್ಕುವಿವೆ. ವೈದ್ಯ ಸಮ್ಮೇಲನವು ಕಳೆದ ಮೇ ತಿಂಗಳಲ್ಲಿಯೆ ಆಗತಕ್ಕುದಿತ್ತು. ಬೆಳಗಾಂವಿಯ ಕರ್ನಾಟಕ ಪರಿಷತ್ತುಗಳ ಸಲುವಾಗಿ ಮುಂದೆ ಬಿತ್ತು. ಈಗ ಅದರ ಸಿದ್ಧತೆಯು ನಡೆದಿದ್ದು ಬೆಂಗಳೂರಿನ ಸುಪ್ರಸಿದ್ಧ ಡಾಕ್ಟರ ಸಿ. ಬಿ. ರಾಮರಾಯರು ಅಧ್ಯಕ್ಷರಾಗಲು ಒಪ್ಪಿದ್ದಾರೆ. ವಾಚನಾಲಯ, ನಾಟಕಗಳ ಸಮ್ಮೇಲನಗಳು ಕರ್ನಾಟಕದಲ್ಲಿ ಮೊದಲಿನವು. ವಾಚನಾಲಯ ಪರಿಷತ್ತಿಗೆ ಆಂಧ್ರದೇಶದ ನರಶಿಂಹಶಾಸ್ತ್ರಿಗಳೂ ನಾಟ್ಯ ಪರಿಷತ್ತಿಗೆ ಬಳ್ಳಾರಿಯ ನಟಶ್ರೇಷ್ಠ ರಾಘವಾಚಾರ್ಯರೂ ಅಧ್ಯಕ್ಷರಾಗುವರು. ಆದುದರಿಂದ ಇವನ್ನು ಆರಂಭಿಸಿದ ಸ್ತುತ್ಯ ಕಾರ್ಯಕ್ಕಾಗಿ ಎರಡೂ ಮಹಾಸಭೆಗಳ ಚಾಲಕರ ಅಭಿನಂದನ ಮಾಡುವುದು ಅವಶ್ಯವು. ಈ ಸಮ್ಮೇಲನಗಳ ಮಹತ್ತ್ವವು ಅಲ್ಪಸ್ವಲ್ಲ. ಇವು ರಾಷ್ಟ್ರೋನ್ನತಿಗೆ ಅತ್ಯಂತ ಸಹಕಾರಿ. ಆದುದರಿಂದ ಆಯಾ ವಿಷಯಗಳಲ್ಲಿ ಮನಸು ಹಾಕುವ ಅಖಿಲ ಕರ್ನಾಟಕ ಬಾಂಧವರೂ ಈ ಸಭೆಗಳಿಗೆ ದಯಮಾಡಿಸಿ ಕಾರ್ಯವನ್ನು ಯಶಸ್ವಿಯಾಗಿ ಮಾಡಬೇಕು.

---

ಮುಂಬಯಿ ಕರ್ನಾಟಕದಲ್ಲಿ ವಿಜಾಪುರದ ಶ್ರೀ. ವೆಂಕಣ್ಣ ನಾಯಿಕರು ತೀರಿಕೊಂಡರು. ನೈಜಾಂ ಕರ್ನಾಟಕದಲ್ಲಿ ಸುರಪುರದ ಪಂಚಾಂಗಕರ್ತರು ಪರಲೋಕವನ್ನೈದಿದರು. ಮತ್ತು ಮೈಸೂರ ಕರ್ನಾಟಕದಲ್ಲಿ ಚಿತ್ರದುರ್ಗದ ದೊಡ್ಡಯ್ಯನವರು ಇಲ್ಲದಾದರು. ಒಬ್ಬರು ಕರ್ನಾಟಕ ಏಕೀಕರಣಪ್ರಿಯ ಕಲೆಕ್ಟರರು; ಮತ್ತೊಬ್ಬರು ಜ್ಯೋತಿಷ್ಯದಲ್ಲಿ ಪ್ರಚಂಡ ವಿದ್ವಾಂಸರು; ಇನ್ನೊಬ್ಬರು 'ಜಾತಿಹೀನ(?)ರ ಮನೆಯು ಜ್ಯೋತಿ ತಾ ಹೀನವೇ' ಎಂಬಂತೆ ಆದಿ ಕರ್ಣಾಟಕರಾಗಿಯೂ ಉಜ್ಜ್ವಲಜೀವನವನ್ನು ಇದ್ದು ತೋರಿ ತಮ್ಮ ಧರ್ಮಬಂಧುಗಳಿಗಾಗಿ ೧೦೦೦೦ರೂ. ಬೆಲೆಬಾಳುವ ಆಸ್ತಿಯನ್ನು ದಾನಮಾಡಿ 'ಕೊಡುವರ್ಗಾವುದು ದೊಡ್ಡಿತ್ತೈ' ಎಂದನ್ನುವಂತೆ ಮಾಡಿಹೋದರು. ಈ ಕರ್ನಾಟಕ ರತ್ನತ್ರಯಕ್ಕಾಗಿ ಯಾವ ಯಾವ ರೀತಿಯಿಂದ ಶೋಕಿಸಬೇಕೆಂಬದು ತಿಳಿಯದಾಗಿದೆ. ಕರ್ನಾಟಕ ಮಾತೆಯು ಇವರೆಲ್ಲರ ಆತ್ಮಗಳಿಗೆ ಶಾಂತಿಯನ್ನೀಯಲಿ!

---

# ಸಾಹಿತ್ಯಲೋಕ



UNITED KARNATAK or A case for Karnatak Unification. Edited by the Secretaries Karnataka Unification Sabha and K. Un. Sub Committee, K. P. C. C. Dharwar 1928. ಬೆಲೆ ರು. ೧-೪-೦.

'ಒಗ್ಗಟ್ಟಿನ ಕರ್ನಾಟಕ' ಅಥವಾ 'ಕರ್ನಾಟಕ ಏಕೀಕರಣ ಪಕ್ಷಮಂಡನ' ವೆಂಬೀ ಇಂಗ್ಲಿಷ ಪುಸ್ತಕವು ಪ್ರಕಟವಾಗಿ ಒಂದು ವರ್ಷವಾಗಿ ಹೋಯಿತು. ಈ ಒಂದು ವರ್ಷದಲ್ಲಿ ಅನೇಕ ಕಾರಣಗಳಿಂದ ಕರ್ನಾಟಕಾಭಿಮಾನವೂ ಏಕೀಕರಣದ ಭಾವನೆಯೂ ಉಂಟಾಗಿವೆ. ಮದ್ರಾಸ ಕಾಯಿದೆಮಂಡಲದಲ್ಲಿ ಏಕೀಕರಣವು ಸ್ವೀಕೃತವಾದರೆ ಮುಂಬಯಿ ಕಾನ್ಸಿಲಿನಲ್ಲಿ ತ್ಯಾಜ್ಯವಾಯಿತು. ಸಾಯಮನ ಕಮಿಶನ್ನಿನ ದೃಷ್ಟಿಪಥವನ್ನು ಸೇರಿದರೂ ಅವರ ವಿಚಾರಪಥವನ್ನು ಎಷ್ಟು ಸೇರಿದೆಯೋ ಹೇಳಲು ಬರದ ಸಂಶಯಾಸ್ಪದಸ್ಥಿತಿಯಲ್ಲಿ ಉಳಿದುಕೊಂಡಿದೆ. ಮುಂಬಯಿಯ ಟಾಯಿಮ್ಸು ಪತ್ರದ ಶನಿದೃಷ್ಟಿಗೆ ಈಡಾಗಿರುವದರಿಂದ ಸರಕಾರದ ವಕ್ರದೃಷ್ಟಿಯೂ ಏಕೀಕರಣವನ್ನು ಬಾಧಿಸಬಹುದೆಂಬ ಅನುಮಾನಕ್ಕೆ ಆಸ್ಪದವಾಗಿದೆ. ಮೊನ್ನೆ ಮೊನ್ನೆ ಧಾರವಾಡದಲ್ಲಿ ಕೂಡಿದ ಕರ್ನಾಟಕ ಪ್ರಾಂತದ ಕಾಂ. ಕ. ಯ ವಾರ್ಷಿಕ ಅಧಿವೇಶನದಲ್ಲಾದ ಚರ್ಚೆಯು ಅದರೊಳಗಿನ ಎಷ್ಟೋ ಸಭಾಸದರು ಏಕೀಕರಣ ಪ್ರಶ್ನೆಯನ್ನು ಸೋಗಿಗಾಗಲಿ, ಗತ್ಯಂತರವಿಲ್ಲದಾಗಲಿ ಸ್ವೀಕರಿಸಿದ್ದರೇನೊ ಎಂಬ ಸಂದೇಹವನ್ನುಂಟುಮಾಡಿದೆ. ಪ್ರಾಂತಾಭಿಮಾನವು ರಾಷ್ಟ್ರೀಯಪಾಪಗಳ ಪಟ್ಟಿಯಲ್ಲಿ ನೂಕಲ್ಪಡುತ್ತಿರುವ ಕುರುಹು ಅಲ್ಲಲ್ಲಿ ಕಂಡುಬರುತ್ತಿರುವದರಿಂದ ಪಾಪಭೀರುಗಳು ತೀವ್ರವೇ ಪ್ರಾಯಶ್ಚಿತ್ತ ಹೊಂದಿ ಪುನೀತರಾಗುವ ಚಿನ್ಹಗಳಿವೆ. ಕೆಲವರು ಒಳಗಿಂದೊಳಗೆ ಪಶ್ಚಾತ್ತಾಪದಿಂದ ಪುನೀತರಾಗಿ ಪ್ರಾಂತಾಭಿಮಾನದ ಕೆಸರುಕೈಯನ್ನು ತೊಳೆದುಕೊಳ್ಳುತ್ತಿವೆ ಕೆಲಸದ ಬೆನ್ನು ಹತ್ತುತಲ್ಲಿ

ದ್ದಾರೆ. ಇಂಥ ಸಂದರ್ಭದಲ್ಲಿ " United Karnatak" ವೆಂಬ ಪುಸ್ತಕದಲ್ಲಿ ಮಂಡಿತವಾದ ತತ್ವಗಳು ನೆಹರು ಕಮೀಟಿಯನ್ನು ಕೈವಶಮಾಡಿಕೊಳ್ಳಲು ಸಿದ್ಧಪಡಿಸಿದ ವಶೀಕರಣ ಚೂರ್ಣಪ್ರಾಯಗಳೊ, ತಾತ್ಕಾಲಿಕ ಅಭಿಮಾನಾವೇಶದಿಂದಾಗಲಿ ಕೀಳು ವಕೀಲರಂತೆ ಸ್ವಾರ್ಥಕ್ಕಾಗಿಯಾಗಲಿ ಎತ್ತಿ ಹಿಡಿದ ಬೂಟಾಟದ ಮಾತುಗಳೋ ಇದರ ನಿರ್ಣಯವಾಗುವದಗತ್ಯವಾಗಿದೆ.

ಪುಸ್ತಕವೇನೊ ಪೂರ್ಣವಾಗಿ ಪ್ರಸಿದ್ಧವಾಗುವ ಪೂರ್ವದಲ್ಲಿಯೇ ಬಲ್ಲವರಿಂದ ಮನ್ನಣೆಯನ್ನು ಪಡೆದಿತ್ತು. ಅದರ ಲೇಖಕರಿಗೆ ಹೆಚ್ಚು ಅವಕಾಶವು ದೊರೆತಿದ್ದರೆ ಅದನ್ನು ಇನ್ನೊಂದಿಷ್ಟು ವಿನಯವಾಗಿಯೂ ವಿಶದವಾಗಿಯೂ ಪರಿಣಾಮಕಾರಕವಾಗಿಯೂ ಸಾಂಗೋಪಾಂಗವಾಗಿಯೂ ಬರೆಯಬಹುದಾಗಿತ್ತು. ಬಹುದಿನಗಳ ಹಿಂದಿನಮಾತು ಈಗ ಬೇಡ. ಈ ಪುಸ್ತಕವು ಇಂಗ್ಲಿಷ ಭಾಷೆಯಲ್ಲಿರುವದರಿಂದ ಇದರ ವಿಚಾರವು ಬರಿಯ ಕನ್ನಡ ಬಲ್ಲವರಿಗೆ ಗೊತ್ತಿಲ್ಲ. ಆದರೆ "ತಾಯಿ ತಾಯ್ ಎಂದು ಸಲೆಸಿದ್ಧ ಮಾಡಲು ಒಣಗು ಒಣ ತರ್ಕಶಾಸ್ತ್ರವೇಕೆ?" ಇತಿಹಾಸವನ್ನು ಓದದೆ ಜನ್ಮದೇಶದ ಬಗ್ಗೆ ಅಭಿಮಾನವು ಹುಟ್ಟಲಾರದೆ, ಹುಟ್ಟಬಾರದೆ ? ಎಂದು ಅನೇಕರು ಅನ್ನಬಹುದು. ಬಲ್ಲವರ ಮಾತು ಬೇರೆ! ಸಾಮಾನ್ಯರಿಗಾಗಿಯೂ ಹೊಸದಾಗಿ ಉಂಟಾಗುತ್ತಲಿರುವ ಬುದ್ಧಿಭೇದವನ್ನು ತೆಗೆದು ಹಾಕುವದಕ್ಕಾಗಿಯೂ, ಈ ಪುಸ್ತಕದಲ್ಲಿ ಪ್ರತಿಪಾದಿತವಾಗಿರುವ ಮೂರು ಮಾತುಗಳನ್ನು ಸ್ವಲ್ಪವಿಸ್ತಾರದಿಂದ ವಿಮರ್ಶಿಸಬೇಕೆಂದಪೇಕ್ಷೆಯಿದೆ.

'In short, if the present boundaries are a real handicap on the development of a certain linguistic group and if the redistribution is likely to help them to come out with the best they have as an offering at the feet of Mother Ind, then there can be said to be a real grievance which ought to be removed both in the interest of the particular group and in the wider intertsts of the nation." —Introduction, p. xviii

" Thus geographycally British Karnataka by itself deserves to be immediately formed into a seperate province so that it may develop its resources to the fullest extent and thus add to the greatness of India." — page 25.

" Such is the rich culture that Karn[...] inherits and in demanding a united Karn[...] it only wishes to find scope again for a re[...] of such a cultural out-burst, the fruits of [...] she most humbly wishes to lay at the fe[...] Bharata-Mata." — page 51

" What we now want is that people who [...] Kannada and live in the Kannada atmos[...] should be brought together under one adm[...]tration to the advantage of both these p[...] and the Indian nation." — page 110

ಹೀಗೆ ಈ ಪುಸ್ತಕದಲ್ಲಿ ಹೇಳಿದ್ದಾಗಿದೆ. ಭಾಷೆಯ [...] ಸೂತ್ರಬದ್ಧರಾಗಿ ಸಂಸ್ಕೃತಿಯಿಂದ ವೀರ್ಯವತ್ತರಾ[...] ಜನಾಂಗದ ಭಾವನೆಯಿಂದ ಅಭ್ಯುದಯಾಕಾಂಕ್ಷಿಗಳಾ[...] ನಾಡಿನವರು ಉಪರಾಷ್ಟ್ರಸಂಜ್ಞೆಗೆ ಪಾತ್ರರಾಗಿ ಭಾ[...] ನಿಜವಾಗಿ ಬೃಹತ್ತರರಾಷ್ಟ್ರವನ್ನಾಗಿ ಮಾಡುವದು ಪ[...] ಪ್ರಾಪ್ತವೂ ಉಚಿತವೂ ಧರ್ಮವೂ ಆಗಿದೆ ಎಂದು [...] ನಿಂದ ಕೊನೆಯವರೆಗೆ ಇದರಲ್ಲಿ ಪ್ರತಿಪಾದಿತವಾಗಿದೆ. [...] ದರೆ ಭಾಷೆಯ ಸೂತ್ರದ, ಸಂಸ್ಕೃತಿಯ ವೀರ್ಯದ, ಜನಾಂಗದ ಅಭ್ಯುದಯದ, ಅಂತೂ ಕರ್ನಾಟಕರಾಷ್ಟ್ರ[...] ವೇನು ? ಅದು ಭಾರತಕ್ಕೆ ಆಧೀನವೂ ಪೋಷಕವೂ [...] ಬಗೆಯೆಂತು ಎಂಬುದನ್ನು ಕುರಿತು ಮುಂದೆ ವಿಚಾರಿಸ[...]

**ಭಾರತಧರ್ಮ** :—(ಬರೆದವರು:—ಶ್ರೀ. ಎಸ್. [...] ಶರ್ಮ, ಬಿ. ಎ. ಬೆಂಗಳೂರು. ಇದು ಎರಡು ಭಾ[...] ಪ್ರಕಟವಾಗಿದೆ. ಮೊದಲನೆಯ ಭಾಗವು ಲೇಖಕರಿಗೆ [...] ಸಿದ ಹಾಗು ಲೇಖಕರ ಪ್ರೀತಿಯ ಹಲವು ವಿಷಯಗ[...] ಕೊಂಡಿದೆ. ಎರಡನೆಯದು **ಡಾಕ್ಟರ್ ಎಸ್.** [...] **ಕೃಷ್ಣನ್** ಅವರ 'ಅಪ್ಟನ್ ಸಂಭಾಷಣೆಗಳ ಕನ್ನ[...] ವಾದ' ವು. ಪುಟಗಳು ಎರಡೂ ಭಾಗಗಳಲ್ಲಿ ಸೇರಿ [...] ೪೫೦. ಹಲವರ ಭಾವಚಿತ್ರಗಳೂ ಇವೆ. ಬೆಲೆ [...]

ಭರತಮಾತೆಯ ಮೋಹದ ಮಕ್ಕಳಲ್ಲಿ ಡಾಕ್ಟರ್ [...] ರಾಧಾಕೃಷ್ಣನ್ ಅವರೂ ಒಬ್ಬರು. ಇವರು ಪರದೇ[...]ಲ್ಲಿಯೂ ತಮ್ಮ ಪಾಂಡಿತ್ಯಪ್ರತಿಭೆಗಳಿಂದ ಆರ್ಯರ [...] ಧರ್ಮದ ಸನಾತನತತ್ವಗಳನ್ನು ನೂತನರೀತಿಯಿಂದ [...] ಆರ್ಯಧರ್ಮದ ಭಂಡಾರಮುದ್ರೆಯನ್ನೊಡೆದು ಶ್ರೀ [...] ವಿವೇಕಾನಂದರೆಂಬ ಹೆಸರನ್ನೂ ಹಲವರಿಂದ [...]

ಷಂತರು, ಆರ್ಯಧರ್ಮದ ಮೂಲಭೂತತತ್ತ್ವಗಳನ್ನು ಬಹು ಸೂಕ್ಷ್ಮವಾಗಿ ತಿಳಿದು ಬೇರೆ ಮತಗಳ ಮೂಲತತ್ತ್ವಗಳೊಂದಿಗೆ ಸರಿಹಚ್ಚಿ ನೋಡಿ ಆರ್ಯಧರ್ಮದ ಶ್ರೇಷ್ಠತೆ ಎಲ್ಲಿದೆಯೆಂಬುದನ್ನು ಕಂಡವರು. ನಿಜವಾದ ದೇಶಪ್ರೇಮವನ್ನು ಪಡೆಯಬೇಕೆನ್ನುವವರೆಲ್ಲರೂ ಇಂಥವರ ಗ್ರಂಥಗಳನ್ನು ಓದಿ ಮನನಮಾಡುವುದು ಅತ್ಯಗತ್ಯವಾಗಿದೆ. ನಮ್ಮ ಧರ್ಮದಲ್ಲಿ, ನಮ್ಮ ಸಂಸ್ಕೃತಿಯಲ್ಲಿ, ನಾವು ಹೆಮ್ಮೆಪಡತಕ್ಕ ವಿಷಯವಾದರೂ ಏನಿದೆಯೆನ್ನುವ ಜಿಜ್ಞಾಸುಗಳಿಗೂ ಇಂತಹ ಗ್ರಂಥಗಳು ಬಹುಸಹಾಯವಾಗುವವು. ಆದುದರಿಂದ ಭಾರತಧರ್ಮದ ಎರಡನೆಯ ಭಾಗವನ್ನು ಪ್ರಸಿದ್ಧಿಸಿದುದಕ್ಕಾಗಿ ಶ್ರೀ. ಶರ್ಮ ಅವರನ್ನು ಅಭಿನಂದಿಸುವುದು ನಮ್ಮ ಆದ್ಯಕರ್ತವ್ಯವಾಗಿದೆ.

ಎರಡನೆಯ ಭಾಗದಲ್ಲಿ ೧ ಆತ್ಮಾನುಭವವೂ ಆದರಸ್ವಭಾವವೂ ೨ ಮತವಿವಾದಗಳೂ ಹಿಂದೂ ಜನರ ಮತಸಹನೆಯೂ ೩ ಹಿಂದೂಧರ್ಮ–೧ (ಮಾಯಾ, ಕರ್ಮ, ಪುರುಷಾರ್ಥ ಮತ್ತು ಆಶ್ರಮಧರ್ಮಗಳು) ೪ ಹಿಂದೂಧರ್ಮ–೨ (ಜಾತಿ ಮತ್ತು ಸಂಘ ಧರ್ಮಗಳು) ಎಂಬುದಾಗಿ ನಾಲ್ಕು ವಿಭಾಗಗಳಿವೆ. ಇವೆಲ್ಲವುಗಳೂ "ಹಿಂದೂಧರ್ಮದ ಮುಖ್ಯ ಉದ್ದೀಪಕ ತತ್ತ್ವಗಳು ಯಾವುವು ಮತ್ತು ಈ ಕಾಲದ ಕ್ಲಿಷ್ಟವಿಚಾರಗಳನ್ನು ಸರಿಪಡಿಸಲು ನಮ್ಮ ಧರ್ಮವು ಯಾವ ಮಾರ್ಗವನ್ನನುಸರಿಸುತ್ತದೆ" ಎಂಬ ಸೂತ್ರದಿಂದ ಬಹು ಮನೋಹರವಾಗಿ ಬದ್ಧವಾಗಿವೆಯೆನ್ನಬಹುದು. ಕೇವಲ ಕುರುಡುನಂಬುಗೆಯೇ ನಮ್ಮ ಮತದ ತಳಹದಿಯಲ್ಲ. ಬರಿ ತರ್ಕವಿತರ್ಕಗಳ ಮಾಯಾಜಾಲವೂ ನಮ್ಮ ಧರ್ಮದ ಮುಖ್ಯಲಕ್ಷಣವಲ್ಲ. ವಿಜ್ಞಾನದ ಶೋಧಗಳನ್ನು ಕಂಡುಹಿಡಿಯುವಂತೆ ಶಾಸ್ತ್ರಪುರಾಣಗಳನ್ನೋದಿ ಬುದ್ಧಿಶಕ್ತಿಯ ಸಹಾಯದಿಂದ ಧರ್ಮದ ಮೂಲವನ್ನೂ ಶೋಧಿಸುವೆನೆನ್ನುವುದು ನಮ್ಮ ಮತಕ್ಕೆ ತಿಳಿಯದ ಮಾತು. ಕೇವಲ ಆತ್ಮಾನುಭವದಿಂದ, ಸ್ವಯಂಪ್ರಜ್ಞೆಯಿಂದ ಕಂಡು ನಮಗಾಗಿ ನಮ್ಮ ಋಷಿಗಳು ಕಾಯ್ದಿಟ್ಟ ಈ ಧರ್ಮವನ್ನು ನಾವಾದರೂ ಆತ್ಮಾನುಭವದಿಂದಲೇ ತಿಳಿಯುವುದು ಸಾಧ್ಯವೆಂಬ ಮಾತು ಮೊದಲನೆಯ ಭಾಗದಲ್ಲಿ ಸಪ್ರಮಾಣವಾಗಿ ಸಿದ್ಧವಾಗಿದೆ. ಜೀವಾತ್ಮಪರಮಾತ್ಮರ ಪರಸ್ಪರ ಸಂಬಂಧವೆಂತಹುದು, ಬೇರೆ ಬೇರೆ ಅವಸ್ಥೆಗಳಲ್ಲಿರುವ ಜೀವಗಳು ಪರಬ್ರಹ್ಮನನ್ನು ಪಡೆಯುವುದು ಹೇಗೆ ಮೊದಲಾದ ಮಹತ್ತ್ವದ ಪ್ರಶ್ನೆಗಳು ಸಂಗ್ರಹವಾಗಿ ವಿವೇಚಿಸಲ್ಪಟ್ಟಿವೆ. ಈ ರೀತಿ ಆರ್ಯರಲ್ಲಿ ಅಂತಃಶಕ್ತಿಯ ವಿಷಯವಾಗಿ ಬೇರೂರಿದ ಅರಿವೇ ಮುಂದೆ ವಿವಿಧ ಮತಸಂಘಗಳು ಬಂದು ಸೇರಿದರೂ ಅವೆಲ್ಲವನ್ನೂ ತನ್ನಲ್ಲಿಯೆ ಸೇರಿಸಿಕೊಳ್ಳುವುದಕ್ಕೆ ಅನುಕೂಲವಾಯಿತು. ಬಾಹ್ಯ ಭೇದಗಳನ್ನು ಮೀರಿ ನಾಮರೂಪಾತೀತವಾದ ಪರವಸ್ತುವೊಂದಿದೆಯೆಂಬುದನ್ನು ಕಂಡು ತಿಳಿದವನು ಆಚಾರಮಾತ್ರದಿಂದ ಬೇರೆಯಾದ ಧರ್ಮಗಳನ್ನು ತಿರಸ್ಕರಿಸುವುದು ಹೇಗೆ? ಅಂತೆ ಎಂದಿನಿಂದಲೂ ಹಲವು ಪರಮತೀಯರು ಇಲ್ಲಿ ನೆಲಸಿ ಸುಖವಾಗಿ ಬಾಳುತ್ತಿರುವರು. ಹೆಸರಿಗೆ ಹಿಂದುಸ್ಥಾನವಾದರೂ ಇಲ್ಲಿ ಹಿಂದೂ, ಮುಸಲ್ಮಾನ, ಕ್ರಿಸ್ತಿ, ಪಾರಸಿ ಎಂಬ ಮುಖ್ಯ ಧರ್ಮಗಳಲ್ಲದೆ ಹಲವು ಮತಮತಾಂತರಗಳೂ ರೂಢಿಯಲ್ಲಿವೆ. ಅವೆಲ್ಲ ಹಿಂದೂಜನರ ಪರಮತಸಹಿಷ್ಣುತೆಯ ಆಸರೆಯಲ್ಲಿರುವ ಕಾರಣ ಭದ್ರವಾಗಿ ಬಾಳುತ್ತವೆ ಎಂಬ ಅಭಿಪ್ರಾಯಗಳು ಬಹು ಸ್ಪಷ್ಟವಾಗಿ ಎರಡನೆಯ ಭಾಗದಲ್ಲಿ ವ್ಯಕ್ತವಾಗಿವೆ. ಮುಂದೆ ಮೂರನೆಯ ನಾಲ್ಕನೆಯ ಉಪನ್ಯಾಸಗಳಲ್ಲಿ ಭಾರತಧರ್ಮದ ಸಿದ್ಧಾಂತಗಳು, ಆಚಾರವಿಚಾರಗಳು ಮೊದಲಾದ ಬಾಹ್ಯರೂಪಕ್ಕೆ ಸಂಬಂಧಿಸಿದುವೆಂದು ತೋರಿದರೂ ಅಂತಃಸ್ಸತ್ತ್ವಕ್ಕೆ ವಿಶೇಷವಾಗಿ ಸಂಬಂಧಪಟ್ಟ ವಿಷಯಗಳ ವಿವೇಚನೆಯಿದೆ. ಮಾಯಾವಾದ, ಕರ್ಮವಾದ, ಪುರುಷಾರ್ಥಗಳು, ವರ್ಣಾಶ್ರಮಧರ್ಮಗಳ ವಿಚಾರವಾಗಿ ಸಂಕ್ಷೇಪವಾದರೂ ಸೂಕ್ಷ್ಮವಾದ ವಿವರಣೆಯನ್ನು ನಾವು ಇಲ್ಲಿ ನೋಡಬಹುದು.

ಇಷ್ಟೆಲ್ಲ ಮೂಲಗ್ರಂಥದ ಮಾತಾಯಿತು. ಇನ್ನು ಭಾಷಾಂತರದ ವಿಷಯ. ಅನೇಕಶತಮಾನಗಳಿಂದ ಸ್ವತಂತ್ರವಾಗಿ ಬೆಳೆದು ಅದ್ಭುತ ಶಬ್ದಭಂಡಾರವನ್ನೂ ಅನುಪಮಧ್ವನಿಶಕ್ತಿಯನ್ನೂ ಪಡೆದ ಆಂಗ್ಲಭಾಷೆಯ ಗ್ರಂಥಗಳನ್ನು ಕನ್ನಡದಲ್ಲಿ ಅನುವಾದಿಸುವುದು ಕಠಿನಕೆಲಸವಾದರೂ ಡಾಕ್ಟರ್ ರಾಧಾಕೃಷ್ಣನ್ ಅವರ ಮೇಲಿನ ಭಕ್ತಿಯಿಂದಲೂ ಕನ್ನಡನಾಡಿನ ಶ್ರೇಯೋಭಿಲಾಷೆಯಿಂದಲೂ "ತ್ವಯಾ ಹೃಷೀಕೇಶ ಹೃದಿ ಸ್ಥಿತೇನ ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ" ಎನ್ನುವ ನಿರಿಚ್ಛಬುದ್ಧಿಯಿಂದಲೂ ಪ್ರೇರಿತರಾದ ಶ್ರೀ. ಶರ್ಮ ಅವರು ಅನುವಾದವನ್ನು ಒಟ್ಟಿನಲ್ಲಿ ಚೆನ್ನಾಗಿ ಸಾಧಿಸಿರುವರು. ಆದರೂ ಇಂತಹ ಗ್ರಂಥಗಳನ್ನು ಪರಿವರ್ತಿಸಬೇಕೆನ್ನುವ ಇತರರಿಗೂ ಸಹಾಯವಾಗಲೆಂಬ ಬುದ್ಧಿಯಿಂದ ಕೆಲವು ಕುಂದುಗಳನ್ನು ತೋರಿಸುವೆವು.

"ಇದು ಬಿಟ್ಟು ಅರ್ಥವತ್ತಾದ ಸಾರವಿದೆಯೆಂದರೆ ಇದೂ ಕೂಡ ಕಾಲದೇಶಕ್ಕನುಗುಣವಾಗಿ ಬದಲಾಯಿಸಿದೆ." "ಇಂಥಾ ನಮ್ಮ ಜನಾಂಗಕ್ಕೆ ವಿವಿಧಾಕಾರಗಳನ್ನುಳ್ಳ ಈ ವಿಷಯಗಳನ್ನೆಲ್ಲ ಒಟ್ಟುಗೂಡಿಸುವ ತನ್ನ ಚರಿತ್ರೆಯ [illegible] ಭಿನ್ನ ಭಿನ್ನ [illegible]ಗಳನ್ನು ಅನ್ವಯರೀತಿಯಿಂದ ತನ್ನಲ್ಲಿ

ಚೆನ್ನಾಗಿ ಜೊತೆಗೂಡಿಸುವ ಶಕ್ತಿಯೊಂದಿಲ್ಲದಿದ್ದರೆ ನಮ್ಮ ಹಿಂದೂಜನರು ಅಷ್ಟು ದೊಡ್ಡ ಕಾರ್ಯಗಳನ್ನು ಹೇಗೆ ಮಾಡಿದ ರೆಂದು ಹೇಳಲು ಸುಲಭಸಾಧ್ಯವಲ್ಲ" ಎನ್ನುವಲ್ಲಿಯೂ ಮತ್ತೆ ಬೇರೆ ಕೆಲವೆಡೆಯಲ್ಲಿಯೂ ಇಂಗ್ಲಿಷು ಕಲಿತವರಿಗೂ ಕೂಡ ಅರ್ಥಮಾಡಿಕೊಳ್ಳುವುದಕ್ಕೆ ಕಷ್ಟಪಡುವ ಪ್ರಸಂಗವಿದೆ. ಪರ ಭಾಷೆಯ ಗ್ರಂಥಗಳನ್ನು ಪರಿವರ್ತಿಸುವಾಗ ಈ ಪರಿವರ್ತನೆ ಗಳು ಸಾಮಾನ್ಯರಿಗೂ—ಆ ಪರಭಾಷೆಯನ್ನರಿಯದವರಿಗೂ ಸಹಜವಾಗಿ ತಿಳಿಯಬೇಕೆಂಬ ಉದ್ದೇಶವೇ ಮುಖ್ಯವೆಂದಮೇಲೆ ಶಬ್ದಕ್ಕೆ ಶಬ್ದವಿಟ್ಟಹಾಗೆ ಭಾಷಾಂತರಿಸಿದರೆ ಯಾರಿಗೂ ಅದ ದರಿಂದ ಪ್ರಯೋಜನವಿಲ್ಲ. ಅಂತೆ ಮೂಲಗ್ರಂಥದ ವಿಚಾರ ಗಳು ಸ್ಪಷ್ಟವಾಗಿ ಪರಿವರ್ತನೆಯಲ್ಲಿ ಬಿಂಬಿಸುವಂತೆ ಮಾಡು ವುದೇ ಪರಿವರ್ತಕರ ಮುಖ್ಯಕರ್ತವ್ಯ. ಈ ಕರ್ತವ್ಯವು ಮರೆ ಯಾದಕಾರಣ ಕೆಲವೆಡೆ ಈ ಗ್ರಂಥದಲ್ಲಿ ಸಂದಿಗ್ಧತೆಯುಂಟಾ ಗಿದೆ. ಅವನ್ನೆಲ್ಲ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳುವ ರೆಂದು ಭಾವಿಸುತ್ತೇವೆ.

ಮೊದಲನೆಯ ಭಾಗದ ಅವಶ್ಯಕತೆಯ ವಿಷಯವಾಗಿ ಲೇಖ ಕರಿಗೂ ಸಂದೇಹ ಬಂದಹಾಗೆ ತೋರುತ್ತದೆ. ಅಂತೆ ಅವರು ತಮ್ಮ ವಿಸ್ತೃತವಾದ ಮುನ್ನುಡಿಯಲ್ಲಿ ಮತ್ತೆ ಮತ್ತೆ ಈ ಮಾತನ್ನೆತ್ತಿರುವರು. ಎಷ್ಟು ಹೇಳಿದರೂ ಎರಡುನೂರಕ್ಕಿಂತ ಹೆಚ್ಚು ಪುಟಗಳುಳ್ಳ ಈ ಭಾಗವನ್ನು ಮುದ್ರಿಸದೆ ಎರಡನೆಯ ಭಾಗವನ್ನಷ್ಟೇ ಪ್ರಸಿದ್ಧಿಸಿದ್ದುದಾದರೆ ಒಳಿತಾಗುತ್ತಿತ್ತು. ಗ್ರಂಥ ಕರ್ತರು ತಮ್ಮ ಇಂಗ್ಲಿಶ್ ಮುನ್ನುಡಿಯಲ್ಲಿ ಅಭಿಪ್ರಾಯ ಪಡು ವಂತೆ ಶ್ರೀ. ಗಳಗನಾಥರಿಗಿಂತ ಶ್ರೀ ಮಾಸ್ತಿಯವರು ಶ್ರೀ ಗುಂಡ ಪ್ಪನವರು ಮೊದಲಾದವರು ಹೆಚ್ಚು ಪ್ರಾಶಸ್ತ್ಯ ಪಡೆದಿರುವುದು ಅವರ ವಿಶಿಷ್ಟ ಧರ್ಮದಿಂದಲ್ಲ; ಶ್ರೀಯುತ ಗಳಗನಾಥರಿಗೆ ಅವರಷ್ಟು ಮನ್ನಣೆ ಸಿಕ್ಕದಿರುವುದು ಅವರು ಸನಾತನ ಧರ್ಮ ವಾದಿ (?) ಗಳಿರುವರೆಂಬ ಕಾರಣದಿಂದಲ್ಲ. ವ್ಯಕ್ತಿವೈಚಿತ್ರ್ಯ ಗಳೇನಿದ್ದರೂ ಅವರ ಕೃತಿಗಳಿಂದ ಅವರಿಗೆ ಸಾಹಿತ್ಯಪ್ರಪಂಚ ದಲ್ಲಿ ಸ್ಥಾನಸಿಕ್ಕುವುದೇ ಹೊರತು ಅವರ ಸ್ನಾನಸಂಧ್ಯಾವಂದನ ಜಪತಪಗಳಿಂದಲ್ಲವೆಂಬುದನ್ನು ನಾವು ಮರೆಯಕೂಡದು. ಶರ್ಮರು ಹೇಳುವಂತೆ ಶ್ರೀ ಗಳಗನಾಥರು ಸ್ಕಾಟ್ ರವೀಂದ್ರ ನಾಥರಿಗಿಂತ ದೊಡ್ಡವರಾದರೆ ("greater as a *man* than any Scott or Tagore) ಯಾರಿಗೆ ಆನಂದ ವಾಗದು? ಕನ್ನಡಿಗರಾದ ನಮಗಂತೂ ಮತ್ತಷ್ಟು ಸಂತೋಷ.

ಮಹಾತ್ಮಾಗಾಂಧಿಯಂಥವರ ಮಾಲಿಕೆಯಲ್ಲಿ ಬರುವ ಶ್ರೀ ಮಹಾತ್ಮರು ಕನ್ನಡನಾಡಿನಲ್ಲಿ ಹುಟ್ಟಿದುದಾದರೆ ಭಾಗ್ಯೋದಯವೇ ಸರಿ. ಆದರೆ ಡಾಕ್ಟರ್ ರಾಧಾ... ಅವರ ಅನುಯಾಯಿಗಳೆಂದು ಕರೆಯಿಕೊಳ್ಳುವ ಶ್ರೀ... ಅವರು ಆ ಮಹಾತ್ಮರು ಪದೇ ಪದೇ ಹೇಳುತ್ತಿರುವ ... ಧರ್ಮದ ವಿಶಾಲತತ್ತ್ವಗಳನ್ನು ೧ನೆಯ ವಿಧಾನದಲ್ಲಿ ... ವುದೂ ಕೇವಲ ಕುರುಡನಂಬುಗೆ ಯಾವ ಪ್ರಯೋಜ... ಬಾರದೆಂಬ ಮಾತನ್ನು ಎರಡನೆಯದರಲ್ಲಿ ಮರೆತಿ... ಸ್ವಲ್ಪ ವಿಚಿತ್ರವಾಗಿದೆ.

ಕೊನೆಯ ಮಾತು. ಶ್ರೀ ಶರ್ಮ ಅವರು ಕನ್ನಡದ... ಅಭಿಮಾನವುಳ್ಳವರೆಂಬುದು ಮೊದಲನೆಯ ಭಾಗದಲ್ಲಿ ... ವಾಗಿದೆ. ಇಂತಹರು ಈ ಗ್ರಂಥಕ್ಕೆ ಇಂಗ್ಲಿಷುಭಾಷೆಯ... ಪ್ರಸ್ತಾವನೆಯೊಂದನ್ನೇಕೆ ಜೋಡಿಸಿದರೆಂಬುದು ... ಮಾತಾಗಿದೆ.

—

**ಅನೇಕಾಂತ**:—(ಹಿಂದೀ ಮಾಸಪತ್ರಿಕೆ), ಸಂಪಾದಕ: ಕಿಶೋರ ಮುಖ್ತಾರ, ಅಧಿಷ್ಠಾತ ಸಮಂತ ಭದ್ರಾಶ್ರಮ; ವಾರ್ಷಿಕ ಮೂಲ್ಯ ೪ ರೂ.

೧೯೨೯ನೇ ಜುಲೈ ೨೧ನೇ ತಾರೀಖಿಗೆ 'ಸಮಂತ ಭದ್ರಾಶ್ರಮ'ವೆಂಬ ಜೈನ ಸಂಸ್ಥೆಯು ದಿಲ್ಲಿಯಲ್ಲಿ ಸ್ಥಾಪಿಸಲ್ಪ... ಅದರ ಪರವಾಗಿ ಹೊರಡುವ ಪತ್ರಿಕೆಯಿದು. ಶ್ರೀ... ವೀರನ ಸಂದೇಶವನ್ನುರುಹುವದು, ಜೈನತತ್ತ್ವ... ರಾಷ್ಟ್ರೀಯ ಹಾಗೂ ಮಾನವ್ಯದ ದೃಷ್ಟಿಯಿಂದ ಅ... ಡುವದು ಇವೇ ಮೊದಲಾದವು ಈ ಸಂಸ್ಥೆಯ ಧ್ಯೇಯ... 'ಅನೇಕಾಂತ'ವೆಂಬದು ಜೈನತತ್ತ್ವಜ್ಞಾನದಲ್ಲಿ ಮುಖ್ಯ... ತತ್ತ್ವವು. 'ಅನೇಕಾಂತ'ಕ್ಕೆ ಅಹಿಂಸೆ ಎಂಬ ಸಾಮಾ... ಪರ್ಯಾಯವಾಚಕನಾಮವನ್ನು ಹೇಳಬಹುದು.

ಇದೇ ಮೊದಲ ವರ್ಷದ ಮೊದಲ ಸಂಚಿಕೆ; ... ಎಂದರೆ ನಮ್ಮ ಕಾರ್ತಿಕ ಕೃಷ್ಣಪಕ್ಷದಲ್ಲಿ ಹೊರಟಿದೆ. ಸಾಹಿತ್ಯ ತತ್ತ್ವಜ್ಞಾನಗಳ ವಿಷಯವಾಗಿ ೧೫ ಲೇಖ... ವವು. ಅದರಲ್ಲಿ ಪಂ. ಬಿ. ಶಾಂತಿರಾಜ ಶಾಸ್ತ್ರಿಗಳು **ಮಹಾಕವಿ ರನ್ನ** ಎಂಬ ಲೇಖವೂ ಓದತಕ್ಕಂತಹದು. ಸಮಂತ ಭದ್ರಾಶ್ರಮದಲ್ಲಿ ಶ್ರೀ ವರ್ಧಮಾನ ಹೆಗಡೆ ... ಕನ್ನಡಿಗರೂ ಇದ್ದಾರೆ. ಈ ಆಶ್ರಮದವರು, ಜೈನ...

ಪುರುಷರಾಗಿ ಉಳ್ಳ ನಮ್ಮ ಕರ್ನಾಟಕ ಸಾರಸ್ವತವ ವಿಷಯವಾಗಿ ಪ್ರೇಮ ಅಭಿಮಾನಗಳುಳ್ಳವರಾಗಿದ್ದಾರೆಂಬುದು ಅನ್ನನ ವಿಷಯಕವಾದ ಲೇಖದ ಕೆಳಗೆ ಸಂಪಾದಕರು ಬರೆದಿದ್ದನ್ನೋದಿದರೆ ತಿಳಿಯುವದು. ಕರ್ನಾಟಕ ಜೈನ ಸಾಹಿತ್ಯದ ಹಿಂದೀ ಅನುವಾದ ಮಾಡಿಸುವ ಹೊಣೆಯನ್ನು ತಾವು ಹೊರುವೆವೆಂದೂ ಇದಕ್ಕೆ ಶ್ರೀಮಂತರು ನೆರವಾಗಬೇಕೆಂದೂ ಬರೆದಿದ್ದಾರೆ. ಈ ಮಾತನ್ನು ಕರ್ನಾಟಕದ ಮತ್ತು ಹಿಂದೀಪ್ರಾಂತದ ಶ್ರೀಮಂತರು ಯೋಚಿಸಬೇಕೆಂದು ನಾವು ಸೂಚಿಸುತ್ತೇವೆ. ಹಿಂದೀ ಬಲ್ಲ ಕನ್ನಡಿಗರು ಈ ಪತ್ರಿಕೆಯನ್ನು ಪ್ರೋತ್ಸಾಹಿಸಬೇಕು.

**ಕಲಾಮಂದಿರದ ಹತ್ತನೆಯ ವಾರ್ಷಿಕ ವರದಿ:—** ವ್ಯವಸ್ಥಾಪಕ ಮತ್ತು ಕಾರ್ಯದರ್ಶಿ ಎ. ಎನ್. ಸುಬ್ಬರಾವ್ ಬೆಂಗಳೂರು.

ಹತ್ತುವರ್ಷಗಳಿಂದಲೂ ಸತತ ಪರಿಶ್ರಮದಿಂದ ಶ್ರೀ ಸುಬ್ಬರಾಯರು ಕರ್ನಾಟಕ ಕಲೆಯ ಏಳಿಗೆಗಾಗಿ ಹಗಲಿರುಳೂ ದುಡಿಯುತ್ತಿರುವದು. ಆರ್ಥಿಕ ಕಷ್ಟಗಳಲ್ಲಿಯೂ ಅವರು ಈ ವರ್ಷ ಮಾಡಿದ ಕೆಲಸವು ಮನನೀಯವಾಗಿದೆ. ಕರ್ನಾಟಕಸ್ಥರು ರಾಯರಿಗೆ ಉದಾರಹಸ್ತದಿಂದ ಸಹಾಯಮಾಡಬೇಕು. ಅಂದರೆ ಮನೆಮನೆಗೂ ಒಂದು ಕಲಾಶಾಲೆಯನ್ನು ರಾಯರು ಏರ್ಪಡಿಸಿ ತೋರಿಸುವರು.

**ಕರ್ನಾಟಕ ಧುರೀಣದ ದೀಪಾವಳಿಯ ವಿಶೇಷ ಸಂಚಿಕೆ:—** (ಸಂಚಿಕೆ ೨), ಸಂಪಾದಕ ಶ್ರೀ ಗಣೇಶ ರಾಮಯಾಜಿ, ಕುಮಟೆ ಡಬಲ್‌ರಾಯಲ್ ಪುಟಗಳು ೯೬, ಬೆಲೆ ೧ರೂ.

ಶ್ರೀಯಾಜಿಯವರು ಕರ್ನಾಟಕ ವೃತ್ತ ಪತ್ರಿಕಾ ಪ್ರಪಂಚದಲ್ಲಿ ಪ್ರವೇಶ ಮಾಡಿದಂದಿನಿಂದ ಹೊಸ ಹೊಸದಾಗಿ ಜನ ಮನ ರಂಜನೆಯನ್ನು ಮಾಡುತ್ತಿರುವರು. ಹೋದವರ್ಷದ ಸಂಚಿಕೆಯಂತೆಯೆ ಇದಾದರೂ ಜನಪ್ರಿಯವಾಗುವಂತೆ ಹೊರಟಿದೆ. ೪೬ ಲೇಖಗಳೂ; ೨ ಬಣ್ಣದ ಚಿತ್ರಗಳೂ ೯೦ ಸಾದಾ ಚಿತ್ರಗಳೂ ಸಂಪಾದರ ಪರಿಶ್ರಮಕ್ಕೆ ಸಾಕ್ಷಿಗಳಾಗಿವೆ. ಶ್ರೀ ವೆಂಕಟಸುಬ್ಬಯ್ಯ, ಕಾರಂತ, ರಾಜಪುರೋಹಿತ, ವೆಂಕಟರಾಮಯ್ಯ, ಗೋವಿಂದಪೈ, ಆ ಇವೇಲಿ ಮ್ಯಾಥ್ಯೂ, ಭಾಗ್ವತ, ವಾಳ್ವೇಕರ, ಸಾಲಿ, ಗಣಪತಿರಾವ್ ಐಗಳ್, ಶೇಷಾದ್ರಿಶರ್ಮ, ಮಹಿಷಿ, ಮಂಗಳವೇಢೆ. ಮೊದಲಾದವರ ಲೇಖಗಳೂ ಶ್ರೀ ಪುಟ್ಟಪ್ಪ ದೇಸಾಯಿ ಮೊದಲಾದ ಕವಿತೆಗಳೂ ವಾಚನೀಯವಾಗಿವೆ. ಇಲ್ಲಿ ಕೊಟ್ಟಂಥ ಚಿತ್ರಗಳಿಗೆಲ್ಲಾ ಸಾಕಷ್ಟು ಪರಿಚಯವನ್ನೂ ಜೋಡಿಸಿದ್ದರೆ ಇದಕ್ಕೂ ಒಳಿತಾಗುತ್ತಿತ್ತು. ಅದಿರಲಿ ವಾಚನಾಭಿರುಚಿಯಿದ್ದವರೆಲ್ಲರೂ ಇದನ್ನು ಓದದೆ ಬಿಡಬಾರದೆಂದು ನಮ್ಮ ಆಗ್ರಹವು.

**ವಿಚಾರತರಂಗಿಣಿ:—** ಎಂಬ ಕನ್ನಡ ಮಾಸಪತ್ರಿಕೆ, ಸಂಪಾದಕ ಮತ್ತು ಪ್ರಕಾಶಕ ಟಿ. ಚಿದಂಬರ ಪಂಡಿತ, ಚಿಕ್ಕಮಗಳೂರು; ವಾರ್ಷಿಕಚಂದಾ ೨-೮-೦ ಪೋಷಕರಿಗೆ ೫ ರೂ.

ಮೊದಲು ಹೊರಡುತ್ತಿದ್ದ 'ಕಥಾ ಸರಿತ್ಸಾಗರ' ಎಂಬ ಮಾಸಪತ್ರಿಕೆಯೇ ಈಗ ಈ ಹೆಸರನ್ನು ತಾಳಿದೆ. ಬರೀ ಕಥಾಭಾಗಕ್ಕಿಂತ ನಿತ್ಯವೂ ಅತ್ಯಾವಶ್ಯಕವಾದ ಆರೋಗ್ಯ ಮತ್ತು ಇತರ ಲೋಕಹಿತಕರವಾದ ವಿಷಯಗಳನ್ನೂ ಚರ್ಚಿಸಲು ಹೊಸ ನಾಮರೂಪಗಳೊಂದಿಗೆ ಬಂದ ಈ ಪತ್ರಿಕೆಗೆ ಸುಸ್ವಾಗತವು.

## ಸ್ವೀಕಾರ

Description of the City of Vijayanagar
The Result of the years Shukla and Pramoduta
The Astrological Mirror
} By B. Suryanarain Row, B. A., M R., A. S: F. R. H. S. etc.

ಶಿವಾದ್ವೈತ ದರ್ಪಣ: — ಶ್ರೀ ಪೂಜ್ಯಪಾದ ನೀಲಕಂಠ ಶಿವಾಚಾರ್ಯರು, ಪೂನಲ್ಲಿ ಪಂಚವರ್ಣ ಬೃಹನ್ಮಠದಿಂದ

ರಘುವಂಶ (೧ನೆಯ ಸರ್ಗ):—ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಬೆಂಗಳೂರು ಸಿಟಿ

ರಹಸ್ಯೋಪದೇಶ:—ಶ್ರೀ ವೈ. ಸುಬ್ಬರಾವ್, „ „

ಪತಿವ್ರತೆ:— ವೆಂಕಟೇಶ ನರಸಿಂಗರಾವ ತಲವಾಯಿ, ಹೆಬ್ಬಳ್ಳಿ

ದೇವೀ ಜಾತ್ರೆಗಳಲ್ಲಿ ಪ್ರಾಣಿಬಲಿನಿಷೇಧ:—ಶ್ರೀ ಐನಕೈ ವೆಂಕಟಸುಬ್ಬಯ್ಯನವರು (ದಾವಣಗೆರೆ)

ಶ್ರೀಮದನಂತ ರಾಷ್ಟ್ರೀಯ ಪಾಠಶಾಳೆಯ ವರದಿ ( ಪೆರಡೂರು )

# ಪ್ರಪಂಚ ಪರಿಚಯ

## ನಾವು ನೀತಿವಂತರು, ಪಾಶ್ಚಾತ್ಯರು ಪಾಪಕರ್ಮಿಗಳು !

ಈ ಬಗ್ಗೆ ಶ್ರೀರಾಮ ನಿರೀಕ್ಷಣಸಿಂಹ M. A. ಕಾವ್ಯತೀರ್ಥರು ಹೀಗೆ ಬರೆದಿದ್ದಾರೆ.

ನಾವು ನಾಮಮಾತ್ರಕ್ಕೆ ರಾಮಕೃಷ್ಣರ ವಂಶಜರು. ದಿನಾಲು ಅವರ ಭಜನೆ ಮಾಡುವವರು. ಆದರೆ ಅವರ ಗುಣವನ್ನು ಮತ್ತು ಕೃತ್ಯವನ್ನು ವ್ಯಾವಹಾರಿಕ ಜೀವನದಲ್ಲಿ ನಮ್ಮ ಆಚರಣೆಯಲ್ಲಿ ತರುವದಿಲ್ಲ. ಶ್ರೀರಾಮಚಂದ್ರನು ತನ್ನ ತಮ್ಮ ಭರತನಿಗಾಗಿ ರಾಜ್ಯ ಬಿಟ್ಟು ಅರಣ್ಯ ಸೇರಿದನು. ಆದರೆ ನಾವು ಈಗ ಒಂದು ಕಾಸಿಗಾಗಿ ಅಣ್ಣತಮ್ಮಂದಿರ ಕೂಡ ಬಡಿದಾಡುತ್ತೇವೆ. ಕಚೇರಿ ಕಟ್ಟೆ ಹತ್ತುತ್ತೇವೆ. ಶ್ರೀಕೃಷ್ಣನು ಸ್ವತಃ ಗೋಗಳನ್ನು ಕಾಯ್ದು ಗೋಸೇವೆಯ ಶಿಕ್ಷಣವನ್ನಿತ್ತರೂ ನಾವು ಆಕಳುಗಳನ್ನು ನಮ್ಮ ಗೇಣು ಹೊಟ್ಟೆಗಾಗಿ ಕಟಕರಿಗೆ ಮಾರುತ್ತೇವೆ. ತಿಂಗಳಿಗೊಮ್ಮೆ ಸತ್ಯನಾರಾಯಣನ ಪೂಜೆ ಮಾಡಿದರೂ ದಿನಾಲು ಅಸತ್ಯನಾರಾಯಣನ ಉಪಾಸನೆ ಮಾಡುವದನ್ನು ಬಿಡಲು ಆಗುವದಿಲ್ಲ. ಸುಳ್ಳು ಖಟ್ಲೆ ಗೆದಿಯಲಿಕ್ಕೆ ಸಹ ಸತ್ಯನಾರಾಯಣನ ಪೂಜೆ! ಅಂದಮೇಲೆ ಇಂಥವರು ಪರಾಧೀನತೆಯಲ್ಲಿ ಬಿದ್ದು ಹೊರಳಾಡುತ್ತಿರುವರೆಂದರೇನು ಆಶ್ಚರ್ಯ ?

ನಮ್ಮಲ್ಲಿ ಉಳಿದಿದ್ದ ಅಲ್ಪ ಸ್ವಲ್ಪ ಸದ್ಗುಣಗಳನ್ನೂ, ವಿದೇಶೀಯರು ನಮ್ಮನ್ನು ಪರಾಧೀನ ಮಾಡಿ ಹೊಡೆದೋಡಿಸಲು ಹೋರಾಡಿದರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ ! ವಿದೇಶೀಯರ ಸಂಸರ್ಗದಿಂದ ಏನಾದದ್ದು ಆಗಿಹೋಯಿತು ಬಿಡಿ. ಅವರು ನಮ್ಮ ಧಾರ್ಮಿಕ ಗ್ರಂಥಗಳನ್ನೆಲ್ಲ ಅಗ್ನಿನಾರಾಯಣ ವಶಕ್ಕೆ ಒಪ್ಪಿಸಿದರು. ಅಲ್ಲದೇ ಖಡ್ಗದ ಹೆದರಿಕೆ ಹಾಕಿದರು. ಇದರಿಂದ ನಾವು ಹೆದರಿ ಧರ್ಮದ ಹೆಸರಿನಿಂದ ಕದ್ದುಮುಚ್ಚಿ ಕರ್ಮಮಾಡಹತ್ತಿದೆವು. ಇದರಿಂದ ಕದ್ದುಮುಚ್ಚಿ ಮಾಡುವ ಅಭ್ಯಾಸವು ದಿನೇದಿನೇ ಬೆಳೆಯಹತ್ತಿತು. ಹೆಸರಿಗೆ ಧರ್ಮ; ನಿಜವಾಗಿ ಪಾಪಕರ್ಮಕ್ಕೆ ಆರಂಭವಾಯಿತು. ಬರಬರುತ್ತ ಇದು ಜಾತೀಯ ಸ್ವಭಾವದ ಒಂದಂಗವಾಗಿ ಸಮಾಜ... ನಾಶಮಾಡಲು ಆರಂಭಿಸಿತು.

ಸ್ವತಂತ್ರ ದೇಶಗಳ ಜನರು ಪಾಪಕರ್ಮಗಳನ್ನು ಪ್ರಾ... ಪ್ರಕಟರೂಪವಾಗಿ ಮಾಡುತ್ತಾರೆ. ಇದಕ್ಕಾಗಿ ಯು... ಮತ್ತು ಅಮೇರಿಕೆಗಳ ದೈನಿಕಚರ್ಯೆಗಳನ್ನು ನೋಡಿರಿ. ...ದ್ದರೂ ಇಂದು ಅವರ ಸಾಮಾಜಿಕ ಜೀವನವು ನೈತಿಕ...ಯಿಂದ ಭಾರತಕ್ಕಿಂತ ಎಷ್ಟೋ ಕೀಳು ಇದೆಯೆಂದು ... ನಿತ್ಯ ಗುಪ್ತಾಚರಣಕ್ಕಿಂತ ಪ್ರಕಟವಾಗಿ ಪಾಪಕರ್ಮ ಮಾ... ಸ್ವತಂತ್ರತೆ ಇರುವದು ಪ್ರತಿಯೊಂದು ಜಾತಿಯ ಭವಿಷ್ಯ...ಗಾಗಿ ಹೆಚ್ಚು ಶ್ರೇಯಸ್ಕರವು; ಏಕೆಂದರೆ ಪ್ರಕಟವಾಗಿ ಮಾ... ಪಾಪಕರ್ಮಗಳನ್ನು ಸುಧಾರಿಸುವದು ಹಗುರು. ನಮ್ಮ ಸ...ಜದಲ್ಲಿ ಸತ್ಯಕ್ಕೆ ಆಡಂಬರವೇ ಹೆಚ್ಚಾಗಿದೆ. ಯಾವ ಮನು... ಸ್ವತಃ ದಿನಾಲು ಯಾವ ಪಾಪ ಮಾಡುವನೋ ಅದಕ್ಕಾ... ಎರಡನೆಯವರಿಗೆ ಪ್ರಾಯಶ್ಚಿತ್ತದ ವ್ಯವಸ್ಥೆ ಮಾಡಲು ... ಸ್ವಲ್ಪ ಸಹ ಹಿಂದುಮುಂದು ನೋಡುವದಿಲ್ಲ! ಪರತಂತ್ರ...ರುವ ದೇಶದ ಜನರು ತಮ್ಮ ನಾಡನ್ನು ತಮ್ಮದೆಂದು ತಿಳಿ... ಮರೆತುಬಿಡುವರು. ಅಲ್ಲದೆ ಕ್ರೂರ ಕೃತ್ಯಗಳನ್ನು ಮಾ... ಅವರಿಗೆ ಕೇವಲ ವಿದೇಶೀಯರ ಭಯವೇ ಇರುತ್ತದೆ! ... ವಾಸಿಗಳೆಲ್ಲರೂ ಭಾರತವರ್ಷವು ತಮ್ಮದೆಂಬುದನ್ನು ...ದ್ದಾರೆ. ಅವರಿಗೆ ಕಳವು ಮಾಡಲು ಯಾರಾದರೂ ... ಬಂದರೆ ಅದು ಇಂಗ್ಲೀಷರದು ! ನೆರೆಹೊರೆಯ ಹೆಣ್ಣು... ಮೇಲೆ ಅತ್ಯಾಚಾರ ಮಾಡಲು ಹೆದರಿಕೆ ಬಂದರೆ ಅದು ಇ...ಷರದು. ಹೀಗೆ ಆವುದೇ ಕೆಟ್ಟ ಕೆಲಸ ಮಾಡಲು ... ಬಂದರೆ ಅದು ಇಂಗ್ಲೀಷರದೇ; ವಿನಾ ತಮ್ಮ ನಾಡಿನವ...

ಈ ಮನೋವೃತ್ತಿಯ ಸ್ವಾಭಾವಿಕ ಪರಿಣಾಮ ಹೀಗಾ... ಭಾರತೀಯರಿಗೆ ತಮ್ಮಲ್ಲಿದ್ದ ದೃಢವಿಶ್ವಾಸ ಕಡಿಮೆಯಾ... ಇಂದು ದೇಶದಲ್ಲಿ ಎಷ್ಟೋ ಸುಧಾರಕ ಸಮಿತಿಗಳು, ಸಂಸ್ಥೆ... ಕೆಲಸ ಮಾಡುತ್ತಿದ್ದರೂ ಆವುದರಲ್ಲಿಯೂ ತಥ್ಯಾಂಶವ...ಸವು ಕಂಡುಬರುವದಿಲ್ಲ. ಸಾರ್ವಜನಿಕ ಜೀವನ ( Pu... Morality ) ದ ದಿವಾಳಿಯೇ ಹೊರಟಿದೆ. ಇಂಥ ಸ್ಥಿ...

ಭಾರತದ ಏಳ್ಗೆ ಬಯಸುವ ಭಾರತೀಯರ ಕಾರ್ಯವು ಎಷ್ಟೊಂದು ಕಠಿನವಾಗಿರುವದೆಂದು ಹೇಳಬೇಕು! ಆದರೂ ಭಾರತವನ್ನು ಎತ್ತಿ ಹಿಡಿಯುವದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ. ಇದಕ್ಕಾಗಿ ಭಗೀರಥ ಪ್ರಯತ್ನ ಬೇಕು; ಭೀಷ್ಮ ಪ್ರತಿಜ್ಞೆ ಬೇಕು.

—ತ್ಯಾಗಭೂಮಿ (ಹಿಂದಿ)

## ಅಖಿಲ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ಸಮ್ಮೇಲನ

ಪ್ರತಿ ಎರಡು ವರುಷಕ್ಕೊಮ್ಮೆ ಈ ಸಮ್ಮೇಲನವು ಕೂಡುವುದು. ಇದು ಈಗ ೩ನೆಯ ಸಮ್ಮೇಲನ. ಜಿನಿವಾದಲ್ಲಿ ಜುಲೈ ೨೫ ರಿಂದ ಆಕ್ಟೋಬರ ೩ನೆಯ ತಾ. ನವರೆಗೆ ಸೇರಿತ್ತು. ೧೨೦೦ ಪ್ರತಿನಿಧಿಗಳು ಬೇರೆ ಬೇರೆ ರಾಷ್ಟ್ರಗಳಿಂದ ಬಂದಿದ್ದರು. ಒಳ್ಳೆ ಉದ್ಬೋಧಕವಾದ ಪ್ರದರ್ಶನವೊಂದು ವಿರಚಿಸಲ್ಪಟ್ಟಿತ್ತು. ಹಿಂದೂ ದೇಶದ ೧೬ ಪ್ರತಿನಿಧಿಗಳು ಇದ್ದರು. ಕಾಶಿ, ಲಕನೌ, ಅಲಹಾಬಾದ, ಮುಂಬೈ, ಪುಣೆ, ಹೈದ್ರಾಬಾದ, ಬೆಂಗಳೂರು, ನೀಲಗಿರಿ ಮಂಗಳೂರು ಮೊದಲಾದ ಸ್ಥಳಗಳ ಶಿಕ್ಷಣ ಸಂಸ್ಥೆಯ ಪ್ರತಿನಿಧಿಗಳು ಅವರಲ್ಲಿದ್ದರು. ಇವರಲ್ಲಿ ಕರ್ನಾಟಕ ಭಾಗದವರೆಂದರೆ ಮಂಗಳೂರಿನ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಬೆಂಗಳೂರಿನ ಕೇ. ಆರ್. ರಾಮಸ್ವಾಮಿ ಅವರು, ನೀಲಗಿರಿ ಗುರುಕುಲಾಶ್ರಮದ ಶ್ರೀ. ಪಿ. ನಟರಾಜನ್ ಅವರು.

೧೯೩೦ರಲ್ಲಿ ಏಶಿಯಾ ವಿಭಾಗದ ಸಮ್ಮೇಲನವು ಕಾಶೀ ಪಟ್ಟಣದಲ್ಲಿ ನೆರೆಯುತಕ್ಕುದಿದೆ. ಆಗ ಅಖಿಲ ರಾಷ್ಟ್ರೀಯ ಶಿ. ಸಂ. ಸ. ಕ್ಕೆ ಹಿಂದೀ ಪ್ರತಿನಿಧಿಗಳನ್ನು ಇದಕ್ಕೂ ಹೆಚ್ಚು ತಕ್ಕೊಳ್ಳುವ ಬಗ್ಗೆ ವಿಚಾರವು ಆಗತಕ್ಕದ್ದಿದೆ.

## ಶ್ರೀ ಹೊಸಕೊಪ್ಪ ಕೃಷ್ಣಶಾಸ್ತ್ರಿಗಳು ಮಾಡಿದ ಸಂಶೋಧನ ಕಾರ್ಯವು

ಕನ್ನಡಿಗರಲ್ಲಿ ಅನೇಕ ವಿದ್ವನ್ಮಣಿಗಳು ಇದ್ದರೂ ಅವರ ಕಾರ್ಯದ ಕಲ್ಪನೆಯು ಉಳಿದ ಕರ್ನಾಟಕಸ್ಥರಿಗೆ ಇಲ್ಲದಿರುವುದರಿಂದ ಅಭಿಮಾನಶೂನ್ಯತೆಯು . ನಮ್ಮಲ್ಲಿ ವಾಸಮಾಡಿದೆ. ಇದನ್ನು ಹೋಗಲಾಡಿಸಲಿಕ್ಕೆ ನಮ್ಮ ಮಹಾಜನರ ಪರಿಚಯ ಮಾಡಿ ಕೊಡುವುದೂ ಒಂದು ಉಪಾಯವಾಗಿದೆ. ವೈ. ವಾ. ಹೊ. ಕೃಷ್ಣರಾಯರು ಹಿಂದುಸ್ತಾನ ಸರಕಾರದ ಪ್ರಾಚೀನ ಲಿಪಿಅನ್ವೇಷಣ ಖಾತೆಯ ಮುಖ್ಯಾಧಿಕಾರಿಗಳಾಗಿ ಕರ್ನಾಟಕಕ್ಕೆ ಕೀರ್ತಿತಂದರು. ಅವರು ಮಾಡಿದ ಸಂಶೋಧನ ಕಾರ್ಯದ ಪಟ್ಟಿಯು ಇದರಡಿಯಲ್ಲಿದೆ.

೧. ಸಂಗಮದೇವ; ೨ ವೆಂಕಟ; ೩ ಸೋಮೇಶ್ವರದೇವ; ೪ ವೀರಗೌಡ(ಪಿಠಾಪುರಂ); ೫ ರಾಜಾಧಿರಾಜನ ಶಾಸನ; ೬ ನರಹರಿ ತೀರ್ಥರ ಶಾಸನ; ೭ ಭೈರವನ ಶಾಸನ, ಕಾರಕಳ; ೮ ಪ್ರೋಲನ ಶಾಸನ; ೯ ನೊಳಂಬರ ಶಾಸನ; ೧೦ ಶ್ರೀ ವಿಜಯು ಶಾಸನ; ೧೧ ಪುಣ್ಯಕುಮಾರನ ತಾಮ್ರಪಟ; ೧೨ ಪಲ್ಲವರ ತಾಮ್ರಪಟ; ೧೩ ನೆಡುಂಜ ಡೈಯನ ಶಾಸನ; ೧೪ ರಾಜಸಿಂಹನ ಶಾಸನ; ೧೫ ಚಂಡ ಶಾಸ್ತ್ರಿಯು ಕಲ್ಲುಬರೆಹ.

ಅಲ್ಲದೆ ೧೦ ವರುಷದ ತಮ್ಮ ಖಾತೆಯ ವರದಿಗಳು (೧೯೧೯. ೧೯). ದಕ್ಷಿಣ ಹಿಂದುಸ್ತಾನದ ದೇವತೆಗಳೆಂಬ ಸುಂದರವಾದ ಮಹತ್ವದ ಗ್ರಂಥವು ೧೯೧೬ರಲ್ಲಿ ಬರೆಯಲ್ಪಟ್ಟಿತು. ವಿಜಯನಗರ ಮತ್ತು ಹೊಯಸಳರ ಕಾಲದ ಮೇಲೆ ಮಹತ್ವದ ಲೇಖಗಳು; ಡಾ. ಥಾಮಸ ಎಂಬವರೊಡನೆ ಎಪಿ. ಇಂಡಿಕಾ ಮಾಸಪತ್ರಿಕೆಯನ್ನು ನಡಿಸಿದರು. ಸ್ವತಂತ್ರವಾಗಿ ಒಬ್ಬರೇ ಹಲವುದಿನ ಸಂಪಾದಕರಾಗಿದ್ದರು. ಅಶೋಕನ ಮಸ್ಕಿ ಎಂಬಲ್ಲಿ ಶಾಸನದ ಬಗ್ಗೆ ಪ್ರಮಾಣಭೂತವಾದ ಲೇಖ ಬರೆದರು. ಪಲ್ಲವರಾಜರ ಮೂರ್ತಿ ಮತ್ತು ಅವರ ೫ ಶಾಸನಗಳ ವಿಚಾರದಲ್ಲಿ ಮಹತ್ವದ ವಿಚಾರಗಳನ್ನು ಪ್ರಕಟಿಸಿದರು.

—ಎಪಿಗ್ರಾಫಿಯಾ ಇಂಡಿಕಾ

## ಮನುಷ್ಯನಿಂದ ಮಹತ್ಕಾರ್ಯಗಳಾಗುವ ವಯಸ್ಸು ಆವುದು ?

ಮಿ. ರೋಸೆ A. B., M. D. ಎಂಬ ಅಮೇರಿಕೆಯ ಡಾಕ್ಟರರು ತಮ್ಮ ಲೇಖದಲ್ಲಿ ಹೀಗೆ ಬರೆದಿದ್ದಾರೆ.

"ಮನುಷ್ಯನಿಂದ ಸರಾಸರಿ ೫೦ನೆಯ ವರುಷದ ವಯಸ್ಸಿಗೆ ಮಹತ್ಕಾರ್ಯಗಳಾಗುತ್ತವೆಂದು ಡೋರಲಾಂಡನೆಂಬವನು ಹೇಳುತ್ತಾನೆ. ೬೦ಕ್ಕಿಂತ ಹೆಚ್ಚು ಬಾಳಿದವರ ಎಣಿಕೆ ಮಾಡಿ ೬೭ ನೆಯ ವಯಸ್ಸು ಮಹತ್ಕಾರ್ಯದ್ದೆಂದು ನನ್ನ ಅಭಿಪ್ರಾಯವಾಗಿದೆ. ವೆರಡಿ ಎಂಬವನು ತನ್ನ ಎರಡು ಸರ್ವೋ

ತ್ಕೃಷ್ಟ ನಾಟಕಗಳನ್ನು ೭೪ ಮತ್ತು ೮೦ನೆಯ ವಯಸ್ಸಿಗೆ ಬರೆದನು. ಮೈಕೇಲಅಂಗೇಲೊನು ಜಗತ್ತನ್ನೆ ಬೆರಗುಗೊಳಿಸುವ ಶಿಲ್ಪಕಾರ್ಯಗಳನ್ನು ೬೬ ಮತ್ತು ೮೯ನೆಯ ವರುಷ ನೆರವೇರಿಸಿದನು. ಎಡಿಸನ್ನನು ತನ್ನ ೮೨ನೆಯ ವರುಷದ ಇಳಿವಯಸ್ಸಿನಲ್ಲಿ ರಾಸಾಯನಿಕ ರೀತಿಯಿಂದ ರಬ್ಬರವನ್ನು ಸಿದ್ಧಪಡಿಸುವ ಯುಕ್ತಿಯನ್ನು ಹುಡುಕುತ್ತಲಿದ್ದಾನೆ. ಹೆನರಿಫೋರ್ಡನು ತನ್ನ ೬೫ನೆಯ ವರುಷಕ್ಕೆ 'ಫೋರ್ಡ' ಮೋಟಾರಗಾಡಿಗಳ ಪ್ರಚಾರ ಮಾಡಿದನು. ಈಗ ಇದಕ್ಕೂ (ಹಗುರಾದ ಮತ್ತು ಸ್ವಲ್ಪ ಬೆಲೆಯ) ಹೆಚ್ಚಿನ ಮೋಟಾರುಗಳನ್ನು ಜಗತ್ತಿಗೆ ಕೊಡಬೇಕೆಂದು ಅವನು ಹಂಚಿಕೆ ಹಾಕುತ್ತಿದ್ದಾನೆ. ಆದುದರಿಂದ ವೈಮನಸಗಳು ಆರೋಗ್ಯದಿಂದ ಇರುವವನು ೫೦ರಿಂದ ೭೦ ಅಥವಾ ಅವಕ್ಕೂ ಮುಂದಿನ ಪರಿಪಕ್ವವಾದ ಸ್ಥಿತಿಯಲ್ಲಿಯೇ ಆಯುಷ್ಯದ ಮಹತ್ಕಾರ್ಯಗಳನ್ನು ಮಾಡಬಲ್ಲನು.

—ಮೆಡಿಕಲ್ ರಿವ್ಯೂಆಫ್ ರಿವ್ಯೂ (ನ್ಯೂಯಾರ್ಕ)

(ಶ್ರೀಕೃಷ್ಣ, ಭೀಷ್ಮ, ಅರ್ಜುನಾದಿಗಳು ಭಾರತೀಯ ಯುದ್ಧದ ಕಾಲಕ್ಕೆ ೬೦ರ ಮನೆಯನ್ನು ದಾಟಿದ್ದರೆಂಬ ಮಾತೂ ಇದಕ್ಕೆ ಪುಷ್ಟಿಕರವಾಗಿದೆ. ಸಂ. ಜ. ಕ.)

---

## ಬಂಗಾಳದ ಹೈಸ್ಕೂಲುಗಳಲ್ಲಿ ಸಂಗೀತ ಶಿಕ್ಷಣ

ಈಗ ಕೆಲದಿನಗಳಿಂದ ಹೈಸ್ಕೂಲುಗಳಲ್ಲಿ (ಬಂಗಾಳದೊಳಗೆ) ಗಾಯನವನ್ನು ಕಲಿಸಬೇಕೆ? ಎಂಬ ಬಗ್ಗೆ ವಿಚಾರವು ನಡೆದಿತ್ತು. ಅದೀಗ ನಿಶ್ಚಿತಸ್ವರೂಪಗೊಂಡಿತು. ಇಡೀ ಹಿಂದುಸ್ಥಾನದ ಸಂಗೀತಜ್ಞರಿಂದ ಅಭಿಪ್ರಾಯಗಳನ್ನು ತರಿಸಿ ಡೈರೆಕ್ಟರರು ಹೋದ ವರುಷ ಒಂದು ಪರಿಷತ್ತನ್ನು ಕರೆದಿದ್ದರು. ಶಾಲೆಯಲ್ಲಿ ಆವ ಕ್ರಮದಿಂದ ಸಂಗೀತವನ್ನು ಕಲಿಸಬೇಕೆಂಬ ಬಗ್ಗೆ ಯೋಜನೆಯು ನಿಶ್ಚಿತವಾಗಿದೆ. ಇಯತ್ತೆಗಳ ತರಗತಿಗಳು ಗೊತ್ತಾಗಿವೆ. ಅಲ್ಲಿ ಕಲಿಸತಕ್ಕ ಹಿಂದುಸ್ಥಾನಿ ಹಾಡುಗಳನ್ನೂ ನಿರ್ಣಯಿಸಿದ್ದಾಗಿದೆ. ಹೈಸ್ಕೂಲುಗಳಲ್ಲಿ ಸಂಗೀತ ಕಲಿಸಲು ಶಿಕ್ಷಕರನ್ನು ತಯಾರಿಸುವುದಕ್ಕಾಗಿ ಒಂದಾಗಲಿ, ಎರಡಾಗಲಿ ಟ್ರೇನಿಂಗಸ್ಕೂಲು ತೆಗೆಯಬೇಕೆಂದು ಗೊತ್ತಾಗಿದೆ. ಈ ಟ್ರೇನಿಂಗ ಸ್ಕೂಲುಗಳ ಅಭ್ಯಾಸಕ್ರಮವೂ ಗೊತ್ತುಮಾಡಲ್ಪಟ್ಟಿದೆ. ಇಲ್ಲಿ ಕಲಿಸಲು ಹಿಂದುಸ್ಥಾನಿ ಸಂಗೀತದಲ್ಲಿ ನಿಷ್ಣಾತರಾದವರನ್ನು ನಿಯಮಿಸುವುದು ಗೊತ್ತಾಗಿದೆ. ಬಂಗಾಲದ ಪ್ರತಿ ಶಿಕ್ಷಣ ಖಾತೆಗೆ ಕಾಲಕಾಲಕ್ಕೆ ತಕ್ಕ ಸಲಹೆಗಳನ್ನು ಕೊಡಲು ಸಂಗೀತಜ್ಞರ ಮಂಡಳವು ಸ್ಥಾಪಿಸಲ್ಪಟ್ಟಿದೆ. ಹೀಗೆ ಶಿಕ್ಷಣವು ಆರಂಭಿಸಲ್ಪಟ್ಟರೆ ಸರಕಾರಕ್ಕೆ ಪ್ರತಿವರುಷ ರೂ. ಗಳಿಗಿಂತ ಹೆಚ್ಚು ಖರ್ಚು ಬರಲಾರದೆಂದು ಮಾಡಲ್ಪಟ್ಟಿದೆ.



— ಕಾಲೇಜ...

## ಹಾಲಿನ ಮಹತ್ತ್ವ

ಆಹಾರ ಪದಾರ್ಥಗಳಲ್ಲಿ ಇದಕ್ಕೆ ಸರಿಯಾದುದು ಇಲ್ಲ. ಬಸುರು ಹೆಂಗುಸರಿಗಂತೂ ಇದು ತ್ಕೃಷ್ಟ. ಏಕೆಂದರೆ ತಾಯಿಗೂ ಗರ್ಭಸ್ಥ ಶಿಶುವಿಗೂ ಣೆಗೆ ಅವಶ್ಯವಾದ ಎಲ್ಲ ಪದಾರ್ಥಗಳೂ ಅದರಲ್ಲಿ ಹಾಲಿನಲ್ಲಿ ಹೊಸ ಶೋಧದಿಂದ ಕಂಡುಹಿಡಿದ ಜೀವಸ ವ್ಹಿಟಾಮಿನ್ ಎ, ಬಿ, ಸಿ, ಡಿ ಎಂಬ ಎಲ್ಲ ಬಗೆಗಳ ಸುಣ್ಣದ ಅಂಶವು ಉಳಿದ ಎಲ್ಲ ಆಹಾರ ಪದಾರ್ಥಗಳಿ ಇದರಲ್ಲಿ ಹೆಚ್ಚಾಗಿದೆ. ಈ ಅಂಶವು ಗರ್ಭಾಶಯದ ಕೋಮಲಶರೀರಿಯ ಅಸ್ತಿಗಳ ಸಿದ್ಧತೆಗೆ ಅತ್ಯಂತ ಉಪ ವಾಗಿದೆ. ಈ ಸುಣ್ಣದಂಶವು ಶರೀರದೊಳಗಿನ ಪ್ರತಿ ವಿಭಾಗಕ್ಕೂ ಅತ್ಯವಶ್ಯವಾಗಿದೆಯೆಂದು ಮೊನ್ನೆ ಮೊ ಯೋಗವಾಗಿ ಮನಗಂಡಿದ್ದಾರೆ. ಆದುದರಿಂದ ಪ್ರತಿ ರಿಗೂ ಹಾಲು ಎಷ್ಟೊಂದು ಅತ್ಯಾವಶ್ಯಕವೆಂದು ಹೇಳಬೇ

— ನುಟ್ರಿಶನ್ (...

## ಪ್ರಳಯಕಾಲದ ಭಿನ್ನ ಭಿನ್ನ ಕಲ್ಪನೆಗಳು

ಡಾ. ಜೀನ್ಸನೆಂಬ ಜಗದ್ವಿಖ್ಯಾತ ಶಾಸ್ತ್ರಜ್ಞನು ಹೇ ನಂದರೆ:—"ಜಗತ್ತಿನ ಅಂತ್ಯವು ಹೇಗೆ ಆಗುವುದೆಂಬ ಕಟ್ಟಕಡೆಯ ಸ್ಥಿತಿಯವರೆಗಿನ ಲೆಕ್ಕವನ್ನೂ ಮಾಡಿ ವುದು ಸಾಧ್ಯವಿದೆ. ಪ್ರಲಯವಾದ ಬಳಿಕ ಸೂರ್ಯಪ್ರ ವಿಲ್ಲ; ಚಿಕ್ಕೆಗಳ ಬೆಳಕಿಲ್ಲ. ವಿಶ್ವದ ಅಂತರಾಳದಲ್ಲೆಲ್ಲ ಕೊಂಡ ಪ್ರಶಾಂತವಾದ ಒಂದು ಹೊಳಪು ಇರು ಇದಕ್ಕೆ ತತ್ವಜ್ಞಾನಿಗಳು ಮೂಲಪ್ರಕೃತಿಯೆಂದು ಕರೆಯು

ಇಂತು ಪ್ರಲಯವಾದ ಬಳಿಕ ಮತ್ತೆ ಸೃಷ್ಟಿನಿರ್ಮಾ ಆರಂಭವಾಗುವ ಸಂಭವವಿಲ್ಲವೆಂದು ಡಾ. ಜೀನ್ಸನು ಹೇ ಇನ್ನೊಂದು ಕಡೆಗೆ ಪ್ರಲಯವಾದ ಬಳಿಕ ತದ್ವಿರುದ್ಧ

ಆರಂಭವಾಗಲೂಬಹುದು ಎಂದೆನ್ನುತ್ತಾನೆ. ಶಾಸ್ತ್ರಜ್ಞರಲ್ಲಿ ಈ ವಿಷಯಕ್ಕೆ ಮತಭೇದಗಳಿವೆ. ಸರ್. ಆಲಿವ್ಹರ ಲೋಜ್‌ನು ಸೃಷ್ಟಿನಿರ್ಮಾಣವಾಗಲಾರಂಭಿಸುವುದೆಂಬ ಅಭಿಪ್ರಾಯವವನಿದ್ದಾನೆ. ಆದರೆ ಡಾ. ಜೀನ್ಸನು ತನ್ನ ಗ್ರಂಥದ ಕೊನೆಗೆ ಹೇಳಿದ ಮಾತುಗಳು ವೇದಾಂತದ ಪ್ರತಿಪಾದನಕ್ಕೆ ತೀರಸಮೀಪವಾಗಿದೆ "ಈ ವಿಶ್ವವು ಒಂದು ಕನಸಿನಂತೆ ಇರುವ ಸಂಭವವಿದೆ. ಸೃಷ್ಟಿ ನಿರ್ಮಾಣ ಮತ್ತು ಇದರ ಪ್ರಲಯಗಳು ಬರಿ ನಮ್ಮ ಕಲ್ಪನೆಗಳೆ ಮಾತ್ರವಲ್ಲದೆ ಅಲ್ಲಿ ಮತ್ತೇನೂ ಇಲ್ಲ."

ನಮ್ಮ ಶಾಸ್ತ್ರಗಳಲ್ಲಿ ನಾಲ್ಕುಪ್ರಕಾರದ ಪ್ರಲಯಗಳನ್ನು ಹೇಳಿದ್ದಾರೆ; (೧) ನಿತ್ಯ (೨) ನೈಮಿತ್ತಿಕ (೩) ಪ್ರಾಕೃತ (೪) ಆತ್ಯಂತಿಕ ಗಾಢನಿದ್ರೆಯಲ್ಲಿದ್ದಾಗ ಮನುಷ್ಯನಿಗೆ ಈ ಜಗತ್ತಿನ ಪ್ರಳಯವಾದಂತೆ ಭಾಸವಾಗುವುದು; ಅದಕ್ಕೆ ನಿತ್ಯ ಪ್ರಲಯುವೆಂಬ ಸಂಜ್ಞೆ. ದಿನದ ಕೊನೆಗೆ ಕಾರ್ಯಬ್ರಹ್ಮದ ಪ್ರಲಯವಾಗುವುದಕ್ಕೆ ನೈಮಿತ್ತಿಕವೆಂಬ ಹೆಸರು. ಇದರ ಉಲ್ಲೇಖವು ಮನುಸಂಹಿತೆ, ಪುರಾಣಗಳಲ್ಲಿದೆ; ಇವುಗಳು ಆಷ್ಟೊಂದು ಮಹತ್ವದವಿಲ್ಲ. ಆದರೆ ಉಳಿದೆರಡು ಮಾತ್ರ ಆಧುನಿಕ ಶಾಸ್ತ್ರೀಯದೃಷ್ಟಿಯಿಂದಲೂ ವಿಚಾರಾರ್ಹವಾಗಿವೆ.

ಪ್ರಾಕೃತಿಕ ಪ್ರಲಯುವಾದಾಗ ಜಗತ್ತು ಮೂಲಪ್ರಕೃತಿಯಲ್ಲಿ ವಿಲೀನವಾಗುತ್ತದೆ; ಈ ಮೂಲಪ್ರಕೃತಿಗೆ 'ಮಾಯೆ' ಎಂಬ ಹೆಸರು. ಇದು ಶಂಕರಾಚಾರ್ಯರಿಗೂ ಸಮ್ಮತವಿದೆ (ಬ್ರಹ್ಮಸೂಂ. ಶಾಂ. ಭಾ. ೧. ೩. ३೦). ಈ ಬಗೆಯ ಪ್ರಲಯವಾದ ಬಳಿಕ ಮತ್ತೆ ಹೊಸ ಕಲ್ಪಕ್ಕೆ ಆರಂಭವಾಗಿ ಮೊದಲಿನಂತೆ ಸೃಷ್ಟಿರಚನೆಯಾಗುವುದು. ಒಂದೊಂದು ಜೀವವೂ ಮುಕ್ತಿಯನ್ನು ಹೊಂದಿದ ಬಳಿಕ ಈ ಜಗತ್ತಿನಲ್ಲಿ ಏನೂ ಉಳಿಯುವುದಿಲ್ಲ; ಈ ಬಗೆಯ ವಿಶ್ವವೇ ಮುಕ್ತವಾದಾಗ ಅದು ಆತ್ಯಂತಿಕ ಮುಕ್ತಿ ಎನಿಸುವುದು. ಎಲ್ಲ ವಿಶ್ವವೇ ಮುಕ್ತಿಯನ್ನು ಹೊಂದಿದಬಳಿಕ ಮತ್ತೆ ಸೃಷ್ಟಿರಚನೆಯುಗಾರಂಭ ಮೊದಲಾದವುಗಳೆಲ್ಲಿಯವು? ಶ್ರೀ ಶಂಕರಾಚಾರ್ಯರಿಗೆ ಈ ಆತ್ಯಂತಿಕ ಮುಕ್ತಿಯ ಕಲ್ಪನೆಯೇ ಸಮ್ಮತವಿಲ್ಲ. ವಾಚಸ್ಪತಿ ಮಿಶ್ರನೂ ತತ್ವವೈಶಾರದಿ ಎಂಬ ಗ್ರಂಥದಲ್ಲಿ ಈ ಮತವನ್ನು ಹೊಡೆದು ಹಾಕಿದ್ದಾನೆ. ಇವರ ಅಭಿಪ್ರಾಯದಂತೆ ಈ ವಿಶ್ವವು ಎಂದೊ ಒಮ್ಮೆ ಮೊಟ್ಟಮೊದಲಿಗೆ ಆರಂಭವಾಯಿತೆಂದಾಗಲಿ, ಅಥವಾ ಕಟ್ಟಕಡೆಗೆ ಆತ್ಯಂತಿಕ ಮುಕ್ತಿ ಹೊಂದುವುದೆಂದಾಗಲಿ ತಿಳಿಯುವುದು ತಪ್ಪು; ಈ ಜಗಚ್ಚಕ್ರವು ನಡೆಯುದು ನಡೆದೇ ಇದೆ. ಆತ್ಯಂತಿಕ ಮುಕ್ತಿ ಎಂಬುವದು ಇಲ್ಲವೇ ಇಲ್ಲ. ನೈಯಾಯಿಕರೂ, ಸಾಂಖ್ಯರೂ ಮಾತ್ರ ಆತ್ಯಂತಿಕ ಮುಕ್ತಿಯುಂಟೆಂದು ಪ್ರತಿಪಾದಿಸುತ್ತಾರೆ. ಮೀಮಾಂಸಕರು ಮಾತ್ರ ಅದಾವ ಬಗೆಯ ಮುಕ್ತಿಯನ್ನೂ ನಂಬುವುದಿಲ್ಲ.

—ಪ್ರಬುದ್ಧ ಭಾರತ

## ಪೋಲಂಡದೇಶಕ್ಕೆ ಸ್ವಾತಂತ್ರ್ಯವು ಯಾಕೆ ಕೊಡಲ್ಪಟ್ಟಿತು?

ಜರ್ಮನ್ ದೇಶವು ಮಹಾಯುದ್ಧದಲ್ಲಿ ಸೋತು ಬಲಹೀನವಾದರೂ ಸಹ ಫ್ರೆಂಚರಿಗೆ ಜರ್ಮನರ ಹೆದರಿಕೆಯು ಬೆನ್ನು ಬಿಡಲಿಲ್ಲ. ಜರ್ಮನರ ಎದೆಯ ಮೇಲೆ ಒಂದು ದೊಡ್ಡಕಲ್ಲು ಇಟ್ಟಂತೆ ಒಂದು ವಿಘ್ನವು ಇರಲೆಂದು ಪೋಲಂಡವು ಸ್ವತಂತ್ರವಾಗಬೇಕೆಂಬ ಮಾತಿಗೆ ಪುಟವು ದೊರೆಯಿತು. ಅಲ್ಲದೆ ರಶಿಯಾ ಮತ್ತು ಜರ್ಮನಿಗಳ ನಡುವೆ ಗೆಳೆತನವಾದರೂ ಕೂಡ ಅದಕ್ಕೆ ಎದುರಿಸಲು ಅವೆರಡರ ನಡುವೆ ಅಡ್ಡಬರುವ ಪೋಲಂಡವನ್ನು ಸ್ವತಂತ್ರರಾಷ್ಟ್ರ ಮಾಡುವುದು ಅವಶ್ಯಕವಿತ್ತು. ಈ ತೊಡಕುಗಳಲ್ಲದೆ ಇನ್ನೂ ಒಂದು ಕಾರಣವುಂಟು. ಮಹಾಯುದ್ಧದ ಆರಂಭದಲ್ಲಿಯೆ ಪೋಲಂಡವನ್ನು ಪರಕೀಯರ ಬಲುಮೆಯೊಳಗಿಂದ ಬಿಡಿಸುವುದು ತಮ್ಮ ಧ್ಯೇಯವಾಗಿದೆಯೆಂದು ಪ್ರಕಟಿಸಲ್ಪಟ್ಟಿತ್ತು. ಹೀಗಾಗಿ ೧೫೦ ವರುಷಗಳಿಂದ ಪಾರತಂತ್ರ್ಯದ ನರಕದಲ್ಲಿ ಕೊಳೆಯುತ್ತ ಬಿದ್ದಿದ್ದ ಪೋಲಂಡವು ಕೊನೆಗೆ ಸ್ವತಂತ್ರವಾಯಿತು.

—ಜಿ. ಜಸ್.

## ಮುಸಲ್ಮಾನರು ಹಿಂದೂದೇಶವನ್ನು ಒಮ್ಮೆಲೆ ಹೊಕ್ಕು ಕೈವಶಮಾಡಿಕೊಂಡರೆ?

'ಮಹಮ್ಮದೀಯರು ಹಿಂದುಸ್ಥಾನದ ಮೇಲೆ ದಾಳಿಮಾಡಿದ್ದೊಂದೇ ತಡ, ಕೂಡಲೆ ಅದನ್ನು ಗೆದ್ದೇಬಿಟ್ಟರು' ಎಂದು ಕೆಲರ ಗ್ರಹಿಕೆ! ಹೀಗೆ ನಮ್ಮಲ್ಲಿ ಹಲವರ ಭಾವನೆಯಾಗಲಿಕ್ಕೆ ಅನೇಕ ಕಪಟಗಂಟಕ ಯುರೋಪೀಯ ಇತಿಹಾಸಕಾರರೇ ಕಾರಣರು. ವಿನ್ಸೆಂಟ ಸ್ಮಿಥ್‌ನಂತಹನೂ ಮುಸಲ್ಮಾನರ ಹಿಂದೂ ದೇಶದ ಪ್ರವೇಶದ ಕಾರಣಮೀಮಾಂಸೆಯನ್ನು ವಿಚಿತ್ರವಾಗಿಯೇ ಹೇಳುತ್ತಾನೆ; "ಉತ್ತರದೇಶದ ಛಳಿನಾಡಿನಿಂದ

ಬಂದ ಮಹಮ್ಮದೀಯರು ಸೆಕೆನಾಡಿನ ಹಿಂದೂ ಜನರಿಗಿಂತ ಬಲಿಷ್ಠರಾಗಿದ್ದರು, ಮಾಂಸಭಕ್ಷಣವೂ ಈ ಗಟ್ಟಿಗತನಕ್ಕೆ ಕಾರಣವು ; ಮಹಮ್ಮದೀಯರು ಧರ್ಮದ ಹುಚ್ಚಿನಿಂದ ತಲೆ ತಿರುಕರಾಗಿ 'ಕಾಫರ'ರನ್ನು ಕೊಲ್ಲುವುದೇ ಧರ್ಮವೆಂದು ತಿಳಿದುದೂ ಇನ್ನೊಂದು ಕಾರಣವು; ಈ ಮಹಮ್ಮದೀಯರ ಈ ಅಬ್ಬರವು ಹಿಂದೂ ಜನರಿಗೆ ಹೆದರಿಕೆಯನ್ನುಂಟುಮಾಡಿ ಅವರ ಸೋಲಿಗೆ ಕಾರಣವಾಯ್ತು ; ಮಹಮ್ಮದೀಯರ ಸುವ್ಯವಸ್ಥಿತ ಸೇನೆಯ ಎದುರಿಗೆ ಹಿಂದೂ ಜನರ ಹಳೆ ಪದ್ಧತಿಯ ದಂಡಿನ ವ್ಯವಸ್ಥೆಯೂ ಯುದ್ಧದಲ್ಲಿ ಆನೆಗಳನ್ನೇ ಮುಖ್ಯವಾಗಿ ಉಪಯೋಗಿಸಿ ಅವುಗಳ ಮೇಲೆ ಅವರು ವಿಶ್ವಾಸವಿಟ್ಟು ಕುಳಿತುದುದೂ ಮತ್ತೊಂದು ಕಾರಣವು."

ಆದರೆ ಎಲಫಿನ್ಸಟನ್‌ನೆಂಬವನು ಇದಕ್ಕೆ ತೀರ ವಿಪರೀತವಾಗಿ ಬರೆದಿರುವನು! ಸಿಂಧವನ್ನು ಗೆದ್ದ ಅರಬರು ಮುಲ್ತಾನಕ್ಕಿಂತ ಮುಂದೆ ಅಡಿಯಿಡಲಾರದೆ, ಇರಾಣವನ್ನೆಲ್ಲ ಸೂರೆಮಾಡಿದಂತೆ ಹಿಂದೂ ದೇಶದಲ್ಲಿ ಆಟಸಾಗದೆ ಅನೇಕ ಶತಮಾನಗಳವರೆಗೆ ಅಲ್ಲೇ ಕೊಳೆಯುತ್ತ ಕುಳ್ಳಿರಲು ಅನೇಕ ಕಾರಣಗಳನ್ನು ಹೇಳುತ್ತಾನೆ. ಕ್ರಿ. ಶ. ೭೧೨ರಲ್ಲಿ ಅರಬರು ಹಿಂದೂ ದೇಶಕ್ಕೆ ದಾಳಿಯನ್ನಿಟ್ಟರು ; ಆದರೆ ೧೧೯೩ ಕ್ರಿ. ಶ. ದವರೆಗೆ ಅವರಿಗೆ ಇಲ್ಲಿ ಕಾಲೂರಿ ನಿಲ್ಲಲಿಕ್ಕೆ ಅನುವಾಗಲಿಲ್ಲ! ಮ...ಮ್ಮದ ಪೈಗಂಬರದ ಮರಣಾನಂತ ೮೦ ವರುಷಗಳೊಳಗಾ... ಅರಬರು ಅರಬಸ್ತಾನವನ್ನಷ್ಟೇ ಅಲ್ಲ, ಇರಾಣ, ಸಿರಿಯಾ, ಪಶ್ಚಿಮ ತುರ್ಕಸ್ತಾನ, ಸಿಂಧ, ಇಜಿಪ್ತ ಮತ್ತು ದಕ್ಷಿ... ಸ್ಪೇನವನ್ನೂ ಸಹ ನುಂಗಿ ನೀರು ಕುಡಿದರು ; ಆದರೆ ಹಿಂ... ಸ್ತಾನದಲ್ಲಿ ಮಾತ್ರ ಅವರ ಕೈ ನಡೆಯಲಿಲ್ಲ. ಕನಿಷ್ಠ ... ವರುಷಗಳವರೆಗೂ ಹಿಂದೂ ದೇಶವು ಮಹಮ್ಮದೀಯರ ದಾ... ಗಳಿಗೆ ಅಸಿಮಿಸಿಗೊಳ್ಳದೆ ತನ್ನ ಸ್ವಾತಂತ್ರ್ಯವನ್ನು ಕಾಯ್ದು ಕೊಂಡಿದ್ದಾಗ ಮುಸಲ್ಮಾನ ಧರ್ಮದ ಹುಚ್ಚು ಎಳ್ಳಷ್ಟು ಕಡಿಮೆ ಇದ್ದಿಲ್ಲ! (ಅಥವಾ ಆ ಕಾಲದಲ್ಲಿ ಅವರು ಶೀತ... ದೇಶದವರಾಗಿದ್ದಿಲ್ಲವೆಂತಲ್ಲ.) ಹಾಗಾದರೆ ಆ ನಾನೂ... ಐವತ್ತು ವರುಷಗಳ ವರೆಗೆ ಮುಸಲ್ಮಾನರು ಹಿಂದೂ... ವನ್ನು ಕೈವಶಮಾಡಿಕೊಳ್ಳಲು ಯತ್ನಿಸಲೇ ಇಲ್ಲವೆಂದು ... ಯಬೇಕೆ? ಇದು ಹುಚ್ಚು. ಮುಸಲ್ಮಾನರು ಹಲವು ... ಯಿಂದ ಉಗ್ರ ಪ್ರಯತ್ನಗಳನ್ನು ಮಾಡಿದರು. ಗುಜರಾ... ಕನೋಜಗಳ ಇತಿಹಾಸವೇ ಇದಕ್ಕೆ ಸಾಕ್ಷಿ. ಹೀಗಿ... ಸ್ಮಿಥ್‌ರಂತಹರು ಹಿಂದೂ ಜನರು ಹೇಡಿಗಳು ಎಂದು ಮುಂತಾ... ಕಾರಣಗಳನ್ನು ಹೇಳುವುದಕ್ಕೆ ಕಾರಣವೇನು?

— ಭಾಂಡಾರಕರ ಸಂಶೋಧನ ಮಂಡಳದ ಪತ್ರಿಕೆ

# ವಿಷಯಾನುಕ್ರಮಣಿಕೆ



## ಮುಂದೆ ಬರುವ ಲೇಖಗಳು

| | |
|---|---|
| ೧ ರಂಗಭೂಮಿಯೂ ಸ್ತ್ರೀಯರೂ | ಶ್ರೀಮತಿ ಕನಕ ಲಕ್ಷ್ಮಮ್ಮ : M A, ಮಹಾರಾಣಿ ಕಾಲೇಜ. ಮೈಸೂರ |
| ೨ ತಮಿಳುದೇಶದ ಹೆಂಗಸರು | ,, ಸುಮತಿ ಬಾಯಿ, B. A. L. T., ತುಂಗಭದ್ರೆ |
| ೩ ಶೂನ್ಯ ಸಂಪಾದನೆ | ಶ್ರೀ. ಚೆನ್ನಪ್ಪ ಉತ್ತಂಗಿ, ಹಾವೇರಿ |
| ೪ ಪಾಪದ ಕಲ್ಪನೆ | ,, ರಂಗನಾಥ ರಾಮಚಂದ್ರ ದಿವಾಕರ, ಸಂಪಾದಕ 'ಕರ್ಮವೀರ' ಧಾರವಾಡ |
| ೫ ಮೂಡಬಿದರೆಯ ಶಿಲಾಶಾಸನಗಳು | ,, ತಿರುಮಲೆ ತಾತಾಚಾರ್ಯ ಶರ್ಮ, ಸಂಪಾದಕ 'ವಿಶ್ವಕರ್ಣಾಟಕ', ಬೆಂಗಳೂರು |



ಪ್ರೀತಿಪೂರ

ಚಿತ್ರಶಿಲ್ಪಿ :— ಶ್ರೀ ಸಂಗಮನಾರಾಯಣ ( ಶಾಂತಿನಿಕೇತನ )

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

| ಸಂಪುಟ ೮ | ಶುಕ್ಲನಾಮ ಸಂವತ್ಸರ, ಬನದ ಹುಣ್ಣಿವೆ<br>ಚಾಲುಕ್ಯವಿಕ್ರಮ ವರ್ಷ ೮೫೪ | ಸಂಚಿಕೆ ೩ |
|---|---|---|


## “ ಹಾಜೀ ಬಿಲ್ಲು ”



ಲೇಖಕರು-- ಶ್ರೀ. ದತ್ತಾತ್ರೇಯ ವೆಂಕಟೇಶ ಬೆಳವಿ, LL. B, M. L.A, ಬೆಳಗಾಂವಿ

ಶ್ರೀಯುತ ಹಾಜಿಯವರ ಗುರುತಿಲ್ಲದವರು ಅವರ ಅಡ್ಡ ಹೆಸರನ್ನೋದಿ ಅವರು ಬಹುತರವಾಗಿ ಮಹಮ್ಮದೀಯ ಧರ್ಮದವರಿರಬಹುದೆಂದು ಊಹಿಸಬಹುದು. ಆದರೆ ಇಂತಹ ತಿಳುವಳಿಕೆಯು ತೀರ ತಪ್ಪಿರುವದು. ಶ್ರೀಯುತ ಸಾರಾಭಾಯಿ ನೇಮಚಂದ ಇವರು ಜೈನ ಧರ್ಮದವರಿದ್ದು ಮುಂಬಯಿ ಇಲಾಖೆಯೊಳಗಿನ ಮಧ್ಯಪ್ರಾಂತದ ಮುಸಲ್ಮಾನೇತರ ಮತದಾರರಿಂದ ಲೆಜಿಸ್ಲೇಟಿವ್ಹ ಎಸೆಂಬ್ಲಿಗೆ ಸನ್ ೧೯೨೬ನೇ ಇಸ್ವಿಯ ನವ್ಹೆಂಬರ ತಿಂಗಳಲ್ಲಿ ಬಹುಮತದಿಂದ ಮೊದಲಿಗೆ ಆರಿಸ್ಪಟ್ಟಿರುತ್ತಾರೆ. ಅವರು ಇಂಗ್ಲಂಡಕ್ಕೆ ಹೋಗಿ ಆಕ್ಸಫರ್ಡದ ವಿಶ್ವವಿದ್ಯಾಲಯದಲ್ಲಿ ಕಲಿತು ಮುಂದೆ ಬ್ಯಾರಿಸ್ಟರರಾಗಿ ಹಿಂದುಸ್ಥಾನಕ್ಕೆ ಬಂದಿರುತ್ತಾರೆ. ಆದರೆ ಬ್ಯಾರಿಸ್ಟರರ ಉದ್ಯೋಗ ಮಾಡದೆ ಅವರು ಮುಂಬಯಿಯಲ್ಲಿರುವ'ದಿ ಸಿಂಧಿಯಾ ಸ್ಟೀಮ್ ನೆವ್ಹಿಗೇಶನ್ ಕಂಪನಿ'ಯಲ್ಲಿ ಕೆಲಸವನ್ನು ಮಾಡುತ್ತಿದ್ದು ಎಸೆಂಬ್ಲಿಯ ಮೆಂಬರರಾಗುವದಕ್ಕಿಂತ ಮೊದಲಿನಿಂದಲೇ, ಹಿಂದುಸ್ಥಾನದ ವ್ಯಾಪಾರದ ಸಲುವಾಗಿ ಹಿಂದೀ ಜನರ ಬಂಡವಲದಿಂದ ಅಸ್ತಿತ್ವದಲ್ಲಿ ಬಂದು ಹಿಂದೀ ಜನರ ಆಡಳತೆಗೆ ಒಳಗಾದ ಹಡಗುಪಡೆಯಿರಬೇಕೆಂದು ಬಲು ಕಸುವಿನಿಂದ ಯತ್ನಿಸುತ್ತಿರುವರು. ಅವರ ಸ್ವದೇಶಾಭಿಮಾನವೂ ದೀರ್ಘೋದ್ಯೋಗವೂ ಕೊಂಡಾಡುವಂತಹವಿರುತ್ತವೆ.

ಹಿಂದುಸ್ಥಾನ ದೇಶಕ್ಕೆ ರಾಜಕೀಯ ಸ್ವರಾಜ್ಯಕ್ಕಿಂತಲು ಆರ್ಥಿಕ ಸ್ವಾತಂತ್ರ್ಯವು ಹೆಚ್ಚು ಮಹತ್ತ್ವದ್ದಿರುತ್ತದೆ. ನಮ್ಮ ದೇಶದಲ್ಲಿ ಇಂಗ್ಲಿಶ್ ಸರಕಾರವು ಪ್ರಸ್ಥಾಪಿತವಾದಂದಿನಿಂದ ನಮ್ಮ ದೇಶದ ಆರ್ಥಿಕ ಇತಿಹಾಸವನ್ನು ಓದುವವರಿಗೆ ಮೇಲೆ ಹೇಳಿದ ಮಾತನ್ನು ಕುರಿತು ಸಹಜವಾಗಿ ಮನವರಿಕೆಯಾಗುವದು. ವೈಕುಂಠವಾಸಿಗಳಾದ ಶ್ರೀಯುತ ರಮೇಶಚಂದ್ರ ದತ್ತರಿಂದ ರಚಿಸಲ್ಪಟ್ಟ ಹಿಂದುಸ್ಥಾನದ ಆರ್ಥಿಕ ಇತಿಹಾಸವನ್ನು (The Economic History of India) ಓದಿದವರಿಗೆ ಈ ಮಾತಿನ ಮಹತ್ತ್ವವನ್ನು ಹೇಳಬೇಕಾಗಿಲ್ಲ. ಬ್ರಿಟಿಶರ ಆಡಳಿತೆಯಲ್ಲಿ ಇಡೀ ಹಿಂದುಸ್ಥಾನದ ಕಲಾಕೌಶಲ್ಯವು ಮಣ್ಣುಪಾಲಾಯಿತು. ಹಿಂದುಸ್ಥಾನದ ವರ್ತಕರಿಗೆ ಬಡತನವು ಬಂತು.

ಉಳಿದ ಉದ್ಯೋಗಗಳಂತೆ ಹಿಂದುಸ್ಥಾನದಲ್ಲಿ ಹಡಗಗಳನ್ನು ಕಟ್ಟುವ ವಿದ್ಯೆಯು ಮುಳುಗಿತು. ಮುಂಬಯಿಯಂತಹ ದೊಡ್ಡ ದೊಡ್ಡ ಬಂದರಗಳಲ್ಲಿರುವ ಹಡಗುಗಳನ್ನು ಕಟ್ಟುವ ಕಾರಖಾನೆಗಳು (Dockyards) ಹಾಳಾಗಿ ಹೋದವು. ದೇವರು ಹಿಂದುಸ್ಥಾನಕ್ಕೆ ಕರಾಚಿಯಿಂದ ರಾಮೇಶ್ವರದ ವರೆಗೆ ಮತ್ತು ರಾಮೇಶ್ವರದಿಂದ ಕಲಕತ್ತೆ ಮತ್ತು ರಂಗೂನದ ವರೆಗೆ ಎಷ್ಟೋ ಸಾವಿರ ಮೈಲುಗಳ ಉದ್ದಳತೆಯ ಸಮುದ್ರದ ದಂಡೆಯನ್ನು ದಯಪಾಲಿಸಿ ವ್ಯಾಪಾರಕ್ಕೆ ಅನುವು ಮಾಡಿಕೊಟ್ಟಿದ್ದರೂ ಹಿಂದುಸ್ಥಾನದಲ್ಲಿ ಅಲ್ಲಲ್ಲಿ ಅನೇಕ ಬಂದರಗಳಿದ್ದರೂ ಆ ಬಂದರಗಳಲ್ಲಿ ಮತ್ತು ಅವುಗಳ ಮುಖಾಂತರ ಘಟ್ಟಗಳ ಮೇಲಿರುವ ದೇಶದಲ್ಲಿ ನಡೆಯುವ ದೊಡ್ಡ ವ್ಯಾಪಾರವೆಲ್ಲ ಬ್ರಿಟಿಶ್ ವರ್ತಕರ ಹಡಗಗಳಿಂದಲೇ ಬಹುತರವಾಗಿ ನಡೆದಿರುವದು. ಹೊಗೆಬಂಡಿಗಳಲ್ಲಿ ಸರಕುಗಳನ್ನು ಕಳಿಸುವದಕ್ಕಿಂತ ಜಲಮಾರ್ಗದಿಂದ ಹಡಗಗಳಲ್ಲಿ ಕಳಿಸುವದು ಬಲು ಕಡಿಮೆ ವೆಚ್ಚದ ಮಾತಾಗಿರುವದು; ಆದರೆ ಹಿಂದುಸ್ಥಾನದ ಈಗಿನ ಆಳರಸರು ಹುಟ್ಟುಬಣಜಿಗರಿರುವದರಿಂದ ಅವರಿಗೆ ಇಂಗ್ಲಂಡದ ವ್ಯಾಪಾರವು ಹೆಚ್ಚಾಗಬೇಕೆಂಬ ಲವಲವಿಕೆಯಿರುವದು ಸಹಜವದೆ. ಈ ದೇಶದಲ್ಲಿ ಬ್ರಿಟಿಶರ ಸಾಮ್ರಾಜ್ಯವು ನೆಲೆಗೊಂಡಂದಿನಿಂದ ಬ್ರಿಟಿಶ್ ವರ್ತಕರು ತಮ್ಮ ಹಡಗುಪಡೆಯನ್ನಿಟ್ಟು ಹಿಂದುಸ್ಥಾನದ ಸಮುದ್ರ ಧಡದಲ್ಲಿ ನಡೆಯುವ ವ್ಯಾಪಾರವನ್ನು ವ್ಯಾಪಿಸಿರುವರು. ಅವರಿಗೆ ಬಂಡವಲದ ಕೊರತೆಯಿಲ್ಲ. ಬ್ರಿಟಿಶ್ ಸರಕಾರದವರ ಆಶ್ರಯವೂ ಹಿಂದುಸ್ಥಾನ ಸರಕಾರದವರ ಸಹಾನುಭೂತಿಯೂ ಅವರಿಗೆ ಹೇರಳವಾಗಿ ದೊರೆಯುತ್ತ ಬಂದಿರುತ್ತವೆ. ವ್ಯಾಪಾರದ ಹಡಗಗಳನ್ನಿಟ್ಟು ಹಿಂದುಸ್ಥಾನದ ಬಂದರಗಳಲ್ಲಿ ನಡೆಯುವ ವ್ಯಾಪಾರದಿಂದ ಲಕ್ಷಾವಧಿ ರೂಪಾಯಿಗಳ ಲಾಭವನ್ನು ಪ್ರತಿವರ್ಷ ಮಾಡಿಕೊಳ್ಳುವ ಬ್ರಿಟಿಶ್ ವರ್ತಕರ ಮೇಲೆ ಹಿಂದುಸ್ಥಾನ ಸರಕಾರದವರು ಸನ್ ೧೯೨೨ನೇ ಇಸ್ವಿಯ ವರೆಗೆ ಪ್ರಾಪ್ತಿಯಮೇಲಿನ ಕರಪಟ್ಟಿಯನ್ನು (Income Tax) ಸಹ ಹೇರಿದ್ದಿಲ್ಲ.

ಸನ್ ೧೯೨೪ನೇ ಇಸ್ವಿಯಲ್ಲಿ ಲೆಜಿಸ್ಲೇಟಿವ್ಹ ಎಸೆಂಬ್ಲಿಯಲ್ಲಿ ಹಿಂದುಸ್ಥಾನದಲ್ಲಿ ವ್ಯಾಪಾರದ ಹಡಗಗಳ ಅಭಿವೃದ್ಧಿಯನ್ನು ಮಾಡಲಿಕ್ಕೆ ಯಾವ ಉಪಾಯಗಳನ್ನು ಯೋಜಿಸಬೇಕೆಂಬ ನ್ಯಾತಿನ ವಿಚಾರವನ್ನು ಮಾಡುವದಕ್ಕೆ ಒಂದು ಕಮೀಟಿಯನ್ನು ನೇಮಿಸಬೇಕೆಂದು ಗೊತ್ತಾಯಿತು. ಅದಕ್ಕೆ 'ದಿ ಇಂಡಿ ಮರ್ಕಂಟಾಯಿಲ್ ಮರೀನ್ ಕಮೀಟಿ' ಯೆಂಬ ಆ ಕಮೀಟಿಯಲ್ಲಿ ಸರ್. ಈ. ಹೆಡ್ಲ್ಯಾಮ್, ಸರ್. ಬಾಯಿಲ್ಸ್, ದಿವಾಣಬಹಾದ್ದುರ ಟೀ. ರಂಗಾಚಾರ್ಯ, ಲಲ್ಲುಭಾಯಿ ಸಾಮಲದಾಸ, ವಿ॥ ಜದುನಾಥರಾಯ, ಆರ್ಥರ್ ಫ್ರೂಮ್, ಮುಂತಾದವರು ಮೆಂಬರರಾಗಿ ಸರ್. ಆರ್ಥರ್ ಫ್ರೂಮ್ ಇವರು 'ದಿ ಬ್ರಿಟಿಶ್ ಇಂ ಸ್ಟೀಮ್ ನೆವ್ಹಿಗೇಶನ್ ಕಂಪನಿ' 'ದಿ ಪೆನಿನ್ಸ್ಯುಲರ ಎಂ ಯಂಟಲ್ ಸ್ಟೀಮ ನೆವ್ಹಿಗೇಶನ್ ಕಂಪನಿ' ಮುಂತಾದ ಕಂಪನಿಗಳ ಏಜಂಟರಾಗಿದ್ದರು. ಇವರೊಬ್ಬರ ಹೊ ಉಳಿದ ಎಲ್ಲ ಮೆಂಬರರು ಒಮ್ಮನಸಿನಿಂದ ಹಿಂದುಸ್ಥಾ ದಲ್ಲಿ ಹಿಂದೀಜನರ ಬಂಡವಲದ ಮೇಲೆ ನಡೆಯುವ ಹಿಂದೀ ಜನರ ಕೈಕೆಳಗಿರುವ ವ್ಯಾಪಾರದ ಹಡ ನಿರ್ಮಿಸಿ ಅವುಗಳ ಏಳ್ಗೆಯನ್ನು ಮಾಡುವದು ಸ ವರದಿಯನ್ನು ಕೊಟ್ಟರು. ಆ ವರದಿಯನ್ನು ಮೂ ಹಿಂದುಸ್ಥಾನ ಸರಕಾರದವರು ಮುಂಬಯಿಯಲ್ಲಿ ವಿದ್ಯಾರ್ಥಿಗಳಿಗೆ ಹಡಗುಗಳನ್ನು ನಡಿಸುವ ಶಿಕ್ಷ ಕೊಡುವ ಕುರಿತು ಡಫರಿನ ಎಂಬ ಹೆಸರಿನ ಒಂದ ವನ್ನು ಇಟ್ಟಿರುತ್ತಾರೆ!

ಜಗತ್ತಿನಲ್ಲಿ ಮತ್ತು ಬ್ರಿಟಿಶ್ ಸಾಮ್ರಾಜ್ಯದಲ್ಲಿ ಹಿ ನದ ಹೊರತು ಪ್ರತಿಯೊಂದು ದೇಶದವರು ತಮ್ಮ ದೇಶದ ಸಮುದ್ರದ ದಂಡೆಗುಂಟ ನಡೆಯುವ ವ್ಯಾಪಾ ಮಾಡುವ ಅಧಿಕಾರವನ್ನು ತಮ್ಮ ತಮ್ಮ ದೇಶದ ಪ್ರ ಕಾಯ್ದಿಟ್ಟಿರುತ್ತಾರೆ; ಮತ್ತು ಈ ವಿಷಯದಲ್ಲಿ ಕಾನೂ ಮಾಡಿಟ್ಟಿರುತ್ತಾರೆ. ಇದೇ ಪ್ರಕಾರ ಹಿಂದುಸ್ಥಾನ ಸಹ ಒಂದು ಕಾನೂನನ್ನು ಪಾಸ ಮಾಡಬೇಕೆಂದು ಶ್ರೀ ಸಾರಾಭಾಯಿ ಹಾಜೀ ಇವರು ಸುಮಾರು ಎರಡು ಹಿಂದೆ ಎಸೆಂಬ್ಲಿಯಲ್ಲಿ ಒಂದು ಬಿಲ್ಲು ತಂದಿರುತ್ತಾರೆ "ಹಾಜೀ ಬಿಲ್ಲು." ಈ ಬಿಲ್ಲಿಗೆ ಹಿಂದುಸ್ಥಾನದೊಳಗಿನ ಯುರೋಪಿಯನ್ನರು ಬಹುತರವಾಗಿ ವಿರೋಧವನ್ನು ವರು. ಅದು ಪಾಸಾದರೆ ತಮಗಾಗುವ ಲಾಭವು ಗುವದೆಂದು ಯುರೋಪಿಯನ್ನರಿಗೆ ಹೆದರಿಕೆ ಬಂ ಹೊಟ್ಟೆಯುಉ ನೋಯಹತ್ತಿದೆ. ಇಂದಿನತನಕ, ಹಿಂ ತಮ್ಮ ಸ್ವಂತ ವ್ಯಾಪಾರದ ಹಡಗುಗಳನ್ನು ಇಡುವ

ವನ್ನು ಮಾಡಿದರೆ ಯುರೋಪಿಯನ್ ಕಂಪನಿಯವರು ತಮ್ಮ ದರಗಳನ್ನು ತೀರ ಕಡಿಮೆಮಾಡಿ ಪೋಟಾಟದಿಂದ ಹಿಂದೀ ಹಡಗುಗಳನ್ನು ಇಲ್ಲವಂತೆ ಮಾಡುತ್ತ ಬಂದಿರುತ್ತಾರೆ. ಸುಮಾರು ಇಪ್ಪತ್ತು ಹಿಂದೀ ಕಂಪನಿಗಳು ಈ ಪೋಟಾಟವಲ್ಲಿ ಇಲ್ಲದಂತಾಗಿ ೮-೧೦ ಕೋಟಿ ರೂಪಾಯಿಗಳ ಹಿಂದೀ ಜನರ ಬಂಡವಲವು ಮುಳುಗಿ ಹೋಗಿವೆ. ಹಾಜೀಯವರ ಬಿಲ್ಲು ಪಾಸಾದರೆ ಬಲು ದೊಡ್ಡ ಅನ್ಯಾಯವಾಗುವದೆಂದೂ ಹಿಂದುಸ್ಥಾನದಲ್ಲಿ ವ್ಯಾಪಾರವನ್ನು ಮಾಡುತ್ತಿಪ್ಪ ಬ್ರಿಟಿಶರನ್ನು ಸುಲಿದಂತಾಗುವದೆಂದೂ ಅವರು ಕೂಗಾಡಹತ್ತಿರುತ್ತಾರೆ. ಹಿಂದುಸ್ಥಾನದಲ್ಲಿರುವ ದೊಡ್ಡ ದೊಡ್ಡ ಯುರೋಪಿಯನರೂ ವಿಲಾಯತಿಯೊಳಗಿನ ಮುಖಂಡರೂ ಈ ಕೂಗಾಟದಿಂದ ಮೋಸಹೋಗಿ ಅದಕ್ಕೆ ಬೆಂಬಲವನ್ನು ಕೊಡಹತ್ತಿದ್ದಾರೆ. ಹಿಂದುಸ್ಥಾನಕ್ಕೆ ಆರ್ಥಿಕ ಸ್ವಾತಂತ್ರ್ಯವನ್ನು ಈ ಮೊದಲೇ ಕೊಟ್ಟಿರುತ್ತೇವೆಂದು ಮೊನ್ನೆ ಹಿಂದುಸ್ಥಾನದ ಸೆಕ್ರೆಟರಿ ಆಫ್ ಸ್ಟೇಟ್‌ಗಳಾದ ಬೆನ್ ಸಾಹೇಬರು ಪಾರ್ಲಮೆಂಟ ಸಭೆಯಲ್ಲಿ ಮುಕ್ತ ಕಂಠದಿಂದ ಹೇಳಿದರು. ಆದರೆ ಹಾಜಿಯವರ ಬಿಲ್ಲು ಈ ಜಾಭದ ಒರೆಗಲ್ಲಾಗಿರುವದು.

---

# ಗುಪ್ತಕಾಲದ ವಿಚಾರ



ಲೇಖಕರು :— ಶ್ರೀ. ಗೋವಿಂದ ಪೈ, ಮಂಜೇಶ್ವರ

## ಮುನ್ನುಡಿ

ಕ್ರಿ. ಶ. ೧೧ನೆಯ ಶತಕದ ಆದಿಯಲ್ಲಿ ಘಜ್ನವೀ ಮಾಮೂದನು ಗುಜರಾತಕ್ಕೆ ದಂಡೆತ್ತಿ ಬಂದಾಗ, ಆತನ ಪಾಳೆಯದೊಂದಿಗೆ ಭಾರತದೇಶಕ್ಕೆ ಬಂದ ಗಣಕಶಿರೋಮಣಿ 'ಅಲ್ಬೆರುನಿ' ಎಂಬವನು ನಮ್ಮೀ ಹಿಂದುಸ್ಥಾನವನ್ನು ಕುರಿತು ತಾನು ಬರೆದಿರುವ ಗ್ರಂಥದಲ್ಲಿ (Alberuni's 'India') ಗುಪ್ತಕಾಲವೂ ವಲಭೀಕಾಲವೂ ಒಂದೇ ಎಂದೂ, ವಲಭೀಕಾಲಕ್ಕೂ ಶಕಕಾಲಕ್ಕೂ ೨೪೧ ವರ್ಷಗಳಷ್ಟು ಅಂತರ, ಎಂದರೆ ಶಕಕಾಲದ ವರ್ಷ ಸಂಖ್ಯೆಯಿಂದ ಆರರ ಘನ (೬³) ಮತ್ತು ಐದರ ವರ್ಗ (೫²) ಗಳ ಮೊತ್ತವಾಗಿರುವ ೨೪೧ (೬³+೫²=೨೪೧) ಎಂಬ ಸಂಖ್ಯೆಯನ್ನು ಕಳೆದರೆ, ಅದೇ ವರ್ಷಕ್ಕೆ ಸರಿಯಾದ ವಲಭೀ ಕಾಲದ ಸಂವತ್ಸಂಖ್ಯೆ ಲಭಿಸುತ್ತದೆಂದೂ 1 ಹೇಳಿರುವನಷ್ಟೆ. ಹೀಗೆಂದರೆ ಆತನ ಹೇಳಿಕೆಯ ಮೇರೆಗೆ ವಲಭೀ ಕಾಲದ ಆರಂಭವು ಕ್ರಿ. ಶ. ೭೮+೨೪೧= ಕ್ರಿ ಶ. ೩೧೯ರಲ್ಲಿ ಆಯಿತೆಂದು ತಿಳಿಯುತ್ತದೆ. ಕೀರ್ತಿಶೇಷ ಡಾ। ರಾಮಕೃಷ್ಣ ಗೋಪಾಳ ಭಾಂಡಾರಕರರು ತನ್ನ 'Early History of the Dekkan' (E. H. D.) ಎಂಬ ಗ್ರಂಥದ ಅನುಬಂಧದಲ್ಲಿ (Appendix A.), ಅಲ್ಬೆರುನಿಯ ಹೇಳಿಕೆಯನ್ನು ಸೋದಾಹರಣವಾಗಿ ತರ್ಕಿಸಿ,

'Thus, then, the evidence in favour of Alberuni's initial date for the Gupta era appears to me to be simply overwhelming.'

ಎಂದು ಮುಕ್ತಕಂಠವಾಗಿ ಹೇಳಿರುವರು. ಡಾ। ಫ್ಲೀಟರವರು (Dr. J. F. Fleet) ಕೂಡ ಬಹುಶಃ ಇನ್ನೂ ತುಂಬ ಆಧಾರಗಳನ್ನು ಸಂಗ್ರಹಿಸಿ, ಗುಪ್ತಕಾಲಾರಂಭವಾದುದು ಕ್ರಿ. ಶ. ೩೧೯-೩೨೦ ರಲ್ಲಿ ಎಂದು ನಿಶ್ಚಯಿಸಿರುವರು. 2 ಹೀಗೆ ಈ ವಿದ್ವಾಂಸರಿಬ್ಬರು ನಿರ್ಣಯಿಸಿರುವ ಮೇರೆಗೆ ಗುಪ್ತ

1 Alberuni's 'India' ( Sachau's translation ) : XL IX

2 ಆದರೆ ಡಾ। ಫ್ಲೀಟರವರ 'Gupta Inscriptions' ಎಂಬ ಗ್ರಂಥವನ್ನು ಇದುವರೆಗೆ ಎಲ್ಲೆಲ್ಲಿ ಎಷ್ಟೆಷ್ಟು ಪ್ರಯತ್ನಿಸಿದರೂ ನನಗದು ಈ ವರೆಗೆ ದೊರೆಯದೆ ನಾನದನ್ನು ಕಂಡಿಲ್ಲವೆಂಬುದು ದುರ್ದೈವವೆಂದು ಬೇರೆ ಹೇಳಬೇಕಿಲ್ಲ. ಆದುದರಿಂದ ಗುಪ್ತಕಾಲಾರಂಭವನ್ನು ಕುರಿತುಳ್ಳ ಅವರ ಅಭಿಪ್ರಾಯವನ್ನು 'Mysore Archaeological Report ( M. A. R ) for 1923' ಎಂಬುದರಲ್ಲಿ ಅನುವದಿಸುವ ಮೇರೆಗೆ ಹೇಳಿರುವೆನಷ್ಟೆ.

ಕಾಲವೂ ವಲಭೀಕಾಲವೂ ಒಂದೇ ಎಂದೂ, ಅದರ ಆರಂಭವು ಶಕಕಾಲಾರಂಭದ (ಕ್ರಿ. ಶ. ೭೮) ೨೪೧ ವರ್ಷಗಳ ಈಚೆಗೆ, ಅಂದರೆ ಕ್ರಿ. ಶ. ೩೧೯–೩೨೦ರಲ್ಲಿ ಆದುದೆಂದೂ ನಿಷ್ಪನ್ನವಾಗುತ್ತದೆ.

ಆದರೆ ಡಾ। ಶಾಮಶಾಸ್ತ್ರಿಗಳವರು ಗುಪ್ತಕಾಲ ಬೇರೆ ವಲಭೀಕಾಲ ಬೇರೆ ಎಂದೂ, ಗುಪ್ತಕಾಲಾರಂಭವಾದುದು ಕ್ರಿ. ಶ. ೨೦೦–೨೦೧ ರಲ್ಲಿ ಎಂದೂ ಅನೇಕ ಆಧಾರಗಳ ಸಹಾಯದಿಂದ ಸತರ್ಕವಾಗಿ ಪ್ರತಿಪಾದಿಸಿ, ಸಹಜವಾದ ವೈದುಷ್ಯದಿಂದ ಪರಿಪೂರ್ಣವಾಗಿರುವ ಲೇಖನವನ್ನು 'Mysore Archaeological Report (M. A. R.) for 1923' ಎಂಬ ವರದಿಯಲ್ಲಿ ಪ್ರಕಟಿಸಿರುವರು. ಇವರ ಲೇಖದಿಂದ ಡಾ। ಫ್ಲೀಟರವರು ನಿಶ್ಚಯಿಸಿರುವ ಗುಪ್ತಕಾಲಾರಂಭದ ವಿಚಾರದಲ್ಲಿರುವ ಹಲವು ಹುಳುಕುಗಳು ಹೊರಗೆಡೆವುದರಿಂದ, ಅವರ ನಿರ್ಣಯವು ಸಲ್ಲದೆಂದು ವ್ಯಕ್ತವಾಗುತ್ತದೆ. ಆದರೆ ಡಾ। ಶಾಸ್ತ್ರಿಗಳು ಆ ಕಾಲಾರಂಭಕ್ಕೆ ನಿರ್ಧರಿಸಿರುವ ಕ್ರಿ. ಶ. ೨೦೦–೨೦೧ ಎಂಬ ತೇದಿ ಕೂಡ ಗುಪ್ತ ಸಂವತ್ಸಂಖ್ಯೆಯಿಂದ ನಿರ್ದಿಷ್ಟವಾದ ಕೆಲವು ಶಾಸನಗಳಲ್ಲಿ ಹೇಳಲ್ಪಟ್ಟ ವಿಷಯಗಳಿಗೆ ಸರಿಹೋಗುವುದಿಲ್ಲ ; ಉದಾ—

(೩) ವಲಭಿಯ ಅರಸಾದ ಧರಸೇನನೆಂಬವನ ಭಟ್ಟಕಪತ್ರ ದತ್ತಿಯಲ್ಲಿ (Bhattakapatra grant), ಅದನ್ನಿತ್ತ ಗುಪ್ತ ಸಂವತ್ ೨೫೭ ರಲ್ಲಿ ವೈಶಾಖ ವದ್ಯ ೧೫ನೆಯ ತಿಥಿಯಂದು ಸೂರ್ಯಗ್ರಹಣವಿತ್ತು ಎಂದು ಆ ದತ್ತಿಯ ಒಕ್ಕಣೆಯಲ್ಲಿದೆ ಎಂದು ಡಾ। ಶಾಸ್ತ್ರಿಗಳು ಪ್ರಕಟಿಸಿದ 'M. A. R. 1927' (ಪು. ೨೭–೩೦) ರಿಂದ ತಿಳಿಯುತ್ತದೆ. ವಲಭಿ ಎಂಬುದು ಗುಜರಾತ್ ದೇಶದಲ್ಲಿದೆ ಎಂದೂ, ಗುಜರಾತದಲ್ಲಿ ಮಾಸಗಣನೆ ಹುಣ್ಣಿಮೆಯಿಂದ ಹುಣ್ಣಿಮೆ ವರೆಗಣ ಪೂರ್ಣಿಮಾಂತ (ಅಂದರೆ ನಮ್ಮಂತೆ ಅಮಾಂತವಲ್ಲ) ವೆಂದೂ ಬೇರೆ ಹೇಳಬೇಕೆಂದಿಲ್ಲ ; ಅಥವಾ ಈ ದತ್ತಿಯಲ್ಲಿ 'ವೈಶಾಖ ವದ್ಯ ೧೫' ಎಂದು ಹೇಳಿರುವುದರಿಂದಲೆ, ಅವರ ತಿಂಗಳ ೧೫ನೆಯ ದಿನ ಅಮಾವಾಸ್ಯೆ ಎಂದೂ, ಆದುದರಿಂದ ಅದರ ಕಡೆಯ ದಿನ ಹುಣ್ಣಿಮೆ ಎಂದೂ ಸ್ಪಷ್ಟವಾಗುತ್ತದೆ. ಹೀಗಾಗಿ ಈ ದತ್ತಿಯಲ್ಲಿ ಹೇಳಿರುವ ಅವರ 'ವೈಶಾಖ ವದ್ಯ ೧೫' ... ನಮ್ಮ ಚೈತ್ರ ಬಹುಳ ಅಮಾವಾಸ್ಯೆ ತಾನೆ.

ಡಾ। ಶಾಸ್ತ್ರಿಯವರ ನಿರ್ಣಯದ ಮೇರೆಗೆ ಗುಪ್ತಾ... ರಂಭವಾದುದು, ಕ್ರಿ. ಶ. ೨೦೦–೨೦೧ರಲ್ಲಿ ಎಂಬುದು... ಕಾಲದ ೨೫೭ನೆಯ ವರ್ಷದಲ್ಲಿ ನಮ್ಮ ಚೈತ್ರ ಬ। ೩೦ರ... ಸಂಭವಿಸಿದ ಸೂರ್ಯಗ್ರಹಣವು ಕ್ರಿ. ಶ. ೪೫೭–... ಆಗಿರಬೇಕಷ್ಟೆ. ಆದರೆ ಇವೆರಡರ ಯಾವ ವರ್ಷದಲ್ಲಿ... ನಮ್ಮ ಚೈತ್ರ ಬ। ಅಮಾವಾಸ್ಯೆಯಂದು ಸೂರ್ಯೋ... ದ್ದಿಲ್ಲ. ಕ್ರಿ. ಶ. ೪೫೯ರಲ್ಲಿ ಸಂಭವಿಸಿದ ಸೂರ್ಯಗ್ರ... ನಮ್ಮ ಚೈತ್ರ ಬ। ೩೦ ಯಂದಲ್ಲ, ನಮ್ಮ ನಿಜಜ್ಯೇಷ್ಠ... ಯಂದು ; ಮತ್ತು ಅದಾದರೂ ಈ ದೇಶಕ್ಕೆ ಅದೃಶ್ಯ... ಪಾರ್ಶ್ವಗ್ರಹಣ. ಹಾಗೆಯೇ ಕ್ರಿ. ಶ. ೪೬೦ರಲ್ಲಿ ... ಚೈತ್ರ ಬ। ೩೦ ಯಂದು (ಎಪ್ರೀಲು ೭) ಸೂರ್ಯ... ನಿತ್ತಾದರೆ, ಅದು ಭರತಖಂಡದಲ್ಲಿ ತೀರ ಅದೃಶ್ಯ... ದ್ದಿತು. 3 ಹೀಗಾಗಿ ಡಾ। ಶಾಸ್ತ್ರಿಗಳು ಈ ಕುರಿತು ... ರುವರು—

'The plate is however dated Valabhi ... 257, Vaisakha Vadi 15. But as the ... eclipse mentioned in the plate does not ... have been visible at Valabhi, there is the ... its being regarded as spurious, unless ... presumed to have been issued in that part ... Gupta empire where the eclipse was ... (M. A. R.—1927. ಪು. 30)

ಆದರೆ ಈ ತಾಮ್ರಪಟ್ಟವು ಕೃತ್ರಿಮವೆಂದಿಗೂ ಅಲ್ಲ ... ವಾಸ್ತವಿಕವೇ ಎಂಬುದೀ ಲೇಖದಲ್ಲಿ ಮುಂದೆ ತಿಳಿವುದು.

ಡಾ। ಫ್ಲೀಟರವರ ಶೋಧನದ ಮೇರೆಗೆ ಗುಪ್ತಕಾ... ವಾದುದು ಕ್ರಿ. ಶ. ೩೧೯–೩೨೦ ರಲ್ಲಿ ಎಂಬು... ಗುಪ್ತ ಸಂವತ್ ೨೫೭ ಎಂಬುದು ಅವರ ನಿರ್ಣಯದ... ಕ್ರಿ. ಶ. ೫೭೬–೫೭೭ ಆಗಬೇಕಷ್ಟೆ. ಇವೆರಡು ... ಲ್ಲಾದರೂ ನಮ್ಮ ಚೈತ್ರ ಬ। ೩೦ ಯಂದು ಸೂರ್ಯ... ವಿದ್ದಿಲ್ಲ ಮಾತ್ರವಲ್ಲ, ಕ್ರಿ. ಶ. ೫೭೩ ರಲ್ಲಿ ನಮ್ಮ ...

3 ಈ ಲೇಖದಲ್ಲಿ ಹೇಳಿರುವ ಗ್ರಹಣಗಳ ತೇದಿಗಳೂ, ಅವುಗಳ ದೃಶ್ಯಾದೃಶ್ಯಭಾವಗಳೂ Sewell and Dikshit's 'I... Calendar' ಎಂಬುದರ ಆಧಾರದಿಂದ ಹೇಳಿವೆ.

೩೦ ಯಂದಾದ ( ಮಾರ್ಚಿ ೧೯ ) ಸೂರ್ಯಗ್ರಹಣವೊಂದು ವಿನಾ, ಕ್ರಿ. ಶ. ೫೫೪ ರಿಂದ ೫೯೨ರ ವರೆಗೆ ಯಾವೊಂದು ವರ್ಷದಲ್ಲಾದರೂ ನಮ್ಮ ಚೈತ್ರ ಬ। ೩೦ ಯಂದು ಸೂರ್ಯ ಗ್ರಹಣವಿದ್ದಿಲ್ಲ. ಕ್ರಿ. ಶ. ೫೭೩ ನೆಯ ಇಸವಿಯ ಗ್ರಹಣ ವಾದರೊ, ಡಾ। ಫ್ಲೀಟರವರು ನಿರ್ಣಯಿಸಿದ ಗುಪ್ತಕಾಲಾ ರಂಭದ ವರ್ಷಕ್ಕೆ ಸರಿಹೋಗುವುದಿಲ್ಲವೆಂಬುದು ಪ್ರತ್ಯಕ್ಷ ವಷ್ಟೆ.

(ಆ) ಗುಪ್ತ ಸಂವತ್ ೫೮೫ರ ಫಾಲ್ಗುಣ ಶುದ್ಧ ಪಂಚ ಮಿಯ ತೇದಿಯುಳ್ಳ ಮೋರ್ವಿಯ ತಾಮ್ರಪಟ್ಟದಲ್ಲಿ (Morvi Copper-plate) ಒಂದು ಸೂರ್ಯಗ್ರಹಣವನ್ನು ಹೇಳಿದೆ 4 (E. H. D.-App. A.) ಅದನ್ನು ಕುರಿತು ಡಾ. ರಾ. ಗೋ. ಭಾಂಡಾರಕರರು ಹೀಗೆಂದಿರುವರು —

'It is by no means necessary to suppose that the eclipse occurred on the new-moon day immediately previous to the 5th of Phalguna Sudi mentioned in the grant. For it is perfectly possible that the actual religious ceremony with reference to the grant was made in Vaisakha, and the deed executed in Phalguna' (ibid).

ಮತ್ತು ಗುಪ್ತಕಾಲಾರಂಭಕ್ಕೆ ಅವರು ಒಪ್ಪಿರುವ ಕ್ರಿ. ಶ. ೩೧೯-೩.೨೦ಕ್ಕೆ ಸರಿಯಾಗಿ, ಈ ದತ್ತಿಯಲ್ಲಿ ಹೇಳಿರುವ ಗುಪ್ತ ಸಂವತ್ ೫೮೫ ( ಅಂದರೆ ಕ್ರಿ. ಶ. ೯೦೫-೯೦೬ ) ರಲ್ಲಿ ಸಂಭ ವಿಸಿತೆಂಬ ಸೂರ್ಯಗ್ರಹಣವು ಆ ವರ್ಷದ ವೈಶಾಖ ಬಹುಳ (ಅಂದರೆ ಮೋರ್ವಿಯುತ್ತರಕಡೆಯವರ ಜ್ಯೇಷ್ಠ ಬಹುಳ) ಅಮಾ ವಾಸ್ಯೆಯಂದು, ಅಂದರೆ ಕ್ರಿ. ಶ. ೯೦೫ ಮೇ ತಾರೀಕು ೭ರಂದು ಆದ ಗ್ರಹಣವಾಗಿರಬೇಕೆಂದಿರುವರು.

ಅವರ ಅಪಾರ ವೈದುಷ್ಯಕ್ಕೆ, ಅಪ್ರತಿಮ ಪಾಂಡಿತ್ಯಕ್ಕೆ ತಲೆ ಬಾಗಿಸಿ ಹೇಳುವುದೇನೆಂದರೆ—ಅವರೀ ಹೇಳಿಕೆಯನ್ನು ಎಂದಿಗೂ ಒಪ್ಪಲಾಗುವುದಿಲ್ಲ; ಏಕೆಂದರೆ ವೈಶಾಖ ಬ। ೩೦ ಯಂದು ಆದ ಗ್ರಹಣದ ಬಗ್ಗೆ ಮಾಡತಕ್ಕ ದತ್ತಿಯನ್ನು ಅದಕ್ಕೆ ೧೦ ತಿಂಗಳ ಬಳಿಕ ಫಾಲ್ಗುಣ ಮಾಸದಲ್ಲಿ ಒಕ್ಕಣಿಸಿ ಕೊಡುವು ದೆಂದರೆ ಅದಕ್ಕೆ ಅರ್ಥವಿಲ್ಲ. ಅರಸರು ಹಾಗೆಂದಿಗೂ ಮಾಡ ರೆಂಬ ಮಾತಂತಿರಲಿ, ಯಾವನೊಬ್ಬ ಯಃಕಶ್ಚಿತ್ ವ್ಯಕ್ತಿಯಾ ದರೂ ಹಾಗೆ ಮಾಡನು. ಗ್ರಹಣವೆಂಬುದು ನಮ್ಮ ಧರ್ಮ ದೃಷ್ಟಿಯಿಂದ ದೊಡ್ಡದೊಂದು ಪುಣ್ಯಕಾಲವೆಂದು ನಾವೆಲ್ಲರೂ ಬಲ್ಲೆವು; ಅದರಲ್ಲೂ ಸೂರ್ಯಗ್ರಹಣವೆಂದರೆ ಕ್ವಾಚಿತ್ಕವೆಂ ಬುದರಿಂದ, ಅದು ದಾನಧರ್ಮಕ್ಕೆ ಅಸಾಮಾನ್ಯವಾಗಿ ದುರ್ಲಭ ವಾಗಿ ಒದಗುವ ಭಾಗ್ಯವೆಂದು ಭಾವಿಸಲ್ಪಡುತ್ತದೆಂದೂ ಬಲ್ಲೆವು. ಹೀಗಿರುವಾಗ ಅಂಥಾ ಸುಕಾಲದಲ್ಲಿ ವಾಗ್ದತ್ತವಾದ ದತ್ತಿಯನ್ನು ಹತ್ತು ತಿಂಗಳ ತನಕ ಬಾಕಿಯಿಟ್ಟು ಆ ಬಳಿಕ ಒಕ್ಕಣಿಸಿ ಕೊಡುವುದೆಂದರೆ ಅದಾವ ಧರ್ಮ? ವಾಗ್ದತ್ತವಾದ ಧರ್ಮವನ್ನು ಜರಗಿಸುವುದೆಂದರೆ ಕೊಟ್ಟ ಮಾತಿನೊಡನೆ, ಬಿಟ್ಟ ನೀರಿನೊಡನೆ; ಆದರೆ ಹಾಗೆ ವಾಗ್ದಾನ ಮಾಡಿದ ದತ್ತಿ ಯನ್ನು ಹೊಗಳುವ ತಾಮ್ರಪಟ್ಟವೊ ಶಿಲಾಲೇಖವೊ ಆ ಒಕ್ಕಣೆ ಯಿಂದೊಡಗೂಡಿ ಉತ್ಕೀರ್ಣವಾಗುವುದಕ್ಕೆ ಕೆಲವಾದರೂ ದಿನಗಳು ಹಿಡಿಯದಿರವು ಎಂಬುದರಿಂದ, ಅಂಥಾ ತಾಮ್ರಪಟ್ಟ- ಶಿಲಾಲೇಖಗಳಿಗೆ ಸಹಃ ಇಕ್ಕುವ ತೇದಿ, ಅಥವಾ ಅವಲ್ಲಿ ಆ ದತ್ತಿ ಯನ್ನು ಕುರಿತುಳ್ಳ ಬರೆವಣಿಗೆಯನ್ನು ಕೊರೆದು ಮುಗಿಸಿದ ತೇದಿ ಮಾತ್ರ, ಆ ದತ್ತಿಯ ವಾಸ್ತವಿಕ ತೇದಿಯಿಂದ ಅಷ್ಟೋ ಕೆಲವು ದಿನಗಳ ಬಳಿಕಣವಾಗುವುದು ಸಹಜವೇ. ದತ್ತಿಗೆ ನೀರುಬಿಟ್ಟ ಮತ್ತು ಅದನ್ನು ಬರೆದುಕೊಟ್ಟ ಆಯಾ ದಿನಗಳ ನಡುವೆ ಅನೇಕ ತಿಂಗಳುಗಳೇ ಕಳೆದುಹೋದ ದೃಷ್ಟಾಂತಗಳು ಶಾಸನಗಳಲ್ಲಿ ಇವೆಯೋ ಎಂಬುದನ್ನು ನಾನರಿಯೆನಾದರೂ, ತಟ್ಟನೆ ನೆನಪಿಗೆ ಒದಗುವ ಹೈಹಯ ವಂಶೀಯ ಮಹಾರಾಜ ಶ್ರೀ ಕರ್ಣದೇವನ ಒಂದು ಶಾಸನದಲ್ಲಿ ಆತನು ತನ್ನ ತಂದೆ ಯಾದ ಗಾಂಗೇಯ ದೇವನ ಶ್ರಾದ್ಧತಿಥಿಯಾದ ಫಾಲ್ಗುಣ ಕೃಷ್ಣ ಬಿದಿಗೆಯಂದು ವಾಚಾದತ್ತ ಮಾಡಿದ ದತ್ತಿಯನ್ನು ಬರೆ ದಿತ್ತುದು ಅದೇ ಫಾಲ್ಗುಣ ಬಹುಳ ನವಮಿಯಂದು 5 (ಅಂದರೆ ಏಳೇ ದಿನಗಳ ಬಳಿಕ) ಎಂದು ತೋರುವುದರಿಂದ, ಕೊಡುಹ ಮತ್ತು ಬರೆಹಗಳ ನಡುವೆ ಬರೆಹಕ್ಕೆ ಬೇಕಾಗುವಷ್ಟು ಕೆಲ ದಿನಗಳಷ್ಟೇ ವಿನಾ, ತಿಂಗಳುಗಟ್ಲೆಯ ಕಾಲಯಾಪನೆಯಾಗುತ್ತಿ ದ್ದಿಲ್ಲವೆಂದು ಸಾಕಷ್ಟು ಧೈರ್ಯದಿಂದ ಹೇಳಬಹುದು.

ಆದುದರಿಂದ ಗುಪ್ತ ಸಂ। ೫೮೫ರ ಫಾಲ್ಗುಣ ಶುಕ್ಲ ೫ ಯಂದು ಉತ್ಕೀರ್ಣವಾಗಿ ಮುಗಿದಾ ಮೋರ್ವಿಯ ತಾಮ್ರ

4 ಈ ಮೋರ್ವಿಯ ತಾಮ್ರಪಟ್ಟವನ್ನು ಡಾ। ಶಾಸ್ತ್ರಿಗಳು ಗೊಡವೆ ಮಾಡಿಲ್ಲವೇಕೆ ?

5 'ಪ್ರಾಚೀನ ಲೇಖಮಾಲಾ' ('ನಿರ್ಣಯಸಾಗರ' ಛಾಪಖಾನೆ)—II. ೧೨೨ ( ಪು. ೩೪೪ )

ಪಟ್ಟದಲ್ಲಿ ಹೇಳಿರುವ ದತ್ತಿಯನ್ನು ಮಾಡಿದ ಪರ್ವಕಾಲವಾದ ಆ ಸೂರ್ಯಗ್ರಹಣವು ಆ ತೇದಿಗೆ ಐದೇ ದಿನಗಳ ಮುಂಚಿನ ನಮ್ಮ ಮಾಘ ಬಹುಳ ಅಮಾವಾಸ್ಯೆಯಂದು (ಅಂದರೆ ಮೋರ್ವಿಯತ್ತ್ರಕಡೆಯವರ ಪೂರ್ಣಿಮಾಂತ ಮಾಸಗಣನದ ರೀತ್ಯಾ ಅವರ ಫಾಲ್ಗುಣ ಬಹುಳ ಅಮಾವಾಸ್ಯೆಯಂದು) ಸಂಭವಿಸಿದ ಸೂರ್ಯೋಪರಾಗ ತಾನೇ ವಿನಾ ಹಿಂದಣ ಬೇರಾವ ತಿಂಗಳಲ್ಲಾದರೂ ಆದ ಗ್ರಹಣವಲ್ಲ ಎಂಬುದು ಮೂರು ಮೂರು ಬಾರಿಗೂ ಕಂಡಿತವೇ ಎಂದು ನನಗೆ ಕಾಣುತ್ತದೆ.

ಈಗ ಗುಪ್ತ ಸಂ। ೫೮೫ ಎಂದರೆ ಡಾ। ಶಾಸ್ತ್ರಿಯವರ ಗುಪ್ತ ಕಾಲಾರಂಭ ನಿರ್ಣಯದ ಪ್ರಕಾರ ಕ್ರಿ. ಶ. ೭೮೫–೭೮೬ ಆಗುತ್ತದೆ; ಡಾ। ಫ್ಲೀಟರವರ ನಿಶ್ಚಯದ ರೀತ್ಯಾ ಕ್ರಿ. ಶ. ೯೦೪–೯೦೫ ಆಗುತ್ತದೆ. ಇವಾವ ವರ್ಷಗಳಲ್ಲಾದರೂ ನಮ್ಮ ಮಾಘ ಬ। ೩೦ ಯಂದು ಸೂರ್ಯಗ್ರಹಣವಾದುದುಂಟೇ ಎಂದು ವಿಚಾರಿಸಿದರೆ, ಕ್ರಿ. ಶ. ೭೭೯ರಿಂದ ೭೮೯ರ ನಡುವೆ ಯಾವ ವರ್ಷದಲ್ಲಾಗಲಿ, ಹಾಗೆಯೆ ಕ್ರಿ. ಶ. ೯೦೧ ರಿಂದ ೯೧೧ ರ ನಡುವಣ ಯಾವ ವರ್ಷದಲ್ಲಾಗಲಿ ನಮ್ಮ ಮಾಘ ಬ। ೩೦ ಯಂದು ಸೂರ್ಯಗ್ರಹಣವೇ ಆದುದಿಲ್ಲ.

ಈ ಕಾರಣಗಳಿಂದ ಡಾ। ಶಾಮಶಾಸ್ತ್ರಿಗಳು ಗುಪ್ತ ಕಾಲಾರಂಭಕ್ಕೆ ಗೊತ್ತು ಹಚ್ಚಿರುವ ಕ್ರಿ. ಶ. ೨೦೦–೨೦೧ ಆಗಲಿ, ಡಾ। ಫ್ಲೀಟರು ನಿರ್ಣಯಿಸಿರುವ ಕ್ರಿ. ಶ. ೩೧೯–೩೨೦ ಆಗಲಿ ಸರಿಯಲ್ಲವೆಂದೂ, ಇವಾವೂ ಗುಪ್ತ ಕಾಲದ ಸಂವತ್ಸಂಖ್ಯೆಯಿಂದ ನಿರ್ದಿಷ್ಟವಾದ ಅನ್ಯಾನ್ಯ ಶಾಸನಗಳಲ್ಲಿ ಸಮಾಖ್ಯಾತವಾದ ಗ್ರಹಣವೇ ಮೊದಲಾದ ವಿಷಯಗಳಿಗೆ ಸರಿ ಹೋಗಲಾರವೆಂದೂ ನಿಶ್ಶಂಕವಾಗಿ ಉಪಪನ್ನವಾಗುತ್ತದೆ.

ಹಾಗಾದರೆ ಗುಪ್ತ ಕಾಲವು ಆರಂಭಿಸಿದುದೆಂದು ?

## ಗುಪ್ತ ಕಾಲಾರಂಭ

ಗುಪ್ತ ಕಾಲಕ್ರಮದಿಂದ ನಿರೂಪಿತವಾದ ಶಾಸನಗಳಲ್ಲಿ ಸಂವತ್ಸಂಖ್ಯೆ, ಮಾಸನಾಮ ಮತ್ತು ತಿಥಿ ಇವಷ್ಟು ಮಾತ್ರವಲ್ಲದೆ, ಇದಕ್ಕಿಂತ ಹೆಚ್ಚಿನ ಯಾವ ಬಗೆಯ ಕಾಲವಿವರವಾದರೂ ಇಲ್ಲದಿರುವುದರಿಂದ, ಅದರ ಆರಂಭಕಾಲವನ್ನು ಹಿಡಿವರೆ ಉಪಯುಕ್ತವಾದ ಸಾಧನಗಳು— ಕಷ್ಟ... ಆದರೂ—ಯಾವುದಾದರೂ ಇವೆ ಎಂದಾದರೆ, ಪ್ರಾಯಶಃ ಆರು ತಾನೆ -

(ಅ) ಬುಧಗುಪ್ತನೆಂಬ ಅರಸನ ಕಾಲದಲ್ಲಿ ಮಾತೃ... ಮತ್ತು ಧನವಿಷ್ಣು ಎಂಬ ಸೋದರರಿಬ್ಬರು ಏರಣ (E... ಎಂಬಲ್ಲಿ ಶ್ರೀ ಜನಾರ್ದನ ದೇವರ ಪ್ರೀತ್ಯರ್ಥವಾಗಿ ಗುಪ್ತ... ೧೬೫ರಲ್ಲಿ ಆಷಾಢ ಶುಕ್ಲ ದ್ವಾದಶಿ ಗುರುವಾರದಂದು ಧ್ವಜಸ್ತಂಭವನ್ನು ಪ್ರತಿಷ್ಠಿಸಿದುದು;

(ಆ) ಪರಿವ್ರಾಜಕ ಮಹಾರಾಜನಾದ ಹಸ್ತಿ... ದತ್ತಿ–ಗುಪ್ತ ಸಂ। ೧೫೬ ಮಹಾ ವೈಶಾಖ ಸಂ... ಕಾರ್ತಿಕ ಶುಕ್ಲ ತದಿಗೆಯಂದು;

(ಇ) ಅದೇ ಪರಿವ್ರಾಜಕ ಮಹಾರಾಜ ಹಸ್ತಿಯ... ಗುಪ್ತ ಸಂ। ೧೬೩ 6 ಮಹಾಶ್ವಯುಜ ಸಂವತ್ಸರ... ಶುಕ್ಲ ಬಿದಿಗೆಯಂದು;

(ಈ) ಅದೇ ಮಹಾರಾಜನ ದತ್ತಿ–ಗುಪ್ತ ಸಂ। ... ಮಹಾಚೈತ್ರ ಸಂವತ್ಸರದ ಮಾಘ ಬಹುಳ ತದಿಗೆಯಂ...

(ಉ) ಸಂಕ್ಷೋಭನೆಂಬ ಅರಸನ ದತ್ತಿ––ಗುಪ್ತ... ೨೦೯ ಮಹಾಶ್ವಯುಜ 7 ಸಂವತ್ಸರದ ಚೈತ್ರ ಕೃಷ್ಣ... ದಶಿಯಂದು;

(ಊ) ಉಪರ್ಯುಕ್ತ ಮೋರ್ವಿಯ ತಾಮ್ರ... ಗುಪ್ತ ಸಂ। ೫೮೫ ಫಾಲ್ಗುಣ ಶುಕ್ಲ ಪಂಚಮಿ... ಯುಳ್ಳ, ಇದರಲ್ಲಿ ಸೂರ್ಯಗ್ರಹಣವನ್ನು ಉಲ್ಲೇಖಿ...

ಇವಾರರಲ್ಲಿ ನನ್ನ ವಿಚಾರಕ್ಕೆ ಗರಿಷ್ಠವೆಂದು ತೋರಿ... ನನ್ನ ಶೋಧನಕ್ಕೆ ಮಹಿಷ್ಠವಾಗಿ ನೆರೆಯಾದುದೂ ಕೊನೆಗೆ ಹೇಳಿರುವ ಮೋರ್ವಿಯ ತಾಮ್ರಪಟ್ಟವೇ; ಹೇ...

ಗುಪ್ತಕಾಲಾರಂಭವು ಯಾವಂದಾದುದೆಂದು ನಿಷ್ಕೃಷ್ಟ... ತನಕ, ಅದು ಹೇಗೂ ಶಕಕಾಲಾರಂಭಕ್ಕಿಂತ ಈಚೆಯ...

---

6 ಈ ಗುಪ್ತ ಸಂ। ೧೬೩ ಎಂಬುದನ್ನು E. H. D.(App. A) ಯಲ್ಲಿ ಸಂ। ೧೬೩ ಎಂದು ಯಾವ ಆಧಾರದಿಂದ ಪಲ್ಲಟಿಸಿದರೋ !!

7 ಸಂವತ್ಸರಾದಿಯಲ್ಲಿ ಗುರು ಮೇಷದಲ್ಲಿದ್ದ ಸಂವತ್ಸರವೇ ಮಹಾಶ್ವಯುಜ; ವೃಷಭದಲ್ಲಿದ್ದ ಸಂವತ್ಸರ ಮಹಾಕಾರ್ತಿಕ. ಹಾಗೆಯೇ ತುಲಾರಾಶಿಯಲ್ಲಿ ಇದ್ದ ಸಂವತ್ಸರ ಮಹಾಚೈತ್ರ, ವೃಶ್ಚಿಕದಲ್ಲಿದ್ದುದು ಮಹಾವೈಶಾಖ.

ಕ್ರಿ. ಶ. ೩೧೯–೩೨೦ರಿಂದ ಈಚೆಯದೆಂದಿಗೂ ಆಗಲಾರದೆಂದೂ ಇಷ್ಟೊಂದು ನಿಶ್ಶಂಕವಾಗಿ ಕಂಡಿತವಿರುವುದರಿಂದ, ಶಕಕಾಲಾರಂಭವನ್ನೇ ಅದರ ವರಿಷ್ಠಾವಧಿಯೆಂದೂ ಕ್ರಿ. ಶ. ೩೧೯–೩೨೦ನ್ನು ಅದರ ಕನಿಷ್ಠಾವಧಿಯೆಂದೂ ಇಟ್ಟುಕೊಳ್ಳೋಣ. ಆ ಪ್ರಕಾರ ಈ ತಾಮ್ರಪಟ್ಟದ ಗುಪ್ತ ಸಂವತ್ ೫೮೫ ಎಂಬುದರ ವರಿಷ್ಠಾವಧಿ ಕ್ರಿ. ಶ. ೭೮+೫೮೫=ಕ್ರಿ. ಶ. ೬೬೩, ಮತ್ತು ಕನಿಷ್ಠಾವಧಿ ಕ್ರಿ. ಶ. ೩೨೦+೫೮೫=ಕ್ರಿ. ಶ. ೯೦೫ ಎಂದಾಗುತ್ತದಷ್ಟೆ. ಈಗ ಈ ಕ್ರಿ. ಶ. ೬೬೩ ರಿಂದ ೯೦೫ ವರೆಗಣ ಯಾವೆಲ್ಲ ವರ್ಷಗಳಲ್ಲಿ ನಮ್ಮ ಮಾಘ ಬ| ಅಮಾವಾಸ್ಯೆಯಂದು ಸೂರ್ಯಗ್ರಹಣಗಳು ಇದ್ದುವೆಂದು ನೋಡಿದರೆ,

(೧) ೨೨ ಜನವರಿ ೬೭೮
(೨) ೨೮ ಜನವರಿ ೬೯೭
(೩) ೨೯ ಜನವರಿ ೭೬೨
(೪) ೧೦ ಫೆಬ್ರವರಿ ೭೮೦
(೫) ೩೦ ಜನವರಿ ೭೮೯
(೬) ೧೧ ಫೆಬ್ರವರಿ ೮೦೭
(೭) ೩೧ ಜನವರಿ ೮೦೮
(೮) ೧೦ ಫೆಬ್ರವರಿ ೮೪೫
(೯) ೧ ಫೆಬ್ರವರಿ ೮೫೪
(೧೦) ೧ ಫೆಬ್ರವರಿ ೮೭೩
(೧೧) ೧ ಫೆಬ್ರವರಿ ೮೯೨
(೧೨) ೨೨ ಜನವರಿ ೯೦೧

ಈ ೧೨ ಗ್ರಹಣಗಳು ಆದುವೆಂಬ ತಿಳಿಯುತ್ತದೆ. ಈಗ ಗುಪ್ತ ಸಂ| ೨೦೯ ಮಹಾಶ್ವಯುಜವೆಂದು ಸಂಕ್ಷೋಭನ ಶಾಸನದಲ್ಲಿದೆ ಎಂದು ಮೇಲೆ ಹೇಳಿದೆಯಷ್ಟೆ. ಈ ೧೨ ಸೂರ್ಯಗ್ರಹಣಗಳಾದ ಈ ಅನ್ಯಾನ್ಯ ೧೨ ಇಸವಿಗಳಲ್ಲಿ ಪ್ರತಿಯೊಂದು ಇಸವಿಯ ಸಂಖ್ಯೆಯಿಂದ ೫೮೫ನ್ನು ಕಳೆದು ಲಬ್ಧ ಸಂಖ್ಯೆಗೆ ೨೦೯ನ್ನು ಕೂಡಿಸಿ ದೊರೆವ ಮೊತ್ತಗಳಲ್ಲಿ ಯಾವಾವ ಸಂಖ್ಯೆಗಳ ಇಸವಿ ಮಹಾಶ್ವಯುಜವಾಗುತ್ತದೆಂಬ ನೋಡೋಣ--

(೧) ೬೭೮–೫೮೫+೨೦೯ = ಕ್ರಿ. ಶ. ೩೦೨ – ಮಹಾಶ್ರಾವಣ
(೨) ೬೯೭–೫೮೫+೨೦೯ = ಕ್ರಿ. ಶ. ೩೨೧ – ಮಹಾಚೈತ್ರ.
(೩) ೭೬೨–೫೮೫+೨೦೯ = ಕ್ರಿ. ಶ. ೩೮೬ – ಮಹಾಭಾದ್ರಪದ
(೪) ೭೮೦–೫೮೫+೨೦೯ = ಕ್ರಿ. ಶ. ೪೦೪ – ಮಹಾಚೈತ್ರ
(೫) ೭೮೯–೫೮೫+೨೦೯ = ಕ್ರಿ. ಶ. ೪೧೩ – ಮಹಾಪೌಷ್ಯ
(೬) ೮೦೭–೫೮೫+೨೦೯ = ಕ್ರಿ. ಶ. ೪೩೧ – ಮಹಾಷಾಢ
(೭) ೮೦೮–೫೮೫+೨೦೯ = ಕ್ರಿ. ಶ. ೪೩೨ – ಮಹಾಶ್ರಾವಣ
(೮) ೮೪೫–೫೮೫+೨೦೯ = ಕ್ರಿ. ಶ. ೪೬೯ – ಮಹಾಭಾದ್ರಪದ
(೯) ೮೫೪–೫೮೫+೨೦೯ = ಕ್ರಿ. ಶ. ೪೭೮ – ಮಹಾಜ್ಯೇಷ್ಠ
(೧೦) ೮೭೩–೫೮೫+೨೦೯ = ಕ್ರಿ. ಶ. ೪೯೨ – ಮಹಾಮಾಘ
(೧೧) ೮೯೨–೫೮೫+೨೦೯ = ಕ್ರಿ. ಶ. ೫೧೬ – ಮಹಾಭಾದ್ರಪದ
(೧೨) ೯೦೧–೫೮೫+೨೦೯ = ಕ್ರಿ. ಶ. ೫೨೫ – ಮಹಾಜ್ಯೇಷ್ಠ

ಆದರೆ ಈ ೧೨ ವರ್ಷಗಳಲ್ಲಿ ಒಂದೇ ಒಂದಾದರೂ ಮಹಾಶ್ವಯುಜವಲ್ಲವಷ್ಟೆ ಎಂದು ಗಾಬರಿಗೊಳಲಾಗದು; ಏಕೆಂದರೆ ಗುಪ್ತ ಸಂ| ಗಳಾದ ೫೮೫ ಮತ್ತು ೨೦೯ ಎಂಬಿವು ಅತೀತ ವರ್ಷಗಳ ಸಂಖ್ಯೆಯನ್ನು ಸೂಚಿಸುತ್ತವೊ ಅಲ್ಲವೆ ವರ್ತಮಾನ ಸಂವತ್ಸರದ ಸಂಖ್ಯೆಯನ್ನು ಸೂಚಿಸುತ್ತವೊ ಎಂಬುದನ್ನೇನೂ ಆಯಾ ಶಾಸನದಲ್ಲಿ ಹೇಳಿಲ್ಲ; ಅತೀತ–ವರ್ತಮಾನ ಸಂಖ್ಯೆಗಳಲ್ಲಿ ಒಂದೆರಡು ವರ್ಷದ ವ್ಯತ್ಯಾಸ ಬರುವುದು ಸಹಜವೇ. ಈ ಮೇಲಣ ೧೨ ವರ್ಷಗಳಲ್ಲಿ ಕ್ರಿ. ಶ. ೩೮೬ ಕ್ರಿ. ಶ. ೪೬೯ ಮತ್ತು ಕ್ರಿ. ಶ. ೫೧೬ ಈ ಮೂರು ಸಂವತ್ಸರಗಳು ಮಹಾ ಭಾದ್ರಪದಗಳಷ್ಟೆ. ಆದುದರಿಂದ ಇವುಗಳ ಮಾರಣೆಯವೇ ಆಗಿರುವ ಕ್ರಿ. ಶ. ೩೮೭, ೪೭೦ ಮತ್ತು ೫೧೭ ಎಂಬಿವು ಮಹಾಶ್ವಯುಜ ಸಂವತ್ಸರಗಳೇ; ಮತ್ತು ಈ ಮೂರರಲ್ಲಿಯ ಯಾವೊಂದು ವರ್ಷವು ಗುಪ್ತಕಾಲದ ೨೦೯ ನೆಯ ಸಂವತ್ಸರವಾಗಿರಬೇಕೆಂಬುದು ನಿಸ್ಸಂದೇಹವಾಗಿ ಖಚಿತವೇ.

ಗುಪ್ತ ಸಂ| ೧೬೫ರಲ್ಲಿ ಆಷಾಢ ಶುಕ್ಲ ದ್ವಾದಶಿ ಗುರುವಾರದಂದು ಬಂದಿತ್ತೆಂದು ಬುಧಗುಪ್ತನ ಕಾಲದೊಂದು ಶಾಸನದಿಂದ ತಿಳಿಯುತ್ತದೆಂದು ಮೇಲೆ ಹೇಳಿದೆಯಷ್ಟೆ. ಈಗ

ಕ್ರಿ. ಶ. ೩೮೭, ೪೭೦ ಮತ್ತು ೫೧೭ ಈ ೩ ವರ್ಷಗಳು ಗುಪ್ತ ಕಾಲದ ೨೦೯ ನೆಯ ಸಂವತ್ಸರಗಳೆಂಬುದರಿಂದ, ಇವುಗಳ ಆಯಾ ವರ್ಷ ಸಂಖ್ಯೆಯಿಂದ ೨೦೯ ನ್ನು ಕಳೆದು, ಆಯಾ ಲಬ್ಧಕ್ಕೆ ೧೬೫ನ್ನು ಕೂಡಿಸಿ ಬರುವ ಕ್ರಿ. ಶ. ೩೪೩, ಕ್ರಿ. ಶ. ೪೨೬, ಮತ್ತು ಕ್ರಿ. ಶ. ೪೭೩ ಈ ೩ ವರ್ಷಗಳಲ್ಲಿಯ ಯಾವ ವರ್ಷದಲ್ಲಿ ಆಷಾಢ ಶುಕ್ಲ ದ್ವಾದಶಿ ಗುರುವಾರದಂದು ಬಂತೆಂದು ಲೆಕ್ಕಹಾಕಿ ನೋಡಿದರೆ, ಕ್ರಿ. ಶ. ೪೨೬ ರಲ್ಲಿ ಮಾತ್ರ ಆಷಾಢ ಶು। ದ್ವಾದಶಿ ಜೂನು ೩ನೆಯ ತಾರೀಕು ಗುರುವಾರದಂದು ಬಂದಿತ್ತು; ಮಿಕ್ಕೆರಡು ವರ್ಷಗಳಲ್ಲಿ ಆ ತಿಥಿ ಗುರುವಾರದಂದು ಬಂದಿರಲಿಲ್ಲ.

ಆದುದರಿಂದ ಕ್ರಿ. ಶ. ೪೨೬ರ ವರ್ಷಸಂಖ್ಯೆಯಿಂದ ೧೬೫ನ್ನು ಕಳೆದರೆ, ಗುಪ್ತಕಾಲದ ಪ್ರಥಮ ವರ್ಷಕ್ಕೆ ಸರಿಯಾದ ಕ್ರಿ. ಶ. ವರ್ಷವು ಲಭಿಸಲೇ ಬೇಕು—ಕ್ರಿ. ಶ. ೪೨೬–೧೬೫=ಕ್ರಿ. ಶ. ೨೬೧. ಹೀಗಾಗಿ ಗುಪ್ತಕಾಲದ ಪ್ರಥಮ ವರ್ಷವು ಕ್ರಿ. ಶ. ೨೬೧ ಎಂದು ನಿಸ್ಸಂದೇಹವಾಗಿ ಸಿದ್ಧವಾಗುತ್ತದೆ; ಅಂದರೆ **ಗುಪ್ತಕಾಲವು ಕ್ರಿ. ಶ. ೨೬೦–೨೬೧ ರಲ್ಲಿ ಪ್ರಾರಂಭಿಸಿತೆಂದು ನಿಷ್ಪನ್ನವಾಗುತ್ತದೆ.**

ಈಗ ಈ ಮೇಲೆ ಹೇಳಿರುವ ಆವಾರು ಸಾಧನಗಳು ಕ್ರಿ. ಶ. ೨೬೦–೨೬೧ ಗುಪ್ತ ಕಾಲಾರಂಭದ ವರ್ಷವೆಂಬೀ ನನ್ನ ಹೇಳಿಕೆಗೆ ಹೊಂದಿಕೆಯಾಗುತ್ತವೊ ನೋಡೋಣ—

(೧) ಗುಪ್ತ ಸಂ। ೧೬೫ರಲ್ಲಿ ಆಷಾಢ ಶು। ದ್ವಾದಶಿ ಗುರುವಾರವೆಂದರೆ, ಕ್ರಿ. ಶ. ೨೬೧+೧೬೫ = ಕ್ರಿ. ಶ. ೪೨೬ನೆಯ ಜೂನ ೩ನೆಯ ತಾರೀಖು ಗುರುವಾರ;

(೨) ಗುಪ್ತ ಸಂ। ೧೫೬ ಮಹಾವೈಶಾಖ– ಕ್ರಿ. ಶ. ೨೬೧+೧೫೬=ಕ್ರಿ. ಶ. ೪೧೭, ಮಹಾ ವೈಶಾಖ.

(೩) ಗುಪ್ತ ಸಂ। ೧೬೩ ಮಹಾಶ್ವಯುಜ 8 ಕ್ರಿ.ಶ. ೨೬೦+೧೬೩=ಕ್ರಿ. ಶ. ೪೨೩. ಗುಪ್ತ ಸಂವತ್ಸರವು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯ ಪಟ್ಟಿರುವಂತೆ ಚೈತ್ರಾದಿಯಲ್ಲ, **ಅದು ಕಾರ್ತಿಕಾದಿ ತಾನೆ** ಎಂದು ನನಗೆ ತೋರುತ್ತದೆ. ಕ್ರಿ. ಶ. ೪೨೩ನೆಯ ಮೇಷ ಸಂಕ್ರಾಂತಿಯಂದು ( ೧೮ ನೆ ಮಾರ್ಚಿ ) ಗುರು ವೃಷಭರಾಶಿಗೆ ಬಂದಿರುವುದರಿಂದ ಕ್ರಿ. ಶ. ೪೨೩ರಲ್ಲಿ ತೊಡಗುವ ಚೈತ್ರಾದಿ ಸಂವತ್ಸರವು ಮಹಾ... ವಲ್ಲದೆ ಮಹಾಶ್ವಯುಜವಾಗದು. ಆದರೆ ಕಾರ್ತಿಕಾದಿ... ಗುಪ್ತ ಸಂ। ೧೬೩ ಎಂಬುದು ಕ್ರಿ. ಶ. ೪೨೨ ನೆಯ ... (ಸಪ್ಟಂಬರ–ಅಕ್ಟೋಬರ) ಮಾಸದಲ್ಲಿ ತೊಡಗುವಂದು, ... ಮೇಷರಾಶಿಯಲ್ಲಿ ತಾನೆ ಇದ್ದುದರಿಂದ, ಆಗಣಿಂದ ... ವರ್ಷದ (ಅಂದರೆ ಕ್ರಿ. ಶ. ೪೨೩ನೆಯ) ಆಶ್ವೀಜಮಾಸ... ಗಣ ಸಂವತ್ಸರವು ಮಹಾಶ್ವಯುಜವೇ ಎಂದಾಗುವ... ಎಂದಿಗೂ ಮಹಾಕಾರ್ತಿಕವೆನಿಸಲಾರದು.

(೪) ಗುಪ್ತ ಸಂ। ೧೯೧ ಮಹಾಚೈತ್ರ– ಕ್ರಿ. ಶ. ... ೧೯೧=ಕ್ರಿ. ಶ. ೪೫೨, ಮಹಾಚೈತ್ರ;

(೫) ಗುಪ್ತ ಸಂ। ೨೦೯ ಮಹಾಶ್ವಯುಜ– ... ೨೬೧+೨೦೯=ಕ್ರಿ. ಶ. ೪೭೦, ಮಹಾಶ್ವಯುಜ;

(೬) ಗುಪ್ತ ಸಂ। ೫೮೫ರ ಫಾಲ್ಗುಣ ಶು। ೫ ಯ ... ಹೇಳಲ್ಪಡುವ (ಅಂದರೆ ನಮ್ಮ ಮಾಘ ಬ। ೩೦ ಯೆಂದು ... ವಿಸಿರಬೇಕೆಂದು ಈ ಮೇಲೆ ನಿರ್ಧರಿಸಿರುವ) ಸೂರ್ಯಗ್ರ... ಕ್ರಿ. ಶ. ೨೬೦+೫೮೫=ಕ್ರಿ. ಶ. ೮೪೫ನೆಯ ಫೆಬ್ರುವರಿ ೧... ತಾರೀಕಿನಂದು ( ನಮ್ಮ ಮಾಘ ಬ। ೩೦ ) ಆದ ... ಸೂರ್ಯಗ್ರಹಣ.

ಇಲ್ಲಿ ಕೆಲ ಕಡೆಯಲ್ಲಿ ೨೬೦, ಕೆಲ ಕಡೆಯಲ್ಲಿ ... ಹೀಗೇಕೆ ಕೂಡಿಸಿದೆಂದು ಶಂಕೆಯಾಗಬಹುದು. ಈ ... ಒಮ್ಮೆ ಹೇಳಿರುವಂತೆ ಈ ವಾರದಲ್ಲಿ ಯಾವೊಂದರಲ್ಲಿಯೂ ... ಆಯಾ ಶಾಸನೋಕ್ತ ಸಂವತ್ಸಂಖ್ಯೆ ವರ್ತಮಾನ ಸಂ... ಸಂಖ್ಯೆಯೊ ಅಥವಾ ಗತಿಸಿದ ವರ್ಷಗಳ ಸಂಖ್ಯೆಯೊ ... ಹೇಳಿಲ್ಲವಾದುದರಿಂದ, ಹೀಗೆ ಮಾಡದೆ ಕಾಲನಿರ್ಣ... ಯಾಗದು.

ಈಗ ಗುಪ್ತ ಕಾಲಾರಂಭದ ವರ್ಷವೆಂದು ನಾನಿಂತು ... ಹಿಡಿದಿರುವ ಈ ಕ್ರಿ. ಶ. ೨೬೦–೨೬೧ ಸರಿಯೋ ಎಂಬು... ಇನ್ನು ಪರೀಕ್ಷಿಸೋಣ.

(೭) ವಲಭೀ, ಅರಸಾದ ಧರಸೇನನ ಸಂವತ್ ... ಭಟ್ಟಕಪತ್ರದತ್ತಿಯಲ್ಲಿ ವೈಶಾಖ ವದ್ಯ ೧೫ನೆಯ ತಿಥಿಯ...

8 ಡಾ। ಭಾಂಡಾರಕರರ P. H. D. (App. A.)ಯಲ್ಲಿ ಇದನ್ನು 'ಗುಪ್ತ ಸಂವತ್ ೧೬೩ ಮಹಾಶ್ವಯುಜ' ಎಂದು ಹೇಳಿದೆ. ... ಯಾಗಿರುವ ಪಕ್ಷದಲ್ಲಿ, ಗುಪ್ತಕಾಲಾರಂಭಕ್ಕೆ ನಾನು ಗೊತ್ತು ಹಚ್ಚಿರುವ ಕ್ರಿ. ಶ. ೨೬೦-೨೬೧ರ ಮೇರೆಗೆ, ಗುಪ್ತ ಸಂ। ೧೬೩ ಎಂದರೆ ಕ್ರಿ. ಶ. ... ೧೬೩=ಕ್ರಿ. ಶ. ೪೨೪ ಎಂದಾಗುತ್ತದೆ; ಕ್ರಿ. ಶ. ೪೨೪ ಮಹಾಶ್ವಯುಜ ಸಂವತ್ಸರ.

( ಅಂದರೆ ನಮ್ಮ ಚೈತ್ರ ಬಹುಳ ಅಮಾವಾಸ್ಯೆಯಂದು ) ಸೂರ್ಯಗ್ರಹಣವಿತ್ತೆಂದು ಇದೆ ಎಂದೀ ಮೇಲೆ ಕಂಡಿರುವೆವಷ್ಟೆ. ಈ ಸಂವತ್ ೨೫೭ ಎಂಬುದು ವರ್ತಮಾನ ಸಂವತ್ಸಂಖ್ಯೆಯಾಗಿರಬೇಕೆಂದು ಕಾಣುವುದರಿಂದ, ಅತೀತ ವರ್ಷಗಳ ಸಂಖ್ಯೆ ೨೫೬; ಆದುದರಿಂದ ಆ ಸಂವತ್ಸರವು ಕ್ರಿ. ಶ. ೨೬೦+೨೫೬=ಕ್ರಿ. ಶ. ೫೧೬. ಈ ಕ್ರಿ. ಶ. ೫೧೬ನೆಯ ಏಪ್ರೀಲು ತಾರೀಕು ೧೭ ರಂದು, ಗುಜರಾತತ್ತ್ರಕಡೆಯವರ ವೈಶಾಖ ಬ। ೩೦ (ಅಂದರೆ ನಮ್ಮ ಚೈತ್ರ ಬ। ೩೦) ನೆಯ ತಿಥಿಯಲ್ಲಿ ಸೂರ್ಯನಿಗೆ ಕಂಕಣ ಗ್ರಹಣವಿತ್ತು. ಮಾತ್ರವಲ್ಲ, ಅದು ಭರತಖಂಡದಲ್ಲೆಲ್ಲ ದೃಶ್ಯವಾಗಿತ್ತು. ಎಂಬುದರಿಂದ ಈ ತಾಮ್ರಪಟ್ಟವೆಂದಿಗೂ ಕೃತ್ರಿಮವಲ್ಲ, ತುಂಬ ವಾಸ್ತವಿಕವೇ ಎಂದು ನಿಷ್ಕೃಷ್ಟವಾಗುತ್ತದೆ.

(೮) ನೇಪಾಳದಲ್ಲಿ ಆಳಿದ ಮಾನದೇವನೆಂಬ ಅರಸನ ಶಾಸನದಲ್ಲಿ, ಸಂ। ೩೮೬ರಲ್ಲಿ ಜ್ಯೇಷ್ಠ ಶುಕ್ಲ ಪಾಡ್ಯದಂದು ರೋಹಿಣಿ ನಕ್ಷತ್ರ ಇದ್ದಿತೆಂದು ಹೇಳಿದೆ. (M. A R—1926: ಪು. ೨೨) ಕ್ರಿ. ಶ. ೨೬೧+೩೮೬=ಕ್ರಿ. ಶ. ೬೪೭ ರಲ್ಲಿ ಮೇ ತಿಂಗಳ ೧೦ನೆಯ ತಾರೀಕು ಜ್ಯೇಷ್ಠ ಶು। ಪಾಡ್ಯದಂದು ರೋಹಿಣಿ ನಕ್ಷತ್ರವು ಸೂರ್ಯೋದಯಾತ್ಪರ ೧೪ ಗಳಿಗೆ ೨೪ ಪಲ ಕಾಲಗಳವರೆಗಿತ್ತು.

## ಸಮುದ್ರಗುಪ್ತ.

ಸಮ್ರಾಜರಾಗಿದ್ದ ಗುಪ್ತರ ( Imperial Guptas ) ವಂಶಾವಳಿ ಹೀಗಿದೆ—



(೯) ಗುಪ್ತವಂಶೀಯ ೫ನೆಯ ಸಮ್ರಾಜನಾಗಿದ್ದ ಸಮುದ್ರಗುಪ್ತನ ಮಗನಾದ ದ್ವಿತೀಯ ಚಂದ್ರಗುಪ್ತನ ಮಥುರೆಯಲ್ಲಿ ಈಚೆಗೆ ದೊರಕಿದೊಂದು ಶಾಸನದಲ್ಲಿ ಹೀಗಿದೆಯಂತೆ 9 —

'ಭಟ್ಟಾರಕ ಮಹಾರಾಜ ರಾಜಾಧಿರಾಜ ಶ್ರೀ. ಸಮುದ್ರಗುಪ್ತಸ್ಯ ಸತ್ಪುತ್ರಸ್ಯ ಭಟ್ಟಾರಕ ಮಹಾರಾಜ ರಾಜಾಧಿರಾಜ ಶ್ರೀ. ಚಂದ್ರಗುಪ್ತಸ್ಯ ವಿಜಯ ರಾಜ್ಯ ಸಂವತ್ಸರೇ (... ... ಪ್ರಥಮೇ?) ಗುಪ್ತ ಕಾಲಾನು ... ... ಸಂವತ್ಸರೇ ಏಕಷಷ್ಠೇ ೬೦–೧ ಆಷಾಢಮಾಸೇ ಪ್ರಥಮೇ ಶುಕ್ಲ ದಿವಸೇ ಪಂಚಮ್ಯಾಂ ಅಸ್ಯಾಂ ಪೂರ್ವಾಯಾಂ........'

ಇದರಿಂದ ಸಮುದ್ರಗುಪ್ತನು ಗುಪ್ತ ಸಂ। ೬೦ರಲ್ಲಿ ಗತಿಸಿದನೆಂದು ನಿಷ್ಪನ್ನವಾಗುತ್ತದೆ; ಅಂದರೆ ಗುಪ್ತ ಕಾಲಾರಂಭಕ್ಕೆ ನಾನು ನಿರ್ಣಯಿಸಿರುವ ತೇದಿಯ ಪ್ರಕಾರ ಕ್ರಿ. ಶ. ೨೬೦–೨೬೧+೬೦= ಕ್ರಿ. ಶ. ೩೨೦–೩೨೧ ರಲ್ಲಿ ಈಗ ಈ ಒಕ್ಕಣೆಯಲ್ಲಿರುವ 'ಆಷಾಢ ಮಾಸೇ ಪ್ರಥಮೇ' ಎಂಬುದರಿಂದ ಗುಪ್ತ ಸಂ। ೬೧ರಲ್ಲಿ ಆಷಾಢಮಾಸವು ಅಧಿಕವಾಗಿರಬೇಕೆಂದೂ, ಈ ದತ್ತಿಯ ತೇದಿ ಆ ಪ್ರಥಮ ಮಾಸದ, ಅಂದರೆ ಅಧಿಕ ಆಷಾಢ ಮಾಸದ, ಶುಕ್ಲ ಪಂಚಮಿಯಾಗಿರಬೇಕೆಂದೂ ಪ್ರಥಮ ದರ್ಶನಕ್ಕೆ ತೋರುವುದು ಸಹಜವೇ. ಆದರೆ ಹಾಗಾಗಿರಲಾರದೆಂದು ನನ್ನ ಅಭಿಪ್ರಾಯ; ಏಕೆಂದರೆ 'ಪ್ರಥಮೇ' ಎಂಬ ಸಂಖ್ಯಾವಾಚಿಯನ್ನು ಅಧಿಕಮಾಸವೆಂಬ ಅರ್ಥದಲ್ಲಿ 'ಆಷಾಢ ಮಾಸೇ' ಎಂಬುದರೊಡನೆ ಅನ್ವಯಿಸಿದರೆ, 'ಶುಕ್ಲ ದಿವಸೇ' ಎಂಬ ಪುಲ್ಲಿಂಗವಾಚಿಯನ್ನು 'ಪಂಚಮ್ಯಾಂ' ಎಂಬ ಸ್ತ್ರೀಲಿಂಗವಾಚಿಯೊಡನೆ ಅನ್ವಯಿಸಲೇ ಬೇಕಾಗುತ್ತದೆ, ಆದರೆ ಹೀಗೆ ಮಾಡುವುದು ಸಂಸ್ಕೃತ ವ್ಯಾಕರಣ ಸೂತ್ರಕ್ಕೆ ತೀರ ವಿರೋಧವೆಂದು ಬೇರೆ ಹೇಳಬೇಡ. 10 ಅದಲ್ಲದೆ ಈ ಶಾಸನವು ಗದ್ಯದಲ್ಲಿದೆಯಲ್ಲದೆ ಪದ್ಯಬದ್ಧವಾಗಿಲ್ಲವೆಂಬುದರಿಂದ, 'ಪ್ರಥಮೇ' ಎಂಬುದನ್ನು ಅಧಿಕಮಾಸವೆಂಬ ಅರ್ಥದಲ್ಲಿ ಹೇಳಿದ್ದರೆ, 'ಪ್ರಥಮಾಷಾಢಮಾಸೇ' ಎಂದಾಗಲಿ, 'ಪ್ರಥಮೇ ಮಾಸೇ' ಎಂದಾಗಲಿ, 'ಆಷಾಢ ಮಾಸೇ' ಎಂಬುದರ ... ಇಡಬೇಕಿತ್ತಲ್ಲದೆ, ಈ ಶಾಸನದಲ್ಲಿಟ್ಟಿರುವಂತೆ ಅದರ ಬಳಿ... ಪದ್ಯದಲ್ಲಾದರೆ ವಿಶೇಷ್ಯ ವಿಶೇಷಣಗಳನ್ನು ಛಂದೋನುಸಾ...ಗಾಗಿ ವಿಜೋಡಿಸಿ, ಬೇರೆ ಬೇರೆಯಾಗಿ, ದೂರದೂರ... ಬೇಕಾಗುತ್ತದಾದರೆ, ಗದ್ಯದಲ್ಲಿ, ಅವನ್ನು ಯಥಾಸ್ಥಾ... ಇಡಬೇಕಷ್ಟೆ. ಆದುದರಿಂದ ಇದು 'ಆಷಾಢ ಮಾಸೇ ಪ್ರ... ದಿವಸೇ ಶುಕ್ಲ ಪಂಚಮ್ಯಾಂ' ಎಂದು ತಾನೆ ಒಕ್ಕಣಿಸಲ್ಪ... ಅದನ್ನು ಓಜನು ಕೆತ್ತುವಾಗ ಕೆಯ್ತಪ್ಪಿಂದೇನೋ '... ಎಂಬ ಪದವು ಹಿಂದುಮುಂದಾಗಿರಬೇಕು ಎಂದೇ ನನಗೆ ...ತ್ತದೆ; ಆದುದರಿಂದ ಇದರ ಅರ್ಥವು 'ಆಷಾಢ ಮಾ... (ಹಪ್ತೆಯ) ಮೊದಲನೆಯ ವಾರ (ಅಂದರೆ ರವಿವಾರ)... ಶುಕ್ಲ ಪಂಚಮಿಯ (ತಿಥಿಯ)ಲ್ಲಿ' ಎಂದಾಗುತ್ತದೆ- ... ಈ ದತ್ತಿಯ ತೇದಿ ಆಷಾಢ ಶುಕ್ಲ ಪಂಚಮಿ ... ಎಂದು ನನ್ನ ಅಭಿಪ್ರಾಯ. ಇದು ಸರಿಯೆಂದಾದ... ಕಾಲಾರಂಭಕ್ಕೆ ನಾನು ಗೊತ್ತು ಹಚ್ಚಿರುವ ತೇದಿಯ (ಕ್ರಿ... ೨೬೦–೨೬೧) ಪ್ರಕಾರ, ಮತ್ತು ಗುಪ್ತ ಸಂವತ್ಸರವು ... ಕಾದಿ ಎಂದು ಈ ಮೇಲೆ ಹೇಳಿರುವ ನನ್ನ ನಿರ್ಧಾರದ ಪ್ರ... ಈ ದತ್ತಿಯ ಗುಪ್ತ ಸಂ। ೬೧ ಎಂಬುದು ಕ್ರಿ. ಶ. ೩೨೧... ಕ್ರಿ. ಶ. ೩೨೨ರ ಕಾರ್ತಿಕ (ಸಪ್ಟಂಬರ–ಅಕ್ಟೋಬರ)... ಮರುವರ್ಷದ (ಕ್ರಿ. ಶ. ೩೨೩) ಅದೇ ತಿಂಗಳ ... ಸಂವತ್ಸರವಷ್ಟೆ; ಅತ ಏವ ಆ ಸಂವತ್ಸರದ ಆಷಾಢ ... ರವಿವಾರ ಎಂದರೆ ಕ್ರಿ. ಶ. ೩೨೩ರ ಮೇ ೨೬ನೆಯ ... ರವಿವಾರ.

9 ಈ ದತ್ತಿಯ ಇಷ್ಟಂಶವನ್ನು ಪ್ರೀತಿಪೂರ್ವಕವಾಗಿ ನನ್ನ ಅವಗಾಹನೆಗೆ ತಂದ ಬಗ್ಗೆ ಶ್ರೀಮಾನ್ ಡಿ. ಬಿ. ದಿಸ್ಕಲಕರರವರಿಗೆ (Cur. Arch. Museum, Muttra) ಅತ್ಯಂತ ಕೃತಜ್ಞನಾಗಿರುತ್ತೇನೆ.

10 ಈ ಬಗ್ಗೆ ಗುಪ್ತ ಸಮ್ರಾಜರ ಶಾಸನಗಳಿಂದಲೇ ಇವೆರಡು ದೃಷ್ಟಾಂತಗಳನ್ನು ಕೊಡಬಹುದು. (೧) ಸ್ಕಂದಗುಪ್ತನ 'ಗಿರ್ನಾರ್' ಶಿಲಾಲೇಖದಲ್ಲಿ (ಗುಪ್ತ ಸಂ। ೧೩೭): ದಿನೇ ಪ್ರೋಷ್ಠ ಪದಸ್ಯ ಷಷ್ಠೇ, (ಶ್ಲೋ. ೨೭); (೨) ಕುಮಾರಗುಪ್ತನ 'ಮಂದಸೋರ್' ಶಿಲಾಲೇಖದಲ್ಲಿ (ಗುಪ್ತ ಸಂ। ೫೨೯): 'ಸಹಸ್ಯ ಮಾಸಸ್ಯ ಶುಕ್ಲಸ್ಯ ಪ್ರಶಸ್ತೇಹ್ನಿ ತ್ರಯೋದಶೇ, (ಶ್ಲೋ. ೩೫). ಇವುಗಳಲ್ಲಿ 'ದಿನೇ' ಮತ್ತು 'ಅಹ್ನಿ' ಎಂಬಿವು ಸ್ತ್ರೀಲಿಂಗವಲ್ಲದಿರುವುದರಿಂದ 'ಷಷ್ಠ್ಯಾಮ್' 'ತ್ರಯೋದಶ್ಯಾಮ್' ಎಂಬ ಸ್ತ್ರೀಲಿಂಗರೂಪಗಳನ್ನು ಉಪಯೋಗಿಸದೆ, 'ಷಷ್ಠೇ' 'ತ್ರಯೋದಶೇ' ಎಂದು ಹೇಳಿದೆ.

11 ಹಪ್ತೆಯ ಕೊನೆಯ ದಿನವಾದ ಶನಿವಾರಕ್ಕೆ 'ಪಶ್ಚಿಮೇಹನಿ' ಎಂದಿರುವುದು ಆಲೂಪ ವಂಶೀಯ ಕುಂದವರ್ಮನೆಂಬ ಅರಸನ ... ಶ. ೯೩೦) ದಲ್ಲಿದೆ—'ಪಶ್ಚಿಮೇಹನಿ ರೋಹಿಣ್ಯಾಂ ಮುಹೂರ್ತೇ ಶುಭಲಕ್ಷಣೇ' (ಶ್ಲೋ. ೮.) ['ಕರ್ನಾಟಕ ಕೇಸರಿ,—೧. ೫ 'ಕದ್ರಿಯಲ್ಲಿರುವ ...ದೊಂದು ಶಾಸನ' ಎಂಬ ನನ್ನ ಲೇಖನವನ್ನು ನೋಡುವುದು.]

# ಶಿವಷಷ್ಟಿ ಪುರಾತನರಲ್ಲೊಬ್ಬರಾದ ಐಯಡಿಯರು



ಲೇಖಕರು :— ಶ್ರೀ ಮಹಾದೇವಪ್ಪ ಮಿರ್ಜಿ, ಹುಬ್ಬಳ್ಳಿ

ಪೊಡವಿ ತೀವಿರೆ ಶಿವನ ಗುಡಿಗಳಂ ರಚಿಸಿದೈ ।
ಯಡಿಯರಡಿದಾವರೆಗಳಂ ನೆನೆದು ಸುಖಂ ।
ಬಡುವೆ ನೆಸ್ನಾತ್ಮದಣಿವಂತೆ ॥
(ಶ್ರೀ ನಿಜಗುಣರು)

ಸತ್ಕೃತಿಗಳಿಗೆ ಮನವೆಳಿಸುವವರ ಅಂದರೆ ಸಜ್ಜನರ ಆವಾಸಸ್ಥಾನವಾಗಿಯೂ ಅಂತೆಯೇ ಅನೇಕ ಶಿವಮಂದಿರಗಳಿಗೆ ಬೀಡಾಗಿಯೂ ಆದುದರಿಂದಲೇ ನಾಡಿನ ಸಂಪತ್ತಿಗೆ ಕಾರಣವಾದ ನೀರಿನ ವಿಪುಲತೆ, ಫಲದ್ರೂಪವಾದ ಭೂಮಿ, ಜನತೆಗೆ ಅವಶ್ಯವೆನಿಸುವ ಖನಿಜದ್ರವ್ಯ, ಪ್ರಜಾಸಮೂಹಕ್ಕೆ ಸುಗಮವೆನಿಸುವ ಪರಿಪಾಲನಧರ್ಮ ಇವುಗಳಿಂದ ಶೋಭಿಸುವ ಚೋಳಮಂಡಲವು ಶೈವರ ನೆಲೆವನೆಯಾಗಿ ರಂಜಿಸುತ್ತಿತ್ತು. ಈ ಮೇರೆಗೆ ಮಹಿಮಾತಿಶಯದಿಂದೊಪ್ಪುವ ಚೋಳೋರ್ವಿಯಲ್ಲಿ ಸಕಲ ವೈಭವದಿಂದ ತುಂಬಿತುಳುಕುವ ತಿರುವಣ್ಣೂರೆಂಬ ಪುರವು ಪಾರ್ಥಿವಕುಲೋತ್ಪನ್ನನಾದ ಐಯಡಿಯರು ಎಂಬ ಭೂತಿಲಕನ ರಾಜಧಾನಿಯಾಗಿ ಐಶ್ವರ್ಯದಿಂದೆಸೆಯುತ್ತಿತ್ತು. ಆ ಊರ ಸುತ್ತಲು ಕೆರೆಕಟ್ಟೆಕಾಲುವೆಹಳ್ಳಗಳು ಯಾವಾಗಲೂ ನೀರಿನಿಂದ ಸಮೃದ್ಧವಾಗಿದ್ದುದರಿಂದ ತರತರದ ಮನೋಹರವಾದ ತೋಟಗಳು, ಸೊಂಪಿನಿಂದ ಪಥಿಕರನ್ನಾನಂದಗೊಳಿಸುವ ಪುಷ್ಪೋದ್ಯಾನಗಳು, ಸಸಿ-ಬಳ್ಳಿ-ಗಿಡಗಳಿಂದ ಭರಿತವಾಗಿ ಆ ಪಟ್ಟಣದ ಸೊಬಗು ಚಿತ್ತಾಕರ್ಷಕವಾಗಿತ್ತು.

ಶಿವಜ್ಞಾನವಿಚಕ್ಷಣರಿಗೆ ನಮ್ಮ ಕಥಾನಾಯಕನು ಪ್ರಮಥಾಂಶಸಂಭೂತನೆಂದು ಭಾಸವಾಗುತ್ತಿತ್ತು. ಸೈರಣೆ, ಸಮಾಧಾನ, ಶಾಂತಿ, ಶಿವತೇಜ ಇವೆಲ್ಲವೂ ಸಾಕ್ಷಾತ್ಕಾರವಾಗಿ ಭೂಮಿಪನ ಮುಖಮಂಡಲದಲ್ಲಿ ಎದ್ದು ಕಾಣಿಸುತ್ತಿದ್ದವು. ಹಾಗೂ ಆತನ ನೋಟವು ಕೂಡ ಶಿವಭಾವವನ್ನು ಬೀರುತ್ತಿತ್ತು. ಪುತ್ರವಾತ್ಸಲ್ಯದಿಂದ ಸಮೀಚೀನವಾಗಿ ಪ್ರಜರನ್ನಾಳುತ್ತ ಶಿವಭಕ್ತಿಯುಕ್ತನಾಗಿ, ಶಿವಕಾರ್ಯನಿರತನಾಗಿ, ಶಿವಧ್ಯಾನಪರನಾಗಿ ಪ್ರಾಜ್ಞರೊಪ್ಪುವಂತೆ ಕಾಲಯಾಪನೆ ಮಾಡುತ್ತಿದ್ದನು.

ಶಿವನಿಂದೆ, ಶಿವಧರ್ಮತಿರಸ್ಕಾರ, ಶಿವಾಚಾರವನ್ನು ಜರಿಯುವದು, ಶಿವಗ್ರಂಥವನ್ನು ಹಳಿಯುವದು ಇವುಗಳನ್ನು ಸಹಿಸದೆ ಶಕ್ತನಾದರೆ ತಕ್ಕಪ್ರತಿಕ್ರಿಯೆಯನ್ನು ಕೈಕೊಳ್ಳುವದು ಇಲ್ಲವಾದರೆ ಆ ಸ್ಥಳದಿಂದ ಸಿಡಿದು ನಿಲ್ಲುವದು ಇವೆಲ್ಲ ಗಣಾಚಾರದ ಮುಖ್ಯಾಂಗಗಳಾಗಿ ಇರುವವು. ಸ್ಥಾವರಲಿಂಗದ ಪೂಜೆಯು ಸುಲಲಿತವಾಗಿ ನಡೆಯುವಂತೆ ಏರ್ಪಡಿಸುವದು, ಶಿವಾಲಯಗಳನ್ನು ಜೀರ್ಣೋದ್ಧಾರ ಮಾಡಿಸುವದು ಇವೆಲ್ಲ ಗಣಾಚಾರದ ಉಪಾಂಗಗಳಾಗಿರುವವು.

ಕಥಾನಾಯಕನು ಸದ್ಧರ್ಮವನ್ನು ಕಾಯ್ದುಕೊಂಡು ಪ್ರಜಾರಂಜಕನಾಗಿ ಶಿವಪ್ರೀತಿಯುತನಾಗಿರುತಿರಲು ಸಂವತ್ಸರಗಳು ದಿವಸಪ್ರಾಯವಾಗಿ ಗತಿಸಿದವು. ಹೀಗಿರುತ್ತಿರಲು ನಮ್ಮ ನರಪುಂಗವನಿಗೆ ಅವನ ಶುಭಕರ್ಮಕ್ರಿಯಾದಿಗಳಿಗನುಗುಣವಾಗಿ ಕಲ್ಯಾಣಕರನಾದ ಬಯಕೆಯು ತಲೆದೋರಿತು. ಜನಸಮೂಹಕ್ಕೆಲ್ಲ ಹಿತಕರವಾಗುವಂತೆ ರಾಜ್ಯಭಾರವನ್ನು ವಹಿಸುವದಕ್ಕೆ ಹತ್ತುವ ಖರ್ಚು ಹೋಗಲಾಗಿ ಬೊಕ್ಕಸದಲ್ಲಿ ಉಳಿಯುವ ಹಣವನ್ನೆಲ್ಲ ತನ್ನ ಸೀಮೆಯಲ್ಲಿರುವ ಶಿಥಿಲವಾದ ಈಶ್ವರಾಲಯಗಳನ್ನು ಕ್ರಮಪಡಿಸಿ ನೂತನವಾದ ಗುಡಿಗಳಂತೆ ಮಾಡಬೇಕೆಂದು ಆಲೋಚನೆಯನ್ನು ಮಾಡಿದನು. ಈ ಅಪೇಕ್ಷೆಯಿಂದ ತನ್ನ ನಾಡಿನಲ್ಲಿದ್ದ ಚತುರರಾದ ಶಿಲ್ಪಿಗಳನ್ನು ಹಾಗೂ ಜಾಣರಾದ ಉಪ್ಪಾರರನ್ನು ಬಹುಮಾನವನ್ನು ಕೊಟ್ಟು ಕರಿಸಿ ಅವರೆಲ್ಲರಿಗೂ ಈಶಗೃಹಗಳನ್ನು ಜೀರ್ಣೋದ್ಧಾರಗೊಳಿಸಲು ಅಪ್ಪಣೆಮಾಡಿ ಮೊದಲಿನಕಿಂತಲೂ ಹೆಚ್ಚು ಅಂದವಾಗಿ ಮಾಡಿಸಿ ಎಲ್ಲೆಲ್ಲಿ ಪೂಜಾದಿಗಳು ನಿಂತುಹೋಗಿದ್ದವೋ ಅಲ್ಲಲ್ಲಿ ತಪ್ಪದೆ ಕ್ರಮವಾಗಿ ಪೂಜೆಯು ನಡೆಯುವಂತೆ ವ್ಯವಸ್ಥೆಯನ್ನು ಮಾಡಿ ಸತ್ಕೀರ್ತಿಯನ್ನು ಸಂಪಾದಿಸಿ ಶಿವಧರ್ಮಧುರೀಣನಾಗಿ ಶಿವಾನಂದಪರನಾಗಿದ್ದನು. ಹೀಗಿರಲು ಆತನಿಗೆ ಬೇರೊಂದು ಕಾಂಕ್ಷೆಯು ಉತ್ಪನ್ನವಾಯಿತು, ಹೇಮಮಯವಾದ ಶ್ರೇಷ್ಠವಾದ, ಮಹೋನ್ನತವಾದ, ವಿಶಾಲವಾದ ಶಿವಾಲಯವನ್ನು

ಕಟ್ಟಿಸಬೇಕೆಂದು ಸಂಕಲ್ಪಿಸಿ ಅದರಂತೆ ಮಾಡಿಬಿಟ್ಟನು. ಆ ದೇವಾಲಯದ ಚೆಲ್ವಿಕೆಯನ್ನು ನೋಡಿ ಬೆರಗಾಗಿ ಅದರ ರಮಣೀಯತೆಯನ್ನು ಕಂಡು ಹಿಗ್ಗುತ್ತ, ಆಹರಪ್ರಾಸಾದದ ಗೋಪುರದ ಮುಗ್ಗುಲಲ್ಲಿ ನಿಂತು ಸಂತೋಷದ ಭರದಲ್ಲಿ ತನ್ನ ದೃಷ್ಟಿಗೆ ಹರಿಯುವಷ್ಟು ಗ್ರಾಮಗಳನ್ನೆಲ್ಲ ಪಾತ್ರವರಿತು ಶಿವಭಕ್ತರಿಗೆ ದಾನಮಾಡಿದನು. ಈ ಪರಿಯಾದ ಸಂಭ್ರಮಾನಂದೋತ್ಸಾಹದಿಂದ ಸ್ನಾನಮಾಡಿ ಅಲ್ಲಿಯ ಮಹಾಲಿಂಗದೆಡೆಯಲ್ಲಿ ಪದ್ಮಾಸನವನ್ನು ಹಾಕಿ ಅಷ್ಟವಿಧಾರ್ಚನೆ ಷೋಡಶೋಪಚಾರಪೂರ್ವಕವಾಗಿ ಶಿವಮೂರ್ತಿಯನ್ನು ಯಥಾವಿಧಿಯಾಗಿ ಪೂಜಿಸಿ, ನಲಿಯುತ್ತ ನಮಸ್ಕರಿಸಿ, ಪಂಚಾಕ್ಷರ ಮಹಾಮಂತ್ರವನ್ನು ಜಪಿಸಿ ಪುನಃ ಲಿಂಗಕ್ಕೆ ಕೈಮುಗಿದು, ಹಣೆಹಚ್ಚಿ ಪ್ರದಕ್ಷಿಣೆಯನ್ನು ಮಾಡಿ ಶಿವಭಜನೆಯನ್ನು ಮಾಡಿ, ಶಿವಮಹಿಮೆಯನ್ನು ಕೊಂಡಾಡಿ, ಶಿವನಾಮಗಳನ್ನು ಮಂಗಲಕರವಾಗಿ ಕೀರ್ತಿಸಿ ಶಿವಭಕ್ತಿರಸವು ಉಕ್ಕೇರಿ ಶಿವಾನಂದಮಗ್ನನಾಗಿ ನಿಜಸುಖದಲ್ಲಿ ಲೋಲಾಡಿದನು. ಆಗ ನಮ್ಮ ಚರಿತ್ರಪುರುಷನ ಅತ್ಯು[illegible] ಶಿವಭಕ್ತಿಯು ಗಣಾಧಿಪನಾದ ದೇವೋತ್ತಮನಿಗೆ ಗೋ[illegible]ವಾಗಿ ಆ ಭೂರಮಣನು ತನ್ನ ಭಾಂಡಾರವನ್ನೆಲ್ಲ ದೇವಾ[illegible]ಗಳ ಜೀರ್ಣೋದ್ಧಾರಕ್ಕಾಗಿ ವಿನಿಯೋಗಿಸಿ ಸಕಲ ಸತ್ಕೃ[illegible]ಗಳನ್ನು ನಿರಪೇಕ್ಷವಾಗಿ ಆಚರಿಸಿದ್ದುದರಿಂದ ಬಹು ಸಂತೋ[illegible]ಪಟ್ಟು ಅವನನ್ನು ಅನುಗ್ರಹಿಸಬೇಕೆಂದು ದಯಾಮ[illegible] ವಿಶ್ವನಾಥನು ಕೂಡಲೇ ನಿಜರೂಪದಿಂದ ಪ್ರಕಟನಾದನು. ಚರಿತ್ರಪುಂಗವನು ಮಂಗಲನಿಧಿಯೆನಿಸಿದ ದಿವ್ಯಸ್ವರೂ[illegible] ಕಂಡು ಮೈಯುಬ್ಬಿ ಗದ್ಗದಕಂಠನಾಗಿ ಕಾರುಣ್ಯಮೂರ್ತಿ[illegible] ಪರಿಪರಿಯಾಗಿ ಸ್ತುತಿಸಿ ಪವಿತ್ರಾತ್ಮನ ಚರಣಕ[illegible] ಮಸ್ತಕವನ್ನಿಡಿ ಆನಂದಪರವಶನಾಗಿ ಮೈಮರೆತನು. [illegible]ಲೋಚನನು ಭಕ್ತೋತ್ತಮನನ್ನು ಪ್ರೀತಿಯಿಂದ ಹಿಡಿದೆ[illegible]ರಿಸಿಕೊಂಡು ಆತನ ಮೈಮೇಲೆ ತನ್ನ ವರದ ಹಸ್ತ[illegible] ನಿತ್ಯವಾದ ಗಣಪದವಿಯನ್ನಿತ್ತು ರಕ್ಷಿಸಿದನು.

---

## ಬೆಳುದಿಂಗಳ ರಾತ್ರಿ

೧

ಮೆಲ್ಲನೆ ಸಾಗುತ ಹರಿವುದು ತೊರೆಯು
ಏಳುತ ಮೇಲಕೆ ಹೊಳೆವುದು ತೆರೆಯು
ತೇಲುತ ಸರಿವುದು ಧವಳದ ನೊರೆಯು
ಮುದದಲಿ ಹಿಗ್ಗುತ ನಲಿವುದು ತಿರೆಯು

೨

ಚಂದ್ರನ ಕಳೆಯಲಿ ಹೊಳೆವುದು ಮರಳು
ವನದಲಿ ಚಲಿಸದೆ ಮಲಗಿದೆ ನೆರಳು
ತಳಿರೊಳು ಖಗಗಳ ನಿರುಪಮ ಗಾನ
ಹೃದಯಕೆ ಹರುಷದ ಅನುಪಮ ಪಾನ

೩

ತೋಟದಿ ಮಲ್ಲಿಗೆ ಸಂಪಿಗೆ ಜಾಜಿ
ವಿಧವಿಧ ತರುಲತೆ ಫಲಗಳ ರಾಜಿ
ತರುಗಳ ನಿಕರಕೆ ಚಿಗುರಿನ ತೊಡಿಗೆ
ಧರಣಿಗೆ ನೂತನ ಹಸುರಿನ ಉಡಿಗೆ

೪

ತಿರೆಯನು ತುಂಬಿದೆ ರಜನಿಯ ತಂಪು
ಪವನದಿ ಹಬ್ಬಿದೆ ಕುಸುಮದ ಕಂಪು
ನಭದಲಿ ಧರೆಯಲಿ ನೆಲಸಿದೆ ಸೊಂಪು
ಎತ್ತಲು ಸುರಿವುದು ಅತಿಶಯದಿಂಪು

೫

ಬೆಟ್ಟದ ಶಿರದೊಳು ಮುಗಿಲಿನ ಮಾಲೆ
ರಂಜಿಸಿ ಮೆರೆವುದು ತೋರುತ ಲೀಲೆ
ಬೆಳಕಿನ ಮಳೆಯಲಿ ಮಿಂದಿದೆ ಮುಗಿಲು
ನೀಲಿಯ ಗಗನದ ಸೊಬಗಿದು ಮಿಗಿಲು

೬

ರಜನಿಯು ಒಲಿಯುತ ಸುರಿವಳು ಬೆಡಗು
ಪ್ರಕೃತಿಯು ನಲಿನಲಿದೀವಳು ಸೊಬಗು
ಎಲ್ಲಿಯು ತುಳುಕಲು ಮೋಹಿಪ ಕಾಂತಿ
ಎನ್ನಯ ಮನದಲಿ ತುಂಬಿದೆ ಶಾಂತಿ

— "ಶ್ರೀ[illegible]"

# ಹಿಂದೂಗಳ ಲಕ್ಷಣವಿಮರ್ಶೆ

ಲೇಖಕರು:—ಶ್ರೀ. ದೊರೆಸ್ವಾಮಿ ಅಯ್ಯಂಗಾರ್ M. A. B. L. ಹೈಕೋರ್ಟ-ವಕೀಲರು, ಮೈಸೂರು

ಹಿಂದೂ ಶಬ್ದಾರ್ಥವು ನಾನಾವಿಧವಾಗಿರುವದರಿಂದ ಈ ಪದದ ಲಕ್ಷಣನಿಷ್ಪತ್ತಿಯು ಬಲು ತೊಡಕಾಗಿರುವದು. ಯಾವುದೊಂದು ವಿಶೇಷಣವನ್ನು ಹಿಂದೂತ್ವಕ್ಕೆ ಲಕ್ಷಣವೆಂದು ಹೇಳಿದರೂ ಹಿಂದೂತ್ವದಲ್ಲಿ ತದ್ವಿರೋಧಕವಾದ ಅಂಶಗಳು ದೊರೆಯುತ್ತವೆ. ಒಂದು ವಸ್ತುವಿನ ಆಧಾರಲಕ್ಷಣವನ್ನು ನಿರೂಪಿಸುವುದೇ ಅದರ ಹೆಸರಿನ ನಿರ್ವಚನ ( Definition ) ವೆನ್ನಿಸಿಕೊಳ್ಳುವುದು. ಪ್ರತಿವಸ್ತುವಿನಲ್ಲೂ ಹತ್ತಾರು ಗುಣಗಳುಂಟು. ಅವುಗಳಲ್ಲಿ ಒಂದು ಗುಣವು ಮಾತ್ರ ಆ ವಸ್ತುವಿನ ಆಧಾರ ಲಕ್ಷಣವೆನ್ನಿಸುವುದು. ಈ ಲಕ್ಷಣದ ದೆಸೆಯಿಂದಲೇ ಆ ವಸ್ತುವಿಗೆ ಆ ಹೆಸರು ಬಂದಿರುವುದು; ಆ ಲಕ್ಷಣವು ಈ ವಸ್ತುವಿನಲ್ಲಲ್ಲದೆ ಇತರ ವಸ್ತುಗಳಲ್ಲಿ ಪ್ರಾಯಶಃ ಇರದು. ಆದರೆ ಹಿಂದೂ ಶಬ್ದಕ್ಕೆ ಮಾತ್ರ ಈ ರೀತಿ ನಿರ್ವಚನ ಮಾಡುವುದು ಕಷ್ಟ. ಹಿಂದೂತ್ವದ ಆಧಾರಲಕ್ಷಣಗಳೆಂದು ನಿರೂಪಿತವಾಗಿರುವ ಲಕ್ಷಣಗಳನ್ನು ಪರೀಕ್ಷಿಸಿದರೆ ಈ ಅಂಶವು ತಿಳಿದು ಬರುವುದು.

ಹಿಂದೂಸಾಮಾಜಿಕತ್ವವು ಜನ್ಮದಿಂದ ಮಾತ್ರವೇ ದೊರೆಯುವುದೆಂದು ಬಹುಮಂದಿ ಹೇಳುವರು. ಹಿಂದೂಗಳ ಸಮಾಜ ವ್ಯವಸ್ಥೆಯಲ್ಲಿ ಜನ್ಮಗುಣಕ್ಕೆ ಹೆಚ್ಚು ಪ್ರಶಸ್ತಿ ಇರುವುದರಿಂದ ಈ ಅಭಿಪ್ರಾಯವು ಹುಟ್ಟಿರುವುದು. ಆದರೆ ಹಿಂದೂತಂದೆ ತಾಯಿಗಳ ಹೊಟ್ಟೆಯಲ್ಲಿ ಹುಟ್ಟಿದವರೆಲ್ಲರೂ ಆ ಒಂದು ಲಕ್ಷಣ ಮಾತ್ರದಿಂದ ಹಿಂದೂಗಳು ಎಂದು ಸಿದ್ಧಾಂತ ಮಾಡಿ ಬಿಡಲಾಗುವುದಿಲ್ಲ. ಉದಾಹರಣೆಗಾಗಿ ಹಾಗೆ ಹುಟ್ಟಿದವನೊಬ್ಬನು ಕ್ರಿಸ್ತನಾಗಬಹುದು. ಅವನು ಆಗಲೂ ಹಿಂದೂವಾಗಿಯೇ ಇರುವನೆ? ಅವನಿಗೆ ಹಿಂದೂ ವ್ಯವಹಾರಧರ್ಮವು ಅನ್ವಯಿಸುವುದೆ? ಈತನು ಹಿಂದೂವಲ್ಲವೆಂದೂ, ಇವನಿಗೆ ಹಿಂದೂ ಧರ್ಮಶಾಸ್ತ್ರವು ಅನ್ವಯಿಸುವುದಿಲ್ಲವೆಂದೂ ಹಿಂದೂವಾದವನು ಹುಟ್ಟು ಮತ್ತು ಮತ ಈ ಎರಡರಿಂದಲೂ ಹಿಂದೂವಾಗಿರಬೇಕೆಂದೂ ಪ್ರೀವಿಕೌನ್ಸಿಲ್ಲಿನವರು ತೀರ್ಮಾನಿಸಿರುವರು[೧] ಈ ಎರಡನೆಯ ಲಕ್ಷಣವನ್ನು ಕುರಿತು ಮುಂದೆ ವಿಚಾರಮಾಡೋಣ. ಹುಟ್ಟಿನ ಲಕ್ಷಣವು ನಿಜವಾದರೆ ಪರಮತಾವಲಂಬಿಗಳಾರೂ ಹೊಸದಾಗಿ ಹಿಂದೂಮತಕ್ಕೆ ಸೇರಲು ಅವಕಾಶವಿಲ್ಲವೆಂದು ತೀರ್ಮಾನವುಂಟಾಗುವುದು. ಹಿಂದೂಮತವನ್ನೂ ಸಮಾಜವನ್ನೂ ಹಿಂದೂಗಳ ಚರಿತ್ರೆಯನ್ನೂ ಸ್ಥೂಲವಾಗಿ ಮಾತ್ರ ನೋಡತಕ್ಕವರಿಗೆ ಈ ತೀರ್ಮಾನವು ನಿಜವೆಂದು ತೋರುವುದು. ಆದರೆ ವಾಸ್ತವತಃ ಇದು ಯಾವ ಕಾಲದಲ್ಲೂ ನಿಜವಲ್ಲ.

ಪರಮತಗಳಿಂದ ಹಿಂದೂಮತಕ್ಕೆ ಸೇರಲು, ಅವಕಾಶವುಂಟೆಂದು ನ್ಯಾಯಶಾಲೆಗಳಲ್ಲೇ ಅನೇಕ ತೀರ್ಮಾನಗಳುಂಟು.[೨] ವೇದಕಾಲದಲ್ಲಿ ಆರ್ಯರು ಮಾತ್ರವೇ 'ಹಿಂದೂ'ಗಳಾಗಿದ್ದರು. ಬರಬರುತ್ತ ಅವರು ಅನಂತ ಸಂಖ್ಯೆಯ ಅನಾರ್ಯರನ್ನೂ ಮ್ಲೇಚ್ಛರನ್ನೂ ಹಿಂದೂಗಳಾಗಿ ಮಾಡಿಕೊಂಡರು. ವೇದಕಾಲದಲ್ಲಿ ಸಹ ವ್ರಾತ್ಯಸ್ತೋಮವೆಂಬ ಸಂಸ್ಕಾರದಿಂದ ಪರಕೀಯರನ್ನು ವಿಸ್ತಾರವಾಗಿ ಹಿಂದೂ ಪಂಗಡಕ್ಕೆ ಸೇರಿಸಿಕೊಳ್ಳುತ್ತಿದ್ದರು. ಎಷ್ಟೋ ಸಂಖ್ಯೆಯ ಪೂಜ್ಯಋಷಿಗಳು ಮ್ಲೇಚ್ಛಯೋನಿಯಿಂದ ಹುಟ್ಟಿರುವರು. ಮುಂದೆ ಬಹುಸಂಖ್ಯೆಯ ಶಕಯವನಹೂಣಘೂರ್ಜರಾದಿಗಳು ಹಿಂದೂಗಳಾದರು. ಮಹಾರಾಷ್ಟ್ರದ ಚಿತ್ಪಾವನ ಬ್ರಾಹ್ಮಣರು ಸಹ ಸಿಥಿಯನ್ ಎಂದರೆ ಶಕರ ಸಂತಾನರು ಎಂದು ಕೆಲವರು ಹೇಳುವರು. ಹಿಂದೂಮತವು ಹೆಸರಿಗೆ ಒಂದು ಮತವು; ನಿಜವಾಗಿ ನೋಡಿದರೆ ಅನೇಕಮತಗಳ ಸಮಷ್ಟಿಯು. ಈ ಕೂಟಕ್ಕೆ ಸೇರಿರುವವರಲ್ಲಿ ಬೌದ್ಧರು, ಜೈನರು, ಸಿಖರು, ಬ್ರಾಹ್ಮಸಮಾಜದವರು, ಆರ್ಯಸಮಾಜದವರು, ಚೈತನ್ಯಮತೀಯರು, ಕಬೀರ ಪಂಥಿಗಳು, ರಾಧಾಸ್ವಾಮೀಯರು ಮೊದಲಾದವರೆಲ್ಲರೂ ಪರಮತೀಯರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವ ಏರ್ಪಾಡನ್ನಿಟ್ಟುಕೊಂಡಿರುವರು. ಚೈತನ್ಯದೇವನ ಶಿಷ್ಯಪರಂಪರೆಯಲ್ಲಿ

---

೧ Q· M· I· A· 199 Abraham V. Abraham.

೨ 32 M 342 at 341, 39 A 101 Pc at 116

೪೫ ಮಂದಿ ದಾಸವರ್ಯರೂ ಆಚಾರ್ಯರೂ ಮುಸಲ್ಮಾನ ಯೋನಿಯಿಂದ ಬಂದವರಾಗಿರುವರು. ಆತನ ಪ್ರಿಯಶಿಷ್ಯನಾದ ಹರಿದಾಸಸ್ವಾಮಿಯೂ, ಆತನ ಮತಕ್ಕೆ ಮೂಲಸ್ತಂಭಪ್ರಾಯ ರಾದ ರೂಪಗೋಸ್ವಾಮಿ-ಸನಾತನಗೋಸ್ವಾಮಿಗಳೂ, ಇವರ ಸೋದರಳಿಯನೂ ಚೈತನ್ಯಮತೀಯರ ವೇದವೆನ್ನಿಸಿಕೊಂಡಿ ರುವ ಷಟ್ಸಂದರ್ಭದ ಕರ್ತೃವೂ ಆದ ಜೀವಗೋಸ್ವಾಮಿಯೂ ಸಹ ಮುಸಲ್ಮಾನರಾಗಿ ಹುಟ್ಟಿ ಚೈತನ್ಯನ ಶಿಷ್ಯರಾಗಿ ಪರಮ ವೈಷ್ಣವಾಚಾರ್ಯರಾಗಿ ಹಿಂದೂಗಳಿಂದ ಅವತಾರಪುರುಷ ರೆಂದು ಪೂಜನೀಯರಾಗಿರುವರು. ಹೀಗೆಯೇ ನಾನಕ, ಕಬೀರ, ದಾದು, ರಾಮದಾಸ ಮೊದಲಾದವರು ಎಷ್ಟೋ ಮಂದಿ ಮುಸ ಲ್ಮಾನರನ್ನು ಹಿಂದೂಗಳಾಗಿ ಮಾಡಿರುವರು. ಮುಸಲ್ಮಾನ ರನ್ನೂ ಹಿಂದೂಮತಕ್ಕೆ ಸೇರಿಸಿಕೊಳ್ಳತಕ್ಕ ಪ್ರಾಯಶ್ಚಿತ್ತಕ್ರಮ ವನ್ನು ದೇವಲಸ್ಮೃತಿಯು೧ ನಿರೂಪಿಸುವುದು. ಈಚೆಗೆ ೧೯೩೩ ರಿಂದ ಹಿಂದೂಮಹಾಸಭೆಯವರು ಸಹ—ಶುದ್ಧ ಸನಾತನ ಹಿಂದೂ ಪಂಡಿತರು ದಯಾನಂದೀಯರ "ಶುದ್ಧಿ" ಕ್ರಮವನ್ನು ಶಾಸ್ತ್ರೀಯವೆಂದು ಒಪ್ಪಿಕೊಂಡಿರುವರು. ಈ ಮಾರ್ಗವಾಗಿ ಈಚೆಗೆ ಎಷ್ಟೋ ಸಾವಿರಮಂದಿ ಮುಸಲ್ಮಾನರು ಹಿಂದೂಗ ಳಾಗಿ ಮಾಡಲ್ಪಟ್ಟಿರುವರು. ಹಿಂದಲ ಕಾಲದಲ್ಲಿ ಕೆಲವೇಳೆ ಬ್ರಾಹ್ಮಣರು ಸಾಕ್ಷಾತ್ತಾಗಿ ಪರಕೀಯರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಹಿಂಜರಿದಿದ್ದರೂ ಅವರು ಬೌದ್ಧಮತಕ್ಕೆ ಸೇರಿ ಬಿಟ್ಟರೆ ಅಲ್ಲಿಂದ ಹಿಂದೂಮತಕ್ಕೆ ಬರಲು ಯಾವ ಅಡ್ಡಿಯನ್ನೂ ಮಾಡುತ್ತಿರಲಿಲ್ಲ.೨ ಸಾಕ್ಷಾತ್ತಾಗಿ ಸಹ ಎಷ್ಟೋಮಂದಿ ಯರು ಹಿಂದೂಮತವನ್ನವಲಂಬಿಸಿರುವರು. ಉದಾಹ ಕ್ರಿ. ಪೂ. ೨ನೆಯ ಶತಮಾನದಲ್ಲಿ ಹೆಲಿಯೋಡೋರಸ ಯವನನು ಕೃಷ್ಣಭಕ್ತನಾಗಿ ಭಾಗವತ ಮತಕ್ಕೆ ಸೇ ಯರ್ ರಾಜ್ಯದ ವಿಶನಗರದಲ್ಲಿ ವಾಸುದೇವನಿಗೆ ಗರುಡ ಗಂಬವನ್ನು೩ ಪ್ರತಿಷ್ಠಿಸಿರುವನು. ಈಚೆಗೆ ಅನೇಕ ಪ್ಯರು ರಾಮಕೃಷ್ಣ ಸಿದ್ಧಾಂತವನ್ನವಲಂಬಿಸಿ ಹಿಂದೂ ಕಾವಿಯುಟ್ಟು ಸಂನ್ಯಾಸಿಗಳಾಗಿರುವರು. ಈಚೆಗೆ ಪಲೂ ಮದರಾಸು ಅಡಿಯಾರ್‌ನಲ್ಲಿ ಸ್ಥಾಪಿತವಾಗಿರುವ ಸಮಾಜ ಎಂಬ ಸಂಸ್ಥೆಯು ಅನೇಕ ಪಾಶ್ಚಾತ್ಯ ಸ್ತ್ರೀಪು ಉಪನಯನಸಂಸ್ಕಾರಾದಿಗಳನ್ನು ಮಾಡಿಸಿ ಹಿಂದೂ ಮಾಡಿರುವುದು. ಇದಲ್ಲದೆ ಹಿಂದೂಮತವು ಯಾವ ಮತಧರ್ಮವನ್ನೂ ಪಡೆಯದೆ ದೇಶದಲ್ಲಿ ಇರುತ್ತಿರುವ ಗೊಂಡರು, ಸಂತಾಲರು, ಕೋಲರು ಮೊದಲಾದ ಕಾಡು ಜನರನ್ನು ಪ್ರತಿವರ್ಷವೂ ತನ್ನ ಸೇರಿಸಿಕೊಂಡು ಅವರಲ್ಲಿ ಜಾತಿವ್ಯವಸ್ಥೆಗಳನ್ನು ಕಲ್ಪಿಸಿ ಗಳನ್ನಾಗಿ ಮಾಡಿಕೊಳ್ಳುತ್ತಿರುವುದು. ಇದರಿಂದ ದ ಪ್ರಜಾಪರಿಗಣತಿಯಲ್ಲಿ ಎಷ್ಟೋ ಸಂಖ್ಯೆಯ ಹಿಂದೂಗಳೆಂದು ಹೇಳಿಕೊಳ್ಳುತ್ತಿರುವರಲ್ಲದೆ ಜಾತಿ ಗಳ ಸಂಖ್ಯೆಯು ವಿಸ್ತಾರವಾಗಿ ಹೆಚ್ಚಾಗುತ್ತಿದೆ. ಈ ಗಳಿಂದ ಜನ್ಮವೇ ಹೈಂದವತೆಗೆ ಮುಖ್ಯಲಕ್ಷಣವಾ ಅಭಿಪ್ರಾಯವನ್ನು ಒಪ್ಪಲಾಗುವುದಿಲ್ಲ.

---

೧. ಮುಸಲ್ಮಾನರು ಸಿಂಧುದೇಶವನ್ನು ಕ್ರಿ. ಶ. ೭೧೨ರಲ್ಲಿ ಜಯಿಸಿ ೩೦ ವರ್ಷಗಳು ಆಳಿದರು. ಅನಂತರ ಇದು ಶತಮಾನಗಳ ಸಂಪರ್ಕವು ನಮಗೆ ಇರಲಿಲ್ಲ. ಇವರ ಆಳ್ವಿಕೆಯಲ್ಲಿ ಬಲಾತ್ಕಾರದಿಂದ ಮುಸಲ್ಮಾನರಾಗಿ ಮಾಡಲ್ಪಟ್ಟಿದ್ದ ಭಾರತರನ್ನು ಹಿಂದೂಮತಕ್ಕೆ ಪು ಳ್ಳಲು ಆಗಿನ ಪಂಡಿತರು ಒಂದು ಪ್ರಾಯಶ್ಚಿತ್ತಕ್ರಮವನ್ನು ವಿಧಿಸಿ ಒಂದು ಗ್ರಂಥವನ್ನು ಬರೆದರು. ಇದು ಇವರ ಮುಖ್ಯಪಟ್ಟಣವಾದ ದೇವಲ ರಿಂದ ದೇವಲಸ್ಮೃತಿ ಎಂಬ ಹೆಸರನ್ನು ಪಡೆಯಿತು.

೨. ಬ್ರಹ್ಮಜ್ಞಾನಸಮಾಜದ ಕರ್ತೃಗಳಾದ ಬ್ಲವಾಟ್ಸ್ಕಿ, ಆಲ್ಕಾಟ, ಬೆಸೆಂಟಮ್ಮ ಇವರುಗಳು ಹಿಂದೂಗಳಾಗಲು ಬಯಸಿದರು. ಆದ ಕಲೆಮಾನದಲ್ಲಿ ಇದಕ್ಕೆ ಅನುಕೂಲವಿಲ್ಲದ್ದರಿಂದ ಇವರು ಬೌದ್ಧಮತಕ್ಕೆ ಸೇರಿದರು.

೩. ಇವನು ಈ ಗರುಡಗಂಬದ ಮೇಲೆ ಈರೀತಿ ಶಾಸನವನ್ನು ಹಾಕಿಸಿರುವನು.— "ದೇವದೇವಸ ವಾ (ಸುದೇ) ವಸ ಗರುಡಧ್ವ ಕಾರಿತೇ ಇ (ಯ) ಹೆಲಿಯೋಡೋರೇಣ ಭಾಗವತೇನ ದಿಯಸಪುತ್ರೇಣ ತಖ್ಖಸಿಲಾಕೇನ ಯೋನ-ದೂತೇನ ಆಗತೇನ ಮಹಾರಾಜಸ ಅಂತ್ಯಲಿಕಿ (ದ) ತಾ ಸಕಾಸಂ ರಾಜ್ಞೋ ಕಾಸಿಪುತಸ ಭಾಗಭದ್ರಸ ತ್ರಾತಾರಸ ವಸೇನ (ಚತು) ದ ಸೇನ್ಮ ರಾಜೇನ ವಧಮಾನಸ ತ್ರೀನಿ ಅಮುತ ಪದಾನಿ ಟ್ಠಿತಾನಿ ನಯಂತಿ ಸ್ವಗ ದಮ ಚಾಗ ಅಪ್ರಮಾನ." = ಇದು ತನ್ನ ೧೪ನೆಯ ವರ್ಷದಲ್ಲಿ ವರ್ಧಿಸುತ್ತಿರುವ ಪಾಲಕ ಕಾಶಿಪುತ್ರ ಭಾಗಭದ್ರ ರಾಜ ಅಂಟಿಯಾಲ್‌ಕಿಡಾಸ್ ಮಹಾರಾಜನಿಂದ ಯವನದೂತನಾಗಿ ಬಂದಂಥಾ ತಕ್ಷಶಿಲಾನಿವಾಸಿ ದಿಯೋನನವಾಗ ಹೆಲಿಯೋಡೋರ ಭಾಗವತನಿಂದ ಕಲ್ಪಿತ ದೇವನಾದ ವಾಸುದೇವನ ಗರುಡಧ್ವಜಸ್ತಂಭವು. ದಮ ತ್ಯಾಗ ಅಪ್ರಮಾದಗಳೆಂಬ ಮೂರು ಅಮೃತಗುಣಗಳ ಅನುಷ್ಠಾನದಿಂದ ಸ್ವರ್ಗವು ಪ್ರಾಪ್ತ

— Lüders-Epigrapica Indica X Appendix, Inscription No

ಭಾರತ ಭೂಮಿಯಲ್ಲಿ ಹುಟ್ಟುವುದೂ ವಾಸಿಸುವುದೂ ಕೂಡ ಇದಕ್ಕೆ ಲಕ್ಷಣವಲ್ಲವೆಂದು ಮೇಲಿನ ಕಾರಣಗಳಿಂದ ಸ್ಪಷ್ಟಪಡುವುದು. ಈಚೆಗೆ ಹಿಂದೂ ಸಂತಾನರು ಜೀವನಾರ್ಥವಾಗಿ ವಲಸೆಹೊರಟು ಪ್ರಪಂಚದ ಸಕಲಭಾಗಗಳಲ್ಲೂ ನೆಲೆಸಿರುವರು. ಅಲ್ಲೇ ಅವರ ಸಂತತಿಯು ಅಭಿವೃದ್ಧಿಯಾಗುತ್ತಿರುವುದು. ಆದಮಾತ್ರಕ್ಕೆ ಇವರೆಲ್ಲರೂ ಹಿಂದೂಗಳಲ್ಲವೆ? ಹಿಂದೆ ಸಹ ಹಿಂದೂಗಳು–ಅದರಲ್ಲೂ ಶ್ರೋತ್ರಿಯರಾದ ಬ್ರಾಹ್ಮಣರು ಪರದೇಶಗಳಿಗೆ ಹೋಗಿ ನೆಲಸುತ್ತಿದ್ದುದಕ್ಕೆ ಐತಿಹಾಸಿಕ ನಿದರ್ಶನಗಳು ದೊರೆಯುತ್ತವೆ. ಜಾವಾ ಬಲಿ ಮೊದಲಾದ ದ್ವೀಪಗಳವರು ಹಿಂದೂಧರ್ಮವನ್ನು ಪರಿಗ್ರಹಿಸಿದ್ದರು. ಈಗಲೂ ಬಲಿದ್ವೀಪದವರು ಹಿಂದೂಗಳಾಗಿಯೇ ಇರುವರು.

---

# ಅಭಿನವ ಪಂಪ ಮಹಾಕವಿಯು ಬರೆದ ವಿಜಾಪುರದ ಶಿಲಾಲಿಪಿ

ಸಂಗ್ರಾಹಕ—ಚೆನ್ನಮಲ್ಲಪ್ಪಾ, ಗಲಗಲಿ, ಹಲಸಂಗಿ

## ಮೂಲಶಾಸನ

ಶ್ರೀ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ।
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ॥*
ಶ್ರೀಮಚ್ಚಾಳುಕ್ಯ ವಂಶ ಲ ।
ಲಾಮಂ ಚತುರುದಧಿ ಮೇಖಳಾಳಂಕೃತ ಧಾ ॥
ತ್ರೀ ಮಂಡಲಮಂ ವಿಕ್ರಮ ।
ಧಾಮಂ ನಿಜ ಭುಜ ಕೃಪಾಣದಿಂ ರಕ್ಷಿಸಿದಂ ॥ ೧ ॥
ಪಿರಿದಾಯಾಸದಿನಿನ್ನೆಗಂ ತಳೆದ ಧಾತ್ರೀಭಾರಮಂ ವಿಕ್ರಮಾ ।
ಭರಣಂಗೊಪ್ಪಿಸಿ ಬೇಳ್ಪುದಂ ಪಡೆದುವೆಂತಾನುಂ ದಿಶಾದಂತಿದಿ॥
ಕ್ಕರಿಣೀಪೇಚಕ ಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ।
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾ ಸಂಗಮಂ ॥ ೨ ॥
ಪುದುವಿಲ್ಲಬ್ಧಿವರಂ ನೆಲಕ್ಕೆ ಬೆರಗಿಲ್ಲಾ ರ್ಪಿಂಗೆ ಕೂರ್ಪಿಂಗೆ ಬೆ ।
ಚ್ಚದರಿಲ್ಲಾಜ್ಞೆಗೆ ಸೀಮೆಯಿಲ್ಲ ತಳತಂತ್ರಕ್ಕಂತಮಿಲ್ಲಾಹವ ॥
ಕ್ಕಿದಿರಿಲ್ಲೋಡಿದ ವೈರಿಗಳ್ಗೆ ಪವಣಿಲ್ಲಾರ್ದತ್ತಿ ಕಿತ್ತಿತ್ತಿ ಪೋ ।
ಗದ ದುರ್ಗತ್ರಯಮಿಲ್ಲದೇಂ ಪಿರಿಯನೋ ಚಾಳುಕ್ಯ ಚಕ್ರೇಶ್ವರಂ ॥ ೩ ॥
ಇರಲೀಗುಂ ಚರಣಾಂ (ಗು) ಳೀ ವಿಪಿನದುರ್ಗಂ ಪಾದಪೀಠಸ್ಥಳೀ ।
ಗಿರಿದುರ್ಗಂ ನಖರಶ್ಮಿಜಾಳ ಜಳದುರ್ಗಂ ವಿಕ್ರಮಾದಿತ್ಯನಿಂ ॥
ಶರಣಾಗೆಂದಪವಾಶ್ರಿತಂಗೆ ವನ ಭೂಭೃತ್ತೋಯ ದುರ್ಗಾಶ್ರಿತಂ ।
ಗಿರವುಂಟೇ ತ್ರಿಪಥೈಕಚಕ್ರಿಯ ಲಲಾಟಸ್ಥಾನದೊಳ್ ತೋರ್ಪುದು ॥ ೪ ॥
ಆತನ ತನಯಂ ತಂದೆಗ ।
ಮೊತನೆ ಮಿಗಿಲೆನಿಪ ಮಹಿಮೆಯಂ ಯುವರಾಜ ॥
ಖ್ಯಾತಿವೆರಸುರ್ವಿಯಂ ತಳೆ ।
ದಾತಂ ಕೇವಳಮೆ ಮಲ್ಲಿಕಾರ್ಜುನದೇವಂ ॥ ೫ ॥
ಕಡಲೊಳ್ ಪುಟ್ಟಿದ ಮಣಿಗಳ್ ।
ಪಡೆಗುಮೆ ಕೌಸ್ತುಭದ ಮಹಿಮೆಯಂ ನೃಪತನಯರ್ ॥

---

* ನಾಗಚಂದ್ರನು ಜೈನ ಕವಿಯಾದರೂ ಶಿವಸ್ತೋತ್ರವನ್ನು ಬರೆಯಲಿಕ್ಕೆ ಹಿಂದುಮುಂದು ನೋಡಲಿಲ್ಲ. ಇದೆಂಥಾ ಉದಾರ ಹೃದಯ !!! ಈಗ ಅಚ್ಚಾಗಿರುವ ಜನ್ನಕವಿಯ ಶಾಸನಗಳಲ್ಲಿಯೂ ಕೂಡ ಹೀಗೆಯೇ ಆದಿಗೆ ವಿಷ್ಣುಸ್ತೋತ್ರವಿದ್ದುದೊಂದು ಆ ಕಾಲದ ಧರ್ಮಜೀವನದ ಉಜ್ವಲಚಿತ್ರ ! ನಾನೃಷಿಃ ಕುರುತೇ ಕಾವ್ಯಂ !" "ಋಷಿಬಲಮಿಲ್ಲದವಂ ಕವಿಯ್ನಸಿನಿಪುದಕ್ಕಂ !"

ಪಡೆಗುಮೆ ಕುಮಾರರೆಂಬೀ ।
ಪಡಿಮಾತಂ ಮಲ್ಲಿದೇವ ಮಹಿಮಾಸ್ಪದನುಂ ॥ ೬ ॥

ಮಣಿವೆಸರಂ ಪಡೆದು ನಭೋ ।
ಮಣಿವೋಲ್ ಬೆಳಗುಗುಮೆ ಶೋಣಮಣಿಗಳ್ ಪೆಸರಿಂ ॥
ದೆಣಿಕೆಗೆ ಕುಮಾರರೆನಿಸುವ ।
ರಿಣೆಯೆನಿಸುವರಾರೊ ಮಲ್ಲಿಕಾರ್ಜುನ ನೃಪನೊಳ್ ॥ ೭ ॥
ಆತನ ರಾಜ್ಯಶ್ರೀಗೆ ನಿ ।
ಕೇತನಮೆನೆ ತನ್ನ ಭುಜಬಳಂ ಮಂತ್ರಬಳಂ ॥
ಚಾತುರ್ದಂತಬಳಂ ವಿ ।
ಖ್ಯಾತಿಗೆ ಛಾಯಲ ಚಮೂಪನಾಶ್ರಯ ಮಾದಂ ॥ ೮ ॥

ಆತತ ಕೀರ್ತಿಯೆನಲ್ ನೆಗ ।
ಳ್ದಾತನ ದೊರೆವೆತ್ತ ವಂಶವೀರ್ಯಶ್ರುತ ವಿ ॥
ಖ್ಯಾತಿಯನಭಿವರ್ಣಿಪೆನೆಂ ।
ಬಾತಂ ದ್ವಿಸಹಸ್ರಜಿಹ್ವನಾಗಲೆವೇಳ್ಕುಂ ॥ ೯ ॥
ಅನವದ್ಯಮಖಂಡಿತಮಮ ।
ರನದೀ ಸಲಿಲಪ್ರವಾಹದ (ನ್ತೆ) ಜಗತ್ಪಾ ॥
ವನಮೆನಿಸಿದ ಛಾಯಲದೇ ।
ವನವಂಶಂ ಸಕಲವಿಪ್ರ ವಂಶೋತ್ತಂಸಂ ॥ ೧೦ ॥

ಅದು ಮತ್ತೆಂತೆನೆ ದಾನವ ।
ಮಥನನ (ವರ) ನಾಭಿಕಮಳದೊಳ್ ಪರಿಮಳದಂ ॥
ತುದಯಿಸಿದಂ ತನ್ನ ಚತು ।
ರ್ವದನದೊಳುದಯಿಸೆ ಸಮಸ್ತ ವೇದ ನಿನಾದಂ ॥ ೧೧ ॥

ಅವರೊಳಗೆ ವೇದ ವೇದಾಂ ।
ಗವಿದಂ ಬ್ರಹ್ಮದ್ವಿತೀಯ ಮೂರ್ತಿಯೆನಲ್ ಭೂ ॥
ಭುವನಮನೆರಗಿಸಿದಂ ಬ್ರ ।
ಹ್ಮವರ್ಚಸಂ ತನಗೆ ಸಹಜಮೆನಿಸಿದ ಸಿದ್ಧಂ ॥ ೧೨ ॥

ಆ ಪರಮ ಬ್ರಹ್ಮ ಪ್ರತಿ ।
ರೂಪಮೆನಲ್ ನೆಗಳ್ದ ಮುನಿಯ ಪೆಸರಿಂ ಜಗಮಂ ॥
ವ್ಯಾಪಿಸೆ ವಶಿಷ್ಠ ಗೋತ್ರಮಿ ।
ಳಾಪಾವನಮಾಯ್ತು ದಿವ್ಯ ಮನುಸೂತ್ರದ ವೋಲ್ ॥ ೧೩ ॥
ಆ ಗೋತ್ರಜರೊಳ್ ಬಹು ವಿ ।
ದ್ಯಾಗುಣ ಚಾರಿತ್ರ ನಿರತರಾರಿನ್ನಿಳಾ ? * ॥

ಭಾಗದೊಳಿರೆ ಗೋವಿಂದಂ ।
ಶ್ರೀಗೆಡೆಗೊಟ್ಟಂ ವಿಶಾಳವಕ್ಷಸ್ಥಳಮಂ ॥

ಶ್ರೀವಧು ಪಕ್ಷದೊಳಿರೆ ವಾಕ್ ।
ಶ್ರೀವಧು ಮುಖಕಮಳದೊಳ್ ವಿರಾಜಿಸೆ ವಿಜಸ ॥
ಶ್ರೀವಧು ನಿಲೆ ನಿಜಭುಜದೊಳ್ ।
ಗೋವಿಂದಂ ಕೀರ್ತ್ತಿ ವಧುಗೆ ವಲ್ಲಭನಾದಂ ॥

ಪ್ರಿಯಮನೊಡರಿಸುವ ನುಡಿಯು ।
ಲ್ಲ್ತ ಯಥಾರ್ಥಂ ಜಗದ ಮನುಜರೊಳ್ ಗೋವಿಂದ ॥
ಭಯಲೋಭದುರ್ಲಭಂ ( ತಾಂ) ।
( ಭುವಿಯೊಳವನ ) ಜನ್ಮಭೂಮಿ ಪುಣ್ಯಕ್ಷೇತ್ರಂ ॥

ಅದರಿಂದಾ ಪುರುಷನ ಪು ।
ಟ್ಟಿದ ನಾಡುಂ ಕಲಿಯುಗ ಪ್ರತಾಪಕ್ಕೊಳಗಾ ॥
ಗದುದಂ ಬಣ್ಣಿಸುವೊಡೆ ತ ।
ಕ್ಕುದು ಪುಣ್ಯಕ್ಷೇತ್ರ ವರ್ಣನಂ ಕೇವಳಮೇ ॥

ಮಹಾಸ್ರಗ್ಧರಾವೃತ್ತ

ಪಲವುಂ ರತ್ನಾಂಶುಗಳ್ ತಳ್ ದೆರೆಗಳ ಪಲವುಂ ...
ಚೆಲ್ವು ...
ನಿಲೆಜಂಬೂದ್ವೀಪಮಂ ಮಂಡಳಿಸಿದ ಪರಿವೇಶಂಬೊ...
...
ಫಳಜನ್ಮಸ್ಥಾನ ಮುಜ್ಜೃಂಭಿತ ಜಳಚರ ಕೋಳಾಹ...
ಧ್ವನ...
ರ್ವಿಲುಳತ್ ಪಾಠೀನ ಪಾಶಾಮುಖ ಲಿಖಿತ ಸಮುತ್ಸ...
ಮಂಭೋನಿಧಾನ ।

ಶರಧಿ ಸರೋವರ ಮನಳಂ ।
ಕರಿಸಿದ ಧರಣೀಸರೋಜ ಕರ್ಣಿಕೆಯೆಂಬಂ ॥
ತಿರೆ ಕಪಿಳ ಕಿರಣದಿಂದಂ ।
ಬರಮಂ ಪಜ್ಜಳಿಸಿದತ್ತು ಮೇರುನಗೇಂದ್ರಂ ॥

ಆ ಕ್ಷೋಣೀಧರ ವಧುವಿಂ ।
ದಕ್ಷಿಣ ದಿಗ್ಮುಖದೊಳೆಸೆವ ಶಶಿಖಂಡದವೋ ॥
ಲೀಕ್ಷಣ ಸುಖಮಯ ಮಿರ್ಪುದು ।
ದಕ್ಷಿಣ ಭರತ ತ್ರಿಖಂಡದಾರ್ಯಾಖಂಡಂ ॥



* " ನಿರತ ರಾರಿನ್ನಿಳಿಳಾ । ಭಾಗದೊಳಿರೆ " ಎಂದಾಗಬಹುದೇ ?

ಕರಿ ತುರಗ ರಜತ ರತ್ನಾಂ ।
ಬರ ಕಾಂಚನ ಸಸ್ಯಗರ್ಭಮೆ ( ನಲೊಪ್ಪಿರೆ ಸಿಂ ॥
ಗರ ) ಮಾಗಿ ಮಧ್ಯದೇಶಂ
ಧರಾವಧೂ ಮಧ್ಯದೇಶಮೆನೆ ಸೊಗಯಿಸುಗುಂ ॥ ೨೧ ॥
ಆ ದೇಶವ ಗಂಗಾಯು ।
ಮ್ನಾದೇವಿಯ ಮಧ್ಯಭೂಮಿ ಪಾವನಮಂತ ॥
ರ್ವೇದಿಯೆನಿಸಿತ್ತು ಮಂಗಳ ।
ವೇದಿ ಚತುರ್ಮುಖ ಮುಖಕ್ಕೆ ತಾನಾಮುದರಿಂ ॥ ೨೨ ॥
ಆ ಮೇದಿನಿಯೊಳ್ ಮಣಿಮಯ ।
ಧಾಮದಿನುತ್ತುಂಗಮೆನಿಪ ದೇವಾಯತನ ॥
ಸ್ತೋಮದಿನೆಸೆವುದು ಕಿರಣ ।
ಗ್ರಾಮಮೆನಲ್ ನೆಗಳ್ದ ವಾರಿಭಟ್ಟ ಗ್ರಾಮಂ ॥ ೨೩ ॥

ಬಹು ವೇದ ಧ್ವನಿಯಿಂ ಸಮುಪ್ರದುಲಿಯಿಂ ಕೀಳ್ಮಾಡುಗುಂ ಯಜ್ಞಭಾ ।
ಗ ಹವಿರ್ಭಾಗಮನೀವ ವಿಪ್ರಜನದಿಂ ದೇವರ್ಕಳಿಂ ಕಳ್ಪಭೂ ॥
ರುಹಮಂ ಮನ್ನಿಸಲೀವುದಲ್ತಗರು ಧೂಮಾಭಾರದಿಂ ತಾಂಡವ।
ಕ್ರಿಯೆಯಂ ಪುಟ್ಟಿಸುಗುಂ ಶಿಖಂಡಿಗೆನೆ ಲಕ್ಷ್ಮೀನೂಪುರಂ ತತ್ಪುರಂ ॥ ೨೪ ॥

ಆ ಪುರದೊಳ್ ಗೋವಿಂದಂ ।
ಗೀ ಪುರುಷನೆ ಪುಣ್ಯಪುರುಷನೆನೆ ಜನಿಯಿಸಿದಂ ॥
ಶ್ರೀಪತಿ (ಸಮ್ಮತಿ) ಸತ್ಯಾ ।
ಳಾಪಂ ನಾರಾಯಣಂ ನಿಜಾನ್ವಯ ತಿಳಕಂ ॥ ೨೫ ॥

ಮನುಸೂತ್ರಕ್ಕೆಡೆಗೊಟ್ಟ ಮುಕ್ತಿನಸರಂ ಚಾರಿತ್ರಮಾಳಾನಿತಂ।
ಬಿನಿಗಾಲೇಪನ ಸಾಂದ್ರ ಚಂದನರಸಂ ವಿಖ್ಯಾತಿ ವಿದ್ಯಾವಿಳಾ ॥
ಸಿನಿಗಾಳೋಕನ ದರ್ಪಣಂ ಕೃ...ಕ್ಷ್ಮೀವಲ್ಲಭಂ ಶ್ರೀಪದ ।
ಕ್ಕೆ ನಿವಾಸಂ ಮನಮೆಂದೊಡೇವೊಗಳ್ವೆನಾ ನಾರಾಯಣ ಖ್ಯಾತಿಯಂ ॥೨೬ ॥

ನಾರಾಯಣ ನರ (–ಸಿಂಹನ) ।
(ಧಾ)ರಿತ್ರಿ ಪವಿತ್ರ ರೂಪವತಿ ಗುಣವತಿ ಕಾಂ ॥
ತಾರತ್ನಮೆನಿಪ ಲೋಹಿಣಿ ।
ವಾರಿರುಹೋದರನ ಲಕ್ಷ್ಮಿಯಂ ಗೆಲೆವಂದಳ್ ॥ ೨೭ ॥
... ... ... ಶಿಖರಂ ।
ಜಳರಾಶಿಗೆ ಕುಮುದಬಂಧು ಪುಟ್ಟುವವೋಲ್ ಭಾ ॥
ಯುಲದಂಡನಾಥ ಸದೃಶಮೆ ।
ನಲೊಡಂ... ... ... ... ... ...॥ ೨೮ ॥
(.) ವಿಬಳಮೆನಿಸಿದ ಲಕ್ಷ್ಮಿಯ ।
ನವನೀಶಂ ಮಲ್ಲಿಕಾರ್ಜುನಂ ಕೊಡೆಧರ್ಮ ॥
ವ್ಯವಸಾಯದೊಳೊಂದಿ... ।
... ... ... ... ರೆ ಪೆರರೊಳರೇ ॥ ೨೯ ॥

ಶಾಶ್ವತ ಕೀರ್ತಿಯಂ ತಳೆದನಿಕ್ಕೆಲದೊಳ್ ರಮಣೀಯ ಮಾಗೆ ।
... ... ... ... ನ ಸ್ತವನೀಯ ಮಪ್ಪಿನಂ ॥
ಶಾಶ್ವತಮಪ್ಪಿನಂ ವಿಬುಧ... ... ... ... ...।
... ... ... ... ... ಬೆತ್ತಿರೆ ಭಾಯಲ ದಂಡ ನಾಯಕಂ ॥ ೩೦ ॥

[ ಇಂತಿದಿಲ್ಲಿಗೆ ಮುಮ್ಮಗ್ಗಲು ಮುಗಿದುದು. ಹಿಮ್ಮಗ್ಗಲಲ್ಲಿ ಮುಖ್ಯವಾಗಿರುವಷ್ಟು ಭಾಗವನ್ನು ಮಾತ್ರವಿಲ್ಲಿ ಎತ್ತಿ ಬರೆಯುವೆನು. ]

"...ಶ್ರೀಮದ್ಭುವನೈಕ ಮಲ್ಲದೇವರಾಜ್ಯಮುತ್ತರೋತ್ತರಾಭಿವೃದ್ಧಿ...(ಹೊಂದುತ್ತಿರಲು)...ಶ್ರೀಮನ್ಮಹಾ ಪ್ರಚಂಡ ದಂಡನಾಯಕ ನಾಕಿಮಯ್ಯಂಗಳ್ ತರ್ದವಾಡಿ ಸಾಸಿರಮುಮಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನಂಗೆಯ್ದು ಸುಖದಿನನುಭವಿಸುತ್ತಮಿರ್ದು ಶಕವರ್ಷಂ ೯೯೬ ನೆಯ ಆನಂದ ಸಂವತ್ಸರದ ಪುಷ್ಯ ಶುದ್ಧ ಪಂಚಮಿ ಬೃಹಸ್ಪತಿವಾರದಂದಿನುತ್ತರಾಯಣ ಸಂಕ್ರಾಂತಿ ಪರ್ವನಿಮಿತ್ತಮಾಗಿ ವಂಕಾಪುರದ ನೆಲೆವೀಡಿನೊಳ್ ಶ್ರೀ ಬಲ್ಲವರಸರ್ಗೆ ಬಿನ್ನಪಂಗೆಯ್ದು ರಾಜಧಾನಿ ವಿಜಯಾಪುರದ ಶ್ರೀ ಸ್ವಯಂಭು ಸಿದ್ಧೇಶ್ವರ ದೇವರ ದೆಗುಲಮಂ ಮಾಡಿಸಿಯಲ್ಲಿಯಾಚಾರ್ಯರ್... ( ಕಾಳಾಮುಖ ತಿಳಕರ್ ) ... ಶ್ರೀ ಯೋಗೇಶ್ವರ ಪಂಡಿತ ದೇವರ ಕಾಲಂ ಕರ್ಚಿ ಕನ್ನವುರಿ ಪನ್ನೆರಡರ ಬಳಿಯಿರುವ ಬಿಜ್ಜನ ಹಳ್ಳಿಯಲ್ಲಿರುವ ಮತ್ತರ್ ೩೦೦ ಕೊಟ್ಟರು ॥"

(ಇದರ ಮುಂದೆ ತ್ರ್ಯಂಬಕನೆಂಬವನನ್ನು ಬಣ್ಣಿಸುವ ಮೂರು ಪದ್ಯಗಳಿವೆ. ಮೇಲ್ಕಂಡ ಶಾಸನ ಕಾಲಾನಂತರದಲ್ಲಿ ಬರೆದುವುಗಳಾಗಿರಬಹುದೋ ಏನೊ. ಶ್ರೀ ನರಸಿಂಹಾಚಾರ್ಯರಾದರೊ ತಮ್ಮ "ಶಾಸನ ಪದ್ಯಮಂಜರಿ"ಯ ೩೬ನೆಯ ಪುಟದಲ್ಲಿ "ಸುಮಾರು ೧೧೮೦"ರ ಪದ್ಯಗಳೆಂದು ಈ ಮೂರನ್ನೂ ಎತ್ತಿ ಬರೆದಿದ್ದಾರೆ. ಆದುದರಿಂದ ಅವುಗಳನ್ನಿಲ್ಲಿ ಬರೆಯದೆ ಬಿಟ್ಟರೆ ತಪ್ಪಾಗಲಿಕ್ಕಿಲ್ಲ. )

# ೧೯೮೦ ರಲ್ಲಿ ಲಂಡನ್ ನಗರದ ಪ್ರಸಿದ್ಧ ವಕೀಲನೊಬ್ಬನ ದಿನಚರಿ

(ಇನ್ನು ಐವತ್ತು ವರ್ಷಗಳಲ್ಲಿ ಮನುಷ್ಯನ ಬದುಕು ಎಷ್ಟು ಬದಲಾಯಿಸ ಬಹುದೆಂದು ತೋರಿಸುವದಕ್ಕೆ ಬರೆದುದು)

ಲೇಖಕ:--ಬಿ. ಎನ್. ಶ್ರೀನಿವಾಸಯ್ಯ ಎಂ. ಎಸ್. ಸಿ., ಅಸಿಸ್ಟೆಂಟ ಮೀಟಿಯೊರಾಲಜಿಸ್ಟ್;

ಇಂಡಿಯಾ ಸರಕಾರದ ಹವಾ ಇಲಾಖೆ; ಆಗ್ರಾ

**ಮಾರ್ಚಿ ೪ :—** ನನ್ನ ಹೆಂಡತಿಯು ಅಟ್ಲಾಂಟಿಕ್ ವಾಯುಮಾರ್ಗದ ಎಕ್ಸ್‌ಪ್ರೆಸ್ ವಿಮಾನದಲ್ಲಿ ( Atlantic Air Express ) ನೆನ್ನೆ ರಾತ್ರಿ ನ್ಯೂಯಾರ್ಕಿಗೆ ಪ್ರಯಾಣ ಮಾಡಿದಳು ; ಈ ದಿನ ಬೆಳಿಗ್ಗೆ ಹತ್ತುಗಂಟೆಗೆ ಅಲ್ಲಿನ ಯುವತಿ ಸಂಘದಲ್ಲಿ ಅವಳು ಭಾಷಣಮಾಡಬೇಕಾಗಿದ್ದುದರಿಂದ ಅವಳು ಹೋಗಿರುವುದು. ದಿವ್ಯ ದೃಷ್ಟಿಯಂತ್ರ ( Televisor )ದ ಮೂಲಕ ಅವಳು ಅಲ್ಲಿ ಮಾಡುವುದನ್ನು ನೋಡುತ್ತ ಮತ್ತು ಭಾಷಣವನ್ನು ಕೇಳುತ್ತ ಕೂರೋಣವೆಂದಿದ್ದೆ ; ಅವಕಾಶವಾಗ ಲಿಲ್ಲ. ಕಲಕತ್ತೆ ಹೈಕೋರ್ಟಿನಲ್ಲಿ ನಾನು ಕೈಹಚ್ಚಿರುವ ಖೂನಿ ಮೊಕದ್ದಮೆಯಲ್ಲಿ ಮೊತ್ತ ಮೊದಲು ಮಾಡುವ ಕೆಲವು ಕಾರ್ಯಗಳ ಬಗ್ಗೆ ನನ್ನ ಕಲ್ಕತ್ತೆಯ ಕಚೇರಿಯ ಮುಖ್ಯಸ್ಥ ನೊಡನೆ ಮಾತನಾಡುವುದಕ್ಕೆ ಒಂಭತ್ತು ಮುಕ್ಕಾಲು ಗಂಟೆಗೆ ಆರಂಭಿಸಿದ್ದು ಹನ್ನೊಂದರವರಿವಿಗೆ ಹಿಡಿಯಿತು.

**ಮಾರ್ಚಿ ೫ :—** ನನ್ನ ಅಭಿಪ್ರಾಯದಂತೆಯೇ ನೆನ್ನೆದಿನ ಕೆಲಸಗಳನ್ನು ನಡೆಸಿರುವಂತೆ ಕಲಕತ್ತೆಯಿಂದ ಈದಿನ ಬೆಳಿಗ್ಗೆ ಅಲ್ಲಿಯವರು ತಿಳಿಸಿದರು ; ಟೋಕಿಯೋದಲ್ಲಿ ನಾನು ನೇಮಿ ಸಿರುವವನು ಮೊಕದ್ದಮೆಗಳನ್ನು ಸರಿಯಾಗಿ ನಡೆಸುತ್ತಿಲ್ಲ. ಆದ್ದರಿಂದ 'ದಿವ್ಯ ದೃಷ್ಟಿಯಂತ್ರ'ದ ಮೂಲಕ ಅವನನ್ನು ದಂಡಿಸಿದ್ದಾಯಿತು.

ಮೆಲ್‌ಬೋರನ್ ನಗರದಲ್ಲಿರುವ ನನ್ನ ತಂಗಿಯನ್ನು ನೋಡಿ ಅವಳೊಡನೆ ಮಾತಾಡೋಣವೆಂದು ದೃಷ್ಟಿಯಂತ್ರವನ್ನು ತೆಗೆ ದುಕೊಂಡರೆ, ಅವಳನ್ನು ನೋಡುವ ಬದಲು, ತುರ್ಕಿದೇಶದ ಗಡ್ಡಮೀಸೆಗಳ ಮುದುಕನೊಬ್ಬನು ಕಾಣಬಂದನು ; ಈ ಯಂತ್ರವನ್ನು ಇನ್ನೂ ತುಂಬಾ ಸುಧಾರಿಸತಕ್ಕದ್ದಿದೆ. ಹಿಂದಿನ ಕಾಲದಲ್ಲಿ ( ೧೯೩೦ ) ಹೀಗೆಯೇ ಟೆಲಿಫೋನ್ ಯಂತ್ರ (Tele- phone)ದ ಬಗ್ಗೆ ತಪ್ಪುಗಳಾಗುತ್ತಿತ್ತಂತೆ. ಯಾರೊ ರೊಡನೆ ಮಾತನಾಡುವುದಕ್ಕಾಗಿ ಆ ಸಂಖ್ಯೆಯ ದೊಡನೆ ಜೋಡಿಸಬೇಕೆಂದು ಬೇಡಿದರೆ, ಯಂತ್ರದ ಕ ವರು ಎಷ್ಟೋ ಸಾರಿ ತಪ್ಪಾಗಿ ಬೇರೆ ಯಾವುದೋ ಯಂತ್ರದೊಡನೆ ಜೋಡಿಸುತ್ತಿದ್ದರಂತೆ ! ಈಗಲೂ ಆಗುತ್ತಿರುವ ಹಾಗಿದೆ !

**ಮಾರ್ಚಿ ೮ :—** ಮೂರು ದಿನದಿಂದ ದಿನಚರಿ ಆಗಲಿಲ್ಲ. ಬೇಕಾದ್ದನ್ನು ಗುರುತು ಹಾಕುವ ನನ್ನ ತರಂಗಸಾಧನ ( Radio-Electric Note- ವನ್ನು ನನ್ನ ಮಗನು ಮೊನ್ನೆ ವಿಯನ್ನಾಕ್ಕೆ ಹೋ ತೆಗೆದುಕೊಂಡು ಹೋಗಿರುವನು. ಎಲ್ಲವನ್ನು ಕೈ ವುದು ಯಾರಿಂದಾಗುವುದು !

**ಮಾರ್ಚಿ ೧೦ :—** ದಿವ್ಯದೃಷ್ಟಿ ಯಂತ್ರದ ಗಂ ಸಿತು. ಯಾರು ಕರೆದರೆಂದು ನೋಡಿದರೆ ದಕ್ಷಿಣ ಅ ದಿಂದ ಯಾರೋ ಕಕ್ಷಿಗಾರರು ( Clients ) ಅವರ ದ್ದಮೆಯನ್ನು ವಾದಿಸಲು ನನ್ನನ್ನು ಬೇಡುತ್ತಿರುವರು. ೧೮ ಗಂಟೆಗಳ ಕಾಲ ಪ್ರಯಾಣಮಾಡಿ ಹೋಗಲು ನ ಲಾರದು. ಇನ್ನೂ ವೇಗವಾದ ವಾಹನಗಳು ಏ ಬಾರದೆ? ಇಲ್ಲವಾದರೆ ನಾನು ಇಲ್ಲಿಂದಲೇ ವಾದಿಸು ಕೋರ್ಟಿನವರು ಅಲ್ಲಿಯೇ ಕುಳಿತು ಕೇಳಲಿ ಎಂದು ಕೊಟ್ಟೆನು. ಕೋರ್ಟಿನವರು ಏನು ಹೇಳು ನೋಡೋಣ.

**ಮಾರ್ಚಿ ೧೧ :—** ಈ ದಿನ ರಜಾ. ಸಾಯಂ ೫ ಗಂಟೆಗೆ 'ಟೆನ್ನಿಸ್' ಆಡುವುದಕ್ಕಾಗಿ ಪ್ಯಾರಿಸ್ ನನ್ನ ಸಣ್ಣ ವಿಮಾನದಲ್ಲಿ ಹೋದೆ. ಒಂದೇ "ಸೆಟ್" ಕೊಂಡು ವಾಪಸು ಬಂದೆ.

**ಮಾರ್ಚಿ ೧೨ :**— ಬೊಂಬಾಯಿ ಹೈಕೋರ್ಟಿನಲ್ಲಿ ಒಂದು ಮೊಕದ್ದಮೆಯಲ್ಲಿ ನನ್ನ ವಾದ. ಹೋಗಿಯೇ ತೀರಬೇಕಾಗಿದ್ದುದರಿಂದ "ಬಾಡಿಗೆ ವಿಮಾನ" (Air-taxi) ವನ್ನು ಏರ್ಪಡಿಸಿಕೊಂಡು ಹೋದೆ. ಹಿಂದಿರುಗುವಾಗ ವಿಮಾನ ಸ್ವಲ್ಪ ತೊಂದರೆ ಕೊಟ್ಟಿತು. ೪೦೦೦ ಅಡಿ ಎತ್ತರದ ನಿಲ್ದಾಣದಲ್ಲಿ ಸ್ವಲ್ಪ ನಿಂತು ಸರಿಮಾಡಬೇಕಾಯಿತು. ಇದರಿಂದ ೩ ಗಂಟೆ ತಡವಾಯಿತು. ದೈವವಶಾತ್, "ಮದ್ಯದ ಬಿಲ್ಲೆ" (Liquor Tablets) ಗಳ ಪೊಟ್ಟಣಗಳು ಮಾರಾಟಕ್ಕೆ ದೊರೆತವು ; ಅವನ್ನು ತಿಂದು ನೀರಡಿಕೆ, ಆಯಾಸಗಳನ್ನು ಪರಿಹರಿಸಿಕೊಂಡೆ. ಹಿಂದಿನಕಾಲದಲ್ಲಿ ಮದ್ಯಗಳನ್ನು ದೊಡ್ಡ ಸೀಸೆಗಳಲ್ಲಿ ತುಂಬಿ ಮಾರುತ್ತಿದ್ದರಂತೆ! ಅವುಗಳಿಗೆ ಸುಂಕ ಬೇರೆ ಕೊಟ್ಟೇ ತೀರಬೇಕಾಗಿತ್ತಂತೆ! ಪಾಪ, ಬಹು ಕಷ್ಟ! ಈಗಲಾದರೋ ಬಿಲ್ಲೆಗಳನ್ನು ಅವಿಸಿಬಿಟ್ಟರಾಯಿತು, ಸುಂಕ ತಪ್ಪಿಸಿದಂತೆಯೇ!

**ಮಾರ್ಚಿ ೧೩ :**— ಪ್ರದರ್ಶನಕ್ಕೆ ಹೋಗಿದ್ದೆವು. ಹಿಂದಿನ ಕಾಲದಲ್ಲಿ (೧೯೩೦) ಅಡಿಗೆ ಮಾಡುತ್ತಿದ್ದ ವಿಧಾನಗಳೂ, ಅವರು ಉಪಯೋಗಿಸುತ್ತಿದ್ದ ಒರಟಾದ ಒಲೆಗಳೂ ಪ್ರದರ್ಶಿಸಲ್ಪಟ್ಟಿದ್ದುವು. ನನ್ನ ಹೆಂಡತಿಗಂತೂ ಅವನ್ನು ನೋಡಿ ನಕ್ಕು ನಕ್ಕು ಸಾಕಾಯಿತು. ಅಂತೂ ೧ ಗಂಟೆ ಕಾಲ ಶ್ರಮಪಟ್ಟು ಆ ಒಲೆಗಳನ್ನು ಉಪಯೋಗಿಸುವ ವಿಧಾನವನ್ನು ಕಲಿತಳು.

**ಮಾರ್ಚಿ ೧೪ :**— ಈಗಳೆ ವಿಧಾನದಲ್ಲಿ ಮಾಡಿದ ಅಡಿಗೆ ಹೇಗಿರುವುದೋ ನೋಡೋಣವೆಂದು ಈದಿನ ಒಂದು ಕೂಟ (Party) ವನ್ನೇರ್ಪಡಿಸಿದೆ. ಆದರೆ, ಈ ಬಗೆಯ ಅಡಿಗೆಯು ತಿನ್ನಲನರ್ಹ ಮತ್ತು ಅಸಾಧ್ಯವೆಂದು ನನಗೆ ತಿಳಿದೇ ಇತ್ತಾದ ಕಾರಣ, ನಮ್ಮ ಕಾಲದ ಆರೋಗ್ಯವೂ ರುಚಿಕರವೂ ಸುಲಭವೂ ಆದ 'ಸಂಯುಕ್ತ ಆಹಾರ' (Synthetic Food) ವನ್ನು ಸಿದ್ಧಮಾಡಿಟ್ಟಿರುವಂತೆ ಗುಟ್ಟಾಗಿ ಹೇಳಿದ್ದೆ. ಹಿಂದಿನವರು ಅಷ್ಟೊಂದು ಆಹಾರವನ್ನು ಹೇಗೆ ತಿನ್ನುತ್ತಿದ್ದರೋ! ಈಗಿನ ಆಹಾರದ ಒಂದು 'ಬಿಲ್ಲೆ' ಅಥವಾ 'ಗುಳಿಗೆ' ಯಲ್ಲಿರುವ ಗುಣವೂ ಶಕ್ತಿಯೂ ಆಗಿನವರ ಒಂದು ಕುಕ್ಕೆ ಆಹಾರದಲ್ಲಿ ತುಸೇ ಉಂಟೆ! ಇದೂ ಅಲ್ಲದೆ ಅಷ್ಟು ತಿಂದು ಜೀರ್ಣಿಸಿಕೊಂಡಿದ್ದರಾದರೆ, ಅವರ ಜೀರ್ಣಶಕ್ತಿಯು ಅಪಾರವಾದುದೇ ಇರಬೇಕು! ಹೀಗೆ ಲೆಕ್ಕವಿಲ್ಲದೆ, ಸಿಕ್ಕಿದ್ದನ್ನು ತಿನ್ನುತ್ತಿದ್ದುದೇ ಆಗಿನ ಕಾಲದಲ್ಲಿ ಅಷ್ಟೊಂದು ಜನ ವೈದ್ಯರಿದ್ದುದಕ್ಕೆ ಕಾರಣವೆಂದು ಈಗ ಅರ್ಥವಾಯಿತು. ಆದರೇನು! ಜನರು ಮಾತ್ರ ಅಲ್ಪಾಯುಗಳಾಗಿದ್ದರು. ನಾನು ಸಣ್ಣವನಾಗಿದ್ದಾಗ ಜನರು ೬೦–೭೦ ವರ್ಷ ವಯಸ್ಸಿನಲ್ಲಿಯೇ ಸಾಯುತ್ತಿದ್ದರು. ಈಗ ನನಗೆ ೫೫ ವರ್ಷ. ಆದರೇನು? ನಾನು ಇನ್ನೂ ಯುವಾವಸ್ಥೆಯನ್ನೇ ಪಡೆದಿಲ್ಲವೆಂದು ನನ್ನ ನಂಬಿಕೆ.

**ಮಾರ್ಚಿ ೧೫ :**—ಈದಿನ ನನ್ನ ಮಗನ ಹುಟ್ಟಿದ ಹಬ್ಬ; ಆದ್ದರಿಂದ ಚಿಕಾಗೋದಿಂದ ಊಟಕ್ಕೆ ಈದಿನ ಮಧ್ಯಾಹ್ನಕ್ಕೆ ಬಾರೆಂದು ಕರೆದಿರುವೆನು. ಅವನಿಗೆ ಒಂದು ದಿವ್ಯದೃಷ್ಟಿ ಯಂತ್ರವನ್ನು ಹುಟ್ಟಿದ ಹಬ್ಬದ ಬಹುಮಾನವಾಗಿ ತೆಗೆದಿಟ್ಟಿರುವೆನು.

**ಮಾರ್ಚಿ ೧೬ :**— ಸಿಡ್ನಿಯಲ್ಲಿ ಇಂಗ್ಲೆಂಡಿಗೂ ಆಸ್ಟ್ರೇಲಿಯಕ್ಕೂ ನಡೆಯುತ್ತಿರುವ ಕ್ರಿಕೆಟ್ ಪಂದ್ಯವನ್ನು ಇಲ್ಲಿಂದಲೇ ನೋಡಿದ್ದಾಯಿತು.

**ಮಾರ್ಚಿ ೧೭ :**—ಹೆಂಡತಿಗೆ ಮೂರು ಕಲ್ನಾರು ಟೋಪಿ (Asbestos Hats) ತೆಗೆದು ಕೊಟ್ಟೆ. ಸಾಯಂಕಾಲ, ಕಾಲು ಚಂಡಿನಾಟ (Football) ವನ್ನು ನೋಡಲು ಹೋಗಿದ್ದೆವು. ಹಳೆತರದ ಆಟವೆಂದು ನನ್ನ ಅಭಿಪ್ರಾಯ; ಇದು ಯಾವಾಗ ಹೋಗಿ ಹೊಸತರದ ಆಟ ಬರುವುದೋ!

**ಮಾರ್ಚಿ ೧೮ :**—ರಾತ್ರಿ ಬಹು ಸೆಕೆಯಾಯಿತು. ಬಿಸಿಲು ಮಚ್ಚಿನ ಮೇಲೆ ಮಲಗಿಕೊಂಡೆನು. ಶಬ್ದನಿವಾರಕ (Noise-Eliminator) ಯಂತ್ರಗಳನ್ನು ಹಾಕಿಸಿದ್ದ ಕಾರಣ, ಬೀದಿಯ ವಾಹನಗಳ ಸದ್ದೊಂದೂ ಕೇಳಿಸದೆ ಸುಖವಾಗಿ ನಿದ್ರೆಬಂತು.

**ಮಾರ್ಚಿ ೧೯ :**—ಹರಾಜಿಗೆ ಹೋಗಿದ್ದೆವು. ಹಿಂದಿನ ಕಾಲದಲ್ಲಿ (೧೯೧೮–೧೮) ರಲ್ಲಿ ಸಿಗರೆಟ್ ಹಚ್ಚಲು ಉಪಯೋಗಿಸುತ್ತಿದ್ದ ವಿಚಿತ್ರ ಸಾಧನಗಳನ್ನು ತಮಾಷೆಗಾಗಿ ಕೊಂಡುಕೊಂಡೆ. ಈಗಿನ ಕಾಲದಂತೆ ರೇಡಿಯಂ ಕೊಳ್ಳಿ (Radium Fire Torches) ಗಳಿರಲಿಲ್ಲವೇನೋ ಪಾಪ!

**ಮಾರ್ಚಿ ೨೧ :**— ನನ್ನ ಮಗನು ಚಿಕಾಗೋವಿನಲ್ಲಿ ವ್ಯಾಸಂಗಮಾಡುತ್ತಿರುವನು ; ಪ್ರಾಯಶಃ ಈಗ ತನ್ನ ಓದಿನಲ್ಲಿ ಮಗ್ನನಾಗಿರಬೇಕೆಂದು ದಿವ್ಯದೃಷ್ಟಿಯಂತ್ರದ ಮೂಲಕ ನೋಡಿದೆನು ; ಅಬ್ಬಬ್ಬಾ, ಓದುವುದನ್ನು ಬಿಟ್ಟು ಇಸ್ಪೇಟಾಡುತ್ತಾ ಸಿಕ್ಕಿದವರನ್ನೆಲ್ಲಾ ಕೊಠಡಿಯಲ್ಲಿ ಸೇರಿಸಿಕೊಂಡು ಬೊಬ್ಬೆಯಿಡುತ್ತಿರುವುದು ಕಂಡು ಬಂತು. ಈ ಯಂತ್ರವಿರು

ವುದು ಬಹು ಅನುಕೂಲ. ಅನೇಕ ತಪ್ಪಭಿಪ್ರಾಯಗಳನ್ನು ಹೋಗಲಾಡಿಸುವುದು ; ಬಹಳ ಕಷ್ಟಪಟ್ಟು ಕೆಲಸಮಾಡುವವರೆಂದು ತೋರಿಸಿಕೊಳ್ಳುವ ನಮ್ಮ ನೌಕರರು ನಮ್ಮ ಬೆನ್ನು ತಿರುಗಿದ ಕೂಡಲೆ ಕಾಲಕಳೆವುದಕ್ಕೆ ಆರಂಭಿಸುವುದೂ, ಪರಸ್ಪರ ಅತ್ಯಂತ ಪ್ರೇಮಿಗಳೆಂದು ನಾವು ನಂಬಿರುವ ಹೆಂಡಿರು ಮನೆಯಲ್ಲಿ ಹೊಡೆದಾಡುವುದೂ, ಇವೆಲ್ಲಾ ಲಾಗುವುದಕ್ಕೆ ಅವಕಾಶವಾಯಿತು ; ಮತ್ತು ಎಷ್ಟೋ ಕೃತ್ಯಗಳು ಹೊರಬೀಳುವಂತಾಗಿರುವುದು.

---

# ಕನ್ನಡ ಶಾಕುಂತಲದ ಷಷ್ಟ್ಯಬ್ದಿ ಪೂರ್ತಿಯು

ಲೇಖಕರು:--ಮುದವೀಡು ಕೃಷ್ಣರಾಯರು, ಧಾರವಾಡ

ಕನ್ನಡಿಗನು ತನ್ನರಿವ ತಾನರಿತು ಮುಂದಾಗುತ್ತ ನಡೆದಿರುವ ಕಾಲವಿದು. ಇಂಥ ಅಭ್ಯುನ್ನತಿಯ ಈ ಸೂರ್ಯೋದಯಕಾಲದಲ್ಲಿ ಕನ್ನಡಿಗನು ಉಪಾಸನೆ ಮಾಡಬೇಕಾದ ಒಬ್ಬ ಮಹಾಪುರುಷನ ಗುರುತನ್ನು ಇಂದು ಇಡೀ ಕನ್ನಡ ನಾಡಿಗೆ ಮಾಡಿಕೊಡುವ ಹಂಬಲದಿಂದ ಈ ನಾಲ್ಕು ಸಾಲುಗಳನ್ನು ಬರೆಯಬೇಕಾಗಿದೆ. ಈ ಮಹಾಪುರುಷನು ಕನ್ನಡಿಗರಿಗೆ ಅರಿಯದವನೇನಲ್ಲ. ನಾಲ್ವತ್ತಾರು ವರ್ಷಗಳ ಹಿಂದೆ ನಾನು ಕಾರವಾರದ ಹಾಯಸ್ಕೂಲಿನಲ್ಲಿ ಇಂಗ್ಲಿಷ ೨ನೇ ಇಯತ್ತೆಯಲ್ಲಿ ಓದುತ್ತಿದ್ದಾಗ್ಗೆ ಇವನ ಧೂಳಿದರ್ಶನವು ನನಗಾಯಿತು. ಅಂದಿನಿಂದ ಇಂದಿನವರೆಗೆ ನನ್ನ ಅಂತಃಕರಣದಲ್ಲಿ ಕೆತ್ತಿತೆಗೆದ ಕಲ್ಮೂರ್ತಿಯಂತೆ ಇವನು ಅಚಲವಾಗಿ ನೆಲಿಸಿರುವನು. ಮುಂದೆ ೨-೩ ವರ್ಷಗಳ ನಂತರ ನಾನು ಸಾಲೆ ಕಲಿಯಲಿಕ್ಕೆಂದು ಧಾರವಾಡಕ್ಕೆ ಬರಬೇಕಾಯಿತು. ಆ ಹೊತ್ತಿಗೆ ಈ ಮಹಾಪುರುಷನು ದಿವಂಗತನಾಗಿ ಒಂದೆರಡು ವರ್ಷಗಳಷ್ಟೇ ಆಗಿದ್ದವು. ಆದುದರಿಂದ ಧಾರವಾಡದ ಆಬಾಲವೃದ್ಧರಿಗೆ ಇವನ ನೆನಪು ಚನ್ನಾಗಿಯೇ ಇತ್ತು. ಈತನ ಕೃತಿಗಳೊಳಗಿನ ಪದಪದ್ಯಗಳು ಮನೆಗಳಲ್ಲಿ, ಗುಡಿಗಳಲ್ಲಿ, ಮದುವೆಗಳಲ್ಲಿ ಉತ್ಸವಗಳಲ್ಲಿ, ಸಭೆಗಳಲ್ಲಿ ಸಮ್ಮೇಲನಗಳಲ್ಲಿ, ಕಾಮನ ಹಂದರಗಳಲ್ಲಿ ಭಾಮೆಯರ ಮಂದಿರಗಳಲ್ಲಿ ಎಡೆಬಿಡದೆ ಕೇಳಬರುತ್ತಿದ್ದವು. ಕನ್ನಡಿಗತನದ ಜೀವಾಳವು ಆಗ ಧಾರವಾಡದಲ್ಲಿ ಕಮರಿದ್ದಿಲ್ಲ. ಮುಂದೆ ೭-೮ ವರ್ಷಗಳಲ್ಲಿ ಈ ಪರಿಸ್ಥಿತಿಯು ಬದಲಾಗುತ್ತ ನಡೆದದ್ದು ಕಾಣಹತ್ತಿತು. ಸರಕಾರೀ ಅಧಿಕಾರಿಗಳೂ ವಕೀಲರೂ ಮೊದಲಾದ ಪ್ರತಿಷ್ಠಿತರು ಉತ್ತರದಿಂದ ಒಳನುಗ್ಗಿ ಧಾರವಾಡದ ಕನ್ನಡಿಗರನ್ನು ಕುಲಗೆಡಿಸಹತ್ತಿದರು, ಮರಾಠೀ ನಾಟಕ ಕಂಪನಿಗಳೂ ಹಿಂದುಸ್ಥಾನೀ ಗವಾಯಿಗಳೂ ಇವರ ... ನೆರವಾಗಹತ್ತಿದರು.

ಹೀಗೆ ನಾವು ಮರೆತ ಮಹಾಪುರುಷನೆಂದರೆ ಚುರಮುರಿ ಶೇಷಗಿರಿರಾಯ. ಮೇಲೆ ಹೇಳಿದಂತೆ ೪೬ ವರ್ಷಗಳ ಹಿಂದೆ ಕನ್ನಡ ಶಾಕುಂತಲದ ಅಚ್ಚಾದ ಪುಸ್ತಕವನ್ನು ನಾ... ವಾರದಲ್ಲಿ ಓದಿದ್ದು ನನಗೆ ಚನ್ನಾಗಿ ನೆನಪಿದೆ. ಮು... ಎಜ್ಯುಕೇಶನ್ ಸೊಸಾಯಿಟಿಯ ಮುದ್ರಣಾಲಯದಲ್ಲಿ ಅಷ್ಟಮಾಂಶದ ಆಕಾರದಲ್ಲಿ ಶೀರಾದ ಅಕ್ಷರಗಳಿಂದ ... ಪುಸ್ತಕವನ್ನು ಕೈಯಲ್ಲಿ ಹಿಡಿದು ೫ನೇ ೬ನೇ ಅಂಕಗಳ ... ವಿನ ವಿಷ್ಕಂಭಕಗಳನ್ನು ತಿರುತಿರುಗಿ ಓದಿ ಓದಿ ಹೊಟ್ಟೆ ... ಲಾರದೆ ನಕ್ಕು ನಕ್ಕು ಸತ್ತದ್ದನ್ನು ನಾನು ಸತ್ತರೂ ... ವಂತಿಲ್ಲ. ಮುಂದೆ ಧಾರವಾಡಕ್ಕೆ ಬಂದಬಳಿಕ ... ಭೀಷ್ಮಾಚಾರ್ಯರಂತಿದ್ದ ಸ್ವ. ವಾ. ವೆಂಕಟ ರಂಗೋ ... ವರ ಜ್ಞಾನವರ್ಧಕಮುದ್ರಾಲಯದಲ್ಲಿ ಡೆಮೀ ... ಆಕಾರದಲ್ಲಿ ಮುದ್ರಿತವಾದ ಈ ಶಾಕುಂತಲದ ... ಆವೃತ್ತಿಯು ನನ್ನ ಕಣ್ಣಿಗೆ ಬಿತ್ತು. ಮುಂದೆ ನಾಲ್ಕಾರು ... ಗಳಲ್ಲಿ ಉತ್ತರ ಕರ್ನಾಟಕದ "ಕ್ಯಾಕ್ಸ್ಟನ್"ರಾದ ... ಆನಾಡ ಚನವೀರಪ್ಪನವರು ತಮ್ಮ ಕರ್ನಾಟಕ ... ಪ್ರೆಸ್ಸಿನಲ್ಲಿ ಮುದ್ರಿಸಿದ ಮೂರನೆಯಾವೃತ್ತಿಯನ್ನು ... ಭಾಗ್ಯವು ನನಗೊದಗಿತು. ಅಂದರೆ ಸಾಮಾನ್ಯವಾಗಿ ... ವರ್ಷಗಳಲ್ಲಿ ಚುರಮುರಿಯ ಶಾಕುಂತಲದ ಮೂರು ... ಮುದ್ರಿತವಾದವೆಂದು ಹೇಳಬಹುದು. ಈಗಿನ ಅಖಂಡ ... ಟಕದ ವಿಶಾಲ ದೃಷ್ಟಿಯಿಲ್ಲದ ಕಾಲದಲ್ಲಿ ಒಂದೇ ... ಯಲ್ಲಿ ಮೂರು ಆವೃತ್ತಿಗಳು ಮುದ್ರಿತವಾಗುವ ... ಬೇಕಾದರೆ ಈ ಶಾಕುಂತಲವು ಆಗಿನವರಿಗೆ ಎಷ್ಟು

ವಾಗಿರಬೇಕೆಂಬುದನ್ನು ಊಹಿಸಿಯೇ ತಿಳಿಯಬೇಕು. ಕ್ರಿ. ಶ. ೧೮೯೩ರಿಂದ ೧೯೨೯ರ ಈ ಮೂವತ್ತಾರು ವರ್ಷಗಳಲ್ಲಿ ಅದು ನಾಲ್ಕನೆಯ ಆವೃತ್ತಿಯನ್ನು ಕಾಣದೆ ಹೋಗಿದೆ ! ಕವಳೆ ಪಿಂಗೆಗಳನ್ನು ತಿನ್ನುವದಕ್ಕೆ ಸವಿಗಲಿತ ನಾಲಿಗೆಯು ದ್ರಾಕ್ಷದ ರುಚಿಯನ್ನೇನು ಬಲ್ಲದು? ಹುಲ್ಲೂ ಕುಳ್ಳೂ ಮಾರುವಂತಾದ ಪೇಟೆಯಲ್ಲಿ ಹೂವಿನ ಬುಟ್ಟಿಯನ್ನಾರು ಕೇಳುವರು ? ಈ ಮೂರು ತಪಗಳಲ್ಲಾದ ಕನ್ನಡಿಗರ ಅಧಃಪಾತಕ್ಕೆ ಇದಕ್ಕಿಂತ ಬೇರೆ ದೃಷ್ಟಾಂತವಾವುದಾದರೂ ಬೇಕೆ ?

ಈ ನಡುಗಾಲದಲ್ಲಿ ನಾವು ಮರೆತದ್ದನ್ನೆಲ್ಲ ಮತ್ತೆ ಈಗ ನೆನಪು ಮಾಡಿಕೊಳ್ಳಹತ್ತಿದ್ದೇವೆ. ಮೈಯೊಡ್ಡ ಮುರಿದು ಏಳಬೇಕೆನ್ನುತ್ತೇವೆ. ಕಣ್ಣಿನ ಮಂಜು ಹರಿಯಬೇಕೆಂದು ಉಜ್ಜಿಕೊಳ್ಳುತ್ತೇವೆ. ಈ ಲಕ್ಷಣಗಳಿಗನುಸಾರವಾಗಿಯೇ ಚುರಮುರಿಯ ಶಾಕುಂತಲದ ಪರಿಚಯುವನ್ನು ಧಾರವಾಡದವರಿಗೆ ಇಲ್ಲಿಯ ಭರತ ಕಲೋತ್ತೇಜಕ ಸಂಗೀತಸಮಾಜದವರು ೧೯೦೩ರಲ್ಲಿ ಪ್ರಯೋಗ ರೂಪವಾಗಿ ಮಾಡಿಕೊಟ್ಟರು. ಶೇಷಗಿರಿರಾಯರ ಹಿರಿಕಿರಿಯ ತಮ್ಮಂದಿರಾದ ಗುಂಡೇರಾಯರು ಈ ಪ್ರಯೋಗ ನೋಡಿ ಹುಚ್ಚೆದ್ದು ಹರಿದು ಕುಣಿದಾಡಿದರು. ಇಪ್ಪತ್ತು ವರ್ಷಗಳ ಹಿಂದೆ ಸ್ವರ್ಗಸ್ಥನಾದ ನನ್ನ ಅಣ್ಣನನ್ನು ಸಜೀವ ಮಾಡಿ ತೋರಿಸಿದಿರೆಂದು ಕಣ್ಣೀರು ಸುರಿಸುತ್ತ ಸಮಾಜದವರನ್ನು ಕೊಂಡಾಡಿದರು. ಕನ್ನಡಿಗರ ಪಿತಾಮಹ ವೆಂಕಟರಂಗೋ ಕಟ್ಟಿಯವರೂ ಕುಲಗುರು ರೊದ್ದ ಶ್ರೀನಿವಾಸರಾಯರೂ ಪ್ರಯೋಗ ನೋಡಿ ಆನಂದಬಾಷ್ಪಗಳನ್ನುದುರಿಸಿ ಸಮಾಜದವರ ಅಭಿನಂದನಮಾಡಿದರು. ಮರಾಠಿಯ ಮೋಹಕ್ಕೆ ಮರುಳಾದ ಉತ್ತರ ಕರ್ನಾಟಕದ ನಾಟ್ಯಪ್ರಪಂಚದಲ್ಲಿ ಬಲವತ್ತರವಾದ ಕ್ರಾಂತಿಯನ್ನುಂಟು ಮಾಡಲು ಟೊಂಕ ಕಟ್ಟಿದ "ಅಸಮಸಾಹಸಿ ಕಣಾ" ಎಂದು ಶಾಂತಕವಿಗಳು ಸ್ವಾಭಿಮಾನೋದ್ರೇಕದಿಂದ ಸಮಾಜದವರ ಬೆನ್ನು ಚಪ್ಪರಿಸಿದರು. ಇಷ್ಟೆಲ್ಲ ಆದರೂ ಆದದ್ದೆಲ್ಲ ಕನಸು ಕಂಡಂತಾಯಿತು. ಆ ಸ್ಥಿತಿಗೆ ಸ್ಥಾಯಿತ್ವ ಉಳಿಯಲಿಲ್ಲ. ಕನ್ನಡಿಗರ ದುರ್ದೈವವಿನ್ನೂ ತೀರಿರಲಿಲ್ಲ; ಇನ್ನೂ ತೀರಿಲ್ಲವೆಂದರೂ ಸಲ್ಲುವದು. ಇದಾದನಂತರ ಸುಮಾರು ಇಪ್ಪತ್ತು ವರ್ಷಗಳಮೇಲೆ ಇದೇ "ಜಯಕರ್ನಾಟಕ"ದಲ್ಲಿ ಶ್ರೀ. ನಾರಾಯಣ ವ್ಯಾಸರಾವ ಕುಲಕರ್ಣಿ ಎಂಬವರು "ಎಂದೂ ಮರೆಯದ ಕನ್ನಡ ಕವಿಯು" ಎಂಬ ತಲೆಬರಹದ ಲೇಖವೊಂದನ್ನು ಬರೆದು ಇದೇ ಶಾಕುಂತಲದ ಹೊಸ ನೆನಪನ್ನು ಕನ್ನಡಿಗರಲ್ಲಿ ಹುಟ್ಟಿಸಿದರು. [ ಜಯಕರ್ನಾಟಕದ ೨ನೇ ವರ್ಷದ ೭ನೇ ಅಂದರೆ ಶಕೆ ೧೮೪೬ರ ಆಗಿ ಹುಣ್ಣಿವೆಯ (೧೮-೫-೧೯೨೪) ಸಂಚಿಕೆಯನ್ನು ಎಲ್ಲರೂ ಅವಶ್ಯವಾಗಿ ನೋಡಬೇಕು. ]

ಕನ್ನಡ ಕವಿಚರಿತ್ರಕಾರರು ತಮ್ಮ ಪ್ರಚಂಡ ಉದ್ಯೋಗದ ೩ನೇ ಭಾಗದ ೨೨೮ನೇ ಪುಟದಲ್ಲಿ ಈ ನಮ್ಮ ಕವಿಯು ಹಾಗು ಇವನ ಕೃತಿಯ ವಿಷಯವಾಗಿ

ಶೇಷಗಿರಿರಾವ ಚುರಮುರಿ.

ಈತನು ಬ್ರಾಹ್ಮಣಕವಿ ; ಧಾರವಾಡ ಪ್ರಾಂತದವನು.

ಗ್ರಂಥ :— ಶಾಕುಂತಲ ನಾಟಕ.

ಇಷ್ಟು ಉಲ್ಲೇಖಮಾಡಿದ್ದಾರೆ. ಇದರಿಂದಲೂ ಅಖಿಲ ಕರ್ನಾಟಕದವರಿಗೆ ಚುರಮುರಿ ಶೇಷಗಿರಿರಾಯನ ಶಾಕುಂತಲದ ಹೆಸರು ಈಗ ಗೊತ್ತಾಯಿತೆನ್ನಬಹುದು. ಆದರೆ ಅದೇ ಪುಸ್ತಕದ ೨೧೬ನೇ ಪುಟದ ವರೆಗೆ ಕನ್ನಡ ಕವಿಗಳ ಪರಿಚಯವನ್ನು ಮಾಡಿಕೊಡುತ್ತಾ ಬಂದ ಕ್ರಮುವನ್ನು ಚರಿತ್ರಕಾರರು ಮುಂದೆ ಅನುಸರಿಸದೆ " ಇತರ ಕವಿಗಳೂ ಮತ್ತು ಗ್ರಂಥಕರ್ತರು " ಎಂಬುದೊಂದು ಸಗಡುಬಗಡು ಗಂಟು ಮಾಡಿದ್ದಾರೆ. ಪುರಂದರ ಗಡದ ಕೃಷ್ಣಪ್ಪ ನಾಯಿಕರ ಸರಾಫೀ ಅಂಗಡಿಯೊಳಗಿನ ಸವಕಳಿ ದುಡ್ಡಿನ ಚೀಲದೊಳಗಿನ ಒಂದು ಕಾಸಿನಂತೆ ಈ ರಂಜಣಿಗೆಯಲ್ಲಿ ಈ ಹೆಸರು ಬಂದಿರುವದರಿಂದ ಇವನೇನು ಕವಿಯು ಅಹುದೋ ಅಲ್ಲವೋ ಎಂಬ ಅನುಮಾನ ಕೂಡ ಎಷ್ಟೋ ಜನರ ಅಂತರಂಗದಲ್ಲಿ ಹುಟ್ಟಬಹುದಾಗಿದೆ. ಮೇಲಾಗಿ ೨೧೭ನೇ ಪುಟದಲ್ಲಿ ಬಂದಿರುವ ಕವಿಚರಿತ್ರಕಾರರ ವಿಷಯ ಪ್ರವೇಶದ ಸೂಚನೆಯಿಂದಲಂತೂ ಈ ಅನುಮಾನವು ದೃಢವಾಗುವ ಸಂಭವವಿದೆ. ಯಾಕಂದರೆ "ಇವರುಗಳಲ್ಲಿ ನಿಜವಾಗಿಯೂ ಕವಿಗಳು ಎಂದು ಹೇಳಿಸಿಕೊಳ್ಳುವದಕ್ಕೆ ಯೋಗ್ಯರಾದವರು ಕೆಲವರೇ ಆಗಿರುತ್ತಾರೆ; ಉಳಿದವರಲ್ಲಿ ಕೆಲವರು ಸಂಸ್ಕೃತ ಬಂಗಾಳೀ ತೆಲಗು ಇಂಗ್ಲಿಷ ಈ ಭಾಷೆಗಳಲ್ಲಿರತಕ್ಕ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ" ಎಂಬುದಾಗಿ ಕವಿಚರಿತ್ರಕಾರರು ಮಾಡಿರುವ ಉಲ್ಲೇಖವು ಸಂಶಯವನ್ನುಂಟುಮಾಡುವುದಕ್ಕೆ ಸಮರ್ಥವಾಗಿರುವುದು. " ಸ್ವಲ್ಪ ಕಾಲಕ್ಕೆ ಹಿಂದೆ ಗತಿಸಿದವರ ಚರಿತ್ರೆಯನ್ನವಲಂಬಿಸಿ ಬರೆಯುವದು ತಮ್ಮ ಉದ್ದೇಶವಲ್ಲ" ಎಂಬ ಸ್ಪಷ್ಟೀಕರಣವನ್ನೇನೋ ಈ ಪೂಜ್ಯ ಗ್ರಂಥಕಾರರು ಮಾಡಿರುವರು. ಆದರೂ ೧೮೮೩, ೧೮೮೭ರಲ್ಲಿ ಆಗಿ ಹೋದ ಕವಿಗಳ ವಿಷಯುವಾಗಿಯೂ ಅಲ್ಪ

ಸ್ವಲ್ಪ ಹೆಚ್ಚು ಸಂಗತಿಗಳನ್ನು ಇವರೇ ಕೊಟ್ಟಿರುವದು ಹಿಂದಿನ ಪುಟಗಳಿಂದ ಕಂಡು ಬರುತ್ತದೆ. ಇದರಿಂದ ಈ ಸಂಶಯವು ದೃಢವಾಗುವದಕ್ಕೆ ಅವಕಾಶವಾಗುತ್ತದೆ. ಕವಿಚರಿತ್ರಕಾರರಿಗೆ ಈ ಕವಿಯ ವಿಷಯವಾಗಿ ಹೆಚ್ಚಿನ ಸಂಗತಿಗಳು ಗೊತ್ತಾಗುವದಕ್ಕೆ ಅವಕಾಶವಿಲ್ಲದ ಮೂಲಕ ಈತನನ್ನು ಈ ಸಗಡು ಬಗಡು ಗಂಟಿನಲ್ಲಿ ಸೇರಿಸಿರಬಹುದೆಂಬ ಊಹೆಗೂ ಅವಕಾಶವಿಲ್ಲ. ಯಾಕಂದರೆ ಈ ಮೊದಲು ಉಲ್ಲೇಖಿಸಿದ ಜಯಕರ್ನಾಟಕದೊಳಗಿನ ಶ್ರೀ. ಕುಲಕರ್ಣಿಯವರ ಬರಹವು ೧೯೨೪ರಲ್ಲಿ ಅಂದರೆ ಕವಿಚರಿತ್ರದ ಮೂರನೆಯ ಭಾಗವು ಪ್ರಸಿದ್ಧವಾಗುವದಕ್ಕಿಂತ ೫ ವರ್ಷ ಮೊದಲು ಪ್ರಸಿದ್ಧವಾಗಿದೆ. ಆ ಲೇಖದಿಂದ ಈ ಕವಿಯ ಪರಿಚಯವು ತಕ್ಕಮಟ್ಟಿಗೆ ಚನ್ನಾಗಿಯೇ ಆಗುವಂತೆಯೂ ಇರುವದು. ಆದುದರಿಂದ ಕವಿಚರಿತೆಯ ೩ನೆಯ ಭಾಗದಲ್ಲಿ ಚುರಮರಿ ಶೇಷಗಿರಿರಾಯನ ಹೆಸರು ನೋಡುವವರಲ್ಲಿ "ಇದ್ದಿರಬಹುದು ಈತನೇನೋ ನಾಲ್ಕು ಅಕ್ಷರಗಳನ್ನು ಛಂದೋಬದ್ಧವಾಗಿಯೋ ರಾಗ ತಾಳಬದ್ಧವಾಗಿಯೋ ಕೂಡಿಸಬಲ್ಲಾತನು" ಎಂಬ ಭಾವನೆಯುಂಟಾಗುವದು ಅಪರಿಹಾರ್ಯವಾಗಿದೆ.

ಈ ಬಗೆಯ ಉದಾಸೀನ ಭಾವದಿಂದ ನೋಡಬಹುದಾದ "ಕೀಳ್ಗವಿ"ಯು ಚುರಮರಿ ಶೇಷಗಿರಿರಾಯನಲ್ಲವೆಂಬುದನ್ನು ಈಗಿನ ಕಾಲದ ಕನ್ನಡಿಗರೆಲ್ಲರೂ ಖಂಡಿತವಾಗಿ ತಿಳಿದುಕೊಳ್ಳಬೇಕಾಗಿದೆ. ಸಿಂಗರಾರ್ಯನನ್ನು ಬಿಟ್ಟರೆ ಈತನೇ ಕರ್ನಾಟಕಕ್ಕೆಲ್ಲ "ಆದ್ಯ ನಾಟಕಾಚಾರ್ಯ"ನೆಂದು ಹೇಳಲು ಯಾವ ಅಭ್ಯಂತರವೂ ತೋರುವದಿಲ್ಲ. ಶಾಕುಂತಲದ ಹೊರತಾಗಿ ಶೂದ್ರಕನ ಮೃಚ್ಛಕಟಿಕದ ಭಾಷಾಂತರವನ್ನೂ ಈತನು ಮಾಡಿರುವದನ್ನು ಇತ್ತಕಡೆಯ ಬಹು ಜನರು ಬಲ್ಲರು. ಈ ಮೃಚ್ಛಕಟಿಕದ ಮುದ್ರಿತವಾದ ಸಮಗ್ರ ಪ್ರತಿಯು ಹೋದ ಮೇ ತಿಂಗಳಲ್ಲಿ ಬೆಳಗಾಂವಿಯಲ್ಲಾದ ಕನ್ನಡ ಗ್ರಂಥಗಳ ಪ್ರದರ್ಶನದಲ್ಲಿ ಮಂಡಿಸಲಾಗಿತ್ತು. ಇದಲ್ಲದೆ ತನ್ನ ಕಾಲದ ಧಾರವಾಡದ ಸಾಮಾಜಿಕ ಪರಿಸ್ಥಿತಿಯನ್ನು ಬಯಲಿಗೆಳೆಯುವ ಉದ್ದೇಶದಿಂದ ಈತನು ಬರೆದ "ಸುಂದರಾ" ಎಂಬ ಪ್ರಹಸನರೂಪವಾದ ಒಂದೇ ಅಂಕಿನ ನಾಟಕವೊಂದು ಹಿಂದೆಯೇ ಮುದ್ರಿತವಾಗಿ ಪ್ರಸಿದ್ಧವಾಗಿತ್ತು. ಈತನ ಕಾವ್ಯಪ್ರತಿಭೆಯು ತುಂಬಿ ಹೊರಸೂಸಿ ರಸಿಕರನ್ನು ತಲೆದೂಗಿಸುತ್ತಿದ್ದ ಅನೇಕ ಪದಪದ್ಯಗಳು ಇಂದಿಗೂ ಉಪಲಬ್ಧವಾಗುವಂತಿರುವವು. ಕವಿಚರಿತ್ರಕಾರರು ಉಲ್ಲೇಖಿಸಿರುವ ಈತನ ಶಾಕುಂತಲವನ್ನೇ



ಕಾವ್ಯದೃಷ್ಟಿಯಿಂದ ನಿರೀಕ್ಷಿಸಿದರೂ ಈತನು ಶಾರದೆ... ಹಸ್ತದಿಂದ ಅನುಗ್ರಹೀತನಾದ ಸಮರ್ಥ ಕವಿಯೆಂ... ಯಾವನಾದರೂ ಒಪ್ಪಿಕೊಳ್ಳದೆ ಇರಲಾರನು. ... ಭಾಷಾಂತರಕ್ಕೆ ಕೈಯಿಕ್ಕಿ ಕಾಲಿದಾಸನ "ಆಪರಿತೋ... ವಿದುಷಾಂ ನ ಸಾಧುಮನ್ಯೇ" ಎಂಬ ವಾಕ್ಯದ ತಿರುಳ... ವನು ತನ್ನ ಭಾಷಾಂತರದ ಪದ್ಯರೂಪ ಪ್ರಸ್ತಾ... "ವಿವಿಧ ಜನರ್ಕಳಿಂ ವಿವಿಧ ಭಾಷೆಯೊಳಂತ... ಸವಿಯೊಳು ಹಚ್ಚಿ ನೋಡಲೊರೆ ಕನ್ನಡಿನೆನ್ನದು ... ದೊರ್ಡೆ ಕವಿತೆಯ ಗಂಡು ಮೆಟ್ಟಿ ಕರನಾಟಕ ... ಪೋಗುವೆಂ" ಎಂಬ ಉದ್ದಾಮ ಪ್ರತಿಜ್ಞೆಯನ್ನು ... ಆತ್ಮೀಯಪ್ರತ್ಯಯವಿಲ್ಲದೆ ಮಾಡುವದೆಂದರೆ ಹುಡು... ಮಾತಲ್ಲ. ಇದೇ ಪ್ರಸ್ತಾವನೆಯಲ್ಲಿ ನಿಜವಾದ ಕಾವ್ಯ... ಗಳನ್ನು ಈತನು ವಿವರಿಸಿರುವದನ್ನು ನೋಡಿದ... ದೊಂದಿಗೆ ಸಮರಸನಾದ ಈತನು ಮೂರ್ತಿಮಂತ ಪ್ರ... ಆಗಿರುವನೆಂದು ಮನದಟ್ಟಾಗದಿರದು. ಈ ಬಗೆಯ ಪದ್ಯಗಳನ್ನು ಇಲ್ಲಿ ಉದಹರಿಸುವದು ಅಪ್ರಸ್ತುತ... ರದು.

ತಳಿರುಗಳಿಂದೆ ಮುಚ್ಚಿ ತೆರೆಯಲ್ ತನಿಮಾವಿನಹಣ್ಣು...
ಜೋಲ್ವವೊಲ್...
ತಿಳಿವಸನಕ್ಕೆ ಬಟ್ಟಮೊಲೆಗಳ ಮರೆಯಾಗಿದೆ ತೋರು...

ಯೊಳಗಿನಯಂಗೆನಾಚಿನವಸರಿಗದೊಳೊಪ್ಪಿಸದಿರ್ಪ...
ಬಲುಬಿಗಿಯಲ್ಲ ತೀರದೆರೆದಲ್ಲದು ಸೊಂಪಿನ ಕಾವ್ಯದೊ...

ಬಿಗಿನುಡಿಯಿರ್ದು ತಕ್ಕಸೊಗನಿಲ್ಲದಿರಲ್ಕದು ತಾಳ್ವ...
ಮೊಗೆಯೊಳಗಿರ್ಪ ಮದ್ಯ ಮಧುರೋಕ್ತಿಯ ಕಾವ್ಯ...
ಮ...

ಉಗುರೆಳೆಗೆಂಪುವಣ್ಣೊಡೆದ ದ್ರಾಕ್ಷದಗೊಂಚಲು
ಗೂಢಮಾಗಿ...
ಮಿಗೆ ರಸದುಂಬಿಗಲ್ಕೆ ರಸದಾಳಿಯ ಕಬ್ಬದು ಕಬ್ಬ...

ಹೀಗೆ ಕಾವ್ಯಲಕ್ಷಣಗಳನ್ನು ಸಮೀಚೀನವಾಗಿ ಬಣ್ಣಿ... ಪಂಡಿತಕವಿಯು ಹಾಗು ಸಾಮಾನ್ಯನಾದ ಹೃ... ಕೃತಿಗಳೊಳಗಿನ ಭೇದವನ್ನು ಹೀಗೆ ಹೃದಯ... ವರ್ಣಿಸಿದ್ದಾನೆ :—

ಕವಿವಿದ್ವಾಂಸನಿರಲ್ಕೆ ತತ್ಕೃತುಪಮಾಲಂಕಾರ ಮುಂತಾದರಿಂ।
ಸವಿಯಾಗಿರ್ಪ ಸುಗೂಢದಿವ್ಯಕೃತಿಯುಂ ಸಾಮಾನ್ಯಸುಂ
ಕಟ್ಟಿದ ॥
ಕವನಂ ನೋಡಲು ರತ್ನದೊಸ್ತದಕರಂಡಂ
ಪಕ್ವದಾಡಿಂಬಮುಂ ॥
ರವಿಯುಂ ಪೊಂಗಲಶಂ ಸುಧಾಕಿರಣನಂ ಚಲ್ವಾನನಂ
ಪೋಲ್ವವು ॥ ೧ ॥

ಈ ಮೂರು ಪದ್ಯಗಳಲ್ಲಿ ಕಣ್ಣಿಗೆ ಬೀಳುವ ಶೇಷಗಿರಿರಾಯನ ಪ್ರತಿಭೆಯೂ ಕವಿತ್ವವೂ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದ ಉಚ್ಚಶ್ರೇಣಿಯ ಕವಿಗಳಲ್ಲಿ ಆತನ ಸಮಾವೇಶ ಮಾಡಲು ಸಾಕಷ್ಟು ಆಧಾರವಾಗಿರುವವೆಂಬುದು ಸಹೃದಯರಿಗೆ ಸ್ಪಷ್ಟವಾಗಿ ತೋರದಿರದು. ಕುಶಲರತ್ನಪರೀಕ್ಷನ ಸೂಕ್ಷ್ಮ ನಿರೀಕ್ಷೆಯಂತೆ ಇವುಗಳಲ್ಲಿ ಹೊರಹೊಮ್ಮಿರುವ ಈತನ ವಿಚಾರಗಳನ್ನು ನೋಡಿದರೆ ಷಡಕ್ಷರಿ ಹಾಗು ಲಕ್ಷ್ಮೀಶ ಇವರಿಬ್ಬರ ಕಾವ್ಯಗಳನ್ನು ಇವನು ಚನ್ನಾಗಿ ಪರಿಶೀಲಿಸಿದಂತೆ ಕಂಡುಬರುವುದಲ್ಲದೆ ಅವುಗಳೊಳಗಿನ ವ್ಯತ್ಯಾಸವನ್ನೆ ತನ್ನ ಉತ್ಪ್ರೇಕ್ಷೆಯಿಂದೊಡಗೂಡಿ ಬಣ್ಣಿಸಿರುವನೆಂದೂ ಹೇಳಬಹುದು. ಶ್ರೀ. ಕುಲಕರ್ಣಿ ನಾರಾಯಣರಾಯರು ತಮ್ಮ ಬರಹದಲ್ಲಿ ಈತನು ಲಕ್ಷ್ಮೀಶನೊಬ್ಬನನ್ನುಳಿದು ಬೇರೆ ಯಾವ ಕನ್ನಡಕವಿಗಳನ್ನೂ ಸ್ಮರಿಸಿಲ್ಲವೆಂದು ಹೇಳಿ ಲಕ್ಷ್ಮೀಶನ ವರ್ಣನೆಯ ಶ್ಲೋಕವನ್ನು ಮಾತ್ರ ಅವತರಿಸಿಕೊಂಡಿದ್ದಾರೆ. ಷಡಕ್ಷರಿಯ ಸ್ಮರಣಪೂರ್ವಕವಾದ ಈ ಕೆಳಗಿನ ಶ್ಲೋಕವು ಅವರ ದೃಷ್ಟಿಪಥದಿಂದ ಹೇಗೆ ಜಾರಿತೆಂಬುದು ತಿಳಿಯದಾಗಿದೆ.

ಪರಿಯಲ್ ತೋರತರಂಗಮೆನ್ನ ಉಪಮಾದಿ ಪೌಢ
ಲಂಕಾರಗಳ್ ॥
ಹರಲೀಲಾಮೃತಸಾಗರೋ ನವರಸಂಗಳ ಮೌಕ್ತಿಕಾ
ಪಂಕ್ತಿಯಂ ॥
ಮರಿಸಲ್ ಕನ್ನಡಮಾತೆ ಮೂಗಿನೊಳು ತಾನಿಂಬಿಟ್ಟ
ನತ್ತೊ ಚಿಕಿ ।
ತ್ಸರ ಕಲ್ಬುದ್ಧಿಗೆ ವಜ್ರವೊ ಕೃತಿಯೊ ಮೇಣಾರಕ್ಕ
ರಾರ್ಯರ್ಗಳ ॥ ೧ ॥

ಕನ್ನಡದ ಕಾಲಿದಾಸ ಭವಭೂತಿಗಳಂತಿದ್ದ ಲಕ್ಷ್ಮೀಶ ಷಡಕ್ಷರಿಗಳ ಕಾವ್ಯರಸಾಸ್ವಾದವನ್ನು ಹೀಗೆ ಬೀರಬಲ್ಲ ಶೇಷಗಿರಿರಾಯನು ಮೇಲ್ದರದ ರಸಿಕಕವಿಯಾಗಿರುವನೆಂಬುದಕ್ಕೆ ಸಂದೇಹವಿಲ್ಲ.

ಶೇಷಗಿರಿರಾಯನು ಶಾಕುಂತಲವನ್ನು ಭಾಷಾಂತರಿಸಿದನು. ಎಲ್ಲ ನಾಡಿನವರೂ ಕಾಲಿದಾಸನ ಈ ಕೃತಿಯನ್ನು ತಮ್ಮತಮ್ಮ ಭಾಷೆಗಳಿಗೆ ಪರಿವರ್ತಿಸಿದರು; ಆದರೆ "ಕರ್ನಾಟದೋಳಿಲ್ಲೆಲ್ಲೈ" ಎಂಬ ಕನ್ನಡನಾಡಿನ ಕುಂದನ್ನು ದೂರಮಾಡಲೆಂದು ಭಾಷಾಂತರಿಸಿದನು. ಈ ಭಾಷಾಂತರವೂ ಈಗಿನ ಕಾಲದ ಕೆಲವು ಭಾಷಾಂತರಗಳಂತೆ ಶಬ್ದಕ್ಕೆ ಪ್ರತಿಶಬ್ದಗಳನ್ನು ಜೋಡಿಸಿ ಸ್ವಾರಸ್ಯಹೀನವಾಗಿ ಮಾಡಿದುದಲ್ಲ. ಕಾಲಿದಾಸನ ಶಾಕುಂತಲವೆಂಬ ಕೊಹಿನೂರ ವಜ್ರವನ್ನು ಕನ್ನಡನುಡಿವೆಣ್ಣಿನ ತಲೆಯ ಹೊಂಗಿರೀಟದಲ್ಲಿ ಹಣೆಯ ಕುಂಕುಮದ ಹತ್ತರ ಎದ್ದುಕಾಣುವ ಹಾಗೆ ಕುಂದಣಹಾಕಿ–ಕೂಡಿಸಿದಂತೆ–ಮಾಡಿದ್ದ. ಅಂತೆಯೇ ಎಲ್ಲ ಭಾಷಾಂತರಗಳಲ್ಲಿ ಕನ್ನಡದ ತನ್ನದು ಸವಿಯಲ್ಲಿ ಹೆಚ್ಚಾಗದಿದ್ದರೆ ಸಾವಿರಾರು ವರ್ಷಗಳಿಂದ ಕವಿತೆಯ ಗಂಡುಮೆಟ್ಟೆಂದು ಕೀರ್ತಿವೆತ್ತ ಕರ್ನಾಟಕದಲ್ಲಿ ಇರಲು ಕೂಡ ತನಗೆ ಅಧಿಕಾರವಿಲ್ಲವೆಂದು ನಿರ್ಭೀತಿಯಿಂದ ನಿರ್ದಾಕ್ಷಿಣ್ಯವಾಗಿ ಸಾರಿದ್ದಾನೆ. ಈ ಶಾಕುಂತಲದ ಮಾಧುರ್ಯವನ್ನು ಮೆದ್ದು ಸ್ವಾರಸ್ಯವನ್ನು ಸವಿದು ಮೋಹಗೊಂಡು ಮರುಳಾದುದರಿಂದಲೇ ಗುರ್ಲಹೊಸೂರಿನ ಕಿರ್ಲೊಸ್ಕರ ಅಣ್ಣಾಸಾಹೇಬರಿಗೆ ಮರಾಠಿಯಲ್ಲಿ ಅದನ್ನು ಪರಿವರ್ತಿಸಬೇಕೆಂಬ ಹಂಬಲಹುಟ್ಟಿತು. ಕನ್ನಡ ಶಾಕುಂತಲವು ಹುಟ್ಟಿದ ೧೮–೧೨ ವರ್ಷಗಳನಂತರ ಅಣ್ಣಾಸಾಹೇಬರ ಮರಾಠೀಶಾಕುಂತಲವು ಜನ್ಮತಾಳಿತು. ಅದು ಈಗ ಹತ್ತಿಪ್ಪತ್ತು ಆವೃತ್ತಿಗಳನ್ನು ಕಂಡು ಬೃಹನ್ಮಹಾರಾಷ್ಟ್ರದ ಭಾಗ್ಯವಾಗಿ ಕೂತಿದೆ. ಮಹಾರಾಷ್ಟ್ರದ ಶ್ರೇಷ್ಠತರಗತಿಯ ನಾಟಕ ಮಂಡಲಿಗಳು ಈ ಸಂಗೀತ ಶಾಕುಂತಲದ ಪ್ರಯೋಗವನ್ನು ಹೋದ ಹೋದಲ್ಲಿ ಮಾಡೇಮಾಡುತ್ತವೆ. ಮಹಾರಾಷ್ಟ್ರದ ರಸಿಕ ವಿದ್ವಾಂಸಪ್ರೇಕ್ಷಕರು ತಂಡತಂಡವಾಗಿ ಹೋಗಿ ನೋಡಿ ಆನಂದಬಟ್ಟು ಪ್ರೋತ್ಸಾಹಕೊಡುತ್ತಾರೆ. ನಮ್ಮ ಈ ಶಾಕುಂತಲವು ಹುಟ್ಟಿ, ಬರುವ ಪುಷ್ಯಬಹುಳಚತುರ್ಥಿಗೆ ೬೦ ವರ್ಷಗಳಾಗುತ್ತವೆ. "ಶುಕಾಬ್ದಕಾ ಪೌಷ್ಯದೊಳ್ ತಾರಾಧೀಶನ ಮಾರ್ಗಮಂ ಕ್ಷುಧಿಕ-ಶೈನರ್‌ನೋಳ್ಪರಂದು ಇಂದಿರಾವಾರಕ್ಕೆ ಈ ಕೃತಿ ಪೂರ್ಣಮಾಯ್ತು" ಎಂದು ಶೇಷಗಿರಿರಾಯನೇ ತನ್ನ ಕೊನೆಯ ಶ್ಲೋಕದಲ್ಲಿ ಹೇಳಿದ್ದಾನೆ. ಈ ಅರವತ್ತು ವರ್ಷಗಳ ಅವಧಿಯಲ್ಲಿ ಇದು ರಂಗಭೂಮಿಯನ್ನು ಕಂಡದ್ದೆಂದರೆ ಇಲ್ಲಿಯ ಭರತ

ಕಲೋತ್ತೇಜಕಸಮಾಜದ ಮುಖಾಂತರ ಇಪ್ಪತ್ತು ಇಪ್ಪತ್ತೈದು ವರ್ಷಗಳ ಹಿಂದೆ. ಅದಕ್ಕೂ ಮೊದಲು ಶ್ರೀ. ಮುಗಳೀ ಶ್ರೀನಿವಾಸರಾಯರು, ವೈ. ವಾ. ಕೆರೂರ ವಾಸುದೇವಾಚಾರ್ಯರು ಇವರೇ ಮೊದಲಾದವರ ಪರಿಶ್ರಮ ಪ್ರೋತ್ಸಾಹಗಳ ಮೂಲಕ ಬಾದಾಮಿಯ ನಾಟಕಮಂಡಳಿಯವರು ೧೮೯೭–೯೮ರ ಸುಮಾರಕ್ಕೆ ಬಾಗಲಕೋಟೆ ವಿಜಾಪುರಗಳಲ್ಲಿ ಇದರ ಪ್ರಯೋಗಮಾಡಿದ್ದೂ ಉಂಟು. ತೀರಿತು ಇಲ್ಲಿಗೇ ಮುಗತಾಯವಾಯಿತು. ಮುಂದಿನ ಕನ್ನಡನಾಟಕ ಕಂಪನಿಗಳಿಗೆ ಇದರ ಗುರುತೇ ಇಲ್ಲ. ಅವರೊಳಗಿನ ಒಬ್ಬಬ್ಬರಿಗೆ ಇದ್ದರೂ "ಹಳೆಯ ನಾಟಕ, ದಾಸಯ್ಯನ ಧಾಟಿಗಳು, ಉದ್ದುದ್ದ ಪದಗಳು; ಅದನ್ನು ಕಟ್ಟಿಕೊಂಡೇನು ಉರ್ಲುಹಾಕಿಕೊಳ್ಳುವದು ?" ಎಂಬ ತಿರಸ್ಕಾರ. ನಮ್ಮ ಇತ್ತಿತ್ತಲಾಗಿನ ವಿದ್ವನ್ಮಣಿಗಳಂತೂ "ಖರಾ ತೋ ಪ್ರೇಮಾ, ಪಾಂಡವಾ ಸಂಮ್ರಾಟ ಪದಾಲಾ" ಇತ್ಯಾದಿಗಳಿಗೆ ಮನಸೋತು ಮಾರಿಹಾದವರು. ಅಂದ ಬಳಿಕ ಕೇಳುವದೇನಿದೆ? ಚುರಮುರಿಯ ಶಾಕುಂತಲಕ್ಕೆ ಕನ್ನಡ ರಂಗಭೂಮಿಯ ಆಶ್ರಯವಿಲ್ಲದಾಗಿ ರಸಿಕಕನ್ನಡಿಗರ ಆಧಾರವಿಲ್ಲದಾಗಿ ಅದು ಮೂಲೆಗುಂಪಾಗಿ ಕೂತಿತು. ಶೇಷ... ಬಯಕೆಯಂತೆಯೇ ಈ ತನ್ನ ಕುರೂಪಕೃತಿಗನ್ನಿ... ರೋಳ್ ಅಡಿಗಳ ದಾಸಿಯಾಗಿ ಬದುಕಲ್ ತಪ್ಪಿದ... ದಾಸ"ರೊಡನಾಟದಲ್ಲಿಯೂ ಕಾಲಕಳೆಯ... ಕನ್ನಡ ನಾಡಿನ "ಜಾಣಕ" ಜಾಣತನವೇ ಒಂದಕ್ಕೊಂ... ಹೆಚ್ಚಾದಬಳಿಕ ಡೊಂಬದಾಸರಲ್ಲಾದರೂ ಕನ್ನಡಸಾ... ತಿಯ ಕುರುಹುಗಳು ಬದುಕಿ ಉಳಿಯುವಬಗೆ ಎಲ್ಲಿ! ... ಭಾರತ ಭಾಗವತ ರಾಮಾಯಣ ಬಸವಪುರಾಣ ... ಜಾತ ಮೊದಲಾದೆಲ್ಲವುಗಳ ಜೊತೆಗೆ ಈ ಶಾಕುಂತಲ... ಎಲ್ಲ ಕಡೆಗೂ ನಶಿಸಿದ್ದರಲ್ಲಿ ಆಶ್ಚರ್ಯವೇನೂ ತೋ... ಆದರೆ ಬದಲಾಗುತ್ತ ನಡೆದಿರುವ ನಮ್ಮ ನಾಡಿನ ... ಸ್ಥಿತಿಯಲ್ಲಿ, ಬರುವ ಸೌಷ್ಯ ಬಹುಳ ಚತುರ್ಥಿಗೆ ನಮ್ಮ... ತಲದ ಅರವತ್ತು ವರ್ಷದ ಹುಟ್ಟಿದ ಹಬ್ಬದ ಶಾ... ಕನ್ನಡನಾಡಿನ ಸ್ರಂಸ್ಕೃತಿಭಕ್ತರೆಲ್ಲರೂ ಆಚರಿಸಿ ... ಜೀವಂತ ಉಳಿಸಿದ ಶ್ರೇಯಸ್ಸಿಗೆ ಪಾತ್ರರಾಗಬೇಕೆಂದು ... ಕೊಳ್ಳುತ್ತೇನೆ.

---

## ದೀನಗಿಂತ ದೇವ ಬಡವ !



೧

ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ಹರಿಯ ಒಲುಮೆ ಪಡೆದು ಪುಣ್ಯ
ಗಳಿಸುತಿರುವೆಯಾ !
ಮರುಳೆ ನೀನು, ಹಳ್ಳಿಗೋಡು,
ದೀನ ಜನರ ಪಾದ ನೋಡು;
ಇರಲು ಗುಡಿಲು ಇಲ್ಲವಲ್ಲ !
ಹೊಟ್ಟೆ ತುಂಬ ಅನ್ನವಿಲ್ಲ !
ಹರಿಗೆ ಎಂದು ಗುಡಿಯನೊಂಡ
ಕಟ್ಟುತಿರುವೆಯಾ !

೨

ಹರಿಯ ವಿಶ್ವರೂಪವನ್ನು
ಮರೆತು ಬಿಟ್ಟೆಯಾ ?
ಜಗಕೆ ಗೋಡೆ ಹಾಕಿ ಗುಡಿಯ
ಕಟ್ಟ ಬಲ್ಲಿಯಾ ?
ದೀನಗೊಂದು ಗೂಡು ಸಾಕು,
ದೇವಗೊಂದು ವಿಶ್ವ ಬೇಕು;
ಮಣ್ಣು, ಹುಲ್ಲು, ಸಣ್ಣ ಓಡು,
ಬಡವಗದುವೆ ಚೆನ್ನ ಗೂಡು.
ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ದೀನಗಿಂತ ದೇವ ಬಡವ
ನೆಂದು ಬಗೆದೆಯಾ !

—ದಿನಕರ ದೇಸಾಯಿ

# ಗೀತೆಯ ಸಂದೇಶ



ಲೇಖಕರು:— ಶ್ರೀ. ಮು. ಪು. ಲಕ್ಷ್ಮೀನೃಸಿಂಹಶಾಸ್ತ್ರಿ, ಬೆಂಗಳೂರು.

**ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ॥**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**

( ಉಪನಿಷತ್ತುಗಳೇ ಹಸುಗಳು, ಕರೆಯುವವನಾದರೋ ಶ್ರೀಕೃಷ್ಣಪರಮಾತ್ಮನು; ಕರುವಾದರೋ ಅರ್ಜುನನು, ಪಾನಮಾಡುವ ವಸ್ತುವಾದರೋ ಅಮೃತ, ಇಂತಹ ಅಮೃತವನ್ನು ಭಗವಂತನು ತನ್ನ ಜನರಿಗಾಗಿ ದಯಪಾಲಿಸಿರುವನು. )

ಅಖಂಡಭೂಮಂಡಲದಲ್ಲಿ ಸರ್ವರಿಂದಲೂ, ಓದಲ್ಪಟ್ಟು, ಸರ್ವಜನೈಕ ಪ್ರೀತಿಪಾತ್ರವಾಗಿರುವ ಗ್ರಂಥವೆಂದರೆ ಭಗವದ್ಗೀತೆಯು. ಸರ್ವಸುಂದರವಾಗಿ ಸರ್ವೋತ್ಕೃಷ್ಟವಾಗಿ ಸರ್ವಜನಾದರಣೀಯವಾಗಿರುವ ಈ ಪವಿತ್ರ ಗ್ರಂಥದಲ್ಲಿ ವರ್ಣಿತವಾಗಿರುವ ಕ್ಷತ್ರಿಯನ ಧರ್ಮವೂ; ರಾಜನೀತಿಯೂ ಮಾನವನ ಮನಸ್ಸನ್ನು ಕಲಕಿಸದೆ ಇರದು. ಗೀತೆಯು ಮುದ್ರಣವಾಗಿರುವಷ್ಟು ಇತರ ಭಾಷೆಗಳಲ್ಲಿ ಪರಿವರ್ತಿತವಾಗಿರುವಷ್ಟು, ಮತ್ತಾವ ಪುಸ್ತಕವೂ ಭಾಷಾಂತರಿಸಲ್ಪಟ್ಟು ಅಚ್ಚಾಗಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅಂತರ್ಜಾತೀಯ ವ್ಯತಿರಿಕ್ತ ಧರ್ಮಗಳಿಂದ ಕೂಡಿರುವ ಈ ಪ್ರಪಂಚದಲ್ಲಿ ಪ್ರತಿಯೊಬ್ಬನಿಂದಲೂ ಮಾನ್ಯತೆಯನ್ನು ಈ ಭಗವದ್ಗೀತೆಯು ಪಡೆದಿರಲು ಕಾರಣವೇನೆನ್ನುವುದು ಸ್ವಾಭಾವಿಕವೇ ಸರಿ. ಗೀತೆಯು ಸರ್ವರಿಗೂ ಜ್ಞಾನವೈಶಿಷ್ಟ್ಯವನ್ನು ಬೋಧಿಸುವ ಸುಲಭ ಗ್ರಂಥವು; ಪ್ರತಿಯೊಬ್ಬರೂ ಇದನ್ನೋದಬಹುದು. ಅರ್ಥವನರಿಯಬಹುದು; ಟೀಕೆ ಟಿಪ್ಪಣಿಗಳನ್ನು ಮಾಡಬಹುದು; ಅದರಂತೆ ನಡೆಯಲು ಪ್ರಯತ್ನಿಸಬಹುದು, ಮಾನವನ ಜೀವನದ ತಿದ್ದುಪಡಿಗಾಗಿ ಗೀತೆಯು ಸಹಾಯಮಾಡುವಷ್ಟು ಮತ್ತಾವುದೂ ಸಹಾಯಮಾಡಲಾರದು; ಮಾನವನ, ಬುದ್ಧಿ, ಶಕ್ತಿ, ಸಾಮರ್ಥ್ಯಗಳೆಷ್ಟಿವೆಯೋ ಅಷ್ಟೂ ಗೀತೆಯ ಪ್ರತಿಭೆಯಿದೆ. ಪರಿಣಾಮಫಲಗಳಲ್ಲಿ ಸೇರದೆ, ಪರಿಣಾಮಫಲಗಳಿಗೆ ಕಾರ್ಯಕಾರಿಯಾಗಿರುವುದು ಈ ಮಹಾ ಗ್ರಂಥವು. ಬುದ್ಧಿಯ ಸ್ಥಿಮಿತತೆಗೆ ದಾರಿಯ ತೋರುವುದಿದು; ಕಾರ್ಯಕಾರಿತ್ವದಲ್ಲಿ ಸರಿಯಾದ ಸ್ಥಾನಗಳನ್ನು ಕಲ್ಪಿಸಿ ಕೊಡುವುದಿದು. ಪರಾತ್ಪರನ ದಿವ್ಯತೇಜಸ್ಸನ್ನು ಪಾಮರರ ಕಣ್ಣೆದುರಿಗೆ ಕಂಡು ನೀಡುವುದಿದು; ಮಾನವನ ಅಂತರಂಗದಲ್ಲಿ ಆವಿರ್ಭವಿಸುವ ಕಠಿನ ಪ್ರಶ್ನೆಗಳಿಗೆ ಸಮಾಧಾನವೀಯುವುದಿದು; ಜೀವನದ ಗುಟ್ಟನ್ನು ಕಣ್ಣೆದುರಿಗೆ ಬಿಚ್ಚಿಟ್ಟು ಸರಿಯಾದ ಹಾದಿಯನ್ನು ತೋರಿಸಿಕೊಡುವುದಿದು; ಅಷ್ಟೇಕೆ? ತೃಣಪ್ರಾರಂಭದಿಂದ ಪರಮಾತ್ಮನ ಪರ್ಯಂತವಿರುವ ಸಮಸ್ತ ಚೈತನ್ಯವಸ್ತುಗಳಿಗೂ ಆನಂದವನ್ನು ತಂದುಕೊಡುವ ಮಹಾವಾಣಿಯಿದು. ಕಣ್ಣೆದುರಿಗಿರುವ ಕತ್ತಲೆಯನ್ನು ಓಡಿಸಿ ದಿವ್ಯಜ್ಯೋತಿಯ ಪ್ರಭೆಯನ್ನು ಬೀರುವುದಿದು. ಆದ್ದರಿಂದಲೇ ಸರ್ವಕಾಲಗಳಿಗೂ, ಸಕಲ ದೇಶಗಳಿಗೂ, ಸಮಸ್ತ ಜನಗಳಿಗೂ ಅನ್ವಯಿಸುವಂತಹ ಅಮೃತವಾಣಿಯಿಂದ ತುಂಬಿದ ಭಗವದ್ಗೀತೆಗೆ ಅಂತಹ ಉತ್ತಮೋತ್ತಮ ಪವಿತ್ರ ಸ್ಥಾನವು ದೊರೆತಿರುವುದು.

ಗೀತೆಯು "ಮಾನವನು ತನ್ನ ಜೀವನದಲ್ಲಿ ಎಡವಿ ಮುಗ್ಗರಿಸಿ, ಬೀಳುವ ಹಳ್ಳಪಳ್ಳಗಳನ್ನು ತೋರಿಸಿ, ಅದನ್ನು ನಿರಾಯಾಸವಾಗಿ ದಾಟಲು ಸುಲಭೋಪಾಯಗಳನ್ನು ಸೂಚಿಸಿಕೊಡುವುದು. ಗೀತೆಯಲ್ಲಿ ಅರ್ಜುನನು ಧಾರ್ಮಿಕವೃತ್ತಿಯನ್ನವಲಂಬಿಸಿರುವ ಒಬ್ಬ ಮನುಷ್ಯಮೂರ್ತಿಯಾಗಿ ಕಂಡುಬರುವನು. ಅವನಲ್ಲಿ ಹುಟ್ಟುವ ಸಂಶಯಗಳಾದರೋ ಕೃಷ್ಣನೊಬ್ಬನಿಂದಲೇ ಪರಿಹಾರವಾಗತಕ್ಕವುಗಳು. ಅರ್ಜುನನ ಪ್ರಶ್ನೆಗಳಿಗೆ ಕೃಷ್ಣನ ಉತ್ತರಗಳು. ಮನುಷ್ಯಜೀವನದ ರೀತಿಯಿಂದ ಆರಂಭವಾಗಿ ದೈವಿಕಘಟನಾಸಾಮರ್ಥ್ಯಗಳಲ್ಲಿ ಕೊನೆಮುಟ್ಟುವುದು. ಜೀವನದ ನಾಟಕವನ್ನು ಪರಮಾತ್ಮನು ಚಿತ್ರೀಕರಿಸಿದಂತೆ ವಿವರಿಸಿರುವನು. ಸಕಲ ವೇದಾಂತರಹಸ್ಯಗಳೂ ಕ್ಷಣ ಮಾತ್ರದಲ್ಲಿ ನಮಗೆ ಅತ್ಯಂತ ಸುಲಭವಾಗಿ ಕಂಡುಬಂದಂತೆ ತೋರ್ಪಡಿಸಿರುವನಾ ಗೀತೆಯಲ್ಲಿ. ಪರಮಾತ್ಮನು ಶ್ರೋತೃವಿನಲ್ಲಿ ಕಾರ್ಯಶ್ರದ್ಧೆಯನ್ನೂ ವಿಧಿನಿಷ್ಠೆಯನ್ನೂ ನಿರೀಕ್ಷಿಸಿ ಪ್ರೀತಿಗೌರವಗಳಿಂದ ತಾನು ಕೂಡಿದವನಾಗಿ, ವಿಜ್ಞಾನವೇದಾಂತಗಳ ಮೇಲೆಯೂ, ಜನನಮರಣಗಳ ಮೇಲೆಯೂ ಜೀವಾತ್ಮಗಳ ಮೇಲೆಯೂ

ಅಪಾರವಾದ ಸೃಷ್ಟಿವೈಚಿತ್ರ್ಯದ ಮೇಲೆಯೂ ಅರ್ಜುನನಿಗೆ ಸಂಶಯಗಳು ಹುಟ್ಟಿದಾಗ, ಅವೆಲ್ಲಾ ನಿಮಿಷಾರ್ಧದಲ್ಲಿ ಮಾಯ ವಾಗುವಂತೆ ಮಾಡಿದ ಪರಮಾತ್ಮನ ಗೀತೆಯ ಮಹತ್ತ್ವವೆಷ್ಟಿನ ದಿರಬಹುದು ?

ಅರ್ಜುನಕೃಷ್ಣರ ಸಂಭಾಷಣೆಯು ಬ್ರಹ್ಮವಿದ್ಯಾ ವಿಷಯ ದಿಂದಾಗಲೀ ಮರಣ ಸಂಬಂಧ ವಿಷಯದಿಂದಾಗಲಿ, ವೇದಾಂತ ರಹಸ್ಯವನ್ನು ಕುರಿತಾಗಲೀ ಆರಂಭವಾಗಿಲ್ಲ. ಅರ್ಜುನನು ತನ್ನ ಶತ್ರುಪಕ್ಷೀಯರಾದ ದಾಯಾದಿಗಳನ್ನು ಕೊಲ್ಲಲು ಹಿಮ್ಮೆಟ್ಟಿ ನಿಂತುದೇ ಗೀತೆಯು ನಮಗಿಂದು ದೊರೆತಿರುವುದಕ್ಕೆ ಕಾರಣ ವೆನ್ನಬಹುದು.

ಗೀತೆಯ ೧೮ ಅಧ್ಯಾಯಗಳನ್ನೂ ಶ್ರದ್ಧೆಯಿಂದ ಓದುವ ಪ್ರತಿಯೊಬ್ಬನೂ, "ಗೀತಾಚಾರ್ಯನು ಅರ್ಜುನನಿಗೆ ಯಾವ ಯಾವ ವಿಷಯಗಳನ್ನೇ ಹೇಳುತ್ತ ಹೋದರೂ ತನ್ನ ಧ್ಯೇಯ ವನ್ನು ಮಾತ್ರ ಮರೆತಿಲ್ಲವೆಂಬುದನ್ನು ಅರಿಯುವನು. ಯುದ್ಧ ರಂಗದಲ್ಲಿ ನಿಂತಾಗ, ಹಿಂದಿರಗುವುದು ಕ್ಷತ್ರಿಯನ ಧರ್ಮವಲ್ಲ ವೆಂದೂ, ತನ್ನ ಪ್ರತಿಷ್ಠಾಗೌರವಗಳಿಗಾಗಿ ಕ್ಷತ್ರಿಯನು ತನ್ನ ಪ್ರಾಣವನ್ನು ತ್ಯಜಿಸಲು ಸಿದ್ಧನಾಗಬೇಕೆಂದೂ ಅದೇ ಶ್ರೇಯ ಸ್ಸೆಂದೂ ಉಪದೇಶಮಾಡಿ ಶ್ರೀ ಕೃಷ್ಣನು ಅರ್ಜುನನು ಮತ್ತೆ ಯುದ್ಧವನ್ನು ಮಾಡುವಂತೆ ಸಿದ್ಧಮಾಡುವನು ಅದೇ ಅವನ ಧ್ಯೇಯ. ಜ್ಞಾನ, ಕರ್ಮ, ಸನ್ಯಾಸ, ಧ್ಯಾನ, ವಿಜ್ಞಾನ ಇವು ಯೋಗದ ಅನೇಕ ಮಾರ್ಗಗಳು. ಇವೆಲ್ಲಾ ಗೀತೆಯಲ್ಲಿ ವಿವರಿಸ ಲ್ಪಟ್ಟಿದೆ. ಇವುಗಳ ಕಡೆಗೇ ಗೀತೆಯನ್ನು ಓದುವವನು ಮನ ಗೊಡಬೇಕಾದುದೂ ಸಹ; ಇವುಗಳ ಅಂತಿಮ ಪರಿಣಾಮವೇ ಪರಮಾನಂದದಲ್ಲಿ ಐಕ್ಯವಾಗುವಿಕೆಯು. ಗೀತೆಯ ಧ್ಯೇಯವು ಸತ್ಯವನ್ನು ಹುಡುಕುವುದು; ಮತ್ತು ಎಂತಹ ಸ್ಥಿತಿಯಲ್ಲಾ ದರೂ ತನ್ನ ಧರ್ಮವನ್ನು ಕಾಪಾಡಬೇಕೆನ್ನುವುದು. ಆದ್ದರಿಂದಲೇ ಶ್ರೀಕೃಷ್ಣಪರಮಾತ್ಮನು "ಶ್ರೇಯಾನ್ ಸ್ವಧರ್ಮೋ ವಿಗುಣಃ ಪರ ಧರ್ಮೋ ಭಯಾವಹಃ ಎಂದು ಹೇಳಿರುವುದು.

ಭಗವದ್ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಅರ್ಜುನನ ಚಲಿತಬುದ್ಧಿಸ್ಥಿತಿಯು, ವಿವರಿಸಲ್ಪಟ್ಟು ವಿಷಾದಯೋಗ ವೆಂದು ಕರೆಯಲ್ಪಟ್ಟಿದೆ. ರಣರಂಗದ ಚಿತ್ರವೂ, ಅರ್ಜುನನು ಎರಡು ಸೇನೆಗಳ ನಡುವೆ ನಿಂತು ಶಸ್ತ್ರಗಳನ್ನು ಕೆಳಗೆಸೆದು ಕೃಷ್ಣನೊಂದಿಗೆ ಮಾತನಾಡುತ್ತಿರುವುದು ಅದರಲ್ಲಿ ಸೂಚಿಸಲ್ಪ ಟ್ಟಿದೆ. ಎರಡನೆಯ ಅಧ್ಯಾಯವು ಆಕಾಲದ ಶುದ್ಧ ಕ್ಷತ್ರಿಯ ರಾಜಪುತ್ರನ ಮೂರ್ತಿಯಂತಿರುವ ಕೃಷ್ಣನ ವಾಕ್ಯ ಆರಂಭವಾಗುವುದು. ಮೂರನೆಯ ಅಧ್ಯಾಯವೂ ಮುಂದಿನ ಅಧ್ಯಾಯಗಳೂ ಕರ್ಮಯೋಗದ ವಿಚಾರವ ಲ್ಪಟ್ಟಿದೆ. ಐದನೆಯ ಅಧ್ಯಾಯವು "ಸಂನ್ಯಾಸವು ಹೆಚ್ಚೇ ? ಕರ್ಮಯೋಗವು ಹೆಚ್ಚೇ ? ಎನ್ನುವ ಅರ್ಜುನನ ಯಿಂದ ಆರಂಭವಾಗುವುದು. ಆರನೆಯ ಅಧ್ಯಾಯದಲ್ಲಿ ಯೋಗದ ವಿಚಾರವು ಹೇಳಲ್ಪಟ್ಟಿದೆ. ಏಳನೆಯ ದಿಂದ ಹದಿನಾರನೆಯ ಅಧ್ಯಾಯದ ವರೆಗೂ, ಈ ವಿಷ ಯುಗಳನ್ನೇ ಕುರಿತು ಅರ್ಜುನಕೃಷ್ಣರಿಗೆ ಸಂಭಾಷಣೆ ಯುವುದು. ಇವರ ಒಟ್ಟಿನ ಪರಿಣಾಮವೆಂದರೆ ಅರ್ಜುನನು ಎದ್ದು ನಿಂತು॥ ನಷ್ಟೋ ಮೋಹಃ ಸ್ಮೃತಿ ತ್ವತ್ಪ್ರಸಾದಾನ್ಮಯಾಚ್ಯುತ ॥ ಸ್ಥಿತೋಽಸ್ಮಿ ಗತಸಂ ಕರಿಷ್ಯೇ ವಚನಂ ತವ" (ಎಲೈ ಅಚ್ಯುತನೇ ! ನಿನ್ನ ದಿಂದ ಮೋಹವು ನಷ್ಟವಾಯಿತು, ನನ್ನಿಂದ ಹೊಂದಲ್ಪಟ್ಟಿತು, ಸಂಶಯಗಳನ್ನು ಬಿಟ್ಟು ಸ್ಥಿರನಾ ನಿನ್ನ ವಚನದಂತೆ ನಡೆಯಲು ಸಿದ್ಧನಾಗಿದ್ದೇನೆ) ಅರ್ಜುನನು ಹೇಳಿದ ವಾಕ್ಯಗಳು. ಇದನ್ನು ಕೇ ಪರಮಾನಂದವಾಯಿತು. ಕೂಡಲೇ "ಯತ್ರ ಯೋ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ। ತತ್ರ ಶ್ರೀ ಭೂತಿರ್ಧ್ರುವಾನೀತಿರ್ಮತಿರ್ಮಮ ॥ "ಎಲ್ಲಿ ಯೋಗೇ ಕೃಷ್ಣನೂ, ಧನುರ್ಧರನಾದ ಅರ್ಜುನನೂ, ಇರುವ ಸಂಪತ್ತೂ, ವಿಜಯವೂ, ಐಶ್ವರ್ಯವೂ ಸ್ಥಿರವಾಗುವ ವಿಜಯನಾದದಂತಹ ಅಮೃತವಾಣಿಯನ್ನು ಕೃಷ್ಣನು ವನು. ಇದೇ ಮಂಗಳಶ್ಲೋಕವಾಗಿ ಅಲ್ಲಿಗೆ ಭಗವ ಮುಗಿಯುವುದು.

ಒಂದು ದೇಶದ, ಸಂಪತ್ತೂ, ವಿಜಯವೂ, ಕೃಷ್ಣ ಆಚಾರ್ಯನ ಬುದ್ಧಿಯಿಂದಲೂ, ಅರ್ಜುನನಂತಹ ವೀ ಯಿಂದಲೂ ದೊರೆಯಬೇಕಾದುದು. "ಬುದ್ಧಿಯ ಧೈರ್ಯದ" ಸಮ್ಮೇಳನದಿಂದಲೇ ಶ್ರೇಯಸ್ಸು ದೊರೆ ಮಂಗಳವಾಗುವುದು ಎನ್ನುವುದೇ ಭಗವದ್ಗೀತೆಯಿಂ ರಿಯಬೇಕಾದ ಸಾರಾಂಶ. "ಫಲಾನುಭವಕ್ಕೆ ಮನ ತನ್ನ ಕಾರ್ಯವನ್ನು ತಾನು ನಡಿಸುವುದೇ ಧರ್ಮ" ಎಂ ಗೀತೆಯ ಸಂದೇಶ. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಎಂಬೀ ಸಂದೇಶವು, ಎಲ್ಲ ಕಾಲಗಳಿಗೂ

ಗಳಿಗೂ ಅನ್ವಯಿಸುವುದು. ಆದರೆ ಹೆಚ್ಚಾಗಿ ಇದು ಅರ್ಜುನ ಮತ್ತು ಕೃಷ್ಣನ ಸಂತಾನಿಗಳಿಗಾಗಿಯೆಂದೇ ಕೃಷ್ಣನು ಇಂತಹ ಅಮೃತವಾಣಿಯನ್ನು ಹೇಳಿದುದೆಂದು ಭಾರತೀಯರಾದ ನಾವು ಎಂದೆಂದಿಗೂ ಮರೆಯಲಾಗದು. ಇಂದಿನ ಭಾರತೀಯರ ಪರಿಸ್ಥಿತಿಯು ಧರ್ಮಕರ್ಮಗಳ ವಿಚಾರದೃಷ್ಟಿಯಿಂದ ಅಂದಿನ ಸ್ಥಿತಿಗೆ ಸಾಮಾನ್ಯದಿಂದಿರುವಂತೆ ತೋರುವುದು. ಇಂತಹ ಸಂದೇಶವನ್ನು ಇಂದು ಯಾವುದಾದರೂ ದೇಶವು ಅಪೇಕ್ಷಿಸುವುದೆಂದರೆ ಅದು ನಮ್ಮ ಭಾರತ ದೇಶ ಮಾತ್ರ. ತಮ್ಮ ಸಂಪತ್ತಿನ, ವಿಜಯದ ಪುನಸ್ಸಂಪಾದನ ವಿಷಯದಲ್ಲಿ ಚಲಿತಮನಸ್ಕರಾಗಿ ಅನೇಕ ಸಂದೇಹಗಳಿಂದ ಕೂಡಿರುವ ನಮ್ಮ ಭಾರತೀಯರಿಗೆ ಸಂಶಯ ನಿವಾರಣೆಯಾಗಬೇಕಾದರೆ, ಗೀತಾವಚನಾನುಸರಣೆಯೇ ಮುಖ್ಯ. ಅಂತಹವರು ಕೃಷ್ಣನನ್ನು ಧ್ಯಾನಿಸಿ, ಪ್ರಾರ್ಥಿಸಿ, ಆತನು ಉಪದೇಶಿಸಿರುವ ವಾಕ್ಯಗಳಂತೆ ಆಚರಿಸಲು ಶಕ್ತಿಯನ್ನು ಕೊಡವಂತೆ ಬೇಡಬೇಕು. ಯಾವ ದೇಶವಲ್ಲಿ ಪರಾತ್ಪರನಾದ, ಕೃಷ್ಣ ಪರಮಾತ್ಮನು ಜನ್ಮವೆತ್ತಿ ತನ್ನ ಕ್ರೀಡಾವಿಲಾಸಗಳಿಂದ ಪವಿತ್ರವನ್ನಾಗಿ ಮಾಡಿದನೋ, ಯಾವ ದೇಶವಲ್ಲಿ ಕೃಷ್ಣನು ಅರ್ಜುನನಿಗೆ ಈ ಮಹಾ, ಪೂಜ್ಯಗೀತೆಯನ್ನು ಉಪದೇಶ ಮಾಡಿದನೋ, ಅಂತಹ ದೇಶವಲ್ಲಿ ಜನ್ಮವೆತ್ತಿರುವ ನಾವು ಕೃಷ್ಣನು ಬೋಧಿಸಿರುವ, ಯೋಗಮಾರ್ಗದಿಂದಾಗಲೀ, ಸಂನ್ಯಾಸಮಾರ್ಗದಿಂದಾಗಲೀ, ತ್ಯಾಗಮಾರ್ಗದಿಂದಾಗಲೀ ಶಕ್ತಿಯನ್ನು ಪಡೆದಿಲ್ಲವೆಂದರೆ ಅದಕ್ಕಿಂತ ಘೋರಪಾಪವು ಬೇರೊಂದಿಲ್ಲ. ಹಾಗಿಲ್ಲದೆ "ಆ ರೀತಿ ನಾವಾಚರಿಸಲು ನಮಿಗೆ ಶಕ್ತಿಸಾಹಸಗಳುಂಟು, ನಮ್ಮ ಧರ್ಮವನ್ನು ರಕ್ಷಿಸಲು ನಮಿಗೆ ಭಗಂತನು ಸಂಪೂರ್ಣವಾಗಿ ಸಹಾಯಮಾಡುವನು" ಎಂಬನಂಬಿಕೆಯಿಂದ, ಕಠಿನಜೀವನ ಧರ್ಮರಣಾಂಗದಲ್ಲಿಳಿಯಲು ಸಿದ್ಧರಿರುವೆವಾದರೆ, ಹೇಗೆ ಮಹಾ ಪ್ರತಾಪಶಾಲಿಗಳಾದ ಭೀಷ್ಮ ದ್ರೋಣರ ಸಹಾಯವಿದ್ದರೂ ದುರ್ಯೋಧನನಿಗೆ ಅಪಜಯವುಂಟಾಗಿ ಅರ್ಜುನನಿಗೆ ವಿಜಯವು ಕೈಸೇರಿತೋ ಹಾಗೆಯೇ ನಮಿಗೂ, ಸಂಪತ್ತೂ, ಸುಖವೂ, ಸ್ವಾತಂತ್ರ್ಯವೂ ಶೀಘ್ರವಾಗಿ ದೊರೆಯುವುದರಲ್ಲಿ ಯಾವ ಸಂದೇಹವೂ ಇಲ್ಲ.

ಅಂತಹ ಭಾವೀಮಂಗಳಕ್ಕಾಗಿಯಾದರೂ ಗೀತಾಧ್ಯಯನ ಮಾಡಿ, ಗೀತಾವಚನಗಳನ್ನನುಸರಿಸಲು ಯತ್ನಿಸಿ ಕೃತಾರ್ಥರಾಗೋಣ.

---

## ಹಾಡಬೇಡ!

ಹಾಡುತಿಹುದೇಕೆಲವೊ ಹಕ್ಕಿ! ಮುಂಜಾವದಲಿ
ಮೂಡಿ ಬಹ ರವಿಯ ಬಿಂಬವ ಕಂಡೆಯಾ?
ಹಾಡುತಿಹೆ; ರಾಗರಸಗೂಡಿ ನಲಿದಾಡಿ ಹಾ-
ರಾಡುತಿಹೆ; ಭಾಗ್ಯವನು ಕಂಡುದೇನು?
ಕಳೆದ ದಿನವನು ರಾತ್ರಿ ನುಂಗಲದ ಕಂಡಾಗ
ಹಲವಿಧದಿ ಹಂಬಲಿಸಿ ಗೂಡಿನೊಳಗೆ
ಮಲಗಿ ನಿದ್ರಿಸಿದುದಲ್ಲದೆ ರಾತ್ರಿಯಲ್ಲಿರ್ದ
ಕಳೆಗಳನು ಕಂಡು ಹೊಗಳಿರ್ಪುದುಂಟೆ?
ಈಗ ಬಂದಿರುವ ದಿನವನು ಕಂಡು ಹಿಗ್ಗುತಿಹೆ
ಆಗಸದಿ ಹಾರಾಡಿ ಹಾಡುತಿರುವೆ.

ಸಾಗರದ ಗರ್ಭದಲಿ ದಿನಕರನು ಮರೆಯಾಗ
ಲಾಗ ದುಃಖಿಪೆ ನಿನ್ನ ಭಾಗ್ಯವಿನಿತೆ?
ನೆರೆದಿರಲು ರಾತ್ರಿ ದುಃಖದ ಮಬ್ಬು ಕವಿದಿರಲು
ಮರಿತಾರೆಗಳಕಂಡು ಸುಖಿಸಿರುವೆಯಾ?
ಧರೆಯ ಬೆಳಗುವ ದಿವ್ಯದಿನದೊಳಿಹ ತೊಡಕುಗಳ
ಗುರುತಿಸುವ ಭಾಗ್ಯವಿಹುದೇ ನಿನ್ನೊಳು?
ಸಂದ ದುಃಖದೊಳಿರ್ದ ಸುಖವನ್ನು ಗುರುತಿಸುವ
ಬಂದ ಸುಖದಲಿ ದುಃಖವಿರೆ ಕಾಣುವ
ಬಂಧುರದ ಭಾಗ್ಯ ನಿನಗಿಲ್ಲ—ಮದದಿಂದ ನೀ-
ನಿಂದು ಬೆಳಗಾಯ್ತೆಂದು ಹಾಡಬೇಡ!

—ಕೆವ್ಮಿಂಜೆ ಸುಬ್ರಾಯ:ಪಾಧ್ಯಾಯ; ಪುತ್ತೂರು

---

# ಮುಖಜ್ಯೋತಿಷದಲ್ಲಿ ಗ್ರಹಗಳ ಜ್ಞಾನ

ಲೇಖಕರು:--ಶ್ರೀಕೃಷ್ಣರಾವ ವಿನಾಯಕ ಗೋಕಾಕ, ವಕೀಲರು, ಸವಣೂರು

ಈ ಜ್ಯೋತಿಷದಲ್ಲಿ ಯಾವ ಗ್ರಹವು ಯಾವ ರಾಶಿಯಲ್ಲಿದೆ ಯೆಂಬದನ್ನು ತಿಳಿಯುವದು ಅತಿ ಮಹತ್ತ್ವದ ವಿಷಯ. ಇದನ್ನು ತಿಳಿದುಕೊಳ್ಳಲಿಕ್ಕೆ ಬೇರೆ ಬೇರೆ ತರಹದ ಹಂಚಿಕೆಗಳಿವೆ.

ಬಲಗಣ್ಣಿನ ಹೊಳಪು ಆಕೃತಿ ಇವೇ ಮುಂತಾದವುಗಳ ಮೇಲಿಂದ ನಮಗೆ ರವಿಯ ಸ್ಥಾನವನ್ನು ಕುರಿತು ಪೂರ್ಣ ಜ್ಞಾನವಾಗುವದು. ಇದಕ್ಕೂ ಮೊದಲು ಮನುಷ್ಯನು ಹುಟ್ಟಿದ ಲಗ್ನವನ್ನು ಹೇಗೆ ಸಿದ್ಧಮಾಡಬೇಕೆಂಬದನ್ನು ಹೇಳಿದ್ದಾಯಿತು. ಆ ಪ್ರಕಾರ ಒಬ್ಬ ಮನುಷ್ಯನು ಇಂಥದೊಂದು ಲಗ್ನದಲ್ಲಿ ಹುಟ್ಟಿದನೆಂದು ತಿಳಿಯುವಾ. ಇನ್ನು ಅವನ ಕುಂಡಲಿಯಲ್ಲಿ ರವಿಯ ಸ್ಥಾನವು ಆವುದು ?

## ರವಿಯ ಸ್ಥಾನ

೧ ಆ ಮನುಷ್ಯನ ಬಲಗಣ್ಣು ಸ್ವಲ್ಪು ಕಪ್ಪು ಬಣ್ಣದ್ದಿದೆ ಯೆಂದು ತಿಳಿಯೋಣ. ಗಾಂಭೀರ್ಯದ ಲಕ್ಷಣವೂ ಅವನ ನೇತ್ರಗಳಲ್ಲಿ ಹೊಳೆಯುತ್ತಿದೆ. ಗುಡ್ಡೆಗಳು ದೊಡ್ಡವಾಗಿವೆ. ಆ ಕಪ್ಪು ಕಣ್ಣೊಳಗಿನ ಬಿಳೇ ಭಾಗದಲ್ಲಿ ಎಳ್ಳಿನಂಥ ಕಪ್ಪು ಚಿನ್ಹಗಳಿವೆ. ಹೀಗಿದ್ದಲ್ಲಿ ರವಿಯ ಸ್ಥಾನವು ಮೇಷರಾಶಿ ಯೆಂದು ತಿಳಿಯಬೇಕು.

೨ ರವಿಯು ವೃಷಭರಾಶಿಯಲ್ಲಿದ್ದರೆ ಆತನ ದಂತಗಳು ವಿರಳವಾಗಿದ್ದು ಕಣ್ಣು ಸಣ್ಣವಾಗಿಯೂ ಸ್ವಲ್ಪ ಒಳಗೆ ಸೇರಿದಂತೆಯೂ ಇರುತ್ತವೆ. ಮತ್ತು ಕರಿ ಗುಡ್ಡಿಗಳ ಸುತ್ತುಮುತ್ತು ಅಲ್ಪವೇ ಆಗಲಿ ಕಪ್ಪು ವರ್ಣವಿರುವದು.

೩ ರವಿಯು ಮಿಥುನರಾಶಿಯಲ್ಲಿದ್ದರೆ ಕಣ್ಣುಗಳು ದೊಡ್ಡವಿದ್ದು ಅವುಗಳ ಕೆಳಗಿನ ಭಾಗವು ತುಸು ಎತ್ತರವಾಗಿರುವದು. ಗುಡ್ಡಿಗಳು ಜಿಕ್ಕಿನ ಕಣ್ಣಿನ ಹಾಗಿದ್ದು ತುಸು ಮುಂದೆ ಬಂದಿರುತ್ತವೆ. ಇದಲ್ಲದೆ ಆ ಗುಡ್ಡಿಗಳ ಸುತ್ತಲಿನ ಭಾಗವು ಬೆಳ್ಳಗಿರುವದು.

೪ ರವಿಯು ಕರ್ಕರಾಶಿಯಲ್ಲಿದ್ದರೆ ಕಣ್ಣುಗಳು ದೊಡ್ಡವಿದ್ದು ಗುಡ್ಡಿಯ ಹೊರಗಿನ ಭಾಗವು ನಸುಗಪ್ಪಾಗಿರುತ್ತದೆ. ಗುಡ್ಡಿಗಳು ಕಪ್ಪಾಗಿರುವವಲ್ಲದೆ ಎವೆಗಳೂ ಕೂಡ ಕಪ್ಪಿರುತ್ತವೆ. ಮತ್ತು ಗುಡ್ಡಿಯ ಸುತ್ತಿನ ಪ್ರದೇಶದಲ್ಲಿ ಸ್ವಲ್ಪ ಕೆಂಪು ಬರುವದು.

೫ ರವಿಯು ಸಿಂಹರಾಶಿಯಲ್ಲಿದ್ದರೆ ನೇತ್ರಗಳು ಪತ್ರದಂತೆ ಸುಂದರವಾಗಿದ್ದು ಜಿಕ್ಕಿನ ಕಣ್ಣುಗಳ ತುಸು ಹೋಲುವವು. ಗುಡ್ಡಿಯ ಸುತ್ತಲಿನ ಭಾಗವು ಗೆಂಪು ಇರುವದಲ್ಲದೇ ಅಲ್ಲಿ ನಾವು ಕೆಂಪಾದ ರೇಷೆಗಳನ್ನು ಕಾಣಬಹುದು.

೬ ರವಿಯು ಕನ್ಯಾರಾಶಿಯಲ್ಲಿದ್ದರೆ ನೇತ್ರಗಳು ... ವಾಗಿ ದೊಡ್ಡವಾಗಿದ್ದು ಗುಡ್ಡಿಗಳೂ ಸ್ವಲ್ಪ ... ಹದ್ದಿನ ಬಣ್ಣದವೂ ಇರುತ್ತವೆ. ಗುಡ್ಡಿಯ ಸುತ್ತಲಿನ ... ಶುಭ್ರವಾಗಿ ಬೆಳ್ಳಗಿರುತ್ತದೆ.

೭ ರವಿಯು ತುಲಾರಾಶಿಯಲ್ಲಿದ್ದರೆ ಕಣ್ಣುಗಳು ... ಗಿದ್ದು ಕಪ್ಪಾಗಿರುತ್ತವೆ. (ಅಂದರೆ ಗುಡ್ಡಿಗಳೂ ಕಪ್ಪಾ...

೮ ರವಿಯು ವೃಶ್ಚಿಕರಾಶಿಯಲ್ಲಿದ್ದರೆ ಕಣ್ಣುಗಳು ... ವಿದ್ದು ಗುಡ್ಡಿಗಳು ಹದ್ದಿನ ಬಣ್ಣದವು. ಕೆಳಗಿನ ಎವೆ... ದಪ್ಪವಾಗಿರುತ್ತದೆ. ಇದಲ್ಲದೆ ಗುಡ್ಡಿಯ ಸುತ್ತಲಿನ ... ಬಿಳಿಗೆಂಪಾಗಿರುವದು.

೯ ರವಿಯು ಧನುರಾಶಿಯಲ್ಲಿದ್ದರೆ ನೇತ್ರಗಳು ... ವಾಗಿಯೂ ಉಗ್ರವಾಗಿಯೂ ಇದ್ದು ಗುಡ್ಡಿಗಳು ಕಪ್ಪು... ದಲ್ಲದೆ ತುಸು ಮುಂದೆ ಬಂದಂತಿರುತ್ತವೆ. ಅವುಗಳ ... ಲಿನ ಭಾಗವು ಕೆಂಪಾಗಿರುತ್ತದೆ.

೧೦ ರವಿಯು ಮಕರರಾಶಿಯಲ್ಲಿದ್ದರೆ ಕಣ್ಣುಗಳು ... ವಾಗಿದ್ದು ಗುಡ್ಡಿಗಳು ಸಣ್ಣವಾಗಿಯೂ ಕಪ್ಪಾಗಿಯೂ ... ತ್ತವೆ. ಗುಡ್ಡಿಗಳ ಸುತ್ತಲಿನ ಭಾಗವು ಕಪ್ಪಾಗಿರುತ್ತದೆ.

೧೧ ರವಿಯು ಕುಂಭರಾಶಿಯಲ್ಲಿದ್ದರೆ ನೇತ್ರಗಳು ... ಗುಡ್ಡಿಗಳು ಹದ್ದಿನ ಬಣ್ಣದವು. ಆ ಗುಡ್ಡಿಗಳ ... ಭಾಗವು ಬಿಳಿ ಮತ್ತು ಹಳದಿ ಹೀಗಿರುತ್ತದೆ.

೧೨ ರವಿಯು ಮೀನರಾಶಿಯಲ್ಲಿದ್ದರೆ ಕಣ್ಣುಗಳು ... ವವಲ್ಲದೆ ಗುಡ್ಡಿಗಳು ಸ್ವಲ್ಪ ಕಪ್ಪಾಗಿಯೂ ಹದ್ದಿನ ... ಮೇಲೆಯೂ ಇರುವವು. ಅವುಗಳ ಸುತ್ತಲಿನ ಭಾಗ... ಪಾಗಿರುತ್ತದೆ.

ಈ ಎಲ್ಲ ಲಕ್ಷಣಗಳನ್ನು ಬಲಗಣ್ಣಿನಲ್ಲಿಯೇ ಪರೀಕ್ಷಿಸಿ ರವಿಯ ಸ್ಥಾನವನ್ನು ನಿರ್ಣಯಿಸಬಹುದು.

## ಚಂದ್ರನ ಸ್ಥಾನನಿರ್ಣಯ

೧ ಈ ವಿಷಯವಲ್ಲಿ ಬಲಗಣ್ಣಿಗಿಂತ ಎಡಗಣ್ಣು ಹೆಚ್ಚು ಉಪಯುಕ್ತವಾದದ್ದು. ಚಂದ್ರನು ಮೇಷರಾಶಿಯಲ್ಲಿದ್ದರೆ ಬಲ ಗಣ್ಣಿಗಿಂತ ಎಡಗಣ್ಣು ದೊಡ್ಡದಿದ್ದು ಗುಡ್ಡಿಯು ಕರ್ರಗಿರು ತ್ತದೆ. ಅದರ ಸುತ್ತಿನ ಭಾಗವು ಕೆಂಪಾಗಿದ್ದು ಕೆಳಗಿನ ರೆಪ್ಪೆಯು ಸ್ವಲ್ಪ ದಪ್ಪಾಗಿರುತ್ತದೆ.

೨ ಚಂದ್ರನು ವೃಷಭರಾಶಿಯಲ್ಲಿದ್ದರೆ ಬಲಗಣ್ಣಿಗಿಂತ ಎಡ ಗಣ್ಣು ಸಣ್ಣದು. ಗುಡ್ಡಿಯು ಕರ್ರಗಾಗಿ ಸಣ್ಣದಿರುವದು. ಅದರ ಸುತ್ತಲಿನ ಭಾಗವು ಬೆಳ್ಳಗಿರುವದು.

೩ ಚಂದ್ರನು ಮಿಥುನರಾಶಿಯಲ್ಲಿದ್ದರೆ ಬಲಗಣ್ಣಿಗಿಂತ ಎಡಗಣ್ಣು ದೊಡ್ಡದಿದ್ದು ಗುಡ್ಡಿಯು ಸ್ವಲ್ಪ ಬೆಕ್ಕಿನ ಕಣ್ಣಿನ ಹಾಗಿರುವದು. ಮತ್ತು ಅದರ ಸುತ್ತಿನ ಭಾಗವು ಬಿಳಿದಾ ಗಿಯೂ ಹಳದಿಯಾಗಿಯೂ ಇರುವದು.

೪ ಚಂದ್ರನು ಕರ್ಕರಾಶಿಯಲ್ಲಿದ್ದರೆ ನೇತ್ರಗಳು ತೇಜಃ ಪುಂಜವಾಗಿಯೂ ದೊಡ್ಡವಾಗಿಯೂ ಇರುತ್ತವೆ. ಗುಡ್ಡಿ ಗಳು ಕಪ್ಪಾಗಿಯೂ ಹದ್ದಿನ ಬಣ್ಣದವೂ ಇರುವವು. ಅವು ಗಳ ಸುತ್ತಲಿನ ಭಾಗವು ಬಿಳುಪಾಗಿರುತ್ತದೆ.

೫ ಚಂದ್ರನು ಸಿಂಹರಾಶಿಯಲ್ಲಿದ್ದರೆ ಕಣ್ಣು ಸಣ್ಣವು. ಗುಡ್ಡಿಗಳು ಕರ್ರಗಾಗಿದ್ದು ಅವುಗಳ ಸುತ್ತಿನ ಭಾಗವು ಬಿಳಿ ಗೆಂಪಾಗಿಯೂ ರೇಷೆಯುಳ್ಳದ್ದಾಗಿಯೂ ಇರುವದು.

೬ ಚಂದ್ರನು ಕನ್ಯಾರಾಶಿಯಲ್ಲಿದ್ದರೆ ಕಣ್ಣು ಸ್ವಲ್ಪ ದೊಡ್ಡವು. ಗುಡ್ಡಿಯಾಲಿ ದೊಡ್ಡದಿದ್ದು ಸ್ವಲ್ಪ ಕಪ್ಪಿರು ತ್ತದೆ. ಅದರ ಸುತ್ತು ಮುತ್ತಿನ ಭಾಗವು ತುಸು ಹಸರು ಛಾಯದ ಮೇಲಿರುವದು.

೭ ಚಂದ್ರನು ತುಲಾರಾಶಿಯಲ್ಲಿದ್ದರೆ (ಎಡಗಣ್ಣಿನ) ಗುಡ್ಡಿಯು ಕಪ್ಪಾಗಿದ್ದು ಸಣ್ಣದಿರುತ್ತದೆ. ಅದರ ಸುತ್ತಿನ ಭಾಗವು ಬಿಳಿಗಪ್ಪಿನವು.

೮ ಚಂದ್ರನು ವೃಶ್ಚಿಕರಾಶಿಯಲ್ಲಿದ್ದರೆ ಕಣ್ಣು ದೊಡ್ಡವು. ಗುಡ್ಡಿ ದೊಡ್ಡದಾಗಿದ್ದು ಬೆಕ್ಕಿನ ಕಣ್ಣಿನಂತಿರುತ್ತದೆ. ಅದರ ಸುತ್ತಲಿನ ಭಾಗವು ಬಿಳುಪು.

೯ ಚಂದ್ರನು ಧನುರಾಶಿಯಲ್ಲಿದ್ದರೆ ಕಣ್ಣು ದೊಡ್ಡವು. ಗುಡ್ಡಿಯು ಕಪ್ಪಾಗಿದ್ದು ದೊಡ್ಡದಾಗಿ ಮುಂದೆ ಬಂದಂತಿರು ತ್ತದೆ. ಅದರ ಸುತ್ತಲಿನ ಭಾಗವು ಬಿಳಿಗೆಂಪು.

೧೦ ಚಂದ್ರನು ಮಕರರಾಶಿಯಲ್ಲಿದ್ದರೆ ಕಣ್ಣು ಸಣ್ಣವು. ಗುಡ್ಡಿ ದೊಡ್ಡದಾಗಿ ಹದ್ದಿನ ಬಣ್ಣದ್ದಿರುತ್ತದೆ. ಅದರ ಸುತ್ತಿನ ಭಾಗವು ಕಪ್ಪು.

೧೧ ಚಂದ್ರನು ಕುಂಭರಾಶಿಯಲ್ಲಿದ್ದರೆ ಕಣ್ಣು ಸಣ್ಣವು. ಗುಡ್ಡಿಯು ದೊಡ್ಡದಾಗಿದ್ದು ಸ್ವಲ್ಪ ಬೆಕ್ಕಿನ ಕಣ್ಣಿನಂತಿರು ತ್ತದೆ. ಅದರ ಸುತ್ತಿನ ಭಾಗವು ಬೆಳ್ಳಗೆ.

೧೨ ಚಂದ್ರನು ಮೀನರಾಶಿಯಲ್ಲಿದ್ದರೆ ಕಣ್ಣುಗಳು ತೇಜಃ ಪುಂಜವಾಗಿದ್ದು ಗುಡ್ಡಿಯು ದೊಡ್ಡದಾಗಿಯೂ ಕಪ್ಪಾಗಿಯೂ ಇರುತ್ತದೆ. ಅದರ ಸುತ್ತಿನ ಭಾಗವು ಬೆಳ್ಳಗೆ.

ಈ ಎಲ್ಲ ಲಕ್ಷಣಗಳನ್ನು ಎಡಗಣ್ಣಿನಲ್ಲಿ ಪರೀಕ್ಷಿಸಬೇಕು.

---

## ಸಂಜೆಯ ದನಿ

ಹಗಲೆಲ್ಲ ಕೂಡಿಟ್ಟ ಹಗರಣವ ಗೋಳಿಂದ
ಗಗನವೆಲ್ಲವು ಮುಸಗಿ, ಮುಗಿಲು ಮಾಸಲು ಆಯ್ತು!
ಎದೆ ಬಿರಿದು ಕುದಿಯುಕ್ಕಿ ಸುರಿವ ಬಿಸಿ ನೆತ್ತರವು
ಮುಗಿಲಡರಿ ಎಲ್ಲೆಡೆಯು ಕಾದ ಕೆಂಡವದಾಯ್ತು!
ಹಗೆತನದ ಉರಿ ಹಬ್ಬಿ ಜಗದಿಂದ ದಗೆಯೆದ್ದು
ಆಗಸದಿ ಹೊಗೆ ಕವಿದು ಕಾಳರಾತ್ರಿಯಿದಾಯ್ತು!
ಬರುವಶ್ರುಧಾರೆಯಲಿ ಹೃದಯ ಬೆಂಡಾಗುತಲಿ
ಮೇಲೆ ನೋಡಲು ಕೆಂಪು-ಅದೆ ಹಸುರುಗೆಂಪು!
ಮುಗಿಲೆಂದು ಹನಿಯಾಗಿ ದಗೆಯ ಹರಿಸುವುದು!
ಗಗನದಲಿ ಕೆಂಪಡಗಿ ಭುವಿಯೆಂದು ತಣಿಯುವುದು
ಹೊಗೆಯಾರಿ ನಾನೆಂದು ಕಣ್ಣ ತೆರೆಯುವೆನು?
ಮೊಗವೆಂದು ನಗೆಯಿಂದ ಬಿರಿದು ಅರಳುವುದು?
ಬಾಗಿದೀ ತಲೆಯೆಂದು ಗೆಲಿದು ನಿಲ್ಲುವುದು?

—ಸೀತಾರಾಮ ಜೋಯಿಸ, ತೋವಿನಕೆರೆ.

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು:— ಶ್ರೀ. ಕೃ. ಶ್ರೀ. ಬೆಟಗೇರಿ, ಬೆಂಗಳೂರು

## ೭ನೆಯ ಪರಿಚ್ಛೇದ

ರಾತ್ರಿಯೆಲ್ಲವೂ ಜಯಸಿಂಹನಿಗೆ ನಿದ್ರೆ ಬಗಲಿಲ್ಲ. ಗುರುವಿನೊಡನೆ ತಾನಾಡಿದ ಮಾತುಗಳಿಗೆ ನೋಡನೋಡುವುದರಲ್ಲಿಯೆ ಹಲವು ಶಾಖೆಪ್ರಶಾಖೆಗಳೊಡೆದು ಹೊರಕ್ಕೆ ಹೊರಟುವು. ಲೋಕದಲ್ಲಿ ಯಾವ ಕಾರ್ಯದ್ದೇ ಆಗಲಿ ಆರಂಭವು ಮಾತ್ರ ನಮ್ಮ ಕೈಯೊಳಗಿನದು. ಅಂತ್ಯವು ನಮ್ಮ ಕೈಯೊಳಗಿನದಲ್ಲ. ಚಿಂತೆಯ ವಿಷಯದಲ್ಲಿಯೂ ಇದೇ ಮಾತು ಪ್ರಮಾಣವಾಗುವುದು. ಜಯಸಿಂಹನ ಹೃದಯದಲ್ಲಿ ಹೊಳೆದು ಬಳೆಯುತಿರುವ ಬಗೆಬಗೆಯ ಬಗೆಯ ತೆರೆಗಳೆಲ್ಲವೂ ಒಂದುಗೂಡಿ, ಎಳೆಯತನದಿಂದಲೂ ನೆಲೆಗೊಂಡಿದ್ದ ಆತನ ವಿಶ್ವಾಸದ ಮೂಲಕ್ಕೇ ಏಟುಹಾಕಲು ತೊಡಗಿದುವು. ಆ ಏಟುಗಳಿಂದ ಅವನು ಕಠಿನಮನಸ್ಕನಾಗತೊಡಗಿದನು.

ಆದರೆ ಭಾವನೆಗಳು ದುಃಸ್ವಪ್ನಗಳಂತೇನು ಮೂಡಿ ಕೂಡಲೆ ಮಾಸಲಾರವು. "ಇದುವರೆಗೂ ಜಯಸಿಂಹನು ತಾಯಿಯೆಂದು ಭಾವಿಸಿದ ದೇವಿಯ ಮಾತೃತ್ವವನ್ನು ಗುರುದೇವನು ಇಂದು ಕಳೆದು ಬಿಟ್ಟನಲ್ಲವೇ ? ಅವಳು ಹೃದಯರಹಿತವಾದ ಶಕ್ತಿಯೆಂದು ವ್ಯಾಖ್ಯೆ ಮಾಡಿದನಲ್ಲವೇ ? ಶಕ್ತಿಗೆ ಸಂತೋಷವೇನು ಅಸಂತೋಷವೇನು! ಶಕ್ತಿಗೆ ಕಣ್ಣುಗಳೆಲ್ಲಿ, ಕಿವಿಗಳೆಲ್ಲಿ? ಶಕ್ತಿಯು ಮಹಾರಥದಂತೆ ತನ್ನ ಸಾವಿರಾರು ಚಕ್ರಗಳ ಅಡಿಯಲ್ಲಿ ಜಗತ್ತನ್ನು ನುಗ್ಗು ನುಗ್ಗು ಮಾಡುತ್ತ ಘರ್ಘರವೆಂದು ಘೋಷಿಸುತ್ತ ನಡೆದಿರುವುದು. ಅದನ್ನು ಅವಲಂಬಿಸಿ ಯಾರು ನಡೆದಿರುವರು ! ಅದರ ಅಡಿಯಲ್ಲಿ ಸಿಕ್ಕು ಹುಡಿಯಾಗುವರಾರು ! ಅದರ ಮೇಲೆ ಏರಿ ನಿಂತು ಉತ್ಸವ ಮಾಡುವರಾರು ? ಅದರ ಒಳಕ್ಕೆ ಬಿದ್ದು ಆರ್ತನಾದವನ್ನು ಮಾಡುತಿರುವರು ಎಂಬುದೆಲ್ಲ ಆ ಶಕ್ತಿಗೆ ಗೊತ್ತಾಗುವುದೆಂತು ? ಅದಕ್ಕೆ ಸಾರಥಿಯು ಕೂಡ ಯಾರೂ ಇಲ್ಲ. ಭೂಮಿಯಲ್ಲಿಯ ಏನೂ ತಿಳಿಯದ ಸಹಾಯರಹಿತಗಳಾದ ಭೀರುಪ್ರಾಣಿಗಳ ... ಹೊರಕ್ಕೆ ತೆಗೆದು, ಆ ಕಾಲರೂಪಿಣಿಯು ಆ ನಿಷ್ಠುರ ... ನೀರಡಿಕೆಯನ್ನು ತಣಿಸುತ್ತಲಿರುವುದಿದು ನಮ್ಮ ... ಏನು ! ಅವಳು ತಾನಾಗಿಯೇ ತನ್ನ ಕಾರ್ಯವನ್ನು ... ಕೊಳುತಿರುವಳಲ್ಲ ! ಅವಳಿಗೆ ದುರ್ಭಿಕ್ಷಗಳಿವೆ; ಪಿಡುಗು ... ಭೂಕಂಪಗಳಿವೆ; ಅಗ್ನಿದಾಹ—ಜರಾ—ಮಾರಿಗಳಿವೆ; ... ರಾದ ಮಾನವರ ಹೃದಯದಲ್ಲಿರುವ ಹಿಂಸೆಯಿದೆ. ಇಷ್ಟು ... ಕಾರ್ಯಕ್ಕೆ ಸಹಕಾರಿಗಳಾಗಿರುವಾಗ ಕ್ಷುದ್ರ ... ಅವಶ್ಯಕತೆಯೇನವಳಿಗೆ ? " ಇತ್ಯಾದಿ ಜಯಸಿಂಹನ ... ತಂತ್ರಿಯ ರೋದನ.

ಅದರ ಮರುದಿನದ ಪ್ರಭಾತವು ಅತ್ಯಂತ ... ವಾದುದು. ಮಳೆಯೆಲ್ಲ ನಿಂತುಬಿಟ್ಟಿದೆ. ಮೂಡಣ ... ಗಳಿಲ್ಲ. ಸೂರ್ಯಕಿರಣಗಳು ಮಳೆಯ ನೀರಲ್ಲಿ ... ಟ್ಟಿವೆಯೇನೋ ಎಂಬಂತೆ ಸ್ವಚ್ಛವೂ ಸ್ನಿಗ್ಧವೂ ... ನೀರ ಹನಿಗಳು ಸೂರ್ಯ ಕಿರಣಗಳಿಂದ ಎಲ್ಲೆಡೆ ... ತಳತಳಿಸುತಿರುವವು. ಆನಂದದಾಯಕವಾದ ಬಿಳಿ ... ಮುಗಿಲಲ್ಲಿಯೂ ನಾಡುಕಾಡುಗಳಲ್ಲಿಯೂ ಹೊಳೆಯ ... ಗಳಲ್ಲಿಯೂ ಅರಳಿದ ಬೆಳುದಾವರೆಯಂತೆ ... ಬಿದ್ದುಬಿಟ್ಟದೆ. ನೀಲಾಕಾಶದಲ್ಲಿ ನೀರುಮೋಡ ... ಗಳು ಕಂಡು ಕಾಣದಂತಾಗುತ್ತಲಿವೆ. ಇಂದ್ರ ... ತೋರಣದ ಕೆಳಗಿನಿಂದ ಹಾಯ್ದು ಬೆಳುವಕ್ಕಿಯ ಸಾಲು ...

ಹೋಗುತಲಿದೆ. ಮಳೆಯ ಜಿಟ್ಟೆಗಳು ಮರಮರಗಳಲ್ಲಿಯೂ ಹಾರಾಡುತ್ತಲಿರುವವು. ಮೇಕೆಯ ಮರಿಗಳು ದುರ್ಗಮವಾದ ಬೆಟ್ಟವನ್ನೇರಿ ಮೇಯಲು ತೊಡಗಿರುವವು. ದನಗಳು ಇಂಪು ಮನಸ್ಸಿನ ಆನಂದದಿಂದ ನೆಲವನ್ನು ಕೆದರಿ ಕಿವಿಯನ್ನು ನಿಮಿರಿಸಿ ಹೂಂಕರಿಸುತಿರುವವು. ಗೋಪಾಲಕರು ಉಲ್ಲಾಸದಿಂದ ಹಾಡಲು ಮೊದಲುಮಾಡಿರುವರು. ಕಂಕುಳಲ್ಲಿ ಕೊಡ ಹೊತ್ತು ನಡೆವ ತಾಯಿಯರ ಸೆರಗನ್ನು ಹಿಡಿದುಕೊಂಡು ಹುಡುಗಹುಡುಗಿಯರಿಂದು ಹೊರಕ್ಕೆ ಹೊರಟಿರುವರು. ಮುದುಕರು ಪೂಜೆಗಾಗಿ ಹೂಗಳನೆತ್ತುತಿದ್ದರು. ಸ್ನಾನಕ್ಕೆಂದು ಬಂದು ಅನೇಕ ಜನರು ನದಿಯಲ್ಲಿ ನೆರೆದುಬಿಟ್ಟಿರುವರು. ಅವರೆಲ್ಲರ ಕಲಕಲಾಟಕ್ಕೆ ಆಳತೆಯೇ ಇಲ್ಲ. ನದಿಯ ಕಲಕಲ ಧ್ವನಿಗೆ ವಿಶ್ರಾಂತಿಯೇ ಇಲ್ಲ. ಆಷಾಢದ ಈ ಬೆಳಗಿನಲ್ಲಿ ಜೀವಮಯಿಯೂ ಆನಂದಮಯಿಯೂ ಆದ ಈ ಭೂದೇವತೆಯ ಕಡೆಗೆ ನೋಡಿ ಜಯಸಿಂಹನು ನಿಟ್ಟುಸಿರು ಬಿಟ್ಟು, ದೇವಿಯ ಮಂದಿರದೊಳಗೆ ಹೊಕ್ಕನು.

ಜಯಸಿಂಹನು ಮೂರ್ತಿಯ ಕಡೆಗೆ ನೋಡಿ ಕೈಮುಗಿದು ಹೇಳಿದನು "ಏನು ತಾಯೀ ನೀನಿಂದು ಇಷ್ಟೊಂದು ಅಪ್ರಸನ್ನಚೇತಕಳಾಗಿರುವೆ? ಒಂದೇ ಒಂದು ದಿನ ನಿನಗೆ ಪ್ರಾಣಿಗಳ ರಕ್ತವು ಸಿಕ್ಕಲಿಲ್ಲವೆಂದು ಹೀಗೆ ಹುಬ್ಬುಗಂಟು ಹಾಕಿರುವೆಯಾ? ನಮ್ಮಗಳ ಹೃದಯದಲ್ಲಿ ಹಣಿಕಿಕ್ಕಿ ನೋಡು; ಅಲ್ಲಿ ಭಕ್ತಿಯ ಅಭಾವವೇನಾದರೂ ಕಂಡು ಬರುವುದೇ? ಭಕ್ತನ ಹೃದಯವನ್ನು ಸಂಪಾದಿಸಿದಷ್ಟಕ್ಕೆ ನಿನಗೆ ತೃಪ್ತಿಯಾಗದೇನು? ನಿರಪರಾಧಿಗಳ ನೆತ್ತರು ಬೇಕೇ ಬೇಕೇನು? ಒಳ್ಳೆಯದು ಅಮ್ಮಾ! ಖಂಡಿತವಾಗಿ ಹೇಳು! ಪುಣ್ಯಶರೀರಿಯಾದ ಗೋವಿಂದಮಾಣಿಕ್ಯನನ್ನು ಭೂಮಿಯಿಂದ ಸೆಳೆದುಬಿಟ್ಟು ರಕ್ಕಸರ ರಾಜ್ಯವನ್ನು ನೆಲೆಗೊಳಿಸಬೇಕೆಂದು ನಿನ್ನ ಅಭಿಪ್ರಾಯವೇನು? ರಾಜನ ರಕ್ತವು ನಿನಗೆ ಇಲ್ಲದಿದ್ದರೆ ನಡೆಯದೇನು? ನಿನ್ನ ಮುಖದಿಂದಲೇ ಉತ್ತರವನ್ನು ಪಡೆಯದ ಹೊರತು ನಾನೆಂದೂ ರಾಜನ ಕೊಲೆಗೆ ಎಡೆಗೊಡುವುದಿಲ್ಲ; ನಾನದನ್ನು ತಡೆದು ನಿಲ್ಲಿಸುವೆನು. ಹೇಳು! ಏನು, ಅಹುದೋ ಅಲ್ಲವೋ?"

ಒಮ್ಮೆಲೆ ಯಾರೂ ಇಲ್ಲದ ಆ ಮಂದಿರದಲ್ಲಿ ಧ್ವನಿಯೆದ್ದಿತು "ಅಹುದು."

ಜಯಸಿಂಹನು ಬೆಚ್ಚಿ ಬಿದ್ದು ಹಿಂತಿರುಗಿ ನೋಡಿದನು. ಯಾರೂ ಅಲ್ಲಿ ಕಾಣಲಿಲ್ಲ. ಯಾರದೊ ನೆರಳನ್ನು ಕಂಡಹಾಗೆ ಮನಸ್ಸಿಗೆನಿಸಿತು. ಧ್ವನಿಯನ್ನು ಕೇಳಿದೊಡನೆಯೇ "ಇದು ಗುರುದೇವನ ಕಂಠಸ್ವರವೇನೋ!" ಎಂದುಕೊಂಡನು. ಮತ್ತೆ "ತಾಯಿಯು ಗುರುವಿನ ಕಂಠಸ್ವರದಲ್ಲಿಯೇ ಆದೇಶವಿತ್ತಿರಬಹುದೇ! ಇದ್ದರೂ ಇದ್ದೀತು!" ಎಂದು ಮನದಲ್ಲಿ ಯೋಚಿಸಿದನು. ಆಗವನ ಮೈಯು ನವಿರು ನಿಮಿರಿ ನಿಂತಿತು. ಮೂರ್ತಿಯೆದುರಿನಲ್ಲಿ ನೆಲಕ್ಕೆ ಬಿದ್ದು ನಮಿಸಿ ಸಶಸ್ತ್ರನಾಗಿ ಹೊರಕ್ಕೆ ಹೊರಟು ನಡೆದನು.

---

## ೮ನೆಯ ಪರಿಚ್ಛೇದ

ಗೋಮತೀನದಿಯ ತೆಂಕಣದೆಸೆಯಲ್ಲಿ ಒಂದೆಡೆಯ ಪ್ರದೇಶವು ಅತಿಶಯ ಉನ್ನತವಾಗಿರುವುದು. ಬಿರುಮಳೆಯ ಸೆಳೆತಗಳೂ ಕಿರಿಯ ಕಿರಿಯ ನೀರ ಸರಿವುಗಳೂ ಸೇರಿ ಈ ಉನ್ನತ ಪ್ರದೇಶವನ್ನು ಹಲವು ಗುಹೆಗಂಹರಗಳನಾಗಿ ವಿಭಾಗಿಸಿ ಬಿಟ್ಟಿರುವವು. ನಸುದೂರದಲ್ಲಿಯೆ ಅರ್ಧಚಂದ್ರಾಕಾರವಾಗಿ ದೊಡ್ಡ ದೊಡ್ಡ ಸಾಲತರುಗಳೂ ಗಾಂಧಾರೀವೃಕ್ಷಗಳೂ ಈ ಭಿನ್ನವಿಚ್ಛಿನ್ನವಾದ ಭೂಭಾಗವನ್ನು ಬಳಸಿಕೊಂಡಿರುವವು. ಈ ಸ್ಥಳದ ನಡುವೆ ದೊಡ್ಡದಾದ ಮರವು ಒಂದೂ ಕಣ್ಣಿಗೆ ಬೀಳದು. ಅಲ್ಲಲ್ಲಿ ದಿಣ್ಣೆಗಳ ಮೇಲೆ ಸಣ್ಣ ಸಣ್ಣ ಸಾಲತರುಗಳು, ಉದ್ದವಾಗಿ ಬೆಳೆಯಲು ಅವಕಾಶವನ್ನು ಪಡೆಯದೆ, ಡೊಂಕು ಡೊಂಕಾಗಿ ಕರಿಗೊಂಡು ಹೋಗಿರುವವು. ಎಲ್ಲೆಡೆಯಲ್ಲಿ ವಿಸ್ತಾರವಾದ ಹಾಸುಗಲ್ಲುಗಳು; ಒಂದೊಂದು ಮೊಳ ಎರಡೆರಡು ಮೊಳ ಅಗಲವಾಗಿರುವ ನೂರಾರು ಸಣ್ಣ ಸಣ್ಣ ಹಳ್ಳಹೊನಲುಗಳು ಅಂಕಡೊಂಕಾದ ದಾರಿಯಿಂದ ಹರಿದು ಮುರಿದು, ಮರಳಿ-ಹೊರಳಿ, ಸೇರಿ-ಜೇರೆಯಾಗಿ, ಹಾರಿ ಕುಣಿದು, ಕಲಕಲಿಸುತ್ತ ಗೋಮತೀನದಿಗೆ ಬಂದು ಬೀಳುವವು. ಈ ಸ್ಥಳವು ಯಾವಾಗಲೂ ನಿರ್ಜನವಾಗಿರುವುದು. ಇಲ್ಲಿಯ ಮುಗಿಲು ಮರಗಳಿಂದ ಮುಚ್ಚಿ ಮುಸುಕಿರುವುದಿಲ್ಲ. ಇಲ್ಲಿಂದ ನಿಂತು ನೋಡಿದರೆ ಗೋಮತೀನದಿಯೂ ಅದರ ಇತ್ತಡಿಯಲ್ಲಿರುವ ಬಗೆಬಗೆಯ ಬಣ್ಣದ ಬೆಳೆವೊಲಗಳೂ ಕಣ್ಣನೋಟ ಹರಿಯುವವರೆಗೂ ಕಾಣುತಿರುವವು.

ಗೋವಿಂದಮಾಣಿಕ್ಯನು ದಿನ ದಿನ ಬೆಳಗಿನಲ್ಲಿ ತಿರುಗಾಡಲು ಇದೇ ಸ್ಥಳಕ್ಕೆ ಬರುತಿರುವನು. ಆಗ ಜತೆಯಲ್ಲಿ ಒಡನಾಡಿಯೊಬ್ಬನೂ ಇರುವುದಿಲ್ಲ. ಮೀಂಗುಲಿಗರು ಯಾವಾಗಲಾದರೊಮ್ಮೊಮ್ಮೆ ಮೀನ ಹಿಡಿಯುತ್ತ ಹಿಡಿಯುತ್ತ ಇಲ್ಲಿಗೆ ಬರುವು

ದುಂಟು. ಆಗ ಅವರು ನೋಡಿದರೆ ಸೌಮ್ಯಮೂರ್ತಿಯಾದ ದೊರೆಯು ಯೋಗಿಗಳಂತೆ ಸ್ಥಿರಭಾವದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತಿರುವನು. ಆಗ ಆತನ ಮೊಗದ ಮೇಲೆ ನೆಲೆಗೊಂಡ ದಿವ್ಯಜ್ಯೋತಿಯು ಆ ಪ್ರಭಾತಪ್ರಭೆಯದೋ ಅತನ ಅಂತರಾತ್ಮನದೋ, ಎಂಬುದು ಗೊತ್ತಾಗುವಂತಿರುವುದಿಲ್ಲ. ಮಳೆಗಾಲವಾದುದರಿಂದ ಈಗ ದಿನದಿನವೂ ಇಲ್ಲಿಗೆ ಬರುವುದಕ್ಕೆ ದೊರೆಗೆ ಅಗುತಿರಲಿಲ್ಲ. ಆದರೂ ಮಳೆಯು ಕೊಂಚ ಹೊರಪಾದ ದಿನಗಳೇನಾದರೂ ದೊರೆತಲ್ಲಿ ಅಂದು ಜೊತೆಯಲ್ಲಿ ಆ ಕಿರಿಯ "ಪುಟ್ಟ" ನನ್ನು ಕರೆದುಕೊಂಡು ಬಂದೇ ಬರುವನು.

ಪುಟ್ಟನನ್ನು "ಪುಟ್ಟ"ನೆಂಬ ಹೆಸರಿನಿಂದ ಕರೆಯಲು ನಮ್ಮ ಮನಸ್ಸೀಗ ಒಪ್ಪದಾಗಿದೆ. ಯಾವ ಒಂದೇ ಒಂದು ಬಾಯಿಗೆ "ಪುಟ್ಟಾ" ಎಂಬ ಸಂಬೋಧನವು ಸಲ್ಲುತ್ತಿದ್ದಿತೋ ಆ ಬಾಯಿ ಈಗ ಇಲ್ಲವಾಗಿದೆ. ವಾಚಕರಿಗೆ "ಪುಟ್ಟ"ನೆಂಬ ಹೆಸರಿನಲ್ಲಿ ವಿಶೇಷವಾದ ಅರ್ಥವೇನೂ ತೋರದಿರಬಹುದು. ಆದರೆ ಹಿಂದೆ ದಿನ ದಿನ ಬೆಳಗಿನಲ್ಲಿ ಚೆನ್ನೆಯು ಸಾಲವನದಲ್ಲಿ ಕಣ್ಣುಮುಚ್ಚಾಟವನ್ನಾಡಿ ಅಡಗಿಕೊಂಡಿರಲು, ತನ್ನನ್ನು ಹುಡುಕಿ ಹುಡುಕಿ ದಣಿಯುತಿರುವ ಚಿಕ್ಕ ಪುಟ್ಟನನ್ನು ಸಾಲವೃಕ್ಷದ ಮರೆಯಿಂದ ನೋಡುತ್ತ ಸವಿಯಾದ ಕಿರುಚುದನಿಯಿಂದ "ಪುಟ್ಟಾ" ಎಂದು ಕೂಗುವಳು. ಆಗ ಮರಮರಮರಗಳಲ್ಲಿಯ ಗಿಣಿಗೊರವಂಕಗಳು ಅವಳಂತೆಯೇ ಕೂಗಲು ತೊಡಗುವವು. ವನದ ಎಲ್ಲ ಕಡೆಯಿಂದಲೂ "ಪುಟ್ಟಾ" "ಪುಟ್ಟಾ" ಎಂಬ ಪ್ರತಿಧ್ವನಿಯು ಹೊರಡುತಿರುವುದು. ಆಗ ಮಾತ್ರ ಈ "ಪುಟ್ಟಾ" ಎಂಬ ಶಬ್ದವು ಅರ್ಥಪರಿಪೂರ್ಣವಾಗಿ ವನದಲ್ಲೆಲ್ಲ ತುಂಬಿಕೊಂಡಿರುತ್ತಿದ್ದಿತು. ಆಗ ಈ "ಪುಟ್ಟಾ" ಎಂಬ ಕೂಗು ಒಂದು ಎಳೆಯ ಹೃದಯದ ಹೆಣ್ಣುಮಗುವಿನ ಕೋಮಲತರವಾದ ಗೆಳೆತನದ ಗೂಡನ್ನು ಬಿಟ್ಟು ಹಕ್ಕಿಯಂತೆ ಸ್ವರ್ಗದ ಕಡೆಗೆ ಹಾರಿಹೋಗುತ್ತಿದ್ದಿತು. ಆಗ ಇದೊಂದೇ ಒಂದು ಸ್ನೇಹಸಿಕ್ತವಾದ ಸುಮಧುರ ಸಂಬೋಧನವು, ಬೆಳಗಿನ ಸಮಯದ ಹಿಂಡುಹಿಂಡು ಹಕ್ಕಿಗಳ ಹಾಡಿನ ಸೊಬಗನ್ನು ಸುಲಿದು ಸೂರೆಗೊಂಡು ಬಿಡುತ್ತಿದ್ದಿತು. ಪ್ರಭಾತಕಾಲದ ಪ್ರಕೃತಿಯ ಆನಂದಮಯ ಸೌಂದರ್ಯದೊಂದಿಗೆ ಒಬ್ಬ ಚಿಕ್ಕ ಹುಡುಗಿಯ ಆನಂದಮಯ ಸ್ನೇಹವು ಬೆರೆತು ಒಂದಾದಂತೆ ತೋರುತಿದ್ದಿತು. ಇಂದೀಗ ಆ ಹುಡುಗಿಯಿಲ್ಲ. ಹುಡುಗನಿದ್ದಾನೆ, ಆದರೆ
"ಪುಟ್ಟ"ನು ಇಲ್ಲ. ಲೋಕದ ಎಲ್ಲ ಜನರಿಗೂ ಎಲ್ಲ
ಗಳಲ್ಲಿಯೂ ಇವನೊಬ್ಬ ಹುಡುಗನೇ ಆದರೆ ಆ ಬಾಲಕ
ಳಿಗೆ ಮಾತ್ರ "ಪುಟ್ಟ"ನು. ಮಹಾರಾಜ ಗೋವಿಂ
ಕ್ಯನು ಈ ಹುಡುಗನನ್ನು "ಧ್ರುವ" ಎಂದು ಕರೆಯು
ನಾವಾದರೂ ಇನ್ನು ಮೇಲೆ ಹಾಗೆಯೇ ಕರೆಯುವ!

ಮೊದಲು ಮಹಾರಾಜನು ಗೋಮತೀ ತೀರಕ್ಕೆ
ಬರುತ್ತಿದ್ದನು. ಈಗ ಧ್ರುವನನ್ನೂ ಜತೆಗೆ ಕರೆ
ಬರುವನು. ಅವನ ಪವಿತ್ರವೂ ಸರಲವೂ ಆದ
ದಲ್ಲಿ ದೊರೆಯು ದೇವಲೋಕದ ಛಾಯೆಯನ್ನು ಕಾಣು
ಮಧ್ಯಾಹ್ನದಲ್ಲಿ ಮಾತ್ರ ಸಂಸಾರದ ತಿರುಗಣೆಯಲ್ಲಿ
ಸುವನು. ಆಗ ಬಳಿಯಲ್ಲಿ ಬಳಸಿ ನಿಂತಿರುವ
ಅನುಭವಿಕರೂ ಆದ ಮಂತ್ರಿಗಳು ಆಡಳಿತದ ವಿ
ದೊರೆಗೆ ಅರಿಕೆ ಮಾಡುವರು. ಅದನ್ನು ಅವನು
ಕೇಳಿ ತನ್ನ ಅಭಿಪ್ರಾಯವೀಯುವನು. ಮತ್ತೆ
ನೆಯೆ ಒಂದೇ ಒಂದು ಚಿಕ್ಕಮಗುವು ಅವನನ್ನು
ಸೆಳವಿನಿಂದ ಹೊರಕ್ಕೆ ತೆಗೆದುಕೊಂಡು ಬರುವುದು.
ದೊಡ್ಡ ದೊಡ್ಡವಾದ ಸ್ಥಿರವಾದ ಆ ಕಣ್ಣುಗಳೆರಡ
ನಲ್ಲಿ ಸಾವಿರಾರು ವಿಷಯುಗಳ ದುರಾಶೆಗಳೆಲ್ಲವೂ
ಹೋಗುವವು. ಮಗುವಿನ ಕೈಹಿಡಿದಾಗಲೆಲ್ಲಾ
ವಿಶ್ವದ ತೀರ ಮಧ್ಯದಲ್ಲಿ ಅಂತರೀಕ್ಷದಲ್ಲಿ ಹಬ್ಬಿ
ಉದಾರವೂ ಸರಲವೂ ವಿಸ್ತೃತವೂ ಆದ ರಾಜ
ರಲ್ಲಿ ತಾನು ನಿಂತಿರುವೆನು ಎನಿಸುವುದು; ಅಲ್ಲಿ
ನೀಲಾಕಾಶದ ಚಂದ್ರಾತಪದಲ್ಲಿ ವಿಶ್ವಬ್ರಹ್ಮಾಂಡದ
ಯೊಂದು ಕಲೆತಂತೆ ಕಣ್ಣಿಗೆ ಕಾಣುತಿರುವುದು.
ಭುವರ್ಲೋಕ ಸ್ವರ್ಲೋಕ ಮೊದಲಾದ ಸಪ್ತ
ಸಂಗೀತಸ್ವರವು ಕೇಳಬಂದಂತೆ ತೋರುವುದು.
ಗಳೆಲ್ಲವೂ ಸರಲವಾಗಿಯೂ ಸಹಜವಾಗಿಯೂ
ವಾಗಿಯೂ ಇರುವಂತೆ ಕಾಣುವುದು. ಒಮ್ಮೆಲೆ
ಉಂಟಾಗುವುದು. ಸಲ್ಲದ ಭಾವನೆಗಳೂ ಚಿಂತೆ-
ಓಡಿಹೋಗಿ ಬಿಡುವವು. ದೊರೆಯು ಆ ಪ್ರಭಾತ
ನಿರ್ಜನವಾದ ವನಮಧ್ಯದಲ್ಲಿ ಹೊಳೆಯ ತಡಿಯಲ್ಲಿ
ವಿಲ್ಲದ ಆಗಸದ ಅಡಿಯಲ್ಲಿ ಒಂದು ಮಗುವಿನ ಪ್ರೇ
ಮುಳುಗಿ ಹೋದವನಾಗಿ, ಸೀಮೆಗಾಣದ ಪ್ರೇಮ
ಸ್ಥಳವನ್ನು ಕಾಣುತ್ತಿದ್ದನು,

ಗೋವಿಂದಮಾಣಿಕ್ಯನು ಧ್ರುವನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವನಿಗೆ ಧ್ರುವೋಪಾಖ್ಯಾನವನ್ನು ಹೇಳಿಕೊಡುತ್ತಿದ್ದನು. ಅವರ ಅರ್ಥವು ಧ್ರುವನಿಗೆ ಗೊತ್ತಾಗುತಿದ್ದಿತೆಂದೇನೂ ಇಲ್ಲ. ಆದರೆ ಧ್ರುವನು ಆಡುತಿರುವ ಆ ತೊದಲುನುಡಿಯಲ್ಲಿ ಧ್ರುವೋಪಾಖ್ಯಾನವನ್ನು ಮರಳಿ ಮರಳಿ ಕೇಳಬೇಕೆಂದು ದೊರೆಯ ಮನದಾಶೆ.

ಕತೆಯನ್ನು ಕೇಳುತ್ತ ಕೇಳುತ್ತ ಧ್ರುವನು ಮಾತನಾಡಿದನು. "ನಾನು ವನಕ್ಕೆ ಓಗುವೆನು"

ರಾಜನು ಕೇಳಿದನು. "ಏತಕ್ಕಾಗಿ ಹೋಗುವೆ ವನಕ್ಕೆ?"

ಧ್ರುವನೆಂದನು. "ಹಲಿಯನ್ನು ನೋಡೂದಕ್ಕೆ!

ರಾಜನು ಹೇಳಿದನು "ನಮ್ಮ ವನದಲ್ಲಿಯೂ ಹರಿಯು ಬರುವನು. ಅವನನ್ನು ನೋಡಲು ನೀನು ಬರುತ್ತಿಯೇ?"

ಧ್ರುವ:—ಹಲಿ ಎಲ್ಲಿದಾನೆ?

ರಾಜ:- ಇಲ್ಲಿಯೇ ಇದ್ದಾನೆ.

ಧ್ರುವನು ತಟ್ಟನೆ ನುಡಿದನು. "ಅಕ್ಕ ಎಲ್ಲಿದಾಳೆ?" ಎಂದು ನುಡಿಯುತ್ತಲೆ ಎದ್ದು ನಿಂತು ಹಿಂದಕ್ಕೆ ಹೊರಳಿ ನೋಡಿದನು. ಎಂದಿನಂತೆಯೆ ತನ್ನ ಅಕ್ಕನು ಬೆನ್ನ ಕಡೆಯಿಂದ ತನ್ನ ಕಣ್ಣುಗಳನ್ನು ಮುಚ್ಚುವುದಕ್ಕಾಗಿ ಬರುತಿರುವಳು; ಎಂದು ಆಗ ಅವನಿಗೆನಿಸಿತೇನೋ! ಯಾರೂ ಇಲ್ಲದುದನ್ನು ನೋಡಿ ಧ್ರುವನು ಕೂಡಲೆ ಕೆಳಕ್ಕೆ ಕುಳಿತು ಕಣ್ಣುಗಳನಷ್ಟೇ ಮೇಲಕ್ಕೆತ್ತಿ ಕೇಳಿದನು "ಅಕ್ಕ ಎಲ್ಲಿದಾಳೆ?" ಎಂದು.

ರಾಜನೆಂದನು "ಮಗೂ! ನಿನ್ನ ಅಕ್ಕನನ್ನು ಹರಿಯು ಕರೆದೊಯ್ದಿರುವನಯ್ಯಾ!"

ಧ್ರುವನು ಕೇಳಿದನು. "ಎಲ್ಲಿದಾನೆ ಹಲಿ?"

ರಾಜನೆಂದನು. "ಅವನನ್ನು ಕೂಗು ಮಗು! ನಿನಗೆ ನಾನೊಂದು ಹಾಡನ್ನು ಕಲಿಸಿಕೊಡುವೆನು. ಅದನ್ನು ನೀನು ಹೇಳು."

ಧ್ರುವನು ತಲೆಯನ್ನು ತೂಗುತ್ತ ತೂಗುತ್ತ ಹಾಡನ್ನು ಹೇಳತೊಡಗಿನು.

"ಹರಿ! ನಿನ್ನ ಕರೆಯುವೆನು! ಕಿರಿಯನೊಂಟಿಗ ನಾನು,
ಅರಿಯದಿಹ ಅಡವಿಯಲಿ ತಿರುಗುತಿಹೆನು;
ಕರಿಯಕತ್ತಲೆ ಮುಸುಕಿ ಸುರಿದು ಕಂಬನಿ ತುಳುಕಿ
ಅರಸುತಿಹೆ ದಾರಿಯನು, ಕಾಣದಿಹೆನು;"

"ಸಿರುತ ಮನವೊರಲುವುದು 'ಏನ ಮಾಡಲಿ?' ಎಂದು
'ಕರಿಯೊಡಲಿನಿರುಳು ಯಾವಾಗ ಬರುವುದೊ!'
ಎಂದು,
ಮರುಗುತಲಿ ನಾನಿಂದು ಕರೆವೆ 'ಹರಿ! ಹರಿ!' ಎಂದು
ಹರಿಯ ಹೊರತಿನ್ನಾರ ನೆರವು ನನಗಿಹುದು?"

"ಸುರಿವ ಕಂಬನಿಗಳನು ಬರಡು ಗೊಳಿಸದಿರಿಂದು;
ಒರೆವರೆಲ್ಲರು ನಿನ್ನ 'ಶರಣವತ್ಸಲ' ನೆಂದು;
ಅರಿದು ನಾನೀ ನುಡಿಯ, ತೊರೆದಿರುವೆ ತಗುಬಗೆಯು;
ಇರುತಿಹೆನು ಬದುಕಿ ನಿನ್ನಾಶೆಯಲಿ ಬಂಧು!"

"ಕಾರಿರುಳ ಕಳೆಯಲಿಹ ತಾರೆ ನಿನ್ನಯ ಕಣ್ಣು!
ದಾರಿದಪ್ಪರು ನಿನ್ನ ಸೇರಿದವರೆಂದು;
ಕೋರುವೆನು ಹರಿಯೆ ಧ್ರುವತಾರೆಯಂತಿಹೆ ನೀನು;
ಬೇರೆ ಯಾರನು ಬಯಸಲಾರೆನಿನ್ನು;"

ರಕಾರವನ್ನು ಲಕಾರವಾಗಿಯೂ ಡಕಾರವನ್ನೂ ದಕಾರವಾಗಿಯೂ ಮಾರ್ಪಡಿಸುತ್ತ—ಒಂದೆರಡು ಮಾತುಗಳನ್ನು ಬಾಯಲ್ಲಿಯೇ ನುಂಗುತ್ತ—ಒಂದೆರಡನ್ನು ಹೊರಕ್ಕೆ ಉಚ್ಚರಿಸುತ್ತ—ಆನೆಯೂಷುತ್ತ ಇನಿದಾದ ದನಿಯಿಂದ ಧ್ರುವನು ಹಾಡನ್ನು ಹೇಳಿದನು. ಕೇಳಿ ರಾಜನ ಪ್ರಾಣವು ಆನಂದರಸದಲ್ಲಿ ಓಲಾಡಿಬಿಟ್ಟಿತು. ಅಂದಿನ ಆ ಸುಂದರ ಪ್ರಭಾತವು ಇಮ್ಮಡಿ ಇನಿದಾಗಿ ಕಂಡಿತು. ನಾಲ್ಕೂ ಕಡೆಯ ಹೊಳೆ, ಹಳುವು, ಮರ, ಬಳ್ಳಿಗಳೆಲ್ಲವೂ ನಗಲು ತೊಡಗಿದುವು. ಹೊಂಬಣ್ಣದ ಸುಧೆಯಿಂದ ಸಿಂಚಿತವಾದ ನೀಲಾಕಾಶದಲ್ಲಿ ದೊರೆಯು ಸರಿಕಾಣದ ಚೆಲುವಿಕೆಯ—ಮುಗುಳುಮುಗುಳಾದ ನಗೆಯ ಅದಾವುದೋ ಮುಖಚ್ಛವಿಯನ್ನು ಕಂಡನು. ಧ್ರುವನು ತೊಡೆಯಮೇಲೆ ಕುಳಿತಿದ್ದನು; ಅದೇತಕೇನೋ ದೊರೆಯು ಅವನನ್ನು ತೋಳುಗಳಿಂದ ತೊಡೆಯಮೇಲಿರುವಾಗಲೇ ಬಿಗಿಯಾಗಿ ತಬ್ಬಿಕೊಂಡನು. ಆಗ, ತಾನೂ--ತನ್ನ ಸುತ್ತಲಿರುವುದೆಲ್ಲವೂ—ಸಕಲ ಸ್ಥಿರಚರಗಳೂ ಅದಾರದೋ ತೊಡೆಯಮೇಲಿರುವಂತೆ ಆತನು ನೋಟವನ್ನು ನೋಡಿದನು. ಅವನ ಆನಂದವೂ ಪ್ರೇಮವೂ ಸೂರ್ಯಕಿರಣಗಳಂತೆ ಹತ್ತುದಿಕ್ಕುಗಳಲ್ಲಿಯೂ ಹರಡಿಹೋಗಿ, ಆಗಸವನ್ನು ಮುಸುಕಿ ಬಿಟ್ಟುವು.

ಈ ಹೊತ್ತಿನಲ್ಲಿ ಸಶಸ್ತ್ರನಾದ ಜಯಸಿಂಹನು ಗುಹೆಯ ಮಾರ್ಗದಿಂದ ನಡೆದುಬಂದು ತಟ್ಟನೆ ದೊರೆಯ ಎದುರಿನಲ್ಲಿ ನಿಂತುಕೊಂಡನು.

ದೊರೆಯು ಎರಡೂ ಕೈಗಳನ್ನು ಜಯಸಿಂಹನ ಕಡೆಗೆ ನೀಡಿದನು; ಮಾತನಾಡಿದನು. ' ಬಾ ! ಜಯಸಿಂಹಾ ! ಬಾ ಬಾ ! ' ರಾಜನು ಈಗ ಮಗುವಿನೊಂದಿಗೆ ಬೆರೆತು ತಾನೂ ಮಗುವಾಗಿದ್ದನು. ಅವನಿಗೀಗ ರಾಜಮರ್ಯಾದೆಯ ಅರಿವೆಲ್ಲಿಯದು ?

ಜಯಸಿಂಹನು ರಾಜನಿಗೆ ನೆಲಮುಟ್ಟಿ ನಮಸ್ಕರಿಸಿದನು. ಬಳಿಕ ನುಡಿದನು. " ಮಹಾರಾಜರ ಬಳಿಯಲ್ಲಿ ನನ್ನದೊಂದು ಬಿನ್ನಪವಿದೆ. "

ರಾಜನೆಂದನು. " ಅದೇನು ಹೇಳು ! "

ಜಯಸಿಂಹ :—" ತಾಯಿಯು ತಮ್ಮಲ್ಲಿ ಅಪ್ರಸನ್ನಳಾಗಿರುವಳು. "

ರಾಜ :—" ಅದೇತಕ್ಕೆ ? ಅವಳಿಗೆ ಅತೃಪ್ತಿಯುಂಟಾಗುವಂತಹ ಕೆಲಸವನ್ನು ನಾನೇನು ಮಾಡಿರುವೆನು ? "

ಜಯಸಿಂಹ:—"ಒಡೆಯರು ಬಲಿದಾನವನ್ನು ತಡೆದು ದೇವಿಯ ಪೂಜೆಗೆ ವ್ಯಾಘಾತವನ್ನುಂಟುಮಾಡಿರುವರು. "

ರಾಜನು ಮೆಟ್ಟಿಬಿದ್ದು ಮಾತನಾಡಿದನು. " ಜಯಸಿಂಹಾ ಏನಿದು ? ಹಿಂಸೆಯ ಲಾಲಸೆಯು ಇಷ್ಟೊಂದೇಕೆ ? ತಾಯಿಯ ತೊಡೆಯಲಾಡುವ ಮಕ್ಕಳ ನೆತ್ತರನ್ನು ಹರಿಸಿ ನೀನಾ ತಾಯಿಯ ಪ್ರಸನ್ನತೆ ಪಡೆಯಬೇಕೆಂದಿರುವೆಯೇನು ? "

ಜಯಸಿಂಹನು ಮೆಲ್ಲಮೆಲ್ಲಗೆ ರಾಜನ ಅಡಿಗಳ ಬಳಿಯಲ್ಲಿ ಕುಳಿತನು. ಧ್ರುವನು ಆತನ ಕತ್ತಿಯನ್ನು ತೆಗೆದುಕೊಂಡು ಆಟವಾಡಲು ತೊಡಗಿದನು.

ಜಯಸಿಂಹನೆಂದನು " ಮಹಾರಾಜ; ಶಾಸ್ತ್ರಗಳಲ್ಲಿ ಬಲಿದಾನದ ವ್ಯವಸ್ಥೆಯನ್ನು ಹೇಳಿರುವುದಲ್ಲವೇ ! "

ರಾಜನೆಂದನು. " ಶಾಸ್ತ್ರದ ನಿಯಮಗಳ ನಿಜವಾದ ತಿರುಳನ್ನು ತಿಳಿದುಕೊಂಡು ನಡೆಯುವವರು ಯಾರಿದ್ದಾರೆ ? ಎಲ್ಲರೂ ತಮ್ಮ ತಮ್ಮ ಮನೋವೃತ್ತಿಗಳಿಗನುಸಾರವಾಗಿಯೇ ಶಾಸ್ತ್ರಗಳ ವ್ಯಾಖ್ಯೆಯನ್ನು ಮಾಡಿ ಬಿಟ್ಟಿರುವರು. ದೇವಿಯೆದುರಿನಲ್ಲಿ ಬಲಿಗೊಟ್ಟು ಕೆಸರುಕೂಡಿದ ನೆತ್ತರನ್ನು ಒಡಲಿಗೆಲ್ಲಕ್ಕೂ ತೊಡೆದುಕೊಂಡು ಉತ್ಕಟವಾದ ಚೀತ್ಕಾರದಿಂದಲೂ ಭೀಷಣವಾದ ಉಲ್ಲಾಸದಿಂದಲೂ ಅಂಗಳದಲ್ಲಿ ಹಲವರು ಕುಣಿಯುತಿರುವರಲ್ಲವೇ ? ಅವರು ಹೀಗೆ ಮಾಡುವುದೆಲ್ಲ ತಾಯಿಯ ಪೂಜೆಯೆನ್ನುವೆಯೇನು ? ಅಲ್ಲ ! ತಮ್ಮ ಹೃದಯದಲ್ಲಿ ನೆಲೆಯಾಗಿರುವ ಹಿಂಸಾರಾಕ್ಷಸಿಯ ಪೂಜೆಯದು. ಹಿಂಸೆಯೆದುರಿನಲ್ಲಿ ಬಲಿದಾನ ಕೊಡಬೇಕೆಂದು ಯಾವ ಶಾಸ್ತ್ರದ ನಿರ್ಬಂಧವೂ ಇಲ್ಲ. ಬಲಿಯನ್ನು ಕೊಡುವುದಿದೂ ಶಾಸ್ತ್ರವಿಧಿಯೇ ? "

ಅದೆಷ್ಟೋ ಹೊತ್ತು ಜಯಸಿಂಹನು ಸುಮ್ಮನಿದ್ದ. ನಿನ್ನೆಯ ರಾತ್ರಿಯಿಂದ, ಅವನ ಮನದಲ್ಲಿಯೂ ... ಅನೇಕ ಮಾತುಗಳು ಎದ್ದು ಬಿದ್ದು ಹೋಗಿದ್ದುವು.

ಕೊನೆಗೆ ಮಾತನಾಡಿದನು. " ನಾನು ತಾಯಿಯ ... ದಲೇ ಕೇಳಿರುವೆನು. ನನಗೀಗ ಈ ಮಾತಿನ ... ಇನ್ನಾವ ಸಂಶಯವೂ ಉಳಿದಿರುವುದಿಲ್ಲ. ಅವಳು ... ಗಿಯೇ ಹೇಳಿರುವಳು ; ಅವಳಿಗೆ ಮಹಾರಾಜರ ... ಬೇಕೆಂತೆ " ಎಂದು ನುಡಿದು ಜಯಸಿಂಹನು ಬೆಳಗಿನ ... ಮಂದಿರದ ಸಂಗತಿಯನ್ನೆಲ್ಲ ರಾಜನಿಗೆ ವಿವರಿಸಿದನು.

ರಾಜನು ನಗುತ್ತ ಮಾತನಾಡಿದನು. "ಇದೇನು ... ಅಪ್ಪಣೆಯಲ್ಲ ; ರಘುಪತಿಯ ಅಪ್ಪಣೆಯು. ರಘು... ಒಳಗಿದ್ದುಕೊಂಡು ನಿನ್ನ ಮಾತಿಗೆ ಉತ್ತರವಿತ್ತಿರುವನು.

ರಾಜನಾಡಿದ ಈ ನುಡಿಗಳನ್ನು ಕೇಳಿ ಜಯ... ಒಮ್ಮೆಲೆ ಬೆಚ್ಚಿ ಬಿದ್ದನು. ಅವನ ಮನಸ್ಸಿನಲ್ಲಿಯೂ ... ಬಗೆಯ ಸಂಶಯವು ಒಂದು ಸಲ ಕಿರಣಸಂತೆ ಮು... ಆದರೆ ಮರಳಿ ಮಿಂಚಿನಂತೆ ಮಾಯವಾಗಿದ್ದಿತು. ... ಮಾತುಗಳಿಂದ ಆ ಸಂಶಯವು ಮತ್ತೆ ಬಡಿದೆದ್ದಿತು.

ಜಯಸಿಂಹನು ತೀರ ಕಾತರಭಾವದಿಂದ ಹೇಳಲು... ದನು. " ಮಹಾರಾಜ ! ನನ್ನನ್ನು ಒಂದು ಸಂಶ... ಇನ್ನೊಂದು ಸಂಶಯದೊಳಕ್ಕೆ ತೆಗೆದುಕೊಂಡು ಹೋ... ದಡದಿಂದೆತ್ತಿ ಕಡಲನಡುವೆ ಬಿಸುಡಬೇಡಿ ! ತಮ್ಮ ... ಗಳಿಂದ ನನಗೆ, ನಾಲ್ಕು ದಿಕ್ಕುಗಳಲ್ಲಿಯೂ ಕಗ್ಗತ್ತಲೆ... ಯುತ್ತಿರುವಂತೆ ತೋರುತ್ತಿದೆ. ನನ್ನಲ್ಲಿ ನೆಲೆಯಾಗಿ... ವಿಶ್ವಾಸಗಳು, ಇದ್ದಂತೆಯೇ ಇದ್ದುಬಿಡಲಿ ; ... ಮಾರ್ಪಡಲೆಂಬ ದುರಾಶೆಯು ನನಗೆ ಉಂಟಾ... ತಾಯಿಯ ಅಪ್ಪಣೆಯಾವರೇನು, ಗುರುವಿನ ಅಪ್ಪಣೆ... ರೇನು ? ಎರಡೂ ಒಂದೇ ಎಂದು ಅದನ್ನೆ ನಾನು ... ವೆನು " ಎಂದು ಹೇಳಿ ಸರಕ್ಕನೆದ್ದು ತನ್ನ ಕತ್ತಿಯನ್ನು ... ಯಿಂದೆಳೆದು ಹೊರಕ್ಕೆ ತೆರೆದನು. ಕತ್ತಿಯು ಭೀಕರವಾ... ಗಳಿಂದ ಮಿಂಚಿನಂತೆ ಲಕಲಕಿಸತೊಡಗಿತು. ತನ್ನ... ನೋಡಿ ಧ್ರುವನು ಗಟ್ಟಿಯಾಗಿ ಅತ್ತುಬಿಟ್ಟನು.

ಪುಟ್ಟಪುಟ್ಟ ಕೈಗಳಿಂದ ರಾಜನನ್ನು ತಬ್ಬಿಕೊಂಡು ಜೀವಭಾವ ದಿಂದ ಅವನನ್ನು ಮರೆಮಾಡಿಬಿಟ್ಟನು. ರಾಜನು ಜಯಸಿಂಹ ನನ್ನು ಎಣಿಕೆಗೆ ತಾರದೆ ಧ್ರುವನನ್ನೇ ತಕ್ಕಯಿಸಿ ಎದೆಗೊತ್ತಿ ಕೊಂಡನು.

ಜಯಸಿಂಹನು ಇದ್ದಕ್ಕಿದ್ದ ಹಾಗೆಯೆ ಕತ್ತಿಯನ್ನು ದೂರ ದಲ್ಲಿ ಎಸೆದು ಬಿಟ್ಟನು. ಧ್ರುವನ ಬೆನ್ನಮೇಲೆ ಕೈಯಾಡಿಸುತ್ತ ಹೇಳಿದನು. "ಮಗು! ಅಂಜಬೇಡವಯ್ಯಾ! ಅಂಜಬೇಡ! ಇದೋ ನಾನು ಹೊರಟುಹೋಗುವೆನು. ನೀನೀ ಮಹತ್ತಾದ ಆಶ್ರಯದಲ್ಲಿ ಚಿರಕಾಲ ಸುಖದಿಂದಿರು; ಈ ವಿಶಾಲವಕ್ಷದಲ್ಲಿ ವಿರಾಜಿತನಾಗು; ನಿನಗೆ ಯಾವನೂ ಅಡ್ಡಿಯನ್ನುಂಟುಮಾ ಡನು." ಎಂದು ನುಡಿದು ರಾಜನಿಗೆ ಪ್ರಣಾಮವನ್ನು ಮಾಡಿ ಇನ್ನು ಅಲ್ಲಿಂದ ಹೊರಟುಹೋಗಬೇಕೆಂದಿದ್ದನು.

ಒಡನೆಯೆ ಏನನ್ನೋ ಯೋಚಿಸಿ ಮರಳಿ ಮಾತನಾಡಿದನು. "ಮಹಾರಾಜರಿಗೆ ಮೊದಲೆ ಎಚ್ಚರಿಕೆ ಕೊಡುವೆನು. ತಮ್ಮ ಬಂಧು ನಕ್ಷತ್ರರಾಯನು ತಮ್ಮ ವಿನಾಶದ ವಿಚಾರವನ್ನು ಮಾಡಿ ರುವನು. ಆಷಾಢ ವದ್ಯ ಚತುರ್ದಶಿಯ ರಾತ್ರಿ ಚತುರ್ದಶ ದೇವತೆಯರ ಪೂಜೆಯ ಸಮಯದಲ್ಲಿ ತಾವು ಜಾಗರೂಕರಾಗಿರ ಬೇಕು."

ರಾಜನು ನಕ್ಕು ನುಡಿದನು. "ನಕ್ಷತ್ರನು ನನ್ನನ್ನು ಅತಿಶಯ ವಾಗಿ ಪ್ರೀತಿಸುವನು. ಅವನು ನನ್ನನ್ನು ಕೊಲ್ಲುವುದಕ್ಕೆ ಯಾವ ಕಾರಣವೂ ಇಲ್ಲ." ಜಯಸಿಂಹನು ಬೀಳ್ಕೊಂಡು ಹೊರಟು ಹೋದನು.

ರಾಜನು ಧ್ರುವನ ಕಡೆಗೆ ನೋಡಿ ಭಕ್ತಿಭಾವದಿಂದ ಹೇಳಿ ದನು. "ನೀನೇ ಇಂದು ರಕ್ತಪಾತದಿಂದ ಭೂದೇವತೆಯ ರಕ್ಷಣ ಮಾಡಿದೆ. ಇದಕ್ಕಾಗಿಯೇ ನಿನ್ನ ಅಕ್ಕನು ನಿನ್ನನ್ನು ಇಟ್ಟು ಹೋಗಿರುವಳು" ಎಂದು ನುಡಿದು ಧ್ರುವನ ಕಂಬನಿಗ ಳಿಂದ ಕೂಡಿದ ಕೆನ್ನೆಗಳೆರಡನ್ನೂ ಒರಸಿದನು.

ಧ್ರುವನು ಗಂಭೀರಮುಖದವನಾಗಿ ಕೇಳಿದನು. "ಅಕ್ಕ ಎಲ್ಲಿದಾಳೆ?"

ಈ ಸಮಯದಲ್ಲಿ ಮೋಡವು ಬಂದು ಸೂರ್ಯನಿಗೆ ಮುಸು ಕುಹಾಕಿ ಬಿಟ್ಟಿತು. ನದಿಯ ಮೇಲೆ ಕಪ್ಪಾದ ನೆರಳು ಬಿದ್ದಿತು. ದೂರದಲ್ಲಿರುವ ಕಾಡಿನ ಕೊನೆಯ ಭಾಗವು ಮೋಡದಂತೆಯೆ ಕಪ್ಪಾಗಿ ಹೋಯಿತು. ಮಳೆ ಬರುವ ಚಿಹ್ನವನ್ನು ಕಂಡು ರಾಜನು ಅರಮನೆಗೆ ಮರಳಿ ಬಂದನು.

## ೯ನೆಯ ಪರಿಚ್ಛೇದ

ಮಂದಿರವು ಬಳಿಯಲ್ಲಿಯೇ ಇದ್ದಿತಾದರೂ, ಜಯಸಿಂಹನು ಜನರ ಸುಳಿದಾಟವಿಲ್ಲದಿರುವ ನದಿಯ ದಡದಲ್ಲಿಂದ ಅದೆಷ್ಟೋ ಸುತ್ತಿಸುತ್ತಿ, ಸಾವಕಾಶವಾಗಿ ಮಂದಿರದ ಕಡೆಗೆ ನಡೆದನು. ಬಗೆಬಗೆಯ ಭಾವನೆಗಳು ಆತನ ಮನದಲ್ಲಿ ಉದಯಿಸತೊಡಗಿ ದುವು. ಹೊಳೆಯ ದಡದ ಒಂದೆಡೆಯಲ್ಲಿ ಗಿಡದ ನೆರಳಲ್ಲಿ ಕುಳಿತುಬಿಟ್ಟನು. ಎರಡೂ ಕೈಗಳಿಂದ ಮೋರೆಯನ್ನು ಮುಚ್ಚಿ ಕೊಂಡು ಯೋಚಿಸಲು ತೊಡಗಿದನು. "ನಾನೀಗ ಒಂದು ಕೆಲಸ ಮಾಡಿಬಿಟ್ಟೆನು; ಆದರೆ ಸಂಶಯವೇನೂ ಸರಿದುಹೋಗ ಲಿಲ್ಲ. ಇದೀಗ ನನ್ನ ಸಂಶಯವನ್ನು ಯಾರು ನಿವಾರಿಸಬಲ್ಲರು? ಮೇಲಾವುದು ಕೀಳಾವುದು ಎಂಬದನ್ನು ಯಾರು ನನಗಿಂದು ಗೊತ್ತುಮಾಡಿ ಕೊಡುವರು? ಸಂಸಾರದಲ್ಲಿಯ ಸಾವಿರಾರು ಕೋಟಿ ದಾರಿಗಳ ಕೂಟದಲ್ಲಿ ನಿಂತಿರುವ ನಾನು ಸರಿಯಾದ ದಾರಿಯಾವುದೆಂದು ಯಾರನ್ನು ಕೇಳಲಿ? ಬಟ್ಟಬಯಲಿನಲ್ಲಿ ಒಬ್ಬೊಂಟಿಗನಾದ ಕುರುಡನಂತೆ ನಿಂತುಕೊಂಡಿರುವೆನು. ಇದೀಗ ನನ್ನ ಕೈಗೋಲು ಮುರಿದು ಹೋಗಿರುವುದು."

ಜಯಸಿಂಹನು ಎದ್ದಾಗ ಮಳೆಬೀಳಲು ಮೊದಲಾಯಿತು. ಮಳೆಯಲ್ಲಿ ನನೆಯುತ್ತ ನನೆಯುತ್ತಲೇ ಜಯಸಿಂಹನು ಮಂದಿ ರದ ಕಡೆಗೆ ನಡೆದನು. ಅನೇಕ ಜನರು ಗುಲ್ಲುಗಲಾಟೆಮಾಡುತ್ತ ಗುಂಪುಗುಂಪಾಗಿ ಮಂದಿರದ ಕಡೆಗೆ ನಡೆದಿರುತ್ತಿದ್ದರು.

ಮುದುಕನೊಬ್ಬನು ಮಾತನಾಡಿದನು. "ತಂದೆತಾತಂದಿರ ಕಾಲದಿಂದಲೂ ಹೀಗೆಯೇ ನಡೆದುಕೊಂಡು ಬಂದಿದೆ. ಈಗ ರಾಜನ ಬುದ್ಧಿಯು ಅವರೆಲ್ಲರನ್ನೂ ಮೀರಿ ಮಿಕ್ಕಿ ಹೋಯಿ ತೇನು?"

ತರುಣನೊಬ್ಬನು ಹೇಳಿದನು. "ಈಗ ಮತ್ತೊಮ್ಮೆ ಮಂದಿ ರಕ್ಕೆ ಹೋಗಬೇಕೆಂದು ಇಚ್ಛೆಯೇ ಉಂಟಾಗಲೊಲ್ಲದು. ಪೂಜೆ ಯಲ್ಲಿ ಆಗಿನ ಸೊಗಸೇ ಉಳಿದಿಲ್ಲ."

ಇನ್ನಾವನೋ ನುಡಿದನು. "ಇದೇನೋ ನವಾಬರ ರಾಜ್ಯ ವಾಗಿ ನಿಂತುಕೊಂಡಿತು." ಬಲಿದಾನದ ವಿಷಯದಲ್ಲಿ ಔದಾ ಸೀನ್ಯವುಂಟಾಗಬೇಕಾದರೆ ಒಬ್ಬ ಮಹಮ್ಮದೀಯನ ಮನ ದಲ್ಲಿಯೇ ಉಂಟಾಗಬಹುದು; ಆದರೆ ಹಿಂದುವಿನ ಮನದಲ್ಲಿ

ಉಂಟಾಗಿರುವುದು ಅತಿಶಯವಾದ ಆಶ್ಚರ್ಯವೆಂದು ಆತನ ಅಭಿಪ್ರಾಯವು.

ಹುಡುಗಿಯರು ಹಲವರು ಹೇಳತೊಡಗಿದರು. " ಈ ರಾಜ್ಯಕ್ಕೆ ಉಳಿಗಾಲವಿದ್ದಂತೆ ತೋರುವುದಿಲ್ಲ. ಅಮಂಗಳವು ಸುರಿಯುತ್ತಲಿದೆ."

ಇನ್ನಾವನೋ ಎಂದನು. " ಪುರೋಹಿತಯ್ಯನವರೇನೋ ತಾವೇ ಹೇಳಿರುವರು; ಮೂರು ತಿಂಗಳುಗಳಲ್ಲಿಯೇ ಈ ದೇಶವು ಪಿಡುಗಿನ ಬಾಯಿಗೆ ತುತ್ತಾಗಿ ಓಡುವುದೆಂದು, ದೇವಿಯು ಅವರ ಕನಸಿನಲ್ಲಿ ಬಂದು ಹೇಳಿ ಹೋಗಿರುವಳೆಂತೆ."

ಹಾರುವು ಹೇಳಿದನು. "ನೀವಿದನ್ನು ನೋಡಲಿಲ್ಲವೇ ನಮ್ಮ ಮಾಧೂ, ಜೇನೆ ಬಂದು ಒಂದುವರೆ ವರುಷವಾಗಿದ್ದರೂ ಸರಿಯಾಗಿ ಬದುಕಿಕೊಂಡೇ ಇದ್ದನು. ಈ ಬಲಿಯು ನಿಂತುದೇ ಆಯಿತು. ಕೂಡಲೆ ಸತ್ತೇ ಹೋಗಬೇಕೇ!"

ಕ್ಷಾಂತನು ಹೇಳಿದನು. "ಅದೇತಕ್ಕಯ್ಯಾ! ಭಾಸುರಪ್ಪ ನಿರಲಿಲ್ಲವೇ! ಅವನು ಸಾಯುವನೆಂದು ಯಾರಿಗೆ ತಿಳಿದಿದ್ದಿತು! ಮೂರೇ ಮೂರು ದಿನದ ಜ್ವರ! ಯಾವಾಗ ವೈದ್ಯರಾಜನ ವಟಿಕೆಗಳನ್ನು ನುಂಗಿದನೋ, ಕಣ್ಣುಗಳೇ ಬೆಳ್ಳಗಾಗಿಹೋದವು. ಭಾಸುರಪ್ಪನ ಸಾವಿನ ಶೋಕದಿಂದಲೂ ರಾಜ್ಯಕ್ಕೆ ಅಮಂಗಲ ವುಂಟಾಗುವುದೆಂಬ ಆಶಂಕೆಯಿಂದಲೂ ಕ್ಷಾಂತನು ಕಾತರ ಗೊಂಡು ಹೋದನು.

ತಿನಕಡಿಯು ಹೇಳಿದಳು. "ಆ ದಿನ ಮಥೂನ ಹುಲ್ಲ ಚಪ್ಪರಕ್ಕೆ ಬೆಂಕಿಬಿದ್ದು ಹೋಯಿತಲ್ಲ! ಪಾಪ ಒಂದೇ ಒಂದು ಸಾರ ಣೆಯರಿವೆ ಕೂಡ ಉಳಿಯಲಿಲ್ಲ."

ಚಿಂತಪ್ಪ ಗೌಡನು ತನ್ನೊಬ್ಬ ಸಂಗಡಿಗನಾದ ಒಕ್ಕಲಿಗನಿಗೆ ಹೇಳಿದನು. "ಈಗ ಮಾತನಾಡಿ ಪ್ರಯೋಜನವೇನು? ನೋಡುವುದಿಲ್ಲವೇ? ಈ ವರುಷದಷ್ಟು ಈ ಮೊದಲು ಎಂದಾದರೂ ಕಾಳುಕಡಿಗಳು ಅಗ್ಗವಾಗಿದ್ದುವೇ? ಈ ವರುಷ ಒಕ್ಕಲಿಗರ ಹಹೆಯಲ್ಲಿ ಏನು ಬರೆದಿದೆಯೋ ಯಾರು ಬಲ್ಲರು?"

ಬಲಿದಾನವನ್ನು ನಿಲ್ಲಿಸಿದಮೇಲೆಯೂ ನಿಲ್ಲಿಸುವುದಕ್ಕೆ ಮೊದಲೂ ಯಾರುಯಾರಿಗೆ ಏನೇನು ತೊಂದರೆಯೊದಗಿದ್ದಿತೋ ಅದೆಲ್ಲಕ್ಕೂ ಒಂದೇ ಒಂದಾದ ಈ ಬಲಿದಾನದ ತಡೆಗಟ್ಟೇ ಕಾರಣವೆಂದು, ಎಲ್ಲರೂ ಸೇರಿ ನಿರ್ಧರಿಸಿ ಬಿಟ್ಟರು. "ಈ ದೇಶವನ್ನು ಬಿಟ್ಟು ಇನ್ನೆಲ್ಲಿಗಾದರೂ ಹೋಗುವುದೇ ಸರಿಯಾದುದು"

ಎಂದು ಜನರೆಲ್ಲರ ಅಭಿಪ್ರಾಯ. ಈ ಅಭಿಪ್ರಾಯದಲ್ಲಿ ಪರಿಣಾಮವೇನು ಉಂಟಾಗಲಿಲ್ಲವಾದರೂ ದೇಶವನ್ನು ಬಿಟ್ಟವನೊಬ್ಬನೂ ಇಲ್ಲ. ಎಲ್ಲರೂ ದೇಶದಲ್ಲಿಯೇ ವಾಸಿಸುತಿರುವರು.

ಜಯಸಿಂಹನು ಇನ್ನಾವುದೋ ಯೋಚನೆಯಲ್ಲಿದ್ದನು. ಜನರನ್ನೆಲ್ಲ ನೋಡಿಯೂ ನೋಡದಂತೆ ಸುಮ್ಮನೆ ಮಂದಿರದ ಕಡೆಗೆ ನಡೆದುಬಿಟ್ಟನು. ಹೋಗಿ ನೋಡಿದನು; ರಘುಪತಿಯು ಪೂಜೆಯನ್ನು ಮುಗಿಸಿಕೊಂಡು ಮಂದಿರದ ಹೊರಕ್ಕೆ ಬಂದು ಕೊಂಡಿದ್ದನು.

ಜಯಸಿಂಹನು ದಡದಡನೆ ರಘುಪತಿಯ ಬಳಿಗೆ ಬಂದು ಆತುರತೆಯಿಂದ ಗಟ್ಟಿಯಾಗಿ ಕೇಳಿದನು. " ಗುರುದೇವಾ, ತಾಯಿಯ ಅಪ್ಪಣೆ ಪಡೆಯುವುದಕ್ಕಾಗಿ, ನಾನಿಂದು ಬೆಳಗ್ಗೆ ಅವಳಿಗೆ ಪ್ರಶ್ನೆ ಕೇಳುತ್ತಿದ್ದೆನಲ್ಲವೇ? ಅದರ ಉತ್ತರವನ್ನು ತಾವು ಕೊಟ್ಟುದೇಕೆ?"

ರಘುಪತಿಯು ಹಾಗೆ ಹೀಗೆ ಮಾಡಿ ಒಮ್ಮೆ ಮಾತನಾಡಿದನು. "ತಾಯಿಯು ತನ್ನ ಆದೇಶವನ್ನು ನನ್ನ ಮುಖಾಂತರವಾಗಿ ಹೊರಪಡಿಸುತಿರುವಳು. ಅವಳು ತನ್ನ ಮುಖದಿಂದ ಎಂದೂ ನುಡಿಯಳು."

ಜಯಸಿಂಹನೆಂದನು. "ತಾವು ಎದುರೆದುರಾಗಿಯೆ ಹೇಳಿ ಕೊಂಡು ಹೇಳಲಿಲ್ಲವೇತಕ್ಕೆ? ಒಳಕ್ಕೆಯೇ ಅಡಗಿದ್ದುಕೊಂಡು ನನ್ನನ್ನು ಮೋಸಗೊಳಿಸಿದುದೇತಕ್ಕೆ?"

ರಘುಪತಿಯು ಕ್ರುದ್ಧನಾಗಿ ಹೇಳಿದನು. "ಬಾಯಿ ಮುಚ್ಚು. ನಾನು ಯಾವ ಯಾವ ಯೋಚನೆಯಿಂದ ಏನೇನು ಮಾಡುವೆ ನೆಂಬುದನ್ನು ನೀನೇನು ಬಲ್ಲೆ? ವಾಚಾಲನಂತೆ ಬಾಯಿಗೆ ಬಂದುದನ್ನೇ ಬೊಗಳಬೇಡ! ನಾನು ಕೊಟ್ಟ ಅಪ್ಪಣೆಯನ್ನು ಪಾಲಿಸುವುದಷ್ಟೇ ನಿನ್ನ ಕೆಲಸ, ನಡುವೆ ಯಾವ ಪ್ರಶ್ನೆಯನ್ನೂ ಕೇಳಕೂಡದು."

ಜಯಸಿಂಹನು ತೆಪ್ಪಗೆ ಕುಳಿತನು. ಆತನ ಸಂಶಯವು ಇನ್ನಿಷ್ಟು ಹಿಗ್ಗಿಹೋಯಿತೇ ಹೊರತು, ಕುಗ್ಗಿದುದು ಕೊಂಚವೂ ಇಲ್ಲ. ಸ್ವಲ್ಪ ವೇಳೆಯಾದಮೇಲೆ ಹೇಳಿದನು. "ಇಂದು ಬೆಳಗಿನಲ್ಲಿ ನಾನು ತಾಯಿಯೊಡನೆ ಮಾತನಾಡುತಿದ್ದಾಗ ಅವಳು ತನ್ನ ಬಾಯಿಂದಲೆ ಅಪ್ಪಣೆ ಕೊಟ್ಟಿರದಿದ್ದಲ್ಲಿ, ಇನ್ನು ನಾನೆಂದೂ ರಾಜನ ಕೊಲೆಗೆ ಅವಕಾಶ ಕೊಡೆನು. ಅದಕ್ಕೆ ಅಡ್ಡಿಯನ್ನೇ ಮಾಡುವೆನು. ತಾಯಿಯು ಅಪ್ಪಣೆ ಮಾಡಿಲ್ಲವೆಂಬುದು ಸ

ಯಾವಾಗ ಖಂಡಿತವಾಗಿ ಗೊತ್ತಾಗಿ ಹೋಯಿತೋ, ಆಗಲೆ ಮಹಾರಾಜನೆದುರಿನಲ್ಲಿ ನಕ್ಷತ್ರರಾಯನ ಸಂಕಲ್ಪವನ್ನು ಪ್ರಕಾಶ ಪಡಿಸಿಯೂ ಆಯಿತು. ಅವನನ್ನು ಎಚ್ಚರಿಸಿಯೇ ಬಂದಿರುವೆನು.

ಕೊಂಚಕಾಲ ರಘುಪತಿಯು ಸುಮ್ಮನೆ ಕುಳಿತುಕೊಂಡಿದ್ದನು. ಹೊರಹೊಮ್ಮುತ್ತಿರುವ ಮುಳಿಸನ್ನೆಲ್ಲ ನುಂಗಿಕೊಂಡು ಗಟ್ಟಿಯಾಗಿ ಜಯಸಿಂಹನಿಗೆಂದನು.

"ಮಂದಿರದೊಳಕ್ಕೆ ನಡೆ !"

ಇಬ್ಬರೂ ಮಂದಿರದೊಳಕ್ಕೆ ಹೋದರು.

ರಘುಪತಿಯೆಂದನು. "ತಾಯಿಯ ಅಡಿಗಳನ್ನು ಮುಟ್ಟಿ ಆಣೆಮಾಡು ! ಆಷಾಢ ಬಹುಳ ಚತುರ್ದಶಿಯೊಳಗಾಗಿ 'ನಾನು ರಾಜರಕ್ತವನ್ನು ತಂದು ಈ ಅಡಿಗಳಿಗೆ ಮುಡಿಪನ್ನು ಸಲ್ಲಿಸುವೆನು' ಎಂದು ಒಡನುಡಿ !"

ಜಯಸಿಂಹನು ಒಮ್ಮೆಲೆ ಹಿಂದಕ್ಕೆ ಸರಿದು ನಸುವೇಳೆ ಸುಮ್ಮನೆ ನಿಂತನು. ಬಳಿಕ ಗುರುವಿನ ಮುಖದ ಕಡೆಗೊಮ್ಮೆ ಮೂರ್ತಿಯ ಮುಖದ ಕಡೆಗೊಮ್ಮೆ ನೋಡಿದನು. ಮೂರ್ತಿಯ ಅಡಿಯನ್ನು ಮುಟ್ಟಿ ಮೆಲ್ಲಮೆಲ್ಲನೆ ಮಾತನಾಡಿದನು. "ಆಷಾಢ ಬಹುಳ ಚತುರ್ದಶಿಯೊಳಗಾಗಿ ನಾನು ರಾಜರಕ್ತವನ್ನು ತಂದು ಈ ಅಡಿಗಳಿಗೆ ಮುಡಿಪನ್ನು ಸಲ್ಲಿಸುವೆನು."

---

## ರಣವೀರ

ಧುಮಧುಮನೆ ಧುಮುಕುತಿದೆ ಧಮನಿಯಲಿ ರಕುತ
ದಯೆಮರೆದು ದುರುಳರನು ತಂದಿಡುವೆನೆನುತ
ಧರುಮದಲಿ ನೆರವಾಗಿ
ನಿರ್ಬಲರಿಗಾಳಾಗಿ
ಆತ್ಮನೈವೇದ್ಯದಲಿ ಬಾಳ್ವೆನೆಂದೆನುತ
ಧುಮಧುಮನೆ ಧುಮುಕುತಿದೆ ಧಮನಿಯಲಿ ರಕುತ ೧

ಕೈಯೊಳಿಹ ಒರೆಗಳೆದ ಥಳಥಳಿಪ ಕತ್ತಿ
ಕೆಂಪಾಗಿ ಹೊಳೆಯುತಿದೆ ಖೂಳರನು ಕತ್ತಿ
ಕಾಲಭೈರವನಂತೆ
ಇಳೆಗಿಳಿದ ಸಾವಂತೆ
ಝಳಪಿಸುತಲಾಯುಧವ ಬರುತಿಹನು ಮುಳಿದು
ಜೀವದಾಸೆಯ ತೊರೆದು ಭೀತಿಯನು ಕಳೆದು. ೨

ಧರುಮಯುದ್ಧವ ನಡಸಿ ಪಡೆಯುವನು ಜಯವ
ಶರಣರನು ಘಾತಿಸದೆ ನೀಡುವನು ಒಲವ
ಹಿಂದಕೊಂಪಡಿಯಿಡದೆ
ಶತ್ರುಶೇಷವ ಬಿಡದೆ
ಕಡಿದಿಡಲು ಮುಂದರಿದು ಲೆಕ್ಕಿಸನು ಶ್ರಮವ
ದೇವನನು ಬೇಡುವನು ಕರುಣಿಸಲು ಫಲವ. ೩

ಕಾಲುತೋಳುಗಳಲ್ಲಿ ಧೃಢತೆಯಿಹ ತನಕ
ನಾಳಗಳಲೊಂದು ಹನಿ ರಕುತವಿಹ ತನಕ
ಕರವಾಳವನು ಹಿರಿದು
ಸೆಣಸಿದವರನು ತರಿದು
ಹೊಸಹುರುಪನೀಯುತ್ತ ಬಳಲಿರುವ ಪಡೆಗೆ
ಒರಗುವನು ನೆಲದಲ್ಲಿ ಬಲಗುಂದೆ ಕಡೆಗೆ. ೪

ಸಾವನಪ್ಪುವ ಕಾಲ ಬಂದಿಹುದನರಿದು
ನಗುನಗುತ ಮಿರ್ತುವನು ಕಾಣಲನುಗೆಯ್ವ
ಜಗದೀಶನನು ನೆನೆದು
ಶಾಂತಿಯಿಂದಸುದೊರೆದು
ಸುರಸತಿಯರೊಲಿದೀಯಲಂಕವನೆ ಏರಿ
ಮೆರೆಯುವನು ವೀರಸಗ್ಗವ ತಾನು ಸೇರಿ. ೫

—ಜಿ. ಪಿ. ರಾಜರತ್ನಂ, ಮೈಸೂರು.

# ಡೊಮಿನಿಯನ್

ಲೇಖಕರು:—'ಪ್ರೇಮ'ದ ಸಂಪಾದಕರಾದ ತುಂಗಭದ್ರೆಯ ಶ್ರೀ ತಾರಾನಾಥರು.

[ ಈ ಲೇಖವನ್ನು ಬರೆದು ಒಂದು ತಿಂಗಳ ಮೇಲಾಯಿತು. ಮೊನ್ನೆ ನಡೆದ ಕಾಂಗ್ರೆಸ್‌ನಲ್ಲಿ ಸಂಪೂರ್ಣ ಸ್ವಾತಂತ್ರ್ಯದ ತೀರ್ಮಾ... ವಾಯಿತು. ಆದರೂ ಈ ಲೇಖವು ಈಗಲೂ ವಿಚಾರಿಸತಕ್ಕದ್ದಾಗಿದೆ ಎಂಬ ನನ್ನ ನಂಬಿಕೆಯು ದೃಢವಾಗಿಯೇ ಇದೆ. ಯಾಕೆಂದರೆ ಸಂಪೂರ್ಣ ಸ್ವಾತಂತ್ರ್ಯವು ಕಾಂಗ್ರೆಸ್‌ನ ಧ್ಯೇಯವೆಂದು ನಿರ್ಧರಿಸಲ್ಪಟ್ಟರೂ ಅದಕ್ಕಾಗಿ ಮುಂದಿಟ್ಟ ಸಾಧನೆಯ ವಿಷಯ ಯೋಚಿಸಿ ನೋಡಿದ್ದಲ್ಲಿ ಅದಕ್ಕೂ ಹತ್ತು ವರ್ಷಗಳ ಹಿಂದೆ ನಡೆದ ಅಸಹಕಾರಕ್ಕೂ ಹೆಚ್ಚಿನ ವ್ಯತ್ಯಾಸವೇನೂ ಕಾಣುವದಿಲ್ಲ. 'ನೊನ್ ಕೊಓಪರೇಷನ್' ಹಿಂದೆ ಸ್ವರಾಜ್ಯ ಸಾಧನೆಗೆ ಕೊಟ್ಟ ಹೆಸರು. 'ಇಂಡಿಪೆಂಡೆನ್ಸ್' ಈಗ ಗಮ್ಯಕ್ಕೆ ಕೊಟ್ಟ ಹೆಸರು. ಅಂದು ಗಮ್ಯಕ್ಕೆ ಸ್ವರಾಜ್ಯವೆಂಬ ನಾಮಕರ್ಣವಾಗಿತ್ತು. ಇಂದು ಇಂಡಿಪೆಂಡೆನ್ಸ್ ಎಂದಾಗಿದೆ. ಹಾದಿಯು ಮಾತ್ರ ಅಂದಿನದೇ ಇಂದೂ. ಇನ್ನೊಂದು ಪ್ರಶ್ನೆ— ಅಂದು ಸಾಧ್ಯವಾಗದ್ದು ಇಂದು ಸಾಧ್ಯವಾದೀತೋ? ಹಾಗಾ... ಬೇಕಾದರೆ ಅದ್ಭುತವಾದ ಒಗ್ಗಟ್ಟು ಜನತೆಯಲ್ಲಿರತಕ್ಕದಲ್ಲವೆ? ಅದಿದೆಯೋ? ಇಲ್ಲವಾದರೆ ಆದು 'ಸ್ವಾತಂತ್ರ್ಯ'ದ ಧ್ಯೇಯದಿಂದ ಉಪಯೋಗ... ಸಂಭವವಿದೆಯೋ?

— ತಾರಾನಾಥ ]

ವಾಯ್ಸರಾಯ್ ಲೊರ್ಡ್ ಅರ್ವಿನ್ ಮತ್ತು ವೆಜ್‌ವುಡ್ ಬೆನ್ ಇವರು ಈ ದೇಶದ ಸ್ವಾತಂತ್ರ್ಯದ ವ್ಯವಸ್ಥೆಯನ್ನು ಯೋಗ್ಯರೀತಿಯಿಂದ ಮಾಡಬೇಕೆಂದು ಹೇಳಿದಂದಿನಿಂದ ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ವಿಚಾರಗಳು ಅಲ್ಲೋಲಕಲ್ಲೋಲವಾಗಿವೆ. ಸಂತೋಷದಿಂದ ಉಕ್ಕುವವರು ಕೆಲವರು ಇದ್ದರೆ ಚಿಂತೆಯಿಂದ ಬಿಕ್ಕುವವರು ಕೆಲವರು. ಇವೆರಡೂ ಇಲ್ಲದೆ ಸಂಶಯಮಾತ್ರದಿಂದ ಬ್ರಿಟಿಷರನ್ನು ನಂಬಲೇಬೇಡಿರಿ ಎಂದೆನ್ನುವವರೂ ಹಲಕೆಲವರು. ಹಿಂದಿನ ಅಭ್ಯಾಸದ ಹಾದಿಯನ್ನೇ ಮುಂದೂ ತುಳಿಯಬೇಕು ಎನ್ನುವವರು ಹಲವರು. ವಿಚಾರಿಸಿ ನೋಡಿದರೆ ಇವರಲ್ಲಿ ಯಾರ ತಪ್ಪೂ ಇಲ್ಲವೆಂದು ಕಾಣುತ್ತದೆ! ಇರಲಿ. ನಮ್ಮಲ್ಲಿಯ **ಲಿಬರಲ್**‌ರಿಗೆ ಹಿಂದುಸ್ಥಾನದ ಸ್ವಾತಂತ್ರ್ಯದ ಸ್ವಪ್ನವನ್ನು ಕಂಡರೂ ಅಷ್ಟು ಧಾರಾಳವಾದ ಆನಂದ. ಸಪ್ರೂ ಅವರು ಮೊಂಟೆಗ್ಯೂ ಚೆಮ್ಸ್‌ಫೋರ್ಡ್ ಸ್ಕೀಮ್ ಪ್ರಕಾರ ನಾವೆಲ್ಲರೂ ಭೇದವಿಲ್ಲದೆ ಕಾರ್ಯವನ್ನು ನಡೆಸಿದ್ದಿದ್ದರೆ ಇಷ್ಟರ ವರೆಗೆ ಸ್ವಾತಂತ್ರ್ಯದ ಹಾದಿಯಲ್ಲಿ ಎಷ್ಟೋ ದೂರ ಹೋಗುತ್ತಿದ್ದೆವು ಎಂದು ಉದ್ಗಾರವನ್ನು ತೆಗೆಯುತ್ತಿದ್ದಾರೆ.

ಇಂಗ್ಲಂಡ್‌ನಲ್ಲಿ ಲೇಬರ್ ಪಾರ್ಟಿಗೂ ಬಹಳ ಸಂತೋಷ. ಯಾಕೆಂದರೆ ತಮ್ಮ ಕಾಲದಲ್ಲಿಯೇ ಈ **ಡೊಮಿನಿಯನ್ ಸ್ಟೇಟಸ್**‌ನ ಮಹತ್ಕಾರ್ಯವು ಸಾಗಿದರೆ ತಮಗೆ ಕೀರ್ತಿ; ಇಂಡಿಯಾ ದೇಶಕ್ಕೊಂದು ಉಪಕಾರ ಎಂದು ಭಾವಿಸುವ ಉದಾರಚಿತ್ತರು ಕೆಲವರು ಇದ್ದಾರವರಲ್ಲಿ. ಇನ್ನು ಅನೇ...ರಿಗೇನೆಂದರೆ 'ಬಹಳ ಬಿಗಿದರೆ ಹರಿದೀತು' ಎಂಬ ಗಾದೆಯು... ಇನ್ನು ಏನೂ ಭಾರತೀಯ ಸ್ವಾತಂತ್ರ್ಯಕ್ಕಾಗಿ ಮಾ... ಹೋದರೆ ಎರಡು ದೇಶಗಳ ಪರಸ್ಪರ ಸಂಬಂಧವು ಎಲ್ಲಿ ಹ... ಯುವದೋ ಎಂಬ ಗಾಬರಿ. (ಹಾಗಾದರೇನಾಗುವ... ಎಂಬದು ಮುಂದೆ ತೋರಿಸಲಾಗುವದು.) ಬರ್ಕೆನ್‌ಹೆಡ್... ಲಾರ್ಡ್ ರೆಡಿಂಗ್, ಸರ್ ಮೈಕೆಲ್ ಓಡ್ವಾಯರ್ ಮುಂ... ವರಿಗೆ ಬಹಳ ಚಿಂತೆ ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ... ಕೊಡಲೇ! ಯಾಕೆ? ತಮ್ಮ ಜೇಬಿಗೆ ಬೀಳುವ ಗಂಟು ... ಮುಣುಗಿ ಹೋಗುತ್ತದೋ ಎಂದು ಭಯ! ಇವರ ಭ... ವನ್ನು ಇವರ ಗದ್ಗದಕಂಠವಾಗಿರುವ ಕೆಲವು ಪ್ರಸಿದ್ಧ ಪತ್ರಿ... ಗಳಿಂದ ತಿಳಿದುಕೊಳ್ಳಬಹುದು. **ಮಾರ್ನಿಂಗ ಪೋಸ್ಟ್** ಎಂಬ ಪತ್ರಿಕೆಯು "ಬ್ರಿಟಿಷ್ ಗವರ್ನಮೆಂಟ್ ನಿಜವಾಗಿಯೂ ಡೊಮಿನಿಯನ್ ಸ್ಟೇಟಸ್‌ನ್ನು ಕೊಡುವ ಯೋಜನೆಯಲ್ಲಿ... ದಾಗಿದ್ದರೆ ಅದು ಹಿಂದೂಸ್ಥಾನದಲ್ಲಿರುವ ಆಂಗ್ಲೇಯರ ರ... ಣೆಗಾಗಿಯೂ ಒಂದು ಫಂಡನ್ನು ಕೂಡಿಸುವದುತ್ತಮ" ... ಬರೆದಿದೆ. **ದಿ ಡೆಯ್ಲಿ ಮೇಲ್** ಇನ್ನೂ ಸ್ಪಷ್ಟವಾದ ... ಯನ್ನಿಟ್ಟದೆ "ಗ್ರೆಟ್ ಬ್ರಿಟನ್ ಇಂಡಿಯಾ ದೇಶಕ್ಕೆ ಡೊಮಿ... ಯನ್ ಹೋಮ್ ರೂಲ್‌ನ್ನು ಕೊಟ್ಟ ಪಕ್ಷಕ್ಕೆ ತನಗೆ ... ಹಾಕಿದ ೧,೫೦೦,೦೦೦,೦೦೦ ಪವನುಗಳನ್ನೂ ತ್ಯಜಿಸಬೇ... ದೀತು. ಅಷ್ಟೇ ಅಲ್ಲವೆ ಇಂಡಿಯಾದಲ್ಲಿ ಒಮ್ಮೆ ಕೆಲಸಮಾ... ಈಗ ಇಲ್ಲಿ ಕೂತ ಸಿವಿಲ್ ಸರ್ವೆಂಟ್‌ಗಳಿಗೂ ಆಫೀಸರ್‌ಗಳಿ...

ಆ ಗವರ್ನಮೆಂಟಿನಿಂದ ಬರುವ ಪೆನ್‌ಷನ್ ಸಹ ಕಳೆದು ಹೋಗಿ ಬಿಡುವದು" ಎಂದು ಅದರ ರೋದನ. ಅಲ್ಲವೆ ಮತ್ತೆ! ರೆಡಿಂಗ್, ಓಡ್ವಾಯರರಂಥವರಿಗೆ ಹೋಗುವ ದುಡ್ಡಾದರೂ ಎಷ್ಟಿದೆಯೆಂಬದನ್ನು ವಾಚಕರು ತಿಳಿದುಕೊಂಡರೆ ಪಾಪ—ಅವರಲ್ಲಿ ಕೆಲವರಿಗಾಗಿಯೂ ದಯೆಯು ಹುಟ್ಟದಿರದು! ಮೇಜರ್ ಗ್ರಾಹಾಮ್ ಪೋಲ್‌ನು ನಮ್ಮ ಸೆಕ್ರೆಟೆರಿ ಆಫ್ ಸ್ಟೇಟ್‌ಗೆ ಈ ಹಣದ ಲೆಕ್ಕಾಚಾರವನ್ನು ಕುರಿತು ಮೊನ್ನೆ ೨ ನೇ ನವೆಂಬರಕ್ಕೆ ಒಂದು ಪ್ರಶ್ನೆ ಹಾಕಿದನು. ಉತ್ತರವು ಮಾತ್ರ ನಿಜವಾಗಿದ್ದರೂ ನಮ್ಮ ಎದೆಯನ್ನೊಡೆಯುವಂತಿದೆ. ಇದು ಹೋದ ವರ್ಷ ಖರ್ಚಾದ ಹಣ! ಸೈನ್ಯದ ಖಾತೆ ಇದು ಮೊದಲನೆಯದು!

| | ಸಂಖ್ಯೆ | | ಸಂದಹಣ | |
|---|---|---|---|---|
| ಮಿಲಿಟರಿ ಆಫಿಸರ್‌ಗಳು | ೩,೬೬೧ | ] | ೧,೭೧೮,೬೬೫ | ಪೌಂ. |
| ಆಯ್. ಎಮ್. ಎಸ್. ,, | ೫೫೧ | | ೩೧೦,೯೬೯ | ,, |
| ರಾಯಲ್ ಇಂಡಿಯನ್ ವ್ಯಾಪಾರದ ಹಡಗುಗಳ ,, | ೧೪೯ | | ೫೪,೧೩೫ | ,, |
| ಕಳೆದ ಇಂಡಿಯನ್ ಯುದ್ಧದ ಹಡಗಗಳ ,, | ೨ | | ೧೮೯ | ,, |
| | ೪,೩೬೩ | ] | ೨,೦೮೩,೯೫೮ | ,, |

ಹಾಗೆಯೇ ಹೋದ ವರ್ಷ ಮಾರ್ಚ ೧೯೨೯ ರ ವರೆಗೆ ಸಿವಿಲ್ ಸರ್ವಿಸ್‌ನ ಪೆನ್‌ಷನರ್‌ರಿಗೆ ಸಂದ ಹಣ:—

| | ಸಂಖ್ಯೆ | ಸಂದಹಣ |
|---|---|---|
| ಇಂಡಿಯನ್ ಸಿವಿಲ್ ಸರ್ವಿಸ್ (ಕಲೆಕ್ಟರ್ ಮುಂತಾದವರು ಇವರಲ್ಲಿ ಜಮಾ) | ೭೩೪ | ೬೩೯,೦೩೯ |
| ಹೈಕೋರ್ಟ ಜಜ್‌ಗಳು | ೩೮ | ೪೦,೭೫೩ |
| ಬಂಗಾಲ್ ಪೈಲಟ್ ಸರ್ವಿಸ್ | ೩೩ | ೧೩,೬೩೩ |
| ಮದ್ರಾಸ್ ಬಿಷಪ್ | ೧ | ೮೦೦ |
| ಇತರ ಸರ್ವಿಸ್‌ಗಳು | ೨,೩೦೦ | ೯೨೩,೭೯೪ |
| | ೩,೧೦೬ ] | ೧,೬೯೭,೭೧೯ |

ನಮ್ಮಲ್ಲಿಯ ಹಳ್ಳಿಯೂರ ರೈತರು ಬೆವಿತು ಗಳಿಸಿದ ಸೊತ್ತನ್ನು ನಮ್ಮವರಿಗೆ ತಿಲಮಾತ್ರವೂ ತಮ್ಮ ವಿದ್ಯೆ ಅನುಭವಗಳ ಲಾಭವನ್ನು ಕೊಡದೆ ಇಂಗ್ಲಂಡಿನಲ್ಲಿ ಕೂತು ತಿನ್ನುವವರು ೭,೪೬೯ ಮಂದಿ! ಅವರು ವರ್ಷ ಒಂದಕ್ಕೆ ತಿನ್ನುವ ದುಡ್ಡು ೩,೭೦೧,೬೭೭ ಪೌಂಡಗಳು ಅಂದರೆ ೫೫,೫೨೫,೧೫೫ ರೂಪಾಯಿಗಳು! ಹೀಗಿರುವಾಗ ರೆಡಿಂಗ್ ಓಡ್ವಾಯರ್ ಅಂಥವರ ಗೋಳು ನಿಷ್ಕಾರಣವಾಗಿದೆಯೋ! ಇಷ್ಟೇ ಅಲ್ಲದೆ ಇಲ್ಲಿ ವ್ಯಾಪಾರಕ್ಕೆ ಹಾಕಿದ ದುಡ್ಡಿನ ಲಾಭ! ವ್ಯಾಪಾರ ಮಾತ್ರದಿಂದ ಸಿಗುವ ಲಾಭ ಬೇರೆ! ಇದರಿಂದ ಮತ್ತು ಇದಕ್ಕಾಗಿಯೇ ಅಧಿಕಾರವನ್ನು ನಡೆಸುವದರ ಲಾಭ ಜಗತ್ತಿನಲ್ಲಿ ಇನ್ನೂ ಬೇರೆ!

ಆದರೆ ಇಂಥವರ ಭಯಕ್ಕೆ ತಲೆಬಾಲವಿದೆಯೋ? ಇವರಿಗೆ ರಾಜ್ಯದ ಬಲವೆಲ್ಲಿದೆ ಎಂಬದಾದರೂ ಗೊತ್ತಿದೆಯೋ? ಇಂಗ್ಲಂಡಿನಲ್ಲಿ ಇವರ ಉಪದೇಶಕ್ಕೆ ಸರಿಯಾಗಿ ನಡೆಯುವವರಾದರೂ ಬಹಳಮಂದಿ ಇದ್ದಾರೋ? ಹೀಗೆ ಗೋಳಿಡುವ ಇವರು ಕೆಲಸಗಾರರಲ್ಲ. ಕೆಲಸಗಾರರ ರಕ್ತವನ್ನು ಹೀರಿ ಕೊಬ್ಬುವ ಧನಮದಾಂಧರು. **ಆದರೆ ಜಗತ್ತಿನ ಪ್ರಗತಿ ಪರಿವರ್ತನಗಳು ನಿಜವಾದ ರಾಷ್ಟ್ರಶಕ್ತಿಯನ್ನೂ ಸಂಘಶಕ್ತಿಯನ್ನೂ ಕೆಲಸಗಾರರಲ್ಲಿಯೇ ಕಾಣುತ್ತಿದೆ. ಅವರ ಧಾವತಿಯೇ ರಾಷ್ಟ್ರದ ಅನ್ನ, ರಾಜ್ಯದ ಧನ; ಅವರ ಹಿತಾಹಿತಗಳಲ್ಲಿಯೇ ಸಕಲವೂ ಇದೆ.** ಇದೊಂದು ಒಣ ಸಿದ್ಧಾಂತವೇ ಅಲ್ಲ. ಕಾರ್ಯತಃ ಜಗತ್ತಿನ ಕೆಲಸಗಾರರು ರಾಷ್ಟ್ರದ ಲಗಾಮುಗಳನ್ನು ತಮ್ಮ ಕೈಯಲ್ಲಿ ತಕ್ಕೊಳ್ಳುತ್ತಿದ್ದಾರೆ. ತಮ್ಮ ಕಷ್ಟನಷ್ಟಗಳನ್ನು ನೋಡಿ ರಾಜ್ಯದ ಸೂತ್ರಗಳನ್ನು ಹಿಡಿಯುವದರಲ್ಲಿ ಪಾಲುಗಾರರಾಗುತ್ತಿದ್ದಾರೆ. ರಷ್ಯಾದಲ್ಲಿ ರಾಜ್ಯವೇ ಅವರದು. ಇಂಗ್ಲಂಡಿನಲ್ಲೀಗ ಅಧಿಕಾರವು ಅವರದು. ಅವರ ಬಲವು ಎಲ್ಲೆಲ್ಲಿಯೂ ಪ್ರಬಲವಾಗುತ್ತಲಿದೆ. ಇಂಗ್ಲಂಡಿನಲ್ಲಿ ಕೂತು ಪೆನ್‌ಷನ್ ತಿನ್ನುವವರಿಗೂ ಇವರ ಸುಖದುಃಖಗಳಿಗೂ ಸಂಬಂಧವಿಲ್ಲ. **ಕೂತು ತಿನ್ನುವ ಧನವಂತರಲ್ಲಿ ಕೆಲಸಗಾರರಿಗೇ ನಂಬಿಕೆ ಇಲ್ಲ.** ದೊಡ್ಡ ಮನುಷ್ಯರ ಧರ್ಮೋಪದೇಶಗಳನ್ನು ಬಹುಕಾಲ ಕೇಳಿ ಮೋಸಹೋಗಿ ಹಾಳಾದ ಕೆಲಸಗಾರರು ಈಗ ತಮ್ಮ ಜೀವನ ರಥವನ್ನು ತಾವೇ ನಡೆಸತೊಡಗಿರುತ್ತಾರೆ. ಇಂಡಿಯಾದೊಡನೆ ತಮಗಿರುವ ನಿಕಟಸಂಬಂಧವು ಅವರಿಗೆ ಬಹು ಚನ್ನಾಗಿ ಗೊತ್ತು. ಅದೇಕೆ ಈಗಿನ ವಾತಾವರಣದಲ್ಲಿಯೇ ಕೂಪಮಂಡೂಕ ನ್ಯಾಯಕ್ಕೆ ಅವಕಾಶವಿಲ್ಲ. ಎಚ್ಚೆತ್ತ ಕೆಲಸಗಾರರು ಸ್ವಾರ್ಥಪರ ದೇಶಾಭಿಮಾನದಿಂದ ಉಪಯೋಗವಾಗುವದು ತಮ್ಮ ಕಾರ್ಯಶಕ್ತಿಯನ್ನು ಒತ್ತೆಯಾಗಿಟ್ಟುಕೊಂಡ ಧನಾಢ್ಯ

ರಿಗೇ ಎಂಬದನ್ನು ಚನ್ನಾಗಿ ತಿಳಕೊಂಡಿದ್ದಾರೆ. **ಅಂತರ್ಜಾತೀಯತೆಯಿಂದಲೇ ತಮ್ಮ ಮುಕ್ತಿ ಎಂಬದನ್ನು ಸಕಲ ದೇಶದ ಕೆಲಸಗಾರರೂ ಅರಿತುಕೊಳ್ಳುವ ಸ್ಥಿತಿಗೆ ಬಂದಿದ್ದಾರೆ.** ಇವರು ತಮ್ಮ ಹಿತವನ್ನು ನೋಡುವರೋ ಅಥವಾ ರೆಡಿಂಗ್‌ನಂಥವರ ಗೋಳಿಗೆ ಸಮಾಧಾನವನ್ನು ಕೊಡಲುದ್ಯುಕ್ತರಾಗುವರೋ ?

ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯವಿಲ್ಲದಿರೋಣದರಿಂದ ತಮಗಾಗುವ ನಷ್ಟವು ಅವರಿಗೆ ಚನ್ನಾಗಿ ಗೊತ್ತು. ಅವರಿಗೆ ಕೂತರೆ ಪೆನ್‌ಷನ್ ಸಿಗುವದಿಲ್ಲ. ಹಾಗೆಯೇ ಈ ಕೆಲಸಗಾರರ ಲಾಭದಿಂದ ತಮಗಾಗುವ ಲಾಭವೂ ಕಾರಖಾನೆಗಳಲ್ಲಿ ದುಡ್ಡು ಹಾಕಿದವರಿಗೆ ಚನ್ನಾಗಿ ಗೊತ್ತು. ದೊಡ್ಡ ದೊಡ್ಡ ಯಂತ್ರಗಳ ಕಾರಖಾನೆಗಳನ್ನಿಟ್ಟುಕೊಂಡ ಧನಿಕರಿಗೂ ಅವರಲ್ಲಿಯ ಕೆಲಸಗಾರರಿಗೂ ಭಾರತೀಯರ ಕ್ರೋಧದಿಂದ ತಮಗಾಗುತ್ತಿರುವ ನಷ್ಟದ ಪೆಟ್ಟು ಈಗಲೇ ಅನುಭವಕ್ಕೆ ಬಂದಿದೆ. ಅವರ ಕಣ್ಣು ಈಗ ತೆರೆದಿದೆ. ಪೆನ್‌ಷನ್ ತಿನ್ನುವವರ ಉಪದೇಶವು ಅವರಿಗೀಗ ನಾಟುವದಿಲ್ಲ. ರೆಮ್ಸೇ ಮೆಕ್ ಡೊನಲ್ಡ್‌ನು-ಇನ್ನು ಸ್ವಲ್ಪ ಕಾಲದಲ್ಲಿಯೇ ಬ್ರಿಟಿಷ್ ರಾಜ್ಯದಲ್ಲಿ ಇನ್ನೊಂದು ಡೊಮಿನಿಯನ್ ಸೇರುವದು-ಎಂದು ಹೇಳಿದುದರ ಕಾರಣವು ತನ್ನ ರಾಜ್ಯಕ್ಕೆ ಆಧಾರವಾಗಿರುವ ಕೆಲಸಗಾರರ ದುಸ್ಥಿತಿಗತಿಗಳ ಜ್ಞಾನದಿಂದ ಉಂಟಾದ ವಿಚಾರವೇ ಹೊರತು ಬರಿಯ ಬಾಯಿಮಾತಲ್ಲ. ಇಂಡಿಯಾಗೂ ಇಂಗ್ಲಂಡಿಗೂ ಇರುವ ಸಂಬಂಧವು ಹರಿದು ಹೋದರೆ ತಮ್ಮ ಜನರಿಗಾಗುವ ನಷ್ಟವು ಎಲ್ಲ ಕೆಲಸಗಾರರಿಗೂ ಗೊತ್ತು. ರೆಮ್ಸೇಗೂ ಗೊತ್ತು. ಅದಕ್ಕಾಗಿಯೇ ಮುಖ್ಯ ಮಂತ್ರಿಯಾದ ಈ ರೆಮ್ಸೆ ಮೆಕ್‌ಡೊನಲ್ಡನು ಜುಲೈಯಲ್ಲಿ "In a period of months rather than years a new Dominion would be added to the Empire. I refer to India" ಎಂದು ಹೇಳಿದ್ದು. ಇದು ಔದಾರ್ಯದ ಹೇಳಿಕೆಯಲ್ಲ; ಅವನ ಪಾರ್ಟಿಯ ಜನರ ಗೋಳನ್ನು ನಿವಾರಿಸಲಿಕ್ಕೆ ಮಾಡಲೇ ಬೇಕಾದ ಉಪಾಯ. ೧೯೨೯ರಿಂದ ೧೯೩೧ರವರೆಗೆ ಅವರಲ್ಲಿಯ ವ್ಯಾಪಾರದ ಕೆಟ್ಟು ಹೋದ ಸ್ಥಿತಿಯನ್ನು ನೋಡಿದರೆ ಇದು ಒಡೆದು ಕಾಣುವದು. ಇದರ ಹಿಂದಿನ ವರ್ಷಕ್ಕಿಂತ ೨ ಕೋಟಿ ರೂಪಾಯಿಗಳ ವ್ಯಾಪಾರವು ಕಡಿಮೆಯಾಗಿದೆ. ೩೭,೦೦೦,೦೦೦ ಗಜ ಬಟ್ಟೆಯು ಮತ್ತು ೮,೫೦೦,೦೦೦ ಪೌಂಡ ನೂಲಿನ ವ್ಯಾಪಾರವು ಈ ವರ್ಷ ಕಡಿಮೆಯಾಗಿದೆ. ಇದಕ್ಕೆ ಸ್ವಾತಂತ್ರ್ಯದಿಂದ ವಂಚಿಸಲ್ಪ... ಭಾರತೀಯರ ಸಿಟ್ಟೇ ಕಾರಣ. ಈ ಸಿಟ್ಟಿನ ರೂಪವೇ 'ಬಾ... ಕಾಟ್' ಎಂಬದು. ಹೊರಗಣ ದೇಶಗಳಿಂದ ನಮ್ಮ... ಬರುವ ಬಟ್ಟೆಯಲ್ಲಿ ೧೦೦ಕ್ಕೆ ೯೭ನೇ ಭಾಗವು ಇಂಗ್ಲಂ... ದಿಂದ ಬರುತ್ತಿತ್ತು. ಈಗಲೋ ಅದು ೭೫ಕ್ಕೆ ಇಳಿ... ಇದಕ್ಕೆ ಇತರ ಹಲಕೆಲವು ಕಾರಣಗಳಿರಬಹುದು. ಆದ... ನಮ್ಮ ಜನರ ಎಚ್ಚರಿಕೆಯು ಸಾಧಾರಣವಾದ ಕಾರಣ... ನಮ್ಮ ರೇಗಿದುದರ ಪೆಟ್ಟು ವ್ಯಾಪಾರಸ್ಥ ಧನಿಕರಿಗೂ ಬಡ ಕೆ... ಗಾರರಿಗೂ ಹತ್ತಿದೆ. ಬೊಂಬಾಯಿಯಲ್ಲಿ ಗಿರಣಿಗಳು 'ಸ್ವ... ಇಲ್ಲದೆ ನಡೆದಿದ್ದರೆ ಈ ಪೆಟ್ಟು ಇನ್ನೂ ಜೋರಾಗಿ ಹತ್ತುತ್ತಿ... ಧನಿಕರ ನಾದದಿಂದ ಕೆಲವು ಪತ್ರಿಕೆಗಳು ಅಲ್ಲಿ ಗೋಳನ್ನಿ... ಆಗಲೇ ! ಅವುಗಳು ಸೂಚಿಸುವ ನಿವಾರಣೋಪಾಯ... ಮಾತ್ರ ಶಾಂತವಿಚಾರದಿಂದ ಹುಟ್ಟಿದವಲ್ಲ. ಪಾಪ-ಗಾ... ಯಿಂದ ಹುಟ್ಟಿದಂಥವುಗಳು ! ಹಿಂದೂಸ್ಥಾನಕ್ಕೆ ಡೊಮಿ... ಯನ್ ಕೊಡುವದರಿಂದ ತಮ್ಮ ವ್ಯಾಪಾರವು ಇನ್ನೂ ನಷ್... ಗುವದು ಎಂದು ಅವು ಗೋಳಾಡುತ್ತಿವೆ. ಬರಿಯ ಹುಚ್ಚು... ಅವಿವೇಕ ! **ಒತ್ತಾಯದಿಂದ ವ್ಯಾಪಾರವನ್ನು ... ನಡೆಸುವದು ಸಾಧ್ಯವೋ ?** ಇತರ ದೇಶಗಳಿಂ... ಬರುವ ಮಾಲನ್ನು ಬ್ರಿಟಿಷರು ನಿಲ್ಲಿಸುವರೋ ! ... ಬಲ್ಲರೋ ? ಜಪಾನ್ ಇದೀಗಲೇ ಅವರ ಬಟ್ಟೆಯ ವ್ಯಾಪಾ... ಎದೆಯ ಮೇಲೆ ಕಾಲನ್ನಿಟ್ಟಿದೆ. ತಮ್ಮ ಮಾಲನ್ನು ... ಇಲ್ಲಿ ಖರ್ಚು ಮಾಡಿಸುವದಕ್ಕಾಗಿ ಇತರ ದೇಶದ ... ಮೇಲೆ ಮನಬಂದಂತೆ ತೆರಿಗೆಯನ್ನೇರಿಸುವರೋ ? ಅದೊ... ಯುದ್ಧಕ್ಕೇ ಆಮಂತ್ರಣವಾಗಿ ಕೂತುಬಿಟ್ಟೀತು ! ... ಯುದ್ಧವೂ ಈಗವರಿಗೆ ಸುಲಭವಲ್ಲ, ಏಕೆಂದರೆ ಬ್ರಿಟಿ... ಹಿಂದಿನಂತೇ ಮುಂದೂ ಭಾರತೀಯರ ಜನಧನಸಹಾಯ... ಸಿಗುವದು ಹೇಗಿದೆಯೋ ವಿಚಾರಿಸಬೇಕಾದ ಮಾತೇ. ... **ಗವರಲ್ಲಿರುವ ಪ್ರೀತಿ ಅಭಿಮಾನಗಳೇ ಅವರ ಹಿ... ಕಾರಣ. ಅವನ್ನು ಸಂಪಾದಿಸುವದಕ್ಕೆ ಆ ಗು... ಗಳೇ ಅವರಲ್ಲಿಯೂ ಇರಬೇಕು. ಅವುಗಳಿಗೇ... ಸಾಕ್ಷಿ? ರೌಂಡ್‌ಟೇಬಲ್ ಕಾನ್‌ಫರೆನ್ಸ್‌ಗೆ ಮೊದ... ಗಿಯೇ ಅವರು ಅದರ ಲಕ್ಷಣಗಳನ್ನು ಕಾರ್ಯ... ತೋರಿಸತಕ್ಕದ್ದು.**

ಈ ಮಾರ್ಗವನ್ನು ಬಿಟ್ಟು ಯಾವ ವಿಧವಾದ ದಬ್ಬಾ... ಯಿಂದಲೂ ತಮ್ಮ ವ್ಯಾಪಾರವನ್ನು ಸುರಕ್ಷಿತವಾಗಿಟ್ಟುಕೊ...

ತಮ್ಮ ಕೆಲಸಗಾರರಿಗೆ ಸಾಕಷ್ಟು ಅನ್ನವನ್ನು ಒದಗಿಸಿಕೊಡುವ ರೀತಿಯು ಇಲ್ಲ. ಅವರಿಗೇ ಇದರ ನಿಶ್ಚಯವಾಗಿದೆ. ಬುದ್ಧಿಯಿಲ್ಲದೆ ಅಲ್ಲಿ ಕೆಲವರು ಧನಿಕರ ಪತ್ರಿಕೆಯಾಗಿರುವ **ಡೇಯ್ಲಿ ಡಿಸ್‌ಪೆಚ್** ನಂತೆ ಒದರಿದರೇನುಪಯೋಗ? ನಮಗೆ ಡೊಮಿನಿಯನ್ ಕೊಡುವದಕ್ಕೆ ಅದರ ಆಕ್ಷೇಪಣೆಯೇನು ? "There is none which is so closely concerned with the future destinies of India as Lancashire...... India is far and away England's best customer. In 1917 she took £ 86,350,000 worth of British products, nearly all manufactured good " (ಅಂದರೆ ಇಂಡಿಯಾದ ಭವಿಷ್ಯದೊಡನೆ ಲೆಂಕೆಶಾಯರ್‌ಗೆ ಇದ್ದಷ್ಟು ಹತ್ತಿರದ ಸಂಬಂಧವು ಇನ್ನಾವದಕ್ಕೂ ಇಲ್ಲ. ಇಂಗ್ಲಂಡಿನ ಮಾಲಿನ ಉತ್ತಮ ಗಿರಾಕಿ ಎಂದರೆ ಇಂಡಿಯಾನೇ. ೧೯೧೭ರಲ್ಲಿ ಅದು ೮೬,೩೫೦,೦೦೦ ಸಾವರಿನ್‌ಗಳ ಮಾಲನ್ನು ನಮ್ಮಿಂದ ಖರೀದಿ ಮಾಡಿತು. ಅಂದರೆ ಸುಮಾರು ನಮ್ಮಲ್ಲಾದ ಮಾಲು ಎಲ್ಲವೂ. ) ಇದಕ್ಕಾಗಿ ನಮಗೆ ಡೊಮಿನಿಯನ್ ಕೊಡಬಾರದೆಂದು ಡೈಯ್ಲಿ ಡಿಸ್‌ಪೆಚ್‌ನ ಅಭಿಪ್ರಾಯ ! ಆಃ ಎಂತಹ ವಿವೇಕ ! ಇಂಡಿಯಾದಲ್ಲಿ ಬೆಳೆಯುತ್ತಿರುವ ಒಕ್ಕಟ್ಟಿನಿಂದಲೂ ರೋಷದಿಂದಲೂ ಆಗ್ರಹದಿಂದಲೂ ಒಂದು ವರ್ಷದಲ್ಲಿ ೭ ಕೋಟಿಯ ವ್ಯಾಪಾರವು ಇಳಿದಿದೆಯೇ ಆದರೆ, ಅದರ ಸಿಟ್ಟಿಗೇ ಇನ್ನೂ ಸೊಪ್ಪುಹಾಕುತ್ತ ಹೋದರೆ **ಇಷ್ಟೆಲ್ಲ ವ್ಯಾಪಾರಕ್ಕೂ ಪಂಗುನಾಮ ಬೀಳಲಿಕ್ಕಿಲ್ಲವೋ? ಎಚ್ಚೆತ್ತ** ಹಿಂದೂಸ್ಥಾನಕ್ಕೆ ಇದು ಅಸಾಧ್ಯವೋ ? ಹಿಂದೆ ಆಗಿದ್ದೀತು ಹಾಗೆ, ಆದರೆ ಮುಂದೆ ಅಸಾಧ್ಯವಾಗಲಾರದು. ಇದು **ಲೇಬರ್ ಪಾರ್ಟಿಗೆ ಗೊತ್ತು. ಇಂಗ್ಲಂಡಿನ ಎಲ್ಲ ವಿಚಾರಶೀಲರಿಗೂ ಗೊತ್ತು. ಬೆನ್, ರೇವನ್ಸ್, ಅರ್ವಿನ್ ಇವರೆಲ್ಲರಿಗೂ ಇದರ ಮನವರಿಕೆಯಾಗಿದೆ.**

ಇಷ್ಟೇ ಅಲ್ಲ. ಡಿಸೆಂಬರದ ಕೊನೆಯವರೆಗೂ ತಕ್ಕ ವ್ಯವಸ್ಥೆಯಾಗದ ಪಕ್ಷದಲ್ಲಿ ಬ್ರಿಟಿಷರೊಡನೆ ಏನೇನೂ ಸಂಬಂಧವಿಲ್ಲದಂತೆ ಸ್ವಾತಂತ್ರ್ಯ ( Independence )ದ ಏರ್ಪಾಡು ಮಾಡತಕ್ಕದ್ದು—ಎಂಬ ಕಾಂಗ್ರೆಸ್‌ನ ಸಂಕಲ್ಪವೂ ಈಗವರಲ್ಲಿ ಉಂಟಾದ ಎಚ್ಚರಿಕೆಗೆ ಅಂಜನವಾಗಿ ಬಂತು. ಅಂತಹ ಸಂಕಲ್ಪಕ್ಕೆ ತಕ್ಕ ಕಾರ್ಯಗಳಿಂದ ಬೇಕಾದ ಸಿದ್ಧಿಯಾಗುವದು ಎಂದಿದರ ರ್ಥವಲ್ಲ. ಈ ತೀರ್ಮಾನಕ್ಕೆ ಅವರು ಹೆದರಿದರು ಎಂದೂ ಹೇಳಲಾಗುವದಿಲ್ಲ. ಅಷ್ಟೇಕೆ ಜಗತ್ತಿನ ಗತಿಯನ್ನು ನೋಡಿದರೆ ಸಂಪೂರ್ಣ ಸ್ವಾತಂತ್ರ್ಯವು ಎಲ್ಲೆಲ್ಲಿಯೂ ಸಾಧ್ಯವಾಗುವಂತೆ ಕಾಣುವದಿಲ್ಲ. ಸಾಧ್ಯವಾದರೂ ಆದರಿಂದ ಜಗತ್ತಿಗೆ ಹೆಚ್ಚಿನ ಹಿತವಾಗುವಂತೆ ತೋರುವದಿಲ್ಲ. **ಜಗತ್ತೆಲ್ಲವೂ ಒಂದು ಕುಟುಂಬದಂತಾಗಬೇಕೆಂಬದೇ ಕಾಲಚಕ್ರದ ಸೂಚನೆ.** ಡೊಮಿನಿಯನ್‌ನಿಂದ **ನಿಜವಾದ** ಸ್ವಾತಂತ್ರ್ಯಕ್ಕೆ ಕುಂದು ಬರುವದೆಂದು ಹೇಳಲಿಕ್ಕೂ ಆಗುವದಿಲ್ಲ. ಇದಕ್ಕೆ **ಕೆನಡಾ** ದೃಷ್ಟಾಂತ. ಬರಿಯ ಸ್ವಾತಂತ್ರ್ಯದಿಂದ ತಮ್ಮ ಸುಖಪ್ರಗತಿಗಳಿಗೆ ಬೇಕಾದ ಸಕಲಸೌಕರ್ಯಗಳೂ ಲಭಿಸುವವು ಎಂದೆನ್ನಲಿಕ್ಕೂ ಆಗುವದಿಲ್ಲ. ಇದಕ್ಕೆ ಆಯರ್‌ಲೆಂಡ್ ನಿದರ್ಶನ. ಬರಿಯ ಹೆಸರುಗಳಿಂದ ಮಾತ್ರ ಆಗುವದೇನು ? ಅಷ್ಟೇ ಅಲ್ಲ. ನಮಗೆ ಸ್ವಾತಂತ್ರ್ಯಸಂಗ್ರಾಮದ ರೀತಿಯಾವದು ? ನನಗದು ಸದ್ಯಕ್ಕೆ ಸಾಧ್ಯವೆಂದೂ ತೋರುವದಿಲ್ಲ ಹಿತಕಾರಿ ಎಂದೂ ತೋರುವದಿಲ್ಲ. ಒಂದು ಚಿಕ್ಕ ಬಾರಡೋಲಿಯಲ್ಲಿ ಗಾಂಧಿಜಿಯವರಿಗಾದ ಗತಿಯೇ ಇದಕ್ಕೆ ಸಾಕ್ಷಿ. ಕತ್ತಿ ತುಬಾಕಿಗಳಿಂದದಾಗುವದು ಸಾಧ್ಯವಲ್ಲ. ಶಾಂತಿಸಂಗ್ರಾಮಕ್ಕೆ ಮಹಾತ್ಮಾಜಿಯವರಿಗಿಂತ ಹೆಚ್ಚಿನ ಸೇನಾನಿಯು ನನಗೆ ತೋರುವದಿಲ್ಲ. ಆದರೆ ಇಷ್ಟೊಂದು ನಿಜ. **ಯೌವನದಲ್ಲಿ ಅಪ್ಪುತಶಕ್ತಿಯಿದ್ದರೂ ಅದರ ಹುರುಪಿಗೆ ಗಾಂಧಿಜಿ ನೋತಿಲಾಲಜಿಯಂಥ ಆತ್ಮಯೌವನವುಳ್ಳ ಹಿರಿಯರ ಜ್ಞಾನಾನುಭವಗಳೇ ಕಣ್ಣು. ಈ ಸ್ವಾತಂತ್ರ್ಯದ ಸಹಜೋನ್ಮತ್ತತೆಯಿಂದ ಯೌವನದ ಹುರುಪು ವಯಸ್ಸಿನ ಕಣ್ಣನ್ನು ಕಿತ್ತೊಗೆಯುವ ಸಂಭವವಿದೆ.** ಹಾಗಾದರೆ ಎರಡು ಪಕ್ಷದವರಿಗೂ ಅದರಿಂದ ಕಷ್ಟನಷ್ಟಗಳು ಬರುವ ಸಂಭವವಿದೆ. ಗಮ್ಯವೂ ಉಪಾಯಗಳೂ ಸ್ಪಷ್ಟವಾಗಿಲ್ಲದಿರೋಣದರಿಂದ ಆಗತಕ್ಕ ಅಪಾಯಗಳನ್ನು ಉತ್ತಮರೀತಿಯಿಂದ ಇಬ್ಬರಿಗೂ ಹಿತವಾಗುವಂತೆ ಆಗದಂತೆ ಮಾಡುವದು ನಿಜವಾದ ಹಿರಿಯರ ಕೆಲಸ. ಲಾಯ್ಡ್ ಜಾರ್ಜನ ಉಕ್ಕಿನ ಕಟ್ಟು ( Steel frame ) ಮೆತ್ತಗಾಗಿದೆ. ಅದು ಆಕಾಶಮಾರ್ಗವನ್ನು ಬಿಟ್ಟು ಭೂಮಿಗೆ ಇಳಿದಿದೆ. ರೆಡಿಂಗ್‌ನಂಥ ಅವಿವೇಕಿಗಳಿಲ್ಲವೆಂದಲ್ಲ ಅಂಥವರೂ ಇದ್ದಾರೆ. ಮೇಲೆ ವಿವೇಕಯುತ ಹಿತೈಷಿಗಳಿಗೆ ಅವರು ಅಸಡ್ಡೆಗಳನ್ನು ಮಾಡುತ್ತಲೂ ಇದ್ದಾರೆ. ಹೀಗಿರುವಾಗ ನಾವು ಮಾಡತಕ್ಕ ಉಪಾಯವೇನು? **ವಿವೇಕದಿಂದ ಜಾಗ್ರತೆಯಿಂದ ಹಿತೈಷಿಗಳ ಕೈಗಳನ್ನು ಬಲಪಡಿಸಬೇಕು.**

ಅವರ ಪ್ರತಿಯೊಂದು ಮಾತೂ ಮೋಸವೆಂದು ಕೂತುಕೊಳ್ಳುವದು ಸುಲಭ. ನಮ್ಮ ಮುಕ್ತಿಯು ನಮ್ಮ ಕೈಯಲ್ಲಿಯೇ ಇದೆ ಎಂಬ ಮಾತಿಗೆ ಆಕ್ಷೇಪಣೆಯೂ ಇಲ್ಲ. ಆದರೆ ನಮ್ಮ **ವಿವೇಕಸಂಕಲ್ಪಕ್ಕೆ ವ್ಯತಿರಿಕ್ತವಾಗದಂತೆ** ಇತರರ ಸಹಾಯವನ್ನು ಪಡೆಯಬಾರದು ಎಂದಾಗುತ್ತದೆಯೋ ಅದರಿಂದ ? ಸುಲಭಮಾರ್ಗವನ್ನು ತಮ್ಮ ಹಿತಕ್ಕಾಗಿ ನಡೆಯುವದು ಮಾನವ್ಯದ ಲಕ್ಷಣ. ವಿಹಂಗಮಮಾರ್ಗವು ವೇದಾಂತದ ಉಪದೇಶ. ಆದರೆ ಬ್ರಿಟಿಷರಲ್ಲಿ ನಮಗೆ ನಂಬಿಕೆಯಿಲ್ಲದಿರುವದು ನಿಷ್ಕಾರಣವಾಗಿದೆಯೆಂದು ನಾನು ಹೇಳುವದಿಲ್ಲ. ಬಹುಕಾಲ ಮೋಸ ಹೋದ ನಮಗೆ ಅದು ಸಹಜವೇ. ನಮ್ಮ ಸ್ವಾತಂತ್ರ್ಯದ ವಾಗ್ದಾನಗಳು ೭೨ ವರ್ಷಗಳಿಂದ ಧಾರಾಳವಾಗಿ ಬರುತ್ತಿವೆ. ೧೮೫೭ ರಲ್ಲಿ ವಿಕ್ಟೋರಿಯಾ ರಾಣಿಯು ಕಡೆಯಿಂದ ಮೊದಲನೆಯದು ಬಂತು. ಆದರೇನಾಯಿತು ಕಾರ್ಯತಃ ? ೨ ಮೇ ೧೮೭೮ ರಲ್ಲಿ ಲಾರ್ಡ ಲಿಟನ್‌ನು ಈ ಪ್ರತಿಜ್ಞೆಗಳನ್ನು ಕುರಿತು ಸೆಕ್ರೆಟರಿ ಆಫ್ ಸ್ಟೇಟ್‌ಗೆ ಬರೆದ ಪತ್ರದಿಂದ ನಮಗೆ ಆದ ಲಾಭವು ಸ್ಪಷ್ಟವಾಗುತ್ತದೆ. "We all know that these expectations never can, or will be fulfilled. We have had to choose between prohibiting them and cheating them; we have chosen the least straight forward course.

Since I am writing confidentially, I do not hesitate to say that both the Governments of England and of India appear to one, up to the present moment, unable to answer satisfactorily the charge of having taken every means in their power of breaking to the heart the words of promise they had uttered to the ear"

**ಸಾರಾಂಶ**—"ಈ ಆಶೆಗಳು ಎಂದಿಗೂ ಕೊನೆಗಾಣುವದಿಲ್ಲ, ಪೂರೈಸಲ್ಪಡುವದೂ ಇಲ್ಲ. ಎಂಬದು ನಮಗೆಲ್ಲರಿಗೂ ಗೊತ್ತು. ಅವುಗಳಿಗೆ ಅಡ್ಡಕಟ್ಟುವದಾಗಲಿ ಮೋಸಮಾಡುವದಾಗಲಿ ಎರಡರೊಳಗೊಂದನ್ನುವದನ್ನಾದರೂ ಆರಿಸಬೇಕಾಯಿತು ನಮಗೆ; ನಾವು ಅತಿ ಕಡಿಮೆಯಾದ ಸರಳತೆಯೆಲ್ಲಿದೆಯೋ ಆ ಮಾರ್ಗವನ್ನೇ ಆರಿಸಿದ್ದೇವೆ.

ರಹಸ್ಯವಾಗಿ ಈ ಪತ್ರವನ್ನು ನಾನು ಬರೆಯುತ್ತೇನಾದುದರಿಂದ ನಾನಿದನ್ನು ಬರೆಯಲು ಹಿಂತೆಗೆಯುವದಿಲ್ಲ. ಇದರವರೆಗೆ ತೃಪ್ತಿಕರವಾಗಿ ಕಿವಿಗೆ ಕೊಟ್ಟ ಮಾತನ್ನು ಮನಸ್ಸಿಗೆ ಕೊಡ ತೋರಿಸದೆ ಹೋದಿರಿ ಎಂಬ ಆರೋಪಕ್ಕೆ ಇಂಗ್ಲಂಡಿನ ಗವರ್ನ ಮೆಂಟಿನಲ್ಲಿಯೂ ಇಂಡಿಯಾದ ಗವರ್ನಮೆಂಟಿನಲ್ಲಿಯೂ ಜವಾಬೇ ಇಲ್ಲವೆಂದು ನನಗೆ ತೋರುತ್ತದೆ."

ಇದೇ ಸ್ಥಿತಿಯು ಇಂದಿನವರೆಗೆ ನಡೆಯುತ್ತ ಬಂದ... ಅಗಸ್ಟ ೧೯೧೭ರಲ್ಲಿ ಮೊಂಟೆಗ್ಯೂ, ಹೌಸ್ ಆಫ್ ಕಾಮನ್ಸ್‌ನಲ್ಲಿ ಹಿಂದೂಸ್ಥಾನವನ್ನು ನಮ್ಮ ಒಂದು ಸ್ವತಂತ್ರಾಂಗವಾಗು... ವಂತೆ ಮುಂದಕ್ಕೆ ತರುವದು ನಮ್ಮ ಕರ್ತವ್ಯ—ಎಂದು ಹೇ... ದನು. ಈಗಿನ ಕೌನ್ಸಿಲ್‌ಗಳನ್ನು ಪ್ರಾರಂಭಿಸುವಾಗ ದಿಲ್ಲಿ... ೧೯೨೧ರಲ್ಲಿ ಡ್ಯೂಕ್ ಆಫ್‌ಕಾನಾಟ್‌ನೂ ಒಂದು ದೊ... ಮಾತನ್ನು ಕೇಳಿಬಿಟ್ಟನು. "Today you have th... beginnings of Swaraj within any Empire a... widest scope and ample opportunity for progress so the liberty which my other Dominions enjoy (ಈ ದಿನ ನನ್ನ ಚಕ್ರಾಧಿಪತ್ಯಕ್ಕೊಳಗಾಗಿ ನಿಮ್ಮ... ಸ್ವರಾಜ್ಯದ ಪ್ರಾರಂಭ. ನನ್ನ ಇತರ ಡೊಮಿನಿಯನ್‌ಗ... ಇರುವ ಸ್ವಾತಂತ್ರ್ಯಕ್ಕೆ ಮುಟ್ಟುವ ಪ್ರಗತಿಗೆ ಬೇಕಾದ ವಿಶಾ... ವಾದ ಅವಕಾಶವೂ ಧಾರಾಳವಾದ ಸಂದರ್ಭವೂ ಇದರಲ್ಲಿವೆ.) ಆದರೆ ಕಾರ್ಯತಃ ಮಾಡಿದ್ದೇನು ? ಇಂತಹ ಪ್ರತಿಜ್ಞೆಗಳನ್ನು ಕೇಳಿ ಕೇಳಿಯೂ ಗತಿಗಾಣದ ಭಾರತೀಯರಿಗೆ ನಂಬಿಕೆಯು ಬಾರದಿರುವದೂ ಸಹಜವೇ.

ಆದರೆ ಒಂದು ವಿಷಯವನ್ನು ಮರೆಯಲಾಗದು. ಇಷ್ಟು... ಇಲ್ಲಿ ನಡೆದ ಬಾಯಿಬಡಕತನಕ್ಕೆ ಉಪಶಮನಾರ್ಥವಾಗಿ ಕೆಲ... ಮಿಠಾಯಿ. ಆದರೆ ೧೯೨೧ರಿಂದ ಯಾವಾಗ ಕಾಂಗ್ರೆಸ್ ಬರಿಯ ಬಾಯಿಮಾತನ್ನು ಬಿಟ್ಟು ಮಹಾತ್ಮರ ಕಠಿಣ ಕಷ... ಪಥವನ್ನು ತುಳಿಯತೊಡಗಿತೋ ಅಂದಿನಿಂದ ದೇಶದಲ್ಲಿ ಹಿ... ಗಿನವರಿಗೆ ನಂಬಲಸಾಧ್ಯವಾದ ಬದಲಾವಣೆಗಳಾದಂತಾಗಿ... ಹಿಂದು, ಮುಸಲ್ಮಾನ, ಕ್ರಿಸ್ತ, ಇತ್ಯಾದಿ ಸಕಲ ಜನಾಂಗ... ಗಳಲ್ಲಿಯೂ ಎಚ್ಚರಿಕೆಯುಂಟಾಗಿದೆ. ಆತ್ಮಾಭಿಮಾನವುಂಟಾ... ಸಕಲರೂ ತಮ್ಮ ಹಕ್ಕುಗಳಿಗಾಗಿ ಕಾದಾಡುತ್ತಿದ್ದಾರೆ. ಅಸಹ... ಕಾರದ ಚಳವಳಿಯಿಂದ ಎಲ್ಲಕ್ಕೂ ವಿಶೇಷವಾಗಿ ಜನತೆ... **ತಮ್ಮ ಹಕ್ಕುಗಳ ಜ್ಞಾನವಾಗಿ ಅವುಗಳಿಗಾಗಿ ಕಾದಾ... ಡುವದರಲ್ಲಿ ಅದ್ಭುತವಾದ ನಿರ್ಭೀತತೆಯುಂಟಾಗಿದೆ.** ಜೈಲಿನ ಕಷ್ಟನಷ್ಟಗಳ ಭಯವೇ ಹೋಗಿದೆ. ಆಳರಸರು ತಮ... ಗಿಂತ ಹೆಚ್ಚಿನವರು ಎಂಬ ಆತ್ಮಶಕ್ತಿವಿನಾಶಕ ಮನೋಗತಿಯು... ನಿಂತು ಹೋಗಿದೆ. ನೆಹರು ರಿಪೋರ್ಟಿನಿಂದ ಎಲ್ಲ ಪಾರ್ಟಿಗ...

ಲ್ಲಿಯೂ ತಕ್ಕ ಮಟ್ಟಿಗಾದರೂ ಹಿಂದೆಂದೂ ಇಲ್ಲದ ಒಕ್ಕಟ್ಟು ಉಂಟಾಗಿದೆ. ಇಂಡಿಯಾದ ಈಗಿನ ಸವಾಲು ಏಕ ಕಂಠದ ಸವಾಲು. ಅದಕ್ಕೆ ಸಮಾಧಾನವನ್ನು ಮಾಡುವದ ರಲ್ಲಿ ದ್ವಿಪಕ್ಷದವರಿಗೂ ಕಷ್ಟವಿದ್ದೇ ಇದೆ. ಆದರೆ ಬೇಕಾ ದಲ್ಲಿ ಸಿಗುವದಿಲ್ಲವೆಂದು ಸಾಕಷ್ಟನ್ನೂ ಬಿಟ್ಟು ಬಿಡುವದು ನ್ಯಾಯವಲ್ಲ. ಅವರು ಅಡಚಣಿಗಳಿಂದ ಕೆಳ ಗಿಳಿದಾರೆಂದು ನಾವು ಮನಬಂದಂತೆ ಶರತುಗಳನ್ನು ಹಾಕುವದು ವಿಹಿತವಲ್ಲ. ಅವರಲ್ಲಿಯ ಹಿತೈಷಿಗಳಿಗೆ ತಮ್ಮವರನ್ನೇ ಸುಧಾ ರಿಸಿಕೊಳ್ಳುವ ಕಷ್ಟವೂ ಎಷ್ಟೋ ಇದೆ.

ಇಬ್ಬರೂ ಪ್ರತಿಪಕ್ಷಿಗಳ ಹಾದಿಯಲ್ಲಿರುವ ಕಷ್ಟಗಳನ್ನು ಸ್ವಲ್ಪ ಗಮನಿಸತಕ್ಕದ್ದು. ಬರಿಯ ರೌಂಡ್‌ಟೇಬಲ್ ಕಾನ್‌ಫರೆನ್ಸಿ ನಿಂದ ನಾವು ಕೇಳಿದ್ದನ್ನೆಲ್ಲ ಅವರು ನಡೆಸಬೇಕೆಂದಾಗಲಿ ಅವರು ಕೊಟ್ಟದ್ದನ್ನೇ ನಾವು ತಕ್ಕೊಂಡು ಸುಮ್ಮನಿರಬೇಕೆಂದಾಗಲಿ ಆಗುವದಿಲ್ಲ. ಒತ್ತಾಯಕ್ಕೆ ಯಾರೂ ಬಗ್ಗಬೇಕಾಗಿಲ್ಲ. ಬೇಡವಾದ್ದನ್ನು ಒಗೆಯುವ ಹಕ್ಕು ಇಬ್ಬರಿಗೂ ಇದೆ. ಆದರೆ ಇಬ್ಬರೂ ತಮ್ಮ ತಮ್ಮ ಹಕ್ಕುಗಳನ್ನು ಮುಂದಿ ಡುವಾಗ ಒಬ್ಬರನ್ನೊಬ್ಬರ ಅಡಚಣಿಗಳನ್ನೂ ತಿಳಕೊಳ್ಳುವ ದಕ್ಕೆ ಯತ್ನಿಸಬೇಕು. ಅದು ಹೇಗೆ? ದೂರ ಕೂತುಕೊಳ್ಳು ವದರಿಂದ ಹಾಗಾಗುವದೋ? ಎಂದಿಗೂ ಆಗದು. ಇಬ್ಬರ ಸಮಾಗಮಕ್ಕೂ ಇಬ್ಬರ ಬೇಡಿಕೆ, ಅಡಚಣಿ ಮತ್ತು ಕಷ್ಟನಷ್ಟ ಗಳನ್ನು ತಿಳಿದುಕೊಳ್ಳಲಿಕ್ಕೂ ಇದೇ ಸುಸಮಯ. ಎರಡು ಪಕ್ಷದವರ ಮುಂದಾಳುಗಳಿಗೂ ಪರಿಚಯವಾಗಿ ಅವರ ಮುಖಾಂ ತರ ಅವರವರ ದೇಶದ ಜನತೆಗೆ ನಿಜವಾದ ಪರಿಸ್ಥಿತಿಗಮ್ಯಗಳ ಶಿಕ್ಷಣವಾಗಬೇಕು. ಈ ಪರಿಚಯದಿಂದಾಗುವ ಶಿಕ್ಷಣ ಪ್ರಚಾರದ ಲಾಭವು ಅಷ್ಟಿಷ್ಟೆಂದು ಹೇಳಲಾಗದು. ಅವರು ಡೋಮಿನಿಯನ್ ಕೊಡುವೆವೆಂದರೆ ಆ ಸ್ವಾತಂತ್ರ್ಯ ವೃಕ್ಷದ ಫಲವನ್ನು ಕೂಡಲೇ ನಮಗೆ ತೋರಿಸಿ ತಿನ್ನಿಸಬೇಕು. ಎಂದು ನಾವು ಕೇಳುವದೂ ತಪ್ಪು ಎಂಬದು ನಿಜ. ಆದರೆ ಅವರು ಬರಿಯ ಬಾಯಿ ಮಾತನ್ನಾಡಿದರೆ ಸಾಕೋ? ಎಂದಿಗೂ ಸಾಲದು. ಆ ವೃಕ್ಷದ ಬೀಜವನ್ನು ಅವರು ಎಲ್ಲರಿಗೂ ಕಾಣುವಂತೆ ನಮ್ಮಲ್ಲಿ ಬಿತ್ತಿ ತೋರಿಸತಕ್ಕದ್ದು, ಇಲ್ಲ ವಾದರೆ ನಮ್ಮಿಬ್ಬರಿಗೆ ಮಾತ್ರವಲ್ಲ ಮುಂದೆ ಜಗತ್ತಿಗೇ ಇದ ರಿಂದ ಹಾನಿಯಾಗುವ ಸಂಭವವಿದೆ. ಭಾರತೀಯರು ಬೇಡಿದ್ದೆ ಲ್ಲವೂ ಅವರಿಗೆ ಸಿಗುವದು ಸಾಧ್ಯವಾಗಿಲ್ಲದಂತೆಯೇ ಭಾರತೀ ಯರನ್ನು ಯೋಗ್ಯರೀತಿಯಿಂದ ಸಮಾಧಾನಗೊಳಿಸದೆ ಬಗ್ಗಿ ಸುವದೂ ಬ್ರಿಟಿಶರ ಯಾವ ಶಕ್ತಿಯುಕ್ತಿಗಳಿಗೂ ಸಾಧ್ಯವಲ್ಲ. ಇಬ್ಬರೂ 'ಆಗಲಾರದ ಊರಿಗೆ ಹೋಗಲಾರದ ಬೇಟೆ'ಯನ್ನು ಬರೆಯುವವನನ್ನು ಬಿಡಲೇಬೇಕು. ಎರಡು ದೊಡ್ಡ ದೇಶಗಳ ಒಕ್ಕಟನ್ನೂ ಅದರಿಂದ ಜಗತ್ತಿನ ಶಾಂತಿವಿಕಾಸಗಳನ್ನೂ ಬೆಳೆ ಸುವ ಈ ಮಹತ್ಕಾರ್ಯಕ್ಕೆ ಬೇಕಾದವರು ಹಠವಾದಿಗಳಲ್ಲ, ಹಿತವಾದಿಗಳೇ.

---

## ತಪ್ಪೇನೋ ದೇವ ?

ಅಂತರೀಕ್ಷವು ಶಾಂತಿಯನೀಯುವುದು ಎನ್ನ ಮನಕೆ ಅದೂ ತಪ್ಪೊ ?
ಇರುಳು—ಹಗಲೆಂಬಿವು ಏನು ಸೊಗಸೋ ! ಬಲು ಚಂದ ಎನ್ನಮನಕೆ ಅದೂ ತಪ್ಪೊ ?
ಚಿತ್ರಗಳಲ್ಲಿನ ಸೌಂದರ್ಯವನು ಬಲು ಮೆಚ್ಚುವೆನು ನಾನು
ಗಾನವು ಹುಚ್ಚುಹುಚ್ಚಾಗಿ ಮಾಡುವುದು ಎನ್ನನು
ನೋಡದ ನೋಟಗಳ ತೋರಿಸುವುದೆನಗದು
ತಿಳಿಯದ ಭಾವಗಳ ಜನಿಸುವುದದು ಎನ್ನ ಹೃದಯದಲಿ ಅದೂ ತಪ್ಪೋ ?
ತಪ್ಪೇನೋ ಇವುಗಳೆಲ್ಲನರಲಿ-ತಪ್ಪಿದ್ದರೆ ತಿಳಿಸಲಾರೆಯಾ ಎನಗೆ
ಈ ಸಮಸ್ಯೆಯನು ಬಿಡಿಸಲಾರೆಯಾ ಎನಗೆ
ನಿನ್ನ ಬಲ್ಲವರು ಸಾರುವರು ದೇವ
ನಿನ್ನ ನಿಚ್ಚಿಸುವವರು ಸಂಸಾರವನು ಕಾಲ್ಕೆಳಗೆ ತುಳಿಯಬೇಕೆಂದು !

—ಪಡುಕೋಣೆ ಶಿವಶಂಕರರಾಯ, ಕಲಕತ್ತೆ.

# ಅಂಧಸಮಾಜ



ಕತೆಗಾರರು :—ಶ್ರೀಮತಿ ವಸಂತಿಬಾಯಿ: ಪಡಕೋಣೆ, ಕಲಕತ್ತೆ.

ಈಗ ನಾನು ಬರೆಯುವ ಕಥೆಗೆ ೪ ವರುಷಗಳಾದುವು. ನಮ್ಮ ಅಜ್ಜನವರ ಮನೆಯಹತ್ತಿರ ಶ್ರೀಪತರಾಯರೆಂಬೊಬ್ಬ ಸದ್ಗೃಹಸ್ಥರಿದ್ದರು. ಅವರಿಗೆ ರಮೇಶನೆಂಬೊಬ್ಬನೇ ಮಗ. ಅವನಿಗೆ ೧೨ನೇ ವರುಷ ಎನ್ನುವಾಗ ಅವನ ಸೋದರ ಅತ್ತೆ ಕಲ್ಯಾಣಮ್ಮನವರು ಪತಿವಿಯೋಗವಾದುದರಿಂದ ತನ್ನ ಏಕಮಾತ್ರ ಪುತ್ರಿಯಾದ ಲೀಲೆಯೊಡನೆ ಅಣ್ಣನಮನೆಯಲ್ಲಿ ಬಂದಿದ್ದರು. ರಮೇಶನೂ ಲೀಲೆಯೂ ಒಂದೇ ಶಾಲೆಗೆ ಹೋಗಿ ಕಲಿತಿದ್ದರು. ಇಬ್ಬರಲ್ಲೂ ಅನ್ಯೋನ್ಯಪ್ರೇಮವಿತ್ತು. ಲೀಲೆಯು ಸ್ವಲ್ಪ ನನ್ನಂತೆ ಕಪ್ಪು. ಆದರೆ ಬಹಳ ಚಂದವಾಗಿದ್ದಳೇ ಸರಿ. ಅವಳ ಕಪ್ಪಾದ ದೊಡ್ಡ ಕಣ್ಣುಗಳು, ಜಾಣತನ, ಬುದ್ಧಿ, ವಿನಯ ಈಗಲೂ ನನಗೆ ನೆನಪಾದರೆ ಹೊಟ್ಟೆ ಉರಿಯುತ್ತದೆ. ಅವಳು ಸ್ವಲ್ಪಮಟ್ಟಿಗೆ ಕಲಿತಿದ್ದಳು. ಓದುಬರಹದಲ್ಲಿ ಅವಳಿಗೆ ಬಹಳ ಉತ್ಸಾಹ, ಪ್ರೀತಿ, ಇತ್ತಾದರೂ ದುರ್ದೈವವು ಅದನ್ನು ಮರೆ ಮಾಡಿತು. ಇರಲಿ, ಲೀಲೆಗೆ ೧೧ ವರುಷ ತುಂಬುತ್ತಲೇ ಸೋದರ ಮಾವ ಶ್ರೀಪತರಾಯರು ಅವಳನ್ನು ಮನೆ ಆಚೆ ಅಟ್ಟಿ ಬಿಡುವ ಯೋಚನೆಯಲ್ಲಿದ್ದರು. ರಮೇಶ, ಲೀಲೆಯರಿಬ್ಬರಲ್ಲೂ ಪ್ರೇಮವು ಬೆಳೆದ ಸಂಗತಿಯೂ ಅವರಿಗೆ ಗೊತ್ತಿತ್ತು. ತನ್ನ ವಿನಹ ಲೀಲೆಗೂ ಇನ್ನಾರು ಆಶ್ರಿತರಿಲ್ಲವೆಂಬುದನ್ನು ಅವರು ಅರಿತಿದ್ದರು. ಆದರೆ, ಆದರೇನು—ತಂಗಿಯ ಮೇಲೆ ಸ್ವಲ್ಪವಾದರೂ ಕರುಣೆ ಪ್ರೇಮವಿದ್ದರೆ ಅವರು ತನ್ನ ಮಗನೊಡನೆ ಅವಳ ವಿವಾಹವನ್ನು ನೆರವೇರಿಸಬಹುದಿತ್ತು. ಹಾಗೆ ಮಾಡಿದರೆ ಅವರ ದೊಡ್ಡಸ್ತಿಕೆಗೆ ಕುಂದುಂಟಾಗುವದಲ್ಲವೇ ? ಅನಾಥರಾದ ತಾಯಿಮಗಳಿಬ್ಬರನ್ನು ೧೦ ವರುಷದಿಂದ ಸಾಕಿದ್ದೇ ದೊಡ್ಡ ಉಪಕಾರವೆಂದೆಣಿಸುವವರು ಲೀಲೆಯನ್ನೇ ಮನೆಸೊಸೆ ಮಾಡುವರೇ! ಹಣವಂತರ ನಿಜವಾದ ಪ್ರೇಮ, ಆದರಗಳು ಹಣವಂತರ ಮೇಲೆ ; ಒಡಹುಟ್ಟಿದ ತಂಗಿ, ಅಕ್ಕ, ಅಣ್ಣತಮ್ಮ ಮುಂತಾದ ಬಂಧುಬಾಂಧವರಲ್ಲಲ್ಲ. ಅದರಲ್ಲೂ ದೈವವಶಾತ್ ಶ್ರೀಪತರಾಯರಿಗೆ ಉತ್ತರಕನ್ನಡದಲ್ಲಿ ತಕ್ಕಮಟ್ಟಿಗೆ ಉಂಡು ತಿಂದು ಇದ್ದ ಒಬ್ಬ ೪೫ ವರುಷದ ಯುವಕನು ಸಿಕ್ಕಿದನು. ಲೀಲೆಯು ಆತನ ಪತ್ನಿಯಾದಳು. ರಮೇಶನಿಗೆ ಅತಿದುಃಖವಾಯಿ... ಏನು ತಾನೇ ಮಾಡಬಲ್ಲನು.

ಲೀಲೆಯು ಮದುವೆಗೆ ಆಗಲೇ ವರುಷವಾಯಿತ್ತು. ... ಮ್ಮನು ತೀರಿಹೋಗಿದ್ದರು. ಅಮ್ಮನ ಕಾಹಿಲೆಯಲ್ಲಿ ... ಒಂದು ಸಲ ಅವಳು ಸೋದರಮಾವನ ಮನೆಗೆ ಬಂದಿದ್ದ... ಕ್ಷಯರೋಗಪೀಡಿತನಾದ ಲೀಲೆಯ ಗಂಡನು ಹಾ... ಹಿಡಿದನು. ಲೀಲೆಯು ಚಿಕ್ಕವಯಸ್ಸಿನವಳಾದರೂ ಹ... ರಾತ್ರೆ ಪತಿಯ ಸೇವಾಶುಶ್ರೂಷೆಮಾಡುತ್ತಿದ್ದಳು. ರೋಗಿ... ದಿನೇ ದಿನೇ ಕೃಶನಾಗುತ್ತಿದ್ದನು. ಕಾಹಿಲೆಯನ್ನು ಸಹಿ... ಳ್ಳಲಾರದೇ ಮಾತುಮಾತಿಗೆ ಲೀಲೆಗೆ ಬಡಿದಾಟವೂ ಬೈ... ಸಿಗುತ್ತಿದ್ದುವು. ಆದರೂ ಅವಳು ಎಲ್ಲವನ್ನು ಸಹಿಸಿಕೊಂ... ತನ್ನಿಂದಾದಮಟ್ಟಿಗೆ ಪತಿಯನ್ನು ಸಂತೋಷಗೊಳಿಸುತ್ತಿದ್ದ...

ರಾತ್ರೆ ಘಂಟೆ ಮೂರು ಇರಬಹುದು. ಲೀಲೆಯು ಪ... ಬಳಿಯಲ್ಲಿ ಕೂತುಕೊಂಡು ಅವನಿಗೆ ಗಾಳಿ ಹಾಕುತ್ತಿದ್ದ... ಅಕಸ್ಮಾತಾಗಿ ರಂಗಣ್ಣ (ಲೀಲೆಯ ಪತಿ) ನಿಗೆ ರಕ್ತವಾಂತಿ... ಯಿತು. ವಾಂತಿಯಾದೊಡನೆ ಅವನ ಅವಸ್ಥೆಯು ನೋಡ... ಸಾಧ್ಯವಾಯಿತು. ರಂಗಣ್ಣನು ಕೈಕಾಲು ಬಡಿಯಲಾ... ದನು. ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ಸ್ನೇಹಪೂ... ನೇತ್ರಗಳಿಂದ ಒಮ್ಮೆ ಲೀಲೆಯನ್ನು ನೋಡಿ ಅವಳ ಮುದ್ದ... ಕೈಗಳನ್ನು ತನ್ನ ಎದೆಯಮೇಲಿಟ್ಟುಕೊಂಡು "ಲೀಲಾ, ನನ್ನ... ಕ್ಷಮಿಸಲಾರೆಯಾ ? ನಾನು ನಿನ್ನನ್ನು ನನಗೆ ಕಠಿಣ ರೋ... ವಿತ್ತಾದರೂ ಈ ಮುದಿವಯಸ್ಸಿನಲ್ಲಿ ಹುಚ್ಚುತನದಿಂದ ನಿನ್ನ... ಮದುವೆ ಮಾಡಿಕೊಂಡು ನಿನ್ನ ಜನ್ಮವನ್ನೇ ಹಾಳುಮಾಡಿದೆ... ಎಂದೊಡನೆ ಲೀಲೆಯು ಮುಗ್ಧಳಂತೆ ಅಳುತ್ತಿದ್ದಳು. ರಮೇ... ಅಣ್ಣ, ತಂದೆತಾಯಿ ಎಲ್ಲರೂ ಅವನಿಗೆ ವಾಂತಿಯಾದಾ... ಅಲ್ಲಿ ಬಂದಿದ್ದರು. ಅತ್ತೆಯು ಹೇಳಿದಳು —"ಚಾಂಡಾಲಿನಿ, ... ಸುಮ್ಮನೇ ಕೂತಿರುವೆ? ನಿನ್ನನ್ನು ಈ ಮನೆಗೆ ತಂದಿದ್ದರಿಂ... ನನ್ನ ಮಗನಿಗೆ ಈ ಅವಸ್ಥೆ ಬಂತು." ಅಯ್ಯೋ! ರಂಗಣ್ಣ...

ದುಃಖ, ರೋಷ ಒಟ್ಟಾಗಿ ಬಂತು. "ಅಮ್ಮ, ಸಾಕು ನಿಮ್ಮ ಪುರಾಣ. ಏನು ಅರಿಯದಂತಹ ಬಾಲೆಯನ್ನು ಏಕೆ ದೂಷಿಸುತ್ತಿರುವೆ? ಈವರೆಗೆ ನೀವೆಲ್ಲರೂ ನಿಮ್ಮಸ್ವಕ್ಕೆ ನಾನು ನನ್ನ ಸ್ವಕ್ಕೆ ಅವಳನ್ನು ಹಿಂಸಿಸಿದೆವು. ಈಗ ಏಕೆ ಅವಳನ್ನು ಬೈಯುತ್ತಿ? ತಪ್ಪುಮಾಡಿದವರು ನಾವು. ದೇವಾ! ನನ್ನ ಲೀಲೆಯನ್ನು ರಕ್ಷಿಸು. ನನ್ನನ್ನು ಕ್ಷಮಿಸು" ಹೀಗೆ ಹೇಳಿ ಲೀಲೆಯನ್ನು ಘಟ್ಟಿಯಾಗಿ ಅಪ್ಪಿಕೊಂಡು ಧಪ್ಪನೇ ಬಿದ್ದನು. ಪ್ರಾಣವಾಯುವು ಹಾರಿಯೋಯಿತು.

ಇತ್ತ ರಮೇಶನು ೩ ವರುಷಗಳಿಂದ ಲೀಲೆಯನ್ನು ನೋಡಿರಲಿಲ್ಲ. ಒಮ್ಮೆ ಅವನು ವಿಧವೆಯಾದ ಲೀಲೆಯನ್ನು ನೋಡಲು ಬಂದನು. ಒಬ್ಬರನ್ನೊಬ್ಬರು ನೋಡಿ ಅಳಲಾರಂಭಿಸಿದರು. ಇಬ್ಬರು ಈಗ ಚಿಕ್ಕವರಲ್ಲ. ವಯಸ್ಸಿಗೆ ಬಂದವರು. ರಮೇಶನು ಕೇಳಿದನು.— "ನಿನ್ನನ್ನು ಈ ಚಿಕ್ಕ ವಯಸ್ಸಿನಲ್ಲಿ ಈದೆಸೆಯಲ್ಲಿ ನೋಡುವ ದುರಾದೃಷ್ಟವು ನನ್ನ ಪಾಲಿಗೆ ಬಂತಲ್ಲ. ಅಪ್ಪನೂ, ಅಮ್ಮನೂ ತೀರಿಕೊಂಡರು. ೩ ದಿನಗಳಿಗಾದರೂ ಮನೆಗೆ ಕರಕೊಂಡು ಹೋಗೋಣವೆಂದರೆ, ನಾನೇ ಈಗ ಅಲ್ಹಾಬಾದಿನ ಒಂದು ಕೋಲೆಜಿನಲ್ಲಿ ಓದುತ್ತಿರುವೆನು. ಅಯ್ಯೋ!

ಲೀಲೆ—"ರಮೇಶ ಬಹಳ ಹೊತ್ತು ನನ್ನೊಡನೆ ಮಾತನಾಡುತ್ತ ಕೂತಿರಬೇಡ. ಅತ್ತೆಯವರು ನೋಡಿದರೆ ದೂರುವರು. ಅಯ್ಯೋ! ಮಾವಯ್ಯನವರೂ ಅತ್ತೆಯವರೂ ತೀರಿದರೇ! ನಮ್ಮಿಬ್ಬರ ಪ್ರಾರಬ್ಧ. ನೀನಾದರೂ ಎಲ್ಲಾದರೂ ಸುಖವಾಗಿರು." ಲೀಲೆಯು ಅಳುತ್ತಲೇ ಇದ್ದಳು. ರಮೇಶನು ಹೊರಟು ಹೋದನು.

ವಿಧವೆಯರಿಗಿರುವಷ್ಟು ಅವಮಾನ ಪರದೂಷಣೆ ಲೋಕದಲ್ಲಿ ನಮ್ಮ ಸಮಾಜದಲ್ಲಿ ಇನ್ನಾರಿಗೂ ಇಲ್ಲ. ವಿಧವೆ ಎಂದಾಕ್ಷಣ ಅವಳ ಮೇಲೆ ಸಂಶಯ. ಎಲ್ಲರ ಕಣ್ಣುಗಳಿಗೂ ಅವಳೊಂದು ಮುಳ್ಳು. ಸಾವಿರಾರು ಒಳ್ಳೇ ಗುಣಗಳು ಅವಳಲ್ಲಿದ್ದರೂ ಅವಳ ಹೃದಯವೂ ಮನಸ್ಸೂ ಎಷ್ಟು ನಿಷ್ಕಪಟವಾಗಿದ್ದರೂ ವೈಧವ್ಯದೆಸೆಯಲ್ಲಿ ಎಲ್ಲಾ ಮಾಯವಾಗುತ್ತದೆ. ವಿಧವೆಯಾಗಿ ಪರತಂತ್ರಳಾಗಿರುವದಕ್ಕಿಂತ ಸಾವೇ ಮೇಲು. ಲೀಲೆಯು ಇಂತಹವರಲ್ಲೊಬ್ಬಳು. ಅವಳು ಏನು ಕೆಲಸ ಮಾಡಿದರೂ ಕೂತರೂ ಎದ್ದರೂ ಅದು ತಪ್ಪಾಗುತ್ತಿತ್ತು. ಒಂದು ದಿನ ಕೆಲಸವೆಲ್ಲಾ ಆದಸಂತರ ಕೂದಲುಗಳನ್ನು ಆರಿಸಿಕೊಳ್ಳುತ್ತಾ ಅವಳು ಕೂತಿದ್ದಳು. ಅತ್ತೆಯ ಸವಾರಿ ಬಂತು—"ಅಬ್ಬಬ್ಬ ನೋಡಿದಿರಾ ಇವಳ ಸೊಬಗು! ಶೃಂಗಾರವಲ್ಲಿಯ ಅಲಂಕಾರ ಮಾಡಿಕೊಂಡು ಯಾರನ್ನು ಮೋಹಿಸಲು ಹೊರಟಿರುವಳೋ ಕಾಣೆ. ದೋಸೆಗೆ ಹಾಕಿದ ಅಕ್ಕಿ ಅಲ್ಲೇ ಬಿದ್ದುಕೊಂಡಿದೆ. ಭೀಮನಂತೆ ತಿಂದುಕೊಂಡು ಅಲೆಯುವದೇ ಅವಳ ಕೆಲಸ. ಮಾರಿ ಮುಂಡೆ ಗೈಯಾಳಿ ಎಲ್ಲರನ್ನು ತಿಂದ ರಂಡೆ. ನಮ್ಮ ಮುತ್ತಿನಂತಹ ಮಗುವನ್ನು ಕೊಂದುಹಾಕಿದ ಮಾರಿ. ಎಂದು ಸಾಯುವಳೋ."

ಲೀಲೆಯು ಯಾವಾಗಲೂ ಇಂತಹ ಮಾತುಗಳನ್ನು ಕೇಳುತ್ತಿದ್ದಳು. ಇಂದು ಮಾತ್ರ ಅವಳಿಗೆ ಬಹಳ ದುಃಖವಾಯಿತು. ಇಷ್ಟು ದಿನದಿಂದ ಒತ್ತಿಟ್ಟ ಮಾತುಗಳು ಹೊರಬಿದ್ದುವು. "ಹೌದು. ಅತ್ತೆಮ್ಮ, ನಾನು ಯಾರ ಕೈಹಿಡಿದಾದರೂ ಹೋಗುವೆನು. ಇಂದಿಗೆ ನನಗೆ ಈ ಮನೆಯ ಋಣಾನುಬಂಧವೂ ತೀರಿತು. ನನ್ನ ಮನೆಯವರ ಮೇಲಿನ ಪ್ರೀತಿಯಿಂದಲೂ ಯಾವ ತರದ ಸಹಾಯವಿಲ್ಲದ ಅನಾಥೆಯಾಗಿದ್ದದರಿಂದಲೂ ಇಷ್ಟರವರೆಗೆ ನಿಮ್ಮೆಲ್ಲವರ ಹೇಳಲಸಾಧ್ಯವಾದ ದೂಷಣೆಗಳನ್ನು ತಿಂದು ಇದ್ದೆನು. ಇಂದು ನೀವೆ ನನಗೆ ಹೊಟ್ಟೆಗಾಗಿ ದಾರಿ ತೋರಿಸಿದಿರಿ. ಅನಾಥರಿಗೆ ಆ ದೇವರೇ ಗತಿ. ನನ್ನ ಹಣೆಬರಹದಲ್ಲಿ ಇದ್ದದ್ದಾಗಲಿ. ಇಗೋ ಈಗಲೇ ಹೊರಡುವೆನು." ಎಂದು ಎದ್ದಳು.

ಅತ್ತೆ—"ನೀನು ಹೋದರೆ ನಮ್ಮ ಪೀಡೆ ಹೋಯಿತು. ಹೋಗು ಈಗಲೇ?"

"ಆಗಲಿ" ಎಂದು ಹೇಳುತ್ತಾ ಅಲ್ಲಿಂದ ಮಾಯವಾದಳು. ಇತ್ತ ರಮೇಶನ ಓದೆಲ್ಲಾ ತೀರಿದ ನಂತರ ಅಲ್ಹಾಬಾದಿನಲ್ಲೇ ಅವನಿಗೆ ೩೦೦ ರೂಪಾಯಿ ಕೆಲಸವಾಗಿತ್ತು. ಮದುವೆಯಾಗಿರಲಿಲ್ಲ. ಪ್ರಭಾಕರನೆಂಬೊಬ್ಬ ದುರ್ಮಾರ್ಗಪ್ರವರ್ತಕನಾದವನು ಅವನ ಸ್ನೇಹಿತನಾಗಿದ್ದನು. ಅವನು ಕೆಟ್ಟವನೆಂದು ರಮೇಶನಿಗೆ ಗೊತ್ತಿತ್ತು. ಆದರೆ ತಾನು ಘಟ್ಟಿಮನಸ್ಸು ಮಾಡಿಕೊಂಡಿದ್ದರೆ ಅವನು ಏನು ತಾನೇ ಮಾಡುವನು ಎಂದು ಅವನೊಡನೆ ಸ್ನೇಹ ಬೆಳೆಸಿದನು.

ಒಂದು ದಿನ ಪ್ರಭಾಕರನು ರಮೇಶನನ್ನು ಒತ್ತಾಯದಿಂದ ಒಂದು ದೊಡ್ಡ ಮನೆಗೆ ಕರಕೊಂಡು ಹೋದನು. ಮನೆಯು ೩ ಅಂತಸ್ತಿನ ದೊಡ್ಡ ಮನೆ. ಇವರಿಬ್ಬರನ್ನು ಬಹಳ ಮರ್ಯಾದೆಯಿಂದ ಒಬ್ಬನು ಕರಕೊಂಡು ಹೋಗಿ ಒಂದು ದೊಡ್ಡ ಹಾಲಿ

ನಲ್ಲಿ ಸೋಫದ ಮೇಲೆ ಕೂಡ್ರಿಸಿದನು. ಅಲ್ಲಿನ ವ್ಯವಸ್ಥೆ ಎಲ್ಲಾ ನೋಡಿ ರಮೇಶನಿಗೆ ಸಂಶಯ ಹುಟ್ಟಿತು. ಪ್ರಭಾಕರನು ತಾನೇ ಈಗಲೇ ಬರುವೆನೆಂದು ಹೇಳಿ ಹೊರಗೆ ಹೋಗಿ ಬಾಗಿಲನ್ನು ಭದ್ರ ಪಡಿಸಿದನು. ಸ್ವಲ್ಪ ಹೊತ್ತಿನ ಮೇಲೆ ಒಬ್ಬ ಪರಿಚಾರಿಕೆಯು ಅನೇಕ ತಿಂಡಿಪದಾರ್ಥಗಳನ್ನು ತಂದು ಮುಂದಿಟ್ಟು ಹೋದಳು. ಆ ಮೇಲೆ ಬಹಳ ಸೊಗಸಾಗಿ ಜರತಾರಿಯ ಶೀರೆಯನ್ನುಟ್ಟು ವೀಳ್ಯವನ್ನು ಹಾಕಿಕೊಂಡು ಒಬ್ಬ ಸುಂದರಿಯು ನಟಿಸುತ್ತಾ ಬಂದು ರಮೇಶನ ಬಳಿಯಲ್ಲಿ ಕೂತಳು. ರಮೇಶನಿಗೆ ಏನು ಮಾಡೋಣವೆಂಬದು ತಿಳಿಯಲಿಲ್ಲ. ಅವಳ ಮುಖವನ್ನೇ ದಿಟ್ಟಿಸಿ ನೋಡಿದನು.

"ಲೀಲೆ, ಹಾ! ಲೀಲೆ, ನಿನ್ನ ಅವಸ್ಥೆ ಹೀಗಾಯಿತೇ!" ಎಂದು ಕಣ್ಣು ಮುಚ್ಚಿಕೊಂಡು ಮೂರ್ಛಾಗತನಾದನು. ಲೀಲೆಯು ಬಹಳವಾಗಿ ಉಪಚಾರ ಮಾಡಿದಳು. ರಮೇಶನು ಕಣ್ಣು ಬಿಟ್ಟನು. ಲೀಲೆ "ರಮೇಶ, ನನ್ನನ್ನು ಕ್ಷಮಿಸು. ನನ್ನನ್ನು ಈ ಮಾರ್ಗಕ್ಕೆ ಎಳೆತಂದ ನಿಮ್ಮ ಸಮಾಜಕ್ಕೆ ಧಿಃಕಾರವಿರಲಿ. ಇದರಲ್ಲಿ ನನ್ನದೇನು ತಪ್ಪಿಲ್ಲ. ನಿಮ್ಮ ಸಮಾಜದ ತಪ್ಪು." ರಮೇಶನು ಎದ್ದು ಕೂತನು. ಲೀಲೆಯ ಎರಡು ಕೈಗಳನ್ನು ತನ್ನ ಎದೆಯ ಮೇಲಿಟ್ಟುಕೊಂಡು "ಪ್ರಿಯೆ ಲೀಲಾ, ಇನ್ನು ಸಹ ನೀನು ನನಗೆ ಪ್ರಿಯಳೇ ಸರಿ. ಈ ಮಾರ್ಗಕ್ಕಿಂತ ನಿನಗೆ ಬೇ[illegible] ಯಾವ ಮಾರ್ಗವೂ ಸಿಗಲಿಲ್ಲವೇ ?"

ಲೀಲೆ—"ರಮೇಶ, ನನ್ನಂಥ ವಿದ್ಯಾಹೀನೆ, ಅನಾಥೆ, [illegible]ಲ್ಲದ ವಿಧವೆಗೆ ಇದೇ ಗತಿ."

ರಮೇಶ—"ಲೀಲಾ, ಆದದ್ದಾಯಿತು. ಇನ್ನಾದರೂ ನಾ[illegible] ಹೇಳುವ ಮಾತನ್ನು ಕೇಳು."

ಲೀಲಾ—"ಏನು ?"

ರಮೇಶ—"ಸಮಾಜಕ್ಕಾಗಲಿ, ಜನರಿಗಾಗಲಿ ಹೆದ[illegible] ಪಾಪಿಯು ನಾನಲ್ಲ. ನನ್ನನ್ನು ಮದುವೆ ಮಾಡಿಕೊಳ್ಳುತ್ತೀಯ[illegible] ಉಪಾಯವಿಲ್ಲದೇ ದುರ್ಮಾರ್ಗಪ್ರವೃತ್ತಳಾದವಳನ್ನು ನಾ[illegible] ಕಳೆದುಕೊಳ್ಳುವೆನು. ಬಾ, ಇಷ್ಟರ ವರೆಗೆ ನಡೆದ [illegible] ಎಲ್ಲಾ ಹೇಳು. ಹೊರಡು; ನನ್ನ ಮನೆಗೆ ಹೋಗೋಣ" ಲೀಲೆಯೂ ಹೊರಟು ಹೋದಳು. ಪಾಪ! ಪ್ರಭಾಕರನು ತಾ[illegible] ರಮೇಶನನ್ನು ದುರ್ಮಾರ್ಗಕ್ಕೆ ಹಚ್ಚಿದನೆಂದು ಬಹಳ ಸಂತೋ[illegible]ಷದಲ್ಲಿದ್ದನು ಕೆಲವು ದಿನಗಳಲ್ಲೇ ಇಬ್ಬರಿಗೂ ಮದುವೆಯಾಯಿತು. ಇಂತಹ ಅನೇಕ ಸಂಗತಿಗಳು ನಮ್ಮ ಸಮಾಜ[illegible] ಕುರುಡತನದಿಂದ ನಡೆಯುತ್ತಿವೆ. ಈಗಲಾದರೂ ಸಮಾಜ[illegible] ಕಣ್ಣು ಬಿಟ್ಟೀತೆ ?

---

## ನವಯುಗದ ದುಂದುಭಿ

ಕಾರೊಡಲ ಕಾರ್ಮುಗಿಲ ಪಡೆಯು ಹಿರಿಸಿಡಿಲಂತೆ
ಸಾರುತಿಹ ದುಂದುಭಿಯ ಮೊಳಗ ಕೇಳಿ !
ಸಾಹಸದ ತರುಣರೇ ಪೌರುಷಾಭರಣರೇ !
ಭಾರತಿಯ ಶೌರ್ಯಪ್ರತಾಪಪೀಯೂಷದಿಂ-

ಧಿಡಿದ ಬಿಸಿನೆತ್ತರುಕ್ಕದೆ ನಿಮ್ಮ ಹೃದಯದಲಿ !
–ಜಗವು ಬೇಸತ್ತಿಹುದು ನಿಸ್ಸತ್ತ್ವದಾಟದಲಿ
ಎಲ್ಲೆಲ್ಲು ನವಯುಗಕೆ ಹಾಹಾರವೆದ್ದಿಹುದು-
ಜಲಧಿಯಬ್ಬರಿಸುತಿದೆ- ನದಿಯು ಭೋರಿಡುತಲಿದೆ-

ಬಿರುಗಾಳಿತಾನೆದ್ದು ಶೃಂಖಲೆಯ ಮುರಿಯುತಿದೆ;
ಹಕ್ಕಿಗಳು ಹಾಡುತಿವೆ ಸ್ವಾತಂತ್ರ್ಯಮಂತ್ರವನು.
ನವಯುಗದ ಶಿಲ್ಪಿಗಳೆ ಏಳಿರೇಳಿ !
ಸಾರುತಿಹ ದುಂದುಭಿಯ ದನಿಯ ಕೇಳಿ !

–ಅರಸುಮಗ ಗೌತಮನು ದುಂದುಭಿಯ ದನಿಗೇಳಿ
ಇಂದ್ರಭೋಗವ ತ್ಯಜಿಸಿ ತಂದೆ ಯೊಲವನು ಬಿಟ್ಟು
ಸತಿಸುತರ ಮೋಹವನು ಹಿರಿದುಬಿಚ್ಚಿಟ್ಟು;
ನಡುರಾತ್ರಿಶೂನ್ಯದಲಿ ನಿಶ್ಶಬ್ದದೆದೆಯಲ್ಲಿ,

ಕಿರುತಾರಗೆಯ ದನಿಯ ಹಿಡಿದು ಹೊರಟು,
ಬಂಧನದ ತೊಡರುಗಳ ಮರ್ಮವರಿತು
ತೋರಲಿಲ್ಲವೆ ಜಗಕೆ ನವಯುಗದ ಬೆಳಕ !
ಸಾರಲಿಲ್ಲವೆ ತನ್ನ ಜೀವವಿರುವನಕ;

ಏಳಿ ! ಗೌತಮನಂತೆ ಭೋಗವನು ತಳ್ಳಿ !
ಸಾಹಸದ ತರುಣರೇ ! ಪೌರುಷಾಭರಣರೇ !
ಸಾರುತಿಹ ದುಂದುಭಿಯ ಮೊಳಗ ಕೇಳಿ
ಭಾರತಿಗೆ ಜಯಘೋಷ ಮಾಡುತೇಳಿ !

—ಸದಾಶಿವಯ್ಯ, ದೇಶೀಯ ವಿದ್ಯಾಶಾಲೆ, ಬೆಂಗಳೂರು

# ಜನಪದ-ಸಾಹಿತ್ಯ

[ ಶ್ರೀ. ಮಾಸ್ತಿ ವೆಂಕಟೇಶ ಐಯ್ಯಂಗಾರ (‘ಶ್ರೀನಿವಾಸ’)ರು ಈ ವಿಷಯವಾಗಿ ತಮ್ಮ ‘ವಿಮರ್ಶೆ’ಯಲ್ಲಿ ಬರೆಯುವದೇನಂದರೆ :—

“ಕವಿತೆಯು ಜೀವನದ ನಿಸರ್ಗ ಕುಸುಮ; ಪಾಂಡಿತ್ಯದ ಕೃತಕ ಫಲವಲ್ಲ. ಇದು ನಮ್ಮವರಿಗೆ ತಿಳಿಯದೆ ಇದ್ದ ವಿಷಯವಲ್ಲ.…ಕವಿತೆಯು ರಸಪ್ರಮುಖವಾದ ಮಾತು, ಭಾವಪ್ರಮುಖವಾದ ಮಾತಲ್ಲ. ಆದರೆ ಈಚೆಗೆ ನಾವು ಇದನ್ನು ಮರೆತಿದ್ದೇವೆ. ಉತ್ತಮ ಕಾವ್ಯದೀದ ಲಕ್ಷಣಗಳನ್ನು ಕಲಿತೆವು; ಆ ಮೇಲೆ ಆ ಲಕ್ಷಣದಂತೆ ಬರೆದರೆಯೇ ಉತ್ತಮ ಕಾವ್ಯವೆಂದು ಹಠ ಮಾಡುತ್ತಿದ್ದೇವೆ. ನ್ಯಾಯವಾಗಿ ನೋಡಿದರೆ ಕಾವ್ಯವು ಧರಿಸಬಹುದಾದ ರೂಪಗಳಿಗೆ ಮೊದಲು ಕೊನೆಯಿಲ್ಲ; ಯಾವ ರೂಪವನ್ನು ಅದು ಧರಿಸಿದರೂ ಅದು ರಸವನ್ನೊಳಗೊಂಡಿದ್ದರೆ ಉತ್ತಮ ಕಾವ್ಯ. ಹೇಳುವವನ ಭಾವನೆಯು ಅದರಲ್ಲಿ ರೂಪುಗೊಂಡಿದ್ದು ಅದರಿಂದ ಆ ಭಾವನೆಯು ಓದುವವನ ಮನಸ್ಸನ್ನು ತಟ್ಟುವದಾದರೆ ಆ ಕಾವ್ಯವು ಸಾರ್ಥಕವಾಯಿತು. ಕೃತಿಯಲ್ಲಿ ವ್ಯಾಕರಣ ಸ್ವಲ್ಪ ಹೆಚ್ಚುಕಡಿಮೆಯಾಗಿರಬಹುದು; ಆದರೆ ರಸವ್ಯಕ್ತಿಯುಂಟಾಗಿದ್ದರೆ ಅದು ಕಾವ್ಯವಾಗದೆ ಹೋಗಲಾರದು.……ಈ ರೀತಿಯ ಕವನವು ಸಾಮಾನ್ಯರಲ್ಲಿ ಹರಡಿದ ಹಾಗೆಲ್ಲ ಮೇಲಣ ಅಂತಸ್ತುಗಳಲ್ಲಿ ಅತ್ಯುತ್ತಮ ಕಾವ್ಯವು ನಿರ್ಮಾಣವಾಗುವ ಸಂದರ್ಭವು ಹೆಚ್ಚುವುದು. ಈಗ ಕೆಲವು ವರುಷಗಳ ಹಿಂದೆ ನಮ್ಮ ಸೀಮೆಯಲ್ಲಿ ಎಲ್ಲೆಲ್ಲಿಯೂ ಒಬ್ಬೊಬ್ಬರು ಕವಿ ಎಂದು ಹೆಸರನ್ನು ಪಡೆದಿದ್ದರು. ಒಂದು ಹಾಡು, ಒಂದು ಲಾವಣಿ, ಒಂದು ಕಗ್ಗವನ್ನು ಯಾರಾದರೂ ಬರೆದರೆ ಅವನನ್ನು ಜನರು ಕವಿ ಎನ್ನುವರು. ಈಗ ಕವಿ ಎಂದರೆ ಇಂಗ್ಲಿಷಿನಲ್ಲಿ ಮಾತ್ರ ಇರತಕ್ಕ ಒಂದು ರೀತಿಯ ಜನ, ಅಥವಾ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಹಿಂದೆ ಗ್ರಂಥಗಳನ್ನು ಬರೆಯುತ್ತಿದ್ದ ವಿಚಿತ್ರ ವ್ಯಕ್ತಿಗಳು ಎಂದು ಭಾವನೆಯುಂಟಾಗಿದೆ. ನಮ್ಮ ಜನರಲ್ಲಿ ಕಾವ್ಯ ಪರಿಚಯವು ಹಿಂದಿನಂತೆ ಮತ್ತೆ ಉಂಟಾಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯ. ಹೀಗಾಗಿ ಜನರಲ್ಲಿ ರಸಜ್ಞತೆಯು ಹೆಚ್ಚಬೇಕು; ಕಾವ್ಯಾಭಿರುಚಿಯುಂಟಾಗಬೇಕು. ಕಲ್ಪನಾಶಕ್ತಿಯುಳ್ಳವನು ಪಂಡಿತನಲ್ಲದಿದ್ದರೂ ಪ್ರಾಸವಿಟ್ಟೋ ಪ್ರಾಸ ಬಿಟ್ಟೋ ಪದ್ಯಗಳನ್ನು ರಚಿಸುವಂತಾಗಬೇಕು. … …ಇಂಥ ಶಕ್ತಿಯು ಜನರಲ್ಲಿ ವಿಸ್ತಾರವಾಗಿ ಹಬ್ಬಿ, ಹಳ್ಳಿಹಳ್ಳಿಯಲ್ಲಿಯೂ ಹುಡುಗರು ತಮ್ಮ ಮಾತೃಭಾಷೆಯ ನಿಸರ್ಗ ಕವಿತೆಯನ್ನು ಕೇಳಿ ರಾಗ ಪರಿಪಾಕವನ್ನು ಪಡೆದು, ಇವರಲ್ಲಿ ಕೆಲವರು ಭಾಷೆಯನ್ನು ಚೆನ್ನಾಗಿ ಕಲಿತು ಉತ್ತಮ ಕವಿತೆಗಳನ್ನು ನೋಡಿ ಅವುಗಳ ರೀತಿಯಲ್ಲಿ ತಮ್ಮ ಭಾವನೆಗಳಿಗೆ ರೂಪನ್ನು ಕೊಟ್ಟರೆ, ಅವರ ಕವಿತೆಯು ಉತ್ತಮ ಕವಿತೆಯಾಗುವುದು.……ಪಂಡಿತಕೃತವಾದ ಕಾವ್ಯ ಮಾತ್ರ ಇರುವ ಜನರಲ್ಲಿ ಹೇಳಿದ ಲಕ್ಷಣದಂತಲ್ಲದ ಬೇರೆ ಹೇಗೆ ಬರೆದರೂ ಕಾವ್ಯಕ್ಕೆ ಕಾವ್ಯವೆಂಬ ಹೆಸರು ಇಲ್ಲದೆ ಹೋಗುತ್ತದೆ. ಇದು ಪಾಂಡಿತ್ಯದ ದೋಷ, ನಮಗೇನು ಎಂದು ನಾವು ಹೇಳುವಂತಿಲ್ಲ. ಪಂಡಿತರು ಯಾವುದನ್ನು ಒಪ್ಪರೋ ಅದನ್ನು ಪಾಮರರು ಸುಲಭವಾಗಿ ಒಪ್ಪುವುದಿಲ್ಲ. ಹೀಗಾಗಿ ಹೊಸ ಕಾವ್ಯವು ಉತ್ತಮವಾದುದಾದರೂ ಜನರಲ್ಲಿ ಬಳಕೆಗೆ ಬರುವುದು ಸಾವಕಾಶವಾಗುವುದು. ಇದು ಜನರ ಬೆಳವಣಿಗೆಯನ್ನು ತಡೆಯುತ್ತದೆ. ಈಗ ನಮ್ಮ ಕಾವ್ಯ ಪ್ರಪಂಚದಲ್ಲಿ ಹೊಸ ಮಾರ್ಗಗಳನ್ನು ಕಂಡು ಮುಂದುವರಿಯುವ ಅಪೇಕ್ಷೆಯೂ ಶಕ್ತಿಯೂ ಜನರಲ್ಲಿ ಉಂಟಾಗುವಂತೆ ಮಾಡುವುದು ಆವಶ್ಯಕವಾಗಿದೆ. ಹೀಗೆ ಮಾಡುವುದರಲ್ಲಿ ನಮ್ಮ ದೇಶದಲ್ಲಿ ವಾಡಿಕೆಯಾಗಿರುವ ಸಾಂಗತ್ಯ, ಲಾವಣಿ ಮುಂತಾದುವನ್ನು ಸೇರಿಸಿ ಪ್ರಕಟಮಾಡುವುದು ಅತಿ ಮುಖ್ಯವಾದ ಕೆಲಸ.”]

೧

ಸಂಗ್ರಾಹಕರು:— ಕಿಶೋರಿ ಸೀತಾದೇವಿ ಬುರ್ಲಿ, ಬಾಗಲಕೋಟಿ

## ಮಕ್ಕಳ ಒಗಟುಗಳು

ಖಂಬ ಖಂಬದ ಮ್ಯಾಲೆ । ದಿಂಬದಿಂಬದ ಮ್ಯಾಲೆ ।
ಬೆಳ್ಳೀ ಬಟ್ಟಲದಾಗ ದುಡ್ಡೋಡ್ಯಾತ್ತಾವ ॥ (ಕಣ್ಣು)

ನಗೀಬಂದು ನಾಕು ದಿನಾ ಆಯ್ತು । ನೆಂಟ ಬಂದು ಎಂಟು
ದಿನಾ ಆಯ್ತು । ನಾ ಕೆಟ್ಟು ಹೋಗ್ತೀನಿ । ನಮ್ಮವರ್ನ
ಕರೀರಿ ॥ (ಮಳೆಗಾಲದ ಹಕ್ಕಿ)

ಆಡವ್ಯಾಗಿರೋ ಗಿಡಗೋವಿಂದಾ । ನಿನಗ್ಯಾರಿಟ್ರೋ ಸಾದಿನ
ಬಟ್ಟು. (ಗುಲಗಂಜಿ)

ಬಸಪ್ಪನ ತೋಟದಾಗ ಎಸಳೊಂಬತ್ತು । ಎಲಿ ಚಿತ್ತಾರ ।
ಬಾಯಿಭಂಗಾರ ॥ ಅಕಟಕ ಮಕಟಕ। ಚಾಟಕ ಚೂಟಕ ।
ಇದನ್ಕಂಡು ನಮ್ಮ ಜೀವ ಚುಟೂ ಚೂಟೂ
(ಕೋತಂಬರಿ)

ಅಕ್ಕಾ ಅಕ್ಕಾ ಗಿಡಾ ನೋಡ । ಗಿಡದ ತುಂಬಾ ಕಾಯೀ
ನೋಡ । ತಿಂದವರ ಬಾಯೀ ನೋಡ (ಯಾಲಕ್ಕಿ)

ಕೈ ಹಿಡಿದಾತ ಗಂಡಲ್ಲ । ಕುಣ್ಯಾಗ ಕೂತಾತ ಹೆಣಾ ಅಲ್ಲ
(ಬಳೆಗಾರ, ಜೇಡ)

ಥಳಿಸಲ್ದಕ್ಕಿ । ಕಾಸಲ್ದ ತುಪ್ಪ । ನಿದ್ದಿಲ್ದೆಂಗಸು । ನಿರಾರ
ಗಂಡಸು (ಯಾಲಕ್ಕಿ, ಜೇನುತುಪ್ಪ, ಹೊಳೆ, ಹಣಮಂತ)

ಮರದಾಗ ಮರಾ ಹುಟ್ಟಿ । ಮರಚಕ್ರ ಕಾಯಾಗಿ।
ತಿನಬಾರದ ಹಣ್ಣು ಬಲು ಸವಿ. (ಕೊಸ.)

ಕರೀ ಸೀರೀ ಗರತಿ । ಪ್ಯಾಟ್ಯಾಗ ಇರತಿ । ದುಡ್ಡ ಕೊಟ್ಟರ
ಬರತಿ (ಸೀಸಲ)

ಅತ್ತಲಿಂದ ಬಂದೇವಮ್ಮಾ । ಮುತ್ತಿನ ಡೇರೀ ಹೊಡದೇ
ವಮ್ಮಾ । ಪಾಪೀ ಕಣ್ಣಿಗಿ ಬಿದ್ದೇವಮ್ಮಾ । ಪರದೇಶಾಗಿ
ಹೋದೇವಮ್ಮಾ ॥ ( ಮಲ್ಲಿಗೆ )

೨

## ಬಯಕೆಯ ಹಾಡು

ಸಂಗ್ರಾಹಕರು:— ಶ್ರೀ. ತಿಮ್ಮಾಜಿ, ಲಿಂಗೋ ಕುಲಕರ್ಣಿ, ಕಾಲವಾಡ

ಒಂದಂಬು ತಿಂಗಳಿಗೆ ಒಂದೇನ ಬಯಸ್ಯಾಳ ॥
ಅಂಗೈಯಲುಪ್ಪು ಎಳಿಹುಣಚಿ ॥ ೧ ॥
ಎರಡಂಬು ತಿಂಗಳಿಗೆ ಎರಡೇನ ಬಯಸ್ಯಾಳ ॥
ಎರಡೆಲಿಗೊಂಡ ಎಳಿಮಾವ ॥ ೨ ॥
ಮೂರಂಬು ತಿಂಗಳಿಗೆ ಮೂರೇನ ಬಯಸ್ಯಾಳ ॥
ಮೂಡಲದಿಕ್ಕಿನ ಮಗಿಮಾವ ॥ ೩ ॥
ನಾಕಂಬು ತಿಂಗಳಿಗೆ ನಾಕೇನ ಬಯಸ್ಯಾಳ ॥
ಕಾಕೀಯು ಹಣ್ಣು ಕೈ ತುಂಬ ॥ ೪ ॥
ಐದಂಬು ತಿಂಗಳಿಗೆ ಐದೇನ ಬಯಸ್ಯಾಳ ॥
ಕೊಯ್ದುಮಲ್ಲಿಗೀ ಎಣಿದಂಡಿ ॥ ೫ ॥
ಆರಂಬು ತಿಂಗಳಿಗೆ ಆರೇನ ಬಯಸ್ಯಾಳ ॥
ಆರಾಕಿದ ಬಾನ ಕೆನಿಮುಸರ ॥ ೬ ॥
ಏಳಂಬು ತಿಂಗಳಿಗೆ ಏಳೇನ ಬಯಸ್ಯಾಳ ॥
ಹೇಳಿ ಕಳವ್ಯಾಳ ತವರೂರಿಗೆ ॥ ೭ ॥
ಎಂಟಂಬು ತಿಂಗಳಿಗೆ ಎಂಟೇನ ಬಯಸ್ಯಾಳ ॥
ಕಂಟಲ್ಯಾಲಕ್ಕಿ ಕೊಡತುಪ್ಪ ॥ ೮ ॥
ಒಂಬತ್ತು ತಿಂಗಳಿಗೆ ತುಂಬ್ಯಾವ ನವಮಾಸ ॥
ಸಂದು ಸಂದೆಲ್ಲ ಕಿರಿಬ್ಯಾನಿ ॥ ೯ ॥
ವ್ಯಾಳ್ಯ ವ್ಯಾಳ್ಯಕೆ ಬ್ಯಾನಿ ತಾಳ ಬಾರಿಸಿದಂತೆ ॥
ತಾಳಲಾರೆನೆ, ನಿಲ್ಲಲಾರೆನವ್ವಾ ತಾಯವ್ವನಿರಬೇಕ
ಜನ್ಮಕ ॥ ೧೦ ॥
ಹೊತ್ತು ಹೊತ್ತಿಗೆ ಬ್ಯಾನಿ ಕತ್ತೀಲೆ ಕಡದಂತೆ ॥
ಹೆತ್ತವ್ವನಿರಬೇಕ ಜನ್ಮಕ ॥ ೧೧ ॥
ಹತ್ತಂಬು ತಿಂಗಳಿಗೆ ಹೆತ್ತಾಳ ಹಸಗೂಸು ॥
ಸುತ್ತೆಲ್ಲ ನೆರದಾರ ಸುಮಂಗಲೆಯರು ॥ ೧೨ ॥

೩

## ಬೀಸುವ ಹಾಡುಗಳು

ಸಂಗ್ರಾಹಕರು:— ಶ್ರೀ ಗುರುರಾಜ ಲಕ್ಷ್ಮಣರಾವ
ಬೆಳ್ಳಿಕಲಂದಾನಿ, ಹಾವೇರಿ

### ಭಕ್ತಿ

ಇಂದು ನನ್ನಂಗಳ । ಶ್ರೀಗಂಧ ನಾತಾವ ।
ಬಂದಿದಾನೇನ ನರಹರಿ ।
ಬಂದಿದಾನೇನ ನರಹರಿ । ನನ ಮನಿಗೆ ।
ಗಂಧದ ಮಡುವ ಕಲಕೂತಾ !

ಕೃಷ್ಣ ಕೃಷ್ಣ ಎಂದು । ಮತ್ತ ಬೀದಿಗೆ ಬಂದೆ
ಕೃಷ್ಣ ನಮಗೆಲ್ಲಿ ದೊರಕ್ಯಾನ ।
ಕೃಷ್ಣ ನಮಗೆಲ್ಲಿ ದೊರಕ್ಯಾನ । ಇಂದೀಗೆ ।
ಎಷ್ಟು ದಿವಸ್ಹೀಂಗ ಕಳಿಯಲಿ ?

ನಾರಾಯಣ ನಿನ್ನ । ನಾಮದ ಬೀಜವ
ನಾನೆಲ್ಲಿ ಬಿತ್ತಿ ಬೆಳಿಯಲ್ಯೋ ।
ನಾನೆಲ್ಲಿ ಬಿತ್ತಿ ಬೆಳಿಯಲ್ಯೋ । ನಿನ ನಾಮ ।
ನಾಲಿಗೀಮ್ಯಾಲ ಬೆಳದೇನೋ !

೪

ಸಂಗ್ರಾಹಕರು:—ಶ್ರೀ. ಗೋ. ಮ. ದೇಶಪಾಂಡೆ, ರಾಜಾರಾಮ
ಕಾಲೇಜ, ಕೊಲ್ಹಾಪೂರ

### ಮಗಳೂ-ತಾಯಿಯೂ

ತಾವರಿಗಿಡ ಹುಟ್ಟಿ ದೇವರಿಗೆ ನೆರಳಾದೆ ।
ನಾ ಹುಟ್ಟಿ ಮನೆಗೆ ಎರವಾದೆ । ಹಡೆದವ್ವ
ನೀ ಕೊಟ್ಟ ಮನೆಗೆ ಹೆಸರಾದೆ ॥

### ಗಂಡಹೇಡರ ಜಗಳದ ರೀತಿ

ಗಂಡಹೆಂಡರ ಜಗಳ ಗಂಧ ತೀಡಿದ್ಹಾಂಗ ।
ಲಿಂಗಕ ನೀರು ಎರೆದ್ಹಾಂಗ । ಹಿರಿ ಹೊಳೆಯ
ಗಂಗವ್ವ ಸಾಗಿ ಹೋದ್ಹಾಂಗ ॥

### ಗಂಡನ ಮನೆಯ ಮಹಿಮೆ

ಗಂಜಿಯ ಕುಡಿದರು ಗಂಡನ ಮನಿಲೇಸು ।
ಅಂದಣದ ಮೇಲೆ ಚವರವ । ಹಾರಿದರು
ಹಂಗೀನ ತೌರಮನಿ ಸಾಕ ॥

**ಹೆಂಡತಿಯ ಮಹಿಮೆ**

ಅಡಗೀಯ ಮನಿಯೊಳಗ ಮಡದೀಯ ಸುಳಿವಿಲ್ಲ ।
ಅಡಿಗಿ ಬಾಯೀಗೆ ರುಚಿಯಿಲ್ಲ । ಹಡೆದವ್ವ
ಮಡದಿ ತವರೀಗೆ ಹೋಗ್ಯಾಳ ॥

**ಗಂಡನಿಗಾಗಿ ಪಕ್ಷಪಾತ**

ಮಾರಾಯರು ಬೈದರ ಜಾರವು ಕಣ್ಣೀರು
ಮಾರಾಯರ ತಮ್ಮ ಮೈದುನ । ಬೈದರ
ಮಾಡಿಲ್ಲದ ನೀರು ಸುರಿದ್ಹಾಂಗ ॥

**ಪುತ್ರಾಭಿಮಾನ**

ಸರಕಾರ ಎಂಜೋದು ದರಕಾರ ನನಗಿಲ್ಲ ।
ಸರಕಾರದೊಳಗ ಸರಿಪಾಲು । ತರುವಂಥ
ಸರದಾರ ಮಗನೊಬ್ಬ ಮನಿಯೊಳಗ ॥

**ಮಗಳು–ಮಗ–ಸೊಸೆಯರ ಹೊಗಳಿಕೆ**

ಕಣ್ಣು ಮೂಗಿಲೆ ನನ್ನ ಹೆಣ್ಣುಮಗಳು ಚಲವಿ ।
ಬಣ್ಣಕ ನನ್ನ ಸೊಸಿ ಚಲಿವಿ । ದಸರೇಕ
ಬನ್ನಿ ಮುಡಿವಾಗ ಮಗ ಚಂದ ॥

---

# ಆರೋಗ್ಯವಿಜ್ಞಾನ

## ಮಕ್ಕಳ ಹೊಕ್ಕಳ ಹುರಿಯನ್ನು ಯಾವಾಗ ಮತ್ತು ಹೇಗೆ ಕೊಯ್ಯಬೇಕು ?

ಲೇ.:- ಡಾ. ಕಾಮಲಾಪುರ ಕಾಂತರಾಯರು M. B. B. S. ಧಾರವಾಡ

### ಯಾವಾಗ ?

ಹುಟ್ಟಿದ ಮಕ್ಕಳ ಹೊಕ್ಕಳ ಹುರಿಯನ್ನು ಯಾವಾಗ ಕೊಯ್ಯಬೇಕೆಂಬದು ಎಲ್ಲರಿಗೂ ಗೊತ್ತಿರಬೇಕಾದ ವಿಷಯವು. ಮಾಸವು ಬಿದ್ದ ಮೇಲೆ ಹುರಿಯನ್ನು ಕೊಯ್ಯುವ ಪರಿಪಾಠ ವೇನೋ ಉಂಟು. ಆದರೆ ಕೂಸು ಹುಟ್ಟಿದ ತರುವಾಯ ಇಷ್ಟೊಂದು ನಿಶ್ಚಿತ ಸಮಯಕ್ಕೆ ಮಾಸವು ಬಿದ್ದೀತೆಂಬುದರ ನಿಯಮವಿಲ್ಲ; ಅದಕ್ಕೆ ಅರ್ಧ ಗಂಟೆಯಿಂದ ೧೨ ಗಂಟೆಗಳ ಹೊತ್ತು ಬೇಕಾಗುವದು. ಅಂದ ಮೇಲೆ ಇಷ್ಟು ಹೊತ್ತಿನ ವರೆಗೂ ಆ ಎಳೆಮಗುವು ಚಳಿಗಾಳಿಗಳಿಗೀಡಾಗಿ ರಕ್ತಮೂತ್ರ ಗಳಲ್ಲಿ ಕೊಳೆಯುತ್ತ ಬೀಳಬೇಕೇ ? ಕೂಸು ತಾಯಿಯ ಬಸಿರಿ ನಲ್ಲಿದ್ದಾಗ ಉಷ್ಣರಸ (Liquouramni) ದಲ್ಲಿ ತೇಲು ತ್ತಿದ್ದು, ಹೊರಗೆ ಬಂದ ಕೂಡಲೆ ಅದರ ಮೈಯೊಳಗಿನ ಮೊದ ಲಿನ ಕಾವು ಒಮ್ಮಿಂದೊಮ್ಮೆ ಹೊರಟು ಹೋಗುತ್ತದೆ. ಇಂಥ ಪರಿಸ್ಥಿತಿಯಲ್ಲಿ ಹನ್ನೆರಡು ಗಂಟೆಯ ವಯಸ್ಸೂ ಇಲ್ಲದ ಆ ಕೂಸನ್ನು ಗಾಳಿಯಲ್ಲಿ ಬಿಡುವದೆಂದರೆ ಚಳಿಯ ಬೇನೆಯ ಬಾಯಲ್ಲಿ ಅದನ್ನು ತುರುಕಿದಂತೆಯೇ ಸರಿ. ಕೆಲವು ಬೇನೆಯ ಪ್ರಸಂಗಗಳಲ್ಲಂತೂ ತಾಯಂದಿರಿಗೆ ಸ್ಮೃತಿ ತಪ್ಪಿ ಹೋಗುವ ದುಂಟು; ಇಂಥ ಹೊತ್ತಿನಲ್ಲಿ ಕೂಸು ತಾಯಿಯ ಹತ್ತರ ಇರು ವದೂ ಒಂದು ಗಂಡಾಂತರವಾಗಿ ಪರಿಣಮಿಸುವದು.

ಆದ್ದರಿಂದ ಮಕ್ಕಳ ಹುರಿಯನ್ನು ಕೊಯ್ಯುವ ಸರಿಯಾದ ಹೊತ್ತಾವುದೆಂದರೆ, ಹುರಿಯಲ್ಲಿ ಹಾರುವ ನಾಡಿಗಳು ನಿಂತ ಕೂಡಲೆ. ಈ ಹುರಿಯೆಂದರೆ ಗರ್ಭದಲ್ಲಿದ್ದ ಶಿಶುವಿಗೆ ತಾಯಿಯ ರಕ್ತವನ್ನು ಒಯ್ದು ಮುಟ್ಟಿಸುವ ಮತ್ತು ತಿರುಗಿ ತರುವ ಕೊಳವಿಯಿದ್ದಂತೆಯೇ ಸರಿ. ಅದರಲ್ಲಿ ಎರಡು ಶುದ್ಧ ರಕ್ತ ವಾಹಿನಿ (Arteries) ಗಳೂ ಒಂದು ಅಶುದ್ಧರಕ್ತವಾಹಿನಿ (Vein) ಯೂ ಇದ್ದು ಅವುಗಳೊಳಗಿಂದ ತಾಯಿಯ ಗರ್ಭದ ರಕ್ತಧಮನಿಗಳೊಳಗಿನ ರಕ್ತವು ಓಡಾಡುವದು. ಕೂಸು ಬಸಿರಿನೊಳಗಿಂದ ಹೊರಗೆ ಬಂದ ಮೇಲೆಯೂ ಹುರಿಯೊಳಗಿನ ನಾಡಿಗಳು ಹಾರುತ್ತಿರುತ್ತವೆ. ಆದರೆ ಗರ್ಭವು ಆಕುಂಚಿತವಾಗಿ ಮಾಸವು ಮುಂದಕ್ಕೆ ಸರಿದೊಡನೆ ಗರ್ಭದೊಳಗಿನ ರಕ್ತವು ಹುರಿಯಲ್ಲಿ ಬರದಂತಾಗಿ ಹುರಿಯು ಹಾರುವದು ನಿಂತುಬಿಡು ವದು. ಈ ಹೊತ್ತಿಗೆ ತಾಯಿಯಿಂದ ದೊರಕಬೇಕಾದ ರಕ್ತ ವೆಲ್ಲಾ ಕೂಸಿಗೆ ದೊರೆತುಬಿಟ್ಟಿರುವದರಿಂದ ಹುರಿಯ ಕೆಲಸವೇ ತೀರಿ ಬಿಟ್ಟಿರುತ್ತದೆ. ಈ ಸಮಯಕ್ಕೆ ಸರಿಯಾಗಿ ಹುರಿಯನ್ನು ಕೊಯ್ಯಬೇಕು. ಹುರಿಯ ನಾಡಿಯು ಹಾರುವದು ನಿಲ್ಲುವ

ದಕ್ಕಿಂತ ಮೊದಲೇ ಮಾತ್ರ ಗಡಿಬಿಡಿ ಮಾಡಬಾರದು. ಮಾಸ ಬೀಳುವ ವರೆಗೆ ಹಾದೀ ನೋಡುತ್ತ ಮಿತಿಮೀರಿ ತಡವನ್ನೂ ಮಾಡಬಾರದು. ಮಾಸಬೀಳುವದಕ್ಕಿಂತ ಮೊದಲೇ ಹುರಿಯನ್ನು ಕೊಯ್ದರೆ ಆ ಮಾಸವು ಕೂಸಿನ ಎದೆಗೆ ಹತ್ತುವದೆಂಬ ವಾಡಿಕೆಯ ನಂಬಿಕೆಯು ನಿರಾಧಾರವಾದದ್ದೇ ಸರಿ.

ಒಂದೇ ಮಾಸವಾಗಲಿ ರಕ್ತಧಮನಿಗಳಿಂದ ಪರಸ್ಪರ ಸಂಬಂಧವುಳ್ಳ ಬೇರೆ ಬೇರೆ ಎರಡು ಮಾಸಗಳಾಗಲಿ ಉಳ್ಳ ಅವಳಿಜವಳಿ ಬಸಿರಿದ್ದಲ್ಲಿ ಮಾತ್ರ ಹೆಚ್ಚು ಎಚ್ಚರವುಳ್ಳವರಾಗಿರಬೇಕು. ಆದರೂ ಹೆದರುವ ಕಾರಣವಿಲ್ಲ. ಹುರಿಯನ್ನು ಕೊಯ್ಯುವದಕ್ಕಿಂತ ಮೊದಲು ಅದನ್ನು ಯೋಗ್ಯರೀತಿಯಿಂದ ಕಟ್ಟಿದ ಪಕ್ಷದಲ್ಲಿ ಯಾವ ಅಪಾಯವೂ ಸಂಭವಿಸುವದಿಲ್ಲ.

## ಹೇಗೆ?

ಇನ್ನು ಹೇಗೆ ಕೊಯ್ಯಬೇಕೆಂಬದನ್ನು ನೋಡುವಾ. ಈ ಕಾರ್ಯಕ್ಕಾಗಿ ಬೇಕಾದ ವಸ್ತುಗಳೆಂದರೆ ಒಂದು ಕತ್ತರಿ ಮತ್ತು ಗಟ್ಟಿಮುಟ್ಟಾದ ನಾರಿನ ದಾರ; ಇಷ್ಟೇ. ಇವೆರಡನ್ನೂ ಮೊದಲು ಕುದಿಸಿರಲಿಕ್ಕೆ ಬೇಕು. ವಾಡಿಕೆಯಾಗಿ ಜನರು ಬೇಕಾದ ದಾರವನ್ನು ಉಪಯೋಗಿಸುವರು; ಮತ್ತು ಕತ್ತರಿ ದಾರಗಳನ್ನು ಮೊದಲು ಕುದಿಸುವದೇ ಇಲ್ಲ; ಈ ರೂಢಿಯನ್ನು ನಾವು ನಿಲ್ಲಿಸಲಿಕ್ಕೆ ಬೇಕು. ಇಲ್ಲದಿದ್ದರೆ ಮಕ್ಕಳ ಹುರಿಯು ಕೊಳೆತುಹೋಗಿ ಅವುಗಳ ಜೀವಕ್ಕೇ ಅಪಾಯವಾಗುವ ಸಂಭವವುಂಟು.

ಈ ಕೆಲಸವನ್ನು ಕೈಕೊಂಡ ಸೂಲಗಿತ್ತಿಯು ಮೊಟ್ಟ ಮೊದಲು ಬಿಸಿನೀರುಸಾಬೂನುಗಳಿಂದ ಕೈಗಳನ್ನು ಹಸನಾಗಿ ತೊಳೆದುಕೊಂಡಿರಬೇಕು. ಹೀಗೆ ತೊಳೆದುಕೊಂಡು ಆ ಮೇಲೆ ಆ ಕುದಿಸಿದ ದಾರದಿಂದ ಹುರಿಯನ್ನು ಎರಡು ಸ್ಥಳಗಳ[illegible] ಕಟ್ಟಬೇಕು. ಒಂದು ಸ್ಥಳವೆಂದರೆ ಹೊಕ್ಕಳದಿಂದ ೨ ಇಂಚು ಬಿಟ್ಟು; ಇನ್ನೊಂದೆಂದರೆ ಮಾತೃಯೋನಿಯಿಂದ ಹ[illegible] ಹೊರಗೆ ಬಂದಿರುವ ಸ್ಥಳದಲ್ಲಿಯೇ. ಸದ್ಯಕ್ಕೆ ಜನರು ಮಕ್ಕ[illegible] ಹೊಕ್ಕಳದಿಂದ ೨-೩ ಇಂಚು ಬಿಟ್ಟು ಒಂದಕ್ಕೊಂದರ ಹ[illegible] ರವೇ ಎರಡು ಸ್ಥಳಗಳಲ್ಲಿ ಕಟ್ಟುತ್ತಾರೆ. ಮಾತೃಯೋನಿ[illegible] ಹತ್ತರ ಕಟ್ಟುವದನ್ನು ಬಿಟ್ಟೇ ಬಿಡುತ್ತಾರೆ. ಈ ಎರಡೂ ಪ[illegible] ತಿಗಳಿಂದ ಪರಿಣಾಮದಲ್ಲೇನು ಅಷ್ಟೊಂದು ಅಭ್ಯಂತರವಾಗು[illegible] ದಿಲ್ಲವಾದರೂ ಮೊದಲನೆಯ ಪದ್ಧತಿಯೇ ಶ್ರೇಯಸ್ಕರವಾದದ್ದು. ಏಕೆಂದರೆ ಮಾತೃಯೋನಿಮುಖದ ಹತ್ತರ ಹುರಿಯನ್ನು ಕಟ್ಟುವದರಿಂದ ಹೊರಗಿದ್ದ ಹುರಿಯ ಉದ್ದಳತೆಯು ಕಂ[illegible] ಬಂದು, ಮಾಸವು ಬಸಿರನ್ನು ಬಿಟ್ಟು ಕಳಚಿದೆಯೋ ಇಲ್ಲವೋ ಎಂಬದು ತಿಳಿದುಬರುವದು.

ಹೀಗೆ ಎರಡೂ ಸ್ಥಳಗಳಲ್ಲಿ ಕಟ್ಟಿದ ಮೇಲೆ ಕೂಸಿನ ಹೊ[illegible] ಳದಿಂದ ಅರ್ಧ ಇಂಚು ಬಿಟ್ಟು ಹುರಿಯನ್ನು ಕೊಯ್ಯಬೇ[illegible] ಇದಕ್ಕಾಗಿ ಕುದಿಸಿದ ಕತ್ತರಿಯನ್ನೇ ಉಪಯೋಗಿಸಬೇ[illegible] ಹಾಗೂ ಬಹಳ ಮೆಲ್ಲಗೆ ಕೆಲಸವನ್ನು ಮಾಡಬೇಕು. ಹು[illegible] ಯನ್ನು ಕಸುವಿನಿಂದ ಎಳೆಯಬಾರದು. ಈ ಹೊತ್ತಿಗೆ ಹು[illegible] ಯಿಂದ ಕೂಸು ಬಿಡುಗಡೆ ಹೊಂದಿತೆಂದು ತಿಳಿದು ಕೂಸ[illegible] ಬಾಣಂತಿಯರನ್ನು ಅವರ ದೇಹಸ್ಥಿತಿಯನ್ನರಿತು ಚೆನ್ನ[illegible] ಶೂಶ್ರೂಷೆಮಾಡಬೇಕು. ಕೊಯ್ದುಳಿದು ಕೂಸಿಗೆ ಹತ್ತಿ[illegible] ಹುರಿಯ ತುದಿಯು ಮುದುಡಿಕೊಂಡು ತುಂಬಿಕೊಳ್ಳುವವ[illegible] ಅದು ಕೊಳೆಯದಂತೆ ದಿನಾಲು ನೋಡಿಕೊಳ್ಳಬೇಕು.

---

# ಕರ್ನಾಟಕ ಕಲೆಯೂ ವಿಜ್ಞಾನವೂ

## ಬಾಲಭಾರತಿ ಕುಮಾರಿ ಯದುಗಿರಿಯಮ್ಮನೂ ಕೃಷಿಕರ್ಮವಿಜ್ಞಾನಿಗಳಾದ ಶ್ರೀಮಾನ್ ಕೊಟ್ಟೂರ ಗಣಪತರಾಯರೂ

### ಬಾಲಭಾರತಿ ಯದುಗಿರಿಯಮ್ಮ

**ಕೋ ನಾಮ ಪಾಕಾಭಿಮುಖಸ್ಯ ಜಂತೋ।**
**ರ್ದ್ವಾರಾಣಿ ದೈವಸ್ಯ ಪಿಧಾತುಮೀಷ್ಟೇ॥ ಭವಭೂತಿ**

ಭಾಗ್ಯಬರುವಾಗ ತಡೆಯುವವರಾರು? ದೈವ ತೆರೆಯುವಾಗ ಮುಚ್ಚುವವರಾರು? ಕನ್ನಡನಾಡಿನ ಉದಯವಾಗಲಿದೆ ಎಂಬುದಕ್ಕೆ ಮತ್ತೆ ಬೇರೆ ಸಾಕ್ಷಿ ಬೇಕಾಗಿದ್ದರೆ ಕುಮಾರಿ ಯದುಗಿರಿಯಮ್ಮನ ಕೀರ್ತನೆ ಕೇಳಬೇಕು. ಅವಳದೇನೊ ಹರಿಕೀರ್ತನೆ ನಿಜ. ಆದರೆ ನಮ್ಮ ನಾಡಿನ, ನಮ್ಮ ನುಡಿಯ, ನಮ್ಮ ಕಲೆಯ, ನಮ್ಮ ಕುಶಲತೆಯ, ನಮ್ಮ ಜನರ ಬುದ್ಧಿಶಕ್ತಿಯ ಕೀರ್ತನೆಯೂ ಅದು ಅಹುದು. ಅವಳ ವಯಸ್ಸೇನು? ಶಕ್ತಿಯೆಷ್ಟು? ಆದರೂ ಆಕೆಯ ಆಧಾರಾಳವಾದ ವೈಖರಿ, ಮುದ್ದು ಮಾತುಗಳ ಮುಗ್ಧಮನೋಹರತೆ, ಕುಶಲವಾದ ನಿರ್ಭಯ ಅಭಿನಯ, ಉಚ್ಚಾರಣೆಯ ಸಂಸ್ಕಾರಸಂಪನ್ನತೆ ಇವೆಲ್ಲವು ಉತ್ತರ ಕರ್ನಾಟಕದವರನ್ನು ಮುಗ್ಧರನ್ನಾಗಿ ಮಾಡಿದ್ದರಲ್ಲಿ ಆಶ್ಚರ್ಯವೇನು?



ಮೂರು ನಾಲ್ಕು ವರ್ಷಗಳ ಪೂರ್ವದ ಮಾತು. ಮೈಸೂರು ಸಂಸ್ಥಾನದೊಳಗಿನ ಚಿಕ್ಕಮಗಳೂರ ಹೆಣ್ಣುಮಕ್ಕಳ ಸಾಲೆಯಲ್ಲಿ ಜರುಗಿದ ಮದರ್‌ಡೇ (Motherday) ಸಮಾರಂಭದ ಕಾಲಕ್ಕೆ ಹೆಣ್ಣುಮಕ್ಕಳ ಆಡಿ ತೋರಿಸಿದ ನಾಟಕಾಭಿನಯದಲ್ಲಿ ಧ್ರುವ, ದುರ್ಯೋಧನ, ಮತ್ತು ಬೇರೆ ಹಾಸ್ಯ ಪಾತ್ರಗಳ ಅಭಿನಯದಲ್ಲಿ ಮೊಟ್ಟಮೊದಲು ಕುಮಾರಿಯ ಪ್ರತಿಭಾವಿಶೇಷವು ಜನರ ಕಣ್ಣಿಗೆ ಹೊಳೆಯಿತು. ವಿವೇಕಶಾಲಿಗಳಾದ ಆಕೆಯ ತಂದೆತಾಯಿಗಳು ಅವಳಾ ಶಕ್ತಿಬೀಜವನ್ನು ಕಂಡು ತಮ್ಮ ಜ್ಞಾನದ ಮತ್ತು ಪ್ರೀತಿಯ ನೀರನ್ನು ಅದಕ್ಕೆರೆದರು. ಕಲಾಭಿಜ್ಞರಾದ ತಂದೆಯವರು ಸಂಗೀತಶಿಕ್ಷಣಕ್ಕೆ ಅನುಕೂಲರಾದರು. ವಿದುಷಿಯರಾದ ತಾಯಿಯವರು ವಿವಿಧ ರಸಾಶ್ರಯವುಳ್ಳ ಕೀರ್ತನೆಗಳನ್ನು ರಚಿಸಿಕೊಟ್ಟರು. ಶಕ್ತಿಮತಿಯಾದ ಯದುಗಿರಿಯಮ್ಮನು ಎಲ್ಲ ರಸಗಳಲ್ಲಿಯೂ ಅವ್ಯಾಹತ ಸಂಚಾರ ಮಾಡಿ ಗೋಕರ್ಣಕ್ಷೇತ್ರದ ಸಂಸ್ಕೃತ ಪಂಡಿತರನ್ನೂ ಮೆಚ್ಚಿಸಿ 'ಬಾಲಭಾರತಿ' ಎಂಬ ಬಿರುದು ಪಡೆದಳು. ಕನ್ನಡವೂ ಕರ್ನಾಟಕವೂ ಏನು ಮುಂದೆ ಬಂದೀತು ಎನ್ನುವ ಕಲ್ಲೆದೆಗಾರರ ಎದೆಯನ್ನೂ ಬೆಳಗಾಂವಿ ಸಾಹಿತ್ಯ ಸಮ್ಮೇಲನ ಕಾಲಕ್ಕೆ ಬಿರಿದವಳ ಮಿಕ್ಕ ಬಿರುದುಗಳೇತಕೆ? ಅವಳ ದೇಶಭಕ್ತಿ, ಸ್ವಭಾಷಾನುರಾಗ, ಪರಗುಣಗ್ರಾಹಕತೆ, ಪರೋಪಕಾರಗಳೇ ಅವಳ ಮೈಯನ್ನೇಕೆ ಅವಳ ಮನವನ್ನೆ ಮೆರೆಯಿಸುವ ಪದಕಪುತ್ಥಳಿಗಳಾಗಿವೆ. ಅವಳ ಮೈಮೇಲಿನ ಪದಕಗಳ ಮಾಲೆ ಬರಿಯ ಉಪಚಾರದ ಹೊರೆ.

ಅವಳ ಗುಣಗಳು ಆನುವಂಶಿಕಸಂಸ್ಕಾರಫಲಗಳಾಗಿರಬಹುದಾದರೂ, ಅವಳು ಚಿಕ್ಕವಯಸ್ಸಿನಲ್ಲಿಯೂ ನಡೆಸಿರುವ ಉಪಾಸನೆಯ ಫಲವೆಂದೂ ಹೇಳಬಹುದು. ಅಡ್ಡಹಾದಿಯನ್ನು ಹಿಡಿದ ರಾಜಲಕ್ಷ್ಮಿಯು ಗುಣಿಗಳ ಕಡೆಗೆ ನೇರವಾಗಿ ಬರುವದು ಅಪರೂಪ. ‘ಬಾಲಭಾರತಿ’ಯ ಉಪಾಸನೆಗೂ ಕೀರ್ತನಾ ಭಕ್ತಿಗೂ ಸಾವಂತವಾಡಿಯ ಮಹಾರಾಜ ಮಹಾರಾಣಿಯವರೂ, ಕೊಲ್ಲಾಪುರದ ಮಹಾರಾಣಿಯವರೂ, ಜಮಖಂಡಿಯ ಸಂಸ್ಥಾನಿಕರೂ ಸನ್ಮಾನವನ್ನೂ ಸಹಾಯವನ್ನೂ ಮಾಡಿರುವರು, ಮಾಡುತ್ತಲಿರುವರು.

ಶಕ್ತಿಸಂಚಾರವುಳ್ಳ ಈ ಬಾಲೆಯು ಕನ್ನಡಿಗರಲ್ಲಿ ನವಚೈತನ್ಯವನ್ನು ಬೀರಿ ನವದೃಷ್ಟಿಯನ್ನುಂಟುಮಾಡಿದರೆ ನಮ್ಮ ನಾಡಿನ ಉದಯದ ಕಾರ್ಯವು ಸದ್ಯಃಫಲದಾಯಿಯೂ ಆಗಲಾರದೆ ? “ಆದರೆ ಈ ಚಿಕ್ಕ ಕೂಸಿನ ಹೊಗಳಿಕೆ ಇಷ್ಟೇಕೆ?” ಎಂದರೆ— “ಗುಣಾಃ ಪೂಜಾಸ್ಥಾನಂ ಗುಣಿಷು ನಚ ಲಿಂಗಂ ನಚವಯಃ” ಎಂದು ಮತ್ತೆ ಭವಭೂತಿಯ ಮಾತಿನಲ್ಲಿ ಹೇಳುವೆವು.

## ಶ್ರೀಮಾನ್ ಕೊಟ್ಟೂರ ಗಣಪತರಾಯರು

ಇವರು ಧಾರವಾಡ ವ್ಹಿಕ್ಟೋರಿಯಾ ಹಾಯಿಸ್ಕೂಲಿನಲ್ಲಿ ಮೆಟ್ರಿಕಢವರೆಗೆ ಅಭ್ಯಾಸ ಮಾಡಿ ಪುಣೆಯ ಅಗ್ರಿಕಲ್ಚರ ಕಾಲೇಜದಿಂದ ಬಿ. ಎ. ಜಿ. ಪದವಿಯನ್ನು ಹೊಂದಿದರು. ೧೯೧೨ ನೆಯ ಇಸ್ವಿಯಲ್ಲಿ ಇವರು ಕರ್ನಾಟಕದ ಹತ್ತಿಯ ಬೆಳೆಯನ್ನು ಸುಧಾರಿಸುವ ಕೆಲಸಕ್ಕಾಗಿ ನಿಯಮಿಸಲ್ಪಟ್ಟರು. ಮುಂದೆ ಸ್ವಲ್ಪ ವರ್ಷಗಳಲ್ಲಿಯೇ ಬೆಳೆಗಳಲ್ಲಿ ಮುಖ್ಯವಾಗಿ ಹತ್ತಿಯಲ್ಲಿ ಹೊಸ ಹೊಸ ಜಾತಿಗಳನ್ನುಂಟುಮಾಡುವ ವಿಷಯದಲ್ಲಿ ಎಷ್ಟೋ ಶೋಧಗಳನ್ನು ಮಾಡಿದರು. ಈ ಶೋಧಗಳ ಸಹಾಯದಿಂದ ಇವರಿಗೆ ಎಮ್. ಎ. ಜಿ. ಪದವಿಯು ದೊರೆಯಿತಲ್ಲದೆ ಇವರ ಹೆಸರು ಯುರೋಪ ಅಮೇರಿಕಾ ಖಂಡಗಳಲ್ಲಿ ಪ್ರಚಾರಕ್ಕೆ ಬಂದಿತು. ನಮ್ಮ ಕರ್ನಾಟಕದ ಆರ್ಥಿಕ ಸ್ಥಿತಿಯನ್ನು ಸುಧಾರಿಸುವದಕ್ಕಾಗಿ ಇವರು ಹತ್ತಿ ಜೋಳ ನೆಲಗಡ್ಲೆ ಮುಂತಾದ ಬೆಳೆಗಳಲ್ಲಿ ಎಷ್ಟೋ ಸುಧಾರಣೆಗಳನ್ನು ಮಾಡಿದ್ದು ಜವಾರಿ ಹ[illegible]ಯಿಂದ ಧಾರವಾಡ ನಂ ೧ ಎಂಬ ಹತ್ತಿಯನ್ನೂ ವಿಲಾ[illegible] ಹತ್ತಿಯಿಂದ ಗದಗ ನಂ ೧ (ಅಪಲಂಡ) ಎಂಬ ಹ[illegible]ಯನ್ನೂ ಹುಡುಕಿ ತೆಗೆದಿದ್ದಾರೆ. ಇವೆರಡು ಹತ್ತಿಗಳ[illegible] ಈಗ ಸುಮಾರು ೩ ಲಕ್ಷ ಎಕರೆ ಭೂಮಿಯ ಮೇಲೆ ಬೆಳೆ[illegible]ತ್ತಾರೆ. ಇದರಿಂದ ರೈತರಿಗೆ ವರ್ಷಾ ೨೦ ಲಕ್ಷ ರೂಪಾಯಿ[illegible] ಲಾಭವಾಗುವದೆಂದು ಹೇಳಬಹುದು. ಜವಾರಿ ಮ[illegible]ವರಾಡಿ ಹತ್ತಿಗಳ ಬೆರಿಕೆ (Cross) ಮಾಡಿ ಭಡೋಚ [illegible]ರಿಯ ಹತ್ತಿಯನ್ನು ಇವರು ತಯಾರಿಸಿರುತ್ತಾರೆ. ಇದನ್ನು [illegible] ಬೈಲಹೊಂಗಲದಲ್ಲಿ ೧೦ ಸಾವಿರ ಎಕರೆ ಭೂಮಿಯ[illegible] ಬೆಳೆಯುತ್ತಾರೆ. ಇವುಗಳಲ್ಲಿ ಧಾರವಾಡ ನಂ ೧ನೇ ಹತ್ತಿ[illegible] ಹಿಂದುಸ್ಥಾನದಲ್ಲಿ ಬೆಳೆಯುವ ಎಲ್ಲ ಹತ್ತಿಗಳಲ್ಲಿ ಬಹಳ ಶ್ರೇ[illegible]ವಾದದ್ದೆಂದು ಗೊತ್ತಾಗಿದೆ. ಇದರಿಂದ ೪೦ ನಂಬರು ನೂಲ[illegible] ಗಿರಣಿಯಲ್ಲಿ ಅನಾಯಾಸವಾಗಿ ಹೊರಡಿಸಬಹುದು. [illegible] ಕೈರಾಟಿಗೂ ಬಹಳ ಸುಲಭವಾದದ್ದಾಗಿದೆ. ಈ ಮ[illegible] ಹೊಸ ಸುಧಾರಿಸಿದ ಹತ್ತಿಗಳಲ್ಲದೆ ಜವಾರೀ ಹತ್ತಿಗೆ ಸಿಡಿ[illegible]ದಿಂದಾಗುವ ಹಾನಿಯನ್ನು ತಪ್ಪಿಸಬೇಕೆಂದು ಸಿಡಿ ಹಾ[illegible] ಇದ್ದ ಹತ್ತಿಯನ್ನು ತಯಾರಿಸಿರುತ್ತಾರೆ. ಇದರಿಂದ ಸಿ[illegible] ಉಪದ್ರವವು ತೀರ ಕಡಿಮೆಯಾಗುವದರಲ್ಲಿ ಎಳ್ಳಷ್ಟೂ [illegible]ಯವಿಲ್ಲ.



ಹತ್ತಿಯಂತೆ ಜೋಳದಲ್ಲಿ ಸಹ ಎಷ್ಟೋ ಹೊಸ ನಮೂ[illegible]ಗಳನ್ನು ಇವರು ಮಾಡಿರುತ್ತಾರೆ. ಇವುಗಳಲ್ಲಿ ಬಿಳಿ[illegible] ಕಸಕ್ಕೆ ಅಸಕೊಳ್ಳದ ಜೋಳವೊಂದುಂಟು. ಅದನ್ನು ಎಷ್ಟೋ [illegible] ರೈತರು ಬಿತ್ತಿ ಅನುಭವ ಪಡೆದಿದ್ದಾರೆ. ಹಾವೇರಿಯ [illegible]ದಲ್ಲಿ ನೆಲಗಡ್ಲೆಯ ಸಾಗುವಳಿಯು ಬಹಳ ಭರದಿಂದ ಸಾ[illegible] ಅಲ್ಲಿ ಬೆಳೆಯುವ ಜಾತಿಯೂ ಇವರು ಶೋಧಿಸಿದ್ದೇ. [illegible] ಕರ್ಮವಿಜ್ಞಾನಿಗಳಾದ ಶ್ರೀಮಾನ್ ಗಣಪತರಾಯರು ಹಲವೊಂದು ಬಗೆಯಿಂದ ನಮ್ಮ ಬಡ ರೈತರ ಹಿತಕ್ಕಾ[illegible] ಒಮ್ಮನಸ್ಸಿನಿಂದ ದುಡಿದು ಕರ್ನಾಟಕ ಮಾತೆಯ ಸೇವೆಯ[illegible] ಮಾಡಿದ್ದಾರೆ. ಮೊನ್ನೆ ಮೊನ್ನೆ ಸರಕಾರದವರೂ ಇ[illegible] ರಾವಸಾಹೇಬ ಪದವಿಯನ್ನು ಕೊಟ್ಟಿರುವರೇನೋ ನಿಜ; [illegible] ಇವರ ಶೋಧಗಳಿಂದಾಗುವ ಲಾಭಗಳನ್ನುಂಡು ಕರ್ನಾಟ[illegible] ಬಡ ಒಕ್ಕಲಿಗರು ಇವರನ್ನು ಹಾಡಿಹರಸುವದರಲ್ಲಿಯೇ [illegible] ಕಾರ್ಯದ ನಿಜವಾದ ಗೌರವವು ತೋರಿಬರುತ್ತಿದೆ.

ಇವರು ಕೃಷಿ ಕರ್ಮ ವಿಷಯವಾಗಿ ಮಾಡಿದ ಶಾಸ್ತ್ರೀಯ ಶೋಧಗಳು ಹಿಂದುಸ್ಥಾನದಲ್ಲಿ ಪೂಸಾದ 'ದಿ ಆಗ್ರಿಕಲ್ಚರಲ್ ಜರ್ನಲ್ ಆಫ ಇಂಡಿಯಾ,' ಇಂಗ್ಲಂಡದಲ್ಲಿ 'ನೇಚರ್' ಹಾಗು 'ದಿ ಆನಾಲ್ಸ ಆಫ್ ಬಾಟನಿ' ಮತ್ತು ಅಮೇರಿಕೆಯಲ್ಲಿ 'ಜರ್ನಲ್ ಆಫ್ ಹೆರಿಡಿಟಿ' ಎಂಬ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಅವುಗಳು ಶಾಸ್ತ್ರಜ್ಞರಿಂದ ಅಂಗೀಕೃತವಾಗಿವೆ.

### ಇವರ ಕೆಲವು ಸಿದ್ಧಾಂತಗಳು

(೧) ಬಣ್ಣದ ವಿವಿಧತೆಗಾಗಿ ಪರಾಗಗಳ ಸಂತತವಾದ ಸಂಕರಣದಿಂದ ಗಿಡದ ಸತ್ತ್ವದಲ್ಲಾಗಲಿ ಫಲದ ಬೆಲೆಬಾಳುವಿಕೆಯಲ್ಲಾಗಲಿ ಬಾಧೆಯುಂಟಾಗುವದಿಲ್ಲ.

(೨) ಎಳೆಯ ಅಳತೆ ಹೆಚ್ಚಾದಂತೆ ಹತ್ತಿಯಿಂದ ಇಳಿಯುವ ಅರಳೆಯ ಪ್ರಮಾಣವು ಕಡಿಮೆಯಾಗುವದೆಂಬ ನಿಯಮವಿಲ್ಲ. ಅದೇ ಪ್ರಕಾರ ಹತ್ತಿಯಿಂದ ಇಳಿಯುವ ಅರಳೆಯ ಪ್ರಮಾಣವು ಹೆಚ್ಚಾದಂತೆ ಎಳೆಯ ಅಳತೆ ಕಡಿಮೆಯಾದೀತೆಂಬ ನಿಯಮವೂ ಇಲ್ಲ. ಹೊಸ ಜಾತಿಯ ಹತ್ತಿಯನ್ನು ಹುಟ್ಟಿಸುವಲ್ಲಿ ಈ ಎರಡೂ ಗುಣಗಳನ್ನು ಬೆಳೆಸಿಕೊಳ್ಳಲು ಅನುವುಂಟು.

(೩) ಸ್ವಾಭಾವಿಕವಾದ ಪರಾಗಸಂಕರಣವು ಹತ್ತಿಯ ಎಲ್ಲ ಜಾತಿಗಳಿಗೂ ಸಾಮಾನ್ಯವಾಗಿದೆ. ಮುಖ್ಯವಾಗಿ ಈ ಕಾರ್ಯವನ್ನು ಭ್ರಮರಗಳು ಮಾಡುತ್ತವೆ.

(೪) ಪರಾಗಸಂಕರಣದಿಂದ ವಿವಿಧ ಗುಣಗಳಲ್ಲಿ ಆಗುವ ಅಭ್ಯಂತರದ ಕ್ರಮವು ಹೇಗಂದರೆ:—(೧) ಊಬು (೨) ಎಲೆಯ ರಸಸತ್ತ್ವ (Leaf coating) (೩) ಹೂವಿನ ಬಣ್ಣ (೪) ಅರಳೆಯ ಇಳಿಯುವಿಕೆ (Ginning percentage) (೫) ಎಳೆಯ ಅಳತೆ (೬) ಬೀಜ.

---

# ಕನ್ನಡದಲ್ಲಿ ಶಬ್ದಭೇದ

ಸಂಗ್ರಾಹಕರು :—ಬಿ. ಶಿವಮೂರ್ತಿಶಾಸ್ತ್ರಿ, ಕೀರ್ತನಕೇಸರಿ, ಕವಿರತ್ನ, ಹುಲ್ಕುಂಟೆಮಠ, ತುಮಕೂರು.

**ಉತ್ತರಕರ್ಣಾಟಕ. ಮೈಸೂರುಕರ್ಣಾಟಕ**

೧ ತಾಬಂಡಿ = ಗಂಗಳ (ಊಟದ ತಟ್ಟೆ)
೨ ಥಾಲಿಪಟ್ಟ = ಕಜ್ಜಾಯ
೩ ಪುರವಠೆ = ಅನುಕೂಲ
೪ ಕುಸಬಿ = ಕುಸುಂಬೆ (ಹುರಿಗಡಲೆಯಲ್ಲಿ ಬೆರಸಿರುವ ಬೀಜ)
೫ ಖೊಬ್ರಿ = ಕೊಬ್ಬರಿ
೬ ಸಜ್ಜಿ = ಸಜ್ಜೆ
೭ ಗಾವಠೀಶಾಲೆ = ಹಳ್ಳೀಶಾಲೆ (ಕೂಲೀಮಠ)
೮ ಬೆಳವಲುಮರ = ಬೇಲದಮರ (ಬೆಲಪತ್ರೇ ಮರ)
೯ ಥಪಾಟಿ = ಕಜ್ಜಾಯ
೧೦ ಗಂಗಳ = ಬೆಲ್ಲದ ಕೊಪ್ಪರಿಗೆ
೧೧ ನಾವಲಿಗ = ಕ್ಷೌರದವ (ನಾಪಿತ)
೧೨ ಪೀಕು = ಗದ್ದೆಯ ಬೆಳೆ
೧೩ ಹಿಚುಗು = ಹಿಸುಗು
೧೪ ಬೆಲಪತ್ರೀಗಿಡ = ಬಿಲ್ವಪತ್ರೇ ಗಿಡ
೧೫ ಕುತ್ತಿಗಿ = ಕುತ್ತಿಗೆ (ಕಂಠ)

**ಉತ್ತರಕರ್ಣಾಟಕ ಮೈಸೂರುಕರ್ಣಾಟಕ**

೧೬ ಪಾತ್ರಿ = ಪಾತ್ರೆ
೧೭ ಬಾಳಿ = ಬಾಳೆ (ರಂಭಾವೃಕ್ಷ)
೧೮ ಕೈಬಳಿ = ಕೈ ಬಳೆ
೧೯ ಸುತ್ತಗಿ = ಸುತ್ತಗೆ
೨೦ ನಾಚಗಿ = ನಾಚಗೆ
೨೧ ಆವಿ = ಆಮೆ (ಕಮಠ)
೨೨ ಒಂಟಿ = ಒಂಟೆ
೨೩ ಗೂಗಿ = ಗೂಗೆ
೨೪ ಗದ್ದಿ = ಗದ್ದೆ
೨೫ ಕುದರಿ = ಕುದರೆ
೨೬ ಕೃಮಿ = ಕ್ರಿಮಿ
೨೭ ಕೆರಿ = ಕೆರೆ
೨೮ ಉಗಿಬಂಡಿ = ಹೊಗೆಯ ಗಾಡಿ (ರೈಲು)
೨೯ ಹಣಿಗೆ = ಬಾಚಣಿಗೆ
೩೦ ಹೊಟ್ಟೆಕಡತ = ಹೊಟ್ಟೆಕಚ್ಚು

(ಸಶೇಷ)

---

# ಮಧ್ವಾಚಾರ್ಯರು ಬಂಗಾಲಕ್ಕೆ ಪಯಣ ಬೆಳೆಸಿದ್ದರೋ ?

ಅನುವಾದಕರು:— ಶ್ರೀ. ಬೆಂಗೇರಿ ಹುಚ್ಚರಾಯರು, ಹಾವೇರಿ

ಮಧ್ಯಕಾಲೀನ ಹಿಂದುಸ್ಥಾನದ ವೈಷ್ಣವ (ದ್ವೈತ) ಮತಪ್ರಸಾರಕರಲ್ಲಿ ಶ್ರೀಮಧ್ವಾಚಾರ್ಯರ ಸ್ಥಾನವು ಅದ್ವಿತೀಯವಾಗಿದೆ. ಇವರ ಚರಿತ್ರೆಯೂ ಕಾಲವೂ ಬಹಳ ಮಹತ್ತ್ವವುಳ್ಳವುಗಳಾಗಿವೆ. ಆಗ ಪಠಾಣರ ಮೊದಲು ಮೊದಲಿನ ಮನೆತನದವರು ಆಳುತ್ತಿದ್ದರು. ದಾಳಿ, ಕೊಲೆಸುಲಿಗೆಗಳಿಲ್ಲದೆ ಒಂದು ದಿನವೂ ಹೋಗುತ್ತಿರಲಿಲ್ಲ. ಇಂಥ ಕಾಲದಲ್ಲಿ ವೇದಾಂತವೂ, ಬುದ್ಧರ ತಾಂತ್ರಿಕವಾದವೂ ಕೂಡಿ ಜನತೆಯ ಅಸುವನ್ನು ಹೀರುತ್ತಲಿದ್ದವು. ಇವರಿಂದ ರಾಷ್ಟ್ರದ ಬೆಳೆಗೆಯೊತ್ತಟ್ಟಿಗಿರಲಿ, ಅದರ ಇರುವಿಕೆಯೂ ಕೂಡ ಇರುಕಿನಲ್ಲಿತ್ತು. "ಹಿಂದು ರಾಷ್ಟ್ರವು ಕುಸಿದೀಳುವ ಲಕ್ಷಣಗಳು ತೋರುತ್ತಿದ್ದವು. ಆಗ ಮಧ್ವಾಚಾರ್ಯರು ಮಾಯಾವಾದವನ್ನು ಖಂಡಿಸಿ, ವ್ಯಕ್ತಿಯ ಮೇಲ್ಮೆಯನ್ನು ತೋರಿಸಿಕೊಟ್ಟರು. ಮತ್ತು ಜಗತ್ತಿನ ಸತ್ಯತೆಯನ್ನು ಜನರ ನಿದರ್ಶನಕ್ಕೆ ತಂದುಕೊಟ್ಟು ಪ್ರಗತಿಪರವಾದ ಹೆಗ್ಗುರಿಗಳ ಮುಂದರಿಸುವ ಕಸುವನ್ನು ಜನರಲ್ಲಿ ಬೀರಿದರು." ಹೊಸ ವೈಷ್ಣವ ಮತದ (ಇದು ಬಂಗಾಲದ ಚೈತನ್ಯನ ಮತದ ಹೆಸರು) ತಳಗಲ್ಲನ್ನಾದರೂ ಇವರೇ ಹಾಕಿದರು. ಇವರು ತಮ್ಮ ಶಿಷ್ಯರಿಗೆ ಮಾಡಿದ ಕಡೆಯ ಉಪದೇಶವನ್ನು ಐತರೇಯ ಉಪನಿಷತ್ತಿನ ಶಬ್ದಗಳಲ್ಲಿ ಹೇಳಬೇಕಾದರೆ "ಅವನನ್ನು (ದೇವರನ್ನು) ಅರಿತು ಸುಮ್ಮನೆ ಕೂಡುವದು ಸಾಕಾಗುವದಿಲ್ಲ. ಆದರೆ ಮುಂದರಿದು ಹೋಗಿ ಜನರಲ್ಲಿ ಆ ತತ್ತ್ವಗಳನ್ನು ಹಬ್ಬಿಸುವದು ಅಗತ್ಯವಿದೆ" ಎಂಬದಿತ್ತು. ಇವರ ತರುವಾಯದಲ್ಲಿ ಆದ ವಿಜಯನಗರದ ಸಾಮ್ರಾಜ್ಯದಮೇಲೆಯೂ ಆಗಿನ ಕಾಲದ ಬಂಗಾಲದಮೇಲೆಯೂ, ಇವರ ಪ್ರಗತಿಪರವಾದ ತತ್ತ್ವವೇ ತನ್ನ ವರ್ಚಸ್ಸನ್ನು (Influence) ಕೂಡಿಸಿತ್ತು. ಈ ತತ್ತ್ವಗಳ ಬೆಳಕು ಜನರಿಗೆ ಹೊಳೆದದ್ದರಿಂದಲೇ ಆಚಾರ್ಯರು ವರಂಗಲ್ಲಿನ ಕಾಕತೀಯವಂಶದ ಮಹಾರಾಣಿಯಿಂದ ಮಾನಹೊಂದಿದರು. ಈ ಮಹಾರಾಣಿಯೆಂದರೆ, ಹಿಂದುಸ್ಥಾನದಲ್ಲಿ ಆಳಿ ಹೆಸರುಪಡೆದವರಲ್ಲಿ ಒಬ್ಬಳಾದ ರುದ್ರಾಂಬೆಯೇ ಆಗಿರಬೇಕು.

ಆಚಾರ್ಯರ ಕಾಲನಿರ್ಣಯದ ಸಲುವಾಗಿ ಇಲ್ಲಿ ಒಂದು ಮಾತನ್ನು ಹೇಳುವದು ಅವಶ್ಯವದೆ. ಇವರು ೧೩ನೇ ಶತಮಾನದ ಕೊನೆಗೆ ಇದ್ದರೆಂದು ಕೆಲವರ ಮತ. ಆದರೆ "ಮಧ್ವಾಚಾರ್ಯರೂ, ಅವರ ಚರಿತ್ರೆಯೂ ಮತ್ತು ಅವರ ತತ್ತ್ವಗಳೂ (Sri Madhava, his life & teachings) ಎಂಬ ಗ್ರಂಥವನ್ನು ಬರೆದ ಶ್ರೀ. ಸಿ. ಎನ್. ಪದ್ಮನಾಭಾಚಾರ್ಯರು, ಈವರೆಗೂ ಬೈಲಿಗೆ ಬರದ ಕೆಲವು ಹೊಸ ಕಾರಣಗಳನ್ನು ಕೊಟ್ಟು, ಆಚಾರ್ಯರು ೧೨೩೮–೧೩೧೭ (ಕ್ರಿ. ಶ.) ರವರೆಗೆ ಇದ್ದರೆಂದು ಸಿದ್ಧಪಡಿಸಿದ್ದಾರೆ. ಈ ಮಾತು ನಮಗೆ ಇಲ್ಲಿ ಬೇಕಾಗದಿದ್ದರೂ ಬಂಗಾಲದ ಪಯಣವನ್ನು ಸಿದ್ಧಪಡಿಸಲಿಕ್ಕೆ ಇದು ನೆರವಾಗುವದೆಂಬದನ್ನು ಬೇರೆ ಹೇಳಬೇಕಾಗಿಲ್ಲ.

ಆಚಾರ್ಯರ ಬಂಗಾಲದ ಪಯಣವನ್ನು ಮುಸಲ್ಮಾನ ಇತಿಹಾಸಕಾರರ ಗ್ರಂಥಗಳ ಆಧಾರಗಳಿಂದಲೂ (ಉದಾ:- ಝೀಯಾಉದ್ದೀನ ಬಾರ್ನಿಯ "ತರೀಖ-ಇ-ಫಿರೋಜಶಾಹಿ") ಆಚಾರ್ಯರ ಚರಿತ್ರೆಯನ್ನೂ ಅವರ ಚಟುವಟಿಕೆಗಳನ್ನೂ ಬಣ್ಣಿಸುವ "ಮಧ್ವವಿಜಯ"ವೆಂಬ ಗ್ರಂಥದ ಆಧಾರದಲೂ ನಿರ್ಣಯಿಸಬಹುದು.

ಆಚಾರ್ಯರು ಉತ್ತರಹಿಂದುಸ್ಥಾನಕ್ಕೆ ಬೇರೆಬೇರೆ ಪ್ರಸಂಗಗಳಲ್ಲಿ ೨ ಸಾರೆ ಪಯಣಮಾಡಿದ್ದರು. ಸರಾಸರಿ ಕ್ರಿ. ಶ. ೧೨೬೨ರಲ್ಲಿ ಅವರು ಬದರಿಯ ಪಯಣವನ್ನು ಮುಗಿಸಿ ತಿರುಗಿ ಬಂದಿದ್ದರೆಂಬದು ಮಧ್ವವಿಜಯ ಮತ್ತು ಜಯತೀರ್ಥವಿಜಯವೆಂಬ ಗ್ರಂಥಗಳಿಂದ ಗೊತ್ತಾಗುತ್ತದೆ. ವೈಷ್ಣವಮತ (ದ್ವೈತ) ಪ್ರಸಾರಕರ ಈ ಮೊದಲಿನ ಪಯಣವು ನಮ್ಮ ವಿಷಯಕ್ಕೆ ಹೊರಗಿನದು.

ಆಚಾರ್ಯರ ಬದರಿಯ ೨ನೇ ಪಯಣವು ಕ್ರಿ. ಶ. ೧೩... ಕ್ಕಿಂತ ಮೊದಲೇ ಆರಂಭವಾಗಿತ್ತೆಂಬದು ನಂಬುವ ಸಂಗತಿ. ದೇವಗಿರಿಯಲ್ಲಿ (ನಿಜಾಮನ ರಾಜ್ಯದ ಮೇರೆಯಲ್ಲಿರುವ) ೧೨... ೧೨೭೧ (ಕ್ರಿ. ಶ.)ರ ವರೆಗೆ ಆಳಿದ ಮಹಾದೇವರಾಯನ (ರಾಮದೇವರಾಯನ ತಂದೆ) ರಾಜ್ಯದ ಮೇರೆಯನ್ನು ದಾಟಿ ... ಆಚಾರ್ಯರು ಪಯಣಮಾಡುತ್ತ ಗಂಗಾತಟಾಕಕ್ಕೆ ಬಂದರು

ಮುಟ್ಟಿದರು. ಆಗ ಅಂದರೆ ೧೩೬೬ರಲ್ಲಿ ಉತ್ತರದಲ್ಲಿ ಅನೇಕಾನೇಕ ಕಾಳಗಗಳು ನಡೆದಿದ್ದವೆಂದು ಮಧ್ವವಿಜಯಕಾರರ ಮತ. "ಹಿಂದುಸ್ಥಾನದ ಇತಿಹಾಸ ಸಂಪುಟ ೧"ರ ಕರ್ತರಾದ ಅಲೆಗ್ಝಾಂಡರ ಡೋ ಸಾಹೇಬರು ತಮ್ಮ ಪುಸ್ತಕದಲ್ಲಿ "ಗಂಗಾ ಯಮುನಾ ನದಿಗಳ ನಡುವಿನ ಪ್ರದೇಶದಲ್ಲಿ ಎದ್ದ ಬಂಡಾಯಗಳನ್ನು ಮುರಿಬಡಿಯಲು, ಸುಲ್ತಾನ ಘೀಯಾಸುದ್ದೀನ ಬಲ್ಬನ್ನನು ತನ್ನ ದಂಡನ್ನು ಕಳಿಸಿದ್ದನೆಂದು" ಅಂದಿದ್ದಾರೆ. ಶ್ರೀ. ಬಿ. ವೆಂಕೋಬರಾಯರು ತಮ್ಮ "ವ್ಯಾಸಯೋಗಿಚರಿತಂ" ಎಂಬ ಗ್ರಂಥದಲ್ಲಿ ಹೇಳುವಂತೆ "ಆಚಾರ್ಯರು ಮಹಾರಾಷ್ಟ್ರವನ್ನು (ಈಗಿನ ಮಹಾರಾಷ್ಟ್ರವಲ್ಲ; ಮಹಾರಾಷ್ಟ್ರವೆಂದರೆ ದೊಡ್ಡ ನಾಡೆಂಬ ಅರ್ಥ) ೧೩೬೬ನೇ ಇಸ್ವಿಯಲ್ಲಿ ದಾಟಿದರು. ಸುಲ್ತಾನನು ಅವರನ್ನು ಆದರಪೂರ್ವಕವಾಗಿ ಸತ್ಕರಿಸಿದನು. ಆಮೇಲೆ ಅವರು ಗಂಗೆಯನ್ನು ದಾಟಿ ಬದರಿಯನ್ನು ಸೇರಿದರು."

ಆಚಾರ್ಯರು ಬದರಿಯಿಂದ ತಿರುಗಿ ಬರುವಾಗ ಗಂಗೆಯನ್ನು ಮತ್ತೆ ದಾಟಬೇಕಾಯಿತು. ಆಗ ಒಂದು ಸಂಗತಿಯೊದಗಿತು. ಇದು ಧಾರ್ಮಿಕ ಮತ್ತು ರಾಜಕೀಯ ದೃಷ್ಟಿಯಿಂದ ಮಹತ್ತ್ವದ್ದಾಗಿದೆ. ಆಚಾರ್ಯರು ಗಂಗೆಯನ್ನು ದಾಟಿದ ಕಾಲವು ಸು. ೧೩೪೦–೪೧ ಆಗಿರಬೇಕು. ಆಗ ಬಂಗಾಲದ ಸರ್ವಾಧಿಕಾರಿಯಾಗಿದ್ದ (Governor) ಮುಘೀಸುದ್ದೀನ ತೋಘ್ರುಲ್‌ಖಾನನು ದಿಲ್ಲಿಯ ಸುಲ್ತಾನನ ಅಧಿಕಾರವನ್ನು ಒಪ್ಪದೆ ಸ್ವತಂತ್ರನಾದ್ದರಿಂದ ಸುಲ್ತಾನಘಿಯಾಸುದ್ದಿನ್ ಬಲ್ಬನ್ನನು ಅವನ ಮೇಲೆ ದಂಡೆತ್ತಿ ಹೋಗಿದ್ದನು. ಸುಲ್ತಾನನು ಬಂಗಾಲವನ್ನು ಮುಟ್ಟಿದ ಕೂಡಲೆ ಸುವರ್ಣಗ್ರಾಮದ ಅರಸನಾದ ದನುಜರಾಯನ ಕೂಡ ಒಪ್ಪಂದ ಮಾಡಿಕೊಂಡನು. ಇದರಿಂದ ತೋಘ್ರುಲ್‌ಖಾನನು ಆ ಹಾದಿಯಿಂದ ಪಾರಾಗುವದನ್ನು ನಿಲ್ಲಿಸಿದಂತಾಯಿತು. (ಆರ್. ಡಿ. ಬ್ಯಾನರ್ಜಿ "ಬಾಂಗ್ಲಾರ ಇತಿಹಾಸ" ಸಂಪುಟ ೨). ದನುಜರಾಯನು ಬಲಿಷ್ಠನಾದ ಅರಸನಾಗಿರಬೇಕೆಂಬುದು ಸಹಜವದೆ. ಮತ್ತು ಇವನ ಹಡಗುಪಡೆಯು ಎಷ್ಟೋ ಮಟ್ಟಿಗೆ ನೆಟ್ಟಗಿದ್ದದರಿಂದ ತೋಘ್ರುಲ್‌ಖಾನನು ನೀರಿನ ಹಾದಿಯಿಂದ ಓಡಿಹೋಗದಂತೆ ಮಾಡಲು ಸುಲ್ತಾನನು ದನುಜರಾಯನ ನೆರವನ್ನು ಗಟ್ಟಿ ಮಾಡಿಕೊಂಡನು.

ಈಗ ನಾವು ನಮ್ಮ ವಾದದ ಮುಖ್ಯ ಮಾತಿಗೆ ಬಂದು ಮುಟ್ಟಿದೆವು. ದಕ್ಷಿಣ ದೇಶದಿಂದ ಬಂದ ಈ ವೈಷ್ಣವ ಯತಿಯನ್ನು ಸತ್ಕರಿಸಿದವನು ದನುಜರಾಯನೇ ಎಂದು ಕೆಲವೆಡೆಯಲ್ಲಿ ಹೇಳಿದ್ದು ಕಂಡುಬರುತ್ತದೆ. ಶ್ರೀ. ಬಿ. ವೆಂಕೋಬರಾಯರು ಮೇಲೆ ಹೇಳಿದ ತಮ್ಮ ಗ್ರಂಥದಲ್ಲಿ "ಶಿಷ್ಯರು ಸಹಿತವಾಗಿ ಮಧ್ವಾಚಾರ್ಯರಿಗೆ ಗಂಗೆಯನ್ನು ದಾಟಲಿಕ್ಕೆ ನಾವುಗಳನ್ನು ದೊರಕಿಸಿಕೊಟ್ಟು ನೆರವಾದವನು ದನುಜರಾಯನೇ ಎಂದು ನಂಬಲು ಕಾರಣವದೆ. ಕೆಳಗೆ ಕೊಟ್ಟ ಮಧ್ವ ವಿಜಯದ ೧೧ನೇ ಸರ್ಗದಲ್ಲಿಯ ೩೦ನೆಯ ಶ್ಲೋಕದಲ್ಲಿ ಉಲ್ಲೇಖಿತನಾದವನು ಹಿಂದೂ ಅರಸನಾಗಿರಬೇಕಲ್ಲದೆ ಮುಸಲ್ಮಾನನಾಗಿರಲಾರನು.

पदं पशोर्वा विनतातनूजः ।
तीर्त्वा नदीं तावददीनसत्त्वः ॥
अनार्दवासाः सकुतूहलार्दैः ।
नृदेवभूदेवपदैर्ववंदे ॥

ಅರ್ಥ :—ಆಚಾರ್ಯರು ಗರುಡನಂತೆ ಆ ನದಿಯನ್ನು (ಗಂಗಾ) ಆಕಳ ಖುರದಷ್ಟು ಅಗಲವಿರುವದೋ ಎಂಬಂತೆ ದಾಟಿದರು. ಅವರ ಸತ್ತ್ವವೇನು ಕಡಿಮೆಯಾಗಲಿಲ್ಲ. ಈಚೆಯ ದಂಡೆಯನ್ನು ಮುಟ್ಟಿದ ಮೇಲೆ ಅವರ ಅರಿವೆಗಳು ತೊಯ್ದಿಲ್ಲವೆಂಬದನ್ನು ನೋಡಿ ಆಚೆಯ ದಂಡೆಯಮೇಲಿದ್ದ ಅರಸನು ಬ್ರಾಹ್ಮಣರನ್ನು ಮುಂದುಮಾಡಿಕೊಂಡು ಕುತೂಹಲದಿಂದ ಆಚಾರ್ಯರನ್ನು ನಮಸ್ಕರಿಸಿದನು.

ಶ್ರೀಮಧ್ವಾಚಾರ್ಯರನ್ನು ಕಂಡವನು ದನುಜರಾಯನೇ ಆಗಿದ್ದರೆ, ಆಚಾರ್ಯರು ಬಂಗಾಲದ ಪಯಣವನ್ನು ಬೆಳೆಸಿದ್ದರು ಎಂಬ ಅನುಮಾನವು ತೆಗೆಯಲ್ಪಟ್ಟಿದೆ.

ಶ್ರೀಮಧ್ವಾಚಾರ್ಯರಿಂದ ಹೊರಟ ವೈಷ್ಣವ (ದ್ವೈತ) ಪಂಥದಿಂದ ಬಂಗಾಲದ ನವೀನವೈಷ್ಣವ ಪಂಥವು ಹುಟ್ಟಿತೆಂಬ ಮಾತನ್ನೂ ಮತ್ತು ಅವರ ಕಾಲದ ವೈಷ್ಣವವಿಭೂತಿಗಳು ಉದಾ :—ಭಕ್ತಿರತ್ನಾವಲಿಯನ್ನು ಬರೆದ ವಿಷ್ಣುಪುರಿಯು, ವೇದಾಂತಿಯಾದ (Mystic) ಮಾಧವೇಂದ್ರಪುರಿಯು, ಮತ್ತು ವಿಷ್ಣುಸ್ಮೃತಿಕಾರನ ಗುರುಗಳೂ (ಕವಿಕರ್ಣಪೂರನ "ಗೌರಗಣೋದ್ದೇಶದೀಪಿಕಾ" ಗ್ರಂಥದಲ್ಲಿ ಇದು ಬಂದಿದೆ) ವಿಜಯನಗರದ ರಾಯರ ಗುರುಗಳೂ ಆದ ವ್ಯಾಸರಾಯರೂ ಬಂಗಾಲಕ್ಕೆ ಸಂಬಂಧಿಸಿದ್ದರೆಂಬಮಾತನ್ನು ನೆನಪಿನಲ್ಲಿಟ್ಟರೆ ಆಚಾರ್ಯರ ಈ ಪಯಣದ ಮೇಲ್ಮೆಯು ಮಿಗಿಲಾಗುವದು; ಮತ್ತು ಈ ಮಾತನ್ನು ನಾವು ಬೇರೆ ಆಧಾರಗಳಿಂದ ಕುಂದಿಲ್ಲ

ದಂತೆ ನಿರ್ಧರಿಸಿದರೆ ಬಂಗಾಲದ ವೈಷ್ಣವಪಂಥಕ್ಕೆ ರೂಪು ಗೊಟ್ಟ ಈ ವೈಷ್ಣವಪಂಥದ ವರ್ಚಸ್ಸನ್ನು ಗೊತ್ತುಮಾಡಲಿಕ್ಕೆ ಶಕ್ತರಾಗುವೆವು.

ಟೀಪು—– ಈ ಲೇಖವನ್ನು ಹಿಂದುಸ್ಥಾನದ ಐತಿಹಾಸಿಕ ತ್ರೈಮಾ ಸಂಪುಟ ೩ ೧೯೨೭ರಲ್ಲಿ ಶ್ರೀ. ರಮೇಶಬಸು ಇವರು ಬರೆದಿದ್ದಾರೆ. ನನ್ನ ವಂದನೆಗಳು. —ಲೇ

---

# ಬಿಡಿನುಡಿಗಳು

## ಬಾಂಬು ಹಾರಿತು

ನ್ಯಾಯಸರಾಯರ ರೇಲು ಬಂಡಿಯಮೇಲೆ ಬಾಂಬು ಹಾರಿದ ನಂತರ, ಮುಖಂಡರ ಮತ್ತು ಅವರ ನಡುವೆ ಆಗ ಬೇಕಾಗಿದ್ದ ಮಂತ್ರಾಲೋಚನೆಯು ಲೊಲ್ಲೊಟ್ಟೆಯು ಗಂಟೆ ಯನ್ನು ಬಾರಿಸಿತು. ಅದೂವರೆಗೂ ಸರಕಾರದವರಲ್ಲಿ ವಿವೇಕ ವಿರಬಹುದು ಎಂಬ ಆಶೆಯಿತ್ತು. ಜನರಲ್ಲಿ ತಾಳ್ಮೆಯಿರಬೇಕು ಎಂಬ ಅಪೇಕ್ಷೆಯಿತ್ತು. ಆದರೇನು ? ಜನರು ಸ್ಥೈರಣೆಗೆಟ್ಟರು. 'Within if possible without if necessary' ಸಾಧ್ಯವಿದ್ದರೆ ಆಂಗ್ಲ ಸಾಮ್ರಾಜದಲ್ಲಿಯೆ, ಅಗತ್ಯ ಬಿದ್ದರೆ ಆಂಗ್ಲ ಸಾಮ್ರಾಜ್ಯಕ್ಕೆ ಹೊರತು ಎಂದು ಅತಿ ನಿಗ್ರಹ ದಿಂದಲೂ ಅತೀವ ವಿವೇಕದಿಂದಲೂ ಅತ್ಯಂತ ಗೌರವದಿಂದಲೂ ಆಡಿದ ಪ್ರಶಾಂತ ಗಂಭೀರ ಮೂರ್ತಿಗಳಾದ ಮಹಾತ್ಮ ಗಾಂಧಿಯವರೂ 'ಆಗಲಿ, ಸ್ವಾತಂತ್ರ್ಯವೇ ನಮ್ಮ ಗುರಿ— ಸಾಮ್ರಾಜ್ಯ ಹೋತಾಗದೆ ಗತಿಯಿಲ್ಲ. ಆಳುವವರ ಚಿತ್ತಕ್ಕೆ ಇದೇ ಸರಿಯಾಗಿ ತೋರುತ್ತಿದ್ದರೆ, ಆಳುಗಳಾದ ನಮಗೂ ಇದೇ ಸರಿ'—ಎಂದು ಜಂಭವಲ್ಲದ ನಿರ್ಧಾರದಿಂದ ರಾಷ್ಟ್ರೀಯ ಮಹಾ ಸಭೆಯಲ್ಲಿ ಆಡಿದರು, ಹೇಳಿದರು, ಸೂಚಿಸಿದರು. ಜನರೂ ಕಂಗೆಟ್ಟು ಮುಂಗೆಟ್ಟು ಅನುಮೋದಿಸಿದರು. ಪೋಷಿ ಸಿದರು, ನಿರ್ಣಯಿಸಿದರು. 'ಸ್ವರಾಜ್ಯ'ವು ಇದುವರೆಗೆ ರಾಷ್ಟ್ರದ ಗುರಿಯಾಗಿತ್ತು. ಸಾಮಂತ ಸ್ವರಾಜ್ಯವು ಅದಕ್ಕೆ ಸಮ್ಮತ ವಿರದಿರಲಿಲ್ಲ. ಸ್ವರಾಜ್ಯವೆಂಬ ನಿರಾಕಾರ ಬ್ರಹ್ಮನಿಗೆ ಏನು ರೂಪಗೊಟ್ಟರೂ ಸಾಗುವಂತಿತ್ತು. ಸುಪ್ತ ಜ್ವಾಲಾಮುಖಿಯು ಬಡಿದೆದ್ದಂತೆ ಸ್ವರಾಜ್ಯದ ಹೊಟ್ಟೆಯೊಡೆದು ಇಂದು 'ಸ್ವಾತಂತ್ರ್ಯ ಸ್ವಾಧೀನ' ಎಂಬ ಗರ್ಜನೆಯು ಕೇಳಬರುತ್ತಿದೆ. ಸಂತೆಯ ಜನ ರಲ್ಲಿ ಬಾಂಬುಗುಂಡು ಹಾರಿದಂತಾಗಿದೆ. ಕೆಲವರು ಹೌಹಾರಿ ಓಡುತ್ತಿದ್ದಾರೆ. ಕೆಲವರು ದೆಂಗು ಬಿಡದು ನೋಡುತ್ತಿದ್ದಾರೆ. ಹಾರುವ ಬಾಂಬು ಹಾರಿಬಿಟ್ಟಿತು. ಯಾರಿಗೆ ತಾಕಿತು! ತಾಕಿತು ? ಇದು ಪಂಚನಾಮೆಯ ಲೆಕ್ಕದಲ್ಲಿ ತಿಳಿಯ ಮಾತು. ನೀರುಮೋಡದಲ್ಲಿಯೂ ಸಿಡಿಲು ಅಡಗಿ ಇರು ಮಹಾತ್ಮರ ಸ್ಥೈರಣೆಗೂ ಮೇರೆಯಿದೆ. ಜನರ ತಾಳ್ಮೆ ಸೀಮೆಯಿದೆ. ಸತ್ತ್ವಪರೀಕ್ಷೆಗೂ ತೂಕವಿದೆ. ಆದರೆ ಸ ದಲ್ಲಿ ಮಾಡಬೇಕಾದ ಉಪಚಾರವನ್ನು ಅಕಾಲದಲ್ಲಿ ಮಾ ಆಗುವ ಅನಾಹುತಕ್ಕೆ ಅಧಿಕಾರಿಗಳ ಅವಿವೇಕವೇ ಕಾ ಲ್ಲದೆ ಮತ್ತೇನು ? ಸ್ವಾತಂತ್ರ್ಯದ ಬಾಂಬು ಹಾರಿತು ಹೌ ಆದರೆ ಈ ಇರುಕಿಗೆ ತಂದವರಾರು ?

---

## ಎಲ್ಲಾದರೂ ಸರಿಯೆ ಎಲ್ಲಾದರೂ ಸರಿಯೆ ಈ ಲೋಕ ಬೇಡ

ಸ್ವಾತಂತ್ರ್ಯದ ಆಶೆಯು ಎಲ್ಲರಿಗೂ ಇದ್ದದ್ದೇ. ಜಗಕ್ಕೆ ಹೊರತಲ್ಲ. ಆ ಇಚ್ಛೆಯು ಐತಿಹಾಸಿಕ ದೃಷ್ಟಿಯಿ ನೋಡಿದರೂ ತೀರ ಸ್ವಾಭಾವಿಕವಾದದ್ದು, ಸಹಜವಾ 'ಹುಲಿರಾಯಾ' ಎಂದರೂ, ಹುಲಿಯು 'ತಿಂದೇ ಬಿಡು ಎನ್ನುತ್ತಿದ್ದರೆ 'ಹುಲಿಯಾಗಿಲಿಯಾ' ಎಂದೆಂದುಕೊಂಡು ನೈಜಭಾವನೆಯನ್ನಾದರೂ ಪ್ರಕಟಿಸುವಾ ಎಂದು ಹು ಬಾಯಿಗೆ ಸಿಕ್ಕವನು ಯೋಚಿಸುವಂತೆ ನಮ್ಮ ರಾಷ್ಟ್ರದ ಯಾಗಿದೆ.

ದೇಶವು ಆಸೇತುಹಿಮಾಚಲ ! ಜನಸಂಖ್ಯೆ ಮೂ ಮೂರು ಕೋಟಿ! ಜಾತಿ, ಮತ, ಪಂಥ, ಪಂಗಡ, ಬಣ್ಣ ಮಾತು, ರೀತಿ, ನಡತೆ, ಅನಂತ! ಕೈಯು 'ಶಸ್ತ್ರ' ಎಂಬ ಹೆ ಕೂಡ ಪಾತ್ರವಾಗುವ ಯಾವ ವಸ್ತುವೂ ಇಲ್ಲದಂತೆ ಬು ಮೈಯು ಬಡತನ, ದೈನ್ಯ, ಚಿಂತೆ, ರೋಗಾದಿಗಳಿಂದ ಬ ಮನಸು ಅಜ್ಞಾನ, ದುರ್ಬುದ್ಧಿ, ಹೇಡಿತನ, ಕ್ಷುದ್ರ

ಅವಿಚಾರ, ಅವಿವೇಕಗಳಿಂದ ಒಡಕು! ತಲೆಯನೇರಿ ಆಳುವವರು, ಸರ್ವಸಾಕ್ಷಿಗಳು, ಸರ್ವಾಂತರ್ಯಾಮಿಗಳು, ಸರ್ವತಂತ್ರ ಸ್ವತಂತ್ರರು, ಸರ್ವಜ್ಞರು ಎನ್ನುವಂತಹ ಪ್ರಭುತ್ವದಿಂದೊಡಗೂಡಿದ ಪ್ರಭಾವಶಾಲಿಗಳು! ಹೀಗಿರಲಾಗಿ ನಮ್ಮಂತಹ ದೇಶವೂ ನಮ್ಮ ಜನರೂ ಸ್ವಾತಂತ್ರ್ಯವನ್ನು ಬೇಡುತ್ತಿರುವರು; ಅದನ್ನು ಗುರಿಯಾಗಿಟ್ಟುಕೊಂಡಿರುವರು ಎಂದು ಹೇಳುವದು ಯಾವ ಕಟ್ಟು ಕತೆಗಾರನ ಕಾಲ್ಪಿಚ್ಛಿದ ಕಲ್ಪನೆಗೂ ನಿಲುಕದ ಮಾತೆಂದು ತೋರಬಹುದು. ಅಸಂಭವ, ಅಶಕ್ಯ, ಹುಚ್ಚು, ಮರುಳು! ಎಂದು ಆಡುವರಾಡಬಹುದು. ಆದರೆ ಏನು? ನಮ್ಮ ರಾಷ್ಟ್ರವು ಸ್ವಾತಂತ್ರ್ಯದ ಗುಡುಗು ಹಾಕಿದ ಮಾತು ಸುಳ್ಳಲ್ಲ.

ನಮ್ಮ ದೌರ್ಬಲ್ಯದ ಕಲ್ಪನೆಯು ನಮಗೆ ಇಲ್ಲದೆ ಇಲ್ಲ. ಸ್ವಾತಂತ್ರ್ಯವನ್ನು ದೊರಕಿಸುವದು ಸುಲಿದ ಬಾಳೆಯ ಹಣ್ಣು ನುಂಗಿದಂತಲ್ಲ ಎಂಬದು ನಮಗೆ ಗೊತ್ತಿದೆ. ಗೇಣು ಹೊಲಕ್ಕಾಗಿ ಮನೆಮಾರು ಹಾಳಾಗುವವರೆಗೆ ಹೊಡೆದಾಡುವವರನ್ನು ನಾವು ದಿನಂಪ್ರತಿಯೂ ನೋಡುತ್ತಿರಲಿಕ್ಕೆ ಪ್ರತಿಖಂಡದಂತೆ ಇರುವ ಸಮುದ್ರವಲಯಾಂಕಿತವಾದ ಭರತಖಂಡವನ್ನು ಆಳುವವರು ಸುಲಭವಾಗಿ ಬಿಡಲಾರರೆಂಬುದೂ ಕೂಡ ತಿಳಿಯಲಾರದಷ್ಟು ನಮ್ಮವರು ಮೂಢರಿಲ್ಲ. ಆದರೆ ಮಾಡುವದೇನು? ಭಾರತದಸ್ವಾತಂತ್ರ್ಯವು ಭಾರತೀಯರ ಜೀವಜೀವಾಳದ ಮಾತಾಗಿದೆ. ಹಿಂದುಸ್ಥಾನವು ಇಂಗ್ಲೀಷರ ಕೈಬಿಟ್ಟರೆ ಅವರ ಸಿರಿವಂತಿಕೆಗೆ ಕೊರತೆಯಾಗಬಹುದು. ಭಾರತವು ಭಾರತೀಯರ ಸ್ವಾಧೀನದಲ್ಲುಳಿಯದಿದ್ದರೆ ಅವರು ಗತಪ್ರಾಣರಾಗುವ ಕಾಲಬರುತ್ತಲಿದೆ. ಇದೇ ಇಂದಿನ ವೀರಸಂಗ್ರಾಮದ ರಹಸ್ಯವು. ಎಂಜಲಕ್ಕೆ ಕೈಯೊಡ್ಡಿ ಕಾಯ್ದು ಕಾಯ್ದು ಬೇಸತ್ತು ಮೋರೆ ಒಣಗಿಸಿಕೊಳ್ಳುವದಕ್ಕಿಂತ, ಒಳ್ಳೆಕೂಳಿನ ಇಚ್ಛೆಯನ್ನು (ಅದು ಸಿಕ್ಕಲಿ ಸಿಕ್ಕದಿರಲಿ) ಆಡಿ ತೋರಿಸುವದೂ ಕೇಡೇ? ಹೀಗೆ ನಮ್ಮ ಜನರು ಲೆಕ್ಕ ಹಾಕುತಲಿದ್ದಾರೆ.

ದಿನದಿನಕ್ಕೆ ಬೆಳೆಯುವ ಬಡತನ, ಕಾಲಕಾಲಕ್ಕೆ ಹೆಚ್ಚಾಗುತ್ತಲಿರುವ ಒಡಕು, ಯಥಾಪ್ರಕಾರವಾದ ನಿಷ್ಕರುಣೆ, ನಿರ್ದಯತೆ, ಔದಾಸೀನ್ಯ ಸುತ್ತುಮುತ್ತೂ ಕಂಡು, ಜನರಿಗೆ ಎಲ್ಲಾದರೂ ಸರಿಯೆ ಎಲ್ಲಾದರೂ ಸರಿಯೆ ಸಾಮ್ರಾಜ್ಯ ಬೇಡ ಎಂದು ಎನಿಸುತ್ತಲಿದೆ. 'ಅಯ್ಯೋ ಸಂಕಟ!' ಎಂದು ಕೂಗಿಕೊಳ್ಳುವ ರೋಗಿಯ ಹೊಟ್ಟೆಯಲ್ಲಿ ಔಷಧವನ್ನು ಹಾಕಬೇಕಲ್ಲದೆ ಬಾಯಲ್ಲಿ ಚೆಂಡು ತುರುಕಿ ಪ್ರಯೋಜನವಿಲ್ಲೆಂಬಂತೆ– ಇಂಥ ದೀನ, ದುರ್ಬಲರೂ ಸ್ವಾತಂತ್ರ್ಯ ಎಂದು ಕೂಗಿಕೊಳ್ಳಬೇಕಾದರೆ ಅವರ ಹೊಟ್ಟೆಯಲ್ಲಿ ಅಂತಹ ಸಂಕಟವಾಗುತ್ತಿರಬೇಕು ಎಂದು ಮುಂತಿಳಿದು ಸಮಾಧಾನ ಶಾಂತಿ ತೃಪ್ತಿಯುಂಟಾಗುವ ಯೋಚನೆಯನ್ನು ಮಾಡಬೇಕಾಗಿದೆಯೆ ವಿನಾ ಬಾಯ್ಚೆಂಡು ಹಾಕುವ ವೃಥಾಪ್ರಯತ್ನದಲ್ಲಿ ಬಟ್ಟು ಕಡಿಮೆಸಿಕೊಳ್ಳುವ ವ್ಯಥೆಗೆ ಗುರಿಯಾಗದಂತೆ ಅಧಿಕಾರಿಗಳು ವರ್ತಿಸಬೇಕೆಂಬುದನ್ನು ಇನ್ನಾದರೂ ಅವರು ತಿಳಿದರೆ ಒಳಿತು. ಅವರಿಗೂ ಒಳಿತು, ನಮಗೂ ಒಳಿತು.

---

## ಗಾಂಧೀ ಟೊಪ್ಪಿಗೆ

ಸ್ವಾತಂತ್ರ್ಯವು ಗುರಿಯಾಯಿತು. ಅಹಿಂಸೆಯು ದೀಕ್ಷೆಯಾಯಿತು. ಕರತೆರಿಗೆಗಳನ್ನು ಕೊಡದಿರುವದು ಸಾಧನೆಯಾಯಿತು. ಕಾರ್ಯಕರ್ತರನ್ನು ದೊರಕಿಸಲು ಕೌನ್ಸಿಲ್ಲು ಬಹಿಷ್ಕಾರವು ಸಾಧನವಾಯಿತು. ಮಹಾತ್ಮರು, ಮೋತೀಲಾಲ ಮತ್ತು ಜವಾಹಿರಲಾಲ ಇವರು ಧುರೀಣರಾದರು. ಹೀಗೆ ಈ ಹೊಸ ಗಾಂಧೀಟೊಪ್ಪಿಗೆಯು ಸಿದ್ಧವಾಗಿದೆ. ಆದರೆ ಅದನ್ನು ಹಾಕಿಕೊಳ್ಳಲು ಅಸಹಕಾರದಲ್ಲಿ ನಾ ನೀ ಎಂದು ಮುಂದೆ ಬಂದವರೇ ಹಿಂಜರಿಯುತ್ತಿದ್ದಾರೆ. ಎಲ್ಲಿ ಮತ್ತೆ ಟೊಪ್ಪಿಗೆ ಬೀಳುವವೋ ಎಂದು ಹೆದರಿಕೆ. ಕೆಲವರಿಗೆ ಬರಿಯ ಸ್ವಾತಂತ್ರ್ಯವು ಸಪ್ಪಗಾಗಿ ಎನ್ನಿಸುವದು. 'ರಾಜ್ಯಕ್ರಾಂತಿ' ಎಂದು ಇವರ ಗರ್ಜನೆ! ಇಂಥವರಲ್ಲಿ ಸುಭಾಷ ಬೋಸ ಮತ್ತು ಶ್ರೀನಿವಾಸಯ್ಯಂಗಾರರು ಪ್ರಮುಖರು. ಸ್ವಾತಂತ್ರ್ಯವೆಂದಾಗಲಿ ಕ್ರಾಂತಿಯೆಂದಾಗಲಿ ಈಗಲೆ ಕೂಗಲು ಸಿದ್ಧವಿರದ ಸಾಮಂತ ಸಾಮ್ರಾಜ್ಯವಾದಿಗಳಾದ ಮಾಲವೀಯಾ ಪ್ರಮುಖರು ಈ ಟೊಪ್ಪಿಗೆಗೆ ತಲೆಬಾಗಿಸಲು ಸಿದ್ಧರಿಲ್ಲ. ಅಹಿಂಸೆಯ ದೀಕ್ಷೆಯನ್ನು ಸ್ವೀಕರಿಸಲು ಎಷ್ಟೋ ಜನರು ಸಿದ್ಧರಿಲ್ಲ. ಅವರು ಸ್ವತಃ ಹಿಂಸೆಮಾಡುವ ಶಕ್ತಿಯುಳ್ಳವರಾಗಲಿ ಮನಸ್ಸುಳ್ಳವರಾಗಿಯಾಗಲಿ ಇರುವರೆಂದಲ್ಲ. ಆದರೆ ಭರತಖಂಡದಂಥ ದೊಡ್ಡ ಪ್ರದೇಶದ ಸ್ವಾತಂತ್ರ್ಯವನ್ನು ಯುದ್ಧರಕ್ತಪಾತಗಳಿಲ್ಲದೆ ಯುದ್ಧಸನ್ನಾಹಪ್ರಚಂಡಸಾಮ್ರಾಜ್ಯದಿಂದ ದೊರಕಿಸುವೆನೆಂದು ತಿಳಿಯುವದೇ ಅವಿವೇಕದ ಮಾತು, ಹುಚ್ಚು ಮಾತು ಎಂದು ಅವರ ಅಭಿಪ್ರಾಯ; ಇತಿಹಾಸದನುಭವ. ಇನ್ನು ಕರತೆರಿಗೆಗಳನ್ನು ಕೊಡದಂತೆ ಜನರನ್ನು ಸಿದ್ಧಪಡಿಸುವದು ಸಾಮಾನ್ಯವಾದ ಮಾತಲ್ಲ. ಪೂರ್ವಸಾಧನೆ ಬೇಕು.

ಕೌನ್ಸಿಲ್ಲುಗಳಿಗೆ ಹೋಗುವವರಲ್ಲಿ ಈ ಶಕ್ತಿಯುಳ್ಳ ಅಥವಾ ಸಾಧನೆಯುಳ್ಳ ಜನರು ಇಲ್ಲೆಂದರೂಸಾಗುವದು. ಇನ್ನುಳಿಯಿತು ಕೌನ್ಸಿಲ್ ಬಹಿಷ್ಕಾರ, ಹೌದು–ಬಹಿಷ್ಕಾರ ಇಂಕಿ ಮಾಡುವ ದೇನು ಮುಂದೆ ? ತಮಗಂತೂ ಜನರ ಸಮುದಾಯಗಳನ್ನು ಸೈನ್ಯದ ಶಿಸ್ತಿನಿಂದ ಸಿದ್ಧಗೊಳಿಸುವ ಶಕ್ತಿಯಿಲ್ಲ. ಬರಿ ಮನೆ ಯಲ್ಲಿ ಕುಳಿತು ಮಾಡುವದೇನು ? ಎಂದು ಈ ಎಷ್ಟೋ ಜನರ ಲೆಕ್ಕ. ಅಂತೂ ಹೀಗಾಗಿ ಗುರಿಯಲ್ಲಿಯೂ, ದೀಕ್ಷೆಯಲ್ಲಿಯೂ, ಸಾಧನೆಯಲ್ಲಿಯೂ, ಸಾಧನವಲ್ಲಿಯೂ, ವಿಶ್ವಾಸವಿಲ್ಲದ ಜನ ರನ್ನು ರಾಷ್ಟ್ರೀಯ ಸಭೆಯ ಕಾರ್ಯಕಾರಿ ಮಂಡಲದ ಅಧಿ ಕಾರಸ್ಥಾನಗಳಲ್ಲಿ ಕಾಲೂರಿಗೊಡದದ್ದು ಸಾಧ್ಯ ಸಾಧನ ದೃಷ್ಟಿ ಯಿಂದ ಉಚಿತವಾಯಿತೆಂದು ಹೇಳಬಹುದಾದರೂ ಸ್ಥಾನಭ್ರಷ್ಟ ರಾದ ಈ ಜನರು ಗಾಂಧೀ ಟೊಪ್ಪಿಗೆಯನ್ನು ಸರಿಸಿ ಮುಂದೇನು ಮಾಡಬೇಕೆಂದು ತಲೆತುರಿಸಿಕೊಳ್ಳುತ್ತಿದ್ದಾರೆ.

---

## ಒಕ್ಕಟ್ಟು ಬಿಕ್ಕಟ್ಟಾಯಿತು

ನಮ್ಮ ದೇಶವು ಮತಪಂಗಡಗಳಿಗೆ ಹೆಸರಾದ ನಾಡು. ಧರ್ಮದಲ್ಲಿ ಹೇಗೊ ಹಾಗೆ ರಾಜಕಾರ್ಯದಲ್ಲಿ ಏಕೆ ಬೇಡ ? ಒಕ್ಕಟ್ಟು ಏಕಮುಖತೆ, United Demand ಎಂದೆಲ್ಲ ಕೂಗಿದ್ದಾಯಿತು; ದುಡಿದದ್ದೂ ಆಯಿತು. ಸ್ವಾತಂತ್ರ್ಯದ ಉಚ್ಚಾರಮಾತ್ರದಿಂದ ನಮ್ಮ ಪಾರತಂತ್ರ್ಯದ ಚಿತ್ರವು ಮಾತ್ರ ಮತ್ತಿಷ್ಟು ಎದ್ದು ಕಾಣುತ್ತಲಿದೆ. ಮತಕ್ಕೊಂದು ಮಾರ್ಗ, ಮಾರ್ಗಕ್ಕೊಂದು ಮತ, ಹೀಗಾಗಿದೆ ಎಲ್ಲ ಪಂಗಡಗಳಲ್ಲಿ. ಸನಿ ಯಕೆ ಬಂದ ಮಂದಪಕ್ಷದವರು ಮತ್ತೆ ಸರಿದುಹೋದರು. ದೂರ ಇದ್ದ ಮುಸಲ್ಮಾನರು ಸನಿಯಕೆ ಬರಲಿಲ್ಲ. (ನ್ಯಾಶ ನಲ್ ಮೊಸ್ಲೆಮರಲೀಗದ ಮಾತು ಸಣ್ಣದಾದ ಅಪವಾದ) ಕೂಡಿದ್ದವರಲ್ಲಿಯೂ ಬಿಡುಗಡೆಯಾಯಿತು. ನೆಹರೂ ವರ ದಿಯ ಮಾತು ಹಿಂದೆ ಬಿತ್ತು. ರಾವುಂಡ ಟೇಬಲ್ಲಿನ ಮಾತು ತೊಡಕಿನದಾಯಿತು. ರಾಷ್ಟ್ರೀಯ ಮಹಾಸಭೆಯ ದ್ವಾರಗಳು ಅರೆ ಇಕ್ಕಿದಂತಾದುವು. ದೇವರಿಗೆ ನೈವೇದ್ಯ ತೋರಿಸಿದಂತೆ ರಾಷ್ಟ್ರೀಯಸಭೆಯು ಗೊತ್ತುಗಳಿಗೆ ಮನ್ನಣೆ ದೊರೆಯುವ ಸಂದರ್ಭವುಂಟಾಯಿತು. ಎಂಥ ಭಿನ್ನಾಭಿಪ್ರಾಯದ ಜನರ ಲ್ಲಿಯು ಐದರ ವಿಶ್ವಾಸಗಳನ್ನು ಹುಟ್ಟಿಸುವ ಮಹಾತ್ಮನು ತನ್ನ ಸತ್ತ್ವಪರೀಕ್ಷೆಗಾಗಿ ತಾನೇ ನಿಂತಂತಾಯಿತು. ಆ ಮಹಾತ್ಮನ ಸತ್ತ್ವಪರೀಕ್ಷೆಯನ್ನು ಮಾಡುವ ಅರ್ಹತಾ ನೋಡುವ ಸತ್ತ್ವವು ಯಾರಲ್ಲಿಯೂ ಇಲ್ಲ ಇದು ನಿಜ. ಮಹಾತ್ಮರ ಸಿದ್ಧಿಯು ಸತ್ತ್ವದಲ್ಲಿರುವದು ಉಪಕರಣಗಳಲ್ಲ ಬೇಕಾದರೆ ಹೇಳಬಹುದು. ಆದರೆ ಒಕ್ಕಟ್ಟೊ ಬಿಕ್ಕಟ್ಟಾ ಹಾದಿಯೂ ಇಕ್ಕಟ್ಟಾಯಿತು ಇದೇನು ಸುಳ್ಳಲ್ಲ.

---

## ಸ್ವಾತಂತ್ರ್ಯದ ಕೂಗಿನ ಕೊನೆ

ಸ್ವಾತಂತ್ರ್ಯದ ಕೂಗು ಶುದ್ಧ ರಾಜದ್ರೋಹವೆಂದು ನಿಸಲಾಗಿದೆ ಎಂದೂ ಅದು ರಾಜಕಟ್ಟಳೆಗೆ ಹೊರತೆಂದೂ ಕೇಳುವ ಪ್ರಸಂಗವು ತೀವ್ರವೇ ಬರಬಹುದು. ಏನೋ ಗಳು ಅನನುಭವಿಗಳು ತಾವೇ ತಮ್ಮಷ್ಟಕ್ಕೆ ತಲೆತಿರುಕ ಕಿರಿಚಿಕೊಂಡದ್ದು ಇದು ಎಂದಾಗಿದ್ದರೆ ಅದಕ್ಕೆ ಎಂಥ ವೆಂದಿದ್ದರೂ ಯಾರೂ ಲೆಕ್ಕಿಸುತ್ತಿದ್ದಿಲ್ಲ. ಮಹಾತ್ಮರಂಥ ಕಿಗಳು, ಮೋತಿಲಾಲರಂಥ ಅನುಭವಿಗಳು, ರಾಷ್ಟ್ರದ ಪ್ರತಿನಿಧಿಗಳುಳ್ಳ ಮಹಾಸಭೆಯಲ್ಲಿ ವಿಚಾರಾಂತ್ಯದಲ್ಲಿ ನಿರ್ಣಯಿಸಿರುವರೆಂದ ಮೇಲೆ ಈ ಕೂಗು ಸುಮ್ಮನೆ ವಾಗುವ ಕೂಗಲ್ಲ. ಇದನ್ನು ನುಡಿವವರು ಆಡಿಮಾಡದ ಗಳೂ ಅಲ್ಲ. ಅದರ ಪ್ರಚಾರವನ್ನು ಅವರು ಮಾಡತಕ್ಕ ಅದಕ್ಕೆ ತಕ್ಕ ಆಚಾರಗಳನ್ನು ನಡೆಯಿಸತಕ್ಕವರೇ. ದವರೂ ಅದನ್ನು ಕಂಡೂಕಂಡು ಸುಮ್ಮನೆ ಕೂಡತಕ್ಕ ಹಿಡಿದರೆ ಓಡುವದು ಬಿಟ್ಟರೆ ಕಚ್ಚುವದು ಮಾಡಬೇಕೇನು ಮಂಟದಲ್ಲಿ ಅವರು ಬೀಳುವರು. ಸ್ವಾತಂತ್ರ್ಯದ ನಿರ್ಣ ಬಹುಮತದಿಂದ ಸ್ವೀಕೃತವಾದ ನಿರ್ಣಯವು. ಕಾಂಗ್ರೆಸ್ ಬೇರೆ ಬೇರೆ ರಾಜಕೀಯ ಪಂಗಡಗಳಲ್ಲಿ ಯಾವ ಮತ ದ್ದರೂ ಸ್ವಾತಂತ್ರ್ಯದ ಗುರಿಯು ಅಗ್ರಾಹ್ಯವಲ್ಲ. ಮಹಾಸಭೆಯನ್ನೆ ಕಟ್ಟಳೆಗೆ ಬಾಹ್ಯವಾದದ್ದೆಂದು ನಿರ್ಣ ವದು ನಮ್ಮ ಆಳರಸರಿಗೆ ನುಂಗಲುಬಾರದ ತುತ್ತು. ತ್ರ್ಯವು ಗುರಿಯೆಂಬವರನ್ನೆಲ್ಲ ಶಿಕ್ಷೆಗೆ ಗುರಿಮಾಡುತ್ತ ವದು ಗಾಳಿಯ ಮೊಟ್ಟೆಯನ್ನು ಕಟ್ಟಲು ಹವಣಿ ಅಂತೂ ಹಿಂದುಸ್ಥಾನ ಸರಕಾರದವರು ತಮ್ಮ ಬುದ್ಧಿ ಮಂದತೆಯಿಂದಲೂ ಗತಿಯ ಮಂದತೆಯಿಂದಲೂ ಸ್ವಾತಂತ್ರ್ಯದ ಮಾತಿಗೆ ಅನುವು ಮಾಡಿಕೊಟ್ಟಮೇಲೆ ಅಡಗಿಸುವದು ಅಷ್ಟು ಸುಲಭವಲ್ಲ. ಮಹಾತ್ಮರಂಥ ಟಿಳಕರಂಥ ಸಾಹಸಿಯ, ವಲ್ಲಭಭಾಯಿಯಂಥ ಪರಾಕ್ರ

ಉದಾಹರಣೆಯಿಂದ ಕಷ್ಟಸಹನೆಯಿಂದ ಸ್ವಾತಂತ್ರ್ಯದ ಮಾತು ಮನೆ ಮಾತು, ಮಕ್ಕಳಮಾತು, ಬಳಕೆಯ ಮಾತು ಆಗದೆ ಉಳಿಯಲಾರದು. ಸ್ವಾತಂತ್ರ್ಯವನ್ನು ಗಳಿಸುವದು ಈಗ ಎಷ್ಟೋ ಕಠಿಣವಿರಲಿ, ಅದರ ಉಚ್ಚಾರಣೆಯಲ್ಲಿಯ ಭಯವು ಮಾತ್ರ ಕಡ ಮೆಯಾಗದೆ ಇರಲಾರದು. ಏನಿಲ್ಲೆಂದರೂ ಇಷ್ಟಾದರೂ ಆ ಕೂಗಿನ ಕೊನೆಯಾಗುವ ಚಿನ್ಹಗಳು ಸ್ಪಷ್ಟವಾಗಿವೆ.

---

## ಕೌನ್ಸಿಲ್ ಬಹಿಷ್ಕಾರದ ಗತಿಯೇನು ?

ಸ್ವಾತಂತ್ರ್ಯದ ಕೂಗು, ಕೂಗಿನಕಿಂತ ಹೆಚ್ಚಾಗುವ ಲಕ್ಷಣ ವಿಲ್ಲ. ಅದಿರಲಿ. ಕೌನ್ಸಿಲ್‌ಬಹಿಷ್ಕಾರದ ಕೃತಿಯ ಗತಿಯೇನು ? ಎಂದು ಊಹೆಮಾಡುವ ಅಗತ್ಯವೇನೂ ಕಾಣುವದಿಲ್ಲ. ಮಹಾ ರಾಷ್ಟ್ರದವರು, ಮದ್ರಾಸದವರು ಬಂಗಾಲದವರು ಈಗಾಗಳೆ ಕೌನ್ಸಿಲ್‌ಪ್ರವೇಶಕ್ಕೆ ಅನುಕೂಲವಾಗುವಂತೆ ಸಂಪ್ರದಾಯ ಗಳನ್ನು ಸಿದ್ಧಪಡಿಸುತ್ತಿದ್ದಾರೆ. ಇದ್ದವುಗಳನ್ನು ಸ್ಥಿರಪಡಿಸುತ್ತ ಲಿದ್ದಾರೆ. ಕೆಲವು ಪುಣ್ಯವಂತರು, ಕಾಂಗ್ರೆಸ್ಸಿಗೆ ಬಯ್ದು, ಕೆಲವು ಮಹಾಭಾಗರು ಸ್ವಾತಂತ್ರ್ಯದ ನಿರ್ಣಯವನ್ನು ತಿರಸ್ಕ ರಿಸಿ, ಕೆಲವು ಪಂಡಿತರು ಮಹಾತ್ಮರನ್ನು ದೂಷಿಸಿ, ಕೆಲವು ಸತ್ಯಮೂರ್ತಿಗಳು ತಮ್ಮ ಬುದ್ಧಿಯನ್ನೆ ಹೊಗಳಿಕೊಂಡು ಕೌನ್ಸಿಲಪ್ರವೇಶದ ನಾಂದಿಯನ್ನು ಹಾಡುತಲಿದ್ದಾರೆ. ಇದಕ್ಕೂ ವಿಚಿತ್ರವೆಂದರೆ ಕೆಲವರು ಚಿಟುಕುಮುರಿದುಕೊಳ್ಳುತ್ತಾ ಕೌನ್ಸಿ ಲ್‌ವನ್ನು ಬಿಟ್ಟೆವು ಎಂದು ಹೇಳುತ್ತಿದ್ದಾರೆ; ಕೆಲವರು ಕಾಂಗ್ರೆ ಸಿನ ಹೆಸರಿನಿಂದ ಹೊರಬಿದ್ದು ಮತ್ತೊಂದು ಹೆಸರಿನಿಂದ ಒಳ ಹೋಗಲು ಏನು ಅಡ್ಡಿ ಎಂದು ಕೇಳುತ್ತಿದ್ದಾರೆ. ಕೌನ್ಸಿಲ್ಲಿ ನಲ್ಲಿ ಹೋಗಿರಿ ಬಿಡಿರಿ ಎಂದು ಹೇಳಲು ಕಾಂಗ್ರೆಸ್ಸು ಯಾರು ! ಅದರ ಪುಣ್ಯದಿಂದೇನು ನಾವು ಕೌನ್ಸಿಲಿನಲ್ಲಿ ಹೊಕ್ಕಿಲ್ಲ. ಅವರ ಪಾಪಕ್ಕಾಗಿ ನಾವು ಹೊರಬೀಳಬೇಕಾಗಿಲ್ಲ. ಅಂತೂ ಏನು. ಕೌನ್ಸಿಲು ಬಿಡಲು ಅನೇಕರಿಗೆ ಮನಸ್ಸಿಲ್ಲ. ಅವರು ಕೊಡುವ ಕಾರಣಗಳು ಏನೇ ಇರಲಿ. ಬಹಿಷ್ಕಾರಕ್ಕೆ ಬಹಿಷ್ಕಾರ ಬೀಳುವ ಹೊತ್ತು ಬರುವಂತೆ ಕಾಣುತ್ತದೆ. ಇದಕ್ಕೆಲ್ಲ ಕಾರಣಗಳು ಮೂರು. ಕಾಂಗ್ರೆಸ್ಸಿನ ಮಾರ್ಗವನ್ನವಲಂಬಿಸಲು ಇವರಿಗೆ ಶಕ್ತಿ ಸಾಲದು. ಹೊಸಮಾರ್ಗ ಹುಡುಕಿ ತೆಗೆಯಲು ಬುದ್ಧಿ ಸಾಲದು ರೌಂಡಟೇಬಲ್ಲಿನ ಎತಕೆಬಲಕೆ "ಡೊಮಿನಿಯನ್ ಸ್ಟೇಟಸ್" ಛಾಪಿನ ರೊಟ್ಟಿಗಿಟ್ಟಿಯ ತುಣುಕು ಸಿಕ್ಕಬಹು ದೆಂಬ ಆಶೆ ತಪ್ಪದು, ಅವರಿಗೆ ಶಕ್ತಿಬುದ್ಧಿಗಳು ಕಡಿಮೆ ಎಂದು ಎನ್ನಬಹುದಾದರೂ ಅಸಹಕಾರಯುಗದ ಅನುಭವದಿಂದ ತಮಗೆ ನೀಗುವದೆಷ್ಟು, ಬಿಡುವದೆಷ್ಟು, ಎಂಬ ವಿವೇಕವಾದರೂ ಇದೆ, ಅಂತೆಯೆ ನಡುನೀರಲ್ಲಿ ಮಹಾತ್ಮರ ಕೈಬಿಡದೆ ದಂಡೆಗೆ ನಿಂತುಕೊಂಡೆ ಕೈಮುಗಿದು ಸ್ವಾತಂತ್ರ್ಯದ ಸಾಗರವನ್ನು ಈಸು ವದು ನಮ್ಮಿಂದಾಗದು ಎಂದು ಹೇಳುತ್ತಿದ್ದಾರೆ. ಶ್ರದ್ಧೆಯಿಲ್ಲದೆ ದೊಡ್ಡ ಕೆಲಸಕ್ಕೆ ಶಿಷ್ಟಾಚಾರಕ್ಕಾಗಿ ಕೈಹಾಕಿ ಕೈಲಾಗದೆ ಕೈ ಯೂರುವದಕ್ಕಿಂತ ಶ್ರದ್ಧೆಯುಳ್ಳ ಸಣ್ಣ ಕೆಲಸಗಳನ್ನು ಕೈ ಕೊಂಡು ಕೊನೆಗಾಣಿಸುವದು ಲೇಸು. ಈ ರೀತಿಯಿಂದ ಶ್ರದ್ಧೆ ಯುಳ್ಳವರು ಕೌನ್ಸಿಲ್ಲಿಗೆ ಹೋದರೂ ಅಡ್ಡಿ ಇಲ್ಲ. ಅಲ್ಲಿಯಾ ದರೂ ತಾವು ಬಾಯಿಂದಾಡುವ ಗುರಿಗಾಗಿ ಸಾಹಸಪರಾಕ್ರಮ ಗಳಿಂದ ಕಾದಾಡಬೇಕು. ಇಲ್ಲದಿದ್ದರೆ ಸತ್ತ್ವವಿಲ್ಲದವರು ಕೌನ್ಸಿಲ್ಲು ಹೊಕ್ಕರೇನು ? ಕಾಡು ಹೊಕ್ಕರೇನು ?

---

## ಮುಂದೇನು ?

ರಾವುಂಡ ಟೇಬಲ್ಲಿನ ಸುತ್ತಲೂ ಕೌನ್ಸಿಲವಾದಿಗಳ ಆಶೆಯು ಸುತ್ತಾಡುತ್ತಿದೆ. ಸಾಮಂತಸ್ವರಾಜ್ಯದ ಕಡೆಗೆ ಅವರ ದೃಷ್ಟಿ ಹಾರಿ ಹೋಗುತ್ತಲಿದೆ. ಇದು ಎಷ್ಟರ ಮಟ್ಟಿಗೆ ಸಾಧ್ಯ ? ಎಂಬುದೇ ಜನಸಾಮಾನ್ಯದ ಮುಂದಿನ ಪ್ರಶ್ನೆಯಾಗಿದೆ. ರಾಜ ಕೀಯ ಪಕ್ಷಗಳಲ್ಲಿ ಮಂದಪಕ್ಷದವರೆಂದು ಸಂಬೋಧಿತರಾಗು ವವರ ವಿಚಾರಗಳಾದರೂ ಈ ವಿಷಯದಲ್ಲೇನು ? ಅವರ ಆಶೆ ಆಕಾಂಕ್ಷೆಗಳೇನು ? ಎಂಬುವನ್ನು ತಿಳಿದುಕೊಂಡರೆ ಸಾಮಾನ್ಯರ ರಾಜಕೀಯ ಬೇಡಿಕೆಗಳ ಲಘೂತ್ತಮವು ತಿಳಿದಂತಾಗುವದು. ಮೊನ್ನೆ ಮೊನ್ನೆಯಾದ ನ್ಯಾಶನಲ್ ಲಿಬರಲ್ ಫೆಡರೇಶನ್ನಿನಲ್ಲಿ ೧೯೩೦ ಇಸ್ವಿಯಲ್ಲಿ ರಾವುಂಡ ಟೇಬಲ್ ಕಾನ್‌ಫರನ್ಸ ಆಗಬೇ ಕೆಂದೂ 'Complete and immediate realisation of the constitution based on Dominion Status with such safeguards & reservations as may be necessary for the period of transition' ಈ ಬದಲಾವ ಣೆಯ ಕಾಲಕ್ಕೆ ಅಗತ್ಯವಾಗಿರುವಷ್ಟು ರಕ್ಷಕ ಮತ್ತು ನಿಗ್ರಾ ಹಕ ಯೋಜನೆಗಳೊಡನೆ, ಸಾಮಂತ ಸ್ವರಾಜ್ಯವನ್ನು ಅಸ್ತಿಭಾ ರವನ್ನಾಗಿಟ್ಟುಕೊಂಡ ಸಂಪೂರ್ಣವಾದ ಮತ್ತು ತಾತ್ಕಾಲಕ್ಕೆ ರೂಢಿಸಬೇಕಾದ ಶಾಸನಪದ್ಧತಿಯು ದೊರಕಬೇಕಾಗಿಯೂ ಗೊತ್ತುಗಳನ್ನು ಮಾಡಿದ್ದಾರೆ. ಮೊನ್ನೆ ಸರ್ ಫಿರೋಜ ಸೆಥ್ನಾ ಎಂಬವರು 'The Liberal party asks for im-

mediate Dominion Status provided at the Round Table conference they can satisfy the Home-Government that the Country is ripe for it, if otherwise they will not mind some reasonable delay' ರಾವುಂಡ ಟೇಬಲ್ಲಿನ ಕಾಲದಲ್ಲಿ ಸಾಮಂತ ಸ್ವರಾಜ್ಯಕ್ಕಾಗಿ ದೇಶವು ಯೋಗ್ಯವಾಗಿದೆಯೆಂದು ಇಂಗ್ಲೀಷ ಸರಕಾರಕ್ಕೆ ಒಪ್ಪಿಯಾಗುವಂತೆ ಮಾಡಿದ್ದಾದರೆ, ಸಾಮಂತ ಸ್ವರಾಜ್ಯವು ತಾತ್ಕಾಲಕ್ಕೆ ಸಿಗಬೇಕೆಂದು ಉದಾರ ಪಕ್ಷದವರ (ಮಂದ ಪಕ್ಷದವರ ಹೊಸ ಹೆಸರು) ಬೇಡಿಕೆಯಿದೆಯೆಂಬೂ, ಹಾಗೆ ಮಾಡಲಾಗದ ಪಕ್ಷಕ್ಕೆ ಯೋಗ್ಯ ಕಾಲದ ವರೆಗೆ ತಾವು ತಡೆದು ನಿಲ್ಲಲು ಸಿದ್ಧರಾಗಿರುವರೆಂದೂ ಹೇಳಿರುವರು. ನಮ್ಮನ್ನಾಳುವವರ ಒಳನಾಡಿಯನ್ನು ಬಲ್ಲ ಟಾಯಿಮ್ಸ ಆಫ್ ಇಂಡಿಯಾ ಪತ್ರವಲ್ಲಿ "The next instalment of reforms will almost certainly include responsible Government for the Provinces." (Jan. 7th 1930) ಸುಧಾರಣೆಯ ಮುಂದಿನ ದಾನಭಾಗದಲ್ಲಿ ಪ್ರಾಂತಗಳಿಗೆ ಜವಾಬುದಾರ ಸ್ವರಾಜ್ಯವು ಬಹುತರವಾಗಿ ದೊರೆತೇ ದೊರೆಯುವದೆಂದು ಹೇಳಿದ್ದಲ್ಲದೆ, ಉದಾರಪಕ್ಷದವರಾದಿಯಾಗಿ ಬೇಡುತ್ತಿರುವ ಸಾಮಂತ ಸ್ವರಾಜ್ಯದ ಬೇಡಿಕೆಯ ವಿಷಯವಾಗಿಯೂ, ಹಿಂದುಸ್ಥಾನದ ಉಪಕಾರ್ಯದರ್ಶಿಗಳಾದ ಅರ್ಲರಸೆಲ್‌ರವರು 'Dominion Status was not possible at the moment and will not be for a long time' ಇಂಡಿಯಾ ದೇಶಕ್ಕೆ ಸಾಮಂತ ಸ್ವರಾಜ್ಯವನ್ನು ಕೊಡಲು ಸದ್ಯಕ್ಕೆ ಆಗಲಾರದೆಂದೂ ಇನ್ನೂ ಎಷ್ಟೋ ದಿನಗಳವರೆಗೆ ಆಗದೆಂದೂ ಹೇಳಿರುವರೆಂಬದಾಗಿ ಬಂದ ಸುದ್ದಿಯ ವಿಷಯವಾಗಿಯೂ ಬರೆಯುವಾಗ 'India is not in a mood to stand the further deferment of her hopes for an indefinite period and we can only hope that the Labour Government will realise that before it is too late' (January 8th 1930) ಅನಿಯತಕಾಲದವರೆಗೆ ತನ್ನ ಆಶೋತ್ತರಗಳು ದೂಡಲ್ಪಟ್ಟದ್ದನ್ನು ತಾಳಿಕೊಳ್ಳುವ ಭಾವನೆಯಲ್ಲಿ ಹಿಂದುಸ್ಥಾನವಿಲ್ಲ. ಲೇಬರ ಸರಕಾರದವರು ಮಿತಿಮೀರುವದರೊಳಗಾಗಿಯೇ ಇದನ್ನು ಲಕ್ಷದಲ್ಲಿ ತಂದುಕೊಳ್ಳಬೇಕು ಎಂದು ತಮ್ಮ ಬಾಂಧವರನ್ನು ಎಚ್ಚರಗೊಳಿಸಲಾಗಿದೆ.

ಮಂದಪಕ್ಷದಂಥವರೂ ಸಾಮಂತ ಸ್ವರಾಜ್ಯವನ್ನು ಬೇಡುತ್ತಲಿದ್ದಾರೆ; ಟಾಯಿಮ್ಸದಂಥ ಪತ್ರಿಕೆಯೂ ಅದನ್ನು ಕೊಡದೆ ಗತಿಯಿಲ್ಲ ಎಂದು ಹೇಳುತಲಿದೆ; ಕೌನ್ಸಿಲ ಸೇರುವವರೂ ಇದೇ ಕಾರ್ಯವನ್ನೂ, ಕಾರಣದ ನಿಮಿತ್ತ ಹೇಳುತಲಿದ್ದಾರೆ. ರಾಷ್ಟ್ರೀಯ ಪಕ್ಷದವರ ದಂಡೋಪಾಯ, ಮಂದಪಕ್ಷದವರ ಸಾಮೋಪಾಯ, ಸ್ವಪಕ್ಷದವರ ದಾನೋಪಾಯಗಳ, ಇತರ ಪಕ್ಷದವರ ಭೇದೋಪಾಯ-ಹೀಗೆ ಈ ಚತುರೋಪಾಯಗಳಿಂದ ಸಾಮಂತ ಸ್ವರಾಜ್ಯವು ಈ ವರ್ಷ ದೊರೆತದ್ದೇ ಆದರೆ ಅಹಿಂಸಾದೀಕ್ಷೆಯ ಮಹಾತ್ಮರಿಗೂ ... ವಾಗದೆ ಇರದು. ಆದರೆ ಕೌನ್ಸಿಲಿನಲ್ಲಿ ... ಸಾಮಂತಸ್ವರಾಜ್ಯವನ್ನು ಹಿಂದುಸ್ಥಾನಕ್ಕೆ ಕೊಡದೆ ಯಿಲ್ಲವೆಂದು ಸರಕಾರದವರು ಮನಗಾಣುವಂತೆ, ಹಾಗೆ ... ದಿದ್ದರೆ ಜನರಲ್ಲಿ ಮಿತಿಮೀರಿದ ಅಸಂತೋಷವು ಉಂಟಾಗುವದೆಂಬದನ್ನು ಅವರಿಗೆ ಸ್ಪಷ್ಟ ಮಾಡಿ ಕೊಡುವಂತೆ ... ನಲ್ಲಿಯಾದರೂ ಒಕ್ಕಟ್ಟಿನಿಂದ ವರ್ತಿಸಬೇಕು. ಇಲ್ಲವಾದರೆ ಟಾಯಿಮ್ಸದ ಮಾತೆಲ್ಲ ಮೂಗಿಗೆ ತುಪ್ಪಹಚ್ಚುವ ಗತ್ತಿನದಾಗಬಹುದು. ಅಂಡರ ಸೆಕ್ರೆಟರಿಯವರ ಮಾತೇ- ... ಹಾಗೇನೂ ಮಾತಾಡಿಲ್ಲವೆಂದು ಅವರು ಈಗ ಪ್ರಕಟಿಸಿದರಾದರೂ— ನಿಜವಾಗಬಹುದು. ಯಾಕೆಂದರೆ ದಾನ ... ಣವು ನ್ಯಾಯವನ್ನಾಶ್ರಯಿಸಿರುವ ಧರ್ಮವಲ್ಲ, ಸ್ವ... ವನ್ನನುಸರಿಸುವ ವ್ಯಾಪಾರ. ಬೇಡುವವರ ಶಕ್ತಿಯುಕ್ತಿ ... ರಾಜ್ಯವು ದೊರಕುವದು. ಇದನ್ನರಿತು ಇನ್ನು ಮುಂದೆ ಕೌನ್ಸಿಲ್ಲಿನ ಒಳಗೂ ಹೊರಗೂ ನಮ್ಮ ಜನರು ... ಹಿತವಾಗುವದು ಖಂಡಿತ.

---

## ಲೆಕ್ಕದ ತೆಕ್ಕೆಗೆ ಸಿಗದ ಮಾತು

ತಾವು ಯಾರಿಗೂ ಬೆದರತಕ್ಕವರಲ್ಲೆಂದು ಸರಕಾರದವರು ಹೇಳಲಿ, ಮಹಾತ್ಮರ ಅಸಹಕಾರದ ಅನುಭವವು ... ಜನರು ಇಂದು ಉದಾಸೀನರಾಗಿ ಎಷ್ಟೇ ಕಾಣಲಿ, ಸ್ವ... ತ್ರ್ಯದ ಮಾತೂ ಕೃತಿಯೂ ಎಷ್ಟೇ ಅಗ್ರಾಹ್ಯವಾಗಿ ... ನಾಳಿನ ಸ್ಥಿತಿಯನ್ನು ಇಂದು ಹೇಳಲು ಬರುವದಿಲ್ಲ. ... ಸುಪ್ತ ಜ್ವಾಲಾಮುಖಿಯಂತಿರುವ ಯುರೋಪ ... ಖಂಡಗಳು ಕೆಂಡಗಳನ್ನುಗುಳುತ್ತ ಏಳಬಹುದು, ... ಆರ್ಥಿಕ ಸ್ಪರ್ಧೆಗೆ ಹಿಂದುಸ್ಥಾನದ ಶಾಂತಿಯು ...

ಹಾದೀತು, ಜನರ ಅಸಂತೋಷವು ಅವರ ಅಂಕೆಯನ್ನು ಮೀರಿ ಹೋಗಲೂ ಬಹುದು, ಮಹಾತ್ಮರ ಧೀರಗಂಭೀರ ಸತ್ಯಶೀಲತೆಯು ಇಡೀ ದೇಶವನ್ನು ಎಚ್ಚರಿಸಿಬಿಡಬಹುದು. ಇಂಥ ಅವುಗಳ ಲೆಕ್ಕ ಹಾಕಲು ಬರುವಂತಿಲ್ಲ. ಎಲ್ಲ ಶಕ್ತಿಗಳ ಲೆಕ್ಕವನ್ನು ಹಾಕಲು ಬರುತ್ತಿದ್ದರೆ ದೈವಕ್ಕೆ ಎಡೆಯೆ ಇರುತ್ತಿರಲಿಲ್ಲ. ಸಾಮ್ರಾಜ್ಯಗಳು ಹಾಳಾಗುತ್ತಲೇ ಇರಲಿಲ್ಲ. ಜಗತ್ತಿನ ಲೆಕ್ಕದ ತೆಕ್ಕೆಯನ್ನು ಶಕ್ತಿಗಳು ಮೀರಿರುವದರಿಂದಲೆ ಇತಿಹಾಸವು ಕಾದಂಬರಿಯಂತೆ ಕಾವ್ಯದಂತೆ ಅದ್ಭುತ ರಮ್ಯವಾಗಿರುವದು; ಗಣಿತದಂತೆ ರಸಹೀನವಾಗಿಲ್ಲ. ಇದಕ್ಕಾಗಿಯೇ ನಿಃಶಸ್ತ್ರರೂ ದುರ್ಬಲರೂ ಆದ ಭಾರತೀಯರು ಅವಿದಿತ ಆವೇಶದಿಂದ ಗರ್ಜಿಸುವರು; ನಿರಸ್ತಸೂರ್ಯ ಪ್ರಕಾಶಿತ ಸಾಮ್ರಾಜ್ಯವೂ ನಡುಗುವದು. ಕಾಲನ ಗರ್ಭದಲ್ಲಿದ್ದುದನ್ನೆಲ್ಲ ಕಂಡವರಾರು?

---

## ಇದೀಗ ತಲೆಯೆತ್ತುತ್ತಲಿರುವ ಅಫಗಾಣಿಸ್ತಾನ

ನಾದೀರಶಹನು ತನ್ನ ತಮ್ಮಂದಿರ ನೆರವಿನಿಂದ ಅಫಗಾಣಿಸ್ತಾನವನ್ನು ಗೆದ್ದ ಕೂಡಲೆ ಅವನು ಮಾಡಿದ ಮೊದಲನೆಯ ಕೆಲಸವು ದೇಶದಲ್ಲೆಲ್ಲ ಶಾಂತಿ ಸುವ್ಯವಸ್ಥೆಗಳನ್ನು ನೆಲೆಗೊಳಿಸಿದುದು; ಮಂತ್ರಿಮಂಡಲವನ್ನು ಏರ್ಪಡಿಸಿದುದು; ಹಿಂದುಸ್ತಾನ ಅಫಗಾಣಿಸ್ತಾನದ ವ್ಯಾಪಾರ ಮಾರ್ಗವನ್ನು ನಿರಾತಂಕವಾಗಿ ಮಾಡಿದುದು. ಪ್ರಜೆಗಳ ಸುಸಂಸ್ಕೃತಿಯು ರಾಜ್ಯದ ಏಳ್ಗೆಯ ಅಡಿಗಲ್ಲು ಎಂಬ ಮಾತು ನಾದೀರಶಹನಿಗೆ ಚೆನ್ನಾಗಿ ಗೊತ್ತಿರುವದರಿಂದ ಶಿಕ್ಷಣ ಪ್ರಸಾರದ ಕಾರ್ಯಕ್ಕೆ ಭರದಿಂದ ಆರಂಭವಾಗಿದೆ. ಇಂತು ಅಂತರ್ವ್ಯವಸ್ಥೆಯನ್ನು ತಕ್ಕ ಹಾದಿಗೆ ತರುವ ಎತ್ತುಗಡೆಯನ್ನು ನಡಿಸಿದ್ದು ಹೊರಗಿನ ಪ್ರಪಂಚದ ಸಂಗಡಲೂ ಯೋಗ್ಯವಾದ ಸ್ನೇಹ ಸಂಬಂಧಗಳನ್ನು ಕಾಯ್ದುಕೊಳ್ಳುವದಕ್ಕಾಗಿ ಹಲವು ಪ್ರಯತ್ನಗಳನ್ನು ನಡಿಸಿದ್ದಾನೆ. ಅಫಗಾಣಿಸ್ತಾನದ ಅಸ್ತಿತ್ವ ಅಭ್ಯುದಯಗಳು ಜಗತ್ತಿನೊಳಗಿನ ಪ್ರಮುಖರಾಷ್ಟ್ರಗಳ ಸಹಾನುಭೂತಿ ಸಹಾಯಗಳ ಮೇಲೆಯೆ ಮುಖ್ಯವಾಗಿ ಅವಲಂಬಿಸಿವೆ. ಆದುದರಿಂದಲೇ ಬಲಿಷ್ಠ ರಾಷ್ಟ್ರಗಳ ರಾಜಧಾನಿಗಳಲ್ಲಿ ತನ್ನ ತನ್ನ ಸಮರ್ಥರಾದ ರಾಯಭಾರಿಗಳನ್ನು ಕಳಿಸಿದ್ದಾನೆ. ಲಂಡನ ಪಟ್ಟಣಕ್ಕೆ ಕಾಬೂಲ ಪಟ್ಟಣವನ್ನು ಕೈವಶ ಮಾಡಿಕೊಂಡ ತನ್ನ ತಮ್ಮನಾದ ಶಹಾವಾಲೀಖಾನನನ್ನು ನೇಮಿಸಿದ್ದಾನೆ. ಕೆಲವೊಂದು ಕಾರಣಗಳ ಮೂಲಕ ಅಮಾನುಲ್ಲಾನನ್ನು ಬದಿಗಿಟ್ಟು ತಾನೇ ಪಟ್ಟಕ್ಕೆ ಬಂದಿದ್ದರೂ ನಾದೀರಶಹನು ಅಮಾನುಲ್ಲಾನ ಕೈಕೆಳಗಿನ ಒಳ್ಳೇ ಯೋಗ್ಯತೆಯ ಯಾವ ಮನುಷ್ಯನನ್ನೂ ತನ್ನ ಕೆಲಸಕ್ಕೆ ಉಪಯೋಗಿಸದೆ ಬಿಟ್ಟಿಲ್ಲ. ಮಂತ್ರಿ ಮಂಡಲದಲ್ಲಿಯೂ ದಿಲ್ಲಿ ಮೊದಲಾದ ಕಡೆಗಳಲ್ಲಿ ರಾಯಭಾರಿಗಳಾಗಿಯೂ ಅಮಾನುಲ್ಲಾನ ಕಾಲದ ಜನರೇ ಅಧಿಕಾರಿಗಳಾಗಿದ್ದಾರೆ. ಅಲ್ಲದೆ ಅಮಾನುಲ್ಲಾನ ಸಂಬಂಧಿಕರನ್ನಾಗಲಿ ಸ್ನೇಹಿತರನ್ನಾಗಲಿ ತನ್ನ ವೈರಿಗಳೆಂದು ಒಬ್ಬರನ್ನು ತಳ್ಳಿ ಪಟ್ಟವೇರಿದ ರಾಜನಿಗೆ ಇರುವ ಸಹಜವಾದ ಸಾಶಂಕದ್ವೇಷಬುದ್ಧಿಯಿಂದ—ಯಾರನ್ನೂ ಸೆರೆಮನೆಯಲ್ಲಿಡಿಸಿದನೆಂದಾಗಲಿ ಪೀಡಿಸಿದನೆಂದಾಗಲಿ ಸುದ್ದಿಯು ಬಂದಿಲ್ಲ. ಇದು ನಾದೀರಶಹನ ಕುಶಲತಂತ್ರ ಪ್ರವೀಣತೆಗೆ ಸಾಕ್ಷಿ. ಅಫಗಾಣಿಸ್ತಾನಕ್ಕೆ ತೀರ ನಿಕಟವರ್ತಿಗಳಾದ ಬ್ರಿಟಿಶರಿಗಿಂತಲೂ ಸಮೀಪದಸ್ವಾರ್ಥವಿಲ್ಲದ ಫ್ರೆಂಚರೇ ಒಳಿತೆಂದು ಅವರಿಂದಲೆ ತನ್ನ ನಾಡಿನ ಏಳ್ಗೆಗಾಗಿ ಹಲವು ಬಗೆಯ ಸಹಾಯ ತಕ್ಕೊಳ್ಳಬೇಕೆಂದು ನಾದೀರಶಹನು ಗೊತ್ತು ಮಾಡಿರಬೇಕೆಂದು ತೋರುತ್ತದೆ. ಫ್ರಾನ್ಸದ ಶಾಸ್ತ್ರಜ್ಞರಿಂದ ಅಫಗಾಣಿಸ್ತಾನದಲ್ಲಿ ಹಲವು ಸುಧಾರಣೆಗಳನ್ನು ಮಾಡಿಸುವದಕ್ಕಾಗಿ ಅವರನ್ನು ಕರೆಯಿಸಿದ್ದಾನೆ. ಬ್ರಿಟಿಶರನ್ನು ಹೀಗೆ ಸ್ವಲ್ಪ ದೂರೀಕರಿಸಿದ್ದು ಅಸಹ್ಯವಾಗಿಯೊ ಏನೊ ಇತ್ತೀಚೆ ಅಫಗಾಣಿಸ್ತಾನದ ಹುಳುಕುಗಳನ್ನು ಬ್ರಿಟಿಶ ಪತ್ರಿಕೆಗಳು ನಡುನಡುವೆ ಪ್ರಕಟಿಸುತ್ತಿವೆ. ಸಹಾಯಮಾಡಲಿಕ್ಕೆಂದಾಗಲಿ, ವ್ಯಾಪಾರಕ್ಕೆಂದಾಗಲಿ ಬ್ರಿಟಿಶರು ಒಮ್ಮೆ ಯಾವ ದೇಶದಲ್ಲಿ ಕಾಲಿಟ್ಟಿರುವರೋ ಅಲ್ಲಿ ಒಂದಿಲ್ಲೊಂದು ಬಗೆಯಿಂದ ತಮ್ಮ ಕಾಲು ಚಾಚಲು ಹವಣಿಸಿ ಆ ದೇಶದವರನ್ನು ಹಿಮ್ಮೆಟ್ಟಿಸಿದುದನ್ನೇ ಇತಿಹಾಸವು ಹೇಳುವದು. ಫ್ರೆಂಚರೂ ಇಂತಹ ಪ್ರಯತ್ನಗಳನ್ನು ಮಾಡಿದರೂ ಬ್ರಿಟಿಶರಷ್ಟು ಈ ಕಲೆಯಲ್ಲಿ ನಿಪುಣರಲ್ಲವೆಂದೇ ನಾದೀರಶಹನು ತನ್ನ ದೇಶಕ್ಕೆ ಇವರನ್ನು (ಫ್ರೆಂಚರನ್ನು) ಕರೆಸಿರುವನೇನೊ ತಿಳಿಯದು. ಅಥವಾ ನಾದೀರಶಹನು ಕೆಲವು ವರುಷಗಳ ವರೆಗೆ ವಿಶ್ರಾಂತಿಗಾಗಿ ಫ್ರಾನ್ಸದೇಶದಲ್ಲಿಯೆ ಕಾಲ ಕಳೆದುದರಿಂದ ಅಲ್ಲುಂಟಾದ ಸ್ನೇಹ ಋಣಾನುಬಂಧಗಳೂ ಇದಕ್ಕೆ ಕಾರಣವಿರಬಹುದು. ಅದೇನೇ ಇರಲಿ. ನಾದೀರಶಹನು ಫ್ರಾನ್ಸದ ಸಹಾಯದಿಂದ ತನ್ನ ದೇಶದ ಸುಧಾರಣೆಯನ್ನು ಮಾಡಲು ಯತ್ನಿಸುತ್ತಿದ್ದಾನೆ. ಫ್ರಾನ್ಸದ ಪ್ರಜಾಪ್ರಭುತ್ವವು ನಾದೀರಶಹನಿಗೆ ಅರಿಯದ ವಿಷಯವಲ್ಲ. ಆದುದರಿಂದಲೇ ತಾನು ಸರ್ವಸ್ವಾಧಿಕಾರಿಯಾದ ಏಕತಂತ್ರದ ಹಳೆಯ ಪದ್ಧತಿಯ ರಾಜನಂತೆ ನಡೆದುಕೊಳ್ಳದೆ ಪ್ರತಿಯೊಂದು ಮಾತಿನಲ್ಲಿಯೂ ಜನಸಮ್ಮತಿಯನ್ನು ಅರಿತುಕೊಳ್ಳುವ ಪ್ರಯತ್ನ

ಮಾಡುತ್ತಿದ್ದಾನೆ. ಈಗ ಅಫಗಾಣಿಸ್ತಾನದಲ್ಲಿ ಮೊನ್ನಿನ ಅನಾಹುತಕ್ಕೆ ಯಾರು ಕಾರಣರಾದರೂ ಆ ಮುಲ್ಲಾಗಳನ್ನೇ ಹಾದಿಗೆ ತರಬೇಕೆಂದು ಅವರ ಪ್ರತಿನಿಧಿಗಳನ್ನು ತನ್ನ ಆಡಳಿತದಲ್ಲಿ ನೆರವಾಗಲಿಕ್ಕೆ ಕರೆಸಿದ್ದಾನೆ- ಇಂತು ಅಫಗಾಣಿಸ್ತಾನವು ನಾದಿರಶಹನಂತಹ ಶಾಂತ ಧೀರ ಗಂಭೀರ ವೃತ್ತಿಯ ಅಧಿಪತಿಯ ಕೈಯಲ್ಲಿ ಒಂದೊಂದಡಿಯನ್ನು ಮುಂದಿಕ್ಕುತ್ತಿದೆ.

---

## ಪರಪ್ರಾಂತದಲ್ಲಿ ಕನ್ನಡಕ್ಕಿರುವ ಮನ್ನಣೆ

ಕವಿ ರವೀಂದ್ರರ ಕಾವ್ಯಗಳಿಗೆ ಮುಗ್ಧರಾಗಿ ಅವನ್ನು ಮೂಲದಲ್ಲಿ ಓದಬೇಕೆಂದು ಅನೇಕರು ಬಂಗಾಳಿಯನ್ನು ಕಲಿತಿರುವರು ಹಲವರು ಇನ್ನೂ ಕಲಿಯುತ್ತಲಿರುವರು. ಅದರಂತೆ ಕನ್ನಡದೊಳಗಿನ ಆವವಾದರೂ ಮಹಾ ಗ್ರಂಥಗಳನ್ನು ಓದಲು ಪರರು ಈ ಭಾಷೆಯನ್ನು ಕಲಿತಿರುವರೆ ? ಅಥವಾ ಕಲಿಯುತ್ತಿರುವರೆ? ಇವೆರಡೂ ಪ್ರಶ್ನೆಗಳಿಗೂ 'ಅಹುದು' ಎಂದು ಉತ್ತರವನ್ನು ಕೊಡಬಹುದು. ವೀರಶೈವ, ಮತ್ತು ವೈಷ್ಣವರ ಅನೇಕಾನೇಕ ಮಹಾಪುರುಷರು ಕನ್ನಡಿಗರೇ ಆದುದರಿಂದ ಈ ಮತಾನುಯಾಯಿಗಳಾದ ಪರಪ್ರಾಂತಸ್ಥರಿಗೆ ಕನ್ನಡದ ಅವಶ್ಯಕತೆ ಎನಿಸದೆ ಇಲ್ಲ. ಈ ಕಾರಣದಿಂದಲೆ ಮರಾಠಿ, ತೆಲುಗು ಹಿಂದೀ ಭಾಷೆಗಳಲ್ಲಿ ವೈಷ್ಣವ ವೀರಶೈವರ ಕನ್ನಡ ಗ್ರಂಥಗಳ ಕೆಲವೊಂದು ಪರಿವರ್ತನೆಯಾದುದು ನೋಡಲಿಕ್ಕೆ ಸಿಗುತ್ತದೆ. ಜೈನ ಗ್ರಂಥಗಳ ವಿಚಾರದಲ್ಲಿಯಂತೂ ಮಾತನೆತ್ತುವ ಕಾರಣವೇ ಇಲ್ಲ. ಜೈನ ತತ್ತ್ವಜ್ಞಾನದ ಅಭ್ಯಾಸಿಗಳಾದ ಜರ್ಮನ್ ಪಂಡಿತರು ಕನ್ನಡವನ್ನು ಕಲಿಯದೆ ಗತಿಯಿಲ್ಲವೆಂದು ಬರೆದಿದ್ದಾರೆ. ಹಿಂದೀ ಭಾಷೆಯಲ್ಲಂತೂ ಇತ್ತೀಚೆ ಕನ್ನಡ ಭಾಷೆಯೊಳಗಿನ ಜೈನವಾಙ್ಮಯ ವಿಷಯಕ ಲೇಖಗಳ ಭಾಷಾಂತರವು ಪ್ರತಿ ತಿಂಗಳೂ ಪ್ರಕಟವಾಗುತ್ತಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ದಿಲ್ಲಿಯ 'ಅನೇಕಾಂತ'ವೆಂಬ ಮಾಸಪತ್ರಿಕೆಯಲ್ಲಿ ಪ್ರತಿ ತಿಂಗಳಲ್ಲಿ ಕನ್ನಡ ಲೇಖದ ಏನಾದರೊಂದು ಅನುವಾದವು ಇದ್ದೇ ಇದೆ. ದಿಸೆಂಬರ ಸಂಚಿಕೆಯಲ್ಲಿ ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿ ಚರಿತ್ರೆಯ ೨ನೆಯ ಭಾಗದ ಭಾಷಾಂತರವನ್ನು ಆರಂಭಿಸಿದ್ದಾರೆ. ಈಗ ೧೮ ವರ್ಷಗಳ ಹಿಂದೆಯೆ ೧೫ನೆಯ ಶತಮಾನದ ವರೆಗಿನ ಕವಿಗಳ ವಿಚಾರವು ಭಾಷಾಂತರಿಸಲ್ಪಟ್ಟು ಹಿಂದಿಯಲ್ಲಿ ಪ್ರಕಟವಾಗಿದೆ. ಆಗ ಇದು ಅತ್ಯಂತ ಮಹತ್ತ್ವದ ಗ್ರಂಥವೆಂದು ... ಲ್ಪಟ್ಟಿದ್ದು ... ಕಾರವ್ಯ

ಎಂಬ ಪತ್ರಿಕೆಯಲ್ಲಿ ಅದು ಬಂಗಾಳಿ ಭಾಷೆಯಲ್ಲಿಯೂ ಭಾ... ತರಿಸಲ್ಪಟ್ಟಿತು ! 'ವೀರ' ಎಂಬ ಇನ್ನೊಂದು ಹಿಂದೀ ... ಪತ್ರಿಕೆಯಲ್ಲಿಯ ಸಂಪಾದಕರು ಒಂದು ವಿಶೇಷ ಸಂಚಿಕೆ... ಪ್ರಕಟಿಸಿ 'ಚಾವುಂಡರಾಯ'ನಿಗೆ ಅರ್ಪಿಸಿದ್ದಾಗಿ, ... ಚಾವುಂಡರಾಯ ಮತ್ತು ಆತನ ಗುರುಗಳ ಭಾವಚಿತ್ರ... ಚಾವುಂಡರಾಯ ಪುರಾಣ, ಶ್ರವಣಬೆಳಗುಳದ ಗೊಮ್ಮಟ... ಈ ಮೊದಲಾದವುಗಳ ಬಗ್ಗೆ ಲೇಖನಗಳಿವೆ. ಅವು ... ಲೇಖನಗಳು ! ಶ್ರೀಮಾನ್ ಗೋವಿಂದ ಪೈ ಅವರವೆ. ... ವಾಗಿ ಹಿಂದೀ ಭಾಷೆಯ ' ಕಲ್ಯಾಣ 'ವೆಂಬ ಮಾಸಪತ್ರಿಕೆ... ಶ್ರೀ ಆಲೂರ, ದಿವಾಕರ ಪ್ರಭೃತಿಗಳಿಂದ ಕನ್ನಡ ... ಶರಣರನ್ನು ಕುರಿತು ಲೇಖನಗಳನ್ನು ಬರೆಯಿಸಿಕೊಂಡು ... ೨-೩ ವರುಷಗಳಿಂದ ನಡುನಡುವೆ ಪ್ರಕಟಿಸುತ್ತಿದೆ. ... ೧೮-೨೦ ವರುಷಗಳ ಹಿಂದೆ ಶ್ರೀ ಆಲೂರರವರಿಂದ ... ಮಾಸ ಪತ್ರಿಕೆಯವರೂ ಪುರಂದರ ದಾಸ ಮೊದಲಾ... ಬಗ್ಗೆ ಲೇಖನಗಳನ್ನು ತರಿಸಿಕೊಂಡು ಪ್ರಸಿದ್ಧ ಮಾಡಿದ್ದರು.

ಇದೆಲ್ಲ ಧರ್ಮಾಭಿಮಾನದಿಂದ ಆದ ಕೆಲಸವಾಯ್ತು. ... ಸಾಹಿತ್ಯದ ಮೇಲಿನ ಪ್ರೀತಿಯಿಂದ ಪರಭಾಷೆಯವರು ... ಅಭ್ಯಾಸವನ್ನಾದರೂ ಮಾಡಿದ್ದುಂಟೆ ? ಅಹುದು. ... ದ್ದುಂಟು. ಶ್ರೀ ಅಜಗಾಂವಕರ ಎಂಬವರ ಮರಾಠಿ ಕವಿ... ಯಲ್ಲಿ ಇದಕ್ಕೆ ಆಧಾರವೂ ಇದೆ. ಚಂದ್ರಾತ್ಮಜ ರುದ್ರ... ಹಳೆಯ ಕವಿಯೊರ್ವನು ಕುಮಾರವ್ಯಾಸನ ಕಾವ್ಯವನ್ನೋ... ಮರುಳಾದನು. ಕನ್ನಡದಲ್ಲಿ ಈ ಕಾವ್ಯವನ್ನೋದಿ ತಾ... ಆನಂದ ಸೌಖ್ಯವನ್ನು ತನ್ನ ಮರಾಠಿ ಬಾಂಧವರಿಗೂ ... ಸುವ ಉದ್ದೇಶದಿಂದ ತಾನು ಕುಮಾರವ್ಯಾಸನ ಭಾರತ... ಗಿನ ಭೀಷ್ಮಪರ್ವವನ್ನು ಭಾಷಾಂತರಿಸಿದೆನೆಂದು ಚಂದ್ರಾ... ರುದ್ರನು ತನ್ನ ಗ್ರಂಥದ ಪೀಠಿಕೆಯಲ್ಲಿ ಹೇಳಿದ್ದಾನೆ. ... ಹದು ಇದೊಂದೆ ಉದಾಹರಣವಲ್ಲ. ಕನ್ನಡ ಷಟ್ಪದಿ... ಗಳ ಪರಿಣಾಮವು ಮರಾಠಿಯ ಮೇಲೆ ಎಷ್ಟೆಂದು ಅರಿ... ದಕ್ಕೆ ಇತ್ತೀಚೆ ಇನ್ನೂ ಒಂದು ಬಲವಾದ ಆಧಾರವು ... ತಿದೆ. ಪುಣೆಯ ಭಾರತ ಇತಿಹಾಸ ಸಂಶೋಧಕ ಮಂ... ಕಾರ್ಯದರ್ಶಿಗಳೂ ಪ್ರಸಿದ್ಧ ಇತಿಹಾಸ ಸಂಶೋಧಕರೂ ... ಶ್ರೀ ಪೋತದಾರರಿಗೆ ಮರಾಠಿಯ ಒಂದು ಹಳೆಯ ... ದೊರೆತಿತು. ಆದರೆ ಅದರ ವೃತ್ತವು ಆವುದೆಂಬುದು ... ಅವರಿಗೆ ಬಗೆಹರಿಯಲಿಲ್ಲ. ಮರಾಠಿಯಲ್ಲಿ ಅಂತಹ ...

ಸಲ್ಲಿ ಬರೆದ ಕವಿತೆಯನ್ನೇ ಅವರು ಅದುವರೆಗೆ ಕಂಡಿದ್ದಿಲ್ಲ. ಆ-ಮೇಲೆ ಅವರು ಧಾರವಾಡಕ್ಕೆ ಬಂದಾಗ ನಮ್ಮ ಅವರ ಮಾತಿನಲ್ಲಿ ಅದು ಷಟ್ಪದೀ ವೃತ್ತವೆಂದೂ ಕನ್ನಡದಲ್ಲಿ ಈ ವೃತ್ತವು ಬಹಳ ಲೋಕಪ್ರಿಯವೆಂದೂ ಕೇಳಿ ಸೋಜಿಗಗೊಂಡರು. ಇಂಗ್ಲಿಷ ಭಾಷೆಯ ಅಧ್ಯಯನದಿಂದ ಈಗಿನ ಕವಿಗಳ ಮೇಲೆ ಆ ಛಂದೋರಚನೆಯ ಪರಿಣಾಮವು ಆಗಿರುವಂತೆ ಮರಾಠಿಯಲ್ಲಿಯ ಷಟ್ಪದಿಕಾವ್ಯನಿರ್ಮಾಣಕ್ಕೆ ಕನ್ನಡ ಕಾವ್ಯಗಳ ಅಧ್ಯಯನ ಆಸ್ವಾದನವೇ ಕಾರಣವು ಇರಲಾರದೊ ?

---

## ಕರ್ನಾಟಕದ ಅರ್ಥಶಾಸ್ತ್ರಜ್ಞರು

ಕಳೆದ ತಿಂಗಳ ಕೊನೆಯ ವಾರದಲ್ಲಿ ಅಲಹಾಬಾದಿನಲ್ಲಿ ಅಖಿಲ ಭಾರತೀಯ ಅರ್ಥಶಾಸ್ತ್ರಜ್ಞರ ಸಮ್ಮೇಲನವು ಸೇರಿತ್ತು. ಅಂತಹ ವಿದ್ವನ್ಮಣಿಗಳ ಮಹಾಸಭೆಯ ಅಗ್ರಸ್ಥಾನವು ಶ್ರೀ. ಎನ್. ಎಸ್. ಸುಬ್ಬರಾಯರಿಗೆ ದೊರೆತುದಕ್ಕೆ ಅದಾವ ಕನ್ನಡಿಗನಿಗೆ ಅವರ ದೇಶಬಾಂಧವನೆನಿಸಿಕೊಳ್ಳುವುದರಲ್ಲಿ ಆನಂದ ಅಭಿಮಾನವೆನಿಸಲಿಕ್ಕಿಲ್ಲ ! ಹಿಂದೆ ಟ್ಯಾರಿಫ್ ಬೋರ್ಡಿಗೆ ಸರಕಾರದವರು ಇವರನ್ನು ಸದಸ್ಯರನ್ನಾಗಿ ಮಾಡಿದ್ದರು. ಇಂಥ ಮಾನ್ಯ ಅಧ್ಯಕ್ಷರಾದ ನಮ್ಮ ಸುಬ್ರಾಯರ ಬಗ್ಗೆ 'ವಿಶ್ವಕರ್ನಾಟಕ' ವು ಹೇಳುವದೇನಂದರೆ: —

"ಅಧ್ಯಕ್ಷ ಪದವಿಯಿಂದ ಬಂದ ಭಾಷಣವೆಂದರೆ ಆ ಮುಂದಿನ ವರ್ಷವೆಲ್ಲ ನಾಡಿಗೆ ಆರ್ಥಿಕ ವಿಚಾರದಲ್ಲಿ ಹಿಡಿಗೊಂಬು, ನಡೆಗೋಲು, ಬೆಳಕಿನ ಕಂಬ. ಕೇಂಬ್ರಿಡ್ಜ್ ತ್ರಿವೇಣಿಯಲ್ಲಿ ಮಿಂದು, ಆಲ್‌ಫ್ರೆಡ್ ಮಾರ್ಷಲ್, ಪಿಗೌ, ಕೈನಿಸ್ ಮುಂತಾದವರ ಶಿಷ್ಯರಾಗಿದ್ದೂ ಶ್ರೀ ಸುಬ್ಬರಾಯರು 'ಈ ಸಭೆಯು ಮುಂದೆ ಬಾಯಿ ತೆಗೆಯಲು ಭಯವಾಗುತ್ತದೆ' ಅನ್ನುವಂತೆ ವರ್ತಿಸುವುದೆಂದರೆ ಆ ಸಭಾರಂಗದ ಮಹಿಮೆಯನ್ನು ಕೊಂಚ ಊಹಿಸಿ ನೋಡಿ.

ಇಂದಿನ ದೇಶದ ಪರಿಸ್ಥಿತಿಯನ್ನು ಗಣನೆಗೆ ತಂದುಕೊಂಡು, ರಾಯರು ತಮ್ಮ ಅಧ್ಯಕ್ಷ ಭಾಷಣವನ್ನು ಆರ್ಥಿಕ ಮೂಲತತ್ವಗಳ ಪರೀಕ್ಷೆಗಾಗಲಿ, ಪರಿಶೋಧನೆಗಳ ವಿಮರ್ಶೆಗಾಗಲಿ ಉಪಯೋಗಿಸದೆ, ಭಾವಪ್ರಧಾನವಾದ ಬಾಣಪ್ರಯೋಗ ಚಾಪಲ್ಯಕ್ಕೆ ಮನಸೋಲದೆ, 'ಆರ್ಥಿಕ ಪರಿವರ್ತನವೂ ಶಿಕ್ಷಣ ವ್ಯವಸ್ಥೆಯೂ' ಎಂಬ ಜೀವನ ಜೀವದಂತಿರುವ ವಿಚಾರವನ್ನು ಕೈಕೊಂಡು ಸಿಂಹಾವಲೋಕನಕ್ರಮದಿಂದ ನಾಗರಿಕ ಪ್ರಪಂಚದ ಚಲನವಲನಗಳನ್ನು ನಿರೂಪಿಸಿ, ರಾಷ್ಟ್ರಕ್ಷೇಮಲಾಭಕ್ಕುಚಿತವೆನಿಸುವ ಸಲಹೆಯೊಂದನ್ನು ಮಾಡಿದ್ದಾರೆ.

ಭರತ ಖಂಡಕ್ಕೆಲ್ಲ "ರಾಷ್ಟ್ರೀಯ ಆರ್ಥಿಕ ಸಮಿತಿ"ಯೆಂಬುದೊಂದಿರಬೇಕು. ಅದು ಶ್ವಾತವಾಗಿರಬೇಕು. ಅಲ್ಲಿ ಶಾಸ್ತ್ರವಿಶಾರದರೂ, ಆಡಳಿತ ವಿಚಕ್ಷಣರೂ ಆದ ಸದಸ್ಯರ ಸಾಧನಸಂಪತ್ತಿಯನ್ನೆಲ್ಲ ಸಂಗ್ರಹಿಸಿ, ಕ್ರೋಢೀಕರಿಸಿ, ವಿಭಜಿಸಿ, ಅರ್ಥಶಾಸ್ತ್ರ ಸಾಹಿತ್ಯ ಭಂಡಾರವನ್ನು ಬೆಳೆಸಬೇಕು. ಅಲ್ಲದೆ ರಾಷ್ಟ್ರದ ಸಂಪದಭಿವೃದ್ಧಿಗೂ, ಪ್ರಜೆಗಳ ಸುಖಸೌಕರ್ಯಗಳಿಗೂ ಉತ್ತೇಜಕವಾಗುವಂತಹ ಆರ್ಥಿಕ ಸಾಹಸಗಳನ್ನು, ಉದ್ಯಮಗಳನ್ನು ಕುರಿತು ಆಲೋಚಿಸಿ, ಯೋಗ್ಯ ಕಾರ್ಯಕ್ರಮಗಳನ್ನು ನಾಡಿನ ಮುಂದಿಡಬೇಕು. ಹೆಚ್ಚೇನು ಈ ಸಮಿತಿಯು ರಾಷ್ಟ್ರದ ಆರ್ಥಿಕ ನೀತಿಸೂತ್ರಗಳನ್ನು ಧರಿಸಬೇಕು. ಇದೇ ರಾಯರ ಭಾಷಣದ ಪಲ್ಲವಿ. ಇಂದಿನ ಶಿಕ್ಷಣ ವ್ಯವಸ್ಥೆಯನ್ನು ಬದಲಾಯಿಸಿ ವೃತ್ತಿಶಿಕ್ಷಣಕ್ಕೆ ಹೆಚ್ಚು ಲಕ್ಷ್ಯವನ್ನು ಕೊಟ್ಟು ಬಾಲಕ ಅಥವ ಬಾಲಕಿಯ ಚಿತ್ತಗತಿ ಮತ್ತು ಅಭಿರುಚಿಗನುಸಾರವಾದ ವೃತ್ತಿಗವನನ್ನು ಅಥವ ಅವಳನ್ನು ಸಿದ್ಧ ಮಾಡಬೇಕು ಎಂಬುದೊಂದು ಅಮೂಲ್ಯವಾದ ಚರಣ.

ಈ ಭಾಷಣದಲ್ಲಿ ಅವರು ಭರತಖಂಡದ ವಿಶ್ವವಿದ್ಯಾನಿಲಯಗಳಲ್ಲಿ ಅರ್ಥಶಾಸ್ತ್ರಾಧ್ಯಯನ ವಿಚಾರ ಮಾಡಿರುವರು; ಇಂಗ್ಲೆಂಡ್, ಐರ್ಲೆಂಡ್, ಜರ್ಮನಿ, ಅಮೇರಿಕದ ಸಂಯುಕ್ತಸಂಸ್ಥಾನಗಳೇ ಮುಂತಾದ ದೇಶಗಳಲ್ಲಿ ಕಾಣಬರುತ್ತಿರುವ ಶಿಕ್ಷಣ ವ್ಯವಸ್ಥೆಗಳ ಬದಲಾವಣೆಗಳನ್ನು ಚಿತ್ರಿಸಿರುವರು; ಭರತಖಂಡದ ಪರಿಸ್ಥಿತಿಯಲ್ಲಿ ಲೆಕ್ಕಿಸಿ ಹಾರ್ಟ್‌ಜಾಗ್ ಸಮಿತಿಯವರ (ಭರತಖಂಡದ ಶಿಕ್ಷಣ ಪರಿಸ್ಥಿತಿಯ ವಿಚಾರ ಮಾಡಲು ಸೈಮನ್ ಸಮಿತಿಯು ಅಂಗವಾಗಿ ನಿರ್ಮಿಸಿದುದು.) ಅಭಿಪ್ರಾಯಗಳನ್ನೆಲ್ಲ ಸಂಗ್ರಹ ಮಾಡಿರುವರು."

ಈ ಪರಿಷತ್ತಿಗೆ ಹಿಂದುಸ್ಥಾನದ ಎಲ್ಲ ಭಾಗಗಳಿಂದ ಪ್ರಸಿದ್ಧ ಅರ್ಥಶಾಸ್ತ್ರಜ್ಞರು ಬಂದಿದ್ದರು. ಎಷ್ಟೋ ನಿಬಂಧಗಳೂ ಬರೆದು ಬಂದಿದ್ದವು. ಅವೆಲ್ಲ ಮುಖ್ಯವಾಗಿ ಕಂದಾಯ, ಸಂತೆಪೇಟೆ, ನಾಣ್ಯಗಳ ಅದಲುಬದಲು ಈ ವಿಷಯಗಳ ಸಂಬಂಧವಾಗಿ ಬರೆದವುಗಳಾಗಿದ್ದವು. ನಮ್ಮ ಧಾರವಾಡದ ಕರ್ನಾಟಕ ಕಾಲೇಜದ ಇತಿಹಾಸ ಮತ್ತು ಅರ್ಥಶಾಸ್ತ್ರಗಳ ಪ್ರೊಫೆಸರರಾದ ಶ್ರೀಮಾನ್ ಎಸ್. ಜಿ. ಬೆರಿಯವರೂ 'ಮುಂಬಯಿ ಕರ್ನಾಟಕದ ಪೈರಿನ ಪೇಟೆ' (Marketting

of Agricultural porduce in the Bombay Karnatak ಎಂಬ ನಿಬಂಧವನ್ನು ಬರೆದೊಯ್ದಿದ್ದರು. ಇದು ಎಲ್ಲ ಅರ್ಥಶಾಸ್ತ್ರಜ್ಞರ ಮನಸ್ಸಿಗೆ ಬಂದಿತೆಂದು ತಿಳಿದುಬರುತ್ತದೆ. ಈ ನಿಬಂಧವು ಜಯಕರ್ನಾಟಕದಲ್ಲಿ ಭಾಗಶಃ ಬರುವದಿದೆ. ಇದನ್ನು ನಮಗೊಪ್ಪಿಸಿದ್ದುದಕ್ಕಾಗಿ ನಾವು ಪ್ರೊ. ಬೆರಿ ಯರಿಗೆ ಕೃತಜ್ಞರಾಗಿರುವೆವು.

---

## ಪ್ರಥಮ ಕರ್ನಾಟಕ ನಾಟ್ಯ ಸಮ್ಮೇಲನ

ಧಾರವಾಡದಲ್ಲಾದ ಸಮ್ಮೇಲನಗಳ ಸುಗ್ಗಿಯಲ್ಲಿ ನಾಟ್ಯ ಸಮ್ಮೇಲನವು ವಿವಿಧಾಂಗಗಳಿಂದ ಕೂಡಿ(ಪ್ರಥಮ ಸಮ್ಮೇಲನವೆಂಬದನ್ನು ಲಕ್ಷದಲ್ಲಿರಿಸಿದರೆ) ಬಹಳೇ ಯಶಸ್ವಿಯಾಯಿತೆಂದು ಹೇಳಲಭ್ಯಂತರವಿಲ್ಲ. ೪೦೦ ನಾಟ್ಯ ಗ್ರಂಥಗಳ ವ್ಯವಸ್ಥಿತ ಪ್ರದರ್ಶನವು, ಸ್ವಾಗತಾಧ್ಯಕ್ಷರಾದ ಶ್ರೀ ಮುದವೀಡು ಕೃಷ್ಣರಾಯರು ದರ್ಶನದಿಂದಲೂ ಶ್ರವಣದಿಂದಲೂ ಸಂಗ್ರಹಿಸಿದ ಸುದ್ದಿಗಳಿಂದ ಸೂಸುವ ೩೦-೩೫ ಪುಟಗಳ ಭಾಷಣವು, ಅಧ್ಯಕ್ಷರಾದ ಶ್ರೀ ತಾಡಪತ್ರಿ ರಾಘವಾಚಾರ್ಯರ ಸ್ವಾನುಭವದ, ವಿಚಾರಚಾತುರ್ಯದ, ನವೀನತೆಯ ಭಾಷಣಗಳು, ಶ್ರೀ ತಾರಾನಾಥರಾಯರ ವಿಚಾರಪರಿಪ್ಲುತವಾದ ಮತ್ತು ಪ್ರಚೋದಕವಾದ ಮಾತುಗಳು, ಗದಗ ಕಂಪನಿಯ ಒಡೆಯರಾದ ಶ್ರೀ ಗರುಡ ಸದಾಶಿವರಾಯರು, ನಾಟ್ಯಕಲಾ ಪ್ರಿಯರಾದ ಶ್ರೀ ಕಣಬರಗೀಮಠರವರು, ಶ್ರೀ ಗುಬ್ಬೀ ವೀರಣ್ಣನವರ ಕಂಪನಿಯ ಪ್ರತಿನಿಧಿಗಳೂ ನಾಟಕಕಾರರೂ ಆದ ಶ್ರೀ ಬೆಳ್ಳಾವೆ ನರಹರಿ ಶಾಸ್ತ್ರಿಗಳು, ಸಂಗೀತ ವಿದ್ವಾಂಸರಾದ ಹುಲಗೂರು ಕೃಷ್ಣಾಚಾರ್ಯರು, ಕಥಾಂಜಲಿಯ ಸಂಪಾದಕರಾದ ಶ್ರೀ ಅ. ನ. ಕೃಷ್ಣರಾಯರು, ಪ್ರೊ. ಕನಕಲಕ್ಷ್ಮಮ್ಮನವರು ಎಮ್. ಎ. ಮೊದಲಾದವರ ಸಹಾಯ, ಭಾಷಣ ಸಂಭಾಷಣೆಗಳು ; ನಾಟಕೋದ್ಯಮದಲ್ಲಿ ಪರಿಶ್ರಮಪಟ್ಟ ಶ್ರೀ. ಕೌಜಲಗಿ ಶ್ರೀನಿವಾಸರಾಯರು ಮುಗಳಿ ಶ್ರೀನಿವಾಸರಾಯರು ಮೊದಲಾದ ಹಿರಿಯರ ಸಹಾನುಭೂತಿಪ್ರೋತ್ಸಾಹನಗಳು; ಇವೆಲ್ಲಕ್ಕೂ ಶಿಖರವಿಟ್ಟಂತೆ ಸಮ್ಮೇಲನದ ಸಂಜೆಗೆ ಶ್ರೀ ವಟ್ಟಂ ಶ್ಯಾಮರಾಯರು ಅವರ ಸಹಕಾರಿಗಳು, ಶ್ರೀ ಅ. ನ. ಕೃಷ್ಣರಾಯರು, ಅಧ್ಯಕ್ಷರಾಗಿದ್ದ ಶ್ರೀ ತಾಡಪತ್ರಿ ರಾಘವಾಚಾರ್ಯರು ಮತ್ತು ಸಹೋದರಿ ವರದಾಬಾಯಿಯವರು ಎಲ್ಲರೂ ಕೂಡಿ ಅಭಿನಯಿಸಿದ ಅಹೆಲ್ಯೋ ಮತ್ತು 'ಮದುವೆಯೊ ಮನೆಹಾಳೊ' ಎಂಬ ಪ್ರಹಸನ— ಹೀಗೆ ಒಂದಕ್ಕಿಂತ ... ಹೆಚ್ಚಿನ ಮಾತುಗಳಿಂದ ತರುಣರ ಪ್ರಯತ್ನಕ್ಕೆ ಕಳೆಯೇ... ರಂಗಭೂಮಿಯ ಮತ್ತು ನಾಟಕಗಳ ಸುಧಾರಣೆಗಾಗಿ ... ಮಂಡಲವನ್ನೂ ಸ್ಥಾಪಿಸಿದ್ದಾಗಿದೆ. ಆದರ ನಿರ್ಣಯ... ಆ ಮಂಡಲದವರು ಒಂದು ಒಳ್ಳೆಯ ಸಾಮಾಜಿಕ ... ಐತಿಹಾಸಿಕ ನಾಟಕವನ್ನು ಬರೆಯಿಸಿಯಾಗಲಿ ಬರೆದ... ಗಲಿ ಪಾರಿತೋಷಕವನ್ನು ಕೊಡಬೇಕೆಂದೂ, ಮುಂದೆ ... ಗಳನ್ನು ಅಭಿನಯಿಸುವ ಏರ್ಪಾಡಾಗುವಂತೆ ಮಾಡಬೇಕೆಂ... ಯೋಚನೆಯನ್ನೂ ಯೋಜನೆಯನ್ನೂ ಮಾಡುವರೆಂದು ... ದ್ದೇವೆ. ಶ್ರೀ ಏರಿ ರಾಮಾಚಾರ್ಯರು ಮತ್ತು ಶ್ರೀ ... ನೂರ ಅಯ್ಯಪ್ಪನವರು ಶ್ರೀ ಮುದವೀಡು ಕೃಷ್ಣರಾ... ಮೊದಲಾದ ಕಾರ್ಯಕಾರಿಗಳು ಅಭಿನಂದನಕ್ಕೆ ಪಾತ್ರ... ದ್ದಾರೆ. ತಮ್ಮ ನಾಟಕದುತ್ಪನ್ನವನ್ನು ಸಮ್ಮೇಲನಕ್ಕೆ ... ಕೊಟ್ಟದ್ದಕ್ಕಾಗಿ ಶ್ರೀ ಗರುಡ ಸದಾಶಿವರಾಯರು, ಶ್ರೀ ... ವಾಚಾರ್ಯರು, ಶ್ರೀ ವಟ್ಟಂ ಶ್ಯಾಮರಾಯರು, ... ಕೃಷ್ಣರಾಯರೂ ಅವರ ಸಹಕಾರಿಗಳೂ ಇವರೆಲ್ಲರೂ ... ಜ್ಞತಾಪೂರ್ವಕ ವಂದನೆಗಳಿಗೆ ಅರ್ಹರಾಗಿದ್ದಾರೆ.

---

## ಸಾಹಿತ್ಯಯಾತ್ರೆಯ ಸ್ತುತ್ಯ ಉಪಕ್ರಮ

ಮೈಸೂರ ವಿಶ್ವವಿದ್ಯಾನಿಲಯದ ಎಮ್. ಎ. ... ಕನ್ನಡ ವಿಷಯವನ್ನು ಐಚ್ಛಿಕವಾಗಿ ತಕ್ಕೊಂಡ ವಿದ್ಯಾರ್ಥಿ... ತಮ್ಮ ಅಧ್ಯಾಪಕರಲ್ಲಿ ಒಬ್ಬರಾದ ಶ್ರೀ. ತೀ. ನಂ. ಶ್ರೀಕಂ... ಎಮ್. ಎ. ಇವರೊಡನೆ ಸಾಹಿತ್ಯಯಾತ್ರೆಗೆಂದು ಹೊ... ಹಂಪಿ, ಬಾದಾಮಿ, ಬಾಗೇವಾಡಿ, ವಿಜಾಪುರ, ತೊರವೆ, ಗ... ಧಾರವಾಡ, ಲಕ್ಷ್ಮೇಶ್ವರ (ಪುಲಿಗೆರೆ) ಗಳನ್ನು ನೋಡಿಕೊಂ... ತಿರುಗಿಹೋದರು. ನಾತಾಳದ ಸೂಟಿಯಲ್ಲಿ ಈ ಬಗೆಯ ... ಉಪಕ್ರಮವನ್ನು ಮಾಡಿದ್ದು ಅಭಿನಂದನೀಯ. ಕರ್ನಾಟ... ಸುಪ್ರಸಿದ್ಧ ಮಹಾಪುರುಷರೂ ಕವಿಗಳೂ ಆಗಿ ... ಸ್ಥಾನಗಳನ್ನು ಸಂದರ್ಶಿಸಿ ಆಯಾ ಮಹಾಪುರುಷರ ... ಹೊಸಮಾಹಿತಿಯನ್ನು ಸಂಗ್ರಹಿಸುವುದೂ ಅಲ್ಲಿ ಈಗಿನ ... ಲ್ಲಿರುವ ಸುಪ್ತ ಅಭಿಮಾನವನ್ನು ಜಾಗ್ರತಗೊಳಿಸುವುದೂ ... ತ್ಯವಿದೆ. ಈ ಬಗೆಯ ಸಾಹಿತ್ಯಯಾತ್ರೆಗಳ ಉದ್ದೇಶದಿಂದ ... ಟಕದ ಒಂದೊಂದು ಭಾಗದ ಪರಿಚಯ ಪ್ರ... ಇನ್ನೊಂದು ಭಾಗದವರಿಗೆ ಆಗಿ ನಾಳಿನ ಏಕೀಕರಣ ಕಾರ್ಯ... ಸ್ಥಿರವಾದ ನೆಲೆಗಟ್ಟನ್ನು ಕಟ್ಟಿದಂತೆ ಆಗುವುದು.

## ಪರಲೋಕವಾಸಿ ಶ್ರೀ ರೊದ್ದ ವ್ಯಾಸರಾಯರು

ನವಕರ್ನಾಟಕದಲ್ಲಿ ಹೊಸವಿಚಾರ, ಸ್ವತಂತ್ರ ವಿಚಾರಗಳಿಂದ ಸ್ಫೂರ್ತಿಗೊಂಡು ಸಮಾಜದ ಉದ್ಧಾರಕ್ಕಾಗಿ ತಮ್ಮಿಂದ ಏನಾದರೂ ಕಾರ್ಯವಾಗಬೇಕೆಂದು ಕಳವಳಗೊಂಡ ಹಿರಿಯರಲ್ಲಿ ಶ್ರೀ ವ್ಯಾಸರಾಯರೊಬ್ಬರು. ಆರಂಭದಲ್ಲಿ ಸಮಾಜ ಸುಧಾರಣೆಯ ಕಡೆಗೇ ಮುಖ್ಯವಾಗಿ ಇವರ ಗಮನವಿತ್ತು. ಶ್ರೀ ರಾನಡೆ, ಗೋಖಲೆಯವರ ವಿಚಾರಪದ್ಧತಿಗೆ ಇವರ ಮನ ಮೆಚ್ಚಿದುದೇ ಇದಕ್ಕೆ ಮುಖ್ಯಕಾರಣ. ಉತ್ತರ ಕರ್ನಾಟಕದಲ್ಲಿ ಆರಂಭಕ್ಕೆ ಆದ ಕೆಲ ಸಮಾಜಸುಧಾರಕರಲ್ಲಿ ಶ್ರೀ ವ್ಯಾಸರಾಯರೂ ಅವರ ಅಣ್ಣಂದಿರಾದ ತಿರುಮಲರಾಯರೂ ಗಣ್ಯರಿದ್ದಾರೆ. ವ್ಯಾಸರಾಯರಿಗೆ ಕೆಲವೊಂದು ವಿಪರೀತ ಪರಿಸ್ಥಿತಿಯ ಮೂಲಕ ಸರಕಾರಿ ನೌಕರಿಯಲ್ಲಿ ಸೇರಬೇಕಾಯ್ತು. ಮುಂಬೈಯಲ್ಲಿ ಟ್ರಾನ್ಸಲೇಟರ ಕಚೇರಿಯಲ್ಲಿ ಕೆಲಸಮಾಡುತ್ತಿದ್ದರು. ಆದರೂ ಇವರ ಸ್ವತಂತ್ರವಿಚಾರಶಕ್ತಿಯು ಕುಂದಲಿಲ್ಲ. ದೇಶದ ರಾಜಕೀಯ ಪರಿಸ್ಥಿತಿಯ ಪರಿಣಾಮವು ಅವರ ವಿಚಾರಪರಿವರ್ತನೆಯನ್ನು ಮಾಡಿತು. ರಾಜಕೀಯ ಉಜ್ಜ್ವಲ ಪಕ್ಷದ ಅನುಯಾಯಿಗಳಾದರು. ತಾವು ಸರಕಾರದ ರೌಪ್ಯ ಶೃಂಖಲಾಬದ್ಧರಾಗಿದ್ದರೂ ಅಲ್ಲಿಂದಲೇ ತಮಗೆ ಶಕ್ಯವಿರುವ ಎಲ್ಲ ಬಗೆಯ ಸಹಾಯವನ್ನೂ ರಾಜಕಾರ್ಯಪಟುಗಳಿಗೆ ಮೇಲಿಂದಮೇಲೆ ಕೊಡುತ್ತಿದ್ದರು. ಇಂಗ್ಲಿಷಭಾಷೆಯ ಮೇಲೆ ಇವರ ಪ್ರಭುತ್ವವು ಅಪೂರ್ವವಾಗಿತ್ತು. ಶೈಲಿಯು ಓಜಸ್ವಿಯಾಗಿತ್ತು. ಮುಂಬೈ ಕ್ರಾನಿಕಲ್ಲಿನಲ್ಲಿ ಮಿ. ಹಾರ್ನಿಮನ್ನರ ಹೆಸರಿನಲ್ಲಿ ಪ್ರಕಟವಾದ ಲೋಕಪ್ರಿಯವಾದ ಎಷ್ಟೋ ಲೇಖನಗಳು ಶ್ರೀ. ವ್ಯಾಸರಾಯರ ಲೆಕ್ಕಣಿಕೆಯಿಂದ ಬಂದುವುಗಳೆಂದು ಕೇಳಿದ್ದೇವೆ. ಕನ್ನಡದಲ್ಲಿ ವಿಶೇಷ ಬರೆಯಲಿಲ್ಲವಾದರೂ ಹಿಂದೆ ಸಚಿತ್ರ ಭಾರತ, ಕರ್ನಾಟಕ ವೈಭವಗಳಲ್ಲಿ ಪರಿಣಾಮಕರವಾದ ಪದ್ಧತಿಯಲ್ಲಿ ಬರೆದ ಹೊಸವಿಚಾರದ ಹಲವು ಲೇಖಗಳು ಪ್ರಕಟವಾಗಿವೆ. ಇತ್ತೀಚೆ ಇವರ ದೇಹವು ರೋಗಗ್ರಸ್ತವಾಗಿ ಕೆಲಸವೆ ಸಾಗದಾಗಿತ್ತು. ಆದರೂ ನಮ್ಮ ನಾಡಿನ ಏಳ್ಗೆಯು ಬೇಗನೆ ಆಗಬೇಕೆಂಬ ಬಗ್ಗೆ ಇವರ ಮಾತುಗಳು ಎಡೆಬಿಡದೆ ನಡೆಯುತ್ತಿದ್ದವು. ಇವರು ವಿದ್ಯಾರ್ಥಿವೇತನವನ್ನಿಡಲು ಕರ್ನಾಟಕ ಕಾಲೇಜಕ್ಕೆ ೧೦೦೦ ರೂ. ಗಳನ್ನೂ ಬಾಲಮಾರುತಿ ಮತ್ತು ಕಾಂಗ್ರೆಸ್ಸ ಕಮಿಟಿಗಳಿಗೆ ಪ್ರತ್ಯೇಕ ೩೦೦ ರೂಪಾಯಿಗಳನ್ನೂ ಕೊಡಬೇಕೆಂದು ಮೃತ್ಯುಪತ್ರದಲ್ಲಿ ಬರೆದಿರುವರು.

## ಪ್ರಥಮ ಕರ್ನಾಟಕ ವಾಚನಾಲಯಗಳ ಸಮ್ಮೇಲನ

ನಾಟ್ಯ ಸಮ್ಮೇಲನದ ಕಾಲಕ್ಕೆ ಧಾರವಾಡದಲ್ಲಿ ವಾಚನಾಲಯಗಳ ಸಮ್ಮೇಲನವೂ ಒಳ್ಳೇರೀತಿಯಿಂದ ಕೊನೆಗಂಡಿತು. ಬೆಝುವಾಡದ ಎಸ್. ವಿ. ನರಸಿಂಹ ಶಾಸ್ತ್ರಿಗಳು ಅಧ್ಯಕ್ಷರಾಗಿದ್ದರು. ಇವರು ಆಂಧ್ರಪ್ರಾಂತದಲ್ಲಿ ವಾಚನಾಲಯಗಳ ಪ್ರಸಾರ ಕಾರ್ಯದಲ್ಲಿ ಕಳೆದ ೧೫–೨೦ ವರುಷಗಳಿಂದ ಬಹಳ ಪರಿಶ್ರಮ ಪಟ್ಟವರು. ಇವರ ಭಾಷಣದಲ್ಲಿ ಇವರು ಮಾಡಿದ ಮಹತ್ವದ ಸೂಚನೆಗಳೆ ಇದಕ್ಕೆ ನಿದರ್ಶನ. ಈ ಸಮ್ಮೇಳನದಲ್ಲಿ ಆದ ಅನೇಕ ಗೊತ್ತುಗಳನ್ನೆಲ್ಲ ಒಳಗೊಳ್ಳುವಂತಹ ಮಹತ್ವದ್ದು ಒಂದೇ ಒಂದುಂಟು. ಕರ್ನಾಟಕಕ್ಕೆ ಎಲ್ಲ ವಾಚನಾಲಯಗಳಿಗೆ ಮಧ್ಯವರ್ತಿಯಾದ ಒಂದು ಸಂಸ್ಥೆಯು ಅವಶ್ಯಕವಿದ್ದು ಅದನ್ನು ಸ್ಥಾಪಿಸಬೇಕೆಂಬುದೇ ಈ ಮುಖ್ಯವಾದ ನಿರ್ಣಯವು. ಈ ಮಧ್ಯವರ್ತಿ ಸಂಸ್ಥೆಯ ಮುಖಾಂತರ ಉಳಿದ ಗೊತ್ತಾದ ಮಾತುಗಳು ಕೃತಿಯಲ್ಲಿ ಬರತಕ್ಕವುಗಳಿವೆ. ಆದಕಾರಣ ಸಮ್ಮೇಲನದಲ್ಲಿ ಗೊತ್ತಾದ ಮೇರೆಗೆ ಅಖಿಲ ಕರ್ನಾಟಕ ವಾಚನಾಲಯ ಸಂಘದ ಸ್ಥಾಪನೆಯಾಗಿ ಉತ್ಸಾಹ ಕಾರ್ಯದರ್ಶಿಗಳಾದ ಶ್ರೀ ಮಿರ್ಜಿ ಮತ್ತು ಡಾ. ಕಾಮುಲಾಪುರರಿಂದ ಬೇಗನೆ ಮುಂದಿನ ಕಾರ್ಯಕ್ಕೂ ಆರಂಭವಾದೀತೆಂದು ವಿಶ್ವಾಸವೆನಿಸುತ್ತಿದೆ.

---

## ಮುಖಚಿತ್ರ ಪರಿಚಯ

ಈಸಲದ ಮುಖಚಿತ್ರವಾದ 'ಪ್ರೇಮಪೂರ'ವನ್ನು ಬರೆದ ಗೆಳೆಯರ ಗುಂಪಿನ ಶ್ರೀ. ಸಂಗಮ ನಾರಾಯಣರಾಯರು 'ಕರಂದೀಕರ ಶಿಷ್ಯವೃತ್ತಿ'ಯನ್ನು ಹೊಂದಿ ಶಾಂತಿನಿಕೇತನದಲ್ಲಿ ಜಗದ್ವಿಖ್ಯಾತರಾದ ಶ್ರೀನಂದಲಾಲ ಬಸು ಇವರ ಬಳಿಯಲ್ಲಿ ವ್ಯಾಸಂಗಮಾಡುತ್ತಿರುವರು. ಧಾರವಾಡದಲ್ಲಿ ಜರುಗಿದ ಮೊನ್ನಿನ ನಾಡಹಬ್ಬದ ಲಲಿತಕಲಾಪ್ರದರ್ಶನದಲ್ಲಿ ಇವರ ಎರಡು ಚಿತ್ರಗಳು ಪ್ರದರ್ಶಿತವಾಗಿದ್ದು ಈ 'ಪ್ರೇಮಪೂರ'ಕ್ಕೆ ಪದಕವೊಂದು ಕೊಡಲಾಯಿತು.

ಈ ಚಿತ್ರದಲ್ಲಿ ಶ್ರೀ ನಂದಲಾಲರ ಕೃತಿಯ ಅಲ್ಪಛಾಯೆಯಿದ್ದರೂ ಭಾವವಿನ್ಯಾಸದಲ್ಲಿಯೂ, ರಚನೆಯಲ್ಲಿಯೂ ನಾವೀನ್ಯವು ತುಂಬಾ ಪ್ರಕಟವಾಗಿದೆ. ಪ್ರೇಮಸಾಗರದ ತೆರೆಯೊಂದು ತರಂಗಮಾಲೆಯೊಂದು ಎಲ್ಲಿಂದಲೋ ಉರುಳುರುಳಿ ಬಂದು ದಂಡೆಯ



ಗುರ್ಲಹೊಸೂರಿನ ಶ್ರೀ ಚಿದಂಬರೇಶ್ವರ ಸ್ವಾಮಿಯು

ಮೂರ್ತಿಶಿಲ್ಪಿ: —ಶ್ರೀ ವಿಠ್ಠಪ್ಪ ಕರ್ಜಗಾರ (ಗುರ್ಲಹೊಸೂರು)

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

| ಸಂಪುಟ ೮ | ಶುಕ್ಲನಾಮ ಸಂವತ್ಸರ, ಭಾರತ ಹುಣ್ಣಿವೆ<br>ಚಾಲುಕ್ಯವಿಕ್ರಮ ವರ್ಷ ೮೫೪ | ಸಂಚಿಕೆ ೪ |
|---|---|---|

# ಸಾಮಾಜಿಕ ಮತ್ತು ರಾಜಕೀಯ ಸುಧಾರಕರಿಗೆ ಒಂದು ಮಾತು



( ಝನೊಫೋನನ ' ಮೆಮೊರಿಬಲ್ ಥಾಟ್ಸ ಆಫ್ ಸಾಕ್ರೆಟಿಸ್ 'ದಿಂದ )

ಅನುವಾದಕರು- ಎಮ್. ಎ. ವೆಂಕಟರಾವ, ಎಮ್. ಎ., ಲೆಕ್ಚರರ, ಇಂಟರಮೀಜಿಯೇಟ ಕಾಲೇಜ, ಮೈಸೂರು.

ಅರಿಸ್ಟಾನ್ ಮಹಾಶಯನ ಪುತ್ರನಾದ ಗ್ಲಾಕನನು ಏಥೆನ್ಸ ನಗರದ ಮುಖಂಡರಲ್ಲೊಬ್ಬನಾಗಬೇಕೆಂಬ ಆಶೆಯಿಂದ ಕೇವಲ ಯೌವನಾವಸ್ಥೆಯಲ್ಲಿಯೇ ಉಪನ್ಯಾಸಗಳನ್ನು ಕೊಡುವುದಕ್ಕೆ ಪ್ರಾರಂಭಮಾಡಿದನು. ಆಪ್ತಸ್ನೇಹಿತರೂ ನೆಂಟರಿಷ್ಟರೂ ಹೇಳಿ ಹೇಳಿ ಸಾಕಾಯಿತು. ಕೊನೆಗೆ ಪ್ರಸಿದ್ಧ ತತ್ತ್ವವಿಚಾರಕನಾದ ಸಾಕ್ರೆಟೀಸನ ಉಪದೇಶವು ಸಫಲವಾಯಿತು.

ಹೇಗೆಂದರೆ—

ಸಾಕ್ರೆಟೀಸ್— "ಏನು ಗ್ಲಾಕನ್, ನಮ್ಮ ಪಟ್ಟಣದಲ್ಲಿ ದೊಡ್ಡ ಸ್ಥಾನವನ್ನು ಪಡೆಯಬೇಕೆಂದು ಸಾಹಸಮಾಡುತ್ತಿರುವ ಹಾಗೆ ಇದೆ ? "

ಗ್ಲಾಕನ್— "ಹೌದು, ಸಾಕ್ರೆಟೀಸ್ "

ಸಾ— "ಸರಿ. ಅಭ್ಯಂತರವಿಲ್ಲ. ನ್ಯಾಯವಾದ ಆಶಯವೇ ಸರಿ. ನಿನ್ನ ಪ್ರಯತ್ನಗಳು ಸಫಲವಾದಲ್ಲಿ ಸ್ವತಂತ್ರವಾಗಿ ವರ್ತಿಸಬಹುದಲ್ಲದೆ, ನೆಂಟರಿಷ್ಟರಿಗೂ ಸ್ನೇಹಿತರ ಗುಂಪಿಗೂ ಶ್ರೇಯಸ್ಕರವಾಗುವುದಲ್ಲದೆ ನಮ್ಮ ದೇಶಕ್ಕೇ ಯಶಸ್ಸನ್ನು ತಂದ ಪುಣ್ಯವು ನಿನಗೆ ಲಭಿಸುವುದು. ನಿನ್ನ ಕೀರ್ತಿಯು ನಮ್ಮ ನಗರದಲ್ಲೆಲ್ಲಾ ತುಂಬಿ, ತರುವಾಯ ಇಡೀ ಗ್ರೀಸ್ ದೇಶಗಳಲ್ಲೆಲ್ಲಾ ಹರಡಿ, ಇನ್ನೂ ಥೆಮಿಸ್ಟಾಕ್ಲೀಸನಂತೆ, ದೇಶ ದೇಶಾಂತರಗಳಿಗೂ ವ್ಯಾಪಿಸುವುದರಲ್ಲಿ ಸಂದೇಹವಿಲ್ಲ. ಎಲ್ಲೆಲ್ಲಿ ಹೋದರೂ ನಿನಗೆ ಸನ್ಮಾನಗೌರವಗಳು ಸಲ್ಲುವುವು. "

ಈ ಸವಿನುಡಿಗಳನ್ನು ಕೇಳಿ ಗ್ಲಾಕನನು ಹಿಗ್ಗಿ ಹೋದನು. ಹೀಗೆ ಗ್ಲಾಕನನ ಮನಸ್ಸನ್ನು ಸೆಳೆದಮೇಲೆ ಸಾಕ್ರೆಟೀಸನು ಪ್ರಶ್ನೆಮಾಡಲುಪಕ್ರಮಿಸಿದನು.

ಸಾ— "ನೀನು ಉತ್ತರೋತ್ತರ ಪಡೆಯಬಹುದಾದ ಮಹತ್ಕೀರ್ತಿಯಿಂದ ನಮ್ಮ ನಗರಕ್ಕೆ ಪ್ರಯೋಜನವಾಗಬಹುದಲ್ಲವೆ? "

ಗ್ಲಾ— "ಅದ್ದಿಯೇನು ? "

ಸಾ— "ಹಾಗಾದರೆ, ಮುಚ್ಚುಮರೆಯೇಕೆ ! ಜನಜೀವನದ ಯಾವ ವಿಷಯುಗಳಲ್ಲಿ ಸುಧಾರಣೆಗಳನ್ನು ಪ್ರಾರಂಭಮಾಡ ಬೇಕೆಂದಿರುವೆ? ತಿಳಿದುಕೊಳ್ಳೋಣ "

ಗ್ಲಾಕನನು ಅನುಮಾನಪಡುತ್ತಿರಲು, ಸಾಕ್ರೆಟೀಸನು ಪ್ರಶ್ನೆಯನ್ನು ಬದಲಿಸಿದನು.

ಸಾ— ನೀನು ಯಾವನಾದರೂ ಸ್ನೇಹಿತನಿಗೆ ಸಹಾಯ ಮಾಡಬೇಕೆಂದು ಇಷ್ಟಪಟ್ಟರೆ ಅವನ ಆಸ್ತಿಪಾಸ್ತಿಗಳನ್ನು ಹೆಚ್ಚಿಸುವುದಕ್ಕೆ ಪ್ರಯತ್ನಪಡಬಹುದಲ್ಲವೆ ? ಅದೇ ರೀತಿಯಲ್ಲಿ ನಮ್ಮದೇಶವನ್ನು ಉದ್ಧಾರಮಾಡಬೇಕೆಂದು ಆತುರಪಟ್ಟರೆ, ಅದರ ಸಂಪದಭಿವೃದ್ಧಿಮಾರ್ಗಗಳಲ್ಲಿ ಉತ್ಸಾಹಶಾಲಿಯಾಗುವೆಯಲ್ಲವೆ ?

ಗ್ಲಾ— ಹೌದು.

ಸಾ— ಹಾಗೆ ದೇಶದ ಸಂಪತ್ತು ಅಭಿವೃದ್ಧಿಯಾಗಬೇಕಾದರೆ ಆದಾಯಗಳು ವಿಧವಿಧವಾಗಿ ಹೆಚ್ಚಬೇಕಲ್ಲವೆ ?

ಗ್ಲಾ— ಹಾಗೆ ತೋರುತ್ತದೆ.

ಸಾ— ನಮ್ಮ ದೇಶದ ಆದಾಯಮಾರ್ಗಗಳಾವುವು ? ಅವು ಎಷ್ಟು ತೆರನಾಗಿರುತ್ತವೆ ? ದಯವಿಟ್ಟು ತಿಳಿಸುವೆಯಾ ? ಏಕೆಂದರೆ ಈ ವಿಷಯಗಳನ್ನು ನೀನು ಬಹಳಮಟ್ಟಿಗೆ ಪರ್ಯಾಲೋಚಿಸಿರಬೇಕು. ಕಡಿಮೆಯಾಗುತ್ತಿರುವ ಆದಾಯ ಬಾಬತುಗಳನ್ನು ಹೆಚ್ಚಿಸುವುದೂ ನಿಂತು ಹೋಗಿರುವ ಬಾಬತುಗಳ ಬದಲಾಗಿ ಹೊಸ ಆದಾಯಗಳನ್ನು ಕಂಡು ಹಿಡಿಯುವುದೂ ದೇಶದ ಸಂಪದಭಿವೃದ್ಧಿಗೆ ಕೈಹಾಕಿರುವ ಮಹಾಶಯರ ಮುಖ್ಯ ಕರ್ತವ್ಯವಲ್ಲವೆ ?

ಗ್ಲಾ— ಆದರೆ...ನಾನು ಈ ವಿಷಯಗಳಿಗೆ ಅಷ್ಟು ಗಮನ ಕೊಟ್ಟಿಲ್ಲ.

ಸಾ— ಸರಿ. ಹಾಗಾದರೆ ದೇಶದ ವೆಚ್ಚದ ಪಟ್ಟಿಯನ್ನಾದರೂ ತಿಳಿಸು. ವ್ಯರ್ಥವಾದ ವೆಚ್ಚಗಳನ್ನು ಕಡಿಮೆ ಮಾಡುವ ಮೂಲಕ, ನೀನು ದೇಶದ ಸಂಪತ್ತನ್ನು ಅಭಿವೃದ್ಧಿಮಾಡ ಬೇಕೆಂದಿರಬಹುದು.

ಗ್ಲಾ— ನಾನು ಈ ವಿಚಾರವನ್ನೂ ಪರ್ಯಾಲೋಚಿಸಿಲ್ಲ.

ಸಾ— ಓಹೋ, ಹಾಗಾದರೆ ನಮ್ಮದೇಶದ ಸಂಪದಭಿವೃದ್ಧಿ ಕಾರ್ಯಗಳು ಸ್ವಲ್ಪಕಾಲ ಕಾಯಬೇಕಾಗುವುದು. ನಾವು ಈಗಲೇ ಅವುಗಳನ್ನು ಕೈಕೊಳ್ಳುವುದಕ್ಕೆ ಸಿದ್ಧರಾಗಿಲ್ಲ. ನಾಡಿನ ಆದಾಯವೆಚ್ಚಗಳನ್ನು ತಿಳಿಯದೆಯೇ ಹೇಗೆ ಅಂಥ ಮಹತ್ಕಾರ್ಯಗಳನ್ನು ಕೈಕೊಳ್ಳುವುದು ?

ಗ್ಲಾ— ಆದರೆ, ಸಾಕ್ರೆಟೀಸ್, ನೀನು ಒಂದು ಮುಖ್ಯವಾದ ವಿಷಯವನ್ನು ಮರೆತಿರುತ್ತೀಯೆ. ಶತ್ರುಖಂಡನದ ಮೂಲಕ ನಮ್ಮ ದೇಶದ ಸಂಪತ್ತನ್ನು ಉಜ್ಜ್ವಲ ಸ್ಥಿತಿಗೆ ತರಬಹುದು.

ಸಾ— ಆಹಾ, ಆಗಬಹುದು. ನಾವು ಶತ್ರುಗಳಿಗಿಂತ ಬಲಶಾಲಿಗಳಾಗಿದ್ದರೆ. ನಾವು ದುರ್ಬಲರಾದರೋ ಇರುವುದನ್ನೂ ಕಳೆದುಕೊಳ್ಳುವೆವು.

ಗ್ಲಾ— ಸಂದೇಹವೇನು ?

ಸಾ— ಹಾಗಾದರೆ, ಯುದ್ಧಮಂತ್ರವನ್ನು ಉಪದೇಶ ಮಾಡುವುದಾದರೆ, ನಮ್ಮ ದೇಶದ ಮತ್ತು ಶತ್ರುಗಳ ಬಲಾಬಲಗಳನ್ನು ತಾರತಮ್ಯದೃಷ್ಟಿಯಿಂದ ಬಹು ಎಚ್ಚರಿಕೆಯಿಂದ ಪರೀಕ್ಷಿಸಿರಬೇಕು. ನಮ್ಮ ಬಲವೇ ಪ್ರಬಲವಾಗಿದ್ದರೆ ನಾವು ಯುದ್ಧಸನ್ನದ್ಧರಾಗಬಹುದು. ಇಲ್ಲದಿದ್ದರೆ ಶಾಂತಿಮಂತ್ರವನ್ನು ಜಪಿಸುವುದು ಮೇಲಲ್ಲವೆ ?

ಗ್ಲಾ— ಸರಿಯಾದ ಮಾತು.

ಸಾ— ಹಾಗಾದರೆ, ನಮ್ಮ ಬಲವನ್ನು ತಿಳಿಸುವೆಯಾ ? ನಮ್ಮ ಸೈನ್ಯವೂ ನಾವೆಗಳೂ ಎಷ್ಟೆಷ್ಟು ಇರುವುವು ? ಶತ್ರುಸೈನ್ಯನಾವೆಗಳು ಎಷ್ಟೆಷ್ಟು ಇರುವುವು ? ಯಾವ ಸ್ಥಿತಿಯಲ್ಲಿರುವುವು ?

ಗ್ಲಾ— ಓಹೋ, ನಾನು ಇವುಗಳನ್ನೆಲ್ಲಾ ಬಾಯಿಪಾಠ ಮಾಡಿಲ್ಲ, ತತ್ಕ್ಷಣ ಹೇಳಲಾರೆ.

ಸಾ— ಬರೆದಿಟ್ಟಿರಬಹುದು, ಹೋಗಿ ತೆಗೆದುಕೊಂಡು ಬಂದರೆ ಒಳ್ಳೆಯದು. ತಿಳಿದುಕೊಳ್ಳಬೇಕೆಂದು ಬಹಳ ಆತುರರಾಗಿದ್ದೇವೆ.

ಗ್ಲಾ— ನಾನು ಇನ್ನೂ ಬರೆವಣಿಗೆಗೆ ತಂದಿಲ್ಲ.

ಸಾ— ಹಾಗಾದರೆ, ಯುದ್ಧವನ್ನು ಈಗಲೇ ಉಪದೇಶ ಮಾಡುವ ಹಾಗಿಲ್ಲ. ಇನ್ನು ಸ್ವಲ್ಪಕಾಲ ತಡೆಯಬೇಕಾಗುತ್ತ ಯಲ್ಲವೆ ? ಭಾರೀ ವಿಷಯಗಳನ್ನು ಪರ್ಯಾಲೋಚಿಸುವ ರಲ್ಲಿ, ಈ ಸಣ್ಣ ವಿಷಯಗಳಿಗೆ ಇನ್ನೂ ಗಮನ ಕೊಟ್ಟಿಲ್ಲದೆ ಇರಬಹುದು. ನೀನು ನಮ್ಮ ದೇಶದ ಕೋಟೆಕೊತ್ತಲುಗಳನ್ನೂ ಸೈನ್ಯಗಳನ್ನೂ ಕುರಿತು ಬಹಳ ದೀರ್ಘವಾಗಿ ಆಲೋಚನೆ ಮಾಡಿರಬೇಕು. ಅದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ.

ಗ್ಲಾ— ಅವುಗಳನ್ನೆಲ್ಲಾ ನಿರ್ಮೂಲ ಮಾಡುವುದೇ ಒಳ್ಳೆಯದೆಂದು ನನ್ನ ಅಭಿಪ್ರಾಯ.

ಏಕೆಂದರೆ, ಆ ಸೈನ್ಯಗಳು ಹಳ್ಳಿಗಾಡನ್ನು ಲೂಟಿಮಾಡುವುದಕ್ಕಾಯಿತೇ ಹೊರತು ಮತ್ತೇನೂ ಪ್ರಯೋಜನವಿಲ್ಲ.

ಸಾ— ಕೋಟೆಗಳನ್ನು ನೆಲಸಮ ಮಾಡಿದರೆ, ಸೈನಿಕರಲ್ಲದೆ ಸರ್ವರೂ ಹಳ್ಳಿಗಳನ್ನು ಕೊಳ್ಳೆ ಹೊಡಿಯಲು ದಾರಿ ಮಾಡಿ ಕೊಟ್ಟಂತಾಗುವುದಿಲ್ಲವೆ? ಅದು ಹಾಗಿರಲಿ ನೀನೆ ಸ್ವತಃ ಆ ಪ್ರದೇಶಗಳಿಗೆ ಹೋಗಿ ಪರೀಕ್ಷೆ ಮಾಡಿರುವೆಯಾ? ಕೋಟೆಗಳೂ ಸೈನ್ಯಗಳೂ ಸಮರ್ಪಕವಾದ ಸ್ಥಿತಿಯಲ್ಲಿಲ್ಲವೆಂದು ಹೇಗೆ ಹೇಳುವೆ?

ಗ್ಲಾ— ಸಮರ್ಪಕವಾಗಿಲ್ಲವೆಂದು ಊಹಿಸುತ್ತೇನೆ.

ಸಾ— ಬರೀ ಊಹೆಗಳನ್ನು ಬಿಟ್ಟು, ವಿಷಯಗಳು ವಾಸ್ತವವಾಗಿ ಯಾವ ಸ್ಥಿತಿಯಲ್ಲಿರುವವೆಂಬುದನ್ನು ಖಂಡಿತವಾಗಿ ತಿಳಿದ ಹೊರತು ಇತರರಿಗೆ ಉಪದೇಶ ಮಾಡುವುದನ್ನು ಬಿಡುವುದು ಒಳ್ಳೆಯದಲ್ಲವೆ?

ಗ್ಲಾ—...ಇರಬಹುದು.

ಸಾ— ಈಚೆಗೆ ಬೆಳ್ಳಿಯು ಕಡಿಮೆಯಾಗುತ್ತಿದೆ. ನೀನು ಗಣಿಗಳಿಗೆ ಹೋಗಿ ಪರೀಕ್ಷಿಸಿಲ್ಲವೇನೋ ?

ಗ್ಲಾ— ಇಲ್ಲ, ನಾನು ಅಲ್ಲಿಗೆ ಹೋಗಿಲ್ಲ.

ಸಾ— ಹೋಗದಿರುವುದೇ ಮೇಲು. ಗಣಿಗಳ ಹತ್ತಿರ ಹವೆ ಚೆನ್ನಾಗಿಲ್ಲವಂತೆ. ಅವುಗಳ ವಿಷಯವಾಗಿ ಮಾತನಾಡಬೇಕಾದ ಸಂಭವವು ಬಂದರೆ, ಈ ನೆಪವೊಂದೇ ಸಾಕು.

ಗ್ಲಾ— ಪರಿಹಾಸ್ಯ ಮಾಡುತ್ತಿರುವಂತಿದೆ!

ಸಾ— ಅವೆಲ್ಲಾ ಹಾಗಿರಲಿ. ಇದೊಂದು ವಿಷಯಮಾತ್ರ ನೀನು ಉದಾಸೀನ ಮಾಡಿರುವ ಹಾಗಿಲ್ಲ. ಅದೇನಂದರೆ—ಮಳೆ ಬೆಳೆಗಳು. ವರ್ಷದ ಬೆಳೆಯು ದೇಶಕ್ಕೆ ಸಾಕಾಗುತ್ತದೆಯೇ ಅಥವಾ ಸಾಲದೇ ಹೋಗಬಹುದೇ? ಇದನ್ನು ನೀನು ಸರಿಯಾಗಿ ತಿಳಿದಿದ್ದರೆ, ಸಕಾಲದಲ್ಲಿ ನೀನು ಕೊಡುವ ಸೂಚನೆಗಳಿಂದ ಸಾವಿರಾರು ಜನ ಪ್ರಜೆಗಳನ್ನು ಉಳಿಸಬಹುದು. ಇದಕ್ಕಿಂತ ಯಶಸ್ಸು ಬೇಕೆ?

ಗ್ಲಾ—ನಾನು ಇಂಥ ವಿಷಯಗಳನ್ನೆಲ್ಲಾ ತಿಳಿದುಕೊಂಡು ಶೇಖರಮಾಡಿಟ್ಟುಕೊಂಡಿರಬೇಕಾದರೆ ನನ್ನ ಕೆಲಸಗಳು ಮಿತಿ ಮೀರಿಹೋಗಿ ಅನಿರ್ವಾಹವಾಗುವುದರಲ್ಲಿ ಸಂದೇಹವಿಲ್ಲ.

ಸಾ—ಅವಶ್ಯವಾದ ವಿಷಯಗಳನ್ನು ತಿಳಿಯದೆ ಯಾವ ಸಂಸಾರವನ್ನೂ ನಡೆಸುವುದಕ್ಕಾಗುವುದಿಲ್ಲ. ದೇಶವೆಂದರೆ ಸಾವಿರಾರು ಸಂಸಾರಗಳ ಸಮುದಾಯ. ಅವುಗಳನ್ನೆಲ್ಲಾ ಸರಿಪಡಿಸುವುದು ಬಹು ಗುರುತರವಾದ ಕಾರ್ಯ. ಮೊದಲು ಒಂದು ಮನೆ, ಒಂದು ಸಂಸಾರವನ್ನು ಯಾಕೆ ಸರಿಯಾಗಿ ನಡೆಸಬಾರದು? ನಿಮ್ಮ ಚಿಕ್ಕಪ್ಪನವರಿಗೆ ವಯಸ್ಸಾಗುತ್ತ ಬಂತು. ನಿನ್ನ ಸಹಾಯವು ಬೇಕಾಗಬಹುದು. ಈ ಕೆಲಸವನ್ನು ಸಮರ್ಪಕವಾಗಿ ನಡೆಸಿದರೆ, ಆ ಮೇಲೆ ಇನ್ನೂ ದೊಡ್ಡ ಕೆಲಸಗಳನ್ನು ಹುಡುಕಿಕೊಂಡು ಹೋಗಬಹುದು. ಒಬ್ಬಿಬ್ಬರಿಗೇನೆ ಸಹಾಯ ಮಾಡಲಾರದವರು, ಪ್ರಪಂಚವನ್ನೇ ಹೇಗೆ ಉದ್ಧಾರಮಾಡಬಲ್ಲರು? ಸೇರಕ್ಕಿಯನ್ನೇ ಹೊರಲಾರದವರು, ಪಲ್ಲದ ಮೂಟೆಯನ್ನು ಹೇಗೆ ಹೊತ್ತಾರು?

ಗ್ಲಾ—ನಮ್ಮ ಚಿಕ್ಕಪ್ಪನವರು ಒಪ್ಪಬೇಕಲ್ಲ!

ಸಾ—ಓಹೋ! ನಿಮ್ಮ ಚಿಕ್ಕಪ್ಪನವರನ್ನೇ ಒಪ್ಪಿಸಲಾರದಿದ್ದರೆ ದೇಶದಲ್ಲಿ ಲಕ್ಷಾಂತರ ಜನರ ಮೆಚ್ಚುಗೆಯನ್ನು ಹೇಗೆ ಸಂಪಾದಿಸುವೆ? ಎಚ್ಚರಿಕೆ, ಗ್ಲಾಕನ್, ಯಶಸ್ಸನ್ನು ಸಂಪಾದಿಸುವುದಕ್ಕೆ ಹೊರಟು, ಕೆಟ್ಟ ಹೆಸರನ್ನು ಕಟ್ಟಿಕೊಂಡೀಯೆ. ತಿಳಿಯದ ವಿಚಾರಗಳಲ್ಲಿ ಕೈಹಾಕಿ ಒಣ ಆಶೆಯಿಂದ ಮಾತನಾಡುವುದು ಅಪಾಯಕರವಲ್ಲವೆ? ಅಂಥವರು ನಮ್ಮ ಸುತ್ತಮುತ್ತಲೂ ತುಂಬಿಲ್ಲವೆ? ಅವರ ಗತಿಯನ್ನು ನೋಡು— ಕೀರ್ತಿಯನ್ನು ಸಂಪಾದಿಸುತ್ತಿದ್ದಾರೆಯೋ, ಅಪಕೀರ್ತಿಗೆ ಗುರಿಯಾಗುತ್ತಿದ್ದಾರೆಯೋ.

ಸರಿಯಾಗಿ ಪರ್ಯಾಲೋಚಿಸಿ ವಿಷಯಗಳನ್ನು ಗ್ರಹಿಸಿ ಮಾತನಾಡತಕ್ಕವರನ್ನೂ ನೋಡು. ಅವರ ಮಾತುಗಳಲ್ಲಿ ಎಷ್ಟು ತೂಕ, ಎಷ್ಟು ಅರ್ಥಪುಷ್ಟಿ ಇರುತ್ತವೆ! ಜನರು ಹೇಗೆ ಆತುರವಾಗಿ ಮರ್ಯಾದೆಪೂರ್ವಕವಾಗಿ ಕೇಳುವರು! ಜನಗಳಲ್ಲಿ ಮಾನಮನ್ನಣೆಗಳನ್ನು ಹೊಂದಿರತಕ್ಕವರನ್ನು ನಿರೀಕ್ಷಿಸಿ ನೋಡಿದರೆ, ಅವರು ಜ್ಞಾನಿಗಳಾಗಿಯೇ ಆಗಿರುತ್ತಾರೆನ್ನುವುದರಲ್ಲಿ ಸಂದೇಹವಿಲ್ಲ. ಜ್ಞಾನಹೀನರಾದರೋ, ಅವಮಾನಕ್ಕೆ ಗುರಿಯಾಗುವುದೇ ಸರಿ. ನೀನು ಯಶಸ್ವಿಯಾಗಬೇಕಾದರೆ ಯಾವ ಆಶಯಗಳನ್ನು ಇಟ್ಟುಕೊಂಡಿರುತ್ತೀಯೋ ಆ ವಿಷಯಗಳಲ್ಲಿ ಸಂಪೂರ್ಣ ಜ್ಞಾನವನ್ನು ಸಂಪಾದಿಸುವುದು ಅತ್ಯವಶ್ಯಕ. ದೇಶದ ಏಳಿಗೆಯಂಥ ಮಹತ್ಕಾರ್ಯಕ್ಕೆ ಕೈಹಾಕುವುದಕ್ಕೆ ಮೊದಲು, ಜನಜೀವನದ ಸರ್ವಭಾಗಗಳಲ್ಲಿಯೂ ಪಾಂಡಿತ್ಯವನ್ನು ಗಳಿಸಿದ್ದೇ ಆದರೆ ನಿನ್ನ ಆಕಾಂಕ್ಷೆಯು ನೆರವೇರುವುದರಲ್ಲಿ ಸಂದೇಹವಿಲ್ಲ.

# ಸಂಗೊಳ್ಳೀ ರಾಯಣ್ಣಾ

( ವೈ. ವಾ. 'ಕಾವ್ಯಾನಂದ'ರ ಲೇಖನಸಂಗ್ರಹದಿಂದ )

ರಾಯಣ್ಣನು ಕಿತ್ತೂರ ದೇಸಗತಿಯ ಒಬ್ಬ ಓಲೇಕಾರನು. ಬೈಲಹೊಂಗಲದ ದಕ್ಷಿಣಕ್ಕೆ ಮಲಾಪಹಾರಿ ನದಿಯ ದಂಡೆಯ ಮೇಲೆ ಇರುವ ಸಂಗೊಳ್ಳೀಗ್ರಾಮವೇ ರಾಯಣ್ಣನ ಹುಟ್ಟಿದ ಊರು. ರಾಯಣ್ಣನು ಜಾತಿಯಿಂದ ಕುರುಬರವನು. ಇವನು ಒಳ್ಳೇ ಗಟ್ಟಿಗನೂ ಸ್ವಾಮಿನಿಷ್ಠನೂ ಸ್ವಾಭಿಮಾನಿಯೂ ಆಗಿದ್ದನು.

ಸನ್ನ ೧೮೨೪ರ ಇಸ್ವಿಯಲ್ಲಿ ಕಿತ್ತೂರು ಹಾಳಾಗಿ ಇಂಗ್ಲೀಷರ ವಶವಾಯಿತು. ಜೇನಿನ ಹುಟ್ಟು ಕಡಿದು ಬೀಳಲು ನೊಣಗಳು ನಿರಾಶ್ರಿತವಾಗಿ ಸಿಟ್ಟಿನಿಂದ ಹಾರಾಡುವಂತೆ, ದೇಸಗತಿಯ ದಂಡಾಳುಗಳ ಗತಿಯಾಯಿತು. ಸುತ್ತಲಿರುವ ಊರುಗಳಿಂದ ಕಿತ್ತೂರಿಗೆ ಬಂದು ಸೇರಿಕೊಂಡಿದ್ದ ಕಡುಗಲಿಗಳೆಲ್ಲ ತಮ್ಮ ತಮ್ಮ ಊರಿಗೆ ಹೋದರು. ಅದರಂತೆ ರಾಯಣ್ಣನೂ ಸಂಗೊಳ್ಳಿಗೆ ಹೋಗಿ ತನ್ನೂರ ಹಳಬಿಕೆಯನ್ನು ಮಾಡಲಾರಂಭಿಸಿದನು.

ನಮ್ಮ ಕಿತ್ತೂರ ದೌಲತ್ತು ಹಾಳಾಯಿತಲ್ಲ ಎಂಬ ಎದೆಗಿಚ್ಚು ರಾಯಣ್ಣನಿಗೆ ಬಹಳವಾಗಿತ್ತು. ಸಂಗೊಳ್ಳೀ ಶಾನಭಾಗ ಬಾಳಪ್ಪನೆಂಬುವವನಿಗೂ ರಾಯಣ್ಣನಿಗೂ ಏನೋಕಾರಣದಿಂದ ವೈಮನಸ್ಯವುಂಟಾಯಿತು. ಶಾನಭಾಗನು ಕಠಿಣ ಕೆಲಸಗಳನ್ನು ರಾಯಣ್ಣನಿಗೆ ಹೇಳತೊಡಗಿದನು. ತಾನು ಅವಶ್ಯವಾಗಿ ಮಾಡಬೇಕಾದ ಕೆಲಸವು ಎಂಥ ಕಠಿಣವಿದ್ದರೂ ರಾಯಣ್ಣನು ಅದನ್ನು ಹಾ ಹಾಂ ಅಂಬುವದರೊಳಗೆ ಮಾಡಿ ಕೊಡುತ್ತಿದ್ದನು. ಆದರೆ ಶಾನಭಾಗನ ಸ್ವಂತದ ಕೆಲಸವನ್ನು ಮಾತ್ರ ಮಾಡುತ್ತಿದ್ದಿಲ್ಲ.

ಒಂದು ದಿನ ಶಾನಭಾಗನು ಆಗಿನ ತಾಲೂಕಿನ ಸ್ಥಳವಾದ ಸಂಪಗಾಂವಿಗೆ ಸರ್ಕಾರೀ ಕೆಲಸಕ್ಕಾಗಿ ಹೊರಟನು. ದಪ್ತರವನ್ನು ತಕ್ಕೊಂಡು ರಾಯಣ್ಣನೂ ಸಂಗಡ ಹೋದನು. ಮಾರ್ಗದಲ್ಲಿ ಹತ್ತಿದ ಹಳ್ಳದಲ್ಲಿ ಸ್ನಾನ ಮಾಡಿ ತನ್ನ ಉಟ್ಟ ಧೋತರವನ್ನು ಸೆಳೆದು ಒಣಗಿಸು ಎಂದು ಶಾನಭಾಗನು ರಾಯಣ್ಣನಿಗೆ ಹೇಳಿದನು. ರಾಯಣ್ಣನು ನಿನ್ನ ಪಂಚೆಯನ್ನು ಸೆಳೆಯಲಿಕ್ಕೆ ನಿನ್ನ ತೊತ್ತಲ್ಲ, ಸರ್ಕಾರಿ ಕೆಲಸವಿದ್ದರೆ ಹೇಳು ಅಷ್ಟು ಮಾಡುತ್ತೇನೆ ಅಂದನು. ಹೀಗೆ ಬಾಯಿಗೆ ಬಾಯಿ ಹತ್ತಿ ಕೈಗೆ ಕೈಯು ಕೂಡ ಹತ್ತಿತು. ರಾಯಣ್ಣನು ಕಣ್ಣು ಕೆಂ ಮಾಡಿ ಹತ್ತರಿದ್ದ ಕತ್ತಿಯನ್ನು ಹಿರಿದು ಶಾನಭಾಗನನ್ನು ಮಾಡಿ ಬಿಟ್ಟನು.

ಹೇಗೋ ಸಾಯುತಕ್ಕ ಪ್ರಸಂಗವೇ ಬಂದಿತು; ಹೇ ಹಾಗೆ ಸಾಯುವದಕ್ಕಿಂತ ಪರಾಕ್ರಮವನ್ನು ಮಾಡಿ ಕಿ ದೇಸಗತಿಯನ್ನು ಮತ್ತೆ ಸ್ಥಾಪಿಸುವದೇ ಹಿತವೆಂದು ಹೊರಟು ದಂಡು ಕೂಡಿಸಿದನು. ಸಂಪಗಾವ, ಬೀಡಿ, ಖಾ ಪೂರ ತಾಲೂಕ ಕಚೇರಿಗಳನ್ನೇ ಮೊದಲು ಸುಟ್ಟು ಕುಮಕು ಮಾಡಿಕೊಂಡು ಕಿತ್ತೂರಿಗೆ ಬರಬೇಕೆಂದು ಕೈದ್ದ ಕುಲವಳ್ಳೀ ಗುಡ್ಡವನ್ನು ಸೇರಿದನು. ಇವನು ಬಗ್ಗರಿಗೆ ಕೈಹಚ್ಚದೆ ಸ್ವಾಮಿದ್ರೋಹಿಗಳೆಂದು ತಿಳಿದ ಸಾಹು ರನ್ನೇ ಸುಲಿದು ತನ್ನ ದಂಡಾಳುಗಳಿಗೂ ಬಡವರಿಗೂ ಕೊ ತ್ತಿದ್ದನು. ಅದರಿಂದ ಸಾವಿರಾರು ಜನರು ರಾಯಣ್ಣ ಸಹಾಯಕರಾದರು. ಇದಕ್ಕೇ ರಾಯನಾಯಕನ ಎಂಬು ದೇಶವಲ್ಲಿ ಸುದ್ದಿ ಹಬ್ಬಿತು.

ಸಂಪಗಾಂವ ತಾಲೂಕಿನ ಇಬ್ಬರು ಗೌಡರೂ ಮಾ ದಾರರೂ ಕೂಡಿ ಸರ್ಕಾರದಿಂದ 'ರಾಯಣ್ಣನನ್ನು ಹಿಡಿದುಕೊಡುತ್ತೇವೆ' ಎಂದು ಎಲೀ ಹಿಡಿದರು. ಒಂದು ಮುಂಜಾವಿನಲ್ಲಿ ಡವಗೀಮಡ ಎಂಬಲ್ಲಿ ರಾಯಣ್ಣನು ಮಾಡಿ ತನ್ನ ಕುತನೀ ಚಣ್ಣವನ್ನು ಏರಿಸಿಕೊಳ್ಳುತ್ತಿ ಆಗಿನ ರೀತಿಯಂತೆ ಚಣ್ಣಗಳು ಬಿಗಿಯಾಗಿರುತ್ತಿದ್ದವು. ಚಣ್ಣ ಮೊಳಕಾಲಮೇಲೆ ಏರಿತ್ತು. ಅಷ್ಟರಲ್ಲಿಯೇ ದಂಡೆಯ ಬಂದು ಕೂತು ದಿನದಂತೆ ವಿಶ್ವಾಸದಿಂದ ಮಾತಾಡುವ ಗೌಡನು ರಾಯಣ್ಣನನ್ನು ತೆಕ್ಕೆಹಾಕಿ ಹಿಡಿದು ಸೀಳು ದನು. ಕೂಡಲೆ ಸುತ್ತು ಮುತ್ತು ಅಡಗಿಕೊಂಡಿದ್ದ ಇಂ ಷರ ಸೋಲ್ಜರರು ಮುಗಿಬಿದ್ದು ರಾಯಣ್ಣನನ್ನು ಮು ಬಿಗಿದರು. ರಾಯಣ್ಣನು ಹಲ್ಲುಕಡಿದು, 'ಹೆಂಗಸ ವಿಶ್ವಾಸಘಾತ ಮಾಡಿ ನನ್ನನ್ನು ಕೊಲ್ಲಬೇಡಿರಿ. ನನ್ನ ದಂ ಮೇಲಿಟ್ಟ ಹತಿಯಾರವನ್ನು ಕಯ್ಯಲ್ಲಿ ಕೊಟ್ಟು ಬಳಿಕ ನನ್ನ ಮೇಲೆ ಬಿದ್ದು ನೋಡೋಣ' ಎಂದನು. ಕೇಳುವವ

ಹಾಗೆಯೇ ಹೊರಸಿನ ಮೇಲೆ ಬಿಗಿದು ನೇದಗಡಕ್ಕೆ ಒಯ್ದರು. ಅಲ್ಲಿಯೇ ಅವನನ್ನು ಗಲ್ಲಿಗೆ ಹಾಕಿದರು.

ಗಲ್ಲಿಗೆ ಹಾಕಿದ ಸ್ಥಳದಲ್ಲಿ ಒಂದು ಆಲದ ಮರವು ಹುಟ್ಟಿರುತ್ತದೆ. ಕೆಲವರು ಭಕ್ತಿಯಿಂದ ಆ ಮರಕ್ಕೆ ಕಲ್ಲಕಟ್ಟೆಯನ್ನು ಕಟ್ಟಿಸಿರುತ್ತಾರೆ. ಮಕ್ಕಳಿಲ್ಲದವರು ಬೇಡಿಕೊಂಡು ಮಕ್ಕಳಾದ ಬಳಿಕ ಒಂದು ಚಿಕ್ಕ ತೊಟ್ಟಿಲವನ್ನು ಆ ಮರಕ್ಕೆ ತಂದು ಕಟ್ಟುವ ವಾಡಿಕೆಯಿದೆ. ಈಗ ಅಲ್ಲಿ ರಾಯಪೂರವೆಂಬ ಒಂದು ಹಳ್ಳಿಯೇ ಆಗಿರುತ್ತದೆ. ರಾಯಣ್ಣನ ಜೀವದ ಗೆಳೆಯನಾದ ಬಿಚ್ಚಗತ್ತಿ ಚನ್ನಬಸಪ್ಪ ಎಂಬಾತನು ಗಡ್ಡಾಬೆಳಸಿ ರಾಯಣ್ಣನ ಗಿಡದ ಪೂಜೆಯನ್ನು ಕೆಲಕಾಲ ಮಾಡುತ್ತಿದ್ದನೆಂದೂ ಸುದ್ದಿಯದೆ.

ರಾಯಣ್ಣ ವಂಶದವರು ಈಗ್ಯೂ ಸಂಗೊಳ್ಳಿಯಲ್ಲಿರುತ್ತಾರೆ. ಅವನದೊಂದು ಕಲ್ಲಿನ ಮೂರ್ತಿಯನ್ನು ಮಾಡಿ ಕೈಯಲ್ಲಿ ಕತ್ತಿಯನ್ನು ಕೊಟ್ಟ ಸಂಗೊಳ್ಳಿ ಗ್ರಾಮದ ಮಧ್ಯದಲ್ಲಿ ಪೂರ್ವಾಭಿಮುಖವಾಗಿ ಕೂಡ್ರಿಸಿದ್ದಾರೆ. ರಾಯಣ್ಣನ ಮೇಲಿನ ಲಾವಣಿಗಳನ್ನು ಎಲ್ಲ ಕಡೆಗೂ ಹಾಡುತ್ತಾರೆ. ರಾಯಣ್ಣನು ಸ। ೧೮೩೨ ಇಸವಿಯಲ್ಲಿ ಪರಲೋಕವನ್ನೈದಿದನು. ಅವನನ್ನು ಹಿಡಿದು ಕೊಟ್ಟವರಿಗೆ ಇಂದಿಗೂ ಗ್ರಾಮುಗಳು ಇನಾಮು ನಡೆಯುತ್ತವೆ.



# ತಮಿಳುನಾಡಿನ ಹೆಂಗಸು



ಲೇಖಕರು:— ಸುಮತಿಬಾಯಿ ಬಿ. ಎ, ಎಲ್. ಟಿ., ಭಿಷಗ್‌ರತ್ನ, ಪ್ರೇಮಾಯತನ, ತುಂಗಭದ್ರಾ.

ಇತಿಹಾಸದ ಪ್ರತಿಧ್ವನಿಯನ್ನು ನಂಬುವುದೇ ಆದರೆ ಒಂದು ಕಾಲದ ತಮಿಳು ಹೆಂಗಸು ಬಹಳ ಉಚ್ಚ ಸ್ಥಿತಿಯಲ್ಲಿದ್ದಳು, ಈಗಿನಂತಲ್ಲ ಎಂದು ಹೇಳಲೇಬೇಕಾಗುವುದು. ಈಗಿನ ಅಧೋಗತಿಯು ಹೇಗೇತಕ್ಕೆ ಬಂತು ಎಂಬುದನ್ನು ತಿಳಿದುಕೊಳ್ಳಬೇಕಾದರೆ ನಾವು ಆ ನಾಡಿನ ಮತ್ತು ಹೆಂಗಸರ ಹಿಂದಿನ ಇತಿಹಾಸವನ್ನು ಪರೀಕ್ಷಿಸಬೇಕು. ತಮಿಳು ಹೆಂಗಸಿನ ಹಿಂದಿನ ಶ್ರೇಷ್ಠತೆಯೂ ಆಕೆಗೆ ಸಮಾಜದಲ್ಲಿದ್ದ ಮಾನವೂ ಅಂದಿನ ಧರ್ಮವನ್ನವಲಂಬಿಸಿಕೊಂಡಿತ್ತು. ಭರತವರ್ಷದಲ್ಲೆಲ್ಲವೂ ಇದ್ದಂತೆ ತಮಿಳು ನಾಡಿನಲ್ಲಿಯೂ ಜನರ ಸ್ಥಿತಿಗತಿಗಳು ಧರ್ಮದ ಆಚರಣೆಗಳಿಗೂ ಗಮ್ಯಗಳಿಗೂ ಅಧೀನವಾಗಿದ್ದವು. ಅವು ಏರಿದಂತೆ ಇವೂ ಏರುವವು. ಅವು ಇಳಿದಂತೆ ಇವೂ ಇಳಿಯುವುವು.

ಇತಿಹಾಸಜ್ಞರಲ್ಲನೇಕರು ತಮಿಳು ಸಂಸ್ಕೃತಿಯು ದ್ರಾವಿಡ ಸಂಸ್ಕೃತಿಯಾಗಿತ್ತೆಂಬುದಕ್ಕೆ ಒಪ್ಪಿಕೊಂಡಿದ್ದಾರೆ. ರಾವಣನ ಕಾಲದ ಸಂಸ್ಕೃತಿಯು ಅದರ ಒಂದು ಪ್ರಕರಣವು ಮಾತ್ರವೇ. ಇತಿಹಾಸಸಂಶೋಧಕರು ಈ ನಾಡು ಒಂದಾನೊಂದು ಕಾಲದಲ್ಲಿ 'ರಾಕ್ಷಸ' ಎಂಬ ಜನರದಾಗಿತ್ತು ಎಂದು ಹೇಳುತ್ತಾರೆ. ಮತ್ತು ರಾವಣನು ಆ ಜನಾಂಗಕ್ಕೆ ಸೇರಿದವನು ಎಂಬುದು ಸಾಧಾರಣವಾಗಿ ತಿಳಿದಿರುವ ಮಾತೇ ಆಗಿದೆ. ಈ ರಾಕ್ಷಸರು ಶಿವಭಕ್ತರಾಗಿದ್ದು ಸೃಷ್ಟಿಸಂಕೇತವಾದ ಲಿಂಗದ ಪೂಜೆಯನ್ನು ಮಾಡುವವರಾಗಿದ್ದರು. ಅವರ ಧರ್ಮವು ಸಂಪೂರ್ಣವಾಗಿ ವ್ಯಕ್ತಿಯ ಇಷ್ಟಾನುಸಾರವಾಗಿದ್ದುದರಿಂದ ಅವರಿಗೆ ಪೂಜಾರಿಪುರೋಹಿತರ ಅವಶ್ಯಕತೆಯು ಇರಲೇ ಇಲ್ಲ. ಇಷ್ಟೇ ಅಲ್ಲ—ಅವರು ಉಚ್ಚರೆಂದು ಭಾವಿಸಲ್ಪಡುವ ಒಂದು ಜಾತಿಗೆ ಮಾತ್ರ ಮೀಸಲಾಗಿದ್ದ ಯಾಗ ಯಜ್ಞ ಪುರಾಣಗಳ ವೈರಿಗಳೇ ಆಗಿದ್ದರು. ತಮಗೆ ತಾವೇ ಪುರೋಹಿತರಾಗಿದ್ದು ಯಾರೂ ಇತರರ ಪೌರೋಹಿತ್ಯಕ್ಕೆ ಒಪ್ಪುತ್ತಿದ್ದಿಲ್ಲ. ಜನರೆಲ್ಲರೂ ಏಕಸಮಾನರೆಂಬುದೇ ಇವರ ಮನಸ್ಸಿನ ಮತ್ತು ಸಮಾಜದ ಧರ್ಮ; ಮತ್ತದರಲ್ಲಿ ಜಾತಿಲಿಂಗಗಳ ಉಚ್ಚ ನೀಚ ಭೇದವೇ ಇರಲಿಲ್ಲ. ಸ್ತ್ರೀಪುರುಷರಿಗೂ ಸಮಾನಾಧಿಕಾರ ಕರ್ತವ್ಯಗಳವರಲ್ಲಿ. ಇಬ್ಬರ ಗುಣಗಮ್ಯಗಳನ್ನು ಪರೀಕ್ಷಿಸಲಿಕ್ಕೂ ಒಂದೇ ಒರೆಗಲ್ಲು. ದೃಷ್ಟಾಂತಕ್ಕೆ ಶೂರ್ಪನಖೆಯು ತನ್ನಣ್ಣನ ರಾಜ್ಯದ ಒಂದು ದೊಡ್ಡ ಭಾಗವಾದ ಜನಸ್ಥಾನ ಮತ್ತು ದಂಡಕಾರಣ್ಯಗಳನ್ನು ಆತನಿಗಾಗಿ ಆಳುವವಳಾಗಿದ್ದಳು. ಮೇರೆಗಳನ್ನೊಳಗೊಂಡ ಈ ಭಾಗಗಳನ್ನು ಆಳುವುದು ಸಾಮಾನ್ಯವಾದ ಕೆಲಸವಲ್ಲವೆಂದು ತಿಳಿದು ರಾವಣನು ತನ್ನ ತಂಗಿಯನ್ನೇ ಅಲ್ಲಿ

ಟ್ಟನು. ಆಕೆಯು ರಾಮಲಕ್ಷ್ಮಣರಲ್ಲಿಗೆ ಬಂದಾಗ ವಿತಂತುವಾಗಿದ್ದಳು. ಆಕೆಗೆ ಮಕ್ಕಳು ಇದ್ದವು. ಆದರೆ ರಾಕ್ಷಸರಲ್ಲಿ ಪುನರ್ವಿವಾಹಪದ್ಧತಿಯಿದ್ದು ವರನನ್ನು ಆರಿಸಿಕೊಳ್ಳುವ ಕೆಲಸವು ಹೆಂಗಸರದೇ ಆಗಿದ್ದುದರಿಂದ ಆಕೆಯು ರೂಢಿಗನುಸಾರವಾಗಿ ತನಗೆ ಬೇಕಾದ ವರನಿದ್ದಲ್ಲಿಗೆ ಬಂದಳು. ಮದುವೆಗೆ ಪ್ರೀತಿಯೇ ಪ್ರಧಾನವಾದುದರಿಂದ ಮತ್ತು ಎಲ್ಲ ವಿಷಯಗಳಂತೆ ಸ್ತ್ರೀಪುರುಷರಿಗೂ ಸಮಾನಾಧಿಕಾರವಿದ್ದುದರಿಂದ ಅವರಲ್ಲಿ ಬಹು ಪತ್ನಿತ್ವಕ್ಕನಕಾಶವಿದ್ದಂತೆ ಬಹುಪತಿತ್ವಕ್ಕೂ ಅವಕಾಶವಿತ್ತು. ಸಂಘನೀತಿಯಲ್ಲಿ ಅವಕಾಶವಿದ್ದರೂ ರೂಢಿಯು ಅಷ್ಟಾಗಿರಲಿಲ್ಲವೆಂಬುದು ಇತಿಹಾಸದಿಂದ ಸ್ಪಷ್ಟವಾಗುತ್ತದೆ.

ಈ ರಾಕ್ಷಸರು ಉತ್ತಮಯೋಧರಾಗಿದ್ದುದರಿಂದ ರಣ ರಂಗಕ್ಕೆ ಹೋದರೆ ಮನೆಗೆ ಹಿಂತಿರುಗಿ ಬರುವುದು ಸಂಶಯದ ವಿಷಯವಾಗಿತ್ತು. ಹಾಗಿರುವಾಗ ಅವರ ಸಕಲ ರಾಜಕಾರ್ಯಗಳನ್ನು ಹೆಂಗಸರು ನೋಡಬಲ್ಲವರಾಗಿದ್ದರು. ಅವರ ಸಂಸ್ಕೃತಿಯೇ ಮಾತೃಪ್ರಧಾನ ಸಂಸ್ಕೃತಿ (Matriarchal) ಯಾಗಿದ್ದುದರಿಂದ ಆಸ್ತಿಯು ಹೆಂಗಸಿನ ಮುಖಾಂತರವಾಗಿ ಬರುತ್ತಿತ್ತು. ಈಗಲೂ ಮಲೆಯಾಳದಲ್ಲೀರೀತಿಯಿದೆ. ಅಲ್ಲಿಯ "ಮರುಮಕ್ಕತಾಯಂ ಲಾ" (Marumakkatayan Law of Inheritance) ಈ ಪುರಾತನ ತಮಿಳ ಸಂಸ್ಕೃತಿಯದೇ ಆಗಿದೆ ಎಂದು ಅನೇಕ ಇತಿಹಾಸಜ್ಞರ ಮತ. ಆಸ್ತಿಯ ವಿಷಯ ಕಾನೂನು ಹೀಗಿರೋಣದರಿಂದ ಹೆಂಗಸಿಗೆ ಬಹಳ ಮರ್ಯಾದೆಯಿತ್ತು. (ಟಮಿಲ್ ಆರ್ಕೆಯೊಲಾಜಿಕಲ್ ಸೊಸೈಟಿ ಸೀರಿಯಲ ನಂ. ಒನ್ನು ನೋಡಿ)

ಲಂಕೆಯ ಯುದ್ಧವೂ ರಾವಣನ ಸಂಹಾರವೂ ಈ ಪುರಾತನ ಸಂಸ್ಕೃತಿಯನ್ನು ಹಾಳು ಮಾಡಿತು. ಅಲ್ಲಿಂದ ದ್ರಾವಿಡ ಸಂಸ್ಕೃತಿಯು ಕೆಲವು ಕಡೆ ಹಾಳಾಗಿಯೂ ಕೆಲವು ಕಡೆ ಆರ್ಯ ಸಂಸ್ಕೃತಿಯಲ್ಲಿಯೇ ಸೇರಿಕೊಂಡೂ ಬೇರೆಯೊಂದು ಆಗಿಲ್ಲದಂತಾಯಿತು. ಇಷ್ಟಾದೊಡನೆಯೇ ಅಂದಿನ ಆರ್ಯರಲ್ಲಿರುವ ರೀತಿನೀತಿಗಳು ಈ ಭಾಗದಲ್ಲಿಯೂ ಮನೆಮಾಡಿಕೊಳ್ಳುತ್ತಾ ಬಂದುವು. ಆಸ್ತಿಯ ಕಾನೂನುಗಳು ಮಾರ್ಪಟ್ಟವು. ಮಾತೃಪ್ರಧಾನಸಂಸ್ಕೃತಿಯು ಪಿತೃಪ್ರಧಾನಸಂಸ್ಕೃತಿಯಾಯಿತು.

ಗಂಡಸಿಗೆ ಹೆಚ್ಚಿನ ಅಧಿಕಾರವು ಬಂತು. ವರ್ಣ, ಜಾತಿ, ಲಿಂಗ, ಕುಲ, ಭೇದಗಳು ಈ ತಮಿಳು ಸಂಸ್ಕೃತಿಯನ್ನು ಸೇರಿಕೊಂಡವು. ಪೌರೋಹಿತ್ಯಕ್ಕೂ ಮಣೆ ಹಾಕಿತು. ಉಚ್ಚ ನೀಚ ಭೇದಭಾವಗಳಿಗೂ ಅವಕಾಶ ಯಿತು. ಹೆಂಗಸರು ನೀಚರಾಗಿ ಭಾವಿಸಲ್ಪಟ್ಟರು!

ಆದರೂ ಹಕ್ಕುಗಳಿಗೆ ಕುಂದು ಬಂದಂತೆ ಹೆಂಗಸಿನ ವಿ ಬರಲಿಲ್ಲ. ಆಕೆಗೆ ಹುಡುಗನಿಗಿದ್ದಂತೆಯೇ ಶಿಕ್ಷಣವಿತ್ತು. ತಮಿ ರಾಜರು ದೊಡ್ಡ ವಿದ್ಯಾಭಿಮಾನಿಗಳಾಗಿದ್ದುದರಿಂದ ವಿದ್ವಾ ಯರಿಗೆ ಸಾಕಷ್ಟು ಮಾನವೂ ಪದವಿಯೂ ಅವರಲ್ಲಿತ್ತು. ರಾಜರಲ್ಲಿ ಕವಿಗಳಿಗೂ ಪಂಡಿತರಿಗೂ ಪೂಜಾರಿ ಪುರೋಹಿ ಗಿಂತ ಹೆಚ್ಚಿನ ಮರ್ಯಾದೆಯು ಕೊಡಲ್ಪಡುತ್ತಿತ್ತು. ಹೆಚ್ಚಿನ ಮಾನವಿರುವವರಿಗೆ ಅದನ್ನಿಟ್ಟುಕೊಂಡ ಹೆಂಗಸ ಬಹುಮಾನವಿತ್ತು. ಎಂದು ವೇದ ಪಠನ ಮಂತ್ರಕ್ಕೂ ಯಾಗಾದಿಗಳಿಗೂ ದೊಡ್ಡಸ್ಥಿಕೆಯು ರಾಜರಲ್ಲಿ ಬಂತೋ ಅವನ್ನು ನಡೆಸುವ ಬ್ರಾಹ್ಮಣರಿಗೆ ಪದವಿಯೂ ಬಂತು ಪುರಾತನ ವೇದತತ್ತ್ವಗಳ ದರ್ಶನಾಚರಣಗಳಿಗೆ ಕೆಡುಕ ಬಂತು. ವೇದಸ್ವರ ವೇಷಭೂಷಣಗಳಿಗೆ ಮಾನವು ನಾಲಿಗೆಯ ಭಾಗ್ಯೋದಯವಾಯಿತು. ಇವುಗಳಿಂದ ವಾಗಿಡಲ್ಪಟ್ಟ ಹೆಂಗಸು ಅಧೋಗತಿಗೆ ಬಂದು ನಾಡಿನ ಅಧೋಗತಿಗೂ ಪ್ರಾರಂಭವಾಯಿತು.

ತಮಿಳು ವಿಶ್ವವಿದ್ಯಾಲಯ (ತಮಿಳ್ ಸಂಘ) ಗಳ ತಮಿಳು ವಿದ್ಯಾಪೀಠಗಳಲ್ಲಿಯೂ ಹೆಂಗಸರಿಗೆ ಬೇಕಾ ಜಾಗೆಯು ಇತ್ತು. ಮೊದಲನೆಯ ಅವ್ವೆಯ್ (ಈ ರಿನ ಇನ್ನೂ ಹಲವು ಪಂಡಿತೆಯರಿದ್ದಾರೆ) ಎಂಬವಳು ಕಾಲದಲ್ಲಿದ್ದ ಪುಲವರ್, ( ಪಂಡಿತರು ) ಗಳಿಗೆಲ್ಲ ಬಹು ಳಾದ ವಿದ್ಯಾವತಿಯಾಗಿದ್ದಳು. ತಮಿಳು ಸಂಘಕ್ಕೆ ಪೀಠವು ರಾಜನ ಮಂತ್ರಾಲೋಚನೆಗಳಲ್ಲಿಯೂ ಸದಾ ಭಾ ಗಿರುತ್ತಿತ್ತು. ಇದರಿಂದ ತಮಿಳು ಹೆಂಗಸರ ಅಂದಿನ ಯನ್ನು ತಿಳಿದುಕೊಳ್ಳಬಹುದು.

ಮುಂದೆ ಆ ತಮಿಳು ಹೆಂಗಸೆಲ್ಲಿ! ಆ ಕೃತ್ರಿಮತೆ ಮೋರೆಯನ್ನೇ ಕಾಣದ ನಾಡೆಲ್ಲಿ! ಶೈವ, ವೈಷ್ಣವ ಮ ಜಗಳದ ಜಗಲಿಯಾಯಿತೀ ನಾಡು! ವಿದ್ಯೆಗಿಂತಲೂ ವಾದವೇ ಹೆಚ್ಚಾಗುತ್ತಾ ಬಂತು. ಗಂಡಸರಲ್ಲಿಯೂ ಗಾರರ ಮಾನವು ಹೋಗಿ ಅವರೂ ಅವರ ಶೂದ್ರರಾದರು. ಅಂದಿನ ಆರ್ಯರಲ್ಲಿದ್ದಂತೆ

ಒಂದೇ ಸ್ಥಿತಿಗತಿಯವರಾಗಿ ಭಾವಿಸಲ್ಪಟ್ಟರು. ಆರ್ಯರ ಉಚ್ಚ ನೀಚ ದೇವರುಗಳು ಬಂದು ತಮಿಳು ನಾಡಿನ ಜನತೆಯಲ್ಲಿಯೂ ಉಚ್ಚ ನೀಚ ಭೇದಭಾವಗಳೂ ಒಡಕುತೊಡಕುಗಳೂ ಉಂಟಾದುವು. ಒಮ್ಮೆ ಸ್ವತಂತ್ರಳಾಗಿದ್ದ ಹೆಂಗಸು ರಾಮಾಯಣ ಕಾಲದಲ್ಲಿ ಅಧೋಗತಿಗೆ ಮುಟ್ಟಿದ ಆರ್ಯ ಸಂಸ್ಕೃತಿಗೆ ಬಲಿಯಾಗಿ ಪರಾಧೀನಳಾದಳು. ಪುರುಷನ ದಾಸಿಯಾದಳು. ವಿದ್ಯಾಹೀನಳಾದಳು. ಪೂಜಾರಿ ಪುರೋಹಿತರಿಗನುಕೂಲವಾದ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಮನುಧರ್ಮಶಾಸ್ತ್ರೋಕ್ತಿಯು ಆಕೆಯ ಸಂಕಲೆಯಾಗಿ ಆಕೆಯು ಈಗ ಬರಿಯ ತೊತ್ತಾಗಿದ್ದಾಳೆ. ಈಗ ದಾಸಿಯಾಗಿರುವ ಆಕೆಯ ಸಂತಾನವೇ ಆಕೆಯ ಮನಸ್ಸಿನ ಪ್ರತಿಬಿಂಬ. ಒಮ್ಮೆ ಸಂಪೂರ್ಣ ಸ್ವತಂತ್ರಳಾದಾಕೆಯ ಈಗಿನ ಮಕ್ಕಳೇ "ಶಾರದಾ ಎಕ್ಟ್" ಗೆ ಇದಿರಾದವರಲ್ಲಿ ಹೆಚ್ಚಿನ ಸಂಖ್ಯೆಯವರು.

ರಾಮಾಯಣಕಾಲದ ಆರ್ಯಸಂಸ್ಕೃತಿಯಿಂದಲೇ ತಮಿಳು ಸಂಸ್ಕೃತಿಯು ಹಾಳಾಯಿತು, ಎಂಬ ಮೇಲಿನ ವಾಕ್ಯಗಳಿಗೆ ಆಕ್ಷೇಪಣೆಯು ಬರಬಹುದು. ಆದರೆ ಕೈ ನೋಡಲಿಕ್ಕೆ ಕನ್ನಡಿಯು ಬೇಕೇ ಎಂಬಂತೆ ಶುದ್ಧ ತಮಿಳು ಸಂಸ್ಕೃತಿಯನ್ನು ಇನ್ನೂ ಕಾಪಾಡಿಕೊಂಡಿದ್ದ ಹಲಕೆಲವು ಇನ್ನೂ ಇವೆ. ಮೇಲೆ ಹೇಳಿದಂತೆ ಮಲೆಯಾಳವು ಎರಡನೆಯ ದರ್ಜಾ. ಸಿಲೋನಿನ ಉತ್ತರಕ್ಕಿರುವ **ಯಾಳ್‌ಪಾಣಿ** ( yalpani ) ಯಲ್ಲಿ ಇನ್ನೂ ಅಪ್ಪಟ ತಮಿಳು ಸಂಸ್ಕೃತಿಯನ್ನು ನೋಡಬಹುದೆಂದು ಇತಿಹಾಸಜ್ಞರೆನ್ನುತ್ತಾರೆ. **ಅಲ್ಲಿ ಅಸ್ಪೃಶ್ಯತೆಯಿಲ್ಲ. ಬಾಲ್ಯವಿವಾಹವಿಲ್ಲ. ಸ್ತ್ರೀಪರಾಧೀನತೆಯಿಲ್ಲ. ಅಂತರ್ಭೋಜನ ವಿವಾಹ ಪದ್ಧತಿಗಳೂ ಇವೆ. ವಿವಾಹದಲ್ಲಿ ಹೆಂಗಸು ತನ್ನ ವರನನ್ನು ತಾನೇ ಆರಿಸುತ್ತಾಳೆ. ಜನತೆಯ ಆಯುವ್ಯಯು ಸ್ಥಿತಿಯು (Standard of life) ಸುಖವಾಗಿಯೂ ಧಾರಾಳವಾಗಿಯೂ ಇದೆ.** ಬಾಡಿಗೆ-ಬ್ರಾಹ್ಮಣರ ಮಡುವಿಗೆ ಸಿಗದ ಆ ಭಾಗದಲ್ಲಿ ತಮಿಳು ಸಂಸ್ಕೃತಿಯನ್ನೂ ಆ ಸಂಸ್ಕೃತಿಯಲ್ಲಿ ಹೆಂಗಸಿಗಿರುವ ಪದವಿಯನ್ನೂ ಯಾರೂ ನೋಡಬಹುದು ಆರ್ಯರ ದೇವಬ್ರಾಹ್ಮಣರು ತಮಿಳು ನಾಡನ್ನು ಈ ಸ್ಥಿತಿಗಿಳಿಸಿದರು. ಅವರನ್ನು ಸುಧಾರಿಸದೇ ನಾಡನ್ನು ಸುಧಾರಿಸುವುದು ಕಷ್ಟ.

ದೇವ ಬ್ರಾಹ್ಮಣರು ಎಂಬ ಶಬ್ದವನ್ನು ನಿಂದೆಗಾಗಿ ಉಪಯೋಗಿಸಿಲ್ಲ. ಬ್ರಾಹ್ಮಣ ಬ್ರಾಹ್ಮಣೇತರ ವಾದವಿವಾದಗಳಿಗನುಕೂಲವಾಗುವಂತೆಯೂ ಕೊಟ್ಟಿಲ್ಲ. **ನನಗೀ ಭೇದಗಳಲ್ಲಿ ನಂಬಿಕೆಯೇ ಇಲ್ಲ.**



## ಕರಿಮರಿನಾಯಿ



ಕರಿಮರಿ ನಾಯಿ ಕುಂಯ್‌ಗುಡತಿತ್ತು
ಭಟ್ಟರ ಬಾಯಿ ವಟಗುಡತಿತ್ತು ॥

ಸರಭರ ಮಳೆಯು ಸುರಿಯುತಲಿತ್ತು
ಕಾಲುವೆ ನೀರದು ಹರಿಯುತಲಿತ್ತು ।
ಭೋರೆನೆ ಗಾಳಿಯು ಬೀಸುತಲಿತ್ತು
ತಬ್ಬಿಲಿ ಕುನ್ನಿಯು ಈಸುತಲಿತ್ತು ।
ಬೆಚ್ಚನ ಮನೆಯಾ ಹೊಚ್ಚಲದೊಳಗೆ
ನಿಂತರು ಭಟ್ಟರು ಹಣಕುತ ಹೊರಗೆ ।

ಮೆಟ್ಟಲನೇರಲು ಕುನ್ನಿಯು ಅತ್ತ
ಹವಣಿಸೆ, ಬಾಗಿಲು ಮುಚ್ಚಿತು ಇತ್ತ ।
ಭಪ್ಪರೆ ಭಪ್ಪರೆ ಭಲೆರೆ ಭಟ್ಟರೋ !
ಕಾಯ್ದರು ಮನೆಯನು ಏನು ಧಿಟ್ಟರೋ !
ಕುನ್ನಿಯು—ಒಳಗೇ ಬಂದೇನಂದಿತು;
ಭಟ್ಟರು—ಬಂದರೆ ಕೊಂದೇನಂದರು !

—ಅಂಬಿಕಾತನಯ ಕೃತ

# 'ಹಿಂದೂ'ಗಳ ಶಾಸ್ತ್ರಮರ್ಯಾದೆ

ಲೇಖಕರು:—ಶ್ರೀ ಮ. ಅ. ದೊರೆಸ್ವಾಮಿ ಐಯಂಗಾರ್, M. A., B. L., ಹೈಕೋರ್ಟ ವಕೀಲರು, ಮೈಸೂರು

ಹಿಂದೂ ಶಾಸ್ತ್ರಗಳನ್ನು, ಶ್ರುತಿಸ್ಮೃತಿದರ್ಶನ ಪುರಾಣೇತಿಹಾಸಾದಿ ಗ್ರಂಥಗಳನ್ನು, ಮುಖ್ಯವಾಗಿ ವೇದವನ್ನು ಗೌರವಿಸುವುದು ಹೈಂದವತೆಗೆ ಮುಖ್ಯ ಲಕ್ಷಣವೆಂದು ಬಹುಮಂದಿ ಹೇಳುವರು. ಸರ್. ಶಂಕರನ್ ನಾಯರ್ ಹಿಂದೂ ಶಬ್ದಕ್ಕೆ ಮಾಡಿರುವ ನಿರ್ವಚನವೇನೆಂದರೆ — "ಪ್ರಾಪ್ತವಯಸ್ಕನಾಗಿದ್ದು ಸಂಸ್ಕೃತದ ವೇದಗಳು ದೋಷಾತೀತವಾದ ಭಗವತ್ಪ್ರಣೀತ ಜ್ಞಾನವೆಂದು ನಂಬತಕ್ಕವನು ಹಿಂದೂ; ಇಂಥಾವರ ಕುಟುಂಬಕ್ಕೆ ಸೇರಿರುವ ಅಪ್ರಾಪ್ತವಯಸ್ಕನು ಸಹ ಹಿಂದೂವಾಗಿರುವನು" (1912 Presidential Address, Madras Provincial Social Conference, Kumbakonam ). ಹಿಂದೂಗಳು ಜಾತಿ, ಮತ, ಕುಲ, ಆಚಾರ ಇವುಗಳೆಲ್ಲದರಲ್ಲೂ ಎಷ್ಟೋ ಭಿನ್ನವಾಗಿದ್ದರೂ ಸಕಲರೂ ಪ್ರಾಯಶಃ ವೇದವನ್ನು ಗೌರವಿಸುವರು. ಹೊಸದಾಗಿ ಯಾವ ಮತ ಹುಟ್ಟಬೇಕಾದರೂ ಇಲ್ಲಿ ವೇದವನ್ನು ಮೂಲ ಮಾಡಿಕೊಂಡೇ ಹುಟ್ಟುವುದು. ಈ ಕಾರಣದಿಂದ ಇಷ್ಟೊಂದು ಭೇದಗಳಿಂದ ತುಂಬಿರುವ ಹಿಂದೂ ಸಮಾಜದಲ್ಲಿ ವೇದಮರ್ಯಾದೆಯು ಸರ್ವಸಾಮಾನ್ಯವಾದ ಮೂಲಸಂಬಂಧವಾಗಿದೆ.

ಆದರೆ ಶ್ರುತ್ಯಾದಿ ಶಾಸ್ತ್ರರಾಶಿಯನ್ನು ಗೌರವಿಸುವುದು ಹೈಂದವತೆಯ ಆಧಾರಲಕ್ಷಣವೆಂಬ ಮಾತು ನಿಜವಲ್ಲ. ಗೌರವಿಸುವುದು ಎಂಬುದು ಸಾಮಾನ್ಯಾರ್ಥದಲ್ಲಾದರೆ ಎಷ್ಟೋಮಂದಿ ಪರಕೀಯರು ಇವುಗಳನ್ನು ಗೌರವಿಸುತ್ತಿರುವರು. ಜರ್ಮನಿಯಲ್ಲಿ ಎಷ್ಟೋ ಮಂದಿ ಇವುಗಳ ವ್ಯಾಸಂಗಕ್ಕೂ ಪ್ರಚಾರಕ್ಕೂ ಪ್ರಶಂಸನಕ್ಕೂ ತಮ್ಮ ಜೀವವನ್ನೇ ಧಾರೆಯೆರೆದಿರುವರು. ಷೋಪನ ಹೊವೆರ್ (Schopenhauer), ಪಾಲ ಡಾಯ್ಸನ್ ಮುಂತಾದ ತತ್ತ್ವಜ್ಞಾನಿಗಳು ನಮ್ಮ ಉಪನಿಷತ್ತುಗಳಿಗೆ ಮೋಹಗೊಂಡು ಶುದ್ಧ ಔಪನಿಷದಿಕರಾಗಿಬಿಟ್ಟಿದ್ದರು. ಪ್ರಾಚೀನ ಇತಿಹಾಸಶೋಧಕರೆಲ್ಲರೂ ಹಿಂದೂ ಗ್ರಂಥಗಳನ್ನು ಗೌರವಿಸದಿದ್ದರೆ ಗತಿಯಿಲ್ಲ. ಆದರೆ 'ಹಿಂದೂ'ಗಳ ಗೌರವವು ಇದಕ್ಕೆ ಮೀರಿದ್ದಾಗಿದೆ ಎನ್ನಬಹುದು. ಹಿಂದೂಗಳು ಈ ಗ್ರಂಥಗಳನ್ನು ಭಗವತ್ಪ್ರಣೀತಗಳೆಂದು ಭಕ್ತಿಯಿಂದ ಭಜಿಸು[illegible] ಈಚೆಗೆ ಅಲ್ಲಲ್ಲಿ ಲೋಕದ ಎಲ್ಲಾ ಮತಗಳೂ ಪವಿತ್ರವಾ[illegible] ಸತ್ಯವಾದುವು, ಮೂಲತಃ ಒಂದೇ ಎಂಬ ಸರ್ವಮತ[illegible] ವಾದ ಅಥವಾ ಸರ್ವಮತಸಮನ್ವಯ-ವಾದ ಎಂಬ ಅಭಿ[illegible] ಯವು ಕೆಲ ಮಹನೀಯರಿಂದ ಪರಿಗ್ರಹೀತವಾಗಿದೆ. [illegible] ಪಂಗಡದವರು ಲೋಕದ ಎಲ್ಲ ಮತಗಳ ಶಾಸ್ತ್ರಗ್ರಂಥ[illegible] ಪವಿತ್ರವಾದುವೆಂದೂ ಭಗವತ್ಪ್ರಣೀತವಾದುವೆಂದೂ ಒ[illegible] ವರು. ಬ್ರಹ್ಮಜ್ಞಾನಸಮಾಜದವರೂ ಹೀಗೆಯೇ ಒಪ್ಪು[illegible] ಆದರೆ ಇವರೆಲ್ಲರೂ ಹಿಂದೂ ಶಾಸ್ತ್ರದ ಪಾವನತೆಯ ಜತೆ[illegible] ಶಾಸ್ತ್ರಗಳ ಪಾವನತೆಯನ್ನೂ ಸಮಾನವಾಗಿ ಗೌರವಿಸು[illegible] ರಿಂದ ಹಿಂದೂಗಳಾಗಲಾರರು ಎಂದು ಹೇಳುವುದಾದರೆ ಶು[illegible] ಗವಾಗಿ ಸನಾತನಧರ್ಮದ ಹಿಂದೂಗಳಾಗಿರುವ ರಾಮ[illegible] ಸಿದ್ಧಾಂತದವರು ಇಂಥಾ ಪಕ್ಷವನ್ನವಲಂಬಿಸಿರುವು[illegible] ತಮ್ಮ ಹಿಂದೂತ್ವವನ್ನು ಕಳೆದುಕೊಂಡಿರುವರೆಂದು ಹೇಳ[illegible] ವುದೆ ? ಅಲ್ಲದೆ ಅನೇಕ ಹಿಂದೂಗಳು ಬ್ರಹ್ಮಜ್ಞಾನಸಮಾ[illegible] ಹೇಗೆ ಸೇರಿರುವರು ? ಇವರೆಲ್ಲರೂ ಸುಧಾರಕರು, ಇವ[illegible] ತೆಯು ಹಿಂದೂ ಕುಲಕ್ಕೆ ಆದರ್ಶಕವಲ್ಲವೆನ್ನಬಹುದು. [illegible] ದರೆ ಸನಾತನಧರ್ಮಿಗಳಾದ ಹಿಂದೂಗಳಲ್ಲೇ ಹಿಂದೂ [illegible] ಗ್ರಂಥಗಳನ್ನು ಗೌರವಿಸುವ ವಿಚಾರದಲ್ಲಿ ಏಕವಾಕ್ಯ[illegible] ಶೈವರು ವೈಷ್ಣವ ಪುರಾಣಗಳನ್ನೂ, ವೈಷ್ಣವರು ಶೈವಪು[illegible] ಳನ್ನೂ ಸಮಾನವಾಗಿ ಗೌರವಿಸುವರೆ ? ಒಂದು ದರ್ಶನ[illegible] ಮತ್ತೊಂದು ದರ್ಶನವನ್ನು ಏಕಪ್ರಕಾರವಾಗಿ ನೋಡು[illegible] ಒಂದು ಮತಶಾಖೆಯವರು ಗೌರವಿಸುವ ಪವಿತ್ರ ಗ್ರಂ[illegible] ಳನ್ನು ಮತ್ತೊಂದು ಶಾಖೆಯವರು ಧಿಕ್ಕರಿಸುವರು.

ವೇದಗಳನ್ನು ಮಾತ್ರ ಸನಾತನ ಹಿಂದೂಗಳು ಸಾ[illegible] ವಾಗಿ ಗೌರವಿಸುವರೆಂದು ಹೇಳುವುದೂ ಸರಿಯಾಗಿಲ್ಲ. [illegible] ವೇದವನ್ನು ಕೆಲವರು ಶ್ರುತಿ ಎಂದು ಭಾವಿಸುವುದಿಲ್ಲ. [illegible] ಕಾಲದವರೆಗೂ ಶ್ರುತಿಯು "ತ್ರಯೀ" ಎಂದು ಮಾತ್ರ [illegible] ಕೊಂಡಿದ್ದಿತು. ಚಾರ್ವಾಕ ಬೌದ್ಧ ಜೈನ ಸಿಖ [illegible]

ಶಾದಿಗಳು ವೇದಪ್ರಾಮಾಣ್ಯವನ್ನೂ ವೇದಪ್ರಾಧಾನ್ಯವನ್ನೂ ಒಪ್ಪುವುದಿಲ್ಲ. ಈಚೆಗೆ ದಕ್ಷಿಣದ ದೇಶದ ಶೈವಸಿದ್ಧಾಂತದವರು ಸಂಸ್ಕೃತ ವೇದವು ಆರ್ಯರಾದ ಬ್ರಾಹ್ಮಣರದೆಂದೂ ದ್ರಾವಿಡರಾದ ಬ್ರಾಹ್ಮಣೇತರಜನಸ್ತೋಮಕ್ಕೆ ಅದು ಶಾಸ್ತ್ರವಲ್ಲವೆಂದೂ ತಮಿಳಿನ ತೇವಾರಂ ಪ್ರಬಂಧಗಳೇ ಅವರಿಗೆ ಮುಖ್ಯ ಶಾಸ್ತ್ರವೆಂದೂ ಈ ಶಾಸ್ತ್ರಕ್ಕೆ ಮೂಲವಾಗಿದ್ದ ಈಗ ಖಿಲವಾಗಿರುವ ನಾನ್ಮರೈ ಎಂಬ ಶಾಸ್ತ್ರರಾಶಿಯೇ ನಿಜವಾಗಿ ಭಗವನ್ಮುಖೋದಿತವಾದ ಜ್ಞಾನವೆಂದೂ ಸಂಸ್ಕೃತದ ವೇದವು ಇದರಿಂದ ಕದಿಯಲ್ಪಟ್ಟು ವಿರೂಪವನ್ನು ಪಡೆದಿರುವ ಒಂದು ಭಾಗವೆಂದೂ ಈ ಅಪಹಾರವನ್ನು ಮತ್ಸ್ಯಾವತಾರದ ಕಥೆಯು ಸೂಚಿಸುತ್ತದೆಂದೂ ವಿವಿಧವಾಗಿ ಬರೆಯಲಾರಂಭಿಸಿದ್ದಾರೆ 1 ಇವರಲ್ಲಿ ಮತ್ತೊಬ್ಬರು ಓಂ ಎಂಬ ಪ್ರಣವಮಂತ್ರವು ಮೂಲತಃ ತಮಿಳಿನ ಬೀಜಾಕ್ಷರಗಳಿಂದ ಸ್ಪಷ್ಟವಾದ್ದೇ ಹೊರತು ಸಂಸ್ಕೃತಾಕ್ಷರಗಳಿಂದಾದ್ದಲ್ಲವೆಂದು ವಾದಿಸುವರು.2 ಸಂಸ್ಕೃತವೇದ ಮೂಲದಿಂದಲ್ಲದೆ ಇತರ ಮೂಲಗಳಿಂದ ಹುಟ್ಟ ಬಹು ಕಾಲದವರೆಗೆ ವೇದಬಾಹ್ಯಗಳೆಂದು ಪ್ರಸಿದ್ಧವಾಗಿ ಕಡೆಗೆ ವೇದೋಪಬೃಂಹಣ ಮತಗಳೆಂದು ಹೆಸರುಪಡೆದಿರುವ ಅನೇಕ ಆಗಮಿಕ ಮತ್ತು ತಾಂತ್ರಿಕ ಮತಗಳು ಹಿಂದೂ ಮತಸಮುದಾಯದಲ್ಲಿ ಕಂಡು ಬರುತ್ತವೆ. 3 ಹಿಂದಲ ಕಾಲದಲ್ಲೇ ಕೌತ್ಸನೇ ಮೊದಲಾದ ಋಷಿಗಳು ವೇದವನ್ನು ಧಿಕ್ಕರಿಸಿದ್ದರೆಂದು ಯಾಸ್ಕನು ತಿಳಿಸುವನು. ಈಗ ಪ್ರಚಾರದಲ್ಲಿರುವ ಹಿಂದೂ ಮತದಲ್ಲಿ ಮುಕ್ಕಾಲು ಭಾಗವು ಸರಿಯಾದ ವೇದಮೂಲದಿಂದ ಹುಟ್ಟಿ ಬಂದುದಲ್ಲ. ನಮ್ಮ ಈಗಿನ ಮತವೆಲ್ಲವೂ ಪುರಾಣಾದಿಗಳನ್ನವಲಂಬಿಸಿರುವುದೇ ಹೊರತು ವೇದವನ್ನಲ್ಲವು, ಹೆಸರಿಗೆ ಈ ಪುರಾಣಾದಿಗಳು ವೇದವನ್ನನುಸರಿಸಿರುತ್ತವೆ, ಇವೆಲ್ಲವೂ ವೇದಾರ್ಥಪ್ರತಿಪಾದಕಶಾಸ್ತ್ರಗಳು, ವೇದಸಾಕ್ಷಾತ್ಕಾರಮಾಡಿದ ಋಷಿಗಳಿಂದ ಪ್ರಣೀತವಾದ್ದರಿಂದ ಶ್ರುತಿವಿರುದ್ಧವಾದುವಲ್ಲವೆಂಬ ಪ್ರತೀತಿ ಹುಟ್ಟಿರುವುದು. ಇದು ಬರಿಯ ಕೃತಕಸಂಕೇತವೇ ಹೊರತು ನಿಜವಲ್ಲ. ವೇದಕಾಲದ ದೇವತೆಗಳು, ಮತಾಚಾರಗಳು, ಯಜ್ಞಕರ್ಮಗಳು ಇವೆಲ್ಲವೂ ಈಗ ಮಾಯವಾಗಿವೆ. ಪೌರಾಣಿಕಮತದ ಹೊಸ ಸಂಗತಿಗಳನ್ನು ವೇದಮೂಲವೆಂದು ಹೇಳುವುದಕ್ಕಾಗಿ ಕೆಲವರು ಆ ಭಾಗಗಳು ಈಗ ಖಿಲವಾಗಿರುವ ಅಗೋಚರ ಶ್ರುತಿಗಳ ಆಧಾರದಿಂದ ಹುಟ್ಟಿದ್ದೆಂದು ಕವನ ಮಾಡಿರುವರು. ಮತ್ತೆ ಕೆಲವರು ಪುರಾಣಗಳ ಕೆಲವು ಭಾಗಗಳು ವೇದಕ್ಕೂ ಪ್ರಾಚೀನವೆಂದು ತಿಳಿಯುವರು. 4 ಈಗ ಹಿಂದೂಮತದಲ್ಲಿ ಬ್ರಾಹ್ಮಣರಲ್ಲೇ ವೇದವನ್ನು ತಿಳಿದವರು ಲಕ್ಷಕ್ಕೊಬ್ಬರು ಸಹ ಇಲ್ಲ.

ಇದೂ ಹಾಗಿರಲಿ. ವೇದವೆಂದರೆ ಯಾವುದು ? ಇದರ ಸೀಮಾವ್ಯವಸ್ಥೆಯಲ್ಲಿ ಅನಾದಿಯಾಗಿ ಭಿನ್ನಾಭಿಪ್ರಾಯಗಳುಂಟು. ಒಂದು ಕಾಲದಲ್ಲಿ ಯಾಜ್ಞವಲ್ಕ್ಯನು ವೇದಋಷಿ ಎಂದು ಪರಿಗಣಿಸಲ್ಪಟ್ಟಿರಲಿಲ್ಲ. 5 ಆದ್ದರಿಂದ ಅವನಿಂದ ಪ್ರವರ್ತಿತವಾದ

---

1 ಕೆ. ಸುಬ್ರಮಣ್ಯಂ ಎಂ. ಏ. ಎಂ.ಎಲ್ ಇವರು ಈ ವಿಚಾರವಾಗಿ ಒಂದೆರಡು ಸಣ್ಣ ಗ್ರಂಥಗಳನ್ನು ಬರೆದಿದ್ದಾರೆ. ಇವರ ಕೊನೆಯ ಮಾತಿಗೆ ಉಪಷ್ಟಂಭಕವಾಗಿ ತತ್ತ್ವಸಂಗ್ರಹ ರಾಮಾಯಣ(ಅಯೋಧ್ಯಾಕಾಂಡ ೨ನೇ ಸರ್ಗ ೩೩–೩೫ ಶ್ಲೋಕ ಗುಂಡಶಾಸ್ತ್ರಿ ಪರಿವರ್ತನ(vol II P. 22) ದಲ್ಲಿ ಒಂದು ವಿಷಯವು ಹೇಳಲ್ಪಟ್ಟಿದೆ— ಸೋಮಕಾಸುರನು ಬ್ರಹ್ಮನಿಂದ ವೇದಗಳನ್ನಪಹರಿಸಿ ತನ್ನ ಗರ್ಭದಲ್ಲಿಟ್ಟಿದ್ದಾಗ ಅವು ಸ್ವಲ್ಪ ವ್ಯತ್ಯಸ್ತಗಳಾಗಲು ಬ್ರಹ್ಮನು ರಾವಣನನ್ನು ಅವುಗಳನ್ನು ಕ್ರಮಪಡಿಸುವಂತೆ ಹೇಳಿದನು. ರಾವಣನು ಅವುಗಳನ್ನು ಯಥಾಪೂರ್ವಕವಾಗಿ ವ್ಯವಸ್ಥೆಗೊಳಿಸಿದನು.

2 Sabhapati Mudaliar—Origin of Pranava.

3 ಇಂಥವುಗಳಲ್ಲಿ ಪಾಂಚರಾತ್ರವು ಮುಖ್ಯವಾದುದು. ಐತಿಹಾಸಿಕ ಶೋಧನೆಯ ದೃಷ್ಟ್ಯಾ ಇದು ಪರಮೂಲದಿಂದ ಹುಟ್ಟಿದ್ದು ನಿಜವಲ್ಲವಾದರೂ ಅನೇಕಕಾಲ ಇದರ ವಿರೋಧಿಗಳು ಇದನ್ನು ವೇದಬಾಹ್ಯ ಮತವೆಂದು ಹೇಳುತ್ತಿದ್ದರು.

4 K. Narayana Iyer—the Permanent History of Bharata Varsba Vol I P. 8 etc

5 Goldshicker—Panini P. 101.

Raichaudhuri— Early History of Vaishnavism 1920, p. 15. ಪಾಣಿನಿ IV iii 165 ಬ್ರಾಹ್ಮಣ ( ಗ್ರಂಥ )ಗಳು ಇವುಗಳ ಪ್ರವರ್ತಕರಾದ ಋಷಿಗಳ ಹೆಸರಿಗೆ 'ಣಿನಿ' ಪ್ರತ್ಯಯ ಸೇರಿಸಿದರೆ ಆ ಬ್ರಾಹ್ಮಣ ಮತ್ತು ಕಲ್ಪಗಳ ಹೆಸರುಂಟಾಗುವುದೆಂದು ಈ ಸೂತ್ರವು ಹೇಳುವುದು. ಇದರ ಪ್ರಕಾರ ಯಾಜ್ಞವಲ್ಕ್ಯನ ಬ್ರಾಹ್ಮಣಗಳ ಹೆಸರು ಉದ್ಧಾರವಾಗುವುದಿಲ್ಲ. ಮುಂದೆ ಕಾತ್ಯಾಯನನ ಕಾಲಕ್ಕೆ ಇವುಗಳೂ ಪವಿತ್ರತೆಯನ್ನು ಪಡೆದಿದ್ದುದರಿಂದ ಅವನು ಈ ಗ್ರಂಥಗಳ ಹೆಸರು ಈ ಸೂತ್ರದಿಂದ ಉದ್ಧಾರವಾಗದಿದ್ದರೂ ಅವು ಪವಿತ್ರ ಗ್ರಂಥಗಳಾಗಿವೆ ಎಂದು ಹೇಳುವನು. ಆದ್ದರಿಂದ ಈ ಗ್ರಂಥಗಳು ಪಾಣಿನಿಯ ಕಾಲದಲ್ಲಿ ಹುಟ್ಟಿದ್ದರೂ ಶ್ರುತ್ಯಂಗಗಳಾಗಿರಲಿಲ್ಲವೆಂದು ಪಂಡಿತರು ಊಹಿಸುವರು. ನಮ್ಮ ಉಪನಿಷತ್ತುಗಳು ಪ್ರತಿಯುಗದಲ್ಲೂ ಹೇಗೆ ಹೊಸದಾಗಿ ಹುಟ್ಟುತ್ತ ಹೆಚ್ಚುತ್ತ ಬಂದವೆಂಬ ಸಂಗತಿಯನ್ನು ಬಲ್ಲವರಿಗೆ ಈ ಮೇಲಿನ ವಿಷಯವು ಅತಿಶಯವಾಗಿ ಕಾಣುವುದಿಲ್ಲ.

ವೆಂದು ಐತಿಹ್ಯವುಳ್ಳ ಶುಕ್ಲ ಯಜುರ್ವೇದ, ಶತಪಥಬ್ರಾಹ್ಮಣ, ತದಂತರ್ಗತವಾದ ಬೃಹದಾರಣ್ಯಕೋಪನಿಷತ್ತು ಇವೆಲ್ಲವೂ ಶ್ರುತಿಯಲ್ಲವೆಂದು ಒಂದು ಕಾಲದಲ್ಲಿ ಭಾವಿಸಲ್ಪಟ್ಟಿತ್ತು. ಅಥರ್ವವೇದದ ವಿಚಾರವಾಗಿರುವ ಸಂದೇಹವನ್ನು ಮೇಲೆಯೇ ಸೂಚಿಸಿದೆ. ಪ್ರತಿಯೊಂದು ವೇದಕ್ಕೂ ಬ್ರಾಹ್ಮಣಗಳೂ ಉಪ ನಿಷತ್ತುಗಳೂ ಪರಿಶಿಷ್ಟದಂತೆ ಜೋಡಿಸಲ್ಪಟ್ಟಿವೆ. ಇತರ ವೇದ ಗಳಿಗೆ ಶಾಖೆಗಳೂ ಬ್ರಾಹ್ಮಣಗಳೂ ಆರಣ್ಯಕಗಳೂ ಪ್ರಾಚೀನ ಕಾಲದಲ್ಲೇ ವ್ಯಕ್ತಪಡಿಸಲ್ಪಟ್ಟದ್ದು ದರಿಂದ ಉತ್ತರೋತ್ತರವಾಗಿ ಹುಟ್ಟಿದ ಉಪನಿಷತ್ತುಗಳೆಲ್ಲವನ್ನೂ ಅಥರ್ವವೇದಕ್ಕೆ ಸೇರಿ ಸುತ್ತ ಬರಬೇಕಾಯಿತು.[೧] ಈ ವೇದವೇ ಅಶ್ರುತಿಯಾದರೆ ನಮ್ಮ ಉಪನಿಷತ್ತುಗಳಲ್ಲಿ ನೂರಕ್ಕೆ ೯೫ ರಷ್ಟು ಸಂಖ್ಯೆಗೂ ಇದೇ ಗತಿ ಪ್ರಾಪ್ತವಾಗುವುದು. ಅಲ್ಲದೆ ಮತ್ತೆ ಕೆಲವರು ಬ್ರಾಹ್ಮಣ ಗಳನ್ನೂ ಆರಣ್ಯಕಗಳನ್ನೂ ಉಪನಿಷತ್ತುಗಳನ್ನೂ ವೇದಭಾಗ ವೆಂದು ಗಣಿಸುವುದಿಲ್ಲ. ಈಗ ದಯಾನಂದೀಯರು ಹೀಗೆಯೇ ಅಭಿಪ್ರಾಯಪಡುವರು. ವೇದಸಂಹಿತೆಯಲ್ಲಿ ಸಹ ಎಷ್ಟೋ ಪ್ರಕ್ಷಿಪ್ತಗಳು ಸೇರಿರುವುವು. ಅನೇಕ ಋಕ್ಕುಗಳಿಗೆ ದ್ರಾವಿ ಡಾಂಧ್ರರಿಗೆ ಪಾಠಭೇದಗಳು ಇವೆ. ವೇದದಲ್ಲಿ ಒಂದೊಂದು ಶಾಖೆಯವರಿಗೂ ಬೇರೆ ಬೇರೆ ಪಾಠವಿದ್ದಿತೆಂದು ಐತಿಹ್ಯವುಂಟು. ಇಷ್ಟು ಅಲ್ಲದೆ ಈಗಿನ ವೇದಸಂಹಿತೆಯನ್ನು ೨೮ ಮಂದಿ ವ್ಯಾಸರುಗಳು ಕೈಯಾಡಿದಂತೆ ಆದಿಕಾಲದಲ್ಲಿ ಒಂದು ವೇದವಿ ದ್ದುದು ಈಗ ಚತುರ್ವೇದವಾಗಿ ಬಳೆಯಿತೆಂದು ಪುರಾಣಗಳ್ಳ ಒಪ್ಪುವುವು. ನಿಜವಾದ ಒಂದು ವೇದವನ್ನು ತಿಳಿಯದೆ ಇದ್ದು ದ ರಿಂದ ದ್ವಾಪರದಲ್ಲಿ ಹಲವು ವೇದಗಳು ಹುಟ್ಟಿದುವೆಂದು ಮಹಾಭಾರತವು ಹೇಳುವುದು. ( ವನ, ೧೪೯ ಅಧ್ಯಾಯ, ೩೧ ಶ್ಲೋಕ ) ಅಲ್ಲದೆ, ಯಜುರ್ವೇದವು ಮೊದಲು ಸರ್ವತ್ರ ಇದ್ದಿತು, ಅದು ಒಂದೇ ಆಗ ಇದ್ದುದು, ಇದನ್ನು ಒಡೆದು ನಾಲ್ಕು ವೇದವಾಗಿ ವಿಂಗಡಿಸಿದರು ಎಂದು ಒಂದು ಪುರಾಣ ವಚನವುಂಟು.[೨] ಪುರಾತನಕಾಲದಲ್ಲಿ ಪ್ರಣವನಾಮಕವಾದ ವೇದ, ದೇವರು (ನಾರಾಯಣ), ಅಗ್ನಿ, ವರ್ಣ (ಹಂಸ) ಇವೆ ಲ್ಲವೂ ಒಂದೊಂದೇ ಇದ್ದುವೆಂದು ಭಾಗವತವು ಹೇಳುವುದು (IX. XIV. 48).[೩] ಮತ್ಸ್ಯ (ಅಧ್ಯಾಯ ೧೪೪, ಶ್ಲೋಕ ೨–೨೦) ವಾಯು (ಅಧ್ಯಾ ೫೮, ಶ್ಲೋಕ ೨–೩೧) ಪುರಾಣ ಗಳು ಉಭಯ ಸಾಮಾನ್ಯ ಶ್ಲೋಕಗಳಲ್ಲಿ ವೇದಾಭಿವೃದ್ಧಿಯನ್ನು ಈ ರೀತಿ ವರ್ಣಿಸುವುವು[೪] "ನಾಲ್ಕು ಪಾದಗಳಿಂದ ಕೂಡಿದ ಒಂದು ವೇದವು ಆಯುರ್ಮಾನವು ಚಿಕ್ಕದಾದ್ದರಿಂದ ದ್ವಾಪರ ದಲ್ಲಿ ಪುನಃ ಪುನಃ ಸಂಕ್ಷೇಪವಾಗಿ ಮಾಡಲ್ಪಟ್ಟು ವಿಭಾಗಿಸಲ್ಪ ಡುವುದು. ದ್ವಾಪರಾದಿಯುಗಗಳಲ್ಲಿ ಏಕವಾದ ವೇದವು ನಾಲ್ಕಾಗಿ ವಿಭಾಗಿಸಲ್ಪಡುವುದು. ಅಭಿಪ್ರಾಯಭೇದದಿಂದ ಇದನ್ನು ಋಷಿಪುತ್ರರು ಮತ್ತೂ ಒಡೆಯುವರು, ಅನಂ ತರ (ಬರಿಯ ಪಾಂಡಿತ್ಯವುಳ್ಳವರಾದ) ಶ್ರುತರ್ಷಿಗಳು ಋಕ್

೧ ಈ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟು.

೨ ಯಜುಸ್ಸರ್ವತ್ರ ಗೀಯತೇ ಏಕ ಆಸೀತ್ ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯನ್ of Govind Das-Hinduism p. 93.

೩ ಏಕ ಏವ ಪುರಾವೇದಃ ಪ್ರಣವಃ ಸರ್ವವಾಙ್ಮಯಃ ।
ದೇವೋ ನಾರಾಯಣೋ ನಾನ್ಯಃ ಏಕೋಽಗ್ನಿರ್ವರ್ಣ ಏವಚ ॥

ಈ ಏಕವರ್ಣದ ಹೆಸರು ಹಂಸವೆಂದು ಶ್ರೀಧರ ವ್ಯಾಖ್ಯಾನದಲ್ಲಿ ದೊರೆಯುವುದು. ಜಾತಿವ್ಯವಸ್ಥೆ ಹುಟ್ಟದೆ ಇದ್ದ ಕಾಲವನ್ನು ನಮ್ಮ ಪುರಾಣಗಳು ಒಪ್ಪಿದಂತಾಯಿತು.

೪ ಏಕೋ ವೇದಶ್ಚತುಷ್ಪಾದಃ ಸಂಕೃತ್ಯ ತು ಪುನಃ ಪುನಃ ।
ಸಂಕ್ಷೇಪಾದಾಯುಷಶ್ಚೈವ ವ್ಯಸ್ಯತೇ ದ್ವಾಪರೇಷ್ವಿಹ ॥೧॥
ವೇದಶ್ಚೈಕಶ್ಚತುರ್ಧಾತು ವ್ಯಸ್ಯತೇ ದ್ವಾಪರಾದಿಷು ।
ಋಷಿಪುತ್ರೈಃ ಪುನರ್ವೇದಾ ಭಿದ್ಯಂತೇ ದೃಷ್ಟಿವಿಭ್ರಮೈಃ ॥
ಮಂತ್ರಬ್ರಾಹ್ಮಣ ವಿನ್ಯಾಸೈಃ ಸ್ವರಕ್ರಮ ವಿಪರ್ಯಯೈಃ ।
ಸಂಹೃತಾ ಋಗ್ಯಜುಸ್ಸಾಮ್ನಾಂ ಸಂಹನ್ಯಂತೇ ಶ್ರುತರ್ಷಿಭಿಃ ॥
ಸಾಮಾನ್ಯಾದ್ವೈಕೃತಾಚ್ಚೈವ ದೃಷ್ಟಿಭಿನ್ನೈಃ ಕ್ವಚಿತ್ ಕ್ವಚಿತ್ ।
ಬ್ರಾಹ್ಮಣಃ ಕಲ್ಪಸೂತ್ರಾಣಿ ಮಂತ್ರಪ್ರವಚನಾನಿ ಚ ॥
ಅನ್ಯೇ ತು ಪ್ರಸ್ಥಿತಾಸ್ತಾನ್ ವೈ ಕೇಚಿತ್ತಾನ್ ಪ್ರತ್ಯವಸ್ಥಿತಾಃ ।
ದ್ವಾಪರೇಷು ಪ್ರವರ್ತಂತೇ ಭಿನ್ನಾರ್ಥೈಸ್ತೈಃ ಸ್ವದರ್ಶನೈಃ ॥



of A. Mahadeva Sastri Social Reform on Sastric Lines 1909 p. 90

ಟುಸ್ಸಾಮುಗಳಿಗೆ ಹೊಸ ಮಂತ್ರಬ್ರಾಹ್ಮಣಗಳನ್ನು ಸೇರಿಸುತ್ತಲೂ ಸ್ವರಕ್ರಮಗಳನ್ನು ಬದಲಾಯಿಸುತ್ತಲೂ ವಿವಿಧವಾಗಿ ಸಂಗ್ರಹಿಸುತ್ತ ಕೆಲವನ್ನು ಒಪ್ಪುತ್ತ ಕೆಲವನ್ನು ತಿರಸ್ಕರಿಸುತ್ತ ಭಿನ್ನಾಭಿಪ್ರಾಯದಿಂದ ಇರುವರು. ಅನೇಕರು ಹೊಸ ಮಂತ್ರ ಬ್ರಾಹ್ಮಣ ಕಲ್ಪ ಸೂತ್ರಗಳನ್ನು ಕಲ್ಪಿಸುವರು. ಇತರರು ಬೇರೆ ಮಂತ್ರಾದಿಗಳನ್ನಿಟ್ಟುಕೊಂಡು ಇವುಗಳನ್ನು ವಿರೋಧಿಸುವರು. ಹೀಗೆ ದ್ವಾಪರದಲ್ಲಿ ಪ್ರತಿಶಾಖೆಯವರೂ ಭಿನ್ನಾರ್ಥವುಳ್ಳ ಅನೇಕ ಶ್ರುತಿಗಳನ್ನು ಕಲ್ಪಿಸಿ ಬೇರೆ ಬೇರೆ ದರ್ಶನಗಳುಳ್ಳವರಾಗಿರುವರು." ವಿರೂಪವನ್ನು ಪಡೆದಿದ್ದ ವೇದವನ್ನು ರಾವಣನು ಉದ್ಧರಿಸಿ ಪರಿಷ್ಕರಿಸಿದನೆಂದು ಹಿಂದೆಯೇ ತಿಳಿಸಿದೆ. ಇದೇ ರೀತಿ ಕ್ಷಾಮದ ದೆಸೆಯಿಂದ ನಷ್ಟವಾಗಿದ್ದ ವೇದವನ್ನು ಸಾರಸ್ವತನು ಉದ್ಧರಿಸಿದನೆಂದು ಮತ್ತೊಂದು ಕಥೆಯುಂಟು. ಈ ರೀತಿ ವೇದಮೂಲ, ವೇದಪಾಠ, ವೇದವ್ಯಾಪ್ತಿ, ವೇದಪ್ರಾಮಾಣ್ಯ ಇವುಗಳೆಲ್ಲವನ್ನೂ ಕುರಿತು ಅನಂತವಾದ ಅಭಿಪ್ರಾಯಭೇದ ಗಳಿರುವಾಗ ಈ ಜಾತಿಯಿಂದ ಭೇದವೇ ಇಲ್ಲವೆಂಬ ಊಹೆಯು ಹಿಂದುತ್ವಕ್ಕೆ ಹೇಗೆ ಆಧಾರಲಕ್ಷಣವಾಗಬಲ್ಲುದು?

ವೇದಗಳ ಸ್ಥಿತಿಯೇ ಹೀಗಿರುವಾಗ ಸ್ಮೃತೀತಿಹಾಸಪುರಾಣಾಗಮತಂತ್ರಗಳ ಗ್ರಂಥಗಳ ಪಾಡನ್ನಂತೂ ವರ್ಣಿಸಬೇಕಾಗಿಯೇ ಇಲ್ಲ. ಉಪನಿಷತ್ತುಗಳು ಸಹ ಸುಮಾರು ೨೦೦ ಹುಟ್ಟಿವೆ. ಮುಸಲ್ಮಾನರ ಕಾಲದಲ್ಲಿ ಅಲ್ಲೋಪನಿಷತ್ತು ಎಂಬುದು ಹುಟ್ಟಿತು. ಕಳೆದ ಶತಮಾನದಲ್ಲಿ ದೇವೇಂದ್ರನಾಥ ಠಾಕೂರರು ಬ್ರಾಹ್ಮೋಪನಿಷತ್ತು ಎಂಬುದನ್ನು ರಚಿಸಿದರು. ಪ್ರತಿಯೊಂದು ಮತಶಾಖೆಯವರೂ ತಮ್ಮ ದೇವತೆ, ಮಂತ್ರ, ನಾಮ ಮೊದಲಾದವುಗಳ ಪ್ರಶಸ್ತಿಗಾಗಿ ಬೇರೆ ಬೇರೆ ಉಪನಿಷತ್ತುಗಳನ್ನು ಕಲ್ಪಿಸಿಕೊಂಡಿರುವರು. ತಂತ್ರಗಳೂ ಸಹ ಸಾವಿರ ಗಟ್ಟಲೆಯಲ್ಲಿ ಹುಟ್ಟಿರುವುವು. ಪಾಂಚರಾತ್ರಾಗಮ ಒಂದರಲ್ಲಿ ೧೦೮ ಸಂಹಿತೆಗಳು ಇರುವುವೆಂದು ಪ್ರಸಿದ್ಧಿ. ಸರಿಯಾಗಿ ನೋಡಿದರೆ ೩೦೦ ಗ್ರಂಥಗಳವರೆಗೂ ದೊರೆಯುವುವು. ಗಣಪತಿ ಬರೆದ ಭಾರತವು ೮೮೦೦ ಶ್ಲೋಕಗಳುಳ್ಳ ಸಣ್ಣ ಗ್ರಂಥವು; ಈಗಿನ ಮಹಾಭಾರತವು ಸುಮಾರು ಒಂದೂವರೆ ಲಕ್ಷ ಶ್ಲೋಕಗಳನ್ನೊಳಕೊಂಡು ಹಲವು ಪಾಠಭೇದಗಳಿಂದ ಮೆರೆಯುತ್ತಿರುವುದು. ಹೆಸರಿಗೆ ಇರತಕ್ಕದ್ದು ಒಂದು ರಾಮಾಯಣವು; ನೋಡಿದರೆ ಸುಮಾರು ೩೦ ರಾಮಾಯಣಗಳು ದೊರೆಯುವುವು.[೧] ಪುರಾಣ ಸ್ಮೃತಿಗಳು ಲೆಕ್ಕಕ್ಕೆ ೧೮, ಸರಿಯಾಗಿ ನೋಡಿದರೆ

---

೧ ಬಾಬು ಗೋವಿಂದದಾಸನ ಗ್ರಂಥದಲ್ಲಿ (Hinduism p. 132) ೨೦ ರಾಮಾಯಣಗಳ ಹೆಸರು ದೊರೆಯುವುದು. ಸಿ. ಆರ್. ಶ್ರೀನಿವಾಸೈಯಂಗಾರ್ಯರ ವ್ಯಾಖ್ಯಾನಗ್ರಂಥದಲ್ಲಿ (The Ramayana of Valmiki 1910, Balakanda, Preface) ಮತ್ತನೇಕ ಹೆಸರುಗಳು ದೊರೆಯುವುವು. ತತ್ತ್ವಸಂಗ್ರಹ ರಾಮಾಯಣದಲ್ಲಿ (ಬಾಲಕಾಂಡ ಸರ್ಗಗಳು ೧—೬) ಇನ್ನೂ ಅನೇಕ ಹೆಸರುಗಳು ದೊರೆಯುವುವು. ಇಷ್ಟೂ ಅಲ್ಲದೆ ಮತ್ತೂ ಕೆಲವು ಗ್ರಂಥಗಳು ದೊರೆಯುವವು ಈ ಎಲ್ಲಾ ಹೆಸರುಗಳನ್ನು ಇಲ್ಲಿ ಸಂಗ್ರಹಿಸಿ ಹೇಳಬಹುದು.

I ಪೂರ್ವ ರಾಮಾಯಣಗಳು—(ಅ) ಸಂಸ್ಕೃತ— ೧ ಅಗಸ್ತ್ಯ, ೨ ಅಗ್ನಿವೇಶ್ಯ ೩ ಅಧ್ಯಾತ್ಮ ೪ ಅದ್ಭುತ ೫ ಅರುಣ ೬ ಆಗಮ ೭ ಆನಂದ ೮ ಕರ್ಮ ೯ ಕಾಕಭುಶುಂಡಿ ೧೦ ಕಾಳಿದಾಸ ೧೧ ಗಾಯತ್ರಿ ೧೨ ಚ್ಯವನ ೧೩ ಜೈನ ೧೪ ಧರ್ಮ ೧೫ ಪೌಲಸ್ತ್ಯ ೧೬ ಭರತ ೧೭ ಭರದ್ವಾಜ ೧೮ ಬೋಧಾಯನ ೧೯ ಬ್ರಹ್ಮ ೨೦ ಬೌದ್ಧ ೨೧ ಮಾರ್ಕಂಡೇಯ (?ಮೃಕಂಡು) ೨೨ ಮಂತ್ರ ೨೩ ವಾಸಿಷ್ಠ ೨೪ ವ್ಯಾಸ ೨೬ ವಾಲ್ಮೀಕಿ ೨೭ ವಾಲ್ಮೀಕಿಕೃತನಾಟಕ ೨೮ ವಿಭೀಷಣ ೨೯ ಶಿವ ೩೦ ಶುಕ ೩೧ ಶೇಷ ೩೨ ಸಂಗ್ರಹ ೩೩ ಸ್ಕಂದ ೩೪ ಹನುಮಾನ್ (ಆ) ಪ್ರಾಕೃತ— ೩೫ ತುಲಸಿ (ಹಿಂದಿ) ೩೬ ಕೇಶವದಾಸ (ಹಿಂದಿ) ೩೭ ಕಂಬ (ತಮಿಳು) ೩೮ ತೊರವೆ (ಕನ್ನಡ) ಇತ್ಯಾದಿ.

II ಅಂಶ ರಾಮಾಯಣಗಳು ರಾಮಕಥೆಯನ್ನು ಪ್ರಸ್ತಾಪಿಸತಕ್ಕ ಗ್ರಂಥಗಳು— ಕೂರ್ಮ, ಪದ್ಮ, ನಾರಸಿಂಹ, ಬ್ರಹ್ಮ, ಸ್ಕಾಂದ, ಭಾಗವತ, ವಿಷ್ಣು, ಬ್ರಹ್ಮಾಂಡ, ಮತ್ಸ್ಯ, ಅಗ್ನಿ, ಭವಿಷ್ಯ ಪುರಾಣಗಳು; ಮಹಾಭಾರತ; ಧರ್ಮಕಾಂಡ, ಅಗಸ್ತ್ಯ ಸಂಹಿತಾ, ಉಮಾಸಂಹಿತಾ, ಹಿರಣ್ಯಗರ್ಭಸಂಹಿತಾ, ಶೇಷಧರ್ಮ, ವಿಷ್ಣುಯಾಮಳ ಇತ್ಯಾದಿ.

III ರಾಮಾಯಣ ವ್ಯಾಖ್ಯಾನ ಗ್ರಂಥಗಳು.

ಗೋವಿಂದರಾಜ—ರಾಮಾಯಣ ಭೂಷಣ — ಕತಕ

ಮಹೇಶತೀರ್ಥ—ರಾಮಾಯಣ ತತ್ತ್ವದೀಪಿಕಾ—ಟೀಕಾ ಶಿರೋಮಣಿ

ರಾಮ ಪಂಡಿತ—ರಾಮಾಯಣ ತಿಲಕ

ಪೆರಿಯ ವಾಚ್ಚಾನ್‌ಪಿಳ್ಳೈ—ತನಿಶ್ಲೋಕ

ರಾಮಾನುಜ—ವ್ಯಾಖ್ಯಾನ

ವೇದಾಂತ ದೇಶಿಕ—ಅಭಯಪ್ರದಾನಸಾರ

VI ರಾಮಮತಗ್ರಂಥಗಳು

| | |
|---|---|
| ರಾಮತಾಪಿನಿ ಉಪನಿಷತ್ | ರಾಮ ರಕ್ಷಾ |
| ತಾರಸಾರೋಪನಿಷತ್ | ರಾಮಗೀತಾ |
| ರಾಮರಹಸ್ಯೋಪನಿಷತ್ | ರಾಮ ಕರ್ಣಾಮೃತ |
| ಮೈತ್ರಾಯಣಿ ಶ್ರುತಿ | ರಾಮಸಹಸ್ರನಾಮ |
| | ಸೀತೋಪನಿಷತ್ |

ನೂರಾರು ದೊರೆಯುತ್ತವೆ. ೧ ಇವುಗಳ ಮೇಲೆ ಹುಟ್ಟಿರುವ ವಿವಿಧಜಾತಿಯ ವ್ಯಾಖ್ಯಾನಗ್ರಂಥಗಳಿಗಂತೂ ಕೊನೆ ಮೊದಲೇ ಇಲ್ಲ. ಈ ಗ್ರಂಥಾರಣ್ಯದಲ್ಲಿ ಯಾವ ವ್ಯವಸ್ಥೆಯೂ ಇಲ್ಲ. ಇತ್ತೀಚೆಗೆ ಹುಟ್ಟಿದ ಮತಾಚಾರ್ಯರುಗಳ ಗ್ರಂಥಗಳೂ ಸ್ತೋತ್ರಪಾಠಗಳೂ ಆಯಾ ಶಾಖೆಯವರಿಗೆ ವೇದಸಮಾನವಾಗಿ ಬಿಟ್ಟಿವೆ. ಹೀಗಿರುವಲ್ಲಿ ಹಿಂದೂ ಶಾಸ್ತ್ರಗ್ರಂಥರಾಶಿಗೆ ಕೇಂದ್ರಪ್ರಾಯವಾದ ಗ್ರಂಥಗಳಾವುವು? ಆ ಗ್ರಂಥಗಳ ಮೂಲಪಾಠವಾವುದು ? ಎಂದು ತಿಳಿಯುವುದು ಅಸಾಧ್ಯವಾಗಿದೆ. ಈ ಕಾರಣದಿಂದ ಹಿಂದೂ ಶಾಸ್ತ್ರವನ್ನು ಮರ್ಯಾದಿಸುವ ಚರ್ಯೆಯು ಅತಿಭಿನ್ನವಾಗಿಯೂ ಪರಸ್ಪರ ವಿರುದ್ಧವಾಗಿಯೂ ಸಂದೇಹಕರವಾಗಿಯೂ ತೊಡಕಾಗಿಯೂ ಇರುವುದು. ಇದು ಹಿಂದೂತ್ವಕ್ಕೆ ತಕ್ಕ ಆಧಾರ ಲಕ್ಷಣವೆಂದು ಭಾವಿಸುವುದು ಸೂಕ್ತವಾಗಿಲ್ಲ.

# ಲಿಂಗ

ಲೇಖಕರು- ಶ್ರೀ ಚನ್ನಮಲ್ಲಪ್ಪಾ ಗಲಗಲಿ, ಹಲಸಂಗಿ

ಪ್ರಾಚೀನ ಶಿವಾಲಯಗಳಲ್ಲೆಲ್ಲಾ ಲಿಂಗಗಳ ಮೇಲೆ ಕೊರೆದ ಒಂದು ಗೆರೆಯನ್ನು ನೋಡಿ ನನಗೆ ಶಿವಲಿಂಗವು ಮಾನವಲಿಂಗದ ಆಕಾರವೇ ಇರಬಹುದೋ ಏನೋ ಎಂದು ಅನಿಸುತ್ತಿತ್ತು. ಆ ಗೆರೆ ಹೇಗೆ ಇರುವದೆಂದರೆ— ಲಿಂಗದ ಹಿಂಭಾಗದಲ್ಲಿ ಉಡುದಾರದಂತೆ ನೆಟ್ಟಗೆ ಹಾಯ್ದಿದ್ದು ಇದಿರಿಗೆ ಮೇಲಕ್ಕೇರಿ ಅದೇ ಕ್ರಮದಲ್ಲಿ ಕೆಳಕ್ಕೆ ಇಳಿದು ಹಿಂದೆ ಹೋಗಿ ಮೊದಲು ಹೊರಟಲ್ಲಿಗೆ ಕೂಡುತ್ತದೆ. ಇದಿರಿಗೆ ಆಗುವ ಈ ಗೆರೆಯ ಕಮಾನದಲ್ಲಿ ಮೇಲಿನಿಂದ ಕೆಳಕ್ಕೆ ಎರಡು ಸಮಾಂತರ ಗೆರೆಗಳು ಕೊರೆಯಲ್ಪಟ್ಟಿರುತ್ತವೆ. ಇದಿರಿನಿಂದ ನೋಡಿದರೆ ಈ ಆಕಾರವು ಬಾಣದಂತೆ ಕಾಣುವದರಿಂದ ಇದಕ್ಕೆ ಜನರು ರಾಮಬಾಣವೆಂದು ಹೇಳುತ್ತಿರುತ್ತಾರೆ. ಆದರೆ ಈ ಒಟ್ಟು ಗೆರೆಯು ಮಾನವಲಿಂಗದ ಅಗ್ರಭಾಗವನ್ನು ಸೂಚಿಸುತ್ತಿರಬಹುದೆಂದು ನನಗೆ ಅನಿಸುತ್ತಿತ್ತು.

ಶಿವಾನುಭವ ಪತ್ರಿಕೆಯಲ್ಲಿ 'ಇತಿಹಾಸದ ಕಣಗಳು' ಎಂಬ ಲೇಖನದಲ್ಲಿ ನಾನೊಂದು ಕಡೆಗೆ ಕ್ರಿಸ್ತಶಕದ ೬ನೇ ಶತಮಾನಕ್ಕಿಂತ ಮುಂಚೆ ಲಿಂಗದ ಪೀಠಕ್ಕೆ ಮಹತ್ತ್ವವಿದ್ದಿಲ್ಲವೆಂದು ತಿಳಿಸಿದ್ದೆನಷ್ಟೆ. ಆದರೂ ನಾನು ಇನ್ನೂ ಹೆಚ್ಚು ಸಂಶೋಧನವನ್ನು ನಡಿಸಿಯೇ ಇದ್ದೆನು. ತ್ರಾವಣಕೋರದ ಆರ್ಕಿಯಾಲಜಿ ಖಾತೆಯ ಡಾಯರೆಕ್ಟರರಾದ ಶ್ರೀ ಗೋಪೀನಾಥರಾಯರ "ಹಿಂದೂ ಮೂರ್ತಿ ಶಾಸ್ತ್ರದ ಮೂಲ ತತ್ತ್ವಗಳು" ಎಂಬ ಇಂಗ್ಲೀಷ ಪುಸ್ತಕವನ್ನೋದುವಾಗ ನನ್ನ ಮೇಲ್ಕಾಣಿಸಿದ ಊಹೆಯೇ ತಿದ್ದುಪಡೆಹೊಂದಿ ಬಲಗೊಂಡಿತು. ಅದು ಹೇಗೆಂದರೆ, ರೇನಿಗುಂಟಾ ಸ್ಟೇಶನ್ನಿನಿಂದ ಆರು ಮೈಲು ದೂರವಿರುವ ಗುಡಿಮಲ್ಲಂ ಎಂಬ ಸ್ಥಳದಲ್ಲಿರುವ ಶಿವಾಲಯದ ಶಿವಲಿಂಗವು ತುಂಬಾ ಮಾನವಲಿಂಗವೇ ಇದ್ದುದಲ್ಲದೆ ಅದು ಪೀಠದಲ್ಲಿ ಕುಳಿತುಕೊಂಡಿರದೆ ಕಂಬದಂತೆ ನಿಂತುಕೊಂಡಿದೆ. ಆ ಕಂಬಕ್ಕೆ ಇದಿರಿಗೆ ಒಂದು ಭೈರವ ವಿಗ್ರಹವು ಕೆತ್ತಲ್ಪಟ್ಟಿದೆ. ಲಿಂಗಾಗ್ರವು ವಿಗ್ರಹದ ಮೇಲ್ಗಡೆಗೆ ಕೊಡೆಯಂತೆ ಕಾಣುತ್ತದೆ. ಈ ವಿಗ್ರಹದ ರೂಪವು ಸಾಂಚೀಸ್ತೂಪದ ಗೊಂಬೆಗಳಂತಿರುವದರಿಂದ ಈ ಲಿಂಗವು ಕ್ರಿಸ್ತಶಕದ ಆರಂಭದ ಕಾಲಕ್ಕಿಂತ ಈಚಿನದು

---

೧ ಸುಮಾರು ೭೮ಪುರಾಣಗಳ ಹೆಸರು ದೊರೆಯುತ್ತದೆ. ಸಲ ಪುರಾಣಗಳು ಸಾವಿರಗಟ್ಟಲೆಯಾಗಿವೆ. ಸ್ಮೃತಿಗಳು ೧೩೨ ಇವೆ. ಧರ್ಮಶಾಸ್ತ್ರಗ್ರಂಥಗಳು ಅನಂತವಾಗಿವೆ. ಇವುಗಳ ಹೆಸರನ್ನೂ ಸಂಖ್ಯೆಯನ್ನೂ ಅನ್ನೇಕ ಕಡೆ ಹೇಳಿದೆ.

I ಸ್ಮೃತಿ ಸಂಖ್ಯೆ

| | | | |
|---|---|---|---|
| ಸಾಂಪ್ರದಾಯಿಕ | ೧೮ | ವೀರಮಿತ್ರೋದಯ | ೫೭ |
| ಗರುಡ ಪುರಾಣ | ೧೮ | ಪರಾಶರ ಮಾಧವ | ೭೦ |
| ಅಗ್ನಿ ,, | ೨೧ | ಹೇಮಾದ್ರಿ | ೮೩ |
| ಯಾಜ್ಞವಲ್ಕ್ಯಸ್ಮೃತಿ | ೨೦ | ನೀಲಕಂಠಮಯೂಖ | ೯೭ |
| ಮಹಾಭಾರತ ಅಶ್ವಮೇಧ | ೨೩ | ಅನಂತದೇವ—ಸಂಸ್ಕಾರ ಕೌಸ್ತುಭ | |
| ಪೈಠೀನಸಿಸ್ಮೃತಿ | ೩೬ | ಕಮಲಾಕರ — ನಿರ್ಣಯಸಿಂಧು | |

II ಧರ್ಮಶಾಸ್ತ್ರಗ್ರಂಥಗಳು

ಅನಂತದೇವ— ಶ್ರೌತ ೫, ಸ್ಮೃತಿ ೧೦೪, ಪುರಾಣ ೨೮, ವ್ಯಾಖ್ಯಾನ ೯೭ — ೨೩೪

ಕಮಲಾಕರ—ಶ್ರೌತ ..., ಸ್ಮೃತಿ ..., ಪುರಾಣ ..., ವ್ಯಾಖ್ಯಾನ ...

ಸರ್ಕಾರ— ವ್ಯವಸ್ಥಚಂದ್ರಿಕಾ ಮೇಲಿನದಕ್ಕೆ ೨೦ ಹೊಸ ಗ್ರಂಥಗಳನ್ನು ಸೇರಿಸುತ್ತದೆ.

ಲಾರದೆಂದು ಐತಿಹಾಸಿಕರೆನ್ನುತ್ತಾರೆ. ಇದರಲ್ಲಿ ನನಗೆ ಎರಡು ಮಾತುಗಳು ಸಿಕ್ಕುವು. ಅವು ಯಾವವೆಂದರೆ—

(೧) ಒಂದಾನೊಂದು ಕಾಲದಲ್ಲಿ ಶಿವಲಿಂಗವು ಮಾನವ ಲಿಂಗದ ಆಕಾರದಲ್ಲೇ ಇತ್ತು.

(೨) ಸುಮಾರು ಕ್ರಿಸ್ತಶಕಕ್ಕೆ ಮುಂಚೆಯಾದರೂ ಪೀಠಕ್ಕೆ ಮಹತ್ತ್ವವಿರಲಿಲ್ಲ. ಲಿಂಗಸ್ತಂಭವನ್ನು ಶಿವನೆಂದೂ ಪೀಠವನ್ನು ಶಕ್ತಿಯೆಂದೂ ಭಾವಿಸುವ ಶಿವಶಕ್ತಿಸಮನ್ವಯದ ತತ್ತ್ವವು ಅದಕ್ಕಿಂತ ಈಚಿನದು.

ಉತ್ತರ ಹಿಂದುಸ್ತಾನದಲ್ಲಿ ಭೀಟಾ ಎಂಬಲ್ಲಿ ಇನ್ನೊಂದು ಲಿಂಗವು ಸಿಕ್ಕಿದೆ. ಅದೂ ಸ್ತಂಭಾಕಾರದ್ದೇ ಇದ್ದು ಅದರ ತುದಿಗೆ ಮಾನವಲಿಂಗಾಗ್ರದ ಆಕಾರವಿರದೆ ಐದು ಮೋರೆಗಳಿವೆ. ಸುತ್ತುಮುತ್ತು ನಾಲ್ಕು; ಮೇಲೆ ಒಂದು. ಈ ಲಿಂಗದ ಮೈಗೆ ಒಂದು ಶಿಲಾಲೇಖವು ಬರೆಯಲ್ಪಟ್ಟಿದೆ. ಆ ಅಕ್ಷರಗಳು ಅಶೋಕನ ಶೈಲಲಿಪಿಗಳ ಬ್ರಾಹ್ಮೀ ಅಕ್ಷರಗಳು. ಆದುದರಿಂದ ಇದೂ ಕೂಡ ಕ್ರಿಸ್ತಶಕಕ್ಕಿಂತ ಮುಂಚಿನದೇ ಎಂಬುದು ನಿಸ್ಸಂದೇಹ. ಇದಕ್ಕೂ ಪೀಠವಿಲ್ಲ. ಬರೇ ಸ್ತಂಭ. ಪೀಠದಲ್ಲಿ ಹುಗಿದಿರಬೇಕಾದ ಕೆಳಭಾಗದಲ್ಲಿಯೇ ಲಿಪಿಯನ್ನು ಬರೆದಿರುವದರಿಂದ ಅದನ್ನು ಪೀಠದಲ್ಲಿ ಹುಗಿದು ಮುಚ್ಚುವಂತೆ ಮಾಡಿರಲಾರರು. ಇದೂ ಕೂಡ ಆ ಲಿಂಗಕ್ಕೆ ಪೀಠವಿರಲಿಲ್ಲವೆಂಬುದನ್ನೇ ಸೂಚಿಸುವದು. ಅಲ್ಲದೆ ಇನ್ನೊಂದು ಮಾತು ಇದರಿಂದ ಗೊತ್ತಾಗುವದೇನಂದರೆ, ಪುರಾಣದ ಪಂಚಮುಖದ ಕಲ್ಪನೆಯು ಕ್ರಿಸ್ತಶಕಕ್ಕಿಂತ ಮುಂಚಿನದು ಗುಡಿಮಲ್ಲಂ ಮತ್ತು ಭೀಟಾ ಇವೆರಡೂ ಸ್ಥಳದ ಲಿಂಗಗಳ ಫೋಟೊಗಳನ್ನು ಶ್ರೀ. ಗೋಪೀನಾಥರಾಯರ ಪುಸ್ತಕದಲ್ಲಿ ನೋಡಿಕೊಳ್ಳಬಹುದು.

ಗುಡಿಮಲ್ಲಂ ಲಿಂಗವು ರಾಮಬಾಣದ ಸಮಸ್ಯೆಯನ್ನು ನಿವಾರಣಗೊಳಿಸಿತು. ಅದು ಕೇವಲ ಲಿಂಗಾಗ್ರದ ನಿದರ್ಶಕಚಿಹ್ನವು. ಇದಕ್ಕೆ ಆಗಮಗಳಲ್ಲಿ ಬ್ರಹ್ಮಸೂತ್ರವೆಂದು ಹೇಳಿದುದಾಗಿ ಶ್ರೀ ಗೋಪೀನಾಥರಾಯರು ಬರೆಯುತ್ತಾರೆ. ಇದನ್ನು ನೋಡಿದರೆ ಲಿಂಗಾಗ್ರದ ಸ್ಪಷ್ಟಾಕಾರವು ಕಲೆಯಲ್ಲಿ ಮಾಯವಾಗಿ ಬರೇ ಗೆರೆಯ ರೂಪಕ್ಕೆ ಬಂದ ಕಾಲದಲ್ಲಿ ಈ ಆಗಮಗಳು ಈಗಿನ ರೂಪಕ್ಕೆ ಬಂದವೆಂದು ಸಿದ್ಧವಾಗುವದು. ಅಂತೇ ಅವುಗಳಲ್ಲಿ "ಸೂತ್ರ"ವೆಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆ. ಈ ಬ್ರಹ್ಮಸೂತ್ರ ರಾಮಬಾಣಗಳ ಸಮಸ್ಯೆ ಬಗೆಹರಿದಾಗಳೇ ಋಗ್ವೇದದೊಳಗಿನ ಅನಾರ್ಯರ "ಶಿಶ್ನೋದೇವ"ನು ಈ ಲಿಂಗಪ್ಪನೇ ಎಂಬುದು ಸ್ಪಷ್ಟವಾಗುತ್ತದೆ. ಈ ಮಂತ್ರಗಳನ್ನು ನಾನು ಮೊಟ್ಟ ಮೊದಲಿಗೆ ರೆ| ಕಿಟ್ಟೆಲ್ ಸಾಹೇಬರ 'ಪರಮಾತ್ಮಜ್ಞಾನ' ವೆಂಬ ಪುಸ್ತಕದಲ್ಲಿ ನೋಡಿದ್ದೆನು. ನನ್ನ ರಾಮಬಾಣದ ಸಂದೇಹಕ್ಕೆ ಇದೂ ಒಂದು ಕಾರಣವಾಗಿತ್ತು. ಆದರೆ ಗೋಪೀನಾಥರಾಯರ ಪುಸ್ತಕದಲ್ಲಿ ಈ ಫೊಟೋಗಳನ್ನೂ ಋಗ್ವೇದದ ಆ ಮಂತ್ರಗಳ ಉಲ್ಲೇಖವನ್ನೂ ನೋಡಿ ನನ್ನ ಸಂದೇಹವು ಸಿದ್ಧಾಂತವಾಯಿತು.

ಇದರ ಮೇಲಿಂದ ಆರ್ಯ ವೈದಿಕರಿಗಿಂತ ಮುಂಚೆ ಈ ದೇಶದಲ್ಲಿ ವಾಸಿಸುತ್ತಿದ್ದ ಜನಾಂಗದವರು ದೇವರನ್ನು ಸೃಷ್ಟಿಕರ್ತನೆಂದೂ ತಂದೆಯೆಂದೂ ಭಾವಿಸಿ ಅದಕ್ಕೆ ಸಂಕೇತವಾಗಿ ಪುರುಷಚಿಹ್ನವನ್ನು ಮೂರ್ತಿಗೊಳಿಸಿದ್ದರೆಂದಂತಾಯಿತು. ಇವನ್ನು ನೆನೆದರೆ ಆ ಕಾಲದಲ್ಲಿ ಇಂಥಾದ್ದೇ ಇನ್ನೊಂದು ತತ್ತ್ವಸಂಕೇತವು ಪ್ರಚಾರದಲ್ಲಿದ್ದಿರಬಹುದೆಂದು ತರ್ಕವುಂಟಾಗುತ್ತದೆ. ತಂದೆಯೆಂದು ಪೂಜಿಸುವವರಂತೆ ದೇವರನ್ನು ತಾಯಿಯೆಂದು ಪೂಜಿಸುವವರೂ ಇದ್ದಿರಲೇಬೇಕು. ಐಹೊಳ್ಳಿಯಿಂದ ತೆಂಕಣಕ್ಕೆ ಎರಡು ಮೈಲು ದೂರದಲ್ಲಿ ಸಿದ್ಧನಕೊಳ್ಳವೆಂಬ ಹಳ್ಳಿಯೂ ಒಂದು ದೊಡ್ಡ ಕೊಳ್ಳವೂ (ಗೊಂದಿಯೂ) ಇದ್ದು ಆ ಕಾಂತಾರದ ಕೊಳ್ಳದಲ್ಲಿ ಏಳೆಂಟನೇ ಶತಮಾನದ ಒಂದು ಶಿವಾಲಯ ಹಾಗೂ ಒಂದು ಸಪ್ತಮಾತೃಕೆಯರ ಗುಡಿ ಇದ್ದದ್ದಲ್ಲದೆ ಅಲ್ಲೊಂದು ಗವಿಯಲ್ಲಿ ಕಲ್ಲುಪಡಿಯ ಮೇಲೆ ಮೈಥುನಾಸನದಲ್ಲಿ ಬತ್ತಲೆ ಮಲಗಿದ ಮುಖವಿಲ್ಲದ್ದೊಂದು ಹೆಣ್ಣುಗೊಂಬೆಯು ಕೆತ್ತಲ್ಪಟ್ಟಿದೆ. ಇಂಥದೊಂದು ಗೊಂಬೆಯು ಮಹಾಕೂಟದಲ್ಲಿಯೂ ಇತ್ತು. ಅದಕ್ಕೆ ಲಜ್ಜೆಗೌರಿಯೆಂದು ಜನರು ಅನ್ನುತ್ತಿದ್ದರು. ಅದು ಈಗ ಒಡೆದು ನಾಚಿಕೆಯ ಭಾಗವು ಲೋಪವಾಗಿ ಹೋಗಿದೆ. ಮುಖದ ಸ್ಥಳದಲ್ಲಿ ಒಂದು ಅರೆ ಬಿರಿದ ಕಮಲದ ಮೊಗ್ಗೆಯನ್ನು ಮಾಡಿದ್ದಾರೆ. ಇಂಥ ಮೂರ್ತಿಗಳಿಗೆ ಮುಖವಿಲ್ಲದೆ ಇರುವುದರಲ್ಲಿ ಒಂದು ಅರ್ಥವಿದೆ. ಅದೇನೆಂದರೆ ಈ ಉಪಾಸನೆಯು ಒಂದು ವ್ಯಕ್ತಿಯ ಪೂಜೆಯಾಗಿರದೆ ಒಂದು ತತ್ತ್ವದ ಪೂಜೆಯಾಗಿದ್ದದ್ದನ್ನೇ ಇದು ಸೂಚಿಸುತ್ತದೆ. ಹಿಂದಿನ ಕಾಲದ ಎಷ್ಟೋ ಶಿವಾಲಯಗಳ ಗೋಡೆಗೆ ಮೈಥುನಾಸನಗಳ ವಿಧವಿಧದ ಚಿತ್ರಗಳನ್ನು ಕೆತ್ತಿರುವುದು ಆ ಕಾಲದ ಶಕ್ತಿಯುಪಾಸನೆಯನ್ನೇ ಸೂಚಿಸುವದೆಂದು ತೋರುತ್ತದೆ. ಅಥವಾ ಆ ಚಿತ್ರಗಳು ಕಾಮಶಾಸ್ತ್ರದ ಕಲೆಯನ್ನು ವಿಸ್ತರಿಸುವ ರಂಜಕಚಿತ್ರಗಳಾಗಿದ್ದರೂ ಇರಬಹುದು. ಇದೇನೇ ಇರಲಿ.

ಆದರೆ ಗವಿಗಳಲ್ಲಿದ್ದ ಮಸ್ತಕಹೀನನಗ್ನಸ್ತ್ರೀಮೂರ್ತಿಗಳು ಮಾತ್ರ ಯೋನಿಪೂಜೆಯನ್ನೇ ಸೂಚಿಸುತ್ತವೆ. ಇಂಥ ಕಾಂತಾರದ ಕೊಳ್ಳಗಳಲ್ಲಿ ವಾಸವಾಗಿದ್ದ ಯೋಗಿಗಳು ಒಂದಾನೊಂದು ಕಾಲದಲ್ಲಿ ಇಂಥ ಉಪಾಸನೆಯನ್ನು ನಡೆಯಿಸುತ್ತಿದ್ದರಿಂದಲೇನೋ ಏನೋ ನಮ್ಮ ಕನ್ನಡ ನಾಡಿನಲ್ಲಿ ಯೋಗಿ ಎಂಬ ಶಬ್ದಕ್ಕೆ ಜೋಗಿ ಎಂಬ ಅಪಹಾಸ್ಯಕಾರಕ ಶಬ್ದವು ಪ್ರಚಾರದಲ್ಲಿ ಬಂದಂತೆ ಕಾಣುತ್ತದೆ. ಒಟ್ಟಿಗೂ ಶಿವತತ್ತ್ವವೂ ಶಕ್ತಿತತ್ತ್ವವೂ ಆರ್ಯರು ಬರುವದಕ್ಕಿಂತ ಬಹು ಪೂರ್ವದಲ್ಲಿಯೇ ಭರತಖಂಡದಲ್ಲಿ ನೆಲೆಗೊಂಡಿದ್ದವೆಂದು ಹೇಳಬಹುದು. ಅದರಲ್ಲಿಯೂ ಇನ್ನೊಂದು ಮಾತೇನೆಂದರೆ ಲಿಂಗದ ಅಗ್ರವು ಊರ್ಧ್ವಮುಖವಾಗಿ ಇರುವುದನ್ನು ನೋಡಿದರೆ ಇದು ಮಾನವರಿಗೆ ಸಂಯಮವನ್ನೂ ಅಧೋಮುಖೀವೃತ್ತಿಗಳ ಊರ್ಧ್ವೀಕರಣವನ್ನೂ ಸೂಚಿಸುವಂತಿದೆ. ಆದುದರಿಂದ ಅನಾರ್ಯ ಜನಾಂಗದಲ್ಲಿ ಮೊದಲಿಗೆಲ್ಲಾ ಪ್ರಕೃತಿಸುಲಭವಾದ ಅಧೋವೃತ್ತಿಗಳಿಗೇ ಒಂದು ರೂಪು ಕೊಟ್ಟು ಅವರಲ್ಲೇ ಒಂದು ಉಪಾಸನೆಯನ್ನು ಕಲ್ಪಿಸಿಕೊಡುವ ಶಾಕ್ತತತ್ತ್ವವೇ ಬಳಕೆಯಲ್ಲಿದ್ದು ಮುಂದೆ ಬರಬರುತ್ತ ಸುಸಂಸ್ಕೃತಿ ಬೆಳೆದು ಬಂದಂತೆಲ್ಲಾ ಸಂಯಮಸೂಚಕವೂ ನೀತಿಯುಕ್ತವೂ ಆದ ಲಿಂಗತತ್ತ್ವವು ಹೊಳೆದು ಪ್ರಚಾರಕ್ಕೆ ಬಂದಿರಬೇಕೆಂದು ತೋರುತ್ತದೆ. ಇದನ್ನು ನೋಡಿದರೆ ಲಿಂಗೋಪಾಸನೆಯು ಆರ್ಯರಿಗಿಂತ ಮುಂಚೆ ಇದ್ದದ್ದರಲ್ಲಿಯೇ ಸುಧಾರಿಸಿದ ಅನಾರ್ಯರ ಧರ್ಮವಾಗಿತ್ತೆಂದು ಹೇಳಬಹುದು. ಇನ್ನೊಂದು ಮಾತೇನೆಂದರೆ, ಎಂಥ ತತ್ತ್ವವಾದರೇನಾಯಿತು, ಹೀಗೆ ನಾಚಿಕೆಗೇಡಾದ ಆಕಾರದಲ್ಲಿ ದೇವತತ್ತ್ವವನ್ನು ಉಪಾಸಿಸಬೇಕೇ ? ಎಂದು ಕೆಲವರು ಅನ್ನಬಹುದು ಆದರೆ ಅದು ಆ ಕಾಲದಲ್ಲಿ ನಾಚಿಕೆಯ ಚಿಹ್ನವೇ ಆಗಿರಲಿಕ್ಕಿಲ್ಲವೆಂದು ನನಗೆ ಅನಿಸುತ್ತದೆ. ಆರೇಳು ನೂರು ವರುಷಗಳ ಹಿಂದಿನ ಗುಡಿಗಳಲ್ಲೇ ತುಸು ನಿಂತು ನೋಡಿರಿ. ಹೆಣ್ಣುಗೊಂಬೆಗಳೆಲ್ಲಾ ಮೊಲೆ ತೆರಕೊಂಡೇ ನಿಂತಿರುತ್ತವೆ. ರಾಣಿಯ ಗೊಂಬೆಯೂ ಹಾಗೇ ರಂಭೆಯ ಗೊಂಬೆಯೂ ಹಾಗೇ. ಈ ರೀತಿಯಾಗಿ ಮೊನ್ನೆ ಮೊನ್ನೆಯೇ ಹೆಣ್ಣುಮಕ್ಕಳಿಗೆ ಕುಪ್ಪಸವಿಲ್ಲದೆ ಸೆರಗಿಲ್ಲದೆ ಬೇಕಾದಂತೆ ಅಡ್ಡಾಡಲಿಕ್ಕೆ ನಾಚಿಕೆಯಿದ್ದಿಲ್ಲವೆಂದ ಮೇಲೆ ಅದಕ್ಕಿಂತ ಬಹು ಸಹಸ್ರ ವರ್ಷಗಳ ಹಿಂದೆ ಬತ್ತಲೆ ಅಡ್ಡಾಡುವ ಕಾಲವೇ ಇತ್ತೆಂದು ನಾವು ಯಾಕೆ ಭಾವಿಸಬಾರದು. ಯಾವ ಕಾಲದಲ್ಲಿ ಮಾನವನು ತೆರೆದು ಇರುವನೋ

ಅದರ ಬಗ್ಗೆ ಆ ಕಾಲದ ಜನಾಂಗದಲ್ಲಿ ಅಷ್ಟೊಂದು ಅ...
ಷತ್ವವಿರುವುದಕ್ಕೆ ಕಾರಣವೇ ಇಲ್ಲ. ಮುಕ್ತ...
ಮಾನವನು ಮುಚ್ಚುಮರೆಯಿಲ್ಲದೆ ಅಡ್ಡಾಡುತ್ತಿದ್ದಾಗ...
ತತ್ತ್ವವು ಮುಂದೆ ಬಂದ ಆರ್ಯಕುಲದವರಿಗೆ ಅಸ...
ಕಂಡಿರುವುದು ಸಹಜ. ಅಂತೇ ಅವರು ಇವರನ್ನು "...
ದೇವಪೂಜಕ"ರೆಂದು ಹಳಿವರು. ಇದರಲ್ಲೇನು ಆ...

ಅನಾರ್ಯರ ಈ ತತ್ತ್ವಜ್ಞಾನವು ಮುಂದೆ ಮುಂದೆ ...
ಮನಸ್ಸನ್ನು ಆಕರ್ಷಿಸದೆ ಬಿಡಲಿಲ್ಲ. ಅಥರ್ವ ವೇದದ...
ಮೇವಾದ್ವಿತೀಯಂ ಸ್ಕಂಭದ ವರ್ಣನೆಯು ಈ ಲಿಂ...
ದ್ದೊಂದು ಹೊಸ ಆವೃತ್ತಿಯೇ ಸರಿ. ಅವರು ಅದ...
ಕೆಯ ಭಾಗವನ್ನೆಲ್ಲ ಅಳುಕಿಸಿ ಬರೇ ಒಂದು ಕಂಬವಾಗಿ...
ಸ್ವೀಕರಿಸಿದರು. ಕೇನೋಪನಿಷತ್ತಿನಲ್ಲಿ ಈ ಕಂಬದ ವ...
ವಿದ್ದದ್ದರಿಂದಲೇ ಅದು ಅಥರ್ವವೇದದ ಉಪನಿಷ...
ಲ್ಲೊಂದೆಂದು ಪ್ರಸಿದ್ಧವಾಗಿರಬಹುದು.

ಹೀಗೊಮ್ಮೆ ಆರ್ಯರ ತತ್ತ್ವಕ್ಕೂ ದ್ರಾವಿಡರ ತ...
ಏಕರೂಪತೆಯು ಬಂತು. ಇದೇ ಮೊದಲನೇ ಐಕ್ಯ. ...
ಲಿನ ಶಿಶ್ನೋದೇವನು ಹೀಗೊಮ್ಮೆ ತ್ರೈಲೋಕ್ಯನ...
ಮೂಲಸ್ತಂಭದ ಶಂಭುವಾದನು. ಆ ಮೇಲೆ ಮ...
ಸ್ಥಿತ್ಯಂತರದ ಕಾಲವು ಬಂತು. ಆಗ ಪುರಾಣ...
ತ್ರಿಮೂರ್ತಿಗಳ ತಂಟೆ. ಆ ತ್ರಿಮೂರ್ತಿತತ್ತ್ವವೆಲ್ಲಾ ...
ಎಂದು ತೋರಿಸುವುದಕ್ಕೆ ಮುಂದೆ ಆ ಕಂಬಕ್ಕೇ ಮೂ...
ಗಳನ್ನು ಕಲ್ಪಿಸಿ ಬುಡವನ್ನು ಬ್ರಹ್ಮಭಾಗವೆಂದೂ ನಡು...
ವಿಷ್ಣುಭಾಗವೆಂದೂ ತುದಿಯನ್ನು ರುದ್ರಭಾಗವೆಂದೂ ...
ಲಿಂಗವನ್ನು ತ್ರಿಮೂರ್ತ್ಯಾತ್ಮಕವಾಗಿ ರೂಪಿಸಿದರು.
ಎರಡನೇ ತತ್ತ್ವಸಮನ್ವಯವು.

ಹಾಳು ಶಿವಾಲಯಗಳಲ್ಲಿ ನೀವು ಈ ರೂಪವನ್ನು ...
ವಾಗಿ ನೋಡಬಹುದು. ಪೀಠವೆಲ್ಲಾ ಒಡೆದು ಹೋ...
ಲಿಂಗವಷ್ಟೇ ಉಳಿದಿದ್ದರೆ ಅಲ್ಲಿ ನಿಮಗೆ ಇದು ಕಾಣ...
ಅವು ಪೀಠದ ಮೇಲೆ ಕಾಣಿಸುವ ಲಿಂಗಕ್ಕಿಂತ ಮ...
ಯಷ್ಟು ಉದ್ದವಾಗಿರುವ ಸ್ತಂಭಗಳೇ ಸರಿ. ಬುಡದ ...
ಭಾಗವು ಚೌಕಾಗಿಯೂ ನಡುವಿನ ವಿಷ್ಣುಭಾಗವು ...
ದಾಗಿಯೂ ಮೇಲಿನ ರುದ್ರಭಾಗವು ದುಂಡಗೆ ಕೊಳ...
ದ್ದಾಗಿಯೂ ಸ್ಪಷ್ಟವಾಗಿ ಕಾಣುತ್ತದೆ. ಇಂಥ ...

ಲಿಂಗದಂಡಗಳನ್ನು ಮಹಾಕೂಟದಲ್ಲಿ ಹೇರಳವಾಗಿ ಕಾಣಬಹುದು.

ಲಿಂಗದ ತ್ರಿಮೂರ್ತ್ಯಾತ್ಮಕತ್ವದ ಬಗ್ಗೆ ಶಿವಪುರಾಣದಲ್ಲಿ ಕೂಡ ಉಲ್ಲೇಖವಿರುವುದಾಗಿ ನಾನು ವಾರಪವರ ಗ್ರಂಥಮಾಲೆಯಲ್ಲೊಂದಾದ "ವೀರಶೈವ ಉಪಯುಕ್ತ ವೇಂಚೇ" ಎಂಬ ಪುಸ್ತಕದಲ್ಲಿ ಓದಿದ್ದೇನೆ. ಭಕ್ತನ ಕಾಲುಗಳೇ ಬ್ರಹ್ಮಭಾಗವೆಂದೂ ದಂಡವೇ ವಿಷ್ಣುಭಾಗವೆಂದೂ ರುಂಡವೇ ರುದ್ರಭಾಗವೆಂದೂ ಹೀಗಿದ್ದದರಿಂದಲೇ ಭಕ್ತನು ಲಿಂಗಕಾಯನೆಂದೂ ಬಣ್ಣಿಸುವ ಶ್ಲೋಕಗಳಿವೆ. ಈ ತ್ರಿಮೂರ್ತ್ಯಾತ್ಮಕತ್ವದ ಸ್ಥಿತ್ಯಂತರದ ಕಾಲವು ಮುಗಿದ ಬಳಿಕ ಇನ್ನೊಂದು ಕಾಲವು ಬಂತೆಂದು ತೋರುತ್ತದೆ. ಇದುವರೆಗೂ ಆದರಿಸದ ಶಾಕ್ತರನ್ನು ಈ ಕಾಲದಲ್ಲಿ ಐಕ್ಯಪಡಿಸಿಕೊಂಡರೆಂದು ಹೇಳಬಹುದು.

ಆಗ ಲಿಂಗದ ಕೆಳಗಿನ ಎರಡು ಭಾಗಗಳೂ ಮುಳುಗುವಂತೆ ಪೀಠದಲ್ಲಿ ತೂತು ತೋಡಿ ಅದರಲ್ಲಿ ಅದನ್ನು ಸೇರಿಸಿ ರುದ್ರಭಾಗವನ್ನಷ್ಟೇ ಮೇಲೆ ತೆರೆದು ಹೀಗೆ ಶಿವ ಶಕ್ತಿ ತತ್ತ್ವಗಳಲ್ಲಿ ಐಕ್ಯವನ್ನುಂಟುಮಾಡಿದರು. ಇದೇ ಕೊನೆಯ ಸ್ಥಿತ್ಯಂತರ. "ಉಮಾಯೈ ಭಗರೂಪಿಣ್ಯೈ ಲಿಂಗರೂಪಧರಾಯ ಚ ಶಂಕರಾಯ ನಮಸ್ತುಭ್ಯಮ್ ॥ (ಕಾಮಿಕಾಗಮ. ಹಿಂ. ಮೂ. ಶಾ.)" ಲಿಂಗಕ್ಕೆ ಹೀಗೆ ತತ್ತ್ವಸಮನ್ವಯದ ಸಲುವಾಗಿ ನಾನಾ ಕಾಲಗಳಲ್ಲಿ ನಾನಾ ರೂಪಗಳು ಬಂದವು. ಏಸು ಹೊಸ ರೂಪಗಳು ಬಂದರೂ ಹಳೆಯ ರೂಪಗಳ ಚಿಹ್ನಗಳು ತುಸುವಾದರೂ ಉಳಿಯುತ್ತಲೇ ಬಂದಿರುವವು. ಹಳೆಯದನ್ನೆಲ್ಲ ಪೂರ್ಣ ತ್ಯಜಿಸಿಲ್ಲ. ಬ್ರಹ್ಮಸೂತ್ರ ಅಥವಾ ರಾಮಬಾಣದ ಸುತ್ತು ಗೆರೆಯೇ ಇದಕ್ಕೆ ಸಾಕ್ಷಿ. ಪೀಠಕ್ಕೆ ಮಿದುವಾದ ಹೆಣ್ಣು ಗಲ್ಲನ್ನೂ ಲಿಂಗಕ್ಕೆ ಬಿರುಸಾದ ಒಪ್ಪಿನ ಗಂಡುಗಲ್ಲನ್ನೂ ಉಪಯೋಗಿಸಬೇಕೆಂದು ಆಗಮಗಳಲ್ಲಿಯೂ ಶಿವತತ್ತ್ವರತ್ನಾಕರದಲ್ಲಿಯೂ ಅಂತೇ ಇದೆ.

ಬೇರೆ ಬೇರೆ ಜನಾಂಗಗಳು ನೆರೆನೆರೆಯಾಗಿ ಕೂಡಿ ಬಾಳುವಾಗ ತನ್ನಿಂದ ತಾನೇ ಒಂದರ ನಾತು ಇನ್ನೊಂದಕ್ಕೆ ಬಡಿಯುವ ಮಾತು ಒತ್ತಟ್ಟಿಗಿರಲಿ. ಆದರೆ ಪರಸ್ಪರರ ಸುಖಶಾಂತಿಗಳಿಗಾಗಿ ಒಬ್ಬರಿಗೊಬ್ಬರು ಒಡಂಬಟ್ಟು ಬುದ್ಧಿಪುರಸ್ಸರವಾಗಿ ಪರಸ್ಪರರ ಸಂಸ್ಕೃತಿಗಳ ಸಂಬೆರಕೆಯನ್ನು ಮಾಡಿಕೊಳ್ಳದೇ ನಿರ್ವಾಹವೇ ಬೀಳುವದಿಲ್ಲ. ಹೀಗೆಂತಲೇ ಲಿಂಗರೂಪದಲ್ಲಿ ಬದಲಾವಣೆಗಳಾದಂತೆ ಮೂರ್ತಿರೂಪಗಳೂ ಬದಲಾಗಿವೆ. ಹರಿಹರ ವಾದವನ್ನು ನೀಗಿಸುವದಕ್ಕೆ ಹರಿಹರ ಮೂರ್ತಿಯೂ ಶಿವಶಕ್ತಿ ವಾದವನ್ನು ನೀಗಿಸುವದಕ್ಕೆ ಅರ್ಧನಾರೀಶ್ವರ ಮೂರ್ತಿಯೂ ಕಾಲಕಾಲಕ್ಕೆ ಪ್ರಕಾಶಕ್ಕೆ ಬಂದವು. ಅಷ್ಟೇಕೆ ? ಹಿಂದೂ ಮುಸಲ್ಮಾನರನ್ನು ಐಕ್ಯಗೊಳಿಸುವುದಕ್ಕೆ ಕಬೀರ, ನಾನಕ, ಸಾಲುಟಗಿಯ ಶಿವಯೋಗೀಶ್ವರ, ಶಿರಹಟ್ಟಿಯ ಫಕೀರಸ್ವಾಮಿ, ಹುಮನಾಬಾದಿಯ ಮಾಣಿಕಪ್ರಭು ಮುಂತಾದ ಜ್ಞಾನಿಗಳು ಉಭಯ ವೇಷಗಳನ್ನೂ ಧರಿಸಿ ನಿಲ್ಲಲಿಲ್ಲವೇ ? ಇಂಥ ಕಾರಣಗಳಿಂದಲೇ ಲಿಂಗದ ರೂಪರೇಷೆಯಲ್ಲಿ ಕೂಡ ಕಾಲಕಾಲಕ್ಕೆ ಬದಲಾಗುತ್ತ ಬಂತು.

ಲಿಂಗದ ಆಕಾರವು ಮೂಲತಃ ಅದೊಂದು ತತ್ತ್ವಸಂಕೇತವಾಗಿದೆ. ಆದರೆ ಇಂಥಾ ತತ್ತ್ವಗಳೆಲ್ಲಾ ಪುರಾಣ ಯುಗದಲ್ಲಿ ಮೂರ್ತಿಗಳಾಗಿ ಕದನ ಮಾಡಹತ್ತಿದವು. ಶಿವನಿಗೆ ಪಂಚಮುಖಗಳಿವೆಯೆಂದೂ ತ್ರಿಶೂಲಾದಿ ಆಯುಧ ಮುಂತಾದವುಗಳ ಧಾರಣವಿದೆಯೆಂದೂ ಇನ್ನೂ ಏನೇನೋ ಕಲ್ಪಿಸಿ ಜನಗಳಲ್ಲಿ ಕೋಲಾಹಲವಾಗುವದಕ್ಕೆ ಕಾರಣವಾಗಿದೆ. ಶಿವನ ಪಂಚಮುಖಗಳು ಆಕಾಶಾದಿ ಪಂಚತತ್ತ್ವಗಳೆಂದು ಪಂಚ ಬ್ರಹ್ಮೋಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿದೆ. ಅಲ್ಲದೆ ದೇವರೂಪಗಳೆಲ್ಲಾ ಪ್ರತಿಭಾಸಂಪನ್ನತೆಯಿಲ್ಲದ ಅಲ್ಪಬುದ್ಧಿಯ ಭಕ್ತರ ಸಲುವಾಗಿ ಕಲ್ಪಿಸಲ್ಪಟ್ಟವುಗಳೆಂದು ಮಹಾನಿರ್ವಾಣತಂತ್ರದಲ್ಲಿ ಘಂಟಾಘೋಷವಾಗಿ ಹೇಳಿದೆ. "**ಏವಂ ರೂಪಾಣಿ ವಿವಿಧಾನಿ ಚ ಕಲ್ಪಿತಾನಿ ಹಿತಾರ್ಥಾಯ ಭಕ್ತಾನಾಮ್ ಅಲ್ಪಮೇಧಸಾಮ್**" ಮಹಾನಿರ್ವಾಣ ತಂತ್ರದ ೧೩ನೇ ಉಲ್ಲಾಸದಲ್ಲಿರುವ ಈ ಉಪದೇಶವು ನನ್ನ ಮನಸ್ಸಿಗೆ ಒಳ್ಳೇ ನಟ್ಟಿತು.

ವಸ್ತುಸ್ಥಿತಿಯು ಈ ರೀತಿಯಾಗಿದ್ದರೂ ಇಂದು ನಾವು ನಾನಾ ದೇವದೇವಿಯರ ರೂಪರಾಶಿಯನ್ನು ಕಟ್ಟಿಕೊಂಡು ದುರಹಂಕಾರದಿಂದ ವ್ಯರ್ಥವಾಗಿ ಒಬ್ಬರನ್ನೊಬ್ಬರು ಜರಿದು ಜನಾಂಗದಲ್ಲಿ ಕೋಲಾಹಲವನ್ನೆಬ್ಬಿಸುವೆವಲ್ಲ! ಇದೆಂಥಾ ಮರುಳುತನ! ನೆಲ ಮುಗಿಲು ಗಾಳಿ ಬೆಂಕಿ ನೀರುಗಳೇ ಶಿವನ ಪಂಚಮುಖಗಳೆಂದು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿರುತ್ತಿದ್ದರೂ, ದೇವರೂಪಗಳೆಲ್ಲಾ ಮಂದಮತಿಗಳ ಸಲುವಾಗಿ ಕಲ್ಪಿಸಲ್ಪಟ್ಟಿರುವವೆಂದು ಶಾಸ್ತ್ರಗಳು ಕೂಗಿಕೊಳ್ಳುತ್ತಿದ್ದರೂ ತಿಳಿದವರೂ ಕೂಡ ಇತ್ತ ಕಿವಿಗೊಡದೆ "ಆ ಜಾತಿ ತಲೆಯಲ್ಲಿ ಹುಟ್ಟಿತು, ಈ ಜಾತಿ ಕಾಲಲ್ಲಿ ಹುಟ್ಟಿತು. ಪಂಚಾಚಾರ್ಯರು ಪಂಚಮುಖಗಳಿಂದ ಹುಟ್ಟಿದರು, ಇನ್ನ್ಯಾವನೋ ಎಲ್ಲಿಂದಲೋ

ಹುಟ್ಟಿದನು." ಮುಂತಾದುದಾಗಿ ಮೂಢೋಚಿತ ಕೋಲಾಹಲವನ್ನೆಬ್ಬಿಸಿಕೊಂಡು ಸುಮ್ಮಸುಮ್ಮನೆ ದುರಹಂಕಾರಕ್ಕೆ ತುತ್ತಾಗಿ ನಮ್ಮ ಆಯುಷ್ಯವನ್ನೂ ಹಾಳು ಮಾಡಿಕೊಂಡು ಜನಾಂಗದ ಜೀವನಕ್ಕೂ ಕಂಟಕರಾಗಿ ಎಲ್ಲೆಲ್ಲೂ ಅಶಾಂತಿಯನ್ನುಂಟುಮಾಡುವದರಲ್ಲಿ ಯಾವ ಜಾಣತನವಿದೆ? ಇಷ್ಟೂ ಕೂಡ ತಿಳಿದು ಕೊಳ್ಳದಿದ್ದರೆ ನಾವು ಅರುವುಳ್ಳವರೇ? ಎಲ್ಲರೂ ಒಬ್ಬರ ಬುದ್ಧಿಯನ್ನು ಸತ್ಯವನ್ನರಿತುಕೊಳ್ಳುವದಕ್ಕೆ ದುಡಿಸಿದರೆ ಇಂದಿನ ಅನರ್ಥಕ್ಕೆ ತಾನೇ ತಡೆಯಾಗಲಿಕ್ಕಿಲ್ಲವೇ!

---

# ಪ್ರಶ್ನೆ

(ಶ್ರೀ ರವೀಂದ್ರನಾಥರ 'ಲಿಪಿಕಾ' ಎಂಬ ಬಂಗಾಲಿ ಗ್ರಂಥದೊಳಗಿನ ಒಂದು ಲೇಖನ)

೧

ಸ್ಮಶಾನದಿಂದ ತಂದೆ ತಿರುಗಿ ಬಂದ.

ಆಗ, ಏಳುವರ್ಷದ ಮಗುವು–ಬರೀ ಮೈ, ಕೊರಳಲ್ಲಿ ಗೋಪಿನೆಳೆ–ಒಂದು ಓಣಿಯ ಮಗ್ಗಲಿನ ಕಿಡಿಕಿಯ ಹತ್ತರ ಕೂತುಕೊಂಡಿದೆ.

ಆತನ ವಿಚಾರವೇನೋ–ಆತಗೇ ತಿಳಿಯದು.

ಬೆಳಗಿನ ಬಿಸಿಲು ಎದುರು ಮನೆಯ ಬೇವಿನ ಗಿಡದ ಟೊಂಗೆಗಳಲ್ಲಿ ಇಣಿಕಿ ಹಾಕುತ್ತಿದೆ.

ಮಾವಿನಕಾಯಿಯವಳು, ಓಣಿಯನ್ನು ಹೊಕ್ಕು ಕೂಗಿ, ಕೂಗಿ, ಹಿಂದೆ ಹೊರಟು ಹೋದಳು.

ತಂದೆ ಬಂದು ಮಗುವನ್ನೆತ್ತಿ ಮೈ ಮೇಲೆ ಕೂರಿಸಿಕೊಂಡ.

ಮಗುವು " ಅಪ್ಪಾ ಅವ್ವನೆಲ್ಲಿ " ? ಎಂದು ಕೇಳಿತು.

ತಂದೆಯು, ತನ್ನ ಕಂಡಿದ ಕಣ್ಣುಗಳಿಂದ ಮೇಲಕ್ಕೆ ಸಿಟ್ಟಿಸಿ "ಮಗೂ ಸ್ವರ್ಗದಲ್ಲಿ" ಎಂದು ಹೇಳಿದ.

೨

ಅಂದಿನಿರುಳು, ನೊಂದು ಕಂದಿದ ತಂದೆಯು ನಿದ್ದೆ ಮಾಡುತ್ತಲೆ ಗಳಿಗೆಗಳಿಗೊಮ್ಮೆ ಏನೇನೋ ಬಡಬಡಿಸುತ್ತಿದ್ದ.

ಬಾಗಿಲಬಳಿ ಮಿಣಿಮಿಣಿ ದೀಪ. ಗೋಡೆಯ ಮೇಲೆ ಒಂದೆರಡು ಹಲ್ಲಿಗಳು.

ಮಗುವು ಹೊರಗೆ ಬಂದು ನಿಂತ; ಎದುರು ಎಲ್ಲೆಲ್ಲು ಬಟ್ಟಬಯಲು.

ನಾಲ್ಕೂನಿಟ್ಟನಲ್ಲೂ ಬೆಳಕುನಂದಿದ ಮನೆಗಳು–ದೈತ್ಯಪುರದ ಕಾವಲುಗಾರರಂತೆ, ನಿಂತಲ್ಲೆ ನಿದ್ರೆ ಮಾಡುತ್ತಿದ್ದವು.

ಬತ್ತಲೆ ಮೈಯ ಮಗುವು ಮುಗಿಲನ್ನು ನಿಟ್ಟಿಸಿನಿಟ್ಟಿಸಿ ನೋಡತೊಡಗಿತು.

ಆತನ, ದಿಕ್ಕುಗೆಟ್ಟ ಮನವು ಯಾರನ್ನೊ ಕೇಳುತ್ತಿತ್ತು "ಸ್ವರ್ಗದ ದಾರಿಯೆಲ್ಲಿ ? ಸ್ವರ್ಗದ ದಾರಿಯೆಲ್ಲಿ?"

ಮುಗಿಲಿನ ಬಯಲಲ್ಲಿ ಯಾವ ಮಾರ್ನುಡಿಯೂ ಇಲ್ಲ.

ಮೂಕ ಕತ್ತಲೆಯು, ತನ್ನ ಚಿಕ್ಕೆಗಣ್ಣುಗಳಿಂದ ಮಿಣುಕುನೀರನ್ನು ಸುರಿಸುತ್ತಿದ್ದಳಷ್ಟೇ !

# ಗುಪ್ತ ಕಾಲದ ವಿಚಾರ



ಲೇಖಕರು—ಶ್ರೀ. ಗೋವಿಂದ ಪೈ, ಮಂಜೇಶ್ವರ

(ಲೇಖಾಂಕ ೨)

## ಸಮುದ್ರಗುಪ್ತ

(೧) ಸಮುದ್ರ ಗುಪ್ತನ ಅಲಾಹಾಬಾದ್ ಶಿಲಾಸ್ತಂಭೋತ್ಕೀರ್ಣ ಪ್ರಶಸ್ತಿಯಲ್ಲಿ 1 (Allahabad Stone-pillar Inscription), ಆತನು ದಕ್ಷಿಣಾಪಥಕ್ಕೆ ದಂಡೆತ್ತಿಕೊಂಡು ಬಂದು ಇಲ್ಲಿಯ ಆಯಾ ದೇಶಗಳ ಅರಸರನ್ನು ಗೆದ್ದು ಅವರನ್ನು ಪುನಃ ಅವರವರ ಪಟ್ಟದಲ್ಲಿ ಪ್ರತಿಷ್ಠಾಪಿಸಿದನೆಂದು ('......ದಕ್ಷಿಣಾಪಥ ರಾಜಗ್ರಹಣ ಮೋಕ್ಷಾನುಗ್ರಹ ಜನಿತ ಪ್ರತಾಪೋನ್ಮಿಶ್ರ ಮಹಾಭಾಗ್ಯಸ್ಯ') ಹೇಳಿರುವ ಅರಸರ ಹೆಸರುಗಳಲ್ಲಿ 'ಕಾಂಚೇಯಕ ವಿಷ್ಣುಗೋಪ' ಎಂಬುದೊಂದು ಹೆಸರಿದೆ. ಈತನು ಕಾಂಚೀ ದೇಶದ (Conjeevaram) ಪಲ್ಲವ ವಂಶೀಯ ಅರಸಾದ ವಿಷ್ಣುಗೋಪನೆಂಬುದರಲ್ಲಿ ಸಂಶಯವಿಲ್ಲ. ಈ ವಿಷ್ಣುಗೋಪನ ಆಳಿಕೆಯ ಕಾಲವಿನ್ನೂ ಕಂಡಿತವಾಗಿ ತಿಳಿದಿಲ್ಲವಾದರೂ, ಈತನಿಂದ ಆರೇ ತಲೆಗಳ ಬಳಿಕ ಆಳಿದ ಅದೇ ವಂಶದ ಸಿಂಹವರ್ಮನೆಂಬ 2 ಅರಸನ ಕಾಲನಿರ್ಣಯದ ಆಧಾರದಿಂದ ಅದನ್ನು ತಕ್ಕಷ್ಟು ಸರಿಯಾಗಿ ನಿರ್ಣಯಿಸಬಹುದು. ಈ ಸಿಂಹವರ್ಮನ ಕಾಲವನ್ನು ಕುರಿತು 'ಲೋಕವಿಭಾಗ' ಎಂಬ ಅತಿ ಪ್ರಾಚೀನವಾದೊಂದು ಜೈನ ಗ್ರಂಥದ ಕೊನೆಯ 'ಮೋಕ್ಷವಿಭಾಗ' ಪ್ರಕರಣದ ಅಂತ್ಯದಲ್ಲಿ ಆ ಗ್ರಂಥರಚನೆಯ ಕಾಲವನ್ನು ಕುರಿತು ಹೀಗೆಂದಿದೆ—

'ಸಂವತ್ಸರೇ ತು ದ್ವಾವಿಂಶೇ ಕಾಂಚೀಶ ಸಿಂಹವರ್ಮಣಃ ।
ಅಶೀತ್ಯಗ್ರೇ ಶಕಾಬ್ದಾನಾಂ ಸಿದ್ಧಮೇತಚ್ಛತತ್ರಯೇ ॥'

ಇದರಿಂದ ಆ ಗ್ರಂಥವು ಸಮಾಪ್ತವಾದುದು ಶಾ. ಶ. ೩೮೦ ರಲ್ಲಿ, ಅಂದರೆ ಕ್ರಿ. ಶ. ೪೫೮—೪೫೯ರಲ್ಲಿ ಎಂದೂ, ಆ ವರ್ಷವು ಕಾಂಚಿಯ ಅರಸಾದ ಸಿಂಹವರ್ಮನ ಆಳಿಕೆಯ ೨೨ನೆಯ

---

1 ಈ ಪ್ರಶಸ್ತಿಯ ಕೊನೆಯಲ್ಲಿ 'ಖಾದ್ಯಟಪಾಕಿಕಸ್ಯ... ಸಾಂಧಿ ವಿಗ್ರಹಿಕ ಕುಮಾರಾಮಾತ್ಯ ಮಹಾದಂಡನಾಯಕ ಹರಿಷೇಣಸ್ಯ' ಎಂದಿದೆ. ಇದೇ ಪ್ರಶಸ್ತಿಯಲ್ಲಿರುವ 'ಕಾಂಚೇಯಕ' ಎಂದರೆ ಕಾಂಚಿಯವನು, 'ಕೌಸಲಕ' ಎಂದರೆ ಕೋಸಲದೇಶದವನು, 'ಸೈಂಹಲಕ' ಎಂದರೆ ಸಿಂಹಲದೇಶದವನು, ಎಂಬಂತೆಯೇ 'ಖಾದ್ಯಟಪಾಕಿಕ' ಎಂದರೆ 'ಖದ್ಯಟಪಾಕಿ' ಎಂಬಲ್ಲಿಯವನು ಎಂಬ ಅರ್ಥವೇ ಸರಿ ಅಲ್ಲದೆ, ಡಾ| ಬೂಲರ (Dr. Buhler) ರು 'ಖಾದ್ಯಟಪಾಕಿಕನ ಮಗನು' ಎಂದಾಗಿಸಿರುವ ಅರ್ಥವೆಂದಿಗೂ ಸರಿಯಲ್ಲ. 'ಖದ್ಯಟಪಾಕಿ' ಎಂಬುದೊಂದು ಊರ ಹೆಸರಲ್ಲದೆ, ದೇಶದ ಹೆಸರಾಗಿರಲಾರದೆಂದು ನನಗೆ ತೋರುತ್ತದೆ; ಮತ್ತು 'ಪಾಕಿ' ಎಂಬ ಪರಪದವುಳ್ಳ ಈ ಹೆಸರು 'ಕೊಲ್ಲಿಪಾಕಿ' ಮುಂತಾದವುಗಳಂತೆ, ಅದು ದಕ್ಷಿಣಾಪಥದಲ್ಲಿಯ ಊರ ಹೆಸರಾಗಿರಬೇಕೆಂಬುದೂ ಸುನಿಶ್ಚಿತವೇ. ಈ 'ಖದ್ಯಟಪಾಕಿ' ಎಂಬುದು ಈಗ ಧಾರವಾಡ ಜಿಲ್ಲೆಯಲ್ಲಿರುವ 'ಕಜ್ಜರಿಗ' ಎಂಬ ಊರೇ ಆಗಿರಬಹುದೆ? ಹಾಗಾದರೆ ಹರಿಷೇಣನು ಕನ್ನಡಿಗನಲ್ಲವೆ?

೩—೮೧೪೫

2 

ವರ್ಷವೆಂದೂ ತಿಳಿವುದರಿಂದ, ಆತನು ಪಟ್ಟವೇರಿದುದು ಕ್ರಿ. ಶ. ೪೩೬–೪೩೭ರಲ್ಲಿ ಎಂದು ನಿಷ್ಪನ್ನವಾಗುತ್ತದೆ. 3

ಸಮುದ್ರಗುಪ್ತನ ದೇಹಾವಸಾನವಾದುದು ಗುಪ್ತ ಸಂ। ೬೦ರಲ್ಲಿ (ಎಂದರೆ ನನ್ನ ತೇದಿಯ ರೀತ್ಯಾ ಕ್ರಿ. ಶ. ೩೨೦–೩೨೧ ರಲ್ಲಿ) ಎಂದು ಈ ಮೇಲೆ ಕಂಡಿರುವದರಿಂದ, ಕ್ರಿ. ಶ. ೪೩೬–೪೩೭ ರಲ್ಲಿ ಕಾಂಚಿಯ ಪಟ್ಟವೇರಿದ ಸಿಂಹವರ್ಮನಿಂದ ಆರು ತಲೆಯಂತರಕ್ಕೆ ಪೂರ್ವಿಕನಾದ ವಿಷ್ಣುಗೋಪನು, ಸಮುದ್ರಗುಪ್ತನು ಕ್ರಿ. ಶ. ೩೨೦ಕ್ಕಿಂತ ಕನಿಷ್ಠಪಕ್ಷಕ್ಕೆ ಹತ್ತಿಪ್ಪತ್ತು ವರ್ಷಗಳಿಗಾದರೂ ಮುಂಚೆ ದಕ್ಷಿಣಾಪಥಕ್ಕೆ ದಂಡೆತ್ತಿ ಬಂದಾಗ, ಕಾಂಚಿಯಲ್ಲಿ ಆಳುತ್ತಿದ್ದು, ಆ ಗುಪ್ತ ಸಮ್ರಾಜನ ಸಮಕಾಲೀನನಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ.

(೨) ಸಿಂಹಲದ್ವೀಪದ ಪ್ರಾಚೀನ ಇತಿಹಾಸವಾಗಿರುವ 'ಮಹಾವಂಸ' ಎಂಬ ಪಾಲಿ ಭಾಷೆಯ ಕಾವ್ಯಕ್ಕೆ ಡಾ। ಗಾಯ್ಗರ್ (Dr. Wilhelm Geiger) ಎಂಬೊಬ್ಬ ಜರ್ಮನ್ ವಿದ್ವಾಂಸರು ಮಾಡಿರುವ ಆಂಗ್ಲ ಅನುವಾದದ ಭೂಮಿಕೆಯಲ್ಲಿ ಅವರು ಹೀಗೆಂದಿರುವರು (Introd. XXXIX)

'Sylvain Levi has Communicated the following passage from the account of the Chinese Wang Hiuen Tse. The king of Cheu-tzne (*i. e.* Ceylon) by name Chi-mi-kia-po-mo (*i. e.* Siri Meghavanna) .........sent an embassy to the king than ruling over India, San-meou-to-lo-kiu-to (*i. e.* Samudragupta)'.

ಪುತ್ತೀ ವಿದ್ವಾಂಸರು ಬುದ್ಧನ ನಿರ್ವಾಣವು ಕ್ರಿ. ಪೂ. ೪೮೩ರಲ್ಲಿ ಆದುದೆಂದು ಹೇಳಿ, ಆ ಮಹಾನಿರ್ವಾಣ ಸಂವತ್ ೮೦೮ರಿಂದ ೮೩೫ರ ವರೆಗೆ ಸಿಂಹಲದ್ವೀಪದಲ್ಲಿ ಆಳಿದ ೬೧ನೆಯ ಅರಸಾದ ಮಹಾಸೇನ ಎಂಬವನು ಕ್ರಿ. ಶ. ೩೨೫ರಿಂದ ೩೫೨ರ ವರೆಗೆ ಆಳಿದನೆಂದೂ, ಆತನ ಬಳಿಕ ೨೭ ವರ್ಷಗಳ ವರೆಗೆ ಆಳಿದ ಸಿರಿ ಮೇಘವಣ್ಣ (ಶ್ರೀ ಮೇಘವರ್ಣ) ಎಂಬವನು ಕ್ರಿ. ಶ. ೩೫೨ರಿಂದ ೩೭೯ರ ವರೆಗೆ ಆಳಿದನೆಂದೂ ನಿರ್ಣಯಿಸಿರುವರು. ಆದರೆ ಇದೆಂದಿಗೂ ಸರಿಯಲ್ಲ. ಏಕೆಂದರೆ, ಬು… ನಿರ್ವಾಣಕ್ಕೆ ಸರಿಯಾದ ಕ್ರಿ. ಪೂ. ವರ್ಷವಾವುದೇ … ಎಷ್ಟೋ ಹಿಂದಣದೊಂದು ಕಾಲದಲ್ಲಿ ಒಂದು ಬಾರಿ ತ… ತಪ್ಪಾಗಲಿ ಸರಿಯಾಗಲಿ ಯಾವುದೊಂದು ವರ್ಷದಿಂದ… ರಿಸತೊಡಗಿ, ಅಂದಿನಿಂದ ಎಷ್ಟೋ ಶತಮಾನಗಳಿಗೆ ಇ… ವರೆಗೆ (ಬೌದ್ಧ ದೇಶಗಳಲ್ಲಿ ಇಂದಿನ ವರೆಗೆ) ಅದಕ್ಕನು… ವಾಗಿ ಇತಿಹಾಸವನ್ನು ಕೂಡ ಬರೆದಿಟ್ಟು ಬಂದಿರು… ಇಂದಿನ ಶೋಧಕ್ಕೆ ಐತಿಹ್ಯದಲ್ಲಿರುವ ಆ ತೇದಿ ಸರಿಯಲ್ಲ… ಬಹುದಾದರೂ, ಆ ತೇದಿಗೆ ಹೊಂದಿಕೆಯಾಗಿರುವ … ಇತಿಹಾಸವಿದೆಯೊ ಅದೆಲ್ಲವನ್ನು ಅದೇ ಪ್ರಾಕ್ಕಾಲದ … ಸರಿಯಾದ ಕ್ರಿ. ಶ. ವರ್ಷದಿಂದ ತಾನೆ ಗೊತ್ತುಹಚ್ಚಬೇಕು… ಹೊಸತಾಗಿ ಶೋಧಿಸಿ ನಿಶ್ಚಯಿಸಿರುವ ತೇದಿಗೆ ಸರಿ ಹೊ… ವುದು ಎಂದಿಗೂ ನೀತಿಯಲ್ಲ. ಹಾಗೆ ಮಾಡಿದರೆ ಆ ಇತಿ… ದಲ್ಲಿ ಏನೆಲ್ಲ ವಿಪರ್ಯಾಸವಾಗದು ! ಅದರಲ್ಲಿ ಉಲ್ಲೇಖಿ… ಎಷ್ಟೋ ಘಟನೆಗಳೆಲ್ಲ ಹೇಗೆಲ್ಲ ಅಸ್ತವ್ಯಸ್ತವಾಗವು !… ಸಂದರ್ಭದಲ್ಲಿ ಡಾ। ಶಾಮಶಾಸ್ತ್ರಿಗಳವರು ಹೇಳಿರುವ… ತಂಬ ಸಾಕೂತವಿದೆ:—

'The assignation of Buddha's Nirva… 543 B. C. 4 may be wrong. But the da… an initial point from which the reigning p… of successive kings of Ceylon are counte… not be altered without affecting the chrono… of the kings.' (M. A. R.—1923 ಪು. ೨೨)

ಇದೇ ಸಂದರ್ಭದಲ್ಲಿ ಇನ್ನೊಂದೀ ಮಾತನ್ನೂ … ಹುದು ; ಅದೇನೆಂದರೆ—

ಯೇಸು ಕ್ರಿಸ್ತನ ಜನನವಾದುದು ಕ್ರಿ. ಶ. ೧ರಲ್ಲಿ … ಆ ಕಾರಣದಿಂದ ತಾನೆ ಆತನ ಹೆಸರ ಶಕವು A. D. … 'Anno domini' (In the year of … lord) ಎಂದು ಕರೆಯಲ್ಪಡುತ್ತದೆಂದೂ ಸರ್ವ… ಯಷ್ಟೆ. ಆದರೆ ಇತಿಹಾಸವನ್ನು ಅವಲೋಕಿಸಿದರೆ, … ಹುಟ್ಟಿದುದು.

---

3 'ಜೈನ ಹಿತೈಷಿ' ಎಂಬ ಹಿಂದೀ ಮಾಸಪತ್ರಿಕೆಯ XIII. ೧೨ನೆಯ (ದಶಂಬರ ೧೯೧೭) ಸಂಚಿಕೆಯಿಂದ ಮೇಲಿನ ಶ್ಲೋಕವನ್ನು ಆಯ… (ಪು. ೫೨೫) ['ಜೈನಗ್ರಂಥ ರತ್ನಾಕರ ಕಾರ್ಯಾಲಯ'—ಹೀರಾಬಾಗ್ ; ಗಿರಗಾಂವ, ಮುಂಬಯಿ.]

4 ಇದು ಬುದ್ಧನ ನಿರ್ವಾಣಕ್ಕೆ ಸಾಂಪ್ರದಾಯಿಕವಾಗಿರುವ ತೇದಿ.

'Probably some years before the year 1 of that era, which all civilised people date from the day on which he was born' (Renan—'Life of Jesus.' II)

ಎಂದು ಕಾಣುತ್ತದೆ. ಡಾ. ಮೊಫ್ಫೆಟರು (Dr. James Moffat) ತನ್ನ 'Everyman's Life of Jesus' (Chap. I) ಎಂಬುದರಲ್ಲಿ ಆತನು ಹುಟ್ಟಿದುದು ಕ್ರಿ. ಪೂ. ೭ನೆಯ ಇಸವಿಯಲ್ಲಿ ಎಂದಿರುವರು. ಈ ಕ್ರಿ. ಪೂ. ೭ನೆಯ ಇಸವಿಯನ್ನು ಆತನ ಜನನದ ನಿಜವಾದ ವರ್ಷವೆಂದಿಟ್ಟು ಕೊಂಡು, ಅಂದಿನಿಂದ ಇಂದಿನ ವರೆಗಿನ ಇತಿಹಾಸವನ್ನು ಏಳೇಳೇ ವರ್ಷಗಳಿಗೆ ಮಾರ್ಪಡಿಸಿ, ಅದಕ್ಕೆ ಸರಿಯಾಗಿಸುತ್ತ ಹೋದರೆ ಹೇಗಾದೀತೆಂದು ವಾಚಕರೇ ಊಹಿಸಲಿ. ಹಾಗಾದರೆ ಬುದ್ಧನ ನಿರ್ವಾಣಕ್ಕೆ ಸಾಂಪ್ರದಾಯಿಕವಾಗಿರುವ ಕ್ರಿ. ಪೂ. ೫೪೩ನ್ನು ೬೦ ವರ್ಷಗಳಿಗೆ ಇಳಿಸಿ ಕ್ರಿ. ಪೂ. ೪೮೩ ಎಂದಾಗಿಸಿ, ಅದರಂತೆ ಐತಿಹಾಸಿಕ ಕಾಲಕ್ರಮಗಳನ್ನು ೬೦–೬೦ ವರ್ಷಗಳಿಗೆ ಪಲ್ಲಟಿಸುತ್ತಾ ಹೋದರೆ ಹೇಗಾಗುವುದೋ ಅಥವಾ ಹೇಗಾಗದೋ ಊಹೆಗೆ ಕೂಡ ದುರೂಹವೇ.

ಆದುದರಿಂದ ಬುದ್ಧನ ನಿರ್ವಾಣಕ್ಕೆ ಸಾಂಪ್ರದಾಯಿಕವಾಗಿರುವ ತೇದಿಯು ಕಾಲಕ್ರಮದಿಂದ ನಿರ್ದಿಷ್ಟವಾಗಿರುವ ಕಾಲಗಳುಳ್ಳ ಇತಿಹಾಸದ ವಿಚಾರದಲ್ಲಿ ನಮಗೆ ಬೇಕಾದುದು ಆ ಸಾಂಪ್ರದಾಯಿಕ ತೇದಿ ತಾನೇ ಅಲ್ಲದೆ, ವಿದ್ವಾಂಸರು ಬುದ್ಧನನ್ನು ನಿರ್ವಾಣಗೊಳಿಸಿದ ತೇದಿಯೆಂದಿಗೂ ಅಲ್ಲ. ಅಂಥಾ ಸಾಂಪ್ರದಾಯಿಕ ತೇದಿ ಎಂದರೆ ಕ್ರಿ. ಪೂ. ೫೪೪–೫೪೩ ತಾನೆ. 5 ಈ ತೇದಿಯಂತೆ ಲೆಕ್ಕಿಸುವಂದು, ಸಿಂಹಲ ದ್ವೀಪದ ೬೧ನೆಯ ಅರಸಾದ ಮಹಾಸೇನನು ನಿರ್ವಾಣಾತ್ಪರ ೮೦೮ ರಿಂದ ೮೩೫ರ ತನಕ ಆಳಿದನೆಂಬರೆ, ಆತನ ರಾಜ್ಯಕಾಲವು ಕ್ರಿ. ಶ. ೨೬೫ರಿಂದ ೨೯೨ರ ವರೆಗೆಂದೂ, ಆದುದರಿಂದ ಆತನ ಬಳಿಕ ಪಟ್ಟಕ್ಕೆ ಬಂದು ೨೭ ವರ್ಷಗಳಿಗೆ ರಾಜ್ಯವಾಳಿದ ಶ್ರೀ ಮೇಘವರ್ಣನ ರಾಜ್ಯಕಾಲವು ಕ್ರಿ. ಶ. ೨೯೨ ರಿಂದ ೩೧೯ ರ ವರೆಗೆಂದೂ ಸ್ವಯಂಸಿದ್ಧವಾಗುವುದರಿಂದ, ಸಿಂಹಲ ದೇಶದೊಡೆಯನಾದ ಆ ಮೇಘವರ್ಣನು ಕ್ರಿ. ಶ. ೩೨೦ರಲ್ಲಿ ದಿವಂಗತನಾದ ಗುಪ್ತ ಸಮ್ರಾಟ್ ಸಮುದ್ರಗುಪ್ತನ ಸಮಕಾಲೀನನಾಗಿದ್ದನೆಂಬುದರಲ್ಲಿ ರವಷ್ಟಾದರೂ ಶಂಕೆಯಿಲ್ಲ.

## ಸ್ಕಂದಗುಪ್ತ

(೩) ಜುನಾಘಡದಿಂದ 'ಊರ್ಜಯಂತಗಿರಿ' ಎಂಬ ಗಿರ್ನಾರಕ್ಕೆ (Girnar) ಹೋಗುವ ದಾರಿಯು ಬಲಮಗ್ಗಲಲ್ಲಿ ದೊಗ್ಗಾಲಿಕ್ಕಿರುವ ಆನೆಯು ಡುಬ್ಬವಂತಿರುವ ಸ್ಥೂಲವಾದೊಂದು ಬಂಡೆಯಲ್ಲಿ ಮೌರ್ಯ ಸಮ್ರಾಟ್ ಅಶೋಕನ ಲೇಖದ ಹಾಗೂ ಮಹಾಕ್ಷತ್ರಪರುದ್ರದಾಮನ ಲೇಖದ ಪಕ್ಕದಲ್ಲಿ ಗುಪ್ತ ಸಮ್ರಾಟ್ ಸ್ಕಂದಗುಪ್ತ ಲೇಖವೂ ಕೊರೆದಿದೆ. ಗುಪ್ತಸಂವತ್ ೧೩೭ ರಲ್ಲಿ ಸ್ಕಂದಗುಪ್ತನು 'ಚತುರುದಧಿ ಜಲಾಂತಾಂ ಸ್ಫೀತಪರ್ಯಂತ ದೇಶಾಮ್' ಈ ಭಾರತ ಭೂಮಿಯನ್ನು ಆಳುತ್ತಿರುವಾಗ, ಆತನಿಂದ ಸೌರಾಷ್ಟ್ರದೇಶದ ಒಡೆತನದಲ್ಲಿ ನಿಯೋಜಿತನಾದ ಪರ್ಣದತ್ತನ ಮಗನಾದ ಚಕ್ರಪಾಲಿತನೆಂಬವನು ಕಟ್ಟೆಯೊಡೆದು ಹರಿದುಹೋದ ಸುದರ್ಶನ ತಟಾಕವನ್ನು ಪುನಃ ಸಂಸ್ಕರಿಸಿದನೆಂದು ಆ ಪ್ರಶಸ್ತಿಯಲ್ಲಿ ಹೇಳಿದೆ. ನನ್ನ ನಿರ್ಣಯದ ಪ್ರಕಾರ ಗುಪ್ತ ಸಂ। ೧೩೭ ಎಂದರೆ ಕ್ರಿ. ಶ. ೨೬೦–೨೬೧+೧೩೭= ಕ್ರಿ. ಶ. ೩೯೭–೩೯೮ ಎಂಬುದರಿಂದ, ಆಗ್ಗೆ ಗುಪ್ತ ಸಮ್ರಾಟ್ ಸ್ಕಂದ ಗುಪ್ತನು ಪಟ್ಟದಲ್ಲಿದ್ದನೆಂದಾಗುತ್ತದೆ.

ಚೀನದ ಯಾತ್ರಿ ಫಾಹಿಯಾನನು (Fa Hian) ನಮ್ಮ ಭಾರತ ದೇಶಕ್ಕೆ ಕ್ರಿ. ಶ. ಸು. ೪೦೦ರಲ್ಲಿ ಬಂದಾಗ, ಆಗ್ಗೆ ಪಾಟಲಿಪುತ್ರದ ಸಿಂಹಾಸನದಲ್ಲಿದ್ದ ಗುಪ್ತ ಸಮ್ರಾಜನು ವಿಕ್ರಮಾದಿತ್ಯನೆಂಬ ಅಪರಾಭಿಧಾನವುಳ್ಳ ಈ ಸ್ಕಂದಗುಪ್ತನೇ ವಿನಾ, ಮೆ॥ ವಿನ್‌ಸೆಂಟ್ ಸ್ಮಿತ್ತರು (Mr. Vincent Smith) ಊಹಿಸಿರುವಂತೆ (ವಿಕ್ರಮಾದಿತ್ಯನೆಂಬ ಅಪರಾಭಿಧಾನವುಳ್ಳ) ದ್ವಿತೀಯ ಚಂದ್ರಗುಪ್ತನೆಂದಿಗೂ (ಗುಪ್ತ ಸಂ। ೬೧ ; ೮೨) ಅಲ್ಲ. ಫಾಹಿಯಾನನು ಆಗ್ಗೆ ಭಾರತ ಭೂಮಿಯಲ್ಲಿ ಆಸೀನಾಂತವಾಗಿ ನೆಲಸಿದ್ದ ತಾನು ಕಂಡ ಸರ್ವಬಗೆಯ ಸಮೃದ್ಧಿಯನ್ನಿತ್ಯಾದಿ ಕುರಿತು ಹೇಳಿರುವನಲ್ಲದೆ ಆ ಗಣಗುಪ್ತ ಸಮ್ರಾಜನ ಹೆಸರನ್ನಾದರೂ ಹೇಳಿಲ್ಲವೆಂಬುವನ್ನು 6 ಮರೆಯಲಾಗದು.

5 'The chronology current in Ceylon, Burma and Siam starts out from the middle of the year 544 B. C. as the date of the Nirvana' (Geiger's 'Mahavamsa'—Introd. XXV).

6 '(Fa Hian) did not trouble even to mention the name of the mighty monarch in whose territories he spent 6 studious years' (V. Smiths 'Early History of India').

## ಕುಮಾರಗುಪ್ತ II

(೪) ಮಾಲವ ದೇಶದಲ್ಲಿರುವ 'ಮಂದಸೋರ್' ಎಂಬಲ್ಲಿರುವೊಂದು ಶಿಲಾಲೇಖದಲ್ಲಿ (Mandasor Stone Inscription), ಗುಪ್ತವಂಶೀಯ ಕುಮಾರಗುಪ್ತನೆಂಬ ಸಮ್ರಾಜನ ಆಳಿಕೆಯಲ್ಲಿ

'ಚತುಸ್ಸಮುದ್ರಾಂತ ವಿಲೋಲಮೇಖಲಾಂ
ಸುಮೇರು ಕೈಲಾಸ ಬೃಹತ್ಪಯೋಧರಾಮ್ ।
ವನಾಂತ ವಾಂತ ಸ್ಫುಟ ಪುಷ್ಪ ಹಾಸಿನೀಂ
ಕುಮಾರ ಗುಪ್ತೇ ಪೃಥಿವೀಂ ಪ್ರಶಾಸತಿ ॥'

(ಶ್ಲೋ. ೨೩)

ದಶಪುರ ಎಂಬಲ್ಲಿರುವ ಸೂರ್ಯಮಂದಿರದ ಜೀರ್ಣೋದ್ಧಾರವು 'ಮಾಲವಾನಾಂ ಗಣಸ್ಥಿತ್ಯಾ' ಎಂದರೆ ಮಾಲವ ದೇಶದವರ ಕಾಲಕ್ರಮದ ಮೇರೆಗೆ (ಎಂದರೆ ವಿಕ್ರಮ ಸಂವತ್) ೫೨೯ನೆಯ ಫಾಲ್ಗುಣ ಶುಕ್ಲ ಬಿದಿಗೆಯೆಂದು ಆಯಿತೆಂದಿದೆ. ವಿಕ್ರಮ ಸಂ। ೫೨೯ ಎಂದರೆ ಕ್ರಿ. ಶ. ೪೭೩–೭೪. ಈಗ ಮೇಲೆ ಕೊಟ್ಟಿರುವ ಗುಪ್ತ ಸಮ್ರಾಜರ ವಂಶಾವಳಿಯಲ್ಲಿ ಕುಮಾರಗುಪ್ತ ಎಂಬ ಹೆಸರುಳ್ಳ ಇಬ್ಬರರಸರು ಇರುವರಷ್ಟೇ. ಇವರಲ್ಲಿ ಮೊದಲನೆಯ ಕುಮಾರಗುಪ್ತನ ಹೆಸರುಳ್ಳ, ಗುಪ್ತ ಸಂ। ೯೬ನೆಯ ನಾಣ್ಯವೇನೋ ದೊರಕಿರುವುದರಿಂದ, ನನ್ನ ನಿರ್ಣಯದ ಪ್ರಕಾರ ಆತನ ಕಾಲವು ಕ್ರಿ. ಶ. ೨೬೦–೨೬೧+ ೯೬=ಕ್ರಿ. ಶ. ೩೫೬–೩೫೭ ಎಂದಾಗುವುದರಿಂದ, ಈ ಮಂದಸೋರ್ ಶಿಲಾಲೇಖದಲ್ಲಿ ಹೊಗಳಲ್ಪಟ್ಟಿರುವ ಕುಮಾರಗುಪ್ತನು ಆತನಲ್ಲ, ಆತನಿಂದ ೪ ತಲೆಯುಂತರಕ್ಕೆ ಈಚೆಯುವನಾದ ಎರಡನೆಯ ಕುಮಾರಗುಪ್ತನೇ ಎಂದು ದೃಢವಾಗುತ್ತದೆ.

## ಹ್ವೇಂ ಚಂಗ (Hiuen Tsang)

(೫) ಮಿ॥ ವಿನ್‌ಸೆಂಟ್ ಸ್ಮಿತ್ತರು (Vincent Smith) ತನ್ನ 'Early History of India' ಎಂಬ ಗ್ರಂಥದಲ್ಲಿ ಹೀಗೆಂದಿರುವರು (2nd Edition 1908–ಪು. ೩೦೦)

"The cruelty practised by Mihiragula became so unbearable that the native princes, under the leadership of Baladitya king of Magadha (the same as Narasimhagupta), and Yasodharman, a Raja of Central India, formed a confederacy against the foreign tyrant. About the year … A. C. they accomplished the delivery of … country from oppression by inflicting a deci… defeat on Mihiragula……"

ಮತ್ತು, ಇದಕ್ಕೆ ಆಧಾರವಾಗಿ ಚೀನಿ ಯಾತ್ರಿಕ ಹ್ವೇಂ… (Hiuen Tsang) ನ ಗ್ರಂಥದಲ್ಲಿ ಬಾಲಾದಿತ್ಯನು … ರಾಜನಾದ ಮಿಹಿರಕುಲನನ್ನು ಗೆದ್ದನೆಂದಿರುವ ಹೇಳಿಕೆಯ… (Beal's 'Buddhist Records of the West… world' I. ಪು. ೧೬೭–೧೭೧) ಮುಂದೊಡ್ಡಿರುವರು.

ಡಾ। ಫ್ಲೀಟರು ಗುಪ್ತ ಕಾಲಾರಂಭಕ್ಕೆ ನಿರ್ಣ… ಕ್ರಿ. ಶ. ೩೧೯–೩೨೦ ಎಂಬ ತೇದಿಗೆ ಸರಿಯಾಗಿ ಗುಪ್ತ… ೧೩೭ (=ಕ್ರಿ. ಶ. ೪೫೬–೪೫೭) ದಲ್ಲಿ ಪಟ್ಟದಲ್ಲಿದ್ದ ಸಮ್ರಾ… ಸ್ಕಂದಗುಪ್ತನಿಂದ ೨ನೆಯ ತಲೆಯುಂತರದಲ್ಲಿ ಆ ಪಟ್ಟವ… ಬಾಲಾದಿತ್ಯನೆಂಬ ಅಪರಾಭಿಧಾನವಿದ್ದ ನರಸಿಂಹಗುಪ್ತ… ಮೇಲಣ ಹೇಳಿಕೆ ಹೊಂದಿಕೆಯಾಗುವಂತೆ ತೋರು… ದರೂ, ಇದೆಂದಿಗೂ ಸರಿಯಲ್ಲವೆಂದು ಈ ಕಾರಣ… ಸ್ಪಷ್ಟವಾಗದಿರದು.

(ಅ) ಹ್ವೇಂ ಚಂಗನು ಆ ಅರಸನನ್ನು ಬಾಲಾದಿತ್ಯ… ಹೇಳಿರುವನಲ್ಲದೆ, ಆತನ ನರಸಿಂಹಗುಪ್ತ ಎಂಬ ವಂಶ… ವುಳ್ಳ ಆತ್ಮನಾಮವನ್ನು ತನ್ನ ಗ್ರಂಥದಲ್ಲಿ ಒಂದೇ ಒಂ… ವಾದರೂ ಹೇಳಿಲ್ಲ;

(ಆ) ಹಾಗೆಯೇ ಆ ಬಾಲಾದಿತ್ಯನೆಂಬವನು ತ… ಗುಪ್ತನ ಮಗನೆಂದೂ, ತಥಾಗತಗುಪ್ತನು ಬುದ್ಧಗುಪ್ತ… ನೆಂದೂ, ಬುದ್ಧಗುಪ್ತನು ಶಕ್ರಾದಿತ್ಯನ ಮಗನೆಂದೂ … ಚಂಗನ ಗ್ರಂಥದಲ್ಲಿ ಹೇಳಿರುವುದರಿಂದ (ibid. II … ೧೬೮–೧೬೯), ಆ ಬಾಲಾದಿತ್ಯನ ಪೀಳಿಗೆಗೂ ನರಸಿಂಹ… ಬಾಲಾದಿತ್ಯನ ಪೀಳಿಗೆಗೂ ರವಷ್ಟಾದರೂ ತಾಳೆ ಬೀಳದು… ಏವ ಅವರಿಬ್ಬರಿಗೂ 'ಬಾಲಾದಿತ್ಯ' ಎಂಬ ಹೆಸರಷ್ಟೇ ಸ… ವಾಗಿದ್ದ ಬಾದರಾಯಣ ಸಂಬಂಧವಷ್ಟೆ ವಿನಾ, ಅವ… ಎಂದಿಗೂ ಒಬ್ಬನೆಂದಾಗದು;

(ಇ) ಮಿಹಿರಕುಲನನ್ನು ಗೆದ್ದ ಯಶೋಧರ್ಮನ… ಆತನ ಮಂದಸೋರ್ ಶಿಲಾಲೇಖ (Mandasor … Inscription of Yasodharman … Vishnuvardhana) ದಿಂದ ಮಾಲವಗಣಸ್ಥಿ…

ವಿಕ್ರಮ ಸಂವತ್ಸರದ) ಸಂ। ೫೮೯ (ಶ್ಲೋ. ೨೪), ಎಂದರೆ ಕ್ರಿ. ಶ. ೫೩೨ ಎಂದಾಗುತ್ತದಷ್ಟೆ. ಇದೇ ಯಶೋಧರ್ಮ ಮಹಾರಾಜನ ಮಂದಸೋರಲ್ಲಿಯೇ ಇರುವ ಇನ್ನೊಂದು ಶಾಸನ ದಲ್ಲಿ ಈತನು ಹೂಣರಾಜನಾದ ಮಿಹಿರಕುಲನನ್ನು ಗೆದ್ದು ದನ್ನು ಕುರಿತು ಹೀಗದೆ 7–'ನೀಚೈಸ್ತೇನಾಪಿಯಸ್ಯ ಪ್ರಣತಿ ಭುಜಬಲಾವರ್ಜನಕ್ಲಿಷ್ಟ ಮೂರ್ಧ್ನಾ ಚೂಡಾ ಪುಷ್ಪೋಪ ಹಾರೈರ್ಮಿಹಿರಕುಲನೃಪೇಣಾರ್ಚಿತಂ ಪಾದಯುಗ್ಮಮ್ ।'

[(ಶ್ಲೋ. ೬)

ಈ ಶಾಸನದಲ್ಲಿ ಬಾಲಾದಿತ್ಯನ ಮಾತೇ ಇಲ್ಲ ಮಾತ್ರವಲ್ಲ, ಇದರಲ್ಲಿ:ಯೇ ಭುಕ್ತಾ ಗುಪ್ತನಾಥೈರ್ನ......ದೇಶಾಂಸ್ತಾನ್... ಯೋ ಭುನಕ್ತಿ॥' (ಶ್ಲೋ. ೪), ಎಂದರೆ ಗುಪ್ತ ಸಮ್ರಾಜ ರಿಂದ ಕೂಡ ಆಳಲ್ಪಟ್ಟಿರದ ದೇಶಗಳನ್ನು ಯಶೋಧರ್ಮನು ಆಳುತ್ತಾನೆ ಎಂದುಳ್ಳ ಹೇಳಿಕೆಯಲ್ಲಿರುವ 'ಭುಕ್ತಾ' ಎಂಬ **ಭೂತಕಾಲವಾಚಿಯ** ಪ್ರಯೋಗದಿಂದಲೆ ಆ ಯಶೋ ಧರ್ಮನ ಕಾಲಕ್ಕೆ ಪೂರ್ವದಲ್ಲಿಯೆ ಗುಪ್ತ ಸಾಮ್ರಾಜ್ಯವು ಖಿಲ ವಾಗಿದ್ದಿರಬೇಕೆಂದೂ, (ಹಾಗಾದ ಕೊಂಚಕಾಲದಲ್ಲಿಯೇ ಈತನು ಗುಪ್ತಸಾಮ್ರಾಜ್ಯಕ್ಕೆ ಮಿಗಿಲಾದ ರಾಷ್ಟ್ರವನ್ನು ಆಳು ತ್ತಿರಬೇಕೆಂದೂ), ಆದುದರಿಂದ ಈತನ ಕಾಲದಲ್ಲಿ ಗುಪ್ತವಂಶೀ ಯರ· ಆಳ್ವಿಕೆಯಿದ್ದಿಲ್ಲವೆಂದೂ ಸ್ವಯಂ ವ್ಯಕ್ತವಾಗುತ್ತದೆ. ಆದುದರಿಂದ ಗುಪ್ತ ಸಮ್ರಾಜರ ಪೀಳಿಗೆಯಲ್ಲಿ ೧೧ನೆಯವ ನಾದ ನರಸಿಂಹ ಗುಪ್ತನು ಮಿಹಿರಕುಲನೊಡನೆ ಕಾದಾಡಿದ ಬಾಲಾದಿತ್ಯನೆಂದು ಮಿ। ಸ್ಮಿತ್ ಪ್ರಭೃತಿಯವರು ಮಾಡಿರುವ ಊಹೆ ತೀರ ನಿರಾಧಾರವೇ ಎಂದು ಬೇರೆ ಹೇಳಬೇಕೆಂದಿಲ್ಲ. ಆ ಗುಪ್ತ ಸಮ್ರಾಟ್ ನರಸಿಂಹಗುಪ್ತನ ಮಗನಾದ ದ್ವಿತೀಯ ಕುಮಾರಗುಪ್ತನು ಆ ಸಮ್ರಾಜರಲ್ಲಿ ಕೊನೆಯವನಾಗಿರಬೇ ಕೆಂದೂ, ಆತನ ಆಳಿಕೆ ಯಶೋಧರ್ಮನ ಕ್ರಿ. ಶ. ೫೩೨ರ ಲೇಖದ ಕಾಲಕ್ಕೆ ಮುಂಚೆಯೆ ಮುಗಿದಿರಬೇಕೆಂದೂ ಸ್ಪಷ್ಟವಾ ಗುವುದರಿಂದ, ನಾನು ಗುಪ್ತಕಾಲಾರಂಭಕ್ಕೆ ಕಂಡುಹಿಡಿದ ತೇದಿ ಇವೆಲ್ಲ ವಿದ್ಯಮಾನಗಳಿಗೆ ಸರಿ ಹೋಗುತ್ತದೆ.

(೬) ಕ್ರಿ. ಶ. ೬೩೦ರಿಂದ ೬೪೪ ವರೆಗೆ ಈ ಭಾರತದೇಶದ ಲ್ಲಿದ್ದು ಇಲ್ಲಿಯ ದೇಶದೇಶಗಳನ್ನು ಸಂದರ್ಶಿಸಿ ತನ್ನ ಪ್ರವಾಸ ಗಳ ಕಥೆಯನ್ನು ಬರೆದಿಟ್ಟಿರುವ ಆ ಚೀನಿ ಯಾತ್ರಿಕನಾದ ಪೂರ್ವೋಕ್ತ ಹ್ವೇಂ ಚಂಗನು ಆಗಣ ವಲಭಿಯ ಅರಸನನ್ನು ಕುರಿತು ಹೀಗೆಂದಿರುವನು—

'The present king ... is the nephew of Sila-ditya of Kanya Kubja. 8 His name is Tu-lu-ho-po-tu' (Beal–II. ಪು. ೨೬೭).

ಚೀನಿ ಭಾಷೆಯ 'Tu-bu-ho-po-tu' ಎಂಬುದಿದು 'ಧ್ರುವಭಟ' ಎಂಬ ಹೆಸರಿನ ಅಪಭ್ರಂಶವಾಗಿರಬೇಕೆಂದು ವಿದ್ವಾಂಸರು ಭಾವಿಸಿರುವರು; ಆದರೆ ವಲಭಿಯ ಮೈತ್ರಕ ವಂಶೀಯ ಅರಸರ ಈ ವಂಶಾವಳಿಯಲ್ಲಿ

---

7 'ಪ್ರಾಚೀನ ಲೇಖಮಾಲಾ'—I. ೨೮ (ಪು. ೧೧೭)

8 ಕಾನ್ಯಕುಬ್ಜದ ಶೀಲಾದಿತ್ಯನೆಂದರೆ ಕನೋಜದ ಪ್ರಸಿದ್ಧ ಚಕ್ರವರ್ತಿ ಶ್ರೀಹರ್ಷದೇವನು.

- ಭಟ್ಟಾರ್ಕ
  - ಧರಸೇನ I
  - ದ್ರೋಣಸಿಂಹ
  - ಧ್ರುವಸೇನ I (ಸಂ. ೨೦೭)
  - ಧ್ರುವಪಟ್ಟ
    - ಗುಹಸೇನ (ಸಂ. ೨೪೦; ೨೪೬; ೨೪೮)
      - ಧರಸೇನ (ಸಂ. ೨೫೨; ೨೬೯; ೨೭೦)
        - ಶೀಲಾದಿತ್ಯ I (ಸಂ. ೨೮೬; ೨೯೦)
          - ಡೇರಭಟ
            - ಶೀಲಾದಿತ್ಯ II
              - ಶೀಲಾದಿತ್ಯ III (ಸಂ. ೩೫೨)
                - ಶೀಲಾದಿತ್ಯ IV (ಸಂ. ೩೭೩; ೩೭೯)
                  - ಶೀಲಾದಿತ್ಯ V (ಸಂ. ೪೦೩)
                    - ಶೀಲಾದಿತ್ಯ VI (ಸಂ. ೪೪೧)
                      - ಶೀಲಾದಿತ್ಯ VII (ಸಂ. ೪೪೭)
            - ಖರಗ್ರಹ (ಸಂ. ೩೩೭)
            - ಧ್ರುವಸೇನ III (ಸಂ. ೩೩೨)
        - ಖರಗ್ರಹ I
          - ಧರಸೇನ III
          - ಧ್ರುವಸೇನ II (ಸಂ. ೩೧೦)
            - ಧರಸೇನ IV (ಸಂ. ೩೨೬; ೩೩೦)

ಭಟ್ಟಾರ್ಕನ ಮಗನಾದ ಧ್ರುವಪಟ್ಟ (ಧ್ರುವಭಟ ?) ನೆಂಬೊಬ್ಬನಲ್ಲದೆ, ಆ ಹೆಸರಿನ ಬೇರಾವ ಅರಸನಾದರೂ ಇಲ್ಲ; ಮತ್ತು ಸಂ। ೨೦೭ರಿಂದ ೨೪೦ ರೊಳಗಣ ಯಾವ ಕೆಲ ವರ್ಷಗಳಲ್ಲಿ ಆತನಾಳಿರಬೇಕೆಂದು ವ್ಯಕ್ತವಾಗುವುದರಿಂದ, ಗುಪ್ತಕಾಲಾರಂಭಕ್ಕೆ ಡಾ। ಫ್ಲೀಟರಾಗಲಿ (ಕ್ರಿ. ಶ. ೩೧೯–೩೨೦), ಡಾ। ಶಾಸ್ತ್ರಿಗಳಾಗಲಿ (ಕ್ರಿ. ೨೦೦–೨೦೧) ಗೊತ್ತುಮಾಡಿರುವ ಆಯಾ ತೇದಿಯನ್ನು ಸಂ। ೨೦೭ರಿಂದ ೨೪೦ ರೊಳಗಣ ಯಾವ ವರ್ಷಕ್ಕೆ ಹೊಂದಿಸಿದರೂ, ಆತನ ಕಾಲವು ಹ್ವೇಂಚಂಗನ ಸಮಕಾಲೀನತೆಗೆ ಸರಿಹೋಗುವದಿಲ್ಲ. ಆದುದರಿಂದ ಈ 'Tu-lu-ho-po-tu' ಎಂಬುದರಿಂದ ನಿಶ್ಚಯಿಸಿರುವ 'ಧ್ರುವಭಟ' ಎಂಬ ಹೆಸರು ಬಾದಾವಿಯ ಚಾಲುಕ್ಯ ಅರಸರಿಗೆ ಸರ್ವಸಾಮಾನ್ಯವಾಗಿದ್ದ 'ಸತ್ಯಾಶ್ರಯ' ಎಂಬಂತೊಂದು ಯಶಃಸಂಜ್ಞೆಯೊ, ಅಲ್ಲವೆ ರಾಷ್ಟ್ರಕೂಟ ವಂಶೀಯ ಶರ್ವನೆಂಬ ಮಹಾರಾಜನು ನೃಪತುಂಗ– ಅಮೋಘ ವರ್ಷಾದಿ ನಾಮಧೇಯಗಳಿಂದ ಪ್ರಸಿದ್ಧನಾಗಿರುವಂತೆ, ಹ್ವೇಂಚಂಗನ ಸಮಕಾಲೀನನಾದ ವಲಭಿಯ ಅರಸನ ಸ್ವಂತ ಹೆಸರು ಧ್ರು... ಎಂದಿದ್ದು, ಆತನು ಬೇರಾವ ಪಟ್ಟನಾಮವನ್ನು ತಾಳಿ, ... ತನ್ನ ಶಾಸನೇತ್ಯಾದಿಗಳಲ್ಲಿ ಪ್ರಕಟಿಸಿ ಅದರಿಂದಲೆ ಇತಿಹಾಸ... ಪ್ರಸಿದ್ಧನಾಗಿರುವನೊ ಎಂಬುದನ್ನು ವಿಚಾರಿಸತಕ್ಕದ್ದು. ... ಗಾದರೊ ಧ್ರುವಭಟ ಎಂಬುದು ಆತನ ಸ್ವನಾಮಧೇಯ... ಎಂದು ಕಾಣುವುದರಿಂದ, ಆ ಚೀನಿ ಯಾತ್ರಿಕನ (ಕ್ರಿ. ... ೬೩೦–೬೪೪) ಸಮಕಾಲೀನನಾದ ವಲಭಿಯ ಅರಸನು ... ಈ ವಂಶಾವಳಿಯಲ್ಲಿಯ ನಾಲ್ಕನೆಯ ಶೀಲಾದಿತ್ಯನೆಂದು ... ನಿಶ್ಚಯಿಸುತ್ತೇನೆ. ಈ ೪ನೆಯ ಶೀಲಾದಿತ್ಯನ ಈ ವರೆಗೆ ... ಕಿರುವ ಸಂ। ೩೭೨ ಮತ್ತು ೩೭೯ರ ಶಾಸನಗಳು ನಾನು ... ಕಾಲಾರಂಭಕ್ಕೆ ನಿರ್ಣಯಿಸಿರುವ ತೇದಿ (ಕ್ರಿ. ಶ. ೨೬... ಯಂತೆ ಕ್ರಿ. ಶ. ೬೩೨–೬೩೩ ಮತ್ತು ೬೩೯–೬೪೦ ಎಂದಾಗುವುದರಿಂದ, ಈತನು ಆ ಚೀನಿಯ ಯಾತ್ರಿಯ ಸ... ಕಾಲೀನನೆಂದಾಗುತ್ತದೆ.

ಈ ಶೀಲಾದಿತ್ಯ ಎಂಬ ಹೆಸರನ್ನು ಈ ಅರಸರ ವಂಶಾವಳಿಯಲ್ಲಿ ತೋರುವಂತೆ, ದ್ವಿತೀಯ ಶಿಲಾದಿತ್ಯನಿಂದ ಸಪ್ತಮ ಶೀಲಾದಿತ್ಯನ ವರೆಗೂ ಆರು ತಲೆಯಂತರಕ್ಕೆ ಅವಿಚ್ಛಿನ್ನವಾಗಿ ಆರು ಮಂದಿ ಅರಸರು ಆಂತಿರುವುದರಿಂದಲೂ, ಅದನ್ನೇ ಕನೋಜದ ಸಮ್ರಾಟ್ ಶ್ರೀಹರ್ಷದೇವನು ಕೂಡ ಪಟ್ಟನಾಮವಾಗಿ ತಾಳಿದನೆಂದು ಕಾಣುವುದರಿಂದಲೂ, 9 ಇದು ಅವರೆಲ್ಲರು ಆಂತುಕೊಂಡ ಪಟ್ಟನಾಮ ತಾನೆ ಅಲ್ಲದೆ, ಅವರವರ ಸ್ವನಾಮಧೇಯವಲ್ಲವೆಂದು ನಿಷ್ಕೃಷ್ಟವಾಗುವುದರಿಂದ, ಹ್ವೇಂ ಚಂಗನ ಸಮಕಾಲೀನ ಅರಸನ ಆತ್ಮನಾಮವು ಧ್ರುವಭಟ ಎಂದಿದ್ದು, ಆ ಚೀನಿ ಯಾತ್ರಿಕನು ಆತನನ್ನು ಹಾಗೆ ಹೆಸರಿಸಿರಬೇಕು, ಆ ಅರಸನು ತನ್ನ ಹಿರಿಯರೋಪಾದಿಯಲ್ಲಿ ಶೀಲಾದಿತ್ಯ ಎಂಬ ಪಟ್ಟನಾಮವನ್ನು ತಾನೂ ತಾಳಿ ಇತಿಹಾಸದಲ್ಲಿ ಹಾಗೆ ಪ್ರಸಿದ್ಧನಾಗಿರಬೇಕು ಎಂದು ಸ್ಪಷ್ಟವಾಗುತ್ತದೆ.

(೭) ಈ ಹ್ವೇಂ ಚಂಗನು ನೇಪಾಳಕ್ಕೆ ಹೋಗಿಲ್ಲವಾದರೂ ಆ ದೇಶವನ್ನು ಕುರಿತು ಪ್ರಸ್ತಾಪಿಸುವಲ್ಲಿ

'Lately there was a king called An-chu-fa-mo (Amsuvarman), who was distinguished for his learning and ingenuity' (Beal–II– ಪು. ೮೧)

ಎಂದಿರುವನು. ಸಂವತ್ ೩೧೮ನೆಯದೆಂದು ತ್ರಿಸಂಖ್ಯಾಕ ಸಂವತ್ಸಂಖ್ಯೆಯುಳ್ಳ ಒಂದು ಶಾಸನದಲ್ಲಿ, ಲಿಚ್ಛವಿ ವಂಶದ ಶಿವದೇವನು ನೇಪಾಳದ ಮಹಾರಾಜನೆಂದೂ, ಅಂಶುವರ್ಮನೆಂಬವನು ಆತನ ಮಹಾ ಸಾಮಂತನೆಂದೂ ಇದೆ. ಸಂವತ್ ೩೪ ಎಂದು ದ್ವಿಸಂಖ್ಯಾಕ ಕಾಲಮಾನದಿಂದ ನಿರ್ದಿಷ್ಟವಾದ ಇನ್ನೊಂದು ಶಾಸನದಲ್ಲಿಯೂ ಅಂಶುವರ್ಮನು ಮಹಾಸಾಮಂತನೆಂದಿದೆ. ಆದರೆ ಸಂವತ್ ೪೯ ಎಂದು ದ್ವಿಸಂಖ್ಯೆಯುಳ್ಳ ಕಾಲದ ಬೇರೊಂದು ಶಾಸನದಲ್ಲಿಅಂಶುವರ್ಮನು ಮಹಾರಾಜನೆಂದಿದೆ10 ಇದರಿಂದ ತನ್ಮಧ್ಯೇ ಮಹಾಸಾಮಂತನಾದ ಅಂಶುವರ್ಮನು ಅಲ್ಲವೆ ಮಹಾರಾಜ ಶಿವದೇವನನ್ನು ಪಟ್ಟದಿಂದ ತಳ್ಳಿ ತಾನು ನೇಪಾಳದ ಮಹಾರಾಜನಾಗಿರಬೇಕು, ಅಲ್ಲವೆ ಆತನು ಶಿವದೇವನ ಮಗಳನ್ನು ತಾನು ಮದುವೆಯಾಗಿ ಆತನ ಬಳಿಕ ಆತನ ಉತ್ತರಾಧಿಕಾರಿಯಾಗಿ ಪಟ್ಟವೇರಿರಬೇಕು, ಎಂದು ವಿದ್ವಾಂಸರು ಊಹಿಸಿರುವರಾದರೂ, ಆತನ ಹೆಸರಿರುವ ಶಾಸನಗಳಲ್ಲಿ ಇರುವೀ ತ್ರಿಸಂಖ್ಯಾಕ ಕಾಲಮಾನವಾವುದು, ದ್ವಿಸಂಖ್ಯಾಕ ಕಾಲಮಾನವಾವುದು ಎಂಬೀ ವಿಷಯದಲ್ಲಿ ವಿದ್ವಾಂಸರಲ್ಲಿ ತುಂಬ ಭಿನ್ನಾಭಿಪ್ರಾಯಗಳಿವೆ. ಇವಲ್ಲಿಯ ದ್ವಿಸಂಖ್ಯೆಯುಳ್ಳ ಕಾಲಮಾನವು ನಮ್ಮೀ ವಿಚಾರದ ಗೊಡವೆಯ ಹೊರಗಣದೆಂಬುದರಿಂದ, ಅದನ್ನಿಲ್ಲಿ ತರ್ಕಿಸುವುದು ಸರಿಯಲ್ಲ. ತ್ರಿಸಂಖ್ಯೆಯುಳ್ಳ ಸಂವತ್ಸವಾದರೊ ಗುಪ್ತಕಾಲದ್ದೆಂದು ಹೀಗೆ ಸ್ವಯಂವ್ಯಕ್ತವಾಗುತ್ತದೆ. ಗುಪ್ತಕಾಲಾರಂಭಕ್ಕೆ ನಾನು ಗೊತ್ತು ಹಚ್ಚಿದ ತೇದಿಯ ಪ್ರಕಾರ, ಸಂವತ್ ೩೧೮ ಎಂದರೆ ಕ್ರಿ. ಶ. ೨೬೦–೨೬೧+೩೧೮ ಕ್ರಿ. ಶ. ೫೭೮–೫೭೯ ಎಂಬುದರಿಂದ, ಆಗ್ಗೆ ಮಹಾಸಾಮಂತನಾಗಿದ್ದು, ಆ ಬಳಿಕ ನೇಪಾಳದ ಮಹಾರಾಜನಾಗಿ ಅನೇಕ ವರ್ಷಗಳಿಗೆ ಆಳಿದ ಅಂಶುವರ್ಮನು ಹ್ವೇಂ ಚಂಗನು ನಮ್ಮ ದೇಶಕ್ಕೆ ಬಂದಿದ್ದ ಕ್ರಿ. ಶ. ೬೩೦ಕ್ಕೆ ಹತ್ತಿಪ್ಪತ್ತು ವರ್ಷಗಳ ಮುಂಚೆ 11 ಅವಸಾನ ಹೊಂದಿದ್ದರೆ ವಾಸ್ತವಿಕವೇ.

---

9 'Thereupon Harshavardhana became king of Kanauj with the title Rajaputra and the style Siladitya' ( Radhakumud Mukarji's 'Harsha'—ಪು. ೯.)

10 C. V. Vaidya's Medieval Hindu India—Vol. I. ಪು. ೩೬೯.

11 ಹ್ವೇಂ ಚಂಗನು Lately ಎಂದಿರುವುದರಿಂದ, ಆತನಿಲ್ಲಿಗೆ ಬಂದಾಗ (ಕ್ರಿ. ಶ. ೬೩೦) ಅಂಶವರ್ಮನು ಮಡಿದು ಒಂದೆರಡು ವರ್ಷಗಳಷ್ಟಲ್ಲದೆ, ಅದಕ್ಕಿಂತ ಹೆಚ್ಚಾಗಲಾರದು. ಎಂದು ಶಂಕಿಸುವವರಿಗೆ ಆ ಚೀನಿಯಾತ್ರಿಕನ ಗ್ರಂಥದಿಂದಲೆ ಇದೊಂದು ಮಾತನ್ನು ಹೇಳಬಹುದು. ಮಿಹಿರಕುಲನೊಡನೆ ಕಾದಾಡಿ ಆತನನ್ನು ಸೆರೆವಿಡಿದನೆಂದು ಈತನು ಹೇಳಿರುವ ಬಾಲಾದಿತ್ಯನು ಕ್ರಿ. ಶ. ೫೨೮ರ ಸರಿಸಮದವನಾಗಿರಬೇಕೆಂದು ಈ ಮೇಲೆ ಕಂಡಿರುವುದರಿಂದ ಆತನ ಮುತ್ತಜ್ಜನಾದ ಶಕ್ರಾದಿತ್ಯನು ಆತನಿಂದ ೧೦೦–೧೨೦ ವರ್ಷಗಳಿಗಿಂತ ಹೆಚ್ಚಿನ ಪೂರ್ವಿಕನಾಗಲಾರನಷ್ಟೆ. 'ಆದರೂ ಆ ಶಕ್ರಾದಿತ್ಯನನ್ನು ಕುರಿತು ಪ್ರಸ್ತಾಪಿಸುವಾಗ ಆತನು 'Not long after the Nirvana of Buddha' ಇದ್ದನೆಂದು ಈ ಯಾತ್ರಿಕನೆಂದಿರುವುದರಿಂದ (Beal—II- ಪು. ೧೬೪ ), ಈತನ lately ಎಂಬುದರ ಕಾಲಾವಧಿ ಎಷ್ಟಾಗಬಹುದು, ಎಷ್ಟಾಗಲಾರದು ಎಂದು ವಾಚಕರೇ ಊಹಿಸಲಿ.

ಈ ಸಂದರ್ಭದಲ್ಲಿ ಡಾ। ಶಾಸ್ತ್ರಿಯವರು ಈ ಅಂಶುವರ್ಮನಿಂದ ಹನ್ನೊಂದು ತಲೆಗಳ ಬಳಿಕಣ ಜಯದೇವನೆಂಬ ನೇಪಾಳದ ಅರಸನನ್ನು ಕನೋಜದ ಸಮ್ರಾಟ್ ಶ್ರೀಹರ್ಷದೇವನ (ಆಳಿಕೆ ಕ್ರಿ. ಶ. ೬೦೬-೬೪೭) ಜಾಮಾತನೆಂದಿರುವುದು (M. A. R. 1926 ಪು. ೨೬) ಎಂದಿಗೂ ಸರಿಯಲ್ಲ. ಏಕೆಂದರೆ ನೇಪಾಳದೊಡೆಯನಾದ ಈ ಜಯದೇವನ ಪ್ರಶಸ್ತಿಯಲ್ಲಿ 12

'ಗೌಡೋಡ್ರಾದಿ ಕಲಿಂಗ ಕೋಸಲ ಪತಿ ಶ್ರೀಹರ್ಷದೇವಾತ್ಮಜಾ। ದೇವೀ ರಾಜ್ಯಮತೀ ಕುಲೋಚಿತ ಗುಣೈರ್ಯುಕ್ತಾ ಪ್ರಭೂತಾ ಕುಲೈರ್ಯೇನೋಢಾ ಭಗದತ್ತರಾಜಕುಲಜಾ ಲಕ್ಷ್ಮೀರಿವ ಕ್ಷ್ಮಾಭುಜಾ॥'

ಎಂದಿಷ್ಟು ಸ್ಪಷ್ಟವಾಗಿ ಹೇಳಿರುವುದರಿಂದ, ಜಯದೇವ ರಾಜನ ಹೆಂಡತಿ ಹರ್ಷದೇವ ಎಂಬ ಹೆಸರುಳ್ಳ ಅರಸನ ಮಗಳೆಂಬುದು ಸರಿಯೇ ಆದರೂ, ಆ ಅರಸನು ಭಗದತ್ತ ರಾಜನ ವಂಶೀಯನು, ಅಂದರೆ ಮಹಾಭಾರತದ ಯುದ್ಧದಲ್ಲಿ ಕೌರವ ಪಕ್ಷೀಯನಾಗಿ ಕಾದಾಡಿ ಮಡಿದ ಕಾಮರೂಪ ದೇಶದ (ಅಂದರೆ ಈಗಣ 'ಅಸ್ಸಾಮ್' ದೇಶದ) ಅರಸನಾದ ಭಗದತ್ತ ಮಹಾರಾಯನ ವಂಶದವನು ಎಂದು ತಿಳಿಯುತ್ತದಷ್ಟೆ. ಕನೋಜದ ಹರ್ಷವರ್ಧನನು ಎಂದಿಗೂ ಭಗದತ್ತನ ವಂಶದವನಲ್ಲ; ಆದುದರಿಂದ ನೇಪಾಳದ ಜಯದೇವನ ಮಾವನಾದ ಹರ್ಷದೇವನೆಂಬವನು ಕನೋಜದ ಶ್ರೀಹರ್ಷದೇವನೆಂದಿಗೂ ಅಲ್ಲ; ಆತನಿಂದ ಭಿನ್ನನೂ, ಆತನಿಂದ ಅರ್ವಾಚೀನನೂ ಆದ, ಕಾಮರೂಪ ದೇಶದ ಆತನ ಸನಾಮನಷ್ಟೆ ಆದ ಅನ್ಯನೇ ಒಬ್ಬ ಅರಸನೆಂದು ಸ್ವಯಂಸಿದ್ಧವಾಗುವುದರಿಂದ, ಆ ಜಯದೇವನು ಹರ್ಷವರ್ಧನನ ಸಮಕಾಲೀನನೆಂದ ಇವರ ಹೇಳಿಕೆ ಅಸಂಗತವೆಂದಾಗುತ್ತದೆ.

ಇಷ್ಟರಮಟ್ಟಿಗೆ ನನಗೆ ದೊರೆತ ದಾಖಲೆಗಳನ್ನೆಲ್ಲ ನಾನು ಗುಪ್ತಕಾಲಾರಂಭಕ್ಕೆ ಕಂಡುಹಿಡಿದ ತೇದಿಗೆ ಹೊಂದಿಸಿ ಪರೀಕ್ಷಿಸುವಲ್ಲಿ, ಅವು ತಪ್ಪದೆ ಸರಿಹೋಗುತ್ತವೆಂದು ತೋ... ಇವಕ್ಕಿಂತ ಹೆಚ್ಚಿಗೆ ದಾಖಲೆಗಳು ನನಗೆ ದೊರಕಿಲ್ಲ; ... ದೊರೆತವರು ನಾನು ನಿರ್ಣಯಿಸಿರುವೀ ತೇದಿ ಸ... ಎಂಬುದನ್ನು ಪರೀಕ್ಷಿಸಿ ತಿಳಿಸಿದರೆ ಅವರಿಗೆ ಚಿರಋಣಿ... ರುವೆನು. ಡಾ। ಫ್ಲೀಟರು ಗುಪ್ತಕಾಲಾರಂಭಕ್ಕೆ ಸರಿ... ಕ್ರಿ. ಶ. ವರ್ಷವನ್ನು ಯಾವ ಆಧಾರಗಳಿಂದ ಕಂಡು ... ರೆಂದು ನಾನರಿಯೆ. ಡಾ। ಶಾಸ್ತ್ರಿಯವರಾದರೊ ವಿಶೇಷತಃ ... ಹರಿವಂಶ, ಉತ್ತರ ಪುರಾಣ, ತ್ರಿಲೋಕಸಾರ, ಪ್ರ... ಚರಿತ, ಇವೇ ಮೊದಲಾದ ಜೈನ ಗ್ರಂಥಗಳನ್ನೂ ಅವಲ್ಲಿ... ವಂಶಗಳ ಅರಸರಿಗೆ ಹೇಳಿರುವ ಕಾಲಮಾನಗಳನ್ನೂ, ಮುಖ್ಯ... ಅವಲ್ಲಿ ಹೇಳಿರುವ 'ಕಲ್ಕಿ' ಎಂಬ ಅರಸನ ಕಾಲವನ್ನೂ ... ರಿಸಿ, ಗುಪ್ತಕಾಲಾರಂಭಕ್ಕೆ ಸರಿಯಾದ ಕ್ರಿ. ಶ. ವರ್ಷ... ಕಂಡು ಹಿಡಿದಿರುವರು; ಇವರ ನೆಮ್ಮಿಕೆಯ ಆಧಾರ... ಈ ಮುಂದೆ ತರ್ಕಿಸುವೆನು.

ನನ್ನ ಶೋಧದ ಹಾದಿ ತೀರ ಬೇರೆ–ಗುಪ್ತ ಸಂವತ್ಸ... ಯಿಂದ ನಿರ್ದಿಷ್ಟವಾದ ಶಾಸನೇತ್ಯಾದಿಗಳನ್ನೇ ಆಧರಿಸಿ... ಗಳಲ್ಲಿ ಹೇಳಿರುವ ಅನ್ಯಾನ್ಯ ವಿಷಯಗಳ ಸಹಾಯ... ಅಂಥವುಗಳ ಸ್ಪಷ್ಟೀಕರಣದಿಂದಲೆ, ಆ ಕಾಲದ ... ಸರಿಯಾದ ಕ್ರಿ. ಶ. ವರ್ಷವನ್ನು ಗೊತ್ತು ಹಚ್ಚಲಿಕ್ಕೆ ಪ್ರ... ಸಿರುವುದರಿಂದ, ನನ್ನೀ ಅನುಮಾನವು, ಏವಂವಿಧ ಕಾ... ರದಲ್ಲಿ ಪ್ರಾಯಿಕವಾಗಿರುವಂತೆ ಒಂದೆರಡು ವರ್ಷಗಳ ... ಚೆಗೆ ಆಗಬಹುದಾದರೂ, ಅದಕ್ಕಿಂತ ಹೆಚ್ಚಿಗೆ ತಪ್ಪಾ... ದೆಂದು ತೋರುತ್ತದೆ. ಆದರೂ ಗುಪ್ತಕಾಲಾರಂಭದ ... ದಲ್ಲಿ ನನ್ನ ನಿರ್ಣಯುವನ್ನು ಕೊನೆಯ ಮಾತೆಂದು ಹೇ... ಲ್ಲೆನು; ಏಕೆಂದರೆ ಸದಸದ್ವ್ಯಕ್ತಿಹೇತುಗಳಾಗಿರುವ ವಿ... ಸರು ಇದನ್ನು ನಿರ್ದಾಕ್ಷಿಣ್ಯವಾಗಿ ಪರಿಶೋಧಿಸಿ, ಇದು ... ಯೆಂದಾದರೆ ಹಾಗೆಂದು ತಮ್ಮ ಅಭಿಮತವನ್ನು ಕೊಡುವ... ಯಾರಿಗೆ ತಾನೆ 'ಆತ್ಮನ್ಯಪ್ರತ್ಯಯಂ ಇರಲಾರದು!

12 'ಪ್ರಾಚೀನ ಲೇಖಮಾಲಾ'– I. ೪೧ (ಪು. ೧೬೪)

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

(ಕಾದಂಬರಿಯ ಕನ್ನಡ ಅನುವಾದವು)

ಅನುವಾದಕರು:— ಶ್ರೀ. ಕೃ. ಶ್ರೀ. ಬಿಟಗೇರಿ, ಬೆಂಗಳೂರು

## ಪೂರ್ವ ಕಥಾಸಾರಾಂಶ

ಗೋವಿಂದ ಮಾಣಿಕ್ಯನು ತ್ರಿಪುರದ ದೊರೆಯಾಗಿದ್ದಾಗ್ಗೆ ಆ ಊರಲ್ಲಿ 'ಚೆನ್ನೆ' ಮತ್ತು 'ಪುಟ್ಟ' ಎಂಬಿಬ್ಬರು ಮಕ್ಕಳಿದ್ದರು. ಇವರಿಗೆ ಬಂಧುವೆಂದರೆ ಒಬ್ಬನೇ ಒಬ್ಬನಾದ ಕೇದಾರೇಶ್ವರನೆಂಬ ದೊಡ್ಡಪ್ಪನು. ಈ ಚಿಕ್ಕ ಮಕ್ಕಳೇ ಆತನ ಜೀವನದ ಏಕಮಾತ್ರಸುಖಸ್ವರೂಪರಾಗಿದ್ದರು.

ಒಂದು ದಿನ ಭುವನೇಶ್ವರೀಮಂದಿರಕ್ಕೆ ದೊರೆಯು ಬಂದಿರಲು ಈ ಅಕ್ಕತಮ್ಮಂದಿರು ಅಲ್ಲಿಯೇ ಆಡುತ್ತಿದ್ದರು. ಮುಗ್ಧ ಸ್ನಿಗ್ಧರಾದ ಆ ಬಾಲಕರಿಗೂ ದೊಡ್ಡ ಮನಸ್ಸಿನವನಾದ ದೊರೆಗೂ ಕ್ಷಣಮಾತ್ರದಲ್ಲಿ ಗೆಳೆತನವಾಗಿ ಬಿಟ್ಟಿತು. ದೊರೆಯು ಅವರಿಗೆ ಪೂಜೆಗೆಂದು ಮನೆಗೊಯ್ಯಲಿಕ್ಕೆ ಹೂಗಳನ್ನು ಕೊಯ್ದುಕೊಟ್ಟನು. ಮರುದಿನ ಮೊದಲ್ಗೊಂಡು ಮುಂಜಾನೆ ಆ ಮಕ್ಕಳನ್ನು ಕಂಡರೇನೇ ಅವನಿಗೆ ಸಮಾಧಾನವಾಗುತ್ತಿತ್ತು. ಆ ಮುದ್ದುಮಕ್ಕಳೂ ಮನಸ್ಸು ಬಿಚ್ಚಿ ಮನದಣಿ ಆ ಮಾತು ಈ ಮಾತುಗಳನ್ನೆಲ್ಲಾ ಆಡುತ್ತಿದ್ದರು.

ಹೀಗೆಯೇ ಒಂದು ವರ್ಷ ಕಳೆಯಿತು. ಆಷಾಢ ಅಮಾವಾಸ್ಯೆಯ ಮರುದಿವಸ ಆ ಮೂವರು ಮಂದಿರಕ್ಕೆ ಬಂದಾಗ್ಗೆ ಮುನ್ನಾ ದಿನ ಭುವನೇಶ್ವರಿಗೆ ಬಲಿಕೊಟ್ಟ ನೂರಾ ಒಂದು ಕೋಣಗಳ ನೆತ್ತರವು ಅಲ್ಲಿ ಹರಿಯುತ್ತಿತ್ತು. ಅದನ್ನು ಕಂಡು ಇದೇನೆಂದು ಚೆನ್ನೆಯು ರಾಜನನ್ನು ಕೇಳಿದಳು. ರಾಜನು ಬೆಚ್ಚಿಬಿದ್ದನು. ಅದೇ ದಿವಸ ಚೆನ್ನೆಗೆ ಜ್ವರ ಬಂತು. ಮರುದಿವಸ ದೊರೆಗೂ ಮಕ್ಕಳಿಗೂ ಭೆಟ್ಟಿಯಾಗಲಿಲ್ಲ. ದೊರೆ ಕೇದಾರೇಶ್ವರನ ಮನೆಗೇ ಬಂದನು. ರಾಜವೈದ್ಯ ಬಂದ; ಉಪಚಾರವೆಲ್ಲಾ ಆಯಿತು. ಆ ಕೋಮಲ ಬಾಲಕಿಯು ರಾಜನ ತೊಡೆಯ ಮೇಲೆ ತೀರಿಕೊಂಡಿದ್ದೇ ನಿಜವಾಯಿತು.

ಮರುದಿನದ ಓಲಗದಲ್ಲಿ ರಾಜನು 'ಪ್ರಾಣಹಿಂಸೆ'ಯಾಗಬಾರದೆಂದು ಕಟ್ಟಪ್ಪಣೆ ಮಾಡಿದನು. ರಾಜನ ಪುರೋಹಿತ ರಘುಪತಿಯು ಪ್ರತಿಭಟಿಸಿದನು. ತಮ್ಮನಾದ ನಕ್ಷತ್ರರಾಯನೂ ಪ್ರಾಚೀನಪದ್ಧತಿಯನ್ನು ಕಾಪಾಡುವದು ಕರ್ತವ್ಯವೆಂದನು. ಧೀರ ಗಂಭೀರ ಗೋವಿಂದಮಾಣಿಕ್ಯನು ತನ್ನ ಸದಂತಃಕರಣ ಪ್ರವೃತ್ತಿಯೇ ಈ ವಿಷಯದಲ್ಲಿ ಪ್ರಮಾಣವೆಂದನು. ಸಭಾಸದರೆಲ್ಲರೂ "ಅವನತಿಯ ಲಕ್ಷಣವಿದು. ಬೌದ್ಧರಿಗೂ ಹಿಂದುಗಳಿಗೂ ಭೇದವುಳಿಯಿತೆಲ್ಲಿ?" ಎಂದು ಯೋಚಿಸುತ್ತ ಮನೆಗೆ ತೆರಳಿದರು. ಅಂದಿನಿಂದ ಪುಟ್ಟನನ್ನು ದೊರೆಯು ತನ್ನ ಬಳಿಯಲ್ಲಿಯೇ ಇರಿಸಿಕೊಂಡನು. ಮುದುಕ ಕೇದಾರೇಶ್ವರನಿಗೂ ಅರಮನೆಯಲ್ಲಿಯೇ ಎಡೆ ದೊರೆಯಿತು.

ಕ್ಷತ್ರಿಯನಾಗಿ ಜಾತಿಯಿಂದ ರಜಪೂತನಾದ ಜಯಸಿಂಹನೆಂಬವನು ಭುವನೇಶ್ವರೀಮಂದಿರದ ಸೇವಕನಾಗಿದ್ದನು. ಅರಮನೆಯ ಪುರಾತನ ಸೇವಕರಲ್ಲೊಬ್ಬನಾದ ಸುಚೇತ್‌ಸಿಂಹನೆಂಬವನು ಜಯಸಿಂಹನ ತಂದೆಯು. ಸುಚೇತ್‌ಸಿಂಹನು ಅಕಾಲಮೃತ್ಯುಗೀಡಾದ್ದರಿಂದ ಅನಾಥನಾದ ಜಯಸಿಂಹನನ್ನು ದೊರೆಯು ಮಂದಿರದ ಕಾರ್ಯಕ್ಕೆ ನಿಯಮಿಸಿದನು. ಮಂದಿರದ ರಘುಪತಿಯೇ ಆತನ ಸಾಕುತಂದೆ. ಜಯಸಿಂಹನು ಕವಿಹೃದಯದವನು,

ಒಡ್ಡೋಲಗದ ಸುದ್ದಿಯನ್ನು ತಂದು ರಘುಪತಿಯು ಜಯಸಿಂಹನಿಗೆ ಹೇಳಿದನು. ಮಹಾರಾಜರು ಹೀಗೆ ಮಾಡಬಾರದಿತ್ತೆಂದು ಆಗ ಆತನಿಗನಿಸಿತು. ಮುಂದೆ ರಘುಪತಿಯು ನಕ್ಷತ್ರರಾಯನನ್ನು ಗುಪ್ತನಾಗಿ ಕರಿಸಿ ದೇವಿಗೆ ರಾಜರಕ್ತದ ನೀರಡಿಕೆಯಾಗಿದೆಯೆಂದೂ ತನಗೆ ಸ್ವಪ್ನದಲ್ಲಿ ಬಂದು ಇದನ್ನು ಆಕೆಯೇ ಒಡನುಡಿದಳೆಂದೂ ಹೇಳಿದನು. ಹಾಗೂ ಹೀಗೂ ಮಾಡಿ ಅಣ್ಣನ ಕೊಲೆ ಮಾಡಬೇಕೆಂದು ತಮ್ಮನನ್ನು ಉದ್ಯುಕ್ತನನ್ನಾಗಿ ಮಾಡಿ ಕಳಿಸಿದನು. ಇದು ಮಾತ್ರ ಅನ್ಯಾಯವೆಂದೂ ದೇವಿಗೆ ರಾಜರಕ್ತ ಬೇಕೇ ಆಗಿದ್ದರೆ ತಾನೇ ಹೋಗಿ ತರುವೆನೆಂದೂ ಜಯಸಿಂಹನು ಉದ್ಗಾರ ತೆಗೆದನು. ನಕ್ಷತ್ರನು ಅಣ್ಣನ ಮೇಲೆ ಕೈ ಮಾಡಿ ಅರಸನಾದರೆ ಯಾರೂ ಏನೂ ನುಡಿಯರೆಂದೂ ಅದೇ ಜಯಸಿಂಹನು ಕೊಲೆ ಮಾಡಿದರೆ ಅಪಾಯಕರವೆಂದೂ ಬುದ್ಧಿವಾದವನ್ನು ರಘುಪತಿಯು ಹೇಳತೊಡಗಿದನು. ಏಕೆಂದರೆ ರಘುಪತಿಗೂ ಜಯಸಿಂಹನಿಗೂ ಜನಕ ಪುತ್ರರ ಅತೀವ ಸಂಬಂಧವು.

ತೀವ್ರಭಾವನೆಯುಳ್ಳ ಜಯಸಿಂಹನಿಗೆ ಅಂದಿನಿಂದ ಭುವನೇಶ್ವರೀಮಾತೆಯ ಕಾರುಣ್ಯದ ವಿಷಯವಾಗಿ ಸಂಶಯ ಬರಹತ್ತಿತು. ಪ್ರಾಣಿಹಿಂಸೆಯನ್ನೇಕೆ ಮಾಡಬೇಕೆಂದೂ ಏಕೆ ಬಿಡಬಾರದೆಂದೂ ಆತನು ಯೋಚಿಸತೊಡಗಿದನು. ಇತ್ತ ಗುರುವಾದ ರಘುಪತಿಯಲ್ಲಿಯೂ ಆತನದು ಅತ್ಯಂತ ನಿಷ್ಠೆ. ಹೀಗಾಗಿ ಮನಸ್ಸೆಲ್ಲಾ ಕದಡಿದ ಕೊಳಪಂತಾಯಿತು. ಒಂದು ದಿನ ಮೂರ್ತಿಯ ಮುಂದೆ ಕುಳಿತು 'ತಾಯೀ ರಾಜರಕ್ತವು ನಿನಗೆ ಬೇಕಾದುದು ನಿಜವೇ' ಎಂದು ಆರ್ತನಾಗಿ ಕೇಳಿದನು. ರಹಸ್ಯದಲ್ಲಿದ್ದ ರಘುಪತಿಯು 'ಹೌದು, ಎಂದು ಕೂಗಿದನು. ಜಯಸಿಂಹನಿಗೂ ಒಂದು ಕ್ಷಣ ಸಂಶಯ ಬಂದಿತು. ಆದರೆ ಸ್ವಾಮಿನಿಷ್ಠನಾದ ಆತನು ಚಟಕ್ಕನೆಂದು ಸಶಸ್ತ್ರನಾಗಿ ಹೊರಟು ಗೋವಿಂದಮಾಣಿಕ್ಯನು ಧ್ರುವ (ಪುಟ್ಟನಿಗೆ ಹೊಸದಾಗಿ ದೊರೆಯಿಟ್ಟ ಹೆಸರು; 'ಪುಟ್ಟ, ಎಂದೆನ್ನಲು ಆತನಕ್ಕನಿಗೊಬ್ಬಳಿಗೇ ಅಧಿಕಾರವಿತ್ತೆಂದರೂ ಸಲ್ಲುವದು) ನೊಡನೆ ಆಡುತ್ತ ಕುಳಿತಿದ್ದ ಗೋಮತೀನದಿಯ ತೆಂಕಣ ದೆಸೆಗೆ ಬಂದನು.

ರಾಜನು ಮಗುವಿನೊಂದಿಗೆ ಬೆರೆತು ತಾನೂ ಮಗುವಾಗಿದ್ದನು. ಸೇವಕನಾದ ಜಯಸಿಂಹನನ್ನು ಹತ್ತಿರವೇ ಕುಳ್ಳಿರಿಸಿಕೊಂಡನು. ಜಯಸಿಂಹನು ಸ್ವಲ್ಪ ಮಾತನಾಡಿ ರಾಜನನ್ನು ಕೊಲ್ಲಲಿಕ್ಕೆ ದೇವಿಯಾಜ್ಞೆಯಾಗಿದೆಯೆಂದು ಹೇಳಿದನು. 'ರಘುಪತಿಯೇ ಹೀಗೆ ಹೇಳಿದವನೇನು' ರಾಜನೆಂದ. 'ಅದೇನಿಲ್ಲ ಎಲ್ಲಾ ಒಂದೇ' ಎಂದು ಜಯಸಿಂಹನು ಕತ್ತಿಯನ್ನೆಳೆದನು. ಇದನ್ನು ಧ್ರುವನು ನೋಡಿ ಗಟ್ಟಿಯಾಗಿ ಅತ್ತುಬಿಟ್ಟ. ಪುಟ್ಟ ಪುಟ್ಟ ಕೈಗಳಿಂದ ರಾಜನನ್ನು ತಬ್ಬಿಕೊಂಡು ದೀನಭಾವದಿಂದ ಅವನನ್ನು ಮರೆಮಾಡಿದನು. ರಾಜನು ಜಯಸಿಂಹನನ್ನು ಎಣಿಕೆಗೆ ತಾರದ ಮಗುವನ್ನೇ ತಕ್ಕಯಿಸಿ ಎದೆಗೊತ್ತಿಕೊಂಡನು. ಇದರಿಂದ ಜಯಸಿಂಹನ ಕೋಮಲಾಂತಃಕರಣವು ಕರಗಿ ಹೋಯಿತು. ಖಡ್ಗವನ್ನು ಎಸೆದು ಬಿಟ್ಟು 'ಮಗೂ, ಹೆದರಬೇಡ; ನೀನು ಈ ವಿಶಾಲವಕ್ಷದಲ್ಲಿ ವಿರಮಿಸು' ಎಂದು ಹೇಳಿ ಹೊರಡಲೆದ್ದನು. ಹೋಗುವ ಮುಂದೆ ನಕ್ಷತ್ರರಾಯನು ಕೊಲೆಮಾಡುವವನಿರುವನೆಂದು ಎಚ್ಚರಿಕೆ ಕೊಟ್ಟು ಹೋದನು. ಮನೆಗೆ ಬಂದು ಇದನ್ನೆಲ್ಲಾ ರಘುಪತಿಗೆ ಹೇಳಿದನು. ಅವನು ತನ್ನ ದರ್ಪದಿಂದ 'ಆಷಾಢ ಬಹುಳ ಚತುರ್ದಶಿಯೊಳಗಾಗಿ ರಾಜರಕ್ತವನ್ನು ದೇವಿಯ ಅಡಿಗಳಿಗೆ ತಂದು ನೀಡುವೆನೆಂದು' ಮತ್ತೊಮ್ಮೆ ಜಯಸಿಂಹನಿಂದ ವಚನ ತೆಗೆದುಕೊಂಡನು.

# ಪ್ರಥಮ ಖಂಡ

## ೧ನೆಯ ಪರಿಚ್ಛೇದ

ದೊರೆಯು ಮನೆಗೆ ಮರಳಿ ಬಂದನು. ನಿಯಮಿತ ರಾಜಕಾರ್ಯಗಳನ್ನೆಲ್ಲ ಮುಗಿಸಿದನು. ಬೆಳಗಿನ ಸೂರ್ಯಮಂಡಲವು ಮುಚ್ಚಿ ಹೋಗಿದ್ದಿತು. ಮೋಡಗಳ ನೆರಳಿನಿಂದ ಹಗಲೂ ಕತ್ತಲೆಯಂತಾಗಿದ್ದಿತು. ರಾಜನು ಬಗೆಯ ದುಗುಡದಿಂದಿದ್ದನು. ಮಿಕ್ಕ ದಿನಗಳಲ್ಲೆಲ್ಲ ನಕ್ಷತ್ರರಾಯನು ಓಲಗಕ್ಕೆ ಬಂದೇ ಬರುತ್ತಿದ್ದನು; ಇಂದವನು ಬಂದಿರಲಿಲ್ಲ. ದೊರೆಯು ಕರೆಯಲು ಕಳುಹಿದನು. "ತನಗೆ ದೇಹಾಲಸ್ಯವುಂಟಾಗಿದೆ"ಯೆಂದು ಅವನು ಕೂಡಲೆ ತನ್ನ ಅರಿಕೆಯನ್ನು ಹೇಳಿಕಳುಹಿಸಿದನು. ದೊರೆಯು ತಾನಾಗಿಯೆ ನಕ್ಷತ್ರರಾಯನ ಬೀಡಾರಕ್ಕೆ ಬಂದು ಬಿಟ್ಟನು. ಮುಖನೆತ್ತಿ ರಾಜನ ಕಡೆಗೆ ನೋಡುವುದಕ್ಕೆ ನಕ್ಷತ್ರನಿಂದ ಆಗಲಿಲ್ಲ. ಒಂದು ಬರೆದ ಓಲೆಯನ್ನು ಕೈಯಲ್ಲಿ ಹಿಡಿದುಕೊಂಡು, "ತಾನಾವುದೋ ಕೆಲಸವಲ್ಲಿ ಮೈಮರೆದು ಹೋಗಿರುವೆನು" ಎಂಬ ಭಾವವನ್ನು ತೋರಿಸಿದನು. ರಾಜನೆಂದನು "ನಕ್ಷತ್ರ! ಅದೇನು ದೇಹಾಲಸ್ಯ ನಿನಗೆ?"

ನಕ್ಷತ್ರರಾಯನು ಕೈಯಲ್ಲಿಯ ಕಾಗದವನ್ನು ಹೀಗೊಮ್ಮೆ ಹೊರಳಿಸಿ, ಕೈಬೆರಳುಗಳನ್ನು ನೋಡುತ್ತ ಮಾತನಾಡಿದನು. "ದೇಹಾಲಸ್ಯ ?—ಇಲ್ಲ !—ದೇಹಾಲಸ್ಯ ಸರಿಯಾಗಿಲ್ಲ; ಇದೊಂದು ಕೊಂಚ ಕೆಲಸವಿದ್ದಿತು—ಅಹುದಹುದು! ದೇಹಾಲಸ್ಯವುಂಟಾಗಿದೆ;—ಏನೋ ಕೊಂಚ ನೆಮ್ಮದಿಯಿಲ್ಲದಂತೆ ಎನಿಸುತ್ತದೆ. "

ನಕ್ಷತ್ರರಾಯನು ತೀರ ಅಧೀರನಾಗಿ ಹೋದನು. ಗೋವಿಂದ ಮಾಣಿಕ್ಯನು ಬಾಡಿದ ಮೋರೆಯಿಂದ ನಕ್ಷತ್ರನ ಮೊಗದ ಕಡೆಗೆ ನೋಡುತ್ತಿದ್ದನು. ಆಗವನು ಮನದಲ್ಲಿಯೆ ಭಾವಿಸಲು ತೊಡಗಿದನು: "ಅಹಹಾ! ಒಲವಿನ ಗೂಡಿನಲ್ಲಿಯೂ ಕೊಲೆಯು ಸೇರಿಕೊಂಡೇ ಇರುವುದಲ್ಲಾ! ಅದು ಹಾವಿನಂತೆ ಅಡಗಿಕೊಂಡಿರಲು ಹವಣಿಸುವುದು; ಹೊರಕ್ಕೆ ಮೋರೆದೋರಲು ಒಲ್ಲದು. ನಮ್ಮ ನಾಡಿನ ಕಾಡುಗಳಲ್ಲಿ ಹಿಂಸ್ರಪಶುಗಳು ಬೇಕಾದಷ್ಟು ಇರುವುವಲ್ಲವೇ! ಕೊನೆಗೆ ಮನುಷ್ಯನು ಮನುಷ್ಯನಿಗೇ ಹೆದರಬೇಕಾಯಿತೇ ? ಅಣ್ಣನು ತಮ್ಮನ ಬಳಿಗೆ ಹೋಗಿ ನಿಃಶಂಕ ಮನದಿಂದ ಕುಳಿತುಕೊಳ್ಳದಂತಾಯಿತೇ ? ಈ ಜಗತ್ತಿನಲ್ಲಿ ಹಿಂಸೆಲೋಭಗಳೇ ಇಷ್ಟೊಂದು ಬೆಳೆದು ಬಿಟ್ಟುವಲ್ಲವೇ ?—ಒಲವುಗೆಳೆತನಗಳಿಗೆ ಇರಲು ಸ್ಥಳವು ದೊರೆಯದೆ ಹೋಯಿತಲ್ಲವೇ ?—ಇವನು ನನ್ನ ತಮ್ಮನು. ಯಾವಾಗಲೂ ನಾವಿಬ್ಬರೂ ಜೊತೆಯಾಗಿ ಒಂದೇ ಮನೆಯಲ್ಲಿ ವಾಸವಾಗಿರುವೆವು. ಒಂದೇ ಮನದವರಾಗಿ ಕುಳಿತು ನಗೆಮೊಗದಿಂದ ಮಾತನಾಡುತಿರುವೆವು—ಇವನೀಗ ನನ್ನ ಬಳಿಯಲ್ಲಿ ಕುಳಿತು ಮನದಲ್ಲಿಯೇ ಕತ್ತಿಯನ್ನು ಮಸೆಯುತ್ತಿದ್ದಾನೆ!" ಗೋವಿಂದ ಮಾಣಿಕ್ಯನಿಗಾಗ ಸಂಸಾರವೆಲ್ಲವೂ ಹಿಂಸ್ರಪಶುಗಳಿಂದ ಪರಿಪೂರ್ಣವಾದ ಕಗ್ಗಾಡಿನಂತೆ ಕಾಣಲು ತೊಡಗಿತು. ಮುಸುಕಿದ ಕಗ್ಗತ್ತಲೆಯಲ್ಲಿ ಎಲ್ಲ ಕಡೆಗಳಲ್ಲಿ ಬರೀ ಕೂರುಗುರು-ಕೋರೆದಾಡೆಗಳ ಚಿತ್ರವು ತೋರಲು ತೊಡಗಿತು. ನಿಟ್ಟುಸಿರುಬಿಡುತ್ತ ರಾಜನು ಮನದಲ್ಲಿ ಯೋಚಿಸಿದನು: "ಈ ಸ್ನೇಹಪ್ರೇಮವಿಹೀನವಾದ ಹಾಳುರಾಜ್ಯದಲ್ಲಿ ಬದುಕಿಕೊಂಡಿದ್ದು, ನಾನು ನನ್ನ ಕುಲದ ವರ–ದೂರವೇಕೆ ಬೆನ್ನಲಿ ಬಂದ ತಮ್ಮನ ಮನದಲ್ಲಿ, ಬರೀ ಹಿಂಸೆ–ಲೋಭ–ದ್ವೇಷಗಳ ಬೇಗೆಯನ್ನು ಹೊತ್ತಿಸಿ ಬಿಟ್ಟಿರುವೆನು. ನನ್ನ ಸಿಂಹಾಸನದ ಸುತ್ತಲೂ ನನ್ನ ಜೀವಜೀವಾಳದಂತಿರುವ ಬಂಧುವರ್ಗದವರೆಲ್ಲರೂ ಬಳಸಿ ನಿಂತು, ನನ್ನನ್ನು ನೋಡಿ ನೋಡಿ ಒಳಗೊಳಗೆಯೇ ಮುಖವನ್ನು ಮುದುಡಿಸುವರು—ಹಲ್ಲುಕಡಿಯುವರು—ಸರಪಳಿಯಿಂದ ಬಿಗಿದ ಭೀಷಣವಾದ ನಾಯಿಗಳಂತೆ ಎಲ್ಲ ಕಡೆಯಿಂದಲೂ ನನ್ನ ಮೇಲೆ ಬೀಳಬೇಕೆಂದು ಹೊಂಚುಹಾಕುತಿರುವರು. ಇದೆಲ್ಲಕ್ಕಿಂತಲೂ ಕೋರೆದಾಡೆಕೂರುಗುರುಗಳ ಏಟನಿಂದ ಛಿನ್ನವಿಚ್ಛಿನ್ನನಾಗಿ, ಇವರೆಲ್ಲರ ನೆತ್ತರ ನೀರಡಿಕೆಯನ್ನು ಕಳೆದುಬಿಟ್ಟು, ಇಲ್ಲಿಂದ ಇಲ್ಲದಂತಾಗುವುದೆ ಮೇಲು." ಬೆಳಗಿನ ಬಾನೆಡೆಯಲ್ಲಿ ದೊರೆಯು ನೋಡಿದ ಆ ಪ್ರೇಮಪೂರ್ಣ ಮುಖಚ್ಛವಿಯು ಅದೆಲ್ಲಿಯೋ ಮರೆಯಾಗಿ ಹೋಯಿತು.

ಎದ್ದುನಿಂತು ಮಹಾರಾಜನು ಗಂಭೀರಭಾವದಿಂದ ಹೇಳಿದನು. "ನಕ್ಷತ್ರ! ಇಂದು ಇಳಿಹೊತ್ತಿನಲ್ಲಿ ನಾವಿಬ್ಬರೂ ಸೇರಿ ಗೋಮತಿ ತೀರದ ನಿರ್ಜನವಾದ ವನದಕಡೆಗೆ ತಿರುಗಾಡಲು ಹೋಗೋಣ!"

ರಾಜನಾಡಿದ ಈ ಗಂಭೀರವಾದ ಆದೇಶವಚನಗಳನ್ನು ಕೇಳಿ, ನಕ್ಷತ್ರನ ಮುಖದಿಂದ ಮಾತುಗಳು ಹೊರಡಲಿಲ್ಲ. ಸಂಶಯಾಶಂಕೆಗಳಿಂದ ಅವನ ಮನವು ತುಂಬಿಹೋಯಿತು. ಆತನ ಮನಸ್ಸಿಗೆ ಎನಿಸತೊಡಗಿತು: "ಮಹಾರಾಜನು ಈಗ ಎಡೆಬಿಡದೆ ತನ್ನ ಮನಸ್ಸನ್ನೇ ಕಣ್ಣಿಟ್ಟು ನೋಡುತ್ತ ಕುಳಿತಿರುವನು; ಅಲ್ಲಿ ಕತ್ತಲೆ ತುಂಬಿದ ತಗ್ಗಿನಲ್ಲಿರುವ ಹುಳುಗಳಂತೆ ಬಗೆಬಗೆಯ ಭಾವನೆಗಳು ಕಲಕಲಿಸುತ್ತಲಿವೆ. ತಟ್ಟನೆ ಹರಡಿದ ಬೆಳಕಿನಿಂದ ಅವೆಲ್ಲ ಹೆದರಿ ಚೆದರಿ ಹೊರಕ್ಕೆ ಹೊರಡುತ್ತಲಿವೆ." ನಕ್ಷತ್ರರಾಯನು ಅಂಜುತಂಜುತ್ತ ರಾಜನ ಮುಖದ ಕಡೆಗೊಮ್ಮೆ ನೋಡಿದನು. ಗಂಭೀರ–ವಿಷಣ್ಣ–ಶಾಂತಭಾವದ ಬೆರಕೆಯು ಆತನ ಮುಖದ ಮೇಲೆ ಒಡೆದುಮೂಡಿದ್ದಿತು. ರೋಷದ ಗುರುತು ಕೂಡ ಅಲ್ಲಿ ಕಾಣುತಿರಲಿಲ್ಲ. ಮಾನವಹೃದಯದ ಕೀಳುತನ–ಕೆಡಕುತನವನ್ನು ನೋಡಿ ಒಂದು ಬಗೆಯ ಪವಿತ್ರವಾದ ಶೋಕವು ಹೃದಯದಲ್ಲಿ ಹೊಳೆಯುತ್ತಲಿದ್ದಿತು.

ಇಳಿಹೊತ್ತಾಯಿತು. ಆಗಲೂ ಮೋಡವು ಮುಸುಕಿಕೊಂಡೇ ಇದ್ದಿತು. ನಕ್ಷತ್ರರಾಯನನ್ನು ಒಡಗೊಂಡು ಮಹಾರಾಜನು ಕಾಲುನಡಿಗೆಯಿಂದಲೇ ಕಾಡಿನ ಕಡೆಗೆ ನಡೆದನು. ಸಂಜೆಯಾಗಲು ಇನ್ನೂ ಅದೆಷ್ಟೋ ಸಮಯವಿದ್ದಿತು; ಆದರೂ ಮುಸುಕಿದ ಮೋಡದ ನಸುಗತ್ತಲೆಯಿಂದ ಆಗಲೆ ಸಂಜೆಯಾಗಿ ಹೋಗಿರುವುದೇನೋ! ಎಂಬ ಭ್ರಮೆಯುಂಟಾಗುವಂತಿದ್ದಿತು. ಕಾಗೆಗಳು ಕಾಡಿನೊಳಗೆಲ್ಲ ಸುತ್ತಿ ಸುತ್ತಿ ಬಂದು ಎಡೆಬಿಡದೆ ಕಿರುಚುತ್ತಿದ್ದುವು. ಒಂದೆರಡು ಹದ್ದುಗಳು ಮಾತ್ರ ಆಗಸದಲ್ಲಿ ಘಹರೆ ತಿರುಗುತ್ತಿದ್ದುವು. ಅಣ್ಣತಮ್ಮಂದಿರಿಬ್ಬರೂ ಆ ನಿರ್ಜನ

ವಾದ ಕಾಡನ್ನು ಪ್ರವೇಶಿಸಿದರು. ಆಗ ನಕ್ಷತ್ರರಾಯನ ಮೈಯಿ ಜುಮ್ಮು ಜುಮ್ಮೆನತೊಡಗಿತು. ದೊಡ್ಡ ದೊಡ್ಡ ಹಳೆಯಮರಗಳು ಭವ್ಯವಾಗಿ ಬೆಳೆದು ನಿಂತಿದ್ದುವು. ಅವೆಲ್ಲ ತಾವು ಮಾತನಾಡುತಿರಲಿಲ್ಲವಾದರೂ, ಒಂದು ಹುಳುವಿನ ಅಡಿಯ ಸಪ್ಪಳವನ್ನು ಸಹ ಕಿವಿಗೊಟ್ಟು ಕೇಳುತಿದ್ದುವು. ಅವುಗಳೆಲ್ಲ ತಮ್ಮ ನೆರಳಿನತ್ತಲೂ ಅಡಿಯಲ್ಲಿ ಹರಡಿರುವ ಕತ್ತಲೆಯತ್ತಲೂ ಕಣ್ಣು ಕದಲಿಸದೆ ನೋಡುತಿದ್ದುವು. ಕಾಡಿನಲ್ಲಿ—ಈ ಭೀಕರವಾದ ಏಕಾಂತತೆಯಲ್ಲಿ ನಡೆದುಹೋಗಲು ನಕ್ಷತ್ರರಾಯನ ಕಾಲುಗಳೇ ಏಳಲೊಲ್ಲುವು. ಗಭೀರವಾದ ನಿಶ್ಶಬ್ದತೆಯ ಹುಬ್ಬುಗಂಟನ್ನು ಎಲ್ಲೆಲ್ಲಿಯೂ ನೋಡಿ, ಎದೆಯು ಗಡಗಡ ನಡುಗಲು ತೊಡಗಿತು. ಸಂದೇಹವೂ ಭಯವೂ ಹೆಚ್ಚಾಗಿ ತಲೆದೋರಿದುವು. ಈ ಸಂಧ್ಯಾಕಾಲದಲ್ಲಿ, ಭೀಷಣವಾದ ಅದೃಷ್ಟದಂತೆ ರಾಜನು ಸುಮ್ಮನೆ ಪೃಥ್ವಿಯ ಅಂತರಾಳದೊಳಗಿಂದ ತನ್ನನ್ನು ಅದೆಲ್ಲಿಗೆ ಕರೆದೊಯ್ಯುತಿರುವನೆಂಬುದರ ಸುಳಿವನ್ನೇ ನಕ್ಷತ್ರರಾಯನು ಕಾಣದಾದನು. "ರಾಜನ ಕೈಯಲ್ಲಿ ಸಿಕ್ಕಿಕೊಂಡುಬಿಟ್ಟೆನು" ಎಂದು ಮನದಲ್ಲಿ ನಿಶ್ಚಯಿಸಿದನು. ಹಾಗೆಯೇ "ರಾಜನು ತನ್ನನ್ನು ಕಠಿನವಾದ ಶಿಕ್ಷೆಯನ್ನು ವಿಧಿಸಲಿಕ್ಕೆಂದೆ ಈ ಕಗ್ಗಾಡಿನಲ್ಲಿ ಕರೆದುತಂದಿರುವನು" ಎಂತಲೂ ಗಟ್ಟಿಮುಟ್ಟ ಮಾಡಿಕೊಂಡನು. ನಕ್ಷತ್ರರಾಯನು ನಿಟ್ಟೋಟದಿಂದ ಓಡಿ ಅಲ್ಲಿಂದ ಪಾರಾಗಲೂ ಬಹುದಾಗಿದ್ದಿತು. ಆದರೆ 'ಯಾರೋ ತನ್ನ ಕೈಕಾಲುಗಳನ್ನು ಕಟ್ಟಿ ಎಳೆದುಕೊಂಡು ಹೋಗುತಿರುವರು; ಇನ್ನು ತನಗೆ ಬಿಡುಗಡೆಯ ಮಾರ್ಗವು ಕೊಂಚವೂ ಉಳಿದಿಲ್ಲ' ಎಂದವನ ಮನಸ್ಸಿಗೆ ಎನಿಸುತ್ತಿದ್ದಿತು.

ಕಾಡಿನ ನಟ್ಟನಡುವೆ ಒಂದು ಹೊಂಡ; ಅದು ಸ್ವಾಭಾವಿಕವಾದ ಜಲಾಶಯದಂತೆಯೇ ಇರುವುದು. ಮಳೆಗಾಲದಲ್ಲಿ ಮಾತ್ರ ನೀರಿನಿಂದ ತುಂಬಿಕೊಂಡಿರುವುದು. ದೊರೆಯು ಆ ಹೊಂಡದ ದಂಡೆಯ ಮೇಲೆ ತಟ್ಟನೆ ತಿರುಗಿನಿಂತು ಹೇಳಿದನು. "ನಿಂತುಕೊಳ್ಳು"

ನಕ್ಷತ್ರರಾಯನು ಬೆಚ್ಚಿಬಿದ್ದು ನಿಂತುಕೊಂಡನು. ರಾಜನ ಆದೇಶವನ್ನು ಕೇಳಿ, ಕೂಡಲೆ ಕಾಲದ ಪ್ರವಾಹವೇ ಕಟ್ಟುವಡೆದು ಹೋಯಿತೇನೋ! ಎಂಬಂತಾಯಿತು. ಕಾಡಿನ ಗಿಡಮರಗಳೆಲ್ಲವೂ ಈ ಆದೇಶದಿಂದಲೆ ಅಲ್ಲಾಟವನ್ನು ನಿಲ್ಲಿಸಿ ನಿಂತಿರುವವೇನೋ! ಎಂದು ತೋರಿತು. ಮೇಗಣಿಂದ ಮುಗಿಲೂ ಕೆಳಗಣಿಂದ ಇಳೆಯೂ ಉಸಿರನ್ನು ಕೂಡ ಬಿಡದೆ ನಿಃಶಬ್ದವಾಗಿ ನೋಡುತ್ತಿರುವವವೇನೋ! ಎನಿಸಿತು. ಕಾಗೆಗಳ ಕೋಲಾಹಲವೆಲ್ಲವೂ ನಿಂತುಹೋಗಿದೆ. ಇನ್ನಾವ ಶಬ್ದವೂ ಕಾಡಿನಲ್ಲಿ ಕೇಳುತಿರಲಿಲ್ಲ—ಈ "ನಿಂತುಕೊಳ್ಳು" ಎಂಬುದೊಂದೇ ಒಂದು ಶಬ್ದವು ಹಲವು ವೇಳೆಯಿಂದ ಎಲ್ಲೆಲ್ಲಿಯೂ ದುಮದುಮಿಸ ತೊಡಗಿರುವುದೇನೋ! ಎಂದು ಕಂಡಿತು. ಈ "ನಿಂತುಕೊಳ್ಳು" ಎಂಬ ಶಬ್ದವೇ, ವಿದ್ಯುತ್ಪ್ರವಾಹದಂತೆ ಮರದಿಂದ ಮರಕ್ಕೆ ಕೊಂಬೆಯಿಂದ ಕೊಂಬೆಗೆ ಹರಿಯತೊಡಗಿರುವುದೇನೋ! ಎಂದಾಯಿತು. ಕಾಡಿನಲ್ಲಿಯ ಎಲೆಯೆಲೆಗಳೂ ಇದೊಂದೇ ಶಬ್ದದ ಕಂಪನದಿಂದಲೇ "ಸುಯ್ ಸುಯ್" ಎಂದು ಸಪ್ಪಳ ಮಾಡುತ್ತಿರುವವೇನೋ! ಎಂದೆನಿಸಿತು. ನಕ್ಷತ್ರರಾಯನು ಆಗ ಮರಗಳ ಕೂಡ ಮರವಾಗಿ ನಿಂತುಕೊಂಡನು.

ಆಗ ದೊರೆಯು ತಮ್ಮನ ಮುಖದ ಕಡೆಗೆ ಮರ್ಮಭೇದಕವಾದ ವಿಷಾದಪರಿಪ್ಲುತವಾದ—ಸ್ಥಿರದೃಷ್ಟಿಯಿಂದ ನೋಡುತ್ತ ಪ್ರಶಾಂತವೂ ಗಂಭೀರವೂ ಆದ ಸ್ವರದಲ್ಲಿ ಮೆಲ್ಲಗೆ ಮಾತಾಡಿದನು. "ನಕ್ಷತ್ರ! ನೀನು ನನ್ನನ್ನು ಕೊಲ್ಲಬೇಕೆಂದಿರುವೆಯೇನು?"

ನಕ್ಷತ್ರನ ಎದೆಗೆ ಸಿಡಿಲು ಬಡಿದಂತಾಯಿತು. ಮರುಮಾತನಾಡುವುದಕ್ಕೆ ಪ್ರಯತ್ನ ಮಾಡಲೂ ಅಸಮರ್ಥನಾದನು.

ರಾಜನೆಂದನು "ತಮ್ಮಾ! ಏತಕ್ಕಾಗಿ ಕೊಲ್ಲಬೇಕೆನ್ನುವೆ! ರಾಜ್ಯದ ಆಶೆಯಿಂದಲೇ ಅಲ್ಲವೇ? ಚಿನ್ನದ ಸಿಂಹಾಸನ, ರತ್ನದ ಕಿರೀಟ, ರಾಜಛತ್ರ ಇವೊಂದರಷ್ಟೇ ರಾಜ್ಯವೆಂದು ಬಗೆದಿರುವೆಯೇನು? ಈ ಕಿರೀಟ, ಈ ರಾಜಛತ್ರ, ಈ ರಾಜದಂಡ ಅವೆಷ್ಟು ಭಾರವಾದುವುಗಳೆಂಬುದನ್ನು ಅರಿತಿರುವೆಯೇನು! ನೂರಾರು ಸಾವಿರ ಜನರ ಚಿಂತೆಯನ್ನೆಲ್ಲ ತೆಗೆದು ಈ ಕಿರೀಟದಲ್ಲಿ ಕೂಡಿಟ್ಟಿರುವುದು. ರಾಜ್ಯವನ್ನು ಪಡೆಯಬೇಕೆಂದು ಬಯಸುತ್ತಿದ್ದರೆ, ಸಾವಿರಾರು ಜನರ ದುಃಖವನ್ನೂ ನನ್ನ ದುಃಖವೆಂದು ತಲೆಯಲ್ಲಿ ತಾಳು! ಸಾವಿರಾರು ಜನರ ವಿಪತ್ತುಗಳನ್ನು ನನ್ನ ವಿಪತ್ತುಗಳೇ ಎಂದು ಕೈಯಲ್ಲಿ ಕೊಳ್ಳು! ಸಾವಿರಾರು ಜನರ ದಾರಿದ್ರ್ಯವನ್ನೂ ನನ್ನ ದಾರಿದ್ರ್ಯವೇ ಎಂದು ಹೆಗಲಮೇಲೆ ಹೊರು! ಹೀಗೆಲ್ಲ ಮಾಡಬಲ್ಲವನಾವನೋ ಅವನೇ ದೊರೆಯು. ಅವನು ತರಗೆಲೆಯ ಗುಡಿಸಿಲಿನಲ್ಲಿದ್ದರೇನು? ಅರಮನೆಯ ಉಪ್ಪರಿಗೆಯಲ್ಲಿದ್ದರೇನು? ಎಲ್ಲರೂ ತನ್ನವರೆಂದು ಭಾವಿಸುವವನಿಗೆ ಎಲ್ಲ ಜನರೂ ಆತನವರೇ ಆಗುವರು. ಧರಣಿಯ

ದುಃಖವನ್ನು ಹರಣಮಾಡಬಲ್ಲವನೇ ಧರಣಿಪಾಲನು; ಹೀಗೆ ಮಾಡದೆ ಭೂಮಾತೆಯ ರಕ್ತವನ್ನೂ ಅರ್ಥವನ್ನೂ ಬಲುಮೆಯಿಂದ ಕಿತ್ತುಕೊಳ್ಳುವವನು ಕಳ್ಳನು. ಆತನ ತಲೆಯಮೇಲೆ ನಿರಂತರವು ನೂರಾರು ಸಾವಿರ ಜನ ಹತಭಾಗಿಗಳ ಕಂಬನಿಗಳ ಮಳೆಯು ಸುರಿಯುತಿರುವುದು. ಆ ಅಭಿಶಾಪದ ಸುರಿಮಳೆಯಿಂದ ಆತನನ್ನು ಅದಾವ ರಾಜಚ್ಛತ್ರವೂ ಕಾಪಾಡಲಾರದು. ಆತನ ಬಗೆಬಗೆಯ ರಾಜಭೋಗಗಳಲ್ಲಿ ಕೂಳಿಲ್ಲದೆ ಬಳಲುತಿರುವ ನೂರಾರು ಜನರ ಹಸಿವೆಯು ಹುದುಗಿಕೊಂಡಿರುವುದು. ನೆಲದಗಲವಾಗಿರುವ ಆತನ ರಾಜವಸ್ತ್ರಗಳಲ್ಲಿ, ಬರಿಮೈಯಿಂದ ಚಳಿಗೆ ನಡುಗುತಿರುವ ನೂರಾರು ಜನರ ಕೊಳೆ ಬೆರೆತ ಅರಿವೆಗಳು ಮರೆಗೊಂಡಿರುವವು. ತಮ್ಮಾ! ನೋಡು! ರಾಜನ ಕೊಲೆ ಮಾಡಿದ ಮಾತ್ರಕ್ಕೇ ರಾಜತ್ವವೆಂದೂ ದೊರೆಯದು. ಭೂಮಿಯನ್ನೆಲ್ಲ ತನ್ನದನ್ನಾಗಿ ಮಾಡಿಕೊಂಡು ರಾಜನಾಗಬೇಕು !"

ಗೋವಿಂದಮಾಣಿಕ್ಯನು ಅಷ್ಟಕ್ಕೆ ಮಾತುಗಳನ್ನು ತಡೆದನು. ಎಲ್ಲೆಲ್ಲಿಯೂ ಗಂಭೀರವಾದ ಸ್ತಬ್ಧತೆಯು ಮೆರೆಯತೊಡಗಿತು. ನಕ್ಷತ್ರರಾಯನು ತಲೆ ಕೆಳಗೆ ಮಾಡಿಕೊಂಡು ಸುಮ್ಮನೆ ನಿಂತನು.

ಮಹಾರಾಜನು ಒರೆಯೊಳಗಿಂದ ಕತ್ತಿಯನ್ನು ಹಿರಿದನು. ನಕ್ಷತ್ರರಾಯನ ಎದುರಿಗೆ ಹಿಡಿದು ಹೇಳಿದನು. "ತಮ್ಮಾ! ಇಲ್ಲಿ ಜನರಾರೂ ಇಲ್ಲ. ಯಾರೂ ನೋಡುವಂತೆಯೂ ಇಲ್ಲ. ಅಣ್ಣನ ಎದೆಯಲ್ಲಿ ತಮ್ಮನು ಚೂರಿಯನ್ನಿಕ್ಕಬೇಕಾಗಿದ್ದಲ್ಲಿ ಸರಿಯಾದ ಸ್ಥಳವು ಇದೇ! ಸರಿಯಾದ ಕಾಲವೂ ಇದೇ! ಇಲ್ಲಿ ನಿನ್ನನ್ನು ಯಾರೂ ತಡೆದು ಹಿಡಿಯುವವರಿಲ್ಲ; ಯಾರೂ ಹಳಿಯುವವರಿಲ್ಲ. ನಿನ್ನ ನರಗಳಲ್ಲಿಯೂ ನನ್ನ ನರಗಳಲ್ಲಿಯೂ ಹರಿಯುತಿರುವುದು ಒಂದೇ ನೆತ್ತರು– ಒಬ್ಬನೇ ತಂದೆಯ ಒಬ್ಬನೇ ತಾತನ ನೆತ್ತರು– ಆ ನೆತ್ತರನ್ನು ನೆಲಕ್ಕೆ ಹರಿಸಬೇಕೆಂದು ಹವಣಿಸುತಿರುವೆಯಾದುದರಿಂದ ನೀನೀಗ ಹರಿಸಿಬಿಡು! ಆದರೆ ಮನುಷ್ಯರು ವಾಸಮಾಡಿಕೊಂಡಿರುವಲ್ಲಿ ಮಾತ್ರ ಈ ಕೆಲಸ ಮಾಡದಿರು! ಯಾವಚಿಂತೆಯೂ ಇಲ್ಲದೆ ಅತ್ಯಂತ ಸ್ನೇಹದಿಂದ ಅಣ್ಣತಮ್ಮಂದಿರು ಹೊಂದಿ ಹೊಂದಿಕೊಂಡಿರುವ ಬೀಡುಗಳ ಬಳಿಯಲ್ಲಿ, ಅಣ್ಣತಮ್ಮಂದಿರ ರಕ್ತಪಾತವು ಆಗಕೂಡದು; ಆದುದರಿಂದಲೇ ನಾನಿಂದು ನಿನ್ನನ್ನು ಕಾಡಿಗೆ ಕರೆದುಕೊಂಡು ಬಂದಿರುವೆನು."

ಇಷ್ಟು ಮಾತನಾಡಿ ದೊರೆಯು ನಕ್ಷತ್ರರಾಯನ ಕೈಯಲ್ಲಿ ಕತ್ತಿಯನ್ನು ಕೊಟ್ಟನು. ನಕ್ಷತ್ರನ ಕೈಯಿಂದದು ನೆಲಕ್ಕೆ ಬಿದ್ದುಹೋಯಿತು. ಅವನು ಎರಡೂ ಕೈಗಳಿಂದ ಮೋರೆಯನ್ನು ಮರೆಮಾಡಿಕೊಂಡು ಅಳುತಳುತ್ತ, ಬಿಗಿದ ಕಂಠದಿಂದ ಹೇಳಿದನು. "ಅಣ್ಣಯ್ಯಾ! ನಾನು ದೋಷಿಯಲ್ಲ– ಈ ಮಾತು ನನ್ನ ಮನಸ್ಸಿನೊಳಗೆ ಎಂದೆಂದೂ ಬಂದಿಲ್ಲ."

ರಾಜನು ಆತನನ್ನು ತಬ್ಬಿಕೊಂಡು ನುಡಿದನು. "ನಾನದನ್ನು ಬಲ್ಲೆನು. ನೀನೆಂದಾದರೂ ನನ್ನನ್ನು ಹೊಡೆಯಬಹುದೇ! ನಾಲ್ಕಾರು ಜನರು ನಿನಗೆ ತಪ್ಪು ಅಭಿಪ್ರಾಯವನ್ನು ಕೊಟ್ಟರುವರು."

ನಕ್ಷತ್ರರಾಯನು ಹೇಳಿದನು "ನನಗೆ ರಘುಪತಿಯೊಬ್ಬನು ಮಾತ್ರ ಹೀಗೆಂದು ಉಪದೇಶಿಸುತ್ತಿದ್ದನು."

ರಾಜನೆಂದನು "ನೀನಿನ್ನು ರಘುಪತಿಯ ಬಳಿಯಿಂದ ದೂರವಾಗಿರು."

ನಕ್ಷತ್ರರಾಯನೆಂದನು. "ಎಲ್ಲಿಗೆ ಹೋಗಲೆಂಬುವದನ್ನು ಹೇಳಿಕೊಡು! ಇಲ್ಲಿರುವುದಕ್ಕೆ ನನಗೆ ಇಷ್ಟವಿಲ್ಲ. ಈ ಸ್ಥಳದಿಂದ– ರಘುಪತಿಯ ಬಳಿಯಿಂದ ಓಡಿಹೋಗಬೇಕೆಂದು ಎನಿಸುತ್ತಿರುವುದು."

ರಾಜನೆಂದನು "ನೀನು ನನ್ನ ಬಳಿಯಲ್ಲಿಯೇ ಇರು !– ಇನ್ನೆಲ್ಲಿಯೂ ಹೋಗಬೇಕಾದುದಿಲ್ಲ. ರಘುಪತಿಯು ನಿನಗೇನು ಮಾಡುವನು?"

ರಘುಪತಿಯು ತನ್ನನ್ನು ಎಳೆದುಕೊಂಡು ಹೋಗುವನು; ಎಂಬ ಹೆದರಿಕೆಯಿಂದಲೋ ಏನೋ! ನಕ್ಷತ್ರರಾಯನು ಅಣ್ಣನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡನು.

---

## ೧೧ನೆಯ ಪರಿಚ್ಛೇದ

ನಕ್ಷತ್ರರಾಯನು ದೊರೆಯ ಕೈಯನ್ನು ಹಿಡಿದುಕೊಂಡು ಕಾಡಿನ ಮಧ್ಯದಿಂದ ಮನೆಗೆ ಮರಳಿ ನಡೆದನು. ಆಗಸದೆಡೆಯಿಂದ ಕೊಂಚ ಕೊಂಚ ಬೆಳಕು ಬರುತ್ತಲಿದ್ದಿತು. ಆದರೂ ಕಾಡಿನ ಕೆಳ ಎಡೆಯೆಲ್ಲವು ಕತ್ತಲೆಯಿಂದ ಆವರಿಸಿಬಿಟ್ಟಿದ್ದಿತು. "ಕತ್ತಲೆಯ ಪಿಡುಗು ಬಂದು ಇರುವುದು; ಬರೀ ಮರಗಿಡಗಳು ಮಾತ್ರ ಮೇಲೆತ್ತಿದ ತಲೆಯಿಂದ ಬದುಕಿಕೊಂಡಿರುವವು; ಕ್ರಮವಾಗಿ ಅವೂ ಆ ಪಿಡುಗಿಗೆ ತುತ್ತಾಗಿ ಹೋಗಿ ಕಗ್ಗತ್ತಲೆಯು ಪೃಥಿವಿ ಆಕಾಶಗಳಲ್ಲಿ ತಾನೇ ತಾನಾಗಿ ನಿಂತುಬಿಡುವುದು" ಎಂದು ನೋಡಿದವನ ಮನಸ್ಸಿಗೆ ಕಾಣುತ್ತಿದ್ದಿತು.

ದೊರಿಯು ಅರಮನೆಯ ದಾರಿಯಿಂದ ನಡೆಯದೆ ಮಂದಿರದ ಕಡೆಗೆ ನಡೆದನು. ಮಂದಿರದಲ್ಲಿಯ ಸಾಯಂಕಾಲದ ಮಂಗಳಾರತಿಯನ್ನು ಮುಗಿಸಿ, ಒಂದು ದೀಪವನ್ನು ಹಚ್ಚಿಟ್ಟುಕೊಂಡು ರಘುಪತಿಯೂ ಜಯಸಿಂಹನೂ ಕುಟೀರದಲ್ಲಿ ಕುಳಿತಿರುವರು. ಇಬ್ಬರೂ ಮೌನದಿಂದ ತಮ್ಮ ತಮ್ಮಲ್ಲಿಯೇ ಭಾವಿಸುತ್ತಲಿರುವರು. ದೀವಿಗೆಯ ಮಸುಕುಬೆಳಕಿನಲ್ಲಿ ಅವರಿಬ್ಬರ ಮುಖದ ಅಂಧಕಾರವು ಮಾತ್ರ ಕಾಣುತ್ತಿದ್ದಿತು. ನಕ್ಷತ್ರರಾಯನಿಗೆ ರಘುಪತಿಯನ್ನು ನೋಡಿ, ಮುಖವನ್ನು ಮೇಲಕ್ಕೆ ಮಾಡಲು ಆಗಲಿಲ್ಲ. ರಾಜನ ಮೈನೆರಳಿನಲ್ಲಿ ನಿಂತುಕೊಂಡು ನೆಲವನ್ನು ನೋಡುತ್ತಲಿದ್ದನು. ರಾಜನು ಅವನನ್ನು ಬಳಿಗೆ ಸೆಳೆದುಕೊಂಡು ಅವನ ಕೈಯನ್ನು ಬಲವಾಗಿ ಹಿಡಿದು ನಿಂತನು; ಸ್ಥಿರನೇತ್ರದಿಂದ ರಘುಪತಿಯ ಮುಖದ ಕಡೆಗೆ ನೋಡಿದನು. ರಘುಪತಿಯು ನಕ್ಷತ್ರರಾಯನನ್ನು ತೀವ್ರದೃಷ್ಟಿಯಿಂದ ನೋಡುತ್ತಿದ್ದನು. ಕೊನೆಗೆ ರಾಜನು ರಘುಪತಿಗೆ ಪ್ರಣಾಮವನ್ನು ಮಾಡಿದನು. ನಕ್ಷತ್ರರಾಯನೂ ಅಣ್ಣನನ್ನು ಅನುಸರಿಸಿದನು. ನಮಸ್ಕಾರವನ್ನು ಸ್ವೀಕರಿಸಿ ರಘುಪತಿಯು ಗಂಭೀರಸ್ವರದಲ್ಲಿ ಹೇಳಿದನು. "ಜಯವಾಗಲಿ ! ನಾಡೆಲ್ಲವೂ ನೆಮ್ಮದಿಯಷ್ಟೆ ?"

ರಾಜನು ಕೊಂಚ ತಡೆದು ಮಾತಾಡಿದನು. "ಮಹನೀಯರ ಆಶೀರ್ವಾದವಿದ್ದಲ್ಲಿ ನಾಡಿಗೆ ಯಾವ ತೊಂದರೆಯೂ ಉಂಟಾಗದು. ಈ ನಾಡಿನಲ್ಲಿ ದೇವಿಯ ಮಕ್ಕಳುಮರಿಗಳೆಲ್ಲರೂ ಒಲುಮೆ ಒಳುಬಗೆಗಳಿಂದ ಕಲೆತು ಒಂದುಗೂಡಿರುವರು. ಅಣ್ಣತಮ್ಮಂದಿರ ನಡುವೆ ಕಿನಿಸು-ಕೀಳ್ಬಗೆಗಳೆಂದೂ ತಲೆಯೆತ್ತವು. ಒಲವಿನ ನೆಲೆವೀಡಿನಲ್ಲಿ ಕೊಲೆಹಗೆತನಗಳನ್ನು ನೆಲೆನಿಲ್ಲಿಸುವದು ಯಾರಿಂದಲಾಗುವದು? ಆದರೂ ನಾನೀಗ ರಾಜ್ಯಕ್ಕೆ ಅಮಂಗಲವೊದಗಬಹುದೆಂಬ ಆಶಂಕೆಯಿಂದ ಬಂದಿರುವೆನು. ಪಾಪಸಂಕಲ್ಪಗಳ ಸಂಘರ್ಷಣದಿಂದ ಕಾಡುಬೇಗೆಯ ದಳ್ಳುರಿಯೇಳಲಿರುವದು. ತಾವು ನಿವಾರಿಸಿ! ಶಾಂತಿಯ ಮಳೆಯನ್ನು ಸುರಿಸಿ! ನಾಡನ್ನು ತಂಪುತಂಪಾಗಿಸಿ ಬಿಡಿ!"

ರಘುಪತಿಯೆಂದನು "ದೇವತೆಯ ಕ್ರೋಧಾಗ್ನಿಯು ಹೊತ್ತಿಯೆದ್ದುಬಿಟ್ಟರೆ ನಿವಾರಿಸಲು ಯಾರಿಂದಾದೀತು ! ಒಬ್ಬ ಅಪರಾಧಿಯ ಸಲುವಾಗಿ ಸಾವಿರಾರು ಜನ ನಿರಪರಾಧಿಗಳು ಆ ಬೆಂಕಿಯ ಬಾಯಿಗೆ ಬಲಿಬೀಳಬೇಕಾಗುವದು."

ರಾಜನೆಂದನು, "ನನಗೂ ಅದೇ ಹೆದರಿಕೆ. ಅದಕ್ಕಾಗಿಯೇ ಎದೆಯು ನಡುಗುತ್ತದೆ. ಆ ಸಂಗತಿಯು ತಿಳಿಯದ ತಿಳಿಯ ಎಲ್ಲರೂ ತಿಳಿಯದವರಂತೆ ಇರುವರೇತಕ್ಕೆ? ಈ ರಾಜ್ಯದ ತಾಯಿಯ ಹೆಸರಿನಿಂದಲೆ ತಾಯಿಯ ಆಜ್ಞೆಯನ್ನೆಲ್ಲರೂ ನಡೆಯುತಿರುವುದು ತಮಗೆ ಗೊತ್ತಿಲ್ಲದೆ ಇದೆಯೇನು! ಅದಕ್ಕಾಗಿಯೇ ಅಮಂಗಲದ ಆಶಂಕೆಯಿಂದ ನಾನೀ ಸಂಜೆಯ ಸಮಯದಲ್ಲಿ ಇಲ್ಲಿಗೆ ಬಂದಿರುವೆನು. ಇಲ್ಲಿ ಪಾಪದ ಮರವನ್ನು ನೆಟ್ಟು ನನ್ನ ಈ ಧನಧಾನ್ಯಸಂಪನ್ನವಾದ-ಸೌಖ್ಯಸಾಗರವಾದ ರಾಜ್ಯದಮೇಲೆ ಬೀಳುವುದಕ್ಕೆ ದೇವತೆಯ ವಜ್ರಾಯುಧವನ್ನು ಕೂಗಿ ಕರೆಯಬೇಡಿ! ನಿಮಗಿದನ್ನು ಮೊದಲೆ ತಿಳುಹಿಸಿ ಈ ಸಂಗತಿಯನ್ನು ತಿಳುಹಿಸಿ ಹೋಗಬೇಕೆಂದೇ ನಾನು ಬಂದಿರುವೆನು." ಎಂದು ನುಡಿದು ರಾಜನು ತನ್ನ ಮರ್ಮಭೇದಕವಾದ ದೃಷ್ಟಿಗಳನ್ನು ರಘುಪತಿಯ ಕಡೆಗೆ ಬೀರಿದನು. ಆತನ ಗಂಭೀರವಾದ ದೃಢಸ್ವರವು ಕುಟೀರದಲ್ಲಿ ಎಲ್ಲೆಲ್ಲಿಯೂ ಕುಣಿಯತೊಡಗಿತು. ರಘುಪತಿಯು ಮರುಮಾತೊಂದನ್ನೂ ಆಡಲಿಲ್ಲ. ಕುಳಿತುಕೊಂಡೇ ಮೇಲಡಿಯಮೇಲೆ ಕೈಯಾಡಿಸುತ್ತ ಮೈದೂಗಲು ತೊಡಗಿದನು. ರಾಜನು ಅವನನ್ನು ನಮಸ್ಕರಿಸಿ ನಕ್ಷತ್ರರಾಯನ ಕೈಹಿಡಿದುಕೊಂಡು ಹೊರಬಂದನು. ಜೊತೆಯಲ್ಲಿಯೇ ಜಯಸಿಂಹನೂ ಹೊರಬಂದನು. ಮನೆಯೊಳಕ್ಕೆದೀವಿಗೆಯೊಂದು,ರಘುಪತಿಯೊಬ್ಬ, ದೊಡ್ಡದಾಗಿರುವ ಆತನ ಪಡಿನೆಳಲೊಂದು, ಇವಿಷ್ಟೇ ಉಳಿದುವು.

ಆಗ ಬಾನಿನಲ್ಲಿಯ ಬೆಳಕೆಲ್ಲವೂ ಹೊರಟು ಹೋಗಿದ್ದಿತು. ತಾರೆಗಳೆಲ್ಲವೂ ಮೋಡಗಳಲ್ಲಿ ಮರೆಗೊಂಡು ಹೋಗಿದ್ದುವು. ಮುಗಿಲನ್ನು ಮುಟ್ಟುವವರೆಗೂ ಕತ್ತಲೆಯು ಬೆಳೆದು ಬಿಟ್ಟಿತು. ಆ ಕಗ್ಗತ್ತಲೆಯಲ್ಲಿ ಸುಳಿಯುತಿರುವ ಮೂಡಣಗಾಳಿಯೊಡನೆ ಅದೆಲ್ಲಿಂದಲೋ ಕದಂಬಕುಸುಮಗಳ ಕಂಪು ಹರಿದು ಬರುತ್ತಿದ್ದಿತು. ಹಾಗೆಯೇ ಕಾಡಿನ ಮರಗಳ ಮರ್ಮರ ಶಬ್ದವು ಕೇಳಬರುತ್ತಿದ್ದಿತು. ಪರಿಚಯದ ದಾರಿ; ದೊರೆಯು ಏನನ್ನೋ ಯೋಚಿಸುತ್ತ ನಡೆಯುತ್ತಲಿದ್ದನು. ಇದ್ದಕ್ಕಿದ್ದಂತೆ ಹಾಗೆಯೇ ಆದಾರೋ ಕರೆದಂತೆ ದನಿಯೊಂದು ಕೇಳಬಂದಿತು. "ಮಹಾರಾಜ"-ದೊರೆಯು ತಿರುಗಿನಿಂತು ಕೇಳಿದನು, "ಯಾರು ನೀನು?"

ಆ ಗುರುತಿನ ಸ್ವರವು ಹೇಳಿತು. "ನಾನೊಬ್ಬ ಬಡವ; ತಮ್ಮ ಅಡಿಯಾಳು ಜಯಸಿಂಹ ನಾನು ಮಹಾರಾಜ! ತಾವೇ ನನ್ನ ಗುರುವು. ತಾವೇ ನನ್ನ ಪ್ರಭುವು. ನನ್ನ ಏನೆಲ್ಲವೂ ತಾವೇ! ಹೊರತು ಇನ್ನಾರೂ ನನ್ನವರಿಲ್ಲ ! ಈ ಕಗ್ಗತ್ತಲೆಯೊಳಗೆ ಕೆಳೆಯ ತಮ್ಮನ ಕೈಹಿಡಿದು ಕರೆದೊಯ್ಯುತಿರುವಂತೆಯೇ

ಕೈಯನ್ನೂ ಹಿಡಿಯಬೇಕು! ಜೊತೆಗೆ ಕರೆದೊಯ್ಯಬೇಕು! ನಾನೂ ಭಯಂಕರವಾದ ಕಗ್ಗತ್ತಲೆಯಲ್ಲಿ ಸಿಲುಕಿಕೊಂಡಿರುವೆನು. ಯಾವ ದಾರಿಯಿಂದ ಮೇಲಾಗುವುದು ಯಾವ ದಾರಿಯಿಂದ ಕೇಡಾಗುವುದು; ಎಂಬುವದನ್ನು ತಿಳಿಯದೆ ಮಿಡುಕಾಡುತ್ತಿರುವೆನು. ಒಮ್ಮೆ ಎಡಕ್ಕೆ ತೆರಳುವೆನು ಮತ್ತೊಮ್ಮೆ ಬಲಕ್ಕೆ ಹೊರಳುವೆನು. ಕಿವಿ ಹಿಡಿದು ದಾರಿಯ ತೋರಿಸುವವರು ಯಾರೂ ಇಲ್ಲದಂತಾಗಿದೆ." ಆಗ ಜಯಸಿಂಹನ ಕಣ್ಣುಗಳಿಂದ ಕಂಬನಿಗಳು ಹರಿದುವು. ಕತ್ತಲೆಯಿದ್ದುದರಿಂದ ಯಾರಿಗೂ ಕಾಣಲಿಲ್ಲ. ದುಃಖಾವೇಗದಿಂದ ತೊಯಿದುಹೋದ ಜಯಸಿಂಹನ ಧ್ವನಿಯು ಮಾತ್ರ ತೇಲುತ್ತ ತೇಲುತ್ತ ದೊರೆಯ ಕಿವಿಗಳಲ್ಲಿ ಸೇರಿತು. ನಿಃಶಬ್ದವಾದ-ಸ್ಥಿರವಾದ ಅಂಧಕಾರದಲ್ಲಿ ಅದು ಗಾಳಿಗೆ ಗಲಬಿಲಿಗೊಂಡ ಸಮುದ್ರದಂತೆ ಕಂಪನ ಹೊಂದಲು ತೊಡಗಿತು. ದೊರೆಯು ಜಯಸಿಂಹನ ಕೈಯನ್ನು ಹಿಡಿದು ಹೇಳಿದನು. "ನಡೆ ನನ್ನೊಡನೆಯೇ ಅರಮನೆಗೆ ನಡೆ!"

---

## ೧೨ನೆಯ ಪರಿಚ್ಛೇದ

ಮರುದಿನ ಜಯಸಿಂಹನು ಮರಳಿ ಬಂದಾಗ ಪೂಜೆಯ ಸಮಯವು ಮೀರಿ ಹೋಗಿದ್ದಿತು. ರಘುಪತಿಯು ಯೋಚನೆಯ ಮುಖವುಳ್ಳವನಾಗಿ ಒಬ್ಬನೇ ಕುಳಿತಿದ್ದನು. ಇದಕ್ಕೆ ಮೊದಲು ಎಂದೆಂದೂ ಈ ಬಗೆಯಾಗಿ ಪೂಜೆಗೆ ನಿಯಮಭಂಗವಾಗಿರಲಿಲ್ಲ.

ಜಯಸಿಂಹನು ಬಂದವನು ಗುರುವಿನ ಬಳಿಗೆ ಹೋಗದೆ ತನ್ನ ತೋಟದೊಳಕ್ಕೆ ಹೋದನು. ಅಲ್ಲಿ ತಳಿತ ಮರಗಳ ಮಧ್ಯದಲ್ಲಿ ಕುಳಿತನು. ಆಗ ಅವನ ಸುತ್ತುಮುತ್ತಣದೆಲ್ಲವೂ ನಡುಗುತಿರುವಂತೆ—ಅಲ್ಲಾಡುತಿರುವಂತೆ ತೋರಿತು. ನೆರಳೆಲ್ಲವೂ ಕುಣಿದಾಡುತಿರುವಂತೆ ಕಂಡಿತು. ಅವನ ನಾಲ್ಕು ಕಡೆಗಳಲ್ಲಿಯೂ ಹೂಬೆರೆತ ಹಸುರುತಳಿರತೊಂಗಲುಗಳು; ಕಪ್ಪುಕಪ್ಪಾಗಿರುವ ನೆಳಲುಪಡಿನೆಳಲುಗಳು; ಆ ನೆಳಲಿನ ಕೋಮಲತರದ ಸ್ನೇಹದ ಆಚ್ಛಾದನವು; ಇನಿದಾದ ದನಿಯ ಕೂಗುಗಳು; ನಿಸರ್ಗದೇವತೆಯ ಒಲವಿನಿಂದ ತುಂಬಿದ ಆಲಿಂಗನವು. ಇಲ್ಲಿಯ ಎಲ್ಲ ಮರಗಿಡಬಳ್ಳಿಗಳೂ—'ಯಾರೊಡನೆಯೂ ಮಾತು ಬೇಡ ಕತೆ ಬೇಡ! ಯಾರ ಭಾವನೆಗಳಿಗೆ ಅಡ್ಡಿಯನ್ನುಂಟುಮಾಡುವುದೂ ಬೇಡ! ನೋಡುವವರು ನೋಡಲಿ! ಆಡುವವರು ಆಡಲಿ!' ಎಂದು ಅಪೇಕ್ಷೆ ಪಟ್ಟುಕೊಂಡೋ ಏನೋ! ನಿಃಶಬ್ದವಾಗಿದ್ದುವು. ಈ ಶಬ್ದವಿಲ್ಲದ ಶುಶ್ರೂಷೆಯಲ್ಲಿ—ನಿಸರ್ಗದೇವತೆಯ ಈ ಅಂತಃಪುರದಲ್ಲಿ ಕುಳಿತು ಜಯಸಿಂಹನು ಭಾವಿಸಲು ತೊಡಗಿದನು. ರಾಜನು ತನಗೆ ಉಪದೇಶಿಸಿದ ಮಾತುಗಳನ್ನು ಮನದಲ್ಲಿಯೇ ಚಿಂತಿಸತೊಡಗಿದನು.

ಇದೇ ವೇಳೆಯಲ್ಲಿ ರಘುಪತಿಯು ಮೆಲ್ಲಮೆಲ್ಲಗೆ ಬಂದು ಜಯಸಿಂಹನ ಬೆನ್ನಮೇಲೆ ಕೈಯಿಟ್ಟನು. ಜಯಸಿಂಹನು ಬೆದರಿಬಿದ್ದನು. ರಘುಪತಿಯು ಅವನ ಬಳಿಯಲ್ಲಿಯೇ ಕುಳಿತನು. ಜಯಸಿಂಹನ ಮೊಗದ ಕಡೆಗೆ ನೋಡಿ ನಡುಗುತಿರುವ ದನಿಯಲ್ಲಿ ಹೇಳಿದನು. "ಮಗು ಇದೇನಿದು? ನಿನ್ನ ಬಗೆಯಿರವು? ನೀನು ನನ್ನ ಬಳಿಯಿಂದ ಸ್ವಲ್ಪಸ್ವಲ್ಪವಾಗಿ ದೂರಕ್ಕೆ ಸರಿದು ಹೋಗುತ್ತಿರುವಿಯಲ್ಲ! ನಿನಗೆ ಅಂತಹವನ್ನು ನಾನು ಮಾಡಿದುದಾದರೂ ಏನು?"

ಜಯಸಿಂಹನು ಏನನೋ ಹೇಳಬೇಕೆಂದು ಹವಣಿಸುತ್ತಿದ್ದನು. ರಘುಪತಿಯು ಅದನ್ನು ಅಲ್ಲಿಯೇ ತಡೆದು ಮಾತನಾಡಲು ತೊಡಗಿದನು. "ಸ್ನೇಹದ ಅಭಾವವಾಗಿದ್ದ ಒಂದೇ ಒಂದು ಕ್ಷಣವನ್ನಾದರೂ ನನ್ನಲ್ಲಿ ಕಂಡಿರುವೆಯಾ? ಜಯಸಿಂಹ! ನಾನು ನಿನ್ನ ವಿಷಯದಲ್ಲಿ ಅಪರಾಧವನ್ನೇನಾದರೂ ಮಾಡಿರುವೆನೇ? ಒಂದು ವೇಳೆ ಮಾಡಿದ್ದರೂ—ನಾನು ನಿನ್ನ ಗುರುವು, ತಂದೆಗೆ ಸಮನಾದವನು; ನಾನು ನಿನ್ನ ಬಳಿಯಲ್ಲಿ ಕ್ಷಮೆಯ ಭಿಕ್ಷೆಯನ್ನು ಬೇಡುತ್ತಿರುವೆನು. ನನ್ನ ತಪ್ಪುಗಳನ್ನೆಲ್ಲ ತೊಳೆದು ಬಿಡು!"

ಜಯಸಿಂಹನು ವಜ್ರಾಹತನಾದಂತೆ ಒಮ್ಮೆಲೇ ಹಾರಿಬಿದ್ದನು. ಹಾಗೆಯೇ ಗುರುವಿನ ಅಡಿಗಳನ್ನು ಹಿಡಿದುಕೊಂಡು ಅಳುತಳುತ್ತ ಮಾತನಾಡಿದನು. "ತಂದೆಯೆ! ನನಗೆ ಯಾವುದೂ ತಿಳಿಯದಾಗಿದೆ. ಯಾವುದನ್ನು ಅರಿತುಕೊಳ್ಳಲೂ ಅಸಮರ್ಥನಾಗಿರುವೆನು. ನಾನೆಲ್ಲಿಗೆ ನಡೆದಿರುವೆನೆಂಬುದು ನನಗೇ ತಿಳಿಯಲೊಲ್ಲದು."

ರಘುಪತಿಯು ಜಯಸಿಂಹನ ಕೈಯನ್ನು ಹಿಡಿದುಹೇಳಿದನು. "ಮಗು! ನಾನು ನಿನ್ನನ್ನು, ಎಳೆಯತನದಿಂದಲೂ ತಾಯಿಯಂತೆ ನಲುಮೆಯಿಂದ ಸಾಕಿರುವೆನು. ತಂದೆಗಿಂತ ಹೆಚ್ಚಾಗಿ ಕಷ್ಟಪಟ್ಟು ಶಾಸ್ತ್ರಾಭ್ಯಾಸ ಮಾಡಿಸಿರುವೆನು. ನಿನ್ನಲ್ಲಿ ತುಂಬು ನಂಬುಗೆಯನ್ನಿಟ್ಟು ಗುಟ್ಟಿನ ಗೆಳೆಯನನ್ನಾಗಿ ಮಾಡಿಕೊಂಡಿರುವೆನು. ಈಗ ನನ್ನ ಒಲುಮೆಯ ಬಲೆಯೊಳಗಿಂದ ಅದಾರು ನಿನ್ನನ್ನು ಸೆಳೆದೊಯ್ಯುತ್ತಿರುವವರು? ಇಷ್ಟು ದಿನದ ಸ್ನೇಹ

ಮಮತೆಗಳ ಬಂಧನವನ್ನು ಅದಾರು ಹರಿದುಹಾಕುತ್ತಿರುವರು? ನಿನ್ನ ವಿಷಯಕವಾಗಿರುವ ನನ್ನ ನೈಸರ್ಗಿಕವಾದ–ದೇವದತ್ತವಾದ ಅಧಿಕಾರದಲ್ಲಿ ಅದಾರು ಕೈಯಿಕ್ಕುತ್ತಿರುವರು ? ಮಗು, ಹೇಳು ! ಆ ಮಹಾಪಾತಕಿಯ ಹೆಸರನ್ನು ಹೇಳು !"

ಜಯಸಿಂಹನೆಂದನು, " ತಮ್ಮ ಬಳಿಯಿಂದ ನನ್ನನ್ನು ಇನ್ನಾರೂ ಸೆಳೆದೊಯ್ಯುತ್ತಿಲ್ಲ. ತಾವೇ ನನ್ನನ್ನು ದೂರಮಾಡಿ ಬಿಟ್ಟಿದ್ದೀರಿ; ನಾನು ಮನೆಯಲ್ಲಿಯೇ ಇದ್ದೆ. ತಾವು ಜತೆಗೆ ಕರೆದೊಯ್ದು ನಡುದಾರಿಯಲ್ಲಿಯೇ ದೂಡಿಬಿಟ್ಟದ್ದೀರಿ. ತಂದೆ ಯಾರು, ತಾಯಿಯಾರು, ಬಂಧುವಾರು, ಎಂದು ತಾವೇ ಹೇಳಿದ್ದೀರಿ. ಸ್ನೇಹಮಮತೆಗಳ ಪವಿತ್ರವಾದ ಅಧಿಕಾರವು ಪ್ರಪಂಚದಲ್ಲಿ ಇಲ್ಲವೇ ಇಲ್ಲವೆಂದು ತಾವೇ ತಿಳುಹಿಸಿದ್ದೀರಿ. ನಾನು ತಾಯಿಯೆಂದು ಗುರುತಿಸುವವಳನ್ನು ತಾವು ಶಕ್ತಿಯೆಂದು ಹೇಳಿಬಿಟ್ಟಿರುವಿರಿ. ಎಲ್ಲಿಯಾದರೂ ಕೊಲೆಗೆಲಸ ನಡೆದಿದ್ದರೆ–ಎಲ್ಲಿಯಾದರೂ ನೆತ್ತರುಹರಿಯುತ್ತಿದ್ದರೆ–ಇನ್ನೆಲ್ಲಿಯಾದರೂ ಅಣ್ಣತಮ್ಮದಿರಲ್ಲಿ ಜಗಳಾಟವಾಗಿ ಇಬ್ಬರೂ ಕಾಳಗವಾಡುತ್ತಿದ್ದರೆ ಆ ಆ ಕಡೆಗಳಲ್ಲೆಲ್ಲವೂ ಈ ನೆತ್ತರ ನೀರಡಿಕೆಯ ಶಕ್ತಿಯು ತನ್ನ ಕಯ್ಯ ಕಪ್ಪರವನ್ನು ಹಿಡಿದುಕೊಂಡೇ ನಿಂತಿರುವಳಲ್ಲವೇ! ನನ್ನ ತಾಯಿಯ ತೊಡೆಯಿಂದ ನನ್ನನ್ನು ಈ ರಕ್ಕಸಿಯ ರಾಜ್ಯಕ್ಕೆ ತಂದುಬಿಟ್ಟುದೇಕೆ ? "

ರಘುಪತಿಯು ಅದೆಷ್ಟೋ ವೇಳೆಯವರೆಗೆ ಸ್ತಂಭಿತನಾಗಿ ಕುಳಿತುಕೊಂಡನು. ಕೊನೆಗೆ ನಿಟ್ಟುಸಿರೊಂದನ್ನು ಬಿಟ್ಟು ಮಾತನಾಡಿದನು. " ಹಾಗಾದರೆ ನೀನಿನ್ನು ಸ್ವತಂತ್ರನಾದೆ! ಬಂಧನದಿಂದ ಬಿಡುಗಡೆಹೊಂದಿದೆ. ನಿನ್ನ ಮೇಲಿದ್ದ ನನ್ನ ಅಧಿಕಾರವೆಲ್ಲವನ್ನೂ ಪ್ರತ್ಯಾಹರಣಮಾಡಿಕೊಂಡೆನು. ಅದರಿಂದಾದರೂ ನೀನೂ ಸುಖಿಯಾಗಿರುವುದಾದರೆ ಅದೂ ಆಗಿಬಿಡಲಿ!" ಎಂದು ನುಡಿದು ಏಳಲುದ್ಯುಕ ನಾದನು.

ಜಯಸಿಂಹನು ಆತನ ಅಡಿಗಳನ್ನು ಹಿಡಿದು ಹೇಳಿದನು. " ಬೇಡ ಬೇಡ ಬೇಡ ! ಪ್ರಭು, ತಾವು ನನ್ನನ್ನು ಬಿಟ್ಟುಬಿಟ್ಟರೂ ನಾನು ತಮ್ಮನ್ನು ಬಿಡಲಾರೆನು. ನಾನು ಇರುತ್ತೇನೆ, ತಮ್ಮ ಅಡಿಗಳೆಡೆಯಲ್ಲಿಯೇ ಇರುತ್ತೇನೆ. ತಮ್ಮ ಇಚ್ಛೆಯೇ ನನ್ನ ಇಚ್ಛೆ. ತಾವು ತೋರಿಸುವ ದಾರಿಯ ಹೊರತು ನನಗೆ ಇನ್ನಾವ ದಾರಿಯೂ ಇಲ್ಲ "

ರಘುಪತಿಯು ಆಗ ಜಯಸಿಂಹನನ್ನು ತಬ್ಬಿಕೊಂಡು ಬಿ[illegible]ದನು. ಆತನ ಕಂಬನಿಯು ಹರಿಯುತ್ತ ಹರಿಯುತ್ತ ಜಯಸಿಂಹನ ಹೆಗಲಮೇಲೆ ಬೀಳಲು ತೊಡಗಿದುವು.



## ಕನ್ನಡದಲ್ಲಿ ಶಬ್ದಭೇದ

ಲೇಖಕರು:—ಶ್ರೀ ಕಪಟರಾಳ ಕೃಷ್ಣರಾಯರು, ಕಲ್ಲಬುರ್ಗಿ

[ಹೋದ ಸಲ ಜಯಕರ್ನಾಟಕದಲ್ಲಿ ಶ್ರೀವಾನ್ ಶಿವಮೂರ್ತಿಶಾಸ್ತ್ರಿಗಳು ಕೊಟ್ಟ ಶಬ್ದಗಳು ನಿಜಾಂ ಕರ್ನಾಟಕದಲ್ಲಿ ಹೇಗೆ ಉಪಯೋಗಿಸಲ್ಪಡುತ್ತವೆಯೆಂಬದನ್ನು ಭೇದವಿದ್ದಲ್ಲಿ ಮಾತ್ರ ಕೆಳಗೆ ತೋರಿಸಲಾಗಿದೆ.]

'ತಾಬಂಡಿ' ಮತ್ತು 'ಗಂಗಾಳ' ಎರಡೂ ಶಬ್ದಗಳು ಉಪಯೋಗದಲ್ಲಿವೆ. 'ಪುರವಣೆ'ದ ಬದಲು 'ಅನುಕೂಲ' ಶಬ್ದವು ರೂಢಿಯಲ್ಲಿದೆ.

'ಸೆಜ್ಜೆ'ಯೆಂದು ನಾವು ಹೇಳುತ್ತೇವೆ.

'ಗಂಗಳ' (ಬೆಲ್ಲದ ಕೊಪ್ಪರಿಗೆ) ಶಬ್ದವು ರೂಢಿಯಲ್ಲಿ ಇಲ್ಲ.

'ನಾವಿಲಿಗ' ನಿಗೆ ನಮ್ಮಲ್ಲಿ 'ನಾಯಿದ' ಅಥವಾ 'ನಾಯ್ದ' ಎಂದನ್ನುತ್ತಾರೆ.

'ಪೀಕು' ರೂಢಿಯಲ್ಲಿಲ್ಲ.

'ಹಿಸುಗು' ಎಂದುಂಟು; ಹಿಚಗು ಇಲ್ಲ.

'ಬಿಲಪತ್ರೀಗಿಡ' ರೂಢಿಯಲ್ಲಿದೆ.

'ಆವಿ' ಅಥವಾ 'ತಾಂಬೇಲು' ಎಂದು ನಮ್ಮಲ್ಲಿ ಹೇಳುತ್ತಾರೆ.

'ಅಗ್ಗಿನಗಾಡಿ' 'ಉಗಿಬಂಡಿ' ಎರಡೂ ರೂಢಿಯಲ್ಲಿವೆ.

'ಹೊಟ್ಟೆಕಡಿತ' ಎಂದರೆ ನಮಗೆ ಗೊತ್ತಾಗುತ್ತದೆ.

# ಬಾದಾಮಿಯ ವರ್ಣನೆ

ಲೇಖಕರು:— ಶ್ರೀ ಶಿರಹಟ್ಟಿ ರಾಘವೇಂದ್ರರಾಯರು, L. M. & S. ಧಾರವಾಡ.

( ಕರ್ನಾಟಕ ಇತಿಹಾಸ ಮಂಡಲದಲ್ಲಿ ೨–೩–೩೦ನೆಯ ದಿನ ಓದಿದ್ದು )

ಕರ್ನಾಟಕದ ಇತಿಹಾಸದ ಸ್ವಲ್ಪಾದರೂ ಅಭಿಮಾನವಿದ್ದವನಿಗೆ ಬಾದಾಮಿಯನ್ನು ಒಮ್ಮೆಯಾದರೂ ನೋಡಬೇಕೆಂಬ ಲವಲವಿಕೆ ಇರುವದು ಸಹಜವು. ಅನೇಕ ಶತಮಾನಗಳವರೆಗೆ ಕರ್ನಾಟಕದ ಪೌರುಷದ ಗಂಡುಮೆಟ್ಟಾದ ಬಾದಾಮಿಯ ಕೋಟೆಯನ್ನೂ, ಅಲ್ಲಿಯ ಸುಪ್ರಸಿದ್ಧ ಮೇಣಬಸ್ತಿಗಳನ್ನೂ– ಅದರ ಹತ್ತರವೇ ಇದ್ದ ಸೃಷ್ಟಿಸೌಂದರ್ಯದಿಂದ ತುಂಬಿ ತುಳುಕುತ್ತಿರುವ ಪುರಾಣಪ್ರಸಿದ್ಧವಾದ ಮಹಾಕೂಟವನ್ನೂ, ಉತ್ತರ ಮತ್ತು ದಕ್ಷಿಣದ ಎರಡೂ ಕಲೆಗಳ ಮಿಶ್ರಣದಿಂದ ಹುಟ್ಟಿದ ಅಥವಾ ಸ್ವತಂತ್ರವಾಗಿಯೇ ನಿರ್ಮಾಣವಾದ ಚಾಲುಕ್ಯ ಪದ್ಧತಿಯ ಕರ್ನಾಟಕ ಶಿಲ್ಪಕಲೆಯ ತವರುಮನೆಯಾದ ಐಹೊಳೆ ಪಟ್ಟದಕಲ್ಲುಗಳನ್ನೂ ಮತ್ತು ಅಜಿಂಕ್ಯವೆಂದೆನಿಸಿಕೊಂಡ ಕರ್ನಾಟಕಬಲದ ಶೌರ್ಯದ ಪ್ರತ್ಯಕ್ಷ ಕುರುಹು ಆದ ಐಹೊಳೆಯ ಗುಡ್ಡದ ಮೇಲಿರುವ ಮೇಗುತೀ ಗುಡಿಯೊಳಗಿರುವ ಕರ್ನಾಟಕದ ಕಡುಗಲಿಯಾದ ಇಮ್ಮಡೀ ಪುಲಕೇಶಿಯ ಕಾಲದ(ಸನ್ ೬೩೪–೩೫) ಶಿಲಾಲೇಖವನ್ನೂ ಒಮ್ಮೆಯಾದರೂ ಕಣ್ಣಾರೆ ಕಂಡು ಧನ್ಯನಾಗಬೇಕೆಂದು ನನಗೆ ಕುತೂಹಲವಿತ್ತು.



೨ನೆಯ ಪುಲಿಕೇಶಿಯ ಒಡ್ಡೋಲಗ

ಅಲ್ಲಿಗೆ ಹೋಗಬೇಕೆಂದು ನಿಶ್ಚಯಿಸಿದನಂತರ ಮೇಲ್ಕಾಣಿಸಿದ ಊರುಗಳ ಪೂರ್ವೇತಿಹಾಸವು ಏನಿದೆ ಮತ್ತು ಅಲ್ಲಿ ಈಗ ಏನೇನು ನೋಡತಕ್ಕದ್ದಿರುವದು ಎಂಬದನ್ನು ತಿಳಿದುಕೊಳ್ಳುವದಕ್ಕೋಸ್ಕರ ಕೆಲವು ಪುಸ್ತಕಗಳನ್ನು ತಿರಿವಿ ಹಾಕಿದೆನು. ಅವುಗಳಲ್ಲಿ ಮುಖ್ಯತಃ ಆರ್. ಡಿ. ಬಾನರ್ಜಿಯವರ 'Memoirs of the Areheological Survey of India–No. 25–'Basreliefs of Badami' ಮತ್ತು 'The chalukyan Architecture of the Kanarese Districts' by Henry Cousens. M, R. A. S. ಇವೇ ಮುಖ್ಯವಾಗಿರುತ್ತವೆ. 'ಗುಣೀ ಗುಣಂ ವೇತ್ತಿ, ನ ವೇತ್ತಿ ನಿರ್ಗುಣಃ' ಎಂಬ ಭರ್ತೃಹರಿಯ ಉಕ್ತಿಯಂತೆ ನಮ್ಮ ಪೂರ್ವಜರ ದೊಡ್ಡಸ್ತಿಕೆಯ ಕಲ್ಪನೆಯು ನಮಗೆ ಬರಬೇಕಾದರೆ ಕೌಜೇನ್ಸನಂಥ ಗುಣಿಗಳು ನಮಗೆ ಈಗ ತಿಳಿಹೇಳಬೇಕಾಗುತ್ತದೆ. ಬಾನರ್ಜಿಯು ಬಾದಾಮಿಯ ಇತಿಹಾಸವನ್ನು ಹೇಳಿಲ್ಲ. ಆದರೆ ಅಲ್ಲಿಯ ಮೇಣಬಸ್ತಿಗಳೊಳಗಿನ ಶಿಲ್ಪಕಲೆಯ ವರ್ಣನೆಯನ್ನು ಬಹಳೇ ಮಾರ್ಮಿಕ ರೀತಿಯಿಂದ ವರ್ಣಿಸಿದ್ದಾನೆ. ಶಿಲ್ಪಕಲೆಯ ಶಾಸ್ತ್ರೀಯ ಜ್ಞಾನವು ಇಲ್ಲದಂಥವರಿಗೆ ಅದನ್ನು ಓದಲು ಬೇಸರ ಬರುತ್ತದೆ. ಕೌಜೆನ್ಸನು ತನ್ನ ಪುಸ್ತಕದಲ್ಲಿ ಕರ್ನಾಟಕದ ಅರಸುಮನೆತನಗಳ ಇತಿಹಾಸದ ಸಾರಾಂಶವನ್ನು ಕೊಟ್ಟಿದ್ದಾನೆ. ಯಾಕಂದರೆ ಅವನೇ ಹೀಗೆ ಹೇಳಿರುವನು:—

'To describe the monuments of a country without giving some account of the people who raised them, would be to deprive our study of a great deal of its interest.

ಬಾದಾಮಿಯು ಹಿಂದಿನ ವಾತಾಪಿ ಅಥವಾ ವಾತಾಪಿಪುರದ ಒಂದು ಮುಖ್ಯ ಭಾಗವು. ಬಾದಾಮಿ ಈ ಹೆಸರು ಎಂದಿ

ನಿಂದ ರೂಢಿಯಲ್ಲಿ ಬಂತೆಂಬದು ತಿಳಿಯುವದಿಲ್ಲ. ವಾತಾಪಿ ಎಂಬ ರಾಕ್ಷಸನಿಂದ ಈ ಊರಿಗೆ ಆ ಹೆಸರು ಬಂದಿತು. ಉತ್ತರದಿಂದ ದಕ್ಷಿಣಕ್ಕೆ ಇಳಿದ ಆರ್ಯರ ಮೂಲಪುರುಷನಾದ ಅಗಸ್ತ್ಯಮುನಿಯು ಬಾದಾಮಿಯ ಗುಡ್ಡದ ಪೂರ್ವಕ್ಕೆ ಸಮೀಪದಲ್ಲಿಯೆ ಇದ್ದ ಮಹಾಕೂಟವೆಂಬ ರಮ್ಯ ಸ್ಥಳದಲ್ಲಿ, ದಾನವರಾದ ವಾತಾಪಿ ಮತ್ತು ಇಲ್ವಲರೆಂಬ ಅಣ್ಣತಮ್ಮಂದಿರನ್ನು ಕೊಂದನೆಂದು ಹೇಳುತ್ತಾರೆ. ಮತ್ತು ಮಹಾಕೂಟಕ್ಕೆ ಹೋಗುವಾಗ ಮಹಾದ್ವಾರದಲ್ಲಿ ಇದ್ದ ದ್ವಾರಪಾಲಕರನ್ನು ವಾತಾಪಿ ಮತ್ತು ಇಲ್ವಲ ರಾಕ್ಷಸರ ಮೂರ್ತಿಗಳೆಂದು ತೋರಿಸುತ್ತಾರೆ. ಈ ಕಥೆಯ ವಿಷಯಕ್ಕೆ ಡಾಕ್ಟರ ಫ್ಲೀಟನು ಹೀಗೆ ಬರೆದಿರುತ್ತಾನೆ:

'It is possible that in this legend of Vatapi and Ilwala, there are preserved, the names of two Aboriginal Kings who held this part of the country, when Aryan civilisation first made its way into it from the north!

ವಾತಾಪಿಯು ಮುಂಚಿನಿಂದಲೂ ಪ್ರಸಿದ್ಧ ಕೋಟೆಯಾಗಿದ್ದು ಅದು ಪಲ್ಲವರ ಕೈವಶದಲ್ಲಿ ಇತ್ತೆಂದು ಕಂಡುಬರುತ್ತದೆ. ಬಾದಾಮಿಯ ಹೊಂಡದ ಉತ್ತರತೀರಕ್ಕೆ ಇದ್ದ ಒಂದು ಬಂಡೆಯ ಮೇಲೆ ಪಲ್ಲವರ ಸ್ತುತಿಪರ ಒಂದು ಲೇಖವು ಅದೆ. ಅದರ ಮೇಲಿಂದ ಬಾದಾಮಿಗೆ ಆವಾಗ್ಗೆ ವಾತಾಪಿ ಎಂಬ ಹೆಸರು ಇತ್ತೆಂದು ಗೊತ್ತಾಗುತ್ತದೆ. ಅನಂತರ ಅದು ಕದಂಬರ ವಶಕ್ಕೆ ಹೋಯಿತು. ಮೊದಲನೇ ಪುಲಕೇಶಿಯು ಕದಂಬರಿಂದ ಅದನ್ನು ಗೆದ್ದುಕೊಂಡನು. ಈ ವಾತಾಪಿಪುರವು ಚಾಳುಕ್ಯರಿಂದಲೇ ಇಷ್ಟು ಪ್ರಸಿದ್ಧಿಗೆ ಬಂದಿದೆ. ಈ ಚಾಳುಕ್ಯರ ಮೂಲಪುರುಷನಾದ ಹೇಮಸೇನನು ಅಯೋಧ್ಯೆಯ ಅರಸುಮನೆತನಕ್ಕೆ ಹೊಂದಿದವನಾಗಿದ್ದು ಯಾವದೋ ಕಾರಣದಿಂದ ದಕ್ಷಿಣಕ್ಕೆ ಬಂದು, ಕರ್ನಾಟಕದೊಳಗಿನ ಹಾರೀತಿ ಎಂಬ ರಾಜಕನ್ಯೆಯೊಡನೆ ಮದುವೆಯಾಗಿ ಪ್ರಸಿದ್ಧಿಗೆ ಬಂದಂತೆ ತೋರುತ್ತದೆ. ಚಾಳುಕ್ಯರು ಮೊದಲು ಭೀಮೆಯ ಹತ್ತರದ ನಾಗಾಯಿಯಲ್ಲಿ ಇದ್ದರೆಂದು ಹೇಳುತ್ತಾರೆ. ಅಲ್ಲಿಂದ ಅವರು ಐಹೊಳೆಗೆ ಬಂದು ಪಟ್ಟದಕಲ್ಲಿನ ಮೇಲಿಂದ ವಾತಾಪಿ ಕೋಟೆಗೆ ಬಂದಂತೆ ತೋರುತ್ತದೆ. ಮೊದಲನೇ ಪುಲಕೇಶಿಯು ಅಶ್ವಮೇಧ ಯಜ್ಞವನ್ನು ಐಹೊಳೆಯಲ್ಲಾಗಲಿ ಅಥವಾ ಪಟ್ಟದಕಲ್ಲಿನಲ್ಲಾಗಲಿ ಮಲಪ್ರಭೆಯ ದಂಡೆಯಮೇಲೆ ಮಾಡಿದನೆಂದು ಹೇಳುತ್ತಾರೆ. ಆಗ ಐಹೊಳೆಗೆ 'ಆರ್ಯಪುರ'ವೆಂದೂ ಪಟ್ಟದಕಲ್ಲಿಗೆ 'ಪಟ್ಟದ ಕಿಸು ಹೊಳಲ್'' ಎಂದು ಕರೆಯುತ್ತಿದ್ದರು. ಇಮ್ಮಡಿ ಪುಲಕೇಶಿ ಕಾಲದ ವಾತಾಪಿಪುರವೆಂದರೆ ಐಹೊಳೆ ಪಟ್ಟದಕಲ್ಲು ಸ ಕೇಶ್ವರ ಹೀಗೆ ಮಲಪ್ರಭೆಯ ಪಶ್ಚಿಮದ ದಂಡೆಗುಂಟ ಬಾದಾಮಿಯ ಗುಡ್ಡದ ಪೂರ್ವದಿಕ್ಕಿಗೆ ಊರು ಹಬ್ಬಿತ್ತೆ ಹುಯೆನ್–ಚಿಯಾಂಗನ ವರ್ಣನೆಯ ಮೇಲಿಂದ ತೋರುತ್ತ ವಾತಾಪಿಪುರದ ಪೂರ್ವಕ್ಕೆ ಒಂದು ದೊಡ್ಡ ನದಿಯು ಹರಿಯುತ್ತಿ ದೆಂದು ಅವನು ಬರೆದಿರುತ್ತಾನೆ. ಈಗಿನ ಬಾದಾಮಿಯಿಂ ನದಿಯು ಸ್ವಲ್ಪ ದೂರವಿರುತ್ತದೆ. ವಾತಾಪಿಯು ಪಲ್ಲವ ಕಾಲದಲ್ಲಿ ಅಥವಾ ಅವರಿಗಿಂತ ಮುಂಚಿನಿಂದಲೂ ಕೋಟೆ ಪ್ರಸಿದ್ಧವಿದ್ದಿತು. ಚಾಳುಕ್ಯರ ಕಾಲದಲ್ಲಿ ಈ ಕೋಟೆಯ ಇದರ ತೆಳಗೆ ಇದ್ದ ಈಗಿನ ಬಾದಾಮಿ ಪಟ್ಟಣವೂ ಚಾಳುಕ್ಯ ಆಗಿನ ತಟಬಂದಿಯು ಮತ್ತು ರಾಜಕಾರಸ್ಥಾನದ ಮುಖ್ಯ ಸ್ಥ ಗಳಾಗಿದ್ದವು. ಐಹೊಳೆ ಪಟ್ಟದಕಲ್ಲುಗಳು ಅರಸು ಯರು ಇರುವ ಪ್ರೀತಿಯ ಸ್ಥಳಗಳಾಗಿದ್ದು ಧಾರ್ಮಿಕ ಸ್ಥ ಯಿಂದಲೂ ಪ್ರಸಿದ್ಧವಾಗಿದ್ದವು. ಊರಿನ ಹತ್ತರ ನಿಂ ಕೋಟೆಯ ಕಡೆಗೆ ನೋಡಿದ ಕೂಡಲೆ ಚಾಳುಕ್ಯ ಮುಂ ಹಿಂದೂ ಅರಸರ ತರುವಾಯ ಕೆಲವು ದಿನಗಳಾವರೂ ಮುಸಲ್ಮಾನರು ಆಳಿದರೆಂದು ಕಂಡುಬರುತ್ತದೆ. ಹೊಂಡದ ಹತ್ತರವೇ ಕೆಲವು ಮಸೀದಿಗಳೂ ಗೋರಿ ಕಾಣುತ್ತವೆ. ಉತ್ತರದ ಹಾಗೂ ದಕ್ಷಿಣದ ಎರಡೂ ಕೋ ಗಳ ಬುರುಜುಗಳ ಕಡೆಗೆ ನೋಡಿದ ಕೂಡಲೆ, ಅವು ಚಾಳು ಕ್ಯರ ಕಾಲದ ಬುರುಜುಗಳಾಗಿರದೆ ಮುಸಲ್ಮಾನರು ದಕ್ಷಿಣಕ್ಕೆ ಕಾಲಿಟ್ಟ ನಂತರದ ಬುರುಜುಗಳೆಂದು ಸಹಜವೇ ಕಂಡು ವಂತಿದೆ. ಚಾಳುಕ್ಯರ ಬುರುಜುಗಳು ಚೌಕು ಇರುತ್ತಿದ್ದವೆ ದುಂಡನ್ನ ಬುರುಜುಗಳೂ ಅಗಸೆಬಾಗಿಲಗಳ ಮೇಲಿನ ಕಮಾ ನುಗಳೂ ಮುಸಲ್ಮಾನರ ಕೂಡ ಹಿಂದುಸ್ಥಾನಕ್ಕೆ ಬಂದಿರುತ್ತವೆ ಚಾಳುಕ್ಯರ ಚೌಕು ಬುರುಜುಗಳು ಮತ್ತು ಕಮಾನು ಇಲ್ಲದ ದೊಡ್ಡ ದೊಡ್ಡ ಕಲ್ಲಿನ ತೊಲೆಗಳನ್ನು ಹೇರಿದ ಅಗಸೆಬಾಗಿಲು ಗಳು ಬಾದಾಮಿ ಊರಿನಲ್ಲಿಯೂ ಕೋಟೆಯನ್ನು ಹತ್ತುವಾ ಗಲೂ ಹಾದಿಯಲ್ಲಿ ಅನೇಕ ಸ್ಥಳಗಳಲ್ಲಿ ಕಂಡುಬರುತ್ತವೆ.

ಬಾದಾಮಿಯ ಗುಡ್ಡವು ಸೊಟ್ಟ ಡೊಂಕ ಅರ್ಧ ಚಂದ್ರಾ ಕೃತಿಯಾಗಿದ್ದು ದಕ್ಷಿಣೋತ್ತರ ಹಬ್ಬಿರುತ್ತದೆ. ದಕ್ಷಿಣ ಮತ್ತು ಉತ್ತರ ಈ ಎರಡೂ ತುದಿಗಳ ಶಿಖರಗಳ ಮೇಲೆ ಎರಡು ಕೋಟೆಗಳು ಇರುತ್ತವೆ. ದಕ್ಷಿಣದ ಕೋಟೆಗೆ 'ರಣಮಂ

ಕೋಟೆ'ಯೆಂದೂ ಉತ್ತರದ ಕೋಟೆಗೆ 'ಬಾವನಬಂಡೆ ಕೋಟೆ' ಯೆಂದೂ ಅನ್ನುತ್ತಾರೆ. ದಕ್ಷಿಣೋತ್ತರ ಹಬ್ಬಿದ ಈ ಗುಡ್ಡದ ಪೊಳ್ಳಿನಲ್ಲಿ ಪಶ್ಚಿಮದ ಕಡೆಗೆ ಒಂದು ದೊಡ್ಡ ಒಡ್ಡು ಹಾಕಿರುವದರಿಂದ ಅಲ್ಲಿ ಒಂದು ದೊಡ್ಡ ಹೊಂಡವು ಆಗಿರುತ್ತದೆ. ಅದೇ ಈಗಿನ ಪ್ರಸಿದ್ಧ ಬಾದಾಮಿಯ ಹೊಂಡವು. ಈ ಒಡ್ಡು ಪಲ್ಲವರ ಕಾಲಕ್ಕಿಂತಲೂ ಮುಂಚಿನದು ಸಹ ಇರಬಹುದು. ಈ ಹೊಂಡವೆಂದರೆ ಒಂದು ಸುಂದರ ಮತ್ತು ರಮ್ಯ ಸರೋವರವೆ ಸರಿ. ಇದರ ಸುತ್ತಲು ಕಲ್ಲಿನ ಪಾವಟಿಗೆಗಳು ಇರುತ್ತವೆ. ಈ ಪಾವುಟಿಗೆಗಳನ್ನು ಪಲ್ಲವರು ಕಟ್ಟಿಸಿರಬಹುದೆಂದು ಸರೋವರದ ಉತ್ತರ ದಿಕ್ಕಿನಲ್ಲಿದ್ದ ಶಿಲಾಲೇಖದ ಮೇಲಿಂದ ಕಂಡುಬರುತ್ತದೆ. ತೆಳಗೆ ಊರು; ದಂಡೇಗುಂಟ ಭೂತನಾಥ ಮುಂತಾದ ಅನೇಕ ಗುಡಿಗಳು, ಗುಹೆಗಳು. ಮತ್ತು ಅಲ್ಲಲ್ಲಿ ಗುಡಿಗಳಿಂದಲೂ ಹಸರು ಕಂಟೆಗಳಿಂದಲೂ ಒಡಗೂಡಿ ಸುತ್ತಲು ಹಬ್ಬಿದ ಆ ಗುಡ್ಡದ ನೋಟವನ್ನು ಎಷ್ಟು ನೋಡಿದರೂ ತೃಪ್ತಿಯಾಗುವಂತೆ ಇಲ್ಲ.


ಬಾದಾಮಿಯ ಗುಡ್ಡದಲ್ಲಿ ಕೊರೆದ ಕಲ್ಮನೆ ?

ಒಂದು ಕಡೆ ನೋಡಿದರೆ ಮೇಣ ಬಸ್ತಿಗಳು ಮತ್ತು ರಣಮಂಡಲ ಕೋಟೆಯು; ಮತ್ತೊಂದು ಕಡೆ ನೋಡಿದರೆ ಹಾಳಾದ ಬಾವನಬಂಡೆ ಕೋಟೆಯು ಮತ್ತು ಸುಂದರವಾದ ಮಾಳೇಗಿತ್ತಿ ಶಿವಾಲಯವು. ಈ ಹೊಂಡದ ಕೆಳಗೆ ಊರು ಇದ್ದು ಊರ ಸುತ್ತಲು ಎರಡು ಗೋಡೆಗಳು ಹಾಗು ಎರಡು ಖಂದಕಗಳ ಕೋಟೆಯು ಗುಡ್ಡದ ಉತ್ತರದ ತುದಿಯಿಂದ ದಕ್ಷಿಣದ ತುದಿಯ ವರೆಗೂ ಇತ್ತೆಂದು ತೋರುತ್ತದೆ. ಈಗೂ ಅನೇಕ ಕಡೆಗೆ ಈ ಗೋಡೆಗಳೂ ಖಂದಕಗಳೂ ಕಾಣಿಸುತ್ತವೆ.

ಬಾದಾಮಿಯ ಪ್ರಸಿದ್ಧ ಮೇಣಬಸ್ತಿಗಳು ದಕ್ಷಿಣ ದಿಕ್ಕಿನ ಗುಡ್ಡದ ಅರ್ಧ ಭಾಗದಲ್ಲಿ ಕೊರೆಯಲ್ಪಟ್ಟಿವೆ. ಇಲ್ಲಿ ಮುಖ್ಯ ನಾಲ್ಕು ಮೇಣಬಸ್ತಿಗಳು ಇರುತ್ತವೆ. ಅವುಗಳಲ್ಲಿ ನಾಲ್ಕನೇದು ಜಿನಾಲಯವಾಗಿದ್ದು ಉಳಿದ ಮೂರೂ ಹಿಂದೂ ಗುಡಿಗಳಾಗಿರುತ್ತವೆ. ಇವುಗಳಿಗೆ ಮೇಣಬಸ್ತಿಗಳೆಂದು ಯಾಕೆ ಅನ್ನುತ್ತಾರೆಂಬದು ನಿಶ್ಚಿತವಾಗಿ ತಿಳಿಯುವದಿಲ್ಲ. ಇಲ್ಲಿಯ ಶಿಲ್ಪಿಗಳು ಕಲ್ಲುಗಳನ್ನೂ ಮೇಣವೆಂದು ಭಾವಿಸಿ ಅಷ್ಟೊಂದು ನಯವಾಗಿ ಕೆಲಸ ಮಾಡಿದ್ದಾರೆಂದೇ ರಸಿಕರು ಹೀಗೆ ಹೆಸರಿಟ್ಟಿರಬಹುದೆಂದು ತೋರುತ್ತದೆ. ಜಿನಾಲಯವು ಯಾರ ಕಾಲದಲ್ಲಿ ಕೊರೆಯಲ್ಪಟ್ಟಿತೆಂದು ಹೇಳಲಿಕ್ಕೆ ಬರುವಂತೆ ಇಲ್ಲ. ಉಳಿದ ಹಿಂದೂ ಮೇಣಬಸ್ತಿಗಳು ಚಾಲುಕ್ಯರ ಕಾಲದಲ್ಲಿಯೇ ಕೊರಿಸಲ್ಪಟ್ಟಿವೆ. ಈ ಮೇಣಬಸ್ತಿಗಳು ಹಿಂದೂ ಗುಡಿಗಳೇ ಹೊರ್ತು ಎಲೋರಾ ಅಜಂತಾದ ಮೇಣಬಸ್ತಿಗಳಂತೆ ವಿದ್ಯಾರ್ಥಿ ಮತ್ತು ಬೌದ್ಧ ಭಿಕ್ಷು-ಭಿಕ್ಷುಕಿಣಿಯರ ಸಲುವಾಗಿ ಕೊರಸಿದ ಮೇಣಬಸ್ತಿಗಳಲ್ಲ. ಇಲ್ಲಿ ಏಲೋರಾ ಅಜಂತಾದಲ್ಲಿ ಭಿಕ್ಷುಭಿಕ್ಷುಕಿಣಿಯರಿಗೆ ಇರಲಿಕ್ಕೆ ಬರುವಂತೆ ಕೋಣೆಗಳ ಮೊದಲಾದ ವ್ಯವಸ್ಥೆಯನ್ನೇನೂ ಮಾಡಿರುವದಿಲ್ಲ. ಏಲ್ಲೋರಾದಲ್ಲಿ ಸಹ ದಶಾವತಾರ ಮುಂತಾದ ಹಿಂದೂ ಮೇಣಬಸ್ತಿಗಳಲ್ಲಿ ಈ ತರದ ವ್ಯವಸ್ಥೆ ಕಂಡುಬರುವದಿಲ್ಲ. ಆ ಕಾಲದ ಹಿಂದೂಗುಡಿಗಳೆಂದರೆ ಬೌದ್ಧರ ಮೇಣಬಸ್ತಿಗಳ ಅನುಕರಣಗಳಾಗಿದ್ದವು. ಬಾದಾಮಿಯ ಮೇಣಬಸ್ತಿಗಳು ವಿದ್ಯಾರ್ಥಿಗಳ ಸಲುವಾಗಿ ಕಟ್ಟಿಸಿದಂಥವು ಅಲ್ಲವೇ ಅಲ್ಲ. ಸಾಮ್ರಾಜ್ಯದೊಳಗಿನ ಮುಖ್ಯ ಕಾರಭಾರದ ಮತ್ತು ಗದ್ದಲದ ಜಾಗೆಗೆ ಬಹು ಸಮಿಪದಲ್ಲಿಯೇ ಇವು ಇರುತ್ತವೆ. ಗುಡ್ಡದ ತುದಿಗೆ ಅಂದರೆ ಸಾಮ್ರಾಜ್ಯನೊಳಗಿನ ಸೈನ್ಯದ ಮುಖ್ಯ ಕೇಂದ್ರವಾದ ರಣಮಂಡಲ ಕೋಟೆಗೆ ಹೋಗುವ ಹಾದಿಯಲ್ಲಿಯೇ ಬೇರೆ ಬೇರೆ ಎತ್ತರಗಳ ಮೇಲೆ ಒಳ್ಳೆ ಆಯಕಟ್ಟಿನ ಜಾಗೆಗಳಲ್ಲಿ ಇವು ಕೊರಿಯಲ್ಪಟ್ಟದ್ದರಿಂದ

ಶಾಂತತೆಯ ಕಾಲದಲ್ಲಿ ಇವು ಹಿಂದೂ ಗುಡಿಗಳೆಂತಲೂ ಯುದ್ಧದ ಕಾಲದಲ್ಲಿ ಸೈನಿಕರಿಗೂ ಇನ್ನುಳಿದ ಜನರಿಗೂ ಆಶ್ರಯದ ಸ್ಥಳಗಳೆಂತಲೂ ಉಪಯೋಗಿಸಲ್ಪಡುತಿದ್ದವೆಂದು ನನ್ನ ತರ್ಕವಿದೆ. ಎಲ್ಲೋರಾ ಮತ್ತು ಅಜಂತಾದ ಭವ್ಯವಾದ ಮೇಣಬಸ್ತಿಗಳನ್ನು ನೋಡಿದವರ ಕಣ್ಣುಗಳಲ್ಲಿ ಇವು ಸಾಕಷ್ಟು ತುಂಬುವದಿಲ್ಲ. ಆದರೆ ಇಲ್ಲಿಯ ನಾಲ್ಕನೇ ಬಸ್ತಿಯಾದ ಜಿನಾಲಯವನ್ನು ಬಿಟ್ಟರೆ ಉಳಿದ ಎಲ್ಲ ಮೇಣಬಸ್ತಿಗಳೊಳಗೆ ಕೊರೆದ ಚಿತ್ರಗಳು ನಮ್ಮ ಪುರಾಣಗಳ ಕಥೆಯೊಳಗಿಂದಲೇ ತಕ್ಕೊಂಡದ್ದರಿಂದ ನಾವು ನೋಡುವದು ನಮಗೆ ತಿಳಿಯುತ್ತದೆ. ಅಜಂತೆಯೊಳಗಿನ ಚಿತ್ರಗಳು ಮತ್ತು ಎಲ್ಲೋರೆಯೊಳಗಿನ ಹಿಂದೂ ಬಸ್ತಿಗಳನ್ನು ಬಿಟ್ಟು ಉಳಿದ ಎಲ್ಲ ಬಸ್ತಿಗಳೊಳಗೆ ಕೊರೆದ ಮೂರ್ತಿಗಳು ಬೌದ್ಧರ ಜಾತಕಕಥೆಯೊಳಗಿನವು ಆಗಿದ್ದರಿಂದ, ನಮ್ಮಂಥವರಿಗೆ ಅವೇನೆಂಬದು ಅರ್ಥವಾಗುವದಿಲ್ಲ. ಇ. ಸ. ೧೮೭೪ರಲ್ಲಿ ಡಾಕ್ಟರ ಬರ್ಗೆಸ್ಸನು ಈ ಮೇಣಬಸ್ತಿಗಳ ವಿಷಯವಾಗಿ ಹೀಗೆ ಬರೆದಿರುತ್ತಾನೆ—

'The full deliniation of these Badami caves might be execuled without much trouble by a few School of Art Students, under proper direction and if well done, would follow a valuable illustration of Vaishnava mythology and Indian Art only to be equalled by what Ajanta affords for Buddhism.

ಯಾಕಂದರೆ ಈ ಮೇಣಬಸ್ತಿಗಳನ್ನು ಕೊರಸಿದ ಚಾಲುಕ್ಯ ಸಮ್ರಾಟರ ಒಲವು ಮೊದಲು ವೈಷ್ಣವಮತದ ಕಡೆಗೆ ಇದ್ದು ಕಡೆಕಡೆಗೆ ಶೈವಮತದ ಕಡೆಗೆ ಹೊರಳಿತು. ಆದುದರಿಂದಲೇ ಮಂಗಳೀಶನ ಕಾಲದ ಪಟ್ಟದಕಲ್ಲೊಳಗಿನ ಗುಡಿಗಳು ಶಿವಾಲಯಗಳಾಗಿರುತ್ತವೆ.

ಈ ಮೇಣಬಸ್ತಿಗಳೊಳಗೆ ಎಲ್ಲಕ್ಕೂ ದೊಡ್ಡದೂ ಸುಂದರವೂ ಆದ ಮೂರನೆ ಮೇಣಬಸ್ತಿಯಲ್ಲಿಯ ಕಂಭದಮೇಲೆಯೂ ಅದರ ಹೊರಗಿನ ಬಂಡೆಯ ಮೇಲೆಯೂ ಕೊರೆದ ಲೇಖಗಳ ಮೇಲಿಂದ ಆ ಬಸ್ತಿಯು (೫೦೦) ಶಾಲಿವಾಹನ ಶಕ ಅಂದರೆ (ಕ್ರಿ. ಶ. ೫೭೮) ರಲ್ಲಿ ಮಂಗಳೀಶನಿಂದ ಕೊರಿಸಲ್ಪಟ್ಟರುತ್ತದೆಂದು ಕಂಡುಬರುತ್ತದೆ. ಇದರಿಂದ ಬಾದಾಮಿಯ ಚಾಳುಕ್ಯರು ಕಾಲಗಣನೆಯಲ್ಲಿ ಶಾಲಿವಾಹನ ಶಕದ ಉಪಯೋಗವನ್ನು ಮಾಡುತ್ತಿದ್ದರೆಂದು ತಿಳಿಯುತ್ತದೆ. ಉಳಿದ ಮೇಣಬಸ್ತಿಗಳ ಕಾಲವು ಅಲ್ಲಿ ಲೇಖವಿಲ್ಲದ್ದರಿಂದ ತಿಳಿಯುಂತಿಲ್ಲ. ಮೊದಲನೇ ಮೇಣಬಸ್ತಿಯು, ವಾತಾಪಿಯು ಚಾಲುಕ್ಯರ ವಶಕ್ಕೆ ಬಂದ ಕೂಡಲೆ ಅಂದರೆ ಚಾಲುಕ್ಯರು ದಕ್ಷಿಣಕ್ಕೆ ಬಂದು ಬಹಳ ದಿನಗಳು ಆಗುವದರ ಒಳಗಾಗಿಯೇ ಕೊರಸಲ್ಪಟ್ಟಿತ್ತೆಂದು ನನಗೆ ತೋರುತ್ತದೆ. ಯಾಕಂದರೆ ಅಲ್ಲಿಯ ಹೆಣ್ಣು ಗೊಂಬೆಗಳ ಉಡುಪು ಉತ್ತರದ ಹೆಂಗಳೆಯರ ಉಡುಪಿನಂತೆ ಇರುತ್ತದೆ. ಅಲ್ಲಿಯ ಮಹಿಷಾಸುರಮರ್ದಿನಿಯ ಉಡುಪು, ಅರ್ಧನಾರೀಶ್ವರನ ಹತ್ತರವೇ ನಿಂತ ಪಾರ್ವತಿಯ ಉಡುಪು ಮತ್ತು ಹರಿಹರನ ಎಡಬಲದಲ್ಲಿ ನಿಂತ ಲಕ್ಷ್ಮೀಪಾರ್ವತಿಯರ ಉಡುಪುಗಳು, ಈಗಿನ ಲಮಾಣಿಗಿತ್ತಿಯರ ಪರಕಾರ ಅಥವಾ ಲುಹುಂಗೆಯಂತೆ ಕಾಣುತ್ತವೆ. ಚಾಳುಕ್ಯರ ಮೂಳಪುರುಷರು ಅಯೋಧ್ಯೆಯಿಂದ ಬಂದನೆಂಬ ಮಾತಿಗೆ ಈ ಉಡುಪುಗಳು ಬೆಂಬಲ ಕೊಡುತ್ತವೆ. ಹೊಸದಾಗಿ ಬಂದಾಗ ಅರಸು ಅರಸಿಯರು ಉತ್ತರದ ಉಡುಪನ್ನೇ ತೊಡುತ್ತಿದ್ದರೋ ಏನೋ ಅಂಬುವ ಸಂಶಯವು ಈ ಮೊದಲನೇ ಮೇಣಬಸ್ತಿಯೊಳಗಿನ ದೇವತಿಗಳು ಮತ್ತು ಹೆಣ್ಣು ಗೊಂಬೆಗಳು ತೊಟ್ಟ ಲುಹುಂಗೆಗಳನ್ನು ನೋಡಿ ಬರುತ್ತದೆ. ಕೆಲವು ದಿನಗಳು ಹೋದನಂತರ ಅರಸಿಯರ ಉಡಿಗಿತೊಡಗಿಯಲ್ಲಿ ಬದಲಾವಣಿಯು ಆಗತೊಡಗಿತೆಂದು ತೋರುತ್ತದೆ. ಯಾಕಂದರೆ ಮೊದಲನೆ ಮೇಣಬಸ್ತಿಯನ್ನು ಕೊರೆಸಿ ಕೆಲವು ದಿನಗಳನಂತರ ಕೊರಸಿದ ಎರಡನೇ ನಂಬರಿನ ಮೇಣಬಸ್ತಿಯೊಳಗಿನ "ಕಾಮರತಿ" ಚಿತ್ರದೊಳಗಿನ ನಾಲ್ಕು ಹೆಣ್ಣು ಗೊಂಬೆಗಳಲ್ಲಿ ಒಂದು ಗೊಂಬಿಯು ಉತ್ತರದ ಲುಹುಂಗೆಯನ್ನು ತೊಟ್ಟುಕೊಂಡಿದೆ; ಆದರೆ ಉಳಿದ ಮೂರು ಗೊಂಬೆಗಳು ಮುಂಬಯಿಯ ಧಷ್ಟಪುಷ್ಟಾದ ದ್ರಾವಿಡ ಕುಲದ ಕೋಳೀ ಹೆಂಗಸರಂತೆ ಬಿಗಿಬಿಗಿಯಾದ ಶೀರೆಗಳನ್ನು ಸುತ್ತಿಕೊಂಡಿವೆ. ಬರಬರುತ್ತ ಲುಹುಂಗೆಗಳು ಲೋಪವಾದಂತೆ ಕಾಣುತ್ತದೆ. ಮಂಗಳೀಶನು ೫೦೦ನೆ ಶಕದಲ್ಲಿ ಕೊರಸಿದ ಮೂರನೆ ಮೇಣಬಸ್ತಿಯೊಳಗಿನ ಅರಸಿಯರ ಗೊಂಬೆಗಳೂ ದೇವತೆಗಳೂ ಮೊಳಕಾಲವರೆಗೆ ಬರೇ ಬಿಗಿಬಿಗಿ ಶೀರೆಗಳನ್ನು ಸುತ್ತುಕೊಂಡಿವೆ. ಅರಸರ ಉಡುಪು ಅಂದರೆ ಈಗಿನ ಚಿಕ್ಕ ಚಣ್ಣದಂತೆ ಅಥವಾ ಶಾರ್ಟ್ಸ್ (Shorts)ಗಳಂತೆ ಇದ್ದು ತಲೆಯ ಮೇಲೆ ಒಕ್ಕಲಿಗರ ಲಗ್ನದಲ್ಲಿಯ ಬಾಸಿಂಗಗಳಂತಿರುವ ಕಿರೀಟಗಳು ಇರುತ್ತಿದ್ದವೆಂದು ತೋರುತ್ತದೆ. ಅರಸಿಯರ ಕೊರಳಿನಲ್ಲಿ ಈಗಿನಂತೆಯೇ ಅನೇಕತರದ ಸರಗಳು—ಕೈಯಲ್ಲಿ ಗೊಂಬ

ಪಾಟಲಿಗಳು, ಟೊಂಕಕ್ಕೆ ಸುತ್ತಿದ ಸೆರಗಿನ ಮೇಲೆ ವಡ್ಯಾಣ ಮತ್ತು ಅನೇಕ ಸರಗಳು ಇರುತ್ತಿದ್ದವು. ಕಾಲಿನಲ್ಲಿ ಈಗಿನಂತೆ ಸರಪಣಿ ಸಹ ಇರುತ್ತಿದ್ದವು. ಹೆಂಗಸರು ತೋಳಿಲ್ಲದ ಕುಪ್ಪಸವನ್ನು ತೊಡುತ್ತಿದ್ದು ಕೆಲವು ಗೊಂಬೆಗಳು ಪೋಲಕಾದಂಥಾದ್ದೇನೋ ತೊಟ್ಟಿವೆ. ಸೈನಿಕರ ಪೋಷಾಕೆಂದರೆ ಈಗಿನ ಶಾರ್ಟ್ಸ್ (Shorts); ಕೈಯಲ್ಲಿ ಭಾಲೆ ಬರ್ಚಿ ಮತ್ತು ಧನುಷ್ಯ ಮುಂತಾದವುಗಳು ಇರುತ್ತಿದ್ದವು ಎಂದು ಈ ಮೇಣಬಸ್ತಿಗಳ ಮೇಲಿಂದ ಕಂಡುಬರುತ್ತದೆ. ಈ ಮೇಣಬಸ್ತಿಗಳಲ್ಲಿ ವಿಶೇಷತಃ ಮೊದಲನೇ ಬಸ್ತಿಯಲ್ಲಿ ವಾತ್ಸಾಯನ ಕಾಮಸೂತ್ರದಲ್ಲಿ ಹೇಳಿದ ಅನೇಕ ಬಂಧಗಳು ಚಿತ್ರರೂಪದಲ್ಲಿ ಕೊರೆಯಲ್ಪಟ್ಟಿವೆ. ಮೊನ್ನೆ ಮೊನ್ನಿನವರೆಗೂ ಗುಡಿಗಳಲ್ಲಿಯೂ ರಥಗಳಮೇಲೂ ಕಿಲ್ಲೆಗಳ ಪ್ರಮುಖ ಬುರುಜುಗಳಮೇಲೂ ಇಂಥ ಚಿತ್ರಗಳು ಯಾಕೆ ಕೊರೆಯಲ್ಪಡುತ್ತಿದ್ದವೋ ತಿಳಿಯುವದಿಲ್ಲ. ಏನೇ ಕಾರಣವಿರಲಿ ಈಗಿನವರಿಗೆ ಅವು ಸಮಂಜಸವಾಗಿ ತೋರುವದಿಲ್ಲ.

ಮರಾಟರ ಕೈಯಿಂದ ಬ್ರಿಟಿಶರ ವಶಕ್ಕೆ ಹೋದನಂತರ ಸಹ ಬದಾಮಿಯ ಕಿಲ್ಲೆಯು ಹೆಸರಾದದ್ದು ಇತ್ತೆಂದು ಈ ಮೇಣಬಸ್ತಿಗಳ ಎದುರಿನಿಂದಲೇ ಹಾಯ್ದು ಹೋಗಬೇಕಾಗಿರುವ ಮೇಲಿನ ರಣಮಂಡಲ ಕೋಟೆಯ ಪಶ್ಚಿಮದ ಬುರುಜಿನ ಮೇಲಿದ್ದ ಒಂದು ತೋಫೇ ಸಾಕ್ಷಿಯಾಗಿರುತ್ತದೆ. ಕೌಜಿನ್ಸನು ಹೀಗೆ ಬರೆದಿರುತ್ತಾನೆ: 'A Souvenir of its later warlike days is an old iron cannon which still lies upon the western bastion of the southern fort. It is an old English piece dated 8-2-25. ಬಾದಾಮಿಯ ಗುಡ್ಡದ ಉತ್ತರದ ಕೋಟೆಗೆ ಬಾವನ ಬಂಡೆ (ಅಂದರೆ ೫೨ ಬಂಡೆಗಳ) ಕೋಟೆ ಅನ್ನುತ್ತಾರೆ. ಇದು ಹಿಂದಿನಿಂದ ಕೊಟ್ಟ ಹೆಸರೆಂದು ಕಾಣುತ್ತದೆ. ಇದೇ ವಾತಾಪಿಯ ಮುಖ್ಯ ಕೋಟೆಯು. ಮೇಲೆ ಹೋಗಬೇಕಾದರೆ ಎಡಬಲ ಚಾಳುಕ್ಯರ ಚೌಕು ಬುರುಜುಗಳಿದ್ದ ಅಗಸೆಬಾಗಿಲಗಳೊಳಗಿಂದಲೂ ಬೇರೆ ಅನೇಕ ಒಳ್ಳೇ ಆಯಕಟ್ಟಿನ ಜಾಗೆಗಳೊಳಗಿಂದಲೂ ಹಾದು ಹೋಗಬೇಕಾಗುತ್ತದೆ. ಪ್ರಸಂಗ ಬಂದಾಗ್ಗೆ ಅಥವಾ ಮನಸ್ಸು ಬಂದಾಗ್ಗೆ ಈ ಕಿಲ್ಲೆಯಲ್ಲಿ ಅರಸರು ಇರುತ್ತಿದ್ದರೆಂದು ತೋರುತ್ತದೆ. ಮೇಲಿನ ಒಳ್ಳೆ ಸುರಕ್ಷಿತವಾದ ಜಾಗೆಯಲ್ಲಿ ಅಂದರೆ ಈಗ ಮುರುಕ ಹುಡೆಗಳು ಇದ್ದ ಮತ್ತು ಮುಳಗಳಿಕೆಯು ಬೆಳೆದ ಸ್ಥಳದಲ್ಲಿ ಒಂದು ಸಣ್ಣ ಅರಮನೆಯು ಇದ್ದಂತೆ ತೋರುತ್ತದೆ. ಅದರ ಹತ್ತರವೆ ಒಂದು ಕಲ್ಲಿನ ಗುಡಿಯು ಈಗೂ ಇರುತ್ತದೆ. ನೀರಿನ ಪೂರೈಕೆಯ ಸಲುವಾಗಿ ಗುಡ್ಡದ ಮೇಲಿನ ಕಲ್ಲಿನಲ್ಲಿ ಕಡಿದ ಸಣ್ಣ ಸಣ್ಣ ಗುಂಡಗಳು ಇರುತ್ತವೆ. ಈ ಕೋಟೆಯ ಪಶ್ಚಿಮದಿಕ್ಕಿಗೆ ಗುಡ್ಡದ ತುದಿಗೆ ಒಂದು ದೊಡ್ಡ ಬುರುಜು ಇರುತ್ತದೆ. ಈ ಬುರುಜು ವಿಜಯನಗರದ ಸದಾಶಿವ ದೇವರಾಯನ ಕಾಲದಲ್ಲಿ ಕ್ರಿ. ಶ. ೧೫೪೩ರಲ್ಲಿ ಪುನಃ ಕಟ್ಟಿಸಲ್ಪಟ್ಟಿತೆಂದು ಈ ಬುರುಜು ಇದ್ದ ಬಂಡೆಯ ತೆಳಗೇ ಮತ್ತೊಂದು ದೊಡ್ಡ ಬಂಡೆಯ ಮೇಲೆ ಇರುವ ಮಾಳೇಗಿತ್ತಿ ಶಿವಾಲಯದೊಳಗಿನ ಶಿಲಾಲೇಖದಿಂದ ಕಂಡುಬರುತ್ತದೆ. ಈ ಬುರುಜಿನ ಮೇಲೆ ಒಂದು ತೋಫು ಇರುತ್ತದೆ. ಆ ತೋಫಿನ ಮೇಲೆ (೧೫೫೦) ಎಂಬ ಇಂಗ್ರಜಿ ಅಂಕೆಗಳು ಕೊರೆಯಲ್ಪಟ್ಟಿವೆ. ಈ ತೋಫನ್ನು ವಿಜಯನಗರದವರು ಪೋರ್ತುಗೀಜರ ಕಡೆಯಿಂದ ಕೊಂಡಿರಬಹುದು. ಈ ಬುರುಜಿನ ಹತ್ತರವೇ ಮದ್ದು ಗುಂಡುಗಳನ್ನು ಇಡುವ ನೆಲಮನೆಯು ಇರುತ್ತದೆ. ಈ ಬುರುಜಿನ ಹತ್ತರದ ಒಂದು ಬಂಡೆಯ ಮೇಲೆ ಒಂದು ಸಣ್ಣ ಮುರುಕ ಮಂಟಪವು ಇರುತ್ತದೆ. ಅಲ್ಲಿ ಕೂತುಕೊಂಡರೆ ಎದುರಿನ ರಣಮಂಡಲ ಕೋಟೆಯು, ಮೇಣಬಸ್ತಿಗಳು, ಭೂತನಾಥ ಸರೋವರವು, ಬಾದಾಮಿಯ ಊರು ಹೀಗೆ ಅನೇಕ ರಮ್ಯವಾದ ನೋಟಗಳು ಕಣ್ಣಿಗೆ ಬೀಳುತ್ತವೆ. ಈ ಗುಡ್ಡದ ಮೇಲೆ ಇನ್ನೂ ಅನೇಕ ಮುರುಕ ಗುಡಿಗಳೂ ಮಂದಿರಗಳೂ ಇರುತ್ತವೆ. ಈ ಕೋಟೆಯ ಪೂರ್ವದಿಕ್ಕಿನಿಂದ ಆಂಜನೇಯನ ಗುಡಿಯ ಮೇಲಿಂದ ಭೂತನಾಥ ಸರೋವರದ (ಬಾದಾಮಿಯ ಹೊಂಡದ) ಕಡೆಗೆ ಇಳಿದು ಬರಲಿಕ್ಕೆ ಮತ್ತೊಂದು ಹಾದಿಯು ಇರುತ್ತದೆ. ಈ ಆಂಜನೇಯನ ಗುಡಿಯ ಹತ್ತರಿದ್ದ ಬಂಡೆಯ ಮೇಲೆ ಒಂದು ಮಹತ್ವದ ಶಿಲಾಲೇಖವು ಇರುತ್ತದೆ. ಈ ಸರೋವರದ ಸುತ್ತಲೂ ಭೂತನಾಥ ಮುಂತಾದ ಅನೇಕ ಗುಡಿಗಳು ಇರುತ್ತವೆ. ಈ ಸರೋವರದ ವಾಯುವ್ಯದಿಕ್ಕಿಗೆ ಲಕುಲೀಶನ ಒಂದು ಸಣ್ಣ ಗುಡಿಯು ಇರುತ್ತದೆ. ಪಟ್ಟದಕಲ್ಲಿನೊಳಗಿನ ವಿರೂಪಾಕ್ಷನ ಮತ್ತು ಮಲ್ಲಿಕಾರ್ಜುನನ ಗುಡಿಗಳಲ್ಲಿಯೂ ಲಕುಲೀಶನ ಮೂರ್ತಿಗಳು ಕಂಡುಬರುತ್ತವೆ. ಚಾಲುಕ್ಯರು ಶೈವಮತಾಭಿಮಾನಿಗಳಾಗಬೇಕಾದರೆ ಲಕುಲೀಶನ ಮತದ ಪರಿಣಾಮವು ಅವರ ಮೇಲೆ ಆಗಿರಬಹುದೆಂದು ಅವರ ಗುಡಿಗಳಲ್ಲಿ ಲಕುಲೀಶ ಮೂರ್ತಿಗಳು ಇರುವದರಮೇಲಿಂದ ಊಹಿಸ

ಬೇಕಾಗಿದೆ. ಇತಿಹಾಸಜ್ಞರು ಇತ್ತಕಡೆಗೆ ಗಮನ ಕೊಡ ಬೇಕು. ಈ ಸರೋವರದ ಈಶಾನ್ಯದಿಕ್ಕಿನಲ್ಲಿರುವ ಒಂದು ಗುಹೆಯಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದ ಬುದ್ಧನಂತೆ ಕಾಣಿಸುತ್ತಿರುವ ಒಂದು ಮೂರ್ತಿಯು ಕಂಡುಬರುತ್ತದೆ. ಈ ಗುಹೆಯಲ್ಲಿ ಅಂಬೆಗಾಲು ಹಚ್ಚಿ ಒಳಗೆ ಹೋಗಬೇಕಾಗುತ್ತದೆ. ಈ ಮೂರ್ತಿಯ ಕೈಯಲ್ಲಿ ಜಪಮಾಲೆಯು ಇರುತ್ತದೆ. ಸಿಂಹಾಸನದ ಹಿಂದೆ ಎಡಬಲ ಕಿರೀಟುಗಳನ್ನು ಹಾಕಿಕೊಂಡ ಸಾಮಂತರು ಚೌರಿಗಳನ್ನು ಬೀಸುತ್ತಲಿದ್ದಾರೆ. ಈ ಮೂರ್ತಿಗೆ 'ಕೊಷ್ಟತ್ರಯ'ವೆನ್ನುತ್ತಾರೆ. ಕುಷ್ಟರೋಗದಿಂದ ಪೀಡಿತನಾದ ಯಾವನೋ ರಾಯನು ಬಾದಾಮಿಗೆ ಬಂದು ನೆಟ್ಟಗಾದ್ದರಿಂದ ಅವನ ಪ್ರತಿಮೆಯು ಅಲ್ಲಿ ಕೊರೆಯಲ್ಪಟ್ಟಿದೆ ಎಂದು ಹೇಳುತ್ತಾರೆ. ಆದರೆ ಸಮ್ರಾಟರ ರಾಜಧಾನಿಯಲ್ಲಿ ಅವರು ಇರತಕ್ಕ ಮುಖ್ಯ ಕೋಟೆಯಲ್ಲಿ ಯಾವನೋ ರಾಯನು ಸಿಂಹಾಸನದ ಮೇಲೆ ಕೂತಿದ್ದ ಪ್ರತಿಮೆಯು ಇರುವದು ಶಕ್ಯವಿಲ್ಲ. ಜನರ ಸಂಪರ್ಕ ಬಿಟ್ಟು ದೂರವಿದ್ದ ಈ ಮೂರ್ತಿಯು ಕುಷ್ಟರೋಗದಿಂದ ಪೀಡಿತನಾದ ಅಥವಾ ವಿರಕ್ತನಾದ ಯಾವನೋ ಒಬ್ಬ ವಾತಾಪಿಯ ಸಮ್ರಾಟನ ಪ್ರತಿಮೆ (Portrait statue) ಎಂದು ನನಗೆ ತೋರುತ್ತದೆ. ಯಾವನೋ ದುಷ್ಟನು, ಈ ವರ್ಷ ಈ ಮೂರ್ತಿಯ ಮುಖವನ್ನು ಭಂಗಿಸಿರುತ್ತಾನೆ. ಅದು ಪ್ಲಾಸ್ಟರ ಹಚ್ಚಿ ಪುನಃ ಕೂಡಿಸಲಿಕ್ಕೆ ಬರುವಂತಿದೆ.

ಬಾದಾಮಿಯಿಂದ ಪಟ್ಟದ ಕಲ್ಲಿಗೆ ಹೋಗಬೇಕಾದರೆ ರಣಮಂಡಳ ಕೋಟೆಯ ಕೆಳಗಿಂದ ಬನಶಂಕರಿಗೆ ಹೋಗಿ ಅಲ್ಲಿಂದ ಶಿವಯೋಗಮಂದಿರದ ಮೇಲೆ ಹಾಯ್ದು ಹೋಗಬೇಕಾಗುತ್ತದೆ. ಬನಶಂಕರಿಯ ಗುಡಿಯು ಹಳೆಯದು ಮತ್ತೂ ದೊಡ್ಡದು ಇದ್ದು ಅದರ ಮುಂದಿನ ಭವ್ಯವಾದ ಹೊಂಡವು ನೋಡತಕ್ಕಂಥಾದ್ದು ಇರುತ್ತದೆ. ಜಾತ್ರೆಯಲ್ಲಿ ಹೊಂಡದ ಸುತ್ತಲು ದೀಪಗಳನ್ನು ಹಚ್ಚುತ್ತಿರುವದರಿಂದ ಆ ದೀಪಗಳ ಮತ್ತು ನೀರಿನಲ್ಲಿಯ ಅವುಗಳ ಪ್ರತಿಬಿಂಬದ ನೋಟವು ಬಹಳೇ ಮನೋಹರವಾಗಿರುತ್ತದೆ. ಶಿವಯೋಗಮಂದಿರದಲ್ಲಿ ಹರಿದ್ವಾರದ ಆರ್ಯರ ಗುರುಕುಲದಂತೆ ವೀರಶೈವ ಮತದ ಸ್ಥಾಪಕರ ಗುರುಕುಲವು ಇರುತ್ತದೆ. ಅಲ್ಲಿ ಹೋದವರಿಗೆ ಬಹಳೇ ಆತಿಥ್ಯವಾಗುತ್ತದೆ. ಅಲ್ಲಿಯ ಸುತ್ತುಮುತ್ತಲಿನ ಮತ್ತು ನದಿಯ ದಂಡೆಯ ಹತ್ತಿರದ ನೋಟವು ಬಹಳೇ ಅಂದವಾಗಿರುತ್ತದೆ. ಇಲ್ಲಿಂದ ಪಟ್ಟದಕಲ್ಲು ೫–೬ ಮೈಲು ಆಗುತ್ತದೆ. ಪಟ್ಟದ ಕಲ್ಲಿನ ಪೂರ್ವದ ಹೆಸರು 'ಪಟ್ಟದ ಕಿಸುಹೊಳಲ್' ಎಂದು ಇರುತ್ತ... ನಂದಿಕೇಶ್ವರ (ಪೂರ್ವದ ನಂದಿಗ್ರಾಮ) ದಿಂದಲೇನೆ ಹ... ಯಲ್ಲಿ ಹೊಲಗಳಲ್ಲಿಯೂ ಅನೇಕ ಗುಡಿಗಳು, ತೋರ್ಮ... ಗಳು ಹತ್ತುತ್ತವೆ. ಊರಿನ ಹತ್ತರದಿಂದ ನೋಡಿದರೆ ಎತ್ತ ನೋಡಿದತ್ತ ಹಳ್ಳಿಯಲ್ಲಿ ಗುಡಿಗಳ ಶಿಖರಗಳೇ ಕಾಣಿಸುತ್ತ... ಇಲ್ಲಿ ಸಂಗಮೇಶ್ವರ, ವಿರುಪಾಕ್ಷ, ಮಲ್ಲಿಕಾರ್ಜುನ, ಪಾಪನಾ... ಜೈನರಗುಡಿ, ಕಾಶೀವಿಶ್ವನಾಥ, ಗಳಗನಾಥ, ಕಾಡಸಿದ್ಧೇಶ್ವ... ಹೊಲದೊಳಗಿನ ಕ್ರಿಸ್ತರ ಗುಡಿ ಎಂಬ ನೋಡತಕ್ಕಂಥ ಅನೇ... ಗುಡಿಗಳು ಅವೆ. ಅವುಗಳಲ್ಲಿ ಸಂಗಮೇಶ್ವರ, ವಿರೂಪಾಕ್ಷ ಮತ್ತು ಮಲ್ಲಿಕಾರ್ಜುನ ಗುಡಿಗಳು ವಾರ್ಮಿಕರೀತಿಯಿ... ನೋಡತಕ್ಕಂಥವು ಇರುತ್ತವೆ. ಅವುಗಳ ವರ್ಣನೆ ಎಷ್ಟು ಮಾಡಿದರೂ ಸಾಲದು. ನೋಡಿ ನೋಡಿ ಬೇಸತ್ತರೂ ತೃಪ್ತಿಯಾಗುವದಿಲ್ಲ. ಬಾದಾಮಿಯ ಮೇಣಬಸ್ತಿಯೊಳಗಿನ ಎಲ್ಲ... ಸುಂದರವಾದ ಮೂರನೆ ಬಸ್ತಿಯೊಳಗಿನ ಮೂರ್ತಿಗಳು ಬಹ... ಸುಂದರವಿದ್ದರೂ, ಈ ಗುಡಿಗಳೊಳಗಿನ ಮೂರ್ತಿಗಳಿಗೆ ಸ... ಸರಿಯಾಗಲಾರವು. ಸಂಗಮೇಶ್ವರನ ಗುಡಿಯನ್ನು ವಿಜಯಾ... ತ್ಯನು (696-733 A. D.) ಕಟ್ಟಿಸಿದನು. ಇಲ್ಲಿಯ ವಿರುಪಾ... ಅಥವಾ ಲೋಕೇಶ್ವರ ಗುಡಿಯೆಂದರೆ ಶಿಲ್ಪಕಲೆಯ ದೃಷ್ಟಿಯಿಂ... ಇಡೀ ಕರ್ನಾಟಕದೊಳಗಿನ ನೋಡತಕ್ಕಂಥ ಒಂದು ಮಹತ್ವದ ಮತ್ತು ದೊಡ್ಡ ಗುಡಿಯೆಂದು ಹೇಳುತ್ತಾರೆ. ಈ ಗುಡಿಯ ಪೂರ್ವದ ಮಹಾದ್ವಾರದ ಹತ್ತರ ಒಂದು ಶಿಲಾಲೇಖವು ಇ... ಅದರ ಮೇಲಿಂದ ಇಮ್ಮಡೀ ವಿಕ್ರಮಾದಿತ್ಯನು ಕಾಂಚಿಯನ್ನು ಮೂರುಸಾರೆ ಗೆದ್ದ ಸಂಗತಿಯ ಸ್ಮರಣಾರ್ಥವಾಗಿ ಅವನ ಪಟ್ಟ... ಅರಸಿಯಾದ ಲೋಕಮಹಾದೇವಿಯು ಕಟ್ಟಿಸಿದಳೆಂದೂ ಮತ್ತು ಸೂತ್ರಧಾರೀ ಗುಂಡನು ಅದನ್ನು ಕಟ್ಟಿದನೆಂದೂ ತಿಳಿಯುತ್ತ... ಕಾಂಚಿಯೊಳಗಿನ ರಾಜಸಿಂಹೇಶ್ವರ ಗುಡಿಯೊಳಗಿನ ಶ... ಶಾಸನದ ಮೇಲಿಂದಲೂ ಇಮ್ಮಡೀ ಕೀರ್ತಿವರ್ಮನ ಪೊ... ರಿಯ ತಾಮ್ರಪಟದಮೇಲಿಂದಲೂ ಇಮ್ಮಡೀ ವಿಕ್ರಮನು ಕಾಂ... ಯೊಳಗಿನ ಮೂರ್ತಿಗಳನ್ನೂ ಶಿಲ್ಪಕಲೆಯನ್ನೂ ನೋ... ಬಹಳೇ ಸಂತುಷ್ಟನಾಗಿದ್ದನೆಂದು ಕಂಡು ಬರುತ್ತದೆ. ಕಾಂ... ಯಿಂದ ಶಿಲ್ಪಗಾರರನ್ನು ಕರಕೊಂಡು ಬಂದು ಅವನು ಪಟ್ಟ... ಕಲ್ಲಿನಲ್ಲಿ ಲೋಕೇಶ್ವರ ಅಂದರೆ ವಿರುಪಾಕ್ಷ ಮತ್ತು ತ್ರೈಲೋ... ಕೇಶ್ವರ ಅಂದರೆ ಈಗಿನ ಮಲ್ಲಿಕಾರ್ಜುನ ಗುಡಿಯನ್ನು ಕ... ದನು. ಪಾಪನಾಥನ ಗುಡಿಯಲ್ಲಿಯ ದ್ರುವಿಡ ಸೂತ್ರ... ಯಾದ ಚತ್ತಾರಿ–ರೇವಡಿ, ಓವಜ್ಜನ ಸ್ತುತಿಯ ಮ... ಸಹಜವಾಗಿ ಕಂಡುಬರುವಂತಿದೆ.

ಈ ಲೋಕೇಶ್ವರ ಅಂದರೆ ವಿರೂಪಾಕ್ಷನ ಗುಡಿಯ ವಿಷಯವಾಗಿ ಇನ್ನೊಂದು ಸಂಗತಿಯನ್ನು ಹೇಳಬೇಕಾಗಿದೆ ಕೌಜೆನ್ಸನ ಕೆಲವು ವಾಕ್ಯಗಳ ಅವತರಣವನ್ನೇ ಇಲ್ಲಿ ಕೊಡುತ್ತೇನೆ :—

'At Ellora a little to the north of the Dashavatara is excavated the great Monolythic temple of Kailasa fashioned after the style of the great Dravida temples of the south. Now this Kailasa is remarkably like the great temple of Lokeshvara, both in plan and details :— A comparison of the two temples shows how much alike they are, in external appearance—



ಪಟ್ಟದ ಕಲ್ಲಿನ ಲೋಕೇಶ್ವರ ದೇವಾಲಯು

the same arrangement of Nandi pavilion-hall-and shrine. The main towers are almost identical—we can come to no other conclusion, than that the one building has been the model for the other and of the two it is easy to see that Kailasa is the copy of Lokeshvara, with the advance in the lighter and more graceful-treatment of its details and greater profusion of rich ornament.'

ಈ ಗುಡಿಯ ಅನೇಕ ಚಿತ್ರಗಳ ಮೇಲೆ, ಆಗಿನ ಕನ್ನಡ ಲಿಪಿಯುಲ್ಲಿ ಆ ಚಿತ್ರಗಳ ಹೆಸರು ಕೊರೆದಿರುತ್ತವೆ. ಇನ್ನೊಂದು ಗುಡಿಯು ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳುವದುಚಿತವು. ಈ ಗುಡಿಯ ಹೆಸರು ತ್ರೈಲೋಕೇಶ್ವರ. ಅದಕ್ಕೆ ಈಗ ಮಲ್ಲಿಕಾರ್ಜುನನ ಗುಡಿಯೆಂದು ಕರೆಯುತ್ತಾರೆ. ಇಮ್ಮಡೀ ವಿಕ್ರಮಾದಿತ್ಯನ ಪಟ್ಟದರಸಿಯಾದ ಲೋಕಮಹಾದೇವಿಯ ತಂಗೆಯೂ ವಿಕ್ರಮನ ಪಿರಿಯರಸಿಯೂ ಆದ ತ್ರೈಲೋಕ್ಯ ಮಹಾದೇವಿಯು ಇದನ್ನು ಅಕ್ಕೆಯ ಹಟದಿಂದ ಕಟ್ಟಿಸಿದಳೆಂದು ತೋರುತ್ತದೆ. ಈ ಗುಡಿಯ ಕೆಲವು ಭಾಗಗಳು ಮುಗಿಯದೆ ಹಾಗೇ ಉಳಿದಿರುತ್ತವೆ. ಶ್ರೀವಿಕ್ರಮಾದಿತ್ಯನು ತೀರಿಕೊಂಡದ್ದರಿಂದ ಹೀಗಾಯಿತೆಂದು ಹೇಳುತ್ತಾರೆ. ಈ ಗುಡಿಯೊಳಗಿನ ಶಿಲ್ಪವು ವಿರೂಪಾಕ್ಷನ ಗುಡಿಯೊಳಗಿನ ಶಿಲ್ಪಕ್ಕೆ ಸರಿಯಾಗಿರುತ್ತದೆ. ಈ ಗುಡಿಯೊಳಗಿನ ರಂಗಮಂಟಪದಲ್ಲಿಯ ಕಂಭಗಳಲ್ಲಿ ಕೊರೆದ ಮೂರ್ತಿಗಳಲ್ಲಿ ಉತ್ತರ ದಿಕ್ಕಿನ ಒಂದು ಕಂಭದಲ್ಲಿ ಕೊರೆದ ಮೂರ್ತಿಗಳು ಇಮ್ಮಡೀ ಶ್ರೀ ವಿಕ್ರಮಾದಿತ್ಯನ ಮತ್ತು ಅವನ ಪಿರಿಯ ಕಿರಿಯರಸಿಯಾದ ತ್ರೈಲೋಕ್ಯಮಹಾದೇವಿಯ ಪುತ್ಥಳಿಗಳೆಂದು ಕೌಜೆನ್ಸನು ಭಾವಿಸುತ್ತಾನೆ. ಅವುಗಳ ಎಲ್ಲತರದ ಉಡುಪುಗಳು ಆ ಕಾಲದ ಅರಸು ಅರಸಿಯರ ಉಡುಪುಗಳಾಗಿವೆ. ಈ ದಂಪತಿಯ ಮೂರ್ತಿಗಳು ಸುಮಾರು ಮೂರು ಫೂಟು ಎತ್ತರವಿರುತ್ತವೆ. ಪಟ್ಟದಕಲ್ಲೊಳಗಿನ ಹೆಂಣು ಮೂರ್ತಿಗಳಿಗೆ ಲುಹಂಗಿಗಳ ಉಡುಪು ಇರುವದಿಲ್ಲ.

# ಅರ್ಧಾಂಗಿ!

"ಕೇಳಬೇಡಿರಿ ಬೇಡಿರಾವ ಕುಲದವಳೆ"ಂದು
ಹೇಳಿದೆನು ! ಮತ್ತೆ ಕೇಳುವಿರದನೆ ! ಏನೆಂದು
ಹೇಳುವೆನೊ ? ಇನ್ನು ನಾಚಿಕೆದೊರೆದು ಹೇಳುವೆನು
ಕೇಳಿರೈ ಹಾಳುಬಾಳಿನ ಕತೆಯನು ! ॥ ೧ ॥

ತಂದೆ ಮಡಿದನು ತಾಯಿ ಹರಯದವಳಿದ್ದಳೈ
ಒಂದೆ ಮಗು ನಾನವರಿಗಾಗಿದ್ದೆನೊಂದು ದಿನ
ಬಂದನೊಬ್ಬನು ಮನೆಗೆ ಮುಗುಳನಗೆಯನು ನಗುತೆ
ನಿಂದನಾತನು ! ನಕ್ಕಳೆನ್ನ ತಾಯಿ ! ॥ ೨ ॥

ನಮ್ಮ ಮನೆಗವನು ಬಂದುದು ಮೊದಲ ದಿನವದುವೆ
ಅಮ್ಮನೇನನೊ ಹೇಳಿ ಹೊರಗೆನ್ನನಟ್ಟಿದಳು !
ನಮ್ಮ ಮನೆ ಮುಳುಗಿತೆಂದೆನುತೆ ಮಿಡುಕಿದೆನು ! ಹೊರ
ಹೊಮ್ಮಿದುವು ಹೊನಲಾಗಿ ಕಂಬನಿಗಳು ! ॥ ೩ ॥

ನನಗಾಗ ವರುಷಗಳು ಹತ್ತು; ಬರುವುದು ಮನೆಗೆ
ದಿನದಿನವು ಬಗೆಬಗೆಯ ಮಂದಿ ! ನೂರೆಂಟು ಸವಿ-
ತಿನಸುಗಳು ಮನೆಯಲ್ಲಿ ! ಸೊಗಸಿರದು ! ತಂದೆಯನು
ನೆನೆನೆನೆದು ಮನದೊಳಳುತಿದ್ದೆ ನಾನು ! ॥ ೪ ॥

ವರುಷಗಳು ನಾಲ್ಕು ಕಳೆದುವು ಮುಂದೆ ತಾಯನಾ-
ವರಿಸಿದುವು ಬೇನೆಗಳು ! ತೊಲಗಿತವಳಸು ಚೆಲುವು !
ತೊರೆದರವಳನು ಮೊದಲಿನಾ ಜನರು ! ಮನೆಗೆ ಹೊಸ-
ಬರು ಬರುವರೆನ್ನದೆದೆ ನಡುನಡುಗಿತು ! ॥ ೫ ॥

ಒಂದಿರುಳು ತರುಣನೊಬ್ಬನು ಜರದ ಸೀರೆಯನು
ತಂದಿತ್ತು ಕುಳ್ಳಿರಲು ಕರೆದಳೆನ್ನನು ತಾಯಿ !
"ಚೆಂದವಾಗಿದನುಟ್ಟು ಬಾರೆ"ಂದಳಾ ತರುಣ-
ನೆಂದ"ನೆನ್ನಿದಿರೊಳೇ ಉಡುವುದೆ"ಂದು ! ॥ ೬ ॥

ಉರಿಯೊಳಿಟ್ಟಂತಾಯ್ತು ಕೇಳಿಯಾನುಡಿಗಳನು !
"ಬರುವೆನೀಗಳೆ" ಎಂದು ಸೀರೆಯನು ಕೊಂಡೊಡನೆ
ಹೊರಗೆ ಬಂದೆಳೆದು ಬಾಗಿಲನು ಕೊಂಡಿಗೆ ಚಿಲಕ-
ವಿರಿಸಿದೆನು ! ಹೊರಹೊರಟೆನಿರುಳಲ್ಲಿಯೆ ! ॥ ೭ ॥

ಬಿಸುಟೆನಾಸೀರೆಯನು ಹರಿದು ಹಾದಿಯ ಹುಡಿಗೆ !
ಕುಸಿದು ನಡೆದೆನು ನಾನು ನಾಚಿಕೆಯ ಭಾರದಲಿ !
ಬಿಸುಸುಯ್ದೆನುಮ್ಮಳಿಸಿ ಕಾತರಿಸುತೀ ತಾಯ
ಬಸಿರೊಳೇಕೆನಗಾಯ್ತೊ ಜನ್ಮವೆಂದು ! ॥ ೮ ॥

ಇರುಳ ಕಗ್ಗತ್ತಲೆಯೊಳೆಂತೊ ಬಂದೆನು ಮೂರು-
ಹರದಾರಿಗಳ ದಾರಿಯನು ನಡೆದು ! ಬೆಳಗಾಯ್ತು
ನೆರೆಯೊಳೂರಾವುದೂ ಇರಲಿಲ್ಲ ಹೊಳೆಯೊಂದು
ಹರಿಯುತಿದ್ದಿತು ಮುಂದೆ ಕೂಗಳತೆಗೆ ॥ ೯ ॥

ಹೊಳೆಗೆ ಬಂದೆನು ಮೊದಲು ಹಣೆಯೊಳಿಹ ಕುಂಕುಮವ-
ನಳಿಸಿದೆನು ! ಗಂಡನಿಲ್ಲದ ಹುಡಿಗಿಯಾದೆನ್ನೈ !
ತೊಳೆದು ಮೆಯ್ಯನು ನೆನೆದ ಬಟ್ಟೆಯೊಳೆ ಮಳಲಿನೊಳು
ಕುಳಿತುಕೊಂಡೆನು ಕಾಸುತೆಳಬಿಸಲನು ! ॥ ೧೦ ॥

ದೂರದಲ್ಲಾವನೋ ಬರುತಿರುವುದನು ನೋಡಿ
ಸಾರಿದೆನು ಗಿಡಗಂಟಿಗಳ ಮರೆಗೆ. ದಾರಿಗನು
ಬೇರೆಯವರಲ್ಲ ಯಾತ್ರೆಯ ಮುಗಿಸಿ ಬರುವ ನ-
ಮ್ಮೂರ ಮುದುಕರು ದಾಸರಾಯರವರು ॥ ೧೧ ॥

ಮಳಲಿನಲಿ ಮೂಡಿರುವ ನನ್ನ ಕಾಲಿನ ಹೆಜ್ಜೆ-
ಗಳನು ನೋಡುತಲವರು ನಿಂತಿರಲು ನಾನವರ
ಬಳಿಗೆ ಸಾರ್ದವರ ಕಾಲ್ಗಳನು ಕಂಬನಿಯಿಂದೆ
ತೊಳೆದು ಹೊರಳಿದೆನವರ ಚರಣದಲ್ಲಿ ! ॥ ೧೨ ॥

"ಏಳು ಮಗಳೇ ! ಏಳೆ ! ಆರು ನೀನೆಂಬುದನು
ಹೇಳವ್ವ ! ಹುಡಿಗಿ ನೀನೊಬ್ಬಳೇ ಏಕಿಂತು
ಪಾಳುಕಾಡೊಳು ಬಂದೆ ? ನಿನಗಾವುದಾಪತ್ತು ?
ಹೇಳೆ"ಂದು ಮೆಯ್ದಡವುತೆಬ್ಬಿಸಿದರು ॥ ೧೩ ॥

ಹಿಂದಿನೆಲ್ಲಾ ವೃತ್ತವನು ರಾಯರರಿತಿದ್ದ-
ರಂದಾಮುದನೆ ಎಂತೊ ಹೇಳಿದೆನು ! ಮತ್ತಳುತೆ
"ತಂದೆ ಮಡಿದನು ತಾಯಿ ಹಗೆಯಾಗಿ ನಿಂತಿಹಳು !
ಇಂದು ನೀವೇ ಎನಗೆ ಗತಿ"ಯೆಂದೆನು ! ॥ ೧೪ ॥

ಎದೆಯೊಳಲಗಿರಿದಂತೆ ದಾಸರಾಯರಿಗಾದು-
ದಡಿರಿದುವು ತುಟಿಯುವರ ಕೊರಲ ಸೆರೆಯುಬ್ಬಿದುವು
ಉದಿರಿದುವು ಕಣ್ಣೀರು ಬಾಯಿಂದೆ ಮಾತು ಬಾ-
ರದು ! ನನ್ನ ತಂದೆಯನು ನೆನೆದತ್ತರು ! ॥ ೧೫ ॥

"ತೊರೆದೆನಿದೊ ಊರಿನಾಸೆಯನಿನ್ನು ! ಬಾ ಮಗಳೆ !
ತಿರುಗುವೆನು ನಿನ್ನೊಡನೆ ! ನಿನ್ನ ಪಾವಿತ್ರ್ಯವನು
ಹರಿ ರಕ್ಷಿಸುವನು ! ಗತಿಯವನೆ ! ಬಾರಮ್ಮ ! ಸಂ-
ಚರಿಸುವೆವು ಗುರುತಿಲ್ಲದೂರುಗಳಲಿ ! " ॥ ೧೬ ॥

ಎಂದು ನುಡಿದಾ ದಾಸರಾಯರಿಗೆ ನಾನಂದಿ-
ನಿಂದೆ ಮಗಳಾದೆನಾ ಪುಣ್ಯವಂತರು ನನಗೆ
ತಂದೆಯಾದರು ! ನಾನು ಗಂಡನಿಲ್ಲದ ಹುಡಿಗಿ-
ಯಿಂದಿಗೂ ! ನಿಜದೆ ನಾನರ್ಧಾಂಗಿಯೈ ! ॥ ೧೭ ॥

ಕರ್ನಾಟಕ ಹೈಸ್ಕೂಲ್
ಧಾರವಾಡ ೩-೨-೧೯೩೦ } ಸಾಲಿ ರಾಮಚಂದ್ರರಾಯ

# ಆರೋಗ್ಯ ವಿಜ್ಞಾನ



## ಮೈಲಿ ಬೇನೆಯು

ಲೇಖಕರು:— ಶ್ರೀ ಕಾಮುಲಾಪುರ ಕಾಂತರಾಯರು, M. B. B. S, ಧಾರವಾಡ

ಕಳೆದ ತಿಂಗಳೆರಡು ತಿಂಗಳುಗಳಲ್ಲಿ ಈ ಉಪಸ್ದ್ರವವು ಎಲ್ಲ ಕಡೆಯಲ್ಲಿಯೂ ಹಬ್ಬುತ್ತಲಿರುವದರಿಂದ ಇದನ್ನು ತಡೆಯಲು ಆವ ಉಪಾಯುಗಳನ್ನು ಕೈಕೊಳ್ಳಲು ಶಕ್ಯವಿದೆಯೆಂಬುದನ್ನು ತಿಳಿದುಕೊಳ್ಳುವದು ವಿಹಿತ.

### ಬೇನೆಯ ಲಕ್ಷಣಗಳು

ಮೈಲಿ ಬೇನೆಯು ಸುಂಕರೋಗಗಳಲ್ಲಿ ಭಯಂಕರವಾದದ್ದು. ವಾಂತಿ, ಚಳಿ, ತಲೆಶೂಲೆ, ಬೆನ್ನುಶೂಲೆ, ಜ್ವರಾತಿಶಯ ಇವೇ ಈ ಬೇನೆಯ ಪ್ರಾರಂಭದಲ್ಲಿ ಕಂಡು ಬರುವ ಲಕ್ಷಣಗಳು. ಜ್ವರಾತಿಶಯ (೧೦೪) ಹಾಗು ಬೆನ್ನುಶೂಲೆ, ಈ ಬೇನೆಯ ನಿದಾನದಲ್ಲಿ ಮುಖ್ಯವಾದ ಲಕ್ಷಣಗಳಾಗಿವೆ. ಮೂರನೆಯ ಇಲ್ಲವೆ ನಾಲ್ಕನೆಯ ದಿನ ಮೈಲಿಗಳೇಳಲು ಸುರುವಾಗುತ್ತದೆ. ಮೊದಲು ಮೋರೆಯ ಮೇಲೆ ಎದ್ದು ಕ್ರಮೇಣ ಎದೆ, ಹೊಟ್ಟೆ, ಟೊಂಕ, ಕೈಕಾಲು ಹೀಗೆ ಹಬ್ಬುತ್ತ ಹೋಗುವವು. ಮೈಲಿ ಎದ್ದ ನಂತರ ಜ್ವರಬಾಧೆಯು ಕಡಿಮೆಯಾಗಿ ರಸಿಕೆ ತುಂಬಿದ ಮೇಲೆ ಜ್ವರವು ಮತ್ತೆ ಬರುವದು. ಕಣ್ಣು, ಮೂಗು, ಅಂಗಳ ಗಂಟಲುಗಳಲ್ಲಿ ಸಹ ಬಕ್ಕೆಗಳು ಏಳುವವು. ಗರ್ಭವತಿಗೆ ಈ ಬೇನೆಯು ತಗಲಿದಲ್ಲಿ ಬಸುರಿನೊಳಗಿದ್ದ ಮಗುವಿನ ಮೈಮೇಲೆ ಮೈಲಿಗಳೆದ್ದ ಚಿನ್ಹಗಳಾಗಲಿ, ಮೈಲಿಗಳಾಗಲಿ ಇದ್ದ ಉದಾಹರಣೆಗಳುಂಟು.

ಮೈಲಿಬಕ್ಕೆಗಳು ಒತ್ತಿದರೆ ಬೊಟ್ಟಿಗೆ ಬಿರುಸಾಗಿ ಹತ್ತುವವು. ಎರಡನೆಯದಿನ ಈ ಬಕ್ಕೆಗಳಲ್ಲಿ ನೀರುತುಂಬಿ ೬-೭ನೆಯ ದಿನ ರಸಿಕೆಯಾಗುವದು. ಒಡೆದು ಆರಿ, ಹಕ್ಕಳಿಗಟ್ಟಿ ಅವು ಉದುರಿಹೋಗಲಿಕ್ಕೆ ಮುಂದೆ ಏನಿಲ್ಲೆಂದರೂ ೧೫ ದಿನಗಳಾದರೂ ಬೇಕಾಗುವವು.

### ಭೇದಗಳು

ಈ ಬೇನೆಯಲ್ಲಿ ಮೂರು ಭೇದಗಳುಂಟು. ಜ್ವರ, ತಲೆಶೂಲೆ, ಬೆನ್ನುಶೂಲೆ, ಮೈಲಿಬಕ್ಕೆಗಳು ಕಡಿಮೆಪ್ರಮಾಣದಲ್ಲಿದ್ದರೆ ಅದಕ್ಕೆ ಸೌಮ್ಯವಾದದ್ದೆಂತಲೂ, ಬಕ್ಕೆಗಳು ದಟ್ಟವಾಗಿದ್ದರೆ ಅದಕ್ಕೆ ದಟ್ಟವಾದುದೆಂತಲೂ (Confluent) ಬಕ್ಕೆಗಳು ಮೊದಲಿನಿಂದಾಗಲಿ ಆ ಮೇಲೆಯಾಗಲಿ ರಕ್ತಸ್ರಾವವಾಗಿದ್ದರೆ "ರಕ್ತಪೂರಿತ" ವೆಂತಲೂ ಅನ್ನುವದುಂಟು. ಇವುಗಳಲ್ಲಿ ಮೂರನೆಯದು ಅತಿದಾರುಣವಾದದ್ದು. ಇದರಲ್ಲಿ ಮರಣವು ತಪ್ಪಿದ್ದೇ.

ಈ ಬೇನೆಯು ಬಡವರು, ಸಿರಿವಂತರು, ಹುಡುಗರು, ಮುದುಕರು, ಹೆಂಗಸರು, ಗಂಡಸರು ಹೀಗೆ ಯಾವ ಭೇದವನ್ನೂ ಮಾಡದು. ಆದರೆ ಎಳೆ ಮತ್ತು ಇಳಿವಯಸ್ಸಿನವು ಬೇನೆಯಲ್ಲಿ ಬದುಕಿ ಉಳಿಯುವದು ವಿರಳ.

ಜನರ ದಟ್ಟಣೆ ಹೊಲಸು ಇದ್ದಲ್ಲಿ ಈ ಬೇನೆಯ ಪ್ರಾಬಲ್ಯ ಹೆಚ್ಚು. ಇಂಥಲ್ಲಿ ಒಮ್ಮೆ ಸುರುವಾಯಿತೆಂದರೆ ಅದನ್ನು ತಡೆಯುವದು ಕಠಿಣ.

### ಹೇಗೆ ಹಬ್ಬುವದು?

ಈ ಬೇನೆಯ ಸುಂಕವು ಬಹು ವೇಗದಿಂದ ಹಬ್ಬುವದು. ರೋಗಿಯು ಉಪಯೋಗಿಸಿದ ಬಟ್ಟೆ ಪಾತ್ರೆಗಳನ್ನು ಎರಡನೆಯವರು ಉಪಯೋಗಿಸಿದಲ್ಲಿ ಈ ಬೇನೆಯು ಅವರಿಗೆ ತಗಲುವದು. ರೋಗಿಯು ಮಲಗಿದ ಸ್ಥಳದಲ್ಲಿದ್ದ ಖುರ್ಚಿ, ಮೇಜು ಮುಂತಾದವುಗಳಿಗೂ ಈ ಸುಂಕವು ಅಂಟಿಕೊಂಡು ಬೇನೆಯನ್ನು ಹರಡಲು ಕಾರಣವಾಗುತ್ತವೆ. ಇದಲ್ಲದೆ ಅಲ್ಲಿಯ ವಾತಾವರಣವೂ ಕೂಡ ಈ ಬೇನೆಯ ಸುಂಕದ ಕಣಗಳಿಂದ ದೂಷಿತವಾಗಿರುವದು. ಅದಲ್ಲದೆ ಅವು ಗಾಳಿಯಿಂದ ಬಹುದೂರದವರೆಗೆ ಒಯ್ಯಲ್ಪಡುವವು. ರೋಗಿಯ ಕಣ್ಣು ಮೂಗಿನೊಳಗಿನ ಹೊಲಸಿನಲ್ಲಿಯೂ ಮಲಮೂತ್ರಗಳಲ್ಲಿಯೂ ಇದರ ಸುಂಕವಿರುತ್ತದೆ. ಅತಿಸೂಕ್ಷ್ಮವಾದ ಕ್ರಿಮಿಗಳೇ ಈ ಬೇನೆಯ ಮೂಲಕಾರಣ. ಅವನ್ನು ತೀಕ್ಷ್ಣವಾದ ಸೂಕ್ಷ್ಮದರ್ಶಕ ಯಂತ್ರಗಳಿಂದ ಕೂಡ ಕಾಣುವದು ಕಠಿಣ. ಆದಕಾರಣ ಇವುಗಳ ವಿಷಯವಾಗಿ ಸಾಕಷ್ಟು ಇನ್ನೂ ಗೊತ್ತಾಗಿಲ್ಲ.

## ಬೇನೆಯನ್ನು ತಡೆಯುವ ಉಪಾಯ

ಕೂಸುಗಳಿಗೆ ಮೈಲಿತೆಗೆಯಿಸುವದಂತು ವಾಡಿಕೆಯ ವಾತಾಗಿದೆ. ಮೈಲಿ ತೆಗೆಯಿಸಿದ ೫-೬ ವರ್ಷಗಳವರೆಗೆ ಮಾತ್ರ ಈ ಬೇನೆಯು ತಗಲದು. ಆದುದರಿಂದ ಊರಲ್ಲಿ ಈ ಬೇನೆಯು ಸುರುವಾದಕೂಡಲೆ ಊರಲ್ಲಿಯ ಕಿರಿಹಿರಿಯರೆಲ್ಲರೂ ಪುನಃ ಮೈಲಿತೆಗೆಯಿಸಬೇಕು. ಕೂಸಿದ್ದಾಗ ಮೈಲಿತೆಗೆಯಿಸಿದೆ ಎಂದೂ ಅಲಕ್ಷಮಾಡಬಾರದು. ಎಲ್ಲರೂ ಸಕಾಲಕ್ಕೆ ಮೈಲಿ ತೆಗೆಯಿಸಿದರೆ ಈ ಬೇನೆಯು ಹಬ್ಬಲು ಮಾರ್ಗವಿಲ್ಲದಾಗುವದು. ಇಷ್ಟೇ ಅಲ್ಲ. ಮನೆಯಲ್ಲಿ ಯಾರಿಗಾದರೂ ಈ ಬೇನೆಯು ತಗಲಿದೆಯೆಂದು ಸಂಶಯ ಬಂದಕೂಡಲೆ ಅವನಿಗೂ ಮೈಲಿತೆಗೆಯಿಸಬೇಕು. ಇದರಿಂದ ಬೇನೆಯ ಕಸುವು ಕಡಿಮೆಯಾಗಿ ರೋಗಿಗೆ ವಿಶೇಷ ಬಾಧೆಯಾಗದು. ಮನೆಯಲ್ಲಿಯ ಇತರರಂತೂ ತೆಗೆಯಿಸಲೇಬೇಕು. ಇದು ಮೈಲಿಬೇನೆಯನ್ನು ತಡೆಯಲು ಮುಖ್ಯವಾದ ಮತ್ತು ಸುಲಭಸಾಧ್ಯವಾದ ಉಪಾಯವು.

ಇನ್ನು ಮುಂಬಯಿಯಂಥ ದೊಡ್ಡ ಪಟ್ಟಣಗಳಲ್ಲಿ ಸುಂಕರೋಗಗಳಿಗಾಗಿ ಪ್ರತ್ಯೇಕವಾದ ಆಸ್ಪತ್ರಿಗಳೇ ಇರುವವು. ರೋಗಿಗಳನ್ನು ಅಲ್ಲಿಯೇ ಇಟ್ಟುಕೊಂಡು ನೆಟ್ಟಗಾದ ಮೇಲೆಯೇ ಮನೆಗೆ ಕಳುಹಿಸುವರು. ಆದರೆ ಈ ತರಹದ ಆಸ್ಪತ್ರಿಗಳು ಎಲ್ಲ ಕಡೆಯಲ್ಲಿ ಇರುವದಿಲ್ಲ. ಆದರೆ ಶಕ್ಯವಿದ್ದಲ್ಲಿ ರೋಗಿಯನ್ನು ಮನೆಯಲ್ಲಿಯಾದರೂ ಪ್ರತ್ಯೇಕವಾದ ಕೋಣೆಯಲ್ಲಿ ಮಲಗಿಸಬೇಕು. ಶುಶ್ರೂಷೆಗಾಗಿ ನಿಯಮಿತ ಜನರ ಹೊರ್ತು ಉಳಿದವರನ್ನಾರನ್ನೂ ಒಳಗೆ ಬಿಡಕೂಡದು. ರೋಗಿಯು ಉಪಯೋಗಿಸಿದ ಬಟ್ಟೆ ಪಾತ್ರೆಗಳನ್ನು ಶುದ್ಧ (dis-infect) ಮಾಡದೆ ಹೊರಗೆ ಒಯ್ಯಬಾರದು. ಶುಶ್ರೂಷೆ ಮಾಡುವವರು ಸಹ ತಮ್ಮ ಬಟ್ಟೆಗಳನ್ನು ಬದಲಾಯಿಸಬೇಕು; ಹಾಗೆಯೇ ಎಲ್ಲ ಕಡೆಗೂ ಹೋಗಬಾರದು. ರೋಗಿಯ ಮಲಮೂತ್ರ ಕಣ್ಣುಮೂಗಿನೊಳಗಿನ ಹೊಲಸು ಸಿಕ್ಕಲ್ಲಿ ಚಲ್ಲಬಾರದು. ಅವನ್ನು ಸುಡುವ ಏರ್ಪಾಡು ಮಾಡಿದಲ್ಲಿ ಬಹಳೇ ವಿಹಿತ. ಹಕ್ಕಳಿಗಳು ಉದುರಲು ಸುರುವಾದಾಗ್ಗೆ ಮೈಗೆಲ್ಲ ಎಂಣೆಯನ್ನು ಹಚ್ಚಬೇಕು. ಇದರಿಂದ ಸುಂಕದ ಕಣಗಳು ಗಾಳಿಯಲ್ಲಿ ಸೇರಲು ಅಶಕ್ಯವಾಗುವದು.

ಇನ್ನುಳಿದ ಉಪಾಯವೆಂದರೆ ಕ್ವಾರಂಟಾಯನ; ಆದರೆ ಈಗಿನ ಕಾಲದಲ್ಲಿ ಈ ಪದ್ಧತಿಯನ್ನು ಪ್ರಚಾರದಲ್ಲಿ ಎಲ್ಲಿಯೂ ತರುವದಿಲ್ಲ. ಆದುದರಿಂದ ಈ ವಿಷಯವಾಗಿ ಹೆಚ್ಚಿಗೆ ಹೇಳುವವನವಶ್ಯವು.

ಸರಕಾರದವರು, ನಗರಸಭೆಯವರು, ನಾಗರಿಕರು ಒಂದಾಗಿ ಮೇಲೆ ಕಾಣಿಸಿದ ಉಪಾಯಗಳಲ್ಲಿ ಸಾಧ್ಯವಾದವುಗಳನ್ನು ಸಕಾಲಕ್ಕೆ ಕೈಕೊಂಡರೆ ಈ ಬೇನೆಯ ಉಪದ್ರವದಿಂದ ನಮ್ಮ ನಮ್ಮ ವಾಸಸ್ಥಳಗಳು ಉಳಿಯುವವೆಂದು ನಮ್ಮ ಆಶೆ.

---

## ಸರ್ವಜ್ಞನ ಸ್ಮರಣೆ

ಬಾಬಾರೊ ಕನ್ನಡದ ಗಂಡುಗವಿ ನೀನು ।
ನೀ ಬಾರದಿರೆ ನುಡಿಯ ಸಿರಿಯುಡಗದೇನು ॥ ೧ ॥
ಪರಭಾಷೆಯೆಂಬ ಚಿಕ್ಕಾಡು ತಗಣಿಗಳು ।
ನಿರುತ ಬಾಧಿಪುವೇನು ಹೇಳುವೆನು ಗೋಳು ॥ ೨ ॥
ಸ್ಪಷ್ಟ ಮಾತಿನ ಧಿಟ್ಟ ಕಬ್ಬಿಗನೆ ಬಾರೊ ।
ಅಟ್ಟಿಸಿದ ಹಾಲಿನಂದದ ಸವಿಯ ತೋರೊ ॥ ೩ ॥
ಅನ್ಯಭಾಷಾಜಾಲದೊಳು ಬೀಳುತೀಗ ।
ನಿನ್ನ ನಾಡಿದು ಸನ್ನೆಗೆಡುತಿಹುದು ಬೇಗ ॥ ೪ ॥
ನಿನ್ನ ಮಾತುಗಳಲ್ಲಿ ಸಂದೇಹವುಂಟೇ ।
ಕನ್ನಡಿಯು ನೋಡಿದಗೆ ಮೊಗದೋರದುಂಟೇ ॥ ೫ ॥
ಕವಿಯಾಗ ಬಯಸುವರು ಬಹು ಜನರು ಬರಿದೆ ।
ಸವಿಗಬ್ಬಗಳನೊರೆಯದಲೆ ಗರ್ವಭರದೆ ॥ ೬ ॥
ಸುಮ್ಮನಿರುವರೆ ನಮ್ಮ ಕನ್ನಡದ ಹುಲಿಯೇ ।
ಒಮ್ಮೆ ಮಾತಾಡು ತಿಳಿಗನ್ನಡದ ಕಲಿಯೇ ॥ ೭ ॥
ಕನ್ನಡದ ನುಡಿಯ ಬೆಳೆ ಕುಂದಿಹುದು ನೋಡು ।
ಇನ್ನು ಕಾವ್ಯಗಳ ಬಿರುಮಳೆಯ ದಯಮಾಡು ॥ ೮ ॥
*ಮೂರಡಿಯೊಳೆಲ್ಲವನು ತುಂಬಿ ಸತ್ಯವನು ।
ಸಾರಿರುವಿ ಸರ್ವಜ್ಞನಹುದಹುದು ನೀನು ॥ ೯ ॥
ಆಗಲೆಮ್ಮಯ ನಾಡಿನುನ್ನತಿಯು ಇಂದೇ ।
ಯೋಗೇಶ ಪಾದಪದ್ಮಗಳ ಕೃಪೆಯಿಂದೆ ॥ ೧೦ ॥

— ಶಂಕರಭಟ್ಟ ಅಗ್ನಿಹೋತ್ರಿ, ಹೊಂಬಳ

* ಪರಮಾತ್ಮನು ಮೂರಡಿಗಳಿಂದ ಜಗತ್ತನ್ನೆಲ್ಲ ವ್ಯಾಪಿಸಿದನು. ಸರ್ವಜ್ಞನು ಮೂರಡಿ (ತ್ರಿಪದಿ)ಯಲ್ಲಿ ಸಕಲ ವಿಷಯನಾರ್ಥಗಳನ್ನು ಸಂಗ್ರಹಿಸಿದನು.

# ಜಗತ್ತು ಕಂಡವರು ಯಾರು?

ಕತೆಗಾರರು— ಶ್ರೀ ರಂಗನಾಥ ಶ್ರೀನಿವಾಸರಾವ ಮುಗಳಿ, ಬಿ. ಎ., ಕರ್ನಾಟಕ ಕಾಲೇಜ, ಧಾರವಾಡ.

ವಿದ್ಯಾಲಯದಿಂದ ಇಬ್ಬರು ವಿದ್ಯಾರ್ಥಿಗಳು ಹೊರಬಿದ್ದರು. ಸಂಜೆಯ ಹೊಂಬಣ್ಣವು ಮುಗ್ಗದಮೇಲಿನ ಪೀತಾಂಬರದಂತೆ ಹೊಸದಾಗಿ ಕಾಣುತ್ತಿದ್ದಿತು. ಕಡೆಯ ತಾಸಿನ ಅಧ್ಯಾಪಕರು ತಲೆಯಲ್ಲಿ ತುರುಕಿದ ಒಂದೆರಡು ವಿಚಾರಗಳು ಜೇನ್ನೊಣಗಳಂತೆ ಕಿವಿಯನ್ನು ಕಡಿದು ಹೊಕ್ಕು, ಸ್ನೇಹಿತರಿಬ್ಬರನ್ನೂ ಸ್ತಬ್ಧಮಾಡಿದ್ದವು. ಮಾತಿಲ್ಲದೆ ಇಬ್ಬರೂ ಗೇಟು ದಾಟಿದರು.

"ಈ ಹೂವು ಯಾವುದು? ನೀನು ಹೇಳುವಿಯಾ?" ಒಬ್ಬನು ಮಗ್ಗುಲಿಗೆ ನೋಡಿ ಆಡಿದನು. 'ಯಾವದಾದರೂ ಇದ್ದೀತು, ಹೆಸರಿಲ್ಲದ ಹೂಗಳು ಎಷ್ಟೋ ಜಗತ್ತಿನಲ್ಲಿ ಇವೆ!'

ಸೃಷ್ಟಿಯ ಮೇಲೆ ಮಮತೆ ಬಹಳಿರುವ ಸ್ನೇಹಿತನಿಗೆ ಇದು ಸಹನವಾಗಲಿಲ್ಲ. "ನೀವೆಲ್ಲಾ ಕಣ್ಣಿದ್ದೂ ಕುರುಡರು, ಬುದ್ಧಿಯಿದ್ದೂ ಬರಡರು" ಎಂದು ಒಬ್ಬ ಮುಂದಾಳುವಿನಂತೆ ಮೂದಲಿಸತೊಡಗಿದನು. ಅದನ್ನು ನಗೆಯಿಂದ ತಡೆದು 'ಈ ಉಪನಿಷತ್ತು ಸಾಕು. ನಾವು ಮಾಡಬೇಕಾದರೂ ಏನು ಹೇಳು' ಎಂದು ಹೂವನ್ನು ಜರೆದು ಆಡಿದ ಗೆಳೆಯನು ಕೇಳಿದನು.

"ಯಾವಾಗಲೂ ಹೊರಗಿನ ಜಗತ್ತನ್ನು ನೋಡಬೇಕು ತಿಳಿದುಕೊಳ್ಳಬೇಕು" 'ಹೀಗೋ!' ಇಬ್ಬರೂ ಮುಂದೆ ಸಾಗಿದರು. ಹೂವಿನ ಗೆಳೆಯನ ಬೋಧವನ್ನು ತತ್ಕ್ಷಣವೇ ಆಚರಣೆಯಲ್ಲಿ ತಂದವನಂತೆ ಇನ್ನೊಬ್ಬನು ವಿನೋದಪೂರ್ವಕವಾಗಿ ಕೆಳಗೆ ಹಾಕಿದ ಮೋರೆಯನ್ನು ತೆಗೆದು ನೆತ್ತಿಯ ಮೇಲಿನ ಸೂರ್ಯನನ್ನು ನೋಡುವ ಹಾಗೆ ಮೇಲಕ್ಕೆ ನೋಡುವುದು, ಹೋಗಹೋಗುತ್ತ ನಿಂತವನೇ ಗಿಡದ ಟೊಂಗೆಗಳಲ್ಲಿ ನೋಡುವುದು, ಜತೆಗಾರನು ಅದೇನೆಂದು ಗಾಬರಿಯಾಗಿ ಅವನಂತೆ ನೋಡಲು, 'ಹಗಲಿನಲ್ಲಿ ನಕ್ಷತ್ರಮೂಡಿದಂತೆ ಕಾಣಿಸಿತು' ಎಂದು ಅಪ್ಪುತದ ಮಾತು ಆಡುವದು, ಇವನ್ನೆಲ್ಲ ನಡೆಸಿದ್ದನು. ಬೋಧಕನಿಗೆ ಮತ್ತೆ ಮುನಿಸು ಬಂದಿತು. "ಸೃಷ್ಟಿಯ ಕೂಡ ಚೇಷ್ಟೆ ಮಾಡಿದರೆ ಆಗುವದಿಲ್ಲ" ಎಂದು ನಿಂದಿಸಿದನು.

ಈಗ ಇಬ್ಬರೂ ಊರ ಸಮೀಪಕ್ಕೆ ಬಂದರು. ವಿದ್ಯಾಲಯವು ಊರಹೊರಗೆ ಎಷ್ಟೋ ದೂರದಲ್ಲಿ ಇದ್ದಿತೆಂದು ಬೇರೆ ಹೇಳಬೇಕಾಗಿಲ್ಲ. ಒಂದು ಕಂದೀಲದ ಕಂಬಕ್ಕೆ ಹಚ್ಚಿರುವ ಪ್ರಕಟನೆಯೊಂದು ಸೃಷ್ಟಿಪ್ರಿಯನ ಕಣ್ಣಿಗೆ ಬಿದ್ದಿತು. ಅವನು ಓದಹೋದನು. ಇನ್ನೊಬ್ಬನು ನಿಂತಲ್ಲಿಯೇ ನಿಂತನು.

'ನಾನು ಕಂಡ ಜಗತ್ತು' ಎಂಬ ವಿಷಯದ ಮೇಲೆ ಪ್ರದೇಶಗಳನ್ನೆಲ್ಲ ಸುತ್ತಾಡಿಬಂದ ಮಹನೀಯರೊಬ್ಬರ ವ್ಯಾಖ್ಯಾನವಿತ್ತು. ಸಂಜೆಯ ೬ ಗಂಟೆಗೆ ಹತ್ತಿರದ ಸಭಾಗೃಹದಲ್ಲಿ ಏರ್ಪಾಟು ಆಗಿದ್ದರಿಂದ, 'ಒಳಿತೇ ಆಯಿತು, ಹೋಗೋಣ ನಡೆ' ಎಂದು ಉಭಯರೂ ತಮ್ಮ ದಿಕ್ಕು ಬದಲಿಸಿ ನಡೆದರು. ಒಬ್ಬನದು ವ್ಯಾಖ್ಯಾತರ ಅನುಭವಗಳನ್ನು ಕೇಳುವ ಕುತೂಹಲ. ಇನ್ನೊಬ್ಬನಿಗೆ ಅವರ ವಿಚಾರಗಳನ್ನು ಕೇಳಿಕೊಳ್ಳುವ ಲವಲವಿಕೆ. ಅಂತೂ ಯಾವ ತಂಟೆಯಿಲ್ಲದೆ ಇಬ್ಬರೂ ಸಭೆ ಸೇರಿದರು. ಸಭೆ ಆಯಿತು, ಮೊದಮೊದಲು ವ್ಯಾಖ್ಯಾತರನ್ನು ಲಕ್ಷಿಸದ ಜನರು ವ್ಯಾಖ್ಯಾನದ ನಂತರ ಅವರ ಶಿಷ್ಯರಾದರು. ಮಹಾಪುರುಷರನ್ನು ಕಂಡಂತೆ ಅವರನ್ನು ಕಾಣಲಿಕ್ಕೆ ಹತ್ತಿ, ವಿಚಾರಗಳನ್ನೆಲ್ಲ ಮರೆತು ಗದ್ದಲದಲ್ಲಿ ನುಗ್ಗಿದರು. ನಮ್ಮ ವಿದ್ಯಾಲಯದ ಗೆಳೆಯರಿಬ್ಬರೂ ಅದಾವ ಗೊಡವೆಗೆ ಹೋಗಲಿಲ್ಲ. ನೆಟ್ಟಗೆ ಹೊರಹೊರಟರು.

"ಅವರ ಜಗತ್ತಿನ ಅನುಭವವನ್ನು ನೋಡಿದಿಯಾ!" ಎಂದು ವಾಚಕರಿಗೆ ಈಗಾಗಲೇ ಗೊತ್ತಿರುವ ಗೆಳೆಯನು ಕೇಳಿದನು.

"ಅವರು ಕಂಡಜಗತ್ತು ಇಷ್ಟೇ ಎಂದು ಕಾಣುತ್ತದೆ!" ಎಂದು ವಿಚಾರೀಸ್ನೇಹಿತನು ತನ್ನ ವಿಮರ್ಶೆ ಮಾಡಿದನು.

"ಒಳ್ಳೆಯ ಮಾತು! ದೇಶಾಂತರವೆಲ್ಲ ಸುತ್ತಿ ಬಂದವರು ಹೀಗೆಂದರೆ"

'ಎಷ್ಟಾದರೂ ಸಂಕುಚಿತವೇ!'

"ಚಲೋ ಇದೆ, ಹುಟ್ಟಿದ್ದೊಂದು ಕಲಿಯುವದೊಂದು ಎರಡು ಜಗತ್ತು ಕಂಡ ನಾವು ಸಂಕುಚಿತರೋ ಹಡಗದಿಂದ ಹಡಗಕ್ಕೆ ಹೋಗುತ್ತ ತರತರದ ಪ್ರವಾಸಮಾಡಿದ ಅವರೋ!"

'ಅವರೇ! ಹಡಗದಿಂದ ಹಡಗಕ್ಕೆ ನೊಣಗಳೂ ಪ್ರವಾಸ ಮಾಡಬಹುದು!'

'ನಿನ್ನ ತಲೆಯು ಕೆಟ್ಟಿರುವದು, ವಾಚನಾಲಯಕ್ಕೆ ನಡೆ' ಎಂದು ವ್ಯಾಖ್ಯಾನದಿಂದ ಸಂತುಷ್ಟನಾಗದ ಸ್ನೇಹಿತನು ಬಂದನು. ಇನ್ನೊಬ್ಬನು ಎಳೆದುಕೊಂಡು ಹೋದನು.

ತಾಸು ಇಬ್ಬರೂ ಮುಗ್ಧರಂತೆ ಕುಳಿತು ಓದಿದರು. " ಇಲ್ಲಿ ಯೊಬ್ಬ ಜಗತ್‌ಸಂಚಾರಿ ( World-trotter ) ಯ ಸುದ್ದಿ ಬಂದದೆ ನೋಡು " ಎಂದು ಜಗತ್ತಿನ ಭಕ್ತನು ಉತ್ಸಾಹ ದಿಂದ ಇಂಗ್ಲಿಷ್ ಪೇಪರನ್ನು ಎತ್ತಿ ಗೆಳೆಯನಿಗೆ ತೋರಿಸಿದನು. 'ಆದರೆ ಕೆಳಗೆ ನೋಡು' ಎಂಬ ಉತ್ತರಬಂದಿತು. ಈ ಪ್ರವಾಸಿಯು ಏನೋ ಆಕಸ್ಮಾತ್ತಾಗಿ ರಸಿಯಾದೇಶದಲ್ಲಿ ಹಾಯುವಾಗ ಕೆಲವು ಹಳ್ಳಿಗಳ ಹೊಲಗಳಲ್ಲಿ ಹಾದಿ ಮಾಡಿಕೊಂಡದ್ದರಿಂದ ಬೆಳೆಗಳು ಬಿದ್ದವೆಂದು ಬರೆದಿತ್ತು.

"ಅಂದರೇನಾಯಿತು ? ಇಷ್ಟು ಜಗತ್ತು ಕಂಡವನಿಗೆ ಅಷ್ಟು ಹೊಲಗಳ ಬೆಲೆಯೇನು ?"

'ಇವರೇ ನಿಮ್ಮ ಜಗತ್ತು ಕಂಡವರು ? ಹೇಳುವ ಹಾಗಿಲ್ಲ!'

ಸ್ನೇಹಿತರಿಬ್ಬರೂ ಎದ್ದರು. ಈ ದೃಷ್ಟಿಭೇದಕ್ಕೆ ಅಗಲುವದೊಂದೇ ಉಪಾಯವೆಂದು ಇಬ್ಬರೂ ತಮ್ಮ ತಮ್ಮ ಮನೆ ಸೇರಿದರು.

೨.

ಮರುದಿವಸ ಮತ್ತೊಂದು ಸಂಜೆ. ಸೂಟಿಯಿದ್ದದರಿಂದ ಸ್ನೇಹಿತರು ತಮ್ಮ ವಿದ್ಯಾಲಯಕ್ಕೆ ಹೋಗಿರಲೇ ಇಲ್ಲ. ಜಗತ್ಪ್ರಿಯನು—ಲಲಿತ ಎಂದು ಇವನ ಹೆಸರು—ಸಂಜೆಯವರೆಗೆ ಕುಳಿತು ಈ ಭೌತಿಕಯುಗದಲ್ಲಿ ಹೆಸರಾದ ಸಾಹಸಿಗಳ ಹಾಗೂ ಸಂಚಾರಿಗಳ ಯಾದಿಯೊಂದನ್ನು ಸಿದ್ಧಪಡಿಸಿ ತನ್ನ ಪ್ರತಿವಾದಿ ವಸಂತನನ್ನು ಈ ಹೊತ್ತು ವಾದದಲ್ಲಿ ಸೋಲಿಸಬೇಕೆಂದು ಸಜ್ಜಾದನು. ಅವನ ಮನೆಗೆ ವೇಗದಿಂದ ಹೋದನು.

"ವಸಂತಾ, ಈ ಹೊತ್ತು ತಿರುಗಾಡಲಿಕ್ಕೆ ನಡೆ, ನೋಡುತ್ತೇನೆ."

"ಯಾಕೆ ? ನೀನೂ ಆ ಜಗತ್ತು ಕಂಡವರಂತೆ ನನ್ನ ಮೇಲೆ ಏನಾದರೂ ಹಾಯಿಸುವಿಯೇನು ?"

"ಹೌದು, ನನ್ನ ಯುಕ್ತಿಯ ಯಂತ್ರವನ್ನು ಹಾಯಿಸುವೆನು"

"ಲಲಿತ, ನಿನ್ನ ಯಂತ್ರವು ಇಷ್ಟು ನಿರುಪದ್ರವವಾದರೆ ಅಡ್ಡಿಯಿಲ್ಲ, ನಿನ್ನ ಅಭಿಪ್ರಾಯವಾದರೂ ಏನು ?

"ಈಗಿನ ಜಗತ್ತಿನಲ್ಲಿ ಅನೇಕಾನೇಕ ಸಂಚಾರಿಗಳಿರುವರೆಂಬೂ ಅವರ ಜಗತ್ತಿನ ಅನುಭವವು ಎಲ್ಲಕ್ಕಿಂತ ಮಿಗಿಲಾದುದೆಂಬೂ ತೋರಿಸುವೆನು."

" ಲಲಿತ, ಅದು ನಿನಗೆ ಬಾರದು. ಅವರು ಜಗತ್ತು ಕಂಡವರಲ್ಲ " ಲಲಿತನು ಇಂಥ ಅಲ್ಲಗಳೆಯುವ ವಾದಕ್ಕೆ ಅತಿಶಯ ಕೋಪಗೊಂಡು,

'ಹಾಗಾದರೆ ನಿನ್ನಂತೆ ಜಗತ್ತು ಕಂಡವರಾದರೂ ಯಾರು?'

'ಹೇಳಿಬಿಡಲೇ ? ಯಾರನ್ನು ಕಂಡರೆ ಐದು ನಿಮಿಷವಾದರೂ ಕಣ್ತುಂಬ ನೋಡುವಂತಾಗುವದೋ ಅವರು !'

'ಆಯಿತು, ಇಂಥವರು ಜಗತ್ತಿನಮೇಲೆ ಇಲ್ಲವೇ ಇಲ್ಲ !'

'ಅದೇಕೆ, ಪ್ರತಿಯೊಂದು ಊರಲ್ಲಿ ಇರುವರು !' ನಿನ್ನ ಆ ದೇವರು ಎಲ್ಲಿರುವನೆಂದು ಪ್ರಹ್ಲಾದನಿಗೆ ಹಿರಣ್ಯಕಶ್ಯಪನು ಪ್ರಶ್ನೆ ಕೇಳಿದಾಗ 'ಅವನು ಎಲ್ಲ ಕಡೆಗೂ ಇರುವನೆಂ'ಬ ಉತ್ತರ ಬರಲು ಆ ರಾಕ್ಷಸತಂದೆಯು ಕ್ರುದ್ಧನಾದಷ್ಟು ಲಲಿತನು ಕನಲಿದನು. ಅವನಷ್ಟೇ ದಿಗಿಲೂ ಬಿದ್ದಿತು.

'ಮಹಾರಾಯ, ಜಗತ್‌ಸಂಚಾರಿಗಳು ಈ ನಮ್ಮ ಕರ್ನಾಟಕದ ಪ್ರತಿಯೊಂದು ಊರಲ್ಲಿಯೂ ಇದ್ದರೆ, ಇಷ್ಟು ಹೊತ್ತಿಗೆ ಜಗತ್ತಿನ ಶೋಧಗಳೆಲ್ಲ ನಮ್ಮ ಉಡಿಯಲ್ಲಿಯೇ ಬೀಳುತ್ತಿದ್ದವು.'

'ಇಲ್ಲಿಯೊಂದು ನಡುಗಡ್ಡೆ, ಅಲ್ಲಿಯೊಂದು ಅಜ್ಞಾತಖಂಡ ಎಂದು ಶೋಧ ಮಾಡಿದರೆ ಅದು ಜಗತ್ತು ಕಂಡಂತೆಯೆ ?'

'ಹೋಗಲಿ, ಆ ನಿನ್ನ ಜಗತ್ತು ಕಂಡವರು ಈ ಊರಲ್ಲಿ ಇರುವರೇನು ?'

'ಅನೇಕರು'

'ನೋಡೋಣ.'

ಕತ್ತಲೆಯು ತನ್ನ ಕಪ್ಪುವೋರೆಸುನ್ನು ಹಣಿಕೆಹಾಕುತ್ತಿರುವದನ್ನು ಕಂಡು ಲಲಿತವಸಂತರು ತಿರುಗಲಿಕ್ಕೆ ಹೊರಟರು. ಮನೆಬಾಗಿಲಿಂದ ಹೊರಬಿದ್ದೊಡನೆ ವಸಂತನು ಮುಳುಗುತ್ತಿರುವ ಸೂರ್ಯನ ಸಂತೋಷರಕ್ತಮುದ್ರೆಯನ್ನು ನಿಟ್ಟಿಸಿ ನೋಡಿದನು. ಲಲಿತನು ಆ ಸೂರ್ಯನನ್ನು ಬಿಟ್ಟು ವಸಂತನನ್ನು ನೋಡಿದನು. 'ಇವನೂ ಒಬ್ಬನು ನಿಮ್ಮ ಜಗತ್ತುಕಂಡ ಜಟ್ಟಿಯೇನು ?' 'ಹೌದು, ಅದರಲ್ಲಿ ಸಂಶಯವೇ ಇಲ್ಲ.' 'ಹಾಗಾದರೆ ನಮ್ಮ ಜಗತ್‌ಸಂಚಾರಿಗಳೇನು ತಪ್ಪು ಮಾಡಿರುವರು ?' 'ಅವರಿಗೆ ಬದುಕಿನ ನೆಲೆಯೇ ಗೊತ್ತಿಲ್ಲ' 'ಆಗಲಿ' ಇಬ್ಬರೂ ಹೊರಗೆ ವೇಗದಿಂದ ಸಾಗಿದರು. ವಸಂತನು ತನ್ನ ಜಗತ್ತು ಕಂಡವರ ಸಲುವಾಗಿ ಎತ್ತೆತ್ತ ತನ್ನ ನೋಟವನ್ನು ಕಳಿಸುತ್ತಿರುವನು, ಯಾರು ಯಾರನ್ನು ದಿಟ್ಟಿಸಿ ನೋಡುತ್ತಿರುವನು

ಎಂಬುದರ ಕಡೆಗೆ ಲಲಿತನ ಲಕ್ಷ್ಯವಿತ್ತು. ಹೀಗಾಗಿ ಹಾದಿಯಲ್ಲಿ ಎರಡು ಮೂರು ಸಲ ಎಡವಿದನು, ಹಾದಿಹೋಕರಿಗೆ ಕೈತಾಕಿಸಿದನು. ಒಬ್ಬಿಬ್ಬರನ್ನು ತಡವಿದ್ದೂ ಆಯಿತು. ಇದುರಿಗೆ, ದೇಶವೆಲ್ಲ ತಿರುಗಿ ತನ್ನ ಅನುಭವಗಳನ್ನು ಹಣೆಪಟ್ಟಿಯ ಮಡಿಕೆಗಳಲ್ಲಿ ಬರೆದುಕೊಂಡು ಬಂದಂತಿರುವ ವರ್ತಕನೊಬ್ಬನು ಬಂದನು. ಅವನು ದೂರವಿರುತ್ತಲೇ ಲಲಿತನಿಗೆ ಹಿಗ್ಗು ಬಂದಿತು. ಅವನು ಮನಸ್ಸಿನಲ್ಲಿ "ಹೌದು, ಇಲ್ಲಿಯೂ ಜಗತ್ತು ಕಂಡವರಿರುವರು, ಇವನನ್ನಾದರೂ ನಿಂತುನೋಡಿ ವಸಂತನು ಉಬ್ಬಬಹುದು" ಎಂದಂದುಕೊಂಡನು. ವರ್ತಕನು ಹತ್ತಿರಕ್ಕೆ ಬರಲು, ವಸಂತನು ಅವನ ಪಾವಡದ ದರ್ಪವನ್ನು ನೋಡಿ ಮುಂದೆ ನೋಡದೆ ಬೇರೆಡೆಗೆ ನೋಡತೊಡಗಿದನು. ಸಂಜೆಯವರೆಗೆ ಭಿಕ್ಷೆಬೇಡಿ ತಂದ ಜೋಳದಕಾಳುಗಳನ್ನು ಮಡಿಲಲ್ಲಿ ಹಾಕಿಕೊಂಡು ಹೊರಟಿರುವ ಕುರುಡಮುದುಕಿಯೊಬ್ಬಳನ್ನು ಯಾರೋ ಹಾಯ್ದು ಅವಳ ಹೊಟ್ಟೆಯ ಕರಳುಗಳನ್ನೇ ಮಣ್ಣುಪಾಲುಮಾಡಿ ಮಾಯವಾಗಿದ್ದರು. ಒಬ್ಬ ಹತ್ತುವರ್ಷದ ಹುಡುಗನು ಆ ಕಾಳುಗಳನ್ನು ಆರಿಸಿಕೊಡುತ್ತಿದ್ದನು. "ನೀನೇ ನನ್ನ ದೇವರಪ್ಪ" ಎಂದು ಅವಳು ಅವನ ತಲೆಯ ಮೇಲೆ ಕೈಯಾಡಿಸುತ್ತಿದ್ದಳು. ವಸಂತನು ನಿಂತನು. ಒಂದೆರಡು ನಿಮಿಷ ನೋಡಿದನು. ಹೃದಯಕ್ಕೆ ಇಲ್ಲದ ವೇದನೆಯಾಯಿತು. ಅದರಲ್ಲಿಯೂ ಒಂದು ತರದ ತಿಳಿವು ಬಂದಂತೆ ಹರುಷವೂ ಆಯಿತು. ಇಬ್ಬರೂ ಮುಂದೆ ಹೆಜ್ಜೆಹಾಕಹತ್ತಿದರು. ಲಲಿತನ ದಿಗಿಲು ಹೆಚ್ಚುತ್ತಲೇ ಇತ್ತು. "ಏನು, ಆ ಕುರುಡ ತಿರುಕರವಳು ಜಗತ್ತನ್ನು ಕಂಡವಳೇ ?" ಎಂದು ಹೀಯಾಳಿಸುವ ಹಾಸ್ಯದಿಂದ ಕೇಳಿದನು. "ಇಲ್ಲ, ಅವಳೇ ಜಗತ್ತು; ಅವಳೇ ಜಗತ್ತು ಹೇಗಿರುವದೆಂಬದನ್ನು ತೋರಿಸುವ ಗುರುತು" "ಹಾಗಾದರೆ ನೀನು ನಿಂತು ನೋಡಿದ್ದೇನು ?" "ನೆಲಕ್ಕೆ ಬಾಗಿದ ಆ ಬಂಗಾರದ ಕೈಯನ್ನು" "ಓ. ಹೋ !" ಈಗ ಇಬ್ಬರೂ ಊರ ತುದಿಗೆ ಬಂದರು. ಲಲಿತನ ಚಿತ್ತಕ್ಕೆ ಸಮಾಧಾನವೇ ಇಲ್ಲ. ತನ್ನ ಪ್ರಶ್ನೆಯನ್ನು ಬಿಡಿಸುವದರ ಸಲುವಾಗಿ ಗೋಣುಹೊರಳಿಸಿ ಹೊರಳಿಸಿ, ಅವನಿಗೆ ಚಳಕುಹಿಡಿದಂತೆ ಆಗಿತ್ತು, ಜಗತ್ತಿನ ಸಮಸ್ಯೆಯು ಹಾಗೆಯೇ ಉಳಿಯಿತು. "ಇನ್ನಂತೂ ಜನರು ಕಾಣದ ಹಾದಿಗೆ ಬಂದೆವು" ಎಂದು ಉದ್ಗಾರ ತೆಗೆದನು. "ಹೌದು, ನಮ್ಮ ಆಯುಷ್ಯದ ಒಂದು ತುದಿಯಿಂದ ಇನ್ನೊಂದು ತುದಿಗೆ ಹೋದರೂ ಜಗತ್ತಿನ ನೆಲೆಯೇ ಹತ್ತದು!" ಊರು ಬಿಟ್ಟು ಈಗೊಂದು ಮೈಲು ಬಂದರು. ಸುತ್ತುಮುತ್ತು ಗಿಡಗಳು ದೊಡ್ಡ [illegible] ತೋಟದಲ್ಲಿಯ ಲತಾಮಂಟಪದಂತೆ ಹಬ್ಬಿ ನಿಂತಿದ್ದವು. ಎಲ್ಲ ಕಡೆ [illegible] ಸದ್ದು. ಶುದ್ಧವಾದ ಹವೆ. ಕತ್ತಲೆಯು ಮುನ್ನೆರಳು ಬಿದ್ದಿ[illegible] ವಿಚಾರದ ಸೆಲ್ಲೆಯನ್ನು ಹೊದ್ದುಕೊಂಡು ನಡೆದಿರುವ [illegible]ತರನ್ನು ಹತ್ತಿರವೇ ಬರುತ್ತಿರುವ ಮೋಟರದ ಕೊಂಬು [illegible]ಸಿತು. ಅವಸರದಲ್ಲಿ ಲಲಿತ ಒಂದು ಬದಿಗೆ, ವಸಂತನು [illegible] ಬದಿಗೆ ಹೋಗಬೇಕಾಯಿತು. ಮೋಟಾರು ನಡುವೆ [illegible] ಅಷ್ಟರಲ್ಲಿಯೇ "ಅಲ್ಲಿ ನೋಡು, ಲಲಿತ, ಜಗತ್ತಿನ ಜ್ಞಾನವನ್ನು" ಎಂಬದಾಗಿ ವಸಂತನು ಕೂಗಿದನು. ಆಚೆಗೆ ಇರುವ ಲಲಿತ[illegible] ಮೋಟರದ ಚಕ್ರಗಳು ಹೊಡೆದೆಬ್ಬಿಸಿದ ಧೂಳಿಯ ಪರದೆ[illegible] ಹಿಂದಿನದಾವುದೂ ಕಾಣಿಸಲಿಲ್ಲ. ತಿರುಗಾಡಲಿಕ್ಕೆ ಬಂದ ಶ್ರೀ[illegible]ತನೆನಿಸಿಕೊಳ್ಳುವ ಸದ್ಗುಣಿಯು ಮುದುಕಿಯೊಬ್ಬಳಿಗೆ [illegible]ವಾದ ಕಟ್ಟಿಗೆಯ ಹೊರೆಯನ್ನು ಇಳಿಸುತ್ತಿದ್ದನು. ಲಲಿತ[illegible] ನಂತರ ನೋಡಿದನು. ಆದರೆ ವಸಂತನು ತಿಳಿದುಕೊಂಡದ್ದ[illegible] ಅವನು ತಿಳಿಯಲಿಲ್ಲ. ಇಬ್ಬರೂ ತಿರುಗಿದರು. ಹೆಚ್ಚುತ್ತಿರುವ ಕತ್ತಲೆಯು ಇಬ್ಬರನ್ನೂ ಬೇಗ ಮನೆಗೆ ಹಚ್ಚಿಕೊಟ್ಟಿತು.

ಮೂರನೆಯ ದಿವಸದ ಮೂರನೆಯ ಸಂಜೆ. ಬಹ[illegible] ಇದು ನಮ್ಮ ಕತೆಯಲ್ಲಿಯ ಕಡೆಯ ಸಂಜೆ. ಆದ[illegible] ಸಂಜೆಗಳಿಗಿಂತ ಈ ಇಳಿಹೊತ್ತು ಬಹಳ ಬೇರೆಯಾದ್ದು[illegible] ವಿದ್ಯಾಲಯವು ಬಿಡುವ ಹೊತ್ತಿಗೆ ದಟ್ಟ ನೀಲವಾದ ಮೋ[illegible]ಗಳು ಆಕಾಶದಲ್ಲಿ ಕೂಡಹತ್ತಿದ್ದವು. ಸೂರ್ಯನು ಹೇಳ[illegible]ದಾಗಿದ್ದನು. ಇದೇನೊ ಮಳೆಯ ಲಕ್ಷಣವಿದೆಯೆಂದು ನಾ[illegible] ಗಂಟೆಗೆ ಲಗುಬಗೆಯಿಂದ ಅದೇ ಲಲಿತವಸಂತರು ಕೂಡಿ[illegible] ಮನೆ ಕಂಡರು. ಮಳೆಯೂ ಆರಭಟೀವೃತ್ತಿಯಿಂದ ಆರ[illegible]ವಾಯಿತು. ಬಹಳ ದಿವಸಗಳಿಂದ ಚಿಂತೆಯಲ್ಲಿದ್ದ ಜ[illegible] ಈ ಸಂಜೆಯು ಮಳೆ ಬಂದದ್ದು ನೋಡಿ, ಮುಂದೆ ಹೊ[illegible]ಯಲ್ಲಿ ಬೀಳುವ ಅನ್ನ ಇಂದೇ ಬಿದ್ದಷ್ಟು ಸಂತುಷ್ಟರಾದ[illegible] 'ಬೇಸಿಗೆ ಬಿಸಿಲು ಹೊಡೆಯುವದೆಂಥ ಮಳೆಗಾಲ!' [illegible] ಈ ವರೆಗೆ ಜಗತ್ತಿನ ಋತುಮಾನವು ತಪ್ಪಿರುವದೆಂದು [illegible] ಕೊಂಡವರು ಈಗ ಸುಮ್ಮನಾದರು. ಎಲ್ಲ ಜನರ ಹೊಟ್ಟೆಯೊಳಗಿನ ಬೇನೆ ಹೋದವು. ಮಳೆರಾಯನೇ ವೈದ್ಯನ[illegible] ಬಂದಂತಾಯಿತು. ಒಂದೆರಡು ತಾಸಿನವರೆಗೆ ಮಳೆಗಳು [illegible] ಜಡಿದು ಬಿದ್ದಿತು. ನಡುಗುತ್ತ ಹಾದಿಯ [illegible] ಮುದುಡಿಕೊಂಡು ಕುಳಿತ ಜನರಿಗೆ ಏಳೆಂಟು [illegible] ಒಂದೇ ಸವನೆ ಮಳೆಯಾದಷ್ಟು ತಲೆಚಿಟ್ಟು ಆಯಿತು, ಮ[illegible] ತಟ್ಟನೆ ನಿಂತಿತು. ಕಾಲುವೆಗಳಲ್ಲಿ ಹರಿಯುವ ನೀರಿನ ತೊ[illegible]

ಹೊರತು ಮುಗಿಲಲ್ಲಿ ಮಳೆಯಾದ ಗುರುತು ಯಾವುದೂ ಉಳಿಯಲಿಲ್ಲ. ಮುಗಿಲೀಗ ಬಯಲಾಯಿತು. ಸೂರ್ಯನೊಬ್ಬನು ತುದಿಯಲ್ಲಿ ಜರದಂಗಿಯನ್ನು ಹಾಕಿಕೊಂಡು ಟೊಪ್ಪಿಗೆಗಾಗಿ ಸೆಟಗೊಂಡ ಬಾಲಕನಂತೆ ನಿಂತಿದ್ದನು. ನಮ್ಮ ಗೆಳೆಯರಿಬ್ಬರೂ ವಸಂತನ ಮನೆಯಲ್ಲಿದ್ದರು. ಮಳೆ ಮುಗಿದ ಮೇಲಿನ ದೃಶ್ಯವನ್ನು ಕಣ್ತುಂಬ ನೋಡಲಿಕ್ಕೆಂದು ಲಲಿತನು ಬಾಗಿಲದವರೆಗೆ ಎದ್ದು ಹೋದನು. ಸೃಷ್ಟಿಯ ಚೆಲುವು ಎದ್ದು ನಿಂತಂತಾಯಿತು. ಸೌಂದರ್ಯದಲ್ಲಿ ಯಾವಾಗಲೂ ಮುಖ್ಯವಾದ ಹೊಳಪು, ಹೊಸತನಗಳೆರಡೂ, ಸೂರ್ಯ ಕಿರಣವು ಮಳೆಹನಿಯೊಡನೆ ಆಡುವ ದೃಶ್ಯದಲ್ಲಿ ಕಂಡು ಬಂದವು. 'ವಸಂತಾ, ನಡೆ ಇನ್ನು ತಿರುಗಲಿಕ್ಕೆ' ಎಂದು ಒದರಿದನು. ಇಬ್ಬರೂ ಹೊರಬದಿಗೆ ಬಂದರು. 'ಮಳೆಯು ನಿಂತಿತೆನ್ನುವಿ ?' ವಸಂತನು ಆಕಾಶದ ಕಡೆಗೆ ನೋಡುತ್ತ ಕೇಳಿದನು. 'ನಿಲ್ಲದೆ ? ಮಳೆಯು ಬಿದ್ದು ಬಿದ್ದು, ಮೊಟ್ಟೆ ಹೊಡೆದು ದಣಿದ ಸೀಮೆಯ ಎತ್ತುಗಳಂತೆ ಸೋತುಹೋಗಿದೆ.'

'ಹೌದು, ಈ ಎತ್ತುಗಳಲ್ಲಿಯೇ ಜಗತ್ತಿನ ಸುಖವಿದೆ'

'ಅದನ್ನು ಕಂಡವರು ಯಾರು ?'

'ಎಷ್ಟೋ ಜನರು, ನಾವು ಎಲ್ಲವನ್ನು ಕಲಿತು, ಅದೊಂದನ್ನು ಕಂಡಿಲ್ಲ.'

'ಸಾಕು ಬಿಡು; ಬರಿಯ 'ಎಷ್ಟೋ ಜನರು, ಅನೇಕರು' ಅಂದರೆ ಆಯಿತೇನು ? ಅಂಥ ಒಬ್ಬನನ್ನಾದರೂ ಈ ಹೊತ್ತು ನನಗೆ ತೋರಿಸಬಾರದೇ ?'

'ತೋರಿಸಿದರೆ ?'

'ಆಗ ನಿನ್ನ ಜಗತ್ತು ಕಂಡವನೊಬ್ಬನಾದರೂ ಇರುವನೆಂದು ಒಪ್ಪುವೆನು.'

'ಯಾಕಾಗಲೊಲ್ಲದು.'

ಗೆಳೆಯರು ಹಾದಿಯ ಮೇಲೆ ಸಹ ಹರಿಯುವ ಹಳ್ಳಗಳಲ್ಲಿ ತಮ್ಮ ಪಾಪೋಸುಗಳನ್ನು ಎಳೆಯುತ್ತ ಮುಂದೆ ಮುಂದೆ ನಡೆದರು. ತನ್ನ ಕಾಲ್ಮರಿಗಳು ಮೊದಲೇ ಹಳೆಯವಾದ್ದರಿಂದ ವಸಂತನು ಬಹಳ ಜೋಕೆಯಿಂದ ನಡೆದಿದ್ದನು. ಅವನ ದೃಷ್ಟಿಯು ಕಾಲಮೇಲೆಯೇ ಇತ್ತು. ಆದರೆ ಲಲಿತನಿಗೆ ತನ್ನ ಜೋಡಿನ ಚಿಂತೆ ಯಾವುದೂ ಇಲ್ಲದ್ದರಿಂದ ಅವನು ತಪ್ಪಿಸಿ ತಪ್ಪಿಸಿ ವಸಂತನನ್ನು ನೋಡುತ್ತಿರುವನು. ಹಿಂದಿನ ದಿವಸದ ಹಾಗೆ ಅವನು ಏನೇನನ್ನು ನೋಡುತ್ತಿರುವನೆಂದು ಪರೀಕ್ಷಿಸುವನು. ಆದರೆ ಬೀದಿಯಲ್ಲಿ ಜನರ ಓಡಾಟವು ಇರಲೇ ಇಲ್ಲ. ಅಲ್ಲಲ್ಲಿ ಒಬ್ಬರು ಮೈಮುಡಿಚಿಕೊಂಡು ಮೆಲ್ಲಗೆ ಅಲೆದಾಡುತ್ತಿದ್ದರು. ಇಂಥದರಲ್ಲಿ ತನ್ನ ಪ್ರೀತಿಯ ಮನುಷ್ಯನನ್ನು ಕೆಳಗೆ ಮೋರೆ ಹಾಕಿದ ವಸಂತನು ಹೇಗೆ ತೋರಿಸುವನೆಂದು ಎಂದಿಲ್ಲದ ದಿಗಿಲು ಲಲಿತನಿಗೆ ಬಿದ್ದಿತ್ತು. ಮೊದಲಿನಂತೆ ಊರ ಹೊರಗೂ ಬಂದರು. ಈಗಂತೂ ವಸಂತನು ಬರಿಯ ಮಾತುಗಾರನೆಂದು ಲಲಿತನ ನಿಶ್ಚಯವಾಯಿತು. 'ಇನ್ನೇನು ತೋರಿಸುವಿ ?' ಎಂದು ತಾನು ಗೆದ್ದ ನಗೆಯ ಮುಖದಿಂದ ಕೇಳಿದನು. 'ಯಾಕೆ, ತೋರಿಸುವದು ಆಗದೇನು ?' ಎಂದು ವಸಂತನು ತಿರುಗಿ ಕೇಳಿದನು.

'ಕೋಟೆಯ ಅಗಸಿಯನ್ನು ದಾಟದ ಮೇಲೆ ಒಳಗಿದ್ದ ರಾಜನನ್ನು ತೋರಿಸುವೆನೆಂದಂತಾಯಿತು.'

'ನಾನು ತೋರಿಸಬೇಕಾದವನು ರಾಜನಲ್ಲವೇ ಅಲ್ಲ.'

'ಅವನು ಏನಿರುವನು ?'

'ದೇವರು ಮಾಡಿದ ಮನುಷ್ಯನು.'

'ರಾಜನು ಮನುಷ್ಯನಲ್ಲವೇನು ?'

'ಅವನು ಅಮಾನುಷನು ! ನಿಮ್ಮ ಲೆಖ್ಖದಂತೆ ಅವನು ಮನುಷ್ಯರ ಬಟ್ಟೆಯಲ್ಲಿ ಬರುವದಿಲ್ಲ.'

'ಈ ಮನುಷ್ಯನೆಂದರೆ ಹೇಗಿರುವನು?'

'ಗಾಳಿಯು ಹೊಡತಕ್ಕೆ ಸಿಕ್ಕ ಬಕುಲದ ಅರಳು, ನೆಲಕ್ಕೆ ಬಿದ್ದು ಮಣ್ಣಾಗಿ ಜನರ ಕಾಲ ತುಳಿತಕ್ಕೆ ಗುರಿಯಾಗಿ, ಅವರ ಉಗುಳುಗಳನ್ನು ಧರಿಸಿಯೂ ಹೇಗೆ ಹೃದಯದಲ್ಲಿ ಕಂಪುಳ್ಳದ್ದಾಗಿರುವದೋ ಹಾಗೆ ಈ ಮನುಷ್ಯನಿರುವನು. ಇವನು ಬಾಡಿದಂತೆ ಕಂದಿದಂತೆ ಕೀಳೆಂದು ಬಗೆದಂತೆ ಇವನ ಕಂಪು ಹೆಚ್ಚುತ್ತದೆ !'

'ನೀನು ಇವನನ್ನು ನೋಡಿರುವೆಯೇನು ?'

'ಕೀಳೆಂದು ಬಗೆದವರನ್ನು ಲಕ್ಷಾವಧಿ ನೋಡಿರುವೆನು, ಕಂಪುಳ್ಳವರನ್ನು ನೋಡಿದ್ದು ಕಡಿಮೆ.'

'ಅಂದರೆ ನನಗೆ ಹೇಗೆ ತೋರಿಸುವೆ ?' 'ನೋಡೋಣ.'

ಈ ಹೊತ್ತಿಗೆ ಸರಿಯಾಗಿ ವಸಂತನ ಕಾಲ್ಮರಿಯ ಅಂಗುಷ್ಠವು ಕಿತ್ತಿತು. ಈಗವನು ಸುತ್ತು ಮುತ್ತು ನೋಡಬೇಕಾಯಿತು. ಹಾದಿಯ ಬಲಕ್ಕೆ ಸಮಗಾರನನೊಬ್ಬನು ಕುಳಿತಿದ್ದ. ಅವನಿಗೆ ಅಂಗುಷ್ಠವನ್ನು ಹಚ್ಚಲಿಕ್ಕೆ ಕೊಟ್ಟು ಇಬ್ಬರೂ ನಿಂತಿ

ರಲು 'ಎಪ್ಪ, ಒಂದು ದುಡ್ಡು ಕೊಡ್ರಿ. ಈವತ್ತ ದೇವ್ರು ಬಂದ. ಲೋಕಕ್ಕೆ ಸಂತೋಶ ಎಪ್ಪ' ಎಂಬ ದೀನವಾಣಿಯು ಹಸಿಯಾದ ನೆಲದಿಂದ ಬಂದಂತೆ ಬಂದಿತು. ವಸಂತನು ಈ ಭೂವಾಣಿಯು ಎಲ್ಲಿಂದ ಬಂದಿತೆಂದು ನೋಡಿದನು. ಕಣ್ಣು ಕಾಣಿಸದ ತಿರುಕರವನೊಬ್ಬನು ಸಮಗಾರನ ಹತ್ತಿರವೇ ಕುಳಿತಂತೆ ಕಂಡಿತು. ಅವನು ಹೊತ್ತುಕೊಂಡು ಮಲಗಿದವನು ಈಗ ಎದ್ದು ಕುಳಿತಿದ್ದನು. 'ಯಾವ ದೇವ್ರೋ!' ಎಂದು ವಸಂತನು ಕೇಳಿದನು. 'ಮಳೆರಾಯ, ಎಪ್ಪಾ' ಎಂದು ತಂಡಿಯಲ್ಲಿ ಗಡಗಡ ನಡುಗುತ್ತಿದ್ದರೂ ಒಂದು ತರದ ಸೋತು ಹೋದ ಜೀವನದ ಮುಗುಳ್ನಗೆಯಿಂದ ಆಡಿದನು. ಅಂಗು ಪ್ರವು ಹೆಚ್ಚಿ ಆಯಿತು, ವಸಂತನಿಗೆ ಆ ಲಕ್ಷ್ಯವೇ ಇಲ್ಲ. ಕೂಡಲೆ ಕಿಸೆಯೊಳಗಿನ ದುಡ್ಡೊಂದನ್ನು ಕುರುಡನ ಕೈಯಲ್ಲಿ ಒಗೆದನು. 'ಎಂಥ ಮರುಳು ನೀನು, ಬೇಗ ನಡೆ' ಎಂದು ಲಲಿತನು ಕರೆದನು. ವಸಂತನು ಮಾತ್ರ ಹಾಗೆಯೇ ನೋಡುತ್ತ ನಿಂತನು. ದೂರದಿಂದ ಆಡು ಒಂದು ಓಡುತ್ತ ಕುರುಡನ ಬಳಿಗೆ ಬಂದಿತು. 'ಬಾ ನನ್ನ ಮಗನೇ' ಎಂದು ಕುರುಡನು ತಲೆಯಾಡಿಸಿ ತನ್ನ ಮುಂದೆ ಕೂಡಿಸಿಕೊಂಡನು. 'ಈ ಆಡು ಎಲ್ಲಿಯದೋ?' ಎಂದು ವಸಂತನು ಕೇಳಿದನು. 'ಇದು ನಾ ಸಾಕಿದ್ದು ಎಪ್ಪಾ, ದೇವರು ಇದೊಂದ ಉಳಿಸ್ಯಾನ ಹಚ್ಚಿಗೋಳಿಕ್ಕೆ' ವಸಂತನ ಕುತೂಹಲವು ಹೆಚ್ಚಿತು. ಲಲಿತನು ಕೆಲಹೊತ್ತು ಅವನ ಗೋಜಿಗೆ ಹೋಗದೆ ಗಿಡಗಳ ಮೇಲಿನ ಮುತ್ತುಹನಿಗಳನ್ನು ನೋಡುತ್ತ ನಿಂತನು. ಸಮಗಾರನು ಚಪ್ಪಲಿಗಳನ್ನು ಸರಿಪಡಿಸಿ ಬಿಲ್ಲಿಯ ದಾರಿ ಕಾಯುತ್ತ ಕುಳಿತಿದ್ದನು. ಇತ್ತ ಕುರುಡನು ತನ್ನ ಮಗ್ಗುಲಿಂದ ಹಿಡಿ ಹುಲ್ಲು ತೆಗೆದು ತನ್ನ ಮುಂದೆ ಕುಳಿತಿರುವ ಆಡಿಗೆ ಕಡ್ಡಿಕಡ್ಡಿಯನ್ನು ಹಿಡಿದು ತಿನಿಸತೊಡಗಿದನು. ಆಡು ಅದನ್ನು ತಿನ್ನುತ್ತಿರಲು ಅತ್ಯಂತ ಸ್ನೇಹದಿಂದ ಎಡಗೈಯನ್ನು ಅದರ ಮೇಲಾಡಿಸುವನು.

'ನಿನ್ನ ಬಂಧು ಬಳಗ ಯಾರೂ ಇಲ್ಲವೇನು?' ವಸಂತನು ಇನ್ನೊಂದು ಪ್ರಶ್ನೆ ಕೇಳಿದನು. 'ಎಲ್ಲರೂ ಇದ್ರು ಎಪ್ಪಾ, ಹುಟ್ಟುಗುರುಡ ಆದ್ರೂ, ದೇವ್ರು ನನ್ಗ ಒಳ್ಳೇ ಹೊಲ, ಒಳ್ಳೇ ಮನಿ, ಒಳ್ಳೇ ಬುದ್ಧಿ ಎಲ್ಲ ಕೊಟ್ಟಿದ್ದ. ಮೋಸಾ ಮಾಡಿ ಕಳ್ರು ಎಲ್ಲಾ ಹಾಳ್ ಮಾಡಿದ್ರು. ಹೆಂಡ್ರು ಮಕ್ಕಳು ದೇವರ ಕಂಡ್ರು. ಎಪ್ಪ ನಾ ನಬ್ಬುವ ಕುರುಡ ಆಗಿ ಬಾಳಿ ಮ್ಯಾಲೆ ಇದ್ದೀನಿ?'

ವಸಂತನ ಮೈ ಜುಮ್ಮೆಂದಿತು. ಎದೆಗೆ ಏನೋ ನೋವಿನ ಬರಿಯನ್ನು ಕೊಟ್ಟ ಹಾಗೆ ಆಯಿತು. 'ಲಲಿತ, ನನ್ನ ಮನುಷ್ಯನು ಇಲ್ಲಿರುವನು ನೋಡೋ' ಎಂದು ಉತ್ಸಾಹದಿಂದ ಹೇಳಲು, ಹೇಳಿದ್ದಕ್ಕಾಗಿ ಲಲಿತನು ಮೊದಲು ನೋಡಿದನು, ಮುಂದೆ ತಾನೇ ನೋಡತೊಡಗಿದನು. 'ಇವನದೆಂಥ ಹಚ್ಚಿಕೊಳ್ಳುವ ಜೀವ; ವಸಂತ, ತಾನು ಮೊದಲೇ ಕುರುಡ ಅದರಲ್ಲಿ ಆಡು ಬೇರೆ ಸಾಕಿದ್ದಾನೆ' 'ಇದೇ ಜಗತ್ತಿನ ಮೋಜು, ಲಲಿತ' ಎಂದು ವಸಂತನಾಡುತ್ತಿರಲು, ಲಲಿತನು ಧಾವಿಸಿ ಹೋಗಿ ತನ್ನದೊಂದು ದುಡ್ಡನ್ನು ಕುರುಡನ ಕೈಯಲ್ಲಿ ಒಗೆದು 'ಇದು ನಿನ್ನ ಆಡಿಗೆ' ಎಂದು ಹೇಳಿದನು. ಸಮಗಾರನ ವ್ಯವಹಾರವನ್ನು ತೀರಿಸಿ ಇಬ್ಬರೂ ಮುಂದೆ ನಡೆದರು. ಇಬ್ಬರಿಗೂ ನಿಜವಾದ ಆನಂದವಾಗಿತ್ತು. ಇಬ್ಬರೂ ಈ ಸಂಜೆಯಲ್ಲಿ ಒಂದೇ ಮನಸ್ಸಿನವರಾಗಿದ್ದರು. 'ಈ ಭಿಕ್ಷುಕ ಬುದ್ಧನ ಮುಗುಳುನಗೆಯನ್ನು ನೋಡಿದೆಯಾ' ವಸಂತ ಸ್ವಲ್ಪ ಮುಂದೆ ಹೋದ ಮೇಲೆ ಕೇಳಿದನು.

'ನೋಡಿದೆನು'

'ಹಾಗಾದರೆ ಜಗತ್ತು ಕಂಡವರಾರು ತಿಳಿಯಿತೇ?'

'ತಿಳಿಯಿತು' 'ಯಾರು?' 'ಇದೇ ನಾವು ಕಂಡ ಕುರುಡನು!' ಇಬ್ಬರೂ ಹಬ್ಬುತ್ತಿರುವ ಸಂಜೆಗತ್ತಲೆಯಲ್ಲಿ ಜೀವನದ ಬೆಳಕು ಕಂಡರು.



# ಕರ್ನಾಟಕದ ಕಲೆ

## ಗುರ್ಲಹೊಸೂರಿನ ಕರ್ಜಗಾರರು

ನಮ್ಮ ಗುಡಿಗಳು ಬಂಗಲೆಗಳಾಗಹತ್ತಿವೆ. ದೇವತಾ ವಿಗ್ರಹಗಳು ಸಭ್ಯಗೃಹಸ್ಥರ (Gentlemen) ಪ್ರತಿಬಿಂಬ ಗಳಾಗಹತ್ತಿವೆ. ರುಚಿಯೂ ದೃಷ್ಟಿಯೂ ಬದಲಾವಣೆ ಹೊಂದಿವೆ. ಆದರೆ ಈ ಬದಲಾವಣೆಯು ನಮ್ಮಲ್ಲಿಯೆ ಹುಟ್ಟಿ ನಮ್ಮಲ್ಲಿಯೆ ಬೆಳೆದಿದ್ದರೆ ಅದರಿಂದ ನಮಗೆ ಅಷ್ಟು ಕೇಡುಂ ಟಾಗುತ್ತಿರಲಿಲ್ಲ. ನಮ್ಮ ರಾಷ್ಟ್ರೀಯಪರಾಭವದೊಡನೆ ಎಲ್ಲ ಮಾತಿನಲ್ಲಿಯೂ ಪರಾಭವಪರಂಪರೆಯು ಬೆನ್ನು ಹತ್ತಿದೆ. ಹಳೆಯ ವಾಸ್ತುಕಲೆ ಹೋಯಿತು, ಶಿಲ್ಪಕಲೆ ಹೋಯಿತು, ಚಿತ್ರಕಲೆ ಹೋಯಿತು. ಕಲೆಯು ಹೋಯಿತೆಂದರೆ ಕಳೆಯೇ ಹೋದಂತೆ. ನಮ್ಮ ಮನೆಯೇನು ಗುಡಿಯೇನು ರೇಲ್ವೇ ಸ್ಟೇಶನ್ನಿನಂತೆಯೆ ನೀರಸವಾಗಿವೆ. ನಮ್ಮ ಜೀವನದಲ್ಲಿ ಮತ್ತೆ ರಸವು ತುಂಬಬೇಕಾದರೆ ವಾಯುಭಕ್ಷಣವನ್ನು ಬಿಟ್ಟು ಅನ್ನ ವನ್ನುಣಬೇಕು. ಪರದೇಶದ ಅನುಕರಣವನ್ನು ಬಿಟ್ಟು ಸ್ವದೇ ಶದ ರೀತಿಗಳಲ್ಲಿಯೇ ರುಚಿಗೆ ಅನುಸಾರವಾಗಿ ಪಲ್ಲಟವನ್ನುಂಟು ಮಾಡಿಕೊಳ್ಳಬೇಕು.

ಈ ಸಲ ಮುಖಚಿತ್ರವನ್ನಾಗಿ ಕೊಟ್ಟ ಮೂರ್ತಿಯನ್ನು ರಚಿಸಿದ ಶಿಲ್ಪಿಯು ಗುರ್ಲಹೊಸೂರಿನ ಕರ್ಜಗಾರ ವಿಠ್ಠಪ್ಪನು. ಇವನ ಮಕ್ಕಳು ಚಿದಂಬರ ಶಂಕರರೆಂಬುವವರು ಈಗೂ ಶಿಲ್ಪಿ ಗಳಾಗಿಯೇ ಕೆಲಸಮಾಡುತ್ತಿರುವರು. ಈಗ ಒಂದು ವರ್ಷದ ಪೂರ್ವದಲ್ಲಿ ಈ ಅಣ್ಣತಮ್ಮಂದಿರು ೨ ಕಟ್ಟಿಗೆಯ ಮೂರ್ತಿ ಗಳೊಂದಿಗೆ ಧಾರವಾಡಕ್ಕೆ ಬಂದಿದ್ದರು. ಆ ಮೂರ್ತಿಗ ಳಲ್ಲಿ ಒಂದು ಭಿಲ್ಲತಿಯ ವೇಷದ ಪಾರ್ವತಿಯು ಶಂಕರನನ್ನು ಒಲಿಸಲು ಬಂದ ಸಂದರ್ಭದ್ದು ; ಇನ್ನೊಂದು ವನವಾಸದ ಲ್ಲಿದ್ದ ಸೀತಾರಾಮಲಕ್ಷ್ಮಣರದು. ಎರಡೂ ಮೂರ್ತಿಕಲಾ ಪಗಳು ಸಲಕ್ಷಣವಾಗಿದ್ದವು. ಅವುಗಳನ್ನು ಕಲಾಪ್ರೇಮಿಗ ಳಾದ ಔಂಧದ ಒಡೆಯರು ಕೊಂಡರು. ಈ ಅಣ್ಣತಮ್ಮಂದಿ ರಲ್ಲಿ ತಂದೆಯ ಗುಣವೇ ಇಳಿದು ಬಂದಿದೆ—ಅದೇಕೆ, ಅದು ಮನೆತನದ ಗುಣವೇ ಎಂದು ಹೇಳಬಹುದು. ಈ ಮನೆತ ನವು ಮೂಲತಃ ಧಾರವಾಡ ಜಿಲ್ಲಾ ಕರ್ಜಗಿಯದಂತೆ. ಅದನ್ನು ಬಿಟ್ಟು ಈ ಮನೆತನದವರು, ಗುರ್ಲಹೊಸೂರಿನಲ್ಲಿ ಕೆಲಕಾಲ ಕಿತ್ತೂರ ಸಂಸ್ಥಾನದಲ್ಲಿಯೂ, ಅದಕ್ಕೂ ಪೂರ್ವದಲ್ಲಿ, ನರಗುಂದ ಸಂಸ್ಥಾನದಲ್ಲಿಯೂ ಅದಕ್ಕೂ ಪೂರ್ವದಲ್ಲಿ ಎರಡ ನೆಯ ಬಾಜೀರಾಯನಿಗೆ ಗುರುಗಳಾಗಿದ್ದ ಶ್ರೀ ಚಿದಂಬರ ದೀಕ್ಷಿತರ ಗುರ್ಲಹೊಸೂರ ಸಂಸ್ಥಾನದಲ್ಲಿಯೂ ಇದ್ದರು. ನಾವು ಈ ಸಲ ಕೊಟ್ಟ ಚಿತ್ರವಾದರೂ ಶ್ರೀ ಚಿದಂಬರ ದೀಕ್ಷಿ ತರ ಶಿಲಾಮೂರ್ತಿಯದು. ಅದರ ಎಡಬಲದ ಮೂರ್ತಿಗಳು ಶ್ರೀ ದೀಕ್ಷಿತರ ಹೆಂಡಂದಿರವು. ಈ ಮೂರ್ತಿಶಿಲ್ಪಪದ್ಧತಿ ಯಲ್ಲಿ ಆಧುನಿಕ ಛಾಯೆಯಿರುವದಾದರೂ, ಪೇಶ್ವಾಯಿ ಕಾಲದ ಅನೇಕ ಮೂರ್ತಿಗಳ ಪದ್ಧತಿಯಲ್ಲಿ ಇದು ರಚಿತವಾ ಗಿದೆ. ಈ ಮನೆತನದವರಿಗೆ ಕರ್ನಾಟಕ ಪದ್ಧತಿಯ ಶಿಲ್ಪವೂ ಬರುವದು. ಮುನವಳ್ಳಿಯಲ್ಲಿ ಮೊನ್ನೆ ಮೊನ್ನೆ ವೆಂಕಟೇಶನ ಮೂರ್ತಿಯೊಂದನ್ನು ಇವರೇ ಮಾಡಿರುವರು.

ಇವರಂತೆಯೆ ಕರ್ನಾಟಕದಲ್ಲಿ ಅಲ್ಲಲ್ಲಿ ಪ್ರಾಚೀನ ಸಂಪ್ರ ದಾಯವನ್ನು ಕಾಯ್ದುಕೊಂಡು ಬಂದಿರುವ ಮನೆತನಗಳಿಗೆ ಜನರಿಂದ ಪ್ರೋತ್ಸಾಹವು ದೊರೆತಲ್ಲಿ ನಮ್ಮ ಕಲಾಭಿವೃದ್ಧಿಗೆ ಬಹಳೇ ಪುಷ್ಟಿ ಬರುವದರಲ್ಲಿ ಸಂದೇಹವಿಲ್ಲ.

(ಈ ಚಿತ್ರದ ಪಡಿಯಚ್ಚನ್ನು ಕೃಪೆಯಿಂದಿತ್ತ ಶ್ರೀ ಚಿದಂ ಬರ ಭಕ್ತರಾದ ಧಾರವಾಡದ ಶ್ರೀಯುತ ದೇವಜೀ ಬಾಬೂ ಮುತಾಲಿಕ ಇವರಿಗೆ ನಾವು ಉಪಕೃತರಾಗಿದ್ದೇವೆ.)

# ಜನಪದ-ಸಾಹಿತ್ಯ



[ ಜನಪದಸಾಹಿತ್ಯವು ಜನರಿಗೆ ಅತ್ಯಂತ ಪ್ರಿಯವಾಗಹತ್ತಿದೆಯೆಂದು ಅನೇಕರು ಪತ್ರಗಳನ್ನು ಬರೆದಿದ್ದಾರೆ. ಅಂಥವುಗಳಲ್ಲಿ ಕೆಳಗೆ ಪ್ರಕಟಿಸ... ಶ್ರೀ. ತೀ. ನಂ. ಶ್ರೀಕಂಠಯ್ಯನವರ ಪತ್ರವೂ ಒಂದು. ಈಗಾಗಲೇ ನಮ್ಮ ಕಡೆಗೆ ೨೦ ಜನರು ಸುಮಾರು ೭೦೦ ಪದ್ಯ (೨೦೦೦ದ ಮೇಲೆ ಸಾಲು) ಗಳ... ಕಳಿಸಿದ್ದಾರೆ. ಇವರೆಲ್ಲರಿಗೂ ನಾವು ಕೃತಜ್ಞರಾಗಿದ್ದೇವೆ. ಈ ಸಾಹಿತ್ಯದ ಪ್ರೇಮಿಗಳಾದ ಶ್ರೀಮಂತರು ಸಹಾಯಮಾಡಿದಲ್ಲಿ ಇದನ್ನು ದೊಡ್ಡ ಹಾ... ಸಣ್ಣ ಪುಸ್ತಕಗಳ ರೂಪವಾಗಿ ಬೇಗನೆ ಪ್ರಕಟಿಸಬೇಕೆಂದು ಇಚ್ಛೆಯಿದೆ.

— ಸಂ. ಜ. ಕ.]

ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಲೆಕ್ಚರ ರಾದ ಮ|| ರಾ|| ರಾ|| ತೀ. ನಂ. ಶ್ರೀಕಂಠಯ್ಯನವರು ಬರೆಯುವದೇನಂದರೆ:—

"ಸಂಪಾದಕರ ಸನ್ನಿಧಿಯಲ್ಲಿ,

ವಿಜ್ಞಾಪನೆಗಳು.

ತಾವು 'ಜಯಕರ್ನಾಟಕ'ದಲ್ಲಿ ಪ್ರಕಟಿಸುತ್ತಿರುವ 'ಜನಪದ-ಸಾಹಿತ್ಯ' ಭಾಗವು ನನ್ನ ಮನಸ್ಸಿಗೆ ಮೆಚ್ಚಾಯಿತು. ಹೊಸ ಸಂಚಿಕೆ ಬರುವುದೇ ತಡ, ಅದನ್ನು ಮೊದಲು ಕುತೂಹಲದಿಂದ ಹುಡುಕಿ ತೆಗೆಯುತ್ತೇನೆ ; ಓದಿ ಓದಿ ಆನಂದಿಸುತ್ತೇನೆ. ನಮ್ಮ ಜನಸಾಮಾನ್ಯದಲ್ಲಿ ಹುಲುಸಾಗಿ ಹುಟ್ಟಿ ಹರಡಿಕೊಂಡು, ಈಗ ಮರೆಯಾಗುತ್ತಿರುವ ಈ ಸಹಜ ಕವಿತೆಯ ಕುಸುಮಗಳನ್ನು ಮಾಲೆಗಟ್ಟಲು ತಾವು ಮಾಡುತ್ತಿರುವ ಪ್ರಯತ್ನಗಳನ್ನು ಎಷ್ಟು ಹೊಗಳಿದರೂ ಸಾಲದು. ಇದುವರೆಗೆಲ್ಲಾ ತಮ್ಮ ಪ್ರಾಂತದವರೇ ಹಾಡುಗಳನ್ನು ಕಲೆಹಾಕಿ ಕಳುಹಿಸುತ್ತಿರುವಂತೆ ತೋರುತ್ತದೆ. ನಮ್ಮ ಕಡೆಯಲ್ಲೂ ಇಂಥ ಹಾಡುಗಳು ಹಲವುಂಟು. ಈ ಬಗೆಯ ಸಾಹಿತ್ಯಸೇವೆಗೆ ಮೈಸೂರಿನವರೂ ನೆರವಾಗಬೇಕಾದದ್ದು ಅಗತ್ಯವೆಂದು ನನಗೆ ತೋರಿತು. ಆದರಿಂದ, ನಾನು ಕೇಳಿರುವ ಜೋಗುಳದ ಹಾಡುಗಳಲ್ಲಿ ಸ್ವಾರಸ್ಯವುಳ್ಳ ಕೆಲವನ್ನು ಮಾತ್ರ ಆಯ್ದು ವಿಂಗಡಿಸಿ ತಮಗೆ ಕಳುಹಿಸಿದ್ದೇನೆ.

ಈ ಹಾಡುಗಳಿಗೆ ನಿಶ್ಚಿತವಾದ ಒಂದು ಪಾಠವಿಲ್ಲ. ಇವು ಒಬ್ಬೊಬ್ಬರ ಬಾಯಲ್ಲಿ ಒಂದೊಂದು ರೂಪವನ್ನು ತಾಳುತ್ತವೆ ಇದಲ್ಲದೆ, ಹಾಡುತ್ತಿರುವ ಹೆಂಗಸು ಹಾಡಿನೊಳಗಿನ ಪದಗಳನ್ನು ಸಂದರ್ಭಕ್ಕೆ ತಕ್ಕಂತೆ ಮಾರ್ಪಡಿಸಿ ಸಮಸ್ಯಾಪೂರಣವನ್ನು ಮಾಡುವುದೂ ಉಂಟು. ಉದಾಹರಣೆಗೆ ಕಂದಯ್ಯ ಎಂದು ಇರುವಂತೆ ಪುಟ್ಟುಡುಗ ಎಂದು ಹೇಳಬಹುದು. ಲಾಲಿಸು... ಮಗು ಹೆಣ್ಣಾದರೆ, 'ಕಂದಮ್ಮ' 'ಪುಟ್ಟುಡುಗಿ' ಎನ್ನಬಹು... ಅಥವಾ ಆ ಮಗುವಿನ ಹೆಸರನ್ನೇ ಹಾಡಿಗೆ ಹೊಂದಿಸಿಕೊಂ... 'ಅಳಬೇಡ ರಂಗಯ್ಯ ಆರಳುಂಡೆ ಕೊಟ್ಟೇನು' ಎಂದೋ 'ಅಳಬೇಡ ಸೀತಮ್ಮ' ಎಂದೋ, ಹೇಳಿಕೊಂಡು ಸು... ಬಹುದು; ತೂಗುವಾಕೆ ಮಗುವಿನ ತಾಯಾದರೆ, 'ಅವ... ಜೋಗುಳವ ಹಾಡ ತೊಡಗ್ಯಾಳು' ಎನ್ನಬಹುದು; ಇಲ್ಲವಾ... 'ಅವರಕ್ಕ' 'ಅವರತ್ತೆ' ಎಂದು ವ್ಯತ್ಯಾಸಮಾಡಿಕೊಳ್ಳಬಹು... ಹೀಗಾಗಿ, ಮೂಲಪಾಠವನ್ನು ನಿರ್ಣಯಿಸುವುದು ಶ್ರಮಸಾ... ಕೆಲವು ಕಡೆಗಳಲ್ಲಿ ಅಸಾಧ್ಯ. ಆ ಕಾರ್ಯಕ್ಕೆ ಕೈಹಾಕಬೇಕಾ... ದೇಶದ ಮೂಲೆಮೂಲೆಗಳಿಂದ ಹಾಡುಗಳ ಪಾಠಗಳ... ಮೊದಲು ಸಂಗ್ರಹಿಸಬೇಕು. ಬಳಿಕ ಅವುಗಳನ್ನು ಶೋಧಿ... ನಿಜವಾದ ಮೂಲಪಾಠವು ಹೊರಟರೂ ಹೊರಡಬಹು... ಪ್ರಯತ್ನವು ಮಾತ್ರ ನಿಷ್ಫಲವಾಗಲಾರದು. ಇತ್ತಕಡೆಗೆ ನ... ವಿದ್ವಾಂಸರ ಗಮನವು ಹರಿಯಬೇಕು. ಒಂದು ಪ್ರಾ... ಕಾವ್ಯವನ್ನು ಪರಿಷ್ಕರಿಸಿ ಮುದ್ರಿಸುವುದಕ್ಕಿಂತಲೂ ಇದು ಹೆ... ಕಷ್ಟದ ಕೆಲಸ ; ಬಹುಶಃ ಹೆಚ್ಚು ಪ್ರಯೋಜನದ ಕೆಲಸ...

ಈ ಜೋಗುಳದ ಹಾಡುಗಳೆಲ್ಲಾ ತ್ರಿಪದಿಯ ಧಾಟಿಯ... ಆಂದರೆ, ಇವುಗಳ ಛಂದಸ್ಸಿನ ರೀತಿ ಮಾತ್ರಾಗಣನಿಯ... ಹೊಂದತಕ್ಕದ್ದಲ್ಲ. ತ್ರಿಪದಿಯನ್ನು ಓದುವ ಹಾಗೆ ಇಲ್ಲಿ ಕೆ... ಕಡೆ ಸ್ವರಗಳನ್ನು ದೀರ್ಘವಾಗಿ ಉಚ್ಚರಿಸಬೇಕು ; ಕೆ... ಕಡೆ ಮೊಟಕುಮಾಡಬೇಕು; ಕೆಲವು ಕಡೆ ತೇಲಿಸಿ ಬಿಡ... ಇದರ ಜೊತೆಗೆ ಈ ಪದ್ಯಗಳಲ್ಲಿ ಛಂದೋದೋಷಗಳೂ ಹೇ... ಸೇರಿಕೊಂಡಿವೆ. ಇದನ್ನೆಲ್ಲಾ ಸರಿಪಡಿಸಬೇಕಾದರೆ ಪ್ರ... ದಲ್ಲಿರುವ ಪಾಠಾಂತರಗಳನ್ನು ನೋಡುವುದು ಅಗತ್ಯ... ಇನ್ನೊಂದು ಸ್ವಾರಸ್ಯದ ಮಾತನ್ನು ಹೇಳಬೇಕು. ಈ ಹಾಡು... ಧಾಟಿ ತ್ರಿಪದಿಯದಾದರೂ ಇವುಗಳನ್ನು ಹಾಡುವಾಗ...

ನೆಯ ಪಾದದ ಮೊದಲ ಮೂರು ಗಣಗಳನ್ನು ಮುಂಚೆ ಹೇಳಿ ಬಳಿಕ ಎರಡನೆಯ ಪಾದವನ್ನೆಲ್ಲಾ ತಿರುಗಿ ಹೇಳುವ ಪದ್ಧತಿಯಿಲ್ಲ. ಈಗ ಕೊಟ್ಟಿರುವ ಪಾಠದಲ್ಲಿರುವಷ್ಟನ್ನೇ ಹಾಡುತ್ತಾರೆ.

ಇಲ್ಲಿ ಶಬ್ದಗಳ ರೂಪವನ್ನು ಹೇಗೆ ಕೊಡಬೇಕೆಂದು ಬಲು ಯೋಚಿಸಬೇಕಾಯಿತು. ಕಡೆಗೆ, ಈಗ ಅವುಗಳನ್ನು ಉಚ್ಚರಿಸುವುದು ಹೇಗೋ ಸಾಧ್ಯವಾದಮಟ್ಟಿಗೆ ಹಾಗೆಯೇ ಬರೆಯುವುದು ಉತ್ತಮವೆಂದು ನಿರ್ಧರಿಸಿದ್ದಾಯಿತು. ಇಲ್ಲಿ ಮುಖ್ಯವಾಗಿ, ಸ್ವರಗಳನ್ನು ಎಳೆಯುವುದರ ಕಡೆಗೂ ತೇಲಿಸುವುದರ ಕಡೆಗೂ ಗಮನಕೊಟ್ಟಿದೆ. ಈ ಕಾರಣದಿಂದ 'ಕರೆದೆವು' ಎಂಬ ಪದವು 'ಕರದೇವು' ಎಂಬ ರೂಪವನ್ನು ತೊಟ್ಟಿದೆ; ಪ್ರತಿಪಾದದ ಕೊನೆಯಲ್ಲೂ ಸ್ವರವನ್ನು ನಿಯತವಾಗಿ ದೀರ್ಘಗೊಳಿಸುವುದರಿಂದ ಆ ಅಂಶವನ್ನು ಬರೆವಣಿಗೆಯಲ್ಲಿ ನಿರೂಪಿಸುವುದಕ್ಕೆ ಅವಶ್ಯಕತೆ ತೋರಲಿಲ್ಲ. ಅಂತು, ಹೆಂಗಸರು ಇವುಗಳನ್ನು ಹೇಗೆ ಹಾಡುತ್ತಾರೆ ಎನ್ನುವುದನ್ನು ತಿಳಿಯಪಡಿಸುವುದು ಈ ವಿಧಾನದಿಂದ ಸುಲಭವಾಯಿತು. ಜನಪದಸಾಹಿತ್ಯವನ್ನು ಅಚ್ಚುಹಾಕಿಸುವುದಲ್ಲಿ ಯಾವ ಕ್ರಮವನ್ನು ಅವಲಂಬಿಸಬೇಕೆಂದು ಬಲ್ಲವರು ನಿಷ್ಕರ್ಷಿಸುವವರೆಗೆ ಈ ಪದ್ಧತಿಯೇ ಉತ್ತಮವೆಂದು ತೋರುತ್ತದೆ.

ಆದರೆ ಒಂದು ಮಾತನ್ನು ಹೇಳಬೇಕು. ಕೆಲವು ಕಡೆಗಳಲ್ಲಿ ಉಚ್ಚಾರಣೆಯೇ ಅಸ್ಪಷ್ಟವಾಗಿರುತ್ತಿತ್ತು; ಅಂಥ ಸಂದರ್ಭದಲ್ಲಿ 'ತೊಟ್ಟಿಲು' ಎಂಬಂತೆ ಶುದ್ಧರೂಪವನ್ನು ಕೊಟ್ಟಿದ್ದೇನೆ. ಇಂಥ ಕಡೆಗಳಲ್ಲಿ ತಪ್ಪು ಪಾಠವನ್ನು ಕೊಡುವುದರಲ್ಲಿ ಪ್ರಯೋಜನವು ಕಡಮೆಯೆಂದು ತೋರಿತು. ಆದರೂ ಎಲ್ಲಾ ಕಡೆಗಳಲ್ಲೂ ಅಶುದ್ಧ ರೂಪಗಳನ್ನು ತಿದ್ದುವ ಸಾಹಸಕ್ಕೆ ಹೋಗಿಲ್ಲ. ಒಂದು ಪದ್ಯಕ್ಕೆ ಎರಡು ಮೂರು ಪಾಠಗಳು ಗೊತ್ತಾದ ಕಡೆ, ಛಂದಸ್ಸು ಅರ್ಥಪುಷ್ಟಿ ಇವನ್ನು ದೃಷ್ಟಿಯಲ್ಲಿಟ್ಟುಕೊಂಡು ಒಂದು ಪಾಠವನ್ನು ಅಂಗೀಕರಿಸಿದ್ದೇನೆ. ಆದರೆ ಪಾಠಾಂತರಗಳನ್ನು ಸೂಚಿಸುವ ಗೋಜಿಗೆ ಹೋಗಿಲ್ಲ; ಅದಕ್ಕೆ ತಕ್ಕ ಸಾಧನವೂ ನನ್ನ ಬಳಿ ಸದ್ಯದಲ್ಲಿ ಇಲ್ಲ.

ಜನಪದಸಾಹಿತ್ಯವನ್ನು ಸಂಗ್ರಹಿಸುವುದರಲ್ಲಿ ತೊಡಗಿರುವ ಸಾಹಿತ್ಯಸೇವಕರಿಗೆ, ನನಗೆ ಒದಗಿದ ಸಮಸ್ಯೆಗಳೇ ತೋರಿರಬಹುದು. ನನ್ನ ಅನುಭವವನ್ನು ಅವರಿಗೆ ಅರಿಕೆ ಮಾಡುವುದು ಉಚಿತವೆಂದು ಭಾವಿಸಿ ಹೀಗೆ ನಾನು ಪ್ರಸಂಗಿಸಬೇಕಾಯಿತು. ಇದೆಲ್ಲವೂ ಚರ್ಚಿಸಬೇಕಾದ ವಿಷಯ.

ಇನ್ನು, ಈ ಹಾಡುಗಳ ಸ್ವಾರಸ್ಯವನ್ನು ಬೆರಳಿನಿಂದ ಮುಟ್ಟಿ ತೋರಿಸಬೇಕಾಗಿಲ್ಲ. ಓದುವವರ ಹೃದಯವನ್ನು ಅವು ತಾವಾಗಿಯೇ ಮುಟ್ಟುತ್ತವೆ. ಇಂಥ ಹಾಡುಗಳೆಲ್ಲವೂ ಬೇಗ ಬಯಲಿಗೆ ಬಂದು ನಮ್ಮ ಸಾಹಿತ್ಯದಲ್ಲಿ ಒಂದು ಪ್ರಧಾನಸ್ಥಾನವನ್ನು ಗಳಿಸಲೆಂದು ನನ್ನ ನಿತ್ಯದ ಹಾರೈಕೆ.

## ಜೋಗುಳದ ಹಾಡುಗಳು

### ೧

ಹವ್ವನಮ್ಮ ಹವ್ವಿ ಹವ್ ಲಾಲಿ ॥ಪ॥
ಹವ್ವಲ್ಲೆ ಎಂದಾರೆ ಹೋಗೋನು ತಿರುಗೀದ
ಎಲ ನಿನ್ನನ್ಯಾರೊ ಕರೆದಾರು ನಾವ್ ನಮ್ಮ
ಗಿಳಿರಾಮನನ್ನು ಕರದೇವು

ಯಾತಕಳುತಾನೆಂದು ಎಲ್ಲಾರು ಕೇಳ್ಯಾರು
ಕಾಯದಾ ಹಾಲ ಕೆನೆ ಬೇಡಿ— ಕಂದಯ್ಯ
ಕಾಡಿ ಕೈಯಿಂದಲಿಳಿಯಾನು ॥

ಅತ್ತಾನು ಕಾಡ್ಯಾನು ಮತ್ತೇನ ಬೇಡ್ಯಾನು
ಮತ್ತಾಸೆನೆರಡು ಎರೆಯಪ್ಪ— ಎರೆಯಪ್ಪ ಕೊಟ್ಟಾರೆ
ಗಪ್ಪುಚಿಪ್ಪಾಗಿ ಮಲಗ್ಯಾನು

ಅಳುವ ಕಂದನ ತುಟಿಯು ಹವಳಾದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ— ಕಂಗಳ ನೋಟ
ಶಿವನ ಕೈಯಲಗು ಹೊಳೆವಂತೆ ॥

ತೂಗುತೊಟ್ಟಿಲಿಗೊಂದು ಪಾಗುಪಟ್ಟೆಯನ್ಹಾಸಿ
ನಾಗಾಯಿ ಮಗುವ ಮಲಗೀಸಿ—ಅವರಮ್ಮ
ಜೋಗುಳವ ಹಾಡತೊಡಗ್ಯಾಳು ॥

ಪುಟ್ಟುಡುಗ ಪುಟ್ಟುಡುಗ ಯಾತಾರ ಪುಟ್ಟುಡುಗ
ನಾಗಾಯಿಯಿಲ್ಲ ಮುರುವಿಲ್ಲ— ಪುಟ್ಟುಡುಗ್ಗೆ
ಮಾಡಿಸೋರುಂಟು ಹಣವಿಲ್ಲ ॥"

---

### ೨

ಸಂಗ್ರಾಹಕರು : ಶ್ರೀ. ಶೇಷ ಅಳಗವಾಡಿ, ಧಾರವಾಡ

ಆಡಿ ಬಾ ಕಂದಯ್ಯ ಅಂಗಾಲು ತೊಳದೇನು
ಟೆಂಗಿನಕಾಯಿ ತಿಳಿನೀರು— ತಕ್ಕೊಂಡು
ಭಂಗಾರದ ಮಾರಿ ತೊಳದೇನು ॥

ಬಾರಣ್ಣ ಬಾ ನನ್ನ ಬಾಲಚಕ್ರವರ್ತಿ
ನಾಲಿಗಿವನ್ಯಾಲ ಸರಸೋತಿ- ಇದ್ದಂಥ
ನನ ಕಂದ ನೀ ಹಾಲ ಕುಡಿಬಾರೊ ॥

ಅಳದೀರೊ ಅಣ್ಣಯ್ಯ ನಿನಗೊಂದು ಹೇಳೇನು
ಅಮರವತಿಯೆಂಬ ಎಳೆದೋಟನೊಳಗಿನ
ಅರಗಿಳಿ ತಂದು ಕೊಡುವೇನು ॥

ಕೂಸು ನನ್ನ ಕಂದಯ್ಯ ಕೇಸು ಬಿಚ್ಚ್ಯಾಡುವಾಗ
ದೇಶದಿಂದೆರಡು ಗಿಳಿಬಂದು ಕೇಳ್ಯಾವ
ಕೂಸ ನೀ ದಾರ ಮಗನೆಂದು

---

## ಹಂತಿಯ ಹಾಡುಗಳು

### ೧

ಸಂಗ್ರಾಹಕರು : –ಶ್ರೀ. ಎಸ್. ಎ. ಧರಿಗೌಡಾ,
ಫರ್ಗ್ಯೂಸನ್‌ಕಾಲೇಜ, ಪುಣೆ.

"ಮೂಡಣ್ಣಾರಿಯಿತೋ ಮುತಾಳ ।
ಕೂರಿಗಿ ಸೂರ್ಯಚಂದ್ರಮರ ಕಾವಲೋ ।
ಅಂಕಡ ಬಂಕಡ ಡೊಂಕ ತೆನಿಯೋ ।
ನಮ್ಮ ಲಂಕೀಹನುಮನ ಕಾವಲೋ ॥

ಬೆಳ್ಳಿಯ ದಾವಣಿ ಬೆಳ್ಳಿಯ ಚಿಲಕಣ್ಣಿ ।
ಬಿಳಿಎತ್ತಿನ್ಹಿಂಡೊಂದ್ಯೆನೂರೋ ।
ಕಂಚಿನ ದಾವಣಿ ಕಂಚಿನ ಚಿಲಕಣ್ಣಿ ।
ಚಿಂಚೆತ್ತಿನ್ಹಿಂಡೊಂದ್ಯೆನೂರೋ " ॥

"ಎಲ್ಲೆಲ್ಲಿ ನೋಡಿದರ ನಲ್ಲನಂಥವರಿಲ್ಲ ।
ಹಲ್ಲುನೋಡಿದರೆ ಹವಳಾವ್ರೋ ।
ಹಲ್ಲು ನೋಡಿದರ ಹವಳಾವು ।
ನಲ್ಲನ ಸೊಲ್ಲು ಕೇಳಿದರೆ ಸಮಾಧಾನೋ ॥

ಎರಿಹೆಂಟೆ ಬರಿಗಾಲು ನಡುವೆ ನೆಗ್ಗಿನ ಮುಳ್ಳಾ ।
ಪ್ರಿಯಾ ನಿನ್ನ ಕಳುಹಿ ಬರುವಾಗ ।
ಪ್ರಿಯಾ ನಿನ್ನ ಕಳುಹಿ ಬರುವಾಗ ।
ಹಿಂದಿನ ನೆನಪಾಗಿ ಜೀವ ಹೋದೀತೋ " ॥

"ಮಾಳಿಗಿ ಮ್ಯಾಲೊಂದ ಚೇರಿಗಿ ಗಿಡಹುಟ್ಟಿ ।
ಏರಿನೋಡ್ಯಾಳ ತವರೂರ ।
ಏರಿ ನೋಡ್ಯಾಳ ತವರೂರೋ ।
ಯುಗಾದಿ ಮೀರಿ ಹೋದೀತೋ ಗಳಿಗ್ಯಾಗ " ॥

"ಬೆಳ್ಳಗೆ ಬೆಳಗಾಗಿ ಬೆಳ್ಳಿ ಮೂಡಲವಾಗಿ ।
ಒಳ್ಳೊಳ್ಳೆ ಮೀನ ಗರಿತೆಗೆದೋ ।
ಒಳ್ಳೊಳ್ಳೆ ಮೀನ ಗರಿತೆಗೆದು ।
ಆಡ್ಯಾವ ಗರತಿ ಗಂಗವ್ವನ ಉಡಿಯಾಗೋ " ॥

---

### ೨

ಸಂಗ್ರಾಹಕರು : ––ಶ್ರೀ. ತಿಮ್ಮಾಜಿ ಲಿಂಗೋ ಕುಲಕರ್ಣಿ, ಕಾಪಾ

ಜೋಳದ್ಹಂತಿಗಿ ಕಟ್ಟಿ ನಾಳಿಗಿ ತಿಂಗಳಾತು ।
ಆನಿ ಮೆಟ್ಟಿದರ ಸವಿಯಾವ್ರೋ ।
ಆನಿ ಮೆಟ್ಟಿದರ ಸವಿಯಾವ್ರೊ ನಮ್ಮ ಬಸವನ ।
ಕೊಳಗ ಮುಟ್ಟಿದರ ಉಳಿದಾವ್ರೋ ॥

ಬೆಳ್ಳನ್ನ ಎರಡೆತ್ತು ಬೆಳ್ಳಿಯ ಬಾರಕೋಲು ।
ಬಂಗಾರದ ಶೆಡ್ಡಿ ಬಲಗಯ್ಯೊ ।
ಬಂಗಾರದ ಶೆಡ್ಡಿ ಬಲಗಯ್ಯೊ ನಮ್ಮ ಬಸವ ।
ಹೊಳೆ ಸಾಲ ಹೊನ್ನು ಬೆಳದಾನೊ ॥

---

### ೩

## ಸೀತಾಪರಿತ್ಯಾಗದ ಹಾಡು

ಸಂಗ್ರಾಹಕರು :–ಶ್ರೀ. ಗೋವಿಂದ ವೇಂಕಟೇಶ ಚುಳಕಿ, ಮುಗ[illegible]

ಆತ್ವಾರ ಉದಯುಕ ಸೋಮಾರ ಬೆಳಿಗ್ಗೆ ಅತ್ತಿಗೆ ಸೀತ[illegible]
ಕರೆಯಾಕ ಹೋದ । ಅತ್ತೀಗೆ ಸೀತವ್ವ ಒಳ್ಯಾಕ ಹೋದ[illegible]
ಉಟ್ಟ್ಯಾಳ ಪಟ್ಟೆಳ್ಳ ಸೀರಿ । ಮುಂದ್ಮ್ಯಾಂದ ಸೀತವ್ವ ಹಿಂ[illegible]
ಲಛಮಯ್ಯ ನಡೆದಾರ ಕಾನನದಡವಿಗೆ ॥ ಕರಿಯುಗೊ[illegible]
ಒಯ್ದು ಮರದಗಡ್ಡಿಗೆ ಹಾಕಿ ಕುಂಡರ ಸೀತವ್ವ ಕೊ[illegible]
ದಾನ । ಮುತ್ತಿನ ಕತ್ತಿ ಎತ್ತೆತ್ತಿ ಹಾಕ್ಯೊತ್ತಿಗೆ ಸರಿಗೀಕೊ[illegible]
ಹಾಂಗ ಸರಿದಿದ್ದಾಳೆ ॥ ಅತ್ತೀಗೆ ಕೊಂದೆನಂತಾ ಕತ್ತೀ[illegible]
ಮಾಡಿ ನೆತ್ತರುಳ್ಳ ಹೊನ್ನೀಮರಕಡಿದಿದ್ದಾನ । ಅತ್ತೀಗೆ[illegible]
ಬಟ್ಟನೆತ್ತರಮಾಡಿ ಅಣ್ಣ ರಾಮಯ್ಯನ ಹಣೆಗೆ ಹಚ್ಯಾನ[illegible]
ದಾರ ಕಡಿದೀ ತಮ್ಮ ಕಡಿವರ ಒಳ್ಳೇದೈತಿ । ಕಡಿದ [illegible]
ನನಗೆ ತೋರಿಸೋ ॥ ಮಾನವುಳ್ಳವರ ಮಗಳು ಗ್ಯಾನ[illegible]

ಸೊಸೆ । ಹದ್ದ ಕಾಗಿ ಮುಟ್ಟದಂತೆ ಹೇಳಿ ಸಿರಿಗಂಧದ ಚಕ್ಕಿ ಹಾಕಿ ಸುಟ್ಟ ಬಂದೇನಣ್ಣಾ ॥ ಬಾದ್ರ ಬಂದೀ ತಮ್ಮ ಬಂದರ ಒಳ್ಳೇದೈತಿ । ಸುಟ್ಟಜಾಗಾ ನನಗೆ ತೋರಿಸೋ ॥ ಉತ್ತ್ರಾರಿ ಮಳೆಯಾಗಿ ಬಿತ್ತಿಬೆಳೆದಾವ । ಸುಟ್ಟ ಜಾಗಾ ನನಗೆ ಸಿಗವಣ್ಣ ॥

---

೬

## ತತ್ತ್ವಪದ

ಸಂಗ್ರಾಹಕರು :–ಶ್ರೀ. ಆನಂದಕವಿ; ಕುರುಗುಂದ

( ಕುಮಾರಿ ನಿಂಬೆಕ್ಕ ಇವರಿಂದ ಸಂಗ್ರಹಿಸಿದ್ದು )

ಈಸಿ ಈಸಿ ನಾ ದಣಕೊಂಡೆ ।
ಸನಿಯಕ ಬರವಲ್ಲದು ಆಚೆದಂಡೆ ॥ ಪಲ್ಲ ॥

ಈಚೆಯ ದಂಡಿಲಿ ಎದೆ ಬುಗುಲು ।
ಆಚೆಯ ದಂಡೆಲಿ ಬಲು ಹುದಲು ।
ಬರಬಾರದಿತ್ತೌ ನಾ ಮೊದಲು ।
ಹಾದೀತಪ್ಪಿ ಬಂದೆನು ಬದಲು ॥ ೧ ॥

ಮುಕ್ಕಟ್ಟ ಬರುತ್ತಲೆ ಮೂರು ತೆರಿ ।
ಆರರ ಅರ್ಭಾಟ ಬಹಳ ಭಾರಿ ।
ನೀರಿನ ಸೆಳವತಿ ಬಲ್‌ಬರಿ ।
ನಿಲ್ಲಗೊಡವಲ್ಲದ ಎನ್ನ ಕಾಲೂರಿ ॥ ೨ ॥

ಎರಡು ದಂಡಿ ನದಿ ಸೂಸೈತೆ ।
ಈ ನದಿ ಈಸುದು ಬಿಗಿ ಆಯಿತೆ ।
ಬರಬರುತ ನಾ ಬಳಕೊಂಡೆ ।
ಇರಇರತ ನಾ ತಿಳಕೊಂಡೆ ॥ ೩ ॥

ಎತ್ತಲು ನೋಡಿದರು ಸುತ್ತಲು ನೀರು ।
ಎನ್ನ ಜೀವ ಬಲು ಗಾಬರಿ ।
ತೇರದಾಳ ತುಕಾರಾಮು ಈಸಿದಾ ।
ದಣುವು ಇಲ್ಲದ ಪಾರಾದಾ ॥ ೪ ॥

---

೭

## ಚಿಕ್ಕಮಕ್ಕಳ ಒಗಟುಗಳು

ಸಂಗ್ರಾಹಕರು : — ಶ್ರೀಮತಿ ಗಂಗೂತಾಯಿ ಹಂದಿಗೋಳ, ಮುನವಳ್ಳಿ

೧. ಆಕಟ್ಟು ಈಕಟ್ಟು । ಮರಕಮೂವತ್ತು ಕಟ್ಟು । ಪಂಚಾಳ ಕಟ್ಟು ಪಗಡೀಯ ಕಟ್ಟು । ಈ ಒಗಟ ಹೇಳಿದವರನ್ನ ಹೆಡಮುರಿಗೆ ಕಟ್ಟು ( ಕೇರು )

೨. ಗಂಟಿಗೆ ಗಂಟಾಗಿ । ಗಂಟಿಗೊಂದೆಲೆಯಾಗಿ । ಮುಟಪ ವಾಗಿ ಮಲ್ಲಿಗೆಯಾಗಿ । ಈ ಒಗಟ ಹೇಳಿದವರಿಗೆ ಎಂಟು ರೊಟ್ಟಿ ಸೇರು ತುಪ್ಪಾ ( ಮಂಗರೊಳ್ಳಿ )

೩. ಯಾದವಾಡದಲ್ಲಿ ಯಾತಾ ಹೊಡವರೆ ಕಲಕೇರ್ಯಾಗ ಕಾಯಾಗ್ತಾವ ( ರಾಟಿಯು ಕುಕ್ಕಡಿ )

೪. ಕೆಂಪುಕುದರೀ ಕರೇಥಡಿ ಹಾಕಿ । ಒಬ್ಬ ರಾವುತ ಹತ್ತಾನ। ಒಬ್ಬ ರಾವುತ ಇಳೀತಾನ ( ರೊಟ್ಟಿಗಳು )

೫. ಪೇಟೆಗೆ ಹೋಗೋದು । ರೊಕ್ಕಾ ಕೊಟ್ಟು ತರೋದು । ಮುಂದಿಟ್ಟುಕೊಂಡು ಅಳೋದು ( ಉಳ್ಳೀಗಡ್ಡಿ )

---

೮

ಸಂಗ್ರಾಹಕರು : —ಶ್ರೀ ಈಶ್ವರಪ್ಪ ಸಣಕಲ್ಲ, ಸುಣಧೋಳ

೧. ಸುಣ್ಣದ ಗುಡಿಯು ಸುತ್ತಲಾರೆ । ಬಣ್ಣದ ಛಡಿಯ ಹಿಡಿಯಲಾರೆ । ದುಂಡನ್ನ ಮಲ್ಲಿಗೀ ಮುಡಿಯಲಾರೆ ( ಮುಗಿಲು ಹಾವು, ಚಿಕ್ಕಿ )

೨. ಕಡದ್ರ ಕತ್ರ್ಯಾಗೋದಿಲ್ಲಾ । ಹಿಡದ್ರ ಹಿಡಿಕಿ ಆಗೋದಿಲ್ಲಾ ( ಬಿಸಿಲು, ನೆರಳು, ದೀವಿಗೆ, ನೀರು )

೩. ಎರಡ ಮನೀಗಿ ಒಂದ ಕಂಬಾ ( ಮೂಗು )

೪. ಗುಡ್ಡದ ಮಾರ್ಯಾಗ ನವಲ ಕುಣೀತೈತಿ (ಹೆಂಗಸರ ತುರುಬು)

೫. ಈಟ ಮನ್ಯಾಗ ಛಡೀ ಹಾಸೈತಿ (ನಾಲಿಗೆ)

---

# ಬಿಡಿನುಡಿಗಳು

## ಪೂರ್ಣ ಸ್ವರಾಜ್ಯವೇ ? ಹೌದು–ಮತ್ತೇನು ?

ರಾಷ್ಟ್ರಸಭೆಯವರು ತಮ್ಮ ಗುರಿಯು 'Independence' ಅಥವಾ 'ಪೂರ್ಣ ಸ್ವರಾಜ್ಯ'ವೆಂದು ಸಾರಿದಂದಿನಿಂದ ಮುಂಬಯಿ ಟಾಯಿಮ್ಸು ಪತ್ರಕ್ಕೆ ಎತ್ತೆತ್ತಲೋ ಎನಿಸಹತ್ತಿದೆ. ತನ್ನ ಅಗ್ರಲೇಖನಗಳಿಂದಲೂ, ಬಿಡಿನುಡಿಗಳಿಂದಲೂ, ಪತ್ರ ವ್ಯವಹಾರದಲ್ಲಿಯೂ, ಅನ್ಯರಿಂದ ಬರೆಸಿದ ಲೇಖನಗಳಲ್ಲಿಯೂ ಬೇರೆ ಬೇರೆ ಜನಾಭಿಪ್ರಾಯಗಳ ಪ್ರಕಟನದಿಂದಲೂ ಪೂರ್ಣ ಸ್ವರಾಜ್ಯವನ್ನು ಸಾರಿದ ಮಹಾತ್ಮರು ಚಾಹೂ ಮಹಾರಾಜರೆಂದೂ, ತಲೆತಿರುಕರೆಂದೂ, ವ್ಯವಹಾರಜ್ಞಾನಶೂನ್ಯರೆಂದೂ, ನಾಯಕರಾಗಲು ಅನರ್ಹರೆಂದೂ ಏನೇನೋ ವ್ಯಕ್ತಪಡಿಸಲು ಸಂಕಟಪಡುತ್ತಲಿದೆ. ಅದರ ಚೀರಾಟಕ್ಕೆ ಒಮ್ಮೆ 'ಇಂಡಿಯನ್ ಡೇಲಿಮೇಲ'ದವರೂ ಒಮ್ಮೆ 'ಕೇಸರೀ' ಪತ್ರದವರೂ ತಿಳಿದೋ ತಿಳಿಯದೆಯೋ ಪುಷ್ಟಿಯನ್ನೀಯುತ್ತಾರೆ. ಕೌನ್ಸಿಲ್ಲಿನ ಮೋಹವುಳ್ಳವರು ಜನರ ಬುದ್ಧಿಯನ್ನು ದಿಕ್ಕುಗೆಡಿಸುವರು. ಹೀಗಾಗಿ ಜನರು ಒಮ್ಮೊಮ್ಮೆ ತಾವು 'ಪೂರ್ಣಸ್ವರಾಜ್ಯ'ವನ್ನು ಬೇಡುವದು ಅನುಚಿತವೋ ಏನೋ ಎಂದು ದಿಗಿಲುಭುಗಿಲಾಗುವರು. ಧರ್ಮತಂತ್ರದಲ್ಲಿ ಹೇಗೆ ಮುಕ್ತಿಯು ಎಲ್ಲ ಪ್ರಾಣಿಗಳ ಗುರಿಯೋ ಹಾಗೆ ರಾಜತಂತ್ರದಲ್ಲಿ Independence ಸ್ವಾಧೀನತೆ, ಅಪರಾಧೀನತೆ, ಸ್ವತಂತ್ರತೆ, ಪೂರ್ಣ ಸ್ವರಾಜ್ಯವು ಎಲ್ಲ ಜನಾಂಗಗಳ ಗುರಿಯಾಗಿದೆ. ಇದರಲ್ಲಿ ಅಸ್ವಾಭಾವಿಕವಾದುದು ಏನೂ ಇಲ್ಲ.

ಈಗ ಹತ್ತು ವರ್ಷಗಳ ಹಿಂದೆಯೆ ದೀನಬಂಧು ಆಂಡ್ರ್ಯೂಜರು– 'Complete and perfect independence for India is a religious principle with me, because I am a Christian.' 'ನಾನು ಕ್ರಿಸ್ತಾನುಯಾಯಿಯಾಗಿದ್ದುದರಿಂದ ಹಿಂದುಸ್ಥಾನಕ್ಕೆ ಸಂಪೂರ್ಣ ಸ್ವರಾಜ್ಯವು ದೊರೆಯಬೇಕೆಂಬುದು ನನಗೊಂದು ಧರ್ಮನಿಬಂಧನೆಯು' ಎಂದು ಹೇಳಿದರು. ಆದರೆ ಕ್ರಿಸ್ತಾನುಯಾಯಿಯಾದ ಆಂಗ್ಲ ಸರಕಾರವು ತನ್ನಂತೆ ಪರರ ಬಗೆಯಲು ಸಿದ್ಧವಿದೆಯೇ? ಎಲ್ಲ ಸರಕಾರಗಳೂ ಜಾತಿಗೆ ಹೊರತು; ಅವರ ಶಾಸ್ತ್ರವೇ ಬೇರೆ! ಈಗ ಇಪ್ಪತ್ತೈದು ವರ್ಷಗಳ ಹಿಂದೆಯೆ ಮಹರ್ಷಿ ಅರವಿಂದರ ಪ್ರೇರಣೆಯಿಂದ ಹೊರಡುತ್ತಿದ್ದ 'ವಂದೇ ಮಾತರಂ' ಪತ್ರದಲ್ಲಿ 'Our ideal is freedom which means freedom from all foreign control' ನಮ್ಮ ಗುರಿಯು ಸ್ವಾತಂತ್ರ್ಯ– ಎಂದರೆ ಪರನಿಯಂತ್ರಣದ ಪೂರ್ಣ ಅಭಾವ– ಎಂದು ಹೇಳಿದರು. ಸ್ವಾತಂತ್ರ್ಯದ ಕಹಳೆಯ ಕೂಗು ಇಂದುನಿನ್ನಿನದಲ್ಲ. ಅದು ಒಬ್ಬಿಬ್ಬ ಜ್ಞಾನಿಗಳು ಆಡುತ್ತಿದ್ದುದು ಇಂದು ರಾಷ್ಟ್ರಸಭೆಯ ಪ್ರಾತಿನಿಧಿಕವಾಣಿಯಾಗಿದೆ. ಹೀಗಿದ್ದು 'ಪೂರ್ಣಸ್ವರಾಜ್ಯ' ಎಂಬ ಮಾತು ಕೇಳಿದ ಕೂಡಲೇ ಕೆಲವರು ಹೌಹಾರಿ 'ಇ! ಇದೇನು?' ಎಂದು ಕೇಳುತ್ತಾರೆ. ಆ ಓಬೀರಾಯನ ಪ್ರಜೆಗಳಿಗೆ ಈ ಹೊಸಮಾತು ತಿಳಿಯದು. ತಿಳಿಸಿ ಹೇಳಿಯೂ ಫಲವಿಲ್ಲ.

ಪೂರ್ಣ ಸ್ವರಾಜ್ಯದ ಮಾತು, ಅಸ್ವಾಭಾವಿಕವೂ ಅಲ್ಲ ಹೊಸದೂ ಅಲ್ಲ. ಫ್ರೆಂಚ ರಾಜ್ಯಕ್ರಾಂತಿಯ ಮೂಲಮಂತ್ರವಾದ 'Liberty, Equality and Fraternity' ಸ್ವಾತಂತ್ರ್ಯ,ಸಮಾನತೆ ಮತ್ತೆ ಸೋದರತೆ ಎಂಬುದು ಒಂದು ಶತಮಾನಕ್ಕಿಂತ ಹಳೆಯ ಮಾತು. ಆ ಮಂತ್ರದ ಪ್ರತಿಧ್ವನಿಯು ಇನ್ನೂ ದಿಕ್ಕುದಿಕ್ಕಿನಲ್ಲಿ ಕೇಳಬರುತ್ತಲಿದೆ. ಯಾವಾವ ದೇಶದ ಜನರು ಎಚ್ಚರವಾಗುತ್ತಲಿರುವರೋ ಅಲ್ಲಲ್ಲಿ ಈ ಮಂತ್ರೋಚ್ಚಾರವು ಕೇಳಬರುತ್ತಲಿದೆ. ಫ್ರೆಂಚರ ಮಾತು ಅವು ವಂಶಪರಂಪರಾಗತ ಹಗೆಗಳಾದ ( ಈಗೇನೋ ಕಾರ್ಯಸಾಮ್ಯವು ತುಂಬಾ ಇದೆ ) ಇಂಗ್ಲಿಷರಿಗೇಕೆ ಎಂದರೆ ಇಕೋ ತಮ್ಮ ಮುದ್ದಿನ ಮೇಕಾಲೇ ಸಾಹೇಬರ ಮಾತು–

"Many politicians of our time are in the habit of laying it down as a self evident proposition that no people ought to be free till they are fit to use their freedom. The maxim is worthy of the fool in the old story who resolved not to go into the water till he had learned to swim. If men are to wait for liberty till they become wise and good, in slavery they may indeed wait forever."

"ತಮ್ಮ ಸ್ವಾತಂತ್ರ್ಯವನ್ನು ಉಪಯೋಗಿಸಲು ತಕ್ಕವರಾಗುವವರೆಗೆ ಯಾವ ಜನರನ್ನೂ ಸ್ವತಂತ್ರ ಮಾಡಲಾಗದು

ಸ್ವಯಂಸಿದ್ಧ ಪ್ರಮೇಯವಿದ್ದಂತೆ ನಮ್ಮ ಕಾಲದ ಎಷ್ಟೋ ರಾಜತಂತ್ರಜ್ಞರು ಹೇಳುವ ವಾಡಿಕೆಯುಂಟು. ಈ ಮಾತು ಒಂದು ಹಳೆಯ ಕಥೆಯೊಳಗಿನ ಹುಚ್ಚನು ಹೇಳಿದ ಮಾತಿನಂತಿದೆ, 'ಈಸಲು ಬರುವವರೆಗೆ ನೀರಿನಲ್ಲಿ ಕಾಲಿಡುವದಿಲ್ಲ' ಎಂದು ಅವನು ಎನ್ನುತ್ತಿದ್ದನಂತೆ. ಪಾರತಂತ್ರ್ಯದಲ್ಲಿ ಬೆಳೆದು ಒಳ್ಳೆಯವರೂ ಜಾಣರೂ ಆಗಿ ಆ ಮೇಲೆ ಜನರು ಸ್ವಾತಂತ್ರ್ಯವನ್ನು ಪಡೆಯುವದಾದರೆ ಅವರು ಅನಂತ ಕಾಲದವರೆಗೂ ಹಾಗೆ ನಿಲ್ಲಬೇಕಾದೀತು." ಜಪಾನ, ರಶಿಯಾ, ಟರ್ಕಿ, ಚೀನ, ಅಫಗಾಣಿಸ್ತಾನ ಮೊದಲಾದವು ತಮ್ಮ ಸ್ವಾತಂತ್ರ್ಯವನ್ನು ಉಪಭೋಗಿಸುತ್ತಿರುವಾಗ ಅವುಗಳ ಮಗ್ಗುಲಲ್ಲಿರುವ ನಾವು ಆ ಸಂಕಲ್ಪದ ಉಚ್ಚಾರವನ್ನೂ ಮಾಡಕೂಡದೇ ? ಅದೇನು ನ್ಯಾಯಬಾಹ್ಯವಲ್ಲ. 'ಈಗಿನ ಪಾರತಂತ್ರ್ಯದ ನರಕವೂ ಬೇಡ. ನಾಳಿನ ಸಾಮಂತಸ್ವರಾಜ್ಯದ ಸ್ವರ್ಗವೂ ಬೇಡ. ಪೂರ್ಣ ಸ್ವರಾಜ್ಯವೆಂಬ ಮುಕ್ತಿಯೇ ನಮ್ಮ ಗುರಿ' ಎಂದು ಹೇಳಲು ಭಾರತೀಯರಿಗೆ ಬಾಧ್ಯತೆ ಇದೆ. 'ಪೂರ್ಣ ಸ್ವರಾಜ್ಯವೇ ?' ಎಂದು ಯಾರೇ ಕಿಣಕಿ ಕೇಳಲಿ ಕೆಣಕಿ ಕೇಳಲಿ 'ಹೌದು, ಮತ್ತೇನು ?' ಎಂದು ನಾವೆಲ್ಲರೂ ಹೇಳಲು ಸಮರ್ಥರಾಗಬೇಕು.

## ಕಾಲಹರಣವಾದರೆ ಅಶುಭ !

ಶುಭವಿದ್ದರೆ ಅದಷ್ಟು ತೀವ್ರವಾಗಲಿ, ಅಶುಭವಿದ್ದರೆ ಅದಷ್ಟು ಮುಂದೆ ಬೀಳಲಿ ಎಂದು ಜನರು ಹೇಳುವದುಂಟು. ಆದರೆ ಇಲ್ಲದ ತೀವ್ರವೇಗದಿಂದ ಯಾವ ಶುಭವಾಗದಿದ್ದರೂ ಸುಮ್ಮನೆ ಕೆಲಸಗಳನ್ನು ಮುಂದೆ ಹಾಕುತ್ತ ಹೋಗುವದರಿಂದ ಅಶುಭವಾಗುವದು ನಿಶ್ಚಯ. ಇಂಗ್ಲೀಷದಲ್ಲಿ ಈ ಅಭಿಪ್ರಾಯವನ್ನೆ 'Delay is dangerous' ಎಂಬ ಗಾದೆ ಹೇಳುವದು.

ಕಿಡಿಯಿದ್ದಾಗಲೆ ನಂದಿಸಬೇಕು, ಹೊತ್ತಾದರೆ ಹೊತ್ತೀತು ಎಂಬ ವಿವೇಕವು ನಮ್ಮನ್ನಾಳುವವರಲ್ಲಿ ಇರುವಂತೆ ಕಂಡು ಬರುವದಿಲ್ಲ. ಎಲ್ಲದಕ್ಕೂ ತಡ ! ಹೋಮರೂಲ ಬೇಡಿದರೆ ಬೇಡಿದವರನ್ನೆ ಬಂಧಿಸಲು ಯತ್ನಿಸಿದರು. ಅದು ಹೋಗಲಿ, ಸರ್ವಪಕ್ಷೀಯ ಪರಿಷತ್ತಿನವರು ನೆಹರೂ ವರದಿಯಲ್ಲಿ ಸಾಮಂತಸ್ವರಾಜ್ಯವನ್ನು ಬೇಡಿದರು. ಇದು ಏಕಮತದ ಬೇಡಿಕೆಯಲ್ಲವೆಂಧು ವಾದಿಸುವವರಿಗೆ ಸರಕಾರದವರು ಇಂಬು ಕೊಟ್ಟು, ಆ ಕಾವನ್ನು ಕಳೆದುಕೊಂಡರು. ಈಗ ಜನರು 'ಪೂರ್ಣ ಸ್ವರಾಜ್ಯ' ಎಂದು ಗರ್ಜಿಸುತ್ತಿದ್ದಾರೆ.



೧೧ ಅನುಯಾಯಿಗಳೊಡನೆ ಸೆರೆಮನೆಯನ್ನು ಸೇರಿದ ಬಾಬೂ ಸುಭಾಸಚಂದ್ರ ಬೋಸರು

ಪೂರ್ಣ ಸ್ವರಾಜ್ಯ ಪಕ್ಷವೂ ಕ್ರಾಂತಿಕಾರಕ ಪಕ್ಷವೂ ಕೂಲಿಕಾರರ ಪಕ್ಷವೂ—ಇವು ಮೂರೂ ಸರಕಾರದ ಅನರ್ಥಕಾರಿಯಾದ ವ್ಯರ್ಥ ವಿಲಂಬದ ಫಲಗಳು. ಸನದಶೀರ ಚಳವಳಿಗೆ ಸಕಾಲದಲ್ಲಿಯೆ ಮನ್ನಣೆ ಕೊಡದೆ ಇದ್ದುದರಿಂದ ಪೂರ್ಣ ಸ್ವರಾಜ್ಯ ಪಕ್ಷವು ತಲೆಯೆತ್ತಿತು. ಅಹಿಂಸಾಮಯ ಚಳವಳಿಯನ್ನು ಬಹುಕಾಲದವರೆಗೂ ನಿರ್ದಯತೆಯಿಂದಲೆ ಕಾಣುತ್ತ ಬಂದಿರುವದರಿಂದಲೂ ನಮ್ಮನ್ನು ತಾವೇ ಆರ್ಮ್ಸ ಆಕ್ಟಿನಿಂದ ನಿಶಃಸ್ತ್ರರನ್ನಾಗಿ ಮಾಡಿ ನಾವು ಅಶಸ್ತ್ರರೆಂದೇ ನಿರ್ವೀರ್ಯರೆಂದು ಹಂಗಿಸುವದರಿಂದಲೂ ಕ್ರಾಂತಿಕಾರಕ ಪಕ್ಷವು ಗದ್ದರಿಸುತ್ತಲಿದೆ. ಡಿಗ್ಬಿ ಸಾಹೇಬರು ' 'Prosperous British India' 'ಸಮೃದ್ಧ ಹಿಂದುಸ್ಥಾನ' ಎಂದು ವಕ್ರೋಕ್ತಿ ವ್ಯಂಜಕ ಹೆಸರಿನ ಪುಸ್ತಕದಲ್ಲಿ ನಮ್ಮ ದೇಶದ ದಾರಿದ್ರ್ಯವನ್ನು ವರ್ಣಿಸಿದರು. ದಾದಾಭಾಯಿಯವರು 'Poverty and Unbritish Rule' 'ಬ್ರಿಟಿಶರಿಗೆ ಸಲ್ಲದ ರಾಜ್ಯಪದ್ಧತಿಯೂ ದಾರಿದ್ರ್ಯವೂ' ಎಂಬ ಪುಸ್ತಕದಲ್ಲಿ ನಮ್ಮ ದೇಶದ ದೀನಾವಸ್ಥೆಯನ್ನು ಬಯಲಿಗಿಟ್ಟರು. ಆದರೆ ಕೇಳಿಕೊಳ್ಳುವ ಪಾಪಿಯೆಲ್ಲಿದ್ದಾನೆ ? ಆಗ್ಗೆ ಕೇಳಿಕೊಳ್ಳಲಿಲ್ಲ—ಈಗ್ಗೆ ಅಲ್ಲಿ ಇಲ್ಲಿ ಎಲ್ಲ ಕಡೆಗೂ ಕೂಲಿಕಾರರ ಕೋಲಾಹಲವು ಕೇಳಬರುತ್ತಿದೆ. ಈ ಮಣೆಯದ ಕಡಬುಗಳನ್ನು ಮಾಡಿದವನೇ ಉಣ್ಣಬೇಕು.

ರಾಷ್ಟ್ರವು 'ಪೂರ್ಣ ಸ್ವರಾಜ್ಯ'ವೇ ತನ್ನ ಗುರಿಯೆಂದು ಸಾರಿದ್ದರೂ ಹಲಕೆಲವು ಮುಖಂಡರು ಈ ವಚನಶೂರ ಸರಕಾರದ ವಚನಪರೀಕ್ಷೆಯನ್ನು ಇನ್ನೊಮ್ಮೆ ಮಾಡಬೇಕೆನ್ನುತ್ತಿರುವರು.

೧೯೧೯ರಲ್ಲಿ ಸಾರ್ವಭೌಮ ಜಾರ್ಜಬಾದಶಹರು ತಮ್ಮ ಜಾಹೀರನಾಮೆಯಲ್ಲಿ—

"But there is one gift which yet remains and without which the progress of a country cannot be consumated—the right of her people to direct her affairs and safeguard her interests"

ಎಂದು ಪ್ರಕಾಶಗೊಳಿಸಿದರು. "ಯಾವದೊಂದು ದೇಶದ ಪ್ರಗತಿಯು ಪರಿಪೂರ್ಣತೆಯನ್ನು ಹೊಂದಬೇಕಾದರೆ ತಮ್ಮ ಕಾರಭಾರವನ್ನು ತಾವೇ ನಿರ್ಣಯಿಸುವ, ತಮ್ಮ ಹಿತವನ್ನು ತಾವೇ ಕಾಯ್ದುಕೊಳ್ಳುವ ಅಧಿಕಾರವು ಆ ದೇಶದ ಜನರಿಗಿರಲೇ ಬೇಕು. ಈ 'ವರ'ವನ್ನೊಂದು ಹಿಂದುಸ್ಥಾನಕ್ಕೆ ಕೊಡುವದುಳಿದಿದೆ." ಎಂದು ಸಾರ್ವಭೌಮರು ಅಪ್ಪಣೆಕೊಡಿಸಿದರು. ನಿದ್ದೆಯಲ್ಲಿ ಕೊಟ್ಟ ವಚನವನ್ನು ಎಚ್ಚತ್ತು ಕೂಡಲೆ ಪಾಲಿಸಿದ ಹರಿಶ್ಚಂದ್ರನ ಕಥೆಯನ್ನು ಕೇಳಿದ ಹಿಂದೂ ಜನರು, ಹೂಂ ಎಂದ ವರವನ್ನು ಕೊಡಲು ಹನ್ನೆರಡು ವರ್ಷ ಹಿಡಿಯುವದನ್ನು ನೋಡಿ ತಾಳಿಕೊಳ್ಳಬಹುದೇ? ಮತ್ತು 'ವರ'ದ ಗೌರವವಾದರೂ ಉಳಿಯುವದೇ? ಈ ವರವೊಂದು ವೇದವಾಣಿ, ಅದರ ಭಾಷ್ಯಗಳು ಬೇರೆ ನಡೆದಿವೆ, ಈ ವ್ಯರ್ಥಕಾಲಹಾಸಿಯಿಂದ ಸರಕಾರಕ್ಕೆ ಗಂಡಾಂತರವಿದೆ ಎಂಬದನ್ನು ಲೆಕ್ಕಿಸಿದರೆ ಅವರಿಗೇ ಹಿತ.

'ದುಂಡು ಮೇಜಿನ ಸಭೆ'ಯ ತುಪ್ಪವನ್ನು ಮರುಳರ ಮೂಗಿಗೆ ಹಚ್ಚಿ ಕೊಡಿಸಿರುವರು. 'ಕುರಡಿಯಾಗಲಿ, ಕುಂಟಿಯಾಗಲಿ, ಹೆಣ್ಣೆದ್ದರೆ ಸಾಕು ಮದುವೆಯಾಗುವೆನು' ಎಂದು ಹೇಳುವ ಆತುರನಾದ ಮದುವಣಿಗನಂತೆ ಕೆಲವರು ಸಾಮಂತ ಸ್ವರಾಜ್ಯಕ್ಕಾಗಿ ಜೊಲ್ಲು ಸುರಿಸುತ್ತಿರಬಹುದು. ಆದರೆ ಜನರಿಗೆ 'The right of her people to direct her affairs and safeguard her interests' ತಮ್ಮ ಕಾರಭಾರವನ್ನು ತಾವೇ ನಡೆಸಿಕೊಳ್ಳುವ ತಮ್ಮ ಹಿತವನ್ನು ತಾವೇ ರಕ್ಷಿಸಿಕೊಳ್ಳುವ ಅಧಿಕಾರವು ಬೇಕಾಗಿದೆ. ಹಾಗೂ ಹೀಗೂ ಮೊದಲಿನಂತೆಯೆ ಅವಿವೇಕದಿಂದ ತಡಮಾಡಿ ಸಾಮಂತ ಸ್ವರಾಜ್ಯ ಎಂಬ ಹೆಸರಿನ ಪೊಳ್ಳು ರಾಜ್ಯಪದ್ಧತಿಯ ಗುದ್ದಿಯೊಂದನ್ನು ಭಾರತೀಯರ ಕೊರಳಿನಲ್ಲಿ ಕಟ್ಟಲು ಆಳರಸರು ಹವಣಿಸುತ್ತಿರಬಹುದು. ಆದರೆ ಇನ್ನು ತಡಮಾಡಿ ಪ್ರಯೋಜನವಿಲ್ಲ; 'Delay is dangerous' ಹೊತ್ತು ಹೊತ್ತೀತು. ಇದನ್ನು ಅವರು ಮರೆಯಬಾರದು.

## ಯುಕ್ತಿಯೋ ? ಶಕ್ತಿಯೋ ?

ಮಿಲ್ಲ ಎಂಬವನೊಂದು ಚಿಕ್ಕ ನಾಟಕವನ್ನು ಬರೆದಿದ್ದಾನೆ. 'ಗಂಡು ಮೀರಿದ ಹುಡುಗ' ಎಂದು ಅದರ ಹೆಸರು. ಆ ನಾಟಕದಲ್ಲಿ ನಾಯಕನಾದ ಫಿಲಿಪ್ಪನು ಮಹಾಯುದ್ಧದಿಂದ ಊರಿಗೆ ಡಕ್ಕೆ ಮರಳಿ ಬಂದಮೇಲೆ ಅವನ ಮಲತಂದೆಯೂ ಫಿಲಿಪ್ಪನು ನಿನ್ನೂ ವಯಸ್ಸಿಗೆ ಬಂದಿರಲಿಲ್ಲವಾದ್ದರಿಂದ ಅವನ ತಂದೆಯು ಮೃತ್ಯುಪತ್ರದ ಪ್ರಕಾರ ಅಲ್ಪವಯಿಯು (ಫಿಲಿಪ್ಪನ) ಸಂರಕ್ಷಕನೂ ಆದ ಜೇಮ್ಸನೊಡನೆ ಸ್ವ ಇಚ್ಛೆಯ ಪ್ರಕಾರ ಶಿಕ್ಷಣವಾಗಬೇಕೆಂದು ಮಾತು ನಡೆದಾಗ ಹುಟ್ಟುಬಿಟ್ಟ... ನಾದ ಜೇಮ್ಸನು ತನ್ನ ಮಲಮಗನ ದುಡ್ಡಿನ ಗಂಟೆಲ್ಲ ... ಕೈಯಲ್ಲಿರುವದು ಎಂಬ ಜಂಬದಿಂದ ಅವನನ್ನು ತನ್ನ ಇಚ್ಛೆಯ ಪ್ರಕಾರವೇ ಎಳೆದುಕೊಂಡು ಹೋಗಲಿಕ್ಕೆ ಪ್ರಯತ್ನಿಸ... ನಲ್ಲದೆ ಹಾಗೆ ಹೀಗೆ ಮಾಡಿದರೆ ಅವನ ದುಡ್ಡು ಅವನಿಗೆ ಸಿಕ್ಕಲ್ಲವೆಂದು ಬೆದರಿಸುವನು. ಆಗ್ಗೆ ವಯಸ್ಸಿನಿಂದ ಇನ್ನೂ ಚಿಕ್ಕವನಿದ್ದರೂ ಮಹಾಯುದ್ಧದ ಮೂಲಕ ನೂರು ಕಡೆ ನೀರು ಕುಡಿದು ಬಂದು ಗಂಡುಮೀರಿದ ಆ ಹುಡುಗನು ... ರಿದ್ದ ಪಿಸ್ತುಲನ್ನು ಹೊರಗೆ ತೆಗೆದು ತನ್ನ ಮಲತಂದೆಗೆ ಗುರಿಯಿಡುವನು. ಆಗ್ಗೆ ಮಲತಂದೆಗೆ ಒಳಗೆ ಎಚ್ಚರಹುಟ್ಟಿದ್ದರೂ ಹೊರಗೆ ಹಿರಿಯತನದ ಶಾತ್ಯದಿಂದ 'What does this bluff mean?' ಈ ಹುಸಿ ಹುಂಬತನದ ಅರ್ಥವೇನು ಎಂದು ಕೇಳುವನು. ಅದಕ್ಕೆ ಫಿಲಿಪ್ಪನು 'It is'nt bluff it is quite serious' ಇದು ಹುಂಬತನವೂ ಅಲ್ಲ ಹುಸಿಯೂ ಅಲ್ಲ ಎಂದು ಗಟ್ಟಿಸಿ ಹೇಳುವನು.

ಹಿಂದುಸ್ತಾನದಲ್ಲಿ ಸದ್ಯಕ್ಕೆ ಅಂತಹದೇ ಒಂದು ಸಂದರ್ಭ ಉಂಟಾಗಿದೆ. ಸುತ್ತೂ ಕಡೆಗೆ ಜಗತ್ತಿನಲ್ಲಿ ಬದಲಾವಣೆಗಳು ಉಂಟಾಗುತ್ತಿವೆ ಎಂಬ ಅರಿವಿಲ್ಲದೆಯೋ ಏನೋ ಆಳರಸರು ವ್ಯರ್ಥವಿಲಂಬವನ್ನೂ ಅರ್ಥವಾಗದ ಮಿಜಿಮಿಜಿತನವನ್ನೂ ಮಾಡುತ್ತಲಿದ್ದಾರೆ. ಮಲತಂದೆಯಾದ ಜೇಮ್ಸನಂತೆ ಆಳರಸರ ಕೈಯಲ್ಲಿ ಹಿಂದೀಯರ ಗಂಟು ಸಿಕ್ಕಿದೆ. ಅಲ್ಪವಯಿ ಸಂರಕ್ಷಕರೆಂಬ ತಮ್ಮ ಜಂಬವನ್ನೂ ಜಬರನ್ನೂ ತೋರಿಸುವ ಧಡ... ಅವರು ಹೊಸ ಗಂಡುಮೀರಿದ ಹುಡುಗರ ಗುಂಡಿಗೆ ಗುರಿ...

ಗುತ್ತಲಿದ್ದಾರೆ. ನಾಟಕದೊಳಗಿನ ಜೇಮ್ಸನಂತೆ ಆಳರಸರಾದರೂ ಸ್ವಾತಂತ್ರ್ಯದ ಮತ್ತು ಕ್ರಾಂತಿಯ ಗರ್ಜನೆಗೆ "ಹುಸಿ" ಎಂದೂ "ಹುಂಬತನ"ವೆಂದೂ ಹೀಯಾಳಿಸಲು ಪ್ರಯತ್ನಿಸುತ್ತಲಿದ್ದಾರೆ. ಮುಂಬಯಿ ಟಾಯಿಮ್ಸಕಾರರು ಮದ್ರಾಸದೊಳಗಿನ ಯಾವನೋ ಪಂಡಿತನು ಸ್ವಾತಂತ್ರ್ಯದ ಕೂಗು ಹುಸಿ ಕೂಗೆಂದು ಅಭಿಪ್ರಾಯಪಡುತ್ತಾನೆಂತಲೂ ಪಂಜಾಬದ ಮಹಮ್ಮದೀಯನೊಬ್ಬನು ಇದೊಂದು ರಾಜಕಾರಣದೊಳಗಿನ "ಹಿಕಮತ್ತೆ"ಂದು ಹೇಳುವನೆಂತಲೂ ಆಗೀಗ ಪ್ರಕಟಿಸುತ್ತಾರೆ. ವ್ಹಾಯಿಸರಾಯರಾದ ಆಯರ್ವಿನ್ ದೊರೆಗಳೂ ಗರ್ಜಿಸಿ ನೋಡಿದ್ದಾರೆ. ನ್ಯೂಲಿಡರ್ ಎಂಬ ಪತ್ರದಲ್ಲಿ ಈ ಹೊಸ ಚಳವಳಿಗೆ "Risky tactics" "ಗಂಡಾಂತರಗಳುಳ್ಳ ತಂತ್ರ" ಎಂದು ಹೆಸರಿಟ್ಟಿದ್ದಾರೆ. ಹಿಂದುಸ್ಥಾನದ ಮೂವತ್ತುಮೂರುಕೋಟಿ ಹುಚ್ಚು ಕುರಿಗಳು ಮಾಡುವವೇನು ಎಂದು ಅವರ ಲೆಕ್ಕವಿರಬೇಕು.

ಆದರೆ ಈ ಎಲ್ಲ ತರ್ಕಕುತರ್ಕಗಳಿಗೆ ಮಹಾತ್ಮರಿಂದ ಈಗಾಗಲೇ ಉತ್ತರವು ದೊರೆತಿದೆ. ವ್ಹಾಯಿಸರಾಯರ ಜೊಳ್ಳು ಬೆದರಿಕೆಗೆ ತಾವು ಸೊಪ್ಪು ಹಾಕುವವರಲ್ಲವೆಂದು ಅವರು ಸಾರಿರುವರು. ಉಪ್ಪಿನ ಕರವನ್ನು ನಿಲ್ಲಿಸುವದಕ್ಕಾಗಿ ಸವಿನಯ ಕಾಯದೆಭಂಗವನ್ನು ತೀವ್ರವೇ ಪ್ರಾರಂಭಿಸುವದಾಗಿ ಆಡಿದ್ದಾರೆ. ತೆರಿಗೆಯನ್ನು ನಿಲ್ಲಿಸುವ ಸವಿನಯ ಕಾಯದೆಭಂಗವನ್ನು ಮಾಡುವವದರ ಸದ್ದು ಅಲ್ಲಲ್ಲಿ ಕೇಳಬರುತ್ತದೆ. "ಹುಸಿಯೂ ಅಲ್ಲ ಹುಂಬತನವೂ ಅಲ್ಲ; ನೀವೇ ಯಥಾಶಕ್ತಿ ನಮ್ಮನ್ನು ವಿರೋಧಿಸಲುಪ್ರಯತ್ನಮಾಡಿದರೆ ನಾವು ಯಥಾಮತಿ ನಿಮ್ಮನ್ನು ವಿರೋಧಿಸಲು ಸಮರ್ಥರೂ ಸಿದ್ಧರೂ ಇದ್ದೇವೆ" ಎಂದು ಪೂರ್ಣಸ್ವರಾಜ್ಯದಿನದ ಉತ್ಸವದಿಂದ ಸಂಶಯ ಉಳಿಯದಂತೆ ಜನರೂ ಸೂಚಿಸಿದ್ದಾರೆ.

ವಿಪರೀತಬುದ್ಧಿಯಾದವರಿಗೆ ಇಲ್ಲಿಯ ಪರಿಸ್ಥಿತಿಯ ಜ್ಞಾನವಾಗದಿದ್ದರೂ ಬುದ್ಧಿಯುಳ್ಳ ಇಂಗ್ಲೀಷ ಜನರಿಗೆ ಇಲ್ಲಿಯ ಪರಿಸ್ಥಿತಿಯ ಅಂದಾಜು ಹತ್ತದೇ ಇಲ್ಲ. ಎ. ಜಿ. ಗಾರ್ಡಿನರ ಎಂಬ ವಿದ್ವಾಂಸರು 'ಮಹಾತ್ಮಾಗಾಂಧಿಯು ಸಾಮಾನ್ಯ ಮನುಷ್ಯನಲ್ಲ; ಅವನ ಕೂಡ ಎಚ್ಚರದಿಂದ ನಡೆದುಕೊಳ್ಳಿರಿ; ಅವನ ಅಭಿಪ್ರಾಯಗಳನ್ನು ಸಾವಧಾನದಿಂದ ತಿಳಿದುಕೊಳ್ಳಿರಿ. ಅವನು ಹೇಳುವ ತಕ್ಕ ಉಪಚಾರಗಳನ್ನು ಮಾಡಿರಿ; ಇಲ್ಲದ ಗೊಂಪಲಗೇಡಿತನವು ಹಿತಕಾರಿಯಲ್ಲ' ಎಂದು ತಮ್ಮ ಜನರಿಗೆ ಎಚ್ಚರಿಕೆಯನ್ನು ಕೊಡುತ್ತಲಿದ್ದಾರೆ. ಬೇಲ್ಸಫರ್ಡ ಎಂಬವರು ಇಲ್ಲಿಯ ರಾಜಕೀಯ ಪಕ್ಷಗಳ ವ್ಯೂಹರಚನೆಯನ್ನು ಮಾರ್ಮಿಕವಾಗಿ ವರ್ಣಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಡೊಮಿನಿಯನ ಸ್ಟೇಟಸ್ ಬೇಡುವ ಪಕ್ಷದವರು ಸರಕಾರದವರ ಕೂಡ ಸಂಭಾವಿತರಂತೆ 'ಸಾಮಂತಸ್ವರಾಜ್ಯವನ್ನು ಕೊಡುವಿರಾ? ಹಾಗೇ ಆಗಲಿ; ದುಂಡುಮೇಜಿನ ಸಭೆಯಲ್ಲಿ ಅದು ನಿರ್ಣಯವಾಗತಕ್ಕದ್ದೇ? ಹಾಗೂ ಆಗಲಿ' ಎಂದು ಇತ್ತ ಮಾತು ನಡೆಸುವ ಸೋಗು ಹಾಕಿಕೊಂಡಿದ್ದಾರೆ. ಅತ್ತ ಪೂರ್ಣಸ್ವರಾಜ್ಯದ ಮುಲಖ್‌ಮೈದಾನ ತೋಫನ್ನು ನಿರಿಯಿಡುವ ಸಂಭ್ರಮವನ್ನು ನಡೆಸಿದ್ದಾರೆ ಕೆಲವರು. ಇನ್ನೊಂದು ಕಡೆಗೆ ಬೇರೆ ಕೆಲವರು ಕ್ರಾಂತಿಯ ಒರೆಗಳೆದ ಕತ್ತಿಯನ್ನು ಹಿಡಿದು ನಿಂತಿದ್ದಾರೆ. ಇವರೆಲ್ಲರ ಮನಸ್ಸಿನಲ್ಲಿಯೂ ನಿಜವಾದ ಹುರುಳುಳ್ಳ ಸ್ವರಾಜ್ಯವು ಸಿಗಬೇಕೆಂಬುದೇ ಇದೆ. ಹೆಸರಿನ ಮೋಹ ಯಾರಿಗೂ ಇದ್ದಂತೆ ತೋರುವದಿಲ್ಲ. ಹೋಮರೂಲ್, ಡೊಮಿನಿಯನ್ ಸ್ಟೇಟಸ್ ಮೊದಲಾದ ಹೆಸರುಗಳಿಗೆ ಮರುಳಾಗುವ ಜನರು ಕಡಿಮೆ. ನಿಜವಾದ ಡೊಮಿನಿಯನ ಸ್ಟೇಟಸ್ ದೊರಕುವ ಲಕ್ಷಣ ಕಾಣದಿದ್ದರೆ ಪೂರ್ಣ ಸ್ವರಾಜ್ಯಪಕ್ಷದವರು ಸವಿನಯ ಕಾಯದೆಭಂಗದ ಮುಖಾಂತರ ಅರಾಜಕತೆಯನ್ನು ಹುಟ್ಟಿಸುವರು. ಆ ಅರಾಜಕದ ಅನುಕೂಲತೆಯಲ್ಲಿ ಕ್ರಾಂತಿಪಕ್ಷದವರು ಮುಂದೆ ಸರಿದು ಬರತಕ್ಕವರು. ಬ್ರಿಟಿಶ್ ಮುತ್ಸದ್ದಿಗಳು ಜಾಣತನದಿಂದ ನಡೆಯದಿದ್ದರೆ ಹಿಂದುಸ್ತಾನದಲ್ಲಿ ಗೊಂದಲವೆದ್ದು ಏನಾದೀತೋ ಎಂದು ಹೇಳಲಿಕ್ಕೆ ಬರದು

ನಮ್ಮಲ್ಲಿಯ ಮೂರು ಪಕ್ಷದವರು ಹೀಗೆ ಮಾತನಾಡಿಕೊಂಡು ಮೇಲೆ ಹೇಳಿದಂತೆ ಮಾಡುತ್ತಲಿರದಿದ್ದರೂ ಪರಿಸ್ಥಿತಿಯ ಮೂಲಕ ಹಾಗಾಗುವ ಸಂಭವವೂ ಉಂಟು. ಆದಕಾರಣ ಆಳರಸರು ಈಗಿನಂತೆ ಹುಡುಗಾಟವನ್ನು ಮಾಡದೆ ಜನರ ಸತ್ತ್ವಪರೀಕ್ಷೆಯನ್ನು ಮಿತಿಮೀರಿ ನೋಡದೆ ಪ್ರಜಾಕ್ಷೋಭವನ್ನು ಕೆಣಕಿ ನೋಡುವವದರಲ್ಲಿ ಯಾರಿಗೂ ಹಿತವಿಲ್ಲ ಎಂಬುದನ್ನರಿತು ವರ್ತಿಸಬೇಕು. ಆಳರಸರು ಹೇಗೆ ನಮ್ಮ ವರ್ತನವು ಯುಕ್ತಿಯೋ ಶಕ್ತಿಯೋ ಎಂದು ಪರೀಕ್ಷಿಸುತ್ತಿರುವರೋ ಹಾಗೆ ಜನರಾದರೂ ತಮಗೆ ಆಳರಸರು ಸ್ವರಾಜ್ಯ ಕೊಡುವದನ್ನು ಮುಂದೆ ದೂಡುತ್ತಿರುವದು ಯುಕ್ತಿಯೋ ಶಕ್ತಿಯೋ ಎಂದು ತಿರುಗಿ ಪರೀಕ್ಷೆ ಮಾಡಲು ನಿಂತಿದ್ದಾರೆ. ಬಣಜಿಗ ಜೇಮ್ಸನಿಗೆ ಗಂಡುಮೀರಿದ ಫಿಲಿಪ್ಪನೇ ಮದ್ದು.

## ಆಚಾರ ಮತ್ತು ಬದನೀಕಾಯಿ

ಬ್ರಿಟಿಶರ ಇತಿಹಾಸಪರಂಪರೆಯನ್ನು ನೋಡಿದರೆ ಅದು ಸ್ವಾತಂತ್ರ್ಯಪಕ್ಷಪಾತಿಯೆಂದು ಅನೇಕರು ಹೇಳುವದುಂಟು.

ಆದರೆ ಅವರು ತಮ್ಮ ಸ್ವಾತಂತ್ರ್ಯದ ಪಕ್ಷಪಾತಿಗಳೇ ಹೊರತು ಮಂದಿಯ ಸ್ವಾತಂತ್ರ್ಯದ ಪಕ್ಷಪಾತಿಗಳಲ್ಲ. ಮಹಾಯುದ್ಧದಲ್ಲಿ ಬೆಲ್ಜಮ್ಮದ ಹೆಸರಿನಿಂದ ಇಂಗ್ಲೀಷರು ಯುದ್ಧ ಹೂಡಿದರು. ಆದರೆ ಬೆಲ್ಜಮ್ಮದ ಸ್ವಾತಂತ್ರ್ಯವು ಗೌಣ; ಜರ್ಮನಿಯು ಪ್ರಬಲವಾಗಬಾರದೆಂಬುದೇ ಅವರ ಪ್ರಧಾನ ಉದ್ದೇಶ. ತುರ್ಕಸ್ಥಾನಕ್ಕೂ ಅವರು ಸಹಾಯಮಾಡಿದ್ದುಂಟು; ಆದರೆ ಅದು ರಸಿಯಾ ದೇಶವು ಪ್ರಬಲವಾಗಬಾರದೆಂದು. ತಮ್ಮ ಸಾಮ್ರಾಜ್ಯಕ್ಕೆ ಪ್ರಬಲಶತ್ರುಗಳು ಹುಟ್ಟಬಾರದೆಂದು ಬ್ರಿಟಿಶ್ ಜನಾಂಗವು ಅವರಿವರ ಬೆನ್ನು ಕಟ್ಟುತ್ತಿರುವದೇ ಹೊರತು ಮಾನವ ಸ್ವಾತಂತ್ರ್ಯದ ಪಕ್ಷಪಾತದಿಂದ ಅಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದು. 'ದಿ ನೆಮಿಸಿಸ್ ಆಫ್ ನೇಶನ್ಸ' (ಜನಾಂಗಗಳ ಅದೃಷ್ಟ) ಎಂಬ ಗ್ರಂಥದ ಕರ್ತೃಗಳಾದ W. R. Peterson ಎಂಬವರು:

" A people who had won their Magna Carta 1215 and Habeas Corpus, and had their Bill of Rights 1689 found themselves instinctively on the side of liberty, wherever it was imperilled."

" ಮ್ಯಾಗ್ನಾಚಾರ್ಟಾ, ಹೆಬಸ್ ಕಾರ್ಪಸ್ ಮತ್ತು ಬಿಲ್ಲ ಆಫ್ ರಾಯಿಟ್ಸದಂಥ ಕಟ್ಟಳೆಗಳನ್ನು ಪಡೆದುಕೊಂಡ ಜನಾಂಗವು ಸ್ವಾತಂತ್ರ್ಯವು ಮುಳುಗುವಲ್ಲೆಲ್ಲ ಅದನ್ನು ಉದ್ಧರಿಸಲು ಕೈಚಾಚಿದುದು ಸ್ವಾಭಾವಿಕವಾಗಿದೆ" ಎಂದು ಬರೆಯುತ್ತಾರೆ. ಥಾಮ್ಸನ್ ಎಂಬ ಕವಿಯು 'ಎಂದಿಗೂ ಬ್ರಿಟನನು ಅಡಿಯಾಳು ಎನಿಸಿಕೊಳ್ಳನು' ಎಂದು ಹಾಡಿದ್ದಾನೆ. ಆದರೆ ಜನರನ್ನು ಅಡಿಯಾಳು ಮಾಡಲಿಕ್ಕೆ ಹಿಂಜರಿದ್ದದ್ದುಂಟೆ ! ತಾವು ಅಡಿಯಾಳು ಮಾಡಿಕೊಂಡವರಿಗೆ ವಿವೇಕದಿಂದ ಇವರಾಗಿಯೇ ಸ್ವಾತಂತ್ರ್ಯ ಕೊಟ್ಟದ್ದುಂಟೇ ! ಆದರೆ ಅದೇ ಮೇಲೆ ಹೇಳಿದ ಪಿಟರಸನ್ ಸಾಹೇಬರು:

' The record is doubtless stained by the policy which led to the loss of the American Colonies, by certain events in the early administration of India, by the early struggles in Wales, and by the long struggle in Ireland."

ಬ್ರಿಟೀಶರ ಸ್ವಾತಂತ್ರ್ಯಪ್ರೀತಿಯ ಚರಿತ್ರಕ್ಕೆ ಅಮೇರಿಕದ ಕೂಡಾದ ಇವರ ಬಡಿದಾಟವೂ ಕ್ಲೈವ್ಹ, ವಾರ್ನಹೆಸ್ಟಿಂಗ್ಸ ಡಾಲಹೌಸಿ ಮೊದಲಾದವರ ಕಾಲದಲ್ಲಿ ಹಿಂದುಸ್ಥಾನದಲ್ಲಾದ ಕೆಲವು ಸಂದರ್ಭಗಳೂ ವೇಲ್ಸದೊಡನೆ ಇವರು ಹೂಡಿದ ತಂತ್ರವೂ ಅಯರ್ಲಂಡದ ಕೂಡ ಇವರು ಎಸಗಿದ ಹೋಲಿಜಗಳೂ ಕಲಂಕಪ್ರಾಯವಾಗಿವೆ ಎಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಆಫ್ರಿಕದ ವಸಾಹತುದ ಕೂಡೇನು, ಇಜಿಪ್ತ ಕೂಡೇನು, ಪ್ಯಾಲಿಸ್ಟಾಯಿನ್‌ದಲ್ಲೇನು, ಅಥವಾ ಸದ್ಯಕ್ಕೆ ಹಿಂದುಸ್ಥಾನದಲ್ಲಿಯೇನು ಬ್ರಿಟಿಶ್‌ರು ನಡೆಸಿರುವ ಕಾರ್ಯಗಳು ಅವರ ಸ್ವಾತಂತ್ರ್ಯ ಪ್ರೀತಿಯ ಚರಿತ್ರಕ್ಕೆ ಭೂಷಣಪ್ರಾಯವಾಗಿಲ್ಲವೇನು ? ಅಮೇರಿಕಾದವರು ೧೭೭೬ರ ಜೂನ ೪ನೇ ತಾರೀಖಿಗೆ ಸ್ವಾತಂತ್ರ್ಯವನ್ನು ಸಾರುವಾಗ:

"The American Colonies are absolved from all allegiance to the British crown, and that all political connection between them and the state of Great Britain is, and ought be totally dissolved."

"ಬ್ರಿಟಿಶ್ ಸಿಂಹಾಸನಕ್ಕೂ ನಮಗೂ ಏನೇನೂ ಸಂಬಂಧವಿಲ್ಲ; ಅವರಂಕಿತದಲ್ಲಿ ನಾವು ಎಳ್ಳಷ್ಟೂ ಇಲ್ಲ, ಅವರು ನಮ್ಮ ಮೇಲೆ ಅಧಿಕಾರವನ್ನು ನಡಿಸಕೂಡದು" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದ ಮೇಲೂ ಬ್ರಿಟಿಶ್ ಜನಾಂಗಕ್ಕೆ ಬುದ್ಧಿ ಬರಲಿಲ್ಲ; ಕಳಕೊಂಡಮೇಲೆ ಬುದ್ಧಿ ಬಂತು. ಅಯರ್ಲಂಡದ ಕಥೆಯೂ ಹಾಡೂ ಅದೇ ! Thomas Daveis ಎಂಬ ಅಯರ್ಲಂಡದ ದೇಶಭಕ್ತನೊಬ್ಬನು ' We hate the Saxon and the Dane, we hate the Norman men 'ಎಂದೂ 'We cannot and will not try to forget her ( England ) long cursing and merciless tyranny to Ireland; and we don't desire to share her gains, her responsibility or her glories " 'ಇವರ ಸಹವಾಸ ಬೇಡ, ಸಂಬಂಧ ಬೇಡ, ಸುಡಲಿ ಅವರ ವೈಭವ'-ಎಂದು ಸಂತಾಪದಿಂದ ಹೇಳಿದ್ದಾನೆ. ಆಯರ್ಲಂಡವು ಇಂದು ಸ್ವತಂತ್ರ ಸಂಸ್ಥಾನವಾದದ್ದೇನೋ ನಿಜ; ಆದರೆ ಅನ್ನ ... ಹರಿದ ಮೇಲೆ; ಹೆಣಬಿದ್ದ ಮೇಲೆ; ಶಾಪ ದೊರೆತ ಮೇಲೆ.

ಅಂತು ಏನು? ಬ್ರಿಟಿಶರು ಕೈಬಿಡದೆ ಇನ್ನೂ ಏನೂ ... ರ್ಪಣವೆಂದು ಎಂದೂ ಅಂದಿಲ್ಲ. ತಾವು ಸ್ವತಂತ್ರರಾಗಿ ... ವಲ್ಲಿ ಹವಣಿಸಿದಷ್ಟೇ ಬೇರೆಯವರನ್ನು ಪರತಂತ್ರದಲ್ಲಿ ಇಡಲು ಹವಣಿಸಿದ್ದಾರೆ. ಮತ್ತೂ ಅವರಿಗೆ ಕಳಕೊಳ್ಳುವರೆಗೆ ...

ಬುದ್ಧಿ ಬಂದಿಲ್ಲ. ಅವರು ಹೇಳುವ ಆಚಾರ ತಮ್ಮ ಸ್ವಾತಂತ್ರ್ಯದ್ದು, ಅವರು ತಿನ್ನುವ ಬದನೀಕಾಯಿ ಮಂದಿಯ ಪಾರತಂತ್ರ್ಯದ್ದು.

---

## ಹುಡುಗ ಬೇಡಿಕೆಗಳು

ಮಹಾತ್ಮಾ ಗಾಂಧಿಯವರು 'ಸ್ವಾತಂತ್ರ್ಯ'ದ ರಣಗರ್ಜನೆಯನ್ನು ಮಾಡಿಯೂ ಇತ್ತ ತಮ್ಮ ಹುಡುಗಬೇಡಿಕೆಗಳನ್ನು (Childish demands) ಮುಂದೆ ಚಾಚುತ್ತಿರುವರಲ್ಲ ಇದೇನು ಹುಡುಗಾಟಿಕೆ ಎಂದು ಕೆಲವು ಪೆದ್ದಂಭಟ್ಟರಿಗೂ ಪಂಡಿತಂಮನ್ಯರಿಗೂ ದಿಗಿಲು ಬಿದ್ದಿದೆ. ಆದರೆ ರಾಷ್ಟ್ರದ ಪಟ್ಟದಲ್ಲಿ ರಾಜನಾಯಕರಿಗೂ ಪ್ರಜಾನಾಯಕರಿಗೂ ನಡೆದ ಚದುರಂಗದಾಟದ ಅರಿವೇ ಅವರಿಗಿಲ್ಲವೇನೋ! ಮಹಾತ್ಮರು ಹನ್ನೆರಡು ತಿಂಗಳ ಮುಂಚಿತವಾಗಿ ಎಚ್ಚರಕೊಟ್ಟು ಸಾಮ್ರಾಜ್ಯಕ್ಕೆ 'ಶಹ' ಕೊಟ್ಟರು. ನೆಹರೂ ವರದಿಯಲ್ಲಿ ಬೇಡಿದ ಸಾಮಂತಸ್ವರಾಜ್ಯವನ್ನು ಕೊಟ್ಟು, ಈ 'ಶಹ' ತಪ್ಪಿಸಬಹುದಾಗಿತ್ತು. ಆದರೆ ಹನ್ನೊಂದು ತಿಂಗಳ ತಪ್ಪಿಸಾಡಿ ಕುತ್ತಿಗೆಗೆ ಬಂದಾಗ ಆಯರ್ವಿನ ದೊರೆಗಳು ಸಾಮಂತಸ್ವರಾಜ್ಯದ ಹಾರು ಮಾತಿನ ಹುಸಿಯಾಟವನ್ನು ಆಡಿದರು. ಹತ್ತುವ 'ಶಹ' ತಪ್ಪಲಿಲ್ಲ. ಕೆಲವು 'ಪ್ಯಾಲಿ'ಗಳು ಬೆದರಿದವು, ಚದರಿದವು. ಜವಾಹಿರನ ಕುದುರೆ ಹಿಂದಿಟ್ಟುಕೊಂಡು ಮಹಾತ್ಮನೆಂಬ ಮಂತ್ರಿಯು ಏರಿ ಬಂದಮೇಲೆ 'ಶಹ' ಸುಲಭವಾಗಿ ತಪ್ಪುವದೇ? ೨೬ನೆಯ ಜಾನೆವಾರಿಯಲ್ಲಿ ಹಿಂದುಸ್ಥಾನದಲ್ಲಿ ಎಲ್ಲೆಲ್ಲಿಯೂ 'ಪೂರ್ಣ ಸ್ವರಾಜ್ಯ'ವು ವಿಶೇಷತಃ ತರುಣರಿಂದಲೂ ಸಾಮಾನ್ಯ ಜನರಿಂದಲೂ ಆಚರಿಸಲ್ಪಟ್ಟಿತು. ಅದರ ಮುನ್ನಾದಿನವೇ ವೈಸರಾಯರು ಆಡಿದ್ದನ್ನೆ ಮತ್ತೆ ಆಡಿದ್ದರು. ಪ್ರತಿಪಕ್ಷದ ಆನೆ ಒಂಟೆಗಳ ಹತ್ತರ ಕೂಡಲು ಆತುರಗೊಂಡ ಕೆಲವು 'ಪ್ಯಾಲಿ'ಗಳು ವೈಸರಾಯರ ಆಟದಿಂದ ಮುಗ್ಧವಾದವು. ಅವುಗಳ ಮೋಹವನ್ನು ಹೊಡೆದುಹಾಕಲು ಮಹಾತ್ಮರು ತಮ್ಮ 'ಹುಡುಗ ಬೇಡಿಕೆ'ಗಳ 'ಪ್ಯಾಲಿ'ಯನ್ನು ಮುಂದೆ ಸರಿಸಿದರು. ಆಟವು ಸಣ್ಣದಾಗಿದ್ದರೂ ಬಗಿತವು ಬಹಳವಾಗಿದೆ ಎಂಬದನ್ನು ತಿಳಿದುಕೊಳ್ಳುವ ಸೂಕ್ಷ್ಮತನವಾಗಲಿ ರಸಿಕತನಕವಾಗಲಿ ನಮ್ಮ ಕೌನ್ಸಿಲ್ ಅಸೆಂಬ್ಲಿಗಳ ವಚನಶೂರರಿಗೆ ಇಲ್ಲ. ಇದರಲ್ಲಿ ಸೈನ್ಯದ ಬೇಡಿಕೆ ಇಲ್ಲ, ಭಾರತೀಯರಿಗೆ ಹೆಚ್ಚು ಚಾಕರಿ ಸಿಕ್ಕಬೇಕೆಂಬ ಮಾತಿಲ್ಲ, ಅದಿಲ್ಲ ಇದಿಲ್ಲ ಎಂದು 'ಛಿದ್ರ'ಗಳನ್ನು ತೋರಿಸಿದ್ದಾರೆ. ಇವು ಮಹಾತ್ಮರಿಗೆ ಬೇಕೇ ಆಗಿದ್ದರೆ ಇವರು ಅಸೆಂಬ್ಲಿಗೆ ಏಕೆ ಸೇರುವದಿಲ್ಲ ಎಂದು ಕುಚೋದ್ಯ ಮಾಡಿದ್ದಾರೆ. ಆದರೆ ಈ 'ಹುಡುಗ ಬೇಡಿಕೆ'ಗಳೇ ಹದಿನಾಲ್ಕು ಲೋಕಗಳನ್ನು ನುಂಗಿರುವ ಬಾಲಕೃಷ್ಣನ ಬಾಯಿಯಂತೆ ಬ್ರಿಟಿಶರಿಗೆ ಭಯವನ್ನುಂಟುಮಾಡಿವೆ. ಇವುಗಳ ಬಗ್ಗೆ ಮೊದಲನೆಯ ಮಾತೆಂದರೆ ಇವು ಒಂದು ತಪದ ಹಿಂದೆ ಸಾಮಂತಸ್ವರಾಜ್ಯದ ಮಾತುಕೂಡ ಇಲ್ಲದಾಗ ರೀಡಿಂಗ ದೊರೆಗಳಿದಿರಿಟ್ಟ ಬೇಡಿಕೆಗಳು. ಎರಡನೆಯದೆಂದರೆ—ಆಳರಸರ ಹುಳುಕು ಹೊರಗೆಡಹಲು ಇದೊಂದು ತುಂಟ ಉಪಾಯ. ಇಷ್ಟು ಮೀರಿ ಇವುಗಳನ್ನು ರಾಜ್ಯಕರ್ತರು ಹೊಡಿಯದೆ ಬಡಿಯದೆ ಒಪ್ಪಿಕೊಂಡರೆ ಹಿಂದಿನ ಮೂವತ್ತು ವರ್ಷಗಳಲ್ಲಿ ಕೌನ್ಸಿಲ್ಲುಗಳಲ್ಲಿ ತಿಣಿಕಾಡಿಯೂ ಪಡೆಯದಿದ್ದದ್ದು ತಾನೆ ಉಡಿಯಲ್ಲಿ ಬಂದು ಬಿದ್ದಂತಾಗುವದು. (೧) ಮದ್ಯಪ್ರತಿಬಂಧ—ಇದರಿಂದ ಕೋಟಿ ಜನರ ಕಲ್ಯಾಣ; (೨) ವಿನಿಮಯವು ೧ಶಿಲಿಂಗ ೪ಪೇನ್ಸು ಇದರಿಂದ ೧೬ ಆಣೆ ಲಾಭ, ತಿಳಿಯದೆ ಹೋಗುವ ಕೋಟ್ಯಾವಧಿ ರೂಪಾಯಿಗಳ ಉಳಿತಾಯ; (೩) ಭೂಕಂದಾಯದಲ್ಲಿ ಅರ್ಧಕ್ಕರ್ಧ ಕಡಮೆ—ಒಕ್ಕಲಿಗನ ಸುಖದ ಹಾದಿ; (೪) ಉಪ್ಪಿನ ಕರ ನಿಲ್ಲಿಸುವದು—ಬಡಬಗ್ಗರಿಗೂ ಹಿತ; (೫) ಸೈನ್ಯದ ವೆಚ್ಚ ಅರ್ಧಕ್ಕರ್ಧ ಕಡಮೆ—ಶಿಕ್ಷಣ, ಆರೋಗ್ಯ, ಒಕ್ಕಲತನ ಮೊದಲಾದವುಗಳ ಹೊಟ್ಟೆಗೆ ಆಹಾರ; (೬) ಮೇಲಿನ ಅಧಿಕಾರಿಗಳ ಸಂಬಳ ಕಡಮೆ ಮಾಡುವದು—ಎಂದರೆ ಪರದೇಶದವರಿಗೆ ಬರಲು ಪ್ರತಿಕೂಲ, ಇಲ್ಲಿಯವರಿಗೆ ಅನುಕೂಲ; (೭) ಪರದೇಶಿಯರಿವೆಗೆ ಸುಂಕ—ನಮ್ಮ ಖಾದಿಗೆ ಸೌಲಭ್ಯ; (೮) ಸಮುದ್ರದ ದಂಡೆಯ ವ್ಯಾಪಾರವು ಭಾರತೀಯರ ಕಡೆಗೆ ಕೊಡುವ ಕಟ್ಟಳೆಯಾಗುವದು—ನಮ್ಮ ವ್ಯಾಪಾರದುನ್ನತಿಯ ಮಾರ್ಗ; (೯) ಕೊಲೆಮಾಡಿದವರನ್ನು ಬಿಟ್ಟು ಉಳಿದ ರಾಜಕೀಯ ಸೆರೆಯಾಳುಗಳನ್ನೂ, ಗಡಿಪಾರು ಆದವರನ್ನೂ ಮುಕ್ತರನ್ನಾಗಿ ಮಾಡುವದು ಇತ್ಯಾದಿ—ಒಪ್ಪಂದದ ಒಪ್ಪಿಗೆಯನ್ನೆ ಸರಕಾರದವರು ಬರೆದುಕೊಟ್ಟಂತೆಯೆ; (೧೦) ಗುಪ್ತ ಪೋಲಿಸರ ಖಾತೆಯನ್ನೆ ತೆಗೆದು ಹಾಕುವದು ಅಥವಾ ಅದು ಪ್ರಜೆಗಳಿಗೆ ಹೊಣೆಯಾಗುವಂತೆ ಮಾಡುವದು—ನಮ್ಮಲ್ಲಿಯ ಅವಿಶ್ವಾಸ-ಬಾಂಧವದ್ರೋಹ-ದೇಶದ್ರೋಹ ಕಡಮೆಯಾಗಲು ಉಪಾಯ; (೧೧) ಸ್ವಸಂರಕ್ಷಣಾರ್ಥವಾಗಿ ಆಯುಧಗಳನ್ನಿಡಲು ಅಪ್ಪಣೆಯನ್ನು ಕೊಡುವ ಅಧಿಕಾರವು ಪ್ರಜಾಮತವನ್ನವಲಂಬಿಸಿರುವದು — ಸ್ವಸಂರಕ್ಷಣದಿಂದ ಸ್ವದೇಶಸಂರಕ್ಷಣಸಾಮರ್ಥ್ಯವು ಬರುವದೇನು ಬಿಗಿಯಲ್ಲ. ಈ ಪ್ರಕಾರದ

ಜಾಲವನ್ನು ಮಹಾತ್ಮರು ಬೀಸಿರಲಾಗಿ ಕ್ಷುದ್ರ ಛಿದ್ರಾನ್ವೇಷಿಗಳು ಜನರ ಬುದ್ಧಿಯಲ್ಲಿ ಭೇದ ಮಾಡುವದು ಹಿತಕಾರಿಯಲ್ಲ. ಸಾಮಂತಸ್ವರಾಜ್ಯವು ದೊರೆತರೆ ಇವೆಲ್ಲ ದೊರಕುವದು ನಿಜ; ಆದರೆ ಕೌನ್ಸಿಲ್ಲುಗಳ ಗರ್ಭಕ್ಕೆ ಇದು ಹಿಡಿಸದ ಭಾರ. ಪ್ರಜಾಕ್ಷೋಭಕ್ಕೆ ಅಂಜಿ, ನ್ಯಾಯವನ್ನು ತಿಳಿದುಕೊಂಡು ಈ ಬೇಡಿಕೆಗಳನ್ನು ಆಳುವವರು ಕೊಟ್ಟಿದ್ದಾದರೆ ಸಾಮಂತಸ್ವರಾಜ್ಯವು ನಮಗೆ ನಿಲುಕದ ತುತ್ತೇನೂ ಅಲ್ಲ. ಈ ಹುಡುಗ ಬೇಡಿಕೆಗಳು ಹುಡುಗಾಟಿಕೆಯವಲ್ಲ. ಬಲಿಗೆ ದಾನಕೊಡುವ ದುರ್ಬುದ್ಧಿಯಾದರೆ ಬಟುವಾಮನನ ಮೂರು ಪಾದಗಳು ಮೂರು ಲೋಕಗಳನ್ನು ವ್ಯಾಪಿಸಲಿಲ್ಲವೇ ?

---

## ಕರ್ನಾಟಕ ಏಕೀಕರಣ

ಕಡಪಾ ರಾಘವೇಂದ್ರರಾಯರ ಸ್ಮರಣದಿನವು ಇದೇ ತಿಂಗಳ ೨೩ನೆಯ ತಾರಿಖಿಗೆ ಬಂದಿತು. ಉತ್ತರಕರ್ನಾಟಕದಲ್ಲಿ ಎಷ್ಟೋ ಜನರಿಗೆ ಕಡಪಾ ಎಂದರೆ ಏಕೀಕರಣ ಏಕೀಕರಣವೆಂದರೆ ಕಡಪಾಯೆಂಬ ಅಭಿಪ್ರಾಯವಿದೆ. ಮಂಗಳೂರಿನಲ್ಲಿ ಕೆಲವರಿಗೆ ಇದು ಸಂಮತವಿಲ್ಲ. ಹೀಗೆಂದಮಾತ್ರಕ್ಕೆ ಕಡಪಾರಾಯರಿಗಿಂತ ಬೇರೆ ಯಾರಾದರೂ ಹೆಚ್ಚು ತನುಮನಧನದಿಂದ ಏಕೀಕರಣಕ್ಕೆ ದುಡಿದಿರುವರೆಂದೇನೂ ಅಲ್ಲ, ಏಕೀಕರಣವು ಆಗಬೇಕಾದಷ್ಟು ಇನ್ನೂ ಆಗಿಲ್ಲ ಎಂದೇ ನಾವು ತಿಳಿಯಬೇಕಾಗುವದು. ಉಸುಬಿನ ಚೀಲಗಳ ಆಧಾರಕೊಟ್ಟು ಸೇತುವೆಯನ್ನು (ಪೂಲು) ಕಟ್ಟಿಕೊಂಡ ಮಾತ್ರಕ್ಕೆ ಸೇತುವೆಯ ದೃಢತೆಗೆ ಬಾಧಕವೇನು ? ನಿಃಶಂಕವಾಗಿ ನಾವು ಸೇತುವೆಯನ್ನುಪಯೋಗಿಸುವದು ಪ್ರಥಮಕರ್ತವ್ಯ. ಏಕೀಕರಣವೇ ನಮ್ಮ ಪ್ರಥಮ ಕಾರ್ಯ, ಏಕೀಕರಣವೇ ನಮ್ಮ ದ್ವಿತೀಯ ಕಾರ್ಯ, ಏಕೀಕರಣವೇ ನಮ್ಮ ತೃತೀಯ ಕಾರ್ಯ. ಕೊಡಗು, ತುಳುವು, ಬಡಗ, ಕೊಂಕಣಿ, ಮರಾಠಿ, ತೆಲುಗು ಎಂಬ ವಿರೋಧ ಬಳಿಯದಂತೆ ಕನ್ನಡ ಮಾತಿನಲ್ಲಿ ನಮ್ಮ ಜನಜೀವನದ ಬಳಕೆ ಬಳೆಯುವಂತೆ ಅತಿಲಘುವಿಚಾರ ಮೊದಲು ಮಾಡಿ ಅತಿಗುರುವಿಚಾರದವರೆಗೂ ಎಲ್ಲ ವಿಚಾರ. ಏಕೀಕೃತ ದೇಹದಂತೆ ಕನ್ನಡವು ಮೆರೆಯಬೇಕು. ಉತ್ತರ, ದಕ್ಷಿಣ, ಮೈಸೂರು ನಿಝಾಮ್ ಸಂಸ್ಥಾನ, ಮುಂಬಯಿ, ಮದ್ರಾಸ ಎಂಬ ಪ್ರಾಂತಭೇದಗಳ ವಿರೋಧವನ್ನು ಮಿಕ್ಕಿ ಕರ್ನಾಟಕದ ಏಕೀಕರಣವಾಗಬೇಕು. ಬ್ರಾಹ್ಮಣ, ಲಿಂಗಾಯಿತ, ಸ್ಪೃಶ್ಯ, ಅಸ್ಪೃಶ್ಯ ಎಂಬ ಭೇದಗಳನ್ನು ದಾಟಿ ಕನ್ನಡಿಗರ ಏಕೀಕರಣವಾಗಬೇಕು. ಒಂದು ಭಾಷೆ, ಒಂದು ದ್ದೇ[illegible] ಒಂದು ಜನ—ಎಂಬ ಭಾವನೆ ಬಲಿಯಬೇಕು. ಅದು ನಿಜವಾ[illegible] ಏಕೀಕರಣ.

ಆ ಏಕೀಕರಣವು ಬಿಳಿಯ ದೇವತೆಗಳು ಕೊಡಬಹುದಾ[illegible] ವರವಾಗಲಿ ದಾನವಾಗಲಿ ಇರಲಾರದು. ಸ್ವಾತಂತ್ರ್ಯದ [illegible] ವಳಿಯು ಕರ್ನಾಟಕ ಏಕೀಕರಣಕ್ಕೆ ವಿರೋಧಕವಾಗುವದೆ[illegible] ಕೆಲವರು ಬೆದರಿಕೊಂಡದ್ದುಂಟು. 'ವರಕೊಡುವ ದೇವತೆ[illegible] ಸಿಟಗೊಂಡರೆ ಹೇಗೆ?' ಇದೇ ಅವರ ಚಿಂತೆ. ಸಾಧುಸಜ್ಜ[illegible] ಕೇವಲ ದಯಾಪೂರಿತರಾಗಿ ದೀನರಿಗೆ ಕೃಪಾಪ್ರಸಾದ[illegible] ಕೊಡುವಂತೆ ದೇವತೆಗಳು ಕೊಡುವದಿಲ್ಲ; ತಪಸ್ಸು ಮಾಡ[illegible] ವರವನ್ನು ಕೊಡುವದಿಲ್ಲ; ತಪಸ್ಸು ಮಾಡಿದರೆ ಝುಕ್ಕಿಸಿ [illegible] ಓಡಿ ಓಡಿ ಬಂದು ಅಪ್ಪಾ ಅಣ್ಣಾ ಎಂದು ಏನಾದರೂ [illegible] ವನ್ನು ಕೊಟ್ಟೇ ಹೋಗುವರು. ಇದು ದೇವತೆಗಳ ಮ[illegible] ಗುಟ್ಟು. ಏಕೀಕರಣ ಚಳವಳಿಯು ಭಿಕ್ಷಾಟನ ಚರಿತೆಯಾ[illegible] ತಪೋಲೀಲೆಯಾಗಬೇಕು. ಅಂತೆಯೆ ಸ್ವಾತಂತ್ರ್ಯತಪಸ್ಸ[illegible] ನಮಗೆ ಪೋಷಕವು ; ಶೋಷಕವಲ್ಲ.

---

## ಈ ತಿಂಗಳ ಕರ್ನಾಟಕ

'ಪೂರ್ಣ ಸ್ವರಾಜ್ಯ ದಿನ'ವು ಕರ್ನಾಟಕದಲ್ಲೆಲ್ಲ [illegible] ಆಚರಿಸಲ್ಪಟ್ಟಿತು. ಹೆದರಿಕೆಯಿಂದ ಹಸಿವು ಅಡಗಿಸಿಟ್ಟುಕೊಂ[illegible] ವವರೂ ಆಡಿತೋರಿಸದವರೂ ಕೆಲವರಿರಲೊಲ್ಲರೇಕೆ; ಸಾಮಾ[illegible] ಜನತೆಯಲ್ಲಿ ಸ್ವತಂತ್ರ್ಯದ ಹಸಿವು ಜಾಗೃತವಾಗಿದೆ ಎ[illegible] ಹೇಳಬಹುದು. ಕೌನ್ಸಿಲ್ಲು ಬಹಿಷ್ಕಾರದ ಮಟ್ಟಿಗೂ ಕರ್ನಾ[illegible] ಕವು ಉಳಿದ ಪ್ರಾಂತಗಳಿಂದ ಬಹಳ ಹಿಂಸೆಯಿಲ್ಲ.

ಏಕೀಕರಣದ ಚಳವಳಿಯು ದೈನಂದಿನ ಚಳವಳಿಯಾ[illegible] ಬೇರುಬಿಡಹತ್ತಿದೆ. ಶ್ರೀ ಬೇಲೂರ ಕೇಶವದಾಸರೂ ಮ[illegible] ಶಿವಮೂರ್ತಿ ಸ್ವಾಮಿಗಳೂ ಕನ್ನಡದ ಒಳನಾಡು ಗಡಿನಾ[illegible] ಗಳಲ್ಲಿ ಗುಡುಗು ಹಾಕುತ್ತಿರುವರು. ಶ್ರೀ. ಮುದುವೀಡು ಕೃ[illegible] ರಾಯರ ವಕ್ತೃತ್ವದಿಂದ ಸೊಲ್ಲಾಪೂರ ಅಕ್ಕಲಕೋಟೆ ಜಮಖ[illegible] ಡಿಗಳ ಜನರು ಜಾಗೃತವಾಗುತ್ತಲಿರುವರು. ಸೊಲ್ಲಾಪೂರದ[illegible] ಬ್ಯಾ. ಸರದಾರರೂ, ಅಕ್ಕಲಕೋಟೆಯಲ್ಲಿ ಶ್ರೀ ಜಂಗಮ [illegible] ಲರೂ, ಜಮುಖಂಡಿಯಲ್ಲಿ ಶ್ರೀ ಹುಲ್ಯಾಳ ಡಾಕ್ಟರರೂ ಕರ್ನಾ[illegible] ಕೋದ್ಯಮದ ಆಧಾರಸ್ತಂಭರಾಗಿರುವದು ಅಭಿನಂದನೀಯ[illegible] ಪಂಡಿತ ತಾರಾನಾಥರಾಯರ ಪ್ರವಚನಸದೃಶ ಭಾಷಣ[illegible] ಷಣಗಳಿಂದ ಕನ್ನಡಿಗರಲ್ಲಿ ತನ್ನತನದರಿವುಂಟಾಗುತ್ತಿರುವ[illegible]

ಪುಣೆಯಂಥ ಮಹಾರಾಷ್ಟ್ರಕೇಂದ್ರವನ್ನೂ ರಾಯರು ತಮ್ಮ ಹೃದಯಸ್ಪರ್ಶಿ ಭಾಷಣಗಳಿಂದ ಮರುಳುಮಾಡಿದರು.

ಮದ್ರಾಸ ವಿಶ್ವವಿದ್ಯಾಲಯದವರೆದುರಿಗೆ ಮ. ರಾ. ಗೋವಿಂದ ಪೈಗಳವರು ಕನ್ನಡ ಮಾತುಗಳನ್ನೊಳಗೊಂಡ ಗ್ರೀಕ ಪ್ರಹಸನದ ವಿಷಯವಾಗಿಯೂ, ಮ. ರಾ. ಪಂಜೆ ಮಂಗೇಶರಾಯರು ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಎಂಬ ವಿಷಯವಾಗಿಯೂ ಮಾತನಾಡಿದರು. ಶ್ರೀ ತಾಡಪತ್ರಿ ರಾಘವಾಚಾರ್ಯರು ಮೈಸೂರು ವಿಶ್ವವಿದ್ಯಾಲಯದಲ್ಲಿ ದಕ್ಷಿಣ ದೇಶದಲ್ಲಿಯ ರಂಗ ಭೂಮಿಯ ಪರಿಸ್ಥಿತಿಯ ವಿಷಯವಾಗಿ ಮಾತನಾಡಿದ್ದಾಯಿತು. ಕನ್ನಡಿಗರಲ್ಲಿ ಬುದ್ಧಿಯ ಹಸಿವೂ ತೀವ್ರವಾಗ ತೊಡಗಿದೆ.

ವಿಜಾಪುರ ಜಿಲ್ಲೆಯ ಚಡಚಣ ಗ್ರಾಮದಲ್ಲಿ ಸ್ಯಾನಿಟರಿ ಟ್ಯಾಕ್ಸ ಎಂಬ ತೆರಿಗೆಯನ್ನು ಬಡವರಾದ ತಮಗೆ ಕೊಡುವದು ಶಕ್ಯವಿಲ್ಲೆಂದು ಅಲ್ಲಿಯ ರೈತರು ಹೇಳಿದ್ದಕ್ಕೆ ಕಲೆಕ್ಟರರ ಸಾಕ್ಷಿಯಾಗಿ ಮಾಮಲೇದಾರರು ಅವರನ್ನು ಇಲ್ಲದ ಸಲ್ಲದ ಬೈಗಳಿಂದ ಬಯ್ದುದ್ದನ್ನು ಸಹಿಸದೆ ಆ ಅಧಿಕಾರಿಗಳಿಗೆ ಅಡಿ ತೋರಿಸಿದ ಆ ಊರರೈತರ ಸ್ವಾಭಿಮಾನದ ಉಕ್ತಿಗಳೂ, ಸೆರೆಮನೆಯಿಂದ ಮರಳಿ ಬಂದ ಬೆಂಗಳೂರಿನ ಸೀತಾರಾಮ ಶಾಸ್ತ್ರಿಗಳು ಜನರ ಹಿತದ ಸಲುವಾಗಿ ಪಡುತ್ತಿರುವ ಸಾಹಸಸಂಕಷ್ಟಗಳೂ ನಮ್ಮ ಜನರಲ್ಲಿ ತಮ್ಮ ತಮ್ಮ ಹಕ್ಕುಗಳ ಅರಿವೂ ಅದಕ್ಕಾಗಿ ಕಷ್ಟಗಳನ್ನು ಸಹಿಸುವ ಶಕ್ತಿಯು ಉದಯವೂ ಆಗಿದೆ ಎಂದು ತೋರಿಸುವವು.

ಅನಂತಪುರದ ಸುಂದರನ್ ಅಯ್ಯರ ಎಂಬ ೧೬ ವರ್ಷದ ಕನ್ನಡ ಯುವಕನು ಡಫರಿನ್ ಹಡಗದಲ್ಲಿ ಶಿಕ್ಷಣಪಡೆಯುತ್ತಿರುವದು ನಮ್ಮ ತರುಣರು ಮುಂದುವರಿಯುತ್ತಿರುವದಕ್ಕೆ ಸಾಕ್ಷಿಯಾಗಿದೆ.

ಇಬ್ಬರು ಅನುಭವಶಾಲಿಗಳನ್ನೂ ಒಬ್ಬ ತರುಣನನ್ನೂ ಕಳೆದುಕೊಂಡು ಕರ್ನಾಟಕವು ಗೋಳಿಡುತ್ತಿದೆ.

ಮೈಸೂರಿನ ವಿಚಿತ್ರ ದಿನಚರ್ಯೆಯು ಉಳಿದ ಕನ್ನಡಿಗರಿಗೂ ಸಂತಾಪಗೊಳಿಸುತ್ತಿದೆ; ಕೊಡಗಿನಲ್ಲಿ ೧ಳಳ ಕಲಮಿನ ಬಾಧೆಯು ಜೇಲೂರ ಕೇಶವ ದಾಸರಿಗೆ ತಗುಲಿತು.

ಈ ತಿಂಗಳು ಪ್ರಸಿದ್ಧವಾಗಿರುವ ಬೆಳಗಾವಿಯ ಮಹಾರಾಷ್ಟ್ರ ಸಾಹಿತ್ಯಸಮ್ಮೇಲನದ ವರದಿಯು ಸುಳ್ಳು ಸೊಟ್ಟು ಜಂಭಗಳಿಂದ ತುಂಬಿಕೊಂಡು ತನ್ನ ಡೊಳ್ಳು ಬಾರಿಸುತ್ತ ಮೆರೆಯಲು ಹೊರಟಿದೆ,

ಈ ಸಲ ಕರ್ನಾಟಕ ಸಾಹಿತ್ಯ ಸಮ್ಮೇಲನವು ಹುಬ್ಬಳ್ಳಿಯಲ್ಲಾಗಬೇಕೆಂದು ಶ್ರೀ ಮಿರ್ಜಿ ಪ್ರಮುಖರಾದ ಹುಬ್ಬಳ್ಳಿಯ ಕನ್ನಡಿಗರು ಪ್ರಯತ್ನಗಳನ್ನು ಈಗಾಗಲೆ ಪ್ರಾರಂಭಿಸಿರುವರಲ್ಲದೆ ಬೇಗನೆ ಧಾರವಾಡದಲ್ಲಿ ಕಲೆಯಲಿರುವ ಸಾಹಿತ್ಯ ಪರಿಷತ್ತಿನ ಆಲೋಚನಾಸಭೆಯಲ್ಲಿ ಇದರ ವಿಚಾರವಾಗಿ ಅದರ ನಿರ್ಣಯವೂ ಆಗುವ ಲಕ್ಷಣಗಳಿವೆ.

ತುಮಕೂರಿನಲ್ಲಿ ಷಡಕ್ಷರಿಯ, ಸೊಲ್ಲಾಪುರದಲ್ಲಿ ವಾರದ ಮಲ್ಲಪ್ಪನವರ ಸ್ಮರಣೋತ್ಸವಗಳು ಅತಿ ವಿಜೃಂಭಣೆಯಿಂದ ಜರುಗಿಸಲ್ಪಟ್ಟವು.

ಮೈಸೂರಿನ ವಿದ್ಯಾಶಾಖೆಯ ಪ್ರಮುಖಾಧಿಕಾರಿಗಳೂ ಈ ವರ್ಷದ ಅಖಿಲಭಾರತ ಅರ್ಥಶಾಸ್ತ್ರಜ್ಞರ ಸಮ್ಮೇಲನದ ಅಧ್ಯಕ್ಷರೂ, ಮ. ರಾ. ರಾ. ಎನ್. ಎಸ್. ಸುಬ್ಬರಾಯರು



( ವಿಶ್ವಕರ್ನಾಟಕ ಕಾರ್ಯಾಲಯದಿಂದ )

ಧಾರವಾಡದ ಕರ್ನಾಟಕಕಾಲೇಜದೊಳಗಿನ ಇತಿಹಾಸ ಹಾಗು ಅರ್ಥಶಾಸ್ತ್ರ ಸಂಘ ಮತ್ತು ಕರ್ನಾಟಕ ಸಂಘಗಳ ವಾರ್ಷಿಕೋತ್ಸವಕ್ಕೆ ಆಗಮಿಸಿ ವಿಚಾರ ಪ್ರಚೋದಕವಾಗಿ ಮಾತನಾಡಿದರು.

'ರಾಮರಾಜ್ಯವಿದ್ದರೇನು ರಾವಣ ರಾಜ್ಯವಿದ್ದರೇನು ರಾಗಿ ಬೀಸುವದು ತಪ್ಪಿದ್ದಲ್ಲ' ಎಂಬ ಹಳೆಯ ನಾಣ್ಣುಡಿಯು ಹಳೆಯಕಾಲದಲ್ಲಿಯೇ ಸುಳ್ಳಾಗಿ ಫ್ರೆಂಚಕ್ರಾಂತಿಯಾದನಂತರ ಈ ಕಾಲದಲ್ಲಿ ರಾಗಿ ಬೀಸುವವರ ಹಿತದ ದೃಷ್ಟಿಯಿಂದಲೇ

ರಾಜ್ಯಘಟನೆಗಳಾಗುತ್ತಿರುವದರಿಂದಲೂ, ರಶಿಯಾ ದೇಶದಲ್ಲಿ ಅಂತಹದೊಂದು ದೊಡ್ಡದಾದ ರಾಜ್ಯರಚನಾ-ಸಮಾಜರಚನಾ-ಪ್ರಯೋಗವು ನಡೆದಿರುವದರಿಂದಲೂ ಹಿಂದುಸ್ಥಾನದವರಾದ ನಾವು ಸುತ್ತಲೂ ನಡೆದಿರುವದನ್ನು ವಿಮರ್ಶಿಸಿ ನಮ್ಮಲ್ಲಿಯ ಸ್ಥಿತಿಗಳನ್ನರಿತುಕೊಳ್ಳಬೇಕೆಂದು ಸ್ವಾರಸ್ಯವಾಗಿ ಹೇಳಿದರು.

ಕನ್ನಡ ಭಾಷೆಯು ವಿದ್ಯಾಖಾತೆಯಲ್ಲಿ ಶಿಕ್ಷಣಭಾಷೆಯಾಗ ಬೇಕೆಂದೂ ಹಾಗಾಗಲು ಇಂದಿನಿಂದಲೇ ನಾವೆಲ್ಲರು ಸರ್ವ ವಿಧ ವಾಗಿ ಪ್ರಯತ್ನಿಸಬೇಕೆಂದೂ ಸುಬ್ರಾಯರು ಅಭಿಪ್ರಾಯ ಪಟ್ಟರು.

---

## ಹತ್ತಿಯ ಮಾರಾಟ

ನಮ್ಮ ಮುಂಬಯಿ ಕರ್ನಾಟಕದಲ್ಲಿ ಹತ್ತಿಯೇ ಮುಖ್ಯ ವಾಗಿ ರೊಕ್ಕದ ಪಯಿರು. ಬೆಳಗಾವಿ, ಧಾರವಾಡ ಮತ್ತು ವಿಜಾಪುರ ಜಿಲ್ಹೆಗಳಲ್ಲಿ ಇದನ್ನು ಬಹು ದೊಡ್ಡ ಕ್ಷೇತ್ರವಲ್ಲಿ ಬೆಳೆಯುತ್ತಾರೆ. ಈ ಹತ್ತಿಯನ್ನೆಲ್ಲ ಮುಂಬಯಿ ಪಟ್ಟಣದ ದೊಡ್ಡ ದೊಡ್ಡ ಗಿರಣಿಗಳ ಒಡೆಯರೂ ರಾಯಲಿ, ಹೋಲ ಕಾರ್ಟ, ಜಪಾನ ಕೇಶ್ಯಾ ಮೊದಲಾದ ದೊಡ್ಡ ದೊಡ್ಡ ಪರದೇಶಗಳ ವ್ಯಾಪಾರದ ಸಂಘದವರೂ ಕೊಂಡು ಕೊಳ್ಳುತ್ತಾರೆ. ಇವರು ರೋಖ ವ್ಯಾಪಾರಸ್ಥರು. ಇವ ರಿಗೂ ಇವರು ಕೊಂಡುಕೊಳ್ಳುತ್ತಿರುವ ಹತ್ತಿಯನ್ನು ಬೆಳೆ ಯುವ ರೈತರಿಗೂ ಪ್ರತ್ಯಕ್ಷ ಗಳಿಕೆ ಬರುವದಿಲ್ಲ. ಇವರು ಒಬ್ಬರನ್ನೊಬ್ಬರು ಅರಿಯರು. ರೋಖ ವ್ಯಾಪಾರಸ್ಥರಿಗೂ ಹತ್ತಿಯನ್ನು ಬೆಳೆಯುವ ರೈತರಿಗೂ ನಡುವೆ ಸಣ್ಣ ಪುಟ್ಟ ವ್ಯಾಪಾರಸ್ಥರೂ ದಲಾಲರೂ ಸೇರಿಕೊಂಡಿರುವರು. ರೈತನು ಬೆಳೆದ ಹತ್ತಿಯು ರೋಖ ವ್ಯಾಪಾರಸ್ಥರ ಕೈಸೇರುವದು ಇವರ ಮುಖಾಂತರವಾಗಿಯೇ. ರೋಖ ವ್ಯಾಪಾರಸ್ಥರ ಹಾಗೂ ರೈತರ ಪ್ರತ್ಯಕ್ಷ ಸಂಬಂಧದಿಂದ ಉಂಟಾಗತಕ್ಕ ಲಾಭ ಗಳೆಲ್ಲ ಈ ಸಣ್ಣ ಪುಟ್ಟ ವ್ಯಾಪಾರಸ್ಥರ ಹಾಗೂ ದಲಾಲರ ಕೈಯಲ್ಲಿ ಮಾಯವಾಗುತ್ತವೆ. ಗದಗ, ಹುಬ್ಬಳ್ಳಿ, ಬಾಗಲ ಕೋಟೆ, ಬೈಲಹೊಂಗಲ ಇವೇ ಮೊದಲಾದ ಪಟ್ಟಣಗಳು ಹತ್ತಿಯ ಮಾರಾಟದ ಆಗರಗಳು. ಈ ಪೇಟೆಗಳಿಂದಲೇ ದಲಾ ಲರ ಮುಖಾಂತರವಾಗಿ ಹತ್ತಿಯು ರೋಖ ವ್ಯಾಪಾರಸ್ಥರ ಕಡೆಗೆ ಹೇರಿ ಹೋಗುತ್ತದೆ. ಅಂದರೆ ರೈತ ದಲಾಲರ ನಡುವೆ ಜೀವನ ಕಲಹವಿದೆ, ನಮ್ಮ ರೈತನು ಮುಗ್ಧನು. ದಲಾ ಲನು ಸ್ವಾಭಾವಿಕವಾಗಿ ಚುರುಕನು. ಹೀಗೆ ಪರಿಸ್ಥಿತಿಯಿ[illegible] ವದರಿಂದ ರೈತನು ನೆಲಕ್ಕೆ ಬಿದ್ದು ಮಣ್ಣು ಮುಕ್ಕುತ್ತಿರುವ[illegible]

ಆದರೆ ಈಗ ಹತ್ತಿಪ್ಪತ್ತು ವರ್ಷಗಳಿಂದ ಪ್ರಯಾಸಪಟ್ಟು ಒಕ್ಕಲತನದ ಖಾತೆಯವರು ಹತ್ತಿಯ ಮಾರಾಟದ ಸಂಘ[illegible] ಳನ್ನು ಅಲ್ಲಲ್ಲಿಗೆ ಸ್ಥಾಪಿಸಿದ್ದಾರೆ. ಅವುಗಳಲ್ಲಿ ಹುಬ್ಬಳ್ಳಿ ಹಾಗೂ ಗದಗ ಪಟ್ಟಣಗಳಲ್ಲಿರುವ ಸಂಘಗಳು ಒಳ್ಳೇ ದಕ್ಷ[illegible] ಯಿಂದ ಕೆಲಸಮಾಡಿ ರೈತನನ್ನು ತಕ್ಕಮಟ್ಟಿಗೆ ಬಲವು[illegible] ನ್ನಾಗಿ ಮಾಡಹತ್ತಿವೆ. ಈ ಸಂಘಗಳಲ್ಲಿ ಪ್ರತ್ಯಕ್ಷವಾಗಿ ಕೆ[illegible] ಮಾಡುವ ರೈತರಿಗೆ ಇವುಗಳ ಮಹತ್ವವು ತಿಳಿಯಲಾರಂಭಿ[illegible] ಅಂತೆಯೇ ಗದಗಹುಬ್ಬಳ್ಳಿಗಳ ದಲಾಲನು ರೈತನನ್ನು [illegible] ತ್ತಲಾಗಿ ಗೌರವಿಸತೊಡಗಿದ್ದಾನೆ. ಹತ್ತಿಯನ್ನು ಹಾ[illegible] ದಲಾಲಿಯ ಅಂಗಡಿಯ ಕಟ್ಟೆಯ ತುದಿಗೆ ಬಗ್ಗಿ ನಿಂತು ದ[illegible] ಲನು ಕೊಟ್ಟಷ್ಟು ದುಡ್ಡು ತಕ್ಕೊಂಡು ತುಟಿ ಎರಡು ಮಾ[illegible] ಸುಮ್ಮನೇ ಹೋಗುತ್ತಿದ್ದ ರೈತರು ಈಗ ಸ್ವಲ್ಪ ವಿಚಾರಮಾ[illegible] ತೊಡಗಿದ್ದಾರೆ. ಇಂಥ ಸುಸಂಘಟಿತವಾದ ಸಂಸ್ಥೆಗಳು ಹೆಚ್ಚಾದಂತೆ ರೈತನಿಗೆ ಮಾರಾಟದಲ್ಲಿ ಚನ್ನಾಗಿ ಹಣ[illegible] ದೊರೆಯುವದೆಂದು ನಿರ್ವಿವಾದವಾಗಿ ಹೇಳಬಹುದು.

ಇದರಂತೆ ಹತ್ತಿಯನ್ನು ಬೆಳೆಯುವ ರೈತನ ಹಿತವ[illegible] ಹೆಚ್ಚಿಗೆ ಸಾಧಿಸುವದಕ್ಕಾಗಿ "ಬಾಂಬೆ ಕಾಟನ ಮಾರ್ಕೆ[illegible] ಆ್ಯಕ್ಟ" ಅಂದರೆ ಮುಂಬಯಿ ಇಲಾಖೆಯ ಹತ್ತಿಯ ಪೇಟೆ[illegible] ಕಾಯಿದೆ ಎಂಬ ಕಾನೂನು ತಯಾರಾಗಿದೆ. ಇದರ ಉದ್ದೇ[illegible] ವೆಂದರೆ ಈಗ ಎಷ್ಟೋ ದಲಾಲರಲ್ಲಿ ಅನಿಯಂತ್ರಿತವಾಗಿ [illegible] ದಿರುವ ವ್ಯಾಪಾರದ ಅನೀತಿಯನ್ನು ಕಡಿಮೆ ಮಾಡುವ[illegible] ದಲಾಲಿಯನ್ನು ಆಯಾ ಪರಿಸ್ಥಿತಿಗನುಸರಿಸಿ ಇಂತಿಷ್ಟೇ ತೆಗೆ[illegible] ಕೊಳ್ಳಬೇಕೆಂದೂ, ತೂಕ ಮಾಪುಗಳು ಸರಿಯಾಗಿರಬೇಕೆಂ[illegible] ಧರ್ಮಾದಾಯ, ಕಡತ, ಬಾರದಾನ ಮತ್ತು ಹವಾ ತೆಗೆ[illegible] ವದು ಮುಂತಾದ ಬಾಬುಗಳು ರೈತಮಂಡಲದ ಸಮ್ಮತಿಗನು[illegible] ರಿಸಿ ಇರಬೇಕೆಂದೂ ಹತ್ತಿಯ ವ್ಯಾಪಾರವು ನಿಷ್ಕಪಟ[illegible] ರಾಷ್ಟ್ರದ ಹೆಸರನ್ನು ಕಾಯುವದಾಗಿರಬೇಕೆಂದೂ ಈ ಕಾ[illegible] ನಿನ ಉದ್ದೇಶವಾಗಿದೆ. ಹುಬ್ಬಳ್ಳಿ ಮತ್ತು ಬೈಲಹೊ[illegible] ಪೇಟೆಗಳಲ್ಲಿ ಈ ಕಾಯ್ದೆಯನ್ನು ಜಾರಿಯಲ್ಲಿ ತರಬೇಕೆಂ[illegible] ಪ್ರಯತ್ನ ನಡೆದಿದೆಯೆಂದು ತಿಳಿದುಬರುತ್ತದೆ. ಲೋ[illegible] ಬೋರ್ಡು, ಮುನಸಿಪಾಲ್ಟಿ, ತಾಲೂಕ ಡೆವ್ಹಲಪ[illegible]

ಅಶೋಸಿಏಶನ್ ಇವೇ ಮೊದಲಾದ ಸಾರ್ವಜನಿಕ ಸಂಸ್ಥೆಗಳು ಒಪ್ಪಿಗೆಯನ್ನು ಕೊಟ್ಟು ಈ ಹೊಸ ಕಾನೂನು ಆಯಾ ಪೇಟೆಗಳಲ್ಲಿ ಜಾರಿಯಾಗುವಂತೆ ಮಾಡಬೇಕು. ಜನರಾದರೂ ತಪ್ಪದೆ ಹಾಗೆ ಮಾಡಿಸಿಕೊಳ್ಳಬೇಕು. ಈ ಕಾಯ್ದೆಯಿಂದ ಒಂದು ಮಂಡಲವು ಸ್ಥಾಪಿತವಾಗಿ ಅದರಲ್ಲಿ ರೈತರದೇ ಬಹುಮತವಿರುವಂತೆ ಏರ್ಪಾಡು ಇರುತ್ತದೆ. ರೈತರು ಈ ಕಾಯ್ದೆಯ ವಿಷಯವಾಗಿ ಅವಶ್ಯವಾಗಿ ವಿಚಾರ ಮಾಡಬೇಕು.

ಇಂಥ ಪರಿಸ್ಥಿತಿಯಲ್ಲಿ ನಮ್ಮ ದಲಾಲರೂ ಒಂದಿಷ್ಟು ತಮ್ಮ ಅಮಾನುಷವೃತ್ತಿಯನ್ನು ಬಿಟ್ಟುಕೊಟ್ಟು ತಮ್ಮಂತೆಯೇ ಇದ್ದ ರೈತರೆಂಬ ಮನುಷ್ಯರ ದುಃಖಗಳಲ್ಲಿ ಪಾಲುಗಾರರಾಗಿ ಸಮಾಜಕ್ಕೆ ಭೂಷಣಪ್ರಾಯರಾಗುವಂತೆ ವರ್ತಿಸುವದೂ ಕರ್ತವ್ಯವಾಗಿದೆ.

---

## ಬೆಳವಿ ರಾಮಚಂದ್ರರಾಯರು

ಸುಪ್ರಸಿದ್ಧರಾದ ಬೆಳಗಾಂವಿಯ ಬೆಳವಿ ದತ್ತರಾಯರ ಮಕ್ಕಳಾದ ರಾಮಚಂದ್ರರಾಯರು ಇದೇ ತಿಂಗಳ ತೀರಿಕೊಂಡರೆಂದು ತಿಳಿಸಲು ಅತ್ಯಂತ ಖೇದವಾಗುತ್ತದೆ. ರಾಮರಾಯರು ಮುಂಬಯಿಯಲ್ಲಿ ವಕೀಲಿಯನ್ನು ನಡಿಸುತ್ತ ಹೆಸರಾಗಹತ್ತಿದ್ದರು. ಕರ್ನಾಟಕ ಚಳವಳದ ಅತ್ಯಂತ ಅಭಿಮಾನಿಗಳಾಗಿದ್ದರು. ಹೋದವರ್ಷದ ಬೆಳಗಾಂವಿಯ ಪರಿಷತ್ತುಗಳಲ್ಲಿ ಪ್ರಮುಖಭಾಗವನ್ನು ವಹಿಸಿದ್ದರು. ಮುಪ್ಪಿನ ಕಾಲದಲ್ಲಿ ಶ್ರೀ ದತ್ತರಾಯರಿಗುಂಟಾದ ದುಃಖದಲ್ಲಿ ಕನ್ನಡಿಗರೆಲ್ಲರೂ ಪಾಲುಗಾರರಾಗಿದ್ದಾರೆಂದು ಹೇಳಬಯಸುತ್ತೇವೆ. ಇಂಥ ಸಾವುಗಳಿಂದ ಆ ದೇವದೇವನಿಗೆ ಏನು ಸಮಾಧಾನವಾಗುವದೋ ತಿಳಿಯದು.

---

## ಶ್ರೀಯುತ ಪಡಮುನ್ನೂರು ರಾಮಚಂದ್ರರಾಯರು

ಹಿಂದೆ, ಕೆನರಾ ಹೈಸ್ಕೂಲಿನ ಸ್ಥಾಪನಾಕಾಲದಿಂದೆಂಬಂತೆ ೧೦-೧೨ ವರ್ಷಗಳ ತನಕ ಭೂಗೋಳ ಶಾಸ್ತ್ರ, ಸಂಸ್ಕೃತ, ಗಣಿತಾದಿಗಳನ್ನು ಅಸಮಾನವಿದ್ವತ್ತಿಕೆಯಿಂದ ಕಲಿಸಿ, ಇಲ್ಲಿಂದ ಕೆಲಸ ಬಿಟ್ಟು ಮಿಶ್ಯನ್ ಶಾಲೆಯಲ್ಲಿ ಕೆಲ ವರ್ಷ ಉದ್ಯೋಗವನ್ನು ನಿರ್ವಹಿಸಿಕೊಂಡು, ಕೊನೆಗೆ ಉಡುಪಿ ಮಿಶ್ಯನ್‌ಶಾಲೆಗೂ ತೆರಳಿ, ಮುಂದೆ ರಾಷ್ಟ್ರೀಯ ಶಿಕ್ಷಣದಲ್ಲಿ ಸೇರಿ, ತಮ್ಮ ಸರ್ವಸ್ವವನ್ನೂ ಗೋಸೇವೆಗಾಗಿ ಎರೆದುಕೊಟ್ಟು, ಇತ್ತೀಚೆಗೆ ತೀರ ಸನ್ಯಾಸಿಯಂತೆ ಮಲ್ಪೆಗೆ ತೆರಳಿದ್ದ, ಶ್ರೀಯುತ ಪಡಮುನ್ನೂರು ರಾಮಚಂದ್ರರಾಯರು ತಾ|| ೧೬ನೇ ರಾತ್ರಿ ೮ ಗಂಟೆಗೆ ಮಲ್ಪೆ ಕ್ರೋಢಾಶ್ರಮದಲ್ಲಿ ದೈವಾಧೀನರಾದರೆಂಬ ವಿಷಾದಕರ ವಾರ್ತೆಯು ನಮಗೆ ತಲಪಿರುವುದು. ಕನ್ನಡದ ಹಾಗೂ ಕನ್ನಡ ಸಂಸ್ಕೃತಿಯ ಅಭಿಮಾನಿಗಳೂ, ಬ್ರಾಹ್ಮಣರೊಳಗೆ ಅಸಾಧಾರಣವಾದ ಸಮಾಜಸುಧಾರಣಾಪ್ರಿಯರೂ ಆಗಿದ್ದ ಇವರು, ತಮ್ಮ ಸೋದರಿಯು ಅಕಾಲವೈಧವ್ಯಕ್ಕೆಡೆಯಾಗಿ ಮುಂಡನವಿಧಿಗೆ ಒಳಪಡುವ ಪ್ರಸಂಗವುಂಟಾದಾಗಲೆ, ಬ್ರಾಹ್ಮಣ್ಯವೇ ತನಗೆ ಬೇಡವೆನ್ನುವಷ್ಟು ವೈರಾಗ್ಯ ತಾಳಿದರು. ಧರ್ಮಪತ್ನಿಯು ಮಡಿದಂದು ಇನ್ನಷ್ಟು ವೈರಾಗ್ಯಭರಿತರಾಗಿ, ಬ್ರಾಹ್ಮಣ ಸಮಾಜವನ್ನುಳಿದು, ಬ್ರಹ್ಮಸಮಾಜವನ್ನೇ ಸೇರಿದರು. ಎರಡನೇ ವಿವಾಹವನ್ನಂತೂ ಆಂಧ್ರಸಾಹಿತ್ಯಕಾರರೂ ಸುಧಾರಕರೂ ಆಗಿದ್ದ ಕೀರ್ತಿಶೇಷ ವೀರೇಷ ಲಿಂಗಮ್ ಪಂತ್ಲು ರವರಿಂದ ಅವರ ಆಶ್ರಮದೊಬ್ಬ ಮಹಿಳೆಯೊಡನೆ ಮಾಡಿಕೊಂಡರು. ಇವರಲ್ಲಿ ಪದ್ಮಾವತಿ ಎಂಬ ಹೆಸರಿನದೊಂದು ಕನ್ಯಾರತ್ನವು ಜನಿಸಿ, ಇಂಗ್ಲಿಷ ಕವಿತೆಗಳನ್ನು ಬರೆವುದರಲ್ಲಿ ಅಸಾಧಾರಣ ವಿದ್ವತ್ತಿಕೆಯಿಂದ ಶ್ರೀಮತಿ ತರುಪತ್ತಳಷ್ಟೆ ಖ್ಯಾತಿಯನ್ನೈದಿದ್ದು, ತೀರ ಎಳೆವಯಸ್ಸಿನಲ್ಲಿ ಇಂಟರ್‌ಮಿಡಿಯಟ್ ಪರೀಕ್ಷೆ ಕೊಡುವಾಗ ಮೃತಿ ಹೊಂದಿರಲು, ಆ ಶೋಕದಿಂದ ಕನ್ಯೆಯ ತಾಯಿಯೂ ಮಡಿದಳು. ನಂತರ ಅಯ್ಯನವರು ಇತ್ತ ಬಂದು, ಗೋಸೇವಾ ಕಾರ್ಯಕ್ಕಾಗಿ ತನ್ನ ಎಲ್ಲವನ್ನು ಕೊಟ್ಟು ಬಿಟ್ಟು, (ಅದು ಸುಮಾರು ೪೦,೦೦೦ ರೂಪಾಯಿಯ ಆಸ್ತಿಯಾಗಬಹುದು). ಸನ್ಯಾಸಿಯಂತೆ ಇರುತಿದ್ದರು. ಪಂಚಮರನ್ನು ಉದ್ಧರಿಸುವುದರಲ್ಲಿ ಇವರು ಅತಿ ಸಾಹಸಿಗಳಾಗಿದ್ದರು. ಪರಂತು, ಲೋಕದ ಕಣ್ಣೆದಿರಲ್ಲೇ ನಲಿದಾಡಿ ಮೆರೆದು, ತನ್ನ ಕಾರ್ಯವನ್ನು ಹೊಗಳಿಕೊಳ್ಳಲಿಚ್ಛೆ ಇಲ್ಲದೆ ಇದ್ದ ಕಾರಣ, ಇವರು ಬಿರುದುಗಳನ್ನಾಗಲಿ, ವಿಶೇಷ ಕೀರ್ತಿಯನ್ನಾಗಲಿ ಈ ಭಾಗದಲ್ಲಿ ಪಡೆದಿಲ್ಲ. ತೀರ ಸಾಧುತ್ವ, ಸೇವಾತತ್ಪರತೆ; ದಾರಿದ್ರ್ಯದ ಮೇಲೆ ವಾತ್ಸಲ್ಯ, ಅತಿಕಷ್ಟ ಕ್ಲೇಶ ಸಹಿಷ್ಣುತೆ ಇವೆ ಇವರಲ್ಲಿದ್ದ ಪರಮ ಗುಣಗಳಾಗಿದ್ದುವು. ಇವರು ಜಿಲ್ಲೆಯಲ್ಲೂ ಜಿಲ್ಲೆಯ ಹೊರಗೂ ತುಂಬಾ ಪರಿಚಿತರು. ಇವರ ಆತ್ಮಕ್ಕೆ ವಿಶೇಷ ಶಾಂತಿಯಿರಲಿ.

— ಕಂಠೀರವ

---

ದಿವಂಗತರಾದ ಶ್ರೀಮಾನ್

## ಶ್ರೀನಿವಾಸಯ್ಯಂಗಾರ್ ಸೆಟ್ಲೂರ್ ಅವರು

ಜಾನೇವರಿ ೧೧ನೆಯ ತಾರೀಖಿನ ದಿನ ಹೆಬ್ಬಾರು ಶ್ರೀ ವೈಷ್ಣವರಲ್ಲಿ ಅಗ್ರಗಣ್ಯರೂ, ದೇಶಭಕ್ತರೂ ಆದ ಶ್ರೀಮಾನ್ ಶ್ರೀನಿವಾಸಯ್ಯಂಗಾರ್ ಎಸ್. ಸೆಟ್ಲೂರ್ ಅವರು ಪರಮಪದವನ್ನೈದಿದರು. ಇವರು ದೊಡ್ಡಮನೆತನದವರು. ನ್ಯಾಯಪರೀಕ್ಷೆಯಲ್ಲಿ ತೇರ್ಗಡೆಯಾದನಂತರ ಬೊಂಬಾಯಿನಲ್ಲಿಯೇ ವಕೀಲಾತಿಯನ್ನು ಮಾಡಲುಪಕ್ರಮಿಸಿದರು. ಆ ಕಾಲದಲ್ಲಿ ಮೈಸೂ



( ವಿಶ್ವಕರ್ನಾಟಕ ಕಾರ್ಯಾಲಯದಿಂದ )

ರಿಂದ ಬೊಂಬಾಯಿಗೆ ಹೋಗುವ ಅನೇಕ ವಿದ್ಯಾರ್ಥಿಗಳಿಗೆ ಆಶ್ರಯರಾಗಿದ್ದರು. ಅಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದರಿಂದಲೂ ಬಹಳ ಗೌರವಕ್ಕೆ ಪಾತ್ರರಾಗಿದ್ದರಿಂದಲೂ ಶ್ರೀ. ವಿ. ಪಿ. ಮಾಧವರಾಯರ ದಿವಾನಗಿರಿಯಲ್ಲಿ ಮೈಸೂರ ನ್ಯಾಯಾಸ್ಥಾನಕ್ಕೆ ಜಡ್ಜಿಗಳಾಗಿ ನಿಯಮಿಸಲ್ಪಟ್ಟರು. ಬೊಂಬಾಯಿನಲ್ಲಿದ್ದಾಗ ಇವರಿಗೂ ಲೋಕಮಾನ್ಯ ತಿಲಕರಿಗೂ ಬಹಳ ಸ್ನೇಹವ್ರ... ಯಿತು. ರಾಜಕೀಯ ವಿಚಾರದಲ್ಲಿ ಮ॥ ಸೆಟ್ಲೂರವರು ... ಕರ ಕಕ್ಷಿಯವರಾಗಿದ್ದರು. ಒಂದೆರಡು ವರ್ಷಗಳು ಜಡ್ಜಿಗ... ಗಿದ್ದರು; ಈ ಸಮಯಕ್ಕೆ ಲೋಕಮಾನ್ಯರ ಬಿಡುಗಡೆಯ ... ಇವರು ಅವರನ್ನು ಅಭಿನಂದಿಸಿ ಬರೆದ ಕಾಗದವೊಂದು ಸ... ದವರ ಕೈಗೆ ಹೋಗಿ ಜಡ್ಜಿ ಸ್ಥಾನಕ್ಕೆ ರಾಜೀನಾಮೆಕೊ... ಕಾಯಿತು. ಆ ಮೇಲೆ ಮದರಾಸಿನಲ್ಲಿ ವಕಾಲತ್ತನ್ನು ಪ್ರಾ... ಸಿದರು. ಅಲ್ಲಿ ಕೆಲವು ವರ್ಷಗಳಿದ್ದು ಹವ ಸರಿಪಡದೆ ಹೋ... ರಿಂದ ಅಲ್ಲಿಂದ ಮೈಸೂರಿಗೆ ಹಿಂತಿರುಗಿ ಬಂದು ಬೆಂಗಳೂ... ಲ್ಲಿಯೇ ವಕೀಲರಾದರು. ಇವರಿಗೆ ಲೋಕಮಾನ್ಯರ ಸ್ನೇ... ಲ್ಲದೆ ಸ್ವಾಮಿ ವಿವೇಕಾನಂದರವರ ಸಾನ್ನಿಧ್ಯವೂ ದೊರೆ... ಇವರಿಗೆ ಸಂಸ್ಕೃತದಲ್ಲಿ ಬಹಳ ಪಾಂಡಿತ್ಯವಿದ್ದುದರಿಂದ ಹಿ... ನ್ಯಾಯದಲ್ಲಿ ಇವರನ್ನು ಆದರ್ಶವಾಗಿಟ್ಟುಕೊಂಡಿದ್ದರು. ಇ... ಮಿತಾಕ್ಷರವನ್ನು ಪರಿಶೋಧಿಸಿ—ಟೀಕೆಯೊಡನೆ ಪ್ರಕಟಿಸಿದ್ದ... ಹಿಂದೂ ಕಾನೂನಿಗೆ ಸಂಬಂಧಪಟ್ಟ ಒಂದು ಬಹು ಕ್ಲಿಷ್ಟ... ವಾದವಿಷಯದಲ್ಲಿ ಚರ್ಚಿಸುವದಕ್ಕೋಸ್ಕರ ಇವರು ... ಯಿತಿಗೂ ಹೋಗಿದ್ದರು. ಇವರಿಗೆ ವಾಗಾಡಂಬರವಿರದಿದ್ದ... ಕೈಬರವಣಿಗೆಯಲ್ಲಿ ಕುಶಲತೆಯಿದ್ದಿತು. ಇಂಗ್ಲೀಷ್ ... ಕೆಯ ವಾಚಕರಲ್ಲಿ ಅವರ ಬರವಣಿಗೆಯ ಶೈಲಿಸೌಷ್ಠವ... ಅರಿಯದವರಿಲ್ಲ. ಪುತ್ರಪೌತ್ರಾದಿಗಳನ್ನೂ, ಸಹಧರ್ಮಿ... ಯನ್ನೂ, ಅನೇಕ ಹಿತಚಿಂತಕರನ್ನೂ ವ್ಯಸನಕ್ಕೆ ಗುರಿಮಾ... ಇಹಲೋಕದ ಪ್ರಯಾಣವನ್ನು ಮುಗಿಸಿಕೊಂಡು ... ಹೋದ ಅವರ ಆತ್ಮನಿಗೆ ಸರ್ವಾಂತರ್ಯಾಮಿಯು ಶಾಂತಿ... ನ್ನೀಯಲೆಂಬುದೇ ನಮ್ಮ ಕೋರಿಕೆ.

—ವಿಶ್ವಕರ್ನಾಟಕ

[ ಮೈಸೂರಿನಲ್ಲಿ ಅಖಿಲಕರ್ನಾಟಕ ಕಲ್ಪನೆಯನ್ನು ... ವರಲ್ಲಿ ಸೆಟ್ಲೂರವರು ಪ್ರಮುಖರೆಂಬದನ್ನು ನಾವೆಲ್ಲರು ... ಯುವಂತಿಲ್ಲ.

—ಸಂ. ಜ. ಕ.]

# ಕ್ಷಮಾಪಣೆ

ಮೂರು ವರ್ಷದ ಬುದ್ಧಿ ನೂರು ವರ್ಷದ ವರೆಗೆ ಎನ್ನುವಂತೆ ಮೂರು ಸಂಚಿಕೆಯ ನಿಯಮಿತತೆಯು ನೂರು ಸಂಚಿಕೆಗಳ ವರೆಗೆ ಎಂಬುದು ನಿಜವಾಗಬಾರದಿತ್ತೇ ? ಈ ನಾಲ್ಕನೆಯ ಸಂಚಿಕೆಯು ಹೊರಡಲು ಸ್ವಲ್ಪ ತಡವಾದದ್ದಕ್ಕೆ ನಮ್ಮ ವಾಚಕರು ಕ್ಷಮಿಸಬೇಕು. ಮುಂದಿನ ಸಂಚಿಕೆಯು ಪರಲೂರವರಿಗೂ ಹುಣ್ಣಿವೆಯ ದಿನವೇ ಕೈಸೇರುವಂತೆ ದಕ್ಷತೆಯನ್ನು ವಹಿಸುವೆವು. ಈಸಲವೂ ನಮ್ಮಿಂದಾಗಲಿ ಮುದ್ರಣಾಲಯದವರಿಂದಾಗಲಿ ದಕ್ಷತೆಯಲ್ಲಿ ಏನಾದರೂ ಕೊರತೆಯಾಯಿತೆಂದಲ್ಲ – ಆದರೆ ಕಾರ್ಲಾಯಿಲನು ಒಂದು ಕಥೆ ಹೇಳುವನಲ್ಲ — ಯಾವದೋ ಒಂದು ಅಡವಿಯಲ್ಲಿರುವ ಒಬ್ಬ ಬೇಡನಿಗೂ ಅವನ ಹೆಂಡತಿಗೂ ಬಡಿದಾಟವಾಯಿತೆಂತೆ. ಅದಕ್ಕಾಗಿ ಅಂದು ಅವನು ಬೇಟೆಗೆ ಹೋಗಲಿಲ್ಲ. ದಿನಾಲು ಕೊಲ್ಲಬೇಕಾದ ನಾಲ್ಕಾರು ಮೃಗಗಳನ್ನು ಕೊಲ್ಲಲಿಲ್ಲ. ಮೃಗಚರ್ಮಗಳು ನಾಲ್ಕಾರು, ಪಟ್ಟಣದ ಸಂತೆಗೆ ಕಡಿಮೆ ಬಂದು, ಮೃಗಚರ್ಮದ ಧಾರಣೆಯು ಹೆಚ್ಚಾಗಿ, ಕೊಳ್ಳುವವರ ನಾಲ್ಕಾರು ಆಣೆ ಹೆಚ್ಚು ವೆಚ್ಚನಾಗಿ, ಅವರು ತಿನ್ನುಣಲು ಮಾಡುವ ವೆಚ್ಚಕ್ಕೆ ಸ್ವಲ್ಪ ಕೊರತೆ ಬಂದಿತು — ಎಂದು ; ಹಾಗೆ 'ಜಯಕರ್ನಾಟಕ'ದ ಈ ಸಂಚಿಕೆಯ ಗತಿಯಾಯಿತು. ಎಲ್ಲಿಯ ಜೇಆಯ್‌ಪಿ ಸಂಸ್ಥೆ ಎಲ್ಲಿಯ 'ಜಯಕರ್ನಾಟಕ' ಎಂದು ಎನ್ನಲು ಬರದು. ಅಲ್ಲಿ ಜಗಳ, ನಮಗೆ ಕಾಗದಕ್ಕೆ ಕೊರತೆ ; ಹುರಬರಕು ಕಾಗದದಲ್ಲಿ ಮುದ್ರಿಸಲು ನಮ್ಮ ಮನದ ಅಸಂಮತಿ,— ಆದರೆ ಬೇರೆ ಗತಿಯೇನು, ಹಾದಿನೋಡಿದ್ದಾಯ್ತು, ಹಲವೊಂದು ಭಾಗವನ್ನು ಹುರಬರಕು ಕಾಗದದಲ್ಲಿಯೆ ಮುದ್ರಿಸಿದ್ದಾಯ್ತು, ತಡಮಾಡಿ ಸಂಚಿಕೆ ರವಾನಿಸುವದಾದೀತು. ಇಷ್ಟರಲ್ಲಿ ನಮ್ಮ ವಾಚಕರು ಸಿಡಿಮಿಡಿಗೊಂಡು ಮತ್ತೆ ಎರಡು ದುಡ್ಡು ಕಳೆದುಕೊಂಡು ಎಲ್ಲಿ ನಮಗೆ ಕಾಗದ ಹಾಕುವರೋ ! ಎಂದು ನಮಗೆ ಅಸಮಾಧಾನ. ಆದರೆ ನಮ್ಮ ಓದುವ ಮಹಾರಾಯರು — ( ಇದು ಇಪ್ಪತ್ತನೆಯ ಶತಮಾನ ) ಎಲ್ಲಿಯ ಇಂಗ್ಲಂಡು ಎಲ್ಲಿಯ ಹಿಂದುಸ್ಥಾನ ; ಎಲ್ಲಿಯ ಹಿಂದುಸ್ಥಾನದ ಸ್ವಾತಂತ್ರ್ಯೋದ್ಯಮ ಎಲ್ಲಿಯ ಅಮೇರಿಕಾ—ಎಂದು ಹೇಗೆ ಎನ್ನಲಾರರೋ ಹಾಗೆ ಎಲ್ಲಿ ಜೇ ಆಯ್ ಪೀ, ಎಲ್ಲಿ 'ಜ–ಕ' ಎನ್ನಬಾರದು— ಯಾಕೆಂದರೆ ಹಾಗೆ ಎನ್ನಲು ಬರದು. ಈ ಜಗತ್ತೆಲ್ಲ ಒಂದು; ನಮ್ಮ ದುಃಖ ನಿಮ್ಮ ದುಃಖ ಅವರ ದುಃಖ ಎಂದು ಬೇರೆಯಿಲ್ಲ. ಅಲ್ಲಿಯ ಜಗಳದಲ್ಲಿ ಇಲ್ಲಿಯವರಿಗೆ ಏಟು ! ಕೈಮೀರಿದ ಮಾತಿನಲ್ಲಿ "ಕ್ಷಮಿಸಿರಿ" ಎನ್ನುವದೊಂದೆ ಉಪಾಯ.

---

# ಸ್ವೀಕಾರ

| | | |
|---|---|---|
| ಪ್ರೇಮಯೋಗ (ಹಿಂದಿ) | ... | ಶ್ರೀ ವಿಯೋಗೀ ಹರಿ ( ಪ್ರಕಾಶಕ ಶ್ರೀ ಘನಶ್ಯಾಮದಾಸ, ಗೋರಖಪುರ ) |
| ಮಾನವ–ಧರ್ಮ ,, | ... | ,, ಹನುಮಾನ ಪ್ರಸಾದ ಪೋದ್ದಾರ ( ,, ) |
| ಪುರಂದರದಾಸರು | ... | ,, ನೆರವಣಿ ರಾಜಾರಾವ್ ಬಿ. ಎ., ಬೆಂಗಳೂರು |
| ನಂದಚರಿತ್ರೆ | ... | ,, ಎಸ್. ಶೇಷಾದ್ರಿ ಶರ್ಮ, ,, |
| ಗೃಹವೈದ್ಯ | ... | ,, ಆದ್ಯ ಅನಂತಾಚಾರ್ಯರು, ವಿಜಾಪುರು |
| ಪ್ರಭುದೇವರ ಸಾಂಗತ್ಯ | ... | ,, ಬುದ್ಧಯ್ಯಾ ಮುರಿಗಯ್ಯಾ ಪುರಾಣಿಕ, ಶೀಗಿಹಾಳ |
| ಆನಂದಮಾಲಾ (೨ನೆಯ ಹೂವು) | ... | ,, ಆನಂದಕವಿ, ಕುರಗೋದ |
| ಭಾರ್ಗವಿ (೧ ಆಣೆ ಗ್ರಂಥಮಾಲೆಯ ೧ನೆಯ ಹೂವು) | ... | ,, ದೇವುಡು (ಪ್ರಕಾಶಕ, ತುಂಟರ ತಂಡ, ಬೆಳಗಾಂವಿ) |
| ಚಿತ್ರಗುಪ್ತ (ವಾರಪತ್ರಿಕೆ) | ... | ,, ಹೊಸಹಳ್ಳಿ ಕೆ. ವೀರಣ್ಣ ಗೌಡರು, ಬೆಂಗಳೂರು, ವಾ. ಚ. ೩–೮ |
| ಸಾಹಿತ್ಯ (ಸಚಿತ್ರ ತ್ರೈಮಾಸಿಕ ಪತ್ರಿಕೆ) | ... | ,, ಹೆರಡಾಲ ವಸಿಷ್ಠಾಶ್ರಮದಿಂದ ಪ್ರಸಿದ್ಧವಾದುದು, ವಾ. ಚಂ. ೦–೨ |
| ಬಸವೇಶ್ವರ ಪಂಚಾಂಗ | ... | ,, ಗದಗಿನ ಬ್ರಹ್ಮಶ್ರೀ. ಕೋಟಪ್ಪಯ್ಯ ಶಾಸ್ತ್ರಿಗಳಿಂದ ರಚಿತವಾದದು ೦–೪ |
| ವಸಂತದ ಸ್ವಾತಂತ್ರ್ಯದ ಅಂಕು | ... | ,, ಕೋಟ ಶಿವರಾಮ ಕಾರಂತ, ಮಂಗಳೂರು |
| ಹಿಂದುಸ್ಥಾನದ ರಾಜ್ಯಪದ್ಧತಿ | ... | ,, ಶ್ರೀ. ಬ. ಜಮಖಂಡಿ, ಹೆ. ಮಾ., ಛತ್ರಗುಣಕಿ, ೦–೬ |

# ವಾಚಕರಲ್ಲಿ ವಿಜ್ಞಾಪನೆ

(೧) ಈ ಸಲ ಅದಿನ ತಡವಾಯಿತು; ಹಲವು ಉರುಟು ಕಾಗದಗಳನ್ನು ಹಾಕಬೇಕಾಯಿತು. ಈ ಬಗ್ಗೆ ಮೊದಲು ನಮ್ಮನ್ನು ಕ್ಷಮಿಸಿ ಆ ಮೇಲೆ ಒಡಿನುಡಿಗಳಲ್ಲಿ ಸಂಪಾದಕರು ಬರೆದ 'ಕ್ಷಮಾಪಣೆ'ಯನ್ನೋದಿ ಕಡೆಗೊಮ್ಮೆ ನಮ್ಮನ್ನು ಕ್ಷಮಿಸಬೇಕು.

(೨) ಈ ವರ್ಷದ ಮೊದಲನೆಯ ಮೂರೂ ಸಂಚಿಕೆಗಳ ಪ್ರತಿಗಳೆಲ್ಲಾ ತೀರಿಹೋದವು. ಇನ್ನು ಮೇಲೆ ಆಗುವ ಚಂದಾದಾರರು ೪ನೆಯ ಸಂಚಿಕೆಯಿಂದಲೇ ಪ್ರಾರಂಭಿಸಬೇಕು. ಹೊಸಬರಿಗೆ ಅನುಕೂಲವಾಗಬೇಕೆಂದು, ಹಿಂದಿನಿಂದ ನಡೆದು ಬಂದ ರವೀಂದ್ರರ ರಾಜರ್ಷಿ ಕಾದಂಬರಿಯ ಪೂರ್ವ ಕಥಾಸಾರಾಂಶವನ್ನು ಈ ಸಲ ಪ್ರಕಟಿಸಿದ್ದೇವೆ. ಈಗಿದ್ದ ಚಂದಾದಾರರೂ ಯಾವ ಕೇ ಕಾರಣದಿಂದ ಈ ೩ ಸಂಚಿಕೆಗಳನ್ನು ಕೇಳಿದರೆ ಕಳಿಸಲು ಸಾಧ್ಯವಿಲ್ಲ.

(೩) ಹೋದ (೭ನೆಯ) ವರ್ಷದ ೧೨ ಸಂಚಿಕೆಗಳೂ ಮಾರಲಿಕ್ಕೆ ಸಿಗುತ್ತವೆ. ಇನ್ನು ಮೂರು ತಿಂಗಳ ಅವಧಿಯಲ್ಲಿ ಮೂರೇ ರೂಪಾಯಿಗಳನ್ನು ಕಳುಹಿದರೆ ಹನ್ನೆರಡೂ ಸಂಚಿಕೆಗಳು ಕಳುಹಲಾಗುವವು. ಅದಕ್ಕೂ ಹಿಂದಿನ ೬ ವರ್ಷದ ಕೆಲಕೆಲವು ಸಂಚಿಕೆಗಳು ಮಾರಲಿಕ್ಕಿವೆ. ೫ ಆಣೆಯ ತಿಕೀಟು ಕಳುಹಿದರೆ ನಮ್ಮಲ್ಲಿದ್ದ ನಿಮಗೆ ಬೇಕಾದ ಸಂಚಿಕೆಗಳು ಕಳಿಸಲ್ಪಡುವವು.

(೪) ಜಯಕರ್ನಾಟಕದ ಎಲ್ಲ ಹಿತಚಿಂತಕರು ತಮ್ಮ ಅಭಿಪ್ರಾಯಗಳನ್ನೂ ಸಲಹೆಗಳನ್ನೂ ಪ್ರತಿ ತಿಂಗಳ ಸಂಚಿಕೆಯನ್ನೋದಿ ತಿಳಿಸುತ್ತಿರಬೇಕೆಂದು ವಿನಯಪೂರ್ವಕವಾಗಿ ವಿಜ್ಞಾಪಿಸುತ್ತೇವೆ.

ವ್ಯವಸ್ಥಾಪಕ, ಜಯಕರ್ನಾಟಕ.

## ವಿಷಯಾನುಕ್ರಮಣಿಕೆ

अ ಅಪೂರ್ವ ಗ್ರಂಥ!

# ಉಪನಿಷದ್ರಹಸ್ಯ

ಅನುವಾದಕರು—ಶ್ರೀ. ದಿವಾಕರ ರಂ. ರಾ.
,, ಬೇಂದ್ರೆ ದ. ರಾ.
,, ಜೋಶಿ ಕೆ. ಬಾ.

## ಇದು ಸರ್ವೋತ್ಕೃಷ್ಟಗ್ರಂಥವೆಂದು

**ಬೇರೆ ಹೇಳಬೇಕೆ? ಏಕಂದರೆ ಇದಕ್ಕೆ**

೧. ದೇವರಾಜ ಬಹಾದ್ದೂರ ೨೦೦ ರೂಪಾಯಿಗಳ ಇನಾಮು ದೊರೆಕಿದೆ.

೨. ಮೈಸೂರ ವಿಶ್ವವಿದ್ಯಾನಿಲಯದ ಬಹುಮಾನ ಸಿಕ್ಕಿದೆ.

೩. ಮದ್ರಾಸ್ ಸ್ಕೂಲ ಬುಕ್ಕ ಎಂಡ ಲಿಟರೇಚರ ಸೊಸೈಯಟಿಯವರ ಪಾರಿತೋಷಿಕವು ಬಂದಿದೆ.

ಇಂತಹ ಗ್ರಂಥವನ್ನು ಇನ್ನೂ ಓದಿಲ್ಲವೆ?

ಅಧ್ಯಾತ್ಮ ಕಾರ್ಯಾಲಯದ ಪುಸ್ತಕಗಳೂ ನಮ್ಮಲ್ಲಿವೆ. ಬೇಗ ತರಿಸಿಕೊಳ್ಳಿ.

ಜಯಕರ್ನಾಟಕ ಮಂಡಲ **ಧಾರವಾಡ.**

---

## ಇದೇ ಪ್ರಕಟವಾದ ಹೊಸ ನಾಟಕ!

# ಸಿದ್ಧ ರಾಮೇಶ್ವರ ವಿಜಯ

( ಸಿಂಪೀ ಲಿಂಗಪ್ಪನು ಬರೆದುದು )

ಎಂಬೀ ಹೊಸ ನಾಟಕ ಪುಸ್ತಕವನ್ನು ಓದಿದ್ದೀರಾ? ಓದಿರದಿದ್ದರೆ ಬೇಗ ತರಿಸಿಕೊಂಡು ಓದಿರಿ. ಕ್ರೌನ ೧೦೦ ಪುಟದ ಪುಸ್ತಕಗಳಿಗೆ ಬೆಲೆ ನಾಲ್ಕೇ ಆಣೆ.

ವಿಜಾಪುರದ ಶ್ರೀ. ಸಿದ್ಧೇಶ್ವರ ಸಂಸ್ಥೆಯವರು ಇದಕ್ಕೆ ೨೫ ರೂಪಾಯಿಗಳ ಬಹುಮಾನಕೊಟ್ಟಿದ್ದಾರೆ.

ಶ್ರೀ. ಸಿದ್ಧರಾಮೇಶ್ವರನ ಭಕ್ತಿರಹಸ್ಯವನ್ನು ಇದರಲ್ಲಿ ಕಂಡುಕೊಳ್ಳುವಿರಿ.

ಪುಸ್ತಕ ಸಿಗುವಸ್ಥಳ—

**ಜಯಕರ್ನಾಟಕ ಕಾರ್ಯಾಲಯ,**
**ಧಾರವಾಡ.**

ಅಥವಾ

**ಸಿಂಪೀ-ಲಿಂಗಪ್ಪ, ಛತ್ತ್ರಗುಣಕಿ,**
**( ಜಿಲ್ಹಾ ವಿಜಾಪುರ ).**

---

## ಲಕ್ಷಗಟ್ಟಲೆ ಮಕ್ಕಳ ಪ್ರಾಣವನ್ನು ಕಾಪಾಡಿದ ವನಸ್ಪತಿಗಳ ಅದ್ಭುತ ಮಹಿಮೆ.




ಬಾಲಾರ್ಕ ಮಧು ಇದು ಮಧುರವಾಗಿದೆ. ಇದನ್ನು... ಮಕ್ಕಳು ಆನಂದದಿಂದ ಸೇವಿಸುತ್ತಾರೆ. ಮಕ್ಕಳಿಗೆ ಇದ... ಕೊಡುವುದರಿಂದ ಉಣಿಸುವ ಹಾಲೂ, ಅನ್ನವೂ, ... ಹತ್ತಿ ಶರೀರದಲ್ಲಿ ಪೌಷ್ಟಿಕರಸಗಳುಂಟಾಗಿ ಗೂಡು... ಕೊಂಡಿರುವ ಎದೆಯ ಎಲುಬುಗಳ ಮಧ್ಯಮಾಂಸ... ಮಕ್ಕಳಿಗೆ ಬಹು ಶಕ್ತಿಯೂ ದೇಹದಾರ್ಢ್ಯವೂ, ... ವುದು. ಕೇವಲ ವೈದ್ಯರ ಹೊಗಳಿಕೆಯೆಂದು ... ಮಾಡದೆ ಒಂದೇ ಒಂದು ಶೀಸೆ ತರಿಸಿಕೊಂಡಲ್ಲಿ ಇ... ಅಪಾರಗುಣವು ತಾನಾಗಿ ತಿಳಿಯುವದು. ಬೆಲೆ ಶೀಸೆ ೧ಕ್ಕೆ ೦-೧೨-೦ ಟ. ಖ ೦-೯-೦

**ಯಂ. ವಿ. ಪ್ರಸಾದಿಕ ಔಷಧಾಲಯ**
**ಶೀಮೊಗ್ಗಾ ಮೈಸೂರ ಶೀಮೆ**

---

## ಸಂಸ್ಕೃತ ಕಲಿಯುವವರಿಗೆ ಸುಲಭ ಪುಸ್ತಕ

# ಗೀರ್ವಾಣ ಭಾಷಾ-ಪ್ರವೇಶ

ಲೇಖಕರು:— ದೇಶಪಾಂಡೆ ಮನೋಹರರಾಯರು;
B. A. S. T. C. D.
ಹೈಸ್ಕೂಲ ಶಿಕ್ಷಕರು, ...

ಪತ್ತೆ:— ಲೇಖಕರ ಕಡೆಗೆ,
ಅಥವಾ
**ಜಯಕರ್ನಾಟಕ ಕಾರ್ಯಾಲಯ,**
**ಧಾರವಾಡ.**



ಕರ್ನಾಟಕ ವೀರರಾಣಿ ಕಿತ್ತೂರ ಚೆನ್ನಮ್ಮಾಜಿ

ಚಿತ್ರಶಿಲ್ಪಿ— ಶ್ರೀ ಭರಮಪ್ಪಾ ಕುಂಬಾರ (ಕೊಟ್ಯಾಳ)

# ಜಯಕರ್ನಾಟಕ




ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः


ಸಂಪುಟ ೮ | ಶುಕ್ಲನಾಮ ಸಂವತ್ಸರ, ಹೋಳೀ ಹುಣ್ಣಿವೆ
ಚಾಲುಕ್ಯವಿಕ್ರಮ ವರ್ಷ ೮೫೪ | ಸಂಚಿಕೆ ೫


## ಪುತ್ರಯಜ್ಞ



(ಶ್ರೀ ರವೀಂದ್ರರದೊಂದು ಕತೆ; ಬಂಗಾಲಿಯಿಂದ ಭಾಷಾಂತರಿಸಲ್ಪಟ್ಟದ್ದು)

ಕನ್ನಡಿಸಿದವರು :— ಶ್ರೀ ಕೃಷ್ಣಕುಮಾರ ಕಲ್ಲೂರ, ಧಾರವಾಡ.

೧

ಊರಿಗೆಲ್ಲ ವೈದ್ಯನಾಥನೇ ಮಹಾಜ್ಞಾನಿ; ಆತ ಯಾವಾಗಲೂ ಭವಿಷ್ಯತ್ಕಾಲದ ಕಡೆಗೆ ಕಣ್ಣಿಟ್ಟೇ ವರ್ತಮಾನ ಕಾಲದ ಕೆಲಸಗಳನ್ನು ಜರುಗಿಸುತ್ತಿದ್ದ. ಮದುವೆಮಾಡಿಕೊಳ್ಳುವಾಗ, ಎದುರಿಗಿದ್ದ ಹೊಸ ಮದುಮಗಳಿಗಿಂತಲೂ ಮುಂದೆ ಹುಟ್ಟುವ ಮಗನ ಮುದ್ದು ಮೋರೆಯೇ, ಆತನ ಕಣ್ಣೆದುರಿಗೆ, ಹೆಚ್ಚು ನಿಚ್ಚಳವಾಗಿ ಕಟ್ಟಿತ್ತು. ಶುಭದೃಷ್ಟಿಯ* ವೇಳೆಯಲ್ಲೂ ಇಷ್ಟೊಂದು ದೂರದೃಷ್ಟಿ ಎಲ್ಲರಿಗೂ ಎಲ್ಲಿಂದ ಬಂದೀತು! ವೈದ್ಯನಾಥನಾದರೋ ಅರಿತ ಸುರಿತ ಮನುಷ್ಯ. ಆತನಿಗೆ ಪ್ರೇಮಕ್ಕಿಂತಲೂ ಪಿಂಡದಾಸೆಯೇ ಪ್ರಬಲವಾಗಿತ್ತು. ಆದುದರಿಂದ 'ಪುತ್ರಾರ್ಥೇ ಕ್ರಿಯತೇ ಭಾರ್ಯಾ' ಎಂಬ ನಂಬಿಗೆಯಿಂದಲೇ ಆತ ವಿನೋದಿನಿಯನ್ನು ಮದುವೆಯಾಗಿದ್ದ.

ಆದರೆ ಈ ಸಂಸಾರದಲ್ಲಿ ಜ್ಞಾನಿಗಳಾದವರು ಮೋಸ ಹೋಗುವದೇ ಹೆಚ್ಚು; ಹರೆಯ ಬಲಿತ ಬಾಳುವೆಗಾರ್ತಿಯಾದರೂ ವಿನೋದಿನಿಯು ತನ್ನ ಆಯುಷ್ಯದ ಹೆಗ್ಗುರಿಯನ್ನು ಸಾಧಿಸದಿರಲು, ವೈದ್ಯನಾಥನ ಕಣ್ಣೆದುರು ಪುನ್ನಾಮನರಕದ ಹೆಬ್ಬಾಗಿಲುಗಳೆರಡೂ ಆಯೆಂದು ಬಾಯ್ತೆರೆದು ನಿಂತಂತೆ ಭಾಸವಾಗತೊಡಗಿತು. ತನ್ನ ಸಾವಿನ ಬಳಿಕ ತನ್ನ ಅತುಲೈಶ್ವರ್ಯವನ್ನು ಆದಾರು ಭೋಗಿಸಬೇಕು ಎಂಬ ಚಿಂತೆಯಿಂದ ಸಾವಿಗೆ ಮೊದಲೇ ಆತನಿಗೆ ಆ ಸಿರಿಸಂಪತ್ತೆಲ್ಲ ಬೇವಿನಂತಾಯಿತು. ವರ್ತಮಾನದ ಇರುವಿಕೆಗಿಂತ ಭವಿಷ್ಯದ ಬರುವಿಕೆಯಲ್ಲಿಯೇ ಆತನಿಗೆ ನಂಬಿಗೆ ಹೆಚ್ಚೆಂದು ಹೇಳಿಯೇ ಇರುವೆನಲ್ಲವೆ!

ವಿನೋದಿನಿಯು ಬಾಳುವೆಯು ಹೊಸಮೊದಲಗಿತ್ತಿ. ಅವಳೆದುರು ವೈದ್ಯನಾಥನ ಅಸೀಮ ಆಶಾವಾದ ಹಾಗು ಜ್ಞಾನಭಾಂ

* ಮದುಮಕ್ಕಳನ್ನು ಒಂದೇ ಮುಸುಕಿನಲ್ಲಿ ಮುಚ್ಚಿ ಮೊಟ್ಟಮೊದಲು ಅವರಿಬ್ಬರ ದೃಷ್ಟಿಮೇಳನ ಮಾಡಿಸುವದಕ್ಕೆ "ಶುಭದೃಷ್ಟಿ"ಯೆನ್ನುವರು. ಬಂಗಾಲದ ಮದುವೆಗಳಲ್ಲಿ ಇದೊಂದು ಮುಖ್ಯ ಕಾರ್ಯಭಾಗ,

ಡಾರದ ಆಟ ನಡೆಯುವಂತಿರಲಿಲ್ಲ. ಅವಳ ಯೌವನವೊ,— ಹೊಸಮಲ್ಲಿಗೆಯಂತೆ ಅರಳಿಕೊಂಡಿದೆ. ಸುತ್ತಲೂ ವರ್ತಮಾನದ ಸಂಕೋಲೆಗಳು ಅವಳನ್ನು ಸುತ್ತಿಕೊಂಡಿವೆ. ಪ್ರೇಮವಂಚಿತ ವಾದ ಅವಳ ಹರೆಯವೂ, ಹೃದಯವೂ, ಕರುಣೆಯ ಕೋಡಿ ಯೊಡೆದುಕ್ಕುವ ಅವಳ ಕಣ್ಣೀರಿನಂತೆ, ವ್ಯರ್ಥವಾಗಿ ಎತ್ತಲೋ ಹರಿದುಹೋಗುತ್ತಿದ್ದವು.

ಈ ಲೋಕದ ಚಿತ್ತಕ್ಷುಧೆಯ ಬಳಲಿಕೆಯಿಂದ ಬೆಂದು ಜೇಗುದಿ ಗೊಂಡ ಅವಳ ಎದೆಯು ಪಾರಲೌಕಿಕ ಪಿಂಡಕ್ಷುಧೆಯನ್ನು ಅದೆಂತು ಬಯಸಬಹುದು! ಅತ್ತ ಮನುವಿನ ಶಾಪ; ಇತ್ತ ವೈದ್ಯನಾಥನ ಪಾರಲೌಕಿಕ ಪರಿತಾಪ. ಎರಡರ ಇಕ್ಕಟ್ಟಿನಲ್ಲಿ ಸಿಕ್ಕು ಹಸಿದು ಹಂಬಲಿಸುವ ಅವಳ ಹೃದಯಕ್ಕೆ ಶಾಂತಿಯ ಸುಳಿವೇ ಇಲ್ಲ.

ಯಾರು ಏನೇ ಎನ್ನಲಿ; ಇಂಥ ವಯಸ್ಸಿನಲ್ಲಿ, ತಮ್ಮ ಅಚ್ಚು ಮೆಚ್ಚಿನ ಒಡವೆಗಳನ್ನು ನೆಚ್ಚುಮೆಚ್ಚಿನ ರಿಗೆ ಕೊಡಕೊಳ್ಳುವ ದರಲ್ಲಿಯೇ ರಮಣಿಯರಿಗೊಂದು ಸುಖ. ಅದನ್ನೇ ಅವರು ತಮ್ಮ ಎಲ್ಲ ಕರ್ತವ್ಯಗಳಿಗಿಂತಲೂ ಮೇಲು ಎಂದು ಬಗೆಯು ವರು.

ಆದರೆ, ವಿನೋದಿನಿಯ ಭಾಗ್ಯದಲ್ಲಿ, ನವಪ್ರೇಮದ ವರ್ಷಾ- ವಾರಿಸಿಂಚನದ ಬದಲಾಗಿ, ಗಂಡ ಅತ್ತೆಮಾವಂದಿರ, ಅತ್ತಿಗೆ ನಾದಿನಿ ನಗೆಹೆಣ್ಣುಗಳ, ಇನ್ನೂ ಹೆಚ್ಚುಹೆಚ್ಚಿನ ಹಿರಿಯರ, ಕೋಪಶಾಪಗಳ ಸಿಡಿಗುಂಡಿನ ಮಳೆಯೆ. ಎಲ್ಲರೂ ಬಂಜೆಬಂಜೆ ಯೆಂದು ಅವಳನ್ನು ಛೇಡಿಸುವರು. ಒಂದು ಹೂಬಳ್ಳಿಯ ಸಸಿ ಯನ್ನು ಗಾಳಿಬೆಳಕುಗಳಿಲ್ಲದೆಡೆಯಲ್ಲಿ ಹುದುಗಿಸಿ ಬಿಟ್ಟಂತೆ ವಿನೋದಿನಿಯ ಪ್ರೇಮವಂಚಿತವಾದ ಹರೆಯದ ಹೃದಯದ ಪಾಡಾಯಿತು.

ಬೆಳಗು ಬೈಗೆಲ್ಲ ಸುರಿಯುವ ಈ ಸಿಟ್ಟುಸಿಡಕಿನ ಮಳೆಯ ಏಟ ನ್ನು ತಡೆಯದೆ, ವಿನೋದಿನಿಯು ಇಸ್ಪೇಟು ಆಡುವದಕ್ಕೆ ಕುಸು ಮೆಯ ಮನೆಗೆ ಹೋಗುತ್ತಿದ್ದಳು. ಆಗ ಅವಳ ನೊಂದ ಎದೆಯು ಎಷ್ಟೋ ನೆಮ್ಮದಿಯಾಗಿರುತ್ತಿತ್ತು. ಅಲ್ಲಿ ಅವಳನ್ನು ಪುನ್ನಾಮ ನರಕದ ಭೀಷಣಛಾಯೆಯು ಸುತ್ತಿಕೊಳ್ಳುತ್ತಿರಲಿಲ್ಲ. ಸಿಟ್ಟು ಸೆಡಕಿನ ಸಿಡಿಲುಮಳೆಯು ಮುತ್ತಿಕೊಳ್ಳುತ್ತಿರಲಿಲ್ಲ.

ಕುಸುಮೆಯು, ಇಸ್ಪೇಟು ಆಡಲು ಜೊತೆಗಾರರು ಕಡಮೆ ಬಿದ್ದಾಗ, ತನ್ನ ಮೈದುನ ನಗೇಂದ್ರನನ್ನು ಆಟಕ್ಕೆ ಕೂಡಿಸು ತ್ತಿದ್ದಳು. ನಗೇಂದ್ರನೂ ವಿನೋದಿನಿಯ ಮನದುಬ್ಬೆಗವನ್ನು ನಗಿಸಿ ಹಾರಿಸಿಬಿಡುತ್ತಿದ್ದ. ಈ ಸಂಸಾರದಲ್ಲಿ ಹೀಗೆಯೆ; ದುಃಖಗಳು ಒಂದರಹಿಂದೊಂದು ಬರುವದುಂಟೇ ಉಂಟು; ಅ ದಲ್ಲಿ ಹೇಗೊ, ಹಾಗೆ ಸಂಕಟದಲ್ಲಿಯೂ ನಾವು ಕಾಲಕ್ರಮ ದಿಂದ ಸುರಿತುಕೊಳ್ಳುವೆವೆಂಬ ತತ್ತ್ವವು ಚಿಕ್ಕವರಿಗೆ ಒಮ್ಮೆಲೆ ಹೊಳೆದುಬರುವದಿಲ್ಲ.

ಹೀಗೆ ನಗೇಂದ್ರನಿಗೂ, ಸಂಕಟಗಳು ಬಾಳಿನಲ್ಲಿ ಬಲವಾಗಿ ಬೆರೆತುಕೊಂಡಿವೆಯೆಂದು ತೋರಿರಲಿಲ್ಲ. ಇತ್ತೀಚೆ ವಿನೋದಿ ನಿಗೂ ನಗೇಂದ್ರನಿಗೂ ತಪ್ಪದೆ ಬೆಟ್ಟಿಯಾಗುತ್ತಲೇ ಇತ್ತು. ಈಗ ಆತ ಮೊದಲಿನಂತೆ ಆಟಕ್ಕೆ ಬಾರೆಂದು ಕಾಡಿಸಿಕೊಳ್ಳುತ್ತಿರಲಿಲ್ಲ.

ನಗೇಂದ್ರನು ಆಟಕ್ಕೆ ಕೂತನೆಂದರೆ, ಆತನ ಮನಸ್ಸೆಲ್ಲ ನಿರ್ಜೀವಿಗಳಾದ ಇಸ್ಪೇಟುಗಳಿಗಿಂತಲೂ, ಸಜೀವವಾದ ಒಂದು ಪದಾರ್ಥದ ಬಳಿಯಲ್ಲೇ ಸುಳಿಯುತ್ತಿತ್ತು. ಹೀಗಾಗಿ, ಎಂದು ಹೋದರೂ ಆತ ಆಟದಲ್ಲಿ ಸೋಲುವದೇ. ಆತನ ಸೋಲಿನ ಗುಟ್ಟನ್ನು, ಕುಸುಮೆಯಾಗಲೀ, ವಿನೋದಿನಿಯಾಗಲೀ ತಿಳಿ ಯದೆ ಇರಲಿಲ್ಲ. ಮೊದಲೇ ಹೇಳಿರುವೆನಲ್ಲ: ಕರ್ಮಫಲದ ಬಲ ವಾದ ಭಾರದ ಪರಿಯನ್ನು ತಿಳಿದುಕೊಳ್ಳುವದು ಹರೆಯದ ಹಾರೈಕೆಯಲ್ಲವೆಂದು.

ಇದೆಲ್ಲವನ್ನು ನೋಡನೋಡುತ್ತ ಕುಸುಮೆಗೆ ಇದೊಂದು ಒಳ್ಳೇ ಮೋಜು ನಡೆದಿದೆಯೆಂದೆನಿಸಿತು. ಈ ಮೋಜು ಬರ ಬರುತ್ತ ಹೇಗೆ ಪರಿಣಮಿಸುವದೋ ಎಂದು ಅವಳ ಕೌತುಕ. ಪ್ರೇಮದ ಹೊಸಚಿಗುರಿಗೆ ಒಳಗಿಂದೊಳಗೆ ನೀರೆರೆದು ಬೆಳೆಸು ವದು ತರುಣಿಯರದೊಂದು ಚಪಲ-ಲವಲವಿಕೆ.

ವಿನೋದಿನಿಗೂ ಇದೆಲ್ಲ ಏನೂ ಕೆಡಕೆನಿಸಲಿಲ್ಲ. ಹೃದಯ ಜಯಕ್ಕಾಗಿ ಕಾದುಕೊಂಡಿದ್ದ ಕೂರ್ಮೆಯ ಕೂರಾದ ಶಸ್ತ್ರ ಯನ್ನು ಒಬ್ಬ ಮನುಷ್ಯನ ಹೃದಯದ ಮೇಲೆ ಇನ್ನಷ್ಟು ಮಸೆಯ ಬೇಕೆಂಬ ಹಂಬಲವು ಅನ್ಯಾಯದ್ದಾದರೂ ಅದೇನು ಅಷ್ಟೊಂದು ಅಸ್ವಾಭಾವಿಕವಲ್ಲ.

ಹೀಗೇ ಇಸ್ಪೇಟಿನಾಟದ ಸೋಲುಗೆಲುವುಗಳು ತಿರುಗು ಮುರುಗಾಗುತ್ತಿರಲು, ಒಮ್ಮೊಮ್ಮೆ ಇಬ್ಬರು ಆಟಗಾರರ ಮನಗಳು ಮೆಚ್ಚಿಕೊಂಡವು.

೨

ಒಂದು ದಿನ; ನಡುಹಗಲು; ವಿನೋದಿನಿ, ಕುಸುಮ, ನಗೇಂದ್ರರು ಆಟವಾಡುತ್ತ ಕುಳಿತಿದ್ದಾರೆ. ಕೆಲಹೊತ್ತಿನಲ್ಲಿ, ತನ್ನ ಜೇನೆಯ ಮಗುವಿನ ಅಳುವನ್ನು ಕೇಳಿ ಕುಸುಮೆಯು ಎದ್ದು ಒಳಕ್ಕೆ ಹೋದಳು. ನಗೇಂದ್ರ ವಿನೋದಿನಿಯೊಡನೆ ಮಾತನಾಡತೊಡಗಿದ. ಆದರೆ ಆತನ ಮಾತುಕಥೆಯ ಪರಿಯನ್ನು ಆತನೇ ಅರಿಯ;–ಆತನ ಹೃತ್ಪಿಂಡವನ್ನು ಹಿಡಿದಲುಗಿಸುತ್ತ ನೆತ್ತರವು ನರಗಳನ್ನು ತುಂಬಿ ತುಂಬಿ ಮೈಯ್ಯೆಂತಮೈಯೆಲ್ಲ ನವಿರಲೆಗಳನ್ನುಂಟು ಮಾಡಿತು.

ಒಮ್ಮೆಂದೊಮ್ಮೆ ಆತನ ಉದ್ದಾಮಯೌವನವು ಎಲ್ಲ ಕಟ್ಟುಗಳನ್ನೂ ಕಡಿದೊಗೆದು ಬಿಟ್ಟಿತು– ಧಿಗ್ಗನೆ, ವಿನೋದಿನಿಯ ಕೈಗಳೆರಡನ್ನೂ ಒತ್ತಿಹಿಡಿದು ಬಲವಾಗಿ ಅವಳನ್ನು ಎಳೆದುಕೊಂಡು ಮುದ್ದು ಕೊಟ್ಟುಬಿಟ್ಟ. ವಿನೋದಿನಿಯು ನಗೇಂದ್ರನಿಂದುಂಟಾದ ಈ ಅಪಮಾನದ ಸಿಟ್ಟು, ಉದ್ವೇಗ, ನಾಚುಗೆಗಳಿಂದ ಕಂಗೆಟ್ಟು, ತನ್ನ ಎರಡು ಕೈಗಳನ್ನು ಕಸಿದುಕೊಳ್ಳಲು ಹೆಣಗಾಡುತ್ತಿರುವಾಗಲೇ ಮನೆಯಲ್ಲಿ ಮೂರನೆಯ ವ್ಯಕ್ತಿಯೊಂದು ಬಂದು ನಿಂತುದು ಅವರ ಕಣ್ಣಿಗೆಬಿತ್ತು. ನಗೇಂದ್ರ ಕೆಳಮೋರೆಯಲ್ಲಿಯೇ ಮನೆಯಿಂದ ಹೊರಗೋಡುವ ದಾರಿಯನ್ನು ಹುಡುಕತೊಡಗಿದ.

ಆಳು ಗಂಭೀರಧ್ವನಿಯಿಂದ 'ಅತ್ತಿಗೆಮ್ಮನವರೇ–ಅತ್ತೆಯವರು ನಿಮ್ಮನ್ನು ಕರೆಯುತ್ತಿದಾರೆ' ಎಂದು ಹೇಳಿದಳು. ವಿನೋದಿನಿಯು ತನ್ನ ಬಳಕುಗಣ್ಣುಗಳಿಂದ ನಗೇಂದ್ರನಿಗೆ ಒಂದು ಮಿಂಚುನೋಟವನ್ನು ಚುಚ್ಚಿ, ಹಲ್ಲುಕಡಿಯುತ್ತಲೇ ಆಳಿನೊಡನೆ ಹೊರಟುಹೋದಳು.

ಆಳು, ತಾನು ನಿಜವಾಗಿ ನೋಡಿದ್ದು ಸ್ವಲ್ಪವೇ ಆದರೂ ನೋಡದಿದ್ದದ್ದನ್ನೇ ಹೆಚ್ಚಾಗಿ ಬಣ್ಣಿಸಿ ಮನೆತುಂಬೆಲ್ಲ ರಂಭಾಟವನ್ನೇ ಎಬ್ಬಿಸಿದಳು. ವಿನೋದಿನಿಯ ಜೀವನ ಮರಗನ್ನು ಬರೆಯುವದಕ್ಕಿಂತ ಕಲ್ಪನೆಗೆ ಬಿಡುವದೇ ಒಳ್ಳೇದು.

ತಾನು ಎಷ್ಟರ ಮಟ್ಟಿಗೆ ನಿರಪರಾಧಿನಿಯಾಗಿದ್ದಳೆಂಬದನ್ನು ಯಾರಿಗೂ ಮನಗಾಣಿಸಲು ಅವಳು ಎತ್ತುಗಡೆ ಮಾಡಲಿಲ್ಲ. ಬಂದುದನ್ನೆಲ್ಲ ನುಂಗಿಕೊಂಡಳು.

ವೈದ್ಯನಾಥನು ಭಾವೀ ಪಿಂಡದಾತೃ ಪುತ್ರನ ಬರುವಿಕೆಯ ಸಂಭವವು ತೀರಾ ಕಡಮೆಯಾಯಿತೆಂದು ಬಗೆದು, ವಿನೋದಿನಿಗೆ 'ಕಲಂಕಿನೀ, ನೀನೀಗಲೇ ನನ್ನ ಮನೆಯಿಂದ ಹೊರಬೀಳು' ಎಂದು ಅಪ್ಪಣೆಯಿತ್ತ.

ವಿನೋದಿನಿಯು, ಮಲಗುವ ಮನೆಯ ಬಾಗಿಲನ್ನು ಇಕ್ಕಿಕೊಂಡು, ಹಾಸುಗೆಯಲ್ಲಿ ಹುದುಗಿ ಬಿದ್ದುಬಿಟ್ಟಳು. ಅವಳ ನೀರಿಂಗಿದ ಕಣ್ಣುಗಳು ನಡುಹಗಲ ಮರುಭೂಮಿಯಂತೆ ಉರಿಯುತ್ತಿದ್ದವು. ಇರುಳುಗತ್ತಲೆ ಮುತ್ತಿಕೊಂಡಿತು. ಹೊರಗಿನ ಹಕ್ಕಿಪಕ್ಕಿಗಳ ಕಿಲಿಪಿಲಿಯೆಲ್ಲ ತಣ್ಣಗಾಯಿತು. ವಿನೋದಿನಿಯು ನಕ್ಷತ್ರಖಚಿತವಾದ ಆಕಾಶವೆಡೆಗೆ ತನ್ನ ನಯನಗಳನ್ನು ನೀಡಿ ನೀಡಿ ನೋಡುತ್ತ–ತಾಯ್ತಂದೆಗಳನ್ನು ನೆನೆಸಿಕೊಳ್ಳುತ್ತಲಿರಲು, ಅವಳ ಗಲ್ಲಗಳೆರಡೂ ಕಣ್ಣೀರನೆರೆಯಲ್ಲಿ ಮುಳುಗಿಹೋದುವು.

ಅಂದಿನ ಇರುಳು, ವಿನೋದಿನಿ ಸ್ವಾಮಿಗೃಹವನ್ನು ತ್ಯಾಗಮಾಡಿದಳು —— ಯಾರೂ ಅವಳನ್ನು ಹುಡುಕಲಿಲ್ಲ ಕೂಡ.

'ಪ್ರಜನಾರ್ಥಂ ಮಹಾಭಾಗಾಃ' ಎಂಬಂತೆ ತಾನು ಸ್ತ್ರೀಜನ್ಮದ ಮಹಾಭಾಗ್ಯವನ್ನು ಪಡೆದದ್ದನ್ನು ವಿನೋದಿನಿಯೂ ಅರಿತಿರಲಿಲ್ಲ.

ಅವಳ ಗಂಡನ ಪಾರಲೌಕಿಕ ಸದ್ಗತಿಯ ಸಸಿಯು ಆಗ ತಾನೇ ಅವಳ ಗರ್ಭದಲ್ಲಿ ಮೊಳಕೆಯೊಡೆದಿತ್ತು.

× × ×

೩

ಇದೆಲ್ಲ ಆಗಿ ಹತ್ತುವರುಷ ಮಿಕ್ಕಿದವು.

ಈ ಮಧ್ಯದಲ್ಲಿ ವೈದ್ಯನಾಥನ ಪ್ರಾಪಂಚಿಕ ಪರಿಸ್ಥಿತಿಯು ಬಹಳ ಮಟ್ಟಿಗೆ ಉನ್ನತಿ ಹೊಂದಿತ್ತು. ಈಗ ಆತನಿರುವದು ಮೊದಲಿನ ಕೊಂಪೆಹಳ್ಳಿಯಲ್ಲಲ್ಲ; ಕಲಕತ್ತೆಯ ಒಂದು ವಿಶಾಲ ಹರ್ಮ್ಯದಲ್ಲಿ.

ಆತನ ಸಿರಿಸಂಪತ್ತುಗಳು ಬೆಳೆದು ಬಂದಂತೆ, ಆ ಸಿರಿಸಂಪತ್ತಿಗೆ ಉತ್ತರಾಧಿಕಾರಿಯೊಬ್ಬನಿಲ್ಲವೆಂಬ ಚಿಂತೆಯೂ ಬಲವಾಗಿ ಬೆಳೆದುಕೊಂಡಿತ್ತು.

ಒಂದಲ್ಲದಂತೆ ಎರಡು ಮದುವೆಗಳಾದವು. ಆದರೇನು ಅದರಿಂದ ಮನೆತನದಲ್ಲಿ ಒಡಕು ಹುಟ್ಟಿತಲ್ಲದೆ ಪಿಂಡದಾನಿಯು ಹುಟ್ಟಲೇ ಇಲ್ಲ.

ದೇವಜ್ಞರೂ, ಜ್ಯೋತಿಷಿಗಳೂ, ಸಂನ್ಯಾಸಿ ಅವಧೂತರೂ ಮನೆಯಲ್ಲಿ ಹೊಕ್ಕಾಡಹತ್ತಿದರು. ಗಿಡಮೂಲಿಕೆಗಳೂ, ಯಂತ್ರ

ಮಂತ್ರಗಳೂ, ಅಲ್ಲದೆ ಅದೆಷ್ಟೋ ' ಪೇಟೆಂಟು 'ಗಳೂ ಮನೆಯನ್ನು ತುಂಬತೊಡಗಿದವು. ಇವಾವೂ, ವೈದ್ಯನಾಥನಿಗೆ ಒಂದು ಮಗುವನ್ನು ಹಡೆದು ಕೊಡಲಿಲ್ಲ. ಈ ನಿಮಿತ್ತ ಕಾಲೀಘಾಟನಲ್ಲಿ * ಬಿದ್ದ ಕುರಿಗಳ ಎಲುಬಿನ ಸ್ತೂಪವು, ತೈಮೂರಲಿಂಗನ ಕಂಕಾಲಜಯಸ್ತಂಭವನ್ನೂ ಅಣಕಿಸುವಂತಾಯಿತು. ಆದರೂ, ಕೆಲವೊಂದೇ ಎಲುಬು, ಸ್ವಲ್ಪೇ ಮಾಂಸಗಳಿಂದುಂಟಾದ ಮಗುವೊಂದು ವೈದ್ಯನಾಥನ ಪ್ರಾಸಾದವನ್ನು ಅಲಂಕರಿಸಲಿಲ್ಲ. ಅಂಥ ಮಗುವೇ ಇಲ್ಲದಿರಲು, ಹೊರಮಕ್ಕಳು ಎಲ್ಲಿ ತನ್ನ ಅನ್ನವನ್ನು ಒಕ್ಕಲಿಕ್ಕುವರೋ ಎಂದು ಆತನ ಬಾಯಿಗೆ ಊಟವೇ ಸವಿಹತ್ತದಾಯಿತು.

ವೈದ್ಯನಾಥನು ಗಂಡು; ಮತ್ತೂ ಒಂದು ಮದುವೆಯಾದ— ಸಂಸಾರದಲ್ಲಿ ಆಸೆಗೆ ಅಂತವೆಲ್ಲಿದೆ ಹೇಳಿ! ಹಾಗೆಯೇ ಬೆಲೆಗೆ ಬರುವ ಹೆಣ್ಣುಗಳಿಗೂ ಕೊರತೆಯಿಲ್ಲ.

ಜಾತಕವನ್ನು ನೋಡಿ ಜೋಯಿಸರು ಒಡನುಡಿದರು. “ವೈದ್ಯನಾಥರೇ, ಈ ಕನ್ನೆಯ ಪುತ್ರಸ್ಥಾನದಲ್ಲಿ ಒಳ್ಳೇ ಶುಭ ಯೋಗವಿದೆ; ಇನ್ನೇನು ಪುತ್ರೋತ್ಪತ್ತಿಗೆ ವಿಲಂಬವೇ ಇಲ್ಲ.”— ಇದೂ ಆಗಿ, ಆರುವರ್ಷವಾದವು—ಆ ಪುತ್ರಸ್ಥಾನದ ಶುಭ ಯೋಗವು ತನ್ನ ಸೋಮಾರಿತನವನ್ನೇ ಬಿಡಲೊಲ್ಲದು.

ವೈದ್ಯನಾಥ ನಿರಾಸೆಯಿಂದ ಕಣ್ಣೇ ಕೆಟ್ಟ. ಆತನನ್ನು ಪುನ್ನಾಮನರಕದ ಪಿಶಾಚಿಗಳು ತಿಕ್ಕಿ ಮುಕ್ಕತೊಡಗಿದವು. ಗತಿಯಿನ್ನೇನು—ಕೊನೆಗೆ ಆತನ ಉದ್ಧಾರಕ್ಕಾಗಿ ಘನಘನ ಪಂಡಿತರೂ, ಶಾಸ್ತ್ರಜ್ಞರೂ ಕಲೆತು ಒಂದು ಮಹಾಯಜ್ಞವನ್ನು ಮಾಡುವದೆಂದು ಗೊತ್ತುಮಾಡಿದರು. ಅದಕ್ಕಾಗಿ ಬಹುಕಾಲದಿಂದ ಬಹುಬ್ರಾಹ್ಮಣರ ಸೇವೆಯೂ ನಿರಂತರವಾಗಿ ನಡೆಯುತೊಡಗಿತು.

ಆವೇಳೆ, ಬಂಗಾಲ ಬಿಹಾರ ಒಡಿಸಾಪ್ರಾಂತಗಳಲ್ಲಿ ಹಿರೇ ಬರವೊಂದು ತಾಂಡವವಾಡುತ್ತಿತ್ತು. ಇತ್ತ, ವೈದ್ಯನಾಥ, ತನ್ನ ಅನ್ನರಾಶಿಗಳ ಮಧ್ಯದಲ್ಲಿ ಕುಳಿತು, ‘ಅಯ್ಯೋ ನನ್ನ ಅನ್ನವನ್ನು ಮುಂದಾರು ತಿನ್ನುವರೋ’ ಎಂದು ಉಸಿರಿಡುತ್ತಿರುವಾಗ್ಗೆ, ದೇಶದ ಬಡ ಜನರೆಲ್ಲ, ಹಸಿವೆಯಿಂದ ಬಳಲಿ ಕಸಿವಿಸಿಪಡುತ್ತ ‘ಅಯ್ಯೋ ಏನು ತಿನ್ನೋಣ’ ಎಂದು ತರಗೆಲೆಗಳನ್ನು ಕಚ್ಚಿಕೊಳ್ಳುತ್ತಿದ್ದರು.

ಇತ್ತ ಅದೇ ಹೊತ್ತಿಗೆ, ವೈದ್ಯನಾಥನ ಚತುರ್ಥ ಸಹಧರ್ಮಿಣಿಯು, ನಾಲ್ಕು ತಿಂಗಳಿಂದಲೂ, ನೂರಾರು ಜನ ಬ್ರಾಹ್ಮಣರ ಪಾದೋದಕವನ್ನು ಪಾನಮಾಡುತ್ತಿದ್ದಾಳೆ. ಹಾಗೆಯೆ, ನೂರಾರು ಬ್ರಾಹ್ಮಣರು, ಬೆಳಿಗ್ಗೆ ಅಮಿತವಾದ ಸಮೃದ್ಧ ಭೋಜನದಿಂದ, ಇರುಳು ತರತರದ ಪಾನಗಳಿಂದ, ಹೊಟ್ಟೆಯನ್ನು ಹಿಗ್ಗಿಸಿಕೊಳ್ಳುತ್ತ ಗಡಿಗೆ ಮಡಿಕೆ ಎಲೆಎಂಜಲುಗಳಿಂದ ಬೀದಿಯನ್ನು ತುಂಬುತ್ತ, ಮುನಸಿಪಾಲ್ಟಿಯ ಹೊಲಸಿನ ಬಂಡಿಗಳ ಸ್ಪೇಶಲ್ ಸರ್ವಿಸನ್ನೇ ಹೂಡಿಸಿದ್ದರು. ಕಣ್ಣು ಗಾಣದೆ ಕಾತರರಾದ, ಬಡ ಜನರು ಅನ್ನದ ವಾಸನೆ ಬಡಿದು ಓಡಿಬಂದು ಮನೆಯನ್ನು ಮುಕುರಿ ಯಜ್ಞಶಾಲೆಯನ್ನು ಅಪವಿತ್ರಮಾಡುತ್ತಿದ್ದರಾದ್ದರಿಂದ, ಅವರನ್ನು ಹೊಡೆದಟ್ಟಲು ಬಾಗಿಲಲ್ಲಿ ಇಬ್ಬರು ಬಲಶಾಲಿಗಳಾದ ಕಾವಲುಗಾರರನ್ನು ಇಡಬೇಕಾಗಿತ್ತು.

ಒಂದು ದಿನ ಬೆಳಿಗ್ಗೆ, ವೈದ್ಯನಾಥನ ಮನೆಯ ಸಂಗಮರವರೀ ಖಚಿತವಾದ ಚೌಸಪ್ಪೆಯ ವೇದಿಕೆಯಲ್ಲಿ ಸ್ಥೂಲೋದರನಾದ ಸಂನ್ಯಾಸಿಯೊಬ್ಬನು, ಎರಡು ಸೇರು ಮೋಹನಭೋಗ† ವನ್ನೂ ಎರಡುಸೇರು ಹಾಲನ್ನೂ ಸೇರಿಸಿ, ಸವಿಯುತ್ತಿದ್ದಾನೆ. ಬಳಿಯಲ್ಲಿ ವೈದ್ಯನಾಥನು ಭಕ್ತಿಭಾವದಿಂದ ಬಾಗಿ, ಕೈಕಟ್ಟಿಕೊಂಡು ಕುಳಿತು ಸಂನ್ಯಾಸಿಯು ಪುಣ್ಯಾನ್ನಭೋಜನವನ್ನು ನೋಡುತ್ತಿದ್ದಾನೆ——ಈ ಹೊತ್ತಿಗೆ ಸರಿಯಾಗಿ, ಹೇಗೋ ಕಾವಲುಗಾರರ ಕಣ್ಣು ತಪ್ಪಿಸಿ, ಸೊರಗಿ ಸೋತುಹೋದ ಚಿಕ್ಕ ಬಾಲಕನೊರ್ವನನ್ನು ಮುಂದೆಮಾಡಿಕೊಂಡು ಕೊರಗಿ ಕಂದಿದ ಹೆಣ್ಣುಮಗಳೊಬ್ಬಳು ಒಳಬಾಗಿಲಲ್ಲಿ ನಿಂತು ‘ಬಾಬೂ—ಸ್ವಲ್ಪ ಏನಾದರೂ ಹೊಟ್ಟೆಗೆ ಹಾಕಿಸಿ—ಅಪ್ಪಾ’ ಎಂದು ಕ್ಷೀಣ ದನಿಯಲ್ಲೇ ಕೇಳಿದಳು.

---

* ಹುಗಳೀನದಿಯ ದಡದ ಮೇಲಿರುವ ಕಲ್ಕತ್ತೆಯ ದಕ್ಷಿಣಕ್ಕೆ ಕಾಲೀಘಾಟು ಇದೆ. ಕಾಲೀಗುಡಿಯಿರುವದಿಲ್ಲಿಯೇ. ಆ ಜಗನ್ಮಾತೆಯ ಎದುರು ಬೀಳುವ ಹರಕೆಗುರಿಗಳು, ದಿನವೊಂದಕ್ಕೆ [illegible] ಕಾಣುತ್ತವೆ.



† ಮೋಹನಭೋಗವೆಂಬುದು ಬಂಗಾಲದ ಒಂದು ಮೇಲ್ತರದ ಪಕ್ವಾನ್ನ. ಸಜ್ಜಿಗೆಯಿಂದ ಮಾಡಿದ್ದು—ನಮ್ಮ ಕೇಸರಭಾತಿನಂತಿರುತ್ತದೆ.

ವೈದ್ಯನಾಥನ ಭಕ್ತಿಭಾವಕ್ಕೆ ಭಂಗ ಬಂದುದರಿಂದ, ಆತನ ಪಿತ್ತವೇ ತಲೆಗೇರಿ—ಗಂಟಲು ಹರಿಯುವಂತೆ ಕೂಗಿಕೊಂಡ "ಗುರುದಯಾಲ—ಏ ಗುರುದಯಾಲ"——ಯಜಮಾನನು ಅಷ್ಟೊಂದು ಒಳ್ಳೆಯವನಲ್ಲವೆಂದರಿತು, ಹೆಣ್ಣು ಮಗಳು ಮತ್ತಷ್ಟು ಕರುಣಸ್ವರದಿಂದ ಅಂಗಲಾಚಿದಳು 'ಅಪ್ಪಾ—ಈ ಮಗುವಿಗೊಂದಿಷ್ಟು ಕೊಡಿಸಿ,—ನನಗೇನೂ ಬೇಡ'———

ಒಡೆಯನ ದನಿಗೇಳಿ ಗುರುದಯಾಲನು ಓಡಿಬಂದು ಮಗುವನ್ನೂ ತಾಯನ್ನೂ ಹೊಡೆದು ಬಡೆದು ರಟ್ಟೆಹಿಡಿದು ಹೊರಗೆ ಅಟ್ಟಿದ.—ಆ ಕೊಳಕಾಣದ ಹಸಿದು ಕಂದಿದ ಕೂಸು ವೈದ್ಯನಾಥನ ಒಬ್ಬನೇ ಒಬ್ಬ ಮಗ——ಇತ್ತ ನೂರುಜನ ಪರಿಪುಷ್ಟ ಬ್ರಾಹ್ಮಣರೂ, ಮೂರುಜನ ಬಲಿಷ್ಠ ಸಂನ್ಯಾಸಿಗಳೂ, ವೈದ್ಯನಾಥನ ಪುತ್ರಪ್ರಾಪ್ತಿಯ ದುರಾಶೆಯಲ್ಲಿ ಪ್ರಲುಬ್ಧರಾಗಿ, ಆತನ ಅನ್ನವನ್ನು ಕೆಚ್ಚುತ್ತಲೇ ಇದ್ದರು.

# ಸಾಮಂತ ಸ್ವರಾಜ್ಯ

ಲೇಖಕರು—ಶ್ರೀ. ಕೆ. ಎಲ್. ಕುಷ್ಟ, B. A. B. L., ಶಾಕೇಳ

ಈಗಿನ ಹಿಂದುಸ್ಥಾನದ ರಾಜಕೀಯ ಚಳವಳದ ಸಂಬಂಧವಾಗಿ ಸ್ವಾತಂತ್ರ್ಯ (ಪೂರ್ಣ ಸ್ವರಾಜ್ಯ), ಸಾಮಂತ ಸ್ವರಾಜ್ಯ ಎಂಬ ಈ ಶಬ್ದಗಳು ಪ್ರಾಮುಖ್ಯತೆಗೆ ಬಂದಿವೆ. ಇಂಗ್ಲಂಡದ ರಾಜಕೀಯ ಪ್ರವೀಣರೂ ಈ ವಿಷಯವನ್ನು ಚರ್ಚಿಸುತ್ತಿರುವರು. ಸಾಮಂತ ಸ್ವರಾಜ್ಯವೆಂದರೇನು? ಪ್ರತಿನಿಧಿ ಸಂಸ್ಥೆಗಳ ಮೂಲಕ ನಡಿಸಬಹುದಾದ ಜವಾಬ್ದಾರಿ ಸರಕಾರಕ್ಕಿಂತ ಇದಕ್ಕೆ ಹೆಚ್ಚಿನ ಅಧಿಕಾರ ಉಂಟೇ? Responsible Government ಜವಾಬ್ದಾರಿ ಸರಕಾರಕ್ಕೂ ಸಾಮಂತ ಸರಕಾರಕ್ಕೂ ಭೇದವೇನು?

ಪ್ರತಿನಿಧಿ ಸಭೆಗಳ ನಿರ್ಣಯಕ್ಕನುಸಾರವಾಗಿ ಅವರ ವಿಮರ್ಶೆಗೆ ಒಳಪಟ್ಟು ಅವುಗಳ ಅಧಿಕಾರದ ಒಳಗೆ ಇರುವ ಕಾರ್ಯಕರ್ತೃಗಳಿಂದ ಕೂಡಿರುವ ಸರ್ಕಾರವೇ ಜವಾಬ್ದಾರಿ ಸರಕಾರ. ನಮ್ಮ ವೈಸರಾಯರು ೧೯೨೯ನೇ ಇಸ್ವಿ ಒಕ್ಟೋಬರ ತಾ॥ ೩೧ಕ್ಕೆ ಕೊಟ್ಟ ಭಾಷಣದಲ್ಲಿ ನಮ್ಮ ಸುಧಾರಣೆಯ ಮುಂದಿನ ಮಾರ್ಗವು ಯಾವದೆಂಬದಾಗಿ ಹೇಳಿರುವದಿಲ್ಲ. ಬ್ರಿಟಿಷ ಡೊಮಿನಿಯನುಗಳಿಗೆ ಸಾಮಂತ ಸ್ವರಾಜ್ಯವು ಫಕ್ಕನೆ ಸಿಕ್ಕಲಿಲ್ಲ. ಕಾಲಕ್ರಮೇಣದಲ್ಲಿ ಸಿಕ್ಕಿತು. ಬ್ರಿಟಿಷ ಮುಖ್ಯಮಂತ್ರಿ ಪಿಟ್ ಎಂಬವರ ಕಾಲಕ್ಕೆ ಡೊಮಿನಿಯನುಗಳ ರಾಜಶಾಸನ ಘಟನೆಯ ವಿಷಯವಾಗಿ ಪಾರ್ಲಮೆಂಟನಲ್ಲಿ ಮಂಜೂರಾದ (Canada Constitutional Act) ರಾಜಶಾಸನ ಘಟನೆಯ ಕಾಯದೆ ೧೭೯೧ರಲ್ಲಿ ಪಾಸಾಗಿ ಆ ರಾಜ್ಯಕ್ರಮವು ಈಗಿನ ನಮ್ಮ ದೇಶದ ಘಟನೆಯ ಮೇರೆಗೆ ಆಗಿತ್ತು. ಪ್ರಾತಿನಿಧಿಕ ಸಂಸ್ಥೆಗಳಿದ್ದವು. ಗವರ್ನರರ ಕೌನ್ಸಿಲು ಪ್ರಾತಿನಿಧ್ಯ ಸಭೆಯಿಂದ ಆರಿಸಲ್ಪಡಲಿಲ್ಲ. ಅದು ಗವರ್ನರ ಅಧೀನವಿತ್ತು. ಬ್ರಿಟಿಷ ಅರಸನೇ ಗವರ್ನರರನ್ನು ನೇಮಿಸಬೇಕಿತ್ತು. ಈ ಸಂಬಂಧವಾಗಿ ಕೆನಡಾದಲ್ಲಿ ೧೯ನೇ ಶತಮಾನದಲ್ಲಿ ಇಂಗ್ಲಂಡಕ್ಕೂ ಈ ಡೊಮಿನಿಯನಿಗೂ ಯುದ್ಧಕ್ಕೆ ಪ್ರಾರಂಭವಾಯಿತು. ಅಲ್ಲಿಯ ಪ್ರಾತಿನಿಧಿಕಸಂಸ್ಥೆಗಳು ಸರ್ಕಾರ ನಡಿಸುವರೆ ಬೇಕಾದ ಖರ್ಚನ್ನು ಶಿಫಾರಸು ಮಾಡದೆ ಸರ್ಕಾರದ ಯಾವದೊಂದು ಕೆಲಸವು ನಡಿಯುವದೆ ಕಷ್ಟವಾಯಿತು. ೧೮೩೮ನೇ ಇಸ್ವಿಯಲ್ಲಿ ದಕ್ಷಿಣ ಕೆನಡಾದಲ್ಲಿ ಆದ ಯುದ್ಧದ ಮತ್ತು ದಂಗೆಯ ಸಂಬಂಧ, ಈ ಡೋಮಿನಿಯನುಗಳಿಗೆ ಯಾವತರದ ಸರ್ಕಾರದ ಘಟನೆಯನ್ನು ಕೊಡಬಹುದೆಂಬದನ್ನು ವಿಚಾರಿಸಲು (John George Lawfton Lord Durham 1792–1840) ಲೊರ್ಡ ಡರಹಾಮ್ ಎಂಬವರು ಕಳುಹಿಸಲ್ಪಟ್ಟರು. ಇವರು ತಯಾರಿಸಿದ ವರದಿಯೇ ಡೋಮಿನಿಯನುಗಳ ರಾಜ್ಯಘಟನೆಯ ಮೂಲಸೂತ್ರವಾಗಿರುವದು. "The crown must consent to carry on the government by means of those in whom the representative body has confidence." ಪ್ರಾತಿನಿಧಿಕ ಸಭೆಗೆ ಭರವಸೆಯಿರುವ ಪ್ರತಿನಿಧಿಗಳಿಂದ ಅರಸನು ಸರ್ಕಾರವನ್ನು ನಡಿಸಬೇಕೆಂಬನೇ ಈ ವರದಿಯ ಮುಖ್ಯಸೂತ್ರ. ಗವರ್ನರನು ಮತ್ತು ಅವನ ಕಾರ್ಯದರ್ಶಿ ಇವರಿಬ್ಬರನ್ನು ಬಿಟ್ಟು ಮಿಕ್ಕವರು ಪ್ರಾತಿನಿಧಿಕ ಸಂಸ್ಥೆಗಳಿಗೆ ಭರವಸೆ

ಬಿದ್ದವರಾಗಬೇಕು. ಇಂಗ್ಲಂಡ ಸರಕಾರಕ್ಕೂ ಬ್ರಿಟಿಷ ಸಾಮ್ರಾಜ್ಯಕ್ಕೂ ಸಂಬಂಧಿಸಿದ ಸಂಗತಿಗಳಲ್ಲಿ ವಿನಃ ಬೇರೆ ವಿಷಯಗಳಲ್ಲಿ ಗವರ್ನರರಿಗೆ ಇಂಗ್ಲಂಡದಿಂದ ಸಾಕಷ್ಟು ಸಹಾಯವು ಸಿಕ್ಕಲಿಕ್ಕಿಲ್ಲ. ಅಲ್ಲಿಯ ಪ್ರತಿನಿಧಿಸಂಸ್ಥೆಗಳಿಗೆ ಅನುಕೂಲವಾಗಿ ಗವರ್ನರನು ನಡೆಯಬೇಕು. ಸರ್ಕಾರದ ಡಿಪಾರ್ಟಮೆಂಟುಗಳ ಮುಖಂಡರು ಪ್ರತಿನಿಧಿಸಭೆಯಿಂದ ಆರಿಸಲ್ಪಡಬೇಕು. ಇವುಗಳು ಜವಾಬ್ದಾರಿ ಸರ್ಕಾರದ ಮುಖ್ಯ ಸೂತ್ರಗಳೆಂತಲೂ ಈಗಿನ ಡೋಮಿನಿಯನ್ ಸರ್ಕಾರದ ಮಹಾಶಾಸನವೆಂತಲೂ ಹೇಳಲ್ಪಟ್ಟವೆ.

"ಸಾಮ್ರಾಜ್ಯ ವಿಷಯಗಳನ್ನು ಬಿಟ್ಟು" ಎಂಬ ಈ ಸೂತ್ರದ ಮುಖ್ಯಭಾಗವು ಕಾಲಕ್ರಮೇಣವೇ, ಸಂಬಂಧಪಟ್ಟವರಿಗೆ ಮರೆತು ಹೋದಂತೆ ತೋರುತ್ತದೆ. ೧೭-೧೮ ಶತಮಾನಗಳಲ್ಲಿ ಈ ವಿಷಯದ ನೆನಪು ಮಾಡುವದು ಅಗತ್ಯವಿರಲಿಲ್ಲ. ೧೯ನೆ. ಶತಮಾನದಲ್ಲಿ ಈ ವಿಷಯವು ಮುಂದಕ್ಕೆ ಬಂತು. ೧೯ನೇ ಶತಮಾನ ಆದಿಯಲ್ಲಿ ಈ ಕೊಲನಿಗಳು ಇಂಗ್ಲಂಡದ ಕುತ್ತಿಗೆಗೆ ಕಟ್ಟಿದ ಕಲ್ಲುಗಳೆಂತಲೂ ಅವುಗಳಿಂದ ಏನು ಪ್ರಯೋಜನವಿಲ್ಲವೆಂತಲೂ ಆದಷ್ಟು ಬೇಗನೆ ಅವುಗಳನ್ನು ಸ್ವರಾಜ್ಯ ಮಾರ್ಗದಲ್ಲಿ ಹೆಜ್ಜೆಯಿಡುವಂತೆ ಮಾಡಿ ಅವುಗಳಿಗೆ ಪೂರ್ಣ ಸ್ವಾತಂತ್ರ್ಯ ಕೊಡುವದೇ ಒಳ್ಳೆಯದೆಂತಲೂ ಅಭಿಪ್ರಾಯವು ಇಂಗ್ಲಂಡದಲ್ಲಿ ಇತ್ತು. ಆದರೆ ೧೮೭೨ರಲ್ಲಿ ಬೇರೆ ಅಭಿಪ್ರಾಯಗಳು ಮುಂದಕ್ಕೆ ಬಂದವು. ಡೊಮಿನಿಯನುಗಳಿಗೂ ಇಂಗ್ಲಂಡದ ಪಾರ್ಲಿಮೆಂಟಿಗೂ ಪರಸ್ಪರ ಅನ್ಯೋನ್ಯ ಉಂಟಾಗುವ ಬಗ್ಗೆ ಒಂದು ಕೌನ್ಸಿಲನ್ನು ಲಂಡನಿನಲ್ಲಿ ಉಂಟುಮಾಡುವದು ಅತೀ ಅಗತ್ಯವೆಂಬದಾಗಿ ಮುಖ್ಯ ಮಂತ್ರಿ ಬೆಂಟಮಿನ ಡಿಸ್ರಯೆಲಿ ಎಂಬವರು ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ಆದರೆ ನಂತರ ಆದ ಬೋಅರರ ದಕ್ಷಿಣ ಆಫ್ರಿಕ ಯುದ್ಧದ ಸಮಯದಲ್ಲಿ ಈ ಡೊಮಿನಿಯನಗಳ ವಿಷಯವಾಗಿ ಇರುವ ಮಮತೆಯು ಕಡಿಮೆ ಆಯಿತು. ಆದರೂ ೧೯೧೪ರ ಅಗೋಸ್ತಿನಲ್ಲಿ ಶುರುವಾದ ಜರ್ಮನಿಯ ಕೂಡ ಸಂಬಂಧಿಸಿದ ಯುದ್ಧದಲ್ಲಿ ತಮ್ಮ ಸ್ವಂತ ಬುದ್ಧಿಯಿಂದ ಇಂಗ್ಲಂಡದ ಸಹಾಯಕ್ಕೆ ಎಲ್ಲ ಡೊಮಿನಿಯನುಗಳು ಸೇರಿ ಯುದ್ಧದಲ್ಲಿ ಬ್ರಿಟಿಷ ಸಾಮ್ರಾಜ್ಯವು ಜಯವನ್ನು ಹೊಂದಿತು.

ಈ ಯುದ್ಧದಲ್ಲಿ ಜಯವಾಗುತ್ತಲೇ ತಮ್ಮ ಕೂಡ ಕೇಳದೆ ಇನ್ನು ಮುಂದಕ್ಕೆ ಯುದ್ಧಕ್ಕೆ ಬ್ರಿಟಿಷ್ ಸಾಮ್ರಾಜ್ಯವು ಹೋಗ... ಬಾರದೆಂಬ ಭಾವನೆಯು ಡೊಮಿನಿಯನುಗಳಲ್ಲಿ ನೆಲೆಗೊಂಡಿದೆ. ಯುದ್ಧದಲ್ಲಿ ಕಾದಾಡುವವರಿಗೆ ಯುದ್ಧ ಶುರು ಮಾಡಬೇಕೇ... ಎಂತ ಹೇಳುವ ಹಕ್ಕಿರಬೇಕೆಂಬ ಸೂತ್ರವನ್ನು ಡೊಮಿನಿಯನುಗಳ ಮಂತ್ರಿಗಳು ತಮ್ಮ ಭಾಷಣದಲ್ಲಿ ಚರ್ಚಿಸಿದ ಕಾರಣ ಈ ಸಂಬಂಧವಾಗಿ ಆಲೋಚಿಸುವ ಬಗ್ಗೆ ೧೯೨೬-೨೭ರಲ್ಲಿ ಲಂಡನಿನಲ್ಲಿ Imperial Conference ಎಂಬ ಈ ಚಕ್ರಾಧಿಪತ್ಯಕ್ಕೆ ಸಂಬಂಧಪಟ್ಟ, ಸಂಸ್ಥೆಗಳ ಪ್ರತಿನಿಧಿಗಳ ಸಭೆಯು ಜರಗಿತು ಬ್ರಿಟಿಷ ಗವರ್ನಮೆಂಟಿನವರು ಮಾಡುವ (Peace Treaty) ರಾಜಿ ಒಪ್ಪಂದಗಳಿಗೆ ಡೊಮಿನಿಯನುಗಳ ಪ್ರತಿನಿಧಿಗಳು ತಮ್ಮ ರಾಜ್ಯಗಳ ಪರವಾಗಿ ಪ್ರತ್ಯೇಕಪ್ರತ್ಯೇಕವಾಗಿ ದಸ್ಕತು ಹಾಕಿರುವರು. ೧೯೨೭ನೇ ಇಸ್ವಿ ಅಗಸ್ಟ ೧೮ಕ್ಕೆ ಲೊಯ್ಡ ಜಾರ್ಜರು ಕೊಟ್ಟ ಭಾಷಣದಲ್ಲಿ ಸ್ವತಂತ್ರ ರಾಷ್ಟ್ರಗಳಿಗಾಗಿ ಡೊಮಿನಿಯನುಗಳಿಗೆ ಸಿಕ್ಕಬಹುದಾದ ಗೌರವಕ್ಕಿಂತ ಈಗಿನ ಕ್ರಮಕ್ಕನುಸಾರವಾಗಿ ಡೊಮಿನಿಯನುಗಳಿಗೆ ಹೆಚ್ಚಿನ ಗೌರವವು ಸಿಕ್ಕುತ್ತದೆಂಬದಾಗಿ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವರು.

ಈ ಮೇರೆಗೆ ಇರುವ ಪರಸ್ಪರ ಸಂಬಂಧಗಳನ್ನು ಯೋಗ್ಯ ವ್ಯವಸ್ಥೆ ಮಾಡುವ ಆಲೋಚನೆಯಿಂದ Imperial Cabinet ಬ್ರಿಟಿಷ ಸಾಮ್ರಾಜ್ಯದ ಒಂದು ಕೆಬಿನಿಟ್ ಮಾಡಬೇಕೆಂಬ ಕೋರಿಕೆಯನ್ನು ರೂಪಾಂತರಗೊಳಿಸುವ ಬಗ್ಗೆ ೧೯೧೭-೧೯೧೮ರಲ್ಲಿ ಸಭೆಯು ಸೇರಿ ಅನೇಕ ಠರಾವುಗಳು ಮಂಜೂರಾಗಿದ್ದವು. ಡೊಮಿನಿಯನುಗಳಿಗೂ ಬೇರೆ ರಾಜ್ಯಗಳಿಗೂ ಆಗಬಹುದಾದ ಒಪ್ಪಂದಗಳ ವಿಷಯದಲ್ಲೂ ಅವರ ಅರಸರ ರಾಜಧಾನಿಗಳಲ್ಲಿರಬೇಕಾದ ಡೊಮಿನಿಯನುಗಳ ರಾಯಭಾರಿಗಳ ವಿಷಯದಲ್ಲೂ ಹೆಚ್ಚಿನ ಭೇದಾಭೇದಗಳು ಹುಟ್ಟಿ ... ವವು. ಕೆನಡಾ ದೇಶಕ್ಕೆ ಮತ್ತು ಅಮೇರಿಕದ ಸಂಯುಕ್ತ ಸ್ಥಾನಕ್ಕೆ ಆದ ಒಪ್ಪಂದಕ್ಕೆ ಬ್ರಿಟಿಷ ರಾಯಭಾರಿಯು ಒಪ್ಪಿಗೆ ಅಗತ್ಯವಿಲ್ಲವೆಂತಲೂ ಕೆನಡಾ ರಾಯಭಾರಿಯ ಒಪ್ಪಂದ ಸಾಕೆಂತಲೂ ಡೊಮಿನಿಯನುಗಳು ಸಾಧನೆ ಮಾಡುವವು.

ಈ ರೀತಿ ಸಾಮಂತ ಸ್ವರಾಜ್ಯದ ಅರ್ಥವು ಕಾಲಕ್ರಮೇಣವಾಗಿ ಅನೇಕ ಕಾರಣಗಳಿಂದ ಬದಲಾಯಿಸುತ್ತಿದೆ. ಸ್ವಾತಂತ್ರ್ಯಕ್ಕೆ ಹತ್ತಿರ ಬಂದದೆ. ತಮ್ಮ ರಕ್ತ ಭಾಷೆ ನಾಗರಿಕತೆ... ಇರುವ ಈ ಡೊಮಿನಿಯನುಗಳ ಸಂರಕ್ಷಣೆಯನ್ನು ಬ್ರಿಟಿಷ ಸರ್ಕಾರವು ಈ ತನ್ನ ಪ್ರೀತಿಯಿಂದ ನೋಡುತ್ತಲಿರುವದು.

ಇಂಡಿಯಾ ದೇಶಕ್ಕೆ ಸಾಮಂತ ಸ್ವರಾಜ್ಯವನ್ನು ಕೊಟ್ಟರೆ ಈ ದೇಶಕ್ಕೂ ದಕ್ಷಿಣಆಫ್ರಿಕಕ್ಕು ಆಗಬಹುದಾದ ಯುದ್ಧದಲ್ಲಿ ಈ ದೇಶಕ್ಕೂ ಜಪಾನಿಯರಿಗೂ ಯಾ ಅಫಗಾನಿಸ್ತಾನಕ್ಕು ಆಗಬಹುದಾದ ಯುದ್ಧದಲ್ಲಿ ಬ್ರಿಟಿಷ ಸರ್ಕಾರವು ಏನು ಮಾಡುವದು? ಬ್ರಿಟಿಷರು ೧೦೦೦ ಮಿಲಿಯ ಪವನನ್ನು ತಾವು ಹಿಂದು ದೇಶದಲ್ಲಿ ವ್ಯಾಪಾರದಲ್ಲಿ ಬಂಡವಾಳವಾಗಿ ಖರ್ಚು ಮಾಡಿದ್ದೇವೆ ಎಂದಂದರೆ ಅದಕ್ಕೆ ಅವರಿಗೆ ಜವಾಬ್ದಾರಿ ಏನು? ಹಿಂದು ದೇಶದ ಪ್ರಾತಿನಿಧಿಕ ಸಂಸ್ಥೆಗಳು ಜಾರಿ ತರಬೇಕಾದ ಯಾವದೊಂದು ನಿರ್ಣಯವನ್ನು ಬ್ರಿಟಿಷ ಸರ್ಕಾರವು ಅಂಗೀಕರಿಸುವದೇ? ಬ್ರಿಟಿಷರ ಬೇರೆ ಸಂಸ್ಥೆಗಳಲ್ಲಿ ಯಾ ಡೊಮಿನಿಯನುಗಳಲ್ಲಿ ಹಿಂದು ದೇಶದ ಪ್ರತಿಒಬ್ಬ ವ್ಯಕ್ತಿಗೆ ಸಹ ಆ ದೇಶದ ಜನರ ಸಮಾನ ಹಕ್ಕುಂಟೇ? ಹಕ್ಕನ್ನು ಕೊಡುವನೆ ಈ ಡೊಮಿನಿಯನುಗಳಿಗೆ ಸಾಕಷ್ಟು ಅಧಿಕಾರವು ಉಂಟೇ?

ಸಮಾನ ಅಧಿಕಾರವನ್ನು ಬ್ರಿಟಿಷರು ಕೊಟ್ಟರೆ ಬ್ರಿಟಿಷರಿಗೆ ಹೆಚ್ಚಿನ ನಷ್ಟ ಉಂಟು. ೪೦೦ ಮಿಲಿಯ ಇಂಡಿಯ ಜನರು ಈ ಡೊಮಿನಿಯನುಗಳಲ್ಲಿ ತುಂಬಿದರೆ ಬ್ರಿಟಿಷ ಸಾಮ್ರಾಜ್ಯವೇಬ ಹೆಸರನ್ನು ಅದಕ್ಕೆ ತೆಗೆದೊಗೆದು ಇಂಡಿಯದ ಸಾಮ್ರಾಜ್ಯವೆಂಬ ಹೆಸರನ್ನಿಡಬೇಕಾದೀತು. ಬ್ರಿಟಿಷ ನಾಗರೀಕತನವು ಎಂದಿಗೂ ತನ್ನ ಅಹಂಕಾರವನ್ನು ಬಿಡದು. ಪ್ರಸಿದ್ಧ (Modern Review) ಎಂಬ ಮಾಸಪತ್ರಿಕೆಯ ಫೆಬ್ರುವರಿ ತಿಂಗಳ ಸಂಚಿಕೆಯ ೨೧೧ನೇ ಪುಟದಲ್ಲಿ ಕೆನಡಾ ದೇಶವನ್ನು ಅಮೇರಿಕದ ಸಂಯುಕ್ತ ಸಂಸ್ಥಾನಕ್ಕೆ ಹೋಲಿಸಿ ಕೆನಡಾ ದೇಶದ ದುರವಸ್ಥೆಗೆ ಅದರ ಪಾರತಂತ್ರ್ಯವೇ ಕಾರಣವಾಗಿರಬಹುದಾಗಿ ಅದರ ಎಡಿಟರರು ಅಭಿಪ್ರಾಯಪಟ್ಟಿರುವರು.

ಅವರು ಕೊಟ್ಟ ಪಟ್ಟಿಯಿಂದ ಈ ಸಂಗತಿಯು ವ್ಯಕ್ತವಾಗುವದು :—

| | ವಿಸ್ತೀರ್ಣ ಚಚೌಕ ಮೈಲು | ಜನಸಂಖ್ಯೆ |
|---|---|---|
| ಕೆನಡಾ | ೩೭ ಮಿಲಿಯ | ೯೩ ಮಿಲಿಯ |
| ಅಮೇರಿಕದ ಸಂಯುಕ್ತ ಸಂಸ್ಥಾನ | ೩ ಮಿಲಿಯ ೯ ಲಕ್ಷ ಮೈಲು | ೧೨೦ ಮಿಲಿಯ |
| ನಾರ್ವೆ | ೧ ಲಕ್ಷ ೨೪ ಸಾವಿರ | ೨ ಮಿಲಿಯ ೭ ಲಕ್ಷ |
| ಬೆಲ್ಜಮ | ೧೧ ಸಾವಿರ | ೭ ಮಿಲಿಯ ೬ ಲಕ್ಷ |

ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ೧೯೨೭ನೇ ಇಸವಿಯಲ್ಲಿ ೨೫,೭೭೮ ಹಡಗಗಳು ಕೆನಡದಲ್ಲಿ ೭೯೧೩ ಹಡಗಗಳು ಇದ್ದವು. ವರ್ತಮಾನಪತ್ರಿಕೆಗಳೂ ಪ್ರಸಿದ್ಧ ಮನುಷ್ಯರೂ ಅಮೇರಿಕವಲ್ಲಿ ಇರುವಷ್ಟು ಕೆನಡಾದಲ್ಲಿ ಇರುವದೇ ಇಲ್ಲ. ಆದ್ದರಿಂದ ಸಾಮಂತ ಸ್ವರಾಜ್ಯದಿಂದ ಕೆನಡಕ್ಕೆ ಏನೂ ಪ್ರಯೋಜನವಿಲ್ಲ.

ಈ ಕಾರಣದಿಂದ ಸಾಮಂತ ಸ್ವರಾಜ್ಯದಿಂದ ಇಂಗ್ಲಿಷರಿಗಾಗಲಿ ನಮಗಾಗಲಿ ಹೆಚ್ಚಿನ ಪ್ರಯೋಜನವಿಲ್ಲವೆಂದು ಹೇಳಬಹುದು.

---

# ಶೂನ್ಯ ಸಂಪಾದನೆ

## ಇದರ ಗ್ರಂಥಕರ್ತನೂ ಕಾಲನಿರ್ಣಯವೂ

ಲೇಖಕರು— ಶ್ರೀ ಚನ್ನಪ್ಪ ಉತ್ತಂಗಿ, ಹಾವೇರಿ.

ಶೂನ್ಯ ಸಂಪಾದನೆಯು ವೀರಶೈವರ ಉದ್ಗ್ರಂಥಗಳಲ್ಲೊಂದಾಗಿದೆ. ಭಗವದ್ಗೀತೆಯು ಉಪನಿಷತ್ತುಗಳ ಸಾರವೆಂದೆನಿಸಿಕೊಳ್ಳುವಂತೆ ಈ ಗ್ರಂಥವು ದಕ್ಷಿಣದ ಉಪನಿಷತ್ತೆನ್ನಿಸಿಕೊಳ್ಳುವ ವಚನವಾಙ್ಮಯದ ಸಾರವಾಗಿದೆ ಎಂದು ಹೇಳಬಹುದು. ಹೀಗಿದ್ದರೂ ವೀರಶೈವರಲ್ಲಿ ಈ ಗ್ರಂಥಕ್ಕೆ ಸಿದ್ಧಾಂತಶಿಖಾಮಣಿ, ಕ್ರಿಯಾಸಾರ, ಶ್ರೀಕರಭಾಷ್ಯ, ಮುಂತಾದ ಸಂಸ್ಕೃತ ಗ್ರಂಥಗಳಷ್ಟು ಪ್ರಾಶಸ್ತ್ಯವಿಲ್ಲದಿರುವದು ಶೋಚನೀಯವೇ ಸರಿ. ವಚನ ಸಾಹಿತ್ಯವು ಕನ್ನಡದಲ್ಲಿ ಬರಿಯಲ್ಪಟ್ಟದ್ದೇ, ಈ ತರದ ದುರದೃಷ್ಟಕ್ಕೆ ಕಾರಣವಾಗಿರುವದೇನೋ ದೇವರೇ ಬಲ್ಲ. ಇದರ ಗ್ರಂಥಕರ್ತನು ಯಾರೆಂದು ಇಲ್ಲಿ ವಿಚಾರಿಸತಕ್ಕದ್ದು,—

ಶ್ರೀಮನ್ ಆರ್. ನರಸಿಂಹಾಚಾರ್ಯರು ಕವಿಚರಿತೆ ಪ್ರಥಮ ಸಂಪುಟದ ೧೬೮ನೆಯ ಪುಟದಲ್ಲಿ ಬಸವೇಶ್ವರನ ಸಹಕಾಲಿಕ ನಾದ ಅಲ್ಲಮಪ್ರಭುವೇ (೧೧೬೦) ಇದರ ಗ್ರಂಥಕರ್ತರೆಂದು ಬರೆದಿದ್ದಾರೆ. ಅವರು ಕೊಟ್ಟಿರುವಂತೆ ಅಲ್ಲಮಕೃತ ಗ್ರಂಥಗಳೆಂದರೆ ೧ ಷಟ್‌ಸ್ಥಲ ಜ್ಞಾನಚರಿತ್ರ (ವಚನ ೬೯೪), ೨ ಶೂನ್ಯ ಸಂಪಾದನೆ, ೩ ಮಂತ್ರ ಗೋಪ್ಯ ವಚನ (೨೭), ೪ ಸೃಷ್ಟಿಯ ವಚನ, ೫ ಬೆಡಗಿನ ವಚನ, ೬ ಮಂತ್ರಮಹಾತ್ಮ್ಯ, ೭ ಕಾಲ ಜ್ಞಾನ ಇವೇ ಮೊದಲಾದ ಸಪ್ತ ಗ್ರಂಥಗಳು ಮುಖ್ಯವಾಗಿವೆ. ಈ ಗ್ರಂಥಪಟ್ಟಿಯಲ್ಲಿ ಬರುವ 'ಶೂನ್ಯ ಸಂಪಾದನೆ' ಎಂಬ ಗ್ರಂಥವು ವೀರಶೈವರ ವಾಙ್ಮಯದಲ್ಲಿಯೇ ಪ್ರಭುದೇವರ ಅಂಕಿತದಿಂದ ದೊರೆಯುತ್ತಿರುವ ಕಾರಣ ಕವಿಚರಿತೆಯ ಕರ್ತರು ಇದನ್ನು ಅಲ್ಲಮಪ್ರಭುವಿನ ಗ್ರಂಥಗಳಲ್ಲೊಂದಾಗಿ ತಿಳಿದಂತೆ ಕಾಣುತ್ತದೆ. ಹೀಗಾಗಿ ಇದರ ಕಾಲವು ಕ್ರಿ ಶಕದ ೧೧೬೦ ಎಂದು ಅವರು ಬರೆದಿರುವರು.

ಆದರೆ ಅಖಿಲ ಪುರಾತನರ ವಚನಗಳಲ್ಲಿ ಪ್ರಭುದೇವರ-ಬಸವಣ್ಣನವರ ಶೂನ್ಯ ಸಂಪಾದನೆಯೆಂದು ಕೆಲವು ವಚನಗಳಿಂದ ಕೂಡಿದ ಒಂದು ಪರಿಚ್ಛೇದವು ಬರುತ್ತದೆ. ಇದನ್ನು ಶ್ರೀಮಾನ್ ನರಸಿಂಹಾಚಾರ್ಯರು ಅಲ್ಲಮಕೃತ ಗ್ರಂಥಗಳಲ್ಲೊಂದಾಗಿ ತಿಳಿದಂತೆ ತೋರುತ್ತದೆ. ಆದರೆ ಶೂನ್ಯ ಸಂಪಾದನೆಯು ಅಖಿಲ ಪುರಾತನರ ವಚನಗಳಲ್ಲಿ ಬರುವ ಪರಿಚ್ಛೇದರೂಪವಾದ ಶೂನ್ಯ ಸಂಪಾದನೆಯಿಂದ ವಿಶಿಷ್ಟವಾದ ಒಂದು ಗ್ರಂಥವಾಗಿದ್ದು, ೨೧ ಸಂವಾದಗಳಿಂದ ಯುಕ್ತವಾಗಿದೆ. ಅಖಿಲ ಪುರಾತನರ ವಚನಗಳಲ್ಲಿ ಉದಾಹರಣೆಗಾಗಿ ಬರುವ ಈ ಶೂನ್ಯ ಸಂಪಾದನೆಯು ದೊಡ್ಡ ಗ್ರಂಥದ ೨೧ ಸಂವಾದಗಳಲ್ಲಿ ಏಳನೆಯ ಸಂವಾದವಾಗಿದೆ. ಶ್ರೀಮಾನ್ ನರಸಿಂಹಾಚಾರ್ಯರು ಪ್ರಭುದೇವರ ಗ್ರಂಥಗಳನ್ನು ಒಂದೊಂದಾಗಿ ವಿವರಿಸುವಲ್ಲಿ ಶೂನ್ಯ ಸಂಪಾದನೆ ಎಂಬದರ ಕೆಳಗೆ ಅದರಲ್ಲಿ ಬರುವ ವಚನಗಳ ಇಲ್ಲವೆ ಅಧ್ಯಾಯಗಳ, ಸಂಖ್ಯೆಯನ್ನು ಕಾಣಿಸದೆ ಇರುವದರಿಂದಲೂ ಅವರು ಈ ಬಗ್ಗೆ ಉಲ್ಲೇಖಿಸಿರುವ ಒಂದೆರಡು ವಚನಗಳು ಅಖಿಲ ಪುರಾತನರ ವಚನಗಳಲ್ಲಿ ಬಂದಿರುವದರಿಂದಲೂ ಈಗ ನಾವು ವಿಚಾರಿಸುತ್ತಿರುವ ಅಂದರೆ ೨೧ ಸಂವಾದಗಳನ್ನೊಳಗೊಂಡಿರುವ ಈ ಶೂನ್ಯ ಸಂಪಾದನೆಯು ಅವರ ಹಸ್ತಗತವಾಗಿತ್ತೇನೋ, ಎಂಬ ಸಂದೇಹ ಉಂಟಾಗುತ್ತದೆ. ಹೇಗೇ ಇರಲಿ ಈಗ ದೊರೆಯುತ್ತಿರುವ ಎಲ್ಲ ಪ್ರತಿಗಳನ್ನು ಸಾದ್ಯಂತವಾಗಿ ವಿಚಾರಿಸಿದರೆ ಶೂನ್ಯ ಸಂಪಾದನೆಯ ಗ್ರಂಥಕರ್ತನು ಅಲ್ಲಮಪ್ರಭುವು ಅಲ್ಲವೆಂಬುದು ವಿಶದವಾಗುತ್ತದೆ. ಇದನ್ನು ಸ್ಪಷ್ಟೀಕರಿಸುವದಕ್ಕೆ ಶೂನ್ಯ ಸಂಪಾದನೆಯ ಆರಂಭದಲ್ಲಿಯೂ ಕೊನೆಯಲ್ಲಿಯೂ ಬರೆಯಲ್ಪಟ್ಟಿರುವ ಮಾತುಗಳನ್ನು ಇಲ್ಲಿ ಉದ್ಧರಿಸುತ್ತೇವೆ.

ಶ್ರೀಗುರು ಬಸವಲಿಂಗಾಯನಮಃ ಪಾರ್ವತೀ ಪ್ರಸನ್ನ ಶ್ರೀ ವಿಘ್ನೇಶ್ವರಾಯನಮಃ ಶ್ರೀಗುರು ಚನ್ನವೀರ ಪ್ರಸನ್ನ ಪ್ರಭುದೇವರ ಶೂನ್ಯ ಸಂಪಾದನೆಯ ಬರೆಯುವದಕ್ಕೆ ಶುಭಮಸ್ತು.

॥ ಕಂದ ॥

ಶ್ರೀ ವಿಮಲ ಮುಕ್ತಿದಾಯಕ ।
ಪಾವನಮಯ ಪರಮಚರಿತ ಷಟ್‌ಸ್ಥಲನಾಯಕ ॥
ಭೂವಿನುತ ಸಚ್ಚಿದಾತ್ಮಕ !
ಭವಜಹರ ಸಲಹು ಸಿದ್ಧಲಿಂಗ ಸುದೇಶಿಕ ॥೧॥

ಅನುಮಿಷ ಕುಂತನ ವೇದ್ಯನ ।
ಪ್ರೇಮದಿ ಪದನಾಲ್ಕು ಶರಣ ಜನಕಿವು ತಾನಿ ॥
ರಾಮಯ ನೆನಿಸನೊಲ್ದು ಮುದದಿಂ ।
ನುತಿಪೆಬೋಳ ಬಸವೇಶಾರ್ಯಂ ॥೨॥

ವರಬೋಳ ಬಸವದೇಶಿಕ ।
ನುರುತರ ಕೃಪೆಯಾಂತು ಅಲ್ಲಮಪ್ರಭುರಾಯನ ॥
ಪರಮಾನುಭಾವ ಬೋಧೆಯ ।
ನೆರೆದೆನು ಗೂಳೂರು ಸಿದ್ಧವೀರಾಚಾರ್ಯಂ ॥೩॥

ಶ್ರೀ ಮತ್ಪರಾತ್ಪರ ಪರಶಿವ ನಿತ್ಯ ನಿರ್ಮಲ ನಿರಘ ಸಹಸ್ರ ಸೂರ್ಯ ಅನಿರ್ವಾಚ್ಯ ಪರಂಜ್ಯೋತಿಸ್ವರೂಪ ಷಟ್‌ಸ್ಥಲ ಜ್ಞಾನಪ್ರಭಾಪುಂಜರಂಜಿತ ಸಕಲ ಭಕ್ತ ಹೃತ್ಕಮಲಕರ್ಣಿಕಾವಾಸ, ಶರಣಜನ ಮುಕ್ತಿಪ್ರದಾಯಕ ಅಖಿಲ ಜಗದಾರಾಧ್ಯ ಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರ ಕೃಪಾಪ್ರಸಾದ ಪಾತ್ರರಾದ ಬೋಳಬಸವೇಶ್ವರನು ಮುಖ್ಯವಾದ ವಸ್ತುವಿನ ಷಟ್‌ಸ್ಥಲ ಜ್ಞಾನಿಗಳಾದ ದಿವ್ಯಾನುಭಾವಿಗಳ ಬೋಧೆಯಿಂದ ಗೂಳೂರು ಸಿದ್ಧೇಶ್ವರನೆಂಬ ಮಹಾನುಭಾವಿಗಳು ನಿತ್ಯನಿರಂಜನ ಅಲ್ಲಮಪ್ರಭುದೇವರು ಸಮಸ್ತ ಮಹಾಗಣಂಗಳಿಗೆ ದಿವ್ಯ ಜ್ಞಾನ ಪ್ರಸಂಗಮಂ ಬೋಧಿಸಿದ ಕ್ರಮವನ್ನು ಅಖಿಲ ಪುರಾತನರ ವಚನಗಳಿಂದ, ಸಂಗ್ರಹಿಸಿದೆವು ಎಂತಲೂ ಗ್ರಂಥಾಂತ್ಯದಲ್ಲಿ

" ಶ್ರೀಮತ್ ಸಮಸ್ತಗಣಪುರಾತನರೊಳ್ ಪ್ರಭುದೇವರು ಮಹಾನುಭಾವಸಂಗೋಷ್ಠಿಯಂ ಮಾಡಿದ, ಶೂನ್ಯ ಸಂಪಾದನೆ ಯೊಳ್ ಎಲ್ಲ ಗಣಂಗಳ ನಿರವಯ ಸಮಾಧಿ ಏಕವಿಂಶತೋಪ ದೇಶಃ-ಅಂತೂ ಸಂಪಾದನೆ ೨೧ಕ್ಕೆ ವಚನ ೧೫೪೩ಕ್ಕೆ ಮಂಗಳಂ ಮಹಾ॥ "ಎಂತಲೂ "ಇನ್ನು ಇದು ಪರಮಗುರು ಪರಮವೀರ ಶೈವ ಸಿದ್ಧಾಂತ ತತ್ವಜ್ಞಾನ, ಇದು ವೀರಶೈವಾಚಾರ ಪ್ರತಿಷ್ಠಾ ಸ್ಥಾಪನಾಚಾರ್ಯ, ಇದು ದಿವ್ಯ ವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರ ಮುಖದರ್ಪಣ, ಇದು ಮಹಾಜ್ಞಾನ ಪ್ರವರ್ಧನ, ಪರಮಾನುಭಾವ ಸಂಬೋಧೆ, ಇದು ಸರ್ವಾಚಾರ ಸಂಪನ್ನ, ಸಮಾರೂಢ ಸಂಗ್ರಹ, ಇದು ಪರಮರಾಜಯೋಗ ಸಾಧ್ಯಸಂಪಾದನ, ಇದು ಸಚ್ಚಿದಾನಂದ ನಿತ್ಯಪರಿಪೂರ್ಣ ಸಾರಾಮೃತ ಪ್ರಸನ್ನ ಪ್ರಸೀದ, ಇದು ಅಜ್ಞಾನ ತಿಮಿರಾಂಜನ ತಂತ್ರ, ಇಂತಪ್ಪ ಪ್ರಭುದೇವರ ಶೂನ್ಯ ಸಂಪಾದನೆಯು ಮಹಾ ಪ್ರಸಂಗಮಂ ಬಸವರಾಜದೇವರೂ ಚನ್ನಬಸವರಾಜ ದೇವರೂ ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ವಚನಗಳಿಂದ ಕಥಾಸಾಂಗತ್ಯವಾಗಿ ಶಿವಗಣ ಪ್ರಸಾದಿ ಮಹಾ ದೇವಯ್ಯಗಳು ತತ್‌ಶಿವಗಣಂಗಳ ಶಿವಾನುಭಾವವನು ಭಾವ ಶ್ರೋತ್ರದ್ವಾರ ಮುಖಕ್ಕೆ ನಿರ್ಮಲ ದರ್ಪಣವೆನೆ ಸಮರ್ಪಿಸಿ ದನು ಈ ಮಹಾ ಪ್ರಸಂಗದ ಸದುಹೃದಯವನು ಅರಿದೊಡೆ ನಿತ್ಯನಿರವಯನಪ್ಪನು. ಭವಭಾರಕ್ಕೆ ಅಂಜಿಕೇಳಲು ಸದ್ಯೋ ನ್ಮುಕ್ತನಪ್ಪನು. ತತ್‌ಸಂಗದಿಂದ ಕೇಳಿ ಮನದಿಂದ ಅವಧರಿಸಲು ನಿರ್ಮಲಾತ್ಮಕನಪ್ಪನು ಆದರಣೆಯಿಂದ ಶ್ರೋತ್ರಮುಖಕ್ಕೆ ಕೇಳಿದಾತನು ರುದ್ರಾಧಿಪತಿಯಪ್ಪನು ಮನೋರತಿಯಿಂ ಬರೆ ದೊಡೆ ಪಠಿಸಿದೊಡೆ ಅರ್ಥವನು ಹೇಳಿದೊಡೆ ಕೇಳಿದೊಡೆ ಸಾಲೋಕ್ಯ ಸಾಮೀಪ್ಯ ಸಾಯುಜ್ಯ ಸಾರೂಪ್ಯವೆಂಬ ಚತುರ್ವಿಧ ಪದಂ ಪಡೆವನು. ಇದನು ಶಿವಶರಣರು ಕೇಳುವದು ಲಾಲಿ ಪುದು ಪಾಲಿಪುದು ಬರೆದೋದುವದು ಇಲ್ಲಿ ವಚನಕ್ರಮ ತಪ್ಪಿ ದೊಡೆ ನಿಮ್ಮ ಪರಿಜ್ಞಾನದಿಂದ ತಿದ್ದಿಕೊಂಬ ದು ಎಂದು ಎನ ಲಾಗಿ ಆ ವಾಕ್ಯವಿಡಿದು ಗುಮ್ಮಳಾಪುರದ ಸಿದ್ಧಲಿಂಗದೇವರು ಅಲ್ಲಿ ಸಿದ್ಧರಾಮ ದೇವರಿಗೆ ದೀಕ್ಷಾಕ್ರಮವಿಲ್ಲದಿರಲು ಬಸವಾದಿ ಪ್ರಮಥರ ಪ್ರಸಿದ್ಧ ವಚನಮಂ ಸೇರಿಸಿದುದು. ಆಪರಿಯಲಿ ಅನಿರ್ವಾಚ್ಯ ಪರಂಜ್ಯೋತಿ ಸ್ವರೂಪ ಷಟ್‌ಸ್ಥಲ ಸಂಪನ್ನ ಷಡ್ಲಿಂಗಾಂಗಭರಿತ ಶರಣಜನಬಾಂಧವ ಶರಣಜನಹೃತ್ಕಮಲ ಕರ್ಣಿಕಾವಾಸ ಅನಾದಿ ಪರಶಿವನೆನಿಸುವ ತೋಂಟದ ಸಿದ್ಧ ಲಿಂಗೇಶ್ವರನು, ಆ ತೋಂಟದ ಸಿದ್ಧಲಿಂಗೇಶ್ವರನ ಕೃಪಾಕಟಾಕ್ಷ ಪಾತ್ರರಾದ ಬೋಳಬಸವೇಶ್ವರನು, ಆ ಬೋಳಬಸವೇಶ್ವರನ ಮಹಾಜ್ಞಾನಾನುಭವಪ್ರಸನ್ನತೆಯಿಂದ ಗೂಳೂರು ಸಿದ್ಧವೀರ ಣ್ಣೊಡೆಯ ದೇವರು ಎಂಬ ದಿವ್ಯ ಜ್ಞಾನಾನುಭಾವಿಯು ಶೂನ್ಯ ಸಂಪಾದನೆಯಂ ರಚಿಸಿ ವಸುಧೆಯ ಷಟ್‌ಸ್ಥಲ ಲಿಂಗಾಂಗ ಸಂಬಂಧಿಗಳಾದ ವೀರಮಾಹೇಶ್ವರರುಗಳ ಶ್ರೀಪಾದಕ್ಕೆ ಸಮ ರ್ಪಿಸಿದನು. ಶಿವಗಣಂಗಳಿಗೆ ಶರಣು ಶರಣಾರ್ಥಿ " ಎಂತಲೂ ಇದೇ ಮುಂದೆ ಪದ್ಯರೂಪವಾಗಿ



॥ ವೃತ್ತ ॥

ಪರಮಸುದೇಶಿಕಾಗ್ರಣಿ ಪವಿತ್ರ ಚರಿತ್ರ ಶಿವಕೃತಿ ರ್ವಸೂ ।
ಸ್ಥಿರತರ ಮಾನಸೇಂದ್ರಿಯ ವಿವರ್ಜಿತ ತೋಂಟದ ಸಿದ್ಧಲಿಂಗಸ ॥
ದ್ಗುರುವರನಾಥರೊಳಿಪ್ಪ ಬೋಳಬಸವೇಶ್ವರಾರ್ಯಸ ।
ತ್ಕರುಣವನಾಂತು ಗೂಳೂರ ಸಿದ್ಧವೀರಯತೀಶ ನೋಲ್ದು ಪೇಳಿದಂ ॥೧॥

ಧರೆಯೊಳ್ ಪ್ರೌಢವೆನಿಪ್ಪ ನೋರ್ವಿ ಮೌಕ್ತಿಕಂಗಳಂ ಚಾರು ಬಂಧುರವಪ್ಪಂತೆ ಸಮಾನದಿಂದವರ ತತ್ ತತ್ ಸ್ಥಾನ ಮಂ ಕಂಡು ಬಿಚ್ಚರದಿಂದಲಿಯ ಮಧ್ಯರತ್ನವನು ಹರುಷಾ ನಂದದಿಂ ಕೊಂಡವೊಲ್ ಶರಣರ್ಮೆಚ್ಚಲು ಸಿದ್ಧವೀರಯತಿ ಪೇಳ್ದ ಶೂನ್ಯಸಂಬೋಧೆಯಂ

ಶ್ರೀಮದ್ದೇಶಿಕ ಅಲ್ಲಮಪ್ರಭುವರಂ ಸ್ವೇಚ್ಛಾವಿಲಾಸಗಳಿಂದ ಮೋದಂ ಶರಣರ್ಗಪ್ಪತೆರದಿಂ ಶೂನ್ಯಪೀಠಾಗ್ರದೊಳ್ ಪ್ರೇಮ ಚಿತ್ತದಿ ಅಡರ್ದೇರಿ ಮಂಡಿಸಿ ಶಿವಜ್ಞಾನಾರ್ಥಮಂ ಕೇಳೆ ಪೇಳ ಮಹಾತ್ಮೆಯಂ ಸಿದ್ಧವೀರ ಸುತಿ ಪೇಳ್ದಂ ಸರ್ವರಾನಂದಿಸಲ್.

॥ ೨ದ ॥

ಗುರುತೋಂಟದ ಸಿದ್ಧೇಶ್ವರನ ಚರಣಂ ಭೋಜಾತಂ ।
ಸ್ಥಿರಕೃತ ಚಿತ್ತೋತ್ಕರ ಸಿದ್ಧಯೋಗಿಶ್ವರಂ ।
ಶರಣರ್ಕಿವಿಗೆ ವಚನಬೋಧೆಯನಿನಿತವಂ ।
ಇತಿ ಶೂನ್ಯಸಂಪಾದನೆ ಸಮಾಪ್ತಂ ಮಂಗಳಂ ಮಹಾ ॥೧॥

ಎಂತಲೂ ಇರುವದು.

ಮೇಲ್ಕಂಡ ಈ ಎಲ್ಲಾ ಸಂಗತಿಗಳನ್ನು ಸಾದ್ಯಂತವಾಗಿ ವಿಚಾರಿಸಿದರೆ ಷಟ್‌ಸ್ಥಲಮಾರ್ಗವನ್ನು ಸುಲಭವಾಗಿ ತಿಳಿಯ ಪಡಿಸುವುದಕ್ಕೆ ಅನುಭವಮಂಟಪದಲ್ಲಿ ಬಸವೇಶ್ವರನು ವಸ್ತು

ಪಾಠದ ರೂಪವಾಗಿ ರಚಿಸಿದ್ದ ಶೂನ್ಯಪೀಠವನ್ನು ಅತ್ಯಂತ ಯೋಗ್ಯನಾದ ಅಲ್ಲಮಪ್ರಭುವಿನಿಂದ ಅಲಂಕರಿಸಿದನು– ಹೀಗೆ ಆ ಶೂನ್ಯಸಿಂಹಾಸನವನ್ನು ಯೋಗ್ಯವಾಗಿ ಶೃಂಗರಿಸಿದ ಪ್ರಭುದೇವರು ಇಂಥಾ ಶೂನ್ಯತ್ವವನ್ನು ಅಂದರೆ ಲಿಂಗಾಂಗ ಸಾಮರಸ್ಯವನ್ನೂ ಸಂಪಾದಿಸುವ ವಿಧಾನವನ್ನು ಬೋಧಿಸಿದ ರೀತಿಯೂ ಇಂಥ ಶಿವಾನುಭವದ ಸಂಬಂಧವಾಗಿ ಇತರ ಶರಣ ರೊಂದಿಗೆ ಮಾಡಿದ ಗೋಷ್ಠಿಗಳೂ ಬಸವೇಶ್ವರನ ಕಾಲದಿಂದಲೇ ಪ್ರಭುದೇವರ ಪರಮಾನುಭಾವಬೋಧೆ ಎಂಬ ಹೆಸರಿನಿಂದ ಪ್ರಚಲಿತವಾಗಿದ್ದವೆಂದು ಕಂಡುಬರುತ್ತದೆ. ಜ್ಯೋತಿರ್ಮಯ ಶಾಂಭವೀಜ್ಞಾನ ದೀಕ್ಷಾಬೋಧೆ ಎಂಬ ಗ್ರಂಥದಲ್ಲಿ ಅಲ್ಲಮ ಪ್ರಭು ಕಲ್ಯಾಣ ಪಟ್ಟಣದಲ್ಲಿ ಬಸವಾದಿ ಪ್ರಮಥಗಣಂಗಳಿಗೆ ಎರಡೆಂಭತ್ತು ಕೋಟಿ ಬೆಡಗಿನ ವಚನಗಳಿಂದ ಉಪದೇಶ ಮಾಡಿರುವನೆಂದು ಹೇಳಿರುವದಕ್ಕೂ ಇದೇ ಕಾರಣವಿದ್ದಿರ ಬಹುದು. ಇಂಥ ಕೆಲವು ವಚನಗಳನ್ನು ಪ್ರಸಾದಿ ಮಹಾ ದೇವಯ್ಯಗಳು ಕಥಾಸಾಂಗತ್ಯವಾಗಿ ಬರೆಯಲೆತ್ನಿಸಿದರು. ಈ ಮಹಾದೇವಯ್ಯಗಳು ಯಾರೋ ತಿಳಿಯದು. ಅದಕ್ಕನುಗುಣ ವಾಗಿ ಗುಮ್ಮಳಾಪುರದ ಸಿದ್ಧಲಿಂಗದೇವರು (೧೪೪೦ ಕ್ರಿ. ಶಕೆ) ಬಸವಾದಿ ಪ್ರಮಥರ ವಚನಗಳನ್ನು ಸೇರಿಸಿ ಪುಷ್ಟೀಕರಿಸಿದ ರೆಂದೂ ಈ ತರದ ಆರಂಭದ ಪ್ರಯತ್ನಗಳನ್ನು ಗೂಳೂರು ಸಿದ್ಧವೀರಣ್ಣೊಡೆಯರು ಕಡೆಯಲ್ಲಿ ಸಿದ್ಧಿಗೆ ಮುಟ್ಟಿಸಿದರೆಂದೂ ಅದಕ್ಕೇನೇ ಈಗ ಶೂನ್ಯ ಸಂಪಾದನೆ ಎಂಬ ಹೆಸರಿರುವದೆಂದೂ ವಿಶದವಾಗುತ್ತದೆ. ಶಿವಾನುಭವದ ಕಡೆಯ ಸ್ಥಲವಾಗಿರುವ ಐಕ್ಯ ಸ್ಥಲವನ್ನು ಗುರುತಿಸುವದಕ್ಕಾಗಿ ಏರ್ಪಾಟವಾದ ಶೂನ್ಯ ಸಿಂಹಾಸನದಲ್ಲಿ ಆ ಯೋಗ್ಯರಾದ ಪ್ರಭುದೇವರು ಶಿವಾನು ಭವ ಗೋಷ್ಠಿಗೆ ಮೂರ್ತಸ್ವರೂಪವನ್ನು ಕೊಟ್ಟದ್ದರಿಂದ ಪ್ರಭುದೇವರ ಶೂನ್ಯ ಸಂಪಾದನೆ ಎಂದು ಹೆಸರು ಬಿತ್ತೆಂದು ತೋರುತ್ತದೆ. ಹೀಗಾಗಿ ಪ್ರಭುದೇವರು, ಶೂನ್ಯ ಸಂಪಾದನೆ ಯೆಂಬ ವಿಷಯಕ್ಕೆ ಮೂಲಕರ್ತರಲ್ಲದೆ ಈ ಹೆಸರಿನ ಗ್ರಂಥಕ್ಕೆ ಕರ್ತರಲ್ಲವೆಂದು ತಿಳಿಯತಕ್ಕದ್ದು. ಇದುವರೆಗೆ ಹೇಳಲ್ಪಟ್ಟ ಆಧಾರಗಳ ಮೇಲಿಂದ ಶೂನ್ಯ ಸಂಪಾದನೆಯ ಗ್ರಂಥಕರ್ತರು ಗೂಳೂರು ಸಿದ್ಧೇಶ್ವರರೆಂದು ಸಿದ್ಧಾಂತವಾಯಿತು.

ಇನ್ನು ಇದು ಬರೆಯಲ್ಪಟ್ಟ ಕಾಲವನ್ನು ವಿಚಾರಿಸತಕ್ಕದ್ದು. ಮೇಲೆ ಹೇಳಿದಂತೆ ಶೂನ್ಯ ಸಂಪಾದನೆಯ ಗ್ರಂಥಕರ್ತರಾದ ಗೂಳೂರು ಸಿದ್ಧವೀರಣ್ಣೊಡೆಯರು, ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯರಾದ ಬೋಳ ಬಸವೇಶ್ವರರ ಕೃಪಾಪ್ರಸಾ ದಿಂದ ಹುಟ್ಟಿದವರೆಂದು ಹೇಳಿರುವದರಿಂದ ಇವರು ತೋಂ[ಟದ] ಯತಿಗಳ ಪ್ರಶಿಷ್ಯರಾಗಿರಬೇಕೆಂದು ತಿಳಿದು ಬರುತ್ತದೆ. ತೋಂ ಟದ ಸಿದ್ಧಲಿಂಗ ಯತಿಗಳು ಕ್ರಿ. ಶ. ೧೪೭೦ ರಲ್ಲಿದ್ದಂತೆ ... ಚರಿತೆಯಿಂದ ತಿಳಿದು ಬರುತ್ತದೆ. (ಸರಿನೋಡಿ ದ್ವಿತೀಯ ಸಂಪು ಪುಟ ೯೭) ತೋಂಟದ ಯತಿಗಳ ಶಿಷ್ಯರಾದ ಬೋಳಬಸವ[ರಾಜ] ದೇವರು ವಚನಗ್ರಂಥಗಳನ್ನಾಗಲಿ, ವೀರಶೈವರ ಇತರ ಗ್ರಂಥ ಳನ್ನಾಗಲಿ, ಬರೆದಂತೆ ತೋರುವದಿಲ್ಲವಾದಕಾರಣ ಕವಿಚ[ರಿತೆ] ಯಲ್ಲಿ ಇವರು ಬದುಕಿದ ಕಾಲವು ಪ್ರತ್ಯೇಕವಾಗಿ ಬರೆಯಲ್ಪ[ಟ್ಟಿಲ್ಲ] ಇವರ ಶಿಷ್ಯರಾದ ಗೂಳೂರ ಸಿದ್ಧವೀರಣ್ಣೊಡೆಯರು ... ಈ ಗ್ರಂಥಗಳೂ ಅದರಲ್ಲಿ ದೊರೆಯುವದಿಲ್ಲವಾದಕಾರಣ ಇವ[ರು] ಬದುಕಿದ ಕಾಲವೂ ಗೊತ್ತಾಗುವದಿಲ್ಲ. ಹೀಗಿದ್ದರೂ ಬೋ[ಳ] ಬಸವರಾಜ ದೇವರ ಇತರ ಶಿಷ್ಯರಾದ ಮುರಿಗೆಯ ... ವೀರ, ಆಚರಣೆಯ ವಚನಗಳನ್ನು ಸಂಗ್ರಹಿಸಿದ 'ಸಂಪಾ[ದ] ನೆಯ ಚನ್ನಂಚದೇವ' ಮುಂತಾದವರನ್ನು ಶ್ರೀಮಾನ್ ನರಸಿಂ[ಹ] ಚಾರ್ಯರು ಕ್ರಿ. ಶ. ಸುಮಾರು ೧೫೩೦ ರಲ್ಲಿ ಬದುಕಿದ ಕವಿ[ಗಳೆಂದು] ಳೆಂದು ಹೇಳಿದ್ದಾರೆ. (ಕವಿಚರಿತೆ ದ್ವಿತೀಯ ಸಂಪುಟ ಪು[ಟ] ೨೨೨–೨೨೧೪) ಹೀಗಾಗಿ ಬೋಳ ಬಸವರಾಜ ದೇವರ ಶಿಷ್ಯ[ರ]ಲ್ಲೊಬ್ಬರಾದ ಈ ಗೂಳೂರು ಸಿದ್ಧವೀರಣ್ಣೊಡೆಯರ ಕಾಲ[ವನ್ನು] ಸುಮಾರು ಕ್ರಿ. ಶಕದ ೧೫೩೦ ಎಂದು ಹೇಳಲಿಕ್ಕೆ ಪ್ರ[ತ್ಯ]ವಾಯುವಿಲ್ಲ.

ಇದುವರೆಗೆ ತಿಳಿದುಬಂದ ಆಧಾರಗಳ ಮೇಲಿಂದ ಶೂ[ನ್ಯ] ಸಂಪಾದನೆಯ ಗ್ರಂಥಕರ್ತರು ಗೂಳೂರು ಸಿದ್ಧವೀರಣ್ಣೊಡೆ ಯರೆಂದೂ ಇವರು ಬದುಕಿದ ಕಾಲವು ಕ್ರಿ. ಶ. ಸುಮಾ[ರು] ೧೫೩೦ ಎಂದೂ ನಿರ್ಣಯವಾದಂತಾಯಿತು. ಇನ್ನು ... ಶೂನ್ಯ ಸಂಪಾದನೆಯಲ್ಲಿ ಬರುವ ವಿಷಯಗಳ ಬಗ್ಗೆ ... ಮಾತುಗಳನ್ನು ಹೇಳಿ ಈ ಲೇಖವನ್ನು ಮುಗಿಸುತ್ತೇವೆ. ... ಣದಲ್ಲಿ ೧೨ನೇ ಶತಮಾನದಲ್ಲಿ ಪರಮಾವಧಿಗೇರಿದ್ದ ವೀ[ರಶೈವ] ಧರ್ಮವು ಕಾರಣಾಂತರಗಳಿಂದ ಆ ಸ್ಥಳವನ್ನು ತ್ಯಜಿಸಿ ... ಹೊರಬಿದ್ದ ಬಳಿಕ ಅಂದರೆ ಬಸವೇಶ್ವರನು ಕೂಡಲ ಸಂಗ[ಮ] ದಲ್ಲಿಯೂ ಚನ್ನಬಸವೇಶ್ವರನು ಉಳವಿಯಲ್ಲಿಯೂ ಪ್ರಭುದೇ ವರು ಶ್ರೀಶೈಲದಲ್ಲಿಯೂ ಐಕ್ಯವಾದ ಬಳಿಕ, ವಚನ ಶಾಸ್ತ್ರ[ದ] ಬೆನ್ನುಮೂಳೆಯಂತಿದ್ದ ಅನುಭವ ಮಂಟಪದ ಆಧಾರಸ್ತಂಭ ಗಳೇ ಬಿದ್ದು ಹೋದಂತಾಗಿ ಅದಕ್ಕೆ ಪುನಃ ರಾಜಾಶ್ರಯ...

ದೊರೆಯುವವರೆಗೆ ವಿಶೇಷತಃ ವಚನ ಶಾಸ್ತ್ರವು ಗೌಪ್ಯವಾದ ಇಲ್ಲವೆ ಅಜ್ಞಾತ ಸ್ಥಿತಿಯಲ್ಲಿದ್ದಂತೆ ತೋರುತ್ತದೆ. ಅಂದರೆ ಬಸವೇಶ್ವರನ ಮರಣಾನಂತರ ಕೆಲವು ವರ್ಷಗಳಲ್ಲಿ ನುಡಿಯಂತೆ ನಡೆಗೆ ಇದ್ದ ಮಹತ್ವವು ಕಡಿಮೆಯಾಗಲು ವಚನಗಳ ಕಡೆಗೆ ವಿಶೇಷ ಲಕ್ಷ್ಯವು ಹೋದಂತೆ ತೋರುವದಿಲ್ಲ. ಬಸವೇಶ್ವರನ ಕಾಲದಲ್ಲಿ ವಚನಶಾಸ್ತ್ರಕ್ಕಿದ್ದ ಮಹತ್ವವು ವಿಜಯನಗರ ಅರಸರು ಲಿಂಗಾಯತ ಮತಕ್ಕೆ ಆಶ್ರಯಕೊಡುವವರೆಗೆ ಅಂದರೆ ಕ್ರಿ. ಶ. ಸುಮಾರು ೧೪ನೆಯ ಶತಮಾನದವರೆಗೆ ವಿಶೇಷವಾಗಿ ಕೇಳಬರುವದಿಲ್ಲ. ಆ ಮೇಲೆ ವಚನ ಶಾಸ್ತ್ರಕ್ಕೆ ಪ್ರಥಮತಃ ವಿಶೇಷ ಲಕ್ಷ್ಯ ಕೊಟ್ಟವರೆಂದರೆ ಕ್ರಿ. ಶ. ಸುಮಾರು ೧೪೩೫ ರಲ್ಲಿ ಬದುಕಿದ ಮಹಲಿಂಗದೇವರೆಂದು ಹೇಳತಕ್ಕದ್ದು. ಇವರು ಪ್ರಭುದೇವರ ವಚನಗಳಿಗೆ ಟೀಕೆಯನ್ನು ಬರೆದಿದ್ದಾರೆ. ಇವರು ವಿಜಯನಗರದ ಪ್ರೌಢದೇವರಾಜನ (ಕ್ರಿ. ಶ. ೧೪೧೯–೧೪೪೬) ಕಾಲಕ್ಕೆ ಇದ್ದಂತೆ ತಿಳಿಯುತ್ತದೆ. ಇವನ ತರುವಾಯ ವಚನ ಶಾಸ್ತ್ರಾಭ್ಯಾಸಕ್ಕೆ ವಿಶೇಷ ರೀತಿಯಿಂದ ಕೈಹಾಕಿದವರೆಂದರೆ ತೋಂಟದ ಸಿದ್ಧಲಿಂಗ ಯತಿಗಳೆಂದು ಹೇಳತಕ್ಕದ್ದು. ಇವರು ವಿಜಯನಗರದ ಅರಸನಾದ ವಿರೂಪಾಕ್ಷನ (ಕ್ರಿ. ಶ. ೧೪೬೭–೧೪೭೮) ಕಾಲದಲ್ಲಿದ್ದಂತೆ ಚನ್ನಬಸವಪುರಾಣದಿಂದ ತಿಳಿಯುತ್ತದೆ. ಅಂತೂ ೧೫ ನೇ ೧೬ನೇ ಶತಮಾನಗಳಲ್ಲಿ ತೋಂಟದವರ ಮಠದ ಶಿಷ್ಯರು ಮಾಡಿದಷ್ಟು ಕೆಲಸವನ್ನು ಬೇರೆ ಯಾರೂ ಮಾಡಲಿಲ್ಲವೆಂದು ಹೇಳಿದರೆ ತಪ್ಪಾಗದು. ಇವರು ಶಿವಾನುಭವದಿಂದ ತುಂಬಿ ತುಳುಕುತ್ತಿರುವ ಪ್ರಮಥರ ವಚನಗಳಲ್ಲಿ ದೊರೆಯುವ ಅನುಭವಾಮೃತದಿಂದ ಆಕರ್ಷಿಸಲ್ಪಟ್ಟದ್ದಲ್ಲದೆ ಇಂಥ ವಚನಗಳಿಗೆ ಐತಿಹಾಸಿಕ ಸ್ವರೂಪವನ್ನು ಕೊಡಬೇಕೆಂಬ ಉತ್ಕಟೇಚ್ಛೆಯೂ ಈ ತರದ ಗ್ರಂಥಗಳನ್ನು ಹುಟ್ಟಿಸುವದಕ್ಕೆ ಕಾರಣವಾಯಿತೆಂದು ಹೇಳಿದರೂ ಹೇಳಬಹುದು. ಅಂದರೆ ಪ್ರತಿಯೊಂದು ವಚನವನ್ನು ಸೂಕ್ಷ್ಮವಾಗಿ ಅಭ್ಯಾಸಿಸಿ ಇದು ಇಂಥವರಿಂದ ಇಂಥ ಕಾಲದಲ್ಲಿ ಇಲ್ಲವೆ ಇಂಥ ಸಂದರ್ಭದಲ್ಲಿ ಹೇಳಲ್ಪಟ್ಟಿರಬೇಕೆಂಬುವದನ್ನು ಗೊತ್ತು ಹಚ್ಚುವದೇ ಇವರ ಮುಖ್ಯ ಪ್ರಯತ್ನವಾಗಿತ್ತು. ಹೀಗೆ ಇವರಿಗೆ ವಚನ ವಾಙ್ಮಯದ ಮನನದಿಂದ ಅತ್ಯುನ್ನತವಾದ ಅದರ ಯೋಗ್ಯತೆಯು ತಿಳಿದು ಬರಲು ಅದನ್ನು ವಿವಿಧರೀತಿಯಿಂದ ಜಗತ್ತಿನ ಮುಂದೆ ಇಡುವದಕ್ಕೆ ಧಾವತಿಗೊಂಡರೆಂದು ಕಾಣುತ್ತದೆ. ಹಿಂದೆ ಹೇಳಿದ ಗೂಳೂರು ಸಿದ್ಧವೀರಣ್ಣೊಡೆಯರಂತೂ ವಚನಶಾಸ್ತ್ರದಲ್ಲಿ ಪ್ರೊಫೆಸ್ಸರರಾಗಿದ್ದರೆಂಬುದು ಇಲ್ಲವಾದರೆ

ವಚನಗಳನ್ನು ಈ ರೀತಿಯಲ್ಲಿ ಪವಣಿಸುವದು ಸುಸಾಧ್ಯವಲ್ಲ. ಇವರು ಪ್ರಭುಲಿಂಗಲೀಲೆಯಲ್ಲಿ ಹೇಳಲ್ಪಟ್ಟ ಅಲ್ಲಮಪ್ರಭುವಿನ ಚರಿತ್ರೆಯನ್ನು ಅಂದರೆ ಅದರಲ್ಲಿ ಬರುವ ವಿಭೂತಿಗಳನ್ನು ತಮ್ಮ ಕಣ್ಣೆದುರಿನಲ್ಲಿಟ್ಟುಕೊಂಡು ಅದೇ ಸುಮುಕಟ್ಟಿನಮೇಲೆ ವಚನಗಳನ್ನು ಸಂವಾದರೂಪವಾಗಿ ಬಹು ಜಾಣ್ಮೆಯಿಂದ ಪವಣಿಸಿದ್ದಾರೆ. ಇವರು ಪ್ರಭುದೇವರನ್ನು ಸೂರ್ಯನನ್ನಾಗಿಯೂ ಉಳಿದ ವಚನಕಾರರನ್ನು ಅಂದರೆ ಪ್ರಭುಲಿಂಗ ಲೀಲೆಯಲ್ಲಿ ಬರುವ ಇತರ ವ್ಯಕ್ತಿಗಳನ್ನು ಅವನ ಸುತ್ತಲೂ ತಿರುಗುವ ಉಪಗ್ರಹಗಳನ್ನಾಗಿಯೂ ವ್ಯವಸ್ಥೆಗೊಳಿಸಿದ್ದಾರೆಂದು ಹೇಳಬೇಕು. ಆದರಿಂದ ಇವರು ಬರೆದ ೩೧ ಸಂವಾದಗಳಲ್ಲಿ ಪ್ರಭುದೇವರು-ಮುಕ್ತಾಯಕ್ಕ, ಪ್ರಭುದೇವರು-ಅಜಗಣ್ಣ, ಪ್ರಭುದೇವರು-ಸಿದ್ಧರಾಮಯ್ಯ, ಪ್ರಭುದೇವರು-ಬಸವೇಶ್ವರ, ಪ್ರಭುದೇವರು-ಚನ್ನಬಸವೇಶ್ವರ, ಎಂಬದಾಗಿಯೇ ಬರುತ್ತದೆ. ಪ್ರಭುದೇವರು ದೇಶಾಂತರಕ್ಕೆ ಹೋಗಿಬಂದ ಗತಿ ಮುಂತಾದ ಕಡೆಯ ಸಂವಾದಗಳು ಪ್ರಭುಲಿಂಗಲೀಲೆಯ ಕ್ರಮವನ್ನೇ ನಿರ್ದೇಶಿಸುತ್ತವೆ. ಈ ಸಂವಾದಗಳಲ್ಲಿ ಬರುವ ೧೫೪೩ ವಚನಗಳಲ್ಲಿ ಈಗ ಪ್ರತ್ಯೇಕವಾಗಿ ದೊರೆಯುವ ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಅಜಗಣ ಮುಕ್ತಾಯಕ್ಕ ಮಹಾದೇವಿಯಕ್ಕ ಮುಂತಾದವರ ವಚನಗಳಲ್ಲಿ ಬಾರದೇ ಇರುವ ಅನೇಕ ವಚನಗಳು ಈ ಗ್ರಂಥದಲ್ಲಿ ಬರುತ್ತವೆ. ಇವು ಸಂದರ್ಭಾನುಸಾರವನ್ನು ಹೊಂದಿಸುವದಕ್ಕೆ ಹಾಕಿದ ಕೈಗಂಟಿನ ವಚನಗಳೋ ಇಲ್ಲವೆ ಇನ್ನೂ ಆಯಾ ವಚನಕಾರರಿಗೆ ಸೇರದೆ ಉಳಿದುಕೊಂಡಿರುವ ವಚನಗಳೋ ಎಂಬ ಸಂದೇಹ ಉಂಟಾಗುತ್ತದೆ. ವಚನ ಶಾಸ್ತ್ರವನ್ನು ಸೂಕ್ಷ್ಮವಾಗಿ ಐತಿಹಾಸಿಕ ಹಾಗೂ ಶಾಸ್ತ್ರೀಯ ದೃಷ್ಟಿಯಿಂದ ಅಭ್ಯಾಸ ಮಾಡುವ ಕಾಲವು ಬಂದಾಗ ಈ ಪ್ರಕ್ಷಿಪ್ತಗಳ ಬಗ್ಗೆ ಯೋಗ್ಯವಾದ ನಿರ್ಣಯವಾಗಬಹುದು. ಯಾರಾದರೂ ಬಸವೇಶ್ವರನ ಕಾಲದ ಶರಣರ ಇತಿಹಾಸವನ್ನು ಇದಕ್ಕೆ ಹೊಂದು ಬಳಿಕೆಯಾಗುವ ವಚನಗಳನ್ನೂ ಸೂಕ್ಷ್ಮವಾಗಿ ಅಭ್ಯಾಸಿಸಹತ್ತಿದರೆ ಈ ವಚನಗಳನ್ನು ಇಲ್ಲವೆ ಬೇರೆ ವಚನಗಳನ್ನು ಗೂಳೂರು ಸಿದ್ಧವೀರಣ್ಣೊಡೆಯರಿಗಿಂತಲೂ ನೂತನ ರೀತಿಯಿಂದ ಯೋಜಿಸಬಹುದು. ಆದರೆ ಈ ವಿಷಯದಲ್ಲಿ ತೋಂಟದ ಸಿದ್ಧಲಿಂಗ ಯತಿಗಳಿಗಿಂತಲೂ ಹೆಚ್ಚು ಪ್ರಾವೀಣ್ಯವು ಬೇಕಾದೀತು. ಹೇಗೆಯೇ ಇರಲಿ. ಗೂಳೂರ ಸಿದ್ಧವೀರಣ್ಣೊಡೆಯರು ಮಾಡಿದ ಈ ಕಾರ್ಯವು ಸ್ತುತ್ಯಾರ್ಹವೇ ಸರಿ. ಯಾಕಂದರೆ ಉತ್ತರದ ಉಪನಿಷತ್ತುಗಳೆನ್ನಿಸಿಕೊಳ್ಳುವ ಸಂಸ್ಕೃತಗ್ರಂಥಗಳಲ್ಲಿ ಸಕಲಸೃಷ್ಟಿಗೆ ಕಾರಣವಾದ ಬ್ರಹ್ಮವನ್ನು ಹುಡು

ಕುತ್ತಾ ಅದನ್ನು ಕಂಡುಕೊಳ್ಳುವಷ್ಟೇ ಬ್ರಹ್ಮಜ್ಞಾನವೆನಿಸಿರಲು ಧಕ್ಷಿಣದ ಉಪನಿಷತ್ತುಗಳೆನ್ನಿಸಿಕೊಳ್ಳುವ ವಚನಶಾಸ್ತ್ರದಲ್ಲಿ ಈತರದ ಹುಡುಕಾಟವು ಕಾಣದೆ ಆ ಬ್ರಹ್ಮವನ್ನು ಕರತಲಾಮಲಕ ಮಾಡಿಕೊಂಡ ಶಿವಾನುಭವವೂ ಅದಕ್ಕನುಗುಣವಾದ ನಡತೆಯನ್ನು ಯಾವಜ್ಜೀವದಲ್ಲಿಯೂ ಪ್ರತ್ಯಕ್ಷಗೊಳಿಸಿದ ಅನೇಕಾನೇಕ ಜೀವಜ್ಯೋತಿಗಳೂ ಕಂಡುಬರುತ್ತವೆ. ಆದರೆ ಸಂಸ್ಕೃತ ಉಪನಿಷತ್ತುಗಳಲ್ಲಿ ಬ್ರಹ್ಮಾನುಭವಿಗಳಾರೂ ಇಲ್ಲವೆಂಬು ತಿಳಿಯಬಾಗದು. ಇದ್ದರೂ ಬೆರಳೆಣಿಸುವಷ್ಟು ಮಂದಿ. ಇಲ್ಲಿ ಅವರದೊಂದು ಮಂಟಪವೇ ಇದೆ. ಇಂಥಾ ಮಹತ್ತ್ವವಾದ ವಾಙ್ಮಯವನ್ನು ಯಾವದೊಂದು ಪಾಶ್ಚಿಮಾತ್ಯ ಭಾಷೆಯಲ್ಲಿ ಒಮ್ಮೆ ಅನುವಾದಿಸಲು ಅನುಕೂಲವಾದರೆ ಇದಕ್ಕೆ ಯೋಗ್ಯವಾದ ಬೆಲೆಯು ಬರುವದರಲ್ಲಿ ಸಂದೇಹವಿಲ್ಲ. ಪ್ರೊಫೆಸರ ರಾನಡೆ ಎಂಬವರು ತಮ್ಮ ಧಾರ್ಮಿಕ ಹಾಗೂ ತಾತ್ತ್ವಿಕ ಸಂಬಂಧವಾದ ಷೋಡಶ ಗ್ರಂಥಮಾಲೆಯಲ್ಲಿ Mysticism in Maharashtra ಎಂದು ಮಹಾರಾಷ್ಟ್ರದ ಧರ್ಮಾನುಭವಕ್ಕೆ ವಿಶಿಷ್ಟವಾದ ಸ್ಥಳವನ್ನು ಕೊಟ್ಟಿರುವಂತೆ ಅದಕ್ಕಿಂತಲೂ ವಿಸ್ತೃತವಾದ ವಾಙ್ಮಯವನ್ನೊಳಕೊಂಡ ಕರ್ನಾಟಕದ ಶಿವಾನುಭವಕ್ಕೂ ಸ್ವತಂತ್ರ ಸ್ಥಳವನ್ನು ಕೊಟ್ಟಿದ್ದರೆ ಬಹಳ ಉತ್ತಮವಾಗಿತ್ತು. ಈಶ್ವರಾನುಗ್ರಹವಾದರೆ ಉಪನಿಷತ್ತುಗಳ ಹಾಗು ವಚನಶಾಸ್ತ್ರದ ತಾರತಮ್ಯರೂಪವಾದ ಒಂದು ಲೇಖವನ್ನಾಗಲಿ ಇಲ್ಲವೆ ಶೂನ್ಯ ಸಂಪಾದನೆಯ ಯೋಗ್ಯತೆಯನ್ನು ತೋರಿಸುವದಕ್ಕೆ ಅದರಲ್ಲಿರುವ ಒಂದು ಸಂವಾದವನ್ನಾಗಲಿ ಕುರಿತು ಬರೆಯಲಿಚ್ಛಿಸುತ್ತೇನೆ. ಈ ಗ್ರಂಥವು ಮುದ್ರಣವಾಗುವದಕ್ಕೆ ಸಬ್ಬಜಡ್ಜ ಹಾಲಭಾವಿಯವರು ಹಣದ ಸಹಾಯ ಮಾಡಿದ್ದಾರೆಂದೂ ಇದನ್ನು ಶ್ರೀಯುತ ಹಳಕಟ್ಟಿಯವರು ಮುದ್ರಿಸಲಾರಂಭಿಸಿರುವರೆಂದೂ ಶಿವಾನುಭವದಲ್ಲಿ ಓದುತ್ತೇವೆ. ಇದು ಇನ್ನು ಕೆಲವು ತಿಂಗಳೊಳಗಾಗಿಯೇ ಹೊರಬೀಳಬಹುದು. ಬಡು ಜನಂದದ ವಾರ್ತೆಯೇ ಸರಿ.

[ಟೀಪು— ಈ ಗ್ರಂಥವು ಅರ್ಧಕ್ಕಿಂತ ಹೆಚ್ಚು ಅಚ್ಚಾಗಿರುವದು ಶ್ರೀಯುತ ಹಳಕಟ್ಟಿಯವರಿಂದ ತಿಳಿದು ಬಂದಿದೆ. ಬೇಗನೇ ಪ್ರಸಿದ್ಧವಾಗುವದು. ಬರಲಿರುವ ಮಹತ್ತ್ವದ ಗ್ರಂಥದ ಪರಿಚಯಕ್ಕಾಗಿಯೇ ಈ ಲೇಖವನ್ನು ಈಗ ಪ್ರಕಟಮಾಡಲಾಗಿದೆ.

— ಸಂಪಾದಕ ಜಯಕರ್ನಾಟಕ]

---

# ಮುಖಜ್ಯೋತಿಷದಲ್ಲಿ ಮಂಗಳಾದಿ ಗ್ರಹಗಳ ಸ್ಥಾನನಿರ್ಣಯ

ಲೇಖಕರು— ಶ್ರೀ. ಕೃಷ್ಣರಾವ ವಿನಾಯಕ ಗೋಕಾಕ, ವಕೀಲರು, ಸವಣೂರು.

## ಮಂಗಳನ ಸ್ಥಾನನಿರ್ಣಯ

ಇದರ ಜ್ಞಾನವನ್ನು ಪಡೆಯಬೇಕಾದಲ್ಲಿ ಗಲ್ಲಗಳ ಆಕೃತಿ, ಬಣ್ಣ ಮುಂತಾದವುಗಳು ಉಪಯೋಗ ಬೀಳುವವು.

೧. ಮಂಗಳನು ಮೇಷರಾಶಿಯಲ್ಲಿದ್ದರೆ ಆ ಮನುಷ್ಯನ ಗಲ್ಲಗಳು ಉಬ್ಬುಗಲ್ಲಗಳಿದ್ದು ಗುಲಾಬಿ ಬಣ್ಣದವಿರುತ್ತವೆ. (ಅಂದರೆ ಈ ತರಹದ ಗಲ್ಲಗಳಿದ್ದವನ ಜನ್ಮಲಗ್ನದಲ್ಲಿ ಮಂಗಳನು ಮೇಷರಾಶಿಯಲ್ಲಿರುವನೆಂದು ತಿಳಿಯಬೇಕು.)

೨. ಮಂಗಳನು ವೃಷಭರಾಶಿಯಲ್ಲಿದ್ದರೆ ಗಲ್ಲಗಳು ಚಪ್ಪಟೆಯಾಗಿ (ಒಳಸಿಕ್ಕ ಹಾಗೆ) ಯಾಗಲಿ ಉಬ್ಬಿದವಾಗಿಯಾಗಲಿ ಇರದೆ ಸಾಧಾರಣವಾಗಿದ್ದು ಬಿಳಿಯಬಣ್ಣದವಿರುತ್ತವೆ.

೩. ಮಂಗಳನು ಮಿಥುನರಾಶಿಯಲ್ಲಿದ್ದರೆ ಅವನವು ಸ್ವಲ್ಪ ಉಬ್ಬುಗಲ್ಲಗಳಿದ್ದು ಬಿಳಿಬಣ್ಣದವಿರುತ್ತವೆ.

೪. ಕರ್ಕರಾಶಿಯಲ್ಲಿದ್ದರೆ ಅವು ಸಾದುಗಪ್ಪಿನ ಮೇಲಿದ್ದು ನಗುವಾಗ್ಗೆ ಅವುಗಳಿಗೆ ತಗ್ಗುಗಳು (dimples) ಬೀಳುತ್ತವೆ.

೫. ಸಿಂಹರಾಶಿಯಲ್ಲಿದ್ದರೆ ಗಲ್ಲಗಳು ಸಾಧಾರಣವಾಗಿದ್ದು ನಡುವೆ ಸ್ವಲ್ಪ ಉಬ್ಬಿದ್ದು ಬಿಳಿಯಬಣ್ಣದವಿರುತ್ತವೆ.

೬. ಕನ್ಯಾರಾಶಿಯಲ್ಲಿದ್ದರೆ ಗಲ್ಲಗಳು ಚಪ್ಪಟೆಯಾಗಿದ್ದು ಹಳದಿಬಣ್ಣದಮೇಲಿರುತ್ತವೆ.

೭. ತುಲಾರಾಶಿಯಲ್ಲಿದ್ದರೆ ಗಲ್ಲಗಳು ಅಗಲವಾಗಿದ್ದು ಗಪ್ಪಿನಮೇಲಿರುತ್ತವೆ.

೮. ವೃಶ್ಚಿಕರಾಶಿಯಲ್ಲಿದ್ದರೆ ಉಬ್ಬಿದ ಕೆಂಪುಗಲ್ಲಗಳುಳ್ಳ

೯. ಧನುರಾಶಿಯಲ್ಲಿದ್ದರೆ ಉಬ್ಬುಗಲ್ಲಗಳು ಸಣ್ಣವಾಗಿದ್ದು ಬಿಳಿಯ ವರ್ಣದಮೇಲಿರುತ್ತವೆ.

೧೦. ಮಕರರಾಶಿಯಲ್ಲಿದ್ದರೆ ಗಲ್ಲಗಳು ಚಪ್ಪಟೆಯಾಗಿದ್ದು ಕಪ್ಪುಬಣ್ಣದಮೇಲಿರುತ್ತವೆ.

೧೧. ಕುಂಭರಾಶಿಯಲ್ಲಿದ್ದರೆ ಗಲ್ಲಗಳು ಸಣ್ಣವಿದ್ದು ಬಿಳಿಯ ವರ್ಣದಮೇಲಿರುತ್ತವೆ.

೧೨. ಮೀನರಾಶಿಯಲ್ಲಿದ್ದರೆ ಉಬ್ಬುಗಲ್ಲಗಳು ಅಗಲವಾಗಿಯೂ ಕಪ್ಪಾಗಿಯೂ ಇರುತ್ತವೆ.

## ಬುಧ ಮತ್ತು ಶುಕ್ರ

ಇವರ ಗತಿಯು ಯಾವಾಗಲು ಸೂರ್ಯನ ಹತ್ತಿರವಿರುವದರಿಂದ ಅವರಿಗೆ ಸ್ವತಂತ್ರವಾದ ಲಕ್ಷಣಗಳನ್ನು ಹೇಳಲಿಕ್ಕಾಗುವದಿಲ್ಲ. ಆದಕಾರಣ ಜನ್ಮಕುಂಡಲಿಯನ್ನು ಸಿದ್ಧಪಡಿಸಿದನಂತರ ಅವರ ಸ್ಥಾನವನ್ನು ನಿರ್ಣಯಿಸಬೇಕು. ಇದು ಕೇವಲ ಅಭ್ಯಾಸದಿಂದ ಸಿದ್ಧವಿದೆ.

## ಗುರುವಿನ ಸ್ಥಾನನಿರ್ಣಯ

ಕಿವಿ ಮತ್ತು ಕಣ್ಣುಗಳ ನಡುವಿನ ಪ್ರದೇಶದ ಲಕ್ಷಣಗಳ ಮೇಲಿಂದ ಗುರುವಿನ ವಿಷಯಕ್ಕೆ ಬೇಕಾದ ಜ್ಞಾನವಾಗುತ್ತದೆ.

೧. ಗುರುವು ಮೇಷರಾಶಿಯಲ್ಲಿದ್ದರೆ ಕಿವಿಗಳು ಸಣ್ಣವಿದ್ದು ಕೆನ್ನೆಯ ಬಣ್ಣವು ಕಪ್ಪಿರುತ್ತದೆ. ಮತ್ತು ಆ ಭಾಗದಲ್ಲಿ ೨ ಇಲ್ಲವೆ ೩ ಹೀಗೆ ಗೆಳತಿಯ ಚಿನ್ಹಗಳು (ಕಪ್ಪು ಚಿಕ್ಕೆಗಳು) ಇರುತ್ತವೆ.

೨. ವೃಷಭರಾಶಿಯಲ್ಲಿರಲು ಕಿವಿಗಳು ದೊಡ್ಡವೂ ಉದ್ದವಾಗಿಯೂ ಇದ್ದು ಕೆನ್ನೆಗಳು ಬಿಳಿಯ ಬಣ್ಣದವಿರುತ್ತವೆ.

೩. ಮಿಥುನರಾಶಿಯಲ್ಲಿದ್ದರೆ ಕಿವಿಗಳು ಸ್ವಲ್ಪ ಸಣ್ಣವು; ಕಣ್ಣುಗಳು ಹಳದಿಬಣ್ಣದವು. ಕಿವಿಗಳ ನಡುವಿನ ಭಾಗವು ಅಗಲವಾಗಿದ್ದು ಕೆನ್ನೆಗಳು ಬಿಳಿಯವರ್ಣದವಿರುತ್ತವೆ.

೪. ಕರ್ಕರಾಶಿಯಲ್ಲಿದ್ದರೆ ಕಿವಿಗಳು ದೊಡ್ಡವು. ಕೆನ್ನೆಗಳು ಹಳದಿಬಣ್ಣದವು. ಅವು ಇನ್ನೂ ಹೆಚ್ಚಿಗೆ ಅಗಲವಾಗಿದ್ದು ಒಂದು ಗೆಳತಿಯ ಚಿನ್ಹವಿರುತ್ತದೆ.

೫. ಸಿಂಹರಾಶಿಯಲ್ಲಿದ್ದರೆ ಕಿವಿಗಳು ಸಣ್ಣವು. ಕೆನ್ನೆಗಳ (ಕಿವಿ–ಕಣ್ಣುಗಳ ನಡುವಿನ ಭಾಗದ) ಅಗಲವು ಕಡಿಮೆಯಿದ್ದು ಅವು ಕೆಂಪು ಬಣ್ಣದಮೇಲಿರುತ್ತವೆ.

೬. ಕನ್ಯಾರಾಶಿಯಲ್ಲಿದ್ದರೆ ಕಿವಿ ದೊಡ್ಡವು. ಕೆನ್ನೆಗಳು ಸ್ವಲ್ಪ ಅಗಲವಾಗಿ ಅವುಗಳ ಮೇಲೆ ಹಸರು ಛಾಯೆಯಿರುತ್ತದೆ.

೭. ತುಲಾರಾಶಿಯಲ್ಲಿರಲು ಕಿವಿ ಸಣ್ಣವು. ಕೆನ್ನೆಯ ಭಾಗವು ಅಗಲವಾಗಿದ್ದು ಕಪ್ಪುವರ್ಣದಮೇಲಿರುತ್ತದೆ.

೮. ವೃಶ್ಚಿಕಲಗ್ನದಲ್ಲಿದ್ದರೆ ಕಿವಿಗಳು ಸ್ವಲ್ಪ ದೊಡ್ಡವು. ಕೆನ್ನೆಯ ಭಾಗವು ಅಗಲವಾಗಿ ಬಿಳಿಗಪ್ಪಿನಮೇಲೆ.

೯. ಧನುರಾಶಿಯಲ್ಲಿರಲು ಕಿವಿಗಳು ದೊಡ್ಡವು. ಕೆನ್ನೆಯ ಭಾಗವು ಹೆಚ್ಚು ಅಗಲವಾಗಿದ್ದು ಹಳದಿಬಣ್ಣದಮೇಲಿರುತ್ತದೆ.

೧೦. ಮಕರರಾಶಿಯಲ್ಲಿದ್ದರೆ ಕಿವಿಗಳು ಸಣ್ಣವು. ಕೆನ್ನೆಗಳ ಅಗಲು ಕಡಿಮೆಯಿದ್ದು ಅವು ಕಪ್ಪುಬಣ್ಣದವಿರುತ್ತವೆ.

೧೧. ಕುಂಭರಾಶಿಯಲ್ಲಿರಲು ಕಿವಿಸ್ವಲ್ಪ ದೊಡ್ಡವು. ಕೆನ್ನೆಯಭಾಗವು ಅಗಲಾಗಿ ಬಿಳುಪಿನ ಮೇಲೆ.

೧೨. ಮೀನರಾಶಿಯಲ್ಲಿದ್ದರೆ ಕಿವಿಗಳು ದೊಡ್ಡವು. ಕೆನ್ನೆಯ ಭಾಗವು ಬಹಳ ಅಗಲವಾಗಿದ್ದು ಬಣ್ಣವು ಹಳದಿ ಮತ್ತು ಬಿಳುಪಿನ ಮೇಲೆ.

## ಶನಿಸ್ಥಾನ ನಿರ್ಣಯ

ಇದು ಕೆಳದುಟಿ ಮತ್ತು ಗದ್ದದ ಲಕ್ಷಣಗಳ ಮೇಲಿಂದ ಸಾಧ್ಯವಿದೆ.

೧. ಶನಿಯು ಮೇಷರಾಶಿಯಲ್ಲಿದ್ದರೆ ಕೆಳದುಟಿಯ ಬಣ್ಣವು ಕಪ್ಪು. ಗದ್ದವು ಅಗಲವಾಗಿದ್ದು ಅದರ ನಡುವೆ ನರವಲಿಯಿರುತ್ತದೆ.

೨. ವೃಷಭರಾಶಿಯಲ್ಲಿರಲು ಕೆಳದುಟಿ ಮತ್ತು ಗದ್ದದ ಬಣ್ಣವು ಬಿಳುಪಾಗಿದ್ದು ಗದ್ದವು ಉದ್ದವಾಗಿಯೂ ಅಗಲು ಕಡಿಮೆಯಾಗಿಯೂ ಇರುತ್ತದೆ.

೩. ಮಿಥುನರಾಶಿಯಲ್ಲಿದ್ದರೆ ಕೆಳದುಟಿಯು ದಪ್ಪಾಗಿಯೂ ಬಿಳುಪಾಗಿಯೂ ಇರುತ್ತದೆ. ಗದ್ದವು ಬಿಳಿಯವರ್ಣದಮೇಲಿದ್ದು ಅದರ ಮೇಲೆ ಸ್ವಲ್ಪ ತಗ್ಗಿನ ಹಾಗಿರುತ್ತದೆ.

೪. ಕರ್ಕರಾಶಿಯಲ್ಲಿದ್ದರೆ ಕೆಳದುಟಿಯು ಸಣ್ಣದಿದ್ದು ಗದ್ದವು ಉದ್ದವಾಗಿರುತ್ತದೆ. ಎರಡೂ ಕಪ್ಪು ಬಣ್ಣದವಿರುತ್ತವೆ.

೫. ಸಿಂಹರಾಶಿಯಲ್ಲಿದ್ದರೆ ಗದ್ದವು ಉದ್ದವಾಗಿಯೂ ಅಗಲವಾಗಿಯೂ ಇರುತ್ತದೆ. ಕೆಳದುಟಿಯು ದಪ್ಪಾಗಿದ್ದು ಕಪ್ಪು ಬಣ್ಣದ್ದು.

೬. ತುಲಾರಾಶಿಯಲ್ಲಿದ್ದರೆ ಗದ್ದವು ಅಗಲವಾಗಿ ಮುಂದೆ ಬಂದಂತಿರುತ್ತದೆ. ಕೆಳದುಟಿ ಸಣ್ಣದು. ಎರಡೂ ಕಪ್ಪುಬಣ್ಣದವು.

೭. ಕನ್ಯಾರಾಶಿಯಲ್ಲಿರಲು ಗದ್ದವು ಅಗಲವಾಗಿದ್ದರೂ ಉದ್ದ ಕಡಿಮೆ. ಕೆಳದುಟಿಯ ಬಣ್ಣ ಕಪ್ಪಿದ್ದು ಅದು ದಪ್ಪವಾಗಿರುತ್ತದೆ.

೮. ವೃಶ್ಚಿಕರಾಶಿಯಲ್ಲಿದ್ದರೆ ಗದ್ದವು ಮೇಲಿನಂತೆ(ಕನ್ಯಾರಾಶಿ). ಕೆಳತುಟಿಯು ಸಣ್ಣದು. ಇವುಗಳ ವರ್ಣವು ಮಾತ್ರಕೆಂಪು.

೯. ಧನುರಾಶಿಯಲ್ಲಿದ್ದರೆ ಗದ್ದವು ಅಗಲು ಕಡಿಮೆಯಾಗಿದ್ದರೂ ಉದ್ದವಾಗಿದ್ದು ಮುಂದೆ ಬಂದಂತಿರುತ್ತದೆ. ಇವುಗಳ ವರ್ಣವು ಬಿಳಿಗಪ್ಪು.

೧೦. ಮಕರರಾಶಿಯಲ್ಲಿದ್ದರೆ ಗದ್ದವು ಚಪ್ಪಟೆಯಾಗಿದ್ದು ಇದರ ಮತ್ತು ಕೆಳದುಟಿಯು ನಡುವೆ ತಗ್ಗಿರುತ್ತದೆ. ಇವುಗಳ ವರ್ಣವು ಬಿಳಿಗಪ್ಪು.

೧೧. ಕುಂಭರಾಶಿಯಲ್ಲಿದ್ದರೆ ಕೆಳದುಟಿಯು ಸಣ್ಣದು. ಗದ್ದ ಉದ್ದ ಕಡಿಮೆಯಿದ್ದು ಅಗಲು ಹೆಚ್ಚಾಗಿದ್ದು ಕಮಾನಿನ ಆಕ್ಕ ಯಂತಿರುತ್ತದೆ. ಇವುಗಳ ವರ್ಣ ಬಿಳುಪು.

೧೨. ಮೀನರಾಶಿಯಲ್ಲಿದ್ದರೆ ಕೆಳದುಟಿಯು ದಪ್ಪವಾಗಿದ್ದು ಇದರ ಮತ್ತು ಗದ್ದದ ನಡುವೆ ತಗ್ಗಿರುತ್ತದೆ. ಗದ್ದದ ಉದ್ದ ಹೆಚ್ಚಾಗಿಯೂ ಅಗಲು ಕಡಿಮೆಯಾಗಿಯೂ ಇರುತ್ತದೆ.

---

## ನಗೆಯ ನವಿಲು

೧

ನಾರೀ ನಿನ್ನ ಮಾರೀ ಮ್ಯಾಗ
ನಗೀ ನವಿಲು ಆಡತಿತ್ತ
ಆಡತಿತ್ತ
ಓಡತಿತ್ತ
ಮುಗಿಲ ಕಡೆಗೆ ನೋಡತಿತ್ತ !

೨

ಮಿನಮಿನ ಮಿಂಚತಿತ್ತ
ಮೂಡತಿತ್ತ ಮುಳುಗತಿತ್ತ
ಮುಳುಗತಿತ್ತ
ತೊಳಗತಿತ್ತ
ನೆಲಾ ಜಲಾ ಬೆಳಗತಿತ್ತ !!

೩

ಕಣ್ಣಿನ್ಯಾಗ ಬಣ್ಣದ ನೋಟ
ತಕತಕ ಕುಣಿದಾಡತಿತ್ತ
ಕುಣೀತಿತ್ತ
ಮಣೀತಿತ್ತ
ಒನಪಿಲೆ ಒನಿದಾಡತಿತ್ತ !!!

೪

ಮನದ ಮಾಮರದ ಕೊನಿಗೆ
ಕೋಕಿಲೊಂದು ಕೂಡತಿತ್ತ
ಕೂಡತಿತ್ತ
ಹಾಡಬಿಟ್ಟು
ಬರೇ ನಿನ್ನ ನೋಡತಿತ್ತ !

೫

ಒಂದು ಜೀವ ನೊಂದುಕೊಂಡು
ಹಗಲಿರುಳೂ ಮಿಡುಕಾಡತಿತ್ತ
ಮಿಡುಕತಿತ್ತ
ತೊಡಕತಿತ್ತ
ಏನೊ ಒಂದ ಹುಡುಕತಿತ್ತ !!

೬

ಕಣ್ಣೀರಿನ ಮಳೆಯು ಕೂಡ
ತನ್ನ ದುಃಖ ತೋಡತಿತ್ತ
ತೋಡತಿತ್ತ
ಬೇಡತಿತ್ತ
ದೊರಕದಕ್ಕ ಬಾಡತಿತ್ತ !!!

— ಅಂಬಿಕಾತನಯದತ್ತ

---

# ರಾತ್ರಿ

ಕವಿ— 'ಮಂಗನ ಶಿಕ್ಷಣ' ಬರೆದ ರಾಮದಾಸ.

ರೂಪಸೌಂದರ್ಯವನೆ ಕಂಡುಷೆಯಂತೆ ಪಶ್ಚಿಮಗೌರಿಯ ।
ಆ । ಲಾಪ ಸಂಗದೊಳಿರಲು ಮಿತ್ರನೆ ನುಂಗಿತಾಗಳೆ ಕಾಂತಿಯ ॥ ೧ ॥
ಮುಂದೆ ಜನಿಸಿದ ತಮವು ಕೂಡಲೆ ಬಳೆದು ಪ್ರಬಲವದಾಯಿತು ॥
ಗಿ । ಕಂದರಾಂಬುಧಿಗಗನದೊಳಗೂ ತನ್ನ ಧ್ವಜವನು ನಿಲಿಸಿತು ॥ ೨ ॥
ಲೋಕಶಿಕ್ಷಣಕಾರ್ಯಕದರಿಂದೊಡನೆಯೇ ತಡೆ ಬಂದಿತು ।
ಜಗ । ದೇಕವೀರರ ಕಯ್ಯೊಳಿಹ ಶಸ್ತ್ರಾಸ್ತ್ರ ಕೆಳಗಿಡಲಾಯಿತು ॥ ೩ ॥
ಅಂಗಡಿಯ ಕದ ಇಕ್ಕಿದವು ಕಯ್ಗೆಲಸ ಅನಿತಕೆ ನಿಂತವು ।
ಕುಲ । ಲಿಂಗವಯಗಳ ಏನನೆಣಿಸದೆ ಎಲ್ಲರನು ಪೊಡಮಡಿಸಿತು ॥ ೪ ॥
ಕಣ್ಣು ಇದ್ದೂ ಕಾಣದಾಯಿತು ಅರಿವು ತಾ ಮರೆಯಾಯಿತು ॥
ಮನೆ । ವೆಣ್ಣನನ್ಯರು ಒಯ್ದರೂ ಜನಪದವು ಏಳದೊಲಾಯಿತು ॥ ೫ ॥
ಉಲಿವು ಎಲ್ಲವು ನಿಂತಿತು ।
ನಗೆ । ನಲಿವು ಅಲ್ಲಿಯೆ ಇಂಗಿತು ॥
ಮಂ । ಗಲವು ಮಸಣವ ಗೂಡಿತು ।
ನೆಲದೆ ನಾವ್ ಜೀವಿಗಳು ಎನಿಸಲು ಉಸಿರುಮಾತ್ರವೆ ಉಳಿಯಿತು ॥ ೬ ॥
ಈ ತಮಸ್ಸಿನ ಕಾಲದೊಳು ದೋಷಾಕರವೆ ಮಿಗೆ ಹೊಳೆಯಿತು ॥
ಕುಲ । ಘಾತಮಾಡುವ ಚೋರ–ಜಾರರಿಗೆಲ್ಲಿಯೂ ಅನುವಾಯಿತು ॥ ೭ ॥
ಹಗಲೊಳೆಂದೂ ತೋರೆತೋರದ ತಾರೆ ಬಲು ಮೇಲೇರಿತು ॥
"ಮೂ । ಜಗದೆ ಶಾಂತಿಯ ರಾಜ್ಯ ಇದುವೇ" ಎಂದು ಗೂಗೆಯು ಕೂಗಿತು ॥ ೮ ॥
ಕಾಡುಜಾತಿಯು ಅಂದು ಕಣ್ದೆರೆದೆದ್ದು ಮುಂದಕೆ ಬಂದಿತು ।
ಈ । ನಾಡಿನೊಳು ಎನಗಾರು ಸರಿ ಇಲ್ಲೆಂದು ಗುಡುಗನು ಹೊಡೆಯಿತು ॥ ೯ ॥
ಹಳೆಯ ನಡತೆಯು ಈಗ ತರವಲ್ಲೆಂದು ಬಾವುಲಿ ನುಡಿಯಿತು ॥
ತಲೆ । ಕೆಳಗೆ ಕಾಲ್ಮೇಲಿರಿಸುವದೆ ಹೊಸತರದ ಚಂದವಿದೆಂದಿತು ॥ ೧೦ ॥
ತಗಣೆಯಂತಹ ಕ್ಷುದ್ರಜೀವಿಯು ಭಟರ ನೆತ್ತರ ಹೀರಿತು ।
ಬಗೆ । ಬಗೆಯ ರೂಪದೆ ರಾತ್ರಿಚರಕುಲ ಧರೆಯೊಳುರೆ ಮೆರೆದಾಡಿತು ॥ ೧೧ ॥
ಸುಮನ ತೋರದೆ ಹೋಯಿತು ।
ಅರಿ । ದಮನ ಇಂದಿಗೆ ಮುಗಿಯಿತು ।
ಇ । ನ್ನೆಮಗೆ ಧ್ರುವಪದ ದೊರೆಯಿತು ।
"ಅಮಮ । ಎನಿತಿದು ತಮದ ಮಹಿಮೆಯೊ" ಎನುತೆ ರಾತ್ರಿಯು ನಕ್ಕಿತು ॥ ೧೨ ॥

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

(ಕಾದಂಬರಿಯ ಕನ್ನಡ ಅನುವಾದವು)

ಅನುವಾದಕರು:— ಶ್ರೀ. ಕೃ. ಶ್ರೀ. ಜಿಟಗೇರಿ, ಬೆಂಗಳೂರು

## ೧೩ನೆಯ ಪರಿಚ್ಛೇದ

ಮಂದಿರದಲ್ಲಿ ಹಲವು ಜನರು ಗುಂಪುಗೂಡಿರುವರು. ತುಂಬಾ ಗುಲ್ಲುಗಲಾಟೆ ನಡೆದದೆ. ರಘುಪತಿಯು ಒಣಗಿದ ಧನಿಯಿಂದ ಕೇಳಿದನು. "ನೀವೆಲ್ಲರೂ ಏನು ಮಾಡುವದಕ್ಕೆ ಬಂದಿರುವಿರಿ?"

ಅಲ್ಲಿ ಹಲವು ಕಂಠಗಳಿಂದ ಕೂಗೆದ್ದಿತು "ನಾವೆಲ್ಲರೂ ಅಮ್ಮನ ದರ್ಶನಕ್ಕಾಗಿ ಬಂದಿರುವೆವು."

ರಘುಪತಿಯು ಹೇಳಲು ತೊಡಗಿದನು, "ಎಲ್ಲಿರುವಳು ಅಮ್ಮ! ಅಮ್ಮನು ಈ ರಾಜ್ಯವನ್ನು ಬಿಟ್ಟು ಹೊರಟುಹೋಗಿರುವಳು. ಅಮ್ಮನನ್ನು ಇರಿಸಿಕೊಂಡಿರುವದಕ್ಕೆ ನಿಮ್ಮಲ್ಲಿ ಸಾಮರ್ಥ್ಯವುಂಟೇನು? ಇಲ್ಲವೆಂತಲೇ ಅವಳು ಹೊರಟು ಹೋಗಿರುವಳು." ತುಂಬಾ ಗದ್ದಲವೆದ್ದಿತು. ಹಲವು ಕಡೆಗಳಿಂದ ಹಲವು ಬಗೆಯ ಮಾತುಗಳು ಕೇಳಬರಲು ತೊಡಗಿದವು.

"ಅದೇತಕ್ಕಾಗಿ ಸ್ವಾಮಿ!"

"ನಾವೇನು ತಪ್ಪುಮಾಡಿದ್ದೇವೆ, ಸ್ವಾಮಿ!"

"ಅಮ್ಮನು ಕೊಂಚವೂ ಪ್ರಸನ್ನಳಾಗುವದಿಲ್ಲವೇ?"

"ನಮ್ಮಣ್ಣನ ಮಗನಿಗೆ ರೋಗ ಬಂದುದರಿಂದ ಇಷ್ಟು ದಿನಗಳವರೆಗೂ ನನ್ನಿಂದ ಮುಡಿಪು ಸಲ್ಲಿಸುವುದಾಗಲಿಲ್ಲ."— 'ತನ್ನ ಉಪೇಕ್ಷೆಯಿಂದಲೇ ಅಮ್ಮನು ಕೋಪಗೊಂಡು ದೇಶ ಬಿಟ್ಟು ಹೋಗಿರುವಳು' ಎಂದವನ ಬಲವಾದ ನಂಬಿಗೆ.

"ನನ್ನ ಎರಡು ಎಳೆಗರುಗಳನ್ನು ಅಮ್ಮನ ಪಾದಕ್ಕೆ ಕೊಡಬೇಕೆಂದು ಅದೆಷ್ಟೋ ದಿನಗಳಿಂದ ಮನಸ್ಸಿನಲ್ಲಿ ಮಾಡಿಕೊಂಡಿದ್ದೆ. ಆದರೆ ತುಂಬಾ ದೂರವಾದುದರಿಂದ ಬರುವದಕ್ಕೆ ಆಗಲಿಲ್ಲ."— 'ತನ್ನ ಕರುಗಳೆರಡನ್ನು ಕೊಡಲು ತಡೆಯಾದುದರಿಂದ ರಾಜ್ಯಕ್ಕೆ ಈ ಬಗೆಯಾಗಿ ಅಮಂಗಲವುಂಟಾಯಿತಲ್ಲಾ!' ಎಂದು ಬಗೆದು ಮರುಗುತ್ತಿದ್ದನವನು.

"ಗೋವರ್ಧನ— ಅಮ್ಮನಿಗೆ ಹರಕೆಸಲ್ಲಿಸುವೆನೆಂದು ... ಕೊಂಡಿದ್ದನೆಂತೆ; ಆದರೆ ಇದುವರೆಗೂ ಇದರ ಸುದ್ದಿಯ... ಎತ್ತಿಲ್ಲ. ಅಮ್ಮನಾದರೂ ಅವನಿಗೆ ಚೆನ್ನಾದ ಶಿಕ್ಷೆಯನ್ನು ... ಟ್ಟಿರುವಳು. ಅವನ ಕುರಿಮರಿಗಳಿಗೆ ಕೆಮ್ಮಲುರೋಗ ... ಬಿಟ್ಟಿದೆ. ಅವನೋ, ಈಗ ಆರುತಿಂಗಳಾಯಿತು ಹಾಸಿ... ಸಿಗೆ ತೆಗೆದಿಲ್ಲ. ಹಾಗೆಯೇ ಬಿದ್ದುಕೊಂಡಿದ್ದಾನೆ."—'ಗೋ... ರ್ಧನನು ತನ್ನ ಅಡ್ಡಗೈ ಬೇನೆಯನ್ನು ತೆಗೆದುಕೊಂಡು ... ಗೂಡಿ ಹಾಳಾಗಿ ಹೋಗಲಿ! ಅಮ್ಮನು ದೇಶದಲ್ಲಿಯೇ ... ಎಂದು ಅವನು ಮನಸ್ಸಿನಲ್ಲಿಯೇ ಬೇಡಿಕೊಂಡನು. ಎಲ್ಲ... ರೂ ಪಾಪ! ಗೋವರ್ಧನನ ಹೊಟ್ಟೆಯ ಗಂಟು ಬಳೆದು ... ಲೆಂದು ಬಿನ್ನವಿಸಲು ತೊಡಗಿದರು.

ಗುಂಪಿನಲ್ಲಿ ಒಬ್ಬ ಎತ್ತರನಾದ ಪುಷ್ಟನಾದ ... ನಿದ್ದನು. ಅವನು ಎಲ್ಲರನ್ನೂ ಹೆದರಿಸಿ ಸುಮ್ಮನಿರಿಸಿ... ಹಾಗೆಯೇ ತನ್ನ ಎರಡೂ ಕೈಗಳನ್ನು ಮುಗಿದು ಎತ್ತಿ ... ಪತಿಗೆ ಕೇಳಿದನು. "ಸ್ವಾಮಿ! ಅಮ್ಮ ಅದೇತಕ್ಕಾಗಿ ಹೊ... ಹೋದಳು? ನಾವು ಅವಳಲ್ಲಿ ಮಾಡಿದ ಅಪರಾಧಗಳಾ... ಏನು?"

ರಘುಪತಿಯೆಂದನು "ನೀವು ಅಮ್ಮನಿಗಾಗಿ ಒಂದೇ ... ಹನಿ ನೆತ್ತರವನ್ನಾದರೂ ಕೊಡಬಲ್ಲಿರಾ? ಇದೇ ಅಲ್ಲವೇ ... ಭಕ್ತಿಯು!"

ಎಲ್ಲರೂ ಸುಮ್ಮನಿದ್ದುಬಿಟ್ಟರು. ಬಳಿಕ ಒಂದೊಂದೇ ... ಗಳು ಹೊರ ಹೊರಡತೊಡಗಿದವು. ಕೆಲಕೆಲವರು ...

ಯಲ್ಲಿಯೆ ಮಾತನಾಡಲು ತೊಡಗಿದರು. "ದೊರೆಯು ಬೇಡ ವೆಂದಿದ್ದಾನೆ. ನಾವೇನು ಮಾಡೋಣ!"

ಜಯಸಿಂಹನು ಕಲ್ಲಿನ ಬೊಂಬೆಯಂತೆ ಅಲ್ಲಾಡದೆ ಕುಳಿತಿದ್ದನು. "ಅಮ್ಮನೇ ಬೇಡವೆಂದಿದ್ದಾಳೆ" ಎಂಬ ನುಡಿಯು ಆತನ ನಾಲಗೆಯ ತುದಿಯ ಮೇಲೆ ಮಿಂಚಿನಂತೆ ಮೂಡಿತು. ಆದರೆ ಅದನ್ನವನು ಬಿಗಿಹಿಡಿದನು. ಒಂದು ಮಾತನ್ನೂ ಆಡಲಿಲ್ಲ.

ರಘುಪತಿಯು ತೀಕ್ಷ್ಣವಾದ ಸ್ವರದಲ್ಲಿ ಮಾತನಾಡಿದನು. "ರಾಜನು ಯಾರು? ಅಮ್ಮನ ಸಿಂಹಾಸನವು ದೊರೆಯ ಸಿಂಹಾಸನದ ಅಡಿಯಲ್ಲಿರಬೇಕೇನು? ಹಾಗಾದರೆ ನೀವೆಲ್ಲರೂ ಈ ಮಾತೃಹೀನವಾದ ದೇಶದಲ್ಲಿ ನಿಮ್ಮ ದೊರೆಯನ್ನು ಕಟ್ಟಿಕೊಂಡು ಇದ್ದುಬಿಡಿ. ನಿಮ್ಮನ್ನು ಅದಾರು ಕಾಪಾಡುವರೆಂಬದನ್ನು ನೋಡಿಯಾದರೂ ನೋಡುವ!"

ಜನರ ಗುಂಪಿನಲ್ಲಿ "ಗುಣುಗುಣು" "ಗುಜುಗುಜು" "ಪಿಸುಪಿಸು" ಮಾತುಗಳು ಕೇಳಿಸಿದವು. ಎಲ್ಲರೂ ಸಾವಧಾನದಿಂದ ಮಾತನಾಡಲು ತೊಡಗಿದರು.

ರಘುಪತಿಯು ಎದ್ದುನಿಂತು ನುಡಿದನು. "ದೊರೆಯನ್ನೆ ದೊಡ್ಡವನನ್ನಾಗಿ ಮಾಡಿಕೊಂಡು ನಿಮ್ಮ ತಾಯಿಯನ್ನು ಅವಮಾನಗೊಳಿಸಿ ನೀವಾಗಿಯೇ ಹೊರಕ್ಕೆ ಹೊರಡಿಸಿದ್ದೀರಿ. ಇದರಿಂದ ನಿಮಗೆ ಒಳ್ಳೆಯದಾಗುವದೆಂದು ಬಗೆದಿರುವಿರೇನು? ಇನ್ನು ಮೂರು ವರುಷಗಳಲ್ಲಿಯೆ ಈ ಇಷ್ಟು ದೊಡ್ಡ ರಾಜ್ಯದಲ್ಲಿ ಒಂದು ಪಿಳ್ಳೆಯಾದರೂ ಉಳಿದರೆ ಕೇಳಿ. ನಿಮ್ಮೆಲ್ಲರ ದೀಪಕ್ಕೆ ದಿಕ್ಕಿಲ್ಲದಂತಾಗಿ ಹೋಗುವದು."

ಗುಂಪಿನಲ್ಲಿ ಕಡಲ ಕಲಕಲಾಟವು ಕ್ರಮವಾಗಿ ಬಳೆದು, ಹರಡಲು ತೊಡಗಿತು. ಜನರ ಗುಂಪಾದರೂ ಕ್ರಮವಾಗಿ ಬಳೆಯುತ್ತಲೆ ಇದ್ದಿತು. ಆ ಜನರೆಲ್ಲರೂ ಕೈಮುಗಿದುಕೊಂಡು ರಘುಪತಿಗೆ ಬಿನ್ನವಿಸಿದರು. "ಮಕ್ಕಳು ತಪ್ಪುಮಾಡಿದರೆ ತಾಯಿಯಾದವಳು ಅವರನ್ನು ಶಿಕ್ಷಿಸಬೇಕು; ಆದರೆ ತಟ್ಟನೆ ಮಕ್ಕಳನ್ನೆಲ್ಲ ಬಿಟ್ಟು ಹೊರಟುಹೋಗುವುದಿದು ಎಲ್ಲಿಯಾದರೂ ಉಂಟೇ? ಪ್ರಭುವೆ! ಹೇಳಿ! ಅಮ್ಮನು ಮರಳಿ ಬರುವುದಕ್ಕೆ ನಾವೇನು ಮಾಡಬೇಕು? ಹೇಳಿಬಿಡಿ!"

ರಘುಪತಿಯು ಹೇಳಿದನು: "ನಿಮ್ಮ ದೊರೆಯು ಈ ರಾಜ್ಯವನ್ನು ಬಿಟ್ಟು ಹೋದದಿನವೇ ಅಮ್ಮನು ಇಲ್ಲಿಗೆ ಮರಳಿ ಅಡಿಯಿಡುವಳು. ಅದುವರೆಗೆ ಬರುವುದಕ್ಕೆ ಸಾಧ್ಯವೇ ಇಲ್ಲ."

ಇದನ್ನು ಕೇಳಿದೊಡನೆಯೆ ಜನತೆಯ ಗುಣುಗುಣಾಟವೆಲ್ಲವೂ ಒಮ್ಮೆಲೆ ನಿಂತುಹೋಯಿತು. ಎಲ್ಲೆಲ್ಲಿಯೂ ಗಂಭೀರವಾದ ನಿಃಶಬ್ದತೆಯು ತಾನೆ ತಾನಾಯಿತು. ಬಳಿಕ ಒಬ್ಬರು ಇನ್ನೊಬ್ಬರ ಮುಖದಕಡೆಗೆ ನೋಡಲು ತೊಡಗಿದರು. ಮಾತನಾಡುವ ಧೈರ್ಯವು ಯಾರಿಗೂ ಇಲ್ಲ.

ರಘುಪತಿಯು ಗುಡುಗಿನಂತಿರುವ ಧ್ವನಿಯಿಂದ ಹೇಳಿದನು. "ಬೇಕಾದರೆ ನಿಮಗೆ ತೋರಿಸುವೆನು. ಬನ್ನಿ! ನನ್ನ ಜೊತೆಯಲ್ಲಿ ಬನ್ನಿ! ಅದೆಷ್ಟೋ ದೂರದಿಂದ-ಅದೆಷ್ಟೋ ಆಶೆಪಟ್ಟುಕೊಂಡು—ನೀವೆಲ್ಲರು ಅಮ್ಮನನ್ನು ಕಾಣಲು ಬಂದಿರುವಿರಿ. ನಡೆಯಿರಿ; ಒಂದುಸಲ ಮಂದಿರದೊಳಕ್ಕೆ ನಡೆಯಿರಿ!"

ಎಲ್ಲರೂ ಮಂದಿರದ ಅಂಗಳದೊಳಕ್ಕೆ ಬಂದು ಸೇರಿದರು. ಮಂದಿರದ ಬಾಗಿಲು ಇಕ್ಕಿದ್ದಿತು. ನಿದಾನವಾಗಿ ರಘುಪತಿಯು ಕದಗಳನ್ನು ತೆರೆದನು.

ಕೆಲವುಹೊತ್ತು ಮಾತನಾಡಬೇಕೆಂಬ ಬಯಕೆಯು ಯಾರಿಗೂ ಉಂಟಾಗಲಿಲ್ಲ. ನೋಡುವವರಿಗೆ ಮೂರ್ತಿಯ ಮುಖವೇ ಕಂಡುಬರುತ್ತಿರಲಿಲ್ಲ; ಮೂರ್ತಿಯ ಬೆನ್ನಕಡೆಯ ಭಾಗವು ಕಾಣುತ್ತಿದ್ದಿತು.— ತಾಯಿಯು ಮುಖವನ್ನು ತಿರುಗಿಸಿರುವಳು! ಕೂಡಲೆ ನೆರವಿಯೊಳಗಿಂದ ಮರುಕದ ಧ್ವನಿಗಳು ಹೊರಡಲು ತೊಡಗಿದುವು. "ಅಮ್ಮಾ ಒಮ್ಮೆಯಾದರೂ ತಿರುಗಿ ನಿಲ್ಲಮ್ಮಾ! ನಾವೇನು ತಪ್ಪು ಮಾಡಿರುವೆವಮ್ಮಾ!" ಎಲ್ಲೆಡೆಯಲ್ಲಿಯೂ "ಎಲ್ಲಿ ಅಮ್ಮ? ಅಮ್ಮ ಎಲ್ಲಿ?" ಎಂಬ ಶಬ್ದವು ಎದ್ದಿತು. ಕಲ್ಲಿನ ಮೂರ್ತಿಯದು; ತಿರುಗಿ ನಿಲ್ಲುವುದು ಹೇಗೆ? ಹಲವು ಜನರಿಗೆ ಎಚ್ಚರು ತಪ್ಪಿತು. ಚಿಕ್ಕಮಕ್ಕಳು ಯಾವುದನ್ನೂ ತಿಳಿಯದೆ ಅಳಲು ತೊಡಗಿದರು. ಮುಪ್ಪಿನ ಮುದುಕರು ತಾಯನ್ನು ಕಳೆದುಕೊಂಡ ಹಸುಳೆಗಳಂತೆ ಕೂಗಿಕೊಳ್ಳಲು ತೊಡಗಿದರು. "ಅಮ್ಮಾ ನಮ್ಮಮ್ಮಾ!" ಹೆಣ್ಣುಮಕ್ಕಳ ಮೊಗದೆರೆಗಳು ತೆರೆದುಬಿಟ್ಟವು. ಮೇಲುಡುಗಳು ಒಸರಿಸಿ ಬಿದ್ದುವು. ಅವರೆಲ್ಲರೂ ಎದೆ ಎದೆ ಬಡಿದುಕೊಳ್ಳತೊಡಗಿದರು. ತರುಣರನೇಕರು ನಡುಗುತ್ತಿರುವ ಮೇಲುದನಿಯಲ್ಲಿ ಕೂಗಲು ತೊಡಗಿದರು. "ಅಮ್ಮಾ ನಾವು ನಿನ್ನನ್ನು ಮರಳಿ ಹಿಡಿದು ತರುವೆವು. ನಿನ್ನನ್ನು ಹೋಗಗೊಡೆವು. ನಿನ್ನನ್ನು ಬಿಟ್ಟಿರಲಾರೆವು" ಒಬ್ಬ ಹುಚ್ಚನು ಹಾಡಲಾರಂಭಿಸಿದನು.

"ಕಲ್ಲಿನ ಮಗಳೇ ನಮ್ಮಮ್ಮಾ! ನಮ್ಮಮ್ಮಾ!

ನಿಲ್ಲದೆ ಮುಖವನು ತೋರಮ್ಮಾ! ನೋಡಮ್ಮಾ!"

ರಾಜ್ಯಕ್ಕೆ ರಾಜ್ಯವೇ ಬಂದು ಮಂದಿರದ ಬಾಗಿಲಲ್ಲಿ ನಿಂತು, "ಅಮ್ಮಾ! ಅಮ್ಮಾ!" ಎಂದು ಮೊರೆಯಿಟ್ಟಿರುವುದೇನೋ ಎಂಬಂತಿದ್ದಿತಾ ನೋಟ. ಆದರೂ ಮೂರ್ತಿಯೇನೂ ತಿರುಗ ಲಿಲ್ಲ. ನಡುವಗಲ ನೇಸರು ಬಿಸಿಲನ್ನು ಎಲ್ಲೆಲ್ಲಿಯೂ ಎರಚ ತೊಡಗಿದನು.- ಅಂಗಳದಲ್ಲಿ ನಡೆದಿದ್ದ ಜನತೆಯ ವಿಲಾಪಕ್ಕೆ ಕೊನೆಯೇ ಇಲ್ಲ.

ಆಗ ಜಯಸಿಂಹನು ಬೆದರುತ್ತ ಬೆಚ್ಚುತ್ತ ಅಲ್ಲಿಗೆ ಬಂದು ರಘುಪತಿಯನ್ನು ಕೇಳಿದನು. "ತಂದೆಯೆ! ನಾನೀಗ ಯಾವ ಮಾತನ್ನೂ ಆಡಲಾಗದೇ?"

ರಘುಪತಿಯೆಂದನು. "ಆಗದು, ಒಂದು ಮಾತನ್ನೂ ಆಡ ಕೂಡದು."

ಜಯಸಿಂಹನೆಂದನು. "ಈಗ ನಡೆದುದರಲ್ಲಿ ಸಂಶಯಕ್ಕೆ ಕಾರಣವೇನೂ ಇಲ್ಲವಷ್ಟೇ?" ರಘುಪತಿಯು ದೃಢಸ್ವರದಿಂದ ಹೇಳಿದನು. "ಇಲ್ಲ, ಏನೂ ಇಲ್ಲ."

ಜಯಸಿಂಹನು ಮುಟ್ಟಿಗೆಯನ್ನು ಬಿಗಿಯಾಗಿ ಹಿಡಿದು ಕೇಳಿ ದನು. "ಎಲ್ಲವನ್ನೂ ನಂಬಬೇಕೇನು?"

ರಘುಪತಿಯು ತನ್ನ ಕೆಂಪಡರಿದ ಕಣ್ಣುಗಳಿಂದ ಜಯಸಿಂಹ ನನ್ನು ದುರದುರನೆ ನೋಡುತ್ತ ನುಡಿದನು. "ಅಹುದು!"

ಜಯಸಿಂಹನು ಎದೆಯಮೇಲೆ ಮುಟ್ಟಿಗೆಯಿಂದ ಹೊಡೆದು ಕೊಂಡು ಹೇಳಿದನು. "ನನ್ನ ಎದೆಯು ಬಿರಿದು ಹೋಗುತ್ತ ಲಿದೆ." ಅವನು ನೆರೆದ ನೆರವಿಯನ್ನು ಬಿಟ್ಟು ಹೊರಕ್ಕೆ ಹೊರಟು ನಡೆದನು.

---

## ೧೪ನೆಯ ಪರಿಚ್ಛೇದ

ಮರುದಿನವೆ ಆಷಾಢ ಬಹುಳ ಚತುರ್ದಶಿಯು; ಇಂದಿನ ಇರುಳು ಚತುರ್ದಶ ದೇವತೆಯರ ಪೂಜೆಯು; ಇಂದು ಬೆಳಗಿನ ಸಮಯದಲ್ಲಿ ಕದಂಬವನದ ಮರೆಯೊಳಗಿಂದ ಸೂರ್ಯನು ಹೊರಕ್ಕೆ ಬಂದಾಗ ಮೂಡಣದ ಬಾನೆಡೆಯಲ್ಲಿ ಮೋಡಗಳಿರ ಲಿಲ್ಲ. ಹೊಂಬಣ್ಣದ ಕಿರಣಗಳು ಹರಡಿಕೊಂಡು, ವನವನ್ನು ಆನಂದದ ಅರಮನೆಯನ್ನಾಗಿ ಮಾಡಿಬಿಟ್ಟಿದ್ದುವು. ಜಯಸಿಂ ಹನು ವನದೊಳಕ್ಕೆ ಬಂದು ಒಂದೆಡೆಯಲ್ಲಿ ಕುಳಿತುಕೊಂಡನು. ಒಡನೆಯೆ ಅವನ ಮನದೆದುರಿನಲ್ಲಿ ಹಿಂದೆ ನಡೆದುಹೋದ ಹಲವು ಸಂಗತಿಗಳ ಹಳಸಂಡಗಳು ಬಂದು ನಿಲ್ಲಲು ತೊಡಗಿ ದುವು. ಇದೇ ವನದಲ್ಲಿ-ಇದೇ ಕಲ್ಲು ಕಟ್ಟಡದ ಮಂದಿರದ ಮೆಟ್ಟಿಲುಗಟ್ಟೆಯಲ್ಲಿ ಇದೆ ಗೋಮತೀನದಿಯ ತಡಿಯಲ್ಲಿ- ಆ ಆಲದಮರದ ತಣ್ಣೆಳಲಲ್ಲಿ-ಆ ತುಂಬು ನೆಳಲಿನಿಂದ ಟ್ಟ ಕೊಂಡಿರುವ ಗುಡಿಸಿಲಿನ ಬಳಿಯಲ್ಲಿ, ತನ್ನ ಎಳೆಯತನವನ್ನು ಕಳೆದುದು, ಜಯಸಿಂಹನ ಮನಸಿನ ಪಟದ ಮೇಲೆ ಇಸ ಕನಸಿನಂತೆ ಮೂಡಲು ತೊಡಗಿತು. ಅಂದಿನ ಚಿಕ್ಕತನದ ಯಿಂದ ಮುಚ್ಚಿ ಮುಸುಕಿದ ಸವಿಯಾದ-ಅಂದವಾದ ವೃತ್ತ ಗಳೆಲ್ಲವೂ ಇಂದು ಜಯಸಿಂಹನನ್ನು ಮರಳಿ ಮರಳಿ ನೆನಪಿ ಲಿದ್ದುವು; ಕೂಗಿ ಕೂಗಿ ಕರೆಯುತ್ತಲಿದ್ದುವು. ಆಗ ಜಯ ಸಿಂಹನ ಮನವು:—"ನಾನಿಂದು ಪ್ರವಾಸಕ್ಕೆಂದು ಹೊರಟಿರುವೆನು. ಅಪ್ಪಣೆಯನ್ನು ಪಡೆದುಕೊಂಡಿರುವೆ ನಾನಿನ್ನು ಮರಳಿ ಬಾರೆನು." ಎಂದು ಎನ್ನುತ್ತಿದ್ದಿತು.

ಬಿಳಿಯಬಣ್ಣದ ಹಾಲುಗಲ್ಲುಗಳಿಂದ ಕಟ್ಟಿದ ಮಂ ಮೇಲೆಲ್ಲವೂ ಸೂರ್ಯನ ಕಿರಣಗಳು ಹರಡಿಕೊಂಡಿವೆ. ಮಂ ರದ ಎಡಗಡೆಯ ಗೋಡೆಯಲ್ಲಿ ಬಕುಲವೃಕ್ಷದ ಕೊಂಬೆ ಒಲೆದಾಡುತಿರುವುದರ ನೆಳಲು ನಲಿಯುತ್ತಲಿದೆ. ಎಳೆಯತನದಲ್ಲಿ ತೋರುತಿದ್ದಂತೆಯೇ ಇಂದು ಕೂಡ ಆ ಕಟ್ಟಡವು ಜಯಸಿಂಹನ ಕಣ್ಣುಗಳಿಗೆ ಸೂರ್ಯಕಿರಣ ಸಚೇತನವಾಗಿ ಕಂಡಿತು. ಅಂದು ಮೆಟ್ಟಿಲುಗಟ್ಟೆಯ ಕುಳಿತುಕೊಂಡು ಆಡುತಿದ್ದಾಗ ಜಯಸಿಂಹನು ಆ ಮೆಟ್ಟಲುಗಳಲ್ಲಿಯೂ ಕೆಳೆಯನ್ನು ಕಾಣುತ್ತಿದ್ದನು. ಈಗ ಆ ಮೆಟ್ಟಲುಗಳನ್ನು ಅಂದಿನ ಎಳೆಯ ತನದ ಕೆಳೆನೋಟ ನೋಡಲು ತೊಡಗಿದನು. ಮಂದಿರದಲ್ಲಿರುವ ದೇವಿಗೆ ಮತ್ತೆ "ಅಮ್ಮಾ" ಎಂದು ಎನಬೇಕೆಂದು ಮನಸ್ಸಾಯಿತು ಆದರೆ ಅಭಿಮಾನವು ಆತನೆದೆಯಲ್ಲಿ ತುಂಬಿ ಹೊರಹೊಮ್ಮಿ ಎರಡು ಕಣ್ಣುಗಳಿಂದಲೂ ಕಂಬನಿಗಳು ಇಳಿಯತೊಡಗಿದುವು.

ಜಯಸಿಂಹನು ರಘುಪತಿಯು ಬರುತಿರುವುದನ್ನು ನೋಡಿ ದನು. ಕಂಬನಿಗಳನ್ನು ಮಿಡಿದುಕೊಂಡನು. ಗುರುವಿನ ಅ ಗಳಿಗೆರಗಿ ನಿಂತುಕೊಂಡನು. ರಘುಪತಿಯು ಮಾತನಾಡಿದನು "ಇಂದೇ ಪೂಜೆಯ ದಿನವು. ಅಮ್ಮನ ಅಡಿಗಳನ್ನು ಹಿಡಿದು ಆಣೆಮಾಡಿದುದು ಏತಕ್ಕಾಗಿಯೆಂಬುದು ನೆನಪಿನಲ್ಲಿದೆಯಲ್ಲವೆ?"

ಜಯಸಿಂಹನೆಂದನು "ಅಹುದು ಇದೆ"

ರಘುಪತಿ:—"ಆಣೆಯನ್ನು ಪಾಲಿಸುವೆಯಷ್ಟೆ?"

ಜಯಸಿಂಹ:—"ಸರಿ"

ರಘುಪತಿ:—ನೋಡು, ಮಗು! ಕೆಲಸವನ್ನು ಎಚ್ಚರಿಕೆ ಯಿಂದ ಮಾಡು, ವಿಪತ್ತು ಒದಗುವ ಸಂಭವವುಂಟು.

ರಕ್ಷಣೆಯಾಗಬೇಕೆಂದೇ ನಾನು ಪ್ರಜೆಗಳೆಲ್ಲರನ್ನು ದೊರೆಗೆ ವಿರುದ್ಧವಾಗಿ ಹುರಿಗೊಳಿಸಿರುವೆನು.

ಜಯಸಿಂಹನು ಸುಮ್ಮನೆ ರಘುಪತಿಯ ಕಡೆಗೆ ನೋಡುತ್ತಿದ್ದನು ಮಾತ್ರ. ಮರುಮಾತೊಂದನ್ನೂ ನುಡಿಯಲಿಲ್ಲ. ರಘುಪತಿಯು ಅವನ ತಲೆಯಮೇಲೆ ಕೈಯನ್ನಿಟ್ಟು ಹೇಳಿದನು. "ನನ್ನ ಹರಕೆಯಿಂದ ಕೆಲಸವನ್ನು ನೀನು ಎಡರುಗಳಿಲ್ಲದೆ ಕಡೆಗಾಣಿಸಲಾಪೆ; ಅಮ್ಮನ ಆದೇಶವನ್ನು ನೆರವೇರಿಸಬಲ್ಲೆ." ಎಂದು ನುಡಿದು ಹೊರಟುಹೋದನು.

ಇಳಿಹೊತ್ತಿನ ಸಮಯ. ದೊರೆಯು ಮನೆಯಲ್ಲಿ ಒಬ್ಬನೇ ಕುಳಿತು ಕಿರಿಯ ಧ್ರುವನೊಡನೆ ಚಿಣ್ಣಾಟವಾಡುತಲಿದ್ದನು. ಧ್ರುವನ ಹೇಳಿಕೆಯಂತೆ ದೊರೆಯು ತನ್ನ ತಲೆಯ ಕಿರೀಟವನ್ನು ಒಮ್ಮೆ ತೆಗೆಯುತ್ತಿದ್ದನು; ಇನ್ನೊಮ್ಮೆ ಧರಿಸುತ್ತಿದ್ದನು. ಅದೆಷ್ಟೋ ವೇಳೆಯವರೆಗೆ ಈ ಕ್ರಮವು ಸಾಗಿದ್ದಿತು. ದೊರೆಯು ಈ ದುರ್ದಶೆಯನ್ನು ಕಂಡು ಧ್ರುವನು ಕೈತಟ್ಟಿ ನಗುತ್ತಲಿದ್ದನು. ದೊರೆಯು ನಸುನಕ್ಕು ತನ್ನಲ್ಲಿ ತಾನೇ ಎಂದುಕೊಂಡನು. "ನಾನು ಇದಾರ ಅಪ್ಪಣೆಯಿಂದ ಇಷ್ಟೊಂದು ಸುಲಭವಾಗಿ ಈ ಕಿರೀಟವನ್ನು ಧರಿಸಿಕೊಂಡೆನೋ, ಅವರ ಅಪ್ಪಣೆಯಿಂದಲೆ ಅಷ್ಟೆ ಸುಲಭವಾಗಿಯೇ ನಾನಿದನ್ನು ತೆಗೆದು ಬಿಸುಡುವೆನು; ನಾನೀಗ ಅದನ್ನೇ ಅಭ್ಯಾಸಿಸುತ್ತಿರುವೆನು. ಕಿರೀಟವನ್ನು ಧರಿಸುವುದು ಬಲ್ಲತನವೇನೋ ಸರಿ! ಆದರೆ ಅದನ್ನು ತೆಗೆದೊಗೆಯುವುದು ಅದಕ್ಕೂ ಕಠಿನವಾದುದು."

ಇದ್ದಕ್ಕಿದ್ದ ಹಾಗೆಯೇ ಧ್ರುವನ ಮನಸ್ಸಿನಲ್ಲೊಂದು ಯೋಚನೆಯು ಹೊಳೆಯಿತು. ನಸುವೇಳೆ ದೊರೆಯ ಮೊಗವನ್ನು ದಿಟ್ಟಿಸಿ ನೋಡುತಿದ್ದು ಕೈಬೆರಳನ್ನು ಮುಂದೆ ನೀಡಿ "ನೀನು ದೊಳೆ" ಎಂದು ನುಡಿದುಬಿಟ್ಟನು. ದೊರೆಯೆಂಬ ಶಬ್ದದಲ್ಲಿಯ ರಕಾರವನ್ನು ಒಮ್ಮೆಲೆ ಬೇರುವರಸಿ ಕಿತ್ತುಹಾಕಿದ್ದರೂ ಧ್ರುವನ ಮನದಲ್ಲಿ ಅನುತಾಪವೇನೂ ಉಂಟಾದಂತೆ ತೋರಲಿಲ್ಲ. ದೊರೆಯು ಎದುರಿನಲ್ಲಿಯೆ ದೊರೆಗೆ ದೊಳೆಯೆಂದು ಬಿಟ್ಟುದಕ್ಕಾಗಿ ಆ ಮಗುವಿಗೆ ಒಂದು ಬಗೆಯ ಹಿಗ್ಗು; ತಣಿವು.

ದೊರೆಯು ಧ್ರುವನ ಈ ಧೃಷ್ಟತೆಯನ್ನು ಸಹಿಸಲಾರದವನಂತೆ "ನೀನು ದೊಳೆ" ಎಂದನು.

"ನೀನು ದೊಳೆ" ಮತ್ತೆ ಧ್ರುವನೆಂದನು.

ಈ ವಾದವು ಕೊನೆಯನ್ನೇ ಕಾಣದಾಯಿತು. ಇಲ್ಲಿಯ ಎರಡು ಪಕ್ಷಗಳಲ್ಲಿ ಯಾವುದಕ್ಕೂ-[illegible]

ಣವಿಲ್ಲ. ಕೇವಲ ಮೈಬಲುಹಿನಿಂದಲೇ ವಾದ ನಡೆದಿದ್ದಿತು. ಕೊನೆಗೆ ದೊರೆಯು ತನ್ನ ಕಿರೀಟವನ್ನು ತೆಗೆದು ಧ್ರುವನ ತಲೆಯ ಮೇಲೆ ಇಟ್ಟುಬಿಟ್ಟನು. ಆಗ ಧ್ರುವನಿಗೆ ಹೆಚ್ಚು ಮಾತನಾಡಲಿಕ್ಕೆ ಎಡೆಯೇ ಉಳಿಯಲಿಲ್ಲ. ಸಂಪೂರ್ಣವಾಗಿ ಸೋತು ಹೋದನವನು. ಕಿರೀಟದಲ್ಲಿ ಧ್ರುವನ ಮುಖದ ಅರ್ಧಭಾಗವು ಕೂಡ ಮುಚ್ಚಿ ಹೋಯಿತು. ಕಿರೀಟದಿಂದ ಕೂಡಿದ ತನ್ನ ತಲೆಯನ್ನು ತೊನೆದಾಡಿಸುತ್ತ ಧ್ರುವನು, ಕಿರೀಟವಿಲ್ಲದೆ ಬರಿದಲೆಯಿಂದಿರುವ ದೊರೆಗೆ ಅಪ್ಪಣೆ ಕೊಟ್ಟನು. "ಒಂದು ಕತೆ ಏಲು" ಎಂದು.

"ಯಾವ ಕತೆಯನ್ನು ಹೇಳಲಿ?" ದೊರೆಯು ಕೇಳಿದನು.

"ಅಕ್ಕನ ಕತೆ ಏಲು" ಧ್ರುವನು ಹೇಳಿದನು. ಕತೆಯೆಂದ ಮಾತ್ರಕ್ಕೆ ತನ್ನ ಅಕ್ಕನು ಹೇಳುತ್ತಿದ್ದ ಕತೆಯೇ ಅವನ ಮನದ ಮುಂದೆ ಬಂದು ನಿಲ್ಲುವುದು. ತನ್ನ ಅಕ್ಕನು ಹೇಳುತ್ತಿದ್ದ ಕತೆಗಳನ್ನು ಬಿಟ್ಟು ಜಗತ್ತಿನಲ್ಲಿ ಬೇರೆ ಕತೆಗಳೇ ಇಲ್ಲವೆಂದು ಆ ಮಗುವಿನ ಮನದೆಣಿಕೆ.

ಆಗ ದೊರೆಯು ದೊಡ್ಡದೊಂದು ಪುರಾಣದ ಕತೆಯನ್ನು ಆರಿಸಿ ತೆಗೆದನು. "ಒಬ್ಬ ದೊರೆ ಇದ್ದನು; ಅವನ ಹೆಸರು ಹಿರಣ್ಯಕಶಿಪು." ಎಂದು ಹೇಳಲು ತೊಡಗಿದನು.

'ದೊರೆ' ಎಂಬ ಶಬ್ದವನ್ನು ಕೇಳಿದೊಡನೆಯೆ "ನಾನು ದೊಳೆ" ಎಂದು ಆತುರದಿಂದ ಧ್ರುವನು ನುಡಿದನು. ತಲೆಯ ಮೇಲಿನ ಕಿರೀಟದ ಬಲುಹು ಹಿರಣ್ಯಕಶಿಪುವಿನ ದೊರೆತನವನ್ನು ಒಮ್ಮೆಲೆ ಸಮ್ಮತಿಸಲಿಲ್ಲ.

ಚಾಟುಭಾಷಿಗಳಾದ ಸಭಾಸದರಂತೆ ಗೋವಿಂದ ಮಾಣಿಕ್ಯನು ಆ ಕಿರೀಟಧಾರಿಯಾದ ಮಗುವಿನ ಮನವನ್ನು ರಂಜಿಸಲು ಮಾತನಾಡಿದನು. "ನೀನು ದೊಳೆ; ಅವನೂ ದೊಳೆ".

ಕೊನೆಗೆ ದೊರೆಯು "ಹಿರಣ್ಯಕಶಿಪು ದೊರೆಯಲ್ಲ ಅವನೊಬ್ಬ ರಾಕ್ಷಸ;" ಎಂದು ಹೇಳಿದಾಗಲೆ ಧ್ರುವನು ಸುಮ್ಮನಾದನು. ದೊರೆಯ ಆ ಮಾತಿನಲ್ಲಿ ಅಡ್ಡಿಪಡಿಸುವಂತಹದಿಲ್ಲವೆಂದು ಕಂಡುಕೊಂಡನು.

ಇದೆ ಸಮಯದಲ್ಲಿ ನಕ್ಷತ್ರರಾಯನು ಒಳಕ್ಕೆ ಪ್ರವೇಶಿಸಿದನು. ವಿನೀತನಾಗಿ ನುಡಿದನು. "ಯಾವುದೋ ರಾಜಕಾರ್ಯಕ್ಕಾಗಿ ಮಹಾರಾಜರು ನನ್ನನ್ನು ಕರೆಯಿಸಿರುವರೆಂದು ಕೇಳಿದೆ. ಅಪ್ಪಣೆಗಾಗಿ [illegible]ದ್ದೇನೆ."

"ಇನ್ನು ಕೊಂಚವೇ ತಾಳು! ಈ ಕತೆಯನ್ನು ಕೊನೆಗೆ ಮುಟ್ಟಿಸಿ ಬಿಡುವೆನು." ಎಂದು ನುಡಿದು ದೊರೆಯು ಎಲ್ಲ ಕತೆಯನ್ನೂ ಹೇಳಿ ಮುಗಿಸಿದನು. ಕೇಳಿ ಧ್ರುವನು "ಲಾಕ್ಕಸ ಕೆಟ್ಟ" ಎಂದು ಒಂದೇ ಮಾತಿನಲ್ಲಿ ತನ್ನ ಅಭಿಮತವನ್ನು ಪ್ರಕಟಗೊಳಿಸಿದನು.

ಧ್ರುವನ ತಲೆಯ ಮೇಲೆ ರಾಜಮುಕುಟವಿರುವುದನ್ನು ನೋಡಿ ನಕ್ಷತ್ರರಾಯನ ಮನಸ್ಸಿಗೆ ಹೇಗೆ ಹೇಗೋ ಎನಿಸಿತು. ನಕ್ಷತ್ರರಾಯನು ತನ್ನ ಕಡೆಗೆ ನೋಡುತಿರುವನೆಂಬುದು ಧ್ರುವನಿಗೆ ಗೊತ್ತಾಯಿತು. ಕೂಡಲೆ ಅವನು ಗಂಭೀರಭಾವದಿಂದ ನಕ್ಷತ್ರರಾಯನಿಗೆ ತಿಳಿಯಪಡಿಸಿದನು. "ನಾನು ದೊಲೆ"

ನಕ್ಷತ್ರರಾಯನೆಂದನು "ಹಾಂ! ಹಾಗೆನ್ನಕೂಡದು, ತಿಳಿಯಿತೇನು!" ಎಂದು ನುಡಿದವನೆ ಧ್ರುವನ ತಲೆಯ ಮೇಲಿದ್ದ ಕಿರೀಟವನ್ನು ಎತ್ತಿಕೊಂಡು ದೊರೆಯ ಕೈಗೆ ಕೊಡಲು ಹೋದನು. ಕಿರೀಟವನ್ನು ಕಸಿದುಕೊಂಡುದಕ್ಕಾಗಿ ಧ್ರುವನು ನಿಜವಾದ ದೊರೆಯಂತೆಯೆ ಕಿರುಚಿಕೊಳ್ಳತೊಡಗಿದನು. ಗೋವಿಂದ ಮಾಣಿಕ್ಯನು ಅವನಿಗೊದಗಿದ ವಿಪತ್ತನ್ನು ದೂರಮಾಡಿದನು. ನಕ್ಷತ್ರರಾಯನನ್ನು ತಡೆದುನಿಲ್ಲಿಸಿದನು.

ಬಳಿಕ ಗೋವಿಂದ ಮಾಣಿಕ್ಯನು ನಕ್ಷತ್ರನಿಗೆ ಹೇಳಿದನು. "ರಘುಪತಿಯು ಹೀನವಾದ ಹಲವು ಉಪಾಯಗಳಿಂದ ಪ್ರಜೆಗಳಲ್ಲಿ ಅಸಂತೋಷವನ್ನು ಹೆಚ್ಚಿಸುತಿರುವನೆಂದು ಕೇಳಿರುವೆನು. ಈಗ ಸ್ವತಃ ನೀನೇ ಹೋಗಿ ಪಟ್ಟಣದಲ್ಲೆಲ್ಲ ತಿರುಗಾಡಿ ಇದರ ವಿಷಯವಾಗಿ ವಿಚಾರನಡೆಯಿಸಬೇಕು. ಸಟಿದಿಟಗಳನ್ನು ನಿಶ್ಚಯಿಸಿ ಏನೆಂಬುದನ್ನು ನನಗೆ ತಿಳುಹಿಸಬೇಕು."

"ಅಪ್ಪಣೆಯಂತಾಗಲಿ" ಎಂದು ನುಡಿದು ನಕ್ಷತ್ರನು ಹೊರಟು ನಡೆದನು; ಆದರೆ ಧ್ರುವನ ತಲೆಯಮೇಲೆ ಕಿರೀಟವಿರುವುದು ಅವನಿಗೆ ಸ್ವಲ್ಪವೂ ಒಪ್ಪಿಗೆಯಾಗಲಿಲ್ಲ.

ಪ್ರಹರಿಯು ಬಂದು ಬಿನ್ನವಿಸಿದನು. "ಪುರೋಹಿತಸ್ವಾಮಿಗಳವರ ಸೇವಕನಾದ ಜಯಸಿಂಹನು ಸನ್ನಿಧಿಯ ಪಾದಗಳನ್ನು ಕಾಣುವುದಕ್ಕೆಂದು ಬಂದು ಬಾಗಿಲಲ್ಲಿ ನಿಂತಿದ್ದಾನೆ."

ದೊರೆಯು ಅವನನ್ನು ಒಳಗೆ ಬಿಡುವುವಕ್ಕೆ ಅನುಮತಿಯನ್ನು ಕೊಟ್ಟನು. ಜಯಸಿಂಹನು ದೊರೆಗೆ ಪೊಡಮಟ್ಟು ಮುಗಿದ ಕೈಗಳಿಂದ ಅರಿಕೆ ಮಾಡಿಕೊಂಡನು. "ಮಹಾರಾಜ! ನಾನು ಎಲ್ಲಿಗೋ ದೂರದೇಶಕ್ಕೆ ಹೋಗಬೇಕೆಂದಿರುವೆನು. ತಾವು ನನ್ನ ದೊರೆಗಳು—ನನ್ನ ಗುರುದೈವವು. ತಮ್ಮ ಹರಕೆಯನ್ನು ಪಡೆದುಕೊಳ್ಳಬೇಕೆಂದು ನಾನೀಗ ಇಲ್ಲಿಗೆ ಬಂದಿರುವೆನು."

ದೊರೆಯು ಕೇಳಿದನು. "ಎಲ್ಲಿಗೆ ಹೋಗುವೆ ಜಯಸಿಂಹ?"

ಜಯಸಿಂಹನೆಂದನು "ನಾನು ಕಾಣೆನು ದೊರೆಯೆ! ನಾನೆಲ್ಲಿಗೆ ಹೋಗಲಿರುವೆನೆಂಬುದನ್ನು ಯಾರೂ ಹೇಳಲಾರರು."

ದೊರೆಯು ಏನನೋ ಹೇಳಬೇಕೆಂದಿದ್ದನು. ಅಷ್ಟರಲ್ಲಿ ಜಯಸಿಂಹನು ಮತ್ತೆ ಮಾತನಾಡಿದನು. "ಬೇಡವೆನ್ನಬೇಡಿ ಮಹಾರಾಜ! ತಾವು ಬೇಡವೆಂದರೆ ನನ್ನ ಪ್ರವಾಸವು ಸುಖದಾಯಕವಾಗಲಾರದು. ಇಲ್ಲಿ ನನ್ನ ಮನವನ್ನು ಮುಸುಕಿಕೊಂಡಿದ್ದ ಸಂಶಯಗಳೆಲ್ಲವೂ ಅಲ್ಲಿಯಾದರೂ ದೂರವಾಗಲೆಂದು ಹರಕೆಯನ್ನು ದಯಪಾಲಿಸಿ! ಇಲ್ಲಿ ಕವಿದ ಕಾರ್ಮೋಡವು ಅಲ್ಲಿಯಾದರೂ ಹರಿದುಹೋಗಲೆಂದು ಆಶೀರ್ವದಿಸಿ! ತಮ್ಮ ಹಾಗೆಯೆ ಶಾಂತಿಯು ಸಿಕ್ಕಲೆಂದು ತಲೆಯಮೇಲೆ ಕೈಯನ್ನಿಡಿ."

ದೊರೆಯು ಕೇಳಿದನು. "ಎಂದು ಹೋಗುವವನು!"

ಜಯಸಿಂಹನು ಹೇಳಿದನು. "ಇಂದು ಸಾಯಂಕಾಲದಲ್ಲಿಯೆ ದೊರೆಯೆ! ಹೆಚ್ಚಿಗೆ ಅವಕಾಶವಿಲ್ಲದಾಗಿದೆ: ನಾನೀಗ ತಮ್ಮನ್ನು ಬೀಳುಕೊಳ್ಳುವೆನು" ಎಂದು ದೊರೆಗೆ ನಮಸ್ಕರಿಸಿ ಅವರ ಅಡಿಯನ್ನು ಮುಡಿದುಕೊಂಡನು. ಆಗ ದೊರೆಯ ಅಡಿಗಳ ಮೇಲೆ ಕಂಬನಿಗಳ ಹನಿಗಳೆರಡು ಬಿದ್ದುವು.

ಜಯಸಿಂಹನು ಎದ್ದು ಇದೀಗ ಹೊರಡಬೇಕೆಂದಿದ್ದನು. ಆಗ ಧ್ರುವನು ಮೆಲ್ಲಮೆಲ್ಲಗೆ ಹೋಗಿ ಅವನ ಉಡುಪಿನ ತುದಿಯನ್ನು ಹಿಡಿದು ಸೆಳೆಯುತ್ತ "ನೀನು ಓಗಬೇಡ" ಎಂದು ನುಡಿದನು.

ಜಯಸಿಂಹನು ನಗುನಗುತ್ತ ಹೊರಳಿನಿಂತನು. ಧ್ರುವನನ್ನು ಎತ್ತಿಕೊಂಡು ಮೈದಡವಿ ಮುತ್ತಿಟ್ಟು ಮಾತನಾಡಿದನು. "ಮಗು ಇಲ್ಲಿ ನಾನು ಯಾರಬಳಿಯಲ್ಲಿರಲಿ? ನನ್ನವರು ಯಾರಿರುವರು?"

ಧ್ರುವನೆಂದನು. "ನಾನು ದೊಲೆ"

ಜಯಸಿಂಹನು ಹೇಳಿದನು. "ನೀನು ದೊರೆಗಳ ದೊರೆಯು ಎಲ್ಲ ಜನವನ್ನೂ ಬಲೆಯಲ್ಲಿ ಬಿಗಿದು ಕಟ್ಟಿಹಾಕುವೆ ನೀನು" ಎಂದು ನುಡಿದು ಧ್ರುವನನ್ನು ಕೆಳಗಿಳಿಸಿ ಜಯಸಿಂಹನು ಅರಮನೆಯಿಂದ ಹೊರಟು ನಡೆದನು. ದೊರೆಯು ಗಂಭೀರ ಮುಖದಿಂದ ಅವೆಷ್ಟೋ ವೇಳೆಯ ವರೆಗೆ ಯೋಚಿಸುತ್ತ ಕುಳಿತನು.

# ಕೆಲಸಗಾರರ ದಂಡು

ಲೇಖಕರು—ಡಾ. ನಾ. ಸು. ಹರ್ಡೀಕರ, ಹುಬ್ಬಳ್ಳಿ

**" ಹಿಂದೂಸ್ತಾನೀ ಸೇವಾದಲವು ಒಂದು ಶಾಂತಿಯ ಸೇನಾರಚನೆಯ ಕಡೆಗೆ ಲಕ್ಷ್ಯವಿಟ್ಟಿರುತ್ತದೆ. "**

ಶಾಂತಿಕರವಾದ ಮತ್ತು ನ್ಯಾಯವಾದ ಮಾರ್ಗಗಳಿಂದ ಸಂಪೂರ್ಣ ಜನತಾಸ್ವಾತಂತ್ರ್ಯವನ್ನು ಗಳಿಸಿ ಆ ಮೂಲಕ ಹಿಂದೂಸ್ಥಾನದ ಜನರಿಗೆ ಸುಖಸಮಾಧಾನಗಳನ್ನು ತರುವದೇ ಹಿಂದೂಸ್ತಾನೀ ಸೇವಾದಲದ ಧ್ಯೇಯವಾಗಿದೆ. ಅವರ ಮನಸ್ಸಿನಲ್ಲಿ ಕುದಿಯುತ್ತಿರುವ ಒಂದೇ ಯೋಚನೆಯೆಂದರೆ ದೇಶದಲ್ಲಿನ ಸಧ್ಯದ ದುರ್ಗುಣಪೂರಿತ ನಿಂದ್ಯ ಅವನತಿಗೆ ಹೇತುಭೂತವಾದ ಪರದೇಶದ ಆಳರಸರ ಜಾಲದೊಳಗಿಂದ



ಹಿಂದೂಸ್ಥಾನದ ಜನರನ್ನು ಪಾರುಮಾಡುವದೇ. ಈ ಸದುದ್ದೇಶದಿಂದ ಜನರ ಹೃದಯದಲ್ಲಿ 'ಮೊದಲು ಹಿಂದೂಸ್ಥಾನ, ಆ ಮೇಲೆ ಹಿಂದೂಸ್ಥಾನ, ಕಡೆಗೂ ಹಿಂದೂಸ್ಥಾನ' ಎಂಬ ವಿಚಾರದ ಮುದ್ರಿಕೆಯನ್ನು ಒತ್ತುವದಕ್ಕಾಗಿ ಪ್ರಯತ್ನಿಸುತ್ತಿದೆ. ಮತ್ತು ದೇಶದ ಬಡೆದಾಟಗಳು ಯಶಸ್ವಿಯಾಗುವ ವರೆಗೆ ಎದೆಗೊಟ್ಟು ನಿಂದಿರಬಲ್ಲ ಮತ್ತು ಅವರ ಶಿಶಿಕ್ಷಿಯು ಭಯಂಕರಕರನಾದ ಹಗೆಯು ಬಗ್ಗುವಂತೆ ಮಾಡಬಲ್ಲ ನಿಸ್ವಾರ್ಥಬುದ್ಧಿಯ, ರಾಷ್ಟ್ರೀಯ, ಶಾಂತಿಮಯ ಸೈನ್ಯವನ್ನು ನಿರ್ಮಾಣಮಾಡುವದಕ್ಕಾಗಿ ಇಚ್ಛಿಸುತ್ತಿದೆ. ಅದರ ಮಾರ್ಗಗಳು ಅಕ್ಷರಶಃ ಶಾಂತತಾಮಯವಾಗಿದ್ದು ಮೇಲಿನ ಧ್ಯೇಯಸಾಧನೆಗಾಗಿ ತರುಣರಲ್ಲಿ ಶಿಕ್ಷಣ, ಶಿಸ್ತು ಮತ್ತು ಸಂಘಟನೆಗಳನ್ನು ಉಂಟುಮಾಡುವದನ್ನು ಒಡಗೊಂಡಿವೆ.

## ದಲವು ಏನು ಮಾಡಿದೆ?

ಎಲ್ಲಾ ತರದ ಕಷ್ಟಗಳೂ ವಿಷಮಗಳೂ ಕಣ್ಣಮುಂದೆ ಕಟ್ಟಿದಂತೆ ಇದ್ದಾಗ್ಯೂ ದಲವು ಕಳೆದ ಆರು ವರ್ಷಗಳಲ್ಲಿ ಮೇಲಿನ ಮಾರ್ಗಗಳನ್ನು ಹಿಡಿದು ಮುಂದುವರಿದಿದೆ. ಅದು (ಇಷ್ಟರ ವರೆಗೆ) ಏನಾದರೂ ಸ್ತುತ್ಯ ಕಾರ್ಯಗಳನ್ನು ಮಾಡಿದೆಯೋ ಇಲ್ಲವೋ ಇದನ್ನು ಹೇಳಲಾರೆ. ಅದನ್ನು ನಿರ್ಧರಿಸುವ ಕಾಲವಾದರೂ ಇನ್ನೂ ಬಂದಿಲ್ಲ. ಆದರೆ ನಾನು ವಿಶ್ವಾಸಪೂರ್ವಕವಾಗಿ ಹೇಳುತ್ತೇನೆ – ಕಾಂಗ್ರೆಸಿನ ಕೆಲಸಗಳನ್ನು ಮಾಡುವದಕ್ಕಾಗಿ ಕವಾಯತಿನ ಶಿಕ್ಷಣವನ್ನು ಹೊಂದಿ ಶಿಸ್ತಿನ, ದಕ್ಷರಾದ, ದೇಶಭಕ್ತಿಯುಳ್ಳ ತುಂಬಿದ ಮತ್ತು ಕಷ್ಟಗಳನ್ನು ಸಮಾಧಾನದಿಂದ ಎದುರಿಸುವಷ್ಟು ಸಹನಶಕ್ತಿಯುಳ್ಳ ರಾಷ್ಟ್ರೀಯ ಕೆಲಸಗಾರರ ಪಡೆಯ ಅವಶ್ಯಕತೆಯ ವಿಚಾರವು ಜನರ ಮನಸ್ಸಿನಲ್ಲಿ ಸ್ಥಿರವಾಗಿ ಬೇರೂರಿರುತ್ತದೆ. ಮತ್ತು ಆ ಕೆಲಸವನ್ನು ಮನಃಪೂರ್ವಕವಾಗಿ ಕೈಯಲ್ಲಿ ತೆಗೆದುಕೊಂಡು ಕೆಲಸ ಮಾಡುವದಕ್ಕೆ ಸಿದ್ಧರಿರುವ ಜನರ ಒಂದು ಪಡೆಯೇ ಇರುವದನ್ನು ನನ್ನ ಕಣ್ಣೆದುರಿನಲ್ಲಿ ನೋಡುತ್ತಿದ್ದೇನೆ.

## ಸದ್ಯದ ಪರಿಸ್ಥಿತಿ

ದಲದ ಕಾರ್ಯಕ್ಷೇತ್ರವು ವಿಸ್ತಾರವಾಗುತ್ತಿದೆ. ವಿದ್ಯಾರ್ಥಿಗಳೂ ತರುಣರೂ ಅದರ ಮೂಲಸೂತ್ರಗಳನ್ನು ತಿಳಿದುಕೊಂಡು ಮೆಲ್ಲಗೆ ಬರುತ್ತಿದ್ದಾರೆ. ಜನಸಾಮಾನ್ಯರಿಗೆ ಈ ಸಂಸ್ಥೆಯ ಮಹತ್ವವು ಮನವರಿಕೆಯಾದ್ದರಿಂದ, ದಲಕ್ಕೆ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸಹಾಯ ಮಾಡಲಾರಂಭಿಸಿದ್ದಾರೆ. ಕಾಂಗ್ರೆಸ ಕಮಿಟಿಗಳಾದರೂ ತಮ್ಮ ತಮ್ಮೊಳಗೂ ತಮ್ಮ ಕಚೇರಿಗಳೊಳಗೂ ಶಿಸ್ತಿನ ಅಭಾವವಿದೆ

ಯೆಂಬುದು ಗೋಚರವಾಗಹತ್ತಿದೆ. ಈಗೀಗ ಅವರು ತನು ಕೆಲಸಗಾರರಿಗೆ ಶಿಕ್ಷಣವನ್ನು ಕೊಟ್ಟು ಶಿಸ್ತಿಗೆ ತರುವ ಸಂಘಟನಾ ಕಾರ್ಯವನ್ನು ಕೈಕೊಂಡಿದ್ದಾರೆ.

## ಕಾರ್ಯಕ್ಷೇತ್ರ

ಕರ್ನಾಟಕವು ನಮ್ಮ ಮುಖ್ಯ ಕಾರ್ಯಕ್ಷೇತ್ರವು. ಕರ್ನಾಟಕ ಏಕೀಕರಣದ ಸಲುವಾಗಿ ಸಹಿಗಳನ್ನು ದೊರಕಿಸುವ ಮಹತ್ತ್ವದ ಕಾರ್ಯವನ್ನು ದಲವು ಕೈಕೊಂಡು ಜರುಗಿಸಿದೆ. ಬಾಗಲಕೋಟೆಯಲ್ಲಿ ಅಖಿಲಭಾರತವ್ಯಾಯಾಮಪೀಠವನ್ನು ಹೆಚ್ಚಾಗಿ ಕನ್ನಡಿಗರ ನೆರವಿನಿಂದ ಈ ೨ ವರ್ಷಗಳಿಂದ ನಡೆಸಿದ್ದಾಗಿದೆ. ಇಂದು ದೇಶದೊಳಗೆ ಮೂರು ನಾಲ್ಕು ಬೇರೆ ಬೇರೆ ಪ್ರಾಂತಗಳಲ್ಲಿ ಸೈನ್ಯಭರ್ತಿಯ ಮತ್ತು ಶಿಕ್ಷಣದ ಕೆಲಸವು ದಲದ ಕಾರ್ಯಕ್ರಮಗಳಿಗನುಸರಿಸಿ ನಡೆದಿರುತ್ತದೆ. ಎಂಟು ಪ್ರಾಂತಗಳಲ್ಲಿ ಸ್ವಯಂಸೇವಕ ಮಂಡಲಗಳು ಸ್ಥಾಪಿತವಾಗಿದ್ದು ಮುಂದಿನ ಚಟುವಟಿಕೆಗಳ ಕಾರ್ಯಕ್ರಮವನ್ನು ತಯಾರಿಸುವದರಲ್ಲಿ ತೊಡಗಿದ್ದಾರೆ.

## ಕಾಂಗ್ರೆಸ್ ಪ್ರಾಂತಗಳೂ ದಲವೂ

ಆದರೂ ಕಾಂಗ್ರೆಸಿನ ಪ್ರಾಂತಗಳೊಳಗೆ ಸುಮಾರು ಮೂರರಲ್ಲೊಂದು ಭಾಗದಷ್ಟು ಪ್ರಾಂತಗಳು ದಲದ ಈ ಕರೆಗೆ ಮಾನಗೊಡುವ ಯೋಚನೆ ಮಾಡಲಿಲ್ಲ. ಅದಕ್ಕೆ ಕಾರಣಗಳಾವವೂ ಅವೆ. ದಲದವರು ತಮ್ಮ ಕಾರ್ಯಕ್ರಮದಲ್ಲಿ ಹಾಕಿಕೊಂಡಿರುವ ಶಾರೀರಿಕ ಶಿಕ್ಷಣಕ್ಕೆ ಜನಾಂಗದ ಈಗಿನ ಪರಿಸ್ಥಿತಿ ಹಾಗೂ ಕಾರ್ಯಕ್ರಮಗಳೊಳಗೆ ಸ್ಥಾನವಿಲ್ಲವೆಂಬುದವರ ಭಾವನೆ. ಕೆಲವರಿಗೆ ಶಿಸ್ತೆಂದರೆ ಅಲಕ್ಷ್ಯ. ಅವರಿಗೆ ತಮ್ಮ ಹಳೇ ಹಳೇ ಪದ್ಧತಿ ( ಪದ+ಹತಿ ) ಯಿಂದಲೇ ಕೆಲಸ ಮಾಡುವ ಲಾಲಸೆ. ಶಿಸ್ತಿನ ಸ್ವಪ್ನವಾದರೂ ಅವರು ಬಂಡೆಬ್ಬಿಸುವರು. ಇದರಿಂದಾಗಿ ಕಾಂಗ್ರೆಸಿನ ಕೆಲಕೆಲವು ಪ್ರಾಂತಗಳು ಈ ವಿಚಾರವನ್ನು ಮಾನ್ಯಮಾಡಿಲ್ಲ. ರಾತ್ರಿ ಹಗಲುಗಳು ಒಂದರ ಹಿಂದೊಂದು ಬರಲೇಬೇಕು. ಹಿಂದು ಮುಂದು ನೋಡದೆ ಕಾಂಗ್ರೆಸಿನ ಅನುಜ್ಞೆಗಳನ್ನು ಪಾಲಿಸಿ, ಹಿಂದೀ ಜನತೆಯ ಉತ್ಕರ್ಷವನ್ನು ಮಾಡಬಲ್ಲ ದೃಢಮನಸ್ಸಿನವರೂ, ಧೈರ್ಯಶಾಲಿಗಳೂ, ದೃಢಕಾಯರೂ, ಉತ್ಸಾಹಿಗಳೂ, ಪ್ರತಿಭಾಸಂಪನ್ನರೂ ಆತ್ಮಸಂಯಮಿಗಳೂ ಆದ ದೇಶಸೇವಕರನ್ನು ತಯಾರಿಸುವ ದಲದ ಮಹತ್ವಾಕಾಂಕ್ಷೆಯನ್ನು ಸಫಲಗೊಳಿಸುವದಕ್ಕಾಗಿ ಕಾಂಗ್ರೆಸಿನ ಎಲ್ಲಾ ಪ್ರಾಂತಗಳೂ ದಲದೊಡನೆ ಒಂದಿಲ್ಲೊಂದು ದಿನ ಸಹಕರಿಸುವವೆಂದು ಪೂರ್ಣವಾಗಿ ನಂಬಿದ್ದೇನೆ.

## ದಲದ ಸ್ವರೂಪ

ದಲವು ಕಾಂಗ್ರೆಸಿನ ಒಂದು ಶಾಖೆ. ಅಂದರೆ ಸಂಸ್ಥೆಯು ಕಾಂಗ್ರೆಸಿನದೇ. ಹೀಗಾಗಿ ಅದೊಂದು ರಾಜಕೀಯ ಸಂಸ್ಥೆಯೆಂದು ಹೇಳಬಹುದು. ಒಂದು ಸೇನಾಸಂಸ್ಥೆಯೆಂದು ಅನ್ನರೂ ಅನ್ನಬಹುದು. ಯಾಕೆಂದರೆ ಅದು ತನ್ನ ಹಾಸುಹೊಕ್ಕುಗಳಲ್ಲಿ ಸೈನ್ಯದಲ್ಲಿ ಕಂಡುಬರುವ ಕಡುತರವಾದ ಶಿಸ್ತನ್ನು ತನ್ನವರಕಡೆಗೆ ಲಕ್ಷ್ಯವಿಟ್ಟಿರುತ್ತದೆ. ಇದರಿಂದ ದಲವು ಸಾಮಾಜಿಕ ಮತ್ತು ವಿದ್ಯಾಪ್ರಚಾರಕ ಕಾರ್ಯಗಳನ್ನು ಮಾಡುವದಿಲ್ಲವೆಂದು ಯಾರೂ ತಿಳಿದುಕೊಳ್ಳಬಾರದು. ಆ ವಿಭಾಗಗಳಿದರೂ ದಲದ ಕಾರ್ಯಕ್ರಮಗಳೊಳಗೆ ಸಮಾವಿಷ್ಟವಾಗಿ ಪ್ರಸಂಗ ಒದಗಿದಾಗ ಆ ಕೆಲಸಗಳನ್ನಾದರೂ ದಲವು ಕೈಕೊಳ್ಳುವದು.

## ಶಿಕ್ಷಣಕ್ರಮ

ನಮ್ಮ ಶಿಕ್ಷಣಪದ್ಧತಿಯಲ್ಲಿ ಮೂರು ವಿಭಾಗಗಳಿವೆ-ಶಾರೀರಿಕ, ಮಾನಸಿಕ ಮತ್ತು ವ್ಯಾವಹಾರಿಕ.

## ಶಾರೀರಿಕಶಿಕ್ಷಣ

ಶಾರೀರಿಕಶಿಕ್ಷಣವನ್ನು ಕೊಟ್ಟು ಆನೆಯಂತಹ ಬಲಶಾಲಿಗಳನ್ನು ತಯಾರಿಸುವದೇ ದಲದ ಆಕಾಂಕ್ಷೆ. ಶಾರೀರಿಕಶಿಕ್ಷಣಕ್ರಮದಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಇವು ಎರಡು ರೀತಿಗಳ ಶಿಕ್ಷಣಗಳು ಕೂಡಿವೆ. ಆದರೂ ಹೆಚ್ಚಿನ ಮಹತ್ವವು ಕವಾಯತು, ಭಾರಹೊತ್ತುಕೊಂಡು ನಡೆಯೋಣ (Route March) ಮತ್ತು ದೂರ ನಡೆಯೋಣ ಇವುಗಳ ಕಡೆಗೆ ಕೊಡಲ್ಪಟ್ಟಿದೆ.

## ಮಾನಸಿಕಶಿಕ್ಷಣ

ಶಾರೀರಿಕಶಿಕ್ಷಣದ ಕೂಡೆ ಮಾನಸಿಕಶಿಕ್ಷಣವಾದರೂ ಕೊಡಲ್ಪಡುತ್ತದೆ. ಅದರ ಮುಖ್ಯ ವಿಷಯಗಳೆಂದರೆ ಹಿಂದುಸ್ಥಾನದ ಚರಿತ್ರೆ ಮತ್ತು ಪ್ರಗತಿ, ಹಿಂದೀ ಮತ್ತು ಪಾಶ್ಚಿಮಾತ್ಯ ದೇಶನಾಯಕರ ತುಲನಾತ್ಮಕ ಜೀವನಚರಿತ್ರೆ, ಚಳವಳಿಯ ಬೇರೆ ಬೇರೆ ವಿಧಗಳು, ಹಿಂದೀ ಜನಾಂಗದವರ ಆರ್ಥಿಕಸ್ಥಿತಿ, ಗ್ರಾಮಸಂಘಟನೆ, ಸಾಮುದಾಯಿಕ ಸ್ವಚ್ಛತೆ ಮತ್ತು ಪ್ರಥಮ ಚಿಕಿತ್ಸೆ ಮೊದಲಾದುವು.

## ಪರಿಣಾಮ

ದಲವು ಕೋಣಗಳನ್ನು ತಯಾರಿಸುತ್ತದೆಂದು ಅನೇಕರ ಭಾವನೆ. ನಾನು ನಿಮಗೆ ಆಶ್ವಾಸನಾಪೂರ್ವಕವಾಗಿ ಹೇಳುತ್ತೇನೆ. ದಲವು ಕೋಣಗಳಂತಹ ನೀತಿರಹಿತ ಮಟ್ಮಾಳರನ್ನಾಗಲೀ ಪುಸ್ತಕಜಂತುಗಳನ್ನಾಗಲೀ ತಯಾರಿಸಲು ಇಚ್ಛಿಸುವದಿಲ್ಲ. ಅದು ದೇಶಭಕ್ತಿಯಿಂದ ತುಂಬಿದ ದಂಡಾಳುಗಳ ದಂಡನ್ನು ತಯಾರಿಸುವದಕ್ಕೆ ಇಚ್ಛಿಸುತ್ತದೆ. ಅದಕ್ಕೆ ಬಲಿಷ್ಠರಾದ ಜನರು ಬೇಕೆಂಬುದೇನೋ ನಿಜ. ಆದರೆ ಅವರಲ್ಲಿ ಕಾಂಗ್ರೆಸು ಹೂಡಿರುವ ಬಡಿದಾಟಗಳ ಪರಿಸ್ಥಿತಿಯನ್ನು ನೋಡಿ ತಿಳಕೊಳ್ಳುವದಕ್ಕೆ ಸಾಕಷ್ಟು ದೇಶಭಕ್ತಿ, ಉತ್ಸಾಹ, ಉಷ್ಣತೆ ಮತ್ತು ಬುದ್ಧಿ ಇವುಗಳಾದರೂ ಇರಬೇಕು. ಈ ತರದ ಶಿಕ್ಷಣವಾದ ಮೇಲೆ ಅವರು ಹೊರಗೆ ದೇಶದಲ್ಲಿ ವ್ಯಾವಹಾರಿಕ ಕೆಲಸಗಳಲ್ಲಿ ತೊಡಗುವರು.

## ವ್ಯಾವಹಾರಿಕಶಿಕ್ಷಣ

ದಲದ ಮೆಂಬರರು ಮಾಡುವ ವ್ಯಾವಹಾರಿಕ ಕೆಲಸಗಳೆಂದರೆ, ಹಳ್ಳಿಗಳಿಗೆ ಹೋಗಿ ಕಾಂಗ್ರೆಸಿನವರು ಮತ್ತು ದಲದವರು ಕೈಕೊಂಡಿರುವ ಕಾರ್ಯಕ್ರಮಗಳನ್ನು ಜನರಿಗೆ ತಿಳಿಹೇಳಿ ಅವರ ಸಹಾನುಭೂತಿಯನ್ನು ಪಡೆಯುವದು; ಕಾಂಗ್ರೆಸ್ ಮೆಂಬರರನ್ನು ಕೂಡಿಸುವದು; ಖಾದಿಯನ್ನು ಹೊತ್ತುಮಾರುವದು; ಮತ್ತು ಸ್ಥಳೀಯ ಕಾಂಗ್ರೆಸ್‌ಕಮಿಟಿಗಳಿಗೆ ಶಿಸ್ತಿನಿಂದ ಮೆರವಣಿಗೆ ತೆಗೆಯುವದು, ಸಭೆಗಳನ್ನು ಕೂಡಿಸುವದು, ಗೊಂದಲಗಳಾಗದಂತೆ ನೋಡಿಕೊಳ್ಳುವದು, ಪರದೇಶೀ ಅರಿವೆಗಳ ಬಹಿಷ್ಕಾರ, ಪ್ರದರ್ಶನಗಳ ಏರ್ಪಾಡು, ಪುಸ್ತಕಸಂಗ್ರಹಾಲಯಗಳನ್ನೂ ವಾಚನಾಲಯಗಳನ್ನೂ ನಡೆಸೋಣ, ಕೂಲಿಕಾರ ಮತ್ತು ಅಸ್ಪೃಶ್ಯಜನರ ಬಗ್ಗೆ ರಾತ್ರಿ ಸಾಲೆಗಳನ್ನು ನಡೆಸೋಣ ಮೊದಲಾದ ಕೆಲಸಗಳಲ್ಲಿ ಸಹಾಯಮಾಡುವದು.

## ನವೀನ ಜಾಗೃತಿ

ಹಿಂದೂಸ್ಥಾನದ ತರುಣರು ಜಾಗೃತರಾಗಿರುವರು. ಅವರಲ್ಲಿ ಸಾಕಷ್ಟು ಉತ್ಸಾಹವಿದೆ. ಅವರಲ್ಲಿ ಕರ್ತವ್ಯಶಕ್ತಿ ಮಹತ್ವಾಕಾಂಕ್ಷೆಗಳಾದರೂ ತುಂಬಿಕೊಂಡಿದೆ. ಅವರಲ್ಲಿ ದೇಶಭಕ್ತಿಯ ಜ್ವಾಲೆಯು ಉರಿಯುತ್ತಿದೆ. ಅವರು ತಮ್ಮ ಮಾತೃಭೂಮಿಯ ಉತ್ಕರ್ಷದ ಸಲುವಾಗಿ ಕೆಲಸ ಮಾಡಲು ಚಡಪಡಿಸುತ್ತಿದ್ದಾರೆ. ಆದರೆ, ಅವರನ್ನು ಸರಿಯಾದ ಮಾರ್ಗಕ್ಕೆ ಇನ್ನೂ ಹಚ್ಚಿಲ್ಲವೆಂದೂ ಅವರ ಉತ್ಸಾಹವು ಪುಕ್ಕಟೆಯಾಗಿ ವ್ಯರ್ಥವಾಗುತ್ತಿದೆಯೆಂದೂ ನನ್ನ ಮನಸ್ಸು ಸಂದೇಹಗೊಳ್ಳುತ್ತದೆ. ಕೆಲಕೆಲವು 'ತರುಣರ ಮುಂದಾಳುಗಳು' ಎಂದು ಹೇಳಿಸಿಕೊಳ್ಳುವವರು ದೇಶಭಕ್ತಿಯಿಂದ ಕೂಡಿದ ಅವರ ಉತ್ಸಾಹದ ಉಪಯೋಗವನ್ನು ತಮ್ಮ ಸ್ವಂತ ಸ್ವಾರ್ಥಪರ ಉತ್ಕರ್ಷೆಗಾಗಿ ಬಳಸಿಕೊಂಡಿದ್ದಾರೆ. ಇದನ್ನು ಹೇಳುವಾಗ ನನಗೆ ಬಹಳ ಖೇದವಾಗುತ್ತದೆ. ಆದರೆ ವಸ್ತುಸ್ಥಿತಿಯು ಹಾಗಿದ್ದದ್ದು ನಿಜ. ಮತ್ತು ಅವುಗಳನ್ನು ಸಮಾಧಾನದಿಂದ ಎದುರಿಸಲಿಕ್ಕೇ ಬೇಕು. ಬರೇ ಕ್ಷೋಭಜನ್ಯ ಉತ್ಸಾಹದಿಂದ ಉಪಯೋಗವಿಲ್ಲ. ಅದು ಮೊದಲು ಕುದಿಯುತ್ತಿದ್ದು ಮೆಲ್ಲಗೆ ತಣ್ಣಗಾಗಿ, ಉಗುರುಬೆಚ್ಚಗಾಗಿ, ಕಡೆಗೆ ಹಿಮದಷ್ಟು ಶೀತಲವಾಗುತ್ತದೆ. ಅದು ತಣ್ಣಗಾದ ಮೇಲೆ ಚಳವಳಿಯು ಎಲ್ಲಿ ಉಳಿಯಬೇಕು? ಆದ್ದರಿಂದಲೇ ಕ್ಷೋಭಜನ್ಯ ಉತ್ಸಾಹದ ಮೇಲೆ ವಿಶ್ವಾಸವಿಡತಕ್ಕದ್ದಲ್ಲ. ಉತ್ಸಾಹವೆಂಬ ವಾಯುರೂಪ ಪದಾರ್ಥವನ್ನು ಉಪಯೋಗಿಸಿ, ಘನೀಕರಿಸಿ ಕಾರ್ಯರೂಪಕ್ಕೆ ತರಬೇಕು. ತರುಣರು ಹಿಂದೂಸ್ಥಾನೀ ಸೇವಾದಲದಂತಹ ಸಂಸ್ಥೆಗಳಲ್ಲಿ ತಂಡತಂಡವಾಗಿ ಸೇರಿ ಕವಾಯತು ಶಿಕ್ಷಣ ಮತ್ತು ಶಿಸ್ತು ಇವುಗಳನ್ನು ಕಲಿತುಕೊಂಡು ಹೆಚ್ಚಿನ ಜವಾಬ್ದಾರಿಯ ಕೆಲಸಗಳನ್ನು ನಿರ್ವಹಿಸುವದಕ್ಕೆ ಸಿದ್ಧರಾಗಬೇಕು.

## ಇತರ ಸಂಸ್ಥೆಗಳು-ಸ್ಕೌಟಪದ್ಧತಿ

ದೇಶದೊಳಗೆ ಹಿಂದೂಸ್ತಾನೀ ಸೇವಾದಲದಂತೆಯೇ ಇತರ ಸಂಸ್ಥೆಗಳಾದರೂ ಇವೆ. ಉದಾಹರಣಾರ್ಥವಾಗಿ ಸ್ಕೌಟ್ ಚಳವಳಿ. ಅವರಾದರೂ ಹಿಂದುಸ್ತಾನೀ ಸೇವಾದಲದವರು ಮಾಡುವ ತರಹದ ಕೆಲಸಗಳನ್ನೇ ಮಾಡುತ್ತೇವೆಂದು ಹೇಳಿಕೊಳ್ಳುತ್ತಾರೆ. ಆದರೆ ಸ್ಕೌಟ್ ಚಳವಳಿಯು ರಾಷ್ಟ್ರಘಾತುಕವಿದೆಯೆಂದು ಹೇಳಲಿಕ್ಕೆ ಎಡೆಯಿದೆ. ಅದು ಸ್ವಭಾವದಲ್ಲಿಯೂ ಕಾರ್ಯದಲ್ಲಿಯೂ ಸಾಮ್ರಾಜ್ಯವಾದಿ (ಕೆಲವೇ ಜನರ ಸುಖದ ಸಲುವಾಗಿ ಜನಸಾಮಾನ್ಯರನ್ನು ಹಿಂಡುವ) ಸಂಸ್ಥೆಯಿದೆ. ಅದು ಅಂಥಾ ಸಂಸ್ಥೆಯಿದೆಯೆಂಬದು ಅನುಭವ ಸಿದ್ಧವಾದ ವಿಷಯ. ಮಹಾತ್ಮಾಜೀ, ರಬೀಂದ್ರನಾಥ ಠಾಗೋರ, ಸಿ. ಎಫ್. ಎಂಡ್ರೂಸ, ಶಾಪೂರಜೀ ಸಕಲತವಾಲಾ, ಶ್ರೀನಿವಾಸ ಅಯ್ಯಂಗಾರ ಮೊದಲಾದ ಮಹಾನ್ ಮಹಾನ್ ಧುರೀಣರು ಸ್ಕೌಟ ಚಳವಳಿಯು ಸಾಮ್ರಾಜ್ಯವಾದಿ ಸ್ವಭಾವದ ಸಂಸ್ಥೆಯೆಂಬುದನು ಹಿಂದೀ ಜನತೆಯ ಲಕ್ಷ್ಯಕ್ಕೆ ತಂದುಕೊಟ್ಟಿರುತ್ತಾರೆ. ಸ್ಕೌಟರೂ ಅವರ ಚಾಲಕರೂ ಹಿಂದೂಸ್ಥಾನವನ್ನು ಶಾಶ್ವತವಾಗಿ ಸಾಮ್ರಾಜ್ಯವಾದಿಗಳ ಹಿಡತದಲ್ಲಿ ಇರಗೊಡುವಂತೆ ಸಹಾಯಮಾಡುತ್ತಿ

ದ್ದಾರೆ. ಇದು ನನ್ನ ದೃಢವಾದ ನಂಬಿಗೆ. ಹಿಂದೂಸ್ತಾನೀ ಸೇವಾದಲವು ಅಚ್ಚ ರಾಷ್ಟ್ರೀಯ ಸಂಸ್ಥೆಯಿದೆ. ಮತ್ತು ಸಂಪೂರ್ಣ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಗಳಿಸುವದರ ಸಲುವಾಗಿಯೇ ಜನ್ಮವೆತ್ತಿದೆ. ಈ ಎಲ್ಲಾ ಕಾರಣಗಳಿಂದಾಗಿ ಈ ಎರಡೂ ಸಂಸ್ಥೆಗಳು ಅವುಗಳ ಧ್ಯೇಯ ಮತ್ತು ಕಾರ್ಯ ಇವುಗಳನ್ನು ನೋಡುತ್ತಿರಲಿಕ್ಕೆ ಒಂದಕ್ಕೊಂದು ಸಂಪೂರ್ಣ ವಿರೋಧವುಳ್ಳವುಗಳಾಗಿವೆ.

## ಹಿಂದೀಯರು ಏನು ಮಾಡುವರು !

ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಹಿಂದೀಯರು ತಮ್ಮ ಮಕ್ಕಳು ಮರಿಗಳನ್ನು ಅವರ ಮನೋಭೂಮಿಕೆಯಲ್ಲಿ ದಾಸಸ್ವಭಾವವನ್ನು ಬಿತ್ತಿ ಅದರ ಬೆಳವಣಿಗೆಯನ್ನು ಉತ್ತೇಜಿಸುತ್ತಿರುವ ಮತ್ತು ತಮ್ಮ ಮಾತೃಭೂಮಿಯನ್ನು ಪರದೇಶೀಯರ ನಿಷ್ಠುರವಾದ ಪಾದಮೂಲದಲ್ಲಿ ಇರಗೊಡಿಸುವದಕ್ಕೆ ಸದಾ ಸಹಾಯಮಾಡುತ್ತಿರುವ ಸಂಸ್ಥೆಗೆ ಸೇರಗೊಡುವರೇ ? ದೇಶದಮೇಲೆ ತಮಗಿರುವ ಹಿಡತವನ್ನು ಬಲಪಡಿಸಿಕೊಳ್ಳುವದಕ್ಕಾಗಿ ಆಳರಸರು ಬೀಸಿರುವ ಬಲೆಯೊಳಗೆ ತಾವಾಗಿಯೇ ಹೋಗಿ ಸಿಕ್ಕಿ ಬೀಳುವರೇ ?

## ಸೇವಾಸಮಿತಿಗಳು

ದೇಶದೊಳಗೆ ಇನ್ನೂ ಕೆಲಕೆಲವು ಸೇವಾಸಮಿತಿಗಳು ಇರುತ್ತವೆ. ಅವುಗಳಾದರೂ ಸ್ಕೌಟ್ ಪದ್ಧತಿಯಿಂದಲೇ ನಡೆದಿವೆ. ಅವುಗಳಲ್ಲಿ ಕೆಲವು ಸ್ಕೌಟ್ ಪದ್ಧತಿಯನ್ನು ಹಿಂದೂಸ್ಥಾನದ ಪರಿಸ್ಥಿತಿಗೆ ಅನುಗುಣವಾಗಿ ರೂಪಿಸಿಕೊಳ್ಳಲು ಪ್ರಯತ್ನಮಾಡಿರಬಹುದು. ದುರ್ದೈವದ ವಿಷಯವೆಂದರೆ ಅವಾದರೂ ತಮ್ಮ ಹುಡುಗರಿಗೆ ದೇಶದ ನಿಜವಾದ ಸಂಗತಿಗಳನ್ನು ತಿಳಿಸಿ ಹೇಳುವದಕ್ಕೆ ಏನೇನೂ ಪ್ರಯತ್ನಮಾಡುವದಿಲ್ಲ. ಅವರು ತಮ್ಮ ಹುಡುಗರನ್ನು ರಾಷ್ಟ್ರಕಾರ್ಯಗಳಲ್ಲಿ ಭಾಗ ತೆಗೆದುಕೊಳ್ಳುವದಕ್ಕೆ ಬಿಡುವದಿಲ್ಲ. ಅವರು ಅಂಧಶ್ರದ್ಧೆಯಿಂದ ತಮ್ಮ 'ಯಜಮಾನ'ರ ಬೆನ್ನುಬೀಳುತ್ತಾರೆ. ಅವರಿಗೆ ಸಾಮ್ರಾಜ್ಯವಾದಿಗಳ ಸಹವಾಸವು ರುಚಿಸುತ್ತದೆ. ರಾಷ್ಟ್ರವಾದಿಗಳ ಸಹವಾಸವು ಬೇಡಾಗಿದೆ.

## ಏಕ ಜಾತೀಯ ಸಂಸ್ಥೆಗಳು

ಒಂದೊಂದು ಜಾತಿಗಳಿಗಷ್ಟೇ ಸಂಬಂಧಿಸಿದ ಸೇವಾಪಥಕಗಳು ಕೆಲವು ಅವೆ. ಅವುಗಳ ಧ್ಯೇಯುಗಳ ಮೇಲಿಂದಲೇ ಅವು ಆಯಾ ಜಾತಿಗಳ ಹಿತದ ಕಡೆಗಷ್ಟೇ ನೋಡುತ್ತವೆ; ಇಡೀ ಜನತೆಯ ಹಿತದ ಕಡೆಗೆ ಅವುಗಳ ದೃಷ್ಟಿ ಇಲ್ಲ ಎಂದು ತಿ[ಳಿ]ಯುತ್ತದೆ.

## ಸ್ವತಂತ್ರ ಪದಾರ್ಥಗಳು

ಇತ್ತೀಚೆಗೆ ದೇಶದಲ್ಲಿ ಕೆಲವು ಸ್ವತಂತ್ರ ಸ್ವಯಂಸೇವಕ ಪಥಕಗಳು ಹುಟ್ಟಿವೆ. ಅವರು ತಮ್ಮತಮ್ಮಷ್ಟಕ್ಕೇ ಕೆಲಸ ಮಾಡುತ್ತಿದ್ದಾರೆ. ತಮಗೇನಾದರೂ ಉಪಯೋಗವಾಗು[ವಂ]ಹಾಗಿದ್ದರೆ ರಾಷ್ಟ್ರಕಾರ್ಯಗಳನ್ನಾದರೂ ಮಾಡುತ್ತಾರೆ. ಅವರಿಗೇನೂ ಒಂದು ನಿಶ್ಚಿತ ಧ್ಯೇಯವೆಂತಿಲ್ಲ. ಹಿಂದೂಸ್ತಾನೀ ಸೇವಾದಲದ ಶಿಕ್ಷಣದಂತಹ ಶಿಕ್ಷಣದ ಕಡೆಗಾದರೂ ಅವರ ಲಕ್ಷ್ಯವಿಲ್ಲ. ಆದರೂ ಅವರು ಬೇಗನೇ ದಲದ ಧ್ಯೇಯ ಸ್ಫೂರ್ತಿಗಳನ್ನು ಅರಗಿಸಿಕೊಂಡು ಸೇವಾದಲಕ್ಕೆ ತಮ್ಮ ಸಂಸ್ಥೆಗಳನ್ನು ಜೋಡಿಸುವರೆಂಬ ಆಶೆಯಿದೆ.

## ವ್ಯಾಯಾಮ ಶಾಲೆಗಳೂ ಗರಡೀ ಮನೆಗಳೂ

ದೇಶದೊಳಗಿನ ಹಳೇ ಹೊಸ ಪದ್ಧತಿಗಳ ಎಲ್ಲಾ ವ್ಯಾಯಾಮ ಶಾಲೆಗಳೂ ಗರಡೀಮನೆಗಳೂ ಬರೇ ಶಾರೀರಿಕ ಶಿಕ್ಷಣದ ಕಡೆಗಷ್ಟೇ ಲಕ್ಷ್ಯಗೊಡುತ್ತವೆ. ದಲದವರಂತೆ ಮಾನಸಿಕ ಶ[ಕ್ತಿ] ವೃದ್ಧಿಯ ಕಡೆಗೆ ಲಕ್ಷ್ಯಗೊಡುವದಿಲ್ಲ. ಈ ಸಂಸ್ಥೆಗಳು ಯಾವುವೂ ರಾಜಕೀಯ ಸಂಸ್ಥೆಗಳಲ್ಲ. ಅವು ಕಾಂಗ್ರೆಸ್ ಇಲ್ಲವೆ ಇತರ ರಾಜಕೀಯ ಸಂಸ್ಥೆಗಳಿಂದ ದೂರವಾಗಿರುತ್ತವೆ.

## ಹಿಂದೂಸ್ತಾನೀ ಸೇವಾದಲ

ಶಿಕ್ಷಣ ಶಿಸ್ತು ಮತ್ತು ಸಂಘಟನೆ ಇವುಗಳನ್ನು ಸಂಪಾದಿಸಿಕೊಂಡು ತಮ್ಮ ಜೀವಕ್ಕೇನೇ ಅಪಾಯ ಬರುವ ಸಂದರ್ಭಗಳಲ್ಲಿ ಕೂಡ ಜನರ ರಾಜಕೀಯ ಬಾಧ್ಯತೆ ಮತ್ತು ದೇಶಾಭಿಮಾನ ಇವುಗಳ ಸಂರಕ್ಷಣೆಗಾಗಿ ಕಾತರಿಸುತ್ತಿರುವ ಸಂಸ್ಥೆಯೆಂದರೆ ಹಿಂದೂಸ್ತಾನೀ ಸೇವಾದಲವೊಂದೇ ಎಂಬುದು ಮೇಲಿನ ವಿಷಯದ ಮೇಲಿಂದ ತಿಳಿದು ಬಂದೀತು.

## ಜನತೆಯೂ ದಲವೂ

ನಮ್ಮ ಜನರು ದಲಕ್ಕೆ ಸಹಾಯಮಾಡಿ ಅದು ತನ್ನ ಧ್ಯೇಯವನ್ನು ಸಾಧಿಸಿಕೊಳ್ಳುವಂತೆ ಮತ್ತು ತನ್ನ ಪರಿಣಾಮಕಾರಿಗಳಾದ ಕಾರ್ಯಕ್ರಮಗಳನ್ನು ಆಚರಣೆಗೆ ತಂದು ಮುಂ[ದೆ] ಸಾಗಿಸುವಂತೆ ಮಾಡಿಯಾರೆಂದು ನಾನು ನಂಬುತ್ತೇನೆ. ಈ ವಿಷಯದಲ್ಲಿ ಉಪೇಕ್ಷಾರವನ್ನು ಬಿಟ್ಟುಕೊಟ್ಟು ದೇಶಬಾಂಧವರು ತನುಮನಧನಗಳಿಂದ ಸಹಾಯವನ್ನು ಮಾಡತಕ್ಕದ್ದಲ್ಲವೇ ನನ್ನ ಇಚ್ಛೆಗಳು ಫಲಕಾರಿಯಾದಾವೆಂದು ನಾನು ನಂಬುತ್ತೇನೆ.

# ಹಟವಾದ-ಪದ್ಧತಿ

( ನಿರೀಕ್ಷಕನಿಂದ )

## ಯೇನಕೇನ ಪ್ರಕಾರೇಣ ವಾದೇ ವಿಜಯೀ ಭವೇತ್

[ ಪ್ರತಿಪಕ್ಷ ಕೋಲಾಹಲಖಂಡನ ಪರಶುರಾಮ ತುಂಟಮುನಿಪ್ರಣೀತ ಹಟವಾದಪದ್ಧತಿಯಿಂದ ]

ಟಾಯಿಮ್ಸ್ ಆಫ್ ಇಂಡಿಯಾ ಪತ್ರದವರೂ ಆಗೀಗ 'ಕೇಸರೀ' ಪತ್ರಿಕೆಯವರೂ ಮಹಾತ್ಮಾಗಾಂಧಿಯವರ ಮತ್ತು ಅವರ ತತ್ತ್ವಗಳ ವಿಡಂಬನೆಯನ್ನೂ ದೋಷದರ್ಶಕ ಟೀಕೆಯನ್ನೂ ಮಾಡುವದನ್ನು ಓದಿ ಓದಿ ಹಳೆಯ ಕಾಲದ ಭಾಷ್ಯಕಾರರ ಮತ್ತು ಧರ್ಮಸುಧಾರಕರ ಖಂಡನಮಂಡನ ಪದ್ಧತಿಯ ನೆನಪಾಗುತ್ತಿತ್ತು. ಒಮ್ಮೆ ಒಬ್ಬ ಜಡ್ಜಿಗಳು ( ನ್ಯಾಯಾಧೀಶ) ಒಬ್ಬ ಲಾಯರನಿಗೆ (ವಕೀಲ) 'ಸುಮ್ಮನೆ ಮಾತು ಬೆಳಿಸಬೇಡಿರಿ, ಒಂದೆರಡೆ ಮಾತಿನಲ್ಲಿ ಹೇಳುವದನ್ನು ಹೇಳಿರಿ' ಎನ್ನಲಾಗಿ 'ನನ್ನ ಪಕ್ಷ ಸತ್ಯ; ಪ್ರತಿ ಪಕ್ಷ ಸುಳ್ಳು; ನನ್ನಂತೆ ತೀರ್ಪು ಕೊಡಬೇಕು.' ಎಂದು ಹೇಳಿದನಂತೆ. ಹಿಂದೆ ರಾಜಸಭೆಗಳಲ್ಲಿ ದಿಗ್ವಿಜಯಕ್ಕೆ ಹೊರಟ ವಾದಿಗಳು ಹಾಕುತ್ತಿದ್ದ ಗೊಂದಲದ ಇತ್ಯರ್ಥವೂ ಇದೆ. ಮಾತಿನ ಮಲಕಿನಲ್ಲಿ ಸತ್ಯಕ್ಕೆ ಉರಲು ಹಾಕಿ ' ಉಳಿದದ್ದೆ ಸತ್ಯ ಅಳಿದದ್ದೆ ಮಿಥ್ಯ ' ಎಂದು ಹೇಳುವ ಚದುರತನವು ವಾದಿಗಳದು. ವ್ಯಾಖ್ಯಾನಕಾರರು ಪತ್ರಿಕಾಕರ್ತರು, ವಕೀಲರು, ಧರ್ಮಲಂಡರು, ಗುಳಿಗೆ ಕೊಡುವವರು, ಬುರುಡಿ ಉಳಿಸುವವರು, ಮತ ನಿರ್ವಾಹಕರು, ರಾಜ್ಯನಿರ್ವಾಹಕರು, ಅರ್ಧ ಪಂಡಿತರು, ಅರಣ್ಯಪಂಡಿತರು, ಪಂಡಿತಂಮನ್ಯರು, ನ್ಯಾಯ ಕೊಡುವವರು ಮತ್ತು ಮಾಡುವವರು- ಇವರೆಲ್ಲರೂ ಎಷ್ಟೋ ಸಲ ಮಾತನಾಡಿಕೊಂಡು ಬಂದಂತೆ ಮಾತನಾಡುತ್ತಾರೆ. ಎಲ್ಲರ ವಾದಪದ್ಧತಿಯು ಒಂದೇ. ಹಾಗಾದರೆ ಇವರು ಯಾವದಾದರೊಂದು ಅಪ್ರಕಟಮತದ ಅನುಯಾಯಿಗಳಿರಬೇಕೇನೋ ಎಂದು ನನಗೆ ಸಂಶಯ ಬರುತ್ತಿತ್ತು. ನೀಲಕಂಠ ದೀಕ್ಷಿತರು ತಮ್ಮ 'ಕಲಿವಿಡಂಬನ'ದಲ್ಲಿ ಈ ಮತದವರ ಒಂದೆರಡು ಒಳಗೆರೆಗಳನ್ನು ಕಂಡು ಹೇಳಿದ್ದಾರೆ. ನಾನೂ ಯಥಾಮತಿ ಯಥಾಶಕ್ತಿ ಈ ಕಾಲದ ಹಟವಾದಿಗಳ ಸೂತ್ರಗಳನ್ನು ಕಂಡುಹಿಡಿದು ಜನರು ಅವುಗಳಿಂದ ಸಾವಧಾನರಾಗಿರಬೇಕೆಂದು ಕೇವಲ ಲೋಕಕಲ್ಯಾಣಕ್ಕಾಗಿ ಸಂಪ್ರಕಟಿಸಿದ್ದೇನೆ.

### ವಿತಂಡಯುಕ್ತಿ ರತ್ನಮಾಲಾ

೧ ಮಂದಿ ಎಷ್ಟು ಉದಾಹರಣೆಗಳನ್ನು ಕೊಟ್ಟರೂ ಅವಕ್ಕೆ 'ಅಪವಾದ' ಎಂದೆನ್ನಬೇಕು. ತಾವು ಒಂದೆರಡೇ ಕೊಟ್ಟರೂ, 'ಆದರ್ಶಭೂತ' 'ಮಾದರಿ' ಎಂದು ಕರೆದುಕೊಳ್ಳಬೇಕು.

೨ ಹಳೆಯದನ್ನು ಹೊಗಳುವದಿದ್ದರೆ ' ಅನುಭವಸಿದ್ಧ ' ಎಂದೆನ್ನಬೇಕು. ಬೈಯುವದಿದ್ದರೆ ' ಅಪ್ರಮಾಣ , ಎಂದೆನ್ನಬೇಕು.

೩ ತಾವು ಶಾಸ್ತ್ರವಾಕ್ಯಗಳನ್ನು ಕೊಡುವಾಗ ಹಿರಿಯರು ಜ್ಞಾನಿಗಳು ಹೇಳಿದಂಥ 'ಆಪ್ತವಾಕ್ಯ' ಗಳೆಂದು ಹೇಳಬೇಕು. ಅವನ್ನೇ ಜನರು ಕೊಟ್ಟರೆ 'ಪರಪ್ರತ್ಯಯನೇಯಬುದ್ಧಿ ಆಗಬಾರದು; ಸ್ವತಃ ವಿಚಾರ ಮಾಡಬೇಕು ಎಂದು ಹೇಳಬೇಕು.

೪ ರೂಢಿಯು ತಮಗೆ ಅನುಕೂಲವಿದ್ದಾಗ 'ಜನಸ್ವರೂಪ ಜನಾರ್ದನನ ಆಚರಣೆ'ಎಂದು ಅದನ್ನು ಹೊಗಳಬೇಕು. ಬೈಯುವದಿದ್ದಾಗ 'ಜನ-ದನ ಕುರಿಹಿಂಡು, ಎಂದು ನಿಂದಿಸಬೇಕು.

೫ ಮಹಾತ್ಮರನ್ನು ಬೆನ್ನು ಹತ್ತಿರಿ ಎಂದು ಹೇಳುವಾಗ 'ಮಹಾಜನೋ ಯೇನ ಗತಃ ಸ ಪಂಥಾ-ದೊಡ್ಡವರು ಹಿಡಿದದ್ದೇ ಹಾದಿ' ಎಂದು ಹೇಳಬೇಕು. ಹಾಗೆ ಮಾಡಬೇಡಿರಿ ಎಂದು ಹೇಳುವದಿದ್ದಾಗ ' ನವಿಲು ಕುಣಿಯುವದೆಂದು ಕಸಬರಿಗೆಯೂ ಕುಣಿದರೆ ಹೇಗೆ' ಎಂದು ವಾದಿಸಬೇಕು.

೬ ಜ್ಞಾನಕ್ಕಿಂತ ಕರ್ಮ ಹೆಚ್ಚು ಎಂದು ಹೇಳುವದಾದರೆ 'ಜ್ಞಾನವೇನು ಬರೀ ಗೊರಟ; ಕರ್ಮವೇ ಅದರ ಫಲ' ಎಂದೆನ್ನಬೇಕು. ಜ್ಞಾನವನ್ನು ಹೆಚ್ಚು ಮಾಡಬೇಕಾದರೆ ' ಜ್ಞಾನ ತಂದೆ ಇದ್ದಂತೆ; ಕರ್ಮ ಅದರ ಮಗು ' ಎಂದು ಇನ್ನೊಂದು ದೃಷ್ಟಾಂತದಿಂದ ಕಣ್ಣು ಕಟ್ಟು ಮಾಡಬೇಕು.

೭ ಕರ್ಮಿಷ್ಠರಿಗೆ ಬೈಯಬೇಕಾದರೆ 'ಡಂಭಾಚಾರಿ'ಗಳೆಂದನ್ನಬೇಕು. ವಿಚಾರವಂತರಿಗೆ ಬೈಯಬೇಕಾದರೆ 'ಒಳಗಂಟಿನವರು' ಎಂದೆನ್ನಬೇಕು.

೮ ಮುಂದೆ ಬಂದವರಿಗೆ ಬೈಯಬೇಕಾದರೆ 'ಅಧಿಕಪ್ರಸಂಗಿಗಳು, ಸ್ವಯಂ ಪ್ರತಿಷ್ಠೆ ಬೆಳಿಸುವವರು' ಎಂದು ನಿಂದಿಸಬೇಕು. ಹಿಂದುಳಿದವರನ್ನು ನಿಂದಿಸಬೇಕಾದರೆ 'ಕೇವಲ ಅನುಯಾಯಿಗಳು—ಸ್ವಯಂಪ್ರಜ್ಞೆಯಿಲ್ಲದವರು' ಎಂದು ಹೇಳಬೇಕು.

೯ ಮುಂದಿ ಹಿಂದೊಂದು ಇಂದೊಂದು ಮಾತಾಡಿದರೆ 'ಅಸಂಬದ್ಧ ಪ್ರಲಾಪಿ'ಗಳೆಂದೆನ್ನಬೇಕು. ತಾವು ಮಾತಾಡಿದರೆ 'ಪ್ರಗತಿಪರರು ಎಂದಂದುಕೊಳ್ಳಬೇಕು.

೧೦ ಮುಂದಿ ಯಾವದಾದರೂ ಮಾತಿನ ಬಗ್ಗೆ ಸಂಶಯ ತೆಗೆಮಕೊಂಡರೆ 'ಸಂಶಯಾತ್ಮಾ ವಿನಶ್ಯತಿ' ಎಂದು ಬೆದರಿಸಬೇಕು. ತಮಗೇ ಸಂಶಯು ಬಂದರೆ 'ಸಂಶಯು ಹುಟ್ಟದೆ ಸತ್ಯವು ದೊರಕದು' ಎಂದು ಹೇಳಿಕೊಳ್ಳಬೇಕು.

೧೧ ಪ್ರತ್ಯಕ್ಷ ವಿಷಯಗಳ ಬಗ್ಗೆ ತಮಗೇ ಸಂಶಯು ಬಂವಾಗ 'ಪ್ರತ್ಯಕ್ಷವಿದ್ದರೂ ಪ್ರಮಾಣಿಸಿ ನೋಡಬೇಕು' ಎಂಬ ನ್ಯಾಯವನ್ನು ಹೇಳಬೇಕು. ಮುಂದಿಗೆ ಬಂದರೆ 'ಕೈಹುಣ್ಣಿಗೆ ಕನ್ನಡಿಯೇಕೆ?' ಎಂದು ಕೇಳಬೇಕು.

೧೨ ತಾವು ಚರ್ಚೆಮಾಡುವದೆಲ್ಲಾ 'ಸತ್ಯಾನ್ವೇಷಣ' ಎಂದಂದುಕೊಳ್ಳಬೇಕು. ಮುಂದಿ ಮಾಡಿದರೆ 'ದೋಷಾನ್ವೇಷಣ' ಎಂದು ಹೇಳಬೇಕು.

೧೩ ತಾವು ಮಾಡದೆ ಮಾಡ ಹೇಳಬಂದವರಿಗೆ 'ಅನಧಿಕಾರಿಗಳು' ಎಂದು ಹೇಳಬೇಕು. ತಾವುಮಾಡಿ ಹಾಗೆ ಮಾಡಲು ಹೇಳಬಂದವರಿಗೆ 'ತಮ್ಮರ್ದೇ ಶಾಸ್ತ್ರಕ್ಕೆ ನಡೆಯಬೇಕು ಎಂ.. ಆಗ್ರಹವುಳ್ಳವರು' ಎಂದೆನ್ನಬೇಕು.

೧೪ ಹೆಚ್ಚಿನ ವಿಚಾರಗಳನ್ನು ಯಾರಾದರೂ ಹೇಳಲು ಬಂದರೆ, ಈ ವೇದಾಂತ ಸಾಕು, ವ್ಯವಹಾರ ನೋಡಿರಿ. 'ಎಂ.. ಹೇಳಬೇಕು. ಇದ್ದ ಆಚಾರವನ್ನು ಹೇಳಲಿಕ್ಕೆ ಬಂದವರ.. ಹೊತ್ತು ಬಂದಂತೆ ಕೊಡೆ ಹಿಡಿಯುವವರು (Time-Servers) ಎಂದೆನ್ನಬೇಕು.

ಇಲ್ಲಿಗೆ ಚತುರ್ದಶ ಇತ್ಯಂಡ ಯುಕ್ತಿರತ್ನಮಾಲಿಕೆ ಮುಗಿದುದು.

---

# 'ಸೆಳವು' ಇಲ್ಲವೆ ಶಕ್ತಿವ್ಯಕ್ತಿಗಳ ಸಂಘರ್ಷ

(ಗೆಳೆಯರ ಗುಂಪಿನಲ್ಲಿ ವಿನಾಯಕನು ಬರೆದುದು)

### ಭಾಗ ೧.

**ಶಕ್ತಿ—** ಚಂಡ ಪ್ರಚಂಡ ತಾಂಡವವು ನಡೆದಿಹುದು;
ಅಂಡಜನ ಸೃಷ್ಟಿಯೇ ತಡವರಿಸುತಿಹುದು!

**ವ್ಯಕ್ತಿ—** ಆವ! ನೀನಾವ! ನನ್ನನು ಕಾವ ದೇವ?
ರುದ್ರರೂಪವ ತಳೆದಿತೇ ನಿನ್ನ ಭಾವ?

**ಶಕ್ತಿ—** ಛಿನ್ನ ವಿಚ್ಛಿನ್ನ ಲೋಕದ ಮೃತ್ಯು ನಾನು;
ಬಿನ್ನಹದ ಬಿನ್ನಾಣ ನಿನ್ನಲ್ಲಿದೇನು?

**ವ್ಯಕ್ತಿ—** ಅಲ್ಲ! ಬಿನ್ನಹವಲ್ಲವಿದು ಅಮಿತ ಶಕ್ತಿ!
ಸಲ್ಲದೆನಗೀಗ ನಿನ್ನಲ್ಲಿ ಅನುರಕ್ತಿ!
ನಾನೇರುವೆ ಹೇಳಿ ನೀ ಮುಂದೆ ಸಾಗು;
ನನಗೆ ಬೇಸರವಿಹುದು ಈ ನನ್ನ ಸೋಗು.

**ಶಕ್ತಿ—** ಜನತೆಯನು ಜೀವರಂಗದಿ ಕುಣಿಸುತಿಹೆನು;
ವನಿತೆಯರ ನೋಟದಿಂದವರ ಮಣಿಸುವೆನು.
ಅವರ ಭಾಗ್ಯೋದಯದ ರವಿ ಚಂದ್ರ ನಾನು;
ಅವರ ದುರ್ಭಾಗ್ಯಕಿಹ ರಾಹು ನಾನು!

**ವ್ಯಕ್ತಿ—** ಅರಿತೆ ನಿನ್ನಯ ಬಲವ ಘನಘೋರ ಶಕ್ತಿ!
ಇನ್ನು ನನ್ನಯ ವಿಮೋಚನೆಗೇನು ಯುಕ್ತಿ?

**ಶಕ್ತಿ—** ಜನರು ಪೂಜಿಸುವ ಹನುಮಂತ ನಾನಹುದು;
ನನ್ನಿಂದ ಅವರಿಗತಿ ಶಕ್ತಿಯಹುದು.
ವಿಧಿಲಿಖಿತಜನ್ಯದುಃಖದ ಡೂರು ಕೇಳಿ
ನೊರೆಯಿಡುವ ಮಾನವರ ಅಭಿಮಾನ ತಾಳಿ
ತುಸುವಾದರೂ ಕಳೆವೆನವರ ಕ್ಲೇಶವನು;
ಶಿಥಿಲಗೊಳಿಸುವೆನು ಅವರನೆಳೆವ ಪಾಶವನು.

ಕೇರಿಕೇರಿಯ ಗುಡಿಗಳಲಿ ದುರ್ಗೆಯಾಗಿ
ನಾಶಿಸುವೆ ಅವರ ಭವ್ಯತೆಗೆಂದು ಹೋಗಿ.
ಹಳ್ಳಿಪಳ್ಳಿಯ ಜನರು ಆನಂದದಿಂದ
ಪೂಜಿಸುವರೆನ್ನನತಿಭಕ್ತಿಯಿಂದ !
ನಗರವಾಸಿಗಳೆನ್ನ ಮೆರವಣಿಗೆ ತೆಗೆದು
ಮನ್ನಿಸುವರೆನ್ನ ನಾ ಬೇಕೆಂದು ಬಗೆದು !

ವ್ಯಕ್ತಿ– ಮೂಢ ಚೈತನ್ಯವೇ ! ನೀನೆನಗೆ ಬೇಡ !
ಬಲ್ಲೆನೀ ಬಲೆಯಲ್ಲಿ ಸಿಕ್ಕುವನ ಪಾಡ !
ಗಾವಿಲರ ಗುರುವಾಗಿ ಮೆರೆಯುತಿಹೆ ನೀನು;
ನಿನಗೆ ಮತ್ತೆಲ್ಲಿ ಮನ್ನಣೆ ಸಿಕ್ಕದೇನು ?

ಶಕ್ತಿ – ಸಿರಿಯೆಂದು ಧ್ಯಾನಿಪರು ಶ್ರೀಮಂತರಿಹರು;
ಸರಸತಿಯ ಕಾಂಬುವರು ಧೀಮಂತರಿಹರು.
ನಿನ್ನೆ ಸಾಕುವು ಅರಸನಾಗಲಿಲ್ಲೆ ?
ಮೊನ್ನೆ ರಸಿಯದ ಝಾರ ಜಾರಲಿಲ್ಲೆ ?
ಇದು ಎಲ್ಲ ನಾನು ಹೂಡಿದ ಆಟವು;
ಇದು ನನ್ನ ಮಂತ್ರ ಮಾಡಿದ ಮಾಟವು !
ದೇಶದೇಶಗಳ ದಿಗ್ವಿಜಯ ನಾನು;
ರಾಜ್ಯಗಳಿಗಿಹ ಧೂಮಕೇತು ನಾನು;
ಭಾಷೆಭಾಷೆಗಳ ಒಳಜಗಳ ನಾನು !
ಪಿಂಡಾರಿಗಳು ಇತ್ತರೆನಗೆ ಮನ್ನಣೆಯ;
ಇಂಗ್ಲಂಡವೀವುದೀಗೆನಗೆ ಕಾಣಿಕೆಯ;
ಇತ್ತೆ ನಾ ರಸಿಯರಿಗೆ ಅವರ ಹೂಣಿಕೆಯ !
ಜೀವಿಸಲು ನೀ ಬಾಗು; ನನ್ನೆದುರು ಬಾಗು !
ಇಲ್ಲದಿದ್ದರೆ ಹೋಗು; ಪ್ರಾಣ ನೀಗು !

ವ್ಯಕ್ತಿ– ಆರು ನೀನೆಲೆ ಶಕ್ತಿ ! ಇಂತು ಬಲುಮೆಯನು
ಮಾಡುತಿಹೆ ಪಡೆಯುವದಕೆನ್ನ ಒಲುಮೆಯನು ?
ವ್ಯಕ್ತಿ ಸಮುದಾಯವೇ ರಾಜ್ಯ, ಸಾಮ್ರಾಜ್ಯ;
ಅಂದ ಮೇಲೆಂತು ಸರಿ ನಿನ್ನ ವ್ಯಾಜ್ಯ ?
ನಾವು ಮಾಡಿದುದನ್ನೆ ರಾಜ್ಯ ಮಾಡುವದು;
ನಾವು ಹಾಡಿದುದನ್ನೆ ದೇಶ ಹಾಡುವದು;
ದೇಶಕ್ಕೆ ಕೇಡಾದ ಅರಸನೀಡಾದ
ಮರಣದೆಳತಕ್ಕೆ ! ನಾವ್ ನಮಗೆ ಬೇಡಾದ
ಮಾರ್ಗವನು ತಿಳಿದರೂ ಏಕೆ ತುಳಿಯುವೆವು ?
ವ್ಯಕ್ತಿಸ್ವಾತಂತ್ರ್ಯವಿದೆ; ಹೇಗೆ ಅಳಿಯುವೆವು ?

ಶಕ್ತಿ —ಹಾಗಲ್ಲ ! ಕೆಚ್ಚೆದೆಯ ಕನ್ನಡಿಗ ವೀರ !
ಅರಿತೆ ನಿಚ್ಚಳವಾಗಿ; ನೀನಹುದು ಧೀರ,
ಆದರೀ ಸ್ವಾತಂತ್ರ್ಯ ಮಾನವನಿಗಿಹುವೆ ?
ಈ ತರಹದಪರಿಮಿತ ಶಕ್ತಿ ಅವಗಿಹುದೆ ?
ನನ್ನ ಬಲೆಯುಲಿ ಸಿಕ್ಕು ಬಿದ್ದ ಮಾನವನು
ನಿರುಪಾಯನಾಗಿ ಬಳಲುವನು; ಸಾಯುವನು !
ನಿತ್ಯವಿಹುದವಗೆ ಈ ಗೂಗೆಗಳ ಶಕುನ,
ಹಲ್ಲಿಗಳ ಸ್ವರವು, ಕಾಗೆಗಳ ಅಪಶಕುನ,
ಹುಚ್ಚು ಹಿಡಿಸುವ ಶಕ್ತಿ ಔಷಧವಲಿಹುದು;
ನನ್ನ ಅದ್ಭುತ ಮಂತ್ರ ತಂತ್ರಗಳಲಿಹುದು,
ನಾನು ಹೇಳಿದ ಹಾಗೆ ದೆವ್ವ ಕುಣಿಯುವವು;
ನನ್ನೆದುರು ಪೈಶಾಚಗಣವು ಮಣಿಯುವವು.
ಇವು ಎಲ್ಲ ಮಾನವರ ಅರಿಗಳಲ್ಲೆ ?
ನರಜನ್ಮವೆಂದಿಗೂ ನನ್ನ ಸೆರೆಯಲ್ಲೆ ?
ಮಾರೆಮ್ಮ ತರುವ ತರತರದ ಬೇನೆಗಳು
ನನ್ನವಿವೆ. ಮುಂದೆ ಬರಲಿರುವ ಸೇನೆಗಳು
ನನ್ನವೇ ! ನನ್ನ ಮೋಡಿಯ ತುತೂರಿ
ಘೋಷಿಸಲು ಆಗುವದು ನರಜನ್ಮ ಸೂರಿ !
ನನಗೆಲ್ಲ ತುತ್ತಾಗಿ, ಸಂಘಟನೆಯಾಗಿ,
ಹೋಗುವದು ನಿಮ್ಮ ಜಗವೆಲ್ಲ ಬಯಲಾಗಿ !
ಯಾವ ಕ್ಷಣದಲಿ ನಿನಗೆ ಸಾವೆಂಬುದರಿಯೆ;
ಇಂತಿರ್ದು ನೀನು ಅರ್ಭಟಿಸುವವು ಸರಿಯೆ ?
ನನ್ನ ವಾಣಿಯ ವೀಣೆ ನುಡಿಯುತಿಹುದು;
ಅದರಿಂದ ಸಿನ್ನಾಟ ನಡೆಯುತಿಹುದು !
ವಶವಾಗು ನನಗಿಂದು ಇದನೆಲ್ಲ ತಿಳಿದು;
ಬಾರಯ್ಯ ! ನನ್ನೆಡೆಗೆ ಅಭಿಮಾನವಳಿದು.
ಆ ಬಳಿಕ ನಿನಗೀವೆ ಸುಖದ ಸಂಪದವ,
ತೊಳೆ ನನ್ನ ಪಾದಗಳ ತ್ಯಜಿಸಿ ಮದವ !

ವ್ಯಕ್ತಿ—ಹಾಗಲ್ಲ ಶಕ್ತಿಯೇ ! ಇನಿತು ತೊಂದರೆಯ
ಸಹಿಸಿ ನುಸುಳಲು ಬೇಕೆ ಈ ನಿನ್ನ ಸೆರೆಯ ?
ಎಲ್ಲ ಅಣುಗಳ ಕೂಡ ಒಂದು ಅಣುವಾಗಿ
ನನ್ನ ಜೀವನವೆಲ್ಲ ನಿನ್ನ ಋಣವಾಗಿ
ನಾಶಿರಲು ನಿನ್ನ ಸಿರಿ ಏತಕಹುದು ?
ಕುರುಡು ಜನ್ಮವು ಏಕೆ ಬೇಸರಿಹುದು ?

ಸುಖದ ಸಂಪತ್ತಿಹುದು ಘನತರ ವಿಪತ್ತು
ನಾನಿರಲು ನಿನ್ನ ಕಲ್ಯಾಣತಿಗೆ ತುತ್ತು.

ಶಕ್ತಿ— ತಿಳಿಯಿತೆನಗೀಗೆಲವೊ ! ನಿನ್ನ ಒಳಸಂಚು ;
ಈ ಕಲ್ಪನೆಯು ಕ್ಷಣಿಕ ಮಿಂಚಿನಂಚು !
ನನ್ನನರಿಯದರು ದುರ್ಭಾಗ್ಯರಿರುತಿಹರು ;
ನನ್ನನರಿತವರು ಸಿರಿವಂತರಿಹರು ;
ನನ್ನ ವಂಚಿಸುವವರು ಹಂಚಿ ಹೋಗುವರು !
ನಾನು ಕವಿಪುಂಗವನ ಕವಿನ ಮೋಡ ;
ಈ ದುರಾಗ್ರಹವು ನಿನಗಿನ್ನು ಬೇಡ ;
ನೀನಿನ್ನು ಅರಿತಿಲ್ಲ ಇದರ ಪಾಡ !
ದಾರಿದ್ರ್ಯದುರಿಯಲ್ಲಿ ನಿನ್ನನಿಡುವೆ ;
ಘೋರ ಯಾತನೆಗಳಿಂ ನಿನ್ನ ಸುಡುವೆ !
ಸರ್ವಥಾ ಬೇಡ ನಂಜಿನ ಪರೀಕ್ಷೆ ;
ಸಾಕು ಮಾಡಿನ್ನು ಹಿಡಿ ನನ್ನ ದೀಕ್ಷೆ !

ವ್ಯಕ್ತಿ—ಸಿರಿಯೇನು ಹಿರಿದಲ್ಲ ಹೋಗೆಲವೊ ! ಶಕ್ತಿ !
ಅರಿತೆನಿಡಿಯಾಗಿಂದು ನಿನ್ನೀ ಕುಯುಕ್ತಿ.
ಸಿರಿಯು ಇರಬಹುದು ಇಲ್ಲದೆಯೆ ಇರಬಹುದು;
ಸತ್ಯಜೀವನವೊಂದೆ ನಿತ್ಯವಿಹುದು.
ಪೂರ್ಣಯೋಗದ ಗುರಿಯೆ ನಿಜವಾದ ಗುರಿಯು ;
ಅದಕೆ ಜೆಂಬಲವಿಹುದು ಇಹದ ಸಿರಿಯು.
ಸಿರಿಯ ಸೆರೆಯಾಳಾಗಿ ನಾನಿರಲು ಒಲ್ಲೆ,
ನಿನ್ನ ಸಂಪರ್ಕವಿಲ್ಲದೆ ಇರಲು ಬಲ್ಲೆ !

ಶಕ್ತಿ— ಅಲ್ಲವೋ ! ಹವೆಯಂತೆ ನಾ ಸರ್ವವ್ಯಾಪಿ !
ನನಗೆ ಶರಣಾಗದವನೆಂಥ ಪಾಪಿ !
ನಿನಗಿನ್ನು ಈ ಜಗದ ಅನುಭವವ ಕೊಡುವೆ;
ನಿನ್ನ ಭವಸಾಗರದಿ ಈಸಬಿಡುವೆ !
ತೋರಿಸುವೆನೆಲೆ ! ಖಂಡಖಂಡಗಳ ಚೆಲುವ,
ಪ್ರಕೃತಿಸೌಂದರ್ಯವನು; ಪಡೆಯೆನ್ನ ಒಲವ !
ಮುನ್ನೀರಿನಾಳವನು ನೀನು ಅರಿತಿಲ್ಲ
ಭಿನ್ನಕಲ್ಪನೆಗಳಲಿ ಇನ್ನು ಬೆರೆತಿಲ್ಲ.
ನಿನಗೆ ಮೆರೆವಾಂಗ್ಲ ದೇಶವನು ತೋರಿ
ಅಲ್ಲಿ ಸಾರುವೆ ನಿನ್ನ ವಿಜಯಭೇರಿ !
ಆಂಗ್ಲ ನುಡಿಗಿರುವ ಮಾಂಗಲ್ಯವನು ನೋಡಿ
ಬರುವಿಯಂತೆಲವೊ! ನೀ ಕುಣಿದು ಹಾಡಿ!

ಸೃಷ್ಟಿಕರ್ತನ ಎಲ್ಲ ಮಿರುಗು ಬೆರಗು
ನೋಡಿದೊಡೆ, ಕಾಣುವದು ತಾಯ ಸೆರಗು.
ಈ ನಿನ್ನ ಕೂಪದಲಿ ಮೂರು ಚಿಕ್ಕೆಗಳು;
ಮುಗಿಲ ಮೇಲ್ಮೊರ್ವವೀ ತೆರದ ರೆಕ್ಕೆಗಳು !

ವ್ಯಕ್ತಿ—ಬೇಡಯ್ಯ! ನನಗಾಂಗ್ಲ ನಾಡ ಹಾಡು !
ಸಾಕಿಹುದು ನನಗೆ ಈ ನಮ್ಮ ನಾಡು.
ಪ್ರಕೃತಿದೇವಿಯ ಚೆಲುವು ಎಲ್ಲಕಡೆಗೊಂದೆ;
ಅಂತೆ ನೀನಾದರೂ ಇಲ್ಲಿ ಬಂದೆ !
ಎಲ್ಲಿಯೂ ಅವಳ ಕುಸುಮಗಳ ಗಂಧ ;
ಎಲ್ಲಿಯೂ ಅವಳ ಆ ರೂಪದಂದ !
ನಾ ತಿರುಗಲಾರೆ ಮನೆ ಮನೆ ನಿನ್ನನರಸಿ,
ಮೋಸಕೊಳಗಾಗೆನ್ನ ಧ್ಯೇಯಗಳನಿರಿಸಿ.
ಸಾಧಕಗೆ ಎಲ್ಲಿದ್ದರೇನು ಹೇಳು ?
ಬಾಧೆ ತರಲಾರದವನಿಗಾವ ಗೋಳು.
ಆಕಾಂಕ್ಷೆಗಳಿಗೇನು ಸೀಮೆಯಿದೆಯೆ ?
ಅವಕೆ ವಶವಾದವಗೆ ಶಾಂತಿಯಿದೆಯೆ ?

ಶಕ್ತಿ— ನಕ್ಷತ್ರದಂತೆ ಹೊಳೆಹೊಳೆವ ಲಲನೆ,
ಅಕ್ಷಯ್ಯವಾದ ಮೃದುಹಾಸವದನೆ,
ಕಂಗೊಳಿಪುದವಳಿಂದ ನಿನ್ನರಮನೆ !
ಶಾಂತಿಯಹುದವಳು ಈ ನಿನ್ನ ಮನಕೆ;
ಕಾಂತಿಯಹುದವಳು ಈ ನಿನ್ನ ಬನಕೆ;
ನಿನ್ನ ಕಲ್ಪನೆಯೊಡೆದ ಚೈತ್ರವನಕೆ !
ಆಗಸದ ಕುಂಕುಮರಿಶಿಣವಿರುವ ರವಿಯು,
ನಿಶೆಯ ನಿಶಿಯಲಿ ನಿಂತು ನಟಿಸುತಿಹ ಕವಿಯು,
ಅವಳೆಂದಿಗೂ ನಿನ್ನ ಜೀವನದ ಸವಿಯು !
ನಿನ್ನಾತುಮಕೆ ಬುದ್ಧಿಪ್ರಾಣಗಳಿಗೆ
ಬಂದ ವೇದನೆಯುಸಿರು ನಿನ್ನ ಅರಗಿಳಿಗೆ !

ವ್ಯಕ್ತಿ—ಬೇಡ ! ನಿನ್ನುಸಿರೆನಗೆ ಸಾವು ಕೇಳು,
ಇಂಥ ಹಂಬಲವೆಲ್ಲ ನನಗೆ ಗೋಳು.
ತಾಯ್ ತಂದೆಗಳ ತೊರೆದು ಅವರೊಲವ ತ್ಯಜಿಸಿ
ಹೊಸದಾಗಿ ಒಂದು ಹೊಸ ಸೃಷ್ಟಿಯನೆ ಸೃಜಿಸಿ
ಅವಳನ್ನು ಅದರೊಡತಿಯಾಗಿ ಮಾಡಿ
ಇರಲಾರೆ ನಾನತ್ತು, ಕಾಡಿ ಬೇಡಿ !

ದೇವ ತಾನಾಗಿತ್ತ ಕುಲತಿಲೋತ್ತಮೆಯು
ಆಗಲಾರಳೆ ನನ್ನ ಐಸಿರಿಯು ರಮೆಯು ?
ನೀನು ರತುನವನಿತ್ತರೂ ಕರುಣಿಸೆನಗೆ
ಅದಕೆ ಸರಿಯಾಮುಂಗುರವು ದೊರೆಯುದೆನಗೆ.
ನಿನಗೆ ಶರಣೆಂದು ಇಹಸಿರಿಯು ತಂಮ
ಕಳೆದುಕೊಳಲಾರೆ ಒಳತಿರುಳನಿಂದು !
ನನ್ನ ತೃಷೆಗನುಸರಿಸಿ ನನಗೀವನವನು;
ಉಲ್ಲಂಘಿಸುವದೆಂತು ದೇವನಾಜ್ಞೆಯನು ?

ಶಕ್ತಿ— ದೇವನೆಲ್ಲಿಯ ದೇವನೆಲೆ ಮೂಢ ಕೇಳು !
ಇಂಥ ನಂಬುಗೆಯಿಂದ ನಿಮ್ಮ ಮನೆ ಹಾಳು.
ನಿನ್ನ ಭಾಗ್ಯವು ನಿನ್ನ ಕೈಯಲಿಹುದು;
ನೀನು ಮಾಡಿದುದನ್ನೆ ವಿಧಿಯು ಮಾಡುವದು.
ಸಮರದಲಿ ಕಾಲ್ದೆಗೆಯಬೇಡ ಚೆನ್ನ !
ನಿನ್ನ ಕವಚವೆ ನಾನು; ಬಿಡೆ ನಿನ್ನ ಬೆನ್ನ !
ಮುಂದರಿವುದಕೆ ನಿನಗೆ ಕನಸುಗಳನೀವೆ,
ಸುರರ ಶಿರದಲಿ ಮೆರೆಯಲಿಚ್ಛಿಸುವ ಹೂವೆ !
ನಿಶೆಯೆ ರೆಕ್ಕೆಗಳಾಗಿ ದಿಶೆಗಳಕ್ಕರೆಯಾಗಿ
ಹಗಲೆ ಹೃದಯದಿ ಬೆಳಗುತಿಹ ಕರುಣೆಯಾಗಿ
ಸಾಗುತಿಹ ಜೀವಿಗಳ ದಿವ್ಯದೇಶ,
ಮಾನವನ ಪ್ರೇರಣೆಯ ವಿಮಲ ಕೋಶ !
ಆ ನಾಡಿನಲಿ ನಿನ್ನ ಕರೆದೊಯ್ದು ಬಿಡುವೆ ;
ಅದರ ಮುಗಿಲಲಿ ತೇಲ್ವ ಕನಸುಗಳ ಕೊಡುವೆ !
ಕಿನ್ನರರ ರಂಭೆಯರ ಕಿನ್ನರಿಯರ,
ಕಿನ್ನರಿಯ ನುಡಿಸುತಿಹ ಸುಂದರಿಯರ,
ಚದುರೆಯರು ಕೊಟ್ಟ ಮದಿರೆಯ ಕುಡಿದು ಕುಣಿದು
ಕನಸುಗುದುರೆಗಳನ್ನು ಓಡಿಸುತ ದಣಿದು
ಲೀಲಾವಿಲೋಲರಿಹ ಎಳೆಯ ಬಾಲಕರ,
ಕೋಲುನವಿಲಾಟಗಳ ಬಾಲಕಿಯರ,
ಕುಂದದಲೆ ಕಂದದಲೆ ಮೆರೆವ ಕುಸುಮಗಳ,
ನಂದದಲೆ ಬೆಳಗುತಿಹ ಅಂದ ಜ್ಯೋತಿಗಳ
ನಾಡಿಗರಸಾಗಿ ಮಾಡುವೆ ನಿನ್ನ ಚೆನ್ನ !
ನಿನ್ನ ಕವಚವೆ ನಾನು; ಬಿಡೆ ನಿನ್ನ ಬೆನ್ನ !

ವ್ಯಕ್ತಿ—ಸಾಕೆನಗೆ ಈ ನಿನ್ನ ಒಣರಗಳೆ ಶಕ್ತಿ !
ಅರಿತೆನಿಡಿಯಾಗಿಂದು ನಿನ್ನ ಕುಯುಕ್ತಿ !

ಕನಸುಗಳ ಸಿರಿಯರಸ ನಾನು, ನೀನಲ್ಲ;
ನನ್ನಾಸೆಗಳನೆಲ್ಲ ದೇವ ಬಲ್ಲ !
ಹಂಬಲಿಸಿ ಕನಸುಗಳ ಜೀವನಕೆ ಸೋತು
ನಿನ್ನ ಹಿಂಬಾಲಿಸಲು ನೀನೊರೆವ ಮಾತು
ಸಲ್ಲದದು ! ಈ ಸಾವ ನೋವ ಸಹಿಸಿ
ಕೊಲ್ಲುತಿಹ ಆಶೆಗಳನೆಲ್ಲ ದಹಿಸಿ
ನಾನು ಜೀವಿಸಲು ಕೊಡುವವನಿರುವ ದೇವ ।
ಅವನಿತ್ತ ಒಂದು ಕನಸಿನ ದಿವ್ಯಭಾವ
ನೀನೀವ ಕನಸುಗಳನೆಲ್ಲ ಮೀರಿಹುದು,
ಏಕಾಂಗಿಯಾಗಿ ಸತ್ಯವನು ಸಾರಿಹುದು.
ತಾಳ್ಮೆಯಂತಹ ಶಕ್ತಿ ಇನ್ನಾವುದಿಲ್ಲ,
ನಿಜವನರಿತೆನು ಆಲಿಸೆನು ನಿನ್ನ ಸೊಲ್ಲ !
ನಾನೆತ್ತಿ ಪಿಡಿಯೆ ಈ ರತ್ನವಿಹ ಹೆಡೆಯು
ಆಗುವದು ವಿಶ್ವ ವಿಶ್ವಕ್ಕೆಲ್ಲ ಕೊಡೆಯು !
ನನ್ನಾತ್ಮದುನ್ನತಿಯು ನನ್ನದಿಹುದು;
ಕೇಳಿನ್ನು ಶಕ್ತಿ ! ನೀ ಸಾಗಬಹುದು ।

× × ×

ಕೋಪಗೊಂಡಾ ಶಕ್ತಿ ಅಣಕಿಸುವ ನಗೆಯ
ನಕ್ಕು ನಿಂತಿತು. ಇದನು ನನ್ನ ಕಡು ಹಗೆಯ
ಮಾಡಿದೆನು ಎಂದು ನಾ ಕಳವಳಿಸುವಲ್ಲಿ
ರೂಪಗೊಂಡಾ ಶಕ್ತಿ ನಿಜರೂಪ ಚೆಲ್ಲಿ
ಮಂಜಿನಂತೆಲ್ಲ ದಿಶೆಗಳನು ವ್ಯಾಪಿಸಿತು.
ಉಷೆಯ ಚಿನ್ನದ ಮುತ್ತಿ ಮತ್ತೆ ಕೋಪಿಸಿತು !
ದುಗುಡದಿಂ ನಡೆದೆ ನಾನೆನ್ನ ಮನೆಗೆ,
ಅಕಟ ! ಚಿಂತೆಯು ತಪ್ಪಲಿಲ್ಲ ಕೊನೆಗೆ !

---

## ಭಾಗ ೨.

ವ್ಯಕ್ತಿ:—ಹಿಂದೊಮ್ಮೆ ನಾ ನುಡಿದ ಹಾಡು ಪಲ್ಲವಿಯು
ಮುಂದೆ ಸಡಗರದಿಂದ ಬರುತಿರುವ ಕವಿಯು
ಪದಕಿರಿಸಿ ಇನ್ನೊಂದು ಮಾತು ಹೇಳುವೆನು:
ಇಂಥ ಕವನಗಳನ್ನೆ ಕಟ್ಟಿ ಬಾಳುವೆನು !

ಇರುವಳೊರ್ವಳು ಎನ್ನ ಪಂಚಪ್ರಾಣ !
ಅಚ್ಚರಿಯಿದೆಲೆ ! ಅವಳ ರೂಪ ನಿರ್ಮಾಣ

ಯಾವ ದೇವನ ಕೃತಿಯೊ ಆ ದೇವನಹುದು
ಸತ್ಯ ! ನಿತ್ಯವು ಅವಗೆ ನಮಿಸಬಹುದು !
ಅವನಿತ್ತ ಹೂವ ಪರಿಮಳದಂತೆ ಅವನಿತ್ತ
ಒಂದು ಕನಸಿನ ದಿವ್ಯಭಾವದಂತವನಿತ್ತ
ಚಿನ್ಮಯಾನಂದದಂತಿದ್ದಳವಳು:
ನಿತ್ಯವೂ ಆ ಲಲನೆ ಹೊಳೆಹೊಳೆವಳು !
ಇಂಥ ಲಲನೆಯು ಕೂಡ ಮಾತನಾಡಿ
ನಮಿಸಿ ನಿಲಲವಳು ಸಂತಸದೆನ್ನ ನೋಡಿ
ನಗುತ ಕೆಲೆಯುತ ಬಂದಳೆನ್ನ ಮನೆಗೆ;
ನೆಲೆಯಿಲ್ಲದಾನಂದವಾಯಿತೆನಗೆ !
ಸಾವಿಗಿಹ ಮೇವೆಂದು ಜೀವರಂಗದಿ ಬಂದು
ಸಹಿಸಲಾರದ ನೋವ ಸಹಿಸಿ ನೊಂದು
ಒಲ್ಲೆನೆಂದಳುತಳುತ ನರಜನ್ಮವೆತ್ತಿ
ಮೂರು ಮೂವತ್ತು ಕೋಟಿಯು ತೆರಿಗೆ ತೆತ್ತಿ
ಆಕ್ರೋಶಿಸುತ್ತಿರುವ ಮಾನವನ ಕೋಟಿ, —
ಎಂತು ಬರುವದು ಇದರ ಉಪ್ಪಳತೆ ದಾಟಿ
ಈ ಹೊನ್ನ ಹುಳಕೆ ಆ ಚಿನ್ಮಯನ ಚೆಲುವು ?
ಈ ದ್ವೇಷದೂಷಣೆಗೆ ಆ ಕೃಷ್ಣನೊಲವು ?
ಇಂಥ ಸೊಬಗನು ತಳೆದ ಸುಂದರಿಯರಿಂದಲ್ತೆ ?
ಇಂಥ ಸುಕುಮಾರಿಯರ ಪ್ರೇಮದಿಂದಲ್ತೆ ?
ಹೀಗಿರಲು ನನ್ನ ಸ್ವರ್ಗದ ದ್ವಾರ ಹೊಕ್ಕು
ಅಕಟ ! ಬಂದಿತು ಶಕ್ತಿ ! ಗಹಗಹಿಸಿ ನಕ್ಕು:
"ಎಲೆ ಮೂಢ! ತಿಳಿಯದಲೆ ನೀನೊಸೆದೆಯಿಂದು !
ಕಣ್ತೆರೆದು ಕುಳಿತಿಯಾ ಸಿಗಲೆಂದು ಪೂರ್ಣೇಂದು ?
ಇಂಥ ಚಾರುವಿಚಾರಿಗಳನೇಕರಿಹರು;
ನಿನ್ನಂತೆಯೇ ಅವರು ಕ್ಲೇಶಪಡುತಿಹರು.
ನನಗೆ ಶರಣಾದವರ ಸಾಲ್ಗೆ ಶರಣೆಂದು
ನಿಂದುದರ ಪ್ರತಿಫಲವ ಭೋಗಿಸಿಂದು !"
ಹೀಗೆಂದು ಒಂದು ವಿಷವಾಕ್ಯವನು ನುಡಿದು
ಹೋಯಿತೆನ್ನಯ ಪ್ರೇಮದಂಕುರವ ಕಡಿದು.
ಆ ಲಲನೆ ಇಹಳು; ಇಹುದವಳ ರೂಪ;
ಆದರೀಗವಳನ್ನು ನೋಡುವದು ಪಾಪ !
ಒಮ್ಮೆ ಬಯಕೆಯು ಮನವ ಮೀರಿ ನೋಡಿದರೂ
ಅವಳ ದೈವಿಕರೂಪವಳಿದು ಹೋಗಿಹುದು !

## ಭಾಗ ೩.

ವ್ಯಕ್ತಿ:—ನನಗೆ ಪ್ರಿಯತಮವಾದ ವಸ್ತುಗಳ ತೆಗೆದು
ಮಾಣಿಕ್ಯವನು ಕೋತಿಗೊಗೆವಂತೆ ಒಗೆದು
ನನ್ನ ಸೌಖ್ಯವನ್ನೆಲ್ಲ ವಾಯುವಿಗೆ ತೂರಿ
ನನ್ನಂತರಂಗವನು ಸೂರ್ಯನಿಗೆ ತೋರಿ
ನಿಂತಿರುವೆ ! ದಿಶೆದಿಶೆಗಳಲಿ ನಿನ್ನ ಯಾನ !
ಮಾನವನು ನಿನ್ನುದಧಿಯಲ್ಲಿರುವ ಮೀನ !
ಎಲೆ ಶಕ್ತಿ ! ನಿನಗೆ ಭಾಗ್ಯವನಿತ್ತರಾರು !
ರಾಜ್ಯಸೂತ್ರಗಳನರ್ಪಿಸಿದರಾರು ?

ಶಕ್ತಿ:— ನಾನರಿಯೆ; ಈ ಗೂಢವೆನಗೆ ಅರಿದು.
ಅವರ ಮರ್ಮವನೆಲ್ಲ ನಾನು ಮರೆದು
ಇರುವೆ ಮದ್ವಾನೆ, ಇಂದ್ರನ ಲೋಕದಾನೆ!
ನನ್ನನ್ನು ಪ್ರಶ್ನಿಸುವರಾರು ತಾನೆ ?
ನಾನು ಕಾಲೆತ್ತಿದೊಡೆ ಪದುಮಗಳು ಉಡುಗಿ,
ನಾನು ಕಣ್ಣೆತ್ತಿದೊಡೆ ತಾರೆಗಳು ನಡುಗಿ
ಜಲದಲ್ಲಿ ಆಕಾಶದಲ್ಲಿ ಅಡಗುವವು !
ಕರುಣೆ ತೋರೆಂದೆನಗೆ ಮೊರೆಯಿಡುವವು !
ನನ್ನೆದುರು ಮೈಮಣಿಯದಂಥ ನೀನು
ಈ ನನ್ನ ವೈಭವವ ಮರೆತೆಯೇನು ?

ವ್ಯಕ್ತಿ:—ಅಲ್ಲವೋ! ನೀನು ಮದ್ವಾನೆ; ಇದು ಸರಿಯೆ
ಆದರದಕೊರ್ವ ಮಾವುತನಿರುವದರಿಯೆ!
ಅವನ ಅಂಕುಶಕೆ ನೀ ಗೆಯ್ವ ಚೀತ್ಕಾರ
ಅವನ ದರ್ಶನದಿ ನಿನಗಾಗುವ ವಿಕಾರ
ನೀನು ತುಳಿಯುತ ಬಂದ ಯಾವ ಪದುಮಗಳೂ
ಅನುಭವಿಸವೆಂದಿಗೂ, ಯಾವ ಕುಸುಮಗಳು !
ನಿನಗೆ ಈ ಅಮಿತಶಕ್ತಿಯನಿತ್ತ ದೇವ
ನಮ್ಮೆಲ್ಲರಿಗೆ ಜನ್ಮವಿತ್ತು ಕಾವ !
ನಮ್ಮ ದೂರನು ಕೇಳಿ ಈ ನಮ್ಮ ಜನಕ
ನಿನ್ನ ದಂಡಿಸಲಿಲ್ಲಿ ಬರುವತನಕ
ಎಲೆ ಶಕ್ತಿ ನಿನಗೆ ಚೆಲ್ಲಾಟ! ಕುಣಿದಾಡು;
ನಿನಗೆ ಮನಬಂದಂತೆ ರಾಜ್ಯವಾಡು !
ಆದರೀ ನಿನ್ನ ಒಯ್ಯಾರದೊನಪು
ಅಳಿಸದಿರಲೀಗ ನಾ ಕೊಡುವ ನೆನಪು.

ಮರೆಯದಿರು ನಾನೊರೆವ ಒಂದು ಮಾತು:
ಅದು ನಾಳೆ ನಿನ್ನ ರಾಜ್ಯದ ಧೂಮಕೇತು !

ನಿರಪರಾಧಿಗಳನ್ನು ನಿಃಸತ್ತ್ವರಾಗಿ
ಮಾಡಿಟ್ಟ ಈ ನಿನ್ನ ಶವವನ್ನು, ಕಾಗಿ
ಮುಟ್ಟದೆಲೆ ! ನೀ ಜಗದಲೆಲ್ಲ ಹೋಗಿ
ಮುಗ್ಧರನು ದಗ್ಧರನ್ನಾಗಿ ಮಾಡಿ
ನೀತಿವಂತರ ಕೂಡ ಗುದ್ದಿಯಾಡಿ
ಸ್ಥಾಪಿಸಿದ ನಿನ್ನ ಒಡೆತನ ಒಡಕತನವು !
ನಿನ್ನ ಪೌರುಷ ಬರಿಯ ಬಾಯ್ಬಡಕತನವು !
ಪೃಥಿವಿಯಲಿ ಪ್ರೀತಿಯೊಂದು ಪ್ರಾಣವಲ್ಲಿ
ದೊರಕಬಹುದಲೆ ! ನಿನಗೆ ದೇವಾಂಶವಲ್ಲಿ.
ಇಂಥದೊಂದಿಡಿಯ ಸಮುದಾಯವನೆ ಸುಟ್ಟು

ಆಳಲೆಳಿಸಿದ ನಿನ್ನ ಪಾತಕಿಯ ಹುಟ್ಟು
ಆ ದೇವನಿಗೆ ತಿಳಿಯದಂಥ ಗುಟ್ಟು !
ಎಲೆ ಶಕ್ತಿ! ಆಳಿನ್ನು, ರಾಜ್ಯವಾಳು;
ದೂರಿಲ್ಲ ಆಗುವದು ನಿನ್ನ ಮನೆ ಹಾಳು !

× × ×

ಈ ನನ್ನ ನುಡಿ ಕೇಳಿ ಯಾವ ಭಾಷೆಯನು
ಮಾತನಾಡುವನಿವನ ರೂಪರೇಷೆಯನು
ನೋಡಿಕೊಳಲೆಂದು ತನ್ನನರಿಗುಸುರಿ
ಮುಂದೆ ಹೋಯಿತು ಶಕ್ತಿ ಕಣ್ಣು ಕೆದರಿ !
ಮಿತಿಯಿದೆಯೆ ಬಲಿತವರ ಕುಡುಕುತನಕೆ ?
ಕೊನೆಯಿದೆಯೆ ನುರಿತವರ ಕೆಡಕುತನಕೆ ?

---

# ಸ್ತ್ರೀಯರು ರಂಗಭೂಮಿಯ ಮೇಲೆ ಬರಬಹುದೇ ?

ಲೇಖಕರು--ಶ್ರೀಮತಿ ಕನಕಲಕ್ಷ್ಮಮ್ಮ, M. A., ಮೈಸೂರು

ಕಾಲಚಕ್ರದ ಪರಿಭ್ರಮಣವೇ ಉನ್ನತಿಯ ಸೌಭಾಗ್ಯ. ಕಾಲಮಹಿಮೆಯಿಂದ ನವನವ ರಹಸ್ಯಗಳು ಹೊರಬೀಳುತ್ತಲೇ ಇರುವವು. ಪ್ರಕೃತೀದೇವಿಯ ಮಡಿಲಿನಲ್ಲಿರುವ ರಹಸ್ಯರತ್ನಗಳ ಉಜ್ವಲತೆಯು ಪ್ರಭಾವವಲ್ಲದೆ ಕಾಲದ ಧೂಳಿನಲ್ಲಿ ಮರೆಯಾಗಿ ಇದ್ದರೂ ಇಲ್ಲದಂತೆ ಕಾಣಿಸಿಕೊಳ್ಳುವ ಅನೇಕ ವಿಷಯಗಳೂ ಪುನರುಜ್ಜೀವನವನ್ನು ಹೊಂದುವವು. ತತ್ವಸಾರದ ಪುನರುತ್ಥಾನದಿಂದಲೇ ಈ ದ್ವಂದ್ವಮಯುವಾದ ಜಗತ್ತಿನಲ್ಲಿ ಪ್ರಗತಿಯ ಕಾಂತಿಯು ಥಳಥಳಗುಟ್ಟುತ್ತಿರುವದು. ನಮ್ಮ ಪೂಜ್ಯವಾದ ದೇಶವು ಪುನಃ ಪ್ರಗತಿಯ ಶಿಖರವನ್ನು ಮುಟ್ಟುವದಕ್ಕೆ ಈಗ ತಾನೆ ಅಲ್ಲಿಯ ರತ್ನದ್ವಾರವು ಗೋಚರಿಸಹತ್ತಿದೆ. ಜ್ಞಾನದೇವಿಯ ಪುಣ್ಯಮೂರ್ತಿಯ ದರ್ಶನದ ಸಲುವಾಗಿ ನಾವುಗಳು ಸಿದ್ಧವಾಗಿ ಸಂಭ್ರಮದಿಂದ ಹೊರಡುವ ಕಾಲವು ತಾನೇ ಒದಗುತ್ತಲಿದೆ.

ಇಂಥಹ ಮಂಗಳಕರವಾದ ಸಮಯದ ಹೆಗ್ಗುರುತು, ಸ್ತ್ರೀಯರೂ ತಮ್ಮ ನೈಜವಾದ ಶಕ್ತಿಯನ್ನೂ, ಘನತೆಯನ್ನೂ, ಆತ್ಮಗೌರವವನ್ನೂ ತಿಳಿದುಕೊಂಡು ಮುಂದುವರಿಯುವೆವೆಂಬ ಸಂಕಲ್ಪದಿಂದ ಕಾರ್ಯರಂಗವನ್ನೇರುವುದಕ್ಕೆ ಬಂದಿರುವದೇ ಅಲ್ಲವೆ ? ಶುಭಸಮಯದ ಹೆಗ್ಗುರುತಾಗಿ ಮುಂದೆ ಮಂಗಳವಾದ್ಯಗಳ ಸಂಭ್ರಮದಲ್ಲಿ ಸಡಗರದಿಂದ ಜಯಜಯವೆನ್ನುತ್ತಾ ಹೊರಡಬೇಕಾದರೆ ಮಹಿಳೆಯರ ಸಂದಣಿಯು ಸಂಭ್ರಮವೇ ಅಲ್ಲವೆ ?

A perfect woman nobly planned
   Born, to comfort and command
And yet a Spirit still and bright
   With something of Angelic light
(*Wordsworth*)

ಕರ್ಮರಂಗದಲ್ಲಿ ಕರ್ಮವೀರೆಯರಾಗಿ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳುವದಲ್ಲದೆ, ತನುಮನಗಳಲ್ಲಿ ದೇವತ್ವದ ದಿವ್ಯಜ್ಯೋತಿಯನ್ನು ರೂಪಾಗಿಸುವ ಮಹಿಳೆಯೇ ನಿಜವಾದ ಸ್ತ್ರೀಯಳಲ್ಲವೇ ? "ವಸ್ತುವಿನ ಸದುಪಯೋಗವೇ ತನಗೂ

ಇತರರಿಗೂ ಹಿತಕಾರಿಯಾದ ಯೋಗವೆಂಬುದು" ತೀರ ನಿಜವೆ. ಭೂಮಿಯಲ್ಲಿ ಮಾನವಜನ್ಮವೆತ್ತುವದೇ ಜ್ಞಾನಸಾಧನೆಮಾಡಿ ಪರಮಾತ್ಮನ ಪಾದಗಳನ್ನು ಸೇರುವದಕ್ಕೆ ನಿರಾಳವಾದ ಮಾರ್ಗ. ಜ್ಞಾನವಿಕಾಸವೇ ಪ್ರಪಂಚದ ಸೊಗಸಿನ ಮೂಲ; ಸೃಷ್ಟಿಯ ಸುವ್ಯವಸ್ಥಿತ ಸೌಂದರ್ಯದ ಪತಾಕೆ. "ತನ್ನ ತಾನರಿದೊಡೆ ತನ್ನರಿವೇ ಗುರು" ಎಂಬ ವಚನದಂತೆ ಯಾರಾದರೂ ತಮ್ಮ ಸ್ವೈಜಶಕ್ತಿಯನ್ನು ಅರಿತದ್ದೇ ಆದರೆ ಅರಿವಿನ ಅರುಣೋದಯ



ಶ್ರೀಮತಿ ಕನಕಲಕ್ಷ್ಮಮ್ಮನವರು

ವಾಗುವುದು. ಅವರ ಸನಾತನ ಶಕ್ತಿಯು ಇದುವರಿವಿಗೂ ಮರೆಯಾಗಿದ್ದು ಈಗ ಉಕ್ಕಿಬರುವದು. ಭರತಭೂಮಿಯ ಮಹಿಳಾಮಂಡಲಕ್ಕೆ ತಮಸ್ಸು ನಾಶವಾಗಿ, ಜೀವನದ ಸಕಲ ಧರ್ಮಗಳನ್ನು ನಡೆಯಿಸುವ ಕಾರ್ಯದಲ್ಲಿ ತಾವೂ ತಮ್ಮ ಭಾಗವನ್ನು ಪಡೆಯಬಹುದೆಂದು ಈಗ ತಾನೆ ತೋರಹತ್ತಿದೆ.

ಕಿಂ ನಾಮ ರೋದಿಷಿ ಸಖೀ ತ್ವಯಿ ಸರ್ವಶಕ್ತಿ
ಆಮಂತ್ರಯಸ್ವ ಭಗವನ್ ಭಗವತ್ಸ್ವರೂಪಮ್ ||
ತ್ರೈಲೋಕ್ಯಮೇತದಖಿಲಂ ತವಪಾದಮೂಲೇ
ಆತ್ಮೈವ ಹಿ ಪ್ರಭವತೇ ನ ಜಡಃ ಕದಾಚಿತ್ ||

[ "ಸಖೀ! 'ಏತಕ್ಕೆ ರೋದಿಸುವೆ ' ನೀನು ಸರ್ವಶಕ್ತಿ ಸಾಗರವೇ ಆಗಿರುವೆ, ನಿನ್ನ ಭಗವತ್ಸ್ವರೂಪವನ್ನು ... ತ್ರಿಸು; ಮೂರು ಲೋಕಗಳೆಲ್ಲ ನಿನ್ನ ಕಾಲಕೆಳಗಿನ ... ಆತ್ಮಕ್ಕೇ ಪ್ರಭಾವವಲ್ಲದೆ ಜಡಕ್ಕೆಂದೂ ಜಯವಿಲ್ಲ." ... ಮಾತುಗಳನ್ನು ಈ ದೇಶೀಯರು ಇದುವರಿವಿಗೆ ಮರೆತಿದ್ದ ... ಸ್ವಸ್ವರೂಪದ ಜ್ಞಾನವಿಲ್ಲವಾದರೆ ಹೇಗೆ ತಾನೆ ಸರ್ವಶಕ್ತಿ ಸ್ಫುರಣವಾಗುವದು ?

ಈ ನವೀನ ಜಾಗ್ರತಿಯು ಸ್ತ್ರೀಪುರುಷರಿಗೆ ಸಮಾನವಾ... ಅನೇಕರು, ಸ್ತ್ರೀಯರಿಗೆ ಈ ಬಗೆಯ ಸ್ವತಂತ್ರಜೀವನವ ... ವೇಕೆಂದು ಸ್ತ್ರೀಮಂಡಲಿಯ ನ್ನೇ ಎ ಜರಿಯುವರಾಗಿರು... ಸ್ತ್ರೀಯರೇ ಸ್ತ್ರೀಯರನ್ನು ಹೀಯಾಳಿಸಿ ಸಮಾಜದಲ್ಲಿ ... ನಿಲುಗಡೆ ಇಲ್ಲದಂತೆ ಮಾಡುವರಾಗಿರುವರು. ಸ್ತ್ರೀ... ಸ್ವತಂತ್ರ ಜೀವನವನ್ನಪೇಕ್ಷಿಸುವದು ಹಿಂದೂಸಮಾ... ಕಾಯಿದೆಗಳಿಗೆ ವಿರುದ್ಧವೆಂದೂ, ಸ್ತ್ರೀಯರು ತಮ್ಮ ... ವನ್ನೆಲ್ಲಾ ಗೃಹದಲ್ಲಿಯೇ ಕಳೆದು ಸಂತಾನಸಹಾಯಿ ... ಅವರ ಪರಿಣಾಮವು ಅಲ್ಲಿಯೇ ಮುಗಿಯಬೇಕೆಂದೂ ... ಪ್ರಾಯಪಡುವವರೇ ಈಗ ನಮ್ಮಲ್ಲಿ ಹೆಚ್ಚಾಗಿದ್ದಾರೆ. ... ಮಹಿಳೆಯರು ಇನ್ನೂ ಮನೋಧೈರ್ಯವಿಲ್ಲದೆ ದುಷ್ಟ... ವಾದಗಳ ಕಲ್ಲುಗಾಣದಲ್ಲಿ ಅರೆಯಿಸಿಕೊಳ್ಳುತ್ತಾ, ... ಅಸಹಾಯತೆಯಿಂದ ಉಂಟಾದ ಸಂತಾಪದಿಂದ ಯಾತನೆ... ಳಿಧಾನೆ. ಇವಕ್ಕೆಲ್ಲಾ ಮೂಲ ಕಾರಣವು ಅಜ್ಞಾನವೇ. ... ಜದ ವಾತಾವರಣದಲ್ಲಿಯ ಅಜ್ಞಾನದಿಂದ, ಕಾಲಾನುಕಾ... ಬಂದಿರುವ ಸೇವಾವೃತ್ತಿಯಿಂದ ಅವರ ಮನೋವೃತ್ತಿ... ಸಂಕುಚಿತವಾಗಿ ಹೋಗಿದೆ. ನಿರಂತರವೂ ಅಷ್ಟ ನ್ನೆ... ಮರವೆಂದು ಕೂಡುವ ಜನರಲ್ಲಿ ನೂತನವೆಂದು. ತೋ... ಯಾವ ಬದಲಾವಣೆಯೂ ಅತ್ಯಂತ ಅಪಾಯಕ... ತೋರುವದು.

ಹಳೇಪದ್ಧತಿಯೆಂದು ಹಳ್ಳಕ್ಕಾದರೂ ಧುಮುಕಲು ... ರಾಗಿರುವರಲ್ಲದೆ ಸಮಾಜರಕ್ಷಣೆಗಾಗಿ ಸಾಹಸವನ್ನು ಮಾ... ಧೈರ್ಯವಿಲ್ಲದವರಾಗಿರುವರು. ಆದರೆ ಮಾತ್ರ ಪುರಾತನ ... ಪುರಾಣಗಳನ್ನು ಶೋಧಿಸಿ ಅವುಗಳ ನಿಜತತ್ವವನ್ನು ...

ಸಮಾಜದ ಹಾಗೂ ಜನಾಂಗದ ಮಂಗಳವನ್ನು ಮಾಡುವವರಿಲ್ಲ. ಬಾಹಿರ ವೇಷಭೂಷಣಗಳೇ ಮತದ ಸಿದ್ಧಾಂತವೆಂದು ತಿಳಿದವರು ಕೆಲವರು. ಇತರರ ಮೆಚ್ಚಿಕೆಗಾಗಿ ಧರ್ಮಾತ್ಮರೆಂದು ನಟಿಸುವವರು ಕೆಲವರು. ಆದರೆ ಅನುಭವದಿಂದ ಸ್ವಧರ್ಮದ ತತ್ವಗಳೇನೆಂಬುದನ್ನು ತಿಳಿದಿರುವರಾದರೂ ಎಷ್ಟುಮಂದಿಯಿರುವರು? ನಾವು ನೂತನವಾಗಿ ಯಾವುದಾದರೊಂದು ಕೆಲಸವನ್ನು ಮಾಡಬೇಕಾದರೆ ಅದನ್ನು ಎಲ್ಲಾ ಕೋನಗಳಿಂದಲೂ ಪರಿಶೀಲನೆ ಮಾಡುವದೇ ಕರ್ತವ್ಯವು. ಆದುದರಿಂದ ಈಗ ಅನೇಕರು ಸ್ತ್ರೀವಿದ್ಯಾಭ್ಯಾಸ, ಸ್ತ್ರೀಸ್ವಾತಂತ್ರ್ಯ, ಸ್ತ್ರೀಯರು ಲಲಿತ ಕಲೆಗಳಲ್ಲಿ ಉತ್ಸಾಹತೋರಿಸುವದಲ್ಲದೆ ತಾವೂ ಅವುಗಳನ್ನು ಕಲಿಯುವದು ಇವೇ ಮೊದಲಾದ ವಿಷಯಗಳನ್ನು ಕೇವಲ ಪ್ರಮಾದವೆಂದು ಭಾವಿಸುವವರಾಗಿದಾರೆ. ಅನೇಕರು ನಿಟ್ಟುಸುರು ಬಿಡುತ್ತಾ, ಚಿನ್ನದಂಥಹ ಕಾಲವು ಕೆಟ್ಟುಹೋಯಿತು. ಸ್ತ್ರೀಯರು ಈ ಕಾಲದಲ್ಲಿ ಮಾನಮರ್ಯಾದೆಗಳನ್ನು ತೊರೆದವರಾಗಿ ಸುಧಾರಣೆ, ಸುಧಾರಣೆ ಎಂದು ಕುಣಿಯಹತ್ತಿರುವರು, ಇನ್ನು ಪತಿವ್ರತಾಧರ್ಮವೆಲ್ಲಿ ಬಂತು, ನೀತಿಯೆಂಬುದರ ಹೆಸರೇ ಹಾಳಾಯಿತು ಎಂದು ಹೇಳುವವರಿದ್ದಾರೆ. ಆದುದರಿಂದ ಸ್ತ್ರೀಯರೇ ತಮಗಿರುವ ಹಕ್ಕು ಬಾಧ್ಯತೆಗಳನ್ನು ತಿಳಿದು ತಮ್ಮ ಆದರ್ಶಗಳು, ಧ್ಯೇಯಗಳೇನೆಂಬುದನ್ನು ಪರಿಶೀಲನೆಮಾಡಿ, ತಮಗೂ ಸ್ವಧರ್ಮವೂ, ಸ್ವದೇಶಾಭಿಮಾನವೂ, ದೇಶಸೇವೆ ಮಾಡುವ ಆದರವೂ ಇರುವುವೆಂಬುದನ್ನು ಹೇಳಬೇಕಲ್ಲವೆ ! ಅಲ್ಲದೆ ಸ್ತ್ರೀಯರೂ ಸಹ ಋಷಿಸಂತಾನರೆ ! ಪುರಾತನಾರ್ಯರು, ಲೋಕಸಂಗ್ರಹಾರ್ಥವಾಗಿ ತಮ್ಮ ಅನುಭವದಿಂದ ತಿಳಿಯಹೇಳಿರುವ ಧರ್ಮತತ್ವಗಳು ಪುರುಷರಿಗೆ ಮಾತ್ರವೇ ಎಂದಿಗೂ ಅನ್ವಯಿಸಲಾರವು. ಸ್ತ್ರೀಯರಿಗೂ ವಿಕಾಸವಾಗುವ ಆತ್ಮವುಂಟು. ಜ್ಞಾನದೀಪವು ಅವರ ಹೃದಯಮಂದಿರಗಳಲ್ಲಿಯೂ ನಂದಿಹೋಗದಂತೆ ಪ್ರಜ್ವಲಿಸಬೇಕು. ಸ್ತ್ರೀಯರಿಗೆ ಪ್ರತಿಭಾಶಕ್ತಿಯಾಗಲೀ ಜ್ಞಾನಶಕ್ತಿಯಾಗಲೀ, ಕ್ರಿಯಾಶಕ್ತಿಯಾಗಲೀ ಎಂದಿಗೂ ಕಮ್ಮಿಯಿಲ್ಲ. ಆದರೆ ಅವರಿಗೆ ಅವರ ಬುದ್ಧಿಜ್ಞಾನಗಳು ವಿಕಾಸವಾಗಲು ಆಸ್ಪದಗಳು ಬಹಳಮಟ್ಟಿಗೆ ಇಲ್ಲವೇ ಇಲ್ಲವಾಗಿರುವವು. ಈಗ ಎಚ್ಚೆತ್ತಿರುವ ಸ್ತ್ರೀಮಂಡಲಿಯು ತಮ್ಮ ಸ್ವಹಿತವನ್ನೂ, ತಾವು ಪರಹಿತವನ್ನು ಮಾಡಲು ಶಕ್ತರೆಂಬುದನ್ನೂ ತಿಳಿಯಲೇ ಬೇಕಾಗಿದೆ.

ಪುರಾತನಾರ್ಯರಲ್ಲಿ ಸ್ತ್ರೀಯರು ಸಂಪೂರ್ಣಸ್ವತಂತ್ರತೆಯನ್ನು ಅನುಭವಿಸುತ್ತಾ, ತನುಮನಗಳ ಉನ್ನತಿಗೆ ಸ್ವಲ್ಪವಾದರೂ ಅಡಚಣೆಯಿಲ್ಲದೆ ದೇಶಸೇವಾನಿರತರಾಗಿರಲು ಮಿತಿಯಿಲ್ಲದ ಆಸ್ಪದಗಳನ್ನು ಕಲ್ಪಿಸಿಕೊಂಡು ಇಹಪರಸಾಧನೆಯನ್ನು ಮಾಡುತ್ತಲಿದ್ದುದು ನಿಜವೆ. ಹಿಂದೂದೇಶದ ಚರಿತ್ರೆಯನ್ನು ಆದರದಿಂದ ಓದುವವರಿಗೆ ಇದು ಹೊಸ ವಿಷಯವೇ ಅಲ್ಲ. ನಮ್ಮ ಜನಮಂಡಲಿಗೆ ಪುರಾತನರು ಮಾಡಿದ ಕೆಲಸಗಳೆಂದರೆ ದೊಡ್ಡ ಆಧಾರವೆಂದು ಮನಸ್ಸಿಗೆ ಸ್ವಲ್ಪಮಾತ್ರ ಧೈರ್ಯಬಂದಂತಾಗುವದು. ಚಿಂತೆಯಿಲ್ಲ. ಪ್ರಗತಿಯ ಪಥಕ್ಕೆ ನಿರಾಳವಾದ ದಾರಿ ತೋರಿಸುವದೇ ದೇಶಸೇವಾಧುರಂಧರರ ಮುಖ್ಯ ಧ್ಯೇಯವಾಗಿರುವದರಿಂದ ಸಾಧ್ಯವಾದಷ್ಟು ಆಧಾರಗಳಿಂದ ಸಮರ್ಥಿಸುವ.

ಅಂದಮೇಲೆ ಸ್ತ್ರೀಯರಿಗೆ ಸ್ವಧರ್ಮವೂ, ಸ್ವಹಿತವೂ, ಪರಹಿತ ಮಾಡುವ ಹಕ್ಕೂ ಇರಬೇಕೆಂದರೆ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವು ಇರಲೇ ಇರಬೇಕು. ಚರಿತ್ರೆಯ ಸಂಶೋಧನೆಯಲ್ಲಿ ಸ್ತ್ರೀಯರು ಯಾವಕಾಲದಲ್ಲಿ ಪ್ರತಿಭಾಶಾಲಿಗಳಾಗಿ, ಜ್ಞಾನಾರ್ಜನೆಯಿಂದ ಆ ಪ್ರತಿಭೆಗೆ ಇಮ್ಮಡಿಯಾದ ಕಾಂತಿಯನ್ನುಂಟುಮಾಡಿ, ಸ್ವತಂತ್ರ ಜೀವನವು ಕೇವಲ ಜ್ಞಾನಾರ್ಜನೆಗೆ ಪ್ರಥಮ ಸೋಪಾನವೆಂದು ಪ್ರಸಿದ್ಧಪಡಿಸಿದ್ದರೋ ಅಂಥಕಾಲದಲ್ಲಿ ಎಲ್ಲಾ ದೇಶವು ವಿಶೇಷವಾಗಿ ಅಭಿವೃದ್ಧಿಸ್ಥಿತಿಯಲ್ಲಿದ್ದುದಲ್ಲದೆ, ಆ ಜನತೆಯ ಹೃದಯದೊಳಗಿನ ಜೀವವಾದ ಸಮಸ್ತ ಲಲಿತಕಲೆಗಳು ಕುಸುಮಸಮೃದ್ಧಿ ಪಡೆದು ಫಲಭರಿತವಾಗಿದ್ದವೆಂದು ಹೇಳುತ್ತದೆ. ನಿಜವೆ, ಪ್ರಗತಿಯು ಸ್ಫೂರ್ತಿಯು ಸೂಸಿ ಹೊರಹೊಮ್ಮುವ ಪರಿಸ್ಥಿತಿಯಲ್ಲಿಯೇ ಸಾಧ್ಯವಲ್ಲದೆ ಅಜ್ಞಾನಾಂಧಕಾರವು ಸಮಾಜದಲ್ಲಿ ವ್ಯಾಪಿಸಿರುವಾಗ ಬರಿಯ ಸ್ವಪ್ನವಲ್ಲವೆ ? ಸ್ತ್ರೀಯರು ತಮ್ಮ ಸ್ವಗೌರವವನ್ನು ಕಾಪಾಡಿಕೊಳ್ಳಲು ಸಮರ್ಥರಾಗಿ, ತಮ್ಮ ಆತ್ಮನೂ ಸಹ ಜ್ಞಾನವಿಕಾಸವನ್ನು ಪಡೆಯುವದಕ್ಕೆ ಸಿದ್ಧನಾಗಿರುವನೆಂದು ಸೂಚಿಸುತ್ತಾ, ಜೀವನಕ್ಕೆ ಒಂದುಬಗೆಯಾದ ಸೊಗಸನ್ನೇ ಕೊಡುವ ಆದರ್ಶಪ್ರಾಯರಾಗಿರುವರೋ ಆ ಕಾಲದಲ್ಲಿ ಸೃಷ್ಟಿಸೌಂದರ್ಯವನ್ನೇ ಹುಡುಕಿಕೊಂಡು ತಿರುಗುವ ಕವಿಶ್ರೇಷ್ಠರೇ ಮೊದಲಾದ ಕಲಾನಾಥರು ತಮ್ಮ ಕಲಾಶಕ್ತಿಯನ್ನು ಭಾವರೂಪವನ್ನಾಗಿಸಲು ಸಮರ್ಥರಾಗುವರು. ರಾಜಾ ವಿಕ್ರಮಾದಿತ್ಯನ ಕಾಲದಲ್ಲಿ ಕಾಳಿದಾಸಾದಿ ಮಹಾ ಕವಿಗಳು ಭಾರತ ಭೂಮಿಯ ಕಲಾಸಂಪತ್ತನ್ನು ತಮ್ಮ ಶಕುಂತಲಾದಿ ನಾಟಕಗಳಲ್ಲಿಯೂ ಸುಂದರವಾದ ಇತರ ಕಾವ್ಯಗಳಲ್ಲಿಯೂ ಪ್ರಕಟಿಸಿದರು. ಆ ಕಾಲದಲ್ಲಿ ಸ್ತ್ರೀಯರೇ ಈ ಮಹಾ ನಾಟಕಗಳಲ್ಲಿ ಪಾತ್ರವನ್ನೂ ವಹಿಸಿ ನಟಕಗಳ

ಮತ್ತು ನಾಟಕಕರ್ತರ ಕೀರ್ತಿಯನ್ನು ವಿಶೇಷವಾಗಿ ಮೆರಿಸುತ್ತಲಿದ್ದರು. ಒಬ್ಬ ಜರ್ಮನ್ ಕವಿಯು ಶಕುಂತಲಾ ನಾಟಕದ ಅಭಿನಯದ ವರ್ಣನೆಯನ್ನು ಬಹು ಸ್ವಾರಸ್ಯದಿಂದ ಮಾಡಿರುವನು :—

"Tᴦe King's Chamberlain unclasps the costly gem, and two figurantes draw aside the folds of the curtain. Admiring interjetions and the clapping fo hand testify that the beautiful wood. land scene with which the play opens is highly appreciated. . . . . The stage herald holding a long staff of mimosa wood in his hand, so that he may conveniently point to the various objects which he means to explain, now announces Sakuntala, the heroine of the play. A thrill of excitement runs through the spell-bound audience Will the actress satisfy or disappoint their high expectations? But there she comes clad in a plain frock of matted dress which veils and yet reveals her lovely form. The rounded lines of the girlish face, her large soft eyes, and long downy lashes, the graceful neck and delicate arms, the expression, attitude, and natural gestures win every heart. She opens her lips and her mouth speaks music. Vikrama's court trembles with delicate and deep emotion. Shakuntala the latest play by Kalidasa, is henceforth enrolled among the immortal creation of the world's poetry" ( The Indian Theatre.)

ಅಲ್ಲದೆ ವಿಕ್ರಮಾದಿತ್ಯನ ಸಭೆಯಲ್ಲಿ ಸಮೀರನೆಂಬುವ ಪ್ರಸಿ ಕವಿಯು ಅವನ ಗುರುವು ಯಾರೆಂದು ಕೇಳಿದಾಗ ಒಬ್ಬ ಸ್ತ್ರೀಯಳ ಹೆಸರನ್ನು ಹೇಳಲು ಕೂಡಲೇ ಕಲಾಪ್ರಿಯನಾದ ವಿಕ್ರಮಾದಿತ್ಯನು ಆಕೆಯನ್ನು ಸಭೆಗೆ ಬರಮಾಡಿ ವಿಶೇಷವಾದ ಪುರಸ್ಕಾರವನ್ನು ಮಾಡಿ ಆಕೆಯನ್ನು ಆಸ್ಥಾನದ ಕವಿಶ್ರೇಷ್ಠರಲ್ಲಿ ಒಬ್ಬಳನ್ನಾಗಿ ಮಾಡಿದನೆಂದು ತಿಳಿದಿದ್ದೇವೆ. ಇದೇ ಕಾಲದಲ್ಲಿಯೇ ಗಣಿತಶಾಸ್ತ್ರಪ್ರವೀಣೆಯಾದ ಲೀಲಾವತಿದೇವಿಯು ಇದ್ದುದು. ಗ್ರೀಸ್ ದೇಶದಲ್ಲಿ ಕೂಡ ಕಲಾಭಿವೃದ್ಧಿಯಿಂದಲೇ ದೇಶೋನ್ನತಿಯ ಸಾಧನೆಯಾಯಿತಲ್ಲದೆ ಅದೇ ಕಾಲಕ್ಕೆ ಮಹಿಳೆಯರು ಸ್ವತಂತ್ರರಾಗಿ ತಮ್ಮ ತನುಮನಗಳ ಶಕ್ತಿಯಿಂದ ಉತ್ತಮಧ್ಯೇಯಗಳಿಂದ ಜೀವವನ್ನು ಸಂಪತ್ಕರಿಸಿದರು. ಅದು ರಿಂದ ಸ್ತ್ರೀಯರಿಗೆ ಸ್ವಾತಂತ್ರ್ಯವೂ, ಆದರ್ಶಜೀವನವೂ ದೇಶ ಪ್ರಗತಿಗೆ ಬಹು ಮುಖ್ಯವೆಂದು ತಿಳಿದು ಬರುವದು.

ನಮ್ಮ ದೇಶದಲ್ಲಿ ಈಗ ೨೦೦ ವರುಷಗಳಿಂದಿತ್ತೀಚೆ ಮಾತ್ರ ಸ್ತ್ರೀಯರ ಗತಿಯು ಅಧೋಗತಿಯಾಗಿ ಪರಿಣಮಿಸಿ ಅವರ ಮನೋಪಾಶವು ಕಗ್ಗತ್ತಲೆಯಿಂದ ಆವರಿಸಿ ಹಿಂದು ಸಮಾಜಕ್ಕೆ ಅವರಿಂದ ತಕ್ಕ ಸೇವೆಯು ದೊರೆಯದಂತಾಗಿದೆ. ನಮ್ಮಲ್ಲಿರುವ ಅನೇಕ ಆಚಾರಗಳು ಅವುಗಳ ಸತ್ವವನ್ನು ಕಳೆದುಕೊಂಡು ಬರಿಯಬೆಂಡಾಗಿ ಶುಷ್ಕವಾಗಿ ಹೋಗಿದ್ದರೂ ಅಲ್ಲಿ ಅವುಗಳಿಂದ ದೇಶಕ್ಕೆ ಅಪರಿಮಿತವಾದ ಕೆಡಕುಂಟಾಗುತ್ತಲಿದ್ದರೂ ಅವುಗಳಿಗೆ ಧರ್ಮವೆಂಬ ಸುಳ್ಳು ಹೆಸರನ್ನಿಟ್ಟು ನಮ್ಮ ಬೆನ್ನನ್ನು ನಾವೇ ತಟ್ಟಿಕೊಳ್ಳುತ್ತಲಿದ್ದೇವೆ.

ಸ್ತ್ರೀಯರು ಸ್ವತಂತ್ರ್ಯರಾದರೆ ರಂಗಭೂಮಿಗೆ ಬರಬಹುದು! ಇದು ಧರ್ಮವನ್ನು ನಾಶಮಾಡುವದಿಲ್ಲವೆ? ಎಂಬದು ಬಹು ಜನರಿಗೆ ಬಹು ಕಠಿಣವಾದ ಸಮಸ್ಯೆಯಾಗಿ ಪರಿಣಮಿಸಿದೆ. ಅನೇಕರಿಗೆ ನಾಟಕವೆಂದರೆ ಬಹು ತುಚ್ಛವಾದುದೆಂದೂ, ಅದರಲ್ಲಿ ಪಾತ್ರವಹಿಸುವರು ನೀತಿರಹಿತರೆಂದೂ ಒಂದು ತಪ್ಪಾದ ಅಭಿಪ್ರಾಯವು ಅವರುಗಳ ಮನಸಿನಲ್ಲಿ ನಾಟಿ ಹೋಗಿದೆ. ನಾಟಕ ರಂಗದ ಸದ್ಯಸ್ಥಿತಿಯನ್ನು ನೋಡಿದರೆ ಹಾಗೆನ್ನಿಸುವದು ಏನೂ ಆಶ್ಚರ್ಯಕರವಾದ ವಿಷಯಲ್ಲ. ನಾಟಕಗಳಿಂದ ವಿಷಯೋದ್ರೇಕ ಮಾಡುವದಕ್ಕೆ ಒಂದು ಮೂಲವೇ ಅಲ್ಲದೆ ಬೇರೆಯಿಲ್ಲ. ಕಥಾನಾಯಕನು ಕಾಮಜ್ವರಪೀಡಿತನಾಗಿ ಮನ್ಮಥನನ್ನು ದೂಷಿಸುವುದೇ ಪ್ರೇಮದ ದೃಶ್ಯವಾಗಿದೆ. ಹೆಂಗಸಿನ ವೇಷಧಾರಿಗಳಾದ ಹೆಂಗಸರೆಂದರೆ ಅನ್ಯಜವಾಗಿ ಕುಲುಕುವ

ಎಂದು ಜ್ಞಾನವಿಹೀನರೂ, ಸಂಸ್ಕೃತಿಯಿಲ್ಲದವರೂ ರಂಗಭೂಮಿಗೆ ಇಳಿದು ರಂಗಭೂಮಿಯ ಮರ್ಯಾದೆಯನ್ನು ಹಾಳುಮಾಡುವವರಾಗಿರುವರು. ಅದಲ್ಲದೆ ಸಮಯಾಸಮಯಗಳಿಲ್ಲದೆ ತುಚ್ಛವಾದ ನಕಲಿಯನ್ನು ಮಾಡುವವರ ಗಲಭೆ ಬೇರೆ. ಅನೇಕ ವೇಳೆ ಈ ಸ್ತ್ರೀ ವೇಷಧಾರಿಗಳ ವೇಷವನ್ನೂ ವೈಯ್ಯಾರವನ್ನೂ ನೋಡಿದರೆ ನಮ್ಮಗಳ ಮನಸ್ಸಿಗೆ ಜುಗುಪ್ಸೆಯುಂಟಾಗುವದು. ಊಹಾಶಕ್ತಿಯಿಂದ ಕೂಡಿ ಪ್ರತಿಭಾಸಂಪನ್ನರಾದ ಬಹು ಸ್ವಲ್ಪ ಪುರುಷರು ಮಾತ್ರ ಒಂದು ವೇಳೆ ಸ್ತ್ರೀಯರ ಮನೋಭಾವಗಳನ್ನು ತೋರ್ಪಡಿಸಬಲ್ಲರೋ ಏನೋ, ಆದರೆ ಮಾತ್ರ ಇನ್ನು ಯಾವ ಭಾಗದಲ್ಲಿಯಾದರೂ ಏಳಿಗೆಗೆ ಬಾರದೆ ಈ ಥಳಕು, ಬಿನ್ನಾಣಗಳಿಂದ ಜನಗಳನ್ನು ಮೆಚ್ಚಿಸಬಹುದೆಂದು ತಿಳಿದಿರುವ ಪ್ರತಿಯೊಂದು ವ್ಯಕ್ತಿಗೂ ಎಂದಿಗೂ ಸಾಧ್ಯವಾಗಲಾರದು. ಈ ಸಂದರ್ಭದಲ್ಲಿ ಮಹಾನುಭಾವರಾದ ಶ್ರೀ ತ್ಯಾಗರಾಜರು ಹೇಳಿದ ಮಾತೊಂದು ನೆನಪಿಗೆ ಬರುತ್ತಲಿರುವುದು. "ಕಾಮಿನಿ ವೇಷಧಾರಿಕೆ ಸಾಧ್ವೀ ನಡತೆಯೇ ಮೈನತಲು ಸುನಾ ಓಮನಸಾ" ಸ್ತ್ರೀಯಳ ಹೃದಯದ ಘನತೆ, ಗೌರವ ಇವುಗಳು ವೇಷಧಾರಿಗಳಾದ ಪುರುಷರಿಗೆ ಹೇಗೆ ತಿಳಿಯಲು ಸಾಧ್ಯ. ಸ್ತ್ರೀವೇಷಧಾರಿಗಳಿಗೆ ಸ್ತ್ರೀಯರಿಗಿಂತ ಹೆಚ್ಚು ಬಿನ್ನಣ ವೈಯ್ಯಾರ ಇವುಗಳು ಸಹಜವಾಗಿ ಹೆಚ್ಚಾಗಿ ಬರುವವೆಂದು ಸ್ತ್ರೀವೇಷಧಾರಿಯೊಬ್ಬರು ಹೇಳಿದರು, ಇದರಿಂದ ನಾಟಕ ಕಲೆಗೂ ಸ್ತ್ರೀವರ್ಗಕ್ಕೂ ಅಪಮಾನವಲ್ಲದೆ ಸಮಾಜಕ್ಕೆ ಎರಡು ಬಗೆಯಾಗಿ ಕೇಡುಂಟಾಗುವದು. ನಾಟಕ ನೋಡುವದಕ್ಕೆ ಬರುವ ಅನೇಕ ಅರಿವಿಲ್ಲದ ಹುಡುಗಿಯರು ವೇಷಧಾರಿಗಳ ಬೆಡಗನ್ನು ಅನುಕರಿಸುವದೊಂದು ದೊಡ್ಡ ವಿಪತ್ತೇ ಅಲ್ಲದೆ ಸ್ತ್ರೀ ವೇಷಧರಿಸುವ ಪುರುಷರಿಗೆ ಇದರಿಂದ ಮನೋಭಾವಗಳೂ ಬದಲಾಗಿ ತನುಮನಗಳ ಶಕ್ತಿಯನ್ನು ಕಳಮಕೊಂಡು ರೋಗಾದಿಗಳಿಗೆ ಈಡಾಗುವರೆಂದು ಅನೇಕ ವೈದ್ಯರು ಅಭಿಪ್ರಾಯಪಟ್ಟಿದ್ದಾರೆ.

ಈಗಾಗಲೇ ನಮ್ಮ ಸಮಾಜದ ಬಲಹೀನತೆಯನ್ನು ನೋಡಿದರೆ ಎದೆ ಒಡೆಯುವಂತಿರುವದು. ಮಹಿಳೆಯರ ಅಸ್ವತಂತ್ರತೆ, ಪರಾಧೀನತೆ, ಆದರ್ಶಹೀನವಾದ ಜೀವನ, ಯಾರಿಗೂ ಬೇಡದ ಸಂತಾನದ ಹೊರೆಯನ್ನು ಹೊತ್ತುಕೊಳ್ಳುವ ಅಧೀನ ಇವುಗಳನ್ನೆಲ್ಲಾ ಯೋಚಿಸುತ್ತಾ ವ್ಯಾಕುಲವಾಗುತ್ತಿರಲು ಪುರುಷರೂ ಕೂಡ ಬಲಹೀನತೆಯಿಂದ, ವಿಕಾರಮನೋಭಾವಗಳಿಂದ ಅಬಲೆಯರಾಗುವದು ಯಾರಿಗೂ ಸಮ್ಮತವಿಲ್ಲದ ಕೆಲಸ. ಸುಳ್ಳು ಕಲ್ಪನೆಯ ಮನೋಭಾವಗಳು ಹಾವಭಾವ ವಿಲಾಸಗಳಲ್ಲಿ ಮಾತ್ರ ಪರಿಣಾಮವಾಗಿರುವದರಿಂದ ಕಲೆಯ ಮುಖ್ಯ ಉದ್ದೇಶವೇ ಹಾಳಾಗಿ ಹೋಗುವದು.

---

## ಭೂಲೋಕಮಲ್ಲನಾರು ?

ಈಗೆರಡು ತಿಂಗಳುಗಳ ಹಿಂದೆ ನವಕರ್ನಾಟಕದಲ್ಲಿ ಶ್ರೀ ದ್ವೈಪಾಯನಾಚಾರ್ಯ ಜಹಾಗಿರ್ದಾರ ಎಂಬವರು ಕಾಡ್ಲವಾಡದ ಒಂದು ಶಿಲಾಲಿಪಿಯನ್ನು ಸಂಶೋಧಿಸಿ ಪ್ರಕಟಿಸಿದ್ದುಂಟು. ಅದರಲ್ಲಿ ಉಲ್ಲಿಖಿತವಾದ 'ಭೂಲೋಕಮಲ್ಲ'ನ ಬಗ್ಗೆಯೂ ಜಯಂತೀ ಪಟ್ಟಣದ ಬಗ್ಗೆಯೂ ಕಾಲದ ಬಗ್ಗೆಯೂ ಅವರಿಗೆ ಸಂಶಯ ಬಂದಿರುತ್ತದೆ.

ಆದರೆ ಆ ಶಿಲಾಲೇಖದಲ್ಲಿ ಹೇಳಿದ ಕಾಲವು ಸರಿಯಾಗಿದೆ. ಭೂಲೋಕಮಲ್ಲನೆಂದರೆ, ಕಲ್ಯಾಣದ ನೆಲೆವೀಡಿನಲ್ಲಿ ಆಳುತ್ತಿದ್ದ ೩ನೆಯ ಸೋಮೇಶ್ವರನು ( ಕ್ರಿ. ವ. ೧೧೨೬–೧೧೩೮ ). ಇವನ ಆಳಿಕೆಯ ೨ನೆಯ ವರ್ಷ ಎಂದರೆ ಕ್ರಿ. ವ. ೧೧೨೭ರಲ್ಲಿ (ಶಕ ವರ್ಷ ೧೦೪೯ರಲ್ಲಿ) ಪ್ಲವಂಗ ಸಂವತ್ಸರವು ಬರುತ್ತದೆ.

ತ್ರಿಭುವನಮಲ್ಲ ಸೋಮೇಶ್ವರನೆಂದರೆ ೪ನೆಯ ಸೋಮೇಶ್ವರನು ( ಕ್ರಿ. ವ. ೧೧೮೩–೧೧೮೯ ) ಇವನ ಆಳಿಕೆಯ ೪ನೆಯ ವರ್ಷ ಎಂದರೆ ಕ್ರಿ. ವ. ೧೧೮೬ರಲ್ಲಿ ( ಶಕವರ್ಷ ೧೧೦೮ರಲ್ಲಿ ) ಪರಾಭವ ಸಂವತ್ಸರವು ಬರುತ್ತದೆ.

ಕಲ್ಯಾಣ, ಬನವಾಸಿ ಎಂದರೆ ಜಯಂತಿ ಇವೆರಡೂ ಚಾಳುಕ್ಯರ ರಾಜಧಾನಿಗಳಿದ್ದವು. ಆದ್ದರಿಂದ ಆ ಶಿಲಾಲೇಖದಲ್ಲಿ 'ಜಯಂತಿಪುರದ ನೆಲೆವೀಡು' ಎಂದು ಉಲ್ಲೇಖ ಮಾಡಿದ್ದು ಸರಿಯಾಗಿದೆ.

— ಶ್ರೀ. ರಾಜಪುರೋಹಿತ.

# ೯|| ಘಂಟೆ

ಕತೆಗಾರರು:- ಶ್ರೀ ಅ. ನ. ಕೃಷ್ಣರಾಯರು, ಸಂಪಾದಕರು 'ಕಥಾಂಜಲಿ,' ಬೆಂಗಳೂರು.

ಹೌರಾ ರೈಲ್ವೆಯ ಸ್ಟೇಷನ್. ಗಲಭೆಯೋ ಹೇಳತೀರದು. ದುರ್ವಾಸನೆಯೋ ಸಹಿಸಲಸಾಧ್ಯ. ಅದು ಪೂಜಾ ರಜೆಯಕಾಲ. ಬಂಗಾಳದಲ್ಲಿ ನವರಾತ್ರಿಯೆಂದರೆ ಬಹಳ ದೊಡ್ಡ ಹಬ್ಬ. ಕ್ರೈಸ್ತರಿಗೆ ಕ್ರಿಸ್ತಮಸ್ ಹಬ್ಬವು ಹೇಗೋ ಹಾಗೆ. ನಾನು ಕಲ್ಕತ್ತೆಯ ಯೂನಿವರ್ಸಿಟಿಯಲ್ಲಿ ಎಂ. ಎಸ್. ಸಿ ಗೆ ಓದುತ್ತಿದ್ದವನು ರಜೆಯನ್ನುಪಯೋಗಿಸಿಕೊಂಡು ಊರಿಗೆ ಹೋಗಿಬರುವ ಎಂದು ಹೊರಟಿದ್ದೆ. ದೂರದೇಶದಲ್ಲಿದ್ದು—ಅದರಲ್ಲಿಯೂ ಕಲ್ಕತ್ತೆಯಂತಹ ಅರಮನೆಗಳ ಊರಿನಲ್ಲಿದ್ದು— ಮನೆಗೆ ಹಿಂತಿರುಗಿ ಬರಿಗೈಯಲ್ಲಿ ಹೋಗಲಾದೀತೇ ? ಏನೋ, ಅಲ್ಪ ಸ್ವಲ್ಪ ರೇಶ್ಮೆಯ ಬಟ್ಟೆಗಳನ್ನೂ, ಲೀಲೂಗೆ ಕೆಲವು ಬಂಗಾಳಿ ನಾಜೂಕಿನ ಫ್ರಾಕುಗಳನ್ನೂ ... ... ... ಅವಳಿಗೆ ಬಂಗಾಳಿ ಹುಡುಗಿಯರು ಉಡುವಂತಹ ಅಂಚುಹೂವಿನ, ತೆಳುಬಣ್ಣದ ೨-೩ ಸೀರೆಗಳನ್ನೂ ಕೊಂಡಿದ್ದೆ. ಅಮ್ಮ ಹಿಂದಿನಕಾಲದವಳು ಅವಳಿಗೇನು ತೆಗೆದುಕೊಂಡು ಹೋಗಲಿ ಎಂದು ಯೋಚಿಸಿ ಯೋಚಿಸಿ ಬೆಳ್ಳಿ ಕೃಷ್ಣದೇವರ ವಿಗ್ರಹವೊಂದನ್ನು ಕೊಂಡಿದ್ದೆ. ಕೆಲಸವೇನು, ಮೈಸೂರನ್ನು ಮೀರಿಸುತ್ತಿರಲಿಲ್ಲ. ಆದರೂ ಕಲ್ಕತ್ತೆಯಿಂದ ತಂದವೇಲೆ ಪ್ರಾಶಸ್ತ್ಯ ಹೆಚ್ಚಷ್ಟೆ. ಈ ಪ್ರೆಜಂಟಗಳದೇ ಒಂದು ಸಣ್ಣ ಗಂಟಾಗಿದ್ದಿತ್ತು; ಜೊತೆಗೆ ನನ್ನ ಪುಸ್ತಕಗಳು, ಹಾಸಿಕೆ, ಮಡಿಯ ಪೆಟ್ಟಿಗೆ, ಬಟ್ಟೆಬರೆಗಳು. ಕಲ್ಕತ್ತೆಯ ಹಿಂದಿನ ಅನುಭವ ನೆನೆದು ರೈಲು ಹೊರಡುವವಕ್ಕೆ ಒಂದು ಘಂಟೆಯ ಮುಂಚೆಯೇ ಸ್ಟೇಷನ್ನಿಗೆ ಬಂದಿದ್ದೆ.

ಕಲ್ಕತ್ತೆಯೆಂದರೆ ಬಾಯಿ ಬಾಯಿ ಬಿಡೋ ಹುಡುಗರೂ ಇದ್ದಾರೆ. ನಾನೂ ಅವನಲ್ಲಿ ಒಬ್ಬನಾಗಿದ್ದೆ. ಆದರೆ ಕಲ್ಕತ್ತೆ ರೈಲ್ವೆ ಸ್ಟೇಷನ್ನಿನಲ್ಲಿ ಜುಲೈ ತಿಂಗಳಲ್ಲಿ ಬಂದಾಗ ಇಳಿದೆ. ಕನಸು ಅರ್ಥ ಹಾರಿದಂತಾಯಿತು. ಆ ವಾಸನೆ- ಆ ಕೊಳಕು-ನಾರಿಗೆ ಪೋಣಿಸಿದ್ದ ಮೀನುಗಳನ್ನು ಹಿಡಿದುಕೊಂಡು ಬೀದಿಯಿಂದ ಹೋಗುತ್ತಿದ್ದ ಆ ಶೋಬಚರ ಗುಂಪು— ಕೇಳಿದ ಪ್ರಶ್ನೆಗೆ ಪ್ರತ್ಯುತ್ತರ ಕೊಡದೆ ಮಕಮಕ ನೋಡುತ್ತಿದ್ದ ಆ ಮುಂಕರ ಮಂಡಳಿ, ನೋಡುತ್ತ ರೈಲ್ವೇ ಸ್ಟೇಷನ್ನಿನ ಅಗಾಧತೆಯನ್ನನುಭವಿಸುತ್ತ ಬೆಂಗಳೂರಿಗೆ ಬಂದ ಬೋರೇಗೌಡನಂತೆ ಭ್ರಮೆಗೊಂಡು ಕಕ್ಕುಬಿಕ್ಕು ಹಿಡಿದಂತವನಾದೆ. ನನ್ನ ಅದೃಷ್ಟಕ್ಕೆ ಮೈಸೂರಿನವನೊಬ್ಬನು ಅವತ್ತು ದಾರಿತೋರಿಸಿ, ಸಹಾಯಮಾಡದಿದ್ದರೆ ಪಾಡು ಬೇಡ.

ಕಲ್ಕತ್ತಾವಾಸ. ಬಂಗಾಳಿಗಳ ಸಹವಾಸ ಮಾಡುತ್ತಾ ಮಾಡುತ್ತಾ ವಿವೇಕಾನಂದ, ರಾಮಮೋಹನ, ರವೀಂದ್ರರು ಇಲ್ಲಿ ಹೇಗೆ ಹುಟ್ಟಿದರಪ್ಪಾ ಎಂದೆನಿಸುತ್ತಿತ್ತು. ಬಂಗಾಲಿಗಳು ಒಟ್ಟು ಜನಾಂಗವಾಗಿ ಅಂತಹ ಬುದ್ಧಿವಂತರೇನಲ್ಲ. ಆದರೆ ಒಳ್ಳೆಯವರು. ಮೊದಲು ಯಾರನ್ನೂ ನಂಬುವುದಿಲ್ಲ, ನಂಬಿದರೆ ಪ್ರಾಣ ಕೊಡಲು ಸಿದ್ಧರಿರುತ್ತಾರೆ.

ನಾನು ಪೂಜಾರಜೆಯಲ್ಲಿ ಊರಿಗೆ ಬರುವಾಗ ಜೊತೆಯಲ್ಲಿ ಸೈಲೇಂದ್ರನೆಂಬ ಸಹಪಾಠಿಯೊಬ್ಬ ಬಂದಿದ್ದ. ನನಗೂ ಅವನಿಗೂ ಬೆಳೆದಿದ್ದ ಮೈತ್ರಿಯು ಒಡಹುಟ್ಟಿದವರನ್ನು ನಾಚಿಸುವಂತಿತ್ತು. ರೈಲ್ವೆ ಪ್ರಯಾಣದ ವಿಧಿಗಳೆಲ್ಲಾ ಪೂರೈಸಿದವು; ಟಿಕೆಟು ಕೊಂಡು ನಾನು ಇಂಟರ ತರಗತಿಯಲ್ಲಿ ಕುಳಿತೆ, ಜೊತೆಯಲ್ಲಿ ಸೈಲೇಂದ್ರನೂ ಕುಳಿತ. ಆ ಡಬ್ಬಿಯಲ್ಲಿ ಏಳುಮಂದಿ ಪ್ರಯಾಣಿಕರು ಸುಲಭವಾಗಿ ಪವಡಿಸಬಹುದಾಗಿತ್ತು. ನಾನಲ್ಲದೆ ನಾಲ್ಕು ಮಂದಿ ಬಂಗಾಳಿಗಳು ಹಾಸಿಗೆ ಹಾಸಿಕೊಂಡು ಕುಳಿತಿದ್ದರು. ಒಂದು ಜಾಗೆಯು ಅವರ ಪೈಕಿ ಯಾರಿಗೋ "ರಿಸರ್ವ್" ಆಗಿತ್ತು. ಇನ್ನೊಂದು ಜಾಗೆಯು ಖಾಲಿ ಇದ್ದಿತು. ರೈಲು ಹೊರಡಲು ಕಾಲು ಘಂಟೆಯು ಮೇಲಿತ್ತು.

ನನ್ನ ಅಗಲಿಕೆಯು ಸೈಲೇಂದ್ರನಿಗೆ ಸಹಿಸಲಾರದಷ್ಟಾಗಿತ್ತು. ಮೈಸೂರಿನ ಸೊಬಗು, ಅರಮನೆಗಳ ರಮ್ಯತೆ, ದಸರಾಹಬ್ಬದ ವಿಜೃಂಭಣೆ, ಮಹಾರಾಜರ ನಿರ್ಮಲ ಕೀರ್ತಿ, ಗೆರುಸೊಪ್ಪೆ, ಕನ್ನಂಬಾಡಿ ಬೇಲೂರಗಳ ವೈಭವಗಳನ್ನು ನನ್ನಿಂದ ಕೇಳಿ ಕೇಳಿ ಅವನ ಆತ್ಮವೆಲ್ಲಾ ವೈಸೂರಿನಲ್ಲಿಯೇ ಲೀನವಾಗಿತ್ತು. ಮೈಸೂರಿನವರು ನೀವು ಎಷ್ಟು ಒಳ್ಳೆಯವರು, ಎಷ್ಟು ಸುಸಂಸ್ಕೃತರು, ಎಷ್ಟುಉದಾರಮತಿಗಳು ಎಂತಹ ಕುಶಲರು ಎಂಬ ಭಕ್ತಿಯ ನುಡಿಗಳಿಗಂತೂ ನೆಲೆಯೇ ಇರಲಿಲ್ಲ. ಅವನ ಕಣ್ಣುಗಳಲ್ಲಿ ದುಃಖಬಿಂದುಗಳು ಕೂಡಿದ್ದವು. ಮಾತೇ ಹೊರಡದಂತಿದ್ದಿತು. ನನ್ನನ್ನೇ ಕ್ಷಣಕಾಲ ನೋಡಿ ಕೈಹಿಡಿದು "ಪುನಃ ಬರುವೆಯಲ್ಲವೆ? ನಮ್ಮನ್ನು ಮರೆಯುವುದಿಲ್ಲವಷ್ಟೇ, ನಿನ್ನ ಮೈಸೂರು ನ

ಬಂಗಾಳ ಬೇರೆಯಲ್ಲ. ಎರಡೂ ಒಂದೇ ತಾಯಿಯ ಇಬ್ಬರು ಮಕ್ಕಳು" ಎಂದನು. ನನ್ನ ಕಣ್ಣುಗಳಲ್ಲಿಯೂ ನೀರು ತುಂಬಿತು. "ಶೀಲಬಾಬು, ಬಂಗಾಳವನ್ನು ಮರೆಯಲೇ, ನನ್ನ ಗುರು ರಾಮಕೃಷ್ಣ ದೇವನ ನಾಡಿದು. ನಿನ್ನಂತಹ ಸ್ನೇಹಿತನನ್ನು ದೊರಕಿಸಿ ಕೊಟ್ಟ ಪವಿತ್ರ ದೇಶವಿದು. ಗೋಪೀನಾಥಷಾ ಜತೀಂದ್ರರ ಹುಟ್ಟಿದ ಕರ್ಮಭೂಮಿಯಿದು. ಇದನ್ನು ಮರೆಯಬೇ– ರಜೆ ಮುಗಿದೊಡನೆಯೇ ಬರುವೆ. ಪ್ರತಿಮಾದೇವಿ (ಅವನ ಸಹೋದರಿ ನನ್ನ ಒಲವಿನ ಗೆಳತಿ) ಗೆ ನನ್ನ ನಮಸ್ಕಾರ ಹೇಳು." ಎಂದ. ಆಗ ಚಹಾ ಚಹ ಹಿಂದೂ ಚಹಾ ಬಂದಿತು. ಸೈಲೇಂದ್ರನು ಚಹವನ್ನು ತೆಗೆದು ಬಲವಂತದಿಂದ ನನ್ನ ಕೈಗಿತ್ತನು. ಚಹದ ಪಾತ್ರೆಯನ್ನು ಹಿಡಿದು 'ಕೃಷ್ಣ ನಾಳೆ ಯಾರೆ ಈ ನಾವು ಯಾರೋ' ಎಂದುಸುರಿದನು. ಈ ಅಗಲುವಿಕೆಯ ಮಾತು ಮರೆಸಲು ನಾನು ರೂಮು ಬಟ್ಟೆ ಅಗಸನ ಮಾತು ತೆಗೆದೆ. ಸೈಲೇಂದ್ರನ ಮನಸ್ಸಾದರೋ ನನ್ನ ವಿಯೋಗವ್ಯಥೆಯಿಂದ ವಿಚಲಿತ ಹೊಂದಲೇ ಇಲ್ಲ. ಈ ವೇಳೆಗೆ ಮೊದಲನೆಯ ಘಂಟೆಯು ಬಡಿಯಿತು. ಸೈಲೇಂದ್ರನು ಎದ್ದು ನಿಂತು ಆದರದಿಂದ ನನ್ನನ್ನು ಅಪ್ಪಿದನು. ಈ ಉದ್ವೇಗದ ಭರದಲ್ಲಿ ನಾವಿರುವಾಗ ನಡೆಯುವ ಅಂಗಡಿಯೊಂದು ನಮ್ಮ ಡಬ್ಬಿಯ ಬಳಿಗೆ ಬಂದು ತನ್ನ ಸಾಮಾನುಗಳನ್ನೆಲ್ಲಾ ಒಳಗೆ ತಳ್ಳಲಾರಂಭಿಸಿತು. ಗಾಡಿಯಲ್ಲಿದ್ದ ಬಂಗಾಳಿಗಳು ಸಾಮಾನುಗಳನ್ನು ಹೊರಗೆ ಬಿಸುಡಲಾರಂಭಿಸಿದರು. ನಾನು ಮಧ್ಯೆ ಬಂದು ಹೊಸದಾಗಿ ಬಂದವನ ಆರ್ತನಾದಕ್ಕೆ ಮನಕೊಟ್ಟು ಉಳಿದಿದ್ದ ಜಾಗೆಯಲ್ಲಿ ಆತ ಕೂಡಬಹುದೆಂದು ಬಿನ್ನವಿಸಿದೆನು. ಸೈಲೇಂದ್ರನೂ ತನ್ನ ವಂಗಬಂಧುಗಳನ್ನೊಪ್ಪಿಸಿದನು. "ಒಳಗೆ ಹೊಸದಾಗಿ ಬಂದ ಪ್ರಯಾಣಿಕನು" "ಥ್ಯಾಂಕ್ಯು ವೆರಿ ಮಚ್" "ಮರಿ ನಿಂಡ ಉಪಕಾರಮಾಯುಂಡೀ." ಎಂದು ತನ್ನ ಸಾಮಾನುಗಳನ್ನಿಟ್ಟು ಕುಳಿತನು. ಆತನು ತೆಲಗು ಮಾತನಾಡಿದುದನ್ನು ಕೇಳಿ ನನ್ನ ಮನಸ್ಸು ಅರಳಿತು. ಈ ಸಾವಿರಾರು ಮೈಲಿಗಳ ಪ್ರಯಾಣದಲ್ಲಿ ಜೊತೆಗೊಬ್ಬ ಸಿಕ್ಕಿದನಲ್ಲಾ ನನ್ನ ಭಾಷೆಯಂತಹ ಭಾಷೆಯನ್ನು ಮಾತನಾಡುವವ ಎಂದು ಬಹು ಸಂತೋಷವಾಯಿತು. ಎರಡನೆಯ ಘಂಟೆಯು ಬಡಿಯಿತು. ಮನಸ್ಸಿಲ್ಲದೆಯೇ ಸೈಲೇಂದ್ರನು ಕೆಳಗಿಳಿದನು. ನನ್ನ ಕೈಯನ್ನು ಭದ್ರವಾಗಿ ಹಿಡಿದು "ಗುಡಬಯ್" ಎಂದನು. ಒತ್ತಿ ಒತ್ತಿ ಹಿಡಿದಿದ್ದ ಅಶ್ರುಧಾರೆಗಳು ಧಾರಾಕಾರವಾಗಿ ಸುರಿಯಲಾರಂಭಿಸಿತು. ಮೂರನೆಯ ಘಂಟೆಯೂ ಬಡಿಯಿತು. ರೈಲು ಮುಂದೆ ನಡೆಯಿತು. ನನ್ನ ಕಂಗಳಲ್ಲಿಯೂ ಅಶ್ರು ಪ್ರವಾಹ. "ಬರುವೆವು. ಇರುವೆವು. ಪ್ರೇಮಿಸುವೆವು; ದ್ವೇಷಿಸುವೆವು, ಒಂದಲ್ಲೊಂದು ದಿನ ಎಲ್ಲರೂ ಪಯಣ ಬೆಳೆಸುವೆವು. ಇಷ್ಟೆ ಅಲ್ಲವೆ ಜೀವನದ ಮರ್ಮ" ಎಂದೆನಿಸಿತು.

೨

ರೈಲು ಮುಂದೆ ಕೆಲವು ನಿಲ್ದಾಣಗಳವರೆಗೆ ಬರುವವರೆಗೂ ಮಾತೇ ಆಡಲು ಮನಸ್ಸು ಬರಲಿಲ್ಲ. ಆ ವೇಳೆಗೆ ಹೊಸ ಪ್ರಯಾಣಿಕನೂ ಹಾಸಿಗೆ ಹಾಸಿ, ತನ್ನ ಸಾಮಾನುಗಳೆಲ್ಲವನ್ನೂ ಜೋಡಿಸಿಟ್ಟು ವೃತ್ತಪತ್ರಿಕೆಯನ್ನು ಓದಲು ಹವಣಿಸುತ್ತಿದ್ದನು. ಖರಗಪುರಕ್ಕೆ ರೈಲುಬರಲು ಅಲ್ಲಿಯವನು ಕೆಲವು ಒಣಗಿಸಿದ ಕಾಬೂಲು ಫಲಗಳನ್ನು ಕೊಂಡು ನನಗೆ ಸ್ವಲ್ಪ ಒತ್ತಾಯದಿಂದಿತ್ತನು. ಅಲ್ಲಿಂದ ಮಾತುಕತೆಗಾರಂಭವಾಯಿತು. ನನ್ನ ಪೂರ್ವೋತ್ತರವನ್ನು ಕೇಳಿ ಮೈಸೂರಿನವನೆಂದು ತಿಳಿದ ಮೇಲಂತೂ ಆತನ ಆನಂದಕ್ಕೆ ಎಲ್ಲೆಯೇ ಇಲ್ಲದಂತಾಯಿತು. ಹಣ್ಣುಗಳ ಮುಖ್ಯಾಂಶವೆಲ್ಲಾ ನನ್ನ ಒಡಲು ಸೇರಲಾರಂಭಿಸಿತು. ಆತನು ಮೈಸೂರಿನಲ್ಲಿ ಒಂದೆರಡು ವರ್ಷ ಇದ್ದ ವಿಚಾರವೂ, ಕನ್ನಡ ಬರುವ ಸಂಗತಿಯೂ ತಿಳಿದನೇಲೆ ನನ್ನ ಅಭಿಮಾನವೂ ಹೆಚ್ಚಿತು.

"ನೀವು ಮೈಸೂರಿನಲ್ಲಿ ಏನು ವ್ಯಾಪಾರ ಮಾಡುತ್ತಿದ್ದಿರಿ.?"

"ನಾನು ಕೆಲವು ಮಿಲ್ಲುಗಳಿಗೆ ಏಜಂಟಾಗಿದ್ದೆ. ಆ ಸಂಬಂಧ ವ್ಯಾಪಾರ ಮಾಡುತ್ತಿದ್ದೆ. ಮೈಸೂರಿನವರ ಸಮಾನವಿಲ್ಲ ಕಾಣ್ರೀ ನಾನೂ ಕಾಶಿ, ಪ್ರಯಾಗ, ಅಲಹಾಬಾದ್, ಗಯಾ, ಕಲ್ಕತ್ತಾ, ಡೆಲ್ಲಿ ಎಲ್ಲಾ ಸುತ್ತಿದ್ದೀನಿ. ಆದರೆ ಮೈಸೂರಿನವರ ವಿನಯ ನಡತೆ, ಅತಿಥಿವಾತ್ಸಲ್ಯ ಬಿಟ್ಟರೆ ಇನ್ನೆಲ್ಲೂ ಸಿಕ್ಕಿಲ್ಲ ಕಾಣ್ರೀ "

" ನಿಮ್ಮ ಪರಿಚಯ ಮಾಡಿಕೊಡಲೇ ಇಲ್ಲ. ತಾವು ಆಂಧ್ರದವರೇನು? "

"ಹೌದು, ನನ್ನ ಸ್ಥಳ ಬೆಜವಾಡಾ. ನನ್ನ ಹೆಸರು ಪ್ರಕಾಶರಾವ ಎಂದು. ಚಿಕ್ಕಂದಿನಲ್ಲಿಯೇ ನನಗೂ ನನ್ನ ತಂದೆಗೂ ಮಾತು ಬಂದು ನಾನು ಮನೆಬಿಟ್ಟು ಬಿಟ್ಟೆ. ಹಾಗೆಯೇ ಭಿಕ್ಷಾನ್ನ ವಾರಾನ್ನದಿಂದ ಸ್ವಲ್ಪ ಓದಿಕೊಂಡು, ಅದೂ ಇದೂ ಕೆಲಸ ಮಾಡಿಕೊಂಡು ಕ್ರಮಕ್ರಮೇಣ ಸ್ವಲ್ಪ ದುಡ್ಡು ಜೊತೆಮಾಡಿಕೊಂಡೆ. ಆ ವೇಳೆಗೆ ನಮ್ಮ ತಂದೆಯೂ ತೀರಿಹೋಗಿದ್ದರು. ಅವರ ಅಲ್ಪ ಆಸ್ತಿನೇ ರೂಢಿಸಿಕೊಂಡು, ಮಿಲ್ಲುಗಳ ಏಜನ್ಸಿ ಸಂಪಾದಿಸಿಕೊಂಡು ಏನೋ ನಿಮ್ಮ ದಯದಿಂದ ಸ್ವಲ್ಪ ಹಣಕಾಸೂ ಮಾಡಿಕೊಂಡೆ. ಈಗ ಸ್ವಂತ ಮನೆಯಿದೆ. ನೀವು ಬೆಜವಾಡದಲ್ಲಿಳಿದೇ ಪುನರಾಸಿಗೆ ಹೋಗಬೇಕು ಕಂಡಿರಾ. ಇಲ್ಲಿ

ಆರಂಭವಾದ ಸ್ನೇಹ ಇಲ್ಲಿಗೇ ಮುಗಿಯಬಾರದು. ನನಗೆ ಎರಡು ಮಕ್ಕಳಿದ್ದಾರೆ. ಎರಡೂ ಎರಡು ರತ್ನಗಳು. ನನ್ನ ಕುಟುಂಬ, ಅವಳೇ ಈ ನನ್ನ ಭಾಗ್ಯಕ್ಕೆಲ್ಲಾ ಕಾರಣ. ಅವಳೇ ನನ್ನ ಮನೆಯ ಮಂಗಳ ಮೂರ್ತಿ. ನೀವು ನೀವು ಅವಳನ್ನು ನೋಡ ಬೇಕು. ಮೈಸೂರೆಂದ್ರೆ ಅವಳಿಗೆ ಪ್ರಾಣ. ನಾವು ಮೈಸೂರು ಬಿಟ್ಟಬಂದಾಗ ಅವಳಿಗೆ ಆಲಸ್ಯವಾಗಿ ೧೦೩–೧೦೪ ಡಿಗ್ರಿ ಗಳಷ್ಟು ಜ್ವರಾ ಬರುತ್ತಿತ್ತು. ಆಗೆಲ್ಲಾ ಮೈಸೂರದ್ದೇ ಕನವರಿಕೆ ಅವಳಿಗೆ. ನನ್ನ ಮಕ್ಕಳು ಅವರೇ ನನ್ನ ಮನೆಯ ಸೂರ್ಯ ಚಂದ್ರರು. ಇಲ್ಲಿ ನೋಡಿ– ... ... ..."

ಎಂದು ಹೇಳಿ ತನ್ನ ದೊಡ್ಡ ಪೆಟ್ಟಿಗೆಯೊಂದನ್ನು ತೆರೆದನು. ಅದರ ತುಂಬಾ ಹೊಸ ಹೊಸ ವಸ್ತ್ರಗಳು. ಕಣ್ಮನಕ್ಕೆ ಒಪ್ಪುವ ಜರತಾರಿಯ ಬಟ್ಟೆಗಳು. ಮೇಲೆಯೇ ಇಟ್ಟಿದ್ದ ಚಿತ್ರಸಂಗ್ರಹ ಪುಸ್ತಕವೊಂದನ್ನು ತೆರದು, ನನ್ನ ಬಳಿಗೆ ಬಂದು ಕುಳಿತು ಉಲ್ಲಾಸ, ಉತ್ಸಾಹ, ಉದ್ವೇಗಗಳಿಂದ ಒಂದೊಂದು ಚಿತ್ರ ವನ್ನು ವರ್ಣಿಸಲಾರಂಭಿಸಿದನು. ಅವನ ಪತ್ನೀಪುತ್ರರ ಚಿತ್ರ ಗಳೇ ೧೦೦–೩೦೦ರಷ್ಟಿದ್ದಿರಬಹುದು.

"ನೋಡಿ, ನನಗೆ ಕೊಂಚ ಕೊಂಚ ಫೋಟೋತೆಗೆಯು ವುದೂ ಬರುತ್ತದೆ. ಇವುಗಳಲ್ಲಿ ಮುಕ್ಕಾಲೆಲ್ಲವನ್ನು ನಾನೇ ತೆಗೆ ದುದು. ಇದು ನನ್ನ ಅನ್ನಪೂರ್ಣೆ (ಕುಟುಂಬದ ಹೆಸರು) ಯದು; ಅವಳು ನಮ್ಮ ಮನೆಗೆ ಬಂದ ವರ್ಷ ತೆಗೆದುಕೊಂಡ ಚಿತ್ರ. ಅವಳು ಶ್ರೀಮಂತರ ಮನೆಯಲ್ಲಿ ಹುಟ್ಟಿದವಳು. ನನ್ನಂ ತಹ ಬಡವನ ಕೈಹಿಡಿದಳು. ಆದರೂ ಒಂದು ದಿವಸವೂ ಅದು ಬೇಕು ಇದು ಬೇಕು ಎಂದು ಪೀಡಿಸಿದವಳಲ್ಲ. ಒಮ್ಮೆ ನನಗೂ ಮಕ್ಕಳಿಗೂ ಇನ್‌ಫ್ಲುಯಂಜಾ ಖಾಯಿಲೆ ಬಂದಿತು. ಸುತ್ತ ಮುತ್ತಲೂ ನಂಟರಿಂಬುವರ ಮನೆಗಳಿದ್ದವು. ಒಬ್ಬರೂ ನೆರವಾ ಗಲಿಲ್ಲ. ಅವಳೊಬ್ಬಳೇ ಸೊಂಟಕಟ್ಟಿ ನಿಂತಳು. ಇತ್ತ ಆಸ ತ್ರೆಗೆ ಹೋಗಿಬರುವುದು. ಇತ್ತ ನಮಗೆ ಗಂಜಿಕಾಸುವುದು. ಇತ್ತ ಮಕ್ಕಳ ನೆತ್ತಿಯ ಒತ್ತುವುದು. ಹಗಲೂ ರಾತ್ರಿ ನಿದ್ರಾ ಹಾರಗಳಿಲ್ಲವೆ ದುಡಿದಳು. ಸಹನದ ಆದಿಮೂರ್ತಿ. ನಾನು ಮುಂಗೋಪಿ. ದಂಡಿಸಿದರೆ ತನ್ನನ್ನು ತಿದ್ದಿಕೊಳ್ಳಲು ಪ್ರಯತ್ನಿ ಸುತ್ತಿದ್ದಳೇ ವಿನಾ ನನಗೆ ಎದುರುಬೀಳಳು. ಇದು ಅವಳು ಗರ್ಭಿಣಿಯಾಗಿದ್ದಾಗ ತೆಗೆದಚಿತ್ರ. ಇದು ಅವಳು ಭಾವಿಯಬಳಿ ಯಲ್ಲಿ ನೀರು ಸೇದುತ್ತಿದ್ದಾಗ ತೆಗೆದುದು. ಇದು ನೋಡಿ ಅವಳು ರಂಗವಲ್ಲಿ ಇಡುತ್ತಿರುವುದು. ರಂಗವಲ್ಲಿಯ ಕುಶಲತೆ ನೋಡ ಬೇಕಾದರೆ ಅನ್ನಪೂರ್ಣೆಯ ಕೆಲಸ ನೋಡಬೇಕು. ನೋಡಿ ಇವು ನನ್ನ ಮಕ್ಕಳದು, ಅವರ ಬಳಿಯಲ್ಲಿ ಕುಳಿತಿರುವ ಚಿಕ್ಕಹುಡುಗಿ ನನ್ನ ಹೆಂಡತಿಯ ತಂಗಿ. ಅದೇ? ಅದು ನಮ್ಮ ಮಾವ ಅತ್ತೆ ಯವರಚಿತ್ರ. ಅವರಿಗೆ ನಮ್ಮೊಂದಿಗೆ ಕುಳಿತು ಫೋಟೋ ತೆಗೆಸಿಕೊಳ್ಳುವುದಕ್ಕೆ ಬಹಳಸಂಕೋಚ. ಅದಕ್ಕೆ ತಲೆ ಬಗ್ಗಿಸಿ ಬಿಟ್ಟಿದ್ದಾರೆ."

"ಇದು ಯಾರ ಚಿತ್ರ"

"ನಮ್ಮ ತಾಯಿಯದು. ಆಕೆ ಈಗಿದ್ದಿದ್ದರೆ ನನ್ನ ಉಚ್ಚಸ್ಥಿತಿ ನೋಡಿ ಎಷ್ಟು ಆನಂದಪಡುತ್ತಿದ್ದಳೋ! ಮೊದಲಿನಿಂದಲೂ 'ಮನೆಗೆ ಸೊಸೆಬಂದದ್ದು ನೋಡಬೇಕು. ನನ್ನ ಮೊಮ್ಮಕ್ಕ ಳನ್ನು ಎತ್ತಿ ಆಡಿಸಿ ಕುಣಿಸಬೇಕು. ಅವರ ಸೊಂಟಕ್ಕೆ ಚಿನ್ನದ ಉಡಿಗೆಜ್ಜೆ ಮಾಡಿಸಿ ಹಾಕಬೇಕು.' ಎಂದು ಪದೇ ಪದೇ ಹೇಳು ತ್ತಿದ್ದಳು. ನಾವು ಅನಾಥರಾಗಿರುವೆವು. ನಮ್ಮ ಸುಖನೋಡಿ ಹಲುಬಿ ಕರುಬುವ ಬಂಧುಬಳಗಗಳಿದ್ದಾರೆಯೇ ವಿನಾ ಕಲೆತು ನಲಿಯುವವರು ಯಾರೂ ಇಲ್ಲ."

ಎಂದು ವರ್ಣಿಸುತ್ತಿರುವಂತೆಯೇ ಬಾಲಸೋರ್ ಸ್ಟೇಷನ್ ಬಂದಿತು, ಪ್ರಯಾಣಿಕನು ಕ್ಷಿಪ್ರದಲ್ಲಿ ಇಳಿದು ಟಿಕೀಟ ಆಫೀ ಸಿಗೆ ಹೋಗಿ ಸ್ವಲ್ಪಹೊತ್ತಿನ ಮೇಲೆ ಕೈಯಲ್ಲೊಂದು ಕಾಗದ ಹಿಡಿದು ಪುನಃ ಬಂದನು. ರೈಲು ಮುಂದಕ್ಕೆ ಹೊರಡಲು ಇಲ್ಲಿ ನೋಡಿ ಎಂದಾ ಕಾಗದವನ್ನು ಕೈಗಿತ್ತನು. ಟೆಲಿಗ್ರಾಮಿನ ಪ್ರತಿ "—ಪ್ರಿಯೇ ಉಳಿದಿರುವುದು ೬೨೦ಮೈಲುಗಳು. ನಾಳೆ ನಾನೂ ನೀನೂ ಮಕ್ಕಳು.

—ಪ್ರಕಾಶ"

ಇದೇ ರೀತಿಯಾದ ಸಂಭಾಷಣೆ ಸಾಗುತ್ತಿತ್ತು. ಸುಮಾರು ೧೨ ಘಂಟೆಯ ವೇಳೆಗೆ ರೈಲು ಕಟಕ್ ಸ್ಟೇಷನ್ನಿನ ಬಳಿಗೆ ಬಂದಿತು. ಪ್ರಕಾಶನು ತನ್ನ ತಿಂಡಿಯ ಬುತ್ತಿಯನ್ನು ತೆಗೆದನು. ನಾನೂ ತೆಗೆದೆನು. ಪರಸ್ಪರ ವಿನಿಮಯವಾದನಂತರ ಇಬ್ಬರೂ ಉಪಹಾರಮಾಡಿ ಮಲಗಿದೆವು. ನನಗೆ ರೈಲ್ವೆಯಗಾಡಿಯಲ್ಲಿ ನಿದ್ದೆ ಸಾಮಾನ್ಯವಾಗಿ ಬರುವುದಿಲ್ಲ. ಮುಸುಕಿಹಾಕಿ ಮಲಗಿದ್ದ ಅತ್ತಿತ್ತ ಹೊರಳಾಡಲಾರಂಭಿಸಿದೆ. ನಿದ್ರೆಯಂತೂ ಬಾರದು. ಜೊತೆಗೆ ತಿಗಣೆಯ ಕಾಟ, ಪ್ರಕಾಶದ ದೀಪ, ಶೀತಲವಾದ ಘಾಳಿಯ ಹೊಡೆತ. ಈ ಮಧ್ಯೆ ರೈಲುನಿಂತಾಗ ಪ್ರಯಾಣಿಕನ

ಸುಗ್ಗಾಟದ ಗೊಂದಲ. ಮಧ್ಯೆ ಸ್ವಲ್ಪ ಜೋಂಪು ಹತ್ತಿತೆಂದರೆ "ಟಕಿಟ ಟಿಕೆಟ" ಎಂಬ ಟಿಕಟಿಕ ಶಬ್ದ. ಮಧ್ಯೆ ಒಂದುಸಲ ಮಲಗಿ ಮಲಗಿ ಬೇಸತ್ತು ಎದ್ದೆ. ಪ್ರಕಾಶರಾಯನು ತೊಟ್ಟಿಲಿನಲ್ಲಿ ಜೋಗುಳದ ಇನಿದನಿ ಕೇಳಿ ಮಲಗಿದ ಮಗುವಂತೆ ಮಲಗಿ ನಿದ್ರಿಸುತ್ತಿದ್ದನು. ಮುಖದ ಮೇಲೆ ನಸುನಗೆಯ ತಾಂಡವನೃತ್ಯ. ಮಧ್ಯೆ ಮಧ್ಯೆ "ಅನ್ನಪೂರ್ಣಾ ನನ್ನ ರನ್ನಾ ಕೊನೆಗೆ ಬಂದೆಬಿಟ್ಟೆ. ಇನ್ನು ಇನ್ನು ಜೀವವಿರುವವರೆಗೆ ನಿನ್ನನ್ನಗಲೆನು. ನನಗೆ ನಿನ್ನ ಬಿಟ್ಟು ಇನ್ನಾರಿದ್ದಾರೆ" ಎಂಬ ಕನವರಿಕೆ. ಅವನ ಸಂತಸವನ್ನು ನೋಡುತ್ತ ನೋಡುತ್ತ "ಏನು ಸುಖ" ಎಂದೆನಿಸುತ್ತಿತ್ತು. ಮಧ್ಯೆ ಮಧ್ಯೆ ಯಾವ ಯಾವದೋ ಭಾವನೆಗಳು ನನಗೆ ಹರಿಯುತ್ತಿದ್ದವು. ಛೆ! ಛೆ! ಎಂದಂದು ಅವುಗಳನ್ನು ಮರೆಯಲೆತ್ನಿಸುತ್ತಿದ್ದೆ. ಭಾವನೆಗಳನ್ನು ಮರೆಯಲು ಸಾಧ್ಯವೇ? ಒಮ್ಮೊಮ್ಮೆ ಕಿಟಕಿಯಿಂದಿಣಿಕಿ ನೋಡಿದರೆ ದೀಪದ ಹುಳಗಳ ದೀಪೋತ್ಸವ ಗಿಡಬಳ್ಳಿಗಳಿಗೆಲ್ಲಾ ಅಲಂಕರಿಸಿದಂತೆ ಕಾಣುತ್ತಿದ್ದಿತು. ಪ್ರಶಾಂತತೆಯಿಂದ ಪ್ರಕಾಶಿಸುತ್ತಿದ್ದ ಹುಣ್ಣಿಮೆಯ ಚಂದ್ರನ ಶಾಂತಪ್ರಭಾವ. ಈ ಮಧ್ಯೆ, ರೈಲ್ವೆಮಾರ್ಗಕ್ಕೆ ಕೊರೆದಿದ್ದ ಕಣಿವೆಯಲ್ಲಿ ರೈಲು ನಡೆದಾಗ ಆಗುತ್ತಿದ್ದ 'ಗೊ' ಎಂಬ ಭಯಂಕರಶಬ್ದ. ಪ್ರಶಾಂತತೆಯಲ್ಲಿ ಗಭೀರತೆ. ಕ್ರಿಮಿಕೀಟಗೂರಗಳ ಕರ್ಕಶನಾದದಲ್ಲಿ ತಿಳಿನೀರ ಹೊಳೆಯಮೇಲೆ ಕುಣಿಯುತ್ತ ತನ್ನ ಮೋಹದ ಬಲೆ ಬೀಸುತ್ತಿದ್ದ ಮಾರುತನ ಮಧುರಗಾನ. ಹೊರಗಿಣಿಕಿ ನೋಡಿದರೆ ಚಂದ್ರಮನ ಪವಿತ್ರ ನಗೆ, ಒಳಗೆ ನೋಡಿದರೆ ಪ್ರವಾಸಿ ಪ್ರಕಾಶರಾಯನ ನಿರ್ಮಲ ನಗೆ. ಇವುಗಳ ಮಧ್ಯೆ ನನ್ನ ಮನಸ್ಸಿನ ಆಂದೋಲನ. ಈ ಮಿಶ್ರಭಾವನೆಗಳನ್ನು ಅನುಭವಿಸುತ್ತ ನಾನು ರಾತ್ರಿಯನ್ನು ಕಳೆಯಲಾರಂಭಿಸಿದೆ. ಪುನಃ ನಿದ್ರೆಯ ಜೋಂಪು ಹತ್ತಿತು. ಮಲಗಿದೆ. ಎಚ್ಚರವಾದಾಗ ಸೂರ್ಯೋದಯವಾಗಿದ್ದಿತು. ಪಲಸಾ ಸ್ಟೇಷನ್ನಿನ ಬಳಿಗೆ ರೈಲು ಬಂದು ನಿಂತಿತು.

೩

ಆ ವೇಳೆಗೇ ಪ್ರಕಾಶರಾಯನು ಎದ್ದು ಕುಳಿತಿದ್ದನು. ರೈಲು ನಿಲ್ಲುವುದನ್ನೇ ಕಾಯುತ್ತಿದ್ದನೆಂದು ಕಾಣುತ್ತದೆ. ಕೂಡಲೆ ಇಳಿದು ಮತ್ತೊಂದು ಟೆಲಗ್ರಾಂ ಕೊಟ್ಟು ಬಂದನು. ಆತನ ಅವಸರವನ್ನು ಕಂಡು ನನಗೆ ನಗೆಯೊಂದು ಕಡೆ. ಮಗುವಿನಂತಹ ಸರಳತೆಯನ್ನು ಕಂಡು ಅಂತಃಕರಣವೊಂದು ಕಡೆ. ಟೀ ಉಪಹಾರಗಳಾದವು.

"ಉಳಿದಿರುವುದೆಲ್ಲಾ ೩೦೦ ಮೈಲಿಗಳು ಊರಿಗೆ ಹತ್ತಿರವಾಗುತ್ತವಾಗುತ್ತ ಮನಸ್ಸಿನ ತವಕವು ಹೆಚ್ಚುತ್ತಿದೆ ನೋಡಿ."

"ನೀವು ಊರು ಬಿಟ್ಟು ಬಹಳ ವರ್ಷಗಳಾದವೋ ?"

"ಯುಗಯುಗಾಂತರಗಳೆಂದೇ ಹೇಳಬೇಕು. ಒಂದು ವರ್ಷದ ಮೇಲಾಗಿದೆ. ಅದಿರಲಿ. ನನ್ನ ಪ್ರಶ್ನೆಗೆ ಕ್ಷಮಿಸಬೇಕು. ತಮಗೆ ಮದುವೆಯಾಗಿದೆಯೋ ?"

"ಆಗಿದೆ"

"ಮನೆಗೆ"

"ಇಲ್ಲ. ಇನ್ನೂ ಇಲ್ಲ....."

"ಹಾಗಾದರೆ ಆದರೂ ಆಗದಂತೆಯೆ ಸರಿ. ನಿಮಗೂ ಮನೆಯಲ್ಲಿ ಹೆಂಡತಿ ಮಕ್ಕಳು ಕಾಯುತ್ತಿದ್ದರೆ ಆಗ ಗೊತ್ತಾಗುತ್ತಿತ್ತು. ಈ ರೈಲು ಬಹು ನಿಧಾನ ನೋಡಿ."

"ರೈಲು ನಿಧಾನವಲ್ಲ. ನಿಮ್ಮ ಮನಸ್ಸಿನ ವೇಗ ಬಹು ಹೆಚ್ಚು." ಎಂದು ಅದು ಇದು ಮಾತನಾಡುತ್ತ ಕುಳಿತೆವು.

ಅಂತೂ, ಯಾವ ವಿಷಯ ಬಂದರೂ, ಕೊನೆಯಲ್ಲಿ ಅನ್ನಪೂರ್ಣಾ ಮಕ್ಕಳ ಸ್ತುತಿಯಲ್ಲಿ ಮುಗಿಯುತ್ತಿತ್ತು. ಕೊನೆಕೊನೆಗೆ ನನಗೆ ಬೇಸರವಾಗುವಷ್ಟೂ ಆಯಿತು. ಆದರೂ ಅವನು ಹೇಳಿದಂತೆ "ಮನೆಗೆ ಬಂದು ಮಕ್ಕಳೂ......ಕಾಯುತ್ತಿದ್ದರೆ" ಎಂದೆನಿಸುತ್ತಿತ್ತು. ನಿಶ್ಶಬ್ದತೆಯಿಂದ ಅವನ ವರ್ಣನೆಯೆಲ್ಲವನ್ನೂ ಕೇಳುತ್ತಲಿದ್ದೆ.

ಸುಮಾರು ೧೨ ಘಂಟೆಯ ವೇಳೆಗೆ ವಾಲ್ಟೇರ್ ಬಳಿಗೆ ಬಂದೆವು. ನನಗೆ ಹಸಿವೇ ಇರಲಿಲ್ಲ. ಜೊತೆಗಾರನ ಬಲವಂತದಿಂದ ಊಟ ಮಾಡಿ ಬಂದೆ. ಪ್ರಕಾಶರಾಯನಿಗೆ ಊಟ ರುಚಿಸಲಿಲ್ಲ. ನನ್ನೆದುರಿಗೇನೋ "ಖಾರ ಸಾಲದ್ರೀ, ಊಟ ಚೆನ್ನಿಲ್ಲ" ಎಂದಂದ. ಆದರೆ ನೈಜವಾಗಿಯೂ ಮಾಡಿ ಬಡಿಸುವವರು ಬಡಿಸಿರಲಿಲ್ಲ. ಅದೆ ಅತೃಪ್ತಿಗೆ ಕಾರಣವೆಂದು ನನಗೆ ಭಾಸವಾಯಿತು.

ರಾಜಮಹೇಂದ್ರಿಯ ಬಳಿಗೆ ಐದು ಘಂಟೆಗೆ ರೈಲು ಬಂದಿತು. ಸ್ಟೇಷನ್ನಿನಲ್ಲಿ ಕಾಫಿಯನ್ನು ಕಂಡು ನನ್ನ ಮಂಕು ಅರ್ಧ ಹರಿಯಿತು. ಪ್ರಕಾಶರಾಯನ ದೇಹಾದ್ಯಂತವೂ ಚೇತನಸ್ವರೂಪಿಯಾಯಿತು. ಮತ್ತೊಂದು ಟೆಲಿಗ್ರಾಮನ್ನಿತ್ತು ತನ್ನ ಗುರುತಿನೊಬ್ಬನೊಂದಿಗೆ ಮಾತನಾಡುತ್ತ ಬಂದ. ನಡೆದ ಸಂಭಾ

ಷಣೆಯು ನನಗೆ ಸಂಪೂರ್ಣ ಅರ್ಥವಾಗದಿದ್ದರೂ ಹೆಂಡತಿ ಮಕ್ಕಳ ಯೋಗಕ್ಷೇಮದ ಕಥೆಯೇ ಆಗಿತ್ತೆಂದು ಗೊತ್ತಾಯಿತು. ರೈಲು ಎಲ್ಲ ಊರ ಎಲ್ಲೆಯನ್ನೂ ದಾಟಿತು. ಪ್ರಕಾಶರಾಯನ ಉದ್ವೇಗಕ್ಕೆ ಮಿತಿಯೇ ಇಲ್ಲವಾಯಿತು. ಸಾಮಾನುಗಳೆಲ್ಲವನ್ನೂ ತೆಗೆದುಕೊಂಡು ಬಾಗಿಲ ಸಮೀಪವಾಗಿಟ್ಟುಕೊಂಡನು. ಹುಡುಗರಿಗೆ ತಂದಿದ್ದ ಗಾಡಿಯನ್ನು ಅಲ್ಲಿಂದ ಇಲ್ಲಿಗೆ ಒಂದೆರಡು ಬಾರಿ ಎಳೆದಾಡಿ ತೃಪ್ತಿಪಟ್ಟುಕೊಂಡನು; ಕಣ್ಣು ತಿರುಗಿಸುವ ಬೊಂಬೆಯನ್ನೂ, ಬೊಗಳುವ ನಾಯಿಯನ್ನೂ, ಹಲ್ಲು ಕಿರಿಯುವ ಕೋತಿಯನ್ನೂ, ಪರೀಕ್ಷಿಸಿ ಜೋಪಾನವಾಗಿ ಕಾಗದದಲ್ಲಿ ಸುತ್ತಿ ಪೆಟ್ಟಿಗೆಗೆ ಹಾಕಿಕೊಂಡನು. ಈ ಮಧ್ಯೆ ಚಿತ್ರಸಂಗ್ರಹಪುಸ್ತಕ ( Album ) ವನ್ನೊಮ್ಮೆ ತೆರೆದು ಅಪ್ಪಿ ಚುಂಬಿಸಿದನು. ಈ ಸಡಗರವು ವಿವಾಹಮಂಟಪವನ್ನು ಅಲ್ಲಗಳೆಯುವಷ್ಟರ ಮಟ್ಟಗಿದ್ದಿತು. ಎಲ್ಲವು ಅಣಿಯಾದನಂತರ ವಸ್ತ್ರಧಾರಿಯಾಗಿ,

“ ರಾಯರೇ, ತಮ್ಮ ಪರಿಚಯವಾದದ್ದು ಬಹು ಸಂತೋಷ. ಜ್ಞಾಪಕವಿರಲಿ. ಯಾವಾಗಲಾದರೂ ಹೀಗೆ ಬಂದಾಗ ಬೆಜವಾಡದಲ್ಲಿ ಇಳಿಯದೆ ಹೋಗಬೇಡಿ. ಊರು ತಲುಪಿದಮೇಲೆ ಕಾಗದ ಬರೆಯುತ್ತೀರಿ. ” ಎಂದು ತನ್ನ ಭೆಟ್ಟಿಯ ಚೀಟಿಯ ಮೇಲೆ ವಿಳಾಸವನ್ನು ಗುರುತು ಹಾಕಿಕೊಟ್ಟು, ಬಾಗಿಲಬಳಿಗೆ ಹೋಗಿ ನಿಂತು, ತನ್ನೊಂದಿಗಿದ್ದ ರೈಲಿನ ಬೀಗದ ಕೈಯಿಂದ ಬಾಗಿಲನ್ನು ತೆರೆದು, ಹಾಗೆಯೇ ನಿಂತನು. ನಾನು ‘ರಾಯರೇ, ಹೇಗೂ ಸ್ಟೇಷನ ಬಂದಿತು. ಬನ್ನಿ, ಕುಳಿತುಕೊಳ್ಳಿ’ ಎಂದದ್ದು ಆತನ ಕಿವಿಗೆ ಬೀಳಿಸಲೇ ಇಲ್ಲ. ತನ್ನಾಗಮನವನ್ನು ಸೂಚಿಸುವ ಸೀಟಿಯ ಧ್ವನಿಯನ್ನು ರೈಲು ಮಾಡಿತು. ಪ್ರಕಾಶರಾಯನು ನನ್ನ ಕಡೆ ತಿರುಗಿ ‘ಉಳಿದಿರುವುದೆಲ್ಲಾ ಇನ್ನೊಂದೆರಡು ಮೈಲಿಗಳು ಕಾಣಿರಿ ” ಎಂದಂದನು.

೯-೩೦ ಗಂಟೆಯ ಸಮಯ. ರೈಲು ನಿಲ್ದಾಣದ ಸಮೀಪವಾಗುತ್ತ ಬಂದಿತು. ಅಲ್ಲಿನ ದೀಪಗಳು, ಜನಗೊಂದಲ್ಲ ಕಾಣಿಸುತ್ತಿತ್ತು. ಆಗ ಪ್ರಕಾಶರಾಯನು “ ರಾಯರೇ, ಅಗೋ ಅವಳೇ. ಮಕ್ಕಳೂ ಸಹ ” ಎಂದು ಕಿರಿಚಿದನು. ನಾನು ಕಿಟಕಿಯಿಂದಾಚೆ ತಲೆಯಿಟ್ಟು ಯಾರೆಂದು ನೋಡಿದೆ. ಮಹದಾಭರ್ಟ ಮಾಡಿಕೊಂಡು ಎದುರುಕಡೆಯಿಂದ ಮತ್ತೊಂದು ರೈಲು ಬರುತ್ತಿದ್ದಿತು. ಈ ಕಿಟಕಿ ಆ ಕಿಟಕಿಗಳ ಸಂದಿನಲ್ಲಿ ಪ್ರಕಾಶರಾಯನ ಪತ್ನೀ–ಪುತ್ರರು ಕಾಣುತ್ತಿದ್ದರು. ನಾನು ಹಾಗೆ ನೋಡುತ್ತಿರುವಂತೆಯೇ ಯಾವದೋ ಪದಾರ್ಥ ಬಿದ್ದಹಾಗಾಯಿತು. ಎದುರಿಗೆ ಬರುತ್ತಿದ್ದ ರೈಲೂ ಇದ್ದಕ್ಕಿದ್ದ ಹಾಗೆಯೇ ನಿಂತಿತು. ನಮ್ಮ ರೈಲೂ ನಿಂತಿತು. ನನ್ನ ಹೃದಯವು ಝಲ್ಲೆನಲು ಇಳಿದು ಜನತೆಯ ಗುಂಪು ಓಡುತ್ತಿದ್ದ ಕಡೆಗೆ ಓಡಿದೆ. ಅಧಿಕಾರಿಗಳು ಒಂದು ಪದಾರ್ಥವನ್ನು ಚಕ್ರಗಳ ಕೆಳಗಿನಿಂದ ಇಳಿಯುತ್ತಿದ್ದರು. ಪದಾರ್ಥವನ್ನು ನೋಡಿದೆ. ಮೊದಲು ಗುರುತು ಸಿಕ್ಕಲಿಲ್ಲ. ವೇಷಭೂಷಣಗಳನ್ನು ದಿಟ್ಟಿಸಿ ನೋಡಿದೆ. ಪ್ರಕಾಶರಾಯ–ಜೊತೆಯಲ್ಲಿ ಬಂದ–ಪ್ರಕಾಶರಾಯ. ಅವನ ಪತ್ನಿಯೂ ಶವದ ಬಳಿ ಬಂದು ನಿಂತಿದ್ದಳು. ಅವನ ಸಾಮಾನುಗಳೆಲ್ಲವನ್ನೂ ಹೊರಗಿಟ್ಟು “ಅಮ್ಮಾ, ಏನು ಹೇಳಲಿ ಅವರ ಸಡಗರ......” ಎಂದೆ. ಮುಂದೆ ಮಾತು ಹೊರಡದಾಯಿತು. ಕಂಠವು ಬಿಗಿದು ಬಂದಿತು. ರೈಲ್ವೆಯ ಘಂಟೆಯೂ ಕೇಳಬಂತು–ಗಾರ್ಡನ ಹಸುರು ದೀಪ–ಪೋರ್ಟರನ ಕೂಗು — ಗಾಡಿಯಲ್ಲಿ ಕುಳಿತೆ—ಮುಂದಕ್ಕೆ ಹೊರಟಿತು.

* * * *

ಹೃದಯದಲ್ಲಿ ಅಣಗಿಸಲಾರದಷ್ಟು ಅಲ್ಲೋಲ ಕಲ್ಲೋಲ. ಕಂಗಳಲ್ಲಿ ಅಶ್ರುಪ್ರವಾಹ. ಈ ಮಧ್ಯೆ ಯಥಾಶಾಂತತೆಯಿಂದ ಹೊರಡುತ್ತಿದ್ದ ರೈಲನ್ನು ಕಂಡು “ ಜೀವನವೆಲ್ಲವೂ ಒಂದು ಪಯಣ ” ಎಂದೆನಿಸಿತು.



# 'ಶಿವಾದ್ವೈತದರ್ಪಣ'ದ ವಿಮರ್ಶೆ

( ಲೇಖಾಂಕ : ೧ )

ಲೇಖಕರ— ಶ್ರೀ ಸಿದ್ಧರಾಮಪ್ಪ ಪಾವಟೆ B. A., LL. B., ಹುಬ್ಬಳ್ಳಿ

ಶ್ರೀವಾದ್ವೈತವರ್ಪಣವೆಂಬ ಚಿಕ್ಕ ಪ್ರಕರಣವು ಹೂಲಿ (ಪೂವನ್ಸಿ) ಪಂಚವರ್ಣ ಮಠದ ಶಾಲಾಧ್ಯಾಪಕ ಬ್ರಹ್ಮ ಶ್ರೀ ಸಿದ್ಧಬಸವಶಾಸ್ತ್ರಿಗಳಿಂದ ಪ್ರಕಟಿಸಲ್ಪಟ್ಟಿದೆ. ನಿಬಂಧವು ಸಂಸ್ಕೃತದಲ್ಲಿಹುದು. ವೀರಶೈವ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದಕವೆಂಪು ಮುಂದುವರಿದಿದೆ.

ಗ್ರಂಥದ ಭೂಮಿಕೆಯನ್ನು ಪ್ರಕಾಶಕರು ಬರೆದಂತೆ ಭಾಸವಾಗುವುದು. ಆದರೆ ಅದು ಹಾಲಾಸ್ಯನಾಥ ಶಾಸ್ತ್ರಿಗಳು ೧೯೦೮ರಲ್ಲಿ ತಾವು ನಾಗರಲಿಪಿಯಲ್ಲಿ ಪ್ರಚಾರಿಸಿದ ಶ್ರೀಕಂಠ ಭಾಷ್ಯಕ್ಕೆ ಬರೆದ ಉಪೋದ್ಘಾತದಿಂದ ಎತ್ತಿಕೊಂಡುದಾಗಿದೆ. ಇದು ಪ್ರಕಾಶಕರ ಹಿರಿಯತನಕ್ಕೆ ಕುಂದಕವನ್ನು ತರುವುದು. ಸಿದ್ಧಬಸವಶಾಸ್ತ್ರಿಗಳ ಭೂಮಿಕೆಯ ೧—೨—೩ ಪುಟಗಳನ್ನು ಹಾಲಾಸ್ಯನಾಥ ಶಾಸ್ತ್ರಿಗಳ ಉಪೋದ್ಘಾತದ ೫—೬—೭ ಪುಟಗಳೊಂದಿಗೆ ಹೋಲಿಸಿ ನೋಡಿರಿ.

ಶ್ರೀ ನೀಲಕಂಠಶಿವಾಚಾರ್ಯರು ಬರೆದ ಬ್ರಹ್ಮಸೂತ್ರ ಭಾಷ್ಯದ ಆಧಾರದಿಂದ ರಚಿಸಿದ ಪ್ರಕರಣವಿದೆಂದು ಪ್ರಕಾಶಕರ ಹೇಳಿಕೆಯು. ಶ್ರೀ ನೀಲಕಂಠಭಾಷ್ಯವನ್ನು ಗುಳೇದಗುಡ್ಡದ ಶ್ರೀ ಮುರಿಗೇಂದ್ರಸ್ವಾಮಿಗಳೆಂಬ ವಿರಕ್ತರು ೧೮೯೦ ರಲ್ಲಿ ಅಚ್ಚು ಹಾಕಿಸಿ ಪ್ರಸಾರಣವನ್ನು ಮಾಡಿರುವರು. ಅದನ್ನು ಶ್ರೀಕಂಠ ಭಾಷ್ಯದೊಡನೆ ಓದಿದರೆ ವೀರಶೈವರು ಶ್ರೀಕಂಠೀಯದಲ್ಲಿ ತುಸು ಹೆಚ್ಚುಕಡಿಮೆಯನ್ನು ಮಾಡಿ ತಮ್ಮದೊಂದು ಭಾಷ್ಯವನ್ನು ಕಲ್ಪಿಸಿಕೊಂಡಿರುವರೆಂದು ಎದ್ದು ಕಾಣುವುದು. ಶ್ರೀಕಂಠನು ವೀರಶೈವರಂತೆ ಶಿವಸರ್ವೋತ್ತಮತಾಪ್ರತಿಪಾದಕನು ; ಶಿವೈಕ ಭಕ್ತನು; ಆಗಮ ಪ್ರಮಾಣ್ಯ ಪ್ರತಿಷ್ಠಾಪಕನು; ಇವನ ಭಾಷ್ಯವು ವೀರಶೈವ ಮತಕ್ಕೆ ತೀರ ಸಮೀಪವಾದುದರಿಂದ ಕೊಂಚ ಬದಲಿಕೆಯಿಂದ ವೀರಶೈವರು ಇದನ್ನು ತಮ್ಮದಾಗಿ ಕಲ್ಪಿಸಿ ನೀಲಕಂಠಭಾಷ್ಯವೆಂದು ಕರೆದರು. ಶ್ರೀ ನೀಲಕಂಠಭಾಷ್ಯದ ಮೂರನೆಯ ಅಧ್ಯಾಯದಲ್ಲಿ ಈ ವ್ಯತ್ಯಾಸಗಳು ಕಂಡುಬರುವುವು. ಮಿಕ್ಕೆಡೆಗಳಲ್ಲಿ ಶ್ರೀ ನೀಲಕಂಠಭಾಷ್ಯವು ಅಕ್ಷರಶಃ ಶ್ರೀಕಂಠಭಾಷ್ಯವಾಗಿದೆ. ಬೇಕಾದ ಒಂದು ಪುಟವನ್ನು ತೆರೆದು ನೋಡಬಹುದು.

ವೀರಶೈವಧರ್ಮವು ವೈದಿಕವೆಂದು ಪಾಲ್ಕುರಿಕೆಯ ಶ್ರೀ ಸೋಮನಾಥನೂ, ಶ್ರೀ ಪಂಡಿತಾರಾಧ್ಯನೂ ಶ್ರೀ ಮಾಯಿದೇವನೂ ಮೊದಲಾದವರು ಅತ್ಯುತ್ತಮವಾಗಿ ಪ್ರತಿಷ್ಠಾಪಿಸಿರುವರು. ಇತ್ತೀಚೆಗೆ ವೀರಶೈವಧರ್ಮವು ವ್ಯಾಸಸೂತ್ರಗಳಿಗೂ ಸಮ್ಮತವೆಂದು ತೋರಿಸುವ ಸಾಹಸದಲ್ಲಿ ಈ ಕೃತಕಭಾಷ್ಯವು ಮುಂದೆ ಬಂದಿದೆ.

ಶ್ರೀ ನೀಲಕಂಠಭಾಷ್ಯಾಭಿಮಾನಿಯು ಶ್ರೀ ನೀಲಕಂಠೀಯದಿಂದಲೆ ಶ್ರೀಕಂಠೀಯವಾಗಿದೆಯೆಂದು ವಾದಿಸಬಹುದು. ಇದು ಸರಿ ಹೊಂದದು. ಶ್ರೀಸಿದ್ಧಬಸವಶಾಸ್ತ್ರಿಗಳು ಹಾಲಾಸ್ಯನಾಥ ಶಾಸ್ತ್ರಿಗಳ ಭೂಮಿಕೆಯನ್ನು ಎತ್ತಿ ತಮ್ಮದನ್ನಾಗಿ ಮಾಡಿಕೊಳ್ಳುವಾಗ ಆ ಭೂಮಿಕೆಯಲ್ಲಿಯ ಶ್ರೀ ಕಂಠ ಎಂಬ ಶಬ್ದಕ್ಕೆ ನೀಲಕಂಠ ಶಬ್ದವನ್ನು ಸೇರಿಸಿಕೊಂಡಿರುವರು. ಆದರೆ ಒಂದೆಡೆಯಲ್ಲಿ ಶ್ರೀಕಂಠಭಾಷ್ಯವು ಒಂದು ಇರುವುದನ್ನೂ ಅದಕ್ಕೆ ಶ್ರೀ ಅಪ್ಪಯ್ಯದೀಕ್ಷಿತರು ಶಿವಾರ್ಕಮಣಿ ಎಂಬ ಟೀಕೆಯನ್ನು ಬರೆದುದನ್ನೂ ಬದಲುಮಾಡದೆ ಉಳಿಸಿರುವರು.

ಶ್ರೀಕಂಠಭಾಷ್ಯಕಾರನು "ವ್ಯಾಸಸೂತ್ರಮಿದಂ ನೇತ್ರಂ। ವಿದುಷಾಂ ಬ್ರಹ್ಮದರ್ಶನೇ ॥ ಪೂರ್ವಾಚಾರ್ಯೈಃ ಕಲುಷಿತಂ। ಶ್ರೀಕಂಠೇನ ಪ್ರಸಾದ್ಯತೇ ॥ ಶ್ರೀಮತಾಂ ವ್ಯಾಸಸೂತ್ರಾಣಾಂ ಶ್ರೀಕಂಠೀಯಃ ಪ್ರವರ್ತತೇ ॥ ಮಧುರೋ ಭಾಷ್ಯಸಂದರ್ಭೋ ಮಹಾರ್ಥೋ ನಾತಿ ವಿಸ್ತರಃ॥" ಎಂದು ಗ್ರಂಥನಿರ್ಮಾಣ ಪ್ರತಿಜ್ಞೆಯನ್ನು ಮಾಡಿರುವನು.

ಶ್ರೀ ನೀಲಕಂಠ ಭಾಷ್ಯಕಾರನ ಗ್ರಂಥ ಪ್ರತಿಜ್ಞೆಯು ಕಂಡುಬರುವುದಿಲ್ಲ. ಆ ಗ್ರಂಥದ ಮೊದಲಿಲ್ಲಿ ಶಿವತತ್ವರಹಸ್ಯದ ಕೆಲವು ಪ್ರಮಾಣಗಳನ್ನುದಾಹರಿಸಿ "ಶ್ರೀಮದ್ವೀರಶೈವಾಗ್ರೇಸರ ನೀಲಕಂಠ ಶಿವಾಚಾರ್ಯ ರೂಪೇಣ ಸ್ವತೇಜಸಾ ಸರ್ವವೇದ ವೇದಾಂತ ತತ್ವರಹಸ್ಯಾರ್ಥ ಪ್ರಕಾಶಕಮಚೀಕರದ್ಭಾಷ್ಯಂ" ಎಂದು ಶ್ರೀ ನೀಲಕಂಠನೆಂಬ ಶಿವಾಚಾರ್ಯನು ವೇದವೇದಾಂತ ತತ್ವರಹಸ್ಯಾರ್ಥಪ್ರಕಾಶಕವಾದ ಭಾಷ್ಯವನ್ನು ರಚಿಸಿದನೆಂದು ವೃತ್ತಾಂತವು ನಿರೂಪಿತವಾಗಿದೆ. ಇದರಿಂದ ಶ್ರೀಕಂಠಭಾಷ್ಯವು ಶ್ರೀಕಂಠಪ್ರಣೀತವೆಂದೂ ಶ್ರೀ ನೀಲಕಂಠ ಭಾಷ್ಯವು ಸಂಕಲಿತವೆಂದೂ ಊಹಿಸಲಿಕ್ಕೆ ಮಾರ್ಗವಿದೆ.

ಮತ್ತೇನೆಂದರೆ ವ್ಯಾಸಸೂತ್ರಗಳಲ್ಲಿ ಜೈಮಿನ್ಯಾದಿ ಸೂತ್ರಗಳಂತೆ ಅಧ್ಯಾಹಾರ, ಗೌಣ, ಲಕ್ಷಣಾ, ವಿಪರಿಣಾಮ, ವ್ಯವಧಾರಣಕಲ್ಪನಾ ಎಂಬ ಅತಿಕ್ಲೇಶಕರವಾದ ದೋಷಗಳಿಲ್ಲ. ಆದರಿಂದಲೆ ಶ್ರೀಕಂಠನು ಅವುಗಳಿಗೆ ನೇತ್ರದ ರೂಪಕವನ್ನು ಹೊಂದಿಸಿರುವರು. ಅಧ್ಯಾಹಾರವೆಂದರೆ ಸೂತ್ರದಲ್ಲಿ ಒಂದು ಪದವನ್ನು ಹೆಚ್ಚಿಗೆ ಸೇರಿಸಿ (ಅಧ್ಯಾಹಾರದಿಂದ) ಅರ್ಥವನ್ನು ಮಾಡುವುದು. ಗೌಣವೆಂದರೆ ಸೂತ್ರದಲ್ಲಿಯ ಪದಗಳ ವಾಚ್ಯಾರ್ಥವನ್ನು ಬಿಟ್ಟು ಆ ವಾಚ್ಯಾರ್ಥಕ್ಕೆ ಸಂಬಂಧಿಸಿದ ಮತ್ತೊಂದು ಅರ್ಥವನ್ನು ಕಲ್ಪಿಸುವುದು. ಲಕ್ಷಣಾ ಅಂದರೆ ಸೂತ್ರದಲ್ಲಿಯ ಪದಗಳಿಗೆ ಮುಖ್ಯಾರ್ಥವನ್ನು ಹೇಳುವುದರಿಂದ ಅರ್ಥವು ಹೊಂದದಿರಲು ಮುಖ್ಯಾರ್ಥ ಅಥವಾ ವಾಚ್ಯಾರ್ಥಕ್ಕೆ ಕಾರ್ಯಕಾರಣತ್ವಾದಿ ಸಂಬಂಧದಿಂದ ಹೊಂದಿಕೆಯುಳ್ಳ ಬೇರೆ ಅರ್ಥವನ್ನು ತಕ್ಕೊಳ್ಳುವುದು. ವಿಪರಿಣಾಮವೆಂದರೆ ಸೂತ್ರ ಪದಗಳ ವಿಭಕ್ತಿಗಳನ್ನು ಪಲ್ಲಟಿಸುವುದು. ಅಂದರೆ ಒಂದು ವಿಭಕ್ತಿಯು ಇದ್ದಲ್ಲಿ ಮತ್ತೊಂದು ವಿಭಕ್ತಿಯನ್ನು ಕಲ್ಪಿಸಿ ಸೂತ್ರಾರ್ಥವನ್ನು ಮಾಡುವುದು. ವ್ಯವಧಾರಣ ಕಲ್ಪನೆಯೆಂದರೆ ಸೂತ್ರಪದಗಳಿಂದ ಹೊರಡುವ ಅರ್ಥಕ್ಕಿಂತ ವಿಪರೀತವಾದ ಅರ್ಥವನ್ನು ಮಾಡುವುದು. ಹೀಗೆ ಮಾಡದೆ ಜೈಮಿನಿಯ ಸೂತ್ರಗಳು ಎಷ್ಟೋ ಕಡೆಗಳಲ್ಲಿ ಅರ್ಥವನ್ನು ಕೊಡುವುದಿಲ್ಲ — ಇವಕ್ಕೆಲ್ಲ ಉದಾಹರಣಗಳನ್ನೂ ವಿಷಯಸ್ಪಷ್ಟೀಕೃತಿಯನ್ನೂ ಶಿವಾರ್ಕಮಣಿದೀಪಿಕೆಯಲ್ಲಿ ಕಾಣಬಹುದು— ಇಂತು ಸ್ವಭಾವನಿರ್ಮಲವಾದ ಬಾದರಾಯಣನ ಸೂತ್ರಗಳಲ್ಲಿ ವೀರಶೈವರ ಪ್ರಾಣಪದಕವಾದ ಅಷ್ಟಾವರಣಗಳೂ ಪಂಚಾಚಾರಗಳೂ, ಒಮ್ಮೆಯಾದರು ಸ್ವಶಬ್ದದಿಂದ ಏಕೆ ಬಂದಿಲ್ಲ.

ಒಂದು ಹೊತ್ತಿಗೆ ಶ್ರೀಮುರಿಗೇಂದ್ರ ಸ್ವಾಮಿಗಳು ಪ್ರಸಾರತನಕ್ಕೆ ತಂದ ಗ್ರಂಥಕ್ಕೆ ಬೇರೊಂದು ನೀಲಕಂಠ ಭಾಷ್ಯವಿರಬಹುದೆಂದರೆ ಅದು ಆಗದು. ನೀಲಕಂಠ ಭಾಷ್ಯಕ್ಕೆ ಕ್ರಿಯಾಸಾರವೆಂಬ ಕಾರಿಕೆಯನ್ನು ಇನ್ನೊಬ್ಬ ನೀಲಕಂಠನೆಂಬ ಆಚಾರ್ಯರು ಬರೆದಿರುವರು. ಆ ಕಾರಿಕೆಗೆ ನಿರ್ವಾಣಮಂತ್ರಗಳೆನ್ನುವವರು ಟೀಕೆಯನ್ನು ಬರೆದಿರುವರು. ಇದರಲ್ಲಿ ನೀಲಕಂಠ ಭಾಷ್ಯವೆಂದು ಉದಾಹರಿಸಿದ ಗ್ರಂಥಭಾಗಗಳು ಗುಳೇದಗುಡ್ಡದ ಶ್ರೀ ಮುರಿಗೇಂದ್ರಸ್ವಾಮಿಗಳ ಪುಸ್ತಕಕ್ಕೂ ಶ್ರೀಕಂಠ ಭಾಷ್ಯಕ್ಕೂ ಅಕ್ಷರಶಃ ಒಂದೇಯಾಗಿವೆ. ಆದರಿಂದ ಬೇರೊಂದು ನೀಲಕಂಠಭಾಷ್ಯವನ್ನು ಊಹಿಸಲು ಇಂಬಿಲ್ಲ.

ಇದು ನೀಲಕಂಠಭಾಷ್ಯದ ಮಾತಾಯ್ತು. ಈ ಭೂಮಿಕೆಯಲ್ಲಿ ನೀಲಕಂಠಾಚಾರ್ಯರು ಪೂವಲ್ಲಿಯ ಮಠದ ಗುರುಪರಂಪರೆಯವರೆಂದು ತೋರಿಸುವ ಹವಣಿಕೆಯು ಕಂಡುಬರುವುದು. ಇದಕ್ಕೆ ಪ್ರಮಾಣವೆಂದು ಶಿವಾದ್ವೈತದರ್ಪಣಕಾರರು ತಮ್ಮ ಗ್ರಂಥಾರಂಭದಲ್ಲಿ ಮಾಡಿದ ಮಂಗಲ ಶ್ಲೋಕಗಳನ್ನೂ ಆ ಮಠದ ಪಟ್ಟಾವಲಿ ಚರಿತ್ರಗತಪದ್ಯಗಳನ್ನೂ ಶ್ರೀ ಸಿದ್ಧ ಬಸವಶಾಸ್ತ್ರಿಗಳು ಅವಲಂಬಿಸುವರು.

ಈ ಮಂಗಲಶ್ಲೋಕಗಳು ಭೂಮಿಕೆಯ ೧-೨-೩ ಪುಟಗಳಂತೆ ಪರರ ಗ್ರಂಥಗಳನ್ನು ಕೈದುಡುಕಿಕೊಂಡುವಾಗಿರುವವು. ಗುಳೇದಗುಡ್ಡದ ಶ್ರೀ ಮುರಿಗೇಂದ್ರಸ್ವಾಮಿಗಳು ತಮ್ಮ ಪುಸ್ತಕಕ್ಕೆ ಉಪೋದ್ಘಾತವನ್ನು ಬರೆದಿರುವರು. ಅದರ ಮೊದಲಲ್ಲಿ "ನಿಗಮ ಶಿಖರ ಸಿಂಧೌ ಸ್ವೀಯ ಪಾಂಡಿತ್ಯ ಶೈಲೈಃ। ನ್ಮಥನ ಜನಿತ ಭಾಷಾಖ್ಯಾಂ ಸುಧಾಂ ಸಂವಿತೀರ್ಯ॥" ಇತ್ಯಾದಿಯಾಗಿ ಏಳು ಶ್ಲೋಕಗಳನ್ನು ಕಟ್ಟಿರುವರು. ಅವುಗಳಲ್ಲಿ ಮೊದಲನೆಯ ನಾಲ್ಕು ಶ್ಲೋಕಗಳಲ್ಲಿ ಶ್ರೀ ನೀಲಕಂಠಾಚಾರ್ಯರ ಸ್ತುತಿಗಳು. ಶ್ರೀ ಸಿದ್ಧಬಸವಶಾಸ್ತ್ರಿಗಳು ೧-೨-೪ ಶ್ಲೋಕಗಳನ್ನು ಎತ್ತಿ ತಮ್ಮ ೭ನೇ ೮ನೇ ೯ನೆ ಶ್ಲೋಕಗಳನ್ನು ಮಾಡಿಕೊಂಡಿರುವರು. ತಮ್ಮ ಮಠದ ಪಟ್ಟಾವಲಿ ಚರಿತ್ರದಲ್ಲಿ ಶಿವಾದಿತ್ಯ ಶಿವಾಚಾರ್ಯರ ವರ್ಣನೆಯೆಂದು ಸಿದ್ಧಬಸವಶಾಸ್ತ್ರಿಗಳು —

ಶ್ರೀಮಚ್ಚೈತನ್ಯಸಿದ್ಧಾಂತಸಮಧಿಗತ ಶಿವಾದ್ವೈತವಿದ್ಯಾವಿಲಾಸಃ । ಕಾಣಾದೀ ರಕ್ಷಪಾದೀರಪಿ ಗಹನಗಿರೋ ಯೋಗವಿದ್ಯಾಮವೈದೀತ್ ॥ ಸಿದ್ಧಾಂತೇ ಜೈಮಿನೀಯೇ ಪಟುತರಮತಿಮಾನ್ ಪಾಣಿನೀಯೇಪಿ ವಿದ್ವಾನ್ । ಜೀಯಾತ್ ಸೋಯಂ ಸದಾ ಶ್ರೀ ಪರಮಗುರುಶಿವಾದಿತ್ಯ ಯೋಗೀಂದ್ರ ಚಂದ್ರಃ॥

ಎಂಬುದು —

ಶ್ರೀಮಜ್ಜ್ಞಾನೇಂದ್ರಾಭಿಘೋರಧಿಗತ ಸಕಲ ಬ್ರಹ್ಮವಿದ್ಯಾಪ್ರಪಂಚಃ । ಕಾಣಾದೀ ರಾಕ್ಷಪಾದೀರಪಿಗಹನ ಗಿರೋ ಯೋ ಮಹೇಂದ್ರಾದವೇದೀತ್ ॥ ದೇವಾ ದೇವಾಧ್ಯಗೀಷ್ಟ ಸ್ಮೃತರ್ನಗರೇ ಶಾಸನಂ ಜೈಮಿನೀಯಂ । ಶೇಷಾಂಕ ಪ್ರಾಪ್ತ ಕೀರ್ತಿರ್ಮಲ ಭಣಿತಿರಭೂತ್ಸರ್ವ ವಿದ್ಯಾಧರೋ ಯಃ ॥

ಇಂತೆಂಬ ಜಗನ್ನಾಥಪಂಡಿತನ ಶ್ಲೋಕದ ವಿಕಟರೂಪವಾಗಿದೆ

ಪೂವಲ್ಲೀಮಠದ ಮಹತ್ವವನ್ನು ಬೆಳೆಯಿಸಲಿಕ್ಕೆ (ಸಿದ್ಧ ಬಸವಶಾಸ್ತ್ರಿಗಳ ಮತ್ತು ಅವರ ತಂಮುಂದಿರಾದ ಚರಮೂರ್ತಿಗಳ ತಿಳುವಳಿಕೆಯಂತೆ) ತೋರಿಸುವ ವಂಶಾವಳಿಯು ಸಮಗ್ರವಾಗಿ ಸುಳ್ಳನಿ. ಹೂಲಿಯ ಮಠಕ್ಕೆ ೧೬೫೦ನೆಯ ಇಸ್ವಿಯ ಎಡಬಲದಲ್ಲಿ ಪಟ್ಟಾಧಿಕಾರಿಯಾದ ಶ್ರೀಸಿದ್ಧನಂಜೇಶನು ಬಸವಶತಕ ಭಾವರತ್ನಾಭರಣ ಗುರುರಾಜಚರಿತ್ರ ರಾಘವಾಂಕಚರಿತ ಎಂಬಿವು ಮೊದಲಾದ ಗ್ರಂಥಗಳನ್ನು ರಚಿಸಿ ಅತಿಪ್ರಸಿದ್ಧನಾಗಿರುವನು. ಕರ್ಣಾಟಕ ಕವಿಚರಿತ್ರದ ೩೭೯ನೆಯ ಪುಟವನ್ನು ನೋಡಿರಿ. ಆತನು ತನ್ನ ಗುರುಪರಂಪರೆಯನ್ನು ಗುರುರಾಜಚರಿತ್ರದಲ್ಲಿ ಕೊಟ್ಟಿರುವನು. ಅದರಲ್ಲಿ ಸಿದ್ಧಬಸವಶಾಸ್ತ್ರಿಗಳು ಹೇಳುವ ಒಂದಾದರು ಹೆಸರು ಬಂದಿಲ್ಲ. ರಾಘವಾಂಕಚರಿತ್ರದಲ್ಲಿ ಶ್ರೀ ಬಸವಚೆನ್ನಬಸವ ಶ್ರೀ ಮಡಿವಾಳಮಾಚಿದೇವರಾದಿಗಳ ಮತ್ತು ಇನ್ನೂ ಅನೇಕ ಶಿವಶರಣರ ಕೊಂಡಾಟವಿದೆ. ಅದರಲ್ಲಿ ಸಿದ್ಧಬಸವಶಾಸ್ತ್ರಿಗಳು ಹೇಳುವ ಸಿದ್ಧಚೈತನ್ಯಾದಿಗಳ ಸ್ತುತಿಯು ಇಲ್ಲ. ರಾಘವಾಂಕಕಾವ್ಯದ ಪ್ರಾರಂಭದ ಮಂಗಲಶ್ಲೋಕಗಳಿಂದ ಪೂವಲ್ಲೀಮಠಕ್ಕೆ ಶ್ರೀ ಸಿದ್ಧನಂಜೇಶನೆಂಬಾಚಾರ್ಯರು ಮೂಲಗುರುಗಳೆಂದು ತಿಳಿದುಬರುವುದು. ಶ್ರೀಯುತ ಸಿದ್ಧಬಸವಶಾಸ್ತ್ರಿಗಳು ಅವಲಂಬಿಸುವ ಪಟ್ಟಾವಲಿಚರಿತ್ರವನ್ನು ಯಾರು ಎಂದು ಬರೆದರು! ಶ್ರೀ ಸಿದ್ಧನಂಜೇಶನಾಗಲಿ ಇನ್ನಾವ ವೀರಶೈವ ಕವಿಯಾಗಲಿ ಭಾಷ್ಯಕಾರನೆನ್ನುವ ಶ್ರೀ ನೀಲಕಂಠನನ್ನು ಅಥವಾ ವೃತ್ತಿಕಾರನೆನ್ನುವ ಸಿದ್ಧಚೈತನ್ಯನನ್ನು ಶಿವದ್ವೈತದರ್ಪಣಕಾರನೆನ್ನುವ ಶಿವಾನುಭವಶಿವಾಚಾರ್ಯನನ್ನು ಹೊಗಳಿಲ್ಲ.

ಸಿದ್ಧಬಸವಶಾಸ್ತ್ರಿಗಳ ಹೆಸರಿನಿಂದ ಚರಮೂರ್ತಿಗಳು ಬರೆದ ಅಥವಾ ಗ್ರಂಥಾಂತರಗಳಿಂದ ಎತ್ತಿದ ಭೂಮಿಕೆಯಲ್ಲಿ ಕಾಣುವ ಈ ಆಚಾರ್ಯವಂಶದ ಹೆಸರುಗಳು ಸಿದ್ಧಚೈತನ್ಯ ಶಿವಾದಿತ್ಯ ಎಂಬಿವುಗಳು ವೀರಶೈವರಲ್ಲಿ ವಾಡಿಕೆಯಾದ ಹೆಸರುಗಳಲ್ಲ. ಭೂಮಿಕೆಯನ್ನು ಓದಿದುದರ ಮೇಲಿಂದ ಚರಮೂರ್ತಿಗಳು ನ್ಯಾಯಗ್ರಂಥಗಳನ್ನು ಓದುವಾಗ ಬಂದಿರುವ ಹೆಸರುಗಳದೊಂದು ಮಾಲಿಕೆಯನ್ನು ಮಾಡಿ ವಂಶಾವಳಿಯನ್ನು ಹೊಂದಿಸಿದಂತೆ ಕಂಡುಬರುವುದು. ಶ್ರೀ ಷಡಕ್ಷರಾದಿ ಉಭಯ ಭಾಷಾ ವಿಶಾರದರೂ, ವೀರಶೈವಸಿದ್ಧಾಂತಸ್ಥಾಪಕರೂ ಆದ ಗ್ರಂಥಕಾರರೂ ವಿಶೇಷವಾಗಿ ಇದೇ ಪೂವಲ್ಲೀಮಠದ ಶಿವಯೋಗಿಗಳೂ ಶಿವಕವಿಗಳೂ ಸಂಸ್ಕೃತಪಂಡಿತರೂ ಆದ ಶ್ರೀ ಸಿದ್ಧನಂಜೇಶ್ವ

ರಾಚಾರ್ಯರು ಮರೆದುಬಿಟ್ಟ ಹೆಸರುಗಳು ನಮ್ಮ ಶ್ರೀಯುತ ಸಿದ್ಧಬಸವಶಾಸ್ತ್ರಿಗಳಿಗೆ ಒಂಮೆಗೆ ದೊರೆತವೆಂದು ನಾವು ನಂಬಲಾರೆವು. ತಮ್ಮ ಗುರುವಂಶದಲ್ಲಿ ಸೇರಿಸಿದ ಶಿವಾದಿತ್ಯ ಶಿವಾಚಾರ್ಯರ ಕಾಲವು ಈಗೆಂಟುನೂರು ವರ್ಷಗಳ ಹಿಂದೆ ಆಗಿಹೋದ ಗಂಗೇಶೋಪಾಧ್ಯಾಯರಿಗಿಂತ ಮತ್ತು ಶ್ರೀ ಹರ್ಷನಿಗಿಂತ ಪ್ರಾಚೀನವೆಂದು ಶ್ರೀಯುತ ಸಿದ್ಧಬಸವಶಾಸ್ತ್ರಿಗಳು ಬರೆದಿರುವರು. ಇದಕ್ಕೆ ಆಧಾರವೆಂದರೆ ಗಂಗೇಶೋಪಾಧ್ಯಾಯರು ತಮ್ಮ ನ್ಯಾಯಗ್ರಂಥದಲ್ಲಿ ಶಿವಾದಿತ್ಯಾಚಾರ್ಯರ ಮತವನ್ನು ಉಲ್ಲೇಖಿಸಿ ಖಂಡಿಸಿದುದು. ಅದರಂತೆಯೆ ಶ್ರೀ ಹರ್ಷನು ತನ್ನ ಗ್ರಂಥದಲ್ಲಿ ಶ್ರೀ ಶಿವಾದಿತ್ಯಾಚಾರ್ಯರ ಮತವನ್ನು ಖಂಡಿಸಿದುದು. ಈ ಗಂಗೇಶೋಪಾಧ್ಯಾಯನು ಮತ್ತು ಶ್ರೀಹರ್ಷನು ೮೦೦ ವರ್ಷಗಳಾಚೆ ಇದ್ದರು.

ಗಂಗೇಶೋಪಾಧ್ಯಾಯನೂ ಶ್ರೀಹರ್ಷನೂ ಖಂಡಿಸಿದ ಶಿವಾದಿತ್ಯಶಿವಾಚಾರ್ಯರನ್ನು ತಮ್ಮ ಮಠದ ಗುರುಪರಂಪರೆಯಲ್ಲಿ ಸೇರಿಸಿಕೊಳ್ಳುವುದು ಹೇಗೆ ಗೌರವವೆನಿಸಿತೊ ತಿಳಿಯದು. ಅದಿರಲಿ. ಈ ವರೆಗೆ ನ್ಯಾಯಗ್ರಂಥಗಳನ್ನು ಪರಿಶೀಲಿಸಿದ ವಿದ್ವಾಂಸರು ಶಿವಾದಿತ್ಯ ಶಿವಾಚಾರ್ಯರು ವೀರಶೈವರೆಂದು ಎಲ್ಲಾದರು ಉಲ್ಲೇಖಿಸಿರುವರೊ ?

ಇದೀಗ ಸಾಕು. ಇನ್ನು ಶಿವಾದ್ವೈತದರ್ಪಣವನ್ನು ಪರೀಕ್ಷಿಸುವ. ಮೊದಲು "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರವಿವರಣವನ್ನು ನೋಡುವ. ಈ ಸೂತ್ರವನ್ನು ಶ್ರೀ ನೀಲಕಂಠನು (ಶ್ರೀ ಕಂಠನು) (ಅಥ) ಧರ್ಮವಿಚಾರಾನಂತರಂ (ಅತಃ) ಯತೋಽಧೀತವೇದೇನ ಧರ್ಮೋ ವಿಚಾರಿತೋ। ತಸ್ಮಾದನುಷ್ಠಾನಸಂಪನ್ನಚಿತ್ತಶುದ್ಧಿನಾ ತತ್ಕಾಲಸಂಪನ್ನ ವಿವೇಕಾದಿಗುಣಸಹಕೃತ ಪರಮಭಕ್ತಿಸಂಭಾವಿತೇನಾನೇನ ಬ್ರಹ್ಮಾಪಿ ವಿಚಾರಣೀಯಮಿತಿ" (ಬ್ರಹ್ಮಜಿಜ್ಞಾಸಾ) ಬ್ರಹ್ಮಣೋ ಜಿಜ್ಞಾಸಾ ಕರ್ಮಣಿ ಷಷ್ಠೀ "ಧರ್ಮವಿಚಾರಾನಂತರದಲ್ಲಿ ಧರ್ಮವನ್ನನುಷ್ಠಿಸಿದರಿಂದ ಚಿತ್ತವು ಶುದ್ಧವಾಯಿತ್ತಾಗಿ ಆ ಚಿತ್ತಶುದ್ಧಿಯ ಕಾಲದಲ್ಲಿ ವಿವೇಕಾದಿಗುಣಗಳುಂಟಾಗಲು ಅವುಗಳಿಂದೊಡಗೂಡಿದ ಪರಮಭಕ್ತಿಯನ್ನು ಹೊಂದಿದವನು ಬ್ರಹ್ಮವನ್ನು ವಿಚಾರಿಸತಕ್ಕುದು" ಎಂದು ವಿವರಿಸುವರು. ಇಲ್ಲಿ ಧರ್ಮವಿಚಾರಾನಂತರದಲ್ಲಿ ಎಂಬುದಕ್ಕೆ ಪೂರ್ವಮೀಮಾಂಸಾವಿಚಾರಾನಂತರದಲ್ಲಿ [illegible] ಶ್ರೀಕಂಠನು ನ ವಯಃ ಧರ್ಮಬ್ರಹ್ಮವಿಚಾರ

ರೂಪಯೋಃ ಶಾಸ್ತ್ರಯೋರತ್ಯಂತಭೇದವಾದಿನಃ ಕಿಂತ್ವೇಕತ್ವವಾದಿನಃ ಧರ್ಮಬ್ರಹ್ಮಯೋರಾರಾಧನಾರಾಧ್ಯಭೂತಯೋಃ ಪ್ರತಿಪಾದಕಂ "ಅಥಾತೋ ಧರ್ಮಜಿಜ್ಞಾಸೇ"ತ್ಯಾರಭ್ಯ ಅನಾವೃತ್ತಿಃ ಶಬ್ದಾದಿತ್ಯೇತಾವತ್ಪರ್ಯಂತಮೇಕಮೇವಶಾಸ್ತ್ರಂ" ಎಂದು ಜೈಮಿನಿಯ ಧರ್ಮಮೀಮಾಂಸೆಗೂ ಬಾದರಾಯಣ ಬ್ರಹ್ಮಮೀಮಾಂಸೆಗೂ ಏಕಶಾಸ್ತ್ರತ್ವವನ್ನಂಗೀಕರಿಸುವನು. ಅದರಿಂದ ಅವನು ಹೇಳಿದ ಧರ್ಮವಿಚಾರವು ಜೈಮಿನೀಯ ಧರ್ಮಸೂತ್ರಪ್ರತಿಪಾದಿತವಾದುದು. ಶಿವಾಗಮಗಳಲ್ಲಿ ಪ್ರತಿಪಾದಿತವಾದ ಅಷ್ಟಾವರಣಪಂಚಾಚಾರರೂಪವಾದ ಧರ್ಮವಲ್ಲ.

ಇದನ್ನು ನೆನಪಿನಲ್ಲಿಟ್ಟು ಶಿವಾದ್ವೈತದರ್ಪಣಕಾರರು ಈ ಸೂತ್ರಾರ್ಥವನ್ನು ಹೇಗೆ ವಿವರಿಸಿರುವರು ನೋಡುವ— "ಅಥಾತೋ ಬ್ರಹ್ಮಜಿಜ್ಞಾಸಾ ಇತಿ. ಅತ್ರ ಅಥ ಶಬ್ದಾರ್ಥೋಽಷ್ಟಾವರಣ ವಿಶಿಷ್ಟ ಪಂಚಾಚಾರ ರೂಪಪತಿಧರ್ಮ ಪ್ರಾಪ್ತ್ಯಾನಂತರ್ಯವಚನಃ ಅತಃಶಬ್ದೋ ಹ್ಯಧಿಕಾರ ಸಂಪೂರ್ಣತ್ವಂ ಬ್ರೂಯತೇ ತಥಾ ಚ ವೇದಾಂತೇ ಪರಮಂಗುಹ್ಯಂಪುರಾಕಲ್ಪೇ ಪ್ರಚೋದಿತಂ । ನಾಪ್ರಶಾಂತಾಯ ದಾತವ್ಯಂ ನಾಪುತ್ರಾಯಾಶಿಷ್ಯಾಯ ವಾ ಪುನಃ॥ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ। ಅಧೀತವೇದಾಯ ಜಿತೇಂದ್ರಿಯಾಯ ಚ। ಪ್ರತಿಷ್ಠಿತಾಷ್ಟಾವರಣಾನುಸಾರಿಣೇ । ಸದಾ ಸದಾಚಾರಯುತಾಯ ಧೀಮತೇ । ಹೇಯಂ ಶಿವಾದ್ವೈತಮಿದಂ ಮುಮುಕ್ಷವೇ ಇತ್ಯಾದಿ ಶ್ರುತ್ಯಾಗಮೋಕ್ತೇಃ ಪತಿಧರ್ಮ ಪ್ರಾಪ್ತ್ಯನಂತರಂ ಯತೋಽಧಿಕಾರ ಪೂರ್ಣತ್ವರೂಪ ಪತಿಧರ್ಮ ಪ್ರಾಪ್ತಿಃ ಅತೋ ಹೇತೋ ಬ್ರಹ್ಮಣೋ ಜಿಜ್ಞಾಸಾ ಕರ್ತವ್ಯೇತಿಶೇಷಃ" ಇದಕ್ಕೆ ಕನ್ನಡವು: ಈ ಸೂತ್ರದಲ್ಲಿ ಅಥ ಶಬ್ದಕ್ಕೆ ಅಷ್ಟಾವರಣವಿಶಿಷ್ಟ ಪಂಚಾಚಾರವೆಂಬ ಪತಿಧರ್ಮವು ಕೈಸೇರಿದ ಬಳಿಕ ಎಂದು ಅರ್ಥವು. ಅತಃ ಶಬ್ದಕ್ಕೆ ಅಧಿಕಾರದ ಸಂಪೂರ್ಣತ್ವದರ್ಥವು. ಹಾಗೆಯೆ ವೇದಾಂತದಲ್ಲಿ ಪರಮರಹಸ್ಯವಾದ, ಪುರಾಕಲ್ಪದಲ್ಲಿ ವಿಧಿಸಲ್ಪಟ್ಟ (ತತ್ವವನ್ನು) ಪ್ರಶಾಂತನಲ್ಲದವನಿಗಾಗಲಿಯು, ಮಗನಲ್ಲದ ಅಥವಾ ಶಿಷ್ಯನಲ್ಲದವನಿಗಾದರೆಯು ಕೊಡಲಾಗದು. ಆವನೊಬ್ಬನಿಗೆ ಈಶ್ವರನಲ್ಲಿ ಅತ್ಯಂತ ಭಕ್ತಿಯುಂಟೋ ಈಶ್ವರನಲ್ಲಿ ಹೇಗೋ ಹಾಗೆಯೆ ಗುರುವಿನಲ್ಲಿಯೂ ಉಂಟೋ ಆ ಮಹಾತ್ಮನಿಗೆಯೆ ಈ ಅರ್ಥಗಳನ್ನು ಹೇಳಿದರೆ ತಿಳಿವುವು. ವೇದಾಧ್ಯಯನವನ್ನು ಮಾಡಿದಂತಹನೂ ಜಿತೇಂದ್ರಿಯನೂ ಪ್ರತಿಷ್ಠಿತವಾದ ಅಷ್ಟಾವರಣವನ್ನನುಸರಿಸಿದವನೂ, ಎಂದೆಂದಿಗೂ ಸದಾಚಾರವುಳ್ಳವನೂ ಮುಮುಕ್ಷುವೂ ಆದವನಿಗೆ ಈ ಶಿವಾದ್ವೈತವನ್ನು ತಿಳುಹಬೇಕು. (ಕೊಡಬೇಕು) ಇತ್ಯಾದಿ ಶ್ರುತ್ಯಾಗಮಗಳ ಉಕ್ತಿಯುಂಟು. ಪತಿಧರ್ಮಪ್ರಾಪ್ತಿಯು ಆಗುತ್ತಿದ್ದಾದಕಾರಣ ಬ್ರಹ್ಮಜಿಜ್ಞಾಸೆಯು ಮಾಡಲ್ಪಡತಕ್ಕದು."

ವಿಷಯವನ್ನು ಪರಾಮರ್ಶಿಸುವ ಮೊದಲು ಭಾಷೆಯನ್ನು ಪರೀಕ್ಷಿಸುವ "ಅತ್ರ ಅಥ ಶಬ್ದಾರ್ಥೋಽಷ್ಟಾವರಣ ವಿಶಿಷ್ಟ ಪಂಚಾಚಾರರೂಪ ಪತಿಧರ್ಮ ಪ್ರಾಪ್ತ್ಯಾನಂತರ್ಯವಚನಃ" ಎಂಬೀ ವಾಕ್ಯವು ತಪ್ಪು. ಅದು "ಅತ್ರ ಅಥ ಶಬ್ದಾರ್ಥೋಽಷ್ಟಾವರಣ ವಿಶಿಷ್ಟ ಪಂಚಾಚಾರರೂಪಪತಿಧರ್ಮ ಪ್ರಾಪ್ತ್ಯಾನಂತರ್ಯವಚನಃ" ಎಂದಾಗಲಿ "ಅತ್ರ ಅಥ ಶಬ್ದಾರ್ಥೋಽಷ್ಟಾವರಣ ವಿಶಿಷ್ಟಪಂಚಾಚಾರರೂಪ ಪತಿಧರ್ಮಪ್ರಾಪ್ತ್ಯಾನಂತರ್ಯಂ" ಎಂದು ಇರಬೇಕಾಗುತ್ತಿತ್ತು. "ಪತಿಧರ್ಮ ಪ್ರಾಪ್ತ್ಯನಂತರಂ ಯತೋಽಧಿಕಾರಪೂರ್ಣತ್ವರೂಪ ಪತಿಧರ್ಮ ಪ್ರಾಪ್ತಿಃ" ಎಂಬುದು ಪತಿಧರ್ಮ ಪ್ರಾಪ್ತಿಯಾದ ಬಳಿಕ ಪತಿಧರ್ಮ ಪ್ರಾಪ್ತಿಯುಂಟಾಗುವುದೆಂಬ ಅಸಂಭವಾರ್ಥವನ್ನುಳ್ಳುದು. ಅದರಿಂದದು "ಪತಿಧರ್ಮ ಪ್ರಾಪ್ತ್ಯನಂತರಂ ಯತೋಽಧಿಕಾರ ಪೂರ್ಣತ್ವ ಪ್ರಾಪ್ತಿಃ" ಎಂದು ಇರಬೇಕು.

---

# ಚಾಲುಕ್ಯ ರಾಷ್ಟ್ರಕೂಟಾದಿಗಳು ಕನ್ನಡಿಗರೇ !

ಲೇಖಕರು— ಶ್ರೀ ನರಗುಂದ ರಾಮರಾಯರು, LL. B., ಧಾರವಾಡ

## ಬಾದಾಮಿಯ ಚಾಲುಕ್ಯರು

೧ನೇ ಚಾಲುಕ್ಯ ಮನೆತನದ—ಕನ್ನಡ ಶಿಲಾಲಿಪಿಗಳು ಸಹ ಅನೇಕ ದೊರೆಯುತ್ತವೆ. ಉದಾ:—

ಕುರುಗೋಡದಲ್ಲಿಯ ೧ನೇಪುಲಕೇಶಿಯ ಶಾಸನ—
ವಿಕ್ರಮಾದಿತ್ಯನ— ಬಿಜಾಪುರದಲ್ಲಿಯ ,,
ಯುವರಾಜವಿಕ್ರಮನ—ಲಕ್ಷ್ಮೇಶ್ವರದಲ್ಲಿಯ ಧ್ವಜಸ್ತಂಭ
ಕಾಂಚಿಯಲ್ಲಿಯ ವಿಕ್ರಮಾದಿತ್ಯನ ಶಾಸನ—
ಐಹೊಳೆಯಲ್ಲಿಯ ವಿಕ್ರಮಾದಿತ್ಯವಿಜಯಾದಿತ್ಯರ ,,

೧ನೇ ಚಾಲುಕ್ಯಮನೆತನದ ಶಾಸನಗಳಲ್ಲಿ ಸಂಸ್ಕೃತ ಶಾಸನಗಳೇ ಬಹಳ. ಕನ್ನಡ ಕಡಿಮೆ—ಈ ಚಾಲುಕ್ಯರನ್ನು ರಾಷ್ಟ್ರಕೂಟ ಅರಸನಾದ ದಂತಿದುರ್ಗನು ಸೋಲಿಸಿದನು—ಸಾಮನಗಡ (ಕೊಲ್ಲಾಪುರ ಸಂಸ್ಥಾನ) ದಲ್ಲಿಯ ಶಾಸನದಲ್ಲಿ ದಂತಿದುರ್ಗನು **ಕರ್ನಾಟಕ ಬಲವನ್ನು** (ಚಾಲುಕ್ಯರ ಬಲವನ್ನು) ಸೋಲಿಸಿ ದಕ್ಷಿಣದೇಶದ ಅರಸನಾದನೆಂದು ಹೇಳಿದೆ. ಈ ಶಾಸನದ ಉಲ್ಲೇಖವನ್ನು ಡಾ|| ಭಾಂಡಾರಕರು ಮತ್ತು ವೈದ್ಯರು (ಶ್ರೀ ವೈದ್ಯರ ೨ನೇಭಾಗ ಪುಟ ೩೩೮) ಮಾಡಿರುತ್ತಾರೆ. ವೈದ್ಯರಂತು ೮ನೇ ಶತಮಾನದಲ್ಲಿ ಚಾಲುಕ್ಯರು ಕನ್ನಡಿಗರಾಗಿರಬಹುದೆಂದು ಬಲು ಕಷ್ಟದಿಂದ ಬರೆಯುತ್ತಾರೆ (೩೩೭ನೇ ಪುಟದಿಂದ ಮುಂದೆ).

ಐಹೊಳೆಯ ಶಿಲಾಶಾಸನದಲ್ಲಿ ಮಹಾರಾಷ್ಟ್ರವೆಂದು ಹೆಸರು ಬಂದಿದೆಯಾದ್ದರಿಂದ ಈ ದೇಶವು ಮಹಾರಾಷ್ಟ್ರವೆಂದು ಮರಾಠಿ ಲೇಖಕರು ಹೇಳುತ್ತಾರೆ. ಮತ್ತು ಮೊದಲನೇ ಚಾಲುಕ್ಯರ ಸಂಬಂಧವಾಗಿ ಅವರಿಗೆ ಅದೊಂದೇ ಆಧಾರವು. ಆದರೆ ಈ ಒಂದು ಆಧಾರದ ಮೇಲಿಂದ ಈ ದೇಶವು ಆ ಕಾಲಕ್ಕೆ ಈಗಿನ ಮಹಾರಾಷ್ಟ್ರದಂತೆ ಮರಾಠಿ ದೇಶವಿತ್ತೆಂದೂ ಮರಾಠಿ ನುಡಿಯೇ ನಾಡನುಡಿಯಾಗಿತ್ತೆಂದೂ ತಿಳಿಯಲಿಕ್ಕೆ ಬರಲಾರದು. ಐಹೊಳೆಯ ಸುತ್ತುಮುತ್ತಲಿನ ಪ್ರಾಂತದಲ್ಲಿ ಇವತ್ತಿಗೂ ಅಚ್ಚ ಕನ್ನಡನುಡಿಯೇ ನಾಡನುಡಿ ಇರುತ್ತದೆ.

ಮೇಲಾಗಿ ಮಹಾರಾಷ್ಟ್ರ ಶಬ್ದವು ಸಂಸ್ಕೃತವಿರುತ್ತದೆ. ಮತ್ತು ಅದು ದೇಶದ ಭಾಗವಾಚಕ ಶಬ್ದವಿದೆ. ಚಾಲುಕ್ಯರ ಕಾಲದಲ್ಲಿ—ಗ್ರಾಮ ಮಹಾಗ್ರಾಮ-ಮಂಡಲ ಮಹಾಮಂಡಲ-ರಾಷ್ಟ್ರ ಮಹಾರಾಷ್ಟ್ರ- ಹೀಗೆ ರಾಜ್ಯದ ಭಾಗಗಳು ಮಾಡಲ್ಪಟ್ಟದ್ದು ಈ ಭಾಗದ ಅಧಿಕಾರಿಗಳಿಗೆ ಗ್ರಾಮಾಧಿಪ ಮಹಾಮಂಡಲೇಶ್ವರ ರಾಷ್ಟ್ರಕೂಟ ಪೃಥ್ವೀವಲ್ಲಭ ಎಂಬದಾಗಿ ಅಧಿಕಾರದ ಹೆಸರುಗಳು ಇದ್ದವು. ಗ್ರಾಮ-ಮಹಾಗ್ರಾಮ ಈ ಮೊದಲಾದ ಸಂಗತಿಗಳ ಬಗ್ಗೆ ಆದಿಪುರಾಣ ೮ನೇ ಆಶ್ವಾಸನ ೬೩ನೇ ಪದ್ಯದ ಮುಂದಿನ ಗದ್ಯ ನೋಡಬಹುದು. ಈ ಪ್ರಕಾರ ಬದಾಮಿ ಚಾಲುಕ್ಯರ ಕಾಲದಲ್ಲಿ ಅವರ ರಾಜ್ಯದಲ್ಲಿ ೩ ಮಹಾರಾಷ್ಟ್ರಗಳು. (Provinces ಅಥವಾ Presidencies) ಇದ್ದವು, ಇಷ್ಟೇ ಅರ್ಥವಾಗುವದು. Fleet ಸಾಹೇಬರು ಈ ಬಗೆ ಅಂದದ್ದು :—

"But the word *i. e.* Maharashtra had originally in his time (*i. e.* Pulkeshi II) a signification very different from the special meaning which its corruption 'Maratha' carries now and denoted simply the great and comparitively unknown region lying to the South of the early Aryan settlement in Hindusthan.

In the whole area of the country not a single Marathi inscription has been discovered of a greater age than 2 or 3 centuries with the exception that a few Prakrat words occur here and there: the inscriptions are all either in pure Sanskrit or pure Kanarese or in the two Languages combined. This fact speaks of itself as to what was the Vernacular of the country in early times".

## ರಾಷ್ಟ್ರಕೂಟರು

ರಾಷ್ಟ್ರಕೂಟರ ಸಂಬಂಧವಾಗಿ ಯಾವತ್ತೂ ಮಹಾರಾಷ್ಟ್ರ ಲೇಖಕರಿಗೆ ಒಳ್ಳೇ ಅಭಿಮಾನವಿರುತ್ತದೆ. ಉಳಿದ ಎಲ್ಲ ಮನೆತನಗಳು ಕದಾಚಿತ್ ಬೇರೆ ನುಡಿಯುವರಾದರೂ ರಾಷ್ಟ್ರಕೂಟರು ನಮ್ಮವರೇ ಎಂದು ಭಾಂಡಾರಕರಾದಿ ಲೇಖಕರು ನಿರ್ಣಯಿಸಿ ಹೇಳುತ್ತಾರೆ.

ರಾಷ್ಟ್ರಕೂಟರ ಬಗ್ಗೆ ಕನ್ನಡಿಗರಿಗೆ ವಿಶೇಷವಾಗಿ ಹೇಳುವ ಕಾರಣವೇ ಇಲ್ಲ. ಈ ರಾಜ್ಯಮನೆತನದ ಕನ್ನಡ ಶಿಲಾಶಾಸನಗಳು ಕೇರಳವಾಗಿ ದೇಶದ ತುಂಬಾ ದೊರೆಯುತ್ತವೆ. ಈ ರಾಜರಲ್ಲಿ ಹಲವರು ಸ್ವತಃ ಕನ್ನಡ ಕವಿಗಳಾಗಿದ್ದರು. ಬಹುತರವಾಗಿ ಎಲ್ಲ ರಾಜರ ಆಸ್ಥಾನದಲ್ಲಿ ಕನ್ನಡ ಆಸ್ಥಾನಕವಿಗಳಿದ್ದರು. ಅನೇಕ ಕನ್ನಡ ಕವಿಗಳು ಇವರನ್ನು ಹೊಗಳಿದ್ದಾರೆ.

ದಂತಿದುರ್ಗನ ಬಗ್ಗೆ ಕಾವ್ಯಾವಲೋಕನ ಪದ್ಯ ೬೫೦ ನೋಡಿ
ಅಮೋಘವರ್ಷ ನೃಪತುಂಗನ ಬಗ್ಗೆ ,, ,, ೩೩೯ ,,
೨ನೇ ಕೃಷ್ಣನ ,, ೭೪೯, ೭೬೬ ,,
೪ನೇ ಗೋವಿಂದನ ,, ಕಳಸ ಶಾಸನ ಪದ್ಯ ,,

(Epigraphica Indica Volume 13th)

೩ನೇ ಕೃಷ್ಣ......ಈತನು ತನ್ನಡ ಉದ್ದಾಮ ಕವಿಗಳಲ್ಲೊಬ್ಬನಾದ ಕವಿಪೊನ್ನನಿಗೆ ಕವಿ ಚಕ್ರವರ್ತಿ ಎಂದು ಬಿರುದು ಕೊಟ್ಟನು. ಮತ್ತು ಆ ರಾಜನ ಆಸ್ಥಾನಕವಿಯು ಪೊನ್ನನೆ ಇದ್ದನು. (ಕರ್ನಾಟಕ ಕವಿ ಚರಿತೆ, ೧ನೇ ಭಾಗ, ಪುಟ ೩೪) ನೃಪತುಂಗನ ಹೆಸರು ಗೊತ್ತಿಲ್ಲೆಂಬುವವರಂತು ನವ ಕರ್ನಾಟಕದಲ್ಲಿ ಯಾರೂ ಇಲ್ಲ. ಈ ರಾಜನ ಕನ್ನಡ ಅಭಿಮಾನವು ಬಲು ಉಜ್ಜ್ವಲವಾದದ್ದು. ಈತನ ಕರ್ನಾಟದೇಶ ವಿಸ್ತಾರದ ಉಲ್ಲೇಖವಿದ್ದ 'ಕಾವೇರಿಯಿಂದಮಾಗೋದಾವರಿವರಮಿರ್ಪ ನಾಡದಾ ಕನ್ನಡದೊಳ್' ಈ ಪದ್ಯವು ಎಲ್ಲರ ನಾಲಿಗೆಯ ಮೇಲೆ ಅದೆ. ಇದರ ಅರ್ಥವನ್ನು ಇಂಗ್ಲೀಷನಲ್ಲಿ Rice ಸಾಹೇಬರು ಕವಿತಾ ರೂಪವಾಗಿ ಮಾಡಿದ್ದು "United Karuatak" ಈ ಪುಸ್ತಕದ ೩೩ನೇ ಪುಟದಲ್ಲಿ ಕೊಟ್ಟಿದೆ. ಅದನ್ನು ಪ್ರತಿಒಬ್ಬ ಇಂಗ್ಲೀಷ ಬಲ್ಲ ಕನ್ನಡಿಗನು ಓದಿ ಮನ್ನಿಸುವಂತೆ ಅದೆ. ಇಂಗ್ಲೀಷ ಕವಿಗಳಾದ ಸ್ಕಾಟ್, ವರ್ಡಸವರ್ಥ ಮುಂತಾದ ಕವಿಗಳಲ್ಲಿ ಕಂಡುಬರುವ ಉಚ್ಚ ದೇಶಾಭಿಮಾನದ ಧ್ವನಿಯು ಇದರಲ್ಲಿ ಕಂಡು ಬರುವದು.

ನೃಪತುಂಗನ ಮಗನಾದ ಕೃಷ್ಣನೇ ವೇರೂಳವಲ್ಲಿಯ ಮುಖ್ಯ ಶಿವಮಂದಿರವಾದ ಕೈಲಾಸವನ್ನು ಕೊರೆಸಿದನು. ಡಾ. ಭಾಂಡಾರಕರೂ ಶ್ರೀ ವೈದ್ಯರೂ ಇವನ ಬಗ್ಗೆ ಅಭಿಮಾನದಿಂದ ಬರೆದು ಮಹಾರಾಷ್ಟ್ರ ಶಿಲಾಶಿಲ್ಪದ ಬಗ್ಗೆ ಇವನಿಗೆ ಧನ್ಯವಾದವನ್ನು ಕೊಟ್ಟಿದ್ದಾರೆ.

ಈ ವೇರೂಳದ ಕಲ್ಲುಗುಡಿಗಳಲ್ಲಿ ಕೇವಲ ಸಂಸ್ಕೃತ ಮತ್ತು ಕನ್ನಡ ಲೇಖಗಳೇ ತುಂಬಿರುತ್ತವೆ. ಇಲ್ಲಿ ಎಲ್ಲಿಯೂ

ದರೂ ಮರಾಠಿ ಅಥವಾ ಮಹಾರಾಷ್ಟ್ರಿ ಶಾಸನವು ದೊರೆಯು[illegible]ದಿಲ್ಲ. ಪ್ರಾಕೃತ ಶಾಸನವು ಸಹ ಇಲ್ಲ. ಈಗಿನ ಕರ್ನಾಟ[illegible]ದಿಂದ ಬಲು ದೂರವಿದ್ದ ಈಗಿನ ಮರಾಠೀ ದೇಶದ ಉತ್ತ[illegible] ಭಾಗದಲ್ಲಿದ್ದ ಈ ಮಂದಿರಗಳ ಗುಂಪಿನಲ್ಲಿ ವಿಪುಲವಾಗಿ ಕನ್ನ[illegible]ಲಿಪಿಗಳೂ ಕನ್ನಡ ಶಾಸನಗಳೂ ಇದ್ದದ್ದು ಯಾತರದ್ದ್ಯೋತಕ[illegible] ಸೆಂಟ ನಿಹಾಲಸಿಂಗನು ವೇರೂಳದಲ್ಲಿ ದೊರೆತ ಅನೇಕ ಕನ್ನ[illegible] ಶಿಲಾಶಾಸನಗಳನ್ನು ನೋಡಿ ಚಕಿತನಾದನು; ಅವನಿಗೆ ಇ[illegible] ಮರ್ಮವು ತಿಳಿಯಲಿಲ್ಲ. ಇತಿಹಾಸದ ಅಭಾವದ ಮೂ[illegible] ಅವನು ಈ ಮಂದಿರಗಳನ್ನು ಕಟ್ಟಲಿಕ್ಕೆ ದಕ್ಷಿಣ ದೇಶ[illegible] ಶಿಲ್ಪಿಗರನ್ನು ತಂದಿರಬೇಕೆಂದೂ ಆದ್ದರಿಂದಲೇ ಈ ಭವ್ಯಮಂ[illegible]ರಗಳು ದಕ್ಷಿಣ ದೇಶದ ಮಂದಿರಗಳನ್ನು ಹೋಲುತ್ತವೆಯೆಂ[illegible] ಮತ್ತು ಇಲ್ಲಿ ಇಷ್ಟು ಕನ್ನಡ ಶಿಲಾಶಾಸನಗಳು ದೊರೆಯು[illegible]ವೆಂದೂ ಮಾಡರ್ನರಿವ್ಯೂದಲ್ಲಿ ಬರೆದಿರುತ್ತಾನೆ. ಶಿಲ್ಪಿಗರು[illegible]ಗಳಲ್ಲಿ ತಮ್ಮ ಲೇಖಗಳನ್ನು ಬರೆಯುವದಿಲ್ಲ. ಗುಡಿಗಳನ್ನು [illegible] ಸಿದವರೇ ಬರಿಸುವ ಪದ್ಧತಿಯುಂಟು, ಈ ಪ್ರಕಾರದ [illegible]ವಾಗಿ ದೊರೆಯುವ ಆಧಾರಗಳು ಈ ರಾಜರು ಅಚ್ಚಕನ್ನ[illegible]ರೆಂದು ಸಾರಿ ಸಾರಿ ಹೇಳುತ್ತವೆ.

ಡಾ॥ ಬರ್ನೆಲ್‌ನು ಇವರು ಕೇವಲ ಕನ್ನಡಿಗರಿದ್ದು [illegible] ಕನ್ನಡ ಮತ್ತು ತೆಲಗು ದೇಶವಲ್ಲಿ ಇದ್ದ ರಡ್ಡಿ ಜನರು [illegible] ವಂಶಜರಾಗಿ ಇರಬಹುದೆಂದು ನಂಬುತ್ತಾನೆ.

ರಾಷ್ಟ್ರಕೂಟರೂ ಕನ್ನಡಿಗರಾಗಲಾರರೆಂದು ವೈದ್ಯರು [illegible] ಪುಸ್ತಕದಲ್ಲಿ ಬಲುಪರಿಯಿಂದ ಕಷ್ಟಬಟ್ಟು ಬರೆದಿದ್ದಾರೆ. [illegible] ತರಂಗಿಣಿಯಲ್ಲಿ ಲಲಿತಾದಿತ್ಯ ಹೆಸರಿನ ಅರಸನು ದಿಗ್ವಿಜ[illegible] ಹೊರಟು ವಿಂಧ್ಯಾದ್ರಿ ದಾಟಿ ದಕ್ಷಿಣಪಥಕ್ಕೆ ಬಂದಾಗ್ಗೆ [illegible] ಮನೆತನದವಳಾದ ಕರ್ಣಾಟರಾಜ್ಞಿ ಅವನಿಗೆ ಎದುರಾಗಿ[illegible] ಮಾಡಿ ಸೋತಳೆಂದು ವರ್ಣನೆ ಇದೆ.

ಈ ಪ್ರಕಾರ ಕ್ರಿ. ವ. ೭೫೦ರ ಸುಮಾರಕ್ಕೆ ಚಾಲುಕ್[illegible] ಅಧಿರಾಜರಿದ್ದಾಗ್ಗೆ ಒಬ್ಬ ಕರ್ನಾಟದ ರಟ್ಟರಾಣಿಯು ವಿ[illegible]ದ್ರಿಯು ದಕ್ಷಿಣ ದಿಕ್ಕಿನಲ್ಲಿ ಆಳುತ್ತಿದ್ದಳೆಂದು ಬರೆದಿದ್ದನ್ನು[illegible] ಶ್ರೀ ವೈದ್ಯರು ಅವಳು ವೆಂಗೀ ದೇಶದವಳಾಗಿರಬಹುದೆಂ[illegible] ದೇಶದಲ್ಲಿ ಚಾಲುಕ್ಯರು ಅಂದರೆ ಕನ್ನಡ ಮಾತನಾಡುವ [illegible] ಟರು ಅಂದರೆ ಈಗಿನ ದಕ್ಷಿಣ ಮಹಾರಾಷ್ಟ್ರದವರು ಆ[illegible] ರೆಂದೂ ಅವರೊಳಗಿನವಳೊಬ್ಬಳು ಈ ರಾಜ್ಞಿಯು ಉ[illegible] ಬಲು ಪ್ರಯಾಸದಿಂದ ಕ್ಲಿಷ್ಟ ಅರ್ಥವನ್ನು ತೆಗೆಯುವ [illegible] ಪ್ರಯತ್ನ ಮಾಡಿದ್ದಾರೆ.

ಆದರೆ ಕರ್ನಾಟಕಸ್ಥರಿಗೆ ರಾಷ್ಟ್ರಕೂಟರ ಬಗ್ಗೆ ಹೆಚ್ಚಿಗೆ ಹೇಳುವ ಕಾರಣವಿಲ್ಲ!

## ಕಲ್ಯಾಣದ ಚಾಲುಕ್ಯರು

ಈ ೩ನೇ ಚಾಲುಕ್ಯರಂತು ಕೇವಲ ಕನ್ನಡ ಭೋಜರು. ಇವರ ಕಾಲವೆಂದರೆ ಕನ್ನಡದ ಘನತೆಯ ಕಾಲವು. ಇವರ ಕಾಲದಲ್ಲಿ ಕನ್ನಡ ಶಿಲಾಶಾಸನಗಳು ಹೆಚ್ಚು. ಕನ್ನಡ ಉತ್ತಮೋತ್ತಮ ಕವಿಗಳು ವಿದ್ವಜ್ಜನರು ಈ ಕಾಲದವರೆ. ಕವಿ ಪಂಪ ರನ್ನ ನಾಗವರ್ಮ ಮುಂತಾದ ಕನ್ನಡ ಉದ್ದಾಮ ಕವಿಗಳು ಈ ಕಾಲದವರು. ವಿಜ್ಞಾನೇಶ್ವರ ಭಾಸ್ಕರಾಚಾರ್ಯ ಮುಂತಾದ ಪಂಡಿತರು ಇದೇ ಕಾಲದವರು. ಶಕಸ್ಥಾಪಕನಾದ ಚಾಲುಕ್ಯ ವಿಕ್ರಮನೆಂಬ ಮಿಗಿಲಾದ ಕನ್ನಡರಾಜನು ಬಾಳಿದ ಕಾಲವು ಇದೇ. ಈ ಪ್ರಕಾರ ಕನ್ನಡ ವಾಙ್ಮಯಶ್ರೀಯನ್ನು ಪೋಷಿಸಿದನರು ಅನ್ಯಭಾಷೆಯನ್ನಾಡುವವರೆ ?

## ಹೊಯ್ಸಳರೂ ಯಾದವರೂ

ಹೊಯ್ಸಳರ ಸಂಬಂಧವಾಗಿ ಹೇಳುವ ಕಾರಣವಿಲ್ಲ. ಅವರು ಅಚ್ಚಕನ್ನಡಿಗರು; ಆ ಬಗ್ಗೆ ಯಾರದೂ ಆಕ್ಷೇಪಣೆಯಿಲ್ಲ. ದೇವಗಿರಿಯ ಯಾದವರ ಸಂಬಂಧವಾಗಿ ಸ್ವಲ್ಪ ಉಲ್ಲೇಖವನ್ನು ಮಾಡುವದು ಅತ್ಯಾವಶ್ಯವಿದೆ. ಇವರು ಹೊಯ್ಸಳರಂತೆ ತಮಗೂ ದ್ವಾರಾವತೀಪುರವರಾಧೀಶರೆಂದು ಬಿರುದನ್ನು ಧರಿಸಿದ್ದರು. ಇವರು ಚಾಲುಕ್ಯರ ಕಾಲದಲ್ಲಿ ಮಹಾಮಂಡಲೇಶ್ವರರಿದ್ದರು. ಇವರ ಆರಂಭದ ಹೆಸರುಗಳಾದ ಸಿಂಘಣ, ಮಲ್ಲುಗಿ, ಭಿಲ್ಲಮ ಮುಂತಾದವುಗಳು ಕನ್ನಡ ಹೆಸರುಗಳು. ಇವರ ರಾಜ್ಞಿಯರ ಹೆಸರುಗಳು—ಲಕ್ಷ್ಮಿಯವ್ವಾ-ಥಡಿಯವ್ವಾ ಇತ್ಯಾದಿ. [ ಭಾರ್ಯಾ ಯಸ್ಯ ಚ ಝುಂಝುರಾಜ ತನಯಾ **ಶ್ರೀಲಕ್ಷ್ಮಿಯವ್ವಾ ಹ್ವಯಾ**]ಇವರ ನಾಯಕರ ಹೆಸರುಗಳು, ಬಾಚಿರಾಜ ಅಥವಾ ಬಾಚಣ್ಣ, ಗೊನಮರಸ, ತಿಪ್ಪರಸ, ಗುಬ್ಬರಸ, ಅಚ್ಯುತನಾಯಕ, ಸಾಳುವತಿಕ್ಕಮ ಈ ಪ್ರಕಾರ ಕೇವಲ ಕನ್ನಡ ಹೆಸರುಗಳೇ. ಇವರ ಶಿಲಾಲಿಪಿಗಳು ಸಹ ಕನ್ನಡದಲ್ಲಿ ಸಿಗುತ್ತವೆ. ೧೩೧೮ ರಲ್ಲಿ ದೇವಗಿರಿಯು ರಾಜಧಾನಿ ಇತ್ತೆಂದು ಕಂಡುಬರುತ್ತದೆ; ಆ ಪೂರ್ವದಲ್ಲಿ ಇವರ ರಾಜಧಾನಿಯು ವಿಜಾಪೂರದಲ್ಲಿ ಮತ್ತು ಚಾಂದವಡದಲ್ಲಿ ಇತ್ತೆಂದು ತೋರುತ್ತದೆ. ಇವರ ಕಾಲದಲ್ಲಿ ಉತ್ತರ ದೇಶದಲ್ಲಿ ಕಟ್ಟಿದ ಗುಡಿಗಳಿಗೆ ಹೇಮಾಡಪಂತಿ ಗುಡಿಗಳೆಂದು ಅನ್ನುತ್ತಾರೆ ಅವು ಕೇವಲ ಚಾಲುಕ್ಯರ ಇಲ್ಲವೆ ಹೊಯ್ಸಳರ ಪದ್ಧತಿಯ ಗುಡಿಗಳೇ ಆಗಿವೆ. ಈ ಹೇಮಾಡಪಂತನಿಗೆ ಹೇಮಾದ್ರಿ ಎಂದೂ ಹೆಸರುಂಟು. ಇವನು ಮೋಡೀ ಲಿಪಿಯನ್ನು ಲಂಕೆಯಿಂದ ತಂದನೆಂಬದಾಗಿ ಒಂದು ಆಖ್ಯಾಯಿಕೆಯಿದೆ. ಆದರೆ ಮೋಡಿಲಿಪಿಯೂ ಆ ಕಾಲನ ಕನ್ನಡ ಲಿಪಿಯಿಂದ ಹುಟ್ಟಿರಲಿಕ್ಕಿಲ್ಲವೇ? ಕನ್ನಡ ಮತ್ತು ಮರಾಠಿ ಬಲ್ಲಂಥ ವಿದ್ವಾಂಸರು ವಿಕಾರವಶರಾಗದೆ ಈ ಬಗ್ಗೆ ಸ್ವಲ್ಪ ವಿಚಾರ ಮಾಡುವಂತೆ ಇದೆ. ಮೇಲಾಗಿ, ದೇವಗಿರಿಯ ಮಗ್ಗುಲಿಗೆ ಇದ್ದ ವೇರೂಳದಲ್ಲಿ ಹೇರಳವಾಗಿ ಕನ್ನಡ ಶಿಲಾಶಾಸನಗಳು ದೊರೆಯುತ್ತವೆ. ಜನರಿಗೆ ತಿಳಿಯದೆ ಇದ್ದಂಥ ನುಡಿಯಲ್ಲಿ ಅವು ಕೊರೆಯುವ ಉದ್ದೇಶವೇನು ? ಜ್ಞಾನೇಶ್ವರಿಯಲ್ಲಿ ಅನೇಕ ಕೇವಲ ಕನ್ನಡ ಶ್ಲೋಕಗಳು ದೊರೆಯುತ್ತವೆ. ದೇವಗಿರಿಯ ಯಾದವರ ಕಾಲದಲ್ಲಿ ಮರಾಠಿ ನುಡಿಯೂ ಪ್ರೌಢ ನುಡಿಯಾಗಹತ್ತಿತ್ತು. ವಿದರ್ಭ ಪೈಠಣದ ಸುತ್ತು ಮುತ್ತಲಿನ ಸೀಮೆಯಲ್ಲಿ ಮರಾಠಿಯೇ ದೇಶಭಾಷೆಯಿತ್ತು; ಇನ್ನೂ ಗ್ರಂಥಸ್ಥ ಭಾಷೆ ಮಾಡುವ ರೂಢಿಯಿದ್ದಿಲ್ಲ. ಜ್ಞಾನದೇವರು ಮತ್ತು ಅವರ ಕಾಲದ ಸಂತಜನರು ದೇಶೀಯರ ಸಲುವಾಗಿ ತಮ್ಮ ಗ್ರಂಥಗಳನ್ನು ಬರೆದು ಮರಾಠಿಯನ್ನು ಗ್ರಂಥಸ್ಥಭಾಷೆಯನ್ನಾಗಿ ಮಾಡಿ ಅವರ ಮೇಲೆ ಒಳ್ಳೆ ಉಪಕಾರವನ್ನು ಮಾಡಿದರು. ಮರಾಠಿ ಭಾಷೆಯ ಸಲುವಾಗಿ ಪ್ರಯತ್ನ ಮಾಡಿದವರಲ್ಲಿ ಹೇಮಾದ್ರಿ (ಹೇಮಾಡಪಂತನು) ಯು ಅಗ್ರಗಣ್ಯನು. ಮೋಡೀ ಲಿಪಿಯನ್ನು ತಯಾರಮಾಡಿ ಪ್ರಚಾರದಲ್ಲಿ ತರುವದಾದರೂ ಈ ಪ್ರಯತ್ನದ ಭಾಗವೇ ಸರಿ.

## ವಿಜಯನಗರದ ರಾಯರು

ಇಲ್ಲಿಯ ವರೆಗೆ ಮರಾಠಿ ಲೇಖಕರು ಮರಾಠಿಯ ಉಜ್ವಲ ಅಭಿಮಾನದಿಂದಲೂ, ಕನ್ನಡ ವಾಙ್ಮಯದ ಅಜ್ಞಾನದಿಂದಲೂ ಮಾಡಿದ ನಿರಾಧಾರ ವಿಧಾನಗಳ ಬಗ್ಗೆ ಬರೆದದ್ದಾಯಿತು. ಇನ್ನು ಪೂರ್ವ ದಿಕ್ಕಿನ ತೆಲಗು ಬಾಂಧವರ ಸಂಬಂಧವಾಗಿ ಇಲ್ಲಿ ಸಂಕ್ಷಿಪ್ತವಾಗಿ ಹೇಳುತ್ತೇನೆ. ವಿಜಯನಗರದ ಸಾಮ್ರಾಜ್ಯದಲ್ಲಿ ಇವರಿಗೆ ಬಲು ಅಭಿಲಾಷೆ. ಹಲಕೆಲವು ಆಂಧ್ರಗ್ರಂಥಕಾರರು ಆ ಸಾಮ್ರಾಜ್ಯವು ತೆಲುಗು ಸಾಮ್ರಾಜ್ಯವೆಂದು ಬರೆದಿದ್ದಾರೆ. ಅದರ ನಿರಾಕರಣದ ಸವಿಸ್ತಾರವಾದ ಲೇಖವನ್ನು ನಾನು ಹೊಸಪೇಟೆಯ ೬ನೇ ಸಾಹಿತ್ಯ ಸಮ್ಮೇಲನದಲ್ಲಿ ಓದಿದೆನು. ಅದು ಸಾಹಿತ್ಯ ಪತ್ರಿಕೆಯಲ್ಲಿ ಅಚ್ಚಾಗಿದ್ದರಿಂದ ಇಲ್ಲಿ ಹೆಚ್ಚಿಗೆ ಹೇಳಲಾರೆ; ಅದನ್ನೋದಬೇಕೆಂದು ಜಯಕರ್ನಾಟಕದ ವಾಚಕರಲ್ಲಿ ವಿಜ್ಞಾಪನೆ. ಆಂಧ್ರರು ಕೃಷ್ಣದೇವರಾಯನಿಗೆ

ಆಂಧ್ರಭೋಜನೆಂದು ಕರೆದಿರುತ್ತಾರೆ. ಮತ್ತು ಅನೇಕ ಆಂಧ್ರ ಕವಿಗಳು ಅವನನ್ನು ಹೊಗಳಿರುತ್ತಾರೆ. ಆದರೆ ಕೃಷ್ಣ ದೇವರಾಯನೇ ಬರೆದ ತೆಲುಗು ಗ್ರಂಥವಾದ ಅಮುಕ್ತಮಾಲ್ಯದಿ ಗ್ರಂಥದ ಆರಂಭದ ಶ್ಲೋಕದಲ್ಲಿಯೇ ತಾನು ಕನ್ನಡ ರಾಜ್ಯ ರಮಾರಮಣನಿದ್ದು, ತನಗೆ ತೆಲುಗು ಸೀಮೆಯ ದೇವತೆಯು ಕನಸಿನಲ್ಲಿ ಬಂದು ( ಆ ನಾಡಿನಲ್ಲಿ ಪಾಳ್ಯವನ್ನು ಮಾಡಿದಾಗ್ಗೆ ) ತೆಲುಗಿನಲ್ಲಿ ನೀನು ಗ್ರಂಥವನ್ನು ಬರೆಯೆಂದು ಹೇಳಿದ್ದರಿಂದ ಹಾಗೆ ಬರೆದೆನೆಂದು ಹೇಳಿದ್ದಾನೆ. ಇದೊಂದೆ ಉದಾಹರಣವು ಸಾಕು. ಈ ದೇಶದಿಂದ ಅನೇಕ ಭಾವಿಕರು ತಿರುಪತಿಗೆ ಹೋಗುತ್ತಾರೆ. ಅವರು ವೆಂಕಟೇಶ ದೇವರ ಗುಡಿಯಲ್ಲಿ ಶ್ರೀದೇವರ ಎದುರಿಗೆ ನಿಂತ ಎರಡು ವಿಗ್ರಹಗಳನ್ನು ನೋಡಿರಬಹುದು. ಅದರಲ್ಲಿ ಒಂದು ವಿಗ್ರಹವು, ಶ್ರೀ ಕೃಷ್ಣದೇವರಾಯ ಮತ್ತು ಅವನ ಉಭಯ ರಾಜ್ಞಿಯರದು. ಮತ್ತೊಂದು ವಿಗ್ರಹವು ವೆಂಕಟಪತಿರಾಯನದು. ಈ ವಿಗ್ರಹಗಳ ಮೇಲೆ ಅವರವರ ಹೆಸರುಗಳನ್ನು ಕೊರೆದಿರುತ್ತಾರೆ. ಶ್ರೀ ಕೃಷ್ಣದೇವನ ಮತ್ತು ಅವನ ಹೆಂಡರಮೇಲಿನ ಹೆಸರುಗಳು ಕೇವಲ ಅಚ್ಚಕನ್ನಡ. ಅಂದರೆ ಶ್ರೀಕೃಷ್ಣದೇವ ರಾಯರು, ತಿರುಮಲ್ಲಮ್ಮನವರು, ಚಿನ್ನಮ್ಮನವರು ಎಂದಿವೆ. ಆದರೆ ವೆಂಕಟಪತಿರಾಯನ ಮೇಲಿನ ಹೆಸರು, ವೆಂಕಟಪತಿ ರಾಯಲು ಎಂದಿದೆ. ಇದರ ಮೇಲಿಂದಲೂ ಕೃಷ್ಣದೇವನು ಕನ್ನಡಿಗನೆಂದೂ ವೆಂಕಟಪತಿರಾಯನು ತೆಲುಗು ರಾಯನೆಂದೂ ಸ್ಪಷ್ಟವಾಗುತ್ತದೆ. ಮೇಲಾಗಿ ಬಳ್ಳಾರಿ ಅನಂತಪೂರ ಜಿಲ್ಹೆಗಳಲ್ಲಿಯ ಶಿಲಾಶಾಸನಗಳು ಈ ಮಾತಿನ ನಿರ್ಣಯವನ್ನು ಮಾಡಿರುತ್ತವೆ. ವಿಜಯನಗರದ ಕಡೇ ಮನೆತನಗಳು ತೆಲುಗು ಮನೆತನಗಳಾದವು. ಹಳೇ ರಾಜರ ಬಿರುದಾವಳಿಗಳು, ರಾಜಶಾಸನಗಳು, ಶಿಲಾಶಾಸನಗಳು, ಗುಡಿ ಬೀದಿಗಳ ಹೆಸರುಗಳು ಇವು ಯಾವತ್ತೂ ಅಚ್ಚಕನ್ನಡ.

ಹೊಸ ಜಾಗ್ರತಿಯ ಮೂಲಕ ನಮ್ಮ ನೆರೆಹೊರೆಯವರಲ್ಲಿ ಹೆಸರಾದ ಯಾವತ್ತು ಹಳೆ ಕನ್ನಡ ಸಾಮ್ರಾಜ್ಯಗಳಲ್ಲಿ ಕ್ಷೆ ಪಯಾದ ಅಭಿಲಾಷೆಯುಂಟಾಗಿದೆ. ನಾವು ಕನ್ನಡಿಗರು ಕ್ಷೆ ಮಹನೀಯರು ಬರೆದದ್ದನ್ನೆ ಓದಿ, ಅದೇ ನಿಜವೆಂದು ಭಾವಿಸಿ ನಮ್ಮನ್ನೆ ಹೀಯಾಳಿಸಿಕೊಳ್ಳುವದು ಬಲು ಲಾಂಛನದ ಸಂಗತಿಯೇ ಸರಿ. ನಮ್ಮ ಇತಿಹಾಸವನ್ನು ನಾವೇ ಬರೆಯಬೇಕಾಗಿದೆ. (ಆದರೆ ನಮ್ಮ ನೆರೆಯವರಂತೆ ಅಸತ್ಯ ವಿಧಾನಗಳನ್ನು ಮಾಡಕೂಡದು. )ಮೇಲೆ ಹೇಳಿದಂತೆ ಶಿಲಾಶಾಸನಗಳಲ್ಲಿ ಗುಡಿ ಗೋಪುರಗಳಲ್ಲಿ ನಮ್ಮ ಪುರಾತನವಾಙ್ಮಯದಲ್ಲಿ ತಕ್ಕಷ್ಟು ಸಾಮಗ್ರಿಯು ದೊರೆಯುವದು. ಇದರ ಹೊರ್ತು ಪೋರ್ತುಗೀಜರ ವಶದಲ್ಲಿ ಗೋವೆಯಲ್ಲಾಗಲಿ ಲಿಸ್ಬನದಲ್ಲಿಯಾಗಲಿ ವಿಜಯನಗರ ಮನೆತನದ ಸಂಬಂಧವಾಗಿ ವಿಶ್ವಸನೀಯವಾದ ಸಾಮಗ್ರಿಯು ದೊರೆಯುತ್ತದೆ.

ನಮ್ಮ ನೆರೆಯವರ ಗ್ರಂಥಗಳಲ್ಲಿ ಅಥವಾ ಇಂಗ್ರಜಿ ಮುಸಲ್ಮಾನೀ ಗ್ರಂಥಗಳಲ್ಲಿ ಅವುಗಳಲ್ಲಿಯ ವಿಧಾನಗಳಿಗೆ ಸ್ವತಂತ್ರ ಆಧಾರಗಳು ದೊರೆಯದ ವಿನಾ ಪೂರ್ಣವಿಶ್ವಾಸವನ್ನು ಇಡಲಾಗದು. ಪೂರ್ವ ದ್ವೀಪಗಳಲ್ಲಿ ಸಯಾಮ ಕಾಂಬೋಡಿಯಾ ದೇಶಗಳಲ್ಲಿ ಕದಾಚಿತ್ ಕನ್ನಡಿಗರ ಉಜ್ವಲವಾದ ಇತಿಹಾಸದ ಬಗ್ಗೆ ಹೆಚ್ಚಿನ ಹೊಸ ಸಂಗತಿಗಳು ನಮಗೆ ದೊರೆಯಬಹುದು ಆದರೆ ಇಷ್ಟು ಪ್ರಯತ್ನಗಳನ್ನು ಮಾಡುವವರಾರು! ಕವಿ ಸಾಮ್ರಾಟರಾದ ರವೀಂದ್ರನಾಥ ಟಾಗೋರರವರು ಆ ದೇಶಗಳಿಗೆ ಹೋಗಿ ಅಲ್ಲಿಯ ಭಾರತೀಯಸಂಸ್ಕೃತಿಯ ವಿಪುಲ ಕುರುಹುಗಳನ್ನು ನೋಡಿ ಒಂದು ಪತ್ರದಲ್ಲಿ ಈಗಿನ ನಮ್ಮ ಜನರ ಬಗ್ಗೆ ಬರೆದಂತೆ "ಅನೇಕ ಹಾಳು ಅರ್ಥಹೀನ ತಂತ್ರಗಳಲ್ಲಿ ಕಾಲಹರಣ ಮಾಡುವ ನಮಗೆ ಈ ಯಾವತ್ತೂ ಕೆಲಸವನ್ನು ಮಾಡಲಿಕ್ಕೆ ಎಲ್ಲಿಯ ಅವಕಾಶವು ?"

# ಕರ್ನಾಟಕ ನಾಟ್ಯಕಲೆ

## ಗುಬ್ಬಿ ಶ್ರೀಚೆನ್ನಬಸವೇಶ್ವರ ಕೃಪಾಪೋಷಿತ ಕರ್ನಾಟಕ ನಾಟಕಸಭೆಯ ಸಂಕ್ಷೇಪ ಚರಿತ್ರೆ

ಈ ನಾಟಕಸಂಘವು ಸುಮಾರು ನಲವತ್ತೈದು ವರ್ಷ ೧೪ಳ ಹಿಂದೆ ಅಂದರೆ ೧೮೮೪ನೆಯ ತಾರಣನಾಮಸಂವತ್ಸರದಲ್ಲಿ ತುಮಕೂರು ಡಿಸ್ಟ್ರಿಕ್ಟಿಗೆ ಸೇರಿದ ಗುಬ್ಬಿಗ್ರಾಮದಲ್ಲಿ ಜೈನಮತಸ್ಥರಾದ ಶ್ರೀ ಚಂದಣ್ಣನೆಂಬುವರಿಂದ ಸ್ಥಾಪಿಸಲ್ಪಟ್ಟಿತು. ಇವರು ಗುಬ್ಬಿಯವಾಸಸ್ಥರಾದ ಶ್ರೀ ಶಿವಕಥಾ ವೀರಪ್ಪಶಾಸ್ತ್ರಿಗಳೆಂಬುವರಿಂದ ಕೆಲವು ನಾಟಕಗಳನ್ನು ಬರೆಯಿಸಿ ಅವರ ಸಹಾಯದಿಂದ ಸಂಘವನ್ನು ದಿನಕ್ರಮವಾಗಿ ಅಭಿವೃದ್ಧಿಗೆ ತರುತ್ತಿದ್ದರು. ಹೀಗಿರಲು ಕೆಲವು ವರ್ಷಗಳ ಮೇಲೆ ಅಂದರೆ ಸುಮಾರು ೩೪ ವರ್ಷಗಳ ಹಿಂದೆ ಈಗ ಈ ಸಂಘದ ಯಜಮಾನರಾಗಿರುವ



ಮ॥ ರಾ॥ ಜಿ. ಎಚ್. ವೀರಣ್ಣನವರು ಅಭಿನೇತೃವಾಗಿ ತಿಂಗಳು ಒಂದಕ್ಕೆ ೫ ರೂಪಾಯಿಗಳ ತಲಬಿನ ಮೇಲೆ ಈ ನಾಟಕಕ್ಕೆ ಸೇರಿದರು. ಹೀಗಿರುವಲ್ಲಿ ಮ॥ ರಾ॥ ವೀರಣ್ಣನವರು ತಮ್ಮ ಸ್ವಭಾವಜನ್ಯವಾದ ನಾಟಕಾಭಿರುಚಿಯಿಂದಲೂ ಅಭಿನಯಕೌಶಲ್ಯದಿಂದಲೂ ತಮ್ಮ ಕರ್ತವ್ಯಗಳಲ್ಲಿ ಹೆಚ್ಚಾದ ಆಸಕ್ತಿಯನ್ನು ತೋರಿಸುತ್ತಾ ಕ್ರಮವಾಗಿ ಐದುರೂಪಾಯಿಗಳಿಂದ ಐವತ್ತುರೂಪಾಯಿಗಳ ತಲಬಿನವರೆಗೂ ಹತ್ತಿದರು. ಇವರು ಯಜಮಾನರಾದ ಚಂದಣ್ಣನವರಲ್ಲಿ ಪರಿಪೂರ್ಣವಾದ ಭಕ್ತಿ ಗೌರವಗಳನ್ನಿಟ್ಟು ನಂಬಿಕೆಯಿಂದ ಕೆಲಸಮಾಡುತ್ತಿದ್ದುದನ್ನು ನೋಡಿ ಅವರು ಕೆಲವು ಕಾಲದಮೇಲೆ ಸಂಘದ ಆಡಳಿತಗಳನ್ನು ಬಹುಮಟ್ಟಿಗೆ ಮ॥ ರಾ॥ ವೀರಣ್ಣನವರ ವಶಕ್ಕೆ ಬಿಟ್ಟು ಇವರಲ್ಲಿ ಅತಿಶಯ ಪ್ರೀತಿಯನ್ನೂ ನಂಬಿಕೆಯನ್ನೂ ಇಟ್ಟಿದ್ದರು. ಅನಂತರ ೮ ವರ್ಷಗಳ ಹಿಂದೆ ಚಂದಣ್ಣನವರು ದೇಹಾಲಸ್ಯದಿಂದಿರುವಾಗ ಮ॥ ರಾ॥ ವೀರಣ್ಣನವರನ್ನು ಕರೆದು ಕೆಲವು ನಿಬಂಧನೆಗಳಿಂದ ಈ ನಾಟಕ ಸಂಘವನ್ನು ಅವರ ವಶಕ್ಕೇ ಪರಿಪೂರ್ಣವಾಗಿ ವಹಿಸಿಕೊಟ್ಟು ದೈವ ಸಾಯುಜ್ಯವನ್ನು ಪಡೆದರು.

ಅನಂತರ ಮ॥ ರಾ ವೀರಣ್ಣನವರು ಈ ನಾಟಕ ಸಂಘವನ್ನು ಕ್ರಮವಾಗಿ ನಡೆಸುತ್ತಾ, ಎರಡು ಮೂರು ವರ್ಷಗಳ ಕಾಲ ದಕ್ಷಿಣ ದೇಶದಲ್ಲಿ ಸಂಚಾರ ಮಾಡಿಕೊಂಡು ಬಂದಮೇಲೆ ತಮ್ಮೊಡನೆ ಪೂರ್ವದಿಂದಲೂ ಅಭಿನೇತೃವಾಗಿ ನಾಟಕಗಳಲ್ಲಿ ಪ್ರಧಾನ ಪಾತ್ರಗಳನ್ನು ವಹಿಸುತ್ತಿದ್ದ ಇವರ ಸ್ನೇಹಿತರಾದ ಮ॥ ರಾ॥ ಸಿ. ಬಿ. ಮಲ್ಲಪ್ಪನವರನ್ನು ಸಹ ತಮ್ಮ ಜೊತೆಗೆ ಪ್ರೊಪ್ರೈಟರನ್ನಾಗಿ ಸೇರಿಸಿಕೊಂಡು ಸಂಘವನ್ನು ಅಭಿವೃದ್ಧಿಗೆ ತರುತ್ತಿದ್ದರು. ಹೀಗಿರುವಲ್ಲಿ ನಾಟಕ ಪ್ರಪಂಚದಲ್ಲಿ ಅನೇಕ ನವನಾಗರಿಕತೆಯ ಬದಲಾವಣೆಗಳು ಅವಶ್ಯಕವಾಗಿ ಕಂಡು ಬಂದುದರಿಂದ ನೀತಿ ಭಕ್ತಿ ಬೋಧಕಗಳಾಗಿಯೂ ಮೊದಲಿಗಿಂತ ಅಂದವಾದ ರಂಗ ಚಿತ್ರಗಳು, ಚತುರತರವಾದ ಸಂವಿಧಾನಗಳು, ಭಾಷಾ ಸೌಂದರ್ಯವು ಇವೆಲ್ಲ ಉಳ್ಳವುಗಳಾ ಗಿರುವ ನಾಟಕಗಳನ್ನು ಬರೆಯಿಸಬೇಕೆಂಬ ಕುತೂ

ಹಲವ್ರಂಟಾಗಿ, ವೇ॥ ಬೆಳ್ಳಾವೆ ನರಹರಿ ಶಾಸ್ತ್ರಿಗಳನ್ನು ಇವರು ಕೇಳಿಕೊಂಡ ಮೇರೆಗೆ ಅವರು ನವೀನಕ್ರಮದಲ್ಲಿ ಶ್ರೀಕೃಷ್ಣ ಲೀಲಾವಿನೋದ, ಕಂಸವಧ, ರುಕ್ಮಿಣೀಹರಣ, ಶ್ರೀಕೃಷ್ಣಪಾರಿಜಾತ, ಶ್ರೀಕೃಷ್ಣಗಾರುಡಿ, ಶಿವಜಲಂಧರ ಮೊದಲಾದ ಪುರಾಣ ಕಥಾಗರ್ಭಿತ ನಾಟಕಗಳನ್ನೂ, ಮಹಾತ್ಮ ಕಬೀರದಾಸ್, ಸಾಧು ತುಕಾರಾಮ, ಭಕ್ತದಾಮಾಜೀಪಂತ ಮೊದಲಾದ ಭಕ್ತ ಮಹನೀಯರ ಚರಿತ್ರೆಗಳನ್ನೂ, ಸುರಾಮಹಿಮೆಯೆಂಬ ಸಾಮಾಜಿಕ ನಾಟಕವನ್ನೂ 'ರಾಜಭಕ್ತಿ' ಮೊದಲಾದ ಇನ್ನಿತರ ನಾಟಕಗಳನ್ನೂ ರಚಿಸಿ ಕೊಟ್ಟರು. ಈ ನಾಟಕಗಳನ್ನು ಸಂಘದವರು ವೇ॥ ನರಹರಿ ಶಾಸ್ತ್ರಿಗಳವರ ಸಹಾಯದಿಂದಲೇ ಅಭ್ಯಾಸ ಮಾಡಿ ಬೆಂಗಳೂರು, ಮೈಸೂರು, ಮದರಾಸ್ ಒಳ್ಳಾರಿ, ಹುಬ್ಬಳ್ಳಿ, ಕೊಡಗು, ಮಂಗಳೂರು, ಮೊದಲಾದ ಪ್ರಾಂತ್ಯಗಳಲ್ಲಿ ಅಭಿನಯಿಸಿ ಉತ್ತಮವಾದ ಕೀರ್ತಿ ಪ್ರಯೋಜನಗಳನ್ನು ಪಡೆದುದಲ್ಲದೆ ೧೯೩೩ನೆಯ ವರ್ಷದಲ್ಲಿ ರಾಜಧಾನಿಯಾದ ಮೈಸೂರು ನಗರದಲ್ಲಿ ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ಕೆ. ಸಿ. ಐ ಇ. ಯವರ ಕೃಪಾಪೋಷಣೆಗೆ ಪಾತ್ರರಾಗಿ ಅರಮನೆಯಲ್ಲಿ ನಾಟಕಗಳನ್ನು ಅಭಿನಯಿಸಿ ಉಚ್ಚತರಗತಿಯ ಬಹುಮಾನವನ್ನು ಪಡೆದರು. ಅಲ್ಲದೆ ಶ್ರೀಮನ್ಮಹಾರಾಜರವರು ಮ॥ ರಾ॥ ಶ್ರೀ ವೀರಣ್ಣನವರ ಹಾಸ್ಯರಸಾಭಿನಯ ಕೌಶಲ್ಯಕ್ಕೆ ಮೆಚ್ಚಿ ಇವರಿಗೆ ವರ್ಸಟೈಲ್‌ಕಮೆಡಿಯನ್ ( Versatile comedian ) ಎಂಬ ಬಿರುದನ್ನೂ ಬಂಗಾರದ ಪದಕವನ್ನೂ ಸಹ ಅನುಗ್ರಹಿ- ಸಿದುದಲ್ಲದೆ, ಶಾಂತಕರುಣರಸ ಪ್ರಧಾನವಾದ ಕಬೀರದಾ- ಪಾತ್ರವನ್ನು ವಹಿಸಿದ್ದ ಮ॥ ರಾ॥ ಸಿ. ಬಿ. ಮಲ್ಲಪ್ಪನವರಿ- ಸಹ ಬಂಗಾರದ ಪದಕವನ್ನು ದಯಪಾಲಿಸಿದರು. (ಈ ಸಂಘ- ಪ್ರಧಾನ ನಟರಲ್ಲಿ ಇಬ್ಬರಾದ ಮ॥ ರಾ॥ ಗಂಗಾಧರರಾ- ವರೂ, ಮ॥ ರಾ॥ ಸಿ. ಬಿ. ಮಲ್ಲಪ್ಪನವರು ಮತ್ತು ಮ್ಯಾನೇ- ಜರ್ ಎಸ್. ನಾಗೇಶರಾಯರವರೂ ಸಹ ಈಚೆಗೆ ಸಂಘವ- ಬಿಟ್ಟು ಸ್ವತಂತ್ರವಾಗಿ ನಾಟಕ ಸಂಘಗಳನ್ನೇರ್ಪಡಿಸಿಕೊಂ- ಅಭಿವೃದ್ಧಿಗೆ ಬ- ತ್ತಿರುವರು.)



'ರಾಜಭಕ್ತಿ' ನಾಟಕದಲ್ಲಿ ಸರೋಜಿನಿಯು ತನ್ನ ಪತಿಯನ್ನು ತಿರಸ್ಕರಿಸುವದು.

ಈಚೆಗೆ ... ೧೯೩೪ನೆಯ ... ವಿಯಲ್ಲಿ ಮ... ಶ್ರೀ ವೀರಣ್ಣ... ರು ಬೆಂಗಳೂ... ನ್ನೇ ತಮ್ಮ ... ಷ್ಠಾನವನ್ನಾ... ಮಾಡಿಕೊಂ... ಅಲ್ಲಿ ಸುಮಾ... ಮೂವತ್ತು ... ರ ರೂಪಾಯಿ... ವರೆಗೆ ವೆಚ್ಚ... ಒಂದು ದಿವ್ಯ... ನಾಟಕ ... ನ್ನು ಕಟ್ಟಿ ೧೯... ನೆಯ ಇಸವಿ ನವೆಂಬರ್ ೧೪ ನೆಯ ತಾರೀಖಿನ ದಿನ ... ಪ್ರವೇಶೋತ್ಸವವನ್ನು ಅತಿ ವಿಜೃಂಭಣೆಯಿಂದ ನಡೆಯಿಸಿ...

ತರುವಾಯ ೧೯೩೫ನೆಯ ಇಸವಿಯಲ್ಲಿ ಕೇವಲ ... ವಯಸ್ಸಿನ ಅಂದರೆ ೧೪ ವರ್ಷಗಳಿಗೆ ಒಳಪಟ್ಟ ವಯಸ್ಸಿ... ಬಾಲಕರನ್ನೇ ಸೇರಿಸಿ ಬೆಂಗಳೂರಲ್ಲಿ " ಬಾಲಕಲಾವಿ... ನಾಟಕ ಸಭಾ " ಎಂಬ ಹೆಸರಿನಿಂದ ಒಂದು ಉಪನಾ... ಸಂಘವನ್ನೇರ್ಪಡಿಸಿ, ಅದರಲ್ಲಿ ಬಾಲಕರಿಗೆ ನಾಟಕ ಸಂ... ವಿದ್ಯೆಗಳು ಮಾತ್ರವಲ್ಲದೆ ಅಕ್ಷರ ವಿದ್ಯೆಯನ್ನೂ ಸಹ ...

ರೀತಿಯಿಂದ ಹೇಳಿಸಿ ಅವರನ್ನು ತರಬೇತು ಮಾಡಿಸಿದರು. ಆ ಸಂಘವು ಈಗ ನಾಲ್ಕು ವರ್ಷಗಳಿಂದಲೂ ಉತ್ತಮರೀತಿಯಿಂದ ನಾಟಕಗಳನ್ನಭಿನಯಿಸುತ್ತಾ ಶ್ರೀಮನ್ಮಹಾರಾಜರವರ ಕೃಪಾಪೋಷಣೆಗೆ ಒಳಪಟ್ಟು ಅರಮನೆಯುಲ್ಲಿಯೂ ಸಹ ಅನೇಕ ನಾಟಕಗಳನ್ನಾಡಿ ಬಹುಮಾನಗಳನ್ನು ಪಡೆದುದಲ್ಲದೆ



ಧ್ಯಾನಮಗ್ನ ಧ್ರುವ ( ಧ್ರುವ ನಾಟಕದಲ್ಲಿ ಸ್ವರ್ಣಮ್ಮ ಎಂಬ ಕುಮಾರಿಯು ಧ್ರುವಪಾತ್ರವನ್ನು ವಹಿಸಿದುದು )

ಕೊಡಗು, ಮದರಾಸು, ಮಂಗಳೂರು, ಬಳ್ಳಾರಿ, ಅನಂತಪುರ ಮೊದಲಾದ ಅನೇಕ ಸ್ಥಳಗಳಲ್ಲಿ ಸಂಚರಿಸಿ ಅತಿಶಯವಾದ ಕೀರ್ತಿಯನ್ನೂ ಪ್ರೋತ್ಸಾಹಪ್ರಯೋಜನಗಳನ್ನೂ ಪಡೆದು ಜನರ ಮೆಚ್ಚಿಕೆಗೆ ಪಾತ್ರವಾಗಿದೆ. ಈಚೆಗೆ ಅಂದರೆ ಕಳೆದ ನವೆಂಬರ್, ಡಿಸೆಂಬರು ತಿಂಗಳುಗಳಲ್ಲಿ ಈ ಸಂಘದ ಮುಖ್ಯ ನಾಟಕಗಳಲ್ಲಿ ಒಂದಾದ "ಶ್ರೀಕೃಷ್ಣಗಾರುಡಿ" ಎಂಬ ನಾಟಕವು ತಪ್ಪದೆ ಇಪ್ಪತ್ತಾವೃತ್ತಿ ಒಂದೇ ಸಮನಾಗಿ ಅಭಿನಯಿಸಲ್ಪಟ್ಟು ಬೆಂಗಳೂರು ಜನರಿಂದ ಅತ್ಯುತ್ತಮವಾದ ಪ್ರೋತ್ಸಾಹವನ್ನು ಪಡೆಯಿತು. ಈ ಉಭಯ ಸಂಘಗಳಿಗೂ ಮ|| ರಾ|| ಬೆಳ್ಳಾವೆ ನರಹರಿ ಶಾಸ್ತ್ರಿಗಳೇ ಗುರುಗಳೆಂಬುದು ಲೋಕವಿದಿತವಾದ ವಿಷಯವಾಗಿದೆ. ಈ ಸಂಘವನ್ನು ಮ|| ರಾ|| ವೀರಣ್ಣನವರ ಭಾವ ಮೈದುನರಾದ ಮ|| ರಾ|| ನೀಲಕಂಠಪ್ಪನವರು ಕಾರ್ಯದರ್ಶಿಗಳಾಗಿ ಮೇಲ್ವಿಚಾರಣೆಯಿಂದ ನಡೆಸುತ್ತಿದ್ದಾರೆ. ಈ ಸಂಘವು ಇಷ್ಟು ಅಭಿವೃದ್ಧಿಯಾಗುವುದಕ್ಕೆ ಮ|| ರಾ|| ನೀಲಕಂಠಪ್ಪನವರ ಕಾರ್ಯದಕ್ಷತೆಯೂ ಮತ್ತು ಮ್ಯಾನೇಜರವರಾದ

ಮ|| ರಾ|| ಎಸ್. ಪಿ ನರಸಿಂಹಮೂರ್ತಿ ಯಂ. ಎ. ಯವರ ಸಮಯೋಚಿತ ಕಾರ್ಯಕರಣ ಚಾತುರ್ಯ ಶಕ್ತಿಗಳೂ ಸಹ ಕಾರಣವಾಗಿವೆಯೆಂದು ಹೇಳಬಹುದು. ದೊಡ್ಡ ಕಂಪೆನಿಯಂತೆ ಈ ಚಿಕ್ಕ ಸಂಘವೂ ಸಹ ಕೇವಲ ಅಭಿವೃದ್ಧಿಗೆ



(ಸದಾರಮೆ' ನಾಟಕದಲ್ಲಿ ವೀರಣ್ಣನವರು ವೈಶ್ಯಪಾತ್ರವನ್ನು ವಹಿಸಿದುದು

ಬರುತ್ತಾ ಇರುವುದಲ್ಲದೆ ಈ ಉಭಯ ಸಂಘಗಳೂ ಸೇರಿ ಸುಮಾರು ೧೮೦ ಕುಟುಂಬಗಳು ಮ|| ರಾ|| ಶ್ರೀ ವೀರಣ್ಣನವರ ಆಶ್ರಯವನ್ನು ಪಡೆದು ಸುಖದಿಂದಿರುವುವು. ಅಲ್ಲದೆ ಈ ಉಭಯ ಸಂಘಗಳಿಂದಲೂ ಸಹ ಈವರೆಗೆ ಮ|| ರಾ|| ಶ್ರೀ ವೀರಣ್ಣನವರು ಸುಮಾರು ಒಂದು ಲಕ್ಷರೂಪಾಯಿಗಳನ್ನು ಧರ್ಮಕ್ಕಾಗಿ ಕೊಟ್ಟ ಪುಣ್ಯಕೀರ್ತಿ ಭಾಗಿಗಳಾಗಿರುವರು. ಇವರಲ್ಲಿರತಕ್ಕ ಆಶ್ರಿತರನೇಕರು ಬಾಲ್ಯದಿಂದಲೂ ಇವರ ಆಶ್ರಯದಲ್ಲಿಯೇ ಬೆಳೆದು ಇವರ ಸಹಾಯದಿಂದಲೇ ಸುಸ್ಥಿತರಾಗಿ ಈಗಲೂ ಇವರ ಉಪಕಾರವನ್ನು ಸ್ಮರಿಸುತ್ತಾ ಸುಖದಿಂದಿರುವರು.

ಈಚೆಗೆ ಮ|| ರಾ|| ವೀರಣ್ಣನವರು ಚನ್ನಪಟ್ಟದಲ್ಲಿಯೂ ಮತ್ತು ತುಮಕೂರಿನಲ್ಲಿಯೂ ಸಹ ಎರಡು ಸಾಮಾನ್ಯವಾದ ನಾಟಕಶಾಲೆಗಳನ್ನು ಕಟ್ಟಿರುವುದಲ್ಲದೆ ಬೆಂಗಳೂರಲ್ಲಿ ಸುಮಾರು ಇಪ್ಪತ್ತೈದು ಸಾವಿರ ರೂಪಾಯಿಗಳ ಬೆಲೆ ಬಾಳತಕ್ಕ ಮತ್ತೊಂದು ನೂತನ ನಾಟಕಶಾಲೆಯನ್ನು ಕಟ್ಟಿಸಿ ಕಳೆದ ೧೯೨೮ನೆಯ ಡಿಸೆಂಬರ್ ೨೫ನೆಯ ತಾರೀಖಿನದಿನ ಅದರ ಪ್ರವೇಶೋತ್ಸವವನ್ನು ನಡೆಯಿಸಿದರು.

ಇಷ್ಟು ಮಾತ್ರವಲ್ಲದೆ ಇವರು ತಮ್ಮಲ್ಲಿರುವ ಇನ್ನು ಕೆಲವು ಮಂದಿ ಬಾಲಕರಿಗೆ ನಾಟಕಶಿಕ್ಷಣವನ್ನು ಕೊಟ್ಟು ಮತ್ತೊಂದು ಬಾಲನಾಟಕ ಸಂಘವನ್ನು ಏರ್ಪಡಿಸಿರುತ್ತಾರೆ. ಇದನ್ನೂ ಸಹ ಕ್ಷಿಪ್ರದಲ್ಲಿಯೇ ಪ್ರತ್ಯೇಕವಾದ ಏರ್ಪಾಡುಗಳಿಂದ ದೇಶಸಂಚಾರಕ್ಕೆ ಕಳುಹಿಸುವ ಪ್ರಯತ್ನದಲ್ಲಿರುವರೆಂದು ತಿಳಿದುಬರುತ್ತದೆ.

ಸಾಮಾನ್ಯ ರೀತಿಯಲ್ಲಿದ್ದ ಈ ಗುಬ್ಬಿ ನಾಟಕಸಂಘವು ಮ|| ರಾ|| ವೀರಣ್ಣನವರ ಆಡಳಿತಕ್ಕೆ ಬಂದನಂತರ ಅನೇಕ ನವೀನ ಕ್ರಮಗಳೇರ್ಪಟ್ಟು ನವೀನ ನಾಟಕಗಳನ್ನಾಡಲಾರಂಭಿಸಿ, ಈಗ ಮೈಸೂರು ದೇಶದಲ್ಲಿರುವ ನಾಟಕ ಸಂಘಗಳಲ್ಲಿ ಉತ್ತಮ ಸ್ಥಾನವನ್ನು ಪಡೆದಿರುವುದು.

# ಜನಪದ-ಸಾಹಿತ್ಯ

## ಹೆಣ್ಣುಮಕ್ಕಳ ಒಗಟುಗಳು

೧

ಸಂಗ್ರಾಹಕರು- ಶ್ರೀ ಶಂಕರಭಟ್ಟ ಅಗ್ನಿಹೋತ್ರಿ, ಡಂಬಳ

೧ ಅಂತರದೆ ಹಾರುವದು ಅದು ಪಕ್ಷಿಯಲ್ಲ; ಅದಕೆ ಕೋಡುಗಳುಂಟು ಬಸವಣ್ಣನಲ್ಲ; ಅದಕೊಂದು ಬಾಲವು ಹನುಮಂತನಲ್ಲ.

೨ ಗಚ್ಚಿನ ಗುಡಿಗೆ ಎತ್ತೆತ್ತೂ ಬಾಗಿಲಿಲ್ಲ

೩ ಭಂಗಾರದ ಗುಬ್ಬಿ ಬಾಲನಲೆ ನೀರು ಕುಡೀತದ

೪ ಬಣ್ಣದ ಸೀರೀ ಉಟ್ಟು ಮಣ್ಣಾಗ ಕೂತಾಳ

೫ ಬಾಬಾ ಎಂಬೋಳು ಬಣ್ಣಿಸಿ ಕರೆನಳು ಇಕ್ಕಿಸಿಗೊಂಬಳು ಕಕ್ಕಸ ಬಡುವಳು

೬ ಭರ್‍ರನ ಬರತಾರ ಕೈತುಂಬ ಹಿಡಿತಾರ ಮನಸಿಗೆ ಬಂದ್ಹಾಂಗ ಏರಿಸತಾರ

೭ ಆನೀಹೊಟ್ಯಾಗ ಆರುಸಾವಿರ ಮಕ್ಕಳು

೮ ಸಾವಿರ ರೂಪಾಯಿ ಸರಕು, ನೂರು ರೂಪಾಯಿ ಗೋಣಿ, ಹೊತ್ತ ಎತ್ತಿಗೂ ಗೊತ್ತಿಲ್ಲ, ಹೇರಿದ ಸೆಟ್ಟಿಗೂ ಗೊತ್ತಿಲ್ಲ.

[ಉತ್ತರಗಳು– ೧ ಗಾಳೀಪಟ, ೨ ತತ್ತಿ, ೩ ದೀಪ; ೪ ಗಜ್ಜರಿ-ಗೆಣಸು; ೫ ಬಳೆ ಇಟ್ಟುಕೊಳ್ಳುವದು; ೬ ಜೋಕಾಲಿ; ೭ ಕುಳ್ಳಬಾನ; ೮ ಬಸುರಾದ ಹೆಂಗಸು ]

---

೨

ಸಂಗ್ರಾಹಕರು- ಶ್ರೀ. ಧೀ. ಹ. ದೇಶಪಾಂಡೆ, ವಿಜಾಪುರ

( ಕುಮಾರಿ ಸತ್ಯಭಾಮಾ ಇವರಿಂದ ಸಂಗ್ರಹಿಸಿದ್ದು. )

೧ ನಾಲ್ಕು ಮೂಲೀ ಬಾಜಾರಾ, ಬಿತ್ತು ಆರು ಕಾಳು, ಹೂಡು ಹದಿನಾರು ಎತ್ತು

೨ ಕರೇ ಸೀರಿ ಉಟ್ಟಾಳ; ಕಾಲುಂಗರ ಇಟ್ಟಾಳ, ವ್ಯಾಲೆ ಹೋಗ್ತಾಳ ಕೆಳಗ ಬರತಾಳ

೩ ಇದರ ಇದರ ಅಂಗಡಿ ಬಿದರಿನ ಚಾವಡಿ ಒದರಗೋತ ಬಂದಾನ ಭೈರಾಗಿ

೪ ಥಂಡಿ ಹೋಗತದ ಭಂಡಾರ ಚೆಲ್ಲತದ

೫ ಗಡಗಡ ಥಂಡಿ ಕಂಡೆ, ಗವಗಿನ ಪ್ಯಾಟಿ ಕಂಡೆ, ಕುತ್ತಿಗಿ ಕೊಯ್ದ ಆಡ ಕಂಡೆ, ರಕ್ತಾನೆ ಕಾಣಲಿಲ್ಲ.

[ಉತ್ತರಗಳು– ೧ ಸಗಡೀಪಟ್ಟು– ಕವಡಿ– ಪಗಡಿ; ೨ ಒನಕೆ; ೩ ಗುಂಗೀಹುಳ; ೪ ಬೀಸುಕಲ್ಲು; ೫ ಹೊಲದಲ್ಲಿಯ ಬೆಳೆ ]

---

೩

## ಚಿಕ್ಕಮಕ್ಕಳ ಒಗಟುಗಳು

ಸಂಗ್ರಾಹಕರು- ಶ್ರೀ. ವೀರಭದ್ರಪ್ಪ ಎಲಿಗಾರ, ಬಾಚೀಗೊಂಡನಹಳ್ಳಿ (ಅನಂತಪುರ)

೧ ತಾತಾಗಿಂಡಿ ತಾಮರಗಿಂಡಿ ಒಡೆದು ನೋಡಿದರೆ ಮುತ್ತಿನ ಗಿಂಡಿ

೨ ಹಸುರ ಗಿಡದಾಗ ಮೊಸರು ಚೆಲ್ಲೈತೆ

೩ ಆಚೇರು ಬಾಚೇರು ಹಾಲುಕೊಡಕೊತ್ತು ವಾಲ್ಯಾಡ ತಾರ

೪ ಅಂತರಲಾಡ ಹಪ್ಪಣ್ಣ ನೆಲಕ ಬಿದ್ದರೆ ದುಪ್ಪಣ್ಣ ಅಂಗೀ ಬಿಚ್ಚೋ ನಿಂಗಣ್ಣ

೫ ಅಂತರಲಾಡ ಹಡಗ ಅವರ ಹೊಟ್ಟೀಲಿ ಬೆಳ್ಳಿ ಕಡಗ ಹೇಳಿದವನೇ ಬಳ್ಳಾರಿ ಹುಡುಗ

೬ ಅಜ್ಜೀ ಸೀರೆ ಮುಡಚಲಾರೆ ಅಜ್ಜನ ರೂಪ ಎಣಿಸಲಾರೆ

[ಉತ್ತರಗಳು– ೧ ಡಾಳಿಂಬರ ಹಣ್ಣು; ೨ ಮಲ್ಲಿಗಿ; ೩ ತೆಂಗಿನಕಾಯಿ; ೪ ಹುಣಸೇ ಹಣ್ಣು; ೫ ಚಂದಪ್ಪ; ೬ ಆಕಾಶ-ನಕ್ಷತ್ರ ]

---

೪

## ಮದುಮಕ್ಕಳ ಒಗಟುಗಳು

ಸಂಗ್ರಾಹಕರು- ಕುಮಾರಿಯರು ಅನಸೂಯಾ ಮತ್ತ ಸರೋಜಿನಿ, ಕಲಘಟಗಿ

೧ ಗುಲಾಬಿ ಹೂವಿನ ಗುಂಪು ಮಲಿಗಿ ಹೂವಿನ ತಂಪು ನನ್ನಕಿಂತ ಚಂದ್ರಾಮರಾಯರು ಬಲುಕೆಂಪು

೨ ಎಡಕ್ಕೆ ಎಣ್ಣೆದೀವಿಗಿ, ಬಲಕ್ಕೆ ತುಪ್ಪದ ದೀವಿಗೆ, ಬಂಗಾರದ ಮಣಿಯಮೇಲೆ ಕೂತು ಸಂಧ್ಯಾವಂದನಿ ಮಾಡ ತಾರ ಚಂದ್ರಾಮರಾಯರು

೩ ಗೋಟು ಅಡಿಕಿ ಗೋಣೀ ಚೀಲ, ಗೋಪುರದೊಳಗೆ ಕೂತುಕೊಂಡು ಗೋಲಿಗುಂಡು ಆಡತಾರ ಚಂದ್ರಾಮರಾಯರು

೪ ಉದ್ದಿನ ಹಿಟ್ಟು ಉದರ ಅನ್ನ, ಮಧ್ಯಾನ್ನದ ಹೊತ್ತಿಗೆ
ಸಿದ್ಧಾಗಿ ಬರತಾರ ಚಂದ್ರಾಮರಾಯರು

೫ ಮೆಂತೇದ ಹಿಟ್ಟು, ತುಪ್ಪದ ಬಟ್ಟು, ತುತ್ತು ತುತ್ತಿ
ಗೊಮ್ಮೆ ತುಪ್ಪ ಬೇಡತಾರ ಚಂದ್ರಾಮರಾಯರು

---

೫

## ಸುವ್ವಿಯ ಪದ

ಸಂಗ್ರಾಹಕರು: — ಶ್ರೀ ಮುತ್ತು ರಾಮಸ್ವಾಮಿ ಮೈಸೂರು.

ಸುವ್ವಿ ಕುಟ್ಟಿಂದಾರೇ ಸುವ್ವಂಗನಾಡೋಳೂ
ನೋಡಣ್ಣಾ ನಿನ್ನ ಮಡದೀಯಾ! ಸುವ್ವಿ ॥ ೧ ॥

ಒಂದಿಬ್ಬೆ ಕುಟ್ಟುವಾಗಾ ಒಬ್ಬಣ್ಣ ಉಣಬಂದಾ
ಒಬ್ಬೀಗೇ ವಬ್ಬೆ ನುರಿಯಾವೂ! ಸುವ್ವಿ ॥ ೨ ॥

ಒಬ್ಬಿಗೇನೇ ವಬ್ಬೇ ನುರಿಯಾವು ಅಣ್ಣಯ್ಯ,
ಎಬ್ಬೀಸೋ ನಿನ್ನ ಮಡದೀಯಾ! ಸುವ್ವಿ ॥ ೩ ॥

ಮಡದಿಯ ಎಬ್ಬಿಸಿದ್ರೇ ಅವನಿದ್ದೆಯಾದಾವೂ।
ಎರಡಬ್ಬೇ ಮಾಡಿ ಹಣಿ ತಂಗೀ! ಸುವ್ವಿ ॥ ೪ ॥

ಎರಡಿಬ್ಬೆ ಮಾಡಿದರೇ ಕಡಿನುಚ್ಚು ಆದಾವೂ।
ನೋಡಣ್ಣಾ ನಿನ್ನ ಮಡದೀಯಾ! ಸುವ್ವಿ ॥ ೫ ॥

ಒಂದಿಬ್ಬೆ ಮಾಡಿದರೇ। ಕುರುಡಕ್ಕಿಯಾದಾವೂ।
ಸಾಕಣ್ಣಾ ನಿನ್ನ ಮನೆ ಕೆಲಸಾ! ಸುವ್ವಿ ॥ ೬ ॥

ನಮ್ಮನೆ ಕೆಲಸಾವಾ ನನ್ಮುಂದೆ ಹೇಳ್ಬ್ಯಾಡಾ,
ನನ್ನ ಮಾನೆಲಿ ಇರಬೇಡಾ। ಸುವ್ವಿ ॥ ೭ ॥

ಕುದುರೇನೆ ತರಿಸಣ್ಣಾ, ಜೀನವ ಬಿಗಿಸಣ್ಣಾ,
ನನ್ನ ಊರಿಗೆ ಕಳಿಸಣ್ಣಾ। ಸುವ್ವಿ ॥ ೮ ॥

ಕುದುರೆ ನಮ್ಮಲ್ಲಿಲ್ಲಾ, ಜೀನ ನಮ್ಮಲ್ಲಿಲ್ಲಾ।
ನಿನ್ನ ಊರಿಗೆ ನಡಿ ತಂಗೀ। ಸುವ್ವಿ ॥ ೯ ॥

ಕಕ್ಕೆ ಹಣ್ಣಾ ತಿಂದು, ಕೈತುಂಬ ನೀರ್ಕುಡಿದೂ,
ಕಾಕರ್ಗಲ್ಲಾಗೆ ನಡುವೊತ್ತೀ। ಸುವ್ವಿ ॥ ೧೦ ॥

ಕಾಕರುಗಲ್ಲಾಗೇ ನಡುವೊತ್ತಿ ಆದಾರೇ
ಸಾಕಣ್ಣಾ ನಿನ್ನ ಮನೆಮಾರ। ಸುವ್ವಿ ॥ ೧೧ ॥

ತಂಗ್ಹೋದ ಮರುದೀನಾ, ಬಂದಾವೆ ಚಳಿಜೊರಾ;
ಮನೆಯ ಮಡದಿಗೇ ತಲೆಶೂಲೆ। ಸುವ್ವಿ ॥ ೧೨ ॥

ಮನೆಯುನ ಮಡದೀಗೇ ತಲೆಶೂಲೆ ಆದಾರೆ,
ದೇವರ್ನಾ ಕೇಳ ಹೊರಟಾನೇ। ಸುವ್ವಿ ॥ ೧೩ ॥

ದೇವ್ರಲ್ಲ, ದಿಂಡ್ರಲ್ಲಾ, ದೈವಲ್ಲ ಭೂತಲ್ಲಾ,
ಮನೆಯಾ ಹೆಣ್ಮಗಳುಸುರಣ್ಣಾ। ಸುವ್ವಿ ॥ ೧೪ ॥

ಮನೆಯುನ್ನ ಹೆಣ್ಮಗಳಾ ಉಸುರಣ್ಣ ಆದಾರೇ,
ತಂಗೀಯಾ ಕರೆಯ ಹೊರಟಾನೇ। ಸುವ್ವಿ ॥ ೧೫ ॥

ಕುದುರೇನೆ ತಂದಿದಿನೀ; ಜೀನವ ಬಿಗಿಸಿದಿನೀ,
ಬರಬೇಕೇ ತಂಗಿ ಮದುವೇಗೇ। ಸುವ್ವಿ ॥ ೧೬ ॥

ಅಂಗ್ಳ ಗುಡಿಸೋರಿಲ್ಲಾ, ತಂಬ್ಗೆ ತೊಳೆಯೋರಿಲ್ಲಾ,
ಹೇಗೆ ಬರಲಣ್ಣಾ ಮದುವೇಗೇ। ಸುವ್ವಿ ॥ ೧೭ ॥

ಅಂಗ್ಳಕ್ಕೆ ಆಳಿಡುವೇ, ತಂಬಿಗ್ಗೆ ತೊತ್ತಿಡುವೇ,
ಬರಬೇಕೇ ತಂಗಿ ಮದುವೇಗೇ। ಸುವ್ವಿ ॥ ೧೮ ॥

ಮಜ್ಗೆ ಕಡೆಯೋರಿಲ್ಲಾ, ಬೆಣ್ಣೆ ತೆಗೆಯೋರಿಲ್ಲಾ,
ಹೇಗೆ ಬರಲಣ್ಣಾ ಮದುವೇಗೇ। ಸುವ್ವಿ ॥ ೧೯ ॥

ಮಜ್ಜಿಗ್ಗೆ ಆಳಿಡುವೇ, ಬೆಣ್ಣೆಗೆ ತೊತ್ತಿಡುವೇ,
ಬರಬೇಕೇ ತಂಗಿ ಮದುವೇಗೇ। ಸುವ್ವಿ ॥ ೨೦ ॥

ಬೇಸಿಗೆ ಬಿಸಿಲಣ್ಣಾ, ಕೂಸಿನ ತಾಯಣ್ಣಾ,
ಹೇಗೆ ಬರಲಣ್ಣಾ ಮದುವೇಗೇ। ಸುವ್ವಿ ॥ ೨೧ ॥

ನಿನ್ನಗೆ ಪಲ್ಲಕ್ಕಿ ಕೂಸಿಗೆ ಮೂರು ತೇಜಿ,
ಬರಬೇಕೇ ತಂಗಿ ಮದುವೇಗೇ ಸುವ್ವಿ ॥ ೨೨ ॥

ಮಳೆಯಾದ್ರೆ ಬಂದಿತೋ, ಹೊಳೆಯಾದ್ರೆ ತುಂಬಿತೋ,
ಹೇಗೆ ಬರಲಣ್ಣಾ ಮದುವೇಗೇ ಸುವ್ವಿ ॥ ೨೩ ॥

ಚಿನ್ನದ ಹಂಗೋಲ್ಗೇ ರನ್ನದ ಹುಟ್ಹಾಕೀ;
ಜೋಕೇಲೀ ನಿನ್ನ ಕರೆದೊಯ್ವೇ ಸುವ್ವಿ ॥ ೨೪ ॥

ಅಪ್ಪಕಟ್ಟಿದ ಮನೇ, ಅವ್ವ ಮಾಡಿದ ಬದುಕೂ,
ಬರಬೇಕೇ ತಂಗಿ ಮದುವೇಗೇ। ಸುವ್ವಿ ॥ ೨೫ ॥

ಅಪ್ಪ ಇದ್ದರೆ ಎನ್ನಾ, ಒಪ್ಪದಲಿ ಕರೆದೊಯ್ತಾ!
ಅಪ್ಪ ಇಲ್ಲದಾ ಮನೆ ಒಲ್ಲೇ। ಸುವ್ವಿ ॥ ೨೬ ॥

ಅಮ್ಮ ಇದ್ದರೆ ಎನ್ನಾ, ಸುಮ್ಮನೆ ಕಳುಹೋಳೇ,
ಅಮ್ಮ ಇಲ್ಲದಾ ಮನೆ ಒಲ್ಲೇ। ಸುವ್ವಿ ॥ ೨೭ ॥

ಬಂದಾರೆ ಬಂದೇನೋ ಅಂಗ್ಳದಾಗೆ ನಿಂದೇನೋ,
ಕಂಪಗೇ ಧಾರೆ ಎರೆದೇನೋ ಸುವ್ವಿ ॥ ೨೮ ॥

ಅಲ್ಲದ ಮಾತಾಡೀ, ಶ್ಯಾವಂತ್ಗೆ ಹೂವ ಬೇಡೀ,
ಊರು ಮುಂದಿನಾ ಪ್ರಾಣೇಶಾ ಗತಿ ॥ ೨೯ ॥

---

೬

## ಜೋಗುಳ ಹಾಡುಗಳು

ಸಂಗ್ರಾಹಕರು :--ಶ್ರೀನಿವಾಸಾಚಾರ್ಯ, ಜಹಾಗಿರದಾರ, ಚಿಂಚೋಳಿ (ನಿಜಾಂ ಕರ್ನಾಟಕ)

ಬಂದು ಬಂದೂ ನನ್ನ ಬಾಗಿಲಿಗೆ ಆಡ್ಯಾನ ।
ಗೋದಿ ವರ್ಣಾದ ಎಳೆನಾಗ । ಎಳೆನಾಗ ! ಎಲೆ ಸ್ವಾಮಿ! ।
ಬಾಲ ಬರತಾನ ಬಲಕಾಗೊ ॥ ೧ ॥

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು ।
ಮಾವಿನಹೋಳು ನಿನ ಕಣ್ಣು । ನಿನ ಕಣ್ಣು ಕಂದಯ್ಯ
ಮಾವ ಬಣ್ಣೀಸಿ ಕರೆದಾನ ॥ ೨ ॥

ಬಾಲ ಹನುಮನ ಮುಂದ ಬಾಲಚೆಂಡಾಡ್ಯಾನ ।
ಬಾಳೀದ (ಬಾವುಲಿ) ಕಿವಿಯ ಕಂದಯ್ಯ । ಕಂದಯ್ಯನನ ಕಂಡು ।
ಬಾಲೇರು ಬಸಿರ ಬಯಸ್ಯಾರ ॥ ೩ ॥

ಕೂಸೊಂದು ಕುಂದಾಣ; ಏಸೊಂದು ಜಾವಳಿ? ।
ದೇಶಕ್ಕ ಜಾಣ ಅಗಸಾಲ । ಅಗಸಾಲ ಮಾಡ್ಯಾನ
ಕೂಸು ಕಂದಯ್ಯನರಳೇಲೆ ॥ ೪ ॥

ತೊಟ್ಟೀಲದೊಳಗೊಂದು ತೊಳೆದು ಮುತ್ತಿನಕಂಡೆ ।
ಹೊಟ್ಟೆ ಮೇಲಾಗಿ ಮಲಗ್ಯಾನ । ಮಲಗೀದ ಕಂದಯ್ಯಾಗ
ಮುತ್ತೀನ ದೃಷ್ಟಿ ತಗದೇನ! ॥ ೫ ॥

---

೭

## ಹಂತಿಯ ಹಾಡುಗಳು

ಸಂಗ್ರಾಹಕರು :--ಶ್ರೀ ಉಡುಪಿರಾವ ಶೇಕದಾರ, ಮಹಿಸವಾಡಿಗಿ (ಬೆಳಗಾಂವಿ ಜಿಲ್ಲೆ)

ಸತ್ಯೆಪ್ಪಾ ಪ್ರಧಾನಿ ಶಿರಹಟ್ಟಿ ಮತ್ತು ಎಂಕಾಟಿ ಪಡಸಲಗಿ ಇವರಿಂದ ಸಂಗ್ರಹಿಸಿದ್ದು.

ಚೆಂದಚೆಂದದ ಗುಡ್ಡ ಮುಂದ ಜೋಗಳ ಭಾಂವಿ
ಮುನ್ನೂರದರವತ್ತು ಎಳೆಮಾವಾ ॥
ಮುನ್ನೂರವರವತ್ತು ಎಳೆಮಾವಿನ ಬನದಾಗ
ರಂಬಿ ಸತ್ಯವ್ವಾ ನೆನೆದಾಳ ॥ ೧ ॥

ಕುಸುಬಿಯ ಹೂವಿನ್ಹಾಂಗ ಹೊಸಮಗ ಅಪ್ಪಾಸಾಬ
ಬಿಸಲಾಗ ಡೇರಿ ಹೊಡೆದಾನ ॥
ಬಿಸಲಾಗ ಡೇರಿ ಹೊಡೆದಾನ । ಕೌಜಲಗಿ ।
ಅಗಸ್ಯಾಗ ಕಾಳಿ ಹಿಡಿಸ್ಯಾನ ॥ ೨ ॥

ಸಣಿಗಿಯ ಕೊಂಡಿ ಹಾಂಗ ತಿರಿಗ್ಯಾವ ಅಲ್ಲನ ಮೀಶಿ
ಕರಿದೆಳಿ ಬಾಳ ಚಲವೇನ ॥
ಕರಿದೆಳಿ ಬಾಳ ಚಲವೇನ । ಅವರವ್ವ
ಕರಬೇವಿನ ದೃಷ್ಟಿ ಮುರದಾಳ ॥ ೩ ॥

ಕಬ್ಬೂರ ಹಾದೀಲಿ ಇಬ್ಬರು ಬರುತಾರ
ಒಬ್ಬ ಸುಲದ್ಹಾಂಗ ಕಸಿ ಅಂಗಿ
ಒಬ್ಬ ಸುಲದ್ಹಾಂಗ ಕಸಿ ಅಂಗಿ । ತೊಟಕೊಂಡ
ನಗವಲ್ಲ ಸೆರಗ ಬಿಡವಲ್ಲಾ ॥ ೪ ॥

---

೮

## ಬೀಸುವ ಪದಗಳು

ಸಂಗ್ರಾಹಕರು :--ಶ್ರೀ . ಗೆಳೆಯರು ಹಿರೇಹೊನ್ನಿಹಳ್ಳಿ.

ಹಣಿಯ ಮ್ಯಾಲಿನ ಗಂಧ ಹಚ್ಚಿದರ್ಯಾರವ್ವ,
ಕುದ್ದ ನನ್ನೂರ ಕುಲಕರ್ಣಿ
ಕುದ್ದ ನನ್ನೂರ ಕುಲಕರ್ಣಿ । ಬಲಕಿರುವ
ಬುದ್ಧ್ಯುಳ್ಳ ರೈತ ನನ್ನ ತಮ್ಮ ॥ ೧ ॥

ಹೊಸಮನಿ ಹೊಸಕಂಬ ಕುಸಲದ ತಲೆಗಿಂಬ.
ಹೊಸಮನ್ಯಾಗ ತಮ್ಮ ಮನಿಗ್ಯಾನ ।
ಮನಿಗಿ ಹೇಳತಾನ ಹೆಸರಿಡ ।
ಅಕ್ಕ ಸಿಸುವಿಗೆ ॥ ೨ ॥

ಹೆಸರನ ಇಡೋದು ಹಾಂಗಲ್ಲ ನನ ತಮ್ಮ
ಹಸರ ಬಳೀ ಮುಂದ ಹಡದಿಯ ಕೊಟ್ಟರೆ ।
ಹೆಸರಿಡತೇನಿ ನಿನ್ನ ಸಿಸುವಿಗೆ ॥ ೩ ॥

ಚಂದ್ರನ ಹೆಂಡತಿ ಇಂದ್ರನ ಹಡದಾಳ
ಬಂದಿರೇನವ್ವ ಮನೆತನಕ ॥
ಬಂದಿರೇನವ್ವ ಮನೆತನಕ । ನನ ತಮ್ಮ ।
ತಂದಿಯ ಹೆಸರು ಇಡತಾನ ॥ ೪ ॥

---

# ಬಿಡಿನುಡಿಗಳು

## ಚದುರಂಗದಾಟ ಮುಂದೆ ಸಾಗಿದುದು

(೧೨-೩-೩೦)

ರಾಷ್ಟ್ರಪಟ್ಟದಲ್ಲಿ ರಾಜನಾಯಕರಿಗೂ ಪ್ರಜಾನಾಯಕರಿಗೂ ಚದುರಂಗದಾಟ ನಡೆದಿದೆಯೆಂಬವು ಹಿಂದಿನ ಸಂಚಿಕೆಯಲ್ಲಿ ನಾವು ಸೂಚಿಸಿದ್ದೆವಷ್ಟೆ. ಆ ಆಟವಿನ್ನೂ ಮುಗಿದಿಲ್ಲ. ಸಾಮಂತಸ್ವರಾಜ್ಯವನ್ನು ಜಕ್ಕಿಸಿ ಕೊಟ್ಟು ಬುರುಜಿಮಾಡಿಕೊಳ್ಳಬೇಕು ಇಲ್ಲವೆ ಪ್ಯಾದಿಮಾತಾಗುವವರೆಗೂ ಆಟವು ಬೆಳೆಯತಕ್ಕದ್ದು. ಪೂರ್ಣಸ್ವರಾಜ್ಯವು ದೊರಕತಕ್ಕದ್ದು.



ಮಹಾತ್ಮರು ವಿವಿಧ ಆಟಗಳನ್ನು ಬಿಡುತ್ತಿದ್ದರೂ ಇರುಕಿನಲ್ಲಿ ಸಿಕ್ಕ ಆಳರಸರು, 'ಶಾಂತಿ ಮತ್ತು ಸುವ್ಯವಸ್ಥೆ ಕೆಡಿಸಬೇಡಿರಿ ಒಳ್ಳೆಯದಾಗಲಿಕ್ಕಿಲ್ಲ' ಎಂದೂ 'ಒಮ್ಮೆ ಹೇಳಿದ್ದೇವಲ್ಲ:— ಜವಾಬುದಾರಸ್ವರಾಜ್ಯವನ್ನು ಕೊಡುವೆವೆಂದು; ಅದೇ ಸ್ವರಾಜ್ಯ ಸಾಮಂತಸ್ವರಾಜ್ಯ ಪೂರ್ಣಸ್ವರಾಜ್ಯ ಏನೂ ತಿಳಿಯಿರಿ' ಎಂದೂ ಇವೆರಡೆ ಮಾತಿನ ಮನೆಗಳಲ್ಲಿ ಸರಿದಾಡುತ್ತಿದ್ದಾರೆ. ತಮ್ಮದು ದುರಾಗ್ರಹವಲ್ಲ ಸತ್ಯಾಗ್ರಹವೆಂದು ಜಗತ್ತಿನ ನಿದರ್ಶನಕ್ಕೆ ತಂದು ಕೊಡಲು ಮಹಾತ್ಮರು ಹನ್ನೊಂದೆ ಬೇಡಿಕೆಗಳನ್ನು ಕೇಳಿ ನೋಡಿದರು, ನಮ್ಮ ಜನರನ್ನು ಬಡತನದ ನರಕದೊಳಗಿಂದ ಉದ್ಧಾರಮಾಡುವೆವೆಂದು ವಚನವನ್ನಾದರೂ ಕೊಡುವೆವೆನ್ನಿರೆಂದು ಸಾಷ್ಟಾಂಗಪ್ರಣಿಪಾತದಿಂದ ಬೇಡಿಕೊಂಡರು; ಅಗಳು ಹಿಚಿಕಿನೋಡುವವರಂತೆ ಉಪ್ಪಿನಕರವನ್ನು ತೆಗೆದು ಹಾಕುವಂತೆ ಮಾಡಿಸಲು ಪ್ರಯತ್ನವನ್ನು ಪ್ರಾರಂಭಿಸುತ್ತಿದ್ದಾರೆ. ಈಗ ಪ್ರಾರಂಭವಾಗಿರಲೂ ಸಾಕು. ವಲ್ಲಭಭಾಯಿಯವರ ಬಾಯಿಗೆ ಬೀಗ ಕೈಗೆ ಬೇಡಿಗಳನ್ನು ಹಾಕಿ ಸೆರೆಮನೆಸೇರಿಸಿರುವದರಿಂದ ಪ್ರಜಾಪಕ್ಷದ ಒಂದು ಆನೆಯು ಇಕ್ಕಟ್ಟಿನಲ್ಲಿ ಸಿಕ್ಕಂತಾಗಿದೆ. ಇನ್ನು ಮುಂದೇನಾಗುವದೊ ನೋಡಬೇಕು.

ಈ ಚದುರಂಗದಾಟವು ದೊಡ್ಡ ಪಟ್ಟದಲ್ಲಿ ಸಾಗಿರುವಾಗ ಅಸೆಂಬ್ಲಿಯಲ್ಲಿ ಹುಲಿಹಳ್ಳಿನಾಟವು ನಡೆದು ವಲ್ಲಭಭಾಯಿಯವರ ಅಣ್ಣಂದಿರಾದ ವಿಠ್ಠಲಭಾಯಿ ಪಟೇಲರು ಅಸೆಂಬ್ಲಿಯೊಳಗಿನ ಕುರಿಗಳನ್ನು ಬೆದರಿಸಿ ಚದರಿಸಿ ತಮ್ಮ ಗವಿಯ ದಾರಿಯನ್ನು ಹಿಡಿದು ಕುಳಿತಿದ್ದಾರೆ. ಮುಂದೆ ಆ ಹುಲಿಯು ಆಟನಾಗುವದೊ ಎಂಬ ಕುತೂಹಲವು ಜನರಿಗಿಷ್ಟಿದ್ದರೂ ಗುಜರಾಥದ ಸಿಂಹವು ಗರ್ಜನೆಸಾಕುತ್ತಿರುವಾಗ ಉಳಿದ ಪಶುಗಳ ಆಟವನ್ನು ನೋಡುವವರಾರು?

---

## "ಬಂಡವಾಳವಿಲ್ಲದ ಬಢಾಯಿ"

ಬ್ರಿಟಿಶ್‌ಸಿಂಹಕ್ಕೆ ಬೆದರದ ಪ್ರಾಣಿಯು ಭೂಮಂಡಲದಲ್ಲಿಲ್ಲವೆಂದು ನಾವು ಹೇಳಬಹುದಾದರೂ ಅವರನ್ನು ದ್ವೇಷಿಸದ ಅಥವಾ ಪ್ರೀತಿಸುವ ಪ್ರಾಣಿಯೂ ಭೂಮಂಡಲದಲ್ಲಿಲ್ಲ ಎಂದೂ ಹೇಳಬಹುದು. ಅಮೇರಿಕಾ ದೇಶದವರು ಬಲ್ಲರು ಬ್ರಿಟಿಶರು ಎಷ್ಟು ಸ್ವಾತಂತ್ರ್ಯ ಪ್ರಿಯರೆಂಬುವದನ್ನು. ಅನೇಕ ವಿಷಯಗಳಲ್ಲಿ ಅಮೇರಿಕಾ ದೇಶವು ಈಗ ಮೇಲು; ಮುಕ್ಕಾಲುಪಾಲು ಜಗತ್ತು ಈಗ ಅವರ ಹಣದ ರಿಣದಲ್ಲಿದೆ. ಸಹಜವಾಗಿಯೇ ಅವರು ತಾವು ಜಗತ್ತಿನಲ್ಲಿ ಮೇಲಾಗಬೇಕು ಎಂದೆನಿಸುವದು. ಅವರ ವಿರೋಧಿಗಳು ಬ್ರಿಟಿಶರೇ. ರಸಿಯಾದೇಶಕ್ಕೂ ಬ್ರಿಟಿಶರಿಗೂ ಬೆಕ್ಕಿನ ನೆಂಟಸ್ತನವಿದ್ದಂತೆ. ಜರ್ಮನಿಗೂ ಬ್ರಿಟಿಶರಿಗೂ ಎಷ್ಟು ಬಾಂಧವ್ಯವೆಂಬುದನ್ನು ಈಗಿನ ಸಾಲೆಯ ಹುಡುಗರೂ ಬಲ್ಲರು. ಫ್ರೆಂಚರಿಗೂ ಬ್ರಿಟಿಶರಿಗೂ ಕುಲವೈರವೆಂದು ಇತಿಹಾಸವು ಸಾರಿಹೇಳುವದು. ಇಟಲಿ ದೇಶವು ಸಮುದ್ರದ ಒಡೆತನಕ್ಕಾಗಿ ಬ್ರಿಟಿಶಸಾಮ್ರಾಜ್ಯದೊಡನೆ ಪ್ರತಿಸ್ಪರ್ಧೆಯನ್ನು ಮಾಡಲೆಳಸಿ

ತ್ತಿದೆ. ಯುರೋಪಖಂಡದಲ್ಲಿ ಹೇಗೆ ಇಂಗ್ಲಂಡವೋ ಏಸಿಯಾ ಖಂಡದಲ್ಲಿ ಹಾಗೆ ತಾನು ಎಂದು ಜಪಾನದ ಬಿಂಕ. ಅವರಿಗೂ ಇವರಿಗೂ ಒಳಗೊಳಗೆ ಭಗ ಭಗ, ಹೊರಗೊರಗೆ ಝುಗ ಝುಗ! ಮುಸಲ್ಮಾನರಾಷ್ಟ್ರಗಳಿಗೂ ಕ್ರಿಶ್ಚನರಾಷ್ಟ್ರಗಳಿಗೂ ಜಾತಿವೈರ. ಹೊತ್ತು ಸಿಕ್ಕರೆ ಚೀನವೂ ತನ್ನ ಸೇಡುತೀರಿಸಿಕೊಳ್ಳದೆ ಬಿಡದು. ಇದಾಯಿತು ಹೊರಗಿನವರ ಮಾತು. ಬ್ರಿಟಿಶ ಸಾಮ್ರಾಜ್ಯದಲ್ಲಿಯೇ ಏನಿದೆ ನೋಡೋಣ. ಕಾನಡಾ, ಆಸ್ಟ್ರೇಲಿಯಾ ಮೊದಲಾದ ಸಾಮಂತರಾಜ್ಯಗಳು ತಮಗೆ ಬೇಕಾಗಿರುವ ಹಕ್ಕುಗಳನ್ನು ಮೊನ್ನೆ ಬಾಯಿಬಿಚ್ಚಿ ಹೇಳಿರುವವಷ್ಟೇ. ಬ್ರಿಟಿಷರ ಕುತ್ತಿನಹೊತ್ತು ಸಾಧಿಸಿ ಅವು ಪೂರ್ಣಸ್ವರಾಜ್ಯವನ್ನೇ ಬೇಡುತ್ತಿರುವವು. ಐರ್ಲಂಡವಾದರೂ ಬ್ರಿಟಿಷರು ಮೆತ್ತಗಿರುವವನ್ನು ಕಂಡು ಮೊಣಕೈಯಿಂದ ಅಗಿಯಲು ಆಸಿಮಿಸಿ ನೋಡುವ ದೇಶವಲ್ಲ. ಇಜಿಪ್ತದ ಗೋಳಾಟವನ್ನು ಇಜಿಪ್ತವೇ ಬಲ್ಲದು. ಉಳಿದದ್ದು ಹಿಂದುಸ್ಥಾನ. ಈ ಇಪ್ಪತ್ತು ಇಪ್ಪತ್ತೈದು ವರ್ಷಗಳ ಕಾಲದಲ್ಲಿ ಹಿಂದುಸ್ಥಾನವು ಒಂದಿಲ್ಲೊಂದು ಬಗೆಯಿಂದ ಸ್ವಾತಂತ್ರ್ಯವನ್ನು ಗಳಿಸಲು ಹವಣಿಸುತ್ತಿದೆ.

ಹಾಗಾದರೆ ಬ್ರಿಟಿಶ್ ಸಾಮ್ರಾಜ್ಯದ ಸಾಮರ್ಥ್ಯದ ಬಡಾಯಿಗೆ ಒಡವಲು ಯಾವುದು? ಹಿರಣ್ಯಕಶಿಪುವಿನಂತೆ ನೆಲದಲ್ಲಿ ಜಲದಲ್ಲಿ ಅಂತರಿಕ್ಷದಲ್ಲಿ ಕೂಡ ಅದಕ್ಕೆ ಮರಣ ಭಯವಿಲ್ಲ. ದಂಡಾಳು, ಹಡಗುಪಡೆ, ಮತ್ತು ವಿಮಾನಪಥಕಗಳಿಂದಲೂ ಅದು ಸುಸಜ್ಜಿತವಾಗಿದೆ. ಇದುವರೆಗೂ ದೈವವು ರಣಾಂಗಣದಲ್ಲಿ ಅವರಿಗೆ ಒಲೆಯುತ್ತ ಬಂದಿದೆ. ಬ್ರಿಟಿಶ ಜನಾಂಗದ ದೇಶಪ್ರೀತಿ, ಕಷ್ಟಸಹನೆ, ಸತತೋದ್ಯೋಗ, ನಿಯಮಿತತೆ, ಶಿಸ್ತು, ಮೊದಲಾದ ಗುಣಗಳೂ ಅದರ ಭಾಗ್ಯೋದಯಕ್ಕೆ ಕಾರಣಗಳೆಂದು ಹೇಳಬಹುದು. ಆದರೆ ತಾವು ಸ್ವಾತಂತ್ರ್ಯಪ್ರಿಯರೆಂದೂ ಚಿಕ್ಕಪುಟ್ಟ ರಾಷ್ಟ್ರಗಳ ಸ್ವಾತಂತ್ರ್ಯರಕ್ಷಕರೆಂದೂ ಅವರು ಇದುವರೆಗೂ ಕೊಚ್ಚುತ್ತ ಬಂದ ಜಂಭವೂ ಒಢಾಯಿಯೂ ಬುಡಮೇಲಾಗುವ ಹೊತ್ತು ಬಂದಿದೆ.

ಹೊಸ ಹೊಸ ಯುಕ್ತಿಗಳಿಂದ ರಾಜ್ಯವಾಳುವ ಹಿಡತವು ಬ್ರಿಟಿಶ ರಾಷ್ಟ್ರದಲ್ಲಿ ತೀರ ಕಡಮೆಯಾಗತೊಡಗಿದೆ. ಭೇದನೀತಿಯೊಂದೇ ಅವರಿಗೆ ಹಾದಿಯಾಗಿದೆ. ಬ್ರಾಹ್ಮಣರ ವಿರುದ್ಧ ಬ್ರಾಹ್ಮಣೇತರರನ್ನೆಬ್ಬಿಸಿದ್ದಾಯಿತು. ಇವರಿಬ್ಬರ ವಿರುದ್ಧ ಅಸ್ಪೃಶ್ಯರನ್ನು ತಂದದ್ದಾಯಿತು. ಇವರೆಲ್ಲರಿದಿರೂ ಮುಸಲ್ಮಾನರನ್ನು ಒಡೆದದ್ದಾಯಿತು. ಕೆಳಗಿನ ಕೀಳುಜಾತಿಯವರನ್ನು ಇವರೆಲ್ಲರ ಸ್ಪರ್ಧೆಗೆ ಹೂಡುವ ಯೋಜನೆಯೂ ಈಗ ನಡೆದಿದೆ; ಆದರೆ ಈ ಭೇದನೀತಿಯು ಬೊಕ್ಕಬರಲು ಬೀಳುವದರಲ್ಲಿ ಸಂದೇಹವಿಲ್ಲ. ಇವರೆಲ್ಲರಿಗೂ ಸರಕಾರವು ತೋರಿಸುವ ಆಶೆಯೆಂದರೆ ತಮ್ಮ ಚಾಕರಿ ನೌಕರಿ ಮತ್ತು ಪದವಿಗಳು. ಈ ದುಂಡುಗಾರ ಸರಕಾರಕ್ಕೆ ದುಡ್ಡು ಸಾಲದಾಗಿದ್ದರಿಂದ ಚಿಕ್ಕಪುಟ್ಟ ನೌಕರಿಗಳೂ ತೀರ ಕಡಮೆಯಾಗಿವೆ. ಎಲ್ಲರಿಗೂ ಕಲಿಸುವದು ಚಾಕರಿಗೆ ದೂಡುವದು. ಉದ್ಯೋಗದಲ್ಲಾಗಲಿ ವ್ಯಾಪಾರದಲ್ಲಾಗಲಿ, ವ್ಯವಸಾಯದಲ್ಲಾಗಲಿ, ಸೈನ್ಯದಲ್ಲಾಗಲಿ, ಕಲೆಗಳಲ್ಲಾಗಲಿ ಕಾರಖಾನೆಗಳಲ್ಲಾಗಲಿ ಹೊಸ ಹೊಸ ಇಂಬು ಮಾಡಿ ದುಡಿಯಬೇಕೆಂಬುವವರಿಗೆಲ್ಲ ದುಡಿತ ದೊರೆತು ಹೊಟ್ಟೆ ಬಟ್ಟೆಗೆ ದೊರೆಯುವಂತೆಯೂ, ಕಲಿತವರಿಗೆಲ್ಲ ಅವರವರ ಯೋಗ್ಯತೆಗೆ ತಕ್ಕ ಕೆಲಸ ದೊರೆಯುವಂತೆಯೂ ಈ ಸರಕಾರದ ಕಡೆಯಿಂದ ಮಾಡುವದಾಗಲೊಲ್ಲದು. ಇದೊಂದೆ ಮಾತು ಸರಕಾರದಲ್ಲಿ ಬುದ್ಧಿವಂತರ ಕೊರತೆಯಿದೆ, ಅವರ ಬುದ್ಧಿಯ ಬಂಡವಲು ತೀರಿದೆ ಎಂದು ತೋರ್ಪಡಿಸಲು ಸಾಕು.

ಬ್ರಿಟಿಷರ ಆಳಿಕೆಯ ನೂರುನೂರೈವತ್ತು ವರ್ಷಗಳಲ್ಲಿ ನಮ್ಮ ಜನರಲ್ಲಿ ಶಿಕ್ಷಣವು ಕಡಮೆಯಾಯಿತು. ದೇಹಶಕ್ತಿಯು ಕುಗ್ಗಿತು, ಹೇಡಿತನವು ಹೆಚ್ಚಿತು, ಕುಡಕತನವು ಮಿತಿಮೀರಿತು, ಜಾತಿ ಜಾತಿಗಳಲ್ಲಿ ದ್ವೇಷ ಬೆಳೆಯಿತು. ರೇಲ್ವೆಯಾಯಿತು, ತಂತಿಯಾಯಿತು, ಸಾಯ್ಕಲ್ಲಾಯಿತು, ಮೋಟಾರಾಯಿತು, ಯಂತ್ರವಾಯಿತು, ಸಿನೇಮಾ ಆಯಿತು, ವಿಮಾನವಾಯಿತು. ಇವೇ ಇವರ ಬಡಾಯಿ. ಆದರೆ ಇದರಿಂದ ದುಡ್ಡು ಯಾರಿಗಾಯಿತು, ಬಡತನವು ಯಾರಿಗಾಯಿತು? ದುಡ್ಡು ಬ್ರಿಟಿಷರಿಗೆ; ಬಡತನವು ಭಾರತೀಯರಿಗೆ!

ಬ್ರಿಟಿಷರ ಬುದ್ಧಿಯ ಬಂಡವಲು ತೀರಿದೆ. ಕೆಲವು ಸಂದರ್ಭಗಳಲ್ಲಿ ವಿಪರೀತ ಬುದ್ಧಿಯೂ ತಲೆದೋರುತ್ತಿದೆ. ಆದಕಾರಣ ಬಂಡಿವಾಳವಿಲ್ಲದ ಬಢಾಯಿಯು ಬಹಳದಿವಸ ಬಾಳಲಾರದು.

---

## ಕಟ್ಟಳೆ ಮತ್ತು ಅಚ್ಚುಕಟ್ಟು

( ಲಾ ಅಂಡ ಆರ್ಡರ )

ಮೇಲಿಂದಮೇಲೆ ಆಳರಸರು ಒಂದೇ ಒಂದು ಮಾತನ್ನು ಹೇಳುತ್ತಾರೆ—ಲಾ ಅಂಡ ಆರ್ಡರ ಎಂದರೆ ಕಟ್ಟಳೆಗೂ ರಾಜ್ಯದ ಅಚ್ಚುಕಟ್ಟಿಗೂ ಬಾಧೆ ತಗಲಬಾರದು ಎಂದು, ಧರ್ಮಶಾಸ್ತ್ರ

ದೊಳಗಿನ ಕಟ್ಟಳೆಗಳು ಹಾಗು ಅಚ್ಚುಕಟ್ಟು ಸಮಗ್ರ ಸಮಾಜದ ಹಿತಕ್ಕೆ ವಿರೋಧಿಯಾಗುವಾಗ ಹೇಗೆ ಸಡಿಲಾಗಿ ಹೊಸ ಕಟ್ಟಳೆಗೂ ಹೊಸ ಅಚ್ಚು ಕಟ್ಟಿಗೂ ಎಡೆಗೊಡಬೇಕಾಗುವದೊ ಹಾಗೆಯೆ ರಾಜಕೀಯ ಕಟ್ಟಳೆಯೂ ಅಚ್ಚುಕಟ್ಟೂ ಕೂಡ ಪ್ರಜೆಗಳ ರಾಜಕೀಯ ಹಿತಕ್ಕೆ ಬಾಧೆ ತಂದರೆ ಅದನ್ನೂ ಮಾರ್ಪಡಿಸಲೇಬೇಕು. ಧಾರ್ಮಿಕ ಹಾಗು ರಾಜಕೀಯ ಕಟ್ಟಳೆಗಳು ಧರ್ಮಗುರುಗಳ ಅಥವಾ ರಾಜರ ಹಿತಕ್ಕಾಗಿಯಲ್ಲ; ಜನರ, ಪ್ರಜೆಗಳ ಹಿತಕ್ಕಾಗಿ. ಯಾವದೊಂದು ಕಟ್ಟಳೆಯಿಂದ ಹಿತವಾಗುವದೊ ಇಲ್ಲವೊ ಇದನ್ನು ಹೇಳುವದು ಜನರ, ಪ್ರಜೆಗಳ ಕರ್ತವ್ಯ ಮತ್ತು ಹಕ್ಕು ಆಗಿದೆ. ಸಮಾಜ ಧರ್ಮದಲ್ಲಿ ಎಲ್ಲಿಯದೋ ಸ್ಮೃತಿವಾಕ್ಯ ತಂದು ಏನಾವರೂ ಅರ್ಥ ಕಲ್ಪಿಸಿ ದುರಾಗ್ರಹದಿಂದ ಸಮಾಜದವರಿಗೆ ತೊಂದರೆ ಕೊಡುವ ಕಾಯಕವು ನಡೆದಂತೆಯೆ ರಾಜಕಾರ್ಯದಲ್ಲಿ ಕೆಲವು ಆಳರಸರ ದುರಾಗ್ರಹದಿಂದ ಪ್ರಜಾಪೀಡನವು ನಡೆದಿದೆ.

ಜನರಲ್ಲಿ ಮೊದಲೇ ಬಡತನ. ಅದರಲ್ಲಿ ಬೇರೆ ನಿಃಶಸ್ತ್ರರಿರುವದರಿಂದ ಸ್ವಸಂರಕ್ಷಣಕ್ಷಮತೆಯಿಲ್ಲ. ಕಟ್ಟಳೆ ಮತ್ತು ಕಟ್ಟಿನ ನೆವದಿಂದ ಜನರಲ್ಲಿ ಹೆದರಿಕೆಯುಂಟಾಗುವಂತೆ ಉಗ್ರಶಾಸನಗಳನ್ನು ಅಮಲಿನಲ್ಲಿ ತಂದರೆ ಮೂಕ ಪ್ರಾಣಿಗಳಂತಿರುವ ಜನರಾದರೂ ಮಾಡಬೇಕೇನು ? ಘಟಂಗರ ಜರದ ರುಮಾಲದಿಂದ ಅವರ ಮನೆಯಲ್ಲಿಯೂ ಸ್ವಾಸ್ಥ್ಯವಿರಬೇಕೆಂದು ತಿಳಿಯುವದು ಹೇಗೆ ತಪ್ಪಾಗುವದೊ ಹಾಗೆಯೆ, ನಾಟಕಗೃಹಗಳಿಂದಾಗಲಿ ತಿಂಡಿ ತೀರ್ಥದ ಅಂಗಡಿಗಳಿಂದಾಗಲಿ ನಮ್ಮಲ್ಲಿಯ ಸುಖಸ್ವಾಸ್ಥ್ಯಗಳನ್ನು ಊಹಿಸುವದು ತೀರ ತಪ್ಪು. ಜನರ ಕಲ್ಯಾಣ ಕಟ್ಟಿಕೊಳ್ಳುತ್ತಿರುವ ಬಗ್ಗೆ ಎಷ್ಟೆ ಡೊಳ್ಳು ಬಾರಿಸಿಕೊಳ್ಳಲಿ ಆದರೆ ಅದೆಲ್ಲ ಪೊಳ್ಳು ಎಂಬದು ತಮ್ಮ ದಿನಂಪ್ರತಿಯ ಜೀವನದಿಂದ ಸಾಮಾನ್ಯರಿಗೂ ತಿಳಿಯತೊಡಗಿದೆ. ಸದ್ಯಕ್ಕಿರುವ ಕಟ್ಟಳೆಗಳಲ್ಲಿಯೂ ಕಟ್ಟಿನಲ್ಲಿಯೂ ಬಹಳೇ ಬದಲಾವಣೆಗಳಾಗಲೇಬೇಕು. ಜನರ ಹಿತವಾಗುವವರೆಗೂ ಅದರಲ್ಲಿ ಬದಲಾವಣೆ ಆಗುತ್ತಲೆ ಹೋಗಬೇಕು. ಹಳೆಯಕಾಲದ ಧಾರ್ಮಿಕ ದುರಾಗ್ರಹಕ್ಕೆ ನಾವು ನಗುತ್ತೇವೆ, ಆದರೆ ಆ ದುರಾಗ್ರಹವೇ ರಾಜಕೀಯ ಕ್ಷೇತ್ರದಲ್ಲಿ ಗೊಂದಲ ಹಾಕತೊಡಗಿದರೆ ನಾವು ಅಳಬೇಕೋ ನಗಬೇಕೋ ? ಯಾವ ಕಟ್ಟಳೆಯೂ ಶಾಶ್ವತವಲ್ಲ. ಮಾನವನ ಹಿತವೇ ಅವರ ಒರೆಗಲ್ಲು. ಆಳುವವರ ವಿಕ್ಷಿಪ್ತ ಬುದ್ಧಿಗೆ ನಿರ್ಣಾಯಕಶಕ್ತಿಯಿಲ್ಲ. ಕಟ್ಟೂ ಕಟ್ಟಳೆಯೂ ನಮಗೂ ಬೇಕು. ಆದರೆ ಅದರಿಂದ ಉಂಟಾಗುವ ಸಮಾಧಾನವೂ ಸುಖವೂ ಶಾಂತಿಯೂ ಅದಕ್ಕೂ ಹೆಚ್ಚಾಗಿ ಬೇಕು. ಇವುಗಳನ್ನು ಕೊಡುವ ಕಟ್ಟೂ ಕಟ್ಟಳೆಯೂ ಬೇಕು ಇಷ್ಟೆ !

---

## ‘ ಮೆಲ್ಪು ಬಲ್ಪನಳಿಗುಂ ’

— ಸಂ

ಮೆಲ್ಪು ಬಲ್ಪನ್ನು ನಾಶಮಾಡುವದೆಂದು ಮಹಾಕವಿ ಪಂಪನು ಹೇಳಿದ್ದಾನೆ. ಅಹಿಂಸಾಸಿದ್ಧಿಯಾದವರೆದುರು ಎಲ್ಲರೂ ವೈರವನ್ನು ಮರೆಯುವರು ಎಂದು ನಮ್ಮ ಶಾಸ್ತ್ರಗಳು ಹೇಳುವವು. ಮಹಾತ್ಮರು ಲೋಕಕಲ್ಯಾಣವನ್ನು ಮಾಡಲೋಸುಗ ಈಗಿನ ತಪ್ಪು ಕಟ್ಟುಕಟ್ಟಳೆಗಳನ್ನು ಮಾರ್ಪಡಿಸಲೆಂದು, ತಮ್ಮ ಕಡೆಗೆ ಏನೂ ತಪ್ಪಿಲ್ಲವೆಂದು ಅಜ್ಞಾನದಲ್ಲಿರುವ—ತಪ್ಪಿದ್ದರೂ ತಮ್ಮ ಹಿತಕ್ಕಾಗಿ ಅದನ್ನು ತಮ್ಮ ಶಕ್ತಿಸರ್ವಸ್ವದಿಂದ ರಕ್ಷಿಸಿಕೊಳ್ಳತಕ್ಕವರೆಂದು ಗರ್ವದಿಂದಲೂ ಸಿಟ್ಟಿನಿಂದಲೂ ಹೇಳುವ ಆಳರಸರೊಡನೆ ಅಹಿಂಸಾಮಾರ್ಗದಿಂದ ಹೋರಾಡಿ ಅವರ ಗರ್ವನಿರಾಸವನ್ನೂ ಅವರ ಅಜ್ಞಾನನಾಶವನ್ನೂ ಮಾಡಲು ಸಿದ್ಧರಾಗಿದ್ದಾರೆ. ಇಂಥ ಪ್ರಯತ್ನಗಳಿಗೆ ಪೌರುಷಕ್ಕಿಂತ ದೈವದ ಬಲವು ಹೆಚ್ಚು. ಬಾರ್ಡೋಲಿಯ ಸತ್ಯಾಗ್ರಹದ ಕಟ್ಟಕೊನೆಯ ಭಾಗದ ಕಾಲಕ್ಕೆ ‘ ನಮ್ಮ ಪ್ರಯತ್ನಕ್ಕೆ ಫಲ ಕೊಡುವದು ದೈವಾಧೀನ. ನಾವಂತೂ ದೇವರನ್ನು ಸ್ಮರಿಸಿ ನ್ಯಾಯಕ್ಕಾಗಿ ಸತ್ಯಕ್ಕಾಗಿ ಪ್ರಯತ್ನಪಟ್ಟಿದ್ದೇವೆ ’ ಎಂದು ಮಹಾತ್ಮರು ಸಾರಿ ಹೇಳಿದ್ದರು. ಅಂಥ ಕಾಲವು—ಬಹಳ ಮಹತ್ತ್ವದ ಕಾಲವು—ಈಗ ಬಂದಿದೆ. ಮಹಾತ್ಮರ ಮೆಲ್ಪು ಅಹಿಂಸೆಯು, ಅಳ್ಳಬಳ್ಳತನವಾಗಲಿ ಹೇಡಿತನವಾಗಲಿ ಅಲ್ಲ; ಅದೊಂದು ಪ್ರಚಂಡ ಶಕ್ತಿ, ವಜ್ರಕ್ಕಿಂತ ಪ್ರಚಂಡವಾದ ಶಕ್ತಿ.

ಯುದ್ಧದ ಚತುರೋಪಾಯಗಳೆಂದರೆ ಸಾಮೋಪಾಯ, ದಾನೋಪಾಯ, ಭೇದೋಪಾಯ, ದಂಡೋಪಾಯ ಎಂದು ಹೇಳುವದುಂಟು. “ಇದ್ದ ಸ್ಥಿತಿಯಲ್ಲಿಯೇ ಸಮಾಧಾನದಿಂದ ಜೀವಿಸಿರಿ ” ಎಂಬುದೇ ಆಳರಸರ ಸಾಮೋಪಾಯ; “ಸ್ವಲ್ಪ ಸ್ವರಾಜ್ಯದಂತಹದೇನಾದರೂ ಕೊಡುವೆವು ” ಎಂಬುದೇ ಅವರ ದಾನೋಪಾಯ; ‘ ಹಿಂದೂಮುಸಲ್ಮಾನರಲ್ಲಿಯೂ, ಬ್ರಾಹ್ಮಣ ಬ್ರಾಹ್ಮಣೇತರರಲ್ಲಿಯೂ, ಸ್ಪೃಶ್ಯಾಸ್ಪೃಶ್ಯರಲ್ಲಿಯೂ ಭಾರತೀಯರು ಭಾರತೀಯೇತರರಲ್ಲಿಯೂ ಬುದ್ಧಿಭೇದಮಾಡುವದೇ ಭೇದೋಪಾಯ; ಅಷ್ಟಕ್ಕಷ್ಟಕ್ಕೆ ಶಿಕ್ಷೆಮಾಡುವದು ದಂಡಿಸುವದು, ಗುಂಡುಹಾಕಿ ಕೊಲ್ಲುವದೇ ಅವರ ದಂಡೋಪಾಯ. ಹೀಗೆಂದರೆ ಭಾರತೀಯರು ನಿಃಶಸ್ತ್ರರಿರುವದರಿಂದ

ವಾಗುವ ಪ್ರಸಂಗವೇ ಇಲ್ಲ. ಮಹಾತ್ಮರ ಚತುರೋಪಾಯಗಳೇ ಬೇರೆ. ಸತ್ಪಕ್ಷದ ವಿಷಯವಾಗಿ ಪ್ರೀತಿಯನ್ನು ಹುಟ್ಟಿಸುವದೇ ಭೇದೋಪಾಯವಾದರೆ ಅಂಥ ಭೇದವನ್ನಷ್ಟೆ ಮಹಾತ್ಮರು ಬಲ್ಲರು. ತಮ್ಮ ಸತ್ಕಾರ್ಯಸಾಧನೆಗಾಗಿ ಅವರು ಪಡುವ ಕಷ್ಟ ಸಹನೆಯು ಹೊರ್ತು ಬೇರೆ ದಾನೋಪಾಯವು ಅವರಿಗೆ ಗೊತ್ತಿಲ್ಲ. ದಂಡೋಪಾಯವು ಅವರ ಶಬ್ದಕೋಶದಲ್ಲಿಯೇ ಇಲ್ಲ. ಸಾಮೋಪಾಯವೇ ಅವರ ದಂಡೋಪಾಯ.

"ಅಲಮೇವ ಶಮಾಯಾಸ್ಮಿ ತಥಾ ಯುದ್ಧಾಯ ಸಂಜಯ॥ ಧರ್ಮಾರ್ಥಯೋರಲಂ ಚಾಹಂ ಮೃದವೇ ದಾರುಣಾಯಚ"॥ ಎಂದು ಉದ್ಯೋಗಪರ್ವದಲ್ಲಿ ಅಜಾತಶತ್ರುವಾದ ಧರ್ಮರಾಜನು ಸಂಜಯನ ಮುಖಾಂತರವಾಗಿ ದುರ್ಯೋಧನನಿಗೆ ಹೇಳಿ ಕಳುಹುವನು. ಮಹಾತ್ಮರಾದರು 'I am not intent on a fight. I am leaving no stone unturned to aviod it. But I am ready for it the moment I find that there is no honourable way out of it.' ಎಂದು ಹೇಳಿದ್ದಾರೆ. (ಬಡಿದಾಡಿಯೆ ತೀರಬೇಕೆಂದು ನಾನೇನು ನಿಂತಿಲ್ಲ. ಅದನ್ನು ತಪ್ಪಿಸಬೇಕು ಎಂದು ವಿಶ್ವಪ್ರಯತ್ನಗಳನ್ನು ಮಾಡುತಲಿದ್ದೇನೆ. ಆದರೆ ಅವು ಒಳ್ಳೇ ರೀತಿಯಲ್ಲಿ ಕೊನೆಗಾಣುವದಾಗಿ ಕಂಡುಬರದಿದ್ದರೆ ತತ್ಕ್ಷಣವೇ ನಾನು ಯುದ್ಧಕ್ಕೂ ಸಿದ್ಧನಿದ್ದೇನೆ.) ಕಾಲಿದಾಸನ ಶಾಕುಂತಲದಲ್ಲಿ ಒಂದೆಡೆಗೆ 'ಶಮಪ್ರಧಾನರಾದ ತಪೋಧನರಲ್ಲಿ ಸುಡುವಂಥ ತೇಜಸ್ಸು ತುಂಬಿಕೊಂಡಿರುವದೆಂದೂ, ಸೂರ್ಯಕಾಂತಕ್ಕೆ ಸೂರ್ಯಕಿರಣ ಮುಟ್ಟಿದ ಕೂಡಲೆ ಹೇಗೋ ಹಾಗೆ ಎರಡನೆಯವರ ತಿರಸ್ಕಾರದಿಂದ ಉರಿಯು ಹೊರಸೂಸುವದು-' ಎಂದು ಹೇಳಿದೆ. ಮಹಾತ್ಮರ ಅಹಿಂಸಾತೇಜವೂ ಅಂತಹದೇ. ಅದಕ್ಕೆ ಲೋಕದ ಬೆಂಬಲವೂ ದೇವರ ಆಶೀರ್ವಾದವೂ ಇದೆ. ಎಂದಮೇಲೆ ಜಯದ ಸಂಶಯವೇಕೆ?

---

## ರಾಷ್ಟ್ರಯಜ್ಞವು

ಪೂರ್ವಕಾಲದಲ್ಲಿ ರಾಜಸೂಯ ಅಶ್ವಮೇಧಯಜ್ಞಗಳಾಗುತ್ತಿದ್ದವಂತೆ. ಈಗಿನ ಕಾಲವೂ ಬೇರೆ, ಈಗಿನ ಯಜ್ಞದ ರೀತಿಯೂ ಬೇರೆ. ಇಂದಿನದು ಅಹಿಂಸಾಮಯ ಯಜ್ಞವು. ಭಾರತರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಏರ್ಪಟ್ಟ ರಾಷ್ಟ್ರಯಜ್ಞವು. ಮಹಾತ್ಮರೇ ಇದರ ಅಧ್ವರ್ಯುಗಳು. ಭಾರತದ ಬಡತನ, ದೌರ್ಬಲ್ಯ ಹೇಡಿತನ ಪಾರತಂತ್ರ್ಯ ಮೊದಲಾದವುಗಳೇ ಯಜ್ಞಪಶುಗಳು. ಪೂರ್ಣ ಸ್ವರಾಜ್ಯವೇ ನಾವು ಬಯಸುವ ಫಲವು. ಹಳೆಯ ಯಜ್ಞಗಳಿಗೆ ರಾಕ್ಷಸರಿಂದ ಬಾಧೆ ತಟ್ಟುತ್ತಿದ್ದಂತೆ ಈ ಯಜ್ಞಕ್ಕೂ ಅಧಿಕಾರಪ್ರತಿಸ್ಪರ್ಧಿಯಿಂದ ಬಾಧೆ ತಟ್ಟುವ ಸಂಭವವಿದೆ. ಆದರೆ ಅವರನ್ನು ಸತ್ಯಾಗ್ರಹಿಗಳು ತಮ್ಮ ಅಹಿಂಸಾಬಲದಿಂದಲೂ ಸತ್ಯನಿಷ್ಠೆಯಿಂದಲೂ ಸಹನಶೀಲದಿಂದಲೂ ಗೆಲ್ಲಬೇಕಾಗಿದೆ. ಯಾರೋ ಒಬ್ಬ ಗುಪ್ತ ದಾನಿಗಳು ಈಗಾಗಲೆ ಈ ಯಜ್ಞಕ್ಕಾಗಿ ೫೦೦೦೦ ರೂಪಾಯಿಗಳನ್ನು ಕೊಟ್ಟಿದ್ದಾರೆ. ಮಹಾತ್ಮರ ಸಾಬರಮತಿ ಆಶ್ರಮದವರೆ ಇದಕ್ಕಾಗಿ ದುಡಿಯಲು ಟೊಂಕಕಟ್ಟಿದ್ದಾರೆ. ಶ್ರೀಮಾನ ಬಾಬೂ ಭಗವಾನದಾಸ, ಅಬ್ಬಾಸ ತೈಯ್ಯಬಜೀ ಮೊದಲಾದ ವಯೋವೃದ್ಧ ಜ್ಞಾನವೃದ್ಧರು ಈ ಯಜ್ಞಕ್ಕೆ ನೆರವಾಗಲು ಸಿದ್ಧರಾಗಿದ್ದಾರೆ. ಪ್ರತಿ ಕ್ರೈಸ್ತನೇ ದೀನರ ಉದ್ಧಾರಕ್ಕಾಗಿ ದಯಾಪ್ರೇರಿತನಾಗಿ ಬಾಳನೆಂಬಂತೆ ಆಚರಿಸುತ್ತಿರುವ ಮಹಾತ್ಮರ ಮಹಾತ್ಮ್ಯಕ್ಕೆ ಬೆರಗಾಗಿ ಕೆಲವು ಯುರೋಪಿಯನರೂ ಈ ಯಜ್ಞದಲ್ಲಿ ನೆರವಾಗಲಿದ್ದಾರೆ. ತಮಗೆ ಮತ್ತೇನೂ ಮಾಡಲಿಕ್ಕೆ ಬರದಿದ್ದರೂ ಮಹಾತ್ಮರ ಯಜ್ಞಕ್ಕೆ ಜಯವಾಗಲಿ ಎಂದು ಅಂತಃಕರಣಪೂರ್ವಕವಾಗಿ ಹರಸಲಾರದ ದುರಾತ್ಮರಾರೂ ಇರಲಾರರೆಂದು ನಮಗೆ ಭರವಸೆಯಿದೆ. ಪ್ರತ್ಯಕ್ಷ ಸಹಾಯ ಮಾಡುವವರು ಹಾಗೆ ಮಾಡಲಿ. ದುಡ್ಡುಳ್ಳವರು ದುಡ್ಡು ಕಳಿಸಲಿ ಏನೂ ಇಲ್ಲದವರು 'ಒಳ್ಳೆದಾಗಲಿ' ಎನ್ನ ದಷ್ಟು ಬಡವರೇ? ಆಗುವ ಯಜ್ಞವು ಆಗಲಿ. ಮಾಡುವ ಮಹಾತ್ಮನು ಮಾಡಲು ಸಮರ್ಥನಿದ್ದಾನೆ. ನೋಡುವವರ ಸಹಾನುಭೂತಿ ಹಿತಚಿಂತನಗಳ ಬೆಂಬಲವೂ ಬೇಕಾಗಿಯೆ ಇದೆ. ತಮ್ಮ ತಮ್ಮ ಯೋಗ್ಯತೆಯಂತೆ ಈ ರಾಷ್ಟ್ರಯಜ್ಞಕ್ಕೆ ನೆರವಾಗುವದು ಎಲ್ಲರ ಕರ್ತವ್ಯವು ಇಂಥ ಪವಿತ್ರ ಸಂಧಿಯು ನೂರು ವರ್ಷಕ್ಕೊಮ್ಮೆ ಬರುವ ಅಪೂರ್ವ ಪರ್ವಕಾಲವು. ಇಂಥ ಕಾಲಕ್ಕೆ ನೆರವಾಗದವನ ಜನ್ಮವು ನಿರರ್ಥಕವೆನ್ನಬಹುದು.

## ಬಡವರ ಉಪ್ಪು

ನಾವು ತಿನ್ನುವ ಉಪ್ಪು ನಮ್ಮದೇ, ಮುಂದಿಯದಲ್ಲ. ಹಿಂದಿನ ಕಾಲಕ್ಕೆ ಉಪ್ಪಿಗೆ ಸುಂಕವಿದ್ದರೂ ಕರವಿರಲಿಲ್ಲ. ಆದಕಾರಣ ಉಪ್ಪಿನ ರಿಣವನ್ನು ಜನರು ನೆನೆಸುತ್ತಿದ್ದರು. ಈಗ ಉಪ್ಪಿನ ರಿಣದಲ್ಲಿ ಯಾರಾದರೂ ಇದ್ದರೆ ಅವರು ಆಳರಸರೇ ಸರಿ.

ಯಾಕಂದರೆ ನಮ್ಮ ಉಪ್ಪಿನ ಕರವು ಅವರ ಪ್ರಚಂಡ ಸಂಬಳದ ತುತ್ತಾಗುವದು. ಅವರೇ ನಮ್ಮ ಉಪ್ಪನ್ನು ತಿನ್ನುತ್ತಿರುವರು. ಮಹಾತ್ಮಾಗಾಂಧಿಯವರು ಈ ಉಪ್ಪಿನ ಕರದ ಕೂಡ ನಮಗಾಗಿ ಪೂರ್ಣ ಸ್ವರಾಜ್ಯವನ್ನೆ ಗಳಿಸುವದಾಗಿ ಪ್ರತಿಜ್ಞೆ ಮಾಡಿರುವದು. ಇದು ನಮ್ಮ ನಾಡಿನ ಆಟದೊಳಗಿನ ತಿರುಗುಪ್ಪು ಎಂದು ಹೇಳಬಹುದು. ಇದುವರೆಗೆ ಪಾರತಂತ್ರ್ಯವಿತ್ತು; ಇಂದು ಸ್ವಾತಂತ್ರ್ಯಕ್ಕೆ ಪ್ರಾರಂಭವಾಯಿತು. ಬಡವರು ಒಳ್ಳೆಯ ದಿನಗಳನ್ನು ಕಾಣಬೇಕಾದರೆ, ಉಪ್ಪಿನಕರ, ಮದ್ಯದ ಅನಿರ್ಬಂಧ ವ್ಯಾಪಾರ, ಸೈನ್ಯದ ಮಿತಿಯಿಲ್ಲದ ವೆಚ್ಚ, ಮೇಲಧಿಕಾರಿಗಳಿಗೆ ದುಂದು ಸಂಬಳ— ಇವೆಲ್ಲ ಹೋಗಲಿಕ್ಕೆ ಬೇಕು. ಒಂದೇಸಂದಾಗಿ ಇವನ್ನೆಲ್ಲ ಹೊಡೆದು ಹಾಕಲು ಮಹಾತ್ಮರು ಉಪ್ಪಿನ ಕರದ ಕಾಯಿದೆಭಂಗದಿಂದ ಪ್ರಾರಂಭ ಮಾಡಿದ್ದಾರೆ.

ನಮ್ಮ ಜನರ ಸರಾಸರಿ ದಿನದ ಗಳಿಕೆಯು ಏಳು ದುಡ್ಡು ! ವೈಸರಾಯರ ದಿನದ ಪಗಾರವು ಏಳು ನೂರು ರೂಪಾಯಿ ! ಎಲ್ಲಿಂದೆಲ್ಲಿ ! ನಮ್ಮ ಹೆಸರಿನಲ್ಲಿ ಈಗಳೇ ೧೬೦೦ ಕೋಟಿ ರೂಪಾಯಿ ಸಾಲ ಮಾಡಿಟ್ಟಿರುವರು ಸರಕಾರದವರು. ಇದನ್ನು ತೀರಿಸುವ ಬಗೆ ಹೇಗೆ? ಬಕಾಸುರನ ಹೊಟ್ಟೆಗೆ ಮನೆಗೊಂದು ಆಳು ಎಂಬಂತೆ—ಈ ರೀತಿಯ ದುಂದು ಕಾರಭಾರವು ಸಾಗಿದರೆ ಹಿಂದುಸ್ಥಾನವು ಬೇಗನೇ ಹಾಳಾಗುವದರಲ್ಲಿ ಸಂಶಯವೇನು? ಇಂಥ ಬಡತನಕ್ಕೆ ನಮ್ಮಲ್ಲಿಯ ಕೋಟಿಗಟ್ಟಲೆ ಜನರನ್ನು ಈಡು ಮಾಡಿ ಅವರ ಊಟಕ್ಕೆ ಸಾಕಷ್ಟು ಉಪ್ಪೂ ದೊರೆಯದಂತೆ ರಾಜ್ಯರಚನೆ ಮಾಡುವ ಕಾರಭಾರದವರ ಅಯೋಗ್ಯತೆಯು ಮೇಲೆಯೆ ಕಾಣುವಂತಿದೆ. ಬಡವರ ಉಪ್ಪು ತಿಂದು ಬಡವರ ಹೊಟ್ಟೆನೆತ್ತಿಯನ್ನು ನೋಡದ ಆಳ್ವಿಕೆಯು ಎಲ್ಲಾದರೂ ಇರುವದೇ ?

---

## ಈ ತಿಂಗಳ ಕರ್ನಾಟಕ

ಮುಂಬಯಿಯ ದಿ|| ಜಾ|| ವಿ. ಕೇ. ಪೈಯವರ ನಿಧನದಿಂದ ಜಸ್ಟಿಸ್ ಚಂದಾವರಕರರ ಗುಂಪಿಗೆ ಸೇರಿದ್ದ ಕನ್ನಡಿಗರೊಬ್ಬರು ಕಡಮೆಯಾದಂತಾಯಿತು. ಇವರ ಯೋಗ್ಯತೆಯ ಮಾನದಿಂದ ಕರ್ನಾಟಕಕ್ಕೆ ಸ್ವತಃ ಏನ ಅಷ್ಟೇನೂ ಸಹಾಯವಾಗಲಿಲ್ಲ. ಅವರು ಬೆಳೆದು ಬಾಳಿದ ಕಾಲವೇ ಹಾಗಿತ್ತು. ಈಗ ಬೇರೆ ಕಾಲವು ಮೂಡತೊಡಗಿದೆ. ಮುಂಬಯಿಯಲ್ಲಿ ಕನ್ನಡ ಪುಸ್ತಕಾಲಯವೂ ಕನ್ನಡಿಗರ ಸಂಘಗಳೂ ತಲೆಯೆತ್ತುತ್ತಿವೆ.

ಕರ್ನಾಟಕದ ಅವಿಶ್ರಾಂತ ಕಾರ್ಯಕರ್ತರಲ್ಲಿ ಒಬ್ಬರಾದ ಹಾನಗಲ್ಲ ಕುಮಾರಸ್ವಾಮಿಗಳು ಲಿಂಗೈಕ್ಯರಾದರು. ಸಣ್ಣ ಸುಳಿವಿಲ್ಲದೆ, ಹೆಸರಿಗೆ ಹಾತೊರೆಯದೆ ದುಡಿದ ಕರ್ಮವೀರರವರೊಬ್ಬರು. ಬಾದಾಮಿಯ ಶಿವಯೋಗಮಂದಿರದ ಶ್ರೇಯಸ್ಸು ಬಲುಮಟ್ಟಿಗೆ ಅವರದು. ವೀರಶೈವ ಗುರುವರ್ಗದವನ್ನು ಸಂಸ್ಕಾರಸಂಪನ್ನರಾಗಿ ಮಾಡುವ ಸತ್ಕಾರ್ಯದಲ್ಲಿ ತಮ್ಮ ಜೀವನವನ್ನೆ ಅವರು ಸವೆಸಿದರು. ಇಂಥ ಅಸಾಧಾರಣ ಕಾರ್ಯಕರ್ತರನ್ನು ಕಳೆದುಕೊಂಡದ್ದಕ್ಕಾಗಿ ಇಡೀ ಕರ್ನಾಟಕಕ್ಕೆ ದುಃಖವಾಗುತ್ತಿದೆ.

ಕರ್ನಾಟಕರು ಪರಪ್ರಾಂತಗಳಲ್ಲಿಯೂ ತಮ್ಮ ಶಕ್ತಿಶಾಲಿತೆಗಳನ್ನು ತೋರ್ಪಡಿಸಿ ಬರುತ್ತಿರುವದಕ್ಕೆ ಉದಾಹರಣೆಗಳು: ಬನಹಟ್ಟಿಯ ತರುಣರು ಬಡೋದೆಯ ಪಂದ್ಯಾಟಗಳದಲ್ಲಿ ಮೊದಲನೆಯ ಬಹುಮಾನವನ್ನು ಪಡೆದದ್ದೂ, ದಕ್ಷಿಣ ಕನ್ನಡದವರು ಹೋದತಿಂಗಳು ರಂಗೂನಿನಲ್ಲಿ ಕ್ರಿಕೆಟ ಆಟದ ಯಶಸ್ಸು ಪಡೆದುಬಂದದ್ದೂ ಅಭಿಮಾನಕರವೆಂದು ಹೇಳಬಹುದು.

ಮಹಾತ್ಮರ ಶಾಂತಿಸಂಗ್ರಾಮದ ಬಗ್ಗೆ ಸಾಕಷ್ಟು ಸಹಾನುಭೂತಿಯು ಕರ್ನಾಟಕದಲ್ಲಿ ಕಂಡುಬರುತ್ತಿರುವದು. ದೇ. ಭ. ಗಂಗಾಧರರಾವ, ಕೌಜಲಗಿ ಹಣಮಂತರಾವ, ಹರ್ಡೀಕರ, ಮಂಗಳವೇಢೆ, ಬುರ್ಲಿ ಮೊದಲಾದವರು ರಾಷ್ಟ್ರೀಯ ಪ್ರಸಾರಕಾರ್ಯವನ್ನು ಎಡೆಬಿಡದೆ ನಡೆಸಿರುವರು. ಸುಮಾರು ೨೦೦ ರಷ್ಟು ಸ್ವಯಂಸೇವಕರು ಕಾಯಿದೆ ಭಂಗಕ್ಕೆ ಸಿದ್ಧರಾಗಿದ್ದಾರೆ.

ಮದ್ರಾಸಬ್ರಾಹ್ಮಣೇತರ ಪಕ್ಷದ ಮುಖಂಡರಾದ ಮುನಿಸ್ವಾಮಿ ನಾಯಡು ಅವರು ತಪ್ಪುಹಾದಿಹಿಡಿದ ಕೊಡವರು ತಮ್ಮ ಸದ್ಯದ ಪ್ರತ್ಯೇಕತೆಯನ್ನು ಬಿಟ್ಟು ಯಾವುದಾದರು ದೊಡ್ಡ ಪ್ರಾಂತದವರೊಡನೆ ಕೂಡಿರುವದೊಳ್ಳೆಯದೆಂದು ಬುದ್ಧಿ ಹೇಳಿದರು. ಪೂರ್ವೇತಿಹಾಸದಿಂದಲೂ, ಭಾಷಾಬಾಂಧವ್ಯದಿಂದಲೂ ಪ್ರಾಕೃತಿಕಸ್ಥಿತಿಯಿಂದಲೂ ಹಿತದ ದೃಷ್ಟಿಯಿಂದಲೂ ಕರ್ನಾಟಕದಲ್ಲಿ ಕೊಡಗು ಸೇರಿಕೊಳ್ಳುವದು ಉಚಿತವೂ ಶಕ್ಯವೂ ಆಗಿದೆಯೆಂದು ಬೇರೆ ಹೇಳುವ ಕಾರಣವಿಲ್ಲ.

ಪೂರ್ವಆಫ್ರಿಕದಲ್ಲಿ ಕೊಡಗಿನ ಕನ್ನಡಿಗರದೊಂದು ಸಂಘ ಏರ್ಪಟ್ಟಿದ್ದು ಸಂತೋಷದ ಸುದ್ದಿಯು.

ಹೋದವರ್ಷದಷ್ಟು ತೇಜವು ಈಸಲದ ಕರ್ನಾಟಕ ಏಕೀಕರಣದಿನಕ್ಕೆ ಬರಲಿಲ್ಲ. ಸ್ವಾತಂತ್ರ್ಯರವಿಯು ಬೆಳಗುತ್ತಿರೆ ಚಂದ್ರನ ಪ್ರಕಾಶವು ಬೀಳದಿರುವದು ಸಹಜವೇ! ಅಂತೂ ಕನ್ನಡಿಗರ ತೇಜವಲ್ಲಿಯೇ ಕುಂದಿಲ್ಲವಷ್ಟೇ ?

ವಿಕ್ರಮಪಟ್ಟಬಂಧೋತ್ಸವವು ಯಥಾಸಾಂಗವಾಯಿತು. ನಮ್ಮ ಸೆಕೆಯು ಮಂದಿಗೆ ತಾಕದ ಹೊರ್ತು ನಮ್ಮ ಶಕವು ನಡೆಯುವ ಬಗೆಯಾದರೂ ಏನು? ನಳಸಂನತ್ಸರದ ಚೈತ್ರಶುದ್ಧ ಪ್ರತಿಪದೆಯಿಂದ ವಿಕ್ರಮವರುಷವು ಪ್ರಾರಂಭವಾಯಿತೆಂಬು ಶ್ರೀ ರಾಜಪುರೋಹಿತರು ವಿಶದಗೊಳಿಸಿದರು,



ಸದ್ಯದ ಸೊಂಡೂರ ಸಂಸ್ಥಾನಾಧಿಪತಿಗಳು

ವಿಜಯನಗರದ ಕೃಷ್ಣದೇವರಾಯನ ಪಟ್ಟಬಂಧೋತ್ಸವವು ಅನಂತಪುರದಲ್ಲಿ ಒಳ್ಳೇ ಸಡಗರದಿಂದ ಜರುಗಿತು. ಆಂಧ್ರದೇಶದಲ್ಲೆಲ್ಲ ಈ ಉತ್ಸವವು ವಿಶೇಷವಿಜೃಂಭಣೆಯಿಂದ ಸಾಂಗವಾಗುತ್ತಿದೆ. ಕರ್ನಾಟಕರೂ ತಮ್ಮವನೇ ಆದ ಈ 'ಕನ್ನಡ ರಾಜ್ಯರಮಾರಮಣ'ನ ಪುಣ್ಯಸ್ಮರಣವನ್ನು ಕೃತಜ್ಞತಾಪೂರ್ವಕವಾಗಿ ಪ್ರತಿವರ್ಷವೂ ಮಾಡಿಯಾರೆಂದು ನಂಬಿದ್ದೇವೆ.

ಸೊಂಡೂರು ಸಂಸ್ಥಾನದ ನೂತನ ಅಧಿಪತಿಗಳಾದ ಶ್ರೀಮಂತ **ಯಶವಂತರಾವ ಅಣ್ಣಾಸಾಹೇಬ ಹಿಂದೂರಾವ ಘೋರಪಡೆ** ಮಮಲಕತಮದಾರ ಸೇನಾಪತಿ ರಾಜಾಸಾಹೇಬ ಇವರಿಗೆ ೫-೨-೧೯೩೧ನೇ ದಿನ ರಾಜ್ಯಾಧಿಕಾರವು ದೊರೆಯಿತು. ಆ ಕಾಲಕ್ಕೆ ತಮ್ಮ ಸಾಸ್ಥಾನದಲ್ಲಿ ಪ್ರಾಥಮಿಕ ಶಿಕ್ಷಣದೊಡನೆ ಹಾಯಸ್ಕೂಲಶಿಕ್ಷಣವನ್ನು ಕೂಡ ಧರ್ಮಾರ್ಥ ಕೊಡುವದಾಗಿ ಸಾರಿದರು. ಸುಶಿಕ್ಷಿತರಾದ ಈ ಅಧಿಪತಿಗಳ ಆಳಿಕೆಯಲ್ಲಿ ಜನರ ಹಿತವೂ ಸಂಸ್ಥಾನದ ಅಭಿವೃದ್ಧಿಯೂ ಆಗಲೆಂದು ನಾವು ಬಯಸುತ್ತೇವೆ.

ಸಾಹಿತ್ಯೋದ್ಯಮಕ್ಕಾಗಿ ಈ ತಿಂಗಳು ವಿಶೇಷವಾಗಿ ಸ್ಮರಣೀಯವಾಗಿದೆ. ಕಲೆಗಳಿಗಾಗಿ ಬೆಂಗಳೂರು ಕಲಾಮಂದಿರದ ಶ್ರೀ ಎ. ಎನ್. ಸುಬ್ಬರಾಯರಿಂದ 'ಕಲಾ' ಮಾಸಪತ್ರಿಕೆಯೂ, ಆಲಮಟ್ಟಿಯ ವೀರಶೈವ ವಿದ್ಯಾಲಯದ ಶ್ರೀ ಮಂಜಪ್ಪ ಹರ್ಡೇಕರವರ 'ಉದ್ಯೋಗ' ಮಾಸಪತ್ರಿಕೆಯೂ ಪ್ರಾರಂಭವಾಗಿವೆ. ಆದರೆ ಮಂಗಳೂರಿನ 'ವಸಂತ'ವು ಮೆಲ್ಲನಿಯಲ್ಲಿಯೂ ಕೊಡಗಿನ ಲೋಕರಹಸ್ಯವು ಉತ್ತೇಜಿತ ಸ್ವರದಲ್ಲಿಯೂ ಮಾತನಾಡತೊಡಗಿವೆ. ಏನೋ ಚಕ್ರನೇಮಿಕ್ರಮವು. 'ವಸಂತ'ದ ಅಚ್ಚೂ, ಅಚ್ಚುಕಟ್ಟೂ, ಅಂತರಂಗ ಬಹಿರಂಗಗಳ ಸವಿಕಟ್ಟೂ ನೋಡಿದರೆ ನಮ್ಮ ಜನರಲ್ಲಿನ್ನೂ ಗುಣಗ್ರಾಹಕತೆಯು ಸಾಕಷ್ಟಿಲ್ಲೆಂದು ವಿಷಾದಿಸಬೇಕಾಗುತ್ತದೆ. ಕರ್ನಾಟಕಕ್ಕೆ ಅವರಲ್ಲಿಯೂ ಮಂಗಳೂರ ಪ್ರಾಂತಕ್ಕೆ ಇಂಥ ಪತ್ರಿಕೆಗಳೂ ಭಾರವಾದವೇ? ಆದರೂ ಜನರಲ್ಲಿ ಸಾಹಿತ್ಯಪ್ರೇಮವು ಹೆಚ್ಚಾಗುತ್ತಿದೆ ಎಂಬುದರಲ್ಲಿ ಸಂದೇಹವಿಲ್ಲ. ಗ್ರಂಥವಿಮರ್ಶೆಗಳ ರೀತಿಯಲ್ಲಿ ಸಂಸ್ಕಾರವೂ ವಿವೇಕವೂ ಹೆಚ್ಚುತ್ತಲಿದೆ. ಶ್ರೀಯುತರುಗಳಾದ ಶ್ರೀಯವರು, ಶ್ರೀನಿವಾಸರು, ಕೈಲಾಸಂ, ವೀ. ಸೀ, ಕೆ. ವ್ಹಿ. ಪುಟ್ಟಪ್ಪ, ಶ್ರೀನಿವಾಸಮೂರ್ತಿ, ವೈ. ಕಾವ್ಯಾನಂದ, ಸೀ. ಕೆ. ವೆಂಕಟರಾಮಯ್ಯ, ಎಸ. ಜೀ. ಶಾಸ್ತ್ರಿ ಮೊದಲಾದವರಲ್ಲಿ ಕೆಲವರ ಮಹತ್ತ್ವದ ಗ್ರಂಥಗಳು ಪ್ರಸಿದ್ಧವಾಗಿದ್ದು ಉಳಿದವರ ಒಳ್ಳೊಳ್ಳೆ ಗ್ರಂಥಗಳು ಪ್ರಕಟವಾಗಲಿವೆ. ಮಂಗಳೂರಿನ ಕರ್ನಾಟಕಸಂಘದ ಪರವಾಗಿ ಶ್ರೀಕೈಲಾಸಂ ಇವರಿಗೂ ಮೈಸೂರಿನ ಕರ್ನಾಟಕ ಸಂಘದ ಪರವಾಗಿ ಶ್ರೀ ವೇ. ತೀ. ಗಳಗನಾಥರಿಗೂ ಶ್ರೀ ಕರಿಬಸವಶಾಸ್ತ್ರಿಗಳಿಗೂ ಆದ ಮನ್ನಣೆಯು ಸಾಹಿತ್ಯ ವಿಷಯದಲ್ಲಿ ಜನರಿಗೆ ಉಂಟಾಗುತ್ತಿರುವ ಆದರವನ್ನು ವ್ಯಕ್ತಪಡಿಸುವದು. ಮಂಗಳೂರು ಮೈಸೂರು ಪ್ರಾಂತಗಳ ರಂಗಭೂಮಿಯಲ್ಲಿ ಹೊಸ ಹೊಸ ನಾಟಕಗಳು ಅಭಿನಯಿಸಲ್ಪಡುತ್ತಿವೆ. ಮದ್ರಾಸಿನ ಕರ್ನಾಟಕ ಭ್ರಾತೃಸಂಘ, ಧಾರವಾಡದ ಮಂಗಮುಟ, ಮೈಸೂರು ಕರ್ನಾಟಕ ಸಂಘ, ದಕ್ಷಿಣಕನ್ನಡದ ಯಕ್ಷಗಾನಸಭೆ, ಕೊಯಿಮುತ್ತೂರಿನ ಹಾಗು ತ್ರಿವೇಂದ್ರಂದ ಕನ್ನಡಿಗರ ಸಂತೋಷಕೂಟ ಮೊದಲಾದವುಗಳ ಕಾರ್ಯಕ್ರಮಗಳು ಉತ್ಸಾಹಪ್ರದಗಳಾಗಿವೆ. ಮಹಾಕವಿ ಷಡಕ್ಷರಿಯ ಜಯಂತ್ಯುತ್ಸವವೂ ಅವನ ಬಗ್ಗೆ ಪ್ರಕಟವಾಗಲಿರುವ ಸಾಹಿತ್ಯ ಸಂಪುಟವೂ, ಕಲ್ಬುರ್ಗಿಯ 'ನಿಜಾಮಕರ್ನಾಟಕಸಂಘ'ದವರು ಪ್ರಕಟಿಸಿರುವ ನಾಟಕಸ್ಪರ್ಧೆಯೂ, ಬೇಗನೆ ಆಗಲಿರುವ ಬಸವಪುರಾಣದ ಭೀಮಕವಿಯ ಜಯಂತ್ಯುತ್ಸವದ ಸೂಚನೆಯೂ ವಿವಿಧಪ್ರಕಾರದ ಜಾಗ್ರತಿಯ ಚಿನ್ಹಗಳಾಗಿವೆ. ಧಾರವಾಡದ ಕರ್ನಾಟಕಶಿಕ್ಷಣಮಂಡಲ ಕನ್ನಡಸಾಹಿತ್ಯಸಮಿತಿಯವರು ಶಬ್ದಕೋಶ, ವಿಶ್ವಕೋಶ, ಬಾಲಸಾಹಿತ್ಯ, ಪ್ರೌಢಸಾಹಿತ್ಯ, ವಿಜ್ಞಾನಗ್ರಂಥ, ಪ್ರಾಚೀನಗ್ರಂಥ ಮೊದಲಾದವುಗಳನ್ನು ರಚಿಸುವ ಮತ್ತು ಪ್ರಕಾಶಿಸುವ ಕಾರ್ಯವನ್ನು ಕೈಕೊಳ್ಳುವದಾಗಿ ಪ್ರಕಟಿಸಿರುವರು. ಸಮಿತಿಯವರ ಉತ್ಸಾಹವೂ ಆಕಾಂಕ್ಷೆಯೂ ಅನುಪಮವಾಗಿವೆ. ಇದಕ್ಕೆ ಸರಿಯಾಗಿ ಕಾರ್ಯವಾದರೆ ಉತ್ತರ ಕರ್ನಾಟಕಕ್ಕೆ ಭೂಷಣವುಂಟಾಗುವದರಲ್ಲಿ ಸಂದೇಹವಿಲ್ಲ. ಧಾರವಾಡದ ಮಂಗಮುಟದವರು ಒಂದು ವಿಮರ್ಶಾಗ್ರಂಥವನ್ನು ರಚಿಸಲು ಅಣಿಮಾಡುತ್ತಿದ್ದಾರೆ. ಬರುವ ಮೇ ತಿಂಗಳಲ್ಲಿ ಸಾಹಿತ್ಯಪರಿಷತ್ತನ್ನು ಕೂಡಿಸುವ ನಿಶ್ಚಯವಾಗಿ ಶ್ರೀ ಪಾವಟೆಯವರ ಸ್ವಾಗತಾಧ್ಯಕ್ಷತೆಯು ಕೆಳಗೆ ಭರದಿಂದ ಸಾಗಿದೆಯೆಂಬುದೂ ಸಂತೋಷಕರವೇ. ಹೀಗೆ ಈ ತಿಂಗಳು ಸಾಹಿತ್ಯ ವಿಷಯದಲ್ಲಿ ಸಂಸ್ಮರಣೀಯವಾಗಿ ಉಳಿಯುವಂತಿದೆ.

---

## ಮುಖಚಿತ್ರಪರಿಚಯ

ಈಸಲದ ಮುಖಚಿತ್ರವನ್ನು ಬರೆದ ಶ್ರೀ ಕುಂಬಾರ ಭರಮಪ್ಪನವರ ವಿಷಯವಾಗಿ ಒಂದು ಸ್ವತಂತ್ರ ಲೇಖನವನ್ನೆ ಪ್ರಕಟಿಸಲಿರುವೆವು. ಈ ಚಿತ್ರದಲ್ಲಿ ವಿಶೇಷವಾಗಿ ಚೆನ್ನಮ್ಮನಲ್ಲಿ ಕನ್ನಡ ಕಳೆಯು ಕಂಡುಬರುವದು. ಮುಂಬಯಿ ಕಲಾಶಾಲೆಗಳಲ್ಲಿ ಕಲಿತವರ ಹಾಗು ರವಿವರ್ಮಧುರಂಧರರ ಚಿತ್ರಗಳನ್ನು ಆದರ್ಶಗಳೆಂದು ತಿಳಿದವರ ಚಿತ್ರಗಳಲ್ಲಿ ಕನ್ನಡ ಕಳೆಯು ಕಾಣುಬರುವದಪರೂಪ. ಶ್ರೀಭರಮಪ್ಪಣ್ಣನವರಲ್ಲಿ ಸ್ವಯಂಭೂಶಕ್ತಿಯಿದೆ. ಸುತ್ತಲಿನ ಪಾತ್ರಗಳಲ್ಲಿ ಒಂದಿಷ್ಟು ಮಹಾರಾಷ್ಟ್ರಛಾಯೆ ಕಂಡುಬರುವದು. ಶ್ರೀ ಕುಂಬಾರರವರಿಗಾದ ಮಿಶ್ರಸಂಸ್ಕಾರದ ಫಲವಿದು. ಆವರೂ ಅವರ ತ್ರಿಪುರದಹನ, ಅಲ್ಲಮನಾಯಕ ಮೊದಲಾದ ಚಿತ್ರಗಳಲ್ಲಿ ವಿಲಕ್ಷಣಸ್ಫೂರ್ತಿಯು ಕಾಣಬರುವದು.

# ಪ್ರಪಂಚ ಪರಿಚಯ

## ಕರ್ನಾಟಕ ಮಹಾ ಸಾಮ್ರಾಟ ರಾಷ್ಟ್ರಕೂಟ ೩ನೆಯ ಕೃಷ್ಣನು (೯೩೭-೯೬೭)

ಶ್ರೀ ತಿ. ತಾತಾಚಾರ್ಯರು ಸವ್ಯಸಾಚಿಗಳಾಗಿ ಇಂದಿನ ರಾಜಕೀಯ ಯುದ್ಧದಲ್ಲಿ ಮುಂದೆ ನಿಂತು ಕಾದುತ್ತಿರುವವರಲ್ಲದೆ ತಮ್ಮ ಅತಿ ಪ್ರೀತಿಯ ವಿಷಯವೂ ಕನ್ನಡ ನಾಡಿನ ಜೀವಾಳಕ್ಕೆ ಸಂಬಂಧಿಸಿದುದೂ ಆದ ಐತಿಹಾಸಿಕ ಸಂಶೋಧನ ಕಾರ್ಯವನ್ನೂ ಮೇಲಿಂದಮೇಲೆ ನಡಿಸಿಯೆ ಇದ್ದಾರೆ. ಇವರು ಈಗ ಪ್ರಕಟಿಸಿದ ಈ ಲೇಖನವು ಕರ್ನಾಟಕದ ಉಜ್ಜ್ವಲ ಶೌರ್ಯ ಪರಾಕ್ರಮ ಕರ್ತೃತ್ವ ಶಕ್ತಿಗಳ ಸಾಕ್ಷಿಯಾಗಿವೆ. ಅದರ ಮುಖ್ಯಾಂಶಗಳೇನೆಂದರೆ—

೧೯೨೨ ರಲ್ಲಿ ಮಧ್ಯ ಹಿಂದುಸ್ಥಾನದ ಜುರಾ (ಜಬಲಪುರದ ಹತ್ತಿರ) ಎಂಬಲ್ಲಿ ಈ ಶಾಸನವು ದೊರೆತಿತು. ಈ ಶಾಸನದಲ್ಲಿ ಕೃಷ್ಣ ರಾಜನಿಗೆ ನೃಪತುಂಗ, ಆನೆವೆಡಂಗ, ಪರಾಂಗನಾಪುತ್ರ, ಕಬ್ಬಿಗ ಎಂಬ ಹೆಚ್ಚಿನ ಹೊಸ ಬಿರುದುಗಳಿವೆ.

ಪಾಂಡ್ಯರನ್ನು ಸೋಲಿಸಿದ ಪರಾಂತಕ ಚೋಳನನ್ನು ಕೃಷ್ಣನು ಗೆದ್ದನು. ಪರಾಂತಕನು ಕ್ರಿ. ೯೪೩ರಲ್ಲಿ ಪಾಂಡ್ಯರನ್ನೂ ಸಿಂಹಾಲಿಗಳನ್ನೂ ಗೆದ್ದು ಲಂಕೆಯನ್ನೂ ಹೊಕ್ಕಿದ್ದನು.

ಕೃಷ್ಣನು ಕಾಂಚಿಯ ಪಲ್ಲವರಿಂದಲೂ ಕಪ್ಪವನ್ನು ಕೇಳಿದನು' ಚೋಳರ ರಾಜ್ಯವನ್ನು ಸಂಪೂರ್ಣವಾಗಿ ಗೆದ್ದು ಅದನ್ನು ತನ್ನ ಅನುಯಾಯಿಗಳಿಗೆ ಹಂಚಿಕೊಟ್ಟನು. ಪಾಂಡ್ಯ, ಚೋಳರನ್ನು ಕೈವಶಮಾಡಿಕೊಂಡು ರಾಮೇಶ್ವರದಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು. ಲಂಕೆಯ ಮೇಲೆ ದಾಳಿಯಿಟ್ಟನು. ಕ್ರಿ ಶ. ೯೪೯-೫೦ರಲ್ಲಿ ಆದ ಥಕ್ಕೊಳಂ ಮಹಾಯುದ್ಧದಲ್ಲಿ ಪರಾಂತಕನ ಮಗನಾದ ರಾಜಾದಿತ್ಯ ಚೋಳನನ್ನು ಸೋಲಿಸಿ ಅವನಿಗೆ ವೀರಸ್ವರ್ಗವನ್ನಿತ್ತನು. ಕೃಷ್ಣನಿಗೆ 'ಕಾಂಚಿಯುಂ ತಂಜೆಯುಂ ಕೊಂಡ"ನೆಂಬ ಬಿರುದು ತಮಿಳಿನಲ್ಲಿದೆ. ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಚೋಳಕುಲಾಂತಕನೆಂಬ ಬಿರುದುಂಟು.

ಈ ಕೃಷ್ಣ ಮಹಾರಾಜನ ರಾಜ್ಯವು ಉತ್ತರಕ್ಕೆ ಮಧ್ಯ ಹಿಂದುಸ್ಥಾನದವರೆಗೂ ದಕ್ಷಿಣಕ್ಕೆ ಸಿಲೋನದವರೆಗೂ ಹಬ್ಬಿತ್ತು.

—ಮಿಥಿಕ್ ಸೊಸಾಯಿಟಿ ಜರನಲ್

---

## ಬಂಗಾಳಿ ವಾಙ್ಮಯಾಭಿವೃದ್ಧಿಯ ಮೂರು ಅವಸ್ಥೆಗಳು

ಡಾ. ಸರ್ ಜದುನಾಥ ಸರಕಾರರು ಬರೆಯುವುದೇನೆಂದರೆ—

ಕೇವಲ ಭಾಷಾಂತರ ರೂಪಾಂತರಗಳನ್ನು ಮಾಡಿ ಇಂಗ್ಲಿಷ ಭಾಷೆಯೊಳಗಿನ ವಿಚಾರಗಳನ್ನು ದೇಶೀಯ ಭಾಷೆಯಲ್ಲಿ ಬರೆಯುವುದೆ ಪ್ರಥಮಾವಸ್ಥೆಯು. ಸ್ವತಃ ಪ್ರತಿಭೆ ಅಥವಾ ಸ್ವತಂತ್ರ ಗ್ರಂಥರಚನಾ ಶಕ್ತಿಯನ್ನು ಆರಂಭಕ್ಕೆ ಯಾರೂ ತೋರಿಸಲಿಲ್ಲ. ಇಂತಹರಲ್ಲಿ ಕೃಷ್ಣಮೋಹನ ಬ್ಯಾನರ್ಜಿ, ರಾಜೇಂದ್ರ ಲಾಲ ಮಿತ್ರ, ಪಿ. ಸಿ. ಮಿತ್ರ, ಈಶ್ವರ ಚಂದ್ರ ವಿದ್ಯಾಸಾಗರರು ಪ್ರಮುಖರು. ಸುಮಾರು ಕ್ರಿ ಶ. ೧೮೧೩ರಿಂದ ೧೮೯೨ರವರೆಗೆ ಈ ಸ್ಥಿತಿಯಿತ್ತು.

ಸ್ವಲ್ಪ ದಿನಗಳು ಕಳೆದ ಬಳಿಕ ಇದಕ್ಕೂ ಒಂದಡಿ ಮುಂದಿಟ್ಟ ಹೊಸ ಗುಂಪೊಂದು ಉದಯವಾಯ್ತು. ಇವರು ಪ್ರತಿಯೊಬ್ಬರೂ ಸಾಹಿತ್ಯದ ಒಂದೊಂದು ಶಾಖೆಯಲ್ಲಿಯೂ ಕ್ರಾಂತಿಯನ್ನೇ ಮಾಡಿ ಅದ್ಭುತ ಕಾರ್ಯವನ್ನು ಮಾಡಿ ತೋರಿಸಿದರು. ಶ್ರೀ ಮಾಯಕೇಲ ಮಧುಸೂದನ ದತ್ತನೆಂಬ ಕವಿವರನು, ದೀನಬಂಧು ಮಿತ್ರನೆಂಬ ವಿಖ್ಯಾತ ನಾಟಕಕಾರನು ಬಂಕಿಮ ಚಂದ್ರ ಚಟರ್ಜಿಯೆಂಬ ಭಾರತವಿಶ್ರುತ ಕಾದಂಬರಿಕಾರನು ಇವರೆಲ್ಲರು ತಮ್ಮ ಕೃತಿಗಳಿಂದ ಆಯಾ ವಿಷಯಗಳಲ್ಲಿ ಅಮರ ಕೀರ್ತಿಯನ್ನು ಸಂಪಾದಿಸಿದ್ದಾರೆ.

ಇವರ ಪರಂಪರೆಯನ್ನೇ ಮುಂದೆ ಸಾಗಿಸಿದವರಲ್ಲಿ ಇಂದು ಪ್ರಮುಖರಾಗಿರುವವರು ಹೇಮಚಂದ್ರ ಬ್ಯಾನರ್ಜಿ, ನವೀನ ಚಂದ್ರಸೇನ, ಮತ್ತು ರವೀಂದ್ರನಾಥ ಠಾಕುರರು. ಇವರಮೇಲೆ ಇಂಗ್ಲಿಷ ವಾಙ್ಮಯದ ಪರಿಣಾಮವು ಸಾಕಷ್ಟಾಗಿದ್ದರೂ ಅದನ್ನು ನಮ್ಮ ದೇಶಕ್ಕೆ ತಕ್ಕಂತೆ ರೂಪಕೊಟ್ಟು ಮಾರ್ಪಡಿಸಿಕೊಂಡಿದ್ದಾರೆ. ಪ್ರಾಚೀನ ಭಾರತದ ಪರಂಪರೆ ರೂಢಿ-ನಡತೆ ನಡೆವಳಿಕೆಗಳ ಅನುಸಂಧಾನದಲ್ಲಿಯೆ ತಮ್ಮ ಸಾಹಿತ್ಯವನ್ನು ವಿರಚಿಸಿದ್ದಾರೆ.

—ಹಿಂದುಸ್ಥಾನ ರಿವ್ಯು

---

## ಕ್ರಿಸ್ತಾಬ್ದ ೧೯೩೩ರಿಂದ ೧೩ ತಿಂಗಳ ವರುಷವು ಆರಂಭವಾಗುವುದು

ಮಿ. ಈಸ್ಟಮನ್ ಎಂಬವನು ವರುಷಕ್ಕೆ ೧೩ ತಿಂಗಳುಗಳಿರಬೇಕೆಂದೂ ಪ್ರತಿ ತಿಂಗಳು ನಾಲ್ಕು ವಾರದ್ದೇ ಇರಬೇಕೆಂದೂ

ಪ್ರತಿಪಾದಿಸುತ್ತಿದ್ದಾನೆ. ಈತನು ಅಮೇರಿಕೆಯ ಪ್ರಮುಖ ಮುಂದಾಳುಗಳಿಗೆ ತನ್ನ ಮತದ ಮನವರಿಕೆ ಮಾಡಿಕೊಡುತ್ತಿದ್ದು, ೧೯೩೩ರ ಒಳಗಾಗಿ ದೇಶದಲ್ಲೆಲ್ಲ ತನ್ನ ಲೆಕ್ಕದಂತೆಯೆ ಕಾಲಗಣನೆಗೆ ಆರಂಭವಾಗುವುದೆಂದು ವಿಶ್ವಾಸವುಳ್ಳವನಾಗಿದ್ದಾನೆ. ಹೀಗೆ ಸುಧಾರಣೆಯಾದರೆ ಜನಗಳಿಗೆ ಅನೇಕ ಪ್ರಕಾರದ ಲಾಭಗಳುಂಟೆಂದು ಅವನ ಅಭಿಪ್ರಾಯವಿದೆ. ಅವು ಆವವೆಂದರೆ—

೧ ಕೆಲಸಗಾರರಿಗೆ ಮೊದಲಿನಷ್ಟೇ ಕಾಲದಲ್ಲಿ ಅಂದರೆ ಈಗಿನ ೧೨ ತಿಂಗಳಲ್ಲಿ ೧೩ ತಿಂಗಳ ಸಂಬಳವು ಸಿಕ್ಕುವುದು. ಶ್ರಮ ಸ್ವಲ್ಪ, ಹಣ ಬಹಳ; ಆದುದರಿಂದ ಇದು ಮಾನವನ ಸುಖ ಶಾಂತಿ, ವಿಶ್ರಾಂತಿಗಳನ್ನು ಹೆಚ್ಚಿಸಿ ಜನಕಲ್ಯಾಣಕಾರಿಯಾಗಿದೆ.

೨ ವ್ಯಾಪಾರೋದ್ಯೋಗಸ್ತರಿಗೆ ಪ್ರತಿ ತಿಂಗಳೂ ತಮ್ಮ ಆದಾಯ ವೆಚ್ಚಗಳನ್ನು ಸರಿಹೊಂದಿಸಿ ನೋಡಿಕೊಳ್ಳಲು ಬಹಳ ಅನುಕೂಲವಾಗುವುದು. ಈಗಿನ ಕಾಲಗಣನೆಯಲ್ಲಿ ಫೆಬ್ರುವರಿಯ ಗಳಿಕೆಯು ಮಾರ್ಚದ ಗಳಿಕೆಗೆ ಎಂದೂ ಪ್ರಮಾಣಬದ್ಧವಾಗಿ ತಿಳಿಯಲ್ಪಡಲಾರದು. ಪ್ರತಿದಿನದ ಸರಾಸರಿ ತೆಗೆದು ಹೋಲಿಸುವ ಶ್ರಮಪಡಬೇಕಾಗುವುದು, ಆದರೆ ಪ್ರತಿ ತಿಂಗಳೂ ೪ ವಾರಗಳುಳ್ಳದೇ ಇದ್ದರೆ ಇದಾವ ಕಾರಣವಿಲ್ಲ.

೩ ಈಗಿನ ಪದ್ಧತಿಯಲ್ಲಿ ರವಿವಾರಗಳು ಕೆಲ ತಿಂಗಳಲ್ಲಿ ೪ ಕೆಲ ಸಾರೆ ೫ ಬರುವವು. ಆದರೆ ಹೊಸ ಪದ್ಧತಿಯಲ್ಲಿ ಆವುದೇ ತಿಂಗಳಲ್ಲಾಗಲಿ ಎಲ್ಲ ವಾರಗಳೂ ಅಷ್ಟಷ್ಟೇ ಬರುವವು.

೪ ವ್ಯಾಪಾರದಲ್ಲಿ ಬಂಡವಾಳವನ್ನು ತೊಡಗಿಸುವ ದೃಷ್ಟಿಯಿಂದಲೂ ಇದು ಲಾಭಕರವು. ಈಗ ೨೧ ಡಾಲರು ಪ್ರತಿ ತಿಂಗಳ ತೊಡಗಿಸಬೇಕಾದಲ್ಲಿ ೧೩ ತಿಂಗಳ ವರುಷವಾದಾಗ ೨೦ ಡಾಲರು ತಿಂಗಳೊಂದಕ್ಕೆ ಸಾಕು

೫ ತಿಂಗಳ ಕೂಲಿಕಾರರ ದಿನಗೂಲಿಯ ಲೆಕ್ಕವೇ ಮೊದಲಾದ ಕಾರಕೂನನ ಕೆಲಸವು ಕಡಿಮೆಯಾಗುವುದು.

ಪಾಪ್ಯುಲರ್ ಸೈನ್ಸ (ನ್ಯೂಯಾರ್ಕ) ಅಮೇರಿಕಾ

---

## ತುರ್ಕೀ ಸರಕಾರದ ಕರ್ತವ್ಯದಕ್ಷತೆ

ತುರ್ಕೀ ದೇಶದಲ್ಲಿರುವ ಪರದೇಶದ ಜನರಿಗೆ ವ್ಯಾಪಾರೋದ್ಯೋಗಗಳಲ್ಲಿ ತಲೆಯೆತ್ತಲಿಕ್ಕೆ ಕೂಡಲೆಳೆಯಷ್ಟು ಸಹ ಅವಕಾಶವು ಸಿಗದಂತೆ ಆ ದೇಶದ ಸರಕಾರವು ಒಳ್ಳೇ ದಕ್ಷತೆಯಿಂದ ಕಾರ್ಯ ನಡಿಸಿದೆ. ಹೊಸದೊಂದು ಕಾಯಿದೆ ಆಗತಕ್ಕದ್ದಿದೆ. ಆ ಕಾಯಿದೆಯ ಮೇರೆಗೆ ಆವಾವ ಉದ್ಯೋಗಗಳಲ್ಲಿ ಎಷ್ಟೆಷ್ಟು ಪರದೇಶಿಗಳಿದ್ದಾರೆಂಬುದು ಹೊರಬೀಳತಕ್ಕದ್ದಿದೆ. ಈ ಕಾಯಿದೆಯು ಪಾಸಾದ ಆರುತಿಂಗಳೊಳಗಾಗಿ ಈ ಪರಕೀಯರೆಲ್ಲರೂ ಆಯಾ ವ್ಯಾಪಾರೋದ್ಯೋಗಗಳೊಳಗಿಂದ ತಮ್ಮ ಕೈತೆಗೆದುಕೊಂಡು ಹೊರಬೀಳಲಿಕ್ಕೆ ಬೇಕು. ವೈದ್ಯನ ಉದ್ಯೋಗ, ಹಲ್ಲಿನ ಡಾಕ್ಟರತನ, ಔಷಧಗಳ ಅಂಗಡಿ ನಡಿಸುವುದು, ಸೂಲಗಿತ್ತಿತನಮಾಡುವುದು ಇವುಗಳಲ್ಲಿ ಒಬ್ಬ ಪರಕೀಯನೂ ಇರಲಾಗದೆಂಬ ಕಟ್ಟಳೆಯಾಗಿದೆ.

ವ್ಯಾಪಾರ, ಹಡಗಿನ ಸೇನಾಧಿಕಾರ, ವಕೀಲಿ, ಈ ವ್ಯವಸ್ಥೆಗಳಲ್ಲಿ ಪರಕೀಯರಿಗೆ ಇಂಬು ಇಲ್ಲ; ಇಷ್ಟೇ ಅಲ್ಲ, ಮನೆ ಬಾಡಿಗೆ ಕೊಡುವದು, ಬೂಟಪಾಲಿಸ ಮಾಡುವುದು, ಟಾಂಗಾ ಹೊಡೆಯುವದು, ಪ್ರದರ್ಶನಗಳ ಅಧಿಕಾರಿಯಾಗುವದು ಇತ್ಯಾದಿ ಸಣ್ಣಪುಟ್ಟ ಕೆಲಸಗಳೂ ಇವರಿಗೆ ಸಿಗಲಾಗದು.

ಈ ಬಗೆಯ ಕಾಯಿದೆಯು ಪಾಸಾದೊಡನೆ ಇನಸ್ಪೆಕ್ಟರರು ಅಡ್ಡಾಡಿ, ನಿಯಮಿತ ಸಂಖ್ಯೆಗಿಂತ ಹೆಚ್ಚು ಜನ ಪರಕೀಯರು ಇದ್ದರೆ ಅವರನ್ನು ಹೊರಗೆ ಹಾಕುವರು. ಅಲ್ಲಿ ಕೆಲಸಕ್ಕಿರುವ ತುರ್ಕೀ ಮನುಷ್ಯನಿಗೆ ಕೀಳುಕೆಲಸ—ಕಡಿಮೆ ಸಂಬಳವು ಇದೆಯೋ ಎಂದು ಶೋಧಿಸಿ, ಅಂತಹ ಅನ್ಯಾಯವಿದ್ದರೆ ಅದನ್ನು ದೂರಮಾಡುವರು.

— ಲಿಟರರಿ ಡೈಜೆಸ್ಟ

---

## ಮುಸಲ್ಮಾನರು ಹಿಂದೂದೇಶವನ್ನು ಒಮ್ಮೆಲೆ ಗೆಲ್ಲಲಿಲ್ಲ

ಕ್ರಿ. ಶ. ೭೧೨ರಲ್ಲಿ ಅರಬರು ಸಿಂಧದಲ್ಲಿ ನಿಂತಬಳಿಕ ಇನ್ನೂರು ವರುಷಗಳವರೆಗೆ ಅದಕ್ಕಿಂತ ಹೆಚ್ಚು ಗೆಲ್ಲಲಿಕ್ಕಾಗದಿರುವುದಕ್ಕೆ ಕಾರಣಗಳುಂಟು. ಆ ಕಾಲದಲ್ಲಿ ಪಾಂಚಾಲರು ಕೆಲ ದಿನಗಳವರೆಗೂ ಸಾಮ್ರಾಟರಾದ ಪ್ರತಿಹಾರರು ಬಹು ಕಾಲದವರೆಗೂ ಬಹುತರ ಉತ್ತರ ಹಿಂದುಸ್ತಾನವನ್ನೇ ತಮ್ಮ ಅಂಕಿತದಲ್ಲಿಟ್ಟುಕೊಂಡು ಮಹಮ್ಮದೀಯರ ತಲೆಯೆತ್ತಗೊಡಲಿಲ್ಲ. ಹತ್ತನೆಯ ಶತಮಾನದ ಕೊನೆಯ ಸುಮಾರಿಗೆ ಪ್ರತಿಹಾರಮನೆತನದ ಇಮ್ಮಡಿ ಮಹೇಂದ್ರಪಾಲನು ತೀರಿಕೊಳ್ಳಲು ಆ ವಂಶಕ್ಕೆ ಇಳಿಗಾಲವು ಬಂತು; ಸಾಮ್ರಾಟ್ ಶಕ್ತಿಯು ನಷ್ಟವಾಯಿತು. ಬೇರೆ ಬೇರೆ ರಾಜರು ತಲೆಯೆತ್ತಿದರು. ಒಕ್ಕಟ್ಟು ಅಳಿಯಿತು.

ಉತ್ತರ ಹಿಂದುಸ್ತಾನದಲ್ಲಿ ಆವುದೇ ರಜಪೂತ ಮನೆತನದ ಸಾಮ್ರಾಜ್ಯವು ಇರುವವರೆಗೂ ವಾಯವ್ಯದಿಕ್ಕಿನ ಸರಹದ್ದುಗಳ ಸಂರಕ್ಷಣಕ್ಕೆ ಹೆಚ್ಚು ಗಮನವು ಕೊಡಲ್ಪಡುತ್ತಿತ್ತು. ಚಂದ್ರಗುಪ್ತನು ಸಾಮ್ರಾಟನಾಗಿದ್ದಾಗ ವಾಯವ್ಯ ಸರಹದ್ದಿನ ಸಂರಕ್ಷಣವು ಬಹಳ ಚೆನ್ನಾಗಿತ್ತು. ಆದುದರಿಂದಲೇ ಜಗಜ್ಜೇತೃವೆನಿಸಿದ ಗ್ರೀಕ ಸಾಮ್ರಾಜನಾದ ಸಿಕಂದರನ ಸೈನಿಕರಿಂದ ಸೆಲ್ಯುಕನಿಗೆ ಚಂದ್ರಗುಪ್ತನನ್ನು ಗೆಲ್ಲಲಿಕ್ಕೆ ಆಗಲಿಲ್ಲ. ಆದರೆ ಅಶೋಕನು ಈ ಪರಂಪರೆಯನ್ನು ಬಿಟ್ಟೊಡನೆ ಮೌರ್ಯವಂಶಕ್ಕೆ ಕೃಷ್ಣಪಕ್ಷವು ಪ್ರಾಪ್ತವಾಯಿತು. ಅಶೋಕನ ನಂತರ ಸ್ವಲ್ಪ ಕಾಲದಲ್ಲಿಯೇ ಗ್ರೀಕರು ಹಿಂದೂ ದೇಶದಲ್ಲಿ ಒಳನುಗ್ಗಿ ಮೌರ್ಯ ಸಾಮ್ರಾಜ್ಯವನ್ನು ನಾಶಮಾಡಿದರು. ಗುಪ್ತರು ಸಾಮ್ರಾಟರಿದ್ದಾಗ ವಾಯವ್ಯ ಸರಹದ್ದನ್ನು ಹೀಗೆ ಸಂರಕ್ಷಿಸಿದರು. ಗ್ರೀಕ ಸಾಮ್ರಾಜ್ಯವನ್ನು ಬುಡಮೇಲು ಮಾಡಿದ ಹೂಣರು ಹಿಂದೂ ದೇಶಕ್ಕೆ ದಾಳಿ ಮಾಡಿದಾಗ ದೇಶದಲ್ಲಿ ಕಾಲಿಡಗೊಡದೆ ಸ್ಕಂಧಗುಪ್ತ ಮಹಾರಾಜನು ಅವರನ್ನು ಲೀಲೆಯಿಂದ ಸೋಲಿಸಿ ಓಡಿಸಿದನು. ದಕ್ಷಿಣ ದೇಶದಲ್ಲಿಯೂ ಮುಂದೆ ಕೆಲ ಶತಮಾನಗಳನಂತರ ಅರಬರ ಪ್ರವೇಶವಾಗದಿರಲಿಕ್ಕೆ ವಾತಾಪಿ (ಬದಾಮಿ) ಚಾಲುಕ್ಯರು ಸಾಮ್ರಾಟರಾಗಿ ವಿಂಧ್ಯಪರ್ವತದ ಗಡಿನಾಡನ್ನು ಒಳ್ಳೇ ದಕ್ಷತೆಯಿಂದ ಕಾಪಾಡುತ್ತಿದ್ದುದೇ ಮುಖ್ಯ ಕಾರಣವು. ಅದರಂತೆ ಕನೋಜದ ಪ್ರತಿಹಾರರೂ ವಾಯುವ್ಯ ದಿಕ್ಕಿನ ಸರಹದ್ದನ್ನು ಚೆನ್ನಾಗಿ ಕಾಪಾಡುತ್ತಿದ್ದುದರಿಂದಲೆ ಮುಸಲ್ಮಾನರಿಗೆ ಮುಂದು ವರಿಯಲಿಕ್ಕೆ ಆಗಲಿಲ್ಲ. ಮುಸಲ್ಮಾನರನ್ನು ಈ ಬಗೆಯಾಗಿ ಹಿಂದೆ ಹತ್ತಿಕ್ಕಿಟ್ಟು ಅಫಗಾಣಿಸ್ಥಾನದವರೆಗೂ ತಮ್ಮ ಸಾಮ್ರಾಜ್ಯವನ್ನು ಕಾದುಕೊಂಡಿರಬೇಕಾದರೆ ಆಗಿನ ಹಿಂದೂ ರಾಜರ ಸೈನ್ಯವು ಸುವ್ಯವಸ್ಥಿತವಾಗಿ ಪರಾಕ್ರಮವುಳ್ಳದಾಗಿ ಇತ್ತೆಂದು ಬೇರೆ ಹೇಳಬೇಕೆ? ಆ ಕಾಲದ ಸುಲೇಮಾನನೆಂಬ ಮುಸಲ್ಮಾನ ಪ್ರವಾಸಿಯೇ ಕನೋಜ ರಾಜರ ಸೇನೆಯಲ್ಲಿ ಒಂಟೆಗಳೂ, ಕುದುರೆಗಳೂ ಇದ್ದವೆಂದೂ ಅದು ಒಳ್ಳೇ ಬಲಿಷ್ಠವಾಗಿತ್ತೆಂದೂ ಬರೆದಿಟ್ಟಿದ್ದಾನೆ. ಆನೆಗಳನ್ನು ಉಪಯೋಗಿಸುವದರಿಂದ ಹಿಂದೂ ಜನರು ಸೋತರೆಂದು ಕಾರಣ ಹೇಳುವುದರಲ್ಲಿಯೂ ಹುರುಳಿಲ್ಲ. ಯಾಕಂದರೆ ಅವುಗಳನ್ನು ಹಿಂದೂ ರಾಜರಷ್ಟೇ ಅಲ್ಲ, ಮಹಮ್ಮದ ಗಿಜನಿಯೂ ಉಪಯೋಗಿಸುತ್ತಿದ್ದನೆಂದೂ ಅವುಗಳ ಸಹಾಯದಿಂದಲೇ ಎಷ್ಟೋ ಯುದ್ಧಗಳನ್ನು ಗೆದ್ದನೆಂದೂ ಇತಿಹಾಸದಲ್ಲಿ ಉಲ್ಲೇಖವಿದೆ.

—ಭಾಂಡಾರಕರ ಸಂಶೋಧಕಮಂಡಳದ ಪತ್ರಿಕೆ

---

# ಸಾಹಿತ್ಯಲೋಕ

**ಮೈಸೂರು ದೇಶದ ವಾಸ್ತುಶಿಲ್ಪ, ೧ನೆಯ ಭಾಗ.** ಡೆಮಿ ಅಷ್ಟಪತ್ರಿ ೮೭ ಪುಟ. ಸಚಿತ್ರ ಬೆಲೆ ೫-೦-೦ ಬಿ. ವೆಂಕೋಬರಾವ ಬಿ.ಎ., ಇವರು ಲೇಖಕರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿರುವ ಕರ್ನಾಟಕ ಸಂಘದಿಂದ ಪ್ರಕಾಶಿಸಲ್ಪಟ್ಟಿದೆ.

ಕರ್ನಾಟಕದಲ್ಲಿ ನವಜಾಗೃತಿಯು ಉಂಟಾದಂದಿನಿಂದ ಕರ್ನಾಟಕದ ಇತಿಹಾಸ ಸಂಸ್ಕೃತಿಗಳ ಅಭ್ಯಾಸ ಸಂಶೋಧನಗಳು ಆಗುತ್ತಲಿವೆ. ಈ ಪುಸ್ತಕವು ಅಂಥ ಅಭ್ಯಾಸದ ಫಲವೆಂದು ಹೇಳಬಹುದು. ವೃಥಾಭಿಮಾನ, ಅವಾಸ್ತವ ಸ್ತುತಿ ಮುಂತಾದವುಗಳನ್ನು ಸೇರಿಸದೆ ಬಿ. ವೆಂಕೋಬರಾಯರು ಮೈಸೂರಿನ ವಾಸ್ತುಶಿಲ್ಪವನ್ನು ಯಥಾರ್ಥವಾಗಿ ಬಣ್ಣಿಸಿದ್ದಾರೆ. ವಿಶೇಷತಃ ಅವರು ಪರಿಶ್ರಮಪೂರ್ವಕವಾಗಿ [illegible] ನಕ್ಷೆಗಳೂ ಚಿತ್ರಪಟಗಳೂ ವಿಷಯವನ್ನು ಚನ್ನಾಗಿ ವಿಶದಪಡಿಸುತ್ತವೆ. ಕರ್ನಾಟಕದ ವಾಸ್ತುಶಿಲ್ಪವು ಬಹಳೇ ವಿಸ್ತೃತವಾದ ವಿಷಯವು. ಅದರಲ್ಲಿ ಮೈಸೂರು ದೇಶದ ವಾಸ್ತುಶಿಲ್ಪವನ್ನಷ್ಟೇ ತಮ್ಮ ವಿಷಯವನ್ನಾಗಿಟ್ಟುಕೊಂಡಿದ್ದರೂ ಲೇಖಕರು ಇಡೀ ಕರ್ನಾಟಕದ ಮೇಲೆಯೇ ಉಪಕಾರಮಾಡಿದ್ದಾರೆ. ಬೆಲೆಯು ಮಾತ್ರ ಸಾಮಾನ್ಯವಾಚಕ ವರ್ಗಕ್ಕೆ ಬಹಳೇ ಹೆಚ್ಚಾಗಿದೆ. ಕನ್ನಡ ಪುಸ್ತಕಗಳು ಲೋಕಪ್ರಿಯವಾಗಬೇಕಾದರೆ ಅವು ಅಗ್ಗವಾಗಿರುವದು ಅವಶ್ಯವು.

ಪ್ರಥಮ ಪ್ರಯತ್ನವೆಂದು ಈ ಕೃತಿಯು ಸ್ತುತ್ಯವೆಂಬಲ್ಲಿ ಯಾವ ಸಂಶಯವೂ ಇಲ್ಲ. ಅನೇಕ ಗುಡಿಗಳನ್ನು ಲೇಖಕರು ವಿವರವಾಗಿ ವರ್ಣಿಸಿದ್ದಾರೆ. ಮೈಸೂರಿನ ಹೊರಗಿರುವ ಪಟ್ಟದಕಲ್ಲು, ಐಹೊಳೆ, ಇಟ್ಟಗಿ, ಗದಗು, ಡಂಬಳ, ಹಾನಗಲ್ಲು, ಬಂಕಾ

ಪುರ ಮುಂತಾದ ಕಡೆಯ ಗುಡಿಗಳ ವರ್ಣನವೂ ಇದೇ ರೀತಿ ಮಾಡಲ್ಪಡುವದು ಅವಶ್ಯ. ಆದರೆ ಈ ಪರಿಯ ವರ್ಣನ ಮಾತ್ರದಿಂದ ವಾಚಕರ ತೃಪ್ತಿಯಾಗದು. ಯಾಕಂದರೆ ಒಬ್ಬ ಶಿಲ್ಪಿಗನ ಕೃತಿಯು ಸುಂದರವಿದೆ, ಬಹಳ ಸುಂದರವಿದೆ, ಎಂದು ಬರೆದ ಮಾತ್ರಕ್ಕೆ ಕಾರ್ಯವು ಮುಗಿಯಲಿಲ್ಲ. ಆ ಸೌಂದರ್ಯವು ಯಾತರಲ್ಲಿದೆ, ಅದು ನಮ್ಮನ್ನು ಯಾವ ರೀತಿಯಿಂದ ಯಾಕೆ ಆಕರ್ಷಿಸುವದು, ಈ ಕಲೆಯು ನೈಸರ್ಗಿಕವೋ ಕಾಲ್ಪನಿಕವೋ, ಇದರಲ್ಲಿ ಮತ್ತು ಅನ್ಯರೀತಿಯ ಕಟ್ಟಡಗಳ ಸೌಂದರ್ಯದಲ್ಲಿ ವ್ಯತ್ಯಾಸವೇನು, ಪ್ರಾಚೀನರು ವಾಸ್ತು ಮತ್ತು ಮೂರ್ತಿಶಿಲ್ಪವನ್ನು ಎಷ್ಟರಮಟ್ಟಿಗೆ ಸಿದ್ಧಪಡಿಸಿದ್ದರು, ಎಂಬ ಮುಂತಾದ ಅನೇಕಾನೇಕ ವಿಷಯಗಳನ್ನು ಚರ್ಚಿಸುವದು ಕಲಾವಿಮರ್ಶಕನ ಕರ್ತವ್ಯವಾಗಿದೆ.

ಆಂಗ್ಲ ಲೇಖಕರಲ್ಲಿ ರಸ್ಕಿನ್ ಇವನು ಆ ಬಗೆಯ ಕಲಾವಿಮರ್ಶಕನೆನ್ನಬಹುದು. ಆ ಬಗೆಯ ಕಲಾವಾಙ್ಮಯವು ನಮ್ಮಲ್ಲಿ ನಿರ್ಮಾಣವಾಗುವದು ಅವಶ್ಯವು. ಅಂದರೆ ನಮ್ಮ ಪ್ರಾಚೀನ ಶಿಲ್ಪಿಗಳು ಶಿಲೆಯಲ್ಲಿ ಹೊಯ್ದ ಕಲಾಸೌಂದರ್ಯವು, ಕೌಶಲವಿಶೇಷವು, ಕಲ್ಪನಾಚಾತುರ್ಯವು, ಕೈಗಾರಿಕೆಯು ಕಲಾವಿಮರ್ಶಕನ ರಸವತ್ತಾದ ಭಾಷೆಯಲ್ಲಿ ಪ್ರವಹಿಸಿ ಜನಮನವನ್ನು ತಣಿಸಿ ಆನಂದಗೊಳಿಸುವವು; ಶಿಲಾಮೂರ್ತಿಗಳಲ್ಲಿ ಜೀವಕಳೆ ತುಂಬಿ ಅವು ನಮ್ಮನ್ನು ಚೇತರಿಸುವವು. ವೆಂಕೋಬರಾಯರು ಮಾಡಿದ ಈ ಪ್ರಯತ್ನದ ಜೊತೆಗೆ ಆ ಪ್ರಯತ್ನಗಳೂ ಆಗುವದು ಅವಶ್ಯ.

೨೬೬ನೇ ಪುಟದಲ್ಲಿ ವೆಂಕೋಬರಾಯರು ಒಂದು ಮಹತ್ವದ ವಿಷಯದ ಕಡೆಗೆ ನಮ್ಮ ದೃಷ್ಟಿಯನ್ನೆಳೆದಿದ್ದಾರೆ. ಅದೆಂದರೆ ಮೂಲ ಸುಂದರವಾಗಿರುವ ಗುಡಿಗಳಿಗೆ ವಿಕಾರವಾದ ಜೋಡಣಿಗಳನ್ನು ಕೊಟ್ಟದ್ದು. ಕಲಾವಿನಾಶಕ ಮತ್ತು ಮೂರ್ತಿಭಂಜಕ ಮೂರ್ಖ ಮುಸಲ್ಮಾನ ದಾಳಿಗಾರರಿಂದ ನಮ್ಮ ಎಷ್ಟೋ ಕಟ್ಟಡಗಳು ನಷ್ಟವಾದವೆಂಬಲ್ಲಿ ಸಂಶಯವಿಲ್ಲ. ಅದರ ಜೊತೆಗೆ ನಮ್ಮ ಜನರ ಧರ್ಮಾಂಧತೆ ಮತ್ತು ದುರ್ಲಕ್ಷದ ಮೂಲಕವೂ ಎಷ್ಟೋ ಕಲೆಯು ಹಾಳಾಗಿ ಹೋಗಿದೆ; ಹಾಗೂ ಹೋಗುತ್ತಿದೆ. ಇದನ್ನಾದರೂ ನಾವು ಮರೆಯಕೂಡದು. ಶಿಲ್ಪದಲ್ಲಿ ಸುಣ್ಣ ಬಡಿಯುವದು, ಸಿಂಧೂರ ಹಚ್ಚುವದು, ಎಣ್ಣೆ ಹೊಯ್ಯುವದು, ಗುಡಿಗಳನ್ನು ಸ್ವಚ್ಛವಾಗಿಡದಿರುವದು, ಇವು ನಿಜವಾದ ಭಾವಿಕರ ಲಕ್ಷಣಗಳಲ್ಲವೆಂದು ನಾವು ಸ್ಪಷ್ಟವಾಗಿ ಹೇಳಬೇಕಾಗಿರುವದು. ಸ್ವಚ್ಛತೆ, ಪ್ರಸನ್ನತೆ, ಸೌಂದರ್ಯ ಇವು ಪ್ರತಿಯೊಂದು ಗುಡಿಯಲ್ಲಿ ಇದ್ದೇ ತೀರಬೇಕು.

ಪುಸ್ತಕದ ಅಚ್ಚು ಮತ್ತು ಕಟ್ಟು ಚೆನ್ನಾಗಿವೆ. ಶೈಲಿಯು ಸರಲ ಮತ್ತು ಸುಲಭ. ಆದರಲ್ಲಿಯ 'ದರ್ಬಾರು' 'ಕಛೇರಿ' ಇಂಡಿಯಾ, ತಾಲ್ಲೂಕು, ಮುಂತಾದ ಪ್ರಯೋಗಗಳು ಉತ್ತರ ಕರ್ನಾಟಕದವರಿಗೆ ಅಷ್ಟೊಂದು ರುಚಿಸುವದಿಲ್ಲ. ಆದರೂ ಒಟ್ಟಿನಮೇಲೆ ಕರ್ನಾಟಕದ ಅಭಿಮಾನಿಗಳಿಗೂ ವಾಸ್ತುಶಿಲ್ಪದ ಅಭ್ಯಾಸಿಗಳಿಗೂ ಕರ್ನಾಟಕಸಂಸ್ಕೃತಿಯ ಸಂಶೋಧಕರಿಗೂ ಈ ಪುಸ್ತಕವು ಅತ್ಯವಶ್ಯವು. ರಂ. ಶ್ರೀ. ದಿವಾಕರ

---

**ಹಿಂದುಸ್ತಾನದ ರಾಜ್ಯಪದ್ಧತಿ**— ಸಿ. ಬಿ. ಜಮಖಂಡಿ ಹೆ. ಮಾ. ಭತ್ತಗುಣಕಿ. ಬೆಲೆ-ಒಂದು ರೂಪಾಯಿ.

ಹಿಂದುಸ್ಥಾನದ ರಾಜ್ಯಪದ್ಧತಿಯ ಬಗ್ಗೆ ಕನ್ನಡ ಪುಸ್ತಕಗಳು ಬಹು ವಿರಳ. ಆದುದರಿಂದ ಈ ಪುಸ್ತಕವು ಒಂದು ಕೊರತೆಯನ್ನು ಕೆಲಮಟ್ಟಿಗೆ ಪೂರಯಿಸುತ್ತದೆ. ಇದರಲ್ಲಿ ಹಿಂದುಸ್ಥಾನದ ರಾಜ್ಯಶಾಸನವು ವಿವರಿಸಲ್ಪಟ್ಟಿರುವದಲ್ಲದೆ ರಾಜ್ಯಪದ್ಧತಿಯೂ ವಿಸ್ತಾರವಾಗಿ ಚರ್ಚಿತವಾಗಿದೆ. ಇದು ಶ್ರೀ. ಕರಂದಿಕರ ಮತ್ತು ಶ್ರೀ. ಕೇಳಕರ ಇವರು ಬರೆದ ಮರಾಠಿ ಪುಸ್ತಕದ ಭಾಷಾಂತರವು. ಲೇಖಕರು ತಮ್ಮ ಆತ್ಮನಿವೇದನದಲ್ಲಿ ಬರೆದಂತೆ ಈ ಪುಸ್ತಕವು ಹಿಂದೂ ದೇಶದ ಶಾಸನ ಪದ್ಧತಿಯ ಸಂಪೂರ್ಣ ಜ್ಞಾನವನ್ನು ೧೮ ಭಾಗಗಳಲ್ಲಿ ಕೊಡುತ್ತದೆ. ಭಾಷಾದೋಷಗಳೂ ಇದರಲ್ಲಿ ಬಹಳವಾಗಿವೆ. ಕೆಲವೆಡೆಗಳಲ್ಲಿ ಗ್ರಂಥಕರ್ತರ ಅಭಿಪ್ರಾಯವು ಸ್ಪಷ್ಟ ತಿಳಿವುದಿಲ್ಲ. ಪುಟ ೧೮ರಲ್ಲಿ ತಿಜೋರಿ ಬದಲು ಕೋಶವೆಂದೂ ೮೫ನೆಯ ಪುಟದಲ್ಲಿ ಲೋಕಪ್ರತಿನಿಧಿ ಬದಲು ಪ್ರಾಂತ್ಯ ಪ್ರತಿನಿಧಿ ಎಂದು ಹೇಳಬಹುದಿತ್ತು. ಪುಸ್ತಕವು ಕನ್ನಡಿಗರಿಗೆ ಉಪಯುಕ್ತವಾಗುವದೆಂಬದರಲ್ಲಿ ಸಂದೇಹವಿಲ್ಲ. ಆದರೆ ಪುಸ್ತಕದ ಪ್ರತಿಯು ಇದ್ದ ಸಂಗತಿಗಳನ್ನು ಇದ್ದಕಿದ್ದಂತೆ ತಿಳಿಸಿ ಹೇಳುವದಾದ್ದರಿಂದ ಆ ರೀತಿಯಿಂದ ನಮಗೆ ತೋರಿದ ದೋಷ ದೋಷಗಳನ್ನು ವಿನಯಪೂರ್ವಕವಾಗಿ ಹೇಳಬೇಕೆನ್ನುತ್ತೇವೆ. ಉಪೋದ್ಘಾತದಲ್ಲಿಯೇ ರಾಜಶಾಸನದ ಬೆಳವಣಿಗೆಯನ್ನು ೧೯೧೯ರವರೆಗೆ ತಂದಿದ್ದರೆ ಒಳಿತಾಗುತ್ತಿತ್ತು. ೩೧ನೆಯ ಪುಟದಲ್ಲಿ ಹೇಳಿದಂತೆ ಸ್ಟೇಟ್ ಸೆಕ್ರೆಟರಿಯವರು ಆರಿಸಿ ಬಂದ ಪ್ರ

ಸಿಧಿಯೇ! ಆಗಬೇಕೆಂತಿಲ್ಲ ; ಅವರು ಬೋರ್ಡ ಸಭೆಯ ಮೆಂಬರರಾಗಿರಬಹುದು. ೪ನೇ ಭಾಗದಲ್ಲಿ ಪ್ರಾಂತಿಕ ಸರಕಾರದ ವಿಷಯವನ್ನು ಹೇಳುವ ಬದಲು ಮಧ್ಯವರ್ತಿ ಸರಕಾರದ ಕಾಯಿದೆ ಎಸೆಂಬ್ಲಿಯ ವಿಷಯವಾಗಿ ಹೇಳಿ ಮಧ್ಯವರ್ತಿ ಸರಕಾರದ ಎಲ್ಲ ವಿಷಯವೂ ಮುಗಿದ ಮೇಲೆ ಪ್ರಾಂತಿಕ ಸರಕಾರದ ವಿಷಯವನ್ನು ತೆಗೆದುಕೊಳ್ಳುವುದು ಹೆಚ್ಚಿಗೆ ಪ್ರಶಸ್ತವಾಗಿತ್ತು. ಅದಲ್ಲದೆ ಪ್ರಾಂತಿಕ ಸರಕಾರದ ವಿಷಯ ಹೇಳುವ ಮೊದಲು ಮಧ್ಯವರ್ತಿ ಸರಕಾರದ ಮತ್ತು ಪ್ರಾಂತಿಕ ಸರಕಾರದ ಹಕ್ಕುಗಳನ್ನು ಸ್ಪಷ್ಟೀಕರಿಸಬೇಕಾಗಿತ್ತು. ೩೪ನೆಯ ಪುಟದಲ್ಲಿ ಎಸೆಂಬ್ಲಿಯ ಕೆಲಸವನ್ನು ಚೆನ್ನಾಗಿ ಕೊಟ್ಟಿಲ್ಲ. ಎಸೆಂಬ್ಲಿಯ ಸ್ಥಿರವಾದ ಕಮಿಟಿಗಳನ್ನೂ (Standing Committees) ಅವುಗಳ ಕೆಲಸವನ್ನೂ ಕೊಡಬೇಕಿತ್ತು. ಜಾತಿವಾರ ಮತದಾರ ಸಂಘದ ವಿಷಯವಾಗಿ ಹೆಚ್ಚಿಗೆ ಚರ್ಚೆ ಮಾಡಿದ್ದರೆ ಒಳಿತಾಗುತ್ತಿತ್ತು. ಪ್ರಾಂತಿಕ ಕೌನ್ಸಿಲಿಗೆ ವಿಶ್ವವಿದ್ಯಾಲಯದ ಪರವಾಗಿ ಒಬ್ಬ ಪ್ರತಿನಿಧಿ ಹೋಗುವುದನ್ನು ತಿಳಿಸಲಿಲ್ಲ. ಕಾಯಿದೆ ಮಂಡಳದ ವಿಷಯವನ್ನು ಹೇಳಿ ಆದ ಮೇಲೆ ಹಿಂದುಸ್ಥಾನದ ಲೋಕಪಕ್ಷಗಳ ರಚನೆಯ ವಿಷಯವನ್ನೂ ಅವುಗಳ ವರ್ಚಸ್ಸು ಸರಕಾರದ ಮೇಲೆ ಹೇಗೆ ಬೀಳಬಹುದೆಂಬುದನ್ನೂ ಅಗತ್ಯವಾಗಿ ತಿಳಿಸಬೇಕಿತ್ತು. ಸ್ಥಾನಿಕ ಸ್ವರಾಜ್ಯದ ಭಾಗವು ನೆಟ್ಟಗಿದೆ. ಲೋಕಲ ಬೋರ್ಡುಗಳ ರಚನೆಯು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬೇರೆ ಬೇರೆ ಇದೆ ಎಂಬುದನ್ನು ತಿಳಿಸಬೇಕು. ೯೧ನೆಯ ಪುಟದಲ್ಲಿ ಬೊಂಬೆ ಕೋರ್ಪೊರೇಶನಿಗೆ, ಕಲ್ಕತ್ತೆ ಮದ್ರಾಸ ಮುನಿಸಿಪಾಲಿಟಿಗಳಿಗಿಂತ ಹೆಚ್ಚಿಗೆ ಅಧಿಕಾರ, ಸ್ವಾತಂತ್ರ್ಯಗಳಿವೆಯೆಂದು ಹೇಳಿರುವದು ತಪ್ಪು. ಈಗ ಕಲ್ಕತ್ತಾ ಕೊರ್ಪೊರೇಶನಿಗೆ ಎಲ್ಲಕ್ಕಿಂತಲೂ ಹೆಚ್ಚಿಗೆ ಅಧಿಕಾರವಿದೆ.

ಕಾಯಿದೆ, ನ್ಯಾಯಖಾತೆ, ಭೂಮಿಯ ತೆರಿಗೆ, ಆಯವ್ಯಯ ವ್ಯವಸ್ಥೆ, ಬರಗಾಲಗಳ ವಿಷಯವಾಗಿ ಬರೆದ ಭಾಗವು ಓದತಕ್ಕದ್ದಾಗಿದೆ. ವಸಾಹತು ಸ್ವರಾಜ್ಯದ ಮೇಲಿನ ಭಾಗವು ಬಹಳ ಉಪಯುಕ್ತವಾಗಿದೆ.

ಮುದ್ರಣಾದೋಷಗಳು ಬಹಳವಾಗಿ ಉಳಿದುಬಿಟ್ಟಿವೆ. ಶುದ್ಧಿಪತ್ರಿಕೆ ದೊಡ್ಡದಿದ್ದರೂ ಅದರಲ್ಲಿ ಕೊಡದೇ ಇದ್ದ ಅನೇಕ ಮುದ್ರಣದ ತಪ್ಪುಗಳು ಪುಸ್ತಕದಲ್ಲಿ ಕಂಡುಬರುತ್ತವೆ. ಉದಾ: ೭೫ನೆಯ ಪುಟದಲ್ಲಿ "ಸನದಿ ನೌಕರ" ಎಂದು ನಿಲ್ಲಿಸಿಬಿಟ್ಟಿದೆ. ಮುಂದೆ ಅದರ ವಿಷಯ ಏನೂ ತಿಳಿಸಿಲ್ಲ.

ಪುಸ್ತಕದ ಬಾಹ್ಯಾಂಗವೂ ಆಕಾರವೂ ಸುಂದರವಾಗಿರುತ್ತದೆ. ಬೆಲೆ ಒಂದೇ ರುಪಾಯಿ ಆಗಿಪ್ಪದರಿಂದ ಹಿಂದುಸ್ಥಾನದ ರಾಜ್ಯಪದ್ಧತಿಯನ್ನು ತಿಳಿಯಬೇಕಾದವರು ಇದನ್ನು ಕೊಂಡುಕೊಳ್ಳಬಹುದು. —ಜಿ. ಆರ್. ಶೆಟ್ಟಿ

---

**ರಘುವಂಶ.**— (ಒಂಬತನೆಯ ಸರ್ಗ :— ಪ್ರಕಾಶಕರು ಅಧ್ಯಾತ್ಮ-ಪ್ರಕಾಶ-ಕಾರ್ಯಾಲಯ, ಬೆಂಗಳೂರು, ಪುಟಗಳು ೧೨೦, ಬೆಲೆ ೦-೮-೦).

"ರಾಜ್ಯಾಶ್ರಮ" ದಲ್ಲಿ ವಾಸಿಸುವ ದಿಲೀಪಾದಿ ಅರಮುನಿಗಳ ವಂಶವರ್ಣನೆಯಿದು; ಬಣ್ಣಿಪನು ವರಕವಿಯಾದ ಕಾಳಿದಾಸನು. ತರುವಾಯ ಹೇಳುವದೇನು! ಹಾಲಿಗೆ ಸಕ್ಕರೆಯನ್ನು ಬೆರಸಿದಂತೆ. ಅಮೃತಕುಂಭದಿಂದ ಕಾವ್ಯಾಮೃತವು ಹೊರಹೊಮ್ಮಿದಂತೆ ಎಲ್ಲವೂ ಮಾಧುರ್ಯಮೇ—ಆನಂದವೇ ಸರಿ! ಆದರೆ ಈ ಪ್ರವಾಹಕ್ಕೆ ಸಂಸ್ಕೃತನುಡಿಯ ಬೆಟ್ಟಗಳು ಅಡ್ಡಗಟ್ಟಿ ಮಾನಸವನ್ನು ದೂರೀಕರಿಸುವ ಸರೋವರವೊಂದನ್ನು ನಿರ್ಮಿಸಿದವು. ರಾಜಹಂಸಗಳು ನಲಿದಾಡತೊಡಗಿದವಲ್ಲಿ. ಆದರೆ ಸಾಮಾನ್ಯ ಪಕ್ಷಿಗಳಿಗದರಿಂದ ಲಾಭವೇನೂ ಆಗದಂತಾಯಿತು. ಇದನ್ನು ಕಂಡುಹಿಡಿದು ಭಗೀರಥನು ಬೆಟ್ಟನ್ನೊಡೆದು ಸ್ವರ್ಗಂಗೆಯನ್ನು ಬೈಲುಸೀಮೆಗೆ ತಂದು ಪ್ರಜೆಗಳೆಲ್ಲರನ್ನು ತಣಿಸಿದಂತೆ ವ್ಯಾಖ್ಯಾನಕಾರರನೇಕರು ಈ ಮಹಾಕಾವ್ಯವನ್ನು ತಮ್ಮ ತಮ್ಮ ತಾಯ್ನುಡಿಗೆ ಪರಿವರ್ತಿಸಿ ಅದರ ರಸವನ್ನೆಲ್ಲರೂ ಉಣ್ಣುವಂತೆ ಏರ್ಪಾಡುಮಾಡಿದರು. ಈ ವ್ಯಾಖ್ಯಾತಭಗೀರಥರಲ್ಲಿ ಬೆಂಗಳೂರಿನ ಅಧ್ಯಾತ್ಮ-ಪ್ರಕಾಶ-ಕಾರ್ಯಾಲಯದ ಸಂಚಾಲಕರೊಬ್ಬರು.

ಕನ್ನಡದಲ್ಲಿ ಈ ಬಗೆಯ ಪ್ರಯತ್ನಮಾಡಿದವರಲ್ಲಿ ಇವರೇ ಅಗ್ರೇಸರರೆಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಇವರು ಮಾಡಿದ ವ್ಯಾಖ್ಯಾನವು ತೀರ ಹೊಸಮಾದರಿಯದು. "ಸ್ವತಂತ್ರವಾಗಿ ಓದಿಕೊಳ್ಳುವವರಿಗೆ ……… ನಿಃಸಂದೇಹವಾಗಿ ತಿಳಿಯುವಂತೆ ವಿಷಯವಿಭಾಗವನ್ನು ಮಾಡಿ" ಬರೆಯಲ್ಪಟ್ಟ ಕನ್ನಡ ಟೀಕೆಯಿದು. ಪ್ರಾರಂಭಕ್ಕೆ ಕವಿಚರಿತೆಯನ್ನು ಸ್ವಲ್ಪದರಲ್ಲಿ ಹೇಳಿ, ತರುವಾಯ ಒಂದನೆಯ ಸರ್ಗದ ಮೂಲವನ್ನು ದೇವನಾಗರೀ ಲಿಪಿಯನ್ನರಿಯದ ಓದುಗರಿಗೋಸುಗ ಕನ್ನಡ ಲಿಪಿ

ಯಲ್ಲಿ ಅಚ್ಚುಹಾಕಿದೆ. ಮುಂದೆ ಶ್ಲೋಕಾನುಕ್ರಮದಿಂದ ಟೀಕೆಯು ಕೊಡಲ್ಪಟ್ಟಿದೆ. ಅದರಲ್ಲಿ ಪ್ರತಿಯೊಂದು ಶ್ಲೋಕದ (೧) ಅನ್ವಯಾನುಸಾರವಾದ ಅರ್ಥವನ್ನೂ (೨) ತಾತ್ಪರ್ಯವನ್ನೂ (೩) ಅದರಲ್ಲಿದ್ದ ಸಮಾಸಗಳ ವಿಗ್ರಹವನ್ನೂ (೪) ವ್ಯಾಕರಣ ವಿವರವನ್ನೂ ಮತ್ತು (೫) ವಿಷಯದ ವಿಶೇಷವಿಚಾರವನ್ನೂ ವಿವರಿಸಲಾಗಿದೆ. ಈ ಐದು ವಿಭಾಗಗಳಮೂಲಕ ಶ್ಲೋಕಾರ್ಥವು ಸುಸ್ಪಷ್ಟವಾಗುತ್ತದಷ್ಟೇ ಅಲ್ಲದೆ ಅದರ ಸ್ವಾರಸ್ಯವು ಕೂಡ ವಾಚಕರಿಗೆ ಮನದಟ್ಟಾಗುತ್ತದೆ. ಕೊನೆಗೆ ಕೊಟ್ಟ ವಿಸ್ತೃತವಾದ ಪರಿಶಿಷ್ಟದಲ್ಲಿ (೧) ವಿಷಯಗಳ ಪಂಗಡ (೨) ಶಬ್ದಗಳ ರೂಪಗಳು (೩) ಕ್ರಿಯಾಪದಗಳ ರೂಪಗಳು (೪) ಛಂದೋವಿಚಾರ (೫) ನಾನಾರ್ಥವಿಚಾರ ಇವೇ ಮೊದಲಾದ ಮಹತ್ತ್ವದ ವಿಷಯಗಳನ್ನು ವಿವರಿಸಿ ಪರೀಕ್ಷೆಯ ಪ್ರಶ್ನೆಗಳನ್ನು ಕೊಟ್ಟದ್ದಾಗಿದೆ.

ಈ ಮೇರೆಗೆ ಪ್ರಕಟಿಸಲ್ಪಟ್ಟ ಈ ಟೀಕೆಯು ಎಲ್ಲ ಬಗೆಯಿಂದ ಉಪಯುಕ್ತವಾದದ್ದಿದೆ. ಮೇಲಾಗಿ ಇಂಥ ಬೆಲೆಯುಳ್ಳ ಗ್ರಂಥದ ಬೆಲೆಯನ್ನು ಕೂಡ ತೀರ ಕಡಿಮೆಯಾಗಿಟ್ಟು ಪ್ರಕಾಶಕರು ಬಡ ವಿದ್ಯಾರ್ಥಿಗಳ ಪ್ರೇಮಾದರಗಳಿಗೆ ಪಾತ್ರರಾಗಿದ್ದಾರೆ.

ಕೊನೆಗೆ, ಸಾಮಾನ್ಯ ಓದುಗರ ದೃಷ್ಟಿಯಿಂದ ಮಾಡಿದ ಒಂದೆರಡು ಸೂಚನೆಗಳನ್ನು ಪ್ರಕಾಶಕರು ಗಮನಕ್ಕೆ ತರುವರೆಂದು ಆಶೆ. ಸಾನ್ವಯಾರ್ಥವನ್ನು ಕೊಡುವಾಗ ಅನ್ವಯವನ್ನು ದಪ್ಪಾದ ಅಕ್ಷರಗಳಿಂದ ಮುದ್ರಿಸಿ ಅರ್ಥವನ್ನು ಕಂಸದಲ್ಲಿ ಕೊಡಬೇಕು. ಅನ್ವಯವನ್ನು ಶ್ಲೋಕದ ಕೆಳಗೆ ಬೇರೆ ಮುದ್ರಿಸಿದರೂ ಸಲ್ಲುವದು. ಇದರಿಂದ ಓದುವಾಗ ಗೊಂದಲವಾಗುವದಿಲ್ಲ. ಇನ್ನೊಂದು ಮಾತು. ವ್ಯಾಕರಣವಿವರದಲ್ಲಿ ಕ್ರಿಯಾಪದಗಳ ರೂಪಗಳನ್ನು ಕೊಟ್ಟಂತೆ ನಾಮಗಳ ರೂಪಗಳನ್ನು ಮೂಲ ರೂಪಸಹಿತವಾಗಿ ಕೊಡಬೇಕು. ಹೇಮ್ನಃ, ಜರಸಾ ಮುಂತಾದ ಹಲವು ಶಬ್ದಗಳ ರೂಪಗಳು ಕೊಡಲ್ಪಟ್ಟಿವೆ ಈ ವಿಧವಾಗಿ. ಆದರೆ ಬಹುತರ ಎಲ್ಲ ನಾಮಗಳ ಮೂಲರೂಪವನ್ನೂ ಶ್ಲೋಕದಲ್ಲಿದ್ದ ರೂಪವನ್ನೂ ಕೊಟ್ಟಿಲ್ಲ. ಅದನ್ನು ಎರಡನೆಯ ಆವೃತ್ತಿಯಲ್ಲಿ ಸರಿಪಡಿಸಬೇಕು.

ಇಂಗ್ಲೀಷ ಶಾಲೆಯ ಒನೆಯ ಈಯತ್ತೆಯಲ್ಲೋದಲು ಈ ಪುಸ್ತಕವು ಯೋಗ್ಯವಾದದ್ದು. ಅಧ್ಯಾಪಕರು ತಮ್ಮ ತಮ್ಮ ಶಾಲೆಗಳಲ್ಲಿದನ್ನುಪಯೋಗಿಸಿ ಪ್ರಕಾಶಕರಿಗೆ ತಕ್ಕ ಪ್ರೋತ್ಸಾಹವನ್ನು ಕೊಡುವರೆಂದು ನಂಬಿಕೆ.

—ಮನೋಹರ ದೇಶಪಾಂಡೆ

**ಅಭಿಸಾರ:**—ಬರೆದವರು ಸಾಲಿ ರಾಮಚಂದ್ರರಾಯರು, ಬೆಲೆ ೦-೩-೦.

ಇದೊಂದು ಚಿಕ್ಕ ಕವಿತೆ. ಶ್ರೀ ಮ. ಪ್ರ. ಪೂಜಾರರವರು ಬರೆದ ಪುಟ್ಟ ಮುನ್ನುಡಿಯಿಂದ ಅಲಂಕೃತವಾಗಿ ಮುಂದೆ ಬಂದಿದೆ. ಶ್ರೀ ಪೂಜಾರರವರು ಹೇಳುವಂತೆ ಇದೊಂದು "ಭಾವ ಪ್ರಧಾನ-ಲಘುಕಾವ್ಯ"ವಾಗಿದ್ದರೂ ಆ ಭಾವನೆಯು ಒಂದು ಚಿತ್ತಾಕರ್ಷಕವಾದ ಸನ್ನಿವೇಶದಲ್ಲಿ ಚಿತ್ರಿತವಾಗಿದೆ. ರವೀಂದ್ರರ 'ಅಭಿಸಾರ'ವೆಂಬ ಕವಿತೆಯು ಇದಕ್ಕೆ ಮೂಲಾಧಾರ; ಆದರೂ ಇದೊಂದು ಸ್ವತಂತ್ರ ಕವಿತೆಯೆಂದೇ ಹೇಳಬಹುದು. ಏಕೆ ದರೆ ಕವಿಯು ಈ ಕತೆಯೊಡನೆ ಹಾಗು ಅದರಲ್ಲಿ ವ್ಯಕ್ತವಾದ ತತ್ತ್ವದೊಡನೆ ಸಂಪೂರ್ಣವಾಗಿ ಬೆರೆತಿದ್ದಾನೆ.

ರಾತ್ರಿಯಾಗಲು ಮರದಡಿಯಲ್ಲಿ ಮಲಗಿರುವ ಉಪಗುಪ್ತನ ಕಾಲನ್ನು ಅಭಿಸಾರಿಕೆಯಾದ ವಾಸವದತ್ತೆಯು ತುಳಿದಾಗ ಈರ್ವರಲ್ಲಿ ಜನಿಸಿದ ವಿಚಾರಗಳ ತಾಕಲಾಟದಿಂದುಂಟಾದ ಕೋಲ್ಮಿಂಚು ಹೊಳೆಯುವದು. ಉದಾಸೀನಳಾಗಿ ಅವಳು ಮನೆಗೆ ನಡೆದಾಗ ಮಳೆಗರೆಯಲು ಸುರುವಾಗಿ 'ಮೊಳಗಿತು ಮುಗಿಲೊಳು ಪ್ರಳಯದ ಭೇರಿ.' ಮುಂದೆ ಬರುವ ವಸಂತ ಕಾಲದ ಬೆಳದಿಂಗಳ ರಾತ್ರಿಯಲ್ಲಿ ಪುರವಾಸಿಗಳು 'ಸುಡ ತೊರೆವಂತವಳನು' ತೊರೆದಾಗ ಈ ಮುನಿವರನ ಪ್ರಶಾಂತವಾದ ಅಂತಃಕರಣದ ಬೆಳದಿಂಗಳು ಆ ವನಿತೆಯನ್ನು ಚೇತರಿಸಿಗೊಳಿಸಿ ಅವಳನ್ನು ಉದ್ಧರಿಸುವದು; ಆಗ ಅಲರುಗಳೆಲ್ಲ ಕುಲುಕುಲು ನಲಿಯುವವು. ಇವೇ ಮೊದಲಾದ ವರ್ಣನೆಗಳು ಕವಿಗೆ ಪ್ರಕೃತಿಸೌಂದರ್ಯದಲ್ಲಿದ್ದ ಪ್ರೇಮವೂ ಆ ಚೆಲುವಿನ ರುಚಿಯು ಹೆಚ್ಚುವ ಹಾಗೆ ಕಥಾನಕದಲ್ಲಿ ಬೆರೆಸುವ ಕೌಶಲ್ಯವೂ ಚೆನ್ನಾಗಿ ವ್ಯಕ್ತವಾಗುತ್ತವೆ.

ಶೃಂಗಾರಲತೆಯಾದ ವಾಸವದತ್ತೆಯ ಬೆಡಗನ್ನೂ ವೈರಾಗ್ಯ ಮೂರ್ತಿಯಾದ ಉಪಗುಪ್ತನ ಭಾವವನ್ನೂ ಉತ್ತಮವಾಗಿ ಬಣ್ಣಿಸಿದ್ದಾನೆ. ವಾಸವದತ್ತೆಯು ಸಾಧುವನ್ನು ಮನೆಗೆ ಕರೆಯುವ ರೀತಿಯೂ ಕವಿಯ ಜಾಣ್ಮೆಯನ್ನು ತೋರಿಸುತ್ತದೆ.

ಒಟ್ಟಿನಮೇಲೆ ಇದೊಂದು ಮುದ್ದಾದ ಕವಿತೆ. ಶೈಲಿಯು ಸರಳವಾಗಿಯೂ ಛಂದವು ಅಂದವಾಗಿಯೂ ಸ್ವರವು ಸಮ ವಾಗಿಯೂ ಇದೆ. ಸಾಲಿಯವರ ಮೃದುಮಧುರ ವಾಣಿಯು ಪ್ರತಿನುಡಿಯಲ್ಲಿಯೂ ಮನಸ್ಸನ್ನೆಳೆಯುತ್ತದೆ. ಆದರೆ ಈ ಚಿಕ್ಕ ಪುಸ್ತಕಕ್ಕಿಟ್ಟ ಬೆಲೆಯು ತೀರಾ ಹೆಚ್ಚು ಯೆಂದು ನಮ್ಮ ಮತ.

—ವಿ. ಕೆ.

**ಸಾವಿತ್ರಿಯ ಸೌಭಾಗ್ಯ** :—( ಕಥಾಂಜಲಿ ಗ್ರಂಥಮಾಲೆ ೩. ಬರೆದವರು. ಶ್ರೀ ಅ. ನ. ಕೃಷ್ಣರಾಯರು ) ಈ ಸಣ್ಣ ಕಥೆಯ ಸಾರಾಂಶ: ತಾಯಿಯನ್ನು ಕಳೆದುಕೊಂಡು ಮಲತಾಯಿಯ ಕಾಟಕ್ಕೆ ಗುರಿಯಾದ ಸಾವಿತ್ರಿಯೆಂಬ ಸುಶೀಲೆಯಾದ ಹುಡಿಗೆಯು ಅಕಸ್ಮಾತ್ತಾಗಿ ಸಂಭವಿಸಿದ ತರುಣ ಪತಿಯ ಮರಣದಿಂದ ವಿಧವೆಯಾಗುವಳು. ಅವಳ ಮಲತಾಯಿ, ಸುಬ್ಬಿ ಹಾಗೂ ಸುಬ್ಬಿಯ ತಾಯಿ ಗೌರಮ್ಮ, ಇಬ್ಬರೂ ಸಾವಿತ್ರಿಯನ್ನೂ ಅವಳ ತಮ್ಮ ಪುಟ್ಟನನ್ನೂ ಅತಿಯಾಗಿ ಕಾಡುವರು. ಒಂದು ದಿನ ತಂದೆ ಲಕ್ಷ್ಮಣರಾಯರು ನಗರಕ್ಕೆ ಹೋದಾಗ ಬೆಳಗಿನಲ್ಲಿದ್ದು ಸುಬ್ಬಿಯು ಸಾವಿತ್ರಿಯ ಹಸುರು ಸೀರೆಯನ್ನು ನೋಡಿದ್ದಕ್ಕೂ ಸಂಜೆಯಲ್ಲಿ ಸುಬ್ಬಿಯು ಕಾಲೆಡವಿ ಬಿದ್ದು ತಲೆ ಒಡೆದುಕೊಂಡದ್ದಕ್ಕೂ ಗೌರಮ್ಮನು ಗಂಟುಹಾಕಿ ಸಾವಿತ್ರಿಯನ್ನು ಒಳಿತಾಗಿ ತಳಿಸುವಳು. ಆ ಏಟುಗಳಿಂದ ಹಾಗೂ ವೈಧವ್ಯ ದುಃಖದಿಂದ ಸಾವಿತ್ರಿಯು ತಂದೆಗೆ ಪತ್ರ ಬರೆದಿಟ್ಟು ಸಾಯುವಳು. ಅವಳ ಎಳಕ ತಮ್ಮನೂ ಅವಳನ್ನು ಹಿಂಬಾಲಿಸುವನು. ಇದು ಸಾವಿತ್ರಿಯ ಸೌಭಾಗ್ಯ! ಅರ್ಥಾತ್ ಅವಳ ದುರ್ಭಾಗ್ಯ. ಈ ಕಥೆಯಲ್ಲಿ ಅಪಾಯಕಾರಕವೆಂದು ತೋರಿಸಿರುವುವು ಸಮಾಜದ ಮೂರು ಸ್ಥಿತಿಗಳು: ಮಲತಾಯಿಯ ರಕ್ಕಸತನ, ವಿಧವೆಯರ ಸಾಯುವ ಗೋಳು, ಹಾಗೂ ಅಪಶಕುನದ ದುಷ್ಪರಿಣಾಮ. ಇವುಗಳನ್ನು ಕತೆಗಾರರು ಕಣ್ಣ ಮುಂದೆ ಕಟ್ಟುವಹಾಗೆ ಸ್ವಭಾವೋಚಿತ ಭಾಷೆಯಲ್ಲಿ ಚಿತ್ರಿಸಿರುವರು. ವಿಶೇಷವಾಗಿ, ಮದುವೆಯ ದಿನ ' ಕರುಣಾಕರ ನೀ ' ಎಂದು ಸಾವಿತ್ರಿಯು ಹಾಡಿ ಕಣ್ಣೀರು ಸುರಿಸಿದ ಸಂಗತಿಯಲ್ಲಿರುವ ಸೂಚನೆಯೂ, ಪುಟ್ಟನ ಕಟ್ಟಕಡೆಯ ಎದೆಯೊಡೆಯುವ ಮೊದ್ದು ಮಾತುಗಳೂ ಹೃದಯಸ್ಪರ್ಶಿಯಾಗಿವೆ. ಆದರೆ ಕಥೆಯು ಕಲಾದೃಷ್ಟಿಯಿಂದ ಹೊಂದಬೇಕಾದ ಪರಿಪಾಕವನ್ನು ಹೊಂದಲಿಕ್ಕೆ ಒಂದೆರಡು ಕೊರತೆಗಳು ಅಡ್ಡಲಾಗಿವೆ. 'ಮುದುಕನೋ, ಮೋಟನೋ' 'ಗಂಡಾನ್ನೋ ವಸ್ತು ದೇವರ ಸಮಾನ' ಎಂದು ಮುಂತಾಗಿ ನುಡಿದು ಪತಿಭಕ್ತಿಯನ್ನಲ್ಲದೆ ಪರಂಪರಾಸಕ್ತಿಯನ್ನೂ ತೋರಿಸುವ 'ಚೆಂದೊಳ್ಳೇ ಹುಡಿಗೆ'ಯು ಪತ್ರ ಬರೆದಿಟ್ಟು, ಅದರಲ್ಲಿಯೂ ಅಂಥ ಪತ್ರ ಬರೆದಿಟ್ಟು ಸಾಯುವಳೆಂಬುದು ನಮಗೆ ಸ್ವಭಾವವಿರುದ್ಧವಾಗಿ ತೋರುತ್ತದೆ. ಅವಳಿಗೆ ವೈಧವ್ಯದುಃಖವು ಎನಿಸದೆ ಇಲ್ಲ. ಅದೇಕೆ? ಎನಿಸಿದಷ್ಟೂ ಅದಕ್ಕೆ ಬಾಯಿಯಿಲ್ಲ. ಸಾಮಾನ್ಯವಾಗಿ ಹಳೆಯದರ ಮೇಲೆ ಶ್ರದ್ಧೆಯುಳ್ಳ ಒಳ್ಳೆಯ ಸ್ತ್ರೀಯರಲ್ಲಿ ನಿಜವಾದ ಸ್ಥಿತಿಯು ಹೀಗಿರುತ್ತದೆ. ಎಲ್ಲವೂ ಬೇಡೆನಿಸುತ್ತದೆ, ಆದರೆ ಕೊರಗಿನ ಕರಗಸವು ಒಳಒಳಗೇ ಕೊರೆಯುತ್ತದೆ. ಇರುವದೆಲ್ಲ ಕರುಣ ಪ್ರಸಂಗವು ಇಂಥ ದೃಶ್ಯದಲ್ಲಿರುವುದರಿಂದ ಹಾಗೆ ಚಿತ್ರಿಸದೆ "ಹಿಂದೂ ಸಮಾಜದಲ್ಲಿ ವಿಧವೆಯರಿಗೆ ಸ್ಥಾನವಿಲ್ಲ" ಎಂದು ಮುಂತಾಗಿ ಕಾಗದ ಬರೆಸಿ ಕತೆಗಾರರು ಕಾಲನ ಕೈಯಲ್ಲಿ ಸಾವಿತ್ರಿಯನ್ನು ಕೊಟ್ಟದ್ದರಿಂದ ಈ ಕಥೆಯ ಜೀವಾಳವೇ ಹಸಗೆಡುತ್ತದೆ. ಇದಲ್ಲದೆ ಸಮಾಜದ ಎರಡು ಮೂರು ಅನಿಷ್ಟಗಳನ್ನು ಕಲೆಹಾಕಿ ಸಣ್ಣ ಕತೆ ಬರೆಯುವದರ ಮೂಲಕ ಯಾವದೊಂದರ ಪರಿಣಾಮವೂ ಪೂರ್ತಿಯಾಗುವದಿಲ್ಲ. ಕಣ್ಣೀರುಗಳೇನೋ ಕಡೆಗೆ ಬರುತ್ತವೆ; ಆದರೆ ಅವು ಪುಟ್ಟನ ಮಾತುಗಳಿಗೆ. ಯಾಕಂದರೆ ಸಾವಿತ್ರಿಗೆ ಬಂದ ಮೊದಲನೆಯ ಸೆಳೆತವು ದೈವದ್ದು, ಎರಡನೆಯದು ಮಲತಾಯಿಯ ಮೂಢ ಬುದ್ಧಿಯದು. ಇಂಥದರಲ್ಲಿ ಅವಳು ಬರಿಯ ವಿಧವೆಯೆಂದು ನಿತ್ಯವಾಗಿ ಎಲ್ಲ ತರದ ತಾಯಂದಿರೂ ನಡೆಸಿರುವ ಆ ಮಂಗಳಾಲಾಪವು ಈ ಕಥೆಯಲ್ಲಿ ಹೇಗೆ ರೂಪುಗೊಳ್ಳಬೇಕು ?

—ರ. ಶ್ರೀ. ಮುಗಳಿ.

---

**ಶ್ರೀ. ಕೆ. ಗೋಪಾಲ ಕೃಷ್ಣರ ಕತೆಗಳು** :—'ಶ್ರೀನಿವಾಸ' 'ಆನಂದಕಂದ'ರ ಸಣ್ಣ ಕತೆಗಳು ಈಗಲೆ ಲೋಕಪ್ರಿಯವಾಗಿವೆ. ಕಥಾಸಾಹಿತ್ಯವು ಹೀಗೆ ಜನತೆಯ ಪ್ರೇಮವನ್ನು ಸಂಪಾದಿಸಿದ್ದನ್ನು ನೋಡಿ ಅನೇಕ ತರುಣ ಸಾಹಿತಿಗಳು ಮನೋಹರವಾದ ಕತೆಗಳನ್ನು ಬರೆದು ಹಿರಿಯರನ್ನೂ ಓದುಗರನ್ನೂ ಆನಂದಗೊಳಿಸುತ್ತಿರುವರು. ಇಂತಹ ತರುಣರ ಮೇಲ್ತರಗತಿಯಲ್ಲಿ ಇರುವವರೊರ್ವರು ಶ್ರೀ. ಕೆ. ಗೋಪಾಲ ಕೃಷ್ಣರಾಯರು.

ನಮ್ಮೆಡೆಗೆ ಬಂದ ಇವರ ನಾಲ್ಕು ಕತೆಗಳು ಪ್ರಸ್ತುತ ಸಾಮಾಜಿಕಸ್ಥಿತಿಯನ್ನೇ ಅನುಲಕ್ಷಿಸಿ ಬರೆದವುಗಳು. ಮೂಡಣದ ಹಾಗು ಪಡುವಣದ ಸಂಸ್ಕೃತಿಯ ಸಂಘರ್ಷದಿಂದ ಹುಟ್ಟಿ ಬಂದ ನಮ್ಮ ಜೀವನದ ಅಂದಚೆಂದಗಳನ್ನೂ ಕುಂದುಕೊರತೆಗಳನ್ನೂ ಇವುಗಳಲ್ಲಿ ಅಲ್ಲಲ್ಲಿ ಚಿತ್ರಿಸಲಾಗಿದೆ.

ಇವುಗಳಲ್ಲಿ ಮೊದಲನೆಯ ಕತೆಯು ( 'ಕಂಡದ್ದು ನಾಲ್ಕು ಸರ್ತಿ')ಅತ್ಯುತ್ತಮವಾದುದೆಂದು ಹೇಳಬಹುದು. ಮುಗ್ಧೆಯೂ ಸುಂದರಿಯೂ ಬುದ್ಧಿವಂತೆಯೂ ನೀತಿವಂತೆಯೂ ಆದ ಕಮಲೆಯು ಪತಿಯನ್ನು ಕಳೆದುಕೊಂಡ ಮೇಲೆ ಇನ್ನೂ ಅನನತ ಸ್ಥಿತಿಯಲ್ಲಿರುವ ನಮ್ಮ ಈ ಸಮಾಜದಲ್ಲಿ ಹೇಗೆ ಸಂಕಟಕ್ಕೆ

ಗುರಿಯಾದಳೆಂಬುದು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿದೆ. ಮೂರನೆಯ ಭಾಗದಲ್ಲಿ ಬಂದಿರುವ ಜಾಗ್ರತಸ್ವಪ್ನವು (Reverie) ಎಲ್ಲ ಬಗೆಯಿಂದಲೂ ಕತೆಗಾರರ ಕೌಶಲ್ಯವನ್ನು ತೋರಿಸುತ್ತದೆ. ಈ ಕಥೆಯ ಒಂದೇ ಒಂದು ದೋಷವೆಂದರೆ:— ಅದು ಏಕಮುಖವಾಗಿಲ್ಲ. ಒಂದೇ ಒಂದು ಭಾವನೆಗೆ ಮೊದಲಿನಿಂದ ಎಲ್ಲವೂ ಒಳಪಟ್ಟಿಲ್ಲ (Unity of Conception). ಉದ್ವೇಗಗಳ ದ್ವಂದ್ವಯುದ್ಧವನ್ನು ನಾವು ಇಲ್ಲಿ ಕಾಣಬಹುದು. ಅನನ್ಯಳಾದ ಕಮಲೆಯ ವ್ಯಕ್ತಿತ್ವವು– ಸುಂದರ ರೂಪವು–ಸಮಾಜದ ಸಂಕೋಲೆಗಳಲ್ಲಿ ಸಿಕ್ಕು ಬಿದ್ದ ಓರ್ವ ಅಭಾಗಿನಿಯ ದೃಶ್ಯದಲ್ಲಿ ಬೆರೆತು ಹೋಗಿ ಈ ತರಹದ ಸೂಚನೆಯು ವಿಶೇಷವಾಗಿ ಅಡಕವಾಗಿರದ ಮೊದಲಿನ ಪ್ರೇಮ ಮೀಮಾಂಸೆಯು ಅಲ್ಲಿಯೇ ಉಳಿಯುವದು.

ಉಳಿದ ಮೂರು ಕತೆಗಳ ಬಂಧವು ಇದಕ್ಕಿಂತ ಕಡಿಮೆ ಗಂಭೀರವಾಗಿದೆ. ಅವುಗಳ ಬರಹವನ್ನು ಪ್ರೇರಿಸಿದ ಭಾವನೆಯು ಇಷ್ಟು ಉದಾತ್ತವಾಗಿಲ್ಲ. ಆದರೂ ಅವು ಸುಂದರ ಚಿತ್ರಗಳು. 'ಸೀನು ಉಡುಗರೆ' ಎಂಬ ಕತೆಯು ಮೇಲಿನ ಕತೆಯಂತೆ ಪರಿಣಾಮಕರವಾದ ಒಂದು ಶೋಕಜನ್ಯಸನ್ನಿವೇಶವನ್ನು ಒಳಗೊಂಡಿದೆ. ಹೆಂಡತಿಯಾದ ಶಾರದೆಯು ಸುಖಕ್ಕೋಸ್ಕರ ಕಷ್ಟಪಡುತ್ತಿರುವ ಬಡವನಾದ ಸೀನುವಿಗೆ ಅವಳು ತೀರಿಹೋದ ಮೇಲೆ ಒಂದು ದೊಡ್ಡ ಕೆಲಸವು ಸಿಗುವದು. ಏನು ಸಿಕ್ಕರೇನು ? ಆದರೆ ಇಲ್ಲಿ ಶಾರದೆಯ ವಿಷಯಕವಾದ 'ಸಿಡುಕುಗಾರ್ತಿ' ಮುಂತಾದ ಮಾತುಗಳಿಂದ ಆ ದಂಪತಿಗಳ ನಡುವೆ ವೈಮನಸ್ಯವಿದ್ದಿತೆಂದು ಅರ್ಥವಾಗುವದರಿಂದ ಅವು ಅಷ್ಟು ಉಚಿತವಾಗಿಲ್ಲ.

'ರಾಮಾಶ್ವಮೇಧವು' ಶ್ರೀನಿವಾಸರ 'ರಂಗಪ್ಪನ' ಕತೆಯ ಮಾದರಿಯ ಒಂದು ಚಿತ್ರವು. ಹೆಂಡತಿಯು ಹಳ್ಳಿಯ ಹುಡಿಗೆಯಿದ್ದರೆ ಅವಳನ್ನು ಸುಧಾರಿಸುವಾಗ ಒದಗುವ ತೊಂದರೆಗಳು ಇಲ್ಲಿ ವರ್ಣಿತವಾಗಿವೆ. ಆದರೆ 'ಪ್ರೇಮಕದನ'ಕ್ಕೆ ಕತೆಗಾರರು ಏಕೆ ಅಷ್ಟು ಮನ್ನಣೆಕೊಟ್ಟರೋ ತಿಳಿಯದು. ಇಂತಹ ಸಂಗತಿಗಳನ್ನು ನಿರರ್ಥಕವಾಗಿ ಹೀಗೆ ಬಿಚ್ಚಿ ಹೇಳುವದರಲ್ಲಿ ಸಾಹಿತ್ಯ ಪ್ರಗತಿಯಿದ್ದರೆ ಅಂಥ ಪ್ರಗತಿಗೆ ಶರಣು !

'ಏನಿದು ಹುಚ್ಚು!' ಎಂಬ ಕತೆಯು ಚಿತ್ತರಂಜಕವಾಗಿದೆ. 'ಕಂಡದ್ದು ನಾಲ್ಕು ಸರ್ತಿ' ಯಲ್ಲಿ ಬಿಡಿಸಿದಂತಹ ಸಮಸ್ಯೆಯು ಇಲ್ಲಿ ಇರದಿದ್ದರೂ ಒಂದು ಹಾಸ್ಯರಸಪ್ರಧಾನವಾದ ಸನ್ನಿವೇಶವಿದೆ. ಕತೆಗಾರನಾದ ಕಥಾನಾಯಕನ ಕಾರ್ಯದಲ್ಲಿ ಪ್ರೇಮವೇ ಪ್ರೇರಣೆಯಾಗಿ ಪರಿಣಮಿಸುವ ಬಗೆಯನ್ನು ಲೇಖಕರು ಸರಸವಾಗಿ ಚಿತ್ರಿಸಿದ್ದಾರೆ. ಕಥೆಯ ವಸ್ತುವು ಶಾಶ್ವತವಿದ್ದರೂ ರೀತಿಯು ನೂತನವಾದುದು.

ಒಟ್ಟಿನ ಮೇಲೆ ಇವು ಒಳ್ಳೆಯ ಕತೆಗಳು. ನೈಜ ಪ್ರೇಮವು ಸಮಾಜದ ಕೊರತೆಗಳೂ 'ಕಂಡದ್ದು ನಾಲ್ಕು ಸರ್ತಿ' ಹಾಗು 'ಸೀನು ಉಡುಗರೆ' ಎಂಬ ಕಥೆಗಳಲ್ಲಿ ವಿಶದವಾಗಿದ್ದರೆ ಹಾಸ್ಯರಸಪೂರಿತವಾದ(Humorous)ದೃಷ್ಟಿಯಿಂದ ಪ್ರೇಮವನ್ನು ವೀಕ್ಷಿಸುವ ಬಗೆಯನ್ನು ಉಳಿದೆರಡು ಕಥೆಗಳಲ್ಲಿ ನಾವು ಕಾಣಬಹುದು. ಕೆಲವು ದೋಷಗಳನ್ನು ತೋರಿಸಿದ ಮಾತ್ರಕ್ಕೆ ಮೇಲೆ ಹೇಳಿದವುಗಳ ಹೊರತು ಬೇರೆ ಗುಣಗಳಿಲ್ಲವೆಂದರ್ಥವಲ್ಲ. ಇನ್ನೂ ಅನೇಕ ಗುಣಗಳಿವೆ. ಅವುಗಳನ್ನು ವಾಚಕರು ಸವಿದು ನೋಡಬೇಕು. ಮೇಲಿನ ಕೆಲವು ಸೂಚನೆಗಳ ಕಡೆಗೂ 'ಹಾಲು (Hall)' 'ಪರಿಮಳಮಿಶ್ರಿತವೆಳಗಾಳಿ' ಮುಂತಾದ ಶಬ್ದಗಳ ಉಪಯೋಗದ ಕಡೆಗೂ ಲಕ್ಷ್ಯಕೊಡಬೇಕಾಗಿ ಕತೆಗಾರರಿಗೆ ನಮ್ಮ ಸೂಚನೆಯಿದೆ. ಆಂಗ್ಲಭಾಷೆಯ ಶಬ್ದಗಳನ್ನು ಹೆಚ್ಚಾಗಿ ನಾವು ಕನ್ನಡದಲ್ಲಿ ಏಕೆ ಬೆರಸಬೇಕು?

—ವಿ. ಕೃ. ಗೋ.

**ಯಾರಿಗೆ ಯಾರು ಕಡಿಮೆ ?** (ಕತೆ) ಲೇ: ಶ್ರೀ ಚಿಂಚೋಳಿ ಜಯಪೂರ್ಣಾಚಾರ್ಯರು. ಇದು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಸಿದ್ಧವಾದ ಅನೇಕ ಒಳ್ಳೆಯ ಕತೆಗಳಲ್ಲಿ ಒಂದು. ಅಲ್ಲದೆ ಮುದ್ದಣನ ಸ್ವರ್ಣಪದಕವನ್ನಾದರೂ ಸಂಪಾದಿಸಿದೆ. ಯಾರಿಗೆ ಯಾರು ಕಡಿಮೆ ! ಹೆಣ್ಣಾಗಿ ಹುಟ್ಟಿದ ಮಾತ್ರಕ್ಕೆ ಮನುಷ್ಯನಿಗೆ ಅಧೀನಳಾಗಿರುವದು ಹೆಂಡತಿಯ ಕರ್ತವ್ಯವೆ ? ಎಂಬ ಪ್ರಶ್ನೆಯನ್ನು ಇಲ್ಲಿ ಲೇಖಕರು ಸೋದಾಹರಣವಾಗಿ ಚರ್ಚಿಸಿರುವರು. ಕಥೆಯ ಮೊದಲನೆಯ ಹಾಗು ಕೊನೆಯ ಭಾಗಕ್ಕಿರುವ ಸಾಮ್ಯವೂ ಅಲ್ಲಲ್ಲಿ ಕಂಡುಬರುವ ಪಾತ್ರಗಳ ಚಲನವಲನೆಗಳ ಸೂಕ್ಷ್ಮ (detailed) ವರ್ಣನೆಯೂ ಲೇಖಕರ ಕಲಾಕೌಶಲ್ಯವನ್ನು ವ್ಯಕ್ತಗೊಳಿಸುತ್ತವೆ. ಸುಧಾರಿಸಿದ ಶಾರದೆಯ ಪತಿಗೆ ಆಕೆಯ ವಿಷಯಕ್ಕಾದ ತಪ್ಪು ತಿಳುವಳಿಕೆಯಿಂದ ಜನಿಸಿದ ಕಷ್ಟವು ಹೃದಯವನ್ನು ತಟ್ಟುತ್ತದೆ. ಲಕ್ಷ್ಮಿಯಂತಹ ಸರಲ ಸ್ವಭಾವದ ಹುಡಿಗೆಯರಾದರೂ ನಮ್ಮ ಸಮಾಜದಲ್ಲಿ ಆಗಾಗ್ಗೆ ಕಣ್ಣಿಗೆ ಬೀಳುತ್ತಾರೆ.

ಇಲ್ಲಿಯವರೆಗೆ ಎಲ್ಲವೂ ಸ್ವಾಭಾವಿಕವಿದ್ದರೂ ಲೇಖಕರು ದಂಪತಿಗಳ ಪುನರ್ಮಿಲನವನ್ನು ಮಾಡುವದಕ್ಕಾಗಿ ...

ಕೊಂಡ ೪–೫ ಕೊಲೆಗಳ ಪಾಪವು ಮಾತ್ರ ಅನಪೇಕ್ಷಿತವಾಗಿದೆ. ಹೀಗೆ ಮರಣಗಳಾಗುವದು ಅಸಂಭವವೆಂಬುದು ನಮ್ಮ ಮತವಲ್ಲ. ಆದರೆ ಒಂದು ಸಣ್ಣ ಕತೆಯ ಬೊಗಸೆಯೊಡ್ಡಿದಷ್ಟು ಸೀಮೆಯಲ್ಲಿ ಇಷ್ಟು ಕೊಲೆಗಳು ಬಂದರೆ ಕಲಾಕೌಶಲ್ಯಕ್ಕೆ ಅಲ್ಪವಾದರೂ ಭಂಗ ಬಂದು ಕತೆಯು ಪೂರ್ಣವಾಗಿ ಸ್ವಭಾವಸಿದ್ಧವಾಗಿರದೆ ಅರ್ಧಭಾಗವು ನೈಜವಾಗಿದ್ದು ಇನ್ನುಳಿದ ಭಾಗವು ಒಂದು ಉದ್ದೇಶವನ್ನು ಸಾಧಿಸಲು ರಚಿಸಿದಂತಾಗುವದು. ಕಥೆಯು ಚೆನ್ನಾಗಿ ಹೆಣೆಯಲ್ಪಟ್ಟದ್ದು ಹೀಗೆ ಕೆಲವು ದೋಷಗಳಿದ್ದರೂ ಪೂರ್ಣತೆ (Perfection) ಯನ್ನು ಹೊಂದಿದೆ.

--ರ. ಶ್ರೀ. ಮು.

---

**೧. ಗಾಂಧಿ ಮಹಾತ್ಮನ ತತ್ತ್ವಬೋಧೆ, ಬೆಲೆ ೨ ಆಣೆ;**
**೨. ಕೈ. ಲಜಪತರಾಯರ ಚರಮ ಶ್ಲೋಕಾವಳಿ**
**೩. ನನ್ನ ತಾಯಿನಾಡು ಬೆಲೆ ೬ ಪೈ.**
**೪. ಶ್ರೀಕೃಷ್ಣ ರಾಜೇಂದ್ರ ವಿಳಾಸಂ ಬೆಲೆ ೮ ಆಣೆ.**

ಲೇಖಕರು : ಶ್ರೀ. ಶಿವಮೂರ್ತಿಶಾಸ್ತ್ರಿ, ಕೀರ್ತನಕೇಸರಿ, ಕವಿರತ್ನ, ಹುಲ್ಲುಂಟೆಮಠ, ತುಮಕೂರು.

೧. ಗಾಂಧಿಯವರು ತುಮಕೂರಿಗೆ ದಯಮಾಡಿಸಿದುದರ ಸ್ಮರಣಾರ್ಥವಾಗಿ ಬರೆಯಲ್ಪಟ್ಟಿದೆ. ೪೩ ಭಾಮಿನಿ ಷಟ್ಪದ್ಯಗಳಲ್ಲಿಯೂ ೯ ಕಂದ ಪದ್ಯಗಳಲ್ಲಿಯೂ ಗಾಂಧಿಯವರ ತತ್ತ್ವಬೋಧೆಯೆಲ್ಲಾ ಬಣ್ಣಿಸಲ್ಪಟ್ಟಿದೆ. ಭಾಷೆಯು ಅತ್ಯಂತ ಸರಳ.

ಕೊನೆಯಲ್ಲಿ ಸಿ. ಆರ್. ದಾಸರವರ ಚರಮಶ್ಲೋಕಾವಳಿಯು ೧೮ ಕಂದ ಪದ್ಯಗಳನ್ನು ಜೋಡಿಸಲಾಗಿದೆ. ಇದರಲ್ಲಿ 'ದೇಶಬಂಧು'ವಿನ ಜೀವನಮಹಿಮೆಯನ್ನು ಹೇಳಿದ್ದಾರೆ.

೨. ೧೩ ಕಂದಪದ್ಯಗಳಲ್ಲಿಯೂ ೨ ವೃತ್ತಗಳಲ್ಲಿಯೂ ಲಾಲಾಜಿಯವರ ಚರಿತೆಯೊಳಗಿನ ಮುಖ್ಯ ಮುಖ್ಯ ಸಂಗತಿಗಳೆಲ್ಲಾ ಹೇಳಲಾಗಿವೆ.

೩. ಇದು ೧೯೨೫ನೆಯ ವರ್ಷದ 'ಏಕೀಕರಣ ದಿನ'ದ ಉತ್ಸವಕ್ಕಾಗಿ ಬರೆದುದು. ಕನ್ನಡ ನಾಡಿನ ಕವಿಗಳು, ಕ್ಷೇತ್ರಗಳು, ವೀರರು ಇವರಿಂದ 'ವೈಭವಾಸ್ಪದವಾಗಿರುವ' ಕನ್ನಡ ನಾಡಿನ ಮಹಿಮೆಯು ೪ ವೃತ್ತ ೨ ಕಂದಗಳಲ್ಲಿ ವರ್ಣಿತವಾಗಿದೆ. ತರುವಾಯ 'ಕನ್ನಡ ನಾಡಿನ ಉದ್ಧಾರಕ' ಕಡಪಾ ರಾಘವೇಂದ್ರರಾಯರ ಚರಿತೆಯ ವಿಷಯವಾಗಿ ೬ ಭಾಮಿನಿ ೧ ಕಂದ ಪದ್ಯಗಳಲ್ಲಿ ಉಲ್ಲೇಖಿಸಿದ್ದಾರೆ. ಕಡಪಾರಾಯರು ಗಣಪತಿಯ ಅವತಾರವೆಂದು ಕವಿಗಳು ಹೇಳಿದ್ದು ಕೀರ್ತನಕಾರರಿಗೆ ಸಹಜವಾದ ಮಾತಾಗಿದೆ. ಹೀಗೆ ಕಟ್ಟುವ ಹೊಸ ಪೌರಾಣಿಕ ಕತೆಗಳು ಎಷ್ಟು ದಿವಸ ಬಾಳುವವೊ ಎಂಬುದು ಸಂದೇಹಾಸ್ಪದ ವಿಷಯವೇ ಸರಿ.

೪. ಇದು ಶ್ರೀಮನ್ ಮಹಾರಾಜರವರು ಅಮೃತ ಹಸ್ತದಿಂದ ತುಮಕೂರದಲ್ಲಿ ವಿದ್ಯುದ್ದೀಪಗಳ ಪ್ರಾರಂಭೋತ್ಸವವು ನಡೆವುದರ ಸ್ಮರಣಾರ್ಥವಾಗಿ ಪ್ರಕಟವಾದುದು. ಶ್ರೀ ಪಿ. ಆರ್ ಕರಿಬಸವ ಶಾಸ್ತ್ರಿಗಳು ತಮ್ಮ ಉಪೋದ್ಘಾತದಲ್ಲಿ ಹೇಳಿದಂತೆ "ಈ ಕಾವ್ಯವು ಚಂಪೂರೂಪವಾಗಿದೆ. ನಾಲ್ಕು ಭಾಗಗಳಾಗಿ ಭಾಗಿಸಲ್ಪಟ್ಟು ಪ್ರತಿಭಾಗಕ್ಕೂ 'ತರಂಗ'ವೆಂಬ ಹೆಸರನ್ನು ಕೊಟ್ಟಿದೆ. ಪ್ರಥಮತರಂಗದಲ್ಲಿ ಭರತಖಂಡದ ಮತ್ತು ಕರ್ಣಾಟಕದ ವರ್ಣನೆಯಿದೆ. ದ್ವಿತೀಯತರಂಗದಲ್ಲಿ ಯದುವಂಶದ ರಾಜರ ಚರಿತ್ರೆಯನ್ನು ಯದುಮಹಾರಾಜರಿಂದ ಹಿಡಿದು ಆಳುವ ಮಹಾಪ್ರಭುಗಳವರೆಗೆ ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ. ತೃತೀಯತರಂಗದಲ್ಲಿ ಶ್ರೀಮನ್ಮಹಾರಾಜರ ಗುಣಗಳೂ ಸದಾಚಾರ ಸನ್ಮಾರ್ಗಗಳೂ ಹೇಳಲ್ಪಟ್ಟಿವೆ. ಚತುರ್ಥತರಂಗದಲ್ಲಿ ಶ್ರೀಮನ್ಮಹಾರಾಜರವರ ಕಾಲದಲ್ಲಾದ ದೇಶಾಭಿವೃದ್ಧಿ ಕಾರ್ಯಗಳು ವರ್ಣಿತವಾಗಿವೆ. ಒಟ್ಟಿನಲ್ಲಿ ನವೀನವೂ ಅವಲೋಕನೀಯವೂ ಆದಖಂಡಕಾವ್ಯವಾಗಿದೆ." ಕವಿಗಳೇ ಪೀಠಿಕೆಯಲ್ಲಿ ಹೇಳಿದಂತೆ ಈ ಗ್ರಂಥವು ಮುಖ್ಯವಾಗಿ ರಾಜಭಕ್ತಿಯಿಂದ ಬರೆದುದು. ರಾಜಭಕ್ತಿಯನ್ನು ಸುತರಾಂ ಅರಿಯದ ನಾವು ಆ ವಿಷಯದಲ್ಲಿ ಮಾತನಾಡುವದು ಅಸಮಂಜಸವಾದೀತು. ಈ ಕಾವ್ಯದಲ್ಲಿ ಷಡಕ್ಷರಿಯ ರಾಜಶೇಖರವಿಳಾಸದ ಪರಿಣಾಮವನ್ನು ಅನೇಕ ಕಡೆಗೆ ಕಾಣಬಹುದು. ಚಾಮುಂಡೇಶ್ವರಿ, ಕೃಷ್ಣರಾಜ, ಚಾಮರಾಜ, ನರಸಿಂಹರಾಜ, ಮಾರಿಕಣಿವೆ ಕೆರೆ, ಶ್ರೀ ಕೃಷ್ಣರಾಜಸಾಗರ, ಶಿವನ ಸಮುದ್ರದಲ್ಲಿ ಕಾವೇರಿ ಜಲಪಾತ, ಮೈಸೂರು ಅರಮನೆ, ಜಯ ಚಾಮರಾಜ ಇವರೆಲ್ಲರ ಸುಂದರ ಚಿತ್ರಗಳಿವೆ.

ಕೆಲವು ಪುಸ್ತಕಗಳಿಗೆ ಅದೊಂದು ಸಮಯಮಹತ್ತ್ವದಿಂದ ಬೆಲೆ ಬರುವದುಂಟು. ಅಂಥ ಜಾತಿಗೆ ಸೇರಿದ ಪುಸ್ತಕಗಳಿವು. ತಮ್ಮ ಪುಸ್ತಕ ಪ್ರಕಾಶನದಿಂದಲೂ ಕೀರ್ತನೆಗಳಿಂದಲೂ ವೇ. ಮೂ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡಿಗರಲ್ಲಿ ಜಾಗೃತಿ ಮಾಡುತ್ತಿರುವನು ಅಭಿನಂದನೀಯವಾಗಿದೆ.

# ಸ್ವೀಕಾರ

... ಶ್ರೀ ಮಿತ್ರಮಂಡಲಿ, ಮಂಗಳೂರು

೧ ಅಳಿಲು ಸೇವೆ ( ಕವಿತೆಗಳು ) ... ,, ಪಾಂಡೇಶ್ವರ ಗಣಪತಿರಾವ್

೨ ಹೂವಿನ ಗೊಂಚಲು (,,) ... ,, ಕರ್ನಾಟಕಸಂಘ, ಮೈಸೂರು

೩ ತಳಿರು (,,) ... ,, ಕೈಲಾಸಂ (ರಾಮಮೋಹನ ಕಂಪನಿಯು ಪ್ರಕಟಿಸಿದುದು)

೪ ಹೋಂ ರೂಲು (ನಾಟಕ) ... ,, ,, ,,

೫ ಬಹಿಷ್ಕಾರ (,,) ... ,, ವಿ. ಸೀತಾರಾಮಯ್ಯನವರು (,,)

೬ ಸೊಹ್ರಾಬ ರುಸ್ತುಂ (,,) ... ,, ಕೆ. ವ್ಹಿ. ಪುಟ್ಟಪ್ಪ ಎಂ. ಎ. (ಮೈಸೂರ ಮಕ್ಕಳ ಕಾರ್ಯಾ...)

೭ ನನ್ನ ಗೋಪಾಲ (,,) ...

೮ ಸತ್ಯಾಗ್ರಹ ವಿಜಯ (,,) ... ,, ಶೇಷಶರ್ಮಾ ಹೆಬ್ಬಾಳಕರ, ಸುರಪುರ

೯ ಸಿದ್ಧರಾಮೇಶ್ವರ ವಿಜಯ ... ,, ಸಿಂಪಿ ಲಿಂಗಪ್ಪಾ, ಛತ್ರಗುಣಕಿ

೧೦ ಚಂಪಕ ಮಾಲಿನಿ (ಕಾದಂಬರಿ) ... ಶ್ರೀಮತಿ ಆ. ರಾಜಮ್ಮನವರು, ಮದ್ರಾಸ

೧೧ ಕಲಾ ( ಮಾಸಪತ್ರಿಕೆ ) ... ಶ್ರೀ. ಎ. ಎನ್. ಸುಬ್ರಾವ್, ಕಲಾಮಂದಿರ ಬೆಂಗಳೂರು ವಾ. ಚ. ...

೧೨ ಉದ್ಯೋಗ (,,) ... ,, ಮಂಜಪ್ಪಾ ಹರ್ಡೇಕರ ಆಲಮಟ್ಟಿ ,,

೧೩ ಬಾಲರಂಜನ (ನೀತಿಯ ಪಾಠಗಳು) ... ,, ಕಾವ್ಯಾನಂದ (ಧಾರವಾಡದ ವಿದ್ಯಾರ್ಥಿಗಳ ಗುಂಪಿನಿಂದ ಪ್ರಕಟಿತ)

೧೪ आत्मसाधन (ಹಿಂದಿ) ... ಗೋರಖಪುರದ ಪರಮಾರ್ಥ ಗ್ರಂಥಮಾಲೆ ಕಾರ್ಯಾಲಯದಿಂದ ಪ್ರಕಟಿತ

೧೫ जैन वीरोंका इतिहास और हमारा पतन ... ಶ್ರೀ ಅಯೋಧ್ಯಾಪ್ರಸಾದ ಗೋಯಲೀಯದಾನ ಗೋರಖಪುರ

೧೬ माण्डूक्य दीपिका (ಮರಾಠಿ) ... ಶ್ರೀ ಶಿವಾನಂದ ಸೂನು, ಬಂಕಾಪುರ

೧೭ Towards Womanhood ... ಶ್ರೀಮತಿ ಸುಮತಿಬಾಯಿ, ಬಿ. ಎ. ಎಲ್. ಟಿ, ಪ್ರೇಮಾಯತನ

೧೮ India and Industry ... ,, ,, ,,

೧೯ ಅಳಿಯ ಸಂತಾನ ಕಟ್ಟ್‌ದ ಗುಟ್ಟ್ (ತುಳು) ... ಶ್ರೀ ಸತ್ಯಮಿತ್ರ ಬಂಗೇರ ಉಡುಪಿ (ತುಳುವ ಸಾಹಿತ್ಯಮಾಲೆ ...)

---

# ಕರ್ಮವೀರ

ಸಂಪಾದಕ:— ರಂಗನಾಥ ರಾಮಚಂದ್ರ ದಿವಾಕರ

ಕರ್ನಾಟಕದ ಪ್ರಮುಖ ರಾಷ್ಟ್ರೀಯ ವಾರಪತ್ರಿಕೆಯಿದು. ಕರ್ನಾಟಕವು ಸರ್ವಾಂಗಸುಂದರವಾಗಲಿಕ್ಕೂ ಭಾರತವು ಸಂಪೂರ್ಣ ಸ್ವತಂತ್ರವಾಗಲಿಕ್ಕೂ ಬೇಕಾಗುವ ಎಲ್ಲ ಬಗೆಯ ಲೇಖಗಳೂ ಸುದ್ದಿಗಳೂ ಪ್ರತಿಸಲವೂ ಪ್ರಕಟವಾಗುವವು. ವಾ. ಚಂದಾ ಅಂ. ವೆ. ಸೇರಿ ರೂ. ೩-೧೨-೦ ಮಾತ್ರ

— ಕರ್ಮವೀರ ಕಾರ್ಯಾಲಯ ಧಾರವಾಡ

## ಸಂಯುಕ್ತ ಕರ್ನಾಟಕ

ಸಂಪಾದಕ— ದಾತಾರ ಬಳವಂತರಾವ ಎಂ. ಎ.

ಈ ಪತ್ರಿಕೆಯಲ್ಲಿ ಕಾಂಗ್ರೆಸಿನ ಕಾರ್ಯ, ಕರ್ನಾಟಕ ಏಕೀಕರಣ, ರೈತರ ಸಂಘಟನೆ, ಇವೇ ಮುಂತಾದ ವಿಷಯಗಳ ಚರ್ಚೆ ತಿಳಿಗನ್ನಡದಲ್ಲಿ ಮಾಡಲಾಗುವದು. ಬೆಳಗಾಂವಿ ಜಿಲ್ಲೆಗೆ ಇದೊಂದೇ ರಾಷ್ಟ್ರೀಯ ಪ್ರಮುಖ ಪತ್ರವು. ವರ್ತಕರು ಇದರಲ್ಲಿ ತಮ್ಮ ಪ್ರಕಟನೆ ಕೊಟ್ಟರೆ ಲಾಭವಾಗುವದು.

ವಾರ್ಷಿಕ ಚಂದಾ ಅಂಚೇವೆಚ್ಚ ಸೇರಿ. ೩-೧೨-೦

'ಸಂಯುಕ್ತ ಕರ್ನಾಟಕ' ಕಾರ್ಯಾಲಯ

ಬೆಳಗಾಂವಿ

## ಕನ್ನಡಿಗ

ಸಂಪಾದಕರು:— ಮಂಗಳವೇಡೆ ಶ್ರೀನಿವಾಸರಾಯರು.

ಕರ್ನಾಟಕದಲ್ಲಿ ವಾರಕ್ಕೆ ಎರಡು ಸಾರೆ ಹೊರಡುವ ಪತ್ರಿಕೆಯೆಂದರೆ ಇದೊಂದೇ. ಕರ್ನಾಟಕ ಏಕೀಕರಣ, ಭಾರತ ಸ್ವಾತಂತ್ರ್ಯ, ರಾಜ್ಯಕ್ರಾಂತಿಕಾರರ ಆಂದೋಲನ ಇವೇ ಮೊದಲಾದ ವಿಷಯಗಳ ಮೇಲೆ ಪ್ರತಿಸಲವೂ ಉತ್ತಮವಾದ ಲೇಖಗಳೂ ಸುದ್ದಿಗಳೂ ಪ್ರಕಟವಾಗುವವು.

ಚಂದಾ ಅಂಚೇವೆಚ್ಚ ಸೇರಿ ರೂ. ೪-೧೩-೦ ಮಾತ್ರ.

ವ್ಯವಸ್ಥಾಪಕ 'ಕನ್ನಡಿಗ' ಬಾಗಲಕೋಟೆ

ಸತ್ಯದ ಜಗತ್ತು ] ೧೦೦೦ ರೂಪಾಯಿ ಇನಾಮು [ ಅದೆಯೇನು ನೋಡೋಣ!

ರಜಿ ] ಧಾತುಪೌಷ್ಟಿಕ ಮತ್ತು ಶಕ್ತಿವರ್ಧಕ [ ಸ್ಪರ್ಧೆ

## ವಜ್ರಾಂಗ ಸುಂದರಪಾಕ

ಇದರಿಂದ ಧಾತು ಶುದ್ಧವಾಗಿ ಘಟ್ಟಿ ಆಗುವುದಲ್ಲದೆ, ಪುರುಷತ್ವವು ಹೆಚ್ಚುತ್ತದೆ. ವೀರ್ಯಸ್ತಂಭನೆಯೂ ಕಾಮವಾಸನೆಯು ಹೆಚ್ಚುತ್ತದೆ. ಮತ್ತು ಸಂತತಿ ಆಗಲಿಕ್ಕೆ ಸಾಹಾಯಕರಆಗುತ್ತದೆ. ಶ್ರೇಷ್ಠಕಂದ, ಇತ್ಯಾದಿ ೫೨ ಜಿನಸುಗಳಲ್ಲಿ ಧಾತು ಪೌಷ್ಟಿಕ ಗುಣವಿಲ್ಲೆಂದೂ ಇದರಲ್ಲಿ ೫೨ ಜೀನಸು ಹಾಕಿಲ್ಲೆಂದೂ ಸಿದ್ಧ ಮಾಡಿಕೊಟ್ಟವರಿಗೆ ೧೦೦೦ ರೂಪಾಯಿ ಇನಾಮು ಕೊಡುವೆವು. ಮುಂಜಾನೆ ೨ ತೊಲೆಯ ಒಂದು ವ ರಾತ್ರಿ ಭೋಜನಾನಂತರ ೨ ತೊಲೆಯ ಒಂದು ವಡಿಯನ್ನು ತಕ್ಕೊಂಡು, ಅದರಮೇಲೆ ಸ್ವಲ್ಪ ಕಾಸಿದ ೨೦ ತೊಲೆ ತೂಕ ಎಮ್ಮೆಯ ಅಥವಾ ಆಕಳ ಹಾಲನ್ನು ಕುಡಿಯಬೇಕು; ಪಥ್ಯವು ಸ್ತ್ರೀವರ್ಜ್ಯವಿಲ್ಲ, ೨೧ ದಿವಸ ಸಾಕಾಗುವಷ್ಟು ಈ ಪಾಕದ ೮೪ ತೊಲೆಯ ಡಬ್ಬಿಗೆ ರೂ, ೫; ೩ ಡಬ್ಬಿಗಳಿಗೆ ರೂ, ೧೫; ೬ ಡಬ್ಬಿಗಳಿಗೆ ರೂ, ೨೭, ವ್ಹಿ. ಪಿ.ಖರ್ಚು ಬೇರೆ, ೩ ಡಬ್ಬಿಗಳನ್ನು ತಕ್ಕೊಂಡರೆ ಪೂರ್ಣ ಗುಣಬರುವದು,

ಕೇವಲ ಸ್ವಪ್ನಾವಸ್ಥೆ—ಇದಕ್ಕೆ ೭ ದಿನಗಳಲ್ಲಿ ಗುಣ, ೨೧ ದಿನದ ಸೀಸೆ ೧ಕ್ಕೆ ಅಂಚೆವೆಚ್ಚಸೇರಿ ೩ ರೂಪಾಯಿಗಳು.

ಪ್ರಮೇಹ (ಪರಮಾ)—ಬೇಕಾದಂಥ ಹಳೇ ಹಾಗೂ ಹೊಸ ಪ್ರಮೇಹವಿದ್ದರೂ ೨೪ ತಾಸುಗಳಲ್ಲಿ ಗುಣ! ೫ ದಿವಸ ಸಾಕಾಗುವಷ್ಟು ಸೀಸೆ ೧ಕ್ಕೆ ಅಂಚೆವೆಚ್ಚ ಸೇರಿ ೪ ರೂಪಾಯಿಗಳು.

ಮೂಲವ್ಯಾಧಿ—ಮೊಳಕೆ, ರಕ್ತಬೀಳೋಣ, ಬಾವು,ಇವೇ ಮೊದಲಾದ ಗುದರೋಗಗಳಿಗೆ ೭ ದಿವಸಗಳಲ್ಲಿ ಗುಣ. ೨೧ ದಿವಸ ಸಾಕಾಗುವಷ್ಟು ಸೀಸೆ ೧ಕ್ಕೆ ಅಂಚೆವೆಚ್ಚ ಸೇರಿ ರೂ. ೪; ಲಕ್ಷಣಗಳನ್ನು ತಿಳಿಸಬೇಕು. ಮೊಳಕೆಗಳಿಗೆ ಬೆಣ್ಣೆಯಲ್ಲಿ ಕಲಿಸಿ ಹಚ್ಚುವ ಹಿಟ್ಟು ತಂಪು ಇರುತ್ತದೆ. ಅದರ ಪುಡಿಕೆ ೧ಕ್ಕೆ ೧—೪—೦ ರೂಪಾಯಿ.

ಪಿನಸಿಗೆ ವ್ರಣದಲ್ಲಿ ಧೂಮ್ರಪಾನ— ಮೂಗಿನೊಳಗಿನ ಗುಂಟಾಳಿ, ಹಿಕ್ಕು, ರಕ್ತ ಕೀವು, ಇವೇ ಮೊದಲಾದ ವಿಕಾರಗಳಿಗೆ ೩ ದಿವಸಗಳಲ್ಲಿ ಗುಣ. ೨೧ ದಿವಸಗಳಿಗೆ ಸಾಕಾಗುವಷ್ಟು ೫ ತೊಲೆಯ ೧ ಪುಡಿಕೆಗೆ ಅಂಚೆವೆಚ್ಚ ಸೇರಿ ೩ ರೂ.

ವಿಳಾಸಃ—ಟಿ. ವ್ಹಿ. ವೈದ್ಯ ಬ್ಲಾಕನಂಬರ ೧೧೧೩, ಪೋಸ್ಟು ಮಿರಜ,

## ವಿಷಯಾನುಕ್ರಮಣಿಕೆ

# ರಾಗದ ಪೆಟ್ಟಿಗೆಗಳು

## ನಾಟಕ ಸಾಮಾನು:-ತಬಲೆ, ಡಕ್ಕೆ, ವಗೈರೆ



೧. ಕೈಪೆಟ್ಟಿಗೆ ಸಿಂಗಲ ರೂ. ೨೫,೩೦, ೪೦, ೫೦,೬೦.
೨. „ ಡಬ್ಬಲ „ ೩೦, ೪೫, ೫೦, ೬೦, ೧೧೦.
೩. ಕಾಲುಪೆಟ್ಟಿಗೆ „ „ ೬೫, ೭೫, ೧೦೦, ೧೩೦, ೧೪೦
೪. ತಬಲೆ (ತಾಂಬ್ರದ ಡಕ್ಕೆ ಸಹಿತ) ರೂ ೧೨, ೧೭, ೧೮, ೨೧
೫. ಫಿಟಲು—ಉತ್ತಮವಾದ ವಿಲಾಯತಿ (ಪೆಟ್ಟಿಗೆಯ ಹೊರತು) ಕಿಮ್ಮತ್ತು ರೂ. ೧೨, ೧೫, ೨೦, ೨೫.

**ಗೋಪಾಳ ಸಖಾರಾಮ ಮತ್ತು ಕಂಪನಿ,**
೨೨೯, ವಿಠ್ಠಲವಾಡಿ ಎದುರಿಗೆ,
**ಕಾಳಬಾದೇವಿ ರೋಡ ಮುಂಬಯಿ.**

# ಡೋಂಗರೆ ಬಾಲಾಮೃತ



ಮಧುರವಿರುವದರಿಂದ ಮಕ್ಕಳು ಸಂತೋಷದಿಂದ ಸೇವಿಸುತ್ತಾರೆ. ಮತ್ತು ಇದನ್ನು ಸೇವಿಸುವದರಿಂದ ಶಕ್ತರಾಗುವರಲ್ಲದೆ ತೂಕವು ಹೆಚ್ಚುವದು.

ಕ್ರಯ ಬಾಟ್ಲಿ ೧ಕ್ಕೆ ೧೪ ಆಣೆ. ಟ. ಖ. ೯ ಆಣೆ.

**ಕೆ. ಟಿ. ಡೋಂಗರೆ ಕಂಪನಿ,**
**ಗಿರಗಾಂವ, ಮುಂಬಯಿ.**

ಡಾಕ್ಟರ ಜೀ. ಜೀ. ಯವರ

# ಸುಗಂಧ ನಶ್ಯದ ಪುಡಿ




ಲೋಕಪ್ರಸಿದ್ಧವಾದ ಈ ಸುಗಂಧ ನಶ್ಯದ ಪುಡಿಯಿಂದ ಶೀತ, ಓಟತಲೆನೋವು, ಮುಂತಾದ ವ್ಯಾಧಿಗಳು ಪರಿಹಾರವಾಗುವವು. ಕಂಠಕ್ಕೆ ಮೇಲ್ಪಟ್ಟ ವ್ಯಾಧಿಗಳು ಅಡಗಿ ಜ್ಞಾನಶಕ್ತಿ ಬೆಳೆಯುವದು. ನ ನಶ್ಯದ ಸಂಗಡ ಸುಗಂಧ ನಶ್ಯದ ಪುಡಿಯಲ್ಲಿ ಒಂದು ಚಿಟಿಕೆಯನ್ನು ಬೆರಸಿದರೆ ಎಲ್ಲವೂ ಪರಿಮಳವಾಗುವದು. ಅನೇಕರು ಕುಟುಂಬ ಔಷಧವಾಗಿ ಉಪಯೋಗಿಸುತ್ತಾರೆ. ಮಾದರಿ ಸೀಸೆ ಪುಕ್ಕಟೆ ಕಳುಹಿಸಲಾಗುತ್ತದೆ. ಒಂದಕ್ಕೆ ಕ್ರಯ ರೂ. ೦—೪—೦.

ವ್ಹಿ. ಪಿ. ೦-೪-೨. ಡಜನ್ ೧ಕ್ಕೆ ಕ್ರಯ ರೂ. ೨-೮-೦. ವ್ಹಿ. ಪಿ. ಚಾರ್ಜ ೮ ಆಣೆ.

ವಿಳಾಸ— ಗುರುಬಸವ ಆ್ಯಂಡ ಕಂಪನಿ ಲಿಮಿಟೆಡ್, ಪೋ. ಬಾ. ೫೭೦, ಮದರಾಸು.

# ಅಮೃತಾಂಜನ




ಇದು ವಾತವೇದನೆ, ಉಳುಕು ಇತ್ಯಾದಿ ವ್ಯಾಧಿಗಳ ಮೇಲೆ ರಾಮಬಾಣದಂತಾಗಿರುವದು. ಕಳೆದ ೨೫ ವರ್ಷಗಳಿಂದ ಇದರ ಉಪಯುಕ್ತತೆಯು ಸ್ಪಷ್ಟವಾಗಿ ಸಿದ್ಧವಾಗಿರುತ್ತದೆ. ಲಕ್ಷಗಟ್ಲೆ ಕುಟುಂಬಗಳು ಅಮೃತಾಂಜನವನ್ನು ಉಪಯೋಗಿಸುತ್ತಿರುವರು. ಆದ್ದರಿಂದ ಎಲ್ಲ ಪ್ರಕಾರದ ವೇದನೆಗಳು, ಕೆಮ್ಮು, ದಮ್ಮು, ಸಂಧಿವಾತ ಮೊದಲಾದ ಎಷ್ಟೋ ವ್ಯಾಧಿಗಳ ಮೇಲೆ ಇದು ಗುಣಕಾರಿಯೆಂದು ಅರಿಯುವರು. ಇದರ ಪ್ರತ್ಯಕ್ಷ ಅನುಭವದಿಂದ ಖಾತ್ರಿಮಾಡಿಕೊಳ್ಳಬಹುದು.

**ಕಿಮ್ಮತ್ತು ೧೦ ಆಣೆ, ವಿ. ಪಿ. ವೆಚ್ಚ ಬೇರೆ.**
**ಅಮೃತಾಂಜನ ಡಿಪೋ,**
**ತಂಬುಚೆಟ್ಟಿ ಸ್ಟ್ರೀಟ್, ಮದ್ರಾಸು.**



ಮಹಾರಾಷ್ಟ್ರಸ್ವರಾಜ್ಯಸಂಸ್ಥಾಪಕರಾದ

**ಛತ್ರಪತಿ ಶ್ರೀ ಶಿವಾಜಿ ಮಹಾರಾಜರು**

( ಕಸ್ತೂರಿಯ ಕೈಕೆಲಸ )

ಶಿಲ್ಪಿ :—ಶ್ರೀ ಅನಂತನಾಯಿಕ ಬಂಡೆಪ್ಪನಾಯಿಕ ಭೋಜಪ್ಪನವರ (ಮುಳಗುಂದ)

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः


| ಸಂಪುಟ ೮ | ಪ್ರಮೋದೂತ ಸಂವತ್ಸರ, ದವನದ ಹುಣ್ಣಿವೆ<br>ಚಾಲುಕ್ಯವಿಕ್ರಮ ವರ್ಷ ೮೫೫ | ಸಂಚಿಕೆ ೬ |
|---|---|---|


## * ಶ್ರೀಮಚ್ಚಾಳುಕ್ಯ ವಿಕ್ರಮ ವರುಷ


ಲೇಖಕರು-ಶ್ರೀ. ನಾ. ಶ್ರೀ. ರಾಜಪುರೋಹಿತ, ಧಾರವಾಡ.


ವಿಜಯ ಮತ್ತು ಪಟ್ಟಬಂಧೋತ್ಸವ ಮುಂತಾದ ಮಹತ್ವದ ಸಂಗತಿಗಳ ಸ್ಮಾರಕವೆಂದು ಪರಾಕ್ರಮಶಾಲಿಗಳಾದ ರಾಜರು, ತಮ್ಮ ಹೆಸರಿನ ಹೊಸ ಕಾಲಗಣನೆಯನ್ನು ಆ ಸಂವತ್ಸರದಲ್ಲಿ ಪ್ರಾರಂಭಮಾಡಿ, ಅದನ್ನು ತಮ್ಮ ರಾಜ್ಯದಲ್ಲಿ ಎಲ್ಲ ಕಡೆಗೂ ಪ್ರಚಾರಗೊಳಿಸುತ್ತಿದ್ದರು. ಇದಲ್ಲದೆ ತಮ್ಮ ಹೆಸರಿನ ಹೊಸ ನಾಣ್ಯಗಳನ್ನು ಮುದ್ರಿಸಿ, ಅವುಗಳನ್ನು ತಮ್ಮ ರಾಜ್ಯದಲ್ಲೆಲ್ಲ ಬಳಕೆಯಲ್ಲಿ ತರುತ್ತಿದ್ದರು. ಈ ನೂತನ ಕಾಲಗಣನೆ, ನಾಣ್ಯಗಳ ನಿಮಿತ್ತದಿಂದ ಈ ಅಭಿನವ ರಾಜಪುರುಷನು, ರಾಜ್ಯವನ್ನು ಪಾದಾಕ್ರಾಂತ ಮಾಡಿದ ಅಥವಾ ರಾಜ-ಪದವನ್ನು ಸ್ವೀಕರಿಸಿದ ಕೀರ್ತಿಯು ರಾಜ್ಯದ ತುಂಬಾ ಬೇಗನೆ ಹಬ್ಬಿ ಈತನ ಪ್ರಭಾವವು ಎಲ್ಲಕಡೆಗೂ ನೆಲೆಗೊಳ್ಳಬೇಕೆಂಬುದೇ ಈ ಸಂಪ್ರದಾಯಗಳ ಫಲಿತಾರ್ಥವು.

ಉತ್ತರ ಕಾಲೀನ ಚಾಳುಕ್ಯವಂಶದ ವಿಕ್ರಮಾಂಕ ಚಕ್ರವರ್ತಿಯು, ವಿಜಯದ ಹಾಗೂ ಪಟ್ಟಬಂಧೋತ್ಸವದ ಸ್ಮಾರಕವೆಂದು, ಶಕವರ್ಷದ ೯೯೮ನೆಯ ನಳನಾಮ ಸಂವತ್ಸರದ ಚೈತ್ರಶುದ್ಧ ಪ್ರತಿಪದೆಯಿಂದ ತನ್ನ ಹೆಸರಿನ ನೂತನ ಕಾಲಗಣನೆಯನ್ನು ಪ್ರಾರಂಭಮಾಡಿ, ಅದೇ ನಳನಾಮ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಯ ದಿವಸ ತನ್ನ ಪಟ್ಟಬಂಧೋತ್ಸವವನ್ನು ಮಾಡಿಸಿಕೊಂಡನೆಂಬುದನ್ನು ಸಿದ್ಧಪಡಿಸುವುದೇ ಈ ಲೇಖನದ ಮುಖ್ಯವಾದ ಉದ್ದೇಶವಾಗಿದೆ.

ಮೊಟ್ಟಮೊದಲು, ಈ ವಿಕ್ರಮಾಂಕ ಚಕ್ರವರ್ತಿಯ ಮನೆತನದ ಸ್ವಲ್ಪ ಇತಿಹಾಸವನ್ನು ಹೇಳಿಬಿಟ್ಟರೆ, ಮುಂದಿನ ಸ್ಪಷ್ಟೀಕರಣವು ಸುಲಭವಾಗಿ ತಿಳಿಯುವದು. ಈ ವಿಕ್ರಮಾಂಕನು, 'ತ್ರೈಲೋಕ್ಯಮಲ್ಲ' 'ಆಹವಮಲ್ಲ' ಎಂಬ ಬಿರುದುಗಳುಳ್ಳ ಮೊದಲನೆಯ ಸೋಮೇಶ್ವರನ ಮಗನು. ಈ ವಿಕ್ರಮಾದಿತ್ಯನಿಗೆ ಇಮ್ಮಡಿ ಸೋಮೇಶ್ವರನೆಂಬ ಅಣ್ಣನೂ ಜಯಸಿಂಹನೆಂಬ ತಮ್ಮನೂ ಇದ್ದರು. ಅಣ್ಣನಿಗೆ "ಭುವನೈಕಮಲ್ಲ" ಎಂಬ ಬಿರುದು ಇದ್ದಿತು. ತಂದೆಯಾದ ಮೊದಲನೆಯ ಸೋಮೇ

---

* ಈ ನಿಬಂಧವನ್ನು ಮೊನ್ನಿನ ಫಾಲ್ಗುಣ ಶುದ್ಧ ಪಂಚಮಿ ದಿನ ಧಾರವಾಡದಲ್ಲಿ ನೆರವೇರಿದ ಶ್ರೀ ಮಚ್ಚಾಳುಕ್ಯವಿಕ್ರಮಾಂಕದೇವನ ಪಟ್ಟಬಂಧೋತ್ಸವದ ದ್ವಿತೀಯ ವಾರ್ಷಿಕ ಸಭೆಯಲ್ಲಿ ಶ್ರೀ. ರಾಜಪುರೋಹಿತರು ಓದಿದರು. — ಸಂ. ಜ. ಕ.

ಶ್ವರನು, ಶಕ ವರ್ಷದ ೯೯೦ನೆಯ (ಎಂದರೆ ಕ್ರಿ. ಶ. ೧೦೬೮ ನೆಯ) ಕೀಲಕನಾಮಸಂವತ್ಸರದ ಚೈತ್ರ ಬಹುಳ ಅಷ್ಟಮಿ ರವಿವಾರ ದಿವಸ ಕುರುವತ್ತಿಯ ಹತ್ತರ ತುಂಗಭದ್ರಾ ನದಿಯಲ್ಲಿ ಜಲಸಮಾಧಿಯನ್ನು ತೆಗೆದುಕೊಂಡು, ಸ್ವರ್ಗಾರೋಹಣವನ್ನು ಮಾಡಿದನು. ಆ ಬಳಿಕ ಆತನ ಹಿರಿಯ ಮಗನಾದ ಭುವನೈಕಮಲ್ಲನಾದ ಇಮ್ಮಡಿ ಸೋಮೇಶ್ವರನು ಅದೇ ಕೀಲಕನಾಮ ಸಂವತ್ಸರದ ವೈಶಾಖ ಶುದ್ಧ ಸಪ್ತಮಿ ಶುಕ್ರವಾರ ದಿನ ಸಿಂಹಾಸನವನ್ನೇರಿದನು. (ಶಿಕಾರಿಪುರ ತಾಲೂಕು ೧೩೬ನೆಯ ಶಾಸನ) ಅದೇ ಕಾಲಕ್ಕೆ ಇತ್ತ ವಿಜಯಯಾತ್ರೆಗೆ ಹೋದ ವಿಕ್ರಮಾಂಕನು, ವೆಂಗಿ ದೇಶವನ್ನು ಗೆದ್ದುಕೊಂಡು ತಿರುಗಿ ಬರುವಾಗ ದಾರಿಯಲ್ಲಿ ತಂದೆಯ ಮರಣದ ಸುದ್ದಿಯನ್ನು ಕೇಳಿದನು. ಆ ಕೂಡಲೇ ಶೀಘ್ರಗತಿಯಿಂದ ಹೊರಟು ಬೇಗನೆ ಕಲ್ಯಾಣ ರಾಜಧಾನಿಗೆ ಬಂದನು. ಆಗ ಅಣ್ಣನಾದ ಭುವನೈಕಮಲ್ಲನು ಬಹಳ ಪ್ರೀತಿಯಿಂದ ಇವನನ್ನು ಇದಿರ್ಗೊಂಡನು. ಅದೇ ಪ್ರಕಾರ ವಿಕ್ರಮಾದಿತ್ಯನೂ ಸಹ ತಾನು ವಿಜಯಯಾತ್ರೆಯಲ್ಲಿ ಸಂಪಾದಿಸಿದಂಥ ಸುವರ್ಣ, ವಜ್ರ, ವೈಡೂರ್ಯ ಮುಂತಾದ ಸಂಪತ್ತನ್ನೆಲ್ಲ ಪ್ರೀತಿಯಿಂದ ಅಣ್ಣನ ಕೈಯಲ್ಲಿ ಕೊಟ್ಟನು. ಇದೇ ಮೇರೆಗೆ ಮುಂದೆ ಕೆಲವು ಕಾಲದ ವರೆಗೆ ಇವರಿಬ್ಬರೂ ಪರಸ್ಪರ ಪ್ರೀತಿಯಿಂದ ಇದ್ದರು. ಆದರೆ ಅಣ್ಣನಾದ ಇಮ್ಮಡಿ ಸೋಮೇಶ್ವರನು ತಿಳಿಗೇಡಿಯೂ ಜನರಿಗೆ ತೊಂದರೆಯನ್ನು ಕೊಡುವವನೂ ಆದ್ದುದರಿಂದ ಆತನು ಪ್ರಜೆಗಳಿಗೆ ಅಪ್ರಿಯನಾದನು. ಇಷ್ಟೇ ಅಲ್ಲ, ತನ್ನ ಹಿತಚಿಂತಕರಾದ ಮಂತ್ರಿಗಳ ಹಾಗೂ ತಮ್ಮಂದಿರ ಹಿತದ ಮಾತುಗಳನ್ನು ಅಲ್ಲಗಳೆದು ಮನಬಂದಂತೆ ನಡೆಯಹತ್ತಿದ್ದರಿಂದ ಎಲ್ಲರಿಗೂ ಬೇಡಾದನು.

ಈ ಸಮಯದಲ್ಲಿ ಇಲ್ಲಿ ಇರುವದು ಒಳ್ಳೆಯದಲ್ಲವೆಂದು ತಿಳಿದು, ಈ ವಿಕ್ರಮಾದಿತ್ಯನು, ತನ್ನ ತಮ್ಮನಾದ ಜಯಸಿಂಹನನ್ನು ಸಂಗಡ ಕರೆದುಕೊಂಡು ಕಲ್ಯಾಣಪಟ್ಟಣವನ್ನು ಬಿಟ್ಟು ದೊಡ್ಡ ಸೈನ್ಯದೊಡನೆ ಹೊರಟನು. ಆಗ ಆ ಇಮ್ಮಡಿ ಸೋಮೇಶ್ವರನು, ಈ ವಿಕ್ರಮಾದಿತ್ಯನನ್ನು ಸೆರೆ ಹಿಡಿಯಬೇಕೆಂದು ಇವನ ಬೆನ್ನಹಿಂದೆ ತನ್ನ ಸೈನ್ಯವನ್ನು ಕಳಿಸಿದನು. ಆದರೆ ಈ ವಿಕ್ರಮಾದಿತ್ಯನು ಅಣ್ಣನ ಸೈನ್ಯವನ್ನೆಲ್ಲ ಸಂಹರಿಸಿ ನೆಲಕ್ಕೆ ಉರುಳಿಸಿದನು! ತದನಂತರ ಹಾಗೆಯೇ ಮುಂದಕ್ಕೆ ಸಾಗಿ ತುಂಗಭದ್ರಾನದಿಯ ತೀರಕ್ಕೆ ಹೋಗಿ, ಕಂಪಿಲಿ ಪಟ್ಟಣದಲ್ಲಿ ವಿಶ್ರಮಿಸಿದನು. ಆ ಬಳಿಕ ಚೋಳ ದೇಶಕ್ಕೆ ತೆರಳಿದನು. ಆ ಕಾಲಕ್ಕೆ ಅಲ್ಲಿ ಆಳುತ್ತಿದ್ದ ವೀರರಾಜೇಂದ್ರ ಚೋಳನು (ಕ್ರಿ. ಶ. ೧೦೬೩-೧೦೭೦), ಈ ವಿಕ್ರಮಾದಿತ್ಯನು ಬಂದ ಸುದ್ದಿಯನ್ನು ಕೇಳಿದಾಕ್ಷಣವೇ ಈತನ ಬಳಿಗೆ ತನ್ನ ರಾಯಭಾರಿಯನ್ನು ಕಳುಹಿಸಿ, "ನಾನು ತಮ್ಮ ಮಾಂಡಲಿಕನಾಗಿರುವದಕ್ಕೆ ಒಪ್ಪುತ್ತೇನಲ್ಲದೆ ತಮಗೆ ನನ್ನ ಮಗಳನ್ನು ಮದುವೆಮಾಡಿ ಕೊಡುತ್ತೇನೆ; ತಾವು ದಯಮಾಡಿ ಸ್ವೀಕರಿಸಬೇಕು." ಎಂದು ತನ್ನ ವಿನಂತಿಯನ್ನು ತಿಳಿಸಿದನು. ಆ ಚೋಳರಾಜನ ಪ್ರಾರ್ಥನೆಯ ಪ್ರಕಾರ ವಿಕ್ರಮಾದಿತ್ಯನು ಒಪ್ಪಿ ಹಿಂದಿರುಗಿ ಬಂದು, ತುಂಗಭದ್ರಾನದಿಯ ತೀರದಲ್ಲಿರುವ ತಮ್ಮ ಉಪರಾಜಧಾನಿಯಾದ ಕಂಪಿಲಿ ಪಟ್ಟಣದಲ್ಲಿ ತಂಗಿದನು. ಆಗ ವೀರರಾಜೇಂದ್ರಚೋಳರಾಜನು, ತನ್ನ ಕನ್ಯೆಯನ್ನು ಕರೆದುಕೊಂಡು ಈ ಪಟ್ಟಣಕ್ಕೆ ಬಂದು, ಮದುವೆಯ ಕೆಲಸವನ್ನು ನೆರವೇರಿಸಿದನು.

ಮುಂದೆ ಕೆಲವು ದಿವಸಗಳ ಮೇಲೆ ಎಂದರೆ ಕ್ರಿ. ಶ. ೧೦೭೦ರಲ್ಲಿ ಆ ವೀರರಾಜೇಂದ್ರ ಚೋಳರಾಜನು ಮರಣಹೊಂದಿದನು. ಆ ಕಾಲಕ್ಕೆ ಆ ಚೋಳರಾಜ್ಯದಲ್ಲಿ ಒಮ್ಮಿಂದೊಮ್ಮೆ ಗಲಭೆಯುಂಟಾಗಿ ಚೋಳಸಿಂಹಾಸನವು ಬುಡಮೇಲಾಗುವ ಪ್ರಸಂಗವೊದಗಿತು. ಈ ಸುದ್ದಿಯು ಈ ವಿಕ್ರಮಾದಿತ್ಯನ ಕಿವಿಗೆ ಮುಟ್ಟಿದ ಕೂಡಲೆ ಈತನು ತತ್ಕಾಲವೇ ಕಾಂಚಿಪಟ್ಟಣಕ್ಕೆ ಹೋದನು. ಮತ್ತು ತನ್ನ ಮಾವನ ಮಗನಾದ ಅಧಿರಾಜರಾಜೇಂದ್ರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಆತನ ಶತ್ರುಗಳನ್ನು ಹೊಡೆದೋಡಿಸಿದನು. ಆ ಬಳಿಕ ಕಂಪಿಲಿ ಪಟ್ಟಣಕ್ಕೆ ತಿರುಗಿ ಬಂದನು. ವಿಕ್ರಮಾದಿತ್ಯನು ಇತ್ತ ಕಡೆಗೆ ಬಂದ ಕೂಡಲೆ, ಆ ಅಧಿರಾಜರಾಜೇಂದ್ರ ಚೋಳರಾಜನ ಸೋದರತ್ತೆಯ ಮಗನಾದ ರಾಜಿಗ (ಎಂದರೆ, ಕುಲೋತ್ತುಂಗ) ನೆಂಬ ವೆಂಗಿದೇಶದ ಚಾಳುಕ್ಯರಾಜನು, ಆ ಚೋಳರಾಜನನ್ನು ಸಿಂಹಾಸನದಿಂದ ತಳ್ಳಿ, ಅವನ ರಾಜ್ಯವನ್ನೆಲ್ಲ ತಾನು ಆಕ್ರಮಿಸಿದನು. ಮತ್ತು ಆ ರಾಜಿಗನು, ಆ ಚೋಳರಾಜನ ಬಂಧುವಾದ ಈ ವಿಕ್ರಮಾದಿತ್ಯನು ತನ್ನ ಮೇಲೆ ಯುದ್ಧಕ್ಕೆ ಬರುವನೆಂದು ತಿಳಿದು, ಈತನ ಅಣ್ಣನಾದ ಭುವನೈಕಮಲ್ಲನನ್ನು ತನ್ನ ಕಡೆಗೆ ಒಲಿಸಿಕೊಂಡನು. ಇದಲ್ಲದೆ ಚೆನ್ನಾಗಿ ಯುದ್ಧದ ಸಿದ್ಧತೆಯನ್ನೂ ಮಾಡಿದನು.

ಇತ್ತ ಭುವನೈಕಮಲ್ಲನು, ತನ್ನ ತಮ್ಮನಾದ ವಿಕ್ರಮಾದಿತ್ಯನನ್ನು ಸೆರೆಹಿಡಿಯುವದಕ್ಕೆ ಇದು ಉತ್ತಮವಾದ ಸಮಯವೆಂದು ತಿಳಿದು, ತಾನೂ ಒಂದು ದೊಡ್ಡ ಸೈನ್ಯವನ್ನು ಏರ್ಪಡಿಸಿದನು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಸಹ ವಿಕ್ರಮಾದಿತ್ಯನು ಕಾಂಚಿಯ ಕಡೆಗೆ ಯುದ್ಧಕ್ಕೆ ಹೊರಟನು. ಇವನು ಅಲ್ಲಿಗೆ ಹೋಗಿ, ರಾಜಿಗನ ಸೈನ್ಯವನ್ನು ತಾಗುವಷ್ಟರಲ್ಲಿ ಹಿಂದಿನಿಂದ ಭುವನೈಕಮಲ್ಲನು ದೊಡ್ಡ ಸೈನ್ಯದೊಡನೆ ಬಂದು ನಿಂತನು. ಆಗ ವಿಕ್ರಮಾದಿತ್ಯನು ಅಣ್ಣನನ್ನು ಕುರಿತು "ನೀನು ನನ್ನ ವೈರಿಗೆ ಸಹಾಯಕನಾಗಿ ನನ್ನ ವಿರುದ್ಧವಾಗಿ ನಿಲ್ಲುವದು ಒಳ್ಳೆಯದಲ್ಲ. ಈ ತಪ್ಪುಹಾದಿಯನ್ನು ಹಿಡಿಯದೆ ನನ್ನ ಕಡೆಗೆ ಬಾ." ಎಂದು ಅನೇಕರೀತಿಯಿಂದ ಉಪದೇಶ ಮಾಡಿದನು. ಆದರೆ ಅವನು ಈ ಒಳ್ಳೆಯ ಮಾತಿಗೆ ಕಿವಿಗೊಡಲಿಲ್ಲ. ಇಂಥ ಕಠಿಣ ಪ್ರಸಂಗವು ಒದಗಿದರೂ ಶೂರನಾದ ವಿಕ್ರಮಾದಿತ್ಯನು ಅತ್ಯಂತ ಶೌರ್ಯದಿಂದ ಈ ಉಭಯ ಶತ್ರುಗಳ ಸಂಗಡ ಯುದ್ಧ ಮಾಡಿ, ರಕ್ತದ ಕಾಲುವೆಗಳನ್ನು ಹರಿಸಿದನು !! ಈ ಮಹಾಯುದ್ಧದಲ್ಲಿ ವಿಕ್ರಮಾದಿತ್ಯನೇ **ವಿಜಯ**ವನ್ನು ಹೊಂದಿದನು! ರಾಜಿಗನು ಓಡಿ ಹೋದನು !! ಭುವನೈಕಮಲ್ಲನು ವಿಕ್ರಮಾದಿತ್ಯನ ಸೆರೆಯಲ್ಲಿ ಸಿಕ್ಕನು! ಆಗ ವಿಕ್ರಮಾದಿತ್ಯನು ಅಣ್ಣನನ್ನು ಹಾಗೆಯೇ ಸೆರೆಹಿಡಿದುಕೊಂಡು ಯಾತಗಿರಿ ಪಟ್ಟಣಕ್ಕೆ ಬಂದು, ಅಲ್ಲಿ ಅವನನ್ನು ಸೆರೆಮನೆಯಲ್ಲಿಟ್ಟನು. ಹಾಗೂ ತಾನು **ಪಟ್ಟಬಂಧೋತ್ಸವ**ವನ್ನು ಮಾಡಿಸಿಕೊಳ್ಳುವದನ್ನು ನಿಶ್ಚಯಿಸಿದನು. ಇನ್ನು ಈ ಕಾಂಚಿಯ ಮಹಾಯುದ್ಧದಲ್ಲಿ ವಿಕ್ರಮಾದಿತ್ಯನಿಗೆ ಯಾವಕಾಲಕ್ಕೆ **ವಿಜಯ**ವು ಪ್ರಾಪ್ತವಾಯಿತು? ಮತ್ತು ಈತನು ತನ್ನ ಪಟ್ಟಬಂಧೋತ್ಸವವನ್ನು ಮಾಡಿಸಿಕೊಳ್ಳುವದನ್ನು ಎಂದು ನಿಶ್ಚಯಿಸಿದನು? ಇವೆರಡು ಸಂಗತಿಗಳ ಕಾಲನಿರ್ಣಯವನ್ನು ಮಾಡಿಬಿಟ್ಟರೆ, ಈತನು ತನ್ನ ಹೆಸರಿನ ನೂತನವಾದ **ಕಾಲಗಣನೆ**ಯನ್ನು ಎಂದಿನಿಂದ ಪ್ರಾರಂಭ ಮಾಡಿದನೆಂಬುದನ್ನು ಸುಲಭವಾಗಿ ಕಂಡುಹಿಡಿಯಬಹುದು.

ಭುವನೈಕಮಲ್ಲನು, ಶಕವರ್ಷದ ೯೯೭ನೆಯ ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಶುದ್ಧ ಚತುರ್ದಶಿಯ ದಿವಸ ರಾಜ್ಯವನ್ನಾಳುತ್ತಿದ್ದನೆಂದು ಈ ಕೆಳಗೆ ಬರೆದ ಶಿಲಾಲೇಖದಲ್ಲಿ ಸ್ಪಷ್ಟವಾಗಿ ಉಲ್ಲೇಖವಿದೆ.

"ಸ್ವಸ್ತಿ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತುಭುವನೈಕಮಲ್ಲದೇವರ ವಿಜಯ ರಾಜ್ಯಂ ಸಲುತ್ತಮಿರೆ, ಶಕವರ್ಷದ ೯೯೭ನೆಯ ರಾಕ್ಷಸಸಂವತ್ಸರದ ಫಾಲ್ಗುಣ ಶುದ್ಧ ೧೪ ಯನ್ನು ತುರುವಂ ಮಗುಳ್ಚಿರ್ಪಲರಂ ಕೊನ್ದು ಸೊವರನಾಗ ಸುರಲೋಕಕ್ಕೆ ಸಂದಂ" (ಸೊರಬ ತಾಲೂಕು ೩೧೫ನೆಯ ಶಾಸನ). ಈ ಫಾಲ್ಗುಣ ಶುದ್ಧ ಚತುರ್ದಶಿಯನಂತರ ಮುಂದೆ ಹದಿನಾರೇ ದಿವಸಗಳ ಮೇಲೆ ಉದಯವಾಗುವ ನಳಸಂವತ್ಸರದಲ್ಲಿ ಈ ವಿಕ್ರಮಾದಿತ್ಯನ ಹೊಸ ಕಾಲಗಣನೆಯು ಪ್ರಾರಂಭವಾಗಿರುತ್ತದೆಂದು ಸಾರಿ ಹೇಳುವ ಮೂರು ಶಿಲಾಲೇಖಗಳು ಉಪಲಬ್ಧವಾಗಿವೆ. ಅವು ಯಾವವೆಂದರೆ, (೧) ಹೊನ್ನಾಳಿ ತಾಲೂಕಿನ ೧೪ನೆಯ (ಎಂದರೆ ಕುರುವ ಗ್ರಾಮದಲ್ಲಿದ್ದ) ಶಿಲಾಲೇಖದಲ್ಲಿ–"ಚಾಳುಕ್ಯವಿಕ್ರಮ ಕಾಲ ೧ನೆಯ ನಳಸಂವತ್ಸರದ ಚೈತ್ರ ಶುದ್ಧ ೫ ಮೀ ಆದಿವಾರದಂದು" ಎಂದು ಸ್ಪಷ್ಟವಾಗಿ ಉಲ್ಲೇಖವಿದೆ. ಇದೇ ಮೇರೆಗೆ (೨) ಹಾನಗಲ್ಲ ತಾಲೂಕ ಅರಳೇಶ್ವರ ಗ್ರಾಮದಲ್ಲಿದ್ದ ಶಿಲಾಶಾಸನದಲ್ಲಿ–"ಶ್ರೀ ಮಚ್ಚಾಳುಕ್ಯವಿಕ್ರಮ ಕಾಲದ ೧ನೆಯ ನಳ ಸಂವತ್ಸರದ ಚೈತ್ರಬಹುಳ ಪಂಚಮಿ ಮಂಗಳವಾರ ಮೇಷ ಸಂಕ್ರಾಂತಿ ವ್ಯತೀಪಾತದಂದು" ಎಂದು ಬರೆದಿದೆ. ಹಾಗೆಯೇ (೩) ಶಿಕಾರಿಪುರ ತಾಲೂಕಿನ ೨೯೨ನೆಯ (ಎಂದರೆ ಮಟ್ಟಿಕೋಟೆ ಗ್ರಾಮದಲ್ಲಿದ್ದ) ಶಿಲಾಲೇಖದಲ್ಲಿ–"ಶ್ರೀಮಚ್ಚಾಳುಕ್ಯ ವಿಕ್ರಮವರ್ಷದ ಪ್ರಥಮ ನಳಸಂವತ್ಸರದ ಪುಷ್ಯ ಬ. ೩ ಸೋಮವಾರಮುತ್ತರಾಯಣ ಸಂಕ್ರಾನ್ತಿಪರ್ಬ್ಬ ನಿಮಿತ್ತದಿಂ ಧಾರಾಪೂರ್ಬ್ಬಕಂ ಮಾಡಿ" ಎಂದು ಇದೆ. ಇತ್ಯರ್ಥವೇನೆಂದರೆ, ನಳನಾಮಸಂವತ್ಸರವು ಉದಯವಾದಂದಿನಿಂದ ವಿಕ್ರಮಾದಿತ್ಯನ ಹೊಸ ಕಾಲಗಣನೆಯು ಪ್ರಾರಂಭವಾಗಿತ್ತೆಂಬುದು ಈ ಮೂರು ಶಿಲಾಲೇಖಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ. ಅತಏವ ನಳನಾಮಸಂವತ್ಸರದ ಆರಂಭದಿಂದಲೇ ಚಾಳುಕ್ಯ ಸಾಮ್ರಾಜ್ಯದ ಸಾರ್ವಭೌಮಾಧಿಕಾರವೆಲ್ಲ ವಿಕ್ರಮಾದಿತ್ಯನಿಗೆ ಪ್ರಾಪ್ತವಾಗಿತ್ತೆಂಬುದು ನಿಸ್ಸಂದೇಹವಾಗಿದೆ.

ಈ ವಿವೇಚನೆಯ ಮಥಿತಾರ್ಥವೇನೆಂದರೆ, ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಶುದ್ಧ ಚತುರ್ದಶಿಯನಂತರ ಹಾಗೂ ನಳನಾಮಸಂವತ್ಸರದ ಚೈತ್ರಶುದ್ಧ ಪ್ರತಿಪದೆಯ ಒಳಗಾಗಿ ಎಂದರೆ ರಾಕ್ಷಸಸಂವತ್ಸರದ ಫಾಲ್ಗುಣಮಾಸದ ಕೃಷ್ಣಪಕ್ಷದಲ್ಲಿ ಮೇಲೆ ವರ್ಣಿಸಿದ ಕಾಂಚಿಯ ಮಹಾಯುದ್ಧವು

ಕೊನೆಗಂಡು ಅರ್ಥಾತ್ ಅದೇ ಕಾಲದಲ್ಲಿ ವಿಕ್ರಮಾದಿತ್ಯನಿಗೆ ವಿಜಯವು ಪ್ರಾಪ್ತವಾಯಿತೆಂಬುದು ಸಿದ್ಧ. ಮತ್ತು ಆ ವಿಜಯವು ಪ್ರಾಪ್ತವಾದ ಕೂಡಲೇ ಬೆಳಗಾದರೆ ಯುದ್ಧದಲ್ಲಿ ವಿಜಯವು ಪ್ರಾಪ್ತವಾದ ಕೂಡಲೇ ಬೆಳಗಾದರೆ ಬರುತ್ತಿರುವ ನಳನಾಮಸಂವತ್ಸರದಲ್ಲಿ ತನ್ನ ಪಟ್ಟಬಂಧೋತ್ಸವವನ್ನು ಮಾಡಿಸಿಕೊಳ್ಳಬೇಕೆಂದು ವಿಕ್ರಮಾದಿತ್ಯನು ನಿಶ್ಚಯಿಸುವದು ಸ್ವಾಭಾವಿಕವಾಗಿದೆ. ಏಕೆಂದರೆ, ಈ ಕೃಷ್ಣಪಕ್ಷವು ಪಟ್ಟಬಂಧೋತ್ಸವಕ್ಕೆ ಗೌಣವಾಗಿದೆ. ಇಷ್ಟೇ ಅಲ್ಲ, ಕೃಷ್ಣ ಪಕ್ಷದ ಕೊನೆಯ ಐದು ತಿಥಿಗಳಂತೂ ಈ ಕಾರ್ಯಕ್ಕೆ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿವೆ.

ಇನ್ನು, ಈ ವಿಕ್ರಮಾದಿತ್ಯನು ತನ್ನ ಹೆಸರಿನ ಹೊಸ ಕಾಲಗಣನೆಯನ್ನು ಎಂದರೆ "**ಚಾಳುಕ್ಯ ವಿಕ್ರಮಕಾಲ**" ಅಥವಾ "**ಚಾಳುಕ್ಯ ವಿಕ್ರಮವರ್ಷ**" ಎಂಬ ಕಾಲಗಣನೆಯನ್ನು ಎಂದಿನಿಂದ ಪ್ರಾರಂಭಮಾಡಿದನೆಂಬುದನ್ನು ಕಂಡುಹಿಡಿಯುವಾ.

ಬಹು ಪುರಾತನ ಕಾಲದಿಂದ ಎಂದರೆ ಕಲಿಯುಗದ ಆರಂಭದಿಂದ ದಕ್ಷಿಣ ಹಿಂದುಸ್ಥಾನದಲ್ಲಿ ಕಿಂಬಹುನಾ ಅಖಿಲ ಭರತ ಖಂಡದಲ್ಲಿ "**ಕಲಿಯುಗ ಸಂವತ್**" ಎಂದರೆ "**ಗತಕಲಿ ಪ್ರಮಾಣ**" ಎಂಬ ಕಾಲಗಣನೆಯು ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭವಾಗಿದೆ. ಈಗ ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದ "**ಶಕವರ್ಷ**" ಎಂದರೆ "**ಶಾಲಿವಾಹನ ಶಕವರ್ಷ**"ವೆಂಬ ಕಾಲಗಣನೆಯೂ ಸಹ ಈ ಪೂರ್ವ ಪದ್ಧತಿಯನ್ನೇ ಅನುಸರಿಸಿ, ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭವಾಗಿದೆ. ಆದುದರಿಂದ ದಕ್ಷಿಣ ಹಿಂದುಸ್ಥಾನದಲ್ಲಿದ್ದ ಈ ಚಾಳುಕ್ಯ ವಿಕ್ರಮಾದಿತ್ಯ ಚಕ್ರವರ್ತಿಯು ಪ್ರಾರಂಭ ಮಾಡಿದ **ಚಾಳುಕ್ಯ ವಿಕ್ರಮವರ್ಷ**"ವೆಂಬ ಕಾಲಗಣನೆಯೂ ಸಹ ಈ ಪ್ರಾಚೀನ ಪದ್ಧತಿಯನ್ನೇ ಅನುಸರಿಸಿ, ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭವಾಗುವದು ಕ್ರಮಪ್ರಾಪ್ತವಾಯಿತು. ಈ ಮಾತನ್ನು, ಮೇಲೆ ಹೇಳಿದ ಹೊನ್ನಾಳಿ ತಾಲೂಕಿನ ೧೪ನೆಯ ಶಾಸನವು ಪುಷ್ಟೀಕರಿಸುತ್ತದೆ; ಏಕೆಂದರೆ, ಆ ಶಾಸನದಲ್ಲಿ ಚಾಳುಕ್ಯ ವಿಕ್ರಮಕಾಲ ೧ನೆಯ ನಳಸಂವತ್ಸರದ ಚೈತ್ರಶುದ್ಧ ಪಂಚಮಿ ತಿಥಿಯಿದೆ. ಇರಲಿ. ಪ್ರಾಚೀನ ಕಾಲದಲ್ಲಿ ಗುಜರಾಥ ದೇಶದಲ್ಲಿ ಪ್ರಚಾರದಲ್ಲಿದ್ದ "**ಗುಪ್ತ ಸಂವತ್**" ಎಂಬ ಕಾಲಗಣನೆಯೂ ಕಾಶ್ಮೀರ, ಪಂಜಾಬ ಪ್ರಾಂತಗಳಲ್ಲಿ ಪ್ರಚಾರದಲ್ಲಿದ್ದ "**ಸಪ್ತರ್ಷಿ ಸಂವತ್**" ಎಂಬ ಕಾಲಗಣನೆಯೂ ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭವಾಗಿವೆ. ಇಷ್ಟೇ ಅಲ್ಲ, ಮಾಳವ ದೇಶಾಧಿಪತಿಯಾದ ಉಜ್ಜಯನಿಯ ವಿಕ್ರಮಾದಿತ್ಯನು ಪ್ರಾರಂಭಮಾಡಿದ "**ವಿಕ್ರಮ ಸಂವತ್**" ಎಂಬ ಕಾಲಗಣನೆಯೂ ಸಹ ಉತ್ತರ ಹಿಂದುಸ್ಥಾನದಲ್ಲಿ ಚೈತ್ರಶುದ ಪ್ರತಿಪದೆಯಿಂದಲೇ ಪ್ರಾರಂಭವಾಗಿದೆ. (ಈ ಕಾಲಗಣನೆಯು ಉತ್ತರ ಹಿಂದುಸ್ಥಾನದ ದಕ್ಷಿಣ ಭಾಗದಲ್ಲಿ ಮಾತ್ರ ಕಾರ್ತಿಕ ಶುದ್ಧ ಪ್ರತಿಪದೆಯಿಂದ ಪ್ರಾರಂಭವಾಗುತ್ತದೆ.)

ಇನ್ನು, ಈ ಚಾಳುಕ್ಯ ವಿಕ್ರಮಾಂಕ ಚಕ್ರವರ್ತಿಯ ಪಟ್ಟಬಂಧೋತ್ಸವವು, ಆ ನಳನಾಮಸಂವತ್ಸರದಲ್ಲಿ ಯಾವ ಮಾಸದಲ್ಲಿ ನೆರವೇರಿತೆಂಬುದನ್ನು ನೋಡುವಾ,

ಈ ಚಾಳುಕ್ಯರಾಜರ ರಾಜಧಾನಿಯಾದ ಯಾತಗಿರಿ ಅಥವಾ **ಏತಗಿರಿ** ಪಟ್ಟಣದ ಸಮೀಪದಲ್ಲಿರುವ **ವಡಗೇರಿ** ಗ್ರಾಮದಲ್ಲಿದ್ದಂಥ ಶಿಲಾಲೇಖದಲ್ಲಿ ಸ್ಪಷ್ಟವಾಗಿ ಬರೆದದ್ದೇನೆಂದರೆ- "ಶ್ರೀಮಚ್ಚಾಳುಕ್ಯವಿಕ್ರಮವರ್ಷ ಪ್ರಥಮ ನಳಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರದಂದು ಪಟ್ಟಬಂಧೋತ್ಸವ ನಿಮಿತ್ತದಿಂ ಪಲವುಂ ಮಹಾ ದಾನಂಗಳಂ ಮಾಡಿ, ದಾನಕಾಲದೊಳ್" ಎಂದು ಇದೆ. ಈ ಲೇಖದಲ್ಲಿ ಪಟ್ಟಬಂಧೋತ್ಸವ ನಿಮಿತ್ತದಿಂ ಮಹಾದಾನಂಗಳಂ ಮಾಡಿ" ಎಂದು ಘಂಟಾಘೋಷವಾಗಿ ಹೇಳಿದ್ದರಿಂದ ಈ ಚಾಳುಕ್ಯ ವಿಕ್ರಮಾದಿತ್ಯನ ಪಟ್ಟಬಂಧೋತ್ಸವವು ಈ ನಳನಾಮಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಯ ದಿವಸವೇ ನೆರವೇರಿತೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿದೆ. ಈ ಶಿಲಾಲೇಖವನ್ನು ಅದೇ ಕಾಲದ ಶಿಲಾಲೇಖಗಳಿಗೆ ಹೋಲಿಸಿ ನೋಡಿದರೆ, ಈ ಮಾತು ಚೆನ್ನಾಗಿ ದೃಢಪಡುತ್ತದೆ. ಹೇಗೆಂದರೆ,

(೧) "ಶ್ರೀ ಮಚ್ಚಾಳುಕ್ಯವಿಕ್ರಮ ವರ್ಷದ ಪ್ರಥಮ ನಳ ಸಂವತ್ಸರದ ಪುಷ್ಯ ಬ. ೩ ಸೋಮವಾರ ಉತ್ತರಾಯಣ **ಸಂಕ್ರಾಂತಿ ಪರ್ವನಿಮಿತ್ತದಿಂ** ಧಾರಾಪೂರ್ವಕಂಮಾಡಿ" (ಶಿಕಾರಿಪುರ ತಾಲೂಕ ೨೯೨ನೆಯ ಶಾಸನ)

(೨) "ಶ್ರೀಮಚ್ಚಾಳುಕ್ಯವಿಕ್ರಮ ವರುಷದ ಎರಡನೆಯ ಪಿಂಗಳ ಸಂವತ್ಸರದ ಮಾಘದ ಪೂರ್ಣಿಮೆ ಸೋಮವಾರದಂದು **ಸೋಮಗ್ರಹಣಪರ್ವನಿಮಿತ್ತದಿಂ** ಧಾರಾಪೂರ್ವಕಂ ಕೊಟ್ಟು," (ಶಿಕಾರಿಪುರ ತಾಲೂಕ ೧೩೫ನೆಯ * ಶಾಸನ)

* ಇದೇ ೧೩೫ನೆಯ ಶಾಸನದ ಆರಂಭದಲ್ಲಿ ಈ ವಿಕ್ರಮಾಂಕ ಚಕ್ರವರ್ತಿಯ ಬಿರುದಾದ "ತ್ರಿಭುವನಮಲ್ಲ" ಎಂಬ ನಾಮದಿಂದ ಶಾಸನಕಾರನು ಹೊಗಳಿದ್ದು ಹೇಗೆಂದರೆ, "ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಲ ತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯಂ ಉತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಂ ಆಚಂದ್ರಾರ್ಕತಾರಂ ಸಲ್ಲುತ್ತಂ ಏತಗಿರಿಯ ನೆಲೆವೀಡಿನೊಳ್ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ."

(೩) " ಶ್ರೀಮಚ್ಚಾಳುಕ್ಯವಿಕ್ರಮವರ್ಷ ಪ್ರಥಮ ನಳಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರದಂದು **ಪಟ್ಟಬಂಧೋತ್ಸವ ನಿಮಿತ್ತದಿಂ** ಪಲವುಂ ಮಹಾದಾನಂಗಳಂ ಮಾಡಿ " (ಏತಗಿರಿ ಪಟ್ಟಣದ ಹತ್ತರ ಇರುವ ವಡಗೇರಿ ಗ್ರಾಮದಲ್ಲಿದ್ದ ಶಿಲಾಶಾಸನ)

ಮೇಲೆ ಬರೆದ ೧ನೆಯ ಶಾಸನದಲ್ಲಿ ಪುಷ್ಯ ಬಹುಳ ತೃತೀಯಾ ಸೋಮವಾರ ದಿವಸ ಮಕರ ಸಂಕ್ರಮಣದ ಹಬ್ಬವಿದ್ದುದರಿಂದ "ಸಂಕ್ರಾಂತಿ ಪರ್ವನಿಮಿತ್ತದಿಂದ " ಧಾರಾಪೂರ್ವಕವಾಗಿ ದಾನಮಾಡಿದರೆಂದು ಹೇಳಿದೆ. ಇದೇ ಮೇರೆಗೆ ೨ನೆಯ ಶಾಸನದಲ್ಲಿ, ಮಾಘಮಾಸದ ಹುಣ್ಣಿವೆಯ ದಿವಸ ಚಂದ್ರಗ್ರಹಣ ವಿದ್ದುದರಿಂದ "ಸೋಮಗ್ರಹಣ ಪರ್ವನಿಮಿತ್ತದಿಂದ" ಧಾರಾಪೂರ್ವಕವಾಗಿ ದಾನಕೊಟ್ಟರೆಂದು ಹೇಳಿದೆ. ಈ ಎರಡು ಶಾಸನಗಳಂತೆಯೇ ೩ನೆಯ ಶಾಸನದಲ್ಲಿಯೂ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರ ದಿವಸ ಪಟ್ಟಬಂಧೋತ್ಸವವಾದುದರಿಂದ " ಪಟ್ಟಬಂಧೋತ್ಸವ ನಿಮಿತ್ತದಿಂದ" ಹಲವು ಮಹಾದಾನಗಳನ್ನು ಮಾಡಿದರೆಂದು ಬರೆದಿರುತ್ತದೆಂದು ಹೇಳುವದು ಯಥಾನ್ಯಾಯವಾಗಿದೆ. ಸಾರಾಂಶವೇನೆಂದರೆ, ಪರ್ವವು ಅಥವಾ ಉತ್ಸವವು ಇದ್ದ ದಿವಸವೇ ದಾನಗಳನ್ನು ಮಾಡುವದು ನಮ್ಮ ವೈದಿಕಸಂಸ್ಕೃತಿಯ ಸಂಪ್ರದಾಯವಾಗಿದೆ. ಮೇಲಾಗಿ ಉತ್ಸವ ಕಾಲಕ್ಕಿರುವ ಆನಂದವೃತ್ತಿಯಲ್ಲಿಯೇ ದಾನಗಳನ್ನು ಮಾಡುವದು ಮನುಷ್ಯಪ್ರಾಣಿಯ ಸ್ವಭಾವವೂ ಆಗಿದೆ.

ಈ ಫಾಲ್ಗುಣ ಶುದ್ಧ ಪಂಚಮಿ ತಿಥಿಯು, ಜ್ಯೋತಿಷ ಶಾಸ್ತ್ರದ ದೃಷ್ಟಿಯಿಂದ ಪಟ್ಟಬಂಧೋತ್ಸವ ಕಾರ್ಯಕ್ಕೆ ಯೋಗ್ಯವಾಗಿದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳುವದಕ್ಕೋಸ್ಕರ ನಮ್ಮ ಧಾರವಾಡದ ಸುಪ್ರಸಿದ್ಧ ಜ್ಯೋತಿಷಶಾಸ್ತ್ರ ವಿಶಾರದರಾದ ವೇದಮೂರ್ತಿ ಬ್ರಹ್ಮಶ್ರೀ ಉಪ್ಪಿನ ಬೆಟಗೇರಿ ವೇಣೀಮಾಧವ ಶಾಸ್ತ್ರಿಗಳವರಕಡೆಗೆ ಹೋದೆನು. ಆಗ ಅವರು **"ಮುಹೂರ್ತ ಚಿಂತಾಮಣಿ"** ಎಂಬ ಗ್ರಂಥವನ್ನು ತೆರೆದು, ಅದರ ೧೧ನೆಯ ಅಧ್ಯಾಯವಾದ **ರಾಜಾಭಿಷೇಕ ಪ್ರಕರಣ**ದಲ್ಲಿದ್ದ ಶುಭಾಶುಭ ಮುಹೂರ್ತಗಳನ್ನು ಹೇಳಿದ್ದೇನೆಂದರೆ- (೧) **ಮಾಸ**- ದಕ್ಷಿಣಾಯನದೊಳಗಿನ ಆರು ಮಾಸಗಳೂ, ಅಧಿಕಮಾಸವೂ, ಉತ್ತರಾಯನದೊಳಗಿನ ಚೈತ್ರ ಮಾಸವೂ ಪಟ್ಟಬಂಧೋತ್ಸವ ಕಾರ್ಯಕ್ಕೆ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿವೆ. ಆದ್ದರಿಂದ ಚೈತ್ರಮಾಸವೊಂದನ್ನು ಬಿಟ್ಟು ಉತ್ತರಾಯನದ ಮಿಕ್ಕ ಐದು ಮಾಸಗಳು ಈ ಕಾರ್ಯಕ್ಕೆ ಶ್ರೇಷ್ಠವಾಗಿವೆ. ಅರ್ಥಾತ್ ಈ ಫಾಲ್ಗುಣ ಮಾಸವು, ಉತ್ತರಾಯನದಲ್ಲಿಯೇ ಇರುವದರಿಂದ ಪಟ್ಟಬಂಧೋತ್ಸವ ಕಾರ್ಯಕ್ಕೆ ಈ ಮಾಸವು ಶ್ರೇಷ್ಠವಾಗಿದೆ. (೨) **ಪಕ್ಷ**- ಈ ಕಾರ್ಯಕ್ಕೆ ಕೃಷ್ಣಪಕ್ಷವು ಗೌಣವಾಗಿದೆ; ಇಷ್ಟೇ ಅಲ್ಲ, ಕೃಷ್ಣಪಕ್ಷದ ಕೊನೆಯ ಐದು ತಿಥಿಗಳಂತೂ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟವೆ. ಶುಕ್ಲಪಕ್ಷವು ಶ್ರೇಷ್ಠವಾಗಿದೆ. ಅರ್ಥಾತ್ ಈ ಫಾಲ್ಗುಣ ಮಾಸದ ಶುಕ್ಲಪಕ್ಷವು ಈ ಪಟ್ಟಬಂಧೋತ್ಸವ ಕಾರ್ಯಕ್ಕೆ ಶುಭಕರವಾಗಿದೆ. (೩) **ತಿಥಿ**- ಚತುರ್ಥಿ, ನವಮಿ, ಚತುರ್ದಶಿ ಈ ಮೂರು ರಿಕ್ತಾತಿಥಿಗಳು ಈ ಕಾರ್ಯಕ್ಕೆ ನಿಷೇಧಿಸಲ್ಪಟ್ಟಿವೆ. ಆದರೆ ಪಂಚಮಿ ತಿಥಿಯು, ಪೂರ್ಣಾತಿಥಿಯಾದುದರಿಂದ ಪಟ್ಟಬಂಧೋತ್ಸವ ಕಾರ್ಯಕ್ಕೆ ಬಹು ಶ್ರೇಷ್ಠವಾಗಿದೆ. (೪) **ವಾರ**- ಈ ಕಾರ್ಯಕ್ಕೆ ಮಂಗಳವಾರವೊಂದು ನಿಷೇಧಿಸಲ್ಪಟ್ಟಿದೆ. ಅರ್ಥಾತ್ ಬೃಹಸ್ಪತಿವಾರವು ಪಟ್ಟಬಂಧೋತ್ಸವ ಕಾರ್ಯಕ್ಕೆ ಶ್ರೇಷ್ಠವಾಗಿರುತ್ತದೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಸಾರಾಂಶವೇನೆಂದರೆ, ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿ * ವಾರವು, ಪಟ್ಟಬಂಧೋತ್ಸವ ಕಾರ್ಯಕ್ಕೆ ಎಲ್ಲ ದೃಷ್ಟಿಯಿಂದಲೂ ಶುಭಕರವಾಗಿವೆ. ಈ ಪ್ರಕಾರ ಜ್ಯೋತಿಷ ಶಾಸ್ತ್ರದಿಂದ, ನಳನಾಮಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ಬೃಹಸ್ಪತಿವಾರ ದಿವಸ ವಿಕ್ರಮಾದಿತ್ಯನ ಪಟ್ಟಬಂಧೋತ್ಸವವು ನೆರವೇರಿತೆಂಬ ಸಿದ್ಧಾಂತವು ಮತ್ತಿಷ್ಟು ಬಲಪಡುತ್ತದೆ.

ಡಾಕ್ಟರ ಫ್ಲೀಟ ಇವರು ಊಹಿಸಿದ್ದೇನೆಂದರೆ, " ನಳನಾಮ ಸಂವತ್ಸರದ ಚೈತ್ರಶುದ್ಧ ಪ್ರತಿಪದೆಯಿಂದ ಈ ವಿಕ್ರಮಾದಿತ್ಯನು ತನ್ನ ಹೆಸರಿನ ಕಾಲಗಣನೆಯನ್ನು ಪ್ರಾರಂಭ ಮಾಡಿರುವದರಿಂದಲೂ, ಹಿಂದೆಹೇಳಿದ ವಡಗೇರಿ ಗ್ರಾಮದ ಶಿಲಾಲೇಖದಲ್ಲಿ ಇದೇ ನಳನಾಮಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಗೆ ಈತನ ಪಟ್ಟಬಂಧೋತ್ಸವವಾಯಿತೆಂದು ಬರೆದಿರುವದರಿಂದಲೂ

---

* ಈ ದಿವಸ ಇದ್ದ ನಕ್ಷತ್ರವನ್ನು ಈ ಶಿಲಾಲೇಖದಲ್ಲಿ ಕೆತ್ತಿಸುವದನ್ನು ಮರೆತಿದ್ದಾರೆ. ಈ ಪಟ್ಟಬಂಧೋತ್ಸವ ಕಾರ್ಯಕ್ಕೆ ಶುಭಕರವಾದ ನಕ್ಷತ್ರಗಳು ಯಾವವೆಂದರೆ- ಜ್ಯೇಷ್ಠಾ, ಶ್ರವಣ, ಅಶ್ವಿನೀ, ಪುಷ್ಯ, ಹಸ್ತಾ, ಮೃಗಶಿರ, ಚಿತ್ರಾ, ಅನುರಾಧಾ, ರೇವತಿ, ರೋಹಿಣಿ, ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರಪದ.

ಈ ನಳನಾಮ ಸಂವತ್ಸರದಲ್ಲಿ ನೆರವೇರಿದ ಪಟ್ಟಬಂಧೋತ್ಸವವು ಗನೆಯ ವಾರ್ಷಿಕ ಉತ್ಸವವಾಗಿರಬಹುದು. ಆದುದರಿಂದ ಈ ವಿಕ್ರಮಾದಿತ್ಯನ ಮುಖ್ಯ ಪಟ್ಟಬಂಧೋತ್ಸವವು, ಈ ತಿಥಿಗೆ ಸರಿಯಾಗಿ ಒಂದು ವರ್ಷದ ಹಿಂದೆ ಎಂದರೆ ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಗೆ ಆಗಿರಬೇಕೆಂದು ತೋರುತ್ತದೆ." ಹಿಂದೆ ಹೇಳಿದ ಸೊರಬ ತಾಲೂಕಿನ ಶಿಗಿಶಿನೆಯ ಶಾಸನವು, ಡಾಕ್ಟರ ಪ್ಲೀಟರ ಈ ಊಹೆಯನ್ನು ಸಂಪೂರ್ಣವಾಗಿ ವಿಧ್ವಂಸಮಾಡುತ್ತದೆ. ಹೇಗೆಂದರೆ, ಆ ಶಾಸನವು ಈ ರಾಕ್ಷಸನಾಮಸಂವತ್ಸರದ ಫಾಲ್ಗುಣ ಶುದ್ಧ **ಚತುರ್ದಶಿಯ** ದಿವಸ ಭುವನೈಕಮಲ್ಲನು ರಾಜ್ಯವನ್ನಾಳುತ್ತಿದ್ದನೆಂದು ಸಾರಿ ಹೇಳುತ್ತದೆ. ಹೀಗಿದ್ದಮೇಲೆ ಈ ಭುವನೈಕಮಲ್ಲನ ತಮ್ಮನಾದ ಈ ವಿಕ್ರಮಾದಿತ್ಯನು ಇದೇ ರಾಕ್ಷಸಸಂವತ್ಸರದ ಫಾಲ್ಗುಣ ಶುದ್ಧ **ಪಂಚಮಿಗೆ** ಪಟ್ಟಬಂಧೋತ್ಸವವನ್ನು ಮಾಡಿಸಿಕೊಳ್ಳುವದು ತೀರ ಅಸಂಭವನೀಯವಾಗಿದೆ. ಇಷ್ಟಕ್ಕೂ ಆ ವಡಗೇರಿ ಗ್ರಾಮದ ಶಿಲಾಲೇಖದಲ್ಲಿ, ನಳನಾಮ ಸಂವತ್ಸರದಲ್ಲಿ ನೆರವೇರಿದ ಪಟ್ಟಬಂಧೋತ್ಸವದ ನಿಮಿತ್ತದಿಂದ ವಿಕ್ರಮಾದಿತ್ಯನು ಮಹಾ ದಾನಗಳನ್ನು ಮಾಡಿದನೆಂದು ಹೇಳಿರುವದರಿಂದ ಆ ಉತ್ಸವವು **ಮಹೋತ್ಸವವೇ** (ಎಂದರೆ ಮುಖ್ಯ ಪಟ್ಟ ಬಂಧೋತ್ಸವವೇ) ಆಗಿರುತ್ತದೆಯೇ ಹೊರತು ವಾರ್ಷಿಕ ಉತ್ಸವದಂಥ ಕ್ಷುಲ್ಲಕ ಉತ್ಸವವು ಅಲ್ಲೆಂಬುದು ಸ್ಪಷ್ಟವಾಗಿದೆ. ಫಲಿತಾರ್ಥವೇನೆಂದರೆ, ಪಟ್ಟಬಂಧೋತ್ಸವವು ನೆರವೇರಿದ ಫಾಲ್ಗುಣ ಶುದ್ಧ ಪಂಚಮಿ ತಿಥಿಯು ನಳಸಂವತ್ಸರದ್ದೇ ಹೊರತು ರಾಕ್ಷಸಸಂವತ್ಸರದ್ದಲ್ಲೆಂಬುದು ಸಿದ್ಧ.

ಇನ್ನು ನಮ್ಮ ಧಾರವಾಡದ ಶ್ರೀಮಾನ್ ರಾಮಚಂದ್ರ ಹಣುಮಂತ ದೇಶಪಾಂಡೆ ಎಮ್. ಎ., ಇವರು. ತಾವು ಬರೆದ "**ಕರ್ನಾಟಕ ಇತಿಹಾಸ**"ದಲ್ಲಿ ಈ ವಿಕ್ರಮಾದಿತ್ಯನು ಈ ನಳನಾಮಸಂವತ್ಸರದ ಚೈತ್ರಶುದ್ಧ ಪ್ರತಿಪದೆಯ ದಿವಸ ಪಟ್ಟಕ್ಕೆ ಕುಳಿತನೆಂದು ಬರೆದಿದ್ದಾರೆ. ಈ ಮಾತಿಗೆ ಆಧಾರವಂತೂ ಇಲ್ಲವೇ ಇಲ್ಲ; ಇಷ್ಟಕ್ಕೂ ಚೈತ್ರಮಾಸವು, ಪಟ್ಟಬಂಧೋತ್ಸವ ಕಾರ್ಯಕ್ಕೆ ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿರುತ್ತದೆಂಬುದನ್ನು ಜ್ಯೋತಿಷ ಶಾಸ್ತ್ರದ ಆಧಾರದಿಂದ ಈ ಮೊದಲೇ ಹೇಳಿದ್ದೇನೆ.

ಕಾಲಗಣನೆಗಳು ಹೇಗೆ ಪ್ರಾರಂಭವಾಗುತ್ತವೆಂಬುದನ್ನು ಸಪ್ರಮಾಣವಾಗಿ ವಿವರಿಸಿ ಹೇಳಿಬಿಟ್ಟರೆ, ಸಂಪೂರ್ಣವಾಗಿ ವಿರೋಧಪರಿಹಾರವಾಗುವದು; ಎಂದರೆ ಎಲ್ಲ ಜನರ ಸಂಶಯಗಳೂ ದೂರಾಗುವವು. ಹೇಗೆಂದರೆ, ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದ "**ಶಕವರ್ಷ**"ವೆಂಬ ಕಾಲಗಣನೆಯು "ಶಕ" ಎಂಬ ಉಪನಾಮದ ರಾಜನ ಪಟ್ಟಬಂಧೋತ್ಸವದ ಕಾಲದಿಂದ ಪ್ರಾರಂಭವಾಗಿರುತ್ತದೆಂದು ಚಾಳುಕ್ಯ ಚಕ್ರವರ್ತಿಯಾದ ಮಂಗಲೇಶನು, ಬಾದಾಮಿಯಲ್ಲಿ ಕೆತ್ತಿಸಿದ ಶಿಲಾಲೇಖದಲ್ಲಿ ಸ್ಪಷ್ಟವಾಗಿ ಹೇಳಿದೆ. ಹಾಗಾದರೆ, ಈ 'ಶಕವರ್ಷ'ವೆಂಬ ಕಾಲಗಣನೆಯು, ಪಟ್ಟಬಂಧೋತ್ಸವದ ಸ್ಮಾರಕವಾಗಿದ್ದರೂ ಚೈತ್ರಶುದ್ಧ ಪ್ರತಿಪದೆಯಿಂದ ಹೇಗೆ ಪ್ರಾರಂಭವಾಯಿತು? ಇದೊಂದು ವಿಚಾರಾರ್ಹವಾದ ಪ್ರಶ್ನವಾಗಿದೆ. ಏಕೆಂದರೆ, ಪಟ್ಟಬಂಧೋತ್ಸವದ ಕಾರ್ಯಕ್ಕೆ ಚೈತ್ರಮಾಸವು ನಿಷೇಧಿಸಲ್ಪಟ್ಟಿರುವುದರಿಂದ ಈ ಶಕರಾಜನ ಪಟ್ಟಬಂಧೋತ್ಸವವು ಚೈತ್ರಶುದ್ಧ ಪ್ರತಿಪದೆಯ ದಿವಸ ಆಗುವದು ಶಕ್ಯವೇ ಇಲ್ಲ. ಅತಏವ ಪಟ್ಟಬಂಧೋತ್ಸವವಾದ ತಿಥಿಯಿಂದ ಕಾಲಗಣನೆಯು ಪ್ರಾರಂಭವಾಗಬೇಕೆಂಬ ನಿಯಮವಿರದೆ, ಪಟ್ಟಬಂಧೋತ್ಸವವಾದ ಸಂವತ್ಸರದಿಂದ (ಎಂದರೆ ವರ್ಷದಿಂದ ಅಥವಾ ಕಾಲದಿಂದ) ಮಾತ್ರ ಪ್ರಾರಂಭವಾಗಬೇಕೆಂಬ ನಿಯಮವಿತ್ತೆಂಬುದು ಇದರಿಂದ ನಿಷ್ಪನ್ನವಾಗುತ್ತದೆ. ಆದುದರಿಂದ ಈ ಶಕವರ್ಷವೆಂಬ ಕಾಲಗಣನೆಗಿಂತ ಮುಂಚೆ ಇದ್ದ "ಕಲಿಯುಗಸಂವತ್" ಅಥವಾ "ಗತಕಲಿಪ್ರಮಾಣ" ಎಂಬ ಕಾಲಗಣನೆಯು, ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭವಾಗಿರುವದರಿಂದ ವ್ಯವಹಾರಸೌಕರ್ಯಕ್ಕೋಸ್ಕರ ಈ ಪೂರ್ವಪದ್ಧತಿಯನ್ನೇ ಅನುಸರಿಸಿ, ಶಕರಾಜನು ತನ್ನ ನೂತನ ಕಾಲಗಣನೆಯನ್ನು ಚೈತ್ರಶುದ್ಧ ಪ್ರತಿಪದೆಯಿಂದಲೇ ಪ್ರಾರಂಭ ಮಾಡುವದು ಕ್ರಮಪ್ರಾಪ್ತವಾಯಿತು. ಅಲ್ಲದೆ ಆ ರಾಜನು ಈ ಚೈತ್ರಮಾಸವೊಂದನ್ನು ಬಿಟ್ಟು ಅದೇ ಸಂವತ್ಸರದ ಉತ್ತರಾಯಣದೊಳಗಿನ ಮಿಕ್ಕ ಐದು ಮಾಸಗಳಲ್ಲಿ ತಿಥಿ, ವಾರ, ನಕ್ಷತ್ರ ಮುಂತಾದ ಸರ್ವದೃಷ್ಟಿಯಿಂದಲೂ ಶುಭಪ್ರದವಾದ ಮುಹೂರ್ತವೊಂದನ್ನು ನೋಡಿಕೊಂಡು, ಆ ತಿಥಿಗೆ ಪಟ್ಟಬಂಧೋತ್ಸವವನ್ನು ಮಾಡಿಸಿಕೊಳ್ಳುವದು ಸ್ವಾಭಾವಿಕವಾಯಿತು.

ಇದೇ ಮೇರೆಗೆ ಈ ಚಾಳುಕ್ಯ ವಿಕ್ರಮಾದಿತ್ಯರಾಜನು, ರಾಕ್ಷಸನಾಮಸಂವತ್ಸರದ ಫಾಲ್ಗುಣಮಾಸದ ಕೃಷ್ಣಪಕ್ಷದಲ್ಲಿ ಮುಂದೆ ಬೆಳಗಾದರೆ ಬರುತ್ತಿರುವ ನಳನಾಮಸಂವತ್ಸರದಲ್ಲಿ ಪಟ್ಟಬಂಧೋತ್ಸವವನ್ನು ಮಾಡಿಸಿಕೊಳ್ಳಬೇಕೆಂದು ನಿಶ್ಚಯಿಸಿದನೆಂಬುದನ್ನು ಈ ಮೊದಲೇ ಸಿದ್ಧಮಾಡಿ ತೋರಿಸಿದ್ದೇವಷ್ಟೇ. ಅಮುಂದೆ ಗತಕಲಿಪ್ರಮಾಣ, ಶಕವರ್ಷ ಮುಂತಾದವುಗಳ

ಹಿಂದುಸ್ಥಾನದ ಪ್ರಾಚೀನ ಕಾಲಗಣನೆಗಳ ಪದ್ಧತಿಯನ್ನನು ಸರಿಸಿ, ನಳನಾಮಸಂವತ್ಸರದ ಚೈತ್ರಶುದ್ಧ ಪ್ರತಿಪದೆಯಿಂದ ತನ್ನ ಹೊಸ ಕಾಲಗಣನೆಯನ್ನು ಪ್ರಾರಂಭಮಾಡಿ, ಅದೇ ನಳ ನಾಮ ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿ ದಿವಸ ಸರ್ವ ದೃಷ್ಟಿಯಿಂದಲೂ ಶುಭಪ್ರದವಾದ ಅತಏವ ಸರ್ವೋತ್ಕೃಷ್ಟ ವಾದ ಮುಹೂರ್ತವಿರುತ್ತದೆಂಬುದನ್ನು ನೋಡಿ, ಆ ತಿಥಿಯಲ್ಲಿ ತನ್ನ ಪಟ್ಟಬಂಧೋತ್ಸವವನ್ನು ಮಾಡಿಸಿಕೊಂಡನೆಂದು ಹೇಳು ವದು ಸಪ್ರಮಾಣವೂ ಸಯುಕ್ತಿಕವೂ ಆಗಿದೆ.

ಇದೂ ಅಲ್ಲದೆ ಮಾಳವದೇಶಾಧಿಪತಿಯಾದ ಉಜ್ಜಯನೀ ಪಟ್ಟ ಣದ ವಿಕ್ರಮಾದಿತ್ಯನು, ಶಕರಾಜನನ್ನು ಸೋಲಿಸಿ, ಆ ಯುದ್ಧ ದಲ್ಲಿ ತಾನು ಸಂಪಾದಿಸಿದ **ವಿಜಯದ** ಸ್ಮಾರಕವೆಂದು ತನ್ನ ಹೆಸರಿನ " **ವಿಕ್ರಮ ಸಂವತ್** " ಎಂಬ ಕಾಲಗಣನೆಯನ್ನು ಹೇಗೆ ಪ್ರಾರಂಭ ಮಾಡಿದನೋ, ಹಾಗೆಯೇ ಈ ಚಾಳುಕ್ಯ ವಂಶದ ವಿಕ್ರಮಾದಿತ್ಯನು, ರಾಕ್ಷಸನಾಮಸಂವತ್ಸರದ ಫಾಲ್ಗು ಣಮಾಸದ ಕೃಷ್ಣಪಕ್ಷದಲ್ಲಿ ಕಾಂಚಿಯ ಮಹಾಯುದ್ಧದಲ್ಲಿ ರಾಜಿಗನೆಂಬ ಚೋಳರಾಜನನ್ನೂ ಅಣ್ಣನಾದ **ಭುವನೈಕ ಮಲ್ಲನನ್ನೂ** ಸೋಲಿಸಿ, ತಾನು ಸಂಪಾದಿಸಿದ **ವಿಜಯದ** ಸ್ಮಾರಕವೆಂದೂ ಸಹ ತನ್ನ ಹೆಸರಿನ " ಚಾಳುಕ್ಯ ವಿಕ್ರಮ ವರ್ಷ " ಎಂಬ ಕಾಲಗಣನೆಯನ್ನು ನಳನಾಮಸಂವತ್ಸರದ ಚೈತ್ರ ಶುದ್ಧ ಪ್ರತಿಪದೆಯಿಂದ ಪ್ರಾರಂಭಮಾಡಿದನೆಂದು ಹೇಳು ವದೂ ಸಮಂಜಸವಾಗಿದೆ. ಹೀಗೆ ಹೇಳುವದರಿಂದ ಕಾರ್ಯ ಕಾರಣ ಸಂಗತಿಯು ಸರಿಯಾಗಿ ಹೊಂದುತ್ತದೆ. ತಾತ್ಪರ್ಯ ವೇನಂದರೆ, ಈ " **ಚಾಳುಕ್ಯ ವಿಕ್ರಮ ವರುಷ** " ವೆಂಬ ಕಾಲಗಣನೆಯು, **ವಿಜಯ** ಮತ್ತು **ಪಟ್ಟಬಂಧೋತ್ಸವ** ಈ ಎರಡು ಮಹತ್ವದ ಸಂಗತಿಗಳ ಸ್ಮಾರಕವೆಂದು ಪ್ರಾರಂಭ ವಾಯಿತೆಂಬುದು ಸಿದ್ಧವಾಯಿತು.

ಗದಗಿನ ವೀರನಾರಾಯಣನ ದೇವಾಲಯದಲ್ಲಿದ್ದ ಶಿಲಾ ಲೇಖವು, ಹೀಗೆ ಗರ್ಜಿಸಿ ಹೇಳುತ್ತದೆ:—

ಬಲ್ಲಾಳ್ತನದಿಂ ರಿಪುನೃಪ ।
ರೆಲ್ಲರನೇಕಾಂಗದಿಂದಮೊರಗಿಸಿ ಧರಣೀ ॥
ವಲ್ಲಭನಾದಂ ತ್ರಿಭುವನ ।
ಮಲ್ಲಂ ಚಾಳುಕ್ಯವಿಕ್ರಮಾದಿತ್ಯನೃಪಂ ॥೧॥
ಎಸೆವ ಶಕವರುಷನಂ ಮಾ ।
**ಣಿಸಿ ವಿಕ್ರಮ ವರುಷ** ಮೆಂದು ತನ್ನಯ ಪೆಸರಂ ॥
ವಸುಮತಿಗೆ ನೆಗಳ್ಚಿದಂ ಸಾ ।
ಹಸಿಗಂ ಜಗದೇಕದಾನಿ ಧರ್ಮವಿನೋದಂ ॥೨॥

ಏತಗಿರಿಯ ನೆಲವೀಡಿನ ಹತ್ತರ ಇರುವ ಯಡರಾವೆಗ್ರಾಮದ ಶಿಲಾಲೇಖವು, ಈ ಚಾಳುಕ್ಯವಿಕ್ರಮಾಂಕ ಚಕ್ರವರ್ತಿಯ ಪ್ರತಾಪವನ್ನು ಹೀಗೆ ಘಂಟಾಘೋಷವಾಗಿ ಹೇಳುತ್ತದೆ:—

" ಎನಿಸಿರ್ದ್ದ ಆಹವಮಲ್ಲದೇವನ ಮಗಂ, ಸೋಮೇಶ್ವ ರೋರ್ವ್ವೀಶ್ವರಂಗನುಜಂ ವಿಕ್ರಮಚಕ್ರಿ ಚಕ್ರಧರರೂಪಂ, ವಿಕ್ರ ಮಾದಿತ್ಯ ನಂದ ನರೇಂದ್ರರ್ಕ್ಕಳತೇಜಂ ಅಡ್ಡಿಹುದು ಇನ್ನು ಯಾಕೆಂದು ತನ್ನಾಣೆ ಗೀಸನೆರೆಗಲ್ **ಶಕನಾಮಮುಂ ಕಳೆದು ಚಾಳುಕ್ಯಾಂಕವಮಂ ಮಾಡಿದಂ** "

ಶಿಕಾರಿಪುರ ತಾಲೂಕ ಬಳ್ಳಿಗಾವೆ ಗ್ರಾಮದ (೧೧೮ ನೆಯ) ಶಿಲಾಲೇಖವು ಈ ವಿಕ್ರಮಾದಿತ್ಯನ ಮಹಿಮೆಯನ್ನು ಹೀಗೆ ಸಾರಿ ಹೇಳುತ್ತದೆ:—

" ಚಾತುರ್ಯ್ಯದೊಳು ಶೌರ್ಯದೊಳು ಅನುಪಮ ಭೋಗ ದೊಳು ಚಾಗದೊಳು ಶಾಂ ತೇಜೋ ಮೂರ್ತ್ತಿಯೊಳು ಕೀರ್ತಿಯೊಳು ಅಧಿಕನಿವಂ ವಿಕ್ರಮಾದಿತ್ಯದೇವಂ "

ಕನ್ನಡಿಗರಲ್ಲಿ ಅವತರಿಸಿದ ಶ್ರೀಮಚ್ಚಾಳುಕ್ಯ ವಿಕ್ರಮಾಂಕ ಚಕ್ರವರ್ತಿಯ ಪುಣ್ಯಸ್ಮರಣವೆಂದು ಈ ಮಹಾ ಪುರುಷನು ಪ್ರಾರಂಭ ಮಾಡಿರುವ " ಚಾಳುಕ್ಯ ವಿಕ್ರಮವರ್ಷ " ವೆಂಬ ಕಾಲಗಣನೆಯನ್ನು ಪ್ರಚಾರದಲ್ಲಿ ತರುವದು ಪ್ರತಿಯೊಬ್ಬ ಕನ್ನ ಡಿಗನ ಅನುಲ್ಲಂಘನೀಯವಾದ ಕರ್ತವ್ಯವಾಗಿದೆ.

ಶ್ರೀಮಚಾಳುಕ್ಯ ವಿಕ್ರಮ ವರುಷ ೮೭೫
ಪ್ರಮೋದೂತ ಸಂ॥ ಚೈತ್ರಶುದ್ಧ ೧
ಧಾರವಾಡ

॥ **ಶ್ರೀಕೃಷ್ಣಾರ್ಪಣಮಸ್ತು** ॥

# ಅವಳ ಗಂಡ

ಲೇಖಕರು—ಶ್ರೀ. ಜಿ. ಪಿ. ರಾಜರತ್ನಂ, ಬೆಂಗಳೂರು

[ ರಷ್ಯದೇಶದ ಪ್ರಸಿದ್ಧ ಬರಹಗಾರನಾದ 'ಮ್ಯಾಕ್ಸಿಂಗಾರ್ಕಿ' (Maxim Gorki) ಯವರ 'ಹರ್ ಲವರ್ (Her Lover)' ಸಣ್ಣಕತೆಯ ರೂಪಾಂತರವಿದು. ]

ನನ್ನ ಪರಿಚಿತನೊಬ್ಬ ನನಗೀ ಕತೆಯನ್ನು ಹೇಳಿದನು. ನಾನು ಬೆಂಗಳೂರಿನಲ್ಲಿ ವಾಸ ಮಾಡುತಿದ್ದಾಗ, ನಾನಿದ್ದ ಬಳಿಯಲ್ಲಿದ್ದ ಹೆಂಗಸರು ನಡತೆಯಲ್ಲಿ ಸ್ವಲ್ಪ ಹಾಗೆ ಹಾಗೇ—ವಿಚಾರ ಏಕೆ. ಅವರಲ್ಲಿ ಒಬ್ಬಳು ಆಂಧ್ರದೇಶದವಳು...ಹೆಸರು ತಾರಾ...ಎತ್ತರವಾಗಿದ್ದಳು...ಬಿಗಿದ ಬಲವಾದ ಮೈಕಟ್ಟು...ಕಪ್ಪಗೆ ದಟ್ಟವಾದ ಹುಬ್ಬುಗಳು...ಕೊಡಲಿಯಿಂದ ಕಡೆದಂತಿರುವ ದೊಡ್ಡ ಮುಖ...ಕಾಮಪೂರಿತದೃಷ್ಟಿಯನ್ನೆರಚುವ ಕಣ್ಣುಗಳು... ದಪ್ಪದನಿ... ಪೈಲ್ವಾನನಂತೆ ನಡೆಯುವ ಅವಳ ದೃಢಕಾಯವನ್ನು ಕಂಡಾಗಲೆಲ್ಲ ನನಗೆ ಹೆದರಿಕೆಯಾಗುತ್ತಿತ್ತು. ನಾನು ವಾಸಿಸುತ್ತಿದ್ದ ಮಹಡಿಯ ಎದುರು ಮಹಡಿಯಲ್ಲಿಯೇ ಅವಳಿದ್ದುದು. ಅವಳು ಮನೆಯಲ್ಲಿರುವಳೆಂದು ತಿಳಿದರೆ ನಾನು ಕಿಟಕಿಯನ್ನೇ ತೆಗೆಯುತಿರಲಿಲ್ಲ. ನಾನವಳನ್ನು ಕಾಣುತ್ತಿದ್ದುದು ಬಹಳ ಅಪರೂಪ. ಕೆಲವು ವೇಳೆ ಬಾಗಿಲಬಳಿ ಕಂಡರೆ, ನನ್ನ ಕಂಡು ಅವಳು ನಗುವಳು—ಕುಚೇಷ್ಟೆಯ ಕೃತ್ರಿಮದ ನಗು. ಆಗಾಗ್ಗೆ, ಕಳ್ಳು ಕುಡಿದು, ಕಣ್ಣು ತೇಲಿಸಿ, ತಲೆಗೆದರಿಕೊಂಡು ವಿಕಾರವಾಗಿ ಹಲ್ಗಿರಿಯುತ್ತ ಬರುವಳು. ಅಂಥ ಸಂದರ್ಭಗಳಲ್ಲಿ ನನ್ನ ಕೂಡೆ ಮಾತಾಡುವಳು.

"ಏನು ವಿದ್ಯಾರ್ಥಿಗಳೇ!" ಎಂದು ಅವಳು ಪೆಚ್ಚುಪೆಚ್ಚಾಗಿ ನಗುತ್ತ ಕೇಳಿದರೆ, ಅವಳ ವಿಷಯದಲ್ಲಿ ನನಗಿದ್ದ ಅಸಹ್ಯತೆಯು ಇನ್ನೂ ಹೆಚ್ಚುವುದು. ಇಂತ ಸಮಾಗಮಗಳಿಂದ ಪಾರಾಗಲು, ರೂಮನ್ನು ಬೇರೆಡೆ ಮಾಡಿಕೊಳ್ಳಲು ಇಷ್ಟವಿತ್ತು. ಆದರೆ, ಚಿಕ್ಕಚೆನ್ನಕೋಠಡಿ—ಗಾಳಿ ಬೆಳಕು ಬರುವ ಜಾಗ—ಸದ್ದುಗಲಗಿಲ್ಲದ ಬೀದಿ—ಆದುದರಿಂದ ಸಹಿಸಿಕೊಂಡಿದ್ದೆ.

ಒಂದು ದಿನ ಬೆಳಿಗ್ಗೆ ಚಾಪೆಯಮೇಲೆ ಉರುಳಾಡುತ್ತಾ, ಸ್ಕೂಲಿಗೆ ಚಕ್ಕರ್ ಕೊಡೋಣವೆಂದು ಯೋಚಿಸುತ್ತಿದ್ದರೆ, ತಾರಾ ಬಾಗಿಲು ತೆರೆದು ಹೊಸ್ತಿಲಬಳಿ ನಿಂದು—ಹಾಳು ದೊಡ್ಡ ಗಂಟಲು—

"ಎದ್ದಿರಾ ವಿದ್ಯಾರ್ಥಿಗಳೆ" ಎಂದು ಗಟ್ಟಿಯಾಗಿ ಅರಚಿದಳು.

"ಏನು ಬೇಕು ನಿನಗೆ!" ಎಂದೆ. ಅವಳ ಮುಖದಲ್ಲಿ ದೈನ್ಯ ಮೂಡಿತ್ತು— ಎಂದಿನಂತಿರಲಿಲ್ಲ.

"ಸ್ವಾಮಿ! ನಿಮ್ಮಿಂದ ಒಂದುಪಕಾರವಾಗಬೇಕು. ದಯಮಾಡಿ ಮಾಡಿಕೊಡುತೀರಾ?"

ನಾನು ಸುಮ್ಮನೆ ಮಲಗಿಕೊಂಡು. "ಓಹೋ! ಏನೊ ಗ್ರಹಚಾರ ಬಂತಪ್ಪ!" ಎಂದು ಕೊಂಡೆ.

"ನಮ್ಮೂರಿಗೆ ಒಂದು ಕಾಗದ ಬರೆಯಬೇಕು. ಅಷ್ಟೆ" ಎಂದು ಅವಳು ಅಂಜುತಂಜುತ ಬೇಡಿದಳು.

"ನಿನ್ನ ಮನೆ ಹಾಳಾಯಿತು!" ಎಂದುಕೊಂಡವನು ಎದ್ದು ಅರೆಗಜ ಕಾಗದ ತೆಗೆದುಕೊಂಡು

"ಒಳಗೆ ಬಾ. ಏನು ಬರೆಯಬೇಕು?" ಎಂದೆ.

ಅವಳು ಸಿಗ್ಗುಪಡುತ್ತಾ, ಒಳಗೆ ಬಂದು, ಏನೆ ಮಾಡಬಾರದುದನ್ನು ಮಾಡಿದವಳಂತೆ ನನ್ನನ್ನು ನೋಡುತ್ತಾ ಕುಳಿತಳು.

"ಸರಿ! ಯಾರಿಗೆ ಬರೆಯಬೇಕು?"

"ಅನಂತಪುರದಲ್ಲಿ...ಶ್ರೀಪತಿಗಾರು ರಸ್ತೆಯಲ್ಲಿರುವ...ಶ್ರೀಯುತ...ಶ್ರೀಯುತ...ಬಾಲಯ್ಯನವರಿಗೆ...

"ಆ ಮೇಲೆ!"

"ಪ್ರಿಯರೆ— ಪ್ರಾಣಪ್ರಿಯರೆ— ಮೋಹನಾಂಗರೆ. ದೇವರು ನಿಮ್ಮನ್ನು ಕಾಪಾಡಲಿ. ನನ್ನ ಮೋಹದ ಚೆನ್ನರೆ, ಇಷ್ಟು ಕಾಲವಾದರೂ ನಿಮ್ಮ ಚಿರದುಃಖಿನಿಯಾದ ಅರಗಿಳಿ ತಾರೆಗೆ ಕಾಗದವೇಕೆ ಬರೆಯಲಿಲ್ಲ?"

ನನಗೇಕೊ ಬಹಳ ನಗು ಬಂತು. "ಚಿರದುಃಖಿನಿಯಾದ ಅರಗಿಳಿ!" ಲಕ್ಷಣವಾಗಿ ಐದಡಿ ಬೆಳೆದಿದ್ದಾಳೆ— ಒಳ್ಳೆಯ ಗುಜ್ಜಾನೆ ಮರಿಯಹಾಗೆ— ಸಾಲುದುದಕ್ಕೆ ಆ ಗಿಳಿ ಹುಟ್ಟಿದಂದಿನಿಂದ ಇದ್ದಿಲ ಚೀಲದಲ್ಲಿ ಬಿದ್ದು ಒದ್ದಾಡಿದ ಹಾಗಿದೆ ಮೈ! ಹೇಗೆ ಹೇಗೊ ನಗುವನ್ನು ತಡೆದುಕೊಂಡು ಕೇಳಿದೆ

"ಯಾರು— ಈ ಬೋಲಯ್ಯನವರು?"

ನಾನು ಹೆಸರು ತಪ್ಪುಹೇಳಿದುದಕ್ಕಾಗಿ ಅವಳು ಅಸಮಾಧಾನಪಟ್ಟಳು. "ಬಾಲಯ್ಯನವರು, ವಿದ್ಯಾರ್ಥಿಗಳೇ!...ಅವರು ನನ್ನ ಯಜಮಾನರು."

"ಯಜಮಾನರು!"

"ಏಕೆ? ಆಶ್ಚರ್ಯವೇಸು? ನನ್ನಂತ ಹುಡುಗಿಗೆ ಮದುವೆ ಆಗಿರಕೂಡದೇ?"

ಇವಳು! ಹುಡುಗಿ? ಸರಿಹೋಯಿತು!

"ಓ! ಏಕಾಗಬಾರದು? ಎಂತೆಂತಹುದೋ ಆಗುತ್ತೆಯಂತೆ...ಎಷ್ಟು ವರುಷವಾಯಿತು ಲಗ್ನವಾಗಿ?" ಎಂದೆ.

"ಆರು ವರುಷವಾಯಿತು."

"ಓ! ಓ!...ಸರಿ...ಕಾಗದ ಬರೆಯೋಣ..."

ನೋಡಿ! ಬಾಯಿಬಿಟ್ಟು ಹೇಳುತ್ತೇನೆ. ಈ ಕಾಗದ ಬರೆಯಿಸುವವಳು ತಾರೆಯಲ್ಲದೆ ಬೇರೆ ಯಾರಾದರೂ ಆಗಿದ್ದದ್ದರೆ, ನನಗೇನೋ ಆ ಬಾಲಯ್ಯನಾಗಲು ಸ್ವಲ್ಪ ಆಸೆ ಉಂಟಾಗುತ್ತಿತ್ತು.

"ನೀವು ಕಾಗದ ಬರೆದುಕೊಟ್ಟು ಬಹಳ ಸಹಾಯಮಾಡಿದಿರಿ...... ನನ್ನಿಂದ ನಿಮಗೇನಾದರೂ ಸೇವೆ ಆಗುವುದಾಗಿದ್ದರೆ..." ಎಂದು ಕೈಮುಗಿದು ಹೇಳಿದಳು.

"ಪರವಾ ಇಲ್ಲ...ಏನೂ ಅಂತ ಕೆಲಸವಿಲ್ಲ."

"ಆದರೆ–ನಿಮ್ಮ ಬಟ್ಟೆಗಿಟ್ಟೆ ಹೊಲಿಯುವುದು...ಒಗೆಯುವುದು..."

ನನಗೆ ನಾಚಿಕೆಯಾಯಿತು. ಅವಳಿಂದ ನನಗಾಗಬೇಕಾದುದು ಏನೂ ಇಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟೆ.

ಅವಳು ಹೊರಟುಹೋದಳು.

ಒಂದೆರಡು ವಾರ ಕಳೆದುದು. ಸಂಜೆ. ರೂಮಿನಲ್ಲಿ ಕುಳಿತು ಶಿಳ್ಳೆಹಾಕುತ ಏನನೊ ಯೋಚಿಸುತಿದ್ದೆ. ಬೇಜಾರು. ಮೋಡ ಕವಿದುಕೊಂಡಿತ್ತು. ಹೊರಗೆ ಹೋಗಲು ಬೇಕಾಗಲಿಲ್ಲ. ಮಾಡಲೇನೂ ಕೆಲಸವಿರಲಿಲ್ಲ. ಹಾಗೆಯೇ ಬಾಗಿಲು ತರೆದುದು. ಸದ್ಯ! ಯಾರೋ ಬಂದರು.

"ವಿದ್ಯಾರ್ಥಿಗಳೇ! ಸ್ವಲ್ಪ ವಿರಾಮವಿದೆಯೇ?"

ತಾರಾ! ಚೆನ್ನಾಯಿತು!

"ಇಲ್ಲ! ಏನದು?"

"ಇನ್ನೊಂದು ಕಾಗದ ಬರೆದುಕೊಡುವಿರಾ ಎಂದು ಕೇಳಲು ಬಂದೆ."

"ಹುಂ! ಬಾಲಯ್ಯನವರಿಗೋ?"

"ಇಲ್ಲ. ಈ ಸಾರಿ ಅವರ ಪರವಾಗಿ ಕಾಗದ ಬರೆಯಬೇಕಾಗಿದೆ."

"ಏ–ನು?"

"ಅಯ್ಯೋ! ನಾನೊಬ್ಬ ಪೆಚ್ಚಿ! ಕ್ಷಮಿಸಿ–ನನಗಲ್ಲ ಅದು. ನನ್ನ ಸ್ನೇಹಿತೆಗಾಗಿ...ಅಂದರೆ...ಸ್ನೇಹಿತೆಯಲ್ಲ...ಗುರು...ಪರಿಚಯ...ನನ್ನ ಸ್ನೇಹಿತನಿಗೆ. ಅವನಿಗೆ ನನ್ನ ಹಾಗೆಯೆ ತಾರೆಯೆಂಬ ಹೆಂಡತಿ ಇದ್ದಾಳೆ...ತಿಳಿಯಿತೆ! ಆ ತಾರೆಗೆ ಒಂದು ಕಾಗದ ಬರೆಯುತ್ತೀರಾ?"

ಅವಳ ಕಡೆ ನೋಡಿದೆ. ಅವಳ ಮುಖ ಪೆಚ್ಚಾಗಿತ್ತು. ಕೈಕಾಲು ನಡುಗುತ್ತಿತ್ತು. ಮೊದಲು ಮೊದಲು ನನಗೆ ತಿಳಿಯಲಿಲ್ಲ...ಆ ಮೇಲೆ ಬೆಳಕುಹರಿದಂತಾಯಿತು.

"ಇಲ್ಲಿ ನೋಡಿಲ್ಲಿ! ...ಬಾಲಯ್ಯ ಎನ್ನುವವರು ಯಾರೂ ಇಲ್ಲ...ತಾರಾ ಎನ್ನುವವಳೂ ಇಲ್ಲ...ನೀನು ಹೇಳುತ್ತಿರುವುದೆಲ್ಲ ಶುದ್ಧ ಅಬದ್ಧದ ಕಂತೆ. ನೀನು ಇನ್ನೊಂದು ಸಾರಿ ಈ ಕಡೆ ಬರಕೂಡದು ತಿಳಿಯಿತೆ?...ನಿನ್ನ ಸಹವಾಸ ಬೇಕಾಗಿಲ್ಲ. ಗೊತ್ತಾಯಿತೆ?" ಎಂದೆ.

ಅವಳು ಗಾಬರಿ ಬಿದ್ದಳು, ಪರದಾಡಿದಳು...ನಿಂತಲ್ಲಿಂದ ಕದಲನೆಯೆ ಮಿಲಿಮಿಲಿ ಒದ್ದಾಡಿಹೋದಳು...ಏನನೊ ಹೇಳುವುದಕ್ಕೆ ತೊಡಗುವಳು, ಹೇಳಬರದು...ಬಹಳ ಅವಸ್ಥೆಪಟ್ಟಳು. ನಾನು ಇದನ್ನೆಲ್ಲಾ ನೋಡುತಿದ್ದೆ. ಅವಳು ನನ್ನನ್ನು ಕೆಟ್ಟದಾರಿಗೆಳೆಯುವುದಕ್ಕೆ ಬಂದಿದ್ದಳೆಂದು ನಾನು ಯೋಚಿಸಿದುದು ತಪ್ಪೆಂದು ತೋರಿತು. ಸಹಜವಾಗಿ ಬೇರೆ ಏನೊ ಕಾರಣವಿತ್ತು.

"ವಿದ್ಯಾರ್ಥಿಗಳೇ!" ಎಂದವಳು, ಇದ್ದಕ್ಕಿದ್ದಹಾಗೆ ಕೈಕೊಡವುತ್ತ ಬಾಗಿಲಕಡೆ ತಿರುಗಿ ಹೊರಟೇಹೋದಳು. ನನಗೆ ಮನಸ್ಸು ಸಮಾಧಾನವಿರಲಿಲ್ಲ. ಆಲಿಸುತ್ತ ಕುಳಿತೆ. ಅವಳ ಮನೆಬಾಗಿಲು ರಾಚಿಬಡಿದುದನ್ನು ಕೇಳಿದೆ. ಪಾಪ! ಅವಳಿಗೆ ಕೋಪಬಂದಿರಬೇಕು. ಹಾಗೆಯೇ ಯೋಚಿಸಿ...ಅವಳ ಬಳಿಗೆ ಹೋಗಿ, ಅವಳನ್ನು ಕರತಂದು, ಅವಳಿಗೆ ಬೇಕಾದುದೆಲ್ಲವನ್ನು ಬರೆದುಕೊಡಬೇಕೆಂದು ನಿಶ್ಚಯಿಸಿದೆ,

ಅವಳ ಕೋಣೆಗೆ ಹೋಗಿ, ಸುತ್ತಲೂ ನೋಡಿದೆ. ನೆಲದ ಮೇಲೆ ಕುಳಿತು, ಮೊಣಕಾಲುಗಳ ನಡುವೆ ತಲೆಯನ್ನಿಟ್ಟು ಕೊಂಡಿದ್ದಳು.

" ಇಲ್ಲಿ ಕೇಳು " ಎಂದೆ.

ನನಗೆ ಈ ಕತೆಯು ಈ ಭಾಗಕ್ಕೆ ಬಂದಾಗಲೆಲ್ಲಾ ಯದ್ವಾ ತದ್ವಾ ಆಗಿಬಿಡುತ್ತೆ.

" ಇಲ್ಲಿ ಕೇಳು " ಎಂದೆ.

ಅವಳು ಝುಗ್ಗನೆದ್ದು, ಕಣ್ಣುಗಳನ್ನರಲಿಸಿ, ನನ್ನ ಹತ್ತಿರ ಬಂದು ನಿಂದು, ತನ್ನ ದಪ್ಪದನಿಯಿಂದ

" ಇಲ್ಲಿ ! ನೋಡಿ ! ಇಲ್ಲಿ ! ...ಬಾಲಯ್ಯನವರೂ ಇಲ್ಲ... ತಾರೆಯೂ ಇಲ್ಲ...ಆದರೆ ಅದರಿಂದ ನಿಮಗೇನು ಆಗಬೇಕು ? ...ಕಾಗದದ ಮೇಲೆ ಎರಡಕ್ಷರ ಗೀಚುವುದು ಕಷ್ಟವೆ ನಿಮಗೆ? ಹೂಂ ? ಅದರಲ್ಲೂ ನಿಮಗೆ ! ಒಳ್ಳೆಯ ಪ್ರಾಯದ ಹುಡುಗ ನವರಿಗೆ !...ಯಾರೂ ಇಲ್ಲ...ಬಾಲಯ್ಯನವರೂ ಇಲ್ಲ...ತಾರೆ ಯೂ ಇಲ್ಲ, ನಾನೊಬ್ಬಳೆ. ಹೇಳಿದೆನಲ್ಲ ಈಗ ! ತೃಪ್ತಿಯಾ ಯಿತೆ ?" ಎಂದು ಹೇಳಿದಳು.

ನಾನು ಹೀಗಾಗುತ್ತೆಂದು ತಿಳಿದಿರಲಿಲ್ಲ. ಕಕ್ಕಾಬಿಕ್ಕಿಯಾದೆ.

" ತಪ್ಪಾಯಿತು ! ಇದೇನು ಮತ್ತೆ ! ಬಾಲಯ್ಯನವರು ಇಲ್ಲ ಎನ್ನುತ್ತೀಯೆ ? "

" ಇಲ್ಲ. "

" ತಾರೆಯೂ ಇಲ್ಲ ? "

" ತಾರೆಯೂ ಇಲ್ಲ. ನಾನೇ ತಾರಾ. "

ನನಗೆ ಬಗೆಹರಿಯಲಿಲ್ಲ. ಅವಳನ್ನೇ ನೋಡುತ್ತ, ನಮ್ಮಿಬ್ಬ ರಲ್ಲಿ ಯಾರಿಗೆ ಬುದ್ಧಿ ಸ್ವಲ್ಪ ಕೆಡುತ್ತಿದೆ ಎಂದು ಯೋಚಿಸು ತಿದ್ದೆ ಆದರೆ, ಅವಳು ಒಳಗೆ ಹೋಗಿ, ಹೋಗಿ, ಪೆಟ್ಟಿಗೆಯಲ್ಲಿ ಏನನ್ನೊ ಹುಡುಕಿ, ನನ್ನ ಬಳಿಗೆ ತಂದು, ಬಹಳ ಅಸಮಾಧಾನ ದಿಂದ

" ಇದೊ ! ಬಾಲಯ್ಯನವರಿಗೆ ಕಾಗದ ಬರೆದುದು ನಿಮ ಗಷ್ಟು ಕಷ್ಟವಾಗಿದ್ದರೆ, ತೆಗೆದುಕೊಳ್ಳಿ ನಿಮ್ಮ ಕಾಗದವನ್ನು ! ಬೇರೆಯವರು ಯಾರಾದರೂ ಬರೆದುಕೊಡುತ್ತಾರೆ. " ಎಂದಳು.

ನೋಡಿದೆ. ಅದು ನಾನು ಬಾಲಯ್ಯನವರಿಗೆ ಬರೆದುಕೊಟ್ಟ ಕಾಗದ ! ಛೆ !

" ಕೇಳು ತಾರಾ ! ಏನು ಇದೆಲ್ಲಾ ? ನಾನು ಬರೆದುಕೊಟ್ಟ ಕಾಗದವನ್ನೇ ನೀನು ಕಳುಹಿಸದಿರುವಾಗ, ಇನ್ನೊಬ್ಬರಿಂದ ಏತ ಕ್ಕಾಗಿ ಬೇರೆ ಕಾಗದ ಬರೆಸಬೇಕು ? "

" ಎಲ್ಲಿಗೆ ಕಳುಹಿಸಲಿಲ್ಲ...ನಾನು ? "

" ಈ ಬಾಲಯ್ಯನವರಿಗೆ. "

" ಅಂತ ಮನುಷ್ಯನೆ ಇಲ್ಲವಲ್ಲ ! "

ನಿಶ್ಚಯವಾಗಿ ನನಗೇನೂ ತಿಳಿಯಲಿಲ್ಲ. ಬೇಜಾರಾಗಿ ಹೊರಟು ಹೋಗಬೇಕೆಂದಿದ್ದೆ. ಆಗ ಅವಳೇ ಹೇಳಿದಳು. ಅವಳಿಗಿನ್ನೂ ಅಸಮಾಧಾನ.

" ಏನಾಶ್ಚರ್ಯ ಇದರಲ್ಲಿ ? ನಾನು ಸಾರಿ ಹೇಳುತ್ತೇನೆ ಬಾಲಯ್ಯ ಎನ್ನುವವರಿಲ್ಲ...ಅದೇಕೆ ಇಲ್ಲವೊ ನನಗೆ ಗೊತ್ತಿಲ್ಲ ...ಆದರೆ ಅವರು ಇರಬೇಕು ಎಂದು ನನಗಿಷ್ಟ...ಮಿಕ್ಕವರ ಹಾಗೆ ನಾನೂ ಮನುಷ್ಯಳಲ್ಲವೆ ? ...ಸರಿ ! ಸರಿ ! ಗೊತ್ತಾ ಯಿತು ! ಗೊತ್ತಾಯಿತು !...ಆದರೂ ನಾನು ಈ ತೆರದ ಕಾಗ ದವನ್ನು ಅವರಿಗೆ ಬರೆದುದರಿಂದ ಯಾರಿಗೂ ಕೆಡಕಾದುದೇ ಕಾಣಲಿಲ್ಲವಲ್ಲ ! "

" ಅವರಿಗೆ !- ಯಾರಿಗೆ ? "

" ಬಾಲಯ್ಯನವರಿಗೆ ತಾನೆ ! "

" ಆದರೆ ಅವರು ಇಲ್ಲವಲ್ಲವೆ ! "

" ಅಯ್ಯೋ ! ಅಯ್ಯೋ ! ಅವರು ಇಲ್ಲದಿದ್ದರೆ ಏನಂತೆ ! ಅವರು ಇಲ್ಲದಿದ್ದರೂ ಇರಬಹುದಷ್ಟೇ ! ನಾನು ಅವರಿಗೆ ಬರೆಯುತ್ತೇನೆ...ಅದರಿಂದ ಅವರು ಇದ್ದಂತೆಯೇ ತೋರು ವುದು. ಆ ಮೇಲೆ ತಾರೆಯು–ಅಂದರೆ ನಾನು...ಅವರು ನನಗೆ ಜವಾಬು ಬರೆಯುತ್ತಾರೆ...ಅನಂತರ ನಾನು ಅವರಿಗೆ ಮತ್ತೆ ಬರೆಯುತ್ತೇನೆ."

ಅರ್ಥವಾಯಿತು. ನನ್ನ ವಿಚಾರದಲ್ಲಿ ನನಗೇ ಅಸಹ್ಯವಾ ಯಿತು, ದುಃಖವಾಯಿತು, ನಾಚಿಗೆಯಾಯಿತು. ನಾನಿದ್ದ ಕೇರಿ ಯಲ್ಲಿಯೆ, ಕೊಂಚದೂರದಲ್ಲಿ ಈ ಜೀವಿಯು ಜೀವಿಸುತ್ತಿ ದ್ದಳು. ಅವಳನ್ನು ಪ್ರೀತಿಸುವ, ಅವಳಿಗಾಗಿ ಮರುಗುವ, ಅವ ಳಿಗಾಗಿ ಅಯ್ಯೋ–ಪಾಪ–ಪಡುವ (Sympathise) ಪ್ರಾಣಿ ಗಳಾರೂ ಈ ಪ್ರಪಂಚದಲ್ಲಿರಲಿಲ್ಲ. ಅವಳು ತನಗಾಗಿ ಒಬ್ಬ ಅವನನ್ನು ತಾನೇ ನಿರ್ಮಿಸಿಕೊಂಡಿದ್ದಳು!

" ಇದೊ, ಕೇಳಿ! ನೀವು ಬಾಲಯ್ಯನವರಿಗೊಂದು ಕಾಗದ ಬರೆದುಕೊಟ್ಟರೆ- ನಾನದನ್ನು ನನಗೋದುವಂತೆ ಬೇರೆಯವರಿಗೆ ಕೊಟ್ಟೆ–ಅವರದನ್ನು ಓದಿದರೆ ನಾನು ಕೇಳಿ, ಬಾಲಯ್ಯನವರು ಇರುವರೆಂದೇ ಭ್ರಮಿಸಿದೆ. ಆ ಮೇಲೆ ನಾನು ಬಾಲಯ್ಯನವರಿಂದ ತಾರೆಗೆ–ಅಂದರೆ ನನಗೆ–ಒಂದು ಕಾಗದ ಬರೆಯುವಂತೆ ಬರೆಯಬೇಕೆಂದು ಕೇಳಿಕೊಂಡೆ. ಅಂತ ಕಾಗದವನ್ನು ಬರೆದು, ಅದನ್ನು ಓದಿಸಿ ಕೇಳಿದರೆ, ಬಾಲಯ್ಯನವರು ಇರುವರೆಂದು ನನಗೆ ಸಿರ್ಥರವಾಗುವುದು. ಇದರಿಂದ ನನ್ನ ಬದುಕು ಹಗುರವಾಗಿ, ಜೀವಿಸುವುದು ಸುಲಭವಾಗುವುದು."

ಇದನ್ನು ಕೇಳಿ 'ನನ್ನ ಬುದ್ಧಿಗೆ ಮುಂಡಮೋಚಿಕೊಬೇಕು.' ಎಂದು ನನ್ನನ್ನು ನಾನೇ ಬೈದುಕೊಂಡೆ.

ಅಂದಿನಿಂದ ಕ್ರಮವಾಗಿ ವಾರಕ್ಕೆರಡು ಸಾರಿ, ಬಾಲಯ್ಯನವರಿಂದ ಒಂದು ಕಾಗದವನ್ನೂ, ಅದರಿಂದ ತಾರೆಗೆ ಅದಕ್ಕೆ ಪ್ರತ್ಯುತ್ತರವನ್ನೂ ಬರೆಯತೊಡಗಿದೆ. ಕಾಗದಗಳನ್ನು ಚೆನ್ನಾಗಿಯೇ ಬರೆಯುತ್ತಿದ್ದೆ. ಅವಳು ಅವುಗಳನ್ನು ಓದಿಸಿ ಕೇಳಿ ಅಳುವಳು, ಆನಂದಿಸುವಳು. ಹೀಗೆ ಊಹೆಯ ಬಾಲಯ್ಯನವರು ಬರೆದ ಪ್ರತ್ಯಕ್ಷ ಪತ್ರಗಳಿಂದ ಅವಳ ಕಣ್ಣಿನಲ್ಲಿ ನೀರು ಕರಿಸುತ್ತಿದ್ದುದಕ್ಕೆ ಬದಲಾಗಿ ಅವಳು ನನ್ನ ಬಟ್ಟೆಗಳನ್ನು ಮಡಿಮಾಡಿಕೊಡುತ್ತಿದ್ದಳು. ಇದಾದ ಮೂರುತಿಂಗಳ ಮೇಲೆ ಯಾವುದೋ ಕಾರಣಕ್ಕಾಗಿ ಪೋಲೀಸಿನವರು ಅವಳನ್ನು ಒಯ್ದರು. ಈ ವೇಳೆಗೆ ಅವಳು ಸತ್ತುಹೋಗಿಧಾಳೆ.

ನನ್ನ ಗುರುತಿನವನು ಈ ಕತೆ ಹೇಳಿ, ಮೇಲೆ ನೋಡುತ್ತಾ, ಹೀಗೆ ಕೊನೆಗಾಣಿಸಿದನು.

ಮನುಷ್ಯನಿಗೆ, ಎಷ್ಟೆಷ್ಟು ಕಷ್ಟಗಳಲ್ಲಿ ಸಿಕ್ಕಿ ಒದ್ದಾಡುತ್ತಿದ್ದರೆ, ಅಷ್ಟಷ್ಟೂ ಬದುಕಿನಲ್ಲಿ ಸುಖಪಡಬೇಕೆಂಬ ಆಸೆ ಹೆಚ್ಚುತ್ತದೆ. ಆದರೆ ನಾವು, ಇದೆಯೋ ಇಲ್ಲವೋ ಎನ್ನುವಷ್ಟು ಒಳ್ಳೆಯ ಗುಣಗಳನ್ನಿಟ್ಟುಕೊಂಡು, ದುರಹಂಭಾವದಿಂದ–ಸೊಕ್ಕಿನಿಂದ ಎರಡನೆಯವರನ್ನು ನೋಡಿ, ಜಗವೆಲ್ಲವೂ ಪಾಪರಹಿತವಾದುದೆಂದು ದೃಢಮಾಡಿಕೊಂಡು, ಇವನ್ನರಿಯುವವರಾಗಿರುವೆವು.

ಇದರಿಂದ ಕೊನೆಗಾಗುವುದು ದುಃಖವೊಂದೇ. ನಾವು 'ಕೀಳುಜನ'ವೆನ್ನುತ್ತೇವೆ. ಕೀಳುಜನಗಳು ಯಾರು ಸ್ವಲ್ಪ ಹೇಳುವಿರಾ ? ಅವರೂ ನಮ್ಮಂತೆಯೇ ಮೂಳೆ, ಮಾಂಸ, ರಕ್ತ, ನರಗಳಿಂದ ಮಾಡಲ್ಪಟ್ಟ ಜನರು. ಇದನ್ನು ನಮಗೆ ಅನಾದಿಕಾಲದಿಂದ ದಿನದಿನವೂ ಹೇಳುತ್ತಿದ್ದಾರೆ. ನಾವೂ ಕಿವಿಗೊಟ್ಟು ಕೇಳುತ್ತಿದ್ದೇವೆ– ಇದೆಲ್ಲವೂ ಎಷ್ಟು ಭೀಕರವೆಂಬುದೂ ಗೊತ್ತು. ಇಲ್ಲವೆ–ಕನಿಕರ, ಶಾಂತಶೀಲತೆಗಳ ವಿಚಾರವಾಗಿ ಘಂಟಾಘೋಷವಾಗಿ ನಡಸುವ ಭಾಷಣಗಳನ್ನು ಕೇಳಿಕೇಳಿ ನಾವು ತೀರ ಕುಲಗೆಟ್ಟುಹೋಗಿರುವೆವೊ ? ಸಾವಧಾನವಾಗಿ ಬಗೆದರೆ ನಾವು ಉತ್ತಮರಲ್ಲ–ನಾವೂ ಕೀಳು ಜನರು - ನಮ್ಮ ಹಿರಿತನವೆಂಬುದನ್ನು ಮನಗಂಡು ದುರಹಂಭಾವದ ಆಳವಾದ ಕೂಪದಲ್ಲಿ ಉರುಳಿರುವವರು. ಸಾಕು ಇನ್ನು. ಇದೆಲ್ಲಾ ಹಳೆಯ ಪುರಾಣ...... ತೀರ ಹಳೆಯದು ......... ವಿಚಾರವೆತ್ತಲು ನಾಚಿಕೆಯಾಗುತ್ತದೆ...ಹೌದು !......ಬಹಳ ಹಳೆಯದು... ಹೌದು ! ಹೌದು !...ಬಹಳ !...

---

## ಕಬ್ಬಿಗರು

( ಈ ಸಲದ ಪ್ರಬುದ್ಧಕರ್ನಾಟಕದಲ್ಲಿದ್ದ ಶ್ರೀ. ಕೆ. ವ್ಹಿ. ಪುಟ್ಟಪ್ಪನವರ ೧೦ ನುಡಿಗಳ ಕವಿತೆಯ ೨ ನುಡಿಗಳು )

ಖಡ್ಗಗಳಿಗೆಮ್ಮಸಿರೆ
ಹರಿವಜ್ರಸಾಣೆ !
ನಮ್ಮ ಲೇಖನಿಗಿಂತ
ಬರಸಿಡಿಲ ಕಾಣೆ !
ದೇಶಗಳು ತಾಗುವುವು,
ಸೋತು ತಲೆಬಾಗುವುವು.
ವಿಪ್ಲವಗಳೇಳುವುವು,
ಮಕುಟ ಬೀಳುವುವು !
ಲೇಖನಿಯೆ ಕೂರಸಿಯು
ಕೆನ್ನೀರೆ ಮಸಿಯು !

ನಮ್ಮ ಕೈ ಬುಟ್ಟಿಯಲಿ
ಸಿಡಿಲ ಗೂಡಿಹುದು !
ಹುಡುಕಿ ನೋಡಿದರಲ್ಲಿ
ಸುಮದ ಬೀಡಿಹುದು !
ಬೈಗು ಬೆಳಗುಗಳಲ್ಲಿ,
ಬೆಳದಿಂಗಳಿಹುದಲ್ಲಿ.
ಸಂಕ್ಷಿಪ್ತ ಬ್ರಹ್ಮವೈ
ನಮ್ಮ ಕೈ ಬುಟ್ಟಿ !
ಕಲ್ಪಕಲ್ಪಗಳಲ್ಲಿ
ಕಾಯುವುವು ಹುಟ್ಟಿ !

# ಮೂವತ್ತು ಮೂರು ಕೋಟಿ !

[ ಕಡೆಯಿಲ್ಲದ ಕಡಲ ನಡುವೆ ಸ್ಥಿರಾಸನದಲ್ಲಿ ಭೂಮಿತಾಯಿಯು ಧ್ಯಾನಮುದ್ರೆಯಲ್ಲಿ ಕುಳಿತಿದ್ದಾಳೆ. ಅವಳ ಎಡತೊಡೆಯ ಮೇಲೆ ಭಾರತಿಯು ತನ್ನ ಮೊಗವನ್ನು ಬಲಗೈಯಿಂದ ಮುಚ್ಚಿ ಒರಗಿ ಎಡಗೈಯನ್ನೆತ್ತಿ ಹಾಡಿಹಾಡಿ ತನ್ನ ಪಾಡನ್ನು ತೋಡಿಕೊಳ್ಳುತ್ತಲಿದ್ದಾಳೆ. ಅವಳ ಸುತ್ತಲೂ ವಿವಿಧಾಕಾರದ ಕೋಟ್ಯಾವಧಿ ಪ್ರಾಣಿಗಳು ಅಸ್ತವ್ಯಸ್ತವಾಗಿ ಬಿದ್ದುಕೊಂಡಿವೆ. ]

ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ
ಮೂವತ್ತುಮೂರು ಕೋಟಿ? ॥ ಪಲ್ಲ ॥
ಮೂವತ್ತು ಮೂರು ಕೋಟೀ, ಮೂವತ್ತು ಮೂರು ಕೋಟೀ !
ಮಕ್ಕಳಿವರೇನಮ್ಮ ? ಮಕ್ಕಳಿವರೇನಮ್ಮ ?
ಮೂವತ್ತು ಮೂರು ಕೋಟಿ ।
ನಾ ಹಡೆದ
ಮೂವತ್ತು ಮೂರು ಕೋಟಿ ॥ ಅನುಪಲ್ಲ ॥
ಮೂವತ್ತು ಮೂರು ಕೋಟೀ, ಮೂವತ್ತು ಮೂರು ಕೋಟೀ!
ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು
ಮೂವತ್ತು ಮೂರು ಕೋಟೀ !
ಸೂಲಗಳು
ಮೂವತ್ತು ಮೂರು ಕೋಟಿ !! ೧

ಹಲಕೆಲವು ಹುಳುಗಳನ್ನೀ ! ಹಲಕೆಲವು ಕುರುಡುಕುನ್ನೀ !
ಕೆಲಕೆಲವು ಹುಚ್ಚುಕುರಿ ! ಕೆಲವು ಹೊಸಹೊಚ್ಚಮುರಿ !
ಗಂಡುತನಕೇಸೊ ಸೊನ್ನೀ !
ಲೆಕ್ಕಕ್ಕೆ
ಮೂವತ್ತು ಮೂರು ಕೋಟಿ !! ೨

ಅತ್ತೊಂದು ಹತ್ತು ಕೋಟೀ ! ಇತ್ತೊಂದು ಹತ್ತು ಕೋಟೀ !
ಸೋದರರು ಇದ್ದರೂ ಆದರದ ನುಡಿಯಿಲ್ಲ;
ಅತ್ತಿತ್ತ ಹತ್ತು ಕೋಟೀ ।
ಹೆಸರಿಗೇ
ಮೂವತ್ತು ಮೂರು ಕೋಟಿ !! ೩

ಬೀತ ನರಪೇತುಗಳಿರಾ ! ಬಾತಂಥ ಪ್ರೇತಗಳಿರಾ !
ಮಣ್ಣನ್ನು ಮುಕ್ಕುವಿರಿ, ಮಸಣದಲಿ ಬಿಕ್ಕುವಿರಿ !
ಹಾರಿರೋ ಜೊಳ್ಳುಗಳಿರಾ !
ಉಸಿರಿಡುವೆ
ಮೂವತ್ತು ಮೂರು ಕೋಟಿ !! ೪

ಸುಣ್ಣವನು ಸುರಿದ ಮೇಲೆ ಕಣ್ಣೀರನೆರೆಯೆ ಹಾಲೇ ?
ಬಣ್ಣ ಬಣ್ಣದ ಜೀವ ಕತಕತನೆ ಕುದಿಯುವವು
ಮುನೆಯಾಯ್ತು ಮಲ್ಲಸಾಲೇ ;
ಇದು ಬದುಕೆ ?
ಮೂವತ್ತು ಮೂರು ಕೋಟಿ !! ೫

ಹಂಗಿನರಮನೆಯ ನರಕಾ—ತಂಗುವಿರಿ—ಇಹುದೆ ಮರುಕಾ!
ಹಿಡಿಬೆರಳ ಹಿಡಿಯಲ್ಲಿ ಅಡಿಯೆರಡರಡಿಯಲ್ಲಿ
ಹೊರಳಿ ಒರಲುವಿರಿ ಅಕಟಾ !
ಅಕಟಕಟ !
ಮೂವತ್ತು ಮೂರು ಕೋಟಿ !! ೬

ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ
ಹೋಳುಹೋಳಾಗಿಹುದು; ಆಳುಬಾಳಾಗಿಹುದು
ಏಳಿರೋ ಆಳಿರೆಂಬೇ—
ಬಾಳಿರೋ
ಮೂವತ್ತು ಮೂರು ಕೋಟಿ !! ೭

ಹಡೆದೊಡಲು ಬಂಜೆಯಾಯ್ತೋ ಬಾಳ್ಮೊದಲೆ ಸಂಜೆಯಾಯ್ತೋ!
ಭಾರತಿಗೆ ತಲೆಭಾರ ಇರುವಳೆಂಬ ವಿಚಾರ—
ಬಾಳ್ವೆಣ್ಣು ಗಿಂಜು ಆಯ್ತೋ ?
ಬರಿ ಶೂನ್ಯ
ಮೂವತ್ತು ಮೂರು ಕೋಟಿ !! ೮

ನನ್ನೆದೆಯ ಹಾಲನೆರೆಸೀ ನನ್ನೊಳಿಹ ಬೆಳಕ ಬೆರಸೀ,
ವಜ್ರದೇಹಿಗಳೆಂದೆ ಗೊನೆಮಿಂಚೊ ಎನೆ ಕಂಡೆ—
ವಿಜಯುವಿರಲೆಂದು ಹರಸೀ
ಕಳುಹಿದೆನು
ಮೂವತ್ತು ಮೂರು ಕೋಟಿ !! ೯

ಬಸುರಿನಲಿ ಪಡೆದುದೇನು ? ಹೊರಗಿಲ್ಲಿ ಹಡೆದುದೇನು ?
ಅರರೆ ! ಬಡಕೊಡಲುಗಳು ಸೆರೆಮನೆಗಳಾದುವೋ !
ನನ್ನಳಲು ಕೇಳದೇನೋ
ಎಲೆಲೇ
ಮೂವತ್ತು ಮೂರು ಕೋಟಿ !! ೧೦

ಡಿಂಭಗಳನೊಡೆದು ಬನ್ನೀ ! ಕಂಭಗಳನೊಡೆದು ಬನ್ನೀ !
ಮೈಯಲ್ಲಿ ಮಡುಗದಿರಿ ! ಮನದಲ್ಲಿ ಅಡಗದಿರಿ !
ತಾಯಿ ಇದೊ ಬಂದೆನೆನ್ನೀ
ನಾ ಪಡೆದ
ಮೂವತ್ತು ಮೂರು ಕೋಟಿ !! ೧೧

— ಅಂಬಿಕಾತನಯದತ್ತ

# ಉಗುಳುವದರ ಬಗ್ಗೆ

( ಸಿರೀಕ್ಷಕನಿಂದ )

**ವಿಷಯ ಪ್ರವೇಶ:**— ಓದುವಣ್ಣಗಳಿರಾ, ಛೀ ಇದೇನು ಮಹಾವಿಷಯ ಎಂದು ಈ ಪುಟಗಳನ್ನು ಉಗುಳು ಹಚ್ಚಿ ತಿರುವಿ ಹಾಕಿ ಮುಂದೆ ಸಾಗಬೇಡಿರಿ. ಇದೆಲ್ಲರ ಬಾಯೊಳಗಿನ ವಿಷಯ ಎಂದು ಅಲ್ಲಗಳೆಯಬೇಡಿರಿ. ಬಾಯೊಳಗಿನದಿದ್ದಷ್ಟಕ್ಕೆ ಎಲ್ಲರ ಕೈಯೊಳಗಿನದು ಎಂದು ಹೇಳಬರುವದಿಲ್ಲ. ನಮ್ಮ ನಮ್ಮ ನಾಲಗೆ ನಮ್ಮನಮ್ಮ ಬಾಯೊಳಗಿದ್ದರೂ ನಮ್ಮನಮ್ಮ ಕೈಯೊಳಗಿದೆಯೇ? ಹಾಗೆಯೇ ಉಗುಳು.

ಓಕುಳಿಯಾಡುವ ಜೀಕಳಿಯಂತೆ, ಹಗಲು ಹನ್ನೆರಡು ತಿಂಗಳೂ ರಂಗಪಂಚಮಿಯನ್ನು ನೆರವೇರಿಸುವವರಂತೆ, ಪಿಚ್ಚಿ ಪಿಚ್ಚಿ ಎಲೆಗಳನ್ನು ನಿಮಿಷಾರ್ಧದಲ್ಲಿ ಅರೆದು ಅಗಿಮ ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ. ಅದು ಸಮಾಜಶಾಸ್ತ್ರದೊಳಗಿನ ಮಹಾ ವಿಷಯ. 'ಬೆರ್ಕೀ' ನಾಯಿಗಳಂತೆಯೂ ಮೋಸಗೊಳಿಸುವಫಿರಂಗಿಗಳಂತೆಯೂ ಲೊಳಲೊಳನೆ, ಧಡಂಧುಡುಂನೆ ಶಬ್ದದಿಂದ ಕಳ್ಳರನ್ನೂ ಹುಳ್ಳುಳ್ಳಗೆ ಮಾಡುವ ಸದೈವ ಸಾವಧಾನಿಗಳಾದ ಉಗುಳುಬಡಕರಬಗ್ಗೆಯೂ ಬರೆಯಲು ಇದು ಸ್ಥಳವಲ್ಲ. ಅದು ನಾಗರಿಕಧರ್ಮಶಾಸ್ತ್ರ (Civics) ದ ಭಾಗ.

ಆವರೂ ಈ ಮಹತ್ವದ ವಿಷಯದ ಬಗ್ಗೆ ನನ್ನ ಅಲ್ಪಮತಿಗೆ ತಿಳಿದಷ್ಟು ಬರೆಯುವದು ಕರ್ತವ್ಯವಾಗಿದೆ.

**ಉಗುಳುವದು ಮತ್ತು ಆರೋಗ್ಯಶಾಸ್ತ್ರ:**— ಮುದುಕರು ಹೇಳುತ್ತಾರೆ ತಾವು ತಮ್ಮ ಹಿರಿಯರ ಉಗುಳು ದಾಟುತ್ತಿದ್ದಿಲ್ಲವೆಂದು. ಹೌದು, ದಾಟುದಾಟುವದರಲ್ಲಿ ತಪ್ಪಿ ಅದರ ಮೇಲೆಯೆ ಕಾಲು ಬಿದ್ದರೆ ರೋಗ ಅಂಟುವ ಸಂಭವ ಬಹಳ. ಯಾರ ಉಗುಳು ಹೇಗೋ ಯಾರು ಬಲ್ಲರು? ಉಗುಳು ರೋಗದ ಉಗಮ. ಉಗುಳಿ ಉಗುಳಿ ರೋಗ, ಬೊಗಳಿ ಬೊಗಳಿ ರಾಗ ಎಂದು ಜನಪದವೇದವಾಕ್ಯವಿಲ್ಲವೇ! ರೋಗಿಯ ಉಗುಳಿನ ಬಗ್ಗೆ ಡಾಕ್ಟರರು ಎಚ್ಚರಪಡಲು ಹೇಳುವಷ್ಟು ತಾವು ಔಷಧರೂಪವಾಗಿ ಕೊಡುವ ವಿಷದಬಗ್ಗೆಯೂ ಹೇಳುವದಿಲ್ಲ. ಉಗುಳು ಮನುಷ್ಯನಲ್ಲಿರುವ ಮಹಾಶಕ್ತಿ. ಅದನ್ನು ವಿಧಾಯಕ ಅಥವಾ ವಿಘಾತಕ ಮಾಡುವದು ನಮ್ಮ ವಿವೇಕ ಅವಿವೇಕಗಳನ್ನವಲಂಬಿಸಿರುವದು. ಉಗುಳುವದು ಮನುಷ್ಯಲಕ್ಷಣ.

**ಉಗುಳುವದು ಮತ್ತು ಮಾನವನ ಅನನ್ಯ ಸಾಮಾನ್ಯ ಲಕ್ಷಣ:**—ಮಾನವನ ಅನನ್ಯಸಾಮಾನ್ಯಲಕ್ಷಣವೇನು ಎಂಬುದರಬಗ್ಗೆ ಶಾಸ್ತ್ರಕಾರರು ಬಹಳೇ ಪೇಚಾಡಿರುವರು. 'ನಗುವವನು ಮನುಷ್ಯ' ಎಂದು ಲಕ್ಷಣಮಾಡಿದರೆ 'ಹೈನಾ' ಎಂಬ ಪಶುವೂ ನಗುವದು, ರಾಜತಂತ್ರಜ್ಞರೂ ನಗುತ್ತಾರೆ— ಆದರಲ್ಲಿ ಮಾನವನ ಹೃದಯ ಕಂಡು ಬರುವದಿಲ್ಲ— ಹೀಗಾಗಿ ಮೇಲಿನ ವ್ಯಾಖ್ಯೆಗೆ ಬಾಧೆ ಬರುತ್ತದೆ. 'ಮಾತಾಡುವವನು ಮನುಷ್ಯ' ಎಂದರೆ ಪಂಡಿತವಕ್ಕಿ (ಗಿಳಿ) ಯೂ ಮಾತಾಡುವದು; ಪಂಡಿತರೂ ಮಾತಾಡುವರು— ಅದರಲ್ಲಿ ಮಾನವನ ಬುದ್ಧಿ ಕಂಡು ಬರುವದಿಲ್ಲ— ಮತ್ತೆ ಬಾಧೆ ಬಂತು. 'ಎರಡು ಕಾಲುಗಳುಳ್ಳ ಪ್ರಾಣಿ ಮನುಷ್ಯನು' ಎಂದು ಹೇಳಬೇಕೆಂದರೆ ಕಾಗೆಗೂ ಎರಡುಕಾಲು; ಗೂಗೆಗೂ ಎರಡು ಕಾಲು. 'ತರ್ಕತಿಳುವಳಿಕೆಯುಳ್ಳವನೆ ಮನುಷ್ಯ' ಎನ್ನಬೇಕೇ? ಕೆಲಕೆಲವು ನಾಯಿಗಳಿಗಿದ್ದಷ್ಟು ತರ್ಕ-ತಿಳುವಳಿಕೆ ಹಲಕೆಲವು ನಾಯಕರಿಗಿರುವದಿಲ್ಲ— ಅದರಲ್ಲಿ ರಂಗಭೂಮಿಯೊಳಗಿನವರೂ ಬಂದರು, ಹೊರಗಿನವರೂ ಬಂದರು. ಹಾಗಾದರೆ ಮನುಷ್ಯನ ಅನನ್ಯ ಸಾಮಾನ್ಯ ಲಕ್ಷಣವೇನು? ಹಾಗಾದರೆ, 'ಉಗುಳುವವನೆ ಮನುಷ್ಯ ಎಂದು ನಾನು ಸೂಚಿಸುತ್ತೇನೆ. ತನ್ನ ಅರುಚಿ, ಅಸಮ್ಮತಿ ಅಸಹ್ಯಗಳನ್ನು ಅತಿ ತೀವ್ರವಾಗಿ ಆದರೆ ತೀರ ಸಂಕ್ಷಿಪ್ತವಾಗಿ ವ್ಯಕ್ತಮಾಡುವ ಒಂದೇ ಒಂದು ಸಾಧನವೆಂದರೆ 'ಉಗುಳುವದು' ಅದು ಮಾನವನಿಗೊಬ್ಬನಿಗೆ ಸಾಧ್ಯ. ಉಳಿದ ಪಶುಪಕ್ಷಿಗಳಿಗೆ ಸಾಧ್ಯವಿಲ್ಲ. ಅವಿವೇಕಿಗಳಿಗೆ ಬುದ್ಧಿಯುಂಟಾಗ ಬೇಕಾದರೆ ನಾಲ್ಕುಜನರ ಕಡೆಯಿಂದ ಉಗುಳಿಸುವ ಉಪಾಯವನ್ನೇನೋ ಹೇಳುವರು. ಆದರೆ ತಕ್ಕ ಹೊತ್ತಿನಲ್ಲಿ ತಕ್ಕ ಮಟ್ಟಿಗೆ ತಕ್ಕುದಲ್ಲದ್ದರ ಬಗ್ಗೆ ತಕ್ಕರೀತಿಯಲ್ಲಿ ಉಗುಳುವ ಶಾಸ್ತ್ರವನ್ನೂ ಕಲೆಯನ್ನೂ ಬಲ್ಲವರು ಮಾನವರಲ್ಲಿಯೂ ಕಡಿಮೆ. ಕಂಡಕುಡಲ್ಲಿ, ಸಿಕ್ಕಸಿಕ್ಕ ಹಾಗೆ, ಬೇಕುಬೇಕಾದಂತೆ ಉಗುಳುವವರೇ ಹೆಚ್ಚು. ಉಸುರಾಡಿಸಲಿಕ್ಕೆ ಬಂದವರೆಲ್ಲರಿಗೂ ಹಟಯೋಗ ಬಂದೇಬರುವದೆಂದಲ್ಲ. ಅಂತೆಯೆ ಜಗತ್ತಿನಲ್ಲಿ ಆಗಬೇಕಾದಷ್ಟು ಸುಧಾರಣೆಯಾಗಲೊಲ್ಲದು.

**ಉಗುಳುವದು ಮತ್ತು ನಾಟ್ಯಕಲೆ:**—ನಮಗೆ ನೆಟ್ಟಗೆ ಉಗುಳಲಿಕ್ಕೆ ಬರುವದಿಲ್ಲವಾದ್ದರಿಂದಲೇ ನಾಟ್ಯಕಲೆಯಲ್ಲಿ ತಿದ್ದು

ಪಡೆಯಾಗಿಲ್ಲ. ನಾಟಕಗೃಹಗಳಲ್ಲಿ 'Don't Spit' 'ಉಗುಳಬಾರದು' ಎಂದು ಬರೆದುದನ್ನು ವಾಚಕರು ಓದಿರಬಹುದು. ಇನ್ನು, ಉಗುಳಿಸಿಕೊಳ್ಳುವಂಥ ಅನೇಕ ಪ್ರಸಂಗಗಳು ತಮ್ಮ ನಾಟಕದಲ್ಲಿಯೂ ಅಭಿನಯಾದಿಗಳಲ್ಲಿಯೂ ಇರುವವೆಂಬ ಭೀತಿಯಿಂದಲೂ ಮುಂಜಾಗ್ರತೆಯಿಂದಲೂ ನಾಟಕದವರು ಹಾಗೆ ಬರೆಯಿಸಿರುವದೇನೋ! ಅವರಿಗೆ ಹಿತ. ಆದರೆ ನೋಡುವವರಿಗೆ ಇಂದಿಲ್ಲ ನಾಳೆ ಹಿತವಾಗಬೇಕಾದರೆ 'ಉಗುಳಬೇಕಾದಲ್ಲಿ ಉಗುಳತಕ್ಕವರೇ' ಎಂದು ಅವರು ನಾಟಕೀಯ ಕಾಯಿದೆಭಂಗವನ್ನು ಸವಿನಯವಾಗಿ ಮಾಡಲಿಕ್ಕೆ ಬೇಕು. ಇಷ್ಟಾಗಿ, ನಾವು ನಾಟಕಗೃಹಗಳಲ್ಲಿ ಉಗುಳುವದನ್ನು ಬಿಟ್ಟಿರುವೆವೋ? ಅದೂ ಇಲ್ಲ. ತೆಳಗೆ ಉಗುಳುತ್ತೇವೆ—ತೆಳಗೆ. ಇದು ಉಗುಳುವದರ ಅಧಃಪಾತವೇ ಸೈ. ನೆಟ್ಟಗೆ ಉಗುಳಿದರೆ ಆಡುವವರಿಗೂ ಹಿತ, ನೋಡುವವರಿಗೂ ಹಿತ. ಇಂಥ ಕಾಲಕ್ಕೆ ಉಗುಳು ನುಂಗಿ ಸುಮ್ಮನೆ ಕೂಡುವದರಲ್ಲಿ ಅರ್ಥವಿಲ್ಲ. 'ಉಗುಳು ನುಂಗಿದರೆ ಹೊಟ್ಟೆ ತುಂಬುವದೇ?' ಎಂದು ಕೇಳುವರು. ನೋಡುವವರು ಉಗುಳು ನುಂಗಿಕೊಂಡಿರದಿದ್ದರೆ ಆಡುವವರ ಹೊಟ್ಟೆ ತುಂಬುತ್ತಿತ್ತೇ? ಸುತ್ತುಮುತ್ತಲು ನೋಡಲು ಜನರು ಕುಳಿತಿರುವಾಗ ಉಗುಳುವದು ಹೇಗೆ ಎಂದು ಯಾರಾದರೂ ಕೇಳಬಹುದು. ಇದು ಸಮಂಜಸವಾದ ಪ್ರಶ್ನೆ. ಆದರೆ ಇದಕ್ಕೆ ಉತ್ತರರೂಪವಾಗಿ ಇನ್ನೊಂದು ಲೇಖವನ್ನೆ ಬರೆಯಬೇಕಾದೀತು. ಮಹಾನಾಟ್ಯಕವಿ ಶೇಕ್ಸಪಿಯರನು ಉಗುಳಿನ ಬಗ್ಗೆ ಒಂದು ನಾಟಕವನ್ನೇ ಬರೆದಿದ್ದಾನೆ. 'ಅದಾವ ನಾಟಕ?' ಎನ್ನುವಿರಾ? 'Merchant Of Venice' 'ಸುರತ ನಗರದ ಶ್ರೇಷ್ಠಿ!' ಅದು. ಅಂಟೋನಿಯೋ ಬೆಸಾನಿಯೋ ಇಬ್ಬರೂ ಜೀವದ ಗೆಳೆಯರು. ಒಬ್ಬರೊಬ್ಬರು ಹಾಕಿದ ಉಗುಳು ದಾಟುತ್ತಿರಲಿಲ್ಲ. ಇವರಿಬ್ಬರೂ ಒಮ್ಮೆ ಶಾಯಲಾಕ್‌ನ ಮೋರೆಯ ಮೇಲೆ ಉಗುಳಿದರು—ಅವನು ಬಹಳ ನಿರ್ದಯನಾದ ಸಾಹುಕಾರಿಕೆಯ ಬಡ್ಡಿಯವನು ಎಂದು. ಇದೇ ಅಂಟೋನಿಯೋನ ಜೀವಕ್ಕೆ ಮೂಲವಾಯಿತು. ಶಾಯಲಾಕ್‌ನು ಒಳಗಿಂದೊಳಗೆ ಕಿಡಿಯುಗುಳಿದನು, ಬೆಂಕಿಕಾರಿದನು. ಮುಂದೆ ಇವನ ಹತ್ತರವೇ ಅವರಿಗೆ ಅಂಟೋನಿಯೋನ ಜೀವ ಒತ್ತೆಯಿಟ್ಟು ಲಕ್ಷಾವಧಿ ಹಣ ತರಬೇಕಾಯಿತು. ಅವಧಿಯೊಳಗೆ ಹಣ ಕೊಡುವದಾಗದ್ದರಿಂದ ಜೀವಕಳಕೊಳ್ಳುವ ಹೊತ್ತು ಬಂತು. ಡ್ಯೂಕನೂ ಪೋರ್ಶಿಯಾ ಇವಳೂ ಶಾಯಲಾಕ್‌ನನ್ನು ಬೊಗಳೆ ನೋಡಿದನು. ಗ್ರ್ಯಾಶಿಯಾನೋನು ಬೊಗಳೆ ನೋಡಿದನು. ಅವನ ಕಾಯಿದೆ ಪುಸ್ತಕಗಳಮೇಲೆ ಸ್ವಲ್ಪ ಉಗುಳು ಚೆಲ್ಲಿ ಪರಿಶೀಲಿಸ ಬೆಲೆರಿಯೋ ಪಂಡಿತನ ಸೂಚನೆಯು ಮೇರೆಗೆ ಅಂಟೋನಿಯೋನು ಉಳಿಸು ಕೊಂಡನು. ಏನೋ ಯಮರಾಜನು ಆ ನುಂಗಿದ ತುತ್ತನ್ನು ಉಗುಳಿದನು. ಉಗುಳುವದಲ್ಲಿ ಕಷ್ಟಗಿದ್ದರಿಂದಲೇ ಆ ಅನಾಹುತವಾಯಿತು. ಆದರೆ ವೇನಿಸ ನಗದವರೆಲ್ಲರೂ ಹೊತ್ತಿಗೇ ಎಚ್ಚತ್ತು ನಾಲ್ಕು ಜನರು ಶಾಯ ಲಾಕ್‌ನಿಗೆ ನೆಟ್ಟಗೆ ಉಗುಳಿದ್ದರೆ ಈ ಗಂಡಾಂತರವೇ ಬರುತ್ತಿರಲಿಲ್ಲ.

**ಉಗುಳುವದು ಮತ್ತು ರಾಜಕೀಯ ಚಳವಳಿ:** ಉಗುಳುವದು ಮಾನವನ ಹಕ್ಕು—ಜನ್ಮಸಿದ್ಧ ಹಕ್ಕು. ಈ ಎಷ್ಟೋ ಜನರು ನಿಷೇಧಸಭೆಗಳಲ್ಲಿ ವ್ಯರ್ಥ ಉಸುರು ಕಳೆದು ಕೊಳ್ಳುವರು. ಹಾಗೆ ಮಾಡದೆ ಉಗುಳುವ ತಮ್ಮ ಜನ್ಮಸಿದ್ಧ ಹಕ್ಕನ್ನು ಉಪಯೋಗಿಸಿದರೆ ಎಷ್ಟೋ ಆಯಾಸವು ಕಡಿಮೆಯಾಗುವದು. ಉಗುಳಿನಂಥ ತೀವ್ರನಿಷೇಧವು ಬೇರೆ ಯಾವುದೂ ಇಲ್ಲ. ಅದು ಬುದ್ಧಿ ಕಳೆದುಕೊಂಡವರಲ್ಲಿ ಶುದ್ಧಿಯನ್ನುಂಟು ಮಾಡುವದು. ಉಗುಳು ಪವಿತ್ರ. ಉಗುಳುವದು ಆಪ್ಪ ವೆಂದು ನೀರಮುಡಿವಂತರು ಹೇಳುವರು; ಅದು ಶುದ್ಧತತ್ವ. ಉಗುಳು ಸ್ವಥೈವ ನಿರ್ಮಲ. ರೀತಿಯಲ್ಲಿ ತಪ್ಪಿದರೆ ಮಾತ್ರ ಹೋಯಿತು. ನಮಗೆ ಬೇಡಾದದ್ದರಮೇಲೆ ಬಗಿ ಉಗುಳುವದರಿಂದ ನಿಷೇಧದ ಕಾರ್ಯವು ತೀರಿಹೋಗುವದು. ಆದ ಉಗುಳುವದು ಮಹಾಶಕ್ತಿ. ಎಲ್ಲರಿಗೂ ತಕ್ಕರೀತಿಯಲ್ಲಿ ಉಪ ಯೋಗಿಸಲು ಬರದು. ಈ ಕಲಿಯುಗವು ಹೋಗಿ ಮತ್ತೆ ಸತ್ಯಯುಗವು ಬರುವಾಗ ಎಲ್ಲರಿಗೂ ಈ ಅಧಿಕಾರವನ್ನು ಉಪ ಯೋಗಿಸುವ ಬುದ್ಧಿಯು ಬರುವಂತೆ ತೋರುತ್ತದೆ.

ಸ್ವಭಾವಭೇದದಿಂದ ಉಗುಳುವ ಸೂಕ್ಷ್ಮತೆಯಲ್ಲಿಯೂ ಭೇದ ವುಂಟಾಗುವದು. ತಾಮಸಿಯು 'ಥ್ಯಾಕ್' ಎಂದುಗುಳು ವನು. ರಾಜಸನು 'ಥೂ' ಎನ್ನುವನು. ಸಾತ್ವಿಕನು ಮಾತ್ರ 'ಛಿ:' ಎಂದು ಕನ್ನಡ ಕಾವ್ಯಗಳಲ್ಲಿರುವಂತೆ ಸೂಕ್ಷ್ಮ ವಾಗಿ ತನ್ನ ತಿರಸ್ಕಾರವನ್ನು ವ್ಯಕ್ತಗೊಳಿಸುವನು.

**ಉಪಸಂಹಾರ:—** ವೇದಕ್ಕೂ ಉಗುಳಿಗೂ ಏನಾದರು ಸಂಬಂಧವಿದೆಯೇ? ಎಂದು ಕೆಲವರು (ನನ್ನ ವಿಷಯದ ಮಹತ್ವ ತಿಳಿಯದೆ ಇದ್ದವರು) ಚೇಷ್ಟೆಯಿಂದ ಕೇಳಬಹುದು. ಮಹಾಸ್ವಾಮೀ 'ಇಲ್ಲದೆ ಇಲ್ಲ' ಎಂದು ನಾನು ಹೇಳುತ್ತೇನೆ. ಆದರೆ ಅದನ್ನು ವರ್ಣಿಸುವ ಶಕ್ತಿಯು ಈ ಪಾಮರನಿಗಿಲ್ಲ

'ಮಂತ್ರಗಳಿಗಿಂತ ಉಗುಳೇ ಬಹಳ' ಎಂದೆನ್ನುವ ನಾಸ್ತಿಕರು ಎಂದುಕೊಳ್ಳಲಿ. ವೇದಮಂತ್ರಗಳನ್ನುಚ್ಚರಿಸುವಾಗ ಹಾರುವ ಆ ಬ್ರಹ್ಮಬಿಂದುಗಳ ಮಹಿಮೆಯು ನಕ್ಷತ್ರಗಳಿಗೂ ಬಾರದು. ವೇದಗಳ ಅರ್ಥವನ್ನು ಇತಿಹಾಸ ಪುರಾಣಗಳು ಹೇಳುವವು. ಅವುಗಳ ಅರ್ಥವನ್ನು ಶರಣರು ದಾಸರು ತಮ್ಮ ವಚನಗಳಲ್ಲಿಯೂ ಕೀರ್ತನೆಗಳಲ್ಲಿಯೂ ಹೇಳಿದರು. ಇಂಥ ಕೀರ್ತನೆಗಳಲ್ಲಿ ಒಂದನ್ನು ಹಾಡುತ್ತ ಪುರಂದರದಾಸರು ಓಣಿ ಹಿಡಿದು ಬರುತ್ತಿರುವಾಗ ಬಿಕ್ಷೆ ಹಾಕಬಾರದೆಂಬ ಕ್ಷುದ್ರಬುದ್ಧಿಯಿಂದಲೋ ಏನೋ ಒಬ್ಬಳು ಕದವನ್ನು ಮುಚ್ಚಿಕೊಳ್ಳಲು ಅವರು ಉಸುರಿದ್ದೇನಂದರೆ: -

" ಭಾರತ ರಾಮಾಯಣ ಪಂಚರಾತ್ರಾಗಮ ।
ಸಾರತತ್ವದ ಬಿಂದು:--- ಒಳಗೆ ಬಿದ್ದೀತೆಂದು ॥
ಗಯ್ಯಾಳಿ ಮೂಳೀ ಕದವನಿಕ್ಕೀದಾಳಿದಕೋ "

ಆದಿಕವಿ ವಾಲ್ಮೀಕಿಯು ಕ್ರೌಂಚಮಿಥುನದಲ್ಲೊಂದರ ಮರಣ ಕಂಡು ಹಾಡಲಿಲ್ಲವೇ ? ಹಾಗೇ ಇದು. ಹಾಡಿನ ಉಗುಳಿನ ಬಿಂದುವೊಂದು ಸಿಡಿದು ಮನೆಯೇ ಪವಿತ್ರವಾಗಬಹುದಾಗಿತ್ತು. ಗಯ್ಯಾಳಿ ಮೂಳಿ ಕದವನಿಕ್ಕಿಕೊಂಡಳು. ಮಹಾತ್ಮರ ಮಾತಿನುಗುಳು ಸಿಡಿದು ಮನವೇ ಪವಿತ್ರವಾದೀತೆಂದು ಕಿವಿಮುಚ್ಚಿಕೊಳ್ಳುವ ಪಂಡಿತರಿಲ್ಲವೇ ಈಗ ? ಮಹಾತ್ಮರು 'ಚೀ' ಎಂದು ಉಗುಳಿದರೆ ಸಾಕು—ಆ ಅಹಿಂಸಾಯುಧವೇ ಪೃಥ್ವಿಯನ್ನೆಲ್ಲ ತನ್ನ ತೆಕ್ಕೆಯಲ್ಲಿರಿಸಿಕೊಳ್ಳಬೇಕೆಂಬ ವೃತ್ರಾಸುರನಿಗೆ ಇಂದ್ರನ ವಜ್ರಾಯುಧದಂತಿದೆ.

---

# 'ಹಿಂದೂ'ಗಳ ಸಾಮಾನ್ಯ ವ್ಯವಹಾರಧರ್ಮ

ಲೇಖಕರು-- ಶ್ರೀ. ಮಂ. ಅ. ದೊರೆಸ್ವಾಮಿ ಐಯಂಗಾರ, M. A. L. B. ಮೈಸೂರು

ಹಿಂದೂ ವ್ಯವಹಾರಧರ್ಮದ ಅಂಕೆಗೊಳಪಟ್ಟವರೆಲ್ಲರೂ ಹಿಂದೂಗಳೆಂದು ಕೆಲವರು ಹೇಳುವರು. 1 ಆದರೆ ಹೀಗೆ ಒಳಪಡತಕ್ಕವರು ಯಾರೆಂದು ಹೇಳಬೇಕು? ಇವರಿವರು ಹೀಗೆ ಒಳಪಡುವರು ಎಂದು ಯಾವ ಗುರುತುಗಳ ಸಹಾಯದಿಂದ ಹೇಳಲಾದೀತು ? ಹಿಂದೂ ವ್ಯವಹಾರಧರ್ಮವೆಂದು ಅದಕ್ಕೆ ಹೆಸರಿಟ್ಟವರಾರು ? ಮೊದಲು ಹಿಂದೂಗಳು ಗೊತ್ತಾದ ಮೇಲೆ ತಾನೇ ಅವರ ವ್ಯವಹಾರಧರ್ಮವಿಂಥಾದ್ದೆಂದು ಗೊತ್ತಾಗಬೇಕು ? ಈ ವ್ಯವಹಾರಧರ್ಮವು ಒಂದು ಪ್ರಕಾರವಾಗಿಲ್ಲ. ದೇಶಕಾಲ ನಿಮಿತ್ತಾನುಸಾರವಾಗಿ ಸ್ಮೃತಿಗಳೂ ನಿಬಂಧಗಳೂ ವ್ಯಾಖ್ಯಾನಗಳೂ ಹುಟ್ಟಿವೆ. ಲಿಖಿತಶಾಸನಕ್ಕಿಂತಲೂ ಆಚಾರವು ಪ್ರಬಲಧರ್ಮವಾದ್ದರಿಂದ ಈ ವ್ಯವಹಾರಧರ್ಮಕ್ಕೆ ವ್ಯವಸ್ಥೆಯೇ ಇಲ್ಲವಾಗಿದೆ. ಇದರಲ್ಲಿ ಸಹ ಈಗ ಬ್ರಿಟಿಷರು ಕುಟುಂಬ, ದಾಯ ಈ ಎರಡು ಅಂಶಗಳಿಗೆ ಸಂಬಂಧಪಟ್ಟ ಭಾಗವನ್ನು ಮಾತ್ರ—ಅದರಲ್ಲೂ ಎಷ್ಟೋ ಬದಲಾವಣೆಗಳನ್ನು ಮಾಡಿ ಪ್ರಚಾರದಲ್ಲಿ ಉಳುಹಿರುವರು. ಈಗ ನ್ಯಾಯಶಾಲೆಗಳಲ್ಲಿ ಪ್ರಚಾರದಲ್ಲಿರುವ ಹಿಂದೂ ವ್ಯವಹಾರಧರ್ಮವೆಲ್ಲವೂ ಆಚಾರವನ್ನು ಬಿಟ್ಟರೆ ಯಾಜ್ಞವಲ್ಕ್ಯಸ್ಮೃತಿಯ ೧೦೦೦ಲ ಶ್ಲೋಕಗಳಲ್ಲಿ ೩೬ ಶ್ಲೋಕಗಳಿಗೆ ಆ ಸ್ಮೃತಿಗೆ ಇರತಕ್ಕ ಹತ್ತಾರು ವ್ಯಾಖ್ಯಾಗ್ರಂಥಗಳಲ್ಲಿ ಮಿತಾಕ್ಷರ ದಾಯಭಾಗ ಎಂಬೆರಡು ವ್ಯಾಖ್ಯಾನಗ್ರಂಥಗಳು ನಿರೂಪಿಸಿರುವ ವ್ಯಾಖ್ಯಾನವನ್ನವಲಂಬಿಸಿರುವುದು.

ಪ್ರಾಯಶಃ ಎಲ್ಲಾ ದೇಶಗಳಲ್ಲೂ ವ್ಯವಹಾರ ಧರ್ಮವು ಮತಧರ್ಮದ ಆಶ್ರಯದಲ್ಲಿ ಬಳೆಯುವುದು. ನಮ್ಮ ದೇಶದಲ್ಲಿ

---

1 ಉದಾಹರಣೆಗಾಗಿ, ಮುಸಲ್ಮಾನರೆಲ್ಲರೂ ಕುರಾನನ್ನು ಮರ್ಯಾದಿಸುವರು. ಇದರಲ್ಲಿ ಬಹುಶಃ ಪಾಠಭೇದಗಳು ಇಲ್ಲ. ಬೈಬಲ್ಲಿಗೆ ಪಾಠಭೇದಗಳಿದ್ದರೂ ಐರೋಪ್ಯ ಕ್ರಿಸ್ತರೆಲ್ಲರೂ ಪ್ರಾಯಶಃ ಒಂದು ಪಾಠವನ್ನು ಶಾಸ್ತ್ರೀಯವೆಂದು ಅಂಗೀಕರಿಸಿರುವರು. ಈ ಎರಡು ಪುಸ್ತಕಗಳಂತೆ ಏಕಪಾಠವುಳ್ಳದ್ದಾಗಿ ಏಕಾರ್ಥವುಳ್ಳದ್ದಾಗಿ ಏಕಪ್ರಾಮಾಣ್ಯವುಳ್ಳದ್ದಾಗಿ ಸರ್ವಪರಿಗ್ರಾಹ್ಯವಾಗಿ ಸಕಲರ ಮತಾಚಾರಗಳ ಮೇಲೂ ಏಕಾಯತ್ತಪ್ರಭುತ್ವವುಳ್ಳದ್ದಾಗಿರುವ ಒಂದು ಗ್ರಂಥವನ್ನು ಹಿಂದೂಗಳು ಪಡೆದಿಲ್ಲ. ಭಗವದ್ಗೀತೆಯನ್ನು ಇಂಥಾ ಕೇಂದ್ರಗ್ರಂಥವನ್ನಾಗಿ ಮಾಡಿಕೊಳ್ಳಬೇಕೆಂದು ಇತ್ತೀಚೆಗೆ ಹಿಂದೂಗಳು ಪ್ರಯತ್ನಿಸಿರುವರು. ಇಂಥಾ ಕೇಂದ್ರಗ್ರಂಥವಿದ್ದರೂ ಅದರ ಮರ್ಯಾದೆಯೇ ನಮ್ಮ ನಿರ್ವಚನಕ್ಕೆ ಆಧಾರಲಕ್ಷಣವಾಗಲಾರದು. ಕ್ರಿಸ್ತರೆಂದರೆ ಬೈಬಲನ್ನು ಮರ್ಯಾದಿಸತಕ್ಕವರು, ಮುಸಲ್ಮಾನರೆಂದರೆ ಕುರಾನನ್ನು ಮರ್ಯಾದಿಸತಕ್ಕವರು ಎಂದು ಹೇಳುವ ನಿರ್ವಚನವು ಸರಿಯಾದ ನಿರ್ವಚನವಲ್ಲ.

ಬಹಳ ಹಿಂದೆಯೇ ಮತಾಚಾರಕ್ಕೂ ವ್ಯವಹಾರಧರ್ಮಕ್ಕೂ ವ್ಯತ್ಯಾಸವೇರ್ಪಟ್ಟು ಎರಡೂ ಸ್ವತಂತ್ರವಾಗಿ ಬೆಳೆದುವು. ಯಾಜ್ಞವಲ್ಕ್ಯಸ್ಮೃತಿಯ ಕಾಲದಿಂದಲೂ ಇದನ್ನು ಚೆನ್ನಾಗಿ ನೋಡಬಹುದು. ದಂಡವಿಧಾನ (Penal Law), ಸಮಯ ನಿಬಂಧ (Contracts), ನ್ಯಾಯವಿಚಾರಣಾಕ್ರಮ (Procedure), ಸಾಕ್ಷ್ಯ (Evidence), ಸ್ವಾಮ್ಯ (Property), ಸಂಬಂಧವ್ಯವಸ್ಥೆ (Law of relations), ದಾಯ ಇವೇ ಮೊದಲಾದ ವ್ಯವಹಾರ ಧರ್ಮಶಾಸ್ತ್ರದ ಭಾಗಗಳೆಲ್ಲವೂ ಬಹಳ ಸೂಕ್ಷ್ಮವಾಗಿಯೂ ವಿಸ್ತಾರವಾಗಿಯೂ ಬೆಳೆದುವು. ಈ ಧರ್ಮಪರಿಪಾಲನೆಯು ಶುದ್ಧವಾಗಿ ರಾಜಕೀಯವಾದುದಾಗಿರಲಿಲ್ಲವಾದ್ದರಿಂದ ರಾಜ್ಯಗಳ ಪರಿವರ್ತನೆಗಳಿಂದ ಈ ಧರ್ಮಕ್ಕೆ ತೊಂದರೆಯುಂಟಾಗಲಿಲ್ಲ. ಬೌದ್ಧರು ದೇಶದಲ್ಲಿ ರಾಜರಾದ ಮೇಲೂ ಹೊಸದಾಗಿ ಯಾವ ವ್ಯವಹಾರ ಧರ್ಮವನ್ನೂ ಕಲ್ಪಿಸಿ ನೆಡಲಿಲ್ಲ. ಶಕಯವನಾದಿ ಪರಕೀಯರು ಇಲ್ಲೇ ರಾಜ್ಯಗಳನ್ನು ಕಟ್ಟಿಕೊಂಡು ನೆಲಸಿದಾಗಲೂ ಯಾವ ಹೊಸ ವ್ಯವಹಾರಧರ್ಮವನ್ನೂ ಇಲ್ಲಿಗೆ ತಂದು 'ಹಿಂದೂ' ವ್ಯವಹಾರ ಧರ್ಮವನ್ನು ಖಿಲಗೊಳಿಸಲಿಲ್ಲ. ಮುಸಲ್ಮಾನರ ಕಾಲದಲ್ಲೂ ಬಹುವಾಗಿ ಇದೇ ಧರ್ಮವೇ ನಡೆದುಕೊಂಡು ಬಂದಿತು. ರಾಜಧಾನಿಗಳಲ್ಲಿ ಮಾತ್ರ ದಂಡವಿಧಾನ (Criminal Law)ವು ಮುಸಲ್ಮಾನರ ಧರ್ಮವನ್ನನುಸರಿಸಿ ಸ್ಥಾಪಿತವಾಗಿತ್ತು. ಆದರೂ ಈ ಕಾಲದಲ್ಲೂ ಹಿಂದೂ ವ್ಯವಹಾರ ಧರ್ಮವೇ ಸಾರ್ವತ್ರಿಕವಾಗಿ 'ಹಿಂದೂ'ಗಳಲ್ಲಿ ಪ್ರಚಾರದಲ್ಲಿದ್ದಿತು. ಹೀಗೆ ಬ್ರಿಟಿಷರ ಆಳ್ವಿಕೆಯವರೆಗೂ ಈ ದೇಶದಲ್ಲಿ ಹಿಂದೂಗಳ ಲಿಖಿತ ಸ್ಮೃತಿ ಧರ್ಮಶಾಸ್ತ್ರವು ಅನಾದಿಯಾಗಿ ನಡೆದು ಬಂದಿತು. ಹಿಂದೂಗಳ ನಾಗರಕತೆಯೂ ಇತಿಹಾಸವೂ ವಿದ್ಯಾರಾಶಿಯೂ ಮತಧರ್ಮವೂ ಅವಿಚ್ಛಿನ್ನವಾಗಿ ಏಕಸೂತ್ರವಾಗಿ ಪರಂಪರೆಯಾಗಿ ನಡೆದುಕೊಂಡು ಬರಲು ಇದೇ ಆಧಾರವಾಗಿದ್ದಿತು. ಆದರೆ ಮೇಲೆ ಹೇಳಿರುವ ಶಾಖೆಗಳಲ್ಲಿ ಸಂಬಂಧ, ದಾಯ ಈ ಎರಡು ಭಾಗಗಳನ್ನು ಕುರಿತ ಧರ್ಮವು ಮಾತ್ರ ಪರಂಪರೆಯಾಗಿ ಸಾರ್ವತ್ರಿಕವಾಗಿ ಒಂದೇ ಆಗಿರಲಿಲ್ಲ. ಸಮಾಜದ ಸಂಬಂಧಗಳಲ್ಲಿ ವಿವಾಹ ಸಂಬಂಧವು ಪ್ರಧಾನವಾದುದು. ದಾಯವು ವಿವಾಹಕ್ರಮವನ್ನನುಸರಿಸಿ ಇರುವುದು. ವಿವಾಹಕ್ರಮವು ಮತಧರ್ಮವು ವ್ಯತ್ಯಸ್ತವಾದಹಾಗೆಲ್ಲ ವ್ಯತ್ಯಸ್ತವಾಗುವುದು. ಆದ್ದರಿಂದ ಹಿಂದೂಗಳು ಪರಮತಕ್ಕೆ ಸೇರಿದಾಗಲೂ ಪರಕೀಯರು ಹಿಂದೂವ್ಯವಹಾರಧರ್ಮವನ್ನು ಪರಿಗ್ರಹಿಸಿದಾಗಲೂ ಸಂಬಂಧ, ದಾಯ ಈ ಎರಡು ಭಾಗಗಳ ವ್ಯವಹಾರಧರ್ಮವು ಸರ್ವತ್ರ ವಿವಿಧವಾಗಿ ವ್ಯತ್ಯಸ್ತವಾಗುತ್ತಿದ್ದಿತು. ಹಿಂದೂಗಳಲ್ಲೇ ಹೊಸ ಹೊಸದಾಗಿ ಮತಾಭಿಪ್ರಾಯಗಳೂ ಮತಶಾಖೆಗಳೂ ಹುಟ್ಟಿದಾಗಲೂ ಇದೇ ರೀತಿ ನಡೆಯಿತು. ಉದಾಹರಣೆಗಾಗಿ, ಸಿಖಮತವು ಹುಟ್ಟಿದಾಗ ಅವರು ಹೊಸದೊಂದು ವಿವಾಹ ಕ್ರಮವನ್ನು ಮಾಡಿಕೊಂಡರು. ಇದರಿಂದ ಅವರ ದಾಯ ವಿಚಾರಾದಿಗಳಲ್ಲಿ ವ್ಯವಹಾರವು ಬದಲಿಸಲು ಅವಕಾಶವುಂಟು. ಇದೇರೀತಿ ದೇಶ, ಕಾಲ, ಅವಸ್ಥೆ, ಮತ ಇವುಗಳ ಮೂಲದಿಂದ ಆಚಾರಭೇದವುಂಟಾಗಿ ಈ ಎರಡು ಭಾಗದ ವ್ಯವಹಾರ ಧರ್ಮದಲ್ಲೂ ವಿವಿಧರೂಪವಾದ ವ್ಯತ್ಯಾಸಗಳು ಹುಟ್ಟಿದವು. ಮತಭೇದವಾದರೂ ಅನೇಕರು ಹಳೆಯ ವ್ಯವಹಾರವನ್ನೇ ಇಟ್ಟುಕೊಂಡು ಇರಲಾರಂಭಿಸಿದರು. ಜೈನರೂ ಬೌದ್ಧರೂ ಹೀಗೆ ಮಾಡಿದರು. ಹಿಂದೂ ಮತದಿಂದ ಮುಸಲ್ಮಾನ ಮತಕ್ಕೆ ಸೇರಿರುವ ಅನೇಕರು ಹೀಗೆಯೇ ಅದ್ಯಾಪಿ ಇರುವರು. ಹೀಗೆ ಹಿಂದೂಗಳ ಸ್ಮೃತಿಲಿಖಿತವಾದ ವ್ಯವಹಾರಧರ್ಮದಲ್ಲಿ ದಂಡ, ಸಮಯ, ಬಂಧ, ನ್ಯಾಯವಿಚಾರಣಾ, ಸಾಕ್ಷ್ಯ, ಸ್ವಾಮ್ಯ ಇತ್ಯಾದಿ ಭಾಗಗಳು ಸ್ಥಿರವಾಗಿ ಅನೂಚಾನವಾಗಿ ಸರ್ವತ್ರ ಒಂದೇ ರೀತಿಯಾಗಿಯೂ, ಸಂಬಂಧ ದಾಯ ಭಾಗಗಳಲ್ಲಿ ಮಾತ್ರ ಭೇದವೇರ್ಪಟ್ಟು ಆಚಾರವು ಲಿಖಿತವಿಧಿಗಳನ್ನು ಮೀರಿಯೂ ನಡೆದುಕೊಂಡು ಬರುತ್ತಿದ್ದ ಕ್ರಮವನ್ನು ಬ್ರಿಟಿಷರು ನಾಶಮಾಡಿದರು. ಇವರು ಮೊದಲಿನ ಸಮಸ್ತ ಭಾಗಗಳಲ್ಲೂ ಹಿಂದೂ ವ್ಯವಹಾರ ಧರ್ಮವನ್ನು ವಜಾಮಾಡಿ ತಮ್ಮ ಧರ್ಮವನ್ನು ಸ್ಥಾಪಿಸಿ ಸಂಬಂಧ (ಕುಟುಂಬಿಕ) ಮತ್ತು ದಾಯ ಈ ಎರಡು ಭಾಗಗಳಲ್ಲಿ ಮಾತ್ರ ಉಪಯುಕ್ತವಾದಷ್ಟನ್ನು ಉಳುಹಿಸಿದರು. ಅದರಲ್ಲೂ ದಿನೇ ದಿನೇ ಬದಲಾವಣೆಗಳಾಗುತ್ತಿವೆ. ಆದ್ದರಿಂದ ಈಗ ಹಿಂದೂ ವ್ಯವಹಾರಧರ್ಮಕ್ಕೆ ತಳಗಲ್ಲಾದ (ಲಿಖಿತ) ಸ್ಮೃತಿಧರ್ಮವು ಖಿಲವಾಗಿ ಅನಂತ ಭೇದಪರಂಪರೆಯುಳ್ಳ ಆಚಾರ ಧರ್ಮವು ಮಾತ್ರ ನಿಂತಿದೆ. ಎಂದರೆ ಈಗ ಪ್ರಚಾರದಲ್ಲಿರುವ ಹಿಂದೂ ವ್ಯವಹಾರ ಧರ್ಮಕ್ಕೆ ವ್ಯವಸ್ಥೆಯೇ ಇಲ್ಲ. ಈ ಧರ್ಮದ ಅಂಕೆಗೆ ಯಾರಾರು ಒಳಪಡುವರು? ಏಕೆ ಒಳಪಡುವರು? ಏಕೆ ಒಳಪಡುವುದಿಲ್ಲ? ಹೀಗೆ ಒಳಪಡುವುದಕ್ಕೂ ಇಲ್ಲದ್ದಕ್ಕೂ ಏನಾದರೂ ನಿಯಮಗಳುಂಟೆ? ಎಂದರೆ ಯಾವುದನ್ನೂ ಹೇಳಲಾಗುವುದಿಲ್ಲ. ಈ ಕಾರಣದಿಂದಲೇ ಅನೇಕ ಪಂಡಿತರು ಈಗಿನ ಸ್ಥಿತಿಯೇ ಸಾರ್ವಕಾಲಿಕವಾದುದೆಂದು ಭ್ರಮಿಸಿ ಹಿಂದೂ ವ್ಯವಹಾರಧರ್ಮವೆಂಬುದೇ ಇಲ್ಲವೆಂದು ವಾದಿಸಲಾರಂಭಿಸಿರುವರು.

ಹಿಂದೂ ವ್ಯವಹಾರ ಧರ್ಮವೆಂದರೆ ಸಾಂಕೇತಿಕವಾಗಿ ಸ್ಮೃತಿಗಳಲ್ಲಿ ವಿಧಿತವಾಗಿರುವ ಧರ್ಮವೆಂದು ಅರ್ಥ. ಬ್ರಿಟಿಷರು ಈಗ ಕುಟುಂಬಸಂಬಂಧ ದಾಯ ಈ ಭಾಗಗಳನ್ನುಮಾತ್ರ ಉಳಿಸಿರುವರಷ್ಟೆ. ಈ ಭಾಗಗಳಲ್ಲಿ ಸ್ಮೃತಿಯ ಧರ್ಮವು ಎಷ್ಟು ದೂರ ಆಚರಣೆಯಲ್ಲಿರುವುದೆಂದು ನೋಡಿದರೆ ಕೆಲಕಡೆ ಎಂಟಾಣೆಯಷ್ಟಿರುವುದು, ಕೆಲಕಡೆ ಎಲಾಣೆಯಷ್ಟಿದೆ, ಕೆಲಕಡೆ ಒಂದಾಣೆಯಷ್ಟು ಸಹ ಇಲ್ಲ, ಕೆಲಕಡೆ ಇಲ್ಲವೇ ಇಲ್ಲ. ಅಲಿಖಿತ ಆಚಾರವು ಈ ಭೇದಗಳನ್ನುಂಟು ಮಾಡಿರುವುದು. ಈ ಆಚಾರವು ಸಹ ಪದೇ ಪದೇ ಕ್ರೋಡೀಕೃತವಾಗಿ ಸ್ಮೃತಿಗಳಿಗೆ ಬರೆಯಲ್ಪಡುವ ವ್ಯಾಖ್ಯಾನ ಗ್ರಂಥಗಳಲ್ಲಿ ಲಿಖಿತವಾಗುತ್ತ ಬರುವುದು. ಆದರೂ ಎಷ್ಟೋಭಾಗವು ಇನ್ನೂ ಅಲಿಖಿತವಾಗಿಯೇ ಇದೆ. ಈಗಿನ ನ್ಯಾಯಶಾಲೆಗಳು ತಮ್ಮ ವ್ಯಾಜ್ಯವರದಿಗಳಲ್ಲಿ ದಿನವಹಿ ಈ ಆಚಾರವನ್ನು ಸಂಗ್ರಹಿಸುತ್ತ ಬರುತ್ತಿವೆ. ಇದು ಹೇಗಾದರೂ ಇರಲಿ. ಹಿಂದೂ ವ್ಯವಹಾರ ಧರ್ಮವು ( ಸ್ಮೃತಿಧರ್ಮವು ) ಯಾರಾರಿಗೆ ಎಷ್ಟೆಷ್ಟು ಅನ್ವಯಿಸುತ್ತದೆ ಎಂದು ಗೊತ್ತು ಮಾಡಲು ಯಾವ ಆಧಾರಲಕ್ಷಣವೂ ಇಲ್ಲ.

ಉದಾಹರಣೆಗಾಗಿ ಮಲೆಯಾಳದ ನಾಯರರೂ ನಂಬೂದರಿಗಳೂ ಅಚ್ಚ ಹಿಂದುಗಳಾದರೂ ಅವರಿಗೆ ಹಿಂದೂ ವ್ಯವಹಾರ ಧರ್ಮವು ಎಳ್ಳಷ್ಟು ಅನ್ವಯಿಸುವುದಿಲ್ಲ. ಅವರ ವಿವಾಹ ಕುಟುಂಬ ದಾಯ ಕ್ರಮಗಳೆಲ್ಲವೂ ಹಿಂದೂ ಸ್ಮೃತಿ ಮತ್ತು ಆಚಾರ ಧರ್ಮಗಳಿಂದ ಶುದ್ಧವಾಗಿ ಭಿನ್ನವಾಗಿವೆ. ಆದರೆ ಮುಸಲ್ಮಾನರಾಗಿರುವ ಖೋಜರು, ಕಚ್ಛೆ ಮೆಮನರು, ಹಲಾಯಿ ಮೆಮನರು, ನವಾಯಿತರು, ಲಬ್ಬೆಗಳು, ಗಿರೇಸಿಯರು ಇವರೇ ಮೊದಲಾದವರು ಹಿಂದೂ ವ್ಯವಹಾರ ಧರ್ಮವನ್ನು ಬಿಡದೆ ಬಳಿಕೆಯಲ್ಲಿಟ್ಟುಕೊಂಡಿರುವರು. ಜಾಟರು, ತಿಯ್ಯಾನ, ಸಂತಾಲಾದಿ ಕಾಡುಜನರು, ಗೋಸಾವಿಗಳು, ಬೈರಾಗಿಗಳು, ವೇಶ್ಯೆಯರು ಇವರು ಹಿಂದುಗಳಾದರೂ ಇವರಲ್ಲಿ ಈಗ ಆಚಾರ ಮುಖೇಣ ಬಳಕೆಯಲ್ಲಿರುವ ವ್ಯವಹಾರಧರ್ಮಕ್ಕೆ ಸ್ಮೃತಿಗಳಲ್ಲಿ ಈಷದಪಿ ಮೂಲಾಧಾರವಿಲ್ಲ. ಪತಿತರು, ಜಾರಜರು, ಅಸ್ಪೃಶ್ಯರು, ಅವರ್ಣಗಳು ಇವರು ಸ್ಮೃತಿಕಾರರಿಗೆ ಅಪರಿಚಿತರಲ್ಲವಾದರೂ ಸ್ಮೃತಿಗಳು ತಾವು ವಿಧಿಸುವ ಧರ್ಮವು ಇವರಿಗೆ ಅನ್ವಯಿಸುವುದಿಲ್ಲವೆಂದು ಮಾತ್ರ ಹೇಳಿ ನಿಲ್ಲುವುವು. ಇವರಿಗೆ ಮತ್ತಾವ ಧರ್ಮವನ್ನು ನೇಮಿಸಬೇಕು ಎಂಬ ಸ್ಮೃತಿಗಳು ವಿಚಾರಮಾಡುವುದಿಲ್ಲ. ಇದನ್ನು ಆಚಾರವು ಮಾಡುವುದು. ಎಲ್ಲಿ ಆಚಾರವು ಹೀಗೆ ಮಾಡಿಲ್ಲವೋ ಅಲ್ಲಿ ಈಗಿನ ಬ್ರಿಟಿಷ ನ್ಯಾಯಶಾಲೆಗಳು ಇವರಿಗೆ ಸ್ಮೃತಿಧರ್ಮವನ್ನೇ ಅನ್ವಯಿಸುವುವು.

ಈಗ ಹಿಂದೂ ವ್ಯವಹಾರಧರ್ಮದ ಚರಿತ್ರೆ, ವ್ಯಾಪ್ತಿ, ಸ್ವರೂಪಾದಿಗಳು ಹಿಂದೂ ಶಬ್ದದ ನಿರ್ವಚನಕ್ಕೆ ಏನೂ ಪ್ರಯೋಜನವಿಲ್ಲವೆಂದು ಸ್ಪಷ್ಟವಾಗುವುದು.

---

## ಹಳೆರೀತಿಯ ಅನುರಾಗ

( ಪಡುಕೋಣೆ ಶಿವಶಂಕರರಾಯ, ಕಲಕತ್ತಾ )

ಹಳೆಬರಂತೆ ಜೀವಿಸುತ್ತೆ.
ಹಳೆಬರಂತೆ ನಿನ್ನಿದಿರೊಳೆ ಮುತ್ತೈದೆತನದಿ ಸಾಯುವಂತೆ
ಈಶ ಕರುಣಿಸಲೆನಗೆ ಎಂದು ಪ್ರಾರ್ಥಿಸುವೆನು, ಎನ್ನ ಪ್ರಾಣದೊಡೆಯ.
ಹೊಸರೀತಿಗಳು ಬೇಡವೆನಗೆ-ಹೊಸಬರನ್ನು ದೂರಲಾರೆ
ಹೊಸದದು ಅವರಿಗೆ ಚೆಂದ–ನನಗೆ ಚೆಂದ ಹಳೆಯದು.
ನಿನ್ನ ಸೇವೆಯದು ಎನ್ನ ಪುಣ್ಯಫಲ–ಅದನು ದಿನದಿನದಿಂದ ಮಾಡುತ ಮುಗಿಯಲೆನ್ನಯುಬಾಳು
ಅದೇ ಸುಖಶಾಂತಿಯಹುದು ಎನಗೆ–
ನೀನೆನಗೆ ಹೊಸ ವೇಷಗಳ ತೊಡಿಸಿದರೇನ್ನಾತೋ ?
ಹೊಸಬರಂತೆ ನಿನ್ನ ಬಳಿ ಕುರ್ಚಿಯ ಮೇಲೆ ಕುಳ್ಳಿಸಿದರೇನ್ನಾತೋ ?
ಹೊಸಬರಂತೆ ಕುಂಕುಮವನು ಹಾಕಲು ಕಲಿಸಿದರೇನ್ನಾತೋ ?
ಅವರಂತೆ ಜಡೆಯನು ಕಟ್ಟಲು ಹೇಳಿದರೇನ್ನಾತೋ ?
ನನಗೆ ಸುಖವಹುದು ಮಾತ್ರ ನಿನ್ನ ಕಾಲಿಗೆರಗಲಾಗಿ
ನಿನ್ನ ಪಾದಧೂಳಿಯನ್ನು ಎನ್ನ ಶಿರದಮೇಲೆ ಧರಿಸಲಾಗಿ
ನಿನ್ನ ಪಾದಗಳ ಎನ್ನ ಪ್ರೇಮಾಶ್ರುಗಳಿಂದ ತೊಳೆಯಲಾಗಿ.

# ಮುಖಜ್ಯೋತಿಷದಲ್ಲಿಯ ಕುಂಡಲಿಯು

ಲೇಖಕರು :— ಶ್ರೀ ಗೋಕಾಕ ಕೃಷ್ಣರಾಯರು, ವಕೀಲರು, ಸವಣೂರು

ಮುಖಜ್ಯೋತಿಷದಲ್ಲಿ ಒಬ್ಬ ಮನುಷ್ಯನ ಕುಂಡಲಿಯನ್ನು ಹೇಗೆ ಸಿದ್ಧಪಡಿಸಬೇಕೆಂಬದನ್ನು ನೋಡುವಾ.

ಎಲ್ಲಕ್ಕೂ ಮೊದಲು ಆ ಮನುಷ್ಯನ ಜನ್ಮಕಾಲವನ್ನು ತೆಗೆಯಬೇಕಾಗಿದೆ. ಆದಕಾರಣ, ತ್ರಿಕೋಣ, ಚೌಕೋನ, ವರ್ತುಳ, ದೀರ್ಘವರ್ತುಳ ಈ ನಾಲ್ಕು ಪ್ರಕಾರಗಳಲ್ಲಿ ಆ ಮನುಷ್ಯನ ಮುಖವು ಯಾವ ತರಹದ್ದಿದೆಯೆಂಬದನ್ನು ನಿರ್ಣಯಿಸಬೇಕು. ಆ ಮೇಲೆ ಆ ಮುಖದ ಆಕೃತಿಯ ಚಿನ್ಹವು ಹೆಬ್ಬಟ್ಟಿನ ಹತ್ತರ ತರ್ಜನಿಯ ಕೆಳಗೆ ಒಂದು ಬಟ್ಟಿನಷ್ಟು ಪ್ರದೇಶದಲ್ಲಿ ಇದೆಯೋ ಇಲ್ಲವೋ ನೋಡಬೇಕು. ಉದಾ— ಮುಖವು ಚೌಕೋನಾಕೃತಿಯದಿದ್ದರೆ ಒಂದು ಚೌಕೋನದಂಥ ಚಿಹ್ನವು ಆ ಪ್ರದೇಶದಲ್ಲಿ ಕಂಡುಬರುವದು. ಇದರಿಂದ ಆಯಾ ಪ್ರಕಾರಕ್ಕೆ ಹಾಕಿಟ್ಟ ಲಗ್ನಗಳಲ್ಲಿ ಒಂದು ಈ ಮನುಷ್ಯನ ಜನ್ಮಕಾಲದ್ದಿರಬೇಕೆಂದು ವಿದಿತವಾಗುತ್ತದೆ. ಆ ಮೇಲೆ ಪ್ರತ್ಯೇಕ ಲಗ್ನದ ಲಕ್ಷಣಗಳ ಮೇಲಿಂದ ಜನ್ಮಲಗ್ನವು ಇಂಥದೇ ಎಂದು ನಿರ್ಣಯಿಸಬೇಕು. ಕೈಯೊಳಗಿನ ಆಯುಷ್ಯರೇಖೆಯಮೇಲಿಂದ ಜನ್ಮವು ದಕ್ಷಿಣಾಯನದಲ್ಲಿಯೋ ಇಲ್ಲವೆ ಉತ್ತರಾಯಣದಲ್ಲಿಯೋ ಎಂಬದು ಗೊತ್ತಾಗುತ್ತದೆ. ಹೆಬ್ಬಟ್ಟಿನ ಚಿನ್ಹದ ಮೇಲಿಂದ ಯಾವ ಪಕ್ಷದಲ್ಲಿ ಜನ್ಮವೆಂಬದನ್ನು ತಿಳಿದುಕೊಂಡು ಕಿವಿಯ ಹಾಲಿಗಳಮೇಲಿಂದ ಹಗಲಿನಲ್ಲಿ ಇಲ್ಲವೆ ರಾತ್ರಿಯಲ್ಲಿ ಎಂಬದನ್ನು ಪರೀಕ್ಷಿಸಬೇಕು.

ಈ ಮೇರೆಗೆ ಜನ್ಮಲಗ್ನವು ಗೊತ್ತಾದಮೇಲೆ ಕುಂಡಲಿಯನ್ನು ಹಾಕಿ ಮೋರೆಯಮೇಲಿಂದ ಯಾವ ರಾಶಿಯೆಂದು ನಿಶ್ಚಿತವಾಗಿದೆಯೋ ಆ ರಾಶಿಯನ್ನು ಮೊದಲನೆಯ ಮನೆಯಲ್ಲಿ ಬರೆಯಬೇಕು. ಅದರ ಮುಂದಿನ ರಾಶಿಗಳನ್ನು ಬಲಗಡೆಯಿಂದ ಎಡಗಡೆಗೆ ಬರೆಯುತ್ತ ಹೋಗಬೇಕು, ಅಂದರೆ ೧೨ ಮನೆಗಳಲ್ಲಿ ೧೨ ರಾಶಿಗಳು ಬೀಳುವವು.

ಈ ಪ್ರಕಾರ ಬರೆದ ಕುಂಡಲಿಯಲ್ಲಿ ಎರಡು ಭಾಗಗಳಿರುತ್ತವೆ. ಅದರಲ್ಲಿ ಬಲಗಡೆಯ ಅರ್ಧಭಾಗಕ್ಕೆ ಉದಿತಗೋಲಾರ್ಧವೆಂದೂ ಎಡಕ್ಕಿದ್ದ ಭಾಗಕ್ಕೆ ಅಸ್ತಗೋಲಾರ್ಧವೆಂದೂ ಕರೆಯುತ್ತಾರೆ. ಇದನ್ನು ಲಕ್ಷ್ಯದಲ್ಲಿಟ್ಟರೆ ಸವಿಯು ಯಾವ ರಾಶಿಯಲ್ಲಿರುವನೆಂಬದನ್ನು ತಿಳಿಯಲಿಕ್ಕೆ ಬಹಳ ಹಗುರಾಗುತ್ತದೆ.

ಇಲ್ಲಿಯವರೆಗೆ ಮುಖದ ಲಕ್ಷಣಗಳನ್ನು ಹೇಳಿದೆವು. ಇನ್ನು ಇವುಗಳಮೇಲಿಂದ ಕುಂಡಲಿಯನ್ನು ಸಿದ್ಧಪಡಿಸಿ ಜನ್ಮಸ್ಥ ಶಕೆ— ತಿಂಗಳು— ಪಕ್ಷ— ತಿಥಿ ಮುಂತಾದವುಗಳನ್ನು ಹೇ ನಿಶ್ಚಯಿಸಬೇಕೆಂಬದನ್ನು ಇಲ್ಲಿ ವಿವರಿಸುವೆವು.

ಈಗ ಶಕೆ ೧೮೪೪ನೆಯ ವರ್ಷ ಒಬ್ಬ ಮನುಷ್ಯನ ಕುಂಡಲಿಯನ್ನು ಸಿದ್ಧಪಡಿಸುವದಿದೆಯೆಂದು ತಿಳಿಯೋಣ. ಮೊದಲು ನಾವು ಅವನನ್ನು ನೋಡಿದ ಕೂಡಲೆ ಅವನ ವಯಸ್ಸನ್ನು ಅವನ ಆಕೃತಿಯಮೇಲಿಂದ ಅನುಮಾನಿಸಿ ಒಂದು ಅಂಕವನ್ನು ಕಲ್ಪಿಸಬೇಕು. ಈಗ ನಾವು ಈ ಮನುಷ್ಯನ ವಯಸ್ಸು ಸುಮಾರು ೪೫ ಇದೆಯೆಂದು ಭಾವಿಸುವಾ. ಇನ್ನು ಈ ಅನುಮಾನದಿಂದ ಜನ್ಮಶಕೆಯನ್ನು ನಿಶ್ಚಯಿಸಲಿಕ್ಕೆ ಗುರು ಮತ್ತು ಶನಿ ಎಂಬ ಗ್ರಹಗಳು ಯಾವ ರಾಶಿಯಲ್ಲಿರುವವೆಂಬದನ್ನು ತಿಳಿದು ಕೊಂಡರೆ ಆ ಶಕೆಯು ತನಗೆ ತಾನೆ ಗೊತ್ತಾಗುವದು.

ಮೊದಲು ಶನಿಯ ವಿಚಾರ ಮಾಡೋಣ. ಈಗ (ಶಕೆ ೧೮... ರಲ್ಲಿ) ಶನಿಯು ವೃಶ್ಚಿಕ ರಾಶಿಯಲ್ಲಿ ಒಂದು ೮ ದಿವಸಗಳಿ ರುತ್ತವೆ. ಶನಿಯು ರಾಶಿಯಿಂದ ರಾಶಿಗೆ ೨½ ವರ್ಷಕ್ಕೆ ಒಂದು ಸಲ ಹೋಗುತ್ತಾನೆ, ಅಂದಮೇಲೆ ೩೦ ವರ್ಷಗಳ ಹಿಂದೆ ಅವನು ತುಲಾರಾಶಿಯ ಅಂತ್ಯದಲ್ಲಿ ಇದ್ದಿರಬೇಕು. ಮತ್ತು ಅದಕ್ಕೂ ಹಿಂದೆ ೧೫ ವರ್ಷಕ್ಕೆ ಅಂದರೆ ಒಟ್ಟು ೪೫ ವರ್ಷ ಹಿಂದೆ— ಶನಿಯು ಮೇಷರಾಶಿಯಲ್ಲಿರಲಿಕ್ಕೆ ಬೇಕು. ಇನ್ನು ಮೇಲೆ ಶನಿಯ ಲಕ್ಷಣಗಳಮೇಲಿಂದ ಶನಿಯು, ಅದಷ್ಟು ಹಿಂ ಗಲಿ ಅಥವಾ ಮುಂದಾಗಲಿ, ಒಂದು ( ಇಲ್ಲವೆ ೨) ರಾಶಿ ಸಿಗುವನು.

ಇದಾದನಂತರ ಗುರುವಿನ ರಾಶಿಯನ್ನು ನೋಡಬೇಕು ರಾಶಿಯಿಂದ ರಾಶಿಗೆ ಗುರುವು ವರುಷಕ್ಕೊಮ್ಮೆ ಹೋಗುತ್ತಾನೆ ಹೀಗೆ ೧೨ ವರುಷಗಳಲ್ಲಿ ೧೨ ರಾಶಿಗಳ ಪಯಣವು ಮು ಯುತ್ತದೆ. ಇನ್ನು ೪೮ ವರ್ಷಗಳ ಹಿಂದೆ ಗುರುವು ಸಿಂ ರಾಶಿಯಲ್ಲಿ ಇದ್ದಿರಬೇಕು. ಅದರಂತೆ ೪೫ ವರ್ಷಗಳ ಹಿಂ ಮಾನಕ್ಕೆ ಗುರುವು ಮುಂದೆ ೨ ರಾಶಿಗಳಲ್ಲಿ—ಅಂದರೆ ಕುಂ ಮೀನಗಳಲ್ಲಿ ಬರುವನು. ಈ ರಾಶಿಯ ಲಕ್ಷಣಗಳನ್ನು ನೋಡಿ ಗುರುವು ಯಾವ ರಾಶಿಯಲ್ಲಿರುವನೆಂಬದನ್ನು ನಿರ್ಣಯಿಸಬೇಕು ಆ ಮೇಲೆ ಗುರುವು ಕುಂಭರಾಶಿಯಲ್ಲಿ ಮತ್ತು ಶನಿಯು

ರಾಶಿಯಲ್ಲಿರುವರೆಂಬದು ಸ್ಪಷ್ಟವಾದರೆ ಆ ಮನುಷ್ಯನ ಜನ್ಮ ಶಕೆಯು ೧೮೦೭ ಇರಬೇಕೆಂದು ವ್ಯಕ್ತವಾಗುತ್ತದೆ.

ರಾಹು ಕೇತು ಗ್ರಹಗಳ ಲಕ್ಷಣಗಳು ಉಪಲಬ್ಧವಿಲ್ಲವೇನೋ ನಿಜ; ಆದರೂ ವಿಚಾರಾಂತ್ಯದಲ್ಲಿ ನಾವು ಅವುಗಳನ್ನು ಸುಲಭವಾಗಿ ಕಂಡು ಹಿಡಿಯಬಹುದು. ಈಗ ಅಂದರೆ ಮೇಲಿನ ಜನ್ಮಶಕೆಯನ್ನು ನಿರ್ಣಯಿಸುವದಕ್ಕಾಗಿ ತೆಗೆದುಕೊಂಡ ಶಕೆ ೧೮೪೮ರಲ್ಲಿ ರಾಹುವು ಕರ್ಕರಾಶಿಯಲ್ಲಿರುತ್ತಾನೆ. ಪ್ರತಿ ೧೮ ವರ್ಷಗಳಿಗೆ ರಾಹುವು ೧೨ ವರುಷಗಳೊಳಗಿಂದ ದಾಟುತ್ತಾನೆ. ಈ ರೀತಿ ನೋಡಲಾಗಿ ೫೪ ವರ್ಷಗಳ ಹಿಂದೆ ರಾಹುವು ಕರ್ಕರಾಶಿಯ ಆರಂಭದಲ್ಲಿ ಇದ್ದಿರಬೇಕು. ರಾಹು ಮತ್ತು ಕೇತುವಿನ ಗತಿಯು ಯಾವಾಗಲೂ ವಕ್ರವಾಗಿರುತ್ತದೆ. ಅವರು ನಿರಂತರವಾಗಿ ಇದ್ದ ರಾಶಿಯೊಳಗಿಂದ ಹಿಂದಿನ ರಾಶಿಯೊಳಗೆ ಹೋಗುತ್ತಾರೆ. ಆ ಪ್ರಕಾರ ಶಕೆ ೧೮೦೧ರಲ್ಲಿ ರಾಹುವು ಮಕರ ರಾಶಿಯಲ್ಲಿ ಬರುವನು. ಕೇತುವಾದರೂ ಯಾವಾಗಲೂ ಎದುರಿಗೆ ೬ ರಾಶಿಗಳ ಅಂತರದಿಂದ ಬರುವನು. ಇದರಂತೆ ಅದೇ ಶಕೆಯಲ್ಲಿ ಅವನು ಕರ್ಕಕ್ಕೆ ಬರುವನು.

ಹೀಗೆ ಜನ್ಮಶಕೆಯ ನಿರ್ಣಯವಾದನಂತರ ಜನ್ಮಮಾಸ ವಾವುದೆಂಬ ಪ್ರಶ್ನೆಯು ಎದುರಿಗೆ ನಿಲ್ಲುತ್ತದೆ. ಈ ವಿಚಾರದಲ್ಲಿ ರವಿಯು ಯಾವ ರಾಶಿಯಲ್ಲಿರುವನೆಂಬ ಮಾತಿನ ಜ್ಞಾನವು ಬೇಕು. ರವಿಯು ಯಾವ ರಾಶಿಯಲ್ಲಿರುವನೋ ಅದೇ ತಿಂಗಳಲ್ಲಿ ಜನ್ಮವಿವೆಯೆಂದು ತಿಳಿಯಬೇಕು. ಚೈತ್ರದ ಅಮಾವಾಸ್ಯೆಕ್ಕೆ ರವಿಯು ಮೇಷರಾಶಿಯಲ್ಲಿರುತ್ತಾನೆ. ವೈಶಾಖದ ಅಮಾವಾಸ್ಯೆಕ್ಕೆ ಅವನು ವೃಷಭರಾಶಿಯಲ್ಲಿ. ಹೀಗೆ ಕ್ರಮವಾಗಿ ಎಣಿಸುತ್ತ ಹೋಗಬೇಕು.

ಜನ್ಮವು ದಕ್ಷಿಣಾಯನದಲ್ಲಿ ಹಗಲಿನ ವೇಳೆಯಲ್ಲಾಗಿದ್ದರೆ ಉದಿತ ಗೋಲಾರ್ಧ ದಕ್ಷಿಣಾಯನ ರಾಶಿಗಳು ಎಷ್ಟಿರುತ್ತವೆಂಬದನ್ನು ನೋಡಬೇಕು. ಅದರಂತೆ ದಕ್ಷಿಣಾಯನದಲ್ಲಿ ರಾತ್ರಿಯ ವೇಳೆಯಲ್ಲಿದ್ದರೆ ಆ ಅಯನದಲ್ಲಿ ಅಸ್ತಗೋಲಾರ್ಧದೊಳಗೆ ಎಷ್ಟು ರಾಶಿಗಳಿವೆಯೆಂಬದನ್ನು ವಿಚಾರಿಸಬೇಕು. ಒಂದು ಉದಾಹರಣೆಯಿಂದ ಇದು ಹೆಚ್ಚು ಸ್ಪಷ್ಟವಾಗಬಹುದು; ಒಂದು ಕುಂಡಲಿಯಲ್ಲಿ ಜನ್ಮವು ವೃಶ್ಚಿಕಲಗ್ನದಲ್ಲಿದೆ ಮತ್ತು ದಕ್ಷಿಣಾಯನದಲ್ಲಿ ರಾತ್ರಿಯ ವೇಳೆಯಲ್ಲಿದೆ ಎಂದು ತಿಳಿಯೋಣ. ಇದರ ಮೇಲಿಂದ ನಾವು ಸೂರ್ಯನು ಯಾವ ರಾಶಿಯಲ್ಲಿರುವನೆಂಬದನ್ನು ತಿಳಿಯಲು ಪ್ರಯತ್ನಿಸಬೇಕು. ಈಗ (ಅಂದರೆ ಶಕೆ ೧೮೪೮ರಲ್ಲಿ) ಅಸ್ತಗೋಲಾರ್ಧದ ರಾಶಿಗಳು ದಕ್ಷಿಣಾಯನದಲ್ಲಿ ಎರಡೇ ಬರುತ್ತವೆ. ವೃಶ್ಚಿಕ ಮತ್ತು ಧನು ಇವೆರಡರಲ್ಲಿ ಯಾವ ರಾಶಿಯಲ್ಲಿ ಸೂರ್ಯನಿರುವನೆಂಬವನ್ನು ನಾವು ಆಯಾ ಲಕ್ಷಣಗಳ ಮೇಲಿಂದ ನಿರ್ಣಯಿಸಬೇಕು. ಉತ್ತರಾಯಣದಲ್ಲಿ ಜನ್ಮವಿದ್ದರೆ, ಹಗಲಿದ್ದರೆ ಉದಿತಗೋಲಾರ್ಧದಲ್ಲಿಯ ರಾಶಿಗಳನ್ನೂ ರಾತ್ರಿಯಿದ್ದರೆ ಅಸ್ತಗೋಲಾರ್ಧದೊಳಗಿನ ರಾಶಿಗಳನ್ನೂ ಎಣಿಸಿ ಇದೇ ಪ್ರಕಾರ ರವಿಯ ಸ್ಥಾನವನ್ನು ನಿರ್ಣಯಿಸಬೇಕು. ಇದರ ಜ್ಞಾನದಿಂದ ಜನ್ಮಮಾಸವು ನಿಶ್ಚಿತವಾಗಿ ಗೊತ್ತಾಗುತ್ತದೆ.

ಇನ್ನು ತಿಥಿನಿರ್ಣಯದ ವಿಷಯದಲ್ಲಿ ಚಂದ್ರನ ಸ್ಥಾನದ ಜ್ಞಾನವು ಅತ್ಯವಶ್ಯ. ಮೊದಲು ಬಲಗೈಯ್ಯ ಹೆಬ್ಬೆಟ್ಟಿನ ಚಿನ್ಹದ ಮೇಲಿಂದ ಯಾವ ಪಕ್ಷದಲ್ಲಿ ಜನ್ಮವೆಂಬದನ್ನು ಗೊತ್ತುಪಡಿಸಬೇಕು. ಸೂರ್ಯನು ಇದ್ದ ರಾಶಿಯಿಂದ ೭ನೇ ರಾಶಿಯಲ್ಲಿ ಚಂದ್ರನಿದ್ದರೆ ಜನ್ಮವು ಶುಕ್ಲಪಕ್ಷದಲ್ಲಿಯಾಗಿರುತ್ತದೆ. ಮತ್ತು ಜನ್ಮವು ಕೃಷ್ಣಪಕ್ಷದಲ್ಲಿದ್ದರೆ ವಾಡಿಕೆಯಾಗಿ ಚಂದ್ರನು ಆ ಏಳನೇ ರಾಶಿಯಿಂದ ಮುಂದಿನ ರಾಶಿಗಳಲ್ಲಿರುತ್ತಾನೆ.

ಇದನ್ನೆಲ್ಲ ನೋಡಿ ಎಡಗಣ್ಣಿನ ಲಕ್ಷಣಗಳ ಮೇಲಿಂದ ಚಂದ್ರನ ಸ್ಥಾನವಾದ ರಾಶಿಯನ್ನು ನಿರ್ಣಯಪಡಿಸಬೇಕು. ಇಷ್ಟು ಗೊತ್ತಾದ ಮೇಲೆ ರವಿಯು ಮೇಷರಾಶಿಯಲ್ಲಿದ್ದು ಧನು ರಾಶಿಯಲ್ಲಿ ಚಂದ್ರನಿದ್ದರೆ ಜನ್ಮವು ಕೃಷ್ಣಪಕ್ಷದಲ್ಲಿರುತ್ತದೆಂಬದು ಸ್ಪಷ್ಟವಾಗುವದು. (ಏಕೆಂದರೆ ಚಂದ್ರನು ಸೂರ್ಯನಿಂದ ಏಳನೆ ರಾಶಿಯಲ್ಲಿರದೆ ಅದರ ಮುಂದಿನ ರಾಶಿಗಳಲ್ಲೊಂದರಲ್ಲಿ ಇರುವನು.) ಇದರ ಮೇಲಿಂದ ತಿಥಿಯನ್ನೂ ಕೂಡ ನಾವು ತಿಳಿಯಬಹುದು. ಅದು ಮೇಲಿನ ಉದಾಹರಣೆಗೆ ಸಂಬಂಧಿಸಿದಂತೆ ಪಂಚಮಿ ಇಲ್ಲವೆ ಷಷ್ಠಿಯಿರಬೇಕು. ಏಕಂದರೆ ಆ ಉದಾಹರಣೆಯ ಪ್ರಕಾರಕ್ಕೆ (ಅಂದರೆ, ಸೂರ್ಯನು ಮೇಷ ರಾಶಿಯಲ್ಲಿದ್ದಾಗ) ವದ್ಯ ಪ್ರತಿಪದೆಗೆ ಚಂದ್ರನು ತುಲಾರಾಶಿಯಲ್ಲಿರುತ್ತಾನೆ. ಚಂದ್ರನು ೨¼ ದಿವಸಕ್ಕೆ ಒಂದು ರಾಶಿಯನ್ನು ದಾಟುತ್ತಿದ್ದು ಆ ತಿಥಿಯಿಂದ ೪½ ದಿವಸಗಳಿಗೆ ಪಂಚಮಿ ಅಥವಾ ಷಷ್ಠಿಯು ಬರುತ್ತದೆ.

## ಕೊನೆಯ ಮಾತು

ಇಲ್ಲಿಯವರೆಗೆ ಶಾಸ್ತ್ರದ ರೀತಿಯನ್ನೆಲ್ಲ ವಿವರಿಸಿನೆವು. ಆದರೆ ಇದನ್ನು ಓದಿದ ಮಾತ್ರಕ್ಕೆ ಈ ಶಾಸ್ತ್ರವು ಅವಗತವಾಗಲಾರದು. ಏಕಂದರೆ ಈ ತರಹದ ಶಾಸ್ತ್ರೀಯ ವಿಷಯಗಳು ಗುರುಮುಖಾಂತರವಾಗಿಯೂ ಸ್ವಾನುಭವದಿಂದಲೂ ಲಭಿಸುತ್ತವೆ.

# ವಿದೂಷಕ

( ಶ್ರೀ ಶ್ರೀ ರವೀಂದ್ರನಾಥ ಠಾಕೂರ ಅವರ 'ಲಿಪಿಕಾ' ಎಂಬ ಬಂಗಾಲಿ ಗ್ರಂಥದಿಂದ ಅಪ್ಪಣೆ ಪಡೆದು ಕನ್ನಡಿಸಿದುದು. )

೧.

ಕಾಂಚಿಯ ಅರಸು ಕರ್ನಾಟಕವನ್ನು ಗೆಲ್ಲಲೆಂದು ಹೋದ. ಆತನಿಗೆ ಗೆಲುವು. ಚಂದನ, ಹಸ್ತಿದಂತ, ಹೊನ್ನು ವಜ್ರಮಾಣಿಕ್ಯಗಳೆಲ್ಲ ಆನೆಭಾರವಾಗಿ ಸಾಗಿದವು.

ತನ್ನೂರಿಗೆ ತಿರುಗುವಾಗ ದಾರಿಯಲ್ಲಿ ಮಾರೆಮ್ಮನ ಮಂದಿರ ವನ್ನು ಬಲಿರಕ್ತದಿಂದ ಮುಳುಗಿಸುವಂತೆ ರಾಜನು ಪೂಜೆ ಮಾಡಿಸಿದ.

ಪೂಜೆಮಾಡಿ ಮರಳುತ್ತಿದ್ದಾನೆ ಅರಸು. ಮೈಯಲ್ಲಿ ರಕ್ತ ವಸ್ತ್ರ; ಕೊರಳಲ್ಲಿ ದಾಸಾಳದ ಮಾಲೆ; ಹಣೆಯಲ್ಲಿ ರಕ್ತಚಂದ ನದ ತಿಲಕ. ಜೊತೆಯಲ್ಲಿ ಮಂತ್ರಿವಿದೂಷಕರಿಬ್ಬರೇ.

ದಾರಿಯ ಒಕ್ಕಡೆಯಲ್ಲಿ ಒಂದು ಮಾವಿನತೋಟದಲ್ಲಿ ಹಲವು ಹುಡುಗರು ಆಟವಾಡುವದನ್ನು ಅರಸು ಕಂಡ.

"ಆ ಚಿಕ್ಕಮಕ್ಕಳು ಆಡುವದೇನೋ ನೋಡಿಬರುವೆ" ಎಂದನು ಅರಸು ತನ್ನ ಸಂಗಾತಿಗಳಿಗೆ.

೨.

ಹುಡುಗರು ಎರಡು ಸಾಲಾಗಿ ಗೊಂಬೆಗಳನ್ನು ಅಣಿಮಾಡಿ ಕೊಂಡು ಯುದ್ಧದಾಟವಾಡುತ್ತಿದ್ದರು.

ರಾಜಕೇಳಿದ "ಯಾರೊಡನೆ ಯಾರ ಯುದ್ಧ ?"

ಮಗುಗಳೆಂದವು "ಕರ್ನಾಟದವರೊಡನೆ ಕಾಂಚಿಯುವರದು"

ಅರಸು ಎಂದ "ಯಾರಿಗೆ ಗೆಲುವು ? ಯಾರಿಗೆ ಸೋಲು ?

ಎದೆಸೆಟೆಸಿಸೆಟೆಸಿ ಮಗುಗಳೆಂದವು "ಕರ್ನಾಟರಿಗೆ ಗೆಲುವು; ಕಾಂಚಿಯುವರಿಗೆ ಸೋಲು."

ಮಂತ್ರಿಯ ಮುಖವು ಗಂಭೀರವಾಯಿತು; ಅರಸನ ಕೆಂಗಣ್ಣು ಕಳಕಳಿಸಿದವು. ವಿದೂಷಕನು ಬಿದ್ದುಬಿದ್ದು ನಕ್ಕ.

೩.

ಅರಸು ತನ್ನ ಪಡೆಯೊಡನೆ ಮರಳುವಾಗಲೂ ಮಕ್ಕಳಾಡು ತ್ತಲೇ ಇದ್ದವು.

ಅರಸನಾಜ್ಞೆಯಾಯಿತು ಒಂದೊಂದು ಮಗುವನ್ನು ಒಂದೊಂದು ಮರಕ್ಕೆ ಕಟ್ಟಿ ಬೆತ್ತದೇಟು ಕೊಡುವದಕ್ಕೆ.

ಹಳ್ಳಿಯಿಂದ ಅವರ ತಾಯ್ತಂದೆಗಳು ಓಡಿ ಬಂದು ಕಾಲ್ಗೆ ಬಿದ್ದು ಬೇಡಿಕೊಂಡರು. "ತಿಳಿಗೇಡಿಕೂಸುಗಳು; ಆಟವಾಡು ತ್ತಿದ್ದವು. ಅರಸೇ ! ದಯವಿಟ್ಟು ತಪ್ಪು ಹೊಟ್ಟೆಯಲ್ಲಿ ಹಾಕಿ ಕೊಳ್ಳು."

ಅರಸು ಪಡೆಯಿಲನನ್ನು ಕರೆಯಿಸಿ "ಈ ಊರ ಜನವು ಎಂದೆಂದೂ ಕಾಂಚಿಯರಸನ ಕೈಗುಣವನ್ನು ಮರೆಯದಂತೆ ಶಿಕ್ಷೆ ಕೊಡಬೇಕು" ಎಂದು ಅಪ್ಪಣೆಯಿತ್ತ.

ಹೀಗೆಂದು ಬೀಡಾರಕ್ಕೆ ನಡೆದನರಸು.

೪

ಮುಚ್ಚಂಜೆಗೆ ಪಡೆಯಿಲನು ಅರಸನೆದುರು ಬಂದು ಸಾಷ್ಟಾಂಗ ಪೊಡಮಟ್ಟು ಅರಿಕೆ ಮಾಡಿಕೊಂಡ. "ದೇವ! ನಾಯಿ ನರಿಗಳ ನ್ನುಳಿದು ಈ ಹಳ್ಳಿಯಲ್ಲಿ ಯಾರ ಬಾಯಲ್ಲೂ ಮಾತೇ ಹೊರ ಬಾರದು."

"ಮಹಾರಾಜನ ಮಾನವುಳಿಯಿತು" ಎಂದ ಮಂತ್ರಿ.

"ವಿಶ್ವೇಶ್ವರಿಯೇ ಮಹಾರಾಜನ ಕೈವಾರಿ" ಪುರೋಹಿತ ನೆಂದನು.

ವಿದೂಷಕನೆಂದ "ಅರಸೇ ! ನನಗಿನ್ನು ಬೀಳ್ಕೊಡುಗೆ ವಾಗಲಿ"

ಅರಸು "ಅದೇನು ?"

ವಿದೂಷಕನು ಮರುಳಿ ಮಾತನಾಡಿದ "ನಾನು ಕೊಲ್ಲ ಲಾರೆ, ಕಡಿಯಲಾರೆ; ದೇವರ ದಯದಿಂದ, ನಗುವದೊಂದೇ ನನಗೆ ಗೊತ್ತು. ಇನ್ನು ತಮ್ಮ ಸನ್ನಿಧಾನದಲ್ಲುಳಿದರೆ ನಾನು ನಗುವನ್ನೇ ಮರೆತು ಬಿಟ್ಟೇನು."

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು

ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು— ಶ್ರೀ. ಕೃ. ಶ್ರೀ. ಬೆಟಗೇರಿ, ಬೆಂಗಳೂರು

## ೧೫ನೆಯ ಪರಿಚ್ಛೇದ

ಇಂದು ಚತುರ್ದಶೀ ತಿಥಿಯು. ಮೊದಲೇ ಕೃಷ್ಣ ಪಕ್ಷ; ಅದರಲ್ಲಿಯೂ ನೀರುಮೋಡವು ಮುಸುಕಿ ತಾರೆಗಳನ್ನೂ ಮರೆಮಾಡಿಬಿಟ್ಟಿದೆ. ಮೋಡದ ಬಿರುಕುಗಳಲ್ಲಿ ಅಲ್ಲೊಂದು ಇಲ್ಲೊಂದು ತಾರೆಗಳು ಮಿಣುಮಿಣುಗುಟ್ಟುತ್ತಲಿವೆ. ತಮ್ಮ ಹೃದಯದಲ್ಲಿ ಹಬ್ಬಿಕೊಂಡಿರುವ ಅಂಧಕಾರದ ಸಲುವಾಗಿಯೇ ಏನೋ ಗೋಮತೀ ತೀರದ ಅರಣ್ಯಗಳೆಲ್ಲವೂ ' ಸುಯ್ ಸುಯ್ ' ಎಂದು ನಿಟ್ಟುಸಿರು ಬಿಡುತ್ತಲಿದ್ದುವು.

ಇಂದಿನ ಇರುಳಲ್ಲಿ ಜನರು ಹೊರಕ್ಕೆ ಹೋಗಬಾರದೆಂದು ಕಟ್ಟಪ್ಪಣೆ. ಇರುಳಿನಲ್ಲಿ ಹೊರಕ್ಕೆ ಹೋಗುವವರಾದರೂ ಯಾರು ! ಅದರಲ್ಲಿಯೂ ಹೋಗಬಾರದೆಂದು ನಿಷೇಧ ಬೇರೆ; ಆದುದರಿಂದ ಹಾದಿಬೀದಿಗಳ ನಿರ್ಜನತೆಯು ಇಂದು ಇನ್ನೂ ಹೆಚ್ಚಾಗಿ ಗಭೀರತೆಯನ್ನು ಉಂಟುಮಾಡುತ್ತಿದ್ದಿತು. ನಗರನಿವಾಸಿಗಳೆಲ್ಲರೂ ತಮ್ಮ ತಮ್ಮ ಮನೆಯ ದೀಪಗಳಿಗೆ ಅಪ್ಪಣೆಕೊಟ್ಟು ಬಾಗಿಲುಗಳನ್ನು ಭದ್ರಪಡಿಸಿ ಬಿಟ್ಟಿರುವರು. ಬೀದಿಗಳಲ್ಲಿ ಕಾಪಿನ ಬಂಟನು ಒಬ್ಬನೂ ಇಲ್ಲ. ಕಳ್ಳರು ಸಹ ಇಂದು ಮನೆಬಿಟ್ಟು ಹೊರಗೆ ಬಂದಿರಲಿಲ್ಲ. ಶವದಹನಕ್ಕಾಗಿ ಸ್ಮಶಾನಕ್ಕೆ ಹೋಗಬೇಕೆಂದಿದ್ದವರು ಮೃತದೇಹವನ್ನು ಮನೆಯಲ್ಲಿಯೇ ಇಟ್ಟುಕೊಂಡು ಬೆಳಗಾಗುವುದನ್ನು ಕಾದುಕೊಂಡಿದ್ದರು. ಹೆಣ್ಣುಮಕ್ಕಳು ಹೆರಿಗೆಯ ಬೇನೆಯಿಂದ ಹಣ್ಣಾಗುತ್ತಲಿದ್ದರೆ ಸೂಲಗಿತ್ತಿಯರನ್ನು ಕರೆಯಲು ಕೂಡ ಹೊರಕ್ಕೆ ಹೋಗುವದಕ್ಕಿಲ್ಲ. ಬೀದಿಯ ಮರಗಳ ಬುಡದಲ್ಲಿ ಮಲಗಿಕೊಳ್ಳುತ್ತಿದ್ದ ತಿರುಕರೆಲ್ಲರೂ ಇಂದು ಸಿರಿವಂತರ ಕರುಹಟ್ಟಿಗಳನ್ನು ಆಶ್ರಯಿಸಿದ್ದರು.

ಆ ರಾತ್ರಿಯಲ್ಲಿ ನಾಯಿನರಿಗಳ ಹಿಂಡು ನಗರದ ಬೀದಿ ಬೀದಿಗಳಲ್ಲೆಲ್ಲ ಅಲೆದಾಡಲು ತೊಡಗಿತು. ಒಂದೆರಡು ಚಿರತೆ ಹುಲಿಗಳು ಜನರ ಮನೆಯ ಬಾಗಿಲುಗಳ ಬಳಿಗೆ ಬಂದು ಗುಡುಗುಹೊಡೆಯುತ್ತಿದ್ದುವು. ಒಬ್ಬನೇ ಒಬ್ಬ ಮನುಷ್ಯನು ಮಾತ್ರ ಇಂದು ಹೊರಕ್ಕೆ ಬಂದಿದ್ದಾನೆ. ಅವನನ್ನು ಬಿಟ್ಟರೆ ಇನ್ನಾರೂ ಕಣ್ಣಿಗೆ ಬೀಳರು. ಅವನು ಒಂದು ಕಿರುಗತ್ತಿಯನ್ನು ತೆಗೆದುಕೊಂಡು ಹೊಳೆಯ ತಡಿಯ ಹಾಸುಗಲ್ಲೊಂದರಮೇಲೆ ಮಸೆಯುತ್ತಿದ್ದನು. ಅನ್ಯಮನಸ್ಕನಾಗಿ ಏನನೋ ಭಾವಿಸುತಲಿದ್ದನು. ಆ ಕತ್ತಿಯು ಬಾಯಿ ಬೇಕಾದಷ್ಟು ಹದನವಾಗಿದ್ದಿತು. ಆದರೆ ಕತ್ತಿಯ ಜೊತೆಯಲ್ಲಿಯೇ ಮಸೆದು ಹದಗೊಳಿಸುತಿರುವ ತನ್ನ ಭಾವನೆಗಳು ಇನ್ನೂ ಸಾಕಷ್ಟು ಹದನಾಗಿಲ್ಲವೆಂದು ಅವನ ಮನದೆಣಿಕೆಯೇನೋ ! ಎಡೆಬಿಡದೆ ಕತ್ತಿಯನ್ನು ಮಸೆದೇ ಮಸೆಯುತ್ತಿದ್ದನು. ಕಲ್ಲಿನ ತಿಕ್ಕಾಟದಿಂದ ಆ ಕೂರಲಗು "ಖಸ್‌ಫಸ್" ಎಂದು ಶಬ್ದಮಾಡುತ್ತಿದ್ದಿತು. ಕೊಲೆಯ ಆಶೆಯಿಂದ ತಪ್ತವಾಗಿ ಬಿಟ್ಟಿದ್ದಿತು. ಆಗ ಅಂಧಕಾರವು ಆ ಕಗ್ಗತ್ತಲೆಯಲ್ಲಿ ಹೊಳೆಯಾಗಿ ಹರಿದು ಹೋಗುತ್ತಿದ್ದಿತು; ಜಗತ್ತಿನ ತಲೆಯ ಮೇಲಿಂದ ಕಾರಿರುಳ ಪ್ರಹರಗಳಾಗಿ ಸರಿದುಹೋಗುತ್ತಿದ್ದಿತು; ಆಗಸದೆಡೆಯಿಂದ ದಟ್ಟ ಮೋಡಗಳ ಹೊನಲುಗಳಾಗಿ ಕಾಣಿಸಿಕೊಂಡು ಹೊರಟು ಹೋಗುತಿದ್ದಿತು.

ಕೊನೆಗೆ ಮಳೆಯು ಮುಸಲಧಾರೆಯಿಂದ ಸುರಿಯ ತೊಡಗಲು ಆಗ ಜಯಸಿಂಹನಿಗೆ ಎಚ್ಚರವಾಯಿತು. ಕಾಯ್ದ ಕಿರುಗತ್ತಿಯನ್ನು ಒರೆಯಲ್ಲಿ ಸೇರಿಸಿ ಎದ್ದುನಿಂತನು. ಪೂಜೆಯ ಸಮಯವು ಬಳಿಸಾರಿದ್ದಿತು. ತನ್ನ ಶಪಥದ ಸಂಗತಿಯು ಮನಸ್ಸಿಗೆ ಹೊಳೆಯಿತು. ಇನ್ನೊಂದು ನಿಮಿಷ ತಡೆಮಾಡಿದರೂ ನಡೆಯುವಂತಿರಲಿಲ್ಲ.

ಮಂದಿರವಿಂದು ಸಾವಿರಾರು ದೀವಿಗೆಗಳಿಂದ ಬೆಳಗುತಿದ್ದಿತು. ತ್ರಯೋದಶ ದೇವತೆಗಳ ಸಾಲಿನಲ್ಲಿಯೆ ಹೊಸ ನೆತ್ತರಕ್ಕಾಗಿ

ನಾಲಿಗೆಯನ್ನು ನೀಡಿಕೊಂಡು ಕಾಲಿಯು ನಿಂತಿರುವಳು. ಮಂದಿರದ ಊಳಿಗದವರನ್ನೆಲ್ಲ ಬೀಳ್ಕೊಟ್ಟು ರಘುಪತಿಯು ಚತುರ್ದಶ ದೇವಿಯರ ಎದುರಿನಲ್ಲಿ ಒಬ್ಬನೇ ಕುಳಿತಿರುವನು. ಆತನ ಎದುರಿನಲ್ಲಿಯೆ ಒಂದು ದೊಡ್ಡ ದೊಣ್ಣೆ; ಥಳಥಳಿಸುತಿರುವ ನಿಡಿದಾದ ಬಿಚ್ಚುಗತ್ತಿಯೊಂದು ದೀವಿಗೆಗಳ ಬೆಳಗಿನಲ್ಲಿ ನೆಲೆಗೊಂಡ ಮಿಂಚಿನಂತೆ ಮಿರುಗುತ್ತಿದ್ದಿತು. ದೇವಿಯ ಅಪ್ಪಣೆಯನ್ನೇ ಹಾರಯಿಸಿಕೊಂಡಿದ್ದಂತೆ ಕಾಣುತ್ತಿದ್ದಿತು.

ಪೂಜೆಯು ಅಂದಿನ ನಟ್ಟಿರುಳಿನಲ್ಲಿಯೆ; ವೇಳೆಯು ತೀರ ಸಮೀಪಿಸಿದೆ; ರಘುಪತಿಯು ತೊಳಲುವ ಮನದವನಾಗಿ ಜಯಸಿಂಹನ ದಾರಿಯನ್ನು ಹಾರಯಿಸಿಕೊಂಡು ಕುಳಿತಿದ್ದನು. ಒಮ್ಮೆಲೆ ಮಳೆಯ ಗಾಳಿಯು ಬಲುಹಿನಿಂದ ಬೀಸಿ ಬಿರುಮಳೆಗೆ ಮೊದಲಾಯಿತು. ಎಡೆಬಿಡದೆ ಮಳೆಯು ಬೀಳಲು ತೊಡಗಿತು. ಗಾಳಿಯಲ್ಲಿ ಮಂದಿರದ ಸಾವಿರಾರು ದೀಪಗಳು ಕಂಪಿಸ ತೊಡಗಿದವು, ಬಿಚ್ಚುಗತ್ತಿಯಮೇಲೆ ಕಾರ್ಮಿಂಚು ಆಟವಾಡಲು ತೊಡಗಿತು. ಚತುರ್ದಶದೇವಿಯರ ಅಂತೆಯೇ ರಘುಪತಿಯ ಪಡಿನೆಳಲುಗಳು ಚೇತನವನ್ನು ಪಡೆದಂತೆ, ದೀವಿಗೆಗಳ ಕುಣಿತದ ತಾಳದೊಂದಿಗೆ ತಾವೂ ಮಂದಿರದ ಗೋಡೆಯಮೇಲೆ ಕುಣಿಯಲು ಮೊದಲುಮಾಡಿದವು. ಮನುಷ್ಯನ ತಲೆಬುರುಡೆಯೊಂದು ಬಿರುಗಾಳಿಯಿಂದ ಮಂದಿರದಲ್ಲೆಲ್ಲ ಉರುಳಾಡತೊಡಗಿತು. ಕಣ್ಣು ಕಪ್ಪಟಗಳೆರಡು ಮಂದಿರದೊಳಕ್ಕೆ ಬಂದು ಹಾರಾಡ ತೊಡಗಿದುವು, ದೀಪದ ಬೆಳಕಿನಲ್ಲಿ ಅವುಗಳ ಪಡಿನೆಳಲೂ ಹಾರ ತೊಡಗಿತು.

ಅರೆಯಿರುಳಾಯಿತು. ಮೊದಮೊದಲು ಬಳಿಯಲ್ಲಿಯೇ--ಆ ಮೇಲೆ ದೂರದೂರದಲ್ಲಿ ನರಿಗಳು ಕೂಗಲಾರಂಭಿಸಿದುವು. ಅವುಗಳ ಜೊತೆಯಲ್ಲಿ ಸೇರಿಕೊಂಡು ಮಳೆಯ ಗಾಳಿಯೂ "ಹೂ ಹೂ" ಎಂದು ಅರಚಲು ತೊಡಗಿತು. ಪೂಜೆಯ ಸಮಯವಾಯಿತು. ರಘುಪತಿಯು ಅಮಂಗಲದ ಆಶಂಕೆಯಿಂದ ತುಂಬಾ ಕಳವಳಗೊಂಡು ಹೋಗಿದ್ದನು.

ಇಂತಹ ವೇಳೆಯ.ಲ್ಲಿ ಉಸಿರೊಂದಿದ ಮುಂಗಾರ ಮಿಂಚಿನಂತೆ ಜಯಸಿಂಹನು ಕಗ್ಗತ್ತಲೆಯೊಳಗಿಂದ ಬೆಳಗುತಿರುವ ಮಂದಿರದಲ್ಲಿ ಒಮ್ಮೆಲೆ ನುಗ್ಗಿಬಂದನು, ದೊಡ್ಡದಾದ ಹೊದಿಕೆಯಿಂದ ಮೈಯೆಲ್ಲವೂ ಮುಚ್ಚಿಹೋಗಿದೆ, ಮಳೆಯ ನೀರು ಹೊನಲಾಗಿ ಮೈಮೇಲಿಂದ ಇಳಿಯುತ್ತಲಿದೆ. ಉಸಿರು ಬೇಗ ಬೇಗನೆ ಆಡುತ್ತಲಿದೆ. ತಾರೆಗಳಂತಿರುವ ಕಣ್ಣುಗಳೆರಡರಲ್ಲಿ ಕಿಡಿಗಳು ಉದುರುವಂತಿದೆ,

ರಘುಪತಿಯು ಅವನನ್ನು ಹಿಡಿದು ಕಿವಿಗೆ ಹತ್ತಿರವಾಗಿ ಮುಖವನ್ನು ತಂದು ಕೇಳಿದನು "ರಾಜರಕ್ತವನ್ನು ತಂದಿರುವೆಯಾ?"

ಜಯಸಿಂಹನು ರಘುಪತಿಯು ಕೈಯನ್ನು ಸರಿಸಿಬಿಟ್ಟು ಗಟ್ಟಿಯಾಗಿ ಹೇಳಿದನು. "ತಂದಿರುವೆನು! ರಾಜರಕ್ತವನ್ನು ತಂದಿರುವೆನು! ತಾವು ಕೊಂಚ ಬದಿಗೆ ಸರಿದು ನಿಂತುಕೊಳ್ಳಿ! ನಾನದನ್ನು ದೇವಿಯ ಅಡಿಗಳಿಗೆ ನಿವೇದಿಸುವೆನು" ಈ ಮಾತುಗಳು ಮಂದಿರದ ಮೂಲೆಮೂಲೆಗಳಲ್ಲಿಯೂ ತೇಲಾಡತೊಡಗಿದುವು, ಮಂದಿರವು ನಡುಗುತಿರುವಂತೆ ಭಾಸವಾಯಿತು.

ಜಯಸಿಂಹನು ದೇವಿಯ ಮೂರ್ತಿಯ ಎದುರಿನಲ್ಲಿ ನಿಂತು ಮಾತನಾಡಲು ತೊಡಗಿದನು. "ಅಮ್ಮಾ! ನಿಜವಾಗಿಯೂ ನೀನು ನಿನ್ನ ಮಗನ ನೆತ್ತರನ್ನೆ ಬಯಸುತಿರುವೆಯೇನಮ್ಮಾ! ರಾಜರಕ್ತವಿಲ್ಲದಿದ್ದರೆ ನಿನ್ನ ನೀರಡಿಕೆಯು ಹಿಂಗುವಂತಿಲ್ಲವೇನು! ನಾನು ಹುಟ್ಟಿದಂದಿನಿಂದಲೂ ನಿನ್ನನ್ನೆ ತಾಯಿಯೆಂದು ಹೇಳುತ್ತ ಬಂದಿರುವೆನು. ನಿನ್ನ ಊಳಿಗವನ್ನೇ ಮಾಡಿರುವೆನು, ಇನ್ನೊಬ್ಬರ ನೆರವನ್ನು ಬಯಸದೆ ಇರುವೆನು. ನನ್ನ ಜೀವನವು ನಿನ್ನನ್ನಲ್ಲದೆ ಇನ್ನಾವುದನ್ನೂ ಗುರಿಯಾಗಿಟ್ಟುಕೊಂಡಿಲ್ಲ. ನಾನೂ ರಾಜಪುತ್ರಜಾತಿಯವನು; ಕ್ಷತ್ರಿಯನು. ನನ್ನ ಮುತ್ತಜ್ಜನು ರಾಜನಾಗಿಯೆ ಇದ್ದನು. ನನ್ನ ಮಾತಾಮಹನ ವಂಶದವರು ಈಗಲೂ ರಾಜಪದವನ್ನು ಅನುಭವಿಸುತಿರುವರು. ನನ್ನ ನೆತ್ತರವಿದು ನಿನ್ನ ಮಕ್ಕಳೊಳಗೇ ಒಬ್ಬನದಲ್ಲವೇ? ನನ್ನ ನೆತ್ತರವಿದು ನಿನಗೆ ಬೇಕಾಗಿರುವ ರಾಜರಕ್ತವೇ ಅಲ್ಲವೇ?" ಮೈಯನ್ನು ಮುಚ್ಚಿದ್ದ ಹೊದಿಕೆಯು ಕೆಳಕ್ಕೆ ಬಿದ್ದಿತು. ಸೊಂಟದಲ್ಲಿ ಜೋಲುತಿದ್ದ ಕಿರುಗತ್ತಿಯನ್ನು ಜಯಸಿಂಹನು ಒರೆಯಿಂದ ಹೊರಗೆ ತೆಗೆದನು.—ಬಾನಿನಲ್ಲಿ ಕೋಲುಮಿಂಚು ಕುಣಿದು ಹೋಯಿತು.—ಅದೇ ಮಿಂಚಿನ ವೇಗದಿಂದ ಜಯಸಿಂಹನು ಕಿರುಗತ್ತಿಯನ್ನು ತನ್ನ ಹೃದಯದಲ್ಲಿ ಹಿಡಿಯವರೆಗೂ ಅದಗಿಸಿಕೊಂಡು ಬಿಟ್ಟನು. ಮೃತ್ಯುವಿನ ಮೊನೆನಾಲಗೆಯು ಅವನ ಎದೆಯಲ್ಲಿ ನಾಟಿ ನಿಂತುಕೊಂಡಿತು. ಮೂರ್ತಿಯ ಅಡಿಗಳ ಬಳಿಯಲ್ಲಿ ದೊಪ್ಪನೆ ಬಿದ್ದುಬಿಟ್ಟನು. ಆ ಕಲ್ಲಿನ ಬೊಂಬೆಯು ಅಲ್ಲಾಡಲೆ ಇಲ್ಲ.

ರಘುಪತಿಯು ಒಮ್ಮೆಲೇ ಕಿರುಚಿಕೊಂಡು ಬಿಟ್ಟನು. ಜಯಸಿಂಹನನ್ನು ಎಬ್ಬಿಸುವುದಕ್ಕೆ ಹವಣಿಸಿದನು; ಎತ್ತುವುದಾಗಲಿಲ್ಲ. ಆತನ ಮೃತದೇಹದಮೇಲೆ ಬಿದ್ದುಬಿಟ್ಟನು. ನೆತ್ತರು ಮಂದಿರದ ಹಾಲುಗಲ್ಲಿನ ನೆಲಗಟ್ಟಿನ ಮೇಲೆಲ್ಲ ಹರಿಯ ತೊಡ

ಗಿತು. ದೀಪಗಳೆಲ್ಲ ಒಂದರಹಿಂದೊಂದು ತಣ್ಣಗಾಗಿ ಹೋದುವು. ಕಗ್ಗತ್ತಲೆಯಲ್ಲಿ ಇರುಳೆಲ್ಲವೂ ಒಂದು ಜೀವಿಯು ನಿಟ್ಟುಸಿರಿನ ಸಪ್ಪುಳು ಮಾತ್ರ ಕೇಳಬರುತ್ತಿದ್ದಿತು. ರಾತ್ರಿಯ ಮೂರನೆಯ ಜಾವವಾದಾಗ ಮಳೆ-ಗಾಳಿ ನಿಂತು ಎಲ್ಲೆಲ್ಲಿಯೂ ನಿಃಶಬ್ದವಾಯಿತು. ಕೊನೆಯ ಜಾವದಲ್ಲಿ ಮೋಡದ ಮರೆಯೊಳಗಿಂದ ಹೊರಕ್ಕೆ ಬಂದಿದ್ದ ಬೆಳ್ಳಿಯ ತಾರೆಯ ಕಿರಣಗಳು ಮಸಮಸಕಾಗಿ ಮಂದಿರದಲ್ಲಿಯೂ ಮೂಡಿತು. ಆ ಬೆಳಕಿನಲ್ಲಿ ನಸುನಸುವೆ ಕಾಣುತಿದ್ದ ಜಯಸಿಂಹನ ಕಳೆಗುಂದಿದ ಮೊಗವನ್ನು ಚತುರ್ದಶ ದೇವತೆಗಳು ಕದಲದೆ ನಿಂತುಕೊಂಡು ನೋಡಲು ತೊಡಗಿದರು. ಬೆಳಗಾಗಿ ಹಕ್ಕಿಗಳು ವನದಲ್ಲಿ ಕೂಗತೊಡಗಲು, ಆಗ ರಘುಪತಿಯು ಜಯಸಿಂಹನ ಮೃತದೇಹವನ್ನು ಬಿಟ್ಟು ಎದ್ದು ನಡೆದನು.

---

## ೧೬ ನೆಯ ಪರಿಚ್ಛೇದ

ಬೆಳಗಿನ ಮೊದಲನೆಯ ಜಾವವು ಕೊಂಚ ಕಳೆದು ಹೋಗಿದ್ದಿತು. ದೊರೆಯ ಅಪ್ಪಣೆಯಂತೆ ಸ್ವತಃ ನಕ್ಷತ್ರರಾಯನೇ ಪ್ರಜಾಜನರ ಅಸಂತೋಷದ ಕಾರಣವನ್ನು ಕಂಡು ಹಿಡಿಯಲು ಹೊರಹೊರಟಿದ್ದನು. "ನಾನೀಗ ಮಂದಿರಕ್ಕೆ ಹೇಗೆ ಹೋಗಲಿ ?" ಎಂದು ಅವನು ಮನದಲ್ಲಿಯೇ ಯೋಚಿಸುತ್ತಲಿದ್ದನು. ರಘುಪತಿಯು ಕಣ್ಣಿಗೆ ಬಿದ್ದರಾಯಿತು ನಕ್ಷತ್ರರಾಯನ ಕೈಕಾಲುಗಳೇ ಹೋಗಿಬಿಡುವವು. ಧೈರ್ಯವೆಲ್ಲವೂ ಉಡುಗಿ ಹೋಗುವುದು; ಆದುದರಿಂದಲೇ ಈಗ ರಘುಪತಿಯನ್ನು ಕಾಣುವುದು ಅವನಿಗೆ ಬೇಡವಾಗಿದ್ದಿತು, ರಘುಪತಿಯ ಕಣ್ಣಿಗೆ ಬೀಳದಂತೆ ಗುಟ್ಟಾಗಿ ಜಯಸಿಂಹನ ಬೀಡಿಗೆ ಹೋಗಿ ಅವನಿಂದ ಏನೆಲ್ಲವನ್ನೂ ಕೇಳಿ ತಿಳಿದುಕೊಳ್ಳಬೇಕೆಂದು ನಕ್ಷತ್ರರಾಯನು ಗಟ್ಟಿಮಾಡಿಕೊಂಡನು.

ನಕ್ಷತ್ರರಾಯನು ಮೆಲ್ಲಮೆಲ್ಲನೆ ಹೆಜ್ಜೆ ಹಾಕುತ್ತ ಜಯಸಿಂಹನ ಗುಡಿಸಲನ್ನು ಹೊಕ್ಕನು. ಒಳಕ್ಕೆ ಹೋದೊಡನೆಯೆ "ಅಯ್ಯಪ್ಪಾ ಬದುಕಿಕೊಂಡೆ" ಎಂದವನ ಮನಸ್ಸಿಗೆ ಎನಿಸಿತು. ನಿಂತು ನೋಡಿದನು. ಜಯಸಿಂಹನ ಪುಸ್ತಕಗಳು ಬಟ್ಟೆಬರೆಗಳು ಉಡುಗೆತೊಡಿಗೆಗಳು ಎಲ್ಲೆಲ್ಲಿಯೂ ಹರಡಿಕೊಂಡು ಬಿದ್ದು ಬಿಟ್ಟಿವೆ. ಒಳಗೆ ಜಯಸಿಂಹನಿಲ್ಲವೇ ಇಲ್ಲ. ರಘುಪತಿಯು ಕುಳಿತಿರುವನು. ರಘುಪತಿಯ ಕಣ್ಣುಗಳಾಗ ಕಿಡಿಗಳನ್ನು ಕಾರುತ್ತಿದ್ದುವು. ನಿಡುಜಡೆಯು ಬಿಚ್ಚಿ ಅತ್ತಿತ್ತ ಚದರಿ ಬಿದ್ದು ಬಿಟ್ಟದ್ದಿತು. ನಕ್ಷತ್ರರಾಯನನ್ನು ನೋಡಿದೊಡನೆಯೆ ರಘುಪತಿಯು ಬಿಗಿದ ಹಿಡಿಯಿಂದ ಆತನ ಕೈಯನ್ನು ಹಿಡಿದುಕೊಂಡನು. ಒತ್ತಾಯದಿಂದ ಅವನನ್ನು ನೆಲದ ಮೇಲೆಯೆ ಕುಳ್ಳಿರಿಸಿದನು. ನಕ್ಷತ್ರರಾಯನ ಜೀವವು ನೆತ್ತಿಯಿಂದಲೆ ಹಾರಿತು. ರಘುಪತಿಯು ಕೆಂಗಣ್ಣ ನೋಟದ ಕಿಡಿಗಳಿಂದ ನಕ್ಷತ್ರರಾಯನ ಅಂಗಾಂಗಗಳನ್ನು ಸುಡುತ್ತ ಹುಚ್ಚು ಹಿಡಿದವರಂತೆ ಮಾತನಾಡಿದನು "ಎಲ್ಲಿದೆ ರಕ್ತ ?" ನಕ್ಷತ್ರರಾಯನ ಹೃತ್‌ಪಿಂಡದಲ್ಲಿ ನೆತ್ತರ ತೆರೆಗಳು ತಾಕಲಾಡಿದುವು. ಬಾಯಿಂದ ಮಾತು ಹೊರಡಲೊಲ್ಲವು. ರಘುಪತಿಯು ಮೇಲಿನ ದನಿಯಲ್ಲಿ ನುಡಿದನು "ನಿನ್ನ ಪ್ರತಿಜ್ಞೆಯೆಲ್ಲಿದೆ ?" "ರಾಜರಕ್ತವು ಎಲ್ಲಿದೆ ?"

ನಕ್ಷತ್ರರಾಯನ ಕೈಕಾಲುಗಳು ನಡುಗಿದುವು. ಬದಿಗೆ ಸೇದು ಕುಳಿತನು. ಉಟ್ಟಪಂಚೆಯ ಸೆರಗನ್ನು ಹಿಡಿದು ಸೆಳೆಯಲು ತೊಡಗಿದನು. ಮೈತುಂಬ ಬೆವರು ಕಾಣಿಸಿಕೊಂಡಿತು. ಬಾಡಿದ ಮೊಗ ಬರತ ಬಾಯಿಗಳಿಂದ ಮಾತನಾಡಿದನು "ಆಚಾರ್ಯ !"

ರಘುಪತಿಯೆಂದನು :—"ಇನ್ನು ಮೇಲೆ ಅಮ್ಮನು ತಾನಾಗಿಯೆ ಕತ್ತಿಯನ್ನೆತ್ತುವಳು. ಎಲ್ಲೆಲ್ಲಿ ನೋಡಿದರೂ ಹರಿಹಿಂಗದ ನೆತ್ತರ ಹರಿವುಗಳು ತೋರಲು ತೊಡಗುವವಿನ್ನು ; ಆಗ ನಕ್ಷತ್ರರಾಯನ ಭ್ರಾತೃಸ್ನೇಹವು ಹೊರಬೀಳುವುದು. ಇದೇ ಕಣ್ಣುಗಳಿಂದ ನಾನದನ್ನು ನೋಡುವೆನು."

"ಭ್ರಾತೃಸ್ನೇಹವೇ ? ಹಾಃ ಹಾಃ ಹಾಃ !— ಆಚಾರ್ಯ" ನಕ್ಷತ್ರರಾಯನಿಗೀಗ ನಗೆಯು ಹೊರಕ್ಕೆ ಹೊರಡಲೊಲ್ಲದು. ಗಂಟಲು ಒಣಗಿ ಹೋಗಿದ್ದಿತು.

ರಘುಪತಿಯು ಹೇಳಿದನು. "ನನಗೀಗ ಗೋವಿಂದಮಾಣಿಕ್ಯನ ರಕ್ತವು ಬೇಡವಾಗಿದೆ. ಪ್ರಪಂಚದಲ್ಲಿ ಗೋವಿಂದಮಾಣಿಕ್ಯನಿಗೆ ಜೀವದ ಜೀವ,— ಹೃದಯದ ಹೃದಯ— ಬಾಳುವೆಯ ಬೀಜವಾಗಿ ಯಾರಿರುವರೋ ಅವರ ರಕ್ತವು ಬೇಕಾಗಿದೆ. ಅವರ ರಕ್ತವನ್ನು ತೆಗೆದುಕೊಂಡು ಗೋವಿಂದಮಾಣಿಕ್ಯನ ವಕ್ಷಸ್ಥಲಕ್ಕೆ ತೊಡೆಯಬೇಕಾಗಿದೆ.— ಆತನ ವಕ್ಷಸ್ಥಲವು ರಕ್ತವರ್ಣವಾಗಿ ಹೋಗಬೇಕು !— ಆ ರಕ್ತದ ಗುರುತನ್ನು ಯಾವುದರಿಂದಲೂ ಅಳಿಸಲಿಕ್ಕೆ ಬರಬಾರದು ! ಇದವನ್ನು ನೋಡು— ನಿಟ್ಟಿಸಿ ನೋಡು !" ಎಂದು ನುಡಿದು ರಘುಪತಿಯು ಹೊತ್ತ ಉತ್ತರೀಯವನ್ನು ಸರಿಸಿದನು. ಆತನ ಮೈಯೆಲ್ಲಕ್ಕೂ ನೆತ್ತರು ಮೆತ್ತಿಕೊಂಡಿದೆ. ಎದೆಯ ಮೇಲೆ ಅಲ್ಲಲ್ಲಿ ದಟ್ಟನಾದ ನೆತ್ತರ ಕಲೆಗಳು ಬಿದ್ದಿವೆ.

ನಕ್ಷತ್ರರಾಯನ ಮೈ ಜುಮ್ಮೆಂದು ನವಿರು ನಿಮಿರಿನಿಂತುವು. ಕೈಕಾಲುಗಳು ಕಂಪಿಸತೊಡಗಿದುವು. ರಘುಪತಿಯು ತನ್ನ ವಜ್ರಮುಷ್ಟಿಯಿಂದ ನಕ್ಷತ್ರರಾಯನ ಕೈಯನ್ನು ಬಿಗಿಯಾಗಿ ಹಿಡಿದು ಕೇಳಿದನು—"ಅವರು ಯಾರು? ಗೋವಿಂದಮಾಣಿಕ್ಯನಿಗೆ ಪ್ರಾಣಕ್ಕಿಂತ ಪ್ರಿಯರಾಗಿರುವವರು ಯಾರಿರುವರು ?

ಯಾರು ಇಲ್ಲದಂತಾದರೆ ಗೋವಿಂದಮಾಣಿಕ್ಯನ ಕಣ್ಣಿಗೆ ಜಗತ್ತು ಸ್ಮಶಾನದಂತೆ ತೋರುವುದು! ಯಾರು ಹೊರಟು ಹೋದರೆ ಆತನ ಬದುಕಿನ ಆಶೆಯು ಅಳಿದು ಹೋಗುವುದು? ಬೆಳಗಿನಲ್ಲಿ ಹಾಸಿಗೆಯಿಂದೇಳುತ್ತಲೆ ಯಾರ ಮೊಗವು ಆತನ ಮನದಲ್ಲಿ ಮೂಡುವುದು? ಯಾರ ನೆನಹನ್ನು ನೆನೆಯುತ್ತ ಆತನು ಇರುಳಿನಲ್ಲಿ ನಿದ್ದೆಹೋಗುವನು? ಆತನ ಎದೆಯಗೂಡಿನಲ್ಲಿ ಅದಾವ ಹಕ್ಕಿಯು ರೆಕ್ಕೆಗಳನ್ನರಳಿಸಿಕೊಂಡು ಕುಳಿತಿದೆ? ಹೇಳು ಹೇಳು! ಅವರಾರು? ನೀನೇ ಏನು?" ಎಂದು ನುಡಿದು ಹಾರಿಹಿಡಿಯುವುದಕ್ಕೆ ಮೊದಲೆ ಹುಲಿಯು ಹುಲ್ಲೆಯ ಮರಿಯನ್ನು ನಿಡುನೋಟದಿಂದ ನೋಡುತ್ತಿರುವಂತೆ, ರಘುಪತಿಯು ನಕ್ಷತ್ರನನ್ನು ನೋಡಿದನು.

ನಕ್ಷತ್ರರಾಯನು ಕೂಡಲೆ ನುಡಿದುಬಿಟ್ಟನು. "ಅಲ್ಲ! ನಾನಲ್ಲ!" ರಘುಪತಿಯ ಮುಷ್ಟಿಯನ್ನು ಬಿಡಿಸಿಕೊಳ್ಳುವುದು ಮಾತ್ರ ಅವನಿಂದಾಗಲಿಲ್ಲ.

ರಘುಪತಿಯೆಂದನು "ಹೇಳು ಹಾಗಾದರೆ; ಅವರಾರು?"

ನಕ್ಷತ್ರರಾಯನು ತಟ್ಟನೇ ಹೇಳಿದನು. "ಧ್ರುವ!"

ರುಘುಪತಿ ಕೇಳಿದನು. "ಧ್ರುವನು ಯಾರು?"

ನಕ್ಷತ್ರರಾಯ– "ಯಾರೋ! ಅವನೊಬ್ಬ ಚಿಕ್ಕಮಗು"

ರಘುಪತಿಯೆಂದನು. "ಸರಿ! ಗೊತ್ತಾಯಿತು, ನಾನವನನ್ನು ಬಲ್ಲೆ. ದೊರೆಗೆ ಹೊಟ್ಟೆಯ ಮಕ್ಕಳಿಲ್ಲ; ಅವನನ್ನೇ ಮಗನಂತೆ ಕಾಪಾಡುತಿರುವನು. ತನ್ನ ಬಳಿವಳಿಯ ಜನರಲ್ಲಿ ದೊರೆಯ ಮಮತೆ ಎಳ್ಳಷ್ಟೂ ಇಲ್ಲ. ಆದರೆ ತಾನು ಸಾಕಿದ ಇನ್ನೊಬ್ಬರ ಕೂಸನ್ನು ಕಣ್ಣಬೊಂಬೆಯಂತೆ ನೋಡಿಕೊಳುತಿರುವನು. ತನ್ನ ಮನೆಯ ಜನರ ಸುಖದಕಿಂತಲೂ ಆ ಮಗುವಿನ ಸುಖದಲ್ಲಿಯೆ ರಾಜನು ಮನವನ್ನು ತೊಡಗಿಸಿರುವನು. ತನ್ನ ತಲೆಯ ಮುಕುಟಕ್ಕಿಂತಲೂ ಆತನ ತಲೆಯಲ್ಲಿರುವ ಮುಕುಟವನ್ನು ನೋಡಿದರೆ ದೊರೆಗೆ ಹಿಡಿಸಲಾರದಷ್ಟು ಹಿಗ್ಗು"

ನಕ್ಷತ್ರರಾಯನು ಬೆರಗಾಗಿ ಮಾತನಾಡಿದನು "ಸರಿಯಾದ ಮಾತಿದು"

ರಘುಪತಿಯೆಂದನು "ಸರಿಯಾದ ಮಾತು ಅಲ್ಲವೇ? ದೊರೆಯು ಆತನನ್ನು ಅದೆಷ್ಟು ಪ್ರೀತಿಸುವನೆಂಬುದು ನನಗೆ ಗೊತ್ತಿಲ್ಲದಿದೆಯೆ? ಗೊತ್ತುಮಾಡಿಕೊಳ್ಳುವುದು ನನಗೆ ಅಸಾಧ್ಯವೇ? ಈಗ ನನಗೆ ಅವನೇ ಬೇಕಾಗಿರುವನು"

ರಘುಪತಿಯು ಮತ್ತೆ ನುಡಿದನು "ಅವನನ್ನು ನೀನು ತರಲೇಬೇಕು. ಇಷ್ಟೇ ಅಲ್ಲ. ಇಂದೇ ತರಬೇಕು– ಇಂದು ರಾತ್ರಿಯಲ್ಲಿ ಅವನಿಲ್ಲಿಗೆ ಬರಲೇಬೇಕು."

ನಕ್ಷತ್ರರಾಯನು ಪ್ರತಿಧ್ವನಿಯಂತೆ ಮಾತನಾಡಿದನು "ಇಂದು ರಾತ್ರಿಯಲ್ಲಿ ಅವನಿಲ್ಲಿಗೆ ಬರಲೇಬೇಕು."

ರಘುಪತಿಯು ನಕ್ಷತ್ರರಾಯನ ಮೊಗದ ಕಡೆಗೆ ಹಾಗೆಯೆ ನಸುವೇಳೆ ನೋಡುತ್ತಿದ್ದನು. ಬಳಿಕ ಧ್ವನಿಯನ್ನು ಕೊಂಚ ಕೆಳಗಿಳಿಸಿ ಮಾತನಾಡಿದನು. "ಈ ಮಗುವೇ ನಿನಗೆ ಹಗೆಯು, ನಿನಗಿದು ಗೊತ್ತೇ? ನೀನು ಅರಸುಮನೆತನದಲ್ಲಿ ಹುಟ್ಟಿರುವೆ. ಎಲ್ಲಿಯವನೋ ಒಬ್ಬ ಜಾತಿಗೋತ್ರಗಳು ಗೊತ್ತಿಲ್ಲದ ಮಗುವೊಂದು ಬಂದು ನಿನ್ನ ತಲೆಯಿಂದ ಕಿರೀಟವನ್ನು ಕಿತ್ತುಕೊಳ್ಳುತ್ತಿದೆ; ಇದನ್ನು ನೀನು ಬಲ್ಲೆಯಾ? ನಿನಗಾಗಿ ಕಾದುಕೊಂಡು ಕುಳಿತ ಸಿಂಹಾಸನವು ಈಗ ಆ ಹುಡುಗನ ಸ್ಥಾನವೆಂದು ನಿರ್ದಿಷ್ಟವಾಗಿದೆಯಲ್ಲ; ನೀನು ಇದನ್ನು ಕಣ್ದೆರೆದು ನೋಡುತಿರುವುದಿಲ್ಲವೇ?"

ಈ ಮಾತುಗಳೇನೂ ನಕ್ಷತ್ರರಾಯನಿಗೆ ಹೊಸವಲ್ಲ. ಇದಕ್ಕೆ ಮೊದಲೇ ಹಲವು ಸಲ ಈ ವಿಚಾರಗಳು ಆತನ ತಲೆಯಲ್ಲಿ ಕೆಲೆದಾಡಿ ಹೋಗಿದ್ದುವು. ಹೆಮ್ಮೆಯ ನುಡಿಯಿಂದವನು ಹೇಳಿದನು "ಅದನ್ನು ತಾವು ಹೇಳಬೇಕಾಗಿದೆಯೇ! ನನಗೆ ತಿಳಿದಿಲ್ಲವೇ! ಇನ್ನು ನಾನೂ ನೋಡಿ ಸಹಿಸಿಕೊಂಡಿರಲಾರೆ"

ರಘುಪತಿಯೆಂದನು "ಆಯಿತು ಹಾಗಾದರೆ ಇನ್ನೇಸಿದೆ! ನಡೆ ಅವನನ್ನು ನನಗೆ ತಂದುಕೊಡು. ನಿನ್ನ ಸಿಂಹಾಸನದ ನಡುವಿನ ಎಡರನ್ನು ಕಡಿದುಹಾಕು. ಹೇಗಾದರೂ ಮಾಡಿ ಈ ಮುಳ್ಳನ್ನು ಮುರಿಯಬೇಕಲ್ಲವೇ? ಆಗಲಿ, ಹೇಳು ಯಾವಾಗ ತರುವೆ ಅವನನ್ನು?"

ನಕ್ಷತ್ರರಾಯನೆಂದನು "ಇಂದು ಸಂಜೆಯಲ್ಲಿ, ಕತ್ತಲೆಯಾಗುತ್ತಲೆ". ರಘುಪತಿಯು ಕೈಯೆತ್ತಿ ಹೇಳಿದನು "ನೋಡು, ಇಂದು ವೇಳೆ ನೀನು ತರದಿದ್ದರೆ ಬ್ರಾಹ್ಮಣನ ತಳತಳಿಕೆಯು ನಿನ್ನನ್ನು ತೊಂದರೆಗೀಡುಮಾಡದೆ ಬಿಡದು. ತರುವೆನೆಂದು ಪ್ರತಿಜ್ಞೆ ಮಾಡಿ ತಪ್ಪಿದರೆ, ಪ್ರತಿಜ್ಞೆಯನ್ನುಚ್ಚರಿಸಿದ ನಿನ್ನ ಮುಖವನ್ನು ಮೂರು ಇರುಳುಗಳು ಕಳೆಯುವುದರೊಳಗಾಗಿ ಹದ್ದು ಕಾಗೆಗಳು ಹರಿದು ಹರಿದು ತಿಂದುಬಿಡುವವು."

ಈ ಮಾತುಗಳನ್ನು ಕೇಳಿ ನಕ್ಷತ್ರರಾಯನು ಬೆಚ್ಚಿಬಿದ್ದನು. ಕೋಮಲವಾದ ಮುಖದಮೇಲೆ ಕೈಯಾಡಿಸಿಕೊಂಡನು. ಕೋಮಲವಾದ ಮುಖದಮೇಲೆ ಹದ್ದುಕಾಗೆಗಳ ಕಠಿಣವಾದ ಕೊಕ್ಕಿನೇಟು ಬೀಳುವುದೆಂಬ ಕಲ್ಪನೆಯೇ ಅವನಿಗೆ ಅತ್ಯಂತ ದುಸ್ಸಹವಾಯಿತು. ರಘುಪತಿಗೆ ನಮಸ್ಕರಿಸಿ ಅಪ್ಪಣೆಯನ್ನು ಪಡೆದುಕೊಂಡನು. ಬೇಗ ಬೇಗ ನಡೆದು ಹೋಗಿ ಜನರ ಗುಂಪಿನಲ್ಲಿ ಸೇರಿಕೊಂಡನು. ಆಗ ನಕ್ಷತ್ರರಾಯನಿಗೆ ಪುನರ್ಜನ್ಮವನ್ನು ಪಡೆದಂತೆ ಎನಿಸಿತು.



ವಿದ್ಯಾಭಿಮಾನಿಗಳೂ ಪರಮತಸಹಿಷ್ಣುಗಳೂ ಆದ
**ಹುಬ್ಬಳ್ಳಿಯ ಮೂರುಸಾವಿರಮಠದ ಈಗಿನ ಸ್ವಾಮಿಗಳು**

# ಕವಿ-ಹರಿಣ ಸಂವಾದ

ಬರಹಗಾರ :- ಆನಂದಕವಿ, ಕುರುಗುಂದ

ಓರ್ವ ಶಿವಯೋಗಿಯು ತನ್ನ ಸಾಕುಚಿಗರಿಯು ಮೈಮೇಲೆ ಪ್ರೀತಿಯಿಂದ ಕೈಯಾಡಿಸುತ್ತ ಒಂದು ನದಿಯ ತಡಿಸಲದ ಬಳಿಯಲ್ಲಿ ಆನಂದದಿಂದ ನಿಂತಿರಲು, ಆ ಹರಿಣವನ್ನು ಕಂಡು,

ವಾರ್ಧಿಕ॥

ಕವಿ :— ಚಿಗುರಿನಂದದಿ ಚಂದಕಾಣುವಂತಹ ಮೃಗವೆ ।
ನೆಗೆದಾಟ ಬಿಟ್ಟು ನಿಂತಿರುವ ಕಾರಣವೇನು ? ।
ಚಿಗರಿಗಂಗಳೆಯರಂ ನೋಡಿ ಬೆದರಿರುವೆಯೋ !
ಸಮ್ಮೋಹಗೊಂಡಿರುವೆಯೋ ! ॥
ಬಗೆಬಗೆಯ ಕಾಂತಾರ ತಿರುತಿರುಗಿ ನೊಂದೆಯೋ ! ।
ನಗಸುತೆಯ ಗರ್ಜನೆಯ ಕೇಳಿ ಭಯಗೊಂಡೆಯೋ ! ।
ಮಿಗಿಲಾದ ಶಿವಯೋಗಿಸನ್ನಿಧಿಗೆ ಶಿರಬಾಗಿ
ನಮಿಸಲ್ಕೆ ಬಂದಿರುವಿಯೋ ! ॥ ೧ ॥

ಭಾಮಿನಿ॥

ಹರಿಣ :— ಮಾಯೆಯೆಂಬುವ ಮೋಹಜಾಲದಿ ।
ಗಾಯ ಹೊಂದುತ ಬಳಲಿ ದಣಿದೆನು ।
ಹಾಯ ! ಹಾ ! ಹಾ ! ನನ್ನ ದುಃಖವನೆಂತು ಬಣ್ಣಿಸಲಿ ! ॥
ಕಾಯಸಿದ್ಧಿಯ ಪಡೆದ ಗುರುವಿಗೆ ।
ನ್ಯಾಯಪಥವನು ತೋರಿ ಬೇಗನೆ ।
ಕಾಯಬೇಕೆಂದೆನುತ ಮುದದಿಂ ಶರಣು ಬಂದಿಹೆನು ! ॥ ೨ ॥

# ಆಚಾರ್ಯಪ್ರವರ ಸಮಂತಭದ್ರರ ಕವಿತ್ವಶಕ್ತಿ

( ಶ್ರೀ. ಕೆ. ಭುಜಬಲಿಶಾಸ್ತ್ರಿಯವರ ಹಿಂದೀಲೇಖಾನುವಾದವು )

ಅನುವಾದಕರು-ಶ್ರೀ ಎನ್. ಎಸ್. ಜೈನೀ, ನೆಲ್ಲಿಕಾರು

ನಮಃ ಸಮಂತಭದ್ರಾಯ ಭವ್ಯಕೈರವಭಾನವೇ ।
ಭಾವಿತೀರ್ಥಕೃತೇ ತಸ್ಮೈ ಸಂಸಾರಾಂಬುಧಿಶೋಷಿಣೇ ॥

ಜೈನಸಮಾಜದಲ್ಲಿ ಆಚಾರ್ಯಪ್ರವರ ಸ್ವಾಮಿ ಸಮಂತಭದ್ರರ ಸ್ಥಾನವು ಬಹಳ ಉಚ್ಚವಾಗಿದೆ. ಜೈನರಲ್ಲಿ ಅವರ ಪವಿತ್ರ ಹೆಸರನ್ನು ಕೇಳದವರಿಲ್ಲ. ಇವರು ಜೈನಸಮಾಜದಲ್ಲಿ ಪ್ರತಿಭಾಶಾಲಿಯಾದೊಬ್ಬ ಆಚಾರ್ಯರೆಂದೂ ದಿಗ್ಗಜವಿದ್ವಾಂಸರೆಂದೂ ಪರಿಗಣಿಸಲ್ಪಟ್ಟಿರುವರು. ಇವರು ತನ್ನ ಉಜ್ವಲವಾದ ಪವಿತ್ರ ಚಾರಿತ್ರದಿಂದಲೇ ವಂದನೀಯರಾದ ಜೈನ ಆದರ್ಶಮಹಾಪುರುಷರಲ್ಲೊಬ್ಬರಾಗಿರುವರು. ಆದರೆ ಆಚಾರ್ಯರ ಜನ್ಮಸ್ಥಾನ ಅವರ ಪಿತೃಕುಲ ಹಾಗೂ ಗುರುಕುಲದ ಯಾವ ಉಲ್ಲೇಖವಾಗಲಿ ಸ್ಪಷ್ಟವಾಗಿ ದೊರೆಯುವುದಿಲ್ಲ. ಆದರೂ ಇತಿಹಾಸಜ್ಞರು, ಆಚಾರ್ಯರು ಕ್ಷತ್ರಿಯವಂಶದಲ್ಲಿ ಹುಟ್ಟಿದ್ದರೆಂದೂ ಅವರ ತಂದೆಯು ಉರಗಪುರದ ರಾಜನಾಗಿದ್ದನೆಂದೂ ಹೇಳುವರು. ಹಾಗೆಯೇ ಇವರು ಮೂಲಸಂಘದ ಪ್ರಧಾನ ಆಚಾರ್ಯರಲ್ಲೊಬ್ಬರಾಗಿದ್ದರು. ಇರಲಿ, ಮೇಲೆ ಬರೆದ ಸಂಗತಿಗಳಲ್ಲಿ ಇಲ್ಲಿ ನಾನು ವಿಚಾರ ಮಾಡುವುದಿಲ್ಲ. ಈ ಲೇಖನದಲ್ಲಿ ಆಚಾರ್ಯರ ಕವಿತ್ವಶಕ್ತಿಯ ದಿಗ್ದರ್ಶನ ಮಾಡುವುದೇ ನನಗೆ ಇಷ್ಟವಿದೆ. ಆದರೆ ನನ್ನಂತಹ ಕ್ಷುದ್ರವ್ಯಕ್ತಿಯು ಆ ಲೋಕಮಾನ್ಯ ದಿಗ್ಗಜ ವಿದ್ವಾಂಸರ ಕವಿತ್ವಶಕ್ತಿಯನ್ನು ಸಮಾಲೋಚನೆ ಮಾಡುವುದೆಂದರೇನು ? ಆಚಾರ್ಯರ ಕವಿತ್ವಶಕ್ತಿಯ ಪರಿಚಯವನ್ನು ಕೊಡುವುದೆಂದರೆ ಅವರಿಗೆ ಅಪಮಾನಮಾಡುವುದಾಗಿದೆ ಎಂದು ನಾನು ತಿಳಿಯುತ್ತೇನೆ. ಇರಲಿ, ಸಮಂತಭದ್ರರು ಜೈನ ಸಿದ್ಧಾಂತಗಳ ಪೂರ್ಣ ಮರ್ಮಜ್ಞರಾಗಿದ್ದು, ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ವೈದ್ಯಕ ಮೊದಲಾದ ಇತರ ವಿಷಯಗಳಲ್ಲಿಯೂ ಪೂರ್ಣ ನಿಷ್ಣಾತರಾಗಿದ್ದರು. ಮಾತ್ರವಲ್ಲ, ಕವಿತ್ವ, ಗಮಕತ್ವ, ವಾದಿತ್ವ, ಮತ್ತು ವಾಗ್ಮಿತ್ವ ಈ ನಾಲ್ಕು ಗುಣಗಳಲ್ಲಿ ಅಸಾಧಾರಣರಾಗಿದ್ದರು. ಪ್ರಕೃತ ಇಲ್ಲಿ ನಾನು ಅವರ ಕವಿತ್ವಶಕ್ತಿಯ ವಿಷಯದಲ್ಲಿ ಯಥಾಶಕ್ತಿ ಕೆಲವು ಮಾತುಗಳನ್ನು ಬರೆಯುವೆನು.

ಇದಕ್ಕಾಗಿ ನನಗೆ ಪೂರ್ವಾಚಾರ್ಯರ ಅಭಿಪ್ರಾಯಗಳ ಆಶ್ರಯವು ಅಗತ್ಯವಿದೆ. ವಿಕ್ರಮನ ೧೧ನೆ ಶತಮಾನದ ಮಹಾಕವಿ ವಾದಿರಾಜ ಸೂರಿಯು ಸಮಂತಭದ್ರರನ್ನು ಸರ್ವೋತ್ತಮ ಕಾವ್ಯರೂಪವಾದ ಮಾಣಿಕ್ಯಗಳ ಪರ್ವತವೆಂದು ಹೇಳಿರುವನು. 'ಜ್ಞಾನಾರ್ಣವ'ದ ಕರ್ತರಾದ ಯೋಗಿರಾಜ ಶುಭ ಚಂದ್ರಾಚಾರ್ಯರು ಸ್ವಾಮಿಯವರನ್ನು 'ಕವೀಂದ್ರಭಾಸ್ವಾನ್' ಎಂದು ಬರೆದಿರುವರು. 'ಅಲಂಕಾರಚಿಂತಾಮಣಿ'ಯಲ್ಲಿ ಅಜಿತಸೇನಾಚಾರ್ಯರು ಅವರನ್ನು 'ಕವಿಕುಂಜರ' ವಿಶೇಷಣದೊಂದಿಗೆ ಸ್ಮರಣೆಮಾಡಿದ್ದಾರೆ. ಹಾಗೆಯೇ 'ವರಾಂಗ ಚರಿತ'ದಲ್ಲಿ ಶ್ರೀ ವರ್ಧಮಾನ ಸೂರಿಯವರು ಅವರನ್ನು 'ಮಹಾಕವೀಶ್ವರ' ನೆಂದೂ ಭಗವಜ್ಜಿನಸೇನಾಚಾರ್ಯರು ತನ್ನ ಆದಿ ಪುರಾಣದಲ್ಲಿ 'ಮಹಾನ್‌ಕವಿವೇಧಾ ಮಹಾಕವಿ ಬ್ರಹ್ಮಾ' ಎಂದೂ ಬರೆದಿದ್ದಾರೆ. ಇವೆಲ್ಲವೂ ಸಮಂತಭದ್ರರ ಕವಿತ್ವಶಕ್ತಿ ಅಥವಾ ಕಾವ್ಯನಿರ್ಮಾಣಕಲೆಯ ವಿಷಯದಲ್ಲಿ ಪ್ರಾಚೀನ ದಿಗ್ಗಜ ಸಂಸ್ಕೃತ ವಿದ್ವಾಂಸರ ಮಂಗಲಮಯವಾದ ಹೃದಯೋದ್ಗಾರಗಳು. ಇನ್ನು ಪ್ರಾಚೀನ ಕರ್ಣಾಟಕ ಕವಿಗಳು ಕೂಡ ತಮ್ಮ ತಮ್ಮ ಕಾವ್ಯಗಳಲ್ಲಿ ಅವರನ್ನು ಒಬ್ಬ ಉತ್ಕೃಷ್ಟ ಕವಿಯ ರೂಪದಲ್ಲಿ ಸ್ಮರಣೆ ಹಾಗೂ ಪ್ರಶಂಸೆಮಾಡಿದ್ದಾರೆ. ಕ್ರಿಸ್ತಶಕ ೧೦೩೮ರಲ್ಲಿ ಮಹಾಕವಿ ಕಮಲಭವನು 'ತನ್ನ ಶಾಂತೀಶ್ವರ ಪುರಾಣ'ದಲ್ಲಿ, ಸನ್ ೯೪೧ರಲ್ಲಿ ಪಂಪ ಮಹಾಕವಿಯು 'ಆದಿಪುರಾಣ'ದಲ್ಲಿ, ೧೪೨೪ರಲ್ಲಿ ಭಾಸ್ಕರ ಕವಿಯು 'ಜೀವಂಧರ ಚರಿತೆ'ಯಲ್ಲಿ, ೧೫೦೮ರಲ್ಲಿ ಮಂಗರಸನು 'ಸಮ್ಯಕ್ತ್ವಕೌಮುದಿ'ಯಲ್ಲಿ, ೧೧೭೦-೧೨೩೫ರ ಕರ್ಣಾಟಕ ಕವಿಚಕ್ರವರ್ತಿ ಜನ್ನಮಹಾಕವಿಯು 'ಯಶೋಧರ ಚರಿತ್ರೆ'ಯಲ್ಲಿ, ಕವಿರಾಜಕುಂಜರ ಮಹಾಕವಿ ನೇಮಿಚಂದ್ರನು 'ಲೀಲಾವತಿ ಪ್ರಬಂಧ'ದಲ್ಲಿ, ಪೊನ್ನ ಮಹಾಕವಿಯು 'ಶಾಂತಿ ಪುರಾಣ'ದಲ್ಲಿ, ಹಾಗೂ ಚಾವುಂಡರಾಯನು 'ಚಾವುಂಡರಾಯ ಪುರಾಣ'ದಲ್ಲಿ ಉಲ್ಲೇಖಮಾಡಿದ್ದಾರೆ. ಹಾಗೆಯೇ ನಯಸೇನನೇ ಮೊದಲಾದ ಕವಿಗಳು ಕೂಡ ಮುಕ್ತಕಂಠದಿಂದ ಸ್ವಾಮಿಯವರ ಕವಿತ್ವಶಕ್ತಿಯ ಪ್ರಶಂಸೆ ಮಾಡಿದ್ದಾರೆ.

ಅವರ ವಿಷಯದಲ್ಲಿ ಹೊರಟಿರುವ ಮೇಲೆ ಬರೆದಿರುವ ಕನ್ನಡ ಕವಿಗಳ ಸುಧಾಸಿಕ್ತನಾದ ಸೂಕ್ತಿಗಳಲ್ಲಿ ನೇಮಿಚಂದ್ರ ಹಾಗೂ ಚಾವುಂಡರಾಯನ ಉದ್ಗಾರಗಳು ಎಲ್ಲಕ್ಕಿಂತಲೂ ಉಲ್ಲೇಖಾರ್ಹವಾಗಿವೆ. 'ತತ್ವಾರ್ಥಭಾಷ್ಯ' ಹಾಗೂ 'ತರ್ಕಶಾಸ್ತ್ರ' ಗಳಮೂಲಕ ತನ್ನ ವಚನರೂಪವಾದ ವೈಭವವನ್ನು ಪ್ರಪಂಚದಲ್ಲಿ ವಿಸ್ತರಿಸಿದ ಸಮಂತಭದ್ರರ ತುಲನೆಯು ಯಾವ ಕವಿಯೊಡನೆಯೂ ಆಗುವುದಿಲ್ಲವೆಂದು ಚಾವುಂಡರಾಯನು ಹೇಳುತ್ತಾನೆ. (ಚಾವುಂಡರಾಯ ಪುರಾಣ ನೋಡಿರಿ) ಹಾಗೆಯೇ ಕವಿಕುಂಜರ, ಮೊದಲಾದ ಅನೇಕಾನೇಕ ಬಿರುದುಗಳುಳ್ಳ ಮಹಾಕವಿ ನೇಮಿಚಂದ್ರರು ಲೀಲಾವತಿ ಪ್ರಬಂಧದಲ್ಲಿ ಕವೀಶ್ವರರಲ್ಲಿ ಸಮಂತಭದ್ರ, ನೈಯಾಯಿಕರಲ್ಲಿ ಅಕಲಂಕದೇವ ಹಾಗೂ ವ್ಯಾಕರಣಗಳಲ್ಲಿ ಪೂಜ್ಯಪಾದ ಈ ಮೂವರನ್ನೇ ನಾನು ವಂದನಾರ್ಹರಾದ ಪೂಜ್ಯ ಕವಿಗಳೆಂದೂ ವಾದಿಗಳೆಂದೂ ಶಾಬ್ದಿಕರೆಂದೂ ಒಪ್ಪುವೆನಲ್ಲದೆ ಬೇರೆ ಯಾರನ್ನೂ ಕವಿ ವಾದಿ ಹಾಗೂ ಶಾಬ್ದಿಕರೆಂದು ತಿಳಿಯುವುದಿಲ್ಲವೆಂದು ಹೇಳುತ್ತಾರೆ.

ಮೇಲೆ ಹೇಳಿದ ಸಂಸ್ಕೃತ ಹಾಗೂ ಕನ್ನಡದ ಪ್ರೌಢಾತಿಪ್ರೌಢ ಮಹಾವಿದ್ವಾಂಸರ ಮತ್ತು ಆಚಾರ್ಯರ ಹೃದಯದಿಂದ ಹೊರಟ ಈ ಕಲ್ಯಾಣಮಯವಾದ ಉದ್ಗಾರಗಳಿಂದ ಸ್ವಾಮೀ ಸಮಂತಭದ್ರರ ಕವಿತ್ವಶಕ್ತಿಯನ್ನು ವಿಜ್ಞ ಪಾಠಕರು ಅಂದಾಜು ಮಾಡಬಹುದು. ಯಾವನೊಬ್ಬ ಕವಿ ಅಥವಾ ವಿದ್ವಾಂಸನು ತನ್ನಿಂದಲೂ ದೊಡ್ಡವರನ್ನೇ ಸ್ಮರಣೆ ಹಾಗೂ ಸ್ತುತಿ ಮಾಡುವನಲ್ಲದೆ ಸಣ್ಣವರನ್ನಲ್ಲವೆಂಬುದು ನಿರ್ವಿವಾದದ ಸಂಗತಿ. ಆದುದರಿಂದ ಆಚಾರ್ಯರ ಕವಿತ್ವಶಕ್ತಿಯ ವಿಷಯದಲ್ಲಿ ಇದರಿಂದಲೂ ಹೆಚ್ಚಿನ ಪ್ರಮಾಣವನ್ನು ಅನುಸಂಧಾನ ಮಾಡುವ ಅಗತ್ಯವೇನಿದೆ ? ಇರಲಿ, ಸಹೃದಯರಾದ ಪಾಠಕರಿಗೋಸ್ಕರ ಆಚಾರ್ಯರ ಸುಧಾಮಯವಾದ ಕವಿತೆಗಳುಳ್ಳ ಪ್ರಕೃತ ಉಪಲಬ್ಧವಾದ ಕೆಲವು ಗ್ರಂಥಗಳ ಪರಿಚಯವನ್ನು ತಮ್ಮೆದುರಿಗಿಡುತ್ತೇನೆ.

(೧) **ಆಪ್ತಮೀಮಾಂಸೆ**:—ಸ್ವಾಮಿಯವರ ಉಪಲಬ್ಧ ಗ್ರಂಥಗಳಲ್ಲಿ ಈ ಗ್ರಂಥವು ಪ್ರಧಾನವಾದುದು. ಇದನ್ನು "ದೇವಾಗಮಸ್ತೋತ್ರ" ವೆಂದೂ ಹೇಳುವರು, ಏಕೆಂದರೆ ಈ ಗ್ರಂಥವು "ದೇವಾಗಮನಭೋಯಾನಚಾಮರಾದಿ ವಿಭೂತಯಃ" ಇತ್ಯಾದಿ. ಈ ರೀತಿ ಆದ್ಯಕ್ಷರಗಳ ಮೇಲೆ ಅವಲಂಬಿತವಾದ "ಭಕ್ತಾಮರ" ಅಥವಾ ಅವರಿಂದಲೇ ರಚಿತವಾದ "ಸ್ವಯಂಭೂ" ಮೊದಲಾದ ಎಷ್ಟೋ ಸ್ತೋತ್ರಗಳ ಹೆಸರು ತಮಗೆ ಕಂಡುಬರಬಹುದು. ಈ ಗ್ರಂಥದ ಕಾರಿಕೆಗಳ ಸಂಖ್ಯೆ ೧೧೪. ಇದರ ಮೇಲೆ ಎಷ್ಟೋ ಟೀಕೆಗಳಿವೆ. ಆದರೂ ಈ ಗ್ರಂಥವು ತನ್ನ ಗಾಂಭೀರ್ಯದಿಂದ ದೊಡ್ಡ ದೊಡ್ಡ ವಿದ್ವಾಂಸರಿಗೆ ಕೂಡ ದುರ್ಗಮ್ಯವಾಗಿ ಕಾಣುವುದೆಂದು ವಿದ್ವಾಂಸರು ಹೇಳುವರು. ಇದೊಂದು ಉಚ್ಚಕೋಟಿಯ ನ್ಯಾಯಗ್ರಂಥ. ಇದರಲ್ಲಿ ಇತರ ಮತಗಳ ಸಿದ್ಧಾಂತ ಹಾಗೂ ಅವುಗಳ ಮೀಮಾಂಸೆಯು ಬಹಳ ಚೆನ್ನಾಗಿ ಮಾಡಲ್ಪಟ್ಟಿದೆ. ಇದರ ಪ್ರತಿಯೊಂದು ಪ್ರಕರಣವೂ ದರ್ಶನೀಯವಾಗಿದೆ. ಇದರಿಂದ ಆಚಾರ್ಯರಿಗೆ ನ್ಯಾಯ ಹಾಗೂ ತರ್ಕದಲ್ಲಿ ಹೆಚ್ಚು ಅಭಿರುಚಿಯಿದ್ದಿತೆಂದು ಗೊತ್ತಾಗುತ್ತದೆ. ನಿಜ. ಒಬ್ಬ ಕವಿಯು ಹೇಳಿರುವನು—

ಅಪರೀಕ್ಷಿತ ಲಕ್ಷಣಪ್ರಮಾಣೈರಪರಾಮೃಷ್ಟಪದಾರ್ಥತತ್ತ್ವೈಃ।
ಅವಶೀಕೃತಜೈತ್ರಯುಕ್ತಿಜಾಲೈರಲಮೇತೈರನಧಿಕತರ್ಕವಿದ್ಭಿಃ॥

ಯಾರು ಲಕ್ಷಣ ಮತ್ತು ಪ್ರಮಾಣಗಳ ಪರೀಕ್ಷೆಮಾಡಲಿಲ್ಲವೋ ಯಾರು ಪದಾರ್ಥತತ್ವಗಳ ಜ್ಞಾನವನ್ನು ಪಡೆಯಲಿಲ್ಲವೋ, ಯಾರು ಜಯದ ಯುಕ್ತಿಗಳನ್ನು ವಶಮಾಡಿಕೊಳ್ಳಲಿಲ್ಲವೋ ಅವರಿಂದ ಏನಾದೀತು ? ನಿಜವಾಗಿ ನ್ಯಾಯಶಾಸ್ತ್ರವು ತನ್ನ ಗೂಢಸಿದ್ಧಾಂತಗಳ ರಕ್ಷಣೆಗೆ ಆವರಣವಾಗಿದೆ. ಇದರ ಮೂಲಕವೇ ವಸ್ತುವಿನ ಸ್ವರೂಪ ವಸ್ತುವಿನ ಪರೀಕ್ಷೆ ಅರ್ಥಾತ್ ನಿರ್ಣಯ ಹಾಗೂ ಸುಯುಕ್ತಿಗಳ ಪೂರ್ಣಬೋಧೆಯುಂಟಾಗುತ್ತದೆ. ಇಲ್ಲಿ ನಮೂನೆಗಾಗಿ "ಆಪ್ತಮೀಮಾಂಸೆ"ಯ ಕೆಲವು ಶ್ಲೋಕಗಳನ್ನು ಬರೆಯುವೆನು—

ಅದ್ವೈತೈಕಾಂತಪಕ್ಷೇಽಪಿ ದೃಷ್ಟೋ ಭೇದೋ ವಿರುಧ್ಯತೇ।
ಕಾರಕಾಣಾಂ ಕ್ರಿಯಾಯಾಶ್ಚ ನೈಕಂ ಸ್ವಸ್ಮಾತ್ ಪ್ರಜಾಯತೇ ॥೨೪॥

ಕರ್ಮದ್ವೈತಂ ಫಲದ್ವೈತಂ ಲೋಕದ್ವೈತಂ ಚ ನೋ ಭವೇತ್।
ವಿದ್ಯಾಽವಿದ್ಯಾದ್ವಯಂ ನ ಸ್ಯಾತ್ ಬಂಧಮೋಕ್ಷದ್ವಯಂ ತಥಾ ॥೨೫॥

ಹೇತೋರದ್ವೈತಸಿದ್ಧಿಶ್ಚೇದ್ ದ್ವೈತಂ ಸ್ಯಾದ್ಧೇತುಸಾಧ್ಯಯೋಃ।
ಹೇತುನಾ ಚೇದ್ವಿನಾ ಸಿದ್ಧಿರ್ದ್ವೈತಂ ವಾಙ್ಮಾತ್ರತೋ ನ ಕಿಮ್ ॥೨೬॥

ಅದ್ವೈತಂ ನ ವಿನಾ ದ್ವೈತಾದಹೇತುರಿವ ಹೇತುನಾ।
ಸಂಜ್ಞಿನಃ ಪ್ರತಿಷೇಧೋ ನ ಪ್ರತಿಷೇಧ್ಯಾದೃತೇ ಕ್ವಚಿತ್ ॥೨೭॥

ಮೇಲೆ ಹೇಳಿದ ಪದ್ಯಗಳ ಆಶಯವು ಹೀಗಿದೆ— ಸರ್ವಥಾ ಅದ್ವೈತಪಕ್ಷವು ಕೂಡ ಸರಿಯಲ್ಲ, ಏಕೆಂದರೆ ಅದ್ವೈತವೇ ಅದ್ವೈತವೆಂದು ತಿಳಿಯುವುದರಿಂದ ಕರ್ತೃಕರ್ಮ ಮೊದಲಾದ ಕಾರಕ, ದಹನ, ಪಚನ ಮೊದಲಾದ ಕ್ರಿಯೆಗಳು ಪ್ರಮಾಣ ಪ್ರಮೇಯ, ಶುಭಕರ್ಮ, ಅಶುಭಕರ್ಮ, ಪಾಪಪುಣ್ಯ, ಇಹ ಲೋಕ, ಪರಲೋಕ, ಜ್ಞಾನ-ಅಜ್ಞಾನ, ಬಂಧಮೋಕ್ಷ ಮೊದಲಾದ ಲೋಕ ಹಾಗೂ ಪ್ರತ್ಯಕ್ಷ ಪ್ರಸಿದ್ಧವಾದ ಒಂದೇ ಒಂದು ಭೇದವು ಕೂಡ ನಿಲ್ಲಲಾರದು. ಇಷ್ಟೇ ಅಲ್ಲದೆ ಅದ್ವೈತಪಕ್ಷವನ್ನು ಹೇತುವಿನಿಂದ ಸಿದ್ಧಮಾಡುವರೋ? ಅಥವಾ ಅಹೇತುವಿನಿಂದಲೋ? ಹೇತುವಿನಿಂದ (ಅನುಮಾನ) ಸಿದ್ಧಮಾಡುವುದಾದರೆ ಸಾಧ್ಯ ಮತ್ತು ಸಾಧನರೂಪವಾದ ದ್ವೈತವು ಸ್ವಯಂ ಸಿದ್ಧವಾಗುತ್ತದೆ. ಹೇತುವಿಲ್ಲದೆ ಸಿದ್ಧಮಾಡುವುದಾದರೆ ಹಾಗೆಯೇ ನಮ್ಮ ದ್ವೈತಪಕ್ಷವು ಕೂಡ ಏಕೆ ಸಿದ್ಧವಾಗಲಾರದು? ಹೇತುವಿಲ್ಲದೆ ಅಹೇತು ಆಗದಿರುವಂತೆ ದ್ವೈತವಿಲ್ಲದೆ ಅದ್ವೈತವು ಕೂಡ ಆಗಲಾರದು.

ಯಾವುದೊಂದು ಸಂಜ್ಞಿಯ ಪ್ರತಿಷೇಧವು ಪ್ರತಿಷೇಧ್ಯವಿಲ್ಲದೆ ಆಗುವುದಿಲ್ಲ. ಹೇಗೆಂದರೆ—ಪುಷ್ಪವಿಲ್ಲದೆ ಆಕಾಶಾದಿಗಳಲ್ಲಿ ಪುಷ್ಪದ ಪ್ರತಿಷೇಧ. ಆದುದರಿಂದ ಅದ್ವೈತವು ಸಂಜ್ಞಿಯಾಗುವುದರಿಂದ ದ್ವೈತವಿಲ್ಲದೆ ಅದರ ನಿಷೇಧವು ಆಗಲಾರದು. ಈ ಪ್ರಕಾರ ಆಚಾರ್ಯರು ಸಾಂಖ್ಯಾಭಿಮತ ನಿತ್ಯತ್ವ, ಬೌದ್ಧಾಭಿಮತ ಕ್ಷಣಿಕತ್ವ ಮೊದಲಾದ ಪಕ್ಷಗಳಲ್ಲಿಯೂ ವಿಸ್ತಾರವಾಗಿ ದೋಷಗಳನ್ನು ತೋರಿಸಿ ಸ್ಯಾದ್ವಾದ-ಅನೇಕಾಂತದ ವರ್ಣನೆ ಮಾಡಿದ್ದಾರೆ. ಲೇಖವಿಸ್ತಾರಭಯದಿಂದ ನಾನು ಆ ಎಲ್ಲಾ ಪದ್ಯಗಳನ್ನು ಇಲ್ಲಿ ಬರೆಯುವುದಿಲ್ಲ. "ಸ್ಥಾಲೀಪುಲಕ" ನ್ಯಾಯದಿಂದ ಮೇಲೆ ಬರೆದ ಪದ್ಯಗಳಿಂದಲೇ ವಿದ್ವಾಂಸರಾದ ಪಾಠಕರು ಆಚಾರ್ಯರ ಕವಿತ್ವಶಕ್ತಿಯ ಪರಿಚಯವನ್ನು ಸ್ವಯಂ ಮಾಡಿಕೊಳ್ಳಬಹುದು.

(೨) **ರತ್ನಕರಂಡಶ್ರಾವಕಾಚಾರ**— ಉಪಲಬ್ಧವಾದ ಶ್ರಾವಕಾಚಾರಗಳಲ್ಲಿ ಈ ಗ್ರಂಥವು ಪ್ರಾಚೀನವೂ ಪ್ರಧಾನವೂ ಮತ್ತು ಉತ್ತಮವೂ ಆಗಿದೆ. ಈ ಗ್ರಂಥದಲ್ಲಿ ಸಪುಸ್ತಗೃಹಸ್ಥಧರ್ಮವನ್ನು ಸಾಸಿವೆಯಲ್ಲಿ ಸಾಗರವನ್ನು ತುಂಬಿಸಿರುವಂತೆ ಬಹಳ ಸ್ಪಷ್ಟರೂಪದಿಂದ ತೋರಿಸಿಕೊಟ್ಟಿದ್ದಾರೆ. ಇದು ೧೫೦ ಶ್ಲೋಕಗಳ ಒಂದು ಸಣ್ಣಗ್ರಂಥವಾಗಿದ್ದರೂ ಇದರಲ್ಲಿ ಶ್ರಾವಕನ ಸಂಬಂಧವಾದ ಯಾವ ಧಾರ್ಮಿಕ ವಿಷಯವೂ ಬಿಡಲ್ಪಟ್ಟಿಲ್ಲ. ನಮೂನೆಗಾಗಿ ಇಲ್ಲಿ ಕೆಲವು ಪದ್ಯಗಳನ್ನು ಬರೆಯುವೆನು—

"ದೇವೇಂದ್ರ ಚಕ್ರಮಹಿಮಾನಮಮೇಯಮಾನಂ,
ರಾಜೇಂದ್ರಚಕ್ರಮವನೀಂದ್ರಶಿರೋರ್ಚನೀಯಮ್ ।
ಧರ್ಮೇಂದ್ರಚಕ್ರಮಧರೀಕೃತಸರ್ವಲೋಕಂ,
ಲಬ್ಧ್ವಾ ಶಿವಂ ಚ ಜಿನಭಕ್ತಿರುಪೈತಿ ಭವ್ಯಃ ॥

ಭಗವಾನ್ ಜಿನೇಂದ್ರದೇವನ ಭಕ್ತಿಮಾಡುವಂಥಾ ಭವ್ಯಜೀವರು ಮೊದಲು ದೇವೇಂದ್ರರ ಅಪರಿಮಿತವಾದ ವಿಭೂತಿಯನ್ನು ಪಡೆಯುತ್ತಾರೆ. ಅನಂತರ ಅನೇಕರಾಜರು ತಮ್ಮ ಮಸ್ತಕವನ್ನು ಬಾಗಿಸಿ ಯಾರಿಗೆ ನಮಸ್ಕಾರ ಮಾಡುತ್ತಾರೋ ಅಂತಹ ಚಕ್ರವರ್ತಿಯ ಚಕ್ರರತ್ನವನ್ನು ಪಡೆಯುತ್ತಾರೆ. ಆ ಮೇಲೆ ಮೂರು ಲೋಕಗಳನ್ನು ಸೇವಕನನ್ನಾಗಿ ಮಾಡಿಕೊಳ್ಳುವ ತೀರ್ಥಂಕರರ ಧರ್ಮಚಕ್ರವನ್ನು ಪಡೆಯುತ್ತಾರೆ ಹಾಗೂ ಅನುಕ್ರಮದಿಂದ ಈ ಎಲ್ಲವನ್ನೂ ಪಡೆದು ಕೊನೆಗೆ ಮೋಕ್ಷಪದವನ್ನು ಪಡೆಯುತ್ತಾರೆ."

"ನಿಯಮೋ ಯಮಶ್ಚ ವಿಹಿತೌ ದ್ವೇಧಾ ಭೋಗೋಪಭೋಗ ಸಂಹಾರೇ ।
ನಿಯಮಃ ಪರಿಮಿತಕಾಲೋ ಯಾವಜ್ಜೀವಂ ಯಮೋ ಧ್ರಿಯತೇ ॥

ಭೋಗೋಪಭೋಗಗಳ ಪರಿಮಾಣವು ಕಾಲಮರ್ಯಾದೆಯುಳ್ಳದ್ದು ನಿಯಮವೆಂದೂ, ಜನ್ಮಪರ್ಯಂತರಧಾರಣೆಮಾಡುವಂಥಾದ್ದು ಯಮವೆಂದೂ ಎರಡು ವಿಧವಾಗಿದೆ. ಮೇಲಿನ ಎರಡು ಪದ್ಯಗಳು ಮಾಧುರ್ಯ ಹಾಗೂ ಪ್ರಸಾದ ಗುಣಗಳಿಂದ ತುಂಬಿತುಳುಕುತ್ತಿವೆ. ಸಮಗ್ರಗ್ರಂಥವು ಈ ಪ್ರಕಾರವಾಗಿಯೇ ಇದೆ. ಆದುದರಿಂದ ಅವನ್ನು ವಿಸ್ತಾರಮಾಡುವುದಿಲ್ಲ.

(೩) **ಸ್ವಯಂಭೂಸ್ತೋತ್ರ**— ಇದನ್ನು 'ಬೃಹತ್ ಸ್ವಯಂಭೂಸ್ತೋತ್ರ' ಮತ್ತು 'ಸಮಂತಭದ್ರಸ್ತೋತ್ರ'ವೆಂದು ಕೂಡ ಹೇಳುವರು. 'ಸ್ವಯಂಭುವಾ' ಪದದಿಂದ ಪ್ರಾರಂಭವಾದುದರಿಂದ ಇದು 'ಸ್ವಯಂಭೂಸ್ತೋತ್ರ'ವೆಂದು ಹೇಳಲ್ಪಡುತ್ತದೆ. ಇನ್ನೊಂದು ಚಿಕ್ಕಸ್ವಯಂಭೂಸ್ತೋತ್ರವು ಕೂಡ ಪ್ರಚಾರದಲ್ಲಿರುವುದರಿಂದ ಇದು 'ಬೃಹತ್ ಸ್ವಯಂಭೂಸ್ತೋತ್ರ'ವೆಂದೂ, ಸಮಂತಭದ್ರರಿಂದ ರಚಿತವಾಗಿರುವುದರಿಂದ 'ಸಮಂತಭದ್ರಸ್ತೋತ್ರ'ವೆಂದೂ ಹೇಳಲ್ಪಡುತ್ತದೆ. ಈ ಗ್ರಂಥ

ದಲ್ಲಿ ಒಟ್ಟಿಗೆ ೧೪೩ ಪದ್ಯಗಳುಂಟು. ಈ ಗ್ರಂಥವು ಕೂಡ ಬಹಳ ಮಹತ್ವಪೂರ್ಣವಾಗಿದ್ದು ಇದೊಂದು ಸ್ತೋತ್ರಾತ್ಮಕ ವಾದ ಕೃತಿಯಾಗಿದೆ. ಸ್ತೋತ್ರವೆಂದರೆ ತನ್ನ ಇಷ್ಟವಸ್ತುವಿನ ಗುಣಗಳ ಸ್ಮರಣೆ ಅಥವಾ ಕೀರ್ತನೆಮಾಡುವುದಾಗಿದೆ. ಸ್ತೋತ್ರವು, ವಿನಯಾನುನಯಗಳ ಮೂಲಕ ತನ್ನ ಅಭೀಷ್ಟ ಸಿದ್ಧಿಗೋಸ್ಕರ ಇಷ್ಟವಸ್ತುವಿನ ಗುಣಗಳನ್ನು ಸ್ಮರಣೆ ಅಥವಾ ಕೀರ್ತನೆ ಮಾಡುವುದು ಪ್ರಾರ್ಥನಾತ್ಮಕಸ್ತೋತ್ರವೆಂದೂ, ಪ್ರೇಮ ಹಾಗೂ ಭಕ್ತಿಯ ಅಧೀನನಾಗಿ ತನ್ನ ಇಷ್ಟವಸ್ತುವಿನ ಗುಣಗಳನ್ನು ಕೀರ್ತನೆಮಾಡುವುದು ಪ್ರಶಂಸಾತ್ಮಕ ಸ್ತೋತ್ರ ವೆಂದೂ ಎರಡು ಪ್ರಕಾರವಾಗಿದೆ. ಈ ಸ್ತೋತ್ರವು ಪ್ರಶಂಸಾ ತ್ಮಕವೆಂದೇ ಹೇಳಬಹುದು. ಸ್ವಾಮಿಜಿಯವರ ಈ "ಸ್ವಯಂ ಭೂಸ್ತೋತ್ರ"ವು ಪಾಂಡಿತ್ಯಪೂರ್ಣ ಹಾಗೂ ಆದರ್ಶಕವಿಗಳ ಕೃತಿಗಳಲ್ಲಿ ಒಂದು ಪ್ರಧಾನಗ್ರಂಥವಾಗಿದೆ. ಸ್ತೋತ್ರದಲ್ಲಾ ದರೋ ಅವರು ವಿಲಕ್ಷಣತೆಯ ಪರಾಕಾಷ್ಠತೆಯನ್ನೇ ಮಾಡಿ ಕೊಟ್ಟಿರುವರೆಂಬುದಕ್ಕೆ ಅವರ "ಆಪ್ತಮೀಮಾಂಸೆ" "ಜಿನ ಶತಕ" ಮೊದಲಾದ ಸ್ತುತ್ಯಾತ್ಮಕವಾದ ಕೃತಿಗಳೇ ಉಜ್ವಲ ನಿದರ್ಶನಗಳಾಗಿವೆ. ಈ ಸ್ತೋತ್ರಗಳಲ್ಲಿ ವಿಶೇಷತೆಯೇನೆಂದರೆ, ಇವುಗಳನ್ನು ಓದುವವರ ಕಣ್ಣೆದುರಿಗೆ ಸಾಕ್ಷಾತ್ ಜಿನೇಂದ್ರ ದೇವನ ನಿಜವಾದ ಚಿತ್ರವು ಬಿಂಬಿತವಾಗುತ್ತದೆ. ಇರಲಿ, ಉದಾ ಹರಣೆಗಾಗಿ ಇದರ ಎರಡು ಮೂರು ಶ್ಲೋಕಗಳನ್ನು ಕೆಳಗೆ ಬರೆಯುವೆವು —

"ಪದ್ಮಪ್ರಭಃ ಪದ್ಮಪಲಾಶಲೇಶ್ಯಃ
ಪದ್ಮಾಲಯಾಲಿಂಗಿತಚಾರುಮೂರ್ತಿಃ ।
ಬಭೌ ಭವಾನ್ ಭವ್ಯಪಯೋರುಹಾಣಾಂ
ಪದ್ಮಾಕರಾಣಾಮಿವ ಪದ್ಮಬಂಧುಃ ॥

ಪದ್ಮಮಣಿಸದೃಶವಾದ ಶರೀರದ ವರ್ಣವುಳ್ಳ ಹಾಗೂ ಪದ್ಮ ಪಲಾಶ ಅರ್ಥಾತ್ ಬಿಳಿಯ ಕಮಲದ ಫಲದೋಪಾದಿ ಶುಕ್ಲ ಲೇಶ್ಯೆ (ಕಾಂತಿ) ಯುಳ್ಳವನಾದುದರಿಂದ ಪದ್ಮಪ್ರಭನೆಂಬ ಸಾರ್ಥಕ ಹೆಸರುಳ್ಳ ಆರನೆಯ ತೀರ್ಥಂಕರನೂ, ಅಂತರಂಗ ಬಹಿರಂಗ ಸಂಪತ್ತಿನಿಂದ ಲಕ್ಷ್ಮಿಯಿಂದ ಆಲಿಂಗಿತನಾದುದ ರಿಂದ ಅತ್ಯಂತ ಸುಂದರಮೂರ್ತಿಯುಳ್ಳ ತಾವು ತಮ್ಮ ಮನೋ ಹರ ಹಾಗೂ ಹಿತೋಪದೇಶರೂಪವಾದ ವಚನಗಳೆಂಬ ಕಿರಣಗಳ ಮೂಲಕ, ಸೂರ್ಯನು ಕಮಲಗಳನ್ನು ಅರಳಿಸಿ ಶೋಭಿಸುವಂತೆ, ಭವ್ಯರೂಪವಾದ ಕಮಲಗಳನ್ನು ವಿಕಸಿತ ಮಾಡಿ ಶೋಭಿಸುತ್ತಿರುವಿರಿ.

ಪದ್ಮಪ್ರಭರ 'ಪದ್ಮಪ್ರಭ' ಹೆಸರಿನ ಸಾರ್ಥಕತೆಯು ಮೇಲೆ ಬರೆದ ಶ್ಲೋಕದಲ್ಲಿ ಬಹಳ ವಿಶದರೀತಿಯಿಂದ ತೋರಿಸ ಲ್ಪಟ್ಟಿದೆ. ಈ ಶ್ಲೋಕದಲ್ಲಿ ಮಾಧುರ್ಯ ಸೌಕುಮಾರ್ಯಾದಿ ಗುಣಗಳು ಬಹಳ ಮನೋಹರವಾದ ರೀತಿಯಿಂದ ಚಿತ್ರಿತವಾ ಗಿವೆ. ಮತ್ತು ಇದರೊಂದಿಗೆ ಪೂರ್ವಾರ್ಧದಲ್ಲಿ ಉಪಮಾಲಂ ಕಾರವೂ ಉತ್ತರಾರ್ಧದಲ್ಲಿ ರೂಪಕಾಲಂಕಾರವೂ ಕಾಣುತ್ತವೆ.

ಚಂದ್ರಪ್ರಭಂ ಚಂದ್ರಮರೀಚಿಗೌರಂ
ಚಂದ್ರಂ ದ್ವಿತೀಯಂ ಜಗತೀವ ಕಾಂತಮ್ ।
ವಂದೇಽಭಿವಂದ್ಯಂ ಮಹತಾಮೃಷೀಂದ್ರಂ
ಜಿನಂ ಜಿತಸ್ವಾಂತಕಷಾಯಬಂಧಮ್ ॥

ಚಂದ್ರನ ಕಿರಣಗಳಿಗೆ ಸಮಾನವಾದ ವರ್ಣವುಳ್ಳವನೂ, ಸಂಸಾರದಲ್ಲಿ ತನ್ನ ಕೇವಲ ಜ್ಞಾನಪ್ರಭೆಯಮೂಲಕ ಸಮಸ್ತ ವಾದ ಪದಾರ್ಥಗಳನ್ನು ಬೆಳಗಿಸುವವನಾದುದರಿಂದ ಇನ್ನೊಬ್ಬ ಚಂದ್ರನಂತೆ ಕಾಂತಿಯುಳ್ಳವನೂ, ಶ್ರೇಷ್ಠರಾದ ಇಂದ್ರಗಣ ಧರಾದಿ ಋಷಿಗಳಿಂದ ವಂದಿಸಲ್ಪಟ್ಟವನೂ, ತನ್ನ ಅಂತಃಕರಣ ದಿಂದ ಕಷಾಯಬಂಧನವನ್ನು ಜಯಿಸುವವನೂ ಆದ ಸಾರ್ಥಕ ವಾದ ಹೆಸರುಳ್ಳ ಚಂದ್ರಪ್ರಭಸ್ವಾಮಿಯನ್ನು ನಾನು ನಮ ಸ್ಕಾರ ಮಾಡುತ್ತೇನೆ.

ಮೇಲೆ ಬರೆದ ಗುಣಗಳಿಂದ ಈ ಶ್ಲೋಕವುಕೂಡ ರಿಕ್ತವಾ ಗಿಲ್ಲ. ಆದುದರಿಂದ ಇಲ್ಲಿ ಆ ಮಾತುಗಳನ್ನು ಪುನಃ ಆಲಾ ಪಿಸುವುದು ಉಚಿತವೆಂದು ನಾನು ತಿಳಿಯುವುದಿಲ್ಲ.

ಚಕ್ರೇಣ ಯಃ ಶತ್ರುಭಯಂಕರೇಣ
ಜಿತ್ವಾ ನೃಪಃ ಸರ್ವನರೇಂದ್ರಚಕ್ರಮ್ ।
ಸಮಾಧಿಚಕ್ರೇಣ ಪುನರ್ಜಿಗಾಯ
ಮಹೋದಯೋ ದುರ್ಜಯಮೋಹಚಕ್ರಮ್ ॥

"ಚಕ್ರವರ್ತಿ ಮಹೋದಯನಾದ ರಾಜಾ ಶಾಂತಿಪ್ರಭುವು ಗೃಹಸ್ಥಾವಸ್ಥೆಯಲ್ಲಿ ಶತ್ರುಗಳಿಗೆ ಭಯವನ್ನುಂಟುಮಾಡುವಂಥ ತನ್ನ ಚಕ್ರರತ್ನದ ಮೂಲಕ ಎಷ್ಟೋ ಸಾಮಂತ ಮಂಡಲೇಶ್ವರ ರಾಜರ ಸಮುದಾಯವನ್ನು ಜಯಿಸಿದನು. ಮತ್ತೆ ವೀತರಾಗಾ ವಸ್ಥೆಯಲ್ಲಿ ಧರ್ಮ ಶುಕ್ಲಧ್ಯಾನಗಳ ಭೇದರೂಪವಾದ ಚಕ್ರದ ಮೂಲಕ ಕಷ್ಟದಿಂದ ಜಯಿಸಲಿಕ್ಕೆ ಯೋಗ್ಯನಾದಂಥ ಮೋಹಿನೀಕರ್ಮಸಂಬಂಧವಾದ ಮೂಲೋತ್ತರ ಪ್ರಕೃತಿಗಳ ಚಕ್ರವನ್ನು ಜಯಿಸಿದನು." ಈ ಶ್ಲೋಕವು ಉಪಜಾತಿ ಛಂದಸ್ಸಿನದಾಗಿದ್ದು ಕಾವ್ಯೋಚಿತವಾದ ಗುಣಗಳಿಂದ ಪರಿ ಪೂರ್ಣವಾಗಿದೆ. ಇದರಲ್ಲಿ ವೀರರಸದ ಆಸ್ವಾದನೆ ಮಾಡುವುದು ಇಷ್ಟವಾಗಿದೆ!

(೪) ಜಿನ ಶತಕ — ಈ ಗ್ರಂಥವು "ಸ್ತುತಿವಿದ್ಯಾ, ಜಿನ ಶತಕಾಲಂಕಾರ" ಮೊದಲಾದ ಹೆಸರುಗಳಿಂದಲೂ ಪ್ರಸಿದ್ಧ ವಾಗಿದೆ. ಸರ್ವಾಲಂಕಾರಗಳಿಂದ ಭೂಷಿತವಾದ ಈ ಗ್ರಂಥವು ಭಕ್ತಿರಸದಿಂದ ಸರ್ವಥಾ ತುಂಬಿ ತುಳುಕುತ್ತಿದೆ. ಇದರ ರಚನಾಕೌಶಲವನ್ನು ನೋಡಿ ದೊಡ್ಡ ದೊಡ್ಡ ವಿದ್ವಾಂಸರು ಕೂಡ ಮುಕ್ತಕಂಠದಿಂದ ಇದರ ಪ್ರಶಂಸೆ ಮಾಡುತ್ತಿರುವರು. ಇದೊಂದು ಸರ್ವೋತ್ಕೃಷ್ಟವಾದ ಚಿತ್ರಕಾವ್ಯ. ಟೀಕೆಯಿಲ್ಲದೆ ದೊಡ್ಡ ವಿದ್ವಾಂಸರು ಕೂಡ ಇವನ್ನು ಕೂಡಲೇ ತಿಳಿಯುವುದು ಕಷ್ಟವಾಗಿದೆ. ಚಿತ್ರಕಾವ್ಯಶಬ್ದಾಲಂಕಾರದ ಒಂದು ಭೇದವು ಹೇಗಿರುವುದೆಂದರೆ—

'ಚಿತ್ರಂ ವಕ್ರೋಕ್ತ್ಯನುಪ್ರಾಸೋ ಯಮುಕಂ ಧ್ವನ್ಯಲಂ ಕ್ರಿಯಾಃ' — ಚಿತ್ರ, ವಕ್ರೋಕ್ತಿ, ಅನುಪ್ರಾಸ ಮತ್ತು ಯಮುಕ ಈ ನಾಲ್ಕು ಶಬ್ದಾಲಂಕಾರಗಳು ಅಕ್ಷರಗಳಿಂದ ಕಮಲ, ಛತ್ರ, ಮುಕುಟ ಮೊದಲಾದ ಆಕಾರಗಳಾಗುವಂಥವುಗಳನ್ನು ಪದ್ಮ ಬಂಧ, ಛತ್ರಬಂಧ ಮೊದಲಾದ ಚಿತ್ರಕಾವ್ಯಗಳೆನ್ನುವರು. ಇಲ್ಲಿ ನಮೂನೆಗಾಗಿ ಈ ಚಿತ್ರಕಾವ್ಯದ ಕೆಲವು ಪದ್ಯಗಳನ್ನು ಕೆಳಗೆ ಬರೆಯುವೆವು:—

" ತತೋತಿತಾ ತು ತೇತೀತ ಸ್ತೋತೃತೋತೀತಿತೋತೃತಃ!
ತತೋಽತಾತಿ ತತೋತೋತೇ ತತತಾ ತೇ ತತೋ ತತಃ"॥—

ಹೇಪ್ರಭೋ! ತಾವು ವಿಜ್ಞಾನ ಮತ್ತು ಬುದ್ಧಿಯ ಪ್ರಾಪ್ತಿಗೆ ತಡೆಯನ್ನುಂಟು ಮಾಡುವಂಥಾ ಜ್ಞಾನಾವರಣಾದಿ ಕರ್ಮ ಗಳನ್ನು ನಾಶಮಾಡಿ ಕೇವಲ ಜ್ಞಾನಾದಿ ಆತ್ಮೀಯಗುಣಗಳನ್ನು ಪಡೆದಿದ್ದೀರಿ. ಹಾಗೂ ಸಂಸಾರಿ ಜೀವಿಗಳಂತೆ ಪರಿಗ್ರಹಕ್ಕೆ ಅಧೀನರಾಗಿರದೆ ಪರಿಗ್ರಹರಹಿತರೂ ಸ್ವತಂತ್ರರೂ ಆಗಿದ್ದೀರಿ. ಆದುದರಿಂದ ಪೂಜ್ಯರೂ ಸುರಕ್ಷಿತರೂ ಆಗಿರುವಿರಿ. ಹೇಪ್ರಭೋ! ತಾವು ಮೂರು ಲೋಕಗಳಿಗೆ ಒಡೆಯರೂ ಜ್ಞಾನಾವರಣಾದಿ ಕರ್ಮಬಂಧನಗಳನ್ನು ನಾಶಮಾಡಿದವರೂ ಆಗಿದ್ದೀರಿ. ಆದುದರಿಂದ ನನಗೂ ಜನ್ಮಮರಣರೂಪವಾದಂಥ ರೋಗವನ್ನು ನಷ್ಟವನ್ನಾಡಿರಿ." ಇದು ಒಂದೇ 'ತ' ವರ್ಣದಿಂದ ರಚಿಸಿರುವ ಚಿತ್ರಕಾವ್ಯ. ಇದರಲ್ಲಿ ಸ್ವಾಧೀನವೃತ್ತಿಯನ್ನು ಎಚ್ಚರ ಮಾಡುವಂಥಾ ಎಂತಹ ಹೃದಯಗ್ರಾಹ್ಯವಾದ ವರ್ಣನೆ ಇದೆ! ಹೀಗೆಯೇ ಪ್ರತಿಯೊಂದು ಪಾದವು ಒಂದೊಂದೇ ಅಕ್ಷರ ಗಳಿಂದ ರಚಿತವಾದ ಶ್ಲೋಕಗಳನ್ನು ಕೆಳಗೆ ಕೊಟ್ಟಿರುವೆವು—
"ಯೇಯಾಯಾಯಾಯಾಯಯೇಯಾಯ ನಾನಾನಾನೂನಾನನಾನನ।
ಮಮಾಮಮಾ ಮಮಾಮಾಮಾಮಿ ತಾತತ್ರೀತತಿ ತತೀತತಃ"॥—

ಅರ್ಥಾತ್— ಹೇ ಭಗವನ್! ತಮ್ಮ ಈ ನಿಜವಾದ ಮೋಕ್ಷ ಮಾರ್ಗವು ದೊಡ್ಡ ದೊಡ್ಡ ಪುಣ್ಯವಂತರೂ ಸುಖಿಗಳೂ ಆದವ ರಿಗೆಮಾತ್ರ ಪ್ರಾಪ್ತವಾಗುತ್ತದೆ. ಜನರಿಗೆ ತಾವು ಚತುರ್ಮುಖ ರಾಗಿ ಗೋಚರವಾಗುತ್ತಿರುವುದು ತಮ್ಮ ಅತುಲ ಅತಿಶಯದ ಮಹಿಮೆಯಾಗಿದೆ. ತಮ್ಮ ಜ್ಞಾನವುಕೂಡ ಪರಿಪೂರ್ಣವಾ ಗಿದೆ, ತಾವು ಮೋಹರಹಿತರಾಗಿರುವಿರಿ. ಆದರೂ ಸಂಸಾರ ಸಂಬಂಧವಾದ ಅನೇಕ ದೊಡ್ಡ ದೊಡ್ಡ ವ್ಯಾಧಿಗಳನ್ನು ಸುಲಭ ವಾಗಿ ನಷ್ಟಮಾಡಿ ಬಿಡುವಿರಿ. ಹೇಭಗವನ್! ಆದುದರಿಂದ ನನ್ನ ಸಂಸಾರಸಂಬಂಧವಾದ ಜನ್ಮಮರಣರೂಪವಾದ ರೋಗ ವನ್ನು ಶೀಘ್ರ ನಷ್ಟ ಮಾಡಿರೆಂದು ನಾನು ಪ್ರಾರ್ಥನೆ ಮಾಡು ತ್ತೇನೆ."

" ನಮೇಮೂನ ನಮಾಮೇನಮೂನನೂನನಮಾನಮಾ।
ಮನಾಮೋನು ನುಮೋನಾಮ ನಮನೋ ಮಮನೋಮನ "॥

ಅರ್ಥಾತ್— ಹೇನೇಮಿನಾಥ! ತಾವು ನಮ್ಮಂತಹ ಅಲ್ಪ ಜ್ಞಾನಿಗಳಿಗೆ ಅಗೋಚರರಾಗಿರುವಿರಿ. ತಮ್ಮ ಈ ವಿಜ್ಞಾನವು ಭವ್ಯಜೀವರುಗಳನ್ನು ಸದಾ ಎಚ್ಚರಿಸುವಂಥಾದ್ದಾಗಿದೆ. ಆದುದ ರಿಂದ ಯಾವಾಗಲೂ ಯಾರಿಂದಲೂ ಬಲಾತ್ಕಾರವಾಗಿ ನಮ ಸ್ಕಾರಾದಿಗಳನ್ನು ಮಾಡಿಸಿಕೊಳ್ಳುವುದಿಲ್ಲ. ಈ ಸಂಸಾರವು ತಮ್ಮನ್ನು ನೋಡಿ ತಾನಾಗಿ ನಮಸ್ಕಾರ ಹಾಗೂ ಸ್ತುತಿಮಾಡು ತ್ತದೆ. ಹೇಸ್ವಾಮಿನ್! ತಾವು ಮೋಹರಹಿತರಾಗಿರುವಿರಿ, ತಮಗೆ ನಾನು ಪ್ರಣಾಮವನ್ನು ಮಾಡುತ್ತೇನೆ, ನನ್ನನ್ನು ಯಾವಾಗಲೂ ಸ್ಮರಣೆಯಲ್ಲಿಡಿರಿ." ಹೇಳಿರಿ, ರಚನೆಯು ಎಷ್ಟು ಭಾವಪೂರ್ಣ ಹಾಗೂ ಉತ್ಕೃಷ್ಟವಾಗಿಲ್ಲ?

(೫) ಯುಕ್ತ್ಯನುಶಾಸನ — ಆಚಾರ್ಯರ ಈ ಗ್ರಂಥವು ಕೂಡ ಬಹಳ ಮಹತ್ವಶಾಲಿ ಹಾಗೂ ದರ್ಶನೀಯವಾಗಿದೆ. ಇದರಲ್ಲಿ ಒಟ್ಟಿಗೆ ೬೪ ಪದ್ಯಗಳುಂಟು. ಪದ್ಯದ ಪ್ರತಿಯೊಂದು ಪದವು ವಿಶೇಷ ಅರ್ಥಗೌರವವುಳ್ಳುದಾಗಿದೆ. ಆಚಾರ್ಯರು ಈ ೬೪ ಪದ್ಯಗಳ ಮೂಲಕ ಸ್ವಮತ ಮತ್ತು ಪರಮತಗಳ ಗುಣದೋಷಗಳ ವರ್ಣನೆಯನ್ನು ಬಹಳ ರೋಚಕ ಶೈಲಿಯಿಂದ ಮಾಡಿದ್ದಾರೆ. ಇದರಲ್ಲಿ ಅಟಲಯುಕ್ತಿಗಳ ಮೂಲಕ ಬಹಳ ಗಾಂಭೀರ್ಯದಿಂದ ನಿತ್ಯತ್ವ ಮೊದಲಾದ ಪ್ರತಿಯೊಂದು ವಿಷ ಯದ ಉಲ್ಲೇಖ ಮಾಡಲ್ಪಟ್ಟಿದೆ. ನಮೂನೆಗಾಗಿ ಇದರ ಎರಡು ಪದ್ಯಗಳನ್ನು ಕೆಳಗೆ ಬರೆದಿರುವೆವು:—

ಭಾವೇಷು ನಿತ್ಯೇಷು ವಿಕಾರಹಾನೇಃ
ನ ಕಾರಕವ್ಯಾಪೃತ ಕಾರ್ಯಯುಕ್ತಿಃ ।
ನ ಬಂಧಭೋಗೋ ನ ಚ ತದ್ವಿಮೋಕ್ಷಃ
ಸಮಸ್ತದೋಷಂ ಮತಮನ್ಯದೀಯಮ್ ॥

ಪದಾರ್ಥಗಳನ್ನು ಸರ್ವಥಾನಿತ್ಯವೆಂದು ಒಪ್ಪುವುದರಿಂದ ಅವುಗಳಲ್ಲಿ ಯಾವ ಪ್ರಕಾರದ ವಿಕಾರ (ಪರ್ಯಾಯ) ವುಂಟಾಗುವುದೇ ಇಲ್ಲ. ಯಾವಾಗ ವಿಕಾರವುಂಟಾಗುವುದಿಲ್ಲವೋ ಕರ್ತೃ, ಕರ್ಮ, ಇತ್ಯಾದಿ ಕಾರಕಗಳ ವ್ಯಾಪಾರವು ಕೂಡ ಆಗಲಾರದು. ಕಾರಕವ್ಯಾಪಾರಗಳ ಅಭಾವದಿಂದ ಕಾರ್ಯದ ಅಭಾವವು ಕೂಡ ಅನಿವಾರ್ಯವಾಗಿದೆ. ಇದರಿಂದ ಬಂಧ, ತತ್ಫಲ ಹಾಗೂ ಮೋಕ್ಷ ಇತ್ಯಾದಿ ಯಾವ ವಸ್ತುವು ಕೂಡ ಪರಮತದಲ್ಲಿ ನಿಲ್ಲಲಾರದು. ಅದುದರಿಂದ ಪರಮತವು ಸರ್ವಥಾ ಸದೋಷವಾಗಿದೆ.

ಸಾಮಾನ್ಯವಾಗಿ ಇದೇ ಆಶಯವುಳ್ಳ ಮತ್ತು ಸರ್ವಥಾ ಕ್ಷಣಿಕೈಕಾಂತವಾದವನ್ನು ಖಂಡನೆ ಮಾಡುವಂಥಾ ಒಂದು ಶ್ಲೋಕವನ್ನು ಇಲ್ಲಿ ಉದ್ಧೃತಮಾಡಿ ಈ ಲೇಖನವನ್ನು ಸಂಪೂರ್ಣ ಮಾಡುತ್ತೇನೆ. "ನ ಬಂಧಮೋಕ್ಷೌ ಕ್ಷಣಿಕೈಕಸಂಸ್ಥೌ ನ ಸಂವೃತಿಃ ಸಾಽಪಿ ಮೃಷಾಸ್ವಭಾವಾ । ಮುಖ್ಯಾದೃತೇ ಗೌಣವಿಧಿರ್ನ ದೃಷ್ಟೋ ವಿಭ್ರಾಂತ ದೃಷ್ಟಿಸ್ತವ ದೃಷ್ಟಿತೋಽನ್ಯಾ"॥ ಅಸ್ತು,

ಸೋಽಯಂಸಮಂತಭದ್ರಾರ್ಯೋರಾಜತಾಂ ಮಮ ಮಾನಸೇ।
ಯೇನ ದುರ್ವಾದಿವೃಂದೋತ್ರ ನಿರ್ಜಿತೋ ನಿಜತೇಜಸಾ ॥

---

# ಕನ್ನಡಿಗರ ತಾಯಿ

[ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯವರು ಕರ್ನಾಟಕ ರಾಷ್ಟ್ರಗೀತವೊಂದನ್ನು ಆರಿಸಿ ಗೊತ್ತು ಪಡಿಸುವವರಿದ್ದಾರೆ. ಆದ್ದರಿಂದ ಕವಿಗಳೂ ಪತ್ರಿಕಾಕಾರರೂ ಹಳೆ ಹಾಗೂ ಹೊಸ ರಾಷ್ಟ್ರಗೀತಗಳನ್ನು ರಾಷ್ಟ್ರಗೀತಮಂಡಲದ ಕಾರ್ಯದರ್ಶಿಗಳಾದ 'ವಿ. ಸೀತಾರಾಮಯ್ಯನವರು, ಪರಿಷತ್ಪತ್ರಿಕೆ, ಕಾರ್ಯಾಲಯ ಬೆಂಗಳೂರು' ಈ ವಿಳಾಸಕ್ಕೆ ಕಳಿಸಬೇಕು.

—ಸಂ. ಜ. ಕ.]

ತಾಯೆಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ !
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ !
ನಮ್ಮ ತಪ್ಪನೆನಿತೊ ತಾಳ್ವೆ,
ಅಕ್ಕರೆಯಿಂದೆಮ್ಮನಾಳ್ವೆ ;
ನೀನೆ ಕಣಾ ನಮ್ಮ ಬಾಳ್ವೆ ,
ನಿನ್ನ ಮರೆಯಲಮ್ಮೆವು—
ತನು ಕನ್ನಡ, ಮನ ಕನ್ನಡ, ನುಡಿ ಕನ್ನಡವೆಮ್ಮವು !

ಹಣ್ಣನೀವ ಕಾಯನೀವ ಪರಿಪರಿಯ ಮರಂಗಳೊ,
ಪತ್ರವೀವ ಪುಷ್ಪವೀವ ಲತೆಯ ತರತರಂಗಳೊ,
ತನೆಯ ಕೆನೆಯ ಗಾಳಿಯೊ,
ಖಗಮೃಗೋರಗಾಳಿಯೊ,
ನದಿನಗರನಗಾಳಿಯೊ !
ಇಲ್ಲಿಲ್ಲದುದುಳಿದುದೆ ? —
ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೆ !

ಬುಗರಿಯೊಯೆ ಶಬರಿ ಕಾಯೆ, ರಾಮನಿಲ್ಲಿ ಬಂದನೆ ?
ಕನ್ನಡ ದಳ ಕೂಡಿಸಿ ಖಳ ದಶಾಸ್ಯನಂ ಕೊಂವನೆ ?
೧ ಪಾಂಡವರಜ್ಞಾತಮಿದ್ದ,
ವಲಲಂ ಕೀಚಕನ ಗೆದ್ದ,
೨ ಕುರುಕುಲ ಮುಂಗದನಮೆದ್ದ
ನಾಡು ನೋಡಿದಲ್ಲವೆ ?
ಮದುವೆ ಇತ್ತಲಾದುದುತ್ತರಾಭಿಮನ್ಯುಗಲ್ಲವೆ ?

ಶಕವಿಜೇತನಮರ ೩ ಶಾತವಾಹನಾಖ್ಯನೀ ಶಕಂ
ನಿನ್ನೊಳೆಂದು ತೊಡಗಿ ಸಂದುದರ್ಧ ಭರತದೇಶಕಂ !
ಚಳುಕ್ಯ ರಾಷ್ಟ್ರಕೂಟರೆಲ್ಲಿ,
ಗಂಗರಾ ಕದಂಬರೆಲ್ಲಿ,
ಹೊಯ್ಸಳ ಬಲ್ಲಾಳರೆಲ್ಲಿ,
ವಿಜಯನಗರ ಭೂಪರು
ಆಳ್ದರಿಲ್ಲಿಯಲ್ಲದೆಲ್ಲಿ, ತಾಯೆ, ಮೇಣಲೂಪರು ?

ಜೈನರಾದ ಪೂಜ್ಯಪಾದ ಕೊಂಡಕುಂದ ವರ್ಯರ,
ಮಧ್ವಯತಿಯೆ ಬಸವಪತಿಯೆ ಮುಖ್ಯ ಮತಾಚಾರ್ಯರ
೪ ಶರ್ವ ಪಂಪ ರನ್ನರ,
ಲಕ್ಷ್ಮೀಪತಿ ಜನ್ನರ,
ಷಡಕ್ಷರಿ ಮುದ್ದಣ್ಣರ,
ಪುರಂದರವರೇಣ್ಯರ,
ತಾಯೆ, ನಿನ್ನ ಬಸಿರೆ ಹೊನ್ನಗನಿ ವಿದ್ಯಾರಣ್ಯರ !

ಹಳೆಯ ಬೀಡ ೫ ಬೇಲನಾಡ ಮಾಡಮೆನಿತೊ ಸುಂದರಂ !
೬ಬಿಳಿಯ ಕೊಳದ ಕಾರಕಳದ ೭ನಿಡುಕರೆನಿತೊ ಬಂಧುರಂ।
ಇಲ್ಲಿಲ್ಲದ ಶಿಲ್ಪಮಿಲ್ಲ,
ನಿನ್ನ ಕಲ್ಲೆ ನುಡಿವುದಲ್ಲ !
ಹಿಂಗತೆಯಿನಿವಾಲ ಸೊಲ್ಲ-
ನೆಮ್ಮ ತೃಷೆಗೆ ದಕ್ಕಿಸು—
ಹೊಸತು ಕಿನ್ನರಿಯಲಿ ನಿನ್ನ ಹಳೆಯ ಹಾಡನುಕ್ಕಿಸು !

ಆರ್ಯರಿಲ್ಲಿ ಬಾರದಲ್ಲಿ ಬಾಸೆ ಎಲ್ಲಿ ಸಕ್ಕದಂ ?
ನಿನ್ನ ನುಡಿಯಿನಚ್ಚುಪಡಿಯನಾಂತರೆನಿತೊ ತಕ್ಕುದಂ !
ಎನಿತೊ ಹಳೆಯ ಕಾಲದಿಂದ
ಬರ್ದಿಲವಿಾ ಬಾಸೆಯಿಂದ
ಕಾಲನ ಮೂದಲಿಸಿ ನಿಂದ
ನಿನಗೆ ಮರವೆ ಹೊದೆವುದೆ ?
ನಿನ್ನ ನುಡಿಗೆ ನಿನ್ನ ನಡೆಗೆ ಮುದುಪುಮೆಂದುಮೊದವುದೆ ?

ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ !
ಕನ್ನಡ ಕಸ್ತೂರಿಯನ್ನ
ಹೊಸತುಸಿರಿಂ ತೀಡದನ್ನ
ಸುರಭಿ ಎಲ್ಲಿ ? ನೀನದನ್ನ
ನವಶಕ್ತಿಯಿನೆಬ್ಬಿಸು—
ಹೊಸ ಸುಗಂದದೊಸಗೆಯಿಂದ ಜಗದಿ ಹೆಸರ ಹಬ್ಬಿಸು !

ನಿನ್ನ ಪಡೆಯ ಕತೆಯ ಕಡೆಯ ನುಡಿಯೆ ತಾಳಿಕೋಟೆಯು?
ಕಡಲಿನೊರತೆಗೊಳವೆ ಕೊರತೆ ? ಬತ್ತದು ನಿನ್ನೂಟೆಯು !
ಸೋಲು ಗೆಲ್ಲವಾರಿಗಿಲ್ಲ ?
ಸೋತು ನೀನೆ ಗೆದ್ದಿಯಲ್ಲ ?
ನಿನ್ನನಳಿವು ತಟ್ಟಲೊಲ್ಲ !—
ತಾಳಿಕೋಟೆ ಸಾಸಿರಂ
ಬಾಹುಬಲದಿ ಮನೋಬಲದಿ ತಾಯೆ ಗೆಲುವೆ ಭಾಸುರಂ !

ಕುಗ್ಗದಂತೆ ಹಿಗ್ಗಿಪಂತೆ ನಿನ್ನ ಹೆಸರ ಟೆಕ್ಕೆಯಂ,
ನೀಗದಂತೆ ಸಾಗಿಪಂತೆ ನಿನ್ನ ನುಡಿಯ ಢಕ್ಕೆಯಂ,
ನಮ್ಮೆದೆಯಂ ತಾಯೆ ಬಲಿಸು,
ಎಲ್ಲರ ಬಾಯಲ್ಲಿ ನೆಲಸು,
ನಮ್ಮ ಮನಮನೊಂದೆ ಕಲಸು !
ಇದನೊಂದನೆ ಕೋರುವೆ—
ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ ?

—ಗೋವಿಂದ ಪೈ

೧ ಧಾರವಾಡ ಜಿಲ್ಲೆಯಲ್ಲಿರುವ 'ಹಾನಗಲ್ಲು' ವಿರಾಟನ ರಾಜಧಾನಿ ಎಂದು ಪ್ರಖ್ಯಾತವಿದೆ. ೨ ಗೋಗ್ರಹಣದ ಯುದ್ಧ. ೩ ಶಾಲಿವಾಹನ. ೪ ಶರ್ವನೆಂದು ನೃಪತುಂಗನ ಹೆಸರು. ೫ ಬೇಲೂರು. ೬ ಶ್ರವಣಬೆಳ್ಗೊಳ. ೭ ನಿಡುನಿಂದಿರುವ ಗೊಮ್ಮಟ ಮೂರ್ತಿಗಳು.

# ಹಿಂದುಸ್ಥಾನ ಸರಕಾರದ ಸಾಲದ ಸೂಲವು!

ಲೇಖಕರು :—ಶ್ರೀ. ಗು. ಕೃ. ವಾಳವೇಕರ, B. A. LL. B., ಹುಬ್ಬಳ್ಳಿ

The Poverty of India is not an opinion, it is a fact.

—The Rt. Hon'ble Ramsay Mocdonald

ರಾಷ್ಟ್ರೀಯ ಮಹಾಸಭೆಯ ಲಾಹೋರದ ಅಧಿವೇಶನದಲ್ಲಿ ಪಾಸಾದ ನಿರ್ಣಯವು ಈ ವಿಷಯದ ಕಡೆಗೆ ಜನರ ಮನಸ್ಸನ್ನು ಸೆಳೆಯಲಾರಂಭಿಸಿದೆ. ಹಿಂದುಸ್ಥಾನ ಸರಕಾರದ ಸಾಲದ ಬಗ್ಗೆ ರಾಷ್ಟ್ರೀಯ ಸಭೆಯ ಗಯೂದ ಅಧಿವೇಶನವು ಸಹ ಒಂದು ನಿರ್ಣಯವನ್ನು ಪಾಸು ಮಾಡಿತ್ತು. ರಾಷ್ಟ್ರೀಯ ಸಭೆಯ ನಿರ್ಣಯವು ನಿಮಿತ್ತಕಾರಣವು. ಜನರ ಅಸಹ್ಯವಾದ ಬಡತನವೂ ಅವರ ಕಂಗಾಲಸ್ಥಿತಿಯೂ ಆರ್ಥಿಕ ಅವನತಿಯೂ ತಿಳಿದವರನ್ನು ವಿಚಾರಮಾಡಲಿಕ್ಕೆ ಹಚ್ಚಿವೆ. ನಮ್ಮ ದುರವಸ್ಥೆಯ ದಾರಿದ್ರ್ಯಕ್ಕೆ ಅನೇಕ ಕಾರಣಗಳು ಉಂಟು. ಅವುಗಳಲ್ಲಿ ರಾಷ್ಟ್ರೀಯ ಸರಕಾರದ ಅಭಾವವು ಮುಖ್ಯವಾದದ್ದು. ಈಗಿನ ರಾಜ್ಯಪದ್ಧತಿಯಿಂದಾಗುವಷ್ಟು ಸತ್ತ್ವಹರಣವು (Exploitation) ಮೊದಲು ಎಂದೂ ಆಗಿದ್ದಿಲ್ಲ. ಹಿಂದುಸ್ಥಾನ ಸರಕಾರದ ಸಾಲದ ಇತಿಹಾಸವೊಂದೇ ಈಗಿನ ರಾಜ್ಯಪದ್ಧತಿಯು ಎಷ್ಟು ದೋಷಮಯವೂ ಹಾನಿಕಾರಕವೂ ಇದೆಯೆಂಬದನ್ನು ನಿಚ್ಚಳವಾಗಿ ತೋರಿಸುತ್ತದೆ.

ಹಿಂದುಸ್ಥಾನ ಸರಕಾರದ ಸಾಲದ ಉಲ್ಲೇಖವು ಈ ಮೊದಲೆ ಜಯಕರ್ನಾಟಕದಲ್ಲಿ ಪ್ರಸಿದ್ಧವಾದ ಕೆಲವು ಲೇಖಗಳಲ್ಲಿ ಬಂದಿದೆ—ಪರಕೀಯ ಭಾಂಡವಲದ ಮೇಲೆ ಒಂದು ಸ್ವತಂತ್ರ ಬರಹವು ಹಿಂದಿನ ಒಂದು ಸಂಚಿಕೆಯಲ್ಲಿ ಅಚ್ಚಾಗಿದೆ. ಕೆಲವು ಮಟ್ಟಿಗೆ ಚರ್ವಿತಚರ್ವಣದ ದೋಷಕ್ಕೆ ಗುರಿಯಾದರೂ ಚಿಂತೆಯಿಲ್ಲೆಂದು ಜಯಕರ್ನಾಟಕದ ಸನ್ಮಾನನೀಯ ಸಂಪಾದಕರ ಸೂಚನೆಗನುಸರಿಸಿ ಈ ವಿಷಯವನ್ನು ಕುರಿತು ಒಂದೆರಡು ಚಿಕ್ಕ ಲೇಖಗಳನ್ನು ಬರೆಯಲು ಯತ್ನಿಸುತ್ತೇನೆ. ವಿಷಯವು ಬಹಳ ಸ್ವಾರಸ್ಯವಾದದ್ದು, ಉಪಯುಕ್ತವಾದದ್ದು ಎಲ್ಲರೂ ಅರಿತುಕೊಳ್ಳಲು ಅವಶ್ಯವಾದದ್ದು.

ಈಗಿನ ಹಿಂದುಸ್ಥಾನ ಸರಕಾರವು ರಾಷ್ಟ್ರೀಯ ಸರಕಾರವಲ್ಲ. ಅದರ ಕಾರಭಾರವು ಹಿಂದೀಜನರ ಸಮ್ಮತಿಯಿಂದ ಅವರ ಇಚ್ಛಾನುಸಾರವಾಗಿ ನಡೆದಿಲ್ಲ. ಆದಕಾರಣ ಅಂಥ ಕಾರಭಾರದಿಂದಾದ ಎಲ್ಲ ಸಾಲದ ಹೊರೆಯನ್ನು ಹೊರಲಿಕ್ಕೆ ನಾವು ಬದ್ಧರಿಲ್ಲ. ನಮ್ಮ ಹಿತಕ್ಕಾಗಿ ತೆಗೆದು ನಮ್ಮ ಹಿತಕ್ಕಾಗಿ ಉಪಯೋಗವಾದ ಸಾಲವನ್ನು ಕೊಡಲಿಕ್ಕೆ ಮಾತ್ರ ನಾವು ಹೊಣೆಗಾರರೆಂದು ನಿಜವಾದ ದೇಶಹಿತತತ್ಪರರಾದ ಹಿಂದೀ ಮುಖಂಡರ ಮತ. ಈ ಪ್ರಶ್ನೆಯನ್ನು ನಿಃಪಕ್ಷಪಾತಬುದ್ಧಿಯಿಂದ ನಿರ್ಣಯಿಸಿ ನ್ಯಾಯವಾಗಿ ನಾವು ಕೊಡಬೇಕಾಗುವ ಸಾಲವನ್ನು ಕೊಡಲಿಕ್ಕೆ ನಾವು ಸಿದ್ಧರಿದ್ದೇವೆಂದು ಹೇಳಿದರೆ ಆಂಗ್ಲರಿಗೆ ಇಷ್ಟೊಂದು ರೋಷವೇಕೆ ?

ಹಿಂದುಸ್ಥಾನ ಸರಕಾರದ ಸಾಲದ ಉಗಮವು, ಬಲಿಷ್ಠ ಹಾಗೂ ಚಿಕ್ಕ ರಾಷ್ಟ್ರಗಳ ಸಂರಕ್ಷಣೆಗಾಗಿ ಹೆಣಗಾಡುತ್ತವೆಂದು ಮೆರೆಯುವ "ನ್ಯಾಯಪ್ರಿಯ" ಬ್ರಿಟಿಶ ಜನರಿಗೆ ಕುಂದು ತರುವಂಥದೂ ಕಲಂಕಹಚ್ಚುವಂಥದೂ ಆಗಿದೆ. ಈ ಸಾಲದ ಉತ್ಪತ್ತಿಯೆಂದರೆ ಹಿಂದೀಜನರ ರಾಜಕೀಯ ಹಾಗೂ ಆರ್ಥಿಕ ದುರ್ದೆಶೆಯ ದ್ಯೋತಕವಾಗಿದೆ. ಈ ಸಾಲದ ಮೂಲವು ನಮ್ಮ ಸ್ವಾತಂತ್ರ್ಯಹರಣದ ಕುರುಹಾಗಿದೆ. ಈ ಸಾಲದ ಬೆಳವಣಿಗೆಯು ಬಹಳ ಉದ್ವೇಗಜನಕವಾಗಿದೆ. ಕಂಪನಿ ಸರಕಾರದ ಹಿಂದುಸ್ಥಾನದಮೇಲಿನ ಸ್ವಾಮಿತ್ವವು ಬ್ರಿಟಿಶರ ಸ್ವಾಧೀನವಾದಬಳಿಕ ಹಿಂದೀಜನರ ರಾಜ್ಯಸಂಪಾದನೆಗಾಗಿ ಕಂಪನಿ ಸರಕಾರಕ್ಕಾದ ಸಾಲವನ್ನು ಹರಿಯುವ ಜವಾಬದಾರಿಯನ್ನು ಹಿಂದುಸ್ಥಾನ ಸರಕಾರದವರು ಹೊತ್ತರು. ಕಂಪನಿಸರಕಾರದ ಕಾರಭಾರವು ಯಾವ ಮಾದರಿಯದಿತ್ತು, ಅವರ ಆಡಳಿತೆಯು ಎಷ್ಟು ದಕ್ಷತೆಯಿಂದ ನಡೆದಿತ್ತು ಎಂಬುದೆಲ್ಲ ಎಲ್ಲರಿಗೆ ಗೊತ್ತಿದ್ದ ಸಂಗತಿಯು. ಉತ್ಪನ್ನಕ್ಕೂ ಖರ್ಚಿಗೂ ಮೇಳುಗೂಡುತ್ತಿರಲಿಲ್ಲ. ಖರ್ಚು ಹೆಚ್ಚಾದಕೂಡಲೆ ಸಾಲತೆಗೆಯಲಿಕ್ಕೆ ಕಂಪನಿಸರಕಾರವು ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಶೀಕ, ಮರಾಠಾ, ಅಫಗಾನ್ ಯುದ್ಧಗಳಿಗಾಗಿ ಕಂಪನಿಸರಕಾರಕ್ಕಾದ ಸಾಲವನ್ನು ನಾವು ತೀರಿಸುವದೆಂದರೆ ನಮ್ಮ ಸ್ವಾತಂತ್ರ್ಯವನ್ನು ಕಳೆಕೊಂಡ

ಪಾರತಂತ್ರ್ಯವನ್ನು ದುಡ್ಡು ಕೊಟ್ಟು ಕೊಂಡುಕೊಂಡೆವೆಂದು ಹೇಳಬೇಕಾಗಿದೆ. ಶೀಕರನ್ನು ಹಣ್ಣಿಗೆ ತರುವದಕ್ಕೆ ಮರಾಠಿಗರನ್ನು ಮೂಲಿಗೊತ್ತಲಿಕ್ಕೆ ಟೀಪುವಿನ ರಾಜ್ಯವನ್ನಪಹರಿಸಲಿಕ್ಕೆ ಕಂಪನಿಸರಕಾರದವರು ಮಾಡಿದ ಸಾಲವನ್ನು ನಾವು ತೀರಿಸುವದೆಂದರೆ ನಾವು ಸ್ವಾಭಿಮಾನಶೂನ್ಯರೆಂದೂ ಚಿರಕಾಲ ಪಾರತಂತ್ರ್ಯದಲ್ಲಿ ಕೊಳೆಯಲು ತತ್ಪರರಿರುವೆವೆಂದೂ ಜಗತ್ತಿಗೆ ಡಂಗುರ ಹೊಡೆದು ಸಾರಿದಂತೆಯೆ ಸರಿ. ಇಂಡಿಯಾ ಕಂಪನಿಯು ೧೬೦೦ ರಲ್ಲಿ ಸ್ಥಾಪಿತವಾಯಿತು. ಕಂಪನಿಸರಕಾರದ ಆಡಳಿತೆಯಲ್ಲಿ ಈ ಭಾಂಡವಲದ ಪಾಲುಗಾರರಿಗೆ ಅವರ ಪಾಲನ್ನು ಕೊಡುವದಕ್ಕಾಗಿ ಆ ಸರಕಾರಕ್ಕೆ ಅನೇಕಸಾರೆ ಸಾಲತೆಗೆಯಬೇಕಾಯಿತು. ಮುಂದೆ ಕಂಪನಿಸರಕಾರದ ಭಾಂಡವಲವನ್ನು ತಾವು ಕೊಡುತ್ತೇವೆಂದು ಒಪ್ಪಿ ಬ್ರಿಟಿಶರು ಕಂಪನಿಸರಕಾರದ ರಾಜ್ಯವನ್ನು ತಮ್ಮ ಸ್ವಾಧೀನಕ್ಕೆ ತಕ್ಕೊಂಡರು. ಅಂದರೆ ೧೬೦೦ರಲ್ಲಿ ಕೂಡಿದ ಭಾಂಡವಲದ ಬಡ್ಡಿಯನ್ನು ಹಿಂದುಸ್ಥಾನವು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷರೀತಿಯಿಂದ ಈ ವರೆಗೆ ಕೊಡುತ್ತ ಬಂದಿದೆ. ಇನ್ನೂ ಎಷ್ಟು ದಿವಸ ಈ ಬಡ್ಡಿಯನ್ನು ತೆತ್ತಬೇಕೋ ತಿಳಿಯದು. ಹಿಂದೀ ಜನರ ಶೌರ್ಯದಿಂದ ಹಿಂದೀಜನರ ಹಣದಿಂದ ಸಂಪಾದಿಸಿದ ಈ ರಾಜ್ಯದ ಒಡೆಯರು ಯಾರು ! ತಮ್ಮ ಬಿಸಿ ಬಿಸಿ ನೆತ್ತರವನ್ನು ಸುರಿಸಿ ಸ್ವಜನರ ಕೊಲೆಮಾಡಿ ಪರಕೀಯರಿಗೆ ರಾಜ್ಯಸಂಪಾದನೆ ಮಾಡಿಕೊಟ್ಟು ಅವಕ್ಕಾಗಿ ಪರಕೀಯರಿಗಾದ ಸಾಲವನ್ನು ತೀರಿಸುವ ಹೊಣೆಯನ್ನು ಹೊತ್ತುಕೊಂಡ ಜನಾಂಗವು ಪ್ರಾಚೀನ ಹಾಗೂ ಅರ್ವಾಚೀನ ಇತಿಹಾಸಗಳಲ್ಲಿ ಒಂದೂ ಇಲ್ಲ.

ಪ್ಲಾಸಿ ಕಾಳಗವಾದನಂತರ ಅಂದರೆ ಸುಮಾರು ೧೭೫೭ರಿಂದು ವ್ಯಾಪಾರಕ್ಕಾಗಿ ಬಂದ ಈಷ್ಟ ಇಂಡಿಯಾ ಕಂಪನಿಯು ಬಂಗಾಲದಂಥ ಸಂಪನ್ನ "ಸುಜಲ, ಸುಫಲ, ಚಿರಸುಖಕೊಡುವ" ಪ್ರಾಂತದ ಒಡೆತನವನ್ನು ಪಡಕೊಂಡ ಬಳಿಕ ಕಂಪನಿಯ ಡಾಯರೆಕ್ಟರರಿಗೂ ನೌಕರರಿಗೂ ದ್ರವ್ಯಲೋಭವು ಅಸಿವಾರವಾಯಿತು. ಪ್ರತಿಯೊಬ್ಬನು ಸ್ವಲ್ಪಕಾಲದಲ್ಲಿ ಸಂಪನ್ನನಾಗಬೇಕೆಂದು ಯತ್ನಿಸಹತ್ತಿದನು. ಇಂಗ್ಲಂಡಕ್ಕೆ ಮರಳಿ ಹೋದ ಕಂಪನಿ ನೌಕರರ ಧನದೌಲತ್ತನ್ನು ನೋಡಿ ಇಂಗ್ಲಿಷ ಜನರು ಬೆರಗಾದರು. ಈ ನೌಕರರಿಗೆ ನವಾಬರೆಂಬ ಬಿರುದು ಪ್ರಾಪ್ತವಾಯಿತು. ಸುವರ್ಣಭೂಮಿಯಾದ ಹಿಂದುಸ್ಥಾನಕ್ಕೆ ಹೋಗಿ ಬಂಗಾರವನ್ನು ಬಳಕೊಂಡುಬರಬೇಕೆಂಬ ಹವ್ಯಾಸವು ಹುಟ್ಟಿತು. ಕಂಪನಿಯ ಪಾಲುಗಾರರು ತಮಗೆ ೧೦೦ಕ್ಕೆ ೬ರಿಂದ ೧೨ರ ವರೆಗೆ ಬಡ್ಡಿ ದೊರೆಯಲೇಬೇಕೆಂದು ಅನ್ನಹತ್ತಿದರು. ಆ ಕಾಲದ ಪತ್ರವ್ಯವಹಾರವನ್ನು ನೋಡಿದರೆ ಈ ದುಡ್ಡಿನ ಆಸೆಬುರುಕತನಕ್ಕೆ ಪಾರಾವಾರವೇ ಇದ್ದಿಲ್ಲವೆಂದು ಕಾಣುತ್ತದೆ. ಇಂಗ್ಲಂಡದ ಸರಕಾರಕ್ಕೂ ಹೀಗೆ ಅನಾಯಾಸವಾಗಿ ದೊರೆತ ದ್ರವ್ಯದಲ್ಲಿ ಕೆಲವು ಭಾಗವಾದರೂ ದೊರೆಯಬೇಕೆಂದೆನಿಸಹತ್ತಿತು. ಕಂಪನಿಗೆ ಚಾರ್ಟರಕೊಡುವ ಮತ್ತು ಬೇರೆ ರೀತಿಯಿಂದ ಅದರ ಕಾರಭಾರವನ್ನು ನಿಯಂತ್ರಿಸುವ ಅಧಿಕಾರವು ಇಂಗ್ಲಂಡದ ಸರಕಾರದ ಕಡೆಗಿದ್ದದರಿಂದ ಅವರು ೧೭೬೭ರಲ್ಲಿ ತಮಗೆ ನಾಲ್ಕು ಲಕ್ಷ ಪೌಂಡುಗಳನ್ನು ಪ್ರತಿವರ್ಷ ಕಂಪನಿಯವರು ಕೊಡಬೇಕೆಂದು ಕರಾರು ಮಾಡಿಕೊಂಡರು. ಆದರೆ ಹೀಗೆ ಎಲ್ಲರೂ ಇದ್ದದ್ದುಬಿದ್ದದ್ದನ್ನೆಲ್ಲ ಹೀರಿಕೊಳ್ಳಹತ್ತಿದರೆ ಕುಬೇರನ ಸಂಪತ್ತು ಸಹ ಈಡಾಗದು. ಅದರಿಂದ ಕಂಪನಿ ಸರಕಾರಕ್ಕೆ ಸಾಲ ತೆಗೆಯಬೇಕಾಯಿತು. ಇದಲ್ಲದೆ ಹಿಂದುಸ್ಥಾನದಲ್ಲಿ ಬಂದ ಕ್ಲೈವ ವಾರನಹೇಸ್ಟಿಂಗ್ಸ ಮೊದಲಾದ ಮಹತ್ವಾಕಾಂಕ್ಷಿ ಕುಟಿಲನೀತಿತತ್ಪರ ನೌಕರರು ಕಂಪನಿಯ ರಾಜ್ಯವನ್ನು ಬೆಳಿಸುವ ಸೆಳವಿಗೆ ಬಿದ್ದರು. ಅವಕ್ಕಾಗಿ ಹಣವನ್ನು ವಿಪರೀತವಾಗಿ ವೆಚ್ಚಮಾಡಬೇಕಾಯಿತು. ಸಾಲವಾಯಿತು. ರಾಜ್ಯಸಂಪಾದನೆಯ ಹವ್ಯಾಸ ಹುಟ್ಟಿದಂದಿನಿಂದ ವ್ಯಾಪಾರವು ಕುಗ್ಗಿತು. ವ್ಯಾಪಾರ ಕಟ್ಟಾದದ್ದಕ್ಕಿಂತ ಲಾಭವಿಲ್ಲದಂತಾಯಿತು. ಆದರೆ ಕಂಪನಿಯ ಮಾಲಕರಿಗೆ ಹಿಂದುಸ್ಥಾನದಲ್ಲಿಯ ಸಾಮಾನುಗಳಮೇಲೆ ಹೆಚ್ಚು ಹೆಚ್ಚು ಆಸೆಯು ಹುಟ್ಟಹತ್ತಿತು. ಈ ಸರಕುಗಳನ್ನು ಕೊಳ್ಳಲಿಕ್ಕೆ ಸಾಲಮಾಡಬೇಕಾಯಿತು. ಈ ಕಾಲದ ಕಂಪನೀ ಸರಕಾರದ ಕಾರಭಾರದ ದಿಗ್ದರ್ಶನವನ್ನು ಮುತ್ತೊಮ್ಮೆ ಮಾಡುವದು ಉಚಿತವು. ಇಂಗ್ಲಿಷ ಜನರು ಬರೆದ ಗ್ರಂಥಗಳನ್ನು ಓದಿದರೂ ಕೂಡ ನಮ್ಮ ಮನಸು ತಲ್ಲಣಗೊಳ್ಳದೆ ಇರದು. ೧೮೦೩ರಲ್ಲಿ ಕಂಪನಿ ಸರಕಾರದ ಲೆಖ್ಖ ಇಡುವ ಪದ್ಧತಿಯನ್ನು ನೋಡಿ ಬೆರಗಾಗಿ ಕಂಪನಿಯ ಸ್ಥಿತಿಗತಿಯು ಹೇಗಿದೆಯೆಂಬದನ್ನು ಬ್ರಿಟಿಶ ಪಾರ್ಲಮೆಂಟಿನವರು ಪರೀಕ್ಷಿಸಿ ಪ್ರಕಟಿಸಿದರು. ಇಂಗ್ಲಂಡದಲ್ಲಿಯ ಕಂಪನಿಯ ಎಲ್ಲ ಆಸ್ತಿಯ ಕ್ರಯವು ೭೭,೪೪,೬೯೦ ಪೌಂಡುಗಳಿದ್ದರೆ ಸಾಲವು ೯೨,೧೯,೧೧೫ ಪೌಂಡು ಇತ್ತು. ಅಂದರೆ ಆಸ್ತಿಗಿಂತ ೧೪,೭೫,೪೨೫ ಪೌಂಡು ಹೆಚ್ಚು ಸಾಲವಿತ್ತು.

೧೮೩೩ರಲ್ಲಿ ಕಂಪನಿಗೆ ಹೊಸ ಸನದು ಕೊಡುವಕಾಲಕ್ಕೆ ಬ್ರಿಟಿಶ ಸರಕಾರದವರು ಕೆಳಗೆ ಕಾಣಿಸಿದ ಶರ್ತುಗಳನ್ನು ಕರಾರ ಪತ್ರದಲ್ಲಿ ಕಾಣಿಸಿದರು.

(೧) ಕಂಪನಿ ಸರಕಾರದವರು ರಾಜ್ಯಕಾರಭಾರ ಮಾಡ ಬೇಕಲ್ಲದೆ ಯಾವತರದ ವ್ಯಾಪಾರ ಮಾಡಬಾರದು.

(೨) ಕಂಪನಿ ಸರಕಾರದವರು ಯಾವದೇ ಕಾರಣಕ್ಕಾಗಿ ಸಾಲ ತೆಗೆದರೆ ಆ ಸಾಲವನ್ನು ತೀರಿಸುವ ಹೊಣೆಯು ಹಿಂದುಸ್ಥಾನದ ಮೇಲಿದೆ.

(೩) ಹಿಂದುಸ್ಥಾನದ ಬೊಕ್ಕಸದೊಳಗಿಂದ ಕಂಪನಿಯು ಭಾಂಡವಲದ ಮೇಲೆ ೧೦೦ಕ್ಕೆ ೧೦ತ್ತಿಯಂತೆ ಬಡ್ಡಿ ದೊರೆಯು ಬೇಕು.

(೪) ಮುಂದೆ ಕಂಪನಿಸರಕಾರದ ರಾಜ್ಯವನ್ನು ಬ್ರಿಟಿಶ ಸರಕಾರದವರು ತಕ್ಕೊಂಡರೆ ಕಂಪನಿಯ ಒಂದು ನೂರು ಪೌಂಡಿನ ಭಾಗಕ್ಕೆ ಎರಡು ನೂರು ಪೌಂಡು ಕೊಡಬೇಕು. ಈ ಹಣವನ್ನು ಹಿಂದುಸ್ಥಾನದ ಬೊಕ್ಕಸದೊಳಗಿಂದ ಕೊಡಬೇಕು.

ಕಂಪನಿ ಸರಕಾರದ ರಾಜ್ಯಸೂತ್ರಗಳು ಬ್ರಿಟಿಶ ಸರಕಾರಕ್ಕೆ ಪರಿವರ್ತನವಾಗುವ ವರೆಗೆ ಅಂದರೆ ೧೮೫೮ರ ವರೆಗೆ ಈ ಸಾಲವು ಹೇಗೆ ಬೆಳೆಯಿತೆಂಬದನ್ನು ನೋಡುವ.

೧೭೯೨ರಲ್ಲಿ ಹಿಂದುಸ್ಥಾನದ ಮೇಲೆ ಹೊರಿಸಿದ ಸಾಲವು ೨೦ ಲಕ್ಷಪೌಂಡು ಇತ್ತು. ಹೈದರಅಲ್ಲಿ ಹಾಗು ಟೀಪು ಸುಲ್ತಾನರ ರಾಜ್ಯವನ್ನು ಸೆಳೆದುಕೊಳ್ಳುವದಕ್ಕಾಗಿ ಆದ ಖರ್ಚು ಕೂಡಿ ೧೭೯೯ರಲ್ಲಿ ಅದು ಒಂದು ಕೋಟಿ ಪೌಂಡು ಆಯಿತು. ೧೭೯೯ರಿಂದ ೧೮೧೮ರವರೆಗೆ ಮರಾಠಿಗರನ್ನು ಮುರಿದು ಮೂಲೆಗುಂಪಾಗಿ ಮಾಡಿ ಬಾಜಿರಾಯನ ಕೈಯಲ್ಲಿಯ ರಾಜ್ಯಸೂತ್ರಗಳನ್ನು ಕಸಿದುಕೊಂಡು ಅವನ ಕೈಯಲ್ಲಿ ಜಪಮಾಲೆಯನ್ನು ಕೊಟ್ಟು ಬ್ರಹ್ಮಾವರ್ತದಲ್ಲಿ ಗಂಗಾನದೀತೀರದಲ್ಲಿ ಜಪಕ್ಕೆ ಕಳಿಸುವದಕ್ಕಾಗಿ ಆದ ಖರ್ಚು ಕೂಡಿದ್ದರಿಂದ ಸಾಲದ ರಕಮು ೩ ಕೋಟಿಗೆ ಏರಿತು. ಲಾರ್ಡ ಬೆಂಟಿಂಗರ ಕಾರಕಿರ್ದಿಯಲ್ಲೇನೋ ಸಾಲದ ರಕಮು ೪೦ ಲಕ್ಷ ಪೌಂಡು ಕಡಿಮೆಯಾಯಿತು. ೧೮೪೪ರಲ್ಲಿ ಲಾರ್ಡ ಆಕ್ಲಂಡ ಸಾಹೇಬರ ಆಳಿಕೆಯಲ್ಲಿ ಇಂಗ್ಲಂಡದ ಸರಕಾರದ ಆಗ್ರಹಕ್ಕಾಗಿ ಅಫಗಾನಿಸ್ಥಾನದ ಕೂಡ ಯುದ್ಧ ಹೂಡಿ ಹಿಂದುಸ್ಥಾನದಮೇಲೆ ಒಂದು ಕೋಟಿ ಸಾಲದ ಹೊರೆಯನ್ನು ಕಂಪನಿ ಸರಕಾರದವರು ಹೊರಿಸಿದರು. ಮುಂದೆ ಸಿಂಧ ಪ್ರಾಂತವನ್ನು ಕೈವಶಮಾಡಿಕೊಳ್ಳುವ ಶ್ರೇಯಸ್ಸನ್ನು ಕಂಪನಿ ಸರಕಾರದವರಿಗೆ ಪಡೆದುಕೊಳ್ಳಬೇಕಾಗಿತ್ತು. ೧೮೫೭ರಲ್ಲಿ ೬ ಕೋಟಿ ಪೌಂಡು ಸಾಲವಿತ್ತು. ೩ ವರ್ಷ ಬಂಡಾಯವನ್ನು ಮುರಿಬಡಿಯಲಿಕ್ಕೆ ೧ ಕೋಟಿ ಪೌಂಡು ಖರ್ಚು ಬಂತು.

೧೮೫೮ರಲ್ಲಿ ಕಂಪನಿ ಸರಕಾರದ ರಾಜ್ಯವು ಬ್ರಿಟಿಶ ಸರಕಾರಕ್ಕೆ ಹೋಯಿತು. ರಾಯನಿಗೆ ರಾಜ್ಯವಾದರೆ ರಾಗಿ ಬೀಸುವದು ತಪ್ಪಲಿಲ್ಲವೆಂಬ ನಾಣ್ಣುಡಿಯಂತೆ ಹಿಂದೀ ಜನರಿಗೆ ಅದರಿಂದೇನೂ ಫಲಿತಾಂಶವಾಗಲಿಲ್ಲ. ಕಂಪನಿ ಸರಕಾರದ ಕಾಲದಿಂದ ನಡೆದುಬಂದ ಸತ್ವಹರಣವು (Exploitation) ಅಬಾಧಿತವಾಗಿ ನಡೆಯುತ್ತಲಿದೆ. ವಿಕ್ಟೋರಿಯಾ ಮಹಾರಾಣಿಯವರ ಜಾಹೀರನಾಮೆಗೆ ಹಾಗೂ ಬ್ರಿಟಿಶ ಮುತ್ಸದ್ದಿಗಳ ಮಾತಿಗೆ ಮರುಳಾಗಿ ಹಿಂದೀ ಜನರು ಈ ಸತ್ವಹರಣದ ಮಹಾಪ್ರವಾಹಕ್ಕೆ ತಡೆ ಹಾಕುವ ಯತ್ನಮಾಡಲಿಲ್ಲ. ಅಪರಿಮಿತ ಸಾಲವು ವಿಷವೇರಿದಂತೆ ಬೆಳೆದು ನಮ್ಮ ಆರ್ಥಿಕ ಜೀವನವನ್ನು ಗತಿಗೆಡಿಸಿ ಬಿಟ್ಟಿದೆ. ಬ್ರಿಟಿಶ ಸರಕಾರದ ಆಡಳಿತೆಯಲ್ಲಿಯ ಸಾಲದ ಅಂದವಾದ ಅಚ್ಚುಕಟ್ಟಾದ ಬೆಳವಣಿಗೆಗೆ ಒಂದು ಸ್ವತಂತ್ರ ಲೇಖನವೇ ಬೇಕು.

---

# ಸಂಗೀತವೂ ನಾಟಕವೂ

ಲೇಖಕರು:—ಶ್ರೀ. ಸಂಗೀತವಿದ್ವಾನ್ ಹುಲಗೂರ ಕೃಷ್ಣಾಚಾರ್ಯರು, ಹುಬ್ಬಳ್ಳಿ

ನಾಟ್ಯಕಲೆಯು ನಮ್ಮ ದೇಶದಲ್ಲಿ ಅತಿ ಪ್ರಾಚೀನ ಅಂದರೆ ಋಕ್ಕಾಲದಿಂದ ಪ್ರಾರಂಭವಾಗಿ ಉತ್ತರೋತ್ತರ ಅಭಿವೃದ್ಧಿಯಾಗುತ್ತ ಈ ಸ್ವರೂಪದಲ್ಲಿ ನಮಗೆ ಲಭಿಸಿರುವದು. ವೈದಿಕಕಾಲದಲ್ಲಿ ವಿಶಿಷ್ಟ ಉತ್ಸವಪ್ರಸಂಗಗಳಲ್ಲಿ ಅಥವಾ ಯಜ್ಞಯಾಗಾದಿಗಳು ನಡೆಯುವ ಕಾಲಕ್ಕೆ ನೆರೆದ ಸಮಾಜದ ಮನರಂಜನೆಗೋಸ್ಕರ ನಡೆಯಿಸುತ್ತಿದ್ದ ಸಂವಾದಾತ್ಮಕ ಚರ್ಚೆಯಾಗಲಿ ಅಥವಾ ಯಾವದಾದರೊಂದು ಕಥೆಯ ಪಾತ್ರಗಳ ಭಾಷಣವನ್ನು ಬೇರೆಬೇರೆ ಜನರು ಅರ್ಥೋಚಿತವಾದ ಅಭಿನಯದಿಂದ ಮಾಡುವದು ರೂಢವಾಗಿತ್ತೆಂಬದು ಋಗ್ವೇದದ ಅನೇಕ ಸೂಕ್ತಗಳ ಮೇಲಿಂದ ಸಿದ್ಧವಾಗುತ್ತದೆ. ವೈದಿಕವಾಙ್ಮಯದ ಕಾಲವು ತೀರಿ ಸಂಸ್ಕೃತವಾಙ್ಮಯದ ಪ್ರಾರಂಭಕಾಲದಲ್ಲಿ ಅಂದರೆ ಪಾಣಿನಿಯ ಕಾಲದಲ್ಲಿ ಈ ನಾಟ್ಯವಿಷಯದ ಮೇಲೆ ಇತರ ಶಾಸ್ತ್ರಗಳ ಮೇಲೆ ಸೂತ್ರಗ್ರಂಥಗಳಿದ್ದಂತೆ ಶಿಲಾಲಿ ಮತ್ತು ಕೃಶಾಶ್ವ ಹೀಗೆ ಇಬ್ಬರಿಂದ ರಚಿಸಿದ ನಟಸೂತ್ರಗಳಿದ್ದವೆಂದು ಪಾಣಿನಿಯು ಉಲ್ಲೇಖಿಸಿರುವನು. ಆದ್ದರಿಂದ ನಾಟ್ಯಕಲೆಯು ಪಾಣಿನಿಯ ಪೂರ್ವದಲ್ಲಿಯೇ ಸಂಸ್ಕರಣಯುಕ್ತವಾಗಿತ್ತೆಂದು ಹೇಳುವದು ಸಾಧಾರವಾಗಿರುವದು. ಪಾಣಿನಿಯ ಪೂರ್ವದಲ್ಲಿ ವೈದಿಕಭಾಷೆಯ ಜೊತೆಗೆ ಹೇಗೆ ಅನೇಕ ಪ್ರಾಕೃತಭಾಷೆಗಳಿದ್ದವೋ ಹಾಗೂ ಪಾಣಿನಿಯ ಪರಿಶ್ರಮದಿಂದ ಯಾವತ್ತು ಪ್ರಾಚೀನ ಭಾಷೆಗಳು ಹಿಂದುಬಿದ್ದು ಕೇವಲ ಸಂಸ್ಕೃತವೇ ಹೇಗೆ ಪ್ರಬಲವಾಯಿತೋ ಹಾಗೆಯೇ ಭರತಖಂಡದ ಯಾವತ್ತು ಸಾಂಸ್ಕೃತಿಕವಿಷಯಗಳಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ಭರತಖಂಡದ ನಿಜವಾದ ಪ್ರಗತಿಯೆಂದರೆ ಪಾಣಿನಿಯ ನಂತರವೆಂದೇ ಹೇಳಬಹುದು. ಈ ಅವಧಿಯಲ್ಲಿ ಸಹ ಆಚಾರ, ವಿಚಾರ, ಧರ್ಮ, ಕಲಾಕೌಶಲ್ಯ, ವಾಙ್ಮಯ, ಶಿಲ್ಪ ಈ ಎಲ್ಲ ವಿಷಯಗಳಿಗೆ ಹೊಸದಾದ ಒಂದು ಪ್ರಗತಿಪರ ಜೀವನವು ಪ್ರಾಪ್ತವಾಯಿತು. ಇದೇ ಅವಧಿಯಲ್ಲಿ ಗಾಯನ, ವಾದನ, ನೃತ್ಯ, ನಾಟ್ಯ, ಕಾವ್ಯ ಇವೆಲ್ಲ ವಿಷಯಗಳು ಸ್ವತಂತ್ರವಾಗಿ ಹೆಚ್ಚಲಾರಂಭಿಸಿದವು.

ಪಾಣಿನಿಯ ನಂತರ ಸಂಸ್ಕೃತ ಭಾಷೆಯು ಪ್ರಮುಖಭಾಷೆಯಾಗಲಿಕ್ಕೆ ಹೇಗೆ ಅದರಲ್ಲಿಯ ಸೌಕರ್ಯವು ಕಾರಣವೋ ಹಾಗೆಯೇ ಸಂಗೀತನಾಟಕವು ಪ್ರಬಲವಾಗಲಿಕ್ಕೆ ಅದರಲ್ಲಿಯ ಸೌಕರ್ಯವೇ ಕಾರಣವಾಯಿತು. ಎಲ್ಲ ಪ್ರಾಕೃತ ಭಾಷೆಗಳಲ್ಲಿಯ ಸೌಂದರ್ಯವನ್ನು ಸಂಸ್ಕೃತದಲ್ಲಿ ಸೇರಿಸಲಿಕ್ಕೆ ಹೇಗೆ ಪಾಣಿನಿಯ ಯೋಜನೆಯಿದ್ದಿತೋ ಹಾಗೆಯೇ ಗಾಯನ, ವಾದನ, ನರ್ತನ, ನಾಟ್ಯ, ಕಾವ್ಯ ಈ ಯಾವತ್ತು ಲಲಿತಕಲೆಗಳಲ್ಲಿಯ ಸೌಂದರ್ಯವನ್ನೂ ಲಾಲಿತ್ಯವನ್ನೂ ಸಂಗೀತವೆಂಬ ಹೊಸಯೋಜನೆಯಲ್ಲಿ ಸೇರಿಸಿ ನಾಟಕವೆಂದರೆ ಸಂಗೀತಯುಕ್ತವಾಗಿ ಇದ್ದೇ ಇರಬೇಕೆಂಬ ಭಾವನೆಯನ್ನು ಜಾಗೃತಮಾಡಿ ಸರ್ವತ್ರ ವ್ಯಾಪಿಸುವಂತೆ ಮಾಡಿದ ಶ್ರೇಯಸ್ಸು ಭರತಮುನಿಗೇ ಇರುವದು. ಭರತಮುನಿಯಿಂದ ನಾಟ್ಯಶಾಸ್ತ್ರವು ನಿರ್ಮಿತವಾದ ನಂತರದ ಯಾವತ್ತೂ ಕವಿಗಳು ಕೇವಲ ಕಾವ್ಯಗಳನ್ನೇ ಆಗಲಿ ಅಥವಾ ಕೇವಲ ಗದ್ಯಗ್ರಂಥಗಳನ್ನೇ ಆಗಲಿ ಬರೆಯುವ ರೂಢಿಯನ್ನು ಕಡಿಮೆ ಮಾಡಿ ಗದ್ಯಪದ್ಯಾತ್ಮಕವಾದ ಚಂಪೂಪದ್ಧತಿಯಿಂದ ನಾಟಕಗಳನ್ನೇ ಅನೇಕರೂಪವಾಗಿ ಬರೆದಿರುವರು. ಈ ರೂಢಿಯು ಎಷ್ಟು ಪ್ರಬಲವಾಗಿರುವದೆಂಬದನ್ನು ಪ್ರಾಚೀನ ನಾಟಕಗಳನ್ನು ನೋಡಿದರೆ ಕೇವಲ ಗದ್ಯನಾಟಕಗಳು ಬಹುಶಃ ಇಲ್ಲೇ ಇಲ್ಲವೆಂದು ಕಾಣಬಹುದು. ಇದರ ಕಾರಣವೇನಂದರೆ ಇದರಲ್ಲಿ ಸೇರತಕ್ಕ, ಮೇಲೆ ವಿವರಿಸಿದ ಗಾಯನಾದಿ ಪ್ರಮುಖವಾದ ಐದು ವಿಷಯಗಳ ಸಂಯೋಗವು. ಈ ಐದು ಪ್ರಮುಖ ವಿಷಯಗಳ ಹೊರ್ತು ಇನ್ನನೇಕ ವಿಷಯಗಳಿದ್ದರೂ ಪ್ರಸ್ತುತ ಲೇಖದಲ್ಲಿ ಅವುಗಳನ್ನು ಚರ್ಚಿಸುವದು ಅಪ್ರಸಂಗಿಕವಾಗುವದು.

ಭರತಮುನಿಯು ಆರ್ಯ ಸಂಸ್ಕೃತಿಯ ವ್ಯಕ್ತಿಯು. ಈತನ ಕಾಲವು ಅಶ್ವಘೋಷ, ಭಾಸ, ಶೂದ್ರಕ, ಕಾಲಿದಾಸ ಮುಂತಾದ ಪ್ರಾಚೀನ ಕವಿವರರ ಪೂರ್ವಕಾಲವಾಗಿರಬೇಕು. ಯಾಕಂದರೆ ಈ ಕವಿಗಳು ತಮ್ಮ ನಾಟಕಗಳ ಅಂತ್ಯದಲ್ಲಿ ಭರತನೇ ಆದ್ಯಾಚಾರ್ಯನೆಂಬ ಗೌರವವನ್ನು ವ್ಯಕ್ತಮಾಡುವದಕ್ಕೆ ಅವನ ಹೆಸರಿನ ಭರತವಾಕ್ಯವೆಂಬ ಪದವನ್ನು ಹಾಕಿರುವರು. ಆದ್ದರಿಂದ ಭರತನು ಅಶ್ವಘೋಷ (ಕ್ರಿ. ಪೂ. ೨ ನೇ ಶತ

ಮಾನದ ಪೂರ್ವಾರ್ಧ )ನಿಗಿಂತ ಪ್ರಾಚೀನನೆಂಬದು ನಿರ್ವಿವಾದವಾಗಿ ಹೇಳಬಹುದು. ಅಂದಮೇಲೆ ಭರತನು ಕ್ರಿ. ಪೂ. ೧ನೇ ಅಥವಾ ೨ ನೇ ಶತಮಾನದಲ್ಲಿ ಇದ್ದಿರಬೇಕೆಂದು ಅನುಮಾನವಾಗುವದು. ನಾಟಕಕಲೆಯು ಭರತನಿಂದ ಸಂಗೀತದಲ್ಲಿ ಯೋಜಿಸಲ್ಪಟ್ಟದ್ದರಿಂದ ಈ ಸಂಸ್ಕರಣಕ್ಕೆ ಅವನೇ ಆದ್ಯಾಚಾರ್ಯನೆಂದು ಜನರ ನಂಬುಗೆಯು ಸಾರ್ಥಕವಾಗಿರುವದು. ಗಾಯನವೆಂದರೆ ಆಯಾ ದೇಶವ್ಯಕ್ತಿಗಳಿಗನುಗುಣವಾಗಿ ಅನೇಕ ರೂಪವಾಗಿರುವದು ಸಹಜವು. ಆದರೆ **ಸಂಸ್ಕರಣ ಹೊಂದಿದ ಸಂಗೀತವು ಸಂಸ್ಕೃತ ಭಾಷೆಯಂತೆ ಇಡೀ ಭರತ ಖಂಡಕ್ಕೆ ಒಂದೇ.** ಸಂಸ್ಕೃತಕ್ಕೆ ಪಾಣಿನಿಯೂ ಸಂಗೀತಕ್ಕೆ ಭರತನೂ ಪ್ರವರ್ತಕರಾದ ಮೂಲಕ ಅವರು ಜಗತ್ತಿಗೆ ಸರಿಯಾಗಿ ಉಪಕಾರ ಮಾಡಿರುವರೆಂದು ಭಾವಿಸಬಹುದು. ಕೇವಲ ಗದ್ಯ ನಾಟಕಗಳು ಸಂಸ್ಕೃತದಲ್ಲಿಯೇ ಆಗಲಿ ಕನ್ನಡದಲ್ಲಿಯೇ ಆಗಲಿ ಪ್ರಾಚೀನಕಾಲದಲ್ಲಿ ಆಗಿರಲಿಲ್ಲವೆಂಬುದು ನಿರ್ವಿವಾದವಾಗಿರುವದು. ಗದ್ಯನಾಟಕಗಳು ತೀರ ಆಧುನಿಕವಾಗಿವೆ. ಆದರೆ ಕೆಲವರು ಸಂಗೀತನಾಟಕಗಳೇ ತೀರ ಆಧುನಿಕವೆಂದು ಪ್ರತಿಪಾದಿಸಬಹುದು. ಅದು ಹೇಗೆಂದರೆ ಆಧುನಿಕ ನಾಟಕಗಳ ಪದಗಳ ಶಿರೋಭಾಗದಲ್ಲಿ ಹಾಕಿರತಕ್ಕ ರಾಗ ತಾಳ ಧಾಟಿ ಎಂಬ ಶಬ್ದಗಳು ಪ್ರಾಚೀನನಾಟಕಗಳ ಪದ್ಯಗಳ ಮೇಲೆ ಹಾಕಿರದೆ ಅವುಗಳಿಗೆ ಬದಲು ಇಂಥ ವೃತ್ತ, ಇಂಥ ಛಂದ ಇಷ್ಟೇ ಹಾಕಿದ್ದರ ಮೂಲಕ ಮೊದಲಿನ ನಾಟಕಗಳಲ್ಲಿ ಸಂಗೀತವಿಲ್ಲವೆಂದು ಕೆಲವರು ಪ್ರತಿಪಾದಿಸುವರು. ಈ ವಿಧಾನವು ಸರಿಯಾದುದಲ್ಲ. ಹೇಗೆಂದರೆ ಪ್ರಾಚೀನ ಸಂಗೀತಪದ್ಧತಿಯಲ್ಲಿಯೂ ಆಧುನಿಕ ಸಂಗೀತ ಪದ್ಧತಿಯಲ್ಲಿಯೂ ವಸ್ತುತಃ ಭೇದವಿಲ್ಲದಿದ್ದರೂ ಅದನ್ನು ಅಭ್ಯಾಸ ಮಾಡುವ ಕ್ರಮದಲ್ಲಿ ಸ್ವಲ್ಪ ಭೇದವು ಕಂಡು ಬರುವದು. ಈ ಭೇದವು ಬಹುಜನ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಪ್ರಗತಿಗೆ ಕಾರಣವಾಗಿರದೆ ಅವನತಿಗೆ ಮಾತ್ರ ಕಾರಣವಾಗಿದೆ. ಸಾಮಾನ್ಯ ಜನರಿಗೆ ಹೊಸರೀತಿಯು ಸುಲಭವಾಗಿದ್ದರೂ ಸಂಗೀತವನ್ನು ಸಾಂಗೋಪಾಂಗವಾಗಿ ಅಭ್ಯಾಸಮಾಡುವ ಜನರಿಗೆ ಇದರಿಂದ ಏನೂ ಲಾಭವಾಗದೆ ಮತ್ತೆ ಹೆಚ್ಚು ಗೊಂದಲದಲ್ಲಿ ಬಿದ್ದಂತಾಗುವದು. ಪ್ರಾಚೀನ ಆಲಾಪಪದ್ಧತಿಯನ್ನು ಅಭ್ಯಾಸಮಾಡಿದವರಿಗೆ ಯಾವದೇ ಪದಪದ್ಯವನ್ನು ರಂಜನವಾಗುವಂತೆ ಮನಸೋಕ್ತವಾಗಿ ಹಾಡುವದು ಸಾಧ್ಯವಾಗಿರುವದು. ಆದರೆ ಧಾಟಿಗಳ ಶ್ರವಣ ಮನನದಿಂದ ಅನುಕರಣಮಾಡುವ ಗಾಯನವು ನಿರ್ದೋಷವಾಗಿ ಜರುಗುವದೆಂದು ಯಾರೂ ಹೇಳಲಾರರು.

ಯಾಕಂದರೆ ನಮ್ಮ ಸಂಗೀತವು ಪಾಶ್ಚಾತ್ಯರ ಸಂಗೀತದಂತೆ ಕ್ಲಪ್ತಸ್ವರಸಾಹಿತ್ಯದಿಂದ ಕಟ್ಟಾಗಿರದೆ ಗಾಯನಕಲೆಯನ್ನು ಅಭ್ಯಾಸ ಮಾಡಿದವನಿಗೆ ನಿರಂಕುಶ ಸ್ವರಸಂಚಾರಕ್ಕೆ ಅವಕಾಶವಿರುವದು. ಹೀಗಿಲ್ಲದ ಸಂಗೀತವನ್ನು ನಾಟಕದಲ್ಲಿ ಸೇರಿಸಿದರೆ ರಾಗರಸಭಾವಗಳು ಎಷ್ಟು ರಂಜನಕಾರಿಗಳಾಗಬಹುದೆಂದನ್ನು ಸೂಜ್ಞರು ತರ್ಕಿಸಬಹುದು. ಯಾವ ದೇಶಕ್ಕೆ ಸ್ವತಂತ್ರ ಸಂಸ್ಕೃತಿಯು ಇರುವದಿಲ್ಲವೋ ಆ ದೇಶವು ಬೇ[illegible] ಸಂಸ್ಕೃತಿಯು ಸಂಗೀತವನ್ನು ಅನುಕರಣಮಾಡಿದ ಹೊರತು ಎರಡನೇ ಮಾರ್ಗವೇ ಇಲ್ಲ. ಇಂಥ ಪ್ರಸಂಗದಲ್ಲಿ ಕೇವಲ ಜನಾಭಿರುಚಿಯ ಪ್ರಕಾರ ವಿಶಿಷ್ಟಪದ್ಧತಿಯನ್ನು ಅಂಗೀಕರಿಸುವದಾಗಲಿ, ವಿಶಿಷ್ಟಪದ್ಧತಿಗಳನ್ನು ಬೆರಿಸುವದಾಗಲಿ ವಿಶಿಷ್ಟ [illegible] ಲಾವಣಿಗಳನ್ನು ಮಾಡುವದಾಗಲಿ ಸಹಜವಾಗಿರುವದು. ಆದರೆ ಕರ್ನಾಟಕವು ನಾಟ್ಯಕಲೆಯ ತವರುಮನೆಯೆಂದು ಭರತಾಚಾರ್ಯನು ಉಲ್ಲೇಖಿಸಿದ್ದ ವಿಷಯವನ್ನು ಒಳಗಡೆಗೆ ನಾಟ್ಯ ಜಯಕರ್ನಾಟಕದಲ್ಲಿ ಪ್ರಸಿದ್ಧಪಡಿಸಿದ್ದೇವೆ. ಆದ್ದರಿಂದ ಕರ್ನಾಟಕಸ್ಥರು ತಮ್ಮ ಸಂಸ್ಕೃತಿಯ ಪರಂಪರೆಯನ್ನು ಬಿಟ್ಟು ಯಾವದಾದರೊಂದು ದೇಶದ ಪದವನ್ನು ಬರೇ ಧಾಟಿಯಿಂದ ಉಪಯೋಗಿಸುವದು ನಮ್ಮ ಸಂಸ್ಕೃತಿಯನ್ನು ನಾಶಮಾಡಿದಂತಾಗುವದು. ಆದ್ದರಿಂದ ಈ ರೂಢಿಯನ್ನು ನಿಲ್ಲಿಸಿ ರಾಗತಾಳಗಳ ನಿಷ್ಕರ್ಷೆಯನ್ನು ಮೊದಲುಮಾಡಿ ಪದಪದ್ಯಗಳನ್ನು ನಮ್ಮ ಸಂಸ್ಕೃತಿಗೆ ಒಳಪಡಿಸಬೇಕು. ಹೀಗೆ ಮಾಡುವ ಕಾರ್ಯದಲ್ಲಿ ಪ್ರಚಾರಲುಪ್ತವಾದ ಅನೇಕ ಪ್ರಾಚೀನ ರಾಗರೂಪಗಳೂ ಜನರಿಗೆ ಗೊತ್ತಾಗುವದಲ್ಲದೆ ಪ್ರಾಚೀನರ ರಾಗಪ್ರಸ್ತಾರದ ಪ್ರಕಾರ ಸಿದ್ಧವಾದ ಅನೇಕ ಹೊಸ ರಾಗರೂಪಗಳು ನಮ್ಮ ಪದ್ಧತಿಯಲ್ಲಿ ಪ್ರಚಾರವಾಗಿ ನಮ್ಮ ಸಂಸ್ಕೃತಿಯು ಹೆಚ್ಚು ವಿಕಾಸವಾಗುವದೇ ಹೊರತು ಸಂಕೋಚದ ಲೇಶವಾದರೂ ಆಗುವ ಭೀತಿಯಿಲ್ಲ. ಸಂಗೀತ ನಾಟಕಗಳಲ್ಲಿ ಈ ಮಹತ್ವದ ಮಾತನ್ನು ತೀರ ದುರ್ಲಕ್ಷಿಸಿರುವದರಿಂದ ದು[illegible] ಭೂಮಿಯಲ್ಲಿ ವಿದ್ವಾಂಸನಾರು ಅವಿದ್ವಾಂಸನಾರು ಎಂಬುದು ತಿಳಿಯುವದೇ ಅಶಕ್ಯವಾಗಿದೆ. ಇದರ ಪರಿಣಾಮವು ಬಹಳ ಅನರ್ಥಕರವಾಗಿರುವದು. ಯಾಕಂದರೆ ಸಂಗೀತಸಂಸ್ಕೃತಿಯ ಪ್ರಚಾರವನ್ನು ಹೆಚ್ಚಾಗಿಯೂ ಸಾರ್ವತ್ರಿಕವಾಗಿಯೂ ಮಾಡುವ ಸೌಲಭ್ಯವು ನಾಟಕಗಳಿಗಿದ್ದಂತೆ ವಿಶಿಷ್ಟ ವ್ಯಕ್ತಿಗಳಿಗೆ ಕೂಡ ಆಗಲಾರದು. ಸಂಗೀತದಲ್ಲಿ ಔದಾಸೀನ್ಯವುಳ್ಳವನು ಕೂಡ ಆ[illegible] ನೋಡಬೇಕೆ[illegible] ವಿಷಯಗಳ ಉಪೇಕ್ಷೆಯಿಂದ ನಾಟಕವನ್ನು

ಹೋದರೂ ನಾದಗುಣದ ನೈಸರ್ಗಿಕಪ್ರಭಾವದಿಂದ ಅವನ ಶ್ರೋತ್ರೇಂದ್ರಿಯಗಳು ಆ ವಿಷಯದಲ್ಲಿ ಕ್ರಮೇಣ ಆಸಕ್ತಿಯನ್ನು ಹೊಂದಲಾರಂಭಿಸುವವು. ಈ ಸಂಸ್ಕಾರವೇ ಹೆಚ್ಚಿದ ಹಾಗೆ ಜಿಜ್ಞಾಸೆಯೂ ಅನುಭವವೂ ಹೆಚ್ಚುತ್ತ ಹೋಗುವದರಿಂದ ಮನಸಿನ ಮೇಲೆ ಪರಿಣಮಿಸುವ ವಿಷಯಗಳಲ್ಲಿ ಸಂಗೀತದ ಆನಂದವು ಮೇಲ್ತರದ್ದಾಗುವದು. ಈ ಅನುಭವವು ಸಾರ್ವತ್ರಿಕವಾಗಿರುವದು. ಆದ್ದರಿಂದ ನಾಟಕಗಳಲ್ಲಿ ಸಂಗೀತವು ಅವಶ್ಯವಾಗಿ ಬೇಕು. ಯಾಕೆಂದರೆ ಯಾವದೊಂದು ಸಂಸ್ಕೃತಿಯ ರಕ್ಷಣೆಯಾಗಬೇಕಾದರೆ ಅವರ ಅನುಕರಣವೂ ಪ್ರೋತ್ಸಾಹವೂ ಸರಿಯಾಗಿಯೇ ಬೇಕು. ಈ ಯೋಜನೆಯಿಂದ ನಮ್ಮ ಕರ್ನಾಟಕ ದೇಶದ ಪ್ರಾಚೀನತಮವಾದ ಒಂದು ಲಲಿತಕಲೆಯು ಅವ್ಯಂಗವಾಗಿ ಉಳಿದರೆ ದೇಶದಲ್ಲಿ ಸುಖಮಯ ಪರಿಸ್ಥಿತಿಯಾದಾಗ ಅದರ ಫಲಗಳನ್ನು ಸೇವಿಸಲಿಕ್ಕೆ ಎಲ್ಲರಿಗೂ ಸಾಧ್ಯವಾಗುವದು. ಕಾಲಾಂತರದಲ್ಲಿ ಲುಪ್ತಪ್ರಾಯವಾದದ್ದನ್ನು ಪುನರುಜ್ಜೀವನಮಾಡುವ ಸಾಹಸದಲ್ಲಿ ಆಯಾಸಪಡುವ ಪ್ರಸಂಗವನ್ನು ತಂದುಕೊಳ್ಳದೆ ನಮ್ಮ ಸಂಗೀತವನ್ನು ಅನ್ಯೂನವಾಗಿ ಕಾಯ್ದುಕೊಳ್ಳುವದೇ ಸೂಜ್ಞರ ಕರ್ತವ್ಯವಾಗಿರುವದರಿಂದ ಕರ್ನಾಟಕ ಸಂಗೀತ ನಾಟಕ ಮಂಡಲದವರು ಈ ವಿಷಯದಲ್ಲಿ ಬಹು ಜಾಗರೂಕರಾಗಿರಬೇಕು.

ಮೇಲಿನ ವಿವೇಚನೆಯಲ್ಲಿ ಪ್ರಾಚೀನ ನಾಟಕಗಳ ಪದಪದ್ಯಗಳಿಗೆ ರಾಗತಾಳಗಳನ್ನು ಹಾಕಿಡುವ ರೂಢಿಯಿದ್ದಿಲ್ಲವೆಂದು ಹೇಳಿದ್ದೇವೆ. ವೃತ್ತಗಳ ಹೆಸರುಗಳನ್ನು ಕೂಡ ಪ್ರತ್ಯೇಕವಾಗಿ ಬರೆಯದಿದ್ದರೂ ಅವುಗಳನ್ನು ಅವುಗಳ ಸ್ವರೂಪಗಳ ಮೇಲಿಂದ ನಿರ್ಣಯಿಸುವದು ಸಹಜವಾಗಿರುವದು. ವಿಶಿಷ್ಟವೃತ್ತಗಳ ಗುರು ಲಘು ಅಕ್ಷರಗಳು ಅಥವಾ ಮಾತ್ರೆಗಳು ತಿಳಿದ ಮೇಲೆ ಆ ಪದ್ಯವನ್ನು ಯಾವ ತಾಳದಲ್ಲಿ ಯೋಜಿಸಬೇಕೆಂಬದನ್ನು ಸಂಗೀತ ಶಾಸ್ತ್ರದಿಂದ ತಿಳಿಯುವದು ಸಂಗೀತಗಾರನಿಗೆ ಸುಲಭಸಾಧ್ಯವಾಗಿದೆ. ಹಾಗೂ ವಿಶಿಷ್ಟ ಅರ್ಥ-ಭಾವವುಳ್ಳ ಪದ್ಯವನ್ನು ಪ್ರಸಂಗಾನುಸಾರ ಯಾವ ರಾಗದಲ್ಲಿ ಹಾಕಬೇಕೆಂಬದು ಕೂಡಾ ಸಂಗೀತ ಶಾಸ್ತ್ರದಲ್ಲಿ ಚರ್ಚಿಸಲ್ಪಟ್ಟಿದೆ. ಆದ್ದರಿಂದ ಆ ವಿಷಯವನ್ನು ಇಲ್ಲಿ ವಿವೇಚಿಸುವದು ಅನವಶ್ಯಕವು. ಈ ವಿಷಯದಲ್ಲಿ ಭರತಮುನಿಯು ನಾಟ್ಯಶಾಸ್ತ್ರದಲ್ಲಿ ಹೇಳಿದ್ದೇನಂದರೆ:—

"ಯಾನಿ ಚೈವ ನಿಬದ್ಧಾನಿ ಛಂದೋವೃತ್ತಿವಿಧಾನತಃ
ಮುಖಪ್ರತಿಮುಖಾದೀನಿ ಗೀತಾಂಗಾನ್ಯೇವ ಸರ್ವಶಃ ॥
ಯದಾತ್ಮಕಾನಿ ತಾನಿ ಸ್ಯುರ್ಧ್ರುವಾಸಂಜ್ಞಾನಿ ನಾಟಕೇ ।
ನಾಸ್ತಿ ಕಿಂಚಿದವೃತ್ತಂ ತು ಪದಂ ಗಾನಸಮಾಶ್ರಯಂ ॥
ತಸ್ಮಾದ್ಗೀತಮಭಿಪ್ರೇಕ್ಷ್ಯ ತದ್ವೃತ್ತಂ
ಯೋಜಯೇದ್ಧ್ರುವಾಂ ।....."

ಈ ವರೆಗೆ ಸಂಗೀತ ನಾಟಕಗಳ ಮಹತಿಯನ್ನೂ ಪ್ರಾಚೀನತ್ವವನ್ನೂ ಕ್ರಮವೃದ್ಧಿಯನ್ನೂ ಐತಿಹಾಸಿಕದೃಷ್ಟಿಯಿಂದ ಸಂಕ್ಷೇಪವಾಗಿ ಹೇಳಿದ್ದೇವೆ.

ಇನ್ನು ಸಂಗೀತವನ್ನು ನಾಟಕಗಳಲ್ಲಿ ಯಾವ ಯಾವ ಪ್ರಸಂಗದಲ್ಲಿ ಎಷ್ಟರ ಮಟ್ಟಿಗೆ ಹಾಕಬೇಕು ಅಥವಾ ಹಾಕಬಾರದೆಂಬ ಮಹತ್ವದ ವಿಷಯವನ್ನು ಚರ್ಚಿಸುವದು ಈಗಿನ ಪರಿಸ್ಥಿತಿಯಲ್ಲಿ ಅವಶ್ಯಕವಾಗಿರುವದರಿಂದ ಕೆಲವು ಸೂಚನೆಗಳನ್ನು ಕೆಳಗೆ ಉಲ್ಲೇಖಿಸುವೆವು. ನಾಟಕಗಳಲ್ಲಿ ಸಂಗೀತವಿದ್ದರೆ ಪ್ರೇಕ್ಷಕರ ಮನರಂಜನೆಗೆ ಒಂದು ಪ್ರಮುಖ ಸಾಧನವೆಂಬದೇನೋ ನಿಜ. ಆದರೆ **ಅದು ವ್ಯಕ್ತಿ, ವಿಷಯ, ಸಮಯಗಳಿಗೆ ಉಚಿತವಾಗಿರಬೇಕೆಂಬದನ್ನು** ಮಾತ್ರ ಈಗಿನ ನಾಟಕಕಾರರು ಮರೆತು ಅದರ ದುರುಪಯೋಗ ಮಾಡುವದನ್ನೇ ವಿಶೇಷವಾಗಿ ಕಾಣಬಹುದು. ಸಮಂಜಸವಾಗಿ ವಿಚಾರ ಮಾಡಿ ನೋಡಿದರೆ ಸಂಗೀತವು ಸ್ವತಂತ್ರ ಶಾಸ್ತ್ರಪ್ರತಿಪಾದಿತ ಕಲೆಯಾಗಿರುವದರಿಂದ ತಿಂಗಳೆರಡು ತಿಂಗಳಲ್ಲಿ ಸಂಗೀತವನ್ನು ನಾಟಕದ ಭಾಷೆಯ ಕೂಡ ಹೊಸದಾಗಿಯೇ ಕಲಿತು ನಾಟಕವನ್ನಾಡುವದು ಅಶಕ್ಯವು. ಅದೇ ಗದ್ಯನಾಟಕವನ್ನು ಅಷ್ಟು ಉತ್ತಮವಾಗದಿದ್ದರೂ ಸಾಧಾರಣವಾಗಿಯಾದರೂ ರಂಗಭೂಮಿಯ ಮೇಲೆ ಪ್ರಯೋಗಿಸಬಹುದು. ಸಂಗೀತ ನಾಟಕವನ್ನು ಅಷ್ಟು ಅಲ್ಪಾವಧಿಯಲ್ಲಿ ಪ್ರಯೋಗಿಸುವದು ಹಾಸ್ಯಾಸ್ಪದವಾಗುವದು. ಯಾಕೆಂದರೆ ಸಂಗೀತ ವಿಷಯವನ್ನು ಸ್ವತಂತ್ರವಾಗಿಯೇ ಅಭ್ಯಾಸ ಮಾಡುವವರಿಗೆ ನಾದಭೇದವು ಮಾರ್ಮಿಕವಾಗಿಯೇ ತಿಳಿದು ರಾಗರಸಗಳ ನಿಯಮದ ಪ್ರಕಾರ ಸ್ವರಗಳಲ್ಲಿ ಸಂಚಾರಮಾಡುವದಕ್ಕೆ ಎಷ್ಟೋ ವರ್ಷಗಳು ಕಳೆದುಹೋಗುವವು. ಹೀಗಿದ್ದು ಸಂಗೀತ ನಾಟಕಗಳನ್ನು ಆಡತಕ್ಕವರಿಗೆ ಮಾತ್ರ ಸಂಗೀತವು ಕೆಲವು ತಿಂಗಳುಗಳಲ್ಲಿಯೇ ಕರತಲಾಮಲಕವಾಗುವದೆಂಬ ಭಾವನೆಯು ಮೂಢವಾಗಿರುವದು. ಇಂಥ ಸಂಗೀತ ನಾಟಕಗಳನ್ನು ಮಾಡುವದಕ್ಕಿಂತ ಭಾವನೋದ್ದೀಪಕವಾದ ಗದ್ಯ ನಾಟಕಗಳನ್ನೇ ಮಾಡುವದು ಹೆಚ್ಚು ಪ್ರಶಸ್ತವೆಂಬ ಭಾವನೆಯು ಇತ್ತೀಚೆಗೆ ಸುಶಿಕ್ಷಿತರಲ್ಲಿ ಹುಟ್ಟಿದ್ದು ಸಮಾಧಾನಕಾರಕವಾಗಿದೆ. ಸಂಗೀತ ನಾಟಕಗಳಲ್ಲಿ ಭೂಮಿಕೆಗಳನ್ನು ವಹಿಸುವವರೂ 'ಒಂದು ಪಾಲು ವಿದ್ಯೆ ಮೂರುಪಾಲು

ಬುದ್ಧಿ' ಎಂಬ ನುಡಿಯನ್ನು ಸಂಗೀತದಂಥ ಸುಸಂಬದ್ಧವಾದ ಲಲಿತಕಲೆಗೂ ಹಚ್ಚಿ ಅದರ ಮಹತಿಯನ್ನು ಮಣ್ಣುಪಾಲು ಮಾಡುವದಲ್ಲದೆ ಜನರಲ್ಲಿ ಮೋಹವನ್ನು ಹುಟ್ಟಿಸಿ ಅನ್ಯಥಾಭಿರುಚಿಯನ್ನು ಹೆಚ್ಚಿಸುವದು ಎಲ್ಲಕ್ಕೂ ದೊಡ್ಡ ಅಪರಾಧವಾಗಿದೆ. ಇಂಥ ಸಂಗೀತವು ನಾಟಕದಲ್ಲಿ ಸೇರಿತೆಂದರೆ ನಾಟಕದ ಮೂಲ ರಸಪೋಷಣೆಗೆ ಭಂಗಬಂದು ಪ್ರೇಕ್ಷಕರು ಉದಾಸೀನರಾಗುವರು. ಆದ್ದರಿಂದ ಈ ರೂಢಿಯನ್ನೇ ಮೊದಲು ನಿಲ್ಲಿಸಬೇಕು. ಸಂಗೀತ ನಾಟಕಗಳನ್ನೇ ಮಾಡುವದಾದರೆ ಪದ್ಧತಿಯ ಪ್ರಕಾರ ಸ್ವತಂತ್ರ ಸಂಗೀತವನ್ನೇ ಅಭ್ಯಾಸಮಾಡಿದ ಜನರನ್ನು ನಾಟಕಗಳಲ್ಲಿ ಸೇರಿಸಿ ಅವರಿಂದ ಮಾಡಲ್ಪಡುವ ಭೂಮಿಕೆಗಳಿಗೆ ಮಾತ್ರ ಪ್ರಸಂಗೋಚಿತವಾಗಿ ಪದಗಳನ್ನು ಹಾಕಬೇಕು. ಅಂದರೆ ಪ್ರೇಕ್ಷಕರಿಗೂ ಮೂಲ ನಾಟಕಕ್ಕೂ ಉಂಟಾಗಬೇಕಾದ ತಾದಾತ್ಮ್ಯವು ಹೆಚ್ಚುವದು. ಈ ಅವಸ್ಥೆಯು ಒದಗಬಾರದೆಂದು ಭರತಮುನಿಯು ಉತ್ತಮ ಯೋಜನೆಯನ್ನೂ ಸಂಗೀತಕ್ಕೆ ಸರಿಪಟ್ಟ ಪ್ರಸಂಗವಿಷಯಗಳನ್ನೂ ಸಂಗೀತದ ವ್ಯಾಪ್ತಿಯನ್ನೂ ಬಹು ಮಾರ್ಮಿಕವಾಗಿ ವರ್ಣಿಸಿರುವನು. ಹೀಗಿದ್ದು ಇಂಥ ಪ್ರಾಚೀನವಾದ ಆರ್ಷಗ್ರಂಥದ ಹೆಸರನ್ನು ನಾಟಕಕಾರರು ಕನಸಿನಲ್ಲಿ ಕೂಡ ಕೇಳಿರುವದಿಲ್ಲ. ಅಂದ ಮೇಲೆ ನಾಟಕ ಲೇಖಕರ ಕೈಯಿಂದ ಪ್ರತಿ ಕ್ಷಣಕ್ಕೂ ಲೇಖನದಲ್ಲಿ ಪ್ರಮಾದಗಳಾಗುವದು ಸ್ವಾಭಾವಿಕವೇ. ನಾಟಕಲೇಖಕರು ಭರತನಾಟ್ಯಶಾಸ್ತ್ರವನ್ನು ಓದಿದ್ದೇ ಆದರೆ ಅದರ ಪರಿಣಾಮವು ಅವರ ಮನಸ್ಸಿನ ಮೇಲೆ ಆಗದೆ ಇರುವದು ಅಸ್ವಾಭಾವಿಕವು. ಯಾಕಂದರೆ ಲೇಖಕರಿಂದಾಗಲಿ ನಟರಿಂದಾಗಲಿ ಪ್ರಮಾದಗಳು ಆಗಬಾರದೆಂಬ ಸದುದ್ದೇಶದಿಂದಲೇ ಆ ವಿಷಯಗಳನ್ನು ಚರ್ಚಿಸಿ ಉಚಿತ ಧ್ಯೇಯವನ್ನು ಸಾಧ್ಯಮಾಡಿಕೊಳ್ಳುವದಕ್ಕೆ ಯಾವ ನಿಯಮಗಳು ಅವಶ್ಯಕವೋ ಅವುಗಳನ್ನು ಶಾಸ್ತ್ರಕಾರರು ಉಲ್ಲೇಖಿಸುವರು. ಮತ್ತು ಉತ್ತಮ ನಾಟಕಗಳೆಂದು ಶಿಷ್ಟಸಮಾಜದವರು ಅಂಗೀಕರಿಸಬೇಕಾದರೆ ನಾಟಕಗಳು ಲಾಕ್ಷಣಿಕವಾಗಿದ್ದರೆ ಮಾತ್ರ ಅವುಗಳ ಮಹತಿಯು ಸರ್ವತೋಮುಖಿಯಾಗಿ ಚಿರಾಯುವಾಗುವದು. ಇಲ್ಲದಿದ್ದರೆ ಹುಟ್ಟುವದಕ್ಕೂ ಲೆಕ್ಕವಿಲ್ಲ ಸಾಯುವದಕ್ಕೂ ಲೆಕ್ಕವಿಲ್ಲ. ಉದಾಹರಣಾರ್ಥ, ಪ್ರಾಚೀನ ಕಾಲದಿಂದ ಈ ವರೆಗೆ ಸರ್ವಮಾನ್ಯವಾದ ನಾಟಕಗಳನ್ನು ತೆಗೆದುಕೊಂಡರೆ ಪ್ರಾಚೀನರ ಲೇಖನದಲ್ಲಿ ಲಾಕ್ಷಣಿಕ ಪದ್ಧತಿಯು ಅವ್ಯಂಗವಾಗಿತ್ತೆಂದೇ ಎಷ್ಟೋ ಶತಮಾನಗಳು ಕಳೆದರೂ ಕೂಡ ಅವುಗಳ ವಿಷಯದಲ್ಲಿ ವಿದ್ವಾಂಸರೂ ಸುಶಿಕ್ಷಿತರೂ ಆದರಪಡುವರು. ಆದರೆ ಆಧುನಿಕ ನಾಟಕ ಲೇಖಕರ ಕೃತಿಗಳನ್ನು ನೋಡಿದರೆ ಇಪ್ಪತ್ತನೇ ಶತಮಾನದಲ್ಲಿಯೇ ಎಷ್ಟೋ ನಾಟಕ ಲೇಖಕರು ಉದಯವಾಗಿ ಅನೇಕ ನಾಟಕಗಳನ್ನು ಬರೆದು ಅಶಿಕ್ಷಿತ ಜನರಿಂದ ಮೋಸದಿಂದ ದ್ರವ್ಯಹರಣ ಮಾಡಿರುವದು ಕಂಡುಬರುವದೇ ಹೊರ್ತು ಸಂಸ್ಕೃತಿಯಲ್ಲಿ ಅಥವಾ ಸಮಾಜದಲ್ಲಿ ಏನಾದರೊಂದು ಕ್ರಾಂತಿಯನ್ನು ಮಾಡಿ ಲೋಕಾದರಕ್ಕೆ ಪಾತ್ರವಾಗಿರುವದು ಕಂಡುಬರುವದಿಲ್ಲ. ಆಧುನಿಕ ನಾಟಕಗಳಲ್ಲಿ ಎಷ್ಟು ನಾಟಕಗಳು ಪ್ರಸಾರವಾಗಿರುವವು ! ತೀರ ಕಡಿಮೆ ! ಇಲ್ಲವೆಂದೇ ಹೇಳಬಹುದು. ಆದ್ದರಿಂದ ನಾಟಕದ ಬರೆಹಗಾರರು ತಮ್ಮ ನಾಟಕದಿಂದ ಅಜ್ಞ ಜನರಿಂದ ದ್ರವ್ಯಹರಣಮಾಡುವದೊಂದೇ ನಾಟಕದ ಧ್ಯೇಯವೆಂದು ತಿಳಿಯದೆ ನಾಟಕದಲ್ಲಿ ಇನ್ನಾವ ವಿಷಯದಲ್ಲಿಯೂ ಇರದಂಥ ಒಂದು ಕ್ರಾಂತಿಕಾರಕ ಗುಣವಿರುವದೆಂಬದನ್ನು ತಮ್ಮ ಮನಸ್ಸಿನಲ್ಲಿ ಸ್ಥಿರವಾಗಿರಿಸಿಕೊಂಡು ಲೋಕಶಿಕ್ಷಣದ ಅನೇಕ ವಿಷಯಗಳನ್ನು ಪ್ರತ್ಯಕ್ಷ ಅಭಿನಯಿಸಿ ತೋರಿಸಿ ಯಾರಿಂದಲೂ ಆಗದಂಥ ಸಮಾಜಜಾಗ್ರತಿಯನ್ನು ಜನರಲ್ಲಿ ಮಾಡಬಹುದು. ಇಂಥ ನಾಟಕಗಳಿಗೆ ಜನರಿಂದಲೂ ಒಳ್ಳೆ ಪ್ರೋತ್ಸಾಹನವು ಸಿಗಬೇಕು.

ನಾಟಕದಲ್ಲಿ ಸಂಗೀತವು ಅವಶ್ಯವಾಗಿಬೇಕೆಂಬ ವಿಚಾರವನ್ನು ಮೇಲೆ ವ್ಯಕ್ತಪಡಿಸಿದ್ದೇವೆ. ಒಂದೊಂದು ನಾಟಕದಲ್ಲಿ ಹತ್ತುಪ್ಪತ್ತು ಭೂಮಿಕೆಗಳಿದ್ದರೂ ಅವೆಲ್ಲಕ್ಕೂ ಸಂಗೀತವಿರಬೇಕೆಂಬದು ಅಸಮಂಜಸವೂ ಅಶಕ್ಯವೂ ಆಗಿರುವದು. ವಿಶೇಷವಾಗಿ ಸಂಗೀತನಾಟಕಕಾರರು ಪದವನ್ನು ಹಾಕಲಿಕ್ಕೆ ಎಲ್ಲಿಯಾದರೂ ಸ್ವಲ್ಪ ಅವಕಾಶವು ಸಿಗುವದೇ ಎಂದು ದೀರ್ಘಪ್ರಯತ್ನದಿಂದ ಪ್ರತಿಯೊಂದು ಪಾತ್ರಕ್ಕೂ ಪದಗಳನ್ನು ಹಾಕಲಿಕ್ಕೆ ಹವಣಿಸುವರು. ಇಂಥ ಹಾಡುಗಳ ಗೊಂದಲದಲ್ಲಿ ಯಾವತ್ತು ನಾಟಕದ ರಸಭಂಗವಾಗುವದರಿಂದಲೇ ನಾಟಕಗಳು ಲೋಕಪ್ರಿಯವಾಗುವದಿಲ್ಲ. ಯಾವ ಭೂಮಿಕೆಯನ್ನು ಮಾಡುವ ವ್ಯಕ್ತಿಗೆ ಸಂಗೀತ ಜ್ಞಾನವು ಚೆನ್ನಾಗಿರುವದೋ ಅದಕ್ಕೆ ಮಾತ್ರ ಸಂಗೀತವು ಉಚಿತವು. ಸಂಗೀತವು ಯಾವ ಜನರಿಗೆ ಸಾಧ್ಯವಾಗಿರುವದೆಂಬದನ್ನು ವ್ಯಾವಹಾರಿಕವಾಗಿ ವಿಚಾರಿಸಿದರೆ ಇದರ ಉತ್ತರವು ಶಾಸ್ತ್ರಾವಲೋಕನವಿಲ್ಲದೇ ಕೂಡ ನಮಗೆ ದೊರೆಯುವದು ಸಾಧ್ಯವಿದೆ.

ಚಿಕ್ಕಮಕ್ಕಳನ್ನು ತೊಟ್ಟಿಲಲ್ಲಿ ಮಲಗಿಸಿ ಹಾಡುವ ಜೋಗುಳದ ಪದಗಳು, ಗೋಪಾಲಕರು ಗೋವುಗಳನ್ನು ಕಾಯುತ್ತ ಅಡವಿಯಲ್ಲಿ ಉಲ್ಹಾಸವಾಗಿ ಹಾಡುವ ಪದಗಳು, ಶಿರೆ ಗಾಂಜಾ ಮೊದಲಾದ ಮಾದಕ ಪದಾರ್ಥಗಳನ್ನು ಸೇವನಮಾಡುವ

ನಮೆಂಬ ಅಸಲಿನ ಸ್ಥಿತಿಯಲ್ಲಿ ಹಾಡುವ ಪದಗಳು, ಗ್ರಾಮ್ಯರು ಮನುನಾಟಕೆಯಲ್ಲಿ ಮನರಂಜನೆ ಮಾಡುವದಕ್ಕೆ ಹಾಡುವ ಲಾವಣಿ ಪದಗಳು, ಹಳ್ಳಿಗಾಡದ ಅಶಿಕ್ಷಿತ ಹೆಣ್ಣುಮಕ್ಕಳು ಬೀಸುಕುಟ್ಟುವ ಅಥವಾ ಕೆಲಸಬೊಗಸೆಗಳಲ್ಲಿ ಹಾಡುವ ಪದಗಳು, ಗೊಂದಲಿಗರಾಗಲಿ ಬುಡುಬುಡಿಕರಾಗಲಿ ಭಾಟರಾಗಲಿ ಹಾಡತಕ್ಕ ಕವನಗಳು, ರಂಟೆ, ಕಪ್ಪಲಿ, ನೇಗಿ, ರಾಟೆ ಮೊದಲಾದ ಸಾಮುಕಷ್ಟಗಳನ್ನು ಮಾಡುವಕಾಲಕ್ಕೆ ಹಾಡುವ ಪದಗಳು, ನಾವಿಗರು ಡೋಣಿಗಳನ್ನು ನಡೆಸುವಕಾಲಕ್ಕೆ ಉಲ್ಹಾಸದಿಂದ ಹಾಡುವ ಪದಗಳು, ಇಂಥ ಸಂದರ್ಭದ ಪಾತ್ರಗಳಿಗೆ ವ್ಯವಹಾರ ದಲ್ಲಿ ಯಾವ ಬಗೆಯ ರೂಢಿ ಇರುವದೋ ಆ ಬಗೆಯ ತದಾತ್ಮ ವಾದ ಕವನಗಳೇ ಹೆಚ್ಚು ರಂಜನಕಾರಿಗಳಾಗುವವಲ್ಲದೆ ಘನಘಟಗಳ ಪದಗಳನ್ನು ಅಥವಾ ಶಿಷ್ಟಗಾಯನದ ಪದ ಗಳನ್ನು ಎಂದೂ ಹಾಕಬಾರದು. ಮತ್ತು ಉದ್ದಿಷ್ಟ ಪ್ರಸಂಗಗಳ ಲ್ಲಿಯೇ ಹಾಕಬೇಕಲ್ಲದೆ ಸುಮ್ಮನೆ ಸಂವಾದ ಅಥವಾ ವರ್ಣನೆ ಗಳನ್ನು ಅವರ ಭಾಷಣಗಳಲ್ಲಿ ಸೇರಿಸಿ ಆ ಸಂದರ್ಭಗಳಲ್ಲಿ ಸಂಗೀತವನ್ನು ಹಾಕುವದು ಬಹಳೇ ಅಸಮಂಜಸವಾಗಿರುವದು. ಅಪಹಾಸ್ಯದ ಭೂಮಿಕೆಗಳಿಗೂ ಕುತ್ಸಿತ ಪಾತ್ರಗಳಿಗೂ ಸಂಗೀತವನ್ನು ಪ್ರಯೋಗಿಸಿ ಸುಮ್ಮನೆ ರಸಭಂಗ ಮಾಡುವದನ್ನು ನಾಟಕಗಳಲ್ಲಿ ನಿಲ್ಲಿಸಬೇಕು. ವಿದೂಷಕನ ಭೂಮಿಕೆಗೂ ರಾಗ ವುತ್ತ ಪದಗಳನ್ನು ಜೋಡಿಸಿ ಕಾಲಹರಣಮಾಡುವದು ಅಪಹಾಸ್ಯವು. ಸುಸಂಸ್ಕೃತರಾದ ನಾಗರಿಕ ಹೆಣ್ಣುಮಕ್ಕಳು ಮನೆಗಳಲ್ಲಿ ಗೌರೀ ಉತ್ಸವ, ವಿವಾಹ, ವ್ರತ, ಅರ್ಚನೆ, ಹಬ್ಬ ಹುಣ್ಣಿವೆಯು ಮನರಂಜನೆ, ವಿನೋದ ಮೊದಲಾದ ಪ್ರಸಂಗಗಳಲ್ಲಿ ಹಾಡುವ ಪದಗಳು ಮೊದಲಾದವುಗಳು ಗಹನಸಂಗೀತವಾಗಿ ದ್ದರೆ ಸುಸ್ವರವಾಗಿಯೂ ಇರಬೇಕು. ಹಾಗಿದ್ದರೆ ಸಂಗೀತದ ಮುಖ್ಯ ತತ್ವಗಳನ್ನು ಸಾಧಾರಣವಾಗಿ ಅನುಕರಣಮಾಡುವದು ಸ್ವಾಭಾವಿಕವಾಗಿ ಕಾಣುವದು. ಸಾಧುಸಂತರು ಹರಿದಾಸರು ಕೀರ್ತನೆ ಮಾಡುವವರು ಭಾಟರು ವೈತಾಲಿಕರು ಮೊದಲಾದವರು ಹಾಡುವ ಸಂಗೀತವು ಮಧ್ಯಮ ವರ್ಗದಲ್ಲಿ ಸೇರಬೇಕು. ವೇಶ್ಯೆ ಯರು, ಕವಿಗಳು, ರಾಜರು, ಮಹಿಷಿಯರು, ವಿದ್ವಾಂಸರು ಸಂಗೀತಗಾರರು, ನಟರು, ನರ್ತಕಿಯರು, ವಿಟರು ಇವರಿಂದ ಹಾಡುವ ಸಂಗೀತವು ಉಚ್ಚಪ್ರತಿಯದಾಗಿರಬೇಕು.

ಈ ಪ್ರಕಾರ ನಾಟಕದಲ್ಲಿಯ ಗಾಯನದ ವಿಷಯವನ್ನು ಶಿಷ್ಟ, ಮಧ್ಯಮ, ಗ್ರಾಮ್ಯ ಹೀಗೆ ಮೂರು ವಿಧ ಮಾಡಿ ಅವು ಗಳಿಗೆ ಸಂಗೀತ, ಗಾಯನ, ಗೀತಗಳೆಂದು ಹೆಸರು ಕೊಡ ಬಹುದು. ಸಂಗೀತವು ಶಾಸ್ತ್ರಸಮೇತವಾದ ಕಲೆಯು. ಗಾಯ ನವು ಸಂಗೀತದ ಅಂಶತಃ ಅನುಕರಣವು. ಗೀತವು ವ್ಯಕ್ತಿ ಸ್ವಭಾವ ಪ್ರಚಾರಕ್ಕೆ ತಾದಾತ್ಮ್ಯವಾದದ್ದು. ಈ ರೂಪಗಳು ನಾಟಕಗಳಲ್ಲಿ ಸ್ವಾಭಾವಿಕ ರೂಪದಲ್ಲಿ ಬಹಳೇ ಒಪ್ಪುವವು. ಉಕ್ತಸ್ಥಾನಗಳ ಬದಲಾವಣೆಯನ್ನು ಮಾಡಿದರೆ ನಾಟಕದ ಸ್ವಾರಸ್ಯವು ಅದೇ ಕ್ಷಣಕ್ಕೆ ಹೋಗುವದು.

ನಾಟಕಗಳಲ್ಲಿ ಭಿನ್ನರಸಗಳಿರುವವು. ಅವುಗಳಲ್ಲಿ ಸಂಗೀತದ ಯೋಜನೆಯ ವಿಷಯವಾಗಿ ಚರ್ಚೆಯು ಅವಶ್ಯವಿರುವದು. ನಾಟಕದ ರಸಗಳಲ್ಲಿ ಶೃಂಗಾರ, ಕರುಣಾ, ಹಾಸ್ಯ ಮತ್ತು ಶಾಂತವೆಂಬ ರಸಗಳಲ್ಲಿ ಸಂಗೀತವು ಒಪ್ಪುವದು. ಶೋಕ, ವೀರ, ಅದ್ಭುತ, ಭಯಾನಕ, ಬೀಭತ್ಸ, ರೌದ್ರ ರಸಗಳಲ್ಲಿ ಸಂಗೀತವು ರಂಜನಕಾರಿಯಾಗುವದಿಲ್ಲ. ಸಂಗೀತವು ಶುದ್ಧ ಸಾತ್ವಿಕ ಮತ್ತು ಶಾಂತಭಾವನೆಯ ದ್ಯೋತಕವಾಗಿದೆ. ಆದರೆ ಕಡೆಯ ಆರು ರಸಗಳಲ್ಲಿ ಸಂಗೀತಕ್ಕೆ ವಿಪರೀತವಾದ ಭಾವನೆಗಳ ಪ್ರಾದು ರ್ಭಾವವಾಗಿರುವ ಮೂಲಕ ಅಂಥ ಪ್ರಸಂಗದಲ್ಲಿ ವ್ಯವಹಾರ ದಲ್ಲಿ ಕೂಡ ಅದರ ಕಲ್ಪನೆಯು ಬರಲಾರದು. ಆದ್ದರಿಂದ ಇಂಥ ಪ್ರಸಂಗದಲ್ಲಿ ಸಂಗೀತವನ್ನು ಉಪಯೋಗಿಸಿದರೆ ಅದು ಸಂಗೀತ ವಾಗದೆ ಅದರ ಹಾಸ್ಯವು ಮಾತ್ರ ಚೆನ್ನಾಗಿ ಆಗುವದು.

ಸಂಗೀತ ನಾಟಕಗಳಲ್ಲಿ ಪ್ರಾಚೀನ ಪದ್ಧತಿಯಲ್ಲಿಯೂ ಆಧು ನಿಕ ಪದ್ಧತಿಯಲ್ಲಿಯೂ ವಿಶೇಷವಾಗಿ ಉಲ್ಲೇಖಿಸತಕ್ಕ ಬದಲಾ ವಣೆಯ ವಿವೇಚನೆಯು ಮಹತ್ವದ್ದಾಗಿದೆ. ಅದನ್ನು ಸ್ವಲ್ಪ ವಿಚಾರಮಾಡಿ ಈ ಲೇಖವನ್ನು ಮುಗಿಸುವೆವು. ಪ್ರಾಚೀನ ನಾಟಕಗಳು ಭರತನ ಆಜ್ಞೆಯ ಪ್ರಕಾರ ಪೂರ್ವರಂಗ ಅಥವಾ ಪ್ರಸ್ತಾವನೆಯಿಂದ ವಿಶಿಷ್ಟವಾಗಿರುವವು. ಆದರೆ ಆಧುನಿಕರು ಅದನ್ನು ಕಿತ್ತೊಗೆದು ಪಾಶ್ಚಾತ್ಯರ ಅನುಕರಣಮಾಡಿ ಅವಶ್ಯಕ ಸುಧಾರಣೆಯನ್ನು ಮಾಡಿದ್ದೇವೆಂದು ಎದೆಗೆ ಕೈಹಚ್ಚಿ ಹೇಳು ವರು. ಅದರ ಉಚ್ಚಾಟನದ ಕಾರಣವನ್ನು ಕೇಳಹೋದರೆ ಅವರು "ಏನು, ಪ್ರತಿನಾಟಕದಲ್ಲಿ ಸೂತ್ರಧಾರ, ನಟಿ, ಪಾರಿ ಪಾರ್ಶ್ವಕರು, ವಿದೂಷಕ ಇವರ ನಿಯಮಿತ ಅರ್ಥದ ವಾಕ್ಯ ಗಳು ಸಾವಿರಾರು ವರ್ಷ ಕೇಳಿ ಆಬಾಲವೃದ್ಧರಿಗೆ ಮುಖೋ ದ್ಗತವಾಗಿವೆ. ಅವನ್ನೇ ಕೇಳುವದು ಕಾಲಾಪವ್ಯಯ"ವೆಂದು ಆರೋಪಿಸುವರು. ಆದರೆ ಈ ಜನರಿಗೆ ಪ್ರಾಚೀನರ ಯೋಜ ನೆಯು ಮುರ್ದಲೇ ಗೊತ್ತಿರದ ಮೂಲಕ ತಾವನ್ನುವದು ಸರಿ ಎಂದು ಭಾವಿಸಿಕೊಂಡಿರುವರು. ಆದರೆ ಅಂಥವರು ದಯ

ವಿಟ್ಟು, ಪ್ರಾಚೀನರ ಉದ್ದೇಶಗಳನ್ನೂ ಸ್ವಲ್ಪಮಟ್ಟಿಗೆ ವಿಚಾರಿಸಿದರೆ ತಮಗಿಂತಲೂ ಅವರು ಹೆಚ್ಚು ವಿಚಾರಮಾಡಿ ಮುಂದೆ ಬೇಕಾಗುವ ಯೋಜನೆಯನ್ನೇ ಅದರಲ್ಲಿ ಸೇರಿಸಿರುವರೆಂದು ಕಾಣಬಹುದು.

ಪ್ರಸ್ತಾವನೆಯ ಯಾವತ್ತು ಭಾಷಣವು ಐದು ಮಿನಿಟನಕಿಂತ ಹೆಚ್ಚು ಸಾಗುವಷ್ಟುಉದ್ದವಾದದ್ದನ್ನು ಯಾವ ನಾಟಕಕಾರರೂ ಇದುವರೆಗೆ ಹಾಕಿಲ್ಲ. ಅಷ್ಟು ಅವಧಿಯಲ್ಲಿ ಮಂಗಲಾಚರಣ, ಈಶಸ್ತವನ, ನಾಟಕಕರ್ತ, ಕಥಾವಸ್ತು ಇವುಗಳನ್ನು ನಿರ್ದೇಶಮಾಡಿ ಪ್ರೇಕ್ಷಕರಿಗೆ ಮುಂದೆಬರುವ ನಾಟಕದ ಸಂದರ್ಭವನ್ನು ಸೂಚಿಸುವದು ಎಷ್ಟು ಅವಶ್ಯವಾಗಿರುವದೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಇಷ್ಟೇ ಅಲ್ಲದೆ ಇನ್ನೊಂದು ಮಹತ್ವದ ಉದ್ದೇಶವಿರುವದು; ಅದನ್ನು ಎಂದೂ ಮರೆಯಕೂಡದು.

ನಾಟಕದಲ್ಲಿ ಸಂಗೀತವು ಅವಶ್ಯವಾಗಿ ಬೇಕೆಂದು ಹಿಂದೆ ಹೇಳಿದ್ದೇವೆ. ಸಂಗೀತವೆಂದರೆ 'ಗೀತಂ ವಾದ್ಯಂ ತಥಾ ನೃತ್ಯಂ ತ್ರಯಂ ಸಂಗೀತ ಉಚ್ಯತೇ' ಅಂದರೆ ಗಾಯನ, ವಾದನ, ನರ್ತನ ಈ ಮೂರರ ಸಂಯೋಗವೆಂದರ್ಥ. ನಾಟಕದಲ್ಲಿ ರಸಗಳಿರುವವು. ಅವರೆ ಅರ್ಥಶೂನ್ಯವಾದ ಸ್ವರಶಾಸ್ತ್ರಕ್ಕೆ ನಾಟಕದ ರಸಗಳನ್ನು ಸೇರ್ಪಡಿಸುವದು ಸರಿಯಲ್ಲವೆಂದು ತಿಳಿದು ಸ್ವತಂತ್ರ ರಂಜಕ ಶಕ್ತಿಯುಳ್ಳ ಈ ಮೂರೂ ಕಲೆಗಳನ್ನು ಜನರಂಜನೆಯ ವೈವಿಧ್ಯಕ್ಕೋಸ್ಕರ ನಾಟಕದಲ್ಲಿ ಸೇರ್ಪಡಿಸುವದಕ್ಕೆ ಪ್ರಸ್ತಾವನೆಯನ್ನು ಒಂದು ಸಾಧನವನ್ನಾಗಿಟ್ಟುಕೊಂಡು ಅದರಿಂದ ಕಥಾವಸ್ತುಕಥನದ ಕಾರ್ಯದ ಹೊರತು ಸಂಗೀತದ ಪ್ರಯೋಗಕ್ಕೂ ಯೋಗ್ಯಸ್ಥಾನವನ್ನು ಕಲ್ಪಿಸಿದ್ದಾಗಿದೆ. ಹೀಗಾಗದಿದ್ದರೆ ನಾಟಕದಲ್ಲಿ ಸಂಗೀತದ ತನ್ಮಯವಾಗಿ ಮೂಲರಸ ಮತ್ತು ಪ್ರೇಕ್ಷಕರ ಮೇಲಿನ ಪರಿಣಾಮಗಳಲ್ಲಿ ಏನೂ ಸಂಬಂಧ ಉಳಿಯುವದಿಲ್ಲ. ಹೀಗೆ ವ್ಯತ್ಯಾಸವನ್ನುಂಟು ಮಾಡಬಾರದೆಂಬದೇ ಮುಖ್ಯ ಉದ್ದೇಶವಿರುವದು. ಪ್ರೇಕ್ಷಕರ ಮೇಲಾಗುವ ನಾಟಕದ ಪರಿಣಾಮವು ಸಂಗೀತದಮೇಲೆ ಅವಲಂಬಿಸಿ ಇರದೆ ಸ್ವತಂತ್ರವಾಗಿರುವದು. ಹಾಗಾಗದಿದ್ದರೆ ಗದ್ಯನಾಟಕಗಳಿಗೆ ರಂಜನೆಯೇ ಇಲ್ಲವೆಂದು ಹೇಳುವ ಅನವಸ್ಥೆಯಾಗುವದು; ನಿಜವಾಗಿ ಹಾಗಿರುವದಿಲ್ಲ. ಬಹುಜನ ಸಮಾಜದಲ್ಲಿ ಒಂದೇ ರುಚಿಯ ಜನರಿರದ ಮೂಲಕ ಹೇಗೆ ನಾಟಕದಲ್ಲಿ ಯಾವತ್ತು ರಸಗಳನ್ನು ಸೇರಿಸಲಿಕ್ಕೆ ನಾಟಕಕರ್ತರು ಪ್ರಯತ್ನಪಡುವರೋ ಹಾಗೆಯೇ ಗಾಯನವಾದನನೃತ್ಯಗಳಿಗೆ ಕೂಡ ಸ್ವತಂತ್ರ ರುಚಿಯಿರುವದರಿಂದ ರುಚಿವೈಚಿತ್ರ್ಯದ ಸಮಾಜಕ್ಕೆ ಇವು ಕೂಡ ರಂಜನಕಾರಿಗಳಾಗುವವೆಂದು ಇವುಗಳ ಯೋಜನೆಯು ವಿಹಿತವಾಗಿರುವದು. ಇನ್ನು ಮೂಲ ನಾಟಕದ ಗಾಯನವಾದನಗಳು ಪ್ರಮಾಣವಿಲ್ಲದೆ ಬೆಳೆದು ಅವುಗಳಿಂದ ನಾಟಕದ ಪರಿಣಾಮವು ಪ್ರೇಕ್ಷಕರ ಮನಸಿನಮೇಲೆ ಆಗುವದಿಲ್ಲವೆಂದೇ ಹಾಗೆ ಮಾಡಕೂಡದೆಂದು ಭರತನು ಕೆಳಗಿನ ಶ್ಲೋಕಗಳಲ್ಲಿ ಹೇಳಿರುವನು :—

"ಏವಂ ಶುದ್ಧೋ ಭವೇಚ್ಚಿತ್ರಃ ಪೂರ್ವರಂಗೋ ವಿಧಾನತಃ,
ಕಾರ್ಯೋ ನಾತಿ ಪ್ರಸಂಗೋಽತ್ರ ನೃತ್ತಗೀತವಿಧಿಂ ಪ್ರತಿ ॥
ಗೀತವಾದ್ಯೇ ಚ ನೃತ್ತೇ ಚ ವಿಬುಧೇಽತಿ ಪ್ರಸಂಗತಃ।
ಖೇದೋ ಭವೇತ್ಪ್ರಯೋಕ್ತೄಣಾಂ ಪ್ರೇಕ್ಷಕಾಣಾಂ ತಥೈವ ಚ॥
ಖಿನ್ನಾನಾಂ ರಸಭಾವೇಷು ಸ್ಪಷ್ಟತಾ ನೋಪಜಾಯತೇ।
ತತಃ ಶೇಷಃ ಪ್ರಯೋಗಸ್ತು ನ ರಾಗಜನಕೋ ಭವೇತ್ ॥

ಇದರ ತಾತ್ಪರ್ಯವೇನೆಂದರೆ ಭೂಮಿಕೆಗಳನ್ನು ಧಾರಣಮಾಡುವ ಜನರಿಂದ ಹೆಚ್ಚಾಗಿ ನೃತ್ಯಗೀತಗಳನ್ನು ಮಾಡಿಸಿದರೆ ಆಯಾಸದಿಂದ ಪ್ರಯೋಗದಲ್ಲಿ ಅಭಿನಯಿಸತಕ್ಕ ಸಂದರ್ಭಗಳಲ್ಲಿ ಆಯಾ ರಸದ ಪೋಷಣೆಯನ್ನು ಮಾಡುವದಾಗುವದಿಲ್ಲ. ಆದ್ದರಿಂದ ಮೂಲನಾಟಕದಲ್ಲಿ ನೃತ್ಯಗೀತಗಳು ವಿಶೇಷ ಪರಿಮಿತವಾಗಿರಬೇಕು. ಅಂದರೆ ಮೇಲೆ ಹೇಳಿದ ಮೂರು ಪ್ರಕಾರದ ಸ್ವಭಾವಸಿದ್ಧವಾದ ಸಂಗೀತವನ್ನು ವ್ಯವಹಾರದಲ್ಲಿ ಹೇಗೆ ಉಪಯೋಗಿಸುವ ರೂಢಿಯುಂಟೋ ಅದರಂತೆಯೇ ವ್ಯವಹಾರದ ಆದರ್ಶವಾದ ನಾಟಕದಲ್ಲಿ ಕೂಡ ಆ ಪ್ರಸಂಗಗಳನ್ನು ಮೀರಿ ಪದಗಳನ್ನು ಹಾಕುವದನ್ನು ನಿಲ್ಲಿಸಬೇಕು. ಬರಿ ಪ್ರತಿಯ ಸಂಗೀತವನ್ನು ಅನುಭವ ಮಾಡುವ ಅಪೇಕ್ಷೆಯುಳ್ಳವರು ಪ್ರಸ್ತಾವನೆಯಲ್ಲಿಯೇ ಅದನ್ನು ಒದಗಿಸಿಕೊಳ್ಳಬೇಕೆಂಬದೇ ಪ್ರಸ್ತಾವನೆಯ ಉದ್ದೇಶವು. ಅದು ಹೇಗೆಂದರೆ ನಾಟಕದ ಪ್ರಾರಂಭಕ್ಕೆ ನಾಂದಿ ಎಂಬ ಹೆಸರಿನ ಮಂಗಲಾಚರಣವಿರುವದು. ಅದರಲ್ಲಿ ಎಲ್ಲ ಭೂಮಿಕೆಗಳನ್ನು ಮಾಡುವ ಜನರೆಲ್ಲರೂ ಕೂಡಿ ಪಡದೆಯ ಒಳಗೆ ಅಥವಾ ಹೊರಗೆ ಒಂದೇ ನಾದವನ್ನು ಆಧಾರವಾಗಿಟ್ಟುಕೊಂಡು ಒಬ್ಬರಿಂದೊಬ್ಬರು ಏನೂ ಸ್ವತಂತ್ರವಾಗದಂತೆ ಕ್ಲಪ್ತವಾದ ಒಂದು ಪದವನ್ನು ಏಕಸಮಯಾವಚ್ಛೇದದಿಂದ ಅನ್ನುವದು ವಿಹಿತವಾಗಿದೆ. ಇದಕ್ಕೆ ಪಾಶ್ಚಾತ್ಯರು "ಕೋರಸ್" ಎಂದರೆ ಸಾಮುದಾಯಿಕಗೀತವೆನ್ನುವರು. ಇದನ್ನು ಯಾವತ್ತು ವಾದ್ಯಗಳಿಂದ ಭವ್ಯವಾಗಿ ಅಂದಕೂಡಲೆ ಯಾವತ್ತು ಪ್ರೇಕ್ಷಕರ ಗಲಭೆಯು ನಿಂತು ಭವ್ಯನಾದದ ಧ್ವನಿಗಳಿಂದ ಅವರ ಮನಸ್ಸು ರಂಗಭೂಮಿಯ ಕಡೆಗೆ ಆಕರ್ಷಿತ

ವಾಗುವದು. ನಂತರ ಸೂತ್ರಧಾರನು ದೇವತಾ, ಗುರು, ಕವಿ ಅಥವಾ ಸಭಾಪ್ರಶಂಸಾಪರವಾದ ಅರ್ಥವುಳ್ಳ ಒಂದು ಅಥವಾ ಎರಡು ಪದಗಳನ್ನು ಹಾಡುವದೂ ರೂಢಿಯಾಗಿದೆ. ಇದರಲ್ಲಿ ಕೇವಲ ಸಭಾಪ್ರಶಂಸೆಯಂಥ ಒಂದೇ ಕ್ಲಪ್ತ ವಿಷಯವಿರದೆ ಆ ಪದಗಳಿಂದ ಸೂತ್ರಧಾರನು ಉಚ್ಚಪ್ರತಿಯ ಗಾಯನನೈಪುಣ್ಯವನ್ನು ತೋರಿಸುವದಕ್ಕೆ ಬುದ್ಧಿಪುರಃಸರವಾಗಿ ಯೋಜಿಸಿದ ಯೋಜನೆಯಿದ್ದು ಇದರಲ್ಲಿ ಪ್ರೇಕ್ಷಕರ ಅಭಿರುಚಿಯ ಪ್ರಕಾರ ಗಾಯನದ ತೃಪ್ತಿಹೊಂದುವದಕ್ಕೆ ಅವಕಾಶವಿರುವದು. ಈ ಪ್ರಸಂಗದಲ್ಲಿ ಉತ್ತಮ ಗಾಯಕನಾದವನು ಸೂತ್ರಧಾರನಿದ್ದರೆ ಗಾಯನವನ್ನು ಅರ್ಧತಾಸಿನ ವರೆಗೆ ಸಾಗಿಸಿ ಪ್ರೇಕ್ಷಕರನ್ನು ಈ ವಿಷಯದಲ್ಲಿ ತೃಪ್ತಿಪಡಿಸಬಹುದು. ಹೀಗೆ ಮಾಡುವ ಉದ್ದೇಶವೇ ಸಂಗೀತನಾಟಕಗಳಲ್ಲಿ ಸೂತ್ರಧಾರನನ್ನು ಮೊದಲಿಗೆ ಹಾಕುವದು ವಿಹಿತವಾಗಿದೆ. ಆದರೆ ಈಗಿನ ಕೆಲವು ನಾಟಕಗಳಲ್ಲಿ ಇಂಥ ಪ್ರಸ್ತಾವನೆಯನ್ನು ಕಿತ್ತೊಗೆದು ನಾಟಕದ ಮುಖ್ಯ ರಸಭರತಿಯ ಕಾಲಕ್ಕೆ ಯಾವದಾದರೊಂದು ಕಲ್ಪಿತ ಪಾತ್ರವನ್ನು ಸೇರಿಸಿ ಆ ಪಾತ್ರದ ಮುಖಾಂತರ ಗಾಯನವನ್ನು ಕೇಳುವ ಅಪೇಕ್ಷೆಯನ್ನು ತೀರಿಸಿಕೊಳ್ಳುವ ಯೋಜನೆಯನ್ನು ಮಾಡಿರುವರು. ಈ ರೀತಿಯಿಂದ ನಾಟಕದ ರಸದಲ್ಲಿ ತಾದಾತ್ಮ್ಯ ಹೊಂದಿದ ಪ್ರೇಕ್ಷಕರು ಅದನ್ನು ಮರೆತು ಗಾಯನದಲ್ಲಿ ತನ್ಮಯವಾಗುವದೂ ಅಸಂಭವವೇ; ಮತ್ತು ಅರ್ಧತಾಸಿನ ವರೆಗೆ ಗಾಯನವು ಸಾಗಿದ ನಂತರ ಗಾಯನದ ಆನಂದದಿಂದ ಪರಾವರ್ತನಹೊಂದಿ ಪುನಃ ನಾಟಕದ ರಸದಲ್ಲಿ ಮಗ್ನರಾಗುವದೂ ನಾಟಕವೂ ಪ್ರೇಕ್ಷಕರೂ ತನ್ಮಯರಾಗುವದೂ ಪರಸ್ಪರ ವಿರುದ್ಧವೂ ಅಸಂಭವನೀಯವೂ ಆದ್ದರಿಂದ ನಾಟಕದ ರಸಹಾನಿ ಕಾರಕವಾಗುವಂಥ ಇಂಥ ಪ್ರಸಂಗಗಳನ್ನು ನಾಟಕದಲ್ಲಿ ಹಾಕಬಾರದೆಂಬದೇ ಭರತನ ಪ್ರಸ್ತಾವನೆಯಲ್ಲಿ ಸೂತ್ರಧಾರನ ಪ್ರವೇಶದ ಮುಖ್ಯ ಉದ್ದೇಶವು.

ಇದು ಗಾಯನ ಹಾಗು ಗೀತಾನುಗವಾದ್ಯಗಳ ವಿಷಯವಾಯಿತು. ಇದರ ಮುಂದೆ ಸೂತ್ರಧಾರನು ನಟಿಯನ್ನು ಕರೆದು ಆವಳಿಗೆ ನೆರೆದ ವಿದ್ವತ್ಸಭೆಯು ಮುಂದೆ ಯಾವದಾದರೊಂದು ಋತುವಿನ ಅಥವಾ ಇನ್ನಾವದಾದರೂ ಸಾಮಾನ್ಯ ಅಭಿರುಚಿಯ ವಿಷಯದ ವರ್ಣನಪರವಾದ ಒಂದು ಪದವನ್ನು ಸಾಭಿನಯ ನರ್ತನವಾಗಿ ಹಾಡಹೇಳುವನು. ಇದರಲ್ಲಿ ನಟಿಯ ಪಾತ್ರದ ಪುರುಷನೇ ಆಗಲಿ ಸ್ತ್ರೀಯೇ ಆಗಲಿ ಉದ್ದಿಷ್ಟಪದವನ್ನು ನೃತ್ಯವಾದ್ಯಗಳೊಂದಿಗೆ ಸಾಭಿನಯವಾಗಿ ಹಾಡಿ ಆ ಕಲೆಯಲ್ಲಿ ಆಸಕ್ತಿಹೊಂದಿದವರಿಗೆ ತೃಪ್ತಿಯಾಗುವಂತೆ ಪ್ರೇಕ್ಷಕರ ಇಚ್ಛಾನುಸಾರವಾದ ಕಾಲದ ವರೆಗೆ ನಡೆಯಿಸಲಿಕ್ಕೂ ಆ ಕಲೆಯ ವಿಶೇಷನೈಪುಣ್ಯವನ್ನು ತೋರಿಸಲಿಕ್ಕೂ ನಟಿಯ ಪಾತ್ರವು ಪ್ರಸ್ತಾವನೆಯಲ್ಲಿ ಏರ್ಪಟ್ಟಿದೆ. ಇದರಂತೆ ಮೂಲನಾಟಕದಲ್ಲಿ ಅಪ್ರಾಸಂಗಿಕ ಹಾಸ್ಯದ ಅತಿರೇಕವಾಗಬಾರದೆಂದು ಹಾಸ್ಯದಲ್ಲಿಯ ನೈಪುಣ್ಯದ ಸ್ವಲ್ಪಭಾಗವನ್ನು ಸ್ವತಂತ್ರವಾಗಿಯೇ ತೋರಿಸಲಿಕ್ಕೆ ಪ್ರಸ್ತಾವನೆಯಲ್ಲಿ ವಿದೂಷಕನ ಪಾತ್ರವು ಉಕ್ತವಾಗಿದೆ. ಇದರಂತೆ ಸೂತ್ರಧಾರನ ಎಡಬಲಕ್ಕೆ ಇರುವ ಇಬ್ಬರು ಪಾರಿಪಾರ್ಶ್ವಕರೆಂಬ ನಾಮವುಳ್ಳವರು ಸೂತ್ರಧಾರನ ಅನುಯಾಯಿಗಳು. ಇವರ ಪ್ರವೇಶವು ಪ್ರಸ್ತಾವನೆಯಲ್ಲಿ ಸೂತ್ರಧಾರನೊಂದಿಗೆ ಇರುವದು. ಆದರ ಉದ್ದೇಶವಾದರೂ ಉಳಿದವರಂತೆ ವಿಶೇಷ ಮಹತ್ವವುಳ್ಳದ್ದಾಗಿರುವದು. ಸೂತ್ರಧಾರನು ಹೇಗೆ ಗಾಯನದಲ್ಲಿ ವಿದ್ವಾಂಸನಾಗಿರಬೇಕೋ ಹಾಗೆ ಈ ಇಬ್ಬರು ಪಾರಿಪಾರ್ಶ್ವಕರು ವಾದನದಲ್ಲಿ ವಿದ್ವಾಂಸರಾಗಿರಬೇಕು. ಒಬ್ಬನು ಸಾರಂಗಿ ವೀಣೆಗಳಂತಹ ಗೀತಾನುಗವಾದ್ಯಗಳಲ್ಲಿಯೂ ಮತ್ತೊಬ್ಬನು ಮೃದಂಗ ಮದ್ದಲಿ ಮೊದಲಾದ ನೃತ್ತಾನುಗ ವಾದ್ಯಗಳಲ್ಲಿಯೂ ನಿಷ್ಣಾತನಾಗಿರಬೇಕು. ಇವರಿಬ್ಬರು ಪ್ರಸ್ತಾವನೆಯಲ್ಲಿ ಸೂತ್ರಧಾರನ ಗಾಯನದ ಕೂಡ ಹಾಗು ನಟಿಯ ನೃತ್ತಾಭಿನಯದ ಕೂಡ ತಮ್ಮ ನೈಪುಣ್ಯವನ್ನು ತೋರಿಸಿ ಸೂತ್ರಧಾರ ನಟಿ ಇವರು ಮುಖ್ಯಭೂಮಿಕೆಯಲ್ಲಿ ಕೆಲಸಮಾಡುವದಕ್ಕೆ ನಿಷ್ಕ್ರಾಂತರಾದೊಡನೆಯೇ ಪಾರಿಪಾರ್ಶ್ವಕರು ರಂಗಭೂಮಿಯ ಎರಡು ಪಾರ್ಶ್ವಗಳಲ್ಲಿ ತಮ್ಮ ಸ್ಥಾನಗಳಲ್ಲಿ ಕುಳಿತು ಪಾತ್ರಗಳಲ್ಲಿಯ ಗಾಯನಕ್ಕೆ ತಮ್ಮ ಜೊತೆಯನ್ನು ಕೊಡುವರು. ಅಂತೂ ಪ್ರಸ್ತಾವನೆಯಲ್ಲಿ ಸೂತ್ರಧಾರನು ಉತ್ತಮಗಾಯಕನು, ನಟಿಯು ನರ್ತನಾಭಿನಯಕುಶಲೆಯು, ವಿದೂಷಕನು ಹಾಸ್ಯಕಾರನು, ಪಾರಿಪಾರ್ಶ್ವಕರು ಗೀತಾನುಗನೃತ್ತಾನುಗವಾದ್ಯನಿಪುಣರು ಈ ಪ್ರಕಾರ ಈ ಐದು ಜನರು ಆ ನಾಟ್ಯಮಂಡಲದಲ್ಲಿಯೇ ಆಯಾಕೆಲಸದಲ್ಲಿ ಅದ್ವಿತೀಯರಾಗಿರುವವರೇ ಆ ಭೂಮಿಕೆಗಳನ್ನು ಮಾಡಬೇಕೆಂಬದು ಭರತನ ಮುಖ್ಯ ಉದ್ದೇಶವಾಗಿರುವದು. ಇಂಥ ಮಾರ್ಮಿಕ ಯೋಜನೆಯ ಮೇಲೆ ಆಧುನಿಕ ವಿದ್ವಾಂಸರ ಆಕ್ಷೇಪವೇ! ಧನ್ಯ ಅವರ ವಿದ್ವತ್ತೆಯೂ ರಸಿಕತನವೂ ಧನ್ಯ!

ಈ ಮೇರಿಗೆ ಪ್ರಸ್ತಾವನೆಯು ಮಹತ್ವವಿರುವದು. ಆದರೆ ಆಧುನಿಕ ರಸಿಕರು ಪ್ರಸ್ತಾವನೆಯ ಐದು ವ್ಯಕ್ತಿಗಳನ್ನು ಮೂಲ ಕಥೆಯಲ್ಲಿಯ ವ್ಯಕ್ತಿಗಳೆಂದು ಸುಮ್ಮನೇ ಗ್ರಹಿಸಿ ಅವುಗಳ ಮುಖ್ಯ ಉದ್ದೇಶವನ್ನರಿಯದೆ ಆರೋಪವನ್ನು ಮಾಡುವದು ಅಸಮಂಜಸವಾಗಿರುವದು. **ಸಂಗೀತನಾಟಕವೆಂದ ಕೂಡಲೆ ಗಾಯನ, ವಾದನ, ನೃತ್ಯ, ನಾಟ್ಯ, ಕಾವ್ಯ ಅಥವಾ ಗದ್ಯ ಈ ಐದು ಸ್ವತಂತ್ರ ವಿಷಯಗಳ ಪ್ರದರ್ಶನವೆಂದೇ ಭಾವಿಸಬೇಕು.** ಪ್ರಸ್ತಾವನೆಯಲ್ಲಿ ಇವುಗಳಲ್ಲಿಯ ಪ್ರತಿಯೊಂದು ಕಲೆಯ ನೈಪುಣ್ಯವನ್ನು ಸ್ವತಂತ್ರವಾಗಿಯೂ, ಮುಖ್ಯ ನಾಟಕದ ಕಥೆಯಲ್ಲಿ ವ್ಯಕ್ತಿಪ್ರಸಂಗಗಳಿಗೆ ಅನುಸರಿಸಿ ಸಂಯುಕ್ತವಾಗಿಯೂ ತೋರಿಸುವ ಯೋಜನೆಯೆಂದೇ ಭಾವಿಸಬೇಕು. ಪಾಶ್ಚಾತ್ಯದೇಶಗಳಲ್ಲಿ ಕೂಡ ಸಂಗೀತ ಮತ್ತು ನಾಟಕ ಇವೆರಡೂ ಒಂದೇ ಸ್ಥಳದಲ್ಲಿ ಒಂದೇ ವೇಳೆಯಲ್ಲಿ ಜನರ ಮನೋರಂಜನಮಾಡುವ ಸಾಧನಗಳೆಂದು ನಂಬಿಗೆಯಿರುವದು. ಇದರ ಪ್ರತೀತಿಯನ್ನು ಈ ದೇಶದ ನಾಟಕಗೃಹದಲ್ಲಿಯ ಅವರ ಪ್ರಯೋಗಗಳನ್ನು ನೋಡಿದರೆ ಸಾಮಾನ್ಯ ಜನರಿಗೆ ಸಂಗೀತ ಮತ್ತು ನಾಟಕ ಇವೆರಡೂ ಒಂದಕ್ಕೊಂದು ಸಮೀಪಿಸಿರುವ ವಿಷಯಗಳೆಂಬ ತತ್ವವು ಅವರಲ್ಲಿ ಕೂಡ ಮಾನ್ಯವಾಗಿರುವದೆಂದು ಕಂಡುಬರುವದು. ಪಾಶ್ಚಾತ್ಯನಾಟಕಗಳಲ್ಲಿ ಕೂಡ ಕೆಲವು ಕಾಲ ಗಾಯನ, ವಾದನ, ನೃತ್ಯಗಳಿಂದ ಪ್ರೇಕ್ಷಕರ ಮನರಂಜನೆಯಾದನಂತರ ಮುಖ್ಯ ನಾಟಕವು ನಡೆಯುವದು. ಇಂಥ ಸಂಯುಕ್ತ ಪ್ರಯೋಗಗಳೇ ಬಹಳ. ಸಂಗೀತವಿಲ್ಲದೆ ಬರಿ ಗದ್ಯನಾಟಕಗಳು ಬಹಳ ಕ್ವಚಿತ್ತು. ಇಂಥ ಸಂಯುಕ್ತ ಆಟಗಳಿಗೆ "ಕಾನ್ಸರ್ಟ ಆ್ಯಂಡ್ ಡ್ರಾಮಾ" ಎನ್ನುವರು. ನಾಟಕಗೃಹದಲ್ಲಿ ಗಾಯನವಾದನನೃತ್ಯಗಳಿಲ್ಲದೆ ಬರೀ ಗದ್ಯ 'ಪ್ರೋಜ್' ನಾಟಕಗಳನ್ನು ನೋಡುವದು ಅರಸಿಕತನವೆಂದು ಭಾವಿಸುವರು. ಆದರೆ ಈ ತರಹದ ಪ್ರಸ್ತಾವನೆಯಂಥ ರೂಢಿಯು ಪಾಶ್ಚಾತ್ಯ ನಾಟಕಗಳಲ್ಲಿ ಕಾಣುವದರ ಬದಲು 'ಕಾನ್ಸರ್ಟ' ಸಂಗೀತ ವೃಂದವು ನಾಟಕದ ಮುಂಚೆ ಪ್ರತ್ಯೇಕವಾಗಿ ಕಾಣಬಹುದು.

ಪ್ರಸ್ತಾವನೆಯ ಉದ್ದೇಶವು ಇದೇ ಎಂದು ತಿಳಿದರೆ ಯಾವ ಅನರ್ಥವೂ ಆಗಲಾರದು. ಪಾಶ್ಚಾತ್ಯರು ಕಾನ್ಸರ್ಟ ಆ್ಯಂಡ ಡ್ರಾಮಾ ಎಂದು ಅನ್ನುವ ಅಭಿಪ್ರಾಯವನ್ನೇ ಸಂಗೀತ ನಾಟಕ ಎಂಬ ಶಬ್ದಗಳು ತೋರಿಸುವವು. ಕಾನ್ಸರ್ಟ ಅಂದರೆ ಸಂಗೀತ ವೃಂದ; ಡ್ರಾಮಾ ಎಂದರೆ ನಾಟಕ. ಈ ಮೇರೆಗೆ ಒಂದೇ ಉದ್ದೇಶದ ಈ ಎರಡು ಪದ್ಧತಿಗಳಲ್ಲಿ ಒಂದು ಸಮಂಜಸವೆಂದೂ ಮತ್ತೊಂದು ನಿಂದ್ಯವೆಂದೂ ಭಾವಿಸುವದು ಸರ್ವಥಾ ಯುಕ್ತವಲ್ಲ. ಪ್ರಸ್ತಾವನೆಯಲ್ಲಿಯ ಐದು ಪಾತ್ರಗಳ ವೇಷವು ಕೇವಲ ದೇಶ ಕಾಲ ಪರಿಸ್ಥಿತಿಯ ಪ್ರಕಾರ ವ್ಯಾವಹಾರಿಕವಾಗಿರುವವು; ಹಾಗು ಮುಖ್ಯ ನಾಟಕದ ಪಾತ್ರಗಳ ವೇಷಗಳು ಆಯಾ ಭೂಮಿಕೆಗೆ ಒಪ್ಪುವಂಥವಿರುವವು. ಹೀಗಿದ್ದರೂ ಕೂಡ ಪ್ರಸ್ತಾವನೆಯನ್ನು ಕಿತ್ತುಹಾಕುವದಕ್ಕೆ ಅಂಥ ಮಹತ್ವದ ಕಾರಣವೇನಾದರೂ ಇದ್ದರೆ ಅಂಥ ಕಾರಣವನ್ನು ಜನರ ಮುಂದಿಟ್ಟು ಅನುವಾದವನ್ನು ಪಡೆಯಬೇಕು. **ಗಾಯನ, ವಾದನ, ನೃತ್ಯ, ನಾಟ್ಯ, ಕಾವ್ಯ ಇವುಗಳಲ್ಲಿ ಯಾವದೂ ಬೇಡೆನ್ನುವವರು ಪ್ರಸ್ತಾವನೆಯು ಬೇಡವೆಂದರೆ ಸಲ್ಲುವದು.** ಅಂಥವರು ಗದ್ಯನಾಟಕಗಳನ್ನು ಪುರಸ್ಕರಿಸಿ ಪ್ರೋತ್ಸಾಹಿಸುವದೆ ನಾಟಕಕಲೆಯ ಮೇಲ್ಮೆ ಮಹದುಪಕಾರ ಮಾಡಿದಂತಾಗುವದು. ಯಾಕೆಂದರೆ ನಾಟಕದಲ್ಲಿ ಮನಸಿಗೆ ಬಂದಂತೆ ಸಂಗೀತವನ್ನು ಸೇರಿಸಿದರೆ ಯಾವ ವಿಷಯದ ರಸಾಸ್ವಾದವೂ ಸರಿಯಾಗಿ ದೊರೆಯುವದಿಲ್ಲ. **ನಿಜವಾದ ನಾಟಕದ** ರಸಾಸ್ವಾದವುಳ್ಳ**ವರು ಗದ್ಯನಾಟಕಗಳನ್ನೇ ಪ್ರೋ**ತ್ಸಾಹಿಸಬೇಕು. ರಸವೈಚಿತ್ರ್ಯದ ಅಪೇಕ್ಷೆಯುಳ್ಳವರು ಸುಸಂಬದ್ಧವಾಗಿ ಪ್ರಯೋಗಿಸುವ ಸಂಗೀತನಾಟಕಗಳ ಅಪೇಕ್ಷೆ ಮಾಡಬೇಕು. ಅಂದರೆ ಅದರಲ್ಲಿ ಯಾವತ್ತು ವಿಷಯದ ಆನಂದವು ಯಥಾಸ್ಥಿತವಾಗಿಯೂ ಸಮವಾಗಿಯೂ ದೊರೆಯುವದು.

---

# 'ಶಿವಾದ್ವೈತದರ್ಪಣ'ದ ವಿಮರ್ಶೆ

( ಲೇಖಾಂಕ ೨ )

ಲೇಖಕರು :—ಶ್ರೀ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ, L. L. B., ಹುಬ್ಬಳ್ಳಿ.

ಅತಃ ಶಬ್ದೋಽಹ್ಯಧಿಕಾರಸಂಪೂರ್ಣತ್ವಂ ಬ್ರೂಯತೇ— ಎಂಬುದು ಅವೈಯಾಕರಣವು. ಬ್ರೂಞ್ ಧಾತುವು ಅದಾದಿ ಎಂಬ ಎರಡನೆಯ ಗಣದ್ದಿದ್ದು ದಿವಾದಿ ನಾಲ್ಕನೆಯ ಗಣದ್ದಲ್ಲ.

ತುಸು ಹಿಂದಕ್ಕೆ ಸರಿದು "ವೇದವ್ಯಾಸಂ ಸೂತ್ರಕಾರಂ ಚೈತನ್ಯಂ ವೃತ್ತಿಕಾರಕಂ" ಎಂಬ ಮಂಗಲಶ್ಲೋಕವಲ್ಲಿಯ ವೃತ್ತಿಕಾರಕಂ ಎಂದಿರುವ ಸಮಾಸದತ್ತ ನೋಡುವ. ಈ ಷಷ್ಠೀಸಮಾಸವು "ತೃಜಕಾಭ್ಯಾಂ ಕರ್ತರಿ" ೨-೨-೧೫ ಎಂಬೀ ಪಾಣಿನಿ ಸೂತ್ರದಿಂದ ನಿಷಿದ್ಧವಾಗಿದೆ. ಶೇಷಷಷ್ಠೀ ಸಮಾಸವೆಂದು ಪರಿಹಾರವಾಗದು. "ಸೂತ್ರವಾರ್ತಿಕ ಭಾಷ್ಯಾಣಾಂ ಕಾರಕಾನ್ ಮುನಿಸತ್ತಮಾನ್ । ಪಾಣಿನ್ಯಾದೀನ್ ನಮಸ್ಕೃತ್ಯ"—ಇತ್ಯಾದಿ ತಾರಾನಾಥ ತರ್ಕವಾಚಸ್ಪತಿಯ ಸರಲಾಟೀಕೆಯ ಉಪಕ್ರಮಣಿಕೆಯನ್ನು ನೋಡಿರಿ.

ಇನ್ನು ಅರ್ಥದತ್ತ ಹೊರಡುವ. ಹಿಂದೆ ಈ ಸೂತ್ರದ ವಿವರಣವನ್ನು ಶಿವಾದ್ವೈತದರ್ಪಣಕಾರರು ಮಾಡಿದುವನ್ನು ಇಳಿಸಿರುತ್ತದೆ. ಅಷ್ಟಾವರಣವಿಶಿಷ್ಟ ಪಂಚಾಚಾರರೂಪ ಪತಿಧರ್ಮಪ್ರಾಪ್ತಿಯಾದ ಬಳಿಕ (ಅಥ) ಅಧಿಕಾರಸಂಪೂರ್ಣವಾಗುತ್ತಾದಕಾರಣ (ಅತಃ) ಬ್ರಹ್ಮವಿಚಾರವನ್ನು ಮಾಡತಕ್ಕುದು (ಬ್ರಹ್ಮಜಿಜ್ಞಾಸಾ) ಎಂಬುದದರ ಕನ್ನಡವು.

ಅಷ್ಟಾವರಣವಿಶಿಷ್ಟಪಂಚಾಚಾರವೊ, ಪಂಚಾಚಾರವಿಶಿಷ್ಟ ಅಷ್ಟಾವರಣವೊ ಎಂಬ ಕ್ಲಿಷ್ಟವಿಷಯುವನ್ನು ಎತ್ತುವುದಿಲ್ಲ. ದರ್ಪಣಕಾರರು ಹೇಳಿದುದನ್ನೆ ಅಂಗೀಕರಿಸುವ. ಶ್ರೀನೀಲಕಂಠಾಚಾರ್ಯರು ಈ ಸೂತ್ರಕ್ಕೆ ಪೂರ್ವಮೀಮಾಂಸೆಯಲ್ಲಿ ವಿವರಿಸಿದ ಧರ್ಮವಿಚಾರಾನಂತರದಲ್ಲಿ ಶಿವಭಕ್ತಿಯೂ ಸದ್ವಿವೇಕವೂ ಹುಟ್ಟದಕಾರಣದಿಂದ ಬ್ರಹ್ಮವಿಚಾರವನ್ನು ಮಾಡತಕ್ಕುದೆಂದು ಅರ್ಥವಿವರಣವನ್ನು ಹೇಳಿರುವರೆಂದು ಮೇಲೆ ಉದಾಹರಿಸಿದೆನು. ಪೂರ್ವಮೀಮಾಂಸೆಯಲ್ಲಿ ಅಷ್ಟಾವರಣಧರ್ಮವನ್ನು ಆವುದಾದರು ಸೂತ್ರದಲ್ಲಿ ಹೇಳಿರುವರೊ ? ವ್ಯಾಸಸೂತ್ರಗಳ ಹಾಗೆ ಅವುಗಳನ್ನು ಆರಾಧಕರು ವೀರಶೈವರು ಅಷ್ಟಾವರಣಪ್ರತಿಪಾದಕವೆಂದು ತಿಳಿದುದನ್ನು ನಾನು ಕಂಡಿಲ್ಲ. ತಿಳುವಿಯೂ ಇಲ್ಲ; ತಿರುವಲಿಕ್ಕೆ ಶಕ್ಯವೂ ಇಲ್ಲ. ಅದರಿಂದ ದರ್ಪಣಕಾರರ ಸೂತ್ರವ್ಯಾಖ್ಯೆಯು ನೀಲಕಂಠಭಾಷ್ಯವನ್ನು ಹಿಂಬಿಡಿದಿಲ್ಲ.

ಸೂತ್ರವನ್ನು ದರ್ಪಣಕಾರರು ಬರೆದಂತೆ ತಿಳಿವುದರಿಂದ ವೀರಶೈವಧರ್ಮವು ವ್ಯಾಸಸೂತ್ರದಲ್ಲಿ ಬಿಚ್ಚಿದ ತತ್ವಜ್ಞಾನಕ್ಕೆ ಮೊದಲ ಮೆಟ್ಟು, ಅದರೊಳು ಪ್ರವೇಶಿಸಲು ಮುಮುಕ್ಷುವು ಸಂಪಾದಿಸಬೇಕಾದ ಯೋಗ್ಯತೆಯ ಸಾಧನವು ಎಂದಾಗುವುದು. ವೀರಶೈವಗುರುಗಳು ಹೀಗೆ ಹೇಳಿಲ್ಲ. ಅದು ಮೋಕ್ಷಕ್ಕೆ ಪ್ರತ್ಯಕ್ಷ ಸಾಧನವೆಂದು ಸ್ಥಾಪಿಸಿರುವರು. "ಅಷ್ಟಾವರಣ ಪಂಚಾಚಾರ ಧರ್ಮ" "ವೀರಶೈವಧರ್ಮ" ಇವುಗಳಲ್ಲಿ ಅರ್ಥಭೇದವಿಲ್ಲ. ವ್ಯಾಸಸೂತ್ರಗಳನ್ನು ವೀರಶೈವಧರ್ಮಕ್ಕೆ ತಿರುವಿದ ನೀಲಕಂಠಭಾಷ್ಯದ ಮೇಲೆ ರಚಿಸಿದ ಕ್ರಿಯಾಸಾರವೆಂಬ ಕಾರಿಕೆಗೆ ವ್ಯಾಖ್ಯಾನವನ್ನು ಬರೆವ ಶ್ರೀ ನಿರ್ವಾಣಮೂರ್ತಿಗಳು ವ್ಯಾಸಸೂತ್ರಶಾಸ್ತ್ರದ ವಿಷಯವನ್ನು ವಿವರಿಸುವಲ್ಲಿ—"ಜೀವಬ್ರಹ್ಮೈಕ್ಯ ಶಬ್ದಿತಲಿಂಗಾಂಗಸಾಮರಸ್ಯಸ್ಯ ಅಷ್ಟಾವರಣ ಪಂಚಾಚಾರ ವಿಶಿಷ್ಟಸ್ಯೈವ ಶಾಸ್ತ್ರವಿಷಯತ್ವಮಂಗೀಕುರ್ಮಃ"— ಜೀವಬ್ರಹ್ಮರ ಐಕ್ಯವೆಂಬ — ಅಷ್ಟಾವರಣಪಂಚಾಚಾರಗಳಿಂದ ಯುಕ್ತವಾದ ಲಿಂಗಾಂಗಸಾಮರಸ್ಯವು ಶಾಸ್ತ್ರವಿಷಯವೆಂದು ಅಂಗೀಕರಿಸುತ್ತೇವೆ ಎಂದಿರುವರು. ಶಾಸ್ತ್ರಾಧ್ಯಯನಕ್ಕೆ ಪೂರ್ವಭೂಮಿಯಾದ ಅಧಿಕಾರಸಾಧನವೂ ಶಾಸ್ತ್ರಾಧ್ಯಯನದ ಪ್ರಯೋಜನವು ಅಥವಾ ಫಲವೂ ಒಂದೇಯಾಗಲಾರವು— ದರ್ಪಣದಲ್ಲಿ ಅಷ್ಟಾವರ್ಣಧರ್ಮವು ಶಾಸ್ತ್ರಾಧ್ಯಯನಾಧಿಕಾರಪ್ರಾಪಕವೆಂದೂ ಅದೆ. ಶಾಸ್ತ್ರಾಧ್ಯಯನವಿಷಯವೆಂದೂ ಹೇಳುವದು ಸಂಗತವಲ್ಲ.

'ಅಥ' ಶಬ್ದದಿಂದ ಅಧಿಕಾರಪ್ರಾಪ್ತಿಯನ್ನು ಹೇಳಿ 'ಅತಃ' ಶಬ್ದದಿಂದ ಅಧಿಕಾರಪೂರ್ಣತ್ವವನ್ನು ಹೇಳುವುದು ಬಲ್ಲತನವಲ್ಲ. ಶಾಸ್ತ್ರಾಧ್ಯಯನಕ್ಕೆ ಅಥವಾ ಬ್ರಹ್ಮಮೀಮಾಂಸೆಗೆ ಬೇಕಾದ ಅಧಿಕಾರವು ಪೂರ್ಣವಾಗಿರದೆ ಅಧಿಕಾರವು ಪ್ರಾಪ್ತಿ

ಯಾಯ್ತೆಂದು ಅನ್ನಲಾಗದು. ಅಧಿಕಾರವು ಪ್ರಾಪ್ತಿಯಾ ಯ್ತೆಂದ ಬಳಿಕ ಅಧಿಕಾರದ ಪೂರ್ಣತ್ವವೂ ಬಂದಿದೆನ್ನಲಿಕ್ಕೆ ಬೇಕು.

ಶ್ರೀ ವ್ಯಾಸಸೂತ್ರಪ್ರತಿಪಾದ್ಯವಾದ ಬ್ರಹ್ಮದ ಲಕ್ಷಣವನ್ನು ಹೇಳುವ "ಜನ್ಮಾದ್ಯಸ್ಯಯತಃ" ಎಂಬೀ ಸೂತ್ರಕ್ಕೆ ದರ್ಪಣ ಕಾರರು ಕೊಟ್ಟ ವಿವರವನ್ನು ನೋಡುವ.–"ಅಥ ಕಿಂ ಬ್ರಹ್ಮ ಕಿಂ ತಸ್ಯ ಲಕ್ಷಣಮಿತಿ ಚೇದುಚ್ಯತೇ । ಘನಲಿಂಗ ಪರ್ಯಾಯ ವಾಚಕಃ ಷಟ್ಸ್ಥಲಾತ್ಮಕ ಪರಶಿವ ಏವ ಬ್ರಹ್ಮ! ತಲ್ಲಕ್ಷಣಂತು ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟಂ ಬ್ರಹ್ಮೇತಿ । ಜೀವಾತ್ಮ ನ್ಯತಿವ್ಯಾಪ್ತಿವಾರಣಾರ್ಥಂ ಸೂಕ್ಷ್ಮೇತಿ । ಸೂಕ್ಷ್ಮತ್ವಂ ಚ ಸ್ವಭಾವನಿರ್ಮಲತ್ವಂ । ತೇನ ನಿರ್ಮಲಚಿದಚಿದ್ರೂಪಶಕ್ತಿ ವಿಶಿಷ್ಟತ್ವೇಪಿ ಮುಕ್ತಾತ್ಮನಿ ನಾತಿವ್ಯಾಪ್ತಿಃ । ತಸ್ಯ ಶಕ್ತೇಃ ಸ್ವಭಾವನಿರ್ಮಲತ್ವಾಭಾವಾತ್ ।" ಸಂದರ್ಭವನ್ನು ಪರೀಕ್ಷಿ ಸುವ–'ಇನ್ನು ಬ್ರಹ್ಮವು ಏನು ? ಅದರ ಲಕ್ಷಣವೇನು? ಎಂದರೆ ಹೇಳುವುದು. ಘನಲಿಂಗವೆಂಬ ಪರ್ಯಾಯಶಬ್ದದಿಂದ ಹೇಳಲ್ಪ ಡುವ ಷಟ್ಸ್ಥಲಾತ್ಮಕಪರಶಿವನೆ ಬ್ರಹ್ಮವು. ಆ ಬ್ರಹ್ಮಲಕ್ಷಣ ವಾದರೊ ಸೂಕ್ಷ್ಮ ಚಿದಚಿದ್ರೂಪವಿಶಿಷ್ಟವು ಬ್ರಹ್ಮವು. ಜೀವಾ ತ್ಮನೂ ಚಿದಚಿದ್ರೂಪಶಕ್ತಿವಿಶಿಷ್ಟನು. ಆದರೆ ಅವನು ಸೂಕ್ಷ್ಮ ಚಿದಚಿದ್ರೂಪಶಕ್ತಿವಿಶಿಷ್ಟನಲ್ಲ. ಅದರಿಂದ ಬ್ರಹ್ಮಕ್ಕೆ ಹೇಳಿದ ಸೂಕ್ಷ್ಮ ಚಿದಚಿದ್ರೂಪಶಕ್ತಿವಿಶಿಷ್ಟವಾದುದು ಬ್ರಹ್ಮವೆಂಬ ಲಕ್ಷಣವು ಜೀವಾತ್ಮನಿಗೆ ಹತ್ತುವುದಿಲ್ಲ. ಮುಕ್ತಾತ್ಮರು ನಿರ್ಮಲಚಿದಚಿದ್ರೂಪಶಕ್ತಿವಿಶಿಷ್ಟರು. ಆದರೆ ಅವರಾ ಶಕ್ತಿಯು ಸ್ವಭಾವನಿರ್ಮಲವಲ್ಲ. ಸೂಕ್ಷ್ಮವೆಂದರೆ ಸ್ವಭಾವ ನಿರ್ಮಲವೆಂಬರ್ಥವು. ಅದರಿಂದ ಬ್ರಹ್ಮದ ಲಕ್ಷಣವು ಮುಕ್ತಾ ತ್ಮರಿಗೆ ಹತ್ತುವುದಿಲ್ಲ'–ಈ ವ್ಯಾಖ್ಯೆಯು ಬಹಳ ದೋಷಗ ಳಿಂದ ಕೂಡಿದೆ. ಅವುಗಳಲ್ಲಿ ಮೊದಲನೆಯದೆಂದರೆ ಸೂತ್ರಕ್ಕೂ ಶ್ರೀನೀಲಕಂಠಭಾಷ್ಯಕ್ಕೂ ಹೊರತಾಗಿರುವುದು. ಶ್ರೀಮದ್ವ್ಯಾಸ ಮಹರ್ಷಿಯು ಬ್ರಹ್ಮಕ್ಕೆ ಆವುದೊಂದರಿಂದ ಜಗತ್ತಿನ ಜನ್ಮಾದಿಗಳುಂಟಾದಪವೊ ಅದುವೆ ಬ್ರಹ್ಮವೆಂದು ಹೇಳಿರುವನು. ಶ್ರೀನೀಲಕಂಠನು ತನ್ನ ಭಾಷ್ಯದಲ್ಲಿ ಜಗತ್ತಿನ ಜನ್ಮಸ್ಥಿತಿಲಯ ಗಳು ಜಗನ್ನಿಷ್ಠವಲ್ಲದೆ ಬ್ರಹ್ಮನಿಷ್ಠವಲ್ಲ; ಆವುದೊಂದರ ಲಕ್ಷಣ ವನ್ನು ತದ್ಗತ ಧರ್ಮದಿಂದ ವಿವರಿಸಬಹುದಲ್ಲದೆ ತದ್ಗತವಲ್ಲದ ಧರ್ಮದಿಂದ ವಿವರಿಸಲು ಆಗದು ಎಂಬ ಪೂರ್ವಪಕ್ಷವನ್ನು ಸ್ವರೂಪಲಕ್ಷಣವಾಗದಿದ್ದರು ಜಗಜ್ಜನ್ಮಾದಿ ಕಾರಣತ್ವವು ಬ್ರಹ್ಮಕ್ಕೆ ತಟಸ್ಥಲಕ್ಷಣವಾಗಿಯೆಂಬ  ಸಿದ್ಧಾಂತವನ್ನು ಮಾಡಿರುವನು–"ಯದ್ಯಪಿ ಜಗಜನ್ಮಾದೇರ್ಬ್ರಹ್ಮಣ್ಯಸಂಬ ಸ್ತಥಾಪಿ ತಟಸ್ಥಲಕ್ಷಣತ್ವೇನ ಪರ್ಯಾವಸಾನಂ ಭವತಿ॥"

ಕ್ರಿಯಾಸಾರ ಕಾರಿಕೆಯಲ್ಲೂ ಶ್ರೀ ನೀಲಕಂಠಾಚಾರ್ಯನು "ಜ್ಞಾತ್ವಾ ಕಥಮುಪಾಸ್ಯಂ ಹಿ ನಿರಸ್ತದ್ವೈತಲಕ್ಷಣಂ । ಲ ಣೇನ ಪ್ರಮಾಣೇನ ವಸ್ತುಸಿದ್ಧಿರುದಾಹೃತಾ ॥ ಜನ್ಮಾದಿಕಾ ಣತ್ವಂ ಹಿ ಜಗತಾಂ ಬ್ರಹ್ಮಲಕ್ಷಣಂ । ಸರ್ವವೇದಾಂತವಾಕ್ಯಾ ಪ್ರಮಾಣಾನಿ ನ ಸಂಶಯಃ" ॥ ಎಂದು ಜಗಜ್ಜನ್ಮಾದಿಕಾರ ತ್ವವು ಬ್ರಹ್ಮಕ್ಕೆ ಲಕ್ಷಣ (ತಟಸ್ಥ)ವೆಂದು ಸಾರಿಹನು.

ಇನ್ನು ಈ ಸರಣಿಯನ್ನು ಬಿಟ್ಟು ಶಕ್ತಿವಿಶಿಷ್ಟತ್ವಲಕ್ಷ ವನ್ನು ಬ್ರಹ್ಮಕ್ಕಿಡುವಲ್ಲಿ ಶ್ರೀ ಶಿವಾನುಭವ ಶಿವಾಚಾರ್ಯರು ಮುಂದು ಮಾಡಿದ ಕಾರಣವನ್ನು ಒರೆದು ನೋಡುವ.–ಜ ತ್ತಿನ ಜನ್ಮಸ್ಥಿತಿಲಯಾದಿಗಳನ್ನು ಬ್ರಹ್ಮಲಕ್ಷಣವನ್ನಾಗಿ ಕಲ್ಪಿ ಸುವಲ್ಲಿ ಬ್ರಹ್ಮಕ್ಕೆ ಅವೆಲ್ಲ ಒಂದೊಂದೂ ಲಕ್ಷಣವಾಗುವವು. ಜಗತ್ತಿನ ಸೃಷ್ಟಿಸ್ಥಿತಿಲಯಾದಿಗಳಲ್ಲಿ ಒಂದೊಂದನ್ನಾದರು ಬ್ರಹ್ಮಕ್ಕಿಂತ ಬೇರೊಂದು ವಸ್ತು ಮಾಡಲಾರದು. ಆದುದ ಅವುಗಳಲ್ಲಿ ಒಂದೊಂದೂ ಬ್ರಹ್ಮಲಕ್ಷಣವಾಗುವವು. ಅಂದರೆ ಜಗತ್ತಿನ ಸೃಷ್ಟಿಯು ಆವುದರಿಂದಹುದು ಅದು ಬ್ರಹ್ಮ, ಜಗತ್ತಿನ ಸ್ಥಿತಿಯು ಆವುದರಿಂದಹುದು ಅದು ಬ್ರಹ್ಮ, ಜಗತ್ತಿನ ಲಯವು ಆವುದರಿಂದ (ಆವುದರಲ್ಲಿ) ಆಗುವುದು ಅದು ಬ್ರಹ್ಮ, ಜಗತ್ತಿನ ತಿರೋಧಾನವಾವುದರಿಂದಹುದು ಅದು ಬ್ರಹ್ಮ, ಜಗ ತ್ತಿನ ಅನುಗ್ರಹವು ಆವುದರಿಂದಹುದು ಅದು ಬ್ರಹ್ಮ ಎಂದು ಒಂದರಲ್ಲಿ ಐದುಲಕ್ಷಣಗಳಾಗುವುವು. ಇಂತು ಪರಸ್ಪರ ಭಿನ್ನ ವಾದ ಐದು ಲಕ್ಷಣಗಳನ್ನು ಒಂದೇ ಬ್ರಹ್ಮಕ್ಕೆ ಹೇಳುವುದು ಭಾರವು. ಅದರಿಂದ ಲಾಘವದಿಂದ ಒಂದೆ ಲಕ್ಷಣವನ್ನು ಹೇಳಲನುವಾದರೆ ಉಪಾದಾನ(Material)ಮತ್ತು ನಿಮಿತ್ತ (Efficient) ವೆಂಬ ಇತ್ತೆರದ ಕಾರಣತ್ವಕ್ಕೂ ಸಲುವ ಯಾಗುವಂತೆ ಬ್ರಹ್ಮಕ್ಕೂ ಜಗತ್ತಿಗೂ ಇರುವ ಹೇತುಹೇತು ಮದ್ಭಾವ ಸಂಬಂಧದಿಂದ ಲಕ್ಷಣವನ್ನು ಹೇಳಬೇಕಾಗುವುದು ಇಂತಹ ಸಂಬಂಧಸಾಮಾನ್ಯದಿಂದ ಬ್ರಹ್ಮವನ್ನು ಗುರುತಿ ಲಿಕ್ಕೆ ಜಗತ್ತಿನ ಸೃಷ್ಟ್ಯಾದಿಗಳ ಒಂದೊಂದರ ಕಾರಣತ್ವ ಸಮರ್ಥವಲ್ಲ. ಅದರಿಂದ ಶಾಸ್ತ್ರದಿಂದರಿಯಬೇಕಾದ ಬ್ರಹ್ಮ ಸ್ವರೂಪಲಕ್ಷಣವನ್ನು ಮೊದಲು ಹೇಳಲನುವಾಗುವುದು ಶ್ಯಕವು. (ಅಂತಹ ಸ್ವರೂಪಲಕ್ಷಣವು ಶಕ್ತಿವಿಶಿಷ್ಟತ್ವ ಹಾಗು ಜಗತ್ತಿನ ಜನ್ಮಾದಿಗಳಿಗೆ, ಅಂತಹ ಶಕ್ತಿವಿಶಿಷ್ಟವಾದ

ಬ್ರಹ್ಮವು ಕಾರಣವಾಗಲರಿಯದು. ಅದರಿಂದ ಮೊದಲು ಸೂಕ್ಷ್ಮ ಚಿದಚಿದ್ರೂಪವೆಂಬ ಶಕ್ತಿಯಿಂದ, ವಿಶಿಷ್ಟನಾಗಿರುವಣವೆಂಬ ಸ್ವರೂಪಲಕ್ಷಣವನ್ನು ಹೇಳುವುದೆ ಉಚಿತವು.

ಎಂದಿದು ಸಂಸ್ಕೃತದ ಕನ್ನಡವು (ಭಾಷಾದೋಷಗಳನ್ನು ಎಣಿಸದೆ ಕನ್ನಡಿಸಿರುವೆನು). ಸಂದರ್ಭದ ತಾತ್ಪರ್ಯವು ಸೂತ್ರಕ್ಕೂ ಆ ಸೂತ್ರದ ನೀಲಕಂಠಭಾಷ್ಯಕ್ಕೂ ವಿರೋಧ ವನ್ನುಳ್ಳುದಾಗಿದೆ. ಸೂತ್ರವು ಬ್ರಹ್ಮದ ಸ್ವರೂಪಲಕ್ಷಣವನ್ನು ತೋರಿಸುವುದಿಲ್ಲ- ತಟಸ್ಥ ಲಕ್ಷಣವನ್ನು ತೋರಿಸುತ್ತಿದೆ. ಅತಿಗಹನಸ್ವರೂಪವನುಳ್ಳ ಬ್ರಹ್ಮವನ್ನು ಸ್ವರೂಪಲಕ್ಷಣದಿಂದ ಗುರುತಿಸುವುದು ಸುಲಭವು. "ಯದ್ಯಪಿ ಜನ್ಮಾದೇರ್ಜಗನ್ನಿಷ್ಠ ತ್ವೇನ ಬ್ರಹ್ಮಣ್ಯಸಂಬಂಧಃ ತಥಾಪಿ ತಾಟಸ್ಥ್ಯೇನ ಲಕ್ಷಣತ್ವಂ ಯುಜ್ಯತೇ" ಜನ್ಮಸ್ಥಿತಿಲಯಾದಿಯು ಜಗತ್ತಿನಲ್ಲಿ ತೋರು ವುದು ಬ್ರಹ್ಮದಲ್ಲಿ ಅಲ್ಲ. ಅದರಿಂದ ಅದು ಬ್ರಹ್ಮದ ಲಕ್ಷಣವು ಆಗದು. ಏಕೆಂದರೆ ಅದು ಬ್ರಹ್ಮಕ್ಕೆ ಸಂಬಂಧಿಸಿಲ್ಲ ಎನ್ನ ಬಹುದಾದರೂ ಅದು ಬ್ರಹ್ಮಕ್ಕೆ ತಟಸ್ಥಲಕ್ಷಣವಾಗಲು ತಕ್ಕು ದಾಗಿದೆ ಎಂದು ಶ್ರೀನೀಲಕಂಠಭಾಷ್ಯವು ಸೂತ್ರವು ತಟಸ್ಥ ಲಕ್ಷಣಪರವೆಂದು ಸಾರುತ್ತಿದೆ. ಸೂತ್ರದ ಸ್ಪಷ್ಟಾರ್ಥವು ಜಗಜ್ಜನ್ಮಾದಿಯೆ ಬ್ರಹ್ಮದ (ತಟಸ್ಥ) ಲಕ್ಷಣವೆಂದು ಒಡೆದು ಕಾಣುವುದು.

ಮತ್ತೇನೆಂದರೆ, ವ್ಯಾಸಸೂತ್ರಗಳು ಉಪನಿಷದ್ವಾಕ್ಯಗಳನ್ನು ಸೂಚಿಸುವುವಾಗಿ ಆ ವಾಕ್ಯಗಳಲ್ಲಿಯ ಪದಗಳಿಂದ ಕೂಡಿರು ವುವು. ಜನ್ಮಾದಿ ಸೂತ್ರಕ್ಕೆ "ಯತೋ ವಾ ಇಮಾನಿ ಭೂತಾನಿ ಜಾಯಂತೇ-ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿ ಶಂತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" ಎಂಬ ತೈತ್ತಿರೀಯಕ ವಾಕ್ಯವು ವಿಷಯವಾಗಿದೆ. ದರ್ಪಣಕಾರರು ಮಾಡಿದ ವಿವರ ಣಕ್ಕೆ ತಕ್ಕ ವಾಕ್ಯವಾವುದೆಂಬುದನ್ನು ತೋರಿಸಿ ತದನುಗುಣ ವಾದ ಪದಗಳನ್ನು ಸೂತ್ರದಲ್ಲಿ ಕಾಣಿಸಿಲ್ಲ. ಇದಿರಲಿ—"ಜನ್ಮಾ ದ್ಯಸ್ಯ ಯತಃ"ಎಂಬೀ ಸೂತ್ರವನ್ನು ಪದಶಃ ಹಿಂಬಾಲಿಸಿದರೆ ಪರ ಸ್ಪರ ನಿರಪೇಕ್ಷವಾದ ಐದು ಲಕ್ಷಣಗಳು ಒದಗುತ್ತವೆಂಬುದು ಭಾಷ್ಯವಿರುದ್ಧವು. "ಜನ್ಮಾದಿಕಂ ಜನ್ಮಸ್ಥಿತಿಪ್ರಲಯತಿರೋ ಭಾವಾನುಗ್ರಹರೂಪಂ ಕೃತಮಸ್ಯ ಚೇತನಾಚೇತನಸಮ್ಮೇ ಲನಸಮರಸೀಭೂತಸ್ಯ ಪ್ರ ಪಂ ಚ ವಿ ಲಾ ಸ ಸ್ಯ ಯತೋ ಯಸ್ಮಾತ್ತದ್ಬ್ರಹ್ಮೇತಿ ಶೇಷಃ" ಚೇತನಗಳ ಅಚೇತನ ಶರೀರ ಭಾವದಿಂದ ವಿಶಿಷ್ಟವಾಗಿ ಏಕೀ ಭಾವವನ್ನು ಹೊಂದಿದ ಈ ಪ್ರಪಂಚವಿಲಾಸದ ಜನ್ಮಸ್ಥಿತಿಲಯತಿರೋಭಾವಾನುಗ್ರಹ ವೆಂಬ ಕೃತ್ಯವು ಆವುದೊಂದರಿಂದಹುದೊ ಅದು ಬ್ರಹ್ಮವು ಎಂದು ಜನ್ಮಾದಿ ಪಂಚಕೃತ್ಯಗಳ ಒಬ್ಬಳಿಯನ್ನು ಬ್ರಹ್ಮದ ಒಂದು ಲಕ್ಷಣವನ್ನಾಗಿ ಭಾಷ್ಯವು ಪ್ರತಿಪಾದಿಸುವದು.

ಮತ್ತೇನೆಂದರೆ ಪರಬ್ರಹ್ಮಶಿವನಲ್ಲಿ ಸ್ವರೂಪಭಾವದಿಂದ ಅಗ್ನಿಯ ದಾಹದಂತೆಯೂ ಚಂದ್ರನ ಚಂದ್ರಿಕೆಯಂತೆಯೂ ಅಥವಾ ಹಾಲಿನ ಇಂಪಿನಂತೆಯೂ ಇರುವ ಶಕ್ತಿಯಿಂದ ಬ್ರಹ್ಮ ವನ್ನು ಲಕ್ಷಿಸುವುದರಿಂದ ಪ್ರಥಮಾಭ್ಯಾಸಿಯು ತಿಳಿಯನೆಂ ಬುದರಿಂದ ತಟಸ್ಥಲಕ್ಷಣದಿಂದಲೆ ಸೂತ್ರವು ಲಕ್ಷ್ಯವನ್ನು ತೋರಿಸುವುದು.

ಪಂಚಕೃತ್ಯದ ಒಬ್ಬುಳಿಗೆ ಕರ್ತೃವಾದ ಬ್ರಹ್ಮವು ಆ ಕೃತ್ಯ ಗಳಲ್ಲಿ ಸಮರ್ಥವಿದ್ದೆ ಇರುವುದು. ಅದರಿಂದ ಶಕ್ತಿವಿಶಿಷ್ಟತ್ವವು ಸ್ವಯಮೇವ ಸಿದ್ಧವಾಯ್ತು. ಮತ್ತೇನೆಂದರೆ ಉಪನಿಷತ್ತು ಗಳಲ್ಲಿ "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಪ್ರಜ್ಞಾನಂ ಬ್ರಹ್ಮ" ಇತ್ಯಾದಿಯಾಗಿ ಹೇಳಿದ ಸ್ವರೂಪಲಕ್ಷಣದಿಂದ ಶಕ್ತಿವಿಶಿಷ್ಟತ್ವವು ಉಪಪತ್ತಿಯಾದಪುದು. ಹಾಗಲ್ಲದೆ ಶಕ್ತಿವಿಶಿಷ್ಟವಾದುದು ಬ್ರಹ್ಮವೆಂದು ಆವ ಉಪನಿಷದ್ವಾಕ್ಯವೂ ಹೇಳಿಲ್ಲ. ಹಾಗೆ ಹೇಳದಿರಲಿಕ್ಕೆ ಶಕ್ತಿಮಂತನಿಗೂ ಶಕ್ತಿಗೂ "ದಂಡೀ ದೇವ ದತ್ತಃ"ಎಂಬಂತೆ ಭೇದಕಲ್ಪನವಾದೀತೆಂಬ ಭಯವೇ ಕಾರಣವು. ರುಚಿವಿಶಿಷ್ಟವಾದುದು ಸಕ್ಕರೆಯೆಂಬುವುದಕ್ಕಿಂತ ರುಚಿಯಾ ದುದು ಸಕ್ಕರೆಯೆಂಬುದು ಸಮಂಜಸವು. ಅದರಿಂದ ಚಿದ ಚಿದ್ರೂಪಶಕ್ತಿವಿಶಿಷ್ಟತ್ವಲಕ್ಷಣಸ್ವರೂಪ ಲಕ್ಷಣಸ್ಯೈವ ವಕ್ತು ಮುಚಿತತ್ವಾತ್" ಎಂದು ದರ್ಪಣಕಾರರು ಚಿದಚಿದ್ರೂಪ ಶಕ್ತಿವಿಶಿಷ್ಟತ್ವವೇ ಬ್ರಹ್ಮದ ಸ್ವರೂಪಲಕ್ಷಣನೆಂದು ಹೇಳು ವುದು ಅಸಮಂಜಸವು.

ಇನ್ನೇನೆಂದರೆ ಒಂದೇ ಶಕ್ತಿಯು ಪರಸ್ಪರವಿರುದ್ಧವಾದ ಚಿದ ಚಿದ್ರೂಪಗಳನ್ನುಳ್ಳುದಾಗದು. ಶಿವಶಕ್ತಿಯು ಶಿವಸ್ವರೂಪ ವಾಗಿದೆ. ಅಗ್ನಿಶಕ್ತಿಯು ದಾಹಕವಲ್ಲದೆ ದಾಹ್ಯದಾಹಕ ಮಯವಾಗದು. ಶ್ರೀ ಸಿದ್ಧಾಂತಶಿಖಾಮಣಿಯಲ್ಲಿ "ತದೀಯಾ ಪರಮಾ ಶಕ್ತಿಃ ಸಚ್ಚಿದಾನಂದಲಕ್ಷಣಾ। ಸಮಸ್ತಲೋಕನಿರ್ಮಾ ಣ ಸಮವಾಯಸ್ವರೂಪಿಣೀ॥ ತದಿಚ್ಛಯಾ ಭವತ್ಸಾಕ್ಷಾತ್ತತ್ಸ್ವ ರೂಪಾನುಸಾರಿಣೀ ॥" ಎಂದು ವೇದಾಗಮೋಪನಿಷದನುಸಾರ ವಾಗಿ ಶಕ್ತಿಯು ಸಚ್ಚಿದಾನಂದಸ್ವರೂಪವೆಂದು ಹೇಳಿಯದೆ.

ಚಿದ್ರೂಪವು ಸಾಕ್ಷಿಯು, ಅಚಿದ್ರೂಪವು ಸಾಕ್ಷಿಭಾಸ್ಯವು. ಚಿದ್ರೂಪವು ಚೇತನವು, ಅಚಿದ್ರೂಪವು ಜಡವು. ಸಚ್ಚಿದಾನಂದಾತ್ಮಕ ಶಿವಶಕ್ತಿಯು ಚಿದಚಿದ್ರೂಪವಾಗದು. ಚಿತ್ತು ಸದಾನಂದರೂಪವಾದರೆ ಅಚಿತ್ತು ಜಡದುಃಖರೂಪವು. ಜಡಾಜಡಗಳು ಸಮವಾಯಸಂಬಂಧದಿಂದ ಕೂಡಿರುವವು. ಶಕ್ತಿಸ್ವರೂಪವನ್ನು "ಅಹಮಸ್ಮಿ" ಎಂಬ ಶ್ರುತಿಯು ಬೋಧಿಸುತ್ತದೆ. ಇಲ್ಲಿ ಅಹಂ ಎಂದರೆ ಶಿವರೂಪವು, ಅಸ್ಮಿ ಎಂಬುದು ಸ್ವಸ್ವರೂಪಪರಾಮರ್ಶರೂಪವಾದ ಶಕ್ತಿಯು. ಈ ಶಕ್ತಿಯ ಸ್ವರೂಪವನ್ನು ಶ್ರೀ ತೋಂಟದಾರ್ಯನು, ಮೇಲುದಾಹರಿಸಿದ ಶ್ಲೋಕಗಳ ಟೀಕೆಯಲ್ಲಿ, 'ತದೀಯಾ= ಪರಶಿವಸಂಬಂಧಿನೀ ಪರಮಾಃಶಕ್ತಿಃ ಪರಾರೂಪಾವಿಮರ್ಶಶಕ್ತಿಃ ಸಚ್ಚಿದಾನಂದಲಕ್ಷಣಾ ಅಸ್ತೀತಿ ಶೇಷಃ ಅಹಮಸ್ಮಿ ಇತಿ ಶ್ರುತೇ: ಅಸ್ಮಿಪ್ರಕಾಶೇ ನಂದಾವಿೂತ್ಯನುತ್ಪನ್ನಮಲೋಲ್ಲಾಸಾಕರ್ಮಕಾಕ್ರಮೋತ್ತಮಸ್ಫೂರ್ತಿರೂಪಾಪಿ, ಸಮಸ್ತಲೋಕನಿರ್ಮಾಣೇ= ಪೂರ್ವೋಕ್ತಪ್ರಕಾರೇಣ"।ನಾಸತೋ ವಿದ್ಯತೇ ಭಾವಃ ಇತಿ ಭಗವದುಕ್ತೇಃ ಸ್ವಾತ್ಮನ್ಯಂಡರಸನ್ಯಾಯೇನ ಅಹಮಿತ್ಯವಿಭಾಗಪರಾಮರ್ಶಾತ್ಮನಾನುಭಯೇಂದ್ರಿಯಗೋಚರತ್ವೇನ ಸ್ಥಿತಸ್ಯ ವಿಶ್ವಸ್ಯೇದಂತಾಲಕ್ಷಣವಿಭಾಗಪರಾಮರ್ಶಮಯ ಸೃಷ್ಟಿ... ಯಾಂ, ಸ್ವಸ್ವಾತಂತ್ರ್ಯಮಹಿಮ್ನಾಭೇದಾಭೇದಂ ಪ್ರತಿ... ವೃಕ್ಷಗತಫಲಮಷ್ಟ್ಯಾದಿನ್ಯಾಯೇನ ವಿಕಾರರಾಹಿತ್ಯೇನ ಸ... ಯಸ್ವರೂಪಿಣೀ=ಉಪಾದಾನಕಾರಣಭೂತಾ ಭವತಿ... ರಾಕರ್ಷಣಲಕ್ಷಣಸಂಹಾರಲೀಲಾಯಾಂ ತದಿಚ್ಛಯಾ ... ಭಂಗಿನ್ಯಾಯೇನ ಸ್ವಕಿರಣಾಯಮಾನಜ್ಞಾನಕ್ರಿಯಾಶಕ್ತಿ... ಸರ್ವಂ ಸ್ವಾತ್ಮನ್ಯಾಕೃಷ್ಯ ಸಾಕ್ಷಾದಪರೋಕ್ಷೇಣಾ... ತತ್ಸ್ವರೂಪಾನುಸಾರಿಣೀ=ಶಿವಾಭಿನ್ನಸ್ವರೂಪಿಣೀ ಭವ... ವತೀತ್ಯರ್ಥಃ। ಶಿವಶಕ್ತಿಯು ಸಚ್ಚಿದಾನಂದಸ್ವರೂಪಿ... ಅದರಿಂದಲೆ ಶಿವನ ಸಚ್ಚಿದಾನಂದಸ್ವರೂಪಪರಾಮರ್ಶ... ಯೂ, ಆಗಿರುವಳು. ಆ ಶಕ್ತಿಯು ತನ್ನ ಸ್ವಾತಂತ್ರ್ಯ... ವಿಶ್ವವನ್ನು ಅಭೇದಪರಾಮರ್ಶದಿಂದ ತನ್ನಲ್ಲಿಟ್ಟು ವಿ... ವನ್ನು ಹೊಂದದೆ ವಿಶ್ವದ ಸಮವಾಯಕಾರಣ... ಳೆಂದೂ, ಕೊನೆಯಲ್ಲಿ ಆ ವಿಶ್ವವನ್ನು ತನ್ನಲ್ಲಿ... ಅಭೇದಪರಾಮರ್ಶದಿಂದುಳಿವಳೆಂದೂ ಈ ಟೀಕೆಯ ಭಾ... ಶಕ್ತಿಯು ಚಿದಚಿದ್ರೂಪವಾದರೆ ಅಚಿದ್ರೂಪದಲ್ಲಿ ... ವನ್ನು ತಾಳಬೇಕಾಗುವುದು.

# ಕೆಲವು ಶಬ್ದಗಳ ಅರ್ಥ

ಲೇಖಕರು:—ಶ್ರೀ. ಶಂಕರಭಟ್ಟ ಅಗ್ನಿಹೋತ್ರಿ, ಹೊಂಬಳ

ವರ್ತಮಾನಪತ್ರದ ಸುದ್ದಿಗಾರ = ಹೋರಿನೊಳಗಿಂದ ಇಲಿಯು ಯಾವಾಗ ಹೊರಬೀಳುವದೆಂಬದನ್ನು ನೋಡುತ್ತ ಜಪ್ಪಿಸಿ ಕೂತಿರುವ ಬಾವುಗ.

ಬೇನೆಯವ = ವೈದ್ಯನು ವೈದ್ಯಕಿಯನ್ನು ಕಲಿಯುವ ಪಾಟ

ಬೇನೆ = ನ್ಯಾಯಮೂರ್ತಿ ಯಮಾಜಿಪಂತರ ಸಮನ್ಸ

ನಿಜವಾದ ಗೆಳೆಯ = ರೂಪಾಯಿ

ವಿದ್ವಾಂಸ = ಶ್ರೀಮಂತರಾಗುವ ಹಂಚಿಕೆ ಗೊತ್ತಿಲ್ಲದವ

ಡಾಕ್ಟರ = ಜನರಿಗೆ ಬೇನೆ ಬರಬೇಕೆಂದು ಬಯಸುವವ

ಜ್ಯೋತಿಷಿ = ಠಕ್ಕರನ್ನು ಠಕ್ಕಿಸುವವ

ಸಾಲಗಾರ = ಹುದಲಲ್ಲಿ ಸಿಗಬಿದ್ದ ಕತ್ತೆ

ಸಾವುಕಾರ = ಮೂಗಿನೊಳಗಿನ ಕೂದಲುಗಳನ್ನು ಕಿತ್ತುವ ಚಿಮಟಗಿ

ಲಂಚ = ಬಲಹೀನನಿಗೆ ಬಲವನ್ನು ಕೊಡುವ ಮಂತ್ರಿಸಿದ ತಾಯಿತ

ನಮಸ್ಕಾರ = ಎರಡನೆಯವರಿಂದ ನಮಸ್ಕಾರ ಮಾಡಿಸಿಕೊಳ್ಳುವ ಸುಲಭೋಪಾಯ

ಕನ್ನಡಿ = ಮಯ್ಯಕ್ಕೆ ಮುಯ್ಯವನ್ನು ತಪ್ಪದೆ ... ವೀರ

ಕೈಯಲ್ಲಿ ಸಿಕ್ಕ ದೇವರು = ಹರಟೆ. ವಿಶೇಷ ಸ್ವಭಾ... ದೇವರು ಆದ್ಯಂತರಹಿತನು; ಅದರಂತೆ ... ಗಾದರೂ ತುದಿಮೊದಲಿಲ್ಲ; ಎರಡೂ ನಿ... ಎರಡರಲ್ಲಿಯೂ ಆನಂದವೃತ್ತಿ

ಸರ್ವಸ್ವನಾಶ = ಯಮನ ಪಾಶ

ಚಲೋ ಬೈಗಳು = ಅನಾದಿ, ದಿಕ್ಕೇಡಿ, ಪರದೇಶಿ, ನಿ... (ಈ ಬೈಗಳು ದೇವರಿಗಲ್ಲದೆ ಅನ್ಯರಿಗೆ ಅನ್ವಯಿಸು... ಯಥೇಚ್ಛ...

ಟೀಕಾಕಾರ = ವ್ಯವಸ್ಥಿತರೀತಿಯಿಂದ ಬೈಯುವ ಸಂಭಾವಿತ ಗೃಹಸ್ಥ

ಅಸ್ಪೃಶ್ಯ = ದುಡ್ಡು ಕಳಕೊಂಡು ಅಡ್ಡಾಡುವವ

ಪದವಿ = ತಾನು ಯೋಗ್ಯತಾಸಂಪನ್ನನೆಂದು ನಿಶ್ಚ... ಒಂದ ಹೇಳುವ ಕುರುಹು

ಗಡಿಯಾರ = ಕಾಲಚಕ್ರದ ಸಗುಣರೂಪ

ಸುಲಭ ಪಾಂಡಿತ್ಯ = ಅನ್ಯರನ್ನು ನಿಂದಿಸೋಣ, ... ಹೀಯಾಳಿಸೋಣ... ವಾಗಿ ಪ್ರಸಿದ್ಧ ಪುರುಷರನ್ನು

# ಮಹಾತ್ಮರಿಗೆ

# 'ಮಂಗಲವು ! ಜಯ ಮಂಗಲವು !!'

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**

— ಭಗವದ್ಗೀತಾಸು ಉಪನಿಷತ್ಸು

ಉತ್ತುಂಗರ ಊರ್ಜಿತರ ಆತ್ಮಗಳು
ಕತ್ತಲೆಯಲ್ಲಿಯೆ ಕೊಳೆಕೊಳೆಯುತ್ತಿರೆ
ಸತ್ತಿಹ ನಾಡಿನ ನಾಡಿನಾಡಿಯಲಿ
ಸತ್ಯಪ್ರೀತಿಗಳ ದಿವ್ಯಮಾತ್ರೆಯಿಂ ಹೊಸನೆತ್ತರವನು ಹರಿಸಿದಗೆ ॥
ಮಂಗಲವು! ಜಯ ಮಂಗಲವು !!

ಒಂದು ಕೆಯ್ಯು ಮತ್ತೊಂದನು ಕೊಯ್ಯುವ
ಕುಂದನು ತಿಳಿಯದೆ, ಬಂಧುಬಂಧುಗಳು
ಬಂಧುರಭಾವವ ತೊರೆದು ಉರಿಯುತಿರೆ,
ಬತ್ತಿದ ಮಾನವರಂತಃಕರಣದಿ ಕರುಣೆಯ ಸರಿಯನು ಸುರಿಸಿದಗೆ ॥
ಮಂಗಲವು! ಜಯ ಮಂಗಲವು !!

ಸಲೆ ದಿಗ್ವಲಯವ ತುತ್ತುವ ಹೆಡೆಯನು
ನೆಲನೀರ್ಗಾಳಿಯ ಮುತ್ತುವ ಪಡೆಯನು
ಒಲವಿನ ಮಂತ್ರದಿ ಗೆಲಲು ಸಾಗಿದಗೆ
ಜಯ ಜಯ ಮೋಹನದಾಸಗೆ ಜಯ ಜಯ ಮೋಹನಾಸ್ತ್ರಧರವೀರನಿಗೆ ॥
ಮಂಗಲವು ! ಜಯ ಮಂಗಲವು !!

ಹರುಷದ ಬಾಷ್ಪದ ಸೇಸೆಯ ಸೂಸಿ
ಹರಕೆಯ ಹೂಗಳ ಬೊಗಸೆಯ ತೂರಿ
ಎರಕದಿ ಎರೆವೆವು! ಅರಿಕೆಯ ಕೊಳ್ಳೈ
ಅರಸೇ ! ಜನಮನಸಿಂಹಾಸನದಲಿ ನೆಲಸೈ ನಿರುತದಿ ನೆಲೆಯಾಗಿ ॥
ಮಂಗಲವು ! ಜಯ ಮಂಗಲವು !!

ಜಯ ಹಗೆಯಳಿದಗೆ ಲೋಕದ ಗೆಳೆಯಗೆ
ಭಯವ ಮೀರಿದಗೆ ನಯದ ಮೂರುತಿಗೆ
ಜಯ ಮಾನವ್ಯದ ಪಾರತೀರನಿಗೆ
ಜಯ ನಿಃಸೀಮದ ಚರಮಸೀಮನಿಗೆ ಜಯ ಜಯ ನಿರುಪಮನಿರ್ಮಲಗೆ ॥
ಮಂಗಲವು ! ಜಯ ಮಂಗಲವು !!

**॥ ಭದ್ರಂ ಶುಭಂ ಮಂಗಲಂ ॥**

೨೭-೩-೩೦
ಪುಣ್ಯನಗರಿ }

ರಾಮಚಂದ್ರ

# ಬಿಡಿನುಡಿಗಳು

## ಅಹಿಂಸಾ ಸಂಗ್ರಾಮದಲ್ಲಿ ಗೆದ್ದರೂ ಮುಕ್ತಿ ಬಿದ್ದರೂ ಮುಕ್ತಿ

ಎಂದೂ ಯಾರೂ ಕೇಳದೆ ನೋಡದ ಇದ್ದ ಧರ್ಮಯುದ್ಧವು ಭರತಭೂಮಿಯಲ್ಲಿ ಇನ್ನು ಪ್ರಾರಂಭವಾಗುವದು. ನಿರ್ಭೀತಶೂರರೂ ಸತ್ಯಧೀರರೂ ಅಹಿಂಸಾವೀರರೂ ಆದ ಮಹಾತ್ಮಾ ಗಾಂಧಿಯವರು ಈ ಧರ್ಮಯುದ್ಧದ ಸೂತ್ರಧಾರರು. ಆಸೇತುಹಿಮಾಚಲವಾಗಿದೆ ಇದರ ರಣಕ್ಷೇತ್ರ. ಭರತಭೂಮಿಯು ಮುಕ್ತಿಯೂ, ಇದನ್ನು ಪಾದಾಕ್ರಾಂತನಾಗಿಯೇ ಇಡಬೇಕೆನ್ನುವ ಬ್ರಿಟಿಷರು ಈ ಮೋಹ ಮತ್ತು ಅಜ್ಞಾನದಿಂದ ಮುಕ್ತರಾಗುವದೂ, ಅಂತೆಯೆ ಇಡಿ ಪ್ರಪಂಚವೆ ದಂಡಶಕ್ತಿಯ ರಾಜ್ಯಪದ್ಧತಿಯಿಂದ ಮುಕ್ತವಾಗುವದೂ ಈ ಶಾಂತಿಸಂಗ್ರಾಮದ ಗುರಿಯಾಗಿದೆ. ಇದಕ್ಕೆ ಬೇಕಾದ ಸೈನಿಕರೂ



ರಾಜದ್ರೋಹ (ದೇಶಪ್ರೇಮ)ಕ್ಕಾಗಿ ೧೦ದಿನ ಸೆರೆಮನೆ ಕಂಡುಬಂದ ಕಲಕತ್ತೆಯ ಮೇಯರರಾದ ಶ್ರೀವಷನ್ ಸೇನಗುಪ್ತರವರು

ಸ್ವಯಂ ಸೇವಕರಾಗಿರುವದು ಅಗತ್ಯ. ಈ ಯುದ್ಧದಲ್ಲಿ ಗೆಲ್ಲುವವರಿಗೆ ಶಸ್ತ್ರಾಸ್ತ್ರಗಳಿಲ್ಲ. ಅವರಿಗೆ ದೇವರ ಬಲವೇ ಬಲ, ಅವರ ಅಂತಃಶುದ್ಧಿಯ ಸಾಮರ್ಥ್ಯವೇ ಸಾಮರ್ಥ್ಯ; ಅವರ ಸತ್ಪಕ್ಷದ ಶಕ್ತಿಯೆ ಶಕ್ತಿ; ಅವರ ಅಹಿಂಸೆಯು ಆಯುಧವೇ ಆಯುಧ; ಅವರ ಆತ್ಮಾರ್ಪಣದ ವೀರ್ಯವೇ ವೀರ್ಯ. ಕೊಂದು ಗೆಲ್ಲಲು ಹೊರಟ ಯುದ್ಧವು ಇದಲ್ಲ. ಸತ್ತರೂ



ತಾವಿರುವ ಅರಮನೆಯನ್ನು ದೇಶಕ್ಕಾಗಿ ದಾನಮಾಡಿದ ಪಂಡಿತ ಮೋತೀಲಾಲ ನೆಹರು ಅವರು

ಗೆಲ್ಲುವೆವು ಎಂಬುದೇ ರಣಘೋಷ; ಯಾಕಂದರೆ, ಸತ್ಯಕ್ಕೆ ಸಾವಿಲ್ಲ. ಧರ್ಮಕ್ಕೆ ಜಯವಿದೆ. ಈ ಯುದ್ಧದಲ್ಲಿ ಗೆಲ್ಲುವವರಿಗೆ ದುಡ್ಡಿನ ಆಶೆಯಿಲ್ಲ. ಸತ್ತು ಸ್ವರ್ಗಕ್ಕೆ ಹೋಗಬೇಕೆಂಬ ಹವ್ಯಾಸವಿಲ್ಲ. ಕಷ್ಟನಷ್ಟಗಳನ್ನು ಸಹಿಸಿ ಮರಣಾಂತವಾಗಿ ಈ ಧರ್ಮಯುದ್ಧದಲ್ಲಿ ಕಾದುವೆವು ಎಂಬುವರು ಈಗಾಗಲೆ ಮುಕ್ತರು. ಈ ಯುದ್ಧದಲ್ಲಿ ಗೆದ್ದರೂ ಮುಕ್ತಿ ಬಿದ್ದರೂ ಮುಕ್ತಿ. ಇಂಥ ಈ ಧರ್ಮಯುದ್ಧದಲ್ಲಿ ನೆರವಾದ ನೆರವಾಗಲಿರುವ ಎಲ್ಲ ದೇಶಭಕ್ತರಿಗೆ ಹೆಂಗಸರೆ ಇರಲಿ, ಗಂಡಸರೆ ಇರಲಿ, ಚಿಕ್ಕವರೆ ಇರಲಿ, ದೊಡ್ಡವರೆ ಇರಲಿ, ಮೇಲು ಜಾತಿಯವರಿರಲಿ ಕೀಳುಜಾತಿಯವರಿರಲಿ ಈ ಎಲ್ಲ ಧರ್ಮವೀರರಿಗೆ ನಮ್ಮ ಅನಂತ

ಪಂದನೆಗಳು. 'ಗುಣಾಃ ಪೂಜಾಸ್ಥಾನಂ ಗುಣಿಷು.' ಭಕ್ತರಲ್ಲಿ ಹೆಚ್ಚು ಕಡಿಮೆ ಇಲ್ಲ.

## ಅಭಿನವ ವಿಶ್ವಾಮಿತ್ರ

ಗಾಂಧಿಯವರು ಅಭಿನವ ವಿಶ್ವಾಮಿತ್ರರು. ಮೈತ್ರೇಯ ಮೊದಲಾದವರು ಜಗತ್ತಿನ ಉದ್ಧಾರಕ್ಕಾಗಿ ಅವತರಿಸಿ ಬರುವರೆಂದು ಥಿಯೊಸೊಫಿಸ್ಟರು ಹೇಳುತ್ತಿರುತ್ತಾರೆ. ಅದು ನಿಜವಿರಲಿ ಬಿಡಲಿ. ಗಾಂಧಿಯು ವಿಶ್ವಾಮಿತ್ರನ ಅವತಾರವೆಂದು ಹೇಳಬಹುದು. ವಿಶ್ವಾಮಿತ್ರನು ಗಾಧಿ ಮನೆತನದವನು, ಕ್ಷತ್ರಿಯ ಬಲವು ಕೀಳು ಬ್ರಹ್ಮಬಲವು ಮೇಲು ಎಂದು ಜಗಕ್ಕೆ ಸಾರಿದವನು, ಏಕವಚನಿಯಾದ ಶ್ರೀ ರಾಮನ ಗುರುವು; ಸತ್ಯವಚನಿಯಾದ ಹರಿಶ್ಚಂದ್ರನ ಪ್ರತಿಸ್ಪರ್ಧಿಯಾಗಿ ಸತ್ಯದ ನೆಲೆಕಂಡವನು; ತ್ರಿಶಂಕುವಿಗೆ ಹೊಸ ಸ್ವರ್ಗವನ್ನು ಕೊಟ್ಟವನು; ತಪೋಭಂಗವಾದರೂ ತಪಃಸಿದ್ಧಿಯನ್ನು ದೊರಕಿಸದೆ ಬಿಡದೆ ಇದ್ದವನು; ಜಗದ್ರಕ್ಷಕವಾದ ಗಾಯತ್ರಿಮಂತ್ರವನ್ನು ಕಂಡವನು, ವಿಶ್ವದ ಮಿತ್ರನು, ಪ್ರತಿ ಸೃಷ್ಟಿಯನ್ನು ರಚಿಸಿದವನು. ಮಹಾತ್ಮರ ಜೀವನ ಚರಿತೆಗೂ ಈ ಚರಿತೆಗೂ ಹೋಲಿಕೆ ಬಹಳ. ಈ ರೀತಿಯಿಂದ ನೋಡಿದರೆ ಮಹಾತ್ಮರು ಆ ವಿಶ್ವಾಮಿತ್ರನಂತೆ ತಮ್ಮ ನೂತನ ಸೃಷ್ಟಿಯನ್ನು ಜಗತ್ತಿಗೆ ರುಚಿಸುವಂತೆ ರಚಿಸದೆ ಬಿಡರು ಎಂದು ತೋರುವದು. ಅವರಿಗೆ ಜಯವು ನಿಶ್ಚಯ.

## ಸತ್ಯಾಗ್ರಹದ ಬ್ರಹ್ಮಾಸ್ತ್ರ

ಸತ್ಯಾಗ್ರಹವು ಬ್ರಹ್ಮಾಸ್ತ್ರವಿದ್ದಂತೆ. ಅದರ ಮುಂದೆ ಯಾರ ಆಟವೂ ನಡೆಯಲಾರದು. ಸತ್ಯಕ್ಕೆ ನಾವು ನೆಲೆಗೊಟ್ಟರೆ ಸತ್ಯವು ನಮಗೆ ನೆಲೆಗೊಡುವದು. ಸತ್ಯವನ್ನು ನಾವು ಬಿಟ್ಟರೆ ನಮ್ಮನ್ನು ಸತ್ಯವು ಬಿಡುವದು. ಸತ್ಯವನ್ನು ನಾನು ಆಚರಿಸಿಯೇ ತೀರುವೆನೆಂಬುವವನಿಗೆ ಬ್ರಹ್ಮಾದಿಗಳೂ ಇದಿರಾಗಿ ನಿಲ್ಲಲಾರರು. ಆದರೆ ಸತ್ಯಾಗ್ರಹವು ಒಂದು ಬ್ರಹ್ಮಾಸ್ತ್ರ. ಸತ್ಯವಿಲ್ಲದೆ ಸತ್ಯಾಗ್ರಹ ಮಾಡಿದರೆ ಅದು ಮಾಡಿದವನನ್ನೆ ನಾಶಮಾಡುವದು. ನಾವು ಇಂದು ಇದನ್ನು ರಾಜ್ಯಪದ್ಧತಿಯ ವಿರುದ್ಧ ಉಪಯೋಗಿಸುತ್ತಿರುವೆವು. ನಾಳೆ ಇದು ಧರ್ಮಕಾರಣದಲ್ಲಿಯೂ ಸಮಾಜಕಾರಣದಲ್ಲಿಯೂ ಉಪಯೋಗವಾಗತಕ್ಕದ್ದು. ಈಗಾಗಲೆ ಆ ತರದ ಪ್ರಯೋಗಗಳು ನಡೆದಿವೆ. ಆದರೆ ನಿಜವಾದ ಸತ್ಯಾಗ್ರಹಿಗಳಿಗೆ ಯಾವ ಬ್ರಹ್ಮಾಸ್ತ್ರದ ಹೆದರಿಕೆಯೂ ಇರಲಾರದು. ಈ ಸತ್ಯಾಗ್ರಹಯುದ್ಧದೊಳಗಿನ ಸ್ವಯಂಸೇವಕರು ನಿಜವಾದ ಸತ್ಯಾಗ್ರಹಿಗಳಾಗಬೇಕು.

ಶುದ್ಧ ಆಚರಣೆಯಿಲ್ಲದವಗೆ ಅಂತಃಕರಣಶುದ್ಧಿಯಾಗದು. ಅಂತಃಕರಣಶುದ್ಧಿಯಿಲ್ಲದೆ ಅಹಿಂಸಾಬಲವು ಬರದು. ಅಹಿಂಸೆಯಿಂದಲೆ ಸತ್ಯದ ಜ್ಞಾನವಾಗುವದು. ಈ ಸತ್ಯದ ಸಾಮರ್ಥ್ಯದಿಂದ ನಿರ್ಭಯವೃತ್ತಿಯುಂಟಾಗುವದು, ಇಂಥವರೇ ಸತ್ಯಾಗ್ರಹದ ಬ್ರಹ್ಮಾಸ್ತ್ರವನ್ನು ಉಪಯೋಗಿಸಬಲ್ಲರು. 'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಃ ಭಯಾತ್' ಈ ಧರ್ಮವು ಒಂದಿಷ್ಟಿದ್ದರೂ ಸಾಕು ಎಷ್ಟೋ ನಿರ್ಭಯವಾಗುವದು. ನಿರ್ಭಯದಿಂದಲೇ ಇಡೀ ಅಸತ್ಯ ಪ್ರಪಂಚವನ್ನೇ ಇದಿರಿಸುವ ಶಕ್ತಿಯುಂಟಾಗುವದು. ಇಂಥ ಶಕ್ತಿ ನಮ್ಮದಾಗಲಿ!

## ಸಾಮ್ರಾಜ್ಯದ ಪ್ರಾಣವೆಲ್ಲಿದೆ ?

ಎಲ್ಲ ಪ್ರಾಣಿಗಳಿಗೂ ಅದರ ಮರ್ಮಸ್ಥಾನವಿರುತ್ತದೆ. ಅದಕ್ಕೆ ಪೆಟ್ಟು ತಗಲಿದರೆ ಅವುಗಳ ಪ್ರಾಣವು ಹೋಗುವದು. ರಾವಣನ ಮರಣವು ಹೃದಯದಲ್ಲಿತ್ತಂತೆ, ಜಟಾಯುವಿನದು ರೆಕ್ಕೆಯಲ್ಲಿತ್ತಂತೆ, ಅಜ್ಜಿಯ ಕಥೆಗಳಲ್ಲಿ ಗಿಳಿಯಲ್ಲಿ ಪ್ರಾಣವಿರುವ ರಾಕ್ಷಸನ ಕಥೆ ಹೇಳುವರಷ್ಟೆ. ಹಾಗೆ ಹಿಂದುಸ್ಥಾನದೊಳಗಿನ ಬ್ರಿಟಿಷ ಸಾಮ್ರಾಜ್ಯದ ಪ್ರಾಣವೆಲ್ಲಿದೆ !

ನಮ್ಮ ಸಹಕಾರದಲ್ಲಿಯೆ ಅದರ ಪ್ರಾಣವಿದೆ. ನಮ್ಮ ಅಸಹಕಾರದಲ್ಲಿಯೆ ಅದರ ಮರಣವಿದೆ. ಭಾರತೀಯರ ಸಹಾಯವಿಲ್ಲದೆ ಹಿಂದುಸ್ಥಾನದ ಸಾಮ್ರಾಜ್ಯವು ಒಂದು ಅರಗಳಿಗೆಯಾದರೂ ನಡೆಯುವದು ಹೇಗೆ? ಗುಜರಾಥದ ಕೆಲವು ಭಾಗಗಳಲ್ಲಿ ಈಗಾಗಲೆ ಸ್ವರಾಜ್ಯವಿದ್ದಂತೆಯೆ ಆಗಿದೆ. ಅಲ್ಲಿಯ ಗೌಡರೂ ತಲಾಟಿಗಳೂ ಅಸಹಕಾರ ಮಾಡಿದ್ದಾರೆ. ಗೌಡಕುಲಕರ್ಣಿಯರೆಂದರೆ ರಾಜ್ಯದ ನರಗಳಿದ್ದಂತೆ. ನರಗಳೇ ಸತ್ತರೆ ಪ್ರಾಣವು ಇದ್ದೂ ಇಲ್ಲದಂತೆ. ನರಗಳು ಸಾಯುವದು ಮಹಾರೋಗ. ಮಹಾರೋಗವುಳ್ಳ ದೇಹವು ಎಷ್ಟು ದಿನ ಬಾಳೀತು ?

ಬ್ರಿಟಿಷರು ನ್ಯಾಯಪಕ್ಷಪಾತಿಗಳೂ ಸ್ವಾತಂತ್ರ್ಯಪ್ರಿಯರೂ ಎಂದು ಜಗತ್ತಿನಲ್ಲಿ ಅವರ ಡಂಗುರವಿದೆ, ಪೂರ್ಣ ಸ್ವರಾಜ್ಯಕ್ಕಾಗಿ ಅಹಿಂಸಾಮಾರ್ಗದಿಂದ ನಾವು ನಡೆಸಿರುವ ಚಳವಳಿಯನ್ನು ಆಳರಸರು ಮುರಿಬಡಿಯಲು ಯತ್ನಿಸಿದ್ದಾದರೆ–ಬ್ರಿಟಿಷರ ನ್ಯಾಯವೂ ಸ್ವಾತಂತ್ರ್ಯಪ್ರೀತಿಯೂ ಜಗತ್ತಿಗೆ ತಾನೆ ತಿಳಿಯುವದು. ಎಲ್ಲ ಕಡೆಗೂ ಅವರ ಅಪ್ರತಿಷ್ಠೆಯಾಗುವದು. ಈ ಅಪ್ರತಿಷ್ಠೆಯೇ ಅವರ ಮರಣ.

ಹಿಂದುಸ್ಥಾನದೊಳಗಿನ ಸಾಮ್ರಾಜ್ಯದ ಪ್ರಾಣವು ದುಡ್ಡಿನಲ್ಲಿದೆ–ವ್ಯಾಪಾರದಲ್ಲಿದೆ, ಈ ಆಡಳಿತಕ್ಕೆ ಬೇಕಾದ ದುಡ್ಡು

ದೊರೆಯದಿದ್ದರೆ, ವ್ಯಾಪಾರವು ಸಾಗದಿದ್ದರೆ ಸಾಮ್ರಾಜ್ಯಕ್ಕೆ ಪ್ರಾಣಸಂಕಟವಾಗದೆ ಇರಲಾರದು.

ಸಾಮ್ರಾಜ್ಯದ ಪ್ರಾಣವು ದಂಡಿನಲ್ಲಿದೆ; ದಂಡಿನ ಪ್ರಾಣವು ದುಡ್ಡಿನಲ್ಲಿದೆ. ದುಡ್ಡು ಕೊಡತಕ್ಕವರು ಒಕ್ಕಲಿಗರು. ತಾವು ಹೇಳಿದಂತೆ ಕಾನೂನುಗಳಾಗದಿದ್ದರೆ ತಾವು ದುಡ್ಡು ಕೊಟ್ಟಿಪ್ಪರಲ್ಲ ಎಂದು ಅವರು ಬಿಗಿಹಿಡಿದರೆ ದಂಡಿನ ಪ್ರಾಣ ಹಿಂಡಿದಂತಾಗುವದು. ಶಿಕ್ಷಣ ಆರೋಗ್ಯ ಒಕ್ಕಲತನ ಮೊದಲಾದವುಗಳಿಗೆ ವೆಚ್ಚಮಾಡುವ ಹಣವನ್ನು ಅವುಗಳಿಗೆ ವೆಚ್ಚಮಾಡದೆ ಸೈನ್ಯಕ್ಕೆ ವೆಚ್ಚಮಾಡುವ ಪ್ರಸಂಗವು ಬರುವದು. ಇದರಿಂದ ಪ್ರಜೆಗಳ ಹಿತವಾಗಬೇಕೆಂಬ ಬುದ್ಧಿಯು ಆಡಳಿತದವರಲ್ಲಿಪ್ಪಿದೆ ಎಂಬದು ಒಡೆದು ಕಾಣಹತ್ತುವದು. ನಿಃಶಸ್ತ್ರರನ್ನು ಶಸ್ತ್ರದಿಂದಲೇ ಆಳುವದು ಸ್ವಾಭಾವಿಕವಾಗಿದೆ. ಶಸ್ತ್ರವಾಯಿತು ಶಸ್ತ್ರಿಗಳಾದರು— ಎಲ್ಲವೂ ದುಡ್ಡಿನ ಅಧೀನ.

ಆದರೆ ಇದೆಲ್ಲ ನಮ್ಮ ಸಮ್ಮತಿಯನ್ನು ಅವಲಂಬಿಸಿದೆ. ನಮ್ಮ ಸಂಮತಿಯಿಂದಲೇ ರಾಜ್ಯ, ದುಡ್ಡು, ವ್ಯಾಪಾರ, ಸೈನ್ಯ. ಪ್ರಜೆಗಳ ಸಮ್ಮತಿಯಿರದಿದ್ದರೆ ಇದಾವುದೂ ಬಹಳ ದಿವಸ ಬಾಳಲಾರದು.

## ನಮ್ಮ ದುರ್ಬಲತೆ

ಪೂರ್ಣ ಸ್ವರಾಜ್ಯವನ್ನು ದೊರಕಿಸುವದು ಇಷ್ಟು ಸುಲಭವಿದ್ದರೆ ನಾವು ಹೀಗೆ ಪರತಂತ್ರರಾಗಿರುವದೇಕೆ ? ನಿಃಶಸ್ತ್ರರಾಗಿರುವದರಿಂದ ಹೇಡಿಗಳಾಗಿದ್ದೇವೆ. ಬಡತನದಿಂದ ಹಣ್ಣಾಗಿದ್ದೇವೆ. ರಂಡಿಗೋಳುತಿಂದು ಸಪ್ಪನ್ನ ಶಾಂತತೆಯಲ್ಲಿ ಬೆಳೆದುದರಿಂದ ಅಶಾಂತಿಯೆಂದರೆ ಹೆದರಿಕೊಂಡು ಬಿಡುತ್ತೇವೆ. ಸಾಮ್ರಾಜ್ಯ ಸುಖವನ್ನನುಭವಿಸುವದರ ಭೋಗದ್ರವ್ಯಗಳನ್ನುನಾವು ಬಯಸಿ, ಬಡವರು ಮೊದಲು ಮಾಡಿಕೊಂಡು ಸಿರಿವಂತರವರೆಗೆ ಎಲ್ಲರೂ ಮೋಹಿತರಾಗಿ ಬಿಟ್ಟಿರುವೆವು.

ಅದರಲ್ಲಿ ಬೇರೆ ಜಾತಿಮತಪಂಥಗಳ ಭೇದದ ಸೀವದಿಂದ ಅಧಿಕಾರಲಾಲಸೆಯಿಂದ, ಮಾನಸನ್ಮಾನದ ಆಶೆಯಿಂದ, ದುಡ್ಡಿನ ಲೋಭದಿಂದ, ಹುಟ್ಟುಹೆದರಬಡಕತನದಿಂದ, ಸುಜ್ಞ ಮತ್ತು ಅಜ್ಞ ಮೂರ್ಖತನದಿಂದ 'ಕೊಡಲಿಯ ಕಾವು ಕುಲಕ್ಕೆ ಮೂಲ' ಎಂಬಂತೆ ನಮ್ಮನ್ನು ಅರಿಯುವವರಿಗೆ ನಾವೇ ನೆರವಾಗುತ್ತೇವೆ. ಇದನ್ನು ನಾವು ತಿಳಿದು ಎಚ್ಚರಗೊಂಡು ನಡೆದರೆ ಸ್ವರಾಜ್ಯವು ನಮ್ಮ ಕೈಮೀರಲಾರದು.

## ಶೀಲ

ಪ್ರಲ್ಹಾದನೆಂಬ ರಾಕ್ಷಸನು. ಇಂದ್ರಪಟ್ಟಸನ್ನೇರಿದಾಗ ದೇವೇಂದ್ರನು ಅವನ ಹತ್ತರ ಹೋಗಿ ಅವನ ಶೀಲವನ್ನು ದಾನವನ್ನಾಗಿ ಬೇಡಿಕೊಂಡು ಬಂದನಂತೆ. ಪ್ರಲ್ಹಾದನ ಶೀಲವು ಹೋದಕೂಡಲೆ ಒಂದೊಂದಾಗಿ ಅವನ ಎಲ್ಲ ಗುಣಗಳೂ ಶಕ್ತಿಗಳೂ ಹೋಗಿ ಅವನ ಇಂದ್ರಪದವಿಯೂ ಹೋಯಿತೆಂದು ಭಾರತದಲ್ಲಿ ಹೇಳಿದೆ. ಬ್ರಿಟಿಷ ಜನಾಂಗವು ತನ್ನ ಶೀಲಬಲದಿಂದ ರಾಜ್ಯವನ್ನು ಗಳಿಸಿತು ಎಂದು ಹೇಳುವರು. ಅದು ನಿಜವಿದ್ದರೆ, ಈಗ ಬ್ರಿಟಿಷ ಜನಾಂಗದಲ್ಲಿ ಶೀಲವಿಲ್ಲದಾಗುತ್ತಿದೆ ಎಂಬದು ಸ್ಪಷ್ಟವಾಗಿರುವದರಿಂದ ಅವರ ಇಂದ್ರಪದವಿಯೂ ಅಂತ್ಯಕಾಲವನ್ನು ಸಮೀಪಿಸುತ್ತಿದೆ ಎಂದು ಹೇಳಬಹುದು. British sovereignty in India is doomed ಬ್ರಿಟಿಷ ಪ್ರಭುತ್ವದ ದಿವಸಗಳು ತೀರಿದವು ಎಂದು ಅನೇಕರು ಪ್ರಕಟವಾಗಿಯೇ ಹೇಳುತ್ತಿರುವರು. ಹಾಗಾದರೆ ನಮ್ಮ ರಾಜ್ಯವು ನಮಗೆ ದೊರಕಬೇಕಾದರೂ ನಮ್ಮಲ್ಲಿ ಶೀಲವು ಬೆಳೆಯಬೇಕು. ಇಂಥ ಶೀಲಕ್ಕೆ ಅತ್ಯುಚ್ಚ ಆದರ್ಶವೆಂದರೆ ಮಹಾತ್ಮಾ ಗಾಂಧಿಯವರೇ ಸೈ.

'There never was in any man sufficient faith in the power of rectitude to inspire him with the broad design of renovating the State on the principle of right and love······ I do not call to mind a single human being who has steadily denied the authority of the laws on the simple ground of his own moral nature'

ಸಾರಾಂಶಃ— "ಸತ್ಯ ಮತ್ತು ಅಹಿಂಸಾ ಬಲದಿಂದಲೇ ರಾಜ್ಯವನ್ನು ಪ್ರತಿಷ್ಠಾಪಿಸುವೆನೆಂಬಷ್ಟು ಸತ್ಯದಲ್ಲಿ ಶ್ರದ್ಧೆಯು ಯಾವ ಮನುಷ್ಯನಲ್ಲಿಯೂ ಕಂಡುಬಂದಿಲ್ಲ. ತನ್ನ ನೀತಿಬದ್ಧ ಸ್ವಭಾವ ಸಾಮರ್ಥ್ಯದಿಂದಲೇ ಕಟ್ಟಳೆಗಳನ್ನು ಸತತವಾಗಿ ವಿರೋಧಿಸುತ್ತ ಬಂದಿರುವ ಒಬ್ಬ ಮನುಷ್ಯನೂ ನನಗೆ ನೆನಪಿಲ್ಲ" ಎಂದು ಇಮರ್ಸನ್ ಎಂಬ ಅಮೇರಿಕೆಯ ತತ್ವಜ್ಞಾನಿಗಳು ಹೇಳಿರುವರು. ಆದರೆ ಅವರು ಹಾಗೆ ಹೇಳುವಾಗಲೇ ಅಂಥ ವಿಭೂತಿಯೊಂದು ಹಿಂದುಸ್ಥಾನದಲ್ಲಿ ಅವತರಿಸಿದೆ ಎಂಬದು ತಿಳಿದಿರಲಿಲ್ಲ. ಮಹಾತ್ಮರ ಸತ್ಯ ಅಹಿಂಸೆಗಳೊಳಗಿನ ಶ್ರದ್ಧೆಯಿಂದ ಭಾರತೀಯರು ಕೆಲಸ ಮಾಡಿದರೆ ಹಿಂದುಸ್ಥಾನದ

ಸ್ವರಾಜ್ಯವೇಕೆ ಜಗತ್ತಿನ ಸಾಮ್ರಾಜ್ಯವೂ ತಾನಾಗಿಯೇ ಭಾರತೀಯರದಾಗಬಹುದು.

---

## ಪರಾಧೀನ ಆರ್ಥಿಕ ಸ್ವಾತಂತ್ರ್ಯ

ಪರಾಧೀನ ಸ್ವಾತಂತ್ರ್ಯ ಎಂಬ ಮಾತು ತಿರುವು ಮುರುವು ಕಾಣಬಹುದು. ಈಗಿನ ತಿರುವು ಮುರುವು ರಾಜ್ಯದಲ್ಲಿ ಯಾವುದು ತಾನೆ ನೆಟ್ಟಗೆ ಉಳಿದಿದೆ ! ಸಾಮ್ರಾಜ್ಯದಲ್ಲಿ ಎಲ್ಲರೂ ಸಮಾನರು ಎಂದು ಹೇಳುವರು. ಆದರೆ ಭಾರತೀಯನಿಗೆ ಮನ್ನಣೆ ಕೊಡುವ ಪಾಪಿಯೊಬ್ಬನೂ ಸಾಮ್ರಾಜ್ಯದಲ್ಲಿ ದೊರೆಯುವದಿಲ್ಲ. ನಮ್ಮ ರಾಜ್ಯಕ್ಕೆ ತಾವು ಸಂರಕ್ಷಣದಾರರು ಎಂದು ಬ್ರಿಟಿಶರು ಹೇಳಿಕೊಳ್ಳುವರು. ನಮ್ಮದೇ ನಮಗೆ ಬಿಟ್ಟು ಕೊಡಿರಿ ಎಂದರೆ ಆ ಮಾತಿಗೆ ಕಿವುಡು. ನಮ್ಮ ಶಸ್ತ್ರಗಳನ್ನೆಲ್ಲ ಕಸಿದುಕೊಂಡು ನಮ್ಮ ಸಂರಕ್ಷಣೆಗೆ ದೊಡ್ಡ ಸೈನ್ಯವನ್ನು ಇಟ್ಟಿರುವೆವೆಂದು ಸಾರಿ ಹೇಳುವರು. ಆದರೆ ಆ ಸೈನ್ಯದ ಹೆದರಿಕೆ ಹಾಕಿ ನಮ್ಮನ್ನಾಳುವರು. ನಮ್ಮ ಬಡತನ ಹೋಗಲಾಡಿಸಲು ಪ್ರಯತ್ನ ಮಾಡುವೆವೆಂದು ಹೇಳುವರು. ಆದರೆ ನಮ್ಮ ಉದ್ಯೋಗಗಳಿಗೆ ಮಾತ್ರ ಉತ್ತೇಜನವಿಲ್ಲ. ಇದೇ ಮಾತು ನಮ್ಮ ದುಡ್ಡಿನದು.

೧೯೧೯ರಲ್ಲಿಯೆ ನಮಗೆ ಆರ್ಥಿಕ ಸ್ವಾತಂತ್ರ್ಯವು ಕೊಡಲಾಗಿದೆ ಎಂದು ಹೇಳಲಾಗುವದು. ಈಗ ಆ ಮಾತಿಗೆ ಹತ್ತು ವರ್ಷಗಳಾಗಿ ಹೋದರೂ, ನಮ್ಮನ್ನು ಮುಂದೆ ಮಾಡಿ ಇಂಗ್ಲಂಡದ ಆರ್ಥಿಕ ಹಿತವನ್ನೇ ಸಾಧಿಸಲು ಪ್ರಯತ್ನಿಸುವರು. ಮೊನ್ನೆ ಅಸೆಂಬ್ಲಿಯಲ್ಲಿ ಲ್ಯಾಂಕೆಶಾಯರದ ಅರಿವೆಗಳಮೇಲೆ ಜಕಾತಿ ಎಷ್ಟು ಹೇರಬೇಕು ಬಿಡಬೇಕು ಎಂಬ ಮಾತು ಹೊರಟರಲಾಗಿ ಪಂಡಿತ ಮದನಮೋಹನ ಮಾಲವಿಯ ಇವರು ಅಸೆಂಬ್ಲಿಯ ಅಧ್ಯಕ್ಷರಾದ ಪಟೇಲ ಇವರಿಗೆ ಮೂರು ಪ್ರಶ್ನೆಗಳನ್ನು ಕೇಳಿ ನಮ್ಮ ಆರ್ಥಿಕ ಸ್ವಾತಂತ್ರ್ಯವನ್ನು ಸಿದ್ಧಾಂತವನ್ನಾಗಿ ಮಾಡಿಕೊಳ್ಳಲು ಯತ್ನಿಸಿದರು. ಆದರೆ (Imperial preference) ಸಾಮ್ರಾಜ್ಯದ ಮಾಲಿಗೆ ವಿಶೇಷ ಪ್ರತಿಷ್ಠೆಯನ್ನು ಕೊಡಬೇಕು ಎಂಬ ತತ್ವವನ್ನು ಮುಂದೆ ಚಾಚಿ ನಮ್ಮ ಆರ್ಥಿಕ ಸಾತಂತ್ರ್ಯಕ್ಕೆ ಸರಕಾರವು ಸೊನ್ನೆ ಸುತ್ತಿತು. ಇಂಗ್ಲಿಷರ ರಾಜ್ಯಪದ್ಧತಿಯ ತಮಾಷೆಯೇ ಹೀಗಿದೆ. ಒಂದು ಕೈಯಿಂದ ಕೊಟ್ಟಂತೆ ಮಾಡುವರು. ಇನ್ನೊಂದು ಕೈಯಿಂದ ಕಸಿದುಕೊಳ್ಳುವರು. ಈ ಕಾಟನ ಟಾರೀಫ (Cotton Tariff) ಬಿಲ್ಲಿನ ಕಾಲದಲ್ಲಿ ಸರಕಾರವು ಮಾಡಿದ ಇಂದ್ರಜಾಲದ ತಾರೀಫು ಎಷ್ಟು ಮಾಡಿದರೂ ತೀರದು. ಈ ಮಾಯಾ ಸಾಮ್ರಾಜ್ಯಕ್ಕೆ ಬೇಸತ್ತು ಪಂ. ಮಾಲವೀಯಾ ಮೊದಲಾದವರು ಅಸೆಂಬ್ಲಿಗೆ ರಾಜೀನಾಮೆ ಕೊಟ್ಟರು.



ಆಳರಸರ ಒಡ್ಡೋಲಗವನ್ನು ಬಹಿಷ್ಕರಿಸಿದ ಪಂಡಿತ ಮದನಮೋಹನ ಮಾಳವ್ಯರವರು

---

## ‘ ಓಲಗಿಸಿ ಬಾಳ್ವುದೆ ಕಷ್ಟವಿಳಾಧಿನಾಥರಾ ’

—ಪಂಪ

ಅರಸರ ಇಚ್ಛೆಯಂತೆ ನಡೆದು ಬಾಳುವೆ ಮಾಡುವದು ಬಹಳೇ ಕಷ್ಟವೆಂದು ಪಂಪನು ಹೇಳುವನು. ಆದರೆ ಆಳರಸರನ್ನು ಓಲಗಿಸಿ ಬಾಳುವುದು ಅದಕ್ಕೂ ಕಷ್ಟ. ಕೌನ್ಸಿಲ್ಲು ಅಸೆಂಬ್ಲಿಗಳ ಮಯಾಸುರ ಸೃಷ್ಟಿಯನ್ನು ಸೇರಬಾರದೆಂದೆ ಮಹಾತ್ಮರು ಹೇಳುತ್ತ ಬಂದಿರುವರು. ಪಂ. ಮಾಲವಿಯಾ ಬಿರ್ಲಾ ಮೊದಲಾದ ಎಂಟು ಜನರು ಈಗ ಹೊಸದಾಗಿ ಬಿಟ್ಟಿದ್ದೆ ಕೌನ್ಸಿಲ್ಲು ಅಸೆಂಬ್ಲಿಗಳ ಜೊಳ್ಳು ಪೊಳ್ಳುತನಕ್ಕೆ ಸಾಕ್ಷಿ. ಮದ್ರಾಸ ಕೌನ್ಸಿಲ್ಲಿನಲ್ಲಿ ಮದ್ಯಪಾನ ಪ್ರತಿಬಂಧಕ್ಕೆ ೫ ಲಕ್ಷ ರೂಪಾಯಿಗಳು ಮಂಜೂರಾದ್ದದ್ದೇನೋ ನಿಜ. ಆದರೆ ಪ್ರತಿ

ಬಂಧದ ಪ್ರತಿಬಂಧವೇ ನಡೆದಿದೆ. ಕೃತಿಯಲ್ಲಿ ಆಕಾಶ ಪಾತಾಳವೆಲ್ಲ ಉಪ್ಪಿನ ಕರದ ವಿರುದ್ಧವಾಗಿ ನಡೆದ ಘೋಷಣೆಯಿಂದ ನಿನದಿಸುತ್ತಿದ್ದರೂ ಆಳರಸರ ತಲೆ ಇನ್ನೂ ತಣ್ಣಗೇ ಇದೆ. ಲಾಂಕಶಾಯರದಿಂದಲೇ ನಾವು ಹಾಳಾಗುತ್ತಿದ್ದರೂ ಅದಕ್ಕೆ ಸಹಾಯಮಾಡುವದೇ ನಮ್ಮ ಕರ್ತವ್ಯ ಎಂದು ಹೇಳಲಾಗುತ್ತಿದೆ. ಶಿಕ್ಷಣವನ್ನು ಶೆರೆಯ ಕಂದಾಯದ ಕೊರಳಲ್ಲಿ ತೊಡಕಿಸಿದ್ದರಿಂದ ನಮ್ಮಲ್ಲಿ ಕುಡುಕತನವು ಬೆಳೆದರೆಯೇ ಶಿಕ್ಷಣ ಬೆಳೆಯಬೇಕು. ಹೀಗೆ ವಿಪರೀತ ಸ್ಥಿತಿಯಿದೆ. ಅಂತೂ ಕೌನ್ಸಿಲ್ಲು ಅಸೆಂಬ್ಲಿಗಳಲ್ಲಿ ಅನ್ಯಾಯವೇ ನ್ಯಾಯವಾಗಿಯೂ ಅಧರ್ಮವೇ ಧರ್ಮವಾಗಿಯೂ ತಿಳಿಯಲ್ಪಡಲಾಗುತ್ತಿದೆ.

ಇಂಥ ಸಭೆಗಳಲ್ಲಿ ಹೋಗಿ ಮಾಡುವದೇನು ? ಪಂ. ಮಾಲವಿಯಾ ಮೊದಲಾದವರು ಇಂದು ಬಿಟ್ಟರು. ಪ್ರೆಸಿಡೆಂಟ ಪಟೇಲರು ನಾಳೆ ಬಿಟ್ಟಾರು. ನಾಮಧಾರಿ ಸ್ವರಾಜ್ಯ ಪಾರ್ಟಿಯವರು ನಾಡಿದ್ದು ಬಿಡಬೇಕಾದೀತು. ಯಾಕಂದರೆ ಅವುಗಳಲ್ಲಿ ಇರುವದು ಹೇಗೆ ? ಎಲ್ಲಿ ಧರ್ಮವು ಅಧರ್ಮದಿಂದಲೂ, ಸತ್ಯವು ಸುಳ್ಳಿನಿಂದಲೂ ಹೊಡೆಯಲ್ಪಡುವದೊ ಅಲ್ಲಿ ಸಭಾಸದರು ಇದ್ದೂ ಸತ್ತಂತೆಯೆ. ಇಷ್ಟೆ ಅಲ್ಲ. ಇಂಥ ಸಭೆಗಳಲ್ಲಿ ಸುಮ್ಮನೆ ಕುಳಿತರು ಕೂಡ ಅಧರ್ಮದ ಪಾಪಕ್ಕೆ ಸಭಾಸದರು ಪಾಲುಗಾರರಾಗದೆ ಉಳಿಯಲಾರರು. 'ಸಭಾಂ ನ ಪ್ರವೇಷ್ಟವ್ಯಂ' ಎಂದು ಮನುವು ಹೇಳಿದ್ದು ಇಂಥ ಸಭೆಗಳ ಬಗ್ಗೆಯೆ.

ಭೀಷ್ಮ ದ್ರೋಣರು ದುರ್ಯೋಧನನ ಪಕ್ಷವು ತಪ್ಪೆಂದು ಸಾರಿ ಡೂರಿ ಹೇಳಿದರೂ ಅವನ ಪಕ್ಷ ಬಿಡಲಿಲ್ಲ. ದುರ್ಯೋಧನನ ಉಪ್ಪುಂಡದ್ದೇ ಅದಕ್ಕೆ ಕಾರಣವಿರಬಹುದು. ಆದರೆ ಈಗಿನ ಹಿಂದುಸ್ಥಾನದಲ್ಲಿ ಉಪ್ಪಿನ ರಿಣವೇ ಉಂಟಾಗುವಂತಿಲ್ಲ. ಯಾಕಂದರೆ ಉಪ್ಪಿಗೂ ಕರ. ಆದಕಾರಣ, ಅಸತ್ಯಪಕ್ಷದೊಡನೆ ಯಾವ ಕಾರಣದಿಂದಲೂ ಸಹಕಾರವನ್ನು ಮಾಡುವದುಚಿತವಲ್ಲ.

---

## ಸಜ್ಜನರ ವಜ್ರೋಕ್ತಿ

ಅಮೇರಿಕಾ ದೇಶದೊಳಗಿನ ಪ್ರೊ. ಡೂವೀ, ಸಂಡರಲಂಡ, ಹೊಲ್ಮ್ಸ ಮೊದಲಾದ ೧೪ ಮಂದಿ ಸಜ್ಜನರು ಬ್ರಿಟಿಶ ಸರಕಾರವನ್ನು ಕುರಿತು ಒಂದು ಪ್ರಕಟನೆಯನ್ನು ಪ್ರಕಟಿಸಿರುವರು. ಅದರಲ್ಲಿ ಅವರು ಹೇಳುವ ಮಾತುಗಳು ವಜ್ರದಂತೆ ಇವೆ. ಅವರು ಹೇಳುವದೇನೆಂದರೆ ! (೧) ಹಡಗುಪಡೆಯ ರೂಪದ ಯುದ್ಧ ಸಾಮಗ್ರಿಯನ್ನು ಕಡಿಮೆ ಮಾಡಬೇಕೆಂಬದಾಗಿ ಬ್ರಿಟಿಷರು ಐದು ಜನಾಂಗಗಳೊಡನೆ ಸಂಧಾನ ನಡೆಸಿ ತಾವು ಜಗತ್ತಿನಲ್ಲಿ ಶಾಂತಿಯು ಬೆಳೆಯಲೆಂಬ ಇಚ್ಛೆಯುಳ್ಳವರೆಂದು ತಿಳಿಸುತ್ತಿರುವರು. ಇದು ನಿಜವೇ ಇದ್ದ ಪಕ್ಷದಲ್ಲಿ ಹಿಂದುಸ್ಥಾನದಲ್ಲಿ ಅಹಿಂಸಾಮಾರ್ಗದಿಂದ ನಡೆದ ರಾಜಕೀಯ ಚಳವಳಿಯನ್ನು ಅವರು ಮನ್ನಿಸಲೇ ಬೇಕು. ಅದನ್ನು ಬ್ರಿಟಿಷರು ವಿರೋಧಿಸಿದ್ದಾದರೆ ಅವರ ಸಾವೋದ್ದೇಶವನ್ನು ಯಾರೂ ನಂಬಲಾರರು. (೨) ಹಿಂದುಸ್ಥಾನದಲ್ಲಿ ಯುದ್ಧದ ಬೆಂಕಿಯು ಹುಟ್ಟಿದರೆ ಅದು ಜಗತ್ತನ್ನೆ ವ್ಯಾಪಿಸುವದರಲ್ಲಿ ಸಂದೇಹವಿಲ್ಲ. ಹಾಗೆ ಅದು ವ್ಯಾಪಿಸಿ ಜಗತ್ತಿನಲ್ಲಾಗುವ ದುಃಖಕ್ಕೆಲ್ಲ ಬ್ರಿಟಿಷ ಜನಾಂಗವನ್ನೆ ಹೊಣೆ ಹಿಡಿಯಬೇಕಾದೀತು. ಯಾಕಂದರೆ ಹಿಂದುಸ್ಥಾನದವರಂತೂ ಅಹಿಂಸಾಮಾರ್ಗದವರಿದ್ದಾರೆ. (೩) ಸಾವೆಷ್ಟು ಪಾಯದಿಂದಲೇ ನ್ಯಾಯವನ್ನು ದೊರಕಿಸುವ ಹಾದಿಯನ್ನು ಮಹಾತ್ಮಾಗಾಂಧಿಯವರು ಹುಡುಕಿ ಕೊಟ್ಟಿದ್ದಾದರೆ ಜಗತ್ತಿನ ಮೇಲೆ ಅವರ ದೊಡ್ಡ ಉಪಕಾರವೇ ಆಗುವದು. ಇಂಥ ಅಭೂತಪೂರ್ವಪ್ರಯೋಗವನ್ನು ಬ್ರಿಟಿಷರು ಹಾಳುಮಾಡುವದು ಸರಿಯಲ್ಲ. ಹೀಗೆ ಸತ್ಯನಿಷ್ಠುರರಾಗಿ ಹೇಳಿದ್ದಲ್ಲದೆ ಬ್ರಿಟಿಷರು ಯಾವದೇ ರೀತಿಯಿಂದ ಭಾರತೀಯರನ್ನು ಹಿಂಸೆಗೆ ಈಡುಮಾಡಿದರೆ ತಮ್ಮಿಂದಂತೂ ಸುಮ್ಮನೆ ನೋಡುತ್ತ ಕೂಡುವದಾಗದು, ತಮ್ಮ ಕೈಲಾದಮಟ್ಟಿಗೆ ಹಿಂದುಸ್ಥಾನ ಜನರಿಗೆ ಸಹಾಯಮಾಡತಕ್ಕವರು — ಎಂದು ಖಂಡತುಂಡಾಗಿ ತಮ್ಮ ಪ್ರಕಟನೆಯಲ್ಲಿ ಕಾಣಿಸಿದ್ದಾರೆ. ಪರದೇಶದವರೇ ಹೀಗೆ ಅನ್ನುತ್ತಿರುವಾಗಿ ನಮ್ಮವರು ಸುಮ್ಮನೇ ಕುಳ್ಳಿರಲಾಗುವದೇ ?

---

## ಸುಮ್ಮನೆ ಕೂಡಲಾರೆವು

ಸದ್ಯದ ಸರಕಾರದ ಪದ್ಧತಿಯ ಅನ್ಯಾಯದ ರೀತಿಯನ್ನು ಒಡೆದು ಹೇಳುವ ಕಾರಣವೇ ಇಲ್ಲದಾಗಿದೆ. ಹಾಗಾದರೆ ಮಾಡುವದೇನು ? ಮಹಾತ್ಮರು ಪೂರ್ಣ ಸ್ವರಾಜ್ಯವನ್ನು ದೊರಕಿಸಲು ಹೆಣಗಾಡುತ್ತಿದ್ದಾರೆ. ಪಂ. ಮಾಲವಿಯಾ ಮೊದಲಾದವರು ಪರದೇಶಿ ಬಟ್ಟೆಯ ಬಹಿಷ್ಕಾರದ ಚಳವಳಿಯನ್ನು ಕೈಕೊಳ್ಳುವವರಿದ್ದಾರೆ. ನಾಳೆ ನೂತನ ಸ್ವರಾಜ್ಯ ಪಕ್ಷದವರು ಮದ್ಯಪಾನಪ್ರತಿಬಂಧದ ಚಳವಳಿಯನ್ನು ಕೈಕೊಳ್ಳಬಹುದು. ಮಂದಪಕ್ಷದವರು ಸಾಮಂತ ಸ್ವರಾಜ್ಯವನ್ನು ದೊರಕಿಸುವ ಪ್ರತಿಜ್ಞೆಯಿಂದ ದುಂಡುಮೇಜಿನ ಪರಿಷತ್ತಿಗೆ ಹೋಗುವ ಸಿದ್ಧತೆಯಲ್ಲಿದ್ದಾರೆ. ನಿಜವಾದ ಸಾಮಂತ ಸ್ವರಾಜ್ಯವು ದೊರೆಯದಿದ್ದರೆ ಅವರೇನು ಮುಂದೆ ಮಾಡತಕ್ಕವರೋ ನೋಡಬೇಕು.

ಹಾಗಾದರೆ ಸಾಮಾನ್ಯ ಜನರು ಏನು ಮಾಡಬೇಕು? ಸುಮ್ಮನೆ ಕೂಡಬಾರದು! ಉಪ್ಪಿನ ಸತ್ಯಾಗ್ರಹದಲ್ಲಾಗಲಿ, ಪರದೇಶಿ ಬಟ್ಟೆಗಳ ಬಹಿಷ್ಕಾರದಲ್ಲಾಗಲಿ, ಮದ್ಯಪಾನ ಪ್ರತಿಬಂಧದಲ್ಲಾಗಲಿ ನೆರವಾಗಲೇ ಬೇಕು. ಇಷ್ಟೆ ಅಲ್ಲ. ಸರಕಾರಕ್ಕೆ ಅನ್ಯಾಯವನ್ನು ಮಾಡುತ್ತಿದೆ ಎಂದು ಸ್ಪಷ್ಟವಾಗಿ ಹೇಳಬೇಕು. ಯಥಾಶಕ್ತಿ ತಾವೂ ಆ ಅನ್ಯಾಯವನ್ನು ಹೋಗಲಾಡಿಸಲು ವಿರೋಧಿಸತಕ್ಕವರು ಎಂದು ಎಚ್ಚರಕೊಡಬೇಕು ಮತ್ತು ಅನ್ಯಾಯವನ್ನು ವಿರೋಧಿಸತಕ್ಕವರು ತಾವು ನ್ಯಾಯಮಾರ್ಗದಲ್ಲಿ ಪ್ರವರ್ತಿಸುವಂತೆ ಎಚ್ಚರ ಪಡಬೇಕು. ಪೂರ್ಣ ಸ್ವರಾಜ್ಯ ದೊರೆಯುವ ವರೆಗೆ ಸುಮ್ಮನೆ ಕೂಡ್ರಬಾರದು.

---

## ಹುಳುಕು ಹೊರಬೀಳಹತ್ತಿದೆ

ಅಲ್ಪವಯಿ ರಾಷ್ಟ್ರಗಳ ಸಂರಕ್ಷಣದಾರರು, ಹಿಂದುಳಿದ ರಾಷ್ಟ್ರಗಳನ್ನು ಮುಂದೆ ತರತಕ್ಕವರು, ಪರತಂತ್ರ ರಾಷ್ಟ್ರಗಳಿಗೆ ಸ್ವಾತಂತ್ರ್ಯ ಕೊಡತಕ್ಕವರು ಮೊದಲಾದ ಬಿರುದಾವಳಿಗಳಿಂದ ಹೊಗಳಿಸಿಕೊಂಡು ಪರೋಪದೇಶದಲ್ಲಿ ಪಾಂಡಿತ್ಯವನ್ನು ಬೆಳೆಸಿಕೊಂಡಿದ್ದ ಬ್ರಿಟಿಶ್ ಸಾಮ್ರಾಜ್ಯ ಸರಕಾರದ ಹುಳುಕು ಒಂದೊಂದಾಗಿ ಹೊರಬೀಳಹತ್ತಿದೆ- ನಮ್ಮ ಹಿಂದುಸ್ಥಾನವಲ್ಲಿಯೆ ಅವರ ಸರಕಿನ ಸಂತೆ. ನಾವು ದುಡಿದು ದೊರಕಿಸಿದ ದುಡ್ಡು ಅವರ ಸಾಮಾನುಗಳನ್ನು ಕೊಳ್ಳುವದರಲ್ಲಿಯೇ ವ್ಯಯವಾಗಬೇಕು. ಹೀಗೆ ಅವರ ನಮ್ಮ ಹಿತಸಂಬಂಧವಿರುವದರಿಂದ ಏನೇ ಆಗಲಿ ಹಿಂದುಸ್ಥಾನವನ್ನು ಬಿಡಲಾಗದು ಎಂದು ಸಾಮ್ರಾಜ್ಯದ ವೈಶ್ಯರು ಹೇಳುತ್ತಿರುವರು. ಏಸಿಯಾ ಖಂಡದ ತಲೆಯ ಮೇಲೆ ತಮ್ಮ ಕಾಲು ಸ್ಥಿರವಾಗಿ ಊರಿ ನಿಲ್ಲಬೇಕಾದರೆ ಹಿಂದುಸ್ಥಾನವು ತಮ್ಮ ಕೈಯಲ್ಲಿ ಉಳಿಯಲೇಬೇಕು. ಆದಕಾರಣ ಹಿಂದುಸ್ಥಾನವನ್ನು ವಿಶ್ವಪ್ರಯತ್ನದಿಂದ ತಮ್ಮ ಕೈಯಲ್ಲಿಯೇ ಉಳಿಸಿಕೊಳ್ಳಬೇಕು ಎಂದು ಬಾಯಿಬಿಚ್ಚಿ ಸಾಮ್ರಾಜ್ಯದ ಕ್ಷತ್ರಿಯರು ಗರ್ಜಿಸುತ್ತಿರುವರು. ಹಿಂದುಸ್ಥಾನವು ಅಸಂಸ್ಕೃತ ದೇಶ; ಅದನ್ನು ತಮ್ಮಂತೆ ಸುಸಂಸ್ಕೃತವಾಗಿ ಮಾಡುವ ವರೆಗೂ ಅದನ್ನು ತಾವು ಬಿಟ್ಟಿಪ್ಪಗಳಲ್ಲ ಎಂದು ಸಾಮ್ರಾಜ್ಯದ ಬ್ರಾಹ್ಮಣರು ಸಾರುತ್ತಿರುವರು. ಹಾಡಿನ ನುಡಿಗಳು ಬೇರೆಯಾದರೂ ಎಲ್ಲರ ಪಲ್ಲವಿಯೊಂದೇ:– "ಏನೇನೂ ಬರಲೀ ಏನೇನೂ ಇರಲೀ ॥ ಭಾರತ ದೇಶವ ಬಿಟ್ಟಿಪ್ಪರಲ್ಲ ॥" ಅಂತೂ ಕಡೆಗೊಮ್ಮೆ ಹೊಟ್ಟೆಯೊಳಗಿನ ಹುಳುಕು ಹೊರಬಿದ್ದಿತು. ಇದಕ್ಕೆ ಒಂದೇ ಒಂದು ಮದ್ದು. ಭಾರತೀಯರೆಲ್ಲರೂ ಇದೇ ಪಲ್ಲವಿಯನ್ನೇ ಹಾಡಬೇಕು. ಮುಳ್ಳು ತೆಗೆಯಲು ಮುಳ್ಳೇ ಬೇಕು.

ಮೊನ್ನೆ ಏ. ಜೀ. ಗಾರ್ಡಿನರ ಎಂಬ ಮಹಾ ವಿದ್ವಾಂಸರೂ 'We are not going to quit India' ಎಂದು ಕಿರಚಿರುವರು. 'ಹೌದು ಮಹಾ ಸ್ವಾಮೀ, ನಿಮ್ಮದಲ್ಲದ್ದನ್ನೂ ನೀವು ಬಿಡಲಾರಿರಿ, ನಮ್ಮದನ್ನು ನಾವು ಹೇಗೆ ಬಿಟ್ಟೇವು'– ಎಂದು ನಾವು ಒತ್ತೊತ್ತಿ ಹೇಳಬೇಕು.

---

## ಬಿಸಿಹತ್ತಿದರೆ ಕರಗುವದು

ಕಾಂಗ್ರೆಸ್ಸಿನಲ್ಲಿ ಕೌನ್ಸಿಲ ಬಹಿಷ್ಕಾರ ಠರಾವು ಪಾಸಾದರೂ ಎಷ್ಟೋ ಪ್ರಮುಖರು ಕೌನ್ಸಿಲ್ಲಿನಲ್ಲಿಯೇ ಸೇರಿಕೊಂಡಿರುವದನ್ನು ಕಂಡು 'ಪೂರ್ಣ ಸ್ವರಾಜ್ಯ'ದ ಗೊತ್ತಿನ ಗತಿಯಾದರೂ ಅಷ್ಟೇ ಸೈ ಎಂದೆಂದುಕೊಂಡು, ಸಾಯ್ಮನ್ ಕಮೀಟಿಯ ರಿಪೋರ್ಟು ಕೂಡ ತೀವ್ರವಾಗಿ ಪ್ರಸಿದ್ಧವಾಗಲಾರದು, ಅದಕ್ಕೆ ಕಾಲಾವಧಿ ಬೇಕು, ಎಂಬ ಬಗೆಯ ಪರದುಃಖಶೀತಲತರವಾದ ಉದ್ಗಾರದ್ದ ಮಾತುಗಳನ್ನು ಆಂಗ್ಲೋ ಇಂಡಿಯನ್ ಪತ್ರಿಕೆಗಳು ಬರೆಯುತ್ತಿದ್ದವು. ಆದರೆ ಸಾಯ್ಮನ್ ರಿಪೋರ್ಟು ತೀವ್ರ ಪ್ರಸಿದ್ಧವಾಗಬೇಕು ಎಂದು ಅವುಗಳೇ ಈಗ ಹೇಳುತ್ತಿವೆ. ಸಾಮಂತ ಸ್ವರಾಜ್ಯವನ್ನು ಇನ್ನೊಂದು ನೂರು ವರ್ಷಗಳ ವರೆಗೆ ಕನಸಿನಲ್ಲಿಯೂ ಕಾಣಲಾರಿರಿ ಎಂದು ಇಂಗ್ಲಂಡದ ಪಂಡಿತರೊಬ್ಬರು ಎಚ್ಚರಕೊಟ್ಟಿದ್ದರು. ನಾವು ಬೇಡುವಷ್ಟು ತೀವ್ರ ಮಾತ್ರ ಅದು ದೊರಕಲಾರದು ಎಂದು ಈಗ ಮೆತ್ತನ್ನ ಉತ್ತರವು ಬರಹತ್ತಿದೆ. ಪಾರ್ಲಿಮೆಂಟನಲ್ಲಿ ಹಿಂದುಸ್ಥಾನಕ್ಕೆ ಸಾಮಂತ ಸ್ವರಾಜ್ಯವನ್ನು ದೊರಕಿಸಿಕೊಡಲಿಕ್ಕೆಂದು ಒಂದು ಪಕ್ಷವೇ ನಿರ್ಮಾಣವಾಗಿದೆ. ಅಯರ್ಲಂಡಕ್ಕೆ ಸ್ವರಾಜ್ಯವನ್ನು ಕೊಡಿಸಲು ಹೀಗೇ ಒಂದು ಪಕ್ಷವು ಪಾರ್ಲಿಮೆಂಟನಲ್ಲಿ ಇತ್ತು. ವಚನಗಳಾದವು ವರಗಳಾದವು ಪಕ್ಷಗಳಾದವು ನಾವು ಇಲ್ಲಿ ಬಿಸಿ ಹೆಚ್ಚದ ಹೊರತು ಅಲ್ಲಿ ಏನೂ ಕರಗುವದಿಲ್ಲ. ಈ ಬಿಸಿಯು ಗಾಂಧಿಯವರ ಸ್ವಾವಲಂಬನಪಕ್ಷದ ತೇಜಸ್ಸಿನಿಂದಲೇ ಉಂಟಾಗಿರುವದು. ಮತ್ತಾರಿಂದಲೂ ಅಲ್ಲ.

ಕೌನ್ಸಿಲ್ಲು ಅಸೆಂಬ್ಲಿಯು ಜನರ ನಾಲಿಗೆಯು ಹರತವಾಗಲು ಕಾರಣವಾದರೂ ಕಾಂಗ್ರೆಸ್ಸಿನ ಚಳವಳಿಯೇ. ಮಂದಪಕ್ಷದವರು 'ಈಗಿಂದೀಗ ಸಾಮಂತ ಸ್ವರಾಜ್ಯ ಬೇಕು' ಎಂದು ಧಿಟ್ಟತನದಿಂದ ಮಾತನಾಡಬೇಕಾದರೂ ಕಾಂಗ್ರೆಸಿನ ಪ್ರತಾಪವೇ ಕಾರಣ. ಆದಕಾರಣ ಮಹಾತ್ಮರ ಸ್ವಾವಲಂಬನದ ತೇಜಸ್ವಿಯಾದ ಮಾರ್ಗವನ್ನು ಎಲ್ಲರೂ ಅವಲಂಬಿಸಿದಂತೆ ನಮ್ಮ ತಲೆಯ ಮೇಲೇರಿರುವ ಅರಗಿನ ರಾಜ್ಯವು ಕರಗಿಹೋಗುವದು.

---

## ತನ್ನಂತೆ ಪರರಬಗೆ

ಸ್ವಾತಂತ್ರ್ಯವು ಜನ್ಮಸಿದ್ಧ ಹಕ್ಕಾದರೆ, ಸಮಾನತ್ವವೂ ಜನ್ಮಸಿದ್ಧವಾದ ಹಕ್ಕೇ ಸರಿ. ದುರ್ಬಲರೇ ಇರಲಿ ಹೇಡಿಗಳೇ ಇರಲಿ ಅವರಿಗೂ ಸ್ವಾತಂತ್ರ್ಯವು ಸಿಗುವದು ನ್ಯಾಯ್ಯವಾದರೆ, ಅಜ್ಞಾನಿಗಳೇ ಇರಲಿ ಕೀಳರೇ ಇರಲಿ ಅವರಿಗೂ ಸಮಾನತ್ವವು ದೊರೆಯಲೇ ಬೇಕಾಗುವದು. ಸ್ವಾತಂತ್ರ್ಯವು ಎಷ್ಟೇ ಜನ್ಮಸಿದ್ಧವಾದ ಹಕ್ಕು ಇರಲಿ ಅದನ್ನು ದೊರಕಿಸುವವರಲ್ಲಿ ಒಕ್ಕಟ್ಟು ಬೇಕು. ಒಕ್ಕಟ್ಟಿನ ವೀರ್ಯದಿಂದಲೇ ಜನ್ಮಸಿದ್ಧ ಸ್ವಾತಂತ್ರ್ಯವನ್ನು ದೊರಕಿಸಲು ಬರುವದು. ಅದಕ್ಕೆ ಶಸ್ತ್ರವೀರ್ಯವು ಅಷ್ಟೇನು ಬೇಡ. ಆದರೆ ಈ ಒಕ್ಕಟ್ಟು ಸಮಾನತ್ವವನ್ನು ಒಪ್ಪಿಕೊಳ್ಳದೇ ಉಂಟಾಗದು. ಜಾತಿ ಮತ, ಪಂಥ, ಬಣ್ಣಗಳ ಭೇದವು ಸಾರ್ವಜನಿಕ ಹಕ್ಕಿನಲ್ಲಿ ಪಂಕ್ತಿಪ್ರಪಂಚವನ್ನು ಮಾಡದಂತೆ ಯೋಜಿಸುವದೇ ಸಮಾನತ್ವದ ತಳಹದಿ. ರಾಜಕೀಯ ರಣಾಂಗಣದಲ್ಲಿ ನ್ಯಾಯಾನ್ಯಾಯದ ವಿಚಾರವಿದ್ದರೆ ಪರಪ್ರಾಂತ್ಯವನ್ನು ಪಾದಾಕ್ರಾಂತ ಮಾಡುವದು ಸಂಭವಿಸುತ್ತಿರಲಿಲ್ಲ. ಮತಗಳ, ರಾಜ್ಯದಲ್ಲಿ ನ್ಯಾಯಾನ್ಯಾಯದ ವಿಚಾರವಿದ್ದರೆ ಅವನು ಮೇಲು ಇವನು ಕೀಳು ಎಂಬ ವಿಷಮತೆ ಉಂಟಾಗುತ್ತಿರಲಿಲ್ಲ. ದೇವರೇ ಎಲ್ಲರ ತಂದೆ; ಭೂಮಿಯೇ ಎಲ್ಲರ ತಾಯಿ, ಪ್ರಪಂಚವೇ ಒಂದು ಕುಟುಂಬ; ಮಾನವರೆಲ್ಲರೂ ಸೋದರರು; ದಯೆಯೇ ಧರ್ಮದ ಮೂಲ; ಪ್ರೇಮವೇ ಎಲ್ಲರನ್ನು ಕೂಡಿಸುವ ಶಕ್ತಿ ಎಂಬಿವೇ ಮೊದಲಾದ ಭಾವನೆವಿಚಾರಗಳುಳ್ಳ ಧರ್ಮಬುದ್ಧಿಯಿಂದ ರಾಜಕಾರಣ, ಧರ್ಮಕಾರಣ, ಸಮಾಜಕಾರಣಗಳಲ್ಲಿ ಕ್ರಾಂತಿಯುಂಟಾಗುತ್ತಿರುವದು. ಬ್ರಾಹ್ಮಣೇತರ ಚಳವಳಿಯೂ, ಅಸ್ಪೃಶ್ಯರ ಚಳವಳಿಯೂ, ಕೂಲಿಕಾರರ ಚಳವಳಿಯೂ, ಸ್ತ್ರೀಯರ ಚಳವಳಿಯೂ, ಪರತಂತ್ರ ರಾಷ್ಟ್ರಗಳ ಚಳವಳಿಯೂ— ಉದಯವಾಗಲಿರುವ ಆ ಧರ್ಮದ ಪೂರ್ವ ಚಿನ್ಹಗಳು. ಬಂಧುಭಾವವಿರದೆ ಸಮಾನತೆಯುಂಟಾಗದು, ಸಮಾನತೆ ಇರದೆ ಸ್ವಾತಂತ್ರ್ಯವು ದೊರೆಯದು. ರಾಜಕಾರಣದಲ್ಲಿಯೂ ಪರದೇಶಗಳಲ್ಲಿಯೂ ಯಾವ ತಾರತಮ್ಯವೂ ವರ್ಣಭೇದ ಜನಿತದ್ವೇಷವೂ ನಮಗೆ ಬೇಡಾಗಿದೆಯೊ ಅದೇ ಬಗೆಯ ತಾರತಮ್ಯವೂ ವರ್ಣಭೇದ ಜನಿತದ್ವೇಷವೂ ಸಮಾಜದಲ್ಲಿಯೂ ಭಾರತಭೂಮಿಯಲ್ಲಿಯೂ ಎಷ್ಟೋ ಜನರಿಗೆ ಬೇಕಾಗಿದೆ. 'ತನ್ನಂತೆ ಪರರ ಬಗೆ' ಎಂಬದು ಅಲ್ಲಿ ಬೇಕು ಇಲ್ಲಿ ಬೇಡ ಹೀಗೆನ್ನಲು ಬರದು. ಅದು ಎಲ್ಲ ಕಡೆಗೂ ಬೇಕು. ಈ ಬುದ್ಧಿಯಿಂದ ನಡೆದರೆ ನಮ್ಮಲ್ಲಿ ಒಡಕು ಬೆಳೆಯಲಾರದು.

---

## ಬೆಂಕಿಯ ಕೂಡ ಚೆಲ್ಲಾಟ

ನಮ್ಮನ್ನು ತಮ್ಮ ಕೈಯಲ್ಲಿಯೆ ನಿರಂತರವಾಗಿ ಉಳಿಯುವಂತೆ ಮಾಡಲು ಸರಕಾರವು ಹುಡುಕಿದ ಹಂಚಿಕೆಗಳಲ್ಲಿ ಒಂದನೆಯದು ನಮ್ಮ ನಿಃಶಸ್ತ್ರಸ್ಥಿತಿ. ಅದರ ಮೂಲಕ ನಾವು ಹೇಡಿಗಳಾಗಿದ್ದೇವೆ. ಹೆದರಿದವರಮೇಲೆ ಕಪ್ಪೆ ಒಗೆದಂತೆ ತಾವು ಹಿಂದುಸ್ಥಾನವನ್ನು ಬಿಟ್ಟುಹೋದರೆ ಇಲ್ಲಿ ರಕ್ತದ ಕಾಲುವೆಗಳು ಹರಿಯುವವು ಎಂದು ಮೇಲಿಂದಮೇಲೆ ಅಂಜಿಸುವರು. ಅವರ ಎರಡನೆಯ ಹಂಚಿಕೆಯೆಂದರೆ ನಮ್ಮಲ್ಲಿಯ ಭಿನ್ನಭಾಷೆ, ಭಿನ್ನ ಪ್ರಾಂತ, ಭಿನ್ನ ಜಾತಿ, ಭಿನ್ನ ಪಂಥ, ಭಿನ್ನ ಮತಗಳ ಕುಂಟುನೆವ ಮುಂದೆಮಾಡಿ ನಿಮ್ಮನ್ನು ನೀವು ಹೇಗೆ ಆಳಿಕೊಳ್ಳುವಿರಿ, ನಿಮ್ಮಲ್ಲಿ ಒಕ್ಕಟ್ಟಿಲ್ಲ, ಎಂದು ನಮಗೇ ಬುದ್ಧಿ ಕಲಿಸಲು ಬರುವದು. ಅವರ ಮೂರನೆಯ ಹಂಚಿಕೆಯೆಂದರೆ ಈ ಭಿನ್ನ ಭಿನ್ನತೆಯ ಛಿದ್ರದೊಳಗಿಂದ ತಮ್ಮ ಭೇದನೀತಿಯನ್ನು ಹಾಯಿಸಿ ನಮ್ಮನಮ್ಮೊಳಗೆ ಬಡಿದಾಟ ಹಚ್ಚುವದು ಮತ್ತು ಬಡಿದಾಟಗಳನ್ನು ಪ್ರೋತ್ಸಾಹಿಸುವದು. ಈಗ ಮಹಾತ್ಮರ ಸತ್ಯಾಗ್ರಹ ಯುದ್ಧವು ಝುಂಝಾವಾತದಂತೆ ಹಿಂಸಾಪ್ರತಿಷ್ಠಿತ ಸಾಮ್ರಾಜ್ಯ ವೃಕ್ಷದ ಬೇರು ಬೇರುಗಳನ್ನು ಸಡಿಲುಗೊಳಿಸುತ್ತಿರುವಾಗ ಉತ್ತರ ಹಿಂದುಸ್ಥಾನದಲ್ಲಿ ಮಹಮ್ಮದೀಯರನ್ನು, ಮಧ್ಯ ಹಿಂದುಸ್ಥಾನದಲ್ಲಿ ಅಸ್ಪೃಶ್ಯರನ್ನು, ದಕ್ಷಿಣದಲ್ಲಿ ಬ್ರಾಹ್ಮಣೇತರರನ್ನು ದೇಶದ್ರೋಹಬಂಧುದ್ರೋಹಗಳಿಗಾಗಿ ಸಜ್ಜುಗೊಳಿಸುತ್ತಿರುವರು. ದೇಶಭಕ್ತರೂ ಬಂಧುಭಾವವುಳ್ಳವರೂ ಆದ ಮಹಮ್ಮದೀಯರೂ ಅಸ್ಪೃಶ್ಯರೂ, ಬ್ರಾಹ್ಮಣೇತರರೂ ತಮ್ಮ ಈ ಹಾದಿ ತಪ್ಪಿದ ಬಾಂಧವರನ್ನು ಹಾದಿಗೆ ತರಲು ಸಿದ್ಧರಾಗುತ್ತಿದ್ದಾರೆ. ಕೆಲವು ದಿವಸಗಳ ಹಿಂದೆ ಸ್ವಾತಂತ್ರ್ಯದ ಶಬ್ದವನ್ನು ಬಡಬಡಿಸಿದ ಅಲ್ಲೀ ಬಂಧುಗಳು ಈಗ ದ್ರೋಹಕ್ಕೆ ನೆರವಾಗಿದ್ದರೆ ಮೊದಲಿನಿಂದಲೆ ದೇಶಭಕ್ತಿಯ ನಿಶ್ಚಳ ಕಲ್ಪನೆಯುಳ್ಳ ಡಾ. ಕಿಚಲು, ಅಬುಲಕಲಮ ಅಸದ ಮೊದಲಾದವರು ಹಿಂದುಸ್ಥಾನದಲ್ಲೆಲ್ಲ ಅಡ್ಡಾಡಿ ಈ ಬಂಧುಗಳೇ ಮೊದಲಾದವರು ಬಿತ್ತಬಹುದಾದ ಭೇದದ ಬೀಜಗಳನ್ನು ನಾಶಗೊಳಿಸತಕ್ಕವರಿದ್ದಾರೆ. ಅಸ್ಪೃಶ್ಯರ ಪ್ರಶ್ನೆಗೆ ಯಾರಿಂದಲಾದರೂ ಮಹತ್ತ್ವವು ಬಂದಿದ್ದರೆ ಅದು ಮಹಾತ್ಮರಿಂದ; ಅಂಥವರನ್ನೆ ಇದುರಾಗಿ ವಿರೋಧಿಸಲು ಮಹಾರಾಷ್ಟ್ರದೊಳಗಿನ ಅಸ್ಪೃಶ್ಯ ಬಂಧುಗಳು ಟೊಂಕಕಟ್ಟುತ್ತಿರುವರಂತೆ. ಅಸ್ಪೃಶ್ಯ ಪಕ್ಷಪಾತಿಗಳಾದ ಶ್ರೀ ವಿಠ್ಠಲ ರಾಮಜೀ ಶಿಂದೇ ಮೊದಲಾದವರು ಮಹಾತ್ಮರ ಚಳವಳದ ಮಹತ್ತ್ವವನ್ನು ಅರಿತವರಾಗಿರುವದರಿಂದ ಇಂದಿಲ್ಲ ನಾಳೆ

ಸ್ಪೃಶ್ಯಾಸ್ಪೃಶ್ಯರಲ್ಲಿ ಒಕ್ಕಟ್ಟೇ ಬೆಳೆದೀತೆ ಹೊರ್ತು ಭೇದದ ಬೀಜವು ನಾಟಲಾರದು. ಕರ್ನಾಟಕದಲ್ಲಿ ಈ ಸಲ ಬ್ರಾಹ್ಮಣೇತರರೇ ಹೆಚ್ಚು ಮುಂದೆ ಬರುತ್ತಿರುವರು. ಆದಕಾರಣ ಹಳೆಯ ಮುಖಂಡರ ಬಾಯಿಕೈಗಳನ್ನು ಕಟ್ಟಲಿಕ್ಕೆ ಹೊಸ ಹರೆಯದ ಹುಡುಗರೇ ಸಮರ್ಥರಿದ್ದಾರೆ. ಅಂತೂ ಸರಕಾರವು ನಮ್ಮ ನಮ್ಮಲ್ಲಿ ಭೇದದ ಬೇಗೆಯನ್ನು ಹಬ್ಬಿಸಲು ಹವಣಿಸುತ್ತಿದೆ. ಬೆಂಕಿಯ ಕೂಡ ಚೆಲ್ಲಾಟವು ತರವಲ್ಲ. ನಮ್ಮ ಒಕ್ಕಟ್ಟು ಅವರ ಸಾಮ್ರಾಜ್ಯಕ್ಕೆ ಮುಳವು ಎಂಬದು ಅವರಿಗೆ ಗೊತ್ತಿಲ್ಲ ವೆಂತಲ್ಲ. ಆದರೆ ಕಳ್ಳರು ಹೇಗೆ ಕಳವು ಮಾಡುವಾಗ್ಗೆ ಎಲ್ಲರಿಗೆ ಎಚ್ಚರವಿರುವದಿಲ್ಲೆಂದು ಗ್ರಹಿಸಿ ನಡೆಯುವರೊ ಹಾಗೆ ಇವರಾದರು ನಮ್ಮಲ್ಲಿ ಒಕ್ಕಟ್ಟು ಸಂಭವಿಸುವದು ದುಃಸಾಧ್ಯವೆಂದು ಎಣಿಸಿದ್ದಾರೆ. ಗಾಂಧಿಯ ಯುಗದಲ್ಲಿ ಅಸಂಭವವೂ ಸಂಭವಿಸುವದೆಂತೆ; ದುಃಸಾಧ್ಯವು ಸಾಧ್ಯವಾಗಲಾರದೇ ?

---

## ೬ನೆಯ ಎಪ್ರೀಲ

ಈ ದಿನವು ಭಾರತದ ಹೊಸ ಇತಿಹಾಸದಲ್ಲಿ ಅತ್ಯಂತ ಮಹತ್ವದ್ದೆಂದು ಎಣಿಸಲ್ಪಡದೆ ಎಂದೂ ಇರಲಾರದು. ರೌಲೆಟ ಆಕ್ಟು ಜಾಲಿಯನವಾಲಾಬಾಗಗಳ ಸಂಬಂಧದಿಂದ ಈ ದಿನವು ಈ ವರೆಗೆ ಸಂಸ್ಮರಣೀಯವೆಂದೆನಿಸಿದ್ದರೂ ಇನ್ನು ಮುಂದೆ ಒಂದು ಬೇರೆ ಮಹತ್ವದ ಕಾರಣಕ್ಕಾಗಿಯೆ ಈ ದಿನವು ಚಿರಸ್ಮರಣೀಯವಾಗಿದೆ. ಬ್ರಿಟಿಶರ "ಉಕ್ಕಿನ ಪಂಜರ" ( Steel Frame )ದಲ್ಲಿ ಸಿಕ್ಕಿಬಿದ್ದ ಹಿಂದುಸ್ಥಾನಕ್ಕೆ ಸ್ವತಂತ್ರವಾಗಲು ಆದಾವ ದಾರಿಯೆ ತೋಚದೆ ನಿಶ್ಚಿತವಾದ ಒಂದು ದಿಕ್ಕಿನಲ್ಲಿ ಯಾವ ಪ್ರಯತ್ನಗಳೂ ನಡೆದಿರಲಿಲ್ಲ. 'ಸತ್ತರವನ್ನೆರಚದೆ ಸ್ವಾತಂತ್ರ್ಯವೆಲ್ಲಿ ! " ಎಂದು ಒಂದು ತಂಡದವರು ಕದ್ದು ಮುಚ್ಚಿ ಗುಣಗುತ್ತಿದ್ದರು; ಇತಿಹಾಸವು ಈ ಪಂಥದವರ ನೀತಿಗೇ ಬೆಂಬಲಗೊಡುತ್ತಿದ್ದರೂ ಹಲವರಿಗೆ ಈ ಮಾತನ್ನು ಬಿಚ್ಚಿಬಿಚ್ಚಿ ಹೇಳುವ ಧೈರ್ಯವಿದ್ದಿಲ್ಲ; ಧೈರ್ಯವಿದ್ದ ಕೆಲರಿಗೆ ಇದು ಹಿಂದುಸ್ಥಾನದಂತಹ ವಿಪರೀತ ಪರಿಸ್ಥಿತಿಯಲ್ಲಿರುವ ದೇಶಕ್ಕೆ ಅಶಕ್ಯವಾದ ಹಾದಿ ಎಂದೆನಿಸುತ್ತಿತ್ತು. ಶಸ್ತ್ರಾಸ್ತ್ರಗಳನ್ನು ಹೊರಗಿನಿಂದ ತರಲಿಕ್ಕೆ ಬರುವಂತಿಲ್ಲ; ಇಲ್ಲಿಯೆ ಮಾಡುವುದು ಸಾಧ್ಯವಿಲ್ಲ; ಹೀಗಾಗಿ ಈ ದಾರಿ ಅಡ್ಡದಾರಿಯೆಂದು ಅವ್ಯವಹಾರ್ಯವಾಯಿತು. ಸುಸ್ಪಷ್ಟವಾಗಿ ಬೇರೆದಾರಿಯಂತೂ ತೋರದಾಗಿತ್ತು. ಪ್ರೊ. ಸೀಲಿ ಎಂಬ ಇಂಗ್ಲಿಷ ಗೃಹಸ್ಥನೇನೋ ತನ್ನ 'ಬ್ರಿಟಿಶ ಸಾಮ್ರಾಜ್ಯ ವಿಸ್ತಾರ'ವೆಂಬ ಗ್ರಂಥದಲ್ಲಿ ಭಾರತೀಯರು ಅಸಹಕಾರ ಮಾಡಿದರೆ ಇಸ್ಪೇಟಿನ ಅಟ್ಟದ ಮನೆಯಂತೆ ಬ್ರಿಟಿಶರ ರಾಜ್ಯವು ದೊಪ್ಪನೆ ನೆಲಕ್ಕುರುಳುವುದು' ಎಂದು ಬರೆದಿಟ್ಟದ್ದನು. ಅದನ್ನು ಓದಿ ಸೈ ಎಂದವರೂ ಎಷ್ಟೋ ಜನ. ಆದರೆ ಆ ಅಸಹಕಾರ ತತ್ವದ ಸಂಪೂರ್ಣ ದರ್ಶನವು ಮಾತ್ರ ಮ. ಗಾಂಧಿಯವರ ಹೊರ್ತು ಇನ್ನಾರಿಗೂ ಆಗಿರಲಿಲ್ಲ. ಮ. ಗಾಂಧಿಯವರು ಮಾತ್ರ ದ.ಆಫ್ರಿಕೆಯಲ್ಲಿ ಈ ಅಸ್ತ್ರದ ಪ್ರಯೋಗಗಳನ್ನು ಮಾಡಿ ಅನುಭವ ಪಡೆದು ಭಾರತ ಸ್ವಾತಂತ್ರ್ಯಕ್ಕಾಗಿ ಅಮೋಘವಾದ ಈ ಅಸ್ತ್ರಪ್ರಯೋಗವನ್ನೇ ಮಾಡಬೇಕೆಂದು ಕಳೆದ ೧೦–೧೫ ವರುಷಗಳಿಂದ ಯೋಚಿಸುತ್ತಿದ್ದರು. ಆ ಸುಸಮಯವು ಈಗ ಒದಗಿತು. ೬ನೆಯ ಎಪ್ರೀಲ ಇದು ಜಗತ್ತಿನ ಇತಿಹಾಸದಲ್ಲಿಯೆ ಚಿರಸ್ಮರಣೀಯ ದಿನವು. ನಿಶ್ಯಸ್ತ್ರರಾದ ಜನರು ಸಶಸ್ತ್ರರಾದ ವಿರೋಧಿಗಳೊಡನೆ ಕಾದಿ ಅವರನ್ನು ಹಿಮ್ಮೆಟ್ಟಿಸಬಹುದೆಂದು ಆತ್ಮವಿಶ್ವಾಸನ್ನುಂಟು ಮಾಡಿದ ದಿನವು. ಜಗತ್ತಿನ ಇತಿಹಾಸದಲ್ಲಿಯೆ ಇಷ್ಟು ದೊಡ್ಡ ಪ್ರಮಾಣದ ಮೇಲೆ ಜನಸಾಮಾನ್ಯರೆಲ್ಲ ಸತ್ಯಾಗ್ರಹಮಾಡಿದ ದೃಷ್ಟಾಂತಗಳು ಇಲ್ಲವೇ ಇಲ್ಲ- ಇಂತು ಎಪ್ರೀಲ ೬ನೆಯ ದಿನವು ಭಾರತ ಸ್ವಾತಂತ್ರ್ಯ ಯುದ್ಧದ ಆರಂಭದಿವಸವೆಂದೂ ಶಸ್ತ್ರಾಸ್ತ್ರಗಳಿಲ್ಲದೆ ವಿರೋಧಿಗಳನ್ನು ಹಣ್ಣಿಗೆ ತರುವ ಅಪೂರ್ವ ಉಪಾಯವನ್ನು ಜಗತ್ತಿಗೆ ತೋರಿಸಿಕೊಟ್ಟದಿವಸವೆಂದೂ ಸಂಸ್ಮರಣೀಯವಾಗಿದೆ.

---

## ಇದರಲ್ಲೊಂದೂ ಶಕ್ಯವಿಲ್ಲವೆ?

೬ನೆಯ ತಾ. ನಿಂದ ರಾಷ್ಟ್ರೀಯ ದಿನಕ್ಕೆ ಆರಂಭವಾಯಿತು. ಈ ಕಾಲದಲ್ಲಿ ಪ್ರತಿಯೊಬ್ಬ ಭಾರತೀಯನೂ ಕೆಳಗೆ ಕಾಣಿಸಿದ ಕಾರ್ಯಗಳಲ್ಲಿ ಒಂದಿಲ್ಲೊಂದನ್ನಾದರೂ ಕೈಕೊಂಡಲ್ಲಿ ಸ್ವಾತಂತ್ರ್ಯವು ನಮ್ಮಿಂದ ದೂರವಿಲ್ಲ. ಕೆಳಗೆ ಹೇಳಿದುವುಗಳಲ್ಲಿ ಒಂದಾದರೂ ಮಾಡಲಿಕ್ಕೆ ಸಾಧ್ಯವಿಲ್ಲವೆಂಬುವಂತಿಲ್ಲ. ಆದುದರಿಂದ ಪ್ರತಿಯೊಬ್ಬನೂ ತನಗೆ ತೂಗುವ ಸೀಗುವ ಒಂದೊಂದು ಕೆಲಸವನ್ನು ಆಯಸ್ಸು ಅದನ್ನು ನೆರವೇರಿಸಬೇಕೆಂದು ಮ. ಗಾಂಧಿಯವರು ಎಲ್ಲರಿಗೂ ಬಿನ್ನವಿಸಿದ್ದಾರೆ, ತಾಯ್ನಾಡ ಏಳ್ಗೆಯನ್ನು ಬಯಸುವ ಪ್ರತಿಯೊಬ್ಬ ಕನ್ನಡಿಗನೂ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ತನಗೆ ಶಕ್ಯವಿರುವ ಎಲ್ಲ ಬಗೆಯಿಂದಲೂ ಈ ರಾಷ್ಟ್ರಕಾರ್ಯದಲ್ಲಿ ಸಹಾಯಮಾಡದೆ ಎಂದೂ ಇರಲಾಗದು.

### ಕೈಕೊಳ್ಳತಕ್ಕ ಕೆಲಸಗಳು

" ಎಪ್ರೀಲ ೬ನೆಯ ತಾ. ನಿಂದ ಆರಿಗೆ ಶಕ್ಯವಿದೆ ಮತ್ತು ಸಿದ್ಧತೆ ಇದೆಯೊ ಅವರು ಉಪ್ಪಿನ ಸತ್ಯಾಗ್ರಹವನ್ನು ಆರಂಭಿಸುವರೆಂದು ನಾನು ಅಪೇಕ್ಷಿಸುತ್ತೇನೆ.

ಸತ್ಯಾಗ್ರಹದಲ್ಲಿ ಎಲ್ಲ ಬಗೆಯಿಂದಲೂ ಸಂಪೂರ್ಣಶಾಂತಿ–ಅಹಿಂಸಾವ್ರತವನ್ನು ಪಾಲಿಸುವುದು ಆದ್ಯಕರ್ತವ್ಯ. ಸಾರ್ವತ್ರಿಕ ಸತ್ಯಾಗ್ರಹವೆಂದರೆ ಜನಸಾಮಾನ್ಯರು ಸಹಜ ಸ್ವಾಭಾವಿಕ ಸ್ಫೂರ್ತಿಯಿಂದ ಕೈಕೊಂಡ ಕಾರ್ಯವು. ಮುಂದಾಳುಗಳೆಂಬುವವರು ಜನಸಾಮಾನ್ಯರಿಗೆ ಸತ್ಯಾಗ್ರಹದ ದಾರಿಯನ್ನಷ್ಟು ಆರಂಭಕ್ಕೆ ತೋರಿಸಿಕೊಡಬೇಕು, ಮುಂದೆ ಜನರು ತಮ್ಮಷ್ಟಕ್ಕೆ ತಾವೇ ಸತ್ಯಾಗ್ರಹದ ಚಳವಳಿಯ ನಿಯಮನವನ್ನು ಮಾಡಿಕೊಳ್ಳುವರು.

ರಾಷ್ಟ್ರೀಯ ಸಭೆಯ ಸ್ವಯಂಸೇವಕರು ಈ ಚಳವಳಿಯನ್ನು ನಿರೀಕ್ಷಿಸುತ್ತಿರಬೇಕು, ಅವಶ್ಯಕವೆನಿಸಿದಲ್ಲೆಲ್ಲ ನೆರವಾಗಬೇಕು. ಈ ಸ್ವಯಂಸೇವಕರು ಯಾವಾಗಲೂ ಈ ಸಮರದ ಅಗ್ರಭಾಗದಲ್ಲಿರತಕ್ಕದ್ದು.

ಸ್ವಯಂಸೇವಕರು ಜಾತಿಬಣಗಳ ಜಗಳಗಳಲ್ಲಿ ಯಾವ ಕಡೆಗೂ ಸೇರಲಾಗದು.

ಹಿಂಸೆ, ಅತ್ಯಾಚಾರಗಳು ತಲೆಯೆತ್ತಿದಲ್ಲಿ ಅದನ್ನು ಶಾಂತ ಮಾಡುವುದರಲ್ಲಿ ತಮ್ಮ ಆತ್ಮಾಹುತಿಯನ್ನು ಕೊಡಲಿಕ್ಕೂ ಸ್ವಯಂಸೇವಕರು ಸಿದ್ಧರಿರಬೇಕು.

ಸ್ವಯಂಸೇವಕರ ಬೇರೆ ಬೇರೆ ವಿಭಾಗ, ತಂಡಗಳಲ್ಲಿ ಸಂಪೂರ್ಣ ಶಿಸ್ತು ಮತ್ತು ಅಂತಃಕರಣಪೂರ್ವಕ ಸಹಕಾರಗಳು ನಮ್ಮ ಯಶಸ್ಸಿಗೆ ಅತ್ಯಂತ ಅವಶ್ಯಕ. ಜನಸಾಮಾನ್ಯವು ನಿಜವಾಗಿಯೂ ಎಚ್ಚತ್ತಿರುವುದಾದರೆ, ಸತ್ಯಾಗ್ರಹದಲ್ಲಿ ಸೇರಿದವರನ್ನು ಬಿಟ್ಟು ಉಳಿದವರು ಖಾದಿ ಉತ್ಪಾದನ ಮತ್ತು ಸಂಪ್ರಸಾರಣ, ಮಾದಕ ಪದಾರ್ಥಗಳನ್ನು ಸೇವಿಸಬಾರದೆಂದು ಪ್ರಚೋದನ, ವಿದೇಶೀಯ ವಸ್ತ್ರಬಹಿಷ್ಕರಣ, ಗ್ರಾಮಸಂಘಟನ, ಸತ್ಯಾಗ್ರಹಿಗಳ ಕುಟುಂಬಗಳಿಗೆ ಹಲವು ಬಗೆಗಳಿಂದ ಸಹಾಯಮಾಡುವುದು ಇವೇ ಮೊದಲಾದ ರಾಷ್ಟ್ರೀಯ ಕಾರ್ಯಗಳನ್ನು ತಾವು ಸ್ವತಃ ಶಕ್ಯವಿದ್ದಷ್ಟು ಮಾಡುವುದಲ್ಲದೆ ಉಳಿದವರಿಗೂ ಇದರಲ್ಲಿ ಭಾಗತಕ್ಕೊಳ್ಳಲು ಪ್ರವೃತ್ತರನ್ನಾಗಿ ಮಾಡುವುದು ಕರ್ತವ್ಯವಾಗಿದೆ”

ಮೋ. ಕ. ಗಾಂಧಿ

## ದಬ್ಬಾಳಿಕೆ

ನಮ್ಮ ದೇಶವನ್ನು ಸುಲಿಯುತ್ತಿರುವ ಈ ಅರಸಾಳುಗಳ ವಿರುದ್ಧವಾಗಿ ನಾವು ಇನ್ನು ಮೇಲೆ ‘ ಒಳಸಂಚು ಅಲ್ಲ ’ ಹೊರಸಂಚೇ ಮಾಡಲಿಕ್ಕೆ ಬೇಕೆಂದು ಪಂ. ಜವಾಹಿರಲಾಲ ನೆಹರು ಅವರು ಲಾಹೋರ ಕಾಂಗ್ರೆಸ್ಸಿನ ಅಧ್ಯಕ್ಷಪದದಿಂದ ಸಾರಿದರು. ಮ. ಗಾಂಧಿಯವರು ‘ ರಾಜದ್ರೋಹವು ದೇಶಭಕ್ತಿ; ದೇಶಭಕ್ತಿಯು ನನ್ನ ಧರ್ಮ’ವೆಂದು ಪ್ರಕಟೀಕರಿಸಿದಂದಿನಿಂದಲೂ ಹಿಂದೂ ದೇಶದವರಿಂದ ನಡಿಸಲ್ಪಡುವ ಪ್ರತಿಯೊಂದು ಭಾಷೆಯೊಳಗಿನ ಪ್ರತಿಯೊಂದು ಪ್ರಾಂತದ ಪತ್ರಿಕೆಗಳೆಲ್ಲವು ಶ್ರುತಿಯಲ್ಲಿಯೇ ಹಾಡುತ್ತಿದ್ದುದು ಕಂಡು ಬರುತ್ತಿದೆ. ಉಪನ್ಯಾಸಕರು ಅದೇ ರಾಗವನ್ನೇ ಹೇಳುತ್ತಿದ್ದುದು ಕೇಳಬರುತ್ತಿದೆ. ಆದರೂ ಸರಕಾರಕ್ಕೆ ಮಾತ್ರ ಎಲ್ಲರನ್ನೂ ಒಮ್ಮೆಲೆ ಹಿಡಿವ ಧೈರ್ಯವಾಗಲೊಲ್ಲದು. ಅಥವಾ ಹಾಗೆ ಎಲ್ಲರನ್ನೂ ಒಮ್ಮೆಲೆ ಹಿಡಿದು ಹಾಕುವುದು ಜಾಣತನವೆನಿಸಲೊಲ್ಲದು. ತನ್ನ ವಿರುದ್ಧ ಹತ್ತುಕಡೆಯಿಂದ ಗಲಾಟೆಯೆದ್ದರೆ ಧೂರ್ತನು ಎಲ್ಲರ ಮೈಮೇಲೆ ಒಮ್ಮೆಲೆ ಏರಿಹೋಗುವದಿಲ್ಲ. ಆದರಲ್ಲಿ ಸ್ಥಳಕಾಲವನ್ನು ನೋಡಿ ಒಬ್ಬಿಬ್ಬರಿಗೆ ಒಳಿತಾಗಿ ಇದುರಿಸಿ ನೋಡುವುದುಂಟು. ಅಧಿಕಾರಿವರ್ಗವು ಹಿಡಿದ ಹಾದಿಯೂ ಈಗ ಇದೇ ತರಹ. ದೇಶದಲ್ಲಿ ಎದ್ದ ಕೂಗಾಟವು ಕೇಳಿಯೂ ಕೇಳಿಸದಂತೆ ಶಾಂತವಾಗಿರುವುದರಲ್ಲಿಯೆ ಹೊಂಚು ಇದೆ. ಈ ಕೆಲರಿಗೆ ಶಿಕ್ಷೆ ದಂಡವಿಧಿಸಿದರೆ ಉಳಿದವರ ಸದ್ದು ಅಡಗುವುದೊ ಎಂದು ಸರಕಾರವು ಈಗ ಈ ಪ್ರಯೋಗವನ್ನು ನಡೆಸಿದೆ. ಇದಕ್ಕಾಗಿಯೆ ಬ್ಯಾರಿಸ್ಟರ ಸೇನಗುಪ್ತರಿಗೆ ಶಿಕ್ಷಿಸುದಾಯ್ತು. ಸರದಾರ ವಲ್ಲಭಭಾಯಿ ಪಟೇಲರಿಗೆ ಸೆರೆಮನೆ



ಕಲ್ಪಿಸಿದ್ದಾಯಿತು. ಶ್ರೀ ನರಿಮನ್ನರಿಗೂ ನಮ್ಮ ಗಂಗಾಧರರಾಯರಿಗೂ ಶಿಕ್ಷೆಯಾಯ್ತು. ಜಮನಲಾಲ ಬಜಾಜರಿಗಂತೂ

. ವರ್ಷದ ಕಠಿಣ ಶಿಕ್ಷೆಯೂ ೩೦೦ ರೂ. ದಂಡವೂ ಆಗಿದೆ. ಆದರೆ ಸ್ವದೇಶಾಭಿಮಾನ, ಸ್ವಾತಂತ್ರ್ಯ ಪ್ರೀತಿಗಳು ಇಂತಹ ಹೆದರಿಕೆ ಬೆದರಿಕೆಗಳಿಂದ ಎಂದೂ ಕಡಿಮೆಯಾಗಲಾರವು.



ಕರ್ನಾಟಕದಲ್ಲಿ ಮಾನ್ಯರಾದ **ಗಂಗಾಧರರಾಯರೊಡನೆ** ಬೆಳಗಾಂವಿಯ ಪ್ರಸಿದ್ಧ ವಕೀಲರಾದ ಜೋಶಿ ನಾರಾಯಣ ರಾಯರೂ ಉಪ್ಪಿನ ಕಾಯದೆಭಂಗಕ್ಕಾಗಿ ಶಿಕ್ಷೆಯನ್ನು ಹೊಂದಿದರು. ನಮ್ಮ ಕನ್ನಡನಾಡಿನ ಪ್ರಥಮ ಬಲಿದಾನದ ಮಾನವು ದೊರೆತದ್ದಕ್ಕಾಗಿ ಈ ಇಬ್ಬರೂ ಹಿರಿಯರನ್ನು ವಂದಿಸುತ್ತೇವೆ. ಕರ್ನಾಟಕದಲ್ಲಿ ದಬ್ಬಾಳಿಕೆಯು ಪ್ರಾರಂಭವಾದದ್ದು ಸಂತೋಷಕರವೇ. ಶ್ರೀ. ಮಂಗಳವೇಢೆ, ಬುರ್ಲಿ, ಪರಮಣ್ಣಾ ಹೊಸಮನಿ ಹೊದ್ಕೆ ನಾಯಿಕ ಮೊದಲಾದ ಕನ್ನಡತರುಣರು ಸತ್ಯಾಗ್ರಹದಲ್ಲಿ ಧುಮಿಕ್ಕಿರುವದು ಸರಕಾರಕ್ಕೆ ಯೋಗ್ಯ ಉತ್ತರವಾಗಿದೆ. ಶ್ರೀ. ಕಾರ್ನಾಡು, ದಿವಾಕರ, ಹರ್ಡೇಕರ, ಮೊದಲಾದ ನುರಿತ ಕೆಲಸಗಾರರಂತೂ ದಾರಿತೋರಿಸಲಿಕ್ಕೆ ಇದ್ದೇ ಇದ್ದಾರೆ. ಅಂಕೋಲೆಯ ಸಮುದ್ರಧಡದಲ್ಲಿ ಕರ್ನಾಟಕದ ರಣಕ್ಷೇತ್ರವು ಸಿದ್ಧವಾಗುತ್ತಿದೆ. ಕರ್ನಾಟಕವೂ ಈ ಧರ್ಮಯುದ್ಧದಲ್ಲಿ ಯೋಗ್ಯ ಭಾಗವನ್ನು ತೆಗೆದುಕೊಳ್ಳದೆ ಬಿಡಲಾರದೆಂದು ಸರಕಾರವು ನೆನಪಿನಲ್ಲಿಡಲಿ.

## ಮ. ಗಾಂಧಿಯವರನ್ನೇಕೆ ಹಿಡಿಯಲಿಲ್ಲ?

ದಳ್ಳುರಿಯನ್ನು ನಂದಿಸುವಾಗ ಮೂಲದಲ್ಲಿರುವ ಪ್ರಜ್ವಲಿಸುವ ಜ್ವಾಲೆಗಳ ಹತ್ತರಕ್ಕೇ ಹೋಗಿ ಅವನ್ನು ತಣ್ಣಗೆ ಮಾಡುವುದು ಅಸಾಧ್ಯವು. ಅಂತಹ ಸಮಯದಲ್ಲಿ ಸುತ್ತಮುತ್ತಲಿನ ಬೇಗೆಯನ್ನು ಇಲ್ಲದಂತೆ ಮಾಡಿದ ಬಳಿಕ ಜ್ವಾಲೆಯ ಉಗಮಕ್ಕೆ ಕೈಹಾಕುವುದು ಶಕ್ಯವಿರುತ್ತದೆ. ಮ. ಗಾಂಧಿಯವರನ್ನು ಹಿಡಿಯದೆ ಅವರ ಪ್ರಮುಖ ಸಹಾಯಕರನ್ನೇ ಕಾರಾಗಾರದಲ್ಲಿರಿಸುವುದರೊಳಗೆ ಸರಕಾರದ ಉದ್ದೇಶವು ಇದೇ ಇರಬೇಕೆಂದು ತೋರುತ್ತದೆ. ಮ. ಗಾಂಧಿಯವರನ್ನೇ ಮೊದಲು ಹಿಡಿದರೆ ಅವರ ಪ್ರಮುಖ ಸಹಕಾರಿಗಳು ದೇಶದ ಮೂಲೆಮೂಲೆಗೂ ಬೇಗೆಯನ್ನು ಒಯ್ಯದೆ ಸುಮ್ಮನಿರುವುದು ಶಕ್ಯವಿಲ್ಲ. ಕಾರಣ ಮೊದಲು ಬೇರೆ ಬೇರೆ ಪ್ರಾಂತದ ಪ್ರಮುಖರನ್ನು ಹಿಡಿದು ಸೆರೆಮನೆಗೆ ಕಳುಹಿದ ಬಳಿಕ ಮ. ಗಾಂಧಿಯವರ ಪಾಳಿಯು ಬರ



ಮಹಾತ್ಮರ ವಿಜಯಯಾತ್ರೆಯಲ್ಲಿದ್ದ
ಕನ್ನಡಿಗ ಬಿಟೆ ಶ್ರೀ ಮೈಲಾರ ಮಹಾದೇವಪ್ಪನು.

ತಕ್ಕದ್ದೆಂದು ತೋರುತ್ತಿದೆ. ಆದರೆ ನಿಜವಾಗಿಯೂ ಜನರಲ್ಲಿ ಮ. ಗಾಂಧಿಯವರು ನಮ್ಮ ಕಲ್ಯಾಣಕ್ಕಾಗಿಯೇ ತಮ್ಮ ದೇಹವನ್ನು ಸವೆಸುತ್ತಿರುವರೆಂಬ ಭಾವನೆಯು ಅಂಕುರಿಸಿದ್ದಾಗಿದ್ದರೆ ಮನುಷ್ಯತ್ವದ ಲಕ್ಷಣವಾದ ಕೃತಜ್ಞತಾ ಬುದ್ಧಿ— ಉಪಕಾರ ಸ್ಮರಿಸುವ ಗುಣವು ಜನರಲ್ಲಿ ಜಾಗೃತವಿದ್ದುದಾದರೆ ಸರಕಾರದವರು ಯಾವ ಯುಕ್ತಿಪ್ರಯುಕ್ತಿಗಳನ್ನು ಯೋಚಿಸಿದರೂ ಮ. ಗಾಂಧಿಯವರನ್ನು ಸೆರೆ ಹಿಡಿದು ಹಾಕುವುದು ಶಕ್ಯವಿಲ್ಲ.

---

## ಕಳೆದ ಆರು ತಿಂಗಳ ಜಯಕರ್ನಾಟಕ

ಪತ್ರಿಕೆಯು ಮಂಡಳದ ಕಡೆಗೆ ಬಂದು ೬ ತಿಂಗಳಾದವು. ಕಳೆದ ೬ ತಿಂಗಳಲ್ಲಿ ಜಯಕರ್ನಾಟಕದ ಮುಖಾಂತರ ಕನ್ನಡ ನಾಡಿನ ಸೇವೆ ಮಾಡಲು ಇಂಬು ದೊರೆತುದಕ್ಕೆ ಸಂತೋಷವಾಗುತ್ತಿದೆಯಾದರೂ ಈ ಸೇವೆಯು ಕೆಲಕಾರಣಗಳ ಮೂಲಕ ಸಾಕಷ್ಟು ತೃಪ್ತಿಕರವಾಗಿ ನಮ್ಮಿಂದ ಆಗಲಿಲ್ಲವೆಂಬ ಮಾತು ನೋವನ್ನುಂಟುಮಾಡುತ್ತಿದೆ. ಈ ವರುಷ ಜಯಕರ್ನಾಟಕದಲ್ಲಿ ಕೆಲವು ಹೊಸ ಏರ್ಪಾಡುಗಳನ್ನು ಮಾಡಿದ್ದು ವಾಚಕರ ಗಮನಕ್ಕೆ ಬಂದಿರಲಿಕ್ಕೆ ಸಾಕು. ಬಣ್ಣದ ಚಿತ್ರವನ್ನು ಹಾಕುವುದು ತುಂಬಾ ವೆಚ್ಚದ ಕೆಲಸ; ಒಂದು ಸಲಕ್ಕೆ ೬೫ ರೂ. ಗಳ ವರೆಗೂ ಬೇಕು. ಹೀಗಿದ್ದರೂ ವರುಷದಲ್ಲಿ ಒಂದೆರಡು ಚಿತ್ರಗಳನ್ನಾದರೂ ಕೊಡಬೇಕೆಂದಿದ್ದೇವೆ. ಪುಟಗಳ ಸಂಖ್ಯೆಯು ಹೆಚ್ಚಾಗಿದೆ. ಉಳಿದ ಚಿತ್ರಗಳ ಸಂಖ್ಯೆಯೂ ಕಡಿಮೆ ಇಲ್ಲ. ಇವೆಲ್ಲ ಖರ್ಚಿನ ವಿಷಯಗಳಾಗಿದ್ದರೂ ಚಂದಾಹಣವನ್ನು ಹೆಚ್ಚಿಸಿಲ್ಲ; ಹೆಚ್ಚಿಸುವ ಅಪೇಕ್ಷೆಯೂ ಇಲ್ಲ. ಹಳ್ಳಿಯ ಹಾಡುಗಳ ಅಮೌಲಿಕ ಸಾಹಿತ್ಯವು ದಿನದಿನಕ್ಕೆ ಮರೆತು ಹೋಗುತ್ತಲಿತ್ತು. ಸಾಹಿತ್ಯಸಮ್ಮೇಳನಗಳಲ್ಲಿ ಇದರ ಸಂಗ್ರಹ ಮಾಡುವ ಚರ್ಚೆಯು ನಡೆಯುತ್ತಲಿತ್ತು. ಆದರೂ ಅತ್ತಕಡೆಗೆ ಯಾರೂ ವಿಶೇಷ ಮನಸ್ಸುಹಾಕಿದ್ದಿಲ್ಲ, ಈ ವರುಷ ಆರಂಭದಿಂದ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುತ್ತಲಿದ್ದೇವೆ. ಕರ್ನಾಟಕದ ದೂರಿನ ಬೇರೆಬೇರೆ ಭಾಗಗಳ ಹಾಡುಗಳೂ ಬರುತ್ತಲಿವೆ. ಸುರತ, ರಂಗೂನಗಳಂತಹ ದೂರಿನ ಸ್ಥಳದಲ್ಲಿರುವ ಕನ್ನಡಿಗರಿಗೂ ಈ ಹಾಡುಗಳು ಬಹಳ ಮೆಚ್ಚಿಕೆಯಾದುವು. ನಮ್ಮ ನಾಡಿನ ಗುಣಿಗಳ ಪರಿಚಯವು ನಮಗೆ ಇಲ್ಲ. ಆದುದರಿಂದ ಅಂತಹ ಮಹನೀಯರುಗಳು ಮಾಡಿದ ಕೆಲಸವನ್ನು ಜನರ ಮುಂದಿಡುವ ಕೆಲಸಕ್ಕೂ ಕೈಯಿಕ್ಕಿದ್ದೇವೆ. ಕರ್ನಾಟಕ ಚಿತ್ರಕಾರರ ಚಿತ್ರಗಳನ್ನೇ ಮುಖ್ಯವಾಗಿ ದೊರಕಿಸಿ ನಮ್ಮ ವಾಚಕರಿಗೆ ಅರ್ಪಿಸಿದ್ದೇವೆ.

ಈ ತಿಂಗಳಿಂದ ಇಡೀ ಜಗತ್ತಿನಲ್ಲಿ ಬೇರೆ ಬೇರೆ ದೇಶಗಳಲ್ಲಿ ನಡೆದ ಮಹತ್ವದ ಚಳವಳಿಗಳನ್ನು ಒಂದೆಡೆಗೆ ಸಂಗ್ರಹಿಸಿ ಸ್ವಲ್ಪದರಲ್ಲಿಯೆ ಪ್ರಕಟಿಸುವ ಏರ್ಪಾಡು ಮಾಡಿದ್ದೇವೆ. ಪುಟಗಳನ್ನು ಹೆಚ್ಚಿಸಿದರೂ ನಮ್ಮ ಅಪೇಕ್ಷೆಯಂತೆ ಪ್ರಪಂಚಪರಿಚಯ ವಿಭಾಗವನ್ನು ಕಾಲಕಾಲಕ್ಕೆ ಕೊಡಲಿಕ್ಕಾಗಿಲ್ಲ; ಈ ಕೊರತೆಯನ್ನು ಬೇಗನೆ ಹೋಗಲಾಡಿಸುವೆವು. ಇದೇನೋ ನಮ್ಮ ಕೈಯೊಳಗಿನ ಮಾತು. ಆದರೆ ಇದಕ್ಕೆಲ್ಲ ಆರ್ಥಿಕ ಅನುಕೂಲತೆಯು ಚೆನ್ನಾಗಿ ಬೇಕಷ್ಟೆ; ನಮಗೆ ಮೊದಲಿಂತ ಸುಮಾರು ೧೦೦ ಚಂದಾದಾರರು ಹೆಚ್ಚಾಗಿದ್ದರೂ ಸಂಖ್ಯೆಯು ೯೦೦ ರ ಮನೆಯನ್ನು ಮೀರಲೆ ಇಲ್ಲವು. ಅಷ್ಟರಿಂದ ಏನಹುದು! ಜಯಕರ್ನಾಟಕದಂಥ ಪತ್ರಿಕೆಗೆ ಕನಿಷ್ಟ ೨೦೦೦ ಚಂದಾದಾರರಾದರೂ ಬೇಡವೆ ? ತಲೆಯಮೇಲೆ ಸುಮಾರು ೪೦೦೦ ರೂ. ಗಳ ಸಾಲದ ಭಾರವಿದೆ. ಈ ವರೆಗೆ ಕೆಲಸಗಾರರಿಗೆ ೧೫-೨೦ ರೂಪಾಯಿಗಳ ಸಂಬಳವೂ ಸಿಕ್ಕಿಲ್ಲ; ಹೀಗಿರುವುದಾದರೂ ಪತ್ರಿಕೆಯನ್ನು ನಡಿಸುತ್ತಿರುವುದಕ್ಕೆ ಎರಡೇ ಕಾರಣಗಳು. ಜಯಕರ್ನಾಟಕದಂತಹ ಪತ್ರಿಕೆಯು ಬಿದ್ದುಹೋಗಬಾರದೆಂಬುದೊಂದು; ಸಾಹಿತ್ಯದ ಮುಖಾಂತರ ನಮ್ಮ ನಾಡಿನ ಸೇವೆ ಮಾಡಬೇಕೆಂಬ ಅನಿವಾರ್ಯ ಆಕಾಂಕ್ಷೆಯು ಇನ್ನೊಂದು. ಕರ್ನಾಟಕ ಮಾತೆಯು ಮನಃಪೂರ್ವಕವಾಗಿ ತನ್ನ ನಂಬಿ ನೆಚ್ಚಿ ಸೇವೆ ಮಾಡಿದವರ ಕೈಯನ್ನೆಂದೂ ಬಿಡಳು ಎಂಬ ಶ್ರದ್ಧೆಯಿಂದ ಕಾರ್ಯವನ್ನು ಸಾಗಿಸಿದ್ದೇವೆ. ನಮ್ಮ ವಾಚಕರು ತಾವು ಇನ್ನೂ ಒಬ್ಬಿಬ್ಬರನ್ನಾದರೂ ಚಂದಾದಾರರನ್ನಾಗಿ ದೊರಕಿಸಿ ಕೊಟ್ಟರೆ ಒಳಿತಾಗುವುದು. ನಾವು ಮಾಡಬೇಕೆಂಬ ಸುಧಾರಣೆಗಳನ್ನಂತೂ ಮಾಡುತ್ತಲೆ ಇದ್ದೇವೆ. ಶ್ರೀಯುತ ಜಠಾರರೂ ಇನ್ನು ಮುಂದೆ ಹುಣ್ಣಿವೆಯ ಮೊದಲೆ ಮೂರುದಿನ ಪತ್ರಿಕೆಯನ್ನು ಅಚ್ಚು ಹಾಕಿಕೊಡುವೆವೆಂದು ಆಶ್ವಾಸನವನ್ನು ಕೊಟ್ಟಿರುವುದರಿಂದ ನಿಯಮಿತತನಕ್ಕೆ ಭಂಗ ಬರಲಿಕ್ಕಿಲ್ಲೆಂದು ಬೇರೆ ಹೇಳಬೇಕಾಗಿಲ್ಲ. ಈ ಅವಧಿಯಲ್ಲಿ ವಿಧವಿಧವಾಗಿ ಸಹಾಯ ಮಾಡಿದ ಸಕಲರಿಗೂ ನಾವು ಕೃತಜ್ಞರಾಗಿದ್ದೇವೆ.

---

# ಪರದೇಶಗಳಲ್ಲಿ ಏನು ನಡೆದಿದೆ?

ಲೇಖಕರು :—ಶ್ರೀ ಕುಡ್ವ ಲಕ್ಷ್ಮೀನಾರಾಯಣರು, ಕಾರ್ಕಳ

## ಸರರಾಷ್ಟ್ರಗಳಲ್ಲಿ ಭಾರತೀಯರಿಗೆ ಗೌರವ

ಬೊಂಬಾಯಿಯಿಂದ ಚೌಲಾ ಮತ್ತು ಇಂಜಿನಿಯರ್ ಎಂಬ ಇಬ್ಬರು ತರುಣರು ವಾಯುಮಾರ್ಗವಾಗಿ ಹಿಂದುಸ್ಥಾನದಿಂದ ಹೊರಟು ೨೦-೩-೩೦ರಲ್ಲಿ ಇಂಗ್ಲಾಂಡದ (Norfolk) ನೊರ್‌ಫೊಕ್ ಎಂಬಲ್ಲಿ ಇಳಿದರು. ನಮ್ಮ ಇಂಡಿಯದ ತರುಣರಲ್ಲಿ ಪ್ರಥಮತಃ ಈ ರೀತಿ ಹೋದವರು ಇವರೇ. ಈ ಮೊದಲು ನಮ್ಮ ಅನೇಕ ತರುಣರು ಮಾಡಿದ ಪ್ರಯತ್ನಗಳು ಸಫಲವಾಗಲಿಲ್ಲ. ಇವರಿಗೆ ನಮ್ಮ ಸೆಕ್ರೆಟರಿ ಆಫ್‌ಸ್ಟೇಟ ಮೊದಲಾದವರು ಬಹಳ ಮರ್ಯಾದೆ ಕೊಟ್ಟರು

ತತ್ವಜ್ಞಾನದಲ್ಲಿ ಪ್ರೊ. ರಾಧಾಕೃಷ್ಣನವರು ಪರರಾಷ್ಟ್ರಗಳಲ್ಲಿ ಅತಿಶಯ ಕೀರ್ತಿಯನ್ನು ಪಡೆದಿರುವರು. ಲಂಡನಿನ ವಿಶ್ವವಿದ್ಯಾಲಯದಲ್ಲಿ ರಾಧಾಕೃಷ್ಣನರು "Idealist View of Life" ಎಂಬ ನಮ್ಮ ಜೀವನಕ್ರಮಗಳ ವಿಷಯು ೪ ಭಾಷಣಗಳನ್ನು ಕೊಟ್ಟರು. ಈ ಭಾಷಣಗಳಿಗೆ ಅಧ್ಯಕ್ಷರಾಗಿರುವ ಈ ವಿಶ್ವವಿದ್ಯಾಲಯದ ಚೆನ್ಸೆಲ (Chancellor)ರಾಗಿದ್ದ ಸರ್. ವಿಲಿಯಮ ಕಾಲಿನ್ಸ ಎಂಬವರು ಇವರಿಗೆ ಧನ್ಯವಾದಗಳನ್ನು ಅರ್ಪಿಸುವಾಗ್ಯೆ "ನಾನು ಕಲಿಯುವಾಗ್ಯೆ ಲಂಡನಿನ ವಿಶ್ವವಿದ್ಯಾಲಯದಲ್ಲಿ ನಿಮ್ಮಂಥಾ ಒಬ್ಬ ಪ್ರೊಫೆಸರನು ಇದ್ದರೆ ತಾನು ಧನ್ಯನಾಗುತ್ತಿದ್ದೆ" ಎಂಬದಾಗಿ ಹೇಳಿದರು. ಅಧ್ಯಕ್ಷರು "ಈ ರೀತಿ ಸುಲಲಿತವಾದ ಮತ್ತು ಗಂಭೀರವಾದ ಮಾತುಗಳನ್ನು ನಮಗೆ ಹೇಳಿದವರು ಯಾರೂ ಇಲ್ಲ. ಈ ರೀತಿ ಪ್ರಖ್ಯಾತಿ ಹೊಂದಿದ ಇವರು ೧೯೩೦ನೇ ಇಸವಿಯಲ್ಲಿ ಜವೆಟ್ ಲೆಕ್ಚರರಾಗಿ (Jowett Lecturer) ನೇಮುಕವಾಗಿರುವರು. ನಂತರ ಇಂಗ್ಲಂಡದಲ್ಲಿ Liverpool, Boweringham, London ಕೆಂಬ್ರಿಜಿನಲ್ಲಿ ಈ ವಿಷಯ ತಿರಿಗಿ ಭಾಷಣವನ್ನು ಕೊಡುವರು.

ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ಸ್ವಾಮಿ ವಿವೇಕಾನಂದರು ಸ್ಥಾಪನೆಮಾಡಿದ ರಾಮಕೃಷ್ಣ ಮಿಶನಿನವರು ಹೆಚ್ಚಿನ ಅಭಿವೃದ್ಧಿಯನ್ನು ಪಡೆದು ಅಲ್ಲಿ ದೇವಾಲಯವನ್ನು ಸ್ಥಾಪಿಸಿ ವೇದಾಂತವನ್ನು ಪ್ರಕಟಿಸುತ್ತಿರುವರು. ಪ್ರೊಫೆಸರ್ ರಾಧಾಕೃಷ್ಣನರು ಅಮೇರಿಕದಲ್ಲಿ ಈ ಮೊದಲು ವಿಖ್ಯಾತಿಯನ್ನು ಪಡೆದರು. ಚಿಕಾಗೋದಲ್ಲಿ ಇವರು ಮೊದಲು "Hindu View of Life" ಎಂಬವರ ವಿಷಯು ಭಾಷಣವನ್ನು ಕೊಟ್ಟರು

## ಇಗುಪ್ತ

ಒಲಿಂನ ಪಟ್ಟಣದಿಂದ ಕೈರೋ ಪಟ್ಟಣಕ್ಕೆ ಮಹಮದ ಶಿದ್ಕಿ ಎಫೆಂಡಿ ಎಂಬವನು ವಾಯುಮಾರ್ಗವಾಗಿ ಬಂದ ವಿಷಯವಾಗಿ ಬಹಳ ಸಂತೋಷವನ್ನು ಜನರು ತೋರ್ಪಡಿಸಿರುವರು.

ಕಳೆದ ಫೆಬ್ರುವಾರಿ ತಾ॥ ೬ ರಲ್ಲಿ ಇಂಗ್ಲಂಡಿಗೂ ಇಜಿಪ್ತ ರಾಜ್ಯಕ್ಕೂ ಆಗತಕ್ಕ ಒಪ್ಪಂದದ ಬಂಧ ಸಹಿಯನ್ನು ಮಂಜೂರಾತಿಯ ಬಗ್ಯೆ ಇಜಿಪ್ತದೇಶದ ಮುಖ್ಯಮಂತ್ರಿಯಾದ ಮುಸ್ತಫಾನಹಾನ ಪಾಶ್ಯಯವರು ತಮ್ಮ ಪಾರ್ಲಿಮೆಂಟಿನಲ್ಲಿ ತಂದಿರುವರು. ನಮಗೂ ಒಪ್ಪಂದವನ್ನು ಮಾಡುವದಕ್ಕೆ ಪೂರ್ಣ ಅಧಿಕಾರವನ್ನು ಕೊಡಬೇಕೆಂತಲೂ ಹಾಗೆ ಒಪ್ಪಂದವು ಸಂಪೂರ್ಣವಾಗಿ ಮಂಜೂರಾತಿ ಆಗುವ ಬಗ್ಯೆ ತಾವು ತಿರಿಗಿ ಇಜಿಪ್ತದ ಪ್ರಾತಿನಿಧ್ಯ ಸಂಸ್ಥೆಯ ಮುಂದೆ ಇಡುವೆನೆಂತಲೂ ಈ ವಿಷಯ ವಿಳಂಬವಾದಲ್ಲಿ ಇಜಿಪ್ತ ರಾಜ್ಯಕ್ಕೆ ಹೆಚ್ಚಿನ ನಷ್ಟ ಉಂಟಾಗಬಹುದೆಂತಲೂ ಅಭಿಪ್ರಾಯಪಟ್ಟಿರುವರು. ಈ ವಿಷಯ ನಡೆದ ಭಾಷಣಗಳಿಂದ ಇಜಿಪ್ತ ರಾಜ್ಯದವರ ಸ್ವಾತಂತ್ರ್ಯವನ್ನು ಬ್ರಿಟಿಶ ಸರ್ಕಾರದವರು ಒಪ್ಪಬೇಕು. ಹಾಗೆ ಆದರೆ ಮಾತ್ರ ಈ ಒಪ್ಪಂದವು ಜಾರಿಗೆ ಬರುವದೆಂತಲೂ ಈ ಒಪ್ಪಂದವು ಇಜಿಪ್ತಿಗೆ ಮಾತ್ರವಲ್ಲ, ಇಜಿಪ್ತ ರಾಜ್ಯದ ತೆಂಕುದಿಕ್ಕಿನಲ್ಲಿರುವ ಸೂಡಾನ್ ಎಂಬ ಪ್ರದೇಶಕ್ಕೆ ಇದೇ ರೀತಿ ಒಪ್ಪಂದವಾಗಬೇಕೆಂಬದಾಗಿ ಬಹುಮತವಿರುವದೆಂತಲೂ ತೋರುತ್ತದೆ. ಆ ಮೇರೆಗೆ ಅವರ ಪಾರ್ಲಿಮೆಂಟಿನಲ್ಲಿ ಪಾಸಾಗಿದೆ. ಹೀಗೆ ಒಪ್ಪಂದವನ್ನು ಮಾಡುವರೆ ಮುಖ್ಯ ಮಂತ್ರಿಯವರು ಲಂಡನಿಗೆ ಬಂದು ತಲ್ಪಿರುವರು. ಇವರಿಗೂ ಇಂಗ್ಲಂಡಿನ ಪರರಾಷ್ಟ್ರ ಕಾರ್ಯದರ್ಶಿಗಳಾದ ಹೆಂಡರಸನ್ ಎಂಬವರಿಗೂ ಸಂವಾದಗಳು ನಡೆಯುತ್ತಿವೆ. ಉಭಯ-

ರಾಜ್ಯಗಳಿಗೂ ಒಳ್ಳೇದಾಗುವಂತೆ ಈ ಒಪ್ಪಂದವನ್ನು ನಾವು ಜಾರಿಗೆ ಕೂಡಲೇ ತರುವೆವೆಂಬದಾಗಿ ಹೆಂಡರ್ಸನ್‌ರವರು ಪಾರ್ಲಿಮೆಂಟಿನಲ್ಲಿ ಹೇಳಿರುವರು.

## ದಕ್ಷಿಣ ಆಫ್ರಿಕ

ದಕ್ಷಿಣ ಆಫ್ರಿಕ ಎಜಂಟರಾಗಿ ಇರುವ ಸರ್ ಕುಮನ ರೆಡ್ಡಿಯವರು ಇತ್ತಲಾಗಿ ತಮ್ಮ ಅಸ್ವಸ್ಥದ ಸಂಬಂಧ ಹಿಂದು ದೇಶಕ್ಕೆ ಬಂದು ಇತ್ತೀಚೆಗೆ ತಮ್ಮ ಮಗ ಗೋಪಾಳ ಸ್ವಾಮಿಯನ್ನು ತನ್ನ ಕಾರ್ಯದರ್ಶಿಯಾಗಿ ತಕ್ಕೊಂಡು ದಕ್ಷಿಣ ಆಫ್ರಿಕಕ್ಕೆ ತೆರಳಿರುವರು. ಅಲ್ಲಿ ಬೊಯರ ಮುಖಂಡನಾದ ಸ್ಮಟ್ಸ್ ಎಂಬವರ ಚಳವಳದಿಂದ ನಮ್ಮ ಜನರಿಗೆ ಇರುವ ಕೆಲವು ಹಕ್ಕುಗಳು ನಾಶವಾಗುವ ಸಂದರ್ಭವು ಒದಗಿಯಿದೆ.

ಮಾನ್ಯ ಶ್ರೀನಿವಾಸ ಶಾಸ್ತ್ರಿಯವರ ಹೆಸರಲ್ಲಿ Sastri College ಎಂಬ ಮಹಾ ವಿದ್ಯಾಲಯವನ್ನು ನೇತಾಲಿನ ಮುಖ್ಯ ಪಟ್ಟಣವಾದ ದರ್ಬಾನ್ ಎಂಬಲ್ಲಿ ಸ್ಥಾಪಿಸಿರುವರು.

ಕೆನ್ಯದಲ್ಲಿ ಈ ಮೊದಲು ಹಿಂದುದೇಶದ ಜನರಿಗೂ ಯುರೋಪಿಯನ್ನರಿಗೂ ನಡೆದ ವಿವಾದಾಂಶಗಳು ಈ ವರೆಗೆ ಇತ್ಯರ್ಥವಾಗಲಿಲ್ಲವಾಗಿ ತೋರುತ್ತದೆ. ಇತ್ತೀಚೆಗೆ ಈ ವಿಷಯ ಅಲ್ಲಿಗೆ ಹೋದ ಮಾನ್ಯ ಶ್ರೀನಿವಾಸ ಶಾಸ್ತ್ರಿಗಳು ತಮ್ಮ ಅಭಿಪ್ರಾಯವನ್ನು ಪ್ರಕಟಗೊಳಿಸಿರುವರು. ಕೆನ್ಯಾದಲ್ಲಿ ಬರುವ ಜನರು ಒಳಗೆ ಪ್ರವೇಶಿಸುವದಕ್ಕೆ ನಾಗರೀಕತನದ ಪರೀಕ್ಷೆಗಳನ್ನು ಇಡಬೇಕೆಂತಲೂ ಈ ಮಟ್ಟಿಗೆ ದುರಸ್ತಿ ಆಗದೆಯಿದ್ದರೆ ಕೆನ್ಯಾ ದೇಶಕ್ಕೆ ಪ್ರಾತಿನಿಧ್ಯಸರ್ಕಾರದ ಸ್ವಾತಂತ್ರ್ಯಕೊಡಬಾರದೆಂತಲೂ ಇವರ ಮುಖ್ಯ ಸೂಚನೆ. ಈ ರೀತಿ ಅಧಿಕಾರಕೊಟ್ಟರೆ ಬಿಳಿ ಜನರು ನಮ್ಮ ಜನರನ್ನು ಪೀಡಿಸದೆ ಇರಲಾರರು. ದಕ್ಷಿಣ ಆಫ್ರಿಕದ ಎಜಂಟರಾದ ಸರ್ ಕುಮನ ರೆಡ್ಡಿಯವರು ಆಫ್ರಿಕಕ್ಕೆ ಹೊರಟು ಹೋಗುವ ಮೊದಲು ಅವರಿಗೆ ಮದ್ರಾಸಿನ ಪಾಚಪ್ಪಾ ಕಾಲೇಜಿನಲ್ಲಿ ೨-೩-೩೦ರಲ್ಲಿ ಕೊಟ್ಟ ಫಲಹಾರ ಪಾರ್ಟಿಯ ಸಮಯದಲ್ಲಿ ಅವರ ಭಾಷಣೆಯಲ್ಲಿ "ಆಫ್ರಿಕದಲ್ಲಿರುವ ಹಿಂದು ಜನರ ಪೈಕಿ ೩ ಅಂಶದ ಜನರು ಅಲ್ಲಿಯೇ ಹುಟ್ಟಿ ಬೆಳೆದವರು. ಅವರಿಗೆ ಹಿಂದು ದೇಶಕ್ಕೆ ಬರುವ ಆಲೋಚನೆಯಿಲ್ಲ. ಅವರು ಅಲ್ಲಿ ಹುಟ್ಟಿದ ಸಂಬಂಧ ಅವರಿಗೆ ದಕ್ಷಿಣ ಆಫ್ರಿಕದಲ್ಲಿ ಇರುವರೆ ಅವರಿಗೆ ಹಕ್ಕು ಉಂಟು. ಬಾಕಿ ೧ನೇ ಅಂಶದವರು ಮಾತ್ರ ಇಂಡಿಯಾ ದೇಶದಿಂದ ಹೋದವರು. ಈಗ ಹಿಂದು ದೇಶದ ಜನರಿಗೆ ವ್ಯಾಪಾರ ಮಾಡುವರೆ ಮತ್ತು ವಾಸಿಸುವರೆ ಲೈಸನ್ಸು ಬೇಕೆಂಬ ಚಳವಳ ನಡೆಯುತ್ತದೆ. ಪೆಡಿಸನ್ ಕಮಿಟಿ (Paddison Committee) (Habbullai Deputation) ಹಬ್ಬಿಬುಲ್ಲಾ ಮೊದಲಾದವರ ಡಿಪ್ಯುಟೇಶನ್ ಮತ್ತು ಶ್ರೀನಿವಾಸ ಶಾಸ್ತ್ರಿಗಳ ಪ್ರಯತ್ನದಿಂದ ಹಿಂದು ದೇಶದ ಗೌರವವು ಹೆಚ್ಚಿದರೂ ಇಲ್ಲಿ ಡೊಮಿನಿಯನ್ ಸ್ಟೇಟಸ್ ಸಿಕ್ಕಿದ ನಂತರ ಹಿಂದು ಜನರ ಗೌರವವು ದಕ್ಷಿಣ ಆಫ್ರಿಕದಲ್ಲಿ ಹೆಚ್ಚುವದು" ಎಂಬದಾಗಿ ಹೇಳಿರುವರು.

## ತುರ್ಕಿರಾಜ್ಯ

ತುರ್ಕಿರಾಜ್ಯದ ಪುನರುಜ್ಜೀವನವು ಈ ಶತಮಾನದಲ್ಲಿ ನಡೆದ ಆಶ್ಚರ್ಯವಾದ ಒಂದು ಕಾರ್ಯ. ತಮ್ಮ ಧುರೀಣರ ಕೆಳಗೆ ಇದ್ದ ಜನಾಂಗವು ಎಷ್ಟು ಅಭಿವೃದ್ಧಿಯನ್ನು ಬಹಳ ಸ್ವಲ್ಪ ಸಮಯದಲ್ಲಿ ಮಾಡಬಹುದೆಂಬದು ಇದರಿಂದ ತಿಳಿಯಬಹುವದು. ಯುದ್ಧದಲ್ಲಿ ಇವರು ಹೆಚ್ಚಿನ ಧೈರ್ಯವಂತರು. ಅವರ ಧುರೀಣರಾದ ಮುಸ್ತಫಾ ಕೆಮಲಪಾಶರು ಇಡೀ ತುರ್ಕಸ್ತಾನವನ್ನೆ ಬದಲಾಯಿಸಿರುವರು. ಹೆಂಗಸರಿಗೆ ಘೋಷಾ ಇರುವದಿಲ್ಲ ಒಬ್ಬ ಹೆಂಗಸು ಮಂತ್ರಿಯಾಗಿರುವಳು. ಮುಸಲ್ಮಾನರ ಕೆಂಪು "ಫೆಜ್" ಟೋಪಿಯನ್ನು ಇವರು ನಿಷೇಧಿಸಿರುವರು. ಹೆಂಗಸರು ಪಾಶ್ಚಾತ್ಯ ಹೇಟು (hats) ಧರಿಸುವರು. ಒಬ್ಬ ಮುಸಲ್ಮಾನನು ಒಬ್ಬಳೇ ಹೆಂಡತಿಯನ್ನು ಮದುವೆ ಆಗಬೇಕು. ಅವರಿಗೆ ಹೆಚ್ಚಿನ ಸ್ವಾತಂತ್ರ್ಯ ಕೊಡಲ್ಪಟ್ಟಿರುವದು. ಮತಕ್ಕೂ ಒಬ್ಬ ವ್ಯಕ್ತಿಯ ರಾಷ್ಟ್ರೀಯ ಕರ್ತವ್ಯಗಳಿಗೂ ಪರಸ್ಪರ ಸಂಬಂಧವಿಲ್ಲವೆಂತಲೂ ಅವನ ದೇವರ ಭಕ್ತಿಯೂ ತನ್ನ ಮತದ ಅನುರಾಗವೂ ಸರ್ಕಾರಕ್ಕೆ ಸಮ್ಮಂಧಪಟ್ಟದ್ದಿಲ್ಲವಾಗಿಯೂ ಇವರು ಹೇಳಿರುವರು. ಟರ್ಕಿಯ ಅಧ್ಯಕ್ಷನು ಮುಸಲ್ಮಾನರ ಕಾಲಿಫನಾಗಿರುವದಿಲ್ಲ.

ಯುದ್ಧಕ್ಕೆ ಬಂದ ಗ್ರೀಕ ಜನರನ್ನು ಮುಸ್ತಫ ಕೆಮಾಲ್ ಪಾಶ್ಯರು ಯುದ್ಧರಂಗದಲ್ಲಿ ಸೋಲಿಸಿ ಅವರನ್ನು (Asia Minor) ಎಸ್ಯಾ ಮೈನರಿನಿಂದ ಹೊರಗೆ ಕಳುಹಿಸಿದರು. ಜರ್ಮನ ಯುದ್ಧದಲ್ಲಿ ಸೋತು ಹೋದ ಯುರೋಪದ ಅರಸರು ಅವರ ತಂಟೆಗೆ ಹೋಗಲಿಲ್ಲ.

ಈ ಸಮಯದಲ್ಲಿ ಕೆಮಾಲರಿಗೆ ಸುಧಾರಣೆಯನ್ನು ಮಾಡುವದಕ್ಕೆ ಸಾಕಷ್ಟು ಸಮಯ ಸಿಕ್ಕಿತು. (Swiss code) ಸ್ವಿಟ್ಸರ್‌ಲಾಂಡಿನ ಕಾನೂನನ್ನು ಆಧರಿಸಿ ಹೊಸ ಒಂದು ಕಾನೂನನ್ನು ಇವರು ಜಾರಿಗೆ ತಂದಿರುವರು. ಪ್ರತಿಒಬ್ಬ ವ್ಯಕ್ತಿಯು ಶಾಲೆಗೆ ಹೋಗುವಂತೆ ಹೊಸ ಶಾಲೆಗಳನ್ನು ಏರ್ಪಡಿಸಿರುವರು; ತುರ್ಕಿ

ಭಾಷೆಯನ್ನೂ ಅವುಗಳ ಅಕ್ಷರವಿಷಯವನ್ನೂ ಇವರು ಶುದ್ಧ ಗೊಳಿಸಿರುವರು. ತುರ್ಕಿ ಜನಾಂಗದ ಮನೋಭಾವಗಳೇ ಬದಲಾಯಿಸಲ್ಪಟ್ಟು ಅವರು ತಮ್ಮ ಆಧುನಿಕಮಾರ್ಗದಲ್ಲಿ ಕಾಲಕ್ರಮೇಣವಾಗಿ ಮುನ್ನಡೆಯಿಟ್ಟಿರುವರು. ಸಾಹಿತ್ಯದಲ್ಲಿಯೂ ನಾಟಕಕಲಾಕೌಶಲ್ಯದಲ್ಲಿಯೂ ಇವರು ಪಾಂಡಿತ್ಯವನ್ನು ತೋರಿಸುತ್ತಲಿರುವರು. ಇತ್ತಲಾಗಿ ಅಫಘಾಣಿಸ್ತಾನದ ಅಮೀರರಾಗಿ ಅಲ್ಲಿಂದ ಹೊರಗೆ ಹೊರಟುಬಂದಿರುವ ಅಮನುಲ್ಲರು ಟರ್ಕಿಯ ಮುಖ್ಯ ರಾಜಧಾನಿಗೆ ಹೋಗಿದ್ದು ಅಲ್ಲಿಯೇ ಉಳಕೊಂಡಿರುವರು.

## ಅಫಘಾನಿಸ್ಥಾನ

ಈಗಿನ ನಾದಿರಖಾನರು ಇತ್ತೀಚೆಗೆ ಅಸ್ವಸ್ಥದಲ್ಲಿರುವ ಸಂಬಂಧ ಅಫಘಾನಿಸ್ತಾನವು ಇನ್ನೊಂದು ಸಾರಿ ರಣಭೂಮಿಯಾಗುವ ಸಂದರ್ಭವು ತೋರಬರುತ್ತದೆ. ಅವರು ಮರಣಪಟ್ಟರೆ ತಿರಿಗಿ ಅಮನುಲ್ಲರು ಅಮೀರರಾಗುವರೇ ? ಇತ್ತೀಚಿಗೆ ಇವರು ತಾವು ಇರುವ ಇತಲಿ ರಾಜ್ಯವನ್ನು ಬಿಟ್ಟು ಅಫಘಾನಿಸ್ತಾನಕ್ಕೆ ಹತ್ತಿರವಾಗಿ ಟರ್ಕಿಯಲ್ಲಿ ಉಳಕೊಂಡಿರುವರು. ಕಮಾಲ್‌ಪಾಚ್ಯಾನು ಅಮೀರರ ತಂಗಿಯನ್ನು ಮದುವೆಯಾಗುವರು ಎಂತ ವರ್ತಮಾನವಿತ್ತು. ಅಫಘಾನಿಸ್ಥಾನದಲ್ಲಿ ಶಿನ್ವಾರಿಯವೆಂಬ ಮುಖ್ಯ ಪಂಗಡವು ಸೌರಿಯಾ ರಾಣಿಯನ್ನು ಬಿಟ್ಟರೆ ಇವರು ತಿರಿಗಿ ಅಫಘಾನಿಸ್ಥಾನಕ್ಕೆ ಬರಬಹುದೆಂಬ ಅಭಿಪ್ರಾಯವನ್ನು ತೋರಿಸುತ್ತಿತ್ತು. ಶಿಕ್ಷಿತ ಜನರು ಅಮನುಲ್ಲಾ ಪಾರ್ಟಿಗೆ ಸೇರಿರುವರು. ಕಾಲಕ್ರಮೇಣವಾಗಿ ಈ ವಿಷಯ ತಿಳಿದು ಬರುವದು ಈ ಅಮೀರ ಅಮನುಲ್ಲರ ಕೂಡೆ ಅಸಂಖ್ಯಾತ ದ್ರವ್ಯವಿರುವದಾಗಿ ತೋರುತ್ತದೆ. ತನ್ನ ಸುಧಾರಣೆಗಳನ್ನು ಅಫಘಾನಿಸ್ಥಾನದವರು ಅಂಗೀಕರಿಸುವದಾದರೆ ತಾನು ಆ ರಾಜ್ಯದ ಸೇವಕನಾಗಿ ಅದರ ಕೆಲಸದಲ್ಲಿ ನಾನು ನಿವೃತ್ತನಾಗುವೆನು ಎಂಬದಾಗಿ ಇವರು ಭರವಸೆಯನ್ನು ಕೊಟ್ಟಿರುವರು.

## ಸಿಂಹಳದ್ವೀಪ

ಇತ್ತೀಚಿಗೆ ಸಿಂಹಳದ್ವೀಪದ ಹೊಸ ರಾಜಶಾಸನದ ಘಟನೆಗಳು ಅತೀ ಆಶ್ಚರ್ಯದವುಗಳಾಗಿರುತ್ತವೆ. ಪ್ರತಿ ಒಬ್ಬ ವ್ಯಕ್ತಿಯು ಮತದಾರನಾಗಿರುವನು. ಈಗಿನ ಸುಧಾರಣೆಯು ಲೋರ್ಡ ದೋನೊಮೋರರು ಪಾರ್ಲಮೆಂಟಿಗೆ ಕೊಟ್ಟ ವರದಿಯ ಮೇಲೆ ಆಧರಿಸುತ್ತದೆ. ಇಂಗ್ಲಂಡಿನ ಲಂಡನ್ ಪಟ್ಟಣದ ಕೌನ್ಸಿಲಿನ ಘಟನಾಕ್ರಮವನ್ನು ಅದು ಮಾದರಿಯಾಗಿಟ್ಟುಕೊಂಡಿರುವದು. ಸಿಂಹಳದ್ವೀಪವನ್ನು ಓರ್ಸ್ತು ಕಮಿಟಿಯು ಮುಂದಕ್ಕೆ ಆಳುವದು. ಅಲ್ಲಿಯ (Legislative Council) ಪ್ರಾತಿನಿಧ್ಯ ಸಂಸ್ಥೆಯಲ್ಲಿ ೧೫ ಆರಿಸಿದ ಮೆಂಬರರೂ ೬ ಸರ್ಕಾರದಿಂದ ನೇಮಕ ಮಾಡಲ್ಪಟ್ಟ ಮೆಂಬರರೂ ಸರ್ಕಾರಿ ೩ ನೌಕರರು– ಸಿಂಹಳದ್ವೀಪದ ಕೋಲೋನಿಯಲ್ ಕಾರ್ಯದರ್ಶಿ, ಅಟೋರ್ನಿಸ್ ಜನರಲ್ ಮತ್ತು ಕೋಶಾಧಿಕಾರಿಯು– ಈ ೩ ಜನರೂ ಹೀಗೆ ೨೬ ಜನ ಮೆಂಬರರಿರುವರು–ಪ್ರತಿ ಒಂದು ಡಿಪಾರ್ಟಮೆಂಟಿಗೂ ಒಂದು ಕಮಿಟಿಯಿರುವದು. ಹೀಗೆ ೧೦ ಡಿಪಾರ್ಟಮೆಂಟಿಗೆ ೧೦ ಕಮಿಟಿಗಳು. ಕೌನ್ಸಿಲಿನವರು ೭ ಜನರನ್ನು ಚೈರಮೇನರಾಗಿ ಯಾ ಅಧ್ಯಕ್ಷರಾಗಿ ಈ ಕಮಿಟಿಗಳಿಗೆ ನೇಮಕಮಾಡಬೇಕು.

ಪ್ರತಿ ಒಬ್ಬ ಮತದಾರನಿಗೆ ಒಂದು ವೋಟುಯಿದ್ದರೂ ಡೂನೆಮೊರರು ಸಿಫಾರಸು ಮಾಡಿದಂತೆ ಪ್ರತಿ ಒಬ್ಬ ವ್ಯಕ್ತಿಗೂ ಓಟು ಇರುವದಿಲ್ಲ. ಒಬ್ಬ ವ್ಯಕ್ತಿಯು ೫ ವರುಷದ ಲಾಗಾಯ್ತು ಸಿಂಹಳದ್ವೀಪದಲ್ಲಿದ್ದರೆ. ಅವನು ಮತದಾರನಾಗಬೇಕೆಂಬದಾಗಿ ಪ್ರಥಮ ವರದಿಯಲ್ಲಿ ನಿಶ್ಚೈಯಿಸಿದ್ದರೂ ನಂತರದಲ್ಲಿ ಅಲ್ಲಿರುವ ಹಿಂದು ದೇಶದ ಹೆಚ್ಚಿನ ಜನರು ಮತದಾರರಾಗುವರೆಂಬ ಹೆದರಿಕೆಯು ಸಿಂಹಳದ್ವೀಪದಲ್ಲಿ ಹುಟ್ಟಿದಂತೆ ತೋರುವದು. ನಂತರ ಯಾರೊಬ್ಬ ವ್ಯಕ್ತಿಯು ಕಾಯಂ ಆಗಿ ಸಿಂಹಳದ್ವೀಪದಲ್ಲಿಯೇ ಜೀವಿಸಿಕೊಂಡಿರುವನಿಗೆ ಸರ್ಟಿಫಿಕೇಟು ಯಾ ಭದ್ರತೆ ಪತ್ರವಿದ್ದು ಇಂಡಿಯಾ ಸರ್ಕಾರದ ಆಶ್ರಯನ್ನೂ ಸಂರಕ್ಷಣೆಯನ್ನೂ ಬಿಟ್ಟುಬಿಡುವನೋ ಆ ವ್ಯಕ್ತಿ ಮಾತ್ರ ಸಿಂಹಳದ್ವೀಪದಲ್ಲಿ ಮತದಾರನಾಗಬೇಕೆಂಬ ನಿರ್ಣಯವು ಮಂಜೂರಾಗಿದೆ. ಈ ವಿಷಯವಾಗಿ ಫೆಬ್ರುವರಿ ೧೧ಕ್ಕೆ ಡಿಲ್ಲಿಯ ಲಿಜಿಸ್ಲೈಟಿವ್ಹ ಸಭೆಯಲ್ಲಿ ಪಂಡಿತ ಹ್ರಿದಯನಾತ್ ಕುಂಜ್ರು ಎಂಬವರು ತಂದ ಆಕ್ಷೇಪಣೆಯನ್ನು ಸರ್ಕಾರದ ಕಡೆಯಿಂದ ಬಾಜಪೈಯವರು ಅಂಗೀಕರಿಸಿ ಆ ವಿಷಯ ಇಂಡಿಯಾ ಸರ್ಕಾರವು ವಿಚಾರವನ್ನು ನಡಿಸಿ ದುರುಸ್ತಿ ಮಾಡುವದೆಂಬದಾಗಿಯೂ ೫ ವರುಷ ಇದ್ದ ಪ್ರತಿ ಒಬ್ಬ ವ್ಯಕ್ತಿಯು ಮತದಾರನಾಗಬೇಕೆಂಬ ಸೂತ್ರವನ್ನು ಜಾರಿಗೆ ತರುವಹಾಗೆ ಮಾಡುತ್ತೇವೆಂಬದಾಗಿಯೂ ಭರವಸೆಯನ್ನು ಕೊಟ್ಟಿರುವರು.

## ಚೀನಾರಾಜ್ಯ

೩೫ ವರುಷಗಳ ಹಿಂದೆ ಜಪಾನಿಯವರು ಚೀನಾದೇಶವನ್ನು ಸೋಲಿಸಿ ಚೀನಾದೇಶದ ಲಿಯಾಟುಂಗ್ ಎಂಬ ರಾಜ್ಯವನ್ನು ಅಪಹರಿಸಿದರು. ಇದಕ್ಕೆ ಋಷ್ಯದವರು ಒಪಲಿಲ್ಲ. ಈ ರಾಜ್ಯವು

ತಿರಿಗಿ ಚೀನಾದೇಶಕ್ಕೆ ಸಿಕ್ಕಿತು. ಈ ಬಗ್ಗೆ ಚೀನಾದೇಶದವರು Chinese Eastern Railway ಎಂಬ ಹೆಸರ ಒಂದು ರೈಲನ್ನು ಉತ್ತರ ಮಂಚುರಿಯದಲ್ಲಿ ಕಟ್ಟುವರೆ ಖುಷ್ಯದವರಿಗೆ ಬಿಟ್ಟಿದ್ದರು- ಅದನ್ನು ನಂತರ ದಕ್ಷಿಣದ ವರೆಗೆ ತಕ್ಕೊಂಡು ಹೋಗಿ ಕಟ್ಟಿದರು. ಲ್ಯೆಯುಟುಂಗ ರಾಜ್ಯವು ಹೋಯಿತೆಂಬ ವ್ಯಾಕುಲಿತ ಜಪಾನಿನವರು ಜರ್ಮನ ಯುದ್ಧದ ಸಮಯ ಈ ರೈಲ್ವೆ ದಕ್ಷಿಣ ಪಾರ್ಶ್ವವನ್ನು ಸ್ವಾಧೀನಮಾಡಿಕೊಂಡರು. ಉತ್ತರ ಭಾಗವನ್ನು ಇಂಗ್ಲಂಡು ಮತ್ತು ಅಮೇರಿಕದವರು ೧೯೧೭ರಲ್ಲಿ ಸ್ವಾಧೀನಮಾಡಿಕೊಂಡರು. ೧೯೧೭ರಲ್ಲಿ ಖುಷ್ಯದ ಝಾರರನ್ನು ಸಿಂಹಾಸನದಿಂದ ಜನರು ತಳ್ಳಿಹಾಕಿದರು. ಆದರೂ ಯುದ್ಧ ಆಗುತ್ತಲೇ ಅದು ತಿರಿಗಿ ಖುಷ್ಯಕ್ಕೆ ಸಿಕ್ಕಿತು- ಇದರ ನಂತರ ೧೯೨೪ರಲ್ಲಿ ಈ ರೈಲುಮಾರ್ಗದ ವಿಷಯ ಚೀನಾದೇಶಕ್ಕೂ ಖುಷ್ಯಕ್ಕೂ ಒಂದು ಒಪ್ಪಂದ ಆಗಿ ಈ ರೈಲನ್ನು ಸಮಹಕ್ಕಿನಿಂದ ಚೀನಾದೇಶದವರೂ ಖುಷ್ಯದವರೂ ಅನುಭವಿಸಬೇಕಾಗಿ ನಿರ್ಣಯಿಸಿತು. ಝಾರರ ಸಮಯಕ್ಕಿದ್ದ ಎಲ್ಲ ಬೇರೆಹಕ್ಕನ್ನೂ ರಿಯಾಯ್ತಿಗಳನ್ನೂ ಖುಷ್ಯದವರು ಬಿಟ್ಟುಬಿಟ್ಟರು.

ಈ ಒಪ್ಪಂದಕ್ಕೆ ವಿರೋಧವಾಗಿ ಚೀನಾದೇಶದವರು ರೈಲ್ವೆಯನ್ನು ಸ್ವಾಧೀನ ಮಾಡಿಕೊಂಡು ಖುಷ್ಯದ ಅಧಿಕಾರಿಗಳನ್ನು ಕೈದುಮಾಡಿದ್ದರಿಂದ ಖುಷ್ಯದವರಿಗೂ ಚೀನಾದೇಶಕ್ಕೂ ಯುದ್ಧವಾಗಿ ಚೀನಾದೇಶದವರು ಪರಾಜಿತರಾಗಿರುವರು. ಖುಷ್ಯದಲ್ಲಿ ಈಗ ೮ ಮಿಲಿಯ ಯುದ್ಧದ ಜನರೂ ಅಸಂಖ್ಯಾಕವಾದ ಆಯುಧ ವ ಯುದ್ಧಸಾಮಗ್ರಿಗಳೂ ಇರುತ್ತವೆ. ಈ ಯುದ್ಧ ಸಾಮರ್ಥ್ಯವು ಚೀನಾದೇಶಕ್ಕೆ ಗೊತ್ತಿಲ್ಲದ ಸಂಬಂಧ ಈ ಯುದ್ಧಕ್ಕೆ ಕಾರಣವಾಯಿತು. ಚೀನಾದೇಶದವರು ೧-೧-೩೦ರ ಲಾಗಾಯ್ತು ಪರದೇಶದವರಿಗೆ ಚೀನಾರಾಜ್ಯದಲ್ಲಿ ತಮ್ಮ ಸ್ವಂತದ ಕೋರ್ಟಿನ ಮುಖಾಂತರ ತಮ್ಮ ಕಾನೂನು ಮೇರೆಗೆ ಆಳಲ್ಪಡುವ ಹಕ್ಕನ್ನು ತೆಗೆದಿರುತ್ತದೆ- ಎಲ್ಲರೂ ಚೀನಾದೇಶದ ಕೋರ್ಟುಗಳಿಗೂ ನ್ಯಾಯಕ್ಕೂ ಸರಿಯಾಗಿ ನಡೆಯಬೇಕು. ಬ್ರಿಟಿಷರು ಅಮೇರಿಕದವರು ಇದಕ್ಕೆ ಒಪ್ಪಲಿಲ್ಲ. ಚೀನಾ ನ್ಯಾಯಾಧೀಶರು ಪಾಶ್ಚಾತ್ಯ ಕಾನೂನಗಳಲ್ಲಿ ಶಿಕ್ಷಿತರಲ್ಲವೆಂತಲೂ ಚೀನಾದೇಶದಲ್ಲಿ ಒಬ್ಬನೂ ಅರಸನಿಲ್ಲವೆಂತಲೂ ಚೀನಾದೇಶದ ನ್ಯಾಯಾಧಿಪತಿಗಳು ಲಂಚವನ್ನು ತಕ್ಕೊಳ್ಳುವರೆಂತಲೂ ತಮ್ಮ ೪೦೦-೫೦೦ ಮಿಲಿಯ ಹಣವನ್ನು ಚೀನಾದೇಶದಲ್ಲಿ ತಮ್ಮ ವ್ಯಾಪಾರದ ಬಂಡವಾಲವಾಗಿ ಹಾಕಿದ್ದೇವೆಂತಲೂ ಹೇಳುವರು. ಇದು ಹ್ಯಾಗೆ ಮುಂದಕ್ಕೆ ಪರಿಣಮಿಸುವದೋ ತಿಳಿಯಲು ಸಾಧ್ಯವಿಲ್ಲ.

ಚೀನಾದೇಶದಿಂದ ಸರಿಯಾದ ವರ್ತಮಾನ ಬರುವದಿಲ್ಲ. ಚಿಯಾಂಗ್ ಕಾರೆಕ್ (Chiang Karhek) ಎಂಬವರು ೧೯೩೦ರಲ್ಲಿ ಒಂದು ಸರ್ಕಾರವನ್ನು ಸ್ಥಾಪಿಸಿದರು. ಅದಕ್ಕೆ ಕ್ರಿಶ್ಚಿಯನ್ ಜನರಲ್ ಆಗಿರುವ Feng ಎಂಬವರಿಗೂ ಇವರಿಗೂ ಯುದ್ಧ ನಡಿಯುವ ಹಾಗೆ ತೋರುತ್ತದೆ. ನಾಂಕಿಂಗ ಮತ್ತು ಪೆಕಿಂಗ ಎಂಬ ಪಟ್ಟಣಗಳಲ್ಲಿ ದಂಗೆಗಳು ನಡೆಯುತ್ತಿದ್ದು ಜನರಿಗೆ ನೆಮ್ಮದಿಯಿಲ್ಲ. ಚಿಯಾಂಗ ಎಂಬವರು ಪಟ್ಟಕ್ಕೆ ರಾಜೀನಾಮೆ ಕೊಡುವರೆಂತಲೂ ಅವರು ಜನರಿಗೆ ಅಸಮ್ಮತರಾಗಿರುವರೆಂತಲೂ ಅಭಿಪ್ರಾಯವು ತಿಳಿಸಬರುವದು. ಅಮೇರಿಕ ಖುಷ್ಯ ಇಂಗ್ಲಂಡಿನ ಯುದ್ಧಹಡಗಗಳು ಚೀನಾದೇಶದ ಬಂದರುಗಳಲ್ಲಿ ತಮ್ಮ ಜನರ ಜೀವದ ಜಾಗ್ರತೆ ನೋಡುವರೆ ಇರುವವು.

## ಹೊಸ ಶೋಧನೆಗಳು

ಅಮೇರಿಕದ ಕೆಲಿಫೋರ್ನಿಯದಲ್ಲಿ ಡಾಕ್ಟರ ಆಲ್ಬರ್ಟ ಮಿಕಿಲ್ಸನ್ ಎಂಬವರು ವಾಯು ವಗೈರೆ ಪ್ರವೇಶವಿಲ್ಲದ ೧ ಮೈಲು ಉದ್ದವಾದ ಒಂದು ಉಕ್ಕಿನ ಟನಲ್ (Steel tunnel) ನ್ನು ಕಟ್ಟುವರು. ಅದರಿಂದ ಪ್ರಕಾಶವು ಸೆಕೆಂಡಿಗೆ ಎಷ್ಟು ಜೇಗನೆ ಹೋಗುತ್ತದೆಂಬವನ್ನು ಹುಡುಕಿ ತೆಗೆಯುವರು. ಈ ವರೆಗೆ ಈ ಸಂಬಂಧ ಮಾಡಿದ ಪರಿಶೋಧನೆಗಳು ಈ Vacuum ನಲ್ಲಿ ಮಾಡಿದವುಗಳಲ್ಲಿ. ಇತ್ತಲಾಗಿ ಇವರು ಹೊಸತಾಗಿ ನಿರ್ಮಿಸಿದ ಒಂದು ಯಂತ್ರದಿಂದ (Interferometer) ಗ್ರಹಗಳ ಸುತ್ತಳತೆಯನ್ನು ಹುಡುಕಿ ತೆಗೆಯುವರು. ನಮ್ಮ ಭೂಲೋಕದಷ್ಟೆ ಗಾತ್ರವಾದ ಒಂದು ಗ್ರಹವನ್ನು ಇತ್ತೀಚೆಗೆ ಶಾಸ್ತ್ರಜ್ಞರು ಹುಡುಕಿ ತೆಗೆದಿರುವರು. ಮಿಕೆಲ್ಸನವರು ಇತ್ತಲಾಗಿ Botelgouse ಎಂಬ ಗ್ರಹದ ಪರಿಮಾಣವನ್ನು ತೆಗೆದಿರುವರು. ಈ ಗ್ರಹವು ೨೦೦ ಮಿಲಿಯ ಮೈಲು ಉದ್ದ (Diameter) ವೆಂತಲೂ ೧೫ ಮಿಲಿಯ ಸೂರ್ಯನಷ್ಟೇ ದೊಡ್ಡದಾದೀತೆಂಬದಾಗಿಯೂ ೨೦೦ ಮಿಲಿಯ ಭೂಮಿಗಳು ಅದರಷ್ಟು ದೊಡ್ಡವಾಗಲಿಕ್ಕಿಲ್ಲವಾಗಿ ಇವರು ಹೇಳುವರು. ನಮ್ಮ ಕಲಕತ್ತೆಯ ಸರ್. ಸಿ. ವಿ. ರಾಮನ್ ಎಂಬವರು ವಸ್ತುಮಾತ್ರಗಳ ಮೂಲವಾದ ಅಣುಗಳ (Molecules) Energy ಯಾನೆ ಚೈತನ್ಯದ ವಿಷಯ ಶೋಧನೆಯನ್ನು ಮಾಡುವರು.

ಈಗಿನ ಜನಸಮುದಾಯವೂ ವ್ಯಾಪಾರವೂ ಹೆಚ್ಚಿದ್ದರಿಂದ "Kingite" ಸರಕಾರದ ಮಾರ್ಗಗಳ ದುರುಸ್ತಿಯ ಬಗ್ಗೆ

ಎಂಬ ಹೊಸ ಇಟ್ಟಂಗಿಯ ರೀತಿ ಮಣ್ಣು ಮಾಡುವ ವಿಧಾನವನ್ನು ಹುಡುಕಿ ತೆಗೆದಿರುವರು. ಮಣ್ಣನ್ನು ೩೭೦೦ ಡಿಗ್ರಿಯವರೆಗೆ ಬಿಸಿಮಾಡಿ ಅದನ್ನು ಸಿಂಪಡಿಸಿ ಘಟ್ಟಿಮಾಡಿದಲ್ಲಿ ಅದರಷ್ಟು ಒಳ್ಳೆಯ ಮಣ್ಣು ಬೇರೆಯಿಲ್ಲ. ಈ ಮಾರ್ಗಗಳು ಮಾಡುವ ಕ್ರಮದಲ್ಲಿ ಮಾತ್ರ ಶೋಧನೆಯಿಲ್ಲ. ಇಂಗ್ಲಂಡಿಗೂ ಫ್ರಾನ್ಸಿಗೂ ಸಮುದ್ರದ ಕೆಳಗಿನಿಂದ ಮಾರ್ಗ ತಕ್ಕೊಂಡು ಹೋಗುವ ಪ್ರಯತ್ನ ನಡೆಯುತ್ತೀದೆ. ಇತಲಿಯಲ್ಲಿ ೮ ಮಿಲಿಯ ಪವನನ್ನು ಖರ್ಚುಮಾಡಿ ೧೫ ಮೈಲು ಉದ್ದವಾದ ನೆಲದ ಒಳಗೆ ಒಂದು ಹೊಸತಾದ ರೈಲ ಮಾರ್ಗವು ತಯಾರ ಮಾಡುವರೆ ಶುರು ಮಾಡಿಸುವರು. ಇದು ಇನ್ನು ೧೨ ವರ್ಷದಲ್ಲಿ ಸಂಪೂರ್ಣವಾಗುವದು.

---

# ಉಪ್ಪಿನ ಸುಂಕದ ಚರಿತ್ರೆ



(ಶ್ರೀ ಹರಿಸರ್ವೋತ್ತಮರಾಯರು 'ಜನ್ಮಭೂಮಿ' ಪತ್ರಿಕೆಯಲ್ಲಿ ಬರೆದುದು)

ಹಿಂದುಸ್ಥಾನದಲ್ಲಿ ಪ್ರತಿ ಒಬ್ಬ ವ್ಯಕ್ತಿಯೂ ವರ್ಷ ಒಂದಕ್ಕೆ ರೂ. ೦-೫-೪ ಪೈಯಂತೆ ಉಪ್ಪಿನ ಬಗ್ಗೆ ಸುಂಕ ಕೊಡುವನು. ಇಂಗ್ಲಂಡಿನಿಂದ ಬರುವ ಉಪ್ಪು ಇಂಡಿಯದಲ್ಲಿ ಖರ್ಚು ಆಗುವ ಉಪ್ಪಿನ ೩ ನೇ ಒಂದು ಅಂಶ. ಈ ಇಂಗ್ಲಂಡಿನ ೯/೧೦ ನೇ ಅಂಶವು ಬಂಗಾಳದಲ್ಲಿ ಖರ್ಚು. ಈ ಸಂಬಂಧ ಇಂಡಿಯಾದಿಂದ ಒಂದು ಕೋಟಿ ರೂಪಾಯಿ ಹೊರಗೆ ಹೋಗುತ್ತದೆ. ಇಂಡಿಯಾದಲ್ಲಿ ಪಂಜಾಬ, ರಾಜಪುತಾನಾ, ಸಿಂಧುದೇಶ ಮತ್ತು ಕರಾಚಿಯಲ್ಲಿ ಇಂಡಿಯಾಕ್ಕೆ ಬೇಕಾಗುವ ಉಪ್ಪಿಗಿಂತ ಹೆಚ್ಚು ತಯಾರಿಸಿ ಪರಊರಿಗೆ ಕಳುಹಿಸುವಷ್ಟು ಸೌಕರ್ಯವುಂಟು. ಮಾಂಸಾಹಾರಿಯವರಿಗೆ ಉಪ್ಪು ಹೆಚ್ಚು ಬೇಕು. ಮಾಂಸದಲ್ಲಿ ಉಪ್ಪು ಹೆಚ್ಚು. ಅದಕ್ಕಿಂತ ಕಡಿಮೆ ಬಾರ್ಲಿ ಗೋದಿಯಲ್ಲಿ; ಮತ್ತು ಅಕ್ಕಿಯಲ್ಲಿ ಇನ್ನಷ್ಟು ಕಡಿಮೆ. ಈ ಕಾರಣದಿಂದ ಹಿಂದುದೇಶದಲ್ಲಿ ಉಪ್ಪಿನ ಖರ್ಚೇ ಹೆಚ್ಚು. ಬಡ ಜನರಿಗಂತೂ ಉಪ್ಪು ಇನ್ನಷ್ಟು ಹೆಚ್ಚಿಗೆ ಬೇಕು. ಬಡವನು ಉಪ್ಪು ಹೆಚ್ಚು ತಕ್ಕೊಂಡರೆ ಅವನು ಹೆಚ್ಚಿನ ಸುಂಕವನ್ನು ಕೊಟ್ಟ ಹಾಗೆ ಆಯಿತು. ಅವನು ಉಪ್ಪನ್ನು ತಕ್ಕೊಳ್ಳದ ಪಕ್ಷದಲ್ಲಿ ಆರೋಗ್ಯ ಕೆಡುವದು. ಉಪ್ಪು ಕಡಿಮೆ ಆದರೆ ಕುಷ್ಟ ರೋಗವೇ ಮೊದಲಾದ ರೋಗಗಳು ಹೆಚ್ಚುವವು.

ನಮ್ಮ ಈ ಇಂಗ್ಲಿಷ ಸರಕಾರದವರು ಈ ಸುಂಕವನ್ನು ಹಾಕುವದು ಸರಿ ಎಂತಲೂ ಅದಕ್ಕೆ ೨ ಕಾರಣಗಳಿವೆ ಎಂಬದಾಗಿ ಹೇಳುವರು. (೧) ಬಡವರು ನಾಗರೀಕ ಸರ್ಕಾರದ ಸೌಕರ್ಯಗಳಿಗೆ ಬೇರೇನು ಸುಂಕವನ್ನು ಹಿಂದುಸ್ಥಾನದಲ್ಲಿ ಕೊಡುವದಿಲ್ಲ. (೨) ಹಿಂದುಸ್ಥಾನದಲ್ಲಿ ಪೂರ್ವಕಾಲದಿಂದ ಈ ಸುಂಕವನ್ನು ಅರಸರು ಹಾಕಿದ್ದರು. ೧ನೇ ಕಾರಣದ ವಿಷಯ ದಾದಾಭೈ ನವ್ರೋಜಿಯವರು ಈ ಮೊದಲೇ ಪ್ರತ್ಯುತ್ತರ ಕೊಟ್ಟಿರುವರು. ಬ್ರಿಟಿಷ ಸರ್ಕಾರವು ಈ ಬಹು ಕಾಲದ ಲಾಗಾಯತ್ತು ಇದ್ದರೂ ಹಿಂದುಸ್ಥಾನದಲ್ಲಿ ಯಾವದರ ಮೇಲೂ ಸುಂಕಗಳನ್ನು ಕೊಡಲಾರದಷ್ಟು ಬಡವರು ಇರುವರೆಂಬದು ಗವರ್ನಮೆಂಟಿಗೆ ಒಂದು ಕುಂದು. ೨ ನೇ ಕಾರಣವು ಸಹ ನ್ಯಾಯವಾದದ್ದಲ್ಲ. ಯಾವಾಗಲಾದರೂ ಸುಂಕವು ಈಗಿನಷ್ಟು ಜನರಿಗೆ ಪೀಡಿಸಲಿಲ್ಲ; ಇಷ್ಟು ಹೆಚ್ಚಿರಲೂ ಇಲ್ಲ. ಕಂಪನಿಯ ಸರಕಾರದವರ ೫ ನೇ ರಿಪೋರ್ಟಿನಲ್ಲಿ ಈ ಸಂಗತಿಯು ಸರಿಯಾಗಿ ಕಾಣಬರುತ್ತದೆ. ನೇಟಿವ್ ಸರಕಾರದವರ ಅಸಡ್ಡೆ ಮತ್ತು ಆಲಸ್ಯದಿಂದ ಸರ್ಕಾರ ಬಳಿಗೆ ಸುಂಕವು ಏನೂ ತಾಗದೆಯಿದ್ದರೂ ಈಗ ೩ ಮಿಲಿಯ ಪವನಿನಷ್ಟು ಇದರಿಂದ ಉತ್ಪತ್ತಿ ಉಂಟೆಂತಲೂ ಅದನ್ನು ೧೭೭೦ ರಿಂದ ಪ್ರತ್ಯೇಕಿಸಬೇಕೆಂತಲೂ ಅದರಿಂದ ಇನ್ನು ೧ ಮಿಲಿಯ ಪವನಿನ ಉತ್ಪತ್ತಿ ಪಡೆಯಬಹುದೆಂತಲೂ ಅವರ ಅಭಿಪ್ರಾಯ ತೋರುತ್ತದೆ.

## ಕಂಪನೀ ಸರಕಾರವೂ ಉಪ್ಪಿನ ಸುಂಕವೂ

ಕ್ಲೈವನ ಸಮಯದಲ್ಲಿ ಇಸ್ಟ ಇಂಡಿಯಾ ಕಂಪನಿಯ ನೌಕರರು ಖಾಸಗಿ ವ್ಯಾಪಾರವನ್ನು ಮಾಡುತ್ತಿದ್ದರು. ಆಗ್ಯೆ ಇಂಡಿಯಾದಲ್ಲಿ ವರಹಗಳು ಬೆಳೆಯುವ ಮರಗಳು (Regoda Tree) ಇದ್ದು ಅವುಗಳನ್ನು ಅಲ್ಲಾಡಿಸುತ್ತಲೇ ರೂಪಾಯಿಗಳ ಸುರಿಮಳೆ ಬೀಳುತ್ತಿತ್ತು. ಕ್ಲೈವನು ನೌಕರರು ವ್ಯಾಪಾರವನ್ನು ಮಾಡುವದು ಸರಿಯಲ್ಲ ಎಂಬದಾಗಿ ಕಂಪ

ನಿಯ ಡೈರೆಕ್ಟರರಿಗೆ ತಿಳಿಸಿದರೂ ಡೈರೆಕ್ಟರರು ಅದಕ್ಕೆ ಒಪ್ಪಲಿಲ್ಲ. ಪರವೂರಿಗೆ ಹೋಗಿ ಕಷ್ಟಪಡುವ ನೌಕರರು ಊರಿಗೆ ಬರುವಾಗ್ಯೆ ಈ ವ್ಯಾಪಾರವಿಲ್ಲದಿದ್ದರೆ ಅವರಿಗೆ ನ್ಯಾಯವಾದ ಆರ್ಥಿಕ ಸ್ವಾತಂತ್ರ್ಯ ಸಿಕ್ಕಲಿಕ್ಕಿಲ್ಲ ಎಂಬದಾಗಿ ಅವರು ಹೇಳಿದರು. ಇಂಡಿಯದೇಶದೊಳಗಣ ಮುಖ್ಯ ವ್ಯಾಪಾರಗಳು ಹೋಗಿ ನಮ್ಮ ಅಡಿಕೆ ಮತ್ತು ಉಪ್ಪು ಇವೆರಡು ಉಳಿದಿದ್ದವು. ಮಿರಜಾಫರನ ಕಾಲದಲ್ಲಿ ಉಪ್ಪಿನ ವ್ಯಾಪಾರವೆಲ್ಲವೂ ಇಂಗ್ಲಿಷ ನೌಕರರ ಕೈಸೇರಿತು. ಅವರಿಗೆ ಊರ ಅರಸರ ಸುಂಕವಿರಲಿಲ್ಲ. ಮಿರಜಾಫರರ ನೌಕರರು ಸುಂಕವನ್ನು ವಸೂಲು ಮಾಡುವರೆ ಬಂದರೆ ಕಂಪನಿಯ ನೌಕರರೂ ಗುಮಾಸ್ತರೂ ಅವರನ್ನು ಪೀಡಿಸಲಾರಂಭಿಸಿದರು. ಈ ಕಂಪನಿ ನೌಕರರು ಊರಿನ ಅರಸರಿಗೆ ಮನ್ನಣೆಕೊಡಲಿಲ್ಲ ಅವರ ಕಾನುನುಕಾಯಿದೆಗೆ ಗಮನವೇ ಕೊಡಲಿಲ್ಲ. ೧೭೬೪ ರಲ್ಲಿ ಬಂಗಾಳಕ್ಕೆ ಗ್ರೆ (Gray) ಎಂಬ ಅಂಗ್ಲಾಳದವನು "ಈ ಗುಮಾಸ್ತರು ಕಲ್ಕತ್ತೆಯಲ್ಲಿ ಬಹಳ ಬಡತನವನ್ನು ನಟಿಸಿ ಹರಕು ವಸ್ತ್ರವನ್ನು ಉಟ್ಟುಕೊಂಡರೂ ಬಂಗಾಳ ದೇಶಕ್ಕೆ ಹೋಗುತ್ತಲೇ ರೈತರನ್ನೂ ಸಾಹುಕಾರರನ್ನೂ ಬಾಧಿಸುವರು. ಬಹಳ ದುಂದುಗಾರಿಕೆಯಲ್ಲಿ ಜೀವಿಸುವರು. ಅಪಮರ್ಯಾದೆಯಾಗುವ ರೀತಿ ಊರಜನರ ನೌಕರರಿಗೆ ಉಪದ್ರವ ಕೊಡುವರು" ಎಂಬದಾಗಿ ಬರೆದಿರುವನು. ಕ್ಲೈವನು ಇದನ್ನು ನಿಲ್ಲಿಸುವದಕ್ಕೆ ಮಾಡಿದ ಪ್ರಯತ್ನಗಳು ಸಫಲವಾಗಲಿಲ್ಲ. ಆದರೆ ದೇಶದ ಒಳಗಿರುವ ವ್ಯಾಪಾರವನ್ನು ಸರಿಗೊಳಿಸಲು ಡೈರೆಕ್ಟರರು ಹೇಳಿದನಂತರ ಕ್ಲೈವನ "Society of trade) ವ್ಯಾಪಾರದ ಸಂಘವೆಂಬದನ್ನು ಸ್ಥಾಪಿಸಿ ಅದರಲ್ಲಿ ೬೦ ಪಾಲುಗಳನ್ನು ಮಾಡಿ ಕೌನ್ಸಿಲರ ಕರ್ನಲ್ ಸ್ಮಿತ್ ಮತ್ತು ಸರ್ ರಾಬರ್ಟ ಬೇಕರ ಎಂಬವರಿಗೆ ೩೨ ಪಾಲುಗಳು, ಕ್ಲರ್ಜಿಯವರಿಗೆ ೧೪೩ ಪಾಲುಗಳು, ಸರ್ಜನರು ಸೈನ್ಯದ (Magors) ಮೇಜರ್ಸರಿಗೂ ಪೆಕ್ಟರರಿಗೂ (Factors) ೯ ಪಾಲುಗಳು, (Mr Bolts) ಬೊಲ್ಟ್ಸನಿಗೆ ೪೩ ಪಾಲುಗಳು ಹೀಗೆ ಕ್ಲೈವನು ಪಾಲುಗಳನ್ನು ವಿಂಗಡಿಸಿ ಅವರಿಗೆ ೧ ವರ್ಷ ವ್ಯಾಪಾರ ಮಾಡುವರೆ ಶಾಸನವನ್ನು ಕೊಟ್ಟನು.

ಈ ಸಂಘಕ್ಕೆ ಕಲ್ಕತ್ತೆಯಲ್ಲಿ ಮಾತ್ರ ಉಪ್ಪನ್ನು ಮಣಕ್ಕೆ ರೂ. ೨ ರ ಪ್ರಕಾರ ಕ್ರಯಕ್ಕೆ ಪಡೆಯುವ ಹಕ್ಕಿತ್ತು. ಅಡಿಕೆ ಕ್ರಯದ ಮೇಲೆ ಶೇಕಡಾ ೧೫ ರ ಸುಂಕವನ್ನೂ ಉಪ್ಪಿನಮೇಲೆ ಶೇಕಡಾ ೫೦ ರ ಸುಂಕವನ್ನೂ ಕಂಪನಿಗೆ ಕೊಡಬೇಕೆಂತಲೂ ನೌಕರರಿಗೆ ಮುಸಾಫೆಯಿರಬಾರದಾಗಿಯೂ ಕ್ಲೈವನು ವಿಲೆವಾರಿ ಮಾಡಿದನು.

ಇದಕ್ಕೆ ಡೈರೆಕ್ಟರರು ಸಮ್ಮತಿಸಲಿಲ್ಲ. ಕ್ಲೈವನು ಈ ಸಂಘವನ್ನು ಬಿಟ್ಟನು. ಈ ರೀತಿ ಒಂದು ವರ್ಷಕ್ಕೆ ಮಾತ್ರ ಉಪ್ಪು ಮಾರುವ ಹಕ್ಕು ಕೊಡುವದು ಸರಿಯಲ್ಲವೆಂತಲೂ ಆದರೂ ಸುಂಕತೆಗೆದು ಹಾಕುವ ಅಗತ್ಯ ತೋರುವದಿಲ್ಲವೆಂತಲೂ ಡೈರೆಕ್ಟರರು ಅಭಿಪ್ರಾಯಪಟ್ಟರು ಈ ಕಾರಣ ೧೭೬೮ರಲ್ಲಿ ಯಾರೊಬ್ಬನೂ ೫೦,೦೦೦ ಮಣಕ್ಕಿಂತ ಹೆಚ್ಚಿನ ಉಪ್ಪನ್ನು ತಯಾರು ಮಾಡಬಾರದಾಗಿಯೂ ೧೦೦ ಮಣಕ್ಕೆ ೩೦ ರೂಪಾಯಿ (Sicca) ಯಂತೆ ಸುಂಕಕೊಡಬೇಕಾಗಿಯೂ ನಿಶ್ಚಯಿಸಲಾಯಿತು. ಆದರೆ ಇದರಿಂದ ಹೆಚ್ಚಿನ ಸುಂಕ ಬರಲಿಲ್ಲ. ಆದ್ದರಿಂದ ಹೆಸ್ಟಿಂಗ್ಸರು ಉಪ್ಪು ತಯಾರ ಮಾಡುವ ಹಕ್ಕನ್ನು ಒಬ್ಬರಿಗೆ ಕೊಟ್ಟರು. ಉಪ್ಪನ್ನು ಅವರೇ ಕಂಪನಿಗೋಸ್ಕರ ತಯಾರ ಮಾಡಬೇಕು. ಈ ರೀತಿ ೫ ವರ್ಷದವರೆಗೆ ಒಬ್ಬನಿಗೆ ಹಕ್ಕು ಕೊಡಲಾಯಿತು. ಇದರಿಂದಲೂ ಹೆಚ್ಚಿನ ಮುಸಾಫೆ ಹುಟ್ಟಲಿಲ್ಲ. ಉಪ್ಪನ್ನು ಕಂಪನಿಯ ಏಜಂಟರಲ್ಲಿ ಒಬ್ಬರು ತಯಾರ ಮಾಡಬೇಕು. ಅವರಿಗೇನೆ ಅದನ್ನು ಮಾರಬೇಕು. ಅದನ್ನು ಈ ಏಜಂಟರು ಮುಸಾಫೆಯಿಟ್ಟು ಒಂದೇ ಸಲ ಮಾರಬೇಕು. ಕಂಪನಿಗೆ ಇದರಿಂದಲೂ ಪ್ರಯೋಜನವಾಗಲಿಲ್ಲವಾದುದರಿಂದ ಆಗಿನ ಗವರ್ನರರಾದ ಲಾರ್ಡ ಕಾರ್ನವಾಲಿಸರು ಸ್ವಲ್ಪ ಸ್ವಲ್ಪ ಉಪ್ಪನ್ನು ಮಾರಲಾರಂಭಿಸಿದರು. ಮಿತವಾಗಿ ಮಾರಿದ್ದರಿಂದ ಕಂಪನಿಯ ಮುಸಾಫೆ ಹೆಚ್ಚಿತು. ಕಂಟ್ರಾಕ್ಟಿನಕಿಂತ ಹೆಚ್ಚಿನ ಉಪ್ಪು ತಯಾರಿಸಿದರೆ ಕಂಪನಿಯವರು ಹೆಚ್ಚಿನ ಹಣಕೊಟ್ಟು ತಯಾರಿಸುವವರು ಗುಟ್ಟನಿಂದ ಮಾರಿದಂತೆ ಪಡಕೊಂಡರು.

ನಂತರದಲ್ಲಿ ಈ ವಿಷಯ ನಡೆದ ವಿಚಾರದಲ್ಲಿ ಒಬ್ಬನಿಗೆ ಉಪ್ಪು ಮಾರುವ ಹಕ್ಕು ಕೊಟ್ಟದ್ದರಿಂದ ಊರಿನಲ್ಲಿ ಉಪ್ಪಿನ ಖರ್ಚು ಕಡಿಮೆ ಆಯಿತು ಈ ಸಂಗತಿ ಕೆಳಗಿನ ಪಟ್ಟಿಯಿಂದ ತಿಳಿಯಬಹುದು.

ಪ್ರತಿಒಬ್ಬನಿಗೆ ಪ್ರತಿವರ್ಷಕ್ಕೆ ಹತ್ತಿದ ವೆಚ್ಚದವಿವರವು—

| ವರ್ಷ | ರಾತ್ತುಗಳು |
|---|---|
| ಕ್ರಿ.ಶಕ ೧೭೯೩ | ೧೧.೯ |
| ೧೮೦೩ | ೧೧.೨ |

| | |
|---|---|
| ೧೮೧೩ | ೧೧-೬೭ |
| ೧೮೨೩ | ೧೧-೪೪ |
| ೧೮೩೩ | ೮-೭೪ |
| ೧೮೪೩ | ೯ |

ಈ ರೀತಿ ಒಬ್ಬ ಬೇಸಾಯಗಾರನಿಗೆ ೨ ತಿಂಗಳ ಉತ್ಪತ್ತಿಯು ವರ್ಷದ ಉಪ್ಪಿನ ಖರ್ಚಿಗೆ ಸಾಕಾಗಲಿಲ್ಲ. ಸೈನ್ಯದವರಿಗೆ ಒಬ್ಬೊಬ್ಬನಿಗೆ ೧೭ ರತ್ತಲ ಉಪ್ಪು ಕೊಡುತ್ತಿದ್ದರು. ಈ ರೀತಿ ತಯಾರಮಾಡಿದ ಉಪ್ಪಿನಲ್ಲಿಯೂ ಮಣ್ಣು ಬೆರಿಸಿಯಿತ್ತು. ಸಮುದ್ರದ ಕರಾವಳಿಯಲ್ಲಿರುವ ಮದ್ರಾಸಿನಿಂದಲೂ ಸಿಂಹಳ ದ್ವೀಪದಿಂದಲೂ ಉಪ್ಪು ಬಂಗಾಳಕ್ಕೆ ಹೋಗದ ಹಾಗೆ ಮಣ ೧ಕ್ಕೆ ರೂಪಾಯಿ ೩-೦-೦ ಸುಂಕ ಹಾಕಿದರು. ಬಂಗಾಳ ದಲ್ಲಿ ಅಕ್ಕಿ ಇತ್ತು. ಮದ್ರಾಸಿನಲ್ಲಿ ಉಪ್ಪು ಮಾರಲು ಸಾಧ್ಯ ವಿಲ್ಲ. ಒಂದುಕಡೆಯಲ್ಲಿ ಉಪ್ಪು ಹಾಳು. ಇನ್ನೊಂದು ಕಡೆ ಯಲ್ಲಿ ಅಕ್ಕಿ ಹಾಳು. ಸಿಂಹಳದ್ವೀಪದಲ್ಲಿ ಜಾಸ್ತಿ ಉಪ್ಪನ್ನು ಸರ್ಕಾರದವರು ನಾಶ ಮಾಡಿದರು.

ಈ ರೀತಿ ಇದ್ದ ೩ ರೂ. ಸುಂಕವು ಇಂಡಿಯಾದ ಉಪ್ಪಿನಮೇಲೆ ಮಾತ್ರವಲ್ಲ ಎಲ್ಲ ಪರದೇಶಿ ಉಪ್ಪಿನಮೇಲೆ ಇದೇ ದರದ ಸುಂಕವು ಇತ್ತು. ಇಂಗ್ಲೆಂಡಿನಿಂದ ಬಂದ ಉಪ್ಪಿಗೆ ಶೇಕಡಾ ೩೦ ಗಿಪ್ಪದ ವಜಾ ಕೊಟ್ಟು ಬಾಕಿ ಉಪ್ಪಿನ ಮೇಲೆ ಶೇಕಡಾ ೩೦ ಸುಂಕ ವಿತ್ತು. ಈ ೩೦ ತಿಂಗಳು ಸಮಯ ಕೊಟ್ಟದ್ದರಿಂದ ಆಮದಿಗೆ ತೊಂದರೆ. ಸರ್ಕಾರ ಸುಂಕವು ಹೆಚ್ಚಿದ ಕೂಡಲೇ ಕಳ್ಳ ಉಪ್ಪು ತಯಾರಾಯಿತು. ಆದ್ದರಿಂದ ಹೊಸ ತೆರಿಗೆಗಳೂ ಹೊಸ ಕಾನೂನೂ ಪಾಸಾದವು. ಯಾರಾದರು ಉಪ್ಪು ತಯಾರ ಮಾಡುವ ಸಂಗತಿಯನ್ನು ಗೊತ್ತಿದ್ದು ತಿಳಿಸಲಿಲ್ಲವಾದರೆ ಅವ ಗೆ ರೂ. ೫೦೦೦ ವರೆಗೆ ಜುಲ್ಮಾನೆ (Regulation VI of 1801) ವಿಧಿಸಲಾಯಿತು. ಒಂದು ಕೊಡಪಾನ ಉಪ್ಪಿನ ನೀರನ್ನು ಬೇಯಿಸಿದರೆ ರೂ. ೫೦೦ ರ ವರೆಗೆ ಜುಲ್ಮಾನೆ. ಉಪ್ಪಿನ ನೀರಿನಲ್ಲಿ ಒಂದು ಹುಲ್ಲನ್ನು ಹಾಕಿ ಅದನ್ನು ಸುಟ್ಟರೆ ಅದಕ್ಕೂ ಶಿಕ್ಷೆ ವಿಧಿಸಲಾಯಿತು. ಬ್ರಿಟಿಶರ ಆಳುವಿಕೆಯಲ್ಲಿ ಉಪ್ಪಿನ ಕ್ರಯಕ್ಕೆ ಊರಿನ ಅರಸರ ಆಳುವಿಕೆಯಲ್ಲಿ ಇರುವ ಕ್ರಯದ ೪ ಪಾಲು ಹೆಚ್ಚು. ಅದಕ್ಕೆ ತಗಲುವ ಖರ್ಚಿನ ಶೇಕಡಾ ೬೦೦ ರಂತೆ ಮಾರುವ ಮೌಲ್ಯವಾಯಿತು. ಡೈರೆಕ್ಟರರಿಗೆ ಇದು ಸರಿ ಬೀಳಲಿಲ್ಲ. ಹೆಚ್ಚು ಉಪ್ಪು ಮಾರಿ ಸ್ವಲ್ಪ ಮುನಾಫೆ ಮಾಡ ಬೇಕೆಂತ ಅವರ ಅಭಿಪ್ರಾಯ. ತಮ್ಮ ನೌಕರರು ಕಂಪನಿಯ ಕಡೆಗೂ ಊರ ಅರಸನ ಕೂಡೆಯೂ ತಮಗೆ ಇರುವ ಕರ್ತವ್ಯ ವನ್ನು ಮರೆತು ಬಿಟ್ಟು ಅನ್ಯಾಯದ ದ್ರವ್ಯಾರ್ಜನೆಯಲ್ಲಿರುವ ರೆಂತ ಅವರು ಅಭಿಪ್ರಾಯಪಟ್ಟರು. ಇಲ್ಲಿಯ ಉಪ್ಪು ತಯಾರ ಮಾಡುವದನ್ನು ತಪ್ಪಿಸುವ ಬಗ್ಗೆ ಹೊಸತಾದ ಒಂದು ಉಪಾ ಯವನ್ನು ಅವರು ಹುಡುಕಿ ತೆಗೆದರು. ಇದರಿಂದ ಇಂಗ್ಲಂಡಿನ ಹಡಗಗಳಿಗೂ ಪ್ರಯೋಜನವಾಯಿತು. ಹಡಗಗಳು ಸರಿಯಾಗಿ ಚಲಿಸುವಂತೆ ಅವುಗಳ ಕೆಳಭಾಗದಲ್ಲಿ ಭಾರವಾದ ಪದಾರ್ಥ ವನ್ನು ಹಾಕುವದುಂಟು. ಅದಕ್ಕೆ ಉಪ್ಪು ಉಪಯೋಗಿಸುವ ಹಾಗೆ ತಮ್ಮ ಜನರಿಗೆ ಸಹಾಯ ಮಾಡಲು ಅವರಿಗೆ ಅನು ಕೂಲವಾಯಿತು. ಇಂಗ್ಲಂಡದಲ್ಲಿ ಉಪ್ಪಿಗೆ ಟನ್ (Ton) ಒಂದಕ್ಕೆ ೨೦ ಸಿಲ್ಲಿಂಗ, ಅಲ್ಲಿಂದ ತರುವ ಖರ್ಚು ೨೦ ಸಿಲ್ಲಿಂಗ, ಇನ್ಸುರೆನ್ಸ ವಗೈರೆ ಖರ್ಚು ೪ ಶಿಲಿಂಗ, ಅಂದರೆ ಒಟ್ಟಾಗಿ ಟನ್ನಿಗೆ ೪೪ ಶಿಲಿಂಗ ಉರ್ಚು. ಬಂಗಾಳದಲ್ಲಿ ತಯಾರಾಗುವ ಉಪ್ಪಿಗೆ ಟನ್ ಒಂದಕ್ಕೆ ೫೪೦ ಶಿಲಿಂಗು ತಗಲುತ್ತಿತ್ತು.

ಡೈರೆಕ್ಟರರು ಈ ಕಾರಣದಿಂದ ಉಪ್ಪನ್ನು ಅಂಗ್ಲಾಳದಿಂದ ಕಳುಹಿಸುವದೇ ಒಳ್ಳೇದೆಂತಲೂ ಬಂಗಾಳದಲ್ಲಿ ತಯಾರಾಗು ವದು ಅಗತ್ಯವಿಲ್ಲವೆಂತಲೂ ಅಪ್ಪಣೆ ಕೊಟ್ಟರು. ೧೮೪೫ರಲ್ಲಿ ೫,೬೨,೬೧೬ ಮಣ ಉಪ್ಪು ಹಿಂದು ದೇಶಕ್ಕೆ ಅಂಗ್ಲಾಳದಿಂದ ಬಂತು. ೧೮೫೧ರಲ್ಲಿ ೧೮,೫೦,೭೬೨ ಮಣ ಉಪ್ಪು ಬಂತು.

ನಂತರ ಲೊರ್ಡ ಮೋರ್ಲೆಯವರು ಸುಂಕ ಕಡಿಮೆ ಮಾಡಿದ್ದು ಮಾನ್ಯ ಗೋಖಲೆಯವರು ಪ್ರತಿನಿಧಿ ಸಭೆಯಲ್ಲಿ ಈ ವಿಷಯ ಭಾಷಣವನ್ನು ಕೊಟ್ಟ ಸಂಗತಿ ವಾಚಕರಿಗೆ ಗೊತ್ತಿರಬಹುದು.

## ಗೊಲ್ಲನ ಸೊಲ್ಲು

ಸಂಗ್ರಾಹಕರು:— ಶ್ರೀ. ಜಿ. ಟಿ. ರಾಜರತ್ನಂ, ಬೆಂಗಳೂರು

ಸುಳ್ಳು ನಮ್ಮಲ್ಲಿಲ್ಲ । ಸುಳ್ಳೇ ನಮ್ಮನೆ ದ್ಯಾವ್ರು ॥ ಪ ॥
ಇರುವೆ ಮಣ್ಣ ಕಲಸೋದ ಕಂಡೆ, ಗೊದ್ದ ಗೋಡೆ ಹಾಕೋದ ಕಂಡೆ
ಮೆಕ್ಕೆಕಾಯಿ ಕಂಡೆನಣ್ಣ—ಹ್ಹ—ಮೆಕ್ಕೆಕಾಯಿ ಕಂಡೆನಣ್ಣ
ಕುಕ್ಕೆಗಾತ್ರವಾ ॥ ೧ ॥
ಬೆಕ್ಕು ಇಟ್ಟ ಕಲಸೋದ ಕಂಡೆ, ಇಲೀ ರೊಟ್ಟಿ ತಟ್ಟೋದ ಕಂಡೆ
ಮೂಗಳಿಬೇರ ಕಂಡೆನಣ್ಣ—ಹ್ಹ—ಮೂಗಳಿಬೇರ ಕಂಡೆನಣ್ಣ
ನೇಗಿಲಗಾತ್ರವಾ ॥ ೨ ॥
ಆನೆ ಪೊಟ್ಟೆ ಹಾಕೋದ ಕಂಡೆ, ಕಪ್ಪೆ ಅದನು ಸಾಕೋದ ಕಂಡೆ
ಗೆಣಸಿನ ಬೀಜ ಕಂಡೆನಣ್ಣ—ಹ್ಹ—ಗೆಣಸಿನ ಬೀಜ ಕಂಡೆನಣ್ಣ
ಮೆಣಸನ ಗಾತ್ರವಾ ॥ ೩ ॥
ಕುರಿಯ ಇಂಡಲಿ ಟಗರ ಕಂಡೆ ।
ಮರದ ಕೊನೆಯಲಿ ಚಿಗರ ಕಂಡೆ ।
ಬೆರಳ ತುದಿಯಲಿ ಉಗುರ ಕಂಡೆ
ನಾ ಕಂಡೆ ಮಹಾದ್ಭುತವ ॥

## ಹೆಣ್ಣುಮಕ್ಕಳ ಹಾಡುಗಳು

ಸಂಗ್ರಾಹಕರು:— ಶ್ರೀ. ವೆಂಕಟರಾವ ಕುಲಕರ್ಣಿ, ಧಾರವಾಡ

ಸಂಜೆಯು ಸಿರಿಬಾರ ನಂದದೀವಿಗೆ ಬಾರ
ಕಂದನುಳ್ಳವರ ಮನೆಗ್ಹೋಗ । ಲಕುಮಿ ತಾಯವ್ವ
ಸಂಜೆ ನಿನ ರಕ್ಷಿ ಇಡಬಾರ ॥
ಯಾಲಕ್ಕಿ ಮಾಟದ ಎರಡಂಗಿ ಹಾಕ್ಯಾಳ
ಎಲೆ ಬಳ್ಳಿಯೊಳಗೆ ಸುಳಿದಾಳ । ಸುಳಿದಾಳ ಕಂದಯ್ನ ।
ಕೈಬೀಸಿ ಲಕ್ಷ್ಮಿ ಕರೆದಾಳ ॥

## ಹಂತಿಯ ಹಾಡುಗಳು

೧

ಸಂಗ್ರಾಹಕರು:- ಶ್ರೀ. ವಾ. ಗು. ಜೋಶಿ, ಕ. ತ. ಸಂಘ, ರಾಯಚೂರು

ವಲ್ಕ ಮಲ್ಕದ ವಲ್ಕ ಚಿಲ್ಕದ ಕಣ್ಣಿ
ಅದ ನಮ್ಮ ಬಸವಾ ಹಂತಿಯ ಕಣ್ಣಿ ॥
ಆರುತಿ ಹಣಿಮ್ಯಾಲೆ ಚಂದ್ರದ ಬೊಟ್ಟೊ
ತರಕ ತರಕ ಚಂದ ಅರಕಿನ ಪೊಟ್ಟೊ ॥
ತಾಯಿ ಭೂಮಿ ತಾಯಿ ಏನಂಬುತಾಳ
ವಾಲಿಕೊಪ್ಪಿಟ್ಟುಕೊಂಡು ಒಡಾಡತಾಳ ॥
ಆ ಕಣದ ಹುಲಸು ಈ ಕಣಕ ಬರಲಿ
ಕಡೆಗಣದ ಹುಲಸು ನಡುಗಣಕ ಬರಲಿ ॥
ಚಂದ್ರಾಮನಂತೆ ಕಣಮಾಡಬೇಕು
ಬಂಡಿಗಾಲಂತೆ ಬಣವಿ ಒಟ್ಟಬೇಕು ॥

೨

ಸಂಗ್ರಾಹಕರು:— ಶ್ರೀ. ರಾ. ಶ್ರೀ. ಅಸರಂಜಿ, ಹುಬ್ಬಳ್ಳಿ

ಹಳ್ಳದ ದಂಡಿಲಿ ಹಸರು ಬಣ್ಣದ ಗುಬ್ಬಿ ।
ಬಿಸಿಲಿಗೆ ಬಾಯಿ ತೆರೆದಾವೋ ।
ಬಿಸಿಲಿಗೆ ಬಾಯಿ ತೆರೆದಾವೋ ಆ ಗುಬ್ಬಿ
ಕುಶಲದ ನಗುವ ನಗತಾವೋ ॥ ೧ ॥
ಹೋಳಿಹುಣ್ಣಿವಿ ಬಂತಂತ ಹೋಳೀಗಿ ಮಾಡ್ಯಾಳ ।
ಬೋಳೆಮ್ಮಿ ತುಪ್ಪ ಕಾಸ್ಯಾಳ ।
ಬೋಳೆಮ್ಮಿ ತುಪ್ಪ ಕಾಸ್ಯಾಳ ನನ್ನ ಗೆಣತಿ ।
ಒಳಬಾಯಿ ಹಿಡಿದು ಉಣಸ್ಯಾಳ ॥ ೨ ॥

## ಬೀಸುವ ಪದಗಳು

ಸಂಗ್ರಾಹಕರು:— ಶ್ರೀಮತಿ ಗೌರವ್ವಾ ಗೋವಿಂದರಡ್ಡಿ ಚಂದರಗಿ, ಧಾರವಾಡ

ಗರಡೀಯ ಮನಿಮುಂದ ಹಾದು ಹೋಗುವನ್ಯಾರ ।
ಕೋಗಿಲ ಬಣ್ಣದ ನಡುಕಟ್ಟ
ಕೋಗಿಲ ಬಣ್ಣದ ನಡುಕಟ್ಟ । ನಮ್ಮಣ್ಣ
ಹಾರಿ ಇಳಿದಾನ ಗರಡೀಯ ॥
ಕುಸ್ತೀಯ ಕಣದಾಗ ಸಿಸ್ತಾಗಿ ನಿಂತಾನ
ಅಗಸೀಯ ತೋಳ್ಹಿಡದ ನಗತಾನ
ಅಗಸೀಯ ತೋಳ್ಹಿಡದ ನಗತಾನ । ನಮ್ಮಣ್ಣ
ಗದ್ದರಿಸಿ ಗಡಿಯ ಒಗದಾನ ॥

## ಜೋಗುಳದ ಹಾಡು

ಸಂಗ್ರಾಹಕರು:— ಶ್ರೀ. ವತ್ಸಲಾ ಜೋಶಿ, ಬಾಗಲಕೋಟೆ

ಜೋಜೋ ಕಂದಮ್ಮಾ । ಎಳೆ ಮಗುವೇ । ಕುಲಕೆ ಭೂಷಣ ನೀನೆ ॥ ಪಲ್ಲ ॥
ಸುಂದರ ಸುಕುಮಾರಾ ! ಇಂದು ನೀ ॥ ಆಡುತಲಿರು ನೀ ಕಂದಾ ॥ ೧ ॥ ಜೋಜೋ ॥
ಹಸರಂಗಿಯ ನಾನು । ಹಸಗೂಸೇ । ತೊಡಸಿದೆ ನಿನಗೀಗಯ್ಯಾ ॥ ೨ ॥ ಜೋಜೋ ॥
ಎರಕೊಂಡಿರುತಿರುವಿ । ಸುರುಚಿರನೇ । ಸರಸದೊಳಾಡುತ ನೀನು ॥ ೩ ॥ ಜೋಜೋ ॥
ನಗೆಮೊಗದಿಂದಿರುವಿ । ಸುಗುಣನಿಧೇ । ಬಗಬಗೆ-ಯಿಂದಾಡುವದೈ ॥ ೪ ॥ ಜೋಜೋ ॥

# ಸಾಹಿತ್ಯಲೋಕ

**ಜೈನವೀರೋಂಕಾ ಇತಿಹಾಸ ಔರ ಹಮಾರಾ ಪತನ;** ಲೇಖಕ:— ಅಯೋಧ್ಯಾಪ್ರಸಾದ ಗೋಯಲೀಯ "ದಾಸ" ಪ್ರಕಾಶಕ— ಜೈನಮಿತ್ರಮಂಡಲ; ದರೀಭಾ, ದಿಲ್ಲಿ:— ಡಬಲಕ್ರೌನ ಆಕಾರ. ೧೫೦ ಪೃಷ್ಠಗಳು.

"ಹಮಾರಾಪತನ":-ನಮ್ಮ ಅವನತಿಯು; ಇದನ್ನು ೩೬ ಪೃಷ್ಠಗಳಲ್ಲಿ ಸಂಕ್ಷಿಪ್ತವಾಗಿಯೂ, ಮರ್ಮಭೇದಿಯಾಗಿಯೂ, ಒಳ್ಳೇ ಸರಸವಾದ ಭಾಷೆಯಲ್ಲಿಬರೆದಿದೆ. ಇದರಲ್ಲಿ ನಮ್ಮ ಹಿಂದವಾಸಿಗಳ ಅವನತಿಯು ಹೇಗೆ ಆಯಿತು, ನಮ್ಮ ಅವನತಿಯನ್ನು ಸಾಧಿಸಿಕೊಳ್ಳುವದಕ್ಕೆ ಯೋಗ್ಯ ಶಿಕ್ಷಣ ಪ್ರಬಂಧವು ಇಂಗ್ಲೀಷರಿಂದ ಹೇಗೆ ಮಾಡಲ್ಪಟ್ಟಿತು, ಅದರಿಂದ ನಾವು ನಮ್ಮ ಧರ್ಮ, ದೇಶ, ಸ್ವಾತಂತ್ರ್ಯ, ಸಂಸ್ಕೃತಿ ಇವೆಲ್ಲವುಗಳನ್ನು ಹೇಗೆ ಕಳಕೊಂಡು ಕೂತೆವು ಎಂಬದರ ವಿಷಯವಾಗಿ ಬರೆಯಲ್ಪಟ್ಟಿದೆ. ಒಂದೇ ಮಾತಿನಲ್ಲಿ ಹೇಳುವುದೆಂದರೆ ಬ್ರಿಟಿಷರ ಆಳುವಿಕೆಯಿಂದ ಆದ ಹಿಂದುಸ್ಥಾನದ ಹೀನ ದೀನ ಸ್ಥಿತಿಯು ಈ ೩೬ ಪುಟಗಳನ್ನು ಓದುವದರಿಂದ ಚಿತ್ರದಂತೆ ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಈ ತರದಿಂದ ವಾಚಕರ ಮನಸ್ಸಿನಲ್ಲಿ ಜಾಗೃತೆಯನ್ನುಂಟುಮಾಡಿ ಮುಂದೆ "ಜೈನೀ ಅಹಿಂಸಾ" ಈ ಶೀರ್ಷಕದ ಕೆಳಗೆ ಜೈನಧರ್ಮದ ಅಹಿಂಸಾತತ್ವವನ್ನು ಸವಿಸ್ತರವಾಗಿ ವರ್ಣಿಸಿ ಅದರ ಮಹತ್ವವನ್ನು ವಾಚಕರ ಮನಸ್ಸಿನಲ್ಲಿ ಬಿಂಬಿಸಿರುವರು.

"ಜೈನವೀರೋಂಕಾ ಇತಿಹಾಸ"— ಜೈನವೀರರ ಇತಿಹಾಸವು:— ಇದು ಒಂದು ನೂರು ಪೃಷ್ಠಗಳಲ್ಲಿ ಬರೆದಿದೆ. ಇದರಲ್ಲಿ ಎಷ್ಟೋ ಆದರ್ಶವೀರರ ವೀರಕೃತ್ಯಗಳ ವಿವರಣೆ ಇರುವದು. ಗಂಗ ಚಲುಕ್ಯರಲ್ಲಿ ಕೆಲ ಕನ್ನಡ ಕಡುಗಲಿಗಳ ಚರಿತ್ರೆಗಳೂ ಇವೆ. ನಮ್ಮ ಅವನತಿಯನ್ನು ನಮ್ಮ ದೀನಸ್ಥಿತಿಯನ್ನು ಅರಿತುಕೊಂಡು ನಿರಾಶರಾದ ವಾಚಕರ ಮನಸ್ಸನ್ನು ಹುರಿದುಂಬಿಸುವದಕ್ಕೆ ಈ ಇತಿಹಾಸವು ಒಳ್ಳೇ ಸಹಾಯ್ಯಕವಾಗುತ್ತದೆ. ಲೇಖಕರು ವಿಷಯದ ಹೊಂದಿಕೆಯನ್ನು ಒಳ್ಳೇ ಕ್ರಮವಾಗಿಯೂ ಯೋಗ್ಯವಾಗಿಯೂ ಮಾಡಿರುವರು. ಈ ತರದ ಪುಸ್ತಕಗಳು ಹಿಂದುಸ್ಥಾನದ ಈಗಿನ ಸ್ಥಿತಿಯಲ್ಲಿ ಒಳ್ಳೇ ಉಪಯುಕ್ತವಾಗಿವೆ. ಇದನ್ನು ಓದಿ ಜನರು ಈಗಿನ ಪರಿಸ್ಥಿತಿಯಲ್ಲಿ ಬೇಕಾದ ಶಾಂತತೆಯ ವೀರವೃತ್ತಿಯನ್ನು ತಾಳಬಹುದು. ಸುಂದರವಾದ ಮುದ್ರಣ ಮತ್ತು ಕೇವಲ ನಾಲ್ಕೇ ಆಣೆ ಬೆಲೆಯುಳ್ಳ ಈ ಪುಸ್ತಕವು ಹಿಂದೀ ಬಲ್ಲವರೆಲ್ಲ ಸಂಗ್ರಹಮಾಡುವದಕ್ಕೆ ಯೋಗ್ಯವಿದೆ.

—ಕೃಷ್ಣಾಬಾಯಿ ಪಣಜೀಕರ

**ಕಥಾಂಜಲಿಯ ಕಥೆಗಳು**—ಶ್ರೀ. ಅ. ನ. ಕೃಷ್ಣರಾಯರ ಕಥಾಂಜಲಿಯು ಹೊರಟಂದಿನಿಂದ ಸಣ್ಣ ಕಥೆಗಳಿಗೆ ಈಗಿನ ಸಾಹಿತ್ಯದಲ್ಲಿ ವಿಶೇಷ ಸ್ಥಳವು ಸಿಕ್ಕಂತಾಗಿದೆ. ಕೇವಲ ಉಜ್ವಲವಾದ ಕಥೆಗಳನ್ನೇ ಸೇರಿಸಿಕೊಳ್ಳಲು ಇಂಥ ಧ್ಯೇಯವನ್ನಿಟ್ಟುಕೊಂಡ ಯಾವ ಮಾಸಪತ್ರಿಕೆಗೂ ಸಾಧ್ಯವಿಲ್ಲ. ಕೆಲವು ಉತ್ತಮವಾದ ಕಥೆಗಳು, ಹಲವು ಮಧ್ಯಮ ತರಗತಿಗೆ ಸೇರಿದಂಥವು,—ಹೀಗೆ ಅದರಲ್ಲಿ ಎಲ್ಲ ಬಗೆಯ ಕಥೆಗಳ ಸಮಾವೇಶವಾಗುವದುಂಟು. ಆದರೆ ಈ ಪ್ರಕಾರದ ಎಲ್ಲ ವಿಭಾಗಗಳಿಗೆ ಸಾಹಿತ್ಯದಲ್ಲಿಯೇ ಎಡೆಯಿರುವದಲ್ಲವೆ?

ಕಥಾಂಜಲಿಯ ಸಂಪಾದಕರಿಂದ ನಮ್ಮೆಡೆಗೆ ವಿಮರ್ಶೆಗೆ ಬಂದ ಕಥೆಗಳಲ್ಲಿ ಆನಂದರವು ಎರಡಿವೆ. ಶ್ರೇಷ್ಠವಾದ ಅನೇಕ ಸಣ್ಣ ಕತೆಗಳನ್ನು ಬರೆದ ಈ ಲೇಖಕರು ಈಗಾಗಲೆ ಸುಪ್ರಸಿದ್ಧಿಯನ್ನು ಹೊಂದಿರುವರು. ವಿಮರ್ಶೆಯ ನಾನಾಪ್ರಕಾರಗಳಲ್ಲಿ ಎರಡು ಮುಖ್ಯವಾದವುಗಳು; ಮೊದಲನೆಯದೆಂದರೆ ಸೂಕ್ಷ್ಮದೃಷ್ಟಿಯಿಂದ ಯಾವದಾದರೊಂದು ಗ್ರಂಥದ ಗುಣದೋಷಗಳನ್ನು ನಿರೀಕ್ಷಿಸಿ ಅವುಗಳ ಕಾರಣಗಳನ್ನು ಸೂಚಿಸುವದು. ಬಹುತರವಾಗಿ ಎಲ್ಲ ತರಹದ ಗ್ರಂಥಗಳನ್ನು ನಾವು ಈ ದೃಷ್ಟಿಕೋನದಿಂದ ನೋಡಬಹುದು. ಆದರೆ ಕೆಲವೊಂದು ಗ್ರಂಥಗಳಿಗೆ ಮಾತ್ರ ಇನ್ನೊಂದು ತರಹದ ವಿಮರ್ಶೆ ಬೇಕಾಗುತ್ತದೆ. ಅದು ಬರಿಯ ಗುಣದೋಷಗಳ ವಿವರಣೆಯಲ್ಲ. ಆಯಾ ಉತ್ತಮವಾದ ಕಾವ್ಯಕಥೆಗಳ ರಸಾನುಭವವನ್ನು ಅನುಭವಿಸಿದ ರಸಿಕನು ಅದನ್ನು ವಾಚಕರಿಗೆ ಹೇಗೆ ಅರಿಕೆಮಾಡಿ ಕೊಡಬೇಕೆಂಬುದೇ ಈ ತರಹದ ವಿಮರ್ಶೆಯು ಬಿಡಿಸಬೇಕಾದ ಮುಖ್ಯ ಪ್ರಶ್ನೆ. ಇಂಥ ಕಥೆಗಳಲ್ಲಿ 'ಆನಂದ'ರ 'ನಾನು ಕೊಂದ ಹುಡುಗಿ' ಹಾಗು 'ಮನವಿದ್ದಂತೆ ಮಾತು' ಎಂಬವುಗಳಿಗೆ ಸ್ಥಾನವಿದೆಯೆಂದು ನಾವು ಹೇಳಬಹುದು. ಇವು ಎಲ್ಲ ಬಗೆಯಿಂದ ಪೂರ್ಣತೆಯನ್ನು ಹೊಂದಿವೆ. 'ಮನವಿದ್ದಂತೆ ಮಾತು' ಎಂಬ ಕಥೆಯಲ್ಲಿ ಲೇಖಕರು ಒರ್ವ ಚಿತ್ರಕಲಾಕೋವಿದನ ಅಂತಃಸ್ಥಿತಿಯನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಲ್ಲದೆ ಸಮಾಜದ ಸಂಕುಚಿತದೃಷ್ಟಿಯು ಅವನ ಕಲೆಯನ್ನು ಹೇಗೆ ದೂಷಿಸಬಲ್ಲದೆಂಬುದನ್ನು ತೋರಿಸಿದ್ದಾರೆ. ನಗ್ನಸ್ತ್ರೀಯ ವರ್ಣನೆಯಿದ್ದ

ಕವಿತೆಯನ್ನು ಕೇಳಿ 'ಭಟ್ಟರು' ತಲೆದೂಗುತ್ತಾರೆ. ಆದರೆ ಅದೇ ಅರ್ಥದ ನಗ್ನಚಿತ್ರವನ್ನು ನೋಡಿ ಮನಸ್ಸಿನಲ್ಲಿ ಆನಂದ ಬಟ್ಟರೂ ಬಾಹ್ಯಾಡಂಬರಕ್ಕಾಗಿ ಅಸಹ್ಯಪಡುತ್ತಾರೆ. ನಮಗೆ ಈ **ಬಾಹ್ಯಾಡಂಬರ** ಬೇಡ; ಮನವಿದ್ದಂತೆ ಮಾತು ಬೇಕು! ಇದೇ ಲೇಖಕರು ಹೇಳಬೇಕಾದ ಮುಖ್ಯವಿಷಯ.

'ನಾನು ಕೊಂದ ಹುಡಿಗೆ' ಯೊಂದು ನೀಳವಾದ ಸಣ್ಣ ಕಥೆಯು. ಮೇಲಿನ ಕಥೆಗಿಂತ ಇಲ್ಲಿಯ ಕಥಾನಕವು ಹೆಚ್ಚು ಮನೋಹರವಾಗಿದೆ. ಅದರಲ್ಲಿ ಸಮಾಜದ ಡಂಭಾಚಾರವ ನ್ನಷ್ಟೇ ಲೇಖಕರು ಬೈಲಿಗೆಳೆದಿದ್ದರೆ, ಸಮಾಜದ ಒಂದು ಘೋರ ವಾದ ರೂಢಿಯನ್ನು ('ಬಸ್ವಿ' ಬಿಡುವ ಪದ್ಧತಿಯನ್ನು) ಅವರು ಇಲ್ಲಿ ಹೃದಯ ಕರಗುವಂತೆ ಬಣ್ಣಿಸಿದ್ದಾರೆ. ಆದರೆ ಬರಿಯ ಸಮಾಜಸುಧಾರಣೆಯಂಥ ಉದಾತ್ತಭಾವನೆಯಿಂದ ಈ ಕಥೆ ಯು ರೂಪಗೊಂಡಿಲ್ಲ. ಅದರಲ್ಲಿ ಒಬ್ಬ ಉತ್ತಮ ಕತೆಗಾರನ ಕೈಚಳಕವು ಒಡೆದು ಕಾಣುತ್ತಲಿದೆ. ಇಕ್ಕಟ್ಟಿನಲ್ಲಿ ಸಿಕ್ಕ ನಾಯ ಕನ ಒಳತೋಟಿಯೂ ಆ ಹುಡಿಗೆಯ ಮುಗ್ಧತೆ ಸೌಂದರ್ಯ ಹಾಗು ಸ್ತ್ರೀತ್ವವೂ ಮನಸ್ಸಿನಲ್ಲಿ ಪ್ರತಿಬಿಂಬಿಸುವ ಹಾಗೆ ಇಲ್ಲಿ ವರ್ಣಿತವಾಗಿವೆ. 'ಸೂಳೆ' ಹಾಗು 'ಬಸ್ವಿ' ಇವುಗಳ ನಡುವೆ ಅಭ್ಯಂತರವನ್ನು ಹುಡುಕಿ ತೆಗೆಯುವ ಹುಡಿಗೆಯ ರೀತಿಯು ವರ್ಡ್ಸ್‌ವರ್ಥ ಕವಿಯ 'We are seven' ಎಂಬ ಕವಿತೆ ಯನ್ನು ನೆನಪಿಗೆ ತರುತ್ತದೆ. ಕಥೆಯು ನಾಯಕನ ಬಾಯಿಂದ ಹೊರಬೀಳುವ ಕಥನವಿದ್ದರೂ ಅದು ಬಹುತರವಾಗಿ ಸಂಭಾಷ ಣೆಯ ರೂಪವನ್ನು (the dramatic way) ತಾಳಿದೆ.

'ಕ್ಯಾಪ್ಟನ್ ಬಾಬ' ಎಂಬ ಕಥೆಯನ್ನು ಬರೆದು ವಾಚಕರಿಗೆ ಪರಿಚಿತರಾದ ಶ್ರೀ. ಇ. ಎ. ಭಾಸ್ಕರರಾಯರು 'ಪ್ರಭಾಕರ' ಎಂಬ ಕಥೆಯ ಲೇಖಕರು. 'ಈಸಾಯಿಗಳ' ಸಮಾಜದ ಚಿತ್ರ ಗಳನ್ನು ನಮ್ಮ ಭಾಷೆಯಲ್ಲಿ ಪ್ರಚಲಿತವಾಗಿ ಮಾಡುವ ಜನರು ಇಲ್ಲದೆ ಇರುವಾಗ ಶ್ರೀ. ಇ. ಎ. ಭಾಸ್ಕರರಾಯರು ಆ ಕೆಲ ಸಕ್ಕೆ ಮುಂದರಿದದ್ದು ಶ್ಲಾಘನೀಯವೇ ಸರಿ. ಅವರಲ್ಲಿ ಕಲಾ ಕೌಶಲ್ಯವಾದರೂ ಇದ್ದೇ ಇದೆ. ಪ್ರಭಾಕರನಂಥ ಉತ್ಸಾಹಿ ತರು ಣನು ತನ್ನ ಪ್ರೇಮವನ್ನು ಹೃದಯವಲ್ಲಿಯೇ ಬಚ್ಚಿಟ್ಟುಕೊಂಡು 'ಪ್ರಪೋಸ' ಮಾಡಲಿಕ್ಕೆ ಬಾಯಿಲ್ಲದೆ ತನ್ನ ಪ್ರೇಮದ ಹುಡಿಗೆ ಯನ್ನು ಒರ್ವ ಮಿತ್ರನು ಮದುವೆಯಾಗಲು ಅವರ ಸುಖ ದಲ್ಲಿಯೇ ತಾನು ಪಾಲುಗಾರನಾಗಿ ತನ್ನ ಜೀವನವನ್ನು ಸಮಾಜ ಸೇವೆಗಾಗಿ ಹೇಗೆ ಅರ್ಪಿಸಿದನೆಂಬುದು ಈ ಕಥೆಯಲ್ಲಿ ಚಿತ್ರಿತ ವಾಗಿದೆ. ಮೇರಿ ಮತ್ತು ಪ್ರಭಾಕರರ ನಡುವೆ ಮಾತು ನಡೆ ದಾಗ ಕಿಶನ್ನನ ಪ್ರವೇಶವಾದರೂ ಕಥೆಯ ಸೊಬಗನ್ನು ಹೆಚ್ಚಿ ಸುತ್ತದೆ. "ಜೀವನವು ಒಂದು ಕ್ಷಣಿಕವಾದ ಕನಸು" ಇದೇ ಈ ಕಥೆಯ ಮೋರೆಯಲ್ಲಿ ಒಡೆದು ಕಾಣುವ ವಿಚಾರ. ಪಾತ್ರ ಗಳ ಮಾತುಗಳಲ್ಲಿ "ಇಂಗ್ಲಿಷ್" ತುಂಬಾ ಇರುವದು; ಇಷ್ಟೇ ಇರಬೇಕಾಗುವದು. ಈ ವಿಷಯದಲ್ಲಿ "ಇಂಗ್ಲಿಷ್" ಇದ್ದ ಕಥೆಗಳಿಗೂ ಹಾಗು ನಾಟಕಗಳಿಗೂ ನಾವು ಕಲ್ಪಿಸಿಕೊಂಡ ಒಂದು ವಿಶೇಷ ಸಾಹಿತ್ಯವಿಭಾಗವನ್ನೇ ಈ ಕಥೆಯು ಸೇರು ವದು.

ನಟ್ ಹಮ್ಸನ್ನನ ಒಂದು ಕಥೆಯು ಶ್ರೀ. 'ನೀಲಮೇಘ' ರಿಂದ 'ಜೀವನದ ಕರೆ' ಎಂಬ ಹೆಸರಿನಿಂದ ಅನುವಾದಿತವಾಗಿವೆ. ಇದೊಂದು ಸಣ್ಣದಾದ ಕಥೆ. ಮುದುಕನು ಒರ್ವ ತರುಣಿ ಯನ್ನು ಲಗ್ನ ಮಾಡಿಕೊಂಡಲ್ಲಿ ಅವಳು ಅವನಿಗೆ ಯಮನಾಗಿ ಅನ್ಯರ ವಿಷಯೋಪಭೋಗಕ್ಕೆ ಹೇಗೆ ಗುರಿಯಾಗುವಳೆಂಬು ದನ್ನು ನಟ್‌ಹಮ್ಸನ್ನನು ಒಂದು ಮಿಂಚು ಹೊಳೆದು ಹೋಗು ವಷ್ಟು ಹೊತ್ತಿನಲ್ಲಿ ಚಿತ್ರಿಸಿದ್ದಾನೆ. ನಮ್ಮ ಸಮಾಜದಲ್ಲಿ ಇಂಥ ಹೀನ ಪ್ರಸಂಗಗಳು ಇನ್ನೂ ಕಂಡುಬರುವದರಿಂದ ಅನುವಾದವು ಸಮಯೋಚಿತವಾಗಿದೆ.

ಶ್ರೀ. ಚಿಂಚೋಳಿ ಜಯಪೂರ್ಣಾಚಾರ್ಯರ 'ಹಳ್ಳಿಯ ಹುಡಿಗೆ' ಎಂಬ ಕಥೆಯು ಅಷ್ಟೊಂದು ತೃಪ್ತಿಕರವಾಗಿಲ್ಲ. ಎಡ್ಮಂಡ ಗಾಸರು ವ್ಹಿಟ್‌ಮನ್ ಎಂಬ ಅಮೇರಿಕನ್ ಕವಿಯ ವಿಷಯಕ್ಕೆ ಹೇಳಿದ "Literature in the condition of protoplasm" ಎಂಬ ಮಾತನ್ನು ನಾವು ಇಲ್ಲಿ ಬೇರೆ ಸಂದರ್ಭದಲ್ಲಿಯಾದರೂ—ಸ್ವಲ್ಪ ಬದಲಿಸಿ "Art in the condition of protoplasm" ಎಂದು ಹೇಳ ಬಹುದು. ಕುದಿ ಹಿಡಿದಿದೆ; ಆದರೆ ಇನ್ನೂ ಅನ್ನವಾಗಿಲ್ಲ. ಕುಸುರು ಇನ್ನೂ ಎಸರಿನಲ್ಲಿದೆ. ಆರಂಭಕ್ಕಿದ್ದ ಕಳೆಯು ಕಥೆಯ ಕೊನೆಗಿಲ್ಲ. ಹಳ್ಳಿಯ ಹುಡಿಗೆಯರು ದುರ್ಮಾರ್ಗ ವನ್ನು ಹಿಡಿದ ತಮ್ಮ ಪತಿಗಳನ್ನು ಸುಧಾರಿಸಿದ್ದನ್ನು ನಾವು ಅನೇಕ ಸಲ ನೋಡಿರುವೆವು. ಆದರೆ ಇಂಥ ಪ್ರಸಂಗಗಳನ್ನು ತೆಗೆದುಕೊಂಡು ಅವುಗಳನ್ನು ಅಂದವಾದ ಸಣ್ಣ ಕಥೆಗಳ ಎರಕದಲ್ಲಿ ಹೊಯ್ಯುವ ಪೂರ್ವದಲ್ಲಿ ಅವಕ್ಕೆ ಸಿಂಪಡಿಸಲು ಬೇಕಾದ ಮಾಂತ್ರಿಕನಾದ ಕಲಾಕೋವಿದನ ಮಂತ್ರಜಲವು

ಉತ್ತರಾರ್ಧದ ಮೇಲೆ ಅಷ್ಟು ಪೂರ್ಣವಾಗಿ ಬಿದ್ದಿಲ್ಲ. ಆದರೂ ಕೊನೆಯ “ ಇಷ್ಟೇನೆ ! ನಾನು ಏನೋ ಅಂದುಕೊಂಡಿದ್ದೆ ! ” ಎಂಬ ಮಾತು ಮನೋಹರವಾಗಿದೆ. ಹಳ್ಳಿಯ ಹುಡಿಗೆಯ ಮುಗ್ಧತೆಯನ್ನು ಲೇಖಕರು ಚೆನ್ನಾಗಿ ತೋರಿಸಿದ್ದಾರೆ; ಆದರೆ ಅವಳು ಪತಿಯನ್ನು ಸುಧಾರಿಸುವದರಲ್ಲಿ ತೋರಿಸಿದ ವಿದಗ್ಧತೆಯು ಸ್ವೈಜವಾಗಿರಬಹುದಾದರೂ ಅದರಲ್ಲಿ ಮನಸ್ಸನ್ನೆಳೆಯುವಂತಹದೇನೂ ಇಲ್ಲ.

ಕಥಾಂಜಲಿಯ ಸಂಪಾದಕರು ಇನ್ನು ಮುಂದೆಯಾದರೂ ಈಗಿನಂತೆ ಉತ್ತಮೋತ್ತಮ ಕಥೆಗಳನ್ನು ಕನ್ನಡಿಗರಿಗರ್ಪಿಸಿ ಅವರ ಆದರಕ್ಕೆ ಪಾತ್ರರಾಗಲೆಂದು ಹಾರೈಸುತ್ತೇವೆ.

—ವಿ. ಕೃ. ಗೋ.

**ಧಾರವಾಡ ವನಿತಾಸೇವಾಸಮಾಜದ ದ್ವಿತೀಯ ವಾರ್ಷಿಕ ವರದಿ** – ಇದರ ಸ್ಥಾಪಕರಾದ ಮುಳೆಬಿನ್ನೂರ ಲಕ್ಷ್ಮಣರಾಯರು ಶಾಂತವಾಗಿ ಅವಿಶ್ರಾಂತವಾಗಿ ನಮ್ಮ ಹೆಣ್ಣು ಮಕ್ಕಳ ಪ್ರಗತಿಗಾಗಿ ದುಡಿಯುತ್ತಿರುವರು. ಇವರ ಸಾಲೆಯಲ್ಲಿ ಬೌದ್ಧಿಕ ಶಿಕ್ಷಣವನ್ನಲ್ಲದೆ ಸೂಲಗಿತ್ತಿತನ, ಶುಶ್ರೂಷೆಗಾರಿಕೆ ಮೊದಲಾದವುಗಳ ಶಿಕ್ಷಣವನ್ನೂ ಕೊಟ್ಟು ಅವರಿಗೆ ದುಡಿಮೆ ಸಿಗುವಂತೆ ವ್ಯವಸ್ಥೆಮಾಡಲಾಗುವದು. ದೇಶವಾತ್ಸಲ್ಯದ ಕಾರ್ಯದಲ್ಲಿ ಉದ್ಯುಕ್ತರಾಗುವಂತೆ ಮಾಡುವರು. ವಾರವಾರಕ್ಕೂ ಬೇರೆ ಬೇರೆ ಪುರುಷ ಹಾಗೂ ಸ್ತ್ರೀ ವಿದ್ವಾಂಸರ ವ್ಯಾಖ್ಯಾನಗಳು ಜರುಗಿ ಮನಸ್ಸು ಪ್ರಸನ್ನವಾಗುತ್ತಿದೆ. ಈ ಮಾದರಿಯ ಸಂಸ್ಥೆಯು ಉತ್ತರ ಬ್ರಿಟಿಶ ಕರ್ನಾಟಕದಲ್ಲಿ ಇದೊಂದೇ ಆಗಿದ್ದರಿಂದ ಎಲ್ಲರೂ ನೆರವಾಗಿ ತಿಂಗಳಾ ೩೦೦–೪೦೦ ರೂ. ಗಳ ಹೊಣೆಯನ್ನು ಹಗುರು ಮಾಡಬೇಕೆಂದು ಕಾರ್ಯದರ್ಶಿಗಳೊಡನೆ ನಾವೂ ಕನ್ನಡಿಗರಲ್ಲಿ ಬೇಡಿಕೊಳ್ಳುತ್ತೇವೆ.

**ಶಾಂತೇಶವಾಚನಾಲಯ ಹಾಗು ಮಹಾನವಮಿ ಉತ್ಸವಗಳ ವರದಿಗಳು**— ಇವುಗಳನ್ನು ಆ ಆ ಕಾರ್ಯದರ್ಶಿಗಳು ಕಳಿಸಿದ್ದಕ್ಕೆ ಅವರಿಗೆ ಕೃತಜ್ಞರಾಗಿದ್ದೇವೆ. ವಾಚನಾಲಯವು ತನ್ನ ದಿನದ ಕೆಲಸವಲ್ಲದೆ ಬೆಳಗಾಂವಿಯ ಪರಿಷತ್ತುಗಳು, ವಿದ್ಯಾರಣ್ಯೋತ್ಸವ, ನವರಾತ್ರಿಯ ಉತ್ಸವದಂಥ ಕಾರ್ಯಗಳಲ್ಲಿ ಯಶಸ್ವಿರೀತಿಯಲ್ಲಿ ಭಾಗತೆಗೆದುಕೊಂಡಿದೆ. ಅಖಿಲ ಕರ್ನಾಟಕ ವಾಚನಾಲಯ ಪರಿಷತ್ತನ್ನು ಈಸಲ ಕೂಡಿಸಿದೆ. ಇಷ್ಟೆಲ್ಲ ಕೆಲಸಮಾಡಿ ರೂ ೫೬೬–೮–[illegible]ಗಳ ಸಿಲ್ಕಿನಲ್ಲಿವೆ. ಇಂಥ ಕರ್ತೃತ್ವಶಾಲಿಯಾದ ವಾಚನಾಲಯಕ್ಕೆ ಒಂದು ಸ್ವತಂತ್ರ ಕಟ್ಟಡವು ಬೇಕೇ ಬೇಕು. ಅದನ್ನು ಒದಗಿಸಿ ಕೊಡುವದು ಧಾರವಾಡಸ್ಥರ ಕರ್ತವ್ಯವು. ಉಳಿದೆಲ್ಲ ಕನ್ನಡಿಗರೂ ಈ ಕಾರ್ಯಕ್ಕೆ ನೆರವಾಗಬೇಕು.

ಮಹಾನವಮಿಯ ವರದಿಯೂ ತೇಜಸ್ವಿಯಾಗಿದೆ. ಹೋದ ವರ್ಷದ ಸಾಲವನ್ನು ತೀರಿಸಿ ಉದ್ಯೋಗ-ಕಲಾ-ಪರಿಷತ್ತುಗಳನ್ನು ವಿಜೃಂಭಣೆಯಿಂದ ನೆರವೇರಿಸಿ ರೂ ೬–೫–೬ ಗಳು ಉಳಿದಿವೆ. ಪ್ರತಿವರ್ಷವೂ ಈ ಉತ್ಸವವು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಲೆಂಬುದೇ ನಮ್ಮ ಹಾರೈಕೆ.

---

**ವೀರ್ಯನಾಶವೇ ಮರಣ:**— ಲೇಖಕರು, ಉಡಪೀನಾಥ ಶ್ರೀನಿವಾಸರಾವ್ ಹೊದಲೂರ, ವಿಜಾಪುರ; ಶ್ರೀಕೃಷ್ಣ ಮಾಲಾ, ಪುಷ್ಪ ೩. ಫುಲ್‌ಸ್ಕ್ಯಾಪ್ ೧/೮ ಪುಟ ೩೨, ಬೆಲೆ ೩ ಆಣೆ ;

‘ ಸಮಾಜದ ಸುಧಾರಣೆಯ ಸಲುವಾಗಿ ಅಲ್ಲಿಯ ತಪ್ಪು ತಡೆಗಳನ್ನು ತಿಳಿಸಿ ಸಾಧಕ ಬಾಧಕಗಳನ್ನು ವಿಂಗಡಿಸಿ ಲೋಕೋಪಕಾರಮಾಡುವದಕ್ಕಾಗಿ ’ ಹೆಣಗಾಡುವ ಸಂಘದಿಂದ ಹೊರಟ ಈ ಚಿಕ್ಕ ಪುಸ್ತಕಕ್ಕೆ ಶ್ರೀ. ಫ. ಗು. ಹಳಕಟ್ಟಿಯವರು ಒಂದು ಚಿಕ್ಕ ಮುನ್ನುಡಿಯನ್ನು ಬರೆದಿರುವರು. ‘ ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ’ ಎಂಬುದು ಹಿರಿಯರ ಅನುಭವದ ಮಾತು. ಆದರೂ ‘ ಧರ್ಮಾವಿರುದ್ಧಃ ಕಾಮೋಸ್ಮಿ ’ ಎಂದು ಗೀತೆಯಲ್ಲಿ ಹೇಳಿದಂತೆ ಕಾಮದಲ್ಲಿಯೂ ಮಿತಿಯಿರಬೇಕು; ಏಕಂದರೆ ಅದೂ ಒಂದು ಪುರುಷಾರ್ಥ. ಈ ಮಿತಿ ಮೀರಿದರೆ ಏನೇನು ಫಲ ಭೋಗಿಸಬೇಕಾಗುವದೆಂಬದನ್ನು ಲೇಖಕರು ವಿರಳವಾಗಿ ಹೇಳಿದ್ದಾರೆ. ಮನಸ್ಸಿಗೆ ಹಚ್ಚಿಕೊಂಡು ಮನಸ್ಸಿಗೆ ಹತ್ತುವಂತೆ ಬರೆದಿದ್ದಾರೆ. ವಿಚಿತ್ರವಾಗಿ ತೋರಬಹುದಾದ ಆದರೆ ನಿಜವಾದ ಮತ್ತು ತಾವು ಕಂಡ ಕೆಲ ಉದಾಹರಣೆಗಳನ್ನೂ ಹೇಳಿದ್ದಾರೆ. ಆಶ್ರಮಧರ್ಮ, ಶಿಕ್ಷಣ, ವೀರ್ಯಸಂಚಯದ ಕಾಲ, ಬ್ರಹ್ಮಚರ್ಯದ ಅಧಃಪತನ–ಮಹತ್ವ–ರಕ್ಷಣೆ ಮೊದಲಾದವುಗಳ ಬಗ್ಗೆ ಕೆಲ ಕೆಲ ಮಾತುಗಳನ್ನು ಹೇಳಿ ಈಗಿನ ಸಹಶಿಕ್ಷಣ–ನೀಟ ಉಡುಪು ಮೊದಲಾದವುಗಳು ಇಲ್ಲವಾಗಬೇಕೆಂದು ಅಭಿಪ್ರಾಯಪಟ್ಟು ಹೀಗಾದರೇನೇ ಸ್ವಾತಂತ್ರ್ಯ ಸಿಗುವದೆಂದು ಕಡೆಗೆ ಹೇಳಿದ್ದಾರೆ. ಚಿಕ್ಕ ಪುಸ್ತಕವಾಗಿದ್ದರೂ ಒಮ್ಮೆ ಯಾವನೂ ಈಗಿನ ತರುಣರು ಓದಬೇಕು.

೧೯ನೇ ಪುಟದಲ್ಲಿ ' ವ್ಯಾಖ್ಯಾತನು ಎಷ್ಟೇ ವಿದ್ವಾನನಿದ್ದರೂ ಅವನು ಹೇಳಿದ್ದು ಜನರ ಮನಸ್ಸಿನ ಮೇಲೆ ಏನೂ ಪರಿಣಾಮ ವಾಗುವದಿಲ್ಲ. ಯಾಕಂದರೆ ಅವನಲ್ಲಿ ಆತ್ಮಬಲವಿಲ್ಲ ಮತ್ತು ಸ್ವಯಂಪ್ರಕಾಶವಿಲ್ಲ. ಇದಕ್ಕೆ ಸ್ವಾಮಿ ವಿವೇಕಾನಂದ, ತುಂಗ ಭದ್ರೆಯ ಪಂಡಿತ ತಾರಾನಾಥ ಮೊದಲಾದವರ ಉದಾಹರಣೆ ಗಳನ್ನು ಕೊಡಬಹುದು ' ಎಂಬಲ್ಲಿ ಲೇಖಕರಿಗೇನು ಹೇಳ ಬೇಕಾಗಿದೆಯೋ ತದ್ವಿರುದ್ಧ ಅರ್ಥವಾಗುವಂತೆ ವಾಕ್ಯರಚನೆ ಯಾಗಿದೆ. ಏತಕ್ಕೆ ಉದಾಹರಣೆಗಳನ್ನು ಕೊಟ್ಟಿರುವರೋ ಅದು ಬಹಳ ಹಿಂದೆ ಇದೆ. ಇದು ದೂರಾನ್ವಯದ ದೋಷ. ದಯ ವಿಟ್ಟು ಇದನ್ನು ಮುಂದಿನ ಆವೃತ್ತಿಯಲ್ಲಿ ತಿದ್ದಬೇಕೆಂದ ಸೂಚಿಸುತ್ತೇವೆ.

**ಶ್ರೀ ಕರ್ನಾಟಕ ವಚನ ಮಣಿಮಂಜರಿ :—** ಕರ್ನಾಟಕ ಸಾಹಿತ್ಯನಿಧಿ. ಶಾ. ವೆಂಕಟರಮಣಯ್ಯ, ಅಲಕಾ ಪುರ, ಗೋರಿಬಿದನೂರು ತಾಲೂಕು ; ಕ್ರೌನ್ ೫೭, ಬೆಲೆ ೬ ಆಣೆ.

" ಶ್ರೀಮನ್ ಮಧ್ವಾಚಾರ್ಯರವರ ಪ್ರಿಯಶಿಷ್ಯರಾದ ಕವಿ ಕುಲತಿಲಕ ತ್ರಿವಿಕ್ರಮ ಪಂಡಿತಾಚಾರ್ಯರವರ ಮಕ್ಕಳು ಶ್ರೀಮನ್ನಾರಾಯಣ ಪಂಡಿತಾಚಾರ್ಯರವರು, ತಮ್ಮ ಅಸ ಮಾನ ಗುರುಭಕ್ತಿ ಪ್ರದರ್ಶನಾರ್ಥವಾಗಿ, ಶ್ರೀ ಮಣಿಮಂಜರಿ, ಶ್ರೀಮಧ್ವ ವಿಜಯ ಎಂಬ ಅಮೂಲ್ಯ ಗ್ರಂಥಗಳನ್ನು ರಚಿಸಿರು ವರು. ಮಣಿಮಂಜರಿಯು ಮಧ್ವವಿಜಯದ ಮಹಾ ಕಾವ್ಯಕ್ಕೆ ಪೀಠಿಕಾರೂಪವೆನ್ನಬಹುದು." ಎಂದು ಲೇಖಕರು ಹೇಳಿದುದು ಯುಕ್ತವೇ ಆಗಿದೆ. " ಇದರಲ್ಲಿರುವ ಎಂಟು ಸರ್ಗಗಳಲ್ಲಿ ಮೊದಲೆರಡು ಸರ್ಗಗಳಲ್ಲಿ ಸಂಕ್ಷಿಪ್ತವಾದ ರಾಮಾ ಯಣದ ಕಥೆಯೂ ಮೂರು ನಾಲ್ಕನೆಯ ಸರ್ಗಗಳಲ್ಲಿ ಸಂಗ್ರಹ ವಾದ ಭಾರತದ ಕಥೆಯೂ ಮುಂದಿನ ಮೂರು ಸರ್ಗಗಳಲ್ಲಿ ಬೌದ್ಧ ಜೈನ ಮತ ಪ್ರವರ್ತಕರು ಮುಂತಾದವರ ಇತಿಹಾ ಸವೂ ಏಳನೆಯವರ ಕೆಲಭಾಗ ಎಂಟನೆಯದರಲ್ಲಿ ಅದ್ವೈತ ಮತಸ್ಥಾಪಕರು ಮುಂತಾದವರ ಚರಿತ್ರೆಯೂ ಕಡೆಯಲ್ಲಿ ದ್ವೈತಮತಸ್ಥಾಪಕರ ಸಂಕ್ಷಿಪ್ತ ಚರಿತ್ರೆಯೂ ಇದೆ. ಇದರ ಅಲ್ಪ ಸ್ವಲ್ಪ ಭಾಗವನ್ನು ಬಿಟ್ಟರೆ ಉಳಿದ ಎಲ್ಲವೂ ಸರ್ವರಿಗೂ ಸಾಮಾನ್ಯವಾಗಿ ಓದಲಿಕ್ಕೆ ಸಹಾಯವಾಗುವದು " ಎಂದು ಈ ಪುಸ್ತಕದ ಬಗ್ಗೆ ಕಟ್ಟಿ ಶ್ರೀನಿವಾಸ ಮೂರ್ತಾಚಾರ್ಯ, ಕನ್ನಡ ಪಂಡಿತ, ಧಾರವಾಡ ಇವರು ಅಭಿಪ್ರಾಯಪಟ್ಟುದ ದನ್ನು ನಾವೂ ಸಮರ್ಥಿಸುತ್ತೇವೆ.

**ಸೂರ್ಯ ಭೇದನ ವ್ಯಾಯಾಮ :—** ಲೇಖಕ, ಶ್ರೀಪಾದ ದಾಮೋದರ ಸಾತವಳೇಕರ್‌ರವರು ಸ್ವಾಧ್ಯಾಯ ಮಂಡಲ ಔಂಧ ( ಸತಾರಾ ಜಿಲ್ಹಾ ) ; ಪ್ರಕಾಶಕರು ಎ. ಗುಂಡಪ್ಪನವರು, ಬಿ. ಎ. ಮತ್ತು ಎಸ್. ವಿ. ವೆಂಕಟರಾ ಮಯ್ಯನವರು ; ಬೆಂಗಳೂರು ಕ್ರೌನ್ ೬೭ ಪುಟ, ಬೆಲೆ ೮ ಆಣೆ.

ಅನೇಕ ಚಿತ್ರಗಳೊಂದಿಗೆ ಸೂರ್ಯನಮಸ್ಕಾರ ವ್ಯಾಯಾಮ ಪದ್ಧತಿಯು ವರ್ಣಿತವಾಗಿದೆ. ಪ್ರಾಣಾಯಾಮವು ಕಷ್ಟಕರ ವಾದ್ದರಿಂದ ಈ ವ್ಯಾಯಾಮವನ್ನು ಅವಲಂಬಿಸಬೇಕೆಂದು ಲೇಖಕರು ಪ್ರಾರ್ಥಿಸಿದ್ದಾರೆ. ಈ ವ್ಯಾಯಾಮದಲ್ಲಿ ಒಂದಕ್ಕಿಂತ ಒಂದು ಸುಲಭವಾದ ನಾಲ್ಕು ಪದ್ಧತಿಗಳನ್ನು ಇದರಲ್ಲಿ ಹೇಳ ಲಾಗಿದೆ. ಈ ವಿಷಯವಾಗಿ ಅನೇಕ ಪುಸ್ತಕಗಳು ಕನ್ನಡದಲ್ಲಿ ಅಚ್ಚಾಗುತ್ತಿರುವದು ಸಂತೋಷಕರವೇ ಸರಿ.

**ಖಾದಿಯ ಅರ್ಥಶಾಸ್ತ್ರ—** ಅನುವಾದಕ, ಅನಂತ ಅಣ್ಣಾಜಿ ಚಿಕ್ಕೋಡಿ; ಪ್ರಕಾಶಕರು ವೆಂಕಟೇಶ ಶ್ರೀನಿವಾಸ ಪಂಡಿತ, ಬೆಳಗಾಂವಿ; ಕ್ರಯ ೪ ಆಣೆ, ಕ್ರೌನ್ ೪೧ ಪುಟಗಳು

ಸುಪ್ರಸಿದ್ಧ ದೇಶಭಕ್ತರೂ ' ಖಾದೀ ತ್ರಿಮೂರ್ತಿ 'ಗಳಲ್ಲೊ ಬ್ಬರೂ ಆಗಿರುವ ಬಾಬೂ ರಾಜೇಂದ್ರ ಪ್ರಸಾದರವರು ಇಂಗ್ಲ ಭಾಷೆಯಲ್ಲಿ ಬರೆದಿರುವ Economics of Khadi ಎಂಬ ಚಿಕ್ಕದಾದರೂ ವಿಚಾರಪ್ರವರ್ತಕವಾದ ಹೊತ್ತಿಗೆಯ ಕನ್ನಡ ಅನುವಾದವನ್ನು, 'ಕಟ್ಟರ ಕನ್ನಡಿಗರು ರಾಷ್ಟ್ರೀಯ ಕಾರ್ಯಕ್ಕೆ ಅಡ್ಡಬರುವರೆಂಬ ಜೊಳ್ಳು ಆರೋಪಕ್ಕೆ ಖಂಡತುಂಡಾಗಿ ಉತ್ತ ರವನ್ನು ಕೊಟ್ಟಂತಾಗುತ್ತದೆ ' ಎಂಬ ದೃಷ್ಟಿಯಿಂದ ಈ ಪುಸ್ತ ಕವನ್ನು ಹೊರಡಿಸಿದ್ದಾಗಿದೆಯೆಂದು ಪ್ರಕಾಶಕರು ಮುನ್ನುಡಿ ಯಲ್ಲಿ ಹೇಳಿದ್ದಾರೆ. ಈ ಅನುವಾದವು ಯಾವದೇ ದೃಷ್ಟಿ ಯಿಂದ ಹೊರಡಲೊಲ್ಲದೇಕೆ, ಖಾದಿಯ ಅರ್ಥಶಾಸ್ತ್ರದೃಷ್ಟಿಯು ಮೂಲ ಪುಸ್ತಕದ ತಿರುಳು. ಖಾದಿಯು ನಮ್ಮ ದೇಶದ ಈಗಿನ ಬಡತನವನ್ನು ಹಿಂಗಿಸುವ ಉಪಾಯಗಳಲ್ಲೊಂದದ ಯೆಂದು ಈ ಪುಸ್ತಕವನ್ನೋದಿ ಯಾರಾದರೂ ಹೇಳಬಹುದು.




ಸಂಪುಟ ೮; ಸಂಚಿಕೆ ೭. ವೈಶಾಖ ಪೌರ್ಣಿಮೆ; ಮೇ ೧೯೩೦

ಸಂಸ್ಥಾಪಕರು:— ಶ್ರೀ. ಆಲೂರ ವೆಂಕಟರಾಯರು] [ಸಂಪಾದಕರು:— ಶ್ರೀ. ಬೇಂದ್ರೆ ದತ್ತರಾಯರು

## ಮುಖ್ಯ ವಿಷಯಗಳು





Vol. VIII, No. 7 (12-5-30) Subscription Rs. 5-8-0

ಜಗಚ್ಛ್ರೇಷ್ಠ !

ಅಜಾತಶತ್ರು !!



ಆಳರಸರ ಕೈಸೆರೆಯಾದ

# ಮಹಾತ್ಮಾ ಗಾಂಧಿಯವರು

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥

तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः


ಸಂಪುಟ ೮ | ಪ್ರಮೋದ ಸಂವತ್ಸರ, ಅಗಿಯ ಹುಣ್ಣಿವೆ | ಸಂಚಿಕೆ ೭

ಚಾಲುಕ್ಯವಿಕ್ರಮ ವರ್ಷ ೮೫೫


## ದಬ್ಬಾಳಿಕೆಗೆ !

ನೆತ್ತಿಗೇರಿದ ಕಣ್ಣ ಕುರುಡು ದಬ್ಬಾಳಿಕೆಯೆ !
ಪೊಳ್ಳು ಬಿಂಕದ ಮೂಗ ಮೇಲೆ ಮಾಡಿ,
ಹಿಂಬರಿಕೆಯುಡಿಯಲ್ಲಿ ಸಿಕ್ಕು ತೊತ್ತಳಿಗೊಂಡು
ಸಾವವರ ನರಳಿಕೆಯ ಕಿವುಡುಗೇಳಿ,
ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ
ಅಂತರಪಿಶಾಚಿಯೇ! ತಣಿಸಬೆಳಸಿ,
ರಕ್ಷಕನು ಎಂದು ತಿಳಕೊಂಡ ರಾಕ್ಷಸ ನೀನು
ನಿನ್ನ ಕರುಳನು ತಿಂದುಕೊಂಡ ಕರುಣಿ !
ಕ್ಷಮೆಗು ನಿನಗೂ ಜಾತಿವೈರವಿಹುದಲ್ಲ !
ನ್ಯಾಯನೀತಿಗಳೆಂದು ನಿನ್ನವೇ ಅಲ್ಲ !
ಪ್ರಳಯತಾಂಡವದ ಪ್ರತಿಸಿಧಿಯು ನೀನೇನು ?
ನರಕಯಾತನೆಯ ಮಾನಸಪುತ್ರ ನೀನು !

* * * *

ಯಜ್ಞಕುಂಡದ ಹಾಗೆ ಹಗಲಿರುಳು ಹೊತ್ತುತಿಹ
ತಪಸಿಗಳ ಎದೆಯ ವೇದಿಕೆಯ ತುಳಿದು,
ಜ್ಞಾನಶಕ್ತಿಗೆ ಇಟ್ಟ ನಿತ್ಯನಂದಾದೀಪ-
ದಂಥ ಮಿದುಳಿನ ತಲೆಗಳನ್ನು ಮುಟ್ಟಿ
ಸತ್ಯವೀರರ ನಿತ್ಯ ಶುದ್ಧ ನಾಲಗೆಯಿಂದ
ಬಂದುಸಿರ ಕಣೆಗಳಿಗೆ ಬೆನ್ನುಗೊಟ್ಟು
ಪ್ರೀತಿವಾತ್ಸಲ್ಯಕ್ಕೆ ಅಭಿಷೇಕ ಗೈಯುತಿಹ
ಸಾಧ್ವಿಯರ ಕಣ್ಣೀರ ನಂಜ ಕುಡಿದು
ನಿನ್ನ ಕೋಪದ ಪಿತ್ತವನು ಕಾರಿಕೊಂಡು
ಅದರ ಪಾಪದ ಹಿರಿಯ ಹೊರೆ ಹೇರಿಕೊಂಡು
ಮುಕ್ಕರಿಸಿ ಮುಗಿಬಿದ್ದು ಕಣ್ಮುಚ್ಚುವಂದು,
ನಿನಗೊಂದು ಶಾಂತಿ—ಆ ಜನಕೆ ಬೇರೊಂದು.

—ಅಂಬಿಕಾತನಯದತ್ತ

# ಕೋ-ಮಿನ್-ಟಂಗ್

ಬರೆದವರು:— ಶ್ರೀ. ಅ. ನ. ಕೃಷ್ಣರಾಯರು - ಸಂಪಾದಕರು, "ಕಥಾಂಜಲಿ," ಬೆಂಗಳೂರು

೧೯೧೧ನೆಯ ಇಸವಿಯಲ್ಲಿ ಚೀನಾದೇಶದ ವುಚಾಂಗಿನಲ್ಲಾದ ರಾಜ್ಯಪರಿವರ್ತನದ ಫಲಿತಾಂಶವಾಗಿ ಮಾಂಚೂವಂಶ ಮುಳುಗಿ ಹೋಯಿತು. ಇದೇ ಮೇಲ್ಪಂಕ್ತಿಯನ್ನೇ ಪಶ್ಚಿಮಾ ಚೈನಾವು ಅನುಸರಿಸಿತು. ಮಾಂಚೂ ಚಕ್ರಾಧಿಪತಿಯು ಫೆಬ್ರುವರಿ ೧೨. ೧೯೧೨ನೆಯ ತಾರೀಖಿನ ದಿವಸ. ೪ ಮಿಲಿಯ ಡಾಲರುಗಳ ರಾಜಶುಲ್ಕವನ್ನು ತೆಗೆದುಕೊಳ್ಳಲೊಪ್ಪಿ ಪಟ್ಟಕ್ಕೆ ಶರಣು ಹೊಡೆದನು. ಆಗ್ಗೆ ಪ್ರಾಂತಿಕ ಪ್ರಜಾಸತ್ತಾತ್ಮಕಸರ್ಕಾರವೊಂದು (Provincial Republican Government) ಡಾ॥ ಸನ್ ಯಾತ್‌ಸೆನ ಯವರ ಅಧ್ಯಕ್ಷತೆಯಲ್ಲಿ ನ್ಯಾನ್ಕಿಂಗಿನಲ್ಲಿ ಕಾರಭಾರಮಾಡುತ್ತಿದ್ದಿತು. ಮಾಂಚೂ ಪತನಾನಂತರ ಸನ್ ಯಾತ್ಸೇನನು, ಯುವಾನ್‌ಷಿಕೈಗೋಸುಗವಾಗಿ ರಾಜೀನಾಮೆಯನ್ನಿತ್ತನು.

ರಾಷ್ಟ್ರಮತೀಯರ ಭಿನ್ನಭಿನ್ನ ಅಭಿಪ್ರಾಯಗಳು ಒಂದು ಮೂರ್ತಸ್ವರೂಪವನ್ನು ೧೯೧೧ರಲ್ಲಿ ಷಾಂಗಾಯಿನಲ್ಲಿ ಹೊಂದಿದುವು. ಕೆಲ ವರ್ಷಾನಂತರ ಇದು ಕ್ಯಾಂಟನನ್ನು ತನ್ನ ಕಾರ್ಯದ ಉಪಕ್ಷೇತ್ರವನ್ನಾಗಿ ಏರ್ಪಡಿಸಿಕೊಂಡು ೧೯೧೬ರಲ್ಲಿ ಉಹನಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿತು. ಪರಸ್ಪರ ಭಿನ್ನಮತಗಳಿಂದ ೧೯೨೭ರ ವೇಳೆಗೆ ಎರಡು ಪಂಗಡಗಳೇರ್ಪಟ್ಟು ಒಂದು ಉಹನ್ನಿನಲ್ಲಿಯೂ ಮತ್ತೊಂದು ನ್ಯಾನ್ಕಿಂಗಿನಲ್ಲಿಯೂ ಕೆಲಸಗಳನ್ನು ಮಾಡಲಾರಂಭಿಸಿದವು. ಶತಮಾನಗಳಿಂದ ಕ್ಯಾಂಟನ್ನು ಪ್ರಗತಿಪರ ಅಭಿಪ್ರಾಯಗಳಿಗೂ, ಹೊಸಹೊಸ ಸುಧಾರಣೆಗಳಿಗೂ ಆಗರವಾಗಿಯೂ, ಕ್ಯಾಂಟನ್ ಜನರು ಸಾಹಸಾತುರರಾಗಿಯೂ ಇದ್ದುದರಿಂದ ಈ ಚಳವಳಿಯು ಅಲ್ಲಿ ಬೇರೂರಿತು.

ಯುವಾನ್‌ಷಿಕೈಗೆ ಮೊದಲಿನಿಂದಲೂ ಈ ರಾಷ್ಟ್ರೀಯ ಚಳವಳಿಯ ವಿಚಾರದಲ್ಲಿ ವಿಶ್ವಾಸವಿರಲಿಲ್ಲ. ಇವನ್ನೇ ಥಾಮಸ್ ಮಿಲ್ಲಾರ್ಡ್ಡಯವರು—

"Yuan was a statesman but while in his day he was liberal and progressive at heart he was a believer in monarchy as the better form of Government for China in its evolution. Yuan helped the overthrowal of Manchus because of their decadence....He helped the Republic not because he thought it practical but necessary to set up something."

"ಯುವಾನನು ರಾಜ್ಯನೀತಿಪ್ರವೀಣ. ತನ್ನ ಕಾಲದಲ್ಲಿಯವನು ಉದಾರಮತಿಯೂ, ಪ್ರಗತಿಪರನೂ ಆದರೂ ಅಂತರಂಗದಲ್ಲಿ ಚೀನಾದೇಶದ ಉತ್ಕ್ರಾಂತಿಗೆ ರಾಜಾಶ್ರಿತಪದ್ಧತಿಯ ಸರ್ಕಾರವೇ ಉತ್ತಮವಾದುದೆಂದು ನಂಬುತ್ತಿದ್ದನು. ಮಾಂಚೂವಂಶದ ಪತನಕ್ಕೆ ಅವನು ಸಹಾಯಕನಾದುದಕ್ಕೆ ಅವರ ಗ್ಲಾನಿಯ ವಿಚಾರದಲ್ಲಿದ್ದ ಅಸಹನೆಯೇ ಕಾರಣ......, ಪ್ರಜಾಶಾಸನ ಪದ್ಧತಿಯ ಸರ್ಕಾರಕ್ಕೆ ಸಹಾಯಮಾಡಿದುದು ಅದರ ದಕ್ಷತೆಯ ಬಗ್ಗೆ ಇದ್ದ ನಂಬಿಕೆಯಿಂದಲ್ಲ; ಹೊಸದಾದ ಯಾವುದಾದರೊಂದನ್ನು ಸ್ಥಾಪಿಸುವ ಅವಶ್ಯಕತೆಯಿದ್ದುದರಿಂದ."

ಎಂದು ವಿವರಿಸಿದ್ದಾರೆ. ಈ ಹೊಸ ಆಡಳಿತದಲ್ಲಿ ಅಸಂತೋಷವುಂಟಾಗಿ. ೧೯೧೨ ಜುಲೈನಲ್ಲಿ ಎರಡನೆಯ ರಾಜ್ಯವಿಪ್ಲವ ಉಂಟಾಯಿತು. ಈ ವಿಪ್ಲವವು ಕೂಡಲೆ ಅಡಗಿಸಲ್ಪಟ್ಟುದು ಮಾತ್ರವಲ್ಲದೆ ಅಕ್ಟೋಬರಿನಲ್ಲಾದ ಚುನಾವಣೆಯಲ್ಲಿ ಯುವಾನನಿಗೆ ಅಧ್ಯಕ್ಷಪಟ್ಟ ದೊರೆಯಿತು.

ಯುವಾನನಿಗೆ ಅಧ್ಯಕ್ಷಸ್ಥಾನ ದೊರೆತೊಡನೆಯೇ ಕೋ-ಮಿನ್-ಟಂಗ್ (ರಾಷ್ಟ್ರೀಯ ಚಳವಳಿಯ ಸಂಸ್ಥೆ)ಯನ್ನು ರಾಜ್ಯದ್ರೋಹಕಾರಕ ಸಂಸ್ಥೆಯೆಂದು ಬಹಿಷ್ಕರಿಸಿದುದಲ್ಲದೆ ಶಾಸನಸಭೆಯಲ್ಲಿದ್ದ ಆ ಪಂಗಡದ ಸದಸ್ಯರೆಲ್ಲರನ್ನು ಹೊರಗೆ ಹಾಕಿಸಿದನು. ೧೯೧೪ರಲ್ಲಿ ರಾಷ್ಟ್ರೀಯ ಸಭೆ (National Assembly)ಯನ್ನೇ ನಿವಾರಿಸಿ, ಅದರ ಸ್ಥಾನದಲ್ಲಿಯೊಂದು ಆಲೋಚನಾಸಮಿತಿಯೊಂದನ್ನು ನಿಯಮಿಸಿ ಎರಡು ವರ್ಷಗಳ ಪರ್ಯಂತರ ನಿರಂಕುಶಾಧಿಕಾರವನ್ನು ಮಾಡಿ, ಅನಂತರ ಲಿಯಾಂಗಷಿಯಿ ಮತ್ತು ಇತರ ಕೆಲಬರ ಸಹಾಯದಿಂದ ಜಪಾನ್ ಮತ್ತು ಇತರ ವಿದೇಶೀ ಮಂತ್ರಿಗಳು ಎಚ್ಚರಿಸಿದರೂ

ಗನುನಿಸದೆ ಸಿಂಹಾಸನವನ್ನಡರಲು ಯತ್ನಿಸಿದನು. ೧೯೧೫ರಲ್ಲಿ ಯುನಾನಿನಲ್ಲಿ ಟ್ಸಾಯಿಅಯೋ ಎಂಬುವನ ನಾಯಕತ್ವದಲ್ಲಿ ದಂಗೆಯೆದ್ದಿತು. ಇದಕ್ಕೆ ಇತರ ದಕ್ಷಿಣ ಪ್ರಾಂತ್ಯಗಳೂ ಸಹಕಾರ ವನ್ನಿತ್ತವು. ಆಗ ಯುವಾನನಿಗೆ ತನ್ನ ಪ್ರಯತ್ನದ ಮೌಢ್ಯವು ಕಂಡು, ಅವನು ಹಿಮ್ಮೆಟ್ಟಿದ್ದನು. ಮಾರನೆಯ ವರ್ಷವೇ ಮೃತ್ಯುವವನನ್ನು ಅಪಹರಿಸಿತು.

ಇವನ ಅನಂತರ ಅಧ್ಯಕ್ಷಪಟ್ಟಕ್ಕೆ ಬಂದ ಜನರಲ್ ಲಿ. ಯುವಾನ್ ಹಂಗನು ಜೂನ್ ೧೯೧೭ರ ವರೆಗೆ ಹಳೆಯ ಪ್ರಜಾ ಪ್ರತಿನಿಧಿ ಸಭೆಯನ್ನೇ ಪುನರುಜ್ಜೀವನಗೊಳಿಸಿ, ಆಲಸ್ಯದ ಆಡಳಿತವನ್ನು ಮಾಡುತ್ತ ಬಂದನು. ಹೊಸ ರಾಜ್ಯಶ್ಯಾಸನದ ಸೂತ್ರಗಳಲ್ಲಿಯೂ ಮಹಾಯುದ್ಧರಂಗವನ್ನು ಚೈನಾದೇಶವು ಪ್ರವೇಶಿಸುವ ವಿಚಾರಗಳಲ್ಲಿಯೂ ವಿಮತಗಳು ಬಂದು ಸಭೆಯು ಕೊನೆಗಂಡಿತು. ಈ ಸಮಯದಲ್ಲಿಯೇ ಮಾಂಚೂ ಚಕ್ರಾಧಿ ಪತಿಯನ್ನು ಪುನಃ ಪ್ರಭುಸ್ಥಾನಕ್ಕೆ ತರಲು ಜನಜನರಲ್ಲರ ವಿಮತಗಳ ಒಪ್ಪಂದವನ್ನು ಮಾಡಲು ಸುಚಾನಿಂದ ಬಂದಿದ್ದ ಜನರಲ್ ಚಂಗ್ಸನ್ನನು ಪ್ರಯತ್ನಿಸಿದನು. ಪ್ರತಿಪಕ್ಷದವರ ಬಲವು ಹೆಚ್ಚಾಗಿ ಈ ಪ್ರಯತ್ನವು ನಿಷ್ಫಲವಾಯಿತು. ಅವರೇ (ಉತ್ತರ ಸೈನ್ಯಾಧಿಕಾರಿಗಳು) ೧೯೧೮ ರಲ್ಲಿ ತಮ್ಮ ಇಷ್ಟ ಮಿತ್ರರ ಒಂದು ಪ್ರಜಾಪ್ರತಿನಿಧಿ ಸಭೆ (Parliament) ಯನ್ನು ಸ್ಥಾಪಿಸಿ ಯುವಾನ್-ಷಿ-ಕೈನ ಗೆಳೆಯನಾಗಿದ್ದ ಸು-ಷಿ-ಚಂಗನನ್ನು ಅಧ್ಯಕ್ಷನನ್ನಾಗಿ ಮಾಡಿದರು.

ಎರಡಾವರ್ತಿ, ಫಲವೀಳ್ಯಕೂಡ ಕೊಡದೆ ವಿಸರ್ಜಿಸಲ್ಪಟ್ಟದ್ದ ಪ್ರಜಾಪ್ರತಿನಿಧಿಗಳಲ್ಲಿಯೂ, ಈ ದಂಡನಾಯಕರು ನಡೆಸುತ್ತಿದ್ದ ಅತ್ಯಾಚಾರಗಳ ವಿಚಾರಗಳ ಬಗ್ಗೆ ಜನತಿಂಥಿಣಿಯಲ್ಲಿಯೂ ಅಸಮಾಧಾನಗಳು ಪ್ರಬಲವಾಗುತ್ತಿದ್ದವು. ಈ ವೇಳೆಗೆ ಸರಿಯಾಗಿ ತನ್ನ ರಾಜ್ಯಭ್ರಷ್ಟತೆಯಿಂದ ಡಾ॥ ಸನ್ಯಾತ್ಸೇನನು ಹಿಂತಿರುಗಲು, ಅವನ ನಾಯಕತ್ವದಲ್ಲಿ ಹಳೆಯ ಪ್ರಜಾಪ್ರತಿನಿಧಿಗಳೂ, ಕ್ಯಾಂಟನ್ನಿನಲ್ಲಿ ಒಂದು* ಪ್ರಜಾಪಕ್ಷ ಸರ್ಕಾರವನ್ನು ಸ್ಥಾಪಿಸಿದರು. ಸನ್ಯಾತ್ಸೇನನು ಯಾವ ಮಹತ್ಸ್ವ ಧಾರಣೆಗಳ ಗೋಜಿಗೂ ಕೂಡಲೆ ಹೋಗಲಿಲ್ಲ. ಅವರ ಆಶೆ ಆದರ್ಶಗಳು ಇಂಗ್ಲೆಂಡ್ ಅಮೇರಿಕಾಗಳ ಅಂತಃಕರಣವನ್ನಾರ್ಜಿಸಿದವು. ಮಹಾಯುದ್ಧಮುಗಿದಮೇಲೆ ಕ್ಯಾಂಟನ್ನಿನ ವ್ಯಕ್ತಿತ್ವವು ದೃಢಪಟ್ಟು ಸಿ. ಬಿ. ವಾಂಗನೂ, ಸಿ. ಸಿ. ವು ಯೆಂಬುವನೂ, ಪೆಕಿಂಗ್ ಡಲಿಗೇಷನ್ನಿನ ಸದಸ್ಯರಾಗಿ ವಾಷಿಂಗ್‌ಟನ್ನಿಗೆ ತೆರಳಿದರು. ಇಬ್ಬರು ಪ್ರತಿನಿಧಿಗಳು ಪೆಕಿಂಗ್ ಡೆಲಿಗೇಷನ್ನಿನ ಸದಸ್ಯರಾಗಿ ಹೋಗಿದ್ದರೂ ಚೀನೀಯ ರಾಷ್ಟ್ರೀಯ ಸರಿಸ್ಥಿತಿ ಮತ್ತು ಪ್ರಜಾಪಕ್ಷೀಯ ಕೋಮಿಂಟಗ್‌ಗಳ ತತ್ತ್ವಗಳನ್ನು ಸಭೆಯ ಮುಂದಿಡುವುದಕ್ಕೇ ಹೋಗಿದ್ದುದರಿಂದ ಇದು ಚೈನೀಯ ರಾಷ್ಟ್ರೀಯ ಇತಿಹಾಸದಲ್ಲಿ ಪ್ರಾಮುಖ್ಯವಾದ ವಿಷಯ. ಸನ್ಯಾತ್ಸೇನನಿಗೂ ಅವನ ಅನುಯಾಯಿಗಳಿಗೂ ಮನಸ್ತಾಪ ಬಂದಿತು. ಅವರಲ್ಲಿ ವು ಎಂಬುವನು ಷಾಂಗಾಯಿಗೆ ತೆರಳಿ, ಅಲ್ಲಿ ಯುವಾನನ ಅನಂತರ ವಿದೇಶ ಮಂತ್ರಿಯಾದನು.

೧೯೨೧–೨೫ರ ವರೆಗೆ ಕ್ಯಾಂಟನ್ನಿನ ಪ್ರಗತಿಯು ಅವಿಚ್ಛಿನ್ನವಾಗಿ ನಡೆಯಿತು. ಸರ್ಕಾರವು ಗೃಹದಲ್ಲಿಯೂ, ವಿದೇಶಗಳಲ್ಲಿಯೂ ಪ್ರಬಲಪ್ರಸಾರಣ ಕಾರ್ಯವನ್ನು ಹೂಡಿ ಕೋಮಿಂಟಂಗ್ ಸಂಸ್ಥೆಯನ್ನು ನವ ಚೈನಾದ ಆಶೆ ಆಶಯಗಳ ಕೇಂದ್ರೀಕರಣವೆಂದು ಚಿತ್ರಿಸಲಾರಂಭಿಸಿತು. ಮಧ್ಯೆ ಮಧ್ಯೆ ಕೆಲವು ಅಂತಃಕಲಹವಿದ್ದರೂ, ಅವುಗಳಿಂದ ರಾಷ್ಟ್ರೀಯ ಪ್ರಗತಿಗೆ ಯಾವ ಪ್ರತಿಬಂಧಕವೂ ಆಗಲಿಲ್ಲ. ಪ್ರತಿಪಕ್ಷಿಗಳ ಸಾಹಸವೇ ೧೯೨೪ರಲ್ಲಿ ಸನ್ಯಾತ್ಸೇನನು ಪೆಕಿಂಗ್ ನಗರಕ್ಕೆ ಸಂದರ್ಶನವಿತ್ತು ಕೋಮಿಂಟಂಗನ್ನು ರಾಷ್ಟ್ರೀಯ ನಿಯಮವರ್ತ್ಮವನ್ನು ಜನಮನದಲ್ಲಿ ಬಿತ್ತುವುದಕ್ಕೆ ಕಾರಣವಾಯಿತು. ಅದೇ ವರ್ಷವೇ ಸನಯಾತ್ಸೇನನು ಪರಲೋಕಪ್ರವಾಸಿಯಾದನು.

ಕೇಂದ್ರವಿಭಾಗವು ಚಂಗ್-ಕೈ-ಷೇಕನ ನಾಯಕತ್ವದಲ್ಲಿದ್ದಿತ್ತು. ಈ ಪಕ್ಷದ ಬಲ ಪ್ರಬಲವಾಗಲು ೧೯೨೬ರಲ್ಲಿ ಪ್ರಗತಿಪರ ಚಟುವಟಿಕೆಗಳ ಪುನರುಜ್ಜೀವನಕ್ಕಾರಂಭವಾಯಿತು. ಕ್ರಸುಗೆಟ್ಟ ವ್ಯಕ್ತಿಗಳೂ, ಸಂಸ್ಥೆಗಳೂ ಮಟ್ಟಹಾಕಲ್ಪಟ್ಟವು. ಕಟ್ಟುಕಟ್ಟಳೆಯನ್ನರಿಯದೆ ಸ್ವೇಚ್ಛಾಪ್ರವರ್ತಿಗಳಾಗಿದ್ದ ಕಾರ್ಮಿಕ ಸಂಘಗಳು ಸುವ್ಯವಸ್ಥಿತಗೊಳಿಸಲ್ಪಟ್ಟವು. ವಿತಿವಿವೇಚನೆಗಳ ವಿಜಯಯಾತ್ರೆಯಾರಂಭವಾಯಿತು. ಪ್ರಚಾರ ಕಾರ್ಯಕ್ಕಾಗಿಯೇ ಒಂದು ರಾಜಕೀಯ ವಿಭಾಗವು ಕೂಡಿಸಲ್ಪಟ್ಟಿತು. ಜನರನ್ನು ಎಚ್ಚರಗೊಳಿಸುವ ಕಾರ್ಯವು ಭರದಿಂದ ಸಾಗತೊಡಗಿತು. ಹಿರಿದು ಕಿರಿದೆನ್ನದೆ ನಾಯಕರು ಪಾಮರರೊಂದಿಗೆ ಬೆರೆತು ಅವರನ್ನು ದಾರಿದ್ರ್ಯ, ಅಂಧಕಾರ

* ೧೯೨೪ ರಲ್ಲಿ ಕಮ್ಯೂನಿಸ್ಟ ಮತೀಯರಿಗೆ ಕೋಮಿಂಟಂಗಿನಲ್ಲಿ ಸ್ಥಳ ಸಿಕ್ಕಿತು, ಅನಂತರ ಎಡ ಬಲ ವಿಭಾಗಗಳಾರಂಭವಾದವು. ೧೯೨೬ರ ವೇಳೆಗೆ ಎಡ ಮತ್ತು ಕೇಂದ್ರ ವಿಭಾಗಗಳಿಗೆ ವೈಷಮ್ಯವು ಹೆಚ್ಚಾಗುತ್ತ ಬಂದಿತು.

ಗಳ ಕೂಪಗಳಿಂದ ಮೇಲಕ್ಕೆತ್ತತೊಡಗಿದರು. ಈ ಸಮಯದಲ್ಲಿ ಕೋಮಿಂಟಂಗ್ ಸೈನ್ಯವು ಉತ್ತರಾಭಿಮುಖವಾಗಿ ಹೋಗಿ ಒಂದು ಹನಿ ರಕ್ತವನ್ನೂ ಚೆಲ್ಲದೆ ಇಯಾನಿಯ ಕಣಿವೆ ಮತ್ತು ಕುದುವೆ ( Delta ) ಗಳನ್ನು ಆಕ್ರಮಿಸಿತು. ನೋಟಕರು ಬೆರಗಾದರೆಂದು ಹೇಳಬೇಕಾಗಿಲ್ಲ. ಉತ್ತರಕ್ಕೆ ಮುಂದೆ ಮುಂದೆ ಹೋಗಬೇಕೆಂದು ಚಂಗ್ ಕೈಷೇಕನೂ ಅವನ ಸಹಯೋಧರೂ ಪ್ರಯತ್ನಿಸುತ್ತಿರುವಂತೇ, ಆರಾಮಾಲಯಗಳಿಂದ ಬೋರೋಡಿನ್ ಮೊದಲಾದ ಪಕ್ಷನಾಯಕರು ಬಂದು ಅವನನ್ನು ರಾಜ್ಯದ್ರೋಹಿಯೆಂದು ಜರಿಯಲೂ, ಪ್ರತಿಪ್ರಳಯವನ್ನು ಸಜ್ಜುಗೊಳಿಸಲೂ ಆರಂಭಿಸಿದರು ಚಂಗನು ಧೈರ್ಯಗೆಡದೆ ಕರ್ತವ್ಯವಿಮುಖನಾಗದೆ ವೀರವಿಕ್ರಮನ ಏಕಾಗ್ರಚಿತ್ತತೆಯಿಂದಲೇ ಮುಂದೆ ಮುಂದೆ ಸಾಗುತ್ತ, ಚಿಕಿಯಾಂಗ್, ಕಿಯಾಂಗ್ಸು, ಷಾಂಗ್ಹಾಯ್, ನ್ಯಾನ್ಕಿಂಗ್ ಪ್ರಾಂತ್ಯಗಳನ್ನು ಆಕ್ರಮಿಸಿದನು. ಅನಂತರದಲ್ಲಿ ಕಮ್ಯೂನಿಸ್ಟರೂ ಕೋಮಿಂಟಂಗ್ ಪಕ್ಷವನ್ನೇ ಸೇರಿದರು. ೧೯೨೭ ರಲ್ಲಿ ಕಮ್ಯೂನಿಸ್ಟರ ಶಕ್ತಿಯು ಹೆಚ್ಚಾಗಿ ಕೋಮಿಂಟಂಗ್ ಸಂಪೂರ್ಣ ಅವರ ಅಧೀನವಾಗಬೇಕು ಅಥವಾ ಅವರನ್ನು ಹದಗೊಳಿಸಬೇಕು ಇಂತಹ ವಿಷಮಪರಿಸ್ಥಿತಿಯೇರ್ಪಟ್ಟಿತು.

ಯಿಯಾಂಗ್ಸಿಯ ಆಕ್ರಮಣಕಾರ್ಯದಲ್ಲಿ ಚಂಗನು ತನ್ನ ಸೇನಾಬಲವೆಲ್ಲವನ್ನೂ ವ್ಯಯಮಾಡಿದ್ದನು. ಆದ್ದರಿಂದ ಈಗಿನ ತನ್ನ ವಿಜಯಯಾತ್ರೆಗೆ ಸಲಕರಣಗಳು ಸಾಲದೆ ಬಂದವು. ರಾಜಕೀಯ ವಿಪರ್ಯಾಯ ( differance ) ಗಳು ಹೆಚ್ಚಾಗುತ್ತಬಂದವು. ನ್ಯಾನ್ಕಿಂಗಿನಲ್ಲಿ ಚಂಗನು ಒಂದು ನಾಮಮಾತ್ರದ ರಾಷ್ಟ್ರೀಯ ಸರ್ಕಾರವನ್ನು ಸ್ಥಾಪಿಸಿದ್ದನು. ನಡಾವಳಿಗಳು ಸೈನ್ಯದಲ್ಲಿ ಜನರಲ್ ಆಗಿದ್ದ ಫೆಂಗ್-ಯು-ಸಿಯಾಂಗನನ್ನು ಒಂದು ಪ್ರಧಾನ ಸ್ಥಾನಕ್ಕೆ ತಳ್ಳಿದವು. ಚಂಗನ ವಿಜಯಕ್ಕೆ ಫೆಂಗನ ಸಹಕಾರವು ಅತ್ಯವಶ್ಯಕವಿದ್ದುದರಿಂದ ಅವನು ಯಿಯಾಂಗ್ಸಿಯಿಂದ ಹಿಂತಿರುಗಬೇಕಾಯಿತು.

ಆಗಸ್ಟ ೧೯೨೭ರಲ್ಲಿ ಕಮ್ಯೂನಿಸ್ಟರೂ, ರಷ್ಯಾ ದೇಶೀಯ ಪ್ರಾಮುಖ್ಯ ಸಲಹೆಗಾರರೂ ಚೀನಾದಿಂದ ಸ್ವದೇಶಗಳಿಗೆ ಹಿಂತಿರುಗಿದರು. ಚಂಗನು ತನ್ನ ದಂಡನಾಯಕತ್ವಕ್ಕೆ ರಾಜೀನಾಮೆ ಕೊಟ್ಟನು. ಚೀನಾದೇಶದ ರಾಷ್ಟ್ರೀಯ ಸಂಸ್ಥೆಯಾದ ಕೋ-ಮಿಂ-ಟಂಗಿನ ಬಲವನ್ನು ವಿವರಿಸುತ್ತಾ ಒಬ್ಬ ಇತಿಹಾಸಜ್ಞರು "ಕೋಮಿಂಟಂಗಿನ ಬಲವು ಎಂದಿಗೂ ಸೈನ್ಯಾದಿಪಶುಬಲದಲ್ಲಿರಲಿಲ್ಲ. ಅವರ ಬಲವನ್ನು ಆ ಪ್ರಸ್ತಾವನದಿಂದ ಗಣಿಸಲೂ ಆಗದು. ಚೀನಾದೇಶವನ್ನು ಚೀನೀಯರೇ ಪುನರುಜ್ಜೀವನಗೊಳಿಸುವದಲ್ಲದೆ, ಒಂದುಗೂಡಿಸಲೂಬಹುದು. ಪೌರಾಧಿಕಾರವೇ ಪ್ರಧಾನವಾದುದು, ಜನಹಿತಸಾಧನೆಯೇ ರಾಷ್ಟ್ರದ ಪ್ರಥಮ ಕರ್ತವ್ಯ. ಮತ್ತು ಚೀನಿಯರಧಿಕಾರವನ್ನು ಪ್ರತಿಭಟಿಸುವ ವಿದೇಶೀಯರ ಪ್ರಯತ್ನಗಳ ವಿರೋಧ. ಈ ತತ್ತ್ವಗಳನ್ನು ಮುಂದೆಮಾಡಿಕೊಂಡು, ಅದು ವಿಕಾಸಹೊಂದಿದೆ. ನಾಯಕರು ಅಸಂಖ್ಯಾಕ ದೋಷಗಳನ್ನು ಮಾಡಿದರೂ, ಪಕ್ಷವು ( Party-Kuomintung ) ತನ್ನ ಮೂಲ ಸೂತ್ರಗಳನ್ನು ಮರೆಯದಿದ್ದರೆ, ಅದಕ್ಕೆ ಅಳಿವು ಬರಲಾರದು. ಅದರ ಸದಸ್ಯತ್ವವು ಚೈನಾ ರಾಷ್ಟ್ರದ ನಾಲ್ಕು ಐದರ ಭಾಗವೇ ( ⅘ ) ಆಗಿರುವುದು ಮಾತ್ರವಲ್ಲದೆ ಸದಸ್ಯರಲ್ಲಿ ಹಲವರು ಪೆಕಿಂಗಿನದಲ್ಲಿ ಮುಖ್ಯ ಅಧಿಕಾರ ಪದವಿಗಳಲ್ಲಿಯೂ ಇದ್ದಾರೆ. ರಾಷ್ಟ್ರದ ತರುಣರು ಅದರೊಂದಿಗೆ ಒಂದಾಗಿದ್ದಾರೆ. ಕೋ-ಮಿಂಟಂಗ್ ಪ್ರತಿಸ್ಪರ್ಧೆಯನ್ನು ರಚಿಸುವ ಪವಾಡಕೃತ್ಯಕ್ಕೇನೂ ಕೈಹಾಕುವುದಿಲ್ಲ. ಅದು ಸ್ಥಾಪಿಸಿರುವ ಸರ್ಕಾರವು ಜಗತ್ತಿನ ಮಿಕ್ಕ ಸರ್ಕಾರಗಳಷ್ಟೇ ಸ್ಥಿರವಾಗಿದೆ. ಚೈನಾದ ಬಹು ಬಲವತ್ತರ ರಾಜಶಕ್ತಿಯ ಪಕ್ಷವಾಗುವ ಭವಿಷ್ಯತ್ತು ಇದಕ್ಕಿದೆ. " ಎಂದು ಶಕುನ ನುಡಿದಿದ್ದಾರೆ.

ನಾಡಿನಲ್ಲಿ ಇಂತಹ ಬಲವತ್ತರವಾದ ಸ್ಥಾನವನ್ನು ಪಡೆದು ನಾಡಿಗರ ಸರ್ವಾನುಮತ ಅನುಸರಣೆಗೆ ಪಾತ್ರವಾಗಿರುವ ಈ ಪಕ್ಷದ ಸೂತ್ರಗಳನ್ನೂ ಕೆಲಸಕಾರ್ಯಗಳನ್ನೂ ಪರೀಕ್ಷಿಸುವ. (೧)೧೯೨೪ರಲ್ಲಿ ನಡೆದ ಸ್ಥಾಪನ ಪರಿಷತ್ತಿನ(Foundation Conferance)ಲ್ಲಿ ಕೋಮಿಂಟಂಗಿನವರು ಹೊರಡಿಸಿದ ಪ್ರಕಟನೆಯು "ಚೀನಾದ ಆರ್ಥಿಕ ಇತಿಹಾಸವು ಬೇಸಾಯದ ಮೇಲೆ ನಿಂತಿದೆ" (Chinese economy rests on agriculture) ಯೆಂದು ಸಾರಿತು. ಚೀನಾದೇಶವು ಬಹಳ ವರ್ಷದಂತೆ ರೈತನಾಡು; ಅಲ್ಲಿ ಶೇಕಡ ೭೦ ಮಂದಿ ಬೇಸಾಯಗಾರರು. ಅನೂಚಿನವಾಗಿ ಬಂದ ದಣಿಗಳ ಹಿಂಸೆಯ ಜೊತೆಗೆ ಪರದೇಶೀಯರು ದಳಿತದ ದಬ್ಬಾಳಿಕೆಗಳನ್ನೂ ಅನುಭವಿಸುತ್ತ ಬಂದು, ಚೀನೀಯನ ಜೀವನವು ಬಹು ದುರ್ಧರವಾಗುತ್ತ ಬಂದಿತು. ಒಂದಾಯವನ್ನಾರಂಭಿಸುವ ಮಾರ್ಗವೊಂದೇ ಅವರಿಗೆ ಅನ ತೆರೆದಿದ್ದುದು. ಇದನ್ನರಿತ ಕೋಮಿಂಟಂಗ್, ಅವರ ಸಂಕಷ್ಟಗಳನ್ನು ನಿವಾರಿಸಲಾರಂಭಿಸಿತು. ಕೋಮಿಂಟಂಗ್ ಅಧಿಕಾರಕ್ಕೆ ಬಂದೊಡನೆಯೇ ಮೊದಲು ಸಾಧ್ಯವಾದಷ್ಟು ಸಾಗುವಳಿಯ ಜಮೀನನ್ನು ಸಮವಾಗಿ ಹಂಚಿ ಸ್ವಂತ ಜಮೀನುಗಳನ್ನು [illegible] ಚಿಕ್ಕಲವಾಡಿಗಳಾಗಿದ್ದ ರೈತಂಗೆ ಸಾಗುವಳಿ

ಯಾಗುವಂತಹ ಜಮೀನುಗಳನ್ನು ಕೊಟ್ಟಿತು. ಬಹು ಜನ ಸ್ಥಳಗಳ ಹೆಚ್ಚಿಗೆ ಜನಗಳನ್ನು ಅಲ್ಪಸಂಖ್ಯಾಕ ಸ್ಥಳಗಳಿಗೆ ಸಾಗಿಸಿತು. ಹಣಗಾರರ, ಕೈಗಳಿಗೆ ಸಿಕ್ಕ ನರಳುತ್ತಿದ್ದವರ ಮತ್ತು ಧನ ಕೊರತೆಯಿಂದ ಜಮೀನಿನ ವಿಶೇಷ ಸಾಗುವಳಿ ಮಾಡಲಾಗದಿದ್ದವರ ಸಹಾಯಾರ್ಥವಾಗಿ 'ರೈತರ ಬ್ಯಾಂಕು'ಗಳನ್ನು ಸ್ಥಾಪಿಸಿತು. ತನ್ನೊಂದು ಪ್ರಕಟಣೆಯಲ್ಲಿ ಕೋ-ಮೀಟಂಗ್ ಹೇಳಿರುವುದೇನೆಂದರೆ-"ಚೀನೀಯ ರಾಜ್ಯಪರಿವರ್ತನದ ಚಳುವಳಿಯು ರೈತರ ಮತ್ತು ಕೆಲಸಗಾರರ ಆಧಾರದ ಮೇಲಿದೆ. ಆದ್ದರಿಂದ ಕೋಮಿಂಟಂಗ್ ತನ್ನ ಶಕ್ತಿಯನ್ನು ರೈತರು ಮತ್ತು ಕೆಲಸಗಾರರು ಕ್ರಮೇಣ ತಮ್ಮ ಆರ್ಥಿಕ ಜೀವನವನ್ನು ಯುಕ್ತರೀತಿಯಿಂದ ರಚಿಸಿಗೊಂಡು, ಅಭಿವೃದ್ಧಿ ಹೊಂದುವಂತೆ ಮಾಡಲು ನಿವೇದಿಸಿದೆ. ಅದು ಪರದೇಶೀಯ ಸಾಮ್ರಾಜ್ಯವಾದ (Foreign Imperialism) ಆಂತರಿಕ ಸೈನ್ಯಾಡಳಿತ (Militarism) ಮತ್ತು ಸುಲಿಗೆಯ ಪಂಗಡಗಳ ಮೇಲಿನ ಸಂಗ್ರಾಮವು ಜಯಶೀಲವಾಗುವಂತೆ ಮಾಡಲು ರೈತರ ಮತ್ತು ಕೂಲಿಗಾರರೊಂದಿಗೆ ಕೆಲಸ ಮಾಡುತ್ತದೆ. ರೈತರ ಮತ್ತು ಕೂಲಿಗಾರರ ಹಿತಕ್ಕಾಗಿ ಈ ಪಕ್ಷವು ಕಾದುವುದರಿಂದ ರೈತರು ಮತ್ತು ಕೂಲಿಗಾರರು ಪಕ್ಷವನ್ನು ಸೇರಿ, ಕ್ರಾಂತಿಸಂಗ್ರಾಮದಲ್ಲಿ ಅವರೊಂದಿಗೆ ಸಹಕರಿಸಿದಲ್ಲಿ ತಮಗೆ ತಾವೇ ಅನುಕೂಲವನ್ನುಂಟುಮಾಡಿಕೊಂಡಂತಾಗುತ್ತದೆ."

ಭೂಕಂದಾಯವೊಂದನ್ನುಳಿದು ಮಿಕ್ಕೆಲ್ಲ ತೆರಿಗೆಗಳೂ ತೆಗೆದು ಹಾಕಲ್ಪಡುತ್ತವೆ. ಮಾಲೀಕರು ಕಟ್ಟಿದ ಬೆಲೆಯ ಮೇಲೆ ಕಂದಾಯಗಳು ಹಾಕಲ್ಪಡುತ್ತವೆ.

ರೈತರ ಚಳವಳಿಯನ್ನು ಸಿಸ್ತುಗೊಳಿಸಿ ಅಭಿವೃದ್ಧಿಮಾಡಲು ಕೋಮಿಂಟಂಗಿನ ಕೇಂದ್ರೀಯ ಮತ್ತು ಪ್ರಾಂತಿಕ ಸಮಿತಿಗಳಲ್ಲಿ ರೈತರ ಖಾತೆಗಳಿವೆ. ಇದಲ್ಲದೆ ರೈತರ ಚಳವಳಿಯ ಮಾತೃಸ್ಥಾನವಾಗಿ, ಸ್ವತಂತ್ರ ಸಂಸ್ಥೆಯೇ ಆಗಿರುವ 'ಪೆಸೆಂಟ್ ಲೀಗ್' ಎಂಬುದು ತನ್ನ ಸಾವಿರಕ್ಕೂ ಹೆಚ್ಚಾದ ಸ್ಥಳೀಯ ಶಾಖೆಗಳ ಮುಖೇನ ಕೋಮಿಂಟಂಗಿನ ತತ್ತ್ವಗಳನ್ನು ಪ್ರಸಾರಿಸುತ್ತಲಿದೆ. ಈ ಲೀಗಿಗೆ ರೈತರು, ಕೂಲಿಗಾರರು, ಹಳ್ಳಿಯ ಕೈಕೆಲಸಗಾರರು, ನೂರು ಮಾರು ಎಕರೆಗಿಂತ ಸ್ವಲ್ಪ ಕಡಿಮೆ ಜಮೀನುಳ್ಳವರು, ಒಮ್ಮೆಲೇ ಜಮೀನುದಾರರೂ, ರೈತರೂ ಆಗಿರತಕ್ಕ ಅರೆ ಜಮೀನುದಾರರೂ, ಅದರ ಸದಸ್ಯರಾಗಲರ್ಹರು. ಅನರ್ಹರಲ್ಲಿ ೧) ೧೦೦ ಮಾರುಗಳಿಗಿಂತ ಹೆಚ್ಚಿಗೆ ಜಮೀನುಳ್ಳವರು ೨) ಕರ್ಜ ಕೊಡುವವರೂ, ಸರಾಫರೂ ೩) ರೈತರ ಏಳಿಗೆಗೆ ವಿರೋಧವಾಗುವ ಯಾವೊಂದು ಪ್ರಯತ್ನದ ಮಾಲೀಕರು ೪) ಮತಪ್ರಸಾರಕರು (Missionaries especially Christian) ೫) ವಿದೇಶೀ ಸಾಮ್ರಾಜ್ಯವಾದಿಗಳ ಅನುಯಾಯಿಗಳು ೬) ಅಫೀಮು ತಿನ್ನುವವರು ೭) ದ್ಯೂತಗಾರರು ಸೇರಿಸಲ್ಪಟ್ಟಿದ್ದಾರೆ.

೧೯೨೬ರಲ್ಲಿ ನೆರೆದ 'ರೈತಪ್ರತಿನಿಧಿ'ಗಳ ದ್ವಿತೀಯ ಸಮ್ಮೇಳನದಲ್ಲಿ ಸುಮಾರು ೩೦ ನಿರ್ಣಯಗಳಾದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ:—

೧) ಸಮಾಜಶಾಂತಿಯು ನೆಲೆಗೊಳ್ಳಲು, ಸಮಾಜದ ದುಷ್ಟ ಕಣಗಳನ್ನು ನಿವಾರಿಸತಕ್ಕದ್ದು.

೨) ದೊಡ್ಡ ದೊಡ್ಡ ಜಮೀನ್ದಾರರು ಪ್ರಚಾರದಲ್ಲಿಟ್ಟಿದ್ದ 'ಒತ್ತಾಯದ ಕೂಲಿ' ಪದ್ಧತಿಯನ್ನು ನಿವಾರಿಸತಕ್ಕದ್ದು.

೩) ಅನ್ಯಾಯದ ಸುಲಿಗೆಗಳನ್ನೂ, ಪೀಡನಾಪರ ತೆರಿಗೆಗಳನ್ನೂ ತೆಗೆದುಹಾಕತಕ್ಕದ್ದು.

೪) ಮಾರ್ಬಡ್ಡಿ ತೆಗೆದುಕೊಳ್ಳುವುದನ್ನು ಕ್ರಿಮಿನಲ್ ಅಪರಾಧವನ್ನಾಗಿಮಾಡುವುದು.

ಈ ನಿರ್ಧಾರಗಳನ್ನು ಕಾರ್ಯಮುಖ ಮಾಡಲು ಕೋಮಿಂಟಂಗ್ ರೈತರ ಚಳವಳಿಗೆ ಯುಕ್ತತರಬೇತನ್ನು ಕೊಡಲಾರಂಭಿಸಿತು. ಶಿಕ್ಷಣಹೊಂದಿದವರು ತಮ್ಮ ತಮ್ಮ ಗ್ರಾಮಗಳಿಗೆ ಹಿಂತೆರಳಿ ಕೋಮಿಂಟಂಗಿನ ಆಶೆ ಆದರ್ಶಗಳನ್ನು ಪ್ರಸಾರಮಾಡುತ್ತಲಿದ್ದಾರೆ. ಈ ಚಳವಳಿಗೆ ಸ್ಫೂರ್ತಿ ಹಾಗೂ ಕಾರ್ಯರೂಪು ಹೊರಗಿನಿಂದ ಬಂದರೂ ಚೀನೀಯರು ತಮ್ಮ ಉತ್ಕ್ರಾಂತಿಯನ್ನು ಅವುಗಳ ಮಿಳನದಿಂದ ಹುಟ್ಟಿದ ತಮ್ಮ ರಾಷ್ಟ್ರೀಯ ಸಂಸ್ಥೆಯಿಂದ ಸಾಧಿಸಿಕೊಳ್ಳುತ್ತಿದ್ದಾರೆ.

ಚೀನಾದಲ್ಲಿ ನಡೆಯುತ್ತಿರುವ ಈಚಿನ ವಿದ್ಯಮಾನಗಳು ಚೀನೀಯರ ಆಶಯವನ್ನು ಸಂಪೂರ್ಣ ಸಾಧ್ಯಗೊಳಿಸಿ ಕೊಡುತ್ತಲಿವೆ.

ಜನರಲ್ಲುಗಳಲ್ಲಿ ಮಧ್ಯೆ ಮಧ್ಯೆ ವೈಮನಸ್ಯಗಳು ಹುಟ್ಟುತ್ತಿದ್ದರೂ, ಚಿಯಾಂಗ್ ಕೈಷೇಕನ ಸಾಮರ್ಥ್ಯವು ಅವುಗಳನ್ನು ತಡೆಗಟ್ಟಿವೆ. ಚಿಯಾಂಗನೇ ಈಗ ಚೀನಾದ ಸರ್ವಾಧಿಕಾರಿಯಾಗಿ, ಅದನ್ನು ಸಂಪೂರ್ಣ ಸ್ವಾತಂತ್ರ್ಯದ ಹೆಗ್ಗುರಿಗೆ ಒಯ್ಯುತ್ತಲಿದ್ದಾನೆ.

ಜಗತ್ತೇ ತೆರೆದ ಕಣ್ಣಿಂದ ಚೀನೀಯ ಸ್ವಾತಂತ್ರ್ಯಸಂಗ್ರಾಮವನ್ನು ನೋಡುತ್ತಲಿದೆ. ಭಾರತವರ್ಷದ ಅಭಿಮಾನವಂತೂ

ಈ ವಿಚಾರದಲ್ಲಿ ಸಂಪೂರ್ಣವಾಗಿದೆ. ಮೊನ್ನೆಮೊನ್ನೆ ಚೀನೀಯ ರಾಷ್ಟ್ರಸೈನ್ಯಗಳೊಂದಿಗೆ ಹೋರಾಡಲು ಆಳರಸರು ಭಾರತೀಯ ಸೈನ್ಯಗಳನ್ನು ಕಳುಹಿಸಿದಾಗ, ಇಡೀ ಹಿಂದೂಸ್ಥಾನವೇ ಒಂದಾಗಿ ನಿಂತು, ಆಳರಸರ ದೌಷ್ಟ್ಯವನ್ನು ಖಂಡಿಸಿತು. ನಿಸರ್ಗದ ಒಂದು ಸ್ಪರ್ಶವು ಜಗತ್ತನ್ನೇ ಒಂದುಗೂಡಿಸುವುದೆಂಬ ಕವಿ ವಚನದಂತೆ ಸಾಮ್ರಾಜ್ಯವಾದ ( Imperialism ) ದ ಮೇಲೆ ಪೌರಸ್ತ್ಯರು ಹೂಡಿರುವ ಸಂಗ್ರಾಮವು, ಒಂದೇ ಆದರ್ಶವನ್ನುಳ್ಳುದಾಗಿರುವುದರಿಂದ ಅದರ ಐಕ್ಯತೆಯು ಹೆಚ್ಚು ಹೆಚ್ಚು ಸಾಧಿಸಲ್ಪಡುತ್ತಿದೆ. ಯುಗಯುಗಾಂತರಗಳಿಂದಲೂ ಪೌರ್ವಾತ್ಯ ರಾಷ್ಟ್ರ (Eastern Nations) ಗಳಲ್ಲಿ ಸಂಸ್ಕೃತಿಯು ಒಮ್ಮುಖವಾಗಿ ಹರಿಯುತ್ತಲಿದೆ. ಸುಪ್ರಸಿದ್ಧ 'ಕಾಕಸು ಓಕಾಕುರನು' ಹೇಳುವಂತೆ—

"ಏಷ್ಯವೆಲ್ಲವೂ ಒಂದೇ. ಕನ್‌ಫ್ಯುಷಿಯಸ್ಸಿನ ಸಮವಾದ ( Communism ) ವನ್ನೂ, ಭಾರತೀಯ ವೇದಪುಷ್ಟ ವ್ಯಕ್ತಿವಾದ (Individualism) ವನ್ನು ಪಡೆದಿರುವ ಎರಡು ಪ್ರಚಂಡ ಸಂಸ್ಕೃತಿಗಳ ಯುಕ್ತೋಚ್ಚಾರಣೆಯನ್ನು ಮಾಡಲಿಕ್ಕೆ ಹಿಮಾಲಯವು ಆ ನಾಡುಗಳನ್ನು ವಿಭಾಗಿಸಿದೆ. ಆದಿರೂಪನೂ, ವಿಶ್ವಮಯನೂ ಆದ ಪರಮಾತ್ಮನಲ್ಲಿ ಅವರಿಗಿರುವ ವಿಶಾಲ ಪ್ರೇಮವನ್ನು ಈ ಮಂಜುವೆಟ್ಟದ ಪ್ರತಿಬಂಧಕಗಳು ಕೂಡ ಒಂದು ಕ್ಷಣವಾದರೂ ಅಡ್ಡಗಟ್ಟಲಾರವು. ಇದೇ ಎಲ್ಲ ಏಷ್ಯಾ ಜನಾಂಗಗಳ ಭಾವಸಿರಿಯೆಂಬ ಪಿತ್ರಾರ್ಜಿತ ಸೊತ್ತು. ಇದೇ ಅವರನ್ನು, ಏಕದೃಷ್ಟಿತ ವಿಷಯದ ಮೇಲೆ ಮನವಿಟ್ಟವರಾಗಿ ಜೀವನದ ಗುರಿಯನ್ನು ಬಿಟ್ಟು ಸಾಧನಗಳ ಹುಡುಕುವ ಹವ್ಯಾಸದಲ್ಲಿ ಮೈಮರೆಯುವ ಮೆಡಿಟರೇನಿಯನ್ ಬಾಲ್ಟಿಕ್ ಜನಗಳಿಂದ ವಿಶೇಷಿಸಿ, ಜಗತ್ತಿನ ಮಹದ್ಧರ್ಮಗಳಿಗೆ ಅವರು ಜನನಕೊಡಲು ಇಂಬುಗೊಟ್ಟಿರುವುದು."

ವಿವಿಧಸುಮಂಗಳನ್ನು ಹೇಗೆ ಒಂದೇ ತಂತುವು ಒಂದುಗೂಡಿಸುವುದೋ ಹಾಗೆ ಪೌರ್ವಾತ್ಯ ಜನಾಂಗಗಳನ್ನು ಧಾರ್ಮಿಕ ಜೀವಾಳವೂ ಸ್ವಾತಂತ್ರ್ಯಾಪೇಕ್ಷೆಯೂ ಉಳ್ಳ ಒಂದೇ ಗುರಿಯು ಒಂದುಗೂಡಿಸಿದೆ. ಕೂಡಿಸದಿದ್ದೆಡೆಗಳಲ್ಲಿ ಕೂಡಿಸುತ್ತಲಿದೆ. ಸುಖವಾದಿಗಳೂ, ಭಾವನಾಪರರೂ ಆದ ನಾವು ರಷ್ಯಾಪ್ರನೊಂದಿಗೆ ಕಲೆತು, ಆ ಐಕ್ಯದ ಪೂರ್ಣವೈಭವದ ದಿವಸವನ್ನು ಹಾರೈಸುವ- ಅದಕ್ಕಾಗಿ ದುಡಿಯುವ.

'Where the world has not broken up into
fragments by narrow domestic walls,
Where the mind is led forward by thee
into ever-widening thought and action,
Into that heaven of freedom, my father,
let my country awake.

---

# ಸರದೇಶಮುಖಿ ಅಥವಾ ಚೌಥ

ಲೇಖಕರು:— ಶ್ರೀ. ಕಪಟರಾಳ ಕೃಷ್ಣರಾಯರು, ಕಲ್ಲಬುರ್ಗಿ.

ಈ ಸರದೇಶಕತಿಯ ವಿಷಯದಲ್ಲಿ ಮರಾಠಿ ಇತಿಹಾಸಕಾರರು ಅಭಿಪ್ರಾಯಪಡುವದೇನಂದರೆ "ಸರದೇಶಮುಖಿ" ಎಂಬ ಬಾಬನ್ನು ಮೊದಲು ಶಿವಾಜಿಯು ಪ್ರಾರಂಭಮಾಡಿದನು. ಎಲ್ಲ ಪರಕೀಯ ರಾಜರು ತನ್ನ ಮಾಂಡಲಿಕರಿರುವ ಕಾರಣ ಅವರು ಖಂಡಣಿಯೆಂದು ಸರದೇಶಮುಖಿಯನ್ನು ತನಗೆ ಸಲ್ಲಿಸಬೇಕೆಂದು ಶಿವಾಜಿಯು ಅಂತಸ್ಥ ಹೇತುವಿದ್ದಿತು" (ವಿದ್ಯಾಸೇವಕ ಸಂಪುಟ ೨ ಸಂಚಿಕೆ ೫ ಪಾನು ೧೫) ಸರದೇಶಮುಖಿಯಾಗಲೀ ಸರದೇಶಕತೆಯಾಗಲೀ ಅನ್ಯ ರಾಜರು ತನ್ನ ಮಾಂಡಲಿಕತೆಂದು ಕೊಡಬೇಕಾಗುವದೆಂದು ಶಿವಾಜಿಯು ಇದನ್ನು ಮೊದಲು ಪ್ರಾರಂಭಮಾಡಿದನೆಂಬುದಕ್ಕೆ ಏನು ಆಧಾರಗಳಿವೆಯೋ ನಾವರಿಯೆವು. ಆದರೆ ನಮಗೆ ಗೊತ್ತಿರುವ ಐತಿಹಾಸಿಕ ಪುರಾವೆಗಳಿಂದ ಮಾತ್ರ ಈ ರೀತಿ ಊಹಿಸುವದಕ್ಕೆ ಆಸ್ಪದವಿಲ್ಲ. ಶಿವಾಜಿ ಮತ್ತು ಶಾಹಜಿಯ ಸಮಕಾಲೀನರಾದ ಸುರಪುರ ಸಂಸ್ಥಾನದ ಮೂಲಪುರುಷರಾದ

ಗಡ್ಡೀಪಿಡ್ಡನಾಯಕ ಮತ್ತು ಹಸರಂಗಿ ಪಾಮನಾಯಕ ಇವರು
ಸಗರನಾಡಿನಲ್ಲಿ ಅಂದರೆ ಸುರಪುರ ಸಂಸ್ಥಾನದಲ್ಲಿ (ನಿಜಾಮ
ಕರ್ನಾಟಕದಲ್ಲಿ ಭೀಮಾ ಮತ್ತು ಕೃಷ್ಣಾ ನದಿಗಳು ಹರಿಯುವ
ನಡುವಿನ ಪ್ರದೇಶಕ್ಕೆ ಸಗರನಾಡು ಎಂದು ಹೆಸರು) ಈ
ಸರದೇಶಕತಿಯನ್ನು ವಸೂಲಿಮಾಡುತ್ತಿದ್ದರಲ್ಲದೆ ವಿಜಾಪುರ,
ತಾಳಿಕೋಟಿ, ನಾಲ್ವತ್ವಾಡ, ಕಲ್ಬುರ್ಗಿ, ಅಂಕಲಕೋಟಿ,
ರಾಯಚೂರ ಮುಂತಾದ ತಮಗೆ ಸಂಬಂಧವಿಲ್ಲದ ಅನೇಕ
ಮಾಮಲೆಗಳಲ್ಲಿ ಸಹ (ಮಾಮಲೆ ಎಂದರೆ ಈಗಿನ ಜಿಲ್ಹೆ)
ವಸೂಲಿ ಮಾಡಲಿಕ್ಕೆ ಇವರಿಗೆ ಅಧಿಕಾರವಿದ್ದಂತೆ ವಿಜಾಪುರದ
ಆದಿಲಶಾಹಿ ಸನದುಗಳಿಂದ ಕಂಡುಬರುತ್ತದೆ. ಇಷ್ಟಿದ್ದ
ಮಾತ್ರಕ್ಕೆ ಆದಿಲಶಾಹಿಯವರು ಸುರಪುರದ ಅರಸರ ಮಾಂಡಲಿ
ಕರೆಂಬ ಭಾವನೆಯಿಂದ, ಸುರಪುರದವರು ಆದಿಲಶಾಹಿ ರಾಜ್ಯ
ದಲ್ಲಿ ಈ ರುಸೂಮು ವಸೂಲಮಾಡುತ್ತಿದ್ದರೆಂದು ಹೇಳಲಿಕ್ಕಾ
ದೀತೆ? ಅದರಂತೆ ಮುಂದೆ ಆದಿಲಶಾಹಿಯು ನಷ್ಟವಾಗಿ ಈ
ಎಲ್ಲ ಪ್ರಾಂತವು ಔರಂಗಜೇಬನ ರಾಜ್ಯಕ್ಕೆ ಸೇರಲು ಪಾಮ
ನಾಯಕನ ಮಗನಾದ ಪೀತಾಂಬರಬಹಿರಿ ಪಿಡ್ಡನಾಯಕನೂ
ಕೂಡ ಔರಂಗಜೇಬನ ಆಡಳಿತದಲ್ಲಿದ್ದ ಈ ಎಲ್ಲ ಪ್ರಾಂತದಿಂದ
ಸರದೇಶಕತಿ ಮುಂತಾದ ರುಸೂಮುಗಳನ್ನು ವಸೂಲಮಾಡ
ತೊಡಗಿದನು. ಅವರಂಗಜೇಬನಿಗೂ ಇವನಿಗೂ ಯುದ್ಧ
ವಾಗುವದಕ್ಕೆ ಇದೇ ಕಾರಣವಾಯಿತು. ಪಿಡ್ಡನಾಯಕನ ಈ
ವಸೂಲಿಗೆ ಔರಂಗಜೇಬನ ಇತಿಹಾಸಕಾರರು ಪಿಡ್ಡನಾಯಕನ
'ಲೂಟಿ' ಎಂದು ಬರೆದಿರುವರು. ತದನಂತರ ಸುರಪುರ ಸಂಸ್ಥಾ
ನಿಕರಿಂದ ಈ ಸರದೇಶಕತಿಯನ್ನು ವಸೂಲಮಾಡಲ್ಪಡುವ
ಪ್ರಾಂತವು ಪೇಶ್ವೆ ಮತ್ತು ನಿಜಾಮ ಇಬ್ಬರ ಆಡಳಿತಕ್ಕೊಳ
ಗಾಯಿತು. ವಿಜಾಪುರ, ಅಂಕಲಕೋಟಿ ಮುಂತಾದ ಪ್ರದೇಶವು
ಪೇಶ್ವೇ ರಾಜ್ಯಕ್ಕೆ ಸೇರಿತು; ಮತ್ತು ರಾಯಚೂರ ಬೀದರ
ಕಲ್ಬುರ್ಗಿಯ ಪ್ರದೇಶವು ನಿಜಾಮ ರಾಜ್ಯದಲ್ಲಿ ಸೇರಿತು.
ಆದಾಗ್ಯೂ ಅನ್ಯರ ಆಡಳಿತದಲ್ಲಿದ್ದ ಈ ಭಾಗದಲ್ಲಿ ಸುರಪುರ
ದವರು ತಮ್ಮ ಸರದೇಶಕತಿಯನ್ನು ವಸೂಲುಮಾಡಹತ್ತಿದರು.
ಇಷ್ಟಿದ್ದಮಾತ್ರಕ್ಕೆ ಔರಂಗಜೇಬ, ಪೇಶ್ವೆ ಮತ್ತು ನಿಜಾಮ ಈ
ಮೂವರೂ ಸುರಪುರದವರ ಮಾಂಡಲಿಕರಾಗಲಾರರು. ಅದ
ರಂತೆಯೇ ಈ ಎಲ್ಲ ರಾಜರು ತಮ್ಮ ಮಾಂಡಲಿಕರೆಂಬ ಭಾವನೆ
ಯಿಂದ ಸುರಪುರದವರು ಇದನ್ನು ಅವರ ರಾಜ್ಯದ ಭಾಗ
ಗಳಿಂದ ವಸೂಲಿಮಾಡುತ್ತಿದ್ದರೆಂದು ಹೇಳಿದರೆ ಹಾಸ್ಯಾಸ್ಪದ
ವಾಗುವದು. ಇದಲ್ಲದೆ ಮಾಂಡಲಿಕರ ಪ್ರಾಂತದಲ್ಲಿ ಸಾಮ್ರಾ
ಟರು ತಾವಾಗಿಯೇ ಖಂಡಣಿಯನ್ನು ವಸೂಲಿಮಾಡುವದಿಲ್ಲ.
ಮಾಂಡಲಿಕರು ತಮ್ಮ ರಾಜ್ಯದ ಉತ್ಪನ್ನದೊಳಗಿನಿಂದ ಆ
ಖಂಡಣಿಯನ್ನು ಸಾಮ್ರಾಟರಿಗೆ ಸಲ್ಲಿಸಬೇಕಾಗುತ್ತದೆ. ಮಾಂಡ
ಲಿಕರು ಕೊಡದೇ ಇದ್ದ ಪಕ್ಷದಲ್ಲಿ ಸಾಮ್ರಾಟರು ಯುದ್ಧ
ಮಾಡಿ ತಮ್ಮ ಬಾಹುಬಲದಿಂದ ಕೊಡುವಂತೆ ಮಾಡುವರು.
ಈ ಸರದೇಶಕತಿ ಮುಂತಾದ ರುಸೂಮುಗಳು ಮಾತ್ರ ವಸೂಲ
ಮಾಡತಕ್ಕವರು ತಾವೇ ಸ್ವತಃ ವಸೂಲಿಮಾಡುವರು. ವಸ್ತುತಃ
ಸರದೇಶಕತಿಯಾಗಲೀ, ಸರಸರದೇಶಕತಿಯಾಗಲೀ ಇದೊಂದು
'ವತನ'ದಂತೆ ಇರುತ್ತಿದ್ದಿತು. ಪೂರ್ವದಲ್ಲಿ ರಾಜ್ಯದ ಮಹತ್ವದ
ಸೇವೆಮಾಡಿದವನಿಗೆ ಅದರಂತೆ ಮುಂದಾದರೂ ರಾಜ್ಯಕ್ಕೆ ಹಿತ
ಮಾಡಬೇಕೆಂಬ ಉದ್ದೇಶದಿಂದ ಇನಾಮುಗಳು ಕೊಡಲ್ಪಡುತ್ತಿ
ದ್ದವು. ಈ ಇನಾಮುಗಳು 'ಇನಾಮುತ್ತಮುಫ್ಹಾ' ಮತ್ತು
'ಇನಾಮ ಬದಲ್‌ವತನ' ಎಂದು ಎರಡು ತೆರನಾಗಿದ್ದವು.
ಇನಾಮುತ್ತಮೂ ಎಂದರೆ ವಂಶಪರಂಪರ ನಡೆಯುವಂತೆ
ಸ್ವತಂತ್ರವಾಗಿ ಕೊಡಲ್ಪಟ್ಟ ಜಾಗೀರು ಮುಂತಾದವುಗಳ,
ಇವುಗಳಲ್ಲದೆ ಇಂತಿಷ್ಟು ಪ್ರಾಂತದ ಮೇಲೆ ದೇಶಕತಿಯಂತೆ
ಸರದೇಶಕತಿ, ಸರಸರದೇಸಗತಿ, ಸರನಾಡಗೌಡಕಿ ಮುಂತಾ
ದವುಗಳು; ರುಸೂಮು ವಸೂಲಿಮಾಡುವ ಹಕ್ಕು 'ವತನ'
ಗಳಂತೆ ಇನಾಮು ಕೊಡಲ್ಪಡುತ್ತಿತ್ತು. ಈ ಹಕ್ಕುಗಳ ಸಂಗಡ
ಉಂಬಳಿ ಗ್ರಾಮುಗಳು, ಚಾವುರಾತ ಜಮೀನುಗಳು ಕೊಡಲ್ಪಡು
ತ್ತಿದ್ದವು. ಈ ರುಸೂಮು ಆ ಪ್ರಾಂತದ ತೆರಿಗೆಯ ರಕಮಿನ
ಮೇಲೆ ೧೦೦ ಕ್ಕೆ ಇಂತಿಷ್ಟೆಂದು ರಕಮು ಕೊಡಲ್ಪಡುತ್ತಿತ್ತು.
ಈ ತರದ ಇನಾಮುಗಳಿಗೆ 'ಇನಾಮು ಬದಲ ವತನ' ಎಂದು
ಹೆಸರು. ಅಂದರೆ ಈ ಇನಾಮುಗಳ ಬದಲು ಬಾದಶಾಹಗೆ
ಸೇವೆಮಾಡಬೇಕಾಗುತ್ತಿತ್ತು. ಈ ತರದ ಇನಾಮು ಸ್ವತಂತ್ರ
ವಾಗಿ ಕೊಡಲ್ಪಟ್ಟ ಜಾಗಿರಿಗಳಲ್ಲಿಯೂ ಮತ್ತು ಜಾಗಿರುಗಳಲ್ಲದ
ಅನ್ಯ ಪ್ರಾಂತದಲ್ಲಿಯೂ ಇರುತ್ತಿದ್ದಿತು. ಈ ಸರದೇಶಗತಿ ವತನ
ವನ್ನು ಕೊಡುವ ರಾಜನು ತನ್ನ ರಾಜ್ಯದಲ್ಲಿಯೇ, ರುಸೂಮು
ವಸೂಲಿ ಮಾಡಲ್ಪಡುವ ಪ್ರಾಂತವನ್ನು ಪರಶತ್ರುಗಳಿಂದ ರಕ್ಷಿಸ
ಬೇಕೆಂದಾಗಲಿ ಅಥವಾ ಯುದ್ಧದ ಕಾಲದಲ್ಲಿ ಸಹಾಯಮಾಡ
ಬೇಕಂದಾಗಲಿ ಕೊಡುತ್ತಿದ್ದನು. ಮುಂದೆ ಕಾಲಾಂತರದಲ್ಲಿ ಆ
ರಾಜ್ಯವು ಅಳಿದು ಆ ಪ್ರಾಂತವು ಪರರಾಜರ ವಶದಲ್ಲಿ ಸೇರಿ
ದಾಗ್ಯೂ ವಸೂಲಮಾಡತಕ್ಕವರು ಪೂರ್ವದಂತೆ ಆ ಪ್ರಾಂತ
ದಿಂದ ವಸೂಲಮಾಡುವದು ತಮ್ಮ ಹಕ್ಕೆಂದು ತಿಳಿಯುತ್ತಿದ್ದರು.
ಆದರೆ ಇಂಥ ಪರಿಸ್ಥಿತಿಯಲ್ಲಿ ವಸೂಲಿಮಾಡಬೇಕಾದರೆ ಬಾಹು
ಬಲವಿಲ್ಲದೆ ಕಾರ್ಯವಾಗುತ್ತಿದ್ದಿಲ್ಲ. ಬಲಾತ್ಕಾರದಿಂದಾಗಲೀ

ಯುದ್ಧಮಾಡಿಯಾಗಲಿ ವಸೂಲಿಮಾಡಬೇಕಾಗುತ್ತಿತ್ತು. ಇದಲ್ಲದೆ ಸರದೇಶಗತಿಯ ರುಸೂಮು ಇಷ್ಟೇ ಇರಬೇಕೆಂದು ನಿರ್ಬಂಧವಿದ್ದಿಲ್ಲ. ಕೊಡುವವನ ಇಚ್ಛೆ ಮತ್ತು ಯಾವನಿಗೆ ಕೊಡಲ್ಪಡುತ್ತಿತ್ತೊ, ಅವನ ಸಾಮರ್ಥ್ಯದ ಮೇಲೆ ಅವಲಂಬಿಸಿದ್ದು ಅದು ಹೆಚ್ಚುಕಡಿಮೆಯಾಗುತ್ತಿತ್ತು. ಗಡ್ಡಿಪಿಡ್ಡನಾಯಿಕ ಮತ್ತು ಅವನ ಮಗ ಹಸರಂಗಿ ಪಾಮನಾಯಿಕನಿಗೆ ದೊರೆತ ವಿಜಾಪುರ ಬಾದಶಹರ ಸನದುಗಳಲ್ಲಿ ಈ ಸರದೇಶಗತಿಗೆ 'ದಾಹಿಜಹ' ಅಂದರೆ ೧೦೦ಕ್ಕೆ ೧೧ ಎಂದು ಬರೆಯಲ್ಪಟ್ಟಿರುವದು. ಅದೇ ಪ್ರಾಂತದ ಮೇಲೆ ಪೀತಾಂಬರ ಬಹಿರಿಪಿಡ್ಡನಾಯಿಕನಿಗೆ ಅವರಂಗಜೇಬನಿಂದ ದೊರೆತ ಸನದಿನಲ್ಲಿ ಈ ಸರದೇಶಗತಿಯು ೧೦೦ಕ್ಕೆ ೨೦ ಎಂದು ಉಲ್ಲೇಖಿಸಿರುವದು. ಇದಲ್ಲದೆ ಈ ರುಸೂಮಿನ ಹಕ್ಕು ಕೊಡುವ ಉದ್ದೇಶವು ಕೂಡ ವಿಜಾಪುರ ಬಾದಶಹನ ಸನದಿನಲ್ಲಿ ಬರೆದಿರುವದು. 'ಸೈನ್ಯವನ್ನಿಟ್ಟು' ಪ್ರಾಂತದಲ್ಲಿ ಶಾಂತತೆಯಿಟ್ಟು ಬಾದಶಹರ ಸೇವೆಯಲ್ಲಿ ತತ್ಪರರಾಗಿ "ಉಪ್ಪಿನ ಸಾರ್ಥಕತೆಮಾಡಬೇಕು" ಅವರಂಗಜೇಬನ ಸನದಿನಲ್ಲಿ ೧೦೦ಕ್ಕೆ ೨೦ ರೂಪಾಯಿ ಸರದೇಶಗತಿಯ ರುಸೂಮಿನ ಉಲ್ಲೇಖವಿದ್ದರೂ ಸಂಸ್ಥಾನವಲ್ಲದ ಬೇರೆ ಪ್ರಾಂತದಲ್ಲಿ ೨೦ ರೂ. ವಸೂಲಿಮಾಡುತ್ತಿದ್ದರೂ ತಮ್ಮ ಸಂಸ್ಥಾನದಲ್ಲಿ ಮಾತ್ರ ಪೂರ್ವದಿಂದ ನಡೆದುಬಂದಂತೆ 'ದಾಹಿಜಾಹ'ನೇ ಅಂದರೆ ೧೦೦ಕ್ಕೆ ೧೧ ವಸೂಲಮಾಡಲ್ಪಡಹತ್ತಿತು. ಈ ರೀತಿ ಒಂದೇತರದ ಹಕ್ಕು ಬೇರೆ ಬೇರೆ ಸ್ಥಳಗಳಲ್ಲಿ ಹೆಚ್ಚುಕಡಿಮೆ ಯಾದದ್ದಲ್ಲದೆ ಕಾಲಕ್ಕನುಸರಿಸಿ ಕೂಡ ಹೆಚ್ಚುಕಡಿಮೆಯಾಗುತ್ತಿತ್ತು. ಪೇಶ್ವೆಯರ 'ಚೌಥು' ಕೂಡ ಇದೇ ತರದ ರುಸೂಮು ಇರುವವಲ್ಲದೆ ದೇಶಕಾಲಕ್ಕನುಸರಿಸಿ 'ದಾಹಿಜಾಹ'ದಂತೆ 'ಚೌಥು' ಆಗಿರುವದು. ಇದೇ ರೀತಿಯಿಂದ ಸರದೇಶಮುಖಿಯು ಪರಿವರ್ತನೆಯಾದುದರಿಂದ ಮರಾಠಿ ರಾಜ್ಯದಲ್ಲಿ ಕೆಲವು ಕಡೆಗೆ ಸರದೇಶಗತಿ ೧೦೦ಕ್ಕೆ ೧೧ (ದಾಹಿಜಾಹಿ) ಬೇರೆ ಕೆಲವು ಸ್ಥಳಗಳಲ್ಲಿ ೧೦೦ ಕ್ಕೆ ೨೫(ಚೌಥು)ಆಗಿರುವದು. ಈ ತರದ ವತನಗಳು ಕೊಡುವಾಗ್ಗೆ ವಿಶಿಷ್ಟ ಹೇತುವಿನಿಂದ ಕೊಡಲ್ಪಡುತ್ತಿದ್ದಾಗ್ಯೂ ಕಾಲಪರಿಸ್ಥಿತಿಯಲ್ಲಿ ಬದಲಾವಣೆಯಾಗಿ ಕೊಡುವವನ ಹೇತು ಉಳಿಯದೇ ಈಗಿನ ದೇಶಮುಖಿ ವತನಗಳು ಉಳಿದುಕೊಂಡಿರುವಂತೆ ಉಳಿದುಕೊಳ್ಳುವವು. ಪೇಶ್ವೆ ರಾಜ್ಯವು ಇದೇ ಚೌಥಿನ ತತ್ವಕ್ಕನುಸರಿಸಿ ಬೆಳೆಯಿತು. ಆದಕಾರಣ ಅವರು ಚೌಥು ವಸೂಲಮಾಡುವದು ತಮ್ಮ 'ಹಕ್ಕು' ಎಂದು ತಿಳಿಯುತ್ತಿದ್ದರು. ಮೊಗಲ ಸಾಮ್ರಾಜ್ಯದಂತೆ ಪೇಶ್ವಾಯಿಯ ರಾಜ್ಯಕ್ಕೆ ಸಾಮ್ರಾಜ್ಯಸ್ವರೂಪವು ಬಾರದ್ದಕ್ಕೆ ಈ ತರದಿಂದ ರಾಜ್ಯವಿಸ್ತಾರವಾದುದೇ ಕಾರಣವಾಯಿತು.

---

# ಕಾಳಿ

ಒಂದು ಚಿಕ್ಕ ಕತೆ

ಬರೆದವ: — ಕೃಷ್ಣಕುಮಾರ ಕಲ್ಲೂರ

## ೧.

ಕಾಳಿ, ಹೆಸರಿನ ತಕ್ಕ ಕಪ್ಪೇ ಆಗಿತ್ತು. ಹೊಟ್ಟೆಯ ಕೆಳಬದಿಗೆ ಸ್ವಲ್ಪ ಬೂದಿಬಣ್ಣದ ಛಾಯೆಯಿದ್ದುದೇನೋ ನಿಜ. ನೋಡಲಿಕ್ಕೆ ಕಾಳಿಯೇನು ಅಷ್ಟೊಂದು ಚಂದವಿರಲಿಲ್ಲ. ಮೋರೆಯ ಮೇಲೆ ದಡ್ಡತನದ ಕಳೆಯೇ ಸುರಿಯುತ್ತಿತ್ತು. ಕಣ್ಣುಗಳು ಚಿಕ್ಕವು; ಸೋಮಾರಿತನದಿಂದ ತುಂಬಿದಂತೆ ಕಾಣುತ್ತಿದ್ದವು. ಆದರೆ ಕಿವಿ ಮಟ್ಟಿಗೆ ಒಳ್ಳೇ ಚುರುಕು. ಬಾಲ ನಾಣ್ಣುಡಿಯಂತೆ ಡೊಂಕೇ ಆಗಿತ್ತು ಎಂಬದರಲ್ಲಿ ಸಂದೇಹವೇ ಇಲ್ಲ. ಸೀರಗಾಲುಗಳು, ನಿಲುವು ಹದವಾದದ್ದು. ಬಟ್ಟೆನಮೇಲೆ ಕಾಳಿ, ಜೋಲುಗಿವಿ ಹಾಕಿಕೊಂಡು, ಜೊಲ್ಲು ನಾಲಿಗೆ ಹಿಂದ ಕಾವಲಿ ಹಿಡಿದು ಓಡಾಡುವಾಗ ಅದು ತುಸು ಹೆಚ್ಚು ಕಡಿಮೆ ಹುಚ್ಚುನಾಯಿಯಂತೇ ಕಾಣುತ್ತಿತ್ತು.

ಆದರೆ ಕಾಳಿಯೇನು ಹುಚ್ಚಲ್ಲ. ಹೊತ್ತುಬಂದಾಗ, ಹುರುಪು ಬಂದಾಗ ಮೈಯುಬ್ಬಿಸಿ, ಕಣ್ಣು ಕೆರಳಿಸಿ, ಹೊಂಚುಹಾಕುವದಲ್ಲಿ ಅದನ್ನು ನೋಡಬೇಕು. ಎಂಥವರೂ ಹೆದರಬಹುದು. ಹೀಗಿದ್ದರೂ ಅದರ ನಡತೆ ಬಲುಮಿದುವು. ಸ್ವಭಾವ ಪ್ರೇಮಮಯವಾದದ್ದು. ನಮ್ಮೋಣಿ ಸುತ್ತಲಿಯ ಚಿಕ್ಕ ಚಿಕ್ಕ ಮಕ್ಕಳೂ ಕಾಳಿ ಕಾಳಿ ಎಂದು ಅದನ್ನು ಅದೆಷ್ಟೋ ಪ್ರೀತಿಯಿಂದ ಕಾಡುತ್ತಿದ್ದರು. ಕಾಳು ವಾಸ್ತ

ವರು; ಬಾಲಯೆಳೆಯುವರು; ಕಿವಿತಿರುವುವರು; ಮೈಮೇಲೆ ಬೀಳುವರು; ಕಲ್ಲಿನಿಂದ ಬಿಗಿಯುವರು—ಆದರೂ ಕಾಳಿ, ಯಾರಿಗೂ ಏನೂ ಮಾಡುತ್ತಿರಲಿಲ್ಲ. ಕೂಸುಗಳು ಕೂಡ ಕೈಚಾಚಿ, ಚೂಚೂ ಎಂದರೆ, ಅದು ತಟ್ಟನೆ ಬಾಲವಾಡಿಸುತ್ತ ಹತ್ತಿರ ಹೋಗಿ ನಿಲ್ಲುವದು.

ಒಂದು ಮನೆಗಲ್ಲ; ಓಣಿಯಲ್ಲಿ ಎಲ್ಲ ಮನೆಗಳಿಗೂ ಕಾಳಿ, ಬೇಕಾಗಿತ್ತು. ಎಲ್ಲರೂ ಅದನ್ನು ಹತ್ತಿರ ಕರೆಯುವವರೇ. ಹೊಟ್ಟೆಗೇನೂ ಕೊರತೆಯಿಲ್ಲ. ಊರ ಆಚಾರಕಿಂತಲೂ ನೆಮ್ಮದಿಯಾಗಿತ್ತು. ತಾನು ತಿಂದು ಮಿಕ್ಕದ್ದನ್ನು ಬೇರೆ ಓಣಿಯ ನಾಯಿಗಳನ್ನು ಕರೆದು ತಿನ್ನಿಸುತ್ತಿತ್ತು. ಹೊಟ್ಟೆಗೆ ಸಾಕಷ್ಟು ಸಿಕ್ಕು ಪುಷ್ಟವಾಗಿದ್ದರಿಂದ, ಅದರ ಮುಂದತನವೂ ಚಂದ ವಾಗಿಯೇ ಕಾಣುತ್ತಿದ್ದಿತು.

ಅದೇಕೋ, ಕಾಳಿಯ ವಸತಿಗ್ರಹ ಮಾತ್ರ ನಮ್ಮ ಮನೆಯ ಮುಂಬದಿಯ ಕಾಲುವೆಯ ಮಗ್ಗುಲಲ್ಲಿ. ಅದನ್ನು ನಾವೇನು ಬೇಕು ಎಂದು ಸಾಕಿರಲಿಲ್ಲ. ಎಲ್ಲರಂತೆ ನಾವೂ ಉಳಿದು ಬಳಿದು ದನ್ನು ಅದಕ್ಕೆ ಇಕ್ಕುತ್ತಿದ್ದೆವು. ಕಾಳಿಯನ್ನು ಯಾರೊಬ್ಬರೂ ಸಾಕಿರಲಿಲ್ಲ. ಓಣಿಯೇ ಅದನ್ನು ಸಾಕಿತ್ತು. ಹೀಗಿದ್ದರೂ ಅದು ಯಾವಾಗಲೂ ನಮ್ಮ ಮನೆಯ ಮುಂದೆಯೇ, ಮುಂಗಾಲುಗಳ ನಡುವೆ ಮೋರೆ ನೀಡಿ ಕೊಂಡು,ಬಿದ್ದಿರುತ್ತಿತ್ತು.

ಕಾಳಿಗೆ, ಒಬ್ಬಿಬ್ಬರು ಗೆಳೆಯರೂ, ಗೆಳತಿಯರೂ ಇದ್ದರು. ಆದರೆ ಅವರ ಓಣಿ ಬೇರೆ. ತನ್ನ ಓಣಿಗೇ ತಾನೇ ರಾಣಿ. ತಾನು ಕರೆದಲ್ಲದೆ, ಬೇರೊಬ್ಬರನ್ನು ಓಣಿಯಲ್ಲಿ ಹಾಯಗೊಡುತ್ತಿರಲಿಲ್ಲ. ಅರಿಯದ ನಾಯಿಗಳು ಓಣಿಯಲ್ಲಿ ಹಾಯ್ದರಂತೂ, ಅವನ್ನು ಹರಿದು ಒಕ್ಕಲಿಕ್ಕಿ ಬಿಡುವಂತೆ ಮಾಡುವದು.

ಕಾಳಿ, ತನ್ನ ಗೆಳೆಯಂದಿರೊಡಗೂಡಿ, ಆಗಾಗ ಊರ ಪಯಣಕ್ಕೆ ಹೊರಡುತ್ತಿತ್ತು. ಊರಿನ ಸಂದಿಗೊಂದಿಗಳನ್ನೂ ಅದು ಬಲ್ಲುದು.ನಾನು ಎಷ್ಟೋ ಸಲ, ಕಾಳಿಯನ್ನು ಮದಿಹಾಳ ದಲ್ಲಿ, ಸಪ್ತಾಪುರದಲ್ಲಿ, ಮಾರ್ಕೆಟನಲ್ಲಿ, ಪೋಲಿಸಲಾಯಿನ್ಸದಲ್ಲಿ ಹೆಡ್ಡಾಫೀಸಿನಲ್ಲಿ ಕಂಡಿದ್ದೇನೆ. ನನ್ನನ್ನು ಎಲ್ಲಿಯೇ ಕಂಡರೂ ಒಮ್ಮೆ ಓಡಿಬಂದು ಬಾಲ ಅಲ್ಲಾಡಿಸುತ್ತ ಕುಂಯಿಕುಯಿ ಮಾಡಿ ಮತ್ತೆ ತನ್ನ ಗೆಳೆಯರನ್ನು ಕೂಡಿಕೊಳ್ಳುವದು. ಅದರ ಕೆಲಸ ಹೆಚ್ಚಾಗಿ ನಮ್ಮ ಮನೆಯೆದುರೇ ಇರುತ್ತಿದ್ದದರಿಂದ, ನನ್ನೊಡ ನೆಯೂ, ನಮ್ಮ ಮನೆಯ ಮಕ್ಕಳುಮರಿಗಳೊಡನೆಯೂ ಕಾಳಿಯ ಬಳಕೆ ಹೆಚ್ಚು.

ಕಾಳಿಯೆಂಬ ಅದಕ್ಕೆ ಯಾರು ಹೆಸರಿಟ್ಟರೋ, ಅರಿಯೆ. ಎಲ್ಲರೂ ಕಾಳಿ ಕಾಳಿಯೆನ್ನುತ್ತಿದ್ದರಾದ್ದರಿಂದ ನಾವೂ ಕಾಳಿಯೆ ನ್ನುತ್ತಿದ್ದೆವು. ನಾವೇ ಸಾಕಿದ ನಾಯಿಯಾಗಿದ್ದರೆ, ಇಲ್ಲವೇ ನಾನೇ ಅದಕ್ಕೆ ಹೆಸರಿಡಬೇಕಾಗಿ ಬಂದಿದ್ದರೆ, ಇದಕ್ಕೂ ಅಂದ ವಾದ ಮತ್ತೊಂದು ಹೆಸರಿಡಬಹುದಾಗಿತ್ತು. ಆದರೂ ಕಾಳಿ ಯೆಂಬದು, ಅಷ್ಟೇನು ಅಂದಗೆಟ್ಟ ಹೆಸರಲ್ಲ. ಆ ನಾಯಿಗೆ ಆ ಹೆಸರೇ ಹೆಚ್ಚು ಒಪ್ಪುತ್ತಿತ್ತು ಎನ್ನಬಹುದು. ಏಕಂದರೆ, ಅಂಕಿತವಲ್ಲದೆ ಅದು ಅನ್ವರ್ಥಕವೂ ಆಗಿತ್ತು.

ದುರಗವ್ವದ್ಯಾಮವ್ವಗಳು ಊರಿಗೇ ಹೇಗೆ ಕಾವಲವೋ, ಹಾಗೆ ಕಾಳಿಯು ನಮ್ಮ ಓಣಿಗೆ ಕಾವಲ. ಅದೊಂದು ಇದ್ದುದ ರಿಂದ ನಮ್ಮ ಓಣಿಗೆ ಅರ್ಧಚಿಂತೆಯೇ ಕಡಿಮೆಯಾಗಿತ್ತು.

ಅಂತೂ ನಮ್ಮ ಓಣಿಯಲ್ಲಿ ಕಾಳಿಯಷ್ಟು ಮಹತ್ವದ ಪ್ರಾಣಿ ಇನ್ನೊಬ್ಬರಾರಾದರೂ ಇದ್ದರೋ ಇಲ್ಲವೋ ಹೇಳಲಾರೆ.

೨

ಧಾರವಾಡಕ್ಕೆ ಆಗ ಮಹಾಮಾರಿಯ ಪಿಡುಗು. ಪ್ಲೇಗು ಬಂದು ಜನಗಳು ಅರಳುಹುರಿದಂತೆ ಪಟಪಟನೆ ಪುಟಿಯುತ್ತಿ ದ್ದರು. ಊರಲ್ಲಿ ಒಂದು ಪೇಟೆ, ಒಂದು ಕೇರಿ, ಒಂದು ಬೀದಿ, ಒಂದು ಓಣಿ, ಒಂದು ಸಂದಿ, ಒಂದು ಗೊಂದಿಯೆನ್ನದೆ ಎಲ್ಲೆಲ್ಲೂ ಪ್ಲೇಗುರಾಯಿತಿ ತಾಂಡವವಾಡುತ್ತಲಿದ್ದಳು. ಸೋಮಾರಿಗಳಾದರೂ, ಮ್ಯುನಸಿಪಾಲಿಟಿಯವರು ತಮ್ಮ ಕುತ್ತಿ ಗೆಗೇ ಬಂದದ್ದರಿಂದ, ಮನಮುಟ್ಟಿ ಹೋರಾಡಿದರು. ಆ ಸಲ ನಮ್ಮ ಜಿಲ್ಹೆಯಲ್ಲಿಯೇ ಸರಕಾರದವರು ತೊಂಭತ್ತಾರು ಸಾವಿರ ರೂಪಾಯಿ ವೆಚ್ಚಮಾಡಿದರಂತೆ ಇಲಿಗಳನ್ನು ಕೊಲ್ಲುವದಕ್ಕೆ. ಆದರೆ ಸಾವು ಯಾವದಕ್ಕೂ ಹಣಿಯಲಿಲ್ಲ.

ಜನಗಳು ಒಂದು ಊರಿಂದ ಮತ್ತೊಂದು ಊರಿಗೆ ಹೋಗು ವದೂ ನಿರ್ಬಂಧ. ಜುಕ್ಕುಜುಲುಮೆಯಿಂದ ಜನಗಳನ್ನು ಮನೆ ಯಿಂದ ಹೊರಹೊರಡಿಸುತ್ತಿದ್ದರು ಪೋಲಿಸಿನವರು. ಅನೇಕ್ಕೋ ಜನರು ಅದಕ್ಕಾಗಿ ಮುನಸೀಪಾಲ್ಟಿಯವರೊಡನೆ ಹೊಡೆದಾಡಿ ದರು ಸಹ. ಶುಕ್ರವಾರ ಪೇಟೆಯ ಒಬ್ಬ ಬ್ರಾಹ್ಮಣ ಮುದುಕ ನೇನೋ ಮನೆ ಬಿಡುವದಕ್ಕೊಪ್ಪದೆ, ಅಧಿಕಾರಿಗಳೊಡನೆ ಹೊಡೆದಾಡಿ, ಜಡ್ಜಿಯವರ ಭಾವೀ ಹಾರಿಕೊಂಡು ಸತ್ತನಂತೆ.

ಊರಲ್ಲಿಯೇ ಊರಿಕೊಂಡಿರುವದರಲ್ಲಿ ಜಾಣತನವೂ ಇರ ಲಿಲ್ಲ; ಉಪಯೋಗವೂ ಇರಲಿಲ್ಲ. ಊರ ಭಾವಿ ಕೆರೆಗಳಲ್ಲೆಲ್ಲ ಔಷಧ ಹಾಕಿಬಿಟ್ಟಿದ್ದರು. ಕಾರಣ ಜನರು ಊರಹೊರಗೆ

ಜೋಪಡಿ ಗುಡಿಸಲು ಬಂಗಲೆಗಳಲ್ಲಿ ಸೇರಿಕೊಂಡಿದ್ದರು. ಪಟ್ಟಣಂತಪಟ್ಟಣವೆಲ್ಲ ಹಾಳು ಸುರಿಯುತ್ತಿತ್ತು. ಒಂದೊಂದು ಮನೆಯೂ, ಒಂದೊಂದು ಓಣಿಯೂ ರಾವು ಹೊಡೆಯುತ್ತಿದ್ದವು. ಓಣಿಯುದ್ದಕ್ಕೂ ಮನೆಗಳು ಕೀಲಿ ಬಿಗಿದುಕೊಂಡೇ ಇದ್ದವು. ಒಟ್ಟಾರೆ ಊರೆಲ್ಲ ವಿಧವೆಯ ಹಣೆಯಂತೆ ತಲೆಯಂತೆ,-ಹೇಮಂತ ಕಾಲದ ಹುಲ್ಲುಬನ್ನಿಗಳಂತೆ, ವಿರಹಿಗಳ ದಗ್ಧೋದ್ದೀಪ್ತವಾದ ಹೃದಯದಂತೆ— ಭಣಗುಟ್ಟುತ್ತಿತ್ತು; ರಣಗುಟ್ಟುತ್ತಿತ್ತು.

ಎಲ್ಲರಂತೇ ನಾವೂ. ಸಪ್ತಾಪುರದಲ್ಲಿ ಬಂಗಲೆಯೊಂದನ್ನು ಬಾಡಿಗೆ ಹಿಡಿದುಕೊಂಡಿದ್ದೆವು. ಏನೋ ದೊಡ್ಡ ಸಂಸಾರ ಎಂದು ದೊಡ್ಡ ಮನೆಯನ್ನು ಹಿಡಿದದ್ದೇ ತಪ್ಪು. ಬಂದು ತುಂಬಿದರು, ಬಂಧುಗಳು, ಬಳಗದವರು, ಹತ್ತಿದವರು ಹೊಂದಿದವರು— ಪರಿಸ್ಥಿತಿಯೇ ಹಾಗಿತ್ತು. ಒಪ್ಪತ್ತು ತಂಗಿಕೊಳ್ಳಲಿಕ್ಕೆ ಚಪ್ಪರ ನೆರಳಾದರೂ ಸಿಕ್ಕೀತೇ ಎನ್ನುತ್ತಿತ್ತು ಜನವೆಲ್ಲ. ಕಣ್ಣಿಗೆ ರೆಪ್ಪೆ ಕೂಡ ಮರೆಯಾಗಿರದಂಥ ದುಸ್ಥಿತಿ. ಮಾಡುವದೇನು ?

ಪ್ಲೇಗಿನ ಹಾವಳಿ ಹೇಳಲಿಕ್ಕಿಲ್ಲ. ಸತ್ತ ಜನಕ್ಕೆ ಅಳುವವ ರಾರೊ!;— ಸುಟ್ಟುಬರುವದಕ್ಕೂ ದಿಕ್ಕಿಲ್ಲ. ನಮ್ಮ ಮನೆಯಲ್ಲೇ ಒಂದೇ ದಿನ ಐದು ಆಳು ಜೀವ ನೀಗಿದ್ದರು. ಯಾವಾಗ ಯಾರಿಗೆ ಏನೋ ಎಂದು ಹೆದರಿಕೆ. ನಮ್ಮವರನ್ನೇ ನಮ್ಮ ಹತ್ತಿರ ಬರಗೊಡಬೇಕಾದರೆ ಹತ್ತು ಸಲ ಹಿಂದುಮುಂದು ನೋಡಬೇಕಾಗುತ್ತಿತ್ತು. ಕೈಗೆ ಕಸ ಬಂದರೂ, ಹೆದರಿಕೆ— ಒಂದು ತಲೆ ನೊಂದರೂ ಹೆದರಿಕೆ—; ಒಮ್ಮೆ ಬಿಟ್ಟು ಎರಡು ಸಲ ಬೈಲುಕಡೆಗೆ ಹೋಗಬೇಕೆನಿಸಿದರೂ ಜೀವ ಕೆಳಗು ಮೇಲೆಯೆ— ನಾವೆಲ್ಲ ಜೀವ ಕೈಯಲ್ಲಿ ಹಿಡಿದುಕೊಂಡು, ಬಾಯಲ್ಲಿ ಅಕ್ಕೀ ಕಾಳು ಹಾಕಿಕೊಂಡು, ಏನೋ ಮಾರಾಯಾ ಎಂದು ಎಲ್ಲ ಭಾರ ಆತನ ಮೇಲೇ ಹಾಕಿ ತಣ್ಣಗೆ ಕುಳಿತುಕೊಳ್ಳುತ್ತಿದ್ದೆವು. ದಿನದ ಅಡಿಗೆ ಊಟಗಳು ಸಹ ಒಂದೊಂದು ವಿಪತ್ತು.

ಊರಲ್ಲಿ ನಮ್ಮದು ಸ್ವಂತ ಮನೆ. ನಿಂತ ಕಾಲಮೇಲೆ, ಇದ್ದುದ್ದಿದ್ದನ್ನೆಲ್ಲ, ದಿಕ್ಕೆಟ್ಟು ಒಗೆದು ಓಡಿಬಂದಿದ್ದೆವು. ಹೊರಡುವಾಗ ಸ್ಮೃತಿ ಯಾರಿಗೆ ! ಮನೆಮಕ್ಕಳನ್ನೆಲ್ಲಿ ಬಿಡುವೆವೋ ಎಂದು ಭಯ, ಮೇಲೆ ಪೋಲೀಸಿನವರ ಗಲಾಟೆ. ಹೀಗಾಗಿ ಮನೆಯೆಲ್ಲ ಕೆದರಿದ ತಿಪ್ಪೆಯ ಗುಂಡಿಯಂತಾಗಿಬಿಟ್ಟಿತ್ತು. ಅಲ್ಲದೆ ಊರಿಗೆ ಊರೆಲ್ಲ ತೆರವು. ಹಾಡೇಹಗಲು ದರೋಡೆ ಹತ್ತಿದ್ದರೂ ಯಾರೂ ಕೇಳುವಂತಿರಲಿಲ್ಲ. ಕಾರಣ ನಾವು ನಮ್ಮ ಮನೆಯ ಕಡೆಗೆ ಕಣ್ಣಿಟ್ಟುಕೊಂಡೇ ಇರಬೇಕಾಗಿತ್ತು.

## ೩

ಮನೆಯನ್ನು ನೋಡಿಕೊಂಡು ಬರುವದಕ್ಕಾಗಲೀ, ಇಲ್ಲವೆ ಯಾವುದೊಂದು ಒಡವೆಯನ್ನು ತರುವದಕ್ಕಾಗಲೀ, ನಾನು ಆಸಿಗೆಬೇಸಿಗೆಗೊಮ್ಮೆಯಾದರೂ ಊರಲ್ಲಿ ಹೋಗಬೇಕಾಗಿತ್ತು. ಊರಲ್ಲಿ ಹೋದಾಗಲೂ ಬಹಳ ಹೊತ್ತು ನಿಲ್ಲುವಂತಿರಲಿಲ್ಲ. ಹೇಗೆ ನಿಲ್ಲಬೇಕು ! ಎಷ್ಟೆಂದರೂ ಜೀವ;— ನೋಡಿ !

ಅಂದು ಬೃಹಸ್ಪತಿವಾರ. ಮನೆಗೆ ಹೋಗಿ ಕೆಲವು ಸಾಮಾನುಗಳನ್ನು ತರಬೇಕಾದ್ದರಿಂದ, ಬೆಳಗಿನಲ್ಲಿಯೇ ಕಾಚ್ಗಾಡಿ ಹತ್ತಿಕೊಂಡು ಊರಕಡೆಗೆ ಹೊರಟೆ.

ನಾನು ನಮ್ಮ ಓಣಿಯ ಪಶ್ಚಿಮ ಕೂಟನಲ್ಲಿರುವಾಗಲೇ ಪೂರ್ವದ ಕೂಟಿನಲ್ಲಿ ಕಾಳಿಯನ್ನು ಕಂಡೆ. ಆಗ ಒಮ್ಮೆಲೆ ನನ್ನ ಜೀವ ನಾಚಿಕೆಗೊಂಡಿತು. ನಾವು ಊರುಬಿಡುವಾಗ ಕಾಳಿಯ ನೆನಪೇ ಇರಲಿಲ್ಲ. ಕಾಳಿಯು ಒಬ್ಬರ ಸೊತ್ತಾಗಿರಲಿಲ್ಲ. ಆ ಮನೆಯವರ ಸಂಗಡ ಹೋಗಿರಬಹುದು, ಈ ಮನೆಯವರ ಸಂಗಡ ಹೋಗಿರಬಹುದು ಎಂದು ಎಲ್ಲರೂ ಅದನ್ನು ಹಿಂದೆ ಬಿಟ್ಟಿದ್ದರು. ಹಾಗೇ ನಾವೂ ಮಾಡಿದ್ದೆವು. ಹಾಗಿಲ್ಲದಿದ್ದರೆ, ನಮ್ಮ ಓಣಿಯಲ್ಲಿ, ನಾವೇಯೇಕೆ ?— ಯಾರೇ ಆದರೂ ಅದರ ಜೋಪಾನವನ್ನು ಕೈಕೊಳ್ಳದಿರುತ್ತಿರಲಿಲ್ಲ. ಆದರೆ ನಮಗೆ ನಮ್ಮ ಹಪಾಹಪಿ. ಹೊಗೆಹತ್ತಿದ ಜೇನ್ನೊಣಗಳಂತೆ ನಾವೆಲ್ಲ ಸಿಕ್ಕತ್ತ ಓಡಿಹೋಗಿದ್ದೆವು. ಅಂಥದರಲ್ಲಿ ನಮಗೆ ಕಾಳಿಯ ನೆನಪೆಲ್ಲಿಯದು!

ಹೀಗಾಗಿ, ನಮ್ಮ ಓಣಿಯ ಕಾಳಿ, ಆಗ ಇಡೀ ಊರಿನದೇ ಆಗಿ ದಿಕ್ಕು ತಪ್ಪಿ ಅನಾಥವಾಗಿದ್ದಿತು.

ನಾನು ನಮ್ಮ ಓಣಿಯಲ್ಲಿ ಹೋಗುತ್ತಿರುವಾಗ ಕಾಳಿ ನನಗೆ ಎದುರಾಗಿ ಓಡಿಬರುತ್ತಿತ್ತು. ನನ್ನನ್ನು ಕಂಡುದರಿಂದ 'ಸ್ವಾಗತಕ್ಕಾಗಿ ಓಡಿಬರುತ್ತಿದೆ' ಎಂದುಕೊಂಡೆ.

ಸಾಯಕಲ್ಲನ್ನು ಕಟ್ಟೆಗೆ ಹೊಂದಿಸಿಟ್ಟು, ಜೇಬಿನಲ್ಲಿಯ ಕೀಲಿ ಕೈಯ ಸರದೊಳಗಿಂದ ಮುಂಚೆಯ ಬಾಗಿಲಿನ ಕೈಯನ್ನು ಹುಡುಕುತ್ತ ಮೆಟ್ಟಲುಗಳನ್ನು ಹತ್ತುತ್ತಿರುವಾಗ, ನಮ್ಮ ಮನೆಯಿಂದ ಸುಮಾರು ಒಂದು ನೂರಡಿ ದೂರದಲ್ಲಿ, ಓಡಿ ಬರುತ್ತಿರುವ ಕಾಳಿ ತಟ್ಟನೆ ನಿಂತುಕೊಂಡಿತು, ನಾನದನ್ನು ನೋಡಿದೆ. ಮುಂದಿನ ಗಳಿಗೆಯಲ್ಲಿಯೇ ಒಂದೆರಡು ಸಲ ಕೆಮ್ಮು ಹತ್ತಿತು. ಧಾರೆಯಾಗಿ ಜೊಲ್ಲು ಸುರಿಸುತ್ತ ಒಂದೇ ಸಮನೆ ಗಿರಿಗಿರಿ ತಿರುಗಹತ್ತಿತು. ಇನ್ನೊಂದು ಕ್ಷಣದಲ್ಲಿ ಮತ್ತೆ ನೆಟ್ಟಗೆ ಲಿನಂತೆ ನಮ್ಮ ಮನೆಯ ಕಡೆಗೆ ಓಡಹತ್ತಿತು. ಆಗ ವಿಶೇಷ ವೇನೂ ಇಲ್ಲವೆಂದೆಂದುಕೊಂಡು, ಕೀಲೀತೆಗೆದು ಒಳಕ್ಕೆ ಹೋಗಿ

ನನಗೆ ಬೇಕಾಗಿದ್ದ ಒಂದೆರಡು ಒಡವೆಗಳನ್ನು ತೆಗೆದುಕೊಂಡು, ಮನೆಯ ಪ್ರತಿಯೊಂದು ಬಾಗಿಲನ್ನೂ, ಕಿಡಿಕೆಯನ್ನೂ ಮತ್ತೊಮ್ಮೆ ನೋಡಿ ಹೊರಟೆ.

ತಲೆಬಾಗಿಲಲ್ಲಿ ಬರುವಹೊತ್ತಿಗೆ—ಕಾಳಿ, ಕಾವಲಿಯ ಬಳಿಯಲ್ಲಿ ಬಿದ್ದುಕೊಂಡದ್ದನ್ನು ನೋಡಿದೆ. ಗಡಿಬಿಡಿಯಿಂದ ಹೇಗೋ ಮನೆಗೆ ಕೀಲಿಯನ್ನಿಕ್ಕಿ ಮೆಟ್ಟಲಿಳಿದು ಕೆಳಗೆ ಬಂದೆ.

ನಾನು ಬಂದುದನ್ನು ನೋಡಿ, ಕಾಳಿಯು ವಾಡಿಕೆಯಂತೆ ಮೇಲಕ್ಕೇಳಲಿಲ್ಲ; ಬಾಲವಾಡಿಸಲಿಲ್ಲ; ಕಣ್ಣೂ ಎತ್ತಲಿಲ್ಲ; ಮಿಸುಕಾಡಲಿಲ್ಲಕೂಡ. ಹಿರಿದ ನಾಲಿಗೆಯನ್ನು ಹಲ್ಲಿನಲ್ಲಿ ಕಚ್ಚಿ, ಒಸಡೆಗಳನ್ನು ಕಿಸಿದುಕೊಂಡು, ಸಂತತವಾಗಿ ಜೊಲ್ಲುಸುರಿಸುತ್ತ ಒಂದೇ ಉಸಿರಿನಲ್ಲಿ ತೇಕುತ್ತಿತ್ತು. ಕಣ್ಣುಗಳನ್ನು ಅರಳಿಸಿ ಕೆರಳಿಸಿ, ಕಾವಲಿಯ ಕಡೆಗೇ ನಿಟ್ಟಿಸಿ ನೋಡುತ್ತಿತ್ತು. ಮುಂಗಾಲುಗಳಿಂದ ನೆಲವನ್ನು ಕೆದರುತ್ತ ಮುಂದೆ ಸರಿಯಲು ಹವಣಿಸುತ್ತಿತ್ತು. ಆದರೆ ಅದಕ್ಕೆ ಅಷ್ಟೊಂದು ತ್ರಾಣವಿರಲಿಲ್ಲ.

ಅದು ನಿಟ್ಟಿಸುವ ದಿಕ್ಕಿಗೆ ನಾನೂ ನೋಡಿದೆ. ಏನೂ ಕಾಣಲಿಲ್ಲ. ಕಾಲುವೆಯಲ್ಲಿ ಬಗ್ಗಿ ನೋಡಿದೆ; ಅಲ್ಲಿ ಮೂರು ಚಿಕ್ಕ ಮರಿಗಳು ಕಣ್ಣುಮುಚ್ಚಿಕೊಂಡೇ ಕುಂಯಗುಡುತ್ತಿದ್ದವು. ಮನೆಯ ಮೆಟ್ಟಲಿನ ಕಲ್ಲುಗಳು ಮರೆಯಾಗಿದ್ದರಿಂದ ಕಾಳಿಗೆ ಅವು ಕಾಣುತ್ತಿರಲಿಲ್ಲ. ನಾನು ಮೂರೂ ಮರಿಗಳನ್ನು ಎತ್ತಿ ಅದರ ಮುಂದೆ ಹಾಕಿದೆ. ಒಡನೆ ಕಾಳಿಯು ದೈನ್ಯಾಸಬಡುತ್ತ ಸಾಗರಬಿದ್ದು ಅವುಗಳನ್ನು ಮೂಸಲು ಯತ್ನಿಸಿತು. ಬಾಯ್ದೆರೆದು ಅವುಗಳನ್ನು ನೆಕ್ಕುವಷ್ಟೂ ಪರಿಸ್ಥಿತಿಯಿರಲಿಲ್ಲ. ಮರಿಗಳು ಇನ್ನೂ ಕಣ್ಣು ತೆರೆದಿರಲಿಲ್ಲ. ಕುರುಡುತನದಲ್ಲೇ ಅವು ತಮ್ಮ ತಮ್ಮೊಳಗೆ ಹೊಕ್ಕಾಡುತ್ತಿದ್ದವು.

ನಾನು ನಿಂತಿರುವಷ್ಟರಲ್ಲಿ ಕಾಳಿಯು ತನ್ನ ಬಾಳಿನ ಆಚೆಯ ದಂಡೆಯನ್ನು ಸೇರಿತು. ಪ್ರಾಣ ಹೋದಮೇಲೂ, ನಿಡಿದಾಗಿ ಹಿರಿದ ಅದರ ಕಣ್ಣುಗಳು ಮರಿಯಲ್ಲಿ ನೆಟ್ಟುಕೊಂಡಿದ್ದವು. ಆ ಕಣ್ಣುಗಳ ಉನ್ಮಾದಭೀಷಣವಾದ ನೋಟವು, ಎಂದೆಂದಿಗೂ ಆ ಮರಿಗಳನ್ನೇ ನೋಡುತ್ತ ನಿಲ್ಲಬಹುದೆಂದು ಎನ್ನಿಸುವ ಹಾಗಿತ್ತು.

ಪ್ಲೇಗಿನ ಪಿಡುಗು. ಕಾಳಿಗೆ ವಿಷಹಾಕಿದ್ದರು. ನಾವು ಇರುವಾಗಲೇ ಕಾಳಿ ಗಬ್ಬವಾಗಿತ್ತು. ಸಾವಿಗೆ ಮೊದಲು, ಈದು ಬಹಳವಾದರೆ ಎರಡು ದಿನವಾಗಿದ್ದೀತು— ಅಷ್ಟೇ. ಒಣೆಯಲ್ಲಿ ಒಬ್ಬರೂ ಇಲ್ಲದಂತೆ ಹೋದ ಮೇಲೆ ಪಾಪ— ಕಾಳಿ— ಎಲ್ಲೆಲ್ಲಿ ತೊಳಲಿಬಳಲಿತ್ತೋ;— ಕೂಳಿಲ್ಲದೆ ಎಷ್ಟೆಷ್ಟು ಕಳವಳಿಸಿತ್ತೋ;— ಬಲ್ಲವರಾರು! ಮೇಲೆ ಪೂರ್ಣ ಗರ್ಭಿಣಿ. ಈದ ಮೇಲೂ, ಹಸಿವಿನ ಕಸವಿಸಿ ತಡೆಯಲಾರದೆ, ಮರಿಗಳನ್ನು ಬಿಟ್ಟೂಬಿಡಲಾರದೆ, ಅದು ಆಹಾರದ ಆಸೆಯಿಂದ ಅತ್ತಿತ್ತ ಹೋಗಿರಬಹುದು. ಯಮುನಾಳುಗಳಂತೆ ಮುನಸಿಪಾಲ್ಟಿಯ ಸಿಪಾಯಿಗಳು, ವಿಷ ಬೆರಸಿದ ಆಹಾರವನ್ನಿಕ್ಕಿದಾಗ, ಅಷ್ಟು ದಿನವೆಲ್ಲ ನಮ್ಮ ಒಣೆಯವರು ಇಕ್ಕಿದ ಅನ್ನಕ್ಕಿಂತ ಸಾವಿರ ಪಾಲು ಹೆಚ್ಚಿನ ಸಂತೋಷದಿಂದ ಅದನ್ನು ಗಪಗಪನೆ ತಿಂದಿರಬಹುದು ಆ ಮೇಲೆ, ಸಾವಿನ ಸೆಳೆತದ ಬಿಗುವು ಹೆಚ್ಚಾದಂತೆ ಮರಿಗಳ ನೆನಪಾಗಿ ಸತ್ತುಕೆಟ್ಟು ಅವುಗಳೆಡೆಗೆ ಧಾವಿಸಿ ಓಡಿಬಂದಿರಬೇಕು. ಆದರೇನು ಆ ಜೀವಗಳು ಒಂದಕ್ಕೊಂದು ಎರವಾಗಲೇ ಬೇಕಿತ್ತು.

ಮರೆಯಿಂದ ಹೊರಕ್ಕೆ ತೆಗೆದು ಮರಿಗಳನ್ನು ಮುಂದಿರಿಸಿದೊಡನೆ ಆ ವರೆಗೂ ನನ್ನನ್ನುಕಣ್ಣೆತ್ತಿ ನೋಡದ ಕಾಳಿ ಒಮ್ಮೆ ಒಮ್ಮೆ ಗುಡ್ಡೆಗಳನ್ನರಳಿಸಿ ನನ್ನನ್ನು ಮಾಲಿಸಿತು. ಆ ಮೇಲೆ ಮರಿಗಳಲ್ಲಿ ನೆಟ್ಟುಹೋದ ಅದರ ನೋಟ ಮತ್ತೆ ಅಲುಗಲಿಲ್ಲ.

ನಾನು ಎಷ್ಟೋಹೊತ್ತು ಏನೇನೋ ವಿಚಾರಿಸುತ್ತ ನಿಂತಲ್ಲೇ ನಿಂತುಬಿಟ್ಟೆ. ಏನು ಮಾಡುವದಕ್ಕೂ ಕೈಯೇಳಲಿಲ್ಲ. ಕೆಲವೊಂದು ಕಾಲ ಕಳೆದ ಮೇಲೆ, ನಾನು ನಿಂತಿರುವಾಗಲೇ ಇಬ್ಬರು ಪೋಲಿಸರು ಹಾದು ಹೋದರು. ನಾನು ಹಾಗೇ ಇದ್ದೆ.

ಕೊನೆಗೆ ನಿರ್ಧಾರ ಮಾಡಿದೆ ಮರಿಗಳನ್ನು ಒಯ್ಯುವದೆಂದು. ಆ ವರೆಗೆ ಮರಿಗಳಲ್ಲೇ ನಿಂತು ಹೋದ ಕಾಳಿಯ ನೋಟವನ್ನು ನೋಡಿ ಅವುಗಳನ್ನು ಮುಟ್ಟುವದೇ ನನ್ನಿಂದ ಆಗಿರಲಿಲ್ಲ. ಮುಟ್ಟಿದರೆ ಕಾಳಿಯು ನನ್ನನ್ನು ಸಾವಿರಚೂರಾಗಿ ಹರಿದು ಬಿಡಬಹುದಲ್ಲವೇ ಎನ್ನುವ ಹಾಗಿತ್ತು ಅದರ ನೋಟ.

ನಾನಿನ್ನು ಮರಿಗಳನ್ನೆತ್ತಿಕೊಳ್ಳುವನು; ಅಷ್ಟರಲ್ಲಿ, ಹಿಂದಿನಿಂದ ಕಠೋರಗಂಭೀರವಾದ ದನಿಯೊಂದು ಕೇಳಬಂತು "ರಾಯರ, ರಾಯರ— ಮುಟ್ಟಬೇಡಿರಿ—" ಹಿಂಜರಿದು ಹಿಂದುರಿಗಿ ನೋಡಿದೆ. ಆಗಲೆ ಹೋದ ಪೋಲಿಸರು. ನಾನು ಸುಮ್ಮನೆ ನಿಂತಿರುವಾಗಲೇ ಅವರಿಬ್ಬರೂ ನನ್ನ ಪೂಜೆಮಾಡತೊಡಗಿದರು. "ಪ್ಲೇಗಿನ ದಿನ; ಹೊಲಸು ಪ್ರಾಣಿಗಳನ್ನು ಮುಟ್ಟಲು ತಿಳಿಯುವದಿಲ್ಲವೇ— ನೀವು ಕಲಿತವರು ತಿಳಿದವರು— ಹೀಗೆ ಮಾಡಿದರೆ ಸುಂಕಹಬ್ಬೀತೆಂಬ ಎಚ್ಚರಿಲ್ಲವೇ" ಹಾಗೆ—ಹೀಗೆ— ಏನೇನೋ— ನಾಚಿಕೆ ಹೆದರಿಕೆಯಿಂದ ನನ್ನ ಮನಸ್ಸು ಮುದುಡಿತು. ನಿಂತ ಕಾಲಮೇಲೆಯೇ ಅವರು ನನ್ನನ್ನು ಅಲ್ಲಿಂದ

ದಾಟಹಾಕಿಬಿಟ್ಟರು. ನಿರುಪಾಯನಾಗಿ ಸಾಯಕಲ್ಲು ಕೈಯಲ್ಲಿ ಹಿಡಿದುಕೊಂಡೇ ಹೊರಟೆ.

+ + + +

ನಾನು ಮತ್ತೊಮ್ಮೆ ಹೋದಾಗ ಆ ಮರಿಗಳು ಅಲ್ಲಿರಲಿಲ್ಲ.

+ + + +

ನಾನು ಮರಿಗಳನ್ನು ಮನೆಗೆ ತಂದಿದ್ದರೆ- ನಮ್ಮ ಮನೆಯವರಿಗೆಲ್ಲ ಪ್ಲೇಗು ಬಂದು ಸಾವಿಗೆ ತುತ್ತಾಗುತ್ತಿದ್ದರೋ- ಯಾರು ಬಲ್ಲರು!

ಎಷ್ಟೆಂದರೂ ಮನುಷ್ಯಜೀವ ಪರಮಾತ್ಮನ ಸೃಷ್ಟಿನಿರ್ಮಾಣ ಕೌಶಲ್ಯದ ಮುಕುಟಮಣಿಯಲ್ಲವೆ! ಅದನ್ನು ಯಾವ ಬಗೆಯಿಂದಲೂ ಕಾಯ್ದುಕೊಳ್ಳದಿದ್ದರೆ ಆತನಿಗೆ ಅಪಮಾನ.

---

# ಅತಿಭಕ್ತನು

ಲೇಖಕರು:— ಶ್ರೀ. ಮಹಾರುದ್ರಪ್ಪಾ ಮಹಾಲಿಂಗಪ್ಪಾ ಮಿರ್ಜಿ, ಹುಬ್ಬಳ್ಳಿ

ಮೊದಲು ಸಿಕ್ಕಿದ ಮೀನ ಮುದದಿ ಶಿವಗೆಂದು ಬಿಡುತಿರ್ಪುದರಿಂದೆ ವಿಮಲನೆನಸಿದತಿಭಕ್ತ ನೀ । ನೊದವಿಸಾನಂದ ಘನವೆನಗೆ

(ನಿಜಗುಣಶಿವಯೋಗಿ)

ತನಗೂ ತನ್ನ ಆಶ್ರಿತರಿಗೂ, ಸಂಸಾರವು ಸುಲಲಿತವಾಗಿ ಸಾಗುವದಕ್ಕೂ, ಹಾಗೂ, ತನ್ನ ಹಿತಾಪೇಕ್ಷಿಗಳಾದ ಪೂಜ್ಯರ ಕಾರ್ಯಕ್ರಮವು ಸಾಂಗವಾಗಿ ನಡೆಯುವದಕ್ಕೂ ಯಾವ ರೂಪದಿಂದಾಗಲಿ ಅಂದರೆ ಧನ, ಧಾನ್ಯ, ವಸ್ತ್ರ ಇತ್ಯಾದಿ ಪ್ರತಿಫಲವನ್ನು ಪಡೆಯಲಿಕ್ಕೆ ಯಾವ ನಿತ್ಯ ಕಜ್ಜವನ್ನು ಕೈಕೊಳ್ಳಬೇಕಾಗುವದೋ ಆ ಕೆಲಸಕ್ಕೆ ಕಾಯಕವೆಂದು ಹೇಳುವ ರೂಢಿಯುಂಟು. ಯಾವದೇ ಕಾಯಕವನ್ನವಲಂಬಿಸಲಿ ಅದರಲ್ಲಿ ದಕ್ಷತೆಯನ್ನು, ಸಮಯೋಚಿತಬುದ್ಧಿಯನ್ನು ದಿನಾಲು ವಹಿಸುತ್ತ ಪರಮಾತ್ಮನಲ್ಲಿಯೂ ಹಾಗೂ ವಂದ್ಯರಾದ ಸದ್ಭಕ್ತರಲ್ಲಿಯೂ ಪ್ರೇಮವನ್ನು ತಳೆದು ಪ್ರಪಂಚವನ್ನು ನಡೆಸಿದರೆ ಅದರಿಂದ ಸದ್ಗತಿಯಾಗುವದು ನಿಃಸಂದೇಹವು. ಈ ಬಗೆ ತ್ರಿಷಷ್ಟಿಪುರಾತನರ ಚರಿತ್ರೆಯಲ್ಲಿ ಒಂದು ಆಖ್ಯಾಯಿಕೆಯನ್ನು ಕಾಣಬಹುದು. ಮೀನಗಾರ ವಂಶದಲ್ಲಿ ಜನಿಸಿದ ಅತಿಭಕ್ತನೆಂಬವನೇ ನಮ್ಮ ಪ್ರಸ್ತುತ ಕಥಾನಾಯಕನು.

ಬಹುವೈಭವದಿಂದ ಮೆರೆಯುವ ಚೋಳಧರೆಯು ಚೆಲ್ವಾಗಿ ಶೋಭಿಸುತ್ತಿತ್ತು. ಶಾಸ್ತ್ರಜ್ಞರು ವೈಭವ ಎಂಬ ಪದವನ್ನು ಅನೇಕ ವಿಧವಾಗಿ ವರ್ಣಿಸಿರುವರು. ಶಿವಾರ್ಚನೆ, ಶಿವಾನುಭವದ ಅನುಕೂಲತೆ ಇವುಗಳ ಸೌಕರ್ಯವನ್ನುಂಟುಮಾಡಿಕೊಡುವ ಮಹನೀಯರ ಹಾಗೂ ವಿದ್ವಜ್ಜನರ ನೆಲಸುವಿಕೆ, ಉಚಿತ ಶಿಕ್ಷಣಗಳ ಅಭ್ಯಾಸ, ಕೃಷಿವಾಣಿಜ್ಯ ಮುಂತಾದ ಧನಾದಿಸಾಧನ ಸಂಪತ್ತಿನ ವಿಪುಲತೆ, ಆಸ್ತಿಕ್ಯದ ಬೀಡಿನಂತಿರುವ ಶಿವನಿಲಯಗಳ ಆಗರ, ಗುಣವಂತ ಪ್ರಜಾಸಮೂಹ ಇತ್ಯಾದಿಯಾಗಿ ವೈಭವದಲ್ಲಿಯೆ ಅಡಕವಾಗುವದಾಗಿ ಸಾಮಾನ್ಯವಾಗಿ ಹೇಳಬಹುದು.

ಅತಿರಮಣೀಯವಾದ ಆ ಚೋಳಭೂಮಿಯಲ್ಲಿ ತಿರುವಣ್ಣ ಎಂಬ ಹೊಳೆಯು ಅದೇ ಹೆಸರಿನ ಪುರದ ಪಾರ್ಶ್ವದಲ್ಲಿ ಅಲ್ಲಿಯ ಜನತೆಯ ಹಾಗೂ ಸಕಲ ಪ್ರಾಣಿಗಳಿಗೆ ಮಹೋಪಕಾರಿಯಾಗಿ ಅಲ್ಲಿ ಸಮಭೂಮಿಯಾದುದರಿಂದ ಶಾಂತವಾಗಿಯೂ ಗಂಭೀರವಾಗಿಯೂ ಅನವರತವಾಗಿ ಪ್ರವಹಿಸುತ್ತಿತ್ತು. ಇದರಿಂದ ತೋಟಪಟ್ಟಿಗಳು, ಗದ್ದೆಗಳು, ಪೂದೋಟಗಳು ಹೆಚ್ಚಾಗಿದ್ದವೆಂದು ವಿವರಿಸುವದೇ ಬೇಡ. ಇಂಥ ಸುಕರವಾದ ಸ್ಥಳದಲ್ಲಿ ತಿರುವೆಣ್ಣೆ ಎಂಬ ಪಟ್ಟಣವು ಸಮಸ್ತ ಐಶ್ವರ್ಯದಿಂದಲೂ, ನಾನಾ ಕಸಬುಗಳನ್ನು ಕೈಕೊಂಡ ಜನರಿಂದಲೂ ರಂಜಿಸುತ್ತಿತ್ತು.

ಕುಲಕ್ರಮಾಗತವಾದ ಕಾಯಕದಲ್ಲಿ ನಮ್ಮ ಚರಿತ್ರನಾಯಕನು ಧುರೀಣನಾಗಿದ್ದನು. ಬೆಸ್ತರಲ್ಲಿ ಹುಟ್ಟಿದ ಕಲುಷದ ಹೊರತಾಗಿ, ಸದ್ಗುಣಗಳು ಆತನಲ್ಲಿ ಹೇರಳವಾಗಿದ್ದವು. ತನ್ನ ಉದ್ಯೋಗವನ್ನು ನಿಯಮದಿಂದ ತಪ್ಪದೆ ಸಾಹಸದಿಂದ ಮಾಡುವದರಲ್ಲಿ ಉತ್ಸುಕನಾಗಿದ್ದನು. ಮೀನಗಾರನಾಗಿದ್ದಾಗ್ಯೂ ಇನ್ನಿತರ ಪ್ರಾಣಿಮಾತ್ರದಲ್ಲಿ ದಯಾಪರನು. ಸತ್ಪಾತ್ರಕ್ಕೆ ಆತನ ಮನವೆಳಸುತ್ತಿತ್ತು. ಶಿವಭಕ್ತರಲ್ಲಿ ಆತನಿಗೆ ಪ್ರೀತಿಯೂ ಹೆಚ್ಚು. ಅವರೊಡನೆ ಕಲೆಯುವನು. ಸದ್ಭಕ್ತರನು

ಗೌರವದಿಂದ ಕಾಣುತ್ತ ಅವರಿಗೆ ತನ್ನ ಕಾಯಕದಿಂದ ಬಂದ ಹಣವನ್ನು ತನ್ನ ಶಕ್ತಿಮೀರಿ ಕೊಡುತ್ತ ಉದಾರಿಯಾಗಿ ಜಂಗಮ ಪ್ರೇಮಿಯಾಗಿ ಶಿವಾನಂದಪರನಾಗಿ ಕಾಲಕಳೆಯುತ್ತಿದ್ದನು. ಈ ರೀತಿಯಾಗಿ ಕೆಲವು ವರ್ಷಗಳು ಗತಿಸಲು ಅವನ ಪ್ರಶಸ್ತವಾದ ನಡತೆಗನುಗುಣವಾಗಿ ಒಂದು ಶ್ರೇಯಸ್ಕರವಾದ ಬಯಕೆಯು ಹೊಳೆಯಿತು. ತಾನು ತೊರೆಗೆ ಹೋದಕೂಡಲೆ ಮೊದಲು ಸಿಕ್ಕ ಮೀನವನ್ನು ಶಿವಾರ್ಪಣವಾಗಲೆಂದು ಒಳ್ಳೇ ಭಕ್ತಿಯಿಂದ ಬಿಟ್ಟುಬಿಟ್ಟು ಬಳಿಕ ತನ್ನ ನಿತ್ಯವ್ಯವಹಾರವನ್ನು ಪೂರೈಸುತ್ತಿದ್ದನು. ಈತನ ಸರಳವಾದ ನಡೆಯೂ, ಶಿವೈಕ್ಯರಲ್ಲಿಯ ಪರಮಾದರವೂ, ಹಾಗೂ ಆತನ ವಿಚಿತ್ರತರವಾದ ದಿನಂಪ್ರತಿಯ ಶಿವಾರ್ಪಣವೂ ಪರಿಪೂರ್ಣನೂ ದಯಾಮಯನೂ ಆದ ಭಗವಂತನಿಗೆ ವೇದ್ಯವಾಗಿ ಒಂದು ಕೌತುಕದ ಸಂಗತಿಯು ವರ್ತಿಸಿತು.

ಒಂದು ದಿನ ಮುಂಜಾವಿನಲ್ಲಿ ಪರಮಾತ್ಮನನ್ನು ನೆನೆಯುತ್ತ, ಪೂಜ್ಯರನ್ನು ಸ್ಮರಿಸುತ್ತ ತನ್ನ ಕಾಯಕಕ್ಕನುಗುಣವಾದ ಸಕಲಸಾಧನಗಳಿಂದ ಆ ತೊರೆಗೆ ಹೋಗುವಾಗ ನಮ್ಮ ಚರಿತ್ರಲಲಾಮನಿಗೆ ಭುಜಗಳು ಹಾರಹತ್ತಿದವು. ಹೃದಯವು ವಿಕಸಿತವಾಗಿ ಸಂತೋಷವುಂಟಾಗಹತ್ತಿತು. ಆಗ ಆತನು ಹೊಳೆಯ ದಡದಲ್ಲಿ ತಕ್ಕ ಸನ್ನಾಹದೊಂದಿಗೆ ಕೂತು ತನ್ನ ಬಲೆಯನ್ನು ಬಿಟ್ಟು "ಮಹಾದೇವನೇ ನೀನು ಇಂಥ ಸ್ಥಾನದಲ್ಲಿ ನನ್ನನ್ನು ಹುಟ್ಟಿಸಿರುವೆಯಾದರೂ, ನಾನು ಶಿವಭಕ್ತರನ್ನು ಮರೆಯುವದಿಲ್ಲ; ಶಿವಾರ್ಪಣಕಾರ್ಯದಲ್ಲಿ ಅಜಾಗರೂಕನಾಗುವದಿಲ್ಲ. ಶಿವ, ಶಿವ," ಎಂದು ಅನ್ನುವಷ್ಟರಲ್ಲಿ ತನ್ನ ಬಲೆಯು ಸ್ವಲ್ಪ ಅಲ್ಲಾಡಲು ಬಲೆಯನ್ನು ಹೊರಗೆ ಜಗ್ಗಿ ನೋಡಿದನು. ಆಶ್ಚರ್ಯಕರವಾದ ರತ್ನಖಚಿತವಾದ ಕನಕದಂತೆ ಪ್ರಕಾಶಿಸುವ ಅಪರಿಮಿತ ಬೆಲೆಯನ್ನು ಬಾಳುವ ಮಹಾಮತ್ಸ್ಯವು ದೊರೆಯಿತು. ಅದನ್ನು ಶಿವಾರ್ಪಿತವಾಗಲೆಂದು ನಿತ್ಯನಿಯಮದ ಮೇರೆಗೆ ಭಕ್ತಿಯಿಂದ ಬಿಟ್ಟುಬಿಟ್ಟನು. ಆಗ ಎರಡನೇ ಸಾರೆ ಬಲೆಹಾಕಿದನು. ಮರಳಿ ಅದೇ ಮೀನವು ಗಾಳದಲ್ಲಿ ಸಿಕ್ಕಿತು. ಅದನ್ನು ಶಿವಾರ್ಪಿತವಾದ ವಸ್ತುವೆಂದು ಪ್ರವಾಹದಲ್ಲಿ ಹಾಕಿದನು. ಮೂರನೇ ಸಲ ಬೇರೆ ಸ್ಥಳದಲ್ಲಿ ಬಲೆಯನ್ನು ಬೀಸಿದನು. ಆಗ ಸಹ ಅದೇ ಬೇಟೆಯು ಕೈಗೆ ಬಂದಿತು. ದತ್ತಾಪಹಾರವು ಯುಕ್ತವಲ್ಲವೆಂದು ಅದನ್ನು ಹರಿಯುವ ನೀರಲ್ಲಿ ಚಲ್ಲಿ ಬೇರೆಡೆಯಲ್ಲಿ ಹೋಗಿ ಗಾಳವನ್ನು ಹೊಳೆಯಲ್ಲಿ ಹಾಕಿದನು. ಪರಮಾತ್ಮನ ಮಾಯೆಯಿಂದ ಎಷ್ಟು ಸಾರೆ ಬಲೆಯನ್ನು ಬೀಸಿದರೂ ಮರಳಿ, ಮರಳಿ ಅದೇ ಅಮೋಘವಾದ ಮತ್ಸ್ಯವೇ ದೊರಕುತ್ತಿತ್ತು. ಹೀಗಾಗಿ ನಮ್ಮ ಭಕ್ತಲಲಾಮನು ಬಲೆಯನ್ನು ಬೀಸಿ ಬೀಸಿ ಎರಡನೇ ಮತ್ಸ್ಯವನ್ನು ಕಾಣದೆ ಬೇಸತ್ತು ಇನ್ನು ಈ ಉದ್ಯೋಗವೇ ಸಾಕೆಂದು ಆ ಕಾಯಕವನ್ನು ಮಾಡುವವರಲ್ಲಿ ತನ್ನ ಉತ್ಪತ್ತಿಮಾಡಿದ ಮಹಾಕಾಯನೂ, ಮಹಾಕಾಲಮೂರ್ತಿಯೂ ಆದ ಶಂಕರನನ್ನು ಬಲವಾಗಿ ಭಕ್ತ್ಯಾವೇಶದಿಂದ ಚಿಂತಿಸಹತ್ತಿದನು. ಆಗಲೇ ಭಕ್ತರಕ್ಷಾಮಣಿಯಾದ ಕೃಪಾಸಮುದ್ರನಾದ ವಿಶ್ವೇಶ್ವರನು ಪ್ರಮಥಗಣಸಮೇತನಾಗಿ ಆತನಿಗೆ ಪ್ರಸನ್ನನಾಗಿ ಗಣಸಮೂಹದಲ್ಲಿ ಈತನಿಗೆ ಅತಿಭಕ್ತನೆಂಬ ಹೆಸರು ಸಾರ್ಥಕವೆಂದು ಪ್ರಶಂಸಿಸಿ, ಪ್ರಭುವನ್ನು ಪರಿಪರಿಯಾಗಿ ಸ್ತುತಿಸುತ್ತಿರುವ ನಮ್ಮ ವರಭಕ್ತನಿಗೆ ಶಾಶ್ವತವಾದ ಗಣಪದವಿಯನ್ನು ದಯಪಾಲಿಸಿದನು.

---

# ಪ್ರಾಚೀನ ಜ್ಯೋತಿರ್ವಿದರು

ಲೇಖಕರು:— ಪ್ರೊ. ಬಿ. ಸೂರ್ಯನಾರಾಯಣರಾವ್ ಬಿ. ಎ., ಎಂ. ಆರ್. ಎ. ಎಸ್. ಎಫ್. ಆರ್. ಎಚ್. ಎಸ್., ಸಂಪಾದಕ
'Astrology,' ಬೆಂಗಳೂರು

ಜ್ಯೋತಿಯೆಂದರೆ ಬೆಳಕು. ಜ್ಞಾನ ಮತ್ತು ಅದರ ಪರಿಶುದ್ಧ ತತ್ತ್ವದಲ್ಲಿ ಅಖಿಲಾಂಡಕೋಟಿಬ್ರಹ್ಮಾಂಡಗಳನ್ನು ಸೃಷ್ಟಿಸುವ ಶಕ್ತಿವಿಶೇಷ. ಅದಕ್ಕೆ ಶಾಸ್ತ್ರಜ್ಞರು ಪರಂಜ್ಯೋತಿಯೆಂತಲೂ, ಪರಾಶಕ್ತಿಯೆಂತಲೂ, ಪ್ರಕೃತಿಯೆಂತಲೂ, ಅನೇಕ ವಿಧವಾಗಿ ಹೇಳುತ್ತಿರುವರು. ಪ್ರಕೃತದಲ್ಲಿ ಜ್ಯೋತಿಷಶಾಸ್ತ್ರ ವಿಷಯವನ್ನು ಕುರಿತು ಕೆಲವು ಸಂಗತಿಗಳನ್ನು ಸೂಚಿಸುವೆನು. ಇದು ಜಯಕರ್ನಾಟಕದ ವಾಚಕರಿಗೆ ಆನಂದವನ್ನುಂಟುಮಾಡುವುದೆಂದು ನಂಬಿದ್ದೇನೆ.

ಜ್ಯೋತಿಷಶಾಸ್ತ್ರವು ಸ್ಕಂಧತ್ರಯಾತ್ಮಕವಾಗಿ ಇರುವುದು. ಗಣಿತ ಅಥವಾ ಸಿದ್ಧಾಂತವೆಂತಲೂ, ಫಲಭಾಗ ಅಥವಾ ಜನ್ಮಕಾಲದಲ್ಲಿ ಗ್ರಹಗಳ ಸ್ಥಿತಿಗಳನ್ನು ತಿಳಿದು ಪೂರ್ವಜನ್ಮದ ಕರ್ಮದ ಫಲವನ್ನು ತಿಳಿಸುವುದು; ಪ್ರಶ್ನ ಅಥವಾ ಯಾವು

ದಾದರೂ ಕಾರ್ಯವನ್ನು ಮಾಡುವಾಗ ಅದು ಯಾವ ರೀತಿಯಲ್ಲಿ ಪರಿಣಮಿಸುವುದೆಂಬುದನ್ನು ತಾತ್ಕಾಲದಲ್ಲಿ ಗ್ರಹಗಳ ಸ್ಥಿತಿಯಿಂದ ಸೂಚಿಸುವುದು ( ಇದಕ್ಕೆ ನಾವು ಎರಡು ಅಧಿಕವಾದ ಭಾಗಗಳನ್ನು ಸೇರಿಸಬಹುದು ) ಮುಹೂರ್ತವೆಂತಲೂ, ಅಂದರೆ ಯಾವ ಕಾರ್ಯದಲ್ಲಿ ಯಾವ ಕೆಲಸವನ್ನು ಮಾಡಿದರೆ ಅನುಕೂಲವಾಗುವುದೆಂಬುವ ಸಂಗತಿಯನ್ನು ತಿಳಿಸುವಹಾಗೆ ಗ್ರಹಗಳ ಸ್ಥಿತಿಯನ್ನು ನೋಡಿಹೇಳುವುದು. ಶಾಂತಿಯೆಂದರೆ, ಗ್ರಹಗಳ ಸ್ಥಿತಿಗಳಿಂದ ಸೂಚಿಸಲ್ಪಟ್ಟಿರುವ ಮತ್ತು ಮನುಷ್ಯನಿಗೆ ವಿರೋಧವಾದ ಫಲಗಳನ್ನು ಅನುವಾಗಿ ಮಾಡಿಕೊಳ್ಳುವುದು. ಈಗ ನಾವು ಹೇಳಿದ ಐದು ಭಾಗಗಳು ಜ್ಯೋತಿಷದಲ್ಲಿ ಒಂದಕ್ಕೆ ಒಂದು ಅಂತರ್ಗತವಾಗಿರುವುದರಿಂದ ಈ ಐದು ಭಾಗಗಳನ್ನೂ ಚೆನ್ನಾಗಿ ತಿಳಿದುಕೊಂಡವನೇ ಜ್ಯೋತಿಷ್ಕನೆಂದು ಹೇಳಬೇಕು. ಯಾವ ರೀತಿಯಲ್ಲಿ ಒಬ್ಬ ಅಡಿಗೆಯವನಿಗೆ, ಎಲ್ಲಾ ಪದಾರ್ಥಗಳನ್ನೂ ಮಾಡುವ ಶಕ್ತಿಯುಂಟಾದರೆ ಒಳ್ಳೇ ಅಡಿಗೆಯವನೆಂದು ಹೆಸರು ಕೊಡಬಹುದೋ ಹಾಗೆಯೇ ಈ ಐದು ಭಾಗಗಳನ್ನೂ ತಿಳಿದವನಿಗೆ ಜ್ಯೋತಿಷ್ಕನೆಂದು ಹೇಳಬಹುದು. ಅಲ್ಲದಿದ್ದರೆ ಅವನ ಪ್ರಯೋಜನವು ಬಹಳ ಕಡಿಮೆಯಾಗಿರುವುದು.

ಸಿದ್ಧಾಂತಗಳು ೧೮ ಸುಸಿದ್ಧಾಂತಗಳೆಂದು ಇರುವುವು. ಇವುಗಳಲ್ಲಿ ಶ್ರೀ ಸೂರ್ಯಸಿದ್ಧಾಂತವೇ ಕೇವಲ ಮುಖ್ಯವಾದದ್ದೆಂದು ಮಹರ್ಷಿ ಬಾದರಾಯಣರು, ಅಂದರೆ ವ್ಯಾಸರು ಹೇಳಿರುವರು.

" ಸೌರೋಪನಿಷದೇವಾದ್ಯ, ಕಲ್ಪೇತ್ವಸ್ಮಿನ್ ಸನಾತನಿ ।
ಯಯಾದಿತ್ಯ ಸ್ವಯಂಪ್ರಾಹ, ಮಯಾಯಪರಿಪೃಚ್ಛತೇ ॥
ಕಾಲಜ್ಞಾನಂ ತು ತತ್ಸಿದ್ಧಂ ವಿಶುದ್ಧಂ ನಾನ್ಯದುಚ್ಯತೇ ।
ತದ್ವಿರುದ್ಧಂ ತು ಯತ್ಸರ್ವಮಪರಿಗ್ರಾಹ್ಯಮೇವ ತತ್ ॥

ಎಲ್ಲ ಸಿದ್ಧಾಂತಗಳಲ್ಲಿಯೂ, ಈಸಿದ್ಧಾಂತವು ಶ್ರೇಷ್ಠವಾದದ್ದೆಂದು ಹೇಳುವುದಕ್ಕೆ ಕಾರಣವುಂಟು. ಏಕೆಂದರೆ, ಸಾಕ್ಷಾತ್ ಶ್ರೀ ಭಗವತ್ಸ್ವರೂಪನಾದ, ಪ್ರತ್ಯಕ್ಷದೈವವಾದ ಸೂರ್ಯನಿಂದ ಉತ್ಪತ್ತಿಯಾದ ಛಾಯಾಪುರುಷನಿಂದ ಮಯಾಸುರನಿಗೆ ತ್ರೇತಾಯುಗಾರಂಭದಲ್ಲಿ ಕೊಡಲ್ಪಟ್ಟಿದೆ. ಈ ಮಯನು ಮಹಾ ಶಾಸ್ತ್ರಜ್ಞನು; ರಾವಣನ ಮಾವನು, ತ್ರಿಪುರಾಸುರರಲ್ಲಿ ಒಬ್ಬನಾಗಿರುವನು; ಅಸುರನಾದರೂ ಪರಮಭಕ್ತನಾಗಿದ್ದದರಿಂದ ತ್ರಿಪುರಾಸುರಸಂಹಾರದಲ್ಲಿ ತಪ್ಪಿಸಿಕೊಂಡನು;

ಮಹಾಭಾರತದಲ್ಲಿ ಮಯಸಭೆಯನ್ನು ಕಲ್ಪಿಸಿ ನೀರಿಲ್ಲದ ಕಡೆಯಲ್ಲಿ ನೀರಿರುವಂತೆಯೂ, ನೀರಿರುವ ಕಡೆಯಲ್ಲಿ ನೀರಿಲ್ಲದಂತೆಯೂ, ಬಾಗಲಿರುವ ಕಡೆಯಲ್ಲಿ ಬಾಗಲಿಲ್ಲದಂತೆಯೂ, ಬಾಗಲ್ಲಿಲ್ಲದ ಕಡೆಯಲ್ಲಿ ಬಾಗಲಿರುವಂತೆಯೂ, ಇವೇ ಮೊದಲಾದ ಅನೇಕ ವಿಚಿತ್ರಗಳನ್ನು ಕಲ್ಪಿಸಿ ಮಾಡಿಯಿರುತ್ತಾನೆ. ಈ ಮಯಾಸುರನು ಭೌತಿಕಾತಿಭೌತಿಕವಿದ್ಯ ( Physical sciences ) ಗಳಲ್ಲಿ ದೊಡ್ಡ ಪಂಡಿತನು. ಗಣಿತದಲ್ಲಿ ಮಹಾ ಪ್ರವೀಣನು. ಜ್ಯೋತಿಷಶಾಸ್ತ್ರದಲ್ಲಿ ಅದ್ಭುತವಾದ ಶಕ್ತಿ ಪಡೆದಿದ್ದನು. ಈ ಸೂರ್ಯಸಿದ್ಧಾಂತವು ಪ್ರಥಮಸಿದ್ಧಾಂತವೆನ್ನುವುದಕ್ಕೆ ಯಾವ ಸಂದೇಹವೂ ಇರುವುದಿಲ್ಲ. ಈ ಗ್ರಂಥದಲ್ಲಿಯೇ ತ್ರೇತಾಯುಗಾರಂಭದಲ್ಲಿ ಮಯನಿಗೆ ಛಾಯಪುರುಷನು ಉಪದೇಶಮಾಡಿದಂತೆ ಹೇಳಲ್ಪಟ್ಟಿದೆ. ಇದು ಸಕಲಸಿದ್ಧಾಂತಗಳಿಗೂ ಮೂಲಾಧಾರವಾಗಿರುವುದು. ಮಿಷ್ಟರ್ ಸ್ವಾಮಿಕಣ್ಣು ಪಿಳ್ಳೆಯವರು, ಸೂರ್ಯಸಿದ್ಧಾಂತದಿಂದಲೇ ನನ್ನಲ್ಲಿ ಕೆಲವು ವಿಷಯಗಳನ್ನು ಗ್ರಹಿಸಿ ಅನಂತರ ತಮ್ಮ ಬುದ್ಧಿಚಮತ್ಕಾರದಿಂದ Indian chronology ಎಂಬ ಪ್ರಯೋಜನ ಗ್ರಂಥವನ್ನು ಬರೆದಿರುವರು.

೨೫೦೦ ವರ್ಷದ ಕೆಳಗೆ, ಈ ಸೂರ್ಯಸಿದ್ಧಾಂತದಲ್ಲಿ ಇರುವ ಪದಗಳ ( Tables and formulae ) ನ್ನು ಅನುಸರಿಸಿ ಆರ್ಯಭಟ್ಟ ಸಿದ್ಧಾಂತಿಯು ಕೆಲವು ಸವರಣೆಗಳನ್ನು ಮಾಡಿ ಆರ್ಯಭಟ್ಟೀಯಂ ಎಂಬ ಗ್ರಂಥವನ್ನು ಬರೆದಿರುತ್ತಾನೆ. ಅನಂತರ ೫೦೦ ವರ್ಷಗಳು ಕಳೆದತರುವಾಯ ವರಾಹಮಿಹಿರಾಚಾರ್ಯರೆಂಬ ಪ್ರಸಿದ್ಧರಾದ ಪಂಡಿತರು, ವಿಕ್ರಮಾರ್ಕ ಸಭೆಯಲ್ಲಿ ಖ್ಯಾತಿಯನ್ನು ಪಡೆದು ಪಂಚಸಿದ್ಧಾಂತಿಕವೆಂಬ ಗಣಿತಶಾಸ್ತ್ರವನ್ನೂ, ಬೃಹಜ್ಜಾತಕ, ಲಘುಜಾತಕ, ಬೃಹತ್ ಸಂಹಿತೆ, ಲಘುಸಂಹಿತ, ವಿವಾಹಪಟಲ, ಯಾತ್ರಾಪಟಲ ಗ್ರಂಥಸಮುಚ್ಚಯ (carpentery and mechanics) ಮೊದಲಾದ ಗ್ರಂಥಗಳನ್ನೂ ಬರೆದು ಬಹಳ ಪ್ರಖ್ಯಾತಿಯನ್ನು ಪಡೆದರು. ಲೋಕೋತ್ಕೃಷ್ಟವಾದ ಕವಿ ಕಾಳಿದಾಸನು ತನ್ನ ಜ್ಯೋತಿರ್ವಿದಾಭರಣದಲ್ಲಿ ಈ ಕೆಳಗಿನ ಶ್ಲೋಕವನ್ನು ಉಪಹರಿಸಿಯಿರುವನು.

ಧನ್ವಂತರಿಕ್ಷಪಣಕೋಽಮರಸಿಂಹ ಶಂಕುವೇತಾಳಭಟ್ಟ ಘಟ
ಕರ್ಪರ ಕಾಳಿದಾಸಾಃ ॥
ಖ್ಯಾತೋ ವರಾಹಮಿಹಿರೋ ನೃಪತೇಃ ಸಭಾಯಾಂ ।
ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ॥

ಅಂದರೆ, ವಿಕ್ರಮಾರ್ಕರ ಸಭೆಯಲ್ಲಿ, ವಿದ್ವದ್‌ರತ್ನಗಳು ೯ ಇದ್ದವೆಂತಲೂ, ಅದರಲ್ಲಿ ಖ್ಯಾತಿಯೆಂಬ ಗುಣವಾಚಕವನ್ನು (Adjective) ವರಾಹಿಮಿಹಿರರಿಗೆ ಕೊಟ್ಟಿರುವುದರಿಂದ ಇವರು ಆ ಪಂಡಿತನವರತ್ನಗಳಲ್ಲಿ ಅಧಿಕ ತೇಜಸ್ವಿಗಳಾಗಿದ್ದ ರೆಂಬುವುದಕ್ಕೆ ಸಂದೇಹವಿರುವುದಿಲ್ಲ.

ಪೂರ್ವದಲ್ಲಿ ಮಹರ್ಷಿಗಳು ವಿನಾ ಮತ್ತಾರೂ ಸಂಹಿತೆ ಯನ್ನು ಬರೆಯಲಿಲ್ಲ. ಸಂಹಿತಾಕಾರರೆಂಬ ಬಿರುದನ್ನು ಪಡೆಯ ಬೇಕಾಗಿದ್ದರೆ ಒಂದು ಸಾವಿರ ವಿಷಯಗಳಿಗೆ ಕಡಿಮೆಯಿಲ್ಲದೆ ತಿಳಿದವರಾಗಿರುವುದಲ್ಲದೆ, ಅವುಗಳನ್ನು ತಮ್ಮ ಸಂಹಿತಾ ಗ್ರಂಥದಲ್ಲಿ ಕರತಲಾಮಲಕವಾಗಿ ಉದಹರಿಸುವ ಸಾಮರ್ಥ್ಯವು ಇರಬೇಕು. ಇಂಥಾ ಮಹಾತ್ಮರಾದ ವರಾಹಮಿಹಿರಾಚಾರ್ಯರು ೨೦೦೦ ವರ್ಷಗಳ ಕೆಳಗೆ ಐದು ಸಿದ್ಧಾಂತಗಳಿಂದ ಸಂಗ್ರಹಿಸಿ ಬರೆದರು. ಅವು ಯಾವುವೆಂದರೆ.

೧ ಸೂರ್ಯಸಿದ್ಧಾಂತ
೨ ಪಿತಾಮಹ ಸಿದ್ಧಾಂತ (ಬ್ರಹ್ಮ)
೩ ಪುಲಿಶಸಿದ್ಧಾಂತ
೪ ವ್ಯಾಸಸಿದ್ಧಾಂತ
೫ ರೋಮಶ ಸಿದ್ಧಾಂತ

ಅನಂತರ ಶಕ ೮೦೦ ನೇ ವರ್ಷದಲ್ಲಿ ಭಾಸ್ಕರಾಚಾರ್ಯ ರೆಂಬ ಮಹಾದೊಡ್ಡ ಗಣಿತಶಾಸ್ತ್ರಜ್ಞರು, ಜನಿಸಿ ಕೆಲವು ಗ್ರಂಥ ಗಳನ್ನು ಬರೆದರು. ಅವುಗಳಲ್ಲಿ ಗೋಳಾಧ್ಯಾಯ (Spherical Trigonometry) ಬೀಜಗಣಿತ (Algebra) ರೇಖಾ ಗಣಿತ (Geometry) ಲೀಲಾವತಿ (Arithmetieal Treatise) ಮೊದಲಾದ ಗ್ರಂಥಗಳನ್ನು ಬರೆದು ಅದರಲ್ಲಿ ಗಣಿತಶಾಸ್ತ್ರವು ಎಷ್ಟು ಪ್ರಯೋಜನವಾದರೂ ಫಲಶಾಸ್ತ್ರವನ್ನು ತಿಳಿಯದೇ ಹೋದಲ್ಲಿ, ಅದರ ಜ್ಞಾನವು ವ್ಯರ್ಥವೆಂದು ಸೂಚಿಸಿ ದ್ದಾರೆ.

ಈಗ ಸುಮಾರು ೬೦೦ ವರ್ಷಗಳಮುಂದೆ ಗಣೇಶ ದೈವಜ್ಞರೆಂಬ ಮಹಾರಾಷ್ಟ್ರ ಬ್ರಾಹ್ಮಣರು, ದೊಡ್ಡ ವಿದ್ವಾಂ ಸರಾಗಿ, ಆ ಹಿಂದಿನ ಕಾಲದ ಗಣಿತಗಳಲ್ಲಿ ಕಂಡು ಬಂದ ಅಲ್ಪಸ್ವಲ್ಪ ಸ್ಖಾಲಿತ್ಯಗಳನ್ನು ಸರಿಮಾಡಿ ಹೊಸದಾಗಿ ಗ್ರಹ ಲಾಘವವೆಂಬ ಗ್ರಂಥವನ್ನು ಬರೆದು ಪ್ರಸಿದ್ಧಿಯನ್ನು ಪಡೆದರು. ಕೆಲವರು ಖಚರದರ್ಪಣವೆಂಬ ಗ್ರಂಥವನ್ನೂ ಈ ಮಹಾತ್ಮರೇ ಬರೆದರೆಂದು ತಿಳಿಸುವರು. ಅನಂತರ ನಮ್ಮ ದೇಶದಲ್ಲಿ ಪರ ಸ್ಪರ ಅಂತಃಕಲಹಗಳಿಂದಲೂ, ಈ ದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂಬ ಮುಸಲ್ಮಾನರ ಪ್ರಯತ್ನದಿಂದಲೂ, ನಮ್ಮ ಶಾಸ್ತ್ರಗಳಿಗೆ ಯಾವ ವಿಧವಾದ ಪ್ರೋತ್ಸಾಹವೂ ಇಲ್ಲದೆ ಹೋಯಿತು.

ವಸಿಷ್ಠರು, ನಾರದರು, ಪರಾಶರರು, ಗರ್ಗ, ವ್ಯಾಸರು ಮೊದಲಾದ ಮಹರ್ಷಿಗಳು ಸಿದ್ಧಾಂತಗಳನ್ನೂ ಮತ್ತು ಫಲ ಭಾಗಗಳನ್ನೂ ವಿಶದವಾಗಿ ಬರೆದು ಲೋಕಕ್ಕೆ ಹಿತವನ್ನುಂಟು ಮಾಡಿರುವರು. ವರಾಹಮಿಹಿರಾಚಾರ್ಯರು ತಮ್ಮ ಗ್ರಂಥ ಗಳಲ್ಲಿ ಸಕ್ಯಾಚಾರ್ಯರು, ಚಾಣುಕ್ಯರು ಅಥವಾ ವಿಷ್ಣುಗು ಪ್ತರು, ಮಯಾಸುರನು, ಯವನರು, ಮಣಿತ್ಥನು ಮೊದಲಾ ದವರ ಹೆಸರುಗಳನ್ನು ತಿಳಿಸುತ್ತಾರೆ.

---

# 'ತಳಿರು'

'ಕಾವ್ಯಾವಲೋಕನ'

ತಳಿರು—(ಕರ್ಣಾಟಕ ಸಂಘ, ಮಹಾರಾಜಾ ಕಾಲೇಜ, ಮೈಸೂರು.) ಬೆಲೆ ೧೨ ಆಣೆ.

ತಳಿರು 'ಕಿರಿಯ ಕಾಣಿಕೆ'ಯಷ್ಟು ದೊಡ್ಡ ಕಾಣಿಕೆಯಲ್ಲ. ಅದಕ್ಕಿಂತ ಇದರಲ್ಲಿ ಕಡಿಮೆ ಪದ್ಯಗಳಿವೆ. ಆದರೂ ಇದು ಕುಸು ಹೆಚ್ಚು ಕಡಿಮೆ ಅದೇ ಯೋಗ್ಯತೆಯು ಕಾಣಿಕೆಯೆನ್ನ ಬಹುದು. ಒಂದು ಬಗೆಯಿಂದ 'ಇದು ಅದಕ್ಕಿಂತ ಹೆಚ್ಚು ಮಹತ್ವವಾದದ್ದು. ಏಕೆಂದರೆ ಅದರಲ್ಲಿ ಅನುವಾದಗಳ ಸಂಖ್ಯೆ ಯು ಸಾಧಾರಣವಾಗಿ ಸ್ವತಂತ್ರ ಕವನಗಳ ಸಂಖ್ಯೆಯಷ್ಟೇ ಇದೆ. ಇಲ್ಲಿ 'ಮೃತ್ಯುವಿಗೆ ಎಲ್ಲರೂ ಒಂದೇ' ಎಂಬ ಕವನವು ಶಿರ್ಲಿ ಕವಿಯ 'Death the Leveller' ಎಂಬ ಕವಿ ತೆಯ ಅನುವಾದವಿದ್ದು ಉಳಿದವೆಲ್ಲವೂ ಸ್ವತಂತ್ರವಾಗಿವೆ. ಅವುಗಳನ್ನು ಪ್ರೇರಿಸಿದ ಭಾವನೆಯು ಅನೇಕ ಸಲ ಇಂಗ್ಲಿಷ

ಕವಿತೆಗಳದಿದ್ದರೂ ಆ ಭಾವನೆಯನ್ನು ಪುಷ್ಟೀಕರಿಸಿ ರಸವತ್ತಾಗಿ ಮಾಡುವ ಕಾರ್ಯವು ಕವಿಯನ್ನೇ ಹೊಂದಿದೆ.

ವಿಷಯಸೂಚಿಕೆಯನ್ನು ನೋಡಿದಲ್ಲಿ ಕವಿತೆಗಳನ್ನು ಯಾವದೊಂದು ವಿಶೇಷವಾದ ಉದ್ದೇಶವನ್ನಿಟ್ಟುಕೊಂಡು ಈಗಿರುವಂತೆ ಹೊಂದಿಸಿದೆಯೆಂದೆನಿಸುವದಿಲ್ಲ. ಇದ್ದ ಕವಿತೆಗಳನ್ನೇ ಆದಷ್ಟು ಉತ್ತಮರೀತಿಯಿಂದ ಸಂಕಲನಮಾಡಿದೆ. ಹೀಗೆ 'ಭಿಕ್ಷುಕರ' ಹತ್ತಿರ 'ಬೀದಿಯೊಳಗಲೆಯುತಿಹಳಾರಿವಳು' ಎಂಬ ಕವಿತೆಯನ್ನೂ 'ಹಣ್ಣೆಲೆಯ' ಹತ್ತಿರ 'ಮಾಗಿ ಬರುತಿದೆ' ಎಂಬದನ್ನೂ ಇರಿಸಲಾಗಿದೆ. ಈ ರೀತಿಯಿಂದ ಶ್ರೀ. ಟಿ. ಎಸ್. ವೆಂಕಣ್ಣಯ್ಯನವರ ಮುನ್ನುಡಿಯಿಂದ ಅಲಂಕೃತವಾಗಿ 'ತಳಿರು' ಮುಂದೆ ಬಂದಿದೆ.

ಛಂದಸ್ಸಿನಲ್ಲಿ ಹೊಸ ಹುರುಪು ರೂಪತಾಳಿ ಅನೇಕ ವರುಷಗಳಾದವು. ಅರುಣ, ಇಂಗ್ಲಿಷ ಗೀತೆಗಳು, ಕಿರಿಯಕಾಣಿಕೆ ಹಾಗು ಇನ್ನು ಅನೇಕ ಗ್ರಂಥಗಳಲ್ಲಿ ಈ ಯುಗದ ನವ ಚೈತನ್ಯಕ್ಕೆ ಬೇಕಾದ ದೇವಾಲಯುವು ಪೂರ್ತಿಯಾಗಿ ಕಟ್ಟಲ್ಪಟ್ಟಿದೆ. ಇನ್ನು ನಮಗೆ ಬೇಕಾದ ಹೊಸ ಬೆಳಕು ಸಿಗುವದು ನವನವೋನ್ಮೇಷಶಾಲಿನಿಯಾದ ಪ್ರತಿಭೆಯ ಮಿಂಚಿನಲ್ಲಿಯೇ ಸರಿ. ವಿಮರ್ಶಕರಾದ ದಾರಿಕಾರರು ಅದನ್ನೇ ಅರಸುತ್ತ ಈಗ ಅಲೆಯಬೇಕಾಗುವದು. ಉಳಿದುದೆಲ್ಲವೂ ಬೇಕು: ನೂತನವಾದ ಶೈಲಿ, ಅಚ್ಚಗನ್ನಡದ ಮಿರುಗು, ಆಂಗ್ಲಸಾಹಿತ್ಯದ ಸಂಪರ್ಕದಿಂದ ಪ್ರತಿದಿನವೂ ಅಸಂಖ್ಯಾಕವಾಗಿ ಉದ್ಭವಿಸುವ ವಿದ್ಯುಲ್ಲತೆಗಳು, ಇವೆಲ್ಲವು ಈ ಚೈತ್ರವನಕ್ಕೆ ಬೇಕೇ ಬೇಕು. ಆದರೆ ಮುಖ್ಯವಾದ ವಾಸನಾಪೂರ್ತಿಯಾಗಲೆಂದರೆ ಈ ಮಧುಕಾಲದ ಮಧುವನ್ನು ಸವಿಯುವ ತುಂಬಿಗಳು ಬೇಕು. ಈ ಮಧುವನ್ನು ವಿಜೃಂಭಣೆಯಿಂದ ಮನೆಗೆ ಕರೆದೊಯ್ಯುವ ಮದುಮಗನು ಬೇಕು!

ಇಂಥ ಕವಿಸಾಮ್ರಾಟನ ಆಗಮನವು ಇನ್ನೂ ಕರ್ನಾಟಕದಲ್ಲಿ ಆಗಿಲ್ಲ. ಆದರೆ ಅವನ ವಂದಿ ಮಾಗಧಿಗಳು ಮುಂದರಿದಿದ್ದಾರೆ. ಅವನಿಗಾಗಿ ಕಟ್ಟಿದ ತೋರಣಗಳು 'ಬಿಳಿಮುಗಿಲಿ'ನಲ್ಲಿ ಹಾರಾಡುತ್ತಲಿವೆ. ಅವನ ತಾರೆಗಳ ಮೇಳವು 'ಲಲಿತಾದ್ರಿ'ಯ ಮೇಲೆ ಇಳಿದು ಬಂದಿದೆ. 'ನನ್ನ ವಾಣಿ'ಯಲ್ಲಿ ಅವನು ಬರುವನೆಂದು ಆಕಾಶವಾಣಿಯಾಗಿದೆ. 'ಹೇಮಾವತಿ ಹೇಮಗಿರಿ'ಯಲ್ಲಿ ಅವನ ವೈಭವವು ಅಸ್ಫುಟವಾಗಿ ವ್ಯಕ್ತವಾಗಿದೆ. ಅಂತೇ ಈ ಗ್ರಂಥವು ನಮ್ಮೆಲ್ಲರ ಆದರಕ್ಕೆ ಪಾತ್ರವಾಗಬೇಕು.

ಇಲ್ಲಿ ಅನೇಕ ಕವಿತೆಗಳು ಸ್ವತಂತ್ರವಾಗಿದ್ದರೂ ಅವುಗಳನ್ನು ಪ್ರೇರಿಸಿದ ಸ್ಫೂರ್ತಿಯು ಅಷ್ಟು ಸ್ವತಂತ್ರವಾಗಿಲ್ಲವೆಂದು ನಾವು ಹಿಂದೆ ಹೇಳಿದೆವು. ಇದು ಎಲ್ಲ ರಾಷ್ಟ್ರಗಳಲ್ಲಿಯೂ ನವಯುಗವು ಪ್ರಾರಂಭವಾಗುವಾಗ ಜರುಗತಕ್ಕ ವೃತ್ತಾಂತ. ನಾವೆಲ್ಲರೂ ಒಂದು ಹೊಸ ವಾತಾವರಣದಲ್ಲಿ ಉಸಿರಾಡಿಸುತ್ತಿರುವೆವು. ಅದು ನಮ್ಮ ರಾಷ್ಟ್ರಜೀವನದಲ್ಲಿ ಪೂರ್ಣವಾಗಿ ಜೀಯುವ ತನಕ ನಾವು ಅದರ ಆವರಣಕ್ಕೆ ಒಳಗಾಗಲೇ ಬೇಕಾಗುವದು. ನಮ್ಮ ವಿಚಾರಗಳು ಆ ಆವರಣದ ಹೊದ್ದಿಕೆಯುತ್ತ ಮಾರ್ಪಡುವವು. ಕವಿಯು

'ರನ್ನಪಂಪರ ಮಹಾಕಾವ್ಯರಸರಂಗದಲಿ
ಭಾರತದ ಕೊಳಗುಳದಿ ನಿನ್ನ ನೋಡಿಹೆನು'

ಎಂದು ಹಂಪೆಯ ಭೀಮನನ್ನುದ್ದೇಶಿಸಿ ಬರೆಯುವಾಗ ನಮಗೆ ಕೀಟ್ಸ ಕವಿಯು ಹೋಮರನ ಮೇಲೆ ಬರೆದ ಸುನೀತೆಯ ನೆನಪಾಗುವದು. 'ಲಲಿತಾದ್ರಿ'ಯನ್ನು ಓದಿದ ಕೂಡಲೆ 'Lines written among the Eujenion Hills' ಕಣ್ಣೆದುರಿಗೆ ಬರುವವು. 'ಅಂಚೆಯವನ'ನ್ನು ನೋಡಿದಾಗ ಕಾವನ ಕವಿಯು ಅಂದಂತೆ "Hark!' Tis the twanging horn!" ಎಂದನ್ನಿಸಿಯೇ ಬಿಡುವದು. ಇದರಂತೆ 'ರಂಗವಲ್ಲಿ' ಯನ್ನು ಓದಿದಾಗ ವರ್ಡ್ಸ್‌ವರ್ಥ ಕವಿಯ 'The old Fishermen' ಎಂಬ ಕವಿತೆಯ ಪ್ರಕಾರವು ಸ್ಮೃತಿಪಥದಲ್ಲಿ ಏಳುವದು. ಹೀಗೆ ಒಂದಲ್ಲ ಎರಡಲ್ಲ-ಅನೇಕ ಕವಿತೆಗಳ ರೀತಿಯೂ ನೀತಿಯೂ ಛಂದವೂ ಅಂದವೂ ಆಂಗ್ಲಸಾಹಿತ್ಯದ ವೈಭವವನ್ನು ಪ್ರತಿಬಿಂಬಿಸುತ್ತಿವೆಯೆಂದು ಹೇಳಬಹುದು.

ಇಂಥ 'ಬಿಂಬಪ್ರತಿಬಿಂಬಾ'ಲಂಕಾರವು ಈಗ ನಮ್ಮ ಸಾಹಿತ್ಯಕ್ಕೆ ಅವಶ್ಯವೆಂದು ಹೇಳಿದರೆ ಯಾರೂ ಅಲ್ಲಗಳೆಯಲಾರರು. ಈ ತರಹದ ಅಲಂಕಾರದಿಂದಲೇ ಇಂದು ಕನ್ನಡ ಮಾತೆಯು ಹೊಸ ಸೊಬಗನ್ನು ತಳೆದಿರುವಳು. ಆದರೆ ಇದು ಕೇವಲ ಅರುಣೋದಯದ ಚಿನ್ಹವು. ಅನ್ಯಸಾಹಿತ್ಯತರಂಗಗಳಿಂದ ನಮ್ಮ ಹೃದಯವು ಉಕ್ಕೇರಿ ಹೊರಸೂಸಿದ ಭಾವನೆಗಳು ನಮ್ಮ ರಾಷ್ಟ್ರದ ವಿಶಿಷ್ಟ ಹಾಗು ಉತ್ತಮವಾದ ಕಾವ್ಯದ ಲಕ್ಷಣಗಳಾಗಲಾರವು. ಇಂಥದೊಂದು ಪ್ರವಾಹವು ಹರಿದು ಹೋದ ಮೇಲೆ ಉಳಿದ ನಮ್ಮ ಜೀವನದಲ್ಲಿ ನಾವು ಏನು ನಮಗೆ ಸರಿಬರುವ ಬದಲಾವಣೆಗಳನ್ನು ನಿರ್ಮಿಸುವೆವೋ

ಅಂದೇ ನಮ್ಮ ನಿಜವಾದ ಸಾಹಿತ್ಯಕ್ಕೆ ಪ್ರಾರಂಭವೆಂದು ಹೇಳಬಹುದು.

ಅಂದರೆ ನಿರ್ಮಲವಾದ ಅಚ್ಚಳಿಯದ ಪ್ರತಿಭೆ—ಇದು ಕವಿಯ ಜೀವನದಲ್ಲಿ ಒಡಮೂಡಿ ಬರಬೇಕು. ಅವನು ಬರೆಯುವ ಕಾವ್ಯಕ್ಕೆ ಬೆಂಬಲವಾಗಿ ಅವನಲ್ಲಿ **ಕಾವ್ಯಜೀವನ** ವಿರಬೇಕು. ಕಾವ್ಯರಂಗದ ಮೇಲೆ ಬರಿಯ ಭಾವನಾಲಹರಿಗಳ ನಟನೆಗಿಂತ, ಕಲ್ಪನಾಶಕ್ತಿಯ ಅದ್ಭುತ ಅಭಿನಯಕ್ಕಿಂತ ಕವಿಯು ತನ್ನ ಜೀವನದಲ್ಲಿ ವಿಶ್ವದ ಜೀವನವನ್ನು ಪ್ರತಿಬಿಂಬಿಸಿ ತನ್ನ ಕವನದ ಕನ್ನಡಿಯಲ್ಲಿ ಅನಂತವಾದ ಮುಗಿಲನ್ನೇ ಸೆರೆಹಿಡಿಯುವ ಕ್ರಮಕ್ಕೆ ಹೆಚ್ಚು ಸ್ಥಾನವಿದೆಯೆಂದರೆ ಅತಿಶಯೋಕ್ತಿಯಾಗಲಾರದು. ವಾಗ್ವೈಖರಿಯು ಇಂಥ ಕವಿಗಿರುವ ಸ್ಫುಟವಾಣಿ. ಚಿತ್ರಶಕ್ತಿಯು, ಅವನು ಕೇವಲ ಸೋಜಿಗದ ಗೋಜಿಗೆ ಹೋಗದಿದ್ದರೂ ಅವನು ನುಡಿದದ್ದನ್ನೇ ಸೋಜಿಗವಾಗಿ ಮಾಡಲು ಅವನಲ್ಲಿದ್ದ ಮಂತ್ರಶಕ್ತಿ. ವಿಶ್ವದ ವಿರಾಟರೂಪಕ್ಕೆ ನಮ್ಮ ದೃಷ್ಟಿಗೆ ಸಾಲುವ–ರೂಪವನ್ನು, ಕೊಡುವ 'ಪವಾಡ' ವನ್ನು ಅವನ ಕಲ್ಪನಾಶಕ್ತಿಯು ಜರುಗಿಸುವದು. ಈ ತರಹದ ಜೀವನಕ್ರಮವು ನಂಜುಂಡ, ದೀನ ಗಿಂತ ದೇವ ಬಡವ, ಜೀವನದ ತಿರುಳು, ದಂತದ ಬಾಚಣಿಗೆ, ಇವೇ ಮೊದಲಾದ ಕವಿತೆಗಳಲ್ಲಿ ಸೂಚಿತವಾಗಿದೆ. ಹೀಗೆಂದ ಮಾತ್ರಕ್ಕೆ ಕಾವ್ಯದ ಉದ್ದೇಶವೆಂದರೆ ಜೀವನದ ಸಮಸ್ಯೆಯನ್ನು ಪ್ರತಿಭೆಯ ಬೆಳಕಿನಲ್ಲಿ ಬಿಡಿಸಿ ಜೀವನವನ್ನು ಅರ್ಥಪೂರ್ಣವಾಗಿ ಮಾಡುವದೊಂದೇ ಎಂದಲ್ಲ. ಕಾವ್ಯದೆದುರಿಗೆ ಇನ್ನೂ ಅನೇಕ ಧ್ಯೇಯಗಳಿವೆ. ಅದು ಕೈಕೊಂಡ ಕಾರ್ಯಗಳು ಅನೇಕ ಮುಖವಾಗಿವೆ. ಆದರೆ ಇದೊಂದು ಕಾವ್ಯದ ಉಚ್ಚ ಧ್ಯೇಯವೆಂದು ಹೇಳಲು ಏನೂ ಪ್ರತಿಬಂಧವಿಲ್ಲ. ಯೀಟ್ಸ ಕವಿಯು ಹೇಳಿದಂತೆ "All art is an endeavour to assimilate, as out of the flying vapours of the world, an image of humans perfection, for its own sake and not for art's sake". "ಇಹಲೋಕದಲ್ಲಿ ಮುಸುಕಿ ಮತ್ತೆ ಮಸುಕಾಗಿ ಹೋಗುವ ಮಂಜಿನೊಳಗಿಂದೇನೋ ಎಂಬಂತೆ ಮಾನವೀಯ ಪರಿಪೂರ್ಣತೆಯನ್ನು ವ್ಯಕ್ತಗೊಳಿಸುವ ಒಂದು ಮೂರ್ತಿಯನ್ನು ರೂಪಗೊಳಿಸಲು ಮಾಡಿದ ಪ್ರಯತ್ನಕ್ಕೇನೇ ಕಲೆಯೆನ್ನಬಹುದು; ಈ ಪ್ರಯತ್ನವನ್ನು ಕಲೆಯ ಸಲುವಾಗೆಂದು ಮಾಡಿರುವದಿಲ್ಲ; ಆದರೆ ಆ ಮೂರ್ತಿಯ ಸಲುವಾಗಿಯೇ."

ಇನ್ನುಳಿದ ಆಂಗ್ಲ ವಿಮರ್ಶಕರ ದೃಷ್ಟಿಯಲ್ಲಿ ಮನುಷ್ಯನ ದಣಿದ ಮನವನ್ನು ತಣಿಸಿ ಅವನನ್ನು ಉಲ್ಲಾಸವೃತ್ತಿಯಲ್ಲಿ ತರುವದೇ ಕಾವ್ಯದ ಮುಖ್ಯ ಕಾರ್ಯವಾಗಿದೆ. ಕಾವ್ಯದ ಈ ವ್ಯಾಖ್ಯೆಯಲ್ಲಿ ಮೇಲೆ ಉಲ್ಲೇಖಿಸಿದ ಉದ್ದೇಶವು ಒಳಪಡುವದಲ್ಲದೆ ಬೇರೆ ಪ್ರಕಾರದ ಕವಿತೆಗಳಿಗೂ ಸ್ಥಾನವನ್ನು ಕಲ್ಪಿಸಿ ಕೊಟ್ಟಂತಾಗುವದು. ಭಿನ್ನ ಭಿನ್ನ ರುಚಿಯಿದ್ದ ಜನತೆಯನ್ನು ಒಂದೇ ಬಗೆಯ ಕಾವ್ಯವು ಸಂತೋಷಗೊಳಿಸಲಾರದು. ಇನ್ನು ಕಾವ್ಯವಾದರೋ ಆಯಾ ಜನಾಂಗದ ವ್ಯೂಹಸಮಾನವಾದ ಜೀವನದ ವಿಮರ್ಶೆಯಾಗಬೇಕು. ಅಂದ ಮೇಲೆ ಅನ್ಯಜಾತಿಯ ಕವಿತೆಗಳನ್ನು ಜನತೆಯು ಬೇಡುವದು.

ಇಂಥ ಕವಿತೆಗಳೇ 'ತಳಿರು'ನಲ್ಲಿ ಮೂರು ಪಾಲಿವೆ. ಬೈಗು, ಚಿಟ್ಟೆ, ಬಿಳಿಮುಗಿಲು, ಮಾಗಿ ಬರುತಿದೆ, ಹಣ್ಣೆಲೆಗೆ, ಮುಂಗಾರು ಹೇಮಾವತಿ–ಹೇಮಗಿರಿ,–ಇವೆಲ್ಲವೂ ವರ್ಣನಾತ್ಮಕ ಕವಿತೆಗಳು. ಅಂದರೆ ಪ್ರಕೃತಿಸೌಂದರ್ಯವನ್ನು ಹೃದಯಂಗಮವಾಗಿ ಬಣ್ಣಿಸುವದು ಅಥವಾ ಅದನ್ನು ನೋಡಿ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ವಿವರಿಸುವದು, ಇದೇ ಅವುಗಳ ಮುಖ್ಯೋದ್ದೇಶ. 'ಬೈಗು' ಮನೋಹರವಾಗಿದೆ. ಸಂಜೆಗೆಂಪು ಕವಿಯನ್ನು ನಿಜವಾಗಿಯೂ ಮೋಹಗೊಳಿಸಿದೆ. 'ಚಿಟ್ಟೆ'ಯಲ್ಲಿ ಅದೇ ತರಹದ ಒಲವು ಒಡೆದು ಕಾಣುತ್ತಿದ್ದರೂ ಆಂಗ್ಲ ಸಾಹಿತ್ಯದ ಪ್ರಭಾವವು ಅಲ್ಲಲ್ಲಿ ಕಂಡು ಬರುವದುಂಟು. "ಹೇಮಾವತಿ–ಹೇಮಗಿರಿ"ಯು ಒಂದು ವಿಶೇಷ ತರಹದ ವರ್ಣನಾತ್ಮಕ ಕವಿತೆ. ಶೆಲ್ಲಿಯ ಪ್ರಮೀಥಿಯಸ್ ಅನ್‌ಬಾವುಂಡ್ ಎಂಬ ನಾಟಕದಲ್ಲಿಯ ನಿಸರ್ಗವರ್ಣನೆಯು ವಿಚಾರಾರ್ಹವಾಗಿದೆ. ಅಲ್ಲಿಯ ಪಾತ್ರಗಳೆಂದರೆ ಪೃಥಿವಿ, ಚಂದ್ರ, ಲೋಕ, ನಾಕ ಇವೇ ಮೊದಲಾದವುಗಳು. ವನಗಳೊಡೆಯರೂ ಗಾಳಿಯ ಒಡೆಯರೂ ಆದ ಅನೇಕ ಕಿನ್ನರ ಕಿಂಪುರುಷರ ನಡುವೆ ಅಲ್ಲಿ ಸಂಭಾಷಣೆಯಾಗುತ್ತದೆ. ಈ ನದಿ–ಗಿರಿಗಳ ವರ್ಣನೆಯು ಆ ರೂಪದಲ್ಲಿರದಿದ್ದರೂ ಅದೇ ಮಾದರಿಯ ಮೇಲಿದ್ದಂತೆ ತೋರುತ್ತದೆ. ಆದರೆ ಇಲ್ಲಿಯ ಕಲ್ಪನಾಶಕ್ತಿಯು ಪೂರ್ಣ ಸ್ವತಂತ್ರವಾಗಿ ವರ್ಣನೆಗೆ ಬೇಕಾದ ಸಾಮಗ್ರಿಯಲ್ಲಿ ಕವಿಯು ಎಲ್ಲಿಯೂ ಅಭಾವವನ್ನು ತೋರಿಸಿರುವದಿಲ್ಲ. ಇಂಥ ವರ್ಣನೆಯು ಇದೇ ಕವಿತೆಯಲ್ಲಿ ಮೊದಲೆಂದು ಹೇಳಬಹುದು. ಕಡೆಗಿರುವ ನೀತಿಬೋಧವನ್ನು ಬಿಟ್ಟಿದ್ದರೆ ಕವಿತೆಯು ಇನ್ನೂ ಚೆನ್ನಾಗುತ್ತಿತ್ತೇನೋ ಎಂದೆನ್ನಿಸುವದು.

ಶ್ರೀ. ಪುಟ್ಟಪ್ಪನವರ 'ಮಾಗಿ ಬರುತಿದೆ' ಹಾಗು 'ಮುಂಗಾರು' ಎಂಬ ಕವಿತೆಗಳು 'ಸುಗ್ಗಿಯ' ನಂತರ ಬಂದಿವೆ. ಮುದುಕ ಕುರುಬನೆಂದು ಮಾಡಿದ ಮಾಗಿಯ ವರ್ಣನೆಯು ಉಚಿತವಾಗಿಯೇ ಇದೆ. ಈ ಕಲ್ಪನೆಯೇನು ಹೊಸತಲ್ಲ. ಸ್ಪೆನ್ಸರ ಕವಿಯ The Masque of the Seasons (ಋತುಗಳ ಗೊಂಬೆಯಾಟ)ದಲ್ಲಿ ಇದೇ ಮಾದರಿಯ ಚಿತ್ರವದೆ. ಆದರೂ ಅದು ಕನ್ನಡ ಸಾಹಿತ್ಯಕ್ಕೆ ನೂತನವಾದುದೇ. ಇನ್ನು -

"ಮಾಗಿ ಬಂದರೇನು ಮುಂದೆ ?
ಸುಗ್ಗಿ ಬಸಿರನೊಡದು ಹಿಂದೆ
ಬಂದೆ ಬರುವದು !"

ಎಂಬಲ್ಲಿ ಶೆಲ್ಲಿಯ ಅದ್ವಿತೀಯವಾದ "If winter comes can spring be far behind?" ಎಂಬ ನುಡಿಯು ನೆನಪಾಗಿ ಅದರ ಛಾಯೆಯು ಮಾತ್ರ ಇಲ್ಲಿ ಕಂಡು ಬರುವದು. ಶೈಲಿಯೂ ಛಂದವೂ ಮನೋಹರವಾಗಿವೆಯೆಂದು ಯಾರೂ ಒಡಂಬಡದೆ ಇರರು. ಇದರಲ್ಲಿಯೂ "ಮುಂಗಾರಿ"ನಲ್ಲಿಯೂ ಇವುಗಳ ಸಾಮರ್ಥ್ಯವು ಕಣ್ಣು ಕುಕ್ಕಿಸುವಂತಿದೆ. ಗಾಳಿ ದೇರನ್ನು ಏರಿ ಹೊರಟ ಕವಿಯನ್ನು ನಾವೂ ಹಿಂಬಾಲಿಸಿದಂತೆ ಭಾಸವಾಗುತ್ತದೆ. ಆದರೆ ಒಂದು ಕ್ಷಣ ರಸಾನುಭವವಾದ ಮೇಲೆ ಪರೀಕ್ಷಿಸಿ ನೋಡಲು ಕವಿತೆಯಲ್ಲಿ ಕೆಲವು ಕುಂದುಗಳು ಒಡೆದು ಕಾಣಹತ್ತುತ್ತವೆ.

"ಐಕಿಲದರ ತಲೆಯು ತಿರುಳು
ಕೊರೆಯುವ ಚಳಿಯದರ ಕರುಳು"

ಇಲ್ಲಿ ಪದ-ಮೈತ್ರಿಯು ಕಿವಿಗೆ ಇಂಪಾಗಿದೆ. ಆದರೆ ಎರಡು ಸಾಲಿನಲ್ಲಿದ್ದರೂ ಅವುಗಳಲ್ಲಿ ಭಾವನೆಯೇನೂ ಭಿನ್ನವಾಗಿಲ್ಲ. ಕರ್ಣಾನಂದದ ಸಲುವಾಗಿಯೇ ಒಂದು ಹೋಗಿ ಎರಡಾಗಿವೆ. ಕವಿಯು ಅರ್ಥಪೂರ್ಣತೆಗಿಂತ ಮಂಜುಳ ಸ್ವನಕ್ಕೆ ಹೆಚ್ಚು ಮನಸೋತಿದ್ದಾನೆ.

ಇದನ್ನು ನಾವು ಮತ್ತೆ ಬೇರೆ ಕಡೆಗೂ ಕಾಣಬಹುದು. ಈ ಅದ್ಭುತ ಶಬ್ದಸಂಚಯವು 'ಮುಂಗಾರಿ'ನಲ್ಲಿ ಹೆಚ್ಚು ಸ್ಪಷ್ಟವಾಗಿದೆ. ಅಲ್ಲಿ ಚಿತ್ರದ ಮೇಲೆ ಚಿತ್ರ. ರೂಪಿನ ಮೇಲೆ ರೂಪು.

"ಕಾಳಿಯ ಕಂಗಳ ಕೆಂಬೆಳಕಂತೆ
ಕೈ ಹೊಂಬಳೆಗಳ ಹೊಸ ಹೊಗರಂತೆ
ಥಳಥಿಪ ಖಡ್ಗದ ದೀಧಿತಿಯಂತೆ
ಮಿಂಚುಗಳೆಸೆದವು ಗೊಂಚಲಲಿ !"

ಮನಸು ದಂಗುಬಡೆದು ಹೋಗುವದು. ಕವಿಯು ಕವಿಯೋ ಇಲ್ಲವೆ ಬೆಳಾಗಾಗುವವರಲ್ಲಿಯೇ ಗೋಪುರದ ಮೇಲೆ ಗೋಪುರವನ್ನು ಕಟ್ಟುವ ಜಕ್ಕಣಾಚಾರ್ಯನೋ ಎಂದೆನ್ನಿಸುವದು. ಶಾಂತಚಿತ್ತರಾಗಿ ಅಲ್ಪ ಹೊತ್ತು ವಿಚಾರ ಮಾಡುವಾ ಇದೆಲ್ಲ ಏತರ ವಿಷಯಕ್ಕೆ ? ಮುಂಗಾರಸುರಿಯ ವಿಷಯಕ್ಕೆಂದು ಉತ್ತರ ಬರುವದಷ್ಟೇ ? ಮೊದಲಿನ ೧೫ ಸಾಲುಗಳಲ್ಲಿ ಅವಳ ಚಿತ್ರವು ನಮ್ಮ ಕಣ್ಣೆದುರಿಗೆ ಕಟ್ಟಿಹೋಗಿರುವದು. ಇಷ್ಟರಲ್ಲಿಯೇ ಹಕ್ಕಿಗಳ ಚಿಲಿಪಿಲಿ ಧ್ವನಿಯು ಕೇಳಿ 'ಅಂಬಾ' ಎನ್ನುವ ಕರಗಳು ಕಿತ್ತೆದ್ದೋಡುವವು. ಅಷ್ಟರಲ್ಲಿ ಸುರಶಿಶು ಮಣಿಗಳು ಭುವಿಗಿಳಿತಂದು ಹುಡುಗ-ಹುಡಿಗೆಯರು ಆಲಿಯ ಕಲ್ಲುಗಳನ್ನು ಆನಂದದಿಂದ ತಿನ್ನುವರು. ಇಂತು ಲೋಕಕೆ ನಾಕವು ಬಿಜಯಂಗೆಯ್ಯೆ ಕವಿಹೃದಯವು ಗಾನತಲ್ಲೀನವಾಗುವದು. ಈ ಆಡಂಬರದಲ್ಲೆಲ್ಲ ಮುಂಗಾರು ರಕ್ಕಸಿಯೆತ್ತ ಮಾಯವಾಗಿ ಹೋದಳು ? ಅವಳ ಗತಿಯೇನು ? ಮೊದಲಿಗಿದ್ದ ಅವಳ ಘೋರ ಚಿತ್ರವು ಮುಂದೆ ಬರುವ ಸಾಮಾನ್ಯವಾದ ಹಾಗು ಕೊನೆಗಿರುವ ಉಲ್ಲಾಸದ ಚಿತ್ರಗಳಿಂದ ಅಳಿಸಿ ಹೋಗಿ ಕವಿತೆಯ ಸಾಮರ್ಥ್ಯವು ಕುಗ್ಗುವದು. ಮುಂಗಾರ ರಕ್ಕಸಿಯ ಚಿತ್ರದಲ್ಲಿ ಮಳೆಗಾಲದ ಭಯಾನಕತೆಯ ಹೊರತು ಬೇರೆ ಯಾವ ಶಕ್ತಿಯೂ ಸಮ್ಮಿಲಿತವಾಗಿರುವದಿಲ್ಲ. ಇದರಿಂದ ಕವಿತೆಯು ಮನೋಹರವಾಗಿ ಮಳೆಗಾಲವನ್ನು ವರ್ಣಿಸುವ ಒಂದು ಕವಿತೆಗಿಂತ ಏನೂ ಹೆಚ್ಚಾಗಲಾರದು. ಸಾಮಾನ್ಯವಾಗಿದ್ದುದನ್ನು ಮನೋಹರವಾಗಿ ಬಣ್ಣಿಸಿದುದೇ ಇದರ ಮುಖ್ಯ ಗುಣ. ಮುಂಗಾರ ರಕ್ಕಸಿಯನ್ನು ಕಡೆತನಕ ಕಣ್ಣೆದುರಿಗಿಟ್ಟುಕೊಂಡು ಕವಿತೆಯನ್ನು ಬರೆದಿದ್ದರೆ ಅವರಲ್ಲಿಯ ಈ ಗುಣವು ಹೆಚ್ಚು ಚಿತ್ತಾಕರ್ಷಕವಾಗುತ್ತಿತ್ತು.

ಇನ್ನೊಂದು ಮಾತು. "ಧಾರೆಯ ದಾರದಿ ನೆಯ್ದಿಹ ತೆಳ್ಳನೆ ಜವನಿಕೆಯುಡುವಳು ತಿರೆವೆಣ್ಣು" ಎಂದು ಕವಿಯು ಬರೆದಿದ್ದಾನೆ. ಈ ಚಿತ್ರವು ಕಲ್ಪನೆಗೆ ಬಹು ಕಷ್ಟಕರವಾಗಿದೆ. ಜವನಿಕೆಯೆಂದರೆ "ಮುಸುಕು" (veil) ಎಂದು ರೂಢಿಯಲ್ಲಿದೆ. ಇದನ್ನು ತಿರೆಯು **ಉಡುವದು** ಹೇಗೆ ? ಇನ್ನು "ಉಡು" ಎಂದರೆ "ಧರಿಸು" ಎಂದಿಟ್ಟುಕೊಳ್ಳೋಣ. ಆದರೂ ಚಿತ್ರವು ಮುಸುಕಾಗಿಯೇ ಉಳಿಯುವದು. ಪೃಥಿವಿಯಂಥ ದೊಡ್ಡ ಹೆಣ್ಣುಮಗಳು ಅಂಥದೊಂದು ಮುಸುಕನ್ನು ಧರಿಸಿ ನಿಂತದ್ದನ್ನು

ಕಲ್ಪಿಸಲು ನಮಗಂತೂ ಕಷ್ಟವಾಗುತ್ತದೆ. ಕವಿಯಲ್ಲಿ ವಾತಿನ ಸಂಪಿದೆ; ಛಂದಸ್ಸಿನ ಛಂದವಿದೆ. ಉತ್ತಮವಾದ ಕಲ್ಪನಾ ಶಕ್ತಿಯೂ ಇದೆ; ಆದರೆ ಅದು ವಿಶೇಷತಃ ಸಣ್ಣ ಸಣ್ಣ ಚಿತ್ರ ಗಳಲ್ಲಿ ರೂಪುಗೊಂಡು ಅವುಗಳನ್ನು ಒಂದು ಶ್ರೇಷ್ಠ ಕಲ್ಪನೆಗೆ ಅಧೀನಪಡಿಸದೆ ಆಗೀಗ ಕಣ್ಣು ಮುಚ್ಚುವದು ಮಾತ್ರ.

"ನೆರೆ" ಹಾಗು "ರಂಗವಲ್ಲಿ" ಇವುಗಳನ್ನು ನಾವು ಕೂಡಿಸಿ ನೋಡಬಹುದು. ಎರಡು ಕಥೆಗಳು ಈ ಕವಿತೆಗಳಲ್ಲಿವೆ. ಕವಿ ಗಳು ಅವುಗಳನ್ನು ಚೆನ್ನಾಗಿಯೇ ನಿವೇದಿಸಿದ್ದಾರೆ. "ರಂಗವಲ್ಲಿ" ಯಲ್ಲಿಯ "ತಮಿಳು ಪದ್ಯಪೂರೆವರಿಲ್ಲ"ವೆಂಬದು ಇಲ್ಲಿಯ ಜನ ರಿಗೆ ಅರ್ಥವಾಗುವಂತಿಲ್ಲ. "ನೆರೆ"ಯಲ್ಲಿಯ ಕಥೆಯಲ್ಲಿ ಇದರ ಲ್ಲಿಲ್ಲದ ಆಂಗ್ಲ ವಾತಾವರಣವು ತೋರಿ ಬರುತ್ತಿದೆ. ನಮ್ಮ ಲ್ಲಿಯೂ ಹೀಗೆ ಒಲೆಯ ಮುಂದೆ ಕುಳಿತುಕೊಂಡು ಅಜ್ಜನು ಹುಡುಗರಿಗೆ ಕಥೆ ಹೇಳುವದುಂಟು. ಆದರೆ ಆ ಕಥೆಗಳ ವಿಷ ಯವನ್ನು ಕವಿತೆಯಲ್ಲಿ ಬರೆಯುವದನ್ನು ನಾವು ಕಲಿತುಕೊಂ ಡದ್ದು ಆಂಗ್ಲರಿಂದ. ಹೀಗಿದ್ದರೂ ನಮ್ಮ ರೀತಿ ನಡತೆಗೆ ಹೊರ ತಾಗಿದ್ದುದು ಈ ಕವಿತೆಯಲ್ಲಿ ಏನೂ ಇಲ್ಲ. ಅಲ್ಲದೆ ಇದರ ಛಂದವು ಇಂಗ್ಲಿಷ ಟ್ರಾಕಿ (Trochee) ಮಾತ್ರೆಯ ಇಂಪನ್ನು ನೆನಪಿಗೆ ತರುತ್ತದೆ.

ಇನ್ನುಳಿದುವೆಲ್ಲವೂ ಬಹುತರವಾಗಿ ಭಾವನಾಪ್ರಧಾನಕವಿತೆ ಗಳು. ಅನೇಕ ಪ್ರಸಂಗಗಳಲ್ಲಿ ನಾನಾತರಹದ ವಿಷಯಗಳ ಮೇಲೆ ಭಿನ್ನ ಭಿನ್ನ ವಿಚಾರಗಳ ಸೆಳವಿನಲ್ಲಿ ಬರೆದವುಗಳು. 'ತಾರೆ ಗಳು' ಎಂಬ ಪದ್ಯದಲ್ಲಿಯ ಚಿತ್ರಶಕ್ತಿಯು ಮನವನ್ನು ಮೋಹಿ ಸುವ ಹಾಗಿದೆ. ಭಿಕ್ಷುಕಿಯ ಹಾಗು ಭಿಕ್ಷುಕರ ಮೇಲಿನ ಎರಡು ಕವಿತೆಗಳಲ್ಲಿ, ಒಂದೇ ವಸ್ತುವನ್ನು ಕುರಿತು ಎರಡು ವಿಚಾರ ಪಕ್ಷಗಳಿಂದ ನೋಡಲಾಗಿದೆ. ಮೊದಲನೆಯದರಲ್ಲಿ ಕವಿಯು ಕಳಕಳಪಟ್ಟರೆ, ಎರಡನೆಯ ಕವಿತೆಯ ಕವಿಯು ಅದೇ ಮಾದ ರಿಯ ಭಿಕ್ಷುಕರನ್ನು ಆನಂದದಿಂದ ಕುಣಿಯ ಹಚ್ಚುತ್ತಾನೆ. 'ಕಳೆದ ಕಿರಿಯತನ'ದಲ್ಲಿ ಕವಿಯು ಬಾಲ್ಯವನ್ನು ವರ್ಡ್ಸ್‌ವರ್ಥ ನಂತೆ ದೈವಿಕವಾಗಿ ಮಾಡದಿದ್ದರೂ ಅದರ ಮುಗ್ಧತೆಯನ್ನು ಪ್ರೀತಿಸುವದು ಕಂಡುಬರುತ್ತದೆ. 'ಬ್ರಾಹ್ಮಣ ಕುಲ' ವೆಂಬ ಕವಿತೆಯೂ ಕವಿಯು ಬಿಟ್ಟ ಒಂದು ನಿಟ್ಟುಸಿರು. ಇಲ್ಲಿ ಇನ್ನೊಂದು ಪ್ರಶ್ನೆಯನ್ನು ವಿಚಾರಿಸುವ ಹಾಗಿದೆ. ಈ ಕವಿತೆ ಯನ್ನು ಹಾಗು 'ನಂಜುಂಡ'ವನ್ನು ನೋಡಿದಲ್ಲಿ ನಮ್ಮ ಭಾಷೆಗೆ ೧೪ ಸಾಲುಗಳ ಸುನೀತಗಿಂತ (sonnet) ೧೨ ಸಾಲಿನ ಸುನೀ ತೆಯು ಹೆಚ್ಚು ಅನ್ವಯಿಸುವಂತೆ ತೋರುತ್ತದೆ. ಇವೆರಡು ಕವಿ ತೆಗಳು ಸಹಜವಾಗಿ ಸುನೀತಾರೂಪವನ್ನು ತಾಳಿದವೆಂದು ಹೇಳಬಹುದು. ಎರಡರಲ್ಲಿಯೂ ಆರನೆಯ ಸಾಲಿಗೆ ಮೊದಲ ನೆಯ ವಿಚಾರತರಂಗವು ಮುಗಿದಿದ್ದು ಇನ್ನೊಂದು ಅಲೆಯು ಸುರುವಾಗಿದೆ. ಶೇಕ್ಸಪಿಯರನ ಸುನೀತಗಳಂತೆ ಇಲ್ಲಿಯೂ ೪ ಸಾಲುಗಳಿಗೆ ಒಂದೊಂದು ಶ್ಲೋಕವಾಗಿದೆ.

ಅಂಬಿಕಾತನಯದತ್ತರ 'ಹಂಪೆ-ವಿಜಯನಗರ ದರ್ಶನ' ಹಾಗು ಆನಂದಕಂದರ 'ಮಾಧವಮುನಿ' ಎಂಬ ಕವಿತೆಗಳ ನಂತರ ಹಂಪೆಯ ಮೇಲೆ ಇನ್ನೂ ಕವಿತೆಗಳೇ ಎಂದು ಕೇಳ ಬಹುದು. ಆದರೆ ಒಂದಾನೊಂದು ಕಾಲದಲ್ಲಿ ಅಪಾರವಾದ ಸಂಪತ್ತಿನ ಬೀಡಾದ ಹಂಪೆಯು ಇಂದು ಅಪಾರವಾದ ಸ್ಫೂರ್ತಿ ಗಾವರೂ ತವರುಮನೆಯಾಗಬಾರದೆ? 'ಹಂಪೆಯ ಭೀಮ'ನ ಮೇಲೆ ಶ್ರೀ. ಪುಟ್ಟಪ್ಪನವರು ಬರೆದ ಕವಿತೆಯಲ್ಲಿಯೂ ಸಾಮ ರ್ಥ್ಯವಿದೆ. 'ಗೊಲ್ಲನ ಬಾಳು' 'ವಚನಬ್ರಹ್ಮ' ಮತ್ತು 'ಪ್ರಶ್ನೆ' ಎಂಬ ಕವಿತೆಗಳೂ ಚೆನ್ನಾಗಿವೆ. 'ಹೀಗಾಯಿತು' ಎಂಬುದು ಬೋಳುಪದನಲ್ಲಿ ಮೊದಲನೆಯ ಲಘುಕವಿತೆಯೆಂದು ಹೇಳಬಹುದು. 'ಹೇಮಾವತಿಯ ತೀರದಲ್ಲಿ'ಯ ಈ ಶ್ಲೋಕವು ಅರ್ಥವನ್ನು ಮುಚ್ಚಿಡುವಂತೆ ತೋರುತ್ತದೆ:

" ಆರ ಗಾನದ ಲಹರಿ ಹೃದಯಕೆ
ತೂರಿ ತೋರಿದ ಆತ್ಮದರಕೆಯ
ನಾರ ಪ್ರೇಮವು ಪೂರ್ಣಮಾಡಿತೊ,
ಅಂಥ ತಂಗಿಯ ಸಾವನು "

ಇವರಲ್ಲಿಯ ಬಂಧವು ದೇವಾಲಯಗಳ ಗೋಡೆಗಳಲ್ಲಿ ಕಲ್ಲುಗಳ ಮೇಲೆ ಅಲ್ಲಲ್ಲಿ ಕಂಡು ಬರುವ ನಾಗರಹಾವಿನ ಮುರಿಗೆಯಂತಿದೆ. ಅದರ ಬಾಲವನ್ನು ಇಲ್ಲವೆ ಹೆಡೆಯನ್ನು ಬಿಡಿಸಿ ಕಂಡುಹಿಡಿ ಯುವದೇ ಕಷ್ಟ. ಇದರಂತೆ ಇದೇ ಕವಿಯ 'ಕಳೆದ ಕಿರಿತನ' ಎಂಬ ಕವಿತೆಯಲ್ಲಿ "ಹಗಲು ಹಣ್ಣು ತಿರುಗುತ್ತಿತ್ತು" ಎಂಬ ಸಾಲಿನ ಅರ್ಥವನ್ನು ತಿಳಿಯುವದೇ ಕಠಿಣವಾಗಿದೆ.

ಆದರೆ ಒಟ್ಟಿನ ಮೇಲೆ ನೋಡಿದಲ್ಲಿ ಈ ಕವಿಯ— ಶ್ರೀ. ನರಸಿಂಹಾಚಾರ್ ಪಿ. ಟಿ. ಇವರ— ಶೈಲಿಯು ಸರಳವಾಗಿದೆ. ಇವರು ಮೂರು ಕವಿತೆಗಳ ವಸ್ತುರೀತಿಗಳಲ್ಲಿಯೂ ವರ್ಡ್ಸ್ ವರ್ಥ ಕವಿಯ ಕವಿತೆಗಳನ್ನು ಎದುರಿಗಿಟ್ಟುಕೊಂಡಂತೆ ತೋರು ತ್ತದೆ, ಶ್ರೀ. ರಾಜರತ್ನಂರವರ ಕವಿತೆಗಳಲ್ಲಿ ಪ್ರಸ್ಥಿಯು ...

ಒಂದು ವಿಶೇಷ ದೃಷ್ಟಿಯಿಂದ ನೋಡುವ ಬಗೆಯು ವ್ಯಕ್ತವಾಗಿದೆ. ಬೆಳವುಗಿಲಿನಲ್ಲಿ ಅವರು ಆದರ ಸೌಂದರ್ಯವನ್ನು ಬಣ್ಣಿಸುವರು. 'ಝುರಿ'ಯನ್ನು ನೋಡಿ ಮಾನವನ ಹೆಮ್ಮೆಯೂ ಇದರಂತೆಯೇ ಎಂದು ಕೆಲ ಹೊತ್ತು ಧ್ಯಾನಿಸುವರು. 'ಹೀಗಾಯಿತು' ಎಂಬಲ್ಲಿ ಪ್ರಕೃತಿಗೆ ಮಾನವನ ಸುಖವೂ ದುಃಖವೂ ಅಷ್ಟೇ ಎಂದು ತಿಳಿಯಪಡಿಸುವರು. ಶ್ರೀ. ಪುಟ್ಟಪ್ಪನವರ ಎಲ್ಲ ಕವಿತೆಗಳಲ್ಲಿಯೂ ಹೊಸ ಹುರುಪಿದೆ. ಅದು ಒಮ್ಮೊಮ್ಮೆ ಅಗಾಧವಾದ ಸೆಳವಿನಿಂದ ಹರಿದುಬರುವದು. ಆದರೆ ಕೆಲವೆಡೆ ಬಂಡೆಗಲ್ಲುಗಳಿಗಟಿದು ಅರ್ಥವಿಲ್ಲದೆ ಸಪ್ಪಳ ಮಾಡುವದು. ಹೀಗೆ:

"ಕನ್ನಡದ ಕುಶಲತೆಗೆ,
ಕನ್ನಡದ ರಸಿಕತೆಗೆ,
ಕನ್ನಡದ ನಿಪುಣತೆಗೆ,
ಕನ್ನಡಿಯು ಮೈಸೂರು!
ಕನ್ನಡಿಗರೆದೆಯರಿಯೆ,
ಕನ್ನಡಿಗರೊಲವರಿಯೆ,
ಕನ್ನಡಿಗರಿಂಪರಿಯೆ" .........

ವಿಶೇಷ ಅರ್ಥವಿಲ್ಲದೆ ಶಬ್ದಗಳನ್ನು ಬೆಳೆಸುತ್ತ ಹೋಗುವದು ಕಿವಿಸೋತ ಕವಿಯ ಕೆಲಸ. ಇಂಥ ಶೈಲಿಗಿಂತ "ದಂತದ ಬಾಚಣಿಗೆ"ಯ ಶೈಲಿಯು ಹೆಚ್ಚು ಸ್ತುತ್ಯವೆಂದನಿಸುತ್ತದೆ. ಶ್ರೀ. ಪುಟ್ಟಪ್ಪನವರ ಕವಿತೆಗಳಲ್ಲಿ ಸಹಜ ಸ್ಫೂರ್ತಿಯು ಕಾಣಿಸಿಬರುತ್ತದೆ. ಅವರ ಯಾವ ಕವಿತೆಗೂ 'ಕೃತಕ'ವೆಂದೆನ್ನಲು ಶಕ್ಯವಿಲ್ಲ. ಆದರೆ ಈ ಸ್ಫೂರ್ತಿಯು ವಿಶೇಷತಃ ಅಲ್ಲೋಲ ಕಲ್ಲೋಲವಾದ ಕಲ್ಪನಾಸಮುದ್ರದ ತರಂಗಗಳ ತಾಕಲಾಟದಿಂದ ಬಂದ ಸೀರ್ಪನಿಯು; ಒಳಗಿರುವ ಆಳವಾದ ನೀರಿನಿಂದ ಪ್ರತಿ ನಿಮಿಷವೂ ಪುಟಿಯುತ್ತಿರುವ ಕಾರಂಜಿಯ ಸೆಲೆಯಲ್ಲ.

ಒಟ್ಟಿನ ಮೇಲೆ 'ತಳಿರಿ'ನಲ್ಲಿಯ ಕವಿತೆಗಳು ಉಚ್ಚ ತರಗತಿಯವಿದ್ದುದರಿಂದ ಓದುಗರು ಅವುಗಳನ್ನು ಅದೇ ಭಾವನೆಯಿಂದ ಸ್ವೀಕರಿಸುವರೆಂಬುದರಲ್ಲಿ ಏನೂ ಸಂಶಯವಿಲ್ಲ. ಇದು ಬರಿಯ ಹೊಸ ಕವಿತೆಗಳ ಗುಚ್ಛವಲ್ಲ; ಹೊಸ ವಿಚಾರಗಳ ಸಂಚಯವೂ ಅಹುದು. ಇಲ್ಲಿ ಬರಿಯ ಹೊಸ ಛಂದಸ್ಸಿನ ಮಿರುಗಿಲ್ಲ; ಅದನ್ನು ಪುಷ್ಟೀಕರಿಸುವ ಹೊಸ ಶೈಲಿಯು ಬೆರಗೂ ಇದೆ. ಕಾಲೇಜಿನ ಬಹುತರ ಎಲ್ಲ ಕವಿಗಳ ಶೈಲಿಯು 'ಉದುರನ್ನ'ದಂತೆ ಬಿಡಿಬಿಡಿಯಾಗಿದ್ದು ಸರಳವಾಗಿಯೂ ಮೃದುವಾಗಿಯೂ ಇರುತ್ತದೆ. 'ದಂತದ ಬಾಚಣಿಗೆ' ಹಾಗೂ 'ದೀನಗಿರುವ ದೇವ ಬಡವ' ಎಂಬ ಕವಿತೆಗಳು ಇದಕ್ಕೆ ಉತ್ತಮವಾದ ಉದಾಹರಣೆಗಳಿವೆ. ಉತ್ತಮೋತ್ತಮ ಶಬ್ದಗಳನ್ನು ಆರಿಸಿ ಅವುಗಳನ್ನು ತಮ್ಮ ಪದ್ಯಗಳಲ್ಲಿ ಹೆಣೆಯುವದರಲ್ಲಿ ಶ್ರೀ. ಬಿ. ಎಮ್. ಶ್ರೀಕಂಠಯ್ಯನವರ ಶಿಷ್ಯರಾದ ಈ ಕವಿಗಳೂ ಬಲ್ಲಿದರು.

—ವಿ. ಕೃ. ಗೋ.

---

## ದೇವನೆಲ್ಲಿಹನು ?

ದೇವನೆಲ್ಲಿಹನು ? ಯೆನ್ನೊಳಗೋ ಬಾಹ್ಯದೊಳಗೋ? ॥
ಹದಿನಾಲ್ಕು ಲೋಕವಾ ಉದರದಲಿ ಧರಿಸಿರುವ ಸ್ವಾಮಿ ॥
ಅಲ್ಪನಾದೆನ್ನ ಸಂಕುಚಿತ ಹೃದಯದೊಳ್ ನೆಲೆಸಿಹನೆ ? ।
ನೆಲೆಸಿಹನು ಎಂದೆನಲು ಅಪಹಾಸ್ಯ ಮಾಡುವರು ಜನರು ॥
ಅದಕೆ ಮನಗೊಟ್ಟು ಆ ದೇವನೆನ್ನೊಳು ಇಲ್ಲ ।
ಬಾಹ್ಯದೊಳಗಿಹನೆನಲು ಆ ಮಾತು ನಿಜವಿಲ್ಲ ॥
ಅಪರಿಮಿತ ಬೆಲೆಯುಳ್ಳ ಕಸ್ತುರಿಯು ತನ್ನೊಳಿರುವುದನರಿಯದೆ ।
ತಿರುಗುವಾ ಸಾರಂಗದಂತೆಮ್ಮ ಜೀವನವು ॥
ನೆಲೆಸಿಹನು ಸರ್ವಮಂಗಳಮೂರ್ತಿ ನಮ್ಮೆಲ್ಲರಾ ಹೃದಯದೊಳು ।
ಒಲವಿನಿಂದೀಕ್ಷಿಸುವವರಿಗತಿಸುಲಭ ಕಾಣುವನು ॥
ಕಾವ ಕರುಣಾನಿಧಿಯು ಭಕುತರಿಗೆ ನೆಲೆಯಾಗಿ ।
ಇರುತಿಹನು ನಮ್ಮೆಲ್ಲರಾ ಅಂತರಂಗದೊಳು ॥

—ದೀನ

# ಮಹಾತ್ಮಾ ಗಾಂಧಿಯವರ ಜೀವನರಹಸ್ಯ

( ನೀರೀಕ್ಷಕನಿಂದ )

ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್
ಕವಯೋ ವದಂತಿ ॥
—ಕಠೋಪನಿಷತ್ತು

೧

ಯಾರ ಜೀವನರಹಸ್ಯವನ್ನು ಯಾರು ಬಲ್ಲರು? ರಹಸ್ಯದಲ್ಲಿ ಸ್ವಲ್ಪ ಅಗಮ್ಯತೆ ಇರದಿದ್ದರೆ ಆ ರಹಸ್ಯದಲ್ಲಿ ಸ್ವಾರಸ್ಯವಿಲ್ಲ. ಒಬ್ಬರ ರಹಸ್ಯದಲ್ಲಿ ಬೇರೊಬ್ಬರು ಬಾಯಿಹಾಕುವದು ಸಭ್ಯತನವಲ್ಲ; ರಹಸ್ಯದಲ್ಲಿ ಹಣಕಿ ಹಾಕುವದು ಹುಡುಗತನ; ಅವರವರ ರಹಸ್ಯವು ಅವರವರಿಗೂ ಅಗಮ್ಯ; ರಹಸ್ಯವನ್ನು ಬಯಲಿಗಾಡುವದು ಅದರ ಹುಡುಗಾಟಿಕೆಯಾಗಬಹುದು.

'It may seem an impertinence to enquire too closely into a man's attitude to the unseen' (*Gray Parekh*) 'Mahatmaji was not given to discussing matters of such discipline, That side, the inner religious side, he seemed to be anxious to veil from public view as much as possible' (*Krishndas*) 'There are some things which are known only to oneself and once's Maker. These are clearly incommunical.' (*M. K. Gandhi*).

"ಅವ್ಯಕ್ತ ಪರಮಾತ್ಮನೊಡನೆ ಇದ್ದ ಒಂದು ಜೀವನ ಸಂಬಂಧದ ಬಗ್ಗೆ ಅತಿ ಚಿಕಿತ್ಸೆಮಾಡುವದು ಅಧಿಕಪ್ರಸಂಗವಾಗಿ ಕಾಣಬಹುದು" ಎಂದು ಗಾಂಧಿಯವರ ಒಬ್ಬ ಚರಿತ್ರಕಾರರು ಹೇಳುವರೆ, ಕೃಷ್ಣದಾಸರೆಂಬ ಇನ್ನೊಬ್ಬ ಚರಿತ್ರಕಾರರು "ಅಂತರ ಸಾಧನದ ಬಗ್ಗೆ ಚರ್ಚೆಮಾಡುವದು ಮಹಾತ್ಮಾಜಿಯವರ ಸ್ವಭಾವವಲ್ಲ. ಅಂತರಂಗದ ಧರ್ಮಾಚರಣೆಯನ್ನು ಆದಷ್ಟು ಸಾರ್ವಜನಿಕ ದೃಷ್ಟಿಯಿಂದ ಅಡಗಿಸಬೇಕೆಂದು ಅವರ ಆತುರತೆ" ಹೀಗೆ ಹೇಳುವರು. ಸ್ವತಃ ಮಹಾತ್ಮರೆ "ತನಗೆ ಗೊತ್ತು, ತನ್ನನ್ನು ಹುಟ್ಟಿಸಿದವನಿಗೆ ಗೊತ್ತು. ಇಂಥ ಕೆಲವು ಒಳಮಾತುಗಳು ಇದ್ದೇ ಇರುತ್ತವೆ. ಅವುಗಳ ಬಗ್ಗೆ ಆಡಲು ಬರದೆಂಬದು ಸ್ಪಷ್ಟವೇ ಇದೆ" ಎಂದು ಹೇಳಿದ್ದಾರೆ. ಹಾಗಾದರೆ ಮಹಾತ್ಮರ ಜೀವನದ ರಹಸ್ಯವು ತಿಳಿಯುವ ಬಗೆ ಹೇಗೆ? ಅಥವಾ ಅದರ ಬಗ್ಗೆ ಬರಿಯುವದು ಉಚಿತವೇ? ಎಂದು ಯಾರಾದರೂ ಕೇಳಬಹುದು. ಮಹಾತ್ಮರ ಜೀವನದ ಬಗ್ಗೆ ಎಲ್ಲರೂ ಮನನನಿದಿಧ್ಯಾಸಮಾಡುವದು ಎಲ್ಲರ ಕರ್ತವ್ಯವಾಗಿದೆ. ಹೀಗೆ ಮಾಡುವದರಿಂದ ನಮಗೆ ಹಿತವಿದೆ. ಯಾರೊಬ್ಬರ ಜೀವನರಹಸ್ಯದ ಚೇಷ್ಟೆಮಾಡುವ ಇಚ್ಛೆಯಿಂದಾಗಲಿ, ಮನೋರಂಜನದ ವಿನೋದಕ್ಕಾಗಲಿ, ರಹಸ್ಯದ ಚರ್ಚೆಮಾಡುವದು ಕೀಳೆಂದೆಣಿಸಬಹುದು. "Lives of Great men all remind us, we can make our lives sublime" ನಮ್ಮ ಜೀವನವನ್ನೂ ಉನ್ನತವನ್ನಾಗಿ ಮಾಡಬಹುದೆಂಬದು ಮಹಾಜನರ ಜೀವನದಿಂದ ತಿಳಿದುಬರುವದೆಂದು ಲಾಂಗಫೆಲೊ ಎಂಬ ಕವಿಯು ಹೇಳುವನು. "What one can do all can do" ಯಾವುದನ್ನು ಮಾಡುವದು ಒಬ್ಬನಿಗೆ ಸಾಧ್ಯವೊ ಅದು ಎಲ್ಲರಿಗೂ ಸಾಧ್ಯ ಎಂದು ಇಮರ್ಸನ್‌ನು ಸಾರಿದರೆ— "Whatever is possible for me is possible even for a child" "ನನಗೆ ಸಾಧ್ಯವಿದ್ದುದು ಒಂದು ಕೂಸಿಗೂ ಸಾಧ್ಯ" ಎಂದು ಮಹಾತ್ಮರೆ ಹೇಳಿದ್ದಾರೆ. ಅದಕ್ಕಾಗಿಯೆ ಅವರ ಜೀವನ ರಹಸ್ಯವನ್ನು ತಿಳಿದುಕೊಂಡು ನಾವೂ ಹಾಗೆಯೆ ಉನ್ನತರೂ ಊರ್ಜಿತರೂ ಆಗಬೇಕೆಂಬ ಉತ್ಸಾಹವನ್ನು ಏಕೆ ತಳೆಯಬಾರದು? 'ನನ್ನ ಸತ್ಯಾಗ್ರಹದೊಳಗಿನ ಪ್ರಯೋಗಗಳು' ಎಂಬ ಆತ್ಮಚಾರಿತ್ರ್ಯಪರಗ್ರಂಥವನ್ನು ಬರೆಯುವದಲ್ಲಾದರೂ ಮಹಾತ್ಮರ ಉದ್ದೇಶವೂ ಇದೆ:- **ತನ್ನಂತೆ ಜನರಾಗಬೇಕು** ತಾನು ಮಾಡಿದಂತೆಯೆ ಜನರು ಮಾಡಬೇಕೆಂದಲ್ಲ. ಜನರು ತನ್ನ ಅನುಯಾಯಿಗಳಾಗಬೇಕೆಂದಲ್ಲ. **ತಮ್ಮ ತಮ್ಮ ಜೀವನದ ಸತ್ಯವನ್ನು ಕಂಡುಕೊಳ್ಳಲು ಮಹಾತ್ಮರಂತೆ ಎಲ್ಲರೂ ಪರಮಪ್ರಯತ್ನಪಟ್ಟು ಆ ಸತ್ಯದಂತೆ**

ಆಚರಿಸಲು ಪ್ರಾಣಾಪಾಯವನ್ನೂ ಲೆಕ್ಕಿಸದೆ ಹೆಣಗಾಡಿ ತಮ್ಮ ತಮ್ಮ ಜನ್ಮದ ಸಾರ್ಥಕತೆಯನ್ನು ಮಾಡಿಕೊಳ್ಳಬೇಕು. ' ತಮ್ಮ ಪ್ರಯೋಗಗಳನ್ನು ಉದಾಹರಣೆಗಳೆಂದು ಭಾವಿಸಿ ಪ್ರತಿಯೊಬ್ಬರು ಅವರವರ ಒಲವಿನಂತೆ ಬಲವಿದ್ದಂತೆ ಸ್ವಂತ ಪ್ರಯೋಗಗಳನ್ನು ಮಾಡಬಹುದು ಎಂದು ಮ. ಗಾಂಧಿಯವರು ಸೂಚಿಸಿದ್ದಾರೆ. ' Nature never creates two things that are exactly alike' ತದ್ರೂಪ ತದಾತ್ಮವಾದ ಎರಡು ವಸ್ತುಗಳನ್ನು ಪ್ರಕೃತಿಯು ಹುಟ್ಟಿಸುವದೆ ಇಲ್ಲ.

ಪರಮಾತ್ಮನಂತೆ ಜೀವರುಗಳ ಬಗ್ಗೆಯೂ ' ಏಕಮೇವಾದ್ವಿತೀಯಂ' ಎಂಬುದು ಸತ್ಯವಾಗಿದೆ ಎಂದು ರವೀಂದ್ರನಾಥ ಠಾಕೂರರವರು ಹೇಳಿರುವರು. ಒಬ್ಬನು ಇನ್ನೊಬ್ಬನ ಅತಿ ಅಂಧಾನುಕರಣವನ್ನು ಮಾಡುವದೂ ಆತ್ಮಘಾತವೇ! ವ್ಯಾವಹಾರಿಕ ಜೀವನದಲ್ಲಿ ಅನುಕರಣವು ಪ್ರಬಲವಾಗಿದ್ದರೂ ಪಾರಮಾರ್ಥಿಕ ಆಚರಣೆಯಲ್ಲಿ ' ತನ್ನ ತಾನು ತಿಳಿದು ' ನಡೆಯಬೇಕಾಗುವದು. ಗಾಂಧಿಯವರ ಜೀವನದಿಂದ ಈ ರಹಸ್ಯವನ್ನೇ ಅರಿತುಕೊಳ್ಳಬೇಕಾಗಿದೆ. ನಮ್ಮಲ್ಲಿ ಪಾರಮಾರ್ಥಿಕವೆನ್ನಿಸಿಕೊಳ್ಳುವ ಜೀವನವೂ ವ್ಯಾವಹಾರಿಕ ಅನುಕರಣದ ರೂಪವನ್ನು ತಾಳಿವೆ. ಈ ಧರ್ಮಗ್ಲಾನಿಯನ್ನು ಹೊಡೆದು ಹಾಕಿ ಮತ್ತೆ ಧರ್ಮಸಂಸ್ಥಾಪನೆಯನ್ನು ಮಾಡಲು ಹುಟ್ಟಿದ ವಿಭೂತಿಗಳಲ್ಲಿ ಮಹಾತ್ಮರೊಂದು ದೊಡ್ಡ ವಿಭೂತಿ. ಅವರ ಜೀವನರಹಸ್ಯವು ಅಡಗಿಸಿಯೂ ಮುಚ್ಚುವಂತಿಲ್ಲ. ಊದಿಯೂ ಆರುವಂತಿಲ್ಲ. ಅವರ ಜೀವಜ್ಯೋತಿಯೊಂದು ಮಹಾರತ್ನಪ್ರದೀಪ. ಸ್ವಯಂಪ್ರಭವಾದ ನಕ್ಷತ್ರ. ಅವರ ಜೀವನದಲ್ಲಿ ಮುಚ್ಚುಮರೆಯಿಲ್ಲ. ಆ ಮಹಾಯೋಗಿಗೆ ಲೋಕಾಂತವೇ ಏಕಾಂತ.

೨

ಎಲ್ಲ ಮಹಾತ್ಮರಂತೆ ಗಾಂಧಿಯವರ ಗುರಿಯಾದರೂ ಚಿಕ್ಕದಿಲ್ಲ. ' ಈ ಮೂವತ್ತು ವರ್ಷ ನಾನು ಪಡೆಯಲು ಹೆಣಗಾಡಿ— ತಳಮಳಿಸುತ್ತಿರುವದು ಆತ್ಮಸಾಕ್ಷಾತ್ಕಾರ, ಪರಮಾತ್ಮ ದರ್ಶನ, ಮೋಕ್ಷ,' ' ನಾನು ಪರಮಾತ್ಮನನ್ನು ಸತ್ಯಸ್ವರೂಪದಲ್ಲಿ ಮಾತ್ರ ಭಜಿಸುತ್ತೇನೆ. ನನಗೆ ಅವನಿನ್ನೂ ದೊರೆತಿಲ್ಲ, ಅದಕ್ಕೆ ಅವನನ್ನು ನಾನು ಹುಡುಕುತ್ತಿದ್ದೇನೆ' ' There is no other god than Truth ' ಸತ್ಯದ ಹೊರತು ಬೇರೆ ದೇವರಿಲ್ಲ ' The only means for the realisation of truth is Ahimsa' ಸತ್ಯದ ಸಂಪಾದನೆಗೆ ಅಹಿಂಸೆಯೊಂದೇ ಹಾದಿ. ' ಪರಾತ್ಪರ ಸತ್ಯವು ಕಾಣುವ ವರೆಗೂ ನನಗೆ ಹೊಳೆಯುವ ಸತ್ಯವೇ ನನಗೆ ಗತಿ. ಈ ಸತ್ಯಮಾರ್ಗದಲ್ಲಿಯೇ ನನಗೆ ಪರಾತ್ಪರ ಸತ್ಯವು ಸುಳಿದು ಹೊಳೆದುಹೋಗಿದೆ.' ನಾವು ದಿನಾಲು ಕಾಣುವ ಸೂರ್ಯನಿಗಿಂತಲೂ ಕೋಟಿ ಪಟ್ಟು ಕಾಂತಿಯುಳ್ಳ ಸತ್ಯದ ಮಹಿಮೆಯನ್ನು ' ತಟಿತ್ಕೋಟಿನಿಭಕಾಯ'ನಾದ ಜಗನ್ನಾಥನನ್ನು ತಾವು ಕಂಡ ಅಲ್ಪ ಸ್ವಲ್ಪ ಬೆಳಕಿನಿಂದ ಬಣ್ಣಿಸುವದಸಾಧ್ಯವೆಂದು ಮಹಾತ್ಮರು ಹೇಳುವರು. ' ಸತ್ಯವು ಪ್ರಚಂಡ ಪ್ರಕಾಶ; ನಾನು ಕಂಡದ್ದು ಸುಳಿಮಿಂಚು' ವಿಶ್ವಂಭರ, ಸರ್ವಾಂತರ್ಗತ ಸತ್ಯಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಸೃಷ್ಟಿಯೊಳಗಿನ ತೀರ ಕ್ಷುಲ್ಲಕವೆನ್ನಿಸುವ ವಸ್ತುವನ್ನೂ ತನ್ನಂತೆ ಪ್ರೀತಿಸಬೇಕಾಗುವದು. ಹೀಗೆ ಪ್ರತಿಯೊಂದು ವಸ್ತುವಿನೊಡನೆ ತಾದಾತ್ಮ್ಯಹೊಂದಬೇಕಾದರೆ ಆತ್ಮಶುದ್ಧಿ ಬೇಕು. ಅಹಿಂಸಾಧರ್ಮವನ್ನು ಪಾಲಿಸದ ಹೊರತು ಆತ್ಮಶುದ್ಧಿಯೆಂಬುದು ಬರಿ ಕನಸು. ಚಿತ್ತಶುದ್ಧಿಯಿಲ್ಲದವನಿಗೆ ದೇವದರ್ಶನವಾಗದು. ಸತ್ಯಸಾಕ್ಷಾತ್ಕಾರಕ್ಕಾಗಿ ತಮಗೆ ಪ್ರಿಯವಿರುವ ಎಲ್ಲ ವಸ್ತುಗಳನ್ನೂ, ಎಲ್ಲ ಪ್ರಿಯವಸ್ತುಗಳಲ್ಲಿಯೂ ಪ್ರಿಯತಮವಾದ ಪ್ರಾಣವನ್ನೂ ತ್ಯಜಿಸಲು ಗಾಂಧಿಯವರು ಸಿದ್ಧರಿರುವರು. ' All that I do by way of speaking and writing all my ventures in the political field are directed to this same end' ಗಾಂಧಿಯವರು ಬರೆಯುವದು ಮಾತಾಡುವದು ರಾಜಕಾರಣವನ್ನು ಮಾಡುವದು ಎಲ್ಲವೂ ತಮ್ಮ ಮೋಕ್ಷಕ್ಕಾಗಿ ಆತ್ಮಸಾಕ್ಷಾತ್ಕಾರಕ್ಕಾಗಿ. ಈಶದರ್ಶನಕ್ಕಾಗಿ. ' My devotion to Truth has drawn me into the field of politics.... Thouse who say that religion has nothing to do with politics do not know what religion means' ಅವರ ಸತ್ಯಭಕ್ತಿಯೇ ಅವರನ್ನು ರಾಜಕಾರಣಕ್ಕೆಳೆಯಿತು. ಧರ್ಮಕ್ಕೂ ರಾಜಕಾರಣಕ್ಕೂ ಸಂಬಂಧವಿಲ್ಲವೆನ್ನುವವರಿಗೆ ಧರ್ಮವೆಂದರೇನೆಂಬದೇ ಗೊತ್ತಿಲ್ಲ ಎಂದು ಅವರ ಮತ. ಈಶಪೂಜನವೇ ಅತ್ಯೂರ್ಜಿತವಾದ ಧ್ಯೇಯ. ಮಾನವಜಾತಿಗೆ ನೀತಿನಿಯಮಾನುಸಾರವಾಗಿ ನಿಷ್ಕಾಮಸೇವೆಯನ್ನು ಮಾಡುವದೇ ಅತ್ಯುತ್ತಮವಾದ ಈಶಪೂಜನವು ಎಂದು ಗಾಂಧಿಯವರು ತಿಳಿದಿರುವರು. ಮಾನವಜಾತಿಯ ಸೇವೆ

ಜೀವನದಗುರಿಯೆಂದಿಟ್ಟುಕೊಂಡವನು ನೀತಿಯುತನಾಗಿ ಉಳಿಯದಿರಲಾರನು. ಇಷ್ಟೇ ಅಲ್ಲ; ' Self realisation I hold to be impossible without service of and identification with the poorest.' ತೀರ ಬಡವರೊಡನೆ ತಾದಾತ್ಮ್ಯಹೊಂದಿ ಅವರ ಸೇವೆಯನ್ನು ಮಾಡದಿದ್ದರೆ ಆತ್ಮಸಾಕ್ಷಾತ್ಕಾರವಾಗುವದು ಅಸಂಭವ. ಮಹಾತ್ಮಾಜಿಯವರ ಜೀವನವು ಧರ್ಮಮಯವಾಗಿದೆ. ಧರ್ಮದ ಸೋಗಿನಿಂದ ರಾಜಕಾರಣವನ್ನು ಸಾಧಿಸುವವರುಂಟು. ಆದರೆ ಗಾಂಧಿಯವರು ರಾಜಕಾರಣದ ನಿಮಿತ್ತದಿಂದ ಧರ್ಮಸಾಧನೆಯನ್ನೆ ಮಾಡುತ್ತಿರುವರು. ತಮ್ಮ ಜನಾಂಗದವರ ಸೇವೆಯ ಮುಖಾಂತರವಾಗಿ ಅವರು ಮಾನವಜಾತಿಯ ಸೇವೆಯನ್ನೆ ಮಾಡುತ್ತಿರುವರು. ಆದಕಾರಣ ಅವರ ಸ್ವರಾಜ್ಯ ಚಳವಳಿಯು ಅವರ ಮುಕ್ತಿಸಾಧನೆಯ ಅವಶ್ಯಭಾಗವಾಗಿದೆ. ಇದನ್ನು ಅವರು ಮತ್ತೆ ಮತ್ತೆ ಒತ್ತಿಒತ್ತಿ ಹೇಳಿರುವರು. ಅಂತೂ ಏನು ! **ಮುಕ್ತಿಯೆ ಗುರಿ, ಸತ್ಯವೇ ದೈವತ, ಅಹಿಂಸೆಯೇ ಸಾಧನ, ಸೇವೆಯೇ ಅನುಷ್ಠಾನ, ಭಾರತವೇ ಕರ್ಮಭೂಮಿ—** ಹೀಗಿದೆ ಮಹಾತ್ಮರ ಸಾಧನಸೋಪಾನ. ಹಿಂದುಸ್ಥಾನದ ಪರಾಧೀನತೆಯು ಮಹಾತ್ಮರ ಸೇವಾನುಷ್ಠಾನಕ್ಕೆ ದೊಡ್ಡದೊಂದು ಆತಂಕವಾಗಿರುವದರಿಂದ ಸ್ವರಾಜ್ಯ ಸಾಧನೆಯೊಂದು ಅವರಿಗೆ ಅವಶ್ಯಕರ್ಮವಾಗಿದೆ.

೩

' ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕದಾಚನ' **' ಉಂಡುಂಡು ಸ್ವರ್ಗಕೈದುವರೆ ಅದನೇನು ರಂಡೆಯಾಳುವಳೇ ?'** ಎಂದು ಸರ್ವಜ್ಞಮೂರ್ತಿಯು ಕೇಳಿಲ್ಲವೇ ? ಹೇಡಿಗಳಿಗೆ ಆತ್ಮಸಾಕ್ಷಾತ್ಕಾರವಿಲ್ಲ. ನಾಯಮಾತ್ಮಾ ಬಲಹೀನೇನ ಲಭ್ಯಃ Fearlessness is the first step towards non-violence. ಅಹಿಂಸಾಪಥದಲ್ಲಿ ಅಭಯವೇ ಮೊದಲನೆಯ ಹೆಜ್ಜೆ.

Swaraj is the abandonment of the fear of death ಸಾವಿನ ಹೆದರಿಕೆಯನ್ನು ಬಿಟ್ಟುಬಿಡುವದೆ ಸ್ವರಾಜ್ಯ. ಹೇಡಿತನ, ಹೆದರಬಡಕತನಗಳೇ ನಮ್ಮ ಪರಾಧೀನತೆಗೆ ಕಾರಣ. ಅಭಯನಾದವನೆ ಅಹಿಂಸೆಯನ್ನಾಚರಿಸುವನು. ಅಹಿಂಸೆಯಿಂದ ಸತ್ಯದರ್ಶನವಾಗುವದು. ಸತ್ಯದರ್ಶನದಿಂದಲೇ ಮುಕ್ತಿ. ಆದರೆ ಬ್ರಹ್ಮಚರ್ಯವಿಲ್ಲದವನಿಗೆ ಅಭಯವು ಸಾಧ್ಯವಿಲ್ಲ. ನಿಜವಾದ ಬ್ರಹ್ಮಚರ್ಯವಿಲ್ಲದೆ ಸತ್ಯದರ್ಶನವೂ ಅಸಂಭವ, ಅಹಿಂಸಾಚರಣೆಯೂ ಅಸಂಭವ.

ಜಗತ್ತಿನ ಸೇವೆಮಾಡತಕ್ಕವನು ಬಡತನವನ್ನು ಅಪ್ಪಿಕೊಳ್ಳಬೇಕಾಗುವದು. ತನಗೆ ಬೇಕಾಗುವ ವಸ್ತುಗಳಿಗಿಂತ ಹೆಚ್ಚು ವಸ್ತುಗಳನ್ನು ಸಂಗ್ರಹಿಸುವದು ಕೂಡ ತಪ್ಪು. ಬಡವರ ದುಃಖ ತಿಳಿಯಬೇಕಾದರೆ ಬಡತನದ ಜೀವನದನುಭವ ಬೇಕು. ದೇಹದ ಬಡತನವೂ ದುಡ್ಡಿನ ಬಡತನವೂ ತಪಸ್ವಿಯ ಸಂಪತ್ತಿ. ದೇಹವು ಧರ್ಮದ ಆದ್ಯಸಾಧನವು. ದೇಹಶುದ್ಧಿಯಿಲ್ಲದೆ ಧರ್ಮಾನುಷ್ಠಾನವಿಲ್ಲ. ದುಡ್ಡು ಮನಸ್ಸನ್ನು ಕೆಡಿಸುವದು. ವೈಭವದೊಡನೆ ವಿಷಯಲೋಲುಪತೆ ಬರುವದು. ಅತಿ ದಾರಿದ್ರ್ಯವು ವಿಘಾತಕವು. ವೈಭವಲಾಲಸೆಯು ಅದಕ್ಕೂ ಹೆಚ್ಚು ವಿಘಾತಕ. ಆದಕಾರಣ ಆಹಾರವಿಹಾರದಲ್ಲಿ ಯುಕ್ತನಾಗಿರುವದು ಅತ್ಯಗತ್ಯ; ಅಪರಿಗ್ರಹವು ವ್ರತವಾಗಬೇಕು.

ಅನಾಸಕ್ತಿಯೇ ಇವೆಲ್ಲಕ್ಕೂ ನೆಲೆ. ಆಸಕ್ತಿಯಲ್ಲಿ ಎಲ್ಲ ಬಂಧನದ ಮೂಲವಿದೆ. ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಜೀವಕ್ಕೆ ಅನಾಸಕ್ತಿಯ ಸಂಸ್ಕಾರವು ದೃಢವಾಗುವದು. ಆದರೆ ಜಪದಿಂದಲೂ (ಗಾಂಧಿಯವರು ' ರಾಮ' ನಾಮ ಜಪವನ್ನು ಮಾಡುತ್ತಿರಬೇಕು ಎಂದು ಹೇಳಲು ಸಾಕಷ್ಟು ಪ್ರಮಾಣಗಳಿವೆ) ಈಶಪ್ರಾರ್ಥನೆಯಿಂದಲೂ ಈಶಕೃಪೆಯನ್ನೂ ಕರ್ಮಶಕ್ತಿಯನ್ನೂ ಪಡೆಯಬೇಕು. ಭಕ್ತನಲ್ಲಿ ಸ್ವಪ್ರಯತ್ನವು ಬೇಕು. ಪ್ರಯತ್ನದ ಜೊತೆಗೆ ಪ್ರಾರ್ಥನೆ ಬೇಕು. ಸೇವಕನಲ್ಲಿಯೂ ಭಕ್ತನಲ್ಲಿಯೂ ನಮ್ರತೆಯು ಅಗತ್ಯ. God himself seeks for his seat the heart of him who serves his fellowmen. ನಮ್ರತೆಯಿಂದ ಪ್ರಾರ್ಥನೆಯ ಜೊತೆಯಲ್ಲಿ, ಜಪಮಾಡುತ್ತ ಅನಾಸಕ್ತನಾಗಿ, ' ನೈವ ಕಿಂಚಿತ್ ಕರೋಮಿ' ನಾನೇನೂ ಮಾಡುತ್ತಿಲ್ಲ ಅವನೇ ಎಲ್ಲವನ್ನು ಮಾಡಿಸುತ್ತಿರುವನು ಎಂಬ ಭಾವನೆಯಿಂದಲೂ ಶ್ರದ್ಧೆಯಿಂದಲೂ ಮಾಡಿದ ಕರ್ಮವೇ ಯುಕ್ತಕರ್ಮವೆನಿಸಿಕೊಳ್ಳುವದು. ಮುಮುಕ್ಷುವು ಇಂಥ ಕರ್ಮವನ್ನೆ ಮಾಡಬೇಕು.

ಯುಕ್ತಕರ್ಮಗಳ ಲಕ್ಷಣಗಳು ನಾಲ್ಕು. ಅವು **ಶುದ್ಧವಾದ ನಿಃಸ್ವಾರ್ಥಬುದ್ಧಿಯಿಂದ ಪ್ರೇರಿತವಾಗಿರಬೇಕು.** ಪ್ರಸಂಗದ ಒತ್ತಾಯದಿಂದ ಸ್ವೀಕೃತವಾಗಿರದೆ ' ಕರ್ತವ್ಯಕ್ಕಾಗಿ ಕರ್ತವ್ಯ'ವೆಂಬಂತೆ **ಸ್ವಯಂಪ್ರೇರಣೆಯ ಸೇವಾಬುದ್ಧಿಯಿಂದ** ಕೈಕೊಳ್ಳಲ್ಪಟ್ಟದ್ದೆ ಯುಕ್ತಕರ್ಮ. **ಸಾಧನದಲ್ಲಿ ಅವು ನಿರ್ದುಷ್ಟವಾದವುಗಳೂ ನಿಷ್ಪಾಪವಾದವುಗಳೂ ಆಗಿರಬೇಕು. ಪರಿಣಾಮದಲ್ಲಿ ಅವು ಕಲ್ಯಾಣಕಾರಕಗಳಾಗಿರಬೇಕು.** ಇವುಗಳಲ್ಲಿ ಒಂದೊಂದು

ಲಕ್ಷಣವು ಕೊರತೆಯಾದಲ್ಲಿ ಅಷ್ಟಷ್ಟು ದೋಷಯುಕ್ತವಾದುದು ಆ ಕರ್ಮವು ಎಂದು ತಿಳಿಯಬೇಕು. 'The morality of an action depends ultimately on the nature of the motives.' ' No actiou which is not voluntary can be called moral' ' As the means so the end' ' The end can not justify the means'

ವಿವೇಕವು ಹೇಳಿದಂತೆ ಎಲ್ಲರೂ ಆಚರಿಸಬೇಬೇಕು. ' The voice of conscience is the voice of God ' ಯಮನಿಯಮಾದಿಗಳಂತೆ ನಿಗ್ರಹದಿಂದ ನಡೆದವನಲ್ಲಿ ವಿವೇಕೋತ್ಪತ್ತಿಯಾಗುವದು. ಆದರೆ ಪರಮತ ಸಹಿಷ್ಣುತೆಯು ಬೇಕೇಬೇಕು. ಇಲ್ಲದಿದ್ದರೆ ಜ್ಞಾನಮದವು ಜಗತ್ಕಲ್ಯಾಣಕ್ಕೆ ಬಾಧಕವಾಗುವದು.

೪

'My life is henceforth is dedicated to the attainment of Swaraj for India' ಇಂದಿನಿಂದ ಭಾರತಕ್ಕೆ ಸ್ವರಾಜ್ಯವನ್ನು ದೊರಕಿಸಲು ನನ್ನ ಜೀವನವು ಅರ್ಪಿತವಾಗಿದೆ ಎಂದು ೧೯೦೮ರಲ್ಲಿಯೆ ಲೋಕಕ್ಕೆ ಸಾರಿದರು. ಗಾಂಧಿಯವರ ಸ್ವರಾಜ್ಯವು ಕೆಲವೊಂದು ವರ್ಗದವರ ಸ್ವರಾಜ್ಯವಲ್ಲ. ನಿಜವಾಗಿ ಪ್ರಜೆಗಳ ರಾಜ್ಯವು. ಆದಕಾರಣ ಪ್ರಜೆಗಳಿಗೆ ಆ ಆ ಕಾಲಕ್ಕೆ ಬೇಕಾಗುವ ರಾಜ್ಯವೇ ಸ್ವರಾಜ್ಯ ಎಂದು ಅವರು ಹೇಳಿರುವರು; Swaraj is the freedom to err and the responisibilty to correct ತಪ್ಪುಮಾಡುವ ಸ್ವಾತಂತ್ರ್ಯವು ಮತ್ತು ಅದನ್ನು ತಿದ್ದಿಕೊಳ್ಳುವ ಜವಾಬುದಾರಿಯು ಸ್ವರಾಜ್ಯ ಎಂದೂ ಹೇಳಿರುವರು; Real home rule is self control. ಸ್ವಾವಲಂಬನದ ಸ್ವಾಧೀನತೆಯೇ ಸ್ವರಾಜ್ಯವೆಂದೂ ನುಡಿದಿರುವರು.

' I would rather see India freed by voilence than chained to slavery by the violence of her oppressors' ಪ್ರಜಾಕಂಟಕರ ಹಿಂಸೆಗೊಳಗಾಗಿ ದಾಸಾನುದಾಸರಾಗಿ ಜನರು ಕೊಳೆಯುವದಕ್ಕಿಂತ ಹಿಂಸೆಯಿಂದ ಹಿಂದುಸ್ಥಾನವು ಸ್ವತಂತ್ರವಾದರೂ ಅಡ್ಡಿ ಇಲ್ಲ. ಆದರೆ Violence can never free India. ಹಿಂಸೆಯಿಂದ ಹಿಂದುಸ್ಥಾನಕ್ಕೆ ಮುಕ್ತಿಯಿಲ್ಲ.

My life is dedicated to the service of India through the religion of non-violence which I believe to be the root of Hinduism. ಹಿಂದೂ ಧರ್ಮದ ಬೀಜವಾತ್ಮವಾದ ಅಹಿಂಸಾಧರ್ಮದಿಂದಲೇ ಹಿಂದುಸ್ಥಾನದ ಸೇವೆಯನ್ನು ಮಾಡಲು ಮಹಾತ್ಮರ ಜೀವನವು ಮುಡುಪಾಗಿದೆ. ಸ್ವದೇಶಿಯ ವ್ರತವನ್ನು ಸ್ವೀಕರಿಸದೆ ಸ್ವರಾಜ್ಯ ದೊರೆಯದು. ಭೌತಿಕ ಸುಖಪ್ರಧಾನವಾದ ಅರ್ವಾಚೀನ ಪಾಶ್ಚಾತ್ಯನಾಗರಿಕತೆಯ ಮೋಹವನ್ನು ನಾವು ಬಿಡದೆ ಸ್ವದೇಶೀವ್ರತವು ಅನುಷ್ಠಾನಕ್ಕೆ ಬರಲಾರದು. ಅದಿಲ್ಲದೆ ಜನರಲ್ಲಿ ಒಕ್ಕಟ್ಟು, ಸ್ವಾವಲಂಬನ, ಸ್ವಾಧೀನತೆ, ಪ್ರೇಮ ಉಂಟಾಗಲಾರವು. ಇವಿಲ್ಲದೆ ಅಹಿಂಸೆ ಇಲ್ಲ.

ಈ ಮಾತುಗಳಿಗೆ ಮೊದಲಿನ ಸತ್ಯ, ಬ್ರಹ್ಮಚರ್ಯ, ಅಪರಿಗ್ರಹ ಅಭಯಗಳು ಕೂಡಿದರೆ ನಮಗೆ ಸ್ವರಾಜ್ಯವು ತಾನೆ ದೊರೆಯುವದು. ಈ ತತ್ತ್ವಗಳನ್ನನುಷ್ಠಾನಕ್ಕೆ ತಂದ ಒಬ್ಬ ಮನುಷ್ಯನು ರಾಜ್ಯಸಾಮ್ರಾಜ್ಯಗಳನ್ನು ಬುಡಮೇಲು ಮಾಡಬಹುದು, ಜನಾಂಗವೇ ಸಿದ್ಧವಾದ ಮೇಲೆ ಕೇಳುವದೇನು ? ಗಾಂಧಿಯವರ ಮನೋರಾಜ್ಯದಲ್ಲಿ ಅಹಿಂಸಾತ್ಮಕ ಭಾರತವಿದೆ. ಅದರಿಂದ ಜಗತ್ತಿನ ಸೇವಾಕಲ್ಯಾಣವಾಗುವದೆಂಬುದು ಅವರ ಜೀವದಾಸೆ. ಇದೇ ಗಾಂಧಿಯವರ ಸತ್ಯಾಗ್ರಹದ ಹಾದಿ. ' ಕರ್ಮ ನಮ್ಮದು ಫಲವೀಯುವದು ಅವನದು. '

೫

ಕವೀಂದ್ರ ರವಿಂದ್ರರೊಡನೆ ನಾವೂ ಪ್ರಾರ್ಥಿಸುವ:-

Let me know that all pain and death are shadows of the moment.

ಸಾವು ನೋವುಗಳು ಕ್ಷಣಿಕವಾದ ಛಾಯೆಗಳೆಂದು ನನಗೆ ಅರಿವುಂಟಾಗಲಿ.

Give me the supreme courage of love, that is my prayer, ' the courage to speak, to do, suffer at thy will, to leave all or be left alone.

ನಿನ್ನ ಇಚ್ಛೆಯಂತೆ ಕಷ್ಟಸಹಿಸುವ, ಎಲ್ಲರನ್ನೂ ಬಿಡುವ ಅಥವಾ ಅವರಿಂದ ಬಿಡಲ್ಪಡುವ—ಆದರೂ ಆಡುವ ಮಾಡುವ ಆ ಅಹಿಂಸಾಬಲವನ್ನು ನನಗೆ ನೀಡು, ಇದೇ ನನ್ನ ಪ್ರಾರ್ಥನೆ

# ಕೊಡಗಿನ ಮಹಿಳೆಯರು

ಬರೆದವರು—ಕುಮಾರಿ ಪದ್ಮಾವತಿ, ಕನ್ಯಾಗುರುಕುಲ, ದೆಹರಾದೂನ್

ಕೊಡಗಿನ ಮಹಿಳೆಯರಲ್ಲಿ ಪ್ರಾಥಮಿಕ ವಿದ್ಯೆಯು ಹೆಚ್ಚಾಗಿರುವುದರಿಂದ, ಸ್ತ್ರೀಯರು ಎಲ್ಲ ವಿಧದಿಂದಲೂ ಮುಂದಕ್ಕೆ ಬರುತ್ತಾ ಇದ್ದಾರೆಂದು ಹೇಳಬೇಕಾಗಿದೆ. ಬಾಲಿಕಾ ಪಾಠಶಾಲೆಗಳು ಅನೇಕವಿರುವುದರಿಂದಲೂ, ಹುಡುಗರೊಡನೆ ವಿದ್ಯೆ ಕಲಿಯಲು, ಕೊಡಗರ ಸ್ತ್ರೀಯರಿಗೆ ಯಾವ ನಿರ್ಬಂಧ ವಿಲ್ಲದಿರುವುದರಿಂದಲೂ, ಸ್ತ್ರೀಯರು ವಿದ್ಯೆಯಲ್ಲಿ ಮುಂದಕ್ಕೆ ಬರುತ್ತಲೇ ಇದ್ದಾರೆ. ಶೇಕಡ ೭೫ರಷ್ಟು ಬಾಲಿಕೆಯರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಹೊಂದುತ್ತಲೇ ಇದ್ದಾರೆ. ಈಗಾಗಲೇ ಅನೇಕ ಬಾಲಿಕೆಯರು ಕಾಲೇಜುಗಳಲ್ಲಿ ವಿದ್ಯಾವ್ಯಾಸಂಗ ಮಾಡುತ್ತಿದ್ದಾರೆ.

ಕೊಡಗಿನ ಸ್ತ್ರೀಯರು ಭರತವರ್ಷದ ಇತರ ಹಿಂದೂಲಲನೆಯರಂತೆ, ಕಾಲಕ್ಕೆ ಸರಿಯಿಲ್ಲದ ಯಾವ ವಿಧವಾದ ಕಟ್ಟುಕಟ್ಟಳೆಯ ನಿರ್ಬಂಧಕ್ಕೆ ಒಳಪಟ್ಟಿರುವುದಿಲ್ಲ. ಅವರಲ್ಲಿ ಬಾಲ್ಯ ವಿವಾಹವೆಂಬುದರ ಗಂಧವೇ ಇಲ್ಲ, ಮತ್ತು ವಿಧವಾವಿವಾಹಕ್ಕೆ ಅಡ್ಡಿಯೇನೂ ಇರುವುದಿಲ್ಲ. ಸ್ತ್ರೀಯರಿಗೆ ಮದುವೆ ಇಲ್ಲದೇನೇ ಇದ್ದು ದೇಶಕ್ಕೆ ಯಾ ತನ್ನ ಕುಟುಂಬಕ್ಕೆ ಕೆಲಸಮಾಡಲು ಯಾವ ಅಡ್ಡಿಯೂ ಇರುವುದಿಲ್ಲ. ಇದರಿಂದ ನಿರ್ಭಯವಾಗಿ ಸಂಸಾರದ ಯಾವ ಭಾಗದಲ್ಲಾದರೂ, ದೇಶಕಲ್ಯಾಣದ ಕೆಲಸವನ್ನು ಮಾಡಲು ಹೆದರುವುದಿಲ್ಲ.

ಸ್ತ್ರೀಯರುಗಳಲ್ಲಿ ಮೊದಲು ಬಿ. ಎ. ಡಿಗ್ರಿ ಪಡೆದವರು, ಶ್ರೀಮತಿ ಕೋದಂಡ ಬೊಳ್ಳಮ್ಮನವರು. ಇವರು ಪೂನಾದ ಸೇವಾಸಮಾಜದಲ್ಲಿಯೂ, ಇತರ ರಾಷ್ಟ್ರೀಯ ಶಾಲೆಗಳಲ್ಲಿಯೂ ಕೆಲಸಮಾಡಿ, ಈಗ ಅಲಹಾಬಾದಿನ ಕ್ರಾಸ್ತ್‌ವೇಟ್ ಕಾಲೇಜಿನ ಪ್ರಿನ್ಸಿಪಾಲರಾಗಿರುವರು. ಮತ್ತು ಇವರ ನಾಲ್ಕುಜನ ಸಹೋದರಿಯರೂ ಕಾಲೇಜು ವಿದ್ಯಾವ್ಯಾಸಂಗವನ್ನು ಪೂರೈಸಿದ್ದು ಒಬ್ಬಳು ಮದ್ರಾಸಿನ ಮೆಡಿಕಲ್ ಕಾಲೇಜಿನಲ್ಲಿ ಯಂ. ಬಿ. ಬಿ. ಯಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವಳು. ಅಲ್ಲದೆ ಇವರೆಲ್ಲರು ಖಾದಿವಸ್ತ್ರಧಾರಿಣಿಯಾಗಿರುವರು.

ಇವರಂತೆಯೇ ಮೆ. ಕೊಂಗಂಡ ಅಪ್ಪಯ್ಯನವರ ಪುತ್ರಿ ಶ್ರೀಮತಿ ಅಕ್ಕಮ್ಮನವರೂ ದೆಹಲಿಯ ಯಂ. ಬಿ. ಪರೀಕ್ಷೆಯಲ್ಲಿ ಮೊದಲನೇದಾಗಿ ಉತ್ತೀರ್ಣಹೊಂದಿ, ಈಗ ಮೈಸೂರು ಮಹಾರಾಜರವರ, ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಅಸಿಸ್ಟೆಂಟ್ ಸರ್ಜನರಾಗಿ, ಬಹಳ ಉಪಯೋಗಕರವಾದ ಕೆಲಸಮಾಡುತ್ತಲಿರುವರು. ಇವರ ಸಹೋದರಿಯೊಬ್ಬಳು ಕಾಲೇಜಿನಲ್ಲಿ ಓದುತ್ತಾ ಈಗಾಗಲೇ ಬಿ. ಎ. ಪಾಸಾಗಲಿಕ್ಕಿರುವಳು; ಇದೇ ಪ್ರಕಾರ ಶ್ರೀಮತೀ ಕೋದಂಡ ಸೀತಮ್ಮನವರೂ, ಪಾಂಡಿರ ಡಾಕ್ಟರ್ ಬೆಳ್ಯಪ್ಪನವರ ಮಕ್ಕಳೂ ಮತ್ತು ಅನೇಕ ಹುಡುಗಿಯರೂ ವಿದ್ಯಾವ್ಯಾಸಂಗದಲ್ಲಿದ್ದಾರೆ. ಶ್ರೀಮತೀ ನೆರವಂಡ ಪೊಂನಮ್ಮನವರೂ ಬಿ. ಎ. ಆಗಿ ಈಗ ಎಲ್. ಡಿ. ಪರೀಕ್ಷೆಗೆ ಹೋಗಿರುವರು. ಈಗಾಗಲೇ ಈ ಸಣ್ಣ ಜನಾಂಗವಾದ ಒಟ್ಟಾರೆ ೩೫೦೦೦ ಜನಾಂಗವುಳ್ಳ ಕೊಡಗರಲ್ಲಿ ಕನಿಷ್ಟಪಕ್ಷ ೫೦ಕ್ಕಿಂತ ಹೆಚ್ಚಾಗಿ ಬಾಲಿಕೆಯರು ಕಾಲೇಜಿನಲ್ಲಿ ಓದುತ್ತಿರುವರು.

ಆದರೆ ಈ ಮಹಿಳೆಯರೊಳಗೆ ಒಬ್ಬಿಬ್ಬರ ವಿನಾ ಯಾರೂ ತನ್ನ ವಿದ್ಯೆಯನ್ನು ರಾಷ್ಟ್ರಸೇವೆಗೆ ಉಪಯೋಗಿಸಿದಂತೆ ತೋರ್ಪಡುವುದಿಲ್ಲ. ಹೀಗೆ ಕಾಲೇಜುಗಳಲ್ಲಿ ಓದುತ್ತಿದ್ದರೂ ಕ್ರಿಶ್ಚನ್ ಪಾದ್ರಿಗಳಿಂದ ಸಿಗುವ ಕಾನ್‌ವೆಂಟಿನ ವಿದ್ಯಾಭ್ಯಾಸದ ದೆಸೆಯಿಂದ ಬಾಲಿಕೆಯರ ಸ್ಥಿತಿಯು ವಿಪರೀತವಾಗಿರುವುದು. ಎಲ್ಲಿ ನೋಡಿದರೂ, ಹೆಚ್ಚಾಗಿ ಪಾಶ್ಚಿಮಾತ್ಯರ ಕಪಟ ಆಡಂಬರಗಳಿಗೂ ಪೋಷಾಕುಗಳಿಗೂ ಮರುಳಾಗಿ, ತಂದೆತಾಯಿಗಳಿಗೆ ಕಷ್ಟಕಾಲದಲ್ಲಿ ಬಂಧುಬಾಂಧವರೋಪಾದಿಯಲ್ಲಿ ಸಹಾಯಕರಾಗುವುದರ ಬದಲು, ಒಂದು ತರದ ಹೊರೆಯಾಗುವುದಲ್ಲದೆ, ತನಗೆ ಲೆವೆಂಡರ್ ಬೇಕೆಂದೂ ವಿಲಾಯತಿ ಅಮೂಲ್ಯ ಸೀರೆಗಳು ಬೇಕೆಂದೂ ಲೇಡೀಸ್ ಶೂ ಬೇಕೆಂದೂ ತನ್ನ ನೆರಮನೆಯ ಹುಡುಗಿಯ ಹತ್ತಿರ ಈ ಎಲ್ಲಾ ವಸ್ತುಗಳು ಇವೆಯೆಂದೂ ಪೀಡಿಸಲು ತೊಡಗುವರು. ಕೆಲವರಂತೂ ತನ್ನ ಮಾತೃಭಾಷೆಯನ್ನು ಕಸತಿಪ್ಪೆಯಲ್ಲಿ ಎಸೆದು ಬಿಟ್ಟಿದ್ದಾರೆ. ಮತ್ತು ತಾವು ನಿಜವಾಗಿಯೂ ಪಾಶ್ಚಿಮಾತ್ಯರಾಗಿ ಬಿಟ್ಟೆವೆಂದು ಕುಣಿಯುವವರೂ ಇದ್ದಾರೆ. ಬಹಳವಾಗಿ ಪುರುಷರಿಗಿಂತ ಸ್ತ್ರೀಯರೇ ಇಂಗ್ಲೀಷರ ಆಡಂಬರಗಳನ್ನು ಅನುಸರಿಸಿದ್ದಾರೆ. ತಿಂಗಳಿಗೆ ಹದಿನೈದು ರೂಪಾಯಿ ಸಿಕ್ಕುವ ಒಬ್ಬ ಕಾನ್‌ಸ್ಟೇಬಲನ ಹೆಂಡತಿಯೂ, ಶ್ರೀಮಂತನ ಪತ್ನಿಯಂತೆ ತೋರ್ಪಡಿಸಲು ಬೇಕಾ

ದಷ್ಟು ಪತಿಯನ್ನು ಪೀಡಿಸಿ ಆಭರಣಗಳನ್ನು ಮಾಡಿಸಿಕೊಳ್ಳುವಳು. ಪತಿಯು ಇದಕ್ಕೆ ಏನಾದರೂ ವಿರೋಧಿಸಿದರೆ ತನ್ನನ್ನು ವಿವಾಹವೇಕೆ ಮಾಡಿಕೊಂಡೆಯೆಂದು ನಿಂದಿಸುವಳು. ಖಾದಿ ವಸ್ತ್ರವಂತೂ ನಮ್ಮ ಕೊಡಗುನಾಡಿನ ಮಹಿಳೆಯರಿಗೆ ವಿಷಪ್ರಾಯವಾಗಿ ತೋರುವದು. ಕೆಲವು ರಮಣಿಯರ ಪತಿಗಳು ಖಾದಿವಸ್ತ್ರಧಾರಣೆಮಾಡಿದರೂ, ತಾವು ಉಡುವುದಕ್ಕೆ ತಯ್ಯಾರಾಗುವುದಿಲ್ಲ. ವಿದ್ಯಾವಂತರಾದ ರಮಣಿಯರಿಗಿಂತ ಅವಿದ್ಯಾವತಿಯರಾದ ಎಂದರೆ ಮಾತೃಭಾಷೆಯಾದ ಕನ್ನಡವನ್ನು ತಿಳಿದ ಲಲನೆಯರು ಸಾವಿರಪಾಲು ಮೇಲಾಗಿದ್ದಾರೆ. ಯಾಕಂದರೆ ವಿದ್ಯಾವಂತ ಮಹಿಳೆಯರು ಈಶ್ವರಪ್ರಾರ್ಥನೆಯನ್ನು ಮರೆತುಬಿಟ್ಟು, ಪಾಶ್ಚಿಮಾತ್ಯರಂತೆ ಕ್ರೈಸ್ತನನ್ನು ಆರಾಧಿಸಲು ತೊಡಗಿರುವರು. ಕೊಡಗಿನ ಕೆಲವು ತಂದೆತಾಯಿಗಳಿಗೆ ತನ್ನ ಮಕ್ಕಳ ಈ ತರದ ನಟನೆಯು ಬಹಳ ಪ್ರಿಯವಾಗಿರುತ್ತೆ. ಈ ಕಾನ್‌ವೆಂಟ್ ವಿದ್ಯೆಯ ಪರಿಣಾಮವು ಇನ್ನು ಕೆಲವು ವರ್ಷಗಳಲ್ಲಿ ಕೊಡಗಿನ ಮಹನೀಯರಿಗೂ, ಮಹಿಳೆಯರಿಗೂ ತಿಳಿಯುವುದು.

ಈ ವಿದ್ಯೆಯ ದೆಸೆಯಿಂದ ನಮ್ಮ ಮುಂದಿನ ಜನಾಂಗವೇ ಮತಿಗೆಟ್ಟು ತನ್ನ ಇರುವಿಕೆಯನ್ನು (existeuce) ಮರೆತು ತಾನು ಹಿಂದುವೂ ಅಲ್ಲ ಕ್ರೈಸ್ತನೂ ಅಲ್ಲ ಎಂಬುವಲ್ಲಿಗೆ ಬಂದು ಚಿಟ್ಟೆಯಂತೆ ಆಗುವ ಸಂಭವವು ಬರುತ್ತದೆಯೆಂಬುದನ್ನು ಮರೆಯದಿರಲಿ.

ಕೊಡಗಿನ ಸ್ತ್ರೀಯರಲ್ಲಿ ಶ್ರೀಮತೀ ಕೋಡಂದೇರ ಸೀತವ್ವನವರು ಬಹಳ ಮುಂಪಕ್ಕೆ ಬಂದಿದವರಾಗಿದ್ದಾರೆ. ಇವರು ಕೇವಲ ಶ್ರೀಮಂತರಿದ್ದು ಪಾಶ್ಚಿಮಾತ್ಯ ದೇಶಗಳನ್ನು ತಿರುಗಿದವರಾಗಿದ್ದಾರೆ. ಕಷ್ಟಕಾಲದಲ್ಲಿ ಬಡವರಿಗೆ ಸಹಾಯಮಾಡುವರು. ಗರ್ಭಿಣೀ ಶಿಶುಸಂರಕ್ಷಣೆಯ ವಿಷಯದಲ್ಲಿ ರೆಡ್‌ಕ್ರಾಸ ಸಂಘದಲ್ಲಿ ಕೆಲಸಮಾಡುವುದರಲ್ಲಿ ಬಹಳ ಆಸಕ್ತಿಯನ್ನು ತೋರಿಸಿರುತ್ತಾರೆ. ಸರಕಾರದವರೂ ಸಹ ಇವರಿಗೆ ಈಗಾಗಲೇ ಕೇಸರೀ ಹಿಂದ್ ಮೆಡಲನ್ನು ಕೊಟ್ಟಿರುತ್ತಾರೆ. ಪ್ರತ್ಯಕ್ಷ ರಾಷ್ಟ್ರೀಯತ್ವವು ಇವರಲ್ಲಿ ಕಡಿಮೆ. ಇವರು ಶ್ರೀಮಂತರ ಗರ್ಭದಲ್ಲಿ ಹುಟ್ಟಿರುವುದರಿಂದಲೂ, ಇವರನ್ನು ಇವರ ಮಾತಾಪಿತೃಗಳು ಈ ರೀತಿಯ ತರಬೇತುಮಾಡಿದುದರಿಂದಲೂ, ಹೀಗೆ ಪಾಶ್ಚಿಮಾತ್ಯರ ನವನಾಗರಿಕತೆಯಲ್ಲಿಯೇ ಇವರಿಗೆ ಹೆಚ್ಚು ಆಸಕ್ತಿ. ನಮ್ಮ ಕೊಡಗುದೇಶದ ಪುಣ್ಯದಿಂದ ಇಂಥಾ ತಾಯಿಗಳು ದೇಶ ಕಲ್ಯಾಣಕ್ಕಾಗಿ ಅಂದರೆ ನಮ್ಮ ಭಾರತ ಮಾತೆಯ ಜ್ಯೇಷ್ಠಪುತ್ರ ಹಿಂದುಸ್ಥಾನದ ಹೃದಯಸಮ್ರಾಟರಾದ ಮಹಾತ್ಮಗಾಂಧಿಯವರ ತತ್ವವನ್ನು ಅವಲಂಬಿಸಿ ಕೆಲಸಮಾಡಲು ಮುಂದುವರಿಯುವ ದಿವಸವೇ ಕೊಡಗಿನಲ್ಲಿ ನಮ್ಮ ಪುಣ್ಯದ ದಿನ. ನಮ್ಮ ಕೊಡಗು ದೇಶದ ಬಂಧುಭಗಿನಿಯರು ಪಾರತಂತ್ರ್ಯವೆಂಬ ರಾಕ್ಷಸಿಯನ್ನು ನಾಶಗೊಳಿಸಿ ಸ್ವಾತಂತ್ರ್ಯವೆಂಬ ದೇವಿಯನ್ನು ಸ್ಥಾಪಿಸುವುದಕ್ಕೆ ತಮ್ಮಿಂದಾದಷ್ಟು ಸೇವೆಮಾಡುವುದಕ್ಕೆ ಎಂದು ಸಿದ್ಧರಾಗುವರೋ ಆ ದಿನವೇ ಹತಭಾಗ್ಯವಾದ ಕೊಡಗಿನ ಸುದಿನವು. ನಮ್ಮ ಕೊಡಗಿನ ಮಹಿಳೆಯರು ಭಾರತವರ್ಷದ ಇತರ ಪ್ರಾಂತ್ಯದ ಮಹಿಳೆಯರಂತೆ ಸತ್ಯಾಗ್ರಹ ಇವೇ ಮೊದಲಾದವುಗಳಲ್ಲಿ ಭಾಗ ತೆಗೆದುಕೊಂಡು ದೇಶವು ದೇಶದ್ರೋಹಿಗಳಿಂದ ತುಂಬದಂತೆ ಎಂದು ಮಾಡುವರೋ ಅಂದು ನಮ್ಮ ಕೊಡಗು ಮಾತೆಯು ಪವಿತ್ರಳಾಗುವಳು. ಏನು ಅಂಥಾ ಪುಣ್ಯದಿನವು ನಮ್ಮ ಕೊಡಗಿನಲ್ಲಿ ಹುಟ್ಟುವುದೆ? ಮತ್ತು ನಮ್ಮ ಲಲನೆಯರಲ್ಲಿ ಜಾಗೃತಿಯು ಭಾವವು ಉದ್ಭವಿಸುವುದೆ?

---

## ಏನಿದ್ದರೇನು !!!

(ಇಂಗ್ಲೀಷದಿಂದ ಭಾಷಾಂತರಿಸಿದ್ದು)

ಕೃಷ್ಣ ಕುಮಾರ ಕಲ್ಲೂರ

ಬದುಕಿ ಇದ್ದರೆಯೇನು ಮತ್ತೆ ಸತ್ತರೆಯೇನು
ಯಾವ ಲೋಕಗಳಲ್ಲಿ ಅಲೆದರೇನು
ನಾನು ಎಂದಿಗು ನಿನ್ನ ಬಳಿಯೆ ಸಾರುತಲಿರುವೆ
ನೀನೆ ನನ್ನೆಡೆಯಲ್ಲಿ ಸುಳಿಯುತಿರುವೆ.

ಯಾರ ಹುಚ್ಚೇನಿರಲಿ ; ಜಾಣರಾದೆವು ನಾವು
ಜಗದ ಸೀಮಾರೇಷೆಯನ್ನು ದಾಟಿ
ನನ್ನ ಆತ್ಮದ ಕಳೆಯ ನಿನ್ನ ಕಂಣಲಿ ಕಂಡೆ
ನೀ ನಿನ್ನ ಕಳೆಯ ನನ್ನಲ್ಲಿ ಅರಿತೆ.

—Mary Coleridge.

# ಬಸವಂಣನ ಭಕ್ತಿ

( ಆಯ್ಕೆಗಾರ :—ಮಧುರಚೆನ್ನ )

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ ಅಂಬಾ ಎಂದು ಕರೆವುತ್ತಲಿದ್ದೇನೆ । ಅಂಬಾ ಅಂಬಾ ಎಂದು ಒರಲುತ್ತಲಿದ್ದೇನೆ । ಸಮುದ್ರದೊಳಗಣ ಸಿಂಪಿನಂತೆ ಬಾಯ ಬಿಡುತ್ತಲಿದ್ದೇನಯ್ಯಾ । ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ । ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ । ಓ ಎನ್ನಲಾಗದೇ ಅಯ್ಯಾ । ಆವಾಗಳೂ ನಿಮ್ಮ ಕರೆವುತ್ತಲಿದ್ದೇನೆ । ಓ ಎನ್ನದೆ ಮೌನವೇ ದೇವಾ । ಯಾತಕ್ಕೆ ನಿಮ್ಮ ದೇವರೆಂದರಿದೆನು । ನೀವೆನ್ನನರಿಯಿರಲ್ಲಾ । ನಾ ನಿಮ್ಮ ನೆನೆವೆನು ನೀವೆನ್ನ ನರಿಯಿರಿ । ನಾ ನಿಮ್ಮನೋಲೈಸುವೆ ನೀವೆನ್ನ ಕಾಣಿರಿ । ನಾನೆಂತು ಬದಕುವೆನು ನಾನೆಂತು ಜೀವಿಸುವೆನಯ್ಯಾ । ನೀವೆ ಪ್ರಾಣಗತಿಮತಿಗಳೆನಗೆ ನೋಡಯ್ಯಾ । ತಂದೆತಾಯಿ ನೀನು ಬಂಧುಬಳಗ ನೀನು । ಎನಗೆ ನೀನಲ್ಲದೆ ಮತ್ತಾರು ಇಲ್ಲವಯ್ಯಾ । ಹಾಲಲ್ಲೆದ್ದು ನೀರಲ್ಲೆದ್ದು । ಅಕಟಕಟ ನಿನಗಿನಿತು ಕರುಣವಿಲ್ಲ । ಅಕಟಕಟ ನಿನಗಿನಿತು ಕೃಪೆಯಿಲ್ಲ । ಯಾಕೆ ಹುಟ್ಟಿಸಿದಿ ಇಹಲೋಕಬಾಹಿರನ । ಯಾಕೆ ಹುಟ್ಟಿಸಿದಿ ಪರಲೋಕದೂರನ । ಯಾಕೆ ಹುಟ್ಟಿಸಿದಿ ಎನಗಾಗಿ ಮತ್ತೊಂದು ತರುಮರಾದಿಗಳಿದ್ದಿಲ್ಲವೇ ॥



ಅಯ್ಯಾ ನಿಮ್ಮನು ದೇವರೆಂದು ನಂಬಿ ಪೂಜಿಸಲಾಗದಯ್ಯಾ । ಯೋನಜ ರೋಮಜ ಮಹಾ ಮುನಿಗಳ ಲಯವ ಮಾಡಿದುದ ನಾ ಬಲ್ಲೆನಾಗಿ । ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ । ಅನಂತ ಕೋಟಿ ಬ್ರಹ್ಮರಿಗೆ ಪ್ರಳಯವ ಮಾಡಿದುದ ನಾ ಬಲ್ಲೆನಾಗಿ । ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ನವಕೋಟಿನಾರಾಯಣರಿಗೆ ಮರಣವ ಮಾಡಿದುದ ನಾ ಬಲ್ಲೆನಾಗಿ । ಅಯ್ಯಾ ನಿಮ್ಮ ದೇವರೆಂದು ನಂಬಿ ಭಜಿಸಲಾಗದಯ್ಯಾ ಬಹುಕೋಟಿರುದ್ರರಿಗೆ ಲಯವ ಮಾಡಿದುದ ನಾ ಬಲ್ಲೆನಾಗಿ । ದೇವನೊಳ್ಳಿದನೆಂದು ಹಿಗ್ಗಬೇಡೆಲೆ ಮನವೆ । ತರಕಟ ಕಾಡಿದನೊಳ್ಳಿದನೆ । ಅಳಿಸುವ ನಗಿಸುವನೊಳ್ಳಿದನೇ ॥

ಭಕ್ತಿಯೆಂಬುದ ಮಾಡಬಾರದಯ್ಯ ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊರೆವುದು । ಘಟಸರ್ಪನಲ್ಲಿ ಕೈದುಡುಕಿದರೆ ಹಿಡಿವುದು ಮಾಬುದೆ । ಭಕ್ತಿ ಬಾಳ ಬಾಯಿ ಧಾರೆ ಕಾಣಯ್ಯಾ ॥

ಮುನ್ನ ಮಾಡಿದ ಪಾಪ ಬೆನ್ನು ಬಿಡದನ್ನಕ್ಕ ಇನ್ನು ಬಯಸಿದರುಂಟೆ । ಭಕ್ತಿಯುಳ್ಳವರ ಬಯಸಿದರುಂಟೆ । ದೇವರಲ್ಲಿ ಮುನ್ನ ವರವ ಹಡೆಯದನ್ನಕ್ಕರ । ಲೇಸಕಂಡು ಮನದಲ್ಲಿ ಬಯಸಿ ಆಸೆ ಮಾಡಿದಡಿಲ್ಲ ಕಂಡಯ್ಯಾ । ತಾಳಮರಕ್ಕೆ ಕಯ್ಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯಾ । ನೀನೀವ ಕಾಲಕ್ಕಲ್ಲದೆ ಇಲ್ಲ ಕಂಡಯ್ಯ । ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದರೆ ತಪ್ಪದು ನೋಡಯ್ಯಾ । ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ । ಎಂಬ ಶ್ರುತಿವಚನ ತಪ್ಪದು ನೋಡಯ್ಯಾ । ಅನುಭವಕ್ಷ್ಯನಿ ಕರ್ಮಾಣಿ ಕಲ್ಪಯುತಶತೈರಪಿ ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ । ಎಂದುದಾಗಿ ಕರ್ಮವಶವಾಗಿ ನಡೆಸುವು । ನಡೆದರೆಯೂ ದೇವ ನಿನ್ನ ಭಕ್ತಿಯ ಬಿಡಲಾರೆನಯ್ಯಾ ॥

ನಾದಪ್ರಿಯನೆಂಬರು ನಾದಪ್ರಿಯನಲ್ಲ । ವೇದಪ್ರಿಯನೆಂಬರು

ವೇದಪ್ರಿಯನಲ್ಲ। ಭಕ್ತಿಪ್ರಿಯನು। ಭಕ್ತಿಲಂಪಟನು। ದೇವ ನೀನು ಭಕ್ತಿಕಂಪಿತನಯ್ಯಾ। ಅಯ್ಯಾ ಭಕ್ತಿ ಎಂತಹದಯ್ಯಾ ದಾಸಯ್ಯ ಮಾಡಿದಂಥಾದ್ದಯ್ಯಾ। ಭಕ್ತಿ ಎಂತಹದಯ್ಯಾ ಸಿರಿಯಾಳ ಮಾಡಿದಂಥಾದ್ದಯ್ಯಾ। ಭಕ್ತಿ ಎಂತಹದಯ್ಯಾ। ಸಿಂಧು ಬಲ್ಲಾಳ ಮಾಡಿದಂಥಾದ್ದಯ್ಯಾ। ಭಕ್ತಿ ಎಂಥಾದ್ದಯ್ಯಾ ದೇವಾ ನೀನು ಬಾಣನ ಬಾಗಿಲ ಕಾದಂಥಾದ್ದಯ್ಯಾ। ಮಾತಿನ ಮಾಲೆಯಲ್ಲಿಪ್ಪುದೇ ಭಕ್ತಿ। ಮಾಡಿ ತನು ಸವೆಯದನ್ನಕ್ಕರ ಮನ ಸವೆಯದನ್ನಕ್ಕರ ಧನ ಸವೆಯದನ್ನಕ್ಕರ ಅಪ್ಪುದೆ ಭಕ್ತಿ। ಆಡಿದರೇನು ಹಾಡಿದರೇನು ಓದಿದರೇನು ತ್ರಿವಿಧದಾಸೋಹವಿಲ್ಲದನ್ನಕ್ಕರ। ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಳಿ। ಲೌಕಿಕರ ಕಂಡು ಆಡುವೆ ಹಾಡುವೆ। ತಾರ್ಕಿಕರ ಕಂಡು ಆಡುವೆ ಹಾಡುವೆ। ಸಹಜಗುಣವೆನ್ನಲ್ಲಿಲ್ಲವಯ್ಯಾ। ನಿಜಭಕ್ತಿ ಎನಗಿಲ್ಲ ತಂದೇ। ಏಕೋಭಾವ ಎನಗುಳ್ಳರೆ ಯಾಕೆ ನೀ ಕರುಣಿಸೆಯಯ್ಯಾ। ಭಕ್ತಿಯೆಳ್ಳನಿತಿಲ್ಲ ಯುಕ್ತಿಶೂನ್ಯನಯ್ಯ ನಾನು। ತನುವಂಚಕ ಮನವಂಚಕ ಧನವಂಚಕನಾನಯ್ಯಾ। ಎನ್ನಲ್ಲಿ ನಿನ್ನ ಮೇಲಣ ಭಕ್ತಿ ಸಾಸಿವೆಯ ಷಡ್ಭಾಗದನಿತಿಲ್ಲ। ಎನ್ನ ಭಕ್ತನೆಂಬರು। ನಾನಾವ ಪಾಪವ ಮಾಡಿದೆನೋ। ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ। ಆನು ಭಕ್ತನೆಂತೆಂಬೆನು ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ। ಆನು ಭಕ್ತನೆಂಬ ನುಡಿ ಸುಡದೇ ದೇವಾ। ಸ್ಥಾವರ ಜಂಗಮ ಒಂದೇ ಎಂದು ಇದಿರು ನುಡಿದು ನಾನೆಡಹುತಿಪ್ಪೆ। ಸಹಜನಲ್ಲಯ್ಯ, ನಾನು ಸಮ್ಯಕ್ಕನಲ್ಲಯ್ಯಾ। ಈ ನುಡಿದ ನುಡಿ ಸುಡದಿಹುದೇ ತಂದೇ ॥

ತ್ರಿವಿಧತ್ರಿವಿಧದಲ್ಲಿ ತಪ್ಪುಕ ನಾನಯ್ಯ। ಒಮ್ಮಿಂಗೆ ಕರುಣಿಸಯ್ಯ ಒಮ್ಮಿಂಗೆ ಕರುಣಿಸಯ್ಯಾ। ಇದನರಿತು ಇನ್ನು ತಪ್ಪಿದೆನಾದರೆ ನೀವು ಮಾಡಿತ್ತೆ ಸಲುವುದು। ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ। ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ। ವೇರು ಗುಣವನರಸುವದೆ ಕಾಗೆಯಲ್ಲಿ। ಪರುಷ ಗುಣವನರಸುವದೇ ಕಬ್ಬುನದಲ್ಲಿ। ಸಾಧು ಗುಣವನರಸುವನೆ ಅವಗುಣಿಯಲ್ಲಿ। ಚಂದನ ಗುಣವನರಸುವದೆ ತರುಗಳಲ್ಲಿ। ಸರ್ವಗುಣಸಂಪನ್ನಾ ನೀವೆನ್ನಲ್ಲಿ ಅವಗುಣವನರಸುವುದೇ। ಅಪ್ರತಿಮ ಮಹಿಮಾ ನಾನು ನಿಮಗೆ ಪ್ರತಿಯೇ ಅಯ್ಯಾ। ಹಗೆಯಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೇ। ಕೋಳದ ಮೇಲೆ ಸಂಕೋಲೆಯನಿಕ್ಕುವರೇ। ಬೆಂದ ಹುಣ್ಣ ಕಂಬಿಯಲಿ ಕೀಸುವರೇ। ನೀ ಕಾಡುವ ಕಾಡ ಸಿರಿಯಾಳಂಗಲ್ಲದೆ ಸೈರಿಸಬಲ್ಲವೇ। ಕರುಣಿಸು ಕರುಣಿಸೆನಗೆ ॥

ಬ್ರಹ್ಮಪದವಿಯನೊಲ್ಲೆ। ವಿಷ್ಣುಪದವಿಯನೊಲ್ಲೆ। ನಾನು ಮತ್ತಾವ ಪದವಿಯನೊಲ್ಲೆನಯ್ಯಾ। ನಿಮ್ಮ ಸದ್ಭಕ್ತರ ಪಾದವ ನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ। ದಾಸನುತ್ತ ತವನಿಧಿಯ ಬೇಡುವನಲ್ಲ। ಚೋಳನಂತೆ ಹೊನ್ನಮಳೆಯ ಕ ಸೆಂಬವನಲ್ಲ। ಅಂಜದಿರು ಅಂಜದಿರು ಅವರಂಥವನಾನಲ್ಲ। ಎನ್ನ ತಂದೆ। ಸದ್ಭಕ್ತಿಯನೆ ಕರುಣಿಸೆನಗೆ। ಮರಮರ ಮಥನದಿಂ ಅಗ್ನಿ ಹುಟ್ಟಿ ಆ ಮರನೆಲ್ಲವ ಸುಡದಿಪ್ಪುದೇ ಅಯ್ಯಾ। ಮಹಾನು ಭಾವರ ಮಥನದಿಂದ ಜ್ಞಾನಾಗ್ನಿ ಹುಟ್ಟಿ ಎನ್ನ ತನುಗುಣವೆಲ್ಲವ ಸುಡದಿಪ್ಪುದೇ ಅಯ್ಯ। ಇದುಕಾರಣ ಮಹಾನುಭಾವಿಗಳ ತೋರಿ ಬದುಕಿಸಯ್ಯಾ। ಚಂಚಲವಿಲ್ಲದ ಭಕ್ತಿ ವಂಚನೆಯಿಲ್ಲದ ಮಹಂತರ ತೋರಾ। ಇಂತಪ್ಪವರ ತೋರಿ ಬದುಕಿಸಯ್ಯಾ ಅಯ್ಯಾ ನಿಮ್ಮ ಶರಣರ ಪಾದಕ್ಕೆನ್ನನು ಚಮ್ಮಾವುಗೆಯ ಮಾಡಯ್ಯಾ। ಕರ್ಮಾವಲಂಬನಂ ಕೇಚಿತ್। ಕೇಚಿತ್ ಜ್ಞಾನಾವಲಂಬನಂ। ವಯಂ ತು ತವಭಕ್ತಾನಾಂ। ಪಾದುಕಸ್ಯಾವಲಂಬನಮ್। ಎಂಬುದಾಗಿ ದೇವಾ ನಿಮ್ಮ ಶರಗೊಡ್ಡಿ ಬೇಡುವದೊಂದೇ ವರವ ಕರುಣಿಸಯ್ಯಾ ॥

ಅಯ್ಯಾ ನಿಮ್ಮ ಶರಣರನು ಮರ್ತ್ಯಲೋಕಕ್ಕೆ ತಂದೆಯಾ ನೆನೆನೆನೆದು ಸುಖಿಯಾಗಿ ನಾನು ಬದುಕಿದೆನಯ್ಯಾ। ಅವರನರಸು ಕಾರಣ ತಂದೆಯೊಂದರಿದೆನಯ್ಯಾ। ಎನ್ನ ಕಾರಣ ತಂದೆಯೊಂ ರಿದೆನಯ್ಯಾ। ಅರಿದರಿದು ನಿಮ್ಮ ಶರಣರಾಚರಿಸುವ ಆಚರಣೆಯ ಕಂಡು ಕಣ್ದೆಗೆದೆನಯ್ಯಾ। ದೇವಾ ನಿನ್ನ ಚಿಂತೆ ನಿನ್ನ ಜ್ಞಾನವಿಲ್ಲದ ಮನುಜರು ಶಗಣಿಯಲಿ ಸಾವಿರ ಹುಳ ಹುಟ್ಟವೇ ದೇವಾ। ಕಾಡ ಮೃಗ ಒಂದಾಗಿ ಇರವೇ ದೇವಾ। ಕಾಡ ಮೃಗ ಒಂದಾಗಿ ಇರವೇ ದೇವಾ। ಸತ್ಯಶರಣರಿಲ್ಲದವರ ವನವಾಸ ನರವಿಂಧ್ಯ ಕಾಣಿರಣ್ಣಾ। ಭಕ್ತಿಯಿಲ್ಲದ ಬಡವ ನಾನಯ್ಯಾ। ಡೋಹರ ಕಕ್ಕಯ್ಯನ ಮನೆಯಲ್ಲು ಬೇಡಿದೆ। ಮಾದರ ಚೆನ್ನಯ್ಯನ ದಾಸಯ್ಯನ ಮನೆಯಲ್ಲು ಬೇಡಿದೆ। ಮಾದರ ಚೆನ್ನಯ್ಯನ ಮನೆಯಲ್ಲು ಬೇಡಿದೆ। ಎಲ್ಲ ಪುರಾತನರು ನೆರೆದು ಭಕ್ತಿಭಿಕ್ಷೆ ನೀಡಿದರೆ ಎನ್ನ ಪಾತ್ರೆ ತುಂಬಿತ್ತಯ್ಯಾ ॥

ಹೊಲಬುಗೆಟ್ಟ ಶಿಶುವು ತನ್ನ ತಾಯ ಬಯಸುವಂತೆ। ಬಚ್ಚಿದಪ್ಪಿದ ಕರು ತನ್ನ ಹಿಂಡನರಸುವಂತೆ। ಬಯಸುತಿರ್ದೆನಯ್ಯ ನಿಮ್ಮ ಶರಣರ ಬರವನು। ದಿನಕರನುದಯಕ್ಕೆ ಕಮಲ ವಿಕಸಿತನಾದಂತೆ ಎನಗೆ ನಿಮ್ಮ ಶರಣರ ಬರವು ನೋಡಾ।

ಸೂರ್ಯನುದಯು ತಾವರೆಗೆ ಜೀವಾಳ । ಚಂದ್ರನುದಯು ನೈದಿಲೆಗೆ ಜೀವಾಳ । ಕೂಪರ ಠಾವಿನಲ್ಲಿ ಕೂಟ ಜೀವಾಳ । ಒಲಿದ ಠಾವಿನಲ್ಲಿ ನೋಟ ಜೀವಾಳ । ನಿಮ್ಮ ಶರಣರ ಬರವೆನಗೆ ಜೀವದ ಜೀವಾಳವಯ್ಯಾ । ಸಾಸಿವೆಯು ಮೇಲೆ ಸಾಗರ ಹರಿದಂತಾಯಿತ್ತಯ್ಯಾ । ಆನಂದದಿಂದ ನಲಿನಲಿದಾಡುವೆನಯ್ಯಾ । ಆನಂದದಿಂದ ಕುಣಿಕುಣಿದಾಡುವೆನಯ್ಯಾ । ನಿಮ್ಮ ಶರಣರು ಬಂದರೆ ಹರುಷದೊಳು ಓಲಾಡುವೆನಯ್ಯಾ । ಕಂಡರೆ ಮನೋಹರವಯ್ಯ ಕಾಣದಿದ್ದರೆ ಅವಸ್ಥೆ ನೋಡಯ್ಯಾ । ಹಗಲು ಇರುಳಹುದು ಇರುಳು ಹಗಲಹುದು । ನಿಮ್ಮ ಶರಣರನಗಲುವ ಧಾವತಿಯಿಂದ ಮರಣವೇ ಕರಲೇಸು ಕಂಡಯ್ಯಾ । ಬಂದಿಹೆನೆಂದು ಬಾರದೆ ಇರ್ದರೆ ಬಟ್ಟೆಗಳ ನೋಡುತ್ತಲಿರ್ದೆನಯ್ಯಾ । ಇನ್ನಾರನಟ್ಟುವೆ ಇನ್ನಾರನಟ್ಟುವೆ । ಇನ್ನಾರ ಪಾದವ ಹಿಡಿವೆನಯ್ಯಾ । ನಿನ್ನ ಶರಣರು ಬಾರದೆ ಇದ್ದರೆ ಅಟ್ಟುವೆನೆನ್ನ ಪ್ರಾಣವನು । ಗಿಳಿಯ ಪಂಜರವನಿಕ್ಕಿ, ಸೊಡರಿಂಗೆಣ್ಣೆಯ ನೆರೆದು, ಬತ್ತಿಯನಿಕ್ಕಿ ಬರವ ಹಾರುತ್ತಿದ್ದೆನೇಗವ್ವ । ತರಗೆಲೆ ಗಿರಕೆಂದಡೆ ಹೊರಗೆ ನಾನಾಲಿಸುವೆ । ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲಗವ್ವಾ । ಶರಣರು ಬಂದು ಬಾಗಿಲ ಮುಂದೆ ನಿಂದಿಹರೆಂದರೆ ಸಂತಸಬಟ್ಟೆನೆಲಗವ್ವಾ । ಅಡವಿಯಲ್ಲೊಬ್ಬ ಕಡು ನೀರಡಿಸಿ ಕಡೆಯಲ್ಲಿ ನೀರ ಕಂಡಂತೆ ಆಯಿತ್ತಯ್ಯಾ । ಕುರುಡ ಕಣ್ಣ ಹಡೆದಂತೆ । ಬಡವ ನಿಧಾನವ ಹಡೆದಂತೆ । ಆಯಿತ್ತಯ್ಯಾ । ನಿಮ್ಮ ಶರಣರ ಬರವೆನ್ನ ಪ್ರಾಣ ಕಂಡಯ್ಯಾ । ಎಡದ ಕೈಯ್ಯಲ್ಲು ಹಾಲ ಬಟ್ಟಲು । ಬಲದ ಕೈಯ್ಯಲ್ಲಿ ಓಜು ಗಟ್ಟಿಗೆ । ಆವಾಗ ಬಂದಾನೋ ನಮ್ಮಯ್ಯ ಹಾಲು ಕುಡಿಸುವ ತಂದೆ ಭಕ್ತಿಪಥವ ತಾನೆ ತೋರಿಸುವ ತಂದೆ । ಭಕ್ತಿರತಿಯ ವಿಕಲತೆಯ ಯುಕ್ತಿಯನೇನು ಬೆಸಗೊಂಬಿರಯ್ಯಾ । ಕಾಮಿಗೆ ಉಂಟೆ ಲಜ್ಜೆನಾಚಿಕೆ । ಕಾಮಿಗೆ ಉಂಟೆ ಮಾನಾಪಮಾನ ಶರಣರಿಗೊಲಿದ ಮರುಳಳನಿಗೇನು ಬೆಸಗೊಂಬಿರಯ್ಯಾ ।

ಕಣ್ಣಕೂಪಕ್ಕೆ ಮುಂದರಿಯದೆ ನುಡಿದು ಮನಮೆಚ್ಚಿ ಮರುಳಾದೆ ನೋಡವ್ವಾ । ಕೇಳು ಕೇಳವ್ವಾ ಕೆಳದೀ । ಸಖಿಯರಿಲ್ಲದೆ ಸುಖವ ಬಯಸಿವರೆ ದೊರೆಕೊಂಬುವುದೆ ಹೇಳಾ । ಎನ್ನ ಮುನಿಸು ಎನ್ನಲ್ಲೇ ಅಡಗಿತ್ತು । ಇನ್ನಾರೆ ಬಾರೈ ಬಾಯಿ ತೆರೆವೆ ಸರಸ ಚಿಂತೆ ಎನಗೇಕವ್ವಾ । ನಮ್ಮ ಚಿಂತೆ ನಮಗೆ ಸಾಲದೇ । ನಮ್ಮ ನಗೆಮೊಗದರಸ ನಮಗೆ ಒಲಿದಾನೋ ಒಲಿಯನೋ ಎಂಬ ಚಿಂತೆ ಹಾಸಲುಂಟು ಮೇಲೆ ಹೊದಿಯಲುಂಟು ನೋಡೇ ಕೆಳದೀ ।

ಪಶ್ಚಿಮಪದ್ಮಾಸನದಲ್ಲಿ ಕುಳಿತು । ನಿಟ್ಟೆಲುವ ಮುರಿದು । ಕುಟಿ ಮಿಡುಕದೆ । ಅಟ್ಟೆ ಆಡಿತಲ್ಲಾ । ಬಿಟ್ಟ ಕಣ್ಣು ಬಿಗಿದ ಹುಬ್ಬು ಬ್ರಹ್ಮರಂಧ್ರದಲ್ಲಿ ಗುಡಿಯ ಕಟ್ಟಲು ಹಿಡಿವಡೆದ ದೇವ। ಪೃಥ್ವಿಸ್ವಾಪ್ಯೇಜವಾಯ್ವಾಕಾಶನಿರಂಜನದೇವಾ ನಿಮ್ಮ ಮಹಿಮೆಯು ಪ್ರಣವರೂಪಂಗಲ್ಲದೆ ಕಾಣಬಾರದಾರಿಗೆಯೂ । ಜ್ಞಾನಜ್ಯೋತಿಯ ಧ್ಯಾನದಿಂದ ನಾಳಶುದ್ಧನಾಗಿ ಆರಾಧಿಸಿ ಕಂಡೆ ದೇವದೇವನ । ಬೆಳಗಿನೊಳಗಿನ ಮಹಾಬೆಳಗು । ದೇವದೇವ ಪರಮಾಶ್ರಯುವೇ ತಾನಾಗಿ । ಶತಪತ್ರಕಮಲಕರ್ಣಿಕಾಮಧ್ಯದಲ್ಲಿ ಸ್ವತಃ ಸಿದ್ಧನಾಗಿರ್ಪನಲ್ಲಾ । ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದನಯ್ಯಾ । ದೇವನೆಂಬ ಮಹಾಬೆಳಗಿನೊಳಿರ್ದು ಶಬ್ದಮುಗ್ಧನಾದುದನೇನೆಂಬಿನಯ್ಯಾ ॥

ಉದಕದೊಳಗೆ ಬಚ್ಚಿಟ್ಟ ಬಯಕೆಯು ಕಿಚ್ಚಿನಂತೆ ಇದ್ದಿತ್ತು । ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು । ನನೆಯೊಳಗಣ ಪರಿಮಳದಂತೆ ಇದ್ದಿತ್ತು । ದೇವದೇವನ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು । ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ । ಸುಳಿಯಲಿಲ್ಲ ಸುಳಿದು ಶೃಂಗಾರವ ಮಾಡಲಿಲ್ಲ । ತನ್ನೊಳಗೇ ಎನ್ನ ಬಚ್ಚಿಟ್ಟನಾಗಿ । ಎಲೆ ಗಂಡು ಗೂಸೇ ನೀ ಕೇಳಾ ನಿನಗೊಬ್ಬಗೆಂದುಟ್ಟೆ ಗಂಡುಡಿಗೆಯನು । ಒಮ್ಮೆ ನಾನು ಗಂಡಪ್ಪೆನಯ್ಯಾ । ಒಮ್ಮೆ ನಾನು ಹೆಣ್ಣಪ್ಪೆನಯ್ಯಾ । ನಿಮ್ಮಡಿಗೆ ವೀರನಪ್ಪೆನಯ್ಯಾ । ನಿಮ್ಮ ಶರಣರಿಗೆ ವಧುವಪ್ಪೆನಯ್ಯಾ ॥

ಅಯ್ಯಾ ನಿಮ್ಮ ಅನುಭಾವದಿಂದೆನ್ನ ತನುವು ಹಾಳಾಯಿತ್ತು । ಅಯ್ಯಾ ನಿಮ್ಮ ಅನುಭಾವದಿಂದೆನ್ನ ಮನವು ಹಾಳಾಯಿತ್ತು । ಅಯ್ಯಾ ನಿಮ್ಮ ಅನುಭಾವದಿಂದೆನ್ನ ಧನ ಹಾಳಾಯಿತ್ತು । ಅಯ್ಯಾ ನಿಮ್ಮ ಅನುಭಾವದಿಂದೆನ್ನ ಕರ್ಮ ಛೇದನವಾಯಿತ್ತು । ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿಯೆಂಬ ಒಡವೆಯನು ದಿಟಮಾಡಿ ತೋರಿದ ಕಾರಣ । ಇನ್ನು ನೀನಿರಿಸಿದ ಮನದಲ್ಲಿ ನಾನಂಜೆನಯ್ಯಾ ಮನವು ಮಹಾಘನಕ್ಕೆ ಶರಣುಹೊಕ್ಕುದಾಗಿ । ಅಯ್ಯಾ ನೀನಿರಿಸಿದ ಧನದಲ್ಲಿ ನಾನಂಜೆನಯ್ಯಾ ಧನದೊಡೆಯ ಜಗದೊಡೆಯ ನೀನಿರುವೆಯಾಗಿ । ಅಯ್ಯಾ ನೀನಿರಿಸಿದ ತನುವಿನಲ್ಲಿ ನಾನಂಜೆನಯ್ಯಾ ತನುಸರ್ವಾರ್ಪಿತವಾದಲ್ಲಿ ನಿಯತ ಪ್ರಸಾದಭೋಗೋಪಭೋಗಿಯಾಗಿ । ಇದುಕಾರಣ ವೀರ ಧೀರಸಮಗ್ರನಾಗಿ ಮನದ ಮೊನೆಯ ಮೇಲೆ ಮನೆಮಾಡಿ ಕೊಂಡಿಪ್ಪ ನಿಮಗೆ ನಾನಂಜೆನಯ್ಯಾ ॥

ಉಂಬುವ ಬಟ್ಟಲು ಬೇರೆ ಕಂಚಲ್ಲ । ನೋಡುವ ದರ್ಪಣ ಬೇರೆ ಕಂಚಲ್ಲ । ಭಾಂಡಭಾಜನ ಒಂದೇ । ಬೆಳಗೆ ಕನ್ನಡಿಯೆನಿಸಿತ್ತಯ್ಯಾ । ಅರಿದರೆ ಶರಣ ಮರೆದರೆ ಮಾನವ । ಅಧ್ಯರ ವಚನ ಪರುಷ ಕಂಡಯ್ಯಾ । ನಂಬಿಯೊಡನೆ ನೀ ವಿಜಯ ಕಂಡಯ್ಯಾ । ಅಧರಕ್ಕೆ ಕಹಿ ಉದರಕ್ಕೆ ಸಿಹಿ । ಕೂಡಲಸಂಗನ ಶರಣರ ವಚನ ಬೇವು ಸವಿದಂತೆ ಕಾಣಿರಂಣಾ ॥

# ನಮ್ಮ ರಂಗಭೂಮಿಯ ಉತ್ಪತ್ತಿಯೂ ಬೆಳವಣಿಗೆಯೂ

ಲೇಖಕರು-- ಶ್ರೀ. ಬಿ. ಎಚ್. ಗಲಗಲಿ ಬಿ. ಎ. ಧಾರವಾಡ

त्रैगुण्योद्भवमत्र लोकचरितं नानारसं दृश्यते ।
नाट्यं भिन्नरुचेर्जनस्य बहुधाप्येकं समाराधनम् ॥

— कालिदासः

ನಾನಾ ರಸಗಳಿಂದೊಡಗೂಡಿದ ಈ ತ್ರಿಗುಣಾತ್ಮಕ ಲೋಕವ್ಯವಹಾರವನ್ನು ಪ್ರತಿಬಿಂಬಿಸಿ ಅವರಿಂದ ಪ್ರಪಂಚದ ಭಿನ್ನರುಚಿಗಳ ಮನರಂಜನೆಯನ್ನುಂಟುಮಾಡುವ ಏಕಮಾತ್ರ ಸಾಧನವೆಂದರೆ “ ನಾಟ್ಯ ” ಅಥವಾ ನಾಟಕ ಒಂದೇ ಎಂದು, ಕವಿಕುಲಗುರು ಕಾಲಿದಾಸನು ಹೇಳಿರುವನು. ಕೇವಲ ಮನರಂಜನೆಗಾಗಿಯೇ ನಾಟಕದ ಅಸ್ತಿತ್ವವಲ್ಲ; ಲೋಕವನ್ನು ಸುಸಂಸ್ಕೃತವಾಗಿ ಮಾಡುವದೇ ಅದರ ಅಂತಿಮಧ್ಯೇಯ. ಮನರಂಜನೆಯು ಈ ಧ್ಯೇಯದ ವಿಶಿಷ್ಟ ಸಾಧನ. ಕಥೆ, ಕಾದಂಬರಿ, ಕಾವ್ಯ, ಮುಂತಾದ ಇತರ ಸಾಧನಗಳಿದ್ದರೂ, ಅವೆಲ್ಲ ಪ್ರಮುಖವಾಗಿ ಕಲಿತಜನರಿಗಷ್ಟೇ ಉಪಯುಕ್ತವಲ್ಲದೆ ನಿರಕ್ಷರಿಗಳಿಗೆ ಅವುಗಳಿಂದ ಪ್ರಯೋಜನವಿಲ್ಲ. ಆದರೆ ‘ ನಾಟಕ”ವು ಮಾತ್ರ ಎಲ್ಲರಿಂದಲೂ ಏಕಪ್ರಕಾರವಾಗಿ ಮನ್ನಿಸಲ್ಪಡುತ್ತಿರುವ ಮಾತು, ಪ್ರತಿರಾತ್ರಿಯಲ್ಲಿ ನಾಟಕಗೃಹ (Theatre) ವನ್ನು ಸಂದರ್ಶಿಸುತ್ತಿರುವವರ ಸಂಖ್ಯೆಯಿಂದ ಮತ್ತು ಜಗದ್ವಿಖ್ಯಾತ ನಾಟಕಕಾರರಾದ ಕಾಲಿದಾಸ, ಶೆಕ್ಸಪೀಅರ್, ಇಬ್ಸೆನ್, ಬರ್ನಾರ್ಡ ಶಾ ಮುಂತಾದವರ ಲೋಕಪ್ರಿಯತೆಯಿಂದ ಸಹಜವಾಗಿ ನಿದರ್ಶನಕ್ಕೆ ಬರುವಂತಿದೆ. ಇಂಥ ಮನ್ನಣೆಯ ಮುಖ್ಯ ಕಾರಣವೆಂದರೆ, ಲೋಕವ್ಯವಹಾರ ಮತ್ತು ನಾಟಕಗಳಲ್ಲಿರತಕ್ಕ ಬಿಂಬಪ್ರತಿಬಿಂಬಭಾವವೆಂದು ಹೇಳಬಹುದು. ಮತ್ತು ಶೆಕ್ಸಪೀಅರನು ಹೇಳಿದಂತೆ ನಾಟಕದ ಮುಖ್ಯ ಉದ್ದೇಶವಾದರೂ ಇದೇ (The purpose of playing, ‘ whose end·········is, to hold as twere, the mirror up to Nature).

ಭಾರತೀಯರಾದ ನಮ್ಮ ರಂಗಭೂಮಿಯು ಇಂದುನಿನ್ನಿನದಲ್ಲ; ಅತ್ಯಂತ ಪ್ರಾಚೀನವಾದದ್ದು. ಮತ್ತು ಅನ್ಯಾನುಕೃತ (Borrowed)ವಲ್ಲ; ಶುಂಬಾಸ್ವದೇಶೀಯ(Indigenous) ವಾದದ್ದು. ಮಹಮ್ಮದೀಯರು ಈ ದೇಶವನ್ನು ಜಯಿಸಿ ಇಲ್ಲಿಯೇ ನೆಲೆಗೊಂಡರೂ ಇಲ್ಲಿ ಬರುವಾಗ್ಯೆ ಅವರು, ತಮ್ಮ ರಂಗಭೂಮಿಯನ್ನು ಸಂಗಡ ತರಲಿಲ್ಲ; ಯಾಕಂದರೆ ಅವರಲ್ಲಿ ಅದು ಇರಲೇ ಇಲ್ಲ; ನೆರೆಹೊರೆಯುವರಾದ ಇಜಿಪ್ಸಿಯನ್ಸ್, ಅರಬ, ಇರಾಣೀಯರಿಂದಲೂ ಬಂದುದಲ್ಲ. ಯಾಕಂದರೆ ಈ ಜನರಲ್ಲಿ ವಾಙ್ಮಯಸಾಹಿತ್ಯಾದಿಗಳು ಚನ್ನಾಗಿ ರೂಢವಾಗಿದ್ದರೂ, ನಾಟ್ಯಕಲೆಯನ್ನು ಇವರು ಅರಿತಿರಲಿಲ್ಲ. ಮಧ್ಯಯುಗೀನ( Medieval )ಯುರೋಪದವರಾದರೂ ಇದನ್ನು ಅರಿತವರಾಗಿದ್ದಿಲ್ಲ. ಇವರ ನಾಟ್ಯಕಲೆಯು ಮೊದಲು ಅಸ್ತಿತ್ವದಲ್ಲಿ ಬಂದದ್ದೆಂದರೆ ಕ್ರಿ. ಶ. ೧೫ ನೇ ಶತಮಾನದಲ್ಲಿ ಇವರ ರೂಪಕಾತ್ಮಕ ( Allegorieal ) ಮತ್ತು ಧಾರ್ಮಿಕ ( Religious ) ನಾಟಕಗಳಾದ “ Mystery & Morality plays” ಇವುಗಳಿಂದ. ಇಷ್ಟು ಹೊತ್ತಿಗೆ ನಮ್ಮ ರಂಗಭೂಮಿಯು ಅತ್ಯುಚ್ಚ ಸುಧಾರಣೆ ಹೊಂದಿ, ಅಷ್ಟೇ ಅವನತ ಸ್ಥಿತಿಗೆ ಬಂದಿತ್ತು.

ಇನ್ನು ನಮ್ಮ ನಾಟ್ಯಕಲೆಯ ಉತ್ಪತ್ತಿಯ ಇತಿಹಾಸವನ್ನು ಪರಿಶೀಲಿಸುವ. ಈ ವಿಷಯದಲ್ಲಿ ತಜ್ಞರು ಭಿನ್ನಭಿನ್ನ ಅಭಿಪ್ರಾಯ ಪಡುತ್ತಾರೆ. ಇವರಲ್ಲಿ ಪ್ರಾಕ್ತನ ವಿದ್ಯಾವಿಚಕ್ಷಣ (Orienta- list) ರಾದ ಕೆಲ ಪಾಶ್ಚಾತ್ಯರ(Windisch and Her- mann) ಅಭಿಪ್ರಾಯವು ಗಮನಿಸುವಂತಹದಾಗಿದೆ. ಸಾಧಾರಣವಾಗಿ ಎಲ್ಲ ಪಾಶ್ಚಾತ್ಯರು ನಮ್ಮ ಸಂಸ್ಕೃತಿ (Culture)ಯ ಮೂಲವನ್ನು ಗ್ರೀಕ ನಾಗರಿಕತೆ (Greek Civiliza- tion) ಯಲ್ಲಿ ತೋರಿಸಲು ಯತ್ನ ಮಾಡಿದ್ದಾರೆ. ಅದರಂತೆ, ಇವರಾದರೂ ನಮ್ಮ ರಂಗಭೂಮಿಯು ಏತದ್ದೇಶೀಯವಾದುದಲ್ಲವೆಂದೂ ಗ್ರೀಕರ ರಂಗಭೂಮಿ(Hellenic Stage)ಯಿಂದ ಅಧಿಷ್ಠಿತವಾದುದೆಂದೂ ಪ್ರತಿಪಾದಿಸುತ್ತಾರೆ. ಅಲೇಗ್ಝಾಂಡರನು ( ಕಿ. ಪೂ. ೩೨೬) ಈ ದೇಶಕ್ಕೆ ದಾಳಿಯಿಟ್ಟು ಸಿಂಧೂ

ನದಿಯ ದಂಡೆಗುಂಟ ಕೆಲಕಾಲ ನೆಲೆಗೊಂಡು, ಅಲ್ಲಿ ತನ್ನ ದೇಶದ ರಂಗಭೂಮಿಯನ್ನು (Altic Theatre) ಸ್ಥಾಪಿಸಿದನು. ಕನೌಜ ಉಜ್ಜಯಿನಿಗಳಲ್ಲಿ ಉದಯ ಹೊಂದಿದ ಹಿಂದೂ ರಂಗ ಭೂಮಿಯು, ಈ ಗ್ರೀಕರಿಂದ ಅನುಕೃತವಾಗಿರಲಿಕ್ಕೆಬೇಕೆಂದು ಇವರ ಆಕ್ಷೇಪ; ಆದರೆ ಇದು ನಿಜವಾದುದೆಂದು ಹೇಳಲಿಕ್ಕೆ ಇವರಲ್ಲಿ ಒಂದಾದರೂ ಪ್ರತ್ಯಕ್ಷಪ್ರಮಾಣವಿಲ್ಲ. "ಜವನಿಕಾ" "ಪಟ" ಮುಂತಾದ ಕೇವಲ ಶಬ್ದಾರ್ಥಗಳಿಂದ ಅನುಮಾನವನ್ನು ತೆಗೆಯುತ್ತಾರೆ. ಇಹಕ್ಕೆ ಪ್ರತಿಯಾಗಿ ಇವರ ಈ ಆಕ್ಷೇಪವು ತೀರ ನಿರಾಧಾರವಾದದ್ದೆಂದು ಹೇಳಲು ಸಾಕಷ್ಟು ಪ್ರಮಾಣಗಳುಂಟು. ಗ್ರೀಕರು, ಕರುಣರಸ (Pathos) ಪೂರ್ಣ ದುಃಖಾತ್ಮಕ ನಾಟಕ (Tragedy)ಗಳನ್ನು ಪ್ರೀತಿಸಿ ಅವನ್ನೆ ಹೆಚ್ಚಾಗಿ ಆಡುತ್ತಿದ್ದರು. ಆದರೆ ಹಿಂದುಗಳು ಇಂಥವುಗಳನ್ನು ಎಂದೂ ಅಭಿನಯಿಸುತ್ತಿರಲಿಲ್ಲ. ನಮ್ಮ ಇಡೀ ನಾಟ್ಯಸಾಹಿತ್ಯ (Dramatic literature) ದಲ್ಲಿ ಒಂದಾದರೂ ದುಃಖಾತ್ಮಕ ನಾಟಕವಿರುವದಿಲ್ಲ. ನಮ್ಮ ನಾಟ್ಯಶಾಸ್ತ್ರಕಾರರು ಅಂಥ ನಾಟಕಗಳನ್ನು ಅಭಿನಯಿಸಲಾಗದೆಂದು ಖಂಡಿತವಾಗಿ ಪ್ರತಿಬಂಧಿಸಿದ್ದಾರೆ ( दूराध्वानं वधं युद्धं राज्यदेशादिविप्लवं... ...प्रत्यक्षाणि न निर्दिशेत् ।। दशरूपक III 34) ಗ್ರೀಕರು ದೇಶ,ಕಾಲ,ಕ್ರಿಯೈಕ್ಯತೆ (Unity of place, time and action) ಗಳಿಂದ ಸಂಪೂರ್ಣಬದ್ಧರು. ನಮ್ಮವರು ಇಂಥ ಬಂಧನಗಳಿಂದ ಅಲಿಪ್ತರು. ಹೀಗೆ ನಮ್ಮ ರಂಗಭೂಮಿಯು ಗ್ರೀಕರಿಂದ ಬಂದುದಲ್ಲ, ಸ್ವಕೀಯವಾದದ್ದೆಂದು ಸಿದ್ಧಮಾಡಲು ಇಂಥ ಇನ್ನೂ ಕೆಲವು ಅಂತಃಪ್ರಮಾಣಗಳು(Internal evidences) ಉಂಟು. ಆದರೆ ಇಲ್ಲಿ ಇಷ್ಟುಮಾತ್ರ ಒಪ್ಪಬಹುದು: ಆ ಕಾಲದಲ್ಲಿ (ಕ್ರಿ. ಪೂ. ೩೨೬) ಅಲೇಗ್ಝಾಂಡ್ರಿಯಾ ಉಜ್ಜಯಿನಿಗಳ ನಡುವೆ ಸಾಗುತ್ತಿದ್ದ ವ್ಯಾಪಾರದಿಂದಲೂ ಮತ್ತು ಈ ದೇಶದಲ್ಲಿ ಸೇರಿಕೊಂಡಿದ್ದ ಗ್ರೀಕರ ಸಹವಾಸದಿಂದಲೂ, ನಿಕಟ ಸಂಬಂಧವುಂಟಾಗಿ ಗ್ರೀಕರ ರಂಗಭೂಮಿಯ ವರ್ಚಸ್ಸು ನಮ್ಮದರಮೇಲೆ ಕೆಲಮಟ್ಟಿಗೆ ಆಗಿ, ಅದರಿಂದ ನಮ್ಮ ನಾಟ್ಯಕಲೆಗೆ ಹೆಚ್ಚು ಉತ್ತೇಜನ ದೊರೆತಿರಬಹುದು. ಇಷ್ಟುಮಾತ್ರವಲ್ಲದೆ ಹೆಚ್ಚಿಗೆ ಸಂಬಂಧವೇನೂ ಇಲ್ಲ.

ಮತ್ತೆ ಕೆಲವರ (Pichel and Luders) ಮತವೇನೆಂದರೆ, ನಮ್ಮ ಎಲ್ಲ ನಾಟಕಗಳಲ್ಲಿ ತಪ್ಪದೆ ಬರುವ ಸೂತ್ರಧಾರನ ಪಾತ್ರದಿಂದಲೂ पुत्रिका, पाञ्चालिका ( ಎರಡಕ್ಕೂ "ಗೊಂಬೆ" ಯೆಂಬರ್ಥ ) ಎಂಬ ಶಬ್ದಗಳ ಆಧಾರದಿಂದಲೂ ನಮ್ಮ ನಾಟ್ಯಕಲೆಯು ಬಹುಕಾಲದಿಂದ ಜನರಲ್ಲಿ ರೂಢವಾಗಿದ್ದ "ಗೊಂಬೆಯ ಆಟ" (Puppet-show) ದಿಂದ ಅಸ್ತಿತ್ವಕ್ಕೆ ಬಂದು ಕ್ರಮೇಣವಾಗಿ ಸದ್ಯದ ಸ್ಥಿತಿಗೆ ಬಂದಿರಬೇಕು. ಯಾಕಂದರೆ ಗೊಂಬೆ ಆಟವು ಬಹು ಪುರಾತನ ಕಾಲದಿಂದ ಲೋಕರಂಜನೆಯ ಒಂದು ಸಾಧನವಾಗಿದ್ದು, ಅದರಲ್ಲಿ ಸೂತ್ರಧಾರನು (ಸೂತ್ರಗಳ ಸಹಾಯದಿಂದ ಗೊಂಬೆಗಳಿಂದ ಆಟವಾಡಿಸುವವ) ಮುಖ್ಯವಾಗಿರುವದು ಕಂಡುಬರುತ್ತದೆ. ಆದರೆ ಇವರ ಈ ಮತವು ಅಸಮಂಜಸವಾದದ್ದೆಂದು ಹಿಲೆಬ್ರಾಂಟ (Hillebrandt)ನು ಹೇಳಿರುವನು. ಯಾಕಂದರೆ ನಾಟಕದ ಸೂತ್ರಧಾರನಿಗೂ ಗೊಂಬೆಯ ಆಟದ ಸೂತ್ರಧಾರನಿಗೂ ಏನೂ ಸಂಬಂಧವಿಲ್ಲ. ಅವರಿಬ್ಬರ ಕಾರ್ಯಗಳು ತೀರ ಭಿನ್ನವಾಗಿರುವವು. ಅಲ್ಲದೆ, ಸಕಲರಸಗಳಿಂದ ತುಂಬಿ ತುಳುಕುವ ಲೋಕವೃತ್ತಿಯನ್ನು ಪ್ರತಿಬಿಂಬಿಸುವ ನವರಸಪೂರ್ಣ ನಾಟಕವು ನೀರಸವಾದ ಗೊಂಬೆ ಆಟದಿಂದ ಜನಿಸಿರಬೇಕೆಂದು ಹೇಳುವದೆಂದರೆ, ವಸ್ತುಸ್ಥಿತಿಯ ವಿಪರ್ಯಾಸ ಮಾಡಿದಂತಾಗುವದು. ವಿಚಾರಮಾಡಿ ನೋಡಿದರೆ ಗೊಂಬೆಯ ಆಟವೇ ನಾಟಕದಿಂದ ಜನಿಸಿರಬೇಕೆಂದು ಅನಿಸುತ್ತದೆ. ಗೊಂಬೆಯ ಆಟಗಳು ಇಂದಿಗೂ ಅಸ್ತಿತ್ವದಲ್ಲಿವೆ.

ನಾಟ್ಯದ ಉತ್ಪತ್ತಿಯ ವಿಷಯವಾಗಿ ಪುರಾಣ ಅಥವಾ ರೂಢಮತ (Traditional view) ವೇನಿರುವದೆಂಬದನ್ನು ಭರತನ ನಾಟ್ಯಶಾಸ್ತ್ರದ ಮೊದಲನೇ ಅಧ್ಯಾಯದಲ್ಲಿ ನೋಡಬಹುದು. ಅಲ್ಲಿ ವರ್ಣಿತವಾದದ್ದು ಹೇಗೆಂದರೆ: ಹಿಂದಕ್ಕೆ, ಯುಗಗಳು ಬದಲಾಗುತ್ತ ಬಂದಂತೆ ಯುಗಧರ್ಮಕ್ಕನುಗುಣವಾಗಿ ಲೋಕದಲ್ಲಿ ಅಧರ್ಮವು ತಲೆದೋರಹತ್ತಲು, ದೇವದಾನವಾದಿಗಳು ಇಂದ್ರಾಧಿಷ್ಠಿತರಾಗಿ, ಭಗವಾನ್ ಬ್ರಹ್ಮದೇವನನ್ನು ಕಂಡು ಎಲ್ಲ ವರ್ಣೀಯರಿಗೂ ಉಪಯೋಗವಾಗುವಂತೆ ಕ್ರೀಡಾರ್ಹವಾದೊಂದು ದೃಶ್ಯಶ್ರಾವ್ಯಸಾಧನವನ್ನು ಕಲ್ಪಿಸಿಕೊಡಲಿಕ್ಕೆ ಬೇಡಿಕೊಂಡರು. ಶೂದ್ರಾದಿಗಳು ವೇದಾನರ್ಹರಾದ್ದರಿಂದ, ಬ್ರಹ್ಮನು "ಯಾಕಾಗಲೊಲ್ಲದು" ಎಂದು ಹೇಳಿ ಋಗ್ವೇದದಿಂದ ನೃತ್ಯವನ್ನು, ಸಾಮವೇದದಿಂದ ಗಾನವನ್ನು, ಯಜುರ್ವೇದದಿಂದ ಅಭಿನಯವನ್ನು, ಮತ್ತು ಅಥರ್ವಣವೇದದಿಂದ ರಸಾದಿಗಳನ್ನು ತಕ್ಕೊಂಡು, ಇವುಗಳಿಂದ "ನಾಟ್ಯವೇದ"ವೆಂಬ ಐದನೇ ವೇದವನ್ನುರಚಿಸಿದನು. "ಅಮೃತಮಂಥನ" ವೆಂಬ ಮೊದಲನೇ ನಾಟಕವು "ಇಂದ್ರ ವಿಜಯ" ಸಮಾರಂಭ

ಕಾಲಕ್ಕೆ ಗಂಧರ್ವ ಅಪ್ಸರೆಯರಿಂದ ಅಭಿನಯಿಸಲ್ಪಟ್ಟಿತು. ಭೂಲೋಕದಲ್ಲಿ ನಹುಷರಾಜನಿಂದ ಮೊದಲನೆ ರಂಗಭೂಮಿಯು ನಿರ್ಮಿತವಾಯಿತೆಂದು ಹೇಳುತ್ತಾರೆ. ಇಲ್ಲಿ ತುಸು ಸೂಕ್ಷ್ಮವಾಗಿ ವಿಚಾರಿಸಿದರೆ, ನಾಟ್ಯಕಲೆಗೆ ಪ್ರಾಪ್ತವಾದ ಈ ಧಾರ್ಮಿಕ ಸ್ವರೂಪವು ನೈಜವಾದದ್ದಿರದೆ, ಕಾರಣಾಂತರದಿಂದ ಬಂದಿರಬೇಕೆಂದು ತೋರುತ್ತದೆ. ಯಾಕಂದರೆ, ಮೊದಲು ಮೊದಲು ನಾಟ್ಯಕಲೆಯು ಜನರಿಂದ ವಿಶೇಷವಾಗಿ ಮನ್ನಿಸಲ್ಪಟ್ಟಿರಲಿಲ್ಲ. ನಾಟಕವಾಡುವವರು ದುರಾಚಾರಿಗಳೆಂದು ಗಣಿಸಲ್ಪಡುತ್ತಿದ್ದರು. ಕೆಲವರು ಇವರನ್ನು ಜಾಯಾಜೀವಿ, ರೂಪಾಜೀವಿ (ಹೆಂಡತಿಯ ರೂಪದಿಂದ ಉಪಜೀವಿಸುವವ) ಎಂದು ನಿಂದಿಸುತ್ತಿದ್ದರು. ಈಗಿನ ಕಾಲದಲ್ಲಿಯಾದರೂ ನಟನರ್ತಕರಿಗೆ ಪರದೇಶಗಳಲ್ಲಿ ಇರತಕ್ಕಂತೆ ನಮ್ಮಲ್ಲಿ ಮಾನಮರ್ಯಾದೆಗಳು ಇರುವದಿಲ್ಲವೆಂಬ ಮಾತು ಎಲ್ಲರಿಗೂ ವಿದಿತವಿದೆ. ಜನರ ದೂಷಣೆಗೆ ಪಾತ್ರವಾದ ರಂಗಭೂಮಿಯು ಕಳೆಗುಂದಹತ್ತಲು ಭರತಮುನಿಯು (ಕ್ರಿ. ಶ. ೩೦೦) ಅದರಲ್ಲಿ ಆಸಕ್ತಿಯುಳ್ಳವನಾದ್ದರಿಂದ, ಅದಕ್ಕೆ ತಗಲಿದ ದೂಷಣೆಯನ್ನು ದೂರ ಮಾಡಲಿಚ್ಛಿಸಿ, ಮತ್ತು ಜನತೆಯು ಆಗಿನ ಧರ್ಮಭಾವನೆಯನ್ನು ಗುರುತಿಸಿ, ನಾಟ್ಯಕಲೆಗೆ ಈ ಪ್ರಕಾರ ಧಾರ್ಮಿಕರೂಪವನ್ನು ಕೊಟ್ಟಿರಬಹುದು.

ಹೀಗೆ ಅನೇಕರು ಅನೇಕ ವಿಧವಾಗಿ ನಮ್ಮ ರಂಗಭೂಮಿಗೆ ಆಕ್ಷೇಪಿಸುತ್ತಿರುವದಕ್ಕೆ ಮುಖ್ಯಕಾರಣವೆಂದರೆ, ಮಾನವ ಇತಿಹಾಸವು ಕೂಡ ಅರಿಯಲಸಮರ್ಥವಾದ ಅದರ ಅತ್ಯಂತ ಪುರಾತನತ್ವ ( Hoary Antiquity ) ವು, ಎಂದು ಹೇಳಬಹುದು. ಸಾಧಾರಣವಾಗಿ, ನಮ್ಮ ಸಂಸ್ಕೃತಿಯ ಜನಕ ಮತ್ತು ಪೋಷಕರಾದ ಪ್ರಾಚೀನ ಋಷಿಗಳ, ತತ್ವಜ್ಞಾನಿಗಳ, ಮತ್ತು ಕವಿವರ್ಯರ ನಿಶ್ಚಿತ ಕಾಲಮಾನವಾಗಲೀ ಅವರ ಜೀವನಚರಿತ್ರೆಯಾಗಲೀ ಎಲ್ಲಿಯೂ ನಿರ್ದಿಷ್ಟವಾಗಿಲ್ಲ. ಇದೊಂದು ನಮ್ಮ ನಾಗರಿಕತೆಯ ವೈಶಿಷ್ಟ್ಯವಾದಂತೆ ತೋರುತ್ತದೆ. ಇದಕ್ಕೆ ನಮ್ಮ ನಾಟ್ಯಕಲೆಯೇನೂ ಅಪವಾದವಾಗಿಲ್ಲ. ಆದಾಗ್ಯೂ ತಜ್ಞರಲ್ಲಿ ಅನೇಕರು ಅಭಿಪ್ರಾಯಪಡುವದೇನಂದರೆ ಮಾನವ ಸ್ವಭಾವವು ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ, ಸಾಧಾರಣ ಒಂದೇ ತರವಾಗಿರುವದುಂಟು. ಜಗತ್ತಿನ ಇತರ ಜನರಂತೆ ನಮ್ಮ ಪ್ರಾಚೀನ ಆರ್ಯರಾದರೂ, ಅವರು ಎಷ್ಟೇ ಕಾಡು ಸ್ಥಿತಿಯಲ್ಲಿರಲಿ, ಮನರಂಜನೆಯ ಸಾಧನಗಳಾದ ನೃತ್ಯಗಾನಾದಿಗಳನ್ನು ಕಲ್ಪಿಸಿಕೊಂಡಿದ್ದರು. ಹಾವಭಾವವಿಶಿಷ್ಟವಾದ ಈ ನೃತ್ಯದೊಂದಿಗೆ ಈಗಿನ "ಲಾವಣಿ" (Ballads)ಯಂಥ ಪದಗಳನ್ನು ಬೆರೆಸಿ ಅವೆರಡಕ್ಕೂ ಸರಿಹೋಗುವಂತೆ ವಾದ್ಯವನ್ನಾದರೂ (Music) ಕೂಡಿಸಿರಬೇಕು. ಬರಬರುತ್ತ ಇದು ಸಂವಾದ (Dialogue) ರೂಪದಲ್ಲಿ ಪರಿಣಮಿಸಿ ಕೊನೆಗೆ ನಾಟ್ಯರೂಪವನ್ನು ಹೊಂದಿರಬೇಕು. ಮನುಷ್ಯನು ಜನ್ಮತಃ ಒಳ್ಳೆ ಅನುಕರಣಶೀಲ ( Mimic ) ನಾದ್ದರಿಂದ ಕ್ರಮೇಣ ಸುತ್ತುಮುತ್ತಲಿನ ಪ್ರಪಂಚವನ್ನು ಅನುಕರಿಸಹತ್ತಿ ಅದರಿಂದ ತನ್ನ ವಿನೋದಸಾಧನವನ್ನು ಕಲ್ಪಿಸಿಕೊಳ್ಳಹತ್ತಿದನು.

ಹೀಗೆ ನಾಟ್ಯಕಲೆಯು ಮನುಷ್ಯನ ಅನುಕರಣಬುದ್ಧಿ (Imitative Instinct) ಯಿಂದ ಜನಿಸಿ, ಸಂವಾದಪರ ಕಥಾನಕಗಳಿಂದ ಹೊರಟು, ಕಾಲಾಂತರದಿಂದ ಸದ್ಯದ ಸ್ಥಿತಿಗೆ ಬಂದಿರಬೇಕೆಂದು ತಿಳಿಯುತ್ತಿದೆ. ಇದಕ್ಕೆ ತಕ್ಕ ಆಧಾರಗಳನ್ನು ಸಕಲಜ್ಞಾನಭಾಂಡಾರದ ತವರುಮನೆಯಾದ ವೇದಗಳಲ್ಲಿ ಕಾಣಬಹುದು. ವೇದಗಳಲ್ಲೆಲ್ಲ ಅತಿ ಪ್ರಾಚೀನವಾದ ಋಗ್ವೇದದಲ್ಲಿ ಇಂಥ ಅನೇಕ ಸಂವಾದಸೂಕ್ತಗಳು ಇವೆ. ಇವುಗಳಲ್ಲಿ ೩ನೇ ಮಂಡಲದ "ವಿಶ್ವಾಮಿತ್ರ—ನದಿಗಳ (ಸರಸ್ವತಿ–ಸುಧಾ) ಸಂವಾದವೂ, ೧೦ನೇ ಮಂಡಲದ "ಸರಮಾ-ಪಣಿಗಳ" ಸಂವಾದವೂ ಬಹಳ ಪ್ರಸಿದ್ಧವಿರುತ್ತವೆ. ಈಗಿದ್ದ ಸೂಕ್ತಗಳಲ್ಲಿ ಕೇವಲ ಪದ್ಯರೂಪದಲ್ಲಿವೆ. ಅವುಗಳ ನಡುವೆ ಅಲ್ಲಲ್ಲಿ ಇರಬೇಕಾಗಿದ್ದ ಗದ್ಯಭಾಗವೆಲ್ಲ ಕಳೆದು ಹೋದ್ದರಿಂದ ನಮಗೆ ಉಪಲಬ್ಧವಿಲ್ಲವೆಂದು ಪಂಡಿತರ ಅಭಿಪ್ರಾಯವುಂಟು. ಹೀಗೆ ನಮ್ಮ ಸಂಸ್ಕೃತಿಯ ಉಳಿದ ಅಂಗಗಳಂತೆ, ನಮ್ಮ ರಂಗಭೂಮಿಯಾದರೂ ವೇದಗಳಿಂದಲೇ ಜನಿಸಿರುವದೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ.

# ಸೊಂಪಿನ ಸಾಗರ

## ಅಂಕ ೧



ಲೇಖಕ :—ಬಿ॥ ಸದಾಶಿವಯ್ಯ

( ಮೈಸೂರ ಮಾಣಿಕ್ಯ, ಪದ್ಮ ಇತ್ಯಾದಿ ಗ್ರಂಥಗಳ ಕರ್ತ )

### ದೃಶ್ಯ ೧

( ಶ್ಯಾಮಿ, ಚಂದು-ಸಮುದ್ರದ ದಡದಲ್ಲಿ ಕುಳಿತಿರುವರು-ಸಂಜೆ )

ಶ್ಯಾಮಿ—ನೀಲಿಗಗನವು ಜಗದ ಹುಡುಗರಿಗೆ ನಿಲುಕದೆಲೆ
ಮೇಲಿರಲಿಬೇಕೆಂದು ಹಾರಿಹೋಯ್ತು.
ಇದಕೆ ಹುಡುಗರು ಮುನಿವರೆಂದರಿತ ಜಗದೊಡೆಯ
ನೆಲಕೆ, ಕಳುಹಿಸಿದನೀ ಸಾಗರವನು
ನೋಡು ! ಗಗನದ ನೀಲಿಸಾಗರದ ನೀಲಿಯನು
ಕಂಡು ಬಲು ಬೆರಗಾಗಿ ತಿಳಿದು ಹೋಯ್ತು
ನೋಟ ಸಾರುವ ವರೆಗು ಹಬ್ಬಿರುವುದೀ ಜಲಧಿ।
ಗಗನ ಬಾಗಿತು ಸುತ್ತಲಿದ ನೋಡಲು
ಗಳಿಗೆಗಳಿಗೆಗು ಗಗನ ಹೊಸಸೊಬಗ ತೋರುವುದು
ಜಲಧಿ ಕೋಪದಲೆದ್ದು ಭೋರ್ಗರೆವುದು
ಅದೊ ! ನೋಡು ಚಂದು ! ಸಂಧ್ಯಾರುಣದ ಕೆಂಬಣ್ಣ
ಗಗನದಲಿ ಜಲಧಿಯಲಿ ಥಳಥಳಿವುದು.
ಒಮ್ಮೆ ಮನ ಗಗನಕ್ಕೆ ಹಾರಬೇಕೆನ್ನುವುದು;
ಒಮ್ಮೆ ಸಾಗರದ ಹಿರಿಯಲೆಯ ನೆತ್ತಿಯನೇರಿ
ಇಳಿಯುತ್ತಲೇರುತ್ತ ತೇಲುತ್ತ ಜಾರುತ್ತಾ
ಜಲಧಿಯಾಚೆಯ ಸೇರಿ ಸಂಚರಿಸಬೇಕೆಂದು
ಕಾತುರದಿ ಉಬ್ಬುವುದು ಒಮ್ಮೆಲೇ ತಗ್ಗುವುದು.

ಚಂದು—ನಿನ್ನ ಮನದಾಶೆಗಳು ಬಯಲಬಯಕೆಗಳು
ಗಗನಕ್ಕೆ ಹಾರಿದವರಾರು ಲೋಕದಿ ಹೇಳು ?
ಚಂಡಮಾರುತನೇಳೆ ಕರಿಮುಗಿಲು ಮೇಲ್ಕವಿಯೆ
ಹಗಲೆ ರಾತ್ರಿಯದಾಗಿ ಭೀಕರದ ಅಲೆ ಅರ್ಭಟದಿ
ಬಡಿದಿಳಿದು ಹೆದರಿಸುತ ಹಡಗುಗಳ ದೋಣಿಗಳ
ಒಮ್ಮೆಲೇ ನುಂಗುವೀ ಅಲೆಗಳೊಡನಾಟವೇ ?
ನನಗೆ ಜಲಧಿಯ ನೋಡೆ ಭಯವಪ್ಪ ! ಭೂಮಿಯಲಿ
ಎಲ್ಲ ಒಂದೇ ಸಮದ ದೊಡ್ಡ ಬಯಲಾಗಿದ್ದು
ಅಲ್ಲಲ್ಲಿ ಹಣ್ಣು ಗಿಡಗಳು ಬೆಳೆದು ಹುಡುಗರನು
ಕರೆಕರೆದು ಕೊಡುವಂತೆ ನೆಲಕೆ ಬಾಗಿರಬೇಕು.

ಶ್ಯಾಮಿ—ಗಿಡ ಬೆಳೆದು ಮರವಾಗಿ ಗಗನಕೆದ್ದಿರಬೇಕು.
ಬುಡದಿಂದ ಸರಸರನೆ ಹತ್ತುತ್ತ ಮೇಲೇರಿ
ತೊಟ್ಟತುದಿಯಲಿ ಕುಳಿತು ಮೋಡಗಳ ತಳ್ಳುತ್ತ
ತಾರೆಗಳ ನೋಡುತ್ತ ಹಣ್ಣ ತಿನ್ನಲಿಬೇಕು.
ನೆಲದಿ ಮನೆಮಠಜನರು ಪುಟ್ಟ ಇರುವೆಗಳಂತೆ
ತೋರುವುದು ನೋಡುತಲಿ ಹಣ್ಣನೆಸೆಯುಲಿಬೇಕು
ಬಿರುಗಾಳಿ ತಾನೆದ್ದು ಹಿರಿಮರವ ತೂಗುತಿರೆ
ಹಾಡುತ್ತ ಕೊಂಬೆಯಲಿ ನಲಿಯಬೇಕು.

ಚಂದು—ಅಯ್ಯೊ ! ಹಾಗಲ್ಲಣ್ಣ ! ಹಣ್ಣುಗಿಡ ಮರವಾಗೆ
ಮರವನೇರುವರಾರು ? ಕಾಲುಜಾರಿದರಾಯ್ತು,
ನಿನ್ನ ಹೇಳಿಕೆಯಂತೆ ಗಿಡವು ಮರವಾದರೆ
ಅದರ ಹಣ್ಣೇ ಬೇಡ-

ಶ್ಯಾಮಿ—ಚೆನ್ನಾಯಿತು ಹಣ್ಣುಗಿಡ ಮರವಾಗೆ ಆ ಮರದ
ಹಣ್ಣು ಬೇಡವೇ ನಿನಗೆ ?

ಚಂದು—ಹಣ್ಣೆನಗೆ ಬೇಕಯ್ಯ ! ಮರಕೇರಲೊಲ್ಲೆ
ಕೆಳಗೆ ಬಟ್ಟೆಯನೊಡ್ಡೆ ಹಣ್ಣುಗಳು ತಪತಪನೆ
ಉದುರಿ ಬಟ್ಟೆಗೆ ಜೋಳಿ ಆಗ ತಿನ್ನುವೆ ನಾನು
ಮರಕೇರಿ ಕಾಲ್ಜಾರಿ ಕೆಳಕುರುಳಿ ಕಾಲ್ಮುರಿಯೆ
ಹಣ್ಣು ಕೊಡುವುದೊ ಕಾಲ ?

ಶ್ಯಾಮಿ—ಕಷ್ಟವಿಲ್ಲದೆ ನಿನಗೆ ಹಣ್ಣುಗಳು ಬೇಕೇನು ?
ನೀನು ಮನೆಯಲ್ಲಿರು-ನಾನು ಮರವನ್ನೇರಿ
ತಿನ್ನುವಷ್ಟನೆ ತಿಂದು
ನಿನಗೊಂದು ಮೂಟೆಯನು ತಂದುಕೊಡುವೆ.

ಚಂದು—ಹಾಗಲ್ಲ! ಜಗದಿ ಹಣ್ಣಿನ ಗಿಡವು ಪುಟ್ಟದಾಗಿರಬೇಕು
ಜಲಧಿ ನದಿ ಕೆರೆಯೊಂದು ಇರಕೂಡದು
ಬೆಟ್ಟಗುಡ್ಡವು ಕಾಡು ಹುಲಿಕರಡಿಸಿಂಹಗಳು

ಹಾವ್ರಚೇಳುಗಳು ಮುಳ್ಳುಗಳು ಈ ಕತ್ತಲೆಯು
ಇಂಥ ಕಂಟಕವೊಂದೂ ಇರಕೂಡದು
ಎಲ್ಲೆಲ್ಲು ಹುಲ್ಲುಗಾವಲು, ಹಣ್ಣುತೋಟಗಳು
ಅಲ್ಲಿ ನಲಿದಾಡುತಿಹ ಹುಡುಗಹುಡುಗೆಯರು–ಈ
ಮಠಗಳೆಲ್ಲವ ಮುಚ್ಚಿ ಪುಸ್ತಕವ ಕಟ್ಟಿಟ್ಟು
ಗುರುಗಳೆಲ್ಲರು ಬಂದು ಹುಡುಗರೊಡಗೂಡಿ
ಹೆದರಿಸದೆ ಬೆದರಿಸದೆ ಕೆಂಗಣ್ಣ ಬೀರದಲೆ
ನಗುತ ಹಣ್ಣನೆ ತಿಂದು ನಲಿಯುತ್ತಲಿರಬೇಕು
ಯಾವಾಗಲೂ ಚಂದ್ರ ತೊಳಗುತಿರಬೇಕು.

ಶ್ಯಾಮಿ–ಆಗಲೊಂದೇ ದಿನಕೆ ಬೇಸರಿಕೆ ನಿನಗಾಗಿ
ತರತರದ ಈ ಸೊಬಗ ಬಯಸಿ ಕಾಣದೆ ಮರುಗಿ
ಹುಚ್ಚನಂತಲೆವೆ ನಿನ್ನಾ ಬಯಲಿನಲ್ಲಿ
ಇದ ನೋಡು ಕೆಂಪು ಬಣ್ಣದ ಮೋಡ ತೇಲುತ್ತ
ಮೇಲೆಮೇಲೇರುತ್ತ ಜಾರುತಿಹುದು
ಅದ ನೋಡು ಮೂಡಲಲಿ ಆ ದೊಡ್ಡ ಕರಿಮೋಡ
ಸಾಗರದ ನಡುವಿಂದ ಏರುತಿಹುದು
ಎರಡು ಕೂಡುವುದೆಲ್ಲೊ ನೋಡೋಣ ಚಂದು
ನಾನು ಗಗನಕೆ ಹಾರಿ ಮೋಡಗಳ ಮೇಲೇರಿ
ದಿಕ್ಕುದಿಕ್ಕಿಗು ಜಾರುತಾಡಬೇಕು !

ಚಂದು–ಗಗನಕೇರಿದನ್ಯಾರು ಈ ಜಗದಲಿ ? ನಿನಗೊಂದು
ಹುಚ್ಚು !

ಶ್ಯಾಮಿ–ಕೇಳರಿಯೆಯೊ ಚಂದು ! ಹಿಂದೆ ಸೀತೆಯನರಸೆ
ಆಂಜನೇಯನು ಪರ್ವತದ ತುದಿಯನೇರಿ
ಬಾಲವನೆ ಬೀಸುತ್ತ ಮೋಡಗಳ ಕೆಳಗಿಳಿಸಿ
ಅವುಗಳನ್ನೇರುತಾಕಾಶದಲಿ ತೇಲುತ್ತ
ಸಾಗರವ ದಾಂಟಿ ಲಂಕೆಯ ಸೇರ್ದನದ ?

ಚಂದು–ಇರಬಹುದು! ಆಂಜನೇಯನು ದೇವ! ನಾವು ನರರು!
ಗಗನದಲಿ ಹಾರುವೊಡೆ ನಮಗೆ ಅಳವಲ್ಲ.

ಶ್ಯಾಮಿ–ನರರಾದರೇನು ! ಹನುಮಂತ ಗಗನದೊಳೇರಿ
ಮೋಡಗಳ ಮೇಲ್ಕುಳಿತು ತೇಲಿದರೆ ನಾನು
ಗಗನಕಿಂತಲು ಹಿರಿಮ ತಾನಾದ ಈ ಜಲಧಿ
ಮೇಲಳಿದು ಹಿರಿಯಲೆಯ ನೆತ್ತಿಯಲಿ ಕುಳಿತು
ಅಲೆಯೊಡನೆ ಏರುತ್ತಲಿಳಿಯುತ್ತ ಜಾರುತ್ತ
ಜಲಧಿಯಾ ದಡದ ನಾದವನು ಕೇಳುವೆ !

ಚಂದು–ಸಾಗರದ ರೌದ್ರವನು ನೀನರಿವ ವರೆವಿಗೂ
ನಿನ್ನನೀ ಹುಚ್ಚು ತಾ ಬಿಡಲೊಲ್ಲದು.

ಶ್ಯಾಮಿ–ರೌದ್ರವೇ? ಸಾಗರವು! ಆನಂದಸಾಗರವು !
ನಿರುತ ನಲಿಯುತ ತುಂಟಮಗುವಿನಂದದಿ ದಡವ
ನಪ್ಪಳಿಸಿ ಘರ್ಜಿಸುತ ನಾಟ್ಯವನ್ನಾಡುತ್ತ
"ಹುಡುಗರಿರಾ ! ದೋಣಿಯೊಡನೈತನ್ನಿರಿ ನೀವು
ಕೂಗುವೆನು ನಿಮ್ಮನ್ನು ಅಲೆಯ ಮೇಲಿಟ್ಟು"
ಎಂದು ತಾ ಕೂಗುತಿಹುದು !

ಚಂದು–ಹಾಗಲ್ಲ! (ನೋಡು) ಘೋರ್ಗರೆವ ಧ್ವನಿಯ (ಕೇಳು)
'ಒಡಲೊಳಗೆ ಕ್ರೂರಜೀವಿಗಳಿಹುವು ದೂರವಿರಿ,
ಲೋಕಲೋಕವನೆಲ್ಲ ಒಮ್ಮೆಲೇ ನುಂಗುವಾ
ಭೀಕರದ ಕಾಳರಾಕ್ಷಸನು ನಾ ದೂರವಿರಿ !'
ಎಂದು ಬೆದರಿಸುತ ಬುಸುಗುಟ್ಟುತ್ತ ಬಾಯಿಂದ
ನೊರೆಯ ವಿಷವಾರಿಯನು ಕಾರುತಿಹುದು

ಶ್ಯಾಮಿ–ಅಯ್ಯೋ! ಚಂದು! ಸೃಷ್ಟಿಕರ್ತ ತಾ ಲೋಕದಲಿ
ಭೀಕರದ ವಸ್ತುಗಳ ಸೃಷ್ಟಿಸಿಲ್ಲ
ನಿನ್ನ ಮನದಾ ಬಣ್ಣ ಭಯವಾಗೆ ಲೋಕದಲಿ
ಸಾಮ್ಯಮಯಸೌಂದರ್ಯ ಕಾಳರಕ್ಕಸನಂತೆ
ಗೋಚರಿಪುದು —

( ಹಿಂದಿನಿಂದ 'ಶ್ಯಾಮೀ!' )

ಶ್ಯಾಮಿ–ಅಗೋ ಅಮ್ಮ ಕೂಗುತ್ತ ಬರುತಿಹಳು ನಮ್ಮನ್ನು!
ಈ ಜಲಧಿಯೆಂತೆನಗೆ ಪ್ರೇಮಮಯಿಯಾಗಿಹುದೋ
ನಮ್ಮಮ್ಮನಿಗೆ ನಾವು ಇರುವೆವಂತು

(ಹಿಂದಿನಿಂದ " ಚಂದೂ! ")

ಹೊರಡೋಣ ಬಾ ಚಂದು
( ಎದ್ದು ಹೊರಡುತ್ತಾ ) ಎಂದಾದರೊಂದು ದಿನ
ಈ ನನ್ನ ಸಾಗರವ ಪ್ರೀತಿಸುವಿ ನೀನು !

ಚಂದು–ನಾನೊಲ್ಲೆ ! ಅಗೋ ಅಮ್ಮ ಹುಡುಕುತ್ತ ಬರುತಿಹಳು

( ಹೊರಡುವರು )–( ಪರದೆ )

## ದೃಶ್ಯ ೨

( ಗುಡಿಸಿಲಿನ ಮುಂಭಾಗದಲ್ಲಿ ನಳಿನಿಯು ಕುಳಿತು ಎರಡು ತೊಡೆಗಳ ಮೇಲೂ ಮಲಗಿರುವ ಶ್ಯಾಮಿ-ಚಂದು ಇಬ್ಬರನ್ನೂ ತಟ್ಟುತ್ತಿರುವಳು )

( ಆಕಳಿಸುವಳು )

ನಳಿನಿ–ಇಂತು ತಿರಿಯುತ್ತ ಬರುತಿದ್ದ ಮುದುಕನ ನಾಯಿ
ಹಿಂಡು ಬಿಟ್ಟೋಡಿಪುದು–ಅವನು ಮನೆ ಸೇರಿದನು
(ಆಕಳಿಸಿ) ಮುಗಿಯಿತಿಲ್ಲಿಗೆ ಕಥೆಯು

ಶ್ಯಾಮಿ–( ತಟ್ಟನೆದ್ದು ) ಕೋರೆದಾಡೆಯ ಬೀರಿ ಬಗಳುತ್ತ
ತಿರುಕನನು ಅಟ್ಟುತ್ತೈತಂದ ನಾಯಿಗಳ ಹಿಂಡು !
ಎಂತವೇ ಮುದುಕನನು ಬಿಟ್ಟಿದ್ದವು ?

ನಳಿನಿ–ಮಲಗಿಕೋ ಶ್ಯಾಮಿ ! ಹೊತ್ತಾಯ್ತೆನಗೆ ಕೆಲಸಕ್ಕೆ !
ಚಂದುವನೆ ನೋಡು ಸದ್ದಿಲ್ಲದಲೆ ಮಲಗಿಹನು

ಶ್ಯಾಮಿ ಚಂದು ಒಳ್ಳೆಯ ಹುಡುಗ–ನಾ ಕೆಟ್ಟವ

ನಳಿನಿ–ನೀನೆ ಚಂದುವಿಗಿಂತ ಒಳ್ಳೆಯವ ಮಲಗಿಕೋ

ಚಂದು–(ತಟ್ಟನೆದ್ದು) ನನಗಿಂತ ಶ್ಯಾಮಿಯೇ ಒಳ್ಳೆಯವನೇ
ನಮ್ಮ? ಶ್ಯಾಮಿ ಜಲಧಿಯ ದಡಕೆ ನನ್ನ ಕರೆಯಲು
ನಾನು । ಹೋಗದಲೆ ನಿಂತಿರಲು ನೀ ಬಂದು ಕಿವಿ
ಯೊಳಗೆ
"ಹೋಗದಿರು ಚಂದಣ್ಣ ! ನೀನೆ ಬಲು ಒಳ್ಳೆಯವ.
ಶ್ಯಾಮಿ ಕೆಟ್ಟವನೆಂ"ದು ಹೇಳುತಿರಲಿಲ್ಲವೋ ?

ಶ್ಯಾಮಿ–ಹಾಗೇನು ?

ನಳಿನಿ–ಮಲಗಿಕೊಳ್ಳಿರಿ ಎನ್ನ ಕಂದಗಳಿರಾ ! ನೀವು ಇಬ್ಬರೂ
ಬಲು ಒಳ್ಳೆಯವರೆಂದು ಪ್ರತಿದಿನವೂ
ತೊಡೆಯಮೇಲಿಟ್ಟು ನಾ ಮುದ್ದಿಸುವುದಿಲ್ಲವೇ ?

ಶ್ಯಾಮಿ–ಅಪ್ಪ ಹೇಳುತಲಿದ್ದ ಸಾಗರದ ಕಥೆ ಹೇಳು
ಸದ್ದುಮಾಡದೆ ಕೇಳಿ ನಿದ್ರಿಸುವೆನು !

ಚಂದು–ಬೇಡವ್ಮ ! ರಾತ್ರಿಯಲಿ ಸಾಗರದ ಅಲೆಯೆದ್ದು
ನನ್ನ ನುಂಗುವ ತೆರದ ಭಯದ ಕನಸಹುದು !

ಶ್ಯಾಮಿ–ನೀ ಮಲಗಿ ನಿದ್ರಿಸು ! ಅಮ್ಮ ಹೇಳುವಳೆನಗೆ !

ನಳಿನಿ–ಆ ಕಥೆಯು ಬೇಡಪ್ಪ ! ತಿಮ್ಮರಾಜನ ಕಥೆಯ ಹೇಳು
ವೆನು ಕೇಳು

ಶ್ಯಾಮಿ–ರಾಜರಾಣಿಯರ ಕಥೆ ಬೇಡಮ್ಮ ನನಗೆ
ಅಪ್ಪ ಹೇಳುತಲಿದ್ದ ಸಾಗರದ ಕಥೆ ಹೇಳು !

ನಳಿನಿ–ಬೇಡಪ್ಪ ಶ್ಯಾಮಿ! ಅಂತಹ ಭಯದ ಕಥೆಗಳನು
ನಿಮ್ಮಂಥ ಬಾಲಕರು ಕೇಳಬಾರದಪ್ಪ ಕಂದ !

ಶ್ಯಾಮಿ–ಭಯದ ಕಥೆಯೇನಮ್ಮ ? ಪೌರುಷದ ಕಥೆ ಹೇಳು
ಕೇಳಿ ನಿದ್ರಿಸೆ ರಾತ್ರಿಯೆಲ್ಲೆಲ್ಲ ಸಾಗರದ ಮೇಲ್ಮಲಗಿ
ಕೂಗಾಡಿ ನಲಿದಿಹೆನು

ನಳಿನಿ–(ಅಪ್ಪುತ್ತ) ಕಂದ! ಹಾಗೆನ್ನದಿರು ! ಎನ್ನೆದೆಯು ನಡು
ಗುವುದು !
( ಮೆತ್ತಗೆ ) ತಂದೆಯೊಬ್ಬರು ಜಲಧಿಮೇಲ್ಮಲಗಿ
ಎನ್ನೆದೆಗೆ
ಕಲ್ಲೆಳೆದು ಕಂದರನು ತಬ್ಬಲಿಗಳನೆ ಮಾಡಿ
ಕೈಬಿಟ್ಟುಹೋಗಿಹರು–( ಗುದ್ದಿಬರುವ ಅಳುವನ್ನು
ತಡೆದು ಕಣ್ಣುಗಳನ್ನು ಒರಸಿಕೊಳ್ಳುವಳು)ಸಾಕು!
ಸೈರಿಸಲಾರೆ ! ( ಬಿಕ್ಕುವಳು )

ಶ್ಯಾಮಿ–(ಎದ್ದುಕುಳಿತು) ಅಮ್ಮ ನೀನೇಕಳುವೆ ?

ನಳಿನಿ–ಅಳಲಿಲ್ಲ ಕಂದ ! ಕಣ್ಣುರಿಯುತಿಹುದದಕೆ ಕಂ
ಬನಿ ಹನಿ ಹರಿಯುತಿಹುದು

ಶ್ಯಾಮಿ–ಕಣ್ಣೇತಕುರಿಯುವುದು–?

ನಳಿನಿ–(ಸ್ವಲ್ಪ ಸುಮ್ಮನಿದ್ದು) ಕಣ್ಣುರಿಯಲಿಲ್ಲಪ್ಪ ! ಏನೊ
ಸಂಕಟವೆನಗೆ

ಶ್ಯಾಮಿ–ಏಕೆ ಸಂಕಟವಮ್ಮ ?

ನಳಿನಿ–ನಿನಗೆ ಹತ್ತಿರುವ ಜಲಧಿಯ ಹುಚ್ಚ ಕಂಡು

ಶ್ಯಾಮಿ–ಅದಕೆ ಸಂಕಟವೇಕೆ? ನೀನೆನ್ನ ಪ್ರೀತಿಸುವ
ತೆರದೊಳೇ ನಾ ಜಲಧಿಯನು ಪ್ರೀತಿಪೆ
ನಾನಾವಗಂ ನಿನ್ನ ಕಣ್ಮುಂದೆಯೇ ಇದ್ದು
ಆಡುತಿರಬೇಕೆಂಬ ನಿನ್ನ ಬಯಕೆಯುವೊಲೇ
ಜಲಧಿ ಸತತವು ನನ್ನ ಕಣ್ಮುಂದೆ ನಲಿಯುತ್ತ
ನರ್ತಿಸಲಿ ಬೇಕೆಂದು ನನ್ನ ಬಯಕೆ
ದಿನದಿನಕೆ ಬಲಿಯುತಿಹುದೆನ್ನಾಸೆ ನೋಡಮ್ಮ
ಅಪ್ಪನಾ ದೋಣಿಯನು ಜಲಧಿಮೇಲಿಟ್ಟು ನಾ
ನದಕಿಳಿದು ಒರೆವಿಡಿದು ಅಲೆಗಳನೆ ತಳ್ಳುತ್ತ
ಹಡಗುಗಳ ಬಳಿಗೈದಿ ಜನರ ಕರೆತಂದು ದಡ
ಕಿಳಿಸುತ್ತ ಸಾಗರದಿ ತೇಲುತಿರಬೇಕೆಂಬ
ಬಯಕೆ ಬಲಿಯುತ್ತಿಹುದು ಬಂದ ದುಡ್ಡನು ನಿನ್ನ
ಕೈಗೆ ತಂದೀಯುವೆನು-ಅಪ್ಪನಾ ದೋಣಿಯನು
ಕೆಳಕಿಳಿಸಿಕೊಡುವೆಯಾ ನನಗೆ ಹೇಳಮ್ಮ !

ನಳಿನಿ–ಅಂಬಿಗರ ಕುಲದಲ್ಲಿ ಹೆಣ್ಣಾಗಿ ಜನಿಸುವುದು
ಬಲ್ಲಾ[illegible]ಳುವುದು ಪಾಪಕರ್ಮದ ಫಲವು

ದಿನದಿನವು ಗಂಡುಮಕ್ಕಳು ಜಲದಿಮೇಲಿರಲು
ಅವರ ಜೀವಕೆ ಭಯದಿ ತಪಿಸುತ್ತ ಕುದಿಯುವುದು
ಯಾವಾಗಲೂ ಮನದಿ ಈ ಕಳವಳದ ದಗೆಯು
ಅನಿತು ದಿನ ಅನ್ನವನು ಕೊಟ್ಟ ಜಲಧಿಯು ತಾನೆ
ಅಂಬಿಗರ ಮಸಣವಾಗುವುದು ಕೊನೆಗೆ
( ಕಣ್ಣೀರನ್ನು ಒರಸಿಕೊಳ್ಳುವಳು )

ಶ್ಯಾಮಿ–ನಿಜವಮ್ಮ! ನೀನು ಹೇಳಿದ ಮಾತು ಸತ್ಯ–
ನೆಲದಮೇಲಾಸೆಯಿಂ ಹಗಲಿರುಳು ದುಡಿಯುತಲೆ
ಮನೆ ಕಟ್ಟಿ ಬೆಳೆಬೆಳೆದು ಸುಖಪಡುವ ಮನುಜರಿಗೆ
ತಮ್ಮ ಮನೆಯೇ ಕಡೆಗೆ, ತಮ್ಮ ನೆಲವೇ ತಮಗೆ
ಮಸಣ ತಾನಾಗುವುದು
ನೆಲದ ಮೇಲ್ನಲಿವ ಜನ ಜಲಧಿಗಂಜುತಲಿತ್ತ
ಬಾರದಲೆ ತಮ್ಮ ಮನೆಯಲೆ ತಾವು ಇದ್ದರೂ
ನಿಶ್ಚಲದ ಭೂಮಿಯೇ ಮಸಣ ತಾನಾಗುವುದು
ಸಲಹಿದೆಡೆಯೇ ಮಸಣ! ಸಲಹಿದೆಡೆಯೇ ಮಸಣ.

ನಳಿನಿ–ನೆಲವು ಸಾಗರದಂತೆ ಬಾಯ್ಬಿಟ್ಟು ನುಂಗದದು
ತಾನು ಸಲಹಿದ ಜನರನು

ಶ್ಯಾಮಿ–ನೆಲನಮೇಲ್ನಲಿಯುವರ ರೋಗಗಳು ಬಡಿಯುವುವು
ಸಾಗರದ ಮೇಲೆ ರೋಗವದೆಲ್ಲಿ ಹೇಳಮ್ಮ
ಹಾವು ಚೇಳೆದ್ದು ಕಡಿಯುವುವು-ನೆಲ ನಡುಗಿ
ಮರ ಬಿದ್ದು ಮನೆ ಬಿದ್ದು ಉರಿಯೆದ್ದು ನುಂಗುವುದು
ನಲಿಯುತಿಹ ಜನಗಳನ್ನು
ಜೆಂಕಿ ಬೆದರುತ ನಂದುವುದು ಜಲಧಿಯ ನೋಡಿ
ರೋಗರುಜನವೂ ಬಾಡುತೋಡುವುವು ಸಾಗರದ
ತನುವೆದ್ದು ತೆಂಗಾಳಿಯೊಡಗೂಡಿ ಬರಲು
ನೋಡಿಲ್ಲವೇನಮ್ಮ ? ಪಟ್ಟಣದ ಜನರೆಲ್ಲ
ಹೆಣಗಳಂತಡಿಯಿಡುತ ನಮ್ಮ ಸಾಗರದೆಡೆಗೆ
ಬಂದು ಜಲಧಿಯ ನೋಡುತಲೆ ಹಿಗ್ಗಿನಲಿದಾಡಿ
ಅಂಬಿಗರು ಅಂಬಿಗರ ಮಕ್ಕಳೇ ಲೋಕದಲಿ
ನಿತ್ಯಭೋಗಿಗಳೆಂದು ಹಾಡಿ ಹೊಗಳುತಲಿದ್ದು
ಜಲದಿಯಿಂದೈತರುವ ತಂಗಾಳಿಯನೆ ಕುಡಿದು
ಆನಂದಪಟ್ಟು ಜಟ್ಟಿಗಳಾಗಿ ಹೋಗುವುದೆ ನೋಡಿ
ಲ್ಲವೇನಮ್ಮ–

ನಳಿನಿ– ಅಹುದು! ಆದರೆ ಏನು ? ಇಂಥ ಜಲಧಿಯೆ ನನ್ನ
ಕಣ್ಮುಚ್ಚಿ ಕೂರಿಸಿತು–
ಮಲಗಿಕೋ ಶ್ಯಾಮಿ! ಕೆಲಸವ ಮಾಡಿಬರುವೆ

ಶ್ಯಾಮಿ–ಮಲಗಿಕೊಳ್ಳುವೆನಮ್ಮ! ಅಪ್ಪನಾ ದೋಣಿಯನು
ನಾಳೆಯೇ ಕೆಳಕಿಳಿಸಿ ಕೊಡುವೆಯೇನಮ್ಮ?

ನಳಿನಿ– ನಾಳೆಯಾಗಲಿ ಶ್ಯಾಮಿ! ನೋಡೋಣ ಮಲಗಿಕೊ.
( ಒಳಕ್ಕೆ ಹೋಗುವಳು)

ಶ್ಯಾಮಿ–ನನ್ನ ಮುದ್ದಿನಬಯಕೆ ಕೈಗೂಡುವುದೆ ನಾಳೆ!
ಕರೆಯುತಿರು ಮೊರೆಯುತಿರು ನನ್ನ ಸಾಗರವೇ!
ಬರುವೆ ನಿನ್ನೊಡನಾಡಿ ನಲಿಯುವುದಕೆ–
(ಮಲಗಿಕೊಳ್ಳುವನು.)
(ಸ್ವಲ್ಪ ಹೊತ್ತಿಗೆ ಹನುಮನು ಬರುವನು.)

ಹನು– (ಹೊರಗೆ ನಿಂತು) ನಳಿನೀ! ನಳಿನೀ!

ನಳಿನಿ- ( ಹೊರಕ್ಕೆ ಬರುತ್ತಾ) ಊಟವಾಯಿತೆ ನಿನಗೆ
ಹನುಮಣ್ಣ ?

ಹನು– ಊಟವೆಲ್ಲಿಯದಮ್ಮ? ಅಂಬಿಗರ ಬಾಳು ಬಲು
ಕೆಟ್ಟಬಾಳು–

ನಳಿನಿ– ಅದು ಏಕೆ ?

ಹನು– ಇಂದು ಒರೆ ಮುರಿದಿಹುದು-ಇಂದು ದೋಣಿಯು
ತೂತು–
ಇಂದು ಜಲಧಿಯು ಮೇಲೆ ಚಂಡಮಾರುತನೆದ್ದು
ದೋಣಿಗಳ ತಳ್ಳಿ ದಡಕ್ಕಪ್ಪಳಿಸುವನು-ಇಂದು
ಬಿರುಮಳೆಯು ಭೋರೆಂದು ಸುರಿಯುತಿಹುದು
ಇಂದು ಹಡಗೇ ಬಾರಲಿಲ್ಲವೀ ದಡಕೆ
ಹೀಗಾಗಿ ಕೈಯಲ್ಲಿ ದುಡ್ಡಿಲ್ಲ–ಮನೆಯಲ್ಲಿ
ಹೆಂಡತಿಯು ಮುನಿಯುವಳು–ಮಕ್ಕಳುವರು
ಹಸಿವ
ತಡೆಯದಲೆ–ಇದ ನೋಡಿ ಬದುಕಬಹುದೇ!
ಅಂಬಿಗರ ಬಾಳು ಬಾಳಲ್ಲಮ್ಮ–

ನಳಿನಿ– ನಿಜವಪ್ಪ! ಹನುಮಣ್ಣ! ನೀ ಹೇಳಿದುದು ಸತ್ಯ
ಇಂದೇಕೆ ಊಟವಿಲ್ಲ ?

ಹನು– ಹೇಳಲಿಲ್ಲವೆ ತಂಗಿ ? ಇಂದು ಒರೆ ಮುರಿದಿತ್ತು–
ಈಗ ಸಾಮಾನುಗಳ ತಂದೆ ಮನೆಗೆ ಅಡುಗೆಯಾಗುತ
ಲಿಹುದು–

ನಳಿನಿ– ಅಂಬಿಗರಬಾಳು ಬಾಳಲ್ಲೆಂಬ ನಿನ್ನನುಡಿ
ಬಲು ಸತ್ಯ ಹನುಮಣ್ಣ! ಮಾಡಲೇನು!

ಕುಳಿತುಕೋ ! ನಿನ್ನಲ್ಲಿ ನಾನೊಂದು ವಿಷಯವನು
ತಿಳಿಯಲಿಹುದು
(ಕುಳಿತುಕೊಳ್ಳುವನು)

ನಳಿನಿ– ನಮ್ಮ ಶ್ಯಾಮಿಗೆ ಸಾಗರದ ಹುಚ್ಚು ದಿನದಿನಕೆ
ಬಲು ಬಲಿತು ಕುಣಿಸುತಿಹುದು–
ಆ ಹುಚ್ಚ ಬಿಡಿಸದಲೆ ನಾನು ಬದುಕಿರಲಾರೆ
ತಾಯು ನೋಡುತ ನಲಿವ ಪುಟ್ಟ ಮಗುವಿನ ತೆರದಿ
ಸಾಗರದ ಹೆಸರ ಕೇಳುತ್ತಲೇ ನಲಿಯುವನು
ಮೇಲಿರುವ ದೋಣಿಯನು ಕೆಳಕಿಳಿಸಿಕೊಂಡು ಎಂದು
ದಿನದಿನವು ಕಾಡಿಸುವನು.

ಹನು– ಹುಡುಗ! ಹುಡಿಹುಚ್ಚಾ! ಸಾಗರವೆದ್ದು ಮೊರೆಯುತ್ತ
ಭೀಕರದಿ ಗುಡುಗುವುದು ಒಮ್ಮೆ ನೋಡಿದರೆ
ಸಾಕವನ ಹುಡಿಹುಚ್ಚು ಧೂಳಿದ್ದು ಹೋಗುವುದು

ನಳಿನಿ– ನನಗೊಂದು ದಾರಿ ಹೊಳೆಯಿತು ಮನಕೆ ಹನು
ಮಣ್ಣ !
ನೀನದಕೆ ಒಪ್ಪಿದರೆ ಉಪಕಾರವಹುದು

ಹನು– ಯಾವ ದಾರಿ ?

ನಳಿನಿ– ನಾಳೆ ಶ್ಯಾಮಿಯು ನಿನ್ನ ದೋಣಿಯಲಿ ಕುಳ್ಳಿರಿಸಿ
ನಿನ್ನೊಡನೆ ಸಾಗರಕೆ ಕರೆದೊಯ್ದು ದಡದಿಂದ
ಹತ್ತುನೂರಿನ ಒಳಗೆ ದೋಣಿಯನೆ ಹೊರಳಿಸು
ಒಡನೆ ಶ್ಯಾಮಿಯ ಹಿಡಿದು ನೀನು ನೀರ್ಕುಡಿಯುತ್ತ
ಭಯದಿಂದ ಬೆದರಿದವೊಲೇಳುತ್ತ ಮುಳುಗುತ್ತ
ಕಣ್ಣುಗಳ ಬಿಚ್ಚುತ್ತ ದಡಕೆಳೆದು ತಂದು
ಸಾಕಪ್ಪ ಸಾಗರದ ಸಹವಾಸವೆನಗೆ
ಜೀವಗಳ ನುಂಗುವೀ ಜಲಧಿ ಗೊಡವೆಯು ಬೇಡ
ನೋಡಿದೆಯ ಶ್ಯಾಮಿ ಜಲಧಿಯ ರೌದ್ರವ ?
ಎಂದು ಹೆದರಿಸಿ ನೋಡು ಅವನ ಹುಚ್ಚೋಡುವುದು
ಅವನು ನೀರ್ಕುಡಿದೆದ್ದು ಮುಳುಗುತಿರಲಲೆಗಳಿಗೆ–

ಹನು– ನಿಜ ತಂಗಿ ! ಒಳ್ಳೆಯ ಉಪಾಯವಿದು

ನಳಿನಿ– ಆದರಣ್ಣಯ್ಯ ! ಹುಡುಗಾಟ ದೊಡ್ಡಾಟವಾದೀತು
ದೋಣಿ ಹೊರಳುತ್ತಲೇ ಶ್ಯಾಮಿಕೈಗಳ ಹಿಡಿದು
ದಡಕೆಳೆದು ತಾ

ಹನು– ಭಯವಿಲ್ಲ! ನಳಿನೀ! ನಾ ನಾಳೆ ಬಂದು
ಶ್ಯಾಮಿಯನು (ಹೊರಡುವನು)

ನಳಿನಿ– (ನಿದ್ರಿಸುತ್ತಿರುವ ಶ್ಯಾಮಿಗೆ ಮುತ್ತಿಟ್ಟು)
ನಿನ್ನ ಬೆದರಿಸಬೇಕೆ ? ಅಯ್ಯೋ– ಕಂದಮ್ಮ !
ನಿನಗೆಲ್ಲಿ ಈ ದುಷ್ಟ ಹುಚ್ಚು ಹಿಡಿಯಿತೋ ! ಕಾಣೆ
ನನ್ನ ಮುದ್ದಿನ ಕಂದ ! ನನ್ನ ಪ್ರೇಮದ ಶ್ಯಾಮಿ !
(ಅಲ್ಲಿಯೇ ಕುಳಿತು ಚಿಂತಿಸುವಳು)

ದೃಶ್ಯ ೩

(ನಳಿನಿಯು ಚಂದುವನ್ನು ಕುಳ್ಳಿರಿಸಿಕೊಂಡು ಗುಡಿಸಿಲ
ಮುಂದೆ ಕುಳಿತಿಹಳು)

ನಳಿನಿ– ಎಷ್ಟು ಹೊತ್ತಾದರೂ ಬರಲಿಲ್ಲವೇಕವರು!
(ನಿಟ್ಟುಸಿರ ಬಿಡುವಳು)

ಚಂದು– ಮಾವ ದೋಣಿಯಲಿಳಿದು ಶ್ಯಾಮಿಯ ಕರೆದೊಡನೆ
ದಡದಿಂದ
ಒರೆವಿಡಿದು ಸರ್‍ರನಿಳಿದನು ಶ್ಯಾಮಿ
ಮಾವ ಹಿಂದೆಯೆ ಕುಳಿತು ಶ್ಯಾಮಿಗೊರೆಯನೆ
ಕೊಟ್ಟು
ನಡೆಸೆಂದು ಹೇಳಿದನು ಶ್ಯಾಮಿ ನಗುತಲೆ ಒರೆಯ
ಹಿಡಿದೆರಡು ಕೈಗಳಲಿ ಸರಸರನೆ ಎಳೆಯುತ್ತ
ದಡದಿಂದ ಬಲು ದೂರ ಸಾಗಿ ಮತ್ತೆ
ಬಲಕೆ ತಿರುಗುತ ಕಣ್ಗೆ ಮರೆಯಾದರು

ನಳಿನಿ– ಶ್ಯಾಮಿಯೇ ದೋಣಿಯನು ನಡೆಯಿಸಿದನೇ ?

ಚಂದು–ಅಹುದಮ್ಮಾ! ಮಾವನಿಗಿಂತಲು ಅವನೆ ಬಿರುಸಾಗಿ
ನಡೆಸುವನು

ನಳಿನಿ– ಹೇಗೆ ಕಣ್ಮರೆಯಾದರು ?

ಚಂದು–ಬಲು ದೂರ ತೇಲುತ್ತ ತೇಲುತ್ತ ಹೋಗುತಲೆ
ಚಿಕ್ಕಹಕ್ಕಿಯ ತೆರದಿ ದೋಣಿಯದು ಕಾಣಿಸಿತು
ಸ್ವಲ್ಪಹೊತ್ತಿಗೆ ಕಪ್ಪುಚುಕ್ಕೆಯಂತಾಗಿ
ಕೊನೆಗೆ ಕಣ್ಮರೆಯಾಯ್ತು

ನಳಿನಿ– ಆಗಲೇ ಮನೆಗೆ ಬರಬಾರದಾಗಿದ್ದಿತೇ ಚಂದು ?

ಚಂದು–ಏಕಮ್ಮಾ ? ಶ್ಯಾಮಿಯನು ನೀ ಬಿಟ್ಟು ತಪ್ಪದಲೆ
ಮನೆಗೆ ಹೋಗೆಂದು ನೀನೆನಗೆ ಹೇಳಿದೆಯಲ್ಲಾ ?

ನಳಿನಿ– ಅಹುದಹುದು

ಚಂದು–ಅದಕೆ ನಾನಲ್ಲಿಂದ ಮಠಕೆ ಹೋಗಿದುವರೆಗೆ
ಪಾಠವನೆ ಕಲಿಯುತ್ತಿದೀಗ ಬಂದೆ

ನಳಿನಿ– ನೀನು ಬಲು ಒಳ್ಳೆಯವ ಚಂದಣ್ಣ ........

(ನಗುವ ಶಬ್ದ ಕೇಳಿಸುವುದು)
ಅದುಯಾರು ? ಶ್ಯಾಮಿ ನಗುತಿರುವವೊಲು ಸದ್ದು?
(ಎದ್ದು ಹೊರಡಲಿರುವಳು ಶ್ಯಾಮಿ ಹನುಮ ಇಬ್ಬರು ಬರುವರು)

ಶ್ಯಾಮಿ–(ನಳಿನಿಯನ್ನಪ್ಪುತ್ತಾ)
ಅವ್ವಾ ಈ ದಿನ ನನಗೆ ಹಬ್ಬವಮ್ಮಾ

ನಳಿನಿ– (ನಗುತ್ತಾ ತಲೆಯನ್ನು ಸವರಿ)
ಅದು ಹೇಗೆ ಶ್ಯಾಮಿ ?

ಶ್ಯಾಮಿ–ನನ್ನ ಮುದ್ದಿನ ಜಲಧಿ ಹಾಡಿ ಕೂಗಿತು ನನ್ನ

ನಳಿನಿ–(ಭ್ರಮಿತಳಾಗಿ) ಸುಖವಾಗಿ ಹೋಗಿಬಂದೆಯ ನೀನು !

ಶ್ಯಾಮಿ–ಸುಖವಾಗಿತೇಲುತ್ತ ಬಂದೆ-ಆದರೊಂದೇ ವಿಷಯ–
ನಡುದಾರಿಯಲಿ ದೋಣಿ ಸರಸರನೆ ತೇಲುತಿರೆ
ಅಲೆಗಳೆದ್ದುರುಳಿಸುತ ತಳ್ಳುತಿರೆ ದೋಣಿಯನು
ಮಾವ ರಭಸಕೆ ಬೆದರಿ ಹಿಂದಕ್ಕೆ ಜಾರಿದನು–
ಒಡನೆಯೇ ದೋಣಿಯುರುಳಿತು ದೊಡ್ಡ
ಅಲೆಯೆದ್ದು
ಮುಳುಗಿಸಿತು ಎಲ್ಲವನು
ನಾ ಡೋಣಿಯನೆ ಹಿಡಿದು ಬಲಗೈಲಿ ಈಜುತ್ತ
ಮಾವನನ್ನರಸಿದೆನು–ಸಿಕ್ಕಲಿಲ್ಲ–
ಕೊನೆಗೆ ದೋಣಿಯ ತಳ್ಳಿ ಮುಳುಗುತೊಳಗರಸಿದೆನು
ಮಾವ ಸಿಕ್ಕಿದನಲ್ಲಿ–ಅವನ ಕೈವಿಡಿದೆಳೆದು
ಮೇಲಕೆತ್ತುತ ತೇಲಿ ದೋಣಿಬಂದಿದ್ದೆಡೆಗೆ
ಕರೆತಂದು ಕುಳ್ಳಿರಿಸಿ ದಡಕೆ ಹಿಂತಿರುಗಿದೆವು–

ನಳಿನಿ– (ನಿರಾಶೆಯಿಂದ ಭ್ರಮೆಯಿಂದ)
'ನಿಜವೆಹನುಮಣ್ಣ ಶಾಮಿಯು ಹೇಳಿದೀಕಥೆಯು!-'

ಹನು– (ನಿಟ್ಟುಸಿರಬಿಟ್ಟು) ಶ್ಯಾಮಿ ಸಟೆಹೇಳುವನೇ ? ಎಲ್ಲ
ನಿಜವಮ್ಮಾ–

ನಳಿನಿ– ಹೋಗು ಶ್ಯಾಮೀ ! ಒಳಗೆ ರೊಟ್ಟಿಯನಿಟ್ಟಹೆನು
ನಿನಗೊಂದು-ಚಂದುವಿಗೆ ಮತ್ತೊಂದು
(ಶ್ಯಾಮಿಯು–ಕುಣಿಯುತ್ತಾ ಒಳಕ್ಕೆ ಹೋಗುವನು
ಚಂದುವೂ ಹಿಂಬಾಲಿಸುವನು)

ಹನು– ನಳಿನಿ ! ನಿನ್ನಯ ಮಗನು ಅಂಬಿಗರ ಕುಲರನ್ನ-ಪುಣ್ಯ
ವಂತಳು ನೀನೇ

ನಳಿನಿ– ಅಯ್ಯೋ ! ಹನುಮಣ್ಣ !
ನೀನು ಹೀಗೆಯೇ ಹೇಳಿ ಸಂತೈಸಲೆಸಗುವೆಯಾ !
ನೀ ಗೈದ ತಂತ್ರವೇನಾಯ್ತೆನಗೆ ತಿಳಿಸು–

ಹನು––ತಂತ್ರಕೆ ಮಂತ್ರಕೆ ಬೆದರಿ ಹೋಗದಾ ಹುಚ್ಚು
ಹುಚ್ಚಲ್ಲ ! ಹುಚ್ಚಲ್ಲ ! ಭ್ರಮಿಸದಿರು ನಳಿನೀ!
ವೀರಅಂಬಿಗನಾಗಿ ಮಾನ್ಯತೆಯ ಪಡೆಯುವಾ
ಯೋಗ ನಿನ್ನಯ ಮಗನ ಹಣೆಯಲ್ಲಿ ಬರೆದಿಹುದು–
ಸಾಗರವ ಕಂಡೊಡನೆ ಹಾರಿಕುಣಿಯುವನು–
ದೋಣಿಯಲಿ ಕೂರುತಲೆ ಒರೆವಿಡಿದು ದೊಡ್ಡವರ
ತೆರದ ನಿರ್ಲಕ್ಷ್ಯದಲಿ ನಗುತ ತೇಲುವನು

ನಳಿನಿ– ಮುಂದೆ ಗತಿಯೇನಣ್ಣ–?

ಹನು– ನಳಿನಿ ! ಚಿಂತಿಸಬೇಡ ವ್ಯರ್ಥವಹುದು–
ಎಂದಾದರೊಮ್ಮೆ ಸಾಯಲೇಬೇಕು ನಾವೆಲ್ಲ–

ನಳಿನಿ– ಆದರೆನ್ನಯಕಂದ......(ಕಂಬನಿಗರೆವಳು.)

ಹನು– ಧೀರಬಾಲಕನವನು–ನಮ್ಮಂತೆ ಭಯವಿಲ್ಲ.
ಚಂಡಮಾರುತನೆದ್ದು ಹೆದರಿಸಿದರೂ–
ಭೋರೆಂದು ಕಿರುಚುತ್ತ ದೋಣಿಯನೆ ನುಂಗುವಷ್ಟು
ಲೈತರುವ ಹಿರಿಯಲೆಯು ಶ್ಯಾಮಿಯಾ ನಗುಮೊಗ
ಕಾಣುತಲೆ ಸದ್ದಡಗಿ ತೇಲುತ್ತಲೈತಂದು–
ಡೋಣಿಯನೆ ಮುತ್ತಿಟ್ಟು ಜಾರುವುದು, ತಂಗಿ!
ಜಲಧಿ, ನಲ್ಮೆಯ ಗೆಳೆಯ ನಿನ್ನ ಶಾಮಿಗೆ ನಳಿನಿ–
ನೀ ಬರಿದೆ ಚಿಂತಿಸುತ ಕೊರಗಬೇಡ–
ಶೂರನವ–ಭಯವಿಲ್ಲ–ಅವನ ಹೇಳಿಕೆಯಂತೆ
ಸಾಗರವು ಕೇಳುವುದು–

ನಳಿನಿ– 'ನಿಜವೇ ಹನುಮಣ್ಣ–

ಹನು– ಸತ್ಯ ! ಸತ್ಯವು ನಳಿನಿ ! ನಿನ್ನ ಮಗ ಅಂಬಿಗರ ಕುಲಕೆ
ಕೀರ್ತಿ ತರುವ ಧೀರನಾಗುವನು–
ಈ ದಿನವೆ ನಾ ಕಂಡೆ ಶ್ಯಾಮಿಯಾರೆಂಬದನು–
ಎಲ್ಲಾ ಹುಡುಗರ ತೆರದಿ ತಿಂದು ಮಲಗುವ ಮಗನು
ಅವನಲ್ಲ ನಳಿನೀ ?
(ಹೊರಡುವೆನು ನಾನು–ಹೊತ್ತಾಯ್ತೆನಗೆ ಕೆಲಸಕ್ಕೆ)

ನಳಿನಿ– ಹೋಗಿಬಾ ಹನುಮಣ್ಣ –
(ಹೊರಡುವನು–ನಳಿನಿಯು ನಿಟ್ಟುಸಿರು ಬಿಟ್ಟು
ಒಳಕ್ಕೆ ಹೋಗುವಳು )

(ಸಶೇಷ)

# ‘ಶಿವಾದ್ವೈತದರ್ಪಣ’ದ ವಿಮರ್ಶೆ

ಲೇಖಾಂಕ ೩.

ಲೇಖಕರು—— ಶ್ರೀ. ಸಿದ್ಧಣ್ಣಮಪ್ಪ ಪಾವಟೆ ಬಿ. ಎ., ಎಲ್‌. ಬಿ.

ಇದಿರಲಿ ಇದೇ ಬ್ರಹ್ಮಲಕ್ಷಣದಲ್ಲಿ “ಘನಲಿಂಗಪರ್ಯಾಯ ವಾಚಕ ಷಟ್ಸ್ಥಲಾತ್ಮಕ ಪರಶಿವ ಏವ ಬ್ರಹ್ಮ” ಎಂಬುದು ವಿತ್ಸೂತ್ರವ್ಯಾಖ್ಯಾನವು. ದರ್ಪಣಕಾರರು ಶ್ರೀ ನೀಲಕಂಠ ಭಾಷ್ಯಾನುರೋಧದಿಂದ ಈ ಪ್ರಕರಣವನ್ನು ಬರೆದಿರುವರಷ್ಟೆ! ಆಭಾಷ್ಯದಲ್ಲಿ ಈ ವಾಕ್ಯಕ್ಕೆ ಮೂಲವೆನಿಸಬಹುದಾದುದೊಂದೂ ವಿಧಾನವಿಲ್ಲ.

ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಸಾರಿಭಿಃ ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥

ಎಂದು ಭಾಷ್ಯವನ್ನು ಗುರುತಿಸುವರು “ ಜನ್ಮಾದ್ಯಸ್ಯ ಯತಃ ” ಎಂಬ ಸೂತ್ರಲಕ್ಷಣದಲ್ಲಿ ಷಟ್ಸ್ಥಲಾತ್ಮಕವೆಂಬ ಶಬ್ದವೆ ಇಲ್ಲ. ಇದು ಸೂತ್ರಾನುಸಾರಿಯಾದ ಪದವೂ ಅಲ್ಲ ನೀಲಕಂಠ ಭಾಷ್ಯದಲ್ಲಿ ಉದಾಹರಿಸಿದ ವಿಷಯವಾಕ್ಯಗಳುಃ—“ ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ರ ಯಂತ್ಯಭಿಸಂವಿಶಂತಿ ” “ ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ ” “ ಸತ್ಯಂ ಜ್ಞಾನಮನಂತಂ ಬ್ರಹ್ಮ”ಇತ್ಯಾದಿ ತೈತ್ತಿರೀಯ ಶ್ವೇತಾಶ್ವತರ ವೊದಲಾದ ಉಪನಿಷತ್ತುಗಳೊಳಗಿನವು. ಅವಾವೊಂದರಲ್ಲಿಯೂ ಷಟ್ಸ್ಥಲಾತ್ಮಕವೆಂಬ ಪದವಾಗಲಿ ಆ ಅರ್ಥವನ್ನುಳ್ಳ ಪದವಾಗಲಿ ಇಲ್ಲ. ವೀರಶೈವಕ್ಕೆ ಷಟ್ಸ್ಥಲಗಳು ಮರ್ಮವಾಗಿವೆ. ಅವುಗಳನ್ನು ಸೂಚಿಸುವ ಸೂತ್ರವೊಂದೂ ಇಲ್ಲ. ಹೀಗಿರಲು ಅಕಸ್ಮಾತ್ತಾಗಿ ಷಟ್ಸ್ಥಲಾತ್ಮಕ ಪರಶಿವ ಏವ ಬ್ರಹ್ಮ” ಎಂದು ನುಸುಳಿಸುವುದು ಉನ್ಮಾರ್ಗವು.

ಬ್ರಹ್ಮವು ಏನೆಂಬುದು ನಮಗೆ (ಶಾಸ್ತ್ರಾಭ್ಯಾಸಕನಿಗೆ) ತಿಳಿಯದು. ಅದನ್ನು ತಿಳಿಯಬೇಕೆಂದು ಈ ಶಾಸ್ತ್ರಾಭ್ಯಾಸಕ್ರಮವು. ಅಪರಿಚಿತಪದಾರ್ಥದ ಪರಿಚಯವನ್ನು ಪರಿಚಿತಪದಾರ್ಥಗಳಿಂದಲೆ ಮಾಡಿಕೊಡಬೇಕು. ಅದಕ್ಕಾಗಿಯೇ ಸೂತ್ರಕಾರನು ಜಗತ್ತಿನ ಜನ್ಮಸ್ಥಿತಿಧ್ವಂಸಗಳಿಗೆ ಕಾರಣವಾವುದೊ ಅದು ಬ್ರಹ್ಮವೆಂದು ಗುರುತಿಸುವುದು. ಅತ್ಯಂತ ಪರಿಚಿತವಾದ ಷಟ್ಸ್ಥಲಾತ್ಮಕ ಪರಶಿವಪದಾರ್ಥದಿಂದಲ್ಲ.

ಇನ್ನು ಬ್ರಹ್ಮಕ್ಕೆ ಹೇಳಿದ “ ಸೂಕ್ಷ್ಮ ಚಿದಚಿದ್ರೂಪಶಕ್ತಿ ವಿಶಿಷ್ಟಂ ಬ್ರಹ್ಮ” ಎಂಬ ಲಕ್ಷಣವನ್ನು ನೋಡುವ. ಸೂಕ್ಷ್ಮ ಚಿದಚಿದ್ರೂಪಶಕ್ತಿ ವಿಶಿಷ್ಟವಾದುದು ಬ್ರಹ್ಮವೆಂದು ಹೇಳುವುದು ಉಚಿತವಲ್ಲ. ಶಿವಾಗಮಗಳಿಗೆ ವಿರುದ್ಧವಾಗಿದೆ. “ಶಕ್ತಿರ್ನಾಚೇತನಾಚಿತಃ”ಮೃಗೇಂದ್ರಾಗಮ ಪತಿಪಟಲ, ೪.“ಚಿತ್‌ಸ್ವರೂಪನಾದ ಪರಶಿವನ ಶಕ್ತಿಯು ಅಚಿದ್ರೂಪವಲ್ಲ.

ಸಿದ್ಧಾಂತಶಿಖಾಮಣಿಕಾರನು “ ತದೀಯಾ ಪರಮಾ ಶಕ್ತಿ: ಸಚ್ಚಿದಾನಂದಲಕ್ಷಣಾ । ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ” ಪರಿಚ್ಛೇದ ೬-೨೨ ಎಂದು ಶಕ್ತಿಯು ಸಚ್ಚಿದಾನಂದಸ್ವರೂಪವನ್ನು ಹೇಳುವನು. ಶ್ರೀ ಷಡಕ್ಷರಮಹಾಶಿವಯೋಗಿಯ

ಯಾ ಶಕ್ತಿಶ್ಚಿದಚಿತ್ಸ್ವರೂಪಕಲಿತಾ ಸ್ವಾಭಾವಿಕೀ ವ್ಯಾಪಿನೀ ।
ಚಿದ್ರೂಪಾ ಮಿಲಿತಾ ತ್ವಯಾ ಶಿವಸುಧಾದಾಮ್ನಾ ಯಥಾ ಚಂದ್ರಿಕಾ ॥
ನಿತ್ಯಾನಂದಮಯಿೀ ತಯಾಪಿ ರಹಿತಂ ತ್ವಾಂ ಬ್ರಹ್ಮಕೇಚಿದ್ವಿದು।
ಸ್ತದ್ರಿಕ್ತಸ್ತಮಿದಂ ಕಥಂ ನು ಕುರುಷೇ ಸ್ವಾಮಿನ್ ಜಗನ್ಮಂಗಲಂ ॥

ಎಂದು ಆ ಶಕ್ತಿಯು ಜಡಾಜಡಪ್ರಪಂಚವನ್ನು ತನ್ನಲ್ಲಿ ಹುದುಗಿಸಿಕೊಂಡು ತಾನು ಚಿದಾನಂದ ಸ್ವರೂಪಿಯಾಗಿ ಶಿವನಲ್ಲಿ ಚಂದ್ರನೊಳು ಚಂದ್ರಿಕೆಯು ಹೇಗೊ ಹಾಗೆ ನಿತ್ಯವಾಗಿ ಅಭೇದದಿಂದ ಕೂಡಿರುವಳೆಂದು ಪ್ರತಿಪಾದಿಸುವನು. ಚಿದಾನಂದ ಸ್ವರೂಪಪರಶಿವನಲ್ಲಿ ಚಿದಚಿದ್ರೂಪಶಕ್ತಿಯು ಇರಲಾರದು.

ಶ್ರೀಕಂಠಭಾಷ್ಯದ ಶಿವಾರ್ಕಮಣಿದೀಪಿಕೆಯಲ್ಲಿ ಅಪ್ಪಯ್ಯ ದೀಕ್ಷಿತರು “ ತದೇವಂ ಜಗತ್ಕಾರಣಮಾನಂದಮಯೋ ನ ಜೀವಃ । ಕಿಂತು ಬ್ರಹ್ಮಾನಂದರೂಪಾ ಚಿಚ್ಛಕ್ತಿಃ” ಪುಟ ೨೨೬ ಅದರಿಂದ ಜಗತ್ಕಾರಣವಾದ ಆನಂದಮಯನು ಜೀವನಲ್ಲ ಆದರೆ ಬ್ರಹ್ಮಾನಂದವೆಂಬ ಚಿಚ್ಛಕ್ತಿಯು ಎಂದು ಅಂದಿರುವುದನ್ನು ನೋಡಬಹುದು.

ಬ್ರಹ್ಮಶಕ್ತಿಯು ಚಿದಚಿತ್ಸ್ವರೂಪವೆಂಬಲ್ಲಿಯ ವಿರೋಧ ಪರಿಹಾರಕ್ಕಾಗಿ “ ಅಸ್ಮನ್ಮತೇ ಬ್ರಹ್ಮಧರ್ಮರೂಪಾಯಾಃ ಶಕ್ತೇಶ್ಚಿಚ್ಛಕ್ತಿರೂಪತ್ವಂ ತತ್ಪ್ರತಿಬಿಂಬರೂಪಾಯಾ ಅಚಿಚ್ಛಕ್ತೇ ರೂಪತ್ವಮಿತ್ಯಂಗೀಕಾರೇಣ ಚಿಚ್ಛಕ್ತಿತತ್ಪ್ರತಿಬಿಂಬಾಚಿಚ್ಛ

ಕ್ತ್ಯೋರ್ಬ್ರಹ್ಮ ಧರ್ಮತ್ವೇ ವಿರೋಧಾಭಾವೇನ ಶಕ್ತಿದ್ವಯಂ ಸಮುಚ್ಚಿತ್ಯೈಕಸ್ಯೈವ ಸೂಕ್ಷ್ಮ ಚಿದಚಿದ್ರೂಪವಿಶಿಷ್ಟತ್ವಸ್ಯ ಲಕ್ಷಣೀಕರಣೇ ತಾತ್ಪರ್ಯಾತ್" ಎಂದು ಶಿವಾದ್ವೈತದರ್ಪಣಕಾರರು ಹೇಳುವುದು ಸಮರ್ಪಕವಾಗಿಲ್ಲ ನಮ್ಮ ಮತದಲ್ಲಿ ಬ್ರಹ್ಮಧರ್ಮವಾದ ಶಕ್ತಿಯು ಚಿಚ್ಛಕ್ತಿಯೆಂದೂ ಅದರ ಪ್ರತಿಬಿಂಬರೂಪವಾದುದು ಅಚಿಚ್ಛಕ್ತಿಯೆಂದೂ ಅಂಗೀಕರಿಸುತ್ತೇವೆ. ಆದರಿಂದ ಚಿಚ್ಛಕ್ತಿಯೂ ಅದರ ಪ್ರತಿಬಿಂಬವಾದ ಅಚಿಚ್ಛಕ್ತಿಯೂ ಬ್ರಹ್ಮಧರ್ಮವಾಗುವಲ್ಲಿ ವಿರೋಧವಿಲ್ಲ. ಆದುದರಿಂದ ಎರಡೂ ಶಕ್ತಿಗಳನ್ನು ಒಟ್ಟಯಿಸಿ ಸೂಕ್ಷ್ಮಚಿದಚಿದ್ರೂಪವಿಶಿಷ್ಟವಾದುದು ಬ್ರಹ್ಮವೆಂದು ಒಂದೆ ಲಕ್ಷಣವನ್ನು ಹೇಳುವಲ್ಲಿ ತಾತ್ಪರ್ಯವು.

ಈ ಸಮಾಧಾನವನ್ನು ಒರೆಗೊಳ್ಳುವ. ಬ್ರಹ್ಮಧರ್ಮವಾದ ಶಕ್ತಿಯು ಚಿಚ್ಛಕ್ತಿಯೆಂದು ತಮ್ಮ ಮತವನ್ನು ಹೇಳಿ ಮತ್ತೆ ಆ ಚಿಚ್ಛಕ್ತಿಯ ಪ್ರತಿಬಿಂಬವಾದ ಆ ಚಿಚ್ಛಕ್ತಿಯು ಸಹ ಬ್ರಹ್ಮಧರ್ಮವಾಗುವಲ್ಲಿ ವಿರೋಧವಿಲ್ಲೆಂಬುದು ಅರ್ಥವಿಲ್ಲದ ವಾಕ್ಯವು. ಬ್ರಹ್ಮಧರ್ಮವು ಅವುದೊ ಅದು ಚಿಚ್ಛಕ್ತಿಯೆಂದು ಅಂದ ಬಳಿಕ ಅಚಿಚ್ಛಕ್ತಿಯು ಬ್ರಹ್ಮ ಧರ್ಮವು ಎಂತಹುದು. ಹೀಗೆ ಪ್ರತಿಪಾದಿಸುವನಾದರು ಹೇಗೆ ನಂಬಿಕೆಗೆ ತಕ್ಕವನಾದಹನು? ಒಂದು ವೇಳೆ, ಅಚಿಚ್ಛಕ್ತಿಯು ಚಿಚ್ಛಕ್ತಿಯ ಪ್ರತಿಬಿಂಬವಾದುದರಿಂದ ಅದೂ ಬ್ರಹ್ಮ ಧರ್ಮವಾಗಲಿಕ್ಕೆ ಅಡ್ಡಿಯು ಇಲ್ಲವೆಂದರೆ ಚಿಚ್ಛಕ್ತಿಯು ಏತರಲ್ಲಿ ಪ್ರತಿಫಲಿಸಿ ಪ್ರತಿಬಿಂಬವನ್ನುಂಟುಮಾಡಿತು? ಪ್ರತಿಬಿಂಬವಾದರೆಯು ಅಚಿದ್ರೂಪವಾದುದರಿಂದ ಚಿದ್ರೂಪಕ್ಕೆ ಶಕ್ತಿಗೆ ಮತ್ತು ಶಿವನಿಗೆ ಹೇಗೆ ವಿರುದ್ಧವಲ್ಲ! ಚಿದ್ರೂಪಶಕ್ತಿಗೆ ಅಚಿದ್ರೂಪಪ್ರತಿಬಿಂಬವು ಹೇಗಾಯ್ತು? ಪ್ರಕಾಶಮಯನಾದ ಸೂರ್ಯನ ಪ್ರತಿಬಿಂಬವು ಪ್ರಕಾಶಮಯವೆ ಆಗಿದೆ.

ಇದಲ್ಲದೆ ಚಿದ್ರೂಪಶಕ್ತಿಯನ್ನೂ ಆ ಶಕ್ತಿಯ ಪ್ರತಿಬಿಂಬವಾದ ಅಚಿದ್ರೂಪ ಶಕ್ತಿಯನ್ನೂ ಸಮುಚ್ಚಯಿಸುವುದು (ಶಕ್ತಿದ್ವಯಂ ಸಮುಚ್ಚಿತ್ಯ) ಹೇಗೆ! ಶಕ್ತಿಯು ವಸ್ತುರೂಪವು, ಅದರ ಪ್ರತಿಬಿಂಬವು ಅವಾಸ್ತವಿಕವು. ಮನುಷ್ಯನನ್ನೂ ಮನುಷ್ಯನ ಪ್ರತಿಬಿಂಬವನ್ನೂ ಸಮುಚ್ಚಯಿಸಲಿಕ್ಕೆ ಬರಲಾರದು.

ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟಂ ಬಹ್ಮ ಎಂಬಲ್ಲಿ ಚಿದಚಿದ್ರೂಪಶಕ್ತಿವಿಶಿಷ್ಟವು ಬ್ರಹ್ಮವೆಂದರೆ ಸಾಕಾಗುತ್ತಿತ್ತು. ಸೂಕ್ಷ್ಮಪದವೇಕೆ ಎನ್ನುವ ಶಂಕೆಗೆ ಚಿದಚಿದ್ರೂಪಶಕ್ತಿಯಿಂದ ಜೀವನೂ ವಿಶಿಷ್ಟನಾಗಿರುವನು. ಮುಕ್ತಾತ್ಮರುಗಳೂ ವಿಶಿಷ್ಟರಾಗಿರುವರು. ಅವರಿಬ್ಬರಿಗೆ ಚಿದಚಿದ್ರೂಪಶಕ್ತಿವಿಶಿಷ್ಟತ್ವವೆಂಬ ಲಕ್ಷಣವು ಅನ್ವಯಿಸುವುದು ಹಾಗೆ ಅನ್ವಯಿಸಬಾರದಂತೆ ಸೂಕ್ಷ್ಮ ಶಬ್ದವನ್ನಿಟ್ಟಿದೆಂದು ಸಮಾಧಾನವನ್ನು ಹೇಳಿರುವರು ಮತ್ತು ಸೂಕ್ಷ್ಮತ್ವವೆಂದರೆ ಸ್ವಭಾವನಿರ್ಮಲತ್ವವೆಂದು ಹೇಳಿ ಸ್ವಭಾವನಿರ್ಮಲಚಿದ ಚಿದ್ರೂಪಶಕ್ತಿವಿಶಿಷ್ಟವಾದುದು ಬ್ರಹ್ಮವೆಂದು ಲಕ್ಷ್ಮಣವಾಯ್ತು. ಸೂಕ್ಷ್ಮವೆಂದರೆ ನಿರ್ಮಲವೆಂಬರ್ಥವು ಅಲ್ಲ. ಆಲದ ಬೀಜದಲ್ಲಿ ಮರವು ಹುದುಗಿದವಂತೆ ಪ್ರಕೃತಿಯಲ್ಲಿ ಜಗತ್ತು ಅಡಗಿರುವುದರಿಂದ ಪ್ರಕೃತಿಗೆ ಸೂಕ್ಷ್ಮವೆಂದಿದೆ ಅಂದರೆ ಪ್ರಕೃತಿಯು ಕಾರ್ಯವನ್ನು ತನ್ನಲ್ಲಿ ಹುದುಗಿಸಿಕೊಂಡಿದೆಯೆಂಬರ್ಥ. ಅದರಂತೆ ಶಕ್ತಿಯು ಜಗತ್ತನ್ನು ಗರ್ಭೀಕರಿಸಿದೆ ಎಂಬರ್ಥದಲ್ಲಿ ಅದಕ್ಕೆ ಸೂಕ್ಷ್ಮವೆನ್ನಬೇಕು. ಜಗತ್ತಿನ ಸೂಕ್ಷ್ಮಸ್ಥಿತಿಯಲ್ಲಿರದ ದೋಷಗಳು ಅದರ ಸ್ಥೂಲಸ್ಥಿತಿಯಲ್ಲಿ ಎಲ್ಲಿಂದ ಬಂದುವು? ಅಂದಬಳಿಕ ಸೂಕ್ಷ್ಮತ್ವಕ್ಕೆ ನಿರ್ಮಲತ್ವವು ಹೇಗೆ! ಎರಡನೆಯ ಪರಿಚ್ಛೇದದಲ್ಲಿ "ಸ್ಥೂಲಚಿದಚಿದ್ರೂಪಶಕ್ತಿವಿಶಿಷ್ಟೋ ಜೀವಃ ಸ್ಥೂಲಚಿದಚಿದ್ರೂಪಶಕ್ತಿವಿಶಿಷ್ಟನು ಜೀವನು ಎಂದು ಶಿವಾದ್ವೈತದರ್ಪಣಕಾರರು ಹೇಳಿರುವರು, ಮತ್ತು ಆ ವಿಧಾನಕ್ಕೆ ಪ್ರಮಾಣವಾಗಿ "ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ" ಎಂದು ಸ್ಥೂಲತ್ವವೆಂದರೆ ಕಾರ್ಯತ್ವಸಮಾನಾರ್ಥಕವಾಗಿ ಹೇಳಿರುವರು. "ಸ್ಥೂಲತ್ವಂ ಚ ಮಲತ್ರಯವಿಶಿಷ್ಟತ್ವಂ" ಸ್ಥೂಲತ್ವವೆಂದರೆ ಮಲತ್ರಯ (ಆಣವಮಲ ಮಾಯಾಮಲ ಕರ್ಮಮಲ) ವಿಶಿಷ್ಟತ್ವವೆಂದು ಹೇಳಿರುವರು. ಸೂಕ್ಷ್ಮಚಿದಚಿದ್ರೂಪಶಕ್ತಿಯಲ್ಲಿ ಇಲ್ಲದ ಮಲತ್ರಯವು ಸ್ಥೂಲ ಚಿದ ಚಿದ್ರೂಪ ಶಕ್ತಿಯಲ್ಲಿ ಎಲ್ಲಿಂದ ಬಂದಿತು? ಆಲದ ಬೀಜದಲ್ಲಿ ಇಲ್ಲದ ಮಾಲಿನ್ಯ ಮರವು ಎಂದಿಗೂ ಆಲದ ಮರದಲ್ಲಿ ಕಾಣದು. ಅಂದಬಳಿಕ ಶಿವನ ಚಿದಚಿದ್ರೂಪಶಕ್ತಿಯು ನಿರ್ಮಲವೆಂತು?

ಅದು ಹಾಗಿರಲಿ. ಮುಕ್ತಾತ್ಮರನ್ನು ಶಿವನಿಂದ ವಿಂಗಡಿಸುವುದು ಮೂರನೆ ಪರಿಚ್ಛೇದದಲ್ಲಿ ದರ್ಪಣಕಾರರು ಹೇಳುವ ಮಾತಿಗೆ ಸರಿ ಹೊಂದುವುದಿಲ್ಲ. ಅಲ್ಲಿ 'ಇದಾನೀಂ ತಯೋರಭೇದಾತ್ಮಕಂ ಶಿವಾದ್ವೈತಂ ನಿರೂಪ್ಯತೇ ಶಿವಾದ್ವೈತಮಿತ್ಯತ್ರ ಶಿವಶ್ಚ ಶಿವಶ್ಚ ಶಿವೌ ತಯೋರದ್ವೈತಂ ಶಿವಾದ್ವೈತಂ ಇತಿ ವ್ಯುತ್ಪತ್ತಿಬಲಲಭ್ಯಂ ಪ್ರಥಮಶಿವಪದಂ ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟಬ್ರಹ್ಮಬೋಧಕಂ ಭವತಿ ಅಪರ ಶಿವಪದಂ ಸ್ಥೂಲಚಿದಚಿದ್ರೂಪಶಕ್ತಿವಿಶಿಷ್ಟಜೀವಬೋಧಕಂ ಭವತಿ। ಅದ್ವೈತಪದಂ ಚ ತಯೋರಭೇದಬೋಧಕಂ ಭವತಿ।' 'ಈಗ ಶಿವಜೀವರ ಅಭೇದವೆಂಬ ಶಿವಾದ್ವೈತವು

ನಿರೂಪಿತವಾಗುತ್ತದೆ. ಶಿವಾದ್ವೈತಂ ಎಂದಲ್ಲಿ ಶಿವನೂ ಶಿವನೂ ಶಿವರು ಅವರಿಬ್ಬರ ಅದ್ವೈತವು ಶಿವಾದ್ವೈತವು. ಈ ಅರ್ಥವು ವ್ಯಾಕರಣ ಶಾಸ್ತ್ರದಿಂದಾದ ಉತ್ಪತ್ತಿಯಿಂದ ಹೊರಡುವುದು. ಮೊದಲನೆಯ ಶಿವಪದವು ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟ ಬ್ರಹ್ಮವಾದಕವು. ಎರಡನೆಯ ಶಿವಪದವು ಸ್ಥೂಲಚಿದಚಿದ್ರೂಪಶಕ್ತಿವಿಶಿಷ್ಟಜೀವಬೋಧಕವು. ಅದ್ವೈತಪದವು ಅವರೀರ್ವರ ಅಭೇದವನ್ನು ಅರುಹುವುದು. ಎಂದಿದರ ಕನ್ನಡವು. ಜೀವನಿಗೆ ಶಿವನೆಂದು ವ್ಯವಹರಿಸುವುದಿಲ್ಲ. ಇದು ಶಾಸ್ತ್ರವ್ಯವಹಾರವಿರುದ್ಧವು. ಶಿವಜೀವೈಕ್ಯವೆಂದೆನ್ನುವರಲ್ಲದೆ ಶಿವಶಿವೈಕ್ಯವೆನ್ನರು. ಅದರಲಿ ಮುಕ್ತಿಯಲ್ಲಿ ಶಿವಜೀವರು ಅಭಿನ್ನರಾದ ಬಳಿಕ ಬ್ರಹ್ಮಕ್ಕೆ ಹೇಳಿದ "ಸೂಕ್ಷ್ಮಚಿದಚಿದ್ರೂಪಶಕ್ತಿವಿಶಿಷ್ಟಂ ಬ್ರಹ್ಮ" ಎಂಬುದು ಮುಕ್ತನಿಗೆ ಹತ್ತಬಾರದೆಂದು ಏಕೆ ಪ್ರಯಾಸಪಡಬೇಕು! ಮುಕ್ತನ ಚಿದಚಿದ್ರೂಪಶಕ್ತಿಯು ಸ್ವಭಾವನಿರ್ಮಲವಾಗದಿದ್ದರೆ ಪುನಃ ಬಂಧಪ್ರಸಂಗವನ್ನು ಆರು ತಾನೆ ನಿವಾರಿಸಲಾಪರು! ಚಿದಚಿದ್ರೂಪಶಕ್ತಿಯು ಅಶುದ್ಧಸ್ವಭಾವವನ್ನು ನೀಗಿ ಶುದ್ಧಸ್ವಭಾವವಾಗದೆ ಮುಕ್ತಿಯಾಗದೈಸೆ. ಶುದ್ಧಸ್ವಭಾವವಾಗುವುದೆಂದರೆ ಮುಕ್ತನ ಚಿದಚಿದ್ರೂಪಶಕ್ತಿಯಲ್ಲಿ ಏನೊಂದು ಕಸುರು ಉಳಿಯದಿರುವುದು ಅಂದರೆ ಸ್ವಭಾವನಿರ್ಮಲವಾಗುವುದು.

ಜೀವನಿಗೆ 'ಸ್ಥೂಲಚಿದಚಿದ್ರೂಪಶಕ್ತಿವಿಶಿಷ್ಟತ್ವಂ ಜೀವತ್ವಂ' ಎಂದು ಹೇಳುವ ಲಕ್ಷಣವು ಯೋಗ್ಯವಲ್ಲ. ಕಾರ್ಯಜನಕ ಸಾಮರ್ಥ್ಯವೆ ಶಕ್ತಿಯು. ಇಂದ್ರಿಯಂಗಳಿಗೆ ಅಗೋಚರವಾಗಿರುವ ಜಗತ್ತನ್ನು ಹುಟ್ಟಿಸುವಲ್ಲಿ ಈಶ್ವರನಿಗೆ ಶಕ್ತಿಯುಂಟು. ಆದರಿಂದ ಈಶ್ವರನು ಶಕ್ತಿವಿಶಿಷ್ಟನು. ಜೀವನು ಈಶ್ವರನಿರ್ಮಿತ ದೇಹಪ್ರಾಣಾದಿ ಪಂಚಕೋಶವಿಶಿಷ್ಟನು. ಅವನಿ ಕಾರ್ಯೋಪಾಧಿ ಎನ್ನಬಹುದು. ದರ್ಪಣಕಾರರಾದರು ಅದ್ವೈತಾಚಾರ್ಯರ "ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ" ಎಂಬ ಶ್ಲೋಕವನ್ನು ಉದಾಹರಿಸಿರುವರು. ಶಕ್ತಿಯೆಂಬುದು ಕಾರಣಾವಸ್ಥೆಯು. ಜೀವನು ಕಾರಣಾವಸ್ಥಾವಿಶಿಷ್ಟನಲ್ಲ – ಮಣ್ಣು ಘಟನಿರ್ಮಾಣಶಕ್ತಿಯನ್ನುಳ್ಳುದು – ಘಟವು ಅದರ ಕಾರ್ಯವು ಮಣ್ಣಿನ ಸ್ಥೂಲಶಕ್ತಿಯಲ್ಲ. ಕಾರ್ಯ ಎಂಬ ಸ್ಥೂಲವನ್ನು ತೋರಿಸದೆ ಒಳಗೊಂಡಿರುವುದು ಶಕ್ತಿಯು. ಗ್ರಂಥಕಾರರು– ಅದ್ವೈತವಾದ ವಿಶಿಷ್ಟಾದ್ವೈತವಾದ ಕಾಶ್ಮೀರ ಶೈವವಾದಗಳನ್ನು ತಿಳಿಯದೆ ಒಂದುಗೂಡಿಸಿ ಬರೆಯಹೋದ್ದರಿಂದ ಈ ಪುಸ್ತಕದಲ್ಲಿ ದೋಷಗಳು ಬಹಳವಾಗಿವೆ. ಇನ್ನು ಇಲ್ಲಿಗೇ ಮುಗಿಸುವೆನು. ಹೆಚ್ಚಿನ ಭಾಷಾಸರಣಿಯ ದೋಷಗಳನ್ನು ಎಣಿಸಿಲ್ಲ. ತಿಪ್ಪರಾಸಿ ಎಂಬ ಕನ್ನಡ ಶಬ್ದಕ್ಕೆ ತೃಪ್ತರ್ಷಿ ಎಂಬ ಸಂಸ್ಕೃತರೂಪವು ಯಾವ ವ್ಯಾಕರಣ ನಿಯಮದಿಂದಲು ಸಾಧಿಸಲಾಗದು. ಇತಿ ಶಿವಂ.

---

## ಕಾಣಿಕೆ (ರವೀಂದ್ರರ ಲೇಖನ)

ಮಹಾನವಮಿಯ ಮಹೋತ್ಸವ, ಹತ್ತರವೇ ಬಂತು. ಉಗ್ರಾಣವೆಲ್ಲ ಅದೆಷ್ಟೋ ಒಡವೆಗಳಿಂದ ತುಂಬಿಹೋಗಿದೆ. ಅದೆಷ್ಟೊ ಬನಾರಸದ ಜರತಾರಿಗಳು; ಅದೆಷ್ಟೊ ಚಿನ್ನದ ಆಭರಣಗಳು; ಹರವೆ ತುಂಬಿ ತುಂಬಿ ಹಾಲು ಮೊಸರು; ಪಾತ್ರೆ ತುಂಬಿ ತುಂಬಿ ಪಕ್ವಾನ್ನಗಳು–

ತಾಯಿ ಇಂದು ಎಲ್ಲರಿಗೂ ಕಾಣಿಕೆ ಕಳಿಸಬೇಕಾಗಿದೆ.

ಹಿರಿಯಣ್ಣನಿಗೆ ಪರಪ್ರಾಂತದಲ್ಲಿ ಸರಕಾರಿ ಕೆಲಸ. ಕಿರಿಯಣ್ಣನಿಗೆ ವ್ಯಾಪಾರ ಕೈಬಿಡುವಂತಿಲ್ಲ. ಇನ್ನುಳಿದ ಅಣ್ಣಂದಿರು ತಮ್ಮ ತಮ್ಮಲ್ಲಿ ಜಗಳವಾಡಿ ಬೇರೆ ಬೇರೆ ಮನೆ ಮಾಡಿದ್ದಾರೆ. ಬಳಗದವರೆಲ್ಲ ಇಲ್ಲೊಬ್ಬರು ಅಲ್ಲೊಬ್ಬರು.

ಕೂಸು, ಹೆಬ್ಬಾಗಿಲಲ್ಲಿ ನಿಂತು, ಹಲವು ದಾಸದಾಸಿಯರು ಬಣ್ಣಬಣ್ಣದ ಬಟ್ಟೆಗಳನ್ನು ಮುಚ್ಚಿಕೊಂಡು ಬೇರೆ ಬೇರೆ ಮನೆಗಳಿಗೆ ಕಾಣಿಕೆಗಳನ್ನು ಸಾಗಿಸುತ್ತಿದ್ದುದನ್ನು ದಿನವೆಲ್ಲವೂ ನೋಡಿಯೇ ನೋಡಿದ.

ಮುಚ್ಚಂಜೆ. ಕಾಣಿಕೆ ಕಳುಹುವನೆಲ್ಲ ತೀರಿವೆ. ಸಂಧ್ಯಾರ್ಚನೆಗಾಗಿ, ಹೊಂದಳಿಗೆಯನ್ನು ಹಿಡಿದುಕೊಂಡು, ಸೂರ್ಯಾಸ್ತದ ಕೊನೆಯ ಅರುಣಕಿರಣಗಳು, ನಕ್ಷತ್ರಮಂಡಲದ ಮಾರ್ಗವನ್ನು ಪ್ರತೀಕ್ಷಿಸುತ್ತಿವೆ.

ಹುಡುಗ ಒಳಗೆ ಬಂದು. ತಾಯಿಯೆಡೆಗೆ ಹೋಗಿ, 'ಅಮ್ಮಾ ನೀನು ಅದೆಷ್ಟೋ ಜನರಿಗೆ ಕಾಣಿಕೆಗಳನ್ನು ಕಳುಹಿದೆ; ನನಗೆ ಒಂದೂ ಕೊಡಲಿಲ್ಲವಲ್ಲವಮ್ಮಾ' ಎಂದು ಕೇಳಿದ.

ತಾಯಿ ಮುಗುಳ್ನಗೆಯಿಂದ ಮಾತನಾಡಿದಳು. "ಎಲ್ಲರಿಗೂ ಎಲ್ಲವನ್ನು ಕೊಟ್ಟುದಾಯ್ತು. ಈಗ ನಿನಗಾಗಿ ಏನೂ ಉಳಿದಿಲ್ಲವಲ್ಲ– ಇದು ನೋಡು" ಎಂದೆನ್ನುತ್ತ ಮಗುವಿನ ಗಲ್ಲಕ್ಕೆ ಮೆಲ್ಲನೆ ಮುತ್ತುಕೊಟ್ಟಳು.

ಮಗು ಅಳುದನಿಯಿಂದ ಮತ್ತೆ ಎಂದ "ಅಮ್ಮಾ ನನಗೆ ಏನೊಂದೂ ಕಾಣಿಕೆ ಇಲ್ಲವೆ?"

"ಮಗೂ, ನೀನೂ ದೂರ ಹೋದಿಯೆಂದರೆ, ನಿನಗೂ ಕಳಿಸುತ್ತೇನಪ್ಪಾ"

"ಹಾಗಾದರೆ ನಾನು ನಿನ್ನ ಹತ್ತಿರ ಇದ್ದಾಗ– ನೀನು ನಿನ್ನ ಕೈಗಾಣಿಕೆಯನ್ನೇನೂ ಕೊಡುವದಿಲ್ಲವೇ?"

ಒಮ್ಮೆಲೆ ತಾಯಿ ಕೈನೀಡಿ ಮಗುವನ್ನೆತ್ತಿ ಅಪ್ಪಿಕೊಂಡು "ಇದು ನೋಡು ನನ್ನ ಕಂದಾ, ಇದೇ ನನ್ನ ಕೈಗಾಣಿಕೆ–" ಎಂದು ತನ್ನ ಕೂಸನ್ನು ಮಡಲಿನಲ್ಲಡಗಿಸಿಕೊಂಡಳು.

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು— ಶ್ರೀ. ಕೃ. ಶ್ರೀ ಬೆಟಗೇರಿ, ಬೆಳಗಾಂವ

## ಪೂರ್ವ ಕಥಾಸಾರಾಂಶ

ಗೋವಿಂದಮಾಣಿಕ್ಯನು ತ್ರಿಪುರದ ದೊರೆಯಾಗಿದ್ದಾಗ್ಗೆ ಆ ಊರಲ್ಲಿ 'ಚೆನ್ನಿ' ಮತ್ತು 'ಪುಟ್ಟ' ಎಂಬಿಬ್ಬರು ಮಕ್ಕಳಿದ್ದರು. ಇವರಿಗೆ ಬಂಧುವೆಂದರೆ ಒಬ್ಬನೇ ಒಬ್ಬನಾದ ಕೇದಾರೇಶ್ವರನೆಂಬ ದೊಡ್ಡಪ್ಪನು. ಈ ಚಿಕ್ಕ ಮಕ್ಕಳೇ ಆತನ ಜೀವನದ ಏಕಮಾತ್ರಸುಖಸ್ವರೂಪರಾಗಿದ್ದರು.

ಒಂದು ದಿನ ಭುವನೇಶ್ವರೀಮಂದಿರಕ್ಕೆ ದೊರೆಯು ಬಂದಿರಲು ಈ ಅಕ್ಕತಮ್ಮಂದಿರು ಅಲ್ಲಿಯೇ ಆಡುತ್ತಿದ್ದರು. ಮುಗ್ಧ ಸ್ನಿಗ್ಧರಾದ ಆ ಬಾಲಕರಿಗೂ ದೊಡ್ಡ ಮನಸ್ಸಿನವನಾದ ದೊರೆಗೂ ಕ್ಷಣಮಾತ್ರದಲ್ಲಿ ಗೆಳೆತನವಾಗಿ ಬಿಟ್ಟಿತು. ದೊರೆಯು ಅವರಿಗೆ ಪೂಜೆಗೆಂದು ಮನೆಗೊಯ್ಯಲಿಕ್ಕೆ ಹೂಗಳನ್ನು ಕೊಯ್ದು ಕೊಟ್ಟನು. ಮರುದಿನ ಮೊದಲ್ಗೊಂಡು ಮುಂಜಾನೆ ಆ ಮಕ್ಕಳನ್ನು ಕಂಡರೇನೇ ಅವನಿಗೆ ಸಮಾಧಾನವಾಗುತ್ತಿತ್ತು. ಆ ಮುದ್ದುಮಕ್ಕಳೂ ಮನಸ್ಸುಬಿಚ್ಚಿ ಮನದಣಿ ಆ ಮಾತು ಈ ಮಾತುಗಳನ್ನೆಲ್ಲಾ ಆಡುತ್ತಿದ್ದರು.

ಹೀಗೆಯೇ ಒಂದು ವರ್ಷ ಕಳೆಯಿತು. ಆಷಾಢ ಅಮಾವಾಸ್ಯೆಯ ಮರುದಿವಸ ಆ ಮೂವರು ಮಂದಿರಕ್ಕೆ ಬಂದಾಗ್ಗೆ ಮುನ್ನಾ ದಿನ ಭುವನೇಶ್ವರಿಗೆ ಬಲಿಕೊಟ್ಟ ನೂರಾ ಒಂದು ಕೋಣಗಳ ನೆತ್ತರವು ಅಲ್ಲಿ ಹರಿಯುತ್ತಿತ್ತು. ಅದನ್ನು ಕಂಡು ಇದೇನೆಂದು ಚೆನ್ನಿಯು ರಾಜನನ್ನು ಕೇಳಿದಳು. ರಾಜನು ಬೆಚ್ಚಿಬಿದ್ದನು. ಅದೇ ದಿವಸ ಚೆನ್ನಿಗೆ ಜ್ವರ ಬಂತು. ಮರುದಿವಸ ದೊರೆಗೂ ಮಕ್ಕಳಿಗೂ ಭೆಟ್ಟಿಯಾಗಲಿಲ್ಲ. ದೊರೆ ಕೇದಾರೇಶ್ವರನ ಮನೆಗೇ ಬಂದನು. ರಾಜವೈದ್ಯ ಬಂದ; ಉಪಚಾರವೆಲ್ಲಾ ಆಯಿತು. ಆ ಕೋಮಲ ಬಾಲಕಿಯು ರಾಜನ ತೊಡೆಯ ಮೇಲೆ ತೀರಿಕೊಂಡಿದ್ದ



ಮರುದಿನ ಓಲಗದಲ್ಲಿ ರಾಜನು 'ಪ್ರಾಣಿಹಿಂಸೆ'ಯಾಗಬಾರದೆಂದು ಕಟ್ಟಪ್ಪಣೆ ಮಾಡಿದನು. ರಾಜನ ಪುರೋಹಿತ ರಘುಪತಿಯು ಪ್ರತಿಭಟಿಸಿದನು. ತಮ್ಮನಾದ ನಕ್ಷತ್ರರಾಯನೂ ಪ್ರಾಚೀನಪದ್ಧತಿಯನ್ನು ಕಾಪಾಡುವದು ಕರ್ತವ್ಯವೆಂದನು. ಧೀರ ಗಂಭೀರ ಗೋವಿಂದಮಾಣಿಕ್ಯನು ತನ್ನ ಸದಂತಃಕರಣ ಪ್ರವೃತ್ತಿಯೇ ಈ ವಿಷಯದಲ್ಲಿ ಪ್ರಮಾಣವೆಂದನು. ಸಭಾಸದರೆಲ್ಲರೂ " ಅವನತಿಯ ಲಕ್ಷಣವಿದು. ಬೌದ್ಧರಿಗೂ ಹಿಂದುಗಳಿಗೂ ಭೇದವುಳಿಯಿತೆಲ್ಲಿ ? " ಎಂದು ಯೋಚಿಸುತ್ತ ಮನೆಗೆ ತೆರಳಿದರು. ಅಂದಿನಿಂದ ಪುಟ್ಟನನ್ನು ದೊರೆಯು ತನ್ನ ಬಳಿಯಲ್ಲಿಯೇ ಇರಿಸಿಕೊಂಡನು. ಮುದುಕ ಕೇದಾರೇಶ್ವರನಿಗೂ ಅರಮನೆಯಲ್ಲಿಯೇ ಎಡೆ ದೊರೆಯಿತು.

ಕ್ಷತ್ರಿಯನಾಗಿ ಜಾತಿಯಿಂದ ರಜಪೂತನಾದ ಜಯಸಿಂಹನೆಂಬವನು ಭುವನೇಶ್ವರೀಮಂದಿರದ ಸೇವಕನಾಗಿದ್ದನು. ಆತ ಮನೆಯ ಪುರಾತನ ಸೇವಕರಲ್ಲೊಬ್ಬನಾದ ಸುಚೇತ್‌ಸಿಂಹನೆಂಬವನು ಜಯಸಿಂಹನ ತಂದೆಯು. ಸುಚೇತ್‌ಸಿಂಹನು ಅಕಾಲಮೃತ್ಯುಗೀಡಾದ್ದರಿಂದ ಅನಾಥನಾದ ಜಯಸಿಂಹನನ್ನು ದೊರೆಯು ಮಂದಿರದ ಕಾರ್ಯಕ್ಕೆ ನಿಯಮಿಸಿದನು. ಮಂದಿರದ ರಘುಪತಿಯೇ ಆತನ ಸಾಕುತಂದೆ. ಜಯಸಿಂಹನು ಕವಿಹೃದಯದವನು.

ಒಡ್ಡೋಲಗದ ಸುದ್ದಿಯನ್ನು ತಂದು ರಘುಪತಿಯು ಜಯಸಿಂಹನಿಗೆ ಹೇಳಿದನು. ಮಹಾರಾಜರು ಹೀಗೆ ಮಾಡಬಾರದಿತ್ತೆಂದು ಆಗ ಆತನಿಗನಿಸಿತು. ಮುಂದೆ ರಘುಪತಿಯು ನಕ್ಷತ್ರರಾಯನನ್ನು ಗುಪ್ತವಾಗಿ ಕರಿಸಿ ದೇವಿಗೆ ರಾಜರಕ್ತದ ನೀಡಿಕೆಯಾಗಿದೆಯೆಂದೂ ತನಗೆ ಸ್ವಪ್ನದಲ್ಲಿ ಬಂದು ಇದನ್ನು ಆಕೆಯೇ ಒಡನುಡಿದಳೆಂದೂ ಹೇಳಿದನು. ಹಾಗೂ ಹೀಗೂ ಮಾಡಿ

ಅಣ್ಣನ ಕೊಲೆ ಮಾಡಬೇಕೆಂದು ತಮ್ಮನನ್ನು ಉದ್ಯುಕ್ತನನ್ನಾಗಿ ಮಾಡಿ ಕಳಿಸಿದನು. ಇದು ಮಾತ್ರ ಅನ್ಯಾಯವೆಂದೂ ದೇವಿಗೆ ರಾಜರಕ್ತ ಬೇಕೇ ಆಗಿದ್ದರೆ ತಾನೇ ಹೋಗಿ ತರುವೆನೆಂದೂ ಜಯಸಿಂಹನು ಉದ್ಗಾರ ತೆಗೆದನು. ನಕ್ಷತ್ರನು ಅಣ್ಣನ ಮೇಲೆ ಕೈ ಮಾಡಿ ಅರಸನಾದರೆ ಯಾತೂ ಏನೂ ನುಡಿಯರೆಂದೂ ಅದೇ ಜಯಸಿಂಹನು ಕೊಲೆ ಮಾಡಿದರೆ ಅಪಾಯಕರವೆಂದೂ ಬುದ್ಧಿವಾದವನ್ನು ರಘುಪತಿಯು ಹೇಳತೊಡಗಿದನು. ಏಕೆಂದರೆ ರಘುಪತಿಗೂ ಜಯಸಿಂಹನಿಗೂ ಜನಕಪುತ್ರರ ಅತೀವ ಸಂಬಂಧವು.

ತೀವ್ರಭಾವನೆಯುಳ್ಳ ಜಯಸಿಂಹನಿಗೆ ಅಂದಿನಿಂದ ಭುವನೇಶ್ವರೀಮಾತೆಯ ಕಾರುಣ್ಯದ ವಿಷಯವಾಗಿ ಸಂಶಯ ಬರಹತ್ತಿತು. ಪ್ರಾಣಿಹಿಂಸೆಯನ್ನೇಕೆ ಮಾಡಬೇಕೆಂದೂ ಏಕೆ ಬಿಡಬಾರದೆಂದೂ ಆತನು ಯೋಚಿಸತೊಡಗಿದನು. ಇತ್ತ ಗುರುವಾದ ರಘುಪತಿಯಲ್ಲಿಯೂ ಆತನದು ಅತ್ಯಂತ ನಿಷ್ಠೆ. ಹೀಗಾಗಿ ಮನಸ್ಸೆಲ್ಲಾ ಕಡಡಿದ ಕೊಳದಂತಾಯಿತು. ಒಂದು ದಿನ ಮೂರ್ತಿಯ ಮುಂದೆ ಕುಳಿತು ‘ ತಾಯೀ ರಾಜರಕ್ತವು ನಿನಗೆ ಬೇಕಾದುದು ನಿಜವೇ’ ಎಂದು ಆರ್ತನಾಗಿ ಕೇಳಿದನು. ರಹಸ್ಯದಲ್ಲಿದ್ದ ರಘುಪತಿಯು ‘ ಹೌದು, ಎಂದು ಕೂಗಿದನು. ಜಯಸಿಂಹನಿಗೂ ಒಂದು ಕ್ಷಣ ಸಂಶಯ ಬಂದಿತು. ಆದರೆ ಸ್ವಾಮಿನಿಷ್ಠನಾದ ಆತನು ಚಟಕ್ಕನೆಂದು ಸಶಸ್ತ್ರನಾಗಿ ಹೊರಟು ಗೋವಿಂದಮಾಣಿಕ್ಯನು ಧ್ರುವ (ಪುಟ್ಟನಿಗೆ ಹೊಸದಾಗಿ ದೊರೆಯಿಟ್ಟ ಹೆಸರು; ‘ ಪುಟ್ಟ, ಎಂದೆನ್ನಲು ಆತನಕ್ಕನಿಗೊಬ್ಬಳಿಗೇ ಅಧಿಕಾರವಿತ್ತೆಂದರೂ ಸಲ್ಲುವದು) ನೊಡನೆ ಆಡುತ್ತ ಕುಳಿತಿದ್ದ ಗೋಮತೀನದಿಯ ತೆಂಕಣ ದೆಸೆಗೆ ಬಂದನು.

ರಾಜನು ಮಗುವಿನೊಂದಿಗೆ ಬೆರೆತು ತಾನೂ ಮಗುವಾಗಿದ್ದನು. ಸೇವಕನಾದ ಜಯಸಿಂಹನನ್ನು ಹತ್ತಿರವೇ ಕುಳ್ಳಿರಿಸಿಕೊಂಡನು. ಜಯಸಿಂಹನು ಸ್ವಲ್ಪ ಮಾತನಾಡಿ ರಾಜನನ್ನು ಕೊಲ್ಲಲಿಕ್ಕೆ ದೇವಿಯ ಆಜ್ಞೆಯಾಗಿದೆಯೆಂದು ಹೇಳಿದನು. ‘ರಘುಪತಿಯೇ ಹೀಗೆ ಹೇಳಿದನೆಂದು’ ರಾಜನಂದ. ‘ ಅದೇನಿಲ್ಲ ಎಲ್ಲಾ ಒಂದೇ’ ಎಂದು ಜಯಸಿಂಹನು ಕತ್ತಿಯನ್ನೆಳೆದನು. ಇದನ್ನು ಧ್ರುವನು ನೋಡಿ ಗಟ್ಟಿಯಾಗಿ ಅತ್ತುಬಿಟ್ಟು ಪುಟ್ಟಪುಟ್ಟ ಕೈಗಳಿಂದ ರಾಜನನ್ನು ತಬ್ಬಿಕೊಂಡು ಜೀವಭಾವದಿಂದ ಅವನನ್ನು ಮರೆಮಾಡಿದನು. ರಾಜನು ಜಯಸಿಂಹನನ್ನು ಎಣಿಕೆಗೆ ತಾರದೆ ಮಗುವನ್ನೇ ತಕ್ಕಯಿಸಿ ಎದೆಗೊತ್ತಿಕೊಂಡನು. ಇದರಿಂದ ಜಯಸಿಂಹನ ಕೋಮಲಾಂತಃಕರಣವು ಕರಗಿಹೋಯಿತು. ಖಡ್ಗವನ್ನು ಎಸೆದು ಬಿಟ್ಟು ‘ ಮಗೂ, ಹೆದರಬೇಡ; ನೀನು ಈ ವಿಶಾಲವಕ್ಷದಲ್ಲಿ ವಿರಮಿಸು’ ಎಂದು ಹೇಳಿ ಹೊರಡಲೆದ್ದನು. ಹೋಗುವ ಮುಂದೆ ನಕ್ಷತ್ರರಾಯನು ಕೊಲೆಮಾಡುವವನಿರುವನೆಂದು ರಾಜನಿಗೆ ಎಚ್ಚರಿಕೆ ಕೊಟ್ಟು ಹೋದನು. ಮನೆಗೆ ಬಂದು ಇವನ್ನೆಲ್ಲಾ ರಘುಪತಿಗೆ ಹೇಳಿದನು. ಅವನು ತನ್ನ ದರ್ಪದಿಂದ ‘ ಆಷಾಢ ಬಹುಳ ಚತುರ್ದಶಿಯೊಳಗಾಗಿ ರಾಜರಕ್ತವನ್ನು ದೇವಿಯ ಅಡಿಗಳಿಗೆ ತಂದು ನೀಡುವೆನೆಂದು ಮತ್ತೊಮ್ಮೆ ಜಯಸಿಂಹನಿಂದ ವಚನ ತೆಗೆದುಕೊಂಡನು.

ದೊರೆಯು ಮನೆಗೆ ಮರಳಿ ಬಂದು ನಿಯಮಿತ ರಾಜಕಾರ್ಯಗಳನ್ನೆಲ್ಲ ಮುಗಿಸಿದ್ದನು. ನಕ್ಷತ್ರರಾಯನು ಆ ದಿನ ಓಲಗಕ್ಕೆ ಬಂದಿರಲಿಲ್ಲ. ದೊರೆಯು ಕರೆಯಲು ಕಳುಹಿದನು. ದೇಹಾಲಸ್ಯವುಂಟಾಗಿದೆಯೆಂದು ಆತನು ಹೇಳಿಕಳಿಸಿದನು. ದೊರೆಯು ತಾನೇ ತಮ್ಮನ ಬೀಡಾರಕ್ಕೆ ಬಂದು ಏನು ದೇಹಾಲಸ್ಯವೆಂದು ಕೇಳಿದನು. ನಕ್ಷತ್ರನು ತೀರ ಅಧೀರನಾಗಿ ಹೋದನು. ಒಲವಿನ ಗೂಡಿನಲ್ಲಿಯೂ ಕೊಲೆಯು ಸೇರಿಕೊಂಡೇ ಇರುವದಲ್ಲಾ ಎಂದು ರಾಜಹೃದಯವು ನೊಂದುಕೊಂಡಿತು. ತುಸು ಹೊತ್ತಿನಮೇಲೆ ದೊರೆಯು ಗಂಭೀರ ಭಾವದಿಂದ ‘ ನಕ್ಷತ್ರ ! ಇಂದು ಇಳಿಹೊತ್ತಿನಲ್ಲಿ ನಾವಿಬ್ಬರೂ ಸೇರಿ ಗೋಮತೀ ತೀರದ ನಿರ್ಜನವಾದ ವನದ ಕಡೆಗೆ ತಿರುಗಾಡಲು ಹೋಗೋಣ’ ಎಂದು ಹೇಳಿ, ತನ್ನ ಮನೆಗೆ ಹೋದನು. ಅವನ ಮುಖದಲ್ಲಿ ರೋಷವು ರವಷ್ಟಾದರೂ ಇರಲಿಲ್ಲ.

ಇಳಿಹೊತ್ತಾದಕೂಡಲೆ ತಮ್ಮನನ್ನೊಡಗೊಂಡು ರಾಜನು ಕಾಲ ನಡಿಗೆಯಿಂದಲೇ ಕಾಡಿನ ಕಡೆಗೆ ನಡೆದನು. ನಕ್ಷತ್ರನ ಮೈ ಜುಮ್ಮೆನ್ನಹತ್ತಿತು. ರಾಜನು ತನಗೆ ಈ ಕಗ್ಗಾಡಿನಲ್ಲಿ ಶಿಕ್ಷೆಯನ್ನು ವಿಧಿಸಿಯೇ ಬಿಡುವನೆಂದು ಭಾವಿಸಿದನು. ಇಷ್ಟರಲ್ಲಿ ಒಂದು ಹೊಂಡದ ನಂತರ ‘ನಿಂತುಕೊಳ್ಳು’ ಎಂದು ರಾಜನಂದನು. ಆಗ ಈ ‘ನಿಂತುಕೊಳ್ಳು’ ಎಂಬುದೊಂದೇ ಶಬ್ದವು ಹಲವು ವೇಳೆಯಿಂದ ಎಲ್ಲೆಲ್ಲಿಯೂ ಮಮುದುಮಿಸತೊಡಗಿರುವುದೇನೋ ಎಂದು ನಕ್ಷತ್ರನಿಗೆ ತೋರಿತು. ತಮ್ಮನನ್ನು ತಡೆದು ನಿಲ್ಲಿಸಿ ‘ ನನ್ನನ್ನು ಏತಕ್ಕಾಗಿ ಕೊಲ್ಲಬೇಕೆನ್ನುವೆ ತಮ್ಮಾ ? ಕೊಂದು ಅರಸನಾಗಬೇಕೆನ್ನುವಿಯಾ ? ಕಿರೀಟಸಿಂಹಾಸನಗಳು ದೊರಕಿದರೆ ರಾಜನಾದಂತಾಯಿತೇ ? ಸಾವಿರಾರು ಜನರ ದುಃಖದ ಹೊರೆ ಹೊರಬೇಕಾಗುವದು. ಧರಣಿಯು ದುಃಖವನ್ನು ಹರಣಮಾಡಬಲ್ಲವನು; ಧರಣಿಯು ಪಾಲನು’ ಎಂದು

ನುಡಿದನು. ಮತ್ತೆ 'ನನ್ನನ್ನು ಕೊಲ್ಲುವದೇ ನಿನ್ನ ಮನಸ್ಸಿನಲ್ಲಿದ್ದರೆ ಕೊಂದುಬಿಡು. ಯಾವ ಚಿಂತೆಯೂ ಇಲ್ಲದೆ ಅತ್ಯಂತ ಸ್ನೇಹದಿಂದ ಅಣ್ಣತಮ್ಮಂದಿರು ಹೊಂದಿಕೊಂಡಿರುವ ಸ್ಥಳದಲ್ಲಿ ಅಣ್ಣತಮ್ಮಂದಿರ ರಕ್ತಪಾತವಾಗಬಾರದೆಂದು ನಿನ್ನನ್ನಿಲ್ಲಿಗೆ ಕರೆತಂದಿರುವೆನು. ನಿನ್ನ ತಂದೆ ಅಜ್ಜಂದಿರ ರಕ್ತವೇ ಉಳ್ಳ ನನ್ನನ್ನು ನಿಶ್ಚಿಂತೆಯಿಂದ ಈ ನಿರ್ಜನಪ್ರದೇಶದಲ್ಲಿ ಕೊಂದು ಬಿಡು' ಎಂದೆಂದು ತಮ್ಮನ ಕೈಯಲ್ಲಿ ಕತ್ತಿಯನ್ನು ಕೊಟ್ಟನು. ನಕ್ಷತ್ರನು ಅಳುತ್ತಳುತ್ತ ಹಾಗೆ ಮಾಡಲಾರೆನೆಂದೂ ರಘುಪತಿಯೇ ಹಾಗೆ ಉಪದೇಶಿಸಿದನೆಂದೂ ಹೇಳಿದನು. 'ರಘುಪತಿಯ ಬಳಿಗೆ ಹೋಗದೆ ನೀನು ನನ್ನ ಬಳಿಯಲ್ಲಿಯೇ ಇರು' ಎಂದು ದೊರೆಯೆಂದನು.

ಆ ಮೇಲೆ ತಮ್ಮನನ್ನೊಡಗೂಡಿ ದೊರೆಯು ಮಂದಿರದ ಕಡೆಗೆ ಬಂದನು. ಮಂದಿರದಲ್ಲಿ ಜಯಸಿಂಹನೂ ರಘುಪತಿಯೂ ಕುಳಿತಿರುವರು. ಅಣ್ಣತಮ್ಮಂದಿರು ರಾಜಪುರೋಹಿತನಿಗೆ ನಮಸ್ಕರಿಸಿದರು. ರಘುಪತಿಯು ಗಂಭೀರಸ್ವರದಲ್ಲಿ 'ನಾಡೆಲ್ಲವೂ ನೆಮ್ಮದಿಯಷ್ಟೇ ?' ಎಂದು ಕೇಳಿದನು. 'ನನಗೂ ಅದೇ ನೆಮ್ಮದಿ ಬೇಕಾಗಿದೆ. ಅದನ್ನು ನಾಶಗೊಳಿಸಲು ಪ್ರಯತ್ನವನ್ನು ಮಾಡಬಾರದು. ಈ ಧನಧಾನ್ಯಸಂಪನ್ನ ರಾಜ್ಯವನ್ನು ದೇವತೆಯ ಹೆಸರಿನಿಂದ ಹಿಂಸೆಗಳಿಂದ ಹಿಂಸೆಗೊಳಿಸಬೇಡಿರಿ. ಅದನ್ನು ಹೇಳಿಹೋಗಲಿಕ್ಕೇ ಬಂದಿರುವೆ' ಎಂದೆಂದು ತಮ್ಮನೊಡನೆ ಹೊರಟನು.

ಆಗ್ಗೆ ಜಯಸಿಂಹನೂ ಹೊರಟುಬಂದನು. "ಮಹಾರಾಜ! ಇಂದಿಗೆ ನೀವೇ ನನಗೆ ಪ್ರಭುವು. ಈ ಕಗ್ಗತ್ತಲೆಯೊಳಗಿಂದ ಕಿರಿಯ ತಮ್ಮನ ಕೈ ಹಿಡಿದು ಕರೆದೊಯ್ಯುವಂತೆಯೇ ನನ್ನನ್ನೂ ಜೊತೆಗೆ ಕರೆದೊಯ್ಯಬೇಕು. ನನ್ನ ಮನಸ್ಸಿಗೆ ಬೆಳಕೇ ಕಾಣದಾಗಿದೆ" ಎಂದು ಮೊರೆಯಿಟ್ಟನು. ದೊರೆಯು ಆ ರಾತ್ರಿ ಜಯಸಿಂಹನನ್ನೂ ಅರಮನೆಗೆ ಕರಕೊಂಡು ಹೋದನು.

ಮರುದಿನ ಮುಂಜಾನೆ ಜಯಸಿಂಹನು ಮನೆಗೆ ಬಂದವನು ಗುರುವಿನ ಬಳಿಗೆ ಹೋಗದೆ ತನ್ನ ತೋಟಕ್ಕೆ ಹೋಗಿ ರಾಜನು ತನಗೆ ಉಪದೇಶಿಸಿದ ಮಾತುಗಳನ್ನು ಮನದಲ್ಲಿಯೇ ಚಿಂತಿಸತೊಡಗಿದನು. ಇತ್ತ ರಘುಪತಿಯು ಒಬ್ಬೊಂಟಿಗನಾಗಿ ಪೂಜೆ ಮಾಡದೆ ಇದ್ದನು. ಪೂಜೆಯ ನಿಯಮಭಂಗವಾದುದು ಇದೇ ಮೊದಲು. ರಘುಪತಿಯು ಜಯಸಿಂಹನಿದ್ದಲ್ಲಿಗೆ ಹೋಗಿ 'ಮಗೂ! ಇಷ್ಟು ದಿನ ನನ್ನ ವಿಷಯಕ್ಕಿದ್ದ ನಿನ್ನ ಪ್ರೇಮವನ್ನು ಯಾರು ಕಿತ್ತೊಗೆಯುತ್ತಿರುವರು ?' ಎಂದು ಕೇಳಿದನು.

'ಯಾರೂ ಇಲ್ಲ. ತಾವೇ ನನ್ನನ್ನು ದೂರಮಾಡುತ್ತಿರುವಿರಿ. ಸ್ನೇಹಮಮತೆಗಳ ಪವಿತ್ರ ಅಧಿಕಾರವು ಪ್ರಪಂಚದಲ್ಲಿ ಇಲ್ಲವೆಂದೂ ಎಲ್ಲಿಯಾದರೂ ಕೊಲೆಗೆಲಸ ನಡೆಯುತ್ತಿದ್ದರೆ ಅಲ್ಲಿ ಇಷ್ಟು ದಿವಸ ತಾಯಿಯೆನಿಸಿಕೊಂಡ ಶಕ್ತಿಯು ನೆತ್ತರ ನೀರಡಿಕೆಯನ್ನು ತೀರಿಸಿಕೊಳ್ಳುತ್ತಿರುವಳೆಂದೂ ತಾವೇ ಹೇಳಿಲ್ಲವೇ ?' ಎಂದು ಜಯಸಿಂಹನು ಉತ್ತರಕೊಟ್ಟನು. 'ಹಾಗಾದರೆ ನೀನು ಸ್ವತಂತ್ರನಾದೆ' ಎಂದನ್ನುತ್ತ ರಘುಪತಿಯು ಏಳಲುದ್ಯುಕ್ತನಾದನು. ತೂಗುಯ್ಯಾಲೆಯಂತಿದ್ದ ಜಯಸಿಂಹನ ಮನಸ್ಸು ಮತ್ತೆ ರಘುಪತಿಯತ್ತ ತೆರಳಿತು. 'ತಾವೇ ನನ್ನ ಪ್ರಭುವು. ನೀವು ಹೇಳಿದಂತೆ ಮಾಡುವೆ' ಎಂದೆನನು. ಅವನನ್ನು ರಘುಪತಿಯು ತಬ್ಬಿಕೊಂಡನು.

ಹೀಗಿರುತ್ತಿರಲು ಮಂದಿರದಲ್ಲಿ ಅನೇಕ ಜನರು ದೇವಿಯ ದರ್ಶನಕ್ಕೆಂದು ಬರುತ್ತಿದ್ದಾಗ ಅವರ ಮನಸ್ಸನ್ನು ರಾಜನ ವಿರುದ್ಧ ಕ್ಷೋಭೆಗೊಳ್ಳುವಂತೆ ರಘುಪತಿಯು ಪ್ರಯತ್ನಿಸುತ್ತಿದ್ದನು. ಮೂಢ ಭಾವಿಕರಾದ ಆ ಜನರು ಈತನು ಹೇಳಿದ್ದಕ್ಕೆಲ್ಲ ತಲೆದೂಗುತ್ತಿದ್ದರು. ದೇವಿಯು ಮುಖತಿರುಗಿಸಿರುವಳೆಂಬುದನ್ನು ಅವರಿಗೆ ತೋರಿಸಿ ಅವರನ್ನು ಮತ್ತಿಷ್ಟು ಸಿಟ್ಟಿಗೆಬ್ಬಿಸಿದನು. ಇದೆಲ್ಲಾ ಜಯಸಿಂಹನ ಮನಸ್ಸಿಗೆ ಬರಲಿಲ್ಲ. 'ತಂದೆಯೇ ಏನಿದು ? ನಾನೀಗ ಯಾವ ಮಾತನ್ನೂ ಆಡಲಾಗದೇ ! ನೀವು ಹೇಳಿದ್ದೆಲ್ಲವನ್ನು ನಂಬಬೇಕೇನು ?' ಎಂದು ಕೇಳಲು ರಘುಪತಿಯು ಕೆಂಪಡರಿದ ಕಣ್ಣುಗಳಿಂದ ದುರುದುರುನೆ ನೋಡುತ್ತ 'ಅಹುದು' ಎಂದು ನುಡಿದನು. ಜಯಸಿಂಹನು ಎದೆಯ ಮೇಲೆ ಮುಷ್ಟಿಯಿಂದ ಹೊಡೆದುಕೊಂಡು 'ನನ್ನೆದೆಯು ಬಿರಿಯುತ್ತಲಿದೆ' ಎಂದು ನುಡಿದವನೇ ಆ ಜನಸಂದಣಿಯನ್ನು ಬಿಟ್ಟು ಹೊರಕ್ಕೆ ನಡೆದನು.

ಮರುದಿನವೆ ಆಷಾಢ ಬಹುಳ ಚತುರ್ದಶಿಯು. ಇಂದಿನ ರಾತ್ರಿಯಲ್ಲಿಯೇ ಚತುರ್ದಶ ದೇವಿಯರ ಪೂಜೆ. ಈ ದಿನ ಬೆಳಿಗ್ಗೆ ಜಯಸಿಂಹನು ಮಂದಿರದ ಕದಂಬವನದಲ್ಲಿ ಕುಳಿತು ಏನನ್ನೋ ಯೋಚಿಸುತ್ತಲಿದ್ದಾನೆ. ತಾನಾವುದೋ ಒಂದು ಪ್ರವಾಸಕ್ಕೆ ಹೊರಟಿರುವೆನೆಂದು ಅವನು ಎಣಿಕೆ ಹಾಕುತ್ತಿದ್ದಾನೆ. ಈ ಹೊತ್ತಿಗೆ ರಘುಪತಿಯು ಬರುತ್ತಿರುವದನ್ನು ಕಂಡು ತನ್ನ ಭಾವನೆಗಳನ್ನೆಲ್ಲ ಹತ್ತಿಕ್ಕಿದನು. 'ಇಂದೇ ಪೂಜೆಯ ದಿನ. ಅಮ್ಮನ ಅಡಿಗಳಲ್ಲಿ ಆಣೆ ಮಾಡಿದುದು ನೆನಪಿದೆಯೆ?' ಎಂದು ರಘುಪತಿಯು ಕೇಳಿದ. 'ಅಹುದು ಇದೆ' ಎಂದು ಜಯಸಿಂಹನು ನಾಳೆ ರಾಜನ ವಿರುದ್ಧ ಪ್ರಜೆಗಳನ್ನು ಹುರಿಗೊಳಿಸುವನು

ನನ್ನ ಹರಕೆಯಿಂದ ನೀನು ಎಡರುಗಳಿಲ್ಲದೆ ಅಮ್ಮನ ಆದೇಶವನ್ನು ನೆರವೇರಿಸಬಲ್ಲೆ' ಎಂದು ರಾಜಪುರೋಹಿತನು ಹೇಳಿದನು.

ಇಳಿಹೊತ್ತಿನ ಸಮಯ. ದೊರೆಯ ಬಾಲಧ್ರುವನೊಡನೆ ಚಿಣ್ಣಾಟಮಾಡುತ್ತಲಿದ್ದನು. ಆಟವಾಡುತ್ತಾಡುತ್ತ ಧ್ರುವನೇ ದೊರೆಯಾದನು. ಕಿರೀಟವೂ ಆತನ ತಲೆಯ ಮೇಲೆ ಬಂದಿತು. ಇಷ್ಟುಹೊತ್ತಿಗೆ ಹೇಳಿಕಳಿಸಿದ ಪ್ರಕಾರ ನಕ್ಷತ್ರನು ದೊರೆಯ ಬಳಿ ಬಂದನು. ಧ್ರುವನ ತಲೆಯಮೇಲೆ ರಾಜಮುಕುಟವಿರುವದನ್ನು ನೋಡಿ ನಕ್ಷತ್ರರಾಯನ ಮನಸ್ಸಿಗೆ ಹೇಗೆ ಹೇಗೊ ಆಯಿತು. ನಕ್ಷತ್ರರಾಯನು ತನ್ನ ಕಡೆಗೆ ನೋಡುತ್ತಿರುವದು ಧ್ರುವನಿಗೆ ಗೊತ್ತಾಗಿ ಅವನು ಗಂಭೀರಭಾವದಿಂದ 'ನಾನು ದೊಳೆ' ಎಂದು ತಿಳಿಯಪಡಿಸಿದನು. 'ಹಾಂ, ಹಾಗೆನ್ನಕೂಡದು' ಎಂದು ನುಡಿದವನೆ ಬಾಲಕನ ತಲೆಯ ಮೇಲಿದ್ದ ಕಿರೀಟವನ್ನು ದೊರೆಯ ಕೈಗೆ ಕೊಡಹೋದನು. ಧ್ರುವನು ಅಳಹತ್ತಿದನು. ರಾಜನು ನಕ್ಷತ್ರನನ್ನು ತಡೆದು ಕಿರೀಟವನ್ನು ಮತ್ತೆ ಧ್ರುವನ ತಲೆಯ ಮೇಲಿಟ್ಟು ತಮ್ಮನೊಡನೆ ರಾಜಕಾರಣದ ಮಾತನಾಡತೊಡಗಿದನು. 'ರಘುಪತಿಯು ಹೀನವಾದ ಹಲವು ಹಂಚಿಕೆಗಳಿಂದ ಪ್ರಜೆಗಳಲ್ಲಿ ನಿಷ್ಕಾರಣವಾಗಿ ಅಸಂತೋಷವನ್ನು ಹೆಚ್ಚಿಸುತ್ತಿರುವನಂತೆ. ಈಗ ನೀನೇ ಹೋಗಿ ಪಟ್ಟಣದಲ್ಲೆಲ್ಲ ತಿರುಗಾಡಿ ಸಟೆದಿಟಗಳನ್ನು ತಿಳಿದುಕೊಂಡು ಬಾ' ಎಂದು ಹೇಳಿ ಕಳಿಸಿದನು.

ಇಷ್ಟರಲ್ಲಿ ಜಯಸಿಂಹನು ಬಂದು 'ಮಹಾರಾಜ! ನಾನು ಎಲ್ಲಿಗೋ ದೂರದೇಶಕ್ಕೆ ಹೋಗಬೇಕೆಂದಿರುವೆನು. ತಾವು ಹರಕೆಯನ್ನು ನೀಡಬೇಕು' ಎಂದು ಬಿನ್ನವಿಸಿಕೊಂಡನು. ಎಲ್ಲಿಗೆ ಹೋಗುವೆಯೆಂದು ರಾಜನು ಕೇಳಲು 'ನಾನು ಕಾಣೆನು ದೊರೆಯೆ! ನಮಸ್ಕಾರ. ಹೆಚ್ಚಿಗೆ ಅವಕಾಶವಿಲ್ಲ! ತಮ್ಮ ಆಶೀರ್ವಾದವಿರಲಿ ಎಂದರಾಯಿತು' ಎಂದು ಹೇಳಿದವನೇ ಜಯಸಿಂಹನು ಹೊರಟುಬಿಟ್ಟನು. ಧ್ರುವನೂ ತನ್ನ ದೊರೆತನದ ಮಾತಿನಿಂದ 'ನೀನು ಓಗಬೇಡ' ಎಂದು ತಡೆಯಲು ಅವನನ್ನು ಎತ್ತಿ ಮುತ್ತಿಟ್ಟು 'ಇಲ್ಲಿ ಎಲ್ಲಿರಲಿ ಮಗೂ?' ಎಂದಂದವನೇ ಅರಮನೆಯಿಂದ ಹೊರಟು ಹೋದನು.

ಇಂದೇ ಚತುರ್ದಶೀ ತಿಥಿಯು. ರಾಜರಕ್ತವು ದೇವಿಯ ಅಡಿಗಳಲ್ಲಿ ನೈವೇದ್ಯವಾಗಿ ಬರತಕ್ಕದು. ಇಂದಿನ ಇರುಳಲ್ಲಿ ಯಾರೂ ಮನೆಯ ಹೊರಕ್ಕೆ ಹೋಗಬಾರದೆಂದು ಕಟ್ಟಪ್ಪಣೆಯಿದ್ದರೂ ಜಯಸಿಂಹನೊಬ್ಬನು ಹೊರಕ್ಕೆ ಬಂದಿದ್ದಾನೆ. ಆತನು ತನ್ನ ಖಡ್ಗವನ್ನು ಮಸೆದು ಮಸೆದು ಒರೆಯಲ್ಲಿ ಹಾಕಿಕೊಂಡು ಮಧ್ಯರಾತ್ರಿಗೆ ಮಂದಿರದ ಕಡೆಗೆ ಹೋಗತಕ್ಕವನು. ರಘುಪತಿಯು ಜಯಸಿಂಹನ ಹಾದಿಯನ್ನೇ ನೋಡುತ್ತಿದ್ದಾನೆ.

ಬಂದನು ಜಯಸಿಂಹ! ರಘುಪತಿಯು ಆತನ ಕಿವಿಯ ಹತ್ತಿರ ಬಂದು 'ತಂದಿರುವೆಯಾ ರಾಜರಕ್ತವನ್ನು?' ಎಂದು ಕೇಳಿದನು. 'ತಂದಿರುವೆ. ನೀವು ದೂರ ಸರಿಯಿರಿ. ದೇವಿಗೆ ಅವನ್ನು ನಿವೇದಿಸುವೆನು' ಎಂದು ಹೇಳಿದವನೇ ದೇವಿಯ ಕಡೆಗೆ ತಿರುಗಿ 'ತಾಯೀ! ನಿನಗೆ ರಾಜರಕ್ತ ಬೇಕೇ? ನಾನೂ ರಾಜಪುತ್ರಜಾತಿಯವನು. ನನ್ನ ಮುತ್ತಜ್ಜನು ರಾಜನಾಗಿದ್ದನು. ನನ್ನ ಮಾತಾಮಹನ ವಂಶದವರು ಈಗಲೂ ರಾಜರು. ಇಗೋ! ಈ ರಾಜರಕ್ತ' ಎಂದು ನುಡಿದವನೇ ಎದೆಗೆ ಕತ್ತಿಯಿಂದ ಇರಿದುಕೊಂಡನು. ಮೂರ್ತಿಯ ಅಡಿಗಳೆಡೆಯಲ್ಲಿ ಆತನು ದೊಪ್ಪನೆ ಬಿದ್ದುಬಿಟ್ಟನು. ಆ ಕಲ್ಲಿನ ಮೂರ್ತಿಯೇನೂ ಅಲ್ಲಾಡಲೆ ಇಲ್ಲ. ಬೆಳಗಿನ ತನಕ ರಘುಪತಿಯು ಜಯಸಿಂಹನ ಮೃತದೇಹದಮೇಲೆ ಬಿದ್ದುಬಿಟ್ಟನು; ಬೆಳಗಿನಲ್ಲಿ ಹಕ್ಕಿಗಳು ಕೂಗತೊಡಗಲು ಅದನ್ನು ಬಿಟ್ಟು ಪುರೋಹಿತನು ಎದ್ದು ನಡೆದನು.

ಬೆಳಗಿನ ಮೊದಲನೆಯ ಜಾವವು ಕೊಂಚ ಕಳೆದಿದ್ದಿತು. ನಕ್ಷತ್ರರಾಯನು ದೊರೆಯ ಅಪ್ಪಣೆಯ ಮೇರೆಗೆ ಅಸಂತೋಷದ ಕಾರಣವನ್ನು ಕಂಡು ಹಿಡಿಯಲು ಹೊರಟಿದ್ದನು. ಮಂದಿರದಲ್ಲಿ ರಘುಪತಿಯಿರುವನೆಂದು ಹೋಗಲಾರದೆ ಜಯಸಿಂಹನ ಗುಡಿಸಲಿಗೆ ಬಂದನು. ಜಯಸಿಂಹನಿಲ್ಲ; ಆದರೆ ಅಲ್ಲಿ ರಘುಪತಿಯು ಕೆಂಗಣ್ಣುಗಳ ಕಿಡಿಗಳುಳ್ಳವನಾಗಿ ಕುಳಿತಿದ್ದನು. 'ಎಲ್ಲಿದೆ ರಕ್ತ?' ಎಂದು ರಘುಪತಿಯು ನಕ್ಷತ್ರನನ್ನು ಕೇಳಿದನು. ಕಡೆಗೆ ಎಲ್ಲವೂ ತಿಳಿದುಬಂತು. ಮತ್ತೆ ರಘುಪತಿಯು ನಕ್ಷತ್ರನ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಂಡು ಅವನನ್ನು ಕೊಲೆಗೆ ಉದ್ಯುಕ್ತನನ್ನು ಮಾಡಿದನು. ಆದರೆ ಈ ಸಲ ಗೋವಿಂದಮಾಣಿಕ್ಯನ ಕೊಲೆಯಲ್ಲ; ಆತನಿಗೆ ಪ್ರಾಣಕ್ಕಿಂತ ಪ್ರಿಯರಾಗಿರುವವರ ಕೊಲೆ. ಇಂಥವರು ಯಾರೆಂದು ನಕ್ಷತ್ರನನ್ನು ಕೇಳಲಾಗಿ ಧ್ರುವ ಬಾಲಕನೆಂದು ಆತನು ಹೇಳಿದನು. ಆಯಿತು. 'ಈ ಬಾಲಕನ ಕೊಲೆಯು ಇಂದು ರಾತ್ರಿ ಆಗುವಂತೆ ಏರ್ಪಡಿಸುವೆ'ನೆಂದು ನಕ್ಷತ್ರರಾಯನು ಮಾತುಕೊಟ್ಟು ಆ ಸ್ಥಳದಿಂದ ಒಮ್ಮೆ ಹೊರಟನು. ಆಗ್ಗೆ ಅವನಿಗೆ ಪುನರ್ಜನ್ಮವನ್ನು ಪಡೆದಂತೆ ಎನಿಸಿತು.

## ೧೭ನೆಯ ಪರಿಚ್ಛೇದ

ಅದೇ ದಿನದ ಸಂಜೆಯ ಸಮಯ; ಧ್ರುವನು ನಕ್ಷತ್ರರಾಯನನ್ನು ಕಂಡು "ಚಿಕ್ಕಪ್ಪಾ" ಎನ್ನುತ್ತ, ಎಂದಿನಂತೆಯೆ ಓಡುತ್ತ, ಬಳಿಗೆ ಬಂದನು. ಕೈಗಳೆರಡನ್ನೂ ಚಾಚಿ ಆತನ ಕೊರಳಿಗೆ ತಕ್ಕೆ ಬಿದ್ದನು; ಕೆನ್ನೆಗೆ ತನ್ನ ಕೆನ್ನೆಯನ್ನೊಂದಿಸಿ ನಕ್ಷತ್ರನ ಮೊಗದಮೇಲೆ ಮೊಗವನ್ನಿಟ್ಟು ಮುದ್ದು ಮುದ್ದಾಗಿ ನುಡಿದನು. "ಚಿಕ್ಕಪ್ಪ"

ನಕ್ಷತ್ರನೆಂದನು "ಹಾಂ ! ಹಾಗೆ ಹೇಳಕೂಡದು. ನಾನು ನಿನಗೆ ಚಿಕ್ಕಪ್ಪನಲ್ಲ."

ಧ್ರುವನು ಮೊದಲಿಂದಲೂ ನಕ್ಷತ್ರರಾಯನಿಗೆ "ಚಿಕ್ಕಪ್ಪ" ಎಂದು ಎನ್ನುತ್ತಲೆ ಬಂದಿದ್ದನು. ಇಂದು ಹಾಗೆ ಎನ್ನುವುದಕ್ಕೆ ಒಮ್ಮೆಲೆ ಅಡ್ಡಿಯೊದವಿದುದಕ್ಕಾಗಿ ಅವನು ತುಂಬಾ ಬೆರಗುಗೊಂಡು ಬಿಟ್ಟನು. ಗಂಭೀರವಾದ ಮುಖಭಾವದಿಂದ ನಸು ವೇಳೆ ಮಾತನಾಡದೆ ಉಳಿದನು. ಬಳಿಕ ಅರಳಿದ ಕಣ್ಣುಗಳಿಂದ ನಕ್ಷತ್ರನನ್ನು ನಿಟ್ಟಿಸುತ್ತ ಕೇಳಿದನು "ನೀನು ಯಾರು?"

ನಕ್ಷತ್ರರಾಯನೆಂದನು "ನಾನು ನಿನಗೆ ಚಿಕ್ಕಪ್ಪನಲ್ಲ!"

ಇದನ್ನು ಕೇಳಿದೊಡನೆಯೇ ಧ್ರುವನಿಗೆ ತುಂಬಾ ನಗೆ ಬಂದು ಬಿಟ್ಟಿತು. ಇಷ್ಟೊಂದು ಅಸಂಭವನೀಯವಾದ ಸಂಗತಿಯನ್ನು ಈ ಮೊದಲು ತಾನೆಂದೂ ಕಂಡು ಕೇಳಿದುದಿಲ್ಲ; ಎಂಬ ಭಾವವು ಆ ನಗೆಯಿಂದ ಹೊರಸೂಸುತಿದ್ದಿತು. ನಗುತ್ತಲೆ ಧ್ರುವನು ಹೇಳಿದನು "ನೀನು ಚಿಕ್ಕಪ್ಪ". ಹಾಗೆ ಹೇಳಲಾಗದೆಂದು ನಕ್ಷತ್ರನು ನಿಷೇಧಿಸಿದಂತೆಲ್ಲ ಧ್ರುವನು "ನೀನು ಚಿಕ್ಕಪ್ಪ, ನೀನು ಚಿಕ್ಕಪ್ಪ" ಎಂದು ಹೆಚ್ಚು ಹೆಚ್ಚಾಗಿ ಹೇಳಲು ತೊಡಗಿದನು. ಆತನ ನಗೆಯೂ ಹೆಚ್ಚು ಹೆಚ್ಚಾಗಲು ತೊಡಗಿತು. "ಚಿಕ್ಕಪ್ಪಾ ಚಿಕ್ಕಪ್ಪಾ!" ಎಂದು ನಕ್ಷತ್ರರಾಯನನ್ನು ಬೇಸರಗೊಳಿಸಿ ಬಿಟ್ಟನು. ನಕ್ಷತ್ರನು ಮಾತನಾಡಿದನು. "ಧ್ರುವ! ನಿಮ್ಮ ಅಕ್ಕನನ್ನು ನೋಡಲು ಹೋಗೋಣವೇನು?"

ನಕ್ಷತ್ರರಾಯನ ಕೊರಳನ್ನು ಬಿಟ್ಟು ಧ್ರುವನು ಚಟ್ಟನೆ ಎದ್ದು ನಿಂತನು. ಕೇಳಿದನು.

"ಅಕ್ಕ ಎಲ್ಲಿದ್ದಾಳೆ?"

ನಕ್ಷತ್ರನೆಂದನು "ಅಮ್ಮನ ಬಳಿಯಲ್ಲಿ"

ಧ್ರುವನು ಕೇಳಿದನು "ಅಮ್ಮ ಎಲ್ಲಿದ್ದಾಳೆ?"

ನಕ್ಷತ್ರ:— "ಅಮ್ಮ ಅಲ್ಲಿ ದೂರ ಒಂದು ಸ್ಥಳದಲ್ಲಿದ್ದಾಳೆ. ಬೇಕಾದರೆ ನನ್ನೊಡನೆ ಬಾ ! ನಾನು ಕರೆದುಕೊಂಡು ಹೋಗುವೆನು."

ಧ್ರುವನು ಕೈತಟ್ಟಿ ಕೇಕೆ ಹೊಡೆದು ಕೇಳಿದನು. "ಯಾವಾಗ ಕರೆದುಕೊಂಡು ಹೋಗುವೆ ಚಿಕ್ಕಪ್ಪ!"

ನಕ್ಷತ್ರ:— "ಈಗಲೆ"

ಧ್ರುವನು ಸಂತಸಗೊಂಡು ಕೂಗುತ್ತ ಕುಣಿಯುತ್ತ ನಕ್ಷತ್ರರಾಯನನ್ನು ತಬ್ಬಿಕೊಂಡನು. ನಕ್ಷತ್ರನು ಅವನನ್ನೆತ್ತಿಕೊಂಡು ಉತ್ತರೀಯದಿಂದ ಮುಸುಕುಹಾಕಿ ಗುಪ್ತದ್ವಾರದಿಂದ ಹೊರಕ್ಕೆ ಹೊರಟನು.

ಇಂದಿನ ಇರುಳಲ್ಲಿಯೂ ಹೊರಕ್ಕೆ ಜನರಾರೂ ಬರಲಾಗದೆಂದು ಕಟ್ಟಳೆಯು. ಆದುದರಿಂದಲೆ ಬೀದಿಗಳಲ್ಲಿ ಪ್ರಜೆಗಳಾರೂ ಇರಲಿಲ್ಲ. ತೆರೆದ ಮೋಡಗಳಿಂದ ಬಾನೆಲ್ಲವೂ ಬೆಳಗುತ್ತಲಿದ್ದಿತು.

ನಕ್ಷತ್ರರಾಯನು ಮಂದಿರದಲ್ಲಿ ಹೊಕ್ಕನು. ಧ್ರುವನನ್ನು ರಘುಪತಿಯ ಕಡೆಗೆ ಕೊಡಲು ಹವಣಿಸಿದನು. ರಘುಪತಿಯನ್ನು ನೋಡಿದೊಡನೆಯೇ ಧ್ರುವನು ಬೆದರಿ ನಕ್ಷತ್ರರಾಯನನ್ನು ಬಲವಾಗಿ ಅಪ್ಪಿಕೊಂಡನು. ಕೈಗಳೆರಡರಿಂದಲೂ ಬಿಗಿಯಾಗಿ ಕೊರಳನ್ನು ಹಿಡಿದು ಬಿಟ್ಟನು. ಮುಗಿದ ಕಂಗಳ ಮೊಗವನ್ನು ಆತನ ಹೆಗಲಮೇಲೆ ಒರಗಿಸಿದನು. ಏನೇನೊ ಪ್ರಯತ್ನವಾಗಿದ್ದಾಯಿತು. ಏನು ಮಾಡಿದರೂ ಧ್ರುವನು ಹಿಡಿದ ಹಿಡಿತವನ್ನು ಸಡಿಲಿಸನು. ಮುಚ್ಚಿದ ಕಣ್ಣುಗಳನ್ನು ತೆರೆಯನು. ಕೊನೆಗೆ ರಘುಪತಿಯು ಬಲುಮೆಯಿಂದ ಧ್ರುವನನ್ನು ಸೆಳೆದು ತನ್ನ ಕಡೆಗೆ ತೆಗೆದುಕೊಂಡನು. ಧ್ರುವನು "ಚಿಕ್ಕಪ್ಪಾ ಚಿಕ್ಕಪ್ಪಾ!" ಎಂದು ಕೂಗಿ ಕೂಗಿ ಅಳಲು ತೊಡಗಿದನು. ನಕ್ಷತ್ರರಾಯನ ಕಣ್ಣುಗಳಲ್ಲಿ ಕಂಬನಿಗಳು ಕಾಣಿಸಿಕೊಂಡುವು; ಆದರೆ ರಘುಪತಿಯ ಎದುರಿನಲ್ಲಿ ತನ್ನ ಹೃದಯದ ಬಲಹೀನತೆಯನ್ನು ತೋರಿಸುವುದೆಂದರೆ ಆತನಿಗೆ ತುಂಬಾ ನಾಚಿಕೆಯೆನಿಸಿತು. ಆಗ ನಕ್ಷತ್ರರಾಯನು ತನ್ನ ಹೃದಯವು ಕಗ್ಗಲ್ಲಿಗಿಂತಲೂ ಕಠಿಣವಾದುದೆಂಬ ಭಾವವನ್ನು ನಟನೆಮಾಡಿ ತೋರಿಸಿದನು. ಧ್ರುವನು "ಅಕ್ಕಾ! ಅಕ್ಕನ್ನಾ!" ಎಂದು ಗಟ್ಟಿಯಾಗಿ ಕೂಗಿ ಕೂಗಿ ಅಳಲು ತೊಡಗಿದನು. ರಘುಪತಿರಾಯನು ಗುಡುಗಿನಂತಹ ತನ್ನ ಬಿರುದನಿಯಿಂದ ಗದರಿಸಿದನು. ಹೆದರಿಕೆಯಿಂದ ಧ್ರುವನ ಅಳುವು ನಿಂತುಹೋಯಿತು. ಚತುರ್ದಶದೇವಿಯರ ಮೂರ್ತಿಗಳು ಇದನ್ನೆಲ್ಲ ನೋಡುತ್ತಲೆ ಇದ್ದುವು.

ಗೋವಿಂದಮಾಣಿಕ್ಯನು ಇರುಳಲ್ಲಿ ಮಲಗಿಕೊಂಡು ಕನಸನ್ನು ಕಾಣುತ್ತಲಿದ್ದನು. ಕನಸಿನಲ್ಲಿ ಅದಾರನೋ ದೈನ್ಯ

ಯೊಂದು ಕೇಳಿದಂತಾಗಿ ಥಟ್ಟನೆ ಎಚ್ಚೆತ್ತನು. ತಾನು ಮಲಗಿದ ಮನೆಯ ಕಿಟಕಿಯ ಕೆಳಗಣಿಂದ ಗಾಬರಿಯ ದನಿಯಿಂದ ಯಾರೋ ಕೂಗುತಿರುವುದು ಕಿವಿಮೇರೆಗೆ ಬಿದ್ದಿತು. "ಮಹಾರಾಜ! ಮಹಾರಾಜ !! "ಎಂದು.

ಒಮ್ಮಿಂದೊಮ್ಮೆಲೆ ದೊರೆಯು ಎದ್ದು ಹೋಗಿ ನೋಡಿದನು. ಮಿರುಗುವ ತಾರೆಗಳ ಕಿರುಬೆಳಕಿನಲ್ಲಿ ಧ್ರುವನ ದೊಡ್ಡಪ್ಪನಾದ ಕೇದಾರೇಶ್ವರನನ್ನು ಕಂಡನು. ಬೆರಗುಗೊಂಡು ಕೇಳಿದನು. "ಏನು ಈಗೇನು ಕೆಲಸ ?"

ಕೇದಾರೇಶ್ವರನು ಕಾತರಕಂಠದಿಂದಲೇ ಕೇಳಿದನು. "ದೊರೆಯೇ! ನಮ್ಮ ಧ್ರುವ ಎಲ್ಲಿರುವನು ? "

ದೊರೆಯು ಮರಳಿ ಕೇಳಿದನು "ಅವನು ಅಲ್ಲಿ ತನ್ನ ಹಾಸಿಗೆಯಲ್ಲಿಲ್ಲವೇ ?" "ಇಲ್ಲ !"

ಕೇದಾರೇಶ್ವರನು ಹಾಗೆಯೆ ಮುಂದೆ ಮಾತನಾಡಲು ತೊಡಗಿದನು. "ಮಹಾರಾಜ ! ಸಾಯಂಕಾಲದಿಂದಲೂ ಧ್ರುವನು ಎಲ್ಲಿಯೂ ಕಣ್ಣಿಗೇ ಬೀಳಲಿಲ್ಲ. ಎತ್ತೆತ್ತ ಹುಡುಕಿದೆನು. ಅವರಿವರನ್ನು ಕೇಳಿದೆನು. ಯುವರಾಜ ನಕ್ಷತ್ರರಾಯರ ಊಳಿಗದವನೊಬ್ಬನು: "ಧ್ರುವನು ಅಂತಃಪುರದಲ್ಲಿ ಯುವರಾಜರ ಬಳಿಯಲ್ಲಿದ್ದಾನೆ" ಎಂದು ಹೇಳಿದನು. ಕೇಳಿ ನಿಶ್ಚಿಂತನಾಗಿಯೆ ಇದ್ದೆನು. ಆದರೆ ರಾತ್ರಿಯು ಅದೆಷ್ಟೋ ಆಗಿ ಹೋದರೂ ಧ್ರುವನು ಮನೆಗೆ ಮರಳಿ ಬರಲಿಲ್ಲ. ಅದಕ್ಕಾಗಿ ಏನೇನೊ ಕಲ್ಪನೆಗಳು ಬಂದು ಮನವನ್ನು ಕಳವಳಗೊಳಿಸಿದುವು. ನೋಡಿಯಾದರೂ ಬರಬೇಕೆಂದು ಹೋದೆ; ನಕ್ಷತ್ರರಾಯನು ಅರಮನೆಯಲ್ಲಿಲ್ಲ. ಈ ಸಂಗತಿಯನ್ನು ತಮಗೆ ತಿಳುಹಿಸಬೇಕೆಂದೆನು. "ನಾನೀಗ ಮಹಾರಾಜರನ್ನು ಕಾಣಬೇಕಾಗಿದೆ. ದಯಮಾಡಿ ಒಳಕ್ಕೆ ಹೋಗಗೊಡಿ" ಎಂದು ನಾನು ಅದೆಷ್ಟು ಬಿನ್ನವಿಸಿಕೊಂಡರೂ ಪ್ರಹರಿಗಳು ಸಮ್ಮತಿಸಲಿಲ್ಲ. ಕೊನೆಗೆ ಉಪಾಯಗಾಣದೆ ಈ ಕಿಟಕಿಯ ಕೆಳಗೆ ನಿಂತು ತಮ್ಮನ್ನು ಕೂಗಿದೆನು. ದೊರೆಗಳ ಸುಖನಿದ್ರೆಗೆ ಅಡ್ಡಿಯನ್ನುಂಟುಮಾಡಿದೆನು. ನನ್ನ ಈ ತಪ್ಪನ್ನು ಕ್ಷಮಿಸಬೇಕೆಂದು ಅಡಿಗಳಡೆಯಲ್ಲಿ ಬಿನ್ನಯಿಸಿಕೊಳ್ಳುವೆನು."

ದೊರೆಯು ಮನದಲ್ಲಿ ತಟ್ಟನೆ ಅದಾವುದೋ ಒಂದು ಭಾವವು ಮಿಂಚಿನಂತೆ ಮಿನುಗಿ ಹೋಯಿತು. ಕೂಡಲೆ ಅವನು ನಾಲ್ಕು ಜನ ಕಾಪಿನ ಬಂಟರನ್ನು ಕರೆದು ಹೇಳಿದನು. "ಸಶಸ್ತ್ರರಾಗಿ ನೀವೀಗ ನನ್ನನ್ನು ಹಿಂಬಾಲಿಸಿರಿ !" ಒಬ್ಬನು ಹೇಳಿದನು. "ಮಹಾರಾಜ ! ಇಂದಿನಿರುಳಲ್ಲಿ ಹೊರಕ್ಕೆ ಕಾಲಿಕ್ಕಲಾಗದೆಂದು ಕಟ್ಟಳೆಯಿದೆ."

ದೊರೆಯು ನುಡಿದನು "ಅದು ಸರಿ ! ಈಗ ನಾನೇ ನಿಮಗೆ ಆಜ್ಞೆ ಮಾಡುತ್ತಲಿದ್ದೇನೆ. ಹೊರಡಿ ಬೇಗ !"

ಜೊತೆಯಲ್ಲಿ ಕೇದಾರೇಶ್ವರನೂ ಹೊರಡಲು ಅನುಗೊಂಡನು. ದೊರೆಯು ಅವನನ್ನು ಮರಳಿ ಮನೆಗೆ ಕಳುಹಿಸಿದನು. ದಾರಿಯು ಜನರ ಸುಳಿದಾಟವಿಲ್ಲದೆ ನಿಶ್ಶಬ್ದವಾಗಿದೆ. ದೊರೆಯು ನೇರವಾಗಿ ಮಂದಿರದತ್ತ ಹೊರಟು ನಡೆದನು.

ಮಂದಿರದ ಬಳಿಯನ್ನು ಸಾರಿ ಅನುಚರರಿಂದ ಮುಚ್ಚಿದ್ದ ಹೊರಬಾಗಿಲನ್ನು ತೆರೆಯಿಸಿದನು. ಆತುರದಿಂದ ಒಳಕ್ಕೆ ಹಣಿಕಿಕ್ಕಿ ನೋಡಿದನು. ಚಕಚಕಿಸುತಿರುವ ಬಿಚ್ಚುಗತ್ತಿಯೊಂದು ಮುಂದೆಯಿದೆ. ಬಳಿಯಲ್ಲಿಯೆ ರಘುಪತಿ ನಕ್ಷತ್ರರಾಯರು ಕುಳಿತುಕೊಂಡು ಮದ್ಯಪಾನ ಮಾಡುತ್ತಲಿದ್ದಾರೆ. ಒಂದೇ ಒಂದು ದೀಪ; ಬೆಳಕು ಹೆಚ್ಚಿಗೆ ಇರಲಿಲ್ಲ. ಧ್ರುವನು ಎಲ್ಲಿರುವನು ? ಧ್ರುವನು ಕಾಲಿಯ ಮೂರ್ತಿಯ ಅಡಿಗಳೆಡೆಯಲ್ಲಿ ಮಲಗಿ ನಿದ್ರಿಸುತ್ತಿರುವನು. ಅವನ ಕೆನ್ನೆಗಳೆರಡರಲ್ಲಿಯೂ ಒಣಗಿ ಹೋಗಿದ್ದ ಕಣ್ಣೀರ ಕಲೆಗಳು ಕಾಣುತಲಿದ್ದುವು. ತುಟಿಗಳೆರಡೂ ನಸು ತೆರೆದಂತಿದ್ದುವು. ಮೊಗದಲ್ಲಿ ಭೀತಿಯ—ಇನ್ನಾವ ಭಾವನೆ—ಚಿಹ್ನವೇ ಇರಲಿಲ್ಲ. ತಾನು ಮಲಗಿರುವ ಆ ಕಲ್ಲುಹಾಸಿಗೆಯನ್ನು ತನ್ನ ಅಕ್ಕನ ಮೆಲ್ಲಿತಾದ ತೊಡೆಯೆಂದವನು ತಿಳಿದಿದ್ದನೋ ಏನೊ ! ಅಕ್ಕನು ಮುತ್ತುಕೊಟ್ಟುದರಿಂದಲೇ ಅವನ ಕಂಬನಿಗಳೆಲ್ಲ ಅಳಿಸಿ ಹೋಗಿದ್ದುವೋ ಏನೋ!

ಮದ್ಯದ ಮದವು ತಲೆಗೇರಿ ನಕ್ಷತ್ರರಾಯನ ಹರಣವೇ ಹೊರಕ್ಕೆ ಬಂದಿದ್ದಿತು. ಬಾಯಿಗೆ ಬಂದಂತೆ ಬಡಬಡಿಸುತ್ತಿದ್ದನು. ಆದರೆ ರಘುಪತಿಯು ಸ್ಥಿರಭಾವದಿಂದ ಕುಳಿತುಕೊಂಡು ಪೂಜೆಯ ಸಮಯವನ್ನು ಎದುರು ನೋಡುತಲಿದ್ದನು. ನಕ್ಷತ್ರರಾಯನ ಬಡಬಡಿಕೆಯ ಕಡೆಗೆ ಅವನು ಕಿವಿಯನ್ನೇ ಕೊಡುತಿರಲಿಲ್ಲ. ನಕ್ಷತ್ರರಾಯನು ಎಡೆಬಿಡದೆ ಗಳುಹುತ್ತಿದ್ದನು. "ಗುರುಗಳೇ! ನಿಮ್ಮ ಮನಸ್ಸಿನ ತೀರ ಒಳಕ್ಕೆ ಹೆದರಿಕೆಯಿದೆ. ನೀವೂ ಮನಸ್ಸಿನಲ್ಲಿ ಹೆದರುವಿರಿ, ನಾನೂ ಹೆದರುವೆನು. ಇಲ್ಲ! ನನಗೆ ಹೆದರಿಕೆಯೆಂದರೇನು ? ಅದಾರ ಹೆದರಿಕೆ ? ಅದೇತರ ಹೆದರಿಕೆ; ಗುರುವೇ ! ನಿಮ್ಮನ್ನು ನಾನು ರಕ್ಷಿಸುವೆನು ನಾನು. ದೊರೆಗೆ ನಾನು ಹೆದರುವೆನೆಂದು ನಿಮ್ಮ ಭಾವನೆಯೇನು ? ಇಲ್ಲಿ ನೋಡಿ ! ನಾನು ಸಹಸ್ರಜನರಿಗೂ ಹೆದರುವುದಿಲ್ಲ. ಮಹಾ

ಜಹಾನನಿಗೂ ಹೆದರುವುದಿಲ್ಲ. ಗುರುಗಳೇ ತಾವು ನನಗೆ ಹೇಳಿರುವಿರಿ; ದೊರೆಯನ್ನು ಹಿಡಿದು ತರುವೆನು. ಬಲಿಕೊಟ್ಟು ಅಮ್ಮನನ್ನು ತಣಿಸುವೆನು. ಅಹಾ! ಇಷ್ಟು ಚಿಕ್ಕದಾಗಿರುವ ಮಗುವಿನ ನೇತ್ರರು ಎಷ್ಟೊಂದಿರುವುದಪ್ಪಾ!"

ಈ ಸಮಯಕ್ಕೆ ಸರಿಯಾಗಿ ಮಂದಿರದ ಗೋಡೆಯ ಮೇಲೆ ಪಡಿನೆಳಲೊಂದು ಬಿದ್ದಿತು. ನಕ್ಷತ್ರರಾಯನು ಹೊಡೆಮರಳಿ ನೋಡಿದನು—ದೊರೆಯು. ನೋಡಿ ಬೆಚ್ಚಿ ಬಿದ್ದನು. ಹೆದರಿಕೆಯಿಂದ ತಲೆಗೇರಿದ ಮದ್ಯದ ಮತ್ತೆಲ್ಲವೂ ಇಳಿದುಹೋಯಿತು. ತನ್ನ ನೆರಳಿಗಿಂತಲೂ ಅವನು ಕಂದಿದವನಾಗಿ ಕಂಡನು. ದೊರೆಯು ಒಮ್ಮೆಲೆ ಮುಂದುವರಿದು ಹೋಗಿ ಮಲಗಿದ ಧ್ರುವನನ್ನು ಎತ್ತಿಕೊಂಡು ಒಡನೆ ಬಂದ ಕಾಪಿನ ಬಂಟರನ್ನು ಕರೆದು ಹೇಳಿದನು. "ಇವರಿಬ್ಬರನ್ನೂ ಸೆರೆಹಿಡಿಯಿರಿ"

ದೊರೆಯ ಆದೇಶದಂತೆ ನಾಲ್ಕುಜನ ಕಾಪಿನ ಬಂಟರು ರಘುಪತಿ-ನಕ್ಷತ್ರರಾಯರ ಕೈಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡರು. ಧ್ರುವನನ್ನು ಎದೆಗೆ ತಬ್ಬಿಕೊಂಡು ರಾಜನು,-ನಿರ್ಜನವಾಗಿದ್ದ ಬೀದಿಗಳೊಳಗಿಂದ—ಚುಕ್ಕೆಗಳು ಮಿಟುಕುಗಣ್ಣುಗಳಿಂದ ನೋಡುತ್ತಿರಲು-ಅರಮನೆಗೆ ಮರಳಿ ನಡೆದನು. ರಘುಪತಿಯೂ ನಕ್ಷತ್ರರಾಯನೂ ಅಂದಿನಿರುಳನ್ನು ಸೆರೆಮನೆಯಲ್ಲಿ ಕಳೆದರು.

---

## ೧೮ನೆಯ ಪರಿಚ್ಛೇದ

ಮರುದಿನವೇ ನ್ಯಾಯವಿಚಾರಣೆಯು. ಓಲಗದಲ್ಲಿ ಜನರ ನೆರವಿಯೋ ನೆರವಿ. ಗೋವಿಂದಮಾಣಿಕ್ಯನು ಗದ್ದುಗೆಯ ಮೇಲೆ ಕುಳಿತಿರುವನು. ಸುತ್ತಲೆಲ್ಲವೂ ಸಭಾಸದರು ಓಲಗಗೊಂಡಿರುವರು. ಸೆರೆಯಾಳುಗಳಿಬ್ಬರೂ-ಎದುರಿನಲ್ಲಿ ನಿಂತಿರುವರು. ಅವರಿಬ್ಬರ ಕೈಗೂ ಶೃಂಖಲೆಗಳಿಲ್ಲ. ಒರೆದೆಗೆದ ಕತ್ತಿಗಳನ್ನು ಹಿಡಿದ ಕಾಪಿನ ಭಟರು ಸೆರೆಯಾಳುಗಳನ್ನು ಬಳಸಿ ನಿಂತಿರುವರು. ರಘುಪತಿಯು ಕಲ್ಲುಬೊಂಬೆಯಂತೆ ಕದಲದೆ ಸೆಟೆದು ನಿಂತಿರುವನು. ನಕ್ಷತ್ರರಾಯನು ಮಾತ್ರ ಬಾಗಿದ ತಲೆಯವನು.

ದೊರೆಯು ರಘುಪತಿಯ ತಪ್ಪುಗಳನ್ನೆಲ್ಲ ಸಪ್ರಮಾಣವಾಗಿ ವಿವರಿಸಿ ಹೇಳಿ ಆತನ ಕಡೆಗೆ ನೋಡುತ್ತ ನುಡಿದನು. "ನಿಮ್ಮದೇನಾದರೂ ಹೇಳಬೇಕಾದುದಿದೆಯೇನು?"

ರಘುಪತಿಯೆಂದನು "ನನ್ನ ನ್ಯಾಯದ ವಿಚಾರಣೆಯನ್ನು ಮಾಡಲು ನಿನಗೆ ಅಧಿಕಾರವಿಲ್ಲ!"

ದೊರೆಯು ಕೇಳಿದನು. "ಹಾಗಾದರೆ ಇನ್ನಾರಿಗಿದೆ?"

ರಘುಪತಿ ನುಡಿದನು. "ನಾನು ಬ್ರಾಹ್ಮಣನು. ದೇವರ ಸೇವಕನು. ನನ್ನ ವಿಚಾರಣೆಯನ್ನು ದೇವರು ಮಾಡಬೇಕು. ಆತನಿಗೊಬ್ಬನಿಗೇ ಆ ಅಧಿಕಾರವಿದೆ."

ದೊರೆ– "ಪಾತಕಕ್ಕೆ ಪ್ರಾಯಶ್ಚಿತ್ತವನ್ನೂ ಪುಣ್ಯಕ್ಕೆ ಪುರಸ್ಕಾರವನ್ನೂ ಕೊಡುವುದಕ್ಕಾಗಿ ಜಗತ್ತಿನಲ್ಲಿ ಸಾವಿರಾರು ಜನರು ಆತನ ಅನುಚರರಿರುವರು. ಅವರಲ್ಲಿ ನಾನೂ ಒಬ್ಬನು; ಈಗ ಅದನ್ನೆಲ್ಲ ತೆಗೆದುಕೊಂಡು ಮಾಡುವುದೇನು! ಸದ್ಯಕ್ಕೆ ನಾನು ನಿಮ್ಮನ್ನೊಂದು ಮಾತಿನ ಬಗೆಗೆ ಕೇಳುತಿರುವೆನು. ಅದಕ್ಕೆ ಉತ್ತರಕೊಡಿರಿ! ನಿನ್ನೆಯ ರಾತ್ರಿಯಲ್ಲಿ ಬಲಿಕೊಡಬೇಕೆಂದು ಬಯಸಿ ನೀವು ಮಗುವೊಂದನ್ನು ಅಪಹರಿಸಿಕೊಂಡು ಹೋಗಿದ್ದುದು ಅಹುದೇನು?"

ರಘುಪತಿಯೆಂದನು "ಅಹುದು"

ದೊರೆಯು ಕೇಳಿದನು. "ನೀವು ನಿಮ್ಮ ತಪ್ಪನ್ನು ಒಪ್ಪಿಕೊಳ್ಳುವಿರಲ್ಲವೇ?"

ರಘುಪತಿಯೆಂದನು "ತಪ್ಪೋ? ಯಾರದು ತಪ್ಪು! ನಾನು ತಾಯಿಯ ಅಪ್ಪಣೆಯನ್ನು ಪಾಲಿಸುತ್ತಿದ್ದೆನು. ತಾಯಿಯ ಸೇವೆಯನ್ನು ಮಾಡುತ್ತಿದ್ದೆನು. ನಡುವೆ ನೀನು ಬಂದು ಅಡ್ಡಯಿಸಿದೆ. ತಪ್ಪುಗಾರನು ನೀನು. ತಾಯಿಯ ಎದುರಿನಲ್ಲಿ ನಿನ್ನನ್ನು ಅಪರಾಧಿಯನ್ನಾಗಿ ಮಾಡಿ ನಿಲ್ಲಿಸುವೆನು. ಆಕೆಯು ನಿನ್ನ ವಿಚಾರಣೆಯನ್ನು ಮಾಡದೆ ಬಿಡಳು."

ರಘುಪತಿಯಾಡಿದ ಮಾತುಗಳಿಗೊಂದಕ್ಕೂ ದೊರೆಯು [illegible] ಗೊಡದೆ, ಮಾತನಾಡಿದನು. "ದೇವತೆಯ ಹೆಸರಿನಿಂದ ಜೀವಬಲಿಯನ್ನು ಕೊಟ್ಟವನಿಗೂ—ಕೊಡಲು ಅನುಗೊಂಡವನಿಗೂ ದೇಶಾಂತರವಾಸದ ಶಿಕ್ಷೆಯಾಗಬೇಕೆಂದು ನಮ್ಮ ರಾಜ್ಯದ ಕಟ್ಟಳೆಯಿದೆ. ನಾನೀಗ ನಿಮಗೆ ಅದೇ ಕಟ್ಟಳೆಯಂತೆ ಶಿಕ್ಷೆ ವಿಧಿಸಬೇಕೆಂದಿರುವೆನು. ಎಂಟು ವರುಷಗಳವರೆಗೂ ನೀವು ಆ ಶಿಕ್ಷೆಗೆ ಒಳಗಾಗಬೇಕಾಗುವುದು. ಕಾಪಿನವರು ನಿಮ್ಮನ್ನು ಈಗಲೆ ನಮ್ಮ ರಾಜ್ಯದ ಎಲ್ಲೆಯನ್ನು ದಾಂಟಿಸಿ ಬರುವರು."

ರಘುಪತಿಯನ್ನು ಅಲ್ಲಿಂದ ತೆಗೆದುಕೊಂಡು ಹೋಗುವುದಕ್ಕೆ ಕಾಪಿನ ಭಟರು ಅನುಗೊಂಡರು. ಮುಂದೆ ಬಂದು ಕೈಯನ್ನು ಹಿಡಿಯಲಿದ್ದರು. ರಘುಪತಿಯು ಸಿಡಿಯುತ್ತ ಅವ

ರಿಗೆ ನುಡಿದನು. "ಹಾಂ ಸರಿದು ನಿಲ್ಲಿ!" ದೊರೆಯನ್ನು ನೋಡುತ್ತ ಹೇಳಿದನು. "ನಿನ್ನ ನ್ಯಾಯವಿಚಾರಣೆಯು ಮುಗಿದು ಹೋಯಿತಲ್ಲವೇ? ಇನ್ನು ನಾನು ನಿನ್ನ ತಪ್ಪಿನ ವಿಚಾರಣೆಯನ್ನು ಮಾಡುವೆನು. ಚತುರ್ದಶ ದೇವತೆಗಳ ಪೂಜೆಯು ನಡೆದ ಎರಡು ಇರುಳುಗಳಲ್ಲಿ ಹೊರಕ್ಕೆ ಹಣಿಯಿಕ್ಕಿದವರು, ಪುರೋಹಿತನು ವಿಧಿಸಿದ ಶಿಕ್ಷೆಯನ್ನು ಅನುಭವಿಸಬೇಕೆಂದು ನಮ್ಮ ಮಂದಿರದ ನಿಯಮವಿದೆ. ಈ ಪೂರ್ವ ಪದ್ಧತಿಗೆ ಅನುಸಾರವಾಗಿ ನೀನೀಗ ಶಿಕ್ಷಾರ್ಹನಾಗಿರುವೆ!"

ದೊರೆಯು ಸಮಾಧಾನದಿಂದಲೆ ಹೇಳಿದನು. "ನೀವು ವಿಧಿಸಿದ ಶಿಕ್ಷೆಯನ್ನು ಅನುಭವಿಸಲು ನಾನು ಸಿದ್ಧನಾಗಿರುವೆನು."

ಸಭಾಸದರೆಲ್ಲರೂ ಕೂಗಿ ಹೇಳಿದರು "ಈ ತಪ್ಪಿಗೆ ಬೇರೆ ಶಿಕ್ಷೆಯಿಲ್ಲ. ಬರೀ ಅರ್ಥ ದಂಡವನ್ನು ಮಾತ್ರ ತೆರಬೇಕಾಗುವುದು.

ರಘುಪತಿಯು ಹೇಳಿದನು. "ನಿನಗೆ ನಾನು ಎರಡು ಲಕ್ಷ ಮುದ್ರೆಗಳ ಅರ್ಥದಂಡವನ್ನು ವಿಧಿಸಿರುವೆನು. ಈಗ ತೆತ್ತು ಬಿಟ್ಟು ಬೇರೆ ಮಾತು."

ದೊರೆಯು ನಸು ವೇಳೆ ಯೋಚಿಸಿದನು. ಬಳಿಕ ಮಾತನಾಡಿದನು. "ಹಾಗೆಯೇ ಆಗಲಿ". ಬೊಕ್ಕಸದೊಡೆಯನನ್ನು ಕರೆಯಿಸಿ ಎರಡು ಲಕ್ಷ ಮುದ್ರೆಗಳನ್ನು ತಂದು ರಘುಪತಿಗೆ ಸಲ್ಲಿಸಲು ತಿಳುಹಿಸಿದನು. ಆಳುಗಳು ರಘುಪತಿಯನ್ನು ತೆಗೆದುಕೊಂಡು ಹೊರಟು ಹೋದರು

ರಘುಪತಿಯು ಹೋದೊಡನೆಯೇ ದೊರೆಯು ನಕ್ಷತ್ರರಾಯನ ಕಡೆಗೆ ನೋಡುತ್ತ ದೃಢಸ್ವರದಿಂದ ಮಾತನಾಡಿದನು. "ನಕ್ಷತ್ರ! ನೀನು ನಿನ್ನ ತಪ್ಪನ್ನು ಒಪ್ಪಿಕೊಳ್ಳುತ್ತೀಯೇನು?"

"ಮಹಾರಾಜ! ನಾನು ತಪ್ಪು ಮಾಡಿದುದು ನಿಜ. ದಯವಿಟ್ಟು ನನ್ನ ತಪ್ಪನ್ನು ಕ್ಷಮಿಸಿ ಬಿಡುವುದಾಗಬೇಕು." ಎಂದು ನುಡಿನುಡಿಯುತ್ತಲೆ ನಕ್ಷತ್ರರಾಯನು ಮುಂದೆ ಬಂದು ದೊರೆಯ ಅಡಿಗಳನ್ನು ಬಿಗಿಯಾಗಿ ಹಿಡಿದುಕೊಂಡನು.

ದೊರೆಯ ಮನಸ್ಸಾಗ ತೂಗುಯ್ಯಾಲೆಯನಾಡಿತು. ಬಾಯಿಂದ ಮಾತುಗಳೇ ಹೊರಡದಾದವು. ಕೊನೆಗೆ ಸಂಯಮಶಕ್ತಿಯಿಂದ ಮನವನ್ನು ಗಟ್ಟಿಮಾಡಿಕೊಂಡು ಹೇಳಿದನು. "ನಕ್ಷತ್ರರಾಯ! ನಿನ್ನನ್ನು ಕ್ಷಮಿಸಿ ಬಿಡುವುದಕ್ಕೆ ನಾನು ಯಾರು? ನನ್ನ ಕಟ್ಟಳೆಯ ಕಣ್ಣಿಯಿಂದಲೆ ನಾನೂ ಕಟ್ಟುವಡೆದಿರುವೆನು. ಸೆರೆಯಾಳುಗಳಂತೆಯೇ ನ್ಯಾಯಾಧೀಶನೂ ಕಟ್ಟಳೆಗಳಿಗೆ ಒಳಗಾಗಿರುವನು. ಒಂದೇ ಬಗೆಯ ತಪ್ಪುಗಾರರಿಬ್ಬರಲ್ಲಿ ಒಬ್ಬನನ್ನು ಶಿಕ್ಷಿಸುವುದು, ಇನ್ನೊಬ್ಬನನ್ನು ರಕ್ಷಿಸುವುದು, ಇದು ಹೇಗಾದೀತು? ನೀನೇ ಯೋಚನೆ ಮಾಡಿನೋಡು!"

ಸಭಾಸದರೆಲ್ಲರೂ ಕೂಗಿದರು "ನಕ್ಷತ್ರರಾಯನು ಮಹಾರಾಜರ ಸಹೋದರನು. ತಮ್ಮನ ತಪ್ಪನ್ನು ಒಡೆಯರು ಕ್ಷಮಿಸಿ ಬಿಡಬೇಕು."

ದೊರೆಯು ನಿಶ್ಚಯಸ್ವರದಲ್ಲಿ ಹೇಳಿದನು. "ತಾವೆಲ್ಲರೂ ಕೊಂಚ ಸುಮ್ಮನಿರಿ! ಈ ನ್ಯಾಯಾಸನದ ಮೇಲೆ ಕುಳಿತಿರುವವರೆಗೆ ನಾನು ಯಾರಿಗೂ ಅಣ್ಣನಲ್ಲ—ಯಾರಿಗೂ ತಮ್ಮನಲ್ಲ.

ಸಭಿಕರೆಲ್ಲರೂ ತೆಪ್ಪಗೆ ಕುಳಿತರು. ಎಲ್ಲಿಯೂ ಮಾತಿನ ಸುಳಿವೇ ಇಲ್ಲ. ದೊರೆಯು ಗಂಭೀರಧ್ವನಿಯಿಂದ ಹೇಳಲು ತೊಡಗಿದನು. "ದೇವಿಯ ಹೆಸರಿನಿಂದ ಜೀವಬಲಿ ಕೊಟ್ಟವರೂ ಕೊಡಲು ಸಿದ್ಧರಾದವರೂ ದೇಶಾಂತರವಾಸದ ಶಿಕ್ಷೆಗೆ ಗುರಿಯಾಗುವರೆಂದು ರಾಜ್ಯದ ಕಟ್ಟಳೆ. ಈ ಕಟ್ಟಳೆಯನ್ನು ತಾವೆಲ್ಲರೂ ಬಲ್ಲಿರಿ. ನಿನ್ನೆಯ ಸಾಯಂಕಾಲದಲ್ಲಿ ನಕ್ಷತ್ರರಾಯನು ಪುರೋಹಿತ ರಘುಪತಿಯೊಂದಿಗೆ ಗುಪ್ತಾಲೋಚನೆಯನ್ನು ನಡೆಯಿಸಿ ಬಲಿಕೊಡಬೇಕೆಂದು ಮಗುವೊಂದನ್ನು ಕದ್ದುಕೊಂಡೊಯ್ದಿದ್ದನು. ಈ ಅಪರಾಧವು ಸಪ್ರಮಾಣ ಸಿದ್ಧವಾದುದರಿಂದ ನಾನು ಇವನಿಗೆ ಎಂಟು ವರುಷಗಳ ದೇಶಾಂತರವಾಸದ ಶಿಕ್ಷೆಯನ್ನು ವಿಧಿಸಿರುವೆನು."

ಕಾಪಿನಾಳುಗಳು ಬಂದು ನಕ್ಷತ್ರನನ್ನು ಕೊಂಡೊಯ್ಯುತಿದ್ದರು. ದೊರೆಯು ಥಟ್ಟನೆ ಗದ್ದುಗೆಯಿಂದ ಇಳಿದು ಬಂದು ನಕ್ಷತ್ರರಾಯನನ್ನು ಬಿಗಿಯಾಗಿ ತಬ್ಬಿಕೊಂಡನು. ಬಿಗಿದ ಕಂಠದಿಂದ ಮಾತನಾಡಿದನು. "ತಮ್ಮಾ! ನಕ್ಷತ್ರಾ! ಈ ಶಿಕ್ಷೆಯು ನಿನಗೊಬ್ಬನಿಗೇ ಅಲ್ಲ. ನನಗೂ ಆದಂತಾಯಿತು. ಮುನ್ನಿನಲ್ಲಿ ನಾನು ಮಾಡಿದ ಪಾತಕವೇನೋ ತಿಳಿಯದು. ನೀನು ಬಂಧುಗಳೆಲ್ಲರನಗಲಿ ಅದೆಲ್ಲಿಯವರೆಗೆ ಒಂಟಿಗನಾಗಿ ವಿದೇಶದಲ್ಲಿರುವೆಯೋ ಅಲ್ಲಿಯವರೆಗೆ ಪರಮಾತ್ಮನು ನಿನ್ನ ಬೆಂಗಾವಲಿಗಿರಲಿ! ನಿನ್ನನ್ನು ಸುಖವಾಗಿರಿಸಲಿ!"

ಈ ಸುದ್ದಿಯು ಹಾಂ ಹಾಂ ಎನ್ನುವುದರಲ್ಲಿಯೇ ಪಟ್ಟಣದಲ್ಲೆಲ್ಲ ಪಸರಿಸಿತು. ಅರಮನೆಯಲ್ಲಿ ಅಳುವ ಗೋಳಾಟವು

ಎದ್ದುಬಿಟ್ಟಿತು. ದೊರೆಯು ದುಗುಡಗೊಂಡ ಬಗೆಯಿಂದ ಬಾಗಿಲುಗಳೆರಡನ್ನೂ ಮುಚ್ಚಿಬಿಟ್ಟು ಮಲಗುಮನೆಯಲ್ಲಿ ಬಿದ್ದು ಕೊಂಡನು. ಕೊಂಚ ಕಾಲದ ಬಳಿಕ ಎದ್ದು ಕುಳಿತು ಮುಗಿದ ಕೈಗಳನ್ನು ಮೊಗದಲ್ಲಿಟ್ಟುಕೊಂಡು ತನ್ನಲ್ಲಿ ತಾನೇ ನುಡಿಯಲು ತೊಡಗಿದನು. "ಪ್ರಭುವೇ ನಾನು ಎಂದಾದರೂ ಅಪರಾಧವನ್ನು ಮಾಡಿದರೆ ನನಗೆ ಕ್ಷಮೆದೋರದಿರು. ಕೊಂಚವಾದರೂ ಕರುಣೆ ಯನ್ನು ತೋರದಿರು! ನನ್ನ ತಪ್ಪುಗಳಿಗೆ ತಕ್ಕುದಾದ ದಂಡನೆ ಯನ್ನು ವಿಧಿಸು! ಮಾಡಿದ ಪಾಪಕ್ಕಾಗಿ ಕೊಟ್ಟ ಶಿಕ್ಷೆಯನ್ನು ಸಹಿಸಬಲ್ಲೆನು. ಕ್ಷಮೆಯ ಹೊರೆಯನ್ನು ಮಾತ್ರ ಸಹಿಸ ಲಾರೆನು ದೇವಾ!"

ನಕ್ಷತ್ರರಾಯನ ವಿಷಯಕವಾದ ಮಮತೆಯು ದೊರೆಯ ಮನದಲ್ಲಿ ನಿಮಿಷನಿಮಿಷಕ್ಕೂ ಹೆಚ್ಚಲು ತೊಡಗಿತು. ಆತನ ಎಳೆಯತನದಂದಿನ ನಿಷ್ಕಲಂಕವಾದ ಮುಖವು ದೊರೆಯ ಕಣ್ಣಮುಂದೆ ಕುಣಿದಾಡತೊಡಗಿತು. ನಕ್ಷತ್ರನ ಅಂದಿನ ಆಡಿದ ಆಟಪಾಟಗಳೂ ಮಾಡಿದ ಮುದ್ದುಕೆಲಸಗಳೂ ನುಡಿದ ಮಾತುಕತೆಗಳೂ ಒಂದೊಂದಾಗಿ ಎದ್ದು ದೊರೆಯ ಹೃದಯ ದಲ್ಲಿ ಹರಡಲು ತೊಡಗಿದುವು. ಅಂದಿನ ಒಂದೊಂದು ಹಗಲು ಗಳೂ ಒಂದೊಂದು ಇರುಳುಗಳೂ—ತಮ್ಮ ತಮ್ಮ ನೇಸರ ಚೆಂಬೆಳಕಿನಲ್ಲಿಯೂ ತಾರೆಗಳು ತಳತಳಿಸುವ ಬಾನೆಡೆಯಲ್ಲಿಯೂ ಪುಟ್ಟ ನಕ್ಷತ್ರನನ್ನು ಕೂಡಿಸಿಕೊಂಡು ಕರೆದುತಂದು ದೊರೆಯ ಎದುರಿನಲ್ಲಿ ನಿಲ್ಲಲಾರಂಭಿಸಿದುವು. ರಾಜನ ಕಣ್ಣುಗಳೆರಡ ರಲ್ಲಿಯೂ ಕಂಬನಿಗಳು ಹರಿಯುತಲಿದ್ದುವು.

---

# ರಾಜದ್ರೋಹವೋ ದೇಶಭಕ್ತಿಯೋ?

ಲೇಖಕರು:— ಶ್ರೀ. ಕುಡ್ವ ಲಕ್ಷ್ಮಣರಾಯರು, ಕಾರ್ಕಳ

ಭಾರತಮಂತ್ರಿಗಳಾದ ವೆಜವುಡ್ ಬೆನ್ನರು ಬ್ರಿಟಿಷ ಪಾರ್ಲಿಮೆಂಟಿನಲ್ಲಿ ಇತ್ತೀಚೆಗೆ ಕೊಟ್ಟ ಭಾಷಣದಲ್ಲಿ ಹಿಂದು ಸ್ಥಾನಕ್ಕೆ ಸಾಮಂತಸ್ವರಾಜ್ಯವು ಸಿಕ್ಕುಬಿಟ್ಟದೆಯೆಂದು ಹೇಳಿರುವರು. ಅಲ್ಲಿ ಅವರ ಭಾಷಣವು ಮುಗಿಯುವಷ್ಟರಲ್ಲಿಯೇ ಇಲ್ಲಿ ರಾಜದ್ರೋಹದ ಮೊಕದ್ದಮೆಗಳು ಹೊರಟವು. ಇದೇ ೧೯೩೦ನೇ ಇಸ್ವಿಯ ಫೆಬ್ರುವರಿ ತಿಂಗಳಲ್ಲಿ ಇಂಡಿಯನ್ ಪೀನಲ್‌ಕೋಡು ೧೨೪ ಅ (ರಾಜದ್ರೋಹ), ಪ್ರೊ. ಕೋಡು ೧೦೭–೧೦೮ (ಜಾಮೀನು–ಮುಚ್ಚಳಿಕೆ), ಪೋಲೀಸು ಆಕ್ಟು, ಆರ್ಮ್ಸ್ ಆಕ್ಟು, ಜೇಲ ಆಕ್ಟುಗಳ ಮೇರೆಗೆ ೭೭ ಮೊಕದ್ದಮೆ ಗಳು ನಡೆದವೆಂತಲೂ ಅವುಗಳಲ್ಲಿ ೭೪ ಮೊಕದ್ದಮೆಗಳಲ್ಲಿ ಆಪಾದಿತರು ಶಿಕ್ಷಿತರಾದರೆಂತಲೂ ತಿಳಿದುಬರುತ್ತದೆ. ನಂತರ ಉಪ್ಪಿನ ಸತ್ಯಾಗ್ರಹಕ್ಕೆ ಶಿಕ್ಷೆಯನ್ನು ಹೊಂದಿದವರಂತೂ ಅಸಂಖ್ಯಾತ.

## ಸ್ವಾತಂತ್ರ್ಯದಿನ–ಆಚರಣೆ

'ಸ್ವಾತಂತ್ರ್ಯದಿನವನ್ನು' ಆಚರಿಸಿದ್ದಕ್ಕೆ ಬೇರೆ ಬೇರೆ ಕೋರ್ಟಿನವರು ಹಲವು ತೆರದಲ್ಲಿ ಶಿಕ್ಷೆಯನ್ನು ವಿಧಿಸಿರುವರು. ಪುರಿಪಟ್ಟಣದಲ್ಲಿ ಪಂಡಿತ ಲಿಂಗರಾಜ ಅರಸರಿಗೆ ೬೦ ರೂ. ಜುಲ್ಮಾನೆ. ಅದೇ ಸಂಬಂಧವಾಗಿ ಶ್ರೀ. ಬೋಧರಾಮರಾಯರು ಮಿಶ್ರರಿಗೆ ೨೫ ರೂ. ಜುಲ್ಮಾನೆ. ಸ್ವರಾಜ್ಯಧ್ವಜವನ್ನು ಮೆರೆಸಿ ದ್ದಕ್ಕೆ ಕಲಕತ್ತೆಯಲ್ಲಿ ಶ್ರೀ. ಅಮರೇಂದ್ರ ಭೋಜರು ಎಳೆಯ ಲ್ಪಟ್ಟರು. ಕಪ್ಪು ಧ್ವಜಗಳಿಂದ ಸರಕಾರಕ್ಕೆ ವಿರೋಧವನ್ನು ವ್ಯಕ್ತಪಡಿಸಿದವರು ಸೆರೆಮನೆ ಸೇರಿದರು. ಅದೇ ಕಲಕತ್ತೆಯ ಬೆಲ್‌ಘಟ್ ಎಂಬಲ್ಲಿ ಸರಸ್ವತೀಪೂಜೆಯ ನಿಮಿತ್ತವಾಗಿ ಚಿಕ್ಕ ವಯಸ್ಸಿನವರನ್ನು ಮಕ್ಕಳಕೋರ್ಟಿಗೆ (Juvenile court) ಕಳುಹಿಸಿರುವರು. ಅವರ ಜೊತೆಗೆ ಬ್ರಿಟಿಷ ಸಾಮ್ರಾಜ್ಯಕ್ಕೆ ಕೆಡಕುಂಟುಮಾಡುವ ದೊಣ್ಣೆಗಳಿದ್ದವೆಂಬುದೇ ಅವರ ಮೇಲೆ ಹೊರಿಸಿದ ತಪ್ಪು.

ರಾಜದ್ರೋಹವನ್ನು ಪ್ರಕಟಿಸಿದ ಬಗ್ಗೆ ಬಿಪಿನ್ ಬಿಹಾರಿ ದಾಸ್ ಎಂಬವನಿಗೆ ಬಂಗಾಲದ ಸೂರಿ ಎಂಬ ಪಟ್ಟಣದಲ್ಲಿ ೫೦೦ ರೂ. ಗಳ ಜಾಮೀನನ್ನೂ ಕೃಷ್ಣ ಒಲ್ಲಿ ಇಸಾಹೇ ಎಂಬವ ನಿಗೆ ಹಜಾರಿಬಾಗಿನಲ್ಲಿ ೨೦೦೦ ರೂ. ಗಳ ಜಾಮೀನನ್ನು ಕೇಳಲಾಗಿ ಅವರು ಕೊಡದ್ದರಿಂದ ಅವರಿಗೆ ಕಾರಾಗೃಹವು ಪ್ರಾಪ್ತವಾಯಿತು.

## ೧೨೪ ಅ. ಇಂಡಿಯನ್ ಪೀನಲ್‌ಕೋಡು

ದಂಡವಿಧಾನದ ಕಾನೂನುಗಳಲ್ಲಿ ಇದು ಮುಖ್ಯವಾದದ್ದು (Royal section); ಮಹಾತ್ಮಾಜಿಯವರು ಇದನ್ನ

Prince among sections ಶ್ರೇಷ್ಠ ಸೆಕ್ಶನ್ನು ಎಂದು ಹೆಸರಿಟ್ಟಿರುವರು. ಈ ಸೆಕ್ಶನ್ನಿನ ಮೇರೆಗೆ ಕಲಕತ್ತೆಯಲ್ಲಿ ನಿಯೋಗಿ ಮಹಮ್ಮದ ಶಿದ್ದಿಕ್, ಶಿಶುರಾಮ ಮಂಡಲ್ ದೇವ ನಂದ ದಿಕ್ಷಿತ್ ಎಂಬವರೂ ಮುಂಬಯಿಯಲ್ಲಿಯ ರಹಿಮಾನ್ ಎಂಬವರೂ ಶಿಕ್ಷಿಸಲ್ಪಟ್ಟರು. ಪಂಜಾಬಿನಲ್ಲಿ ಒಬ್ಬರಿಗೆ ಜನ್ಮಟಾಪು (Transportation for life) ವಿಧಿಸಲಾಗಿತ್ತು; ಹಿಂದುಗಡೆ ೩೦ ವರ್ಷ ಕಠಿಣ ಸಜಾ ಎಂಬದಾಗಿ ಕಡಿಮೆ ಮಾಡಲಾಯಿತು. ಸರಾಸರಿಯಲ್ಲಿ ಪ್ರತಿಯೊಬ್ಬನಿಗೂ ಈ ಸೆಕ್ಶನ್ನಿನ ಮೇರೆಗೆ ೧ ವರ್ಷ ೧ ತಿಂಗಳು ಶಿಕ್ಷೆ ಆಗಿದೆ. ಈ ಸೆಕ್ಶನ್ನಿಗೆ ಆಧಾರವಾಗಿ ಬೇರೆ ದಂಡವಿಧಾನದ ಕಾನೂನುಗಳು ಮಾಡಲ್ಪಟ್ಟದ್ದರಿಂದ ಇದರ ಬಗ್ಗೆ ಕೂಲಂಕಷವಾಗಿ ವಿಚಾರಿಸುವದು ಅತ್ಯಗತ್ಯವಾಗಿದೆ. ೧೯೩೪ನೇ ಇಸ್ವಿ ಅಗೋಸ್ತು ತಾ. ೧೧ರಲ್ಲಿ ರಾಜಕೀಯ ಚಳವಳದಲ್ಲಿ ಶಿಕ್ಷಿಸಲ್ಪಟ್ಟ ಜನರೂ ಸ್ವಾತಂತ್ರ್ಯದಿನಾಚರಣೆಯ ಕಾಲಕ್ಕೆ ಮೆರವಣಿಗೆಯನ್ನು ತೆಗೆದ ಶ್ರೀ. ಸುಭಾಸಚಂದ್ರ ಬೋಸ, ನಿರನ್ ಶಂಕರರಾಯ, ಡಾ. ಜೆ. ಎಮ್ ದಾಸಗುಪ್ತ ಮತ್ತು ಇತರ ೯ ಜನರೂ ಇದೇ ಸೆಕ್ಶನ್ನಿನ ಮೇರೆಗೆ ಶಿಕ್ಷಿಸಲ್ಪಡತಕ್ಕವ್ದೆಂದು ಕಲಕತ್ತೆಯ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಅಭಿಪ್ರಾಯಪಟ್ಟಿರುವರು. ಕೆಲವು ದಿವಸಗಳ ಹಿಂದೆ ಈ ಶಿಕ್ಷೆಯು ಹೈಕೋರ್ಟಿನಲ್ಲಿ ೯ ತಿಂಗಳಿಗೆ ಕಡಿಮೆ ಮಾತ್ರ ಮಾಡಲ್ಪಟ್ಟದ್ದರಿಂದ ಕೆಳಗಿನ ಕೋರ್ಟಿನವರು ಮಾಡಿದ ರಾಜದ್ರೋಹದ ಅರ್ಥವು ಸರಿಯೆಂಬುದಾಗಿ ಹೈಕೋರ್ಟಿನವರ ಅಭಿಪ್ರಾಯವಿರುವದೆಂದು ತಿಳಿಯಬೇಕಾಗಿದೆ. ೧೯೩೪ನೇ ಫೆಬ್ರುವರಿ ೫ ರಲ್ಲಿ 'ಬಾಂಗ್ಲಾರ ಕಥಾ' ಎಂಬ ವರ್ತಮಾನಪತ್ರದ ಸಂಪಾದಕರಾದ ಸತ್ಯರಂಜನ ಭಕ್ಷಿಯವರನ್ನು ಶಿಕ್ಷಿಸುವಾಗ್ಗೆ ೧೨೪ ಅ. ಸೆಕ್ಶನ್ನು ಟೀಕಿಸಿರುವರು. (121 Indian cases 749).

### ೧೨೪ ಅ. ಸೆಕ್ಶನ್ನಿನ ಚರಿತ್ರೆ

ಇದು ಪ್ರಥಮತಃ ನಮ್ಮ ಪೀನಲ್‌ಕೋಡಿನಲ್ಲಿರಲಿಲ್ಲ. ಲಾರ್ಡ ಮೆಕೋಲೆಯವರಿಗೆ ಇದು ಅಗತ್ಯವೆಂದು ತೋರಲಿಲ್ಲ. ೧೮೭೦ರಲ್ಲಿ ನಮ್ಮ ಸರಕಾರದ ಲಾ ಮೆಂಬರರಾದ ಸರ್ ಜೇಮ್ಸ ಸ್ಟೀಫನ್ ಎಂಬವರು ಅದನ್ನು ಸೇರಿಸಿರುವರು. ಆಗ್ಗೆ ಅವರು ಹೇಳಿದ್ದೇನಂದರೆ:—

"ಇಂಗ್ಲಂಡದ ರಾಜದ್ರೋಹದ ಕಾನೂನನ್ನು ಸರಿಯಾಗಿ ಜಾರಿಗೆ ತಂದರೆ ಅದು ಜರ್ಮನಿಯ ಕಾನೂನಿನಷ್ಟೇ ಕಠಿಣ. ಆದರೆ ಈಗ ೫೦ ವರ್ಷಗಳಿಂದ ಇಂಗ್ಲಿಷ ಸರಕಾರದವರು ಇದನ್ನು ಜಾರಿಗೆ ತರಲೇ ಇಲ್ಲ. ಇಂಗ್ಲಂಡದಲ್ಲಿ ೧೮೩೨ನೇ ಸುಧಾರಣೆಯ ಆಕ್ಟು (Reform Act of 1832) ಜಾರಿಗೆ ಬಂದ ನಂತರ ರಾಜದ್ರೋಹದ ಖಟ್ಲೆಗಳು ಬಹಳ ಕಡಿಮೆ; ಇಲ್ಲವೆ ಇಲ್ಲವೆಂದು ಹೇಳಬಹುದು. ಹಿಂಸೆಗೆ ಸಹಾಯ ಮಾಡಿದರೆ ಮಾತ್ರ ರಾಜದ್ರೋಹವಾಗುವದಲ್ಲದೆ - ಅಂಥ ಹಿಂಸಾಪ್ರೇರೇಪಣೆಯಿಲ್ಲವಾದರೆ ಅದು ರಾಜದ್ರೋಹವಲ್ಲ"

ಈ ರೀತಿಯಾಗಿ ಅವರ ಅಭಿಪ್ರಾಯವು ಆಗಿನ ಇಂಗ್ಲಂಡದ ರಾಜದ್ರೋಹದ ಕಾನೂನಿನ ಮೇಲೆ ಆಧರಿಸಿತ್ತು. ಭಾವನೆಗಳಿಂದಲೇ ಭೂಲೋಕವು ಮುನ್ನಡೆಯಲ್ಲಿ ಹೆಜ್ಜೆಯಿಡುವದು (Ideas govern the world); ಆದ್ದರಿಂದ ಮನಸ್ಸಿನೊಳಗಿನ ಅಭಿಪ್ರಾಯಗಳನ್ನು ಪ್ರಕಟಗೊಳಿಸುವದು ಅತ್ಯಗತ್ಯವೆಂದು ಅವರ ಮತವಿತ್ತು. ಅಂತೇ ಅವರು, ಆಗಿನ ಇಂಡಿಯಾದ ಚೀಫ ಜಸ್ಟಿಸ್ ಆಗಿ ಕಲಕತ್ತೆಯಲ್ಲಿದ್ದ ಸರ ಬಾರನ್ಸ ಪೀಕೋಕರು ತಯಾರಿಸಿದ ಮಸೂದೆಯನ್ನು ನಿರಾಕರಿಸಿದರು; ಪೀಕೋಕರ ಮಸೂದೆಯು ಕಾನೂನಾಗಿ ಜಾರಿಗೆಬಂದರೆ ಇಂಗ್ಲಂಡದಲ್ಲಿ ರಾಜದ್ರೋಹವನ್ನೊಳಗೊಳ್ಳದ ವ್ಯಕ್ತಿಗಳ ಕೆಲಸಗಳೂ ಮಾತುಗಳೂ ಇಂಡಿಯಾದಲ್ಲಿ ರಾಜದ್ರೋಹವನ್ನೊಳಗೊಳ್ಳುವವು ಎಂಬದಾಗಿ ಸರ್ ಸ್ಟೀಫನ್ನರ ಅಭಿಪ್ರಾಯವಿತ್ತು.

### ಚೀಫ ಜಸ್ಟಿಸರ ಮಸೂದೆ

ಇದರಲ್ಲಿದ್ದದ್ದೇನಂದರೆ,

"Whoever attempts to excite or to induce or does any thing which he knows to be likely to excite or to induce to entertain feelings ......"etc

"ವ್ಯಕ್ತಿಗಳ ಮನಸ್ಸಿನಲ್ಲಿ ಸರಕಾರದ ಮೇಲೆ ಹುಟ್ಟಬಹುದಾದ ಯಾ ವ್ಯಕ್ತಿಗಳ ಮನಸ್ಸಿನಲ್ಲಿ ದ್ವೇಷವು ಹುಟ್ಟಬಹುದೆಂದು ಗೊತ್ತಿರುವ ಕೆಲಸವನ್ನು ಯಾವನಾದರೂ ಮಾಡುತ್ತಾನೋ ಯಾ ಮಾಡುವರೆ ಪ್ರಯತ್ನಿಸುತ್ತಾನೋ......" ಇತ್ಯಾದಿ.

ಹಾಗಾದರೆ ವ್ಯಕ್ತಿಗೆ ನ್ಯಾಯವಾಗಿ ಹಕ್ಕು ಇರುವ ಕೆಲಸವನ್ನು ಅವನು ಮಾಡಿದಲ್ಲಿ ಅವರ ಫಲಿತಾಂಶವು ಸರಕಾರದವರ ಮೇಲಣ ಅನುರಾಗವನ್ನು ನಾಶ ಮಾಡುವದಾದರೆ ಅದನ್ನವನು ಮಾಡಕೂಡದೋ ? ಉದಾ:- ಒಬ್ಬ ವ್ಯಕ್ತಿಯು ಸರಕಾರಕ್ಕೆ

ತೀರ್ವೆ (ಕರ) ಯನ್ನು ಕೊಡುವದಿಲ್ಲ.' ಇದರಿಂದ ಬೇರೆ ಜನರಲ್ಲಿ ಸರಕಾರದವರ ಮೇಲೆ ದ್ವೇಷದ ಭಾವನೆಯುಂಟಾಗಲಿಕ್ಕಿಲ್ಲವೇ? 'ಒಬ್ಬ ವ್ಯಕ್ತಿಯು ತಾನು ಸರಕಾರದ ತೀರ್ವೆಯನ್ನು ಕೊಡದೆ ಬೇರೆ ವ್ಯಕ್ತಿಗಳಿಗೂ ಕೊಡಬೇಡವೆಂದು ಹೇಳುತ್ತಾನೆ.' ಇದು ರಾಜದ್ರೋಹವೋ? ಈ ಬಗೆಯ ಚರ್ಚೆಯು ಆಗ್ಗೆ ನಡೆಯಿತು.

ಟೀಕಾಕಾರ ಮಸೂದೆಯ ಮೇರೆಗೆ ಇದು ರಾಜದ್ರೋಹ. ಸ್ಟೀಫನರ ಅಭಿಪ್ರಾಯದ ಮೇರೆಗೆ ಇದು ರಾಜದ್ರೋಹವಲ್ಲ. ವ್ಯಕ್ತಿಯು ತನಗಿರುವ ಹಕ್ಕಿನ ಮೇರೆಗೆ ಯಾವದೊಂದು ಕಾರ್ಯವನ್ನು ಮಾಡಬಹುದು. ಹಕ್ಕಿನ ಮೇರೆಗೆ ಫಲಿತಾಂಶವಾಗಿ ಸರಕಾರದ ವಿಷಯಕ್ಕೆ ಹುಟ್ಟಿದ ದ್ವೇಷಕ್ಕೆ ಅವನು ಜವಾಬದಾರನಲ್ಲ. ನ್ಯಾಯವಾದ ಅವನ ಹಕ್ಕನ್ನು ಬಿಟ್ಟು ಅತಿಕ್ರಮಿಸಿದ ಅವನ ಮಾತುಗಳು ೧೨೪ ಅ ಸೆಕ್ಶನ್ನಿಗೆ ಒಳಪಡಬಹುದು.

## ಸರ್ ಸ್ಟೀಫನರ ಮಸೂದೆ

ಸರಕಾರದವರು ಪ್ರಥಮತಃ ಪ್ರಕಟಿಸಿದ ಇವೇ ಇಂಡಿಯನ ಪೀನಲಕೋಡಿನ (೧೨೪ ಅ.) ಭಾಷಾಂತರವು ಹೀಗಿದೆ :—

"ಯಾವಾತನು ಬಾಯ್ದೆರೆಯಾಗಿ ಅಥವಾ ಬರಹಮೂಲಕವಾದ ಮಾತಿನಿಂದಾಗಲಿ ಗುರುತಿನಿಂದಾಗಲಿ ಕಣ್ಣಿಗೆ ತಿಳಿಯುವ ಚಿತ್ರದಿಂದಾಗಲಿ ಇನ್ನಾವ ವಿಧದಿಂದಾಗಲಿ ಬ್ರಿಟಿಷ ಇಂಡಿಯದಲ್ಲಿ ಕಾನೂನುಪ್ರಕಾರ ಸ್ಥಾಪಿಸಲ್ಪಟ್ಟಿರುವ ಗವ್ಹರ್ನಮೆಂಟಿನವರ ವಿಷಯದಲ್ಲಿ ವಿರೋಧವಾದ ತಾತ್ಪರ್ಯವುಂಟಾಗುವ ಹಾಗೆ ಪ್ರೇರೇಪಣೆ ಮಾಡುತ್ತಾನೋ ಅಂಥಾ ಮನುಷ್ಯನು ಯಾವಜ್ಜೀವಪರ್ಯಂತವೂ ಯಾ ಅದಕ್ಕಿಂತ ಕಮ್ಮಿ ಮಾಯಿದೆಯ ಪರ್ಯಂತವೂ ನೀರಿನ ಮೇಲೆ ಕಳುಹಿಸಲ್ಪಡತಕ್ಕದ್ದು. ಇದಕ್ಕೆ ಜುಲ್ಮಾನೆ ಸೇರಿಸಬಹುದು."

ಅಂದಮಾನ ದ್ವೀಪಗಳಿಗೆ ಈಗ ಜನರನ್ನು ಕಳುಹಿಸುವದಿಲ್ಲವಾದ್ದರಿಂದ ನೀರಿನ ಮೇಲೆ ಕಳುಹಿಸದೆ ಯಾವಜ್ಜೀವವೂ ಅಂದರೆ ೧೪ ವರ್ಷ ಅವರಿಗೆ ಕಾರಾಗೃಹವು ಪ್ರಾಪ್ತಿಯಾಗುವದು.

ಕಾಲಕ್ರಮೇಣ ೧೮೯೮ ರಲ್ಲು ಈ ಸೆಕ್ಶನ್ನು ಸುಧಾರಿಸಲ್ಪಟ್ಟಿತು. ಟಿಪ್ಪಣಿಗಳಲ್ಲಿ ಸುಧಾರಣೆಯಾಗಿದೆ. 'ಸರಕಾರ'ದ ಮುಂಚೆ 'ನಮ್ಮ ಚಕ್ರವರ್ತಿ'ಯವರೆಂಬದನ್ನು ಕೂಡಿಸಿರುವರು. ಸರಕಾರದವರ ಬಗ್ಗೆ ದ್ವೇಷ—ತುಚ್ಛೀಕಾರ—ವೈಮನಸ್ಸುಗಳುಂಟಾಗದಂತೆ ನ್ಯಾಯವಾದ ರೀತಿಯಲ್ಲಿ ಮಾಡಬಹುದೆಂಬದಾಗಿ ಹೇಳಿರುವರು. ವೈಮನಸ್ಸಿನಲ್ಲಿ ರಾಜದ್ರೋಹವೂ ಎಲ್ಲ ತರದ ದ್ವೇಷಭಾವನೆಗಳೂ ಕೂಡಿರುತ್ತವೆ.

## ಈ ಸೆಕ್ಶನ್ನಿನ ಮೇಲೆ ಜಡ್ಜರ ಅಭಿಪ್ರಾಯ

ಸರಕಾರದ ಮೇಲಣ ದ್ವೇಷವು ಕಾರ್ಯದಲ್ಲಿ ತೋರಿದರೆ ಅದು ರಾಜದ್ರೋಹ. ಆಪಾದಿತವ್ಯಕ್ತಿಯಲ್ಲಿ ಈ ದ್ವೇಷವನ್ನು ಹುಟ್ಟಿಸುವ ಮನೋಭಾವನೆಯು ಇಲ್ಲದ ಪಕ್ಷದಲ್ಲಿ ಅವನು ರಾಜದ್ರೋಹಕ್ಕಾಗಿ ಶಿಕ್ಷಿಸಲ್ಪಡುವದಿಲ್ಲ. ವ್ಯಕ್ತಿಯು ಬರೆದ ಪತ್ರಗಳಿಂದಲೂ ಲೇಖನಗಳಿಂದಲೂ ಅವನ ಮನೋಭಾವವನ್ನು ತಿಳಿಯಬೇಕು. ಸ್ವರಾಜ್ಯವು ನಮಗೆ ಬೇಕೆಂಬದಾಗಿ ಹೇಳುವದು ರಾಜದ್ರೋಹವಲ್ಲ. ವ್ಯಕ್ತಿಯು ಬರೆದ ಇಡೀ ಲೇಖನವನ್ನು ನೋಡಬೇಕಲ್ಲದೆ ಬೇರೆ ಬೇರೆ ವಾಕ್ಯಗಳನ್ನು ಪ್ರತ್ಯೇಕವಾಗಿ ನೋಡಬಾರದು. ೧೯೦೮ ರಲ್ಲಿ ನಡೆದ ಲೋಕಮಾನ್ಯ ತಿಲಕರ ಒಂದು ಮೊಕದ್ದಮೆಯಲ್ಲಿ ಮನೋಭಾವವೆಂದರೇನೆಂಬ ಬಗ್ಗೆ ಚರ್ಚೆ ನಡೆದು ಲೇಖನದ ಅರ್ಥವೇ ಬರೆದ ವ್ಯಕ್ತಿಯ ಮನೋಭಾವವೆಂದೆಣಿಸಬೇಕಾಗಿ ಕೋರ್ಟಿನವರು ಅಭಿಪ್ರಾಯಪಟ್ಟಿರುವರು. ಅದಲ್ಲದೆ ಆಳರಸರೆಂದರೇ ಕಾನೂನಿನಿಂದ ಸ್ಥಾಪಿತವಾದ ಸರಕಾರವೆಂಬದಾಗಿ ಕೋರ್ಟಿನವರು ಅಭಿಪ್ರಾಯಪಟ್ಟಿರುವದರಿಂದ ಆಯ್. ಸಿ. ಎಸ್ ಜನರನ್ನು ದೂಷಿಸುವದು ರಾಜದ್ರೋಹವೆಂಬದಾಗಿ ಹೈಕೋರ್ಟಿನವರು ಅಭಿಪ್ರಾಯಪಟ್ಟಂತಾಯಿತು. ಸುಭಾಸಚಂದ್ರರ ಮೇಲೆ ನಡೆದ ಪ್ರಕರಣದಲ್ಲಿ 'Down with Imperialism' ಎಂಬುದರ ಅರ್ಥವನ್ನು ಮುಖ್ಯ ಪ್ರೆಸಿಡೆನ್ಸಿ ಮೆಜಿಸ್ಟ್ರೇಟರು ಕೊಟ್ಟಿರುವದು ಹೇಗೆಂದರೆ- Imperialism=ಬ್ರಿಟಿಷ ಸರಕಾರ; Down with Imperialism=Down with British Government. ಈ ರೀತಿಯಾಗಿ ಹೈಕೋರ್ಟಿನವರೇ ಅಭಿಪ್ರಾಯಪಟ್ಟರೆ 'ಕಾನೂನಮೇರೆಗೆ ಸ್ಥಾಪಿತವಾದ ಸರಕಾರ' ಎಂಬ ಶಬ್ದಗಳ ಅರ್ಥವು ಅತಿ ವಿಸ್ತೃತವಾಯಿತು. 'ಬಾಂಗ್ಲಾರ ಕಥಾ' ಪ್ರಕರಣದಲ್ಲಿ ಬ್ಯಾರಿಸ್ಟರ ಬಿ. ಸಿ. ಚಟರ್ಜಿಯವರು '೧೨೪ ಅ. ಸೆಕ್ಶನ್ನಿನಲ್ಲಿರುವ ಕಾನೂನು ಮೇರೆಗೆ ಸ್ಥಾಪಿತವಾದ ಸರಕಾರವೆಂಬುದು ೧೯೧೯ ನೆ ಇಸ್ವಿಯ ಗವರ್ನಮೆಂಟ ಆಫ್ ಇಂಡಿಯಾ ಆಕ್ಟ ಜಾರಿಗೆ ಬಂದನಂತರ ನಮ್ಮ ಇಂಡಿಯನ್ ಸಿವ್ಹಿಲ್ ಸರ್ವಿಸಿನವರಿಗೆ ಸಂಬಂಧಿಸುವದಿಲ್ಲ'ವೆಂದು ಮಾಡಿದ ಪ್ರಯುತ್ನಗಳು ಸಫಲವಾಗಲಿಲ್ಲ. 'ಕಾನೂನು ... ಮಾಡುವ ಅಧಿಕಾರವು ಪ್ರಾಂತಿಕ

ಸಂಸ್ಥೆಗಳಿಗೆ ಹೋಗಿದ್ದರಿಂದ ನೌಕರಶಾಹಿಯೆಂದರೆ ಈ ಸರಕಾರವಲ್ಲವೆಂಬದನ್ನು ತಾವು ಒಪ್ಪಲಾರೆವೆಂದು ಹೈಕೋರ್ಟಿನವರು ಹೇಳಿರುವರು.

## ಈ ಕಾನೂನಿನ ಬಗ್ಗೆ ಲಾರ್ಡ ಹೆಲ್ಡೇನ ಮತ್ತು ಲಾರ್ಡ ಪಾರ್ಮರ ಇವರ ಅಭಿಪ್ರಾಯ

ಲಾರ್ಡ ಹೆಲ್ಡೇನರು ಬ್ರಿಟಿಷ ಸಾಮ್ರಾಜ್ಯದಲ್ಲಿ ಪ್ರಖ್ಯಾತ ಮನುಷ್ಯರು. ಬಹಳ ವರ್ಷಗಳ ವರೆಗೆ ಇವರು ಲಾರ್ಡ ಚಾನ್ಸಲರ ಎಂಬ ಅತ್ಯುತ್ಕೃಷ್ಟ ಪದವಿಯನ್ನು ಪಡೆದಿದ್ದರು. ಇವರು ಈ ವಿಷಯವಾಗಿ ಹೇಳುವದೇನಂದರೆ,

" ಅಭಿಪ್ರಾಯಗಳನ್ನು ಸೂಚಿಸಲು ಬಂಧನಮಾಡುವದರಿಂದ ಎಂದಿಗೂ ಸಾರ್ಥಕತೆಯಿಲ್ಲ. ಸ್ವಾತಂತ್ರ್ಯದ ಮೇಲೆ ಬಂಧನಗಳನ್ನು ಹಾಕಿದರೆ ಜನರಿಗೆ ಮನೋವ್ಯಥೆಯುಂಟಾಗುವದು. ಸಮಾಜದ ಹಿತಕ್ಕಾಗಿ ಕೆಲವು ಸಂಗತಿಗಳಲ್ಲಿ ಸ್ವಾತಂತ್ರ್ಯಕ್ಕೆ ಬಂಧನ ಹಾಕುವದು ಅಗತ್ಯವಿದ್ದರೂ ಈ ವಿಷಯದಲ್ಲಿ ಜನಸಮುದಾಯದ ಅಭಿಪ್ರಾಯವೇ ಪ್ರಮುಖವಾದದ್ದು. ಜನರ ಅಭಿಪ್ರಾಯವು ನಮ್ಮ ಸಹಾಯಕ್ಕೆ ಇಲ್ಲವಾದರೆ ನಮ್ಮ ಬಂಧನಗಳಿಂದ ಏನೂ ಪ್ರಯೋಜನವಿಲ್ಲ. ಇನ್ನಷ್ಟು ಗಂಡಾಂತರಗಳೇ ಬಂದೊದಗುವವು. ನಮ್ಮ ಪ್ರಸಿದ್ಧ ವಿರಾಮಸ್ಥಳವಾದ ಹೈಡ ಪಾರ್ಕಿನಲ್ಲಿ ರಾಜದ್ರೋಹಸೂಚಕ ಚಿನ್ಹಗಳನ್ನು ಜನರು ತೋರಿಸಿದರೂ ಅದರಲ್ಲಿ ನಾವು ಪ್ರವೇಶಮಾಡುವದಿಲ್ಲ. ನಮ್ಮ ಸರಕಾರದ ದೂಷಣೆ ತುಚ್ಛೀಕಾರಗಳುಳ್ಳ ಮಾತುಗಳನ್ನು ಕೇಳಿದರೂ ಅವುಗಳನ್ನು ಲಕ್ಷ್ಯಕ್ಕೆ ತರದೆ ಹಾಗೆಯೇ ಬಿಡುವೆವು. ಜನರನ್ನು ನಾವು ಬಂಧಿಸಿದರೆ ಮತ್ತಿಷ್ಟು ತೊಂದರೆಗಳು ಹುಟ್ಟುವವು."

ಇದೇ ವಿಷಯವಾಗಿ ಪ್ರಸಿದ್ಧ ಇಂಗ್ಲಿಷ ನ್ಯಾಯಾಧೀಶರಾದ ಲಾರ್ಡ ಪಾರ್ಮರ ಎಂಬವರು ಭಾಷಣ ಕೊಟ್ಟಿರುವದು ಹೇಗೆಂದರೆ,

"ಒಂದು ವ್ಯಕ್ತಿಯ ಭಾಷಣವು ಬೇರೆ ವ್ಯಕ್ತಿಗಳಲ್ಲಾಗಲಿ ಕೇಳುವ ಜನಸಮೂಹದಲ್ಲಾಗಲಿ ಸರಕಾರದ ಬಗ್ಗೆ ದ್ವೇಷವನ್ನು ಹುಟ್ಟಿಸುತ್ತದೋ ಇಲ್ಲವೋ ಎಂಬದರ ವಿಷಯವಾಗಿ ಭಿನ್ನಾಭಿಪ್ರಾಯಗಳು ಹುಟ್ಟಲು ಅವಕಾಶವುಂಟು. ಈ ಭಿನ್ನಾಭಿಪ್ರಾಯಗಳನ್ನು ಕುರಿತು ಏನು ಮಾಡಲೂ ಸಾಧ್ಯವಿಲ್ಲ. ನಮ್ಮ ಇಂಗ್ಲಂಡದ ಕಾನೂನಿನ ( Common Law ) ಮೇರೆಗೆ ಅಭಿಪ್ರಾಯಗಳನ್ನು ಸೂಚಿಸುವದೊಂದು ಶಿಕ್ಷಾರ್ಹವಾದ ಕೃತ್ಯವಲ್ಲ. ಈ ಸೂತ್ರವು ನಮ್ಮ ದೇಶದ ಸ್ವಾತಂತ್ರ್ಯದ ಮೂಲಾಧಾರವಾಗಿದೆ."

## ನಮ್ಮ ಸೆಕ್ರೆಟರಿ ಆಫ್ ಸ್ಟೇಟರು ೧೯೨೬ರಲ್ಲಿ ಈ ಬಗ್ಗೆ ಬರೆದ ಲೇಖನ

ಆಗ್ಗೆ ಇಂಗ್ಲಂಡಿನಲ್ಲಿ ೧೨ ಜನ ಕಮ್ಯುನಿಸ್ಟರ ಮೇಲೆ ರಾಜದ್ರೋಹದ ಆರೋಪವೇರ್ಪಟ್ಟು ನ್ಯಾಯಾಧೀಶ ಸ್ವಿಫ್ಟ ಎಂಬವರು ಜೂರಿಯವರಿಗೆ ಕೊಟ್ಟ ಚಾರ್ಜಿನ ಮೇರೆಗೆ ಆರೋಪಿಗಳು ಶಿಕ್ಷಿಸಲ್ಪಟ್ಟರು. ನ್ಯಾಯಾಧೀಶರು ಜೂರಿಯವರಿಗೆ ಹೇಳಿದ್ದೇನಂದರೆ, " ಆರೋಪಿಗಳು ಮಾಡಿದ ಭಾಷಣವು ಸಾಮ್ರಾಜ್ಯದ ಕಾನೂನಿಗೆ ವಿರೋಧವಾಗಿ ನಮ್ಮ ಸರಕಾರವನ್ನೇ ನಾಶಪಡಿಸಬೇಕೆಂಬ ಭಾವವನ್ನು ವ್ಯಕ್ತಪಡಿಸುವದೆಂದು ನೀವು ( Jury ) ಅಭಿಪ್ರಾಯಪಡುವದಾದರೆ ಈ ಆರೋಪಿಗಳು ಅಪರಾಧವನ್ನುಮಾಡಿರುವರೆಂಬದಾಗಿ ಹೇಳುವದು ನಿಮ್ಮ ಕರ್ತವ್ಯ".

ಈ ಕಾಲಕ್ಕೆ ಬರೆದ ಲೇಖನದಲ್ಲಿ ನಮ್ಮ ಸೆಕ್ರೆಟರಿ ಆಫ ಸ್ಟೇಟರು (ಆಗ್ಗೆ ಅವರು ಸೆಕ್ರೆಟರಿಗಳಾಗಿರಲಿಲ್ಲ) ಈ ನ್ಯಾಯಾಧೀಶರು ಹೇಳಿದ ಮಾತುಗಳಿಗೆ ತಮ್ಮ ಸಮ್ಮತಿಯಿಲ್ಲವೆಂಬದಾಗಿ ಹೇಳುವದಲ್ಲದೆ ಪ್ರಸಿದ್ಧ ಪ್ರೊ. ಡಿಸಿಯವರು ಬರೆದ 'ರಾಜಶಾಸನಗಳ ಕಾನೂನು ' ಎಂಬ ಪುಸ್ತಕದಲ್ಲಿ ಬರೆದಿರುವ ಹೇಳಿಕೆಗಳನ್ನು ಅನುಮೋದಿಸಿರುವರು. ಅದು ಏನಂದರೆ, " ಇಂಗ್ಲಂಡಿನ ರಾಜದ್ರೋಹವನ್ನು ನ್ಯಾಯಾಧೀಶರು ಟೀಕಿಸಿದ ಮೇರೆಗೆ ಜಾರಿಗೆ ತಂದರೆ ನ್ಯಾಯ್ಯವಾದ ಮತ್ತು ಸರಕಾರದವರು ಅನುಮತಿಸಬೇಕಾದ ಚರ್ಚೆಗೆ ಅಭ್ಯಂತರವುಂಟಾಗುವದು. ರಾಜಕೀಯ ಚಳವಳಗಳೊಡನೆ ವ್ಯವಹರಿಸುವ ಕ್ರಮಗಳಿಗೆ ಈ ಟೀಕು ವಿರೋಧವಾಗಿರುವದು ". ಈ ರೀತಿಯಲ್ಲಿ ಪ್ರೊಫೆಸರರು ಅಭಿಪ್ರಾಯಪಟ್ಟಿರುವದು ಸರಿಯೆಂಬದಾಗಿ ಇದೇ ವೆಜವುಡ್ ಬೆನ್ನರು ಹೇಳಿರುವದು ಹೇಗೆಂದರೆ, " ಈ ಮೇರೆಗೆ ಚರ್ಚೆಗಳ ಹಾಗೂ ಭಾಷಣಗಳ ಸ್ವಾತಂತ್ರ್ಯಕ್ಕೆ ಇಂಗ್ಲಂಡಿನ ಲಿಬರಲ್ ಪಕ್ಷದವರು ಎಂದಿಗೂ ಸಮ್ಮತಿಸಲಾರರು. ಅದಲ್ಲದೆ ಇಂಥ ಮೊಕದ್ದಮೆಗಳನ್ನು ಪ್ರಾರಂಭಮಾಡುವ ಸರಕಾರದ ಮೇಲೆ ಹೆಚ್ಚಿನ ಜವಾಬ್ದಾರಿಯಿರಬೇಕು. ಈ ಮೊಕದ್ದಮೆಗಳನ್ನು ಮುಂದರಿಸುವದು ಜನರಿಗೆ ಪ್ರಯೋಜನಕರವೂ ಹಿತಕರವೂ ಏನೆಂಬದನ್ನು ಪ್ರಥಮತಃ ಇತ್ಯರ್ಥಿಸಬೇಕು. ಕಾನೂನಿನ ಮೇರೆಗೆ ಎಲ್ಲರೂ ಸರಿಸಮಾನರು. (Law is impartial) ಈ ಮೇರೆಗೆ ರಾಜದ್ರೋಹದ ಆರೋಪಣೆ

ಮಾಡುವದರಿಂದ ಕಾನೂನು ನಿಷ್ಪಕ್ಷಪಾತಿ ಎಂಬ ಭರವಸೆಯು ಜನರಲ್ಲಿ ಕಡಿಮೆಯಾಗುವದು. ಅದಲ್ಲದೆ ಇಂಥವರ ಭಾಷಣಗಳಿಂದ ನೆಮ್ಮದಿಯೇನಾದರೂ ಭಂಗವಾಗಿದೆಯೇನೆಂಬದನ್ನು ನೋಡಬೇಕು. ಇವರಿಗೆ ಹಿಂಸಾಮಯ ಕೃತ್ಯವನ್ನು ಮಾಡುವ ಮನೋಭಾವವಿದ್ದರೂ ನೆಮ್ಮದಿಗೆ ಭಂಗವಾಗಿದೆಯೇ ಹೇಗೆಂಬದನ್ನು ನೋಡದೆ ರಾಜದ್ರೋಹದ ಮೊಕದ್ದಮೆಗಳನ್ನು ಉಂಟು ಮಾಡಬಾರದು" (It is clear therefore that whatever may have been the intentions of the leaders their intention to promote sporadic outbursts has been denied by them—their teaching has been absolutely without effect.)

ಮಂತ್ರಿವರ್ಯ ಬೆನ್ನ ಸಾಹೇಬರು ತಮ್ಮ ಲೇಖನದ ಕೊನೆಯಲ್ಲಿ ತಮ್ಮ ಅಭಿಪ್ರಾಯವನ್ನೂ ಆಗ್ಗೆ ತಾವು ಸೇರಿದ್ದ ಲಿಬರಲ್ ಪಕ್ಷದವರ "ರಾಜದ್ರೋಹ"ದ ವಿಷಯಕವಾದ ಅಭಿಪ್ರಾಯಗಳನ್ನೂ ಕೆಳಗೆ ಬರೆದಂತೆ ಸೂಚಿಸಿರುವರು:—

"ಪ್ರಕಟವಾದ ಮಾತುಗಳು ನ್ಯಾಯವಾದವುಗಳಲ್ಲ. ನ್ಯಾಯವಾದವುಗಳೆಂದು ಸಾಧಿಸಲು ಸಾಧ್ಯವೂ ಇಲ್ಲ. ಸೂಕ್ಷ್ಮವಿಚಾರದಲ್ಲಿ ಅವುಗಳು ತಕ್ಷೀರುಕರ. ರುಜುವಾತು ನೋಡಿದಲ್ಲಿ ಜೂರಿಯವರ ಅಭಿಪ್ರಾಯವು ಸರಿ. ಬೇರೆ ತೀರ್ಪನ್ನು ಕೊಡುವರೆ ಅವರಿಗೆ ಸಾಧ್ಯವೇ ಇಲ್ಲ. ಕಮ್ಯುನಿಸ್ಟರ ಅಭಿಪ್ರಾಯಗಳು ಆರ್ಥಿಕ ಮತ್ತು ರಾಜಕೀಯ ದೃಷ್ಟಿಯಿಂದ ನೋಡಿದರೆ ಅಸಾಧ್ಯ ಹಾಗೂ ಅಸಹ್ಯವಾದವುಗಳೆಂಬದು ನಿಜ. ಯಾಕಂದರೆ ಎಲ್ಲಾ ಅಧಿಕಾರವನ್ನು ಒಬ್ಬ ಮನುಷ್ಯನಿಗೆ ಕೊಟ್ಟು ಅವನನ್ನು ಡಿಕ್ಟೇಟರನನ್ನಾಗಿ ಮಾಡಿ ಈ ಅಧಿಕಾರವನ್ನು ಬಲಾತ್ಕಾರದಿಂದ ಆಧರಿಸುವದೂ ಜಾರಿಗೆ ತರುವದೂ ಅಗತ್ಯವಾಗುತ್ತದೆ. ಆದರೆ ಪ್ರಾಮುಖ್ಯದಿಂದ ಆಲೋಚಿಸತಕ್ಕ ಸಂಗತಿಗಳು ಬೇರೆಯೇ ಉಂಟು. ಪಕ್ಷಪಾತವಿಲ್ಲದೆ ಇರುವದು ಹಾಗೂ ಈಗಿನ ಪರಿಸ್ಥಿತಿಯಲ್ಲಿ ಅದು ಪ್ರಯೋಜನದ್ದೊ (Expedient) ಎಂಬದನ್ನು ಆಲೋಚಿಸುವದು ಮುಖ್ಯವಾದವುಗಳು. ಈ ಮೊಕದ್ದಮೆಯಲ್ಲಿ ಪಕ್ಷಪಾತವುಂಟೆಂದು ಹೇಳಲು ಕಮ್ಯುನಿಷ್ಟ ಪಕ್ಷದವರಿಗೆ ಆಸ್ಪದವುಂಟು. ಬೇರೆ ಸಂಗತಿಗಳನ್ನೂ ನಾವು ಆಲೋಚಿಸುವದಾದರೆ ನಮ್ಮ ರಾಜ್ಯದಲ್ಲಿ ಯಾವದೊಂದು ಗಲಾಟೆಯಿರುವದಿಲ್ಲ. ನಮ್ಮ ಸರಕಾರದ ಅಧಿಕಾರವನ್ನು ಜಾರಿಗೆ ತರುವಷ್ಟು ಕಾರಣವೂ ತೋರುವದಿಲ್ಲ."

ಅಂದರೆ ಗಲಾಟೆ ಅಥವಾ ನೆಮ್ಮದಿಗೆ ಭಂಗವಿಲ್ಲದೆ ಇರುವಲ್ಲಿ ಸರಕಾರದವರು ರಾಜದ್ರೋಹದ ಮೊಕದ್ದಮೆಗಳನ್ನು ಶುರು ಮಾಡಬಾರದಾಗಿ ನಮ್ಮ ಸೆಕ್ರೆಟರಿಗಳ ಅಭಿಪ್ರಾಯ.

ಇತ್ತೀಚೆಗೆ ರಂಗೂನಿನಲ್ಲಿ ಶ್ರೀ ಸೇನಗುಪ್ತರ ಮೇಲೆ ನಡೆದ ರಾಜದ್ರೋಹ ಪ್ರಕರಣದಲ್ಲಿ ಮ್ಯಾಜಿಸ್ಟ್ರೇಟರು ಸೇನಗುಪ್ತರ ಭಾಷಣದಿಂದ ಗಲಾಟೆಯಾಗಿದೆಯೋ ಅಥವಾ ಅಂಥ ಭಾವನೆಯು ಜನರಲ್ಲಿ ಹುಟ್ಟಿದೆಯೋ ಎಂಬದರ ವಿಷಯವಾಗಿ ಕೆಲವರನ್ನು ಕೇಳಲು ಅವರು ಇಲ್ಲೆಂದರು. ಆದರೂ ಪೂರಾ ಭಾಷಣದ ಮೇಲೆ ಆಧರಿಸದೆ ಕೆಲವು ವಾಕ್ಯಗಳ ಮೇಲೆ ಆಧರಿಸಿ ಸೇನಗುಪ್ತರಿಗೆ ೧೦ ದಿವಸದ ಶಿಕ್ಷೆ ಕೊಟ್ಟರು. ಬೆನ್ನರ ಮೂಲ ಸೂತ್ರಕ್ಕೆ ವಿರೋಧವಾಗಿ ಈ ಮೊಕದ್ದಮೆಯು ನಡೆಯಿತು. ಏಕಂದರೆ ಆಗ್ಗೆ ಬ್ರಹ್ಮದೇಶದಲ್ಲಿ ಗಲಾಟೆಯೇ ಇರಲಿಲ್ಲ. ಮೊನ್ನೆ ಮೊನ್ನೆ ದೇವೀದಾಸ ಗಾಂಧಿ, ಡಾ. ಕಿಚಲು ಮೊದಲಾದ ದೇಶಭಕ್ತರಿಗೆ ಶಿಕ್ಷೆಯಾದದ್ದಾದರೂ ಮಂತ್ರಿವರ್ಯರ ಆ ಮೂಲಸೂತ್ರಕ್ಕೆ ವಿರೋಧವಾಗಿಯೇ ಸರಿ.

### ಹೆರೊಲ್ಡ ಲಾಸ್ಕಿಯವರ ಅಭಿಪ್ರಾಯ

ಪ್ರಸಿದ್ಧ ಪ್ರೊಫೆಸರರಾದ ಇವರು ಲಂಡನ್ನಿನ ಕಾನವೆ ಹಾಲ್ ಎಂಬಲ್ಲಿ 'The Dangers of conformity' ಎಂಬದೊಂದು ಭಾಷಣವನ್ನು ಕೊಟ್ಟರುವರು. ಅದರಲ್ಲಿ ಅವರು ಹೇಳಿದ್ದೇನಂದರೆ :—

"Whatever there is good in society is the result of the liberation of individuality and that whatever accordingly impedes the expression in society is obnoxious to its wellbeing..........."

ಆ ಭಾಷಣದ ಸಾರಾಂಶವು ಹೀಗಿದೆ :—

"ವ್ಯಕ್ತಿ ಸ್ವಾತಂತ್ರ್ಯವೇ ಸಮಾಜಹಿತದ ತಳಹದಿ. ಇದಕ್ಕೆ ತಡೆಹಾಕುವದೆಂದರೆ ಸಮಾಜಕಲ್ಯಾಣಕ್ಕೇ ತಡೆಹಾಕಿದಂತೆ. ಮತಗಳ ಅಧಿಕಾರವು ಕಡಿಮೆಯಾಗುತ್ತಲೆ ಸರಕಾರದ ಅಧಿಕಾರವು ಹೆಚ್ಚಿರುವದು. ಕಾಲಕ್ರಮೇಣ ಸರಕಾರ ಶುರು ಮಾಡಿದ್ದೇನು ಎಂಬದಾಗಿ ಅಭಿಪ್ರಾಯಪಡುವನು

ಈ ಕಾರಣದಿಂದ ನಾವು ಇಂಗ್ಲಿಷ ರಾಜದ್ರೋಹದ ಕಾನೂನನ್ನು ಮತ್ತೆ ಪರಿಶೋಧಿಸಬೇಕು. ನಾಗರಿಕತನದ ಸರಹದ್ದಿನಲ್ಲಿ ಜಾತಿವಿವಾದ, ಮತವಿವಾದ, ಜನಾಂಗವಿವಾದ, ವರ್ಣಭೇದ ವಿವಾದಗಳು ಇರುವವು. ಪ್ರತಿಯೊಬ್ಬರು ಬಲಾತ್ಕಾರದಿಂದಲೂ ಹಿಂಸೆಯಿಂದಲೂ ತಮ್ಮ ತಮ್ಮ ಹಿತಸಾಧನೆಯನ್ನು ಮಾಡಿಕೊಳ್ಳುವದರಲ್ಲಿದ್ದಾರೆ. ಇಂಥ ಜನಾಂಗಗಳ ಹತ್ತರ ನಾಗರಿಕತನವನ್ನು ನಾಶಮಾಡುವ ಆಯುಧಗಳಿವೆ. ಈ ಗಂಡಾಂತರದಿಂದ ನಾವು ಪಾರಾಗಬೇಕಾದರೆ ನಾವು ನಮ್ಮ ವಿಚಾರಶಕ್ತಿ ( Reason ) ಯ ಮೇಲೆಯೇ ಅವಲಂಬಿಸಿರಬೇಕು. ತಮ್ಮ ಮನಸ್ಸಾಕ್ಷಿಯನ್ನೇ ಪ್ರಮಾಣವೆಂದು ತಿಳಿದ ವ್ಯಕ್ತಿಗಳೇ ನಮ್ಮ ನಾಗರಿಕತನದ ಮುಂದಾಳುಗಳಾಗಿರುವರು."

ಈ ಪ್ರಕಾರ ಅನೇಕ ರಾಜಕೀಯ ತತ್ತ್ವಜ್ಞಾನಿಗಳು ರಾಜದ್ರೋಹ ಎಂಬ ಕಾನೂನನ್ನು ಜಾರಿಗೆ ತರಬಾರದೆಂತಲೂ ಅದರಿಂದ ಜನಾಂಗಗಳಿಗೂ ದೇಶಗಳಿಗೂ ಬಾಧೆಯುಂಟಾಗುವದೆಂತಲೂ ಅಭಿಪ್ರಾಯಪಟ್ಟಿರುವರು. ಆದ್ದರಿಂದ ಈ ರಾಜದ್ರೋಹದ ( ೧೨೪ ಅ ) ಕಾನೂನನ್ನು ಇಂಡಿಯಾ ದೇಶದ ಕಾನೂನು ಪುಸ್ತಕಗಳಿಂದ ತೆಗೆದು ಹಾಕುವದು ಅತ್ಯಗತ್ಯವಾಗಿದೆ. ಗಲಾಟೆಯಿಲ್ಲದಲ್ಲಿ ರಾಜದ್ರೋಹದ ಮೊಕದ್ದಮೆಗಳು ನಡೆಯುವದಂತೂ ಕೇವಲ ಅನ್ಯಾಯ !

# ಬಿಡಿನುಡಿಗಳು

## ಸತ್ಯಕ್ಕೆ ಬಹಿಷ್ಕಾರ

ಸತ್ಯವನ್ನು ಮಾತನಾಡುವದು ದಿನೇದಿನೇ ಬಿಗಿಯಾಗ ಹತ್ತಿದೆ. ಸದ್ಯದ ಸರಕಾರಕ್ಕೆ ಅನುಕೂಲವಾಗುವಂತೆಯೆ ಮಾತಾಡುವ ಪ್ರತಿಜ್ಞೆ ಮಾಡಿತೇ ಸುಳ್ಳು ಮಾತನಾಡಬೇಕಾಗುವದೇ ಕಟ್ಟಿಟ್ಟದ್ದು. ಸತ್ಯವು ಸರಕಾರಕ್ಕೆ ಬರಷಣವಾಗಿದೆ. ಆದಕಾರಣ ಎಲ್ಲಿ ನೋಡಿದರೂ ಸತ್ಯವಂತರಿಗೂ ಸದಾಚಾರಿಗಳಿಗೂ ಶಿಕ್ಷೆಯಾಗುತ್ತಲಿದೆ. ಸತ್ಯವನ್ನು ಮರೆಮಾಚಿ ರಾಜಧರ್ಮಕ್ಕೆ ತಲೆಬಾಗಿದರೆ ಮಾತ್ರ ಒಳ್ಳೇದು. ಆದರೆ ಈ ಸ್ಥಿತಿಯು ಎಷ್ಟು ದಿವಸ ನಡೆಯತಕ್ಕದ್ದು. ಪ್ರಕಟವಾಗಿ ಆಡಲುಬರದ್ದನ್ನು ಜನರು ಗುಪ್ತವಾಗಿ ಆಡುತ್ತಾರೆ; ಗುಪ್ತವಾಗಿಯೂ ಆಡಲು ಬರದ್ದನ್ನು ಮನಸ್ಸಿನಲ್ಲಿ ಆಡಿಕೊಳ್ಳುತ್ತಾರೆ. ಪ್ರಕಟವಾಗಿ ಆಡುವದನ್ನೂ ಕಾಯದೆ ಕಟ್ಟಳೆಗಳ ಉರಲಿಗೆ ದೊರೆಯದಂತೆ ನುಸುಳಿಸಿ ಆಡುವರು. ಅಂತೂ ತೀವ್ರವೇ, ಸತ್ಯಕ್ಕೆ ಬಹಿಷ್ಕಾರವನ್ನು ಹಾಕಿದ ಸರಕಾರವು ತಾನೇ ನಿರ್ಮಿಸಿದ ತಾನೇ ಒಡ್ಡಿದ ಸುಳ್ಳಿನ ಬಲೆಯಲ್ಲಿ ಬಿದ್ದು, ಸರಕಾರವು ಏನು ಆಡಿದರೂ ಅದರಲ್ಲಿ ಜನರಿಗೆ ವಿಶ್ವಾಸವಿಲ್ಲದ್ದಾಗಿ, ಜನರೇನಾಡಿದರೂ ಸರಕಾರಕ್ಕೆ ಅದರಲ್ಲಿ ವಿಶ್ವಾಸವಿಡಲು ಹೆದರಿಕೆಯಾಗಿ, ಎಲ್ಲಕಡೆಗೂ ಅವಿಶ್ವಾಸವೇ ಅವಿಶ್ವಾಸವಾಗಿ 'ಸಂಶಯಾತ್ಮಾ ವಿನಶ್ಯತಿ' ಎಂಬಂತೆ ಸರಕಾರದ ಗತಿಯಾಗುವದು. ಮಹಾತ್ಮರು ಹೇಳುವದೇನೂ ಸುಳ್ಳಲ್ಲ :—

There is hardly a man or woman breathing in India who with every breath does not breathe in disaffection, sedition, disloyalty and whatever other term one may use to describe the mentality of the nation which has set its mind on destroying the existing system of Government.

ಸದ್ಯಕ್ಕಿರುವ ರಾಜ್ಯಪದ್ಧತಿಯನ್ನು ಹಾಳುಗೆಡಿಸಲು ಮನಸ್ಸುಳ್ಳ ರಾಷ್ಟ್ರದ ಮನೋವೃತ್ತಿಯನ್ನು, ಅಪ್ರೀತಿ, ರಾಜದ್ರೋಹ, ಎಂದು ಬೇಕಾದ ಹೆಸರಿನಿಂದ ಕರೆದರೂ ಅಷ್ಟೇ. ಇಂದು ಹಿಂದುಸ್ಥಾನದಲ್ಲಿ ತಮ್ಮ ಪ್ರತಿ ಶ್ವಾಸೋಚ್ಛ್ವಾಸದಲ್ಲಿ ಈ ಅಪ್ರೀತಿರಾಜದ್ರೋಹಗಳನ್ನು ಉಸಿರಾಡಿಸದ ಹೆಂಗಸಾಗಲಿ ಗಂಡಸಾಗಲಿ ದೊರೆಯುವದು ದುರ್ಲಭ. ಆಳುವವರೇ ಸತ್ಯದ ಕೊಲೆ ಮಾಡಿದರೆ ಪ್ರಜಾಕ್ಷೋಭವು ಹೇಗೆ ತಾನೇ ಆಗದಿರದು ?

" ಪ್ರಜಾಪೀಡನಸಂಕ್ಷೋಭಾತ್ ಸಂಜಾತಶ್ಚಾಪಿ ಪಾವಕಃ ।
ರಾಜಾನಮಪಿ ದಹತ್ಯೇವ ಸಕುಲಂ ಚ ಸರಾಷ್ಟ್ರಕಂ॥ "

ಪ್ರಜಾಪೀಡನದ ಬೆಂಕಿಯು ರಾಜನನ್ನೂ ಆತನ ಕುಲವನ್ನೂ ಆತನ ದೇಶವನ್ನೂ ಸುಟ್ಟು ಬೂದಿ ಮಾಡುವದೆಂಬದಾಗಿ ಸ್ಮೃತಿಕಾರರು ಎಚ್ಚರ ಕೊಟ್ಟದ್ದನ್ನು ಈಗಿನ ರಾಜರೂ ಲಕ್ಷ್ಯದಲ್ಲಿಡಲಿ.

## ಅಹಿಂಸೆಗೆ ಬಂಧನ

ಸಾಮಾನ್ಯರೂ ಸರಕಾರಕ್ಕೆ ಅಪ್ರಿಯವಾದ ಸತ್ಯವನ್ನು ಮಾತನಾಡುವದು ದುಷ್ಕರವಾಗಿರುವದರಿಂದಲೇ ಸತ್ಯಮೂರ್ತಿ

ಗಳಾದ ಮಹಾತ್ಮಾ ಗಾಂಧಿಯವರು ಸೆರೆಸಮನೆ ಕಾಣಬೇಕಾಗಿ ಬಂದಿತು. ಸತ್ಯಮಾರ್ಗವನ್ನು ಒಪ್ಪಿಕೊಂಡೂ ಕೆಲವೊಂದು ಬಗೆಯ ಹಿಂಸೆಯು ಅಧರ್ಮವಲ್ಲವೆಂದು ಪ್ರತಿಪಾದಿಸುವ ಜನರೂ ಇದ್ದಾರೆ. ಆದರೆ ಸರಕಾರದ ಸುದೈವದಿಂದ ಸತ್ಯವನ್ನು ಕೂಡ ಅಹಿಂಸೆಯಿಂದಲೇ ಸಾಧಿಸಬೇಕೆಂಬ ಆಗ್ರಹವುಳ್ಳ ಮಹಾತ್ಮರ ಬೋಧನಾಪ್ರಭಾವದಿಂದ ಭಾರತೀಯರು ಪೂರ್ಣ ಸ್ವರಾಜ್ಯ ಸಂಗ್ರಾಮವನ್ನು ಸಾಗಿಸುತ್ತಿದ್ದೂ, ಸರಕಾರದ ದುರ್ದೈವದಿಂದ ಅವರಿಗೆ ವಿಪರೀತ ಬುದ್ಧಿ ಸ್ಫುರಿಸಿ ಅಹಿಂಸಾಮೂರ್ತಿಗಳಾದ ಮಹಾತ್ಮರನ್ನು ಎಲ್ಲಿಯೋ ಕೋಟೆಯಲ್ಲಿ ಸೆರೆಹಾಕಿದ್ದಾರೆ. ಅಹಿಂಸೆಯಿಂದಲೇ ಹಿಂಸೆಯನ್ನು ಗೆಲ್ಲಬೇಕೆಂದು ಮಹಾತ್ಮರ ಬಿರುದು ಮತ್ತು ಪ್ರತಿಜ್ಞೆ. ಆದರೆ ಹುಂಬ ಸರಕಾರಕ್ಕೆ ಹಿಂಸೆಯ ಹೊರತು ಬೇರೆ ಸನ್ನೆ ತಿಳಿಯದು. ಅದೆಲ್ಲ ಸರಿ. ಆದರೆ ಸರಕಾರದ ಹಿಂಸಾಮಾರ್ಗದಿಂದ ಮಾನವಜೀವಿತದ ಅಪರಿಮಿತ ಹಾನಿಯಾಗುವದು ; ಅದಕ್ಕೆ ಜವಾಬುದಾರರಾರು ? ಮಹಾತ್ಮರ ನಿಗ್ರಹವಿಲ್ಲದಾಗಿ ಜನರು ಅನಿವಾರ್ಯವಾಗಿ ಹಿಂಸೆಗೆ ಪ್ರವೃತ್ತರಾಗುವದರಲ್ಲಿ ಸರಕಾರದ ಕಲ್ಯಾಣವಿದೆಯೇ ? ಹಿಂಸಾಸಂಗ್ರಾಮವುಂಟಾದರೆ ಬಡಿಯುವ ಕೈಯೂ ಬಡಿಸಿಕೊಳ್ಳುವ ಮೈಯೂ ಭಾರತೀಯರದೇ ಎಂದು ಸರಕಾರವು ನಿಶ್ಚಿಂತವಾಗಿರಬಹುದು. ಆದರೆ ಹೀಗೆ ಹಿಂಸೆಗೀಡು ಆಗಬೇಕಾಗಿ ಬಂದ ಸರಕಾರದ ನೌಕರರಾದ ಭಾರತೀಯರು ಅವರನ್ನು ನಂಬುವರೇ ? ಹೀಗೆ ನಂಬುಗೆಗೇಡಾದ ಸರಕಾರವು ನಿಲ್ಲಲು ಕಾಲುಂಟೇ ?

## ಮಹಾತ್ಮರನ್ನು ಏಕೆ ಹಿಡಿದಿರಬಹುದು ?

ಮಹಾತ್ಮಾಜಿಯವರೂ ಸತ್ಯಾಗ್ರಹವನ್ನು ಅಹಿಂಸಾಮಾರ್ಗದಿಂದ ಸಾಗಿಸಿದರೆ ತಾವೂ ಅಹಿಂಸಾಮಾರ್ಗದಿಂದಲೇ ಅದನ್ನು ಪ್ರತಿಬಂಧಿಸುವೆವೆಂದು ಹಗರಣ ಮಾಡಿದ ಸರಕಾರವು ತನ್ನ ಸೋಗನ್ನು ಸುತ್ತಿಟ್ಟು ರಾವಣರೂಪವನ್ನು ಪ್ರಕಟಮಾಡಿರುವದು. ಮಹಾತ್ಮರನ್ನು ಹಿಡಿದಿದ್ದಾಯಿತು. ಸರಕಾರವು ಸೋತದ್ದಾಯಿತು. ಅದರಲ್ಲಿ ಸಂಶಯವೇನೂ ಇಲ್ಲ. ಸರಕಾರದ ಕಡೆಗೆ ಸತ್ಯವಿದ್ದದ್ದೆ ಆದರೆ ಅದನ್ನು ಜನರಿಗೆ ಮನವರಿಸಿ ಕೊಡುವದು ಸುಲಭವಿತ್ತು. ಸತ್ಯದ ಸೋಗು ಹಾಕಿಕೊಳ್ಳಬಹುದಾದರೂ ಅದೂ ಬಹಳ ಹೊತ್ತು ಬಾಳುವದಿಲ್ಲ. ಸರಕಾರದವರು ನಿರಾಶರಾಗಿ ಸೋತು ಅವರನ್ನು ಹಿಡಿದರೋ, ತಮ್ಮ ಬಲದ ದರ್ಪದಿಂದಲೋ? ಮತ್ತೇನಾದರೂ ಇದೆಯೋ?

ಸರಕಾರದವರು ಹೇಳುತ್ತಾರೆ; ಗಾಂಧಿಯವರು ದರಶನದಲ್ಲಿಯ ಉಪ್ಪಿನ ವಖಾರನ್ನು ಲೂಟಮಾಡತಕ್ಕವರಿದ್ದರು ಆದಕಾರಣ ತಾವು ಹಿಡಿಯಬೇಕಾಯಿತು ಎಂದು. ಆದರೆ ಉಪ್ಪೇನು ಉಪ್ಪಿನ ವಖಾರೇನು ? ಉಪ್ಪು ಮಾಡುವಾಗೇಕೆ ಹಿಡಿಯಲಿಲ್ಲ ? ಉಪ್ಪು ಮಾಡುವದನ್ನು ಪ್ರತಿಬಂಧಿಸುವದು ಬಿಗಿ, ಉಪ್ಪಿನ ವಖಾರನ್ನು ಸಂರಕ್ಷಿಸುವದು ಸುಲಭ. ಹೀಗಿದ್ದು ಸರಕಾರದವರು ಅಡ್ಡಹಾದಿಯನ್ನೇಕೆ ಹಿಡಿದರು ? ಪೇಶಾವರ, ದಿಲ್ಲಿ, ಕಲಕತ್ತಾ ಮೊದಲಾದ ಸ್ಥಳಗಳಲ್ಲಿ ದೊಂಬಿಗಳಾದವಂತೆ, ಚಿತಗಾಂಗದಲ್ಲಿ ಕ್ರಾಂತಿಕಾರಕರು ಗೊಂದಲವೆಬ್ಬಿಸಿದರಂತೆ, ಅಂತೆ ಮಹಾತ್ಮರನ್ನು ಹಿಡಿಯಬೇಕಾಯಿತಂತೆ, ಕುರಿಯನ್ನು ಯೇನಕೇನ ಪ್ರಕಾರೇಣ ತಿಂದು ಬಿಡಬೇಕು ಎಂದು ಹಂಚಿಕೆ ಹಾಕಿ ತಿರುವು ಮುರುವು ಮಾತನಾಡುವ ಕಥೆಯೊಳಗಿನ ತೋಳನಂತೆ ಆಯಿತೀ ಲೆಕ್ಕ. ಅಹಿಂಸಾಬೋಧೆಯಿಂದ ಹಿಂಸಾಪ್ರವೃತ್ತಿಯಾಗುವದೆನ್ನುವದಕ್ಕಿಂತ ಆಳರಸರ ಹಿಂಸಾಪ್ರಚೋದನದಿಂದಲೇ ಆದಾಯಿತು ಎನ್ನುವದೇ ವಿಹಿತ! ತಮ್ಮ ತಪ್ಪು ಮಂದಿಯ ಮೇಲೆ ಹಾಕುವ ಗತ್ತು ಹೇಗಿದೆ! ಮಹಾತ್ಮರೇನೋ ಇತ್ತೀಚೆ ಹಿಂಸೆಯ ನಿರ್ಭರ್ತ್ಸನೆಯನ್ನು ತಕ್ಕಷ್ಟು ಮಾಡುವದಿಲ್ಲವಂತೆ ! ಅದಕ್ಕಾಗಿ ಹಿಂಸಾಪಂಥದವರು ಅವರಿಗೆ ಶಿಕ್ಷೆಕೊಟ್ಟರೋ? ಒಳ್ಳೇ ಲೆಕ್ಕ! ಮಹಾತ್ಮರಿಗೆ ಮತ್ತಿಷ್ಟು ಅನುಕೂಲತೆಗಳನ್ನು ಕಲ್ಪಿಸಿಕೊಡುವದನ್ನು ಬಿಟ್ಟುಕೊಟ್ಟು ಅವರಿಗೇ ಬಂಧನವೇ ? ಇವಾವೂ ನಿಜವಾದ ಕಾರಣಗಳಲ್ಲ. ಇಂಥ ಮಾತುಗಳನ್ನು ತರ್ಕಿಸುವದು ಬಿಗಿ; ಆದರೆ ತರ್ಕಿಸುವ ಪ್ರಯತ್ನವೇನೂ ವಿಫಲವಲ್ಲ. (೧) ದರಶನದ ವಖಾರನ್ನು ಸಂರಕ್ಷಿಸುವಾಗ ಮಹಾತ್ಮರಿಗೂ ಗುಂಡು ಹಾಕುವ ಪ್ರಸಂಗ ಬರಬಹುದಾಗಿತ್ತು. (೨) ಮಹಾತ್ಮರು ಹೇಗಾದರೂ ಒಂದು ಲಕ್ಷ ಸ್ವಯಂ ಸೇವಕರನ್ನು ಮುಂಬಯಿಯಲ್ಲಿ ಕೂಡಿಸಿದ್ದರೆ ( ಹಾಗೆ ಕೂಡುವದರಲ್ಲಿ ಸಂಶಯವಿರಲಿಲ್ಲ) ಮುಂಬಯಿಯಲ್ಲಿಯೇ ಮಹಾತ್ಮರ ಮುಖಂಡತ್ವದಲ್ಲಿ ದೊಡ್ಡ ಸಂಗ್ರಾಮವೇ ಉಂಟಾಗುವಂತಿತ್ತು. ಇಲಾಖೆಯ ರಾಜಧಾನಿಯಲ್ಲಿ ಇದಾದರೆ ಇಡೀ ಇಲಾಖೆಯ ಮೂಗೇ ಹಿಡಿದಂತಾಗಿ ವ್ಯಾಪಾರವು ಕಟ್ಟಾಗಬಹುದಾಗಿತ್ತು. ಇದು ಸರಕಾರಕ್ಕೆ ಬೇಡಾಗಿತ್ತು. (೩) ಗುಜರಾಥವು ಪ್ರಾಯಶಃ ಅರ್ಧ ಸ್ವರಾಜ್ಯವನ್ನು ದೊರಕಿಸಿದೆ; ಅದನ್ನು ಪೂರ್ಣವಾಗಿಸಿಕೊಡಬಾರದು. ಸರದಾರ ಭಾಯಿಯವರನ್ನು ಹಿಡಿದು ನೋಡಿದರು, ಕೋಠಾರಿಯವರಾಯಿತು, ಕಾಲೇಲಕರರಾಯಿತು, ಮಹಾದೇವದೇಸಾಯಿಯವರಾಯಿತು. ಇನ್ನೂ ಬೆಂಕಿ ಆರಲಿಲ್ಲ. ಅಂತೆ ಮೂಲ ಜ್ವಾ

ದೇವನಿಗೆ ತಕ್ಕೊಬಿದ್ದವರು. (೯) ಪೇಶಾವರದಲ್ಲಿ ಪ್ರತಿ ಜಾಲಿಯನವಾಲಾಬಾಗದಂತೆಯೇ ಕೊಲೆಯಾಗಿರುವದಂತೆ. ಅದರ ನಿಜವಾದ ಸುದ್ದಿಯು ಗಾಂಧಿಯವರಿಗೆ ತಿಳಿದಿದ್ದರೆ, ತಮ್ಮ ಕರುಣೆಯ ಆರ್ತಸ್ವರದಿಂದ ಜಗತ್ತನ್ನೆ ನಡುಗಿಸಬಹುದಾಗಿತ್ತು. ಅದಕ್ಕೆ ಸರಕಾರದವರು ಹೆದರಿರುವರು. (೫) ಕೆಲವು ಮಳ್ಳು ಪೊಳ್ಳು ಜನರು—ಈಗಿನ ಚಳವಳಿಯು ಕೇವಲ ಗಾಂಧಿಯವರಿಂದ ಪ್ರೇರಿತವಾಗಿದೆ. ಜನರಲ್ಲಿ ಜೀವವಿಲ್ಲ—ಎಂದು ಕಿವಿಯೂದಿರಬೇಕು, ಆದಕಾರಣ ಗಾಂಧಿಯವರನ್ನು ಹಿಡಿದರೆ ಒಂದು ಬಿಡಾಡಿ ನಾಯಿಯಾದರೂ ಗುರ್ರೆನ್ನುವದೋ ಇಲ್ಲವೋ ನೋಡಬೇಕು, ಬರೀ ಬೊಗಳಿ ಸುಮ್ಮನಾಗುವದೋ ಮೈ ಮೇಲೆ ಬರುವದೋ, ಮೈ ಮೇಲೆ ಬಂದು ಕಚ್ಚಿಗಿಚ್ಚೀತೆಂಬ ಭಯವನ್ನುಂಟು ಮಾಡುವದೋ ಇಲ್ಲವೋ ಇದನ್ನು ಸರಕಾರದವರು ಪರೀಕ್ಷಿಸಬೇಕೆಂದು ಮಾಡಿರಬಹುದು. (೬) ಅಹಿಂಸಾ ಪ್ರವರ್ತಕರಾದ ಗಾಂಧಿಯವರನ್ನು ಸೆರೆಯಲ್ಲಿಟ್ಟು, ಕಂಗೆಟ್ಟ ಮುಂಗೆಟ್ಟ ಜನರನ್ನು ತಿವಿದು ರೊಚ್ಚಿಗೆಬ್ಬಿಸಿ ಹಿಂಸೆಗೆ ಪ್ರವರ್ತಿಸಿ, ಆ ಮೇಲೆ ಅವರನ್ನು ಹೆಣಬಡಿದು ಹೊಡೆದು ಸ್ವರಾಜ್ಯ ಚಳವಳಿಯನ್ನು ಮುರಿದಿಡಿಯಬೇಕು. (೭) ಸಾಯಮನ ವರದಿಯ ಸ್ವಾಗತಕ್ಕಾಗಿಯೂ, ಒಂಡೀಗಾಲಿ ಮೇಜಿನ ಪರಿಷತ್ತಿನ ಪೂರ್ವಸಿದ್ಧತೆಯೆಂದೂ ಶಾಂತ ವಾತಾವರಣವನ್ನುಂಟು ಮಾಡಲು ಶಾಂತಮೂರ್ತಿಗಳನ್ನೆ ಬಂಧಿಸಿರಬಹುದು.

ಇವುಗಳಲ್ಲಿ ಯಾವ ತರ್ಕವು ನಿಜವಿದ್ದರೂ ಸರಕಾರದ ಇಚ್ಛೆಯು ಫಲಿಸುವಂತೆ ಮಾತ್ರ ಅವರ ಈ ಕೃತಿಯಾಗಿಲ್ಲ. ಇಷ್ಟು ಖಂಡಿತವಾಗಿ ಹೇಳಬಹುದು. ರೊಚ್ಚಿಗೆದ್ದ ಸರಕಾರವು ಹುಚ್ಚೆದ್ದು ಮಾಡಿದ ಕೆಲಸವಿದು !

## ಅಯರ್ವಿನ್ ದೊರೆಗಳ ಅವಿವೇಕ

'So long as the law is defied neither the Viceroy nor his Government can do anything but resist its subversion by whatever means in their power and in whatever manner that may seem appropriate.'

'ಎಲ್ಲಿಯ ವರೆಗೆ ಕಟ್ಟಳೆಯ ತಿರಸ್ಕಾರವಾಗುವದೊ, ಅಲ್ಲಿಯ ವರೆಗೆ ತಮ್ಮ ಶಕ್ತಿಯಲ್ಲಿದ್ದ ಸಿಕ್ಕ ಸಾಧನಗಳಿಂದಲೂ, ತಮಗೆ ಯೋಗ್ಯವಾಗಿ ಕಾಣುವ ಬೇಕಾದ ರೀತಿಯಿಂದಲೂ, ವ್ಹಾಯಿಸರಾಯರಾಗಲಿ, ಅವರ ಸರಕಾರದವರಾಗಲಿ ಅವರನ್ನೆ ಬುಡ ಮೇಲು ಮಾಡುವ ಪ್ರಯತ್ನವನ್ನು ತಡೆಯದೆ ಬೇರೆ ಏನೂ ಮಾಡುವಂತಿಲ್ಲ'— ಎಂದು ವ್ಹಾಯಿಸರಾಯರು ಪಠಾಣರಾದ ಮಹಮ್ಮದಲ್ಲಿಯವರಿಗೆ ಬರೆದ ಓಲೆಯಲ್ಲಿ ಅಪ್ಪಣೆಕೊಟ್ಟರುವರು. ಇದರ ಅರ್ಥವೇನು ? ಕ್ರಾಪು ಬಿಟ್ಟರೆ ಅಧರ್ಮ ಕನ್ನಡಕ ಹಾಕಿಕೊಂಡರೆ ಅಧರ್ಮ ಎಂದು ಕೂಗಿಕೊಳ್ಳುವ ನಾಡಾಡಿ ಶಾಸ್ತ್ರಿಗಳಂತೆ— ವ್ಹಾಯಿಸರಾಯರೂ ಉಪ್ಪಿನ ಕಟ್ಟಳೆಯಂಥ ಅನ್ಯಾಯದ ಕಟ್ಟಳೆಯನ್ನೂ ವಿರೋಧಿಸಿದ ಮಾತ್ರಕ್ಕೆ ರೇಗಿಗೆದ್ದು, ಸಿಕ್ಕದ್ದು ಮಾಡುವೆನು ಸಿಕ್ಕಂತೆ ಮಾಡುವೆನು ಎಂದು ಹೇಳುವದೇನು ಅವರ ಪದವಿಗೆ ಭೂಷಣವೋ ? ' End Justifies the means ' ತಮಗೆ ಬೇಕಾದ ಪರಿಣಾಮವನ್ನುಂಟುಮಾಡಿಕೊಳ್ಳುವ ಸಿಕ್ಕ ಉಪಾಯಗಳನ್ನು ಯೋಜಿಸುವದು ನೀತಿಯೆಂದು ಬಗೆದಿರುವರೋ ? ' ಲಾ ಆಂಡ ಆರ್ಡರ'ದ ಜಂಭಹೇಳುವರ ಬಾಯಿಂದ ಈ ಮಾತುಗಳು ಬರಬೇಕೇ ? ಏನು ' all is fair in war ' ಯುದ್ಧದಲ್ಲಿ ಏನು ಮಾಡಿದರೂ ಸರಿಯೇ, ಎಂಬ ದಂಡನೀತಿಯ ಕುಹಕಸಿದ್ಧಾಂತವನ್ನು ಅನುಸರಿಸುವರೋ ? ಇದೂ ಅಹಿಂಸಾಮಯ ಸತ್ಯಾಗ್ರಹದ ವಿರುದ್ಧವಾಗಿಯೇ ! ವಿವೇಕ ಭ್ರಷ್ಟರಾದರೆ ನೂರು ರೀತಿಯಾಗಿ ವಿನಾಶವಾಗುವದೆಂಬ ಮಾತನ್ನು ಅವರು ತಮ್ಮ ಕೋಪದಲ್ಲಿ ಮರೆತಂತೆ ಕಾಣುತ್ತದೆ.

## (Law) ಲಾ ಎಂದರಾದರೂ ಏನು ?

ಕಾಯದೆಗಳೆಂದಷ್ಟಕ್ಕೆ ಅವು ಧರ್ಮ, ನೀತಿಮಯ ಎಂಬ ಮೂಢ ಕಲ್ಪನೆಯನ್ನು ನಾವು ಕಿತ್ತಿಹಾಕಬೇಕಾಗಿದೆ ಎಲ್ಲಿಯವರೆಗೆ ಯಾವದೇ ಒಂದು ನಿಯಮವು ಜನಾಂಗದ ಬಹುಮತದಿಂದ ಸ್ವೀಕೃತವಾಗಿರುವದೋ ಅಲ್ಲಿಯ ವರೆಗೆ ಮಾತ್ರ ಅದು ಒಂದು ವೇಳೆ ಅಧರ್ಮವಿದ್ದರೂ, ಅನೀತಿಕರವಿದ್ದರೂ, ಕಾಯದೆ ಕಟ್ಟಳೆ ಎಂದು ಸ್ವೀಕೃತವಾಗುವದು. ಬಹುಮತದಿಂದ ತಿರಸ್ಕೃತವೂ ದೇಶದ ಪೂರ್ವಾಚಾರಕ್ಕೆ ವಿರುದ್ಧವೂ, ಬಡವರಿಗೆ ಸಂಕಟವನ್ನುಂಟುಮಾಡುವಂತಹದೂ, ಅನೀತಿಕರವೂ ಆದ ಯಾವ ಕಟ್ಟಳೆಯೂ ಜನರಲ್ಲಿ ನಿಜವಾದ ಗಂಡಸುತನವಿದ್ದರೆ, ಒಂದು ನಿಮಿಷವೂ ಬಾಳಲಾರದು, ಬಾಳಬಾರದು.

All the world over British rule has been and is distinguished by the reign of the law.

ಬ್ರಿಟಿಷರ ಆಳಿಕೆ ಎಂದರೆ ಕಾಯದೆ ಕಾನೂನುಗಳ ಆಳಿಕೆ ಎಂದು ಜಗತ್ಪ್ರಸಿದ್ಧವಿದೆ ಎಂದು ಸಾಮ್ರಾಜ್ಯವಾದಿಗಳಾಗಿದ್ದ ಲಾರ್ಡ ಸಿಕ್ಸಿಯಂತಹವರು ಹೇಳುವರು. ಆದರೆ ಅವರ ಬಂಧುಗಳಲ್ಲಿನ್ನೊಬ್ಬರು,

'The conception of soverignty, law and right is altogether divorced from morality and ethics. Legally speaking the State is almighty'.

ರಾಜಶಕ್ತಿ, ಕಾಯದೆ ಕಾನೂನು, ಹಕ್ಕು ಇವುಗಳ ಕಲ್ಪನೆಗೂ ನೀತಿಗೀತಿಗೂ ಸುತರಾಂ ಸಂಬಂಧವಿಲ್ಲ, ಕಾಯದೆಯ ಮಾತಿನಲ್ಲಿ ಹೇಳುವದಾದರೆ, ರಾಜ್ಯಾಂಗವು ಸರ್ವತಂತ್ರ ಸ್ವತಂತ್ರವು ಎಂದು ಹೇಳುವನು. ಸರಿ. ಹಿಂದುಸ್ಥಾನದ ಜನರಿಗೆ ಈ ಮಾತಿನ ಅನುಭವವು ಬಂದಿದೆ. ಆದರೆ ಬ್ರಿಟಿಷರಿಗೆ ಇನ್ನೊಂದು ಮಾತಿನ ಅನುಭವವು ಬರಬೇಕಾಗಿದೆ.

'Only such law as has the support of moral sentiment will be respected and obeyed'

ಯಾವ ಕಟ್ಟಳೆಗೆ ನೀತಿಯ ಬೆಂಬಲವಿದೆಯೋ ಅದನ್ನೆ ಜನರು ಪ್ರತಿಪಾಲಿಸುವರು, ಅದನ್ನೆ ಮನ್ನಿಸುವರು. ಭಾರತೀಯರಲ್ಲಿ ನೈತಿಕ ಕಲ್ಪನೆಯು ಜಾಗೃತವಾಗಿದೆ. ನೀತಿಗೆ ವಿರುದ್ಧವಾದ ಎಲ್ಲ ಕಟ್ಟಳೆಗಳ ಮರಣವೇ ಸಾಗಿಬರುತ್ತಲಿದೆ ಎಂಬದನ್ನು ಎಲ್ಲರೂ ನೆನಪಿನಲ್ಲಿಡಬೇಕಾಗಿದೆ. ಕಟ್ಟಳೆಯು ರಾಜಕೀಯವಿರಲಿ, ಸಾಮಾಜಿಕವಿರಲಿ, ಧಾರ್ಮಿಕವಿರಲಿ, ಕೌಟುಂಬಿಕವಿರಲಿ!

'Widespread ideas of right and wrong representing prevalent ethical standards tend to be crystallized into law' Gettell.

ಆಯಾ ಕಾಲದ ನೀತಿಪ್ರಾಮಾಣ್ಯದಂತೆ ಬಹು ಜನರಿಗೆ ಯಾವುದು ತಪ್ಪು ಯಾವುದು ಸರಿ ಎಂದೆನಿಸುವದೊ ಅದೇ ವಿಧಿನಿಷೇಧಾತ್ಮಕ ಧರ್ಮವಾಗುವದು. ಹಿಂದುಸ್ಥಾನವಂತೂ ಸತ್ಯ, ಅಹಿಂಸೆ, ಸಮಾನತ್ವ. ಸ್ವಾತಂತ್ರ್ಯ, ಬಾಂಧವ್ಯದ ಮಾರ್ಗದಲ್ಲಿದೆ. ಸಿಕ್ಕ ಸೊಟ್ಟ ಕಟ್ಟಳೆಯೂ ತಾನು Law ಲಾ ಎಂದು ಬಡಿವಾರಕೊಚ್ಚುವ ದಿನಗಳು ಹೋದವು.

## ಪಾಪದ ಗುಡಿಗೆ ಪರಪೀಡೆಯ ಕಳಸ

ಇಲ್ಲಿ ಕೆಲವು ನಿಜವಾದ ಮಾತುಗಳನ್ನು ಹೇಳಬೇಕಾಗಿದೆ. ಮಾತುಗಳು ನಿಜವಾದರೂ ಸದ್ಯದ ಸರಕಾರ ಪದ್ಧತಿಗೆ ಅವು ಅಪಥ್ಯ. ಆದರೂ ನಾವೆಲ್ಲರೂ ಅವುಗಳನ್ನು ಮುಂದಟ್ಟ ಮಾಡಿಕೊಳ್ಳುವದಗತ್ಯ. ಮೊಟ್ಟಮೊದಲು, ಬ್ರಿಟಿಷರು, ಹಿಂದುಸ್ಥಾನವನ್ನು ಗೆದ್ದದ್ದೆ ಅನ್ಯಾಯದಿಂದ. ಆ ಮೇಲೆ, ಸಬ್ಸಿಡಿಯರಿ ಸಿಸ್ಟಮದಿಂದ ರಾಜರಿಗೆ ಶಸ್ತ್ರಸಂನ್ಯಾಸಕೊಟ್ಟು, ಆರ್ಮ್ಸ್ ಆಕ್ಟಿನಿಂದ ಜನರನ್ನೆಲ್ಲ ನಿಃಶಸ್ತ್ರರನ್ನಾಗಿ ಮಾಡಿದ್ದು ಎರಡನೆ ಅನ್ಯಾಯ; ದೇಶವನ್ನೆಲ್ಲ ಸುಲಿದು ಹಾಳು ಮಾಡಿ ದಂಡುಗಾರಿಕೆಯಿಂದ ರಾಜ್ಯನಡೆಸುತ್ತಿರುವದು ಮೂರನೆ ಅನ್ಯಾಯ; ಹಿಂದುಸ್ಥಾನದ ಜನರನ್ನು ಅವರ ಸಮ್ಮತಿಯಿಂದಲೇ ಆಳುತ್ತಿರುವದಾಗಿ ಜಗತ್ತಿಗೆ ಸುಳ್ಳು ಹೇಳುತ್ತಿರುವದು ನಾಲ್ಕನೆ ಅನ್ಯಾಯ; ಭಾರತೀಯರ ವ್ಯಾಪಾರೋದ್ಯೋಗಗಳನ್ನು ಬೆಳಿಸಿಕೊಡದಂತೆ ಮಾಡಿ, ಬ್ರಿಟಿಷರ ಗಿರಾಕಿಗಳಾಗಿಯೇ ಅವರು ಉಳಿಯುವಂತೆ ಯತ್ನಿಸುತ್ತಿರುವದು ಐದನೆ ಅನ್ಯಾಯ; ನಮ್ಮ ನಮ್ಮೊಳಗೆ ಜಗಳಹುಟ್ಟಿಸುತ್ತಿರುವದೂ, ಹಾಗೆ ಹುಟ್ಟಲು ಪ್ರತ್ಯಕ್ಷಾಪ್ರತ್ಯಕ್ಷವಾಗಿ ಯತ್ನಿಸುವ ಮಿಷನರಿಗಳಿಗೂ ಆಂಗ್ಲೊ ಇಂಡಿಯನ್ ಪತ್ರಿಕೆಗಳಿಗೂ ಶಿಕ್ಷಿಸದಿರುವದೂ ಆರನೆ ಅನ್ಯಾಯ; ಹೀಗೆ ಪಾಪದ ಗುಡಿಯನ್ನೆ ಸಾಮ್ರಾಜ್ಯರೂಪವಾಗಿ ಕಟ್ಟಿದ ಈಗಿನ ಸರಕಾರ ಪದ್ಧತಿಯಲ್ಲಿ ಪ್ರಜಾಪೀಡೆಯು ಆ ಗುಡಿಯ ಕಳಸವಾಗಿದೆ.

ಎಲ್ಲವೂ ಕಾಯಿದೆ ಪ್ರಕಾರವಾಗಲಿಕ್ಕೆ ಬೇಕು ಎಂದು ಹೇಳುವದು, ತಮ್ಮ ಕೊಂಕು ಕಾಯಿದೆಗಳೂ ತಮ್ಮ ಅನ್ಯಾಯಕ್ಕೆ ಅನುಕೂಲವಾಗದಿದ್ದರೆ ಅವುಗಳನ್ನೂ ಉಲ್ಲಂಘಿಸಿ, (Ordinance) ಆರ್ಡಿನನ್ಸುಗಳಿಂದ ಸ್ವೇಚ್ಛಾಸ್ವಚ್ಛಂದರಾಜ್ಯವನ್ನು ನಡೆಸುವದು, ಅದಕ್ಕೆ ಬಾಯಿಂದ ಪ್ರತಿಕಾರ ಮಾಡಿದರೆ ಅವಕಾಶಗೊಡುವಂತಿಲ್ಲ, ಕೃತಿಯಿಂದ ಪ್ರತಿಕಾರ ಮಾಡಿದರೆ ಯದ್ವಾತದ್ವಾ ಹಾದಿಯಿಂದ ಹಾಗೆ ಪ್ರತಿಕಾರಮಾಡುವವರನ್ನು ಕಾಡುವದು, ಶಿಕ್ಷಿಸುವದು. ಪ್ರಜಾಪೀಡನಸಂತಾಪದಿಂದ ಭಾರತಭೂಮಿಯು ಕುದಿಯುತ್ತಿದೆ. ಈ ಮೂಕ ಜ್ವಾಲಾಮುಖಿಯ ಮೇಲೆ ಸಾಮ್ರಾಜ್ಯವು ಸ್ಥಿರವುಳಿಯಬಹುದೇ?

## Press Act ಅಥವಾ ಹಿಚುಕುವ ಕಾಯಿದೆ

ಒಬ್ಬ ಮನುಷ್ಯನು ತನ್ನನ್ನೆ ಕೊಂದುಕೊಂಡರೂ ಅನ್ಯಾಯ; ಇನ್ನೊಬ್ಬರನ್ನು ಕೊಂದರೂ ಅನ್ಯಾಯ. ಎರಡೂ ಅಪರಾಧಗಳಿಗೂ ಭಯಂಕರ ಶಿಕ್ಷೆಯಿದೆ. Press Act ಎಂಬ ಮುದ್ರಣಾಸುರನು, ಪತ್ರಿಕೆಗಳ ಕುತ್ತಿಗೆ ಹಿಚುಕುವದಲ್ಲದೆ, ಪತ್ರಿಕೆಗಳ ಮರಣದಿಂದ ಅದರಲ್ಲಿ ಬರೆಯುವವರ ವಿಚಾರಗಳು ಹೊರಗೆ ಬರಲು ಅನುವಿಲ್ಲದೆ ಅವೂ ಅಲ್ಲಿಯೇ ಸಾಯುವವು. ಕೊಲೆಯು ಮತ್ತು ಆತ್ಮಘಾತದಂತಹ ಎರಡು ಪಾತಕಗಳು ಇದರಿಂದ ಸಂಭವಿಸುವವು. ಶ್ರೀ ಚಿಂತಾಮಣಿ ಮತ್ತು ಶ್ರೀ ನಟರಾಜನ್‌ರಂತಹ ಮೆತ್ತನ್ನ ಜನರು ಕೂಡ ಮುದ್ರಣಾಸುರನಿಗೆ ಸಮಾಧಿಯಾಗಬೇಕೆಂದು ಹೇಳುವರೆಂದಮೇಲೆ, ಈ ಶಸ್ತ್ರ

ಳಿಯ ಘೋರತ್ವದ ಬಗ್ಗೆ ಬೇರೆ ಪ್ರಮಾಣವೇ ಬೇಡ. ಪ್ರೆಸ್ ಶಿಕ್ಷೆ ಬರೆಯುವವರ ಕೈ ಕಟ್ಟುವ ಕಟ್ಟಳೆಯು. ಆಡುವವರ ಬಾಯಿ ಕಟ್ಟುವ ಕಟ್ಟಳೆಯು ಇನ್ನು ತೀವ್ರವೇ ಬರಲು ಸಮಯ ಬಾರಬಹುದು.

## ಪುಂಡ ಪಾಳೆಗಾರಿಕೆ

ದೇಶದಲ್ಲೆಲ್ಲ ಈಗ ಪುಂಡ ಪಾಳೆಗಾರಿಕೆಯು ನಡೆದಿದೆ. ಗುಜರಾಥ ಬೆಂಗಾಲಗಳಲ್ಲಿ 'ಗುಂಡಾರಾಜ್ಯ'ವು ನಡೆದಿದೆಯೆಂದು ಮಹಾತ್ಮರೇ ಹೇಳಿರುವರು. ಪೇಶಾವರ ಮೊದಲಾದ ಸ್ಥಳಗಳಲ್ಲಿ ಗುಂಡಿನ ರಾಜ್ಯವೇ ನಡೆದಿದೆ. ಮ್ಯಾಜಿಸ್ಟ್ರೇಟರ ಬುದ್ಧಿ ತಾಳಗೆಟ್ಟಿದೆ, ಹುಂಬತನವು ಅಳತೆಗೆಟ್ಟಿದೆ. ಇವೆಲ್ಲಕ್ಕೂ ಸರಕಾರದ ಅನ್ಯಾಯದ ಧೋರಣವೇ ಕಾರಣ. ಎಷ್ಟೋ ಮ್ಯಾಜಿಸ್ಟ್ರೇಟರಿಗೂ ಪೋಲೀಸರಿಗೂ ತಾವು ಹೊಟ್ಟೆಯ ಸಲುವಾಗಿ ಪಾಪ ಮಾಡುತ್ತಿರುವದಾಗಿ ಮನಸು ಕಟಿಯುತ್ತಿರಬಹುದು. ಆದರೆ ಯಥಾ ರಾಜಾ ತಥಾ ಪ್ರಜಾ! ಕಳ್ಳರನ್ನೂ ಕೂಡ ಹೊಡೆದು ಬಡೆದು ಮಾಡದವರು, ಅಹಿಂಸಾಮಾರ್ಗದಿಂದ ಹೋಗುವ ಸತ್ಯಾಗ್ರಹದ ಸದ್ಗೃಹಸ್ಥರಿಗೆ ಘಾಯ ಮಾಡಿ ಅವಮಾನ ಮಾಡಲೂ ಅಸಿವಿಸಿ ನೋಡದಿರುವದು ಬುದ್ಧಿಭ್ರಂಶದ ಕುರುಹಾಗಿದೆ. ಇದಕ್ಕೆ ಉತ್ತರವೆಂದು ಬಂಗಾಲ ಮದ್ರಾಸದ ಎಷ್ಟೋ ಪ್ರಮುಖ ಜನರೂ ಬಾಂಬೆ ವೆಸ್ಟರ್ನ್ ಲಿಬರಲ್ ಅಸೋಶಿಯೇಶನ್‍ದವರೂ ಸರಕಾರಕ್ಕೆ ಬರೆದದ್ದು ಯೋಗ್ಯವೇ ಆಗಿದೆ. ಆದರೆ ಇವರನ್ನು ಕೇಳುವರಾರು ?

## ಒಂದೇ ಮದ್ದು

ಹಿಂದುಸ್ಥಾನವು ತನ್ನ ಕೈಬಿಡುತ್ತಿದೆ ಎಂಬುದು ಎಷ್ಟೋ ಬ್ರಿಟಿಷರಿಗೆ ಈಗ ಹೊಳೆದಿರಲಿಕ್ಕೆ ಸಾಕು. ಅಂತೆಯೆ ಇಂದೆ ಬರುವ ಸಾವು ನಾಳೆ ಬರಲಿ ಎಂದು ಸುಧಾರಣೆಗಿಧಾರಣೆ ಮಣ್ಣು ಮಸಂಟಿ ಎಂದು ಕಾಲಕಳೆಯುತ್ತಲಿದ್ದಾರೆ. ಆದರೆ, ಇದೆಲ್ಲಕ್ಕೂ ಒಂದೇ ಮದ್ದೆಂದರೆ, ಆಳರಸರ ಓಲಗಕ್ಕೆ ಶರಣು ಹೊಡೆದು ಸ್ವದೇಶದ ಸ್ವಾತಂತ್ರ್ಯಸಂಗ್ರಾಮಕ್ಕೆ ಸೇರಿದ ಶ್ರೀ ವಿಠ್ಠಲಭಾಯಿ ಪಟೇಲರ ಮಾತಿನಲ್ಲಿ ಹೇಳುವದೆಂದರೆ 'ಬಹಿಷ್ಕಾರ. ಆಳರಸರೊಡನೆ ಸರ್ವಕ್ಷೇತ್ರಗಳಲ್ಲಿಯೂ ಬಹಿಷ್ಕಾರ. ಪರದೇಶ ವಸ್ತ್ರ ಬಹಿಷ್ಕಾರ. ಅವರಲ್ಲಿಯೂ ಬ್ರಿಟಿಷ ಪದಾರ್ಥಗಳಿಗೆ ಬಹಿಷ್ಕಾರ. ಆಳರಸರಿಗೆ ಸಾಮಾಜಿಕ ಬಹಿಷ್ಕಾರ. ಆಂಗ್ಲೋ ಇಂಡಿಯನ್ ಪತ್ರಿಕಾಲಯಗಳಲ್ಲಿ ನಮ್ಮ ಜನರು ಮಾಡುವ ಕೆಲಸಕ್ಕೆ ಬಹಿಷ್ಕಾರ. ಕಡೆಯ ಉಪಾಯವೆಂದರೆ ಕರನಿರಾಕರಣೆಯಂತೂ ಇದ್ದೇ ಇದೆ.'

ಹೀಗೆ ಬಹಿಷ್ಕಾರವೊಂದೇ ಒಂದು ಮದ್ದಾಗಿದೆ. ಈಗಾಗಲೆ ಶ್ರೀ. ಪಟೇಲ, ಮಾಲವೀಯ, ಸುಭಾಷರು ಪರದೇಶ ವಸ್ತ್ರ ಬಹಿಷ್ಕಾರದ ಕಾರ್ಯಕ್ರಮವನ್ನು ಕೈಯಲ್ಲಿ ತೆಗೆದುಕೊಂಡು ಮುಂಬೈ ಕಲ್ಕತ್ತೆಗಳಂಥ ನಾಡಿನ ವ್ಯಾಪಾರದ ಪಡಿಮೂಲೆಗಳಲ್ಲಿಯೇ ವ್ಯವಸ್ಥಿತವಾಗಿ ಕಾರ್ಯ ನಡೆಸಿದ್ದಾರೆ. ನಮ್ಮ ವರ್ತಕರೂ ಯೋಗ್ಯ ಭಾಗವನ್ನು ತೆಗೆದುಕೊಳ್ಳಹತ್ತಿದ್ದಾರೆ. ಯಾರು ೩ ತಿಂಗಳು, ಯಾರು ೬ ತಿಂಗಳು, ಯಾರು ೧ ವರ್ಷದವರೆಗೂ ಪರದೇಶದಿಂದ ತರುವ ಸಾಮಾನುಗಳ ಬೇಡಿಕೆಯನ್ನು ನಿಲ್ಲಿಸಿದ್ದಾರೆ. ಈಗ ಮಹಾತ್ಮಾಜಿಯವರ ಬಂಧನದಿಂದಂತೂ ಇದಕ್ಕೆ ಕಳೆಯೇರಹತ್ತಿದೆ. ನಾಳೆ ಪ್ರಯಾಗದಲ್ಲಿ ಕೂಡಲಿರುವ ರಾಷ್ಟ್ರಸಭೆಯ ( A. I. C. C ) ಸಭೆಯಲ್ಲಿ ಇವೆಲ್ಲದರ ಕೂಲಂಕಷ ವಿಚಾರವಾಗತಕ್ಕದ್ದಿದೆ ವಾತಾವರಣವೂ ಇದೆಲ್ಲಕ್ಕೆ ಅನುಕೂಲವಿದೆ. ಜನರು ತಮ್ಮಷ್ಟಕ್ಕೆ ಬ್ರಿಟಿಷ ಸಿನೇಮಾ ಫಿಲ್ಮಗಳಿಗೂ ಔಷಧಗಳಿಗೂ ಬಹಿಷ್ಕಾರ ಹಾಕಹತ್ತಿದ್ದಾರೆ. ಗುಜರಾಥದಲ್ಲಂತೂ ಬಾರ್ಡೋಲಿಯವರು 'ಮಹಾತ್ಮರ ಅಥವಾ 'ಸರದಾರ'ರ ಅಪ್ಪಣೆಯಿಲ್ಲದೆ ಕರಕೊಡುವದಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ವೃದ್ಧರಾದರೂ ತಾರುಣ್ಯದ ಉತ್ಸಾಹದೊಂದಿಗೆ ಅಬ್ಬಾಸ ತಯ್ಯಬ್ಜಿಯವರು ದರ್ಶನಾದ ಉಪ್ಪಿನ ವಖಾರನ್ನು ಕೈವಶ ಮಾಡಿಕೊಳ್ಳಲಿಕ್ಕೆ ಹೊರಟಿದ್ದು ಮಹಾತ್ಮರ ಕಾರ್ಯವನ್ನು ಕೊನೆಗಾಣಿಸುವವರಿದ್ದಾರೆ. ಹೀಗೆ ದೇಶದ ಪರಿಸ್ಥಿತಿಯಂತೂ ದಿನದಿನಕ್ಕೆ ಕ್ಷಣಕ್ಷಣಕ್ಕೆ ಬಿಕ್ಕಟ್ಟಿನದಾಗಹತ್ತಿದೆ. ನಮ್ಮ ರಾಜಪ್ರತಿನಿಧಿಗಳಾದ ಅಯರ್ವಿನ್ ದೊರೆಗಳು ಈಗಾದರೂ ಬುದ್ಧಿಗಲಿತು ಮಹಾತ್ಮಾಜಿಯವರು ದೊರೆಗಳಿಗೆ ಬರೆದ ಎರಡನೆಯ ಪತ್ರದಲ್ಲಿ ಬಿನ್ನವಿಸಿಕೊಂಡಂತೆ ಪ್ರಜೆಗಳ ಬೇಡಿಕೆಗಳಿಗೆ ಮನ್ನಣೆಯನ್ನೀಯುವರೇ? ಜನಗಳಿಗಂತೂ ಜಯವು ಕಟ್ಟಿಟ್ಟದ್ದೇ. ಏಕಂದರೆ ಮಹಾತ್ಮರು ಹೇಳಿದಂತೆ ಈ ಚಳವಳವನ್ನು ಸಾಗಿಸುತ್ತಿರುವವರು ಗಾಂಧಿಯವರಲ್ಲ ಪರಮೇಶ್ವರನು!

## ಈ ತಿಂಗಳ ಕರ್ನಾಟಕ

ದೇಶದ ಧರ್ಮಯುದ್ಧದಲ್ಲಿ ಕರ್ನಾಟಕವೂ ಯೋಗ್ಯ ಭಾಗವನ್ನು ವಹಿಸಿದೆ. ಜನಸಮುದಾಯದಲ್ಲಿ ವಿಲಕ್ಷಣ ಜಾಗೃತಿಯಾಗಿದೆ. ಕರ್ನಾಟಕದ ಸಮುದ್ರಜಿಲ್ಹೆಗಳಾದ ದಕ್ಷಿಣೋತ್ತರ ಕನ್ನಡ ಜಿಲ್ಹೆಗಳಲ್ಲಿಯ ಉಪ್ಪಿನ ಸತ್ಯಾಗ್ರಹದ ವೃತ್ತಾಂತವು ಕನ್ನಡಿಗರೆಲ್ಲರಿಗೂ ಸ್ಫೂರ್ತಿದಾಯಕವಾಗಿದೆ. ದಕ್ಷಿಣ ಕನ್ನಡದಲ್ಲಿ ವೇಗವೀರರೂ ಉತ್ತರ ಕನ್ನಡದಲ್ಲಿ ನಾಡವರೂ ಅಲ್ಲಿಯ ಚಳವಳದ ಪ್ರಾಣಸ್ವರೂಪರಾಗಿ ಮುಂದೆ ಬಂದುದು ನಾಡಿನ ಇತಿಹಾಸದಲ್ಲಿಯೇ ವಿಶಿಷ್ಟ ಮಹತ್ತ್ವದ ಸಂಗತಿಯಾಗಿದೆ. ಸರಕಾರದವರೂ ತಮ್ಮ ದಬ್ಬಾಳಿಕೆಯ ಅಸ್ತ್ರವನ್ನು ಜೋರಿನಿಂದ ಪ್ರಯೋಗಿಸಿದ್ದಾರೆ. [illegible] ಕರ್ನಾಡ ಸದಾಶಿವರಾಯರು

ರನ್ನು ಮೊದಲು ಮಾಡಿಕೊಂಡು ಸುಮಾರು ೩೦ ಜನರನ್ನು ಮಂಗಳೂರಲ್ಲಿ ಹಿಡಿದಿದ್ದಾರೆ. ಕರ್ನಾಟಕದ ಕುರುಕ್ಷೇತ್ರವಾದ ಅಂಕೋಲೆಯ ಧರ್ಮಕ್ಷೇತ್ರದಲ್ಲಂತೂ ಅನೇಕಾನೇಕ ಜನರನ್ನು ಹಿಡಿದಿದ್ದಾರೆ. ನಾಡವರ ಮುಂದಾಳುಗಳನ್ನು ಹಿಡಿದ ಮೇಲೆ ಹೆಣ್ಣುಮಕ್ಕಳೇ ಮುಂದೆ ಬಂದು ಸಂಗ್ರಾಮವನ್ನು ಸಾಗಿಸ ಹತ್ತಿದ್ದು ಕಾಯಿದೆ ಭಂಗದ ಉಪ್ಪಿನ ಸಂತೆಗಳೇ ಜರುಗುತ್ತಿರು ವವು. ೧೦೦೦೦ ಗಟ್ಲೆ ಜನರ ಸಾಮೂಹಿಕ ಶಾಸನೋಲ್ಲಂಘ ನವು ಉತ್ತರ ಕನ್ನಡದ ಸಮುದ್ರ ಸ್ಥಳಗಳಲ್ಲಿ ಸಂಭವಿಸಿದೆ. ಶ್ರೀ ಗುಣ್ವಾಡಿ ಶಂಕರರಾವ ಮತ್ತು ಡಾ. ಹರ್ಡೀಕರರ ನೇತೃತ್ವದಲ್ಲಿ ಈ ಕಾರ್ಯವು ಯಶಸ್ವಿಯಾಗಿ ನಡೆದಿದೆ.

ದಕ್ಷಿಣ ಕನ್ನಡಿತಿಯರಾದ ಚಟ್ಟೋಪಾಧ್ಯಾಯ ಕಮಲಾದೇವಿಯವರು ಮುಂಬೈಯಲ್ಲಿಯ ಸತ್ಯಾಗ್ರಹದಲ್ಲಿ ಪ್ರಮುಖ ಸ್ಥಾನವನ್ನಲಂಕರಿಸಿದ್ದಾರೆ. ಸ್ವಾತಂತ್ರ್ಯದ ಉಪ್ಪನ್ನು ಮಾರಿ ಒಂದೇ ದಿನದಲ್ಲಿ ೩೧೦೦೦ ರೂ. ಗಳನ್ನು ಕಲೆಹಾಕಿದರು. ಪೋಲೀಸರು ಉಪ್ಪಿನ ಸ್ಥಳವನ್ನು ಮುತ್ತಲಿಕ್ಕೆ ಬಂದಾಗ ಶೌರ್ಯದಿಂದ ಅವರನ್ನು ಅಡ್ಡಗಟ್ಟಿದರು. ಕಮಲಾದೇವಿಯರ ಈ ಕಾರ್ಯವು ಕನ್ನಡಿಗರೆಲ್ಲರಿಗೂ ಅಭಿಮಾನಾಸ್ಪದವಾಗಿದೆ.

ಆ ಮೇಲೆ ಬಂಟ ಬೆಳಗಾಂವಿಯ ಗಂಗಾಧರರಾಯರನ್ನು ಮತ್ತೆ ಸೆರೆಮನೆಯಲ್ಲಿ ಹಾಕಿದ್ದಲ್ಲದೆ ಅಲ್ಲಿಯ ಮುಖಂಡರಾದ ದಾತಾರ–ಗೋಖಲೆ ಮೊದಲಾದ ಯಾವತ್ತೂ ಮುಖಂಡರನ್ನು ಸೆರೆಮನೆಗೆ ಕಳುಹಿದ್ದಾರೆ. ಅಲ್ಲಿ ಆಳರಸರು ಮಾತ್ರ ತೊಟ್ಟೇ ನಿಂತಿದ್ದಾರಂತೆ. ಮುಂದಾಳುಗಳನ್ನು ಹಿಡಿದರೂ ತರುಣ ಸ್ವಯಂಸೇವಕರೇ ಒಬ್ಬರ ಹಿಂದೊಬ್ಬರು ಮುಂದೆಬಂದು ನಭೂತೋ ನಭವಿಷ್ಯತಿ ಉತ್ಸಾಹವನ್ನು ತೋರ್ಪಡಿಸುತ್ತಿದ್ದಾರೆ. ಬೈಲಹೊಂಗಲ ತಾಲೂಕಿನಲ್ಲಿಯೂ ಜನರು ಒಳ್ಳೇ ಹುರುಪಿನಿಂದ ಕೆಲಸಸಾಗಿಸಿದ್ದಾರೆ. ಕಿತ್ತೂರ ಎಂಬ ಊರಲ್ಲಿ ನಾಲ್ಕು ದಿನದಲ್ಲಿ ೪೦೦ ಈಚಲ ಗಿಡಗಳು ಕಡಿದು ಹಾಕಲ್ಪಟ್ಟವೆ.

ವಿಜಾಪುರ ಜಿಲ್ಹೆಯಲ್ಲಿಯೂ ಸಾಕಷ್ಟು ಉತ್ಸಾಹವು ಕಂಡುಬರಹತ್ತಿದೆ. ಮೊಹರೆಯವರು ಸೆರೆಮನೆಗೆ ಕಳುಹಿಸಲ್ಪಟ್ಟರು. ಮಂಗಳವೇಡೆಯವರು ಕಾರಾಗ್ರಹವನ್ನು ಸೇರಿದರು. ಗಲಗಲಿಯಲ್ಲಿ ಅನೇಕರನ್ನು ಹಿಡಿದಿದ್ದಾರೆ. ಬಿಸನಾಳದಲ್ಲಿ ಸ್ವತಂತ್ರ ಉಪ್ಪಿನ ಕೈಗಾರಿಕೆಯೇ ನಡೆದಿದೆ.

ಧಾರವಾಡದಲ್ಲಿ ದಿವಾಕರರನ್ನು ಕಾರಾಗ್ರಹಕ್ಕಟ್ಟಲಾಗಿದೆ. ಅವರ ಹಿಂದೆ ಕರಮರಕರ ಹುಕ್ಕೇರಿಕರ ಮೊದಲಾದವರು ಮುಂದಾಳುತನವನ್ನು ವಹಿಸಿದ್ದಾರೆ. ಗದಗ–ರೋಣ ಹಿರೆಕೆರೂರ ಹಾವೇರಿ ಕಲಘಟಗಿ ಹುಬ್ಬಳ್ಳಿ ಮೊದಲಾದ ತಾಲೂಕಗಳಲ್ಲಿ ಪ್ರಚಾರಕಾರ್ಯವು ಭರದಿಂದ ಸಾಗಿದೆ.

ಬಳ್ಳಾರಿಯಲ್ಲಿ ಪರದೇಶವಸ್ತ್ರ ಬಹಿಷ್ಕಾರವನ್ನು ಅಲ್ಲಿಯ ವರ್ತಕರೇ ಕೈಯಲ್ಲಿ ತೆಗೆದುಕೊಂಡಿದ್ದಾರೆ. ಉಪ್ಪಿನ ಕಾಯಿದೆ ಭಂಗವೂ ಅನೇಕ ಸ್ಥಳಗಳಲ್ಲಾಗಿದೆ.

ಕೊಡಗಿನಲ್ಲಿ ಮದ್ಯಪಾನ ಹಾಗೂ ಖಾದೀ ಕಾರ್ಯಗಳು ಉತ್ಸಾಹದಿಂದ ಸಾಗಿವೆ. ನಾಡಿನ ಹಿರಿಯರು ಸ್ವಯಂಸೇವಕರಿಗೆ ನೆರವಾಗುತ್ತಿದ್ದಾರೆ.

ಸಂಸ್ಥಾನಗಳಿಂದಲೂ ಜನರು ಬರಹತ್ತಿದ್ದಾರೆ. ಕಲ್ಲಬುರ್ಗಿಯಿಂದಲೂ ಬೆಂಗಳೂರಿನಿಂದಲೂ ಅಂಕೋಲೆಗೆ ಸ್ವಯಂಸೇವಕರು ಬಂದು ಸೇರಿದ್ದಾರೆ. ಹೀಗೆ ಸಕಲ ಭಾಗಗಳಲ್ಲಿ ಶಾಂತಯುದ್ಧದ ವಾತಾವರಣವು ದಿನೇ ದಿನೇ ಹೆಚ್ಚು ಉತ್ಸಾಹಯುಕ್ತವಾಗಹತ್ತಿದೆ. ಮುಂಬೈಯಿಂದ ಕಾರವಾರಕ್ಕೆ ಉತ್ಸಾಹಿ ಕನ್ನಡಿಗರ ಗುಂಪೊಂದು ಬಂದುಸೇರಿದೆ. ಶ್ರೀ. ಜೋಶಿ ಹಾಗೂ ಕಾರಂತರು ಕೌನ್ಸಿಲುಗಳಿಗೆ ರಾಜೀನಾಮೆ ಕೊಟ್ಟಿದ್ದಾರೆ. ಮೂವರು ಗೌಡಕುಲಕರ್ಣಿಯರೂ ತಮ್ಮ ಸರಕಾರೀ ಸ್ಥಳಗಳಿಗೆ ಶರಣು ಹೊಡೆದು ಕಾಯಿದೆಭಂಗದಲ್ಲಿ ಸೇರಿದ್ದಾರೆ. ಹೀಗೆ ಎಲ್ಲಿಲ್ಲಿಯೂ ಉತ್ಸಾಹ! ಇಷ್ಟರಲ್ಲಿ ೧ಸಾವಿರಕ್ಕೂ ಹೆಚ್ಚು ಜನರಿಗೆ ಶಿಕ್ಷೆಯಾಗಿದೆಯೆಂದು ತಿಳಿದುಬರುತ್ತದೆ.

ಇದೇ ಹೊತ್ತಿಗೆ ಬೆಳಗಾಂವಿಯಲ್ಲಿ ಬ್ರಾಹ್ಮಣೇತರರ ಪರಿಷತ್ತು ಹಾವೇರಿಯ ಶ್ರೀ ಹೊಸಮನಿಯವರ ಅಧ್ಯಕ್ಷತೆಯಲ್ಲಿ ಜರುಗಿ ರಾಷ್ಟ್ರೀಯ ಸಭೆಗೆ ತಾವು ಸೇರಬೇಕಾಗಿ ನಿರ್ಣಯವಾಗಿದೆ. ಅಖಿಲ ಭಾರತ ದೃಷ್ಟಿಯಿಂದ ಜಮಾಯತ್ ಉಲ್ ಉಲೇಮಾ ಸಭೆಯವರು ಮುಸಲ್ಮಾನರು ಕಾಂಗ್ರೆಸ್ಸನ್ನು ಸೇರಬೇಕೆಂದು ನಿರ್ಣಯಿಸಿದ ಮಹತ್ತ್ವವೇ ಕರ್ನಾಟಕದಲ್ಲಿ ಈ ಪರಿಷತ್ತಿಗಿದೆ. ಇದರಿಂದ ಚಳವಳವು ಇನ್ನು ಮುಂದೆ ಇನ್ನೂ ಜೋರಿನಿಂದ ನಡೆಯುವದೆಂದು ಕಾಣಹತ್ತಿದೆ. ಈ ಸಲ ಅಲ್ಲಲ್ಲಿ ಜರುಗಿದ ಬಸವೇಸ್ವರ ಜಯಂತಿಯ ಹಬ್ಬವೂ ಈ ಚಳವಳಿಗೆ ಸಹಾಯಕವಾಗಿಯೇ ಹಲವೊಂದು ಸ್ಥಳಗಳಲ್ಲಿ ಪರಿಣಮಿಸಿದೆ. ಮಹಾತ್ಮರ ಜೀವನಕ್ಕೆ ಬಹಳ ರೀತಿಯಿಂದ ಸಾಮ್ಯವುಳ್ಳ ಬಸವೇಶ್ವರನ ಪುಣ್ಯಸ್ಮರಣವು ಈ ಕಾಲಕ್ಕೆ ಈ ರೀತಿಯಲ್ಲಿ ನಡೆಯಲು ಮೊದಲಾದುದು ಶುಭಚಿನ್ಹವೇ. ಹರ್ಡೇಕರ ಮಂಜಪ್ಪಣ್ಣನವರು ಖಾದಿಯ ಕೆಲಸವನ್ನು ಬಲವತ್ತರವಾಗಿ ನಡೆಸಿದ್ದಾರೆ. ೧ ಲಕ್ಷ ರೂ. ಗಳ ಭಾಂಡವಲನ್ನು ಕೂಡಿಸಿ ಈ ಕಾರ್ಯವನ್ನು ಮುಂದುವರಿಸುವವರಿದ್ದಾರೆ. ಈಗಾಗಲೆ ೨೦–೩೦ ಸಾವಿರ ರೂಪಾಯಿಗಳು ಕೂಡಿದವು. ವೈಶ್ಯರೆ ಕನ್ನಡಿಗರೆಲ್ಲರೂ ಶ್ರೀಮಂತರೇ ಈ ಕಾರ್ಯವನ್ನು ಕೈಯಲ್ಲಿ ತೆಗೆದುಕೊಂಡದ್ದು ನಾಡಿಗೇ ಶುಭದಾಯಕವಾಗಿದೆ,

# ಕರ್ನಾಟಕದ ಬಲಿದಾನ

[ ಇವೆಲ್ಲ ಪಡಿಯಚ್ಚುಗಳನ್ನು ಕೊಟ್ಟದ್ದಕ್ಕಾಗಿ ವಿಜಯ ಹಾಗೂ ಕರ್ಮವೀರ ಕಾರ್ಯಾಲಯದವರಿಗೆ ಕೃತಜ್ಞರಾಗಿರುವೆವು — ಸಂಪಾದಕ ]



ಕಾರ್ನಾಡು ಸದಾಶಿವರಾಯರು ( ೧೫ ತಿಂಗಳ ಸಾದಾ ಶಿಕ್ಷೆ )



ದಿವಾಕರ ರಂಗರಾಯರು( ೬ ತಿಂಗಳ ಸಾದಾ ಶಿಕ್ಷೆ )







ಮಂಗಳವೇಢೆ



ನಂದಗಡದ ಹಣಮಂತ ನಾಯಿಕರು
(೧ ವರ್ಷ ಸಾದಾ ಶಿಕ್ಷೆ)



ಬೆಳಗಾಂವಿಯ ಶ್ರೀ. ಗೋಖಲೆಯವರು
(೬ ವಾರ ಸಾದಾ ಶಿಕ್ಷೆ)



ಡಾ. ಹರ್ಡೀಕರರೊಡನೆ ಅಂಕೋಲೆಗೆ ಹೊರಟ ಪ್ರಥಮ ಪಥಕವು.



ಕರ್ನಾಟಕದ ಕುರುಕ್ಷೇತ್ರವಾದ ಅಂಕೋಲೆಯ ಧರ್ಮಕ್ಷೇತ್ರವು.



(೧) ಜೋಗಿ ಬೀರಣ್ಣನಾಯಿಕ ಸೆಟಗೇರಿ (೨) ಬೊಮ್ಮಯ್ಯಾ ರಾತುನಾಯಿಕ ಚೌಡಗೌಡ

(೩) ಹಮ್ಮಣ್ಣ ಗೋವಿಂದನಾಯಿಕ ವಂದಿಗೆ (೪) ದೇವಣ್ಣ ಹೊನ್ನಪ್ಪನಾಯಿಕ ವಂದಿಗೆ

(೫) ಬೀರಣ್ಣ ಬೊಮ್ಮನಾಯಿಕ ಕಣಗಿಲ



ಶ್ರೀ. ತಿ. ಶ್ರೀ. ನಾಯಿಕರು
(೩ ತಿಂಗಳ ೧ವಾರ ಸಾದಾಶಿಕ್ಷೆ)



ಶ್ರೀ. ಕೌಜಲಗಿ ಹಣಮಂತರಾಯರು
(೩ ತಿಂಗಳ ೩ವಾರ ಸಾದಾಶಿಕ್ಷೆ)



ಶ್ರೀ. ಕಾರಖಾನೀಸರು
(೩ ತಿಂಗಳ ೧ ವಾರ ಸಾದಾಶಿಕ್ಷೆ)

ಸತ್ಯಾಗ್ರಹಿಗಳನ್ನು ಅಂಕೋಲೆಗೆ ಕಳಿಸುವ ಹುಬ್ಬಳ್ಳಿ ೦: ಸಭೆ
(ಡಾ. ಹರ್ಡೀಕರರೂ ದಿವಾಕರರೂ ಮಧ್ಯದಲ್ಲಿದ್ದಾರೆ)

# ಪ್ರಪಂಚ ಪರಿಚಯ

## ಜೋನ್ ಡುವಿ

ಹಿಂದೀ ಜನರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಂಪೂರ್ಣ ಸಹಾನು ಭೂತಿಯನ್ನು ತೋರಿಸಿದ ಅಮೇರಿಕೆಯ ಹಲವು ಸದ್ಗೃಹಸ್ಥರಲ್ಲಿ ಇವನೊಬ್ಬನು. ಜಗತ್ತಿನ ಸ್ವತಂತ್ರ ವಿಚಾರಿಗಳೂ ನವೀನ ತತ್ವ ಸಂಶೋಧಕರೂ ಎನಿಸಿದ ಇಂದಿನ ಅಗ್ರಗಣ್ಯ ದರ್ಶನಕಾರರಲ್ಲಿ ಇವನು ಪ್ರಮುಖನು. ಅಮೇರಿಕೆಯಷ್ಟೇ ಅಲ್ಲ. ಯುರೋಪ, ಚೀನ, ಜಪಾನ ಮೊದಲಾದ ಕಡೆಗೂ ಇವನ ಬಗ್ಗೆ ಆದರವಿದೆ. ಇವನ ವಿಚಾರಗಳಿಗೆ ಮಾನ್ಯತೆಯಿದೆ. ಸತ್ಯ ಸಂಶೋಧನವೆಂಬ ವಿಚಾರ ಪ್ರಬೋಧಕ ಗ್ರಂಥವನ್ನು ಮೊನ್ನೆಯೆ ಪ್ರಕಟಿಸಿದ್ದಾನೆ. ಈತನ ಬಗ್ಗೆ ನೇಶನ ಪತ್ರಿಕೆಯಲ್ಲಿ ಹೀಗೆ ವೃತ್ತಬಂದಿದೆ,

"೫೦ಕ್ಕಿಂತ ಹೆಚ್ಚು ವಿಷಯಗಳ ಮೇಲೆ ಇವನು ಸಣ್ಣ ದೊಡ್ಡ ಪುಸ್ತಕಗಳನ್ನು ಬರೆದಿದ್ದಾನೆ. ಇಷ್ಟರಿಂದಲೆ ಈತನ ವಿಶಾಲವಾದ ವಿಚಾರಕ್ಷೇತ್ರವೂ ಅದ್ಭುತ ಲೇಖನಶಕ್ತಿಯೂ ಗೋಚರವಾಗುತ್ತವೆ. ಲೇಖ ಪುಸ್ತಕಗಳು ಸೇರಿ ೨೦೦ ಪ್ರಕಟನೆಗಳು ಈತನನ್ನು ಕುರಿತು ಪ್ರಕಟಿತವಾಗಿವೆ! ಇದೆಲ್ಲ ೧೯೩೯ರ ಮಾರ್ಚದ ವರೆಗೆ ಮಾತ್ರ!"

ಇಂತಹ ಮಹಾಪುರುಷನೇ ಮ. ಗಾಂಧಿಯರ ಸತ್ಯಾಗ್ರಹವನ್ನು ಎತ್ತಿಹಿಡಿದು ಇಂಗ್ಲಂಡಕ್ಕೆ ಎಚ್ಚರ ಕೊಟ್ಟಿದ್ದಾನೆ. ಇವನೊಂದಿಗೆ ಇವನ ಸರಿಸಮಾನಸ್ಕಂಧರಾದ ಇನ್ನೂ ೧೦ ಸದ್ಗೃಹಸ್ಥರೂ ಅದಕ್ಕೆ ಸಹಿಹಾಕಿದ್ದಾರೆ.

---

## ಮಿತ್ರರಾಷ್ಟ್ರಗಳ ಸೈನಿಕರ ಸಭ್ಯವೃತ್ತಿ

ಅಮೇರಿಕಾ, ಫ್ರಾನ್ಸ, ಇಂಗ್ಲಂಡದ ಸೈನಿಕರು ಜರ್ಮನಿಯಲ್ಲಿ ಆಕ್ರಮಿಸಿದ ಭಾಗವನ್ನು ಮೊನ್ನೆ ತಾನೆ ಬಿಟ್ಟು ಮರಳಿ ತಮ್ಮ ತಮ್ಮ ನಾಡುಗಳಿಗೆ ತೆರಳಿದರು. ಈ ಸೈನಿಕರು ಹಿಂದೆರಳುವಾಗ "ತಂದೆಯಿಲ್ಲದ ತಾಯಿಗೆ" ಹುಟ್ಟಿದ ೧೫೦೮೦ ಅನಾಥ ಬಾಲಕರನ್ನು ಬಿಟ್ಟು ನಡೆದರು! ಇದೇನು ಜರ್ಮನ್ ಸ್ತ್ರೀಯರ ಸಚ್ಛೀಲದ ಪರಿಣಾಮವೊ? ಬ್ರಿಟಿಶ, ಅಮೇರಿಕಾ ಫ್ರೆಂಚರಾಷ್ಟ್ರಗಳ ಗಂಡಸರ ಸಭ್ಯವೃತ್ತಿಸದಾಚಾರದ ಫಲವೊ? ಹೇಳುವುದ ಕಷ್ಟ. ಇವೆರಡರಲ್ಲಿ ಆವ ಕಾರಣವೇ ಇದ್ದರೂ ಯುದ್ಧ ಮತ್ತು ಪಾಶವೀ ಶಕ್ತಿಗಳ ಘನಘೋರ ದುಷ್ಪರಿಣಾಮಗಳಿವು ಎಂಬ ಮಾತು ಮಾತ್ರ ಸುಳ್ಳಲ್ಲ.

—ಯುನಿಟೀ ಅಮೇರಿಕಾ

---

## ಹೊಸ ಯುಗಕ್ಕೆ ಹೊಸವೇದ !

'ಇಂಡಿಯಾ ಅಂಡರ ಬಾಂಡೇಜ' ಎಂಬ ಗ್ರಂಥವನ್ನು ಬರೆದು ವಿಶೇಷ ವಿಖ್ಯಾತರಾದ ಡಾ. ಜೆ. ಟಿ. ಸಂಡರಲಂಡ ಎಂಬವರು ಒಂದು ಮಹತ್ವದ ವಿಚಾರವನ್ನು ಲೋಕದ ಎದುರು ಇಟ್ಟಿದ್ದಾರೆ. ಡಾ. ಸಂಡರಲಂಡರು ವಸುಧೈವ ಕುಟುಂಬವಾದಿಗಳು. ತತ್ವಜ್ಞಾನಿಗಳು. ಧರ್ಮಶಾಸ್ತ್ರದ ಮರ್ಮಜ್ಞರು. ಮಾನವ್ಯದ ಉದ್ಧಾರಕ್ಕಾಗಿ ಹಗಲಿರುಳೂ ಹವಣಿಸುತ್ತಿರುವವರು. ಆದುದರಿಂದ ಇವರ ವಿಚಾರಗಳು ಮನನೀಯವೆಂಬ ಬಗ್ಗೆ ಬೇರೆ ಹೇಳಬೇಕಿಲ್ಲ. ಇವರು ಬರೆದಿರುವ ಲೇಖದ ಮುಖ್ಯಾಂಶಗಳೇನಂದರೆ:

ನಮಗೆ ಹೊಸ ಧರ್ಮಗ್ರಂಥಗಳಿರಬಾರದೇಕೆ? ಹಿಂದಿನವು ಆಗಿನ ಪರಿಸ್ಥಿತಿಗೆ, ಅವಶ್ಯಕತೆ ಅನುಕೂಲತೆಗಳಿಗೆ ಅನುಸರಿಸಿ ಬರೆದ ಗ್ರಂಥಗಳು. ಇಂದಿನ ಜಗತ್ತೇ ಬೇರೆ ಆಗಿದೆ. ಅಂದಬಳಿಕ ಅಂದಿನ ಗ್ರಂಥಗಳಾದರೂ ಏಕೆ? ಹಿಂದಿನ ಕಾಲದ ಶಾಸ್ತ್ರೀಯ ಜ್ಞಾನದ ಅತ್ಯಲ್ಪ ವಿಚಾರಗಳ ಮೇಲೆಯೆ ಇಂದಿನ ಜನರಿಗೆ ಬಾಳಿ ಬದುಕಲು ಹೇಳಿನೋಡಿರಿ; ಒಪ್ಪುವರೆ? ಆ ಹಿಂದಿನ ಸಾಮಾಜಿಕ ನೀತಿನಿಯಮಗಳನ್ನೇ ಅನುಸರಿಸ ಹೇಳಿರಿ, ಸಮ್ಮತಿಸಬಹುದೆ?

ಕಾಲಮಾನಪರಿಸ್ಥಿತಿಯು ಬದಲಾದೊಡನೆಯೆ ಶಾಸ್ತ್ರವಿಚಾರಗಳು ಹೊಸ ರೀತಿಯಲ್ಲಿ ಬರಬೇಕಾಗುವುದು. ತತ್ವಜ್ಞಾನವು ಹೊಸ ರೂಪವನ್ನು ತಾಳುವುದು. ಕಾವ್ಯ, ಕಲಾ, ಸಾಹಿತ್ಯ, ಸಂಗೀತ, ನೀತಿಮರ್ಯಾದೆ ಮೊದಲಾದವುಗಳೆಲ್ಲ ಹೊಚ್ಚಹೊಸವಾಗಿಯೆ ನಿರ್ಮಾಣವಾಗಬೇಕಾಗುತ್ತದೆ. ಜನಜೀವನದ ಬೌದ್ಧಿಕ ಮತ್ತು ನೈತಿಕ ವಿಚಾರಪ್ರವಾಹವು ಯಾವಾಗಲೂ ಜೀವಂತವಾಗಿ ಹರಿಯುತ್ತಿರಬೇಕು. ಅದು ಹರಿಗಡಿದು ನಿಂತಲ್ಲಿಯೆ ನಿಂತುಬಿಟ್ಟರೆ ಜೀವನವು ಕೊಳೆಯಾಗುವುದು. ಚಟುವಟಿಕೆಯು ಚೈತನ್ಯವುಳ್ಳದರ ಲಕ್ಷಣ. ಅದಲು ಬದಲು ಇಲ್ಲದ್ದಾಗುತ್ತಲೆ ಅಳಿಗಾಲವು ಬಂದಿತೆಂಬುದು ಸಿದ್ಧಾಂತ.

ಪುರಾಣದೊಳಗಿನ ಹಳೆ ಕಥೆಗಳನ್ನು ಓದಿಯೆ ಜಗದುತ್ಪತ್ತಿ ಯನ್ನೇಕೆ ತಿಳಿಯಬೇಕು ? ಇಂದಿನ ಶಾಸ್ತ್ರೀಯ ಶೋಧಗಳು ಪರಮಾತ್ಮನು ವಿಶ್ವವನ್ನು ಹೇಗೆ ಸೃಜಿಸಿದ್ದನೆಂಬುದನ್ನು ಮನೋಹರವಾಗಿ ಹೇಳುವದಿಲ್ಲವೆ ?

(ಸತ್ಯಕ್ಕಾಗಿ ಹರಿಶ್ಚಂದ್ರನೇ ಸವಿದ; ದುಷ್ಟನಿಗ್ರಹಕ್ಕಾಗಿ ರಾಮನೇ ಯತ್ನಿಸಿದ; ಹೊಸ ಸೃಷ್ಟಿ ನಿರ್ಮಾಣಕ್ಕೆ ಬ್ರಹ್ಮಬಲ ಸಂಪಾದನೆ; ಗಾಧಿರಾಜನೊಬ್ಬನೆ ತಪಂಬಟ್ಟನೆನ್ನುವಂತಿದೆಯೆ ! ಜಗತ್ತಿನಲ್ಲಿ ಇಂದು ಈ ಕ್ಷಣದಲ್ಲಿ ಸತ್ಯಾಗ್ರಹಕ್ಕಾಗಿ, ರಾವಣ ರಾಜ್ಯವಿನಾಶಕ್ಕಾಗಿ ರಾಮರಾಜ್ಯಸ್ಥಾಪನೆಗಾಗಿ ಹೆಣಗುವವರು ಹೋರಾಡುವವರು ಇಲ್ಲವೆ ?) ಆ ಹಳೆಯ ಅವತಾರಗಳನ್ನೇ ಕೇವಲ ಏಕೆ ನೆನಿಸುತ್ತ ಕುಳ್ಳಿರಬೇಕು ? ಇಂದಿನವರಿಂದ ಸ್ಫೂರ್ತಿಶಕ್ತಿಗಳು ದೊರೆಯುವಂತಿಲ್ಲವೆ ?

(ನಾವು ದ್ವೇಷಿಸುವವರನ್ನೂ ನಮ್ಮ ದ್ವೇಷಮಾಡುವವರನ್ನೂ ಹೇ ದೇವಾ ನೀನು ಕೊಲ್ಲು ಎಂದು ಮುಂತಾಗಿ) ದ್ವೇಷಪೂರಿತ ಪ್ರಾರ್ಥನೆಗಳುಳ್ಳ ಆ ಹಳೆಯ ಮಂತ್ರತಂತ್ರಗಳನ್ನೇ ಇಂದಿಗೂ ಏಕೆ ಹೇಳಬೇಕು ? (ಅಹಿಂಸಾ, ಸತ್ಯ, ಪ್ರೇಮಗಳ ಉಪದೇಶ ದಿಂದ) ಜಗತ್ತನ್ನೇ ಉದ್ಧರಿಸಲು ಹೊರಟ ಆಧುನಿಕ ಋಷಿಗಳ ಬೋಧನೆಯನ್ನು ಏಕೆ ಅನುಸರಿಸಬಾರದು ?

ಇಂದಿನ ಧರ್ಮಗ್ರಂಥಗಳನ್ನು ಬರೆದು ಬೇರೆ ಪ್ರಕಟಿಸುವ ಕಾರಣವಿಲ್ಲ. ಸಾಹಿತ್ಯಮಹೋದಧಿಯಲ್ಲಿ ಅವು ಬೆರೆತಿವೆ. ಕಲಿ ಗಳ ಉಸುರಿನಲ್ಲಿ ಧರ್ಮವಚನಗಳಿವೆ. ಇತಿಹಾಸಲೇಖನದಲ್ಲಿ ಅಡಕವಾಗಿವೆ. ಹಳೆಯದನ್ನು ಹೊಲ್ಲವೆಂದು ಬಿಡುವ ಕಾರಣ ವಿಲ್ಲ. ಹಳೆಯದವರ ಹೊಟ್ಟೆಯೊಳಗಿಂದಲೆ ಹೊಸತು ವಿಕ ಸಿತವಾಗುವುದು.

ಜಗತ್ತು ಹೊಸಹೊಸತು ಆಗುತ್ತ ನಡೆದಿದೆ. ಇದು ಅದರ ಧರ್ಮ. ಸಂಸ್ಕೃತಿಯು ವಿಕಾಸವಾಗುತ್ತಲಿದೆ. ಆದುದ ರಿಂದ ಹಿಂದೆ ಒಂದು ಕಾಲಕ್ಕೆ ಆವುದು ಸಾಕಷ್ಟಿತ್ತೊ, ಅದು ಇಂದಿನ ಹೊಸ ವಿಚಾರದೃಷ್ಟಿಗೂ ಬದಲಾದ ಸಮಾಜಿಕ ನೈತಿಕ ಪರಿಸ್ಥಿತಿಗೂ ಎಂದೂ ಸರಿಹೋಗಲಾರದು.

—ಯುನಿಟಿ (ಅಮೇರಿಕಾ).

---

## ವಿ. ಫ್ರೀಡೆಲ್ ಎಂಬ ಜರ್ಮನಿಯ ಧೀಮಂತನು

'ಆಧುನಿಕ ಜಗತ್ತಿನ ಸಂಸ್ಕೃತಿಯ ಐತಿಹ್ಯ'ವನ್ನು ಕುರಿತು ಈತನು ಪ್ರಖ್ಯಾತವಾದ ಪುಸ್ತಕವನ್ನು ಬರೆದಿದ್ದಾನೆ. ಇದರ ಇಂಗ್ಲಿಷ ಭಾಷಾಂತರವು ಪ್ರಕಟವಾಗಿದೆ. ಸ್ಪೆಂಗ್ಲರನೆಂಬವನು "ಯುರೋಪದ ಇಳಿಗಾಲ"ವೆಂಬ ಪುಸ್ತಕವನ್ನು ಬರೆದನಂತರ ಇಷ್ಟು ಮಹತ್ವದ ಬೇರೊಂದು ಗ್ರಂಥವೇ ಪ್ರಕಟವಾಗಿಲ್ಲ ವೆಂದು ಪ್ರಕಾಶಕರು ಹೇಳುತ್ತಾರೆ. ನಿಚ್ಛೆ ಎಂಬವನ ತರುವಾ ಇವನಷ್ಟು ಧೀಮಂತನೂ ವಿಚಾರಸಾಮರ್ಥ್ಯವುಳ್ಳವನೂ ಬೇರೆ ಆವನೂ ಹುಟ್ಟಲ್ಲ.

ಇತಿಹಾಸವನ್ನು ಹೇಗೆ ಬರೆಯಬೇಕೆಂಬ ಬಗ್ಗೆ ಇವನ ವಿಚಾರ ಗಳು ವಿಲಕ್ಷಣವಾಗಿವೆ. (ನಮ್ಮ ಇತಿಹಾಸ ಬರೆಯುವ ಪ್ರಾಚೀನ ಪದ್ಧತಿಗೆ ಸರಿಹೋಗುತ್ತವೆ!) ಅವನು ಬರೆದಿರುವು ದೇನೆಂದರೆ: ಇತಿಹಾಸದಲ್ಲಿ ಆದ ಸಂಗತಿಗಳನ್ನು ಇದ್ದಕ್ಕಿದ್ದಂತೆ ಸ್ಥಳಕಾಲಗಳ ಸೂಕ್ಷ್ಮವಿವರದೊಂದಿಗೆ ಹೇಳುವುದು ಮಹತ್ವದ ವಿಷಯವೇ ಅಲ್ಲ; ಇತಿಹಾಸವನ್ನು ನಿರ್ಮಿಸಿದ ವ್ಯಕ್ತಿಯ ಶಬ್ದ ಚಿತ್ರವನ್ನು ಸರಿಯಾಗಿ ಒಡಮೂಡುವಂತೆ ಮಾಡುವುದು ಐತಿ ಹಾಸಿಕ ಲೇಖನದ ಹಿರಿಗುರಿಯಾಗಿರಬೇಕು. ಏಕೆಂದರೆ ಕಾಲ ಗಣನೆ ಮೊದಲಾದುವನ್ನು ಸೂಕ್ಷ್ಮವಾಗಿ ಕಂಡುಹಿಡಿದು ಹೇಳು ವುದು ಎಂದೂ ಸಾಧ್ಯವೇ ಇಲ್ಲ. ಇತಿಹಾಸವೆಲ್ಲವೂ ಒಂದು ಕಥಾಸಂಗ್ರಹವು—ಪುರಾಣವು...... ಒದಗಿದುದನ್ನು ಇದ್ದಕ್ಕಿ ದ್ದಂತೆ ಸೂಕ್ಷ್ಮವಾಗಿ ಹೇಳುವುದು ಅಶಕ್ಯವೆಂಬ ವಿಚಾರವು ದೃಢವಾಗುತ್ತಲೆ ಅದನ್ನು ಮನೋಹರವಾಗಿ—ಪರಿಣಾಮಕರ ವಾಗಿ ಬರೆಯಬೇಕೆಂಬ ಬುದ್ಧಿಯುಂಟಾಗುವುದು. ಸಂಪೂರ್ಣ ವಾದ ಇತಿಹಾಸವನ್ನು ಬರೆವುದು ಅಸಾಧ್ಯವಿಷ್ಟೇ ಅಲ್ಲ, ಉತ್ಕೃ ಷ್ಟವಾಗಿ ಬರೆಯಲ್ಪಟ್ಟದೆ ಎಂಬ ಇತಿಹಾಸ ಗ್ರಂಥವು ಒಗ್ಗರಣೆ ಹಾಕಿಯೆ ಸಿದ್ಧಪಡಿಸಿರಲಿಕ್ಕೆಂಬುದು ಸಿದ್ಧಾಂತ.

ಈತನ ಇನ್ನೂ ಕೆಲವು ಅಭಿಪ್ರಾಯಗಳು ಸೋಜಿಗವುಳ್ಳುವು ಗಳಾಗಿವೆ. ಈಗಿನ ವಿಚಾರಶಕ್ತಿಯು ಹೆಚ್ಚಾಗಿರುವ ಮಾನವ ರಲ್ಲಿರುವ ತಿಳಿವಿನಕಿಂತಲೂ ಆರಂಭದ ಮಾನವಕೋಟಿಯಲ್ಲಿ ಹೆಚ್ಚಿನ ಜ್ಞಾನಶಕ್ತಿಯಿತ್ತೆಂದು ಇವನು ಪ್ರತಿಪಾದಿಸುತ್ತಾನೆ. ಕಳೆದ ನಾಲ್ಕು ಶತಮಾನಗಳಲ್ಲಿ ವಿಚಾರಕ್ಷೇತ್ರವು ವಿಸ್ತೃತವಾ ಗಿದೆಯೆಂಬುವುದು ಪೂರ್ವಗೃಹದೂಷಿತ ಮಾತು ಎಂದೂ ಇವನ ಅಭಿಪ್ರಾಯ. ಬಾಬಿಲೋನಿನ ನಾಶವಾಗಿ ಫಲಜ್ಯೋತಿಷ ಶಾಸ್ತ್ರವೂ, ಸಾಮುದ್ರಿಕ, ಕಣಿಹೇಳುವುದೂ ಹಾಳಾದುದರಿಂದ ಜಗತ್ತಿಗೆ ಬಹಳೇ ದೊಡ್ಡ ಹಾನಿಯಾಯ್ತೆಂದು ಹೇಳುತ್ತಾನೆ. ಮಾನವಕೋಟಿಯು (ವಿಚಾರ, ಯುದ್ಧ, ಪಿಡುಗು ಮೊದಲಾ ದವುಗಳ !) ಆಘಾತಗಳಿಂದ ಅಲ್ಲೋಲಕಲ್ಲೋಲಗೊಳ್ಳುವ

ದಿಂದ ಬಳಿಕ ಭೂಮಿಗೂ ಅಂತಹ ಕಂಪನಗಳುಂಟಾಗುತ್ತಿರಲಿಕ್ಕೆ ಬೇಕು. ಕೇವಲ ಭೂಮಿಗೆ ಸಮೀಪದ ಗುರುಮುಂಗಳಾದಿಗಳಷ್ಟೇ ಅಲ್ಲ ಇಡಿ ಸೂರ್ಯಮಾಲೆಯೆ ಅನುಕಂಪಿತವಾಗುತ್ತಿರಲಿಕ್ಕೆಬೇಕೆಂದೂ ಯೂರಪ್ಪಿನಲ್ಲಿ ಕರಿಸಾವಿನ (ಬ್ಲ್ಯಾಕ ಡೆಥ್) ಕಾಲದಲ್ಲಿ ಭೂಕಂಪವಾಯಿತು. ಇದರಲ್ಲಿ ಏನಾದರೂ ಕಾರ್ಯಕಾರಣ ಸಂಬಂಧವು ಇಲ್ಲದಿಲ್ಲವೆಂದೂ ಎನ್ನುವನು.

—ನೇಶನ್ (ನ್ಯೂಯಾರ್ಕ.

# ಸಾಹಿತ್ಯಲೋಕ

**The Nations Call— ರಾಷ್ಟ್ರದ ಕೂಗು—** (ಲೇಖಕ:— ಶ್ರೀಮಾನ್ ದಿವಾಕರ ರಂಗರಾಯರು— ಸಂಪಾದಕ:—'ಕರ್ಮವೀರ' ಧಾರವಾಡ. ಬೆಲೆ—೦—೧೨—೦.)

ಕನ್ನಡ ತಾಯಿಯ ಮುದ್ದು ಮಕ್ಕಳಾದ ಶ್ರೀಮಾನ್ ದಿವಾಕರ ರಂಗರಾಯರನ್ನರಿಯದ ಕನ್ನಡಿಗರಾರು ? ಪರದಾಸ್ಯದಲ್ಲಿ ತಲ್ಲಣಿಸುವ ತಾಯ್ನಾಡನ್ನುದ್ಧರಿಸಲು—ಕಟಿಬದ್ಧರಾದ ಕನ್ನಡ ತರುಣರಲ್ಲಿ ಇವರು ಅಗ್ರೇಸರರೆನ್ನಲು ಪ್ರತ್ಯವಾಯುವಿಲ್ಲ. ಉದಯೋನ್ಮುಖವಾದ ಕನ್ನಡ ನಾಡನ್ನು ಚೈತನ್ಯದಿಂದ ತುಂಬುವ ಸ್ಫೂರ್ತಿಭಾಸ್ಕರನೇ ಈತನು. ಈ ಪುಸ್ತಕದಲ್ಲಿ ಕಲೆಹಾಕಿದ ಲೇಖನಗಳು ಈ 'ದಿವಾಕರ' ನ ಕಿರಣಗಳು.

ತರುಣರೇ ಭಾವದ ಮನೆ; ತರುಣರೇ ಧೈರ್ಯದ ಕೊನೆ; ತರುಣರ ಮೇಲೆಯೇ ಭವಿಷ್ಯದ ಹೊಣೆ; ಎಂಬುದನ್ನರಿತು ಶ್ರೀಮಾನ್ ದಿವಾಕರರು ಅವರನ್ನೇ ಎಚ್ಚರಿಸಲು ಯತ್ನಿಸಿದ್ದಾರೆ. ಅಂತರಂಗದ ತರುಣರೇ ಕೇಳಿ!

"Young men! fling off fear, give full scope to the wings of energy, have great ideals and work them out in the full glare of Divine Presence.

ಭಯವನ್ನು ಬಿಸಾಟಿ, ಹುರುಪನ್ನು ಹಾರಲು ಬಿಟ್ಟು, ಪರಮಾತ್ಮನ ದಿವ್ಯ ಸಾನ್ನಿಧ್ಯದಲ್ಲಿ ಹೆಗ್ಗುರಿಯನ್ನು ಮುಟ್ಟಲು ಹೆಣಗಾಡಿರಿ. ಇದೇ ಅವರ ಸಂದೇಶ! ಆತ್ಮೋದ್ಧಾರವನ್ನೂ ದೇಶೋದ್ಧಾರವನ್ನೂ ಒಡನೆಯೇ ಸಾಧಿಸುವದು ತರುಣರೆದುರಿಗಿಟ್ಟ ಅವರ ಹೆಗ್ಗುರಿಯು. ಈ ಗೆಲವಿನ ಗುರಿಯನ್ನೇರುವ ಮೆಟ್ಟಿಲುಗಳಾವವು? ಪರಿಸ್ಥಿತಿಯ ಅರಿವು (Consciousness of the correct situation) ಮೊದಲನೆಯದು. ಇದರಿಂದ ಮುಂದುವರಿಯುವ ಇಚ್ಛೆಯು ಬಲಿಯುವದು (A strong current for progress must set in). ಎರಡನೆಯದು ದೃಢಸಂಕಲ್ಪವು. (One strong will can set a thousand to dance in joy of selfless action) ಒಬ್ಬನ ದೃಢಸಂಕಲ್ಪದಿಂದ ಸಾವಿರಾರು ಜನರು ಆನಂದದಿಂದ ಆತ್ಮಯಜ್ಞಕ್ಕೆ ಸಿದ್ಧರಾಗುವರು. ಇಂಥ ಶಕ್ತಿಯನ್ನೆಬ್ಬಿಸಿ ತಾಯ್ನಾಡಿನ ಸೇವೆಗಾಗಿ ಅದನ್ನು ಧಾರೆಯೆರೆಯುವದು ಪ್ರತಿಯೊಬ್ಬನ ಕರ್ತವ್ಯ! (Awaken this central force and direct it towards the service of the mother and you have done your duty) ಆತ್ಮಸಮರ್ಪಣವು ಮೂರನೆಯದು.

**Deliver up to the hands of the Lord this frail and perishable reed in order that it might burst into ineffable music at the touch of the divine lips!**

ತಮ್ಮ ದೇಹ ಕೊಳಲನ್ನು ಪರಮಾತ್ಮನ ಕೈಯಲ್ಲಿಟ್ಟು ಆತನ ದಿವ್ಯ ತುಟಿಗಳ ಸ್ಪರ್ಶದಿಂದ ಹುಟ್ಟಿದ ಇಂಪಾದ ಸಂಗೀತದಿಂದ ಜನರನ್ನು ರಂಜಿಸಬೇಕು. ಧ್ಯೇಯಕ್ಕೆ ದೇಹವನ್ನರ್ಪಿಸುವದೇ ಆತ್ಮಸಮರ್ಪಣವು. ಇದೇ ಯಶಃಸಾಧನೆ, ಗೆಲವಿನ ಗುಟ್ಟು!

ಮೇಲ್ಕಾಣಿಸಿದ ಹಲವು ಅವತರಣಗಳು ಬರಹಗಾರನ ಅಂತರಂಗದ ಅಂದವನ್ನೂ, ವಿಚಾರದ ವೀರ್ಯವನ್ನೂ, ಮಾತಿನ ಮಾಧುರ್ಯವನ್ನೂ ಒಡೆದು ತೋರಿಸುತ್ತವೆ. ಈ ಈ ಲೇಖನಗಳ ಸ್ವಾರಸ್ಯದ ಪೂರ್ಣಾನುಭವವನ್ನು ಪಡೆಯಲಿಚ್ಛಿಸುವವರು ಪುಸ್ತಕವನ್ನೋದಿಯೇ ತೀರಬೇಕು. ಕನ್ನಡ ತರುಣರು ಇದರಿಂದ ಸ್ಫೂರ್ತಿಯನ್ನು ಹೊಂದಲಿ!

**ರಾಷ್ಟ್ರಬಂಧು ಯುಗಾದಿ ಕಾಣಿಕೆ :—** ಸಂಪಾದಕರು ಶ್ರೀ. ಕಡೆಂಗೊಡ್ಲು ಶಂಕರಭಟ್ಟರು. ಸಿಗುವ ಸ್ಥಳ ರಾಷ್ಟ್ರಬಂಧು ಕಾರ್ಯಾಲಯ ಮಂಗಳೂರು; ಬೆಲೆ ೬ ಆಣೆ+ಅಂಚೆ ೧ ಆಣೆ

ವಿವಿಧತೆಯೇ ಈ ಸಂಚಿಕೆಯ ಜೀವಾಳವು. "ವಿಯೋಗ ವ್ಯಥಾ" ಎಂಬ ಸುಂದರವಾದ ಚಿತ್ರದಿಂದ ಸುಶೋಭಿತವಾದ ಈ ಹೊಸವರ್ಷದ ಕಾಣಿಕೆ, ಅಚ್ಚಿನಂತೆ ಮುದ್ದಾಗಿದೆ. ಲೇಖನಗಳಾದರೂ "ಬಹುಮುಖವಾದ ಪ್ರತಿಭೆಯನ್ನು" ಪ್ರದ

ರ್ಶಿಸುವಮುಖವೇ ಇರುತ್ತವೆ. "ಸಾಮ್ರಾಜ್ಯವಾದ ಮತ್ತು ಭರತ ವರ್ಷ" ಎಂಬ ಲೇಖದಲ್ಲಿ ಅದೊಂದು ರಾಜಕೀಯ ವಾದದ ಕಿಂತಲೂ ಎರಡು ಸಂಸ್ಕೃತಿಗಳ ಸಮರಸವಾದವೆಂದೆಂಬ ಮತವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ. ಭಾರದ್ವಾಜರ ಲೇಖನದಲ್ಲಿ ಹಿಂದುಸ್ಥಾನವನ್ನು ಸಾಲದ ಕೊಳದಲ್ಲಿ ಚಲ್ಲಿ ಅದರ ಸರ್ವಸ್ವವನ್ನು ಯಾವ ರೀತಿಯಾಗಿ ವಿಲಾಯತಿಯು ಲೂಟ ಮಾಡಿತೆಂಬ ಹೃದಯಂಗಮವಾದ ಸಂಗತಿಯು ಅಂಕಿ ಗಳೊಡನೆ ಸಿದ್ಧಗೊಳಿಸಲ್ಪಟ್ಟಿದೆ. 'ತ್ಯಾಗರಾಜರ ಕೀರ್ತನೆ ಯಲ್ಲಿ ಸಂಗೀತವು ಮುಖ್ಯವಾಗಿದ್ದರೆ ಪುರಂದರ ದಾಸರಲ್ಲಿ ಕವಿತ್ವ ಮುಖ್ಯವಾಗಿದ್ದಿತು. ಆದರೂ ಇಬ್ಬರಿಗೂ ಭಾಗವತ ಸಂಬಂಧವಲ್ಲದೆ ಜನ್ಮಜನ್ಮಾಂತರ ಸಂಬಂಧವೂ ಗುಪ್ತವಾಗಿ ಹೇಗೆ ಇದ್ದೀತೆಂಬದನ್ನು' ಕೂರಿಗನೂರ ನರಸಿಂಗರಾಯರ ಲೇಖ ದಲ್ಲಿ ಸ್ಪಷ್ಟೀಕರಿಸಲಾಗಿದೆ. ಸಣ್ಣ ಕತೆಗಳಾದರೂ ಒಂದ ಕ್ಕಿಂತ ಒಂದು ಉತ್ತಮವಾಗಿವೆ. ಕರ್ನಾಟಕ ಕಾದಂಬರಿ ಪಿತಾಮಹ ಬಿ. ವೆಂಕಟಾಚಾರ್ಯರ ಅಮೌಲ್ಯ ಜೀವನಚರಿ ತೆಯ ಸಲುವಾಗಿಯಾದರೂ ಈ ಸಂಚಿಕೆಯನ್ನು ತರಿಸಿ ಓದ ಬಹುದು. ಮೂಡಬಿದರೆಯ ಪರಿಚಯವು ಸುಂದರ ಚಿತ್ರಗಳ ಸಹಿತವಾಗಿ ಕನ್ನಡಿಗರಿಗೆ ಮಾಡಿಕೊಡಲಾಗಿದೆ. ಜವಾಹಿರ ಲಾಲರ ಬೇರೆ ಬೇರೆ ವಯಸ್ಸಿನ ಚಿತ್ರಗಳೂ ಇವೆ. ಕವಿತಾ ವಿಭಾಗವು ಕವಿಗಳ ಕೌಶಲವನ್ನು ವ್ಯಕ್ತಪಡಿಸುತ್ತದೆ. ರಸಿಕ ಸಂಪಾದಕರ ಕವಿತೆಗಳೂ ಇರಬಹುದೆಂದು ನಾವು ಆಶಿಸಿದ್ದೆವು; ಮುಂದಿನ ಸಲವಾದರೂ ಅವರು ನಮ್ಮನ್ನು ನಿರಾಶರನ್ನಾಗಿ ಮಾಡಬಾರದು. ಇದೇ ರೀತಿಯಲ್ಲಿ ರಾಷ್ಟ್ರಬಂಧುವಿನ ಯುಗಾ ದಿಯ ಸಂಚಿಕೆಯು ಕನ್ನಡಿಗರ ಸೇವೆಯನ್ನು ಮಾಡಲೆಂದು ನಾವು ಹಾರೈಸುತ್ತೇವೆ. ಸಂಪಾದಕರನ್ನು ಇನ್ನೊಮ್ಮೆ ಅಭಿ ನಂದಿಸಿ ಎಲ್ಲರೂ ತರಿಸಿ ಓದಬೇಕೆಂದು ಸೂಚಿಸುತ್ತೇವೆ.

### ಗೀತಾರ್ಥಚಂದ್ರಿಕೆ

—ಲೇಖಕರು ಹೊಸಕೆರೆ ಚಿದಂಬರಯ್ಯನವರು; ಪ್ರಕಾಶಕರು ಎಮ್. ರಾಮರಾವ ಎಸ್, ಎಸ್, ಎನ್. ಬುಕ್‌ಡಿಪೊ ಬೆಂಗ ಳೂರು. ಕ್ರೌನ ಆಕಾರದ ಸುಮಾರು ೫೦೦ ಪುಟದ ಪುಸ್ತಕ. ಬೆಲೆ ೨ ರೂಪಾಯಿ.

ಶ್ರೀ. ಚಿದಂಬರಯ್ಯನವರು ಬರೆದ ಅತ್ಯುತ್ತಮ ಹಾಗು ಅತ್ಯುಪಯುಕ್ತ ಪುಸ್ತಕಗಳಲ್ಲಿ ಇದೊಂದು. ಶ್ರೀ ಚಿದಂಬರಯ್ಯ ನವರು ಕನ್ನಡ ಗ್ರಂಥಕಾರರಲ್ಲಿ ಮೇಲ್ತರಗತಿಗೆ ಸೇರಿದವರೆಂಬು ದರಲ್ಲಿ ಸಂದೇಹವಿಲ್ಲ. ಅಧ್ಯಾತ್ಮ ವಿಚಾರದಲ್ಲಿ ಅವರು ಹೆಚ್ಚಾಗಿ ನುರಿತವರೆಂಬದನ್ನು ಅವರು ಈ ವರೆಗೆ ಕನ್ನಡಕ್ಕೆ ಒದಗಿಸಿದ ಗ್ರಂಥಭಾಂಡಾರವೇ ಸಾಕ್ಷಿ. ಅವರು ಶ್ರೀಮದ್ಭಗವದ್ಗೀತೆ ಯನ್ನು ಕನ್ನಡದಲ್ಲಿ ಸಂಪಾದಿಸಲು ಕೈಕೊಂಡದ್ದು ಕನ್ನಡ ನಾಡಿಗೇ ಒಂದು ಉಪಕಾರ.

ಶ್ರೀ. ಚಿದಂಬರಯ್ಯನವರು ಗೀತೆಯ ವಿಷಯದಲ್ಲಿ ಮೊದಲಿ ನಿಂದಲೂ ಹೆಚ್ಚಿನ ವ್ಯಾಸಂಗವನ್ನು ಮಾಡಿದವರು. ಈಗ ಎಷ್ಟೋ ವರ್ಷಗಳ ಹಿಂದೆಯೇ **ಗೀತಾಸಾರ ವಿಚಾರ**ವೆಂಬ ಗ್ರಂಥಮಾಲೆಯೊಂದನ್ನು ನಮಗೆಲ್ಲ ಒಪ್ಪಿಸಿದರು. ಆ ನಂತರ ಹಾಗೆಯೇ **ಗೀತಾರ್ಥ ವಿವರಣೆ** ಯನ್ನು ನಮ್ಮ ಕೈಗಿತ್ತರು. ಮತ್ತೀಗ ಇದೊಂದು ಮುಡುಪನ್ನು ನಮಗಾಗಿ ತಂದಿರು ವರು. ಇದು ನಮ್ಮ ಬಾಯಿಗೂ, ಗಂಟಲಿಗೂ ಹೊಟ್ಟೆಗೂ 'ಹದವಾದ ತುತ್ತು' ಆದೀತೆಂದು ಆಸೆ.

ಪುಸ್ತಕವು ಕನ್ನಡದ ಕೆಲವು ಮನೋಹರ ಪುಸ್ತಕಗಳ ಲ್ಲೊಂದು. ಕಾಗದ, ಅಚ್ಚು ಕಟ್ಟು ಎಲ್ಲಾ ಒಪ್ಪಾಗಿವೆ. ಹೆಸ ರಿಡುವಂಥ ಅಚ್ಚಿನ ತಪ್ಪುಗಳಿಲ್ಲ; ಇದ್ದ ಬಿದ್ದ ಕೆಲಸಕ್ಕೆ ಒಪ್ಪೋಲೆಯನ್ನೂ ಕೊಟ್ಟಿದ್ದಾರೆ. ಪುಸ್ತಕದ ಮೊದಲಿಗೆ ಚಿಕ್ಕದೊಂದು ಉಪಯುಕ್ತವಾದ ಮುನ್ನುಡಿ. ನಂತರ ವಿಸ್ತೃತ ವಾದ ವಿಷಯಸೂಚನೆ. ಆ ಮೇಲೆ ಭಾವಾರ್ಥ ಟಿಪ್ಪಣಿಗ ಳೊಡನೆ ಗೀತೆಯ ಮೂಲ ಶ್ಲೋಕಗಳು, ಅಧ್ಯಾಯಕ್ರಮವಾಗಿ ಕೊಡಲ್ಪಟ್ಟಿವೆ. ತರುವಾಯ ಈಗಿನ ಹೊಸ ಪದ್ಧತಿಯಂತೆ ಓದುಗರಿಗೆ ಅನುಕೂಲವಾಗುವ ಹಾಗೆ ಶ್ಲೋಕದ ಮೊದಲ ಸಾಲಿನ ಪರಿವಿಡಿ. ಹೀಗೆ ಪುಸ್ತಕದ ಜೋಡುಕಟ್ಟು(Get up) ಒಳ್ಳೇ ಚನ್ನಾಗಿ ಬಂದಿದೆ.

ಇದೀಗ ಹೊರವುೈ. ಹಾಗೆ ಒಳವುೈಯ್ಯೂ ಅಂದವಾಗಿದೆ. ಲೇಖಕರು 'ಕನ್ನಡ ಭಾಷಾಭಂಡಾರಕ್ಕೆ ಹೊಸ ಮಾದರಿ ಯಾಗುವಂತೆ' ಮೂಲಕ್ಕೆ ವ್ಯಾಖ್ಯಾನ ಬರೆದಿರುವದಾಗಿ ಹೇಳಿ ಕೊಳ್ಳುತ್ತಾರೆ. ಹಾಗೆಯೇ ತಾವು ಶಾಂಕರಸಂಪ್ರದಾಯದ ಹೆಜ್ಜೆಯನ್ನು ಹಿಡಿದಿರುವದಾಗಿ ಒಪ್ಪಿಕೊಂಡಿದ್ದಾರೆ. ಆದರೂ ಜನರು ಇಂಥದೊಂದು ಪಂಥಕ್ಕೇ ಸೇರಿದ ಅರ್ಥವನ್ನೇ ಗ್ರಹಿಸ ಬೇಕೆಂಬ ಸಂಕುಚಿತಬುದ್ಧಿಗೆ ಗ್ರಂಥಕಾರರು ಒಳಗಾಗಿಲ್ಲ. ಹೀಗೆ ಯಾವದೇ ಒಂದು ಪಂಥದ ಹೆಜ್ಜೆಯನ್ನೇ ತುಳಿದಿದ್ದಾ ದರೂ, ಗ್ರಂಥಕಾರನಲ್ಲಿ ನಿಜವಾದ ತನ್ನತನವೊಂದಿದ್ದರೆ ಅದು ಅವನ ಬರಹದಲ್ಲಿ ಒಡಮೂಡದಿರಲಾರದು. ಆದರೂ ಗ್ರಂ

ಯಂಥ ಗ್ರಂಥಗಳ ವಿಷಯುಗಳಲ್ಲಿ 'ಇದೀಗ ನನ್ನ ಮತ' ವೆಂದೆ ನ್ನುವದು ಧ್ಯಾರ್ಷ್ಟ್ಯವೆಂದು ಗ್ರಂಥಕರ್ತರು ತಿಳಿಯುತ್ತಿರ ಬಹುದು. ಬರೆಹಗಾರನ ಹಾಗೆ, ಓದುಗರಲ್ಲಿಯೂ ಅಂಥ ತನ್ನ ತನವೊಂದಿರುವಾಗ, ಅವರೂ ವ್ಯಾಖ್ಯಾನವು ಯಾವ ಪಂಥಕ್ಕೆ ಸೇರಿದ್ದರೂ, ಒಳ್ಳೆಯದಿದ್ದುದನ್ನು ಮೆಚ್ಚಲೇಬೇಕು.

ಪುಸ್ತಕವು ಭಗವದ್ಗೀತಾಭಕ್ತರಿಗೆ ಎಲ್ಲ ರೀತಿಯಿಂದಲೂ ಒಪ್ಪುವಂತಾಗಿರುವದು. ಪಾರಾಯಣಕ್ಕಾಗಲೀ ಹೆಚ್ಚಿನ ಅಭ್ಯಾಸಕ್ಕಾಗಲೀ ಇದು ತಕ್ಕುದಾಗಿದೆಯೆನ್ನಬಹುದು. ವ್ಯಾಖ್ಯಾನವು ಸುಲಲಿತವಾದ ಕನ್ನಡದಲ್ಲಿ ಬರೆದುದಾಗಿದೆ. ಪ್ರತಿಯೊಂದು ಶ್ಲೋಕಕ್ಕೂ ಸಂಬಂಧವುಂಟಾಗುವಂತೆ ನಡುವೆ ಅರ್ಥವಿವರಣೆಗಾಗಿ ಕೊಂಡಿಗಳನ್ನಿಟ್ಟಿದ್ದಾರೆ. ಹಾಗೆಯೇ ಅವಯವಾರ್ಥಗಳೂ ಅವತರಣಿಕೆಗಳೂ ಟಿಪ್ಪಣಿಗಳೂ ಪಾಠಾಂತರಗಳೂ ಅತ್ಯುಪಯುಕ್ತವಾಗಿದೆ.

ಮೂಲ ಶ್ಲೋಕಗಳು ದೇವನಾಗರಿಯಲ್ಲಿದ್ದಿದ್ದರೆ ಹೆಚ್ಚು ಅಂದವಾಗಬಹುದಿತ್ತು. ಕನ್ನಡ ಅಚ್ಚು ಅಂದವಾಗಿದ್ದರೂ, ಸಂಸ್ಕೃತ ಬರೆಹಕ್ಕೆ— ಆ ಭಾಷೆಯ ಇಮ್ಮಡಿ ಮುಮ್ಮಡಿ ಒತ್ತುಗಳ ಮೂಲಕ— ಅಷ್ಟೊಂದು ಒಪ್ಪುವದಿಲ್ಲ. ಆದರೆ ಇದೇನೂ ತಪ್ಪುಯೆನ್ನಲಾರೆವು.

ಒಟ್ಟಾರೆ, ಪುಸ್ತಕವು ಸರ್ವಾಂಗಸುಂದರವಾಗಿದೆ. ಮೇಲೆ ಬೆಲೆಯೂ ಕಡಿಮೆ. ಪುಸ್ತಕವು ಕನ್ನಡಿಗರ ಆದರಕ್ಕೆ ಪಾತ್ರವಾಗಿ, 'ಬೆಳದಿಂಗಳಂತೆ ಹೃದಯುವನ್ನು ಅರಳಿಸಿ ಆನಂದಗೊಳಿಸುವಂತೆ ಅವರಿಗೆ ಮುದ್ದುಬೀರಲಿ' ಎಂದೇ ನಮ್ಮದೂ ಕೋರಿಕೆ.

**ಭಾರತದ ಸವಿಕಟ್ಟು:—** ಲೇಖಕರು ಶ್ರೀ ಹೊಸಕೆರೆ ಶ್ರೀನಿವಾಸಮೂರ್ತಿಗಳು, ಬೆಂಗಳೂರು.

ಶ್ರೀ ಚಿದಂಬರಯ್ಯನವರ ಮಕ್ಕಳಾದ ಇವರು ತಂದೆಯವರ ಸರಳ ಮನೋಹರ ಶೈಲಿಯನ್ನೇ ಸಾಧಿಸಿದ್ದಾರೆ. ಮಧ್ಯಕಾಲೀನ ಸಂಸ್ಕೃತದ ಅನಂತಕವಿಗಳೆಂಬವರು ಬರೆದ ಭಾರತವನ್ನು ಕನ್ನಡಕ್ಕೆ ರೂಪಾಂತರಿಸಿದ್ದಾರೆ. ಸಂಸ್ಕೃತದ ಪಾಂಡಿತ್ಯದ ಶೈಲಿಯು ಇಲ್ಲಿ ಕನ್ನಡದ ರಸಿಕತೆಯ ಶೈಲಿಯಾಗಿ ಪರಿಣಮಿಸಿದೆ. ಎಲ್ಲರೂ ಓದಬೇಕು.

**Yogamimansa:—** ಸಂಪಾದಕರು ಕುವಲಯಾನಂದರು, ಕೈವಲ್ಯಧಾಮ, ಲೋಣಾವಳ. (ತ್ರೈಮಾಸಿಕ).

ಈ ಪತ್ರಿಕೆಯು ಅವಿಶ್ರಾಂತವಾಗಿ ಹಟಯೋಗವನ್ನು ಆಧುನಿಕ ಶಾಸ್ತ್ರೀಯ ದೃಷ್ಟ್ಯಾ ಪ್ರಯೋಗಿಸಿ ಜಗತ್ತಿಗೆ ಅದರ ಗುಣಗಳನ್ನು ಅರುಹುತ್ತಲಿದೆ. ಅಮೇರಿಕಾ, ಜರ್ಮನಿ ಮೊದಲಾದ ಪರದೇಶದ ಪಂಡಿತರಿಗೆ ಮಾನ್ಯವಾಗಿದೆಯೆಂದಮೇಲೆ ಬೇರೆ ಮಾತೇಕೆ? ಜಿಜ್ಞಾಸುಗಳು ಇದನ್ನು ತರಿಸಿ ಹಿತಹೊಂದಬೇಕು.

# ಜನಪದಸಾಹಿತ್ಯ

## ಕಂತಪೆತ್ತಿನ ಹಾಡು

ಸಂಗ್ರಾಹಕರು:— ಅಪ್ಪಯಾಚಾರ್ಯ, ಶಿಕ್ಷಿ, ದಡ್ಡೆರ ದಡ್ಡಿ, ಮುಂಡರಗಿ

ಕಂತಹೋರಿಗೆ, ಹೋಗಿ ಯಂಥಾ ಪಾಶಕೆ ಬಿದ್ದೆ ನಿಂತೆನಂದರೆ ನೆಲಯಿಲ್ಲದಾಯ್ತು ॥ಪ॥

ಹಾರೋಗೇರಿಯಿಂದ ಆರು ಮಂದಿ, ನಾವು ಹೋರಿಯಲ ತರಲಿಕ್ಕೆ ಹೋದೆವಣ್ಣಾ ॥ ಹೋರಿಯ ನೋಡಲು, ಮೈ ಉಬ್ಬೇರಿತು ಘಳಿಗಾಗ। ಯಾರ ಮಾತು ಕೇಳಲಿಲ್ಲೊ ಜಾರಿ ಬಿದ್ದಾಂಗಯ್ತುಪ್ಪಾ ॥೧॥

ಭಾರಿಯ ಗಂಟಪ್ಪಾ, ಹೋರಿಯ ಹಿಡಕೊಂಡ, ಊರಾಗ ಜನ ನನಗೆ ಮಾತಾಡಿತು॥ ಮೂವತ್ತೊರಾ ಕೊಟ್ಟು, ಮೂಡಲ ಹೋರಿಯ ತಂದೆ ಬ್ಯಾಡಂದ್ರು ಕೇಳಲಿಲ್ಲೊ ಹಾಡಹಗಣದ ಮಾತು ॥ ಪಡಿ ಜೋಳ ಮನ್ಯಾಗಯಿಲ್ಲಾ ಬಡಿವಾರದವನೆಂದು, ಕೂಡಿದಲ್ಲೆ ಜನ ನನಗೆ ಕುಂದಿಟ್ಟಿತು ॥ ೨ ॥

ಉಗಾದಿ ಮುಂದಿತ್ತು, ಯಾಗಪ್ಪನ ಹಿಡಕೊಂಡು ಹ್ಯಾಗ ಅದಿರಂತ ಬಂದಾರಣಾ ॥ ಯಂಟ ಮಂದಿ ಬಂದ ಕುಂತ್ರೊ ಲಂಗಟ ಹರಿದಾಂಗಾಯ್ತುಪ್ಪಾ, ಸಂಗಟಿಯು ಪಡಿಪಡಿ ತಿಂದಾರಣ್ಣಾ । ಗಂಟಗಡ ಕೊಟ್ಟೆನಪ್ಪಾ ಸೊಂಟ ಮುರೆ ಹೊಡಿತಿದ್ರೊ। ಉಂಟಮಾಡಿದಾ ಹಾರೋಗೇರಿ ಬಂಟ ಕಲ್ಲೇಶ್ವರ ॥೩॥

# ಭಾರತ ಸ್ವಾತಂತ್ರ್ಯ—ಸಂಗ್ರಾಮ

## ಸತ್ಯಾಗ್ರಹದ ಸುದ್ದಿ

(ಕೆಲವು ಒಡೆದು ಕಾಣುವ ಸಂಗತಿಗಳು)

[ಕರ್ನಾಟಕದಲ್ಲಿ, ಕೈದು, ಶಿಕ್ಷೆ, ಕಾಯದೇಭಂಗಗಳಲ್ಲಿ ಒಂದಿಲ್ಲೊಂದು ಸಂಗತಿ ಒದಗದ ದಿನವೇ ಇಲ್ಲವೆಂದು ಹೇಳಬಹುದು. ಆಗು ರುವದರಿಂದ, ಸ್ಥಾನಸಂಕೋಚದ ಮೂಲಕ ಕೇವಲ ಮುಖ್ಯ ಸಂಗತಿಗಳಲ್ಲಿ ಕೆಲವನ್ನೇ ಆರಿಸಿ ಕೊಡಬೇಕಾಗಿದೆ. —ಸಂ ಜ. ಕ.]

ಮಾರ್ಚ ೪.— ಗಾಂಧೀಜಿಯವರು ವೈಸರಾಯರಿಗೆ ಬರೆದ ಮೊದಲನೇ ಪತ್ರ, ಶ್ರೀ. ರೇಜಿನಾಲ್ಡ ರೆನಾಲ್ಡ್ಸರಿಂದ ಮುಟ್ಟಿಸಲಾಯಿತು.

ಮಾರ್ಚ ೬ — ಭಾಷಣ ಬಂದಿಯ ಕಟ್ಟಳೆಯನ್ನು ಮುರಿದೊಗೆದದ್ದಕ್ಕೆ ಶ್ರೀ. ಸರದಾರ ವಲ್ಲಭಭಾಯಿಯವರಿಗೆ ಮೂರು ತಿಂಗಳ ಸ್ವರಾಜ್ಯಾಶ್ರಮವಾಸ.

ಮಾರ್ಚ ೬ — ಗಾಂಧೀಜಿಯವರ ಪತ್ರಕ್ಕೆ ವ್ಹಾಯಸರಾಯರ ಉತ್ತರ.

ಮಾರ್ಚ ೧೨ — ಮಹಾತ್ಮಾಜಿಯವರು ಸರಕಾರದ ತಿರುಗುಪ್ಪ ಮುಟ್ಟಿಸುವದಕ್ಕಾಗಿ ಸಂಕ ಸರಮನಿ ಕಟ್ಟಿದ್ದು. ದಾಂಡಿಯ ಕಡೆಗೆ ಪ್ರಯಾಣ

ಮಾರ್ಚ ೧೩ — ಶ್ರೀ. ಸೇನಗುಪ್ತರು, ಬರ್ಮಾ ಸರಕಾರದವರು ಹೊರಡಿಸಿದ ಹುಕುಮಿನ ಮೇರೆಗೆ ಹಿಡಿಯಲ್ಪಟ್ಟರು.

ಮಾರ್ಚ ೧೬ — ಮಹಾತ್ಮಾಜಿಯವರು ಹಿಂದುಸ್ಥಾನದಲ್ಲೆಲ್ಲಿಯೂ ಸಾರ್ವತ್ರಿಕ ಸತ್ಯಾಗ್ರಹವನ್ನು ಅಲ್ಲಲ್ಲಿಯ ಮುಖಂಡರು ಆರಂಭಿಸಬಹುದೆಂದು ಅಪ್ಪಣೆಯಿತ್ತರು.

ಮಾರ್ಚ ೨೧ — ಕಾಂಗ್ರೆಸ್ಸದ ಕಾರ್ಯಕಾರೀ ಮಂಡಲವು, ಆಯಾ ಪ್ರಾಂತಿಕ ಕಾಂಗ್ರೆಸ ಕಮಿಟಿಗಳಿಗೆ ಸತ್ಯಾಗ್ರಹವನ್ನಾರಂಭಿಸಲು ಅನುಮತಿಯನ್ನಿತ್ತಿತು.

ಮಾರ್ಚ ೨೨ — ಶ್ರೀ. ಸೇನಗುಪ್ತರಿಗೆ ೧೦ ದಿನದ ಸಾದಾ ಶಿಕ್ಷೆ.

ಎಪ್ರಿಲ ೨ — ಶ್ರೀ. ಪಂಡಿತ ಮೋತೀಲಾಲ ನೆಹರು ಅವರು ತಮ್ಮ ಆನಂದ ಭವನವನ್ನು ಸ್ವರಾಜ್ಯಭವನವನ್ನಾಗಿ, ದೇಶಕ್ಕೆ ದಾನವಿತ್ತರು.

ಎಪ್ರಿಲ — ೬ ಗಾಂಧೀಜಿಯವರು ಉಪ್ಪಿನ ಕಟ್ಟಳೆಯನ್ನು ದಾಂಡಿಯಲ್ಲಿ ಮುರಿದರು. ಹಾಗೆಯೇ ಬೇರೆ ಬೇರೆ ಪ್ರಾಂತಗಳಲ್ಲೂ ಮುರಿಯಲ್ಪಟ್ಟಿತು. ಮಹಾತ್ಮರ ಮೂರನೆಯ ಮಗನಾದ ಶ್ರೀ. ರಾಮದಾಸ ಗಾಂಧಿಯವರು ಸೇಟ ಮಣಿಲಾಲ ಕೋಠಾರಿ ಮೊದಲಾದವರೂ ಹಿಡಿಯಲ್ಪಟ್ಟರು.

ಎಪ್ರಿಲ ೬ — ಶ್ರೀ. ನರಿಮನ್, ಹಾಗು ದರ್ಬಾರ ಗೋಪಾಲದಾಸ ಮೊದಲಾದವರಿಗೆ ಕೈದು ಹಾಗು ಶಿಕ್ಷೆ.

ದೇ. ಭ. ಗಂಗಾಧರರಾಯರಿಗೆ ೧ ತಿಂಗಳ ಕಾರಾಗ್ರಹವಾಸ (ಮೊದಲನೆ ಸಾರೆ) ಬೆಳಗಾಂವಿಯಲ್ಲಿ

ಎಪ್ರಿಲ ೮ — ಮುಂಬೈ ಕಾಂಗ್ರೆಸ ಕಚೇರಿಯನ್ನು ಪೋಲೀಸರು ಝಡತಿ ಮಾಡಿದರು. ಕೋಶಾಧ್ಯಕ್ಷರಾದ ಜಮ್ನಾಲಾಲ ಬಜಾಜರ ಕೈದು. ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು ಉಪ್ಪು ಮಾರಿ ಮೂವತ್ತು ಸಾವಿರ ಮೇಲೆ ಹಣಕೂಡಿಸಿದರು.

ಎಪ್ರಿಲ ೯ — ಸತ್ಯಾಗ್ರಹಕ್ಕಾಗಿ, ಗಾಂಧೀಜೀಯವರ ಕಿರಿಮಗನಾದ ದೇವಿದಾಸ ಮೊದಲಾದ ಮುಖಂಡರು ದಿಲ್ಲಿಯಲ್ಲಿ ಹಿಡಿಯಲ್ಪಟ್ಟರು.

ಎಪ್ರಿಲ ೧೨ — ಶ್ರೀ. ಸೇನಗುಪ್ತರೇ ಮೊದಲಾದವರು ರಾಜದ್ರೋಹಾತ್ಮಕವೆಂದು ಜಪ್ತ ಆದ ಪುಸ್ತಕಗಳನ್ನು ಕೊಟುಕೊಟನಲ್ಲಿ ಓದಿ ತೋರಿದರು. ಆ ಕಾಲದಲ್ಲಿ ಪೋಲೀಸರ ಪುಂಡಾಟಿಕೆ.

ಎಪ್ರಿಲ ೧೩ — ಜಾಲಿಯನವಾಲಾ ಬಾಗದ ಸ್ಮರಣದಿನ ದೇಶದಲ್ಲೆಲ್ಲ ಆಚರಿಸಲ್ಪಟ್ಟಿತು. ಮದ್ರಾಸದಲ್ಲಿ ಉಪ್ಪಿನ ಕಟ್ಟಳೆ ಕಿತ್ತುಬಿತ್ತು. ಶ್ರೀ. ಪ್ರಕಾಶಂರನ್ನು ಹಿಡಿದುಬಿಟ್ಟರು.

ಎಪ್ರಿಲ ೧೪ — ಶ್ರೀ. ಪಂಡಿತ ಜವಾಹೇರಲಾಲ ನೇಹರು ಅವರು ಹಿಡಿಯಲ್ಪಟ್ಟು ಅವರಿಗೆ ೬ ತಿಂಗಳು.

ಎಪ್ರಿಲ ೧೫ ಮತ್ತು ೧೬ — ಕಾಂಗ್ರೆಸದ ಅಧ್ಯಕ್ಷರಾದ, ಪಂಡಿತ ಜವಾಹಿರಲಾಲರಿಗೆ ಶಿಕ್ಷೆಯಾದ ನಿಮಿತ್ತ ದೇಶದಲ್ಲೆಲ್ಲ ಹರತಾಳ. ಕಲಕತ್ತೆಯಲ್ಲಿ ದಂಗೆ. ಪೋಲೀಸರ ಉರಾಟಿಕೆ. ಕರಾಚಿಯಲ್ಲಿ ಮುಖಂಡರ ಕೈದು. ಪೋಲೀಸರ ಹಿಡಿಮದ್ದು. ಶ್ರೀ. ಜಯರಾಮದಾಸ ದೌಲತರಾಮ (ಸಿಂಧದ ಹಿರೇಹುದ್ದರು) ಅವರಿಗೆ ಗುಂಡಿನ ಘಾಯ.

ಬಂದರದಲ್ಲಿ ಸಂಪು.

ಬಾಗಲಕೋಟೆಯಲ್ಲಿ ಮಂಗಳವೇಢೆ ಶ್ರೀನಿವಾಸರಾಯರಿಗೆ ೪ ತಿಂಗಳ ಕಾರಾಗೃಹವಾಸ.

ಶ್ರೀ. ಪಂಡಿತ ಮೋತಿಲಾಲ ನೆಹರು ಅವರು ಮಗನ ಪಟ್ಟಕ್ಕೆ ಬಂದರು—ಎಂದರೆ ಶ್ರೀ. ಜವಾಹಿರಲಾಲ ನೇಹರು ಅವರು ಕಾರಾಗ್ರಹಕ್ಕೆ ಹೋದದ್ದರಿಂದ ಕಾಂಗ್ರೆಸದ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿದರು. ಗಾಂಧೀಜಿಯವರು ಸರಕಾರದ ಅನ್ಯಾಯದ ಧೋರಣವನ್ನು ಖಂಡಿಸಿದರು.

ಎಪ್ರಿಲ ೧೭ — ದಿವಾಕರರಿಗೆ ಧಾರವಾಡದಲ್ಲಿ ೭ ತಿಂಗಳ ಶಿಕ್ಷೆ ಮಂಗಳೂರಲ್ಲಿ ಉಮೇಶರಾಯರೇ ಮೊದಲಾದವರಿಗೆ ದಸ್ತಗೀರ.

ಎಪ್ರಿಲ ೧೯ — ಚಿತಾಗಾಂಗದಲ್ಲಿ ಸರಕಾರದ ಆಯುಧ ಭಾಂಡಾಗಾರವು ಗುಪ್ತಜನರಿಂದ ಲೂಟಿಯಾಯಿತು. ೭ ಜನರ ವಧೆ. ತಂತಿ, ಹಾಗು ಹಳಿಗಳು ಕಿತ್ತಿಯೊಗೆಯಲ್ಪಟ್ಟವು.

ಬಂಗಾಲದಲ್ಲಿ ದಬ್ಬಾಳಿಕೆಯ ಪ್ರಾರಂಭ. ಪಾಟ್ನಾದಲ್ಲಿ ಪೋಲೀಸರು ಸತ್ಯಾಗ್ರಹಿಗಳನ್ನು ಹಿಂಸಿಸಿದರು. ಬಂಗಾಲದ ಪ್ರಮುಖ ಮುಖಂಡರ ಸೆರೆ.

ಎಪ್ರಿಲ ೨೦ — ಅಂಕೋಲೆಯಲ್ಲಿ ಸಾಮೂಹಿಕ ಕಾಯಿದೆಭಂಗ. ಊರಿಗೆ ಊರೇ ಹೆಂಗಸರು ಗಂಡಸರು ಮುದುಕರು ೬—೭ ಸಾವಿರ ಜನ ಸಮುದ್ರದಲ್ಲಿ ಉಪ್ಪುಮಾಡಿದರು.

ಎಪ್ರಿಲ ೨೧ — ಮದ್ರಾಸದಲ್ಲಿ ಮುಂದಾಳುಗಳ ಸೆರೆ.

ಎಪ್ರಿಲ ೨೨ — ಕಲಕತ್ತೆಯಲ್ಲಿ, ಸ್ತ್ರೀಯರು ಕಾಯಿದೆಭಂಗಮಾಡಿ ಸಾರ್ವಜನಿಕ ಮೆರವಣಿಗೆ ತೆಗೆದರು.

ಎಪ್ರಿಲ ೨೩ — ಪೇಶಾವರದಲ್ಲಿ ಮುಂದಾಳುಗಳ ಕೈದು. ಸಾವಿರಾರು ಜನರ ಶಾಂತತಾಪೂರ್ಣವಾದ ಮೆರವಣಿಗೆಗಳು. ಪೋಲೀಸರ ಅನ್ಯಾಯದ ಅಕೃತ್ಯಗಳು. ಬ್ರಿಟಿಷ ಸೋಲ್ಜರರ ಮದಾಂಧತನ. ಅವರಲ್ಲಿ ಮೂವರ ಸಾವು ಕೆಲವರಿಗೆ ಗಾಯ. ಆಯುಧಗಳಿಂದ ತುಂಬಿದ ಮೋಟಾರುಗಳು ಸುಟ್ಟವು. ನೆರೆದ ಜನರಲ್ಲಿ ಅಸಂಖ್ಯ ಜನರ ಸಾವು. ಹೆಣಗಳ ರಾಶಿರಾಶಿ. ಮಿತಿಯಿಲ್ಲದಷ್ಟು ಗಾಯುಗಳು. ಜನರು ಹಿಂಜರಿಯದೆ: ಪೂರ್ಣಶಾಂತತೆಯಿಂದ ಗುಂಡಿಗೆ ಎದೆಕೊಟ್ಟು ಸಾವನ್ನಪ್ಪಿಕೊಂಡರು. ಸ್ತ್ರೀಯರ ಅಪೂರ್ವ ಧೈರ್ಯ.

ಮಹಾತ್ಮರ ಶಿಷ್ಯರಾದ ಶ್ರೀ. ಮಹಾದೇವ ದೇಸಾಯಿಯವರಿಗೆ ಉಪ್ಪಿನ ಕಟ್ಟಳೆ ಮುರಿದದ್ದಕ್ಕಾಗಿ ಸೆರೆ.

ಎಪ್ರಿಲ ೨೫ — ಶ್ರೀ. ವಿಠಲಭಾಯಿ ಪಟೇಲರು (ಭಾರತ ನ್ಯಾಯ ವಿಧಾಯಕ ಮಹಾ ಮಂಡಲದ ಅಧ್ಯಕ್ಷರು) ಸರಕಾರದಲ್ಲಿದ್ದ ತಮ್ಮ ಅಧ್ಯಕ್ಷಸ್ಥಾನಕ್ಕೆ ತಿಲಾಂಜಲಿಯನಿತ್ತರು.

ಎಪ್ರಿಲ ೨೬ — ಕಾಂಗ್ರೆಸದ ಕಾರ್ಯಭಾರಿಗಳಾದ ಶ್ರೀ. ಶ್ರೀ ಪ್ರಕಾಶರಿಗೆ ೬ ತಿಂಗಳ ಶಿಕ್ಷೆ.

ಮಹಾತ್ಮರ ಧರಸಾಣದಲ್ಲಿಯ ಸರಕಾರೀ ಉಪ್ಪಿನ ಭಾಂಡಾರಗಳನ್ನು ಹಿಡಿದುಕೊಳ್ಳುವದಾಗಿ ಪ್ರಸಿದ್ಧ ಪಡಿಸಿದರು.

ಎಪ್ರಿಲ ೨೭ — ೧೯೧೦ ರ ಪ್ರೆಸಆಕ್ಟ (ಪತ್ರಿಕೆಗಳ ಪ್ರಕಾಶಕರು, ಸಂಪಾದಕರು, ಮುದ್ರಕರಿಗೆ ಮುಗದಾಣ)ವನ್ನು ತಿರುಗಿ ಜಾರಿಯಲ್ಲಿ ತರಲ್ಪಟ್ಟಿತು.

ಎಪ್ರಿಲ ೨೮ — ಮದ್ರಾಸದಲ್ಲಿ ಸಭೆಯಲ್ಲಿ ನೆರೆದ ಜನರಮೇಲೆ ಪೋಲೀಸರ ರಾಕ್ಷಸೀಕೃತ್ಯ, ಮೂವರಿಗೆ ಸಾವು. ಅನೇಕರಿಗೆ ಗಾಯ.

ಎಪ್ರಿಲ ೨೯ — ಅಂಕೋಲೆಯ ಸುತ್ತು ಮುತ್ತಲಿನ ೨೫ ಹಳ್ಳಿಗಳ ಜನರು—ಮುಖ್ಯವಾಗಿ ನಾಡವರ ಹೆಣ್ಣು ಮಕ್ಕಳು—ಉಪ್ಪಿನ ಸಂತೆಯನ್ನು ಮೊದಲನೇ ಸಲ ನೆರೆಸಿದ್ದು.

ಮೇ ೩ — ಕಾರ್ನಾಡು ಸದಾಶಿವರಾಯರಿಗೆ ೧೫ ತಿಂಗಳ ಕಾರಾಗೃಹವಾಸ

ಮೇ ೫ — ಅಜಾತ ಶತ್ರುವನ್ನು ಮಧ್ಯರಾತ್ರಿಯಲ್ಲಿ ಕಳ್ಳರಂತೆ ಬಂದು ಹಿಡಿದುಕೊಂಡು ಹೋಗಿ ಯರವಡೆಯಲ್ಲಿ ಒಯ್ದಿಟ್ಟರು.

ಮೇ ೯ — ಗಂಗಾಧರ ರಾಯರಿಗೆ ರತ್ನಾಗಿರಿಯಲ್ಲಿ ೧ ತಾಸು ಬಿಟ್ಟು ಮತ್ತೆ ೫ ತಿಂಗಳ ಶಿಕ್ಷೆಕೊಟ್ಟರು.

ಮೇ ೧೨ — ಉಪ್ಪಿನ ವಖಾರಕ್ಕೆ ಏರಿಹೋದ ಗಾಂಧಿಯವರ ಸ್ಥಳ ವಹಿಸಿದ ಅಬಾಸ ತಯ್ಯಬಜಿಯವರನ್ನೂ ೫೯ ಸ್ವಯಂ ಸೇವಕರನ್ನೂ ಹಿಡಿದರು. ಸರೋಜಿನಿದೇವಿಯವರು ಇನ್ನು ಸೇನಾಪತಿಗಳು. ಮಹಾರಾಷ್ಟ್ರದ ಶಿರೋಡೆಯಲ್ಲಿ ೯೦ ಜನರನ್ನು ಹಿಡಿದರು.

ಕಡೆಗೊಮ್ಮೆ ಅಯರ್ವಿನ ದೊರೆಗಳು ಬಂಡೀಗಾಲು ಪರಿಷತ್ತು, ಅಕ್ಟೋಬರ ೨೧ ಕ್ಕೆ ಕೂಡಿಯೇ ಕೂಡುವದೆಂದು ಡಂಗುರ ಸಾರಿದ್ದಾರೆ.



ಮುದ್ರಕರು—ಖಂ. ರಾ. ಬಿಸೆ, ಕ. ಪ್ರಿಂ. ವರ್ಕ್ಸ್, ಧಾರವಾಡ. ೮೫೦೫,೩೦,೧೨೦೦

# ಜಯಕರ್ನಾಟಕ

ಸಂಪುಟ ೮; ಸಂಚಿಕೆ ೮. ಜ್ಯೇಷ್ಠ ಪೌರ್ಣಿಮೆ; ಜೂನ ೧೯೩೦

ಸಂಸ್ಥಾಪಕರು:— ಶ್ರೀ. ಆಲೂರ ವೆಂಕಟರಾಯರು] [ಸಂಪಾದಕರು:— ಶ್ರೀ. ಬೇಂದ್ರೆ ದತ್ತರಾಯರು

## ಮುಖ್ಯ ವಿಷಯಗಳು

ವೀರ ಸತ್ಯಾಗ್ರಹಿ



# ಮಹಾರಾಣಾ ಪ್ರತಾಪಸಿಂಹ

(ಕತ್ತರಿಯ ಕೈ ಕೆಲಸ)

ಶಿಲ್ಪಿ:- ಶ್ರೀ ಶಿವರಾಮ, ಶಾಸ್ತ್ರಿ; ಕೊಪ್ಪಳ.

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥

तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

ಸಂಪುಟ ೮ | ಪ್ರಮೋದ ಸಂವತ್ಸರ, ಕಾರಹುಣ್ಣಿವೆ
ಚಾಲುಕ್ಯವಿಕ್ರಮ ವರ್ಷ ೮೫೫ | ಸಂಚಿಕೆ ೮

# ಗ್ರೀಕರಲ್ಲಿ ಸ್ವಾತಂತ್ರ್ಯದ ಕಲ್ಪನೆಯ ಹುಟ್ಟು

ಲೇಖಕರು:— ಶ್ರೀ. ನಾರಾಯಣಶರ್ಮಾ, ಬೆಳಗಾವಿ.

ಹಿಂದೂ ದೇಶದೊಳಗಿನ ಸ್ವಾತಂತ್ರ್ಯದ ಬಗ್ಗೆ ಒಂದೇ ಒಂದು ಕೋಲಾಹಲ ನಡೆದಿರಲು, ಬುನಾದಿ ಕಾಲದ ಗ್ರೀಕರ ವಿಚಾರಗಳನ್ನು ತೆಗೆದುಕೊಂಡು ನಮಗೇನು ಮಾಡಬೇಕಾಗಿದೆಯೆಂದು ಅನೇಕರಿಗೆ ಉಪೇಕ್ಷೆಯಾಗಬಹುದು; ಆದರೆ ಹಿಂದೂಗಳಾದ ನಮಗೆ ಇನ್ನೂ ಪ್ರತಿಯೊಂದು ಪಾಶ್ಚಾತ್ಯ ಜನಾಂಗದವರಿಂದ ಬೇಕಾದಷ್ಟು ಕಲಿಯಬೇಕಾಗಿದೆ; ಪಾಶ್ಚಾತ್ಯ ಜನಾಂಗದವರೆಂದೊಡನೆ, ಒಂದೇ ಪಟ್ಟಿಗೆ ಅಪಾರ್ಥಮಾಡಿಕೊಳ್ಳಬೇಡಿ. ಪಾಶ್ಚಾತ್ಯ ಜನಾಂಗದವರೆಂಬೀ ಅಭಿಧಾನದಿಂದ ಭೌತಿಕಶಾಸ್ತ್ರ ಪ್ರವೀಣರಾಗಿ ಮೆರೆಯುವಂಥ ಪಾಶ್ಚಾತ್ಯರಿಗೆ ಗುರುತುಕಂಡರಿಯದವರೆಂದು ನಾವೀಗ ತಿಳಿಯುತ್ತಿದ್ದರೂ, ಒಂದಾನೊಂದು ಕಾಲಕ್ಕೆ ಅವರೂ ಇದೇ ಆರ್ಯಾವರ್ತದಲ್ಲಿದ್ದು ಇಲ್ಲಿಂದಲೇ ಅತ್ತ ಕಡೆಗೆ ಹೋಗಿರುವರೆಂಬುದನ್ನು ನಾವು ಮರೆಯಲಾಗದು; ಹೀಗೆ ಬುನಾದಿ ಕಾಲದ ಬಾದರಾಯಣ ಸಂಬಂಧವನ್ನು ಹಚ್ಚಿಕೊಂಡರೆ, ಪಾಶ್ಚಾತ್ಯ ಜನಾಂಗದವರೂ ನಮ್ಮ ಅಣ್ಣತಮ್ಮಂದಿರೇ ಆಗುತ್ತಾರೆ; ಇನ್ನು, ಒಂದು ವೇಳೆ ನಮ್ಮ ಅಣ್ಣತಮ್ಮಂದಿರಲ್ಲವೆಂದರೂ, ನಾವು ಅವರಲ್ಲಿಯ ಗುಣಗಳನ್ನು ಗ್ರಹಿಸಬಾರದೆಂಬರ್ಥವಾಗುವದಿಲ್ಲ; ನಮ್ಮ ಪಾಶ್ಚಾತ್ಯ ಬಂಧುಗಳು ಆಧ್ಯಾತ್ಮಜ್ಞಾನವೊಂದನ್ನು ಬಿಟ್ಟು, ಮಿಕ್ಕ ಎಲ್ಲ ತೆರನಾದ ಭೌತಿಕ ಜ್ಞಾನಗಳಲ್ಲಿ ಮುಂದುವರಿದವರಾದ್ದರಿಂದ ಈ ವಿಷಯದಲ್ಲಿ ನಾವು ಅವರಿಂದ ಕಲಿತುಕೊಳ್ಳದೆ ಬೇರೆ ಗತಿಯಿಲ್ಲ;

ಪ್ರಾಚೀನ ಕಾಲದ ಇತಿಹಾಸದೊಳಗೆ, ಗ್ರೀಸ ದೇಶದ ಇತಿಹಾಸವು; ಅದರೊಳಗೂ ಮತ್ತೆ, ಅಥೆನ್ಸದ ಪ್ರಜಾಧಿಪತ್ಯದ ಚರಿತ್ರೆಯೆಂದರೆ ತೀರಿತು; ಅದರ ಭಾರವಣೆಯು ಅಷ್ಟಿಷ್ಟೆಂದು ಹೇಳಲಳವಲ್ಲ; ಈ ಹೊತ್ತು ಇಡೀ ಯುರೋಪಖಂಡದ ಇತಿಹಾಸದೊಳಗೆ ಗ್ರೀಸಕ್ಕೆ ದೊರೆಯುವ ಮಾನವು ಅದೊಂದರಿಂದಲೇ! ಮತ್ತು ಅದು ಬಹು ಮಟ್ಟಿಗೆ ನಿಜವೂ ಇದೆ; ಏಕೆಂದರೆ, ಆ ಅರ್ವಾಚೀನ ಕಾಲದಲ್ಲಿ ನಮಗೆ ದೃಗ್ಗೋಚರವಾಗುವ ಪಾಶ್ಚಾತ್ಯ ಸುಧಾರಣೆ, ಅವರ ಶಾಸ್ತ್ರೀಯ ಬೆಳವಳಿಗೆ;

ಕಲಾಕೌಶಲ್ಯ, ತತ್ವದರ್ಶನ ಹಾಗೂ ಧರ್ಮವಿಚಾರದ ಚಿಕಿತ್ಸೆ, ಅವುಗಳಿಗೆಲ್ಲ ಪ್ರಾಚೀನ ಗ್ರೀಸದೇಶವೇ ಮಾತೃಸ್ಥಾನವಾಗಿತ್ತು; ರಾಜಕೀಯ ವಿಚಾರದ ಬೆಳವಣಿಗೆಯನ್ನು ನೋಡಿದರಂತೂ, ಗ್ರೀಸ ದೇಶದ ಇತಿಹಾಸವು ಹಿಂದೂ ದೇಶದ ಇತಿಹಾಸಕ್ಕಿಂತಲೂ ಮಹತ್ವದ್ದಾಗಿದೆ; ಪ್ರಜಾಧಿಪತ್ಯದ ಜನಕರೆಂದು ಗ್ರೀಕರಿಗೆ ಪ್ರತಿಷ್ಠೆಕೊಟ್ಟುಕೊಳ್ಳಲಿಕ್ಕೆ ದಾರಿಯಿರದಿದ್ದರೂ, ಪ್ರಜಾಧಿಪತ್ಯದ ಕಲ್ಪನೆಯನ್ನು ಗ್ರೀಕರೆಷ್ಟು ಬೆಳೆಸಿ ಹಬ್ಬಿಸಿದರೋ ಅಷ್ಟು ಯಾರೂ ಹಬ್ಬಿಸಲಿಲ್ಲವೆನ್ನಲಿಕ್ಕೇನೂ ಅಡ್ಡಿಯಿಲ್ಲ; ಮತ್ತು ಈ ಹೊತ್ತು ನಾಗರಿಕತೆಯ ಅತ್ಯಂತಿಕವಾದ ಶಿಖರಕ್ಕಡರಿದ ಜನಾಂಗದವರಿಗೂ ಕೂಡ ಗ್ರೀಕರಷ್ಟು ರಾಷ್ಟ್ರೀಯ ಅಥವಾ ವೈಯಕ್ತಿಕ ಸ್ವಾತಂತ್ರ್ಯದ ತಿಳುವಳಿಕೆಯು ಇರುವದೆಂದೂ ಹೇಳಲಿಕ್ಕಬಾರದು;

ಪ್ರಜಾಧಿಪತ್ಯದ ಕಲ್ಪನೆಗೆ ಚಲನೆಕೊಟ್ಟು, ಅದರ ಅಭಿರುಚಿಯನ್ನು ಜಗತ್ತಿಗೆ ಹಚ್ಚಿದ ಶ್ರೇಯವು ಬಹು ಮಟ್ಟಿಗೆ ಅಥೇನ್ಸದವರಿಗಿದ್ದರೂ, ಒಂದಾನೊಂದು ಕಾಲಕ್ಕೆ ಅಥೇನ್ಸದಲ್ಲಿಯೂ ಅರಸೊತ್ತಿಗೆಯು ಇತ್ತೆಂಬುದನ್ನು ಕಣ್ಮರೆ ಮಾಡಕೂಡದು; ವಾಡಿಕೆಯಾಗಿ ಅರಸರು ವಿವೇಕವುಳ್ಳವರಾಗಿರುವದು ಅಪರೂಪವೆಂಬುದು ಜಗತ್ತಿನ ಅನುಭವವೇ ಆಗಿರುವದರಿಂದ ಈ ಸೃಷ್ಟಿನಿಯಮಕ್ಕೆ ಗ್ರೀಸ ದೇಶದ ಅರಸರೇನೂ ಅಪವಾದವಾಗಿರಲಿಲ್ಲ! ಅರ್ಥಾತ್ ಅವರು ಎಲ್ಲ ರಾಜರುಗಳಂತೆ ನಿರಂಕುಶರಾಗಿಯೂ, ಪ್ರಜೆಗಳನ್ನು ಹಿಂಸೆಪಡಿಸುವವರಾಗಿಯೂ ಹೊಣೆಗೆಟ್ಟವರಾಗಿಯೂ, ಇದ್ದರು; ಈ ತೆರನಾದ ಹೊಣೆಗೆಟ್ಟ ಆಳಿಕೆಗೆನೇ ಬೇಸತ್ತು ಅಥೀನಿಯನ್ನ ಪ್ರಜೆಗಳು ಅರಸೊತ್ತಿಗೆಯೆಂಬ ಹೆಸರನ್ನೇ ಹೇಳಹೆಸರಿಲ್ಲದಂತೆ ಮಾಡಿದರು. ಈ ಗ್ರೀಕ ರಾಜ್ಯಕ್ರಾಂತಿಯ ಚರಿತ್ರೆಯನ್ನು ಉದಾಹರಿಸಿ ಇತಿಹಾಸಗಾರನಾದ ಹಿರೋಡೋಟಸನು ಅನ್ನುವದೇನಂದರೆ, ' ಇವೇ ಮೊದಲಾದ ದೃಷ್ಟಾಂತಗಳಿಂದ ಆಳೆದು ತಿಳಿದು ನೋಡಲು, ಒಂದೇ ಒಂದು ಸಂಗತಿಯು ಒಡೆದು ಕಾಣಿಸುವದು; ಅದಾವುದೆಂದರೆ, ಸಮತ್ವವೆಂಬ ಶಬ್ದಕ್ಕೆ ಸರಿಗಟ್ಟುವ ಮತ್ತಾವ ವಸ್ತುಗಳು ಈ ಪ್ರಪಂಚದೊಳಗೆ ಇಲ್ಲವೆಂಬುದೇ ! ಸಮತ್ವದೊಳಗೆ ಎಂತಹ ಅದ್ಭುತವಾದ ಮಾಟವು ಮೈಮುಚ್ಚಿಕೊಂಡಿರುವದೆಂಬುದರ ಪ್ರತ್ಯಂತರವು ಬೇಕಿದ್ದರೆ ಗ್ರೀಕರ ಇತಿಹಾಸವೇ ಸಾಕ್ಷಿ. ಎಲ್ಲಿಯ ವರೆಗೆ ಅಥೀನಿಯನ್ನರು ಅರಸೊತ್ತಿಗೆಯ ಅರೆದಾಟದ ಕೆಳಗೆ ಪೇಚಾಡುತ್ತಿದ್ದರೋ ಅಲ್ಲಿಯ ವರೆಗೆ ಅವರು ಧೈರ್ಯ ಶೌರ್ಯಾದಿ ಗುಣಗಳಲ್ಲಿ ಎಲ್ಲರಿಗಿಂತ ಕಡಿಮೆಯೇ ಇದ್ದರು; ಆದರೆ ಅರಸೊತ್ತಿಗೆಯ ಕಟ್ಟನ್ನು ಹರಿದು ಸ್ವತಂತ್ರರಾದ ಅಲ್ಪಾವಕಾಶದಲ್ಲಿಯೇ ಅವರು ಎಲ್ಲರನ್ನು ಮೀರಿನಿಂತರು; ಅರಸೊತ್ತಿಗೆಯಿರುವ ಕಾಲಕ್ಕೆ ಒಂದೊಂದು ಸಲ ಯುದ್ಧದೊಳಗೆ ತಮ್ಮ ಪಕ್ಷಕ್ಕೆ ಸೋಲುಂಟಾದರೂ ಅವರಿಗೆ ಆ ಸೋಲಿನ ಬಗ್ಗೆ ಎಷ್ಟೆಷ್ಟೂ ವ್ಯಸನವೆನಿಸುತ್ತಿರಲಿಲ್ಲ; ಬಿಟ್ಟಿಯ ಆಳಿಗೆ ಹಗ್ಗ ಹರಿದರೇನು ಕೋಲು ಮುರಿದರೇನೆಂದೆನಿಸುವಂತೆ ಅವರಿಗೂ ತಮ್ಮ ರಾಜನ ವಿಷಯವಾಗಿ ಅನಿಸುತ್ತಿದ್ದಿತು; ಆದರೆ ಅರಸೊತ್ತಿಗೆಯ ಬಿಟ್ಟಿಯ ಭಾರವು ದೂರವಾಗಿ ನಮ್ಮ ಸ್ವಾತಂತ್ರ್ಯಕ್ಕಾಗಿ ನಾವು ಹೆಣಗುತ್ತಿರುವೆವೆಂಬ ಭಾವನೆಯು ಅವರಲ್ಲಿ ಅಡಿಯಿಡಲಿಕ್ಕೆ ಮೊದಲಾದಾಗಿನಿಂದ ಅವರ ಮೈಯಲ್ಲಿ ಬೇರೊಂದು ಜೀವಕಳೆಯು ತುಂಬಿ ತುಳುಕಹತ್ತಿತು !

ಸ್ವಾತಂತ್ರ್ಯವೇ ಸುಸಂಸ್ಕೃತ ಜನಾಂಗದ ಜೀವನವು. ವ್ಯಕ್ತಿಸ್ವಾತಂತ್ರ್ಯ ರಾಷ್ಟ್ರೀಯ ಸ್ವಾತಂತ್ರ್ಯಗಳಿಲ್ಲದೆ ಯಾವುದೊಂದು ಜನಾಂಗವು ಅಭಿವೃದ್ಧಿಗೆ ಬಾರದೆಂಬುದು ಇದೀಗ ಎಲ್ಲರಿಗೂ ಮನದಟ್ಟಾಗತೊಡಗಿದೆ; ಆದರೂ, ಸ್ವಾತಂತ್ರ್ಯದ ಈ ಶುದ್ಧ ಹಾಗೂ ಉಚ್ಚವಾದ ಧ್ಯೇಯವು ಇನ್ನೂ ಹೇಳುವಷ್ಟು ಯಾವ ಜನಾಂಗದವರಿಗೂ ತೃಪ್ತಿಕರವಾಗಿ ಕೈಸೇರಿಲ್ಲವೆಂದರೆ ಅತ್ಯುಕ್ತಿಯಾಗದು. ಕೆಲ ವಂಶದಿಂದ ಈ ವಿಷಯದಲ್ಲಿ ಕೆಲ ಜನಾಂಗಗಳು ಅಥೇನ್ಸದವರನ್ನು ಮೀರಿಸುವಷ್ಟು ಮುಂದುವರಿದಿದ್ದರೂ, ಅವಿನ್ನೂ ಪೂರ್ಣಾವಸ್ಥೆಗೆ ಮುಟ್ಟಿಲ್ಲವೆಂದು ಹೇಳವೇ ಬೇರೆ ದಾರಿಯಿಲ್ಲ; ಸ್ವಾತಂತ್ರ್ಯದ ಬಗ್ಗೆ ಅಥೀನಿಯನ್ನ ಜನರ ನಿಜವಾದ ವಿಚಾರಗಳೇನಿದ್ದವೆಂಬುದು ಮನದಟ್ಟಾಗಬೇಕಾದರೆ, ನಾವು ಮೊತ್ತ ಮೊದಲು ಅರ್ವಾಚೀನ ಜನರ ಕಲ್ಪನೆಗಳೇನಿರುವವೆಂಬುದನ್ನು ನೋಡಿದರೆ, ಅವರ ಸ್ವಾತಂತ್ರ್ಯ ಕಲ್ಪನೆಯ ಅರ್ಥವು ಸುಲಭವಾಗಿ ಮನಸಿಗೆ ಹಿಡಿಯುವದು.

ರಾಜಕೀಯ ಸ್ವಾತಂತ್ರ್ಯದಲ್ಲಿ ಮುಖ್ಯವಾಗಿ ಎರಡು ಪ್ರಭೇದಗಳು ಇವೆ; ಬೇಕೆಂದರೆ ಅವಕ್ಕೆ ಅಂಗಗಳೂ ಅನ್ನಬಹುದು; ಒಂದನೇದು ಸಾಮುದಾಯಿಕ ಅಥವಾ ಸಾಮೂಹಿಕ ಸ್ವಾತಂತ್ರ್ಯವು; ಅಂದರೆ ನಾವು ಯಾವ ಜನಸಮೂಹದ ಅಥವಾ ಜನಸಮಷ್ಟಿಯ ಅವಯವವೆಂದೆನಿಸಿಕೊಳ್ಳುತ್ತಿರುವೆವೋ ಆ ಜನಸಮೂಹದ ಮೇಲೆ ಬೇರೆ ಯಾವ ಸಮಷ್ಟಿಯ ಆಳಿಕೆ ನಡೆಯದಿರುವದು; ಉದಾಹರಣೆಗಾಗಿ ಈ ತೆರದ ಸ್ವಾತಂತ್ರ್ಯವು ಈಗ

ಎಲ್ಲಿಯಾದರೂ ಇದ್ದರೆ, ಅದು ಅಮೇರಿಕದ ಸಂಯುಕ್ತ ಸಂಸ್ಥಾನ, ಇಂಗ್ಲಂಡ ಫ್ರಾನ್ಸ ಮೊದಲಾದ ಜನಾಂಗಗಳಲ್ಲಿ ಬಳಿಕೆಯಲ್ಲಿದೆ. ಜನಸಮೂಹಕ್ಕೆ ಇಂತಹ ಸ್ವಾತಂತ್ರ್ಯವಿರುವದು ಇಷ್ಟವೂ ಅವಶ್ಯವೂ ಇರುವಂತೆ, ಅದನ್ನು ಕಾಯ್ದಿಡುವದು ಪ್ರತಿಯೊಂದು ಜನಸಮೂಹದ ಕರ್ತವ್ಯವಾಗಿದೆಂಬುದು ಹೊಸದಾಗಿ ಹೇಳಬೇಕಿಲ್ಲ; ಈ ವಿಧದ ಕಲ್ಪನೆಗೆ ಜಗತ್ತಿನ ಬೆಳವಣಿಗೆಯಲ್ಲಿ ಸ್ವಯಂಸಿದ್ಧವಾದ ಸಿದ್ಧಾಂತಕ್ಕಿರುವಷ್ಟು ಮಹತ್ವವು ಬಂದಿದೆ; **ಪರರಾಜರ ಆಳಿಕೆಯು ಎಷ್ಟು ಹಿತಕರವೂ, ಕ್ಷೇಮಕರವೂ ಇದ್ದಾಗ್ಯೂ ಅದರ ಸೋಗನ್ನು ಯಾವ ಜನಾಂಗದವರೂ ಸುಮ್ಮನೆ ಹುಚ್ಚರಂತೆ ತಮ್ಮ ಹೆಗಲುಗಳ ಮೇಲೆ ಹೊರಲಾರರು;** ಇಷ್ಟೇ ಅಲ್ಲದೆ ಹಿಂದೂ ದೇಶದಂಥ ಜನಾಂಗಗಳು ಒಂದು ವೇಳೆ ಪರರಾಜರ ಆಳಿಕೆಗೆ ತಲೆಬಗ್ಗಿಸಿದರೂ, ಸ್ವಸಂತೋಷದಿಂದಲ್ಲದೆ, ಅವರಿಗೆ ಎದುರಾಗುವಷ್ಟು ತಮ್ಮಲ್ಲಿ ಸಾಮರ್ಥ್ಯವಿಲ್ಲದ್ದರಿಂದಲೇ ! ಇದು ಮನುಷ್ಯರ ಮಾತಾಯಿತು; ಪಶುಗಳಿಗೆ ಸಹ ಮನುಷ್ಯನ ಕೈಕೆಳಗೆ ನಡೆಯುವದೆಂದರೆ ಕಷ್ಟಕ್ಕೆ ಬರುತ್ತದೆ; ಆದರೆ, ಪ್ರಾಣಹಿಂಸಕ ಶಸ್ತ್ರಾಸ್ತ್ರಗಳ ಮುಂದೆ ಎಲ್ಲಿ ಮನುಷ್ಯನ ಆಟವೇ ನಡೆಯುವದಿಲ್ಲವೋ, ಅಲ್ಲಿ ಪಶುಗಳಂಥ ಬುದ್ಧಿಹೀನ ಪರತಂತ್ರವಾದ ಪ್ರಾಣಿಗಳ ಪಾಡೇನು ? ಸಾರಾಂಶವೇನಂದರೆ, ಭಗವಂತನು ಮನುಷ್ಯಪ್ರಾಣಿಗಳಲ್ಲಿ ಸ್ವಾತಂತ್ರ್ಯಪ್ರೀತಿಯನ್ನೂ ಪಾರತಂತ್ರ್ಯದ ವಿಷಯದಲ್ಲಿ ಅಪ್ರೀತಿಯನ್ನೂ ಹುಟ್ಟಿಸಿ ಇಟ್ಟಿರುವನೆಂಬುದು ಕಂಡುಬರುತ್ತದೆ; ಮಾತ್ರ ಪಶುಪಕ್ಷ್ಯಾದಿಗಳಿಗೆ ಅದನ್ನು ಬಾಯಿಬಿಚ್ಚಿ ಆಡಲಿಕ್ಕೆ ಬರುತ್ತಿರುವದಿಲ್ಲ; ಹಳ್ಳಿಗಾಡ ಜನರಿಗೆ ಬಾಯಿದ್ದು, ಅದನ್ನು ಸ್ಪಷ್ಟವಾಗಿಯೂ, ವ್ಯವಸ್ಥಿತವಾದ ಭಾಷೆಯಿಂದಲೂ ಹೇಳಲಿಕ್ಕೆ ಬರುವದಿಲ್ಲೆಂಬುದಿಷ್ಟೇ ಅಭ್ಯಂತರವು; ನನ್ನ ಮನೆಯ ಕಾರ್ಯಭಾರವೆಲ್ಲವೂ ನನ್ನ ಮನಸಿನಂತೆಯೇ ನಡೆಯಬೇಕೆಂದು ಯಾರಿಗೆ ತಾನೇ ಅನಿಸದೆ ಇರದು ?

ಇನ್ನು, ಎರಡನೆಯದೆಂದರೆ ವ್ಯಕ್ತಿಸ್ವಾತಂತ್ರ್ಯವು; ಇದುವರೆಗೆ ನಾವು ಹೇಳಿದ ಸಾಮೂಹಿಕ ಸ್ವಾತಂತ್ರ್ಯವಿಷ್ಟ ಮಾತ್ರಕ್ಕೆ ಎಲ್ಲ ಕೆಲಸವಾಯಿತೆಂದೇ ತಿಳಿಯಲಿಕ್ಕಾಗದು; ಸಾಮೂಹಿಕ ಅಥವಾ ಸಾಮುದಾಯಿಕ ಸ್ವಾತಂತ್ರ್ಯದೊಡನೆ ವ್ಯಕ್ತಿವಿಷಯಕವಾದ ಸ್ವಾತಂತ್ರ್ಯವಾದರೂ ಇದ್ದೇ ತೀರಲಿಕ್ಕೆ ಬೇಕು; ವ್ಯಕ್ತಿಸ್ವಾತಂತ್ರ್ಯವೆಂದರೆ, ಪ್ರೌಢಾವಸ್ಥೆಗೆ ಬಂದಿರುವ ಪ್ರತಿಯೊಬ್ಬನಿಗೂ ತನ್ನ ಹಿತಾಹಿತಗಳನ್ನರಿತು ನಡೆಯುವ ಹಕ್ಕು; ಅದರಲ್ಲಿ ಸ್ವದೇಶದ ಅಥವಾ ಪರದೇಶದ ಸರಕಾರದವರ ಕೈ ಇರಬಾರದೆಂಬದು. ಒಂದುವೇಳೆ, ಹೀಗೆ ಹೇಳುವವರಲ್ಲಿ ಯಾವನೊಬ್ಬನ ಹಿತವಿದ್ದರೂ, ಅವನಿಗೆ, ಹೀಗೇ ನಡೆಯೆಂದು ಬಲುಮೆಮಾಡಿಸಕೂಡದೆಂಬುದೇ ವ್ಯಕ್ತಿಸ್ವಾತಂತ್ರ್ಯ ಶಬ್ದದ ಮಥಿತಾರ್ಥವು; ವ್ಯಕ್ತಿಸ್ವಾತಂತ್ರ್ಯದೊಳಗೆ ಎರಡು ವಿಷಯಗಳು ಒಳಗೊಳ್ಳುತ್ತವೆ; ಶಾರೀರಿಕ ನಿರ್ಬಂಧ ಅಥವಾ ಬಲುಮೆಯಿಲ್ಲದಿರುವದೊಂದು, ಸಾಮಾಜಿಕ ಅಥವಾ ರಾಜಕೀಯ ತೊಂದರೆಯ ಭಯವಿಲ್ಲದಿರುವದೊಂದು; ಮೊದಲನೇದಕ್ಕೆ ಶಾರೀರಿಕ ಸ್ವಾತಂತ್ರ್ಯವೆಂದೂ, ಎರಡನೇದಕ್ಕೆ ಮಾನಸಿಕ ಅಥವಾ ನೈತಿಕ ಸ್ವಾತಂತ್ರ್ಯವೆಂದೆನ್ನಬಹುದು; ವ್ಯಕ್ತಿಸ್ವಾತಂತ್ರ್ಯದ ವಿಚಾರಗಳು ಪ್ರಾಚೀನ ಅಥೆನ್ಸದೊಳಗೆ ಬಲು ಮಟ್ಟಿಗೆ ಬೆಳೆದಿದ್ದವು; ಬಲುಮೆಯ ಅಥವಾ ದಬ್ಬಾಳಿಕೆಯ ಪ್ರತಿಕಾರವನ್ನು ಜೇರೆ ಜನಾಂಗದವರು ಎಷ್ಟು ಬೇಕಾದಷ್ಟು ಬಲವಾಗಿ ತೋರ್ಪಡಿಸಿದ್ದರೂ, ಅವರಿಗೆ ಅಥೀನಿಯನ್ನರಷ್ಟು ಸ್ವಾತಂತ್ರ್ಯದಬಗ್ಗೆ ಮನಸ್ಸಿನಲ್ಲಿ ಬೆಳಕು ಬಿದ್ದಿರಲಿಲ್ಲ; ಸ್ವಾತಂತ್ರ್ಯವೆಂಬ ಶಬ್ದವು ಕಿವಿಗೆ ಬಿದ್ದೊಡನೆ ಅಥೀನಿಯದ ನಾಗರೀಕನ ಮೈಯಲ್ಲಿ ಅಭಿಮಾನದ ಗಾಳಿ ಸಂಚರಿಸದಂತಾಗಿ ಆ ಸ್ವಾತಂತ್ರ್ಯದ ರಕ್ಷಣೆಗಾಗಿ ಅವನು ಹಗಲಿರಳು ಹೆಣಗುವದರಲ್ಲಿಯೇ ತನ್ನ ಜನ್ಮಸಾರ್ಥಕ್ಯವೆಂದೆಣಿಸುತ್ತಿದ್ದನು; ಸ್ವಾತಂತ್ರ್ಯಕ್ಕಾಗಿ ಹೀಗೆ ಜೀವದ ಹಂಗುತೊರೆದು ಹೋರಾಡುವ ನಾಗರೀಕರು ಸಿಗುವದು ಅಪರೂಪವೇಸರಿ ! ಧನ್ಯ ! ಆ ಅಥೀನಿಯನ್ನರು !

ಅಥೀನಿಯನ್ನರಲ್ಲಿಯ ಇನ್ನೊಂದು ವೈಲಕ್ಷಣ್ಯವೇನಂದರೆ, ಅವರ ಸುದೈವದಿಂದ ಪ್ರಜಾಧಿಪತ್ಯದ ಆಳಿಕೆಯು ಎಷ್ಟು ಸುಖಮಯವಾಗಿ ಪರಿಣಮಿಸಿತೋ ಅಷ್ಟು ಯಾವ ದೇಶದವರಿಗೂ ಆಗಲಿಲ್ಲ; ಪಾಸೇನಿಯನೆಂಬ ಚರಿತ್ರಗಾರನೊಬ್ಬನು ಅಥೀಯದ ಪ್ರಜಾಧಿಪತ್ಯವನ್ನು ಕುರಿತು ಬರೆಯುವಾಗ್ಗೆ “ ಪ್ರಜಾಧಿಪತ್ಯದ ಆಳಿಕೆಯು ಅಥೆನ್ಸದವರನ್ನುಳಿದು ಮಿಕ್ಕ ಯಾವ ಜನಾಂಗದವರಿಗೂ ದಕ್ಕಲಿಲ್ಲ; ಮತ್ತು ಅದರಿಂದ ಯಾರೂ ಪುರೋವೃದ್ಧಿಗೂ ಮುಟ್ಟಲಿಲ್ಲ; ಅಥೆನ್ಸದವರಿಗೆ ಮಾತ್ರವೇ ಅದು ದಕ್ಕಿತು; ಹೀಗಾಗಲಿಕ್ಕೆ ಅವರ ಬುದ್ಧಿವಂತಿಕೆಯೇ ಕಾರಣ”ವೆಂದು ಒಂದೆಡೆಯಲ್ಲಿ ನುಡಿದಿರುವನು; ಮತ್ತು ಹೀಗಿರುವದರಿಂದಲೇ ತತ್ಕಾಲೀನವಾದ ರಾಷ್ಟ್ರಗಳಲ್ಲಿ ಅಥೆನ್ಸವೆಂದರೆ ಯಾರಿಗೂ ಸರಿಗೊಳ್ಳಲಿಕ್ಕೆ ಅಸಾಧ್ಯವಾದ ಜನಾಂಗವೆಂದೇ ಎಲ್ಲರ ಭಾವನೆಯಿದ್ದಿತು; ಅಥೇನ್ಸದವರ ಸ್ವಾತಂತ್ರ್ಯವಿಚಾರಕ್ಕೆ ಇಷ್ಟೊಂದು ಮಹತ್ವಬಂದಿರುವದಕ್ಕೆ ಇದುವೇ ಕಾರಣವು.

# ಗೊಂಡಾರಣ್ಯ

ಲೇಖಕರು:-ಶ್ರೀ. ಆರ್. ವ್ಯಾಸರಾಯರು; ಭೂಮಿಶಾಸ್ತ್ರಜ್ಞರು; ಬೆಂಗಳೂರು.

ಗೊಂಡಾರಣ್ಯದಲ್ಲಿ ಬೂರುಗದ ಮರವೊಂದಿತ್ತು. ಅದರಮೇಲೆ ಗಿಳಿಗಳೆರಡು ಸಂತೋಷದಿಂದ ಸಂಸಾರವನ್ನು ಮಾಡುತಿದ್ದವು ಎಂದು ಹಳೆಯ ಕಥೆಗಳು ಮೊದಲು ಆಗುವುದುಂಟು. ಗೊಂಡಾರಣ್ಯವೆಂಬುದು ಯಾವುದು, ಎಲ್ಲಿದೆ ಎಂಬುದನ್ನು ಯಾವಾಗಲಾದರೂ ಯೋಚಿಸಿದಿರಾ? ಕಥೆ ಹೇಳುವವರು ಗೊಂಡಾರಣ್ಯವನ್ನೇ ಏಕೆ ಆರಿಸಬೇಕು ?

ಹಿಂದೂದೇಶದ ಇತರ ಭಾಗಗಳಿಗಿಂತ ಈ ಪ್ರದೇಶವು ಯುದ್ಧ, ಕಾಳಗ, ಕದನ, ಮುಂತಾದ ನಾಗರಿಕ ಹವ್ಯಾಸಗಳಿಂದ ತೊಂದರೆಗಳಿಗೆ ವಿಶೇಷವಾಗಿ ಸಿಲುಕಿರದೆ ಶಾಂತಿಯನ್ನು ಬಹಳ ಮಟ್ಟಿಗೆ ಅನುಭವಿಸುತಿತ್ತೆಂತಲೆ ಈ ಅರಣ್ಯವನ್ನು ಆರಿಸುತ್ತಿದ್ದರೆಂದು ತೋರುತ್ತದೆ. ಈ ದೇಶವು ವಿಶೇಷ ಫಲವತ್ತೂ ಅಲ್ಲ, ಅರಣ್ಯವೂ ಅಲ್ಲ. ನೆರೆಯವರು ಇದನ್ನು ಅರಣ್ಯವೆನ್ನುವುದಕ್ಕೆ ಬದಲು ವನವೆನ್ನುತ್ತಾರೆ. ಮನುಷ್ಯನ ಸಾಧಾರಣ ಶಾಂತಿ ಜೀವನಕ್ಕೆ ಅನುಕೂಲವಾದಷ್ಟು ಬೆಳೆಯಾಗುತ್ತೆ. ಆಶಾತುರರಾದ ದಸ್ಯುಗಳಕಂಗಳಿಗೆ ಗೋರೈಸುವಷ್ಟು ಸಂಪದಪ್ರದವಲ್ಲ. ಬೆಟ್ಟ, ಗುಡ್ಡ, ಘಾಟ, ನದಿಗಳಿಂದ ತುಂಬಿ ಸುಲಭವಾಗಿ ಜಯವನ್ನು ದೊರಕಿಸಲೂ ಅನುಕೂಲಿಸದು. ಇಲ್ಲಿಗೆ ಗಂಗಾ ಸಿಂಧೂ ಪ್ರದೇಶಗಳಲ್ಲಿ ದೊರೆತನಮಾಡಿದ ಮುಸಲಮಾನ ರಾಜರು ಬರಲಿಲ್ಲ. ಆದುದರಿಂದಲೇ ಈಚಿನವರೆಗೂ ದೇಶದ ಪ್ರಜೆಗಳೂ ರಾಜರೂ ಒಂದೇ ಜನಾಂಗವಾದ ಗೊಂಡರೇ ಆಗಿದ್ದರು. ಮರಾಠೆಯವರು ಈ ದೇಶದ ರಾಜರನ್ನು ತಮ್ಮ ಕೈವಶಮಾಡಿಕೊಂಡಿದ್ದರು. ಬೋಸ್ಲೆ ರಾಜ್ಯದೊಡನೆ ಬ್ರಿಟಿಷರಿಗೆ ಈ ದೇಶವೆಲ್ಲಾ ವಶವಾಯಿತು. ನೈಜಾಮು ಸರಕಾರದಿಂದ ಮುಕ್ಕಾಲು ಭಾಗವನ್ನೆ ಈ ಹೆಸರಿನಿಂದ ಕರೆಯಬಹುದು.

ಗೊಂಡರು ಕಾಡು ಜಾತಿಗೆ ಸೇರಿದ ದ್ರಾವಿಡ ಪಂಗಡದವರೆಂದು ಪಂಡಿತರು ಹೇಳುತ್ತಾರೆ. ಇವರು ಕಾಡು ಜನರು ಎಂಬುದು ಅತಿ ಪಂಡಿತಭಾಷೆ. ನೈಜಾಮು ಇಲಾಖೆ ಮತ್ತು ಮಧ್ಯಪ್ರಾಂತಗಳ ಎಲ್ಲೆಯಲ್ಲಿರುವ ಘನಪರ್ವತಪ್ರಜಗಳಲ್ಲಿ, ವಿಶೇಷವಾಗಿ ಬಸ್ತರವೆಂಬ ರಾಜ್ಯದಲ್ಲಿನ ಕಾಡುಭಾಗಗಳಲ್ಲಿ ಇರುವ ಕೆಲವರಿಗೆ ಈ ಮಾತು ಅನ್ವಯಿಸಿದರೂ ಅನ್ವಯಿಸಬಹುದು. ಇವರನ್ನು ಅಲ್ಲಿಯ ಜನಗಳು "ಮರಿಯಾ" (ಮಡೆಯಾ) ಎಂದು ಕರೆಯುತ್ತಾರೆ. ಈ ಜನಾಂಗದ ಇತರರಂತೆ ನಾಗರೀಕತೆಗೆ ಬಾರದ ಮೂರ್ಖರೆಂದು ಇವರನ್ನು ಹೀಗೆ ಕರೆದಿರಬಹುದೆ ? ( ಮಡೆಯರ್ ಮೂರ್ಖ ಅರಿಯದವ-ಅಜ್ಞ ). ಗೊಂಡರು ಸಾಧಾರಣವಾಗಿ ಒಕ್ಕಲುತನದ ಜನರು; ಕಷ್ಟಸಹಿಷ್ಣುಗಳು; ತಮಿಳರಂತೆ ಮೈಬಗ್ಗಿಸಿ ಕೆಲಸ ಮಾಡುತ್ತಾರೆ; ಸತ್ಯಪ್ರಿಯರು; ನಂಬುಗೆಯಜನ; ಇವರ ನಡತೆಯು ಚೊಕ್ಕಟವಾದುದು; ಮಿತವ್ಯಯಿಗಳು. ಇವರಲ್ಲಿ ರಾಜಗೊಂಡರೆಂಬವರು ಹಿಂದೂ ಆಚಾರಗಳನ್ನೂ ನಡೆಯಿಸುತ್ತಾರೆ. ಹಿಂದೂಗಳಿಂದ ಉತ್ತಮರೆಂದು ಒಪ್ಪಿಗೆಗೆ ಬಂದಿದ್ದಾರೆ. ಇತರಗೊಂಡರೂ ನೀಚರಲ್ಲ, ಉತ್ತಮರ ನೆಂಟರು. ಇವರು ತಮ್ಮ ಗೊಂಡಿಯನ್ನು ಮರೆತು ಹಿಂದಿಯನ್ನೆ ಆಡುತ್ತಾರೆ.

ಇವರ ಆಕಾರವು ದಕ್ಷಿಣ ದೇಶಿಯರಂತೆ ಇದೆ, ಆದರೆ ಬಣ್ಣ ಎಳೆಗೆಂಪು. ಇವರು ಲಘು ಹೃದಯರು. ಹಳ್ಳಿಗಾಡಿನವರು ಪಾನಮಾಡುವುದು ಕಡಿಮೆ. ಬಾಲ್ಯವಿವಾಹವೆ ಹೆಚ್ಚು ರೂಢಿ. ಆದರೆ ಮದುವೆಯುಕಟ್ಟು ವ್ಯೆಸೀಳದು. ಮದುವೆಯ ಖರ್ಚು ಕೊಟ್ಟುಬಿಟ್ಟರೆ ಕಟ್ಟು ಬಿಚ್ಚುತ್ತೆ. ಬೇರೆ ಕಟ್ಟುಕೂಡ ಆಗುತ್ತೆ. ಈ ವಿಷಯದಲ್ಲಿ ಇನ್ನೂ ಕಾಡರು ಎನ್ನಿಸಿಕೊಳ್ಳುವ "ಮರಿಯ"ರಪದ್ಧತಿಯನ್ನು ನೋಡೋಣ.

ಇವರು ಇನ್ನೂ ತಮ್ಮ ಗೊಂಡಿಯನ್ನೆ ಆಡುತ್ತಾರೆ. ಈ ನುಡಿಯು ತೆನುಗಿಗೂ ಅರವಕ್ಕೂ ಮಧ್ಯಸ್ತವಾದುದು. ಹಲವು ಕನ್ನಡ ಶಬ್ದಗಳೂ ಇವೆ. ತಮ್ಮ ಮಕ್ಕಳು ಐದು ಆರು ವರುಷ ವಯಸ್ಸಾದ ಮೇಲೆ ಇವರು, ಮಕ್ಕಳನ್ನೂ ತಂದೆತಾಯಿಗಳೊಂದಿಗೆ ಮಲಗಗೊಡುವುದಿಲ್ಲ. "ಗುಡಿಗೆ" ಕಳುಹಿಸುತ್ತಾರೆ. ಪ್ರತಿ ಹಳ್ಳಿಯಲ್ಲಿಯೂ "ಗುಡಿ" ಯೊಂದುಂಟು. ಇದು ನಮ್ಮಲ್ಲಿ "ಚಾವಡಿ" ಎನ್ನುವಂಥಾದ್ದೆ ಒಂದು ಟವನ್ ಹಾಲ್. ಇಲ್ಲಿ ಊರಿನ ಮಕ್ಕಳೆಲ್ಲಾ ಒಟ್ಟಿಗೆ ಮಲಗುತ್ತಾರೆ, ಆಡುತ್ತಾರೆ. ಸಾಯಂಕಾಲದ ಹೊತ್ತಿನಲ್ಲಿ ಊರಿನ ಹಿರಿಯರು ಇಲ್ಲಿ ಸೇರಿ ನಾಡಿನಪದಗಳನ್ನೂ ಹೆಜ್ಜೆಗಳನ್ನೂ ಹೇಳಿಕೊಡುತ್ತಾರೆ. ಇಲ್ಲಿ ಹೆಣ್ಣುಗಂಡು ಎಂಬ ವ್ಯತ್ಯಾಸವಿಲ್ಲ. ಸ್ವಭಾವ

ವಾಗಿ ವಯಸ್ಸು ಬಂದಮೇಲೆ ಹೆಣ್ಣು ಗಂಡಿಗೂ ಭಾವವು ಬೆರತರೆ ಅವರಿಬ್ಬರೂ ಗುಡಿಯಿಂದ ಆಚೆಗೆ ಹೋಗಿ ಕಾಡಿನಲ್ಲಿ ಒಂದೆರಡು ವಾರಗಳು ಮರೆಯಾಗಿರುತ್ತಾರೆ. ಆ ಮೇಲೆ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ಆಗ ತಂದೆತಾಯಿಗಳು ವಿಚಾರಿಸಿ ಬಳವಳಿಗಳನ್ನು ಗೊತ್ತುಮಾಡುತ್ತಾರೆ. ಇವರ ಆಸ್ತಿ ಎಮ್ಮೆಗಳಾದುದರಿಂದ ಹೊಸ ಸಂಸಾರಕ್ಕೆ ಗಂಡು ಹೆಣ್ಣಿನವರು ಸೇರಿ ನಗದು ಎಷ್ಟು ಎಮ್ಮೆಗಳು ಬೇಕೆನ್ನುವುದನ್ನು ಗೊತ್ತುಮಾಡಿ ಒಂದುದಿನ ಊರೂಟವನ್ನು ಇಡುತ್ತಾರೆ. ಆ ಮೇಲೆ ಹೊಸ ದಂಪತಿಗಳು ತಮಗೆ ಮನ ಒಪ್ಪಿದಲ್ಲಿ ಗುಡಿಸಲನ್ನು ಹಾಕಿ ಸಂಸಾರ ಮಾಡುತ್ತಾರೆ. ಸಂಸಾರದಲ್ಲಿ ಅಸಂತೋಷವಾಗಲಿ, ಅಪನಂಬುಗೆಗಳಾಗಲಿ ವಿರಳ. ಗಂಡ ಹೆಂಡರು ಪರಸ್ಪರ ಸಂತೋಷಕಕ್ಕಾಗಿ ಹಲವುವೇಳೆ ತಮ್ಮ ಶಕ್ತಿ ರೂಢಿಗೆ ಮೀರಿ ಪ್ರಯಾಸಪಡುತ್ತಾರೆ. ದುರ್ದೈವದಿಂದ ಮೃತ್ಯುವು ಘಟನೆಯಾದರೆ ಉಳಿದವರು ತಂದೆತಾಯಿಗಳ ಮನೆಯನ್ನು ಸೇರಿಕೊಳ್ಳುತ್ತಾರೆ. ಪುನರ್ವಿವಾಹ ವಿರಳ. ಒಂದುವೇಳೆ ಆದರೂ ಮನೆ ತಪ್ಪಿದವರಲ್ಲಿಯೆ ಆಗುತ್ತೆ. ಇದು ಮೊದಲಿನ ಸಂಬಂಧದಷ್ಟು ಸಂತೋಷಕರವಲ್ಲವೆಂದು ಸಾಧಾರಣ ಭಾವನೆಯು ಅವರಲ್ಲಿ ಬಂದು ಹೋಗಿದೆ.

“ಮರಿಯು”ರು ವ್ಯವಸಾಯ ಮಾಡುವುದು ಕಡಿಮೆ. ದನಗಳನ್ನು ಮೇಯಿಸಿ ಬೇಟೆಮಾಡಿ(ಧನುಸ್ಸಿನಿಂದ)ಗೆಡ್ಡೆ ಗೆಣಸು ಅಗಿದು ತಿಂದು ಜೀವಿಸುತ್ತಾರೆ. ಚಿಪ್ಪಿಗನ ಕೈವಾಡದಿಂದ ಮೆರಗೇರಿದ ದೇವತ ಆಕಾರದ ನರನಾರಿಯರನ್ನು ಕಂಡರೆ, ಭೂತಗಳೆಂದೆ ಇರಬಹುದು, ಗಾಬರಿಗೊಂಡು ಕಾಡಿಗೂ ಓಡಿ ಮರೆಯಾಗುತ್ತಾರೆ.

ಇವರ ದೇಶದಲ್ಲಿ ನರ್ಮದಾನದಿಯು ಕೈಮೂರುಪರ್ವತ ಸಾಲಿನ ಮೈಕಲವೆಂಬ ಭಾಗದಲ್ಲಿನ ಆಮ್ರಕಾನನ ಪ್ರಸ್ಥ (ಅಮರಕಂಟಕ) ದಲ್ಲಿ ಹುಟ್ಟಿ ಎತ್ತರವಾದ ಸಮನೆಲವಾದ ಕರೆಕಲ್ಲಿನ ವಿಂಧ್ಯ ಸಾತಪುರ ಪರ್ವತಶ್ರೇಣಿಗಳ ನಡುವೆ ಆನೆಯ ಸೊಂಡಲಿನ ಮಧ್ಯದಲ್ಲಿ ಹಾಕಿದ ಬಿಳಿಯ ನಾಮದಂತೆ ಬೆಳಗುತ್ತ ಹರಿಯುತ್ತದೆ. ಮಹಾನದಿಯು ತಂಕೇರುಬಸ್ತದ ಗಿರಿವ್ರಜಗಳಿಂದ ಹೊರಬಿದ್ದು ಉತ್ತರದಲ್ಲಿ ಗಂಗಾನದಿಯ ಜಲಾನಯನ ಪಾತ್ರದೊಡನೆಯೂ ದಕ್ಷಿಣದಲ್ಲಿ ಗೋದಾವರಿ ನದಿಯ ಜಲಾನಯನಪಾತ್ರದೊಡನೆಯೂ ಬಲವಾದ ಯುದ್ಧವನ್ನು ಮಾಡುತ್ತಾ ಹಾಯ್ದುಹೋಗುತ್ತದೆ. ಸೋಣಭದ್ರಾ (ಸೋನ್), ಇಂದ್ರಾವತಿ ಮುಂತಾದ ಭಾರಿ ಭಾರಿ ಉಪನದಿಗಳೂ ಈ ದೇಶದಲ್ಲಿ ಹುಟ್ಟಿ ಹರಿದು ದೇಶವನ್ನೆಲ್ಲ ಶೋಭಿಸುತ್ತಿವೆ. ರಾಮಾಯಣದಲ್ಲಿ ಪ್ರಖ್ಯಾತಿಗೊಂಡ ಶಬರಿಯು ಈ ದೇಶದಲ್ಲಿ ಇದ್ದವಳೆನ್ನುತ್ತಾರೆ. ಶಬರವೆಂಬುದು ಒಂದು ಜಾತಿಯ ಹೆಸರು. ಈ ಜನಗಳು ಈಗ ಇನ್ನೂ ಕೊಂಚ ಪೂರ್ವದಿಕ್ಕಿಗಿರುವ ಪೂರ್ವಘಟ್ಟಗಳ ಶಾಖೆಗಳಲ್ಲಿ ವಾಸವಾಗಿರುತ್ತಾರೆ. ಈ ಸಂಗಡದ ಸಹಾಯದಿಂದ ರಾಮನು ಈ ಕಾಡುಗಳಲ್ಲಿ ಅಲೆದು ಗೋದಾವರಿಯನ್ನು ಹಿಡಿದು ಮೇಲೆ ಹತ್ತುತ್ತಾ ಜನಸ್ಥಾನದ ಪಂಚವಟ (ನಾಸಿಕ)ಗೆ ಸೇರಿರಬೇಕು. ಹೆಸ್ಡೊ ಎಂಬ ಭಾರಿ ಉಪನದಿಯು ಮಹಾನದಿಯನ್ನು ಬೆರೆಯುವಲ್ಲಿ “ಶಬರಿನಾರಾಯಣ”ವೆಂಬ ಕ್ಷೇತ್ರವಿರುತ್ತದೆ. (ಇದು ಕಲಕತ್ತೆಯಿಂದ ನಾಗಪುರಕ್ಕೆ ಹೋಗುವ ಬಿ. ಎನ್. ಆರ್. ರೈಲುದಾರಿಯಲ್ಲಿ ನೈಲಾ ಎಂಬ ರೈಲುಠಾಣೆಯ ದಕ್ಷಿಣಕ್ಕೆ ಇರುತ್ತೆ.) ಇಲ್ಲಿ ಪ್ರತಿ ವರುಷವೂ ದೊಡ್ಡ ಪರಷೆಯಾಗುತ್ತೆ.

ಈಗಲೂ ಛತ್ತೀಸಘಡ (ಮುವತ್ತಾರು ಕೋಟೆಗಳ) ನಾಡಿನಲ್ಲಿ ಹಲವು ರಾಜರೂ ಜಮೀನುದಾರರೂ ಗೊಂಡರು. ಈ ದೇಶವಲ್ಲಿ ಗೊಂಡರಲ್ಲದೆ ನೆಯಿಗೆಯವರೂ ( ಪೈಯಿನ್ಕಾ ) ಚಮ್ಮಾರರೂ, ಆಭೀರರೂ ( ಅಹೀರರೂ ), ರಾಜವಾದರೂ, ಘಾಸಯರು ಇರುತ್ತಾರೆ. ನೆಯಿಗೆಯವರು ಬಲುವಾಗಿ ಕಬೀರಪಂಥಿ ವೈಷ್ಣವರು. ಚಮ್ಮಾರಲ್ಲೂ ಹಲವರು ಕಬೀರಪಂಥಿಗಳು, ಆಭೀರರು ಗೊಲ್ಲರು. ಇವರು ಈಗಲೂ ದನಗಳ ಹಿಂಡುಗಳನ್ನು ಅಟ್ಟಿಕೊಂಡು ಅಡವಿ ಅಡವಿ ತಿರುಗುವುದಲ್ಲದೆ ದನಗಳೊಂದಿಗೆ ಬೆಟ್ಟ ಗುಡ್ಡಗಳಲ್ಲಿ ಒಬ್ಬಂಟಿಗರಾಗಿ ನಿರ್ಭಯವಾಗಿ ಇರುತ್ತಾರೆ. ಇವರ ರೂಪ ಬಣ್ಣಗಳನ್ನು ನೋಡಿದರೆ ಇವರು ಉತ್ತರ ದೇಶದವರಂತೆ ಸುಂದರರಾಗಿದ್ದಾರೆ; ನಾಗರಿಕತೆಯಲ್ಲಿ ಗೊಂಡರಿಗಿಂತ ಕಮ್ಮಿಯವರೆಂದು ಎಣಿಸಲ್ಪಡುತ್ತಾರೆ. ಹಲವರು ಗೊಂಡರಲ್ಲಿ ನೌಕರಿಗೆ ಇರುತ್ತಾರೆ. ಇವರನ್ನು ನೋಡಿದರೆ ನಾಗರಿಕತೆಯು ಅರ್ಥಸಂಪತ್ತಿಯ ಅಡಿಯಾಳು ಎಂಬುದು ತೋರುತ್ತೆ.

ನೇಯಿಗೆಯವರು ಸಾಧಾರಣವಾಗಿ ಚುರುಕುಬುದ್ಧಿಯುಳ್ಳವರು, ಕಷ್ಟವನ್ನು ಸಹಿಸಲಾರರು; ಆದುದರಿಂದ ಗೊಂಡರಷ್ಟು ಅರ್ಥಸಂಪನ್ನರಲ್ಲ. ಇವರ ಸ್ಥಿತಿಯು ರೈಲು ಒಳದೇಶಕ್ಕೆ ಹಾಯ್ದುಬಂದಹಾಗೆಲ್ಲಾ ಇನ್ನೂ ಕೀಳಾಗುತ್ತಲಿದೆ. ಜೀವನೋಪಾಯದ ನೇಯಿಗೆಯು ಕೈಯಿಂದ ಕಸದುಬೀಳುತ್ತಿದೆ. ಮಾರವಾಡಿಯು ವಿಲಾಯತಿಯ ಬಣ್ಣದ ಬಿಡಗಿನ ವಿಷವನ್ನೂ ನ್ಯಾಗನ್‌ಗಳಲ್ಲಿ ತಂದು ತಂದು ಚೆಲ್ಲುತ್ತಾನೆ. ಬಡವರಿಗೆ

ಆಧಾರವಾಗಿ, ವ್ಯಾಯೆಸವ(?) ಕೂಡ ಬೇಕಿಲ್ಲದೆ, ಊರು ಕಾಡು ಎಂದು ವ್ಯತ್ಯಾಸಮಾಡದೆ, ಬೈಲುಪೊದೆ ಎನ್ನದೆ, ಮಳೆರಾಯನು ಕರೆದಂತೆ ಎಲ್ಲ ಕಡೆಯಲ್ಲೂ ಎರಚಿದ ಅಮೃತದಂತೆ ಇರುವ ಮಧುವೃಕ್ಷ (ಮಹುವಾ=ಇಪ್ಪೆ)ಗಳ ಹೂಗಳು ಜನಗಳಿಗೂ ದನಕರಗಳಿಗೂ ಆಹಾರವಾಗಿದ್ದುದು, ಈಗ ಸಾರಾಯಿ ಗಂಡಗು ಗಳಿಗೆ ಒಯ್ಯಲ್ಪಟ್ಟು ಅದೇ ರೈಲುಮಾರ್ಗವಾಗಿ ಮೃತಪಾನೀಯ ವಾಗಿ ಅಲ್ಲಿಗೆ ಬರುತ್ತಲಿದೆ. ಬಲಿಷ್ಠರಿಗೆ ಅನುಕೂಲವಾದ ಸಲ ಕರಣೆಗಳು ಬಡವರನ್ನು ಪುಡಿಮಾಡುತಲಿವೆ ಎಂಬುದನ್ನು ಇವರು ಉದಹರಿಸುತ್ತಾರೆ.

ರಜವಾರರು ಗೊಂಡರಷ್ಟೆ ಯೋಗ್ಯರಾಗಿ ಅವರಿಗೆ ಸರಿಸಮ ನಾಗಿರುತ್ತಾರೆ. ಇವರು ಸೈನ್ಯಗಳ ಭಟರು; ರಾಜ್ಯವನ್ನು ಕಟ್ಟಲು ಬಂದ ಕ್ಷತ್ರಿಯರ ಬಲವಿದ್ದರೂ ಇರಬಹುದು. ನಮ್ಮ ದೇಶದಲ್ಲಿ ಇರುವ ರಾಚಾವಾರರು ಇವರ ಸಂಬಂಧಿ ಗಳಿರಬಹುದೆ?

ಘಾಸಿಯರು ಹುಲ್ಲುಕೊಯಿದು ಮಾರಿ ಜೀವಿಸುವ ಜಾತಿ. ಇವರು ನಟುವರೂ ಹೌದು. ಇವರು ಸೈನ್ಯದ ಜೊತೆಯಲ್ಲಿ ಕುದುರೆ ಕೆಲಸದಲ್ಲಿ ಇದ್ದು ಬಂದಿರಬಹುದು. ಇವರು ಅಸ್ಪೃ ಶ್ಯರು. ಇವರು ತಮ್ಮ ಜಾತಿಯ ಕಸಬುವಿನ ಮಿಕ್ಕ ಕೆಲಸ ದಲ್ಲಿ ಕುಶಲರಾಗಿರುವುದು ವಿರಳ. ಇವರು ನಾಗರೀಕ ವಿಷಪರಿ ಪಾಕವನ್ನು ಉದಹರಿಸುತ್ತಾರೆ.

ಇವರಲ್ಲದೆ ಬೈಗ ಅಥವ ಧುನುವಾರರೆಂಬವರು ವಿಶೇಷವಾಗಿ ಬೇಟೆಯಿಂದಲೆ ಜೀವಿಸುವ ಶುದ್ಧ ಕಾಡು ಜನರು ಇರುತ್ತಾರೆ. ಇವರು ಕೊಳಕರು. ಈಗೀಗ ವ್ಯವಸಾಯಕ್ಕೆ ಇಳಿಯುತ್ತಿದ್ದಾರೆ. ಇವರ ಜಾತಿಯ ಕಸಬು ಬಿದುರಿನ ಬುಟ್ಟಿ ಹೆಣೆಯು ವುದು. ಇವರಿಗೂ ನಮ್ಮ ವ್ಯಾದರಿಗೂ ಸಂಬಂಧವಿರಬಹುದೆ?

ಈ ದೇಶವು ಪ್ರಖ್ಯಾತ ಆರ್ಯ ರಾಜ್ಯಗಳಾದ ದಶಾರ್ಣ, ವಿದರ್ಭ, ರಾಜಪುತ್ರ ಸಂಸ್ಥಾನ ಮತ್ತು ರೇವಾ (ಭಾಗೇಲ) ಗಳಿಗೆ ಹತ್ತಿರವಾಗಿರುವುದರಿಂದ ದೇಶಭ್ರಷ್ಟರಾದ ರಾಜಪುತ್ರರು ಇಲ್ಲಿಗೆ ಬಂದು ರೂಪುಗುಣಗಳಲ್ಲಿ ಅಷ್ಟೇನೂ ಕಮ್ಮಿಯಲ್ಲದ ಗೊಂಡರಾಜ ಕನ್ಯೆಯರನ್ನು ಮದುವೆಯಾಗಿ ಆರ್ಯ ರಾಜ ವಂಶಗಳನ್ನು ಸ್ಥಾಪಿಸಿರುವರು. ಈಚೀಚಿಗೆ ಕೆಲಬರು ತಮ್ಮ ವಂಶಗೌರವವನ್ನು ಹೆಚ್ಚಿಸಲಿಕ್ಕೆ ಅನೇಕ ದೇವದೇವತೆಗಳ ಅಮಾನುಷಶಕ್ತಿಯ ಸಹಾಯವನ್ನೂ, ತಪಸ್ಸಿನಿಂದಲೆ ಇರ ಬೇಕು, ಪಡೆದಿದ್ದಾರೆ. ಸೂರ್ಯ [illegible] ತಮ್ಮ

ಸಂತಾನಕ್ಕೆ ವಂಶಮರ್ಯಾದೆಯನ್ನು ನೀಡಲು ಕೈಹಿಂದೆಗೆಯು ವದಿಲ್ಲ. ಅಂತೂ ಜಾತಿಯ ದರಿದ್ರರ ತೃಪ್ತಿಸಮಾಧಾನಗಳಿಗೆ ಏಕಾಶ್ರಯ ಐಶ್ವರ್ಯದ ಹವಿಸ್ಸು ಸಿಕ್ಕಿದಹಾಗೆಲ್ಲಾ ಯಜ್ಞೇ ಶ್ವರನು ಜಾತಿಯನ್ನು ಪುಟಹಾಕಿ ಸುವರ್ಣವನ್ನಾಗಿ ಮಾಡುತ್ತಿ ದ್ದನು. ಬ್ರಿಟಿಷರ ರಾಜ್ಯದಲ್ಲಿ ಅವನಿಗೆ ಮಂದವಾಗಿ ನಿಸ್ತೇಜ ವಾಗಿದೆ. ಖಾಂಡವವನ ದಹನಕ್ಕೆಂದು ಅರ್ಜುನನನ್ನು ಕಾದಿದ್ದಾನೆ.

ಈ ಗೊಂಡವನದಲ್ಲಿ ಕಲ್ಲಿದ್ದಲು ವಿಶೇಷ. ಕಬ್ಬಿಣದ ಅದರು, ಮ್ಯಾಂಗನೀಸು ಅದುರು ಸುಣ್ಣಕಲ್ಲು ಈ ವನಗಳಲ್ಲಿ ಹೇರಳ ವಾಗಿವೆ. ಮೋಡವನ್ನು ಹರಕಾರನಾಗಲು ಬಲವಂತಮಾಡಿದ ಕಾಳಿದಾಸನ ಯಕ್ಷನು ಆಶ್ರಯಿಸಿಕೊಂಡಿದ್ದ ರಾಮಗಿರಿಯು (ರಾಮಟೇಕ್) ಮ್ಯಾಂಗನೀಸು ಕಲ್ಲನ್ನು ರಫ್ತುಮಾಡುವ ರೈಲು ಠಾಣೆಯಾಗಿದೆ. ಕಟನಿಯ ಸಿಮೆಂಟನ್ನು ಅರಿಯದವರುಂಟೆ.

ಇಲ್ಲಿ ಸಾಲವನಗಳು ವಿಶೇಷ. ಸಾಲವು ಎಂಟು ಹತ್ತು ಅಡಿ ಗಳು ಬುಡದಿಂದ ಬೆಳೆದು ಎರಡು ಕವಲಾಗಿ ಒಡೆದು ನೇರ ವಾಗಿ ೫೦–೬೦ ಅಡಿಗಳ ಎತ್ತರಕ್ಕೆ ಕೈಗಳನ್ನು ಅಂತರಿಕ್ಷಕ್ಕೆ ಚಾಚಿ ನಿಂತು ತಪಸ್ಸುಮಾಡುವ ಮುನಿಯಂತೆ ನಿಂತಿರುತ್ತದೆ. ಮರವು ಬಹು ಘಟ್ಟಿ. ಇಲ್ಲಿನ ಜನರು ಇವನ್ನು ನಮ್ಮಲ್ಲಿನ ತ್ಯಾಗ(ತೇಗು)ದಂತೆ ಉಪಯೋಗಿಸುತ್ತಾರೆ. ಇದು ತ್ಯಾಗದಷ್ಟು ನಯವಲ್ಲ, ಆದರೆ ಅದಕ್ಕಿಂತಾ ಎಷ್ಟೋ ಹೆಚ್ಚು ಘಟ್ಟಿ. ರೈಲು ದಾರಿಗೆ ಹಾಕುವ ಅಡ್ಡ ಮರವಾಗಿ ಇದನ್ನು ಈಗ ಬಹಳ ವಾಗಿ ಉಪಯೋಗಿಸುತ್ತಾರೆ. ಇದರ ಹೂ ಬಲು ಸಣ್ಣ, ಗೊಂಚಲು ಗೊಂಚಲಾಗಿ ವಸಂತದ ಆದಿಭಾಗದಲ್ಲಿ ಮರವನ್ನು ಮದವಣಿಗಿತ್ತಿಯಂತೆ ಅಲಂಕರಿಸುತ್ತದೆ. ಈ ವನಗಳನ್ನು ಮಾರ್ಚಿ ಎಪ್ರಿಲ್ ತಿಂಗಳಲ್ಲಿ ಪ್ರವೇಶಿಸಿದರೆ ಇದರ ಮೃದು ವಾದ ಮಲ್ಲಿಗೆಗಿಂತ ಮನೋಜ್ಞವಾದ ಸುವಾಸನೆಯು ವನಶ್ರೀವ ತೆಯ ಸುಖಾಗಮನ ವಾರ್ತೆಯಂತೆ ಮನಸ್ಸಿಗೆ ಇಂಪುಗೈಯು ತ್ತದೆ. ಇದರ ಬೀಜ ಗೋದಿಯಂತೆ ಇರುತ್ತೆ. ಇವನ್ನು ಸುಲಿದು ಬೈಗಾ ಜನಗಳು ಅಟ್ಟು ಅನ್ನದಂತೆ ತಿನ್ನುತ್ತಾರೆ. ಇದು ನಾಗ ರಿಕರಿಗೆ ಜೀರ್ಣವಾಗುವುದಿಲ್ಲ. ಈ ವೃಕ್ಷದ ದೃಢತೆಯನ್ನೂ ನೀಳವನ್ನೂ ಜ್ಞಾಪಕದಲ್ಲಿ ಇಟ್ಟುಕೊಂಡೇ ವಾಲ್ಮೀಕಿಯು ರಾಮದೇವರನ್ನು ಶಾಲಪ್ರಾಂಶುಃ ಎಂದು ವರ್ಣಿಸಿದ್ದಾನೆ. ಈ ಮರದ ಗೋಂದು ಸಾಂಪ್ರಾಣಿ. ಈ ಮರದ ಎಲೆಗಳನ್ನುಂಡು ಟಾಸರ ಎಂಬ ಕಾಡು ರೇಷ್ಮೆಯು ತಯಾರಾಗುತ್ತೆ. ಕುಸುಮ, ಸಾಜಾ, ಸಿಸಮ (ಬೀಟೆ) ಧಾರ ಮುಂತಾದ ಹಲವು ಮರ ಗಳೂ ಇವೆ, ಇವುಗಳಲ್ಲಿ ಲೋಧ್ರ ವೃಕ್ಷವು ಗಮನಿಸಬೇಕಾ

ದುದು. ಇದರ ಹೂ ಬಿಳುಪು, ಬಹಳ ಮೃದುವಾದ ಸುಗಂಧ ವನ್ನು ಕೊಡುತ್ತೆ. ಇದರ ತೊಗಟೆಯಿಂದ ಕೆಂಪು ಬಣ್ಣವಾಗುತ್ತೆ. ಈ ಹೂವನ್ನು ಒಣಗಿಸಿ ಪೂರ್ವ ಕಾಲದಲ್ಲಿ ಯುವತಿಯರು ತಮ್ಮ ಮುಖಕಾಂತಿಯನ್ನು ಬೆಳಗಿಸಿಕೊಳ್ಳುತ್ತಿದ್ದರು. (ನೀತಾ ಲೋಧ್ರಪ್ರಸವ ರಜಸಾ ಪಾಂಡುತಾ ಮಾನನೆ ಶ್ರೀಃ-. ಮೇಘದೂತ, ಕಾಳಿದಾಸ).

ಮಾವು ಮುಂತಾದ ಹಣ್ಣಿನ ಗಿಡಗಳು, ಕೇಂದು ಎಂಬ ಹಣ್ಣಿನ ಕರಿಮರವೂ, ಚಾರವೃಕ್ಷ ಮುಂತಾದವೂ ಇವೆ. ನೆಲ್ಲಿ, ಅಳಲೆಕೂಡ ವಿಶೇಷವಾಗಿ ಬೆಳೆಯುತ್ತೆ. ಇಲ್ಲಿನ ಕಾಡಿನಲ್ಲಿ ಖರಸಾಲಿ ( ಪಾರಿಜಾತ ) ಗಿಡಗಳು ತುಂಬಿರುತ್ತವೆ. ಈಚೆಗೆ ನಾಗಪುರದ ಹತ್ತಿರ ಕಾಮತಿ ಎಂಬಲ್ಲಿ ಕಸಕಿತ್ತಲೆಹಣ್ಣಿನ ತೋಟಗಳು ಹೇರಳವಾಗಿ ಹಣ್ಣು ಬೊಂಬಾಯಿ ಕಲಕತ್ತೆಯ ವರಿಗೂ ಬಿಕರಿಯಾಗುತ್ತಿವೆ.

ಇಲ್ಲಿನ ಕಾಡುಗಳಲ್ಲಿ ಹುಲಿ, ಕರಡಿ ಬಹಳ. ಆನೆಗಳು ಮೊದಲು ಹೇರಳವಾಗಿದ್ದವಂತೆ. ಈಗ ಇಲ್ಲ. ಇಲ್ಲಿ ಬಿಳಿ ಚರ್ಮದ ಹುಲಿಗಳು ಕೆಲವು ಸಿಕ್ಕಿವೆ. ಆದರೆ ಇವನ್ನು ಕೆಲವರು ತೊನ್ನು ಹಿಡಿದ ಹುಲಿಯನ್ನುತ್ತಾರೆ. ಕುದುರೆ ಮುಖದ ಜಿಂಕೆಗಳು ಅಪರೂಪವಾಗಿ ಕಾಣಬರುವುವು. ನಾಯಿಯಂತೆ ಬೊಗಳುವ ಜಿಂಕೆಯೂ ಇರುತ್ತೆ.

ಮಿಕ್ಕ ವಿಷಯಗಳಲ್ಲಿ ಹಿಂದುಸ್ಥಾನದ ಇತರ ಕಡೆಗಳಂತೆ ಇಲ್ಲಿಯೂ ಇರುತ್ತೆ.

ಅಂತೂ ಇದು ಉತ್ತರ ದೇಶಕ್ಕೂ ದಾಕ್ಷಿಣಾತ್ಯಕ್ಕೂ ನಡು ಮನೆಯಾಗಿ ಸಾನ್ವರ್ಥನಾಮವಾಗಿ ಮಧ್ಯಪ್ರಾಂತವೆನಿಸಿದೆ.

---

# ಸ್ತ್ರೀಯರು ರಂಗಭೂಮಿಯ ಮೇಲೆ ಏಕೆ ಬರಬಾರದು ?

ಬರೆದವರು:— ಶ್ರೀಮತಿ ಕನಕಲಕ್ಷ್ಮಮ್ಮ, M. A., ಮೈಸೂರು

ಕಲೆಗಳಲ್ಲೆಲ್ಲಾ ಶ್ರೇಷ್ಠವಾದದ್ದು ನಾಟಕಕಲೆ. ಸಂಗೀತ, ವೈಖರೀ, ಭಾಷಾ, ದೃಶ್ಯ ಇವುಗಳಿಂದ ಕೂಡಿ ಲಲಿತಕಲೆಗಳ ಸಾರವನ್ನು ಜೀವನಸಾರವನ್ನಾಗಿ ಇಳಿಸಿದ ಕಲೆಯಿದು. ಪ್ರಪಂಚ ವನ್ನು ನಾಟಕರಂಗವೆಂದೂ, ಭಗವಂತನೇ ಈ ಲೀಲೆಯನ್ನಾಡಿಸುವ ಸೂತ್ರಧಾರನೆಂದೂ ಸಾಧಾರಣವಾಗಿ ಎಲ್ಲರೂ ಹೇಳುವ ವಿಚಾರವೆ. ನಾಟಕರಂಗವೂ ಸಹ ಆ ಪರಮಾತ್ಮನ ಲೀಲಾರಂಗವೆ. ಆತನ ಸೃಷ್ಟಿಕೌಶಲಗಳನ್ನೂ, ಸೌಂದರ್ಯರಚನೆಯನ್ನೂ ಅನುಭವಿಸಿ ತಿಳಿದು, ಅದರಿಂದ ಉಂಟಾದ ಉಜ್ವಲವಾದ ಮಾನಸದಿಂದ ನಾಟಕಕರ್ತನು, ಅವುಗಳಿಗೆಒಂದು ಪೂತವಾದ ರೂಪವನ್ನು ಕೊಡುವವನಾಗಿಧಾನೆ. ಕಲೆಯು ಜೀವನದ ಸಾರ, ಈ ಪ್ರಗತಿಪಥದಲ್ಲಿ ನಡೆಯಿಸುವ ಧ್ರುವತಾರೆ ಹೃದಯದ ಅಂಧಕಾರವನ್ನು ತೊಲಗಿಸಿ ಆನಂದವನ್ನು ಪ್ರಜ್ವಲಿಸುವ ಜ್ಯೋತಿ. ಈ ಪ್ರಪಂಚವು ಪರಮಾತ್ಮನನ್ನು ಒಳಗೊಂಡಿರುವ ದೇವಾಲಯವೆಂದು ಪ್ರಕಟಪಡಿಸುವ ಆ ನಂದಾದೀಪ. ಯಾವ ಕಾಲದಲ್ಲಿ ಜನರು ಒಂದು ಸಮಾಜದ ಜೀವಿಗಳಾಗಬೇಕೆಂದು ತೀರ್ಮಾನವಾಯಿತೋ ಅಂದಿನಿಂದಲೂ, ಏಕೆ ? ಮಾನವರ ಸೃಷ್ಟಿಕಾಲ



ದಿಂದಲೂ ಜನರು ಕಲಾಪ್ರಿಯರಾಗಿದ್ದಾರೆ. ಇನ್ನೂ ಜನರು ಜೀವನದ ಉದ್ದೇಶವೇನೆಂದು ಯೋಜಿಸುವದಕ್ಕೆ ಮುಂಚಿನಿಂದಲೂ ಕಲ್ಲಿನಲ್ಲಿ ಆಯುಧಗಳನ್ನು ಮಾಡಿ ಉಪಯೋಗಿಸುತ್ತಲಿದ್ದ ಕಾಲದಿಂದಲೂ ಕಲೆಯು ಉತ್ಪತ್ತಿಯುಂಟಾಗಿದೆ. ಕಲೆಯು ನಾಗರೀಕತೆಯ ಜೀವ. ಬಹು ಸೋಜಿಗವಾದ ವಿಚಾರವೇ ಸರಿ.

ಅಂದಮೇಲೆ ಕಲೆಯು ಸೃಷ್ಟಿಯಲ್ಲಿ, ಮತ್ತು ಪ್ರತಿವ್ಯಕ್ತಿಯ ಜೀವನದಲ್ಲಿ ಅತ್ಯಂತ ಉನ್ನತವಾದ ಸ್ಥಳವನ್ನು ಹೊಂದಿದೆ. ನಮ್ಮಲ್ಲಿ ಅಡಗಿ ನಿದ್ರಿಸುತ್ತಲಿರುವ ಕುಂಡಲಿನಿ ಎಂಬ ಶಕ್ತಿಯನ್ನು ಉಜ್ವಲಪಡಿಸಿ ಎಬ್ಬಿಸುವಂಥಾ ಮಹಾಶಕ್ತಿಯುಳ್ಳದ್ದಲ್ಲವೆ ಕಲೆಯು? ಈ ದ್ವಂದ್ವಮಯವಾದ ಜಗತ್ತಿನಲ್ಲಿ ಕಷ್ಟಗಳನ್ನು ಅನುಭವಿಸಿ, ಪರಿತಾಪದಿಂದ ಮನಗುಂದಿ ಸಂಕಟಪಡುವ ಮಾನವಜಾತಿಯ ಮನೋವೈಕಲ್ಯವು ನಾಶವಾಗಿ ಆನಂದದ ಬೀಜಗಳನ್ನು ಬಿತ್ತಬೇಕಾದರೆ ಕಲೆಯೇ ಅಲ್ಲವೆ ಅಡಿಗಲ್ಲು ! ನಮ್ಮಲ್ಲಿರುವ ಕ್ರಿಯಾಶಕ್ತಿಯು ಪ್ರಕೃತಿಯ ಸಹಜವಾದ ಕರ್ಮಗಳಲ್ಲಿ ಸ್ವಲ್ಪ ಮಟ್ಟಿಗೆ ಉಪಯೋಗಿಸಲ್ಪಡುವದು. ಆದರೆ ಇನ್ನೂ ಉಳಿದಿರುವ ಕ್ರಿಯಾ

ಶಕ್ತಿಯು ಕಲೆಯಲ್ಲಿ ಅಮೃತ ಶಕ್ತಿಯನ್ನು ಪಡೆಯುವದು. ವಿಷಯಭೋಗವನ್ನು ಬಿಡುತ್ತಾ ಬಂದಂತೆ ಬುದ್ಧಿಯು ಬೆಳೆಯುತ್ತಾ ಬಂದಿದೆ. ಆದುದರಿಂದಲೇ ಮಾನವನ ಮನಸ್ಸಿನ ಸಂಪತ್ತಿಗೆ ಎಲ್ಲೆಯಿಲ್ಲ. ನಿಸರ್ಗಜ್ಞಾನವನ್ನು (Instinct) ನಿರ್ವಿಕಲ್ಪಜ್ಞಾನದ ವರಿವಿಗೆ (Intuition) ಹೆಚ್ಚಿಸುವ ಶಕ್ತಿಯು ಮಾನವರದು. ಜ್ಞಾನವು ಸ್ಫುಟವಾಗಿರದಿದ್ದರೂ ಜೀವರಾಶಿಗಳಲ್ಲಿ ಅಂತರ್ಗತವಾಗಿದೆ, ವಿದ್ಯಾಭ್ಯಾಸವೇ ಆದಿಯಾಗಿ ಸಕಲ ವಿಜ್ಞಾನಮಾರ್ಗಗಳೂ ಈ ಅಂತರ್ಗತವಾದ ಜ್ಞಾನವನ್ನು ಸ್ಫುಟ ಮಾಡುವ ಸಲುವಾಗಿಯೇ.

ಕಲೆಗೆ ಈ ಶಕ್ತಿಯು ವಿಶೇಷವಾಗಿದೆ. ಜ್ಞಾನವೆಂದರೆ ಏತರ ಜ್ಞಾನವೆಂಬ ಪ್ರಶ್ನೆ ಬರಬಹುದು. ನಮ್ಮ ಆತ್ಮದಸ್ವರೂಪವು ಪ್ರಫುಲ್ಲಿತವಾಗಿ ಈ ಪರಮಾತ್ಮನಿಗೂ, ಜೀವಾತ್ಮನಿಗೂ ಇರುವ ಪರಸ್ಪರಸಂಬಂಧವೇನೆಂಬುದನ್ನು ತಿಳುಹಿಸುವದೇ ಜ್ಞಾನವು. ಜೀವವು ನಿರಂತರ ಆನಂದ ಸೌಂದರ್ಯ ಇವುಗಳನ್ನು ಹುಡುಕಿಕೊಂಡು ಅಲೆದಾಡುವದು. ಪ್ರಾಪಂಚಿಕ ವ್ಯವಹಾರದಲ್ಲಿ ಲಭಿಸುವ ಅತ್ಯಲ್ಪಸುಖವನ್ನೇ ಆನಂದವೆಂದು ಮೋಸ ಹೋಗುವ ಪ್ರಮೇಯವುಂಟು. ಆದರೆ ಜಾಗ್ರತೆಯಲ್ಲಿಯೇ ಈ ಮಾಯವು ನಾಶವಾಗಿ ಶಾಶ್ವತವಾದ ಆನಂದವು ವಿಷಯಸುಖಗಳಿಂದಲೆ ಬರಲಾರದೆಂದು ಬೋಧೆಯಾಗುವದಲ್ಲದೆ ಸತ್‌ಚಿತ್‌ಆನಂದ ಸ್ವರೂಪನಾದ ಸ್ವಾಮಿಯನ್ನು ಸೇರುವದರಿಂದಲೇ ನಿತ್ಯಾನಂದವುಂಟಾಗುವದೆಂಬ ಅರಿವು ಅಲ್ಪವಾದರೂ ಉಂಟಾಗುತ್ತದೆ. ಇಂತಹ ಜ್ಞಾನಜ್ಯೋತಿಯು ದಿವ್ಯಪ್ರಕಾಶಕ್ಕೆ ಕಲೆಯೇ ಜೀವಪ್ರದವು. ಅಂದಮೇಲೆ ಸಕಲ ಕಲೆಗಳ ಸಾರಭೂತವಾದ ನಾಟಕ ಕಲೆಯ ಮಹಿಮೆಯನ್ನು ಎಷ್ಟು ಹೇಳಿದರೂ ಸ್ವಲ್ಪವೇ ಆಗಿದೆ. ಆಯಾ ಸಮಯದ ಸಮಾಜಸ್ಥಿತಿಯನ್ನು ಸರಿಯಾಗಿ ಸಂದರ್ಶಿಸಿ, ಆಗಿನ ಸಮಾಜದ ಉನ್ನತಿಗೆ ಸಾಕಾದ ಆದರ್ಶಗಳನ್ನು ಜ್ಞಾನದ ಬೆಳಕಿನಲ್ಲಿ ಬೆಳೆಸುವದೇ ನಾಟಕದ ಮುಖ್ಯ ಉದ್ದೇಶವಾಗಿರಬೇಕು. ಈ ಉದ್ದೇಶದಿಂದ ಪೂರ್ಣ ಹೊಂದಿದ ನಾಟಕಗಳೆಲ್ಲಾ ಸಮಾಜಸಂಜೀವನಶಕ್ತಿಯನ್ನು ಹೊಂದಿರುತ್ತವೆ. ಸಮಾಜಶಿಕ್ಷಣಕ್ಕೂ ಸಂಸ್ಕರಣಕ್ಕೂ ನಾಟಕವೇ ಕಾಮಧೇನುವೆಂಬುದನ್ನು ಪಾಶ್ಚಿಮಾತ್ಯರು ಕಂಡು ಹಿಡಿದು ಅದರ ಫಲವನ್ನು ಅನುಭವಿಸುತ್ತಲಿರುವರು. ಜರ್ಮನೀ ದೇಶದಲ್ಲಿ ಸಮಾಜಶಿಕ್ಷಣಕ್ಕಾಗಿಯೇ ಅಲ್ಲಿಯ ಚಕ್ರವರ್ತಿಯು ಸ್ಟೇಟ ಥಿಏಟರ ಎಂಬುವ ಒಂದು ನಾಟಕ ಶಾಲೆಯನ್ನು ಕಟ್ಟಿಸಿ ಅದರಲ್ಲಿ ನೀತಿಬೋಧಪರವಾದ ನಾಟಕಗಳನ್ನಾಡಿಸಿ ಎಲ್ಲರೂ ಆ ನಾಟಕಾವಲೋಕನದಿಂದ ಉಪಕಾರ ಹೊಂದುವಂತೆ ಏರ್ಪಡಿಸಿದ್ದನು. ಸಮಾಜಶಿಕ್ಷಣಕ್ಕೆ ಇನ್ನಾವ ಶಿಕ್ಷಣಾಲಯವೂ ಈ ರೀತಿಯಾಗಿ ಪ್ರಜಾಪ್ರೇರೇಪಕ ಪ್ರಭಾವ ಶಕ್ತಿಯನ್ನು ಹೊಂದಿಲ್ಲ. ನಾಟಕವನ್ನು ನೋಡುವ ಅಪೇಕ್ಷೆ ಇಲ್ಲದಿರುವವರು ಬಹು ಸ್ವಲ್ಪ ಮಂದಿ. ನಾಟಕವನ್ನು ನೋಡಬೇಕೆಂಬವರು ಸಮಾಜದಲ್ಲಿ ಬಹು ಹೆಚ್ಚು. ಅಲ್ಲದೆ ಸಮಾಜದ ಎಲ್ಲಾ ಜನರಿಗೂ ವಿದ್ಯಾಶಾಲೆಗಳಲ್ಲಿ ಸಂಸ್ಕೃತಿ ಕೊಡುವ ವಿದ್ಯೆಯನ್ನು ಕಲಿಯುವದು ಸಾಧ್ಯವಿಲ್ಲ. ಆಕರ್ಷಣಶಕ್ತಿಯಿಂದ ಕೂಡಿದ ನಾಟಕರಂಗವು ಮಾತ್ರ ಜನತೆಯ ಶಿಕ್ಷಣ ಸಂಸ್ಕೃತಿಗಳನ್ನು ಸುಲಭರೀತಿಯಿಂದ ಮಾಡಬಲ್ಲದು. ಆದುದರಿಂದಲೇ ಈಟ್ಸ (Yeats) ಎಂಬ ಐರ್ಲ್ಯಾಂಡ್ ದೇಶದ ಮಹಾಕವಿಯು ಹೀಗೆ ಹೇಳಿದ್ದು "All Ireland must walk the stage"—ಐರ್ಲಂಡಿನ ಜನಾಂಗವೆಲ್ಲಾ ನಾಟ್ಯರಂಗವನ್ನು ನೋಡಲೇಬೇಕು. ಎಲ್ಲಕ್ಕೂ ಕರ್ತನಾದ ಸ್ವಾಮಿಯನ್ನು ಸೇರುವ ಸದುದ್ದೇಶದ ಆದರ್ಶವೇ ಸಮಾಜದ ಬೆಳಕಾಗಿರಬೇಕು. ಈ ಆದರ್ಶದ ಸಂಪೂರ್ಣತೆಗೆ ತತ್ತ್ವ, ಭಾಷ್ಯಸಾಂಕೇತಿಕ ಕಲಾಕೌಶಲಗಳಿಂದ ಕೂಡಿದ ನಾಟಕವೇ ನಿರಾಳವಾದ ಮಾರ್ಗ. ಅಲ್ಲದೆ ನಾಟಕದಿಂದ ನೋಟಕರ ಊಹಾಶಕ್ತಿ (Imagination)ಯು ವಿಶೇಷವಾಗಿ ಅರಳುವದು. ಈ ಬಗೆಯ ಅಧಿಕವಾದ ಊಹಾಶಕ್ತಿಯಿಲ್ಲದೆಯಿರುವದೇ ಸಮಾಜದ ಅಸುಖಕ್ಕೆ ಕಾರಣ. ಏಕಂದರೆ ಇತರರಲ್ಲಿ ಪ್ರೇಮ, ದಯ ಇವುಗಳಿರಬೇಕಾದರೆ ಅವರನ್ನು ತಮ್ಮಂತೆ ಭಾವಿಸುವ ಊಹಾಶಕ್ತಿಯಿರಬೇಕು. ಅಹಂಕಾರ ನಿರ್ದಯತೆ ದೂರುವದು ಇವೇ ಮೊದಲಾದ ವಿಷಮಯವಾದ ದುರ್ಗುಣಗಳ ಹರಡುವಿಕೆಗೆ ಹೃದಯದ ಅರಳುವಿಕೆಯಿಲ್ಲದೆ ಇರುವದೇ ಕಾರಣ. ನಾಟಕದ ಈ ಬಗೆಯ ಮಹತ್‌ಶಕ್ತಿಯನ್ನು ನೋಡಿಯೂ, ತಿಳಿದೂ ನಾವುಗಳು ಈ ನಾಟಕವನ್ನು ಅಧಃ ಪಾತಾಳಕ್ಕೆ ತಳ್ಳಿರುವದು ಬಹು ಶೋಚನೀಯವಾದ ವಿಷಯವೇ ಸರಿ. ಕೇವಲ ವಿದ್ಯಾವಿಹೀನರೂ ಸಂಸ್ಕೃತಿವಿಹೀನರೂ ಆದವರ ಕೈಗೆ ನಾಟಕಲಕ್ಷ್ಮಿಯನ್ನು ವಶಮಾಡಿರುವದರಿಂದ ಆಕೆಯ ಗೌರವ ಹಾನಿಯಾಗುವದೊಂದಲ್ಲದೆ ಸಮಾಜಕ್ಕೆ ನಾಟಕವೆಂಬ ಹೆಸರಿನಿಂದ ಕೊಡುವ ವಿಷದಿಂದ ಜೀವಹಾನಿಯಾಗುವದು. ಇದ್ದು ಬಿದ್ದವರೆಲ್ಲ ನಾಟಕಕಂಪನಿಗಳನ್ನು ಮಾಡುವದೂ, ನಾಟಕಗಳನ್ನು

ಬರೆಯುವದೂ ಸಮಾಜಕ್ಕೆ ದೊಡ್ಡ ಕೇಡು. ಹೆಚ್ಚಾದ ಸಂಘ ಶಕ್ತಿಯಿಂದ ಈ ಬಗೆಯ ಕೆಡಕನ್ನು ಪರಿಹರಿಸಬೇಕಾದುದೇ ನಮ್ಮ ಮುಖ್ಯ ಉದ್ದೇಶವಾಗಿರಬೇಕು.

ನಾಟಕವು ಇಷ್ಟು ಘನತೆಯನ್ನು ಹೊಂದಿದ ಕಲೆಯಾಗಿರುವಾಗ ಇದರಲ್ಲಿ ಪಾತ್ರವನ್ನು ಸ್ತ್ರೀಯರೇಕೆ ವಹಿಸಕೂಡದು? ಯಾವಾಗ ನಾಟಕವು ಕಲಾವಿಹೀನರ ಮತ್ತು ಜ್ಞಾನವಿಹೀನರ ಕೈಯಿಂದ ತಪ್ಪಿಸಲ್ಪಟ್ಟು ಪ್ರೇಮಸಿಂಹಾಸನದಲ್ಲಿ ಕುಳ್ಳಿರಿಸಲ್ಪಡುವದಲ್ಲದೆ, ಸಮಾಜಸೇವೆಯೆಂಬ ಪತಾಕೆಯನ್ನು ಏರಿಸುವದೋ ಆಗ ಈ ಆಕ್ಷೇಪಣೆಯು ತಾನೇ ನಶಿಸಿ ಹೋಗುವದು.

ರಂಗಭೂಮಿಯು ಪಾಪಸಂಕಲಿತವಾದ ಹೇಯಕರ್ಮಭೂಮಿಯಲ್ಲ. ಇದು ಮಂಗಳಕರಳಾದ ನಾಟಕಲಕ್ಷ್ಮಿಯು ಪೂಜಿಸಲ್ಪಡುವ ಪೂಜಾಮಂದಿರ. ಪ್ರತಿಯೊಬ್ಬ ನಟನೂ, ಮತ್ತು ನಟಿಯೂ ಈ ದೇವಿಗೆ ಪ್ರೇಮದಿಂದ ಅರ್ಪಿಸುವದು ಅವರ ಭಕ್ತಿ ಪ್ರೇಮಗಳೆಂಬ ಕುಸುಮಗಳು. ಎಲ್ಲರೂ ಈ ಬಗೆಯ ಪೂತವಾದ ಹೃದಯವುಳ್ಳವರಾಗಿ ರಂಗಭೂಮಿಗಿಳಿದರೆ ಸಮಾಜದ ಸೇವೆಯು ಬಹು ಸಮರ್ಪಕವಾಗಿಯೇ ನಡೆಯುವದು. ನಾಟಕದಲ್ಲಿ ಪಾತ್ರವನ್ನು ವಹಿಸಿದ ಮಾತ್ರವೇ ಸ್ತ್ರೀಯಳು ನೀತಿಗೆ ತಿಲಾಂಜಲಿಯನ್ನು ಕೊಡುವಳೆಂಬುವದಕ್ಕೆ ಆಧಾರವಿಲ್ಲ. ಸ್ತ್ರೀಯಳಿಗೂ ಸ್ವಗೌರವವುಂಟು; ಮರ್ಯಾದೆಯುಂಟು. ನಿರಂತರ ವಿಷಯಭೋಗದಲ್ಲಿಯೇ ನೆಟ್ಟಮನಸ್ಸುಳ್ಳವಳಾಗಿದ್ದು ಸಮಯ ಸಿಕ್ಕಿದೊಡನೆಯೇ ನೀತಿಭ್ರಷ್ಟಳಾಗುವಳೆಂದು ಹೇಳುವದು ಎಲ್ಲಿಯ ನ್ಯಾಯ? ನಿಜವಾದ ನೀತಿಗೆ ಸ್ವಾತಂತ್ರ್ಯವೇ ಗುರುತು. ಇತರರ ಭಯಕ್ಕಾಗಿ ನಟಿಸುವ ನೀತಿಯ ನಡತೆಯು ಎಷ್ಟು ದಿನಗಳಿರಬಹುದು? ಅದಕ್ಕೆ ಬದಲಾಗಿ ಸುವಿದ್ಯೆಯಿಂದ ಸುಜ್ಞಾನವನ್ನು ಪಡೆದು ನೀತಿಯ ಸತ್ಯದ ನಿಜಸ್ವರೂಪವನ್ನು ಅರಿತಿರುವ ಸ್ತ್ರೀಯರಿಗೆ ನೀತಿಮಾರ್ಗದಲ್ಲಿರಬೇಕೆಂದು ನಿರ್ಬಂಧ ಪಡಿಸಲೇಕೆ? ಜ್ಞಾನವು ಹೆಚ್ಚಾದಷ್ಟೂ ಭೋಗದಾಸೆಯು ಕಡಿಮೆಯಾಗುತ್ತಾ ಬಂದು ಕಡೆಗೆ ತಾವು ಕೈಗೊಂಡಿರುವ ಕಲೆಯೇ ತಮ್ಮ ಯೋಗವೆಂಬ ಭಾವವುಂಟಾಗುವದು. ಇದೇ ಅಲ್ಲವೆ "ಯೋಗಃ ಕರ್ಮಸು ಕೌಶಲಂ" ಎಂಬ ಹೇಳುವ ಅಮೋಘವಾದ ವಚನದ ರಹಸ್ಯ! ಯೋಗವೆಂದರೆ ಈ ಮನಸ್ಸನ್ನು ಪರಮಾತ್ಮನಲ್ಲಿ ಲೀನಮಾಡುವದೇ ಆಗಿದೆ. ಕಲೆಯು ಪರಮಾತ್ಮನ ನಿಜಸ್ವರೂಪವನ್ನು ಬೆಳಗಿ ಈ ಮನಸ್ಸನ್ನು ಸುಲಭವಾಗಿ ಆತನ ಪಾದಗಳಲ್ಲಿ ಲೀನಮಾಡಿ ಬಿಡುತ್ತದೆ. ಆದುದರಿಂದ ನಾಟಕದಲ್ಲಿ ಪಾತ್ರವನ್ನು ವಹಿಸಿದಮಾತ್ರವೇ ಸ್ತ್ರೀಯಳು ನೀತಿರಹಿತಳಾಗುವಳೆಂಬುವದಕ್ಕೆ ಆಧಾರವೇ ಇಲ್ಲ.

ನಾಟಕವು ಲೋಕಸಂಗ್ರಹಾರ್ಥವಾಗಿರುವದರಿಂದ ಸ್ತ್ರೀಯಳೇಕೆ ಇದರಲ್ಲಿ ಸಹಾಯಕಾರಿಯಾಗಬಾರದು? ಆಕೆಗೂ ಸಮಾಜಸೇವೆ ಮಾಡುವದಕ್ಕೆ ನಿಜವಾದ ಹಕ್ಕುಂಟಲ್ಲವೆ? ಆಕೆಯ ಕಲಾಭಿಮಾನವು ಹೆಚ್ಚಾಗಿದ್ದು ಈ ಬಗೆಯ ಶಕ್ತಿಯಿದ್ದರೆ ಸ್ತ್ರೀಯಳು ಅದೇಕೆ ರಂಗಭೂಮಿಯನ್ನು ತನ್ನ ಸೇವಾಮಂದಿರವನ್ನಾಗಿಸಬಾರದೆಂದು ಪ್ರಶ್ನೆ ಮಾಡಬಹುದು. ಪುರಾತನಾರ್ಯರಲ್ಲಿ ಸ್ತ್ರೀಯರಿಗೆ ಸಮಾಜಶಿಕ್ಷಣೆಗೆ ಬೇಕಾದ ಸಹಾಯವೂ ಅವಕಾಶವೂ ಇದ್ದೇ ಇದ್ದಿತು. ಪ್ರಕೃತಿಯ ತೊಡೆಯಲ್ಲಿ ಪಾಲಿತರಾಗಿ ತಪೋವನಗಳಲ್ಲಿ ಋಷಿಚರ್ಯೆಯಲ್ಲಿರುತ್ತಾ ಜ್ಞಾನಾರ್ಜನೆಗಾಗಿ ಗುರುಗಳನ್ನು ಹುಡುಕಿಕೊಂಡು ಬರುತ್ತಲಿದ್ದ ಅನೇಕ ರಾಜರಿಗೂ ಕೂಡ ಇವರಿಂದ ವಿದ್ಯೆಯು ಸಿಕ್ಕುತ್ತಿದ್ದಿತು. ಈ ಕಾಲದ ಶಿಕ್ಷಣಕ್ರಮವೇ ಬೇರೆಯಾಗಿದೆ. ಜನತೆಯು ಹೆಚ್ಚಾಗಿ ಬೆಳೆದಿದೆ. ಸುಲಭವಾದ ಪ್ರಯಾಣಾನುಕೂಲಗಳಿಂದ ದಿನೇ ದಿನೇ ಅಭಿವೃದ್ಧಿ ಹೊಂದುತ್ತಲಿದೆ. ಈ ಜನತೆಯ ಶಿಕ್ಷಣಕ್ಕೆ ನಾಟಕರಂಗವೇ ಮುಖ್ಯವಾದ ವಿದ್ಯಾಮಂದಿರವಾದುದರಿಂದ ಸ್ತ್ರೀಯರೂ ಸಹ ಇಲ್ಲಿಯೂ ಕೂಡ ತಮ್ಮ ದೇಶಸೇವೆಯ ಭಾಗವನ್ನು ಹೊಂದಲು ಬಾಧ್ಯರಿರುತ್ತಾರೆ. ನಾಟಕಕಲೆಯು ಸಮಾಜಸೇವೆಗೆ ಮುಖ್ಯ ಅಂಗವಾಗಿರುವದರಿಂದ ಸ್ತ್ರೀಯಳು ಇದರಲ್ಲಿ ಭಾಗವನ್ನು ಹೊಂದಲು ಅಧಿಕಾರಿಣಿಯಾಗಿರುವಳೆಂದು ಹೇಳಿದ್ದಾಯಿತು. ಮುಂದೆ ಸ್ತ್ರೀಯಳಿಗೆ ಕಲಾಪ್ರೇಮವಿದ್ದು ಈ ನಾಟ್ಯಕಲೆಯಲ್ಲಿ ತನ್ನಲ್ಲಿರುವ ಆತ್ಮವಿಕಾಸವನ್ನು ಹೊಂದುವದೆಂಬ ದೃಢವಾದ ನಂಬಿಕೆಯಿದ್ದರೆ ಯಾತರ ಸಲುವಾಗಿ ಆಕೆಗೆ ಈ ಮಾರ್ಗವು ಮುಚ್ಚಲ್ಪಡಬೇಕು? ನಮ್ಮಲ್ಲಿ ಸಾಧಾರಣವಾಗಿ ಅನೇಕರು ಸ್ವರ್ಗಕ್ಕೆ ಸ್ತ್ರೀಯರನ್ನು ನೂಕಲು ಬಹು ಆತುರರಾಗಿದ್ದಾರೆ. ಹೇಳುವ ನೀತಿಯೆಲ್ಲಾ ಅವರ ಸಲುವಾಗಿಯೇ. ಮಾಡುವ ಕಾಯಿದೆಗಳೆಲ್ಲಾ ಅವರಿಗೋಸ್ಕರವೆ! ಅವರಿಗೆ ವಿದ್ಯೆ ಬೇಡ; ಯೋಗ ಬೇಡ; ಜ್ಞಾನದ ಅವಶ್ಯಕತೆಯೇ ಇಲ್ಲ. ಸಾವಿರಾರು ವರುಷಗಳು ತಪಸ್ಸುಮಾಡಿ ಜ್ಞಾನಸಂಪಾದನೆ ಮಾಡಿದ ವಿಶ್ವಾಮಿತ್ರನು ಮೇನಕೆಯನ್ನು ನೋಡಿದಾಕ್ಷಣವೇ ತನ್ನ ತಪಸ್ಸಿನ

ಶ್ರದ್ಧೆಯನ್ನು ತ್ಯಜಿಸಿ ಮನಸ್ಸೋತನಂತೆ. ತನುಮನಗಳಲ್ಲಿ ಶಕ್ತಿಯಿಲ್ಲದೆ ಜ್ಞಾನದ ಒಂದು ಕಿರಣವನ್ನಾದರೂ ಕಾಣದೆ ಇರುವ ಸ್ತ್ರೀಯರು ಹೇಗೆ ಸರ್ವತ್ಯಾಗಿಗಳಾಗಬೇಕೆಂಬುದು ಇವರಿಗೆ ತೋರದು. ಹೆಂಗಸು ಪುರುಷರಿಗೆ ಘನವಾದ ಸ್ಫೂರ್ತಿಯನ್ನು ಕೊಡುವ ಶಕ್ತಿ. ಆದರೆ ಮಾತ್ರ ವಿದ್ಯಾವಿಹೀನಳಾದ ಮತ್ತು ಜ್ಞಾನವಿಹೀನಳಾದ ಸ್ತ್ರೀಯಳಿಂದ ಪುರುಷರಿಗೆ ಯಾವ ಬಗೆಯಿಂದ ಸ್ಫೂರ್ತಿಯೂ ಗೃಹದಲ್ಲಿ ಸಂತೋಷವೂ ಉಂಟಾಗುತ್ತದೋ ತಿಳಿಯುವದಿಲ್ಲ. ಇದರ ಮೇಲೋ ವಿಷಯಮತ್ತರಾದ ಅನೇಕ ಸ್ವನಿರ್ಮಿತ ಧರ್ಮೋಪದೇಶಕರು ಉಪದೇಶಿಸುವದೋ "ನಾರಿ ನರಕಕೆ ದಾರಿ ಮುಸಿದರೆ ಮಹಾಮಾರಿ". ಇವರಿಗೆ ಬೇಕಾಗುವದೇನೋ ಇವರೆಡೆ! ಈ ರೀತಿಯಾಗಿ ಸಾರುತ್ತಲಿರುವಾಗ ಸ್ತ್ರೀಯರೆಂದರೆ ಎಷ್ಟು ಕೆಟ್ಟರಾದವರೆಂದು ತಿಳಿದಿದ್ದರಾದೀತು? ಈ ವಿಧವಾದ ಅಭಿಪ್ರಾಯವನ್ನು ಪಡೆದಿರುವದರಿಂದಲೇ ಸ್ತ್ರೀಯರಿಗೆ ಸಂತಾನಭಾರವಿನಹ ಮತ್ತೆ ಯಾವ ವಿಧವಾಗಿಯೂ ಜೀವಿಸುವ ಅಧಿಕಾರವಿಲ್ಲವೆಂದು ಸಾರುತ್ತಲಿರುವದಲ್ಲದೆ ಪಶುಗಳಿಗಿಂತ ಕಡೆಯಾಗಿ ಹೆಣ್ಣುಮಕ್ಕಳನ್ನು ಸಮಾಜದ ನಿಬಂಧನೆಯೆಂದು ಬಲಿಕೊಟ್ಟು ದೇಶದ ಉನ್ನತಿಯ ಪತಾಕೆಯನ್ನು ಧೂಳಿನಲ್ಲಿ ತಳ್ಳಿ ಪರದೇಶೀಯರ ಪದತಳದಲ್ಲಿ ಬಿದ್ದಿರುವದು.

ಇದರಿಂದ ಸ್ತ್ರೀಯರು ಸಂಸಾರಗೃಹಿಣಿಯರಾಗಿರಬಾರದೆಂಬ ಅಭಿಮತವಲ್ಲ, ಅಲ್ಲದೆ ಸ್ತ್ರೀಯರಿಗೊಂದು ಸ್ವಧರ್ಮವಿದ್ದರೆ ಗೃಹಿಣಿಯಾಗಿರಲಾರರೆಂದೂ ಅಲ್ಲ. ಸ್ತ್ರೀಯರ ಸರ್ವ ಶಕ್ತಿಯನ್ನು ಅಡಗಿಸಿ ಹತಮಾಡಿ ಅವರನ್ನು ಭೋಗಸಾಮಗ್ರಿಯೆಂದು ಭಾವಿಸುವದು ಸರ್ವಥಾ ಸರಿಯಲ್ಲವೆಂಬುದು ಮಾತ್ರವೆ ಅಲ್ಲದೆ ಜ್ಞಾನವಿಕಾಸ ಕಲಾಭಿಮಾನಗಳನ್ನು ಹೊಂದಿರತಕ್ಕ ಸ್ತ್ರೀಯರು ಸಂಸಾರದಲ್ಲಿ ಪ್ರೇಮದ ಸಾರವನ್ನು ಇಳಿಸಿ ತೆಗೆಯುವರು.

ಧರ್ಮವೆಂದರೆ ಬರಿಯ ಅಧ್ಯಾಯನ ಅಧ್ಯಾಪನೆಗಳಲ್ಲ. ತಾತ್ವಿಕ ಧರ್ಮದ ಅಭಾವದಿಂದ ಮೃಗಜಲದಂತೆ ಬಾಹಿರವೇಷವನ್ನು ಹೊಂದಿರುವ ಅವರ ವೇಷದ ಆಡಂಬರಗಳಲ್ಲ. ಧರ್ಮವೆಂದರೆ(ಧೃ—ಧಾರಯತೇ)ಯಾವದು ಪ್ರಜೆಗಳನ್ನು ಹಿತದಿಂದ ಸೇರಿಸಿಡುವದೋ ಅದೇ ಧರ್ಮವು. ಇಂಥ ಸಮಾಜಹಿತದ ಸಂಗ್ರಹಾರ್ಥವಾಗಿ ಸ್ತ್ರೀಯರೇಕೆ ರಂಗಭೂಮಿಯ ಸೇವೆ ಮಾಡಲಾಗದು? ಇದೇ ಸ್ವಧರ್ಮವೆಂದು ಭಾವಿಸುವ ಸ್ತ್ರೀಯರು ಬಹಳ ಜನರಿರಬಹುದು. ಸ್ವಧರ್ಮಕ್ಕೆ ವಿಶಾಲವಾದ ಮತ್ತು ಸರ್ವತೋಮುಖಿಯಾದ ಅರ್ಥವಿರಬೇಕು. ಇತರರು ಹೇಳಿದಂತೆ ಕುಣಿಯುವದು ಸ್ವಧರ್ಮವಲ್ಲ. "ಸಮಾಜದ ತನು ಮನಗಳನ್ನು ಅಧ್ಯಾತ್ಮಿಕ ತತ್ವಗಳಿಗೆ ಏಕತಾನವಾಗಿರುವಂತೆ ಮಾಡಿ ಸಾರ್ವಜನಿಕ ಸುಖಸಾಮ್ರಾಜ್ಯವನ್ನು ಸ್ಥಾಪಿಸುವದೇ ನಿಜವಾದ ಧರ್ಮವು."

ಸ್ತ್ರೀಯರಿಗೆ ಸ್ವಧರ್ಮವನ್ನು ತಾವಾಗಿ ಆರಿಸಿಕೊಂಡು ಆನಂದಮಯವಾದ ಜ್ಞಾನದ ತೇಜಸ್ಸು ಪ್ರತಿಬಿಂಬಿಸುವಂತೆ ಹೃದಯವನ್ನು ಪ್ರಫುಲ್ಲಿತವಾಗಿಟ್ಟುಕೊಂಡಿರುವ ಬಾಧ್ಯತೆಯಿರುವದಲ್ಲದೆ ನಾಟಕದಲ್ಲಿ ಪಾತ್ರವನ್ನು ವಹಿಸುವದೂ ಕೂಡ ಕೇವಲ ಘನತೆಯ ಕೆಲಸವೆಂದೂ ಇದು ಕರ್ಮಭೂಮಿಗಿಳಿದ ಕರ್ಮವೀರರ ಕರ್ಮಗಳಲ್ಲಿ ಒಂದು ಮಹತ್ಕರ್ಮವೆಂದೂ ತಿಳಿಯಲು ಸಾಕಾದಷ್ಟು ಕಾರಣಗಳಿವೆ. ಆಯಾ ಪಾತ್ರಕ್ಕೆ ಅನುಗುಣವಾದ ಭಾವಗಳನ್ನು ಪ್ರತಿರೂಪಿಸುವದು ಸಾಮಾನ್ಯವಾದ ಕೆಲಸವಲ್ಲ. ಪ್ರತಿಯೊಬ್ಬ ನಟಳೂ ನಿರಂತರ ಪಠನಶೀಲಳಾಗಿದ್ದು ಆ ಪಾತ್ರದ ಪಂಚಪ್ರಾಣಗಳನ್ನು ತನ್ನದಾಗಿಸಿಕೊಳ್ಳಬೇಕು. ಹಿಂದೆ ಇರ್ವಿಂಗ್ ಎಂಬ ಘನವನ್ನು ಪಡೆದ ನಟನು ರಿಚರ್ಡ III ಎಂಬುವವನ ಪಾತ್ರವನ್ನು ವಹಿಸಿದಾಗ ಟೆನಿಸ್‌ನ್ನನು ಆಶ್ಚರ್ಯದಿಂದ ಸ್ವಲ್ಪಕಾಲ ಸ್ತಂಭಿತನಾಗಿ ಅನಂತರ ಹೇಳಿದ್ದೇನಂದರೆ "ಗೆಳೆಯಾ, ಆ ಪ್ಲಾಂಟಾಜೆನೆಟ ಕುಟುಂಬದ ನೋಟವನ್ನುಸಹ ಎಲ್ಲಿ ಪಡೆದೆ." ಎಂದು, ಅಲ್ಲದೆ ಆತನೆ ರೋಮಿಯೋ ಪಾತ್ರವನ್ನು ವಹಿಸುವವನಿರುವಾಗ ನಾಟಕ ಪ್ರಾರಂಭವಾಗುವವರಿಗೂ ಯಾರೊಡನೆಯಾಗಲೀ ಇರ್ವಿಂಗನು ಮಾತನಾಡುತ್ತಲಿರಲಿಲ್ಲ. ಆತನ ಮನವೆಲ್ಲಾ ಆ ಪಾತ್ರದಲ್ಲಿ ಲೀನವಾಗಿ ಆ ರೋಮಿಯೋವಿನ ತೇಜವೆಲ್ಲಾ ಈತನಲ್ಲಿ ಸೇರಿದಂತೆ ಇದ್ದಿತು." ನಿರಂತರವೂ "Thou shalt not teach me to forget" ಎಂಬುವ ಒಂದು ವಾಕ್ಯವನ್ನು ಪಠನ ಮಾಡುತ್ತಲಿದ್ದನು. ಅಂದ ಮೇಲೆ ನಾಟಕದಲ್ಲಿ ಪಾತ್ರ ವಹಿಸುವವರಿಗೆ ಧ್ಯಾನ ಮನನಶಕ್ತಿಗಳು ಎಷ್ಟರಮಟ್ಟಿಗೆ ಸ್ವಾಭಾವಿಕವಾಗಿ ಬರುವವು! ಅದರಿಂದ ಭಗವಂತನ ಸಾನಿಧ್ಯ ಸೌಖ್ಯವನ್ನು ಹೊಂದಲು ಅವರಿಗೆ ಎಷ್ಟು ಸುಲಭವಾದ ಕೆಲಸವಾಗುವದು! ಶಕ್ತಿಯು ಅಖಂಡವಾದದ್ದು; ಅದನ್ನು ಯಾವ ವಿಧವಾಗಿಯಾದರೂ ಉಪಯೋಗಿಸಿಕೊಳ್ಳುವ ಹವ್ಯಾಸದ ಜ್ಞಾನವನ್ನಿಗೆ ಖಂಡಿತವಾಗಿಯೂ ಇದ್ದೇ ಇರುವದು. ಇಷ್ಟು ಘನವಾದ ಮತ್ತು ಮನೋವಿಕಾಸಕ್ಕೆ ಬೇಕಾದಷ್ಟು ಅವಕಾಶ

ಕೊಡುವ ಕೆಲಸವನ್ನು ತಮ್ಮ ಕರ್ತವ್ಯವೆಂದು ತಿಳಿದು ಮಾಡು ವದರಿಂದ ಯಾವ ದೋಷವೂ ಇರುವದಿಲ್ಲ.

ಸ್ತ್ರೀಯರಿಗೆ ನಾಟಕಗಳಲ್ಲಿ ಪಾತ್ರವನ್ನು ವಹಿಸಲು ಮುಂದರಿದು ಬರುವದು ಈಗಿನ ಪರಿಸ್ಥಿತಿಯಲ್ಲಿ ಕಷ್ಟವಾದ ವಿಚಾರವೇ ಆಗಿದೆ. ಜನಾಪವಾದದ ಬೇಗೆಯಲ್ಲಿ ಬೆಂದು ದುಶ್ಚರಿತ್ರೆಯೆಂಬ ಹೆಸರಿನ ಭಾರವನ್ನು ಹೊತ್ತು ತಲ್ಲಣಿಸಬೇಕಾಗುವದು. ನಮ್ಮ ಸಮಾಜದ ಡಾಂಭಿಕ ಸ್ವನಿರ್ಮಿತ ಗುರುಗಳು ಸ್ತ್ರೀಯರು ಪಾತ್ರವನ್ನು ವಹಿಸುವರೆಂದರೆ ಗುಂಪು ಗುಂಪಾಗಿ ನಾಟಕ ಮಂದಿರವನ್ನು ತುಂಬುವರಾದರೂ ಅನಂತರ ದೂಷಿಸಿ, ಅವರನ್ನು ಹೀಯಾಳಿಸುವ ಶೂರರೇ! ಚಿಂತೆಯಿಲ್ಲ, ಸ್ತ್ರೀಯರು ತಮ್ಮ ಆದರ್ಶದ ಶಕ್ತಿಯಿಂದ ಇದು ವರೆಗೆ ಎಷ್ಟೋ ಕಷ್ಟಗಳಲ್ಲಿ ಪಾರಾಗಿ ರಾಷ್ಟ್ರ ಸೇವೆಮಾಡುವ ಸಲುವಾಗಿ, ತನು ಮನಗಳ ಉನ್ನತಿಗಾಗಿ ಹೋರಾಡಿ ಕೃತಕೃತ್ಯರಾಗಿರುವಂತೆ ಇಲ್ಲಿಯಾದರೂ ತಮ್ಮ ಶಕ್ತಿಯನ್ನುಪಯೋಗಿಸಬಲ್ಲರು. ಕಷ್ಟಗಳನ್ನು ಸಹಿಸುವ ಸಹಿಷ್ಣುತೆಯು ಸ್ತ್ರೀಯರಿಗಲ್ಲದೆ ಮತ್ತಾರಲ್ಲಿ ಹೆಚ್ಚಾಗಿರಬಲ್ಲದು? ಸ್ತ್ರೀಯರ ಭೋಗವೆಲ್ಲ ಆತ್ಮತ್ಯಾಗದಲ್ಲೇ ಇಲ್ಲವೆ? ಕಲಾಭಿಮಾನಕ್ಕಾಗಿ, ದೇಶ ಹಿತಕ್ಕಾಗಿ ನಮ್ಮ ಹೃದಯದ ಪ್ರತಿಯೊಂದು ರಕ್ತಬಿಂದುವನ್ನೂ ಸಹ ಕೊಡಲು ಸಿದ್ಧರಿರುವರೆಂದು ತಿಳಿಯಹೇಳಲು ನಾವು ಮುಂದೆ ನಿಲ್ಲುವ. ನಮ್ಮೀ ಸಹಾಯವಿಲ್ಲದೆ ನಮ್ಮೀ ಪುರುಷರು ಎಂದಾದರೂ ಭಾರತಮಾತೆಯ ಸ್ವಾತಂತ್ರ್ಯ ಮಾಂಗಲ್ಯವನ್ನು ಆಕೆಗೆ ಪುನ, ಲಭಿಸುವಂತೆ ಮಾಡುವರೋ ನೋಡುವ. ಇದಕ್ಕೆ ಬೇಕು ಧೈರ್ಯ, ಸಾಹಸ, ಆತ್ಮತ್ಯಾಗದ ಪರಮ ಭೋಗ.

ಪೂಜ್ಯವಾದ ಆತ್ಮ ತ್ಯಾಗದ ಬಲದಿಂದ ದೇಶದ ಪರಿಸ್ಥಿತಿಯು ಶುದ್ಧವಾಗಿಯೆ ಆಗುವದು; ಇದರಲ್ಲಿ ಎಳ್ಳಷ್ಟಾದರೂ ಸಂಶಯವು ಇರಲಾರದು. ಪ್ರಪಂಚದ ಇತರ ದೇಶೀಯರು ತಮ್ಮ ದೇಶದ ರಕ್ಷಣೆಯ ಸಲುವಾಗಿ ತಮ್ಮ ಮಕ್ಕಳ ರಕ್ತದ ಪ್ರವಾಹವನ್ನು ದೇಶದಲ್ಲಿ ಎಷ್ಟು ಹರಿಸಿಲ್ಲ! ಆತ್ಮತ್ಯಾಗದ ಹಬ್ಬವನ್ನೇ ಮಾಡಿಲ್ಲ! ನಮಗೆ ಮಾತ್ರ ಆ ಸೌಭಾಗ್ಯವು ಬೇಡವಾಯಿತೆ? ನಮ್ಮ ಆದರ್ಶರಹಿತದೌರ್ಬಲ್ಯವೇ "ಅತ್ಯಾಚಾರ ಪ್ರಿಯರಿಗೆ ಸ್ವಾಗತ" ವಲ್ಲವೇ! ಕಲಾಭಿರುಚಿಗೆ ಕಲಂಕವು ಹತ್ತಿದರೆ ಜೀವಕ್ಕೆ ಹೇಯವಾದ ಮೋಹದ ವ್ಯಾಪಸೆಯೇ ಸರಿ. ಜ್ಞಾನದ ನಿರ್ಝರಿಯು ಆದರ್ಶ ಪ್ರೇಮದಲ್ಲಿ. ಸೌಂದರ್ಯೋಪಾಸನೆಯು ಸೌಂದರ್ಯ ಸಾಗರನಾದ ಪರಮಾತ್ಮನನ್ನು ಸೇರುವ ಯೋಗಸೌಭಾಗ್ಯವು. ಭಾವತರಂಗಗಳ ಮೇಳವೇ ಸೌಂದರ್ಯೋಪಾಸನೆಯ ಮುಖ್ಯತತ್ವ. ಕಲಾಶಿಖರವಾದ ನಾಟಕ ಕಲೆಯಲ್ಲಿಯಲ್ಲದೆ ಬೇರೆ ಎಲ್ಲಿ ತಾನೆ ಸೌಂದರ್ಯೋಪಾಸನೆಯು ಸಾಧ್ಯವಾದೀತು!

---

# 'ಹಿಂದೂ' ಶಬ್ದದ ವ್ಯಾಪನೆ

ಲೇಖಕರು :—ಶ್ರೀ. ಮಂ. ಅ. ದೊರೆಸ್ವಾಮಿ ಐಯ್ಯಂಗಾರ M. A. B. L. ಮೈಸೂರು.

ಗೋಬ್ರಾಹ್ಮಣರಲ್ಲಿ ಪೂಜ್ಯಬುದ್ಧಿಯನ್ನಿಡುವುದು ಹಿಂದೂಧರ್ಮಕ್ಕೆ ಅತಿಮುಖ್ಯ ಲಕ್ಷಣವೆಂದು ಬಹುಮಂದಿ ಅಭಿಪ್ರಾಯಪಡುವದು. ಮುಖ್ಯವಾಗಿ ಪಾಶ್ಚಾತ್ಯಪಂಡಿತರು ಇದೇ ಹಿಂದೂತ್ವಕ್ಕೆ ಅತಿಸ್ಪಷ್ಟವಾದ ಬಾಹ್ಯಲಕ್ಷಣವೆಂದು ನಿರೂಪಿಸುವರು. ಒಂದು ವಿಧವಾಗಿ ನೋಡಿದರೆ ಇದು ನಿಜವೇ ಸರಿ. ವೇದಕಾಲದಿಂದಲೂ ನಾವು ಬ್ರಾಹ್ಮಣರನ್ನೂ ಗೋವನ್ನೂ ಮರ್ಯಾದಿಸುತ್ತ ಬಂದಿದ್ದೇವೆ. ಹಿಂದೂಸಮಾಜದಲ್ಲಿ ಬ್ರಾಹ್ಮಣರು ಮತವೊಂದರಲ್ಲಿ ಮಾತ್ರ ಪ್ರಧಾನರೆಂದು ಹೇಳುವುದು ತಪ್ಪು. ಕಾರಣಗಳು ಹೇಗಿದ್ದರೂ ಅವರು ಆದಿ ಕಾಲದಿಂದಲೂ ಮತ, ವಿದ್ಯೆ, ಸಾಮಾಜಿಕವ್ಯವಹಾರ, ಕುಲ, ನಾಗರಿಕತೆ, ರಾಜಕೀಯಪ್ರಾಬಲ್ಯ ಇವುಗಳೆಲ್ಲದರಲ್ಲೂ ಹಿಂದೂ ಸಮಾಜದಲ್ಲಿ ಪ್ರಧಾನರಾಗಿರುತ್ತಿರುವರು. ಲೋಕದ ಇತರ ಎಲ್ಲಾ ದೇಶಗಳಲ್ಲೂ ಅಲ್ಲಿನ ರಾಜರುಗಳ ಚರಿತ್ರೆಯನ್ನು ತಿಳಿದರೆ ಆ ದೇಶದ ಚರಿತ್ರೆಯನ್ನು ತಿಳಿದಂತೆ ಆಗುವುದು. ಎಲ್ಲೋ ಒಂದೆರಡು ಕಡೆ ಮಾತ್ರ ಇದರ ಜತೆಗೆ ಅಲ್ಲಿನ ಕೆಲ ಮಹಾಪುರುಷರ ಚರಿತ್ರೆಯ ನಡೆವಳಿಯನ್ನೇ ಬದಲಾಯಿಸಿರುವ ಮಹಾಪುರುಷರೆಲ್ಲರೂ ರಾಜಕೂಟದಿಂದ ಹೊರತಾಗಿ ಹುಟ್ಟಿ ಮಹಿಮೆಗೊಂಡಿರುವರು. ಇದನ್ನು ಗಮನಿಸದೆ ಪಾಶ್ಚಾತ್ಯ ಪಂಡಿತರುಗಳು ಈ ದೇಶದ ಚರಿತ್ರೆಯನ್ನು ಇಲ್ಲಿನ ರಾಜನ್ಯರ ಚರಿತ್ರೆಯ ದ್ವಾರಾ ಪೋಣಿಸಲು ಪ್ರಯತ್ನಿಸಿ ನಾನಾಬಗೆಯಾದ ಅಪಾರ್ಥಗಳನ್ನೂ ಅನರ್ಥಗಳನ್ನೂ ಕಲ್ಪಿಸಿರುವರು. ರಾಜನ್ಯರನ್ನು ಬಿಟ್ಟು ಮಹಾಪುರುಷರುಗಳ ಚರಿತ್ರೆಯನ್ನು ನೋಡಿ

ದರೂ ಭಾರತಚರಿತ್ರೆಯು ಪೂರ್ಣವಾಗಿ ಹೊರಪಡುವುದಿಲ್ಲ. ಏಕೆಂದರೆ, ಇತರ ಜನಾಂಗಗಳಂತಲ್ಲದೆ ಇಲ್ಲಿ ಮಹಾಪುರುಷರಿಗಿಂತಲೂ ಸಮಾಜದ ಸಂಸ್ಥೆಗಳು (Institution) ಹೆಚ್ಚು ಪ್ರಾಬಲ್ಯವುಳ್ಳುವಾಗಿ ಇಲ್ಲಿನ ಜನಸ್ತೋಮ ಪರಂಪರೆಯಹೃದಯವನ್ನು ಆಳುತ್ತ ಅವರ ಪ್ರವೃತ್ತಿ ನಿವೃತ್ತಿಗಳನ್ನೂ ವಿಧಾಯಕಪಡಿಸುತ್ತ ಇರುವುದರಿಂದ ಮಹಾಪುರುಷರು ಈ ಜನಾಂಗದ ಆತ್ಮಸ್ವರೂಪವನ್ನು ಸಂಪೂರ್ಣವಾಗಿ ಪ್ರತಿಫಲಿಸುವಂತೆ ಮಾಡಲಾರರು. ಈ ಕಾರಣದಿಂದಲೂ ಮತ್ತನೇಕ ಕಾರಣಗಳಿಂದಲೂ ಈ ದೇಶದಲ್ಲಿ ಮಹಾಪುರುಷರಿಗೆ ಚರಿತ್ರೆಯೇ ಇಲ್ಲದಾಗಿದೆ. ಎಷ್ಟೋಮಂದಿಯ ಹೆಸರನ್ನು ಸಹ ಇಲ್ಲಿ ಮರೆಯದೆ ಕಾಪಾಡುವುದಿಲ್ಲ. ಹೆಸರು ನಿಂತರೂ ಅವರ ದೇಶ, ಕಾಲ, ಜೀವನವೃತ್ತಾಂತ ಇವಾವುವೂ ದೊರೆಯುವುದಿಲ್ಲ. ಇಲ್ಲಿನ ಸಂಸ್ಥೆಗಳಿಗೆಲ್ಲ ಮೂಲಸೂತ್ರಪ್ರಾಯವಾದುದು ಬ್ರಾಹ್ಮಣ್ಯವು. ಆದ್ದರಿಂದ ಬ್ರಾಹ್ಮಣ್ಯದ ಚರಿತ್ರೆಯೇ ಹಿಂದೂಚರಿತ್ರೆಯಾಗಿದೆ.

ಹೀಗಿದ್ದರೂ ಬ್ರಾಹ್ಮಣಪೂಜನವೇ ಹಿಂದೂತ್ವದ ಆಧಾರಲಕ್ಷಣವೆಂದು ಭಾವಿಸಲಾಗುವುದಿಲ್ಲ. ಜೈನ, ಬೌದ್ಧ, ಸೀಖ, ಲಿಂಗಾಯತಾದಿಗಳೆಲ್ಲರೂ ಬ್ರಾಹ್ಮಣಪ್ರಾಧಾನ್ಯವನ್ನೊಪ್ಪರು. ಇತರರೂ ಈಗ ರಾಜಕೀಯವಾಗಿ ಇದನ್ನು ವಿರೋಧಿಸುತ್ತಿರುವರು. ಭಕ್ತಿಮಾರ್ಗದರ್ಶಕರಾದ ಆಚಾರ್ಯರುಗಳೆಲ್ಲರೂ ಜಾತಿಗಿಂತಲೂ ಭಕ್ತಿಯೇ ಮೇಲೆಂದು ಸಾರಿ ಬ್ರಾಹ್ಮಣನಿಗಿಂತಲೂ ಭಕ್ತನೇ ಮಾನ್ಯನೆಂದು ನಿರೂಪಿಸಿರುವರು. ಬ್ರಾಹ್ಮಣ್ಯಕ್ಕೂ ಬ್ರಾಹ್ಮಣಜಾತಿಸಂಸ್ಥೆಗೂ ಸಮವಾಯ ಸಂಬಂಧವೇನೂ ಇಲ್ಲ. ಮೇಲೆ ಹೇಳಿದ ಪ್ರಶಸ್ತಿಯೆಲ್ಲವೂ ಬ್ರಾಹ್ಮಣ್ಯದ್ದಾಗಿರುವುದು. ಆದರೆ ಬ್ರಾಹ್ಮಣ್ಯದ ಅನುಷ್ಠಾನ ಸಂರಕ್ಷಣ ಭರಣಗಳಿಗೆ ವಂಶಪಾರಂಪರ್ಯವಾಗಿ ಗೊತ್ತಾಗಿದ್ದವರು ಬ್ರಾಹ್ಮಣರೆಂಬ ಹೆಸರನ್ನು ಪಡೆದರೂ ಈ ಕಾರ್ಯವನ್ನು ಇವರು ಮಾತ್ರವೇ ಸಾರ್ವತ್ರಿಕವಾಗಿ ಎಲ್ಲಾ ಕಾಲದಲ್ಲೂ ಅತ್ಯುತ್ತಮವಾಗಿ ಮಾಡಿರುವರೆಂದು ಹೇಳಲು ಆಗುವುದಿಲ್ಲ. ಬ್ರಾಹ್ಮಣಜಾತಿ ಹುಟ್ಟುವುದಕ್ಕೆ ಮುಂಚಿತವಾಗಿಯೇ ಬ್ರಾಹ್ಮಣ್ಯವು ಹುಟ್ಟಿದ್ದಿತು. ಉಪನಿಷತ್ತುಗಳ ಕಾಲದಲ್ಲಿ ಬ್ರಾಹ್ಮಣಜಾತಿಯವರಿಗಿಂತಲೂ ಕ್ಷತ್ರಿಯ ಸಂತಾನವೇ ಬ್ರಾಹ್ಮಣ್ಯಧ್ಯೇಯದ ಅನುಷ್ಠಾನ ಪರಿಪಾಲನ ಅಭಿವೃದ್ಧಿಗಳಿಗೆ ಆಧಾರವಾಗಿದ್ದರು. ಭಾರತಚರಿತ್ರೆಯಲ್ಲಿ ಈ ಧ್ಯೇಯದ ವಿಕಾಸಕ್ಕೂ ಸಮಯೋಚಿತವಾದ ನಿರ್ವಾಹಕ್ಕೂ ಬ್ರಾಹ್ಮಣಜಾತಿಯವರಷ್ಟೇ ಇತರ ಜಾತಿಯವರೂ ಶ್ರಮಪಟ್ಟಿರುವರು. ಈ ಧ್ಯೇಯಸಂಪನ್ನರು ಮಾತ್ರವೇ ನಿಜವಾದ ಬ್ರಾಹ್ಮಣರೆನ್ನಿಸುವರು. ಈ ಧ್ಯೇಯಕ್ಕೆ ಸಲ್ಲಬೇಕಾದ ಮರ್ಯಾದೆಯು ಇಂಥವರಿಗೆ ಮಾತ್ರ ಸಲ್ಲಬೇಕು. ಆದರೆ ಇಂಥಾ ಬ್ರಾಹ್ಮಣರು ಹಿಂದೂಮತಕ್ಕೆ ಸೇರದೆ ಇರತಕ್ಕವರಲ್ಲೂ ಗೋಚರಿಸಬಹುದು.—ಇತ್ಯಾದಿಕಾರಣಗಳಿಂದ ಬ್ರಾಹ್ಮಣಜಾತಿಪೂಜನವೇ ಹಿಂದೂತ್ವದ ನಿರ್ವಚನಕ್ಕೆ ಆಧಾರವಾಗಲಾರದು.

ಮೇಲೆ ನೋಡುವುದಕ್ಕೆ ಬ್ರಾಹ್ಮಣಪೂಜೆಗಿಂತಲೂ ಗೋಪೂಜೆಯು ಹಿಂದೂತ್ವಕ್ಕೆ ಪ್ರಶಸ್ತವಾದ ಬಾಹ್ಯಲಕ್ಷಣವೆಂದು ಕಾಣುವುದು. ಗೋಪೂಜೆಯು ವೇದಕಾಲದಿಂದಲೂ ಉತ್ತರೋತ್ತರವಾಗಿ ಬೆಳೆಯುತ್ತ ಬಂದಿದೆ. ಯಾವ ವಸ್ತುವಿನ ವೈಯಕ್ತಿಕತೆಯೂ (Individuality) ಅದಕ್ಕೂ ಇತರ ವಸ್ತುಗಳಿಗೂ ಇರತಕ್ಕ ಸ್ಪಷ್ಟ ವ್ಯತ್ಯಾಸ ಗುಣದಿಂದ ನಿರ್ಧರಪಡುವುದು. ಹಿಂದೂಗಳಿಗೂ ಅವರ ಪ್ರತಿದ್ವಂದ್ವಿಗಳಾದ ಮುಸಲ್ಮಾನರಿಗೂ ಗೋವು ಅನೇಕ ಶತಮಾನಗಳಿಂದ ಉಭಯರ ಪೃಥಗಾತ್ಮ ಸ್ವರೂಪವನ್ನು ನಿರ್ಧರ ಪಡಿಸತಕ್ಕ ಸಾಮಗ್ರಿಯಾಗಿ ಪರಿಣಮಿಸಿರುವುದು. ಹಿಂದುಗಳನ್ನು ಅತಿಹೇಯವಾಗಿ ಅಪಮಾನಿಸುವುದು ಎಂದರೆ ಅವರಿಗೆ ಗೋಮಾಂಸವನ್ನೂಡಿಸಿ ಅವರ ಪವಿತ್ರ ಸ್ಥಳಗಳಲ್ಲಿ ಗೋವಧೆ ಮಾಡುವುದು ಎಂದು ಮುಸಲ್ಮಾನರು ಬಹುಕಾಲದಿಂದ ಭಾವಿಸಿರುವರು. ಹಿಂದುಗಳನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುವುದಕ್ಕೆ ಅತಿ ದೃಢವಾದ ಸಂಸ್ಕಾರವು ಅವರಿಗೆ ಗೋಮಾಂಸವನ್ನು ತಿನ್ನಿಸುವುದಾಗಿದೆ. ಮುಸಲ್ಮಾನರು ತಾವು ಆಚರಿಸುವ ಕುರ್ಬಾಣಿಗೆ ಈ ದೇಶದಲ್ಲಿ ಗೋವನ್ನು ಅರ್ಪಿಸಿದರೆ ಮಾತ್ರವೇ ಅದು ಪವಿತ್ರವಾಗುವುದೆಂದು ಎಣಿಸುವರು. ಹೀಗೆ ಮುಸಲ್ಮಾನರ ಚಿತ್ತಭಿತ್ತಿಯಲ್ಲಿ ಹಿಂದೂತ್ವಕ್ಕೆ ಗೋವೇ ಮುಖ್ಯಚಿನ್ಹವೆಂದು ಚಿತ್ರಿತವಾಗಿದೆ. ಪ್ರತಿಯೋಗ ಸಂಸ್ಕಾರದಿಂದ ಹಿಂದೂಗಳ ಮನಸ್ಸಿನಲ್ಲೂ ಇಂಥಾ ಭಾವನೆಯೇ ಉಂಟಾಗಿರುವುದು. ಮುಸಲ್ಮಾನರ ಮೇಲೆ ಇವರು ಯಾವಾಗ ಬೀಳಬೇಕಾದರೂ ಗೋವಿನ ಹೆಸರು ಹೇಳಿಕೊಂಡು ಕಾರ್ಯಾರಂಭ ಮಾಡುತ್ತಿರುವರು. ಶಿವಾಜಿಯು ಗೋಬ್ರಾಹ್ಮಣ ಪರಿಪಾಲನೆಗಾಗಿ ಸ್ವರಾಜ್ಯ ಸಂಗ್ರಹಮಾಡಿದನು. ನಾನಾರಾಯನ ದಂಗೆ ಸಹ ಗೋನಿಮಿತ್ತವಾಗಿಯೇ ಆರಂಭಿಸಿತು. ಗೋವು ಆ ಕೃಷ್ಣನಿಗೆ ಪ್ರಿಯವಾದ ವಸ್ತು. ವೃಷಭವು ಶಿವನ ವಾಹನವು. ಇವರಿಬ್ಬರನ್ನು ಪೂಜಿಸುವಾಗಲೂ ಗೋವಿನ ದೇವತೆಯನ್ನು ಪೂಜಿಸದೆ ತೀರದು. ಹೀಗೆ ಗೋವನ್ನು

ಪೂಜಿಸಿ ಅದರ ಸಗಣಿ ಗಂಜಳನನ್ನು ಸೇವಿಸುತ್ತ ಗೋವಿಗಾಗಿ ಸಾವಿರ ಗಟ್ಟಲೆಯಾಗಿ ಪ್ರಾಣವನ್ನರ್ಪಿಸುವುದಕ್ಕೂ ಸಹ ಸಿದ್ಧರಾಗಿರತಕ್ಕವರು ಲೋಕದಲ್ಲಿ ಹಿಂದೂಗಳೊಬ್ಬರೇ ಆಗಿರುವರು. ಇವಲ್ಲದೆ ಹಿಂದೂ ಪಂಗಡದಲ್ಲಿ ನಾವು ಸೇರಿಸಿಕೊಳ್ಳಬೇಕೆಂದು ಬಗೆಯತಕ್ಕವರೆಲ್ಲರೂ— ಜೈನ ಬೌದ್ಧ ಸಿಖ ಪಾರಸಿಕ ಬ್ರಾಹ್ಮ ಆರ್ಯ ಸಮಾಜಿಕರೆಲ್ಲರೂ ಗೋವನ್ನು ಪೂಜಿಸುವರು.

ಆದರೆ ಹಿಂದೂಗಳು ಎಂದರೆ ಗೋಪೂಜಕರು ಎಂದು ಹೇಳುವ ಈ ನಿರ್ವಚನವು ಸಮರ್ಪಕವಾದುದೆ? ಜನರು ಪ್ರಾಯಶಃ ತಲೆಗೆ ನವಿಲು ಗರಿ ಸಿಕ್ಕಿಸಿಕೊಳ್ಳರು. ಶ್ರೀ ಕೃಷ್ಣನು ಹಾಗೆ ಮಾಡುತ್ತಿದ್ದನಂತೆ. ಆದ್ದರಿಂದ ಶ್ರೀಕೃಷ್ಣನ ವೈಲಕ್ಷಣ್ಯವೇನೆಂದು ಕೇಳಿದರೆ ಗೀತಾಕರ್ತೃವು, ಭಾರತ ಸಾಮ್ರಾಜ್ಯ ಸ್ಥಾಪನಾಚಾರ್ಯನು, ಭಾಗವತ ಧರ್ಮ ಪ್ರವರ್ತಕನು ಎಂದು ಹೇಳುವುದಕ್ಕೆ ಬದಲಾಗಿ ಬರ್ಹಿಪಿಂಛಾಭರಣನೆಂದು ಹೇಳುವುದು ಹಾಸ್ಯಾಸ್ಪದವಾಗುವುದು. ವಸ್ತುವಿನ ವೈಲಕ್ಷಣ್ಯವನು ಅದರ ಉತ್ತಮ ಗುಣಗಳಿಂದ ನಿರೂಪಿಸಬೇಕಲ್ಲದೆ ನಿಕೃಷ್ಟ ಗುಣಗಳಿಂದಲ್ಲವು. ಆದ್ದರಿಂದ ಲೋಕಾತಿಶಯವಾದ ಐತಿಹಾಸಿಕ ಮಹಿಮಾ ಸಂಪತ್ತಿಯಿಂದ ಸರ್ವ ಶ್ರೇಷ್ಠತೆಯಿಂದ ಮೆರೆಯುತ್ತಿರುವ ಹಿಂದೂ ಧರ್ಮಕ್ಕೆ ಮುಖ್ಯ ಲಕ್ಷಣವು ಮೃಗಪೂಜೆಯು ಎಂದು ಹೇಳುವುದು ಶುದ್ಧ ಕುಚೋದ್ಯವೇ ಆಗುವುದು. ಹಿಂದೂ ಧರ್ಮದಲ್ಲಿ ಪಶುಪೂಜೆಯು ಪಾಮರ ಸಾಧಾರಣಧರ್ಮವಾಗಿರುವುದು. ಈ ಧರ್ಮದ ಅತ್ಯುಚ್ಚವಾದ ಧ್ಯೇಯಗಳು ಉಪನಿಷತ್ತುಗಳಲ್ಲೂ ಗೀತೆಯಲ್ಲೂ ಅಡಗಿವೆ. ಇಂಥಾ ವೇದಾಂತ ಧರ್ಮವು ಹಿಂದೂ ಮತಕ್ಕೆ ಕಲಶಪ್ರಾಯವಾಗಿ ಅದರ ಲೋಕ ಪ್ರಸಿದ್ಧಿಗೆಲ್ಲಾ ಕಾರಣವಾಗಿರುವಾಗ ಹಿಂದೂಧರ್ಮವೆಂದರೆ ಗೊಲ್ಲರ ಧರ್ಮವು, ಕೊರವರ ಧರ್ಮವು ಎಂದು ಹೇಳ ಹೋಗುವುದು ನಾಚಿಕೆಗೇಡಲ್ಲವೆ? ಗೋಪೂಜೆಯ ವೈಪರೀತ್ಯವು ನಮ್ಮಲ್ಲಿ ಬಹಳ ಈಚಿನದು. ಮುಸಲ್ಮಾನರೊಡನೆ ಪ್ರತಿಯೋಗಿಸುವಾಗ ಕೃತಕವಾಗಿ ಕಲ್ಪಿತವಾಯಿತು. ಈಗಲೂ 'ಚಂಡಾಲರು' ಗೋಮಾಂಸವನ್ನು ಭುಜಿಸುತ್ತಿರುವರು. ಇವರನ್ನು ಹಿಂದೂಕೂಟದಿಂದ ಬಿಡಲಾಗುವುದಿಲ್ಲ. ಇದಲ್ಲವೆ ಈ ಗೋಪೂಜೆಯಂತೆಯೇ ನಮ್ಮಲ್ಲಿ ಕಪಿಪೂಜೆಯೂ ಉಂಟು. ಇದು ಹಿಂದೂಗಳಲ್ಲದೆ ಮತ್ತಾರಲ್ಲೂ ಪ್ರಾಯಶಃ ಇಲ್ಲ. ಹಸುವಿನಂತೆಯೇ ಕಪಿಯೂ ಈಗಿನ ಹಿಂದೂಮತದ ಮುಖ್ಯ ದೇವತೆಗಳಿಗೆ ಪ್ರಿಯವಾಗಿದೆ. ಕಪಿಯು ಪ್ರಧಾನ ರಾಮಭಕ್ತನು; ಆಂಜನೇಯನು ಶಿವ ವೀರ್ಯೋದ್ಭವನು; ನಂದೀಶ್ವರನು ಕಪಿಯೇ ಆಗಿರುವನು. ಹಿಂದೂಗಳ ಶಿವ ವಿಷ್ಣು ಮೊದಲಾದ ಸಕಲ ದೇವತೆಗಳೂ ಕೆಲಕೆಲ ಶಾಖೆಯವರ ದೇವತೆಗಳಾಗಿರುವಾಗ ಆಂಜನೇಯನೊಬ್ಬನು ಮಾತ್ರವೇ ಎಲ್ಲಾ ಶಾಖೆಯವರಿಗೂ ಪಂಡಿತ ಪಾಮರರಿಗೂ ಮಾನ್ಯನಾದ ದೇವರಾಗಿರುವನು. ಈ ಕಾರಣಗಳಿಂದ ಕಪಿಪೂಜೆಯನ್ನು ಸಹ ಹೈಂದವತೆಯ ಆಧಾರ ಲಕ್ಷಣವೆನ್ನಬಹುದಲ್ಲವೆ? ಕೆಲವು ಪರದೇಶಗಳಲ್ಲಿ ಸಹ ಗೋಪೂಜೆಯು ಕಂಡುಬರುವುದು. ಮೊರಾಕೋ ದೇಶದ ಮುಸಲ್ಮಾನರು ನಮ್ಮಂತೆಯೇ ಗೋವನ್ನು ಪೂಜಿಸಿ ಅದರ ಸಗಣಿಗಂಜಳಗಳನ್ನು ಪವಿತ್ರವೆಂದು ಭಾವಿಸುತ್ತಾರಂತೆ*

ಇತ್ಯಾದಿ ಕಾರಣಗಳಿಂದ ಗೋಬ್ರಾಹ್ಮಣರ ಮನ್ನಣೆಯು ಹಿಂದೂತ್ವಕ್ಕೆ ಒಂದು ಉಪಯುಕ್ತವಾದ ಎರಡನೆ ತರದ ಲಕ್ಷಣವಾದರೂ ಅದನ್ನೇ ಪ್ರಧಾನ ಲಕ್ಷಣವೆಂದು ಇಟ್ಟುಕೊಂಡು ತೃಪ್ತರಾಗಿರಲಾಗುವುದಿಲ್ಲ. ಹಾಗೆ ಮಾಡುವುದು ಶಾಸ್ತ್ರೀಯವಾದ ನಿರ್ವಚನವಾಗುವುದಿಲ್ಲ.

'ಹಿಂದೂ' ಆಚಾರ, ಸಂಸ್ಥೆ, ಅಭಿಪ್ರಾಯ ಇವುಗಳ ಪರಿಗ್ರಹವು ಹಿಂದೂತ್ವಕ್ಕೆ ಲಕ್ಷಣವೆಂದು ಕೆಲವರು ಹೇಳುವರು. ಹಿಂದೂಗಳಿಂದಲೇ ಸ್ಪಷ್ಟವಾಗಿ ಅದ್ಯಾಪಿ ಅವರಿಂದ ಮಾತ್ರವೇ ವಿಸ್ತಾರವಾಗಿ ಮರ್ಯಾದಿತವಾಗಿರುವ ಆಚಾರಗಳೂ ಸಂಸ್ಥೆಗಳೂ ಅಭಿಪ್ರಾಯಗಳೂ 'ಹಿಂದೂ' ಎನ್ನಿಸಿಕೊಳುವವು. ಇವು ನಮ್ಮ ಸಮುದಾಯದ ವೈಯಕ್ತಿಕತೆಯನ್ನು ಒಂದು ವಿಧವಾಗಿ ನಿರೂಪಿಸಬಲ್ಲವು. ಇವುಗಳಲ್ಲಿ ಮುಖ್ಯವಾದುವು ಯಾವುವೆಂದರೆ— ೧ ಜಾತಿವ್ಯವಸ್ಥೆ ೨ ಆಶ್ರಮಧರ್ಮ ೩ ಮೋಕ್ಷಧರ್ಮ ೪ ಅಹಿಂಸಾವ್ರತ ೫ ಕರ್ಮವಾದ ೬ ಜನ್ಮಾಂತರವಾದ ೭ ಅವತಾರವಾದ ೮ ಮೂರ್ತಿಪೂಜಾ ೯ ಉಪನಯನಾದಿ ಸಂಸ್ಕಾರಗಳು ೧೦ ಬಾಲ್ಯವಿವಾಹ ೧೧ ವಿಧವಾವಿವಾಹ ನಿಷೇಧ ೧೨ ಶಿಖಾಯಜ್ಞೋಪವೀತ ಧಾರಣೆ ೧೩ ನಾಮಧಾರಣೆ ೧೪ ಯಜ್ಞಯಾಗಕ್ರಮ ೧೫ ಪುರುಷಕರ್ಣವೇಧೆ ೧೬ ಶವದಹನ ೧೭ ಅದ್ವೈತವಾದ ೧೮ ಯೋಗಶಾಸ್ತ್ರ ಇತ್ಯಾದಿ ಇತ್ಯಾದಿ. ಇವುಗಳಲ್ಲಿ ಬಹುಭಾಗವು ಸನಾತನ ಹಿಂದೂ ಮತವನ್ನವಲಂಬಿಸಿಕೊಂಡಿದೆ.



* Govind Das—Hinduism

ಹಿಂದೂ ಶಬ್ದವು ಶುದ್ಧವಾಗಿ ಮತವಾಚಕವಲ್ಲವೆಂದು ಹಿಂದೆಯೇ ಹೇಳಲಾಗಿದೆ.

ಈ ಲಕ್ಷಣಗಳಲ್ಲಿ ಯಾವುದೊಂದೂ ಏಕಾಯುತ್ತವಾಗಿಲ್ಲ. ಈ ಒಂದೊಂದು ಅಂಶದಲ್ಲೂ ನಮ್ಮಲ್ಲೇ ಎಷ್ಟೋ ಒಳಭೇದಗಳುಂಟು. ಮೂರ್ತಿಪೂಜೆಯು ವೇದಕಾಲದಲ್ಲಿ ಕಂಡು ಬರುವುದಿಲ್ಲ. ಇದು ಪೌರಾಣಿಕ ಹಿಂದೂಮತದ ಮುಖ್ಯ ಆಸ್ತಿಯು. ಆದರೆ ಈಗಲೂ ಮುನಿಗಳು ಬ್ರಹ್ಮವೇತ್ತರು ಇವರಿಗೆ ಮೂರ್ತಿ ಪೂಜೆ ಇಲ್ಲ. ಬ್ರಾಹ್ಮ ಆರ್ಯ ಸಮಾಜದವರು, ಶಿವನಾರಾಯಣ ರಾಧಾಸ್ವಾಮಿ ಮತಿಯರು, ಸ್ಥಾನಕವಾಸಿಗಳು ಇವರೆಲ್ಲರೂ ಹಿಂದೂಗಳಾದರೂ ವಿಗ್ರಹ ಪೂಜೆಯನ್ನು ವಿರೋಧಿಸುವರು. ವಿಗ್ರಹ ಪೂಜೆಯು ಲೋಕದ ಎಲ್ಲಾ ದೇಶಗಳಲ್ಲೂ ಇದ್ದು ಈಗ ಇಲ್ಲದಿರುವ ಕಡೆಗಳಲ್ಲಿ ಪ್ರಯತ್ನಪೂರ್ವಕವಾಗಿ ಬಿಡಲ್ಪಟ್ಟಿದೆ. ಈಗಲೂ ರೋಮನ್ ಕಥೋಲಿಕ ಕ್ರಿಸ್ತರು ಮಹಾತ್ಮರ ಸ್ಮಾರಕ ವಸ್ತುಗಳು ಗೋರಿಗಳು, ಚಿತ್ರಗಳು ಇವುಗಳನ್ನು ಪೂಜಿಸುವರು ಸಹ ಪತಪೂಜಕರಾಗಿಪುವರು. ವಿಗ್ರಹ ಪೂಜೆಯನ್ನು ತಿರಸ್ಕರಿಸಿರುವ ಸೀಖರು ತಮ್ಮ ಮತಗ್ರಂಥವನ್ನೇ ದೇವರೆಂದು ಪೂಜಿಸುತ್ತಿರುವರು. ಮುಸಲ್ಮಾನರು ಸಹ ಗೋರಿ ಪೂಜೆಯನ್ನು ಬಿಟ್ಟಿಲ್ಲ; ಪಂಜಾಗಳನ್ನಾರಾಧಿಸುವುದನ್ನು ಬಿಟ್ಟಿಲ್ಲ. ಹಿಂದೂ ಮತವನ್ನು ಬಿಟ್ಟು ಕ್ರಿಸ್ತಮತವನ್ನವಲಂಬಿಸಿರುವ ಅನೇಕ ಜನಗಳು ಅಧ್ಯಾಪಿ ಹಿಂದೂ ವಿಗ್ರಹಗಳನ್ನು ಪೂಜಿಸುವರು.

ಉಪನಯನವು ದ್ವಿಜರಿಗೆ ಮಾತ್ರ ಗೊತ್ತಾಗಿರುವುದು. ಇದರಲ್ಲೂ ಹೆಂಗಸರಿಗೆ ಇದು ಇಲ್ಲ. ಇವರು ಹಿಂದುಗಳಲ್ಲವೆ? ಪಾರಶಿಕರಲ್ಲೂ ಉಪನಯನ ಯಜ್ಞೋಪವೀತ ಧಾರಣಗಳುಂಟು. ಶಿಖೆಯನ್ನು ಲೋಕದ ಸಮಸ್ತ ಸ್ತ್ರೀಜಾತಿಯೂ ಧರಿಸಿರುವುದು. ಅವರೆಲ್ಲರೂ ಹಿಂದುಗಳಾಗಲಾರರು. ನಮ್ಮ ವಿಧವೆಯರೂ ತಿರದಂಡಿ ಸನ್ಯಾಸಿಗಳೂ ಅದನ್ನು ವಿಸರ್ಜಿಸುವರು. ಅವರು ಹಿಂದೂಗಳಲ್ಲವೆ ? ಪಂಚಮರಲ್ಲಿ ಹಣೆಗೆ ಏನೂ ಇಡರು; ಸಾಧಾರಣರು ಈಚೆಗೆ ಬಿಡುತ್ತಿರುವರು. ಗಂಡಸರು ಕಿವಿಚುಚ್ಚಿಸಿಗೊಳ್ಳುವ ಆಚಾರವು ಬಹುದೊಡ್ಡ ಲಕ್ಷಣವಾಗುವುದಿಲ್ಲ. ಜೈನ ಬೌದ್ಧ ಸಿಖ ಲಿಂಗಾಯತಾದಿ ಮತೀಯರಲ್ಲಿ ಈ ಉಪನಯನಾದಿ ಆಚಾರಗಳೊಂದೂ ಇಲ್ಲ. ವಿಧವಾ ವಿವಾಹನಿಷೇಧ, ಬಾಲ್ಯವಿವಾಹ ಇವು ಬ್ರಾಹ್ಮಣರಲ್ಲೂ ವೈಶ್ಯರಲ್ಲೂ ಮಾತ್ರ ಉಂಟು. ಶವದಹನವು ಈಗಲೂ ಮಧ್ಯ ಏಸಿಯದ ಶಕರಲ್ಲಿ ಉಂಟು; ಪ್ರಾಚೀನ ಗ್ರೀಕರಲ್ಲಿದ್ದಿತು; ನಮ್ಮ ದೇಶದಲ್ಲಿ ಇರಲಿಲ್ಲ. ಈಗಲೂ ಲಿಂಗಾಯತರು, ಕೀಳು ಜಾತಿಯವರು, ಸಂನ್ಯಾಸಿಗಳು ಇವರೆಲ್ಲರೂ ಇದನ್ನು ಆಚರಿಸುವುದಿಲ್ಲ. ಯಜ್ಞಯಾಗಗಳು ಇತರ ರೂಪಗಳಲ್ಲಿ ಲೋಕದಲ್ಲಿ ಎಲ್ಲ ಕಡೆಯೂ ಉಂಟು. ನಮ್ಮಲ್ಲಿ ಸಹ ಇವು ಈಗ ಅಪರೂಪವಾಗಿವೆ. ಹಿಂದೆ ವಿವಿಧರೂಪವಲ್ಲಿದ್ದವು. ಈ ಆಚಾರಗಳೆಲ್ಲವೂ ಬಹಳ ಅಲ್ಪವಿಚಾರಗಳು. ಇವುಗಳ ದೆಸೆಯಿಂದ ಹಿಂದೂತ್ವದ ಲಕ್ಷಣ ನಿರ್ಣಯಮಾಡಹೋಗುವುದು ಹುಚ್ಚುತನವೇ ಸರಿ.

ಮೋಕ್ಷಧರ್ಮದ ವಿಚಾರವನ್ನು ಹಿಂದೆಯೇ ಪ್ರಸ್ತಾಪಿಸಲಾಗಿದೆ. ಆಶ್ರಮಧರ್ಮವು ಸಹ ನಮ್ಮಲ್ಲಿ ಈಚೆಗೆ ಬೌದ್ಧರ ಕಾಲದಿಂದಲೂ ವ್ಯವಸ್ಥೆಯನ್ನು ಪಡೆದಿದೆ. ಇದು ಆಚರಣೆಯಲ್ಲಿ ಮಾತ್ರ ಯಾವಾಗಲೂ ಇದ್ದಂತೆ ತೋರಲಿಲ್ಲ. ಇದು ದ್ವಿಜರಿಗೆ ಮಾತ್ರ ಅದರಲ್ಲೂ ಗಂಡಸರಿಗೆ ವಿಧಾಯಕವಾಗಿದೆ. ಅಖಿಲಶಾಸ್ತ್ರಕ್ಕೂ ನಡೆವಳಿಕೆಯ ಆಚಾರಕ್ಕೂ ಸಂಬಂಧವೇ ಇಲ್ಲ. ಶಾಸ್ತ್ರವು ಕಲಿಯುಗಕ್ಕೆ ಸಂನ್ಯಾಸವನ್ನು ನಿಷೇಧಿಸುವುದು. ಬ್ರಾಹ್ಮಣರಿಗೆ ಮಾತ್ರ ಅದಕ್ಕೆ ಅಧಿಕಾರಕೊಟ್ಟಿರುವುದು, ಹೀಗಿದ್ದರೂ ಈಗ ದೇಶದಲ್ಲಿ ಕೋಟಿ ಸಂಖ್ಯೆಯ ಬ್ರಾಹ್ಮಣೇತರ ಸಂನ್ಯಾಸಿಗಳು ಗೋಚರಿಸುವರು. ಅಹಿಂಸಾವ್ರತವು ಕ್ರಿಸ್ತಾದಿ ಪರಕೀಯರಿಗೂ ಧ್ಯೇಯವಾಗಿದೆ. ನಮ್ಮಲ್ಲಿ ಇದರ ಗಾಗಲ್ಪ ಸ್ವಲ್ಪ ಹೆಚ್ಚಾಗಿದ್ದರೂ ಆಚರಣೆಯಲ್ಲಿ ನಾವೂ ಇತರರೂ ಎಲ್ಲರೂ ಒಂದೇ ಸಮವಾಗಿದ್ದೇವೆ. ಸಕಲಮತವೂ ಅಹಿಂಸೆಯನ್ನು ಬೋಧಿಸುವುದು. ಕರ್ಮವಾದವು ಈಗ ಲೋಕದಲ್ಲಿ ಬಹುಭಾಗದವರಿಂದ ಅಂಗೀಕರಿಸಲ್ಪಟ್ಟಿದೆ. ಇದನ್ನು ಕುರಿತು ನಮ್ಮಲ್ಲೇ ವ್ಯವಸ್ಥೆ ಇಲ್ಲ. ಜನ್ಮಾಂತರವಾದವು ಅನೇಕ ಕಾಡು ಜನರಲ್ಲೂ ಮುಸಲ್ಮಾನ ಸೂಫಿಗಳಲ್ಲೂ ಪ್ರಾಚೀನ ಗ್ರೀಕರಲ್ಲೂ ಈಜಿಪ್ತರಲ್ಲೂ ಈಗಿನ ಬ್ರಹ್ಮಜ್ಞಾನಸರೂಚೀಯರಲ್ಲೂ ಕಂಡು ಬರುವುದು. ಅವತಾರವಾದವು ಸಕಲಮತೀಯರಲ್ಲೂ ಉಂಟು. ಹೆಸರಿಗೆ ಮಾತ್ರ, ಮುಸಲ್ಮಾನರೊಬ್ಬರಲ್ಲಿಲ್ಲ. ಆಗಾಖಾನಿಗಳು ಅಹಮ್ಮದೀಯರು ಮೊದಲಾದವರು ಈ ವಾದವನ್ನು ಪರಿಗ್ರಹಿಸಿ ತಂತಮ್ಮ ಗುರುಗಳು ಶ್ರೀಕೃಷ್ಣ, ಕಲ್ಕಿ, ಮಹಮ್ಮದ ಕ್ರಿಸ್ತ ಇವರೆಲ್ಲರ ಸಮುಚ್ಚಯಾವತಾರಗಳೆಂದು ಹೇಳಲಾರಂಭಿಸಿದ್ದಾರೆ. ಅದ್ವೈತವಾದವೂ ಯೋಗಶಾಸ್ತ್ರವೂ ಎಲ್ಲೋ ಕೆಲ ಪಂಡಿತರ ಮತಗಳಲ್ಲಿದೆ. ಅಖಿಲ ಹಿಂದೂ ಕುಲದವರ ಮತವೆನ್ನಲಾಗುವುದಿಲ್ಲ. ಪಾಶ್ಚಾತ್ಯ ಪಂಡಿತರಲ್ಲೂ ಮುಸಲ್ಮಾನ ಸೂಫಿಗಳಲ್ಲೂ ಈ ವಾದಗಳು ಪ್ರಚಾರದಲ್ಲಿವೆ. ಹಿಂದೂ ಮತ

ಕೂಟದಲ್ಲಿ ನೂರಕ್ಕೆ ೯೫ ಮಂದಿ ಅದ್ವೈತದರ್ಶನವನ್ನು ವಿರೋಧಿಸಿ ಬಿಟ್ಟಿರುವರು.

ಇವುಗಳಂತಲ್ಲದೆ ಜಾತಿವ್ಯವಸ್ಥೆಯು ಹಿಂದೂಗಳಲ್ಲಿ ಅತ್ಯಂತ ದೃಢವಾಗಿ ಹಬ್ಬಿರುವ ಸಂಸ್ಥೆಯಾಗಿದೆ. ಈಗ ಲೋಕದಲ್ಲಿ ಮತ್ತಾವ ದೇಶದಲ್ಲೂ ಮತ್ತಾವ ಜನರಲ್ಲೂ ಈ ವ್ಯವಸ್ಥೆಯು ಇಲ್ಲ ನಮ್ಮ ಮುಂದಲ್ಲ ಮಂಗಳಕ್ಕೆ ಜಾತಿವ್ಯವಸ್ಥೆಯು ಆವಶ್ಯಕವಿಲ್ಲದೆ ಇರಬಹುದು. ಆದರೆ ಐತಿಹಾಸಿಕವಾಗಿ ಹಿಂದೂಗಳ ಸಮಸ್ತ ಆಗುಹೋಗುಗಳಿಸೂ ಈ ವ್ಯವಸ್ಥೆಯೇ ಮೂಲ ಕಾರಣವಾಗಿದ್ದಿತು. ನಮ್ಮಲ್ಲಿ ಹುಟ್ಟಿರುವ ಸಮಸ್ತಮತಗಳೂ ಅಭಿಪ್ರಾಯಗಳೂ ಸಂಸ್ಥೆಗಳೂ ನಾಗರಿಕತೆಯೂ ಜಾತಿಯನ್ನು ಆಶ್ರಯಿಸಿಕೊಂಡೇ ಹುಟ್ಟಿ ಬೆಳೆದಿರುವುವು. ಆದರೂ ಜಾತಿವ್ಯವಸ್ಥೆಯುಳ್ಳವರೆಲ್ಲರೂ ಹಿಂದೂಗಳೆಂದೂ ಇಲ್ಲದವರೆಲ್ಲರೂ ಹಿಂದೂಗಳಲ್ಲವೆಂದೂ ಹೇಳಲಾಗುವುದಿಲ್ಲ. ಭಕ್ತಿಮಾರ್ಗಪ್ರವರ್ತಕರೆಲ್ಲರೂ ಜಾತಿಯನ್ನು ಧಿಕ್ಕರಿಸಿರುವರು. ಪ್ರಾಚೀನ ಕಾಲದಲ್ಲಿ ವರ್ಣವ್ಯವಸ್ಥೆ ಇದ್ದಿತೇ ಹೊರತು ಈಗಿನ ಜಾತಿಕ್ರಮವು ಇರಲಿಲ್ಲ. ಜೈನ, ಬೌದ್ಧ, ಲಿಂಗಾಯತ, ಸಿಖ, ಕಬೀರಪಂಥಿ, ಬ್ರಾಹ್ಮಸಮಾಜ ಆರ್ಯಸಮಾಜ ಇವರೆಲ್ಲರೂ ಕೃತಸಂಕಲ್ಪದಿಂದ ಜಾತಿಕ್ರಮವನ್ನು ನಿರ್ಮೂಲಿಸಿರುವರು. ಹಿಂದೂಗಳಾಗಿದ್ದು ಈಗ ಮುಸಲ್ಮಾನ ಕ್ರೈಸ್ತರಾಗಿರುವ ನಮ್ಮ ದೇಶೀಯರಲ್ಲಿ ಜಾತಿವ್ಯವಸ್ಥೆಯು ಅದ್ಯಾಪಿ ನಡೆದು ಬರುವುದು. ಲೋಕದಲ್ಲಿ ಈಗ ಬಿಳಿಯ ಜನರಿಗೂ ಅನ್ಯವರ್ಣದವರಿಗೂ ಹುಟ್ಟಿರುವ ವೈಷಮ್ಯದಿಂದ ಅಮೇರಿಕಾ, ಕೆನಡಾ, ಆಸ್ಟ್ರೇಲಿಯಾ, ನ್ಯೂಜೀಲಾಂಡು, ಆಫ್ರಿಕಾ ಮೊದಲಾದ ದೇಶಗಳಲ್ಲಿ ಈಗ ಜಾತಿವ್ಯವಸ್ಥೆಯು ಹುಟ್ಟುತ್ತಿರುವುದು. ಇತ್ಯಾದಿ ಕಾರಣಗಳಿಂದ ಜಾತಿವ್ಯವಸ್ಥೆಯನ್ನು ಗೋಬ್ರಾಹ್ಮಣ ಪೂಜೆಯಂತೆ ಹಿಂದೂತ್ವಕ್ಕೆ ಅತಿ ಮುಖ್ಯವಾದ ಎರಡನೆ ದರ್ಜೆಯ ಲಕ್ಷಣವನ್ನಾಗಿ ಮಾತ್ರ ಹೇಳಬಹುದು.

ಹಿಂದೂ ಮತವನ್ನವಲಂಬಿಸುವವರು ಹಿಂದೂಗಳು ಎಂದು ಬಹುಮಂದಿ ಹೇಳುವರು. ಸ್ಥೂಲವಾಗಿ ನೋಡಿದರೆ ಇದು ನಿಜವೆಂದು ಕಾಣಬಹುದು. ಆದರೆ ಹಿಂದೂಮತ ಎಂದರೆ ಯಾವುದು ? ಹಿಂದೂಗಳ ಮತವು ಎಂದು ಉತ್ತರ ಹೇಳುವುದಾದರೆ ಈ ನಿರ್ವಚನವು ತಪ್ಪಾಗುವುದು. ಹಿಂದೂ ಮತವೆಂಬುದು ಹೇಳುವುದಕ್ಕೆ ಒಂದು; ಸರಿಯಾಗಿ ನೋಡಿದರೆ ಸಾವಿರವಾಗಿರುವುದು. ವಿವಿಧಜಾತಿಯ ಮತಧರ್ಮಗಳೂ, ಮತಾಚಾರಗಳೂ, ತತ್ವವಾದಗಳೂ, ಉಪಾಸನಾಕ್ರಮಗಳೂ, ಪುರಾಣಕಥಾವಳಿಯೂ ಇಲ್ಲಿ ಅಡಗಿರುವುವು. ಇಷ್ಟೊಂದಕ್ಕೂ ಕೇಂದ್ರಪ್ರಾಯವಾದ, ಸರ್ವಸಾಮಾನ್ಯವಾದ, ಒಂದುಗೂಡಿಸತಕ್ಕ ನಿಯಮಗಳು ಯಾವುವು ? ಕೆಲವರು ಈ ಕೇಂದ್ರ, ನಿಯಮವು ಗೋಬ್ರಾಹ್ಮಣ ಪೂಜೆಯನ್ನಬಹುದು; ಕೆಲವರು ಹಿಂದೂ ಶಾಸ್ತ್ರಮರ್ಯಾದೆ ಎನ್ನಬಹುದು; ಕೆಲವರು ಜಾತಿವ್ಯವಸ್ಥೆ ಎನ್ನಬಹುದು; ಕೆಲವರು ಜನ್ಮಾಂತರ, ಕರ್ಮ, ಅದ್ವೈತ ಮೊದಲಾದ ಅಭಿಪ್ರಾಯಗಳೆನ್ನಬಹುದು; ಕೆಲವರು ಉಪನಯನಾದಿ ಸಂಸ್ಕಾರಗಳೆನ್ನಬಹುದು; ಕೆಲವರು ಯಜ್ಞವೆನ್ನಬಹುದು; ಕೆಲವರು ಯೋಗವೆನ್ನಬಹುದು; ಈ ಯಾವುದೊಂದು ಅಂಶವು ಹಿಂದೂಶಬ್ದದ ನಿರ್ವಚನಕ್ಕೆ ಸಾಕಾಗಲಾರದೆಂದು ಮೇಲೆಯೇ ತೋರಿಸಿರುವುದರಿಂದ ಹಿಂದೂ ಎಂದರೆ ಹಿಂದೂ ಮತಾನುಸಾರಿ ಎಂದು ಅರ್ಥಮಾಡುವುದರಲ್ಲಿ ಔಚಿತ್ಯವೇನೂ ಇಲ್ಲ. ಇವಲ್ಲದೆ ಹಿಂದೂ ಮತಕ್ಕೆ ಸಾಂಕೇತಿಕವಾಗಿ ಸೇರಿದವರೆಂದು ಹೇಳಲು ಅಸಾಧ್ಯವಾಗಿರುವ ಮತ್ತು ಹಿಂದೂ ಮತದವರಲ್ಲವೆಂದು ಸಾರಿಕೊಳ್ಳುತ್ತಿರುವ ಬೌದ್ಧ, ಜೈನ, ಸಿಖ, ಬ್ರಾಹ್ಮ ಆರ್ಯಮತೀಯರನ್ನೆಲ್ಲಾ ಹಿಂದೂಜನಕೋಟಿಯಲ್ಲಿ ಸೇರಿಸಬೇಕಾಗುವುದು. ಕಾಶಿಯ ಅಖಿಲಭಾರತಹಿಂದೂ ಮಹಾಸಭೆಯವರು ಇವರೆಲ್ಲರನ್ನೂ ಹಿಂದೂಗಳೆಂದೇ ಭಾವಿಸಲು ಬಗೆದಿರುವರು. ಹಿಂದೂಮತದ ಮೂಲಪ್ರವಾಹವನ್ನು ಬ್ರಾಹ್ಮಣ–ಹಿಂದೂಧರ್ಮ ಅಥವಾ ಸನಾತನ ಹಿಂದೂ ಧರ್ಮ ಎಂದು ಕರೆವೆವೆ ಈಗ ಮೇಲೆ ಹೇಳಿದ ಮತ ಶಾಖೆಗಳೆಲ್ಲವೂ ಇದರ ಸಂತಾನವಾಗುವುವು. ಇವು ಹಿಂದೂ ದೇಶದಲ್ಲಿ ಹಿಂದೂ ಕುಲದವರಲ್ಲಿ ಹಿಂದೂಗಳಿಂದ ಮೂಲ ಹಿಂದೂ ಮತವಾಹಿನಿಯಿಂದ ಕವಲು ಒಡೆದ ಶಾಖಾವಾಹಿನಿಗಳು ಮಾತ್ರವಾಗಿವೆ. ಆದ್ದರಿಂದ ವಿಸ್ತೃತಾರ್ಥದಲ್ಲಿ ಇವುಗಳನ್ನೂ ಹಿಂದೂ ಮತಾವರಣದಲ್ಲಿ ಸೇರಿಸುವದರಲ್ಲಿ ಔಚಿತ್ಯಹಾನಿ ಏನೂ ಇರುವುದಿಲ್ಲ. ಕ್ರಿಸ್ತರೂ ಸಹ ಸ್ವಲ್ಪದೂರ ಹಿಂದೂಗಳ ಶಿಷ್ಯರು; ಮುಸಲ್ಮಾನರ ಸೂಫಿಗಳು ಬಹುವಾಗಿ ಹಿಂದೂಶಿಷ್ಯರು. ಇವರನ್ನು ವಿಸ್ತೃತಾರ್ಥದಲ್ಲಿ ಹಿಂದೂಕೂಟಕ್ಕೆ ಸೇರಿಸಬಹುದೆ ? ಹಿಂದೂಮತಕ್ಕೂ ಸಂಸ್ಕೃತಿಗೂ ಅತ್ಯಂತ ಸಮೀಪವಾದ ಬಾಂಧವ್ಯವುಳ್ಳ ಪಾರಶಿಕರನ್ನು ಹೀಗೆ ಮಾಡಕೂಡದೇತಕ್ಕೆ? ಇಷ್ಟಲ್ಲದೆ ಬೌದ್ಧರನ್ನು ವಿಸ್ತೃತಾರ್ಥದಲ್ಲಿ ಹಿಂದೂಗಳೆಂದು ಕರೆದರೆ ಚೀನರು ಜಪಾನರು ಎಲ್ಲರೂ

ಹಿಂದೂಗಳಾಗುವರಲ್ಲವೇ? ಇವರನ್ನು ಹಿಂದೂಗಳೆಂದು ಕರೆಯುಲು ರೂಢಿಯು ಅಡ್ಡಿಯಾಗಿರುವುದಲ್ಲವೇ? ಹೀಗೆ ಮತ ದೃಷ್ಟಿಯಿಂದ ಹಿಂದೂ ಎಂದರೆ ಸನಾತನ ಧರ್ಮ ಎಂದು ಮಾತ್ರ ಅರ್ಥವಾಗುವುದು. ಜೈನಬೌದ್ಧಾದಿಗಳನ್ನು ಹಿಂದೂ ಕೂಟಕ್ಕೆ ಸೇರಿಸಲು ಕಾರಣವು ಮತವಲ್ಲ; ಇತರ ಕಾರಣಗಳಿಂದ ಈ ರೂಢ್ಯಾರ್ಥವು ಹುಟ್ಟಿರುವುದು.

ಸನಾತನಹಿಂದೂಧರ್ಮಿಯಾರು ? ಎಂದು ಹೇಳುವುದು ಸಹ ಕಷ್ಟವಾಗಿರುವುದು. ಹಿಂದೂ ಶಾಸ್ತ್ರಸಮ್ಮತವಾದ ಆಚಾರಗಳನ್ನನುಸ್ಮಿಸತಕ್ಕವರು ಸನಾತನ ಧರ್ಮಿಗಳು ಎಂದು ಸ್ಥೂಲವಾಗಿ ಅರ್ಥವಾಗುವುದು. ಈ ಶಾಸ್ತ್ರಕ್ಕೆ ತಕ್ಕ ವ್ಯವಸ್ಥೆಯೇ ಇಲ್ಲವೆಂದೂ ಈ ಸಮುದ್ರದಲ್ಲಿ ಕೇಂದ್ರ ನಿಯಮಗಳಾವುವೂ ಇಲ್ಲವೆಂದೂ ಆಚಾರವು ಲಿಖಿತಶಾಸ್ತ್ರವನ್ನು ಮೂಲೆಗೆ ತಳ್ಳಿರುವುದೆಂದೂ ಹಿಂದೆ ವಿವರಿಸಲಾಗಿದೆ. ಮಲೆಯಾಳದ ನಾಯರು, ನಂಬೂದರಿಗಳು, ಜಾಟರು, ಬೈರಾಗಿಗಳು, ಗೋಸಾವಿಗಳು ಇವರು ಅನುಸ್ಮಿಸುವ ಆಚಾರವು ಲಿಖಿತ ಶಾಸ್ತ್ರದಲ್ಲಿ ಇಲ್ಲವೇ ಇಲ್ಲ, ಈ ಧರ್ಮಶಾಸ್ತ್ರಕ್ಕೆ ಕುಲಾಚಾರದ ವಿರೋಧವಿಲ್ಲದಿದ್ದರೆ ಸಾಕು, ಎಂದು ಹೇಳುವುದಾದರೆ ಅದೂ ಇಲ್ಲಿ ಸರಿ ಹೋಗುವುದಿಲ್ಲ. ಮೇಲೆ ಹೇಳಿದವರ ಎಷ್ಟೋ ಆಚಾರಗಳು ಶಾಸ್ತ್ರಾಚಾರಕ್ಕೆ ವಿರೋಧವಾಗಿರುವವು. ಕಲಿಯುಗಕ್ಕೆ ಸಂನ್ಯಾಸವು ವರ್ಜ್ಯವಾಗಿರುವುದು. ಹಾಗಾದರೆ ಶಂಕರ ರಾಮಾನುಜ ಮಧ್ವಾದಿಗಳು ಹಿಂದೂಗಳಲ್ಲವೇ ? ಶೂದ್ರರಿಗೆ ಸನ್ಯಾಸವು ಕೂಡದು. ಹಾಗಾದರೆ ರಾಮಾನಂದಿ ಕಬೀರಪಂಥಿ ಬೈರಾಗಿಗಳ ಗತಿ ಏನು? ವೇದಮಂತ್ರವನ್ನು ಶೂದ್ರನಿಗೆ ಉಪದೇಶಿಸಕೂಡದೆಂದು ಶಾಸ್ತ್ರವು ಹೇಳುವುದು. ರಾಮಾನುಜಾಚಾರ್ಯರು ಚಂಡಾಲಾದಿಗಳಿಗೂ ಇದನ್ನು ಉಪದೇಶಿಸಿದರೆಂದು ಪ್ರತೀತಿಯುಂಟು, ಇವರು ಹಿಂದೂವೆ? ಅಲ್ಲವೆ? ತನ್ನ ಮಗಳು ತನ್ನ ಸಹೋದರಿ ಇತರ ಮಕ್ಕಳನ್ನು ಯಾರೂ ದತ್ತು ತೆಗೆದುಕೊಳ್ಳಕೂಡದೆಂದು ಶಾಸ್ತ್ರವು ಹೇಳುವುದು; ಆಚಾರವು ಇದಕ್ಕೆ ವಿರೋಧವಾಗಿ ನಡೆಯುತ್ತಿರುವುದು. ಹೀಗೆ ಯಾರು ಪತಿತರು ಯಾರು ಅಲ್ಲ ಎಂದು ಹೇಳುವುದೇ ಕಷ್ಟವಾಗಿದೆ. ಒಂದು ಆಚಾರವು ಶಾಸ್ತ್ರಸಮ್ಮತವೇ ಅಲ್ಲವೆ, ಎಂದು ನೋಡುವುದರಲ್ಲಿ ಸಹ ಎಷ್ಟೋ ವಿಧವಾಗಿ ಅರ್ಥ ಹೇಳಲು ಅವಕಾಶವುಂಟು. ಒಂದೇ ಶಾಸ್ತ್ರವಚನಕ್ಕೆ ಪರಸ್ಪರವಿರುದ್ಧವಾದ ನೂರು ಅರ್ಥಗಳು ಸಹ ನಮ್ಮಲ್ಲಿ ಪ್ರಚಾರದಲ್ಲಿವೆ. ಈ ಅಂಶದಲ್ಲೂ ಬರಿಯ ನಂಬಿಕೆ—ತನ್ನ ಆಚಾರ್ಯ, ತನ್ನ ಜಾತಿ, ತನ್ನ ಕುಲ ಇವರು ಅಂಗೀಕರಿಸಿರುವ ಅರ್ಥವೇ ಸರಿಯಾದ್ದೆಂಬ ಮೂಢ ನಂಬಿಕೆಯೇ—ಪ್ರಧಾನವಾಗಿರುವುದಲ್ಲದೆ ಶಾಸ್ತ್ರೀಯವಾದ ಯಾವ ವ್ಯವಸ್ಥೆಯೂ ಇಲ್ಲ. ಒಂದೇ ಅರ್ಥವನ್ನಿಟ್ಟುಕೊಂಡು ಸಮಾನಾಚಾರಗಳನ್ನುಳ್ಳ, ಸಣ್ಣದಾದ ಜಾತಿಸಮುದಾಯದಲ್ಲಿ ಸಹ ಅನಾಚಾರವು ಎಷ್ಟು ದರ್ಜೆಯದಾದರೆ ಪಾತಿತ್ಯವುಂಟಾಗುವುದು ಎಂಬ ವಿಚಾರದಲ್ಲಿ ವ್ಯವಸ್ಥೆ ಇಲ್ಲ. ಇದನ್ನು ಶಾಸ್ತ್ರೀಯವಾಗಿ ನಿರ್ಧರಪಡಿಸತಕ್ಕ ಆಚಾರಮಾಪಕಯಂತ್ರವಾವುದೂ ಸ್ಪಷ್ಟವಾಗಿಲ್ಲ. ಕ್ರಿಸ್ತರಲ್ಲಿ ಇಂಥಾ ಗೊಂದಲವಿಲ್ಲ. ಅವರಲ್ಲಿ ಪ್ರತಿಯೊಂದು ಮತ ಶಾಖೆಯವರೂ ತಾವು ನಂಬತಕ್ಕ ಅಭಿಪ್ರಾಯಗಳನ್ನೂ ಆಚಾರಗಳನ್ನೂ ಸ್ಪಷ್ಟವಾಗಿ ಪಟ್ಟಿಮಾಡಿಕೊಂಡಿರುವರು. ಇವುಗಳನ್ನತಿಕ್ರಮಿಸಿದ್ದಲ್ಲಿ ಅಂಥಾ ತಪ್ಪನ್ನು ವಿಚಾರಣೆಮಾಡಲು ಮಠೀಯ ನ್ಯಾಯಶಾಲೆಗಳು (Ecclesiastical Courts) ಪಡಿಸಡಿಯಾಗಿರುವುವು. ನಮ್ಮಲ್ಲಿ ಬಹಿಷ್ಕಾರ ಹಾಕತಕ್ಕ ಮಠಗಳೂ ಜಾತಿಸಭೆಗಳೂ ಯಥೇಷ್ಟವಾಗಿದ್ದರೂ ಇವು ಅನಾಚಾರವನ್ನು ನ್ಯಾಯಾಸ್ಥಾನದಲ್ಲಿ ವಿಚಾರಿಸುವಂತೆ ವಿಚಾರಮಾಡಲು ಯಾವ ವ್ಯವಸ್ಥೆಯನ್ನು ಕಲ್ಪಿಸಿಕೊಂಡಿಲ್ಲ. ಈ ಮಠೀಯ ನ್ಯಾಯಶಾಲೆಗಳ ತೀರ್ಮಾನಗಳ ಮೇಲೆ ಇಂಗ್ಲಂಡಿನಲ್ಲೂ ಇತರ ಕಡೆಗಳಲ್ಲೂ ವ್ಯಾವಹಾರಿಕ ನ್ಯಾಯಶಾಲೆಗಳಲ್ಲಿ ಅಪೀಲು ಸಲ್ಲಿಸುವುದಕ್ಕೂ ಅವಕಾಶವುಂಟು. ಉದಾಹರಣೆಗಾಗಿ ೧೮೬೦ರ ಸುಮಾರಿನಲ್ಲಿ ಒಬ್ಬ ಆಂಗ್ಲ ಮತಾಧಿಕಾರಿಯು ನರಕವು ಇಲ್ಲವೆಂದು ಹೇಳಿದ್ದಕ್ಕೆ ಮತ ಸಂಸ್ಥೆಯವರು ಇವನಿಗೆ ಬಹಿಷ್ಕಾರ ಹಾಕಿದರು. ಇವನು ದೇಶದ ಪ್ರಧಾನ ನ್ಯಾಯ ಸಭೆಯಾದ ಶ್ರೀಮಂತ ಸಭೆ (House of Lords)ಗೆ ಅಪೀಲು ಸಲ್ಲಿಸಿದನು. ಆ ನ್ಯಾಯಶಾಲೆಯವರು ನರಕವಿದೆ ಎಂದು ನಂಬದಿರುವುದು ಪಾತಿತ್ಯಕ್ಕೆ ಕಾರಣವಾಗಿಲ್ಲವೆಂದೂ ಅವನನ್ನು ಬಹಿಷ್ಕರಿಸಿದ್ದು ತಪ್ಪೆಂದೂ ತೀರ್ಮಾನಿಸಿದರು. ಆಂಗ್ಲ ಮತಶಾಖೆಯವರ ನಂಬಿಕೆಗಳನ್ನು ಪಾರ್ಲಿಮೆಂಟಿನವರು ವಿಧಾಯಕ ಪಟ್ಟಿಸಿರುವರು. ಇತರ ಶಾಸನಗಳನ್ನು ಬದಲಾಯಿಸುವಂತೆಯೇ ಇವುಗಳನ್ನು ಬದಲಾಯಿಸಬಹುದು. ಇಂಥಾ ಅಚ್ಚುಕಟ್ಟಿನ ವ್ಯವಸ್ಥೆಯು ಹಿಂದೂ ಮತದಲ್ಲಿ ಇಲ್ಲ.

ಹಿಂದೂಮತಾಚಾರಗಳು ಶುದ್ಧ ಹಿಂದುಗಳಾದ ಸನಾತನ ಧರ್ಮೀಯರಲ್ಲೂ ಭಿನ್ನ ಹಿಂದುಗಳಾದ ಜೈನ ಬೌದ್ಧ ಸಿಖರುಗಳಲ್ಲೂ ಇರುವುದು ಅತಿಶಯವಲ್ಲ. ಇದನ್ನು ಅನೇಕ ಕ್ರಿಸ್ತರಲ್ಲೂ ಮುಸಲ್ಮಾನರಲ್ಲೂ ಕಾಣಬಹುದು. ಇವರನನ್ನು ಕ್ರಿಸ್ತ

( ೪೯೪ನೇ ಪುಟದಲ್ಲಿ ಮುಂದುವರಿದಿರುವದು. )

# ಗಿಳಿಯು ಪಂಜರದೊಳಿಲ್ಲ *

[ಜ್ವರದಿಂದ ಬಳಲಿದ ಮಗುವನ್ನು ಮಗ್ಗುಲಲ್ಲಿರಿಸಿ ಒಬ್ಬ ತಾಯಿ ನಿದ್ದೆಹೋದಳು. ನಿದ್ದೆ ತಿಳಿದೆದ್ದು ನೋಡುತ್ತಾಳೆ. 'ಗಿಳಿಯು ಪಂಜರದೊಳಿಲ್ಲ.']

ಏನೆಂದು ಕೂಗಲಿ ನಿನ್ನ । ಎನ್ನಾ । ಚೆನ್ನಾ ಏನೆಂದು ಕೂಗಲಿ ನಿನ್ನ ॥ಪಲ್ಲ॥

ಮಲಗಿಸಿದೆ ಪೊಲೆಯೂಡಿ । ಖೋಡೀ ।
ನಿದ್ದೆ ಹೋದೆನದೇಕೊ ಪಾಪಿಯು ।
ಎದ್ದು ಕಣ್ದೆರೆವನಿತರೊಳು ನಾ ।
ಮುದ್ದು ಕಂದಾ ಮುಚ್ಚಿಬಿಟ್ಟೆಯೊ ಕಣ್ಣಾ ॥ ಏನೆಂದು ॥

ದೃಷ್ಟಿಗಿಷ್ಟಿಗೆ ಬೆದರಿ । ಹೆದರೀ ।
ನಿನ್ನ ನಗೆ ಕಿವಿದಣಿಯೆ ಕೇಳದೆ ।
ಇನ್ನು ಅತ್ತರೆ ಸಾಕು ಜನುಮವು ।
ಧನ್ಯವೆಂಬೆನು ಅಳಲೊ ಅಪ್ಪಾ ಅಣ್ಣಾ ॥ ಏನೆಂದು ॥

ಮುದ್ದು ಚೀರುವ ಕುರುಳು । ಬೆರಳು ।
ಮೀಸಲಳಿಯದ ನಗೆಯು, ಕಪಟವು
ಈಸು ಇಲ್ಲದ ನೋಟ, ಸೊಬಗಿನ
ಕೂಸು ಕಂಡಿದ್ದಿಲ್ಲ ಇಂತಹದನ್ನ । ಏನೆಂದು ॥

ಲಲ್ಲೆಯನು ಮರೆಮಾಚೀ । ನಾಚಿ ।
ಹಾಡಿ ಮಲಗಿಸಲಿಲ್ಲ ನಿನ್ನನು ।
ಹಾಡಿ ಅಳುವೆನು ಕೇಳಿ ಏಳೆಲೊ ।
ಕಾಡು ನನ್ನನು ಬೇಡಿ ಪಡಿಸೋ ಬನ್ನಾ ॥ ಏನೆಂದು ॥

ಉರಿಗೆ ಮಿನುಗುವ ಚಿನ್ನಾ । ನನ್ನಾ ।
ಹಸುಳನಾ ಸಿಂಗಾರ, ಕಳೆ ತಾ
ನೆಸೆಯುತಿದೆ ಬಂಗಾರವಿದು ತುಸು ।
ತುಸುವು, ಹಾ, ಮಾಸಿಲ್ಲವಿನ್ನೂ ಬಣ್ಣಾ ॥ ಏನೆಂದು ॥

ನನ್ನ ಅಮೃತದ ತುತ್ತು । ಬಿತ್ತು ।
ಎಷ್ಟು ಸಲ ಮುದ್ದಿಟ್ಟರೂ ಅ-
ಷ್ಟಷ್ಟು ಸಲ ಇನ್ನಷ್ಟು ಅನಿಸಿತು ।
ಕಷ್ಟವಯ್ಯೋ ಆದೆ ಹುಳುಗಳ ಅನ್ನಾ ॥ ಏನೆಂದು ॥

ಯಾವ ದೃಷ್ಟಿಯು ದೋಷಾ । ರೋಷಾ ।
ಕಣ್ಣು ಕಟ್ಟಿತು ನುಂಗಿ ಜೀವವ ।
ನುಣ್ಣಗಿರಿಸಿತು ದೇಹವನು ಹಾ ।
ಬಣ್ಣಗೆಡಿಸದೆ ತಿರುಳುಗೆಡುವೊಲು ಹಣ್ಣಾ ॥ ಏನೆಂದು ॥

ಇದುವೆ ಬಡವಿಯ ಭಾಗ್ಯಾ । ಭೋಗ್ಯ ।
ಎಂದು ಮನದಲಿ ತಿಳಿದು ನಾ ಬೇ-
ರೊಂದು ಬಯಸದೆ ಆಗಲಕ್ಷಯ ।
ಎಂದೆ ನೀನೇ ನನ್ನ ಹೊನ್ನೊ! ರನ್ನಾ ॥ ಏನೆಂದು ॥

ನನ್ನ ಬಸುರಲಿ ಬೆಳೆದಾ । ಹೊಳೆದಾ ।
ಭಾವಕಳೆಯೇ! ಬದಿಗೆ ನಿನ್ನನು ।
ಸಾವು ನುಂಗುತ್ತಿರಲು ಎಂತೀ ।
ಜೀವ ಸುಮ್ಮನೆ ಬಿದ್ದುಕೊಂಡಿತು ನನ್ನಾ ॥ ಏನೆಂದು ॥

ಬಿಸಿಯುಸಿರ ತಳಮಳವೂ । ಝುಳವೂ ।
ಪ್ರಳಯ ಝುಂಝಾಸಿಲಕೆ ಸರಿದೊರೆ ।
ಅಳುವ ತೊಳಗಿನ ಕೂಡ ಬಿಸಿನೀರ್ ।
ಮಳೆಯ ಸುರಿದರು ತೆರೆಯಲಾರೆಯ ಕಣ್ಣಾ ? ॥ ಏನೆಂದು ॥

ತೋರ ಎದೆಗಳು ತೊರೆದು । ಹರಿದು ।
ತೊಯ್ದಿದೀ ಕುಪ್ಪಸವು ಸೆರಗೂ ।
ಅಯ್ದಿತೆಲ್ಲಿಗೊ ಜೀವಹಂಸವು ।
ಸುಯ್ದುಗಿಯ್ದೂ ಬಾಯಿ ತೆರೆಯೋ ಚಿನ್ನಾ ॥ ಏನೆಂದು ॥

ತೆರವು ನನ್ನೀ ಕೈಯು । ಮೈಯು ।
ತೆರವು ತೊಡೆ ತುಟಿ, ತೆರವು ನಾಲಿಗೆ ।
ತೆರವು ಕಿವಿಕಣ್ ತೆರವು ಎದೆಗಳು ।
ತೆರವೊ ಬಾಲಾ ! ಮನವೆ ಭಣಭಣ ! ಶೂನ್ಯಾ ॥ ಏನೆಂದು ॥

* 'ಗಿಳಿಯು ಪಂಜರದೊಳಿಲ್ಲ' ಈ ತಲೆಕಟ್ಟು ಪುರಂದರದಾಸರಾಯರ ಒಂದು ಹಾಡಿನ ಪಲ್ಲವಿ. ದಾಸರು ಮಗನು ತೀರಿಕೊಂಡಾಗ ಈ ಹಾಡನ್ನು ಅವರು ಹಾಡಿದರೆಂದು ಹೇಳುತ್ತಾರೆ.

ಬರಿದು ನಿನ್ನೀ ಉಡುಪೂ । ತೊಡಪೂ ।
ಬರಿದು ತೊಟ್ಟಿಲ ಬರಿದು ಹಾಸಿಗೆ ।
ಬರಿದು ಅಂಗಳ ಬರಿದು ಹಿತ್ತಲ ।
ಬರಿದು ಮನೆ ತಡೆಯುವೆನೆ ರಣರಣವನ್ನಾ ॥ ಏನೆಂದು॥

ನಿನ್ನ ಪ್ರೀತಿಯ ಎತ್ತೂ । ಮತ್ತೂ ।
ಅತ್ತ ಚೆಂಡಿದು ಇತ್ತ ಬೊಗರೆಯು ।
ಎತ್ತಿ ಕಣ್ಣನು ನೋಡಲಾರೆನು ।
ಎತ್ತ ನೋಡಿದಡತ್ತ ಆಟದ ಚಿನ್ನಾ ॥ ಏನೆಂದು॥

ಇದ್ದ ಕಣ್ಣನು ಕಳೆದೂ । ಸೆಳೆದೂ ।
ಕೈಯ್ಯ ಕೋಲನು ಕಸಿದು ಕಾಲನು ।
ಮೆಯ್ಯುಗೆಡಿಸಿದ ಮೇಲೆ ಬದುಕೇ !
ಅಯ್ಯೊ ದೈವವೆ ಏನು ಮಾಡಲಿ ಮುನ್ನಾ ॥ ಏನೆಂದು ॥

ಮಿಗುವ ತಾಪಕೆ ಕಾಯ್ದೂ । ಕಾಯ್ದೂ ।
ಕರಗಿ ಬಾಯಲಿ ಬಾಯನಿಕ್ಕುತ ।
ಸುರಿದರೆನ್ನೀ ಪ್ರಾಣ, ಕಂದಾ ।
ತಿರುಗಿ ಬಂದೀತೇನೋ ಜೀವವು ನಿನ್ನಾ॥ ಏನೆಂದು ॥

ಕಲ್ಪವೃಕ್ಷದ ಅಗಿಯೇ । ಚಿಗಿಯೇ ।
ದೊರೆಯದೀ ಚಂಡಾಳಿಯಾ ಹೊಲೆ-
ನೆರಳಿನಲಿ ಇಂಬೆಂದು ಕಮರುತ ।
ಮರಳಿ ತೆರಳಿದೆ ಸ್ವರ್ಗಧಾಮಕೆ ನಿನ್ನಾ ॥ ಏನೆಂದು॥

ಕ್ಷೀಣವಾಯಿತು ಪುಣ್ಯಾ । ನನ್ನಾ ।
ಕಂದ ತೀರಿದೆ ಈಗ ಸೇರಿದೆ ।
ನಂದನನ, ಹಾ ! ಮತ್ತೆ ಎನ್ನವೆ ।
ಎಂದು ಪಡೆಯುವೆ ಕಂದನಂ ನಿನ್ನನ್ನಾ ॥ ಏನೆಂದು॥

ಕರುಳಮಲ್ಲಿಗೆ ಹಬ್ಬೀ । ಕೊಬ್ಬೀ ।
ಚೆಂದ ನನೆಕೊನೆಹೋಗುತಿರೆ ನಲ-
ವಿಂದ ಕಳವಿಲಿ ಬಂದು ನೆರವಿನ ।
ಹಂದರವ ॥ ಏನೆಂದು ॥

ಎದೆಯ ತಿರುಮಲೆಯಿಂದಾ । ಬಂದಾ ।
ಹಾಲಗಂಗೆಗೆ ಕಣ್ಣ ನೀರಿನ ।
ಕಾಲ್ವೆ ಕೂಡಿತು; ಕ್ಷೀರಸಾಗರ ।
ಲೀಲೆ ತಿಳಿವುದೆ ? ತಾನೆ ಬಲ್ಲನು ತನ್ನಾ ॥ ಏನೆಂದು॥

ತನ್ನ ಕೂಸದು ಅಚ್ಚೂ । ಮೆಚ್ಚೂ ।
ತಾಯಿತಾಯಿಗೆ ಇದ್ದ ಎಲ್ಲರ ।
ತಾಯಿ ತಂದೇ ಚಿಗುರ ಚಿವುಟುವಿ ।
ಮಾಯ ಮಮತೆಯು ನಿನ್ನ ರೀತಿಯೆ ಭಿನ್ನಾ ॥ ಏನೆಂದು॥

ಕರುಳ ಕಳವಿದು ಸರಿಯೇ? । ಹರಿಯೇ ।
ದಾನ ದೊರೆಯದು ಎಂದು ವಂಚಿಸಿ ।
ದೀನಮಾತೆಯು—ನಿನ್ನ ನಾಟಕ ।
ನೀನೆ ಬಲ್ಲೆಯೊ ಘನಕರುಣ ಸಂಪನ್ನಾ ॥ ಏನೆಂದು॥

—ಅಂಬಿಕಾತನಯ ದತ್ತ.

---

(೪೯೩ನೇ ಪುಟದಿಂದ ಮುಂದ ಸಾಗಿದ್ದು)

ಹಿಂದೂಗಳು, ಮುಸಲ್ಮಾನ-ಹಿಂದೂಗಳು ಎಂದು ಕರೆಯಬೇಕಾಗುವುದು* ಬೊಂಬಾಯಿ ಪ್ರಾಂತದಲ್ಲಿರುವ ಕೋಲಿ ಜನರಲ್ಲಿ ಅನೇಕರು ಕ್ರಿಸ್ತರಾಗಿರುವರು. ಆದರೂ ಹಿಂದೂದೇವರುಗಳ ವಿಗ್ರಹಗಳನ್ನಿಟ್ಟುಕೊಂಡು ಅವುಗಳಿಗೆ ಪೂಜೆ ಉತ್ಸವಾದಿಗಳನ್ನು ಹಿಂದುಗಳಂತೆಯೇ ನಡೆಸುತ್ತಿರುವರು. ಮದರಾಸಿನಲ್ಲೂ ಇಂಥಾ ಕ್ರಿಸ್ತ-ಹಿಂದೂಗಳು ಅನೇಕವಾಗಿ ದೊರೆಯುವರು. ಇಲ್ಲಿನ ಅರ್ಧಪಾಲು ರೋಮನಕ್ರಿಸ್ತರಲ್ಲಿ ಜಾತಿವ್ಯವಸ್ಥೆಯುಂಟು. ಮುಸಲ್ಮಾನ-ಹಿಂದೂಗಳು ಮುಖ್ಯವಾಗಿ ಗುಜರಾತಿನಲ್ಲೂ ಕಂಡುಬರುವರು. ಮಾತಿಯ, ಮೂಮುನ, ಷೆಯಿಕ, ಮೊಲೆಸಲಾಮ, ಸಂಘರ್ ಸಂಜೋಗಿ (ಸಿಂಧುದೇಶ) ದೂದೆಕಾಲ (ಮದರಾಸು), ಹುಸೇನಿ, ರಾವಚಂದ (ಸಿಂಧುದೇ... ಜೈಶ್ವರ, ಕೂರ್ಮಿ (ಬಿಹಾರ) ಇವೇ ಮೊದಲಾದ ಜಾತಿ... ವರು ಹಿಂದೂ ಮತ್ತು ಮುಸಲ್ಮಾನ ಮತಾಚಾರಗಳನ್ನು ಸ... ವಾಗಿ ಆಚರಿಸುತ್ತಿರುವರು. ಹುಸೇನಿ ಎಂಬುವರು ಬ್ರಾಹ್ಮಣ... ಆಚಾರವನ್ನೆಲ್ಲ ಇಟ್ಟುಕೊಂಡಿರುವರು. ಅದರ ಜತೆಗೆ ಮುಸ... ಲ್ಮಾನರ ಆಚಾರವನ್ನೂ ಕೈಕೊಂಡಿರುವರು. ಕಬೀರಪಂ... ಗಳಲ್ಲಿ ಹಿಂದೂಕಬೀರಪಂಥಿಗಳು ಮುಸಲ್ಮಾನಕಬೀರಪಂಥಿ... ಗಳು ಎಂಬ ಎರಡು ಶಾಖೆಗಳುಂಟು. ಇತ್ಯಾದಿ ಕಾರಣಗಳಿಂ... ಹಿಂದೂ ಎಂದರೆ ಹಿಂದೂ ಮತಾವಲಂಬಿ ಎಂದು ಹೇಳುವು... ಶಾಸ್ತ್ರೀಯವಾದ ನಿರ್ವಚನವಾಗುವುದಿಲ್ಲ!

J. T. Marten -- Census of India 1921, Vol I, part 1 Report p 1156; and Bhattacharya-- Hindu Castes and Sects, P 118,208,&272 etc, 32 Madras 342 at 349 p Sankarn Nair.

# ಫಕ್ಕೀರವ್ವನ ಪುಣ್ಯ

( ಒಂದು ಕತೆ )

ಬರೆದವರು— ಕೃಷ್ಣ ಕುಮಾರ ಕಲ್ಲೂರ.

೧

ಬೆಳಗಿನ ಮೂರುಗಂಟೆ. ಫಕ್ಕೀರವ್ವನು, ಮೈಯೆಲ್ಲ ಹಂಣು ಹುಣಾಗಿದ್ದರೂ, ಏಳಲಾರದೆ ಎದ್ದು ಬೀಸಹಾಕಿದ್ದಳು. ಹಿತ್ತಲ ಮನೆಯ ಹುಸಿಯಲ್ಲಿ ಬೀಸುಕಲ್ಲಿನ ಮುಂದೆ ಎಡಗಾಲು ಚಾಚಿ ಬಲಗಾಲಮಂಡೆಯ ಬದಿಯಲ್ಲಿ ಒಂದು ಮರದ ತುಂಬ ಜೋಳ ಅಣಿಮಾಡಿಕೊಂಡು, ತಿರುವಲೋ ಬೇಡವೋ ಎನ್ನುತ್ತ ಕಲ್ಲನ್ನು ತಿರುವುತ್ತಲಿದ್ದಳು. ಇಂದು ಮಾತ್ರ ದಿನದಂತೆ ಅವಳ ಬೀಸು ಕಲ್ಲ ಹಾಡಿನ ತೆರೆಗಳು ಏರಿ ಏರಿ ಬಂದು, ಗಳೆಗೆ ಹೋಗುತ್ತಿರುವ ದನಗಳಿಗೂ, ಒಕ್ಕಲಿಗರಿಗೂ ಹೊಸ ಹುರುಪನ್ನು ಉಂಟುಮಾಡುತ್ತಿರಲಿಲ್ಲ. ಅದೇಕೋ ಅವಳ ಕೆಲಸ ಸಾಗ ಲೊಲ್ಲದು. ಎಷ್ಟು ಹೊತ್ತಾದರೂ ಮರದಲ್ಲಿದ್ದ ಜೋಳವೇ ಸವೆದಿರಲಿಲ್ಲ. ಚಿಟ್ಟಗಟ್ಟಿ ಜೋಳವನ್ನು ಹಾ, ಹಾ, ಎನ್ನುವದರಲ್ಲಿ ದರದಿಲ್ಲದೆ ಬೀಸಿ ಹಾಕುವವಳು ಇಂದು ನಾಲ್ಕು ರೊಟ್ಟಿಯ ಪೂರ್ತೆ ಕೂಡ ಬೀಸಲಾರದಾಗಿದ್ದಳು. ಎರಡನೆಯ ಕೋಳಿ ಕೂಗಿತು. ಫಕ್ಕೀರವ್ವ ಮರದಲ್ಲಿ ಕೈಯಿಕ್ಕಿ ನೋಡಿದಳು. ಇನ್ನೂ ಅರ್ಧದಮೇಲೆ ಜೋಳ ಹಾಗೇ ಇತ್ತು. ಇರುಇರುತ್ತಲೆ, ಆಕೆಯ ಕಣ್ಣುಗಳಿಂದ ನೀರು ಬಳಬಳನೆ ಉದುರಹತ್ತಿತು. ಕಲ್ಲು ತಿರುವುವದನ್ನು ಇದ್ದಕ್ಕಿದ್ದ ಹಾಗೆಯೇ ನಿಲ್ಲಿಸಿ, ಮೋರೆಗೆ ಸೆರಗು ಹಾಕಿಕೊಂಡು, ಹುಸಿಯ ಕಟ್ಟೆಗೆ ಒರಗಿ ಮೆಲ್ಲಮೆಲ್ಲನೆ ಬಿಕ್ಕಿ ಬಿಕ್ಕಿ ಅಳಹತ್ತಿದಳು. ದುಕ್ಕವು ಒತ್ತರಿಸಿ ಬರುತ್ತಿತ್ತು. ಆದರೂ ಅದನ್ನು ಬಲುಮೆಯಿಂದ ಹತ್ತಿಟ್ಟುಕೊಳ್ಳುತ್ತಿದ್ದಳು. ಬಯಿಯಲ್ಲೇ ಮಲಗಿದ ಗಂಡನಿಗೂ ಮಕ್ಕಳಿಗೂ ಎಚ್ಚರವಾದೀತೆಂದು ಅವಳಿಗೆ ಅಂಜಿಕೆ.

ಕೆಲಹೊತ್ತಿನ ಮೇಲೆ ದುಕ್ಕವು ತಮ್ಮಣೆಯಾಗಲು, ಫಕ್ಕೀರವ್ವನು ಮತ್ತೆ ಬೀಸತೊಡಗಿದಳು. ಬೆಳಕು ಹರಿಯುವದರೊಳಗೇ ಇಟ್ಟುಕೊಂಡ ಜೋಳವೆಲ್ಲ ಬೀಸಿ, ರೊಟ್ಟೀ ಬೇಯಿಸಿ, ಗಂಡನನ್ನೆಬ್ಬಿಸಿ, ಕಟ್ಟಿಕೊಟ್ಟು, ಹೊಲಕ್ಕೆ ಅಟ್ಟಬೇಕಾಗಿತ್ತು. ಮೈಮೇಲೆ ಇಷ್ಟೊಂದು ಮುಂದಿನ ಹೊಣೆಯಿರುವಾಗ ಮುನ್ನೋಡಿ ಕೆಲಸಮಾಡುವವನ್ನು ಬಿಟ್ಟು, ಹಿಂದಿನದನ್ನು ನೆನೆಸಿ ಅಳುತ್ತ ಕುಳ್ಳಿರುವದು ಅವಳಿಗೆ ಸೇರಲಿಲ್ಲ. ಬೆಳಗಾಗಲೆದ್ದು ಗಂಡನು ಹೊಲಕ್ಕೆ ಹೋಗಿ ಹೋರೆಮಾಡಿ ನಾಲ್ಕರಲ್ಲಿ ಎರಡಾಣೆಯಾದರೂ ಮನೆಗೆ ತಂದರೆ, ಮರುದಿನ ಮಕ್ಕಳಿಗೆ ಎರಡು ರೊಟ್ಟಿ ದೊರೆಯಬಹುದೆಂದು ಅವಳ ಬಗೆ.

ಹೀಗೆ ತನ್ನ ಕೆಲಸದ ಹೊಣೆಯ ವಿಚಾರವನ್ನೇ ತಲೆಯಲ್ಲೆಲ್ಲ ತುಂಬಿಕೊಂಡು, ಫಕ್ಕೀರವ್ವನು, ಮೈಮರೆತವಳಂತೆ ಇಮ್ಮಡಿ ಕಸುವಿನಿಂದ ಕಲ್ಲು ತಿರುವತೊಡಗಿದಳು. ಹೀಗಿರುವಾಗಲೇ ಅವಳ ಎಡಭುಜವನ್ನು ಯಾರೋ ತಟ್ಟಿದಂತಾಯಿತು. ಫಕ್ಕೀರವ್ವನು ಮೈ ಜುಮ್ಮೆಂದು ಮೆಟ್ಟಿಯೇ ಬಿದ್ದಳು. ಚೀರಿಕೊಳ್ಳಬೇಕೆನಿಸಿದರೂ ಆಗಲಿಲ್ಲ. ಇನ್ನೂ ಕತ್ತಲೆ ಕವಿದಿದ್ದರಿಂದ ಹೆಗಲು ತಟ್ಟಿದವರನ್ನು ಅವಳು ಗುರುತಿಸದೇ ಹೋದಳು. ಅವಳ ಮೈಯೆಂತ ಮೈಯೆಲ್ಲ ಚಳಿಕಟ್ಟಿ, ಥರ ಥರ ನಡುಗು ಹುಟ್ಟಿತು. ಬಂದವರು ಮಾತನಾಡಿದರು:—

" ಯಾಕೆ, ಫಕ್ಕೀರೀ ! ಹೆದರಿದೆಯಾ? "

ಗಂಡನ ದನಿಯ ಗುರುತು ಹತ್ತಲು ಅವಳ ಹೆದರಿಕೆ ಹಿಮ್ಮೆಟ್ಟಿತಾಯಿತು. ಆದರೂ ನಡುಕ ನಿಲ್ಲಲಿಲ್ಲ. ಮನದಲ್ಲಿ ಒಂದು ತರದ ಸೋಜಿಗವು ತಲೆದೋರಿತು. ಹಿಗ್ಗು ಉಕ್ಕೇರಿ ಬಂದಂತಿದ್ದರೂ, ಅದು ಕೆಲವೊಂದು ಹೊತ್ತು, ಸೋಜಿಗದ ಬೆನ್ನಹಿಂದೆ ಅಡಿಗಿಕೊಂಡು ನಿಲ್ಲಬೇಕಾಯಿತು. ಮುನ್ನಾಯಿರುಳು, ಅಷ್ಟೊಂದು ರಂಭಾಟವಾದಮೇಲೆ, ಸರಿರಾತ್ರಿಗೆ ಹಾಸಿಗೆ ಕಂಡ ಗಂಡನು ಇಷ್ಟು ಬೇಗನೇ ಎದ್ದು ಬಂದಾನೆಂದು ಫಕ್ಕೀರವ್ವನು ಬಗೆದಿರಲಿಲ್ಲ.

ಚಿನ್ನಪ್ಪನು, ಸರಿರಾತ್ರಿಮಾಡಿ ನಿದ್ದೆ ಹೋಗಿದ್ದರೂ, ಫಕ್ಕೀರವ್ವನು ಬೀಸಹಾಕುವ ಹೊತ್ತಿಗೆ ಎಚ್ಚತ್ತಿದ್ದನು. ಅವಳು ಬೀಸುತ್ತ ತನ್ನಮೇಲೆ, ಮಕ್ಕಳಮೇಲೆ, ಹಾಡು ಕಟ್ಟಿ ಹಾಡುವದನ್ನು, ಮುಸುಕಿನಲ್ಲಿ ಮಲಗಿಯೇ ಕೇಳುತ್ತ, ಬಿಸ್ಸಿಕೊಳ್ಳ

ವದು ಆತನ ವಾಡಿಕೆ. ಆದರೆ ಇಂದು ಹಾಡಿನ ಇಂಪು ಆತನ ಕಿವಿಯನ್ನು ತಣಿಸಲಿಲ್ಲ. ಆದ್ದರಿಂದ ಮುಂಜಾವಿನ ಸಕ್ಕರೆ ನಿದ್ದೆಯ ಮಬ್ಬು ಹಾರಿಹೋಗಿ ಕಣ್ಣೆಲ್ಲ ನಿಚ್ಚಳವಾಗಿರಲು ಮಲಗಿಕೊಂಡಲ್ಲಿಯೇ ಏನೇನೋ ಎಣಿಕೆ ಹಾಕುತ್ತಲಿದ್ದ. ನಡುವೇ ಬೀಸುಕಲ್ಲು ನಿಂತಿತು; ಫಕ್ಕೀರವ್ವನ ಬಿಕ್ಕುದನಿಯ ಅಳುವು ಕೇಳತೊಡಗಿತು; ಆಮೇಲೆ ಮತ್ತೆ ಅವಳು ಇಮ್ಮಡಿ ಕಸುವಿನಿಂದ ಬೀಸತೊಡಗಿದ್ದುದು ತಿಳಿದುಬಂತು. ಏನು ಎನಿಸಿತೇನೋ, ಆತ ಎದ್ದು ಬಂದು, ಇಳಿವೋರೆ ಹಾಕಿಕೊಂಡು ಫಕ್ಕೀರವ್ವನ ಬಳಿಯಲ್ಲೇ ಕುಳಿತುಕೊಂಡ. ಅವಳು ಅದನ್ನು ಅರಿಯಲಿಲ್ಲ. ಅಂತೆಯೇ, ಬೀಸುವ ಭರದಲ್ಲಿದ್ದಾಗ ಚಿನ್ನಪ್ಪನು ಅವಳನ್ನು ತಟ್ಟಲು ಅವಳು ಅಷ್ಟು ಬೆದರಿದ್ದು.

ಚಿನ್ನಪ್ಪ ಮತ್ತೆ ಮಾತನಾಡಿದ. ಈಸಲ ಆತನು ತನ್ನ ಮಾತಿನಲ್ಲಿ ತುಸು ಹುಸಿನಗೆಯನ್ನು ಬೆರೆಸಲು ಯತ್ನಿಸಿದ–

"ಯಾಕಲೆ! ಫಕ್ಕೀರಿ? ಮತ್ತೆ ಬಡತ ಬಿದ್ದಾವೆಂದು ಹೆದರಿದೆಯೇನು?"

ಫಕ್ಕೀರವ್ವ ಮಾತನಾಡಲೆ ಇಲ್ಲ. ಈ ಮಾತಿನಿಂದ ಅವಳ ಮೈಚಳಿ ಮಾತ್ರ ಬಿಟ್ಟುಹೋಯಿತು. ಗೂಟವನ್ನು ಹಿಡಿದುಕೊಂಡಿದ್ದ ಕೈಯು ಮೆಲ್ಲನೆ ಅಲ್ಲಿಂದ ಕಳಚಿತು. ಚಿನ್ನಪ್ಪನು, ಮತ್ತಷ್ಟು ಮುಂದೆ ಸರಿದು, ಬಲಗೈಯನ್ನು ಅವಳ ಬಲಹೆಗಲ ಮೇಲಿರಿಸಿ, ತಲೆಯನ್ನು ಅವಳ ಎಡಹೆಗಲಮೇಲೆ ಚಲ್ಲಿ, ಕಿರುದನಿಯಲ್ಲೇ ತನ್ನ ಮಾತನ್ನು ಮುಂದುವರಿಸಿದ–

"ಫಕ್ಕೀರಿ, ನೀನು ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು ನೋಡು. ನಾನೇನು ಮಾಡಲಿ, ನೀನೇ ಹೇಳು. ನನಗೆ ಮೈಮೇಲೆ ಅರಿವಿದ್ದರೆ ನಾನೆಂದೂ ಹಾಗೆ ಮಾಡುತ್ತಿರಲಿಲ್ಲ. ಎಚ್ಚರಬಂದಮೇಲೆ ನಾನು ಮಾಡಿದ ಕೆಲಸ ನನಗೇ ಹೇಸಿಗೆ ಬರುತ್ತಿದೆ. ಗಂಡುಸಾಗಿದ್ದರೂ ನಾನು ಕೈಲಾಗದ ಹೇಡಿ ಎಂದು ನನ್ನನ್ನು ನಾನೇ ಹಳಿದುಕೊಂಡಿದ್ದೇನೆ. ನೀನು ನನಗಿಂತ ಎಷ್ಟೋ ಚಿಕ್ಕವಳು. ನಿನ್ನಮೇಲೆ ಕೈಮಾಡಿ, ನಿನ್ನನ್ನು ಹಣ್ಣುಗಾಯಿ ನೀರುಗಾಯಿಮಾಡಿ ನಾನು ಹೇಗೆ ಗಂಡುಸೆಂದು ಹೆಮ್ಮೆತೊಟ್ಟುಕೊಳ್ಳಬೇಕೋ ನನಗೇ ತಿಳಿಯದು ನೋಡು. ಇನ್ನೊಮ್ಮೆ ನಿನ್ನನ್ನು ಹೊಡೆಯಲಾಗದೆಂದು ಗಲ್ಲಗಲ್ಲಬಡಿದುಕೊಂಡು, ಕಾಣುಮುಟ್ಟಿ, ಕೊರಳು ಮುಟ್ಟಿ, ಬಸವಣ್ಣನನ್ನೂ ಮುಟ್ಟಿ, ಎಷ್ಟೋಸಲ ಆಣೆ ಹಾಕಿಕೊಂಡಿದ್ದೇನೆ ಫಕ್ಕೀರಿ; ಆದರೆ ಸಿಟ್ಟೇರಿದಾಗ ಈ ಬುದ್ಧಿಯೆಲ್ಲ ಎಲ್ಲಿ ಓಡಿ ಹೋಗುವದೋ ನೋಡು. ನಿನ್ನೆ ರಾತ್ರಿಯಂತೂ ನಾನು ನಿನ್ನನ್ನು ಮನಬಂದಂತೆ ಹಾಕಿಕೊಂಡು ಹಣಿದುಬಿಟ್ಟೆ. ಇಷ್ಟಾ, ನಿನ್ನ ಈ ಮಿದುವು ಮೈ ಮುಟ್ಟಿದರೆ ಮಾಸಬೇಕು. ಇಂಥ ನಿನ್ನನ್ನು ಹೊಡೆಯಲು ನನ್ನ ಕೈ ಹೇಗೆ ಎದ್ದಿತೋ ಏನೋ–! ನಾನು ಬಲು ಕಲ್ಲು ಫಕ್ಕೀರೀ, ಬಲುಕಲ್ಲು– ನೋಡು....."

ಗಂಡನ ಮಾತು ಕೇಳಿ ಫಕ್ಕೀರವ್ವನಿಗೆ ದುಕ್ಕ ಅಸಗೊಳ್ಳಲಿಲ್ಲ; ಕಣ್ಣಕೋಡಿಯನ್ನೊಡೆದು ಹರಿಯಹತ್ತಿತು. ಚಿನ್ನಪ್ಪನೂ ಅಳಬಾರದಷ್ಟು ಅತ್ತುಬಿಟ್ಟ. ಎಳೆ ಹರೆಯದ ಹೆಂಡತಿಯನ್ನು ಸುಮಸುಮ್ಮನೆ, ಎಳ್ಳಷ್ಟು ತಪ್ಪಿಲ್ಲದೆ ಹೊಡೆದುಬಿಟ್ಟುದಕ್ಕಾಗಿ ಆತನಿಗೆ ಮೀರಿಮೀರಿ ಪಶ್ಚಾತ್ತಾಪವಾಗಿತ್ತು. ಆತನು ಹುರಿಗಂಡಸು; ಅವಳು ಪುಡಿಹೆಂಗಸು. ಅವಳು ಆತನಿಗೆ ಈಡೇ? ಆದರೂ ಫಕ್ಕೀರವ್ವ ಆತನ ಹೊಡತಬಡತ ತಾಳಿಕೊಂಡು ತನ್ನ ನೋವನ್ನು ಒಳಗೊಳಗೇ ಹತ್ತಿಟ್ಟುಕೊಳ್ಳುತ್ತಿದ್ದಳು. ಅವಳ ಈ ಗುಣವು ಚಿನ್ನಪ್ಪನ ಪಶ್ಚಾತ್ತಾಪವನ್ನು ಮತ್ತಷ್ಟೂ ನಾಚಿಸಿತ್ತು. ಆ ನಾಚಿಕೆಯಿಂದಲೇ ಏನೋ, ಚಿನ್ನಪ್ಪನು ತನ್ನ ಮೋರೆಯನ್ನು ಫಕ್ಕೀರವ್ವನ ಸೆರಗಿನಲ್ಲಿ ಹುದುಗಿಸಿಕೊಂಡು ದುಕ್ಕಿಸತೊಡಗಿದ. ಹೀಗೆಯೆ, ಗಂಡಹೆಂಡರಿಬ್ಬರೂ ಬಲುಹೊತ್ತಿನ ವರೆಗೆ, ಒಬ್ಬರನ್ನೊಬ್ಬರು ಅವಚಿಕೊಂಡು ಅಳುತ್ತ ಕುಳಿತುಬಿಟ್ಟರು. ಏನೇಯಾದರೂ ಫಕ್ಕೀರವ್ವನ ಬಾಯಿಂದ ಮಾತುಗಳೇ ಹೊರಬೀಳದಾದವು. ಮೂಕಳಾಗಿಯೇ, ತನ್ನ ಕೈಮೈಗಳಿಂದ ಗಂಡನನ್ನು ಹಲವು ಪರಿಯಿಂದ ಸಂತಯಿಸ ತೊಡಗಿದಳು. ಚಿನ್ನಪ್ಪನೇ ಮತ್ತೆ ಮಾತಿಗೆ ಮೊದಲು ಮಾಡಿದ—

"ಫಕ್ಕೀರೀ! ನೀನೂ ಬಲ ಹಟಮಾರಿ ನೋಡು. ನಾನು ನಿಶೆಯಲ್ಲಿದ್ದಾಗ ಎಚ್ಚರದಪ್ಪಿ, ಕೈಮೀರಿ ಕೆಲಸಮಾಡಿಬಿಡುತ್ತೇನೆಂದು ನಿನಗೆ ಗೊತ್ತು. ಆದರೂ ನೀನು ಏನಾದರೂ ಎದರುವಾದಿಸಿ ನನ್ನಿಂದ ಹೊಡತ ತಿನ್ನುತ್ತೀ! ಕುಡಿದು ಬಂದಾಗ ನನಗಂತೂ ಬುದ್ಧಿ ಕೈಯಲ್ಲಿರುವದಿಲ್ಲವೆಂದು ನೀನು ಬಲ್ಲೆ. ನನ್ನನ್ನು ಬಿಡು; ನೀನೇಯೇಕೆ ಜಾಣಳಾಗಬಾರದು! ಉಳಿದ ಎಲ್ಲ ಪರಿಯಿಂದಲೂ ನೀನು ನನಗಿಂತ ಎಷ್ಟೋ ಜಾಣಳಿರುವಿ; ಆದರೆ ನಾನು ಕುಡಿದುಬಂದಾಗಲೇ ನೀನೂ ನಿನ್ನ ಬುದ್ಧಿಯನ್ನು ಮಾರಿಕೊಳ್ಳುವೆಯೋ ಏನೋ! ಹೀಗೇ ನಡೆಯುತ್ತಹೋದರೆ, ಒಂದಿಲ್ಲೊಂದು ದಿನ ನಾನು ಎಲ್ಲಿ ನಿನ್ನನ್ನು ಕೊಂದುಬಿಡುವೆನೋ ಎಂದು ಬಲು ಹೆದರಿಕೆಯಾಗುತ್ತದೆ ಫಕ್ಕೀರಿ— ದಯಮಾಡಿ ಅಷ್ಟು ಉದ್ದನೀರಿಗೆ ನಾನು ಹೋಗ

ದಂತೆ ನೀನೇ ನೋಡಿಕೊಳ್ಳಬೇಕು, ನೋಡು. ನಿನ್ನೆ ನೀನು ಬಹಳ ಹಟತೊಟ್ಟೆ. ಅಂತೆ, ಮೊದಲೇ ಸೆರೆಕುಡಿದ ಕೋತಿಗೆ ಚೇಳು ಕಡಿದಂತೆ ನಾನು ಅರವುಗೆಟ್ಟು ನಿನ್ನನ್ನು ನುಗ್ಗುನುಗ್ಗು ಮಾಡಿದೆ. ಆ ತೋಳಬಂದಿಯನ್ನು ನಾನು ಬೇಡಿದಾಗ ಕೊಟ್ಟುಬಿಟ್ಟಿದ್ದರೆ, ಇಷ್ಟೆಲ್ಲ ಕೇಡು ಆಗುತ್ತಿತ್ತು ನೋಡು!— ಪ್ರಾಣಹೋದರೂ ನನ್ನಿಂದ ಕುಡಕತನವನ್ನು ಬಿಡಲಾಗುವದಿಲ್ಲ. ನಿನಗೆ ನನ್ನ ಪ್ರಾಣಬೇಕೋ ನಾನು ಕುಡಿಯುವದನ್ನು ಬಿಡುವದು ಬೇಕೋ?”

ಚಿನ್ನಪ್ಪನ ಮಾತುಗಳು ಫಕ್ಕೀರವ್ವನ ದುಃಖವನ್ನು ಮತ್ತೂ ಉಕ್ಕಿಸುತ್ತಿದ್ದವು. ಮುನ್ನಾಯಿರುಳು, ಗಂಡನು ತೋಳಬಂದಿಯನ್ನು ಬೇಡಿದಾಗ ಕೊಡದಿದ್ದದ್ದು ಒಳಿತೆಂದು ತೋರಿತು. ಆದರೂ, ಆದ ಅನರ್ಥದ ತಪ್ಪನ್ನು ತನ್ನ ಮೇಲೆ ಹೊತ್ತುಕೊಳ್ಳಲು ಅವಳು ಸಿದ್ಧಳಾದಳು. ಅದರಿಂದ ಅವಳ ಮನಸ್ಸು ತುಸು ಹಗುರಾಗಲು ಫಕ್ಕೀರವ್ವನು ಮಾತಾಡಿದಳು—

“ನನಗೂ ಅಷ್ಟು ತಿಳುವಳಿಕೆ ಬರಲಿಲ್ಲ— ಹೋಗಲಿಬಿಡು. ಆವದ್ದು ಆಗಿಹೋಯಿತು. ಬೇಗನೇ ಇದಿಷ್ಟು ಬೀಸಿ, ರೊಟ್ಟೀ ಮಾಡಿ ಕಟ್ಟಿಕೊಡುವೆ. ಹೊರಗೆ ಹೋಗುವಿಯಂತೆ.”

“ಫಕ್ಕೀರೀ, ಪೆಟ್ಟು ಬಲವಾಗಿ ಹತ್ತಿರಬೇಕು. ಒಬ್ಬಳೇ ಪಡಿ ಜೋಳವನ್ನು ಹೇಗೆ ಬೀಸುವೆ ನಾನೂ ನಿನಗೆ ನೆರವಾಗಲೇ?”

ಗಂಡಹೆಂಡಿರಿಬ್ಬರೂ, ಜೋಳ ಬೀಸುವದಕ್ಕೆ ಮೊದಲು ಮಾಡಿದರು. ಹೆಂಡತಿಯು ತಪ್ಪನ್ನು ತಾನೇ ಹೊತ್ತುಕೊಂಡದ್ದರಿಂದ, ತಾನು ಮಾಡಿದ್ದು ಅಷ್ಟೇನು ತಪ್ಪಲ್ಲವೆಂದು ಚಿನ್ನಪ್ಪನು ತನ್ನನ್ನೇ ಸಮಾಧಾನ ಮಾಡಿಮಾಡಿಕೊಳ್ಳುತ್ತ ಮಾತನಾಡಿದ—

“ಹಾಗಾದರೆ, ಇನ್ನೊಮ್ಮೆ ಹೀಗೆ ಹಟ ತೊಡಬೇಡ. ಫಕ್ಕೀರೀ.”

“ನಾನೇನು ಬೇಕುಬೇಕೆಂದು ಹಟ ತೊಡುವೆನೇ. ಮೊದಲೇ ಮನೆಯಲ್ಲಿ ಬಡತನ ಥೈಥೈ ಕುಣಿಯುತ್ತದೆ. ನಾವಿಬ್ಬರೂ ಮೈಮುರಿದು ದುಡಿಯುವದೆಲ್ಲ ಹೊಟ್ಟೆಬಟ್ಟೆಗೆ ಕೂಡ ಸಾಲುವದಿಲ್ಲ. ಅಂಥದರಲ್ಲಿ ನೀನು ಹೀಗೆ ಕುಡಿಯುತ್ತಹೋದರೆ, ನಾಳೆ ಬೆಳಗಾದರೆ ಮನೆಯೆಲ್ಲ ತೊಳೆದುಹೋದೀತು. ಈಗ ಮನೆಯಲ್ಲಿ ಉಳಿದದ್ದೊಂದು ತೋಳಬಂದಿ. ಅದನ್ನೂ [illegible] ಹೆಣ್ಣಿಕೆ ಬಡಿದು ಎದರೆ, ಮಕ್ಕಳುಮರಿಗಳೇನು ಹೊಟ್ಟೆಗೆ ಕೇರು ಹಾಕಿಕೊಳ್ಳಬೇಕೇ? ಅದಕ್ಕಾಗಿ ನಾನಿಷ್ಟು ಬಡಕೊಳ್ಳುವದು. ನೀನು ನನ್ನನ್ನು ಹೊಡೆದರೆ ಬಡಿದರೆ ನನಗೇನು ನೋವಿಲ್ಲ. ನೀನು ನನ್ನನ್ನು ಕೊಂದರೂ ನನಗೇನು ಯೋಚನೆಯಿಲ್ಲ. ಆದರೆ, ಹೀಗೆ ಮನೆತನವೇ ಹಾಳಾಗುತ್ತ ಹೋದರೆ, ಮುಂದೆ ನೀನೇನು ಮಾಡುವೆ; ಮಕ್ಕಳೇನು ಮಾಡಬೇಕು!!” —ಫಕ್ಕೀರವ್ವನ ಕಣ್ಣಿಂಪಿನ ಒಡಲಲ್ಲಿ ಮತ್ತೆರಡು ಮುತ್ತುಗಳು ಮೂಡಿದವು.

ಫಕ್ಕೀರವ್ವನ ಮಾತಿನ ಸತ್ಯವು ಚಿನ್ನಪ್ಪನಿಗೆ ಹೊಳೆಯದಿರಲಿಲ್ಲ. ತನ್ನ ಮಾತು ಸೋತಿತೆಂದು ಆತ ನಾಲಿಗೆ ಕಚ್ಚಿಕೊಂಡ. ಆ ಎಲ್ಲ ಸಂಗತಿಯಿಂದ, ಫಕ್ಕೀರವ್ವನಿಗೆ ಒಂದು ತರದ ಹೊಸ ಬಗೆಯ ಸಮಾಧಾನವಾಯಿತು. ಹಿಟ್ಟು ತುಂಬಿಟ್ಟು, ಅವಳು ಲಗುಬಗೆಯಿಂದ ತನ್ನ ಕೆಲಸದಲ್ಲಿ ತೊಡಗಿದಳು.

೨

ಈ ಮಾತಿಗೆ ಒಂದು ತಿಂಗಳಾಯಿತು. ಫಕ್ಕೀರವ್ವನ ಹಾಡು ಎಂದಿನಂತೆ ಸಾಗಿಯೇ ಇತ್ತು. ಚಿನ್ನಪ್ಪನಿಂದ ಮತ್ತೂ ಎರಡು ಮೂರು ಸಲ ಹೊಡತ ತಿಂದಿದ್ದಳು. ಅದಕ್ಕೆ ಅವಳು ಅಂಜಿರಲೇ ಇಲ್ಲ. ಅದು ತಾನು ಬೇಡಿ ಪಡೆದ ಭಾಗ್ಯವೆಂದು ಅವಳು ತಿಳಿದುಕೊಂಡುಬಿಟ್ಟಿದ್ದಳು. ಆದರೆ ಮುಂದೆ ಮನೆತನದ ಗತಿಯೇನು; ಮಕ್ಕಳ ಪಾಡೇನು; ಎಂಬದೇ ಅವಳ ಯೋಚನೆ. ತಾನು ಎಷ್ಟೆಂದರೂ ಹೆಣ್ಣಾಳು. ಬೆಳಗಿನಿಂದ ಬೈಗಿನವರೆಗೆ ಮೈಯೆಲುಬು ಪುಡಿಯಾಗುವಂತೆ ದುಡಿದರೂ, ಹುಟ್ಟುವದು ಒಂದು ನಾಲ್ಕಾಣೆ. ಚಿನ್ನಪ್ಪನೂ ದುಡಿಯುತ್ತಿದ್ದ; ಬೇಕಾದಷ್ಟು ಗಳಿಸುತ್ತಿದ್ದ. ಆದರೆ ಬುದ್ಧಿ ತಿಳಿದಾಗ, ವಾರಕ್ಕೊಮ್ಮೆಯೋ ಎರಡುಸಲವೋ ತನ್ನ ಗಳಿಕೆಯನ್ನು ಮನೆಗೆ ಮುಟ್ಟಿಸಿದರೆ ಹಿರಿಯರ ಪುಣ್ಯ. ಫಕ್ಕೀರವ್ವನೇ, ತನ್ನ ಗಳಿಕೆಯಿಂದ ಹೇಗೋ ಸಂಸಾರ ಸಾಗಿಸಿದ್ದಳು. ಗತಿಗಾಣದೆ ಮೈಮೇಲಿನ ವಸ್ತ್ರಗಳನ್ನೂ ಮಾರಬೇಕಾಗಿ ಬಂದಿತ್ತು. ಆದರೂ ಫಕ್ಕೀರವ್ವ ಸಮಾಧಾನದಿಂದ ತನ್ನ ದಾರಿಯನ್ನು ತುಳಿಯುತ್ತಲೇ ಇದ್ದಳು. ಇನ್ನೊಬ್ಬ ಹೆಂಣಾಗಿದ್ದರೆ, ಎಂದೋ ಮನೆಬಿಟ್ಟು ಓಡಿ ಹೋಗುತ್ತಿದ್ದಳು. ಆದರೆ ಫಕ್ಕೀರವ್ವನು ಸ್ವಭಾವದಿಂದಲೇ ಮೆತ್ತನ್ನವಳು. ಅಲ್ಲದೆ, ತನ್ನ ಮೇಲಿದ್ದ ಗಂಡನ ಪ್ರೇಮವನ್ನೂ ಚೆನ್ನಾಗಿ ಅರಿತವಳು. ಅವಳು ಕಂಡ ಪಟ್ಟಿಗೆ, ಕುಡಿಯುವದೇ ಚಿನ್ನಪ್ಪನ ದುರ್ಗುಣ. ಅದನ್ನು ಹೇಗಾದರೂ ತಪ್ಪಿಸಬೇಕೆಂದು ಅವಳು ಮನಮುಟ್ಟಿ ಹೆಣಗುತ್ತಿದ್ದಳು.

ಹಲವು ಬಗೆಯಿಂದ ಯತ್ನಮಾಡಿನೋಡಿ ಕಡೆಗೆ ಅದು ಮನುಷ್ಯರ ಕೈಮೀರಿದಮಾತೆಂದು ಬಗೆದು ಸುಮ್ಮನಾಗಿದ್ದಳು. ಗಂಡನು ತನ್ನ ಗಳಿಕೆಯನ್ನು ಹಾಳುಮಾಡಲೊಲ್ಲನೇಕೆ; ತನ ಗಾದ್ದೂ ಹೆಚ್ಚಾಗಿ ಹಣ ಸಿಗಬಹುದಾದರೆ, ಇನ್ಮಡಿ ದುಡಿತ ವನ್ನು ಮಾಡಿಯಾದರೂ ಸಂಸಾರದ ಎಲ್ಲ ಭಾರವನ್ನು ತಾನೇ ಹೊರಲು ಸಿದ್ಧಳಾಗಿದ್ದಳು.

ಚಿನ್ನಪ್ಪನಿಗೂ ತನ್ನ ದುರ್ಗುಣದ ಅರಿವಿಲ್ಲದಿರಲಿಲ್ಲ. ತನ್ನ ಹೆಂಡರು ಮಕ್ಕಳ ಕುತ್ತಿಗೆಯನ್ನು ತಾನು ಸಣ್ಣಾಗಿ ನೂಲಿನಿಂದ ಕೊಯ್ಯುತ್ತಿರುವೆನೆಂದು ಆತನಿಗೆ ತಿಳಿದಿತ್ತು. ಆದರೆ ಮಾತು ಆತನ ಅಳವು ಮೀರಿತ್ತು. ಕಾರಣ, ತನ್ನ ಹೆಂಡತಿಮಕ್ಕಳ ಸ್ವರ್ಗನರಕವೆರಡೂ, ಸೆರೆಸಿಂದಿಗಳಲ್ಲಿಯೇ ಇರುವವೆಂದು ಆತ ಗಟ್ಟಿಯಾಗಿ ಗೊತ್ತುಮಾಡಿಕೊಂಡಿದ್ದ.

೩

"ಫಕ್ಕೀರೀ–, ಎಲೇ ಫಕ್ಕೀರಿ–, ಕೊಡಲೀ ತೆಗೆದುಕೊಂಡು ಬಾ–"

ಚಿನ್ನಪ್ಪನು ಆತುರದ ದನಿಯಿಂದ ಕೂಗುತ್ತಿರುವದನ್ನು ಕೇಳಿ ಫಕ್ಕೀರವ್ವನು ಧಾವಿಸಿ ಹೊರಗೆ ಓಡಿಬಂದಳು. ಮುಂಚೆಯ ಅಂಗಳದಲ್ಲಿ ನಾಲ್ಕೈದು ಜನರು ಚಪಗೊಡ್ಲಿಗಳನ್ನೂ, ಒಂದೆ ರಡು ದೊಡ್ಡ ಕೊಡ್ಲಿಗಳನ್ನೂ, ಹಗ್ಗನುಲಿಗಳನ್ನೂ ಹೊತ್ತು ಕೊಂಡು ನಿಂತಿದ್ದರು. ಚಿನ್ನಪ್ಪನು ಅವರೆಲ್ಲರ ನಡುವೆ ನಿಂತು ರಾವುಹೊಡೆಯುವಂತಹ ಆವೇಶದಿಂದ ಅವರೆಲ್ಲರನ್ನು ಹುರಿ ದುಂಬಿಸುತ್ತಿದ್ದ. ಫಕ್ಕೀರವ್ವನಿಗೆ ಅವರ ಅರ್ಥವಾಗಲಿಲ್ಲ. ಚಿನ್ನಪ್ಪನು ಮತ್ತೆ ಕೂಗಿ ಹೇಳಿದ–

"ಫಕ್ಕೀರೀ– ಮೊನ್ನೆ ನೀರುಕುಡಿಸಿದ ಕೊಡ್ಲಿಯನ್ನು ಬೇಗ ತೆಗೆದುಕೊಂಡು ಬಾ. ಅವಸರದ ಕೆಲಸವಿದೆ. ಹೋಗಬೇಕು."

ಫಕ್ಕೀರವ್ವನು ಗೊಂದಲಗೆಟ್ಟಿದ್ದರೂ, ಗಂಡನ ದರ್ಪಕ್ಕೆ ಬೆದರಿ ಒಡನೆಯೇ ಕೊಡಲಿಯನ್ನು ತಂದುಕೊಟ್ಟಳು. ಕೂಡಲೇ ಚಿನ್ನಪ್ಪನು ತನ್ನ ಜನವನ್ನು ಕೂಡಿಕೊಂಡು ಜೀವುಗಾಲಹಾರಿಕೆ ಯಿಂದ ಹಿರೇಕೆರೆಯ ನಿಟ್ಟಿಗೆ ಸಾಗಿಹೋದನು. ಫಕ್ಕೀರವ್ವನು ಮತ್ತೇನೋ ವಿಧಿಕಾಟ ಬಂದಿತೆಂದು ಬಗೆದಳು. ಹೊತ್ತಿಲ್ಲದ ಹೊತ್ತಿನಲ್ಲಿ ನಾಲ್ಕೆಂಟು ಜನ ಗಂಡಾಳು ಕೊಡ್ಲಿ ಹೊತ್ತುಕೊಂಡು ಓಡಿ ಹೋದದ್ದನ್ನು ಕಂಡು ಅವರೆಲ್ಲ ಯಾರನ್ನೋ ಕೊಲೆ ಮಾಡುವದಕ್ಕೆ ಹೋದರೆಂದೂ, ಇನ್ನು ಮನೆ ಮುಳುಗುವ ಹೊತ್ತು ಬಂದಿತೆಂದೂ ಬಗೆದು ವಿಚಾರಮೂಢಳಾದಳು.

× × ×

ರಾತ್ರಿ ನಾಲ್ಕೈದು ತಾಸಾಯಿತು; ಚಿನ್ನಪ್ಪ ಬರಲಿಲ್ಲ, ಹುಡುಗರೆಲ್ಲ ಮಲಗಿಕೊಂಡಿದ್ದವು. ಫಕ್ಕೀರವ್ವ, ಒಂದು ಕಂಬಕ್ಕೆ ಆತು ಕುಳಿತು, ತಾಳಗೆಟ್ಟು ಹಲವು ಎಣಿಕೆ ಹಾಕುತ್ತ ಗಂಡನ ದಾರೀ ಕಾಯುತ್ತಿದ್ದಳು.— ಸರಿರಾತ್ರಿಯಾಗಿರಬಹುದು; ಬಾಗಿಲ ಧಡಮ್ಮೆಂದಿತು. ಚಿನ್ನಪ್ಪನ ಸುಳಿವನ್ನರಿತು ಫಕ್ಕೀರವ್ವ ಓಡಿಹೋಗಿ ಬಾಗಿಲ ತೆರೆದಳು. ಚಿನ್ನಪ್ಪ ಒಳಗೆ ಬಂದ, ಮೈಯೆಲ್ಲ ದಣಿದು ಸೋತಂತೆ ತೋರಿತು. ಹೆಗಲಮೇಲಿನ ಗೊಂಗಡಿಯನ್ನಿಳಿಸಿ, ಕೈಯ ಕೊಡ್ಲಿಯನ್ನು ಚಲ್ಲಿ ಮೆಟ್ಟು ಗಟ್ಟೆಯಮೇಲೆ ಕುಳಿತು ಬಿಟ್ಟ. ಮೋರೆಯೆಲ್ಲ ಜೋರೆಂದು ಬೆವರಿತ್ತು. ಮೈಯೆಲ್ಲ ಹೊಲಸು. ತೊಗಲಿನಮೇಲೆ ತರಚ ಗುರುತುಗಳು. ನೋಡಿದರೆ, ತೀರ ಹಸಿದು ಕಂಗಾಲಾಗಿದ್ದ ನೆಂದು ತೋರುತ್ತಿತ್ತು.

"ಫಕ್ಕೀರಿ! ರೊಟ್ಟೀ ನೀಡು ಹೊಟ್ಟೆ ಬಲು ಹಸಿವು."

ಫಕ್ಕೀರವ್ವನು ಅಡಿಗೆಮನೆಯಲ್ಲಿ ಹೋಗಿ ಎರಡು ಚರಿಗೆ ನೀರು ತಂದುಕೊಟ್ಟು ಗಂಗಾಳವನ್ನು ನೀಡಿಯಿಟ್ಟಳು. ಚಿನ್ನಪ್ಪ ಊಟಕ್ಕೆ ಕುಳಿತ.

"ಫಕ್ಕೀರಿ! ನಿನ್ನ ದೈವ ತೆರೆಯಿತು. ನೋಡಲೆ! ಇನ್ನು ಮೇಲೆ ಎಲ್ಲ ಚಿಂತೆ ತಪ್ಪಿದಂತಾಯಿತು."

ಫಕ್ಕೀರವ್ವನಿಗೆ ಮಾತಿನ ಅರ್ಥವಾಗಲಿಲ್ಲ. ಧೀಮೂಢಳಾಗಿ ಕುಳಿತಿದ್ದಳು.

"ಫಕ್ಕೀರೀ—, ಇಕಾ–ಇನ್ನುಮೇಲೆ ನಾನು ಕುಡಿಯುವ ದನ್ನು ಬಿಟ್ಟು ಬಿಟ್ಟೆ–; ಇನ್ನೆಂದೂ ಕುಡಿಯುವದೇ ಇಲ್ಲ; ಗಡಂಗದ ಕಡೆಗೆ ಕಣ್ಣೂ ಕೂಡ ಹಾಕುವದಿಲ್ಲ ನೋಡು."

ಚಿನ್ನಪ್ಪನ ಮಾತು ಕೇಳಿ ಫಕ್ಕೀರವ್ವನ ಮೋರೆಯಮೇಲೆ ಕಿರುನಗೆಯೊಂದು ಮಿಂಚಿಹೋಯಿತು.

"ಸುಳ್ಳಲ್ಲ ಫಕ್ಕೀರೀ—; ನಿಜವಾಗಿ ಇನ್ನುಮೇಲೆ ಜೀವ ಹೋದರೂ ಕುಡಿಯುವದಿಲ್ಲ. ನಾನು ಗಳಿಸಿದ ರೊಕ್ಕವನ್ನೆಲ್ಲ ತಪ್ಪದೇ ಮೊದಲು ನಿನ್ನ ಕೈಯಲ್ಲೇ ತಂದುಕೊಟ್ಟು ಬಿಡುವೆ; ನಗಬೇಡ– ಇಲ್ಲಿ ಕೇಳು, ಇಷ್ಟು ದಿನ ಆದದ್ದೆಲ್ಲ ಹೋಗಲಿ– ದೇವರಪಾದಬಡೆದು ಆಣೆ ಹಾಕಿಕೊಂಡಿದ್ದರೂ ನನ್ನಿಂದ ಕುಡಿತವನ್ನು ಬಿಡುವದಾಗಲಿಲ್ಲ. ಆದರೆ ಇಂದು, ಇದೊ, ನಿನ್ನ ಪಾದ ಬಡಿದು ಆಣೆ ಮಾಡುತ್ತೇನೆ– ಇನ್ನೆಂದೆಂದೂ ಸೆರೆಯನ್ನು ಮುಟ್ಟುವದಿಲ್ಲ, ಆಯಿತೇ! ಪ್ರಸಂಗವೇ ಹಾಗಿದೆ."

ಚಿನ್ನಪ್ಪನು ಆವೇಶದಲ್ಲಿ ಊಟವನ್ನು ಬಿಟ್ಟು, ಬದಿಯಲ್ಲಿ ನೀಡಲು ಕುಳಿತ ಫಕ್ಕೀರವ್ವನ ಕಾಲನ್ನು ಹಿಡಿದೇ ಬಿಟ್ಟ. ಫಕ್ಕೀರವ್ವನ ಕಣ್ಣಲ್ಲಿ ಹಳೆಯ ನಾಚಿಗೆಯ ತೆರೆಯೊಂದು ತೋಳಗಿ ತೋರಿಯಡಗಿತು. ಮೆಲ್ಲನೆ ಚಿನ್ನಪ್ಪನ ಕೈಯನ್ನು ಎತ್ತಿಕೊಂಡಳು.

"ಫಕ್ಕೀರೀ! ಊರಲ್ಲಿ ಇಂದು ಏನಾಗಿದೆಯೆಂದು ನಿನಗೆ ಗೊತ್ತಿರಲಿಕ್ಕಿಲ್ಲ. ನಿನ್ನೆ ರಾತ್ರಿ ಚಾವಡಿ ಮುಂದೆ ಸಭಾ ಇರುವದೆಂದು, ವಾಲೀಕಾರ ಗುರಪ್ಪನು ನನ್ನನ್ನು ಒಲ್ಲೆ ಒಲ್ಲೆಂದರೂ ಎಳೆದುಕೊಂಡು ಹೋಗಲಿಲ್ಲವೆ! ಅಲ್ಲಿ ನೀನೂ ಬಂದಿದ್ದರೆ ಬಲು ಲೇಸಾಗುತ್ತಿತ್ತು, ನೋಡು. ಗಾಂಧೀ ಅಂತಂತಾರಲ್ಲ– ಆ ಗಾಂಧೀಮಂದಿ ಬಂದು ಅದೇನೋ ಲೆಚ್ಚರ ಅಂತ– ಅದನ್ನು ಹೇಳುತ್ತಿದ್ದರು. ಲೆಚ್ಚರ ಎಂದರೆ ಏನು ಗೊತ್ತಿಲ್ಲವೇ! ಲೆಚ್ಚರ ಅಂದರೆ ಸೆರೆಕುಡಿಯಬಾರದೆಂದು ಹೇಳುವದು. ಆ ಗಾಂಧೀ ಮಾತ್ರ ಜನರು ಸೆರೆಕುಡಿಯುವದನ್ನು ಬಿಡಿಸುವದಕ್ಕೆ ಒಂದು ಘನಯುಕ್ತಿ ತೆಗೆದಿರುವನು ನೋಡು.– ಫಕ್ಕೀರಿ, ಸೆರೆಕುಡಿಯುವದು ಕೆಟ್ಟ ಎಂದು ಸಣ್ಣ ಕೂಸಿಗೆ ಕೂಡ ತಿಳಿಯುವದು. ಅದರಿಂದಲೇ ಅಲ್ಲವೆ ನಾವಿಷ್ಟು ಬಡತನದ ಭವಣೆಯನ್ನು ಬಡುತ್ತಿರುವದು. ಆ ಕೆಟ್ಟ ಗುಣವನ್ನೊಂದು ಬಿಟ್ಟುಬಿಡಬೇಕೆಂದು ನಾನೂ ಎಷ್ಟೆಷ್ಟೊ ಹಂಚಿಕೆ ಹಾಕಿದ್ದೆ. ಆದರೆ– ಆ ಗಾಂಧೀ– ನೋಡು–ದೊಡ್ಡ ಮನುಷ್ಯ ಬಲು ದೊಡ್ಡ ಯುಕ್ತಿ ಹುಡುಕಿದ್ದಾನೆ. ಈ ಸೆರೆ ಕುಡಿಯುವದನ್ನು ಹೇಗೆ ಬಿಡಬೇಕೆಂದು ತಿಳಿಯಲಾರದೆ ಜೀವ ಬೇಸರಾಗಿ, ನಿನಗೆ ಗೊತ್ತಿಲ್ಲ ಫಕ್ಕಿರೀ, ನಾನು ಒಮ್ಮೆ ಉರುಲು ಹಾಕಿಕೊಳ್ಳಬೇಕೆಂದು ಮಾಡಿದ್ದೆ. ಆದರೆ ಆ ಗಾಂಧೀ ಮಹಾರಾಜ ಮಾತ್ರ ಈಗ ಇಡೀ ದೇಶವನ್ನೆಲ್ಲ ಬದುಕಿಸುವ ಉಪಾಯವನ್ನು ಹೇಳಿಕೊಟ್ಟಿರುವನು. ನಿನ್ನೆ ಲೆಚ್ಚರ ಹೇಳಿದರಲ್ಲ– ಆ ಗಾಂಧೀ ಮಂದಿ– ಧಾರವಾಡದವರು, ಅವರು ಆ ಗಾಂಧೀ ಹಂಚಿಕೆಯನ್ನು ನಮಗೆಲ್ಲ ಹೇಳಿಬಿಟ್ಟರು. ಅದಕ್ಕೇ ಇಂದು ಮುಂಜಾನೆ ಊರ ಐವತ್ತು ಆಳು ಹೋಗಿ ಊರ ಮಗ್ಗಲಿನ ಈಚಲ ಗಿಡಗಳನ್ನೆಲ್ಲ ಕಡಿದು ಬಂದಿರುವೆವು. ಇನ್ನುಮೇಲೆ ಸೆರೆ ಸಿಂದಿ ಹುಟ್ಟುವಹಾಗಿಲ್ಲ; ನಾವು ಕುಡಿಯುವ ಹಾಗಿಲ್ಲ; ನಿಮ್ಮ ಗೋಳು ಕಟ್ಟಿಕೊಳ್ಳುವ ಹಾಗಿಲ್ಲ ; ತಿಳಿಯಿತೆ? ಸೆರೆ ಕುಡಿಯುವದರ ಸಲುವಾಗಿ ನಾವೇ ಜೀವಕ್ಕೆ ಎರವಾಗುವದರ ಬದಲು, ಆ ಸೆರೆಯ ಮೂಲವನ್ನೇ ಕಡಿದು ಬಿಡಬೇಕೆಂದು ನಮ್ಮಲ್ಲಿ ಯಾರಿಗೂ ತಿಳಿದಿರಲಿಲ್ಲ. ಆ ಗಾಂಧೀ ಮಹಾರಾಜನಿಗೆ ಒಬ್ಬನಿಗೆ ತಿಳಿಯಿತು. ಅದಕ್ಕೇ ಆತ ಎಲ್ಲರಿಗಿಂತ ದೊಡ್ಡವ ನೋಡು."

ಫಕ್ಕೀರವ್ವನು, ದೇಶದಲ್ಲೆಲ್ಲ ಕಾಯಿದೆ ಮುರಿದು ಉಪ್ಪು ಮಾಡುವದರ ಬಗ್ಗೆಯೂ, ಈಚಲಗಿಡಗಳನ್ನು ಕಡಿದೊಗೆಯುವದರ ಬಗ್ಗೆಯೂ ಚಟುವಟಿಕೆ ನಡೆದಿದೆಯೆಂದು ಕೇಳಿಬಲ್ಲಳು. ಆದರೆ ಅದು ಬರೀ ಹಾರಸುದ್ದಿ. ಆ ಚಟುವಟಿಕೆಯಿಂದ ತನ್ನ ಮನೆತನಕ್ಕೊಂದು ಭಾಗ್ಯವುಂಟಾದೀತೆಂದು ಅವಳು ಕನಸು ಮನಸಿನಲ್ಲಿಯೂ ಬಗೆದಿರಲಿಲ್ಲ. ಕುಡಿತದ ಮಾತೆತ್ತಿದರೆ ಗಂಡನ ಮೇಲೆ ಅವಳದು ಸಂಪೂರ್ಣ ಅವಿಶ್ವಾಸ. ಆದರೂ ಅಂದು ಆತನ ಹೇಳಿಕೆಯಲ್ಲಿ ಸುಳ್ಳಿನ ಸುಳಿವನ್ನು ಅವಳು ತಿಳಿಯದಾದಳು. ಚಿನ್ನಪ್ಪನ ಮಾತುಗಳು ಅವಳ ಕಣ್ಣೆದುರಿಗೆ ಮುಂದಿನ ಸುಖದ ಸವಿಗನಸುಗಳನ್ನು ತಂದೊಡ್ಡಿದವು. ಕಂಣೆವೆಗಳಲ್ಲಿ ತೊಡಕಿಕೊಂಡ ನೀರನ್ನು ಒರಸಿಕೊಳ್ಳುತ್ತ ಮಾತನಾಡಿದಳು.

"ಹೇಗಾದರೂ, ಯಾರ ಪುಣ್ಯದಿಂದಲಾದರೂ, ನಿನ್ನ ಕುಡಿತ ತಪ್ಪಿದರೆ ನಮ್ಮ ಮನೆತನ ನಾಲ್ಕೊಪ್ಪತ್ತು ನಿಂತೀತು. ಅದೇ ನಮ್ಮ ಸೌಭಾಗ್ಯ."

"ಅದರ ಚಿಂತೆ ಬಿಡು ಫಕ್ಕೀರಿ; ಬರೇ ನಮ್ಮ ಮನೆತನವೇ ಏಕೆ? ದೇಶದಲ್ಲೆಲ್ಲ ಮನೆತನಗಳಿಗೂ ಸೌಭಾಗ್ಯವುಂಟಾದೀತು. ಅದಕ್ಕಾಗಿಯೇ, ನಾವು ಮತ್ತೆ ನಾಳೆ ನೆರೆಹಳ್ಳಿಯ ಈಚಲಗಿಡಗಳನ್ನು ಕಡಿಯಲು ಹೋಗುವವರಿದ್ದೇವೆ. ಇನ್ನೆಂಟು ದಿನಗಳಲ್ಲಿ ನಮ್ಮ ಹಳ್ಳಿಯ ಎಡಬಲದಲ್ಲಿ ಈಚಲವೆಂಬದು ಔಷಧಕ್ಕೂ ಸಿಗದಂತೆ ಮಾಡುವೆವೆಂದು ಊರವರೆಲ್ಲ ಸಭಾದಲ್ಲಿ ಆಣೆಯಿಟ್ಟುಕೊಂಡಿರುವೆವು."

"ಸರಿ!!, ನೀನು ಹೀಗೆ ಗಳಿಕೆಯಿಲ್ಲದ ದುಡಿಮೆಯ ಬೆನ್ನು ಹತ್ತಿದರೆ ಗತಿಯೇನು? ಇನ್ನಾದರೂ ಹೊಲಕ್ಕೆ ಹೋಗಿ ಮನಮುಟ್ಟಿ ದುಡಿಯುವೆಯೆಂದು ತಿಳಿದಿದ್ದೆನಲ್ಲ!"

"ಇಷ್ಟು ದಿನ ನಾನು ಮನೆಗೆ ತಂದ ಗಳಿಕೆಯಾದರೂ ಅಷ್ಟರಲ್ಲೇ ಇದೆ ಬಿಡು! ಒಮ್ಮೆ ಸಿಂದೀಗಿಡಗಳೆಲ್ಲ ಹೇಳಹೆಸರಿಲ್ಲದಂತಾದರೆ ನನ್ನ ಗಳಿಕೆ ಏನು ಕಡಿಮೆ ಫಕ್ಕೀರಿ. ನಿನಗೆ ಹಂಚಿನ ಮನೆಕಟ್ಟಿಸಿ ಕೊಟ್ಟೇನು. ಇಲ್ಲಿ ನೋಡು! ಇಷ್ಟು ದಿನ ನನ್ನ ಷ್ಟಕ್ಕೆ ನಾನೇ ಹಾಕಿಕೊಂಡ ಎಷ್ಟೋ ಆಣೆಗಳನ್ನು ನನ್ನಷ್ಟಕ್ಕೇ ನಾನೇ ಮುರಿದುಬಿಟ್ಟಿದ್ದೇನೆ. ಆದರೆ ಈ ಸಲ ಸಭಾದಲ್ಲಿ ಆಣೆ ಮಾಡಿದ್ದೇವೆ, ಫಕ್ಕೀರೀ, ಗಾಂಧೀ ಮಂದಿಯೆದುರಿಗೆ! ಅದನ್ನು ಹೇಗೆ ಮುರಿಯಬೇಕು ಹೇಳು! ಅದಕ್ಕಾಗಿ ದಿನಕ್ಕೆ ಏನಿಲ್ಲೆಂದರೂ

ಒಂದು ಈಚಲಗಿಡವನ್ನು ಉರುಳಿಸದೆ ನಾನು ಊಟ ಮಾಡುವಂತಿಲ್ಲ. ಅಲ್ಲದೆ ಈ ಕೆಲಸ ಹತ್ತು ಜನರಿಗೆ ಉಪಯೋಗವಾಗುವಂತಹದು. ಅದಕ್ಕಾಗಿ ನಾಲ್ಕೊಪ್ಪತ್ತು ನಮಗೆ ಕಷ್ಟವಾದರೇನಾಯಿತು. ಇಷ್ಟು ದಿನ ನೀನು ಸಾಗಿಸಿದಂತೆ ಇನ್ನು ಸ್ವಲ್ಪ ದಿನ ಮನೆತನವನ್ನು ಸಾಗಿಸು. ಆ ಮೇಲೆ ನಾನು ನಿನಗೆ ತುತ್ತುಮಾಡಿ ಉಣ್ಣಿಸೇನಂತೆ. ”

× × ×

ಆದರೆ ಮುಂದೆ ನಾಲ್ಕೇ ದಿನಗಳಲ್ಲಿ ಫಕ್ಕೀರವ್ವನು ಮುಂಗಾಣದ ಒಂದು ಸಂಗತಿಯೊದಗಿತು. ಊರ ಜನರ ಉರವಣಿಗೆ ಬಹಳವಾಯಿತೆಂದು ಸರಕಾರದವರು ಚಿನ್ನಪ್ಪನೇ ಮೊದಲಾದ ಕೆಲವು ಪುಂಡರನ್ನು ಸೆರೆಹಿಡಿದು ಚಾವಡಿಯಲ್ಲಿ ಕುಳ್ಳಿರಿಸಿದರು. ಸುದ್ದಿ ಫಕ್ಕೀರವ್ವನಿಗೆ ತಿಳಿಯುತ್ತಲೇ, ಅವಳು ಎದೆ ಬಾಯಿಬಿಡುತ್ತ ಮೊಲೆಗೂಸನ್ನು ಬಗಲಲ್ಲಿ ಹಾಕಿಕೊಂಡು, ಮುಂಗುಡಿ ಕೂಸು ಅಳುತ್ತಿರುವದನ್ನೂ ಲೆಕ್ಕಿಸದೆ, ಮನೆಯ ಬಾಗಿಲುಗಳನ್ನು ಸಹ ಹಾಗೇ ಹಾರದೆಗೆದು ಚಾವಡಿಗೆ ಓಡಿದಳು. ಚಾವಡಿಯೆದುರಿಗೆ, ಯಾವ ದೊಡ್ಡಾಟಕ್ಕೂ ನೆರೆಯದಷ್ಟು ಜನ, ಇರುವೆಯಾಡಲಿಕ್ಕೆ ಅನುವಿಲ್ಲದಂತೆ ಕಿಕ್ಕಿರಿದು ನೆರೆದಿದ್ದರು. ಚಾವಡಿಯ ಬಂಕದಲ್ಲಿ ರಟ್ಟೆಗೆ ಹಗ್ಗ ಹಚ್ಚಿಸಿಕೊಂಡು ಚಿನ್ನಪ್ಪನೂ ಆತನ ಸಂಗಾತಿಗಳೂ ಎದೆಸೆಟೆಸಿಕೊಂಡು ಕುಳಿತಿದ್ದರು. ಗಾಂಧೀಟೊಪ್ಪಿಗೆಯವರೊಬ್ಬರು ಜನರೆಲ್ಲರಿಗೆ ಏನೋ ಹೇಳಿ ಹುರಿದುಂಬಿಸುತ್ತಿದ್ದರು. ಚಿನ್ನಪ್ಪನ ರಟ್ಟೆಗೆ ಹಗ್ಗ ಬಿಗಿವಿರುವದನ್ನು ಕಂಡು ಫಕ್ಕೀರವ್ವನಿಗೆ ಬಲು ಕಸಿವಿಸಿಯಾಯಿತು. ಆದರೆ ಆ ಕಸಿವಿಸಿಯಲ್ಲಿಯೇ ಸೋಜಿಗವೂ ಹಣಿಕಿಹಾಕುತ್ತಿತ್ತು. ಏತಕ್ಕೆಂದರೆ, ಚಿನ್ನಪ್ಪನ ಕೊರಳಲ್ಲಿ ಹೂಮಾಲೆಗಳೂ ನೂಲಿನ ಮಾಲೆಗಳೂ ಇದ್ದವು. ಗಾಂಧೀಟೊಪ್ಪಿಗೆಯವರೊಬ್ಬರು “ ದೇಶದ ಜನರಿಗೆ ಹಿತವನ್ನುಂಟುಮಾಡುವದಕ್ಕಾಗಿ ಸೆರೆಮನೆಗೆ ಹೋಗುವದು ಎಲ್ಲಕ್ಕೂ ದೊಡ್ಡ ಮಾನ”ವೆಂದು ಸಾರಿ ಹೇಳಿದ್ದನ್ನು ಕೇಳಿ, ಸಭೆ ಹರಿದ ಮೇಲೆ ನೆರೆದವರೆಲ್ಲ ಚಿನ್ನಪ್ಪನ ಬೆನ್ನು ತಟ್ಟಿ ‘ ಭಲೆ, ಭಲೆ ’ ಎನ್ನುತ್ತಿರುವದನ್ನೂ, ಆತನು ನಗುತ್ತ ನೆರೆದವರ ಭೆಟ್ಟಿ ಮಾಡಿಕೊಳ್ಳುವದನ್ನೂ ನೋಡಿ, ಫಕ್ಕೀರವ್ವನ ಸೋಜಿಗವು ಸಂತೋಷವಾಯಿತು. ಕಣ್ಣಲ್ಲಿ ನೀರು ತುಂಬಿಕೊಂಡೇ ಗಂಡನ ಕಡೆಗೆ ಹರಿದುಹೋದಳು. ಅವಳನ್ನು ಕಂಡು ಜನರೆಲ್ಲ ದಾರಿ ಮಾಡಿಕೊಟ್ಟರು. ಚಿನ್ನಪ್ಪನು ಅವಳನ್ನು ನೋಡಿ ಉಬ್ಬಿದೆದೆಯಿಂದ ಎದುರುಬಂದು—

“ ಫಕ್ಕೀರಿ ! ಇಕಾ—ನಾನಂತೂ ತುರಂಗಕ್ಕೆ ಹೋಗಲಿರುವೆ—ನೀನು ಹುಚ್ಚಿಯಂತೆ ಅಳಬೇಡ ಬಿಡು; ನಿನಗೆ ಅಳಿಕ್ಕೇನಾಯಿತೀಗ! ನಾನೇನು ಕಳುವು ತುಡುಗುಮಾಡಿ ಫಟಿಂಗನಂತೆ ತುರಂಗಕ್ಕೆ ಹೋಗಲಿರುವೆನೇ ? ಅನ್ಯಾಯದ ಸರಕಾರವನ್ನು ಡಬ್ಬುಹಾಕಲು ಸೆರೆಮನೆಗೆ ಹೋದರೂ ಸತ್ತರೂ ಸ್ವರ್ಗಕ್ಕೆ ಹೋದಂತೆ. ಜಗತ್ತಿನಲ್ಲಿ ಎಲ್ಲರಿಗಿಂತ ದೊಡ್ಡವನಾದ ಗಾಂಧೀಮಹಾರಾಜನೂ ಕೂಡ ತುರಂಗದಲ್ಲಿರುವನಂತೆ. ಎಂದಮೇಲೆ ಅದರಲ್ಲಿ ಮಾನಹೋಗುವದೆಂತು ? ಇಲ್ಲಿ ನೋಡು, ನಾನು ಈಗ ಹೋದರೆ, ನಮ್ಮ ಮನೆತನದ ಹೆಸರಾಗುವದು; ನಮ್ಮೂರಿನ ಹೆಸರಾಗುವದು; ಇಷ್ಟು ದಿನ ಸೆರೆಕುಡಿದ ಪಾಪವನ್ನು ತೊಳೆದಂತಾಗುವದು. ಫಕ್ಕೀರಿ, ಹುಟ್ಟುವದು ಒಮ್ಮೆಯೆ ಸಾಯುವದೂ ಒಮ್ಮೆಯೆ ಎಂದಮೇಲೆ ಹೆದರಬೇಕಾಯಿತೇಕೆ ಹೇಳು. ಎಲ್ಲಿದ್ದರೂ ನಾವು ಮೈಮುರಿಯೆ ದುಡಿಯದಿದ್ದರೆ ಗತಿಯಿಲ್ಲ. ಅದನ್ನೇ ತುರಂಗದಲ್ಲಿ ಮಾಡಿದ. ಇಷ್ಟೂ ಮೀರಿ, ಹೋದರೆ ಎಂಟು ಹತ್ತು ತಿಂಗಳು ಹೋದೇನು. ನೀನು ಅಲ್ಲಿಯವರೆಗೆ ಹೇಗಾದರೂ ಮಾಡಿ ಸಂಸಾರ ಸಾಗಿಸುವಲ್ಲೆ. ಅಲ್ಲದೆ ಇನ್ನೂ ಒಂದು ಗುಟ್ಟು. ಇಕಾ ನಾನೀಗ ತುರಂಗ ಸೇರಿದರೆ ನನ್ನ ಸೆರೆಯ ಹವ್ಯಾಸವೇ ತಪ್ಪಿಹೋಗುವದು. ಸೆರೆಯ ಸೆರೆಯೊಳಗಿಂದ ಪಾರಾಗಲು ಸರಕಾರದ ಸೆರೆಸೇರಬೇಕಾದರೆ ಅದೂ ಪುಣ್ಯವೇ ಎಂದಿಟ್ಟುಕೊ. ಹತ್ತು ಮಂದಿಗೆ ಅಪ್ಪ ಅಣ್ಣ ಎಂದರೆ ಮಾತನಾಡಿಸದವರೂ ಇಂದು ನನಗೆ ಸೈಸೈಯೆನ್ನುತ್ತಿರುವರಲ್ಲ—ಇದಕ್ಕೂ ಹೆಚ್ಚಿನ ಹೆಮ್ಮೆಯೆಲ್ಲಿದೆ! ದೇಶಕ್ಕೆ ಹಿತಮಾಡಿ ತುರಂಗಕ್ಕೆ ಹೋದವನ ಹೆಂಡತಿಯೆಂದು ನೀನೂ ಊರಲ್ಲೆಲ್ಲ ಮೂಗು ಮೇಲೆ ಮಾಡಿಕೊಂಡು ಮೆರೆಸಬಹುದು — ಅಳಬೇಡ ಫಕ್ಕೀರಿ. ನನಗೂ, ನಿನ್ನನ್ನೂ ಹುಡುಗರನ್ನೂ ಬಿಟ್ಟುಹೋಗಲು ಕೆಡಕೆನಿಸುತ್ತದೆ. ಆದರೆ ಉಪಾಯವಿಲ್ಲ. ನಾನು ಹೋಗಲೇಬೇಕಲ್ಲ ! ಅದರಿಂದ ನನ್ನಂಥ ನೂರು ಮಂದಿಗೆ ಹುರುಪು ಬಂದೀತು; ತುರಂಗದ ಅಂಜಿಕೆ, ಸರಕಾರದ ಬೆದರಿಕೆ ತಪ್ಪೀತು. ಹೀಗೆ ಎಲ್ಲಾ ಹಳ್ಳಿಗಳೂ ಕಾಯದೆ ಮುರಿಯಲು ನಿಂತರೆ, ಕಂಣುಮುಚ್ಚಿ ಕಂಣುತೆರೆಯುವದರಲ್ಲಿಯೇ ಸರಕಾರ ಮಂಣುಮುಕ್ಕೀತು. ಆ ಮೇಲೆ ಗಾಂಧೀಸರಕಾರ ಆದರೆ, ಅನ್ಯಾಯಮಾಡಿ ಸರಕಾರದವರು ಕಸಿದುಕೊಂಡ ನಮ್ಮ ಹೊಲಗಳೆಲ್ಲ ತಿರುಗಿ ಬಂದಾವು. ಬರದಿದ್ದರೂ ಇಲ್ಲ—ನಾಲ್ಕು ಜನರಿಗಾದರೂ ಉಪಕಾರವಾದೀತೋ ಇಲ್ಲೋ! [illegible] ಮೇಲೆ ಹೆದರುವದೇಕೆ—ಬಿಡು.— ”

ನೆರೆದವರೂ ಫಕ್ಕೀರವ್ವನಿಗೆ ನಾಲ್ಕು ಮಾತು ತಿಳಿಹೇಳಿದರು. ಏನಾದರೂ ಸೆರೆಸಿಕ್ಕ ಗಂಡ ಬಿಡುಗಡೆ ಹೊಂದಲಾರನೆಂದು ಅವಳು ಅರಿತು ಮನಸಿಗೆ ಧೈರ್ಯ ತಂದುಕೊಂಡಳು.

"ಹಾಗಾದರೆ ನಾನು ಹೋಗುತ್ತೇನೆ. ಫಕ್ಕೀರಿ—ನಮ್ಮ ಕೆಟ್ಟ ಗುಣ ಬಿಡುವದಕ್ಕಾಗಿ ನಾವು ಕೆಲಸ ಮಾಡಿದರೆ ಈ ಸರಕಾರದವರು ನಮ್ಮನ್ನು ತುರಂಗಕ್ಕಟ್ಟುವರಂತೆ—! ಅಟ್ಟಲಿ—. ಮಾಡಿದ್ದಕ್ಕೆ ಮುಂದೆ ಉಂಡಾರು ಎರಡೆರಡು ಕೈಲೆ. ಗಾಂಧಿ ಬೇಡ ಯೆಂದು ಹೇಳದಿದ್ದರೆ ಈಗಲೇ ನೋಡಿಬಿಡುತ್ತಿದ್ದೆ ಒಂದು ಕೈ. ಆದರೆ, ಹೋಗಲಿ ಬಿಡು- ನೀನಂತೂವ ಎನೆಗೆ ಹೋಗು. ನಾವು ಈಗಲೇ ಧಾರವಾಡಕ್ಕೆ ಹೋಗಬೇಕಂತೆ.—ಇಕಾ ಕರೆಪ್ಪಾ— ನಮ್ಮ ಮನೆಯಕಡೆಗಷ್ಟು ಕಂಣಿರಲೆಪ್ಪಾ. ಊರಿಗೆ ಹಿರಿಯ ನೀನು."—

ನೆರೆದವರೆಲ್ಲ, ಚಿನ್ನಪ್ಪನಿಗೆ ಮನೆಯ ಚಿಂತೆ ಬಿಡುವದಾಗಿ ಒತ್ತಿಹೇಳಿದರು. ತಮ್ಮಣ್ಣಗೌಡರು ಚಿನ್ನಪ್ಪ ಬರುವ ವರೆಗೆ ಆತನ ಕುಟುಂಬದ ಭಾರಹೊರುವದಾಗಿ ಆಶ್ವಾಸನವಿತ್ತರು.

ಫಕ್ಕೀರವ್ವನ ಎದೆಯಲ್ಲಿ ಒಂದು ತರದ ದುಕ್ಕ, ಒಂದು ತರದ ಸೋಜಿಗ ಒಂದು ತರದ ಸಂತಸಗಳು ತೊಟ್ಟಿಲ ಜೀಕನಾಡಹತ್ತಿದವು. ಅಂಥ ಗಡಬಿಡಿಯಲ್ಲಿಯೇ, ಗಂಡನನ್ನು ಪೋಲೀಸರು ಎಳೆದೊಯ್ಯುವದನ್ನೂ ಕಂಡು. ಮಾತಾಡಿದಳು —

"ಆಗಲಿ ಹೋಗಿ ಬಾ—ಹೋಗಿ ಬಾ. ನೀನು ಹೋಗುವದರಿಂದ ನಮ್ಮ ಮನೆತನಕ್ಕೆ ಕೊನೆಯವರೆಗೆ ಸುಖವುಂಟಾಗುತ್ತಿದ್ದರೆ ನಾನೇಕೆ ಬೇಡವೆನ್ನಲಿ ! ಎಂದರೂ ಬಿಡುವಂತಿಲ್ಲ. ಅದರೆ ನಾನು ಅಷ್ಟು ದಿನವೆಲ್ಲ ನಿನ್ನ ದಾರಿಯನ್ನೇ ಕಾಯುತ್ತಿರುವೆ. ನಿನ್ನ ಪುಣ್ಯದಿಂದ, ನಾನು ರಟ್ಟೆಮುರಿದು ಹೊಟ್ಟೆ ಹೊರಕೊಳ್ಳಬಲ್ಲೆ. ನಾನೇನು ಒಬ್ಬರಿಗೆ ಭಾರವಾಗಿರಲಾರೆ. ಆದರೂ ಕೈಮೀರಿ ಬಂದರೆ, ಇಕಾ ಇಷ್ಟು ದಿನ ನೀನು ಇದರ ಮೇಲೆ ಕಣ್ಣಿಟ್ಟಿದ್ದೆಯಲ್ಲ—ಈ ತೋಳಬಂದಿಯನ್ನೇ ಆಗ ಸಂತೋಷದಿಂದ ಮಾರಿ ಮಕ್ಕಳನ್ನು ಸಾಕೇನು !"

ಹೀಗೆನ್ನುತ್ತ ತನ್ನ ತೋಳಬಂದಿಯನ್ನುಚ್ಚಿ ಗಂಡನವೋರೆಗೆ ನಿವಾಳಿಸಿ ಮತ್ತೆ ಇಟ್ಟುಕೊಂಡಳು. ಮುಂದೆ ಮಾತಾಡಬಾರದೆ ಸುಮ್ಮನೆ ನಿಂತಿರುವಾಗಲೇ ಪೋಲಿಸರು ಚಿನ್ನಪ್ಪನೇ ಮೊದಲಾದವರನ್ನು ಎಳೆದೊಯ್ಯಹತ್ತಿದರು. ಫಕ್ಕೀರವ್ವನು ಕೆಲಹೊತ್ತು ಸುಮ್ಮನೆ ನಿಂತಿದ್ದು, ಫಕ್ಕನೆ ಏನೋ ಹೊಳೆದಂತಾಗಿ ಓಡಿ ಹೋಗಿ ಗಂಡನನ್ನೆದುರಿಸಿ ತಡೆದು ನಿಂತು—

"ಹಾಗಾದರೆ ಇನ್ನೊಮ್ಮೆ ನನ್ನ ಕೊರಳುಮುಟ್ಟಿ ಆಣೆ ಮಾಡು—ಇನ್ನೆಂದೆಂದಿಗೂ ಸೆರೆಸಿಂದಿ ಕುಡಿಯುವದಿಲ್ಲೆಂದು"—.

ಚಿನ್ನಪ್ಪ ನಗುನಗುತ್ತ ಹಾಗೆ ಮಾಡಿದ. ಒಡನೆಯೇ ಫಕ್ಕೀರವ್ವನು ಒಮ್ಮಗ್ಗಲು ಸರಿದುನಿಂತು, ಅವರೆಲ್ಲರಿಗೆ ಹೋಗಲು ದಾರಿ ಬಿಟ್ಟಳು. ಚಿನ್ನಪ್ಪನ ಗುಂಪಿನ ಹಿಂದಿನಿಂದೆ ಹಲವರು ಹಿರಿಯರು—ಕಿರಿಯರು ಹುಡುಗರು-ಹುಪ್ಪಡಿ ಹಲವು ತರದಿಂದ ಜಯಜಯಕಾರ ಮಾಡುತ್ತ, ಬೆನ್ನು ಹತ್ತಿದರು. ಫಕ್ಕೀರವ್ವನು ಊರ ಮುಂದಿನ ಭಾವಿಯ ಕಟ್ಟೆಯ ಮೇಲೆ ಎಡಗೈಯನ್ನು ಗಲ್ಲಕ್ಕೆ ಹಚ್ಚಿಕೊಂಡು ಬಲಗೈಯನ್ನು ತಲೆಯ ಮೇಲಿಟ್ಟುಕೊಂಡು ನಿಂತು, ಕಣ್ಣುಗಳನ್ನರಳಿಸಿ, ಮರೆಯಾಗುವವರೆಗೂ ಚಿನ್ನಪ್ಪನನ್ನೇ ನೋಡುತ್ತಿದ್ದು, ಆತ ಹಿಂತಿರುಗಿ ನೋಡಿ ಹೋಗೆಂದು ಕೈಸನ್ನೆ ಮಾಡಿದಾಗೆಲ್ಲ ತಲೆಕೊಡಹುತ್ತಿದ್ದು ಕೆಲಹೊತ್ತಿನ ಮೇಲೆ ಹಿಂದಿರುಗಿ ಮನೆಯ ಹಾದಿ ಹಿಡಿದಳು.

× × × ×

ಫಕ್ಕೀರವ್ವನು ಎಂದಿನಂತೆ ತನ್ನ ಸಂಸಾರಸಾಗಿಸಿದ್ದಾಳೆ. ಸಂತೆಗೊಮ್ಮೆ ಧಾರವಾಡಕ್ಕೆ ಹೋದಾಗೆಲ್ಲ, ಸುತ್ತುಹಾದಿಯಾದರೂ ತುರಂಗದೆದುರಿಗೇ ಹಾದು ಬರುವಳು. ಆಗ ಮುಂದೆ ಹೆಜ್ಜೆಯಿಡಲೋ ಬೇಡವೋ ಎನ್ನುತ್ತ, ತನ್ನ ತುಂಬುಗಣ್ಣುಗಳಿಂದ ತುರಂಗದ ಬಾಗಿಲವನ್ನೇ ಮಾಲಿಸುತ್ತ ಕೆಲಹೊತ್ತು ನಿಂತು, ಆಮೇಲೆ ಮನೆ ಮಕ್ಕಳ ನೆನಪಾಗಲು ಮತ್ತೆ ಮೆಲ್ಲನೆ ಮುಂದೆಸಾಗುವಳು. ಚಿನ್ನಪ್ಪನಿಗೆ ಶಿಕ್ಷೆಯಾದ ಮೇಲೆ, ಆತನನ್ನು ಧಾರವಾಡದ ತುರಂಗದಲ್ಲಿಟ್ಟಿರುವರೋ, ಮತ್ತೆಲ್ಲಿಗಾದರೂ ಒಯ್ದಿರುವರೋ ಎಂಬದನ್ನು—ಯಾರೂ ಅರಿಯರು;—ಫಕ್ಕೀರವ್ವನೂ ಅರಿಯಳು. ಆದರೂ ಮೇಲಿಂದ ಮೇಲೆ ಧಾರವಾಡದ ತುರಂಗದ ಬಾಗಿಲನನ್ನಷ್ಟೇ ನೋಡುತ್ತಿದ್ದರೆ ಅವಳಿಗೆ ಸಮಾಧಾನ. ಅದಕ್ಕಾಗಿ ಏನಾದರೊಂದು ಅಡ್ಡನೆವ ಹುಡುಕಿಕೊಂಡು ಧಾರವಾಡಕ್ಕೆ ಮೇಲಿಂದ ಮೇಲೆ ಹೋಗಿ ಬರುತ್ತಾಳೆ.

× × × ×

ಬೆಳಗುಮುಂಜಾನೆ ಫಕ್ಕೀರವ್ವನು ಬೀಸುವ ಹೊತ್ತು. ಊರ ಜನರ ಕಾಳು ಬೀಸಿ ಅವಳೀಗ ಬದುಕು ಮಾಡುತ್ತಿರುವಳು. ದೊಡ್ಡನಸುಕಿನಲ್ಲಿ ಅವಳ ಗುಡಿಸಲ ಮುಂದೆ ಹಾಯ್ದರೆ ಅವಳು ಹೀಗೆ ಹಾಡುತ್ತಿರುವದು ಕಿವಿಗೆ ಬೀಳದಿರದು.

" ಸರಕಾರವೆಂಬೋದು ದರಕಾರ ನನಗಿಲ್ಲ । ಸರದಾರ ಗಂಡ ಸರಕಾರದ—ಸರಕಾರದ ಮೈಸೊಕ್ಕು । ಮುರಿಲಾಕ ಸಾಗಿ ಹೋಗ್ಯಾನ ॥"

" ಸೆರೆಯಕುಡಿವುದಬಿಟ್ಟು, ಸೆರೆಮನೆಗೆ ಹೋಗ್ಯಾನ । ಸರುವಾರ ರಾಜ್ಯ ನಿಲಸಾಕ–ನಿಲಸಾಕ ನನ್ನ ನಲ್ಲ । ದುರುಳರ ಗೋಣು ಮುರಿಲಾಕ ॥"

" ಈಚಲಮರವ ಕಡಿದಾರ–ಬಡತನದ ಬೇರು ಕಡಿಯೇತು, ನಾಚಿಕಿ ಬಾಳ್ವಿ ಹಿಂಗೀತು – ಹಿಂಗೀತು ನಾಡೆಲ್ಲ । ಊಚು ಊಚಾತು ಬಸವಣ್ಣಾ— ॥ "

---

# ಧರ್ಮಶಾಸ್ತ್ರದ ಆರಂಭ

ಲೇಖಕರು:– ಶ್ರೀ. ಮಹಾಬಲ ಶಂಕರ ಹೆಗಡೆ, M. A., LL. B., ಹೊನ್ನಾವರ.

ಇಪ್ಪತ್ತನೆಯ ಶತಮಾನವು ಸುಧಾರಣೆಯ ಯುಗವೆಂದು ಪ್ರಸಿದ್ಧವಾಗಿದೆ. ಈ ಯುಗದಲ್ಲಿ ಐರೋಪ್ಯರು ವಿಜ್ಞಾನಶಾಸ್ತ್ರದಲ್ಲಿಯೂ ನಾನಾಕಲೆಗಳಲ್ಲಿಯೂ ಮುಂದಡಿಯಿಟ್ಟಿರುವರೆಂದು ಎಲ್ಲರಿಗೆ ಗೊತ್ತಿದ್ದಮಾತು. ಅಲೆಯುಂಚೆ, ವಿದ್ಯುಚ್ಛಕ್ತಿ, ಆಕಾಶಯಾನ ಮೊದಲಾದ ವಿಷಯಗಳಲ್ಲಿ ಪಾಶ್ಚಾತ್ಯರು ಅತ್ಯಂತ ಪ್ರಗತಿಯನ್ನು ಹೊಂದಿರುವರು. ಸೃಷ್ಟಿದೇವತೆಯನ್ನು ಒಲಿಸಿ ಅವಳನ್ನು ಕೈವಶಮಾಡಿಕೊಂಡಿರುವೆವೆಂದು ಪಾಶ್ಚಾತ್ಯರು ಹೆಮ್ಮೆಪಡುವದುಂಟು. ಆಕಾಶಯಾನವು ದೇವತೆಗಳಿಗೆ ಮಾತ್ರಸಾಧ್ಯವೆಂದು ನಾವು ಪುರಾಣದಿಂದ ಕಲಿತಿರುವೆವು. ಆದರೆ ದೇವತೆಗಳ ಈ ಜನ್ಮಸಿದ್ಧವಾದ ಹಕ್ಕನ್ನು ಆಕ್ರಮಿಸಿದ ಪಾಶ್ಚಾತ್ಯರು, ಇದನ್ನು ಕುರಿತು ಜಂಬಕೊಚ್ಚಿದರೆ ಅದೇನೂ ಆಶ್ಚರ್ಯವಲ್ಲ. ಕಳೆದ ಮಹಾ ಯುದ್ಧದಲ್ಲಿ ಅಗಣಿತ ಶಸ್ತ್ರಾಸ್ತ್ರಗಳು ಪ್ರಯೋಗಿಸಲ್ಪಟ್ಟವು. ಇವುಗಳ ಸಂಗ್ರಾಹದಿಂದ ಲಕ್ಷಗಟ್ಲೆ ಕೊಲೆಯಾಯಿತು. ಯುದ್ಧವು ಮುಗಿದನಂತರ ಇಷ್ಟೆಲ್ಲ ಅನಾಹುತಿಗೆ ವಿಜ್ಞಾನಶಾಸ್ತ್ರದಪ್ರಗತಿಯೇ ಕಾರಣವೆಂದೂ, ನಾವು ಹೇಳುವ ನವಸುಧಾರಣೆಯಿಂದ ನಿಜವಾದ ಆತ್ಮೋನ್ನತಿಯಾಗುವದಿಲ್ಲವೆಂದೂ ಪಾಶ್ಚಾತ್ಯಪಂಡಿತರಲ್ಲಿ ಅನೇಕರು ಹೇಳತೊಡಗಿದರು. ಇರಲಿ. ಈ ನವಸುಧಾರಣೆಯ ಝುಂಝಾವಾತವು ನಮ್ಮ ದೇಶದಲ್ಲಿಯೂ ಬೀಸತೊಡಗಿದೆ. ಸುಧಾರಣೆಯ ಮಹಾದ್ವಾರವನ್ನು ಪ್ರವೇಶಿಸುವ ಆಕಾಂಕ್ಷೆಯಿಂದ ನಾವು ನಮ್ಮ ಉಡಿಗೆತೊಡಿಗೆಗಳಲ್ಲಿಯೂ ಪಾಶ್ಚಾತ್ಯರನ್ನು ಅನುಕರಿಸುತ್ತಿರುವೆವು. ಇದರಿಂದ ಆರ್ಯಸಂಸ್ಕೃತಿಯನ್ನು ಮೂಲೆಗೊತ್ತುವ ಕಠಿಣ ಪ್ರಸಂಗವೂ ಒಂದೊದಗಿದೆ. ಆದರೆ ಆರ್ಯಸಂಸ್ಕೃತಿಯೇ ನಿಜವಾದ ಸಂಸ್ಕೃತಿಯೆಂದೂ ಅದರ ಅನುಸರಣೆಯಿಂದಲೇ ನಮ್ಮ ಏಳಿಗೆಯಾಗುವದೆಂದೂ ಅದನ್ನು ಅಚ್ಚಳಿಯದೆ ಕಾದಿಡುವದೇ ನಮ್ಮ ಧರ್ಮವೆಂದೂ ನಾವು ಮರೆಯಬಾರದು. स्वधर्मे निधनं श्रेयः परधर्मो भयावहः । ಎಂಬ ಭಗವದುಕ್ತಿಯಾದರೂ ಇದೇ ಆಶಯವನ್ನು ವ್ಯಕ್ತಪಡಿಸುತ್ತದೆ. ನಾವು ಧರ್ಮದ ಹೆಸರಿನಿಂದ ಅನೇಕ ದುಷ್ಟಪದ್ಧತಿಗಳಿಗೆ ನಮ್ಮ ಸಮಾಜದಲ್ಲಿ ಇಂಬುಗೊಟ್ಟಿರುವೆವು. ಒಂದಾನೊಂದು ಕಾಲದಲ್ಲಿ ಯೋಗ್ಯವೆಂದು ತೋರಿದ ಪದ್ಧತಿಗಳು ಜನರಿಂದ ಅನುಸರಿಸಲ್ಪಟ್ಟು ಯುಗಾಂತರದಲ್ಲಿ ಜನರ ಏಳ್ಗೆಗೆ ಅಡ್ಡಿಯಾಗಿ ಪರಿಣಮಿಸುತ್ತವೆ. ಧಾರ್ಮಿಕ ತತ್ವವನ್ನರಿಯದೆ ಪದ್ಧತಿಯ ಮಡುವಿನಲ್ಲಿ ನಾವು ಬಿದ್ದಿರುವೆವು. ಈ ಪದ್ಧತಿಗಳು ಜನರ ಬುದ್ಧಿಯನ್ನು ಆವರಿಸಿ ಅವರ ಹಿತಕ್ಕೆ ವಿಘ್ನಗಳುಂಟುಮಾಡುತ್ತವೆ. ಮಿಸ್ ಮೇಯೋಳಂಥ ಕ್ಷುದ್ರಬುದ್ಧಿಯವಳು ಈ ಪದ್ಧತಿಗಳನ್ನು ತಿರಸ್ಕರಿಸಿ ಹಿಂದೂ ಜನರು ಸ್ವಾತಂತ್ರ್ಯವನ್ನು ಪಡೆಯಲಿಕ್ಕೆ ಅಯೋಗ್ಯರೆಂದು ಹೇಳಿದಳು. ಪ್ರಾಣಿಹಿಂಸೆ, ದೇವದಾಸಿಯರಸಂಸ್ಥೆ ಮೊದಲಾದವುಗಳು ಹಿಂದೂ ಧರ್ಮಕ್ಕೆ ಕಲಂಕವನ್ನು ತಂದಿರುವವು. ಆದರೆ ಅನುಕರಣವು ಮಾನವನ ಸ್ವಾಭಾವಿಕ ಧರ್ಮವಲ್ಲ. ಹೊಸ ಹೊಸ ವಿಚಾರಗಳು ಮನಸ್ಸಿನಲ್ಲಿ ಉದ್ಭವಿಸಿದಮೇಲೆ ತನ್ನ ಆಚಾರಣೆಯನ್ನು ಪರಿಶೀಲಿಸುವ ಬುದ್ಧಿಯು ಅವನಲ್ಲಿ ಹುಟ್ಟುತ್ತದೆ. ಬುದ್ಧಿಯು ಬಲಿತ ಮೇಲೆ ಅವನು ಸಮ್ಮನೆ ಕೂಡುವದಿಲ್ಲ. ಒಂದಾನೊಂದು ಕಾಲದಲ್ಲಿ ಚೂಪವಾದ ಕಲ್ಲು ಮಾನವನ ಆಯುಧವಾಗಿತ್ತು. ಅದಕ್ಕೂ ಮೊದಲು ಹರವಾದ ಕಲ್ಲನ್ನು ಆಯುಧವಾಗಿ ಉಪಯೋಗಿಸುತ್ತಿದ್ದನು. ಚೂಪವಾದ ಕಲ್ಲನ್ನು ಪ್ರಯೋಗಿಸುವಾಗ ತನ್ನ ಹಿಂದಣವರು ಉಪಯೋಗಿಸುವ ಆಯುಧಗಳು ಕಾಡುಜನರವೆಂದು ಸುಧಾ... ಮನುಷ್ಯನಲ್ಲಿದ್ದ ಉತ್ಸಾಹ... ಉಸಿರನ್ನು ಹೇಳತೊಡಗಿದನು.

ಶಕ್ತಿಯು (Creative Genius) ಅವನನ್ನು ಹೆಚ್ಚಿನ ಕೆಲಸಕ್ಕೆ ಹಚ್ಚಿಸುತ್ತದೆ. ಇತ್ತಲಾಗಿ ಭಾರತೀಯರೂ ಮಹಾತ್ಮರ ಉಪದೇಶದಿಂದ ತಮ್ಮ ಆಚಾರವಿಚಾರಗಳ ಗುಣಾವಗುಣಗಳನ್ನು ಪರೀಕ್ಷಿಸಲಿಕ್ಕೆ ಪ್ರಾರಂಭಮಾಡಿರುವದು ಆನಂದದ ಸಂಗತಿಯು. ಭಾರತೀಯರಲ್ಲಿ ಕೆಲವು ಜನರು ಅಚ್ಚ ಸನಾತನ ಧರ್ಮವನ್ನು ಹಿಂಬಾಲಿಸುವವರು ಧರ್ಮಶಾಸ್ತ್ರವನ್ನು ಅಕ್ಷರಶಃ ಪರಿಪಾಲಿಸುವರು. ಕೆಲವರು ಸನಾತನ ಧರ್ಮದ ತಿರುಳನ್ನು ಕೆಡಿಸದೆ ನಡೆನುಡಿಗಳಲ್ಲಿ ಮಾರ್ಪಾಡು ಮಾಡಿರುವರು. ಉಳಿದವರು ಸನಾತನ ಧರ್ಮಕ್ಕೆ ತಿಲಾಂಜಲಿಯನ್ನಿತ್ತು ಪಾಶ್ಚಾತ್ಯರನ್ನು ಅನುಕರಿಸಿರುವರು. ಭಾರತೀಯರಲ್ಲಿ ನವಚೈತನ್ಯವು ತುಂಬಿ ತುಳುಕುತ್ತಿರುವ ಸಮಯವಿದು. ಇಂಥ ಸಂದರ್ಭದಲ್ಲಿ ಧರ್ಮಶಾಸ್ತ್ರಗಳಲ್ಲಿ ಉಕ್ತವಾದ ಪದ್ಧತಿಗಳಾವವು ಎಂದು ವಿಚಾರಿಸುವದು ಅವಶ್ಯವು.

ಇಡೀ ಜಗತ್ತು ಧರ್ಮವನ್ನು ಅವಲಂಬಿಸಿದೆಯೆಂದು ನಮ್ಮ ಜನರು ಹೇಳುತ್ತಾರೆ. (धारणाद्धर्ममित्याहुः धर्मो धारयति प्रजाः) ಜಗತ್ತಿನ ಕಲ್ಯಾಣಕ್ಕೆ ಧರ್ಮವೇ ಮೂಲ ಕಾರಣವು. ಧರ್ಮವು ನಷ್ಟವಾದರೆ ಇಡೀ ಜಗತ್ತು ಮುಳುಗುತ್ತದೆ. ಧರ್ಮಶಾಸ್ತ್ರಗಳಲ್ಲಿ ಈ ಸನಾತನ ಧರ್ಮವು ಪ್ರತಿಪಾದಿಸಲ್ಪಟ್ಟದೆ. ಧರ್ಮಶಾಸ್ತ್ರಗಳು ವಿಶೇಷವಾಗಿ ಆಚಾರಕ್ಕೆ ಹೆಚ್ಚು ಮಹತ್ವವನ್ನು ಕೊಡುತ್ತವೆ. ವರ್ಣಾಶ್ರಮಧರ್ಮವನ್ನು ಪಾಲಿಸಿದರೆ ಸದ್ಗತಿಯು ದೊರೆಯುತ್ತದೆಂಬ ಸ್ಮೃತಿಕಾರರ ಮತವು ಹಿಂದಣ ಕಾಲದಲ್ಲಿ ಪ್ರಜೆಗಳನ್ನು ಸನ್ಮಾರ್ಗಕ್ಕೆ ಹಚ್ಚಿಕೊಡಲಿಕ್ಕೆ ಈ ಸ್ಮೃತಿಗಳು ಸಹಾಯಕಾರಿಯಾಗಿದ್ದವು. ಅರಸನೂ ಇವುಗಳ ಆಜ್ಞೆಯಂತೆಯೇ ರಾಜ್ಯವನ್ನು ಪಾಲಿಸುತ್ತಿದ್ದನು ಈ ಸ್ಮೃತಿಗಳು ಬೇರೆ ಬೇರೆ ಕಾಲದಲ್ಲಿ ಬರೆಯಲ್ಪಟ್ಟದ್ದರಿಂದ ಅವುಗಳಲ್ಲಿ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ಆಯಾ ಕಾಲದ ಸಮಾಜದ ಪರಿಸ್ಥಿತಿಯನ್ನು ಅವು ಕನ್ನಡಿಯಂತೆ ತೋರಿಸುತ್ತವೆ. ಪ್ರಸ್ತುತ ಲೇಖದಲ್ಲಿ ಈ ವಿಷಯವನ್ನು ವಿಚಾರಿಸುವಾಗ ನಾವು ಪ್ರಸಿದ್ಧ ಗ್ರಂಥಕರ್ತರ ಅಭಿಪ್ರಾಯವನ್ನೇ ಉಲ್ಲೇಖಿಸುವೆವು. ಹದಿನೆಂಟು ಸ್ಮೃತಿಗಳು ಇದ್ದರೂ ಅವುಗಳಲ್ಲಿ ಕೆಲವು ಮಾತ್ರ ಹೆಸರುವಾಸಿಯಾಗಿವೆ. ಉಳಿದ ಗ್ರಂಥಗಳಿಗೆ ನಾವು ಶರಣುಹೊಡೆಯಬೇಕು.

ಶ್ರುತಿಯೇ ಧರ್ಮದ ಮೂಲವೆಂದು ಎಲ್ಲ ಶಾಸ್ತ್ರಕಾರರು ಹೇಳುತ್ತಾರೆ. ವೇದಗಳು ಅಪೌರುಷೇಯವಿದ್ದುದರಿಂದಲೂ ವಿಶಿಷ್ಟಜನರಿಗೆ ಮಾತ್ರ ಮಂತ್ರದರ್ಶನವಾದುದರಿಂದಲೂ ಪುರಾತನವಾದುದರಿಂದಲೂ ಅವುಗಳಿಗೆ ಭಾರತವಾಙ್ಮಯದಲ್ಲಿ ಮಹತ್ವವು ಬಂದಿದೆ. ಋಗ್ವೇದದಲ್ಲಿ ಸೃಷ್ಟಿಯದೇವತೆಗಳನ್ನು ಸ್ತುತಿಸುವ ಋಕ್ಕುಗಳಿರುವವು. ಆದರೆ ಚತುರ್ವೇದಗಳಲ್ಲಿ ಧರ್ಮವನ್ನು ಪ್ರತಿಪಾದಿಸುವ ಒಂದು ವಚನವೂ ದೊರೆಯುವದಿಲ್ಲ. ಹೀಗಿದ್ದು ಧರ್ಮಶಾಸ್ತ್ರಕಾರರು ಶ್ರುತಿಗೆ ಮರ್ಯಾದೆಕೊಡುವದೇಕೆ? ನಿಜವಾಗಿ ಇದು ಔಪಚಾರಿಕವೆಂದು ನಮಗೆ ತೋರುತ್ತದೆ. ವೇದಗಳು ಅಮೌಲ್ಯವಾದ ಗ್ರಂಥಗಳಿದ್ದು ಕಾಲಕಳೆದಂತೆ ಅವುಗಳಿಗೆ ಯುಕ್ತವಾದ ಗೌರವವು ದೊರೆತಿದೆ. ಅಪೌರುಷೇಯವಾದುದರಿಂದ ವೇದವಚನಗಳನ್ನು ಕುರಿತು ತರ್ಕ ಮಾಡುವದು ಮೂಢತನವು. ಹೀಗೆ ನಮ್ಮ ಕಲ್ಪನೆಯಿರಲು ಎಲ್ಲ ಶಾಸ್ತ್ರಗಳೂ ಶ್ರುತಿಮೂಲವೆಂದು ಅವುಗಳ ಕರ್ತರು ಹೇಳುತ್ತಾರೆ. ತಮ್ಮ ಶಾಸ್ತ್ರಕ್ಕೆ ಮಾನವು ದೊರೆಯಬೇಕೆಂದು ಹೀಗೆ ಹೇಳುವ ಪರಿಪಾಠವಿದ್ದಿರಬೇಕು.

ವೇದಾಭ್ಯಾಸವು ಬ್ರಾಹ್ಮಣನ ಆದ್ಯಕರ್ತವ್ಯವು. ವೇದಗಳು ಮೊದಲು ಮುಖೋದ್ಗತವಾಗಿ ಕಲಿಸಲ್ಪಡುತ್ತಿದ್ದವು. ಕಾಲಚಕ್ರವು ತಿರುಗಿದಂತೆ ವೇದಪಠನದಲ್ಲಿ ಹೆಚ್ಚುಕಡಿಮೆಯಾಯಿತು. ಇದರಿಂದ ಬೇರೆ ಬೇರೆ ಶಾಖೆಗಳುಂಟಾದವು. ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಶಾಖೆಗಳಾಗಿ ಅನೇಕ ಆಚಾರ್ಯರು ತಮಗೆ ತಿಳಿದಂತೆ ವೇದಾಭ್ಯಾಸವನ್ನು ಮಾಡಿಸುತ್ತಿದ್ದರು. ಅಲ್ಲದೆ ಈ ಶಾಖೆಗಳು ಬೇರೆ ಬೇರೆ ನಗರಗಳಲ್ಲಿ ಹಬ್ಬಿ ಅಲ್ಲಿ ಪ್ರಾಮುಖ್ಯತೆಯನ್ನು ಪಡೆದವು. ಈ ಶಾಖೆಗಳ ಉತ್ಪಾದಕರಾಗಲೀ ಅವರ ಶಿಷ್ಯರಾಗಲೀ ಇತರ ನಿಯಮಗಳನ್ನೂ ಶಾಸ್ತ್ರಗಳನ್ನೂ ವೇದದೊಡನೆಯೇ ಕಲಿಸುತ್ತಿದ್ದರು. ಈ ಆಚಾರನಿಯಮಗಳು ಎಲ್ಲ ಕಡೆಯಲ್ಲಿಯೂ ಏಕಭಾವವನ್ನು ತಾಳಲಿಲ್ಲ; ಅವುಗಳಲ್ಲಿಯೂ ಭೇದವುಂಟಾಯಿತು. ಈ ಭೇದಗಳಿಂದ 'ಚರಣ'ಗಳು ಹುಟ್ಟಿದವು. ಆಚಾರನಿಯಮಗಳೆಲ್ಲ ಧರ್ಮಸೂತ್ರಗಳಲ್ಲಿ ದೊರೆಯುತ್ತವೆ. ಪ್ರಸಿದ್ಧ ಆಚಾರ್ಯರು ತಮ್ಮ ಶಿಷ್ಯರಿಗೆ ದೈನಿಕ ಆಚಾರಗಳನ್ನು ವಿವರಿಸಿ ಹೇಳುತ್ತಿದ್ದರು. ಅವುಗಳನ್ನೆಲ್ಲ ನೆನಪಿನಲ್ಲಿಡುವದು ಕಷ್ಟವಾದುದರಿಂದ ಸೂತ್ರರೂಪದಲ್ಲಿ ವಿವರಿಸಿದರು. ಇವೇ ಧರ್ಮಸೂತ್ರಗಳು. ಆಪಸ್ತಂಭ, ಬೌಧಾಯನ, ಗೌತಮ ಮೊದಲಾದ ಪ್ರಖ್ಯಾತವಾದ ಧರ್ಮಸೂತ್ರಗಳು ಡಾ. ಬುಹ್ಲರ, ಡಾ. ಜಾಲಿಯವರ ಅಭಿಪ್ರಾಯದಂತೆ ಕ್ರಿ. ಪೂ. ೬೦೦-೨೦೦ ರಲ್ಲಿ ರಚಿತವಾಗಿರಬೇಕು. ಈ ಧರ್ಮಸೂತ್ರಗಳನ್ನು ಆಪಸ್ತಂಭ, ಬೌಧಾಯನ, ಗೌತಮ ಎಂಬ ವ್ಯಕ್ತಿಗಳೇ ಬರೆದರೆಂದು ಹೇಳ

ಲಾಗದು. ಈ ಆಚಾರ್ಯರನ್ನು ಉತ್ಪಾದಕರೆಂದು ತಿಳಿದ ಚರಣಗಳಲ್ಲಿ ಇವುಗಳಲ್ಲಿ ವಿವರಿಸಲ್ಪಟ್ಟ ಧಾರ್ಮಿಕ ನಿಯಮಗಳು ವಿಧಿಸಲ್ಪಟ್ಟಿದ್ದವು.

ಡಾ. ಜಾಲಿ (Dr. J. Jolly) ಡಾ. ಬುಹ್ಲರ ಇವರಿಬ್ಬರು ಧರ್ಮಶಾಸ್ತ್ರ ಗ್ರಂಥಗಳನ್ನೂ ಅವುಗಳ ಟೀಕಾ ಗ್ರಂಥಗಳನ್ನೂ ಚನ್ನಾಗಿ ಪರಿಶೀಲಿಸಿರುವರು. ಡಾ. ಜಾಲಿಯವರು ವಿಷ್ಣುಸ್ಮೃತಿಯನ್ನೂ ನಾರದಸ್ಮೃತಿಯನ್ನೂ ಡಾ. ಬುಹ್ಲರರವರು ಗೌತಮ, ಬೌಧಾಯನ, ಆಪಸ್ತಂಭ, ವಸಿಷ್ಠ ಧರ್ಮಸೂತ್ರಗಳನ್ನೂ ಮನುಸ್ಮೃತಿಯನ್ನೂ ಇಂಗ್ಲಭಾಷೆಯಲ್ಲಿ ಟೀಕಾ ಟಿಪ್ಪಣಿ ಸಹಿತವಾಗಿ ಪರಿವರ್ತಿಸಿರುವರು. ಇವರು ಮಾಡಿದ ಪರಿಶ್ರಮವು ಅಗಾಧವಾದದ್ದು. ನಾವು ಇದರಿಂದ ಈ ಗ್ರಂಥಕಾರರಿಗೆ ಬಹಳ ಕೃತಜ್ಞರಾಗಿರುವೆವು. ಗೆದ್ದಲಿಗಳ ಬಾಯಿಯಿಂದ ಈ ಗ್ರಂಥಗಳನ್ನೂ ಅವುಗಳ ಟೀಕೆಗಳನ್ನೂ ತಪ್ಪಿಸಿ ಅವುಗಳನ್ನು ನೆಟ್ಟಗೆ ಶೋಧಿಸಿ ಪ್ರಕಾಶಿಸಿದ್ದರಿಂದ ಭಾರತೀಯರು ಅವರಿಗೆ ಸದಾ ಋಣಿಯಾಗಿರುವರು.

ಡಾ. ಜಾಲಿಯವರ ಮತದಂತೆ ಗೌತಮ, ಬೌಧಾಯನ ಸೂತ್ರಗಳು ಕ್ರಿ. ಪೂ. ೫–೬ ಶತಮಾನದಲ್ಲಿಯೂ, ಆಪಸ್ತಂಭ, ವಸಿಷ್ಠ, ಧರ್ಮಸೂತ್ರಗಳು ೪–೫ನೇ ಶತಮಾನಗಳಲ್ಲಿಯೂ ರಚಿಸಲ್ಪಟ್ಟವು. ಗೌತಮ ಸೂತ್ರಗಳು ಎಲ್ಲಕ್ಕೂ ಪ್ರಾಚೀನವಾದವು. ಗೌತಮನು ಸಾಮವೇದಿಯು. ಬೌಧಾಯನನು ಆಪಸ್ತಂಭನು; ಕೃಷ್ಣ ಯಜುರ್ವೇದಿಯು; ದಾಕ್ಷಿಣಾತ್ಯನು. ಹಾರೀತ, ಹಿರಣ್ಯಕೇಶಿ, ಉಶನಸ, ಯಮ, ಶಂಖ ಇವರ ಸೂತ್ರಗಳು ಧರ್ಮಶಾಸ್ತ್ರ ಗ್ರಂಥಗಳ ಟೀಕೆಗಳಲ್ಲಿ ದೊರೆಯುತ್ತವೆ. ಇವೆಲ್ಲ ಧರ್ಮಸೂತ್ರಕಾಲದವಿದ್ದಿರಬೇಕು. ಮೇಲಣ ಗ್ರಂಥಗಳೆಲ್ಲ ಸೂತ್ರರೂಪದಲ್ಲಿವೆ.

ಕೆಲಕಾಲದ ತರುವಾಯ ಈ ಧರ್ಮಗ್ರಂಥಗಳು ಶ್ಲೋಕರೂಪದಲ್ಲಿ ಬರೆಯಲ್ಪಟ್ಟವು. ಇಂಥ ಗ್ರಂಥಗಳಲ್ಲಿ ಮಾನವ ಧರ್ಮಶಾಸ್ತ್ರ ಇಲ್ಲವೆ ಮನುಸ್ಮೃತಿಯು ಪ್ರಾಧಾನ್ಯವನ್ನು ಹೊಂದಿದೆ. ಶ್ಲೋಕದಲ್ಲಿ ಬರೆಯಲ್ಪಟ್ಟ ಅಂದರೆ ಪದ್ಯ ಗ್ರಂಥಗಳು ಸೂತ್ರಗ್ರಂಥಗಳ ಪ್ರಕೃತಿಗಳೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಅದು ಹೇಗಾದರೂ ಇರಲಿ. ಈಗ ಉಪಲಬ್ಧವಾದ ಧರ್ಮಶಾಸ್ತ್ರ ಗ್ರಂಥಗಳು ಧರ್ಮಸೂತ್ರಗಳಿಗಿಂತ ಇಚಿನಕಾಲದವೆಂದು ಹೇಳಬೇಕು. ಮನುಸ್ಮೃತಿಗೆ ಭೃಗುಸ್ಮೃತಿಯೆಂದೂ ಕರೆಯುವ ಪರಿಪಾಠವುಂಟು. ಋಷಿಗಳು ಮನುವಿನ ಬಳಿಗೆ ಹೋಗಿ ಧರ್ಮವನ್ನು ಕಲಿಸೆಂದು ಬೇಡಿದ ಮೇಲೆ ಅವನು ತಾನು ಬ್ರಹ್ಮನಿಂದ ಹುಟ್ಟಿದೆನೆಂದೂ ಧರ್ಮವನ್ನು ಬ್ರಹ್ಮನಿಂದ ಕಲಿತೆನೆಂದೂ ಅದನ್ನು ಹತ್ತು ಋಷಿಗಳಿಗೆ ತಿಳಿಸಿದೆನೆಂದೂ ಹೇಳುತ್ತಾನೆ. ಆ ಹತ್ತು ಜನರಲ್ಲಿ ಒಂಭತ್ತು ಜನರು ಮರೆತದ್ದರಿಂದ ಧರ್ಮವನ್ನು ಕಲಿಸಬೇಕೆಂದು ಅವರೊಳಗಿನ ಭೃಗು ಎಂಬವನಿಗೆ ಆಜ್ಞಾಪಿಸುತ್ತಾನೆ. ಆಗ ಭೃಗುವು ಧರ್ಮವನ್ನು ಆ ಋಷಿಗಳಿಗೆ ತಿಳಿಸುತ್ತಾನೆ. (ಮನುಸ್ಮೃತಿ, ೧, ೧–೬೦), ಮನುಸ್ಮೃತಿಯಲ್ಲಿ ಹೇಳಿದಂತೆ ಭೃಗುವೇ ಈ ಗ್ರಂಥದ ನಿಜವಾದ ಕರ್ತನು ಆದುದರಿಂದ ಅದಕ್ಕೆ ಭೃಗುಸಂಹಿತಾ ಎಂಬ ಹೆಸರು ಬಂದಿರುತ್ತದೆ. ಮನುವೆಂಬವನು ಕಾಲ್ಪನಿಕ ವ್ಯಕ್ತಿಯಿರಬೇಕು. ಮಾನವ ಪ್ರಾಣಿಯ ಮೂಲಪುರುಷನು ಮನುವು. ಆದರೆ ಅವನು ಸದ್ಯದ ಸ್ಮೃತಿಗ್ರಂಥದ ಕರ್ತನಿರಲಿಕ್ಕಿಲ್ಲ. ಪ್ರಸ್ತುತ ಮನುಸ್ಮೃತಿಯು ಅರ್ವಾಚೀನದ್ದಿದ್ದು ಅದನ್ನು ಮಾನವ ಕುಲಪಿತಾಮಹನು ರಚಿಸಿದನೆಂದು ಹೇಳುವದು ಮೂರ್ಖತನವು. ವೇದಾಭ್ಯಾಸವನ್ನು ಸಾಂಗವಾಗಿ ಮಾನವ ಚರಣವೊಂದಿದ್ದಿರಬೇಕೆಂದೂ ಆ ಚರಣದಲ್ಲಿ ಮಾನವ ಧರ್ಮಸೂತ್ರಗಳು ಪಠಿಸಲ್ಪಡುತ್ತಿದ್ದಿರಬೇಕು. ಅವು ಈಗ ಉಪಲಬ್ಧವಿಲ್ಲದ್ದರಿಂದ ಪ್ರಸ್ತುತ ಮನುಸ್ಮೃತಿಯು ಮಾನವಧರ್ಮಸೂತ್ರಗಳ ಸಹಾಯದಿಂದ ಬರೆಯಲ್ಪಟ್ಟಿರಬೇಕೆಂದೂ ಪಾಶ್ಚಾತ್ಯ ಪಂಡಿತರು ಅಭಿಪ್ರಾಯಪಡುತ್ತಾರೆ. ಈ ಮಾನವ ಚರಣದ ಉತ್ಪಾದಕನು ಮನುವೆಂಬ ಮಹಾಪುರುಷನಿದ್ದಿರಬೇಕು. ಮನುಸ್ಮೃತಿಯು ಹಿಂದಿನ ಧರ್ಮಸೂತ್ರಗಳ ಅರ್ಕವಾಗಿರಬೇಕು. ಮಾನವ ಜಾತಿಯ ಮೂಲಪುರುಷನಾದ ಮನುವು ಈ ಗ್ರಂಥವನ್ನು ರಚಿಸಿದನೆಂದು ಜನರಲ್ಲಿ ಪ್ರವಾದವಿರುವದರಿಂದಲೋ ಇಲ್ಲವೆ ಇದರ ನೈಜ ಮಹತ್ತೆಯಿಂದಲೋ ಎಲ್ಲ ಜನರೂ ಈ ಗ್ರಂಥವನ್ನು ಆಧಾರವಾಗಿ ತೆಗೆದುಕೊಳ್ಳುತ್ತಾರೆ. ಅದರೊಳಗಿನ ಶ್ಲೋಕಗಳನ್ನು ಉಲ್ಲೇಖಿಸದ ಟೀಕಾಕಾರನಿಲ್ಲ. ಸದ್ಯ ಉಪಲಬ್ಧವಾದ ಮನುಸಂಹಿತೆಯು ಕ್ರಿ. ಶಕ ೨೦೦ ರಲ್ಲಿ ಬರೆಯಲ್ಪಟ್ಟಿರಬೇಕೆಂದು ಡಾ. ಬುಹ್ಲರರ ಮತ. ಇದರ ತಿರುಳಿನ ಗ್ರಂಥವು ಬಹುಶಃ ಮಾನವಧರ್ಮ ಸೂತ್ರವು— ಇದಕ್ಕೂ ಮೊದಲು ರಚಿತವಾದದ್ದಿರಬೇಕು. ಭೃಗುವು ಈಗಣ ಪರಿಸ್ಥಿತಿಗೆ ತಕ್ಕ ಗ್ರಂಥವನ್ನು ತಂದವನಿರಬೇಕು. ಮನುಸ್ಮೃತಿಯು ಬಹಳ ಪುರಾತನ ಗ್ರಂಥವಾದುದರಿಂದಲೂ ಜನರು ಅದನ್ನು ಪೂಜಿಸಲು

ತ್ರಿಪ್ಪದರಿಂದಲೂ ಆವರ ಮೇಲೆ ಮೇಧಾತಿಥಿ, ಗೋವಿಂದರಾಜ ರಘುನಂದನ, ಕುಲ್ಲೂಕ ಮೊದಲಾದವರು ಟೀಕೆಯನ್ನು ಬರಿದಿರುತ್ತಾರೆ.

ಮನುಸ್ಮೃತಿಯ ತರುವಾಯ ಯಾಜ್ಞವಲ್ಕ್ಯಸ್ಮೃತಿಯು ಬಹಳ ಖ್ಯಾತಿಗೊಂಡಿದೆ. ಯೋಗೀಶ್ವರನಾದ ಯಾಜ್ಞವಲ್ಕ್ಯನು ಈ ಗ್ರಂಥದ ಕರ್ತನೆಂದು ಹೇಳಿದೆ. ಆದರೆ ಇದರಲ್ಲಿ ತಥ್ಯಾಂಶವಿಲ್ಲ. ಶುಕ್ಲ ಯಜುರ್ವೇದವನ್ನು ಸೂರ್ಯನಿಂದ ಗೃಹಿಸಿದ ಯಾಜ್ಞವಲ್ಕ್ಯನು ಸ್ಮೃತಿಕಾರನಾಗಿರಲಿಕ್ಕಿಲ್ಲ. ಹೀಗಿರಲು ಇದರ ಕರ್ತನ ವಿಷಯವು ಸಂದಿಗ್ಧವಾದದ್ದು. ಈಗ ಉಪಲಬ್ಧವಿದ್ದ ಗ್ರಂಥವಲ್ಲಿ ಗಣೇಶಪೂಜೆ, ಗ್ರಹಶಾಂತಿ ಮೊದಲಾದವುಗಳ ಉಲ್ಲೇಖ ವಿರುವದರಿಂದ ಕ್ರಿ. ಶಕ. ೪ ನೇ ಶತಮಾನದಲ್ಲಿ ಇದು ರಚಿತವಾಗಿರಬೇಕೆಂದು ಡಾ. ಜಾಲಿಯುವರ ಅಭಿಪ್ರಾಯ. ಬೌದ್ಧಧರ್ಮಾನುಯಾಯಿಗಳ ಉಡುಪುಗಳ ಉಲ್ಲೇಖವು ಇದರಲ್ಲಿ ದೊರೆಯುತ್ತದೆ. ಶ್ರೀ. ಶಂಕರಾಚಾರ್ಯರ ಶಿಷ್ಯನಾದ ಸುರೇಶ್ವರಾಚಾರ್ಯನು ಇದರ ಮೇಲೆ ಪಿಶ್ವರೂಪವೆಂಬ ಟೀಕೆಯನ್ನು, ವಿಜ್ಞಾನೇಶ್ವರನು ಮಿತಾಕ್ಷರಾ ಎಂಬ ಟೀಕೆಯನ್ನು ಬರೆದಿರುವರು. ವಿಜ್ಞಾನೇಶ್ವರನ ಮಿತಾಕ್ಷರಿಯು ಮೇಲೆ ಟೀಕೆಗಳಾಗಿರುವವು. ಯಾಜ್ಞವಲ್ಕ್ಯಸ್ಮೃತಿಯಲ್ಲಿ ಮೂರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯವು ಆಚಾರಾಧ್ಯಾಯವು (ಆಚಾರ ಪ್ರಕರಣ). ಎರಡನೆಯ ಅಧ್ಯಾಯದಲ್ಲಿ ವ್ಯವಹಾರವು (Positive Law) ವಿವರಿಸಲ್ಪಟ್ಟದೆ. ಈ ಅಧ್ಯಾಯದಲ್ಲಿ ಅರಸನ ಕರ್ತವ್ಯಗಳೂ ,ವ್ಯವಹಾರದ ಹದಿನೆಂಟು ಅಂಗಗಳೂ ವರ್ಣಿಸಲ್ಪಟ್ಟಿವೆ. ಪ್ರಾಯಶ್ಚಿತ್ತಪ್ರಕರಣವೆಂಬ ಕೊನೆಯ ಅಧ್ಯಾಯವಲ್ಲಿ ಪ್ರಾಯಶ್ಚಿತ್ತದ ಉದ್ದೇಶವೂ ಅಪರಾಧಗಳಿಗೆ ಅನುಕೂಲವಾದ ಪ್ರಾಯಶ್ಚಿತ್ತಗಳೂ ಹೇಳಲ್ಪಟ್ಟವೆ. ಮನುಸ್ಮೃತಿಯಲ್ಲಿ ಈ ತರದ ವಿಭಾಗಗಳಿಲ್ಲ. ವ್ಯವಹಾರದಬಗ್ಗೆ ಪ್ರತ್ಯೇಕ ಚರ್ಚೆಯಿಲ್ಲ. ರಾಜಧರ್ಮ ಪ್ರಕರಣದಲ್ಲಿ ಅರಸನ ಕರ್ತವ್ಯಗಳು ಮಾತ್ರ ಕೊಡಲ್ಪಟ್ಟವೆ. ಆದರೆ ಕ್ರಮವಾಗಿ ಸ್ಮೃತಿಗಳಲ್ಲಿ— ಧರ್ಮವನ್ನು, ಮಾತ್ರ ಪ್ರತಿಪಾದಿಸುವ ಗ್ರಂಥಗಳಲ್ಲಿ—ವ್ಯವಹಾರದ ಸಮಾವೇಶವಾಯಿತು. ವ್ಯವಹಾರವು ಧರ್ಮದ ಒಂದು ಅಂಗವೆಂಡು ಭಾವನೆಯಾದನಂತರ ವ್ಯವಹಾರಪ್ರಕರಣವು ಸ್ಮೃತಿಗಳಲ್ಲಿ ಸೇರಲಿಕ್ಕೆ ಕಾರಣವಾಯಿತು. ಸುಮಾರು ೬ ನೇಯ ಶತಮಾನದಲ್ಲಿ ರಚಿಸಲ್ಪಟ್ಟ ನಾರದಸ್ಮೃತಿಯು ಸಂಪೂರ್ಣವಾಗಿ ವ್ಯವಹಾರದ ಹದಿನೆಂಟು ಅಂಗಗಳನ್ನು ವರ್ಣಿಸುತ್ತದೆ ಇಡೀ ಗ್ರಂಥದಲ್ಲಿ ಧರ್ಮದ ಪ್ರತಿಪಾದನೆಯಿಲ್ಲ. ಮೂಲ ಮನುಸ್ಮೃತಿಯಲ್ಲಿ ವ್ಯವಹಾರ ಪ್ರಕರಣವಿದ್ದು ಅವನ್ನೇ ನಾರದನು ವಿಶದವಾಗಿ ಹೊಸತಾಗಿ ಬರೆದನೆಂದೂ ಅರ್ಥಾತ್ ನಾರದ ಸ್ಮೃತಿಯ ತಿರುಳು ಮೂಲ ಮಾನವಧರ್ಮಶಾಸ್ತ್ರದ ಭಾಗವಿದ್ದಿರಬೇಕೆಂದೂ ಕೆಲವರ ಅಭಿಪ್ರಾಯ.

(See Dr. Jolly's introduction & Narada Smriti S. B. L Series )

ಪ್ರಾಚೀನ ಹಿಂದುಸ್ಥಾನದ ನ್ಯಾಯಪದ್ಧತಿಯು ನಾರದ ಸ್ಮೃತಿಯಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ಸ್ಮೃತಿಗಳಲ್ಲಿ ಮನುಯಾಜ್ಞವಲ್ಕ್ಯ, ನಾರದ ಇವು ಹಳೆಯುವಾಗಿದ್ದು ಪ್ರಸಿದ್ಧಿಯನ್ನು ಪಡೆದಿರುತ್ತವೆ.

---

## ಗೆಳೆಯ....ಗೆ

ನಿನ್ನ ನೆನೆವರೆ ಎದೆಯು ಕುಣಿಪ ಸಂತಸದುಕ್ಕು
ನಿನ್ನನ್ನೆ ಕಣ್ಣಿಟ್ಟು ನೋಡುವರೆ ಬಾರದಿಹುದು;
ಕಣ್ಣ ನೋಟದ ಮೂರ್ತಿ ಮರ್ತ್ಯವಾಗಿದ್ದರೂ
ಕನವರಿಸುವೆದೆಯ ನೆನೆಪಿನ ರೂಪು ದಿವ್ಯವಹುದು.
ಮಣ್ಣು ಮಣ್ಣೆನ್ನುವರು ಬಾಳನ್ನು ದೇಹವನು
ಮಣ್ಣಿನೊಡಲಲಿ ಹೊಂನು ಅಡಗಿಹುದ ಕಾಣದವರು;
ನಿಂನ ಮುಂಣಿನ ಮೂರ್ತಿ ವಿಶ್ವದೆದೆಯುಲಿ ನಲಿವ
ಕಾವ್ಯದಾನಂದವನು ತೆರೆದೆನಗೆ ತೋರುತಿಹುದು.



—'ವನಮಾಲಿ'

# ವಂಗಮಹಿಳೆಯರು

ಲೇಖಕರು—ಶ್ರೀಮತಿ ವಸಂತಿಕಾಬಾಯಿ ಪಡಕೋಣ.

## ವಂಗಮಹಿಳೆಯರ ಪೂರ್ವಾಚಾರಗಳು

ಪೂರ್ವಕಾಲದಲ್ಲಿ ಬಂಗಾಲದಲ್ಲಿ ಘ೦ದೆಯ ರೀತಿಯು ಬಹಳ ಹೆಚ್ಚಾಗಿತ್ತು. ಸಾಧಾರಣ ಸ್ಥಿತಿಯ ಮನೆಗಳಲ್ಲಿ ಬಂಗಾಲದಲ್ಲಿ ಹೆಣ್ಣುಮಕ್ಕಳಿಗೆ ಐದು ವರುಷದ ತನಕ ಆಟಪಾಟ ಮುಂತಾದ್ದನ್ನುವಿನಹ ಇನ್ನಾವದನ್ನೂ ಕಲಿಸುತ್ತಿರಲಿಲ್ಲ. ಚಿಕ್ಕಂದಿನಿಂದ ಅವರಲ್ಲಿ ಹೆಣ್ಣುಮಕ್ಕಳಿಗೆ ಬತ್ತಲೆ ಬಿಡುತ್ತಿದ್ದಿಲ್ಲ. ಹುಡುಗಿಗೆ, ಐದುವರುಷ ಆಯಿತೆಂದರೆ ಮೊದಲು ಅವಳಿಗೆ ಸಿಬಪೂಜೆ (ಶಿವಪೂಜೆ) ಗೌರಿಪೂಜೆ ಮುಂತಾದ ಪೂಜೆಗಳನ್ನು ಕಲಿಸುವ ರೂಢಿ ಇತ್ತು. ಆರು ವರ್ಷಕ್ಕೆಲ್ಲಾ ಅವರಿಗೆ ಮದುವೆಯಾಗಲೇ ಬೇಕಿತ್ತು. ಹಾಗಾಗಿ ಹೆಣ್ಣುಮಕ್ಕಳಿಗೆ ಈಗಿನ ಕಾಲದಂತೆ ಶಿಕ್ಷಣವನ್ನು ಕೊಡುತ್ತಿರಲಿಲ್ಲ. ಆದರೆ ಐದು ವರುಷ ತುಂಬಿದ ನಂತರ ಮನೆಯಲ್ಲಿ ಹಿರಿಯರಾಗಿದ್ದವರು ತಾಯಿಯಾಗಲೀ ಅಜ್ಜಿಯಾಗಲೀ ಸೋದರ ಅತ್ತೆಯಾಗಲಿ, ಯಾರಾದರೂ ಮಧ್ಯಾಹ್ನದ ಹೊತ್ತಿನಲ್ಲಿ ಮಹಾಭಾರತ, ರಾಮಾಯಣ ಮುಂತಾದ ಐತಿಹಾಸಿಕ, ಪೌರಾಣಿಕ ಕಥೆಗಳನ್ನು ಆಗಾಗ್ಗೆ ಅವರಿಗೆ ಹೇಳಿ ಪುಸ್ತಕ ಜ್ಞಾನವಿಲ್ಲದಿದ್ದರೂ, ಧರ್ಮೋಪದೇಶ, ಪತಿಪರಾಯಣತೆ ಮೊದಲಾದವನ್ನು ಹೇಳಿಕೊಡುತ್ತಿದ್ದರು. ಅವರಲ್ಲಿ ಆರನೇ ವರ್ಷದಲ್ಲಿ ಹೆಣ್ಣಿಗೆ ಮದುವೆಯಾದರೆ ಅದೊಂದು ಪವಿತ್ರವಾದ ಕಾರ್ಯವಾಗಿತ್ತು. ಅದಕ್ಕೆ ಅವರು "ಗೌರಿದಾನ" ವೆನ್ನುತ್ತಿದ್ದರು. ಅಷ್ಟು ಚಿಕ್ಕ ವಯಸ್ಸಿನಲ್ಲಿ ಮದುವೆಯಾದ ಕೂಡಲೇ ಹುಡುಗಿಯರನ್ನು ಗಂಡನ ಮನೆಗೆ ಕಳುಹಿಸುತ್ತಿರಲಿಲ್ಲ. ಋತುಮತಿಯಾಗಿ ಪ್ರಸ್ತ ಮುಂತಾದ್ದು ಆದನಂತರ ಹುಡುಗಿಯು ಅತ್ತೆಮನೆಗೆ ಹೋಗುತ್ತಿದ್ದಳು. ಮತ್ತು ಐದು ವರುಷ ತುಂಬಿದನಂತರ ಹುಡುಗಿಯು ಮನೆಬಿಟ್ಟು ಈಚೆಗೆ ಬರುವದು ಕಠಿಣ ನಿರ್ಬಂಧವಾಗಿತ್ತು. ಮದುವೆಯಾದನಂತರ ಸಹ ಪತಿಯ, ಮಾವನ, ಭಾವ-ಮೈದುನರ ಎದುರಿಗೆ ಅವರು ಹೋಗಲು ನಿರ್ಬಂಧವಿತ್ತು. ಎಲ್ಲಾದರೂ ತಪ್ಪಿ ಪತಿಯಾಗಲೀ ಯಾರಾದರೂ ಗಂಡಸರಾಗಲೀ ಅಥವಾ ಅತ್ತೆನಾದಿನಿಯರಾಗಲಿ ಬಂದರೆ ಅಷ್ಟು ಎಳೆಹುಡುಗಿ ಸಹ ತಲೆಯ ಮೇಲಿನ ಸೆರಗಿನಿಂದ ಮುಖವನ್ನು ಮುಚ್ಚಿಕೊಳ್ಳಬೇಕಿತ್ತು. ೬ ವರುಷದಿಂದ ೯ ವರುಷದೊಳಗೆ ಹುಡುಗಿಯರಿಗೆ ಮದುವೆಯ ಸಮಯವಿತ್ತು. ೯ನೇ ವರುಷ ಮೀರಿತೆಂದರೆ ಹುಡುಗಿಯ ತಂದೆ ತಾಯಿಯರು ಜಾತಿಭ್ರಷ್ಟರೆಂದೂ ಅವರು ಸತ್ತ ಮಾತಾಪಿತೃರಿಗೆ ನರಕಕ್ಕೆ ಎಳೆದರೆಂದೂ ಅವರನ್ನು ಬಹಿಷ್ಕಾರ ಮಾಡುತ್ತಿದ್ದರು. ವರದಕ್ಷಿಣೆಯ ರೂಢಿಯು ಆಗಿನ ಕಾಲದಲ್ಲಿ ಇದ್ದಿಲ್ಲ. ಹೆಣ್ಣಿನ ತಂದೆಗೂ ಗಂಡಿನ ತಂದೆಗೂ ಮನಸ್ಸು ಒಪ್ಪಿದರೆ, ಜಾತಕ ಕೂಡಿಬಂದರೆ ಮದುವೆಯಾಗುತ್ತಿತ್ತು. ಕೆಲವೇಳೆಯಲ್ಲಿ ಪವಿತ್ರಕುಲದವರಾರಾದರೂ ಒಂದು ಗಂಡು ಇದ್ದರೆ ಅದೇ ಕುಲದ ಅನೇಕ ಹೆಣ್ಣುಗಳಿದ್ದರೆ ಅಷ್ಟು ಪವಿತ್ರವಾದ ಕುಲವು ಸಿಗದಿದ್ದರೆ ಆ ಹೆಣ್ಣುಗಳನ್ನೆಲ್ಲಾ ಒಂದೇ ಗಂಡಿಗೆ ಕೊಡುತ್ತಿದ್ದರು. ಹೀಗಾಗಿ ಒಬ್ಬ ಪುರುಷನಿಗೆ ೧೦–೧೨ ಮದುವೆಗಳಾಗುತ್ತಿದ್ದುವು. ಮದುವೆಯಾದನಂತರ ಬಂಗಾಲಿಯ ಮಹಿಳೆಯರು ತಲೆಯ ಮೇಲೆ ಸೆರಗನ್ನು ಎಳೆಯಬೇಕು.

## ವಂಗಮಹಿಳೆಯರ ಉಡುಪುತೊಡಪು

ಅವರ ಉಡುಪು ೧೦ ಮೊಳ೯ಿಂದ ೧೨ ಮೊಳದವರೆಗೆ ಉದ್ದ. ಮೊದಲು ಶಿಮಿಜ ಎಂಬ ದೊಡ್ಡ ಮೊಣಕಾಲಿನವರೆಗೆ ಅಂಗಿಯನ್ನು ತೊಟ್ಟುಕೊಳ್ಳುವರು. ಅದರ ಮೇಲೆ ಸೀರೆಯನ್ನುಡುವರು. ಸುಮಾರು ೧೪ ಮೊಳ ಉದ್ದ ಸೆರಗನ್ನು ತಲೆಯಮೇಲಿಂದ ಎಳೆದು ಅದರ ತುದಿಗೆ ಭಾರವಾಗಲಿಕ್ಕೆ ಒಂದು ಬೀಗದ ಕೈ ಗೊಂಚಲನ್ನು ಸಿಕ್ಕಿಸಿ ಅದನ್ನು ಬಲಗೈ ಕೆಳಗಿನಿಂದ ಎಳೆದು ಎಡಗೈಹೆಗಲಮೇಲೆ ಹಾಕಿಕೊಳ್ಳುವರು. ಮದುವೆಯಾದ ಗುರ್ತು ಏನಂದರೆ, ಬೈತಲೆಗೆ ಸಿಂಧೂರವನ್ನು ಹಚ್ಚಿಕೊಳ್ಳುವದು. ಮುಂಚಿನ ಕಾಲದಲ್ಲಿ ಇಡೀ ಬೈತಲೆಗೆ ಸಿಂಧೂರ ಹಚ್ಚಿಕೊಳ್ಳುತ್ತಿದ್ದರು. ಈಗೀಗ ಬಹಳ ಚಿಕ್ಕದಾಗಿ ಹಚ್ಚಿಕೊಳ್ಳುವರು. ಇನ್ನೊಂದು ಗುರ್ತು ಅವರ ಎಡಗೈಯಲ್ಲಿ ಕಬ್ಬಿಣದ ಬಳೆ. ಅದನ್ನು ಮದುವೆಯ ಸಮಯದಲ್ಲಿ ಅತ್ತೆಯು ತೊಡಿಸುವಳು. ನಮ್ಮಲ್ಲಿ ಮಂಗಲಸೂತ್ರ ಹೇಗೋ ಹಾಗೆಯೇ ಅವರಿಗೆ ಅದು. ಅವರು ಕೈಗಳಲ್ಲಿ ಒಂದೇ ನಮೂನೆಯ ೧೦–೧೨ ಬಳೆಗಳನ್ನು ಇಟ್ಟುಕೊಳ್ಳುತ್ತಾರೆ. ಕುತ್ತಿಗೆಯಲ್ಲಿ ನಮ್ಮ ಹಾಗೆ ಅನೇಕ ಆಭರಣಗಳನ್ನು ತೊಟ್ಟುಕೊಳ್ಳುವದಿಲ್ಲ. ಒಂದು ಇಲ್ಲವೆ ಎರಡು. ಈಗಿನ ನಮ್ಮವರಲ್ಲಿ ಹೇಗೆ ಮುಂಚಿನಕಾಲದ ಒಡವೆಗಳಿಗೂ ಈಗಿನ

ಕಾಲದ ಒಡವೆಗಳಿಗೂ ವ್ಯತ್ಯಾಸವಿದೆಯೋ ಹಾಗೆಯೇ ಅವರಲ್ಲೂ ಒಡವೆಗಳಲ್ಲಿ ವ್ಯತ್ಯಾಸವಾಗಿದೆ. ಮುಂಚಿನ ಕಾಲದಲ್ಲಿ ಸ್ತ್ರೀಯರು ಕಾಲಿಗೆ ಜೋಡು ಹಾಕಿಕೊಳ್ಳುತ್ತಿದ್ದಿಲ್ಲ. ಆದರೆ ಈಗ ಮನೆಯಲ್ಲಿ ಸಹ ಕಾಲಿನಲ್ಲಿ ಜೋಡಿಲ್ಲದೇ ಅವರು ತಿರುಗಾಡುವದಿಲ್ಲ. ಅವರಲ್ಲಿ ಬೆಳಿಗ್ಗೆ ಎದ್ದಾಕ್ಷಣ ಬಹಿರ್ದೆಸೆಗೆ ಹೋಗಿ ಮುಖವನ್ನು ತೊಳೆಯುವ ಮೊದಲು ರಾತ್ರೆ ಮಲಗುವಾಗ ಉಟ್ಟುಕೊಂಡ ಸೀರೆಯುನ್ನು ತೆಗೆದಿಟ್ಟು (ಶ್ರೀಮಂತರಲ್ಲಿ) ಮಡಿಶೀರೆ (ಅಂದರೆ ಸಿಲ್ಕಿನದು) ಯುನ್ನುಟ್ಟುಕೊಳ್ಳುವರು. ಸಾಧಾರಣ ಸ್ಥಿತಿಯಲ್ಲಿರುವವರು ಒಗೆದ ಸೀರೆಯುನ್ನುಡುವರು. ಆ ಮೇಲೆ ಒಳಗೆ ಹೋಗಿ ಮೊದಲು ದೇವರಪೂಜೆ ಮಾಡಿ ನಂತರ ನೀರುಕುಡಿಯುವರು. ಅವರಲ್ಲಿ ಕೆಂಪು ಅಂಚಿನ ಸೀರೆಯುನ್ನು ಉಡುವದು ಶ್ರೇಷ್ಠ. ಸಧವೆಯರು ಎಂದೂ ಅಂಚಿಲ್ಲದ ಸೀರೆಯುನ್ನುಡುವದಿಲ್ಲ ವಿಧವೆಯರು ಅಂಚಿನಸೀರೆ ಉಟ್ಟುಕೊಳ್ಳುವದಿಲ್ಲ. ಅವರಲ್ಲಿ ಆಲ್ತಾ (ಅಲಕ್ತಿಕಾ) ಎಂಬದೊಂದು ಕೆಂಪು ದ್ರವ ಪದಾರ್ಥವನ್ನು ನಮ್ಮಲ್ಲಿ ಹೇಗೆ ಸಧವೆಯರು ಕಾಡಿಗೆಹಚ್ಚಿಕೊಳ್ಳುತ್ತೇವೋ ಹಾಗೆಯೇ ಅವರು ಅದನ್ನು ಏನಾದರೊಂದು ವಿಶೇಷ ಕಾರ್ಯವಾದ ಪಕ್ಷದಲ್ಲಿ ಕಾಲಿನಸುತ್ತಲೂ ಹಚ್ಚಿಕೊಳ್ಳುತ್ತಾರೆ. ವಿಧವೆಯರಿಗೆ ಬಂಗಾಲದಲ್ಲಿ ಈಗಲೂ ಬಹಳ ನಿರ್ಬಂಧವಿದೆ. ಅವರು ಎಷ್ಟೇ ಚಿಕ್ಕವರಾಗಲೀ ಅವರಿಗೆ ಶುಭ್ರವಾದ ಬಿಳೀಸೀರೆಯೇ. ಕೈಯಲ್ಲಿ ಬಳೆಯಿಲ್ಲ. ಮೈಯಲ್ಲಿ ಕುಪ್ಪಸವಿಲ್ಲ. ಈಗೀಗ ಕುಪ್ಪಸತೊಟ್ಟುಕೊಳ್ಳುತ್ತಾರೆ. ಸೀರೆಯುಮೇಲೊಂದು ಬಿಳೇ ಚದ್ದರವನ್ನು ಬೆನ್ನಿನ ಮೇಲೆ ಎದೆಯ ಮೇಲೆ ಹಾಕಿಕೊಳ್ಳುವರು. ಬ್ರಹ್ಮಸಮಾಜಕ್ಕೆ ಸೇರಿದವರು ವಿಧವೆಯರಿಗೆ ಅಷ್ಟೊಂದು ನಿರ್ಬಂಧ ಮಾಡುವದಿಲ್ಲ. ಆದರೆ ಅಂಚಿನಸೀರೆ ಎಂದಿಗೂ ಉಟ್ಟುಕೊಳ್ಳುವದಿಲ್ಲ.

## ವಂಗಮಹಿಳೆಯರ ಶಿಕ್ಷಣ

ಶ್ರೀಮಂತರಲ್ಲಿ ಎಳೆಯ ಹುಡುಗಿಯರಿಗೆ ಮದುವೆಯಾದರೂ ಅವರನ್ನು ಪಾಠಶಾಲೆಗೆ ಕಳುಹಿ ಪುಸ್ತಕಜ್ಞಾನ ಕೊಡದಿದ್ದರೂ ಅವರಿಗೆ ಮನೆಯ ವ್ಯವಹಾರವನ್ನು ನೋಡಿಕೊಳ್ಳುವದು, ಅಡಿಗೆ, ಅಥಿತಿಸತ್ಕಾರ ಮುಂತಾದನ್ನು ಚನ್ನಾಗಿ ಕಲಿಸುವರು. ಜಮೀನದಾರಿ ಇದ್ದವರಾದರೆ ಅದರ ವ್ಯವಹಾರವನ್ನು ನೋಡುವದನ್ನು ಕಲಿಸುವರು. ಒಂದುವೇಳೆ ಏನಾದರೂ ಜಮೀನದಾರಿ ವ್ಯವಹಾರದ ವಿಷಯು, ಹೊರಗಿನ ಜನರು ಆ ಶ್ರೀಮಂತ ಹೆಂಗಸಿನೊಡನೆ ಮಾತನಾಡುವ ಕೆಲಸವಿದ್ದರೆ ಅವರು ಹೊರಗಿನ ಕೊಠಡಿಯಲ್ಲಿ ಕೂತುಕೊಂಡು ಒಬ್ಬ ದಾಸಿಯೊಡನೆ ಹೇಳಿ ಕಳುಹಿಸುತ್ತಿದ್ದರು. ಅದಕ್ಕೆ ಜವಾಬು ಒಳಗಿನ ಹೆಂಗಸು ಅದೇ ದಾಸಿಯೊಡನೆ ಹೊರಗೆ ಹೇಳಿ ಕಳುಹಿಸುತ್ತಿದ್ದಳು. ಒಳಗಿನಿಂದ ಆ ಸ್ತ್ರೀಯು ಮಾತನಾಡಿದ ಶಬ್ದಗಳು ಸಹ ಹೊರಗಿನ ಗಂಡಸರಿಗೆ ಕೇಳಬಾರದಿತ್ತು. ಅಷ್ಟು ಘರದೆಯ ರೂಢಿ ಇತ್ತು. ಆದರೂ ಜಮೀನುದಾರಿಯ ಲೆಖ್ಖಪತ್ರ ಮುಂತಾದನ್ನು ಹೆಂಗಸರು ನೋಡುತ್ತಿದ್ದರು.

ಈಗಲೂ ಪೂರ್ವಾಚಾರದವರು ಮೇಲೆ ಬರೆದ ಪ್ರಕಾರವೇ ಪ್ರತಿಯೊಂದು ವಿಷಯದಲ್ಲಿ ನಡೆಯುತ್ತಾರೆ. ಆದರೆ ಇತ್ತೀಚೆಗೆ ಬಂಗಾಲದಲ್ಲಿ ಸ್ತ್ರೀಶಿಕ್ಷಣದ ಚಳವಳದಿಂದ ಪ್ರತಿಯೊಬ್ಬ ಸುಧಾರಕರು ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡುತ್ತಾರೆ ಈಗ ೧೫-೧೬ ವರುಷಕ್ಕೆ ಮೊದಲು ಹುಡುಗಿಯರಿಗೆ ಮದುವೆಯಾಗುವದಿಲ್ಲ. ಗಂಡು ಹೆಣ್ಣಿಗೆ, ಹೆಣ್ಣು ಗಂಡಿಗೆ ಒಪ್ಪಿದರಾಯಿತು. ಮದುವೆಯಾದನಂತರ ಸಹ ಈಗ ಘರದೆ ಅಷ್ಟಿಲ್ಲ. ಘರದೇವಿನಹ ಎಲ್ಲೂ ತಿರುಗಾಡುತ್ತಾರೆ. ಈಗ ಇಲ್ಲಿ ಹೆಂಗಸರಿಗೆ ಕೊಡುವಷ್ಟು ಗೌರವವನ್ನು ಇನ್ನಾವ ದೇಶದಲ್ಲೂ ಕೊಡುವದಿಲ್ಲ. ಇತ್ತೀಚೆಗೆ ಅವರಲ್ಲಿ ಎಷ್ಟು ಸುಧಾರಣೆಯಾಗಿದೆ ಎಂದರೆ ಪ್ರತಿಯೊಂದು ವಿಷಯದಲ್ಲಿ ಆಂಗ್ಲೆಯರಿಗೆ ಸಲ್ಲುವದನ್ನೆಲ್ಲ ಇವರುಮಾಡುತ್ತಾರೆ. ಕೆಲವು ಕಡೆಯಲ್ಲಿ ಹೆಂಗಸರು ಸಿಗರೇಟ ಸೇದುತ್ತಾರೆ. (Bob) ತಲೆಕೂದಲು ಕತ್ತರಿಸುತ್ತಾರೆ. ಗಂಡಸರೊಡನೆ (Dance) ನೃತ್ಯಕ್ಕೆ ಹೋಗುತ್ತಾರೆ. ಸ್ವೇಚ್ಛೆಯಿಂದ ಎಲ್ಲಿಬೇಕಾದರೂ ಪರಪುರುಷರೊಡನೆ ಹೋಗುತ್ತಾರೆ.

## ವಂಗಮಹಿಳೆಯರ ರೂಪ–ಗುಣಗಳು

ರೂಪದಲ್ಲಿ ಅವರಲ್ಲಿ ಕೆಲವರು ಬಹಳ ಸುಂದರವಾಗಿರುತ್ತಾರೆ. ಕೆಲವರು ಬೆಳ್ಳಗಿರುತ್ತಾರೆ. ಕೆಲವರು ಕಪ್ಪು. ವಿಧವಿಧವಾದ ರೂಪಗಳಿಂದಲೂ ಬಣ್ಣಗಳಿಂದಲೂ ಕೂಡಿರುತ್ತಾರೆ. ಗುಣಗಳೂ ಹಾಗೆಯೇ ಅವರವರ ಸ್ವಭಾವದ ಮೇರೆಗೆ. ಅವರು ಯಾರನ್ನಾದರೂ ಪ್ರೀತಿಸಿದರೆ ಅವರಿಗೋಸ್ಕರ ಜೀವಸಹ ಕೊಡುವಷ್ಟು ಪ್ರೀತಿ ಮಾಡುತ್ತಾರೆ. ಯಾರಮೇಲೆಯಾದರೂ ದ್ವೇಷಮಾಡಿದರೆ ಅವರು ಸಾಯುವತನಕ ದ್ವೇಷ ಹಿಡಿಯುತ್ತಾರೆ.

# ಸೊಂಪಿನ ಸಾಗರ

ಲೇಖಕರು:—ಬಿ. ಸದಾಶಿವಯ್ಯ



[ ಕಳೆದ ಸಂಚಿಕೆಯಿಂದ ಮುಂದೆ ಸಾಗಿದ್ದು ]

## ದೃಶ್ಯ ೪

(ಒರೆವಿಡಿದು ಶ್ಯಾಮಿಯು ಬರುವನು-ಎದುರಿಗೆ ಮುದಕನೊಬ್ಬನು ಬರುವನು)

ಮುದುಕ—ಈ ಮೊಬ್ಬಿನಲ್ಲಿ ಒರೆಯ ಹಿಡಿದು ಹೋಗುತಲಿರುವ
ನೀನು ಯಾರು ಮಗನೇ ?

ಶ್ಯಾಮಿ—ನಾನೊಬ್ಬ ಅಂಬಿಗನು—

ಮುದುಕ—ಎಲ್ಲಿಗೆಂದೋಡುತಿಹೆ ?

ಶ್ಯಾಮಿ— ನನ್ನ ಸಾಗರಕೆಂದು—

ಮುದುಕ—ಅಯ್ಯೋ ! ಕಂದ ! ನಿನ್ನ ತಾಯಿತಂದೆಗಳಾರು
ತಡೆಯಲಿಲ್ಲವೇ ?

ಶ್ಯಾಮಿ— ತಡೆಯುವುದೆ ? ಅದು ಏಕೆ ?

ಮುದುಕ—ಅದೋ ನೋಡು—ಪೂರ್ವದಲಿ ಸಾಗರದ ಅಂಚಿನಲಿ
ಕಾರ್ಮುಗಿಲು ಕವಿಯುತಿಹುದು— ಅದೋ,
ನೋಡು ದೂರದಲಿ ಅಲೆಯೆದ್ದು ಬೆಟ್ಟದೊಲು
ಹೊರಳುತ್ತ ಬಡಿಯುತಿಹುದು — ಮುಂಬೆಳಗು
ಬೆಳಗದೆಯೆ ಮೊಬ್ಬು ತಾ ಕವಿದಿಹುದು—
ಇದೆ ಗುರುತು ಕಂದಯ್ಯ ಚಂಡಮಾರುತ ಬರಲು—
ಹೋಗದಿರು— ಹೋಗದಿರು— ನಿನ್ನದೋಣಿಯು
ಇಂದು ಸಾಗರದಿ ನಿಲ್ಲದದು—ಒರೆಯುಳಿಯದು—

ಶ್ಯಾಮಿ— ಚಂಡ ಮಾರುತನೇಳೆ ಭಯವೇನು ?

ಮುದುಕ—ಭಯವೇನು ? ಭಯವೇನು ?—
ಚಂಡ ಮಾರುತನ ಹಾವಳಿಯುನರಿಯುವೆ ಒರೆಯ
ನೀನೆಂತು ಹಿಡಿದಿರುವೆ ?

ಶ್ಯಾಮಿ— ಚಂಡಮಾರುತನೇಳೆ ಅಲೆಯುನೆತ್ತಿಯಲಿ —
ನನ್ನ ದೋಣಿಯು ಹೊತ್ತು ಹಾಡಿ ತೂಗುವುದು —

ಮುದುಕ—(ಭ್ರಾಂತನಾಗಿ) ನಿನ್ನ ದೋಣಿಯನುಂಗಿ ಭೋರ್ಗರೆಯುವುದು—

ಶ್ಯಾಮಿ— ನನಗೆ ಹೊತ್ತಾಯ್ತು ಕೆಲಸಕ್ಕೆ

ಮುದುಕ—( ತಡೆಯುತ್ತಾ) ಹೋಗದಿರು ಕಂದಯ್ಯಾ!
ಸಾಗರದ ರೌದ್ರವರಿಯದ ಹಸುಳೆ ನೀನು—

ಶ್ಯಾಮಿ— ಸಾಗರವು, ರೌದ್ರವೇ ! ನೋಡಿ ಬರುವೆನು, ಈಗ
(ಮುಂದಕ್ಕೆ ನುಗ್ಗುವನು)

ಮುದುಕ—ಅಯ್ಯೋ ! ಕಂದ ! ನಿನ್ನ ತಾಯಿತಂದೆಗಳಾರು !
ಅವರೊಪ್ಪಿ ನಿನ್ನನಟ್ಟಿದರೆ ಈ ಸಾಗರಕೆ—
(ತಡೆಯುವನು)

ಶ್ಯಾಮಿ— ಹೊತ್ತಾಯ್ತು ಹಾದಿಬಿಡಿ ತಾತಯ್ಯ—
(ತಪ್ಪಿಸಿಕೊಂಡು ಹೊರಟು ಹೋಗುವನು)

ಮುದುಕ—(ಅತ್ತಕಡೆಯೇ ದಿಟ್ಟಿಸಿನೋಡಿ ನಿಟ್ಟುಸಿರುಬಿಟ್ಟು)
ಸಾಗರವ ನೋಡುತಲೆ ಭಯಪಡುವ ಹುಡುಗ ತನ—
ಆದರೀ ಬಾಲಕನು ಸಾಗರದ ರೌದ್ರಕ್ಕು ಹಾರಿ
ಹಿಗ್ಗುವನು—ದೇವರೇ ಕಾಪಾಡು.

## ದೃಶ್ಯ ೫

( ನಳಿನಿಯು ಕೃಶವಾಗಿ ಗುಡಿಸಿಲ ಮುಂದೆ ಕುಳಿತಿರುವಳು. ತಂದೆಯ ತೊಡೆಯ ಮೇಲೆ ಮಲಗಿರುವನು—ಹನುಮನು ಬಂದು ಪಕ್ಕದಲ್ಲಿ ಒರೆಯನ್ನು ಹಿಡಿದು ಕುಳಿತಿರುವನು)

ನಳಿನಿ— ದಿವಸವೆಂಟಾಯ್ತೆನ್ನ ಮುದ್ದು ಕಂದನ ನೋಡಿ,
ಇವುಗಳೆನ್ನಯ ಜೀವನದಿ ದುರ್ದಿನಗಳು—
ಸಾಕಿನ್ನು ದೇವರೇ ಸುಖಗಳಿವು ನನಗೆ—
ನೀಗುವೆನು ಪ್ರಾಣವನು— ನನಗಿಲ್ಲಿ ನೆಲೆಯಿಲ್ಲ

ಹನುಮ—ದುಃಖಿಸದಿರು—ನಳಿನಿ ! ಜೀವನವು ಶಾಶ್ವತವೆ!
ನಿನ್ನೆಡೆಗೆ ಶ್ಯಾಮಿಯನು ಕಳುಹಿಸಿದ ದೇವನೆ ಅವ
ಗೊಲಿದು ತನ್ನೆಡಗೆ ಕರೆದೊಯ್ದನು—
ಶ್ಯಾಮಿ ನಿನ್ನವನಲ್ಲ—ದೇವರಣುಗ!

ನಳಿನಿ— ಶ್ಯಾಮಿ! ನನ್ನಯ ಶ್ಯಾಮಿ ! ನನ್ನ ಮುದ್ದಿನ ಕಂದ!
ದೇವಗೆಂತವ ಮಗನು ? ಅಯ್ಯೋ ! ನಾ ಸಾಕಿ!
ಯಾರಿಗೋಸುಗ ಜೀವಿಸಿರಲಿ ನಾನಿಲ್ಲಿ ! ನನ್ನ
ಹೃದಯ ಭಯವು ಕಡುದುಃಖನಾಯ್ತಿಂದು—

ಪತಿಯಿಲ್ಲದೆನ್ನಕಗ್ಗತ್ತಲೆಯ ಹೃದಯದಲಿ ಮುದ್ದು
ಶ್ಯಾಮಿಯ ಮುಗುಳ್ನಗೆಯು ಬೆಳಗುತಲೆನ್ನ
ವ್ಯರ್ಥಜೀವನದಿ ಆಶೆಯನು ಹುಟ್ಟಿಸುತಲಿತ್ತು-
ಆದೊಡೀಗೇನಿಹುದು- ಬೆಂಗಾಡು ಜೀವನದಿ—
ಇನ್ನು ನಾನಿರಲೊಲ್ಲೆ—ಹನುಮಣ್ಣ ! ಈ ನನ್ನ
ಚಂದುವನು ನಿನ್ನ ಮಡಲಿಗೆ ಹಾಕಿ ಹೋಗುವೆನು-
ನನ್ನ ಶ್ಯಾಮಿಯು ಹೋದ ಹಾದಿಯಲ್ಲೇ—

(ಬಿಕ್ಕುವಳು)

ಹನುಮ-ಸಂತೈಸಿಕೊ ನಳಿನಿ, ಸುಖದುಃಖಗಳು ಎಂಬ
ಹಾಸು ಹೊಕ್ಕಲಿ ನೇದ ಜೀವನವಿದದರಲ್ಲಿ ಮೋಹ
ಜೇಡ—ಅಂತೆ ಬೇಸರವು ಬೇಡ

ನಳಿನಿ- ಎನ್ನ ಜೀವನದಲ್ಲಿ ಹಾಸಿಲ್ಲ—ಹೊಕ್ಕೊಂದೇ ಸುತ್ತು
ತ್ತಲಿಹುದಣ್ಣ—
ಹುಟ್ಟಿದಾದಿನದಿಂದ ಇದುವರೆಗು ಕಷ್ಟವೇ! ದುಃಖ
ವೇ ನನ್ನ ಭಾಗಕ್ಕುಳಿದು ಬೇಯಿಸಿತು—ಬಿರುಗಾಳಿ
ಬಡಿದೆದ್ದು ಸಾಗರದ ಒಡಲಿಗೆ —
ನನ್ನ ಮುದ್ದಿನ ಕಂದ—ನನ್ನ ಮುದ್ದಿನಶ್ಯಾಮಿ
ತುತ್ತಾದನೆ! ಅಯ್ಯೋ ! ದುಷ್ಟ ಸಾಗರವೇ? ದು:ಖ
ದಾಗರವೆ: ?—
ನನ್ನ ಕಂದನ ನುಂಗಿ ಹಿಗ್ಗುತಿಹೆಯಾ ?—
ನನ್ನ ಗೋಳನು ಕೇಳಿ ಕರಗದಿಹೆಯಾ ?—
ಕಲ್ಲೆದೆಯ ಸಾಗರವೆ ? ನನ್ನನೇ ನಿನಗೆ ಆಹುತಿ
ಯಾಗಿ ನೀಡುವೆನು—

(ಚಂದುವನು ಕೆಳಗಿಳಿಸಲು ಹೋಗುವಳು-ಹನು
ಮನು ಬಂದು ಕೈಹಿಡಿದು ತಡೆಯುವನು.)

ಹನುಮ-ಸಂತೈಸಿಕೋ ನಳಿನಿ ! ಶ್ಯಾಮಿ ನಮ್ಮವನಲ್ಲ—
ಪುತ್ರವ್ಯಾಮೋಹವನು ದೂರ ಮಾಡು—

ನಳಿನಿ-ಕಾಳರಕ್ಕಸನಂತೆ ನುಂಗೆ ಬಹ ಹಿರಿಯಲೆಯು ಮುದ್ದ
ಶ್ಯಾಮಿಯ ನಗುವ ಮೊಗವ ಕಾಣುತಲೆ ಮಗುವಿ
ನಂದದಿ ಸುಳಿದು ದೋಣಿಯನೆ ಮುತ್ತಿಟ್ಟು
ಕೂಗುವುದು-ಶ್ಯಾಮಿ ಬಲು ಧೀರ-ಭಯವಿಲ್ಲೆಂದು,
ಅಂದು ನುಡಿದಾ ನಿನ್ನ ನುಡಿಯ ಸತ್ಯವನೋಡು-
ಸಾಕು ಹನುಮಣ್ಣ—
ನನ್ನ ಹೃದಯದ ದು:ಖ ನಿನಗೆ ತಿಳಿಯುವುದೆಂತು
ಹೆಣ್ಣಾಗಿ ಜನಿಸಬಾರದು ನಿಮ್ಮ ಕುಲದಲ್ಲಿ

ಹನುಮ-ಸ[illegible]ತೈಸಿಕೊ—ತಂಗಿ !

(ಹತ್ತಾರು ಜನರ ಜಯಕಾರಧ್ವನಿಯು ಕೇಳಬರುವುದು)

ಹನುಮ-ಏನಿದೇತರ ಶಬ್ದ ?

ನಳಿನಿ-ಜಲಧಿಯಲೆಗಳೆ ಎದ್ದು ನುಗ್ಗುತಿರುವಂತಿಹುದು

(ಮತ್ತಷ್ಟು ಹತ್ತಿರದಲ್ಲಿ ಕೇಳಿಸುವುದು)

ಹನುಮ-ಏನಿದು ? ಇತ್ತಲೇ ಬರುತಿಹರು ?

(ನಳಿನಿಯು ಹನುಮನು ಎದ್ದು ಪಕ್ಕದಲ್ಲಿ ನಿಲ್ಲುವರು)

ನಳಿನಿ—ಬಿಳಿಯ ಬಟ್ಟೆಯ ಹುಡುಗರಾರಿವರು ?

ಹನುಮ—ಹಡಗಿನಲಿಹ ಸೈನ್ಯದವರು

ನಳಿನಿ—ಹಡಗಿನಲಿ ಸೈನ್ಯವೇಕೆ ?

ಹನುಮ—ಹಡಗು ಕಷ್ಟಕೆ ಸಿಕ್ಕಿ ನಡುಗಲಿವರೆಲ್ಲರೂ—
ಡೋಣಿಗಳ ಕೆಳಗಿಳಿಸಿ ಜನರನ್ನು ವಸ್ತುವನು
ದಡಕೆ ಸುಖವಾಗಿ ಕರೆತಂದು ರಕ್ಷಿಪರು

ನಳಿನಿ—ಇಲ್ಲಿಗೇ ಬರುತಿಹರು !

ಹನುಮ—ಇಲ್ಲೇನು ಕೆಲಸ !

(ಎಲ್ಲರಂತೆಯೇ ಬಿಳಿಯ ಅಂಗಿ ಷರಾಯಿ—ಟೋಪಿ
ಯನ್ನು ಧರಿಸಿ, ಮೆರಗುವ ಪಟ್ಟಿಯನ್ನು ಉತ್ತರೀ
ಯದಂತೆ ಧರಿಸಿದ ಶ್ಯಾಮಿಯನ್ನು ಹೊತ್ತುಕೊಂಡ
ಹತ್ತಾರು ಹುಡುಗರು ಜಯಕಾರ ಮಾಡುತ್ತ
ಬರುವರು)

ಶ್ಯಾಮಿ—(ತಾಯಿಯನ್ನು ನೋಡುತ್ತಲೇ ದುಮ್ಮಿಕ್ಕಿ ಬಂದು
ನಳಿನಿಯ ಪಾದಕ್ಕೆ ಬಿದ್ದು)—ಕ್ಷಮಿಸು ನಮ್ಮಮ್ಮ !
ನಿನಗೆ ಮೋಸವ ಮಾಡಿ, ಸರಿದೋಡಿ ಸಾಗರಕೆ—
ನಲಿದಾಡುತಿದ್ದೆ;- ನೀನೆಂತು ನನಗರಸಿದೆಯೋ
ಎಂತು ಕರುಬಿದೆಯೋ ! ದು:ಖದಿ ಎಂತು
ನೊಂದೆಯೋ ! ಕ್ಷಮಿಸುವೆಯ ಹೇಳಮ್ಮ— ನಿನ್ನ
ಶ್ಯಾಮಿಯು ನೀನು .....

ನಳಿನಿ-( ಆನಂದದಿಂದಪ್ಪುತ್ತಾ ) ಏಳೇಳು ಕಂದಮ್ಮಾ ನನ್ನ
ಮುದ್ದಿನಶ್ಯಾಮಿ! ಎಲ್ಲಿದ್ದೆ ಈ ಎಂಟು ದಿವಸದಿಂದ?
ನಿನ್ನ ನೋಡಲು ಹಲುಬಿ ಮತಿಗೆಟ್ಟು ಸಾಗರಕೆ
ಎನ್ನನಾಹುತಿ ಕೊಡಲು ಮನಮಾಡಿ ಹೊರಟಿದ್ದೆ
ಅಯ್ಯೋ ? ನನ್ನಯ ಕಂದ ! ನನ್ನ ಶ್ಯಾಮಣ್ಣ !
ಎಲ್ಲೆಲ್ಲಿ ಬಳಲಿದೆಯೋ ? ಇನಿತು ದಿನವು—

ಶ್ಯಾಮಿ—ಹೇಳುವೆನು-ಕುಳಿತು ಕೊಳ್ಳಿರಿ ನೀವು ಮಾವಯ್ಯ;
ಏಕೆ ನಿಂತಿಹೆ ನೀನು ? —ಬಾ ! ಚಂದು ನಿನಗೆಂದು
ಬಗೆಬಗೆಯ ಹಣ್ಣುಗಳ ಹಡಗಿಂದ ತಂದಿಹೆನು—

(ಎಲ್ಲರೂ ಶ್ಯಾಮಿಯ ಸುತ್ತಲೂ ಕುಳಿತುಕೊಳ್ಳುವರು)

ಶ್ಯಾಮಿ—ಬೆಳಕು ಬಾರದ ಮುನ್ನ ನಾನೆದ್ದು ದೋಣಿಯನ್ನು
ಹೊತ್ತುಕೊಂಡೈದಿದೆನು ಜಲಧಿಯೆಡೆಗೆ—
ಮುದುಕನೊಬ್ಬನು ತನ್ನ ದಾರಿಯ.ಲಿ ತಾ ಬಂದು
"ಹೋಗದಿರು ಅಣ್ಣಯ್ಯಾ ! ಬಿರುಗಾಳಿ ಬೀಸು
ತಿದೆ, ಇನ್ನು ಕತ್ತಲೆ" ಎಂದು ತಡೆದ—ನಾನದಕೆ—
ಕಿವಿಗೊಡದೆ ದೋಣಿಯನು ಅಲೆಯಲ್ಲಿಟ್ಟೇರುತಲಿ

ರವಿಯುದಯದೊಳಗಾಗಿ ಹಡಗ ಜಲಧಿಯ
ನಡುವೆ—
ನೋಡಬೇಕೆಂದು ಒರೆವಿಡಿದು ತೇಲುತಲಿದ್ದೆ ಒಂದು
ಮೈಲಿನ ದೂರ ದಡದಿಂದ ಸಾಗಿದ್ದೆ—ಬಿರುಗಾಳಿ
ಯೊಡನೆಯೇ ಮೊರೆಯುತಬ್ಬರಿಸುತ—ಹಿರಿಯಲೆ
ಗಳೆದ್ದು ದೋಣಿಯ ಸುತ್ತಿ ಕೂಗುತ್ತಾ
ಬೆಟ್ಟದಿಂದ ಕಣಿವೆಗೆ ಕಣಿವೆಯಿಂದ ಬೆಟ್ಟಕ್ಕೆ
ಹಕ್ಕಿ ಹಾರುವ ತೆರದಿ ನನ್ನ ದೋಣಿಯ ಹಿಡಿದು
ಮೇಲೇರಿ ಕೆಳಗಿಳಿದು ಜಾರುತ್ತ ಮೊರೆಯುತ್ತಾ
ಹೋರಾಡುತಿರೆ, ವರ್ಥ್ಯವಾಯ್ತೆನ್ನವರೆಯು—
ಒರೆಯಬಿಡುತಲೆ ದೋಣಿಮುಂದಲೆಯ ನಾ ಹಿಡಿದು
ಧೈರ್ಯದಲಿ ಕುಳಿತಿದ್ದೆ—ಕೊನೆಗೆ ತಲೆಕೆಳಗಾಯ್ತು
ಬಲು ಹೊತ್ತು ಹೋರಾಡಿ ಅಲೆಗಳನ್ನೆ ಎದುರಿ
ಸುತ್ತ ದೋಣಿಯನ್ನು ಬಿಗಿಹಿಡಿದು ತೇಲುತ್ತಿದ್ದೆ—
ಕೊನೆಗೆ ಸ್ಮೃತಿ ತಪ್ಪಿತು
(ನಳಿನಿಯು ಶ್ಯಾಮಿಯ ತಲೆಯನ್ನು ಸವರುವಳು)
ಆ ಮೇಲೆ ಏನಾಯಿತೋ—ಕಣ್ದೆರೆದು ನೋಡಿದೆ;
ದೂರದಲೆಗಳ ಕೂಗು—
ಮೊಬ್ಬು ಬೆಳಕೆಲ್ಲೆಲ್ಲು—ಗಾಳಿ ಭೋರೆಂದುಕೂಗುತ್ತ
ನುಗ್ಗುತಲಿತ್ತು—
ಸುತ್ತ ಮನೆಯಂತಿತ್ತು—ಮೇಲೆ ಛಾವಣಿಯಲ್ಲಿ
ಗಗನದಲಿ ಕಾರ್ಮೋಡಗಳ ಗುಂಪು ಮುಸುಕಿತ್ತು.
ಎದ್ದು ಕುಳಿತೆನು—ಒಡನೆ ಕಂಡೆನೀ ಸೋದರರು
ಸುತ್ತ ಕುಳಿತಿಹುದು—ನನ್ನುಪಚರಿಸುತೆ—ಹಾಲ
ಕುಡಿಯೆಂದರು, ಕುಡಿದೆ ಬಟ್ಟಲಕೊಂಡು—
"ಎಲ್ಲಿರುವೆ ನಾನೀಗ" ಎಂದು ಕೇಳಿದೆನಿವರ—
ಹೇಳಿದರು "ನಾಪ್ರಜ್ಞೆಯಿಲ್ಲದಲೆ ಸಾಗರದಿ—
ದೋಣಿ ಮುಂದಲೆ ಹಿಡಿದು ತೇಲುತಿದ್ದುದ—
ಇವರು ನೋಡಿ ತಟ್ಟನೆ ತಮ್ಮ ಹಡಗಬಿಟ್ಟೈತಂದು
ನನ್ನ ರಕ್ಷಿಸಿ ತಂದು ಹಡಗಿನಲಿ ಮಲಗಿಸಿ ಶೈತ್ಯೋ
ಪಚಾರವ ಮಾಡುತಿದ್ದುದನು—"
ನನ್ನ ಕಥೆ ಕೇಳಿದರು—ಮೊದಲಿಂದ ಹೇಳಿದೆನು—
ದಿನದಿನಕೆ ಚೇತರಿಸಿ ಬಲವಾದೆ—
"ಹೋಗುವೆನು ನನ್ನ ಮನೆಗೆಂದು ಹೇಳಿದನಿವರ
ಯಜಮಾನರಿಗೆ; ಅವರು ಸಂತೈಸಿ ಹೇಳಿದರು,
"ಮಗನೆ! ಸಾಗರವೆದ್ದು ಗುಡುಗುತ್ತಿದೆ ನಾಲ್ಕಾರು
ದಿನದಿಂದ- ಹಡಗ ದಡದಲ್ಲಿ ಬಿಟ್ಟಿಹೆವು—ನಿನ್ನ
ಸಾಹಸ, ನಿನ್ನ ಧೈರ್ಯ, ಸಾಗರದೊಲ್ಮೆ ಮಿಗಿಲಿ
ನವು—ಇದರಿಂದ ನೀನು ನಮ್ಮಲಿ ನಿಂತು ದೊಡ್ಡ
ಹುಡುಗರಡಳದಿ ಒಬ್ಬನಾಗು. ಬಿರುಗಾಳಿ ನಿಂತೊ
ಡನೆ ಪಶ್ಚಿಮಕೆ ತೇಲುವೆವು. ನಿನ್ನ ತಾಯಿಯ
ನೋಡಿ ಹಿಂತಿರುಗಿ ಬರುವೆ- ಎಂದೆನ್ನ ಮುದ್ದಿ
ಸಿದರು—
ಅಂದಿನಿಂದಿರುವೆನಾ ಹಡಗಿನಲಿ ನೋಡಮ್ಮ!
ಇಂದು ನಾವೀಡಡಕೆ ಬಂದಿಳಿದೆವು.

ನಳಿನಿ—(ಅಪ್ಪುತ್ತ) ನನ್ನ ಶ್ಯಾಮಣ್ಣ! ನೀ ನನ್ನ ಮಗನಲ್ಲ—
ದೇವಸುತನು—

ಹನುಮ—ನೋಡಿದೆಯಾ ನಳಿನಿ! ನನ್ನ ನುಡಿಯ ಸತ್ಯವನ್ನು.

ಶ್ಯಾಮಣ್ಣ—ಬರುವೆ ಚಂದು ನನ್ನೊಡನೆ ಹಡಗಿನ ಬಳಿಗೆ!

ಚಂದು—ನಾನೊಲ್ಲೆ—ಹಣ್ಣ ಕೊಡು—ನನಗೆಂದು ತಂದಿರುವೆ
ನೆಂದು ಹೇಳಿದೆಯಲ್ಲ—

ಶ್ಯಾಮಿ—ತೆಗೆದುಕೋ—ತಿನ್ನು.
(ಹಣ್ಣಿನ ಗಂಟನ್ನು ಕೊಡುವನು)—

ಶ್ಯಾಮಿ—ನಮ್ಮ ಸೈನ್ಯದ ಹಾಡ ಕೇಳಿರುವೆಯೇನಮ್ಮ!
ಹೇಳುವೆವು—ಕೇಳು. ಮೊದಲು ಮಾಡಿರಿ,
ನನ್ನ ಸೋದರರೆ, ಹಾಡ—
(ಎಲ್ಲರೂ ಹೇಳುವರು)

ಶಿವನೇ ನಮ್ಮಯ ಒಡೆಯನು ಕೇಳಿರಿ
ಭುವಿಯೊಳು ನಾವೇ ಸ್ವತಂತ್ರರು ॥ಪ॥
ಭೀತಿಯೆಂಬ ಬಂಧನವನೆಕಿತ್ತು
ಭೂತಪ್ರೇತಕಾಹುತಿಯಿತ್ತಿಹೆವು
ದೇಹದಲಭಿಮಾನವ ತೊರೆದಿಹೆವು
ಮೋಹವ ಸುಟ್ಟು ವಿಭೂತಿಯ ಧರಿಸಿ ॥೧॥
ಜಗವ ಮರೆತು ನರ್ತನವನೆ ಗೆಯ್ಯುವ
ಹರನುತ್ಸಾಹದ ಕಿಚ್ಚೆಮ್ಮೆದೆಯೊಳು
ಬೆಳಗುತಲೊಲವಿಂ ತುಂಬಿದೆ ನಾವು
ನಿರುತ ನಲಿಯುವೆವು ಸಾಗರದಲೆಯಲಿ ॥೨॥
ತಾರಾಮಂಡಲದೊಡೆಯರು ನಾವು
ಮೋಡವ ನಡೆಸುವ ಧೀರರು ನಾವು
ಗಾಳಿಯ ಹೆಗಲನ್ನೇರುತ ಬರುವೆವು
ತೇಲುತಲಿರುವೆವು ನೀಲಿಗಗನದಲಿ ॥೩॥
ಸಾಗರದಲೆಗಳ ಶಿಖರವನೇರಿ
ಹಾಡುತ ಗಾನದ ಇಂಪನು ಬೀರಿ
ತೇಲುತ ನಲಿಯುತಲಿರುವೆವು ಜಗದಲಿ
ಧೀರ ನಿರಂಕುಶ ಬಾಲರು ನಾವು ॥೪॥ ॥ಸ॥

# ಶ್ರೀಮನ್ಮಹಾತ್ಮಾ ಗಾಂಧಿಯವರ ವಚನಾಮೃತಗಳು

[ ಶ್ರೀ. ಸಾಂಬಭಟ್ಟ ಜೋಶಿ, ಮೈಸೂರು, ಇವರ ಸಂಕಲನದಿಂದ ಕೆಲವನ್ನು ಆಯ್ದುಕೊಟ್ಟಿದ್ದೇವೆ. —ಸಂ. ಜ. ಕ. ]

### ಈಶ್ವರ ದರ್ಶನ

ನಾನು ಯಾವಾಗಲೂ ಬಡ ಭಾರತೀಯರೊಂದಿಗೆ ನನ್ನ ಜನ್ಮವನ್ನು ಕಳೆಯಲು ಆಶಿಸುತ್ತೇನೆ. ಇದರ ಹೊರ್ತು ಇನ್ನಾವ ಬಗೆಯಿಂದಲೂ ನನಗೆ ಈಶ್ವರ ದರ್ಶನವಾಗದು. ಅನಾಥರ ಸೇವೆಯೇ ಧರ್ಮ. ಧರ್ಮವಿದ್ದಲ್ಲಿ ಪರಮೇಶ್ವರನಿರುವ. ಅನಾಥರ ರೂಪದಲ್ಲಿಯೇ ಪರಮಾತ್ಮನು ಯಾವಾಗಲೂ ದರ್ಶನಕೊಡುತ್ತಿರುತ್ತಾನೆ.

+ + + +

ಜಗತ್ತಿನವರನ್ನೆಲ್ಲ ಪ್ರೀತಿಸಲು ಕಲಿಯುವದೇ ಈಶ್ವರ ದರ್ಶನದ ಮುಂಗುರುಹು.

### ಕಲೆ

ತಪಸ್ಸು ಮನುಷ್ಯನ ಜೀವನದಲ್ಲಿ ಎಲ್ಲಕ್ಕೂ ಹೆಚ್ಚಿನ ಕಲೆಯಾಗಿರುತ್ತದೆ.

+ + + +

ನನಗಾದರೋ ಜಗತ್ಕರ್ತನು ರಚಿಸಿದ ಆಕಾಶದಲ್ಲಿ ಅನೇಕ ಕಲೆಗಳ ಅನಂತಭಾಂಡಾರವು ಅಡಗಿದಂತೆ ಕಾಣುವದು. ಅವನ್ನು ನೋಡಿ ನೋಡಿ ನನ್ನ ಕಣ್ಣುಗಳೆಂದೂ ಸೋಲವು. ಪ್ರತಿ ಕ್ಷಣವೂ ಆತನ ಕಲೆಯು ನವನವೋರೂಪವಂನು ತಾಳು ಮತಿದೆ. ಚಿರರಮಣೀಯವಾದ ಈಶ್ವರನ ಈ ನಿಸ್ಸೀಮಕಲಾಚಾತುರ್ಯವೆತ್ತ; ! ಮನುಷ್ಯನ ಅಲ್ಪ ಕಲೆಯ ಆಡಂಬರವೆತ್ತ !

### ಸೌಂದರ್ಯ

ಮೊದಲು, ಸ್ತ್ರೀಯರು ಸದ್ಗುಣಗಳನ್ನೇ ಸೌಂದರ್ಯವೆಂದು ತಿಳಿಯುತ್ತಿದ್ದರು. ನಯನಹರವಾಗಿ ಕಾಣಬೇಕೆಂದು ವಸ್ತ್ರ ಒಡವೆಗಳನ್ನಿಟ್ಟುಕೊಳ್ಳುವದು ವೇಶ್ಯೆಯರ ಬೆಡಗು.

### ತ್ಯಾಗಯೋಗಿ

ಯಾವನು, ತಾನು ಪವಿತ್ರನಾಗಿ ಜಗತ್ತಿಗೋಸುಗ ತನ್ನ ಸರ್ವಸ್ವವನ್ನು ಅರ್ಪಣಮಾಡುವನೋ ಅಂಥ ತ್ಯಾಗ ಯೋಗಿಯು ಚಕ್ರವರ್ತಿಗಿಂತಲೂ ಮಿಗಿಲಾದ ಶಕ್ತಿ ಅಧಿಕಾರಗಳನ್ನು ಭೋಗಿಸುತ್ತಾನೆ.

### ನಿಜವಾದ ಕಳ್ಳನು

ಪರಹಿತಕ್ಕೋಸುಗ ಪ್ರಾಣದಾನವನ್ನು ಮಾಡಲಾರದವನು ಮನುಷ್ಯನೆಂದು ಹೇಳಿಕೊಳ್ಳಲು ಯೋಗ್ಯನಲ್ಲ. ಸ್ವಾರ್ಥ ಕ್ಕೋಸುಗ ಬದುಕುವಮಾಡುವವನೇ ಕಳ್ಳನೆಂದು ಶಾಸ್ತ್ರಗಳು ಹೇಳುತ್ತವೆ.

### ದಯಾಧರ್ಮ

ನಾವು ಉಂಡುಟ್ಟು ಸುಖದಿಂದಿದ್ದರೂ, ಹಸಿದವರ ಹೊಟ್ಟೆತುಂಬಿಸುವದು, ಬತ್ತಲೆಯಿದ್ದವರ ಮರ್ಯಾದೆಮುಚ್ಚುವದು ನಿಜವಾದ ಧರ್ಮವಾಗಿವೆ.

### ಮುಕ್ತಿಮಾರ್ಗ

ಸತ್ಯಾಚರಣೆಯೇ ಮುಕ್ತಿಯ ದ್ವಾರವು.

### ಶಾಂತಿ

ಶಾಂತಿಯೇ ಶೂರನ ನಿಜವಾದ ಶಸ್ತ್ರ. ಶಾಂತಿಯ ಕುರುಹು ಕ್ಷಮೆ. ಅದು ಶೂರನಿಗೆ ಅಲಂಕಾರ ಪ್ರಾಯವಾಗಿದೆ.

### ವೀರ

ಶಸ್ತ್ರಗಳಿಲ್ಲದೆಯೂ ದುಷ್ಟಜನರ ರಾಕ್ಷಸೀಹಿಂಸೆಗೆ ಎದೆಯೊಡ್ಡಿ ನಿಲ್ಲುವವನೇ ನಿಜವಾದ ವೀರನು.

+ + + +

ಅಹಿಂಸಾ ಕ್ಷಮೆಗಳೇ ವೀರನ ಲಕ್ಷಣಗಳು.

### ವಾಚನ

ಒಂದು ಮಣ ಪುಸ್ತಕಗಳನ್ನು ಓದಿ ಒಗೆಯುವದಕ್ಕಿಂತ, ಅವುಗಳಲ್ಲಿಯ ಆರೇ ಸಾಲುಗಳನ್ನು ಆಚರಣೆಯಲ್ಲಿ ತರುವದು ಹೆಚ್ಚಿಗೆ ಮಹತ್ವದ್ದು.

### ಉತ್ತಮ ಪ್ರಚಾರ

ಕೇವಲ ಪುಸ್ತಕಗಳಿಂದ ಪ್ರಚಾರವಾಗದು. ಎರಡನೆಯವರಲ್ಲಿ ನಾವು ಯಾವ ಆಚಾರಗಳನ್ನು ಹರಡಲು ಯತ್ನಿಸುವೆವೋ, ಅವನ್ನು ಸೂಕ್ಷ್ಮವಾಗಿ ನಾವೇ ಮೊದಲು ಆಚರಿಸುವದು ಪ್ರಚಾರದ ಅತ್ಯುತ್ತಮ ರೀತಿ.

# ಎತ್ತ? ಎತ್ತ??

( ಪ್ರಸ್ತುತ ಪರಿಸ್ಥಿತಿಯ ಅವಲೋಕನ )

ಬರೆದವ— ಪ್ರೇಕ್ಷಕ

ಸದ್ಯದ ರಾಷ್ಟ್ರೀಯ ಸಂಗ್ರಾಮವು ಯಾವ ರೀತಿಯಿಂದ ಕೊನೆಮುಟ್ಟುವದು ಎಂಬದನ್ನು ಹೇಳಲಿಕ್ಕಾಗುವದಿಲ್ಲ. ಹಡಗವು ದಡವನ್ನಂತೂ ಬಿಟ್ಟಿದೆ. ಕಡಲಿನ ನಟ್ಟನಡುವೆ ಇದೆ. ಆನೆಗಾತ್ರದ ತೆರೆಗಳು ಎಲ್ಲಾ ಕಡೆಗಳಿಂದಲೂ ಹೊಡೆಯುತ್ತಿವೆ. ನಾಯಕನು ತೆರೆಮರೆಯಾಗಿದ್ದಾನೆ. ಆತನ ನೆಚ್ಚಿನ ಮೆಚ್ಚಿನ ಜೋತೆಗಾರರೂ ಸೆರೆಯೊಯ್ಯಲ್ಪಟ್ಟಿದ್ದಾರೆ. ಇಂತಹ ಗಡಚಿನಲ್ಲಿ ರಾಷ್ಟ್ರನೌಕೆಯು ಆಚೆಯ ದಂಡೆಯನ್ನು ಕಾಣುವ ಬಗೆ ಏನು ಎಂತು ಎಂದು ಅನೇಕರಿಗೆ ಅನಿಸುವದು ಸ್ವಾಭಾವಿಕವಾಗಿದೆ.

ಮೇಲಿನ ವಿಚಾರಗಳು ಪ್ರೇಕ್ಷಕರಿಗೇ ಬರುವವಲ್ಲದೆ ಕೆಲಸಮಾಡುವವರಿಗೆ ಅಲ್ಲ. ಏನು? ಎಂತು? ಎಂದು, ನೋಡುತ್ತ ಕೂಡುವವರೇ ಅನ್ನಬೇಕಲ್ಲದೆ, ಮಾಡುವವರನ್ನು ಈ ಕೂಟಪ್ರಶ್ನೆಯು ಕಾಡುವದೇ ಇಲ್ಲ. ಸತ್ಯಾಗ್ರಹಿಗಳ ಮಾರ್ಗವು ಸುಸ್ಪಷ್ಟವಿದೆ. ಮಾಡುವದು, ಪಡೆಯುವದು, ಇಲ್ಲವೆ ಮಡಿಯುವದು—ಈ ಮೂರು ಮಂತ್ರಗಳಲ್ಲದೆ ಉಳಿದುವನ್ನು ಅವರು ಅರಿಯರು. A Satyagrahi knows no defeat ( ಸತ್ಯಾಗ್ರಹಿಗೆ ಸೋಲೇ ಇಲ್ಲ) ಎಂದು ಸತ್ಯಾಗ್ರಹಶಾಸ್ತ್ರದ ಪ್ರವರ್ತಕರಾದ ಮಹಾತ್ಮರೇ ಎಂದಿರುವರು.

ಆದರೂ, 'ಪ್ರೇಕ್ಷಕ'ರ ಅಭಿಪ್ರಾಯವನ್ನು ದುರ್ಲಕ್ಷಿಸಲೂ ಬರುವಂತಿಲ್ಲವೆಂಬುದನ್ನು ಎಲ್ಲರೂ ಬಲ್ಲರು. ರಂಗಭೂಮಿಯ ಮೇಲೆ ಪಾತ್ರಗಳನ್ನು ವಹಿಸಿದವರು ತಂತಮ್ಮ ಪಾತ್ರತೆಯ ಮೇರೆಗೆ ಅಭಿನಯವನ್ನು ಮಾಡುವರು; ಹೋಗುವರು. ಅವರು ಎಷ್ಟೇ ಒಳ್ಳೆಯ ಕೆಲಸವನ್ನು ಮಾಡಲಿ, ಅದನ್ನು ಕೆಡಿಸುವ ಶಕ್ತಿಯು ಪ್ರೇಕ್ಷಕರಲ್ಲಿದೆ ಎಂಬುದನ್ನು ಎಲ್ಲರೂ ಒಪ್ಪತಕ್ಕ ಮಾತು. ಅಂತೇ ನಾಟಕದವರು ನೋಟಕರನ್ನು ಮೆಚ್ಚಿಸಲಿಕ್ಕೆ ಇಷ್ಟು ಹರಿಯಿಂದ ಹಣ ಗಾಡುವರು.

ನಮ್ಮ ರಾಜಕೀಯ ಪರಿಸ್ಥಿತಿಯಲ್ಲಿ ಕಳೆದ ೪ ತಿಂಗಳುಗಳಲ್ಲಿ ಅದ್ಭುತ ಪರಿವರ್ತನೆಯಾಗಿದೆ. ಗಾಂಧಿಜಿಯವರು ಸತ್ಯಾಗ್ರಹ ಸಂಗ್ರಾಮವನ್ನು ಹೂಡಿದಾಗ ಸರಕಾರದ ವೃತ್ತಿಯು ಸ್ವಲ್ಪ ತಾಳ್ಮೆಯದಾಗಿ ತೋರುತ್ತಿತ್ತು. ಮಹಾತ್ಮರಿಗೆ ಸ್ವರಾಜ್ಯ ಯಾತ್ರೆಗಾಗಿ ಹೊರಡಲು ಅಡ್ಡಿಮಾಡಲಿಲ್ಲ. ಆ ವೇಳೆಯು ಲೆಜಿಸ್ಲೇಟಿವ್ ಅಸೆಂಬ್ಲಿಯೊಳಗೆ ಅಧ್ಯಕ್ಷ ಪಟೇಲರೊಡನೆ ನಡೆಯುವದರಲ್ಲೂ, ಟಾರಿಫ ಬಿಲ್ಲಿನ ಚರ್ಚೆಯ ಕಾಲದಲ್ಲೂ ಸ್ವಲ್ಪ ಗಾಬರಿ ( Nervous ) ಯಾದವರಂತೆ ತೋರುತ್ತಿದ್ದರು. ಶಾಸನಭಂಗ ( Civil–Disobedience) ದ ಚೇಷ್ಟೆಯನ್ನು ಮಾಡಿಯೂ ನೋಡಿದರು. Ordinary Laws of the land ಎಂದರೆ ದೇಶದ ಸಾಮಾನ್ಯ ಕಾನೂನುಗಳಿಂದಲೇ ಚಳವಳಿಯನ್ನು ಬಗ್ಗುಬಡಿಯುವೆವೆಂದರು. ಗಿಡ ಕಡಿಯಲು ಹೋಗಿ ತನ್ನ ಕಾಲಮೇಲೆಯೇ ಕೊಡಲಿ ಹಾಕಿಕೊಳ್ಳುವ ಹುಡುಗನಂತೆ ಸಿವಿಲ್ ಡಿಸೋಬಿಡಿಯನ್ಸು ಆತ್ಮಘಾತವನ್ನು ಮಾಡಿಕೊಳ್ಳುವದೆಂದರು. ಅಂತೂ ಚಳವಳಿ ಕಡೆಗೆ ದುರ್ಲಕ್ಷ್ಯವನ್ನೇ ನಟಿಸಿದರು. ಆ ಪ್ರಕಾರವಾಗಿ ಶಾಸನ ಭಂಗವನ್ನು ಮಾಡಿದವರಿಗೆ ಸೌಮ್ಯ ಶಿಕ್ಷೆಗಳೂ ಕೊಡಲ್ಪಟ್ಟವು. ಆದರೆ ಆಂದೋಲನವು ಸರಕಾರದ ಆಳತೆಯ ಹೊರಗೆ ಹಬ್ಬಿತು. ಆಗ ತೀವ್ರತರವಾದ ದಂಡನವೃತ್ತಿಯನ್ನು ಸ್ವೀಕರಿಸಿದರು.

ಈ ತಿಂಗಳೊಪ್ಪತ್ತಿನ ಸಂಗತಿಗಳನ್ನು ಎಲ್ಲರೂ ಬಲ್ಲರು. ನಮ್ಮ ಪ್ರೀತಿವಿಶ್ವಾಸಗಳಿಗೆ ಪಾತ್ರರಾದ ನಾಯಕರನ್ನೆಲ್ಲ ಸರಕಾರವು ಸೆರೆಮನೆಗಟ್ಟಿತು. ನಡೆವ ಸಮರವು ನಾಯಕ ವಿಹೀನವಾಗಿಯೇ ನಡೆದಿದೆ. ಅಲ್ಲಿಯೊಬ್ಬ ಮೋತಿಲಾಲ ನೆಹರೂ, ರಾಜೇಂದ್ರಪ್ರಸಾದ, ಇಲ್ಲಿಯೊಬ್ಬ ವಿ. ಜೆ. ಪಟೇಲ ಹೀಗೆ ಕೆಲವರು ಉಳಿದಿದ್ದಾರೆ. ಅವರೂ ಸೆರೆಮನೆಯ (ಬಾದಶಹರ ಅರಮನೆಯ) ಆತಿಥ್ಯವನ್ನು ಸ್ವೀಕರಿಸಲು ಸಿದ್ಧತೆಯನ್ನೇ ಮಾಡುತ್ತಿದ್ದಾರೆ. ನಮ್ಮ ನಾಯಕರ ನಾಯಕನೊಬ್ಬ ಹೊರಗೆ ಉಳಿದಿದ್ದ. ಆತನೊಬ್ಬನಿದ್ದರೆ ನಮಗೆ ಇನ್ನಾರೂ ಬೇಕಿದ್ದಿಲ್ಲ. ಒಂದು ಶತಮಾನದ ಹಿಂದಣ ಶಾಸನದ ಜೀರ್ಣೋದ್ಧಾರಮಾಡಿ, ಸರಕಾರವು ಆತನನ್ನೂ ಬಂಧಿಸಿ ಪುಣ್ಯಕಟ್ಟಿಕೊಂಡಿತು. Press Ordinance ' ವೃತ್ತಪತ್ರಾಸುರ'ನು ('ವಿಶ್ವಕರ್ಣಾಟಕ'ವು ಈ ನಾಮಕರಣವನ್ನು ಮಾಡಿದೆ. ನಮಗಂತೂ ವೃತ್ರಾಸುರನ ನೆನಪೇ ಆಗುವದು)

ಪ್ರಮುಖ ಪತ್ರಗಳ ಗಂಟಲು ಒಂದೊಂದಾಗಿ ಹಿಚಕುತ್ತಿದ್ದಾನೆ. ಲಾಠಿಗಳ ಹೊಡೆತಬೇಕು, ಇದು ಬೇಡ; ಗುಂಡು ಹಾರಿಸಿಕೊಂಡು ಸಾಯುವದು ಬೇಕು, ಇದು ಬೇಡ. ಇದು ಸಣ್ಣಗೆ ಮೆಲ್ಲಗೆ ಹಗುರಾಗಿ ಕ್ಷಣಶಃ ಕೊಲ್ಲುವ ತಂತ್ರ. ಇದು ಬಾಯಿ ಮೂಗು ಬಿಗಿದು, ಉಸುಲುಕಟ್ಟಿಸಿ, ಹೊಟ್ಟೆಯೊಳಗೆ ಕಸವಿಸಿ ಹುಟ್ಟಿಸಿ, ನಿಧಾನವಾಗಿ, ಶಾಂತವಾಗಿ, ಜೋಕೆಯಿಂದ ಕೊಲ್ಲುವ ಯಂತ್ರ. ಇದು ನಮ್ಮ ಮೈಮಾತುಗಳಿಗೂ ಅಲ್ಲ— ನಮ್ಮ ವಿಚಾರಗಳಿಗೂ ಮುಗುದಾಣ ಹಾಕಲು ಹವಣಿಸುತ್ತಿದೆ. ಅತೇ ಅಷ್ಟು ಭಯಂಕರವಾಗಿದೆ. ಮಾಡಬೇಡಿರಿ, ಮಾತನಾಡಬೇಡಿರಿ--ಇಷ್ಟೇ ಅಲ್ಲ, ವಿಚಾರಗಳನ್ನೂ ಮನಸ್ಸಿನಲ್ಲಿ ತರಬೇಡಿರಿ ಎಂದು ಇದರ ಆಜ್ಞೆ. ಅಂತೂ ನಮ್ಮನ್ನು ತ್ರಿಕರಣಶುದ್ಧರನ್ನಾಗಿ ಇಡಬೇಕೆಂದು ಇದರ ಸಾತ್ವಿಕ ಇಚ್ಛೆ. ನಾವು ಸ್ವರ್ಗವಾಸಿಗಳಾಗುವುದರಿಂದಲೇ ಈ ಸತ್ಸಂಕಲ್ಪವು ಈಡೇರಬಹುದು. ಇಂತಹ ಕಾಯೇನವಾಚಾಮನಸಾ ಶುದ್ಧಿಯು ಈ ಪಾಪಮಯ ಪೃಥ್ವಿಯ ಮೇಲಂತೂ ಸಾಧ್ಯವಿಲ್ಲ.

ಈ ಮಾನಸಿಕ ಹಿಂಸೆಯಿರಲಿ— ಕಾಯಿಕ ಹಿಂಸೆಗಂತೂ ಕೋಡಿಯೊಡೆದಿದೆ. ಪೇಶಾವರದಲ್ಲಿ ಜಾಲಿಯನವಾಲಾಬಾಗದ ಶಿದ್ಧಿ ಬೆಳಿಸಿದ ಪುನರಾವೃತ್ತಿಯಾಗಿದೆಯೆಂದು ಜನರಲ್ಲಿ ಸಾಧಾರಣ ಭೀತಿ ಹುಟ್ಟಿದೆ. ಅದನ್ನು ಯೋಗ್ಯ ಮಾರ್ಗಗಳಿಂದ ಸರಕಾರದವರು ದೂರಮಾಡಲೊಲ್ಲರು. ಸೊಲ್ಲಾಪುರದಲ್ಲಿ ದಂಡಿನ ರಾಜ್ಯ ( ಮಾರ್ಶಲ್‌ಲಾ ) ಅಲ್ಲಿ ಮಶಿನ್ಗನ್ನುಗಳ ಕಾವಲಿನ ಸಂದಿಗಳೊಳಗಿಂದ ಹೃದಯವಿದಾರಕವಾದ ಸುದ್ದಿಗಳು ಹೊರಬೀಳಹತ್ತಿವೆ. ನಾಡಿನಲ್ಲೆಲ್ಲಾ ಕಡೆ, ವಿ. ಜೇ. ಪಟೇಲರ ಮಾತಿನಲ್ಲಿ ಹೇಳುವುದೆಂದರೆ, ಲಾಠೀರಾಜ್ಯ. ಧೋಲೆರಾ—ವಿರಾಮಗಾಂವಗಳಲ್ಲಿ ನಡೆದವೆಂದು ಪ್ರಕಟವಾದ ಹಿಂಸೆಯು ವರ್ತಮಾನಗಳಂತೂ ಹಿಂದೀಯರ ಗಂಡಸುತನಕ್ಕೆ ಆಹ್ವಾನವನ್ನು ಕೊಡುತ್ತಿವೆ. ಇಂತಹ ಪ್ರಬಲನಾದ ಪ್ರಲಯಮಾರುತನನ್ನು (ಅಹಿಂಸೆಯ ಮಾರ್ಗದಿಂದಲೇ ಆಗಲಿ) ಎದುರಿಸಲು ನಮ್ಮಲ್ಲಿ ಶಕ್ತಿ ಇದೆಯೇ ? ಆ ಶಕ್ತಿಯನ್ನು ಸಂಗ್ರಹಿಸಿರುವವೇ ? ನಮ್ಮ ಸಂಕಲ್ಪವೂ ಸಾಧನವೂ ಶುದ್ಧವಾಗಿರಬಹುದು. ಹೀಗೆಯೇ ಸಾಗಿದರೆ ಜಯವೂ ಸಿಕ್ಕಬಹುದು. ಆದರೆ ಮುಖಂಡವಿಹೀನರಾದಾಗ, ನಮ್ಮ ಪ್ರತಿಪಕ್ಷವು ಶಸ್ತ್ರಾಸ್ತ್ರಗಳಿಂದ ತರತರದ ಕಾಯಿದೆ ಕಾನೂನಗಳಿಂದ ಸುಸಜ್ಜಿತವಿರುವಾಗ ನಾವು ಇದೇ ರೀತಿ ಧೀರಗತಿಯಿಂದ ಸಾಗುವದು ಸಾಧ್ಯವೇ ? ಮೊನ್ನೆ ಮೊನ್ನೆ ಧಾರಾಸನ, ಶಿರೋಡಾ ವಾಡಲಾ ಮೊದಲಾದ ಸ್ಥಳಗಳಲ್ಲಿ ಸರಕಾರವು ತೋರಿಸಿದ ಸ್ವರೂಪವಂತೂ ಅತಿ ನಿಷ್ಠುರವಾಗಿದೆ. ೪೦೦—೫೦೦ ಮಂದಿ ಹರೆಯದ ಹುರುಪಿನ ಹುಡುಗರು—ಭಾರತಮಾತೆಯ ನೆಚ್ಚಿನ ಮೆಚ್ಚಿನ ಮಕ್ಕಳು ಬಡಿಗೆಗಳಿಂದ ಎಲಬು ಮುರಿಸಿಕೊಂಡು, ತಲೆಯೊಡಿಸಿಕೊಂಡು, ಒಬ್ಬಿಬ್ಬರು ಸತ್ತು, ಉಳಿದವರು ಸಾಯಲಾಗಿ ಹಾಸಿಕೆ ಹಿಡಿದಿದ್ದಾರೆ. ಇಂತಹ ಬಿಕ್ಕಟ್ಟಿನಲ್ಲಿ ನಮ್ಮಿಂದ ಏನು ಆಗಬೇಕು ? ಸತ್ಯಾಗ್ರಹಿಗಳ ಮಾತಿರಲಿ, ಸಾಮಾನ್ಯರು ಇದಕ್ಕೆ ಹೆದರದೆ ಇರುವರೆ ? ಸರಕಾರವಂತೂ ತನ್ನ ಉಗ್ರ ನಗ್ನ ಕಾಲೀಸ್ವರೂಪವನ್ನು ಪ್ರಕಟಮಾಡಿದೆ. ಪ್ರಜಾವರ್ಗವು ಇದರಿಂದ ಭಯಭೀತವಾಗದೆ ಉಳಿಯುವದೇ ? ಇವೊತ್ತಿಗೆ ಅನಿಸುವ ಈ ಕೆಲ ಶಂಕೆಗಳಿಗೇ ಸಂಕ್ಷೇಪವಾಗಿ ಉತ್ತರವನ್ನು ಕೊಡಲು ನಾನು ಅಪೇಕ್ಷಿಸುವೆನು.

× × ×

ಯಾರು ಏನೇ ಎನ್ನಲಿ, ಗಾಂಧಿಯಲ್ಲಿ ನನಗಂತೂ ವ್ಯವಹಾರ ಕೌಶಲ್ಯವು ಕಾಣುವುದು. ಸೂಕ್ಷ್ಮವಾಗಿ ನೋಡಿದರೆ ಈತನ ಆಂದೋಲನದಿಂದ ಕೆಳಗಿನ ೪ ಮಾತುಗಳು ಸಂಭವಿಸಿದವೆಂದು ತೋರಿ ಬರುವದು.

೧. ೨—೩ ತಿಂಗಳುಗಳಲ್ಲಿ ಆಸೇತುಹಿಮಾಚಲ ಅಪೂರ್ವ ಜಾಗೃತಿಯಾಯಿತು.

೨. ಹಿಂದುಸ್ಥಾನದೊಳಗಿನ ಪಕ್ಷೋಪಪಕ್ಷಗಳು ನಿರ್ನಾಮವಾದವು.

೩. ಜನತೆಯೊಳಗಿನ ಅಲ್ಪಸಂತುಷ್ಟಿಯು ನಿರ್ಮೂಲವಾಯಿತು.

೪. ಸರಕಾರವು ಒಳಗೊಳಗೆ ಹೆದರಿದೆ.

ಮುಪ್ಪಿನ ಮುದುಕ ! ಕೋಲು ಹಿಡಿದುಕೊಂಡ ! ಕಾಲು ನಡಿಗೆಯಿಂದ ಹೊರಟು ಬಿಟ್ಟ ! ಹಲವರು 'ಹುಚ್ಚು' ಎಂದರು. ಸರಕಾರವು ಸ್ತಿಮಿತವಾಗಿ ಸುಮ್ಮನೆ ಇದ್ದಿತು. ಹಿಡಿದರೂ ಕಷ್ಟ, ಬಿಟ್ಟರೂ ಕಷ್ಟ; ಎರಡು ತಿಂಗಳುಗಳಲ್ಲಿ ನಾಡಿಗೆ ನಾಡೇ ದೊಡ್ಡದೊಂದು ಬೇಗೆ !

ಗಾಂಧೀ ಮಾಡಿದುದು ಇಷ್ಟು. ಅನೇಕರ ಹೊಟ್ಟೆಯೊಳಗಿನ ಕಸಿವಿಸಿಯನ್ನು ತೋಡಿಕೊಳ್ಳಲಿಕ್ಕೆ ಕೋಡಿಯನ್ನು ಮಾಡಿಕೊಟ್ಟನೀತನು. ಹಲವರಿಗೂ ಭಾರತದ ವಿಮೋಚನೆಯೊಂದು ತಲೆತಿನ್ನುವ ಪ್ರಶ್ನೆಯಾಗಿದ್ದಿತು. ಎಲ್ಲರೂ ಸ್ವೀಕರಿಸಬಹುದಾದ ಮಾರ್ಗವು ಮರೆಯಾಗಿದ್ದಿತು. ಗಾಂಧಿ ಆ ತೆರೆಯನ್ನು ಹಾರಹೊಡೆದನು,

ಲಾಹೋರ ಕಾಂಗ್ರೆಸಿನವರಿಗೆ ನಾಡಿನಲ್ಲಿ ಎಷ್ಟು ಬಣಗಳು ! ಲಾಹೋರ ಕಾಂಗ್ರೆಸಿನೊಳಗಿನ ಪ್ರಕ್ಷುಬ್ಧ ವಾತಾವರಣವನ್ನೂ ನಾನು ನೋಡಿ ಬಲ್ಲೆ. ಗಾಂಧಿಯವರೇ ಅದರ ಸೂತ್ರಧಾರರಿದ್ದರು. ಯಾವ ಪಕ್ಷದವರೂ ಗಾಂಧಿಯವರ ಕಾರ್ಯಕ್ರಮಕ್ಕಾಗಲಿ, ಅವರ ಗೊತ್ತು ( Resolutions ) ಗಳಿಗಾಗಲಿ ಮನಸಾ ಒಪ್ಪಿಗೆಯನ್ನು ಕೊಡಲಿಲ್ಲ. ಆದರೆ ರಾಷ್ಟ್ರಕ್ಕೆ ರಾಷ್ಟ್ರವನ್ನೇ ಒಯ್ಯಬಲ್ಲ ನಾಯಕರು ಇವರೊಬ್ಬರೇ ಎಂದು ಇವರನ್ನು ಬೆನ್ನುಗಟ್ಟಿದರು. ಅಂದಿಗೂ ಇಂದಿಗೂ ಎಷ್ಟು ಅಂತರ !

'ಅರೇಬಿಯನ್ ನಾಯಿಟ್ಸ್' ಎಂಬ ದಂತಕಥೆಗಳಲ್ಲಿ ಸಿಂದಬಾದನಾವಿಕನ ಕಥೆಯು ರಂಜಕವಿದೆ. ಸಿಂದಬಾದನಿಗೆ ಒಬ್ಬ ಮುದುಕ ಗಂಟು ಬಿದ್ದಿದ್ದನಂತೆ. ಆತನು ಹಗಲಿರುಳೂ ಎದ್ದಾಗಲೂ ಬಿದ್ದಾಗಲೂ ಸಿಂದಬಾದನ ಹೆಗಲಮೇಲೆ ಕುಳಿತು ಕೊಂಡಿರುತ್ತಿದ್ದ. ಆತನ ಹಿಡತದೊಳಗಿಂದ ತನ್ನನ್ನು ಹೇಗೆ ಬಿಡಿಸಿಕೊಳ್ಳಬೇಕೆಂದು ಸಿಂದಬಾದನಿಗೆ ದೊಡ್ಡದೊಂದು ಚಿಂತೆ ಇದ್ದಿತಂತೆ! ಗಾಂಧಿಯೂ ಆ ಮುದಕನಂತೇ ಇದ್ದಾನೆ. ಯಾವ ಪಕ್ಷಗಳನ್ನೂ ಲಕ್ಷಿಸದೆ ತನ್ನ ಹಾದಿಯನ್ನು ತಾನು ಹಿಡಿದನು. ಎಲ್ಲಾ ಪಕ್ಷಗಳು ಇವನನ್ನು ಹಿಂಬಾಲಿಸಿದವು. ಆಳರಸರನ್ನು ಹಿಡಿದುಕೊಂಡು ಸಮತಾವಾದಿ (Communists)ಗಳಂಥ, ಕ್ರಾಂತಿಕಾರಕ (Revolutionaries) ರಂಥ ರುದ್ರಪಕ್ಷಗಳವರೆಗೆ ಎಲ್ಲರ ಅಂತಃಕರಣಗಳಲ್ಲಿ ಈ ಮುದುಕನು ತಳವೂರಿ, ಮರ್ಮಸ್ಥಾನಗಳನ್ನು ಹಿಡಿದುಕೊಂಡು ಕುಳಿತಿದ್ದಾನೆ. ಎಂಥೆಂಥವರಿಂದಲೂ ಬಿಡಿಸಿಕೊಳ್ಳಲಿಕ್ಕೆ ಆಗದು !

ಪ್ರಜಾಪಕ್ಷದಿಂದ ರಾಜಪಕ್ಷದವರೆಗೆ ಸ್ಥೂಲವಾಗಿ ೧೦–೧೫ ಸಂಗಡಗಳಿವೆ. ಎಲ್ಲ ಸಂಗಡಗಳೂ ಕರಗಹತ್ತಿವೆ. ೧ ಕ್ರಾಂತಿಕಾರರು ಗಾಂಧಿಯವರಿಗೆ ಮುಕ್ತಮಾರ್ಗವನ್ನು ಕೊಟ್ಟರುವರು. ೨ ಕಮ್ಯುನಿಸ್ಟರಿಗೂ ಬಹುಜನ ಸಮಾಜದ(Masses) ದಲ್ಲಿ ಹುಟ್ಟದ ಅಸಂತೋಷವು ಬೇಕೇ ಬೇಕು. ಆದುದರಿಂದ ಅವರೂ ಸುಮ್ಮನಿದ್ದಾರೆ. ೩ ತರುಣ ಪಕ್ಷವು (Youth-leaguers)ತನ್ನನ್ನು ಶಾಂತಿ ಸಂಗ್ರಾಮದಲ್ಲಿ ಪೂರಾ ಅರ್ಪಿಸಿ ಕೊಂಡಿರುವದು.

೪ ಹಿಂದೂ ಮಹಾಸಭೆಯವರೂ ಸತ್ಯಾಗ್ರಹವನ್ನು ಸೇರಿರುವರು. ಒಳ್ಳೆ ಒಳ್ಳೇ ಎನ್ನುತ್ತ ಪ್ರತಿಸಹಕಾರವಾದಿಗಳೂ (Responsivists)ಕೂಡಿಕೊಂಡಿರುವರು. ೫. ಜಮಾಯಂತ ಉಲ್-ಉಲೆಮಾ ಸಭೆಯು ಸಾಹಸದಿಂದಲೂ, ಮತ್ತು ಪ್ರೇಮಾವರದಂತಹ ಸಂದರ್ಭಗಳಲ್ಲಿ ಸರಕಾರವು ಹಿಂದು ಮುಸಲ್ಮಾನ ಎನ್ನದೆ ನಿಷ್ಪಕ್ಷಪಾತ ಬುದ್ಧಿಯಿಂದ ಎಲ್ಲರನ್ನೂ ಸಮವಾಗಿ ನ್ಯಾಯವಾಗಿ ಹಿಂಸಿಸುವದು ಎಂಬುದು ಕಂಡು ಬಂದುದರಿಂದಲೂ ಮುಸಲ್ಮಾನರೂ ರಾಷ್ಟ್ರೀಯ ವೃತ್ತಿಯವರಾಗುತ್ತಿದ್ದಾರೆ. ೬. ಬ್ರಾಹ್ಮಣೇತರ ಪಕ್ಷವೂ ರಾಷ್ಟ್ರೀಯಪಕ್ಷವನ್ನು ಮುಕ್ಕಾಲು ಪಾಲು ಸೇರಿದೆ, ೭. ಅಸ್ಪೃಶ್ಯವರ್ಗವು ಉಳಿದ ಹಿಂದುಗಳೊಡನೆ ರಾಜಿ ಮಾಡುತ್ತಿದೆ. ೮. ವರ್ತಕರೂ The greatest friend of the Mercantile Community ಎಂದು ಎನ್ನುತ್ತ ಬಹಿಷ್ಕಾರದ ಚಳವಳಿಯನ್ನು ಉಗ್ರವಾಗಿ ನಡೆಸಿರುವರು. ಸರಕಾರದ ಬೆನ್ನಾಸರದಂತಿರುವ ಇವರು ಈ ಬಾರಿ ಇಷ್ಟು ರಾಷ್ಟ್ರೀಯವೃತ್ತಿಯವರಾಗಿರುವದು ಸೋಜಿಗವಾಗಿದೆ. ಅವಕ್ಕೊಂದು ಕಾರಣವಿದೆ. ಹೋದ ವರ್ಷದ ಕೂಲಿಕಾರರ ಕಟ್ಟು(Strikes) ಗಳಿಂದ ಸಮತಾವಾದ (Communism )ದ ಅನುಭವವು ಇವರಿಗೆ ಚನ್ನಾಗಿ ಬಂದಿದೆ. ಆದುದರಿಂದ ಇದ್ದುದರಲ್ಲಿ ' ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ ' ಎಂಬ ಗಾದೆಯು ಮೇರೆಗೆ ಗಾಂಧಿಯವರ ಮಧ್ಯಮ ಮಾರ್ಗವನ್ನು ಹಿಡಿದಿರುವರು. ೯. ಇವರಿಗಿಂತ ಹಿರಿದಾದ ಪಂಡಿತರೆಂದರೆ ( Liberals ) ಮಂದಪಕ್ಷದವರು ಇವರ ಅನುಯಾಯಿಗಳು ಇವರೇ. ರಾಜಕೀಯ ರಣಾಂಗಣದಲ್ಲಿ ಕೆಲಸ ಮಾಡದಿದ್ದರೆ ಬಿಡಲಿ; ಗಟ್ಟಿಸಿ ನಾಲ್ಕು ಮಾತುಗಳನ್ನು ಸರಕಾರದ ಮೋರೆಯದುರಿಗೆ ಆಡಲಿಕ್ಕೂ ಇವರಿಗೆ ಧೈರ್ಯವಿಲ್ಲ. ಇವರ ತಲೆ ಬಲು ಶಾಂತ. ಆದರೆ ಇವರ ತಲೆಯೂ ಕಾಯುವಂತೆ ಒಬ್ಬ ಆಂಗ್ಲ ಮನುಷ್ಯನು ಮಾಡಿದನು. ಅದೊಂದು ಕಥೆಯೇ ಇದೆ.

Daily Herald ಎಂಬ ಇಂಗ್ಲಂಡಿನ ಲೇಬರ ಪಕ್ಷದ ಪ್ರಮುಖ ಪತ್ರಿಕೆಯ ಪ್ರತಿನಿಧಿಯು ಮೊನ್ನೆಮೊನ್ನೆ ಗಾಂಧಿಯವರನ್ನು ಜೇಲಿನಲ್ಲಿ ಸಂದರ್ಶಿಸಿ, ಸರಕಾರಕ್ಕೆ ಕೆಲ ಅಚ್ಚುಕೆಚ್ಚಿನ ಮಾತುಗಳನ್ನು ಹೇಳಿದ್ದಾನೆ. ಗಾಂಧಿಯವರ ಕೂಡ ಸಂಧಿ ಮಾಡಿರಿ ಎಂದು ಅವುಗಳ ತಾತ್ಪರ್ಯ. ಈಗ ಮಂದಪಕ್ಷದವರಿಗೆ ಬಾಯಿಯೊಡೆದಿದೆ. ಇವರು ಆ ಪ್ರತಿನಿಧಿಯ ಮಾತುಗಳನ್ನೇ ಎತ್ತಿ ಹಿಡಿಯುತ್ತಿರುವರು. ಇವರೂ ಸಹ ರಾಷ್ಟ್ರೀಯ ಪಕ್ಷದವರನ್ನು ಪೂರಾ ಕೂಡಿಕೊಳ್ಳುವದು ಖಚಿತ. ಏಕೆಂದರೆ ಇವರ ಬೇಡಿಕೆಗಳೂ ಸರಕಾರದವರಿಗೆ Impossible, Impracticable- ಅಸಾಧ್ಯ, ಅನ್ಯವಹಾರ್ಯವೆಂದು ಅನಿಸುವವು. ಅವರು ಸ್ಪಷ್ಟವಾಗಿ ಇಲ್ಲವೆನ್ನುವ ಹಾದಿಯನ್ನು ಇವರು ನೋಡುತ್ತಿದ್ದಾರೆ.

ಸರಕಾರವು ಒಳಗೊಳಗೆ ಹೆದರಿರುವದು ನಿಶ್ಚಯ. ಇಲ್ಲವಾದರೆ ಡೇಲಿ ಹೆರಲ್ಡಿನ ಮುಖಾಂತರ ಗಾಂಧಿಯವರೊಡನೆ ಮಾತನಾಡುವ ಗೋಜಿಗೆ ಹೋಗುತ್ತಿದ್ದಿಲ್ಲ. ತಾವು ಹಿಂಜರಿಯುವದು ಖಂಡಿತವೆಂದು ಡಬ್ಬಾಳಿಕೆಯ ಆಕ್ರೋಶವನ್ನು ನಡೆಸಿದ್ದಾರೆ.

ನಮಗೆ ವಿಜಯವಾಗುವುದು ನೂರಕ್ಕೆ ತೊಂಬತ್ತುಪಾಲು ನಿಶ್ಚಯ. ಒಂದುವೇಳೆ ಹಿಂಜರಿಯುವದಾದರೂ, ಹಳ್ಳಿಪಳ್ಳಿಯೊಳಗಿನ ಪಿಳ್ಳಿಗೂ ತಿಳಿದು ಹೋಗಿಬಿಟ್ಟಿದೆ- ಈ ಸರಕಾರವು ಅನ್ಯಾಯಮೂಲವಾಗಿದೆಯೆಂದು. ಈಗಲ್ಲದಿದ್ದರೂ ಮತ್ತೆ ಬೇಗ ಈ ರಾಜ್ಯಪದ್ಧತಿಯನ್ನು ಪ್ರಜಾವರ್ಗವು ನಾಶಗೊಳಿಸುವದು ನಿಶ್ಚಯ.

ಸೈಮನ್ನರಿಪೋರ್ಟು ಪ್ರಕಟವಾಗುವ ಸಂದುಕಟ್ಟಿನಲ್ಲಿ, ವರ್ತುಲ ಪರಿಷತ್ತು ನೆರೆಯಲಿರುವ ಸಂದರ್ಭದಲ್ಲಿ, ಇಂತಹ ಅದ್ಭುತ ಜಾಗೃತಿಯನ್ನು ಹುಟ್ಟಿಸಿ, ಸಣ್ಣಪುಟ್ಟ ಪಕ್ಷಗಳ ಅಲ್ಪ ಸಂತುಷ್ಟವೃತ್ತಿಯನ್ನು ನಾಶಗೊಳಿಸಿ, ರಾಷ್ಟ್ರವು ಏಕಮುಖವಾಗಿ ತನ್ನ ಬೇಡಿಕೆಯನ್ನು ಬೇಡುವಂತೆ ಮಾಡಿದ ವ್ಯವಹಾರ ಚಾತುರ್ಯವು ಮಹಾತ್ಮರಿಗಲ್ಲದೆ ಇನ್ನಾರಿಗಿದ್ದೀತು ? Arest of Gandhi- Release of an Idea ಗಾಂಧಿಯವರ ಬಂಧನದೊಡನೆ ಭಾರತೀಯ ಸ್ವಾತಂತ್ರ್ಯದ ಕಲ್ಪನೆಯ ವಿಮೋಚನೆಯಾಗುವುದು ಎಂದು ಸಿ. ರಾಜಗೋಪಾಲಾಚಾರ್ಯರು ಅಂದುದು ಸತ್ಯವಾಯಿತಲ್ಲವೇ ?

---

## ಒಂದುಮಾತು

—(೦)—

ನೋಡು, ನೋಡು, ಹೊಂಬಿಸಿಲಲಿ ಹನಿಮಳೆ
ಹೊಳಲ ಗಾಳಿಯನು ಸೀಳುತಿದೆ,
ಮೂಡಲದಲಿ ಹೊನ್ನೇಸರ ಹೊಂಗಳೆ
ಎಳೆಚಿಗುರಲ್ಲುರಿದೇಳುತಿದೆ
ಮಳೆಬಿಲ್ಲಿನ ಹೊಂಬಣ್ಣದ ಹೊಗರದು
ತಂಗೊಳದಲಿ ಪಡಿನೆಳಲಿಸಿದೆ,
ತಳಿರಿಂ ತುಂಬಿದ ಮಾವಿನ ಕೊಂಬಿಲಿ
ಕೋಗಿಲೆ ಕವನವನುಲಿಯುತಿದೆ
ಮರಳೊಳಗೂಡಿದ ಈ ಕೊಳನೀರಲಿ
ಅರಸಂಚೆಗಳೇನಾಡುತಿವೆ,
ಅರಳಿದ ಬಿಳಿಮುಗಿಲಾಗಸಕೆತ್ತಿದ
ಬೆಳ್ಗೊಡೆಯೊಲು ಕಂಗೊಳಿಸುತಿವೆ
ಎನ್ನೆದೆಯೊಳಗಾನಂದದ ಬೆಳ್ವೆಳ—
ಕಾವರಿಸುತ ನಿರ್ಮಲಸುಖದ
ಬಣ್ಣದ ಕನಸುಗಳೆನಿತೊ ಬರೆದಿವೆ.
ಕವಿತಾಮಾತೆಯ ತೊಡವುಗಳ।

ದೂರದಿ ತೋರುವ ಶೈಲಾವಳಿಯಿಂ
ಹಾಲೆರೆದಂತಿಳಿವಾ ಹೊನಲು
ಸಾರುವನುಣ್ದನಿ ಗೀತಾವಳಿ ತಂ-
ಗಾಳಿಯ ಗಂಧದೊಳಾಡುತಿದೆ
ಮೌನದ ಮಧುರಿಮೆಯೂದುತ ಸೃಷ್ಟಿ-
ಸ್ಮಿತ ಸುಮಸುರಭಿಯ ಸೂಸುತಿದೆ,
ಮೌನವೆ ಬಾಳ್ಕೆಯ ತುದಿಮೊದಲೆಂಬಾ
ಸುಂದರ ತತ್ವವ ಸಾರುತಿದೆ
ಬಾರೆಲೆ ದಾರಿಗ ! ಆವುದ ನೋಡದ
ದುಡುಕಿನ ಪಯಣವು ಸಾಕಿನ್ನು
ದೂರದ ತೀರದ ಸಂದೇಶವ ತಿಳಿ,
ಬರೆದಿದೆ ಚಿಗುರಿನ ರಾಗದಲಿ
ಒಂದೇ ನೋಟದಿ, ಒಂದೇ ಭಾವದಿ,
ಒಂದೇಕಾಂತದ ಈತಿಳಿವ
ಇಂದೇ ತಿಳಿವೊಡೆ ಸತ್ಯವಿಸಖ್ಯವ-
ನಿಂದೇ ಬಳಸೈ ದಾರಿಗನೀ.

—ಶ್ರೀ. ಜಾಂಡೇಶ್ವರ ಗಣಪತಿರಾವ, ಬ್ಯಾ.

# ಅಹಿಂಸಾತತ್ವದ ತಿರುಳು

ಲೇಖಕ:—ಜಿಜ್ಞಾಸು.

'ತನ್ನ ತಾನರಿದರೆ ತನ್ನರಿವೆ ಗುರು' ಎಂಬದೊಂದು ಮಂತ್ರ. ಇದು ಪ್ರತಿಯೊಬ್ಬ ಮನುಷ್ಯನು ತನ್ನ ಜನ್ಮ ಸಾಫಲ್ಯವನ್ನು ಪಡೆಯುವ ಬಗೆಯನ್ನು ತೋರಿಸುತ್ತದೆ. ಇಂಥ ಜ್ಞಾನಮಾರ್ಗದಲ್ಲಿ ಕಾಲಿಡುವ ಮೊದಲು, ಮನುಷ್ಯನು ತನ್ನನ್ನು ತಾನೇ ಗೆದ್ದುಕೊಳ್ಳಬೇಕಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಆತ್ಮಪರಿಪಾಕವಾಗುವ ಮೊದಲು, ಇಂದ್ರಿಯನಿಗ್ರಹವು ಅನಿವಾರ್ಯವಾಗಿದೆ. ಈ ಇಂದ್ರಿಯನಿಗ್ರಹದಿಂದಲೇ ಮನುಷ್ಯ ತನ್ನನ್ನು ತಾನು ಗೆಲ್ಲಬಹುದು.

ಇಂದ್ರಿಯನಿಗ್ರಹಕ್ಕೆ ಸುಲಭ ಸಹಾಯಕಾರಿಯೆಂದರೆ ಪ್ರೇಮ. ಪ್ರೇಮಿಯಾಗಿದ್ದ ಮನುಷ್ಯನು, ಇಂದ್ರಿಯನಿಗ್ರಹವನ್ನು ಮಾಡಲು ಶಕ್ತನಾಗುತ್ತಾನೆ. ಪ್ರೇಮದ ಬೆಳಕು, ಹೃದಯದಲ್ಲಿ ಹೊಳೆದು ಬೆಳಗಹತ್ತಿದರೆ ಮನುಷ್ಯನು, ತನ್ನ ಸಾಮಾನ್ಯ ಜೀವನವನ್ನು ಮೀರಿ ಮೇಲಕ್ಕೇರುತ್ತಾನೆ. ಆ ಪ್ರೇಮದ ಬೆಳಕು ಆತನಿಗೊಂದು ದಿವ್ಯದೃಷ್ಟಿಯನ್ನು ಕೊಡುತ್ತದೆ. ಆ ದೃಷ್ಟಿಯ ನೆರವಿನಿಂದ ಮನುಷ್ಯನು ಬಾಳಿನ ನಿಜವಾದ ಬೆಲೆಯನ್ನು ಅರಿಯುತ್ತಾನೆ. ಆತನ ಭಾವನೆಗಳು ಪವಿತ್ರವಾಗತೊಡಗುವವು. ಕೀಳು ಬಯಕೆಗಳನ್ನು, ಆತನು ನಿರಾಯಾಸವಾಗಿ ಹೊಡೆದೋಡಿಸಬಲ್ಲ. ಆದರೆ, ಇದೆಲ್ಲ ಇಲ್ಲಿ ಹೇಳಿದಷ್ಟು ಸುಲಭವಾಗಿ ನಾಲ್ಕೆಂಟು ಸಾಲುಗಳಲ್ಲಿ ಸಾಧ್ಯವಾಗುವದಿಲ್ಲ. ಅದಕ್ಕಾಗಿ ಮನುಷ್ಯನು ತನ್ನ ಜೀವನದ ಹಲವು ಸಾಲು ಸಾಲುಗಳನ್ನೇ ತೇಯಬೇಕಾಗುತ್ತದೆ. ಏಕೆಂದರೆ ನಮ್ಮ ಜೀವನಗಳು ಒಂದೊಂದು ಘನಘೋರಸಂಗ್ರಾಮ ಭೂಮಿಗಳಾಗಿವೆ. ಪ್ರತಿಯೊಂದು ವ್ಯಕ್ತಿಯೂ ತನ್ನನ್ನು ಸುತ್ತುಗಟ್ಟನಿಂತ ದುಷ್ಪರಿಸ್ಥಿತಿಯ ಕೋಟೆಯ ಗೋಡೆಗಳನ್ನೊಡೆದು, ತನ್ನ ದಾರಿಯನ್ನು ತಾನೇ ಮಾಡಿಕೊಳ್ಳಬೇಕಾಗಿದೆ.

ಈ ಜೀವನಸಂಗ್ರಾಮದಲ್ಲಿ ಪ್ರೇಮವೇ ಶಕ್ತಿ. ಇದಕ್ಕೆ ಭಕ್ತಿಯೆಂದೂ ಅನ್ನುವದುಂಟು. ಈ ಶಕ್ತಿಯು ಮನುಷ್ಯನಿಗೆ ಆತನ ತತ್ತ್ವವನ್ನು ತಿಳಿಸಿಕೊಡುವ ಗುರುವಾಗಿದೆ. ಈ ಶಕ್ತಿಯ ನೆರವಿನಿಂದ ಮನುಷ್ಯನು, ಸಾಮಾನ್ಯರಿಗೆ ಅಸಾಧ್ಯವಾದ ಕೆಲಸಗಳನ್ನು ಸುಲಭವಾಗಿ ನೆರವೇರಿಸಬಲ್ಲ. ಇನ್ನುಳಿದ ವಿಷಯಗಳಲ್ಲಿ ಮಾಡಲಾರದಂಥ ಅಮೋಘವಾದ ಸ್ವಾರ್ಥತ್ಯಾಗವನ್ನು ಮಾಡಲು ಸಿದ್ಧನಾಗುತ್ತಾನೆ. ಆದರೆ ಇಂಥ ಸ್ವಾರ್ಥತ್ಯಾಗವನ್ನು ಮಾಡುವ ಮೊದಲು ಮನುಷ್ಯನು ತನ್ನ ತುಚ್ಛವಾದ ಆಸೆ ಇಚ್ಛೆಗಳನ್ನು ಗೆದ್ದುಕೊಂಡಿರುತ್ತಾನೆ.

ಈ ಪ್ರೇಮದ ಬಲದಿಂದಲೇ ಸೀತೆಯು ಅಪರಿಮಿತವಾದ ಕಷ್ಟಗಳನ್ನು ಸಹಿಸಲು ಶಕ್ತಳಾದಳು; ಸಾವಿತ್ರಿಯು ಸಾವನ್ನು ಗೆದ್ದಳು; ಇದರಿಂದಲೇ ಪನ್ನಾದಾಸಿಯು ಅಸಾಮಾನ್ಯವಾದ ಸ್ವಾರ್ಥತ್ಯಾಗವನ್ನು ಮಾಡಿದಳು; ಇದಕ್ಕಾಗಿಯೇ ಜಿತೇಂದ್ರನಾಥದಾಸನು ಆತ್ಮಾರ್ಪಣವನ್ನು ಮಾಡಿದನು. ಹೀಗೆ ಆ ಪ್ರೇಮವೇ ಒಬ್ಬರಲ್ಲಿ ಪತಿಭಕ್ತಿ, ಇನ್ನೊಬ್ಬರಲ್ಲಿ ಆತ್ಮಶಕ್ತಿ, ಮತ್ತೊಬ್ಬರಲ್ಲಿ ದೇಶಪ್ರೀತಿ, ಮಗುದೊಬ್ಬರಲ್ಲಿ ಆದರ್ಶಸಾಧನೆಯಾಗಿ ಪರಿಣಮಿತು.

ಮನುಷ್ಯನು, ತನ್ನ ಪ್ರೇಮದ ದೆಸೆಯಿಂದ, ಆ ಪ್ರೇಮಪಾತ್ರವಾದ ವಸ್ತುಗಳಿಗಾಗಿ ಎಂಥ ಸ್ವಾರ್ಥತ್ಯಾಗವನ್ನಾದರೂ ಮಾಡಬಲ್ಲನಷ್ಟೇ! ಆದರೆ ಇದೀಗಲೇ ಪ್ರೇಮದ ಪರಿಪೂರ್ಣತೆಯಲ್ಲ; ಆರಂಭ. ತನ್ನ ಆನಂದದ ಅರಿವನ್ನು ತನ್ನ ಪ್ರೇಮಾಸ್ಪದರಾದವರಲ್ಲಿ ಕಂಡುಕೊಳ್ಳಲು ಯತ್ನಿಸುವದು ಪ್ರೇಮಕಲೆಯ ಮೊದಲನೇ ಪಾಠ. ಈ ಅವಸ್ಥೆಯಿಂದ, ಮನುಷ್ಯನ ಆತ್ಮದಲ್ಲಿ ಪ್ರೇಮವು ವಿಕಾಸಹೊಂದುತ್ತ ಹೊಂದುತ್ತ ಅದು, ತನಗೆ ತೀರ ಹತ್ತಿ ಹೊಂದಿದವರನ್ನು ಪ್ರೀತಿಸುವಂತೆಯೇ, ಇಡೀ ಮಾನವ ಜಾತಿಯನ್ನೇ ಪ್ರೀತಿಸಲು ಕಲಿಯುತ್ತದೆ. ಅಲ್ಲಿಂದ ಮುಂದೆ ಆ ಪ್ರೇಮಶಕ್ತಿಯು ಇಡೀ ವಿಶ್ವವನ್ನೇ ತನ್ನ ತೆಕ್ಕೆಯಲ್ಲಿ ಅಪ್ಪಿಕೊಳ್ಳಲು ಹವಣಿಸುತ್ತದೆ. ಈ ಸ್ಥಿತಿಯೇ ಮನುಷ್ಯಜೀವನದ ಪರಮಪದವಿ. ಇದುವೆ ಜೀವನ್ಮುಕ್ತರ ನೆಲೆ. ಇಂಥ ಸ್ಥಿತಿಯಲ್ಲೇ ವ್ಯಕ್ತಿಯ ಆತ್ಮವು ಪರಮಾತ್ಮನ ಸಾಯುಜ್ಯವನ್ನು ಪಡೆಯುತ್ತಿರಬೇಕು.

ಮಹಾತ್ಮಾಜಿಯವರು ಈಗಲೀಗ ಈ ಮೆಟ್ಟಿಲನ್ನು ಸಮೀಪಿಸುತ್ತಿದ್ದಾರೆ. ವಿಶ್ವಪ್ರೇಮವೇ ಅವರ ಆತ್ಮದ ಸಾಫಲ್ಯ; 'ವಿಶ್ವಪ್ರೇಮದ ಅಂಕುರವೇ ಈಶ್ವರದರ್ಶನದ ಮುಂಗುರುತು' ಎಂಬದು ಅವರ ಒಡನುಡಿ.

ಜಗತ್ತಿನ ಇತಿಹಾಸದಲ್ಲಿ ಇಂಥ ಅಪೌರುಷೇಯ ಪದವಿಯನ್ನು ಪಡೆದವರು ಕೆಲವರುಂಟು, ಪುರಾಣಕಾಲದಿಂದಿತ್ತೀಚೆಗೆ

ಈ ವಿಶ್ವಪ್ರೇಮದ ಆದರ್ಶವನ್ನು ಇಟ್ಟುಕೊಂಡವರಲ್ಲಿ ಮೊದಲಿಗನು, ಚೀನದೇಶದ ಮಹಾತ್ಮನಾದ ಲಾಓಟ್ಸೆ ( Laotze ). ಆ ನಂತರ ಈ ಆದರ್ಶವನ್ನೇ ಎತ್ತಿಹಿಡಿದವನು, ಭಗವಾನ್ ಬುದ್ಧದೇವ. ಇತ್ತೀಚೆಗೆ, ಈ ತತ್ತ್ವವನ್ನು ಜಗತ್ತಿಗೆಲ್ಲ ಸಾರಿದವನು ಭಗವಾನ್ ಕ್ರಿಸ್ತದೇವ. ರವೀಂದ್ರನಾಥ ಠಾಕೂರರು, ಹಿಂದುಸ್ತಾನದ ಸಂದೇಶವೆಂದು ಈ ಮಾತನ್ನೇ ಜಗತ್ತಿಗೆಲ್ಲ ತಿಳಿಹೇಳುತ್ತಿದ್ದಾರೆ. ಮಹಾತ್ಮಾಜಿಯವರು ತಮ್ಮ ಜೀವನವನ್ನು ಇದಕ್ಕೋಸುಗವೇ ಮೊಸಲು ಮುಡುಪಾಗಿ ತೆಗೆದಿಟ್ಟಿರುವರು.

ಮೇಲೆ ನೋಡುವವರಿಗೆ, ಮಹಾತ್ಮಾಜಿಯವರು ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವರೆಂದು ಕಾಣಬಹುದು. ಆದರೆ ಅವರಿಗೆ ಬೇಕಾದದ್ದು, ವಿಶ್ವಸ್ವಾತಂತ್ರ್ಯ. ಜಗತ್ತು ಈಗ ಒಂದು ತರದ ಪಾಶವೀಶಕ್ತಿಯ ಅಂಕೆಯಲ್ಲಿ ತೊಳಲಾಡುತ್ತಿದೆಯೆಂದು ಅವರ ಕಣ್ಣಿಗೆ ಕಾಣುತ್ತಿರುವದು. ಮೊನ್ನಿನ ಮಹಾಯುದ್ಧ, ಇತ್ತೀಚೆ ಚೀನ ಅಪಗಾಣಿಸ್ತಾನದಲ್ಲಿ ನಡೆದ ಗಲಭೆಗಳು ಅದರ ಕುರುಹು. ಈ ಪರತಂತ್ರತೆಯ ಪಾಶದಿಂದ ಜಗತ್ತನ್ನು ಬಿಡಿಸುವದೇ ಗಾಂಧಿಜೀಯವರ ಕವೀಂದ್ರರ ಗುರಿಯಾಗಿದೆ. (ರೀತಿಗಳು ಇಬ್ಬರವೂ ಭಿನ್ನವಾಗಿವೆಯೆಂಬದು ಬೇರೆಮಾತು). ಹಿಂದುಸ್ಥಾನದಂತೆಯೇ ತೊಳಲಾಡುತ್ತಿರುವ, ಆಪ್ರಿಕ ಕೇನಿಯಾ ದೇಶಗಳೂ ಮಹಾತ್ಮರ ಹೃದಯದಲ್ಲಿ ಅಷ್ಟೇ ಕಳವಳವನ್ನುಂಟುಮಾಡುತ್ತಿವೆ.

ವಿಶ್ವಪ್ರೇಮದ ಸಾದನೆಗೆ, ಮಹಾತ್ಮರು ಹಿಂದೀಯರರಾದುದರಿಂದ, ಸಹಜವಾಗಿ ಹಿಂದುಸ್ತಾನವೇ ಕರ್ಮಭೂಮಿಯಾಯಿತು. ಹಿಂದುಸ್ತಾನವು, ಸರ್ವಸೌಖ್ಯಸಂಪನ್ನವಾಗಿದ್ದರೆ ಮಹಾತ್ಮಾಜಿಯವರಂಥವರು ಈ ದೇಶವನ್ನು ತೊರೆದು ದುಃಖಿತ ದೇಶಕ್ಕೆ ಹೋಗದಿರುತ್ತಿರಲಿಲ್ಲ. ಇದಕ್ಕೆ. ಸಿ, ಎಫ್, ಆ್ಯಂಡ್ರೂಜ, ಮಿಸ್ ಸ್ಲೇಡ ಮೊದಲಾದವರೇ ಸಾಕ್ಷಿ.

ಮನುಷ್ಯನಿಗೆ, ವೈಯುಕ್ತಿಕವಾಗಿ ಒಂದು ಆತ್ಮಶಕ್ತಿಯಿರುವಂತೆ ರಾಷ್ಟ್ರಕ್ಕೂ ಹಾಗೆಯೆ ಜಗತ್ತಿಗೂ, ಒಂದು ಸಾಮೂಹಿಕವಾದ ಆತ್ಮಶಕ್ತಿಯುಂಟು. ಅದು ವ್ಯಕ್ತಿಶಕ್ತಿಯಿಂದಲೇ ಮೊಳೆದು ಬಂದಿರುವದು. ಮನುಷ್ಯನೊಬ್ಬನಿಗೆ, ಆತ್ಮಪರಿಪಾಕವಾಗಿ, ಜೀವನಪರಿಪೂರ್ಣತೆಯುಂಟಾಗುವದೇ ಕೊನೆಯ ಗುರಿಯಾಗಿರುವಂತೆ, ದೇಶಗಳಿಗೂ ಅದೇ ಕೊನೆಯ ಗುರಿಯಾಗಿದೆ. ಈ ವಿಚಾರದಲ್ಲಿ ವೈಯಕ್ತಿಕ ಆತ್ಮಶಕ್ತಿಗಳಿಗೆ ಹತ್ತುವ ನಿಯಮವೇ ಸಾಮೂಹಿಕವಾದ ರಾಷ್ಟ್ರದ ಆತ್ಮಶಕ್ತಿಗೂ ಅನ್ವಯಿಸುವದು.

ವೈಯಕ್ತಿಕ ಆತ್ಮಪರಿಪಾಕಕ್ಕೆ ತ್ರಿಕರಣಶುದ್ಧಿ, ಇಂದ್ರಿಯದಮನಗಳು ಎಷ್ಟರಮಟ್ಟಿಗೆ ಅವಶ್ಯಕವೋ, ರಾಷ್ಟ್ರದ ಆತ್ಮಪರಿಪಾಕಕ್ಕೂ, ಇವೆರಡು ಮಾತುಗಳು ಅಷ್ಟೇ ಅವಶ್ಯಕ. ಗಾಂಧಿಯವರು ಸಾರ್ವತ್ರಿಕವಾಗಿ ಅಹಿಂಸಾತತ್ವವನ್ನು ಸಾರುವಲ್ಲಿ ಇದೇ ಮಾತನ್ನು ಹೇಳಿರುತ್ತಾರೆ.

'ಹಿಂದುಸ್ತಾನವೀಗ ನಿಷ್ಪ್ರಭವಾಗಿದೆ. ಅದರಲ್ಲಿ ಈಗ ಶಾರೀರಿಕ ಶಕ್ತಿಯಿಲ್ಲ; ಆತ್ಮಶಕ್ತಿಯೂ ಕಳೆಗುಂದುತ್ತ ನಡೆದಿದೆ.' ಎಂಬದನ್ನು ಮೊದಲೇ ಕಂಡು ಹಿಡಿದು ಮಹಾತ್ಮರು. ನಮ್ಮ ಎದುರಾಳಿಗಳಿಗಿಂತ ಹೆಚ್ಚಿನ ಶಾರೀರಿಕ ಬಲವನ್ನು ಗಳಿಸುವದು ನಮಗೆ ಸದ್ಯಕ್ಕೆ ಹೆಚ್ಚು ಕಷ್ಟಕಾರಿಯಾಗಿದೆ. ಅಲ್ಲದೆ, ಆ ಮಾರ್ಗದಿಂದ ಬರುವ ಗೆಲುವಾದರೂ ಬಲುದಿನ ಬಾಳುವಂತಹದಲ್ಲ. ಅದಕ್ಕಾಗಿಯೇ ಮಹಾತ್ಮಾಜಿಯವರು, ಆತ್ಮಶಕ್ತಿಯ ತಪಸ್ಸಿನ ಮೇಲೆ ಹೆಚ್ಚು ಹೊಣೆಯಿಟ್ಟಿರುವರು.

ಇಂಥ ತಪಸ್ಸನ್ನು ಗಾಂಧಿಯವರು ಈ ಎರಡೂ ತಪಗಳಿಂದಲೂ ಸಾಧಿಸುತ್ತಿರುವದು ಜಗವೆಲ್ಲ ಬಲ್ಲಮಾತು. ತಾವು ಗಳಿಸಿದ ತಪಶ್ಶಕ್ತಿಯನ್ನೇ ಮಹಾತ್ಮರು ಈಗ ರಾಷ್ಟ್ರದ ಶ್ವಾಸಕೋಶಗಳಲ್ಲಿ ಊದುತ್ತಿರುವರು. ರಾಷ್ಟ್ರವು ಶಾರೀರಿಕವಾದ ಪಾಶವೀಶಕ್ತಿಯನ್ನು ಮೀರಿನಿಲ್ಲುವಂಥ ಅದ್ಭುತವಾದ ಆತ್ಮಶಕ್ತಿಯನ್ನು ಪಡೆಯಬೇಕೆಂಬುದೇ ಅವರ ಬಯಕೆ. ಅಂಥ ಶಕ್ತಿಯನ್ನು ಪಡೆಯಲು ಅಹಿಂಸಾಮಯವಾದ ಸತ್ಯಾಗ್ರಹವೇ ದಾರಿಯೆಂದು ಅವರ ಧೃಢವಿಶ್ವಾಸ.

ಕಳೆದ ಹತ್ತುವರ್ಷಗಳಿಂದ ರಾಷ್ಟ್ರವೂ, ಮಹಾತ್ಮಾಜಿಯವರೊಡನೆ ತಪಸನ್ನಾಚರಿಸುತ್ತಿದೆಯೆನ್ನಬಹುದು. ಆದರೆ ಆ ಆಚರಣೆಯಲ್ಲಿ ಇನ್ನೂ ಕುಂದು ಕೊರತೆಗಳಿವೆ. ರಾಷ್ಟ್ರವು ತ್ರಿಕರಣಶುದ್ಧಿಯನ್ನು ಪಡೆಯಬೇಕು— ಎಂದರೆ, ಕಾಯೇನ ವಾಚಾಮನಸಾ...ಅಹಿಂಸಾವ್ರತವನ್ನು ಕೈಕೊಳ್ಳಬೇಕು. ಈಗೀಗ ಎಷ್ಟೋ ಜನರು, ಹೊಟ್ಟೆಯಲ್ಲಿ ಬಲವಾದ ಕಿಚ್ಚನ್ನು ಮುಚ್ಚಿಟ್ಟುಕೊಂಡು, ಗಾಂಧಿಯವರ ಮೋರೆನೋಡಿ ಹೇಗೋ ಅಹಿಂಸೆ ಅಹಿಂಸೆಯೆಂದು ಸುಮ್ಮನಿರುವರು. ಅದಾಗದು. ರಾಷ್ಟ್ರವು ಸಂಪೂರ್ಣವಾಗಿ ಇಂದ್ರಿಯನಿಗ್ರಹವನ್ನು ಮಾಡಲು ಕಲಿಯಬೇಕು. ಆಳರಸರು ಎಷ್ಟೋಸಲ ನಮ್ಮನ್ನು ರೊಚ್ಚಿಗೆಬ್ಬಿಸಿ, ಆ ಮೇಲೆ 'ಶಾಂತತಾಭಂಗವಾಯಿತು; ನಿರುಪಾಯರಾಗಿ ಗುಂಡು

ಹಾಕಬೇಕಾಯಿತು' ಎಂದು ಕೊಚ್ಚಿಕೊಳ್ಳುತ್ತಾರೆ. ಸೋಲ್ಲಾಪುರದಲ್ಲಿ, ಲಾಹೋರದಲ್ಲಿ, ಪೇಶಾವರದಲ್ಲಿ ಹೆಚ್ಚುಕಡಿಮೆ ಹೀಗೇ ಆಯಿತು. ಆದರೆ ಇಂಥ ಸಂದರ್ಭಗಳಲ್ಲಿಯೇ ರಾಷ್ಟ್ರವು ಅಪರಿಮಿತವಾದ ಇಂದ್ರಿಯದಮನಶಕ್ತಿಯನ್ನು ತೋರಿಸಬೇಕು. ಆಳರಸರು ಏನೇ ಆದರೂ, ಅನ್ಯಾಯ ಮಾಡದಿರರೆಂಬದು ಸೆರಗಿಗೆ ಗಂಟು ಹಾಕಿದಮಾತು. ಅವರು ತಮ್ಮ ಪಾಶವೀಶಕ್ತಿಯನ್ನು ಪರಮಾವಧಿಗೆ ಮುಟ್ಟಿಸುವರೆಂಬದರಲ್ಲಿ ಸಾಸಿವೆಕಾಳಷ್ಟು ಸಂದೇಹವಿಲ್ಲ. ಆದರೆ ಅಂಥ ಹೊತ್ತಿನಲ್ಲೂ ರಾಷ್ಟ್ರವು ಮಿತಿಮೀರಿದ ಸಾಹಸದಿಂದ ಎಲ್ಲವನ್ನು ತಾಳಿಕೊಳ್ಳಬೇಕು. ತಾಳ್ಮೆ-ದುಃಖ ಸಹನಶಕ್ತಿ-ಯ ಬೆಂಕಿಯಲ್ಲಿ ಆತ್ಮವು ಪುಟಗೊಂಡು ಹೊಸತಾಗಿ ಒಪ್ಪಹಾಕಲ್ಪಡಬೇಕಾಗಿದೆ.

ಈ ಅಹಿಂಸಾಮಯವಾದ ಹೋರಾಟದಲ್ಲಿ, ನಿರ್ಭೀತಿ, ಬುದ್ಧಿಪೂರ್ವಕವಾದ ದುಃಖಸಹಿಷ್ಣುತೆ, ಸ್ವಾರ್ಥತ್ಯಾಗ, ಬಂಧುಭಾವ, ದಯಾಮಾಯೆಗಳೇ ಸಾಧನಸಾಮಗ್ರಿ. ಇದು, ಪಾಶವೀಶಕ್ತಿಯೊಡನೆ ಆತ್ಮಶಕ್ತಿಯು ನಡೆಯಿಸಿದ ಯುದ್ಧ. ಇದರಲ್ಲಿ ಕ್ರೂರತನವಲ್ಲ,-ತಾಳ್ಮೆ; ಹೇಡಿತನವಲ್ಲ-ವೀರರಿಗೊಪ್ಪುವ ಕ್ಷಮೆ ಇವುಗಳೇ ಹುದುವು. ಹೆರರಿಗೆ ಹಿಂಸೆಮಾಡುವದಲ್ಲ, ತಾನು ಸಹಿಸಿಕೊಳ್ಳುವದೇ ಅಹಿಂಸಾವ್ರತಿಯ ಕರ್ತವ್ಯ. ಹಿಂಸೆಯು ಮನುಷ್ಯನನ್ನು ಅಧೋಗತಿಗಿಳಿಯುವದು; ಆತನನ್ನು ಪಶುವನ್ನಾಗಿ ಮಾಡುವದು. ಸಹನೆಯು ಉನ್ನತಿಗೊಯ್ಯುವದು; ಮನುಷ್ಯನನ್ನು ದಿವ್ಯತೇಜಸ್ವಿಯನ್ನಾಗಿ ಮಾಡುವದು. ಹಿಂಸೆಯು ನಮ್ಮ ವಿವೇಕವನ್ನು ಮಸಣಿಸುತ್ತದೆ. ಸಹನೆಯು ನಮ್ಮ ಸದಸದ್ವಿವೇಕಬುದ್ಧಿಯನ್ನು ನಿಚ್ಚಳವಾಗಿ ಎಚ್ಚರಿಸುತ್ತದೆ. ಹಿಂಸೆಗೆ, ಕೈಯಲ್ಲಿದ್ದ ಆಯುಧವೇಬಲ; ಆ ಆಯುಧವಿಲ್ಲದಿದ್ದರೆ ಹಿಂಸಾಮಾರ್ಗಿಯ ಆಟನಡೆಯದು. ಅಹಿಂಸಾವ್ರತಿಗೆ ಆತ್ಮಶಕ್ತಿಯೇಬಲ. ಆತನಿಗೆ ಹೊರಗಿನ ನೆರವು ಬೇಕಿಲ್ಲ. 'ನಮ್ಮಲ್ಲಿ ಶಸ್ತ್ರಾಸ್ತ್ರಗಳಿವೆಯೆಂದು' ಎದೆಯುಬ್ಬಿ ಮಾಡುವದು ಹೆಚ್ಚಿನ ಶೌರ್ಯವಲ್ಲ. ನಿರಾಯುಧರಾಗಿಯೂ, ಗುಂಡಿಗೆದೆಯನ್ನೊಡ್ಡುವಂಥವರು ಹೆಚ್ಚಿನ ಶೂರರು. ಹೀಗೆ ನೋಡಲಾಗಿ, ಹಿಂಸೆಗಿಂತ, ಅಹಿಂಸೆಗೆ ಹೆಚ್ಚು ಧೈರ್ಯವು ಬೇಕು; ಪುಕ್ಕರಿಂದಾಗುವ ಮಾತಲ್ಲವದು.

ಅಂತೆಯೆ, ಅಹಿಂಸಾವ್ರತಿಯ ಮಾರ್ಗವು ದುಸ್ತರವಾಗಿದ್ದರೂ ದೃಢತರವಾಗಿರುವದು. ಆತನ ಸಾಧನೆಯು ನೀರಗುಳ್ಳೆಯಂತೆ ಮರುಗಳಿಗೆ ಮಾಯವಾಗುವದಲ್ಲ. ನೇಪೋಲಿಯನ್ ಸೀಝರ ಮೊದಲಾದವರು ರಾಜ್ಯಕಟ್ಟಿದರು; ಕೆಲವು ದಿನ ಹೌದೆನ್ನಿಸಿಕೊಂಡರು. ಆದರೆ ಈಗೆಲ್ಲಿ ಅವರ ರಾಜ್ಯ! ಕಲಿಯುಗದಲ್ಲಿ ಅವರಿಗೆ ಯಾರು ಸೈಯೆನ್ನಬೇಕು. ಆದರೆ ಇತ್ತ ನೋಡಿರಿ; ಲಾಓಟ್ಸನೂ, ಬುದ್ಧದೇವನೂ, ಕ್ರಿಸ್ತಪ್ರಭುವೂ-ಒಂದೊಂದು ರಾಜ್ಯವನ್ನು ಕಟ್ಟಿದರು. ಸಾವಿರ ಸಾವಿರ ವರ್ಷಗಳಾದವಲ್ಲ! ಈಗಲಾದರೂ ಆ ಮಹಾತ್ಮರು ಕಟ್ಟಿದ ರಾಜ್ಯಗಳು ಎಂದು ಅಳಿಯುವವೆಂದು ಯಾರಾದರೂ ಹೇಳಬಲ್ಲರೆ!

ಅಹಿಂಸಾವ್ರತಿಗೆ ಸತ್ಯವೇ ದೇವರು; ಸಹನವೇ ಸಾಧನ; ಸತ್ಯಾಗ್ರಹವೇ ಆತನ ಆಚಾರ ವಿಚಾರ. ದುಃಖ, ಸಾವುಗಳು ಆತನ ಯೋಚನೆಯ ಮಾತುಗಳಲ್ಲ; ಕಾರ್ಯವೊಂದೇ. ಸತ್ಯಕ್ಕಾಗಿ, ಜಗದ್ಧಿತಕ್ಕಾಗಿ ಬಾಳುವದು ಆತನ ಧ್ಯೇಯ. ಇಂಥ ಆದರ್ಶಪ್ರಾಯವಾದ ಸತ್ಯಾಗ್ರಹದ ಉದಾಹರಣೆಯನ್ನು ನಾವು ಮಹಾತ್ಮಾಪ್ರಹ್ಲಾದನಲ್ಲಿ ಕಾಣಬಹುದು. ಆತ್ಮಶಕ್ತಿಯು ಪಾಶವೀಶಕ್ತಿಗಿಂತ ಎಷ್ಟು ಅಧಿಕಬಲವುಳ್ಳದೆಂಬ ಆದರ್ಶವನ್ನು ಪ್ರಹ್ಲಾದಚರಿತ್ರೆಯು ಜಗತ್ತಿಗೇ ಸಾರುತ್ತಿದೆ. ಸತ್ಯಕ್ಕಾಗಿ ಕೊನೆಯ ವರೆಗೂ ಆಗ್ರಹ, ಎಷ್ಟೇ ಹಿಂಸೆಹೊಂದಿದರೂ ಶಾಂತಿಮಯವಾದ ಸಹನೆ, ಇವುಗಳಿಂದ ಆತನು ತಂದೆಯ ಶಾರೀರಿಕಬಲವನ್ನೆಲ್ಲ ಗಂಡುಮೀರಿದ. ಹಿಂಸೆ ಮನುಷ್ಯನ ಆತ್ಮವು ಹೇಸುತ್ತದೆ. ಅಹಿಂಸೆಯಿಂದ ಪರಿಶುದ್ಧವಾಗುತ್ತದೆ. ರಾಜಾ ಅಶೋಕನೇ ಇದಕ್ಕೆ ಸಾಕ್ಷಿ. ಅಹಿಂಸೆಯು ಆತ್ಮಶುದ್ಧಿಯ ದೀಕ್ಷೆ. ಮಹಾತ್ಮರು ರಾಷ್ಟ್ರದ ಆತ್ಮಕ್ಕೀ ದೀಕ್ಷೆಯನ್ನು ಕೊಟ್ಟಿದ್ದಾರೆ. ಅದರಿಂದ ಅದನ್ನು ಜಾಗೃತಗೊಳಿಸಿದ್ದಾರೆ. ಭಾರತವು ಈಗ ಈ ಆತ್ಮಶುದ್ಧಿಯ ಸಾಧನೆಯನ್ನು ಐವತ್ತು ಪಾಲು ಸಾಧಿಸಿದೆಯೆಂದು ಹೇಳಬಹುದು. ರಾಷ್ಟ್ರಚೈತನ್ಯವೀಗ ಜಾಗೃತವಾಗಿದೆ. ನಮ್ಮ ರಾಷ್ಟ್ರಚೈತನ್ಯವು ವೃದ್ಧಿಗೊಂಡಂತೆ ಆಳರಸರು ತಮ್ಮ ಪಾಶವೀಬಲವನ್ನು ಇಮ್ಮಡಿಸುತ್ತಿದ್ದಾರೆ. ೧೯೩೨ರಲ್ಲಿ ಸೈನ್ಯದ ವೆಚ್ಚ ೪೮ ಕೋಟಿಯಿಂದ ೬೩ಕ್ಕೇರಿತು.

ಆದರೆ, ಅಹಿಂಸಾವ್ರತಿಗಳ ದಾರಿ, ಬೇರೆಯಾಗಿದೆ. ಯಾರು ಬೀಳಬೇಕು ಹಾಳಾಗಬೇಕು ಎಂದು ಅವರು ಬಯಸರು, ಬರೆ ರಾಷ್ಟ್ರಕಲ್ಯಾಣವಲ್ಲ, ಜಗತ್ಕಲ್ಯಾಣವೇ ಅವರ ಕಾರ್ಯ. ಸತ್ಯದ ಬಲವೇ ಮಿಗಿಲಾದುದೆಂದು ಅವರು ಜಗತ್ತಿಗೆ ತಿಳಿಸಬೇಕಾಗಿದೆ. ಇಂದು, ಪ್ರಪಂಚದ ಕಿವಿಯಲ್ಲಿ ಹಿಂದುಸ್ಥಾನವು ಈ ಗಾಯತ್ರಿ ಮಂತ್ರವನ್ನೇ ಒಡನುಡಿಯುತ್ತಿದೆ.

ಭಾರತವು ಈ ಹತ್ತು ವರ್ಷಗಳಲ್ಲಿ ಅಭೂತಪೂರ್ವವಾದ ಆತ್ಮಶಕ್ತಿಯನ್ನು ಪಡೆದಿದೆ. ಮೊನ್ನೆ ಮೊನ್ನೆ ಪೇಶಾವರದಲ್ಲಿ

ಜನರು ನಿಶ್ಶಸ್ತ್ರರಾದರೂ ೫–೬ ಗಂಟೆಗಳಕಾಲ, ಎದೆಯೊಡ್ಡಿ ಗುಂಡುಗಳನ್ನು ಅಪ್ಪಿಕೊಂಡದ್ದು ಸಾಮಾನ್ಯವಲ್ಲ! ಯಾವ ದೇಶವಲ್ಲಿ ಯಾವ ಕಾಲದಲ್ಲಿ ಯಾವ ಜನರಲ್ಲಿ ಇಂಥ ಅಗಾಧವಾದ ಆತ್ಮಶಕ್ತಿಯು ಆವಿಷ್ಕೃತವಾಗಿದೆ! ಆದರೆ ಒಂದು ಪ್ರದೇಶವರವು ಸಾಲದು. ದೇಶಕ್ಕೆ ದೇಶವೇ ಅಂಥ ಬಲವನ್ನು ಪಡೆಯಬೇಕು. ದುಃಖ ಸಹಿಸಬೇಕು; ನೋಯಬೇಕು; ಸಾಯಬೇಕು.

ಈ ವಿಷಯದಲ್ಲಿ, ಎಚ್ಚರಿರಬೇಕಾದ ಮಾತೊಂದಿದೆ. ಕ್ರಿಯೆಗೆ ಪ್ರತಿಕ್ರಿಯೆ ಇರುವದುಂಟು. ಆದರೆ ಅದು ಕ್ರಿಯೆಯ ಅತಿಕ್ರಿಯೆಯಾದಾಗ. ಈ ವೇಳೆಯಲ್ಲಿ ಅಹಿಂಸೆಯ ಪ್ರತಿಕ್ರಿಯೆ ಯುಂಟಾಗದಂತೆ ನೋಡಿಕೊಳ್ಳಬೇಕು. ರಾಷ್ಟ್ರದಲ್ಲಿ ಇಂದ್ರಿಯ ದಮನಶಕ್ತಿಯುಂಟಾದರೆ ಈ ಭಯವಿಲ್ಲ.

ಒಟ್ಟಾರೆ, ಹಿಂದುಸ್ಥಾನವು ಈಗ ಮಾಡಬೇಕಾದುದು ಸಹನೆ; ಪಡಬೇಕಾದುದು ದುಃಖ. ತನ್ನ ಆತ್ಮಶುದ್ಧಿಯನ್ನಲ್ಲದೆ ವೈರಿಗಳ ಆತ್ಮಶುದ್ಧಿಯನ್ನೂ ಮಾಡುವದು ಅವರ ಹೊಣೆ. ಗಾಂಧಿಯವರು ಹೇಳುವಂತೆ— 'This struggle, therefore, is intended to make friends with Englishmen........." —ಈ ಶಾಂತಿಯುದ್ಧದಿಂದ ನಾವು ಸಂಪಾದಿಸಬೇಕಾದುದು ಬ್ರಿಟಿಶರ ಹಗೆತನವನ್ನಲ್ಲ; ಗೆಳೆತನವನ್ನು. ಹಾಗೆಯೇ, ಜಗತ್ತಿನ ಹಿತವೂ ಈ ಶಾಂತಿ ಯುದ್ಧದ ಒಂದು ಗುರಿಯಾಗಿದೆ. ಅದಕ್ಕಾಗಿ ಹಿಂದುಸ್ಥಾನವು ಇಂದು ಕ್ರಿಸ್ತನ ಅವತಾರವನ್ನು ಧರಿಸಬೇಕಾಗಿದೆ– India has got to play Christ

---

## ಮೈಸೂರು ಸಾಗರ

ಚಾಮುಂಡಿ ಬೆಟ್ಟದಡಿ
ಮೈಸೂರು ಸಾಗರವ
ಕಾಣಬಹುದು–ಜನರು
ಕಾಣಬಹುದು
ಪತ್ತನವು ಇರುವೆಡೆಯು
ಕತ್ತಲಿನಲಾಗುವುದು
ಮೇರೆಯಿಲ್ಲ–ಎನುವ
ವಾರಿಧಿಯೊಲು
ನಿಶಿಯೊಡನೆ ಸಾರುವಳು
ಮೈಸೂರು ಸೇರುವಳು
ಕಡಲದೇವಿ–ನೀಲಿ
ಯೊಡಲದೇವಿ
ಸಾಗರದ ಗಾಂಭೀರ್ಯ
ಕಾಗರವಿದೆಂಬಂತೆ
ವಿಶ್ವವಿಲ್ಲಿ–ಇಹುವ
ನಿಶ್ಶಬ್ದದಿ

ವಾರಿಧಿಯೊಳುರುಳುತಿಹ
ಪೇರಲೆಗಳೆನೆ ತೋರಿ
ಬಲಿತಮರಗಳ್–ಸುತ್ತ
ಅಲುಗುತಿಹುವು
ಮೃಗಗಳಾಲಯದಲಿಹ
ಮೃಗಗಳಾ ಬಿರುದನಿಯು
ಸೂಸುತಿಹುದು–ಕಡಲ
ಘೋಷದಂತೆ
ತಲದಲಿಹ ರತುನಗಳು
ಜಲದ ಮೇಲ್ಬಂದುವೆನೆ
ಇಳೆಯ ಜೋತಿ ವ್ರಾತ
ಹೊಳೆಯುತಿಹುದು
ಈ ಪರಿಯ ಕಡಲಿನಿಂ
ನಾ ಪಡೆದ ಹರುಷದಾ
ಕೊನಲು ಹರಿದು–ಅದಕೆ
ಕಾಣ್ಕೆಯಾಯ್ತು

— ಜಿ. ಪಿ. ರಾಜರತ್ನಂ

ಕವಿಸಾಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

( ಕಾದಂಬರಿಯ ಕನ್ನಡ ಅನುವಾದವು )

ಅನುವಾದಕರು— ಶ್ರೀ. ಕೃ. ಶ್ರೀ. ಚಿಟಗೇರಿ, ಬೆಳಗಾಂವ

## ೧೯ನೆಯ ಪರಿಚ್ಛೇದ

ದೇಶವನ್ನು ಬಿಟ್ಟು ಹೊರಡಲು ಅನುಗೊಂಡ ರಘುಪತಿಯನ್ನು ಕಾಪಿನಭಟರು ಕೇಳಿದರು "ಸ್ವಾಮಿಗಳ ಪ್ರಯಾಣವು ಯಾವಕಡೆಗೆ ಆಗಬೇಕು ?"

ರಘುಪತಿಯು ಮಾರುಹೇಳಿದನು "ಪಡುವಲು ಕಡೆಗೆ."

ಒಂಭತ್ತು ದಿನಗಳವರೆಗೆ ಪಡುವಲು ನಿಟ್ಟಿನಲ್ಲಿ ಪಯಣವನ್ನು ಮಾಡುತ್ತ ಸೆರೆಯಾಳೂ ಕಾಪಿನಭಟರೂ ಡಾಕಾ ಪಟ್ಟಣದ ಬಳಿಯಲ್ಲಿ ಸಾರಿದರು. ಅಲ್ಲಿಯೇ ರಘುಪತಿಯನ್ನು ಬಿಟ್ಟು ಕಾಪಿನವರು ಮರಳಿ ರಾಜಧಾನಿಗೆ ಬಂದರು.

ರಘುಪತಿಯು ತನ್ನಲ್ಲಿ ತಾನೇ ಬಗೆದನು. "ಈ ಕಲಿಯುಗದಲ್ಲಿ ಬ್ರಾಹ್ಮಣರ ಶಾಪವು ಫಲಿಸಲಾರದು—ಬ್ರಾಹ್ಮಣರ ಬುದ್ಧಿಯು ಎಷ್ಟೊಂದಿರುವುದೆಂಬುದನ್ನು ತೋರಿಸಿ ಬಿಡುವೆನು. ಗೋವಿಂದ ಮಾಣಿಕ್ಯನ ಅರಸುತನದ ಯೋಗ್ಯತೆಯನ್ನೂ ನನ್ನ ಪುರೋಹಿತತನದ ಯೋಗ್ಯತೆಯನ್ನೂ ಒಮ್ಮೆ ನೋಡಿ ಬಿಡುವೆನು."

ತ್ರಿಪುರ ರಾಜ್ಯದಲ್ಲಿ— ಮಂದಿರದ ಒಂದು ಮೂಲೆಯಲ್ಲಿ ಮೊಗಲ ರಾಜ್ಯದ ವರ್ತಮಾನವು ತಿಳಿಯುವ ಬಗೆಯೆಂತು ? ಆದುದರಿಂದಲೇ ರಘುಪತಿಯೀಗ ಡಾಕಾಪಟ್ಟಣಕ್ಕೆ ಹೋಗಿ ಮೊಗಲರ ರೀತಿನೀತಿಗಳನ್ನೂ ಆಡಳಿತದ ಬಗೆಯನ್ನೂ ಕಂಡು ಕೇಳಬೇಕೆಂದು ಬಯಸಿದನು.

ಅದು ಮೊಗಲ ಸಾರ್ವಭೌಮನಾದ ಷಾಜಹಾನನ ಆಳಿಕೆಯ ಕಾಲವು. ಆತನ ಮೂರನೆಯ ಮಗನಾದ ಔರಂಗಜೇಬನು ಆಗ ತೆಂಕಣನಾಡಿನಲ್ಲಿದ್ದ ವಿಜಾಪುರದ ಕೋಟೆಯನ್ನು ಹಿಡಿಯಲು ಹೊಂಚು ಹಾಕುತ್ತಲಿದ್ದನು. ಎರಡನೆಯ ಮಗನಾದ ಸೂಜಾನು ಬಂಗಾಲಕ್ಕೆ ಅಧಿಪತಿಯಾಗಿದ್ದನು. ರಾಜಮಹಾಲು ಆತನ ರಾಜಧಾನಿಯಾಗಿದ್ದಿತು. ಕೊನೆಯ ಮಗನಾದ ಮುರಾದನು ಗುಜರಾತನ್ನು ಆಳುತ್ತಿದ್ದನು. ಹಿರಿಯವನಾದ ಯುವರಾಜ ದಾರಾನು ರಾಜಧಾನಿಯಾದ ದಿಲ್ಲಿಯಲ್ಲಿಯೇ ಇರುತ್ತಿದ್ದನು. ಸಮ್ರಾಟನಿಗಾಗ ಅರವತ್ತೇಳು ವರುಷದ ವಯಸ್ಸು. ಆತನ ದೇಹದ ಅಸ್ವಾಸ್ಥ್ಯದ ಮೂಲಕ ಸಾಮ್ರಾಜ್ಯದ ಹೊಣೆಯೆಲ್ಲವೂ ಯುವರಾಜನ ತಲೆಯ ಮೇಲೆಯೇ ಬಿದ್ದಿದ್ದಿತು.

ರಘುಪತಿಯು ಕೆಲವು ಕಾಲ ಡಾಕಾಪಟ್ಟಣದಲ್ಲಿಯೇ ವಾಸವಾಗಿದ್ದು ಉರ್ದುಭಾಷೆಯನ್ನು ಚೆನ್ನಾಗಿ ಕಲಿತುಕೊಂಡನು. ಬಳಿಕ ಅವನು ರಾಜಮಹಾಲಿಗೆ ಹೋಗಬೇಕೆಂದು ಹೊರಟನು.

ರಘುಪತಿಯು ರಾಜಮಹಾಲನ್ನು ತಲ್ಪಿದಾಗ ಭರತಖಂಡದಲ್ಲಿ ಎಲ್ಲ ಕಡೆಗೂ ಒಂದು ಗುಲ್ಲು ಎದ್ದುಬಿಟ್ಟಿತು. ಸಮ್ರಾಟ ಷಾಜಹಾನನು ಮೃತ್ಯುಶಯ್ಯೆಯ ಮೇಲೆ ಮಲಗಿರುವನೆಂಬ ವದಂತಿಯು ಎಲ್ಲೆಲ್ಲಿಯೂ ಹರಡಿಕೊಂಡಿದ್ದಿತು. ಈ ಸುದ್ದಿಯು ಕಿವಿಗೆ ಬಿದ್ದೊಡನೆಯೇ ಕುಮಾರ ಸೂಜಾನು ತನ್ನ ಸೈನ್ಯವನ್ನೊಡಗೊಂಡು ದಿಲ್ಲಿಗೆ ಓಡಿಹೋಗಿದ್ದನು. ಸಾವಿನಬಾಗಿಲಲ್ಲಿ ನಿಂತಿರುವ ಸಮ್ರಾಟನ ತಲೆಯ ಮೇಲಣ ರಾಜಮುಕುಟವನ್ನು "ಉಫ್" ಎಂದು ಊದಿ ಹಾರಿಸಿಬಿಡಬೇಕೆಂದು ಆತನ ನಾಲ್ವರು ಮಕ್ಕಳೂ ಹವಣಿಕೆ ಹಾಕುತಲಿದ್ದರು.

ಅರಾಜಕವಾಗಿದ್ದ ರಾಜಮಹಲಿನಲ್ಲಿ ಇರಲು ರಘುಪತಿಯ ಮನಸ್ಸು ಒಪ್ಪಲಿಲ್ಲ. ಸೂಜಾಕುಮಾರನನ್ನು ಹಿಂಬಾಲಿಸಿ ಹೋಗಬೇಕೆಂದು ಯೋಚಿಸಿದನು. ಒಡನಿದ್ದ ಆಳುಹೋಳುಗಳನ್ನೆಲ್ಲ ಮನೆಗೆ ಮರಳಿ ಹೋಗುವುದಕ್ಕೆ ಹೇಳಿದನು. ತನ್ನ ಬಳಿಯಲ್ಲಿದ್ದ ಎರಡು ಲಕ್ಷ ಮುದ್ರಿಕೆಗಳನ್ನು ರಾಜಮಹಾಲಿನ ಬಳಿಯಲ್ಲಿ ಜನರ ಸುಳಿದಾಟವಿಲ್ಲದ ಒಂದು ಪ್ರದೇಶದಲ್ಲಿ ಹೂತಿಟ್ಟನು. ಆತನಿಗೆ ಗುರುತು ಸಿಕ್ಕುವುದಕ್ಕಾಗಿ ಅಲ್ಲಿ ಒಂದು

ಕಲ್ಲನ್ನು ನೆಟ್ಟನು. ಜೊತೆಯಲ್ಲಿ ತೀರ ಸ್ವಲ್ಪ ಹಣವನ್ನು ತೆಗೆದುಕೊಂಡನು. ಉರಿದ ಗುಡಿಸಲುಗಳನ್ನೂ ಹಾಳಾದ ಊರುಗಳನ್ನೂ ಬೀಳಾದ ಬೆಳೆಯ ಹೊಲಗಳನ್ನೂ ನೋಡುತ್ತ, ಸಸೈನ್ಯನಾದ ಸೂಜಾನು ಹೋದ ದಾರಿ ಇದೇ ಎಂದು ಕಂಡುಕೊಂಡು, ರಘುಪತಿಯು ಬಿಡುವಿಲ್ಲದೆ ಬಳಲಿಕೆಯನ್ನು ಬಗೆಗೆ ತಾರದೆ ದಾರಿ ನಡೆಯಲು ತೊಡಗಿದನು. ಅವನು ಆಗ ಸನ್ಯಾಸಿಯ ವೇಷವನ್ನು ತಳೆದಿದ್ದನು. ಆದರೇನು ? ಸನ್ಯಾಸಿಯನ್ನು ಕರೆದು ಆದರಾತಿಥ್ಯವನ್ನು ಮಾಡುವವರಾದರೂ ಯಾರು ಆ ದಾರಿಯಲ್ಲಿ ? ಸೂಜಾನ ಸೈನ್ಯವು ಸಾಗಿಹೋದ ಹಾದಿಯ ಎರಡು ಬದಿಗಳೆಡೆಯಲ್ಲೆಲ್ಲ ಬರಗಾಲವು ಬಾಯ್ದೆರೆದು ನಿಂತಿದ್ದಿತು. ಸೈನ್ಯದಲ್ಲಿಯ ಆನೆ-ಕುದುರೆ ಹೇಸರುಗತ್ತೆ-ಹೊರೆಯೆತ್ತುಗಳಿಗಾಗಿ ಬಲಿಯದಿದ್ದ ಬೆಳೆಯನ್ನೆಲ್ಲ ಕೊಯಿದು ಕೊಯಿದು ಹಾಕಿದ್ದರು. ಒಕ್ಕಲಿಗರ ಪಾಲಿಗೆ ಒಂದು ಕಾಳು ದೊರೆಯದಂತೆ ಮಾಡಿಬಿಟ್ಟದ್ದರು. ಎಲ್ಲೆಲ್ಲಿಯೂ ಹಾಳು ಮಾಡಿದ ಹೊಲಗಳ ಬೇಲಿಗಳು ಬಿದ್ದುಕೊಂಡಿದ್ದುವು. ಸಾಮಾನ್ಯವಾಗಿ ಜನರೆಲ್ಲರೂ ತಮ್ಮ ತಮ್ಮ ಹಳ್ಳಿಗಳನ್ನು ಬಿಟ್ಟು ಓಡಿಹೋಗಿದ್ದರು. ಎಲ್ಲಿಯಾದರೂ ಒಬ್ಬಿಬ್ಬರು ಕಣ್ಣಿಗೆ ಬಿದ್ದರೆ ಅವರ ಮೊಗದ ಮೇಲೆ ನಗೆಯ ಗುರುತೇ ಕಾಣುತಿರಲಿಲ್ಲ. ಎಲ್ಲರೂ ಬೆದರಿದ ಎರಳೆಗಳಂತೆ ಅಸ್ಥಿರರು. ಯಾರನ್ನು ಕಂಡರೂ ಅವರಿಗೆ ಅಪನಂಬುಗೆಯೆ.

ನಿರ್ಜನವಾಗಿರುವ ಆ ಕಾಡುದಾರಿಯ ಪಕ್ಕದ ಮರದಡಿಯಲ್ಲಿ ನಾಲ್ಕಾರು ಜನರು ಗುಂಪಾಗಿ ಕುಳಿತುದು ಅಲ್ಲಲ್ಲಿಯೇ ಕಂಡುಬರುತಿದ್ದಿತು. ಅವರೆಲ್ಲರ ಕೈಯಲ್ಲಿಯೂ ದೊಡ್ಡ ದೊಡ್ಡ ದೊಣ್ಣೆಗಳು. ಹಾದಿಕಾರರನ್ನು ಬೇಟೆಯಾಡಬೇಕೆಂದು ಹೊಂಚುಹಾಕುತ್ತ ದಿನವೆಲ್ಲವೂ ಅವರು ಕಾದು ಕುಳಿತಿರುವರು. ಧೂಮಕೇತುವಿನ ಹಿಂದೆ ಇದ್ದ ಉಲ್ಕಾರಾಶಿಗಳಂತೆ ಈ ಕಳ್ಳರ ತಂಡವು ಸೂಜಾನ ಸೈನ್ಯವನ್ನೇ ಹಿಂಬಾಲಿಸಿರುತ್ತಿದ್ದಿತು. ಸೈನಿಕರು ಸುಲಿದುಕೊಂಡು ಬೇಸತ್ತು ಬಿಟ್ಟುಹೋದುವನ್ನೆಲ್ಲ ಈ ತಂಡದವರು ಸವರಿಕೊಂಡು ಹೋಗುವರು. ಹೆಣವನ್ನು ತಿನ್ನುವುದಕ್ಕಾಗಿ ನಾಯಿ ನರಿಗಳು ತಮ್ಮ ತಮ್ಮಲ್ಲಿಯೆ ಕಚ್ಚಾಡುತಿರುವಂತೆ ನಡುನಡುವೆ ಸೈನಿಕರಿಗೂ ಕಳ್ಳರಿಗೂ ಕಾದಾಟವು ನಡೆಯುತಿದ್ದಿತು.

ಯುವನ ಸೈನಿಕರಿಗೆ ನಿಷ್ಠುರತನವೆಂದರೆ ಒಂದು ನಗೆಯಾಟವಾಗಿ ಹೋಗಿದ್ದಿತು. ದಾರಿಯ ಬದಿಯಲ್ಲಿ ಬರುತಿರುವ ನಿರಪರಾಧಿಗಳಾದ ಹಳ್ಳಿಗರ ಹೊಟ್ಟೆಯಲ್ಲಿ ಕಾರಣವಿಲ್ಲದೆ ತಮ್ಮ ಕೈಗತ್ತಿಯನ್ನು "ಖಸ್" ಎಂದು ಚುಚ್ಚಿಬಿಡುವರು; ಇಲ್ಲವೆ ತಲೆಟೊಪ್ಪಿಗೆ ಸಹಿತವಾಗಿದ್ದ ಅವರ ರುಂಡವನ್ನು ಮುಂಡದಿಂದ ಥಟಕ್ಕನೆ ಬೇರೆಮಾಡಿ ಚೆಲ್ಲುವರು. ಇವೆಲ್ಲವೂ ಸೈನಿಕರ ಸಣ್ಣಪುಟ್ಟ ವಿನೋದಗಳು. ತಮ್ಮನ್ನು ಕಂಡು ಹೆದರಿಕೊಂಡು ಹರಿದೋಡಿ ಹೋಗುತಿರುವ ಹಳ್ಳಿಗರನ್ನು ಕಂಡಾಗ ಸೈನಿಕರಿಗೆ ಹಿಡಿಸಲಾರದಷ್ಟು ಹಿಗ್ಗು. ಮೊದಲು ಸುಲಿಗೆ ಸೂರಾಟದ ಕೆಲಸ; ಬಳಿಕ ಜನರನ್ನು ಹಿಡಿದು ಹಿಂಸಿಸುವ ಕೆಲಸ. ತಾವು ಕೊಡುತಿರುವ ಹಿಂಸೆಯನ್ನು ಸಹಿಸಲಾರದೆ ಅಸಹಾಯರಾದ ಜನರು ತೊಂದರೆಯಿಂದ ಕೂಗಿ ಕಿರುಚುತಿದ್ದರೆ ಸೈನಿಕರಿಗೆ ಬ್ರಹ್ಮಾನಂದ. ಆ ದುರ್ಬಲರ ದುಃಖದ ಕಿರುಚುದನಿಯಲ್ಲಿ ಅವರು ಸುರಲೋಕದ ಸಂಗೀತದ ಸೊಬಗನ್ನು ಕಾಣುತಲಿದ್ದರೇನೋ ! ಸುಶೀಲರಾದ-ಸನ್ಮಾನ್ಯರಾದ ಬ್ರಾಹ್ಮಣರಿಬ್ಬರನ್ನು ಎಳೆದು ತರುವರು. ಬೆನ್ನಿಗೆಬೆನ್ನು ಹೊಂದಿಸಿ ನಿಲ್ಲಿಸಿ ಬಿಗಿದು ಕಟ್ಟುವರು, ಮೂಗು ಬಾಯಿಗಳೆರಡರಲ್ಲಿಯೂ ನಸ್ಯವನ್ನು ತುಂಬುವರು. ಇದೊಂದು ಬಗೆಯ ಚೆನ್ನಾಟವಾಸೈನಿಕರಿಗೆ. ಎರಡು ಕುದುರೆಗಳನ್ನು ಜೊತೆಯಾಗಿ ನಿಲ್ಲಿಸುವರು; ಒಂದೊಂದು ಕುದುರೆಯ ಮೇಲೆ ಒಂದೊಂದು ಕಾಲನ್ನಿಡಿಸಿ ಮೇಲೊಬ್ಬ ಮನುಷ್ಯನನ್ನು ನಿಲ್ಲಿಸುವರು; ಬಳಿಕ ಕುದುರೆಗಳೆರಡನ್ನೂ ಬಲವಾಗಿ ಹೊಡೆದು ಒಂದಕ್ಕೊಂದು ವಿರುದ್ಧವಾದ ದಿಕ್ಕಿಗೆ ಓಡಿಸಿಬಿಡುವರು; ಮೇಲೆ ನಿಂತಿದ್ದವನು ಕೆಳಕ್ಕೆ ಬಿದ್ದು ಕೈಕಾಲು ಮುರಿದುಕೊಂಡು ಸಂಕಟದಿಂದ ಒದ್ದಾಡುತಿದ್ದರೆ ತಾವು ನಕ್ಕು ನಕ್ಕು ನಲಿಯುವರು. ಇದೂ ಒಂದುಬಗೆಯ ಆಟವವರದು. ಇಂದಾಡಿದ ಆಟ ನಾಳಿಗಿಲ್ಲ. ದಿನಕ್ಕೊಂದು ಚೆಂದದ ಆಟಗಳನ್ನವರು ಕಂಡುಹಿಡಿಯುತಲಿರುವರು. ತಣ್ಣಗಿದ್ದ ಹಳ್ಳಿಗಳಿಗೆ ಕೊಳ್ಳಿಯಿಟ್ಟು ಸುಟ್ಟುಬಿಡುವುದೆಂದರೆ ಸೈನಿಕರಿಗೆ ಸಹಜವಾದ ಕೆಲಸ. ಇದರಿಂದವರಿಗೆ ಸವಿಯೂಟ ಉಂಡಷ್ಟು ಸಂತೋಷ.

ಸೈನ್ಯವು ಸಾಗಿಹೋದ ಕಡೆಗಳಲೆಲ್ಲ ಸೈನಿಕರ ಅತ್ಯಾಚಾರದ ಸಾವಿರಾರು ಗುರುತುಗಳು ಕಂಡುಬರುತಲಿದ್ದವು. ಇಂತಹ ಪರಿಸ್ಥಿತಿಯಲ್ಲಿ ರಘುಪತಿಗೆ ಆದರಾತಿಥ್ಯವು ದೊರೆಯಬೇಕೆಲ್ಲಿಂದ ? ಒಂದೊಂದು ದಿನಗಳನ್ನು ಅರೆಹೊಟ್ಟೆಯಿಂದಲೂ ಒಂದೊಂದು ದಿನಗಳನ್ನು ಬರಿಹೊಟ್ಟೆಯಿಂದಲೂ ಕಳೆಯಲು ತೊಡಗಿದನಾತ. ರಘುಪತಿಯು ರಾತ್ರಿಯಲ್ಲಿ ದಾರಿಯಲ್ಲಿ ದೊರೆತ ಹಾಳೂರಿನ ಬೀಳುಮನೆಯೊಂದರಲ್ಲಿ ತಂಗಿಕೊಂಡಿದ್ದನು. ಬೆಳಗಿನಲ್ಲೆದ್ದು ನೋಡಿದನು. ರಾತ್ರಿಯೆಲ್ಲವೂ

ತಾನು ತಲೆಗಿಂಬಾಗಿಟ್ಟುಕೊಂಡುದು ತಲೆಯಿಲ್ಲದ-ಮನುಷ್ಯನ ಮುಂಡವೊಂದು. ಇನ್ನೊಂದು ದಿನ ಮಧ್ಯಾಹ್ನದ ಸಮಯ; ಹಸಿವೆಯಿಂದ ಕಂಗೆಟ್ಟ ರಘುಪತಿಯು ಒಂದು ಮನೆಯೊಳಗೆ ನುಗ್ಗಿದನು. ವಿಚಿತ್ರವಾದ ನೋಟವೊಂದನ್ನು ನೋಡಿದನು. ಮುರಿದುಹೋಗಿದ್ದ ಪೆಟ್ಟಿಗೆಯೊಂದು. ಅದರ ಮೇಲೆ ತಲೆಯಿಟ್ಟುಕೊಂಡು ಮನುಷ್ಯನೊಬ್ಬನು ಕುಳಿತಿದ್ದಾನೆ. ಕಳೆದುಹೋದ ಹಣಕ್ಕಾಗಿ ಅಳುತ್ತಿರುವನೇನೋ! ಎಂಬಂತಿದೆ ಆತನ ಭಂಗಿ. ರಘುಪತಿಯು ಬಳಿಗೆ ಹೋಗಿ ಅವನ ತಲೆಯನ್ನು ಹಿಡಿದು ಮೇಲಕ್ಕೆತ್ತಿದನು. ಕುಳಿತ ಮನುಷ್ಯನು ದಡಕ್ಕೆಂದು ಹಿಂದಕ್ಕೆ ಬಿದ್ದು ಬಿಟ್ಟನು. ನೋಡಿದರೆ ಅಲ್ಲೇನಿದೆ? ಬರೀ ಸತ್ತ ಹೆಣವು. ಜೀವವು ಹೊರಟುಹೋಗಿ ಅದೆಷ್ಟೋ ವೇಳೆಯಾಗಿದ್ದಿತು.

ಇನ್ನೊಂದು ದಿನ ರಾತ್ರಿಯಲ್ಲಿ ರಘುಪತಿಯು ಜನರು ಬಿಟ್ಟು ಹೋಗಿದ್ದ ಹಳ್ಳಿಯ ಮನೆಯೊಂದರಲ್ಲಿ ಮಲಗಿಕೊಂಡಿದ್ದನು. ಬೆಳಗಾಗುವುದಕ್ಕೆ ಇನ್ನೂ ಕೊಂಚಕಾಲವಿದ್ದಿತು. ಆಗ ಮೆಲ್ಲಮೆಲ್ಲಗೆ ಮನೆಯ ಮುಂಬಾಗಿಲು ತೆರೆಯಿತು. ಶರತ್ಕಾಲದ ಬೆಳದಿಂಗಳ ಒಡನೊಡನೆಯೆ ಅನೆಷ್ಟೊ ಪಡಿನೆಳಲುಗಳು ಬಾಗಿಲಬಳಿಯಲ್ಲಿ ಮೂಡಿದವು ಪಿಸುಗುಟ್ಟುತ್ತಿರುವ ಸದ್ದು ಕೇಳಿಸಿತು. ರಘುಪತಿಯು ಒಮ್ಮೆಲೆ ಬೆಚ್ಚಿ ಬೆದರಿ ಬಿದ್ದು ಎದ್ದು ಕುಳಿತನು. ಅವನು ಎದ್ದೊಡನೆಯೆ "ಅಯ್ಯಯ್ಯೋ ಅಮ್ಮಾ" ಎಂಬ-ಗಾಬರಿಗೊಂಡ ಹೆಂಗಸರ ಕೂಗಿನ ದನಿಗಳು ಕೆಲವು ಕಿವಿಗೆ ಬಿದ್ದುವು. ಕೂಡಲೆ ಗಂಡುಸೊಬ್ಬನು ಮುಂದುವರಿದು ಬಂದು ಗಟ್ಟಿಯಾಗಿ ಮಾತಾಡಿದನು. "ಯಾರಲೇ ನೀನು?"

ರಘುಪತಿಯು ಕೇಳಿದನು. "ನಾನೊಬ್ಬ ಬ್ರಾಹ್ಮಣ! ದಾರಿಕಾರ! ನೀವು ಯಾರು?"

"ಈ ಮನೆ ನಮ್ಮದು! ನಾವು ಮನೆಬಿಟ್ಟು ಓಡಿ ಹೋಗಿದ್ದೆವು. ಮೊಗಲರ ಸೈನ್ಯವು ಹೊರಟು ಹೋಯಿತೆಂಬುದನ್ನು ಕೇಳಿ ಈಗ ಮರಳಿ ಬಂದಿರುವೆವು."

ರಘುಪತಿಯು ಕೇಳಿದನು. "ಮೊಗಲರ ಸೈನ್ಯವು ಯಾವ ಕಡೆಗೆ ಹೋಯಿತು?"

ಆತನು ಹೇಳಿದನು. "ವಿಜಯಗಡದ ಕಡೆಗೆ! ಇಷ್ಟರಲ್ಲಿಯೇ ಅದು ವಿಜಯಗಡದ ಕಾಡನ್ನು ಬಳಿಸಾರಿರಬಹುದು."

ರಘುಪತಿಯು ಮತ್ತೊಂದು ಮಾತು ನುಡಿಯದೆ ತಟ್ಟನೆ ಎದ್ದನು. ಹೊರಟು ನಡೆದನು.

---

## ೨೦ನೆಯ ಪರಿಚ್ಛೇದ

ವಿಜಯಗಡದ ಬಳಿಯಲ್ಲಿರುವ ಕಗ್ಗಾಡು ಕಳ್ಳಕಾಕರಿಗೆ ನೆಲೆವೀಡು. ಈ ಕಾಡಿನ ಮಧ್ಯದಲ್ಲಿ ಹಾಯ್ದು ಹೋಗಿರುವ ಹಾದಿಯ ಇಕ್ಕೆಲಗಳಲ್ಲಿಯೂ ಅದೆಷ್ಟೋ ಮನುಷ್ಯರ ಕಂಕಾಲಗಳು ಬಿದ್ದುಕೊಂಡಿರುವವು. ಅವುಗಳ ಮೇಲೆಲ್ಲ ಕಾಡಕುಸುಮಗಳು ಅರಳಿರುವವು. ಇದು ಹಾದಿಯೆಂಬುದಕ್ಕೆ ಇನ್ನಾವ ಗುರುತುಗಳೂ ಇರಲಿಲ್ಲ. ಕಾಡಿನಲ್ಲಿ ಆಲದ ಮರಗಳಿರುವವು; ಜಾಲಿಯ ಮರಗಳಿರುವವು; ಬೇವಿನ ಮರಗಳಿರುವವು; ನೂರಾರು ಬಗೆಯ ಕಾಡುಬಳ್ಳಿಗಳೂ ಕಂಟಕುತ್ತುರುಗಳೂ ಇರುವವು. ಅಲ್ಲಲ್ಲಿಯೇ ಆಳವಾಗಿದ್ದ ಹೊಂಡಗಳೂ ಕೆರೆಗಳೂ ಇದ್ದಂತೆ ಕಂಡುಬರುವವು; ಎಡೆಬಿಡದೆ ಉದುರುತಿರುವ ಮರದೆಲೆಗಳು ಬಿದ್ದು ಬಿದ್ದು ಅವುಗಳಲ್ಲಿಯ ನೀರು ಕೊಳೆತು ನಾರುತಿರುವುದು. ಸಣ್ಣ ಸಣ್ಣ ಸರಿವುಗಳು ಅತ್ತಿತ್ತ ಹೊರಳುತ್ತ ಮರಳುತ್ತ ಹಾವಿನಂತೆ ಕಗ್ಗತ್ತಲೆಯ ಕಾಡನ್ನು ಸೇರಿಕೊಂಡಿರುವವು. ಮರಗಳ ರೆಂಬೆರೆಂಬೆಗಳಲ್ಲಿಯೂ ಕೊಂಬೆಕೊಂಬೆಗಳಲ್ಲಿಯೂ ಮಂಗಗಳ ಬಳಗ. ಆಲದ ಮರಗಳ ನಿಡುಗೊಂಬೆಗಳ ಮೇಲಿಂದ ಕೋಡಿಗ-ಕೋತಿಗಳ ಬಾಲಗಳು ನೂರಾರು ನೇತಾಡುತಿರುವುದು ಕಂಡುಬರುವುದು. ಅಲ್ಲಿದ್ದ ಹಾಳು ಗುಡಿಯೊಂದರ ಅಂಗಳದಲ್ಲಿ ತುಂಬಾ ಹೊನ್ನೆಯ ಮರಗಳು. ಆ ಪ್ರತಿಯೊಂದು ಮರವೂ ಅರಳಿದ ಬಿಳಿಯ ಹೂಗೊಂಚಲುಗಳಿಂದಲೂ ಮಂಗಗಳ ತೆರೆದಬಾಯಿ-ಬಿಳಿಯ ಹಲ್ಲುಗಳಿಂದಲೂ ತುಂಬಿಹೋಗಿರುವುದು. ಸಾಯಂಕಾಲದಲ್ಲಿ ದಟ್ಟತ್ರಾದ ಎಲೆಯ ದೊಡ್ಡ ದೊಡ್ಡ ಮರಗಳಲ್ಲಿ ಎಲೆಗಳ ಮರೆಗೆ ಅವಿತು ಕುಳಿತುಕೊಂಡು ಟೀವಕ್ಕಿಗಳು ಚೀತ್ಕಾರಮಾಡಲು ತೊಡಗಿದರೆ ಕಾಡಿನ ಕಗ್ಗತ್ತಲೆಯು ವಿದೀರ್ಣವಾಗಿಹೋಗುವುದೇನೋ ಎಂದೆನಿಸುವುದು. ಇಂದು ಮೊಗಲರ ಸೈನ್ಯವು ಈ ಕಾಡಿನಲ್ಲಿ ಬಂದು ಸೇರಿರುವುದು. ಗಿಡಮರ ಬಳ್ಳಿ-ಪೊದೆ ಹುಲ್ಲು-ಹಸರುಗಳಿಂದ ತುಂಬಿಕೊಂಡಿದ್ದ ವರ್ತುಲಾಕೃತಿಯಾದ ಈ ಕಾಡು, ಮೊಗಲರ ಸೈನಿಕರೆಂಬ ಗಿಡಗಗಳ ಗುಂಪಿಗೆ ಒಂದು ಗೂಡಾಗಿ ಪರಿಣಮಿಸಿತು. ಸೈನಿಕರ ಸುಳಿವನ್ನು ಕಂಡೊಡನೆಯೆ ಕಾಗೆಗಳು "ಕಾ ಕಾ" ಎಂದು ಕಿರುಚುತ್ತ ಗುಂಪುಗುಂಪಾಗಿ ಎದ್ದು ಬಾನಿನಲ್ಲಿ ಹಾರಾಡಲು ತೊಡಗಿದುವು. ಮರಳಿ ಮರಗಳ ಮೇಲೆ ಬಂದು ಕುಳಿತುಕೊಳ್ಳುವ ಧೈರ್ಯವೇ ಅವುಗಳಿಗಾಗಲಿಲ್ಲದು. ಯಾವ ಬಗೆಯ ಗುಲ್ಲುಗಲಾಟೆಗಳನ್ನೂ ನಡೆಯಿಸಕೂಡದೆಂದು ಸೇನಾಪತಿಯ ಕಟ್ಟಪ್ಪಣೆ. ಹಗಲೆಲ್ಲವೂ ನಡೆದು

ಹಸಿದುಬಂದಿದ್ದ ಸೈನಿಕರು ಕಾಡಿನೊಳಕ್ಕೆ ಬಂದು ಒಣಗಿದ ಕಟ್ಟಿಗೆಗಳನ್ನಾರಿಸಿ ತಂದು ಅಡಿಗೆಗೆ ಆರಂಭಿಸಿದರು. ಅವರಾಗ ತಮ್ಮ ತಮ್ಮಲ್ಲಿಯೆ ಮೆಲ್ಲಗೆ ಮಾತನಾಡಿಕೊಳುತಿದ್ದರು. ಅವರ ಆ ಗುಣುಗುಣಾಟದ ಶಬ್ದವು ಕಾಡಿನಲ್ಲಿ ಹರಡಿಕೊಂಡು ಸಾಯಂಕಾಲದಲ್ಲಿ ಕೂಗಿಟ್ಟಿದ್ದ ಜೀರುಂಡೆಗಳ ಚೀರಾಟವನ್ನು ಮರೆಯಿಸಿಬಿಟ್ಟಿತು. ಮರಗಳಡಿಯಲ್ಲಿ ಕಟ್ಟಿದ್ದ ಕುದುರೆಗಳು ನಡುನಡುವೆ ಹುರುಪಿನಿಂದ ಹೇಕರಿಸುವವು. ಬಲವಾಗಿ ಕಿಳಿರಿಡುವವು. ಆಗ ಕಾಡಿಗೆಕಾಡೇ ಕೂಗಿಟ್ಟಂತೆ ಕಾಣುವುದು. ಹಾಳುಗುಡಿಯ ಪಕ್ಕದಲ್ಲಿ, ಗುಡಿಸಿ ಹಸನುಮಾಡಿದ ಒಂದೆಡೆಯಲ್ಲಿ ಶಹಾಸೂಜಾನ ಬೀಡಾರವಿರುವುದು. ಇನ್ನುಳಿದವರೆಲ್ಲರೂ ಇಂದಿನಿರುಳನ್ನು ಕಾಡಿನ ಮರಗಳ ಕೆಳಗೆ ಮಲಗಿಕೊಂಡೇ ಕಳೆಯಬೇಕು.

ದಣಿವನ್ನು ಎಣಿಸದೆ ದಿನವೆಲ್ಲವೂ ನಡೆದು ರಘುಪತಿಯೂ ಈ ಕಾಡಿನೊಳಕ್ಕೆ ಪ್ರವೇಶಿಸಿದನು; ರಾತ್ರಿಯಾಗಿದ್ದಿತಾಗ. ಸಾಮಾನ್ಯವಾಗಿ ಸೈನಿಕರೆಲ್ಲರೂ ಮಲಗಿಕೊಂಡಿದ್ದರು. ಎಲ್ಲೆಲ್ಲಿಯೂ ಮಾತಿನ ಸುಳಿವಿಲ್ಲ. ಕೆಲವು ಸೈನಿಕರು ಮಾತ್ರ ಮಾತುಕತೆಯಿಲ್ಲದೆ ಕಾವಲಿನ ಕೆಲಸ ಮಾಡುತಲಿದ್ದಾರೆ. ಅಲ್ಲಲ್ಲಿಯೆ ಕೆಲವು ಕಡೆಗೆ ಬೆಂಕಿಯುರಿ ಉರಿಯುತಲಿದೆ. ರಘುಪತಿಯು ಕಾಡನ್ನು ಸೇರಿದೊಡನೆಯೆ ಅವನಿಗೆ ಮೊಗಲಸೈನಿಕರ ನಿದ್ದೆಯ ಗೊರಕೆಗಳ ಶಬ್ದವು ಕೇಳಿಸಿತು. ಕಾಡಿನ ಸಾವಿರಾರು ಮರಗಳು ನಿಡಿದಾದ ತಮ್ಮ ಕೊಂಬೆಗಳನ್ನು ಚಾಚಿಕೊಂಡು ಕಾವಲು ಮಾಡುತಲಿದ್ದುವು. ಕರಿಯ ಗೂಗೆಗಳು ಆಗಲೆ ಹುಟ್ಟಿದ್ದ ತಮ್ಮ ಮರಿಗಳ ಮೇಲೆ ಗರಿಗಳನ್ನು ಹರಡಿ ಮರೆಮಾಡಿ ಕುಳಿತುಕೊಂಡಿರುವಂತೆ ಕಾಡ ಹೊರಕ್ಕೆ ಇರುವ ಹೇರಿರುಳು ಕಾಡಿನೊಳಕ್ಕೆ ಇರುವ ಕಾರಿರುಳ ಮೇಲೆ ಗಟ್ಟಿಯಾಗಿ ಮುಸುಕುಹಾಕಿ ಸುಮ್ಮನೆ ಕುಳಿತುಕೊಂಡಿರುವುದೇನೋ ಎಂದು ಎನಿಸುವಂತಿದ್ದಿತಾನೋಟ. ಕಾಡಿನ ಒಳಗೊಂದು ರಾತ್ರಿಯು ಮುಖವನ್ನು ಮುಚ್ಚಿಕೊಂಡು ಮಲಗಿದ್ದಂತೆಯೂ ಕಾಡಿನ ಹೊರಗೊಂದು ರಾತ್ರಿಯು ಮುಖವನ್ನೆತ್ತಿಕೊಂಡು ಎಚ್ಚತ್ತು ಕುಳಿತಿದ್ದಂತೆಯೂ ತೋರುತಿದ್ದಿತಲ್ಲಿಯ ಬಗೆ. ಅಂದಿನಿರುಳು ರಘುಪತಿಯು ಕಾಡಿನಲ್ಲಿಯೇ ಒಂದೆಡೆಯಲ್ಲಿ ಮಲಗಿಕೊಂಡನು.

ಬೆಳಗಿನ ಸಮಯ; ರಘುಪತಿಯೊಳ್ಳೇ ನಿದ್ದೆಯಭರದಲ್ಲಿರುವನು. ಇದ್ದಕ್ಕಿದ್ದಹಾಗೆಯೇ ಮೈಮೇಲೆ ನಾಲ್ಕೈದು ಏಟುಗಳು ಬಿದ್ದುವು. ರಘುಪತಿಯು ಗಡಬಡಿಸಿ ಎಚ್ಚತ್ತನು. ಎದ್ದು ನೋಡಿದನು. ಗಡ್ಡಮೀಸೆಗಳಿಂದ ಮೋರೆಯೆಲ್ಲವೂ ಮುಚ್ಚಿಹೋಗಿದ್ದ ತುರುಕ ಸೈನಿಕರು ಕೆಲವರು ತಮ್ಮ ಭಾಷೆಯಲ್ಲಿ ಅದೇನೇನೋ ಕೂಗಿ ಕೂಗಿ ಮಾತನಾಡುತ್ತಿದ್ದರು. ಇವರು ತನಗೆ ಬಯ್ಯುತಿರುವರೆಂದು ರಘುಪತಿಯು ಅನುಮಾನಿಸಿದನು. ತಾನೂ ತನ್ನ ಭಾಷೆಯಲ್ಲಿ ಅವರ ಪರಾಮರ್ಶೆಯನ್ನು ಚೆನ್ನಾಗಿ ತೆಗೆದುಕೊಂಡನು. ಮುಯ್ಯಿಗೆ ಮುಯ್ಯನ್ನು ತೀರಿಸಿದನು. ಸೈನಿಕರು ರಘುಪತಿಯ ಕೈಯನ್ನು ಹಿಡಿದು ಎಳೆದಾಡಲು ಮೊದಲು ಮಾಡಿದರು.

“ಇದೇನು ತಮಾಷೆ ನಡೆಯಿಸಿದ್ದೀರೇನು ?” ರಘುಪತಿಯು ಕೆಂಗಣ್ಣಿನಿಂದ ನೋಡುತ್ತ ಬಿರುದನಿಯಲ್ಲಿ ನುಡಿದನು. ಆದರೆ ಸೈನಿಕರ ಆಚರಣೆಯಲ್ಲಿ ತಮಾಷೆಮಾಡುವುದರ ಲಕ್ಷಣವು ಕೊಂಚವಾದರೂ ಕಾಣುತಿರಲಿಲ್ಲ. ಅವರು ನಿರ್ಭೀತಿಯಿಂದ ರಘುಪತಿಯನ್ನು ಸೆಳೆದುಕೊಂಡು ನಡೆದುಬಿಟ್ಟರು.

---

## ೨೧ ನೆಯ ಪರಿಚ್ಛೇದ

ಬೆಟ್ಟದ ಮೇಲೆ ವಿಜಯಗಡವು. ವಿಜಯಗಡದ ಕಾಡು ಕೋಟೆಯ ತೀರ ಬಳಿಬಳಿಯಲ್ಲಿಯೆ ಬಂದು ಕೊನೆಗಂಡಿರುತ್ತದೆ. ಕಾಡಿನೊಳಗಿಂದ ರಘುಪತಿಯು ಹೊರಕ್ಕೆ ಬಂದನು. ಒಮ್ಮೆಲೆ ನೋಡಿದನು. ಎತ್ತರವಾದ ಕಲ್ಲಿನ ಕೋಟೆಯು ಆಗಸಕೆ ಆಧಾರವಾಗಿ ನಿಂತುಗೊಂಡಿದೆ. ಕಾಡು ತನ್ನಲ್ಲಿದ್ದ ಸಾವಿರಾರು ಗಿಡಗಳ ಗುಂಪುಗಳಲ್ಲಿ ಅಡಗಿ ಹೋಗಿದ್ದಂತೆಯೆ ಕೋಟೆಯು ತನ್ನ ದೊಡ್ಡ ದೊಡ್ಡ ಬಂಡೆಗಳಲ್ಲಿ ಹುದುಗಿ ನಿಂತಿರುವುದು. ಅರಣ್ಯವು ಸಾವಧಾನವಾಗಿದ್ದಂತಿದೆ. ದುರ್ಗವು ಬೆದರಿ ಬೆರಗು ವಟ್ಟಂತಿದೆ. ಕಾಡು ಹೊಟ್ಟೆ ತುಂಬಿದ ಹುಲಿಯಂತೆ ಮುಂಗಾಲೂರಿ ಬಾಲವನ್ನು ಅಲ್ಲಾಡಿಸುತ್ತ ಬಿದ್ದುಕೊಂಡಿದೆ. ಕೋಟೆಯು ಕೆರಳಿದ ಸಿಂಹದಂತೆ ನಿಮಿರದ ನವಿರಿನಿಂದ ಮೈಮುರಿದು ಕೊಳ್ಳುತ್ತ ಎದ್ದುನಿಂತಿದೆ. ಕಾಡು ನೆಲಕ್ಕೆ ಕಿವಿಯಾನಿಸಿ ಏನನ್ನೊ ಕೇಳುತ್ತಲಿದೆ. ಕೋಟೆಯು ಮುಗಿಲಿನತ್ತ ಮೊಗವನ್ನೆತ್ತುತ್ತಲಿದೆ.

ರಘುಪತಿಯು ಕಾಡಿನಲ್ಲಿಂದ ಹೊರಕ್ಕೆ ಬಂದೊಡನೆಯೆ ಕೋಟೆಯ ಮೇಲೆ ಕಾವಲಿಗಿದ್ದ ಸೈನಿಕರು ಬೆಚ್ಚಿ ಬೆರಗುಗೊಂಡು ಎದ್ದುನಿಂತರು. ಕೊಂಬುಗಳು ಕೂಗಿದುವು. ಕೋಟೆಯು ಒಮಿಂದೊಮ್ಮೆ ಸಿಂಹನಾದವನ್ನು ಮಾಡಿ ಅವಡುಗಚ್ಚಿ ಹುಬ್ಬುಗಂಟುಹಾಕಿ ಎದ್ದುನಿಂತಿತೇನೋ! ಎಂಬಂತೆ ಕಂಡಿತು. ರಘುಪತಿಯು ತನ್ನ ಜನಿವಾರವನ್ನು ತೋರಿಸಿದನು; ಕೈಯನ್ನೆತ್ತಿ ಏನೇನೋ ಸನ್ನೆಮಾಡಿದನು. ಸೈನಿಕರು ಹಾಗೆಯೇ ನಿಂತು

ಕೊಂಡೇ ಇದ್ದರು. ರಘುಪತಿಯು ತೀರ ಕೋಟೆಯ ಹತ್ತಿರಕ್ಕೆ ಬಂದನು. ಆಗ ಸೈನಿಕರು ಆತುರದಿಂದ ಕೇಳಿದರು. "ಯಾರು ನೀನು ?"

ರಘುಪತಿಯು ಹೇಳಿದನು "ನಾನೊಬ್ಬ ಬ್ರಾಹ್ಮಣನು, ಅತಿಥಿಯಾಗಿ ಬಂದಿರುವೆನು."

ದುರ್ಗಾಧಿಪತಿಯಾದ ವಿಕ್ರಮಸಿಂಹನು ತುಂಬಾ ಧರ್ಮಿಷ್ಠನು. ದೇವಬ್ರಾಹ್ಮಣರಲ್ಲಿಯೂ ಅತಿಥಿಗಳಲ್ಲಿಯೂ ಆತನದು ಬಲು ಭಕ್ತಿ. ಜನಿವಾರವನ್ನು ತೋರಿಸಿ ಬಿಟ್ಟರೆ ಸಾಕು; ದುರ್ಗದೊಳಕ್ಕೆ ಪ್ರವೇಶಿಸಲು ಇನ್ನಾವ ಗುರುತುಗಳೂ ಬೇಕಾಗಿರಲಿಲ್ಲ. ಆದರೆ ಈಗಿನ ಇಂತಹ ಯುದ್ಧದ ಸಮಯದಲ್ಲಿ ತಾವೇನು ಮಾಡಬೇಕೆಂಬುದು ಸೈನಿಕರಿಗೆ ಬಗೆಹರಿಯದ ಮಾತಾಯಿತು.

ರಘುಪತಿಯು ಹೇಳಿಕೊಂಡನು "ನನಗೆ ನೀವೀಗ ಆಶ್ರಯ ಕೊಡದಿದ್ದಲ್ಲಿ ಮಹಮ್ಮದೀಯರಿಂದ ನೀವೇ ನನ್ನನ್ನು ಕೊಲ್ಲಿಸಿದಂತಾಗುವುದು."

ಈ ವರ್ತಮಾನವು ವಿಕ್ರಮಸಿಂಹನ ಕಿವಿಗೆ ಬಂದು ನಿಲುಕಿತು. ಕೂಡಲೆ ಆತನು 'ಬ್ರಾಹ್ಮಣನಿಗೆ ಕೋಟೆಯಲ್ಲಿ ಆಸರೆ ಕೊಡಬೇಕು' ಎಂದು ಅನುಮತಿಯಿತ್ತನು. ಕೋಟೆಯ ಮೇಲಿಂದ ಏಣಿಯೊಂದನ್ನು ಕೆಳಕ್ಕೆ ಬಿಟ್ಟಾಯಿತು. ರಘುಪತಿಯು ಹತ್ತಿಹೋಗಿ ಕೋಟೆಯೊಳಕ್ಕೆ ಪ್ರವೇಶಿಸಿದನು.

ಕಾಳಗವು ನಡೆಯಬಹುದೇನೋ ಎಂಬ ಯೋಚನೆಯಿಂದ ಕೋಟೆಯೊಳಗಿನ ಜನರೆಲ್ಲರೂ ಅಸ್ಥಿರರಾಗಿ ಹೋಗಿದ್ದರು. ಮುದುಕನಾದ "ಕಾಕಾಸಾಹೇಬ"ನು ರಘುಪತಿಯ ಆದರೋಪಚಾರದ ಭಾರವನ್ನು ತಾನೇ ವಹಿಸಿಕೊಂಡನು. ಆತನ ನಿಜವಾದ ಹೆಸರು ಖಡ್ಗಸಿಂಹನೆಂದಿದ್ದಿತು; ಆದರೆ ಆತನನ್ನು ಕೆಲವರು "ಕಾಕಾ ಸಾಹೇಬ"ಎಂದು ಕರೆಯುವರು. ಇನ್ನು ಕೆಲವರು "ಸುಭೇದಾರ ಸಾಹೇಬ" ಎಂದು ಕರೆಯುವರು. ಜನರು ಹೀಗೇತಕ್ಕಾಗಿ ಕರೆಯುತಿದ್ದರೋ ತಿಳಿಯದು. ಪ್ರಪಂಚದಲ್ಲಿ ಆತನಿಗೆ ಅಣ್ಣತಮ್ಮಂದಿರ ಮಕ್ಕಳುಗಳಿರಲಿಲ್ಲ. ಅಣ್ಣತಮ್ಮಂದಿರೂ ಇರಲಿಲ್ಲ. "ಕಾಕಾಸಾಹೇಬ" ಎಂದು ಕರೆಯಿಸಿಕೊಳ್ಳುವ ಅಧಿಕಾರವು ಅವನಿಗೆ ಈಗಲೂ ಇರಲಿಲ್ಲ. ಮುಂದೆ ಎಂದಾದರೂ ದೊರೆಯುವ ಸಂಭವವೂ ಇರಲಿಲ್ಲ. ಅಣ್ಣತಮ್ಮಂದಿರ ಮಕ್ಕಳಿದ್ದ ರೀತಿಯಲ್ಲಿಯೇ ಆ ಸುಭೇದಾರ ಸಾಹೇಬನ ಸುಭೆಯಿದ್ದಿತು; ಆದರೆ ಇದುವರೆಗೂ ಆತನ ಉಪಾಧಿಗಳ ವಿಷಯದಲ್ಲಿ ಎಂದೂ ಯಾರೂ ತೊಂದರೆಯನ್ನು ತಂದೊಡ್ಡಿಲ್ಲ; ಸಂದೇಹವನ್ನು ಮುಂದೆ ಮಾಡಿಲ್ಲ. ಅಣ್ಣತಮ್ಮಂದಿರ ಮಕ್ಕಳಿಲ್ಲದ ಕಾಕಾಸಾಹೇಬನಿಗೂ ಸುಭೆಯಿಲ್ಲದ ಸುಭೇದಾರಸಾಹೇಬನಿಗೂ ಸಂಸಾರದ ಅನಿತ್ಯತೆಯ ಆಶಂಕೆಯೂ ಲಕ್ಷ್ಮಿಯ ಚಾಂಚಲ್ಯದ ಹೆದರಿಕೆಯೂ ಏನನ್ನು ಮಾಡಬಲ್ಲವು!

ಕಾಕಾಸಾಹೇಬನು ಬಂದು "ಓಹೋ ಈತನು ನಿಜವಾದ ಬ್ರಾಹ್ಮಣೋತ್ತಮನು" ಎಂದು ನುಡಿದು ತುಂಬಾ ಭಕ್ತಿಯುಕ್ತನಾಗಿ ನಮಸ್ಕರಿಸಿದನು. ರಘುಪತಿಯ ಆಕೃತಿಯು ತೇಜಸ್ವಿಯಾದ ಒಂದು ದೀಪದ ಕುಡಿಯಂತಿದ್ದಿತು. ಅದನ್ನು ನೋಡಿದವರೆಲ್ಲರೂ ಪತಂಗಗಳಂತೆ ಮುಗ್ಧರಾಗಿ ಹೋಗುತ್ತಿದ್ದರು.

ಜಗತ್ತಿನಲ್ಲಿ ನಡೆಯುತ್ತಲಿದ್ದ ಶೋಚನೀಯ ಅವಸ್ಥೆಗಾಗಿ ವಿಷಾದಗೊಂಡವನಾಗಿ ಕಾಕಾಸಾಹೇಬನು ಮಾತನಾಡಿದನು "ಸ್ವಾಮೀ ಈಗಿನ ಕಾಲದಲ್ಲಿ ಬ್ರಾಹ್ಮಣರು ಎಷ್ಟು ಜನ ಸಿಕ್ಕಬಹುದು."

ರಘುಪತಿಯೆಂದನು "ಎಲ್ಲಿಯೋ ತೀರಕೊಂಚ ಜನ!"

ಕಾಕಾ ಸಾಹೇಬನು ನುಡಿದನು "ಮೊದಲು ಬ್ರಾಹ್ಮಣರ ಮುಖದಲ್ಲಿ ಅಗ್ನಿಯಿದ್ದಿತು. ಈಗ ಆ ಅಗ್ನಿಯೆಲ್ಲವೂ ಬ್ರಾಹ್ಮಣರ ಹೊಟ್ಟೆಯಲ್ಲಿ ಸೇರಿಕೊಂಡಿದೆ."

ರಘುಪತಿಯೆಂದನು "ಅದೇನೊ ಮೊದಲಿನಿಂದಲೂ ಇಷ್ಟುತೆಯೇ ಇದೆ.

ಕಾಕಾ ಸಾಹೇಬನು ತಲೆದೂಗಿ ಮಾತನಾಡಿದನು. "ಅಹುದು ಸರಿಯಾದ ಮಾತು" ಅಗಸ್ತ್ಯಋಷಿಯು ಅಷ್ಟೊಂದು ನೀರನ್ನು ಕುಡಿದು ಬಿಟ್ಟನಲ್ಲಾ! ನೀರಿನ ಅಳತೆಗೆ ಸರಿಯಾಗಿಯೇ ಆಹಾ... ವನ್ನೂ ಅವನು ತಿನ್ನುತ್ತಿದ್ದನೆಂದು ತಿಳಿದುಕೊಂಡರೆ ತಪ್ಪು ದರೂ ಏನು ?"

ರಘುಪತಿಯೆಂದನು "ಮತ್ತೆ ಬೇರೆ ಉದಾಹರಣೆಗಳೂ ಉಂಟು."

ಕಾಕಾ ಸಾಹೇಬ "ಸರಿ ! ಇರದೇ ಏನು! ಜಹ್ನು ಮುನಿಯ ನೀರಡಿಕೆಯ ಕಥೆಯನ್ನೂ ಕೇಳಿರುವೆನು; ಆದರೆ ಆತನ ಹಸಿವೆಯ ವಿಷಯದ ಕಥೆಯನ್ನು ಎಲ್ಲಿಯೂ ಬರೆದುದ ಕಾಣೆ. ಆದರೂ ಅನುಮಾನದಿಂದ ನಾವು ತಿಳಿದುಕೊಳ್ಳ ಬಹುದು. ಹಸುರೆಲೆಗಳನ್ನವನು ತಿನ್ನುತ್ತಿದ್ದನಂತೆ. ಆದರೆ ಅದನ್ನೇನು ಸ್ವಲ್ಪವೇ ತಿನ್ನುತ್ತಿದ್ದನೆಂದೇನೂ ಅಲ್ಲ! ದಿನಾಲು ಆತನು ಎಷ್ಟೊಂದು ಹಸುರೆಲೆಯನ್ನು ತಿನ್ನುತ್ತಿದ್ದನೆಂಬುದರ ಲೆಕ್ಕವು ತಮಗೆ ಗೊತ್ತಿದ್ದರೆ ಅದನ್ನು ನನಗೆ ಕೊಂಚ ತಿಳಿಸು ಸುವಿರಾ? "

ರಘುಪತಿಯು ಬ್ರಾಹ್ಮಣರ ಮಹಾತ್ಮ್ಯವನ್ನು ನೆನೆದು ಗಂಭೀರಭಾವದಿಂದ ನುಡಿದನು. "ಇಲ್ಲ ಇಲ್ಲ! ಮೊದಲಿನವರು ಆಹಾರದ ವಿಷಯವಾಗಿ ಅಷ್ಟೊಂದು ಲಕ್ಷ್ಯವನ್ನೇ ಕೊಡುತ್ತಿರಲಿಲ್ಲ"

ಕಾಕಾಸಾಹೇಬನು ನಾಲಗೆಯನ್ನು ಕಚ್ಚಿಕೊಂಡು ನುಡಿದನು. " ರಾಮ! ರಾಮ! ಇದೇನು ಮಾತು ಸ್ವಾಮೀ! ಮೊದಲಿನ ಬ್ರಾಹ್ಮಣರ ಜಠರಾವಲಯವು ವಿಶೇಷವಾಗಿ ಪ್ರದೀಪ್ತವಿದ್ದಿತಾದರೂ ಅದಕ್ಕೆ ವಿಶಿಷ್ಟವಾದುದೊಂದು ಅಳತೆಯಿರಬಹುದು! ಸ್ವಾಮಿಗಳಿಗೆ ಗೊತ್ತಿಲ್ಲದ ವಿಷಯವೇ? ಈಗ ನೋಡಿ! ದಿನಗಳು ಕಳೆವಂತಿಲ್ಲ ಆ ಎಲ್ಲ ಅಗ್ನಿಯೂ ನಂದಿ ಹೋಯಿತು. ಹೋಮದ ಅಗ್ನಿಯು ಕೂಡ ಕಾಣದಾಯಿತು. ಆದರೆ......"

ರಘುಪತಿಯು ನಸುನೊಂದವನಾಗಿ ಮಾತನಾಡಿದನು. " ಹೋಮದ ಅಗ್ನಿಯು ಹೇಗೆ ಕಾಣಬೇಕು? ದೇಶದಲ್ಲಿ ತುಪ್ಪವು ಸಿಕ್ಕುವುದೇ? ಪಾಖಂಡಿಗಳು ಬಂದು ಹಸುಗಳನ್ನೆಲ್ಲ ನುಂಗಿ ನೀರುಕುಡಿಯುತಿರುವರಲ್ಲ! ಈಗ ಹವಿಸ್ಸನ್ನು ದೊರಕಿಸಬೇಕೆಲ್ಲಿಂದ? ಹೋಮಾಗ್ನಿಯು ಕಾಣದೆ ಹೋದ ಮೇಲೆ ಇನ್ನು ಬ್ರಹ್ಮತೇಜಸ್ಸು ಅದೆಷ್ಟು ದಿನ ಉಳಿದೀತು!" ಎಂದು ನುಡಿದು ರಘುಪತಿಯು ತನ್ನಲ್ಲಿ ಹುದುಗಿಕೊಂಡಿದ್ದ ಕಿಚ್ಚಿನ ಕಾವನ್ನು ಅನುಭವಿಸಲು ತೊಡಗಿದನು.

ಕಾಕಾಸಾಹೇಬನು ಹೇಳಿದನು " ಸ್ವಾಮಿಗಳ ಮಾತು ಹತ್ತುಸಲ ನಿಜ! ಹಸುಗಳು ಸತ್ತುಹೋಗಿ ಈಗ ಮನುಷ್ಯ ಲೋಕದಲ್ಲಿ ಹುಟ್ಟುತಿರುವವು. ಆದರೆ ಅವುಗಳಿಂದ ತುಪ್ಪವು ಸಿಕ್ಕಬಹುದೆಂದು ಆಶೆಪಟ್ಟುಕೊಂಡರೆ ನಡೆಯುವಂತಿಲ್ಲ! ಏತಕ್ಕೆ ಎಂದು ಕೇಳುವಿರೋ! ಹೈನದ ಅಭಾವವೇ ಎಲ್ಲೆಲ್ಲಿಯೂ ತುಂಬಿಹೋಗಿದೆಯಲ್ಲವೇ? ಹೋಗಲಿಬಿಡಿ! ಸ್ವಾಮಿಗಳವರು ಯಾವ ಕಡೆಯಿಂದ ದಯುವಾಡಿಸಿದಾರೆ?"

ರಘುಪತಿ ಹೇಳಿದನು " ತ್ರಿಪುರದೇಶದ ಅರಮನೆಯಿಂದ."

ವಿಜಯುಗಡದ ಹೊರಕ್ಕಿರುವ ಭರತಖಂಡದ ಭೌಗೋಲಿಕ-ಐತಿಹಾಸಿಕ ಜ್ಞಾನವು ಕಾಕಾಸಾಹೇಬನಿಗೆ ಅಷ್ಟಕ್ಕಷ್ಟೇ ಇದ್ದಿತು. ಭರತಖಂಡವೆಂದು ತಿಳಿದುಕೊಳ್ಳಬಹುದಾದ ಭೂಭಾಗವು ವಿಜಯುಗಡವನ್ನು ಬಿಟ್ಟು ಇನ್ನೂ ಕೆಲವು ಇರಬಹುದೆಂದು ಆತನ ಮನಸ್ಸು ನಂಬುತಿರಲೇ ಇಲ್ಲ. ಏನೇನೋ ಯೋಚನೆ ಮಾಡಿ ಕೊನೆಗೆ ಅನುಮಾನದಲ್ಲಿಯೆ ಇದ್ದುಕೊಂಡವನಾಗಿ ಮಾತನಾಡಿದನು. " ಸರಿ! ತ್ರಿಪುರದ ದೊರೆಯು ಹೆಸರಾದವನಲ್ಲವೇ?"

ರಘುಪತಿಯು ಆ ಮಾತಿಗೆ ತನ್ನ ಸಂಪೂರ್ಣ ಸಮ್ಮತಿಯನ್ನು ಕೊಟ್ಟನು.

ಕಾಕಾಸಾಹೇಬ:— " ಸ್ವಾಮಿಗಳ ಉದ್ಯೋಗವೇನು?"

ರಘುಪತಿ :— " ನಾನು ತ್ರಿಪುರದ ದೊರೆಯ ಪುರೋಹಿತನು"

ಕಾಕಾಸಾಹೇಬನು ಕಣ್ಣುಮುಚ್ಚಿ ಕೈಮುಗಿದು ತಲೆಬಾಗಿ " ಆಹಾ!" ಎಂದು ನುಡಿದನು. ಆತನ ಭಕ್ತಿವಿಶ್ವಾಸಗಳು ರಘುಪತಿಯಲ್ಲಿ ಹೆಚ್ಚಾಗಲು ತೊಡಗಿದ್ದುವು. " ಏತಕ್ಕಾಗಿ ಸ್ವಾಮಿಗಳು ದಯುಮಾಡಿಸುವುದಾಗಿದೆ?"

ರಜುಪತಿಯೆಂದನು " ತೀರ್ಥಾಟನೆಗಾಗಿ!"

ಒಮ್ಮೆಲೆ ಗಲಾಟೆಯಾದ ಗುಲ್ಲು ಕೇಳಿಸಿತು. ಹಗೆಗಳು ಕೋಟೆಯನ್ನು ಮುತ್ತಿಗೆ ಹಾಕಿದುದರಿಂದ ಉಂಟಾದ ಸೊಲ್ಲದು. ಕಾಕಾಸಾಹೇಬನು ಕೊಂಚ ನಕ್ಕು ಕಣ್ಣುಗಳನ್ನು ನಸುವೇಳೆ ಮುಚ್ಚಿ ಮಾತನಾಡಿದನು. " ಓ ಇದೇ! ಏನೂ ಇಲ್ಲ. ಎಲ್ಲವೂ ಸರಿಹೋಗುವುದು." ವಿಜಯುಗಡದ ವಿಷಯವಾಗಿ ಕಾಕಾಸಾಹೇಬನ ವಿಶ್ವಾಸವು ದೃಢವಾಗಿದ್ದಷ್ಟು ಆ ಕೋಟೆಯ ಬಂಡೆಗಲ್ಲುಗಳಾದರೂ ದೃಢವಾಗಿದ್ದುವೋ! ಪರದೇಶದ ಪಥಿಕರಾದರೂ ಊರೊಳಗೆ ಬಂದರೆ ಕಾಕಾಸಾಹೇಬನು ಕೂಡಲೆ ಅವರ ಮೇಲೆ ತನ್ನ ಅಧಿಕಾರವನ್ನು ಕೂಡಿಸಿ ಬಿಡುತ್ತಿದ್ದನು. ವಿಜಯುಗಡದ ಮಹಾತ್ಮ್ಯವು ಅವರ ಬಗೆಯಲ್ಲಿ ಬೇರೂರುವಂತೆ ಮಾಡುತ್ತಿದ್ದನು. ಇಂದಂತೂ ತ್ರಿಪುರದ ಅರಮನೆಯಿಂದ ರಘುಪತಿಯು ಬಂದಿರುವನು. ಇಂತಹ ಸತ್ಪಾತ್ರನಾದ ಅತಿಥಿಯು ಕಾಕಾಸಾಹೇಬನಿಗೆ ಹಿಂದೆ ಎಂದೆಂದೂ ಸಿಕ್ಕಿರಲಿಲ್ಲ. ಇಂದು ಆತನಿಗೆ ಹಿಡಿಸಲಾರದಷ್ಟು ಹಿಗ್ಗು. ವಿಜಯುಗಡದ ಪುರಾತನತ್ವದ ವಿಷಯದಲ್ಲಿ ಅತಿಥಿಯೊಡನೆ ಮಾತನಾಡಲು ತೊಡಗಿದನು. " ನೋಡಿ! ಬ್ರಹ್ಮನ ಅಂಡವೂ ಈ ವಿಜಯುಗಡದ ಕೋಟೆಯೂ ಪ್ರಾಯಶಃ ಒಂದೇಕಾಲದಲ್ಲಿ ಉತ್ಪನ್ನವಾಗಿರಬಹುದು. ಮತ್ತೇನೆನ್ನುವಿರೊ? ಮನು ಮಹಾರಾಜನು ಆಗಿ ಹೋದನಲ್ಲ! ಅವನಿಂದ ಎರಡನೆಯ ದೊರೆಯ ಕಡೆಯಿಂದಲೇ ನಮ್ಮ ವಿಕ್ರಮಸಿಂಹ ಮಹಾರಾಜರ ಮೊಮ್ಮಲಿಗರು ಈ ಕೋಟೆಯ ಆಧಿಪತ್ಯವನ್ನು ವಹಿಸಿರಬಹುದು. ಇದರಲ್ಲೇನೂ ಸಂಶಯವೇ ಇಲ್ಲ."

ವಿಜಯುಗಡಕ್ಕೆ ಸಾಕ್ಷಾತ್ ಶಂಕರನ ವರಪ್ರದಾನವಿದ್ದುದೂ ಕಾರ್ತವೀರ್ಯಾರ್ಜುನನು ಇಲ್ಲಿ ಸೆರೆಯಾಳಾಗಿ ಇರುತ್ತಿದ್ದನೆಂಬುದೂ ರಘುಪತಿಗೆ ಗೊತ್ತಾಗದೆ ಹೋಗಲಿಲ್ಲ.

" ಹಗೆಗಳು ಕೋಟೆಗೆ ಯಾವಹಾನಿಯನ್ನೂ ಮಾಡಲಾರದೆ ಹೋದರೆಂದೂ, ಅವರ ಬಳಿಯಲ್ಲಿ ಸಿಡಿಗುಂಡುಗಳಿದ್ದರೂ

ಹಾರಿಸಿದ ಗುಂಡುಗಳು ಕೋಟೆಯವರೆಗೆ ಬಂದು ತಲುಪಲೇ ಇಲ್ಲವೆಂದು ಸಾಯಂಕಾಲಕ್ಕೆ ಸುದ್ದಿಯು ಗೊತ್ತಾಯಿತು. ಅದನ್ನು ಕೇಳಿದೊಡನೆಯೇ ಕಾಕಾಸಾಹೇನು ಹೆಮ್ಮೆಯ ನಗೆ ನಕ್ಕು ಅರಳಿದ ಕಣ್ಣುಗಳಿಂದ ರಘುಪತಿಯನ್ನು ನೋಡತೊಡಗಿದನು. ಕೋಟೆಗೆ ಇರುವ ಅಮೋಘವಾದ ಶಂಕರನ ವರ ಪ್ರಸಾದಕ್ಕೆ ಇದೊಂದು ಪ್ರತ್ಯಕ್ಷ ಪ್ರಮಾಣವು. ಇದಕ್ಕೂ ಹೆಚ್ಚಿಗೆ ಇನ್ನೇನು ಬೇಕು ! " ಎಂಬುದಾನಗೆಯ ಒಳಗುಟ್ಟು. ನಂದೀಶ್ವರನು ತಾನಾಗಿಯೇ ಬಂದು, ಹಾರಿಸಿದ ಗುಂಡುಗಳನ್ನೆಲ್ಲ ಹಾಗೆಯೆ ಎದುರಿಸಿಕೊಂಡು ಹೋಗಿರಬಹುದೆಂದೂ, ಕೈಲಾಸದಲ್ಲಿ ಗಣಪತಿ ಕಾರ್ತಿಕೇಯರು ಆ ಗುಂಡುಗಳಿಂದ ಗೋಲಿಯಾಟವನ್ನಾಡುತಿರಬಹುದೆಂದೂ ಕಾಕಾಸಾಹೇಬನು ಭಾವಿಸಿಕೊಂಡನು.

---

## ೨೨ ನೆಯ ಪರಿಚ್ಛೇದ

ಹೇಗಾದರೂ ಮಾಡಿ ಶಹಾಸೂಜನನ್ನಷ್ಟು ತನ್ನ ಕೈಯೊಳಗೆ ತೆಗೆದುಕೊಂಡು ಬಿಡಬೇಕೆಂದು ರಘುಪತಿಯ ಒಳಬಯಕೆ. ಸೂಜಾನು ಕೋಟೆಗೆ ಮುತ್ತಿಗೆ ಹಾಕಲಿರುವೆನೆಂದು ಕೇಳಿದೊಡನೆಯೇ ಅವನು "ಮಿತ್ರಭಾವದಿಂದ ಹೇಗಾದರೂ ಕೋಟೆಯೊಳಕ್ಕೆ ಸೇರಿ ತನ್ನಿಂದಾದಷ್ಟುಮಟ್ಟಿಗೆ ಸೂಜಾನ ಮುತ್ತಿಗೆಗೆ ನೆರವಾಗಬೇಕೆಂದು ಯೋಚಿಸಿದನು. ಆದರೆ ಆ ಬ್ರಾಹ್ಮಣನು ಕಾಗದ ಸುದ್ದಿಯನ್ನೇ ಅರಿಯದವನು. ಸೂಜಾನಿಗೆ ಸಹಾಯ ಮಾಡಬೇಕಾದರೆ ತಾನೇನು ಮಾಡಬೇಕು, ಎಂಬುದು ಅವನಿಗೆ ಬಗೆಹರಿಯದ ಮಾತಾಯಿತು.

ಮರುದಿನ ಮತ್ತೆ ಕದನಕ್ಕೆ ಮೊದಲಾಯಿತು. ಹಗೆಗಳು ಸುರಂಗವನ್ನು ಹಾಕಿ ಕೋಟೆಯ ಕೆಲವು ಭಾಗವನ್ನು ಹಾರಿಸಿಬಿಟ್ಟರು; ಆದರೆ ಮೇಲಿಂದ ಸುರಿಯುತ್ತಿರುವ ಗುಂಡುಗಳ ಬಿರುಮಳೆಯಿಂದ ಕೋಟೆಯಲ್ಲಿ ನುಗ್ಗುವುದು ಸೈನಿಕರಿಗೆ ಅಸಾಧ್ಯವಾಗಿದ್ದಿತು. ಒಡೆದು ಹೋಗಿದ್ದ ಕೋಟೆಯ ಭಾಗವನ್ನು ಕೂಡಲೆ ಸರಿಗೊಳಿಸಿಯೂ ಆಯಿತು. ಆದರೆ ಇಂದು ಸಿಡಿಗುಂಡುಗಳು ಒಂದೊಂದಾಗಿ ಕೋಟೆಯೊಳಕ್ಕೆ ಬಂದು ಬೀಳಲು ತೊಡಗಿದುವು. ಮೂವರು ನಾಲ್ವರಂತೆ ಕೋಟೆಯ ಕಾಪಿನ ಸೈನಿಕರು ಸಾಯಲೂ ತೊಡಗಿದರು. ಹಲವರು ಗಾಯವನ್ನೂ ಹೊಂದಿದರು.

"ಸ್ವಾಮೀ ಇದಕ್ಕೆ ಹೆದರಿಕೊಳ್ಳಬೇಕಾದ ಕಾರಣವೇ ಇಲ್ಲ. ನೋಡುತ್ತಿರಿ ! ಇದೆಲ್ಲವೂ ಬರಿ ಒಂದು ಆಟವಾಗಿ ಹೋಗುವುದು" ಎಂದು ನುಡಿದು ಕಾಕಾಸಾಹೇಬನು ರಘುಪತಿಯನ್ನು ಜೊತೆಗೆ ಕರೆದುಕೊಂಡು ಕೋಟೆಯ ಎಲ್ಲ ಕಡೆಗಳನ್ನು ತೋರಿಸುತ್ತ ತಿರುಗಾಡಲು ಮೊದಲು ಮಾಡಿದನು. ಇದು ಆಯುಧಶಾಲೆ, ಇಲ್ಲಿ ಬೊಕ್ಕಸದಮನೆ, ಇತ್ತಕಡೆಗೆ ಗಾಯಾಳುಗಳನ್ನು ಉಪಚರಿಸುವ ಬೀಡು, ಇದೇ ಸೆರೆಮನೆ, ಈ ಕಟ್ಟೆಯದಿದು ಓಲಗಸಾಲೆ ಎಂದು ಎಲ್ಲವನ್ನೂ ಬೇರೆ ಬೇರೆಯಾಗಿ ಬಣ್ಣಿಸಿ ಹೇಳುತ್ತ ತೋರಿಸುತಲಿದ್ದನು. ಮತ್ತೆಮತ್ತೆ ರಘುಪತಿಯ ಮೊಗದಕಡೆಗೆ ಹೆಮ್ಮೆಯ ನೋಟದಿಂದ ನೋಡುತ್ತಿದ್ದನು. ಆಗ ರಘುಪತಿಯು ಮಾತನಾಡಿದನು. "ಅದ್ಭುತವಾದ ಕೆಲಸವಿದು, ಅಬ್ಬಾ ! ನಮ್ಮ ತ್ರಿಪುರದ ಕೋಟೆಯು ಇದರ ಜೊತೆಗೇನೂ ನಿಲ್ಲಲಾರದು. ಎಲ್ಲವೂ ಸರಿಹೋಯಿತು; ನೋಡಿ ! ನಮ್ಮ ತ್ರಿಪುರದ ಕೋಟೆಯಲ್ಲಿ ಗುಟ್ಟಾಗಿ ಹೋಗಿ ಬರುವುದಕ್ಕೆ ಸುರಂಗದ ದಾರಿಯಿದೆ. ಅದೊಂದು ಮಾತ್ರ ಇಲ್ಲಿ ಇದ್ದಂತೆ ಕಾಣುವದಿಲ್ಲ."

ಕಾಕಾಸಾಹೇಬನು ಏನನೋ ಮಾತನಾಡಬೇಕೆಂದಿದ್ದನು. ಅಷ್ಟರಲ್ಲಿಯೇ ಮನಸ್ಸನ್ನು ಕೊಂಚ ತಡೆಹಿಡಿದು ಹೇಳಿದನು. "ಇಲ್ಲ ! ಈ ಕೋಟೆಯಲ್ಲಿ ಅಂತಹದೇನೂ ಇಲ್ಲ."

ರಘುಪತಿಯು ತುಂಬಾ ಬೆರಗುಗೊಂಡವನಾಗಿ ನುಡಿದನು. "ಇಷ್ಟೊಂದು ದೊಡ್ಡದಾದ ಕೋಟೆಯಲ್ಲಿ ಒಂದೂ ಸುರಂಗದ ದಾರಿಯಿಲ್ಲವೆಂದರೆ ಇದೇನು ಮಾತಿದು !"

ಕಾಕಾಸಾಹೇಬನು ಕೊಂಚ ಒಗಲುಬಿದ್ದವನಾಗಿ ಹೇಳಿದನು. "ಇಲ್ಲ ಸ್ವಾಮೀ ! ನಿಜವಾಗಿಯೂ ಇದ್ದುದಾದರೆ ನಮಗೆ ಯಾರಿಗೂ ಗೊತ್ತಿಲ್ಲದೆ ಹೋಗಬಹುದೇ !"

ರಘುಪತಿಯು ನಕ್ಕು ನುಡಿದನು. "ಹೋಗಲಿ ಬಿಡಿ ! ಇದ್ದರೆ ನಿಮಗೆ ಗೊತ್ತಾಗದೆ ಹೋಗುತಿದ್ದಿತೇ ?"

ಕಾಕಾಸಾಹೇಬನು ಗಂಭೀರಭಾವದಿಂದ ನಸುಹೊಳೆ ಸುಮ್ಮನೆ ಇದ್ದನು. ಬಳಿಕ "ರಾ...ಮ ರಾ...ಮಾ" ಎಂದು ಮೈ ಮುರಿದು ಆಕಳಿಸಿದನು. ಬೆರಳಿನಿಂದ ಚಿಟಿಕೆ ಬಾರಿಸಿದನು. ಬಾಯಿ ವಾಯು ಮುಖದ ಮೇಲೆಯೂ ಮೀಸೆ ಗಡ್ಡಗಳ ಮೇಲೆಯೂ ಕೈಯನ್ನಾಡಿಸಿಕೊಂಡನು. ಹೇಳಲು ತೊಡಗಿದನು. "ಕೇಳಿ ! ಸ್ವಾಮೀ ! ತಾವು ಯಾವಾಗಲೂ ಪೂಜೆ ಅರ್ಚನೆಗಳಲ್ಲಿಯೇ ಆಸಕ್ತರಾಗಿರುವವರು. ತಮಗೆ ಹೇಳುವುದರಲ್ಲಿ ದೋಷವೇನೂ ಇಲ್ಲ. ಕೋಟೆಯಲ್ಲಿ ಬರುವುದಕ್ಕೂ ಕೋಟೆಯ ಹೊರಕ್ಕೆ ಹೋಗುವುದಕ್ಕೂ ಒಂದೆರಡು ಗುಟ್ಟಾದ ದಾರಿಗಳು

ನವು. ಆದರೆ ಬೇರೆ ಕಡೆಗಳಿಂದ ಬಂದವರಾರಿಗೂ ಅವುಗಳನ್ನು ತೋರಿಸಕೂಡದೆಂದು ಕಟ್ಟಪ್ಪಣೆಯಿದೆ."

ರಘುಪತಿಯು ಸಂದೇಹಸ್ವರದಲ್ಲಿ ನುಡಿದನು "ಹೀಗೇನು? ಇರಬಹುದು ಬಿಡಿ."

ಕಾಕಾಸಾಹೇಬನು ಹಾಗೆಯೇ ಕೊಂಚ ಕಾಲ ಯೋಚಿಸಿದನು. ಮೊದಲು ಒಂದು ಸಲ "ಇಲ್ಲ" ಎಂದು ಹೇಳಿ ಆ ಮೇಲೆ "ಇದೆ" ಎಂದು ಹೇಳಿದರೆ ಜನರ ಮನಸ್ಸಿನಲ್ಲಿ ಸಂದೇಹವುಂಟಾಗುವುದು ಸಹಜ ಎಂದುಕೊಂಡನು. ಇನ್ನೊಂದು ವಿಶೇಷವೇನೆಂದರೆ ವಿಜಯಗಡವು ತ್ರಿಪುರದ ಕೋಟೆಗಿಂತ ಒಂದು ಮಾತಿನಲ್ಲಿ ಕಡಿಮೆಯಾಗಿದೆಯೆಂಬುದು ವಿದೇಶೀಯನಾದ ರಘುಪತಿಯ ಕಣ್ಣಿಗೆ ಕಾಣಬಾರದೆಂದು ಕಾಕಾಸಾಹೇಬನ ಬಗೆಯ ಬಯಕೆ. ರಘುಪತಿಯು ಹೀಗೆಯೇ ಭಾವಿಸಿರಬಹುದೆಂದು ಆತನು ಕಳವಳಗೊಂಡುಹೋದನು.

ಕಾಕಾಸಾಹೇಬ:— "ಸ್ವಾಮೀ! ತಮ್ಮ ತ್ರಿಪುರವು ಇಲ್ಲಿಂದ ಅದೆಷ್ಟೋ ದೂರದಲ್ಲಿದೆ; ಅಲ್ಲದೆ ತಾವೋ ಬ್ರಾಹ್ಮಣರು; ಕೇವಲ ದೇವರ ಸೇವೆಯೊಂದೇ ತಮ್ಮ ಮುಖ್ಯ ಕಾರ್ಯವಾಗಿದೆ. ತಮಗೆ ಅದನ್ನು ತೋರಿಸಿದರೆ ಗುಟ್ಟು ಹೊರಕ್ಕೆಬೀಳುವ ಸಂಭವವೇ ಇಲ್ಲ."

ರಘುಪತಿಯೆಂದನು. "ನನಗೇತಕ್ಕೆ ಬೇಕದು! ನನ್ನಲ್ಲಿ ತಮಗೆ ಸಂದೇಹವಿದ್ದಲ್ಲಿ ಅಂತಹ ಯಾವ ಮಾತುಗಳನ್ನೂ ನನ್ನೆದುರಿಗೆ ಹೇಳಬೇಡಿ! ನಾವೋ ಹೇಳಿಕೇಳಿ ಬಡ ಬ್ರಾಹ್ಮಣರು; ಕೋಟೆಯ ಸುದ್ದಿಯನ್ನೆಲ್ಲ ತೆಗೆದುಕೊಂಡು ನಮಗೇನಾಗಬೇಕಾಗಿದೆ!"

ಕಾಕಾಸಾಹೇಬನು ನಾಲಿಗೆಕಚ್ಚಿಕೊಂಡು ಮಾತನಾಡಿದನು. "ರಾಮ ರಾಮ! ಅಯ್ಯೋ! ಏನು ಸ್ವಾಮೀ ಇನ್ನು ಮೇಲೆಯೂ ತಮ್ಮಲ್ಲಿ ಸಂದೇಹಪಡುವುದೆಂದರೇನು? ಬನ್ನಿ ಅವುಗಳನ್ನೂ ಒಂದು ಸಲ ತೋರಿಸಿಕೊಂಡು ಬರುತ್ತೇನೆ"

ಇತ್ತ ಕೋಟೆಯ ಹೊರಗೆ ಮೊಗಲಾಯರ ಸೇನೆಯಲ್ಲಿ ಒಮ್ಮಿಂದೊಮ್ಮೆ ವಿಶೃಂಖಲತೆಯುಂಟಾಗಿಬಿಟ್ಟಿದ್ದಿತು. ಸೂಜಾನ ಶಿಬಿರವು ಕಾಡಿನ ನಡುವಿದ್ದಿತಲ್ಲವೆ! ಸುಲೇಮಾನ್‌ಖಾನನ ಸೈನ್ಯವೂ ಜಯಸಿಂಹನ ಸೈನ್ಯವೂ ಬಂದು ಪಾಳೆಯದ ಮೇಲೆ ಬಿದ್ದು ಸೂಜಾನನ್ನು ಸೆರೆಹಿಡಿದುಬಿಟ್ಟುವು. ಹಾಗೆಯೆ ಮುಂದುವರಿದು ಬಂದು ಕೋಟೆಯನ್ನು ಮುತ್ತಿಕೊಂಡಿದ್ದ ಸೈನ್ಯದ ಮೇಲೆ ಬಿದ್ದುವು. ಸೂಜಾನ ಸೈನಿಕರು ಕಾಳಗವನ್ನು ಮಾಡದೆ ಫಿರಂಗಿಗಳನ್ನೆಲ್ಲ ಹಿಂದೆ ಚೆಲ್ಲಿಕೊಟ್ಟು ಸೋಲನ್ನು ಒಪ್ಪಿದರು.

ದುರ್ಗದಲ್ಲಿಂದು ತುಂಬಾ ಗೊಂದಣವೇ ಗೊಂದಣ. ಸುಲೇಮಾನಖಾನನ ದೂತನೊಬ್ಬನು ವಿಕ್ರಮಸಿಂಹನಬಳಿಗೆ ಬಂದನು. ಕೂಡಲೆ ಕೋಟೆಯ ಬಾಗಿಲುಗಳು ತೆರೆದುವು. ಸುಲೇಮಾನ್ ಖಾನ್—ಜಯಸಿಂಹರನ್ನು ವಿಕ್ರಮಸಿಂಹರು ತಾನೇ ಹೋಗಿ ಎದುರುಗೊಂಡು ಕರೆದುಕೊಂಡು ಬಂದನು. ಡಿಲ್ಲೀಶ್ವರನ ಆನೆ—ಕುದುರೆ—ಕಾಲಾಳುಗಳಿಂದ ಕೋಟೆಯೆಲ್ಲವೂ ಕಿಕ್ಕಿರಿದು ಹೋಯಿತು. ಮೊಗಲ ಸಾಮ್ರಾಜ್ಯದ ಬಾವುಟಗಳು ಹಾರಾಡಲು ತೊಡಗಿದುವು. ಕಹಳೆ—ಕೊಂಬು—ಭೇರಿ—ದುಂದುಭಿ ಮೊದಲಾದ ರಣವಾದ್ಯಗಳು ಮೊರೆಯಲಾರಂಭಿಸಿದುವು. ಕಾಕಾಸಾಹೇಬನ ಬಿಳಿಯ ಕಲ್ಲಿನಮೀಸೆಗಳ ಕೆಳಗೆ ನಗೆಮಲ್ಲಿಗೆಯು ಸಂಪೂರ್ಣವಾಗಿ ಅರಳಿ ನಲಿದಾಡುತ್ತಲಿದ್ದಿತು.

---

## ಇರುಳಿಗೆ ಸಾವಿರ ಕಣ್ಣು

( ಇಂಗ್ಲೀಷದಿಂದ ಭಾಷಾಂತರಿಸಿದ್ದು )

ಶ್ರೀ. ಕೃಷ್ಣ ಕುಮಾರ ಕಲ್ಲೂರ

೧

ಇರುಳಿಗೆ ಸಾವಿರ ಕಂಣು
ಹಗಲಿಗೆ ಒಂದೇ ಒಂದು;
ಆದರು ಸೂರ್ಯನು ಮುಳುಗೆ
ಲೋಕದಲೆಲ್ಲಾ ಕತ್ತಲೆಕಾಳ್ಗ.

೨

ಮನಸಿಗು ಸಾವಿರ ಕಂಣು
ಹೃದಯಕೆ ಒಂದೇ ಒಂದು;
ಆದರೆ ಪ್ರೇಮವು ಅಳಿಯೆ
ಬಾಳಿನ ಬೆಳಕೇ ಮರೆಯಾಗುವದು.

—F. W. Bourdillon

# ಪರದೇಶಗಳ ರಾಜಕೀಯ ಚಟುವಟಿಕೆಗಳು

ಬರೆದವರು—ಕುಡವ ಲಕ್ಷ್ಮಣರಾಯರು. B. A., B. L. ಕಾರ್ಕಳ.

೪ ತಿಂಗಳ ಲಾಗಾಯ್ತು ಲಂಡನಿನಲ್ಲಿ ಜರಗಿದ ನೌಕಾಸೈನ್ಯದ ಸಭೆಯು ಇತ್ತೀಚೆಗೆ ಮುಗಿಯಿತು. ಪರಿಷತ್ತಿನ ಮುಂದೆ (೧) ಇಂಗ್ಲಾಂಡಿಗೂ ಅಮೇರಿಕಕ್ಕೂ ಚಿಲ್ಲರೆ ಸಹಾಯಕ ನೌಕಾ ಹಡಗಗಳ ವಿಷಯದ ವಿವಾದ. (೨) ಫ್ರೆಂಚರ ನೌಕಾ ಸೈನ್ಯಕ್ಕೂ ಇತಲಿಯ ನೌಕಾ ಸೈನ್ಯಕ್ಕೂ ಇರತಕ್ಕ ಸಂಬಂಧ. (೩) ಸಬ್ ಮೆರ್‍ಯಾನ್ (Submarine) ಎಂಬ ನೀರೊಳಗೆ ಇದ್ದು ಯುದ್ಧಮಾಡುವ ಹಡಗವನ್ನು ನೌಕಾಯುದ್ಧದಲ್ಲಿ ಉಪಯೋಗಮಾಡಬಾರದೆಂಬ ನಿರ್ಣಯ. (೪) ನೌಕಾಹಡಗ ಗಳನ್ನು ಇನ್ನು ಹೆಚ್ಚಿಗೆ ಕಟ್ಟುವದು—ಇವೇ ಮೊದಲಾದ ವಿಷಯಗಳು ಚರ್ಚೆಗೆ ಇಡಲ್ಪಟ್ಟವು.

ಈ ರಾಜ್ಯದ ಜನರೊಳಗಿರುವ ಪರಸ್ಪರ ಅಪನಂಬಿಕೆಗಳ ಸಂಬಂಧ ನೌಕಸೈನ್ಯದ ಪರಿಷತ್ತಿನ ಮುಂದೆ ಇದ್ದ ಯಾವ ದೊಂದು ನಿರ್ಣಯವು ಮಂಜೂರಾಗಲಿಲ್ಲ. ಫ್ರೆಂಚರು ನೌಕಾ ಸೈನ್ಯದ ಬಲವನ್ನು (೧) ಪ್ರತಿ ಒಂದು ರಾಜ್ಯದ ವಿಸ್ತೀರ್ಣ (೨) ಕರಾವಳಿಯ ವಿಸ್ತೀರ್ಣ (೩) ಆ ರಾಜ್ಯಕ್ಕೆ ಇರತಕ್ಕ ಪರ ರಾಜ್ಯಗಳ ವ್ಯಾಪಾರ (೪) ರಾಜ್ಯದೊಳಗೆ ಇರತಕ್ಕ ಆಮದುರಪ್ತಾಗುವ ಮಾರ್ಗಗಳು (೫) ಸಮುದ್ರದ ಮೇಲೆ ಹೋಗುವ ವ್ಯಾಪಾರದ ಮೌಲ್ಯ ಇವುಗಳ ಮೇಲೆ ಅವಲಂಬಿಸಿ ನೌಕಸೈನ್ಯವನ್ನಿಡಬೇಕೆಂಬ ಸೂಚನೆಯಿಟ್ಟರು. ಈ ರೀತಿ ಲೆಖ್ಖ ಮಾಡಿದ್ದಲ್ಲಿ ಸರಾಸರಿಯಲ್ಲಿ ಇಂಗ್ಲಾಂಡಿನ ಹಡಗ ಪಡೆಯು ೧೦ ಆದರೆ, ಅಮೇರಿಕಕ್ಕೆ ೪.೨, ಫ್ರಾನ್ಸಿಗೆ ೩ ಜಪಾ ನಿಗೆ ೧.೬, ಇತಲಿಗೆ ೧ ಹೀಗೆ ನೌಕಾಸೈನ್ಯವಿರಬೇಕಾಯಿತು. ಇತಲಿಯು ತಾನು ಫ್ರೆಂಚ ರಾಜ್ಯಕ್ಕೆ ಸರಿಸಮಾನವೆಂಬ ಭಾವನೆ ಯಿಂದ ಇದಕ್ಕೆ ಒಡಂಬಡಲಿಲ್ಲ.

ಸಬ್‌ಮೆರ್‍ಯಾನ (Submarine) ಹಡಗುಗಳನ್ನು ಕಡಿಮೆ ಮಾಡುವದರೆ ಫ್ರೆಂಚರಿಗೆ ಕಬೂಲಿಯಿರುವದಿಲ್ಲ. ಇಂಗ್ಲಾಂಡಿನ ಮತ್ತು ಅಮೇರಿಕದ ಪರಸ್ಪರ ಮೈತ್ರಿಯು ತನಗೆ ಅಪಾಯ ಕರವೆಂಬದಾಗಿ ಫ್ರೆಂಚರಲ್ಲಿ ಭಾವನೆ ನೆಲೆಗೊಂಡಿತು. ಅಮೇರಿಕ ದ ಹಡಗಗಳಪಡೆಯು ೧೯ಕ್ಕನೇ ಪಾಲಿನ ಸೈನ್ಯವು ತನಗೆ ಅಗತ್ಯ ವೆಂಬದಾಗಿ ಜಪಾನು ಅಭಿಪ್ರಾಯಪಟ್ಟಿತು. ಅದಕ್ಕೆ ಅಮೇ ರಿಕ ಒಡಂಬಡಲಿಲ್ಲ. ಇತಲಿಯು ಕಟ್ಟಕಡೆಗೆ ಈ ಸಭೆಯ ನಿರ್ಣಯಗಳಿಗೆ ಉದಾಸೀನತೆಯನ್ನು ತೋರಿಸಿತು.

ಈ ರೀತಿ ಸಭೆಯು ಯಾವ ನಿರ್ಣಯವನ್ನು ಮಂಜೂರು ಮಾಡಲಿಲ್ಲ. ನಮ್ಮ ಬ್ರಿಟಿಶ ಮಂತ್ರಿಗಳ ಪ್ರಯತ್ನವು ಈ ರೀತಿ ನಿಷ್ಫಲವಾದರೂ ಇಂಗ್ಲಾಂಡಿಗೂ ಅಮೇರಿಕಕ್ಕೂ ಜಪಾನ ದೇಶಕ್ಕೂ ಪರಸ್ಪರ ಒಂದು ಒಪ್ಪಂದವಾಗಿಯದೆ. ಬ್ರಿಟಿಶ ಮಂತ್ರಿ ಮೆಕ್ಡೊನಾಲ್ಡರು ಪಾರ್ಲಮೆಂಟಿನಲ್ಲಿ ಇದೇ ಮೇ ೧೬ರಲ್ಲಿ ಕೊಟ್ಟ ಭಾಷಣದಲ್ಲಿ ಒಪ್ಪಂದದ ಸಂಬಂಧ ಬ್ರಿಟಿಶ ಭಂಡಾರಕ್ಕೆ ೧೫ ಮಿಲಿಯ ಪವನಿನ ಮುನಾ ಉಂಟೆಂತಲೂ ಇನ್ನು ೨ ರಾಜ್ಯಗಳು ಈ ಒಪ್ಪಂದಕ್ಕೆ ಸೇರುವ ಸಂಭವ ಉಂಟೆಂತಲೂ ನೌಕಾ ಹಡಗಗಳನ್ನು ಹೊಸತಾಗಿ ಕಟ್ಟುವ ಈ ಪರಸ್ಪರ ಕಾದಾಟವನ್ನು ನಾವು ನಿಲ್ಲಿಸಿದ್ದೇವೆಂತಲೂ ನೌಕಾ ಸೈನ್ಯವನ್ನು ಕಡಿಮೆ ಮಾಡುವದರೆ ೩ ರಾಜ್ಯದವರು ಒಪ್ಪಿರುವದ ರಿಂದ ಬೇರೆ ರಾಜ್ಯದವರು ಈ ಮಾದರಿಯನ್ನು ಅನುಸರಿಸಿ ಆ ರೀತಿ ನಡೆಯುವ ಸಂದರ್ಭ ಉಂಟೆಂತಲೂ ಹೇಳಿರುವರು.

ಈ ಲೇಖನವನ್ನು ಬರೆಯುತ್ತಿರುವಾಗ್ಯೆ ನಮ್ಮ ಲೇಬರ ಪಾರ್ಟಿಯಲ್ಲಿದ್ದ (Oswald Mosaley) ಮೊಸ್ಲೆ ಎಂಬ ವರು ತಮ್ಮ ಮಂತ್ರಿತ್ವಕ್ಕೆ ರಾಜಿ ಕೊಟ್ಟಿರುವರು. ವಿಲಾಯತಿ ಯಲ್ಲಿ ಈಗ ಜೀವನಮಾಡುವದಕ್ಕೆ ಕೆಲಸವಿಲ್ಲದೆಯಿರುವ ಕೂಲಿ ಜನರಿಗೆ ತಮ್ಮ ಜೀವನಮಾಡಲು ಯಾವ ವಿಲೆವಾರಿ ಮಾಡಬೇಕೆಂಬದರ ವಿಷಯ ಚರ್ಚೆನಡೆಯುತ್ತಿರುವದು. ಈ ವಿಷಯ ಭಿನ್ನಾಭಿಪ್ರಾಯಗಳು ಉಂಟು. ನಮ್ಮ ಹಿಂದು ದೇಶದ ಚಳವಳದ ನಿವಾರಣೆಯ ವಿಷಯ ಲೇಬರ್ ಪಾರ್ಟಿಯಲ್ಲಿ ಭಿನ್ನಾಭಿಪ್ರಾಯಗಳಿರುವವು. ಫೆನ್ನರ್ ಬ್ರೊಕ್ವೆ (Fenner Brockway) ಮೊದಲಾದವರಿಗೆ ಇಂಡಿಯಾ ದೇಶಕ್ಕೆ ಸಾಮಂತ ಸ್ವರಾಜ್ಯವನ್ನು ೧೦ ವರುಷಗಳೊಳಗೆ ಕೊಡಬೇ ಕೆಂಬ ಅಭಿಪ್ರಾಯವಿರುವಹಾಗೆ ತೋರುವದು. ಕವಿವರ್ಯ ರವಿಂದ್ರರೂ ಮಾನ್ಯ ಶ್ರೀನಿವಾಸಶಾಸ್ತ್ರಿಗಳೂ ಇಂಡಿಯಾ ದೇಶಕ್ಕೆ ಕೈಲಾದಷ್ಟು ಬೇಗನೆ ಸಾಮಂತ ಸ್ವರಾಜ್ಯವನ್ನು ಕೊಡುವದು ಅಗತ್ಯವೆಂತ ಭಾಷಣವನ್ನು ಈ ತಿಂಗಳಲ್ಲಿ ಪಾರ್ಲಮೆಂಟು ಮೆಂಬರರಿಗೆ ಕೊಟ್ಟಿರುವರು. ಕೊನೆಸ್ ವೆಲ್ತ ಲೀಗ ಎಂಬ ಸಭೆಯ ಅಧ್ಯಕ್ಷರಾದ (Peter Free man M. P.) ಪಿಟರ್ ಫ್ರಿಮೇನ್ ಎಂಬವರು ಒಂದು ಮಹಾ ಮೆಮೋರಿಯಲ್ ತಯಾರ್‍ಮಾಡಿ ಇಂಡಿಯಾ ದೇಶಕ್ಕೆ

ಸಾಮಂತ ಸ್ವರಾಜ್ಯವನ್ನು ಕೊಡಬೇಕೆಂತಲೂ ಈ ವಿಷಯ ಇಂಗ್ಲಂಡದ ಲೇಬರ ಯುನಿಯನಗಳೂ ನಿರ್ಣಯಗಳನ್ನು ತರಬೇಕೆಂತಲೂ ಭಗೀರಥಪ್ರಯತ್ನ ಮಾಡುತ್ತಲಿರುವರು. ಲೇಬರ ಪತ್ರದ ಮುಖ್ಯ ಕರೆಸ್‌ಪೊಂಡೆಂಟರಾದ ಷ್ಲೋಕಂಬ ಎಂಬವರು ಇಂಡಿಯ ರಾಷ್ಟ್ರೀಯ ಸಭೆಯ ಕೂಡ ಗವರ್ನಮೆಂಟಿನವರು ರಾಜಿಪ್ರಸ್ತಾಪನ ನಡಿಸಬೇಕೆಂತಲೂ ಇಂಡಿಯಾ ಜನರ ಕಾಂಕ್ಷೆಯೇ ಗಾಂಧಿಯರಾಗಿ ಅವತರಿಸಿಯಿದೆ ಎಂಬ ಅಭಿಪ್ರಾಯವನ್ನು ಸೂಚಿಸಿರುವರು. ಇಂಗ್ಲಂಡಿನಲ್ಲಿ ಈ ಎರಡು ವಿಷಯಗಳು ಮಾತ್ರವಲ್ಲ. ಇಜಿಪ್ತ ರಾಜ್ಯದ ಸ್ವಾತಂತ್ರ್ಯದ ವಿಷಯ ರಾಜಿ ಒಪ್ಪಂದಮಾಡುವರೆ ಲಂಡನ ಸಭೆಗೆ ಬಂದಿದ್ದ ನಭನ್‌ಪಾಶ್ಯಾ ಮೊದಲಾದವರು ಒಪ್ಪಂದವನ್ನು ಮಾಡದೆ ತಿರುಗಿ ತಮ್ಮ ಇಗಪ್ತ ರಾಜ್ಯಕ್ಕೆ ತೆರಳಿರುವರು. ಮೊದಲು ಒಪ್ಪಂದದ ಮಸೂದೆಯಲ್ಲಿ ೧೬ ಶರ್ತಗಳಿದ್ದವು. ಬ್ರಿಟಿಷರಿಗೂ ಇಗುಪ್ತ ದೇಶಕ್ಕೂ ಇರುವ ಸ್ನೇಹವನ್ನು ಇನ್ನಷ್ಟು ಬಲಪಡಿಸಿ ಇಗುಪ್ತ ರಾಜ್ಯದಿಂದ ಸೈನ್ಯವನ್ನು ಬ್ರಿಟಿಷರು ತಕ್ಕೊಂಡು ಹೋಗಿ (Geneva) ಜಿನವದಲ್ಲಿರುವ League of Nations ಸಭೆಗೆ ಐಗುಪ್ತ ರಾಜ್ಯವು ಸದಸ್ಯರಾಗುವರೆ ಬ್ರಿಟಿಷರು ಒಪ್ಪಿ ಇಗುಪ್ತ ರಾಜ್ಯಕ್ಕೂ ಪರರಾಜ್ಯಕ್ಕೂ ಬರಬಹುದಾದ ವಿವಾದಗಳನ್ನು (League) ಲೀಗಿನವರ ಠರಾವಿನ ಮೇರೆಗೆ ಒಪ್ಪಬೇಕು. ಬ್ರಿಟಿಷರು ಪರರಾಜ್ಯಗಳ ಮೇಲೆ ಯುದ್ಧಮಾಡುವಾಗ್ಗೆ ತಮ್ಮ ರಾಜ್ಯದಲ್ಲಿದ್ದ ಬಂದರ ಮುಂತಾದವುಗಳ ಸೌಕರ್ಯಗಳನ್ನು ಇಗುಪ್ತ ದೇಶದವರು ಬ್ರಿಟಿಷರಿಗೆ ಕೊಡಬೇಕು. ಪರರಾಜ್ಯ ನೌಕರರನ್ನು ನೇಮಿಸುವದಾದರೆ ಐಗುಪ್ತ ದೇಶದವರು ಬ್ರಿಟಿಷರನ್ನು ಕೆಲಸಕ್ಕೆ ಇಡಬೇಕು. ಪ್ರತಿ ಒಬ್ಬರಿಗೆ ರಾಯಭಾರಿಗಳಿಡುವ ಹಕ್ಕಿರಬೇಕು. ಪರರಾಜ್ಯದವರು ಇಗುಪ್ತ ರಾಜ್ಯದಲ್ಲಿರುವಾಗ್ಗೆ ಇಗುಪ್ತ ರಾಜ್ಯದ ನ್ಯಾಯಸ್ಥಾನಗಳಿಗೆ ಅಧೀನರಾಗಿರಬೇಕು. ಬ್ರಿಟಿಷರ ಕೋರ್ಟುಗಳನ್ನು ತೆಗೆದುಹಾಕಬೇಕು. ಆದರೆ ಇಗುಪ್ತ ಕೋರ್ಟಿನ ನ್ಯಾಯಾಧೀಶರು ಬ್ರಿಟಿಷರು ಮತ್ತು ಇಗುಪ್ತ ದೇಶದವರಾಗಿ ಜೊತೆಯಲ್ಲಿ ತಪ್ಪಿಕ ಆಗಬೇಕು. ಬ್ರಿಟಿಷ ಸೈನ್ಯವು ಐಗುಪ್ತ ರಾಜ್ಯದ ಪ್ರಭುತ್ವಕ್ಕೆ ಹಾನಿಬಾರದಂತೆ ಸುಯೇಜ್ (Suez-Canal) ಕಾಲುವೆಯನ್ನು ರಕ್ಷಿಸಬೇಕು. ಇಗುಪ್ತ ಸೈನ್ಯದ ಕರಬೇತಿಗೆ ಆಫೀಸರರು ಬೇಕಾದರೆ ಬ್ರಿಟಿಷರನ್ನೇ ನೇಮಿಸಬೇಕು. ಸೌದಾನ (Saudan) ರಾಜ್ಯದ ರಾಜಕೀಯ ಸ್ಥಿತಿಯು ೧೮೯೯ನೇ ಒಪ್ಪಂದದ ಮೇರೆಗೆ ಇರಬೇಕು. ಈ ಒಪ್ಪಂದವು ೨೫ ವರ್ಷದ ವರೆಗೆ ಜಾರಿಯಿರಬೇಕು.

ಸೌದಾನಿನ ವಿಷಯ ಮಾತ್ರ ನಮ್ಮ ಬ್ರಿಟಿಷರು ಇಗುಪ್ತ ರಾಜ್ಯಕ್ಕೆ ಬಿಟ್ಟುಕೊಡಲೂ ಅದರಲ್ಲಿ ಐಗುಪ್ತ ದೇಶದ ಜನರು ಬರಲು, ವಾಸಿಸಲು, ಏನೂ ಆತಂಕಮಾಡದಿರಲು ಕಬೂಲು ಮಾಡಲಿಲ್ಲ. ಬೇರೆ ನಿರ್ಣಯಗಳಿಗೆ ಉಭಯತರು ಒಪ್ಪಿದರು. ಆದದರಿಂದ ಒಪ್ಪಂದವು ಮುರಿದುಹೋಯಿತು.

೧೯೩೦ನೇ ಇಸ್ವಿಯಲ್ಲಿ ಏಶಿಯದ ವ್ಯಾಪಾರದ ವಿಷಯ ಪಾಶ್ಚಾತ್ಯ ರಾಜ್ಯಗಳೊಳಗೆ ಬಹಳ ಉದ್ಯಮಯಿರುವದು. ಜಪಾನದಲ್ಲಿ ಆಂಗ್ಲೇಯರು ಈ ಮೊದಲೇ ಹೆಚ್ಚಿನ ವ್ಯಾಪಾರ ಮಾಡುವರು. ಜರ್ಮನಿಯು ಇತ್ತೀಚಿಗೆ ಈ ವ್ಯಾಪಾರದ ಮೇಲೆ ತನ್ನ ದೃಷ್ಟಿಯನ್ನಿಟ್ಟಿದೆ. ಜರ್ಮನಿಯ ಮುಖ್ಯ ವರ್ತಕನಾದವರು ಪ್ರಕಟಿಸಿದ ೧೯೨೯ನೇ ಇಸ್ವಿಯ ವರದಿಯಲ್ಲಿ ತಾವು ಏಶ್ಯಖಂಡದಿಂದ ೮೬೧ ಮಿಲಿಯ ಮಾರ್ಕಿನ (Million Marks) ಮೌಲ್ಯದ ಸಾಮಾನನ್ನು ಆಮದುಮಾಡಿದ್ದೇವೆಂತಲೂ ೬೯೩ ಮಿಲಿಯ ಮಾರ್ಕು ಮೌಲ್ಯದ ಸಾಮಾನನ್ನು ರಫ್ತುಮಾಡಿದ್ದೇವಾಗಿಯೂ ಪ್ರಕಟಿಸಿರುವರು. ಈ ಕಾರಣದಿಂದ ಚೀನಾದೇಶಕ್ಕೆ ಜರ್ಮನ್ನ ವ್ಯಾಪಾರಸ್ಥ ಸಭೆಯ ಕಡೆಯಿಂದ ಒಂದು ಮಂಡಲವು ಜರ್ಮನಿಯ ವ್ಯಾಪಾರವನ್ನು ಹೆಚ್ಚಿಸುವ ಉಪಾಯವನ್ನು ಶೋಧನೆಮಾಡಲು ಹೋಗುವದು. ಜರ್ಮನಿಯ ಸ್ಥಳೀಕ ವ್ಯಾಪಾರದಲ್ಲಿಯೂ ಅಲ್ಲಿಯ ದೊಡ್ಡ ಉದ್ಯಮಗಳ ಭಂಡವಾಳದಲ್ಲಿ ಅಮೇರಿಕ ಮತ್ತು ಇಂಗ್ಲಂಡಿನ ವರ್ತಕರ ಹಣವು ಅತಿರೇಕವಾಗಿರುವದೆಂತ ಚಳವಳವು ಅಲ್ಲಿ ನಡೆಯುತ್ತಲಿದೆ.

ರಷ್ಯದವರು ಬೇರೆ ರಾಜ್ಯಗಳ ಹಾಗೆ ವರ್ಷಾವಧಿಯ ಅಭಿವೃದ್ಧಿಯ ವರದಿಯನ್ನೂ ವರ್ಷಾವಧಿಯ ಆಯವ್ಯಯದ ಪಟ್ಟಿಯನ್ನೂ ಪ್ರಕಟಿಸುವದರಲ್ಲಿ ೫ ವರುಷಗಳ ಮುನ್ನಡೆಯ ಒಂದು ಕ್ರಮವನ್ನು ((5 years' plan) ಪ್ರಕಟಿಸುವರು. ರಷ್ಯದ ಉದ್ಯಮಗಳನ್ನು ಈಗಿನಕ್ಕಿಂತ ೩ ಪಟ್ಟು ಹೆಚ್ಚಿಗೆ ಮಾಡುವೆವೆಂತಲೂ ಸಾಗುವಳಿಯ ಉತ್ಪತ್ತಿಯನ್ನು (೬೫ ಮಿಲಾರ್ಡ ರುಬಲ್ಸ (Roubles) ಈಗಿನ ಸಮ ೨ ಎರಡು ಪಾಲು ಹೆಚ್ಚಿಗೆ (೧೩೦ ಮಿಲಾರ್ಡ Roubles) ಮೌಲ್ಯದಷ್ಟು ಮಾಡುವೆವೆಂತ ಅವರು ಪ್ರಕಟಿಸಿರುವರು. ಇತ್ತೀಚಿಗೆ ಅಲ್ಲಿಯ ಸರ್ಕಾರವು ಕ್ರಿಸ್ತ ದೇವಾಲಯಗಳನ್ನು ಮುಚ್ಚಿಸಿರುವದೆಂಬದಾಗಿಯೂ ಆ ವಿಷಯ ಬ್ರಿಟಿಷ ಗವರ್ನಮೆಂಟಿನವರು ಸೋವಿಯಟ್ ಗವರ್ನಮೆಂಟಿನ ಕೂಡ ಪ್ರಶ್ನೆ ಕೇಳಬೇಕೆಂಬ ಚಳವಳವು ಇಂಗ್ಲಂಡನಲ್ಲಿ ನಡೆದರೂ ಅದಕ್ಕೆ ಲೇಬರ್ ಸರ್ಕಾರವು ಗಮನ ಕೊಡಲಿಲ್ಲ. ಈಗ ಹೊಸತಾಗಿ ರಷ್ಯದ ಸರ್ಕಾರದವರ ಕೂಡ ಆವ ವ್ಯಾಪಾರದ ಒಪ್ಪಂದವನ್ನು ಜಾರಿಗೆ

ಕಾರದೆಯಿದ್ದರೆ ಇಂಗ್ಲಂಡಿನಲ್ಲಿ ಇನ್ನಷ್ಟು ಹೆಚ್ಚಿನ ಜನರಿಗೆ ಕೆಲಸವಿಲ್ಲದೆ, ಇನ್ನಷ್ಟು ತೊಂದರೆಯು ಉಂಟಾಗಬಹುದೆಂಬ ಭಾವನೆಯೇ ಈ ಮೌನಕ್ಕೆ ಕಾರಣವಾಗಿದೆ. ೧೯೧೭ ಇಸ್ವಿಯಲ್ಲಿ ರಷ್ಯದ ಉತ್ಕ್ರಾಂತಿಯು ಸುರುವಾಗಿ ನವಂಬರ ತಿಂಗಳಲ್ಲಿ ರಷ್ಯದ ಈಗಿನ ಸರ್ಕಾರವು ಸ್ಥಾಪಿತವಾದರೂ ಆಗಿನ ಬ್ರಿಟಿಷ ಗವರ್ನಮೆಂಟಿನ ಮುಖ್ಯ ಮಂತ್ರಿ ಲೋಯಿಡ್ ಜೋರ್ಜರು ೧೯೨೨ ರ ವರೆಗೆ ಅದನ್ನು ಅಂಗೀಕರಿಸಲಿಲ್ಲ. ೧೯೨೪ರ ಬ್ರಿಟಿಷ ಲೇಬರ್ ಸರ್ಕಾರದ ಮುಖ್ಯ ಮಂತ್ರಿ ರೆಮ್ಸೆ ಮೇಕ್ಡೊನಾಲ್ಡರು ಅದನ್ನು ಅಂಗೀಕರಿಸಿ ಒಂದು ಒಪ್ಪಂದವಾದರೂ ೧೯೨೭ನೇ ಮೇ ತಿಂಗಳಲ್ಲಿ ಆಗಿನ ಕನ್ಸರ್ವೇಟಿವ್ (Conservative) ಮುಖ್ಯ ಮಂತ್ರಿಗಳಾದ ಬಾಲ್ಡ್ವಿನ್‌ರು (Baldwin) ಅದನ್ನು ರದ್ದುಪಡಿಸಿದರು. ನಂತರ ಕಳೆದ ತಿಂಗಳಲ್ಲಿ ಲೇಬರ ಸರ್ಕಾರದವರು ತಿರಿಗಿ ಒಪ್ಪಂದ ಮಾಡಿರುವರು. ಕೂಲಿಕಾರರ ಮತ್ತು ಒಕ್ಕಲಿಗರ ಸಂಘಗಳೇ ರಷ್ಯದ ಸರ್ಕಾರದ ಮೂಲಾಧಾರವಾದದರಿಂದ ಐಶ್ವರ್ಯವಂತರ ಮತ್ತು ಶ್ರೀಮಂತರ ಸರ್ಕಾರವಾದ ಬ್ರಿಟಿಷ ಸರ್ಕಾರವು ಅದನ್ನು ಅಂಗೀಕಾರಮಾಡಿ ಅದಕ್ಕೆ ಗೌರವ ಕೊಡದು. ಈ ಕನ್ಸರ್ವೇಟಿವರ ಆಕ್ಷೇಪಗಳು ಲೇಬರ ಸರ್ಕಾರಕ್ಕೆ ಒಪ್ಪವು. ಆದರೂ ರಷ್ಯಸರ್ಕಾರದ ಮೇಲಣ ವೈಮನಸ್ಸು ಈಗಲೂ ಇಂಗ್ಲಂಡದ ಪತ್ರಿಕೆಗಳಲ್ಲಿ ತೋರಿ ಬರುವದು. ನಮ್ಮ ಧುರೀಣರಾದ ಜವಹರಲಾಲ ನೆಹ್ರುಗಳು ರಷ್ಯದ ವಿಷಯ ಬರೆದ ಲೇಖನಗಳಲ್ಲಿ ರಷ್ಯದಲ್ಲಿ ಈಗ ಇರುವ ಸರ್ಕಾರವು ಭೂಲೋಕದಲ್ಲಿ ನಡೆಯುವ ಪ್ರಯೋಗಗಳ ಪೈಕಿ ಅತಿ ಶ್ರೇಷ್ಠವಾದದ್ದೆಂತಲೂ ಜನಸಮುದಾಯಕ್ಕೆ ಹಿತಕರವೆಂತಲೂ ರಷ್ಯಕ್ಕೆ ಶಾಂತಿಯೂ ರಷ್ಯದ ಒಕ್ಕಲಿಗರಿಗೆ ಬೇಕಾದ ಸಾಗುವಳಿ ಮಾಡುವದಕ್ಕೆ ಸ್ಥಳವೂ ಕಷ್ಟಮಾಡುವವನಿಗೆ ಸಾಕಷ್ಟು ಉತ್ಪತ್ತಿಯು ಅಲ್ಲಿ ಶಿಕ್ಕುತ್ತದೆಂಬದಾಗಿ ಅಭಿಪ್ರಾಯ ಪಟ್ಟಿರುವರು. ರಷ್ಯದ ಜನರ ಕೂಡೆ ಒಪ್ಪಂದ ಮಾಡಿದರಿಂದ ಭೂಲೋಕದ ನೆಮ್ಮದಿಗೆ ಹಿತಕರವೆಂತ ಸಹಾ ಅವರು ಹೇಳಿರುವರು. ಇತ್ತೀಚಿಗೆ ಹೆಚ್ಚಿನ ಜನರ ಸಮ್ಮತಿಯಿಂದ ರಷ್ಯದಲ್ಲಿ ೧೯೨೯ನೇ ಅಕ್ಟೋಬರ ಲಾಗಾಯ್ತು ೧೯೩೦ ಫೆಬ್ರುವರಿ ಒಳಗೆ ೩೬೪ ಕ್ರಿಸ್ತ ದೇವಾಲಯಗಳ ಪೈಕಿ ೨೦೨ ಕ್ರಿಸ್ತ ದೇವಾಲಯಗಳನ್ನು ಮುಚ್ಚಿ, ಈ ಕಟ್ಟಡಗಳಲ್ಲಿ ಶಾಲೆಗಳೂ ಸರ್ಕಾರಿ ಆಫೀಸುಗಳು ನಡೆಯುವವು. ಈ ವಿಷಯ ಮಾರ್ಚ ತಾ|| ೧೬ರಲ್ಲಿ ಇಂಗ್ಲಂಡಿನ ಎಲ್ಲ ಕ್ರಿಸ್ತ ದೇವಾಲಯಗಳಲ್ಲಿ ಇಂಗ್ಲಂಡದ ಜನರ ಅಸಂತುಷ್ಟಿಯನ್ನು ಸೂಚಿಸುವ ಬಗ್ಗೆ ಪ್ರಾರ್ಥನಾ ಸಭೆಗಳು ಕೂಡಿರುವವು.

೧೯೨೯ನೇ ಅಗೋಸ್ತಿನಲ್ಲಿ ಪೆಲಿಸ್ಟೈನ್‌ನಿ (Palestine) ನಲ್ಲಿ ಅರಬರಿಗೂ ಅಲ್ಲಿಯ ಯಹೂದ್ಯರಿಗೂ ನಡೆದ ಡೊಂಬಿಯ ವಿಷಯ ತಪ್ಪಿಮಾಡಲು ನೇಮಕವಾದ ಕಮಿಶ್ನನಿನ ವರದಿಯು ಇತ್ತೀಚಿಗೆ ಪ್ರಕಟವಾಗಿಯದೆ. (೧) ಯಹೋದ್ಯರಿಗೂ ಅರಬರಿಗೂ ಇರುವ ದ್ವೇಷ (೨) ಎರಡು ಕಡೆಯ ವರ್ತಮಾನ ಪತ್ರಿಕೆಗಳು ಬರೆದ ಲೇಖನಗಳು (೩) ಈ ದೇಶದಲ್ಲಿ ಸಾಕಷ್ಟು ಸೈನ್ಯವು ಇಲ್ಲದೆ ಇರುವದು (೪) ರಾಜಕೀಯ ಕಾರಣಗಳಿಂದ ತಮಗೆ ಅನ್ಯಾಯವಾಗಿಯಿದೆ ಎಂಬ ಅರಬರ ಭಾವನೆ ಇವೇ ಈ ಡೊಂಬಿಯ ಮೂಲಕಾರಣ. ಈ ವಿಷಯ ಅರಬರ ಕಡೆಯು ಒಂದು (Deputation) ಪ್ರತಿನಿಧಿಮಂಡಲವು ಇಂಗ್ಲಂಡಿಗೆ ಹೋಗಿ ನಮ್ಮ ಮುಖ್ಯ ಮಂತ್ರಿಯವರೊಡನೆ ಇದೇ ಕಳೆದ ಮಾರ್ಚಿಯಲ್ಲಿ ತಮ್ಮ ತೊಂದರೆಗಳನ್ನು ಅನ್ಯಾಯಗಳನ್ನು ಸೂಚಿಸಿದೆ. ಅರಬರ ಯಹೂದ್ಯರ ಮುಖಂಡ ಸಭೆಯು ಸೇರಿ, ಈ ರೀತಿ ಮುಂದಕ್ಕೆ ಗಲಾಟೆ ಆಗದಂತೆ ಪ್ರಯತ್ನಗಳು ನಡೆಯುತ್ತಲಿರುವವು. ಇಂಡಿಯದ ಮುಸಲ್ಮಾನರು ತಮ್ಮ ಜಾತಿಯವರ ಸಹಾಯಾರ್ಥವಾಗಿಯೂ ತಮ್ಮ ಪ್ರವಾದಿಯ ಪವಿತ್ರ ಸ್ಥಳಗಳನ್ನು ರಕ್ಷಿಸುವ ಬಗ್ಗೆ ಪಾಲಿಸ್ಟಿನ್ ದಿನ ಎಂಬ ದಿವಸವನ್ನು ಇಂಡಿಯದಲ್ಲಿ ಆಚರಿಸುವದಲ್ಲದೆ ಆ ವಿಷಯ ಜೊಂಬಯಿಯಲ್ಲಿ ಸಭೆಯನ್ನು ಕರಿಸಿ ತಮ್ಮ ಅಭಿಪ್ರಾಯಗಳನ್ನು ಗವರ್ನಮೆಂಟಿನವರಿಗೆ ಸೂಚಿಸುವರು.

ಅಮೇರಿಕದ ಸಂಯುಕ್ತ ರಾಜ್ಯಗಳ ಪಾರ್ಲಿಮೆಂಟಿನ ಕಾಂಗ್ರೆಸಿನಲ್ಲಿ ಫಿಲಿಪಿನ್ ದ್ವೀಪಗಳಿಗೆ ಸ್ವರಾಜ್ಯಕೊಡುವನಿರ್ಣಯವು ಈ ತಿಂಗಳಲ್ಲಿ ಚರ್ಚಿಸಲ್ಪಡುವದು. ನಮ್ಮ ಸತ್ಯಾಗ್ರಹದ ಚಳವಳದ ವಿಷಯ ಅಮೇರಿಕದಲ್ಲಿರುವಷ್ಟು ಕುತೂಹಲವೂ ಸಹಾನುಭೂತಿಯೂ ಬೇರೆ ರಾಜ್ಯಗಳಲ್ಲಿರುವದಿಲ್ಲ. ನೌಕಾ ಸೈನದ ಕಾನ್ಫರನ್ಸಿನಲ್ಲಿ ಅಮೇರಿಕದವರು ಮಾಡಿದಷ್ಟು ಪ್ರಯತ್ನ ಇನ್ನಾರೂ ಮಾಡಲಿಲ್ಲ. ಯುರೋಪ ರಾಷ್ಟ್ರಗಳ ಪರಸ್ಪರ ದ್ವೇಷಗಳು ಅಮೇರಿಕಕ್ಕೆ ಅಸಹ್ಯವಾಗಿ ಕಂಡು ಬಂದಿರುವದು. ಈ ಮೊದಲು ಅಮೇರಿಕದ ಮುಖ್ಯ ಪಟ್ಟಣವಾದ ವಾಶಿಂಗ್‌ಟನ್ನಿನಲ್ಲಿ ೧೯೨೧ನೇ ಇಸ್ವಿಯಲ್ಲಿ ಜರುಗಿದ 'ಥಮು' ನೌಕಾಸೈನ್ಯದ ಪರಿಷತ್ತಿನಲ್ಲಿ ಅಮೇರಿಕವೂ ಇಂಗ್ಲಂಡೂ ನೌಕಾ ಸೈನ್ಯದಮಟ್ಟಿಗೆ ಸರಿಸಮಾನರು ಎಂಬ ಸೂತ್ರವನ್ನು ಬ್ರಿಟಿಷ ಗವರ್ನಮೆಂಟ ಕಡೆಯಿಂದ ಲಾರ್ಡ ಬಾಲ್ಫರರು ಆಗ್ಗೆ (Mr Balfour) ಅಂಗೀಕರಿಸಿದರು. ಆ ಲಾಗಾಯತು ಬ್ರಿಟಿಷರಿಗೂ ಅಮೇರಿಕಕ್ಕೂ ಆದ ಸ್ನೇಹವು ಈಗಲೂ ಕಡಿಮೆಯಾಗಿಲ್ಲ. ಈಗಿನ ನೌಕಸೈನ್ಯದ ಪರಿಷತ್ತಿನಲ್ಲಿ ಅಮೇರಿಕದ ಸಹಾನುಭೂತಿಯಿಲ್ಲದೆ ಇದ್ದರೆ ಈಗಿದ್ದಷ್ಟು ಫಲಿತಾಂಶ ಸಹಾ ಇರುತ್ತಿರಲಿಲ್ಲ.

# ಜನಪದಸಾಹಿತ್ಯ



## ಬೀಸುಕಲ್ಲಿನ ಹಾಡುಗಳು

ಸಂಗ್ರಾಹಕರು— ಶ್ರೀ ಸೀಪೀ ಲಿಂಗಪ್ಪನವರು, ಛತ್ರಗುಡಿಕಿ.

ತನ್ನಂಗ ನೋಡಿದರ ಭಿನ್ನಿಲ್ಲ-ಭೇದಿಲ್ಲ ।
ತನ್ನಂಗ ತನ್ನ ಮಗಳ್ಹಾಂಗ । ನೋಡಿದರ ।
ಕಣ್ಣಮುಂದಾದ ಕೈಲಾಸ ॥

* * *

ಕಾಗೀಗೆ ಕಣ್ಣಿಟ್ಟ—ಕರಿಯಹುಬ್ಬಿನ ಜಾಣ ।
ಮಾವಿನಹಣ್ಣು ಮನಿಯಾಗ । ಇಟ್ಟುಕೊಂಡು ।
ನೀರಲ ಹಣ್ಣಿಗ್ಯಾಕ ಕಣ್ಣಿಟ್ಟ ॥

* * *

ಬಡತನ ಬಂದರ ಬಾಗಿಕೊಂಡಿರುವೇನು ।
ಬಾರೆನಣ್ಣಯ್ಯ ನಿನ್ನ ಮನಿಗೆ । ನಿನ್ನಮಡದಿ ।
ಏಳಲಮಾಡಿ ನುಡಿದಾಳ ॥

* * *

ಹಚ್ಚಡದ ಪದರಾಗ ಅಚ್ಚಮಲ್ಲಿಗಿ ಹೂವ ।
ಬಿಚ್ಚಿ ನನ್ನಮ್ಯಾಗ ಒಗೆವಂಥ । ಪುರುಷರನ ।
ಬಿಟ್ಹ್ಯಾಂಗ ಬರಲೆ ಹಡೆದವ್ವ ॥

* * *

ಸರದಾರ ನಿನ್ನಿಂದ ಸರುವೆಲ್ಲ ಮರೆತೇನು ।
ಸರದಾಗ ಇರುವ ಗುಳದಾಳಿ, । ನಿನ್ನಿಂದ ।
ಸರುವ ಬಳಗೆಲ್ಲ ಮರೆತೇನು ॥

* * *

ಬಂಗಾರ ಬಳಿಯುವರು ತಿಂಗಳದ ಹಾದೆನರು ।
ನನ್ನ ಕೊಟ್ಟ್ಯಾಕ ಮರತಾರ । ಮಾವಿನ ।
ಹಣ್ಣವೊಣುವಾಗ ನೆನಸ್ಯಾರ ॥

* * *

ಸಂತೆಯು ಊರಿನಾಕೆ ಸಂತೋಷದ ಹಡೆದವ್ವ ।
ಸಂತೆಯು ಮಾಡಿ ಕಳುಹಿ ತಾ । ನಿಂತಾಳ ।
ಸಂಪೀಗಿ ಬನದ ನೆರಳಾಗ ॥

ಹಾದಿಯ ಮನೆಯಾಕೆ, ಹರದಿ ನನ್ನ ತಂಗೆವ್ವ ।
ಹಾದಿಯ ಬಿಡುನನಗ ಹಸಿವಿಲ್ಲ । ನನ್ನ ಬಗಲಾನ ।
ಬಿಂದೂಲಿ ಬಾಳಾಗ ಬಿಸಿಲಾತು ॥

* * *

ಓರಿಗೆಯ ಪುರುಷರು ಊರೀಗಿ ಹೋದರ ।
ನಾರೀ ನಿನ್ನ ಕಣ್ಣ ಒಳಹೊರಗ । ತಿಂಗಳದ ।
ಚಂದ್ರಾಮರ್‍ಯಾಕ ತಡದಾರ ॥

* * *

ಪರಿಮಳದಂಥರಸರು ಪರನಾರಿಯರಿಘೋದರ ।
ಮನಿಮಡದೀ ಬಾಯಿಬಿಡಬೇಡ, । ಅವರುತಮ್ಮ ।
ಮನಹೇಸಿ ಮನಿಗೆ ಬರತಾರ ॥

* * *

ಚಿಂತಕ ಇಟ್ಟುಕೊಂಡು ಚಿಪ್ಪಾಟ ಬಳಿವಾಕೆ ।
ಚಿಂತಿಲ್ಲ ಏನ ನಿನಗಿಷ್ಟು, । ನಿಮ್ಮರಾಯ ।
ಅಲ್ಲೊಬ್ಬಳ ಕೂಡ ನಗುತಿದ್ದ ॥

( ಉತ್ತರ )

ನಕ್ಕರ ನಗಲೆವ್ವ ನಗೆಮುಖದ ಕೇದಿಗೆ ।
ನಾ ಮುಚ್ಚಿ ಮುಡಿವ ಪರಿಮಳದ । ಹೂವ ।
ಅವಳೊಂದು ಗಳಿಗೆ ಮುಡಿಯಲಿ ॥

* * *

ಅರೆದ ಅರಿಸಿನ ಚಂದ, ಜರದ ರುಮಾಲ ಚಂದ ।
ಸರದಾರ ಚೆಲುವ; ಸತಿಪುರುಷರ। ತೊಡಿಮ್ಯಾಲ ।
ಮಕಮಲಿ ಟೊಪಿಗಿ ಮಗ ಚೆಲುವ ॥

* * *

ಧಡಿಯ ಧೋತರದವರು ಮುಡಿಯುಂಗುರದವರು ।
ಸಡಗರದವರು ನಂನನೀರ । — ನಿಮ್ಮಿಂದ ।
ಗಡಿನಾಡ ತವರ ಮರೆತೇನ ॥

ಸಂಗ್ರಾಹಕಃ— ಗೋವಿಂದ ವೆಂಕಟೇಶ ಚುಳಕಿ ಮುಗದ.

ಮುನವಳ್ಳಿ ಮುಂದೀನ ವನವ ಕಂಡೀರಕ್ಕಾ ।
ತನವೀಗೆ ಆಳ್ಳ್ಯಾನ ಹೂಮುಗ್ಗಿ । ನನ ಚಲುವ ।
ತಮ್ಮಾಗ್ರ ವಡೆದಾವ ಮಕವಿಾಶಿ ॥

* * *

ಬೀಸೂವ ಕಲ್ಲೀಗೆ ಬಿಳಿಯ ರ್‍ಯಾವಳಮುತ್ತು ।
ಬೇಶಾಗಿ ಹೊಯ್ಯೊ ಹೋಳೆಗಾರ । ನನ ಮನೀಗೆ ।
ಬೀಸಾಕ ಬರತಾರ ಗೆಣೆತ್ಯಾರು ॥

* * *

ಹಚ್ಚನ್ನ ಮ್ಯೆಯವನ ಹವಳದ ತುಟಿಯವನ ।
ಮತ್ತೆಲ್ಲಿ ಹೋಗಿದ್ಯೊ ಗಿಳಿರಾವು । ಮಲ್ಲಾಡದ ।
ಮೆತ್ತನ್ನ ಹಣ್ಣ ಮೆಯಲಾಕ ॥

* * *

ಕರ್‍ರನ್ನ ಹೆಣತೆಂತ ಕರಿಕರಿ ಮಾಡಲಿಬಾಡ ।
ಹರಕೋ ನಿನ ಗುಳದಾಳಿ । ಮುಗದದ ।
ರೈತರ ಮಗಳಾಗಿ ಇರತೇನೋ ॥

* * *

ಸಕ್ಕರಿ ಹೇರಿಕೊಂಡು ಸೊಗಲಕ್ಹೋಗುವ ಜಾಣ ।
ನಮ್ಮವಗ್ಹೇಳೋ ಮರೆಯುಬ್ಯಾಡ । ಅತ್ತೆಮನೆಯ ।
ಬೆಳೆದಿಂಗಳು ನಮುಗ ಬಿಸಲಾತು ॥

* * *

ಕಾಜಿನ ಕರಿಮಣಿ ಮೋಜಿನ ಬ್ಯಾಳೀಮಣಿ ।
ರಾಜಮಂಡಲದ ಗುಳದಾಳಿ । ಇರುತನಕ ।
ರಾಜ್ಯದ ಚ್ಯಾಜ ನನ ಮನೆಯಾಗ ॥

* * *

ಪುಂಡೀಯು ಪಲ್ಲೇಕ ಇಂಗು ಜೀರಿಗಿ ಮೂಲ ।
ಗಂಗವ್ವ ಮೂಲ ಗೌರೀಗೆ । ಹಾರೂರ ಮಗಳು ।
ರಂಡ್ಯಾದರ ಮೂಲ ತವರೀಗೆ ॥

* * *

ಅತ್ತೆಯ ಮನಿಯಾಗ ಮುತ್ತಾಗಿ ಇರಬೇಕು ।
ಹೊತ್ತ ನೀಡಿದರ ಉಣಬೇಕ । ನಮ್ಮಪ್ಪನ ।
ಉತ್ತುಮ ಹೆಸರ ತರಬೇಕ ॥

ಬಂಜೀ ಬಾಗಲ ಮುಂದ । ಬಂಗಾರದೊಳಕಲ್ಲ ।
ಬಂದ ಕುಟ್ಟ್ಯಾಕ ಸೊಸೆಯಿಲ್ಲ । ಮಾನೌಮಿ ।
ಬನ್ನಿಮುಡಿಯಾಕ ಮಗನಿಲ್ಲ ॥

* * *

ಹುಟ್ಟಿದೂರ ನೋಡಿ ಹೊಟ್ಟೆ ತಣ್ಣಗಾಯ್ತು ।
ಇಟ್ಟಂಗಿಹೆಂಡಿ ಎಳೆಮಾವ । ನನ ಮುಗದವ ।
ಅರಗಿಳಿಯ ಬಿಟ್ಟಿರಸಾರೆನೆ ॥

* * *

ಬಿಳಿಯಂಗಿ ತೊಟ್ಟ್ಯಾನ ಬಿಳಿಗುದುರೆ ಏರ್‍ಯಾನ ।
ಬೆಳದಿಂಗಳೆಂದೊಳಗ್ಹೋದೆ । ನನ ತಮ್ಮಾ ।
ಬೆಳಗಾವಿ ದೊರೆಯೇ ಹಿಡಿ ನೀರ ॥

* * *

ಕೇದಗುದುರಿಯ ಜಾಣ ಮುಂದಿನೂರಿಗೆ ಪಯಣ ।
ನಿಂದರಂದರ ಇರವಲ್ಲ । ನನ ತಮ್ಮ ।
ಎಂದೀನ ಸಿಟ್ಟು ನನಮ್ಯಾಗ ॥

* * *

ತಂಬಿಟ್ಟೀಗೆ ಉಪ್ಪಿಲ್ಲ ತವರೀಗೆ ಮುಪ್ಪಿಲ್ಲ ।
ದಂಬ ನಿನ ಗುಡಿಗೆ ಕದವಿಲ್ಲೊ । ಶಿವರಾಯಾ ।
ಬಂಜೀಯು ಬಾಗಿಲಿಗೆ ಸುಳಿವಿಲ್ಲ ॥

* * *

ಹಾಡೀಗೆ ಹಾಡಿಲ್ಲ ಏಡಿಗೆ ತಲೆಯಿಲ್ಲ ।
ಮೋಡಬಂದಲ್ಲಿ ಬಿಸಿಲಿಲ್ಲ । ಹೆಣ್ಣೀಗೆ ।
ಓಡಿಹೋದಲ್ಲಿ ಸುಕವಿಲ್ಲ ॥

* * *

ತಂಗಿಯಗಂಡಾ ಬಾರೊ, ಖಂಗ ಮೈದುನ ಬಾರೊ ।
ತಂಗಳ ನುಚ್ಚು ಉಣಬಾರೊ । ಆಚೀ ಓಣಿ ।
ಮಂಗ ಸತ್ತದ ಹೊರಬಾರೊ ॥

* * *

ಹಾದಿ ಮ್ಯಾಲಿನ ಬಸ್ತಿ ಹಾಲೀನ ಅಭಿಷೇಕ ।
ಹೌದು ಹೋಗೋಣ ಬಾರ ಹಡದವ್ವಾ । ಸದ್ಯಾಕತಿಗೆ ।
ಮಾಡೂಣು ಬಾರ ನಮುಸ್ಕಾರ ॥

ನಮ್ಮ ಸರಕಾರದ

ಸಿಟ್ಟುಸಿರಿನಿಂದ ಹುಟ್ಟಿಬಂದ

ವೃತ್ತಪತ್ರಾಸುರನ ದಬ್ಬಾಳಿಕೆಯನಿಮಿತ್ತ

ಕಾಂಗ್ರೆಸದ ಅಧ್ಯಕ್ಷರಾದ

# ಶ್ರೀ ಮೋತೀಲಾಲ ನೇಹರು

ಅವರು ಮಾಡಿದ

ಅಪ್ಪಣೆಯ ಮೇರೆಗೆ ಈ ಸಲ

# ಬಿಡಿನುಡಿಗಳು

ಹಾಕಲ್ಪಡಲಿಲ್ಲ

# ಹರಿಯುವತನಕ ಜಗ್ಗಬೇಕೇ ?

ಈ ದೇಶಕ್ಕೊಮ್ಮೆ ಪರದೇಶೀಯರು ಹಾಲುಜೇನುಗಳ ಭೂಮಿ ಎಂದು ಕರೆಯುತ್ತಿದ್ದರು. ಹೆಸರಿಗೆ ಸರಿಯಾಗಿ ಮೋಹವೂ ಹುಟ್ಟುತ್ತ ಹೋಯಿತು. ಗೊಲ್ಲರೂ ಬಂದರು. ನೊಣಗಳೂ ಬಂದು ಮುತ್ತಿಕೊಳ್ಳುತ್ತ ಹೋದವು. ಅವೂ ಒಂದೆರಡು ಕಡೆಗಳಿಂದಲ್ಲ, ಅನೇಕಾನೇಕ ದೇಶಗಳಿಂದ; ಒಂದೆರಡು ಕಾಲಮಾತ್ರಗಳಲ್ಲಲ್ಲ. ಬಹುಕಾಲದಿಂದ ನಡೆದಿದೆ ಈ ಭರತ ಗೋಮಾತೆಯನ್ನು ಹಿಂಡುವ ವ್ಯಾಪಾರ, ಆದರೆ ಎಷ್ಟೆಂದು ಎಲ್ಲಿವರೆಗೆ ಹಿಂಡಬಹುದೀ ಬಡಪ್ರಾಣಿಯನ್ನು ?

ಆಕೆಯ ಸಂತಾನವು ಮೊನ್ನೆಮೊನ್ನೆಯವರೆಗೆ ಸಾಮಾನ್ಯವಾಗಿ ಸ್ವಾರ್ಥದಲ್ಲಿ ಮುಳುಗಿದ್ದು ಹೇಡಿಯಾಗಿದ್ದು ತಾಯಿಯ ಸುಖ ದುಃಖವನ್ನು ನೋಡದೆಯೇ ಹೋಯಿತು. ಆದರೂ ಅಲ್ಲಲ್ಲಿ ಒಮ್ಮೊಮ್ಮೆ ಹಲಕೆಲವು ಯೋಗ್ಯ ಮಕ್ಕಳು ತಾಯಿಯ ಗೋಳನ್ನು ಕೇಳಲಾರದೆ ತಾಳಲಾರದೆ ಆಕೆಯನ್ನು, ಕ್ಷುದ್ರ ಮನಸ್ಸಿನ ಆಕೆಯ ಮಕ್ಕಳಿಂದಲೂ ಪರದೇಶೀಯರಿಂದಲೂ ಕಾಪಾಡಯತ್ನಿಸಿದರು. ಆದರೆ ಅಂಥ ಪುಣ್ಯಾತ್ಮರು ಎಂದು ಕಂಡದ್ದನ್ನು ಕಂಡಂತೆಯೇ ಹೇಳತೊಡಗಿದರೋ ಅಂದೇ ಕೆಂಡದಂತಾದರು ಹಿಂಡುವವರೆಲ್ಲರೂ. ಗೊಲ್ಲರು ಮಲ್ಲರಾದರು. ಹಾಲನ್ನು ಕರೆಯುವವರು ರಕ್ತವನ್ನೇ ಹೀರಹತ್ತಿದರು. ಭಾರತ ಧೇನುವು ಕ್ಷೀಣಳಾಗುತ್ತ ಹೋದಳು. ಆಕೆಯಲ್ಲಿ ಈಗಿರುವದು ಪ್ರಾಣ ಒಂದೇ.

ಆದರೂ ಆಕೆಯ ದುಃಸ್ಥಿತಿಯನ್ನು ನೋಡಲಿಕ್ಕೆ ಕಣ್ಣು ಬೇಕಲ್ಲವೇ ಎಲ್ಲರಿಗೂ. ಮೇಲೆ ಅದನ್ನು ಕಾಣುವದೂ ಸುಲಭವಲ್ಲ, ಯಾಕಂದರೆ ಈಗಿನ ರಕ್ತಚುಂಬಕರೋ ಶಲ್ಯತಂತ್ರ ಧುರೀಣರು! ನೋವಿಲ್ಲದೆ ಸದ್ದಿಲ್ಲದೆ ರಕ್ತವನ್ನು ಸುರಿಸಬಲ್ಲ ಮಾರ್ದವ್ಯಪ್ರವೀಣರು !! ಇದರ ಮೇಲೆ ಸೊರಗಿದ ಪಶುವಿಗೆ ಬೆರಗಿನ ಭೂಷಣ! ನವನಾಗರಿಕತೆಯ ಕೃತ್ರಿಮ ಶೀಲಪಿನಯುಗಳ ಪೋಷಾಕುಗಳಲ್ಲಿ ಮುಚ್ಚಿಹೋದ ತಾಯಿಯ ಅಸ್ಥಿಪಂಜರವು ಜನಸಾಮಾನ್ಯದ ಕಣ್ಣಿಗಾದರೂ ಬೀಳುವದು ಹೇಗೆ? ಹೇಗಿದೆ ನಮ್ಮ ದುರ್ಗತಿ! ಒಂದು ಕಡೆ, ಇದ್ದ ಗಂಟನ್ನೂ ಕರಗಿಸುವ ತೆರಿಗೆಯ ಸೂಕ್ಷ್ಮರೀತಿ; ಇನ್ನೊಂದು ಕಡೆ, ಒಳಗಿನಿಂದೊಳಗೇ ಕೊರಗಿಸುವ ಶಿಕ್ಷಣ ಪದ್ಧತಿ; ಮೇಲೆ ಎಲ್ಲವನ್ನೂ ಮುಚ್ಚಿಟ್ಟುಕೊಳ್ಳುವ "ಲೊ ಎಂಡ್ ಒರ್ಡರ್"ನ ಥಳಕು ಪೋಷಾಕು! ಇಂಥ ಸ್ಥಿತಿಯಲ್ಲಿ ಒಳಗಿನ ಗುಟ್ಟು ಶಿವನೇ ಬಲ್ಲ ಎಂದೆನ್ನ ಬೇಕಲ್ಲವೆ ? ಆದರೆ ಶಿವನ ಗುಟ್ಟು ಭಕ್ತನಿಗೆ ಗೊತ್ತಾಗದಿರುವದೇ ! ಮಹಾತ್ಮಾ ಗಾಂಧಿಯವರ ಪರಮಭಕ್ತಿಯ ದೃಷ್ಟಿಗೆ ಅಮ್ಮನ ಮೇಲೆ ಹೊರಿಸಿದ ಜರಿಕಲಾಬತ್ತುಬಟ್ಟೆಗಳೆಲ್ಲವೂ ಪಂಥಿ (Transparent)ಯಾಗಿ ಬಿಟ್ಟವು. ಆಕೆಯ ರೋಗ ದಾರಿದ್ರ್ಯ ಪೀಡಿತವಾದ ದುರ್ಬಲವಾದ ರೂಪವು ಅವರ ಕಣ್ಣಿಗೆ ಬಡೆಯಿತು. ಅವರದನ್ನು ನೋಡಿದರು; ಇತರರ ಕಣ್ಣುಗಳನ್ನು ತೆರೆದುಬಿಟ್ಟರು.

ಗುಟ್ಟನ್ನು ರಟ್ಟುಗೊಳಿಸದೆ ಮೂಢ ಭಕ್ತಿಯು ಹೋಗುವದಿಲ್ಲ. ಇದು ಮಹಾತ್ಮಾಜಿಗೆ ಚನ್ನಾಗಿ ತಿಳಿದ ವಿಷಯು. ಆದದರಿಂದ "ಲೊ ಎಂಡ್ ಒರ್ಡರ್" ಎಂಬ ಸೊಲ್ಲು ನಮಗೆ ತಾರಕ ಮಂತ್ರವೋ ಮಾರಕ ಮಂತ್ರವೋ ಎಂಬದನ್ನು ಅಂಥ ಭಕ್ತರಿಗೆ ತೋರಿಸಿಕೊಡುವದಕ್ಕಾಗಿ ಅವರು ಉಪ್ಪಿನ ಸತ್ಯಾಗ್ರಹವನ್ನು ಹೂಡಿದರು. ಅಷ್ಟಾದೊಡನೆಯೇ ಎಲ್ಲೆಲ್ಲಿಯೂ ಬೊಬ್ಬೆ ಎದ್ದಿತು. ಈ ಗಾಂಧಿಯು ದಯಾಳುವಾದ ಅರ್ವಿನ್‌ನು ಕೊಟ್ಟ 'ಡೊಮಿನಿಯನ್'ನ ವಾಗ್ದತ್ತಕ್ಕೆ ಮಣ್ಣು ಹಾಕಿ ದೇಶಕ್ಕೆ ಕೆಲಕಾಲದಲ್ಲಿಯೇ ಆಗತಕ್ಕ ಉದ್ಧಾರವನ್ನು ಹಾಳುಮಾಡುತ್ತಾನೆ ಎಂಬ ಗದ್ದಲವು ಲಿಬರಲ್, ನೇಶನಲಿಷ್ಟ ಇತ್ಯಾದಿ ಇತ್ಯಾದಿ ಪಾರ್ಟಿಗಳಲ್ಲೆಲ್ಲ ಎದ್ದು ಬಿಟ್ಟಿತು. ಇಲ್ಲಿಯೂ ಯುರೋಪ ಅಮೆರಿಕಗಳಲ್ಲಿಯೂ 'ಗಾಂಧಿಜಿ ಬರತಕ್ಕ "ಡೊಮಿನಿಯನ್"ಗೆ ಒಂದು ದೊಡ್ಡ ಅಸಡ್ಡೆ' ಎಂಬ ಮತವನ್ನು ಪತ್ರಿಕಾಕಾರರು ಹಬ್ಬಿಸುತ್ತ ಹೋದರು. ಇಲ್ಲೀ ದೇಶದಲ್ಲಿಯೇ ಅನೇಕರು ಆ ಮಹಾತ್ಮರಿಗೇ ಬುದ್ಧಿವಾದವನ್ನು ಹೇಳುತ್ತಹೋದರು. ಅವರೆ ಮುಂದೆ ಬರತಕ್ಕ ಡೋಮಿನಿಯನ್‌ನ ಲಕ್ಷಣಗಳನ್ನು ಸ್ವಲ್ಪವಾದರೂ ಈಗ ಮೊದಲೇ ತೋರಿಸದೆ ತಮಗೂ ತಮ್ಮ ಪಾರ್ಟಿಗೂ ಸುಮ್ಮನಿರುವದು ಸಾಧ್ಯವೇ ದು ಗಾಂಧಿಯವರು ಹಿಡಿದ ಹಠವನ್ನು ಬಿಡಲಿಲ್ಲ. ಬಿಡಲಿಕ್ಕಾದರೂ ಹೇಗಾದೀತು ಮತ್ತೆ! ಅನೇಕ ವಾಗ್ದತ್ತಗಳನ್ನೂ ಪ್ರತಿಜ್ಞೆಗಳನ್ನೂ ಪಡೆದರೂ ಮಾತೊಂದರ ಮುಂದೆ ಫಲವನ್ನೆಂದಿಗೂ ಕಾಣದ ಈ ದೇಶಕ್ಕೆ ಈಗ ಸರಕಾರದ ಟೊಳ್ಳುಮಾತುಗಳಲ್ಲಿ ನಂಬಿಕೆಯನ್ನಿಟ್ಟು ಬಿಟ್ಟು ಮಾಡತಕ್ಕ ಕಾರ್ಯವನ್ನು ಬಿಡಲಿಕ್ಕಾದೀತೇ!

ಇಷ್ಟು ಸುಟ್ಟುಕೊಂಡೂ ಇನ್ನೂ ಬರಿ ಮಾತಿನಲ್ಲಿ ವಿಶ್ವಾಸವನ್ನಿಡುವದು ಅಸಾಧ್ಯವೆಂದು ಮಹಾತ್ಮರು ಹಿಡಿದ ಹಠವನ್ನು ಸಡಿಲಿಸದೆ ಹೋದದ್ದು ಅನ್ಯಾಯವೆಂದು ಹೇಳಲಾದೀತೇ ? ಅವರು 'ಡೋಮಿನಿಯನ್' ನ್ನೆ ಒಮ್ಮೆಗೇ ಕೊಟ್ಟು ಬಿಡಿ ಎಂದು ಕೇಳಲಿಲ್ಲ. ಕೆಲವು ಲಕ್ಷಣಗಳನ್ನಾದರೂ ಸರಕಾರವು ತೋರಿಸಲಿ ಎಂದೇ ಅವರು ಕೇಳಿಕೊಂಡದ್ದು. ಮತ್ತು ಈ ಕೇಳಿಕೆಯೇ ಚನ್ನಾಗಿ ರೂಪುಗೊಂಡು ಅವರ ೧೧ ಪ್ರಾಂತಗಳಾದವು ಮತ್ತನಕ್ಕೆ ಎಲ್ಲ ಪಾರ್ಟಿಯವರೂ ಸೈ ಹಾಕಿದರು.

ಹನ್ನೊಂದರಲ್ಲೊಂದಕ್ಕೂ ಮಾನವು ದೊರೆಯಲಿಲ್ಲ. ಹೀಗಿದ್ದರೂ ಸರಕಾರದ ಹೃದಯವು ಮಾರ್ಪಟ್ಟಿದೆ ಎಂದು ಹೇಳುವದು ಯಾರಿಗೆ ಸಾಧ್ಯ? ಅವರ ಈಗಿನ ಪ್ರತಿಜ್ಞೆಯನ್ನು ನಂಬುವದು ಹೇಗೆ? ಈ ಪ್ರಶ್ನೆಗಳು ಸಹಜವಾದರೂ ಅನೇಕರಿಗೆ ಇನ್ನೂ ಸರಕಾರದಲ್ಲಿ ಮೂಢ ಭಕ್ತಿಯಿತ್ತು. ದೃಷ್ಟಿಸಂಕೋಚದಿಂದಲೋ, ಸರಕಾರವು ಭಾರತಾಂಬೆಯ ಮೇಲೆ ಹಾಕಿದ ಥಳಕಿನಿಂದ ಮೈಮರೆತುದರಿಂದಲೋ ಆಕೆಗೆ ಹೊದಿಸಿದ ಮರೆಯುವ ಪೋಷಾಕುಗಳು ಹೆಚ್ಚಾಗಿ ಅವು ಪರಿಪಂಥಿ (Opaque) ಯಾಗಿ ಆಕೆಯ ದೇಹವು ಇವರಿಗೆ ಕಂಡು ಬಾರದ್ದೋಣದರಿಂದಲೋ ಏನೋ, ಅನೇಕರಿನ್ನೂ ಕನಸಿನ ಮುಡಿಗೆಗಳನ್ನು ನೆಮಲುವವನ್ನು ಬಿಡಲಿಲ್ಲ; ತಾಯಿಯು ಸೊರಗಿದರೂ ಇವರ ಭಕ್ತಿಯು ಕದಲಲಿಲ್ಲ. ಇದ್ದ ಸ್ಥಿತಿಗತಿಗಳು ಇವರ ಕಣ್ಣಿಗೆ ಇದ್ದಂತೆಯೇ ಕಂಡುಬರುವದು ಸಾಧ್ಯವೋ ಹಾಗಿರುವಾಗ? ಅವನ್ನು ತೋರಿಸಬೇಕು; ಅವರ ಕಣ್ಣನ್ನು ಹಿಡಿದು ತೆರೆಯಬೇಕು. ಸರಕಾರವು ಆರಿಸಿಕೊಂಡಿಟ್ಟ 'ಲೊ ಎಂಡ್ ಆರ್ಡರ್'ನ ಪೋಷಾಕನ್ನೂ ಭರತ ಮಾತೆಯ ಮೇಲೆ ಅದು ಹೊದಿಸಿಟ್ಟ ಪಟ್ಟೆಬಟ್ಟೆಗಳನ್ನೂ ಹರಿದು ಬಿಟ್ಟು ಇಬ್ಬರನ್ನೂ ಬಟಬತ್ತಲೆಯಾಗಿ ಜಗತ್ತಿಗೇ ತೋರಿಸುವ ಘನಕಾರ್ಯವನ್ನು ಗಾಂಧಿಯವರಿಗೆ ಕೈಕೊಳ್ಳಬೇಕಾಯಿತು. ಈ ಕಾರ್ಯವೇ ಅವರು ಹೂಡಿದ 'ಸಿವಿಲ್ ಡಿಸೊಬೀಡಿಯನ್ಸ್' ಎಂದರೆ.

ಇದು ಮೊದಲುಗೊಂಡಾಗ ಇದರಿಂದಾಗುವದೇನು ಎಂದು ಹೀಯಾಳಿಸಿದವರು ಈಗಲೂ ಅಂದಿನಂತೆಯೇ ಆಡುವರೋ? ಮಾಡುವರೋ?!! ಹಿಂದಿನ ಭಕ್ತಿಯನ್ನು ಇಂದೂ ಸಾಗಿಸುವದಕ್ಕೆ ಇವರಿಂದಾದೀತೋ? ಅರಿವುಳ್ಳ ಪತ್ರಿಕಾರರು ಜಗತ್ತಿನಲ್ಲೆಲ್ಲಿ ಯಾದರೂ ಈಗ ಸರಕಾರದ ನೀತಿ ರೀತಿ ಪ್ರೀತಿಗಳನ್ನು ಹೊಗಳಬಲ್ಲರೋ ?

ಪಾಶ್ಚಿಮಾತ್ಯ ವೃತ್ತಪತ್ರಿಕೆಗಳನ್ನೇ ಇಲ್ಲಿ ಸ್ವಲ್ಪನೋಡುವ 'ಸ್ಪೆಕ್ಟೇಟರ್'ನ ಸಂಪಾದಕನು ಹೀಗೆನ್ನುತ್ತಾನೆ. 'ಅರ್ಧಮರ್ಧ ಕೆಲಸದ ಸಮಯವು ಇದಲ್ಲ ಆಗುವದೆಲ್ಲವೂ ಒಮ್ಮೆಯೇ ಆಗಬೇಕು; ಇಲ್ಲವಾದರೆ ಆಗುವದೇನೂ ಇಲ್ಲ (ಇಂಡಿಯದ ಹಿತಕ್ಕಾಗಿ) ಎಂಬದಾದರೂ ತಿಳಿಯಬೇಕು. ಆಯರ್‌ಲೆಂಡಿನಲ್ಲಿ ಸ್ವಾತಂತ್ರ್ಯವು ಸ್ಥಾಪನೆಯಾಗುವದಕ್ಕೆ ಮೊದಲು ಅಲ್ಲಿ ಯಾವ ಸ್ಥಿತಿಯಿತ್ತೋ ಅದೇ ಈಗ ಇಂಡಿಯಾದಲ್ಲಿದೆ. ಲಾಯ್ಡ್ ಜಾರ್ಜನ ಹಟವಾದಿತನದಿಂದ ಆ ದೇಶಕ್ಕೆ ಅನಾಯಕತ್ವ, ರಕ್ತ, ಕಣ್ಣೀರುಗಳನ್ನು ಧಾರಾಳವಾಗಿ ನೋಡಬೇಕಾಯಿತು. ಆದರೇನಾಯಿತು ಕೊನೆಗೆ ಪಾರ್ಲಮೆಂಟಿಗೆ ಇಳಿಯಬೇಕಾಯಿತೋ ಇಲ್ಲವೊ ? ಅನಾಯಕತ್ವಪ್ರಿಯರೆಂದು ಹಿಂಸಿಸಲ್ಪಟ್ಟ ಆರ್ಥರ್ ಗ್ರಿಫಿತ್ಸ್ ಮತ್ತು ಮ್ಯಾಕೆಲ್ ಕೊಲಿನ್ಸ್ ಇವರನ್ನು ತಮ್ಮ ಸಮಾನರೆಂದು ಭಾವಿಸಿಕೊಳ್ಳಬೇಕೇ ಆಯಿತಲ್ಲವೆ ಕಡೆಗೆ. ಅವರೊಡನೆ ಅವರ ದೇಶದ ಸ್ವಾತಂತ್ರ್ಯಸಮಸ್ಯೆಯನ್ನು ಚರ್ಚಿಸಲೇಬೇಕಾಯಿತಲ್ಲವೆ?' ಹೀಗಿದೆ ಆ ಲೇಖದ ಸಾರಾಂಶ. ಇದಲ್ಲದೆ ಇವರೊಳಗೇ ಪ್ರಸಿದ್ಧನಾದ ಸ್ಲೊಕೊಂಬ್‌ನ ಡೆಯ್ಲಿ ಹೆರಾಲ್ಡ್ ಸರಕಾರದ ಕೃಪಾಛತ್ರವನ್ನು ಹೇಗೆ ವರ್ಣಿಸುತ್ತದೆ ನೋಡುವ!—ಇಂಡಿಯ ಸರಕಾರವು ಸುಲಭವಾದ ಮತ್ತು ವಿನಾಶಕಾರಿಯಾದ ದಬ್ಬಾಳಿಕೆಯ ಹಾದಿಯನ್ನು ತುಳಿಯುತ್ತಿದೆ. ಅದು ಒಂದುಕಡೆ ಸುಧಾರಣೆಗಾಗಿ ಸ್ಯಾಮನ್ ರಿಪೋರ್ಟಿನ ಹಾದಿಯನ್ನು ನೋಡುತ್ತಿದೆ. ಇನ್ನೊಂದುಕಡೆ ಜನರ ಅಸಂತುಷ್ಟತೆಯನ್ನು ದಬ್ಬಾಳಿಕೆಯಿಂದ ಸುಧಾರಿಸಹತ್ತಿದೆ. ಇಲ್ಲಿತನಕ ಇದ್ದ ಪ್ರಜಾಸತ್ತೆಯ ಸರಕಾರವು ಸಹ ಅಲ್ಲೀಗ ಇಲ್ಲ. ವಾಯ್ಸರಾಯನು ಸ್ವಚ್ಛಂದ ವೃತ್ತಿಯಿಂದಾಳುತ್ತಿದ್ದಾನೆ. ಒರ್ಡಿನೆನ್ಸ್‌ನಿಂದಲೇ ಶಾಸನ ವಿಧಿಯು ಈಗ ನಡೆಯುತ್ತಿದೆ. ಬರಿಯ ಸಂಶಯದ ಮೇಲೆಯೇ ಜನರನ್ನು ಸೆರೆಹಿಡಿಯುವ ಅಧಿಕಾರವು ಕೊಡಲ್ಪಟ್ಟಿದೆ. ಹತ್ತು ವರ್ಷಗಳಿಂದೆಂದೂ ಕಾಣದ ವಿಧಿಗಳಿಂದ ಪ್ರೆಸ್ ಬಂಧಿಸಲ್ಪಟ್ಟಿದೆ. — ಎಂದು ಲೇಬರ್ ಪಾರ್ಟಿಯ ಈ ಪ್ರಸಿದ್ಧ ಪತ್ರಿಕೆಯೇ ಹೇಳುತ್ತದೆ. ಇಷ್ಟೇ ಏಕೆ— ಈಚೆಗೆ ಎಂದೂ ಕಣ್ಣೆತ್ತಿ ನೋಡದ ಪಶ್ಚಿಮ ದೇಶಗಳ ಪತ್ರಿಕೆಗಳು ಈಗ ಇಲ್ಲಿಯ ಸುದ್ದಿಗೇ ಮುಖ್ಯ ಸ್ಥಾನವನ್ನು ಕೊಡುತ್ತಲಿವೆ. ನಮ್ಮ ದೇಶದ ಗೋಳನ್ನು ಜಗತ್ತಿನ ದೃಷ್ಟಿಯಿಂದ ಮರೆಮಾಚಿಕೊಂಡಿಟ್ಟುಕೊಳ್ಳುವನು ಈ ಸರಕಾರಕ್ಕೆ ಇನ್ನೆಂದಿಗೂ ಸಾಧ್ಯವಲ್ಲ. ಮಹಾತ್ಮಾಜಿಯವರು ಈಗ ನಡೆಸಿದ

ಚಳವಳಿಯ ದೊಡ್ಡ ಉಪಯೋಗವೆಂದರೆ ಇದು. ನಾಗರಿಕ ಜಗತ್ತಿನ ಕಣ್ಣನ್ನು ಇಲ್ಲಿಯವರ ಸ್ವಾರ್ಥತ್ಯಾಗಸಾಹಸಗಳ ಒತ್ತಾಯದಿಂದ ಅದು ಇಲ್ಲಿಗೆ ತಿರಿಗಿಸಿದೆ.

ಇದು ಹೊರಗಿನವರಿಗಾದ ಲಾಭವಾಯಿತು. ಅವರಿಗೆ ಇದ್ದ ಸಂಗತಿ ಇದ್ದಂತೆಯೇ ತಿಳಿಯೋಣದರಿಂದ ನಮಗಾಗುವ ಲಾಭವೂ ಸಾಮಾನ್ಯವಲ್ಲ. ಈಗಿಲ್ಲಿ ಸರಕಾರವು ನಡೆಸುತ್ತಿರುವ ಕ್ರೌರ್ಯವೇ ಜಗತ್ತಿನಲ್ಲೆಲ್ಲ ಅದರ ವೈರಿಯಾಗಿ ಸದ್ಯದಲ್ಲಿಯೇ ಪರಿಣಮಿಸದಿರದು. ಮತ್ತು ಜಗತ್ತನ್ನೇ ಲಕ್ಷ್ಯದಿಂದ ದೂರ ಗೊಳಿಸಿ ಸುಖವಾಗಿ ಬದುಕುವದು ಯಾವ ದೇಶಕ್ಕೂ ಸಾಧ್ಯವಲ್ಲ.

ನಮ್ಮ ದೇಶಕ್ಕೇ ಆದ ಲಾಭವಾವುದು ? ಮೂಢಭಕ್ತಿಯು ಮುಣಗಿತು. ಮೂರೇ ತಿಂಗಳ ಹಿಂದೆ ತೋರಿದ ಮತವ್ಯತ್ಯಾಸ ಗಳೂ ಕೋರಿಕೆಗಳೂ ಇಲ್ಲದಂತಾಗಿ ಎಲ್ಲ ಪಾರ್ಟಿಯವರ ಬೇಡಿಕೆಯೂ ಒಂದೇ ಆಯಿತು. ಮಹಾತ್ಮಾಜಿಯವರು ಮೊನ್ನೆ ಹಾಕಿದ ನಾಲ್ಕು ಶರತುಗಳೇ ಈಗ ಎಲ್ಲರವೂ. ಡೊಮಿನಿಯನ್ ಸ್ಟೇಟಸ್ ಒಂದೇ ಅಲ್ಲ ಅವರಿಗೆ ಈಗ ಬೇಕಾದುದು; ಅದರಲ್ಲಿ ಸಂಪೂರ್ಣ ಸ್ವಾತಂತ್ರ್ಯಕ್ಕೆ ಬೇಕಾದ ವಿಕಾಸಾರ್ಹ ಉಪಾದಾನವೂ ಇರಬೇಕಂತೆ (Substance for Independence). ಬಾಯ್‌ಕಾಟ್‌ಗೆ ವೇಗವು ದೊರಕಿತು. ಮಾಲವಿಯಾ ಪಟೇಲರಂಥವರು ಆ ರಥಕ್ಕೆ ಸಾರಥಿಗಳಾಗಿ ನಿಂತಿದ್ದಾರೆ. ಎಂದೂ ಟೊಂಕಕಟ್ಟದ ವರ್ತಕರೂ ಹೆಂಗಸರೂ ಸಹ ಇಂದು ರಂಗದ ಮುಂಭಾಗದಲ್ಲಿ ಧೀರರಾಗಿ ಕಾದಾಡುತ್ತಿದ್ದಾರೆ. ಎಲ್ಲ ವಿಧವಾದ ಭಯವೂ ಮಾಯವಾಗಿದೆ. ಸರಕಾರವೆಂದರೆ ಮಾಬಾಪ್ (ತಂದೆತಾಯಿ) ಅಲ್ಲ. ಹಲ್ಲುಗುರುಗಳಶಕ್ತಿ ಎಂಬುದು ಈ ಚಳವಳಿಯು ಒಡೆದು ತೋರಿಸುತ್ತಿದೆ. ಹಿಂದಿನಂತೆ ಮುಂದಾಳುಗಳ ಬಂಧನವು ಇಂದು ಇತರರಿಗೆ ಪ್ರತಿಬಂಧಕವಾಗದೆ ಇನ್ನೂ ಉತ್ತೇಜಕವಾಗಿದೆ. ಸೆರೆಮನೆಯಲ್ಲಿ ಬಿದ್ದ ಒಬ್ಬನ ಜಾಗೆಯಲ್ಲಿ ಹತ್ತು ಮಂದಿ ನಿಲ್ಲುತ್ತಿದ್ದಾರೆ. ದೇಶಕ್ಕೂ ವಿರಾಮವಿಲ್ಲ, ಸರಕಾರಕ್ಕೂ ವಿರಾಮವಿಲ್ಲ. ಇಬ್ಬರೂ ಬರೆಬೆತ್ತಲೆಯಾಗಿ ಜಗತ್ತಿನ ಎದಿರಿನಲ್ಲಿದ್ದಾರೀಗ. ಇದೇ ಅಲ್ಲವೆ ಮಹಾತ್ಮರು ಕೋರಿದ್ದ ಮೊದಲನೆಯ ಪ್ರಕರಣ. ಆದರೆ ಈ ಸ್ಥಿತಿಯು ಹೀಗೆಯೇ ಇರಬೇಕೋ ?

ಇನ್ನು ತಡಕ್ಕವಕಾಶವಿಲ್ಲ. ಜಗತ್ತಿನ ಅನುಭವವು ಒಂದು ಕಡೆ ಲೋಕಸಂಗ್ರಹದ ಮೇಲೆ ದೃಷ್ಟಿಯನ್ನಿಟ್ಟುಕೊಂಡಿದೆ. ಇಲ್ಲಿಯೋ ಸರಕಾರದ ಉಪೇಕ್ಷೆಯಿಂದ ಹಿಂಸೆಯಿಂದಲೂ ಜನರಿಗೆ ಅದರಲ್ಲಿದ್ದ ದ್ವೇಷವು ಮುಂದಕ್ಕೆ ಹೋಗಿ ಇಂಗ್ಲಿಷರ ಮೇಲೆಯೇ ದ್ವೇಷವು ಪ್ರಾರಂಭವಾಗಹತ್ತಿದೆ. ದಬ್ಬಾಳಿಕೆಯು ಚಳವಳಿಯನ್ನು ಹಿಂಸಾಮಾರ್ಗದ ಕಡೆಗೆ ಓಡಿಸುವ ಸಂಭವವಿದೆ. ಹಾಗಾದರೆ ಮಹಾತ್ಮಾಜಿಯವರು ತೋರಿಸಿದ ಹಾದಿಯಿಂದ ಜಗತ್ತಿಗಾಗತಕ್ಕ ಆದರ್ಶಪ್ರಾಯವಾದ ಅಹಿಂಸಾ ಮಾರ್ಗಕ್ಕೆ ಮುಳ್ಳುಬೀಳುವದೋ ಇಲ್ಲವೋ! ಪೂರ್ವ ಪಶ್ಚಿಮಗಳು ಎರಡು ಕಕ್ಷಿಗಳಾಗಿ ನಿಲ್ಲುವ ಸಂಭವವಿದೆ. ಹಾಗಾದರೆ ಇಂಗ್ಲಂಡಿಗೂ ಇಂಡಿಯಾಗೂ ಅವಮಾನ. ಮಹಾತ್ಮಾಜಿಯವರಿಗೆ ಅವಮಾನ. ಜಗಕ್ಕೆಲ್ಲಕ್ಕೂ ಕೇಡು. ಕಾಲಗತಿಗೆ ವಿರುದ್ಧ! ಹಾಗಾಗದೆ ಲೋಕಸಮಸ್ತಕ್ಕೂ ಹಿತಕಾರಿಯಾದ ಕರ್ತವ್ಯವೆ ಎಂದು ಸರಕಾರದ ತಲೆಯನ್ನು ಹೊಕ್ಕುತ್ತದೋ. ಮಹಾತ್ಮಾಜಿಯವರಂತೂ ನಾಲ್ಕು ಪ್ರಾಂತಗಳಿಗಿಳಿದಿದ್ದಾರೆ. ಅಧಿಕಾರಿ ಬೆನ್‌ರು ಇನ್ನೂ ಹಳೆಯ ಸುವ್ವಾಲಿಯನ್ನೇ ಹಾಡುತ್ತ ಹೋಗುವರೋ ?

## ಇದು ನೋಡಿರಿ !

ನಮ್ಮ ಬರೆಹಗಾರರಲ್ಲೊಂದು ಬಿನ್ನಹ—ಬರೆಹಗಳು ಆದಷ್ಟು ಚಿಕ್ಕವಿದ್ದರೆ ಒಳಿತು. ಬಹಳವಾದರೂ, ಜಯಕರ್ನಾಟಕದ ಮೂರು ಪುಟಗಳನ್ನು ಮೀರದಂತಿರಬೇಕು. ವಿಷಯವ್ಯಾಪಕತೆಯು ಹೆಚ್ಚಾಗಿದ್ದರೆ, ವಿಷಯವನ್ನು ಬೇರೆ ಬೇರೆ ತಲೆಕಟ್ಟುಗಳಿಂದ ಚಿಕ್ಕ ಚಿಕ್ಕ ಲೇಖಗಳಾಗುವಂತೆ ವಿಭಾಗಿಸುವದುತ್ತಮ. ಇವುಗಳನ್ನೇ ಅನುಕ್ರಮವಾಗಿ ಪ್ರಕಟಿಸಬಹುದು. ಅದರೂ ಚಿಕ್ಕ ಬರೆಹಗಳೇ ನಮಗೂ ವಾಚಕರಿಗೂ ಹೆಚ್ಚು ಪ್ರಿಯಕರವಾಗಿರುವವು. 'ಕಿರಿದರಲ್ಲಿ ಪಿರಿದರ್ಥ'ವೆಂಬ ಕವಿವಾಕ್ಯವನ್ನು ಮಾಸಪತ್ರಿಕೆಯ ಲೇಖಕರಂತೂ ಮರೆಯಲೇ ಆಗದು. (ಕತೆ ಕಾದಂಬರಿಗಳು ಈ ಮಾತಿಗೆ ಹೊರತಾಗಿವೆಯೆನ್ನಬಹುದು )

# ವಿವಿಧವಿಷಯಗಳು

## ಪ್ರಪಂಚಪರಿಚಯ

### ಬೆಳ್ಳಿಯು ನೀರನ್ನು ನಿಷ್ಕಲ್ಮಷ ಮಾಡುತ್ತದೆ.

ಜರ್ಮನಿಯ ಒಬ್ಬ ಶಾಸ್ತ್ರಜ್ಞನು, ವಿಶೇಷ ರೀತಿಯಿಂದ ಸಿದ್ಧಪಡಿಸಿದ ಬೆಳ್ಳಿಯ ದ್ರವವನ್ನು ನೀರಲ್ಲಿ ಬೆರಸಿದರೆ ಅದು ಜಲವನ್ನು ಶುದ್ಧಗೊಳಿಸುವುದೆಂದು ಕಂಡು ಹಿಡಿದಿದ್ದಾನೆ. ಒಂದು ಔಂಸು ಬೆಳ್ಳಿಯ ಇಪ್ಪತ್ತನೆಯ ಅಂಶವು ಕೂಡ ೬೫೦ ಕೋಟಿ ಗ್ಯಾಲನ್ನ ಕುಡಿಯುವ ನೀರನ್ನು ಶುದ್ಧಮಾಡುವುದೆಂದು ಅವನ ಅಭಿಪ್ರಾಯವಿದೆ. (ಈ ಕಾರಣದಿಂದಲೆ ನಮ್ಮ ಪೂರ್ವಜರು ಬೆಳ್ಳಿಯ ಪಾತ್ರೆಗಳನ್ನೇ ಊಟಕ್ಕೂ ನೀರಿಗೂ ಉಪಯೋಗಿಸುತ್ತಿರಬಹುದಲ್ಲವೆ ? )

— ಪೊಪ್ಯುಲರ ಸೈನ್ಸ್, ಅಮೇರಿಕಾ.

### ಬೆಳಕು ಹಾಡಬಲ್ಲದು, ಸೊಪ್ಪುಳವು ಕಾಣಬಲ್ಲದು

ನ್ಯೂಯಾರ್ಕಿನ ಶಾಸ್ತ್ರಜ್ಞರು ಈ ಬಗೆಯ ಬಲು ಸೋಜಿಗದ ಪ್ರಯೋಗಗಳನ್ನು ಮಾಡಿ ತೋರಿಸಿದ್ದಾರೆ. ಒಂದು ನೃತ್ಯಶಾಲೆಯ ಕತ್ತಲೆ ಕೋಣೆಯಲ್ಲಿ ಒಂದೆಡೆಯಿಂದಲೇ ಪ್ರಕಾಶ ಕಿರಣಗಳನ್ನು ಬರಮಾಡಿಕೊಂಡು ಅವು ಒಂದು ವಿಶಿಷ್ಟ ರೀತಿಯಿಂದ ಮಾಡಿದ ಗ್ಲಾಸಿನ ಪಟ್ಟಿಯಮೇಲೆ ಬೀಳುತ್ತಲೆ ನಾದವುಂಟಾವದು ಕೇಳಬಂದಿತು. ಆ ಪ್ರಕಾಶವನ್ನು ಅಡ್ಡಗಟ್ಟುತ್ತಲೆ ನಾದವು ನಿಂತುಬಿಟ್ಟಿತು.

ಫೋನೋಗ್ರಾಫಿನಲ್ಲಿ ಹುಟ್ಟುವ ನಾದದ ತೆರೆಗಳು ಬೆಳಕಿನ ತೆರೆಗಳಾಗುವಂತೆಯೂ, ಫೋಟೋದ ಕ್ಯಾಮರಾದೊಳಗಿನ ಪ್ರಕಾಶ ಕಿರಣಗಳು ಮರಳಿ ನಾದರೂಪದಲ್ಲಿ ಹೊರಬರುವಂತೆಯೂ ಮಾಡಿ ತೋರಿಸಿದರು.

— ಪೊಪ್ಯುಲರ ಸೈನ್ಸ ಅಮೇರಿಕಾ.

### ಕೋಟ್ಯಾಧೀಶನಾದ ಕೆಲಸಿಗನ ಉಪದೇಶ

ಮಿ॥ ಟಮಿ ಮೊರ್ಗನ್‌ನೆಂದು ಇವನ ಹೆಸರು. ಹತ್ತು ವರುಷದ ವಯಸ್ಸಿನಲ್ಲಿ ಇವನು ಕೆಲಸಿಗನಾಗಿದ್ದಾಗ ಇವನಿಗೆ ಒಂದು ವಾರದ ಪ್ರಾಪ್ತಿಯು ೧೨ ಶಿಲಿಂಗು ಇತ್ತು. ಈಗ ಅವನು ಅಮೇರಿಕೆಯ ಅತ್ಯಂತ ಶ್ರೀಮಂತರಲ್ಲಿ ಒಬ್ಬನಾಗಿದ್ದಾನೆ. ಇವನ ಗಿರಾಕಿಗಳಲ್ಲಿ ಮೂವರು ಅಮೇರಿಕೆಯ ಅಧ್ಯಕ್ಷರಾಗಿದ್ದರು. ಉದ್ಯೋಗದಲ್ಲಿ ಯಶಸ್ಸನ್ನು ಪಡೆಯಬೇಕಾದರೆ ಕೆಳಗೆ ಕಾಣಿಸಿದ ೫ ನಿಯಮಗಳನ್ನು ಪಾಲಿಸಲಿಕ್ಕೆಬೇಕೆಂದು ಅವನು ತನ್ನ ಸಹಕಾರಿಗಳಿಗೆ ಕೊನೆಗೆ ತನ್ನ ಉದ್ಯೋಗದಿಂದ ನಿವೃತ್ತನಾಗುವಾಗ ಉಪದೇಶಿಸಿದ್ದಾನೆ. ಆ ನಿಯಮಗಳಾವವೆಂದರೆ—

೧ ಯಾವಾಗಲೂ ಆದರಪ್ರೀತಿಯುಕ್ತನಾಗಿ ಸವಿ ಮಾತುಗಳನ್ನಾಡು.

೨ ಯಾವಾಗಲೂ ಪ್ರಾಮಾಣಿಕನಾಗಿರು; ಫಲದ ಚಿಂತೆಯಿಂದ ಸಂತ್ರಸ್ತನಾಗಬೇಡ. ನೀನು ಉದ್ಯೋಗಶೀಲನಾಗಿ ವಿನಯವುಳ್ಳಾತನಾದರೆ ಫಲವು ತನ್ನ ಕಾಲಿನಿಂದ ನಿನ್ನಲ್ಲಿ ನಡೆದು ಬರುವುದು.

೩ ವ್ಯಾವಹಾರಿಕನಾಗಿ ಜನಮನವನ್ನು ಅರಿತುಕೊ; ನಿನ್ನ ಗಿರಾಕಿಗಳ ಮನವನ್ನು ಸಂತೈಸು. ಗಂಟು ಮೋರೆಯಿಂದ ಬಂದ ಗಿರಾಕಿಯು ನಗುಮೋರೆಯಿಂದ ಹೋಗುವಂತೆ ನಡೆ; ನುಡಿ.

೪ ಮಿತಿಮೀರಿ ಮಾತನಾಡಬೇಡ. ಆಡುವುದೇ ಇದ್ದರೆ ಜಾಣ್ಮೆಯಿಂದ ಮಾತನಾಡು.

೫ ವೃತ್ತಪತ್ರಿಕೆಗಳ ಹಿರಿಬರೆಹಗಳನ್ನು ಓದು, ಅಂದರೆ ಪ್ರಚಲಿತ ಪ್ರಪಂಚದ ಪರಿಚಯವು ನಿನಗಾಗಿ, ಅಂತಹ ಮಾತುಕಥೆಗಳ ಸಂದರ್ಭದಲ್ಲಿ ಚತುರತನದಿಂದ ಮನೋವೇಧಕವಾಗುವಂತೆ ವಿಚಾರ ನಿಯಮವನ್ನು ಮಾಡಲಿಕ್ಕೆ ಸಮರ್ಥನಾಗುವಿ.

### ಪದಾರ್ಥಗಳು ಇಷ್ಟು ತುಟ್ಟಿ ಏಕೆ?

ಅಂಗಡಿಯಲ್ಲಿ ಕುಳಿತು ಕುಳಿತು ಹೊಟ್ಟೆ ಬಂದ ಮುದಿಶೆಟ್ಟಿಯು ಕುತ್ತುಸುರುಬಿಡುತ್ತ ಹೇಳುವುದೇನಂದರೆ- ಪದಾರ್ಥಗಳು ತುಟ್ಟಿಯಾಗದೇನು ಮಾಡುವವು ? ಏಕೆಂದರೆ ಕೂಲಿ ದರಗಳು ಮಿತಿಮೀರಿ ಹೆಚ್ಚು; ಕೆಲಸಮಾಡುವ ಅವರ ತಾಸುಗಳು ತೀರ ಕಡಿಮೆ; ಸುಂಕ, ಇನಕಮಟ್ಯಾಕ್ಸ ಮೊದಲಾದ ಕರಗಳಿಗೆ ಲೆಕ್ಕವಿಲ್ಲ. ತರುಬರುವ ವೆಚ್ಚವು ಅಳತೆಯ ಹೊರಗೆ!

ಮೈ ಮುರಿದು ದುಡಿದು ತನ್ನ ಗಲಾಟೆಯಿಂದ ಇದೀಗ ಮುಂದೆ ಬಂದಿರುವ ತರುಣ ವರ್ತಕನು ಹೀಗೆ ಎನ್ನುವನು - 'ವ್ಯಾಪಾರ ವ್ಯವಹಾರಗಳೆಲ್ಲ ಅವ್ಯವಸ್ಥಿತವಾಗಿ ಸಾಗಿವೆ; ಮೇಲ್ವಿಚಾರಣೆ, ಸುವ್ಯವಸ್ಥೆಗಳಿಲ್ಲದುದೇ ಇದಕ್ಕೆ ಕಾರಣ. ತಳದಿಂದ ತುದಿಯವರೆಗೆ ಚನ್ನಾಗಿ ಮಾರ್ಪಡಿಸಿದರೆ ಎಲ್ಲವೂ ಸರಿಹೋಗುವದು.

ಬಡಕಲು ಮೈಯು, ಹಸಿವೆ ಕಣ್ಣಿನ, ಸಪ್ಪನ್ನ ಮೋರೆಯ ಗಿರಾಕಿಯು ಹೀಗೆ ಗೊಣಗುವುದು ಕೇಳಬರುತ್ತಿನೆ.— ಬಂಡವಾಳದವರು, ಕಾರಖಾನದಾರರು, ವ್ಯವಸ್ಥಾಪಕರು, ಪಾಲುಗಾರರು (ಶೇರಹೋಲ್ಡರ್ಸ) ಕೆಲಸಗಾರರು ಎಲ್ಲರೂ ನಮ್ಮಿಂದ (ಗಿರಾಕಿಗಳಿಂದ) ದುಡ್ಡು ಹೀರಿಕೊಳ್ಳಬೇಕೆನ್ನುತ್ತಿರುವರು !

ಇದರಲ್ಲಿ ಒಂದು ಚಮತ್ಕಾರವೇನೆಂದರೆ ಇವರೆಲ್ಲರ ಮಾತುಗಳಲ್ಲಿಯೂ ಸ್ವಲ್ಪ ಹೆಚ್ಚು ಕಡಿಮೆ ಸತ್ಯಾಂಶವು ಇಲ್ಲದಿಲ್ಲ.

ಆದರೆ ಈ ಗೊಂದಲದೊಳಗಿಂದಲೂ ದಾರಿಯುಂಟೆಂದು ತುಸು ವಿಚಾರಿಸಿದಲ್ಲಿ ಕಂಡುಬರುವದು; ಪ್ರಾಮಾಣಿಕತನದಿಂದ ಬುದ್ಧಿಯ ಉಪಯೋಗಮಾಡಿ ಸಹಕಾರದಿಂದ ಒಕ್ಕಟ್ಟಿನಿಂದ ನಡೆದರೆ ಯಶಸ್ಸು ಸಿಕ್ಕಲೇಬೇಕೆಂದು ಇತಿಹಾಸವು ಸಾರುತ್ತಲಿದೆ.

—ಸಂಡೇ ಎಕ್ಸಪ್ರೆಸ್.

## ಹತ್ತಿಯ ಉಪಯೋಗದ ಹೊಸ ಶೋಧಗಳು

ಬಾರ್ಸಿಲೋನಾ (ಯುರೋಪ)ದಲ್ಲಿ ಆದ ಅರಳೆ ನೂಲುವ ಕಾರಖಾನದಾರರ ಪರಿಷತ್ತಿನಲ್ಲಿ ಕರ್ನಲ್ ಸೆಡಸ್ ಬ್ರೌನ್ಸ ಎಂಬವರು ಅಭಿಪ್ರಾಯಪಟ್ಟದ್ದೇನಂದರೆ–

ಲಕ್ಷಾವಧಿ ಅರಳೆಯ ಗಂಟುಗಳಿಂದ ಟಾಯರ (Tyre) ಗಳನ್ನು ಮಾಡುತ್ತಿರುವರು; ಹತ್ತಿಯಿಂದ ಮಾಡಿಕೊಳ್ಳಬಹುದಾದ ಬಹುವಿಧ ಉಪಯೋಗದ ಕಲ್ಪನೆಯು ಜಗತ್ತಿಗೆ ಇನ್ನೂ ಇಲ್ಲ. ಅಮೇರಿಕೆಯಲ್ಲಿ ದಾರಿಯ ಗುರ್ತ ಹೇಳುವುದಕ್ಕೆ ಹತ್ತಿಯನ್ನು ಉಪಯೋಗಿಸುತ್ತಾರೆ. ತೊಗಲಿನ ಕೆಲಸವನ್ನು ಹತ್ತಿಯು ಮಾಡಬಲ್ಲದು. ಕುದುರೆಯ ಎಲ್ಲ ಸಾಮಾನುಗಳನ್ನೂ ಸೋಲ್ಜರರಿಗೆ ಅವಶ್ಯಕವಾದ ಎಲ್ಲ ತೊಗಲಿನ ಪದಾರ್ಥಗಳನ್ನೂ ಚರ್ಮದ ಬದಲು ಅರಳೆಯಿಂದಲೇ ಸಿದ್ಧಪಡಿಸಲಿಕ್ಕೆ ಬರುತ್ತದೆ. ರೇಶ್ಮೆಗಿಂತ ಅತ್ಯಂತ ಮೃದುವಾಗಿಯೂ ತಂಪಾಗಿಯೂ ಇರುವ ಹಾಸುಗೆಗಳನ್ನು ಇದರಿಂದ ತಯಾರಿಸಲಿಕ್ಕೆ ಬರುತ್ತದೆ. ಜಗತ್ತಿನಲ್ಲಿ ಅರಳೆಯ ಬಟ್ಟೆಗಿಂತ ಬೇರೊಂದು ಆರೋಗ್ಯಕರವಾದ ವಸ್ತ್ರವಿಲ್ಲೆಂದು ಕರ್ನಲ್ ಸೆಡಸ್ ಬ್ರೌನರ ಮತವಿದೆ.

## ಸತ್ತವರನ್ನು ಮತ್ತೆ ಎಚ್ಚರಿಸುವದು

ರಕ್ತಾಶಯದ ರೋಗಚಿಕಿತ್ಸೆಯಲ್ಲಿ ನಿಪುಣನಾದ ಒಬ್ಬ ಡಾಕ್ಟರನು ಸಿಡ್ನೆ (ಆಸ್ಟ್ರೇಲಿಯಾ)ಯಲ್ಲಿ ವಿದ್ಯುತ್ತಿನ ಸೂಚಿಯನ್ನು ಎದೆಯಲ್ಲಿ ಚುಚ್ಚಿ ಸತ್ತವನನ್ನು ಮರಳಿ ಎಚ್ಚರಿಸಿದನು. ಈ ಉಪಾಯದಿಂದ ಹುಟ್ಟುತ್ತಲೆ ಸತ್ತ ಎಳೆಮಕ್ಕಳನ್ನು ಮಾತ್ರ ಬದುಕಿಸಬಹುದೆಂದು ಆತನು ಹೇಳುತ್ತಾನೆ. ಆದರೆ ಆಕಸ್ಮಿಕ ಮರಣ ಬಂದವರೂ, ನೀರಿನಲ್ಲಿ ಮುಳುಗಿ ಅಥವಾ ಧಕ್ಕಿ ತಗಲಿ ತೀರಿದವರೂ. ಸಹ ಜೀವಂತರಾಗುವುದು ಶಕ್ಯವಿದೆಯೆಂದೂ ತೋರುತ್ತದೆ.

ಮನುಷ್ಯನು ಉಸಿರಾಡಿಸುವುದನ್ನು ನಿಲ್ಲಿಸುತ್ತಲೆ ಸತ್ತಂತೆ ಆಗಲಿಲ್ಲ; ಅಥವಾ ಅವನ ನಾಡಿಗಳು ಹಾರುವುದು ಕಟ್ಟಾದ ಕೂಡಲೆ ಸಹ ಪ್ರಾಣಹೋಯಿತೆಂದು ತಿಳಿಯುವ ಕಾರಣವಿಲ್ಲೆಂಬುದು ಸಿದ್ಧವಾಗಿ ಬಹಳ ದಿನಗಳಾದುವು.

ಮಾಸ್ಕೋ ಪಟ್ಟಣದ ಶಾಸ್ತ್ರಜ್ಞರು ಒಂದು ಔಷಧಿಯನ್ನು ಸಿದ್ಧಪಡಿಸಿ ನಾಯಿಯ ಮೇಲೆ ಪ್ರಯೋಗಿಸಿದರು. ಓಣಿಯಲ್ಲಿ ಅಪಘಾತದಿಂದ ಮೃತವಾದ ನಾಯಿಯು ಅದರಿಂದ ಸಜೀವವಾಯಿತು. ಇದೇ ಶಾಸ್ತ್ರಜ್ಞನು ಜೀವ ಹೋಗಿ ೩೪ ತಾಸುಗಳಾದ ಒಂದು ದೇಹವನ್ನು ತಂದು ಅದನ್ನು ಆ ಔಷಧಿಯ ಸಹಾಯದಿಂದ ಬದುಕಿಸಲು ಬಹಳ ಪರಿಶ್ರಮಪಟ್ಟರು. ಜೀವವು ಒಂದು ನಿಮಿಷಾರ್ಧದವರೆಗೆ ಮಾತ್ರ ಮರಳಿ ಬಂದು ಮತ್ತೆ ಹೋಯಿತು.

ರಸಿಯದ ಇನ್ಜಿನೀರರು ಶಾಸ್ತ್ರಜ್ಞರು ಇನ್ನೊಂದು ಬಗೆಯಿಂದ ಪ್ರಯತ್ನಿಸುತ್ತಿದ್ದಾರೆ. ನಿಜವಾಗಿಯೂ ಸಾಯುವ ಮುಂಚಿತವಾಗಿ ೨–೩ ದಿನ ರಕ್ತಾಶಯದ ಕ್ರಿಯೆಯು ಕಟ್ಟಾಗುವುದೆಂದು ಕಂಡುಹಿಡಿದು, ಒಂದು ಕೃತ್ರಿಮ ರಕ್ತಾಶಯವನ್ನು ಸಿದ್ಧಪಡಿಸಿ ಅದರ ಸಹಾಯದಿಂದಲೆ ಶರೀರದೊಳಗಿನ ರಕ್ತಸಂಚಲನವನ್ನು ನಡಿಸಬೇಕೆಂದು ಎತ್ತುಗಡೆ ಮಾಡಿದ್ದಾರೆ.

ಈ ಉಪಾಯದಿಂದ ಈ ವರೆಗೂ ಅಸಾಧ್ಯವೆನಿಸಿದ್ದ ರಕ್ತಾಶಯದ ಮೇಲಿನ ಶಸ್ತ್ರಕ್ರಿಯೆಯು ಸಾಧ್ಯವೆಂದೆನಿಸಲಾರಂಭಿಸಿದೆ. ಅಮೇರಿಕೆಯಲ್ಲಿ ಕೃತ್ರಿಮ ರಕ್ತಾಶಯದ ಸಹಾಯದಿಂದ ಒಂದು ಬೆಕ್ಕಿನ ಶಸ್ತ್ರಕ್ರಿಯೆಯನ್ನು ಮಾಡಿದ್ದಾಗಿದೆ.

ಒಬ್ಬ ಫ್ರೆಂಚ ಶಾಸ್ತ್ರಜ್ಞನು ರಕ್ತದ ಕಾರ್ಯವನ್ನೇ ಮಾಡುವಂತಹ ಇನ್ನೊಂದು ದ್ರವ್ಯವನ್ನು ತಯಾರಿಸಿದ್ದಾನೆ. ೧೦೦ಕ್ಕೆ ೫೦,೬೦ ರಂತೆ ನೆತ್ತರವು ಕಡಿಮೆಯಾದ ರೋಗಿಗಳಿಗೆ ಈ ದ್ರವ್ಯವನ್ನು ಕೊಟ್ಟು ಗುಣಪಡಿಸಿದ್ದುಂಟು.

ಆದರೆ ಇಷ್ಟರಿಂದಲೇ ಮನುಷ್ಯನು ಮರಣವನ್ನು ಗೆದ್ದಂತಾಗಲಿಲ್ಲ. ಹೊಸ ಎಲುಬು (ಮೂಳೆ), ರಕ್ತನಾಡಿಗಳು

ಜ್ಞಾನತಂತುಗಳು ಇವೇ ಮೊದಲಾದವುಗಳನ್ನು ಸಿದ್ಧಪಡಿಸುವುದು ಸಾಧ್ಯವಾಗಿಲ್ಲ. ಆದರೂ ಆಕಸ್ಮಿಕ ಸಾವು ಬಂದವರಿಗೆ ಮತ್ತೆ ಜೀವಂತರನ್ನಾಗಿ ಮಾಡುವ ಉಪಾಯಗಳು ಸಾಧ್ಯವಾದರೂ ಜಗತ್ತಿಗೆ ಆಗುವ ಲಾಭವು ಅಷ್ಟಿಷ್ಟಲ್ಲ.

—ಸಂಡೇ ಸನ್

---

## ಮುಂಬೈ ಇಲಾಖೆಯ ಮೋಟಾರ ಮಾರ್ಗದರ್ಶಕ ( ಗೈಡು )

ಮುಂಬೈ ಇಲಾಖೆಯೊಳಗಿನ ಮೋಟಾರ ಸರ್ವೀಸಿನ ದಾರಿಗಳ ನಕ್ಷೆ ಸಹಿತ ಸಂಪೂರ್ಣ ಮಾಹಿತಿಯೊಡನೆ ಮುಂಬೈ ಸರಕಾರದವರು ಪ್ರಪಟಿಸಿದ್ದಾರೆ. ಸುಮಾರು ೪೦೦ ದಾರಿಗಳ ಮತ್ತು ೧೦೦೦ ಸಣ್ಣ ದೊಡ್ಡ ಊರುಗಳ ಮಾಹಿತಿಯಿದೆ. ಮೊದಲು ಇದರ ಬೆಲೆ ೧೦ ರೂ. ಇತ್ತು; ಈಗ ೬ರೂ. ಆಗಿದೆ. ೧೨ ಪುಸ್ತಕ ಕೊಳ್ಳುವ ಪುಸ್ತಕ ವ್ಯಾಪಾರಿಗಳಿಗೆ ೪-೮-೦ ಬೆಲೆ. ಪುಸ್ತಕ ವ್ಯಾಪಾರಿಗಳಿಗೆ ಯಾವಾಗಲೂ ಅಂಚೆವೆಚ್ಚವಿಲ್ಲದೆ ದೊರೆಯುವವು. 'ಸುಪರಿಂಟೆಂಡೆಂಟ ಗವರ್ಮೆಂಟ ಪ್ರಿಂಟಿಂಗ ಎಂಡ ಸ್ಟೇಶನರಿ' ಜರ್ನಿರೋಡ ಗಾರ್ಡನ್ಸ ಬೊಂಬೆ, ವಿಳಾಸಕ್ಕೆ ಬರೆದರೆ ಪುಸ್ತಕಗಳು ದೊರೆಯುವವು.

## ಸರಕಾರದ ಸಂಕಟ

ಇಂಗ್ಲಂಡಿನಲ್ಲಿ ಅಧಿಕಾರಾರೂಢವಾದ ಲೇಬರ ಪಕ್ಷದಲ್ಲಿ ವಿಚಾರಶೀಲರೆಂದು ಹೆಸರು ಪಡೆದಿರುವ **ಬ್ರೇಲ್ಸಫರ್ಡ್** ಎಂಬವರು ಹಿಂದುಸ್ಥಾನದ ಸದ್ಯದ ರಾಜಕೀಯ ಪರಿಸ್ಥಿತಿಯ ವಿಷಯವಾಗಿ ಅಭಿಪ್ರಾಯಪಟ್ಟಿದ್ದರ ಸಾರಾಂಶ:—

ಗಾಂಧಿಯವರನ್ನು ಬ್ರಿಟಿಷರ ಬಂದಿವಾಸದಲ್ಲಿ ಇಟ್ಟಿದ್ದಕ್ಕೆ ಯಾರಿಗೂ ಸಂತೋಷವಿಲ್ಲ. **ಆಯರ್ವಿನ** ದೊರೆಗಳೂ ಬೆನ್ನರೂ ಜನರನ್ನು ಸೆರೆಹಿಡಿಯುವದನ್ನೂ, ವಿಚಾರಣೆಯಿಲ್ಲದೆ ಸೆರೆಮನೆಗಟ್ಟುವದನ್ನೂ, ಪತ್ರಿಕೆಗಳಿಗೆ ಬಾಯ್ಬೀಗಹಾಕುವದನ್ನೂ ಅತಿ ಪ್ರೀತಿಯಿಂದ ಮಾಡುತ್ತಾರೆಂದು ಹೇಳಲಿಕ್ಕೆ ಬರುವದಿಲ್ಲ. ಮನಸ್ಸಿಗೆ ಸೇರಲಾರದಾಯಿತೆಂದರೆ, ಮಾಡುತ್ತ ಹೋಗುವದು ತಲೆಭಾರವಾಗುವದು. ಗಾಂಧಿಯವರೂ ಇದನ್ನೇ ಬಯಸಿದ್ದರೆಂದು ತೋರುತ್ತಿದೆ. ಹಿಂದುಸ್ಥಾನವನ್ನು ಆಳುವದು ನಮಗೆ ಒಲ್ಲೆನಪ್ಪಾ! ಎಂದು ಎನಿಸುವಂತೆ ಮಾಡಬೇಕೆಂದು ಅವರ ಇಚ್ಛೆ ಇರಬೇಕು. **ಹಿಂದುಸ್ಥಾನವನ್ನು ಆಳುವದರಲ್ಲಿ ಇಂದು ಯಾರಿಗೆ ಸುಖವಿದೆ?** ಬೆನ್ನರು ಪ್ರಬಲವಾದ ಕರ್ಮಚಕ್ರದಲ್ಲಿ ಸಿಲುಕಿ, ಅಕಲ್ಪಿತ ಅನಿಚ್ಛಿತ ಕರ್ಮಕ್ಕೆ ಉದ್ಯುಕ್ತರಾಗಿದ್ದಾರೆ.

**ಟಾಲಾಸ್ಟಿಯನ** ತರುವಾಯ ಗಾಂಧಿಯವರೇ ಜಗದ್ವಂದ್ಯರಾದ ಸಾಧುಶ್ರೇಷ್ಠರು. ಅಂತೆಯೆ ಈ ಅನಿಚ್ಛಿತಪ್ರಸಂಗಕ್ಕಾಗಿ ಎಲ್ಲರೂ ವಿಷಾದಿಸುವದು. **ಗಾಂಧಿಯವರಿಂದು ಮನುಷ್ಯಸಿದ್ಧಿಯ ಉಚ್ಚತಮಶಿಖರದಲ್ಲಿ ನಿಂತಿರುವರು.** ಕ್ಷುದ್ರಸುಖದ ಬೆನ್ನುಹತ್ತಿದ ಈ ಜಗತ್ತಿನಲ್ಲಿ ಸಾಧುಪುರುಷನಿಗೆ ಇನ್ನೂ ಆದರವಿದೆ. **ಒಬ್ಬ ಸಾಧುವನ್ನು ನಾವು ಸೆರೆಮನೆಗಾಣಿಸಿದುದರಿಂದ ಸುಧಾರಿಸಿದ ಎಲ್ಲಾ ರಾಷ್ಟ್ರಗಳ ಅಂತಃಕರಣವು ಬ್ರಿಟಿಷ ಸಾಮ್ರಾಜ್ಯದ ವಿಷಯವಾಗಿಯೂ ಲೇಬರ ಸರಕಾರದ ವಿಷಯವಾಗಿಯೂ ನೊಂದುಕೊಳ್ಳುವದರಲ್ಲಿ ಸಂಶಯವಿಲ್ಲ.**

ಹಿಂದುಸ್ಥಾನದಲ್ಲಂತೂ ಜನರ ಮನಸ್ಸು ಹೆಚ್ಚು ದೂಷಿತವಾಗಲುಬೇಕು. ಜಿತೇಂದ್ರಿಯನು ಇಂದ್ರಾದಿಗಳನ್ನೂ ಗೆಲ್ಲಬಲ್ಲನೆಂದು ಅವರ ಶ್ರದ್ಧೆ. ಪಾರ್ಥಿವರಾಜರಂತೂ ಆತನಿಗೆ ಎಷ್ಟು ಹೆದರಬೇಕು!

ಸರಕಾರಕ್ಕೂ ದೊಡ್ಡ ಪೇಚುಬಿದ್ದಿತ್ತು. ಹಿಡಿದರೆ ರಾಷ್ಟ್ರವನ್ನೇ ಕೆಣಕಿದಂತಾಗುವದು. ಬಿಟ್ಟರೆ ತನ್ನ ಬಲಹೀನತೆಯು ಪ್ರದರ್ಶನವಾಗುವದು. ವಿಚಾರಿಸಿ, ವಿಚಾರಿಸಿ ಕೊನೆಗೆ ನಿರ್ಧರಿಸಬೇಕಾಯಿತು. ದೈವವು ಸರಕಾರವನ್ನು ನಿರ್ಧಾರಕ್ಕೆ ತಂದೇಬಿಟ್ಟಿತು. **ಅದು ಆಳುತ್ತಿರುವದು ಆಳಲ್ಪಡುವವರ ಸಮ್ಮತಿಯಿಂದಲ್ಲ— ಅವರನ್ನು ಹೆದರಿಸುತ್ತ.**

ಸರಕಾರವು ಬೇರೆ ಬಗೆಯಿಂದ ಆಚರಿಸುವದು ಅಸಾಧ್ಯವೇ ಇದ್ದಿತೆಂದು ಅನ್ನುವಂತಿದೆ. ಆದರೆ ನಿಷ್ಪಕ್ಷಪಾತಿಯಾದ ಪ್ರೇಕ್ಷಕನು ಅನ್ನಬಹುದು—**ಗಾಂಧಿಯವರಂಥವರನ್ನು ಸೆರೆಹಿಡಿಯಬೇಕಾಗಿ ಬಂದ ಸರಕಾರವು ಒಳ್ಳೆಯ ನಾಗರಿಕರ ಮನ್ನಣೆಗೆ ಏನೆಂತ ಪಾತ್ರವಾಗುವದೋ!**

ಗಾಂಧಿಯವರ ಅರ್ಥಶಾಸ್ತ್ರವು ನಮಗೆ ಒಗ್ಗಲಿಕ್ಕಿಲ್ಲ. ಅವರ ವಿರಕ್ತವೃತ್ತಿಯು ಅರ್ಥವಾಗಲಿಕ್ಕಿಲ್ಲ. ಹಿಂದುಸ್ಥಾನದಲ್ಲಿ ಬಡವರಬಗ್ಗರ, ಕೂಲಿಕಾರರ, ಅಸ್ಪೃಶ್ಯರ, ಹೆಣ್ಣುಮಕ್ಕಳ ಉನ್ನತಿಗೆ ಹೆಚ್ಚುಮಟ್ಟಿಗೆ ಅವರೇ ಕಾರಣರೆಂದೂ, ಕದನ ಮಾಡುವ ಪಕ್ಷಸಂಘಗಳಿಗೆ ಸಹಿಷ್ಣುತೆಯನ್ನು ಕಲಿಸಿದರೆಂದೂ ಎಲ್ಲರೂ ಒಪ್ಪಬೇಕಾಗಿದೆ. ಆದರೆ ರಾಜಕೀಯ ಪಾರತಂತ್ರ್ಯದ

ದೆಸೆಯಿಂದ ಅವರ ಸಮಾಜಸೇವೆಯ ಉತ್ಕಂಠತೆಯು ಸಫಲ ವಾಗಲೊಲ್ಲದು. ನಮ್ಮ ಆಳಿಕೆಯನ್ನು ಬೇರುಸಹಿತ ನಾಶಗೊಳಿಸುವವರೆಗೂ ತಮ್ಮವರ ಬಡತನವೂ, ಸಾಮಾಜಿಕ ಹೀನಸ್ಥಿತಿಯೂ ಬಯಲಾಗವೆಂದು ಅವರಿಗೆ ಅನಿಸುವದು. **ಅವರ ಹೋರಾಟದ ಗುಟ್ಟು ಅವರ ಸೇವಾಪ್ರಿಯಜೀವನದಲ್ಲಿದೆ.**

ಯಶಸ್ಸು ಕಟ್ಟಿಟ್ಟದೇ. ಬರೀ ಹೊತ್ತಿನ ಪ್ರಶ್ನೆಯಿದೆ. ಹೇಗೋ ಹೇಳಲಾಗದು. **ನಮ್ಮ ಶಕವು ಮುಗಿತಾಯಕ್ಕೆ ಬಂದಿದೆ.** ಇಂಗ್ಲಿಷರು ಹಿಂದುಸ್ಥಾನವನ್ನು ಸಮಕ್ಷಮ ಆಳುವದಂತೂ ಕೆಲದಿನಗಳಲ್ಲಿಯೇ ಅಸಂಭವವಾಗಲೇಬೇಕು. ಪ್ರಾಂತಿಯ (ಇಲಾಖೆಯ) ಸ್ವರಾಜ್ಯವು ಸಿಕ್ಕುವದಂತೂ ಖಂಡಿತ.

ನಾವು ಸಿದ್ಧಪಡಿಸಿದ ವೇಲಾಪತ್ರಿಕೆಯ (Time-Table) ಪ್ರಕಾರ ವರ್ತುಲ ಪರಿಷತ್ತು (Round Table Conference) ಕೊನೆಗಾಣಲಿಕ್ಕೆ ೮-೯ ತಿಂಗಳುಗಳಾದರೂ ಬೇಕು. ಆ ವರೆಗೆ ದಬ್ಬಾಳಿಕೆಯಿಂದ ಹಿಂದುಸ್ಥಾನದಲ್ಲಿ ಶಾಂತಿಯನ್ನಿಡಬಹುದೆಂಬ ಬಗ್ಗೆ ಆಯರ್ವಿನ್ನರಿಗಾದರೂ ಎಷ್ಟು ವಿಶ್ವಾಸವಿದೆಯೋ ಹೇಳಲಿಕ್ಕಾಗದು.

ಆದರೆ ಆ ವರೆಗೆ ಹಿಂದೀ ಜನರ ಇದ್ದ ಬಿದ್ದ ಪ್ರೀತಿವಿಶ್ವಾಸಗಳೂ ಮುಳುಗಿಹೋಗುವದರಲ್ಲಿ ಸಂದೇಹವಿಲ್ಲ. ಗಾಂಧಿ, ಜವಾಹರಲಾಲ, ಸೇನಗುಪ್ತ ಮೊದಲಾದ ಲೋಕಪ್ರಿಯ ಮುಖಂಡರು ಸೆರೆಮನೆಯಲ್ಲಿದ್ದಾಗ ಮಂದಪಕ್ಷದವರಾದರೂ ಅಸಂತುಷ್ಟರಾಗದೆ ಉಳಿಯುವರೇ ?

**ಆದುದರಿಂದ ವರ್ತುಲ ಪರಿಷತ್ತು ವ್ಯರ್ಥಶ್ರಮವು. ಕಾಲಚಕ್ರವು ಬೆನ್ನರ ವೇಲಾಪತ್ರಿಕೆಯನ್ನು ತಿರುವುಮುರುವು ಮಾಡಿದೆ.** ಅವರು ಕೈಕೊಳ್ಳಬೇಕಾದ ಉಪಾಯಗಳು ಅವರ ರಾಜನೀತಿಗೇ ಮುಳುವಾಗಿರುವವು.

**ಮತ್ತೆ ಹೊಸದಾಗಿ ಹೂಡುವದರ ಹೊರತು ಗತಿಯಿಲ್ಲ.** ಹೊಸ ಪ್ರಕಟನೆ ಬೇಕು. ತತ್ವಗಳ ಹೊಸ ಉಚ್ಚಾರಬೇಕು. ವರ್ತುಲ ಪರಿಷತ್ತಿನ ಹಾದೀ ನೋಡಲಾಗದು. ಪ್ರಾಂತೀಯ ಸ್ವರಾಜ್ಯವನ್ನು ಈಗಲೇ ಕೊಡಬೇಕು. ಮಸಾಪತಿನ ಸ್ವರಾಜ್ಯದ ಮೆಟ್ಟಲುಗಳನ್ನು ನಿರ್ಧರಿಸಬೇಕು. ಕಾರಾಗೃಹದಲ್ಲಿದ್ದವರನ್ನೂ ಪರಿಷತ್ತಿಗೆ ಕರೆಯಬೇಕು.

ಬಾಲ್ಡವಿನ್ನರಿಗೂ ಲಾಯಿಡ ಜಾರ್ಜರಿಗೂ ಸ್ಪಷ್ಟವಾಗಿ ಹೇಳುವಾ: **ಹಿಂದುಸ್ಥಾನವನ್ನು ಸ್ವರಾಜ್ಯದ ಮೆಟ್ಟಲಿಗೆ ಒಯ್ಯಲಿಕ್ಕೆ ಅವರು ಒಪ್ಪದಿದ್ದರೆ ನಾವು ಅಧಿಕಾರ ಸಂನ್ಯಾಸವನ್ನು ಮಾಡುವೆವೆಂದು.**

## ಕೆಲ ಸುದ್ದಿಗಳು

ಇತ್ತೀಚಿಗೆ ಅಮೇರಿಕದಲ್ಲಿ ಇಂಗ್ಲಿಷ ಶಬ್ದಗಳ Spelling Competition ಅಕ್ಷರಗಳ ಜೋಡಣೆಯ ಸ್ಪರ್ಧೆ ನಡೆದು ಅದರಲ್ಲಿ ಒಬ್ಬ ಅಮೇರಿಕ ಪತ್ರಿಕೆಯ (Reporter) ಬಾತ್ಮೆದಾರನು ಉಚ್ಚಸ್ಥಾನವನ್ನು ಪಡೆದಿರುವನು.

ಫ್ರಾನ್ಸಿನಲ್ಲಿ ಒಬ್ಬ ಮಹಿಳೆಯು ಗಂಡಸರ ಉಡುಪನ್ನು ಧರಿಸಿದ ಸಂಬಂಧ ಹೆಂಗಸರ ಕ್ಲಬ್ಬಿನಿಂದ ಹೊರಡಿಸಲ್ಪಟ್ಟಿದ್ದರಿಂದ ಆ ವಿಷಯ ತನ್ನ ಹಕ್ಕನ್ನು ಸ್ಥಾಪಿಸುವ ಬಗ್ಗೆ ಫ್ರೆಂಚ ನ್ಯಾಯಸ್ಥಾನದಲ್ಲಿ ಒಂದು ಮೊಕದ್ದಮೆಯನ್ನು ದಾಖಲ್ಮಾಡಿರುವಳು.

ಚೀನಾ ದೇಶದಲ್ಲಿ ಪೂರಾ ನೆಮ್ಮದಿಯಿಲ್ಲವಾದರೂ ಇತ್ತೀಚಿಗೆ ಆರೋಗ್ಯ ಸಂಬಂಧ ಅವರು ಹೆಚ್ಚಿನ ಸುಧಾರಣೆಗಳನ್ನು ಜಾರಿಗೆ ತಂದಿರುವರು. ವಾಯು ಹಡಗಗಳನ್ನು ಅಮೇರಿಕದಿಂದ ಕೊಂಡುಕೊಳ್ಳುತ್ತಿರುವರು. ಆಧುನಿಕ ನಾಗರಿಕತೆಯ ಮಾರ್ಗದಲ್ಲಿ ಹೆಜ್ಜೆಯನ್ನಿಡುತ್ತಿರುವರು.

ಬ್ರಹ್ಮದೇಶದಲ್ಲಿ ಮೇ ತಿಂಗಳಲ್ಲಿ ಆದ ಭೂಕಂಪದಿಂದ ಪೆಗು ಮೊದಲಾದ ಪ್ರಾಂತ್ಯಗಳಲ್ಲಿ ಹೆಚ್ಚಿನ ಜನನಾಶವೂ ನಷ್ಟವೂ ಆಗಿರುವದು.

ಇಂಡೋಚ್ಯಾನಾದೇಶದಲ್ಲಿ ಫ್ರೆಂಚ ಸರ್ಕಾರದವರಿಗೂ ಅಲ್ಲಿನ ಜನರಿಗೆ ಸಹಾ ಪರಸ್ಪರ ವೈಷಮ್ಯ ಹುಟ್ಟಿ ದೊಂಬಿಗಳು ನಡೆಯಿತು.



# ಕನ್ನಡಿಗರೂ ಭಾಷಾಭ್ಯಾಸವು

## ಒಂದು ಮುನ್ನುಡಿ

( ನಿರೀಕ್ಷಕನೀದ )

೧

ಭಾಷೆಯು ಮನುಷ್ಯನ ಮನುಷ್ಯತ್ವದ ಲಕ್ಷಣಗಳಲ್ಲೊಂದು. ಸ್ಪಂದನ, ದರ್ಶನ, ಆಕ್ರಂದನಗಳಿಂದ ವನಸ್ಪತಿ, ಕ್ರಿಮಿಕೀಟಕ, ಪಶುಪಕ್ಷಿಗಳು ತಮ್ಮ ತಮ್ಮ ಸುಖದುಃಖಗಳನ್ನು, ರಾಗದ್ವೇಷಗಳನ್ನು ಹೊರಪಡಿಸುವವು. ಮಾನವನ ವೈಖರಿಯು ಅವನ ಬುದ್ಧಿಪ್ರಭಾವದ ಒಳ್ಳೆ ನಿದರ್ಶನವಾಗಿದೆ. ಭಿನ್ನ ಭಿನ್ನ ಭಾಷೆಗಳು ಸಂಸ್ಕೃತಿಯ ಜೇಧದ ಕುರುಹುಗಳು. ಕೀರ ಕಾಡುಸ್ಥಿತಿಯಲ್ಲಿರುವ ಜನರ ಭಾಷೆಯಲ್ಲಿಯೂ ಎಲ್ಲಬಗೆಗಳಿಂದಲೂ ಮುಂದುವರಿದ ಜನರ ಭಾಷೆಯಲ್ಲಿಯೂ ಮಹದಂತರವಿರುವದು. ಕಾಡುಜನರ ಭಾಷೆ ಕೂಡ, ಮೂಕ ಸನ್ನೆಗಳಿಗಿಂತಲೂ ಕೂಗು—ಕೇಕೆಗಳಿಗಿಂತಲೂ ಎಷ್ಟೋ ಮೇಲು. ವಸ್ತು ವಸ್ತುಗಳೊಳಗಿನ, ಭಾವ ಭಾವಗಳೊಳಗಿನ ಭೇದಗಳು ಹೆಚ್ಚು ಹೆಚ್ಚು ನಿಚ್ಚಳವಾಗುತ್ತ ಹೋದ ಹೋದಂತೆ, ನಾಮಕರಣದಲ್ಲಿ ವೈವಿಧ್ಯವು ಉಂಟಾಗಲೇ ಬೇಕಾಗುವದು. ಮನುಷ್ಯನ ಬುದ್ಧಿ ಅಂತಃಕರಣಗಳು ಸಂಸ್ಕಾರಹೊಂದಿದಂತೆ ಅವನ ಭಾಷೆಯೂ ಸಂಸ್ಕಾರಹೊಂದುವದು. ಅವನ ಜ್ಞಾನೇಂದ್ರಿಯಗಳ ಶಕ್ತಿಯು ಬೆಳೆದಂತೆ, ಅವನ ಕಾರ್ಯಕಲಾಪವು ವಿಸ್ತಾರಹೊಂದಿದಂತೆ, ಅವನ ವಿಚಾರಗಳೂ ಮನೋವಿಕಾರಗಳೂ ಸೂಕ್ಷ್ಮವಾದಂತೆ, ಅವನ ಅನುಭವವು ಸುಸ್ಪಷ್ಟವಾದಂತೆ ಅಡಿಗಡಿಗೆ ಅವನ ಭಾಷೆಯೂ ಸುಸಂಪನ್ನವಾಗುವದು. ಪೂರ್ವದ ಕನ್ನಡ ನುಡಿಯು ಆಗಿನ ಕನ್ನಡಿಗರ ಸಂಸ್ಕಾರ ಸಂಪನ್ನತೆಯನ್ನೂ, ಈಗಿನ ಕನ್ನಡನುಡಿಯು ಇಂದಿನ ಕನ್ನಡಿಗರ ಸಂಸ್ಕಾರವಿಪನ್ನತೆಯನ್ನೂ ತೋರಿಸುವವು.

ಭಾಷಾಭೇದವು ಜನರ ಭಿನ್ನರುಚಿಯ ಅವಶ್ಯಕವಾದ ಪರಿಣಾಮವು. ಆದರೆ ನಮ್ಮ ಭಾಷೆಯಿಂದ ನಮ್ಮ ಹೃದ್ಗತವನ್ನು ತಿಳುಹಲು ಬರುವಂತೆ, ಇನ್ನೊಬ್ಬರ ಭಾಷೆಯಿಂದ ಅವರ ಹೃದ್ಗತವನ್ನು ತಿಳಿದುಕೊಳ್ಳಲು ಬರುವದು. ಹೀಗೆ ಭಾಷೆಗಳಿಂದಲೇ ಜಗತ್ತಿನಲ್ಲಿ ಭೇದಗಳುಂಟಾಗಿದ್ದರೂ ಭಾಷೆಯೇ ಜಗತ್ತಿನ ಐಕ್ಯಕ್ಕೆ ಒಂದು ಮುಖ್ಯೋಪಾಯವಾಗಿದೆ. ಒಂದು ಭಾಷೆಯನ್ನು ಚೆನ್ನಾಗಿ ಬಲ್ಲವನು ಇನ್ನೊಂದು ಭಾಷೆಯನ್ನು ತಿಳಿದುಕೊಳ್ಳುವದು ಅಷ್ಟು ಬಿಗಿಯಲ್ಲ. ಮೇಲಾಗಿ ದೇಶದೇಶಗಳ ಹತ್ತುಗಡೆಯ ಮೂಲಕ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಬಲ್ಲವರು ಲಕ್ಷಾವಧಿ ಜನರಿರುವರು. ಈ ಜನರು ವಿವೇಕಿಗಳಾದರೆ ಭಿನ್ನಭಾಷಾಸಮಾಜಗಳಲ್ಲಿ ಒಕ್ಕಟ್ಟು ಬೆಳೆಸುವದು ಸುಲಭವಾಗದಿರಲಾರದು. ಅವಿವೇಕವಿದ್ದಲ್ಲಿ ಭಾಷಾಭೇದವು ಎರಡು ನಾಡುಗಳ ನಡುವಿನ ಗುಡ್ಡದಂತೆ ಪ್ರಗತಿಗೆ ಒಂದು ತೊಂದರೆ; ವಿವೇಕವಿದ್ದಲ್ಲಿ ಭಾಷಾಭೇದವು ಎರಡು ಸೀಮೆಗಳ ನಡುವಿನ ಹೊಳೆಯಂತೆ ಪ್ರಗತಿಗೆ ಒಂದು ಉಪಾಯ. ಭಾಷಾಭೇದವನ್ನು ಗುಡ್ಡವನ್ನಾಗಿ ಮಾಡಿಕೊಳ್ಳುವದೂ ಹೊಳೆಯನ್ನಾಗಿ ಮಾಡಿಕೊಳ್ಳುವದು ಅಲ್ಲಲ್ಲಿಯ ಜನರ ವಿವೇಕವನ್ನು ಕೂಡಿದೆ. ಹಿಂದುಸ್ಥಾನದ ಇಂದಿನ ಸ್ಥಿತಿಯಲ್ಲಿ ಭಾಷಾಭೇದವು ಗುಡ್ಡವಾಗುತ್ತಲಿದೆ; ನಾಳೆ ಹೊಳೆಯಾಗಬಹುದು. ಭಿನ್ನಭಾಷಾಭ್ಯಾಸವು ಭೇದವನ್ನು ಮೀರಿ ಐಕ್ಯವನ್ನು ಸಾಧಿಸುವ ಉತ್ಕಟ ಉಪಾಯವು.

ಭಿನ್ನಭಾಷಾಭ್ಯಾಸದ ಅವಶ್ಯಕತೆಗೆ ಇನ್ನೊಂದು ಕಾರಣವನ್ನು ಹೇಳಬಹುದು. ಪ್ರತಿಯೊಂದು ದೇಶದ ರಾಜಕೀಯ ಧಾರ್ಮಿಕ ಸಾಮಾಜಿಕ, ಸಾಂಸ್ಕೃತಿಕ ಇತಿಹಾಸವನ್ನು ಬರೆಯಬೇಕಾದರೆ ಆ ದೇಶದ ಭಾಷೆಯನ್ನಷ್ಟೆ ತಿಳಿದು ಸಾಗುವದಿಲ್ಲ. ಅದರ ಸುತ್ತುಮುತ್ತಲಿನ ಜನಾಂಗಗಳ, ಪ್ರಾಂತಗಳ ಭಾಷೆಗಳನ್ನೂ ಅದರ ಸಂಸರ್ಗಸಂಪರ್ಕದಲ್ಲಿ ಬಂದ ಇನ್ನು ಬೇರೆ ಜನರ ಭಾಷೆಗಳನ್ನೂ ತಿಳಿದುಕೊಳ್ಳದೆ ಅವರ ಇತಿಹಾಸಕ್ಕೆ ಸಮಗ್ರತೆ ಬರುವದೇ ಇಲ್ಲ. ಹಿಂದುಸ್ಥಾನದ ಪ್ರಾಚೀನ ಇತಿಹಾಸವನ್ನು ಅಭ್ಯಾಸ ಮಾಡುವವರು ಸಂಸ್ಕೃತವನ್ನಲ್ಲದೆ ಗ್ರೀಕ ಭಾಷೆಯನ್ನು ಅರಬ್ಬಿ ಮತ್ತು ಪರ್ಸಿಯನ್ ಪಹಲವಿಯನ್ನು, ಪಾಲಿಯನ್ನು, ದ್ರಾವಿಡ ಭಾಷೆಗಳನ್ನು ಪ್ರಾಕೃತ, ಅಪಭ್ರಂಶ ಪೈಶಾಚಿಗಳನ್ನೂ ಅಭ್ಯಾಸಮಾಡಬೇಕಾಗುವದು. ಹಾಗೆಮಾಡದೆ ಬರಿಯ ಸಂಸ್ಕೃತಾಭ್ಯಾಸದಿಂದ ಪ್ರಾಚೀನಚರಿತ್ರೆಯ ನಿರೂಪಣವು ಪೂರ್ಣತೆಯನ್ನು ಹೊಂದಲಾರದು.

ವಿವಿಧ ಭಾಷಾಭ್ಯಾಸಕ್ಕೆ ಸದ್ಯದ ಹಿಂದುಸ್ಥಾನವು ಒಳ್ಳೇ ಅನುಕೂಲವಾಗಿದೆ. ಇಲ್ಲಿ ಸಾಮಾನ್ಯ ಸುಸಂಸ್ಕೃತ ಮನುಷ್ಯನಿಗೂ ಮೂರು ಭಾಷೆಗಳು ಬರುತ್ತವೆ. ಒಂದು ಜನ್ಮಭಾಷೆ, ಒಂದು ರಾಜಭಾಷೆ, ಒಂದು ಧರ್ಮಭಾಷೆ. ಇತ್ತೀಚೆ ರಾಷ್ಟ್ರಭಾಷೆಯೊಂದು ಸೇರಿಸಿ ಚತುರ್ಭಾಷಾಕೋವಿದರಲ್ಲದಿದ್ದರೂ ಚತುರ್ಭಾಷಾವಿದರ ಸಂಖ್ಯೆಯು ಹೆಚ್ಚಾಗುತ್ತಲಿದೆ. ಜನ್ಮಭಾಷೆಯು ಪ್ರಾಂತಭಾಷೆಯು ಬೇರೆ ಇದ್ದ ಪಕ್ಷದಲ್ಲಿ ಸುಸಂಸ್ಕೃತರಿಗೆ ಐದು ಭಾಷೆಗಳು ಬರುವದು ಅಪರೂಪವಲ್ಲ. ಸೊಲ್ಲಾಪುರ ಬಳ್ಳಾರಿ ಹೈದ್ರಾಬಾದ, ಮಂಗಳೂರು, ಬೆಂಗಳೂರುಗಳಂಥ ಪಟ್ಟಣಗಳಲ್ಲಿರುವವರಿಗೆ ತೆಲಗು ತಮಿಳು ಉರ್ದು, ಮರಾಠಿ, ತುಳು ಕೊಂಕಣಿಗಳಲ್ಲಿ ಒಂದೆರಡು ಭಾಷೆಗಳ ವ್ಯವಹಾರಿಕ ಜ್ಞಾನವಾಗದೆ ಇಲ್ಲ. ದಿಗಂತ ಕೀರ್ತಿಯುಳ್ಳ ಕವಿ ರವೀಂದ್ರರ ಮೂಲಕವಾಗಿ ಬಂಗಾಲಿ ಭಾಷೆಯ ಪರಿಚಯಮಾಡಿಕೊಂಡವರು ಎಷ್ಟೋ ಜನರಿರುವರಲ್ಲದೆ, ಅಲೌಕಿಕ ಪುರುಷರಾದ ಮಹಾತ್ಮಾಜಿಯವರ ಮೂಲಕ ಗುಜರಾಥಿಯನ್ನು ಓದಿಕೊಂಡವರು ಅಲ್ಪ ಸ್ವಲ್ಪ ಜನರಾದರೂ ಇರುವರು. ಅಂತೂ ಏನು, ಈಗಿನ ಕರ್ನಾಟಕದಲ್ಲಿ ಬಹು ಭಾಷಾವಿದರು ಅನೇಕ ಜನರಿರುವರಲ್ಲದೆ, ಅನೇಕಭಾಷಾವಿದರೂ ಸಾವಿರಾರು ಇರುವರು.

ಈ ಬಹುಭಾಷಾಜ್ಞಾನದ ಸದುಪಯೋಗವನ್ನು ಮಾಡಿಕೊಳ್ಳುವದಲ್ಲದೆ, ಈಗಿನ ಜಗತ್ತಿನ ಪರಿಸ್ಥಿತಿಗನುಸರಿಸಿ, ನೂತನ ಭಾಷೆಗಳನ್ನೂ ಕಲಿಯುವದೂ ಅವುಗಳ ಯುಕ್ತೋಪಯೋಗದಿಂದ ತಮ್ಮ ತಮ್ಮ ನಾಡಿನ ಜ್ಞಾನ ಸಂಪತ್ತಿಯನ್ನು, ಪ್ರಭಾವವನ್ನು, ಜಗತ್ತಿನೊಡನೆ ಒಂದಾಗುವ ಯೋಗ್ಯತೆಯನ್ನು ಹೆಚ್ಚುಮಾಡಿಕೊಳ್ಳಲೇಬೇಕು.

೨

ಕನ್ನಡಿಗರು ಮೊದಲು ಅಭ್ಯಸಿಸಬೇಕಾದದ್ದು ಕನ್ನಡ. ಕನ್ನಡದೇಶದಲ್ಲಿ ಹುಟ್ಟುವದರಿಂದಾಗಲಿ, ಬೆಳೆಯುವದರಿಂದಾಗಲಿ ಕನ್ನಡವು ಮಾತೃಭಾಷೆಯಿರುವದರಿಂದಾಗಲಿ ಕನ್ನಡವು ಬಂದು ಹಾಯಿತೆಂದು ಹೇಳಲುಬರದು. ಕೆಲಮಟ್ಟಿಗೆ ಸಾಲೆಯಲ್ಲಿ ಕನ್ನಡವನ್ನು ಓದುವದರಿಂದಲೂ ಕರ್ತವ್ಯವು ತೀರುವದಿಲ್ಲ. ಕರ್ತವ್ಯದ ಮಾತಿರಲಿ, ಆ ಕನ್ನಡವು ವಿವಿಧವ್ಯವಹಾರಗಳಿಗೂ ಸಾಕಾಗುವದಿಲ್ಲ. ಕರ್ನಾಟಕದ ಸಕಲಸಾಹಿತ್ಯದ, ವಾಙ್ಮಯದ ಅಭ್ಯಾಸವು ಸುಸಂಸ್ಕೃತ ಕನ್ನಡಿಗರಿಗೆ ಅಗತ್ಯ. ಹಳೆಯ ಸಾಹಿತ್ಯವಾಙ್ಮಯಗಳು ಹಳೆಯ ಜನರ ವಿವಿಧವಿಚಾರಭಾವನೆಗಳ ಮೂರ್ತಿಗೊಂಡ ಅವತಾರಗಳು. ಸಾಹಿತ್ಯವಾಙ್ಮಯಗಳು ಕೆಲಸವಿಲ್ಲದ ಜನರು ಮಾಡಿದ ಅನವಶ್ಯಕ ಭಾಷಾವಿಸ್ತಾರವಲ್ಲ. ಆದರೆ ಈಗಿನ ವಿಪರೀತ ಸ್ಥಿತಿಯು ಮೂಲಕ ಮಾತೃದೇಶಭಾಷೆಯ ಅಭ್ಯಾಸವನ್ನು ಸುವ್ಯವಸ್ಥಿತವಾಗಿ ಮಾಡುವವರು ಕಡಿಮೆ. ಹಳೆಯ ಸಾಹಿತ್ಯದಲ್ಲೇನಿದೆ ಎಂದು ಪಾಂಡಿತ್ಯದಿಂದ ಮೂಗುಮುರಿಯುವ ಪದವೀಧರರೆಷ್ಟೋ ಜನರಿರುವರು. ಇಂದಿನ ಇಳಿಗಾಲದಲ್ಲಿ ನಾವು ನಮ್ಮ ಸಾಹಿತ್ಯದ ಅಭ್ಯಾಸವನ್ನು ಮಾಡುವದಿಲ್ಲೆಂದು ನಾಳಿನ ಏಳಿಕೆಗಾಲದಲ್ಲಿ ಮಾಡಲಾರೆವೆಂದಲ್ಲ. ಹೊಟ್ಟೆಬಟ್ಟೆಗೆ ಸಾಟಿಮಾಡಿಕೊಂಡು ಹೇಗಾದರೂ ದೈನದಿಂದ ಸಂಸಾರವನ್ನು ಸಾಗಿಸುವ ಕಿರುಕುಳರಂತೆ, ಸಾಹಿತ್ಯ-ಸಂಸ್ಕೃತಿ-ಇತಿಹಾಸ- ವೈಭವಸಂಪನ್ನವಾದ ಕನ್ನಡನಾಡೂ ಸಿಕ್ಕ ನುಡಿಯೊಳಗಿನ ಮಾತುಗಳನ್ನು ಕೈಗೆ ಬಂದಂತೆ ತಕ್ಕೊಂಡು ಪ್ರಗತಿಪರತ್ವವೆಂಬ ಭ್ರಮದಲ್ಲಿ ಸಾಗುವದು ನಮ್ಮ ನಾಡಿನ ಪದವಿಗೆ ಭೂಷಣವಲ್ಲ. ಪರಭಾಷೆಯೊಳಗಿನ ಶಬ್ದಗಳನ್ನು ತಕ್ಕೊಳ್ಳುವದು ಅಗತ್ಯವೂ ಇದೆ. ಆದರೆ ಅಲ್ಲಿ ವಿವೇಕವು ಬೇಕು. ತಕ್ಕೊಳ್ಳುವಾಗ ನಮ್ಮ ನುಡಿಗೆ ಸರಿಹೋಗುವಂತೆ ಅವುಗಳಿಗೆ ಸಂಸ್ಕಾರವು ಬೇಕು. ಹೊರಗಿನ ದೆವ್ವ ಬಂದು ಮನೆಯ ದೇವರನ್ನೋಡಿಸಿತು ಎಂಬಂತೆ ಕನ್ನಡ ನುಡಿಯ ಗತಿಯು ಈಗಿನ ಕನ್ನಡ ಸಾಹಿತ್ಯದಲ್ಲಿ ಆಗುತ್ತಿದೆ. ಈ ಪ್ರವೃತ್ತಿಗೆ, ಸಾಮಾನ್ಯರ ಔದಾಸೀನ್ಯವೂ, ಕಲಿತವರೆಂಬುವವರ ಪಂಡಿತಂಮನ್ಯತೆಯೂ ಕಾರಣಗಳಾಗಿವೆ. ಕನ್ನಡದ ಕಂಪು ಮತ್ತೆ ದಿಕ್ಕು ದಿಕ್ಕುಗಳಲ್ಲಿ ಹಬ್ಬಬೇಕಾದರೆ, ಕನ್ನಡದ ಶಬ್ದಭಾಂಡಾರದ ಸೂಕ್ಷ್ಮ ಅಭ್ಯಾಸವೂ, ಅದನ್ನು ಬೆಳೆಯಿಸಿಕೊಳ್ಳುವ ಬಗೆಬಗೆಗಳ ಅರಿವೂ, ಯಾವ ವಿಚಾರವನ್ನೂ ಯಾವ ಭಾವವನ್ನೂ ಸೂಕ್ಷ್ಮವಾಗಿಯೂ, ಸ್ಪಷ್ಟವಾಗಿಯೂ ಸಮಗ್ರವಾಗಿಯೂ ತಿಳುಹಲು ಬರುವ ಸಾಮರ್ಥ್ಯವೂ ನಮ್ಮ ಜನರಲ್ಲಿ ಬೇಕು. ಸಾಮಾನ್ಯರಿಂದ ಸುಸಂಸ್ಕೃತರ ವರೆಗೂ ನಮ್ಮ ವಿಚಾರವು ಗಮ್ಯವೂ ಮಾನ್ಯವೂ ಆಗುವಂತೆ ನಮ್ಮ ಶೈಲಿಯಲ್ಲಿ ವೈವಿಧ್ಯವುಂಟಾಗುವಂತೆ ನಾವು ಕೃಷಿಮಾಡಬೇಕು. ಇಂಥ ಸಮಗ್ರಸಂಪನ್ನಭಾಷೆಯು ಜ್ಞಾನಾವಿರ್ಭಾವ, ಸಂವರ್ಧನ, ಸಂರಕ್ಷಣ, ಪ್ರಸಾರಗಳ ಪ್ರಮುಖೋಪಾಯವು.

ಕನ್ನಡಿಗರು ಅಭ್ಯಸಿಸಬೇಕಾದ ಎರಡನೆ ಭಾಷೆಯು ಸಂಸ್ಕೃತ. ರಾಮಾಯಣ ಭಾರತಗಳ ವಿಚಾರಸಂಪತ್ತಿಯನ್ನೂ ಕಾಲಿದಾಸಾದಿಗಳ ಮಹಾಕಾವ್ಯಗಳ ಭಾವಪ್ರಭಾವವನ್ನೂ ಪುರಾಣಗಳ ಸ್ಫೂರ್ತಿಯನ್ನೂ ಕನ್ನಡವು ಎಷ್ಟೋ ಮಟ್ಟಿಗೆ

ತನ್ನಲ್ಲಿ ಅರಗಿಸಿಕೊಂಡಿದ್ದರೂ ಆ ಕಾರ್ಯವು ಇನ್ನೂ ಪೂರ್ಣವಾಗಿಲ್ಲ. ಅದಲ್ಲದೆ ವೇದೋಪನಿಷತ್ತುಗಳ, ದರ್ಶನಗಳ, ಷಡಂಗಗಳ, ಸ್ಮೃತಿಗಳ, ಬ್ರಾಹ್ಮಣಾರಣ್ಯಕಗಳ, ಆಗಮಗಳ, ಕಲಾಪ್ರಪಂಚದ ಅಪರಂಪಾರವಾದ ಸಮುದ್ರವಿನ್ನೂ ಕನ್ನಡವನ್ನು ಸೇರಲು ಹಾದಿ ಕಾಯುತ್ತಿದೆ. ದೇಶೀಯ ಭಾಷೆಗಳ ಮಹತ್ವವು ಎಷ್ಟು ಬೆಳೆದರೂ ಸಂಸ್ಕೃತದ ಮಹತ್ವವು ಯಾವ ರೀತಿಯಿಂದಲೂ ಕಡಮೆಯಾಗದು. ಅದರ ಮಹತ್ತ್ವವು ಕಡಿಮೆಯಾಗಿದೆ ಎಂದು ತಿಳಿಯುವದು ತೀರ ತಪ್ಪು. ಇನ್ನು ಮೇಲೆ ಸಂಸ್ಕೃತವನ್ನು ಅಭ್ಯಸಿಸುವದು ಅದರ ಪೌರಾಣಿಕ ವಚನ ಶೈಲಿಯನ್ನು ಅನುಕರಿಸಲಾಗಲೀ ಅಣಗಿಸಲಾಗಲೀ ಅಲ್ಲ; ಅದರ ಜ್ಞಾನಪ್ರಭಾವದಿಂದ ಕನ್ನಡವನ್ನೂ ಹೆಚ್ಚು ಸಮರ್ಥವನ್ನಾಗಿ ಮಾಡಿಕೊಳ್ಳುವದಕ್ಕಾಗಿ; ಅದರ ವೀರ್ಯದಿಂದ ತಾನೂ ವೀರ್ಯವತ್ತರವಾಗುವದಕ್ಕಾಗಿ. ಆದಕಾರಣ ದೇಶೀಯ ಸಾಹಿತ್ಯ ವಾಙ್ಮಯಗಳು ಬೆಳೆದಂತೆ ಸಂಸ್ಕೃತದ ಅಭ್ಯಾಸಕ್ಕೆ ಹೆಚ್ಚು ಉತ್ತೇಜನವು ದೊರೆಯುವದರಲ್ಲಿ ಸಂದೇಹವಿಲ್ಲ.

ಆ ಮೇಲೆ ದ್ರಾವಿಡ ಭಾಷೆಗಳನ್ನು ವಿಶೇಷತಃ ತಮಿಳು ಭಾಷೆಯನ್ನು ಅಭ್ಯಾಸಮಾಡುವದಗತ್ಯ. ಕನ್ನಡದ ಪೂರ್ವ ಚರಿತ್ರೆಗೂ ಕನ್ನಡಿಗರ ಪೂರ್ವ ಚರಿತ್ರೆಗೂ ಅದರಿಂದ ಲಾಭವಾಗುವಂತಿದೆ. ದ್ರಾವಿಡ ಭಾಷೆಗಳಲ್ಲಿ ಕನ್ನಡವು ತಮಿಳಿಗೆ ಹೆಚ್ಚು ಸಂಬಂಧಿಸಿದ್ದುದು. ಕನ್ನಡದ ಮೂಲ ರೂಪಗಳ ನಿರ್ಣಯಕ್ಕೆ ತಮಿಳಿನ ಜ್ಞಾನವು ಬೇಕೇಬೇಕು. ಕರ್ನಾಟಕದಲ್ಲಿರುವ ಅನೇಕಾನೇಕ ತಮಿಳು ಜನರು ಈ ವಿಷಯದಲ್ಲಿ ಕನ್ನಡಕ್ಕೆ ಸಹಾಯವನ್ನು ಮಾಡಿದರೆ ಬಹಳೇ ಒಳಿತಾಗುವದು. ಇದೇ ರೀತಿಯಾಗಿ ಕರ್ನಾಟಕದಲ್ಲಿರುವ ತೆಲಗು ಮರಾಠಿ ತಮಿಳು ಮೊದಲಾದ ಜನರು ಆ ಆ ಭಾಷೆಯ ಜ್ಞಾನವನ್ನು ಕನ್ನಡದ ಊಳಿಗದಲ್ಲಿ ಉಪಯೋಗಿಸುವದು ಉಭಯತರಿಗೂ ಉಪಯೋಗಕಾರಿ. ತೆಲಗು ಸಾಹಿತ್ಯಕ್ಕೂ ಸಂಸ್ಕೃತಿಗೂ ಇತಿಹಾಸಕ್ಕೂ ಕನ್ನಡವೂ ಬಹಳ ಉಪಕಾರಿಯಾಗಿದೆ. ಮರಾಠೀ ಭಾಷೆಯು ರೂಪವನ್ನು ಹೊಂದುವಲ್ಲಿ ಕನ್ನಡದಿಂದಾದ ಉಪಯೋಗವು ಅಷ್ಟಿಷ್ಟಲ್ಲ. ಇದಲ್ಲದೆ ಉತ್ತರ ಕರ್ನಾಟಕದ ಅವನತಿಯ ಕಾಲದ ಇತಿಹಾಸಸಂಶೋಧನದಲ್ಲಿ ಮರಾಠಿಯ ಸಹಾಯವು ಅತ್ಯಗತ್ಯವಾಗಿದೆ

ಕರ್ನಾಟಕಸಂಸ್ಕೃತಿಯಲ್ಲಿ ಜೈನರೊಂದು ಮಹತ್ತ್ವದ ಘಟಕರಾಗಿರುವದರಿಂದ ಅರ್ಧಮಾಗಧಿಯ ಅಭ್ಯಾಸವು ಬಹಳ ಅವಶ್ಯವಾಗಿದೆ. ಜೈನರ ಸ್ಫೂರ್ತಿಯ ಝರಿಯು ಅರ್ಧಮಾಗಧಿ ಸಾಹಿತ್ಯದಲ್ಲಿರುವದರಿಂದ ನಮ್ಮ ಕನ್ನಡ ಜೈನಪುರಾಣಗಳಲ್ಲಿಯೂ, ಕಾವ್ಯಗಳಲ್ಲಿಯೂ ಮೂಲದ ಛಾಯೆಯೆಷ್ಟು ಏನು ಎಂಬವನ್ನು ಚರಿತ್ರಕಾರರು ತಿಳಿದುಕೊಳ್ಳಲೇಬೇಕಾಗಿದೆ. ಇವರಷ್ಟೇ ಮಹತ್ತ್ವದ ಇನ್ನೊಂದು ಭಾಷೆಯು ಪ್ರಾಕೃತವು. ಪ್ರಾಕೃತವು ದೇಶೀಯ ಭಾಷೆಗಳ ಸಮುದ್ರವೆಂದು ಹೇಳಬಹುದು. ಪ್ರಾಕೃತಕ್ಕೂ ದ್ರಾವಿಡ ಭಾಷೆಗಳಿಗೂ ಇರುವ ಪರಸ್ಪರ ಸಂಬಂಧ ಸಂಶ್ರಯಗಳನ್ನು ಗೊತ್ತುಪಡಿಸುವದು ಭಾರತೀಯ ಭಾಷೇತಿಹಾಸದಲ್ಲಿ ಪ್ರಮುಖ ಕಾರ್ಯವಾಗಿದೆ. ಇದೇ ರೀತಿಯಲ್ಲಿ ಪೈಶಾಚಿಕ ಭಾಷೆಯ ಒಡಪನ್ನೊಡೆಯುವದು ದ್ರಾವಿಡ ಭಾಷಾಭ್ಯಾಸಿಗಳ ಪಾಲಿಗೆ ಬರುವದರಿಂದ ಕನ್ನಡಿಗರೂ ತಮ್ಮ ಪಾಲಿನ ಕಾರ್ಯವನ್ನು ಮಾಡಲೇಬೇಕು.

## ಈ ಸಲದ ಮುಖಚಿತ್ರ

ಈ ಸಂಚಿಕೆಯೊಳಗಿನ ರಾಣಾ ಶ್ರೀ ಪ್ರತಾಪಸಿಂಹರ ಮುಖಚಿತ್ರವನ್ನು ಕೊಪ್ಪಳದ ಶ್ರೀ. ಶಿವರಾಮ ಶಾಸ್ತ್ರಿಗಳವರು ಕಾಗದಲ್ಲಿ ಕತ್ತರಿಸಿ ತಯಾರಿಸಿರುವರು. ಇದಕ್ಕೆ ೨-೩ ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ನೆರೆದ ಕಲಾಪ್ರದರ್ಶನದಲ್ಲಿ ಬಹುಮಾನವು ದೊರೆತಿದೆ. ಶ್ರೀ ಶಾಸ್ತ್ರಿಗಳವರು ಬೆಂಗಳೂರಿನ ಶ್ರೀ. ಅ. ನ. ಸುಬ್ಬರಾಯರ ಕೈಯಲ್ಲಿ ಚಿತ್ರಶಿಲ್ಪ ಶಿಕ್ಷಣವನ್ನು ಪಡೆದಿರುವರು. ಕೊಪ್ಪಳದ ಸಾಹಿತ್ಯಸೇವಾಸಮಿತಿಯ ಸಂಸ್ಥಾಪಕರಲ್ಲೊಬ್ಬರು. ಗೆಳೆಯರ ಗುಂಪಿನವರು.

ರಾಜರ್ಷಿ ಪ್ರತಾಪಸಿಂಹನ ಜನ್ಮೋತ್ಸವವು ಮೇ ತಿಂಗಳಲ್ಲಿ ಎಲ್ಲ ಕಡೆಗೂ ಜರುಗಿತು. ಅಕಬರಬಾದಶಹನ ಸಾಮದಾನಭೇದೋಪಾಯಗಳಿಗೆ ಮನಸೋಲದ ಏಕಾಕಿ ರಜಪೂತ ವೀರನಿವನು. ಕೊನೆಗೆ ಅಕಬರನು ದಂಡೋಪಾಯವನ್ನು ಅವಲಂಬಿಸಿದನು. ಪ್ರತಾಪಸಿಂಹನು ಚಿತ್ತೂರು ರಾಜಧಾನಿಯನ್ನು ಬಿಡಬೇಕಾಯಿತು. ಚಿತ್ತೂರಿನ ಧ್ವಂಸವು ಅಕಬರನ ಒಳ್ಳೆಯ ರಾಜ್ಯಕಾರ್ಯಭಾರಕ್ಕೆ ದೊಡ್ಡ ಕಲಂಕವು. ಹೆಣ್ಣು ಗಂಡು ಹುಡುಗರು ಮುದುಕರು ಒಕ್ಕಲಿಗರು ರಾಜ ಪರಿವಾರದವರು ಎಲ್ಲರೂ ಕೊಲ್ಲಲ್ಪಟ್ಟರು. ಪ್ರತಾಪನ ಮುಂದಣ ಅಸಹಾಯ ಶೌರ್ಯವೂ, ವನವಾಸದ ಯಾತನೆಗಳೂ, ವಿಲಾಸತ್ಯಾಗದ ವ್ರತಗಳೂ, ವಿರಕ್ತ ಜೀವನವೂ ಲೋಕವಿದಿತವಾಗಿವೆ. ಚಿತ್ತೂರನ್ನು ಬಿಟ್ಟು ಉಳಿದ ರಾಜ್ಯವೆಲ್ಲ ಆತನಿಗೆ ಕರಗತವಾಯಿತು. ಚಿತ್ತೂರಿನ್ನು ನಿಟ್ಟಿಸುತ್ತ, 'ಚಿತ್ತೂರು'! 'ಚಿತ್ತೂರು'! ಎಂದು ಕಂಬನಿ ಕರೆಯುತ್ತ ದೇಹವಿಟ್ಟನು, ಈತನ ಸ್ಮರಣೆಯು ಇಂದಿನ ಭಾರತೀಯ ಸ್ವಾತಂತ್ರ್ಯದ ಸಂಗ್ರಾಮಸಮಯದಲ್ಲಿ ಎಲ್ಲರನ್ನೂ ಪುನೀತರನ್ನಾಗಿ ಮಾಡದೆ ಇರದು. ಈತನಲ್ಲವೇ [illegible]!!

# ಸತ್ಯಾಗ್ರಹದ ಸುದ್ದಿಗಳು

( ಮೇ ತಿಂಗಳು )

೧೪— ಶ್ರೀಮತಿ ರುಕ್ಮಿಣಿ ಲಕ್ಷ್ಮೀಪತಿಯವರಿಗೆ ಮದ್ರಾಸದಲ್ಲಿ ೧ ವರ್ಷದ ಶಿಕ್ಷೆ.

೧೫— ಶ್ರೀಮತಿ ಸರೋಜಿನಿ ನಾಯುಡು ಅವರು ಧಾರಸ್ನೆಯಲ್ಲಿ ಸತ್ಯಾಗ್ರಹದ ಕಾಲದಲ್ಲಿ ೧೬ ತಾಸುಗಳ ಅನ್ನ ನೀರಿಲ್ಲದೆ ಕುಳಿತರು.

ಮುಂದಿನ ಪಕ್ಷದ ಮುಂದಾಳುಗಳಾದ ಪಂ. ಕುಂಜ್ರು ಅವರು ಲೆ. ಅಸೆಂಬ್ಲಿ ಸ್ಥಳಕ್ಕೆ ರಾಜೀನಾಮೆ ಕೊಟ್ಟರು.

ಮುಂಬಯಿಯಲ್ಲಿ ವೃತ್ತಪತ್ರಕಾರರ ಸಮ್ಮೇಳನ.

೧೬— ಶ್ರೀ. ಸರೋಜಿನಿದೇವಿಯವರನ್ನು ಸೆರೆಹಿಡಿದು ಸರಹದ್ದಿನ ಹೊರಗೆ ಬಿಟ್ಟರು.

ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರಿಗೆ ೯ ತಿಂಗಳ ಶಿಕ್ಷೆ.

೧೯— ಕಾಲಾ (ಪಂಜಾಬ) ಎಂಬಲ್ಲಿ ಗೋಳಿಬಾರ.

ಯರವಡಾ ಜೇಲಿನಲ್ಲಿ ಇಂಗ್ಲಂಡಿನ 'ಡೇಲಿ ಹೆರಲ್ಡ' ಪತ್ರಿಕೆಯ ಪ್ರತಿನಿಧಿಗಳಾದ ಜಾರ್ಜ ಸ್ಲೊಕೊಂಬ ಅವರು ಮಹಾತ್ಮರನ್ನು ಸಂದರ್ಶಿಸಿ, ಒಪ್ಪಂದದ ಕರಾರುಗಳನ್ನು ವಿಚಾರಿಸಿದರು.

೨೦— ಹಿಂದುಸ್ಥಾನದಲ್ಲೆಲ್ಲ ವೃತ್ತಪತ್ರಿಕಾಕರ್ತರ ಹರತಾಳವು.

೨೧—ಶ್ರೀ. ಶಂಕರರಾವ ಗುಳವಾಡಿಯವರಿಗೆ ೧ವರ್ಷದ ಸಕ್ರಮಶಿಕ್ಷೆ.

೨೨— ಶ್ರೀ. ಸರೋಜಿನಿದೇವಿಯವರನ್ನು ಮತ್ತೆ ಸೆರೆಹಿಡಿದರು.

ಶ್ರೀ. ನರೀಮನ್ನರಿಗೆ ಮತ್ತೆ ೪ ತಿಂಗಳ ಶಿಕ್ಷೆ.

ಡಾಕ್ಕಾದಲ್ಲಿ ಹಿಂದು ಮುಸಲ್ಮಾನರ ದಂಗೆ.

೨೩— ಶ್ರೀ ಸರೋಜಿನಿದೇವಿಯವರಿಗೆ ೯ ತಿಂಗಳ ಕಾರಾಗ್ರಹ ಶಿಕ್ಷೆ.

೨೪— ಕೆನಿಯಾದಿಂದ (ಆಫ್ರಿಕಾ) ಸತ್ಯಾಗ್ರಹಕ್ಕಾಗಿ ಹಿಂದುಸ್ಥಾನಕ್ಕೆ ಸ್ವಯಂಸೇವಕರು ಬಂದದ್ದು.

ಮೈಸೂರಿನಿಂದ ಸತ್ಯಾಗ್ರಹಕ್ಕಾಗಿ ಸ್ವಯಂಸೇವಕರು ಹೊರಟದ್ದು.

ಮುಂಬಯಿಯ ವ್ಯಾಪಾರಸ್ಥರ ಪ್ರಚಂಡವಾದ ಮೆರವಣಿಗೆಗೆ ಪೋ. ಕಮಿಷನರರಿಂದ ತಡೆ; ಸತ್ಯಾಗ್ರಹದ ಬಲಕ್ಕೆ ಹಿಂಜರಿಸಿ ಅವರನ್ನು ಮುಂದೆ ಸಾಗಗೊಟ್ಟದ್ದು.

೨೫— ಶ್ರೀಮತಿ ದುರ್ಗಾಬಾಯಿ (ಮದ್ರಾಸ ಸತ್ಯಾಗ್ರಹದ ಸರ್ವಾಧಿಕಾರಿ) ಇವರಿಗೆ ೧ ವರ್ಷದ ಶಿಕ್ಷೆ.

ರಂಗೂನಿನಲ್ಲಿ ದಂಗೆ. ೧೨೦೦ ಜನರಿಗೆ ಗಾಯ ೨೦೦ ಜನರು ತೀರಿಕೊಂಡರು.

೨೬— ಮಾಲವೀಯಾಜೀಯವರನ್ನು ಕಾಬಲಪುರದಲ್ಲಿ ಹಿಡಿದು ಬಿಟ್ಟದ್ದು.

ಪೇಶಾವರದ ಅನಾಹುತದ ವಿಚಾರಣೆಗಾಗಿ ಸರಕಾರದವರಿಂದ ನೇಮಿಸಲ್ಪಟ್ಟ ಸುಲೇಮಾನ ಕಮಿಟಿಯ ವಿಚಾರಣೆಗೆ ಪ್ರಾರಂಭ.

ನಾಯಿಯ ನೆವದಿಂದ ಮುಂಬಯಿ ಭೇಂಡಿಬಜಾರದಲ್ಲಿ 'ಗೋಳಿಬಾರ' ಆದದ್ದು.

ಲಖನೌದಲ್ಲಿ 'ಗೋಳಿಬಾರ್'

ಭಾರತಮಂತ್ರಿ ಬೆನ್ನರ ಪರಿಸ್ಥಿತಿಯ ಸಮಾಲೋಚನೆ.

೨೭— ಸೋಲ್ಲಾಪುರದಲ್ಲಿ 'ನಾಡಗುಡಿ'ಯ ಸತ್ಯಾಗ್ರಹಕ್ಕೆ ಪ್ರಾರಂಭ ಬೆಂಗಳೂರಲ್ಲಿ ಕ್ರಿಶ್ಚನರ ಪರಿಷತ್ತು ಸೇರಿ, ಸ್ವದೇಶಿ ಸತ್ಯಾಗ್ರಹಕ್ಕೆ ಬೆಂಬಲಕೊಡುವ ಗೊತ್ತುಗಳಾದವು.

ದಿಲ್ಲಿಯಲ್ಲಿ ಜುಮ್ಮಾಮಶಿದಿಯಲ್ಲಿ ೨೦,೦೦೦ ಮುಸಲ್ಮಾನರು ಸತ್ಯಾಗ್ರಹವನ್ನು ಬೆಂಬಲಿಸಿದರು.

ದಿಲ್ಲಿಯಲ್ಲಿ ಸ್ವಾಮಿ ಶ್ರದ್ಧಾನಂದರ ಮೊಮ್ಮಗಳು ಶ್ರೀಮತಿ ಸತ್ಯವತೀದೇವಿಯವರಿಗೆ ೬ ತಿಂಗಳ ಶಿಕ್ಷೆ.

೨೮— ಪೇಶಾವರ ಪ್ರಕರಣದ ವಿಷಯವಾಗಿ ಪಟೇಲ ಕಮಿಟಿಯ ವಿಚಾರಣೆಯ ಆರಂಭ.

ಧಾರಸ್ನೆಯ ಉಪ್ಪಿನ ಮೋರಿನ ದಾಡಿನಲ್ಲಿ ಒಬ್ಬ ಸ್ವಯಂಸೇವಕನು ಲಾಠಿಯ ಬಡಿತದಿಂದ ಗಾಯಹೊಂದಿ ಸತ್ತನು.

೨೯— ಲಿಲ್ಲೂಆ (ಬಂಗಾಲ) ದಲ್ಲಿ ಕೂಲಿಕಾರರ ಮೇಲೆ ಗೋಳಿಬಾರ.

ಮುಂಬಯಿಯಲ್ಲಿ ೨೦೦೦೦ ಪಾರ್ಸಿಗಳ ಪ್ರಚಂಡ ಮೆರವಣಿಗೆ.

೩೦— ವೈಸರಾಯರು ಕರಬಂದಿ, ಅಧಿಕಾರಿಗಳ ಬಹಿಷ್ಕಾರ, ಟಂಗಗಳ ವಿಷಯವಾಗಿ ೨ ಹೊಸ ಆರ್ಡಿನನ್ಸುಗಳನ್ನು ಪ್ರಕಟಿಸಿದ್ದು.

ಉದಕಮಂಡಲದಲ್ಲಿ ಸ್ತ್ರೀಯರ ಸಭೆ ಸೇರಿ, ಅಧ್ಯಕ್ಷರಾದ ಶ್ರೀಮತಿ ಡಾ. ಮುತುಲಕ್ಷ್ಮಿರೆಡ್ಡಿ (ಮದ್ರಾಸ ಕಾಯಿದೆ ಕೌನ್ಸಿಲಿನ ಉಪಾಧ್ಯಕ್ಷೆ) ಇವರ ಈಗಿಂದೀಗ ಡೊಮಿನಿಯನ್ ಸ್ವರಾಜ್ಯವನ್ನು ಬೇಡಿ, ದಬ್ಬಾಳಿಕೆಯನ್ನು ನಿಷೇಧಿಸಿ, ಹೆಣ್ಣುಮಕ್ಕಳು ರಾಷ್ಟ್ರಕಾರ್ಯದಲ್ಲಿ ಸೇರಬೇಕೆಂದು ಹೇಳಿದರು.

ಶ್ರೀಮತಿ ಮಿತ್ರ ಇವರಿಗೆ ಲಖನೌದಲ್ಲಿ ೬ ತಿಂಗಳ ಶಿಕ್ಷೆ

೩೧— ಪೇಶಾವರ ಪ್ರಕರಣದಲ್ಲಿ ಘರ್ವಾಲಿ ಪಲ್ಟನಿನವರು ಏಪ್ರಿಲ್ ೨೩ರಲ್ಲಿ ನಿಃಶಸ್ತ್ರ ಜನರ ಮೇಲೆ ಗುಂಡಿನ ಸುರಿಮಳೆ ಮಾಡುವ ಅಪ್ಪಣೆಯನ್ನು ಮುರಿದದ್ದಕ್ಕಾಗಿ ಅವರ ವಿಚಾರಣೆ.

ಗುಜರಾಥದಲ್ಲಿ ಖೇಡಾ ಜಿಲ್ಹೆಯ ರೈತರು ಗಾಂಧಿಜಿಯವರ ಅಪ್ಪಣೆಯ ಹೊರತು ಹೊಲದ ಕರಿಗೆ ಕೊಡುವುದಿಲ್ಲವಾಗಿ ನಿಶ್ಚಯಿಸಿದರು.

ಪೇಶಾವರದಲ್ಲಿ ಒಬ್ಬ ಶೀಖ ಸರದಾರನ ಹೆಂಡತಿ ಮಕ್ಕಳೊಡನೆ ಓಣಿಯಲ್ಲಿ ಹೋಗುತ್ತಿರುವಾಗ ಮೂವರಿಗೂ ಗುಂಡು ಬಡಿದು, ಮಕ್ಕಳು ಸತ್ತು ಹೋದುದರಿಂದ ಕೂಡಿದ ಜನರ ಮೇಲೆ ಗೋಳೀಬಾರ ಮಾಡಲ್ಪಟ್ಟಿತು.

# ಸಾಹಿತ್ಯಲೋಕ

## ಕವಿಚಕ್ರವರ್ತಿ ರನ್ನನ ಗದಾಯುದ್ಧ ನಾಟಕವು.

ವೆ. ಭೀ. ನಾಯಕ ಎಂ. ಎ. ಬೆಲೆ ೬ ಆಣೆ.

ಈ ವರೆಗೆ ಹೊಸಗನ್ನಡದಲ್ಲಿ ರನ್ನನ ವಿಷಯವಾಗಿ ಹುಟ್ಟಿರುವ ಸಾಹಿತ್ಯವು ಬಹುಶಃ ವಿದ್ವಜ್ಜನರಿಗೆ ಉಪಕಾರಿಯಾಗಿದೆ. ಶ್ರೀ. ಕಾಮತರವರ 'ಗದಾಯುದ್ಧದ ಕಥೆ'ಯೊಂದನ್ನುಳಿದು ಉಳಿದೆಲ್ಲ ವಿಮರ್ಶೆ—ಚರ್ಚೆಗಳು ಸಾಮಾನ್ಯ ವಾಚಕರಿಗೆ ಕತ್ತಲೆಯೊಳಗಿನ ಕರಿಮಣಿಯಿದ್ದ ಹಾಗೆ. ಆದರೆ "ಶ್ರೀ"ಯವರು 'ಗದಾಯುದ್ಧ'ದ ನಾಟ್ಯಾನುವಾದ ಮಾಡಿ ಚಿಕ್ಕದಾದ ಚಲುವಾದ ಕೃತಿಯನ್ನು ಬರೆದಂದಿನಿಂದ ರನ್ನನು ಬೆಳದಿಂಗಳಲ್ಲಿ ತಳತಳಿಸುವ ರನ್ನವೇ ಆಗಿರುವನು. ಆದರೆ ಈ ರನ್ನವನ್ನು ಕಂಡು ಕುಣಿದಾಡಿದವರೆಷ್ಟು ಜನ ? ಪ್ರಾಯಶಃ ಕಾವ್ಯಸ್ವರೂಪದಲ್ಲಿ ರನ್ನನನ್ನು ಕಂಡವರೇ ರಂಗಸ್ಥಳದ ಮೇಲೆ ಕಂಡರು. ಎಂದರೆ ರನ್ನನ ಮೂಲದ 'ಬಲ್ಮೆ'ಯು ಇದ್ದಹಾಗೆ ಇರಲೆಂದು ಶ್ರೀಯವರು ಅವನ 'ಕಾಳಸಕುಣಿಕೆ'ಗಳುಳ್ಳ ಹಳೆಗನ್ನಡವನ್ನೇ ತಮ್ಮ ದೃಶ್ಯದಲ್ಲಿ ಇರಿಸಿರುವರು. ಆದರೆ ರಂಗಭೂಮಿಯು ರನ್ನನ ಪ್ರಖ್ಯಾತಿಯನ್ನು ಶ್ರೀಯವರಂಥ ಸೂತ್ರಧಾರರಿಂದ ಕೇಳಿ, 'ರನ್ನಕವಿಪ್ರಶಸ್ತಿ'ಯ ಲೇಖಕರಂಥ ಪ್ರೇಕ್ಷಕವೃಂದದ ಪ್ರಶಂಸೆಗಳನ್ನು ಓದಿ, ಸಾಹಿತ್ಯಸುಖವಿಶೇಷವನ್ನು ಬಯಸುವ ಸಾಮಾನ್ಯ ಜೀವವು ಹೇಗೆ ಎಲ್ಲಿಯ ವರೆಗೆ ಸುಮ್ಮಗಿರಬೇಕು ? ಈ ಪಿಪಾಸೆಯನ್ನು ಪೂರೈಸುವದಕ್ಕಾಗಿ ಬರೆಯಲ್ಪಡಬೇಕಾದ ಅನೇಕ ಸಾಹಿತ್ಯಪ್ರಯತ್ನಗಳಲ್ಲಿ ನಮಗೆ ತಿಳಿದ ಮಟ್ಟಿಗೆ ಶ್ರೀ. ನಾಯಕರವರ ಮೇಲ್ಕಾಣಿಸಿದ ಪುಸ್ತಕವು ನಿರ್ವಿವಾದವಾಗಿ ಮೊದಲನೆಯದು.

ಒಂದೆರಡು ಮಾರ್ಪುಗಳನ್ನು ಬಿಟ್ಟರೆ ಇದು ಶ್ರೀ ಯವರ ದೃಶ್ಯದ ಹೊಸಗನ್ನಡ ಗದ್ಯಾನುವಾದ. ಅರ್ಥಾತ್ ಇದಕ್ಕೆ ಶ್ರೀಯವರ ಒಪ್ಪಿಗೆಯು ಇರಲಿಕ್ಕೆ ಸಾಕು. ಆದರೆ ಕೃತಜ್ಞತೆಗಳನ್ನು ಕೊಡುವಾಗ ಅನುವಾದಕರು ತಮ್ಮ 'ಮೊದಲ ಮಾತಿ'ನಲ್ಲಿ ಸರಿಯಾಗಿ ಶ್ರೀಯವರ ಮೂಲ ಕೃತಿಯನ್ನು ನೆನೆಸಬೇಕಾಗಿತ್ತು. ಈಗ ನೆನೆಸಿಲ್ಲವೆಂತಲ್ಲ, ಆದರೆ ಮನಸ್ಸಿನಲ್ಲಿದ್ದಷ್ಟು ಕೃತಜ್ಞತೆ ಸ್ಪಷ್ಟವಾದ ಶಬ್ದಗಳಲ್ಲಿ ಬಂದಿಲ್ಲ. ಇನ್ನು, ಈ ಪುಸ್ತಕದ ಹೆಸರು 'ಹೊಸಗನ್ನಡ ಗದಾಯುದ್ಧ ನಾಟಕ' ಎಂದಿದ್ದರೆ ಹಳೆಗನ್ನಡದ ಗಂಧವಿಲ್ಲದವರಿಗೆ ಏನೆಂದು ಭಾವನೆಯಾಗುವದು ? ಹಳೆಗನ್ನಡದಲ್ಲಿಯೇ ಆ ರನ್ನನ ಹಳೆಯ ನಾಟಕವೊಂದು ಸಿಕ್ಕಿರಬಹುದೆಂದು ಹೆಸರು ಕೇಳಿಯೇ ಅವರು ದೂರ ಸರಿಯಬಹುದು.

ಅನುವಾದಕರು ಈ ಪುಸ್ತಕಕ್ಕೆ ರನ್ನನ ಚರಿತ್ರ, ಕಾವ್ಯಗುಣ ಮುಂತಾದ ವಿಷಯಗಳುಳ್ಳ ಪ್ರಸ್ತಾವನೆಯೊಂದನ್ನು ಸರಳವಾಗಿ ಸಾರಾಂಶರೂಪವಾಗಿ ಬರೆದಿರುವರು. ಆದರೆ ಅವಸರದಿಂದಲೋ ಅಥವಾ ಕಿರಿದಾಗಿ ಬರೆಯಬೇಕೆನ್ನುವ ಉದ್ದೇಶದಿಂದಲೋ, ಗೊತ್ತಿದ್ದ ಮಾತುಗಳ ಸರಿಸವನಾದ ಜೋಡಿಕೆಯಾಗಿಲ್ಲ. ಸಾಮಾನ್ಯ ವಾಚಕನಿಗಂತೂ ಸಂದೇಹಗಳು ಪ್ರಬಲವಾಗುತ್ತವೆ. ಉದಾಹರಣಾರ್ಥವಾಗಿ "ಈ ಕವಿಯು ಅರಸನಿಂದ ಯೋಗ್ಯ ಸನ್ಮಾನಗಳನ್ನು ಪಡೆದು ಕ್ರಿ. ಶ. ಸುಮಾರು ೧೦೩೦ ರಲ್ಲಿ ಮೃತನಾಗಿರಬಹುದು." ಇದರರ್ಥವೇನು? ಇದು ಸಹಜವಾಗಿ ಸೇರಿರುವ ಸ್ಖಲಿತವಿರಬಹುದು. ಆದರೆ ಅರಸನ ಯೋಗ್ಯ ಸನ್ಮಾನಕ್ಕೂ ಕವಿಯ ಮರಣಕ್ಕೂ ಇಲ್ಲದ ಸಂಬಂಧವು ಅನಪೇಕ್ಷಿತವಾಗಿ ಅನ್ವಯಿಸುತ್ತದಲ್ಲವೇ ! ಇನ್ನು, ಅನುವಾದದಲ್ಲಿ ಅಭಿನಯದೃಷ್ಟಿಯು ಪ್ರಮುಖವಾಗಿ ಹೊಸಗನ್ನಡ ಓದುಗನ ಬೇಡಿಕೆಗಳೆಲ್ಲ ಸಮಾನವಾಗಿ ಪೂರೈಸಲಾಗಿಲ್ಲ. ಹಳೆಗನ್ನಡದ ಹಳೆಯತನವು ಕಾರಣವಿಶೇಷವಿಲ್ಲದ ಕಡೆಗಳಲ್ಲಿ ಕಾಲಿಕ್ಕಿದೆ. ವಾಕ್ಯಾನುಕ್ರಮದಲ್ಲಿ ಸ್ವಭಾವವಾದ ಓಘವು ಇಲ್ಲದಾಗಿ ಕೆಲವು ಸಂದರ್ಭಗಳಲ್ಲಿ ಕೃತ್ರಿಮತೆಯು ಅನಿವಾರ್ಯವಾಗಿದೆ. ಹೀಗೆನ್ನುವುದರಲ್ಲಿ ಒಂದೇ ಒಂದು ಭಾವ. ಯಾವದೋಷಗಳನ್ನು ಅನುವಾದಕರು ಸುಲಭವಾಗಿ ತೆಗೆದೊಗೆದು ಭಾಷಾಂತರವನ್ನು ತಿಳಿಗೊಳದಂತೆ ಮಾಡಬಹುದಾಗಿತ್ತೋ ಅವನ್ನು ಈಗಲಾದರೂ ತಿದ್ದಬಹುದೆಂಬ ಸೂಚನೆ. ಅಂತೇ ದೃಷ್ಟಾಂತಗಳನ್ನು ಕೊಡುವೆವು. ಕೃಷ್ಣನ ಮೊದಲಿನ ಭೀಮವರ್ಣನೆಯ ಗದ್ಯದಲ್ಲಿ 'ಕುರುಭೂಭೃತ್‌ದ್ವಲಕೂಲತೂಲಪವನ' 'ಕೌರವ್ಯಗಂಧೇಭಕೇಸರಿ' ಎಂಬ ದೀರ್ಘದಂಡಕಗಳನ್ನು ಮೂಲದಲ್ಲಿದ್ದಂತೆ ಇಟ್ಟರೆ ರಂಗಭೂಮಿಯ ಮೇಲೆ ಕಳೆತುಂಬಬಹುದು, ಆದರೆ ಅದು ಅರ್ಥವಿಲ್ಲದ ಕಹಳೆಯಾದರೆ ? ಅಷ್ಟೇ ಕಸುವುಳ್ಳ ತಿಳಿಗನ್ನಡದ ವೀರಭಾಷೆಯನ್ನು ತಂದಿದ್ದರೆ, ಎರಡೂ ಉದ್ದೇಶಗಳು ಸಫಲವಾಗುತ್ತಿರಲಿಲ್ಲವೇ ? 'ಕುರುರಾಜನ ಸೈನ್ಯವನ್ನು ಅರಳೆಯ ದಿಂಡನಂತೆ ದಿಕ್ಕಾಪಾಲು ಮಾಡುವ ಗಾಳಿಯು!'

ಎಂಬ ತರದ ಅನುವಾದವು ಹೆಚ್ಚು ಸರಿಯಾಗಬಹುದಿತ್ತು. ಇವರಂತೆಯೆ ಪುಟ ೧೩೦ರಲ್ಲಿಯ ಸಂಜಯನ ಮೊದಲನೆಯ ಮಾತಿನಲ್ಲಿ ನಾಲ್ಕನೆಯ ಸಾಲು, ಹಾಗೂ ಪುಟ ೩೧ರಲ್ಲಿಯ ಭೀಮನ ಆಹ್ವಾನವು. ಅಲ್ಲಿ ಕಿಂಚಿತ್ ಔಚಿತ್ಯದೃಷ್ಟಿಯಿಪ್ಪರೂ ಸಂಸ್ಕೃತದ ವಿಶೇಷಣಗಳನ್ನು ಔಚಿತ್ಯಕೆಡಿಸದೆ ಕನ್ನಡದಲ್ಲಿ ಇಡಬಹುದಾಗಿತ್ತು. ಇದಲ್ಲದೆ ' ಗಳಿಯಿಸುತಿರೆ ಕಭರಿಭರಂ ' ಎಂಬ ಮುಂತಾದ ಪದ್ಯಗಳ ಅನುವಾದದಲ್ಲಿ ಮೂಲದ ಶಬ್ದ ಶಕ್ತಿನಿದರ್ಶನಕ್ಕಾಗಿ 'ಕಬರಿಭರವು ಗಳಿಯಿಸುತಿರಲು' ಎಂದೂ 'ಗಳಿಯಿಸುತಿರೆ ನಯನವಾರಿ' ಇದಕ್ಕೆ 'ಅಶ್ರುಧಾರೆಯು ಸಾಗಿರಲು' ಎಂದೂ ಎನ್ನುವದು ಶೈಲಿಯ ವಿಷಮತೆಯನ್ನುತೋರಿಸುತ್ತದೆ. ಅದರಂತೆ ಮೂಲಕ್ಕೆ ತೀರಶರಣವಾಗಿ ಹೊಸಗನ್ನಡದಲ್ಲಿ ಭಿನ್ನಾರ್ಥವುಳ್ಳ ಶಬ್ದಗಳನ್ನು ಹಾಗೆಯೇ ಇಟ್ಟಿರುವದು ಅಸಮಂಜಸ; ಉದಾ—ಊರು, ವಲ್ಲಿ. ' ಊರುಗಳನ್ನು ಮುರಿಯುವೆನು ' ಎಂಬಲ್ಲಿ ತೊಡೆಯೆಂಬರ್ಥವು ಪ್ರತೀತವಾಗದೆ ' ಪಟ್ಟಣ ' ಎಂಬುದು ಪ್ರಧಾನವಾಗುತ್ತದೆ. ಊರು, ವಲ್ಲಿ ಎಂಬವುಗಳ ಬದಲು ತೊಡೆ, ಬಳ್ಳಿ ಎಂದಿದ್ದರೇನಾಗುತ್ತಿತ್ತು ? ಇದೇ ಪ್ರಕಾರ ನೊಸಲ್ಗಣ್ಣ, ಇಕ್ಕಣ್ಣುರುಡರು, ಪನ್ನತಿಕೆ, ಅದಟರು, ಬೆಳ್ಪನ ಎಂಬ ಶಬ್ದಗಳನ್ನು ಹಳೆಗನ್ನಡ ತಿಳಿಯದವರಿಗೆ ಏನು ಪ್ರಯೋಜನ ? ರನ್ನನ ಭಾಷಾಶಕ್ತಿಗಿಂತ ಮೊದಲು ಅವನ ನಾಟ್ಯಶಕ್ತಿ, ವೀರರಸಸಹಜಪ್ರತಿಭೆ ಇವುಗಳನ್ನು ಜನರು ಸವಿಯಬೇಕಾದ್ದರಿಂದ ಸಮವಾದ ತಿಳಿಗನ್ನಡ ಶೈಲಿಯು ಈ ಅನುವಾದದಲ್ಲಿ ಇರಬೇಕಾಗಿತ್ತು. 'ಜೋಳದಪಾಳಿ' ಎನ್ನುವದಕ್ಕೆ 'ಅನ್ನದ ಹಂಗು', ' ಕಯ್ಸೆಸೊರೆ ' ಎಂಬುವದಕ್ಕೆ 'ಕಹಿಗುಂಬಳ' ಎಂದು ಭಾಷಾಂತರಿಸಿ ಅನುವಾದಕರು ಕೆಲವೆಡೆಗಳಲ್ಲಿ ಸೊಗಸಾಗಿ ರಚಿಸಿರುವರು. ಆದರೆ ಈ ಸೊಗಸಿನಲ್ಲಿ ಸಮತೆ ಇಲ್ಲ.

ಪುಟ ೧ ' ಕೌರವ ಕುಲವಿಲಯಕೇತುವಾದ......ಮಾಡಿರುವನು' ಇದರ ಪ್ರಧಾನವಾಕ್ಯಕ್ಕೆ ಕರ್ತೃಪದವೇ ಇಲ್ಲ. ಭೀಮನ ಆರಂಭ ಭಾಷಣದ ವಾಕ್ಯವೂ ಮುರಿಗೆಮುರಿಗೆಯಾಗಿದೆ. ಪುಟ ೧೬ ' ಮುಗುಳ್ನಗೆಯಿಂದೊಡಗೂಡಿದ ಮುಖವುಳ್ಳ ಐರಾವತದ ನಡಿಗೆಯುಳ್ಳ ಮೇರುಪರ್ವತಸದೃಶವಾದ ಸೂರ್ಯಸುತನಾದ ಕರ್ಣನ ರೂಪು. ' ಈ ವಾಕ್ಯವು ಅತಿ ತದ್ರೂಪವಾಗಿದೆ. ' ಕರವಾಳಂಮಸೆನಂದದೆ ಮರವಾಳಂಮಸೆಯೆ ಕೂರಿತಕ್ಕುಮೆ' ಎಂಬುದಕ್ಕೆ ' ಕತ್ತಿಯನ್ನು ಮಸೆದಂತೆ ಬಡಿಗೆಯನ್ನು ಮಸಿದರೆ ಅದು ತೀಕ್ಷ್ಣವಾಗುವದೇ ?' ಎಂಬ ಅನುವಾದದಲ್ಲಿ ಮರವಾಳದ ಅರ್ಥವು ಸರಿಯಾಗಿ ಬಂದಿಲ್ಲ. ಮರವಾಳವೆಂದರೆ ' ಬಡಿಗೆ'ಯಲ್ಲ, ಕಟ್ಟಿಗೆಯ ಆಯುಧ. ' ಹೊರವಂಟ, ಇದೇಕೊಳ್ಳು' ಎಂದು ಮುಂತಾದ ಹಳೆಗನ್ನಡ ಪ್ರಯೋಗಗಳು ಹೊಸಗನ್ನಡ ಶೈಲಿಗೆ ವಿಸಂಗತವಾಗಿ ಇವೆ. ಈ ಅನುವಾದದಲ್ಲಿ ಮುಖ್ಯ ಮಾರ್ಪಾಟೆಂದರೆ, ಶ್ರೀಯವರು ಕೊಟ್ಟಿರುವ ರನ್ನನ ಶ್ರೇಷ್ಠವಾದ ಸಮಾಪ್ತಿಪದ್ಯವನ್ನು ( ಪಂಕಜಮುಸುಹೃದ್ವದನ ಪಂಕಜಮುಂ.....ಎಯ್ದಿದರ್) ಭಾಷಾಂತರಿಸದೆ ಅನುವಾದಕರು ' ಅರ್ಕನೂ, ಕುರುಕುಲಾರ್ಕನೂ ಅಸ್ತನಾದರು' ಎಂದು ಹೇಳಿ ಮುಗಿಸಿರುವರು. ಆ ಪದ್ಯವು ಸ್ತುತ್ಯಾತ್ಮಕವಾಗಿದೆಯೆಂದು ರನ್ನನ ಗದಾಯುದ್ಧದ ವಿಮರ್ಶಕರಾದ 'ರನ್ನಪ್ರಶಸ್ತಿ'ಯ ಲೇಖಕರು ಅಭಿಪ್ರಾಯಪಟ್ಟಿದ್ದಾರೆ; ಆದರೆ ಅದು ನಿಂದಾತ್ಮಕವಾಗಿದೆಯೆಂದು ' ರನ್ನಪ್ರಶಸ್ತಿ'ಯ ವಿಮರ್ಶವನ್ನು ಹೋದ ವರ್ಷ ಜಯಕರ್ನಾಟಕದಲ್ಲಿ ಬರೆದವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಪ್ರಸ್ತುತ ಲೇಖಕರು ಯಾವ ಪಕ್ಷವನ್ನೂ ಹಿಡಿಯದೆ ತಟಸ್ಥರಾಗಿ ಉಳಿದಂತೆ ಕಾಣುತ್ತದೆ.

ಒಟ್ಟಾರೆ, ಇನ್ನಿಷ್ಟು ಗುಣಗಳೂ ದೋಷಗಳೂ ಈ ಪುಸ್ತಕದಲ್ಲಿವೆ. ಅವುಗಳ ಬರಿಯ ದಿಗ್ದರ್ಶನವನ್ನು ಮೇಲೆ ಮಾಡಿದ್ದಾಯಿತು. ಮುಖ್ಯವಾಗಿ ಹೇಳಬೇಕಾದ ವಿಷಯವೆಂದರೆ, ಈ ಪುಸ್ತಕವು ತೃಪ್ತಿಕರವಾಗಲಿಕ್ಕೆ ತಪ್ಪಿಸಿಕೊಳ್ಳಬಹುದಾಗಿದ್ದ ತಪ್ಪುತಡೆಗಳು ಅಡ್ಡಬಂದಿವೆ. ಆದರೂ ರನ್ನನು ಗಡಚೆಂದು ತಿಳಿದುಕೊಂಡವರ ಅಭಿಪ್ರಾಯವನ್ನು ಪಲ್ಲಟಿಸುವದಕ್ಕಾಗಿ ಬೇಕಾಗುವ ಸಾಧನಸಾಮುಗ್ರಿಯನ್ನು ಅನುವಾದಕರು ನಿಃಸಂಶಯವಾಗಿ ಸಲ್ಲಿಸಿರುವುದರಿಂದ ಅವರಿಗೆ ನಾವು ಕೃತಜ್ಞರಾಗಿರುವುದು ಕರ್ತವ್ಯ. ಸಾಹಿತ್ಯಮಂದಿರದ ಮೇಲಿನಟ್ಟಕ್ಕೆ ಹೋಗಲಾರದೆ ನೆಲಹಿಡಿದ ಕನ್ನಡಿಗರಿಗೆ ಮೇಲಿನ ರನ್ನದೊಡವುಗಳನ್ನು ಎಷ್ಟೋ ಓರಣದಿಂದ ಕೆಳಕ್ಕೆ ತಂದಿರುವುದು ಶ್ರೇಯಸ್ಕರವಲ್ಲವೇ ?

**ಕರ್ನಾಟಕ ಬಾಲಬೋಧೆ** — ಲೇಖಕರು ಆಸ್ಥಾನವಿದ್ವಾನ್ ಕರ್ನಾಟಕ ಭಾಷಾರತ್ನಂ ಪಿ. ಆರ್. ಕರಿಬಸವಶಾಸ್ತ್ರಿಗಳವರು; ಪ್ರಕಾಶಕರು ಎಚ್. ಜಿ. ಲಿಂಗಣ್ಣ ಎಂಡ್ ಸನ್, ಮೈಸೂರು ಬೆಲೆ ೨ ಆಣೆ.

ಕರ್ನಾಟಕ ಏಕೀಕರಣ, ಭಾಷಾಭಿವೃದ್ಧಿಗಳ ದೃಷ್ಟಿಯಿಂದ ನಮ್ಮ ನಾಡಿಗೆಲ್ಲ ಒಂದೇ ಬಗೆಯ ಪಠ್ಯಪುಸ್ತಕಗಳು ಇರುವುದು ಅತ್ಯವಶ್ಯವೆಂದು ಗೊತ್ತಾಗಿ ಬಹಳ ದಿನಗಳಾದುವು; ಸಾಹಿತ್ಯ ಸಮ್ಮೇಳನಗಳಲ್ಲಿ ಅಂತಹ ಗೊತ್ತುಗಳೂ ಆಗಿರುವವು; ಆದರೆ ಕೆಲಸಕ್ಕೆ ಕೈಕೊಳಕೊಂಡು ಬೆಂಬತ್ತಿದವರು ಈ ವರೆಗೆ ಯಾರೂ ಇದ್ದಿಲ್ಲ. ಲೇಖಕರಲ್ಲಿ ಕೆಲವರು ಈ ಬಗೆಯ ಕೃತಿಕ ಪುಸ್ತಕಗಳನ್ನು ಬರೆಯಲು ಸಿದ್ಧರಿದ್ದರೂ ಅವನ್ನು ಅಚ್ಚು

ಹಾಕಿಸಿ ಪ್ರಕಟಿಸುವ ಸಾಹಸಿಗರಾದ ಪುಸ್ತಕ ವ್ಯಾಪಾರಿಗಳೂ ಇರಲಿಲ್ಲ. ಇದೀಗ ಶ್ರೀ ಲಿಂಗಣ್ಣನವರು ಈ ದಿಕ್ಕಿನಿಂದ ತಮ್ಮ ಕೆಲಸವನ್ನು ಆರಂಭಿಸಿರುವುದಾಗಿ ಕೇಳುತ್ತೇವೆ. ಈ ಉದ್ದೇಶದಿಂದಲೇ ಈ ಬಾಲಬೋಧೆಯನ್ನು ಪ್ರಕಟಿಸಿದ್ದುಂಟು.

ಇದರಲ್ಲಿ ಅಕ್ಷರ ಸೌಲಭ್ಯಕ್ರಮ 'ರ, ತ, ಈ, ಕ' ಮತ್ತು ಉಚ್ಚಾರಾನುಕ್ರಮ ಅ, ಆ ಇವೆರಡೂ ಪದ್ಧತಿಗಳನ್ನೂ ಅನುಸರಿಸಿ ಚಿಕ್ಕಮಕ್ಕಳಿಗೆ ಉಪಯುಕ್ತವಾಗುವಂತೆ ಒಳ್ಳೇ ರೀತಿಯಿಂದ ಪ್ರಕಟಿಸಿದ್ದಾರೆ. ಇದೇ ಮೇರೆಗೆ ಬಾಲಬೋಧೆಯ ೨ನೆಯ ಭಾಗ, ಮೊದಲನೆಯ ಪುಸ್ತಕ ಮೊದಲಾದುವುಗಳನ್ನೂ ಬೇಗನೆ ಅಚ್ಚುಹಾಕಿಸಿ ಪ್ರಸಿದ್ಧಪಡಿಸುವರೆಂದು ನಂಬುತ್ತೇವೆ. ಪ್ರಾಥಮಿಕ ಶಿಕ್ಷಣದ ಅಧಿಕಾರಗಳು ಸ್ಥಾನಿಕ ಸ್ವರಾಜ್ಯದವರ ಕೈಯಲ್ಲಿ ಬಂದಿರುವುದರಿಂದ ಅವರು ಈ ಬಗೆಯ ಪುಸ್ತಕಗಳಿಗೇ ಶಾಲೆಯಲ್ಲಿ ಆಶ್ರಯಕೊಟ್ಟು ಹೊಸ ಹೊಸ ಗ್ರಂಥ ಪ್ರಕಾಶಕರಿಗೆ ಉತ್ತೇಜನ ಕೊಡುವುದು ಕರ್ತವ್ಯವಾಗಿದೆ.

# ಸ್ವೀಕಾರ

೧. ಕರ್ನಾಟಕ ಸಾಮ್ರಾಜ್ಯ ಸಂಪುಟ ೫ ಭಾಗ ೧—೨... ... ಶ್ರೀ ರಾ. ಹ. ದೇಶಪಾಂಡೆ
೨. ಮಾರ್ದನಿ ... ... ... ... ... ಶ್ರೀ ಶ್ರೀನಿವಾಸ ವೆಂಕಟೇಶ ಗಲಗಲಿ

# ಅರ್ಧಬೆಲೆಗೆ

ಹೋದವರ್ಷದ ಎಂದರೆ ೭ನೆಯ ವರ್ಷದ ಹನ್ನೆರಡೂ ಸಂಚಿಕೆಗಳನ್ನು ಮೂರೇ ರೂಪಾಯಿಗಳಿಗೆ ಕೊಡುವೆವು. ಎಲ್ಲರೂ ತ್ವರೆಮಾಡಬೇಕು. ಮತ್ತು ಅದಕ್ಕೂ ಹಿಂದಿನ ವರ್ಷಗಳ ಕೆಳಗಿನ ಸಂಚಿಕೆಗಳನ್ನು ೫ ಆಣೆಗೆ ಒಂದರಂತೆ ಕೊಡಲಾಗುವದು. ೧ ರೂ. ಗಿಂತ ಕಡಿಮೆ ಬೆಲೆಯನ್ನು ಅಂಚೇ ಟಿಕೀಟುಗಳ ರೂಪದಲ್ಲಿ ಕಳಿಸಬಹುದು. ವಿಳಾಸ-ಜಯಕರ್ನಾಟಕ ಧಾರವಾಡ.

ವರ್ಷ ೧— ೧, ೨, ೮, ೯, ೧೦, ೧೧, ೧೨ ... ವರ್ಷ ೪— ೨, ೩, ೪, ೫, ೯, ೧೦, ೧೧, ೧೨
" ೨— ೨, ೪, ೬, ೭, ೮, ೯, ೧೦, ೧೧ ... " ೫— ೧, ೩, ೪, ೫, ೬, ೭, ೯, ೧೨
" ೩— ೧, ೨, ೪, ೫, ೬, ೭, ೮, ೯ ... " ೬— ೧, ೩, ೫, ೬, ೭, ೮, ೯, ೧೦, ೧೧, ೧೨



ಮುದ್ರಕರು—ಖ. ರಾ. ಭಿಸೆ, ಕ. ಪ್ರಿಂ. ವರ್ಕ್ಸ್, ಧಾರವಾಡ. ೭೫೫,೫೦,೧೨೦೦

## ಜರ್ಮನ್ ಅಲಾರಂ ಟೈಂಪೀಸ್




ಈ ಗಡಿಯಾರಗಳು ಜರ್ಮನ್ ದೇಶದಲ್ಲಿ ತಯಾರಿಸಿದ್ದು. ಮೇಲುಗಡೆ ಎಂದಿಗೂ ಕಪ್ಪಾಗ ದಂಥ ನಿಕಲ್ ಬೆಳ್ಳಿಯ ಮುಚ್ಚಳವಿರುವವು. ಇದಕ್ಕೆ ಒಂದಾವರ್ತಿ ಬೀಗಕೊಟ್ಟರೆ ೩೦ ಗಂಟೆಯ ಕಾಲ ನಡೆಯುವದು. ಮತ್ತು ಖರಾರು ಗಂಟೆಯನ್ನು ತೋರಿಸುವದು. ಗಡಿಯಾರದ ಎತ್ತರ ೭ ಅಂಗುಲ ವಿರುವದು. ಗಂಟೆ ತೋರಿಸುವ ಡಯಲು ೪ ಅಂಗುಲವಿರುವದು. ಇದರಲ್ಲಿ ಯಾವ ಆಗಲಿ ಬಹು ಜೇಗನೆ ಗಂಟೆಯನ್ನು ಗುರುತುಹಿಡಿಯಬಹುದು. ಇದು ಅಂಗಡಿ, ಸ್ಕೂಲು, ಮನೆ ರೀಡಿಂಗ್‌ರೂಂ, ಗುಡಿ ಮುಂತಾದವುಗಳಲ್ಲಿ ಇಡಲು ಬಹು ಉಪಯುಕ್ತವಾದದ್ದು. ಇವಕ್ಕೆ ಖಾತ್ರಿಯಾಗಿ ೫ ವರ್ಷ ಗ್ಯಾರಂಟಿ ಕೊಡುವೆವು. ಕ್ರಯ 1 ಕ್ಕೆ ರೂ. 5-8-0. ಅಲಾರಂ ಇಲ್ಲದ್ದು 3-0-0

**T. ರಾಯಲ್ ಕಂಪೆನಿ, 20. ಅರುಣಾಚಲ ಮೊದಲ ಬೀದಿ ಜಿ. ಟಿ. ಮದರಾಸ್**

---

## ಜಂಟಲ್‌ಮೆನ್ ರೇಡಿಯಂ ಪಾಕೇಟ್ ವಾಚ್



ಈ ಗಡಿಯಾರಗಳು ಹೊಸದಾಗಿ ಸ್ವೀಜರ್‌ಲ್ಯಾಂಡ್ ದೇಶದಲ್ಲಿ (ಸ್ವಿಸ್ ಮೇಡ್) ತಯಾರಾದವು. ಬಹು ಬಲಿಷ್ಠವಾದ ಲೀವರ್‌ಮೂವ್‌ಮೆಂಟ್ಸ್‌ಗಳಿಂದಲೂ, ದೃಢವಾದ ಸಾಮಾನುಗಳಿಂದಲೂ ತಯಾರಿಸಿ ಒಳಗಡೆ ಕೆಂಪುಗಳು ಇಟ್ಟಿರುವವು. ಇದರಲ್ಲಿ ಕತ್ತಲೆಯಲ್ಲಿ ದೀಪದ ಸಹಾಯವಿಲ್ಲದೆ ಗಂಟೆಯನ್ನು ನೋಡಬಹುದು. ಇವರ ಡೈಯಲ್‌ನಲ್ಲಿ ರೇಡಿಯಂ ಎಂಬ ಒಂದು ವಿಧವಾದ ವಿದ್ಯುಚ್ಛಕ್ತಿಯನ್ನು ಇಟ್ಟಿರುವದರಿಂದ ಎಲೆಕ್ಟ್ರಿಕ್ ದೀಪದಂತೆ ಪ್ರಕಾಶಿಸುತ್ತಾ ಗಂಟೆಯನ್ನು ತೋರಿಸುವುದು. ಇವು ನೋಡಲಿಕ್ಕೆ ಬಹು ಲಕ್ಷಣವಾಗಿಯೂ ಜೇಬಿಗೆ ಅಡಕವಾಗಿಯೂ ಇರುವವು. ಇವಕ್ಕೆ ಖಾತ್ರಿಯಾಗಿ 5 ವರುಷಗಳ ಗ್ಯಾರಂಟಿ ಕೊಡುವವು. ಕ್ರಯ ರೂ. 4-0-0

**T. V. Devkar & Co. 18 Beat Madras** **T. V. ದೇವಕರ್ ಅಂಡ ಕೋ 18 ಬೀಟ್ ಮದರಾಸ್**

---

## ಭಂಗಾರದ ಹರಳಿನ ಉಂಗರಗಳು



ಈ ಉಂಗರಗಳನ್ನು ಸೀಮೆಭಂಗಾರದಿಂದ ತಯಾರಿಸಿ ಮೇಲುಗಡೆ ಎಂದಿಗೂ ಬಣ್ಣಹೋಗದಂತೆ ಎಲೆಕ್ಟ್ರಿಕ್ ಶಕ್ತಿಯಿಂದ ಅಪರಂಜಿಭಂಗಾರ ಮಾಡಿದೆ. ಮೇಲು ಭಾಗದಲ್ಲಿ ಕೆಂಪು ಹಸರೂ ಮುಂತಾದ ಇಮಿಟೇಷನ್ ವಜ್ರದ ಕಲ್ಲುಗಳು ಇಟ್ಟು ಕಟ್ಟಡ ಕಟ್ಟಿರುವದು. ನೋಟಕ್ಕೆ ನಿಜವಾದ ವಜ್ರದ ವುಂಗರವೆಂದೇ ಹೇಳಬೇಕು. ಕ್ರಯ ರೂ.1-0-0 ಒಂದೇ ಸಲ ೩ ಉಂಗರ ತರಸಿದರೆ 1 ಟೇಬಲ್ ಟೈಂಪೀಸ್ ( Timepiece ) ಗಡಿಯಾರ ಬಹುಮಾನವಾಗಿ ಕೊಡಲ್ಪಡುವದು.

**British Agency 18 Beat. Madras** **ಬ್ರಿಟಿಷ್ ಏಜಿನ್ಸಿ 17 ಅರುಣಾಚಲ ಮೊದಲಬೀದಿ**

---

# ದಿ ಧಾರವಾಡ ಬ್ಯಾಂಕ ಲಿಮಿಟೆಡ್

**ಹೆಡ್ ಆಫೀಸ ಧಾರವಾಡ** **(ಸ್ಥಾಪನಾ ೧೮೯೩ನೆಯ ಇಸ್ವಿ)** **ಬ್ರಾಂಚ ಆಫೀಸ ಹು**

( Incorporated Under The Indian Companies Act 1882)

ಚಾಲತಿ ಠೇವು Current Deposits— ೫ನೇ ತಾರೀಖಿನೊಳಗಾಗಿ ೧ ತಿಂಗಳ ವರೆಗಿನ ಠೇವಿಗೆ ೧೦೦ಕ್ಕೆ ೩ಕ್ಕಿದಂತೆ ಬಡ್ಡಿ

ಚಾಲತಿ ಲೆಕ್ಕ (Current Accounts) —ದಿನದ ಶಿಲ್ಕಿನ ಮೇಲೆ ೧೦೦ಕ್ಕೆ ವರ್ಷಕ್ಕೆ ೨ ದಂತೆ ಬಡ್ಡಿಯು.

ನಿಶ್ಚಿತ ಠೇವು ( Fixed Deposits )—ಇನ್ನೊಂದು ನೋಟೀಸು ಕೊಡುವವರೆಗೆ ಕೆಳಗೆ ಕಾಣಿಸಿದ ನಿಶ್ಚಿತ ಠೇವಿಗೆ ಮುಂದೆ ತೋರಿಸಿದ ಬಡ್ಡಿಯು ಕೊಡಲ್ಪಡುವದು.

| | | | |
|---|---|---|---|
| ೬ ತಿಂಗಳಿಗೆ | ೧೦೦ಕ್ಕೆ ವರ್ಷಕ್ಕೆ ೫½ | ೧೨ ತಿಂಗಳಿಗೆ | ೧೦೦ಕ್ಕೆ ವರ್ಷಕ್ಕೆ |
| ೨೪ ,, | ,, ೬¾ | ೩೬ ,, | ,, |

ಚೆಕ್ಕುಗಳನ್ನೂ ಹುಂಡಿಗಳನ್ನೂ ಹಣ ವಸೂಲಿಗಾಗಲಿ ಹಣ ತಕ್ಕೊಳ್ಳಲಿಕ್ಕಾಗಲಿ ಪೇಟೆಯ ಚಾಲತಿ ದರದಂತೆ ಹಾಗೂ ತಕ್ಕೊಳ್ಳುವೆವು. ಮುಂಬಯಿ, ಮದ್ರಾಸ ಮತ್ತು ಕಲಕತ್ತೆಯ ಹುಂಡಿಗಳನ್ನು ಕೊಡುವೆವು. ಸರಕಾರಿ ಕಾಗದಗಳ ಮೇಲೆ ಅಥವಾ ಬೇರೆ ಯೋಗ್ಯ ವಸ್ತುಗಳ ಮೇಲೆ ಸಾಲಗಳನ್ನು ಕೊಡುವೆವು. ಬೇರೆ ಹೆಚ್ಚಿನ ಮಾಹಿತಿಯಾಗಲಿ



ಸಂಪುಟ ೮; ಸಂಚಿಕೆ ೯. ಆಷಾಢ ಪೌರ್ಣಿಮೆ; ಜುಲೈ ೧೯೩೦

ಸಂಸ್ಥಾಪಕರು:- ಆಲೂರ ವೆಂಕಟರಾಯರು] [ಸಂಪಾದಕರು:- ಬೆಳಗಾಂವಿ ರಾಮಚಂದ್ರರಾಯರು ಬೀ. ಎ.

## ಮುಖ್ಯ ವಿಷಯಗಳು



# ಮಯೂರ ನಾಟ್ಯ

ಶಿಲ್ಪಿ—ನಾರಾಯಣ, ಶಾಂತಿನಿಕೇತನ

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥

तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

| ಸಂಪುಟ ೮ | ಪ್ರಮೋದ ಸಂವತ್ಸರ, ಕಡ್ಲಿಗಡಬಿನ ಹುಣ್ಣಿವೆ<br>ಚಾಲುಕ್ಯವಿಕ್ರಮ ವರ್ಷ ೮೫೫ | ಸಂಚಿಕೆ ೯ |
|---|---|---|

## ಹೊಸಕಾಲದ ನವಿಲು!

ಮನದಣಿ ಕುಣಿಯುತ ಕೇಕೆಯ ಹಾಕುತ
ಮರಡಿಯು ಮೇಲಣ ಹಸುರಲಿ ಹಾರುವ
ಹೊಸಕಾಲದ ನವಿಲು !

ಬೇಸಗೆಬೇಗೆಯು ಹಳೆಯುಡನೆಲ್ಲವ
ಸಾಸಿರ ನಾಲಿಗೆಯಿಂದಲೆ ಸವರಲು
ಪೂಸಿ ಎರೆಯಲಿಳೆ-ತಾಯಿಯು ತವಕದಿ
ಸಾಸಿರ ರೂವಿಲಿ ಕಾರಿನ ನೀರೆಯು

ಬೇಗದಿ ಬಂದಿರಲು,
ಕುಣಿವುದು ಹಗಲಿರುಳು
ಹೊಸಕಾಲದ ನವಿಲು !

ಬಂದಿತು ಮಳೆಗಾಲವು ಆಳಿಗಾಲವು
ಬಂದಿತು ಎನ್ನುತ ಬನದೊಳಗಿನ ದ್ವಿಜ-
ವೃಂದವು ತಾವೇ ತಾವೆಯೆ ಮಾಡಿದ
ಬಂದಿಯ ವಾಸವನೊಡನೆಯೆ ಸೇರಲು

ಒಂದೇ ಒಂದೆಯುದು
ನಿಂದದೆ ನೊಂದದೊಲು
ಹೊಸಕಾಲದ ನವಿಲು !

ಮಿಂದೆವು ಮಾಸದ ಬೇಸಿಗೆಬಿಸಿಲಲಿ
ಪೋದೆವು ಜಗವನು ನೆಳಲಿನಲೆನ್ನುತ
ಹಿರಿತನದಿಂದಲಿ ನಿಂತಿಹ ಮರಗಳು
ತಿರೆಯನು ಬಿರಿಯುವ ಬಿರುಮಳೆ ಬಂದಿರೆ

ಅತಿ ಅತಿ ಅದುರಿರಲೂ
ತನನನ ಕುಣಿವುದಿದೂ
ಹೊಸಕಾಲದ ನವಿಲು !

ಬಾನಿನ ಬಯಲೊಳು ನಡೆದಿಹ ಬವರದಿ
ಕಾಣದ ಗುಡುಗಿನ ಗುಟ್ಟನು ಕಂಡೊಲು
ಮಾಣದ ವೈಭವವಾದ್ಯವು ಎಂದೋ
ತಾನೆಯೆ ಹೊಸನಾಡಿನ ದೊರೆಯೆಂದೋ

ತಲೆಯಲಿ ಕೊಡೆಯಿರಿಸಿ
ನಲಿವುದು ಹಗಲಿರುಳು
ಹೊಸಕಾಲದ ನವಿಲು !

ಪಸೆಯನು ತಂದಿತು ಸಸಿಯನು ತೋರಿತು
ಪೊಸಪೊಸವೂಗಳ ಕಣ್ಣನು ತೆರೆಯಿತು
ಕಸುಕಿನ ನೆಲದಲಿ ಹಸುರನು ಹಾಸಿತು
ಪೊಸಕಾಲವಿದೆಂಬಾನಂದದಲಿಯೆ

ಮೈಮರೆಯುತ ಮರುಳು
ಕುಣಿವುದು ಹಗಲಿರುಳು
ಹೊಸಕಾಲದ ನವಿಲು !

ಮುಗಿಲದು ನಸುವೆಯೆ ತನ್ನಯ ಮುಸುಕನು
ತೆಗೆದೋಗೆದೊಳ್ಳಿಯ ನೇಸರ ನಗೆಯಲಿ
ಝುಗಝುಗವಿರುತಿರೆ ಬಿಂಕದ ಗರುವಿನ
ಬಗೆಬಗೆ ಬಣ್ಣದ ಗರಿಯನೆ ತೆರೆಯುತ

ಮೆಲ್ಲನೆ ಒಗೆಯುವನು
ತಾಲದಿ ಕಾಲ್ಗಳನು
ಹೊಸಕಾಲದ ಸಖನು !

ಕೊಳೆತಿಹ ಹುಳಿತಿಹ ಕಂದಿಹ ಕಮರಿಹ
ಹಳೆಯದ ಕುಲವನು ಗಳಮನೆ ನುಂಗಲು
ಮಳೆವೋಡದ ರಕ್ಕಸರೈದಿರುತಿರೆ
ಸೆಳೆಮಿಂಚಿನ ಹಲ್ಲುಗಳಾಡಿಸುತಿರೆ

ನಲಿವುದು ಹಗಲಿರುಳು
ನಿಲುವುದು ದಣಿಯದೊಲು
ಹೊಸಕಾಲದ ನವಿಲು !

ಗರಿಯಲಿ ಬಗೆಬಗೆ ಬಯಕೆಯ ಹರಹುತ
ಗರುವವ ನಡುವಿನ ಪೊಡೆಯಲಿ ತೋರುತ
ಬರುತಿಹ ಬೆಳೆಯನು ಸಿರದಲಿ ಧರಿಸುತ
ಸರುವರ ಕರೆಯುವ ಕೇಕೆಯ ಹಾಕುತ

ಕುಣಿವುದು ಹಗಲಿರುಳು
ಬೆಳೆಗಾಲದ ಕುರುಹು
ಹೊಸಕಾಲದ ನವಿಲು !

— ರಂಗನಾಥ ಮುಗಳಿ.

# ಪೂರ್ಣ ಸ್ವರಾಜ್ಯ

## ಅಥವಾ

## ಸಮಗ್ರ ಕ್ರಾಂತಿ

ಲೇಖಕ—ರಾಮಚಂದ್ರ ಬೆಳಗಾಂವಕರ, ಬಿ. ಎ.,

ಡಿಸೆಂಬರ ೩೧ ನೆಯ ತೇದಿಯ ಮಧ್ಯರಾತ್ರಿಯಲ್ಲಿ ರಾಷ್ಟ್ರೀಯ ಮಹಾಸಭೆಯು ಸಂಪೂರ್ಣ ಸ್ವಾತಂತ್ರ್ಯವೇ ಭಾರತೀಯರ ಧ್ಯೇಯವೆಂದು ಜಗತ್ತಿಗೆ ಸಾರಿ ಹೇಳಿತು. ಸಂಪೂರ್ಣ ಸ್ವಾತಂತ್ರ್ಯಕ್ಕೆ ಇಂಗ್ಲೀಷಿನಲ್ಲಿ Complete Independence ಎಂದು ಹೆಸರು. 'ಒಕ್ಕಲುನಾಡಿನ ಸ್ವರಾಜ್ಯ' (Dominion Status), 'ಸಾಮ್ರಾಜ್ಯಾಂತರ್ಗತ ಸ್ವರಾಜ್ಯ' ಮೊದಲಾದ ಶಬ್ದಗಳಲ್ಲಿ ಅಡಕವಾದ ಸಂದಿಗ್ಧ ಸ್ವಾತಂತ್ರ್ಯವನ್ನು ಸ್ಪಷ್ಟಭಾಷೆಯಲ್ಲಿ ನಿರಾಕರಿಸಲಿಕ್ಕೆ ಈ ಹೊಸ ಶಬ್ದ ಸಮುಚ್ಚಯವು ಸೃಷ್ಟಿಸಲ್ಪಟ್ಟಿತು. ಕ್ರಾಂತಿಕಾರರ ಬಲಿದಾನದಿಂದಲೇ ಈ ನಾಮಕರಣವು ಸ್ವೀಕೃತವಾಯಿತು. ಮ. ಗಾಂಧಿಯವರಾದರೂ ಸಂಪೂರ್ಣ ಸ್ವಾತಂತ್ರ್ಯಕ್ಕಾಗಿಯೇ ಹೋರಾಡುತ್ತಿದ್ದರೆಂಬುದರ ಬಗೆಗೆ ಯಾರೂ ಸಂದೇಹಪಡುವಂತಿಲ್ಲ. ದೂರದರ್ಶಿಗಳಾದುದರಿಂದ ಯೋಗ್ಯ ಸಮಯದ ದಾರಿಯನ್ನು ಕಾಯುತ್ತಿದ್ದರು. ಆ ಅಮೃತಸಿದ್ಧಿಯೋಗವು ಬಂದಿತು. ತಟ್ಟನೆ ಮಹಾತ್ಮರು ತಮ್ಮ ಶೀಲನ ವರ್ಚಸ್ಸಿನ ಬೆಂಬಲವನ್ನಿತ್ತು, ಈ ಹೊಸ ನಾಮನಿರ್ದೇಶವನ್ನು ಒಪ್ಪಿಕೊಂಡರು.

ಆದರೆ ಮಹಾತ್ಮರು ಇಷ್ಟಕ್ಕೆ ತಡೆಯದೆ 'ಪೂರ್ಣಸ್ವರಾಜ್ಯ' ಎಂಬ ಮತ್ತೊಂದು ಹೆಸರನ್ನು ಬಳಕೆಯಲ್ಲಿ ತಂದಿರುವರು. ಇದೇಕೆ ? ಗಾಂಧಿಯವರ ಗುಣವಿಶೇಷಗಳನ್ನು ಬಲ್ಲವರಿಗೆ ಈ ಹೊಸ ಹೆಸರಿನಲ್ಲಿ ಹೊಸತನವು ತೋರದೆ ಇರಲಾರದು.

ಶಬ್ದಗಳಲ್ಲೇನಿದೆ ? ನಿಘಂಟುಗಳಲ್ಲಿ ಶಬ್ದಗಳು ರಾಶಿರಾಶಿಯಾಗಿ ಬಿದ್ದುಕೊಂಡಿವೆ. ಅವೆಲ್ಲವುಗಳಿಗೂ ಅಷ್ಟೇ ಬೆಲೆಯಿರುವುದಿಲ್ಲ. ಆದರೆ ಕೆಲ ಶಬ್ದಗಳು ಜನಾಂಗಕ್ಕೆ ಜನಾಂಗವನ್ನೇ ಅಲ್ಲಾಡಿಸುವವು. ಅವುಗಳಲ್ಲಿ ಅಷ್ಟೊಂದು ವೀರ್ಯವಿರುವದು, ಚೇತನೆಯಿರುವದು. ಇಂಥ ಶಬ್ದಗಳು ಯೋಗ್ಯರ ಅಭಿಮಂತ್ರಣದಿಂದ ಅಸ್ತ್ರಗಳಂತೆ ಅಮೋಘವಾಗುವವು. ವಿಶುದ್ಧ ಜೀವಗಳು ತಮ್ಮ ಜೀವನದ ಎರಕವನ್ನು ಹೊಯ್ದಿರುವದರಿಂದ, ಇವುಗಳು ವಿವಿಧಾರ್ಥಪರಿಪೂರ್ಣವಾಗುವವು.

ಮಹಾತ್ಮರು ಇಂಥ ಮಂತ್ರಮಯ ಶಬ್ದಗಳ ಜನಕರೂ, ಯೋಜಕರೂ ಇದ್ದಾರೆ. ಅಹಿಂಸೆ, ಅಪರಿಗ್ರಹ, ಸತ್ಯಾಗ್ರಹ ಮೊದಲಾದ ಶಬ್ದಗಳಿಗೆ ಅವರ ಶೀಲಚಾರಿತ್ರ್ಯಗಳ ಮೂಲಕ ಎಂತಹ ಮನ್ನಣೆ ಬಂದಿದೆಯೆಂಬುದನ್ನು ಎಲ್ಲರೂ ಬಲ್ಲರು ಅವುಗಳಲ್ಲಿ ತಪಸ್ಸಿದೆ, ಸಾಧನವಿದೆ, ಯೋಗವಿದೆ. 'ಪೂರ್ಣಸ್ವರಾಜ್ಯ' ವೆಂಬ ಈ ಹೊಸ ಕೂಸಾದರೂ ಮೊದಲಿನವುಗಳ ಪರಂಪರೆಯಲ್ಲಿಯೇ ಬಂದಿರಲಿಕ್ಕೆ ಸಾಕು. ಇದರಲ್ಲಿ ಧ್ವನಿತವಾಗುವ ಯೋಗಾರ್ಥವನ್ನು ಈ ಲೇಖನದಲ್ಲಿ ತಿಳಿದಮಟ್ಟಿಗೆ ವಿವೇಚಿಸಬೇಕೆಂದಿದೆ.

× × × ×

'ಪೂರ್ಣಸ್ವರಾಜ್ಯ'ಕ್ಕೆ ಸಮಾನಾರ್ಥಪರವಾಗಿ 'ಸಮಗ್ರ ಕ್ರಾಂತಿ' ಯೆಂಬ ಹೆಸರನ್ನು ಈ ಲೇಖನದ ತಲೆಕಟ್ಟಿನಲ್ಲಿ ಸೂಚಿಸಿದೆ. 'ಕ್ರಾಂತಿ' (Revolution) ಎಂಬ ಶಬ್ದವು ಪಶ್ಚಿಮದವರ ಕಾಣಿಕೆಯಾಗಿದೆ. ಜನಜೀವನದಲ್ಲಿ ಪ್ರತ್ಯಕ್ಷ ಪರಿವರ್ತನೆಯು ಶೀಘ್ರವಾಗಿ ಆಗುವದಕ್ಕೆ ಅವರು ಕ್ರಾಂತಿಯೆನ್ನುವರು. ಲಾಹೋರ ಕಾಂಗ್ರೆಸ್ಸಿನ ತರುಣ ಅಧ್ಯಕ್ಷರಾದ ಜವಾಹಿರಲಾಲರು ತಮ್ಮ ಭಾಷಣದ ಕೊನೆಯಲ್ಲಿ 'ಇನ್ಕಿಲಾಬ ಝಿಂದಾಬಾದ' (Long live Revolution) ಕ್ರಾಂತಿಯು ಚಿರಾಯುವಾಗಲಿ ! ಎಂದು ಘೋಷಣೆಯನ್ನು ಮಾಡಿದರು. ಕೂಡಲೆ ಸಭಾಮಂಟಪದಲ್ಲಿ ಎಲ್ಲಾ ಕಡೆಗೂ ಅದೇ ಗರ್ಜನೆಯು ದುಮದುಮಿಸಿತು. ಈ ಕೂಗು ಇಂದು ಭಾರತೀಯ ತರುಣಲೋಕದ ರಣಗರ್ಜನೆಯಾಗಿದೆ. ಅಂಥ ಮೋಹಕಶಕ್ತಿ ಅದರಲ್ಲಿ ಇದ್ದೇ ತೀರಬೇಕಷ್ಟೆ ?

× × × ×

ನನಗೆ ತಿಳಿಯುವ ಮಟ್ಟಿಗೆ 'ಪೂರ್ಣಸ್ವರಾಜ್ಯ' 'ಸಮಗ್ರ ಕ್ರಾಂತಿ' ಎಂಬ ಎರಡೂ ಶಬ್ದಗಳು ಸುಮಸುಮಾರು ಒಂದೇ ಅರ್ಥವನ್ನು ಸೂಚಿಸುವವು. ಒಂದು ಭಾರತೀಯರ ವಿಚಾರದ ರೀತಿಯ ಪ್ರತಿನಿಧಿಯಾಗಿದ್ದರೆ, ಇನ್ನೊಂದು ಪಾಶ್ಚಾತ್ಯರ ವಿಚಾರಪರಂಪರೆಯ ಫಲವಾಗಿದೆ.

× × × ×

ಪೂರ್ಣಸ್ವರಾಜ್ಯವು ಬರಿ ಸ್ವರಾಜ್ಯಕ್ಕಿಂತಲೂ ಹೆಚ್ಚು. ನಮ್ಮನ್ನು ನಾವೇ ಆಳುವೆನಲ್ಲದೆ, ಆ ಆಳುವಿಕೆಯು **ಸರ್ವಾಂಗಪರಿಪೂರ್ಣವಾಗಿರತಕ್ಕುದು.** ನಮ್ಮ ಮೇಲಿನ ನಮ್ಮ ಒಡೆತನವು ಪುಟ್ಟಾಪೂರಾ ಇರಬೇಕಿದ್ದರೆ, ಅದು ನಿರಾತಂಕವಾಗಿರತಕ್ಕುದು. ಆದುದರಿಂದ ಪೂರ್ಣ ಸ್ವರಾಜ್ಯವು ಸಂಪೂರ್ಣ ಸ್ವಾತಂತ್ರ್ಯದ ಅಥವಾ ಅ-ಪಾರತಂತ್ರ್ಯ ( In-dependence )ದ ಕಲ್ಪನೆಯನ್ನು ಒಳಕೊಂಡಿದೆ. ಅಂತೆಯೆ ಅದು ಸಂಪೂರ್ಣ ಸ್ವಾತಂತ್ರ್ಯಕ್ಕಿಂತಲೂ ಹೆಚ್ಚು. ಹಾಗಿದ್ದರೆ ಸ್ವರಾಜ್ಯ-ಸ್ವಾತಂತ್ರ್ಯಗಳನ್ನಲ್ಲದೆ ಇನ್ನಾವ ವಿಶೇಷಗಳು ಈ ಶಬ್ದದಲ್ಲಿ ಅಡಕವಾಗಿವೆ ?

× × × ×

ಈ ಶಬ್ದದ ಯೋಗಾರ್ಥವನ್ನು ತಿಳಕೊಳ್ಳಬೇಕಾದರೆ, ನಾವು ಗಾಂಧಿಯವರ ದೇಶಸೇವೆಯ ವಿಶಿಷ್ಟರೀತಿಯ ಕಡೆಗೇ ಹೊರಳಬೇಕಾಗುವದು.

ಮಹಾತ್ಮರು ಸ್ವರಾಜ್ಯಯಾತ್ರೆಗಾಗಿ ಸಾಬರಮತಿಯಿಂದ ಹೊರಡುವ ಮೊದಲು ಒಬ್ಬರು ಕೇಳಿದ ಪ್ರಶ್ನೆಗಳಿಗೆ ಅವರು ಕೊಟ್ಟ ಉತ್ತರಗಳು ' Young India ' ದಲ್ಲಿ ಪ್ರಕಟವಾಗಿವೆ.

' ನಿಮಗೆ ಎಂಥ ಸರಕಾರವು ಬೇಕು ? '

' ಪ್ರಜೆಗಳ ಇಚ್ಛಾನುಸಾರಿಯಾಗಿ ನಡೆಯುವ ಸರಕಾರವು ಬೇಕು. '

' ನಿಮಗೆ ಜನಪದರಾಜ್ಯವು (Democracy) ಬೇಕೆ ? '

' ನಾನು ಶಬ್ದಗಳಿಂದ ಮೋಸಹೋಗುವವನಲ್ಲ. '

' ನೀವು ಮಾರ್ಗಕ್ಕಾದರೂ ಮಹತ್ತ್ವವನ್ನು ಕೊಡುವಿರಾ? '

' ಖಂಡಿತ '

' ನಿಮ್ಮ ಪ್ರಜಾಪ್ರಭುತ್ವವಾದರೂ ಯಾವ ರೂಪವನ್ನು ಪಡೆಯಬಹುದು ? '

' ನಾನು ಹೇಳಲಾರೆ. ಮಾರ್ಗದ ವಿಷಯವಾಗಿ ಎಚ್ಚರ ಪಡುವೆನು. ಮಾರ್ಗವೆಂದರೆ, ಜನಪದದ ಇಚ್ಛೆಯನ್ನು ಸಾಧ್ಯಗೊಳಿಸುವ ಸಾಧನ. ಒಂದು ಸತ್ಯದ ಅಹಿಂಸೆಯ ಮಾರ್ಗವಿದೆ. ಇನ್ನೊಂದು ಮೋಸದ ಹಿಂಸೆಯ ಮಾರ್ಗವಿದೆ. '......

ಮೊನ್ನೆ ಇಂಗ್ಲೆಂಡಿನ ಡೇಲಿ ಹೇರಲ್ಡಿನ ಪ್ರತಿನಿಧಿಗಳಾದ ಸ್ಲೋಕೋಂಬರೊಡನೆ ಯರವಡೆಯ ಸೆರೆಮನೆಯಲ್ಲಾದ ಸಂಭಾಷಣೆಯಲ್ಲಿಯೂ, ' ಶಬ್ದಜಾಲವು ನನ್ನನ್ನು ಠಕ್ಕಿಸಲಾರದು. ನಾನು ತಿರುಳಿ ( Substance )ನ ಕಡೆ ನೋಡುತ್ತೇನೆ ' ಎಂದು ಹೇಳಿದರು.

ಅಂತೂ ಗಾಂಧಿಯವರು ಎರಡು ಮಾತುಗಳನ್ನು ಮಾತ್ರ ಲೆಕ್ಕಿಸುವರು. (೧) ಅವರಿಗೆ ತಥ್ಯ ಬೇಕು. ಮಿಥ್ಯ ಬೇಡ. ಜನತೆಗೆ ತಾತ್ಕಾಲಿಕವಾಗಿ, ಪ್ರತ್ಯಕ್ಷವಾಗಿ ಹಿತಕಾರಿಯಾಗುವಂತಹದೆಲ್ಲಾ ಬೇಕು– ಹೆಸರು ಏನೇ ಇರಲಿ. ಅವರಿಗೆ ಹುರುಳು ಬೇಕು. ಹರಟೆ ಬೇಡ. (೨) ಆ ಹುರುಳನ್ನು ದೊರಕಿಸುವ ಸಾಧನವಾದರೂ ಶುದ್ಧವೂ ಸಾತ್ತ್ವಿಕವೂ ಇರತಕ್ಕುದು.

ಸೂಕ್ಷ್ಮವಾಗಿ ವಿಮರ್ಶಿಸುವವನಿಗೆ ಜನತೆಯ ಕೊರತೆಗಳು ತಾನೇ ತೋರುವವು. ಅವುಗಳ ಸ್ವರೂಪವನ್ನು ಒಳಿತಾಗಿ ತಿಳಿದುಕೊಂಡು, ಅವುಗಳನ್ನು ನೀಗಲಾಡಿಸಲು ಯೋಗ್ಯ ಮಾರ್ಗಗಳನ್ನು ಹುಡುಕಿ, ಆ ಮಾರ್ಗಗಳನ್ನು ಆಗಿಂದಾಗ ಆಚರಣೆಯಲ್ಲಿ ತರುವದೇ ಗಾಂಧಿಯವರ ಚಾತುರ್ಯದ ಮರ್ಮವಾಗಿದೆ.

ಗಾಂಧಿಯವರ ಸ್ವರಾಜ್ಯದ ಚಳವಳಿಯು ಬರಿ ಸ್ಥೂಲ ರಾಜಕೀಯ ಸ್ವರೂಪದ್ದಿರದೆ, ಅದಕ್ಕೆ ಎರಡು ಮೈಗಳಿವೆ. ಇತ್ತ ಜನತೆಯ ರಾಜಕೀಯ ಆಕಾಂಕ್ಷೆಗಳ ತೃಪ್ತಿಯೂ ಆಗಿರಬೇಕು, ಇತ್ತ ರಾಷ್ಟ್ರಪುರುಷನ ಆಂತರಂಗಿಕ ದೋಷಗಳೂ ನಿರ್ಮೂಲವಾಗಿರಬೇಕು. ಉಪ್ಪಿನ ಚಳವಳಿಯಿಂದ ಸರಕಾರದೊಡನೆ ಹೋರಾಟವೂ ಆಗಬೇಕು. ಉಪ್ಪಿನ ಮೇಲಣ ಅನ್ಯಾಯದ ಕರವು ಹೋಗಿ, ಪ್ರಜೆಯು ಸಧನವಾಗಬೇಕು. ಇತ್ತ ಶಾಸನ ಭಂಗವೂ ( Disobedience of Laws ) ಆಗಬೇಕು, ಇತ್ತ ಸೆರೆಸಿಂದಿಗಳ ವ್ಯಸನವೂ, ಪರದೇಶಿ ವಸ್ತುಗಳ ವ್ಯಾಪಾರವೂ ಕಟ್ಟಾಗಬೇಕು.

ಇಂತು ಪೂರ್ಣ ಸ್ವರಾಜ್ಯವೆಂದರೆ ರಾಷ್ಟ್ರವು ತನ್ನ ಕೊರತೆಗಳನ್ನು ತಾನರಿತು, ಪರಕೀಯ ಪ್ರಭುತ್ವವನ್ನು ಅವಲಂಬಿಸದೆ ಅವುಗಳನ್ನು ದೂರಮಾಡುವದು. ಇದೊಂದು ರಾಷ್ಟ್ರೀಯ **ಯೋಗವು.** ಪರಮಾರ್ಥದ ಮಾರ್ಗದಲ್ಲಿ ಬಹಿರಂಗದ ಶತ್ರುಗಳು, ಅಂತರಂಗದೊಳಗಿನ ಶತ್ರುಗಳು ಎಂದು ದ್ವಿವಿಧ ದೋಷಗಳನ್ನು ನಾಶಗೊಳಿಸಬೇಕಾಗುವಂತೆ ರಾಷ್ಟ್ರೀಯ ಯೋಗದಲ್ಲಿಯೂ ಇಬ್ಬಗೆಯ ಹಗೆಗಳನ್ನು ಎದುರಿಸಬೇಕಾಗುವದು. ಹೊರಗೆ– ಪರಕೀಯ ಪ್ರಭುತ್ವ; ಒಳಗೆ– ನಮ್ಮ ನಮ್ಮೊಳಗಿನ ಅಜ್ಞಾನ, ರೂಢಿಯ ಶಿಷ್ಟಾಚಾರದ ಪೂರ್ವಪದ

ಪತಿಯ ಕುರುಡು ಅರಸೊತ್ತಿಗೆ, ಜಾತಿಭೇದದ ಭೂತ, ಉಚ್ಚ ವರ್ಣಗಳ ಉರಿವಣಿಗೆ, ಮಠಾಧೀಶರ ಮೆರವಣಿಗೆ, ಬಂಡವಾಳದವರ ಬಂಡಾಟ ( Capitalism ), ಜಮೀನುದಾರರ, ಜಹಗೀರುದಾರರ, ಸಂಸ್ಥಾನಿಕರ ವರ್ಚಸ್ವ— ಅಂತೂ ಸೊತ್ತುಳ್ಳವರ ( Vested interests )—ಅವರು ಉಚ್ಚ ವರ್ಣದವರೆಂದೇ ಕರೆದುಕೊಳ್ಳಲಿ, ದುಡ್ಡುಳ್ಳ ವರ್ಗದವರೇ ಇರಲಿ— ರಾಜಕೀಯ ಅಧಿಕಾರ. ಹೊರಗಣ ಹಗೆಯನ್ನು ಸೋಲಿಸುವುದು ಸುಲಭ. ಒಳಗಣ ಹಗೆಯನ್ನು ಹಣ್ಣು ಮಾಡುವುದೇ ಕಷ್ಟ. ಏಕೆಂದರೆ ಒಳಗಿನ ಹುಳುಕಿನ ಮೂಲಕವೇ ಹೊರಗಿನವರ ಆಳಿಕೆ ನಡೆದಿದೆ. ಆದುದರಿಂದ **ಪೂರ್ಣ ಸ್ವರಾಜ್ಯದ ಆಂದೋಲನವು ಅಕುಂಠಿತವಾಗಿ ಅವಿರತವಾಗಿ ಸಾಗುವಂತಹದು.** ಪರಕೀಯ ಪ್ರಭುತ್ವವು ಹಳಿದು ಮಾತಾದಮೇಲೂ ನಡೆಯುವಂತಹದು. ಏಕೆಂದರೆ ಪರದಾಸ್ಯವೆಂಬುದೊಂದೇ ನಮ್ಮ ದೋಷವಲ್ಲ. ನಮ್ಮ ದೋಷಗಳು ಹೇರಳವಾಗಿವೆ. ಅವುಗಳನ್ನೆಲ್ಲ ಹಾಳುಮಾಡಲಿಕ್ಕೆ ದೊಡ್ಡ ಕಾಲಾವಧಿ ಬೇಕು. ಅಂತೂ ಪೂರ್ಣ ಸ್ವರಾಜ್ಯವೆಂದರೆ ಕಟ್ಟಕಟ್ಟ ಸಿದ್ಧಿಯಲ್ಲ. ವಿವಿಧ ರಾಷ್ಟ್ರಾಂಗಗಳ (ರಾಜಕೀಯ, ಸಾಮಾಜಿಕ, ಆರ್ಥಿಕ, ನೈತಿಕ, ಬೌದ್ಧಿಕ ಮೊದಲಾದವುಗಳ) ಬೆಳವಣಿಗೆಗಾಗಿ ಮಾಡುವ ಸಾಹಸರಾಶಿಯಲ್ಲಿಯೇ ಪೂರ್ಣ ಸ್ವರಾಜ್ಯವು ದೃಗ್ಗೋಚರವಾಗುವದು. ಅಥವಾ ಆ ಸಾಹಸವೇ ಪೂರ್ಣ ಸ್ವರಾಜ್ಯವೆಂದರೂ ಸಲ್ಲುವದು. ಏಕೆಂದರೆ ಆ ಸಾಹಸದಲ್ಲಿ ಪ್ರಯತ್ನವೂ ಸಿದ್ಧಿಯೂ ಮಿಳಿತವಾಗಿರುವವು.

ಈ ವಿಧವಾದ ಸಾಮಾಜಿಕ-ರಾಜಕೀಯ ಚಳವಳಿಗಳ ಮೇಳನದ — ಸರ್ವಾಂಗೀಣ ಸಂಸ್ಕರಣ( All-round reform ) ದ ಮೊದಲಿಗರು ನಮ್ಮ ಆರ್ಯಾವರ್ತದಲ್ಲಿ ಗಾಂಧಿಯವರೇ ಎಂದು ಹೇಳಬಹುದು. ಗಾಂಧಿಯವರು ರಾಷ್ಟ್ರೋದ್ಧಾರದಲ್ಲಿ ಆತ್ಮೋದ್ಧಾರವನ್ನು ಬೆರೆಸಿಬಿಟ್ಟಿರುವರು. ಸಮಾಜದ ಮೋಕ್ಷಕ್ಕೆ ಹೊರತಾಗಿ ಅವರಿಗೆ ತಮ್ಮ ಮೋಕ್ಷವು ಬೇರೆಯಿಲ್ಲ. ದೇವದರ್ಶನಕ್ಕಾಗಿ ತಮಗಿರುವ ಉತ್ಕಂಠೆಗೆ ಈ ಸರಕಾರವು ಅಡ್ಡಬಂದಿರುವದರಿಂದಲೇ ಅದರ ಹಗೆಯಾಗಿರುವೆನೆಂದು ಅವರು ಮೊನ್ನೆ ಮೊನ್ನೆ ಹೇಳಿರುವರು. ಇದನ್ನೇ ಜೆ. ಸಿ. ಕುಮಾರಪ್ಪನವರು ' Purna Swarajya is within you ' ಪೂರ್ಣ ಸ್ವರಾಜ್ಯ ನಿಮ್ಮೊಳಗೇ ಇದೆ, ಎಂದು ರಹಸ್ಯಮಯವಾಗಿ ಹೇಳಿದರು. ಪೂರ್ಣ ಸ್ವರಾಜ್ಯವು ಒಳಗೆ ಅರಿತುಕೊಂಡು, ಹೊರಗೆ ಪಡಕೊಳ್ಳುವಂತಹ ವಿಷಯು. ಅದು ಸ್ವಾವಲಂಬನದ— ಸ್ವಯಂನಿರ್ಣಯದ— ಸರ್ವೋದ್ಧಾರದ ಮಾರ್ಗ. ಇಷ್ಟೇ— ಹಿಂದಣ ಯೋಗಮಾರ್ಗಗಳು ಸಮಾಜದಿಂದ ವ್ಯತಿರಿಕ್ತವಾಗಿ ಕೇವಲ ಸ್ವಕೀಯ ಮೋಕ್ಷದ ಸಾಧನಗಳಾಗಿದ್ದವು. ಪೂರ್ಣಸ್ವರಾಜ್ಯಯೋಗವು ಸಮಾಜ ಮೋಕ್ಷದ ಅನುಷ್ಠಾನವು.

ಇದು ಸಮಷ್ಟಿಯ ಮೋಕ್ಷಮಾರ್ಗವಾದುದರಿಂದ ಹಳೆಯ ವೇದಾಂತಿಗಳಂತೆ ಅಸ್ಪೃಶ್ಯತೆ, ವೇದಾಭ್ಯಾಸಾದಿ ಜ್ಞಾನಾರ್ಜನೆಯಲ್ಲಿ ಮತ್ತು ಜನಸಾಮಾನ್ಯರಿಗೆ ಇರಬೇಕಾದ ಹಕ್ಕುಗಳಲ್ಲಿ ಸ್ತ್ರೀ-ಶೂದ್ರರ ಅನಧಿಕಾರ, ಧರ್ಮದ ಮರೆಯಲ್ಲಿ ವಿವೇಕಕ್ಕೆ ಅಸಮ್ಮತವಾದ, ಅಶಾಸ್ತ್ರೀಯವಾದ ನಿರ್ಬಂಧನೆಗಳು ಮೊದಲಾದ ಸಾಮಾಜಿಕ ಕುಂದಕಗಳನ್ನು ಮುಟ್ಟದ ಹಾಗೆ ನಡೆಯುವದು ಇನ್ನು ಸಾಧ್ಯವಿಲ್ಲ. ಈ ಮುಟ್ಟಲುಮುರುಕತನವು ಇನ್ನು ಬಗೆಹರಿಯದು. ಈ ಅನ್ಯಾಯಗಳನ್ನು ಸ್ಪಷ್ಟವಾಗಿ, ದೃಗ್ಗೋಚರವಾಗಿ ದೂರೀಕರಿಸಲೇಬೇಕು. ಪೂರ್ಣಸ್ವರಾಜ್ಯದ ಚಳವಳಿಯು ರಾಜಕೀಯವಷ್ಟೇ ಅಲ್ಲದೆ, ರಾಜಕೀಯಕ್ಕಿಂತ ಹೆಚ್ಚು ಸಾಮಾಜಿಕವೂ, ಸಾಮಾಜಿಕವಲ್ಲದೆ ಜನತೆಗೆ ಆರ್ಥಿಕ ಸ್ವಾತಂತ್ರ್ಯವನ್ನೀಯುವಂತಹದೂ, ಜನತೆಯ ನೀತಿ-ಶೀಲ-ಬುದ್ಧಿಗಳ ವಿಕಾಸಕ್ಕೆ ಹೊತ್ತುಕೊಳ್ಳುವಂತಹದೂ ಆಗಿರುವದು.

× × × ×

ಸಮತಾವಾದ (Communism) ಕ್ಕೂ ಗಾಂಧಿಯವರ ಹಾದಿಗೂ ಪೂರ್ವಪಶ್ಚಿಮದಷ್ಟು ಅಂತರವು. ನಿಜವಾಗಿಯೂ ಒಂದು ಪಶ್ಚಿಮದಿಂದ ಬಂದಿದ್ದು, ಇನ್ನೊಂದು ಪೂರ್ವದಿಂದ ಬಂದಿರುವದು. ಅಲ್ಲದೆ ಅವು ಪರಸ್ಪರರಿಂದ ಮೋರೆ ತಿರುವಿಕೊಂಡು ಹೊರಟಂತೆ ತೋರುವವು. ಸಾಧನಗಳಲ್ಲೇನೋ ಮಹದಂತರವಿದೆ. ಆದರೆ ಸಾಧ್ಯ ( Objective ) ದಲ್ಲಿ ವಿಸ್ಮಯಕರವಾದ ಸಾಮ್ಯವು ತೋರದಿರದು. ಸತ್ಯಾಗ್ರಹವು ಅಹಿಂಸೆಯ ಅಡಿಗಲ್ಲ ಮೇಲೆ ನಿಂತಿದೆ. ಸಮತಾವಾದವು ಹಿಂಸೆಗೆ ಆಸ್ಪದವನ್ನು ಕೊಡದೆ ಇಲ್ಲ. ಒಂದರಲ್ಲಿ ಸತ್ಯದ ಆಗ್ರಹವಿದೆ. ಇನ್ನೊಂದು ರಾಜನೀತಿಯ ಕೈಚಳಕಕ್ಕೆ ಆಶ್ರಯವನ್ನಿತ್ತಿದೆ. ಸತ್ಯಾಗ್ರಹವು ಎಲ್ಲ ವರ್ಗಗಳ ನೈತಿಕ ಪರಿವರ್ತನೆಯನ್ನು ( Moral conversion) ಮಾಡಲಪೇಕ್ಷಿಸುವದು. ಕಮ್ಯುನಿಝಮ್ಮು ದುಡಿಯುವ ವರ್ಗದ

ಕಲ್ಯಾಣವನ್ನು ಹೆಚ್ಚಾಗಿ ಚಿಂತಿಸುವದು. ಮತ್ತದಕ್ಕಾಗಿ ದುಡ್ಡುಳ್ಳವರು ಈ ವರೆಗೆ ತುಳಿದ ಎಲ್ಲ ಮಾರ್ಗಗಳನ್ನು ತಾನೂ ತುಳಿಯುವದು. ಸತ್ಯಾಗ್ರಹವು ಒಕ್ಕಲಿಗರ ಹಿತವನ್ನು ಹೆಚ್ಚಾಗಿ ಲಕ್ಷಿಸುವದು. ಸಮತಾವಾದವು ಔದ್ಯೋಗಿಕ ಪ್ರಗತಿ (Industrialism) ಗೆ ಹೆಚ್ಚು ಮಹತ್ವವನ್ನು ಕೊಡುವದು. ಸತ್ಯಾಗ್ರಹವು ಕೈಗಾರಿಕೆಗಳ ಪುನರುಜ್ಜೀವನಕ್ಕಾಗಿ ಟೊಂಕಕಟ್ಟಿದೆ. ಸಮತಾವಾದವು ಆಧುನಿಕ ಯಾಂತ್ರಿಕ ಶೋಧಗಳನ್ನು ಎಲ್ಲಾ ಬಗೆಯಿಂದ ಉಪಯೋಗಿಸಲಿಕ್ಕೆ ಸಿದ್ಧವಿದೆ. ಇಂತಹ ಅಂತರವಿದ್ದೂ, ಎರಡೂ ದಾರಿಗಳು ಒಂದೇ ಗುರಿಯನ್ನು ಇಟ್ಟುಕೊಂಡಿವೆಯೆಂಬುದೇ ನಮಗೀಗ ಬೇಕಾದ ವಿಷಯ. ಅದೆಂದರೆ ಬಹುಜನಸಮಾಜ (Masses) ದ **ಸಾಮಾನ್ಯ ಪ್ರಜಾವರ್ಗದ, ದಲಿತವರ್ಗದ ಉದ್ಧಾರದ ಉದ್ದೇಶ.**

ಎರಡೂ ಪ್ರಯೋಗಾವಸ್ಥೆಯಲ್ಲಿರುವದರಿಂದ, ಎರಡೂ ಮಾರ್ಗಗಳಲ್ಲಿ ಪಲ್ಲಟವಾಗುವ ಸಂಭವವು ಅಷ್ಟಿಷ್ಟಲ್ಲ. ಏಕೆ, ಪಲ್ಲಟವಾಗುತ್ತಲೂ ಇದೆ. ಯಂತ್ರಸಾಮಗ್ರಿ ಶಾಸ್ತ್ರೀಯ ಪ್ರಗತಿಗಳ ಕೂಡ ಗಾಂಧಿಯುವರು ಇಂದಿಲ್ಲ ನಾಳೆ ಸಂಧಿ ಮಾಡಲೇ ಬೇಕು. ಸಮತಾವಾದವಾದರೂ ಅಹಿಂಸೆ, ಸಹಿಷ್ಣುತೆ, ಮಾನವತೆ (Human element) ಗಳ ಸಂಗಡ, ಮತ್ತು ಕೈಕಸಬು ಒಕ್ಕಲತನಗಳ ಸಂಗಡ ರಾಜಿ ಮಾಡಲೇ ಬೇಕು. ಎರಡೂ ಚಳವಳಿಗಳು ಇಂದಿಲ್ಲ ನಾಳೆ ಕೂಡಿಕೊಂಡು, ಪೂರ್ವಪಶ್ಚಿಮಗಳ ಸಂಗಮವನ್ನು ಮಾಡದೆ ಇರವು.

ರಾಜಕೀಯ ಸಾಮಾಜಿಕ ಆರ್ಥಿಕ ಸುಧಾರಣೆಗಳು ಒಂದಕ್ಕೊಂದು ವೈಲಿಯಾಗದಂತೆ ನಡೆಯತಕ್ಕವೆಂಬ ಹಳೆಯ ತತ್ವಗಳನ್ನು ಮೂಲೆಗುಂಪಾಗಿಸಿ, ಸಮಾಜದ ಸರ್ವಾಂಗಗಳ ಬೆಳವಣಿಗೆಯಾಗತಕ್ಕದ್ದು, ಸರ್ವಾತ್ಮಕವಾದ ಸಮಗ್ರವಾದ ಕ್ರಾಂತಿಯಾಗತಕ್ಕದು-ಎಂಬ ವಿಚಾರವು ಫ್ರೆಂಚ ಕ್ರಾಂತಿಯ ಕಾಲದಲ್ಲಿ ಮಸಕಾಗಿ ಮೂಡಿದರೂ, ರಶಿಯದ ಕ್ರಾಂತಿಯಲ್ಲಿ ಮೊಟ್ಟಮೊದಲು ಸ್ಪಷ್ಟವಾಗಿ ಕಂಡುಕೊಂಡಿತು. 'ಇನ್ಕಿಲಾಬ ಝಿಂದಾಬಾದ (ಕ್ರಾಂತಿ ಚಿರಂಜೀವಿಯಾಗಲಿ)' ಎಂಬ ಕೂಗಿನಲ್ಲಿ ಇದೇ ಅರ್ಥವು ತುಂಬಿಕೊಂಡಿದೆ. ರಶಿಯದ ಬೊಲ್ಶೆವಿಕ ಕ್ರಾಂತಿಯನ್ನು ತೃಪ್ತಿಕರವಾಗಿ ಚರ್ಚಿಸಲು ಇದು ಸಮಯವೂ ಅಲ್ಲ, ಸ್ಥಾನವೂ ಅಲ್ಲ.

\+ + + +

ಪೂರ್ವಪಶ್ಚಿಮ ಖಂಡಗಳಲ್ಲಿ ಒಂದೇ ಕಲ್ಪನೆಯು ಹೇಗೆ ಉದಯವಾಗಿದೆ, ಕಾಲಮಾಹಾತ್ಮ್ಯವನ್ನರಿತು ನಮ್ಮ ರಾಷ್ಟ್ರೀಯ ಜೀವನವನ್ನು ನಾವು ಮಾರ್ಪಡಿಸಿಕೊಳ್ಳುವದು ಹೇಗೆ ಅಗತ್ಯವಿದೆ ಎಂಬುದು ಪಾಠಕರ ಗಮನಕ್ಕೆ ಬಂದರೆ, ನನ್ನ ಲೇಖನವು ಸಫಲವಾದಂತಾಗುವದು. ಅಸ್ಪೃಶ್ಯತಾನಿವಾರಣೆ, ಮದ್ಯಪಾನವಿಮೋಚನೆ, ಬಹುಸಂಖ್ಯಾಕರ ದಾರಿದ್ರ್ಯನಾಶ, ಶಿಕ್ಷಣದ ಪದ್ಧತಿಯಲ್ಲಿ ಸುಧಾರಣೆ ಮತ್ತು ಶಿಕ್ಷಣ-ಪ್ರಸಾರ ಇವುಗಳೇ ಪೂರ್ಣಸ್ವರಾಜ್ಯದ ಚಳವಳಿಯ ಪ್ರಮುಖ ಅಂಗಗಳಾಗದೆ ಇರವು.

---

## ಬೇಡಿಕೆ

ನನ್ನಿಯನು ಕೊಡು ಎಂದೆ; ನನ್ನಿಯನು ಕೊಡು ಎಂದೆ;
ನನ್ನಿಯನು ಕೊಡು ಎಂದು ಬೇಡಿ ಬೆಂದೆ;
ನನ್ನಿ ಸಿಗುವದೆ ನನಗೆ ಪಾಮರಗೆ ಎಂದಂದು
ನನ್ನಿ ಇಲ್ಲವು ನನಗೆ ಎಂದು ನೊಂದೆ,

ಮತ್ತೆ ಗಾಳಿಯು ತಂದ ಪಾಪಮಯ ಬೀಜಗಳು
ಎತ್ತಲಿಂದಲೊ ಬಂದು ಚಿತ್ತದಲಿ ನಿಂದಿಹವು;
ಕತ್ತರಿಸಿ ಬೀಳುತಿಹ ಕ್ಷಣಿಕಪುಣ್ಯದ ಬೆಳೆಯ
ಬಿತ್ತಿ, ಬೆಳೆದವನನ್ನು ಬೆದರಿಸುವವು.

—ವಿನಾಯಕ.

# ಮುದ್ರಣಾಲಯುಗಳ ಶಾಸನದ ಚರಿತ್ರೆ

ಲೇಖಕರು :—ಶ್ರೀ ಕುಡ್ವ-ಲಕ್ಷ್ಮಣರಾಯರು, ಬಿ. ಎ., ಬಿ. ಎಲ್.

## ಇಂಗ್ಲೆಂಡು

ಇಂಗ್ಲೆಂಡಿನ ವ್ಯಕ್ತಿಗಳಿಗೆ ಭಾಷಣಸ್ವಾತಂತ್ರ್ಯ ಉಂಟು. ಭಾಷಣಸ್ವಾತಂತ್ರ್ಯಕ್ಕೂ ಮುದ್ರಣಸ್ವಾತಂತ್ರ್ಯಕ್ಕೂ ಅಲ್ಲಿ ಪರಸ್ಪರಸಂಬಂಧವುಂಟು. ಇಂಗ್ಲೆಂಡಿನ ಮುದ್ರಣಸ್ವಾತಂತ್ರ್ಯವೆಂದರೇನು ? ಒಬ್ಬ ವ್ಯಕ್ತಿಯು ಬೇರೆ ವ್ಯಕ್ತಿಗಳ ನ್ಯಾಯವಾದ ಹಕ್ಕುಗಳಿಗೆ ಬಾಧೆ ಬರದಂತೆ ಬರೆಯುವ ಸ್ವಾತಂತ್ರ್ಯ. ಈ ಅಭಿಪ್ರಾಯಗಳನ್ನು ಬೇರೆಯವರ ತಿಳುವಳಿಕೆಯ ಬಗ್ಗೆ ಪ್ರಕಟಸುವದೇ ಈ ಮುದ್ರಣಸ್ವಾತಂತ್ರ್ಯ. ಕೇಳುವವರಿಗೆ ಅಸಹ್ಯವಾಗುವ ರೀತಿ ದೇವರನ್ನು ಹೀಯಾಳಿಸುವದು, ಯಾ ತಮ್ಮ ತಿರಸ್ಕಾರವನ್ನು ತೋರಿಸುವದು, ಮಾರ್ಗದಲ್ಲಿ ಜನರ ಓಡಾಟವು ಕಟ್ಟಾಗುವಂತೆಯೂ ಅನ್ಲಾಫುಲ್ ಅಸೆಂಬ್ಲಿಯಾಗುವಂತೆಯೂ ನಡಕೊಳ್ಳುವದು, ಬೀಭತ್ಸವಾಗಿ ಮಾತನಾಡುವದು-ಇವೆಲ್ಲವೂ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಮಿಕ್ಕಿದ್ದು. ಒಬ್ಬ ವ್ಯಕ್ತಿಯ ಸ್ವಾತಂತ್ರ್ಯದ ಗಡಿಯು ಇನ್ನೊಬ್ಬ ವ್ಯಕ್ತಿಯ ಸ್ವಾತಂತ್ರ್ಯದ ಗಡಿಯನ್ನು ಮಿಕ್ಕಬಾರದು. ಈ ಗಡಿಯನ್ನು ಮೀರಿದೆಯೋ ಇಲ್ಲವೋ ಎಂಬೀ ಸವಾಲನ್ನು ಈ ವ್ಯಕ್ತಿಯ ಸರಿಸಮಾನರಾದ ಬೇರೆ ೧೨ ವ್ಯಕ್ತಿಗಳು ಇತ್ಯರ್ಥಿಸಬೇಕು. ಈ ೧೨ ವ್ಯಕ್ತಿಗಳಿಗೆ ಇಂಗ್ಲಿಷರು ಜೂರಿ ( Jury ) ಎಂಬದಾಗಿ ಕರೆಯುವರು. ೧೯೩೦ ಮೇ ೨೯ರ ಇಂಗ್ಲಿಷ ವರ್ತಮಾನ ಪತ್ರಿಕೆಗಳನ್ನು ಓದಿದಲ್ಲಿ ನಮ್ಮ ಚಕ್ರವರ್ತಿ ಚಕ್ರವರ್ತಿನಿಯವರು ಇಂಗ್ಲೆಂಡಿನ ಮತ್ತು ಬ್ರಿಟಿಷ ವಸಾಹತಿಗಳ ಮುದ್ರಣಾಲಯುಗಳ ಒಡೆಯರಿಗೂ ಪತ್ರಿಕಾಕರ್ತರಿಗೂ ತಮ್ಮ ಬಕ್ಕಿಂಗ್ಹಾಮ ಅರಮನೆಯಲ್ಲಿ ಇದೇ ಜೂನ ತಾ ೩೪ಕ್ಕೆ ಆಮಂತ್ರಣ ಕೊಟ್ಟದುದು ತಿಳಿದುಬರುವದು. ಜರ್ಮನ ಯುದ್ಧದ ಸಮಯದಲ್ಲಿ ಪ್ರಕಟಣಾ ಇಲಾಖೆಯು ಪತ್ರಿಕಾಕರ್ತ ನೊರ್ತ ಕ್ಲಿಫ (Northcliff)ರ ಕಡೆ ಇತ್ತು. ಮುದ್ರಣಾಲಯುಗಳಿಗಿರುವ ಈ ಸ್ವಾತಂತ್ರ್ಯವೂ ಗೌರವವೂ ಇಂಗ್ಲೆಂಡಿನಲ್ಲಿ ಬೇಗನೆ ಬಂದಿಲ್ಲ. ಮುದ್ರಣಾಲಯುಗಳ ಮೇಲೆ ಕಠಿಣವಾದ ಬಂಧನೆಗಳು ಸ್ಟುವರ್ಟ ಅರಸರು ಆಳುವಾಗ್ಗೆ ಇದ್ದವು. ೧೬೯೫ರಲ್ಲಿ ಈ ಬಂಧನೆಗಳು ಶಿಥಿಲವಾದವು ಎಂದು ತಿಳಿಯಬರುತ್ತದೆ.

ಮೊದಲು ಮುದ್ರಣಾಲಯುಗಳು ಧರ್ಮಮತಗಳ ವಿಷಯ ಪ್ರಕಟಸಲು ಸ್ವಾತಂತ್ರ್ಯವನ್ನು ಪಡೆದವು. ಇಂಗ್ಲೆಂಡಿನಲ್ಲಿದ್ದ (Clarenden code) ಕ್ಲೆರೆಂಡೆನ್ ಕೋಡ್ ಎಂಬ ಕಾನೂನಿನಿಂದ ಜನರು ಆಗ ಹೆಚ್ಚಿನ ದುಃಖಪಟ್ಟರು. ಪ್ರತಿಒಬ್ಬ ವ್ಯಕ್ತಿಗೆ ತನಗೆ ಇಷ್ಟವಿದ್ದ ರೀತಿ ಆರಾಧಿಸಲು ಹಕ್ಕಿರಲಿಲ್ಲ. ೧೬೮೯ ರಲ್ಲಿ ಈ ಹಕ್ಕು ಇಂಗ್ಲೆಂಡಿನಲ್ಲಿ ಪ್ರತಿಒಬ್ಬ ವ್ಯಕ್ತಿಗೆ ಸಿಕ್ಕಿತು. ಈ ಸ್ವಾತಂತ್ರ್ಯ ಸಿಕ್ಕಿದುದರಿಂದ ಇಂಗ್ಲೆಂಡು ಮುನ್ನಡೆಯಲ್ಲಿ ಹೆಜ್ಜೆಯನ್ನಿಟ್ಟಿತು. ಆದರೂ ರಾಜಕೀಯ ವಿಷಯಗಳಲ್ಲಿ ಸ್ವಾತಂತ್ರ್ಯವು ೧೮೪೩ರ ವರೆಗೆ ಇಂಗ್ಲೆಂಡಿನಲ್ಲಿ ಇರಲಿಲ್ಲ. ರಾಜದ್ರೋಹದ ಅನೇಕ ವ್ಯಾಜ್ಯಗಳಾಗಿ ಅನೇಕರು ಶಿಕ್ಷಿಸಲ್ಪಟ್ಟರು. ಆದರೆ ೧೮೪೩ರಲ್ಲಿ ಜಾರಿಗೆ ಬಂದ Campbell ಆಕ್ಟಿನ ಮೇರೆಗೆ ಆಪಾದಿತ ವ್ಯಕ್ತಿಯು ತಾನು ಬರೆದ ಲೇಖನವೂ ಪ್ರಕಟಸಿದ ಕಾರಣವೂ ಜನತೆಯ ಹಿತಕ್ಕೆ ಎಂತಲೂ ಅದು ನ್ಯಾಯವೂ ಸತ್ಯವೂ ಎಂದು ರುಜುಪಡಿಸಿದ ಪಕ್ಷದಲ್ಲಿ ಅವನು ಶಿಕ್ಷಿಸಲ್ಪಡುವದಿಲ್ಲ. ಅದು ಸಾಕಷ್ಟು ಕಾರಣವಾಗಿ ಪರಿಣಮಿಸುವದು. ಆದರೆ ಧರ್ಮಮತಗಳ ಮೇಲಣ ನಿರ್ಬಂಧನೆಯು ಇನ್ನೂ ಇಂಗ್ಲೆಂಡಿನಲ್ಲಿರುವದು. ಈಗಿನ ಲೇಬರ ಪಕ್ಷದವರು ಈ ವಿಷಯ ಕಾನೂನನ್ನು ತಿದ್ದಬೇಕಾಗಿ ಮಾಡಿದ ಪ್ರಯತ್ನಗಳು ಈ ವರೆಗೂ ಫಲಿಸಲಿಲ್ಲ. ಇಂಗ್ಲೆಂಡಿನ ಮಂತ್ರಿವರ್ಯ ಪಿಟ್ಟನು ಪ್ರಸಿದ್ಧ ( Thelwell ) ತೆಲ್‌ವೆಲ್ ಮತ್ತು ಹೊರ್ನ ಟೂಕ್ (Horne Tooke)ಎಂಬವರನ್ನು ಪಾರ್ಲಮೆಂಟನ್ನು ಸುಧಾರಣೆ ಮಾಡಬೇಕೆಂಬದರ ವಿಷಯ ಬರೆದದ್ದಕ್ಕೆ ರಾಜದ್ರೋಹದ ಆರೋಪದ ಮೇಲೆ ತನ್ನಿಗೆ ೧೭೯೪ರಲ್ಲಿ ಕಳುಹಿಸಿದರೂ ಜುರಿಯವರು ಅವರನ್ನು ಶಿಕ್ಷಿಸಲಿಲ್ಲ. (Erskine) ಎರ್ಸ್ಕಿನ್ ಮೊದಲಾದ ಪ್ರಸಿದ್ಧ ನ್ಯಾಯಾಧೀಶರು ಫ್ರೆಂಚ ಸರ್ಕಾರದ ತೀವ್ರ ನಿರ್ಬಂಧನೆಗಳನ್ನು ತಮ್ಮ ದೇಶದಲ್ಲಿ ತರಬಾರದಾಗಿ ಅರಸನಿಗೆ ತಿಳಿಸಿದರು. ಪ್ರಸಿದ್ಧ ಟ್ರೆವೆಲ್ಯನ್ನ ( Trevelyan ) ರು (ಆಧುನಿಕ ಚರಿತ್ರಾಕರ್ತರೊಬ್ಬರು) ಈ ಕಾರಣದಿಂದ ಫ್ರಾನ್ಸಿನಲ್ಲಿ ಆದ ಕ್ರಾಂತಿಯೂ ರಕ್ತಪ್ರವಾಹವೂ ಇಂಗ್ಲೆಂಡಿನಲ್ಲಿ ಆಗಲಿಲ್ಲವಾಗಿಯೂ ಶಾಂತಿಯು ನೆಲೆಗೊಂಡಿರುವುದಾಗಿಯೂ ಅಭಿಪ್ರಾಯ ಪಟ್ಟಿರುವರು.

## ಫ್ರಾನ್ಸ್

೧೭೮೯ರಿಂದ ೧೭೯೩ರ ವರೆಗೆ ರಾಜಕೀಯ ಸಾಮಾಜಿಕ ಸ್ವಾತಂತ್ರ್ಯದ ವಿಷಯ ಫ್ರಾನ್ಸಿನಲ್ಲಿ ನಡೆದಷ್ಟು ಪ್ರಯೋಗಗಳು ಭೂಲೋಕದಲ್ಲಿ ಬೇರೆ ಯಾವ ರಾಜ್ಯದಲ್ಲಿಯೂ ನಡೆದಿಲ್ಲ. ನೆಪೋಲಿಯನನು ಅಧಿಕಾರಕ್ಕೆ ಬರುತ್ತಲೇ ಫ್ರಾನ್ಸಿನ ಸಾಹಿತ್ಯ ಕಳೆಯು ಕುಂದಿತು. ಸಾಹಿತ್ಯದ ಏಳಿಗೆಗೂ ಮುದ್ರಣ ಸ್ವಾತಂತ್ರ್ಯಕ್ಕೂ ಸಂಬಂಧ ಉಂಟು. ನಿರುಂಕುಶಪ್ರಭುತ್ವಕ್ಕೂ ಮುದ್ರಣಸ್ವಾತಂತ್ರ್ಯಕ್ಕೂ ಹಗೆ. ಪ್ರಸಿದ್ಧ ಲೇಖಕರಾದ ಚೆಟೂಬ್ರೆಂಡ (Chateoubriand) ಮತ್ತು ಮೆಡಮ್ ಸ್ಟೀಲ್ (Madame de Steel) ಇವರು ಫ್ರಾನ್ಸನ್ನು ಬಿಟ್ಟುಹೋದರು. ೧೮೧೧ರಲ್ಲಿ ನೆಪೋಲಿಯನನು ಮುದ್ರಣಾಲಯಗಳ ಮೇಲೆ ಕಠಿಣವಾದ ಬಂಧನಗಳನ್ನಿಟ್ಟುದರಿಂದ, ೧೮೧೧ರಲ್ಲಿ ಫ್ರಾನ್ಸಿನಲ್ಲಿ ಕಟ್ಟಕಡೆಯ ಒಂದು ವರ್ತಮಾನ ಪತ್ರಿಕೆಯು ಸಹಾ ನಿಂತುಹೋಯಿತು. ಈಗಿನ ಫ್ರೆಂಚರು ಈ ವಿಷಯ ಅವನನ್ನು ದೂರದೆ ಇರಲಾರರು.

## ಹಿಂದುಸ್ಥಾನ

ಮುದ್ರಣಾಲಯಗಳು ಜನತೆಯ ವಿದ್ಯಾಭ್ಯಾಸಕ್ಕೂ ಅವರ ಮುನ್ನಡೆಗೂ ಅಗತ್ಯ ಎಂಬುದರ ವಿಷಯ ಸಂಶಯವಿಲ್ಲ. ಹಿಂದಿನ ಸಂಸ್ಕೃತಿಗಳು ನಾಶವಾಗಿರುವವು. ರೊಮಾನ್ಸರ, ಟರ್ಕಿಯವರ, ಗ್ರೀಕರ ನಾಗರಿಕತೆಯು ಈ ಮೊದಲೇ ನಾಶವಾಗಿಯಿವೆ. ನಾಗರಿಕತನವನ್ನು ನಾಶಪಡಿಸುವ (Waste Products) ಕೊರತೆಗಳನ್ನು ತೆಗೆಯುವದೇ ಮುದ್ರಣಾಲಯುಗಳ ಮುಖ್ಯ ಕರ್ತವ್ಯ. ಯಾವ ಸಂಸ್ಥೆಯಲ್ಲಿಯೂ ಸ್ವಲ್ಪ ಮಟ್ಟಿನ ಕೆಟ್ಟ ಜನರಿರುವದರಿಂದ ಆ ಸಂಸ್ಥೆಯು ಕೆಟ್ಟದೆಂಬದಾಗಿ ಹೇಳುವರಿ ಸಾಧ್ಯವೇಯಿಲ್ಲ. ಅನಾಯಕತ್ವವನ್ನು ಕೆಲವು ಮುದ್ರಣಾಲಯುಗಳಿಂದ ಛಾಪಿಸಲ್ಪಡುವ ಪತ್ರಿಕೆಗಳು ಶ್ಲಾಘಿಸಿರಬಹುದು. ಆದರೆ ಆ ಕಾರಣದಿಂದ ಮುದ್ರಣಾಲಯುಗಳ ಸ್ವಾತಂತ್ರ್ಯವನ್ನು ತೆಗೆಯುವ ಅಗತ್ಯವಿಲ್ಲ. ಅದು ನ್ಯಾಯವೂ ಅಲ್ಲ.

## ಮುದ್ರಣ ಶಾಸನಗಳು

(೧) ೧೭೯೯ರಲ್ಲಿ ವೆಲ್ಲೆಸ್ಲಿಯುವರು ಒಂದು ಕಾನೂನು (Regulation) ಜಾರಿ ಮಾಡಿದರು.

೧೮೨೨ರಲ್ಲಿ ಮದ್ರಾಸಿನ ಗವರ್ನರರು ಮುದ್ರಣಾಲಯ ಸ್ವಾತಂತ್ರ್ಯಕ್ಕೆ ಸರ್ ಥಾಮಸ್ ಮನ್ರೊ (Sir Thomes munrd) ವಿರೋಧವಾಗಿ ಬರೆದ ಮಿನಿಟ್.

(೨) ೧೮೨೩ ಎಪ್ರಿಲ್ ೫ರಲ್ಲಿ ಮುದ್ರಣಾಲಯುಗಳ ವಿಷಯ ಕಾನೂನು. ಇದನ್ನು ಆಧರಿಸಿ ೧೮೨೭ರಲ್ಲಿ ಬೊಂಬಯಿ ಸರ್ಕಾರವು ಒಂದು ಕಾನೂನು ಜಾರಿಮಾಡಿತು.

(೩) ೧೮೩೫ನೇ ಇಸವಿಯ XIನೇ ಆಕ್ಟು.

(೪) ೧೮೫೭ರಲ್ಲಿ ಆಕ್ಟು ೧೫ನೇದು.

(೫) ೧೮೬೭ರಲ್ಲಿ XXV ನೇ ಆಕ್ಟು.

(೬) ೧೮೭೦ರಲ್ಲಿ ಈಗಿನ ಪಿನಲ್‌ಕೋಡಿನ 124 A ಜಾರಿ ಆಯಿತು.

(೭) ೧೮೭೮ರಲ್ಲಿ (Vernacular Press Act) ದೇಶೀಯ ಭಾಷೆಗಳ ಮುದ್ರಣಾಲಯುಗಳ ಶಾಸನ.

(೮) ೧೯೧೦ರಲ್ಲಿ ಆದ ಮುದ್ರಣಾಲಯದ ಶಾಸನ.

(೯) ೧೯೩೦ರಲ್ಲಿ ನಮ್ಮ ವೈಸರಾಯರು ಜಾರಿಮಾಡಿದ (Ordinance) ಕಾನೂನು.

ಈ ರೀತಿ ಆಗಾಗ್ಗೆ ನಮ್ಮ ಮುದ್ರಣಾಲಯುಗಳಿಗೆ ೯ ಸಾರಿ ಬಂಧನಗಳು ಬಿದ್ದಿವೆ. ಇಂಗ್ಲೆಂಡಿನಲ್ಲಿ ಸ್ವಾತಂತ್ರ್ಯವು ದಿನೇ ದಿನೇ ಹೆಚ್ಚುತ್ತಲಿದೆ. ಆದರೆ ಈ ಮೇಲಣ ಕಾನೂನುಗಳನ್ನು ನೋಡಿದರೆ ಕಾಲಕ್ರಮೇಣ ಇಲ್ಲಿ ಸ್ವಾತಂತ್ರ್ಯಕ್ಕೆ ಬಂಧನಗಳು ಹೆಚ್ಚುತ್ತಲಿವೆ.

ಈ ರೀತಿ ನಮ್ಮ ಮುದ್ರಣಾಲಯುಗಳ ಶಾಸನದ ಚರಿತ್ರೆಯು ೧೩೦ ವರುಷಗಳದು ಮಾತ್ರ ಇದೆ. ೧೯ನೇ ಶತಮಾನದ ಪ್ರಥಮ ೫೦ ವರುಷಗಳಲ್ಲಿ ಹಿಂದುಸ್ಥಾನದಲ್ಲಿ ಮುಖ್ಯ ದೇಶೀಯ ಮುದ್ರಣಾಲಯುಗಳಿರಲಿಲ್ಲ. ಈಗಿನ ಇಂಗ್ಲಿಷ ವರ್ತಮಾನ ಪತ್ರಿಕೆಗಳಾದ ಅಮೃತಬಜಾರ ಪತ್ರಿಕೆ ಹಿಂದುಪತ್ರಿಕೆಗಳನ್ನು ಛಾಪಿಸುವ ಮುದ್ರಣಾಲಯುಗಳಿಗೆ ಲಕ್ಷಗಟ್ಲೆ ಹಣವು ವೆಚ್ಚವಾಗಿರಬಹುದು. ಇಂಗ್ಲಿಷ ಪತ್ರಿಕೆಗಳು ಮುಂಚೆ ಹೆಚ್ಚಾಗಿದ್ದುವಲ್ಲದೆ ಘನತೆಯ ಸ್ಥಿತಿಯಲ್ಲಿದ್ದವು.

೧೭೯೯ರಲ್ಲಿ ಆದ ಕಾನೂನಿನ ಮೇರೆಗೆ ಛಾಪೆ ಆಗುವ ಮೊದಲೇ ಪತ್ರಿಕೆಗಳನ್ನು ಗವರ್ನಮೆಂಟಿನ ಕಡೆಯಿಂದ ನೇಮಿಸಲ್ಪಟ್ಟ ಆಫೀಸರರು ಓದಬೇಕಿತ್ತು. ಅವರ ಸಮ್ಮತಿಯಿಲ್ಲದೆ ಅದನ್ನು ಛಾಪೆ ಮಾಡಬಾರದು. ಇದಕ್ಕೆ ವಿರೋಧವಾಗಿ ನಡೆದ ಪತ್ರಿಕಾಕರ್ತರನ್ನು ಇಂಗ್ಲೆಂಡಿಗೆ ಗಡಿಪಾರು ಮಾಡುತ್ತಿದ್ದರು. ಆಗ ಆಂಗ್ಲೇಯ ಪತ್ರಿಕೆಗಳು ಮಾತ್ರ ಇದ್ದವು. ಅವುಗಳೇ ಸರ್ಕಾರವನ್ನು ದೂಷಿಸುತ್ತಲಿದ್ದವು. ವಂಗ

ವನ್ನು ಇತ್ತೀಚೆಗೆ ತೆಗೆದು ಹಾಕಿದ ಬಗ್ಗೆಯೂ ಮುಖ್ಯ ಪಟ್ಟಣವನ್ನು ದಿಲ್ಲಿ, ಮಾಡಿದ ಬಗ್ಗೆಯೂ ಆಂಗ್ಲೇಯ ಪತ್ರಿಕೆಯವರು ಆಗಿನ ವೈಸರಾಯರಾದ ಹಾರ್ಡಿಂಜರನ್ನು ದೂರಿದರು. ಮತ್ತು ಈಗಿನ ಯಾವ ರಾಜಕೀಯ ಚಳವಳದಲ್ಲಿಯಾದರೂ ಇವರು ಸರ್ಕಾರದ ಕಡೆಗೆ ಇರುವರು. ಕಂಪೆನಿಯವರು ಮಾಡಿದ ಕಾನೂನಿಗೆ ರೆಗುಲೇಶನ್ ಎಂಬ ಹೆಸರಿರುವದು. ೧೮೧೮ನೇ ಇಸವಿಯ ರೆಗುಲೇಶನನ್ನು ವ್ಯಾಸರಾಯ ಹೆಸ್ಟಿಂಗ್ಸ (Marquis of Hastings)ರು ಸ್ವಲ್ಪಮಟ್ಟಿಗೆ ತಿದ್ದುಪಡೆಯನ್ನು ಮಾಡಿದರು.

೧೮೨೨ರಲ್ಲಿ ಮುದ್ರಣಾಲಯಗಳ ವಿಷಯ ನಮ್ಮ ಸರ್ಕಾರವು ಹೆಚ್ಚಿನ ಗಮನ ಕೊಟ್ಟಿತು. ಮದ್ರಾಸಿನ ಪ್ರಸಿದ್ಧ ಗವರ್ನರರು ಈ ಕೆಳಗೆ ಕಾಣಿಸಿದ ರೀತಿ ತಮ್ಮ ಅಭಿಪ್ರಾಯವನ್ನು ಕಂಪೆನಿ ಸರ್ಕಾರಕ್ಕೆ ತಿಳಿಸಿದರು

"ನಮ್ಮ ಬ್ರಿಟಿಷ ಸರ್ಕಾರದ ರಕ್ಷಣೆಗೂ ಈ ದೇಶದ ನೆಮ್ಮದಿಗೂ ಈಗಿನ ಮುದ್ರಣಾಲಯಗಳ ಮೇಲಿರುವ ಬಂಧನಗಳನ್ನು ನಾವು ಇಡಲೇಬೇಕು. ಇಲ್ಲಿಯ ಜನರು ನಮ್ಮವರೇ ಆಗಿದ್ದರೆ ಸ್ವಾತಂತ್ರ್ಯವು ಅಗತ್ಯವೆಂಬುದು ಸತ್ಯ. ಆದರೆ ಈಗಿನ ಸ್ಥಿತಿಯಲ್ಲಿ ಸ್ವಾತಂತ್ರ್ಯ ಕೊಡುವದರಿಂದ ಹೆಚ್ಚಿನ ತೊಂದರೆ ಉಂಟು. ಉಪಯುಕ್ತ ಜ್ಞಾನವನ್ನು ಪ್ರಸರಿಸುವ ಬದಲು, ಇಲ್ಲಿಯ ಜನರಲ್ಲಿ ಈ ಸ್ವಾತಂತ್ರ್ಯವು ಅವಿಧೇಯತ್ವವನ್ನೂ ಅನಾಯಕತ್ವವನ್ನೂ ಹುಟ್ಟಿಸುವದು. ಸ್ವತಂತ್ರ ಮುದ್ರಣಾಲಯಗಳೂ ಪಾರತಂತ್ರ್ಯವೂ ಎಂದಿಗೂ ಪರಸ್ಪರ ವಿರುದ್ಧವಾದವುಗಳು......ಮುದ್ರಣಾಲಯಗಳ ಪ್ರಥಮ ಕರ್ತವ್ಯವೇನು? ಪಾರತಂತ್ರ್ಯದಿಂದ ಈ ದೇಶವನ್ನು ವಿಮೋಚಿಸುವದೇ. ಪ್ರತಿಂದು ವಿಷಯವೂ ಈ ಮುಖ್ಯ ಧ್ಯೇಯಕ್ಕೆ ಒಳಗಾಗಿರುವದು"

ಈ ಗವರ್ನರರು ತಾವು ಹೇಳುವದರಲ್ಲಿ ಯಥಾರ್ಥವಾಗಿ ತಮ್ಮ ಅಭಿಪ್ರಾಯವನ್ನು ಹೇಳಿರುವರು. ಈ ಅವರ ಅಭಿಪ್ರಾಯಗಳನ್ನು ಕಂಪೆನಿ ಸರ್ಕಾರವು ಮಂಜೂರು ಮಾಡಿತು. ಆ ರೀತಿ ೧೮೨೩ರಲ್ಲಿ ಮುದ್ರಣಶಾಸನವು ಜಾರಿಆಯಿತು. ಅದನ್ನು ಅನುಸರಿಸಿ ಅದೇ ರೀತಿಯಲ್ಲಿ ೧೮೨೫ರಲ್ಲಿ ಇನ್ನೊಂದು ಮುದ್ರಣ ಶಾಸನವು ಜಾರಿಗೆ ಬಂದಿರುತ್ತದೆ. ಇದರ ಪ್ರಮುಖ ನಿರ್ಬಂಧನೆಗಳು ಯಾವವೆಂದರೆ—

(೧) ಗವರ್ನಮೆಂಟಿನ ಅನುಮತಿಯಿಲ್ಲದೆ ಯಾವದೊಂದು ಮುದ್ರಣಾಲಯವನ್ನು ಇಡಕೂಡದು.

(೨) ಈ ಅನುಮತಿಯ ಮೇರೆಗೆ ಛಾಪೆ ಆದ ಪುಸ್ತಕ ಪತ್ರಿಕೆಗಳನ್ನು ಗವರ್ನಮೆಂಟಿನ ಶೋಧನೆಯ ಬಗ್ಗೆ ಕೊಡಬೇಕು.

(೩) ಗವರ್ನಮೆಂಟ ಬಜೇಟಿನ ನೋಟೀಸಿನ ಮೂಲಕ ಯಾವ ಪುಸ್ತಕವನ್ನೂ, ಯಾವ ವರ್ತಮಾನಪತ್ರಿಕೆಯನ್ನೂ, ಯಾವ ಮುದ್ರಣವನ್ನೂ, ಯಾವ ಮಾರಾಟವನ್ನೂ ಸರ್ಕಾರದವರು ನಿಲ್ಲಿಸಬಹುದು.

ಈ ಕಾನೂನಿನ ಮೇರೆಗೆ ಬಕ್ಕಿಂಗಮ ಮತ್ತು ಕಲ್ಕತ್ತಾ ಜರ್ನಲ್ ಎಂಬ ಮಾಸಪತ್ರಿಕೆಗಳ ಸಂಪಾದಕರನ್ನು ಇಂಗ್ಲೆಂಡಿಗೆ ಕಂಪೆನಿಯ ಸರ್ಕಾರದವರು ಗಡಿಪಾರು ಮಾಡಿದರು.

ಈ ವಿಷಯ ರಾಜಾರಾಮ ಮೋಹನರಾಯರು ಆಗಿನ ನ್ಯಾಯಾಧೀಶರಿಗೂ ಗವರ್ನರ ಜನರಲರಿಗೂ ಮಾಡಿದ ಆಕ್ಷೇಪಣೆಗಳು ಸಫಲವಾಗಲಿಲ್ಲ. ಅಲ್ಲಿಂದ ಪ್ರಿವ್ಹಿ ಕೌನ್ಸಿಲಿನ ಮುಖಾಂತರ ನಮ್ಮ ಚಕ್ರವರ್ತಿಯವರಿಗೆ ಮಾಡಿಕೊಂಡ ರಾಜಾರಾಮ ಮೋಹನರಾಯರ ಬಿನ್ನವತ್ತಳೆಯಿಂದ ಸಹಾ ಏನೂ ಪ್ರಯೋಜನ ಉಂಟಾಗಲಿಲ್ಲ.

ಈ ರೀತಿ ಮುದ್ರಣಾಲಯಗಳ ಮೇಲಿನ ಬಂಧನಗಳು ೧೮೩೫ ನೇ ನವ್ಹಂಬರದ ವರೆಗೆ ಇದ್ದವು. ಆಗಿನ ವ್ಯಾಸರಾಯರಾದ ಲೊರ್ಡ ವಿಲಿಯಮ್ ಬೆಂಟಿಂಕರನ್ನು ಪತ್ರಿಕೆಗಳು ಹೆಚ್ಚಾಗಿ ದೂರಿದರೂ ಅವರು ಪತ್ರಿಕೆಗಳನ್ನು ಈ ರೆಗ್ಯುಲೇಶನ್ ಮೇರೆಗೆ ಶಿಕ್ಷೆಗೆ ಗುರಿ ಪಡಿಸಲಿಲ್ಲ. ತರುವಾಯ ಸ್ವಲ್ಪಕಾಲದವರೆಗೆ ಗವರ್ನರ ಜನರಲ್ ಕೆಲಸವನ್ನು ನೋಡಿಕೊಂಡಿದ್ದ (Sir Charles Matcalfe) ಸರ್ ಮೆಟ್‌ಕಾಫರು ೧೮೩೫ ರಲ್ಲಿ ಈ ಕಾನೂನನ್ನು ಆಗಿನ ಲಾ ಮೆಂಬರರಾದ ಪ್ರಸಿದ್ಧ ಮೆಕೋಲೆಯವರ ಸಹಾನುಭೂತಿಯಿಂದ ರದ್ದುಪಡಿಸಿದರು. ಈ ರೀತಿ ಸ್ವಾತಂತ್ರ್ಯವು ಹಿಂದುಸ್ಥಾನದ ಮುದ್ರಣಾಲಯಗಳಿಗೆ ಸಿಕ್ಕಿತು. ೧೮೩೫ ರಲ್ಲಿ ಜಾರಿಗೆ ಬಂದ ಕಾನೂನು ಈ ಬಂಧನಗಳನ್ನು ರದ್ದುಪಡಿಸಿತು. ತಾನು ಛಾಪಖಾನೆಯನ್ನು ಇಟ್ಟ ಸ್ಥಳದ ವಿಷಯವಾಗಿ ಛಾಪಖಾನೆಯ ಒಡೆಯನು ಒಂದು ಹೇಳಿಕೆಯನ್ನು ಮೇಜಿಸ್ಟ್ರೇಟರ ಮುಂದೆ

ಕೊಡಬೇಕೆಂಬ ಒಂದು ಶರ್ತು ಮಾತ್ರ ಇತ್ತು. ಈ ಸಂಬಂಧ ಮೆಟ್‌ಕಾಫರು ತಮ್ಮ ಪದವಿಯನ್ನು ಕಳಕೊಂಡರೆಂತ ಕಾಣುವದು. ನಂತರ ಬಂದ ಲೊರ್ಡ ಆಕ್ಲಾಂಡರು ಈ ಮಟ್ಟಿಗೆ ಸುಮ್ಮನಿದ್ದರು.

ಈ ಸ್ವಾತಂತ್ರ್ಯವು ೧೮೫೭ ನೇ ಸಿಪಾಯರ ದೊಂಬೆಯ ವರೆಗೆ ಇತ್ತು. ಆಗಿನ ಚಳವಳದ ಸಂಬಂಧವಾಗಿ ಒಂದು ದಿವಸದಲ್ಲಿಯೇ ಪಾಸಾಗಿ ಜಾರಿಗೆ ಬಂದ ಈ XV ೧೮೫೭ನೇ ಆಕ್ಟೆಂಬ ಕಾನುನು ಒಂದು ವರುಷದ ವರೆಗೆ ಮಾತ್ರ ಇದ್ದಿತು. ಆಗಿನ ಭಯಂಕರ ಸಮಯದಲ್ಲಿ ಸಹಾ ಒಂದು ವರ್ಷದ ತರುವಾಯ ಅದನ್ನು ತಿರುಗಿ ಜಾರಿಗೆ ತರಲಿಲ್ಲ.

ಈ ನಂತರ ಜಾರಿಗೆ ಬಂದ ೧೮೬೭ ನೇ ಇಸ್ವಿಯ ೨೫ ನೇ ಆಕ್ಟು ಈಗಲೂ ಉಂಟು. ೧೮೯೦ ರಲ್ಲಿ ಕೆಲವು ಮಟ್ಟಿಗೆ ಇದು ತಿದ್ದಲ್ಪಟ್ಟದೆ. ಪುಸ್ತಕಗಳನ್ನು ರಜಿಸ್ಟರ ಮಾಡುವ ಬಗ್ಗೆ ತಂದ ಈ ಕಾನುನಿನಲ್ಲಿ ೧೮೩೫ ನೇ ಆಕ್ಟಿನ ಶರ್ತುಗಳನ್ನು ಸಹಾ ಹಾಕಿರುವರು.

೧೮೭೦ ನೇ ಇಸ್ವಿಯಲ್ಲಿ ಮುದ್ರಣಾಲಗಳ ನಿಯಂತ್ರಣದ ಬಗ್ಗೆ ಇಂಡಿಯನ್ ಪಿನಲ್‌ಕೋಡಿಗೆ ೧೨೪-ಎ ಎಂಬ ರಾಜ ದ್ರೋಹದ ಒಂದು ಶೆಕ್ಶನ್ ಕೂಡಿಸಿಯದೆ. ಕೂಲಂಕಷವಾಗಿ ಹಿಂದಿನ ಸಂಚಿಕೆಂಎಲ್ಲಿ ಈ ವಿಷಯ ಹೇಳಿದುವೆವು. ಲೊರ್ಡ ಮೆಕೊಲೆಯವರು ಪಿನಲ್‌ಕೋಡಿನ ಮಸೂದೆಯನ್ನು ತಯಾರಿಸುವಾಗ ಈ ವಿಷಯ ಆ ಕೋಡಿನಲ್ಲಿ ೧೧೩ ನೇ ಶೆಕ್ಶನು ದೇಡಿದ್ದರಾಗಿ ತೋರುತ್ತದೆ. ಆದರೆ ಯಾವ ಕಾರಣವೆಂತ ತಿಳಿಯುವದಿಲ್ಲ. ಅದನ್ನು ನಂತರ ಪಿನಲ್ ಕೋಡಿಗೆ ಸೇರಿಸಿರಲಿಲ್ಲ. ೧೮೯೭ ರಲ್ಲಿ ಆದ ಮಾನ್ಯ ಬಾಲಗಂಗಾಧರ ತಿಲಕರ ವ್ಯಾಜ್ಯದಲ್ಲಿ ರಾಜದ್ರೋಹದ ಈ ೧೨೪-ಎ ಶೆಕ್ಶನಿಗೆ ವಿಶೇಷವಾದ, ಜನರಿಗೂ ಪತ್ರಿಕಾಕರ್ತರಿಗೂ ಬಾಧಕವಾದ ಟೀಕನ್ನು ನ್ಯಾಯಾಧೀಶರು ಕೊಟ್ಟದ್ದರೂ, ೧೮೬೭ ನೇ ಆಕ್ಟಿನಿಂದಾಗಲಿ, ೧೨೪-ಎ ಶೆಕ್ಶನಿನಿಂದಾಗಲಿ, ಪತ್ರಿಕಾಕರ್ತರಿಗೆ ಹೆಚ್ಚಿನ ತೊಂದರೆ ಆಗಲಿಲ್ಲ.

ಆದರೆ ೧೮೭೮ ನೇ ಇಸ್ವಿಯಲ್ಲಿ ಆದ ದೇಶೀಯ ಭಾಷೆಗಳ ಮುದ್ರಣಾಲಯದ ಕಾನುನು ಪತ್ರಿಕಾಕರ್ತರಿಗೆ ಹೆಚ್ಚಿನ ಬಂಧನವನ್ನುಂಟುಮಾಡಿತು. ಆಗ್ಗೆ ಬ್ರಿಟಿಷ ಸರಕಾರಕ್ಕು ಅಫಘಾನಿಸ್ಥಾನಕ್ಕು ಯುದ್ಧ ಪ್ರಾರಂಭವಾಗುವ ಸಂದರ್ಭವಿತ್ತು. ಮುದ್ರಣಾಲಯಗಳು ತೊಂದರೆ ಮಾಡದಂತೆ ಈ ಕಾನುನನ್ನು ಬಳಕೆಯಲ್ಲಿ ತಂದರು. ನಮ್ಮ ದೇಶೀಯ ಅರಸರಿಂದ ಹಣವನ್ನು ಸುಲಿಗೆ ಮಾಡುವದನ್ನು ನಿಲ್ಲಿಸುವದಕ್ಕೂ ರಾಜದ್ರೋಹವನ್ನು ನಿಲ್ಲಿಸುವದಕ್ಕೂ ಈ ಕಾನುನನ್ನು ಮಾಡಿದ್ದೇನೆಂದು ಸರ್ಕಾರದವರು ಹೇಳಿರುವರು. ಈ ಕಾನುನಿನ ಮೇರೆಗೆ ಹೊಸ ಶರ್ತುಗಳು ಜಾರಿಗೆ ಬಂದವು. (೧) ಸ್ಥಳೀಯ ಸರ್ಕಾರದ ಸಮ್ಮತಿ ಪಡೆಯದೆ ಛಾಪಿಸುವ ಹಾಗೂ ಗವರ್ನಮೆಂಟಿನವರ ಮೇಲೆಯೂ ಬೇರೆ ಜಾತಿಗಳ ಮೇಲೆಯೂ ದ್ವೇಷ ಹುಟ್ಟುವ ಯಾವದೊಂದು ಲೇಖನ ಬರೆಯುವ ಪತ್ರಿಕೆಯ ಸಂಪಾದಕರಿಂದ ಜಾಮಿನು ಕರಾರು ಪಡಕೊಳ್ಳುವದು ಇಥವಾ ಹಣವನ್ನು ಜಾಮಿನಾಗಿ ಪಡೆಯುವದು. (೨) ಇದಕ್ಕೆ ವಿರೋಧವಾಗಿ ಬರೆದ ವರ್ತಮಾನ ಪತ್ರಿಕೆಗಳಿಗೆ ಗಜೇಟಿನಲ್ಲಿ ಎಚ್ಚರಿಕೆಯನ್ನು ಕೊಟ್ಟ ಮೇಲೂ ಅವರು ತಪ್ಪು ಮಾಡಿದರೆ, ಅವರ ಮುದ್ರಣಾಲಯದ ಸಾಮುಗ್ರಿಗಳನ್ನು ಜಪ್ತಿ ಮಾಡುವದು. (೩) ಜಾಮಿನು ಕೊಡುವರೆ ಇಷ್ಟವಿಲ್ಲದ ಪತ್ರಿಕಾ ಸಂಪಾದಕರು ಸರ್ಕಾರಕ್ಕೆ ತಾವು ಛಾಪೆ ಮಾಡುವ ಮೊದಲು(proof)ಬರೆದ ಲೇಖನಗಳನ್ನು ತೋರಿಸಿ ಅನುಮತಿ ಪಡೆಯಬೇಕು ರಾಜದ್ರೋಹದ ಲೇಖನಗಳ ಪುಸ್ತಕಗಳನ್ನು ನಾಶಪಡಿಸುವದೆಯೂ ಆಮದುಮಾಡುವದನ್ನು ನಿಷೇಧಿಸುವದೆಯೂ ಸರ್ಕಾರವು ಅಧಿಕಾರ ಹೊಂದಿತು. ಈ ಆಕ್ಟಿನ ಕೆಲವು ಶರ್ತುಗಳನ್ನು ಭಾರತ ಮಂತ್ರಿಗಳು ಜಾರಿಗೆ ತರಲಿಲ್ಲ. ಬ್ರಿಟಿಷ ಪಾರ್ಲಿಮೆಂಟಿನ ೧೫೦ ಸದಸ್ಯರು ಈ ಹೊಸ ಕಾನೂನನ್ನು ಖಂಡಿಸಿದರು. ನಂತರ ಬ್ರಿಟಿಷ ಮುಖ್ಯ ಮಂತ್ರಿಗಳಾದ Gladstone ಗ್ಲೆಡ್ಸಟನರೂ ಇದೇ ರೀತಿ ಅಭಿಪ್ರಾಯ ಪಟ್ಟರು.

ಈ ಕಾನೂನು ಜಾರಿ ಆದಕೂಡಲೆ ಅಮೃತಬಜಾರ ಪತ್ರಿಕೆಯು ಇಂಗ್ಲಿಷ ಭಾಷೆಯಲ್ಲಿ ಪ್ರಕಟಿಸಲ್ಪಟ್ಟಿತು. ಅದರ ಮೊದಲು ಅದು ಬಂಗಾಳಿ ಭಾಷೆಯಲ್ಲಿ ಪ್ರಕಟವಾಗುತ್ತಲಿತ್ತು. ಪ್ರಸಿದ್ಧ ಶಿಶಿರಕುಮಾರ ಘೋಸರು ಈ ರೀತಿ ತಮ್ಮ ಸ್ವಾತಂತ್ರ್ಯವನ್ನು ಇಟ್ಟುಕೊಂಡು ತಮ್ಮ ಪತ್ರಿಕೆಯನ್ನು ಪ್ರಸಿದ್ಧಗೊಳಿಸಿದರು. ಮೂರು ವರುಷದಲ್ಲಿಯೇ ಈ ಕಾನೂನನ್ನು ವ್ಹಾಯಸರಾಯ ರಿಪನರು ತೆಗೆದುಹಾಕಿದರು.

೧೯೦೮ರಲ್ಲಿ ಈ ಸಮಯದಲ್ಲಿ ಬಂಗಾಳದಲ್ಲಿ ಗುಪ್ತ ಸಮಿತಿಗಳೂ ಪ್ರತೀಕಾರದ ಚಟುವಟಿಕೆಗಳೂ ಮೊದಲಾದವು. ಈಗ

ಪೊಂಡಿಚೇರಿಯಲ್ಲಿರುವ ಶ್ರೀ. ಅರವಿಂದ ಘೋಸರೇ ವೊದಲಾದವರು ಬಂಗಾಳದ ವಿಭಾಗದ ವಿಷಯು ಮಾಡಿದ ಚಳವಳವನ್ನು ನಿಲ್ಲಿಸುವದಕ್ಕೂ ವಂದೇ ಮಾತರಂ ಎಂಬ ಅವರ ಪ್ರಸಿದ್ಧ ದಿನಪತ್ರಿಕೆಯನ್ನು ದಂಡಿಸುವದಕ್ಕೂ ೧೯೧೦ ರಲ್ಲಿ ಹೊಸ ಮುದ್ರಣ ಶಾಸನವನ್ನು ಸರ್ಕಾರದವರು ಏರ್ಪಡಿಸಿದರು.

ಮಾನ್ಯ ಡಾಕ್ಟರ ಎನಿಬೆಜಂಟರ "New India" ಪತ್ರಿಕೆಯ ವಿಷಯು ಮದ್ರಾಸಿನಲ್ಲಿ ನಡೆದ ಚಳವಳದಲ್ಲಿ ನ್ಯಾಯಾಧೀಶರ ತೀರ್ಪಿನಿಂದಲೂ, ಕೊಮ್ರೇಡ್ (Comrade) ಎಂಬ ವರ್ತಮಾನಪತ್ರಿಕೆಯ ವಿಷಯು ಪ್ರಸಿದ್ಧ ನ್ಯಾಯಾಧೀಷ ಸರ್ ಲೊರೆನ್ಸ ಜೆಂಕಿನ್ನರು ಕೊಟ್ಟ ಅಭಿಪ್ರಾಯದಿಂದಲೂ, ಈ ಶಾಸನದ ಪ್ರಕಾರ ಭಾಷಣಸ್ವಾತಂತ್ರ್ಯವೂ ಮುದ್ರಣಸ್ವಾತಂತ್ರ್ಯವೂ ಹಿಂದುಸ್ಥಾನದಲ್ಲಿ ಇಲ್ಲವೆಂಬುದು ಸರಿಯಾಗಿ ತೋರಿತು. ಈ ಕಾನುನಿನ ಮೇರೆಗೆ ಆಪಾದಿತನು ತಾನು ಆಪಾದಿತನಲ್ಲ ಎಂತ ರುಜುಪಡಿಸಬೇಕು. ಎಲ್ಲಾ ಕಾನೂನುಗಳ ಮೂಲ ಸೂತ್ರಕ್ಕೆ ವಿರೋಧವಾಗಿ ಈ ಶಾಸನವು ತೋರಿಬಂದಿತು. ಇದನ್ನು ೧೯೨೨ರಲ್ಲಿ ರದ್ದು ಪಡಿಸಿದರೂ, ಈ ಕಾನೂನನ್ನು ಇನ್ನಷ್ಟು ಕಠಿಣ ಶರ್ತುಗಳ ಸಮೇತ ಈಗಿನ ವ್ಯಾಸರಾಯರು ಜಾರಿಗೆ ತಂದಿರುವರು. ವ್ಯಾಸರಾಯರಿಗೆ "Government of India Act" ಗವರ್ನಮೆಂಟ ಆಫ ಇಂಡಿಯಾ ಆಕ್ಟಿನ ೭೨ನೇ ಶೆಕ್ಸನ್ ಮೇರೆಗೆ ತಾತ್ಕಾಲಿಕ ಅಗತ್ಯದ ಸಂದರ್ಭಗಳಲ್ಲಿ ೬ ತಿಂಗಳಿಗೆ ಒಂದು ಕಾನೂನು ಜಾರಿತರುವ ಹಕ್ಕಿರುವದು. ಈ ಹೊಸ ಕಾನೂನಿನ ಮೇರೆಗೆ ಒಲ್ಲಿಯ ದೇಶೀಯ ಭಾಷೆಯ ವರ್ತಮಾನ ಪತ್ರಗಳು ನಿಂತು ಹೋಗಿವೆ. ಇದೇ ಕಳೆದ ಮೇ ತಿಂಗಳಲ್ಲಿ ೨ ದಿವಸ ಎಲ್ಲ ಹಿಂದುಸ್ಥಾನದ ಪತ್ರಿಕೆಗಳು ಹರ್ತಾಳನ್ನು ಆಚರಿಸಿರುವವು. ಎಲ್ಲಾ ಪತ್ರಿಕೆಯವರು ಸಭೆಸೇರಿ ಮುಂದಿನ ಕ್ರಮವನ್ನು ಆಲೋಚಿಸಿ ಅಧ್ಯಕ್ಷರಾದ ಮದ್ರಾಸಿನ ಹಿಂದು ಪತ್ರಿಕೆಯ ಸಂಪಾದಕರು ರಂಗಸ್ವಾಮಿ ಅಯ್ಯಂಗಾರರು ಹೇಳಿದಂತೆ ತತ್ಕಾಲಕ್ಕೆ ಕೆಲವು ಪತ್ರಿಕೆಗಳು ಹಣವನ್ನು ಜಾಮಿನಾಗಿ ಕಟ್ಟಿರುವವು.

೧೯೧೦ ನೇ ಆಕ್ಟೂ ಈಗಿನ ಒರ್ಡಿನೆನ್ಸೂ

ಈ ಒರ್ಡಿನೆನ್ಸು ಹೊಸತಾದ ಕಠಿಣ ಶರತ್ತುಗಳನ್ನು ಮಾಡಿದೆ. ಅವುಗಳು ೧೯೧೦ನೇ ಆಕ್ಟಿನಲ್ಲಿರುವದಿಲ್ಲ. ಯಾವದೊಂದು ಮುದ್ರಣಾಲಯುವು, ಕಾನುನನ್ನು ಸರಿಯಾಗಿ ಸರ್ಕಾರವು ಜಾರಿ ಮಾಡುತ್ತಿರುವಲ್ಲಿ ಅದಕ್ಕೆ ವಿರೋಧವಾಗಿ ನಡೆಯುವರೆ ಪ್ರೇರೇಪಿಸುತ್ತದೋ ಯಾ ಸ್ಥಳಿಕ ಸಂಸ್ಥೆಗಳಿಗಾಗಲೀ ಸರ್ಕಾರಕ್ಕಾಗಲೀ ಪ್ರಜೆಗಳು ಕೊಡತಕ್ಕ ತೀರ್ವೆ, ಕರ, ಶೆಸ್ಸು ಯಾ ಯಾವ ನಮೂನೆ ತೀರ್ವೆ ಕಂದಾಯ ವ ಸರ್ಕಾರಿ ಹಣವನ್ನು ಕೊಡುವರೆ ತಡಮಾಡಬೇಕೆಂತಾಗಲೀ ಕೊಡಬಾರದೆಂತಾಗಲೀ ಪ್ರೇರೇಪಿಸುವದೋ, ಯಾವ ಮುದ್ರಣಾಲಯವು ಸರ್ಕಾರಿಯ ನೌಕರನನ್ನಾಗಲೀ ಸ್ಥಳಿಕ ಸಂಸ್ಥೆಗಳ ನೌಕರನನ್ನಾಗಲೀ ತನ್ನ ಸರ್ಕಾರಿ ಹುದ್ದೆಯ ಸಂಬಂಧವಾದ ಕೆಲಸವನ್ನು ಮಾಡುವ ಹಾಗೆ ಪ್ರೇರೇಪಿಸುವದೋ ಯಾ ತನ್ನ ಕೆಲಸಕ್ಕೆ ರಾಜಿಕೊಡುವರೆ ಪ್ರೇರೇಪಿಸುವದೋ, ಯಾವ ಮುದ್ರಣಾಲಯವು ನಮ್ಮ ಅರಸರ ಪ್ರಜೆಗಳೊಳಗೆ ದ್ವೇಷವನ್ನು ಹುಟ್ಟಿಸುತ್ತದೋ, ಯಾವ ಮುದ್ರಣಾಲಯವು ನಮ್ಮ ಚಕ್ರವರ್ತಿಯ ಸೈನ್ಯದಲ್ಲಿ ಯಾ ಪೊಲಿಸ ಇಲಾಖೆಯಲ್ಲಿ ಹೊಸತಾಗಿ ವ್ಯಕ್ತಿಗಳನ್ನು ತಕ್ಕೊಳ್ಳುವದಕ್ಕೆ ಯಾ ಸೇರಿಸುವದಕ್ಕೆ ಅಪಾಯವಾಗುವ ರೀತಿ ನಡಕೊಳ್ಳುತ್ತದೋ ಆ ಮುದ್ರಣಾಲಯವು ಇಟ್ಟ ಡಿಪೊಜಿಟನ್ನು ಸರ್ಕಾರದವರು ಜುಲ್ಮಾನೆಮಾಡಿ ವಜಾ ಮಾಡಬಹುದು.

ಡಿಪೊಜಿಟ ಹಣವನ್ನು ಸರ್ಕಾರದವರು ಜುಲ್ಮಾನೆ ಮಾಡುವ ಈ ೩ ತಕ್ಸಿರುಕರವಾದ ಆಪಾದನೆಗಳು ೧೯೧೦ ಆಕ್ಟಿನಲ್ಲಿ ಇರಲಿಲ್ಲ. ಅಲ್ಲದೆ ಸರ್ಕಾರದವರು ಹಣವನ್ನು ಡಿಪೊಜಿಟು ಇಡಬೇಕಾಗಿ ಮುದ್ರಣಾಲಯಕ್ಕೆ ನೋಟೀಸು ಕೊಟ್ಟನಂತರ ಆ ಹಣವನ್ನು ಡಿಪೊಜಿಟ್ ಮಾಡುವವರೆಗೆ ಈ ಮಧ್ಯಕಾಲದಲ್ಲಿ ಪತ್ರಿಕೆಗಳನ್ನು ಮುದ್ರಣಾಲಯಗಳು ಮುದ್ರಿಸಬಾರದು. ಹಾಗೆ ಛಾಪೆ ಮಾಡಿದರೆ ಮುದ್ರಣಾಲಯವನ್ನು ಗವರ್ನಮೆಂಟನವರು ಜುಲ್ಮಾನೆಯಾಗಿ ಸ್ವಾಧೀನಮಾಡಿಕೊಳ್ಳುವರು. ಈ ತೆರದ ಜುಲ್ಮಾನೆಯು ೧೯೧೦ನೇ ಶಾಸನದಲ್ಲಿರಲಿಲ್ಲ.

ಈ ರೀತಿ ಮುದ್ರಣಾಲಯಗಳನ್ನು ಸರ್ಕಾರದವರು ಜುಲ್ಮಾನೆಯಾಗಿ ಸ್ವಾಧೀನಮಾಡಿಕೊಂಡರೆ ಹೆಚ್ಚಿನ ಅನ್ಯಾಯುವಾಗುವದು. ಕೆಲವು ಮುದ್ರಣಾಲಯಗಳು ಹಲವು ಲಕ್ಷ ರೂಪಾಯಿ ಪನೌಲ್ಯದವುಗಳು. ಕೆಲವು ಅಲ್ಪಕ್ರಯದವು. ಯಾವ ಕಾನುನು ಮೇರೆಗೆ ಸಹಾ ಸರ್ಕಾರದವರಿಗೆ ಒಂದು ಲಕ್ಷ ರೂಪಾಯಿ ಜುಲ್ಮಾನೆ ಮಾಡುವ ಅಧಿಕಾರವಿರುವದಿಲ್ಲ. ಈಗಿನ ಶಾಂತಿಮಯ ಅಸಹಕಾರದ ಚಳವಳದ ವಿಷಯ ಬರೆಯುವ ಯಾ

ಶ್ಲಾಘಿಸುವ ಮುದ್ರಣಾಲಯಗಳನ್ನು ಈ ಶಾಸನದ ಮೇರೆಗೆ ಶಿಕ್ಷಿಸಬಹುದು. ಶಾಂತಿಮಯ ಅಸಹಕಾರವು ನಮ್ಮ ರಾಷ್ಟ್ರೀಯ ರಾಜ್ಯಶಾಸನದ ಮೇರೆಗೆ ಕಾನೂನಿಗೆ ಸರಿ ಎಂತ ಮಾನ್ಯ ಗೋಖಲೆಯವರು ಈ ಮೊದಲು ಅಭಿಪ್ರಾಯಪಟ್ಟಿರುವರು. ಅಸಹಕಾರವು ನ್ಯಾಯವೆಂತಾಗಲೀ ಈಗಿನ ಚಳವಳವು ನ್ಯಾಯವೆಂತಾಗಲೀ ತೋರಿಸುವ ಲೇಖನಗಳನ್ನು ಯಾವ ಮುದ್ರಣಾಲಯವೂ ಮುದ್ರಿಸಕೂಡದು. ಅಂದರೆ ಸವಿನಯ ಅಸಹಕಾರವನ್ನು ಶ್ಲಾಘಿಸುವ ಲೇಖನಗಳೂ ರಕ್ತವನ್ನು ಚೆಲ್ಲುವ ದೊಂಬಿಯನ್ನು ಹೊಗಳುವ ಲೇಖನಗಳೂ ಏಕಪ್ರಕಾರ ತಕ್ಷಿರುಕರ. ಈಗಿನ ರೀತಿ ಚಳವಳನ್ನು ನಾವು ನಡಿಸಲೇ ಕೂಡದು. ಅರ್ಜಿಗಳ ಮುಖಾಂತರ ನಾವು ಸರ್ಕಾರದ ದಿವ್ಯ ಚಿತ್ತಕ್ಕೆ ಮನವಿ ಮಾಡಿಕೊಳ್ಳುವ ಚಳವಳವು ಮಾತ್ರ ಹಿಂದು ಜನರಿಗೆ ನ್ಯಾಯವೆಂತ ನಮ್ಮ ಸರ್ಕಾರದವರು ಅಭಿಪ್ರಾಯ ಪಡುವರು. ತಕ್ಷಿರುಗಳ ವಿವರವು ಈ ಹೊಸ ನಿಬಂಧನೆಯಲ್ಲಿ ಅಸ್ಪಷ್ಟ. ಯಾವ ಕಾರ್ಯವೂ ತಕ್ಷಿರುಕರ ಎಂಬದಾಗಿ ಹೇಳುವಷ್ಟು ವಿಶಾಲವಾಗಿ ಈ ನಿಬಂಧನೆಯನ್ನು ಟೀಕಿಸಬಹುದು.

೧೯೧೦ನೇ ಮುದ್ರಣಾಲಯದ ಶಾಸನವು ನ್ಯಾಯವಲ್ಲವೆಂತ ಈ ಶಾಸನವನ್ನು ಸರ್ ಟೆಜ್‌ಬಹದೂರ ಸಪ್ರು (Tej Bahadur Sapru) ಇವರು ಲಾ ಮೆಂಬರರಾಗಿ ತೆಗೆದು ಹಾಕಿದರೂ ನಮ್ಮ ವ್ಯಾಸರಾಯಪ್ರಭುಗಳು ಅದು ಸಹಾ ಸಾಕಷ್ಟು ವಿಸ್ತಾರವಲ್ಲ; ಅದನ್ನು ತೆಗೆದುಹಾಕಿದ್ದು ಸರಿಯಲ್ಲವೆಂಬದಾಗಿ ಈಗ ಅಭಿಪ್ರಾಯಪಟ್ಟಿರುವರು.

೧೯೧೦ನೇ ಇಸ್ವಿ ಮೇರೆಗೆ ಹಿಂದುಸ್ಥಾನದ ಪ್ರತಿ ಒಂದು ಪತ್ರಿಕೆಯೂ ಈ ಮೊದಲು ಎಚ್ಚರಿಸಲ್ಪಟ್ಟಿದೆ. ಅಮೃತ ಬಜಾರಪತ್ರಿಕೆ, ಬೊಂಬಯಿ ಕ್ರೊನಿಕಲ್, ಟ್ರಿಬ್ಯೂನ (ಲಾಹೋರ್) ಪಂಜಾಬಿ, ಮದ್ರಾಸಿನ ಹಿಂದುಪತ್ರಿಕೆ ಇವುಗಳು ಎಚ್ಚರಿಸಲ್ಪಟ್ಟಿವೆ. ಈ ರೀತಿ ಮುದ್ರಣಾಲಯಗಳಿಗೆ ಸ್ವಾತಂತ್ರ್ಯವೇ ಇರುವದಿಲ್ಲ. ಈಗಿನ ಪರಿಣಾಮವು ಇನ್ನು ತಿಳಿಯಬೇಕು. ಮದ್ರಾಸಿನ ಸ್ವರಾಜ್ಯ, ಸ್ವದೇಶಮಿತ್ರನ್, ತಮಿಳನಾಡು ಮೊದಲಾದ ಪತ್ರಿಕೆಗಳಿಂದ ಹಣವನ್ನು ಡಿಪೊಜಿಟ್ಟ ಆಗಿ ಸರ್ಕಾರದವರು ವಸೂಲಿಮಾಡಿರುವರು. ಮದ್ರಾಸಿನ ಸ್ವರಾಜ್ಯಪತ್ರಿಕೆಯ ಎಡಿಟರರಾದ ಪ್ರಕಾಶಮನವರು ತುರುಂಗವಾಸಿಯಾಗಿರುವದರಿಂದ ಅದರ ಮಾಲಿಕನಾಗಿ ಬೇರೆಯವರು ಮುದ್ರಣಾಲಯದ ವಿಷಯ ಡಿಕ್ಲೆರೇಸನ್ ಕೊಡಬೇಕಾಗಿ ಸರ್ಕಾರದ ಕಡೆಯಿಂದ ಮದ್ರಾಸಿನ ಮುಖ್ಯ ಪ್ರೆಸಿಡೆನ್ಸಿ ಮೇಜಿಸ್ಟ್ರೇಟರ ಕೋರ್ಟಿನಲ್ಲಿ ಸರ್ಕಾರದವರು ವಾದಿಸಿದರು. ಆದರೆ ಈ ಅಭಿಪ್ರಾಯವು ಸರಿಯಲ್ಲವೆಂತ ಮೇಜಿಸ್ಟ್ರೇಟರು ತೀರ್ಮಾನಿಸಿರುವರು. ಆದರೆ ಬೇರೆ ಕಡೆಯಲ್ಲಿ ತುರುಂಗವಾಸಿಯಾದವರು Declaration ಕೊಟ್ಟಿದ್ದರೆ ಅವರು ತುರುಂಗದಲ್ಲಿರುವಾಗ್ಗೆ ಬೇರೆಯವರು ಡಿಕ್ಲೇರೇಸನ್ ಕೊಡಬೇಕಾಗಿ ಕೆಲವು ಜಿಲ್ಲಾ ಮೇಜಿಸ್ಟ್ರೇಟರು ಅಭಿಪ್ರಾಯಪಟ್ಟಿರುವರು.

ಮುದ್ರಣಸ್ವಾತಂತ್ರ್ಯವೂ ನಾಗರೀಕತನದ ಅಗತ್ಯ. ಜನಸ್ವಾತಂತ್ರ್ಯದ ಮುಖ್ಯ ಆಧಾರ. ಈ ಕಾರಣದಿಂದಲೇ ಮ. ಗಾಂಧಿಯವರು ತುರಂಗವಾಸಿಯಾಗುವ ಮೊದಲು ಈ ಓರ್ಡಿನೆನ್ಸ ಕಾನೂನು ಮೇರೆಗೆ ಪತ್ರಿಕೆಗಳನ್ನು ಛಾಪಿಸುವದಕ್ಕಿಂತ ಮುದ್ರಣವನ್ನೇ ನಿಲ್ಲಿಸುವದು ಒಳ್ಳೇದು ಎಂಬದಾಗಿ ಅಭಿಪ್ರಾಯಪಟ್ಟರೂ ತಮ್ಮ ಪರಿಷದಿನಲ್ಲಿ ಈಗಿನ ಪತ್ರಿಕಾಕರ್ತರು ಹಣವನ್ನು ಒಂದುಸರ್ತಿ ಡಿಪೊಜಿಟ್ ಕಟ್ಟಬೇಕಾಗಿಯೂ ಅದನ್ನು ಸರ್ಕಾರದವರು ಜುಲ್ಮಾನೆಯಾಗಿ ವಿಧಿಸಿದ ನಂತರ ಹ್ಯಾಕೋರ್ಟಿನಲ್ಲಿ ಈ ಸಂಗತಿ ವಿಷಯ ಮೊಕದ್ದಮೆಯನ್ನು ನಡಿಸಿ ಅಲ್ಲಿಯೂ ಸೋತರೆ ನಂತರ ಕಾನೂನಿನ ಮೇರೆಗೆ ಹಣಕಟ್ಟದೆ ಪತ್ರಿಕೆಗಳನ್ನು ಪ್ರಕಟಿಸಬೇಕೆಂತಲೂ ನಂತರ ಶಿಕ್ಷೆ ಆದರೆ ಮುದ್ರಣ ನಿಲ್ಲಿಸಬೇಕೆಂತ ಅಭಿಪ್ರಾಯಪಟ್ಟಿರುವರು.

ಈ ಪತ್ರಿಕೆಯ ಮಾಲಿಕರ ಸಂಪಾದಕರ ಸಭೆಯ ಅಧ್ಯಕ್ಷರು ನಮ್ಮ ವ್ಯಾಸರಾಯರ ಭೆಟ್ಟಿ ಬಗ್ಗೆ ಮೇ ೨೮ಕ್ಕೆ ತೆರಳಿ ವ್ಯಾಸರಾಯರ ಕೂಡ ಮಾತನಾಡಿ ಬಂದಿರುವರು.

ಇದರ ಫಲಿತಾಂಶವೇನೋ ಸದ್ಯದಲ್ಲಿಯೇ ತಿಳಿಯುವದು.

# "ಸಣ್ಣ ಕತೆಗಳು"

ಲೇಖಕರು: — ಶ್ರೀ ಕೆ. ಗೋಪಾಲಕೃಷ್ಣರಾವ, ಬೆಂಗಳೂರು.

ಈಚೀಚೆಗೆ ಯಾವ ಪತ್ರಿಕೆಯನ್ನು ತೆಗೆದುಕೊಂಡು ನೋಡಿದರೂ ಅದರಲ್ಲಿ ಸಣ್ಣ ಕತೆಗಳಿಗೆ ಒಂದು ಸ್ಥಾನವಿದ್ದೇ ಇರುವುದು. ದಿನವಹಿ ಬರುವ ವೃತ್ತಪತ್ರಿಕೆಗಳಲ್ಲಿಯೂ ಸಣ್ಣ ಕತೆಗಳು ಬರಲಾರಂಭಿಸಿರುವುವು. ಇಂಗ್ಲೆಂಡು ಬಂಗಾಳ ದೇಶಗಳಲ್ಲಾದರೋ ಸಣ್ಣ ಕತೆಗಳಿಗೋಸ್ಕರ ಅನೇಕ ಪತ್ರಿಕೆಗಳೇ ಇರುವವು. ಕರ್ಣಾಟಕದಲ್ಲಿಯೂ ಕಥಾಂಜಲಿಯೆಂದು ಸಣ್ಣ ಕತೆಗಳಿಗಾಗಿಯೇ ಒಂದು ಪತ್ರಿಕೆಯು ಹೊರಟಿರುವುದು. ಪ್ರಪಂಚದಲ್ಲಿನ ಪ್ರತಿ ಭಾಷೆಗಳಲ್ಲಿಯೂ ಈ ಸಣ್ಣ ಕತೆಗಳು ಬಹಳವಾಗಿ ಆದರಿಸಲ್ಪಡುತ್ತಿರುವವು. ಇದು ನೋಡಿದರೆ ಈ ಯುಗವೇ ಸಾಹಿತ್ಯಸಾಮ್ರಾಜ್ಯದಲ್ಲಿ ಸಣ್ಣ ಕತೆಯ ಯುಗವಾಗಿ ಪರಿಣಮಿಸುವುದೆಂದು ತೋರುತ್ತದೆ.

ಇದು ಹಿಂದಿನ ಯುಗವಲ್ಲ. ಜನಗಳಿಗೆ ವಿರಾಮವಿಲ್ಲ. ದೊಡ್ಡ ದೊಡ್ಡ ಕಾದಂಬರಿಗಳನ್ನೂ ಪದ್ಯಗ್ರಂಥಗಳನ್ನೂ ಓದಲು ಬಿಡುವಿಲ್ಲ. ಹದಿನೆಂಟನೆಯ ಶತಮಾನದಿಂದೀಚೆಗೆ ವಿಜ್ಞಾನವು ಸರ್ವತೋಮುಖವಾಗಿ ಬೆಳೆಯುತ್ತಿದೆ. ಹೊಸ ಹೊಸ ಶೋಧನಗಳು ನಡೆಯುತ್ತಿವೆ. ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಪ್ರಾಪಂಚಿಕ ಸುಖಾಭಿವೃದ್ಧಿಯು ಮುಂದುವರಿಯುತ್ತಿದೆ. ಅದರಿಂದ ಪೋಟಾ ಪೋಟಿಯು ಹೆಚ್ಚಾಗಿ ಜೀವನಕ್ಕೆ ಬಹಳ ಹೊಡೆದಾಟವಿದೆ. ಅಮೇರಿಕಾ ಯುರೋಪ ದೇಶಗಳಲ್ಲಾದರೋ ಅನೇಕರಿಗೆ ಊಟಮಾಡಲು ಅವಕಾಶವಿಲ್ಲ. ಸಂಗೀತನಾಟ್ಯಶಾಲೆಗಳಿಗೆ ಹೋಗುವುದಕ್ಕಂತೂ ಆಗುವುದೇ ಇಲ್ಲ. ಇನ್ನು ಅವರು ಪುಸ್ತಕಭಂಡಾರಗಳಿಗೆ ಹೋಗುವುದೆಂತು ! ಸಾಹಿತ್ಯದಲ್ಲಿ ಸುಖವನ್ನನುಭವಿಸುವುದೆಂದು ! ಅವರಿಗೆ ರೈಲುಗಳಲ್ಲಿಯೂ ಗಾಡಿಗಳಲ್ಲಿಯೂ ಹೋಗುವಾಗ ದೊರೆತ ವಿರಾಮವನ್ನು ಉಪಯೋಗಿಸಕೊಳ್ಳಬೇಕಲ್ಲದೆ ಬೇರೆ ವಿರಾಮವಿಲ್ಲ. ಆಗ ಚಾರಲ್ಸ ಡಿಕನ್ಸರಂಥವರ ಕಾದಂಬರಿಗಳನ್ನು ಓದುತ್ತಾ ಕುಳಿತುಕೊಳ್ಳಲಾಗುತ್ತದೆಯೆ ? ಮನಶ್ಶಾಂತಿಯೆಲ್ಲಿರುವುದು! ಯಾವುದನ್ನೂ "Dash it off" ಎನ್ನುವ ಆತುರ ತಕ್ಷದ ಕಾಲವಿದು. ಸಾಹಿತ್ಯವೋ ಜನಜೀವನವನ್ನೆಡೆಬಿಡದೆ ಅನುಸರಿಸುವುದು. ಅದರಿಂದಲೇ ಈಗ ಜನರಿಗೆ ಸಣ್ಣ ಕವಿತೆಗಳಲ್ಲಿ ಅಷ್ಟು ಮಮತೆ. ಸಣ್ಣ ಕತೆಗಳಿಗೆ ಇಷ್ಟು ಆದರ.

ಎರಡು ಶತಮಾನಗಳಿಂದೀಚೆಗೆ ಪಾಶ್ಚಾತ್ಯರ ಸಂಪರ್ಕವು ಹಿಂದೂ ಜನರಲ್ಲಿ ಹೆಚ್ಚುತ್ತಾ ಹಿಂದೂ ಸಂಸ್ಕೃತಿಯು ಪಾಶ್ಚಾತ್ಯರ ಸಂಸ್ಕೃತಿಯೊಂದಿಗೆ ಕಲೆತು ಜೀವನದ ನಾನಾಭಾಗಗಳಲ್ಲಿ ನಾನಾಬದಲಾವಣೆಗಳಾಗುತ್ತಿವೆ. ಕಲೆಗಳಲ್ಲಿ ಅನೇಕ ಮಾರ್ಪಾಡುಗಳು ತೋರಿ ಬರುತ್ತಿವೆ. ನವೀನತೆಯು ಮುಗುದೆಯ ಮಂದಹಾಸದಂತೆ ಸಾಹಿತ್ಯಮಂಡಲದಲ್ಲಿ ಪಸರಿಸುತ್ತಿದೆ. ಸ್ವೇಚ್ಛತೆಯು ಹೆಚ್ಚುತ್ತಿದೆ. ಕವಿತೆಗಳಲ್ಲಿ ಹೊಸ ಮಾರ್ಗ, ಕಾವ್ಯಗಳಲ್ಲಿ ಹೊಸ ರೀತಿ, ಕಾಣಬರುತ್ತಿದೆ. 'ಮಾತೆಯ ಮಮತೆಯ ಭರದೊಳೈತರುವ ತರಳನಂತೆ' ಪಾಶ್ಚಾತ್ಯ ಸಾಹಿತ್ಯವಿಶೇಷಗಳು ಒಂದೊಂದಾಗಿ ಹಿಂದೂ ದೇಶದ ಸಾಹಿತ್ಯದಲ್ಲಿ ನಲಿಯುಲಾರಂಭಿಸಿವೆ. ಅವುಗಳಲ್ಲಿ ಮುಖ್ಯವಾದವು ವಿಮರ್ಶೆಯೊಂದು; ಸಣ್ಣ ಕತೆಯೊಂದು.

ಈ ಸಾಹಿತ್ಯ ವಿಶೇಷವಾದ ಸಣ್ಣ ಕತೆಯು ಮೂಲ (ಜನನ) ಇಂಗ್ಲೀಷು ಸಾಹಿತ್ಯದಲ್ಲಿಯೇ. ಅದು ಒಂದು ಶತಮಾನದಿಂದೀಚೆಗೆ. ಚಾರಲ್ಸ್ ಡಿಕನ್ಸರ " ಕ್ರಿಸ್ಮಸ್ ಬುಕ್ಸ್ " ಎಂಬುದೇ ಮೊದಲನೆಯದೆಂದು ತೋರುತ್ತದೆ. ಅದನ್ನೂ ಆಂಗ್ಲೇಯ ವಿಮರ್ಶಕಾರರೊಬ್ಬರು (Hudson) " ಕಾದಂಬರಿಗಳು - ಅಲ್ಲ ಮರಿಕಾದಂಬರಿಗಳು " ಎಂದು ಹೇಳುತ್ತಾರೆ. ಅಲ್ಲಿಂದೀಚೆಗೆ ಲ್ಯೂಯಿ ಸ್ಟೀವನ್‌ಸನ್, ಸರ್ ಆರ್ಥರ್ ಕಾನಂಡೈಯಲ್, ಅಮೇರಿಕಾ ದೇಶದ ಎಡ್ಗರ್ ಆಲನ್‌ಪೊ, ನೇಥಿನಿಯಲ್ ಹಾಥಾರನ್, ಬ್ರೆಟ ಹಾರ್ಟ್ಟ ಮೊದಲಾದವರು ಕತೆಗಳನ್ನು ಬರೆಯಲಾರಂಭಿಸಿ ಅದಕ್ಕೊಂದು ಪರಿಪೂರ್ಣತೆಯನ್ನು ತಂದರು. ಈಚೆಗೆ ರಷ್ಯಾ, ಜರ್ಮನಿ, ಫ್ರಾನ್ಸ್ ದೇಶಗಳಲ್ಲಿ ಅನೇಕ ಕತೆಗಳು ಹೊರಬೀಳುತ್ತಿವೆ. ಅನೇಕರ ಕತೆಗಳು ಸಾಹಿತ್ಯದಲ್ಲಿ ರತ್ನಪ್ರಾಯವಾಗಿವೆ.

ಹಿಂದೂ ದೇಶದ ಸಾಹಿತ್ಯಗಳಲ್ಲಿ ಇಂಗ್ಲೀಷು ಸಾಹಿತ್ಯದ ಪ್ರಾಬಲ್ಯವು ( Influence ) ಮೊಟ್ಟಮೊದಲು ಕಂಡುಬಂದಿದ್ದು ಬಂಗಾಳಿ ಸಾಹಿತ್ಯದಲ್ಲಿ. ಏಕೆಂದರೆ ಆಂಗ್ಲೇಯರು ಮೊಟ್ಟಮೊದಲು ಬಂಗಾಳದಲ್ಲಿ ನೆಲಸಿ ಅಲ್ಲಿನವರನ್ನು ಆಂಗ್ಲಭಾಷಾಪಾರಂಗತರನ್ನಾಗಿ ಮಾಡಿದರು, ಅಲ್ಲಿ ಜನಿಸಿದ ಬಂಕಿಂ

ಚಂದ್ರರ ಕಾದಂಬರಿಗಳು ಹಿಂದೂ ಸಾಹಿತ್ಯದಲ್ಲಿ ಮೊದಲ ಕಾದಂಬರಿಗಳೆಂದರೆ ಅತಿಶಯೋಕ್ತಿಯಾಗಲಾರದು. ಅಲ್ಲಿಂದೀಚೆಗೆ ಬಂಗಾಳದಲ್ಲಿ ಉದ್ದಾಮಕವಿಗಳನೇಕರು ಜನಿಸಿ ಭಾಷಾಸೇವೆಯನ್ನು ಮಾಡತೊಡಗಿದರು, ಭಾರತವರ್ಷದ ಕವಿಪುಂಗವರಾದ ರವೀಂದ್ರರನ್ನರಿಯದ ಭಾರತೀಯನೇ ಇಲ್ಲ. ಅವರ "ಮಾಷಿ ಮತ್ತು ಇತರ ಕತೆಗಳ"ನ್ನು ಓದದ ಓದುಗನೇ ಇಲ್ಲ. ಇತರ ದೇಶದ ಸಾಹಿತ್ಯಗಳೆಲ್ಲವೂ ಈ ಬಂಗಾಳೀ ಸಾಹಿತ್ಯವನ್ನೇ ಅನುಕರಣ ಮಾಡಿದವೆಂಬ ಅಭಿಪ್ರಾಯವು ಅನೇಕ ವಿಧದಲ್ಲಿ ತೋರಿ ಬರುವುದು. ಹಿಂದೂ ದೇಶದ ಯಾವ ಭಾಷೆಗಳನ್ನು ತೆಗೆದುಕೊಂಡರೂ ಅವುಗಳಲ್ಲಿ ಬಂಗಾಳಿಯ ಭಾಷಾಂತರಗಳು ಯಥೇಷ್ಟವಾಗಿ ದೊರೆಯುತ್ತಿವೆ. ಕರ್ಣಾಟಕ ಕಾವ್ಯಪಿತಾಮಹರಾದ ಬಿ. ವೆಂಕಟಾಚಾರ್ಯರು ಬಂಕಿಂಚಂದ್ರರ ಕಾದಂಬರಿಗಳನ್ನು ಪರಿವರ್ತಿಸಿ ಕರ್ಣಾಟಕ ಸಾಹಿತ್ಯಕ್ಕೆ ಒಂದು ಹುರುಪನ್ನು ತಂದರು. ಅದರ ಪ್ರಭಾವವು ಕರ್ಣಾಟಕ ಕಾದಂಬರಿಗಳ ಮೇಲೆ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಇಲ್ಲಿ ವಿವರಿಸುತ್ತಾ ಕುಳಿತುಕೊಳ್ಳಲಾಗುವುದಿಲ್ಲ. ಅದರಂತೆಯೇ ರವೀಂದ್ರರ ಸಣ್ಣ ಕತೆಗಳ ಪ್ರಾಬಲ್ಯದಿಂದ ಇತರ ಭಾಷೆಗಳಲ್ಲಿಯೂ ಸಣ್ಣ ಕತೆಗಳು ಬರಲಾರಂಭಿಸಿದವೆಂದು ಭಾವಿಸಿದ್ದೆನು. ಆದರೊಂದು ಸಂದರ್ಭದಲ್ಲಿ ಕರ್ಣಾಟಕರವೀಂದ್ರರಾದ ಮ॥ ರಾ॥ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರೊಂದಿಗೆ ಮಾತನಾಡುತ್ತಿದ್ದಾಗ ಅವರೇ ಹೇಳಿದರು: ರವೀಂದ್ರರ ಮಾಷಿ ಮೊದಲಾದ ಕತೆಗಳು ಹೊರಬೀಳುವ ಮೊದಲೇ ಶ್ರೀನಿವಾಸರ ಕತೆಗಳಲ್ಲಿ ಒಂದೆರಡು ಹೊರಬಿದ್ದಿದ್ದವೆಂದು. ಅದನ್ನು ನೋಡಿದರೆ ಪ್ರತಿ ಭಾಷೆಯ ಮೇಲೂ ಆಂಗ್ಲೇಯ ಸಾಹಿತ್ಯದ ಪ್ರಭಾವವೇ ಮೂಲವೆಂದು ವ್ಯಕ್ತವಾಗುತ್ತದೆ. ಆಂಗ್ಲೇಯ ಸಾಹಿತ್ಯವು ಒಂದು ಮಹತ್ತಾದ ಜಲಪ್ರವಾಹ. ಅದರ ಜಲವು ಅನೇಕ ಕಾಲುವೆಗಳ ಮೂಲಕ ಅನೇಕ ಪ್ರಾಂತ್ಯಗಳಲ್ಲಿ ಪ್ರವಹಿಸಿ ಫಲವತ್ತಾಗಿ ಮಾಡಿ ಬೆಳೆಯನ್ನು ಕೊಡುತ್ತಿದೆ. ಕರ್ಣಾಟಕದಲ್ಲಿ ಚಿರಪರಿಚಿತರಾದ, ಕನ್ನಡ ಆಂಗ್ಲ ಭಾಷೆಗಳಲ್ಲಿ ಪಾರಂಗತರಾದ "ಶ್ರೀನಿವಾಸ"ರೇ ಕನ್ನಡ ಸಣ್ಣ ಕತೆಗಳಿಗೆ ಮೂಲ ಪುರುಷರು. ಅವರಿಗಿಂತ ಹಿಂದೆ ಮ॥ ರಾ॥ ಲಕ್ಷ್ಮೀಪತಯ್ಯನವರ ಹಿತಬೋಧಿನಿ ಎಂಬ ಪತ್ರಿಕೆಯಲ್ಲಿ ಕೆಲವು ಸಣ್ಣ ಕತೆಗಳು ಬಂದಿದ್ದವೆಂದು ತಿಳಿದು ಬಂದಿದೆ. ಆದರೆ ಕರ್ಣಾಟಕ ಸಾಹಿತ್ಯ ಚರಿತ್ರೆಯಲ್ಲಿ ಸಣ್ಣ ಕತೆಗೆ ಮೂಲ ಪುರುಷರು ಯಾರೆಂದರೆ ಶ್ರೀನಿವಾಸರೇ ಎಂದು ನಿಸ್ಸಂದೇಹವಾಗಿ ಹೇಳಬೇಕಾಗುತ್ತದೆ.

ಹಾಗಾದರೆ ಹಿಂದೆ ನಮ್ಮಲ್ಲಿ ಸಣ್ಣ ಕತೆಗಳಿರಲಿಲ್ಲವೆ? ಇದ್ದುವು. ಆದರೆ ಅವು ಸಾಹಿತ್ಯವಿಶೇಷವಾಗಿ ಪರಿಣಮಿಸಿರಲಿಲ್ಲ. ಹುಡುಗರಾಗಿರುವಾಗ ಅಜ್ಜಿಯ ಕತೆಗಳು, ಬರುಬರುತ್ತಾ ನೀತಿ ಚಿಂತಾಮಣಿ, ಶುಕಸಪ್ತತಿಯ ಕತೆಗಳು, ಕ್ರಮೇಣ ಪಂಚತಂತ್ರ ಹಿತೋಪದೇಶದಲ್ಲಿನ ಕತೆಗಳು, ಅಸಂಖ್ಯ ಯವನ ಯಾಮಿನಿ ವಿನೋದ, ಆ ಮೇಲೆ ಪೌರಾಣಿಕ ಉಪಾಖ್ಯಾನ ಈ ರೀತಿ ಹಿಂದಿನಿಂದಲೂ ಮಾನವಜೀವನಕ್ಕೂ ಸಣ್ಣ ಕತೆಗಳಿಗೂ ಬಾಂಧವ್ಯವಿದ್ದೇ ಇರುವುದು. ಆದರೆ ಇವು ವಸ್ತುತಃ ಸಣ್ಣವಾಗಿದ್ದರೂ ಈಗ ಸಣ್ಣ ಕತೆಗಳೆಂದು ಯಾವು ದನ್ನು ಕರೆಯುವೆವೋ ಅವುಗಳ ಗುಂಪಿಗೆ ಸೇರಲಾರವು. ಅವುಗಳ ಲಕ್ಷಣವೇ ಬೇರೆ, ಇವುಗಳ ರೀತಿಯೇ ಬೇರೆ.

ಸಣ್ಣ ಕತೆಗಳಲ್ಲಿರಬೇಕಾದ ಲಕ್ಷಣಗಳಾವುವು? ಸಣ್ಣ ಕತೆಯೆಂದರೆ ಸಂಗ್ರಹಿಸಿದ ಕತೆಯೆ? ಮುನ್ನೂರು ಪುಟಗಳಲ್ಲಿ ಬರೆಯಬೇಕಾದ ವಸ್ತುವನ್ನು ಸಂಕುಚಿತ ರೀತಿಯಲ್ಲಿ ಮೂವತ್ತು ಪುಟಗಳಲ್ಲಿ ಬರೆಯುವುದೇ? ಅದು ಸಣ್ಣ ಕತೆಯೆಂದಿಗೂ ಆಗುವುದಿಲ್ಲ. ಅದು ಫಿಲ್ಮಿನ ಪಟ್ಟಿಯ ಒಂದು ಚಿತ್ರದಂತೆ. ಅದನ್ನು ನೋಡಿದಾಗ ಅದನ್ನೇ ಉಪಯೋಗಿಸಿ ಚಿತ್ರವನ್ನು ಗೋಡೆಯಮೇಲೆ ಬೀಳುವ ಹಾಗೆ ಮಾಡಿದ್ದರೆ ಚೆನ್ನಾಗಿರುವುದಲ್ಲಾ ಎನ್ನಿಸುವುದು. ಪ್ರಬುದ್ಧ ಕರ್ಣಾಟಕದಲ್ಲಿ ಆರೇಳು ವರ್ಷಗಳ ಹಿಂದೆ ಎರಡು ಕತೆಗಳು ಬಂದಿದ್ದವು. ಒಂದು 'ಶಾರದೆ' ಯೆಂಬುದು, ಮತ್ತೊಂದು 'ನಾಯಕಸಾಮ್ರಾಜ್ಯ'ವೆಂದು. ಶಾರದೆಯೆಂಬ ಸಣ್ಣ ಕತೆಯಲ್ಲಿ ಶಾರದೆಯ ಮದುವೆಗೋಸ್ಕರ ಅವಳ ತಂದೆಯ ಕಷ್ಟನಷ್ಟಗಳು, ಶಾರದೆಯ ಗಂಡ, ಅವಳ ಕೋಟಲೆಯ ಸಂಸಾರ, ಗಂಡನ ಅಕಾಲಮರಣ, ಅನಂತರ ಅವಳ ಜೀವನ, ತಂದೆಯ ಸಾಲವನ್ನು ತೀರಿಸಿದ ಬಗೆ, ಕೊನೆಗೆ ನದಿಯಲ್ಲಿ ತನ್ನ ದೇಹವನ್ನು ಸಮರ್ಪಣೆ ಮಾಡಿದುದು; ಅಂತು ಶಾರದೆಯ ಜೀವನವು ಸಂಪೂರ್ಣವಾಗಿ ಚಿತ್ರಿಸಲ್ಪಟ್ಟಿರುವುದು. ಆದರೆ ಅದನ್ನೇ ಇನ್ನೂ ವಿಶದವಾಗಿ ವರ್ಣಿಸಿ ಕಾದಂಬರಿಯನ್ನಾಗಿ ಮಾಡಿದ್ದರೆ ಚೆನ್ನಾಗಿರುವುದಲ್ಲಾ ಎನ್ನಿಸುವುದು.

ಸಣ್ಣ ಕತೆಗೆ ಕಥಾಭಾಗವು ಪ್ರಧಾನವಲ್ಲ; ಅದು ಕಾದಂಬರಿಗೆ, ಮೇಲೆ ಹೇಳಿದ ಸಣ್ಣ ಕತೆಗಳ ಗುಂಪಿಗೆ. ಸಣ್ಣ ಕತೆಗಳಲ್ಲೇನೋ ಕಥಾವಸ್ತುವುಂಟು. ಅದೇ ಪ್ರಾಮುಖ್ಯತೆಯನ್ನು ವಹಿಸುವುದಿಲ್ಲ. ಜೀವನೆಂಬ ವಾಹಿನಿಯಲ್ಲಿ ಅನೇಕ ತರಂಗಗಳೂ, ಜಲಪಾತಗಳೂ, ವಕ್ರಗತಿಯೂ, ಗಾಂಭೀರ್ಯವೂ

ಉಂಟು. ಸಂಸಾರವೆಂಬ ಸಾಗರದಲ್ಲಿ ಅನೇಕಾನೇಕ ಅಲೆಗಳುಂಟು. ಮೀನು ಮೊಸಳೆ ತಿಮಿಂಗಿಲವೇ ಮೊದಲಾದ ಕ್ರೂರ ಜಂತುಗಳುಂಟು. ಮುತ್ತು, ರತ್ನ, ಹವಳ ಮೊದಲಾದ ಅಮೋಘ ವಸ್ತುಗಳೂ ಉಂಟು. ಒಂದು ಜೀವನದ ಆದ್ಯಂತವನ್ನು ಕಥಾವಸ್ತುವನ್ನಾಗಿ ಇಟ್ಟುಕೊಂಡು ಬರೆದರೆ ಅದು ಕಾದಂಬರಿಯಾಗುವುದು. ಜೀವವಾಹಿನಿಯಲ್ಲಿಯ ಯಾವುದಾದರೊಂದು ಸುಂದರವಾದ ನೋಟವನ್ನೋ, ಭೀಕರವಾದ ಜಲಪಾತವನ್ನೋ ವರ್ಣಿಸಿದರೆ ಅದು ಸಣ್ಣ ಕತೆಯಾಗುವುದು. ಅದನ್ನು ಉತ್ತಮ ರೀತಿಯಲ್ಲಿ ಚಿತ್ರಿಸುವುದು ಚಿತ್ರಿಕನ ಚಾತುರ್ಯ. ಸಣ್ಣ ಕತೆಯನ್ನು ಬರೆಯುವವನ ಬುದ್ಧಿಶಕ್ತಿ.

ಈ ವರ್ಷದ ಕಥಾಂಜಲಿಯ ಮೊದಲನೆಯ ಸಂಚಿಕೆಯಲ್ಲಿ ಬಂದಿದ್ದ "ರಾಮಾಶ್ವಮೇಧ"ವೆಂಬ ಸಣ್ಣ ಕತೆಯೊಂದನ್ನು ಓದಿನೋಡಿ. ಅದರಲ್ಲಿ ಸಂಸಾರದಲ್ಲಿ ಒಂದೇ ಒಂದು ಸಂಘಟನೆ-ಒಂದು ಚಿತ್ರವನ್ನು ಚಿತ್ರಿಸಿದೆ. ಇಂಥ ಸಂಘಟನೆಗಳು ಪ್ರತಿನಿತ್ಯವೂ ಪ್ರತಿ ಸದನಗಳಲ್ಲಿಯೂ ನಡೆಯುತ್ತಿರುತ್ತವೆ. ಓದಲದನ್ನು ತೆಗೆದುಕೊಂಡರೆ ಬೇಜಾರುಹಿಡಿಯುವುದೇ ? ಓದಿ ಮುಗಿಸಿದ ಮೇಲೆ ಏನೋ ಪೂರ್ಣವಾಗಲಿಲ್ಲ ಎಂದು ತೋರುತ್ತದೆಯೇ ? ಅದರಲ್ಲಿರುವದೆಲ್ಲಾ ಒಂದೇ ಸಂಘಟನೆ. ಆದುದರಿಂದ ಸಣ್ಣ ಕತೆಯಲ್ಲಿ ಕ್ರಿಯೆಯೂ, ಆಶಯವೂ, ಪರಿಣಾಮವೂ ಒಂದೇ ಒಂದು. ಅಜಂತಾಗುಹೆಗಳಲ್ಲಿನ ಚಿತ್ರಗಳನ್ನು ನೋಡಿ. ಅಲ್ಲಿ ಒಂದು ಬುದ್ಧದೇವನ ಸಭೆಯ ಚಿತ್ರವಿದೆಯಂತಿಟ್ಟುಕೊಳ್ಳೋಣ. ಅದರಲ್ಲಿ ನೂರಾರು ಜನಗಳಿರುತ್ತಾರೆ. ದೊಡ್ಡ ದರ್ಬಾರು. ಆದರೆ ಅದರ ಪಕ್ಕದಲ್ಲಿ ಅದರಲ್ಲಿರತಕ್ಕಂಥ ಮುಖ್ಯ ಪಾತ್ರಗಳ ಹಾವಭಂಗಿಗಳನ್ನು ಒಂದೊಂದಾಗಿ ಬೇರೆ ಬೇರೆ ಚಿತ್ರಗಳಾಗಿ ಚಿತ್ರಿಸಿರುತ್ತಾನೆ. ಸಣ್ಣ ಕತೆಗಳು ಈ ಬೇರೆ ಬೇರೆ ಚಿತ್ರಗಳ ಹಾಗೆ. ಅವುಗಳು ಒಂದೇ ಸರ್ತಿ ಓದಿ ಮುಗಿಸುವಂತಿರಬೇಕು. ಅದರಲ್ಲಿರುವ ಸಂಘಟನೆಯೇ ಓದುಗನಲ್ಲಿ ಭಾವೋದ್ರೇಕವನ್ನುಂಟುಮಾಡುವಂತಿರಬೇಕು. ಚಿತ್ರವನ್ನು ಎದುರಿಗೆ ನಿಲ್ಲಿಸಿ ಚಿತ್ತವನ್ನು ಆಕರ್ಷಿಸುವಂತಿರಬೇಕು.

ಒಂದು ಸಣ್ಣ ಕತೆಯಲ್ಲಿ ಒಂದೇ ಒಂದು ಅಂಶವನ್ನೋ ಸನ್ನಿವೇಶವನ್ನೋ ಪ್ರಸ್ತಾಪಿಸಿ ಕತೆಯನ್ನು ಒಂದೇ ಸರ್ತಿ ಓದಿ ಮುಗಿಸುವಂತಿರಬೇಕಾದ್ದರಿಂದ ವರ್ಣನೆಗಳಿಗೂ ಸಂಭಾಷಣೆಗಳಿಗೂ ವಿಮರ್ಶನಾವ್ಯಾಖ್ಯಾನಗಳಿಗೂ ಮಿತಿಮೀರಿ ಆಸ್ಪದವಿಲ್ಲ. ಇವೆಲ್ಲವೂ ಇಲ್ಲದೆ ಇದ್ದರೆ ಕತೆಗೆ ಸ್ವಾರಸ್ಯವೂ ಇಲ್ಲ.

ಈಗ 'ಇಂದಿರೆಯೋ, ಅಲ್ಲವೋ' ಎಂಬ ಶ್ರೀನಿವಾಸರ ಕತೆಯನ್ನು ಓದಿ ನೋಡಿ. ಅದರಲ್ಲಿ ನಾರಾಯಣಮೂರ್ತಿಯು (ಇಂದಿರೆಯ ಗಂಡ) ಯೋಚನೆಮಾಡುತ್ತ ಕುಳಿತಿದ್ದಾನೆ. ಅವನಿಗೆ ಅರ್ಧ ನಿದ್ರೆ ಬಂದಿತ್ತು. ನೊಂದ ಮನಸ್ಸು, ಸೋತ ದೇಹ. ಎರಡಕ್ಕೂ ವಿಶ್ರಾಂತಿ ಬೇಕಾಗಿತ್ತು. ಹಾಗೆಯೇ ಕುರ್ಚಿಯ ಮೇಲೆ ಕುಳಿತಿದ್ದರೆ ಅಲ್ಲಿಗೆ ಇಂದಿರೆಯು ಬಂದಳು. ಇಲ್ಲಿ ಶ್ರೀನಿವಾಸರು ಏನು ಹೇಳುತ್ತಾರೋ ಕೇಳಿ "ಇಂದಿರೆಯು ಹೇಗಿದ್ದಳೆಂಬುದನ್ನು ವರ್ಣಿಸದಿದ್ದರೆ ಇಂದಿರೆಯು ಬಂದಳು ಎಂಬ ಮಾತನ್ನು ಕೇಳಿ ನಿಮಗೆ ಆ ಬರುವಿನ ಸಂಪೂರ್ಣ ಅರ್ಥವು ತಿಳಿಯಲಾರದು. ಇಂದಿರೆಯು ಬಹಳ ಚೆಲುವೆ. ಸ್ವಲ್ಪ ಉದ್ದವಾದ ಮುಖ. ಹಾಲುಕೆನೆಯಂತೆ ಮಿದುವಾದ ಬಿಳುಪಿನ ಸೊಬಗು ಹಣೆಯನ್ನು ತುಂಬಿತ್ತು. ಸೊಬಗು ಅಲ್ಲಿಂದ ಹುಬ್ಬುಗಳ ನಡುವೆ ಹರಿದು, ಕಣ್ಣುಗಳನ್ನು ಸೇರಿ ಅಲ್ಲಿ ಮಲ್ಲಿಗೆಯಾಗಿರುವುದು......" ಈ ರೀತಿ ಇಂದಿರೆಯನ್ನು ವರ್ಣಿಸಿ ಅವಳ ಆಕೃತಿಯನ್ನೂ ನಮ್ಮೆದುರಿಗೆ ನಿಲ್ಲಿಸಿ ಅವಳ ಚೆಲುವನ್ನು ಎಂದೆಂದಿಗೂ ಮರೆಯದ ಹಾಗೆ ಮಾಡುತ್ತಾರೆ. ನಾರಾಯಣಮೂರ್ತಿಯ ಸ್ಥಿತಿಯನ್ನು 'ನೊಂದ ಮನಸ್ಸು, ಸೋತ ದೇಹ' ಎಂಬ ನಾಲ್ಕು ಮಾತುಗಳಿಂದ ಎಷ್ಟು ಚೆನ್ನಾಗಿ ಚಿತ್ರಿಸಿದ್ದಾರೆ! ಹಾಗೆಯೆ ನಾಲ್ಕಾರು ವಾಕ್ಯಗಳಿಂದ ಇಂದಿರೆಯ ಸೊಬಗನ್ನು ಎಷ್ಟು ಇಂಬಾಗಿ ವರ್ಣಿಸಿದ್ದಾರೆ! ಸಣ್ಣ ಕತೆಗಳಲ್ಲಿ ವರ್ಣನೆಗಳು ಬರಬೇಕು. ಆದರೆ ವೆಂಕಟಾಚಾರ್ಯರ ಕಾದಂಬರಿಗಳಲ್ಲಿರುವಂತೆ ಒಂದು ವರ್ಣನೆಗೆ ಒಂದು ಪರಿಚ್ಛೇದವೋ—ಅಲ್ಲ ಜಯನೃಪ ಕಾವ್ಯದಲ್ಲಿ ಬರುವ ಸುಲೋಚನೆಯ ವರ್ಣನೆಯಂತೆ ಕಾಲು, ಕಾಲುಗುರು, ಕುಚ, ಕೊರಳು, ಕುರುಳು, ಕೆನ್ನೆ, ಕಿವಿ, ಇತ್ಯಾದಿಗಳೆಲ್ಲಕ್ಕೂ ಒಂದೊಂದು ಪದ್ಯದಂತೆ ಏಳೆಂಟು ಪುಟಗಳೋ ವರ್ಣಿಸಿದರೆ ಎಷ್ಟು ಅಸಹ್ಯಕರ! ವರ್ಣನೆಗಳನ್ನು ವಿಶಾಲವಾಗಿ ಬೆಳೆಯಿಸುವುದಕ್ಕೆ ಸಣ್ಣ ಕತೆಗಳಲ್ಲಿ ಅವಕಾಶವೇ ಇಲ್ಲ.

ಕತೆಗಳಿಗೆ ಸಂಭಾಷಣೆಯು ಸಾರಿಗೆ ಒಗ್ಗರಣೆಯಂತೆ. ಕತೆಗೆ ಕಳೆಯನ್ನು ಕಟ್ಟುವುದು ಸಂಭಾಷಣೆಯೇ. ನಾವು ಕಾದಂಬರಿಗಳನ್ನಾಗಲಿ, ಕತೆಗಳನ್ನಾಗಲಿ ಓದುವಾಗ ವರ್ಣನೆ ಮೊದಲಾದುವುಗಳನ್ನು ತಿರಿವಿಹಾಕುತ್ತಾ ಸಂಭಾಷಣೆಗಳನ್ನು

ಉತ್ಸಾಹದಿಂದ ಓದುತ್ತೇವೆ. ಸಂಭಾಷಣೆಗಳು ಸಣ್ಣ ಕತೆಯಲ್ಲಿ ಇದ್ದೇ ಇರಬೇಕು. ಆದರೆ ಅವನ್ನು ಹೆಚ್ಚಾಗಿ ಬೆಳೆಯಿಸಿಕೊಂಡುಹೋದರೆ ಬೇಜಾರುಹಿಡಿಯುತ್ತದೆ.

ವರ್ಣನೆ, ಸಂಭಾಷಣೆಗಳ ಹಾಗೆ ವಿಮರ್ಶನಾವ್ಯಾಖ್ಯಾನಗಳ ಅನಿವಾರ್ಯವು ಅಷ್ಟಾಗಿ ಸಣ್ಣ ಕತೆಯಲ್ಲಿರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಇವೇ ಕತೆಗೆ ರೂಪುಗಟ್ಟುತ್ತವೆ. ಅಂತು ವರ್ಣನೆ, ಸಂಭಾಷಣೆ, ವಿಮರ್ಶನಾವ್ಯಾಖ್ಯಾನಗಳು ನಮ್ಮ ಶರೀರದಲ್ಲಿ ಅಂಗಗಳಂತೆ, ಇವು ತಮ್ಮ ತಮ್ಮ ಕೆಲಸಗಳೆಷ್ಟೋ ಅಷ್ಟರಲ್ಲಿರಬೇಕು. ಹದ್ದು ಮೀರಿದರೆ ಹದ ಕೆಡುವುದು.

ಒಬ್ಬ ಯೋಗಿಯ ಜೀವನನ್ನು ತೆಗೆದುಕೊಂಡು ನೋಡಿದರೆ ಅವನ ವ್ಯಾಪಾರಗಳೆಲ್ಲಾ ಅವನ ಮುಖ್ಯ ಆಶಯವಾದ ಮೋಕ್ಷದ ಕಡೆಗೆ ತಿರುಗಿರುತ್ತದೆ ಅವನು ನೋಡುವುದಕ್ಕೆ ಎಲ್ಲರ ಹಾಗೆಯೇನೋ ಇರುವನು. ಆದರೆ ಎಲ್ಲರ ಹಾಗೆ ಅವನ ಚಲನೆಯು ಸ್ವೇಚ್ಛೆಯಾಗಿರುವುದಿಲ್ಲ. ಹಿಡಿತವುಂಟು; ಹಿರಿಯತನವುಂಟು. ಅವನ ಮನೋವಾಕ್ಕಾಯ ಮಾರ್ಗಗಳೆಲ್ಲವೂ ಮೋಕ್ಷವೆಂಬ ಆ ಒಂದು ಪಥಕ್ಕೆ ಸಹಕಾರಿಯಾಗಿರುವಂತೆ ಸಣ್ಣ ಕತೆಗಳಲ್ಲಿರಬೇಕಾದ ಏಕತ್ವವೆಂಬ ಮುಖ್ಯಅಂಶಕ್ಕೆ ವರ್ಣನೆ, ವ್ಯಾಖ್ಯಾನ, ವಿಮರ್ಶೆ, ಸಂಭಾಷಣೆಗಳೆಲ್ಲವೂ ಅನುಯಾಯಿಗಳಾಗಿರಬೇಕು.

ಸಣ್ಣ ಕತೆಗಳೆಲ್ಲವೂ ಪ್ರೌಢ ಭಾಷೆಯಲ್ಲಿಯೇ ಇರಬೇಕು. ವಾಕ್ಯಗಳೆಲ್ಲವೂ ವ್ಯಾಕರಣಬದ್ಧವಾಗಿಯೇ ಇರಬೇಕು. ಎಂದು ಹೊರಟರೆ ಅವು ಎಂದಿಗೂ ರುಚಿಸುವುದಿಲ್ಲ. ಸಣ್ಣ ಕತೆಗೆ ಬೇಕಾದ್ದು ವ್ಯಾವಹಾರಿಕ ಭಾಷೆ. ಅಣ್ಣ ತಂಗಿಯರು ಮಾತನಾಡುವಾಗ ವ್ಯಾಕರಣನಿಯಮವನ್ನನುಸರಿಸಿ ಮಾತನಾಡುತ್ತಾರೆಯೆ ? ಮಕ್ಕಳ ಮಾತು ಪ್ರೌಢರೀತಿಯಲ್ಲಿರುತ್ತದೆಯೆ ? ಗಂಡಹೆಂಡಿರ ಪ್ರೇಮಭಾಷಣಗಳು ಒಂದೊಂದು ಪದಗಳಲ್ಲಿಯೆ ಪರ್ಯವಸಾನವಾಗುವುದಲ್ಲಾ; ವಾಕ್ಯಗಳು ಅರ್ಧರ್ಧದಲ್ಲಿಯೇ ನಿಂತುಹೋಗುವುದಲ್ಲಾ.

ಇಲ್ಲಿ ರಾಮಭೀಮರ ಸಂಭಾಷಣೆಯನ್ನು ನೋಡಿ. ರಾಮ, ಭೀಮ ಸ್ಕೂಲಿಗೆ ಹೋಗುತ್ತಿದ್ದಾರೆ. ರಾಮನ ಜೇಬಿನ ತುಂಬ ಹುರಿಗಡಲೆ. ಭೀಮನ ಜೇಬು ಬರೀ ಜೇಬು.

'ಅದೇನೋ ರಾಮು ?'

'ಏನೂ ಇಲ್ಲ ಕಣೋ, ಹುರಿಗಡಲೆ'

'ಲೋ ಇನ್ನು ಯಾರಿಗೂ ಕೊಡಬಾರದು. ನಾವಿಬ್ಬರೇ ತಿನ್ನೋಣ.'

'ನಾನು ಅದನ್ನು ಎಂಜಲು ಮಾಡಿಬಿಟ್ಟದ್ದೇನೆ.'

'ಎಂಜಲಾದರೇನು ಏನೂ ಇಲ್ಲ.'

'ಲೋ. ನಾನು ನಿನಗೆ ಕೊಡುವುದಿಲ್ಲಪ್ಪ'

'ಹಾಗಾದರೆ ನಿನ್ನ ಸಂಗಾತ ಬಿಟ್ಟುಬಿಡುತ್ತೇನೆ. ನೋಡಿಕೋ'

'ಬಿಟ್ಟುಬಿಡು'

ಇದನ್ನು ಈ ಶೈಲಿ ಬಿಟ್ಟು ಬೇರೆ ಯಾವ ರೀತಿ ಬರೆಯುತ್ತೀರಿ. ಅವರ ಬಾಯಲ್ಲಿ ದೊಡ್ಡ ದೊಡ್ಡ ಪದಗಳನ್ನು ಹಾಕಿದರೆ ಅದು ಏನಾಗಿ ಹೋಗುತ್ತದೆ ಗೊತ್ತಿದೆಯೇ ? ಬಯಲು ನಾಟಕದಲ್ಲಿನ ವೇಷಗಳನ್ನು ನೀವು ನೋಡಿರಬಹುದು. ಅವರು ಆಡುವ ದೂರುಗಳನ್ನೂ ಕೇಳಿದ್ದೀರಿ. ಅದರಂತೆಯೇ ಸಣ್ಣ ಕತೆಯೂ ಆಗಿ ಹೋಗುತ್ತೆ. ಸನ್ನಿವೇಶಗಳನ್ನು ವರ್ಣಿಸುವಾಗಲೂ ಅಷ್ಟೆ. ನಾಗರಪಂಚಮಿಯ ಹಬ್ಬ. ಅದರಂತೆ ಅಲ್ಲಿಯದೊಂದು ಸನ್ನಿವೇಶ.

"ನಿನ್ನೆ ದಿನ ನಾಗರಪಂಚಮಿಯಾಯಿತಲ್ಲಾ ಹಿಂದಿನದೆಲ್ಲಾ ಜ್ಞಾಪಕಕ್ಕೆ ಬಂತು. ಹೋದವರ್ಷ ಅಪ್ಪ ಇದ್ದ. ನಾನು ಹೀಗಿರಲಿಲ್ಲ. ಎಲ್ಲರೂ ಒಂದು ಕಡೆ ಸೇರಿ ಹಬ್ಬ ಮಾಡಿದ್ವು. ಈ ವರ್ಷ ಹೀಗಾಯಿತು. ಇದನ್ನು ನೆನೆಸಿಕೊಂಡು ಒಲೆಯ ಮೇಲೆ ಎಸರು ಇಟ್ಟದ್ದವಳು ಏನೂ ತೋರದೆ ಹಾಗೆ ತಲೆಯ ಮೇಲೆ ಕೈಹೊತ್ತುಕೊಂಡು ಕೂತುಬಿಟ್ಟೆ. ಇದು ಒಡಹುಟ್ಟಿದವರಹಬ್ಬ; ಅಣ್ಣಯ್ಯನ ಮನೆಗಾದರೂ ಹೋಗಿ ನೋಡಿಕೊಂಡು ಬರಲೇ; ನನಗೆ ನೀನೇ ಎನ್ನುವವರು ಮತ್ತೊಬ್ಬರು ಇಲ್ಲ ಎನ್ನಿಸಿತು..." ಇಲ್ಲಿ ಭಾಷೆಯನ್ನು ನೋಡಿ.

ಅನೇಕ ಸಂದರ್ಭಗಳಲ್ಲಿ ಆಂಗ್ಲೇಯ ಪದಗಳನ್ನು ಉಪಯೋಗಿಸಬೇಕಾಗುತ್ತದೆ. ಮಾತಿನ ಬಿರುವಿನಲ್ಲಿ ಅರಿಸವಾಸಗಳು ನುಸುಳಿಕೊಂಡು ಬಂದು ಬಿಡುತ್ತವೆ. ಅವುಗಳನ್ನೆಲ್ಲ ತಿದ್ದಿ ಬರೆದರೆ ಅಲ್ಲಿನ ವ್ಯಾಪಾರಗಳು ಕೃತಕರೂಪವನ್ನು ತಾಳುವುದಿಲ್ಲವೇ ? ಆಯಾ ರಸಗಳಿಗೆ ತಕ್ಕ ರಚನಾಶಕ್ತಿಯಿರಬೇಕು. ಭಾವಗಳಿಗೆ ತಕ್ಕ ಭಾಷೆಯಿರಬೇಕು. ಮಗು "ಅಪ್ಪಾ ಪ್ರೇಷ್ಟೆ ಹೋದ ಊಹೂ" ಎನ್ನುವುದು ಹೇಗಿದೆ. "ನಮ್ಮ ತಂದೆಯವರು ಊರಿಗೆ ಹೋದರು. ನನಗೆ ಆಗುವುದಿಲ್ಲ" ಎಂಬುದು ಹೇಗಿದೆ. ಸಣ್ಣ ಕತೆಯಲ್ಲಿ ಪ್ರತಿಯೊಂದು ಮಾತೂ ತೂಕವಾದುದು. ಒಟ್ಟನಲ್ಲಿ ಒಂದು ಮಾತಿನಲ್ಲಿ ಹೇಳಿಬಿಡಬಹುದು. ಪದ್ಯಗಳಲ್ಲಿ ಭಾವಗೀತೆಗಳು ಹೇಗೋ ಗದ್ಯದಲ್ಲಿ ಸಣ್ಣ ಕತೆಗಳು ಹಾಗೆ.

ಸಣ್ಣ ಕತೆಗಳು ಬೆಳೆದು ಬರಬೇಕಾದರೆ, ಯಥೇಚ್ಛವಾಗಿ ಸಾಹಿತ್ಯಸೇವೆಯಾಗಬೇಕಾದರೆ ಕರ್ಣಾಟಕದ ಎಲ್ಲಾ ಪ್ರಾಂತ್ಯದವರೂ ಮುಂದು ಬರಬೇಕು. ಎಲ್ಲರೂ ಸಾಹಿತ್ಯವನ್ನು ಬೆಳೆಯಿಸಬೇಕೆಂದಿದ್ದರೆ ನಮ್ಮ ಸಾಹಿತ್ಯವನ್ನು ಇತರ ಸಾಹಿತ್ಯಗಳೊಂದಿಗೆ ತುಲನಾತ್ಮಕವಾಗಿ ವ್ಯಾಸಂಗಿಸಬೇಕು. ಶ್ರೀಯವರು ಹಾಡಿರುವರು.

ಇವಳ ಸೊಬಗನವಳು ತೊಟ್ಟು
ನೋಡ ಬಯಸಿದೆ
ಅವಳ ತೊಡಿಗೆ ಇವಳಿಗಿಟ್ಟು
ಹಾಡ ಬಯಸಿದೆ

ಎಂದು. ನಾವು ಅವರ ಹೇಳ್ಪಂಕ್ತಿಯನ್ನು ಅನುಸರಿಸಬೇಕು.

ಸಣ್ಣ ಕತೆಯು ಆಂಗ್ಲ ಸಾಹಿತ್ಯದಿಂದ ಬಂದಿದ್ದು ಎಂದು ಹಿಂದೆಯೇ ಹೇಳಿದೆ. ಈಗ ಅಮೇರಿಕಾದವರು ರಷ್ಯಾದವರು ಸಣ್ಣ ಕತೆಯನ್ನು ಬರೆಯುವುದರಲ್ಲಿ ಮುಂದುವರಿಯುತ್ತಿದ್ದಾರೆ. ಫ್ರೆಂಚರೂ ಅಷ್ಟೆ. ನಾವು ಅವರ ಕತೆಗಳನ್ನು ಮೊದಲು ಭಾಷಾಂತರ ಮಾಡತೊಡಗಬೇಕು. ನಮ್ಮ ಸಾಹಿತ್ಯದಲ್ಲಿದರ ಚಳವಳಿಯನ್ನು ಹುಟ್ಟಿಸಬೇಕು. ಅವರ ಸಾಹಿತ್ಯದ ಬೆಳವಣಿಗೆಯನ್ನು ಚನ್ನಾಗಿ ಗಮನಿಸುತ್ತಿರಬೇಕು. ಅನಂತರ ಅದನ್ನಿಲ್ಲಿ ಬಿತ್ತಲು ಪ್ರಾರಂಭಿಸಬೇಕು. ಸ್ವತಃ ಬರೆಯಲು ಪ್ರಾರಂಭಿಸಬೇಕು. ಭಾಷಾಂತರದಲ್ಲಿಯೇ ನಿಂತು ನಮ್ಮ ಸ್ವೋಪಜ್ಞತೆಯನ್ನು ನಾಶಗೊಳಿಸಿಕೊಳ್ಳಬಾರದು.

ಇನ್ನೊಂದು ವಿಚಾರ. ನಮಗೆ ಒಳ್ಳೊಳ್ಳೆ ಭಾವಗಳು ಬರಬೇಕಾದರೆ ಉತ್ತಮ ಕಾವ್ಯಗಳನ್ನು ತಪ್ಪದೆ ಓದಬೇಕು. ಎಲ್ಲರ ಮನಸ್ಸನ್ನೂ ಲೋಹದ ತಂತಿಗೆ ಹೋಲಿಸಬಹುದು. ತಂತಿಯನ್ನು ಮೀಂಟಿದರೆ ತಾನವು ಹೊರಟೇ ಹೊರಡುತ್ತೆ. ಆದರೆ ವೀಣೆಯ ಮೇಲೆ ಶ್ರುತಿಪಡಿಸಿದ ತಂತಿಯ ನಾದವು ಹೇಗೆ, ಕಿಲುಬಿನಿಂದ ಕೂಡಿರುವ ಕಬ್ಬಿಣದ ತಂತಿಯ ನಾದವು ಹೇಗೆ ! ನಮ್ಮ ಮನಸ್ಸು ವೀಣೆಯಲ್ಲಿ ಶ್ರುತಿಪಡಿಸಿದ ತಂತಿಯಂತಾಗಬೇಕಾದರೆ ಉತ್ತಮ ಕಾವ್ಯಗಳನ್ನು ಪಠಿಸಬೇಕು. ಜೀವನದಲ್ಲಿನ ಪ್ರತಿ ದೃಶ್ಯವನ್ನೂ ವಿಮರ್ಶಕ ದೃಷ್ಟಿಯಿಂದ ನೋಡುತ್ತಾ ಬರಬೇಕು. ಅದಾಯಿತೆಂದರೆ, ಸರಿಯಾದ ಸನ್ನಿವೇಶವು ದೊರೆತಾಗ ನಮ್ಮಿಂದ ಕತೆಗಳೂ ಕವಿತೆಗಳೂ ಹೊರಬೀಳುವ ಸಂಭವವುಂಟು.

ನಾವು ದಾರಿಯಲ್ಲಿ ಹೋಗುತ್ತಿರುವಾಗ ಹಸುವಿನ ಕರುವೊಂದು ತಾಯಿಯ ಬಳಿಗೆ ಓಡಿ ಬರುವುದು, ತಾಯಿಯ ವಾತ್ಸಲ್ಯ ಇದನ್ನು ನೋಡುತ್ತೇವೆಂದು ಇಟ್ಟುಕೊಳ್ಳೋಣ. ಆಗ ಪ್ರತಿಯೊಬ್ಬರ ಮನಸ್ಸಿನಲ್ಲಿಯೂ ಅವರವರ ತಂದೆತಾಯಿಗಳ ವಾತ್ಸಲ್ಯವು ಜ್ಞಾಪಕಕ್ಕೆ ಬಂದೇ ಬರುವುದು. ಸಂಸ್ಕಾರವಾದ ಮನಸ್ಸಾದರೆ ಅಷ್ಟಕ್ಕೆ ನಿಲ್ಲುವುದಿಲ್ಲ. ಅದಕ್ಕೆ ಸೇರಿದ ಅನೇಕ ವಿಚಾರಗಳು ತಲೆದೋರುವುದು. ಆ ಸ್ಥಳವನ್ನು ಬಿಟ್ಟುಬಂದರೂ ಅದು ಮನದಲ್ಲಿ ತಾಂಡವಾಡುತ್ತಿರುವುದು. ನಮ್ಮ ಮನಸ್ಸಿನದೆಲ್ಲವೂ ರೆಸೊನನ್ಸ್ ( Resonance ) ಹಾಗೆ; ವೀಣೆಯ ಮೇಲೆ ಶ್ರುತಿಪಡಿಸಿವಂಥ ಸಂಸ್ಕಾರವಾದ ಮನಸ್ಸಿನ ಮೇಲಿನ ಪರಿಣಾಮವು ಕಾನ್‌ಸೊನನ್ಸ್‌ನದು (Consonance).

ಅಖಾಡಕ್ಕೆ ಇಳಿಯಬೇಕಾದರೆ ಜಟ್ಟಿಯು ಹೇಗೆ ಕಸರತ್ತು ಮಾಡಬೇಕೋ ಹಾಗೆ ಸಣ್ಣ ಕತೆಗಳನ್ನು ಬರೆಯಬೇಕೆಂದಿರುವವನು ಚೆನ್ನಾಗಿ ಕಸರತ್ತು ಮಾಡಬೇಕು. ಕಾದಂಬರಿಗಳನ್ನು ಸುಲಭವಾಗಿ ನೇಯಬಹುದು. ಅದರಲ್ಲಿ ಅವಕಾಶವು ಹೆಚ್ಚಾಗಿದೆ. ಆದರೆ ಸಣ್ಣ ಕತೆಗಳನ್ನು ಬರೆಯುವುದು ಸುಲಭವಲ್ಲ. ಒಂದು ದೊಡ್ಡ ಪರದೆಯ ಮೇಲೆ ಬಣ್ಣಗಳನ್ನು ಬಳಿದು ಒಂದು ರಾಜಭವನವನ್ನೇ ಚಿತ್ರಿಸಬಹುದು. ಆದರೆ ಆರು ಕಾಸಿನಗಲದ ದಂತದ ಬಿಲ್ಲೆಯ ಮೇಲೆ ಕುಚ್‌ಬಿಹಾರ್ ರಾಜಕುಮಾರನ ಚಿತ್ರವನ್ನು ಚಿತ್ರಿಸುವುದಕ್ಕೆ ವೆಂಕಟಪ್ಪನವರೇ ಆಗಬೇಕು.

ಐರೋಪ್ಯ ದೇಶಗಳಲ್ಲಿ ಹೊರಬೀಳುತ್ತಿರುವ ಕತೆಗಳಲ್ಲಿ ಕನ್ನಡ ಕತೆಗಳು ಹತ್ತರಲ್ಲಿ—ಯಾಕೆ ನೂರರಲ್ಲಿ ಒಂದು ಪಾಲಿಲ್ಲ. ಕರ್ಣಾಟಕ ಸಾಹಿತ್ಯದಲ್ಲಿ ಈಗ ಉಂಟಾಗಿರುವ ಜಾಗೃತಿಯು ಶುಭಸೂಚಕವಾಗಿದೆ. ಆದುದರಿಂದ ಸಣ್ಣ ಕಥೆಯ ಸಾಹಿತ್ಯವು ಹೆಚ್ಚಾಗಿ ಬೆಳೆಯಲೆಂದು ಹಾರೈಸುತ್ತೇವೆ.

# ವಾದಭೂಮಿ

## ಸಂಗೀತವೂ ನಾಟ್ಯ ಶಾಸ್ತ್ರವೂ

ಲೇಖಕರು:—ಪ್ರೊ|. ಆರ್. ವ್ಹಿ. ಜಹಾಗೀರದಾರ, ಎಮ್. ಎ., (ಲಂಡನ್) ಕರ್ನಾಟಕ ಕಾಲೇಜ ಧಾರವಾಡ.

ಜಯ ಕರ್ನಾಟಕದ ೭ನೆಯ ಸಂಚಿಕೆಯಲ್ಲಿ ಶ್ರೀ. ಹುಲಗೂರ ಕೃಷ್ಣಾಚಾರ್ಯರು ಈ ವಿಷಯದ ಮೇಲೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ತಜ್ಞರ ಎಡೆಯು ಅಜ್ಞರ ಕಡೆಯೆಂದು ತಿಳಿದವನಾದರೂ तद्भागधेयं परमं पशूनां ಎಂಬ ಭರ್ತೃಹರಿಯ ಮಾಲಿಕೆಯಲ್ಲಿ ಸೇರದವನೆಂಬ ಹೆಮ್ಮೆಯಿಂದ ನಾಲ್ಕು ಮಾತುಗಳನ್ನು ಬರೆಯುವ ಧೈರ್ಯ ತಂದುಕೊಂಡಿರುವೆ. ಸಂಗೀತಶಾಸ್ತ್ರದಲ್ಲಿ ನುರಿತವನಾಗದಿದ್ದರೂ ಸಂಗೀತಕಲೆಯನ್ನು ಅರಿಯುವವನಾದ, ನಾಟಕಗಳನ್ನು ಚನ್ನಾಗಿ ಬರೆಯುವ ಯೋಗ್ಯತೆಯುವನಲ್ಲವಾದರೂ ಚನ್ನಾಗಿ ಬರೆದ ನಾಟಕಗಳನ್ನು ನೋಡುವ ಉತ್ಸುಕತೆಯುವನಾದ ನನ್ನಂತಹ ಮಿಕ್ಕ ಎಷ್ಟೋ ಜನರು ಜಯಕರ್ನಾಟಕದ ವಾಚಕರ ಸಮಾಜದಲ್ಲಿ ಇರಬಹುದು; ಅವರೆಲ್ಲರ ಊದು-ಗೋಳಿವೆ ನಾನು ಎಂಬ ಸಮಾಧಾನದಿಂದ ಬರೆಯುವೆ. ಇದಲ್ಲದೆ ಈಗ ಬರೆದು ಬಂದ ಲೇಖದಲ್ಲಿಯ ಎಷ್ಟೋ ಅಭಿಪ್ರಾಯಗಳು ಕೇವಲ ವ್ಯಕ್ತಿ-ಮತ ಸ್ವಾತಂತ್ರ್ಯದ ಉದಾಹರಣೆಗಳಲ್ಲದೆ ಸರ್ವಸಮ್ಮತ ಸಿದ್ಧಾಂತವೆಂದು ಒಪ್ಪುವಂತಹವು ಅಲ್ಲವೆಂದು ನನ್ನ ನಂಬಿಗೆಯಾಗಿದೆ; ಅದನ್ನು ತೋರಿಸಿಕೊಡುವ ಹವಣಿಕೆಯಿಂದ ಬರೆಯುವೆ.

ಮೊದಲು ನನಗೆ ತಿಳಿದ ಮಟ್ಟಿಗೆ ಶ್ರೀ. ಹುಲಗೂರವರ ಲೇಖದ ಆಶಯವನ್ನು ಕಾಣಿಸುವೆ. ಒಟ್ಟನಮೇಲೆ ಹೊಸದು ಕೇಡು ಎಂಬ ಹಳೆಯ ಹಾಡಿನ ಪಲ್ಲವಿಯೆಂದರೆ ಈ ಲೇಖವೆಂದು ನನ್ನದಂತೂ ಊಹೆಯಾಗಿದೆ; ತಪ್ಪಿದರೆ ಒಪ್ಪುವೆ. "ಉತ್ತಮ ನಾಟಕಗಳೆಂದು ಶಿಷ್ಟಸಮಾಜದವರು ಅಂಗೀಕರಿಸಬೇಕಾದರೆ ನಾಟಕಗಳು ಲಾಕ್ಷಣಿಕವಾಗಿದ್ದರೆ ಮಾತ್ರ ಅವುಗಳ ಮಹತಿಯು ಸರ್ವತೋಮುಖಿಯಾಗಿ ಚಿರಾಯುವಾಗುವದು" ಎಂದು ಮೊದಲು ಬರೆದುಕೊಂಡು, ಆ ಮೇಲೆ ಭರತಮುನಿಯು ನಾಟ್ಯಕಲೆಯ ಆದ್ಯಪ್ರವರ್ತಕನಿದ್ದುದರಿಂದ ಅವನು ಹೇಳಿದ ಲಕ್ಷಣಗಳನ್ನು ಅನುಸರಿಸಿ ನಾಟಕಗಳನ್ನು ಬರೆಯಬೇಕಲ್ಲದೆ ಈಗಿನವರಂತೆ ಪಾಶ್ಚಿಮಾತ್ಯರ ಅನುಕರಣೆಯಿಂದ ಸೂತ್ರಧಾರ ನಟಿಗಳಿಲ್ಲದ ನಾಟಕಗಳನ್ನು ಬರೆಯಬಾರದು ಎಂದು ಕನಿಕರದಿಂದ, ಖೇದದಿಂದ, ಅಸಮ್ಮತಿಯಿಂದ ಉದ್ಗಾರವನ್ನು ತೆಗೆದಿರುವರು. ಸಂಗೀತವು ನಾಟಕಕ್ಕೆ ಬೇಕಾದುದೆ ಹೇಗೆ ಎಂಬ ವಿಷಯವು ಈ ಸಂದರ್ಭದಲ್ಲಿ ಅಡಕವಾಗಿದ್ದರೂ (ಕೆಲ ಕಾರಣಗಳಿಂದ) ಲೇಖಕರು ಅದರ ಸುಳುವನ್ನೇ ಎತ್ತಿಲ್ಲವಾದ್ದರಿಂದ "ಸಂಗೀತವೂ" "ನಾಟ್ಯಶಾಸ್ತ್ರವೂ" ಎಂಬ ಪದಗಳ ಸಂಬಂಧವೇನೆಂದು ಓದುವೇಳೆ ಓದುಗರು ಪೇಚಾಟದಲ್ಲಿ ಬೀಳಬಹುದಾಗಿದೆ.

ಈ ಎರಡು ವಿಷಯಗಳನ್ನು ವಿಶೇಷವಾಗಿ ಐತಿಹಾಸಿಕದೃಷ್ಟಿಯಿಂದಲೇ ಲೇಖಕರು ಪರೀಕ್ಷಿಸುವರೆಂದು ತಿಳಿದುಕೊಂಡು ನಾನಾದರೂ ಈ ವಿಷಯವನ್ನು ಇತಿಹಾಸದ ಸಾಕ್ಷಿಯಾಗಿಯೆ ಪರೀಕ್ಷಿಸಲು ಯತ್ನಿಸುವೆ. ಆದರೆ ದುರ್ದೈವದ ಸಂಗತಿ! ನಮ್ಮ ದೇಶದಲ್ಲಿ ರೂಢಿಯ ಸಾಕ್ಷಿದಾರರಂತೆ ಇತಿಹಾಸವಾದರೂ ಇದ್ದುದನ್ನು ಇದ್ದಂತೆ ಹೇಳದೆ ಕಲಿಸಿದ್ದನ್ನಷ್ಟೆ ಪಾಠಮಾಡಿ ಹೇಳುವಂತೆ ತೋರುತ್ತದೆ. ಬರೆಯುವವನ ಉಲ್ಲಾಸವೇ ಭರತಖಂಡದ ಇತಿಹಾಸ. ಈ ಸ್ಥಿತಿಯಲ್ಲಿ ಹಲಕೆಲವು ವಿದ್ವಾಂಸರು (ಪ್ರಾಯಶಃ ಎಲ್ಲರೂ ಪಾಶ್ಚಿಮಾತ್ಯರೇ) ಇತ್ತೀಚೆಗೆ ಪರಿಶ್ರಮದಿಂದಲೂ ಪರಿಶೋಧದಿಂದಲೂ ಅಲ್ಪಸ್ವಲ್ಪ ಸಂಗತಿಗಳನ್ನು ಬಯಲಿಗೆ ಎಳೆದಿದ್ದಾರೆ. ಅವುಗಳ ಆಧಾರದ ಮೇಲಿಂದ ನಮ್ಮ ವಿಷಯದಲ್ಲಿ ನಿಶ್ಚಿತವಾಗಿ ಹೇಳಬೇಕಾದರೆ ನಾಟಕದ ಕಥೆಯು ಹೀಗಿದೆ: ನಾಟಕದ ಉದ್ದೇಶವನ್ನೂ ಸ್ವರೂಪವನ್ನೂ ನೋಡಿದಾಗ ವೇದಕಾಲದಲ್ಲಿ ನಾಟಕವು ಇದ್ದಿಲ್ಲವೆಂದು ಹೇಳಬಹುದು; ಅದರ ಅಂಕುರವು ಇರಬಹುದು. ಆದರೆ ಆ ಅಂಕುರವು ಚಿಗುರಿ ಮೊದಲು ಕಣ್ಣಿಗೆ ಕಾಣಿಸುವದು ಭಾರತಕಾಲದಲ್ಲಿ (ಅಂದರೆ ಕ್ರಿ. ಪೂ. ೫ನೆಯ ಶತಮಾನ). ಭರತನಿಗಿಂತ ಮೊದಲು ಕೃಶಾಶ್ವ ಮತ್ತು ಶಿಲಾಲಿಯೆಂಬವರು ನಾಟ್ಯಸೂತ್ರಗಳನ್ನು ಬರೆದಿದ್ದರೆಂಬ ಸಂಗತಿಗೆ ಪ್ರಮಾಣಗಳಿವೆ. ಇದಲ್ಲದೆ ಹೆಸರಾದ ಕವಿಗಳೆನ್ನಿಸಿಕೊಂಡ ಭಾಸ ಮತ್ತು ಅಶ್ವಘೋಷರು ನಾಟಕಗಳನ್ನು ಬರೆದಾಗ್ಗೆ ಭರತಮುನಿಯ ನಾಟ್ಯಶಾಸ್ತ್ರದ ಘೋಷದ ಧ್ವನಿ ಕೂಡ ಇದ್ದಿಲ್ಲವೆಂದು ಪಂಡಿತರು ಬಹುಮತದಿಂದ ಅಭಿಪ್ರಾಯ ಪಟ್ಟಿದ್ದಾರೆ. ಹೀಗಿರಲು ಭರತಮುನಿಯು ನಾಟ್ಯಶಾಸ್ತ್ರವನ್ನು

ಉಳಿಸಿದವನಾಗಲಿ ಬೆಳೆಸಿದವನಾಗಲಿ ಇರಬಹುದೆಂದು ಹೇಳಬಹುದು. ಹುಟ್ಟಿಸಿದವನಂತೂ ಅಲ್ಲವೇ ಅಲ್ಲ. ಒಮ್ಮೆಲೆ ಈ ನಾಟ್ಯಶಾಸ್ತ್ರದಿಂದ ನಾಟ್ಯಕಲೆಯು ಬೆಳೆಯಿತೆಂದು ಹೇಳಲು ಕೂಡ ಧೈರ್ಯ ಸಾಲುವಂತಿಲ್ಲ. ಭರತಮುನಿಯ ತರುವಾಯ ಅಷ್ಟು ಕಾವ್ಯಗಳನ್ನಾಗಲಿ ಶುದ್ಧ ಗದ್ಯಗಳನ್ನಾಗಲಿ ಬರೆಯುವದನ್ನು ಬಿಟ್ಟು ಚಂಪೂರೂಪದ ನಾಟಕಗಳನ್ನೇ ಕವಿಗಳು ಹೆಚ್ಚಾಗಿ ಬರೆಯಹತ್ತಿದರೆಂದು ಶ್ರೀ. ಹುಲುಗೂರರವರು ತಮ್ಮ ಲೇಖದಲ್ಲಿ ಬರೆದು ಬಿಟ್ಟಿರುವರೇನೋ ನಿಜ. ಅವಕ್ಕೆ ಪ್ರಮಾಣಗಳನ್ನು ತೋರಿಸಬೇಕಲ್ಲವೆ, ದೃಷ್ಟಾಂತಗಳನ್ನು ಕೊಡಬೇಕಲ್ಲವೆ ! ಪಾಣಿನಿಯ ಪೂರ್ವದಲ್ಲಿ ಬರೆದ ಪದ್ಯ-ಗ್ರಂಥಗಳೆಂದರೆ ವೇದ, ರಾಮಾಯಣ, ಮಹಾಭಾರತ; ಗದ್ಯ-ಗ್ರಂಥಗಳೆಂದರೆ ಸೂತ್ರಗಳು ಮತ್ತು ಉಪನಿಷತ್ತುಗಳು. ಭರತಮುನಿಯು ಬರೆದದ್ದು ಪಾಣಿನಿಯ ಸಂಸ್ಕೃತದಲ್ಲಿ; ತರುವಾಯದ ಕವಿಗಳು ಬರೆದದ್ದೂ ಅದೇ ಸಂಸ್ಕೃತದಲ್ಲಿ. ಪಾಣಿನಿಯ ಸಂಸ್ಕೃತದಲ್ಲಿ ಗದ್ಯ-ಗ್ರಂಥಗಳೆಷ್ಟು, ಪದ್ಯ-ಗ್ರಂಥಗಳೆಷ್ಟು, ಚಂಪೂ-ಪ್ರಬಂಧಗಳೆಷ್ಟು, ಮತ್ತು ಕವಿಗಳ ಪ್ರವೃತ್ತಿಯು ಯಾವತರದ ಗ್ರಂಥಗಳಲ್ಲಿ ಇದ್ದಿತು? ಪಂಚಮಹಾಕಾವ್ಯಗಳು, ಪಂಚಲಘುಕಾವ್ಯಗಳು ಹುಟ್ಟಿದ್ದು ಪಾಣಿನಿಯ ಸಂಸ್ಕೃತದಲ್ಲಿ ಅಂದರೆ ಭರತಮುನಿಯ ತರುವಾಯ; ಪಾಣಿನಿಯ ಸಂಸ್ಕೃತದಲ್ಲಿ ಶುದ್ಧ-ಗದ್ಯಾತ್ಮಕ ಗ್ರಂಥಗಳು ತಲೆದೋರುವದಾದರೂ ಭರತಮುನಿಯಿಂದ ಎಷ್ಟೋ ತಲೆಗಳಾಗಿ ಹೋದ ಮೇಲೆ ನಾಟ್ಯ-ಶಾಸ್ತ್ರ ಬರೆದದ್ದು ಕ್ರಿಸ್ತಶಕದ ಆದಿಯಲ್ಲಿ; ಸುಬಂಧುವಿನ ವಾಸವದತ್ತಾ, ಬಾಣಕವಿಯ ಹರ್ಷಚರಿತ, ಕಾದಂಬರಿಗಳಂತಹ ಹೆಸರಾದ ಗದ್ಯ-ರತ್ನಗಳು ಹೊರಬಿದ್ದುದು ನಮ್ಮ ಶಕದ ೬-೭ ನೆಯ ಶತಮಾನಗಳಲ್ಲಿ. ಇದಲ್ಲದೆ ಭರತಮುನಿಯ ತರುವಾಯದ ಗ್ರಂಥಗಳಲ್ಲಿ ನಾಟಕ, ಇಲ್ಲವೆ ಚಂಪೂಪ್ರಬಂಧಗಳಿಗಿಂತ ಕಾವ್ಯಗಳ ಸಂಖ್ಯೆಯೆ ಹೆಚ್ಚಾಗಿದೆ. ಚಂಪೂ ಪದ್ಧತಿಯ ಪ್ರಚಾರವು ಸಂಸ್ಕೃತದಲ್ಲಿ ಕೇವಲ ಶಿಲಾಲೇಖಗಳಲ್ಲಿಯೆ ಹೆಚ್ಚಾಗಿ ಕಂಡು ಬರುವದು. ಹೀಗಿರಲು ಕೇವಲ ನಾಟ್ಯಕಲೆಯನ್ನು ಉಳಿಸಿದುವರ ಶ್ರೇಯ ಮಾತ್ರವೇ ಭರತಮುನಿಗೆ ಸಂಪೂರ್ಣವಾಗಿ ಸಲ್ಲುವದೆಂದು ಹೇಳಬಹುದು. ಇಂಎನಂತೆ ಹಿಂದಿನ ಕಾಲದಲ್ಲಿಯಾದರೂ ನಾಟಕ ಬರೆಯುವವನು ಯಾವನೇ ಇರಲಿ ಅದನ್ನು ಆಡಿ ತೋರಿಸುವವರು ಮಾತ್ರ ತಿಳಿಗೇಡಿಗಳೂ ಕುಲಗೇಡಿಗಳೂ ಎಂದು ಹೆಸರುಗೆಟ್ಟಂತೆ ತೋರುತ್ತದೆ. ಈ ಸ್ಥಿತಿಯನ್ನು ಹೋಗಲಾಡಿಸಲು ಯತ್ನಿಸಿದವನು ಭರತಮುನಿಯು!

नच वेदविहारोऽयं संश्राव्यः शूद्रजातिषु ।
तस्मात्सृजापरं वेदं पंचमं सार्ववर्णिकम् ॥
नाट्याख्यं पंचमं वेदं सेतिहासं करोम्यहम् ।
जग्राह पाठ्यमृग्वेदात्सामभ्यो गीतमेव च ।
यजुर्वेदादभिनयान्रसानाथर्वणादपि ॥

ಮುಂತಾದ ನಾಟ್ಯಶಾಸ್ತ್ರದಲ್ಲಿಯ ಶ್ಲೋಕಗಳಿಂದ ಐದನೆಯ ವೇದವೆಂದು ಭರತಮುನಿಯು ಯುಕ್ತಿಯಿಂದ ನಾಟ್ಯಕಲೆಯ ಪ್ರತಿಷ್ಠೆಯನ್ನು ಹೆಚ್ಚಿಸಿದನೆಂದು ಹೇಳಬಹುದಷ್ಟೆ. ಭಾಸ ಅಶ್ವಘೋಷರಂತಹ ಪ್ರವೀಣರು ನಾಟ್ಯಶಾಸ್ತ್ರಗಳ ಲಕ್ಷಣಗಳನ್ನು ಲಕ್ಷಿಸಿಲ್ಲ. (ಭಾಸನಂತೂ ತನ್ನ "ಊರುಭಂಗ" ನಾಟಕದ ಕೊನೆಯಲ್ಲಿ ದುರ್ಯೋಧನನ ವಿಷಯವಾಗಿ दिवं गतः ಎಂಬ ವಾಕ್ಯವನ್ನು ಬರೆದು ಎಲ್ಲ ಶಾಸ್ತ್ರ-ಪ್ರಮಾಣಗಳನ್ನು ಮೂಲೆಗಸಮಾಡಿರುವ); ಭರತಮುನಿಯನ್ನೇ ಆಧಾರವಾಗಿ ಇಟ್ಟುಕೊಂಡಿರಬಹುದಾದ ಕಾಲಿದಾಸನು ತನ್ನ ಮಾಲವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ न चापि काव्यं नवमित्यवद्यम् ಎಂಬ ಮಾತಿನಿಂದ ತನ್ನ ಗ್ರಂಥವು ಹೊಸದಾದ(ಇಲ್ಲವೆ ಹೊಸತರದ) ಕಾವ್ಯವೆಂದೇ ಸೂಚಿಸಿದ್ದಾನೆ. ಇವರು ಎಣಿಕೆಯ ಕವಿಗಳು; ಇನ್ನು ಎಣಿಕೆಯಿಲ್ಲದ ಮಿಕ್ಕ ಚಿಕ್ಕ ಕವಿಗಳು ನಾಟ್ಯಶಾಸ್ತ್ರವನ್ನು ಅನುಸರಿಸಿದರೇನು? ನುಡಿಗಟ್ಟನ್ನು ಅನುಸರಿಸಿದರೇನು? ಹೀಗಿರಲು "ಲಾಕ್ಷಣಿಕವಾಗಿದ್ದರೆ ಮಾತ್ರ ಅವುಗಳ ಮಹತಿಯು ಸರ್ವತೋಮುಖಿಯಾಗಿ ಚಿರಾಯುವಾಗುವದೆಂ"ಬ ಮಾತಿಗೆ ಒಪ್ಪಬಹುದೆ? ಕವಿಯ ಇಲ್ಲವೆ ಕಾವ್ಯದ ಮಹತಿಯು ಹೊರಕಟ್ಟಿಯಿಂದಲ್ಲ, ಒಳಕಟ್ಟಿನಿಂದ. ಕಲೆಗೆ ಶಾಸ್ತ್ರವಿರಲಿ; ಆದರೆ ಶಾಸ್ತ್ರದ ಕಲೆಯೇ ಕಲೆಯೆನ್ನುವ ಹಟವೇಕೆ?

ಇತಿಹಾಸವಂತೂ ಇರಲಿ, ಇದ್ದುದನ್ನೇ ನೋಡುವಾ. ಸದ್ಯಕ್ಕೆ ಪಾಶ್ಚಿಮಾತ್ಯರಲ್ಲಿ ನಾಟ್ಯಕಲೆಯು ಬೆಳೆದಿದೆ. ಹೆನ್ರಿಕ್ ಇಬ್ಸೆನ್, ಬರ್ನಾರ್ಡ ಶಾ ಮೊದಲಾದವರು ಅಪ್ರತಿಮ ನಾಟಕಕಾರರೆಂದು ಹೆಸರಾಗಿರುವರು. ಇವರಿಬ್ಬರ ನಾಟಕಗಳು ಗದ್ಯದಲ್ಲಿ. ಇವರಿಬ್ಬರೂ ಹಳೆ ಪದ್ಧತಿಯನ್ನು ಬಿಟ್ಟುಕೊಟ್ಟವರು. ಹೊಸ ಪದ್ಧತಿಯನ್ನು ಹೂಡಿದವರು. ಹಳೆಯ ಲಕ್ಷಣಗಳನ್ನು ಬಿಟ್ಟುಕೊಟ್ಟುದಕ್ಕಾಗಿ ಇವರ ನಾಟಕಗಳು ಕೆಲಕಾಲ ಜನರಿಗೆ "ವಿಲಕ್ಷಣ" ವೆನಿಸಿದವಲ್ಲದೆ ಅದರಿಂದ ಅವುಗಳ ಚಿರಾಯುತನಕ್ಕೆ ಬಾಧೆಬರುವ ಲಕ್ಷಣಗಳೇನೂ ಇಲ್ಲ. ಇದಲ್ಲದೆ ಯುರೋಪಖಂಡದಲ್ಲಿ ಸಂಗೀತ ನಾಟಕಗಳೂ ಉಂಟು.

ಅವುಗಳಿಗೆ Opera (ಆಪೆರಾ) ಎನ್ನುವರು; ಇವುಗಳ ಸಂಗೀತವೆಲ್ಲ ಶಾಸ್ತ್ರೀಯ; ಗದ್ಯದ ಲೇಶವಾದರೂ ಇಲ್ಲ. ಇಂಗ್ಲಂಡಿನಲ್ಲಿ ಕೂಡ ಜರ್ಮನ ಇಲ್ಲವೆ ಫ್ರೆಂಚ ಭಾಷೆಯ Operaಗಳು ನಡೆಯುವವೆಂದು ಹೇಳಿದರೆ ಸಾಕು; ಇವುಗಳಲ್ಲಿ ಕೇವಲ ಶಾಸ್ತ್ರೀಯ ಸಂಗಿತವೆ ಇರುವದೆಂದಾಗಲಿ ಗದ್ಯದ ಗಂಧ ಕೂಡ ಇರುವದಿಲ್ಲವೆಂದಾಗಲಿ ಬೇರೆ ಒತ್ತಿ ಹೇಳುವ ಕಾರಣವಿಲ್ಲ. ಶಾಸ್ತ್ರೀಯ ಸಂಗೀತವನ್ನೂ ಗದ್ಯನಾಟಕವನ್ನೂ ಬೆರೆಯಿಸುವ ರೂಢಿಯು ಪಾಶ್ಚಿಮಾತ್ಯರಲ್ಲಿ ಇಲ್ಲ. ಸಂಗೀತವು ಶಾಸ್ತ್ರೀಯವಾಗಿ ಉಳಿದು ನಾಟಕವು ಕಲೆಯಾಗಿ ಬೆಳೆದರೆ ಅವುಗಳನ್ನು ಕೂಡಿಸುವದಾದರೂ ಹೇಗೆ ?

ಇಷ್ಟೆಲ್ಲ ಯಾಕೆ ? "ಪ್ರಸ್ತಾವನೆಯಲ್ಲಿ ಐಮ ಪಾತ್ರಗಳ ವೇಷವು ಕೇವಲ ದೇಶ-ಕಾಲ-ಪರಿಸ್ಥಿತಿಯ ಪ್ರಕಾರ ವ್ಯಾವಹಾರಿಕವಾಗಿರುವದು" ಎಂಬ ಮಾತನ್ನೇ ಶ್ರೀ. ಹುಲಗೂರರವರು ತಮ್ಮ ಲೇಖದ ಮೊದಲಿಗೆ ಕಾಣಿಸಿದ್ದರೆ ಆ ಲೇಖದ ಎಷ್ಟೋ ಭಾಗವನ್ನು ಬರೆಯುವ ಆಯಾಸವೇ ಅವಶ್ಯವಿದ್ದಿಲ್ಲ. ದೇಶ, ಕಾಲ, ಪರಿಸ್ಥಿತಿ ! ಮುತ್ತಿನಂತಿಹ ಮಾತು, ಎಲ್ಲರೂ ಒಪ್ಪಬಹುದಾದ ಪ್ರಮೇಯ. ಆದರೆ ಈ ಮೂರುಗಳಲ್ಲಿ ಕೇವಲ ದೇಶವನ್ನಷ್ಟೆ ಮನಸ್ಸಿನಲ್ಲಿಟ್ಟುಕೊಂಡು ಭರತಮುನಿಯಂಥವನ ಕಡೆಗೆ ಬೊಟ್ಟುಮಾಡುವದು ಯಾಕೆ, ಈಗಿನವರಿಗೆ ಬೊಟ್ಟು ತಿವಿಯುವದು ಯಾಕೆ ? ಕಾಲ ಪರಿಸ್ಥಿತಿಗಳನ್ನು ನೋಡಬಾರದೇ? ಸೂತ್ರಧಾರನೇ ಉತ್ತಮ ಗಾಯಕನಿರಬೇಕೆಂಬ ಆಗ್ರಹವಿಲ್ಲ. ನಾಟಕದಲ್ಲಿಯೆ "ಸೂತ್ರಧಾರನ ಉತ್ತಮ ಗಾಯನ, ನಟಿಯ ನರ್ತನಾಭಿಕೌಶಲ್ಯ, ವಿದೂಷಕನ ಹಾಸ್ಯ" ಕಂಡುಬಂದರೆ ಸಾಲಲಿಕ್ಕಿಲ್ಲವಷ್ಟೆ ? ನಮ್ಮ ಪರಿಸ್ಥಿತಿಯಲ್ಲಿ "ಪಾರಿಪಾರ್ಶ್ವಕನ ಗೀತಾನುಗ ನೃತ್ಯಾನುಗ ವಾದ್ಯನೈಪುಣ್ಯ"ವನ್ನು ಮುಖಪಾತ್ರದಲ್ಲಿ ಕುಳಿತವರು ತೋರಿಸಿದರೆ ಸರಿಸಾಲದೆ? ನಾಟಕದ ಉದ್ದೇಶವೇನು ? ಸೂತ್ರಧಾರನ ಗಾಯನವೆ? ನಟಿಯ ನರ್ತನ ಕೌಶಲ್ಯವೆ? ಇಲ್ಲವೆ ಗಾಯನ ನರ್ತನ ಕೌಶಲ್ಯವೆ?

दुःखार्तानां समर्थानां शोकार्तानां तपस्विनाम्।
विश्रान्तिजननं काले नाट्यमेतन्मया कृतम्॥

ಎಂದು ನಾಟಕದ ಉದ್ದೇಶವನ್ನು ಭರತಮುನಿಯೇ ಒತ್ತಿ ಒಡೆದು ಹೇಳಿದ್ದಾನೆ. ಹೀಗಿರಲು ನಮ್ಮ ಕಾಲಪರಿಸ್ಥಿತಿ ಅನುಸರಿಸಿ ನಾವು ಬರೆಯಬೇಕೋ, ಇಲ್ಲವೆ ಸಾವಿರಾರು ವರ್ಷಗಳ ಹಿಂದಿನ ಸಮಾಜಕ್ಕಾಗಿ ಭರತನು ಬರೆದ ಕಟ್ಟಳೆಗಳನ್ನು ಅನುಸರಿಸಿ ಶಿಷ್ಟಸಮಾಜದಿಂದ ಅಂಗೀಕರಿಸಿಕೊಳ್ಳಬೇಕೋ! ಇದಕ್ಕೆ ಭರತಮುನಿಯೆ ಸಾಕ್ಷಿಯಾಗಲಿ.

अन्यत्कृतयुगे नाट्यं त्रेतायां द्वापरेऽपरम्।
अन्यत्कलियुगे चैव कविबुद्ध्यनुरूपतः॥

ಎಂದು ನಾವು ಶಿಷ್ಟಸಮಾಜಕ್ಕೆ ಹೇಳಿದರೆ ಭರತಮುನಿ ನಾಟ್ಯಕಲೆಯ ಆದ್ಯಾಭಿಮಾನಿಯಾದ ಭರತಮುನಿಯು ಆನಂದಾತಿಶಯದಿಂದ ತಾಳಬಿಟ್ಟು ಕುಣಿಯಬಹುದು.

---

## ಮುಂಗಾರು

ತಂಗಾಳಿ ಮಳೆಯ ಕಂಪ
ಬೀರುತಿರುವುದು;
ಮುಂಗಾರ ಮುಗಿಲದೆಂತು
ಮೊರೆಯುತಿರುವುದು !
ಅಲ್ಲಿ ನೋಡು ಕರಿಯ ಮುಗಿಲು ತುಂಬುತಿಹುದು ಬಾನೊಳು,
ಸೊಲ್ಲಿನಿಂದ ಮೊರೆದು ಬರುವ ಆನೆವಿಂಡ ತೆರದೊಳು !
ಮುಂದಾಗಿ ಗವಿಗಳೆಲ್ಲ
ಓಡಿ ಬರುತಿವೆ;
ಒಂದಾಗಿ ಗೊಲ್ಲಕೂಟ-
ವೆಲ್ಲ ಬರುತಿದೆ;
ಕತ್ತಲಲ್ಲಿ ಜಾರುತಿಹುದು ಧಾರೆಯಾಗಿ ಸೋನೆಯು,
ಕತ್ತಲಿಂದ ಕೂಡುತಿಹುದು ಹಗಲಿನಲ್ಲೆ ಭೂಮಿಯು.

ಸಾಕಮ್ಮ ನಿನ್ನ ಹೆತಳ
ನಿಲ್ಲಿಸೀಗಲೆ;
ಏನಮ್ಮ ಬೆಳಕದೆಂತು
ಹೊಳೆಯಿತಾಗಲೆ !
ಲೋ ರಾಮು ರಂಗ ಬಾರೊ ಗುಬ್ಬಿಗೂಡ ಕಟ್ಟುವ
ಭೋರೆಂಬ ಗಾಳಿಯೊಳಗೆ 'ಬಾರು ಚೆಂಡ'ನಾಡುವ,
ಥಳ್ಳೆಂದು ಮಿಂಚುಬಳ್ಳಿ
ಹಬ್ಬುತಿರುವುದು;
ಘಳ್ಳೆಂದು ಗಗನವೆಲ್ಲ
ಬಿರಿಯುತಿರುವುದು;
ಸಿಡಿಲು ಸೀಳಿ ಗುಡುಗದೆಲ್ಲು ಗುಮ್ಮುಗೊಟ್ಟುತಿರುವುದು,
ನೋಡದೋ ಚಿಕ್ರೆಂದು ಮಳೆಯು ಸುರಿಯುತಿರುವುದು.

ವಿ. ಎ. ಎಸ್.

# ಪ್ರೀತಿಯ ನೀತಿ *

ಬರೆದವರು:– ಕೆ. ಜಿ ರಾಮಚಂದ್ರ.

೧.

ಸಂಧ್ಯಾಕಾಲ. ಸೂರ್ಯದೇವನು ಆಗ ತಾನೆ ತನ್ನ ಮನೆಗೆ ತೆರಳುತ್ತಿದ್ದನು. ಆಕಾಶವು ನಿರ್ಮಲವಾಗಿದ್ದಿತು. ಎಲ್ಲೆಲ್ಲಿಯೂ ನಕ್ಷತ್ರಗಳು ಮಿನುಗುತ್ತಿದ್ದುವು. ಪಕ್ಷಿಗಳ ಚಿಲಿಪಿಲಿನಾದವನ್ನುಳಿದು ಶಾಂತತೆಯೇ ಎಲ್ಲೆಲ್ಲಿಯೂ ಆವರಿಸಿದ್ದಿತು. ಶೀತಲನಾದ ಚಂದ್ರಮನು ನಸುನಗುತ್ತ ತನ್ನ ತಿರುಮನೆಯಿಂದ ಹೊರಬರುತ್ತಿದ್ದನು. ಅಂತಹ ದಿನವೊಂದರಲ್ಲಿ ರಾಮುವೂ, ಶಾರದೆಯೂ ಮನೆಯಹಿಂದೆ ಚಿಕ್ಕ ಬನವೊಂದರಲ್ಲಿ ಸಂಭಾಷಿಸುತ್ತ ಕುಳಿತಿದ್ದರು. ಅಸ್ಪಷ್ಟ ಮಾತುಗಳು– ಸ್ವಲ್ಪಹೊತ್ತು ನೀರವ–ಅನಂತರ ಮಾತು, ಮಧ್ಯೆ ಮಧ್ಯೆ ಕದ್ದು ಕದ್ದು ಒಬ್ಬರ ಮುಖವನ್ನೊಬ್ಬರು ನೋಡುವುದು. ಕಳ್ಳತನ ಪತ್ತೆಯಾದೊಡನೆಯೇ ನಾಚಿಕೆಯಿಂದ ತಲೆಬಾಗುವುದು.

"ಶಾರದ, ನೀನು ನನ್ನನ್ನು ಪ್ರೀತಿಸುವಿಯಾ ?"

ಶಾರದೆಯು ನಿರುತ್ತರಳು.

"ಕೇಳಿದುದಕ್ಕೆ ಉತ್ತರ ಕೊಡಬಾರದೇನು" ?

"ರಾಮೂ ನಿನ್ನ ದೊಡ್ಡದೊಡ್ಡ ಮಾತುಗಳೊಂದೂ ನನಗೆ ಅರ್ಥವೇ ಆಗುವದಿಲ್ಲ. ಪ್ರೀತಿ........"

"ಪ್ರೀತಿ........ಮುಂದೆ ಹೇಳು ಶಾರದಾ."

"ರಾಮೂ ನಿನ್ನಂತೆ ನಾನು ಪಂಡಿತಳಲ್ಲ. ಅನುಭವಿಸುವುದನ್ನು ಆಡಲರಿಯೆ."

"ಹಾಗಾದರೆ ನಿನ್ನ ಪ್ರೀತಿಯ ಅರ್ಥವು ಹೇಗೋ ?"

"ಬಾಯಿಂದ ಹೇಳಿದರೇನೇ ಪ್ರೀತಿಯಾಗುವದೇನು ?"

"ನಿಜ, ಶಾರದ ನಾನು ಅಷ್ಟು ದೂರ ಯೋಚಿಸಲಿಲ್ಲ. ಸ್ತ್ರೀಯ ಪವಿತ್ರಪ್ರೇಮವು ಭೂಮಿಯೊಳಗಡಗಿರುವ ಖನಿಯಂತೆಂಬುದನ್ನು ಅರಿಯದಿದ್ದೆ. ಪುರುಷರು ವಚನಶೂರರಾದರೆ, ಸ್ತ್ರೀಯರು ಅನುಭವಶೂರರಲ್ಲವೆ ?"

"ಇರಬಹುದು. ಯಾರು ವಚನಶೂರರಾದರೂ ನನ್ನ ರಾಮುವಲ್ಲ. ಅವನು ಅನುಭವಿಸಿದುದನ್ನೇ ಆಡುವನು."

ರಾಮುವಿನ ದೇಹಾದ್ಯಂತವೆಲ್ಲವೂ ಪುಲಕಿತವಾಯಿತು. ಆನಂದದಿಂದ ಕಣ್ಣುಗಳಲ್ಲಿ ಹನಿಗಳುಸುರಿದುವು. ಸ್ವಲ್ಪ ಹೊತ್ತು ಚಿಂತಿಸಿ ಶಾರದೆಯ ಮೃದುವಾದ ಕೈಗಳನ್ನು ತನ್ನೆದೆಗೆ ಒತ್ತಿಕೊಂಡು "ಶಾರದಾ ನಿನಗೆ ತಕ್ಕವನಾಗಲು ಪರಮಾತ್ಮನನ್ನು ಪ್ರಾರ್ಥಿಸುತ್ತೇನಷ್ಟೆ. ನಾನು ಕೇವಲ ಬಡ ಜಂತು. ನೀನು......ನೀನು......ದೇವತೆ– ನನ್ನ ಭಾಗದ "ದೇ......" ಮಾತುಗಳು ಹೊರಡದೆ ಗಂಟಲುಬ್ಬಿ ಬಂದಿತು. ಶಾರದೆಯು ಮೈದಡವುತ್ತಾ

"ಇದೇನು ರಾಮು, ಹೀಗೆ ಎಳೆಮಕ್ಕಳಂತೆ ಅಳುವೆ. ನಾನು ದೇವತೆಯಾದರೆ ನೀನೂ ದೇವರು" ಎಂದಳು.

ರಾಮುವಿನ ಅಳುವು ಹಾರಿತು. ಮಳೆ ಬಂದು ನಿಂತ ಮೇಲೆ ಹೊಂಬಣ್ಣದ ಬೆಳಕುಹರಿವಂತೆ ಮುಖದ ಮೇಲೆ ನಗೆಯು ಹರಿಯಿತು. ಪುನಃ ಚಿಂತೆಗೆ ಅವನ ಮನಸ್ಸೊಳಗಾಯಿತು. ಚಿಂತಿಸಿ ಗಂಭೀರವಾಗಿ "ಇದೆಷ್ಟು ದಿನ ಶಾರದ ! ನೀನು ವಿವಾಹವಯಸ್ಕಳಾಗಿರುವೆ. ನನಗೂ ನಿನಗೂ ಎಲ್ಲಿಯ ಬಾಂಧವ್ಯ ? ನೀನೊಂದು ಕಡೆಗೆ ನಾನು......"

"ಪ್ರೇಮಕ್ಕೆ ಮದುವೆಯು ಕಟ್ಟುಂಟೆ ರಾಮು–; ಪ್ರೇಮವೆಂದರೆ ಮದುವೆಯಲ್ಲೆ ಮುಗಿಯಬೇಕೆ ? ಮಕ್ಕಳುಮರಿಗಳಾಗುವುದರಲ್ಲಿಯೇ ಕೊನೆಗಾಣಬೇಕೆ ?"

"ಅಲ್ಲ ಶಾರದ ಹಿರಿಯರ ಹೇಳಿಕೆಯಂತೆ ಜೀವನವೆಂಬುದು ಒಂದು ರಥ. ಅದನ್ನೆಳೆಯಲು ಉಚಿತಶಕ್ತಿಯ ಎರಡು ಕುದುರೆಗಳು ಬೇಕು. ನೀನೊಂದುಕಡೆ–, ನಾನೊಂದುಕಡೆಯಾದರೆ ನಮ್ಮ ಜೀವನರಥವೆಂತು ನಡೆಯಬೇಕು ? ಚಿರಕಾಲದಿಂದ ನಾವು ಒಬ್ಬರನ್ನೊಬ್ಬರು ಬಲ್ಲೆವು– ಒಟ್ಟಿಗೆ ಬೆಳೆದಿದ್ದೇವೆ. ಭಿನ್ನಭೇದವಿಲ್ಲದೆ ಆಡಿಪಾಡಿ ನಲಿದಿದ್ದೇವೆ ಮುಂದೆಯೂ ಇದೇ ನಡೆಯದೇಕೆ ?"

---

* ಕಥಾವಸ್ತುವನ್ನು ಕೊಟ್ಟು, ಬರೆದ ಮೇಲೂ ಅಲ್ಲಲ್ಲಿ ತಿದ್ದಿಕೊಟ್ಟ "ಕಥಾಂಜಲಿ"ಯ ಸಂಪಾದಕರೂ, ನನ್ನ ಪ್ರಿಯ ಮಿತ್ರರೂ ಆದ ಶ್ರೀ. ಅ. ನ. ಕೃಷ್ಣರಾಯರಿಗೆ ತುಂಬಾ ಕೃತಜ್ಞನಾಗಿದ್ದೇನೆ. —ಲೇಖಕ.

" ಸಮಾಜದ ಕಟ್ಟಿದೆಯಲ್ಲ ರಾಮು—; ಅದಕ್ಕಾರು ಹೊಣೆ! ಸಮಾಜವೇ—! ಅಂಧಸಮಾಜವೇ—! ಜೀವನಗಳನ್ನು ಕೊಲೆ ಮಾಡುವ ಸಮಾಜವೇ! ಹೃದಯಸಾಮ್ರಾಜ್ಯದಲ್ಲಿ ಯಾವ ಸಮಾಜದ ತೊಡಕು ತಾನೆ ನಿಂತೀತು ? "

" ರಾಮು, ನೀನು ಅಸ್ವಸ್ಥನಾಗಿದ್ದೀಯೆ. ಮನೆಗೆ ಹೊರಡು. ನಾನು ಬೆಳಿಗ್ಗೆ ನೋಡುತ್ತೇನೆ. ಜ್ಞಾಪಕವಿರಲಿ ರಾಮು—ಬಡ ಗೆಳತಿ ಒಬ್ಬಳಿದ್ದಳೆಂಬುದು......"

ಎಂದುದು ಶಾರದೆಯು ಎದ್ದಳು. ರಾಮುವು ಚಕಿತನಾದನು. ಅವಳ ಕೈಹಿಡಿದನು—; ಅದನ್ನೇ ದಿಟ್ಟಿಸಿ ನೋಡಿ—ಅಪ್ಪಿ—ಮನದಣಿಯೆ ಚುಂಬಿಸಿ " ಈ ಕೈಯನ್ನೇ ಶಾಶ್ವತವಾಗಿ ಹಿಡಿಯುವ ಭಾಗ್ಯಬರಲಿ ನನಗೆ ಶಾರದಾ" ಎಂದುದನು. ಶಾರದೆಯು ಕೈಬಿಡಿಸಿಕೊಂಡು ಓಡಿದಳು. ಆಗ ಕಂಬನಿಯೊಂದು ಅವಳ ಮೂಗಿನ ನತ್ತಾಗಿತ್ತು.

೨.

ರಾಮು ಈ ಸಲ B. A. ತರಗತಿಯಲ್ಲಿ ತೇರ್ಗಡೆ ಹೊಂದಿ ಬೊಂಬಾಯಿಗೆ 'ಲಾ' ( Law ) ಪರೀಕ್ಷೆಗೆ ಹೋಗಬೇಕೆಂದು ಹವಣಿಸುತ್ತಿದ್ದನು. ಇವನ ತಂದೆ ನಾರಾಯಣರಾಯರು ಭಾರಿ ಜಮೀನುದಾರರು. ರಾಮುವಿನ ತಾಯಿಯವರಾದರೂ ಪೂರ್ವ ವಯಸ್ಸಿನಲ್ಲಿಯೇ ಎಲ್ಲ ಮಕ್ಕಳನ್ನೂ ಕಳೆದುಕೊಂಡು ಬಹಳ ದುಃಖಕ್ಕೀಡಾಗಿದ್ದಳು. ಅವರ ಅದೃಷ್ಟವಶಾತ್ ರಾಮುವೊಬ್ಬನು ಉಳಿದುಕೊಂಡನು. ಇನ್ನು ಪ್ರೇಮ ವಿಶ್ವಾಸದ ವಿಷಯ ಕೇಳಬೇಕೆ ! ಅವನೇ ಅವರಿಗೆ ಸರ್ವಸ್ವವೂ ಆಗಿದ್ದನು. ರಾಮುವಿನ ಮಾತುಕಥೆಗಳೆಂದರೆ ಅವರಿಗೆ ಹಬ್ಬದೂಟವಿದ್ದಂತೆ. ರಾಮುವನ್ನು ಬಿಟ್ಟು ಒಂದು ದಿನವೂ ಇದ್ದವರಲ್ಲ. ಬೊಂಬಾಯಿಗೆ ಹೋಗಿ ' ಲಾ ' ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಭಾರೀ ವಕೀಲನಾಗಬೇಕೆಂಬ ಆಕಾಂಕ್ಷೆಯು ಮೊದಲಿನಿಂದಲೂ ರಾಮುವಿನ ಮನಸ್ಸಿನಲ್ಲಿ ನಾಟಿತ್ತು. ಈಗ ಅದಕ್ಕೆ ತಕ್ಕ ಸಮಯವಾಯಿತು. ತಂದೆ ತಾಯಿಗಳಿಗೂ ತಮ್ಮ ಮಗನು ದೊಡ್ಡ ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ದೊಡ್ಡ ಹುದ್ದೇದಾರನಾಗಿ ತಮಗೂ, ತಮ್ಮ ವಂಶಕ್ಕೂ ದೊಡ್ಡ ಹೆಸರನ್ನು ತರಬೇಕೆಂದು ಬಲವಾದ ಆಶೆ. ಆದರೆ ಅವನೊಬ್ಬನನ್ನೇ ದೂರ ದೇಶಕ್ಕೆ ಕಳುಹಿಸಲು ಇಷ್ಟವಿಲ್ಲ. ಪುನಃ ' ಅವನು ಅಲ್ಲಿಗೆ ಹೋಗಿ ಓದಿ ಬರದಿದ್ದರೆ ದೊಡ್ಡ ಹುದ್ದೇದಾರನಾಗುವ ಬಗೆ ಹೇಗೆ ? ' ಎಂದು ತಮ್ಮಲ್ಲಿಯೇ ಸಮಾಧಾನವನ್ನು ಹೊಂದಿ ಒಪ್ಪಿಗೆಯನ್ನಿತ್ತರು.

ಬಹಳ ವರ್ಷಗಳಿಂದಲೂ ಶಾರದೆಯ ತಂದೆ ವಿಶ್ವನಾಥರಾಯರಿಗೂ, ನಾರಾಯಣರಾಯರಿಗೂ ಸ್ನೇಹ. ಅವರಿಬ್ಬರು ಒಂದೇ ಮನೆಯವರಂತೆಯೇ ಇದ್ದರು. ಯಾರ ಮನೆಯಲ್ಲಿ ಏನು ವಿಶೇಷಗಳು ಸಂಭವಿಸಿದರೂ ಮತ್ತೊಬ್ಬರು ಬಂದು ಓಡಾಡದಿದ್ದರೆ ಆಗುವಹಾಗೇ ಇಲ್ಲ.

ರಾಮೂ ಶಾರದೆಯ ಪ್ರೀತಿಯಂತೂ ಹುಟ್ಟು ಪ್ರೀತಿಯೆಂದೇ ಹೇಳಬೇಕು. ಒಂದು ದಿನವೂ ಒಬ್ಬರನ್ನೊಬ್ಬರು ಬಿಟ್ಟು ಇರಲಾರರು. ಶಾರದೆಗಾದರೊ ಆಗಲೇ ೧೫ ವರ್ಷ ತುಂಬುತ್ತ ಬಂದಿತ್ತು.

ವಿಶ್ವನಾಥರಾಯರಿಗೂ ಶಾರದೆಯನ್ನು ಬಿಟ್ಟರೆ ಬೇರೆ ಮಕ್ಕಳಿಲ್ಲ. ಅವಳೇ ಗಂಡುಮಗು ಅವಳೇ ಹೆಣ್ಣುಮಗು ಎಂದು ಭಾವಿಸಿಕೊಂಡು ಉಚಿತ ವಿದ್ಯಾಭ್ಯಾಸವನ್ನು ಕೊಡಿಸುವುದಕ್ಕೆ ಹಿಂದೆಗೆದಿರಲಿಲ್ಲ. ವೀಣೆಯನ್ನು ಬಾರಿಸುವುದರಲ್ಲಿ ಶೇಷಣ್ಣನವರಂತಾಗಬೇಕೆಂಬುದು ಶಾರದೆಯ ಮಹದಾಕಾಂಕ್ಷೆಯಾಗಿತ್ತು. ಅವಳು ಇನ್ನೂ ಚಿಕ್ಕವಳಿರುವಾಗ, ಮನೆಗೆ ಯಾರಾದರೂ ಬಂದರೆ ತನ್ನ ಬಲಗಾಲನ್ನೇ ವೀಣೆಯನ್ನಾಗಿ ಮಾಡಿಕೊಂಡು ಕಿವಿಯನ್ನು ಶೃತಿಯನ್ನಾಗಿ ಮಾರ್ಪಡಿಸಿ ಮಧುರವಾಗಿ ಹಾಡಿಬಿಡುವಳು. ಇವಳ ಈ ಆಸೆಯನ್ನು ಕಂಡು ವಿಶ್ವನಾಥರಾಯರು ಉತ್ತಮ ಶಿಕ್ಷಕನನ್ನು ಗೊತ್ತುಮಾಡಿದರು. ಮೊದಲೇ ಪ್ರತಿಭಾಂಕುರಳು, ಜೊತೆಗೆ ಉತ್ತಮ ಶಿಕ್ಷಣ ಬೇರೆ, ಹೀಗಾಗಿ ೧೨-೧೩ ತುಂಬುವುದರೊಳಗೇ ವರ್ಣಗಳನ್ನು ಬಾರಿಸುವಷ್ಟು ಪಟುವಾದಳು. ವಿಶ್ವನಾಥರಾಯರು ಎಷ್ಟು ಉದಾರಹೃದಯರಾದರೂ ಶಾರದೆಗೆ ಇಂಗ್ಲೀಷು ಕಲಿಸಬೇಕೆಂದು ಇಲ್ಲ. ಹೆಣ್ಣುಮಕ್ಕಳು ಇಂಗ್ಲಿಷನ್ನು ಕಲಿತರೆ ಕೆಟ್ಟುಹೋಗುತ್ತಾರೆಂಬುದೇ ಅವರ ಭಾವನೆ. ಆದರೂ ಶಾರದೆಯು ಶಾಲೆ ಕನ್ನಡ ಉಪಾಧ್ಯಾಯನ ಪ್ರಾಣ ಹಿಂಡಿ ತಕ್ಕಷ್ಟು ಇಂಗ್ಲೀಷನ್ನು ಕಲಿತೇ ಇದ್ದಳು. ದೊಡ್ಡ ದೊಡ್ಡ ಗ್ರಂಥಗಳನ್ನು ಓದಿ ತಿಳಿಯುವುದಕ್ಕೆ ಬಾರದಿದ್ದರೂ, ಹತ್ತಾರು ತಪ್ಪುಗಳನ್ನು ಮಾಡಿ ಕಾಗದವನ್ನು ಬರೆಯುವಷ್ಟು ಮಾತ್ರ ಬರುತ್ತಿತ್ತು. ಶಾರದೆಯ ಅಕ್ಷರವೆಂದರೆ ಮುತ್ತುಪೋಣಿಸಿದಂತೆಯೇ ಸರಿ. ಆದ್ದರಿಂದ ಅವಳು ತಪ್ಪುಮಾಡಿ ಚಿತ್ತಾರಮಾಡಿದರೂ ಅವಳ ಕಾಗದ ಬಗೆಯಲ್ಲಿ ಚೆನ್ನಾಗಿಯೇ ಇರುತ್ತಿದ್ದಿತು.

೩.

ಹಿರಿಯರೆನ್ನುವಂತೆ ಶಾರದೆಗೂ, ರಾಮುವಿಗೂ ಬಾಲ್ಯದಿಂದಲೂ ಒಂದು ಬಗೆಯ ಋಣಾನುಬಂಧವೇ ಇದ್ದಿತು. ತಾನು ಯಾವ ಕೆಲಸಮಾಡಬೇಕಾದರೂ ರಾಮುವಿನ ಅಪ್ಪಣೆ ಬೇಕೆನ್ನುತ್ತಿದ್ದಳು. ರಾಮುವು ಪಕ್ಕದಲ್ಲಿದ್ದಹೊರತು ತಿಂಡಿ ತಿನ್ನಲೊಪ್ಪಳು. ಯಾರಾದರೂ ಪರಿಹಾಸ್ಯಮಾಡಿ "ಅವನೇನು ನಿನ್ನ ಗಂಡನೇನೆ– ಇಷ್ಟೊಂದು ಮುದ್ದುಮಾಡುತ್ತಿ" ಎಂದರೆ "ಹೌದಮ್ಮ, ಯಾಕಾಗಬಾರದು ನನಗಾ ಅದೃಷ್ಟವಿದ್ದರೆ." ಎನ್ನುತ್ತಿದ್ದಳು. ಬಾಲ್ಯದಲ್ಲಿ ಮಾತ್ರವಲ್ಲದೆ ಬೆಳೆದು ದೊಡ್ಡವರಾದ ಮೇಲೆಯೂ ಅದೇ ರೀತಿಯ ವಿಶ್ವಾಸವೇ ಇದ್ದಿತು. ರಾಮುವು ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದುದನ್ನು ಕೇಳಿ ಹಿರಿ ಹಿರಿ ಹಿಗ್ಗಿದಳು. ವರ್ಷದಿಂದ ಸುಂದರ ಹೂವುಗಳನ್ನು ಹೆಣೆದಿದ್ದ ತನ್ನ ಚೌಕಕ್ಕೆ ಈಗ ಸದುಪಯೋಗ ದೊರೆಯಿತೆಂದು ಭಾವಿಸಿದಳು. ಮಾರನೆಯ ದಿನ ತನ್ನ ತೇರ್ಗಡೆಯ ವಿಚಾರ ಕೇಳಬಂದ ರಾಮುವಿಗೆ ಅದನ್ನು ಹೊದಿಸಿ "ನನ್ನ ರಾಮುವಿಗೆ ಇದು ಪ್ರೇಮದ ಕಾಣಿಕೆ" ಎಂದು ಬರೆದು ಕೈಗಿತ್ತಳು.

ರಾಮುವೂ ಅದೇ ಭಾವವನ್ನೇ ಇಟ್ಟುಕೊಂಡಿದ್ದನು. ಅವನ ಪ್ರಪಂಚದಲ್ಲಿದ್ದವರು ಮೂರೇ ಮಂದಿ– ತನ್ನ ತಂದೆ– ತನ್ನ ತಾಯಿ– ತನ್ನ ಶಾರದ. "ಮದುವೆಯಾಗು–ಮದುವೆಯಾಗು–ವಯಸ್ಸು ೨೦ ಆಗಿಹೋಯಿತು." ಎಂದು ತಾಯಿಯು ಅಂದರೆ "ಸರಿಯಮ್ಮ– ಆದರೆ ಶಾರದೆಯಂತಹ ಹೆಣ್ಣನ್ನು ಗೊತ್ತುಮಾಡು– ಈ ಕ್ಷಣ ಮದುವೆಯಾಗಲು ಸಿದ್ಧನಿದ್ದೇನೆ" ಎಂದು ಹೇಳುವನು.

ತಂದೆ, ತಾಯಿ, ಶಾರದ ಎಲ್ಲರನ್ನೂ ಬಿಟ್ಟು ದೂರ ದೇಶಕ್ಕೆ ತೆರಳುವೆನಲ್ಲಾ ಎಂದು ರಾಮುವಿಗೆ ರಾತ್ರಿಯೆಲ್ಲಾ ಚಿಂತೆ. ರಾಮುವು ಹೊರಟು ಹೋಗುವನಲ್ಲಾ ಎಂದು ಶಾರದೆಗೆ ಚಿಂತೆ. ಹೀಗಾಗಿ ಅಂದು ಒಬ್ಬರೂ ನಿದ್ರಿಸಲಿಲ್ಲ. ಶಾರದೆಗೇನೇನೋ ಕನಸುಗಳು. "ಆಹಾ! ಕನಸು ನಿಜವಾದರೆ ಎಷ್ಟು ಚೆನ್ನಾಗಿರುತ್ತದೆ" ಎಂದಂದುಕೊಳ್ಳುವಳು. ಮರ ಕ್ಷಣವೇ "ನನಗೆಲ್ಲಿ ಆ ಭಾಗ್ಯ" ಎಂದು ಸುಮ್ಮನಾಗುವಳು. "ನನ್ನ ಬಿಟ್ಟು ಬೇರೆಯೊಬ್ಬಳನ್ನು ಮದುವೆಯಾದರೆ ಅವಳು ರಾಮುವಿನಂತಹ ಗುಣವಂತನಿಗೆ ತಕ್ಕರೀತಿಯಲ್ಲಿರುವಳೇ ? ಅವನ ಸುಖವನ್ನೇ ಸದಾ ಬಯಸುವಳೇ ?" ಎಂದು ಚಿಂತಿಸುವಳು. ರಾಮುವು ಸುಖವಾಗಿರಬೇಕೆಂಬುದೊಂದೇ ಅವಳ ಹೃದಯದಾಸೆ. ಬೆಳೆಯುವಾಗ ಒಟ್ಟಿಗಿದ್ದವರು. ಈಗ ಅಗಲುತ್ತೇವಲ್ಲ ಎಂದೊಮ್ಮೆ ನಿಟ್ಟುಸಿರು ಬಿಡುವಳು. ಮರುಕ್ಷಣವೇ "ರಾಮುವೇನು ನನ್ನ ಬಳಿಯಲ್ಲಿಯೇ ಇರಬೇಕೆ ?– ಎಲ್ಲರಿಗಿಂತಲೂ ದೊಡ್ಡತನದಿಂದ ಅವನು ಬಾಳಬೇಡವೆ ? ನನ್ನ ರಾಮು ಎಲ್ಲರ ಮುಂದಾಳಾಗಬೇಡವೆ ?" ಎಂದು ಸಮಾಧಾನಹೊಂದಿ ತನ್ನ ಸ್ವಾರ್ಥತೆಯನ್ನೇ ಜರಿದುಕೊಳ್ಳುವಳು.

೪.

ಬೆಳಗಾಯಿತು. ದುಃಖದ ಮಬ್ಬೆಲ್ಲವೂ ಹರಿಯಿತು. ರಾಮುವು ಪ್ರಯಾಣಸನ್ನದ್ಧನಾಗಿದ್ದುದರಿಂದ, ನಾರಾಯಣರಾಯರೂ, ವಿಶ್ವನಾಥರಾಯರಿಬ್ಬರಮನೆಯಲ್ಲೂ ಸಡಗರ. ದೂರಪ್ರಯಾಣ. ದಾರಿಯಲ್ಲಿ ಶ್ರಮ ಹೆಚ್ಚು. ಎಂದು ಬುಟ್ಟಿ ಬುಟ್ಟಿ ತಿಂಡಿಗಳಿಗಾರಂಭವಾಯಿತು.

ಪ್ರಯಾಣದ ಹೊತ್ತು ಸಮೀಪಿಸಿಯೇ ಬಂತು. ರಾಮುವು ತನ್ನ ವಸ್ತ್ರಭೂಷಣಗಳೆಲ್ಲವನ್ನೂ ಟ್ರಂಕಿನಲ್ಲಿ ಅಡಗಿಸಿ, ಹಾಸಿಗೆಯ ಮೂಟೆಯನ್ನು ಆದಷ್ಟು ಚಿಕ್ಕದು ಮಾಡಿ ಹೊರಡಲು ಸಿದ್ಧನಾದನು. ತಂದೆತಾಯಿಗಳಿಗೆ ನಮಸ್ಕರಿಸುವಾಗಂತಲೂ ಅವನ ಹೃದಯವು ಕಳಚಿಬೀಳುವುದೇನೋ ಎಂಬಂತಿತ್ತು. ಗಾಡಿಯಲ್ಲಿ ಕುಳಿತು ಎಲ್ಲರನ್ನೂ ದೈನ್ಯದಿಂದ ಈಕ್ಷಿಸಿ "ಹೋಗಿ ಬರುತ್ತೇನೆ" ಎಂದಂದ. ದುಃಖದಿಂದ ತಪ್ತರಾಗಿದ್ದ ತಾಯಿತಂದೆಗಳು "ಚೆನ್ನಾಗಿರಪ್ಪಾ" ಎಂದು ಬಿಗಿದುಬರುತ್ತಿದ್ದ ಕಂಠದ ಮಧ್ಯೆ ಉಸುರಿದುದು ಅವನಿಗೆ ಕೇಳಿಯೇ ಕೇಳಿಸಿತು. ಸುತ್ತಲೂ ತಿರುಗಿ ಸೆರಗಿನ ತುದಿಯಿಂದ ಕಂಗಳನ್ನು ಮುಚ್ಚಿಕೊಂಡಿದ್ದ ಶಾರದೆಯನ್ನು ಕಂಡು ಕೂಡಲೇ ಗಾಡಿಯಿಂದಿಳಿದು ಅವಳ ಬಳಿಗೆ ಬಂದು "ಅಳಬೇಡ ಶಾರದಾ– ಹೋಗಿಬರುವೆ" ಎಂದು ಬಹು ಕಷ್ಟದಿಂದ ಹೇಳುತ್ತ "ನಾನು ಬರುವ ಹೊತ್ತಿಗೆ ನೀನು ಗಂಡನ ಮನೆ............" ಮುಂದೆ ಮಾತು ಹೊರಡದಾಯಿತು.– ಕರವಸ್ತ್ರದಿಂದ ಕಂಗಳನ್ನು ಮುಚ್ಚಿಕೊಂಡು ಗಾಡಿಯಲ್ಲಿ ಹೋಗಿ ಕುಳಿತ. ಗಾಡಿಗೇನು ಮರುಕವೆ! ಸೀತೆಯ ದುಃಖವನ್ನು ಕಂಡ ಶುಕಪಿಕಾದಿಗಳು ಮರುಗಿದಂತೆ ಮರುಗುವ ಆತ್ಮವೆ! ತನ್ನ ಗಡಗಡ ಶಬ್ದಮಾಡುತ್ತ ಮುಂದೆ ಹೊರಟೇ ಹೊರಟಿತು.

೫.

ಶಾರದೆಯು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಳು. ಇದು ತಂದೆತಾಯಿಗಳ ಆನಂದವನ್ನು ದ್ವಿಗುಣಪಡಿಸಿತು. ಆಗಲೇ ಶಾರದೆಗೆ ೧೫ ವರ್ಷ ತುಂಬುತ್ತ ಬಂದಿತ್ತು. ಬೆಳದ ಹೆಣ್ಣನ್ನು ಮನೆಯಲ್ಲಿ ಮದುವೆಯಿಲ್ಲದೆ ಇಟ್ಟುಕೊಂಡಿರಲು [illegible] ಜನಗಳೇನಂದಾರು! ವಿಶ್ವನಾಥರಾಯರು ಮಗಳಿಗೆ ತಕ್ಕ ಗಂಡನನ್ನು ಹುಡುಕಲು ಮೊದಲಿಟ್ಟರು.

ಹುಡುಗಿಯು ದೊಡ್ಡವಳಾಗಿದ್ದಾಳೆಂದು ಜನರು ಆಡಿಕೊಳ್ಳಲಾರಂಭಿಸಿದರು. ಅವರ ಮೃದು ಮನಸ್ಸು ಇದರಿಂದ ತಲ್ಲಣಿಸಿ, ವರ ಸಿಕ್ಕಿದರೆ ಸಾಕು ಎಂದು ಉಸಿರಿಡುತ್ತಿದ್ದರು. ವರಗಳ ಸಂತೆಯಲ್ಲಿ ರಾಯರ ಓಡಾಟವು ಹೆಚ್ಚಾದಂತೆ ಅಭಾವವೂ ಹೆಚ್ಚಾಗುತ್ತಿದ್ದಿತು. ವರದಕ್ಷಿಣೆಯನ್ನು ಕೇಳುತ್ತಿದ್ದವರೇ ಹೆಚ್ಚು. ಹೀಗಾಗಿ ಹುಡುಗಿಯ ವಿಚಾರ ಜನಗಳಲ್ಲಿ ಎಲ್ಲಿ ಕೆಟ್ಟ ಅಭಿಪ್ರಾಯಗಳು ಬೆಳೆಯುವುವೋ ಎಂಬ ಭಯದ ತಾಂಡವನೃತ್ಯಕ್ಕಾರಂಭವಾಗಿ ರಾಯರು ಶಾರದೆಯನ್ನು ಪೂರ್ವ ವಯಸ್ಕರಾದ ರಾಮಪುರದ ಜೋಡಿದಾರ್ ಶಾಮಣ್ಣನವರಿಗೆ ಕೊಟ್ಟು ಲಗ್ನಮಾಡಿ ಬಿಡಲು ಒಪ್ಪಿಬಿಟ್ಟರು. ಪತಿಭಕ್ತಿಪರಾಯಣೆಯಾದ ಪಾರ್ವತಮ್ಮನವರು ವಿಧಿಯಿಲ್ಲದೆ ತಮ್ಮ ಒಪ್ಪಿಗೆಯನ್ನೂ ಕೊಟ್ಟರು. ತನಗೆ ಗಂಡು ಗೊತ್ತಾದುದು ಶಾರದೆಗೆ ಗೊತ್ತಿದ್ದರೂ ಯಾರೆಂಬುದರ ಅರಿವಿರಲಿಲ್ಲ. ಪಾರ್ವತಮ್ಮನವರು ಪೂರ್ವಾಚಾರಕ್ಕನುಗುಣವಾಗಿ ಶಾರದೆಯನ್ನು ವಧುಪೀಠಕ್ಕೆ ಸಜ್ಜುಗೊಳಿಸಲಾರಂಭಿಸಿದರು—ಉರುಟಣೆ ಹಾಡುಗಳು—ಬೀಗರ ಹಾಡುಗಳು-ಆರತಿ ಹಸೆಗೆ ಕರೆದದ್ದು—ಮುಖತೊಳೆದದ್ದು ತಲೆ ಬಾಚಿಕೊಂಡಿದ್ದು—ಕುಂಕುಮ ಇಟ್ಟುಕೊಂಡದ್ದು ಹಲ್ಲುಜ್ಜಿಕೊಂಡಿದ್ದು—ಇವುಗಳ ಹಾಡುಗಳಿಗೆ ಆರಂಭವಾಯಿತು. “ಉರುಟಾಣೆಗೆ ಕರೇವೆ ನಾ ಉರಗಾಧಿಪಶಯನ—ಸುರಟೀರಾಗದಿ ನಿನ್ನ ಸುಂದರಾನಯನಾ” ಎಂಬ ಹಾಡು ಕಲಿಯುವಾಗ ಶಾರದೆಯು ಹೊಟ್ಟೆ ಬಿರಿಯುವಷ್ಟು ನಗುತ್ತಿದ್ದಳು. ಸಂಗೀತದ ಜ್ಞಾನವಿದ್ದವಳಿಗೆ ಅಪಸ್ವರ ರಾಗವನ್ನು “ಸುರಟೀರಾಗ” ಎಂದು ಕರೆಯುತ್ತಿದ್ದುದರ ವೈಚಿತ್ರ್ಯವು ಅರ್ಥವಾಗುತ್ತಿರಲಿಲ್ಲ. ಬರುವ ಗಂಡನು ಕುರೂಪಿಯಾಗಿ ಬಹುದು. ಅವನನ್ನು “ಸುಂದರಾನಯನಾ” ಎಂದನ್ನಬೇಕಲ್ಲಾ ಎಂದು ಈ ಹಾಡಿನ ಕಿರುಲಾಟವನ್ನು ಕಲಿಯುತ್ತಿದ್ದಳು. ಜೊತೆಗೆ ತನ್ನ ಆಶುಕವಿತ್ವದಿಂದ ಹೊರಬೀಳುತ್ತಿದ್ದ “ಗಂಡನೋ-ಪ್ರಾಣ ಗಂಡನೋ ನಿನ್ನೇಳಮ್ಮಯ್ಯ” ಎಂದು ವೆಂಕಟಾಚಾರ್ಯರ ಅಥವಾ ಪುರಂದರ ದಾಸರ ಅಂಕಿತ ಹಾಕಿ ಹೇಳಿ ತಾಯಿಯನ್ನು ಗೋಳುಗುಟ್ಟಿಸುತ್ತಲೇ ಇದ್ದಳು.

ಅಮ್ಮನು ತಾಯ್ತನದ ಕರ್ತವ್ಯ ಸೌಖ್ಯಗಳನ್ನು ಬೋಧಿಸುವುದಕ್ಕೆ ತೊಡಗಿದ್ದಾಗ ಮಾತ್ರ ಶಾರದೆಯು ತನ್ನ ಸಹಜ ತುಂಟತನವನ್ನು ತೊರೆದು ನೀರವವಾಗುತ್ತಿದ್ದಳು. ಅವಳ ಮನಸ್ಸೆಲ್ಲವೂ ರಾಮುವಿನ ಮೇಲೆ ನೆಟ್ಟದ್ದಿತು. ಗಂಡನೆಂದರೆ ರಾಮುವಿನ ಚಿತ್ರವೇ ಅವಳ ಕಣ್ಣೆದುರಿಗೆ ನಿಲ್ಲುತ್ತಿತ್ತು. ಒಂದೊಂದು ವೇಳೆ ತಾಯಿಯು ಸಾವಿತ್ರಿಯಂತಿರಬೇಕೆಂದು ಉಪಮಾ ಹೇಳಿದಾಗ ತಾನು ಸಾವಿತ್ರಿಯೆಂದೂ ರಾಮುವೇ ಸತ್ಯವಾನನೆಂದೂ ಅನುಭವಿಸುತ್ತಿದ್ದಳು. ಅವಳ ಜೀವನವು ಸುಖಮಯ—ಶಾಂತಿಪೂರ್ಣ!!! ಒಮ್ಮೊಮ್ಮೆ ರಾಮುವು ಇಲ್ಲದಿದ್ದರೆ ತನ್ನ ಭಾವೀ ಜೀವಿತವೇನಾಗುವುದೆಂದು ಯೋಚಿಸುವಳು—ಮುದಿಗಂಡನ ಹುಡುಗಿ ಮಡದಿ-ಮನೆತುಂಬ ಮಕ್ಕಳು—ಕಿತ್ತು ತಿನ್ನುವ ಬಡತನ, ಜೊತೆಗೆ ರೋಗಾದಿ ಉಪಟಳಗಳ ಹಾವಳಿ ಇವುಗಳನ್ನು ಚಿಂತಿಸಿ ರೋಮಾಂಚನೆಯನ್ನು ಪಡೆಯುತ್ತಿದ್ದಳು. ಆ ಮರುಕ್ಷಣವೆ ರಾಮುವಿನ ನೆನಪು ಮಳೆಯಿಂದ ನೆನೆದು ವರುಣನನ್ನು ಸ್ತುತಿಸುತ್ತಿದ್ದ ಜನತತಿಯ ಮೇಲೆ ಚಂದ್ರಮನು ಪ್ರೇಮದಿಂದ ಮುಗುಳ್ನಗೆ ನಕ್ಕಂತಾಗಿ—ತನ್ನ ನಗುವಿನ ಕಿರಣಗಳಿಂದ ಮನೆಯನ್ನು ಬೆಳಗಿಸುವಳು.

೨.

ಮಾರನೆಯ ದಿನ ಸುಮಾರು ೧೦ ಘಂಟೆ ಇರಬಹುದು. ಸತ್ಯನಾರಾಯಣ ಪೂಜೆಯ ಏರ್ಪಾಡು ಆಗಿದೆ. ಅರಸಿನ ಕುಂಕುಮಕ್ಕೆ ಮುತ್ತೈದೆಯರನ್ನು ಶಾರದೆಯು ಕರೆದು ಬಂದು ತನ್ನ ಕೋಣೆಯಲ್ಲಿ ಕುಳಿತು ಯೋಚಿಸುತ್ತಿದ್ದಳು. ಅವಳಿಗೆ ಸಿಂಗಾರಗಳು ಬೇಡವಾದವು. ಹೊರಗೆ ಯಾರೋ ಮಾತನಾಡುತ್ತಿದ್ದಂತೆ ಕಿವಿಗೆ ಬಿತ್ತು. ಆಲೈಸಿ ಕೇಳಿದಳು. ನೀರಿಗಾಗಿ ಬಂದಿದ್ದ ರಥದ ಬೀದಿ ಸುಬ್ಬಮ್ಮನವರು.

“ಏನ್ರಮ್ಮ ಪಾರ್ವತಮ್ಮನವರೇ ಗಂಡು ಗೊತ್ತಾಯಿತಂತೆ ನನಗೇನು ಹೇಳೋದೇ ಬೇಡವೆ? ಮುಖ್ಯ ಗಂಡು ಗೊತ್ತಿಲ್ಲ—ಯಾರು ವರ?”

“ಅದೇ ರಾಮಪುರದ ಜೋಡೀದಾರು ಶಾಮಣ್ಣನವರು”

“ಏನು! ಆ ೫೦ ವರುಷದ ಮುದುಕನಿಗೆ ಕೊಟ್ರಿ”

“ಎಲ್ಲಿ ಬಂತಮ್ಮ, ಇನ್ನೂ ಆತನಿಗೆ ಈಗ ೩೦-೩೫ ಇರಬಹುದು. ಆತನಿಗೇನಮ್ಮ, ದೇವರಿದ್ದಾಗಿದ್ದಾನೆ. ನೀವು ಆತನ್ನ ನೋಡಿದ್ದರೆ ಏನು ಹೇಳುತ್ತಿದ್ದಿರೋ”

“ನಾನೆಲ್ಲಾ ನೋಡಿದ್ದೀನಿ ಸುಮ್ಮನೆ ಇರಿ—ಮೊದಲನೆಯ ಮದುವೆ-೨ ಮಕ್ಕಳಿದ್ದಾರೆ. ಆತನ್ನ ನೋಡಿದರೆ ವಯಸ್ಸು ಗೊತ್ತಾಗುತ್ತೆ ಹೋಗಲಿ—ಎಂದು ಲಗ್ನ—ನಮಗೆ ಲಾಡು ಚಿರೋಟಿ ಬಿದ್ದಿಲ್ಲಾ ಒಂದು.”

“ಚೈತ್ರಶುದ್ಧ ಚೌತಿ ಲಗ್ನ ಚೆನ್ನಾಗಿದೆಯಂತೆ ಕಾನನಹಳ್ಳಿ ನರಶಿಂಹ ಜೋಯಿಸರೇ ಆ ಲಗ್ನ ಕಟ್ಟಿಕೊಟ್ಟಿದ್ದಾರೆ. ಅದನ್ನು ಬಿಟ್ರೆ ನಮ್ಮ ಹುಡುಗಿಯ ನಕ್ಷತ್ರಕ್ಕೆ ಬೇರೆ ಲಗ್ನವೇ ಇಲ್ಲವಂತೆ.”

"ಬಳ್ಳೇದಮ್ಮ ಹೋಗಿಬರುತ್ತೇನೆ, ಸಂತೋಷ." ಇದು ಒಳಗೆ ಕುಳಿತಿದ್ದ ಶಾರದೆಗೆ ಕೇಳಿಸಿತು. ಚಕಿತಳಾದಳು. ತನ್ನ ಜೀವನದ ಅಂತಿಮಾವಸ್ಥೆ ಇದು ಎಂದು ತಿಳಿದಳು. ದಿಕ್ಕು ತೋರದಂತಾಯಿತು. ಅಯ್ಯೊ! ಇಂತಹ ಸಮಯದಲ್ಲಿ ರಾಮು ಇಲ್ಲವೆ ಎಂದು ಕಂಬನಿ ಸುರಿಸಲು ಪ್ರಾರಂಭಿಸಿದಳು. ತನ್ನ ಯೋಚನೆಯು ಕೊನೆಮುಟ್ಟುವಂತೆ ತನಗೆ ಕಾಣಲಿಲ್ಲ. "ಈಗಲೇ ಬೊಂಬಾಯಿಗೆ ಓಡಿಹೋಗಿ ರಾಮುವನ್ನು–ನನ್ನ ರಾಮುವನ್ನು ಸೇರಿ ಬಿಡಲೆ?" ಎಂದುಕೊಳ್ಳುವಳು. ಪುನಃ ಸ್ವಲ್ಪ ಹೊತ್ತು ಯೋಚಿಸಿ ಕೊನೆಗೆ ರಾಮುವಿಗೆ ಎಲ್ಲ ವಿಷಯಗಳನ್ನೂ ತಿಳಿಸಿ ಒಂದು ಕಾಗದ ಬರೆಯಲು ನಿಶ್ಚಯಿಸಿದಳು.

೭.

ರಾಮು ಬೊಂಬಾಯಿ ಸೇರಿ ೬ ತಿಂಗಳಾಗಿತ್ತು. ಬೊಂಬಾಯಿನ ಹವೆ ಅವನಿಗೆ ಚನ್ನಾಗಿ ಒಂಟರಲಿಲ್ಲ. ತಂದೆತಾಯಿಗಳಿಗೆ ಬರೆದರೆ ಎಲ್ಲಿ ಗಾಬರಿಪಡುವರೊ ಎಂದು ಬರೆಯದೆ ಸುಮ್ಮನೇ ಇದ್ದು ಬಿಟ್ಟನು. ದೈವವಶಾತ್ ಇವನ ಸಹಾಯಕ್ಕೆ ಮೈಸೂರಿನ ಸ್ನೇಹಿತ ಮಾಧು ಒಡಹುಟ್ಟಿದವರಿಗಿಂತಲೂ ಹೆಚ್ಚಾಗಿ ಯಾವಾಗಲೂ ಇವನ ಜೊತೆಯಲ್ಲಿಯೇ ಇರುತ್ತಿದ್ದನು. ರಾಮುವಿಗೆ ಯಾವಾಗಲೂ ಶಾರದೆಯ ಯೋಚನೆಯೇ ಆಗಿತ್ತು. ಅವನ ಕನಸು ಮನಸಿನಲ್ಲಿ ಅವಳು ಮನೆಮಾಡಿ ಕುಳಿತಿದ್ದಳು.

× × × ×

ಒಂದು ದಿನ ಮಧ್ಯಾಹ್ನ ಸುಮಾರು ೩ ಘಂಟೆ ಇರಬಹುದು. ರಾಮುವಿಗೆ ವಿಪರೀತ ಜ್ವರ–ತಾಪ–ಪಕ್ಕದಲ್ಲಿಯೇ ಮಾಧು ಕುಳಿತಿದ್ದಾನೆ. ರಾಮು ತನ್ನ ಮನಸ್ಸಿಗೆ ಬಂದಂತೆ ಮಾತನಾಡುತ್ತ "ಮಾಧು-ಮಾಧು" ಅಂದನು.

"ಏನು ರಾಮು" ?

"ಅಲ್ಲಿ ನೋಡು ಕೆಳಗೆ ಅವಳು ನಿಂತಿದ್ದಾಳೆ–ಒಬ್ಬಳೇ ನಿಂತಿದ್ದಾಳೆ ಹೋಗಿ ಕರೆದುಕೊಂಡುಬಾ, ಹೋಗು–ತಡಮಾಡಬೇಡ ಹೋಗು."

"ರಾಮು. ಇದೇನು ಹೀಗೆ ಮಾತನಾಡುವೆ? ಯಾರೂ ಇಲ್ಲವಲ್ಲಾ."

"ಇದ್ದಾಳೆ ಮಾಧು–ನಿನಗೆ ಕಾಣುವದಿಲ್ಲ–

ಮಾಧು. ನಾನು ನಿನ್ನಲ್ಲಿ ಎಲ್ಲವನ್ನೂ ಹೇಳಿರುವೆ. ಆದರೆ ಆ ಒಂದು ವಿಚಾರಮಾತ್ರ ಹೇಳಿಲ್ಲ."

"ಅದಿರಲಿ ರಾಮು ಈಗ ಬೇಡ. ನಿನಗೆ ಗುಣವಾದಮೇಲೆ ಹೇಳುವಿಯಂತೆ."

"ಗುಣದಮಾತು ಹಾಗಿರಲಿ. ನಾಳೆ ಯಾರೊ ನಾವು ಯಾರೊ ? ಮಾಧು–ಅವಳು–ನನ್ನಶಾರದ–ಅವಳು ನನ್ನ ಜೀವದ ಗೆಳತಿ–ಪ್ರೇಮದ ಪುತ್ಥಳಿ. ಇಬ್ಬರೂ ಒಟ್ಟಿಗೆ ಆಡುತ್ತ ಪಾಡುತ್ತ ನಲಿಯುತ್ತ ಬೆಳೆದೆವು. ಈಗ ಅವಳು ಮದುವೆಯಾಗಿ ನನ್ನನ್ನಗಲುವಳು."

"ಏಕೆ ಅಗಲಬೇಕು ರಾಮು–ನೀನೇ ಅವಳನ್ನು ಮದುವೆಯಾಗಿ ಬಿಡು."

"ಆ ಭಾಗ್ಯ ನನಗೆಲ್ಲಿ ಬಂತು ಮಾಧು–ಅವಳು ಮಾಧ್ವರ ಕುಲಕ್ಕೆ ಸೇರಿದವಳು. ನಾನು ಸ್ಮಾರ್ತ. ಅವಳ ತಂದೆತಾಯಿಗಳೊಪ್ಪುವರೆ ?"

"ರಾಮು ಪ್ರೀತಿಯ ಮುಂದೆ ತಂದೆತಾಯಿಗಳ ಮತ್ತು ಸಮಾಜದ ಕಟ್ಟಳೆಯೆ ?"

ಹೀಗೆ ಹೇಳುತ್ತಿರುವಾಗ ಅಂಚೆಯವನು ಒಂದು ಲಕೋಟೆಯನ್ನು ರಾಮುವಿನ ಕೈಗೆ ಕೊಟ್ಟನು. ಅದರ ಮೇಲ್ವಿಳಾಸವನ್ನು ಕಂಡೊಡನೆಯೇ ಜ್ವರತಾಪದಿಂದ ನರಳುತ್ತಿದ್ದ ರಾಮುವು ಜಿಂಕೆಯಂತೆದ್ದು ಕುಳಿತು ಪತ್ರವನ್ನೋದಿ ನೋಡಿ ಬಾರಿಬಾರಿಗೂ ಮುದ್ದಿಸಿ, ಹೃದಯಕ್ಕಪ್ಪಿಕೊಂಡು "ಶಾರದಾ! ಕಡೆಗೂ ನನ್ನ ಮೇಲೆ ದಯ ಬಂತೆ" ? ಎಂದಂದನು.

ಇದನ್ನು ನೋಡುತ್ತ ಪಕ್ಕದಲ್ಲಿಯೇ ನಿಂತಿದ್ದ ಮಾಧುವು ಬೆಕ್ಕಸ ಬೆರಗಾದನು–ಜ್ವರ ತಪ್ತ ಆ ರಾಮುವೆಲ್ಲಿ ಹರಿಣಿಯಂತೆ ಹಾರಾಡುತ್ತಿರುವ ಈ ರಾಮುವೆಲ್ಲಿ ಎಂದು ಯೋಚಿಸುತ್ತಿರುವಲ್ಲಿ ರಾಮುವು ಮಾಧುವನ್ನು ಕರೆದು ಕಾಗದವನ್ನೋದಲಿತ್ತನು.

ನನ್ನ ರಾಮು,

ನಾನು ನಿನ್ನನ್ನು ಮರೆತೆನೆಂದು ತಿಳಿಯಬೇಡ. ಹೆಚ್ಚಾಗಿ ಬರೆಯಲು ಸಮಯವಲ್ಲ. ನನ್ನ ಮದುವೆ ಗೊತ್ತಾಗಿದೆ. ಯಾರು ಗೊತ್ತೆ ? ರಾಮುಪುರದ ಶಾಮಣ್ಣಜ್ಜಯ್ಯ. ನೀನೀಗ ಬಂದರೆ ನಾನು ನಿನ್ನವಳು. ಇಲ್ಲವಾದರೆ ನನ್ನಗತಿ......

ನಿನ್ನ ಶಾರದ.

"ಇದಕ್ಕೇನು ಮಾಡೋಣ ? ರಾಮು"

"ಮಾಡುವುದೇನು ಮಾಧು. ಕಾಲವಿಳಂಬ ಮಾಡಲು ಅವಕಾಶವಿಲ್ಲ. ರಾತ್ರಿಯ ಮೇಯಿಲಿಗೆ ಮೈಸೂರಿಗೆ ಹೋಗಿ ಅವಳನ್ನು ಕರೆದುಕೊಂಡು ಬಾ, ತೆಗೆದುಕೊ" ಎಂದು ೫೦ ರೂಪಾಯಿಗಳನ್ನು ಕೊಟ್ಟು "ಮಿಕ್ಕದ್ದನ್ನೆಲ್ಲಿಯಾದರೂ ಸರಿಮಾಡು. ಆ ಮೇಲೆ ಕೊಡುತ್ತೇನೆ." ಎಂದಂದನು.

ಮಾಧುವು ಹೊಗುಟ್ಟಲಾರಂಭಿಸಿದನು. ರಾಮುವಿನ ಆ ವಿನಂತಿಯು ಸಿಡಿಲುಘಾತಕ್ಕವನು ಸಿದ್ಧನಾಗಿರಲಿಲ್ಲ. ಆಗ ರಾಮು "ಮಾಧು, ನನ್ನ ಅಣ್ಣ ತಮ್ಮಂದರಿಗಿಂತಲೂ ಹೆಚ್ಚಾಗಿ ಹೆಚ್ಚಿನ ಪ್ರೇಮದಿಂದ ನೀನು ನನ್ನನ್ನು ನೋಡಿಕೊಂಡಿರುವೆ– ಇದೊಂದು ಉಪಕಾರ ಮಾಡಲಾರೆಯಾ ? " ಎಂದನ್ನುತ್ತ ಮಾಧವನ ಕೈಹಿಡಿದು ದೈನ್ಯದಿಂದ ನೋಡಿದನು. ಯೋಚಿಸುತ್ತ ನಿಂತಿದ್ದ ಮಾಧುವು ತಟ್ಟನೆ ತಿರುಗಿ ನೋಡಿದನು. ತನ್ನ ಕೈಮೇಲೆ ರಾಮುವಿನ ಕಂಬನಿಯೊಂದು ಬಿದ್ದಿತ್ತು. ಜೊತೆಗೆ ರಾಮುವಿನ ದೀನವದನ. ಮಾಧುವು ಸಂಶಯಕಲ್ಲೋಲತೆಯನ್ನು ದೂರಮಾಡಿ,

"ಇದಕ್ಕಿಷ್ಟು ಚಿಂತೆಯೆ ! ರಾಮು– ರಾತ್ರಿಗೆ ಹೊರಡುತ್ತೇನೆ. ಆದರೆ ಇಲ್ಲಿ ನಿನ್ನ ಪಾಡು? "

"ನಾನು ಆರೋಗ್ಯವಾಗಿದ್ದೇನೆ. ಯೋಚನೆ ಮಾಡಬೇಡ. ಹೋಗಿ ಬಾ. " ಎಂದಂದನು.

೮.

ಸಮಾರು ೯ ಘಂಟೆಯಿರಬಹುದು. ಶಾರದೆಯು ತನ್ನ ಮನೆಯ ಹಿಂಭಾಗದಲ್ಲಿದ್ದ ಹೂವಿನ ಗಿಡಗಳಿಗೆ ನೀರೆರೆಯುತ್ತಿದ್ದಳು. ಆ ಹೂಗಳ ಮಧ್ಯೆ ಪ್ರಕಾಶಿಸುತ್ತಿದ್ದವಳು ವನಜ್ಯೋತ್ಸ್ನೆಯನ್ನು ಮೀರಿಸುವಂತೆ ಕಾಂತಿಯುಕ್ತಳಾಗಿದ್ದಳು. ಆದರೆ ದುಃಖದಿಂದ ಮುಖವು ಮಾತ್ರ ಬಾಡಿತ್ತು. ಮಧ್ಯೆ ಮಧ್ಯೆ ಹೂಗಳಲ್ಲೊಂದನ್ನು ಕೈಯಲ್ಲಿ ಹಿಡಿದು 'ಅರಳಿ ಬಾಡಿ-ಮಣ್ಣು ಪಾಲಾಗುವೆನೊ-ನಿನ್ನಂತೆ ಯಾರನ್ನಾದರೂ ಸೇರುವೆನೊ' ಎಂದು ತನ್ನಷ್ಟಕ್ಕೆ ತಾನೆ ಮಾತಾಡಿಕೊಳ್ಳುವಳು.

ಹೀಗೆ ವಿರಹ ಪ್ರಪಂಚದಲ್ಲಿ ವಿಹರಿಸುತ್ತಿದ್ದಾಗ "ಶಾರದಾ–ಶಾರದಾ" ಎಂದು ಮೆಲ್ಲನೆ ಯಾರೊ ಕೂಗಿದಂತಾಯಿತು–ಹಿಂತಿರುಗಿ ನೋಡಿದಳು. ಮಲಿನ ವಸ್ತ್ರಗಳನ್ನು ಧರಿಸಿದ್ದ ಮಾಧು. ಅವನನ್ನರಿಯಳು. "ಅವನು ನನ್ನನ್ನು ಹೇಗೆ ಬಲ್ಲ!" ಎಂದು ಸಂಶಯಗೊಂಡಳು. ಅಷ್ಟರಲ್ಲಿ ಮಾಧುವು ಕಿಸೆಯಿಂದೊಂದು ಕಾಗದವನ್ನು ತೆಗೆದು ಅವಳ ಕೈಗೆ ಇತ್ತನು. ಅದನ್ನು ಓದುತ್ತ ಓದುತ್ತ ಶಾರದೆಯ ಮುಖ ಪ್ರಫುಲ್ಲಿತವಾಗುತ್ತಾ ಬಂದಿತು. ಕೊನೆಗೆ ಆನಂದಾತಿಶಯದಲ್ಲಿ ಅದನ್ನಪ್ಪಿ ತನ್ನ ಕಂಬನಿಗಳಿಂದ ನೆನೆಯಿಸಿಬಿಟ್ಟು ಮಾಧುವಿನ ಕಡೆ ತಿರುಗಿ

"ಮಾಧುರಾಯರು ತಾವೇನೆ ! "

"ಹೌದು–ನಾನೇ "

"ನಾನು ರಾತ್ರಿ ರೈಲಿಗೆ ಸಿದ್ಧವಾಗುತ್ತೇನೆ. ಇಲ್ಲಿಗೆ ಬಂದರೆ ಬರುವೆ, "

"ಆಗಲಿ" ಎಂದು ಹೇಳಿ ಮಾಧು ಹೊರಟು ಹೋದನು. ಅವನು ಹೋಗುತ್ತಿದ್ದುದನ್ನು ನೋಡುತ್ತ ಶಾರದೆಯು ತನ್ನನ್ನು ದಮಯಂತಿಗೂ, ರಾಮುವನ್ನು ನಳನಿಗೂ ಮಾಧುವನ್ನು ಹಂಸದೂತನಿಗೂ ಹೋಲಿಸಿ ತನ್ನಷ್ಟಕ್ಕೆ ತಾನೇ ಹಿಗ್ಗುತ್ತಿದ್ದಳು.

× × × ×

ರಾತ್ರಿ ಸುಮಾರು ೮ ಘಂಟೆಯಾಯಿತು. ಮಾಧು ಮೆಲ್ಲನೆ ಬಂದು ಕಿಟಕಿಯಲ್ಲಿ ಕೂಗಿದನು. ಶಾರದೆಯು ಮೊದಲು ಹೊರಡಲು ಗಾಬರಿಪಟ್ಟಳು. ಆದರೆ ಮಾಧವನ್ನು ನೋಡಿದ ಕೂಡಲೇ ಧೈರ್ಯಗೊಂಡು ಹೊರಟೇ ಬಿಟ್ಟಳು. ರೈಲನ್ನು ಹತ್ತಿ ಕೆಲವು ಸ್ಟೇಷನ್‌ಗಳನ್ನು ದಾಟಿದರೂ ತನ್ನ ಗಾಬರಿಯು ತಪ್ಪಲಿಲ್ಲ. ಹಿಂದೆಯೇ ಯಾರಾದರೂ ತನ್ನನ್ನು ಹುಡುಕಿಕೊಂಡು ಬರುತ್ತಿರುವರೊ? ಏನೊ? ಎಂದು ಪ್ರತಿಯೊಂದು ಸ್ಟೇಷನ್ನಿನಲ್ಲಿಯೂ ಬಗ್ಗಿ ನೋಡುವಳು. ತನ್ನ ಭವಿಷ್ಯತ್ ಸುಖವನ್ನು ನೆನೆಯುತ್ತ ನೆನೆಯುತ್ತ ಹಾಗೆಯೇ ನಿದ್ರಾದೇವಿಯ ಮಡಲಲ್ಲಿ ಮಗುವಿನಂತೆ ಮಲಗಿದಳು.

ಬೆಳಗಾಯಿತು. "ಮಾಧೂರಾಯರೆ! ಬೊಂಬಾಯಿ ಬಂತೆ" ಎಂದು ಕೇಳಿದಳು. ಪಾಪ! ಮಾಧು ಏನುತ್ತರವನ್ನು ಕೊಟ್ಟಾನು! "ಇಲ್ಲಮ್ಮಾ– ಹೀಗೆ ಇನ್ನೆರಡು ರಾತ್ರಿಗಳನ್ನು ಕಳೆಯಬೇಕು."

"ಇನ್ನೆರಡು ರಾತ್ರಿಗಳೆ ! ಎಲ್ಲಿ ಕಳೆಯಬೇಕು "

"ಹೀಗೆಯೇ ಇನ್ನೆರಡು ದಿನ ಪ್ರಯಾಣ ಮಾಡಬೇಕು. ಮುಖವನ್ನು ತೊಳೆದುಕೋಮ್ಮಾ. ಮುಂದಿನ ಸ್ಟೇಷನ್ನಿನಲ್ಲಿ ಸ್ವಲ್ಪ ಕಾಫಿಯನ್ನು ತೆಗೆದುಕೊಳ್ಳೋಣ. "

"ಬೇಡ–ಬೊಂಬಾಯಿಗೇ ಹೋಗಿ ಅಲ್ಲೇ ತೆಗೆದುಕೊಳ್ಳೋಣ."

"ಎರಡು ದಿನ ಉಪವಾಸವಿರುವುದಕ್ಕೆ ಆಗುತ್ತದೆಯೆ! ತಾಯಿ ಹೀಗೆ ದೇಹವನ್ನು ದಣಿಸಿದರೆ ರಾಮುವು ಎಷ್ಟು ಕ್ಷಣ ಕ್ಷಮಿಸಿಗೊಳ್ಳುವನು. "

ಮಾಧುವಿನ ಈ ಕಾಟಕ್ಕೆ "ಆಗಲಿ " ಎಂದು ಶಾರದೆ ಒಪ್ಪಿದಳು. ಒಂದೊಂದು ದಿನವೂ ಅವಳಿಗೆ ಸಹಿಸಲಸಾಧ್ಯವಾಯಿತು. ಹಾಗೆಯೇ ಮತ್ತೊಂದು ದಿನವೂ ಕಳೆಯಿತು.

"ನಾಳೆ ಬೆಳಿಗ್ಗೆ ೭ ಘಂಟೆಗೆ ಬೊಂಬಾಯಿನಲ್ಲಿರುತ್ತೇವೆ ಶಾರದಮ್ಮಾ" ಎಂದನು.

"ಆ ನಾಳೆ ಎನ್ನುವುದು ಇವತ್ತೆ ಬರಬಾರದಿತ್ತೆ " ಎಂದು ದುರ್ಗೇಶ ನಂದಿನಿಯನ್ನು ಓದುವುದಕ್ಕೆ ಮೊದಲಿಟ್ಟಳು.

ದೃಷ್ಟಿ ಗ್ರಂಥದಮೇಲೆ, ಆದರೆ ಗಮನ- ಮನಸ್ಸುಗಳು ಬೊಂಬಾಯಿನಲ್ಲಿ ರಾಮುವಿನ ಮೇಲೆ.

೯.

ಬೊಂಬಾಯಿನಲ್ಲಿ ರಾಮುವಿಗೆ ಪೂರ್ತಿಯಾಗಿ ಗುಣವಾಗಿರಲಿಲ್ಲ. ಮಾಧುವು ತಾನು ಹೋಗುವಾಗ ತನ್ನೊಬ್ಬ ಸ್ನೇಹಿತನನ್ನು ತಾನು ಬರುವವರೆಗೆ ರಾಮುವಿಗೆ ಔಷದೋಪಚಾರ ಮಾಡಲು ಬಿಟ್ಟು ಹೋಗಿದ್ದನು. ದಿನವೂ ಅವನು ರಾಮುವಿನಿಚ್ಛೆಯಂತೆ ಎಲ್ಲ ರೈಲುಗಳನ್ನು ನೋಡುತ್ತಿರುವುದೇ ಅವನ ಕೆಲಸವಾಗಿತ್ತು. ಯಾವಾಗ ಈ ಸ್ನೇಹಿತನು ರೂಮಿಗೆ ಹೋದರೂ ಆತನನ್ನು ರೈಲಿಗಟ್ಟುವುದೇ ರಾಮುವಿನ ಕೆಲಸವಾಗಿತ್ತು.

ಈ ದಿನ ರಾಮುವಿಗೆ ವಿಪರೀತ ಜ್ವರತಾಪ. ಹುಚ್ಚು ಹುಚ್ಚಾಗಿ ಮಾತನಾಡುವನು. "ಶಾರದಾ—ಎಲ್ಲಿರುವೆ? ಮಾಧು ನಿನ್ನನ್ನು ಕರೆಯಲು ಬಂದಿದ್ದನೆ? ಬರುವೆಯೊ— ಇಲ್ಲವೊ?" ಎಂದು ಕೂಗಿಕೊಳ್ಳುವನು.

ಒಂದು ನಿಮಿಷವೂ ಆ ಹೊಸ ಸ್ನೇಹಿತನನ್ನು ಹತ್ತಿರ ಕೂಡಿಸನು. ಪ್ರತಿಯೊಂದು ವೇಳೆಯೂ ಶಾರದೆಯನ್ನು ಕರೆತರು ಮತೆ ಹೇಳುವನು. ಔಷಧಿಯನ್ನು ತೆಗೆದುಕೊಳ್ಳನು. ಆ ಸ್ನೇಹಿತನಿಗೆ ರಾತ್ರಿಯೆಲ್ಲಾ ನಿದ್ರೆಯಿಲ್ಲ. ಅಂತು ಆ ರಾತ್ರಿಯನ್ನು ಬಹು ಪ್ರಯಾಸವಾಗಿ ಕಳೆದರು.

ಬೆಳಗಾಯಿತು. ರಾಮೂಗೆ ಬೆಳಗಾದರೂ ಒಂದೆ— ರಾತ್ರಿಯಾದರೂ ಒಂದೆ. ನಿದ್ರೆಯೇ ಇಲ್ಲ. ಎದ್ದವನೇ ಮುಖ ತೊಳೆದುಕೊಳ್ಳುವುದಕ್ಕೆ ಮುಂಚೆ ತನ್ನ ಸ್ನೇಹಿತನನ್ನು ಸ್ಟೇಷನ್ನಿಗೆ ಓಡಿಸಿದನು.

ನಿರೀಕ್ಷೆಯ ಆಯಾಸವು ನಿರಾಸೆಯನ್ನು ಹುಟ್ಟಿಸುತ್ತಿದ್ದಿತು. ಇಲ್ಲಿಗೆಲ್ಲಿ ಬರುತ್ತಾಳೆ— ತಂದೆತಾಯಿಗಳನ್ನು ಬಿಟ್ಟು— ಒಂದು ವೇಳೆ ಬರಲು ಅವಳು ಸಿದ್ಧಳಾದರೂ ಮನೆಯಲ್ಲಿ ಬಿಡುತ್ತಾರೆಯೆ?— ನನಗೆ ಅವಳನ್ನು ಪಡೆಯುವ ಭಾಗ್ಯವುಂಟೆ?" ಎಂದು ಚಿಂತಿಸುತ್ತಾ ಮಲಗಿದನು. ನಿದ್ರೆಯು ಜೋಂಪುಹತ್ತಿತ್ತು. ಹೀಗೆ ಎಷ್ಟು ಹೊತ್ತು ಮಲಗಿದನೊ— ಏಳುವ ಹೊತ್ತಿಗೆ ಎದುರಾಗಿ ಮಾಧು ನಿಂತಿದ್ದನು. ಅವನನ್ನು ನೋಡಿದೊಡನೆಯೆ ಕನಸಿನಲ್ಲಿರುವೆನೇನೊ ಎಂದು ಭ್ರಮೆಗೊಂಡು ಕಣ್ಣುಜ್ಜಿಕೊಂಡು ನೋಡಿದನು. ಮಾಧುವೆ?— ಮಾಧು ನಿಜ.

"ಮಾಧು- ಅವಳು— ಬಂದಳೆ? ಅಂದನು"

"ಬಂದಿದ್ದರೂ ನೀನೆಲ್ಲಿ ನೋಡುವೆ- ರಾಮು?" ಎಂದು ಹಿಂದಿನಿಂದ ಒಂದು ಹಕ್ಕಿ ನುಡಿಯಿತು. ರಾಮು ತಿರುಗಿ ನೋಡಿದನು. ಅವಳೇ ಅವಳು—ಅವನ ನಚ್ಚಿಣ್ಣು— ಯಾರಿಗಾಗಿ ತನ್ನ ಸರ್ವಸ್ವವನ್ನೂ ಧಾರೆಯೆರೆದುಕೊಡಲು ಸಿದ್ಧನಿದ್ದನೊ ಆ ಶಾರದ.

"ಶಾರದಾ ನನ್ನ ಮೇಲೆ ದಯೆಬಂತೆ" ಎಂದು ಕೈನೀಡಿದನು. ಸೂಜಿಗಲ್ಲಿನ ಸೆಳೆತಕ್ಕೆ ಕಬ್ಬಿಣವು ಬರುವಂತೆ ಮೆಲ್ಲನೆ ಅವನ ಬಾಹುಪಾಶಕ್ಕೊಳಗಾದಳು. ಇಬ್ಬರೂ ಅಗಲಿಕೆಯನ್ನರಿಯದ ಪ್ರೇಮ ಸ್ವರ್ಗಕ್ಕೆ ಹಾರಿದರು. ಮಾಧು ಮೆಲ್ಲನೆ "ರಾಮು! ಪ್ರೀತಿಯ ಮುಂದೆ ಕಟ್ಟಳೆಯೆ?" ಎಂದಂದನು. ಆಗ ಅವನಿದ್ದ ಅರಿವುಂಟಾಗಿ ಶಾರದೆಯೆದ್ದು ನಾಚಿಕೆಯಿಂದ ತಲೆಬಾಗಿ ದೂರ ನಿಂತಳು. ಸಮಯ ಸರಿಯಿಲ್ಲವೆಂದು ಮಾಧು ಮೆಲ್ಲನೆ ಒಳಗಿನ ಕೋಣೆಗೆ ಜಾರಿದನು.

× × × ×

ಹೊಸ ಕಾಲದ, ಹೊಸ ರೀತಿಯ ಮುಂದೆ ಹಳೆಯ ಕಟ್ಟು ಕಟ್ಟಳೆಗಳು ನಿಂತಾವೆ! ರಾಮೂ ಶಾರದೆಯ ತಂದೆತಾಯಿಗಳು ವಿಧಿಯಿಲ್ಲದೆ ತಮ್ಮ ಒಪ್ಪಿಗೆಯನ್ನು ಕೊಟ್ಟೇಕೊಟ್ಟರು. ಆದರೆ "ತಮಗೊಂದು ಮಾತು ಹೇಳಿ ಮದುವೆ ಮಾಡಿಕೊಂಡಿದ್ದರೆ ಚೆನ್ನಾಗಿತ್ತು" ಎಂದು ಪಾರ್ವತಮ್ಮನವರ ಅಳಲು. ಆರ್ಯ ಸಮಾಜದ ಮದುವೆಯಾಗುವುದಕ್ಕಿಂತಲೂ ನಮ್ಮ ರೀತಿಯ ಮದುವೆಯೇ ಆಗಿದ್ದರೆ ಚೆನ್ನಾಗಿತ್ತೆಂದು ಶಾರದೆಯ ತಾಯಿ ಯಾರಹತ್ತಿರಲೋ ಹೇಳಿದರಂತೆ!

# ಈಗಿನ ರಾಜಕೀಯ ಪರಿಸ್ಥಿತಿ

ಲೇಖಕ:-ಶ್ರೀ ದ. ವೆ. ಬೆಳವಿ, ಬೀ. ಎ. ಎಲ್ ಎಲ್. ಬಿ., (ಬೆಳಗಾವಿ)

ತಕ್ಕ ಗಿಡದಿಂದ ರುಜೆ ಫಕ್ಕನೇ ಅಡಗಿಹುದು ।
ತಕ್ಕ ಗಿಡವನು ಕೊಡಲರಿಯದನ ಮಾತ್ರೆ ವೈಕುಂಠಯಾತ್ರೆ ! ಸರ್ವಜ್ಞ ॥

ಸನ್ ೧೯೦೬ನೇ ಇಸ್ವಿಯ ಡಿಸೆಂಬರದಲ್ಲಿ ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರೀಯ ಸಭೆಯ ಅಧಿವೇಶನದಲ್ಲಿ ಕೈ. ದಾದಾಭಾಯೀ ನವರೋಜಿಯವರು ಹಿಂದುಸ್ಥಾನಕ್ಕೆ "ಸ್ವರಾಜ್ಯವು ಬೇಕು" ಎಂದು ಮೊದಲಿಗೆ ಸಾರಿ ಹೇಳಿದರು. ಆಗ ಹಿಂದುಸ್ಥಾನದ ಆಳರಸರ ಬಳಗದಲ್ಲಿ ಒಮ್ಮಿಂದೊಮ್ಮೆ ಸಿಡಿಲು ಬಿದ್ದಂತೆ ಗಲಭೆಯುಂಟಾಯಿತು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಹಿಂದೀ ಜನರು ತಮ್ಮದೇಶದಲ್ಲಿ ಸ್ವರಾಜ್ಯವಾಗಬೇಕೆಂದು ಬಯಸುವದು ಕಾನೂನುಗಳಿಗೆ ವಿರೋಧವಾದ ಮಾತಲ್ಲೆಂತ ಕಲಕತ್ತೆಯ ಹೈಕೋರ್ಟಿನವರು ನಿರ್ಣಯಿಸಿದರು. ಆದರೆ ಮುಂದೆ ಸನ್ ೧೯೦೮ನೇ ಇಸ್ವಿಯಲ್ಲಿ ಬೇಝುಂಟಮ್ಮನವರೂ ಕೈ ಲೋಕಮಾನ್ಯ ಟಿಳಕರವರೂ ಸ್ವರಾಜ್ಯವೆಂದರೆ ಹೋಮರೂಲನ್ನು ಬ್ರಿಟಿಶ್ ಸರಕಾರದವರು ಬೇಗನೇ ಕೊಡಬೇಕೆಂತ ಪ್ರತಿಪಾದಿಸಹತ್ತಿದಾಗ ಹಿಂದುಸ್ಥಾನದ ಅನ್ನದಮೇಲೆ ಪುಷ್ಟರಾದ ಯುರೋಪಿಯನ್ನರು ಅವರಿಬ್ಬರಮೇಲೆ ಕೆಂಡಗಳನ್ನು ಕಾರಿದರು. ಬೆಝುಂಟಮ್ಮನವರನ್ನು ನೀಲಗಿರಿಯ ತಂಪು ಹವೆಯಲ್ಲಿ ಸೆರೆಯಲ್ಲಿಟ್ಟರು ಮತ್ತು ಲೋಕಮಾನ್ಯರ ಕಡೆಯಿಂದ ನಾಲ್ವತ್ತು ಸಾವಿರ ರೂಪಾಯಿಗಳ ಹೊಣೆಯನ್ನು ತಕ್ಕೊಂಡರು. ಈ ಮಾತುಗಳು ಇತಿಹಾಸ ಪ್ರಸಿದ್ಧವಾಗಿರುತ್ತವೆ. ಹೋಮರೂಲನ್ನು ಬೇಡುವದೂ ಆಳರಸರ ಕೃತ್ಯಗಳ ಮೇಲೆ ತೀವ್ರವಾದ ಟೀಕೆಯನ್ನು ಮಾಡುವದೂ ಕಾಯದೆಗಳಿಗನುಸರಿಸಿಯದೆ, ಎಂದು ಮುಂಬಯಿ ಹೈಕೋರ್ಟಿನವರು ಗೊತ್ತುಮಾಡಿದರು. ಮುಂದೆ ೧೯೨೦ನೇ ಇಸ್ವಿಯ ಅಗಸ್ಟ ೧ನೇ ತಾರೀಖಿಗೆ ಈಶಸಂಕಲ್ಪಕ್ಕೆ ಅನುಸರಿಸಿ ಲೋಕಮಾನ್ಯ ಟಿಳಕರವರು ಹಿಂದುಸ್ಥಾನದ ರಾಜಕೀಯ ಚಳವಳಿಯ ಸೂತ್ರಗಳನ್ನು ಮಹಾತ್ಮಾ ಗಾಂಧಿಯವರ ಕೈಯಲ್ಲಿ ಕೊಟ್ಟು ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಮತ್ತಂದಿನಿಂದ ಮಹಾತ್ಮಾ ಗಾಂಧಿಯವರ ಅನತ್ಯಾಚಾರಿ ಅಸಹಕಾರ ಯುಗಕ್ಕೆ ಪ್ರಾರಂಭವಾಯಿತು. ಮೊದಲು ಈ ಅಸಹಕಾರವೆಂಬ ಮಹಾಮಂತ್ರವು ಕೆಲವು ದಿವಸಗಳವರೆಗೆ ಹಿಂದೀ ಜನರಿಗೆ ಚೆನ್ನಾಗಿ ತಿಳಿಯಲಿಲ್ಲ. ಈ ಮಹಾಮಂತ್ರವನ್ನು ಸನ್ ೧೮೮೩ನೇ ಇಸ್ವಿಯಲ್ಲಿ ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಇತಿಹಾಸದ ಪ್ರೊಫೆಸರರಾದ ಸೀಲಿ ಎಂಬ ಪಂಡಿತರು "ಇಂಗ್ಲಂಡದ ಬೆಳವಣಿಗೆ" (The Expansion of England) ಈ ಹೆಸರಿನ ಪುಸ್ತಕದಲ್ಲಿ ಸೂತ್ರರೂಪದಿಂದ ಹೇಳಿ, ಹಿಂದೀ ಜನರು ರಾಜ್ಯದಾಡಳಿತದ ಕೆಲಸದಲ್ಲಿ ಬ್ರಿಟಿಶರಿಗೆ ಮನಮುಟ್ಟಿ ಸಹಾಯವನ್ನು ಮಾಡುವವರೆಗೆ ಮಾತ್ರ ಬ್ರಿಟಿಶರ ಸಾಮ್ರಾಜ್ಯವು ಉಳಿಯುವದೆಂತ ಖಂಡಿತವಾಗಿ ಸಾರಿದರು. ಬ್ರಿಟಿಶರಿಗೆ ಹಿಂದೀ ಜನರ ಸಹಾಯದ ಹೊರ್ತು ಹಿಂದುಸ್ಥಾನದಲ್ಲಿ ರಾಜ್ಯಾಧಿಕಾರವನ್ನು ನಡಿಸುವದು ಅಶಕ್ಯವದೆ- ಇದೇ ಸೀಲಿ ಸಾಹೇಬರು ಹೇಳಿದ ಮಹತ್ವದ ಗುಟ್ಟು. ಹಿಂದುಸ್ಥಾನ ದೇಶದ ದೊಡ್ಡ ಆಕಾರವೂ ಹಿಂದೀಜನರ ಸಂಖ್ಯಾಬಲವೂ ಹಿಂದುಸ್ಥಾನ ಮತ್ತು ಇಂಗ್ಲಂಡ ಇವೆರಡರೊಳಗಿನ ಮಹದಂತರವೂ ಸೀಲಿ ಸಾಹೇಬರ ಸಿದ್ಧಾಂತಕ್ಕೆ ಪುಷ್ಟಿಯನ್ನು ಕೊಡುತ್ತವೆ. ಬ್ರಿಟಿಶರು ಹಿಂದೀ ಜನರ ಸಹಾಯದಿಂದಲೇ ಹಿಂದುಸ್ಥಾನವನ್ನು ಕೈವಶಮಾಡಿಕೊಂಡರು. ಹಿಂದೀ ಜನರ ದುಡ್ಡಿನಿಂದಲೇ ಬ್ರಿಟಿಶರು ಹಿಂದುಸ್ಥಾನದಲ್ಲಿ ತಮ್ಮ ರಾಜ್ಯಾಧಿಕಾರವನ್ನು ಸ್ಥಿರಪಡಿಸಿದರು. ಹಿಂದೀ ಜನರನ್ನೇ ತಮ್ಮ ಆಳುಮಕ್ಕಳಾಗಿ ಮಾಡಿ ಅವರ ಮುಖಾಂತರವೇ ವಿವಿಧ ರೀತಿಗಳಿಂದ ಅವರ ಪ್ರಜೆ ಶೋಷಣವನ್ನು ಮಾಡಿ, ಅವರನ್ನು ನಿಃಶಸ್ತ್ರರನ್ನಾಗಿ ಮಾಡಿ ಹಿಂದೀ ಜನರ ದೊಡ್ಡ ಸೈನ್ಯವನ್ನೂ ಹಿಂದೀ ಪೋಲೀಸ ತಂಡನ್ನೂ ನಿರ್ಮಿಸಿ, ಹಿಂದೀ ಜನರನ್ನು ನಿರಾತಂಕವಾಗಿ ಆಳುತ್ತಬಂದರು. ಹಿಂದೀ ಜನರೂ ಬ್ರಿಟಿಶ್ ಸಾಮ್ರಾಜ್ಯದೊಳಗಿನ ಉಳಿದ ಎಲ್ಲ ಪ್ರಜೆಗಳೂ ತಮಗೆ ಸಮನಾಗಿ ಪ್ರಿಯರಾಗಿದ್ದು ಅವರೆಲ್ಲರನ್ನು ವರ್ಣಭೇದವಿಲ್ಲದೆ, ಜಾತಿ

ವಿಲ್ಲದೆ ಮತ್ತು ಧರ್ಮಭೇದವಿಲ್ಲದೆ ಅವರ ಹಿತದ ಸಲುವಾಗಿಯೇ ಆಳುವೆವೆಂತ ಬ್ರಿಟಿಶ್ ರಾಷ್ಟ್ರದ ಪರವಾಗಿ ಕ್ರಿಸ್ತಲೋಕವಾಸಿಯಾದ ವ್ಹಿಕ್ಟೋರಿಯಾ ಮಹಾರಾಣಿಯವರು ಸನ್ ೧೮೫೮ನೇ ಇಸ್ವಿಯಲ್ಲಿ ಮುಕ್ತಕಂಠದಿಂದ ಹೇಳಿದರು. ಇದೇ ವಚನವನ್ನು ಅವರ ತರುವಾಯ ಬ್ರಿಟಿಶ್ ಸಿಂಹಾಸನಾರೂಢರಾದ ೭ನೇ ಎಡ್ವರ್ಡ ಬಾದಶಹರೂ ೫ನೇ ಜಾರ್ಜ ಬಾದಶಹರೂ ಕಾಲಕಾಲಕ್ಕೆ ಕೊಟ್ಟರು. ಆದರೆ ಆ ವಚನಗಳು ಕಾಗದದಲ್ಲೇ ಉಳಿದು ಹಿಂದೀ ಜನರಿಗೆ ಉಳಿದ ಬ್ರಿಟಿಶ್ ಸಾಮ್ರಾಜ್ಯದೊಳಗಿನ ಪ್ರಜೆಗಳಿಗೆ ದೊರೆತ ರಾಜಕೀಯ ಹಕ್ಕುಗಳು ದೊರಿಯಲಿಲ್ಲ. ಹಿಂದುಸ್ಥಾನವು ಬ್ರಿಟಿಶರ ಸ್ವಂತ ಆಸ್ತಿಯಾಯಿತು. ಹಿಂದುಸ್ಥಾನವು ಬ್ರಿಟಿಶ್ ಸರಕುಗಳನ್ನು ಕೊಂಡುಕೊಳ್ಳುವ ಮುಖ್ಯ ಪೇಟೆಯಾಯಿತು. ಹಿಂದೀ ಜನರ ಕೈಗಾರಿಕೆಗಳನ್ನು ಬೇರೆ ಬೇರೆ ತರಹದ ಹಂಚಿಕೆಗಳನ್ನು ಮಾಡಿ ಬ್ರಿಟಿಶರು ಮುಳುಗಿಸಿ ಬಿಟ್ಟರು. ಹಿಂದುಸ್ಥಾನವು ತೀರ ಬಡತನದ ಸ್ಥಿತಿಗೆ ಬಂದಿತು. ಈ ಮೊದಲಾದ ಮಾತುಗಳ ಅರಿವು ಹಿಂದೀ ಜನರಿಗೆ ಆದುದರಿಂದಲೇ ಮಹಾತ್ಮಾ ಗಾಂಧಿಯವರ ಅಸಹಕಾರದ ತತ್ವಕ್ಕೆ ಹಿಂದುಸ್ಥಾನದಲ್ಲಿ ಸದ್ಯಕ್ಕೆ ಆಶ್ರಯವು ದೊರೆತಿರುವದು. ಕಾರಣವಿಲ್ಲದೆ ಯಾವ ಕಾರ್ಯವೂ ಆಗುವದಿಲ್ಲ. ಹಿಂದುಸ್ಥಾನದಲ್ಲಿ ಹಬ್ಬಿರುವ ತೀವ್ರ ಅಸಂತೋಷವೂ ನಿರಾಶೆಯೂ ಈಗಿನ ಗಲಭೆಯು ನಿಜವಾದ ಕಾರಣಗಳಿವೆ. ಇವುಗಳಿಗೆ ನಿಜವಾದ ಉಪಾಯವೆಂದರೆ ಹಿಂದುಸ್ಥಾನದಲ್ಲಿ ಬ್ರಿಟಿಶರ ವಸಾಹತಿಗಳಲ್ಲಿ ಅಂದರೆ ಕಾನಡಾ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾ, ಆಯರ್ಲಂಡ್ ಮುಂತಾದ ದೇಶಗಳಲ್ಲಿ ಅಲ್ಲಿಯ ಬ್ರಿಟಿಶ್ ಪ್ರಜೆಗಳು ಅನುಭವಿಸುತ್ತಿದ್ದ ಸ್ವರಾಜ್ಯದ ನಿಜವಾದ ಹಕ್ಕುಗಳನ್ನು ಹಿಂದೀ ಜನರಿಗೆ ತೀವ್ರವಾಗಿ ಕೊಟ್ಟು ಅವರ ಸಮಾಧಾನವನ್ನು ಮಾಡುವದೊಂದೇ ಮಾತು. ಆದರೆ ದುರ್ದೈವದಿಂದ ಬ್ರಿಟಿಶ್ ಮುತ್ಸದ್ದಿಗಳಿಗೆ ಇದು ತಿಳಿಯದ್ದರಿಂದ ಅವರು ಬುದ್ಧಿಹೀನ ವೈದ್ಯನಂತೆ ದಬ್ಬಾಳಿಕೆಯಿಂದ ಹಿಂದೀ ಜನರನ್ನು ಮೂಲೆಗೊತ್ತಿ ಅವರ ರಾಜಕೀಯ ಆಕಾಂಕ್ಷೆಗಳನ್ನೂ ಅವರ ಅಸಹಕಾರದ ಪ್ರಯತ್ನಗಳನ್ನೂ ಇಲ್ಲದಂತೆ ಮಾಡಲು ಹವಣಿಸುತ್ತಿದ್ದಾರೆ. ಮಹಾತ್ಮಾ ಗಾಂಧಿಯವರನ್ನು ಎರವಡೆಯ ಸೆರೆಮನೆಯಲ್ಲಿಟ್ಟಿರುವರು. ಮಹಾತ್ಮಾ ಗಾಂಧಿಯವರು ಹೋದರೆ ಅವರ ಹಿಂದೆ ಒಂದು ನಾಯಿಯೂ ಕೂಗದು ಹೀಗೆ ಅರ್ಲ ವಿಂಟರಟನ್ ಸಾಹೇಬರು ಗರ್ವದಿಂದ ಬ್ರಿಟಿಶ್ ಪಾರ್ಲಮೆಂಟಿನಲ್ಲಿ ಹೇಳಿದರು. ಮಹಾತ್ಮಾ ಗಾಂಧಿಯವರು ಸೆರೆಮನೆಗೆ ಹೋಗಿ ಒಂದು ತಿಂಗಳವೇಲಾಯಿತು. ಆದರೆ ಅಸಹಕಾರದ ಗೊಂದಲವು ಹೆಚ್ಚಾಗುತ್ತ ನಡೆದದೆ. ಹಿಂದುಸ್ಥಾನದೊಳಗಿನ ಬಹುತರವಾಗಿ ಎಲ್ಲ ರಾಜಕೀಯ ಮುಂದಾಳುಗಳು ಈಗ ಕಾರಾಗೃಹದಲ್ಲಿ ಹಾಕಲ್ಪಟ್ಟಿರುತ್ತಾರೆ. ಎತ್ತರವಾದ ಎಲ್ಲ ಗಿಡಗಳನ್ನು ಕಡಿದು ಹಾಕುವ (Lopping off of the tall poppies) ಯುಕ್ತಿಯನ್ನು ಆಳರಸರು ಈ ಮೊದಲೇ ಮಾಡಿಬಿಟ್ಟಿರುವರು. ಕಾಯದೆ ಮತ್ತು ಶಾಂತತೆ (Law and order) ಇವುಗಳ ಹೆಸರಿನಲ್ಲಿ ನಿರಪರಾಧಿ, ನಿಃಶಸ್ತ್ರ, ಅನತ್ಯಾಚಾರಿ ಸತ್ಯಾಗ್ರಹಿಗಳನ್ನು ಅಮಾನುಷ ರೀತಿಯಿಂದ ಹಿಂದೀ ಪೋಲೀಸರಿಂದ ದೊಣ್ಣೆಗಳಿಂದ ಹೊಡಿಸುವದೂ ಅವರಿಗೆ ದಂಡಾಳುಗಳಿಂದ ಗುಂಡು ಹಾಕಿಸಿ ಕೊಲ್ಲಿಸುವದೂ ಹಿಂದೀ ಹೆಂಗಸರನ್ನು ಸಹ ಸೆರೆಮನೆಗೆ ಕಳಿಸುವದೂ ಮುಂತಾದ ಸಂಗತಿಗಳನ್ನು ಕಂಡು ಹಿಂದೀ ರಾಜಕಾರಣದಲ್ಲಿ ಮವಾಳರಾದ ಸರ್ ತೇಜಬಹಾದ್ದೂರ ಸಪ್ರೂ, ಸರ್. ಸೀ. ಪೀ. ರಾಮಸ್ವಾಮೀ ಅಯ್ಯರ, ಶ್ರೀಯುತ ನಟರಾಜನ್, ಶ್ರೀಯುತ ಗೋಪಾಳರಾವ ದೇವಧರ ಮುಂತಾದವರು ಸಹ ವ್ಯಸನಪಡುತ್ತಲಿದ್ದಾರೆ. ಈಗಿನ ಗವ್ಹರ್ನರ ಜನರಲ್‌ರಾದ ಲಾರ್ಡ ಅರ್ವಿನ ಧೋರಣೆಗಳು ಹಿಂದುಸ್ಥಾನದಲ್ಲಿರುವ ಯುರೋಪಿಯನ್‌ರ ಕೈಯೊಳಗಿನ ಗೊಂಬೆಯಾಗಿರುತ್ತಾರೆ. ಇಂಗ್ಲಂಡದೊಳಗಿನ ಜನರಿಗೆ ಹಿಂದುಸ್ಥಾನದ ನಿಜವಾದ ಸಂಗತಿಯು ತಿಳಿಯಬಾರದೆಂತ ಆಳರಸರ ಯುಕ್ತಿ ಪ್ರಯುಕ್ತಿಗಳು ನಡೆದವೆ. ಆದರೆ ಕೊನೆಗೆ "ಸತ್ಯಮೇವಜಯತೆ" ಈ ಮಾತೇ ನಿಜವಾಗಿ ಹಿಂದೀ ಜನರಿಗೆ ಸ್ವರಾಜ್ಯವು ದೊರೆಯುವದು.

ಹಿಂದೀ ಜನರನ್ನು ಮೋಸಗೊಳಿಸುವ ಹಂಚಿಕೆಗಳಲ್ಲಿ ವರ್ತುಲ ಪರಿಷತ್ತೊಂದಾಗಿದೆ. ಸಾಯಮನ್ ಸಪ್ತಕದ ವರದಿಯು ಪ್ರಸಿದ್ಧವಾದ ನಂತರ ಇಂಗ್ಲಂಡದಲ್ಲಿ ಕೆಲವು ಹಿಂದೀ ಜನರೂ ಕೆಲವು ಬ್ರಿಟಿಶರೂ ಈ ಗೋಲಮೇಜಿನ ಸುತ್ತಲು ಕುಳಿತು ಹಿಂದೀ ಜನರಿಗೆ ಯಾವ ತರದ ರಾಜ್ಯದಾಡಳಿತೆಯನ್ನು ಕೊಡಬೇಕೆಂಬುದು ಗೊತ್ತಾಗುವದದೆ. ಹಿಂದುಸ್ಥಾನದಲ್ಲಿ ಜಾತಿ ಜಾತಿಗಳ ನಡುವೆ ಸನ್ ೧೯೨೦ನೇ ಇಸ್ವಿಯಲ್ಲಿ ಆದ ಕಾನೂನಿನಿಂದ (The Government of India Act, 1920) ಹುಟ್ಟಿಸಿದ ಒಡಕುಗಳನ್ನು ಬ್ರಿಟಿಶ್ ಜನರ ಮುಂದೆ ತರುವ ಹಂಚಿಕೆಯಿಂದೇ ಗೋಲಮೇಜಿನ ಪರಿಷತ್ತು ಇರುತ್ತದೆಯೆಂದು ತೋರುತ್ತದೆ. ಈ ಪರಿಷತ್ತಿಗೆ ರಾಷ್ಟ್ರೀಯ

ಸಭೆಯ ಪರವಾಗಿ ಯಾರೂ ಹೋಗಲಾರರು. ಮಹಾತ್ಮಾ ಗಾಂಧಿಯವರಂತೂ ಸೆರೆಮನೆಯಲ್ಲಿ ಬಿದ್ದಿರುವರು. ಈ ಗೋಲ ಮೇಜಿನ ಪರಿಷತ್ತಿನ ವಿಷಯವಲ್ಲಿ ಹೆಚ್ಚಿಗೆ ಬರೆಯುವದು ಅನವಶ್ಯಕವಾಗಿರುವದು.

ಮಹಾತ್ಮಾ ಗಾಂಧಿಯವರು ಪ್ರಾರಂಭಿಸಿದ ಅನತ್ಯಾಚಾರಿ ಅಸಹಕಾರವನ್ನು ಕುರಿತು ಸರ್ ಪಿ. ಎಸ್. ಶಿವಸ್ವಾಮೀ ಅಯ್ಯರರಂಥ ಹಿಂದೀ ರಾಜಕಾರಣದಲ್ಲಿ ಪ್ರವೀಣರಾದ ಮಹನೀಯರು ಮದ್ರಾಸಿನಲ್ಲಿ ಪ್ರಸಿದ್ಧವಾಗುತ್ತಿರುವ ದೀ ಇಂಡಿಯನ್ ರಿವ್ಹ್ಯೂ ಎಂಬ ಮಾಸಿಕದ ಮೇ ತಿಂಗಳ ಸಂಚಿಕೆಯಲ್ಲಿ ಅನ್ನುವದೇನಂದರೆ:—

"If Mahatma Gandhi's compaign has served any purpose, it is the indubitable demonstration of the wide-spread character of the national movement and the futility of expecting to put it down by a mere policy of suppression. The tide of nationalism cannot be checked by the measures of Mrs. Partington."



## ತಿಳಿಯ ತಿಂಗಳಿನಲ್ಲಿ

—(C)—

೧.

ಚಂದಿರನು ಕರಗಳಿಂದಿಳೆಯು ತಕ್ಕೈಸುತಿರೆ,
ಭಯಚಕಿತೆ ಕಾರಿರುಳು ಗಿಡಮರದ ಬಳಿಗೆಸಲೆ,
ಜೊನ್ನವನು ಮುತ್ತಿಡುತ ಸುಖಿಸಿ ಮುಂದಕೆ ಯಮುನೆ
ಕಲರವದೆ ಹರಿಯುತಿರೆ, ಮೆಲುಮೆಲನೆ ವೃಷುಗಮನೆ
ಮತ್ಸ್ಯಾವತಾರನನು ಬಯಸಿ ಮೀನುಗಳಲ್ಲಿ
ಕ್ರೀಡಿಸಲು ಬಾರೆಂದು ಕರೆಯುತಿರೆ ಜಲದಲ್ಲಿ,
ನವನೀತ ಚೋರನಿಗೆ ಕಣ್ಣನಗೆ ಬೆಣ್ಣೆಯನು
ಗಗನದಲಿ ಬಿಳಿಮುಗಿಲು ಸುಳಿಸುಳಿದು ಕುಡುತಿರಲು,
ಗೋಪಾಲಕೃಷ್ಣನಿಗೆ ಶೀತಾಂಶು ಚಂದ್ರಿಕೆಯ
ಕೆನೆಮೊಸರು ತನಿವಾಲನರ್ತಿಯಿಂದಿಡುತಿರಲು,
ಗೋವಳನನೋಲಯಿಸಿ ಬಳಿಬರುವ ಗೋಪಿಯರ
ಸೀರೆಕಂಚುಕವೆಸೆದು ಹೋಲುತಿರೆ ಸುರಧನುವ,
ನೂರಾರು ಮುರಹರರು ನಿಂತರೆನೆ ಮಾಯೆಯಲಿ
ನೀಲದಾಗಸ ತೋರೆ, ವೃಕ್ಷಗಳ ನಡುವಿನಲಿ
ವೇಣುಲೋಲನು ತನ್ನ ಮುರಲಿಯನು ನುಡಿಸುತಿರೆ,
ಬಲಿತ ಮರಗಳು ತೂಗಿ ಬಿಜ್ಜಣವನಿಕ್ಕುತಿರೆ,
ಹರಿವ ಯಮುನೆಯ ತಡಿಯ ಹಸುರು ಬಯಲೊಳಗಂದು
ಜಗದೊಡೆಯನಾಡಿದನು ಗೋಪಿಯರ ಬಳಿಸಂದು

೨.

ಒಡತಿಯರನೊಡಗೊಂಡು ಹದಿನಾರು ಸಾವಿರವ
ನಲಿಯುತಿರಲಾಳುವನು ಹದಿನಾಲ್ಕು ಲೋಕಗಳ.
ತಾಳವಿಡಿದಾಗಸದಿ ತಾರೆಗಳು ಮಿಣುಕಿದವು,
ಚಂದ್ರಮನ ಜತೆಗೂಡಿ ಕಿರುಮೋಡವಾಡಿದುವು.
ದಡದ ಕಲ್ಲುಗಳೊಡನೆ ನಲಿದು ನಡೆದಳು ಯಮುನೆ,
ಜಲದ ಮಕರಗಳೊಡನೆ ಕುಣಿದು ಸರಿದಳು ಯಮುನೆ.
ಯಮುನೆ ಲೀಲೆಯೊಳಾಗ ಸಂತಸದಿ ಜಾರಿದಳು,
ಹೆಚ್ಚಿದುಲ್ಲಾಸದಲಿ ಗರ್ತದೊಳು ಬಳಸಿದಳು.
ಮಾರುತನ ದನಿಗೇಳುತೆಲೆಯ ನೆರಳುಗಳಾಗ
ನುಸುಳಿ ಬಹ ಕಿರಣಗಳನೊಡಗೂಡಿ ನಲಿದಾಗ,
ಹೆಮ್ಮರಗಳಲುಗಿಸುತ ನಾಟ್ಯವಿಡಿದನು ವಾಯು,
ಹಸುರು ಗರುಕೆಯ ನುಡಿಸಿ ಕುಣಿಸುತಿದ್ದನು ವಾಯು.
ಏಳು ಕಣ್ಣಿನ ಕೊಳಲನೊಳಹೊಕ್ಕು ಸುಳಿದಾಡಿ,
ಸಪ್ತಸುಸ್ವರಗಳನು ಸೂಸುತಿರೆ ತೆಂಗಾಳಿ,
ಕಮ್ಮಲರನೆಳಸಿ ಬಂದೆರಗುವಲರುಣಿಯಂತೆ
ಸರುವ ವಿಶ್ವವು ಹರಿಯ ನರ್ತನಕೆ ಮೇಳವಿಸೆ,
ತಿಳಿಯ ತಿಂಗಳಿನಲ್ಲಿ ಹಸುರು ಬಯಲೊಳಗಂದು
ಜಗದೊಡೆಯನಾಡಿದನು ಗೋಪಿಯರ ಬಳಿಸಂದು

—ಶ್ರೀ. ಪಿ. ರಾಜರತ್ನಂ

# ಸತ್ಯ

ತನ್ನ ತಾ ಅರಿತರೆ, ತನ್ನರಿವೇ ಗುರು. ಉದ್ಧರೇದಾತ್ಮನಾತ್ಮಾನಂ.

ಬರೆದವ:– ಮಧುರಚೆನ್ನ, ಹಲಸಂಗಿ

ನಮ್ಮ ಬಾಯಿಯು ನಮ್ಮ ಸ್ವತಂತ್ರವಿದ್ದದ್ದರಿಂದ ನಮಗೆ ಸುಳ್ಳಾಡುವದಕ್ಕೆ ಅನುಕೂಲವಾಗಿರುತ್ತದೆ. ನಮ್ಮ ಮನಸ್ಸಿನಲ್ಲಿ ಇದ್ದ ಮಾತನ್ನು ಮುಚ್ಚಿಟ್ಟುಕೊಂಡು ಬೇರೆ ಮತ್ತೊಂದೇನಾದರೂ ಹುಟ್ಟಿಸಿ ಹೇಳಲಿಕ್ಕೆ ನಮಗೆ ಬರುತ್ತದೆ. ಆದರೆ ಕನಸಿನಲ್ಲಿ ಒಮ್ಮೊಮ್ಮೆ ಮನಸಿನಲ್ಲಿ ಇದ್ದದ್ದೆಲ್ಲಾ ಬಡಬಡಿಸಿಬಿಡುತ್ತಿರುತ್ತೇವೆ. ಆಗ ನಮ್ಮ ಬದಿಯಲ್ಲಿ ಮಲಗಿದವರು ಎಚ್ಚರಿದ್ದರೆ ನಮ್ಮ ಮನಸಿನೊಳಗಿನ ಮಾತೆಲ್ಲಾ ಅವರಿಗೆ ಗೊತ್ತಾಗಿಬಿಡುತ್ತದೆ. ಒಮ್ಮೊಮ್ಮೆ ನಾವು ನಮ್ಮ ಮನಸಿನಲ್ಲಿ ಒಳ್ಳೊಳ್ಳೇ ಗುಪ್ತಸಂಗತಿಗಳನ್ನು ಮುಚ್ಚಿಟ್ಟುಕೊಂಡು ಯಾರ್‍ಯಾರಿಗೂ ಹೇಳಬಾರದೆಂದು ನಿಶ್ಚಯಿಸಿರುವದುಂಟು. ಆದರೆ ಇಂಥ ನಿದ್ರೆಯಲ್ಲಿ ಬಡಬಡಿಸಿ ಬೈಲಿಗೆ ಬಿದ್ದರೆ ಏನುಗತಿಯಾದೀತು ! ಕನಸಿನಲ್ಲಿ ನಾವು ನಮ್ಮ ಮನಸ್ಸಿನಲ್ಲೇ ಮಂಡಿಗೆಮಾಡುತ್ತಿರುತ್ತೇವೆ. ಆದರೆ ನಮ್ಮ ಶರೀರ ನಮ್ಮ ಬಾಯಿ ಇವು ನಮ್ಮ ಸ್ವತಂತ್ರವಿರುವದಿಲ್ಲ. ಆದ್ದರಿಂದಲೇ ಕನಸ್ಸಿನಲ್ಲಿ ಮನದೊಳಗೆ ಆಳಾಪಮಾಡುತ್ತಿರುವಾಗ ಇತ್ತ ಹೊರಗೆ ಬಾಯಿ ಅದನ್ನೆಲ್ಲಾ ಬಡಬಡಿಸಿಬಿಡುತ್ತದೆ. ನಮ್ಮನ್ನು ಹುಟ್ಟಿಸಿದ ದೇವರು ಎಚ್ಚರದಲ್ಲಿ ಕೂಡ ನಮ್ಮ ಬಾಯಿ ನಮಗೆ ಸ್ವತಂತ್ರವಾಗಿರದಂತೆ ಮಾಡಿ ಮನದೊಳಗಿನ ಮಂಡಿಗೆಯನ್ನೆಲ್ಲ ಹೊರಗೆಡಹುವಂತೆ ಮಾಡಿಬಿದ್ದಟ್ಟರೆ ನಮಗೆ ಸುಳ್ಳನ್ನೇ ನುಡಿಯಲಿಕ್ಕೆ ಬರುತ್ತಿದ್ದಿಲ್ಲ. ಯಾಕಂದರೆ ನಾವು ಏನು ಹೇಳಬೇಕಾದರೂ ಮನಸ್ಸಿನಲ್ಲಿ ಯೋಚಿಸಿಕೊಂಡೇ ಹೇಳಬೇಕಾಗುತ್ತದೆ. ನಾವು ಮನಸಿನಲ್ಲಿ ಒಳಗೆ ಯೋಚಿಸುವದೆಲ್ಲಾ ಹೊರಗೆ ಬಾಯಿ ಒಡನೇ ಸವನೆ ಬಡಬಡಿಸಿಹತ್ತಿದರೆ ನಮ್ಮ ಒಳಗಿನ ಹೂರಣವೆಲ್ಲಾ ಹೊರಬಿದ್ದೇಬಿಡುತ್ತದೆ. ಹತ್ತರಿದ್ದವರಿಗೆಲ್ಲಾ ತಿಳಿದೇ ಹೋಗುತ್ತದೆ. ಅಂದ ಬಳಿಕ ಸುಳ್ಳು ಹೇಳುವ ಹಾದಿಯೇ ಉಳಿಯಲಿಲ್ಲ.

ಆದರೆ ನಮ್ಮನ್ನು ಹುಟ್ಟಿಸಿದ ದೇವರು ನಮ್ಮ ಬಾಯಿಯನ್ನು ಹೀಗೆ ಅಸ್ವತಂತ್ರ ಮಾಡದೆ ನಮ್ಮ ಸ್ವತಂತ್ರದಲ್ಲಿ ಇಟ್ಟಿದ್ದಾನೆ. ಅದರಿಂದ ನಮಗೆ ಬೇಕಾದದ್ದನ್ನು ಹೇಳಲಿಕ್ಕೆ ಬರುತ್ತದೆ; ಬೇಡಾದದ್ದನ್ನು ಹೇಳದೆ ಬಿಡಲಿಕ್ಕೆ ಬರುತ್ತದೆ. ಹೀಗೆ ದೇವರು ನಮಗೆ ಸುಳ್ಳಾಡುವದಕ್ಕೆ ಅನುಕೂಲವನ್ನು ಮಾಡಿಬಿಟ್ಟಿದ್ದಾನೆ.

ದೇವರೇನೋ ಹೀಗೆ ಸುಳ್ಳಾಡುವದಕ್ಕೆ ಹಾದಿಮಾಡಿಬಿಟ್ಟಿದ್ದಾನೆ. ಆದರೆ ಋಷಿಗಳೂ ಸಾಧುಸತ್ಪುರುಷರೂ ರಾಜರೂ ಇದಕ್ಕೆ ಅಡ್ಡಿಮಾಡಲಿಕ್ಕೆ ಬರುತ್ತಾರೆ. ಸುಳ್ಳೆಂಬುದು ಮಹಾ ಪಾಪವೆಂದು ಋಷಿಗಳ ಶಾಸ್ತ್ರ; ಮಹಾ ಅನೀತಿಯೆಂದು ಸತ್ಪುರುಷರ ವಚನ; ಮಹದಪರಾಧವೆಂದು ರಾಜರ ಕಾನೂನು. ಹೀಗಂದ ಮೇಲೆ ಇದರ ಅರ್ಥವೇನು ? ಇವರೆಲ್ಲರೂ ದೇವರಿಗೆ ವಿರುದ್ಧವಾಗಿ ನಿಂತಿರುವರೇನು ? ದೇವರ ಮನಸಿನಲ್ಲಿ ಮನುಷ್ಯರು ಸುಳ್ಳಾಡಬಾರದೆಂದು ಇದ್ದರೆ ಅವನು ಮೊದಲೇ ಇವರ ಬಾಯಿಯನ್ನು ಸುಳ್ಳಾಡದ ಹಾಗೆ ನಿರ್ಮಿಸುತ್ತಿದ್ದನು. ಅಥವಾ ಇವರ ಮನಸ್ಸನ್ನೇ ಸುಳ್ಳಾಡದಂತೆ ಗಟ್ಟಿಮುಟ್ಟಾಗಿ ನಿರ್ಮಿಸುತ್ತಿದ್ದನು. ಆದರೆ ದೇವರು ಹೀಗೆ ಮಾಡಿಲ್ಲ. ನಮ್ಮ ಬಾಯಿ ನಮ್ಮ ಕೈಯಲ್ಲಿ ಇರುವಂತೆ ಮಾಡಿದ್ದಾನೆ. ಅಲ್ಲದೆ ಹೀನ ಮನಸ್ಸನ್ನು ಕೊಟ್ಟಿದ್ದಾನೆ ಇದರಲ್ಲಿ ದೇವರ ಉದ್ದೇಶವೇನು ಇರಬಹುದು ? ನಾವು ಸದಾ ಸುಳ್ಳಾಡಿ ಒಬ್ಬರಿಗೊಬ್ಬರು ಮೋಸಮಾಡುತ್ತಲೇ ಇರಬೇಕೆಂದು ದೇವರ ಮನಸ್ಸಿನಲ್ಲಿ ಇದ್ದೀತೇ ?

ದೇವರ ಮನಸಿನಲ್ಲಿ ಏನಿದೆಯೋ ಎಂತಿದೆಯೋ ನಮಗೆ ಗೊತ್ತಿಲ್ಲ. ಯಾಕಂದರೆ ನಾವು ಅವನನ್ನು ಎಂದೂ ಕಂಡು ಮಾತಾಡಿಸಿ ಕೇಳಿಲ್ಲ.

ಹಾಗಾದರೆ ದೇವರ ರಚನೆಗೂ ಋಷಿಗಳ ಸಾಧುಸತ್ಪುರುಷರ ಮತ್ತು ರಾಜರ ಆಜ್ಞೆಗೂ ಯಾಕೆ ಮೇಳವಿಲ್ಲ ?

ಸುಳ್ಳಾಡುವದರಿಂದ ಹೆರವರಿಗೆ ಮೋಸವಾಗಿ ಕಷ್ಟವಾಗುವದರಿಂದ ರಾಜರು ತಮ್ಮ ಪ್ರಜೆಗಳಿಗೆ ಕಷ್ಟವಾಗಬಾರದೆಂದು ಸುಳ್ಳು ಹೇಳುವವರನ್ನು ಶಿಕ್ಷಿಸುವರು. ಸುಳ್ಳಾಡಿ ಒಬ್ಬರನ್ನೊಬ್ಬರು ವಂಚಿಸಿ ರಾಜ್ಯದಲ್ಲಿ ಸುಖವಿಲ್ಲದಂತೆ ಮಾಡಬಾರದೆಂದು ರಾಜರು ತಮ್ಮ ರಾಜ್ಯರಕ್ಷಣೆಗಾಗಿ ಹೀಗೆ ಸುಳ್ಳಿಗೆ ಶಿಕ್ಷೆಯನ್ನಿ

ಟ್ಟರು. ಅವರೇನೂ ದೇವರನ್ನು ಮಾತಾಡಿಸಿ ಅವನ ಮನಸಿನಲ್ಲಿ ಇದ್ದದ್ದನ್ನೆಲ್ಲಾ ತಿಳಿದುಕೊಂಡು ಹೀಗೆ ಮಾಡಿಲ್ಲ. ಇವರೂ ನಮ್ಮಂತೆ ದೇವರನ್ನು ಕಾಣದವರೇ.

ಸತ್ಪುರುಷರಂತೂ ಸರ್ವರ ಹಿತಚಿಂತಕರು. ಆದ್ದರಿಂದ ಅಹಿತವನ್ನು ಬೆಳಿಸುವ ಸುಳ್ಳು ಅನ್ಯಾಯವೆಂಬುದು ಅವರಿಗೆ ಸಹಜವಾಗಿಯೇ ತಿಳಿಯುವದು.

ಋಷಿಗಳಂತೂ ಸುಳ್ಳು ಹೇಳುವದು ಪಾಪವೆಂದು ಹೇಳಿದ್ದಾರೆ. ಋಷಿಗಳೆಂದರೆ ಅವರೂ ಮನುಷ್ಯರೇ. ಆದರೆ ಹೆಚ್ಚು ತಿಳುವಳಿಕೆಯನ್ನು ಮಾತ್ರ ಅವರು ಮಾಡಿಕೊಂಡಿದ್ದರು. ಸದಾ ತಿಳುವಳಿಕೆಯ ವಿಚಾರಗಳನ್ನೇ ಅವರು ಮಾಡುತ್ತಿದ್ದರು. ಅದೇ ಅವರ ವ್ಯವಸಾಯವಾಗಿತ್ತು. ಅಂದಮೇಲೆ ಜನರಿಗೆ ತಿಳಿದಷ್ಟು ಋಷಿಗಳಿಗೆ ತಿಳಿಯಲಿಕ್ಕಿಲ್ಲವೇನು ? ಜನರು ಸುಳ್ಳಾಡುವ ಸವಿಗೆ ಬಿದ್ದರೆ ಮೋಸ ಹೆಚ್ಚಾಗಿ ಜನರಲ್ಲಿ ಅವಿಶ್ವಾಸ ಬೆಳೆದು ಯಾರೂ ಯಾರನ್ನೂ ನಂಬದಂತಾದರೆ ಲೋಕದ ಬಾಳುವೆಯೇ ಸಾಗಲಿಕ್ಕಿಲ್ಲೆಂಬ ಮಾತು ಋಷಿಗಳಿಗೆ ತಿಳಿಯಲಾರದೇ? ಇದಲ್ಲದೆ ಆ ಕಾಲದಲ್ಲಿ ರಾಜರೆಲ್ಲಾ ಋಷಿಗಳ ಆಜ್ಞೆಯನ್ನು ಪಾಲಿಸುತ್ತಿದ್ದರು. ರಾಜರಿಗೆ ಕಾಯಿದೆಗಳನ್ನೆಲ್ಲಾ ಋಷಿಗಳೇ ಮಾಡಿಕೊಡುತ್ತಿದ್ದರು. ಅಂಗಬಳಿಕ ರಾಜರಿಗೆ ಸುಳ್ಳಿನ ಶಿಕ್ಷೆಯನ್ನು ಕಲಿಸಿಕೊಟ್ಟವರು ಋಷಿಗಳೇ. ಇದಲ್ಲದೆ ಋಷಿಗಳು ವನವನ್ನು ಸೇರಿ ಬರೇ ಮೂಗು ಹಿಡಕೊಂಡು ಯಾರ ಹಂಗೂ ಇಲ್ಲದೆ ಮೂಲೆ ಹಿಡಿದು ಕೂಡುತ್ತಿದ್ದಿಲ್ಲ. ಅವರು ತಾಪತಡಿಯಿಲ್ಲದಂತೆ ಅರಣ್ಯದಲ್ಲಿ ಆನಂದದಿಂದ ಇದ್ದುಕೊಂಡು ಲೋಕದ ಕಲ್ಯಾಣ ಹ್ಯಾಗಾದೀತೆಂದು ಯೋಚಿಸುತ್ತಿದ್ದರು. ಆದ್ದರಿಂದಲೇ ಅವರು ಲೋಕದಲ್ಲಿ ಸುಳ್ಳಿನಿಂದ ಕಷ್ಟ ಬೆಳೆಯಬಾರದೆಂದು ಸುಳ್ಳನ್ನು ಪಾಪವೆಂದು ಹೇಳಿದರು. ಇನ್ನೊಂದು ಕಾರಣವೇನಂದರೆ ಸುಳ್ಳಾಡುವದರಿಂದ ಹೆರವರಿಗೆ ನಷ್ಟವಾಗುವದಿಷ್ಟೇ ಅಲ್ಲ; ತನ್ನ ಜೀವಕ್ಕೂ ಸಮಾಧಾನ ಸಿಗುವದಿಲ್ಲ. ವಂಚಿಸಿ ಮೋಸ ಮಾಡಿದವನ ಮನಸಿಗೆ ಸಮಾಧಾನವಿದ್ದೀತೇ? ಯಾವಾಗಲೂ ಎದೆಗುದಿ ಇದ್ದೇ ಇರುವದು. ಎದೆಗುದಿ ಇದ್ದವನಿಗೆ ಸುಖವುಂಟೇ ? ಮನುಷ್ಯನು ಏನು ಮಾಡುವದೆಲ್ಲಾ ಸುಖಕ್ಕಾಗಿಯೇ. ಅಂದಮೇಲೆ ಸುಳ್ಳಾಡಿ ಪರರನ್ನು ವಂಚಿಸಿ ತನ್ನ ಜೀವಕ್ಕೂ ಎದೆಗುದಿ ಮಾಡಿಕೊಂಡರೆ ಸುಖವನ್ನು ದೊರಕಿಸಿದಂತಾಯಿತೇ ? ಇಲ್ಲ. ಶಾಂತವೃತ್ತಿಯಲ್ಲಿಯೇ ಸುಖವುಂಟೆಂದು ಋಷಿಗಳಿಗೆ ತಿಳಿದಿತ್ತು. ಆದ್ದರಿಂದಲೇ ಅವರು ಶಾಂತವಾದ ವನದಲ್ಲಿ ಇರುತ್ತಿದ್ದರು. ಕೆಟ್ಟ ಕೆಲಸ ಮಾಡುವದರಿ[illegible] ಮನದಲ್ಲಿ ಶಾಂತಿಸಮಾಧಾನವೂ ಉಳಿಯಲಾರದು. ಆದ್ದರಿ[illegible] ತನ್ನ ಶಾಂತಿಯನ್ನೂ ಪರರ ಸುಖವನ್ನೂ ಹಾಳುಮಾಡುವ[illegible] ಕೆಟ್ಟ ಕೆಲಸಗಳಿಗೆಲ್ಲಾ ಅವರು ಪಾಪವೆಂದು ಹೇಳಿದರು. [illegible] ಶಾಂತಿಯೆಂದು ಸದಾ ಶಾಂತಿಯನ್ನೇ ಬಯಸುವ ಋಷಿ[illegible] ಮನುಷ್ಯನ ಅಶಾಂತಿಗೆ ಕಾರಣವಾದ ಈ ಸುಳ್ಳನ್ನು ಪಾ[illegible]ವೆಂದು ಹೇಳಿದ್ದು ಸಹಜ. ಸದಾ ಸುಖದ ಸಲುವಾಗಿ[illegible] ಬಡಿದಾಡುತ್ತಿರುವ ನಾವು ಕೆಟ್ಟ ಕೆಲಸ ಮಾಡಿ ಎದೆಗುದಿ ಹ[illegible]ಕೊಳ್ಳುವದು ಜಾಣತನವಲ್ಲವೆಂಬುದು ಯಾರಿಗಾದರೂ [illegible]ಯುತ್ತದೆ. ಋಷಿಗಳಾದರೂ ಇಷ್ಟು ಮಾತನ್ನು ತಿಳಿ[illegible]ಲಿಕ್ಕೆ ದೇವಗ ತನಕಾ ಹೋಗಿದ್ದಾರೆಂದು ಕಾಣುವದಿಲ್ಲ. [illegible]ಲ್ಲದೆ ಋಷಿಗಳು ಪಾಪದ ಫಲದಿಂದ ನರಕ ಪ್ರಾಪ್ತಿಯಾ[illegible]ದೆಂದೂ ಮುಂದಿನ ಜನ್ಮದಲ್ಲಿ ಕಷ್ಟಭೋಗಿಸಬೇಕಾಗುವದೆಂ[illegible] ಹೇಳಿದ್ದಾರೆ. ಇದನ್ನು ಅಂಜಿಕೆಗಾಗಿ ಹೇಳಿರುವರೋ [illegible] ಹೇಳಿರುವರೋ ತಿಳಿಯುವುದಕ್ಕೆ ನಮಗೆ ಮಾರ್ಗವಿಲ್ಲ. [illegible] ಕರ್ಮ ಮಾಡಿದರೆ ಜೀವಕ್ಕೆ ಶಾಂತಿ ಸಿಗುವದಿಲ್ಲ; ಇದು [illegible] ಇರುವಾಗಲೇ ಭೋಗಿಸಬೇಕಾದ ಫಲವು. ಆದರೆ ಸತ್ತ [illegible] ನರಕವಿದೆಯೋ ಇಲ್ಲವೋ ಅಥವಾ ಮುಂದೆ ಮತ್ತ [illegible]ದೆಯೋ ಇಲ್ಲವೋ ಇದ್ಯಾವುದನ್ನೂ ತಿಳಿದುಕೊಳ್ಳುವ[illegible] ನಮ್ಮೆಲ್ಲರ ಬುದ್ಧಿಗೆ ಅಷ್ಟೊಂದು ಶಕ್ತಿಯಿಲ್ಲ.

ಹಾಗಾದರೆ ಋಷಿಗಳೂ ಉಳಿದವರಂತೆ ತಮ್ಮ [illegible] ತಿಳಿದೇ ಸುಳ್ಳಿಗೆ ಅಡ್ಡಬಂದ ಹಾಗಾಯಿತು. ಅವರ [illegible] ಮನಸಿನಲ್ಲಿ ಏನಿದ್ದಿರಬಹುದೋ ಅದು ಬೇರೆಯೇ [illegible] ರಾಜರು ತಮ್ಮ ರಾಜ್ಯದ ಸುರಕ್ಷಿತಕ್ಕಾಗಿ, ಸಾಧುಗಳು [illegible] ಹಿತಕ್ಕಾಗಿ, ಋಷಿಗಳು ಮಾನವನ ಉನ್ನತಿಗಾಗಿ—ಹೀಗೆ [illegible]ಲ್ಲರೂ ತಮ್ಮ ತಮ್ಮ ಸ್ವಭಾವಾನುಸಾರವಾಗಿಯೇ ಹಾಗೆ [illegible]ರುವರು.

ಪಾಪದಿಂದ ನಾವು ನರಕಕ್ಕೆ ಹೋಗುವಂತೆಯೂ [illegible] ಮುಂದಿನ ಜನ್ಮದಲ್ಲಿ ಕಷ್ಟಕ್ಕೆ ಗುರಿಯಾಗುವಂತೆಯೂ [illegible] ನಮಗೆ ಪಾಪ ಮಾಡುವದಕ್ಕೆ ಯಾಕೆ ಅನುವು [illegible]ಟ್ಟನು ? ಸುಳ್ಳು ಹೇಳುವುದಕ್ಕೇ ನಮಗೆ ಬಾರದ [illegible] ಯಾವ ಕೆಟ್ಟ ಕರ್ಮಗಳನ್ನೂ ಮಾಡಲಿಕ್ಕೆ ನಮಗೆ [illegible] ಇರುತ್ತಿದ್ದಿಲ್ಲ. ಸುಳ್ಳೇ ಸರ್ವ ಪಾಪಗಳ ತಾಯಿ. [illegible] ಬಳಿಕ ನಮ್ಮ ತಲೆಯೊಳಗಿನ ವಿಚಾರ ತಲೆಯೊಳಗೇ ಮು[illegible]

ಹೊರಗೆ ಬಾಯಿಂದ ಬೇಕಾದ್ದನ್ನು ಹೇಳಲಿಕ್ಕೆ ಬರುವಂತೆ ಮಾಡಿದ್ದರಲ್ಲಿ ದೇವರ ಉದ್ದೇಶವೇನು ಇರಬಹುದು ?

ಈಗ ಸಾಲೆಯ ಮಕ್ಕಳದೊಂದು ಉದಾಹರಣವನ್ನು ತೆಗೆದುಕೊಳ್ಳೋಣ. ಶಿಕ್ಷಕನು ಯಾವಾಗಲೂ ಮಗುವಿನ ಕೈಯನ್ನು ತಾನೇ ಹಿಡಿದು ಬರೆಯಿಸುತ್ತ ಇದ್ದರೆ ಆ ಮಗುವಿಗೆ ಕುಸು ಹೊತ್ತಿನಲ್ಲೇ ಬೇಸರವಾಗಿಬಿಡುತ್ತದೆ. ಯಾಕಂದರೆ ಆ ಮಗುವಿಗೆ ತನ್ನ ಮನಸಿಗೆ ಬಂದಂತೆ ಗೀಚಲಿಕ್ಕೂ ಚಿತ್ರ ತೆಗೆಯಲಿಕ್ಕೂ ಸಿಕ್ಕ ಸಿಕ್ಕ ಅಕ್ಷರಗಳನ್ನೂ ಬರೆಯಲಿಕ್ಕೆ ಅವಕಾಶ ಕೊಡದೆ ಶಿಕ್ಷಕನು ಸದಾ ಸರ್ವಕಾಲ ಕೈ ಹಿಡಕೊಂಡೇ ಕುಳಿತು ತನ್ನ ಮನಸಿಗೆ ಬಂದದ್ದನ್ನೇ ಬರೆಯಿಸಹತ್ತಿದನೆಂದರೆ ಆ ಹುಡುಗನ ಪಾಲಿಗೆ ಸಾಲೆಯೆಂದರೆ ಅದೊಂದು ಸೆರೆಮನೆಯೇ ಆದೀತು. ಸ್ವತಂತ್ರವಿಲ್ಲದೆ ಯಾವಾಗಲೂ ಇನ್ನೊಬ್ಬರ ಕೈಕೆಳಗೇ ಪರತಂತ್ರದಿಂದ ಇರುವದು ಬಲು ಬೇಸರದ ಕೆಲಸವಾಗಿದೆ. ಅದರಲ್ಲಿ ಆನಂದವೇ ಇಲ್ಲ. ಇದರಂತೆಯೇ ದೇವರು ನಮ್ಮ ಬಾಯಿಯನ್ನು ನಮ್ಮ ಸ್ವತಂತ್ರ ಮಾಡದೆ ಇದ್ದರೆ ನಮ್ಮ ಮನಸೊಂದು ಕಡೆ ಮಾತೊಂದು ಕಡೆ ಆಗಿ ನಮಗೆ ಪ್ರಶಸ್ತವೆನಿಸುವಂತಿದ್ದಿಲ್ಲ. ಈಗ ನಮ್ಮ ಕಾಲು ನಮ್ಮ ಸ್ವತಂತ್ರದಲ್ಲಿ ಇಲ್ಲವೆಂದು ತಿಳಿಯೋಣ. ನಮ್ಮ ವೈರಿಗಳು ನಮ್ಮನ್ನು ಕೊಲ್ಲಬೇಕೆಂದು ಬೆನ್ನಟ್ಟಿದಾಗ ನಾವು ಓಡಿಹೋಗಬೇಕೆಂದು ಯೋಚಿಸಿ ಹಾಗೆ ಓಡುವುದಕ್ಕೆ ಆರಂಭಿಸಲು ಕಾಲುಗಳು ನಮಗೆ ಬೇಕಾದ ದಿಕ್ಕಿಗೆ ಹೋಗದೆ ನಮ್ಮ ವೈರಿಗಳ ಕಡೆಗೇ ಎಳಕೊಂಡು ಹೋದರೆ ನಮ್ಮ ಗತಿಯು ಏನಾದೀತು? ನಮ್ಮ ಬಾಯಿಯು ಸ್ವತಂತ್ರತೆ ತಪ್ಪಿದರೂ ನಮ್ಮ ಹಾಡು ಹೀಗೇ ಆಗುತ್ತದೆ. ಒಂದೇಸವನೆ ಹೀಗೇ ಆಗಹತ್ತಿದರೆ ನಮ್ಮ ಬಾಳುವೆಯೇ ನಮಗೆ ಬೇಸರಾಗುತ್ತದೆ. ಆಟದಲ್ಲಿ ಒಂದೇಸವನೆ ಮೇಲಿಂದಮೇಲೆ ಕಡೆತನಕ ಸೋಲುವುದೇ ಆದರೆ ಬೇಸರಬಟ್ಟು ಹುರುಪು ಕುಗ್ಗಿ ಆಟವೇ ಸಾಕಾಗುತ್ತದೆ ! ಹೀಗೆ ಅಸ್ವತಂತ್ರತೆಯಿಂದ ಆನಂದವಿಲ್ಲದಂತೆ ಆಗಬಾರದೆಂದು ದೇವರು ನಮಗೆ ನಮ್ಮ ಬಾಯಿಯನ್ನು ನಮ್ಮ ಸ್ವತಂತ್ರದಲ್ಲಿ ಇಟ್ಟಂತೆ ಕಾಣುತ್ತದೆ. ಈಗ ನಾವು ಒಬ್ಬರಿಗೆ ಒಂದು ಒಳ್ಳೇ ಬಿಗಿಯಾದ ಲೆಕ್ಕವನ್ನು ಹೇಳಿ ಅದರ ಉತ್ತರ ಹೇಳೆಂದು ಹೇಳುತ್ತಿರುತ್ತೇವೆ. ಒಂದು ಒಗಟನ್ನು ಹೇಳಿ ಒಡೆಯೆಂದು ಹೇಳುತ್ತಿರುತ್ತೇವೆ. ಆ ಲೆಕ್ಕದ ಉತ್ತರವನ್ನೂ ಒಗಟಿನ ಒಡಪನ್ನೂ ನಾವು ಬಿಚ್ಚಿ ಹೇಳದೆ ಮುಚ್ಚಿ ಇಡುವದರಲ್ಲಿಯೇ ಆನಂದವಿದೆ. ನಾವು ಯಾವನಿಗೆ ಕೇಳಿರುವೆವೋ ಅವನಿಗೂ ಕೂಡ ತಾನೇ ಎಣಿಕೆ ಹಾಕಿ ತಾನೇ ಯೋಚಿಸಿ ಗೊತ್ತು ಹಚ್ಚಿ ಹೇಳುವದರಲ್ಲಿ ಆನಂದವಿದೆ. ನಡುವೆ ಯಾರಾದರೂ ಗೊತ್ತಿದ್ದವರು ಬಾಯಿಹಾಕಿ ಹೇಳಿಕೊಡಲಿಕ್ಕೆ ಬಂದರೆ ಇವರಿಬ್ಬರಿಗೂ ಸಿಟ್ಟು ಬರುತ್ತದೆ. ಯಾಕಂದರೆ ನಡುವೇ ಉತ್ತರ ಹೇಳಿಬಿಟ್ಟರೆ ಇಬ್ಬರದೂ ಭರವು ಅಳಿದು ಆನಂದವು ತಪ್ಪಿ ಹೋಗುತ್ತದೆ. ಈ ನಮ್ಮ ಆನಂದಕ್ಕಾಗಿಯೇ ದೇವರು ನಮ್ಮ ಅವಯವಗಳನ್ನು ನಮ್ಮ ಸ್ವತಂತ್ರದಲ್ಲಿ ಇಟ್ಟಿದ್ದಾನೆಂದು ತೋರುತ್ತದೆ. ಇದಲ್ಲದೆ ಇನ್ನೊಂದು ರೀತಿಯಿಂದಲೂ ತರ್ಕಿಸಬಹುದು. ಅದೇನಂದರೆ—ನಾವು ಆಟದಲ್ಲಿ ಒಬ್ಬನಿಗೆ ಕಣ್ಣು ಕಟ್ಟಿ ಗೊತ್ತುಪಡಿಸಿದ ಒಂದು ಘಾಜೆಯನ್ನು ಮುಟ್ಟಬೇಕೆಂದು ಹೇಳಿ ಮೊದಲು ಅವನನ್ನು ಗರಗರ ತಿರುಗಿಸಿ ತಪ್ಪುದಾರಿಗೆ ಹಚ್ಚಿಬಿಡುತ್ತೇವೆ. ಅವನು ಇಂಥ ಪ್ರಸಂಗದಲ್ಲಿ ತನ್ನ ಬುದ್ಧಿಯನ್ನು ಚೆನ್ನಾಗಿ ಉಪಯೋಗಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ತನ್ನ ಘಾಜೆಗೆ ಮುಟ್ಟುವದಿಲ್ಲ. ಅಲ್ಲದೆ ತನ್ನ ಘಾಜೆಯನ್ನು ತಾನೇ ಹುಡುಕಿಕೊಳ್ಳುವದರಲ್ಲೇ ಆಟದ ಆನಂದವಿದೆ. ಮೊದಲೇ ತಪ್ಪುದಾರಿಗೆ ಹಚ್ಚದೆ ನೆಟ್ಟಗೆ ಘಾಜೆಯ ಕಡೆಗೇ ಮೋರೆಮಾಡಿ ನಿಲ್ಲಿಸಿಬಿಟ್ಟರೆ ಇದರಲ್ಲಿ ಅವನ ಬುದ್ಧಿಯ ಕೌಶಲ್ಯವೇನೂ ಕಂಡು ಬರುವಂತೆ ಇಲ್ಲ. ಅಲ್ಲದೆ ಆನಂದವೂ ಇಲ್ಲ. ಮೈಚಳಿ ಬಿಟ್ಟು ಸಹಜವಾಗಿ ಘಾಜೆ ಮುಟ್ಟಿಬಿಡಬಹುದು. ಇದರಲ್ಲೇನು ಹುರುಳಿದೆ ? ದೇವರೂ ಕೂಡ ನಮಗೆ ಈ ಲೋಕದ ಆಟದಲ್ಲಿ ನಮಗೆ ತಪ್ಪುದಾರೀ ಹಿಡಿಯುವುದಕ್ಕೆ ಅನುಕೂಲ ಮಾಡಿ ನಮ್ಮ ಬುದ್ಧಿವಂತಿಕೆಯನ್ನು ಪರೀಕ್ಷಿಸುತ್ತಿರಬಹುದೆಂದು ತೋರುತ್ತದೆ. ನಮ್ಮಿಂದ ನಾವೇ ಬುದ್ಧಿವಂತರಾಗಿ ತಪ್ಪು ಯಾವದು ಒಪ್ಪು ಯಾವದು ಎಂಬುದನ್ನು ನಾವೇ ಗೊತ್ತು ಹಚ್ಚಿಕೊಂಡು ನಮ್ಮ ಘಾಜೆಯನ್ನು ನಾವೇ ಹುಡುಕಿಕೊಳ್ಳುವ ಆನಂದ ನಮಗುಳಿಯಲೆಂದು ಅವನು ಹೀಗೆ ಮಾಡಿದಂತೆ ಕಾಣುತ್ತದೆ. ಇದಲ್ಲದೆ ಇನ್ನೊಂದು ಕಾರಣವನ್ನೂ ಕಲ್ಪಿಸಬಹುದು. ಸದಾಚಾರದಿಂದ ನುಡಿದಂತೆ ನಡೆದರೆ ಮುಕ್ತಿಯಾಗುವದೆಂದು ಋಷಿಗಳು ಹೇಳುತ್ತಾರೆ. ಮುಕ್ತಿ ಎಂದರೆ ಹುಟ್ಟು ಸಾವುಗಳ ಕೈಯ್ಯೊಳಗಿಂದ ದಾಟುವದು. ತಿರುಗಿ ಜನ್ಮಕ್ಕೆ ಬಾರದಂತೆ ಆಗುವದೇ ಮುಕ್ತಿ. ಈ ಲೋಕದ ಕಷ್ಟ ತಪ್ಪುವದೇ ಮುಕ್ತಿ. ಒಟ್ಟಿನಮೇಲೆ ಒಬ್ಬನಿಗೆ ಮುಕ್ತಿಯಾಯಿತೆಂದರೆ ಅವನು ಈ ಭವದಿಂದ ಪಾರಾಗಿ ಬಿಟ್ಟಂತಾಯಿತು. ಋಷಿಗಳ ಹೇಳಿಕೆಯಂತೆ ಮುಕ್ತಿಯೆಂದರೆ ಇದೆ,

ಲೋಕದ ಮಾನವರೆಲ್ಲಾ ಸದಾಚಾರದಿಂದಲೇ ನಡೆದು ಎಲ್ಲರೂ ಮುಕ್ತರೇ ಆಗಿಬಿಟ್ಟರೆ ತಿರುಗಿ ಈ ಲೋಕದಲ್ಲಿ ಯಾರು ಹುಟ್ಟಿ ಬರಬೇಕು? ಈ ಲೋಕವು ಹ್ಯಾಗೆ ನಡೆಯಬೇಕು? ಈ ಲೋಕವನ್ನು ಹುಟ್ಟಿಸಿದ ದೇವರು ಇದನ್ನು ಹಾಳು ಬೀಳಗೊಡ ಬಾರದೆಂದು ಜನರು ಮುಕ್ತರಾಗದಂತೆ ಅವರಿಗೆ ಪಾಪ ಮಾಡುವದಕ್ಕೆ ಅನುವು ಮಾಡಿ ಮಾಯಾಬದ್ಧರನ್ನಾಗಿಸಿ ಬಿಟ್ಟಿದ್ದಾನೆಂದು ತೋರುತ್ತದೆ. ಕೋಟಿ ಜನರಲ್ಲಿ ಒಬ್ಬಿಬ್ಬರು ಮಾತ್ರ ಪೂರ್ಣ ವಿಚಾರಮಾಡಿ ಬಲೆಗೆ ಬೀಳದೆ ಬಿಡಬಹುದು. ಇಂಥ ಒಬ್ಬಿಬ್ಬರು ಮುಕ್ತರಾದರೆ ಆಗಲಿ. ಅಷ್ಟರಿಂದ ಲೋಕವೇನೂ ಹಾಳಾಗುವಂತೆ ಇಲ್ಲ. ಹೀಗೂ ಅವನ ಹಂಚಿಕೆಯಿದ್ದೀತು.

ಇದೆಲ್ಲಾ ಇರಲಿ. ದೇವರು ಇದ್ದದೇ ನಿಜವಿದ್ದರೆ ಈ ಕಾರಣಗಳು ನಿಜವಾಗುವವು. ಆದರೆ ಅವನು ಇದ್ದಾನೋ ಇಲ್ಲವೋ ನಿಶ್ಚಯವಾಗಿ ಗೊತ್ತಾಗುವಂತಿಲ್ಲ. ಋಷಿಗಳಿಗೂ ಕೂಡ ಅವನಿದ್ದದ್ದು ಪೂರ್ಣ ಗೊತ್ತಾದಂತೆ ಕಾಣುವದಿಲ್ಲ. ಯಾಕೆಂದರೆ ಒಂದು ದೇಶದ ಋಷಿಗಳು ದೇವರಿದ್ದಾನೆಂದು ಎದೆಯ ಮೇಲೆ ಕೈಯಿಟ್ಟು ಹೇಳಿದರೆ ಇನ್ನೊಂದು ದೇಶದ ಋಷಿಗಳು ಅವನು ಇಲ್ಲೇ ಇಲ್ಲವೆಂದು ಗಟ್ಟಿಯಾಗಿ ಹೇಳುತ್ತಾರೆ. ಹೀಗೊಂದು ಕಾಲದಲ್ಲಿದ್ದ ಋಷಿಗಳು ಹೇಳಿದರೆ ಇನ್ನೊಂದು ಕಾಲದ ಋಷಿಗಳು ಏನೂ ಹೇಳಲಿಕ್ಕೆ ಸಾಧ್ಯವಿಲ್ಲೆಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳುತ್ತಾರೆ. ಅಂದ ಬಳಿಕ ನಾವು ಯಾವ ಮಾತು ನಿಜವೆನ್ನಬೇಕು ? ದೇವರು ಇದ್ದದ್ದೇ ಆದರೆ ಇದುವರೆಗೆ ತರ್ಕಿಸಿದ ಕಾರಣಗಳಲ್ಲಿ ಯಾವದಾದರೂ ಒಂದು ಕಾರಣವು ಸತ್ಯವಿದ್ದೀತು. ಆದರೆ ದೇವರೇ ಇಲ್ಲವೆಂದರೂ ಬೇರೆ ಕಾರಣವನ್ನು ಕಲ್ಪಿಸಲಿಕ್ಕೆ ಬರುತ್ತದೆ. ಅದೇನಂದರೆ— ಈ ಲೋಕದಲ್ಲಿ ಗಿಡಬಳ್ಳಿಗಳು ಬೀಜದಿಂದ ಹಸಿ ಮಣ್ಣಿನಲ್ಲಿ ಮೊಳೆತು ಬೆಳೆದು ಕೆಲದಿನ ಬಾಳಿ ಕೊನೆಗೊಮ್ಮೆ ಬಿದ್ದು ಹೋಗುವಂತೆ ಮಾನವರೂ ಕೂಡ ಹೀಗೆಯೇ ತಾಯಿತಂದೆಗಳಿಂದ ಹುಟ್ಟಿ ಕೆಲದಿನ ಬಾಳಿ ಬದುಕಿ ಕೊನೆಗೊಮ್ಮೆ ಮರಬಿದ್ದಂತೆ ಬಿದ್ದುಹೋಗಿ ಬಿಡುತ್ತಾರೆಂದು ತಿಳಿಯಬೇಕಾಗುವದು. ಇಷ್ಟು ತಿಳಕೊಳ್ಳಲಿಕ್ಕೆ ನಾವು ಇನ್ನೊಬ್ಬರನ್ನು ಕೇಳುವ ಕಾರಣವೇನೂ ಇಲ್ಲ. ಯಾಕೆಂದರೆ ಕಣ್ಣಿಗೆ ಇದು ಸ್ಪಷ್ಟವಾಗಿಯೇ ಕಾಣುತ್ತದೆ. ದೇವರಿಲ್ಲೇ ಇಲ್ಲವೆಂದೂ, ಜನ್ಮಾಂತರ ಸುಳ್ಳೆಂದೂ ಹಿಡಿದರೆ ಲೋಕದ ಆಟವೆಲ್ಲಾ ಇಷ್ಟೇ ಸರಿ. ಹೀಗೇ ಇದ್ದದ್ದಾದರೆ ಒಂದು ಹಣ್ಣಿನ ಉದಾಹರಣೆಯಿಂದ ನಮ್ಮ ಪ್ರಶ್ನೆ ತೀರುವದು. ಮೊದಲು ಹೂವಾದಾಗ ಸುವಾಸನೆ. ಆಮೇಲೆ ಮಿಡಿಯಾದಾಗ ಒಗರು. ಬಳಿಕ ಕಾಯಿ ಬಂದಾಗ ಹುಳಿ. ಅಲ್ಲಿಂದ ಹಣ್ಣಾದಾಗ ಸವಿ. ಇಷ್ಟಾಗಿ ತೀರಿತು. ಕೊನೆಗೇನು ಕೊಳೆತು ಮಣ್ಣುಪಾಲಾಗಿ ಬಿಡುವದು. ಮನುಷ್ಯರದಾದರೂ ಇದೇ ಹಾಡು. ಮೊದಲಿಗೆ ಕೆಟ್ಟ ಮನಸ್ಸಿದ್ದು ಮುಂದೆ ವಯಸ್ಸು ಇಳಿಯಿಳಿದಂತೆಯೂ ಒಳ್ಳೇ ಸಹವಾಸ ಬೆಳೆಬೆಳೆದಂತೆಯೂ ಬುದ್ಧಿವಂತಿಕೆ ಹೆಚ್ಚಾಗಿ ಒಳ್ಳೆ ಮನಸ್ಸು ಉಂಟಾಗುವದು. ಹ್ಯಾಗಿದ್ದರೂ ಕೊನೆಗೆ ಸಾಯುವುದು. ಹಿಂಗಟವಿದ್ದರೂ ಮುಂಗಟವಿದ್ದರೂ ಅಷ್ಟೇ. ಆಯಾ ಕಾಲಕ್ಕೆ ಹಸಿಬಿಸಿ ಎಂಬ ಭೇದವಿಲ್ಲದೆ ಎಲ್ಲಾ ನೆಲಕ್ಕೆ ಬೀಳಬೇಕು. ಇದು ಲೋಕದ ನಿಯಮವೇ ಇದೆ. ದೇವರು ಇದ್ದರೆ ನಮ್ಮ ಸುಖದುಃಖಗಳನ್ನು ನಾವು ಲೆಕ್ಕಿಸದೆ ಅವನ ಮನಸಿನಲ್ಲಿದ್ದದ್ದಕ್ಕೇ ಮಹತ್ತ್ವ ಕೊಡಬೇಕಾಗುತ್ತಿತ್ತು. ಆದರೆ ಅವನು ಇಲ್ಲದ್ದೇ ನಿಜವಾದರೆ ಆ ಬಳಿಕ ನಮ್ಮ ಸುಖದ ಕಡೆ ಲಕ್ಷ್ಯವಿಡಬೇಕಾಗುವದು. ನಮಗೆ ಸುಖವಾಗಬೇಕೆ ಆದರೆ ನಾವು ಸತ್ಯವಂತರಾಗಿಯೇ ಇರಬೇಕಾಗುವದು. ಯಾಕೆಂದರೆ ನಾವು ಅಸತ್ಯವಂತರೆಂದು ಜನರಿಗೆ ತಿಳಿದು ಹೋದರೆ ನಮ್ಮನ್ನು ಯಾರೂ ನಂಬುವದಿಲ್ಲ ಆದ್ದರಿಂದ ಇನ್ನೊಬ್ಬರು ನಮ್ಮ ಕಷ್ಟಕ್ಕೆ ಆಗಲಾರರು. ಇದಲ್ಲದೆ ನಮ್ಮ ಸಳ್ಳುತನದಿಂದ ಯಾರಿಗಾದರೂ .ಮೋಸವಾಗಿ ನಷ್ಟವಾಗಿದ್ದರೆ ಅವರು ಎಂದಾದರೂ ನಮ್ಮನ್ನು ಕಷ್ಟಕ್ಕೆ ಗುರಿಮಾಡಿ ಸೇಡು ತೀರಿಸಿಕೊಳ್ಳಬೇಕೆನ್ನುತ್ತಾರೆ. ಹೀಗಾದರೆ ವ್ಯವಹಾರದಲ್ಲಿ ನಮಗೆ ಸುಖವೇ ಇಲ್ಲದಂತೆ ಆಗುತ್ತದೆ. ಒಂದು ವೇಳೆ ನಾವು ದರ್ಪವುಳ್ಳವರಾಗಿದ್ದು ನಮಗೆ ಇನ್ನೊಬ್ಬರಿಂದ ಕಷ್ಟವಾಗಲಿಕ್ಕಿಲ್ಲ. ಆದರೆ ಒಳಗೆ ಎದೆಗುದಿ ತಪ್ಪಲಾರದು. ಇದಲ್ಲದೆ ಶಾಂತವೃತ್ತಿಯಿಲ್ಲದವರಿಗೆ ಸುಖವೇ ಇಲ್ಲ. ಸುಳ್ಳಾಡುವವರಿಗೆ ಸದಾ ಮನದಲ್ಲಿ ಒಂದು ಸುಳ್ಳು ಮುಚ್ಚುವುದಕ್ಕೆ ಸಾವಿರ ಸುಳ್ಳುಗಳನ್ನು ಹುಡುಕುವ ಚಿಂತೆಯೇ ತುಂಬಿಕೊಳ್ಳುತ್ತದೆ. ಚಿಂತೆ ಹತ್ತಿದಮೇಲೆ ಸುಖವೆಲ್ಲಿಯದು? ದೇವರಿಲ್ಲದಿದ್ದರೂ, ಪರಲೋಕವಿಲ್ಲದಿದ್ದರೂ, ಪುನರ್ಜನ್ಮವಿಲ್ಲದಿದ್ದರೂ ಈ ಲೋಕದಲ್ಲಿ ಬದುಕಿರುವಷ್ಟು ದಿನವಾದರೂ ತನಗೂ ತನ್ನವರಿಗೂ ಸುಖವು ಸಿಗಬೇಕೆಂದೆನಿಸಿದರೆ ದರಿಂದ ಸತ್ಯವಂತಿಕೆಯು ಅಗತ್ಯವಾಗಿ ಬೇಕಾಗುವದು. ಸುಳ್ಳಿನಿಂದೇ ಸರ್ವ ಕುಕರ್ಮಗಳನ್ನು ದಕ್ಕಿಸುವದು. ಇಂಥಾ ಸುಳ್ಳು ಮೊದಲು ಕಿತ್ತಿ ಹೋದರೆ ನಮಗೆ ಇನ್ನಾವ ಕೆಟ್ಟ ಕೆಲಸ ಮಾಡುವದಕ್ಕೂ ಅನುವೇ ಸಿಗುವದಿಲ್ಲ. ಇದರಿಂದ ಸುಖ

ಅನ್ಯರಿಂದ ಕಷ್ಟಬರಲಿಕ್ಕಂತೂ ಕಾರಣವೇ ಇಲ್ಲ. ಅಲ್ಲದೆ ಮನಸಿನಲ್ಲಿ ಮಳಮಳವಿಲ್ಲದ್ದರಿಂದ ಕಿಡಿಗೇಡಿ ಜನರ ಉಪದ್ರವಗಳಿಗೂ ಮನಸು ಒದ್ದಾಡುವದಿಲ್ಲ. ಯಾಕಂದರೆ ಬಹುದಿನಗಳಿಂದ ಶಾಂತವಾಗುತ್ತ ಬಂದು ಗಟ್ಟಿಯಾಗಿದ್ದ ಮನಸಿನಲ್ಲಿ ಶಾಂತವೃತ್ತಿಯು ಸ್ಥಿರವಾಗಿ ಉಳಿಯುತ್ತದೆ. ಶಾಂತಚಿತ್ತನಿಗೆ ಸಹನಶಕ್ತಿಯು ಸಂಪತ್ತು ವಿಪುಲವಾಗಿ ಇರುತ್ತದೆ, ಆದ್ದರಿಂದ ಇಂಥವರಿಗೆ ಎಂಥ ಕಷ್ಟವೂ ಅಷ್ಟೊಂದು ಬಾಧಿಸಲಾರದು.

ಇನ್ನು ಈ ಲೋಕವಲ್ಲಿ ಈ ಸತ್ಯವಂತಿಕೆ ಎಂಬುದೊಂದೇ ಇಲ್ಲದ್ದರಿಂದ ನಡೆಯುವ ಕಷ್ಟಗಳು ಎಷ್ಟೆಂದು ಹೇಳಲಿ!

ವ್ಯವಹಾರದಲ್ಲಿ ಒಬ್ಬರಿಂದೊಬ್ಬರಿಗೆ ಮೋಸವಾಗುತ್ತಿದ್ದರಂತೂ ಸರಿಯೇ ಸರಿ. ಆದರೆ ಪಾರಮಾರ್ಥಿಕ ಕ್ಷೇತ್ರದಲ್ಲಿಯೂ ಇದರಿಂದ ತುಂಬಾ ನಷ್ಟವುಂಟಾಗಿದೆ. ಹೇಗೆಂದರೆ—ಈವತ್ತಿಗೂ ಆತ್ಮಜ್ಞಾನಿಗಳೆನಿಸಿಕೊಳ್ಳುವ ಸಾಧುಸತ್ಪುರುಷರೂ, ಮೈತುಂಬಿ ದೇವರ ನುಡಿ ಹೇಳುವ ಪೂಜಾರಿಗಳೂ, ಬೇಕಾದ್ದು ಮಾಡಬಲ್ಲೆವೆನ್ನುವ ಮಂತ್ರಗಾರರೂಊರೂರಿಗೂ ಹೇರಳವಾಗಿ ಇದ್ದಾರೆ. ಇವರ ಚೆಲ್ಲಾಟವಿಲ್ಲದ ಸ್ಥಳವೇ ಇಲ್ಲ. ಮೈಯ್ಯಲ್ಲಿ ದೆವ್ವ ಬಂದು ಕುಣಿದಾಡುವವರಿಗಂತೂ ಲೆಕ್ಕವಿಲ್ಲ. ಅಲ್ಲದೆ ಶಾಸ್ತ್ರ ವಿಷಯದಲ್ಲಿ ಬರೆಯುವ ಗ್ರಂಥಕಾರರೇನು ಕಡಿಮೆ? ಇಷ್ಟೊಂದು ಗಲಾಟೆಯಿದ್ದರೂ ದೇವರಿದ್ದಾನೋ ಇಲ್ಲವೋ ಸ್ಪಷ್ಟವಾಗಿ ನಂಬುವುದಕ್ಕೇ ಇಂದು ದಾರಿಯಿಲ್ಲದಾಗಿದೆ. ಮರಣದ ಅನಂತರ ಯಾವದೇ ರೂಪದಲ್ಲಿ ಉಳಿಯುವೆವೋ ಇಲ್ಲವೋ ಹೇಳಿಕೊಡುವುದಕ್ಕೆ ಸಾಧ್ಯವಿಲ್ಲದಾಗಿದೆ. ಮಂತ್ರಶಕ್ತಿ ಸತ್ಯವೋ ಅಸತ್ಯವೋ ಒಪ್ಪಿಕೊಳ್ಳುವುದಕ್ಕೆ ಮನಸ್ಸು ಒಡಂಬಡದಂತಾಗಿದೆ. ಅಯ್ಯೋ ಇದು ಯಾತರ ಫಲವು? ಈ ಪುಣ್ಯಾತ್ಮರೆಂಬವರು ತಮ್ಮ ತಮ್ಮ ವೃತ್ತಾಂತವನ್ನೆಲ್ಲಾ ಸತ್ಯಸತ್ಯವಾಗಿ ಲೋಕಕ್ಕೆ ಪ್ರಮಾಣಿಸಿ ಕೊಡಲಾರದ್ದೇ ಇಂಥ ಕಷ್ಟಕ್ಕೆ ಕಾರಣವಲ್ಲವೇ? ಸಾಧು ಸತ್ಪುರುಷರೆಂಬವರು ತಮಗಾದ ಸ್ವಾನುಭವದ ವೃತ್ತಾಂತವನ್ನು ಎಷ್ಟೂ ಹೇಳುವದಿಲ್ಲ. ಬರೇ ಭಕ್ತಮಂಡಳವನ್ನು ಬೆಳಿಸಿಕೊಂಡು ತಿರುತಿರುಗಿ ಹಳೇ ಶಾಸ್ತ್ರಗಳನ್ನೇ ಬಿಚ್ಚಿಕೊಂಡು ಕುಳಿತು ಮೆರೆಯುತ್ತಾರೆ. ಅಯ್ಯೋ ಜ್ಞಾನಿಗಳೆನಿಸಿಕೊಂಬವರೇ ನಿಮ್ಮ ಶಾಸ್ತ್ರ ಕೇಳಿದರೆ ಆಗುವದಕ್ಕಿಂತ ಹೆಚ್ಚಿಗೆ ನಿಮ್ಮ ಸ್ವತಃದ ಸತ್ಯಚರಿತ್ರಶ್ರವಣದಿಂದ ಲೋಕಕ್ಕೆ ಲಾಭವಾಗುವಂತೆ ಇದೆ. ಇಂಥ ಆತ್ಮಜ್ಞಾನಿಗಳೆಂಬುವರು ಹೆಚ್ಚಾಗಿ ಅಜ್ಞ ಜನಾಂಗವನ್ನೆಲ್ಲಾ ತಮ್ಮ ಬಲೆಗೆ ಎಳೆದುಕೊಂಡು ಬಿಡುತ್ತಲಿರುವುದರಿಂದ ವಿಚಾರವಂತರಿಗೆ ಶಾಸ್ತ್ರ ವಿಷಯವೆಲ್ಲಾ ತಲೆಯಮೇಲೆ ಕಲ್ಲು ಹೊರಿಸಿದಂತೆ ಆಗುತ್ತಲಿದೆ. ಶಾಸ್ತ್ರಗಳಲ್ಲಿ ಹೇಳಿದ್ದು ಸತ್ಯವೆಂದು ನಂಬುವುದಕ್ಕೆ ಪ್ರಮಾಣವಿಲ್ಲ; ಅಸತ್ಯವೆಂದು ಸ್ಪಷ್ಟವಾಗಿ ಹೇಳುವುದಕ್ಕೆ ಶಕ್ತಿಯಿಲ್ಲ. ಹೀಗಾಗಿ ಇಂದು ಧರ್ಮವೆಂದರೆ ಅದೊಂದು ಬಿಡಲಾರದ ಕರ್ಮವಾದಂತಾಗಿದೆ. ಹೀಗೆ ಲೋಕದಲ್ಲಿ ಅಸತ್ಯವು ಎಲ್ಲಾ ಕಡೆಯಲ್ಲೂ ತನ್ನ ಆಟವನ್ನು ನಿರಾತಂಕವಾಗಿ ಸಾಗಿಸಿದೆ. ವ್ಯವಹಾರದಲ್ಲಿಯೂ ಅಸತ್ಯ, ಅಧ್ಯಾತ್ಮದಲ್ಲಿಯೂ ಅಸತ್ಯ. ಈ ಅಸತ್ಯವು ಕಾಲು ತೆಗೆಯುವ ತನಕ ಲೋಕದ ಸ್ಥಿತಿಯು ಸಮಕ್ಕೆ ಬರುವುದು ಅಶಕ್ಯವೇ ಸರಿ. ಎಲ್ಲಿಯುವರೆಗೆ ನಮ್ಮಲ್ಲಿ ಅಸತ್ಯವು ವಾಸಮಾಡಿಕೊಂಡಿರುವುದೋ ಅಷ್ಟು ಕಾಲವೂ ನಮ್ಮಲ್ಲಿ ಸತ್ಯಜ್ಞಾನವೂ, ಸತ್ಯ ಪ್ರೀತಿಯೂ ಸತ್ಯಶಕ್ತಿಯೂ ಹಣಿಕಿ ಹಾಕುವದಿಲ್ಲ. ನಮ್ಮಲ್ಲೇ ಸತ್ಯವಿಲ್ಲದಿದ್ದರೆ ನಮಗೆ ಹ್ಯಾಗೆ ಜಗದ ಸತ್ಯರಹಸ್ಯವು ಸಾಕ್ಷಾತ್ಕಾರವಾದೀತು? ನಮ್ಮಲ್ಲಿ ಸತ್ಯವೆಂಬುದೇ ಇಲ್ಲವಾದರೆ ಇನ್ನೊಂದು ಜೀವವು ನಮ್ಮನ್ನು ಹ್ಯಾಗೆ ಹೊಂದಿಕೊಂಡೀತು? ಹೊಂದಿಕೊಳ್ಳುವುದಕ್ಕೇ ಆಗದ ಜೀವಿಯನ್ನು ಹಚ್ಚಿಕೊಳ್ಳುವುದಕ್ಕಾದರೂ ಹೇಗೆ ಆದೀತು? ಇದ್ದದ್ದನ್ನು ಇದ್ದಕ್ಕಿದ್ದಂತೆ ಮಾತಾಡುವುದಕ್ಕೇ ಶಕ್ತಿಯಿಲ್ಲದೆ ಅಸತ್ಯವನ್ನಾಶ್ರಯಿಸಿದವನಿಂದ ಇನ್ನೇನು ತಾನೇ ಮಾಡುವುದಕ್ಕೆ ಆದೀತು? ಸತ್ಯವೊಂದಿಲ್ಲದೆ ಹೋದರೆ ಅಂಥ ಪ್ರಾಣಿಗೆ ಇನ್ನೇನೂ ಇಲ್ಲ.

ಸದ್ಯದ ಕಾಲದಲ್ಲಿ ವ್ಯವಹಾರದಲ್ಲಿ, ಅಧ್ಯಾತ್ಮದಲ್ಲಿ, ಸಂಸಾರದಲ್ಲಿ, ಸಂಘದಲ್ಲಿ ಎಲ್ಲೆಲ್ಲಿಯೂ ಗಲಭೆಯುಂಟಾಗಿರುವುದಕ್ಕೆ ಈ ಅಸತ್ಯದ ಹೆಚ್ಚಳವೇ ಕಾರಣವಾಗಿದೆ. ಅಧ್ಯಾತ್ಮದಲ್ಲಿ ಒಲವಿದ್ದವರು ತಮಗೆ ಹಳೇ ಶಾಸ್ತ್ರವನ್ನು ನಂಬಿಕೊಂಡು ಹೊರಡುವುದಕ್ಕೆ ಸಾಧ್ಯವಿದ್ದರೆ ಸಾಗಲಿ. ಅದರಿಂದ ನಷ್ಟವೇನೂ ಇಲ್ಲ. ಏನೋ, ಸಾಧನೆಯು ಬೆಳೆದು ಬಂದರೆ ಏನಾದರೂ ಕಲ್ಯಾಣವಾದೀತು. ಆದರೆ ನಂಬುವುದಕ್ಕೆ ಆಗದವರಿಗೆಲ್ಲಾ ಒತ್ತಾಯಪಡಿಸಿ ನಂಬುವುದಕ್ಕೇ ಹಚ್ಚಬೇಕೆನ್ನುವುದು ಹುಚ್ಚುತನ. ಇಲ್ಲದ್ದನ್ನು ಇದೆಯೆಂದು ನಂಬುವುದಕ್ಕೆ ಜೀವವು ಒಪ್ಪುವದಿಲ್ಲ. ಅದು ಒಲ್ಲೆ ಒಲ್ಲೆನ್ನುತ್ತದೆ. ಈಗಿನ ಕಾಲವಲ್ಲಿ ಹೆಚ್ಚು ಕಲಿತವರಲ್ಲಿ ಇಂಥವರೇ ಹೆಚ್ಚಾಗಿ ಇದ್ದಾರೆ. ಮತ್ತು ದೇಶದ ಕಲ್ಯಾಣವೂ ಕೂಡ ಇಂಥವರನ್ನೇ ಅವಲಂಬಿಸಿಕೊಂಡು ಇರುತ್ತದೆ. ಹಿರಿಯ ಬಳಿಕ ಕೆಲವು ಶಾಸ್ತ್ರಿಗಳೂ ಸ್ವಾಮಿಗಳೂ ಸೇರಿ ಅಜ್ಞರನ್ನು ಮಾತಿನ ಬಲೆಯಲ್ಲೆಳಕೊಂಡು ಆ ಬಲದಿಂದ ಇಂಥ

ಸುಶಿಕ್ಷಿತರೆಂಬವರನ್ನು ನಂಬಿಸುವುದಕ್ಕೆ ಯತ್ನಪಡುವುದು ಅನ್ಯಾಯವೂ ಅಸಾಧ್ಯವೂ ವಿಫಲಕಾರಿಯೂ ಆಗಿದೆ. ಇಂಥವರು ತನಗೆ ನಂಬುವುದಕ್ಕೆ ಆಗದೆ ಹೋದರೆ ಆ ಹಾದಿಯನ್ನು ಬಿಟ್ಟು ಬಿಡಲಿ. ಆದರೆ ಇದ್ದದ್ದನ್ನು ಇದ್ದಕ್ಕಿದ್ದಂತೆ ನುಡಿಯುವುದಕ್ಕಾದರೂ ಸಿದ್ಧರಾದರೆ ಈ ನಂಬಿ ನಡೆಯುವವರಿಗಿಂತ ಇವರಿಂದ ಹೆಚ್ಚಿನ ಪ್ರಯೋಜನವಾಗುವಂತಿದೆ. ಇಲ್ಲದ್ದನ್ನು ಜುಲಿಮೆಯಿಂದ ನಂಬುವುದು ಕಷ್ಟ. ಆದರೆ ಇದ್ದಕ್ಕಿದ್ದಂತೆ ಸತ್ಯವನ್ನಾಡುವುದು ಅಷ್ಟೇನೂ ಕಷ್ಟದ್ದಲ್ಲ. ದಿವ್ಯ ಜ್ಞಾನವನ್ನು ಬಯಸುವವರು ಇಷ್ಟಾದರೂ ಮಾಡದೆ ಗತಿಯಿಲ್ಲ. ಸತ್ಯವಂತಿಕೆಯಿಂದ ನಿರಭಿಮಾನತೆಯೂ ನಿಸ್ಸ್ವಾರ್ಥತೆಯೂ ಉದಯಿಸುವುದಕ್ಕೆ ಮಾರ್ಗವಾಗುವದು. ಇವೆರಡೂ ಜೊತೆಯಾದ ಬಳಿಕ ನಿರಹಂಕಾರವುಂಟಾಗದಿರದು. ಇಷ್ಟೊಂದು ಸಿದ್ಧಿಸಿದರೆ ನಮ್ಮ ತಪವು ಅರ್ಧದ ಮಟ್ಟಿಗಾದರೂ ಫಲಿಸಿದಂತಾಯಿತು. ಅಹಂಕಾರ ಮಮಕಾರಗಳು ಕಡಿಮೆಯಾದ ಹಾಗೆಲ್ಲಾ ಶಾಂತವೃತ್ತಿಯು ಸಹಜವಾಗುತ್ತ ಬರುವದು. ಅಲ್ಲದೆ ಸರ್ವ ಪಾಪಗಳ ಆಧಾರವಾದ ಅಸತ್ಯವೇ ಲೋಪಿಸುತ್ತ ಬಂದಬಳಿಕ ಹೊಸ ಪಾಪದ ಅಂಜಿಕೆಯುಂತೂ ಉಳಿಯಲಿಲ್ಲ. ಹೀಗಾಗಿ ಜಪವಿಲ್ಲದೆ ತಪವಿಲ್ಲದೆ ದಾನವಿಲ್ಲದೆ ಧರ್ಮವಿಲ್ಲದೆ ಕೂಡ ಸತ್ಯವೊಂದರಿಂದಲೇ ಮನುಷ್ಯನು ನಿರಹಂಕಾರ ನಿರ್ಮಮತ್ವ ನಿಷ್ಪಾಪ ಜೀವನವನ್ನು ಸಮೀಪಿಸಿ ಉನ್ನತಿಗೆ ಬರುವನು. ಈ ತಪಸ್ಸೂ ಕೂಡ ಇನ್ನಾವ ತಪಸ್ಸಿಗಿಂತ ಕಡಿಮೆಯದಲ್ಲ. ನಾವು ಬರೇ ಸತ್ತು ಬೈಲಾಗುವ ದೇಹಿಗಳಾಗಿರದೆ ಅಮರವಾದ ಆತ್ಮವಿದ್ದದ್ದೆ ಸತ್ಯವಾದರೆ, ಅಥವಾ ವಿಶ್ವವು ಬರೇ ಅನಾಥವಾಗಿರದೆ ಅದರೊಡೆಯನಾದ ದೇವರೆಂಬವನೇನಾದರೂ ಇದ್ದದ್ದಾದರೆ ಇಂಥ ಸತ್ಯ ತಪಸ್ಸು ಫಲಿಸದೆ ಇರಲಾರದು. ನಂಬುಗೆಯೊಂದಿಲ್ಲದ ಮಟ್ಟಿಗೆ ಇವನು ಮಹದಪರಾಧಿಯೇನೂ ಅಲ್ಲ. ಉಳಿದ ಸಾಧಕರಿಗಿಂತ ಇವನದೇನೂ ಕಡಿಮೆಯದಲ್ಲ, ಇಂದು ನಮ್ಮಿಂದ ಏನು ಮಾಡುವುದಕ್ಕಾಗದಿದ್ದರೂ ಬಿಡಲಿ. ಈ ಸತ್ಯವೊಂದನ್ನಾದರೂ ಹಿಡಿದುಕೊಳ್ಳುವುದಕ್ಕೆ ಸಿದ್ಧರಾದರೆ ನಮ್ಮ ಜನ್ಮದಲ್ಲಿ ಏನಾದರೂ ಕಲ್ಯಾಣದ ಬೀಜವು ಫಲಿಸೀತೆಂಬ ಆಶೆಯಿದೆ. ಈವತ್ತಿನ ಕಾಲದಲ್ಲಿ ಹೊರಗೆಲ್ಲಾ ಬೊಬ್ಬಾಟ ನಡೆದಿದೆ; ಒಳಗೆ ನೋಡಿದರೆ ಬೆಂಕಿ ಬಿದ್ದಿದೆ. ಸಾಮಾನ್ಯವಾಗಿ ಎಲ್ಲೆಲ್ಲೂ ವಿಷಮ ವೈಷಮ್ಯಗಳ ಕೋಲಾಹಲವೆದ್ದಿದೆ. ಈ ಕೋಲಾಹಲದ ಮೂಲ ವೇನೆಂದು ನೋಡಿದರೆ ಬರೇ ಅಜ್ಞಾನ. ಸತ್ಯವೇನೆಂಬುದು ಗೊತ್ತಾಗದೆ ಇರೋಣವೇ ಅಜ್ಞಾನ. ಹೊರಗಿನ ಬೊಬ್ಬಾಟ ಕೇಳಿ ಅದನ್ನು ಅಡಗಿಸುವುದಕ್ಕೆ ಓಡಬೇಕೇ ಅಥವಾ ಒಳಗಿನ ಬೆಂಕಿಯನ್ನು ನೊಂದಿಸುವುದಕ್ಕೆ ಯತ್ನಿಸಬೇಕೇ ? ಮೇಲಾ [illegible] ಯಾವದೇ ಮಾಡಿದರೂ ಮಾಡಲಿ; ಆದರೆ ಹ್ಯಾಗೆ ಏ[illegible] ಮಾಡಬೇಕೆಂಬುದು ತಿಳಿಯದಂತಾಗಿದೆ. ಹೊರಗೆ ರಾಜಕಾರಣದ ಮುಖ್ಯತ್ವವಿದ್ದಷ್ಟೇ ಒಳಗೆ ಧರ್ಮಕಾರಣದ ಮುಖ್ಯತ್ವವಿದೆ. ಲವಲೇಶವೂ ಹೆಚ್ಚುಕಡಿಮೆಯಿಲ್ಲ. ಹೊರಗಿನ ಕಾರಣದಿಂದ ಎಷ್ಟು ನಷ್ಟವೋ ಒಳಗಿನ ಕಾರಣದಿಂದ ಅದಕ್ಕಿಂತ ಹೆಚ್ಚಿನ ನಷ್ಟವಿದೆ. ಇಂದು ನಾವು ಏನು ಮಾಡಿಯೂ ಈ [illegible] ಕೋಲಾಹಲದಲ್ಲಿ ಸಾಮ್ಯವನ್ನುಂಟುಮಾಡುವುದು ಅಸಾಧ್ಯವಾಗಿದೆ. ಕಂಡುಂಡು ಮನಗಂಡ ಧರ್ಮ ಜ್ಞಾನವು ಮನೆ ಮನೆಗೆ ಬಂದು ನಿಲ್ಲುವತನಕ ಸಾಮ್ಯವೆಂಬುದು ಕಲ್ಪನೆಯ ಕಥೆಯೇ ಸರಿ. ರಾಜಶಾಸನದ ಕಲ್ಪನೆಗಿಂತ ಧರ್ಮಶಾಸನದ ಕಲ್ಪನೆಯು ಜನಾಂಗದಲ್ಲಿ ಹೆಚ್ಚು ಬೇರುಬಿಟ್ಟಿದೆ. ಆದ್ದರಿಂದ ಹೊರಗಿನ ಬೊಬ್ಬಾಟಕ್ಕಾಗಿ ಟೊಂಕ ಕಟ್ಟುವಂತೆ ಒಳಗಿನ ತೊಡಕು ಬಿಡಿಸುವುದಕ್ಕೂ ಇಂದು ಜನರು ಸಿದ್ಧರಾಗಬೇಕು.

ಹೊರಗೆ ತಮಗೆ ತೋಚಿದಷ್ಟು ಸಾಗುವ ವೀರರು [illegible] ಮುಟ್ಟುವರೋ ಮುಟ್ಟಲಿ. ಇತ್ತ ಕಣ್ಣುಮುಚ್ಚಿ ಒಳಗೆ [illegible] ಹಾಕುವ ಧೀರರೂ ಬೇಕು. ಇಂದು ಜಗತ್ತು ಏನು [illegible] ಬೇಕೆಂಬುದನ್ನು ತಿಳಿಯದೆ ಕಿಂಕರ್ತವ್ಯತಾಮೂಢವಾ[illegible] ಹೊರಗೆ ಹಾರುವವರು ಹಾರಲಿ. ಒಳಗೆ ಮುಳುಗಿ [illegible] ಜ್ಞಾನವನ್ನು ಪಡೆಯುವವರೂ ಇಂದುಬೇಕು. ತನಗೇ ಆ[illegible] ಲೋಕಕ್ಕೇ ಆಗಲಿ ಇಂದು ಹಿತವಾಗಬೇಕಾದ ದ[illegible] ತಿಳಿಯದಂತಾಗಿದೆ, ತಿಳಿಯದೆಯೇ ಹಿತಮಾಡಿಕೊಳ್ಳುವುದು ಅರ್ಥವೇ ಇಲ್ಲದ ಮಾತು. ಅಧ್ಯಾತ್ಮದಲ್ಲಿ ಮುಂದುವರಿಯುವುದಕ್ಕೆ ನಮಗೆ ವಿಶ್ವಾಸದ ಆಧಾರವಿಲ್ಲ. ಆದರೆ ಸತ್ಯ[illegible] ಕಂಡುಕೊಳ್ಳುವುದಕ್ಕಾಗಿ ಸತ್ಯವನ್ನು ಆಶ್ರಯಿಸುವ[illegible] ಮಾತ್ರ ನಮಗೆ ಅಡ್ಡಿಯಿಲ್ಲ.

( ಅಪೂರ್ಣ )

# ಅಳಲಿ ಮತ್ತು ಸಿಂಹ

## ಒಂದು ವ್ಯಂಗ್ಯ ಕಥೆ

( ಕ್ರಿಲೋಫನ 'ಹಿತೋಪದೇಶ' ದಿಂದ )

ಒಮ್ಮೆ ಒಂದು ಅಳಲಿಯು ಸಿಂಹರಾಜನ ಸೇವೆ ಮಾಡಿತು. ಅದು ಹೇಗೋ ನಾನರಿಯೆ, ಆದರೆ ಸಿಂಹರಾಜನ ಕೃಪಾಕಟಾಕ್ಷಕ್ಕೆ ಅದು ಪಾತ್ರವಾಯಿತೆಂಬುದಿಷ್ಟು ತೀರ ಸತ್ಯ. ಮತ್ತು ಇದೇನು ಅಂಥ ಸುಲಭವಾದ ಕೆಲಸವಲ್ಲವೆಂಬದನ್ನು ಎಲ್ಲರೂ ಬಲ್ಲರು.

ಆದರ ಸೇವೆಗೆ ಪ್ರತಿಯಾಗಿ ಅಳಲಿಗೆ ಇಡಿ ಬಂಡಿತುಂಬ ಕಡ್ಲೆ ದೊರೆಯುವ ವಚನ ಕೊಡಲಾಯಿತು. ವಚನವೇ ?— ಅಹುದು. ಆದರೆ ಅಷ್ಟರಲ್ಲಿ ಎಷ್ಟೋಕಾಲ ಕಳೆದೇ ಕಳೆಯಿತು. ಬಡ ಅಳಲಿಯು ಬಹುತರವಾಗಿ ಹಸಿದು ಕಂಗಾಲಾಗಿ ಕಣ್ಣೀರು ಸುರಿಸಿದರೂ ಸಿಂಹರಾಜನ ಓಲಗದಲ್ಲಿ ನಸುನಗು ತಲಿತ್ತು.

ಸಿಂಹರಾಜನ ಬಾಲದಹಿಂದೆ ಅರಸೂಳಿಗದ ಅಳಲಿಯು ಅಲೆದಾಡುತ್ತ ಬರುತ್ತಿರುವಾಗ ಅಳಲಿಯ ಗೆಳೆಯರು ಮರಗಳ ಕೊಂಬೆಗಳಲ್ಲಿ ಅಲ್ಲಲ್ಲಿ ಕಾಣುತ್ತಿದ್ದರು.

ಕಣ್ಣು ಸೂಲಿ ಹಾಕುವವರೆಗೂ ಅದು ಅವುಗಳನ್ನು ದಿಟ್ಟಿಸಿ ನೋಡೇ ನೋಡುತ್ತಿತ್ತು. ಆದರೆ ಅವು ಕಡ್ಲೆಗಳನ್ನು ಒಡೆದೆ ಒಡೆಯುವವು. ಅರಸೂಳಿಗದ ಅಳಲಿಯು ಕಡ್ಲೆಗಿಡಗಳ ಕಡೆಗೆ ಒಂದಡಿಯಿಕ್ಕಿ ತನ್ನ ಸೊಗಸಿನ ಹಳೆಯ ಗೆಳೆಯರನ್ನು ನೋಡುವದು. ಆದರೆ ಇದಕ್ಕೂ ಹೆಚ್ಚೇನೂ ಅದು ಮಾಡಲಾರದು. ಸಿಂಹರಾಜನಿಗಾಗಿ ಏನನಾದರೂ ಮಾಡಲು ಕೂಡಲೆ ಕರೆಯಾದರು ಬರುವದು; ಜಗ್ಗಿಕೊಂಡು ಹೋದರೂ ಹೋದರೇ !

ಆದರೆ ನೋಡಿ ! ಕೊನೆಗೊಮ್ಮೆ ಅಳಲಿಗೆ ಮುಪ್ಪು ಬಂದು, ಸಿಂಹರಾಜನಿಗೆ ಅದು ಬೇಸರವಾಯಿತು. ಕೆಲಸದಿಂದ ನಿವೃತ್ತವಾಗುವ ಕಾಲವು ಬಂದಿತು. ರಾಜಾಧಿಕಾರಿಗಳು ಹಾಗೆ ರಾಜಾಜ್ಞೆಯನ್ನು ಕಳುಹಿದರು ಮತ್ತು ಇಡಿ ಬಂಡಿತುಂಬ ಕಡ್ಲೆಗಳನ್ನು ನಿಜವಾಗಿಯೂ ಕೊಟ್ಟರು.

ಒಳ್ಳೊಳ್ಳೆಕಾಳು ! ಅಂಥ ಕಡ್ಲೆಗಳನ್ನು ಜನರಾರೂ ಆ ಮೊದಲು ಕಂಡಿರಲೇಇಲ್ಲ. ಆರಿಸಾರಿಸಿದಕಾಳು—ಒಂದೊಂದೂ ಒಂದೊಂದರಂತಹವು. ಅತ್ಯಂತ ವಿಸ್ಮಯಕರ. ಆದರೆ ಒಂದೇ ಒಂದು ದುರ್ದೈವದ ಸಂಗತಿ—ಅಷ್ಟು ಹೊತ್ತಿಗೆ ಅಳಲಿಯ ಹಲ್ಲುಗಳೆಲ್ಲ ಬಿದ್ದುಹೋಗಿ ಬಹಳ ದಿನಗಳಾಗಿದ್ದವು.

---

# ಹಂಬಲದ ಹಾಡು

ನಹುಷನ ಉದ್ದಾಮಶನಕ್ಕೆ ಪ್ರತಿಭಟಿಸಿದ ಅಗಸ್ತ್ಯನಂತೆ ಮಹಾತ್ಮಾ ಗಾಂಧಿಯವರ ತೇಜೋಮಯ ಶರೀರವು ಧರ್ಮಯುದ್ಧಕ್ಕೆಂದು ಹೊರಮೊಂಚಿತು. " ಇದು ನಮ್ಮ ಕೊನೆಯ ಯುದ್ಧ. ಇದರಲ್ಲಿ ಸತ್ಯಕ್ಕೆ ಇಲ್ಲವಾದರೆ ಮೃತ್ಯುವಿಗೆ ಜಯ. ಕೊನೆಗಾಣದೆ ಮನೆಗಾಣಲಿಕ್ಕಿಲ್ಲ"ವೆಂದು ಹಟ ತೊಟ್ಟು ಮಹಾತ್ಮರು ಸಾಗಿದರು. ಆ ಘೋರ ಪ್ರತಿಜ್ಞೆಯನ್ನು ಕೇಳಿ ಯಾವನ ಎದೆಯು ಜಲ್ಲೆನ್ನಲಿಕ್ಕಿಲ್ಲ? ಕಳವಳಿಸಿದ ಮನಸ್ಸು ತನ್ನ ಕನಿಕರದ ಸಂತಾಪವನ್ನು ಒಪ್ಪಿಕೊಂಡು ಮಹಾತ್ಮರ ಸ್ವರೂಪ—ದರ್ಶನಕ್ಕಾಗಿ ಹಂಬಲಿಸಿ ಹಾಡಿದ್ದು ಹೀಗೆ:

೧

ಏನಿದಾನಂದವಯ್ಯಾ । ಏನಿದಚ್ಚರಿಯಿದಯ್ಯಾ ॥
ಹೊರಗೆಲ್ಲ ನಡುಗುತಿದೆ । ಒಳಗೆಲ್ಲ ಗುಡುಗುತಿದೆ ।
ಹೊರಬರಲು ಹೆದರಿ ತಾ ಅಡಗುತಿಹದಯ್ಯಾ ।
ಒಳಗಿರಲು ತಾಳದಲೆ ಮಿಡುಕುತಿಹದಯ್ಯಾ ।
ನನಗಿಂದು ಬಲವಾಗಿ ತೊಡಕುತಿಹದಯ್ಯಾ ।
ತಾಳೆನೀ ಮುಯ್ಯಾ ॥ ತಾಳೆನೀ…॥
ಕೊಡು ನಿನ್ನ ಕಯ್ಯಾ ।
ದೂಡೆನ್ನ ಮಾಯಾ । ತೋರಿ ಉಪಾಯಾ ।
ನೀನೆನ್ನ ಮನದ ರಾಯಾ ॥

೨

ಇಂದು ತಾ ಹೊರಹೊಂಟ । ಎಂದು ಬರುವನೊ ಬಂಟ ।
ಇನ್ನೆಂದು ಕಾಣುವನೊ ಜಗದ ದೊರೆ—ನೆಂಟಾ ।
ಇನ್ನೆಂತು ಹರಿಯುವದು ಈ ಕೊರಲ ಗಂಟಾ ।
ಮುಂದೇನು ಬರುವದೆಂಬ ಭಯದ ಉತ್ಕಂಠಾ ।
ಹೀಗಾಗಿ ಬೆಂದು ॥ ಹೀಗಾಗಿ…॥
ಕೇಳುವೆನು ಇಂದು ।
ಮಾತು ನಿನಗೊಂದು । ಅದುವೆ ಸರಿಯೆಂದು ।
ಹೇಳೆನ್ನ ಮನದ ರಾಯಾ ॥

೩

ಯಾರು ನೀ ಎಂದೆನುತ । ಹಗಲಿರುಳು ಚಿಂತಿಸುತ ।
ಬಗೆಯಿಲ್ಲದಂತಾಗಿ ದಣಿಯಿತ್ತೆ ಚಿತ್ತಾ ।
ದಣಿಕೆಯಾ ಬಿಸಿಲಿನಲಿ ಕುದುರೆಯೆನಿಸಿತ್ತಾ ।
ತೋರಿದಂತಾಗೆ ತಾ ದುಡುಕುತಲಿ ಅತ್ತಾ ।
ಮೋಜು ತಾನೆಂಥಾ ॥ ಮೋಜು...॥
ಯಾರು ನೀನೆಂತ ।
ಕೊನೆಗೆ ತಿಳಿ ಬಂತಾ । ಹೇಳು ದಿಟವೆಂತಾ ।
"ನೀನೊಂದು ಮನದ ಮಾಯಾ." ॥

೪

ಕಾಣಿಸುವ ಲೋಕದಾ । ಕಾಣಿಕೆಯು ಎರಡು ವಿಧ ।
ಕೆಡಕೆಂದು ಒಳಿತೆಂದು ಸಟೆ-ದಿಟಗಳೆಂದು ।
ಒಡಮೂಡಿ ಕಾಣಿಸುವ ಕಳಿಬಿಳಿಗಳೆಂದು ।
ಜೀವಿಸುವದೊಂದು ನಿರ್ಜೀವ ಮತ್ತೊಂದು ।
ಹೀಗೆ ನಿನಗಿಲ್ಲ ॥ ಹೀಗೆ...॥
ಎರಡುತರ ಹೊಲ್ಲ ।
ಒಮ್ಮನದ ಮಲ್ಲ । ಒಳಹೊರವೆ ಇಲ್ಲ ।
ಅಲ್ಲವೆ ನೀನು ಮಾಯಾ ? ॥

೫

ದೇಹವೆ ನಿನಗಿಲ್ಲ । ಸಂದೇಹವೆನಗಿಲ್ಲ ।
ದೇಹವಿರೆ ನಿರ್ದ್ವಂದ್ವ ತಾನಾಗಬಹುದೆ ।
ದೇಹ ಮುಚ್ಚಿದ ಮನವು ಜಗದಿ ಹಬ್ಬುವದೆ ।
ದೇಹವಿಲ್ಲದ ಜೀವ ಜಡಜೀವವಹುದೆ ।
ಅಹುದೆನ್ನೆ ತಪ್ಪಾ ॥ ಅಹು...॥
ಅಲ್ಲವೆನೆ ಒಪ್ಪಾ ।
ಹೇಳು ಹೇಳಪ್ಪಾ । ನಿನ್ನಯು ಸ್ವರೂಪ ।
ಹೇಳೆನ್ನ ಹಟವಿದಯ್ಯಾ ॥

೬

ನಡೆಯುವವು ಜನಕಾಗಿ । ನೀ ನಿಂತ ಕಾಲ್ಗಳು ।
ದುಡಿಯುವವು ಜನಕಾಗಿ । ನೀಳಾದ ಕೈಗಳು ।
ನುಡಿಯುವದು ಜನಕಾಗಿ । ನಸುನಗೆಯ ಬಾಯಿಯು ।
ಇನ್ನೆಲ್ಲಿ ನಿನ್ನ ಮೆಯ್ ? ಮಾಯೆಯಿದು ಎಲ್ಲಿ ।
ಮೈಯಿಲ್ಲದಂತಾಗೆ ಮನುಜ ನೀನಲ್ಲ ।
ಇನ್ನು ಮೈಮೆಯ ನಿನ್ನ ಬಣ್ಣಿಪನು ಬಲ್ಲ ।
ನುಡಿಯಲಾಸಲ್ಲ ॥ ನುಡಿ...॥
ನುಡಿದರದು ಹೊಲ್ಲ । ನುಡಿಯಬೇಕಲ್ಲ ।
ಕಲಿಯೆ ಜನಮನದ ಜೀಯಾ ॥

೭

ಒಳುನಾಡ ಬೆಳಗುವಾ । ಹೊಸಪರಿಯ ರವಿಯೆನೆ ।
ಒಳುಹೊಲೆಯು ತೊಳೆಯುವಾ । ಕಳಕಳಿಯ ಜಲವೆನೆ ।
ಒಳುಮನವನಳೆಯುವಾ । ವಾಮನನ ಕಳೆಯೆನೆ ।
ಜಗವ ಸುಡೆ * ಮುಗಿವ ಕಿಡಿ ಇದು ಕಡೆಯ ಹೊನ್ನೆ ॥
ಇದೆ ಸತ್ವ ಇದೆ ತತ್ವ ಇದು ಶಕ್ತಿಯೆನ್ನೆ ।
ಇದೆ ಬುದ್ಧಿ ಇದುವೆ ಸಾರದ ಸಾರವೆನ್ನೆ ।
ಸಕಲ-ರಸವನ್ನೆ ॥ ಸಕಲ. ॥
ಸವಿಶಾಂತವನ್ನೆ । ಮಾಡಿ ಬರೆವವನೆ ।
ಇವನೆ ಕವಿ ಮನದ ರಾಯಾ ॥

'ಆನಂ'

* ಮುಗಿವ ಕಿಡಿ=ಪ್ರಳಯಾಗ್ನಿ.

## ಕಂಪನಿ ಸರಕಾರದ ಪೂರ್ವೋತ್ತರಗಳು

ಅಥವಾ

# ದಲಾಲರ ದರೋಡೆ

ಲೇಖಕರು:– ಎಸ್. ಕೃಷ್ಣಶರ್ಮ, ಚಿತ್ರದುರ್ಗ.

೧೮ನೆಯ ಶತಮಾನದಲ್ಲಿ ಜಗತ್ತಿನ ಎಲ್ಲಾ ಕಡೆಯಲ್ಲಿದ್ದಂತೆಯೇ ಹಿಂದುಸ್ಥಾನದಲ್ಲೂ ನದಿಗಳ ಮೇಲೆ, ರಸ್ತೆಗಳಲ್ಲಿ ಸಾಮಾನು ಸಾಗಿಸಲು ಒಳದೇಶದ ಸುಂಕ ತೆರಿಗೆಗಳನ್ನು ತೆರಬೇಕಾಗಿತ್ತು. ಈಸ್ಟ್ ಇಂಡಿಯಾ ಕಂಪೆನಿಯವರು* ಅವರ ರಫ್ತು ಆಮದು ( Export-Import ) ವ್ಯಾಪಾರಕ್ಕೆ ಈ ತೆರಿಗೆಗಳಿಲ್ಲದಂತೆ ಒಂದು ಫರ್ಮಾನನ್ನು ನವಾಬನಿಂದ ಸಂಪಾದಿಸಿದ್ದರು. ಯುರೋಪದಿಂದ ಇಲ್ಲಿಗೆ ಅವರು ಮಾರಲು ತಂದ ಸಾಮಾನು, ಇಲ್ಲಿಂದ ಅಲ್ಲಿಗೆ ಒಯ್ದ ದಿನಸು– ಎಲ್ಲಾ ತೆರಿಗೆಯಿಲ್ಲದೆಯೇ ದೇಶದಲ್ಲಿ ಸಾಗಿಹೋಗುತ್ತಿತ್ತು. ಇಂಗ್ಲಿಷರ ರೆಸಿಡೆಂಟನಿಂದಾಗಲಿ ಇಂಗ್ಲಿಷು ಕಾರಖಾನೆಗಳ ಚಾಲಕರಿಂದಾಗಲಿ ಸಹಿಮಾಡಿಸಿಕೊಂಡು ಬಂದ 'ದಸ್ತಕ'–ಒಂದು ಚೀಟಿಯನ್ನು ಸುಂಕದ ಕಟ್ಟೆಯಲ್ಲಿ ತೋರಿಸಿದರೆ ಅವರ ಮಾಲೆಲ್ಲ ಸುಂಕವಿಲ್ಲದೆ ಸಾಗುತ್ತಿತ್ತು.

೧೭೫೭ರಲ್ಲಿ ಪ್ಲಾಸಿ ಯುದ್ಧ ನಡೆದು ಇಂಗ್ಲೀಷರದರಲ್ಲಿ ಗೆದ್ದಕೂಡಲೆ ಅವರ ಗೌರವ ವರ್ಚಸ್ಸುಗಳು ಹೆಚ್ಚಿದವು. ಕಂಪೆನಿಯ ಪರವಾನಗಿಯಲ್ಲದೆ ಸ್ವತಂತ್ರವಾಗಿಯೂ ತಮ್ಮ ಜವಾಬ್ದಾರಿಯ ಮೇಲೆಯೇ ಒಳದೇಶದ ವ್ಯಾಪಾರಮಾಡುತ್ತಿದ್ದಂಥ ಕಂಪೆನಿಯ ನೌಕರರು, ಆ ಸಮಯದಲ್ಲಿ ಕಂಪೆನಿಯು ಆಮದುರಫ್ತಿನ ಸುಂಕದ ಬಗ್ಗೆ ಪಡೆಯುತ್ತಿದ್ದ 'ಬಿಡತಿ'ಯನ್ನು ತಾವೂ ಪಡೆಯಬೇಕೆಂದು ಗೊಂದಲಹಾಕಿದರು. ಈ ಸಂಗತಿಯನ್ನು ಚೆನ್ನಾಗಿ ಗಮನಿಸಬೇಕಾದುದು ಅಗತ್ಯ. ಇಲ್ಲಿಂದ ಮುಂದೆ ಬಂಗಾಳದ ರಾಜಕೀಯ, ಆರ್ಥಿಕ, ವಾಣಿಜ್ಯ ಚರಿತ್ರೆಯಲ್ಲಿ ಈಯಂಶ ಹುದುಗಿಕೊಂಡು ಹಾವಳಿಮಾಡಿದೆ.

ಕಂಪೆನಿಯವರ 'ಆಮದು ರಫ್ತು' ವ್ಯಾಪಾರಕ್ಕೆ ಮಾತ್ರ ಕಂಪೆನಿಯವರಿಗೆ ಸುಂಕದ ಬಿಡತಿಯನ್ನು ಬಂಗಾಳದ ನವಾಬರು ದಯಪಾಲಿಸಿದ್ದರು. ಆದರೆ ಕಂಪೆನಿಯ ನೌಕರರು ತಮ್ಮ ಸ್ವಂತ ಜವಾಬ್ದಾರಿಯ ಮೇಲೆ ವ್ಯಾಪಾರನಡೆಸಿ, ಬಂಗಾಳದಲ್ಲಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ದಿನಸನ್ನು ಸಾಗಿಸುತ್ತ, "ಆ ಒಳದೇಶದ ವ್ಯಾಪಾರ'ಕ್ಕೂ ಸುಂಕದ ಬಿಡತಿಯು ತಮಗೆ ಬರಬೇಕೆಂದು ಗುಲ್ಲೆಬ್ಬಿಸಿದರು.

ಪ್ಲಾಸಿ ಕದನದ ನಂತರ ೧೭೫೭ರಲ್ಲಿ ಕ್ಲೈವನು ಮೀರ ಜಾಫರನನ್ನು ಬಂಗಾಳದ ನವಾಬನನ್ನಾಗಿ ಮಾಡಿದ. ಆದರೆ ಮೀರಜಾಫರನು ಅಸಮರ್ಥನೆನಿಸಿಕೊಂಡು ಇಂಗ್ಲಿಷರಿಗೆ ಮಾಡಬೇಕಾಗಿದ್ದ ಲಾಭವನ್ನು ಮಾಡಲಾರದೆ ಹೋದ. ೧೭೬೦ರಲ್ಲಿ ಅವನನ್ನು ತಳ್ಳಿ ಮೀರಕಾಸಿಮನನ್ನು ಬಂಗಾಳದ ನವಾಬನನ್ನಾಗಿ ಮಾಡಿದರು. ಈ ಹೊಸ ನವಾಬನು ತನಗೆ ಪಟ್ಟಕಟ್ಟಿದ್ದಕ್ಕಾಗಿ ಕಂಪನಿಯವರಿಗೆ ಬದ್ರ್ವಾನ, ಮಿಡನಪುರ, ಚಿತ್ತಗಾಂಗ– ಈ ೩ ಜಿಲ್ಲೆಗಳ ಕಂದಾಯದ ವರಮಾನವನ್ನು ಅವರಿಗೆ ಬಹುಮತಿಯಾಗಿ ದಾನಮಾಡಿದ. ಮೀರಜಾಫರನು ಕೊಡದೆ ಉಳಿದಿದ್ದ ಬಾಕಿಯನ್ನು ಕೊಡಲು ಒಪ್ಪಿದ. ಕಂಪನಿಯವರು ದಕ್ಷಿಣ ಹಿಂದುಸ್ಥಾನದಲ್ಲಿ ನಡೆಸಿದ ಯುದ್ಧಗಳ ವೆಚ್ಚಕ್ಕಾಗಿ ೫ ಲಕ್ಷ ರೂಪಾಯನ್ನೂ ಚಂದಾ ಆಗಿ ಕೊಡಲು ಒಪ್ಪಿದ. ಮಾತಿಗೆ ತಪ್ಪದಂತೆ ಮೀರಕಾಸಿಮನು ಯೋಗ್ಯ ಭಾರತಪುತ್ರನಂತೆ ಈ ಎಲ್ಲ ವಚನಗಳನ್ನೂ ಎರಡೇ ವರ್ಷದಲ್ಲಿ ನಡೆಸಿಕೊಟ್ಟ.

ಆದರೆ ಒಳದೇಶದ ವ್ಯಾಪಾರದ ಧಾಂದಲೆ ಮಾತ್ರ ದಿನದಿನಕ್ಕೆ ಹೆಚ್ಚಿತು. ಊರಿಂದೂರಿಗೆ ಕಂಪನಿಯ ನೌಕರರು ಮಾಲನ್ನು ಸುಂಕವಿಲ್ಲದೆಯೇ ಸಾಗಿಸುತ್ತಿದ್ದರು. ದೇಶೀ ವರ್ತಕರ ಮಾಲಿಗೆ ಮಾತ್ರ ಸುಂಕ ಹೆಚ್ಚಾಗಿಯೇ ಸಲ್ಲಬೇಕಾ

---

* ನಮ್ಮ ದೇಶಕ್ಕೆ ನಮ್ಮೊಡನೆ ಸರಿಬಾರದ ದಿನಸು, ಬಟ್ಟೆಗಳ ವ್ಯಾಪಾರ ಮಾಡಲು ಪರದೇಶೀ ವರ್ತಕರು ಬಂದರು. ಅವರಲ್ಲಿ ಈಸ್ಟ್ ಇಂಡಿಯಾ ಕಂಪನಿ ಇಂಗ್ಲಿಷರದು. ಈಗ ಹತ್ತಿ ಸೇಂಗಾಯಿ ವ್ಯಾಪಾರಕ್ಕೆ ಬಂದಿರುವ ರ್‍ಯಾಲಿ, ವಾಲ್ಕಾರ್ಟ್, ಲ್ಯಾಂಗಿ ಮುಂತಾದ ಕಂಪನಿಗಳಂತೆ ಅವರೂ ಬಂದರು. ದಲಾಲಿಗಳಂತೆ ಬಂದು ದೊರೆಗಳಾದರು. ಈ ಬಗ್ಗೆ 'ದಲಾಲಿಗಳು ದೊರೆಗಳಾದರು' ಎಂಬ ಪುಸ್ತಕವನ್ನೋದಬೇಕು.

ಗಿತ್ತು. ದೇಶೀ ವರ್ತಕರು ಹಾಳಾದರು. ನವಾಬನ ಬೊಕ್ಕಸ ಬರಿದಾಯ್ತು. ಕಂಪನಿಯ ನೌಕರರು ಮಾತ್ರ ವ್ಯಾಪಾರಕ್ಕೆ ಏಕಛತ್ರಾಧಿಪತಿಗಳಾಗಿ ಅತುಳ ಐಶ್ವರ್ಯವನ್ನು ಗಳಿಸಿದರು.

೧೭೬೦ರಲ್ಲಿ ಕ್ಲೈವನ ಬದಲಾಗಿ ಹೆನ್ರಿ ವಾನ್ಸಿಟಾರ್ಟನು ಬಂದ. ಅವನು ಈ ಪೀಡೆಯನ್ನೂ ಅದರ ಕಾರಣಗಳನ್ನೂ ಹೀಗೆ ವರ್ಣಿಸಿದ.

" ವ್ಯಾಪಾರದ ವಿಷಯದಲ್ಲಿ ಮೀರಜಾಫರನನ್ನು ಹೊಸ ಅನುಕೂಲಗಳ ಬಗ್ಗೆ ಕೇಳಲಿಲ್ಲ. ಕೇಳುವ ಅಗತ್ಯವೂ ಇರಲಿಲ್ಲ ಕಂಪನಿಯವರಿಗೆ. ೧೭೫೭ರಲ್ಲಿ ಆದ ಕರಾರುಗಳೇ ಕಂಪನಿಗೆ ಸಾಕಾಗಿದ್ದವು. ನವಾಬನ ನಿರಂಕುಶಾಧಿಕಾರದ ಏಟು ಮಾತ್ರ ಬೇಡಾಗಿತ್ತು. ಉಳಿದುದೆಲ್ಲ ಕಂಪನಿಗೆ ತೃಪ್ತಿಕರವಾಗೇ ಇತ್ತು. ಹೀಗಿರಲು ನಮ್ಮ ದರ್ಪವು ದೇಶದಲ್ಲಿ ರೂಢಿಯಾದೊಡನೇ ಕಂಪನಿಯ ನೌಕರರು, ಅವರ ನೌಕರರು ಹೊಸ ಹೊಸ ಪದ್ಧತಿಗಳನ್ನು ಆಮಲಿನಲ್ಲಿ ತಂದರು. ಇದು ವರೆಗೆ ವ್ಯಾಪಾರಮಾಡಲು ಅಧಿಕಾರವಿಲ್ಲದೆ ಇದ್ದ ದಿನಸುಗಳ ವ್ಯಾಪಾರವನ್ನು ಮೊದಲು ಮಾಡಿದರು. ದೇಶದ ವ್ಯವಹಾರದಲ್ಲಿ ಕೈಹಾಕಿದರು. "

ವೆರ್ಲ್ಸ್ಟ್ ಸಾಹೇಬನು ಅವನ ತರುವಾಯ ಗವರ್ನರ. ಅವನೂ ಹೀಗೇ ಬರೆದ.

" ಸುಂಕ ಕೊಡದೆ ವ್ಯಾಪಾರ ನಡೆಸಿದರು. ಇದನ್ನು ನಡೆಸಲು ಲೆಕ್ಕವಿಲ್ಲದಷ್ಟು ದಬ್ಬಾಳಿಕೆಗಳನ್ನು ಚಲಾಯಿಸಿದರು. ಇಂಗ್ಲಿಷ ಗುಮಾಸ್ತರು ಜನರಿಗೆ ಹಿಂಸೆಕೊಟ್ಟು, ಅಷ್ಟಕ್ಕೆ ತೃಪ್ತಿಯಿಲ್ಲದೆ ತಮ್ಮ ತಮ್ಮ ಅಕೃತ್ಯಗಳನ್ನು ವಿಚಾರಿಸಲು ನವಾಬನ ಅಧಿಕಾರಿಗಳು ಬಂದರೆ ಅವರನ್ನೇ ಹಿಡಿದು ಹೊಡೆಸು ಬಾದಶಾಹಿಯ ಅಧಿಕಾರವನ್ನೇ ತಿರಸ್ಕರಿಸಿದರು. ಇದೇ ಮೀರಕಾಸಿಮನೊಡನೆ ನಮಗೆ ಯುದ್ಧವಾಗಲು ಕಾರಣ. "

ಸ್ವಯಂ ನವಾಬ ಮೀರಕಾಸಿಮನೇ ಇಂಗ್ಲಿಷ ಗವರ್ನರನಿಗೆ ಕಂಪನಿಯ ನೌಕರರ ದಬ್ಬಾಳಿಕೆಯ ಬಗ್ಗೆ ಬಲವಾಗಿಯೇ ಪತ್ರ ಬರೆದ.

" ಕಲ್ಕತ್ತೆಯ ಕಾರಖಾನೆಯಿಂದ ಕಾಸಿಂಬಜಾರ, ಪಾಟ್ನಾ, ಡಾಕಾದ ವರೆಗೆ ಎಲ್ಲ ಇಂಗ್ಲಿಷು ಮುಖಂಡರು, ಅವರ ಅಧಿಕಾರಿಗಳು ಗುಮಾಸ್ತರು ಪ್ರತಿನಿಧಿಗಳು ಸೇರಿ— ರೈತರು, ರಾಜರು, ಜಮೀನ್‌ದಾರರು, ತಾಲೂಕದಾರರು ಎಲ್ಲಾ ತಾವೇ ಆದಂತೆ ವ್ಯವಹರಿಸುತ್ತಿದ್ದಾರೆ. ಕಂಪನಿಯ ಬಾವುಟ ಪ್ರತಿ ಮನಸು ಬಂದರೆ ಅಲ್ಲಿ ಏರಿಸಿ ನಮ್ಮ ಅಧಿಕಾರಿಗಳ ದೌಲತ್ತು ನಡೆಯದಂತೆ ಮಾಡುತ್ತಾರೆ. ಅಲ್ಲದೆ ಪ್ರತಿ ಜಿಲ್ಲೆಯಲ್ಲಿಯ ಗುಮಾಸ್ತರು ನೌಕರರು ಎಲ್ಲರೂ ಪ್ರತಿಯೊಂದು ಗುಪ್ತ, ಪರಘಣ, ಕಛೇರಿಗಳಲ್ಲೂ, ಎಣ್ಣೆ, ಮೀನು, ಹುಲ್ಲು, ಬಿದಿರು, ಅಕ್ಕಿ, ಭತ್ತ, ಅಡಿಕೆ— ಮುಂತಾದ ದಿನಸುಗಳ ವ್ಯಾಪಾರ ನಡೆಸುತ್ತಾರೆ. ಕಂಪನಿಯ ದಸ್ತಕ ಕೈಲಿದ್ದರಾಯಿತು, ಪ್ರತಿಯೊಬ್ಬನೂ ಕಂಪೆನಿಯ ಮಾಲಕನಂತೆಯೇ ತಿಳಿದುಕೊಳ್ಳುತ್ತಾನೆ. "

ಮೀರಕಾಸೀಮನ ದೂರುಗಳು ನಿರಾಧಾರವಾಗಲಿಲ್ಲ. ಪಾಟ್ಣಾದ ಪ್ರತಿನಿಧಿ ಎಲ್ಲಿಸನು ನವಾಬನೊಡನೆ ದ್ವೇಷಬುದ್ಧಿಯಿಂದ ವರ್ತಿಸಿ ನವಾಬನಿಗೆ ಅಸಹ್ಯಬರುವಂತೆ ಮಾಡಿದ. ಆರ್ಮೇನಿಯಾ ದೇಶದ ವರ್ತಕನೊಬ್ಬ ನವಾಬನ ಉಪಯೋಗಕ್ಕಾಗಿ ಸ್ವಲ್ಪ ಸಾಲ್ಟ್‌ಪೀಟರ್‌ನ್ನು ಕೊಂಡನೆಂದು ಅವನ ಮೇಲೆ ಆರೋಪ ಬಂತು. ಇದು ಕಂಪೆನಿಯ ಹಕ್ಕಿಗೆ ತಿರಸ್ಕಾರವೆಂದು ಭಾವಿಸಿ ಎಲ್ಲಿಸನು ಅವನನ್ನು ಹಿಡಿದು ಕೈದಿ ಮಾಡಿ ಕೋಳತೊಡಿಸಿ ಕಲ್ಕತ್ತೆಗೆ ಕಳಿಸಿದ. ಇಂಗ್ಲಿಷ ಸೈನ್ಯದಿಂದ ಪರಾರಿಯಾದ ಇಬ್ಬರು ಸಿಪಾಯಿಗಳು ನವಾಬನ ಮಾಂಘೈರು ಕೋಟೆಯಲ್ಲಿ ಅಡಗಿಕೊಂಡಿರುವರೆಂದು ಅನುಮಾನಪಟ್ಟು ಎಲ್ಲಿಸನು ಆ ಕೋಟೆಯೊಳಗೆ ಹುಡುಕಲು ತನ್ನ ಸಿಪಾಯಿಗಳನ್ನು ಕಳಿಸಿದ. ಓಡಿಹೋದವರು ಸಿಗಲಿಲ್ಲ. ಆಗ ಗವರ್ನರನ ಮಂತ್ರಿಮಂಡಲದ ಸಭ್ಯನಾಗಿದ್ದ ವಾರನ್ ಹೇಸ್ಟಿಂಗ್ಸನು ಈ ರೀತಿ ನವಾಬನ ಅಧಿಕಾರವನ್ನು ಬಹಿರಂಗವಾಗಿ ತಿರಸ್ಕರಿಸುವುದು ಅಯೋಗ್ಯವೆಂದೂ ಅದರಿಂದ ಜಗಳ ಬರಬಹುದೆಂದೂ ತರ್ಕಿಸಿದ.

"ಎಲ್ಲಿಸನ ಬಗ್ಗೆ ನಾನು ಏನು ಮಾಡಲೂ ತಿಳಿಯದವನಾಗಿದ್ದೇನೆ. ಅವನ ನಡತೆ ಬಹಳ ಅವಿವೇಕ. ನವಾಬನೊಡನೆ ಅವನ ದ್ವೇಷಬುದ್ಧಿ ಬಹಿರಂಗದಲ್ಲೇ ದೃಢವಾಗಿ ಕಾಣುತ್ತಿದೆ. ಇನ್ನೂ ಹೇಳಿದರೆ ಕಂಪೆನಿಗೆ ಕೆಟ್ಟ ಹೆಸರು, ಜನರಲ್ಲಿ ಕಂಪೆನಿಯ ಬಗ್ಗೆ ಅನಾದರ ಬರದಿರಲಾರದು.......ಜಗತ್ತು ನಡೆದ ಸಂಗತಿಗಳಿಂದ ತೀರ್ಮಾನ ಕೊಡುತ್ತದೆ. ಅದಕ್ಕೆ ತೋರುವುದೇನು? ಬಹಿರಂಗವಾಗಿ ನವಾಬನ ದೌಲತ್ತಿನ ತಿರಸ್ಕಾರ— ಅವನ ಅಧಿಕಾರಿಗಳ ಕೈದು— ಅವನ ಕೋಟೆಗಳ ಮೇಲೆ ಕಂಪನಿಯ ಸಿಪಾಯಿಗಳನ್ನು ಕಳಿಸಿದುದು. ಅದು ಹೇಳುವದೇನು? ಈ ಪ್ರಾಂತ

ಇಂಗ್ಲೀಷು ಅಧಿಕಾರಿ ಮುಖ್ಯನು ನವಾಬನ ಸುಭಾದಾರಿಯನ್ನು ಮನ್ನಿಸುವುದಿಲ್ಲ. ಇದರ ಫಲ ಸ್ಪಷ್ಟವಾಗಿಯೇ ಇದೆ. ಬಹಿರಂಗ ಕಲಹವೇ ಇದರ ಪರಿಣಾಮ."

ಕಂಪೆನಿಯ ನೌಕರರು ಸ್ವತಂತ್ರವಾಗಿ ಮಾಡಿದ ವ್ಯಾಪಾರಕ್ಕೆ 'ಬಿಡತಿ' ಆಗಬೇಕೆಂದು ಎಬ್ಬಿಸಿದ ಗಲಾಟೆಗೆ ವಿರುದ್ಧವಾಗಿ ಕೊನೆಯವರೆಗೂ ಹೊಡೆದಾಡಿ, ಈ ವ್ಯಾಪಾರದಿಂದ ಬಂಗಾಳೀ ವರ್ತಕರಿಗೆ ಆಗುತ್ತಿದ್ದ ಹಾವಳಿಯ ಬಗ್ಗೆ ಮರುಕಗೊಂಡ ಕೀರ್ತಿ ವಾರನ್ ಹೇಸ್ಟಿಂಗ್ಸನದು. ಅವನ ಕಣ್ಣುಗಳು ಸ್ವಾರ್ಥದಿಂದ ಕುರುಡಾಗಿರಲಿಲ್ಲ. ಬಂಗಾಳಿಗಳಿಗೆ ಆಗುತ್ತಿದ್ದ ಅನ್ಯಾಯವನ್ನು ಕಠಿಣ ಶಬ್ದಗಳಿಂದ ಬಲವಾಗಿ ದೂಷಿಸಲು ಅವನ ಸ್ವಜನಾಭಿಮಾನವು ಅಡ್ಡಿಯಾಗಲಿಲ್ಲ.

"ತಮ್ಮ ಮುಂದೆ ಒಂದು ಮಾತನ್ನಿಂದು ಹೇಳುವೆನು. ಅದನ್ನು ಸವರಣೆ ಮಾಡದಿದ್ದರೆ ನವಾಬನಿಗೆ ಕಂಪೆನಿಗೆ ಸ್ನೇಹ ಕೂಡಿಸಲು ಮಾಡುವ ಯಾವದೇ ಪ್ರಯತ್ನವಾಗಲಿ ವಿಫಲವಾಗುತ್ತದೆ. ಇಂಗ್ಲಿಷ ಜನಾಂಗದ ಹೆಸರಿನಲ್ಲಿ ದಬ್ಬಾಳಿಕೆ ನಡೆಯುತ್ತಿದೆ. ಅನೇಕ ಕಡೆ ನಾನು ಹೋದಾಗ ಇಂಗ್ಲಿಷು ಬಾವುಟ ಹಾರುತ್ತಿತ್ತು. ನದಿಯಲ್ಲಿ ನಾನು ನೋಡಿದ ದೋಣಿಗಳಲ್ಲಿ ಇಂಗ್ಲಿಷು ಬಾವುಟ ಇಲ್ಲದವೇ ಇಲ್ಲ. ಯಾರೇ ಅದನ್ನು ಹಿಡಿಯಲಿ—ಅವು ಹೆಚ್ಚಿ ಹೋಗುವುದರಿಂದ ನವಾಬನ ಬೊಕ್ಕಸಕ್ಕಾಗಲಿ, ದೇಶದ ಶಾಂತಿಗಾಗಲಿ, ನಮ್ಮ ಜನಾಂಗದ ಗೌರವಕ್ಕಾಗಲಿ ಸಹಾಯವಿಲ್ಲ; ಸ್ಪಷ್ಟವಾಗಿಯೇ ತೊಂದರೆಯುಂಟು. ಕೆಲವು ಮಂದಿ ಸಿಪಾಯರು ನಮ್ಮ ಮುಂದೆ ಹೋಗುತ್ತಿದ್ದರು. ಅವರ ದೊಂಬಿಯನ್ನು ನೋಡಿದರೆ ಸಾಕು. ಅವರಿಗೆ ಸ್ವತಂತ್ರಾಧಿಕಾರ ಸಿಕ್ಕರೆ ಅವರ ಗರ್ವ ಅವರ ಲೂಟಿಯ ಚಪಲ ಎಷ್ಟು ದೂರ ಹೋದೀತೆಂಬುದು ತಿಳಿಯುತ್ತದೆ. ದಾರಿಯಲ್ಲಿ ನನಗೆ ಎಷ್ಟೋ ಜನ ಇವರ ಬಗ್ಗೆ ದೂರು ತಂದರು. ನಾವು ಹೋದಾಗ ನಾವು ಸಿಪಾಯಿಗಳೆಂದು ಭಾವಿಸಿ ಪಟ್ಟಣದ ಜನರೆಲ್ಲ ಊರು ಬಿಟ್ಟು ಓಡಿಹೋದರು. ಅಂಗಡಿಗಳನ್ನು ಮುಚ್ಚಿದರು. ಇಂಥ ಸಣ್ಣ ಪುಟ್ಟ ಅನ್ಯಾಯಗಳಿಂದಲೇ ದೇಶದ ಜನರಿಗೆ ನಮ್ಮ ಸರಕಾರದ ಬಗ್ಗೆ ಅನಾದರದ ಅಭಿಪ್ರಾಯಗಳಿರುವುದು."

ಹೇಸ್ಟಿಂಗ್ಸನು ಹಿಂದುಸ್ಥಾನದಲ್ಲಿ ಬಹಳಕಾಲ ಇದ್ದವನು. ಕಂಪೆನಿಯ ಆಡಳಿತದ ಬಗ್ಗೆ ಜನರಿಗಿದ್ದ ಅಭಿಪ್ರಾಯ ಅವನಿಗೆ ಚೆನ್ನಾಗಿ ಗೊತ್ತು. ಸಿಯಾರ್ ಮುತಖರೀನ ಎಂಬ ಚರಿತ್ರಕಾರನು ಯುದ್ಧಭೂಮಿಯಲ್ಲಿ ಇಂಗ್ಲೀಷು ಸಿಪಾಯರು ತೋರುವ ನಡತೆಯನ್ನು ಹೊಗಳುತ್ತ ಅವರ ರಾಜ್ಯಭಾರ ಪದ್ಧತಿಯನ್ನು ಶೋಚನೀಯವಾಗಿ ವರ್ಣಿಸಿರುವನು.

"ಇಂಗ್ಲಿಷರಲ್ಲಿ ಅತಿದೃಢ ಧೈರ್ಯವೂ ಅತಿ ಜಾಗರೂಕ ವಿವೇಕವೂ ಬೆರೆತಿವೆ. ಯುದ್ಧರಂಗದ ಚಾತುರ್ಯ ಶಿಸ್ತುಗಳಲ್ಲಿ ಅವರು ಅದ್ವಿತೀಯರು. ಈ ಕ್ಷಾತ್ರ ಗುಣದ ಜೆತೆಗೆ ಅವರಿಗೆ ಆಡಳಿತದ ನೀತಿಯೂ ಬಂದಿದ್ದರೆ— ರೈತನ ರಾಜನ ಸುಖ ದುಃಖಗಳ ಬಗ್ಗೆ ಆದರಬುದ್ಧಿಯಿದ್ದಿದ್ದರೆ— ಯುದ್ಧದ ಬಗ್ಗೆ ಅವರು ತೋರುವ ಆದರ ಯುಕ್ತಿಗಳನ್ನು ಪ್ರಜೆಯ ಕ್ಷೇಮದ ಬಗ್ಗೆ ತೋರಿದ್ದರೆ— ಜಗತ್ತಿನಲ್ಲಿ ಯಾವ ಜನಾಂಗವೂ ಅವರಿಗೆ ಸಮನಾಗಲಾರದು. ಆದರೆ ಈ ದೇಶದ ಜನರ ಬಗ್ಗೆ ಅವರು ತೋರುವ ಅನಾದರ ಅಶ್ರದ್ಧೆಗಳಿಂದ ಅವರ ಪ್ರಜೆಗಳು ಎಲ್ಲ ಕಡೆಯಲ್ಲೂ ಗೋಳಾಡುತ್ತಿದಾರೆ. ಬಡತನ ಅಧೋಗತಿಗಳ ಪಾಲಾಗಿದಾರೆ."

ಬಂಗಾಳದ ನವಾಬನು ಇಂಗ್ಲಿಷು ಗವರ್ನರನಿಗೆ ನ್ಯಾಯವಾದ ದೂರುಗಳನ್ನು ತಂದೇ ತರುತ್ತಿದ್ದ. ಆದರೇನು, ವ್ಯರ್ಥ ಪ್ರಯತ್ನ!

"ಪ್ರತಿಯೊಂದು ಪರಗಣ, ಹಳ್ಳಿ, ಪ್ರತಿಯೊಂದು ಕಾರಖಾನೆಯಲ್ಲಿ ಕಂಪನಿಯ ಗುಮಾಸ್ತರು ಉಪ್ಪು, ಅಡಕೆ, ತುಪ್ಪ, ಅಕ್ಕಿ, ಹುಲ್ಲು, ಬಿದರು, ಮೀನು, ಬೆಲ್ಲ, ಶುಂಠಿ, ಸಕ್ಕರೆ, ಹೊಗೆಸೊಪ್ಪು, ಅಫೀಮು, ಇನ್ನೂ ಬರೆಯಲು ಸಾಧ್ಯವಿಲ್ಲದ ಅಗತ್ಯವಿಲ್ಲದ ದಿನಸುಗಳಲ್ಲಿ ವ್ಯಾಪಾರ ಮಾಡುತ್ತಿದಾರೆ. ರೈತರ ವರ್ತಕರ ದಿನಸುಗಳನ್ನು ಬಲವಂತವಾಗಿ ಕಿತ್ತುಕೊಂಡು ಅವುಗಳ ಬೆಲೆಯಲ್ಲಿ ರೂಪಾಯಿಗೆ ನಾಲ್ಕಾಣೆಯನ್ನು ಮಾತ್ರ ಕೊಡುತ್ತಾರೆ. ತಮ್ಮ ದಿನಸನ್ನು ಮಾರಬೇಕಾದರೆ ಬಲವಂತ ಮಾಡಿ, ದಬಾಯಿಸಿ ಒಂದು ರೂಪಾಯಿನ ದಿನಸನ್ನು ಐದು ರೂಪಾಯಿಗೆ ಮಾರುತ್ತಾರೆ. ಪ್ರತಿಯೊಂದು ಜಿಲ್ಲೆಯ ಅಧಿಕಾರಿಗಳೂ ತಮ್ಮ ಕೆಲಸಗಳನ್ನು ನಿರ್ವಹಿಸದೆ ಬಿಟ್ಟಿದ್ದಾರೆ. ಈ ಪುಂಡಿನಿಂದ ವರ್ಷಂಪ್ರತಿ ನನಗೆ ೨೫ ಲಕ್ಷ ರೂಪಾಯಿ ನಷ್ಟವಾಗುತ್ತಿದೆ. ದೇವರ ದಯೆಯಿಂದ ನಾನು ಒಪ್ಪಿಕೊಂಡ ಕರಾರುಗಳಿಗೆ ತಪ್ಪಿ ನಡೆದಿಲ್ಲ. ನಡೆಯುವುದೂ ಇಲ್ಲ. ಹೀಗಿರಲು ಇಂಗ್ಲಿಷು ವರ್ತಕರು ನನ್ನ ಅರಸೊತ್ತಿಗೆಗೆ ಅಪಮಾನ ಮಾಡಿ ನನಗೆ ನಷ್ಟ ಮಾಡುವುದೇಕೆ?"

ಕಂಪನಿಯ ಗುಮಾಸ್ತರ ನಡತೆಯ ಬಗ್ಗೆ ಇನ್ನೂ ಹೆಚ್ಚಿನ ವಿವರವು ಸರ್ಜೆಂಟು ಬ್ರಿಗೋವಿನ ಪತ್ರದಲ್ಲಿ ಕಾಣುತ್ತದೆ.

"ಕೊಳ್ಳುವುದಕ್ಕೋ ಮಾರುವುದಕ್ಕೋ ಒಬ್ಬ ಗುಮಾಸ್ತನು ಇಲ್ಲಿಗೆ ಕಳಿಸಲ್ಪಡುತ್ತಾನೆ. ಬಂದಕೂಡಲೆ ಇಲ್ಲಿನ ಜನರನ್ನು ತನ್ನ ದಿನಸನ್ನು ಕೊಳ್ಳಲಿಕ್ಕಾಗಲಿ ಅವರ ಮಾಲನ್ನು ಮಾರಲಿಕ್ಕಾಗಲಿ ಬಲಾತ್ಕರಿಸಲು ಅಧಿಕಾರವುಳ್ಳವನೆಂದು ಅವನು ತಿಳಿಯುತ್ತಾನೆ. ಅನವಕಾಶದಿಂದಲೇ ಆಗಲೊಲ್ಲದೇಕೆ ವ್ಯಾಪಾರ ನಡೆಸದಿದ್ದರೆ ಒಡನೆಯೇ ಲಾಟ ಏಟುಗಳೋ ಕೈದೋ ಆಗಬೇಕು. ಇದು ಸಾಲದೆ ಮತ್ತೊಂದು ರೀತಿಯಲ್ಲಿ ಪೀಡಿಸುವನು' ಎಲ್ಲ ವ್ಯಾಪಾರವನ್ನು ತನ್ನ ಸ್ವಾಧೀನ ಮಾಡಿಕೊಂಡು ತಾವು ವ್ಯಾಪಾರ ಮಾಡುವ ದಿನಸುಗಳನ್ನು ಮತ್ತಾರೇ ಆಗಲಿ ಕೊಡದಂತೆ ಕೊಳ್ಳದಂತೆ ದಬಾಯಿಸುವನು. ದೇಶದ ಜನರು ಯಾರಾದರೂ ಹಾಗೆ ಕೊಟ್ಟರೂ ಕೊಂಡರೂ ತನ್ನ ಅಧಿಕಾರದ ಸವಿಯನ್ನು ಅವರಿಗೆ ತೋರಿಸುವನು. ಅಲ್ಲದೆ ಬೇರೆ ವರ್ತಕರಿಗಿಂತ ಬಹಳ ಕಡಮೆ ಬೆಲೆ ಕೊಟ್ಟು ಜನರ ದಿನಸು ಕೊಳ್ಳುವನು. ಅನೇಕಸಾರಿ ಆ ಬೆಲೆಯನ್ನೂ ಸಲ್ಲಿಸುವುದೇ ಇಲ್ಲ. ನಾನೇನಾದರೂ ನಡುವೆ ಬಂದರೆ ದೂರು ಕೂಡಲೇ ಒಡುವುದು. ಬಂಗಾಳದಲ್ಲಿನ ಗುಮಾಸ್ತರು ದಿನಾಲೂ ನಡೆಸುತ್ತಿರುವ ಹೇಳಲು ಸಾಧ್ಯವಿಲ್ಲದ ಇಂಥ ಅತ್ಯಾಚಾರಗಳ ದೆಸೆಯಿಂದಲೇ ಈ ಬಾಕರಗಂಜಿನಂಥ ಸಮೃದ್ಧ ಜಿಲ್ಲೆಯೂ ಊರಿನಲ್ಲಿ ವಾಸ ಮಾಡುವವರಿಲ್ಲದೆ ನಿರ್ಜನವಾಗುತ್ತಿದೆ. ದಿನ ದಿನವೂ ಜನರು ಊರು ಬಿಟ್ಟು ಕ್ಷೇಮಕರವಾದ ಸ್ಥಳಗಳಿಗೆ ಹೋಗುತ್ತಿದ್ದಾರೆ. ಬೇಕಾದ ಹಾಗೆ ವ್ಯಾಪಾರ ನಡೆಯುತ್ತಿದ್ದ ಪೇಟೆಗಳಲ್ಲಿ ಈಗ ದಿನಸಿನ ಹೆಸರೇ ಇಲ್ಲ. ಯಾಕೆ? ಈ ಗುಮಾಸ್ತರ ಆಳುಗಳು ಬಡಜನರನ್ನು ಪೀಡಿಸುವುದರಿಂದ ಜಮೀನುದಾರನೇನಾದರೂ ಬಡಜನರ ಪಕ್ಷವಹಿಸಿ ಬಂದರೆ ಅವನಿಗೂ ಅದೇ ಮರ್ಯಾದೆಯೇ. ಮೊದಲಿಗೆ ಸಾರ್ವಜನಿಕ ಕಚೇರಿಗಳಲ್ಲಿ ನ್ಯಾಯವಿಚಾರಣೆ ನಡೆಯುತ್ತಿತ್ತು. ಈಗ ಪ್ರತಿಯೊಬ್ಬ ಗುಮಾಸ್ತನೂ ನ್ಯಾಯಾಧಿಪತಿ. ಪ್ರತಿಯೊಬ್ಬನ ಮನೆಯೂ ಕಚೇರಿ. ಜಮೀನ್ದಾರರ ಮೇಲೆ ಕೂಡ ಇವರ ತೀರ್ಮಾನದ ಅಮಲು ಚಲಾವಣೆಯಾಗಬೇಕು. ತಮ್ಮ ಜವಾನರೊಡನೆ ಜಗಳವಾಡಿದರೆಂದು, ತಮ್ಮದೇನಾದರೂ ಕದ್ದರೆಂದು- ಇವರ ಜನರೇ ಅದನ್ನು ಕದ್ದಿರುವ ಸಂಭವ ಹೆಚ್ಚು- ಇಲ್ಲದ ನೆವಗಳನ್ನು ಕಲ್ಪಿಸಿ ಹೂಡಿ ಜಮೀನ್ದಾರರಿಂದ ಪರಿಹಾರ ದ್ರವ್ಯವನ್ನು ಪಡೆಯುತ್ತಾರೆ."

ಕಲ್ಕತ್ತೆಯಲ್ಲಿದ್ದ ಇಂಗ್ಲಿಷು ಗವರ್ನರನಿಗೆ ಡಾಕಾದ ಕಲೆಕ್ಟರ್ ಮಹಮ್ಮದಾಲಿಯು ಬರೆದ ಒಂದು ಪತ್ರದಲ್ಲಿ ಹೀಗೆ ವಿವರವಾಗಿ ಬರೆಯಲ್ಪಟ್ಟಿದೆ.

"ಮೊದಲನೆಯದೆಂದರೆ ಕೆಲವು ವರ್ತಕರು ಕಾರಖಾನೆಯೊಡನೆ ಶರೀಕಾಗಿ ತಮ್ಮ ದೋಣಿಗಳ ಮೇಲೆ ಇಂಗ್ಲಿಷು ಬಾವುಟ ಕಟ್ಟಿ ತಮ್ಮ ದಿನಸು ಇಂಗ್ಲಿಷರ ಮಾಲೆಂದು ದಬಾಯಿಸಿ ಷಹ-ಬಂದರ್ ಮತ್ತು ಇತರ ಸುಂಕಗಳನ್ನು ಕೊಡದೆ ಸಾಗಿಸುವರು. ಎರಡನೆಯದು–ಲಕ್ಕೀಪುರ, ಢಾಕಾದ ಗುಮಾಸ್ತರು ತಮ್ಮ ಹೊಗೆಸೊಪ್ಪು, ಹತ್ತಿ, ಕಬ್ಬಿಣ, ಚಿಲ್ಲರ ದಿನಸುಗಳನ್ನು ಅಲ್ಲಿನ ವರ್ತಕರಿಗೆ ಪೇಟೆ ಧಾರಣೆಗಿಂತ ದುಬಾರಿಯಾಗಿ ಮಾರಿ ಬಲಾತ್ಕಾರದಿಂದ ಹಣ ವಸೂಲು ಮಾಡುವರು. ಇದಲ್ಲದೆ ಅವರ ಜವಾನರಿಗೆ ಊಟದ ಖರ್ಚು ವಸೂಲು ಮಾಡುತ್ತಾರೆ. ಕರಾರಿಗೆ ತಪ್ಪಿದರೆಂದು ಜುಲ್ಮಾನೆಗಳು ಬೇರೆ ಸುಲಿಯುತ್ತಾರೆ. ಈ ದುರಾಚಾರಗಳಿಂದ ಔರಂಗದಂಥ ಸ್ಥಳಗಳು ನಿರ್ಜನವಾಗಿವೆ. ಮೂರನೆಯದು–ಲಕ್ಕೀಪುರದ ಕಾರಖಾನೆಯ ಗುಮಾಸ್ತರು ತಾಲೂಕುದಾರನ ತಾಲೂಕುಗಳನ್ನು ಎಲ್ಲಾ (ರೈತರ ಹೊಲಗಳು) ತಹಸೀಲದಾರನಿಂದ ಬಲವಂತವಾಗಿ ಕಿತ್ತುಕೊಂಡು ತಮ್ಮ ಸ್ವಾಧೀನ ಮಾಡಿಕೊಂಡಿರುವರು. ಅದಕ್ಕೆ ಕಂದಾಯವನ್ನಾದರೂ ಕೊಡುವುದಿಲ್ಲ. ತರಲೆಕೋರರ ಮಾತು ಕೇಳಿ ತಮ್ಮ ದಸ್ತಕ ಕೊಟ್ಟು ಫಿರಂಗಿಗಳನ್ನೂ ಸಿಪಾಯರನ್ನೂ ನಾಡಿನೊಳಗೆ ಕಳಿಸಿ ಇಲ್ಲದ ದೊಂಬಿಯೆಬ್ಬಿಸುವರು. ಇಷ್ಟಬಂದ ಕಡೆ ಚೌಕಿಗಳನ್ನಿಟ್ಟು ಬಡವರ ಮನೆಗಳಲ್ಲಿ ತಮ್ಮ ದಿನಸುಗಳನ್ನೆಲ್ಲ ಮಾರಿಸಿ ಬಂದ ಹಣವನ್ನು ತಾವೇ ತೆಗೆದುಕೊಳ್ಳುವರು. ಈ ಗಲಾಟೆಗಳಿಂದ ದೇಶ ಹಾಳಾಗಿದೆ. ರೈತರು ತಮ್ಮ ಮನೆಗಳಲ್ಲಿರಲು ಕ್ಷೇಮವಿಲ್ಲದಾಗಿದೆ. ಮಾಲ ಗುಜಾರಿ (ತೆರಿಗೆ)ಯನ್ನು ಅವರು ಕೊಡಲಾರದಾಗಿದ್ದಾರೆ. ಅನೇಕ ಕಡೆ ಷೆವಲಿಯರ್ ಸಾಹೇಬನು ಹೊಸ ಪೇಟೆಗಳನ್ನು ಹೊಸ ಕಾರಖಾನೆಗಳನ್ನು ಹೂಡಿ ಸುಳ್ಳು ಸಿಪಾಯರನ್ನು ಸೃಷ್ಟಿಸಿದ್ದಾನೆ. ಕೈಗೆ ಸಿಕ್ಕವರೆಲ್ಲರನ್ನು ಹಿಡಿದು ಜುಲ್ಮಾನೆ ಹಾಕುತ್ತಾನೆ. ಅವರು ಇವನ ಈ ಅತ್ಯಾಚಾರದಿಂದ ಅನೇಕ ಸಂತೆಗಳು ಘಾಟುಗಳು, ಪರಘಣಾಗಳು ಹಾಳಾಗಿ ಹೋಗಿವೆ."

ಕಂಪನಿಯ ನೌಕರರು ಮುಖ್ಯ ಮುಖ್ಯ ಜಿಲ್ಲೆಗಳಲ್ಲಿ ಆ ದೇಶದ ವ್ಯಾಪಾರವನ್ನು ಫಜೀತಿಗೆ ತಂದದ್ದು ಹೀಗಿರಲು ಅವರು ಇಲ್ಲಿನ ಸನಗನ್ನು ಕೊಳ್ಳುತ್ತಿದ್ದ ರೀತಿಯೂ ದಬ್ಬಾಳಿಕೆಯೇ. ಕಣ್ಣಾರೆ ಅದನ್ನು ಕಂಡ ವಿಲಿಯಂ ಬೋಲ್ಟ್ಸ್ ಎಂಬ ಇಂಗ್ಲಿಷ ವರ್ತಕನು ವಿವರಿಸಿರುವನು.

" ಈಗ ನಡೆಯುತ್ತಿರುವ ಒಳದೇಶದ ವ್ಯಾಪಾರವು ಅದ ರಲ್ಲೂ ಕಂಪನಿಯವರ ವ್ಯಾಪಾರವು ಅತ್ಯಾಚಾರದ ಅತಿರೇಕದ ದೃಶ್ಯ. ಇದರ ದುಃಖಪೂರಿತ ಫಲವನ್ನು ಎಲ್ಲ ನೇಕಾರರೂ ಕಸಬುದಾರರೂ ಉಣ್ಣುತ್ತಿದ್ದಾರೆ. ತಯಾರುಮಾಡಿದ ಮಾಲೆಲ್ಲ ಇವರ ಬಾಯಿಗೇ ಬೀಳಬೇಕು. ಇಂಗ್ಲಿಷು ವರ್ತಕರೂ ಅವರ ಕರೀ ಗುಮಾಸ್ತರೂ ಸೇರಿ ಇಂಥಿಂಥ ಕೆಲಸಗಾರನು ಇಷ್ಟಿಷ್ಟು ಮಾಲು ಇಷ್ಟು ಬೆಲೆಗೆ ಕೊಡಬೇಕೆಂದು ತಮ್ಮ ಮನಸಿಗೆ ಬಂದಹಾಗೆ ತೀರ್ಮಾನ ಮಾಡುವರು. ಅವರದು ನಿರಂಕುಶಾಧಿಕಾರ. ಗುಮಾಸ್ತನೊಬ್ಬ ಪೇಟೆಗೆ ಬಂದಕೂಡಲೆ ಒಂದು ಮನೆಮಾಡುತ್ತಾನೆ. ಅದು ಅವನ ಕಚೇರಿಯಂತೆ. ತನ್ನ ಆಳುಗಳನ್ನು ಹರಕಾರವನ್ನು ಕರೆಸಿ ದಲಾಲರನ್ನೂ ಪೈಕಾರ ರನ್ನೂ ನೇಕಾರರನ್ನೂ ಅಲ್ಲಿಗೆ ಕರೆಸುತ್ತಾನೆ. ಒಂದು ವಾಯಿದೆ ಮಾಡಿ ಆದಿನಕ್ಕೆ ಸರಿಯಾಗಿ ಆ ಸ್ಥಳದಲ್ಲಿ ಇಷ್ಟು ಬೆಲೆಗೆ ಇಷ್ಟು ಮಾಲನ್ನು ಕೊಡಬೇಕೆಂದು ಗೊತ್ತುಮಾಡಿ ಕೆಲವು ಹಣ ಮುಂಗಡ ಕೊಟ್ಟು ನೇಕಾರರಿಂದ ಮುಚ್ಚಳಿಕೆ ಬರೆಸಿ ಕೊಳ್ಳುತ್ತಾನೆ. ಈ ವ್ಯಾಪಾರಕ್ಕೆ ಆ ಬಡ ನೇಕಾರನ ಒಪ್ಪಿ ಗೆಯು ಅವಶ್ಯಕತೆಯೇ ಇಲ್ಲ. ಕಂಪನಿ ಗುಮಾಸ್ತರು ರುಜು ಮಾಡೆಂದ ಮುಚ್ಚಳಿಕೆಗೆ ಅವರು ಮಾಡಲೇಬೇಕು. ಇಲ್ಲದಿದ್ದರೆ ಮುಂಗಡದ ಅವರ ಸೊಂಟಕ್ಕೆ ಸಿಕ್ಕಿಸಿ ಎರಡೇಟು ಬಿಗಿದು ಕಳಿಸುತ್ತಾರೆ. ಈ ನೇಕಾರರಲ್ಲಿ ಬಹಳ ಜನರ ಹೆಸರು ಕಂಪ ನಿಯ ಗುಮಾಸ್ತರ ರಜಿಸ್ಟರಿನಲ್ಲಿ ಹತ್ತಿರುತ್ತಾರೆ. ಅಂಥವರು ಇವರಿಗಲ್ಲದೆ ಬೇರೆಯವರಿಗೆ ಮಾಲು ತಯಾರುಮಾಡಿ ಕೊಡ ಕೂಡದು. ಆದರೆ ಕಂಪನಿಯ ಗುಮಾಸ್ತರು ತಮ್ಮೊಳಗೆ ತಾವು ಒಬ್ಬನ ರಜಿಸ್ಟರಿನಿಂದ ಮತ್ತೊಬ್ಬನದಕ್ಕೆ ವರ್ಗಾಯಿಸ ಬಹುದು. ಗುಲಾಮರಂತೆ ಅವರು ಈ ಗುಮಾಸ್ತ ಪರಂಪರೆಯ ಮೋಸ ದಬ್ಬಾಳಿಕೆಗಳಿಗೆ ಒಳಗಾಗಬೇಕು. ಇಲ್ಲಿ ನಡೆಯುವ ಮೋಸ ಅಷ್ಟಿಷ್ಟಲ್ಲ. ಊಹಿಸುವದೂ ಅಸಾಧ್ಯ. ಆದರೇನು ! ಎಲ್ಲಾ ಕೊನೆಗೆ ಬಡನೇಕಾರನ ಮನೆ ಹಾಳುಮಾಡಲಿಕ್ಕೇ. ಕಂಪನಿಯ ಗುಮಾಸ್ತರೂ ಜಚೆಂದ್ರರೂ (ಬಟ್ಟೆ ಪರೀಕ್ಷೆಮಾಡು ವವರೂ) ಸೇರಿ ಮಾಲಿಗೆ ಬೆಲೆ ನಿರ್ಣಯಮಾಡುತ್ತಾರೆ. ಪೇಟೆ ಯಲ್ಲಿ ಅದೇ ಮಾಲನ್ನು ಮಾರಿದರೆ ಆಗುವ ಬೆಲೆಗೆ ೧೫ ರು.– ಕೆಲವು ವೇಳೆ ೪೦ ರು. ರಷ್ಟು ಕಡಮೆಯೇ ಇವರು ಬೆಲೆ ನಿರ್ಣಯಿಸುವುದು. ಇವರು ಬಲವಂತವಾಗಿ ರುಜುಮಾಡಿಸಿ ಕೊಂಡ ಮುಚ್ಚಳಿಕೆಗಳ ಕರಾರಿನಂತೆ ಅನ್ಯಾನುಕೂಲದ ದೆಸೆ ಯಿಂದ ಕೆಲವರಿಗೆ ನಡೆಸಲಾಗದಿದ್ದರೆ ಅಂಥ ನೇಕಾರರ ಮಾಲನ್ನು ಸಿಕ್ಕಷ್ಟು ಕಿತ್ತುಕೊಂಡು ಅದನ್ನು ಅಲ್ಲೇ ಹೋದ ಷ್ಟಕ್ಕೆ ಮಾರಿ ಆ ಹಣವನ್ನು ತಮ್ಮ ಒಪ್ಪಂದದ ನಷ್ಟಕ್ಕೆ ಭರ್ತಿ ಮಾಡಿಕೊಳ್ಳುತ್ತಾರೆ. ರೇಶಿಮೆಯ ದಾರವನ್ನು ಸುತ್ತುವ ನಗೋಡರೆಂಬ ಜನರಿಗೆ ಇವರು ಎಷ್ಟು ಹಿಂಸೆಮಾಡಿದರೆಂದರೆ– ಅವರೆಲ್ಲನೇಕರು ಇವರ ಪೀಡೆಯನ್ನು ತಡೆಯಲಾರದೆ ರೇಶಿಮೆ ಯನ್ನು ಸುತ್ತಲಿಕ್ಕೆ ಬಲವಂತಮಾಡಲು ಅವಕಾಶವೇ ಇಲ್ಲದಂತೆ ಆಗಲೆಂದು ತಮ್ಮ ಹೆಬ್ಬೆರಳನ್ನು ಕತ್ತರಿಸಿಕೊಂಡಿರುವರು. "

ಬರೀ ಕೈಗಾರಿಕೆಯೇ ಅಲ್ಲ ಹಾಳಾದುದು; ಇದರಿಂದ ಬಂಗಾಳದಲ್ಲಿ ಬೇಸಾಯವೂ ಹಾಳಾಯಿತು. ಏಕೆಂದರೆ ನೇಕಾ ರರೇ ರೈತರೂ ಆಗಿದ್ದರು.

" ರೈತರು ಕೈಗಾರಿಕೆ ಬೇಸಾಯ ಎರಡನ್ನೂ ಮಾಡುತ್ತಾರೆ. ಗುಮಾಸ್ತರ ಈ ಅತ್ಯಾಚಾರದಿಂದ ರೈತರಿಗೆ ತಮ್ಮ ಹೊಲ ವನ್ನು ಹಸನಾಗಿ ಮಾಡಿಕೊಳ್ಳಲು ಅನನುಕೂಲವಾಗುತ್ತದೆ. ಕಂದಾಯಕೊಡಲಿಕ್ಕೂ ಗತಿಯಿಲ್ಲದಾಗುತ್ತದೆ. ರೆವಿನ್ಯೂ ಅಧಿಕಾರಿಗಳ ಬಾಧೆ ಮೊದಲಾಗುತ್ತದೆ. ಈ ಸಂಕಟಗಳನ್ನು ತಡೆಯಲಾರದೆ ಎಷ್ಟೋ ಜನ ಮಕ್ಕಳನ್ನು ಮಾರಿಕೊಳ್ಳ ಬೇಕಾಗುತ್ತದೆ ಕಂದಾಯಕೊಡಲಿಕ್ಕಾಗಿ. ಇಲ್ಲದಿದ್ದರೆ ದೇಶ ಬಿಟ್ಟು ಓಡಿಹೋಗಬೇಕಾಗುತ್ತದೆ. "

ಈ ಉದಾಹರಣೆಗಳು ಸಾಲವೆ ! ಬೇರೆ ಬೇರೆ ಆಧಾರ ಗಳಿಂದ ಇದನ್ನು ಆರಿಸಿದೆ. ಇಂಗ್ಲಿಷು ಗವರ್ನರೊಬ್ಬ, ಇಂಗ್ಲಿಷು ಮಂತ್ರಿಮಂಡಲದ ಸದಸ್ಯನೊಬ್ಬ, ಇಂಗ್ಲಿಷು ವರ್ತಕ ನೊಬ್ಬ ಇವರ ಪತ್ರಗಳಿಂದ, ಸ್ವಯಂ ನವಾಬನ ಪತ್ರದಿಂದ, ಒಬ್ಬ ಮಹಮ್ಮದೀಯ ಕಲೆಕ್ಟರನ ವರದಿಯಿಂದ, ಮಹಮ್ಮ ದೀಯ ಚರಿತ್ರಕಾರನೊಬ್ಬನ ಚರಿತ್ರೆಯಿಂದ ಆರಿಸಿದೆ. ಎಲ್ಲಾ ಆಧಾರಗಳು ಒಂದೇ ವಿಷಾದದ ಕಥೆಯನ್ನು ಹೇಳುತ್ತಿವೆ. ಬಂಗಾಳದ ಜನರಿಗೆ ದಬ್ಬಾಳಿಕೆಯೇನು ಹೊಸದಲ್ಲ. ಆದರೂ ಈ ರೀತಿ ಹಳ್ಳಿಹಳ್ಳಿಗೂ ಮಗ್ಗ ಮಗ್ಗಕ್ಕೂ ವಿನಾಶ ತಂದಿಟ್ಟ ಅತ್ಯಾಚಾರವನ್ನೆಂದೂ ಅವರು ಅನುಭವಿಸಿರಲಿಲ್ಲ. ಅಧಿಕಾರಿಗಳ ದೌರ್ಜನ್ಯವನ್ನು ಅವರು ಕಂಡಿದ್ದರು. ಆದರೆ ತಮ್ಮ ವ್ಯಾಪಾರ, ತಮ್ಮ ಕಸಬು, ತಮ್ಮ ಬಾಳನ್ನೂ ಹೀಗೆ ರೂಪುಗೆಡಿಸುವ ಆಡಳಿತವನ್ನು ಅರಿತಿರಲಿಲ್ಲ. ಅವರ ಉದ್ಯೋಗದ ಸೆಲೆ ಊಟೆ ಯಾಗಿ ಹರಿಯುವುದು ನಿಂತಿತು. ಅವರ ಸುಸಮೃದ್ಧಿಪ್ರವಾಹವು ಬತ್ತಿಹೋಯಿತು.

ಇಂಥ ಕ್ಷೋಭೆಯನ್ನು ನಿಲ್ಲಿಸಲು ಬಂಗಾಳದಲ್ಲಿ ಇಬ್ಬರು ಇಂಗ್ಲಿಷರು ಯತ್ನಮಾಡಿದರು. ಒಬ್ಬನು ಹೆನ್ರಿ ವಾನ್ಸಿಟಾರ್ಟ. ಇನ್ನೊಬ್ಬ ವಾರನ್ ಹೆಸ್ಟಿಂಗ್ಸ್. ಅವರು ಮಾಂಘೈರು ಕೋಟೆಗೆ ಬಂದು ಮೀರಕಾಸೀಮನನ್ನು ಕಂಡರು. ಮೀರಕಾಸೀಮನು ಸ್ವೇಚ್ಛಾಪ್ರವರ್ತಕನಾದ ಪುಂಡನಾದರೂ ಚಾಣಾಕ್ಷನಾಗಿದ್ದ. ಹಟಯೂ ಧೀರನೂ ಆಗಿದ್ದರೂ ಕಂಪನಿಯ ಮುಂದೆ ತನ್ನ ಬೇಳೆ ಬೇಯದೆಂದೂ ವಾನ್ಸಿಟಾರ್ಟ ಹೇಸ್ಟಿಂಗ್ಸಸರ ವಿನಾ ತನಗೆ ಬೇರೆ ಸ್ನೇಹಿತರಿಲ್ಲೆಂಬುದೂ ಗ್ರಹಿಸಿದ. ಕೇಳಿದ ವರಗಳ ಕೊಟ್ಟು ಹಾಗೂ ಹೀಗೂ ಮೂವರೂ ಒಂದು ಒಪ್ಪಂದ ಮಾಡಿದರು.

ಒಪ್ಪಂದದ ಷರತ್ತುಗಳು ೯ ಭಾಗಗಳಾಗಿವೆ. ಮೊದಲ ಮೂರು ಮಾತ್ರ ಬಹಳ ಮುಖ್ಯವಾದವು. ಅವು ಹೀಗಿದ್ದವು— ೧. ಹಡಗಿನಲ್ಲಿ ಸಾಗುವ ರಫ್ತು ಆಮದು ವ್ಯಾಪಾರಕ್ಕೆಲ್ಲಕ್ಕೂ ಕಂಪೆನಿಯ ದಸ್ತಕ ಕೊಡಬೇಕು. ಅದಕ್ಕೆ ಸುಂಕ ತೆರಿಗೆಗಳ ಬಾಧೆಯಿಲ್ಲದೆ ಸಾಗಿಹೋಗಬೇಕು. ೨. ದೇಶದಲ್ಲೇ ಹುಟ್ಟಿದ, ತಯಾರಾದ ದಿನಸುಗಳ ಒಳದೇಶದ ವ್ಯಾಪಾರಕ್ಕೆ ಕಂಪನಿಯ ದಸ್ತಕ ಕೊಡಬೇಕು. ೩. ಒಪ್ಪಂದದಲ್ಲಿ ಕಾಣಿಸುವ ದಿನಸುಗಳಿಗೆ ಇಲ್ಲಿ ನಮೂದಿಸುವ ದರದಂತೆ ತೆರಿಗೆ ಕೊಡಬೇಕು.

ಈ ಒಪ್ಪಂದಕ್ಕಿಂತ ಗೌರವವಾದುದು ಮತ್ತೊಂದು ಇರಲಾರದು. ಆದರೂ ಕಲ್ಕತ್ತೆಯಲ್ಲಿ ಮಾತ್ರ ಗುಲ್ಲೆದ್ದಿತು. ಅಮ್ಯಾಟ್, ಹೇ, ವಾಟ್ಸರು ೧೨–೧–೧೭೬೩ರಲ್ಲಿ "ವಾನ್ಸಿಟಾರ್ಟನು ಮಾಡಿದ ಷರತ್ತುಗಳು ನಮ್ಮ ಜನಾಂಗಕ್ಕೇ ಅವಮಾನಕರ. ನಮ್ಮ ಮತ್ತು ನಮ್ಮವರ ವ್ಯಾಪಾರಕ್ಕೆ ಮುಳುವು." ಎಂದು ಗುಲ್ಲೆಬ್ಬಿಸಿದರು. ಫೆಬ್ರುವರಿ ೨೫ಕ್ಕೆ ಸದಸ್ಯಮಂಡಲಿ ಸಭೆ ನೆರೆಯಿತು. ಒಳದೇಶದ ವ್ಯಾಪಾರ ಸುಂಕವಿಲ್ಲದೆ ನಡೆಸಲು ಕಂಪನಿಯ ನೌಕರರಿಗೆ ಅಧಿಕಾರವಿರಬೇಕು. ನವಾಬನ ಗೌರವಕ್ಕಾಗಿ ಉಪ್ಪಿನ ಮೇಲೆ ಮಾತ್ರ ೨½ ರು ಯಂತೆ ತೆರಿಗೆ ಕೊಡಲಾಗುವುದು. ವಾನ್ಸಿಟಾರ್ಟನು ಒಪ್ಪಿದಂತೆ ೯ ರು. ರಂತೆ ಆ ಪದಾರ್ಥಗಳೆಲ್ಲಕ್ಕೂ ತೆರಿಗೆ ಕೊಡಲಾಗದು. ಹೀಗೆಂದು ಮಾರ್ಚಿ ೧ರಲ್ಲಿ ಗೊತ್ತುವಳಿಯಾಯಿತು. ವಾನ್ಸಿಟಾರ್ಟ್, ಹೇಸ್ಟಿಂಗ್ಸರು ಮಾತ್ರ ಈ ಗೊತ್ತುವಳಿಗೆ ಒಪ್ಪಲಿಲ್ಲ.

ಸ್ವಪ್ರಯೋಜನಕ್ಕಾಗಿ ಹೊಡೆದಾಡುತ್ತಿದ್ದ ಸ್ವಾರ್ಥಿಗಳ ನಿರ್ಣಯ ಇದು. ಇದಕ್ಕೆ ಹೇಸ್ಟಿಂಗ್ಸನು ಬರೆದ ಅಸಮ್ಮತಿಯು ಟೀಪು ನ್ಯಾಯಪಕ್ಷಪಾತಿಯಾದವರನ್ನು ನ್ಯಾಯಕ್ಕಾಗಿ ವಾದಿಸುವಂತಿದೆ. ಹೇಸ್ಟಿಂಗ್ಸನು ಬರೆದ ದೀರ್ಘಲೇಖದಲ್ಲಿ ಒಂದು ಭಾಗವು ಮಾತ್ರ ನೋಡತಕ್ಕದ್ದಾಗಿದೆ.

"ನಮ್ಮ ಕಂಪನಿಯು ಇನ್ನೂ ಬಾದಶಹಿಯ ಅಡಿಯಾಳಾಗಿದ್ದಾಗ ಕೀಳು ನೌಕರನಂತೆ ದೇಶದ ಜನಸಾಮಾನ್ಯರ ನಡುವೆ ನಾನು ಮೊದಲು ಬಾಳಿದಾಗ ಅಧಿಕಾರಿಗಳಿಂದ ಜಮೀನುದಾರರಿಂದ ಪ್ರೀತಿ ಮರ್ಯಾದೆಗಳನ್ನು ಪಡೆದಿರುವೆ. ಆದುದರಿಂದ ಈ ನಿರ್ಣಯವು ಅನ್ಯಾಯವೆಂದು ದೃಢವಾಗಿ ಹೇಳಬಲ್ಲೆ. ಇಷ್ಟೇ ಅಲ್ಲ. ನಮ್ಮ ಜನರು ಪಾಳೆಯಗಾರರೂ ಪುಂಡರೂ ಆಗುವುದರ ಬದಲು ನ್ಯಾಯವಾದ ಪ್ರಮಾಣವಾದ ವ್ಯಾಪಾರವನ್ನು ಮಾತ್ರ ಮಾಡಿಕೊಂಡು ಸರಕಾರದ ಅಧಿಕಾರಕ್ಕೆ ಒಳಗಾಗಿ ನಡೆದರೆ ಎಲ್ಲೆಲ್ಲಿಯೂ ಇವರಿಗೆ ಮರ್ಯಾದೆ ಸಿಕ್ಕೀತು. ಈಗಿರುವ ಅಪಕೀರ್ತಿ ಹೋಗಿ ಇಂಗ್ಲಿಷು ಜನಾಂಗಕ್ಕೆ ಎಲ್ಲೆಡೆಯೂ ಕೀರ್ತಿ ಬಂದೀತು. ದೇಶಕ್ಕೆ ನಮ್ಮ ವ್ಯಾಪಾರದಿಂದ ಕ್ಷೇಮವಾಗಿ ಹೆಸರೆತ್ತಿದರೆ ಬಡ ಜನರು ಹೆದರಿ ಹಿಂಸೆಗೊಳಗಾಗುವ ಭೂತದ ಹೆಸರಾಗದೆ ಇಂಗ್ಲಿಷರ ಹೆಸರೆಂದರೆ ಕ್ಷೇಮವೆಂದು ರಕ್ಷಣೆಯೆಂದು ಜನ ತಿಳಿದಾರು."

ಒಪ್ಪಂದವು ಕಲ್ಕತ್ತೆಯಲ್ಲಿ ತಿರಸ್ಕೃತವಾದುದೂ ಒಪ್ಪಂದದ ಮೇಲೆ ತೆರಿಗೆ ವಸೂಲು ಮಾಡಲು ಹೋದ ತನ್ನ ಅಧಿಕಾರಿಗಳಿಗೆ ಅಡ್ಡಿಮಾಡಿದುದೂ ಮೀರಕಾಸೀಮನಿಗೆ ತಿಳಿಯಿತು. ಆಗ ಉಂಟಾದ ಸಾತ್ವಿಕಕ್ರೋಧದಲ್ಲಿ ಹಿಂದುಸ್ಥಾನದ ಅರಸರ್ಯಾರೂ ಮಾಡದ ಒಂದು ಅತಿಶ್ರೇಷ್ಠ–ಔತ್ಸುಕ್ಯದಾರ ಕಾರ್ಯವನ್ನು ಮಾಡಿದ. ತನ್ನ ಆದಾಯುವನ್ನೇ ತ್ಯಾಗಮಾಡಿ ಎಲ್ಲ ಒಳದೇಶದ ತೆರಿಗೆಗಳನ್ನೂ ತೆಗೆದು ಹಾಕಿದ. ಕನಿಷ್ಠಪಕ್ಷ ತನ್ನ ಪ್ರಜೆಗಳು ಕಂಪನಿಯವರ ಸಂಗಡ ಸಮಪೋಟಿಯಿಂದ ಲಾದರೂ ವ್ಯಾಪಾರಮಾಡಲಿ ಎಂದು ಅವನ ಆಸೆ!

ನಂಬುವುದಕ್ಕೂ ಸಾಧ್ಯವಿಲ್ಲದ ಸಂಗತಿ. ಆದರೂ ನಿಜವಾಗಿಯೂ ನಡೆದುಹೋಯಿತು. ಕಲ್ಕತ್ತೆಯ ಮಂಡಲವು ವಾನ್ಸಿಟಾರ್ಟ ಹೇಸ್ಟಿಂಗ್ಸರು ಎಂದಿನಂತೆ ಅಸಮ್ಮತಿಪಕ್ಷ– ಎಲ್ಲ ಸುಂಕಗಳನ್ನು ಮೀರಕಾಸಿಮನು ತೆಗೆದುಹಾಕಿರುವುದು ತಮ್ಮ ಇಂಗ್ಲಿಷು ಜಾತಿಗೇ ದ್ರೋಹಮಾಡಿದಂತೆ ಎಂದು ಬೊಬ್ಬೆಹಾಕಿತು! ಬ್ರಿಟಿಷು ಭಾರತಚರಿತ್ರೆಯಲ್ಲಿ ಜೇಮ್ಸ್ ಮಿಲ್ಲನು "ಈ ಪ್ರಸಂಗದಲ್ಲಿ ಕಂಪನಿಯ ನೌಕರರ ನಡತೆಯು

ಸ್ವಾರ್ಥವು ನ್ಯಾಯ-ನಾಚಿಕೆಗಳನ್ನು ಕೂಡ ಹೇಗೆ ಬಿಡುತ್ತ ದೆಂಬುದರ ಉದಾಹರಣೆಯಾಗಿದೆ. ” ಎಂದು ಬರೆದಿರುವನು. ವಿಲ್ಸನ್ನನು “ ಈ ನಡತೆಯ ಬಗ್ಗೆ ಭಿನ್ನಾಭಿಪ್ರಾಯವಿರಲಾರದು. ವ್ಯಾಪಾರೀಲೋಭದ ಸಂಕುಚಿತ ದೃಷ್ಟಿಯ ಸ್ವಾರ್ಥದಿಂದ ಸದಸ್ಯರೆಲ್ಲ ನ್ಯಾಯ ನೀತಿ ವಿಚಾರಗಳಿಗೆ ತಿಲಾಂಜಲಿ ಕೊಟ್ಟಿದ್ದರು. ಹೇಸ್ಟಿಂಗ್ಸ್ ವಾನ್ಸಿಟಾರ್ಟರು ಮಾತ್ರ ದೊಡ್ಡ ಮನಸ್ಸರು. ”

ಅಸಮ್ಮತಿ ಪಕ್ಷದವರು ತಮ್ಮ ಅಭಿಮತವನ್ನು ಸ್ವಲ್ಪ ಮೊನೆಯಾಗಿಯೇ ಮಸಿದು ವಾದಿಸಿದರು. “ಎಲ್ಲಾ ವ್ಯಾಪಾರವೂ ನಮ್ಮದೇ ಆಗಬೇಕು. ನಾವೇ ಉಪ್ಪು ತಯಾರಿಸಬೇಕು ದೇಶದ ಎಲ್ಲ ದಿನಸನ್ನೂ ನಾವೇ ಕೊಳ್ಳಬೇಕು. ಎಂದು ಬಯಸುವುದು ನಮ್ಮ ಹಿತವಿರಬಹುದು. ಆದರೆ ತನ್ನ ದೇಶದ ವರ್ತಕರಿಗೆ ವ್ಯಾಪಾರಮಾಡುವ ಅವಕಾಶವಿಲ್ಲದಂತೆ ಮಾಡುವ ಪ್ರಯತ್ನದಲ್ಲಿ ನವಾಬನು ಎಂದಿಗೂ ನಮಗೆ ನೆರವಾಗಲಾರ. ” ಇದರಿಂದ ಸಂಗತಿಯೆಲ್ಲ ಸ್ಪಷ್ಟವಾಗುತ್ತದೆ. ಸಂಪತ್ಸಮೃದ್ಧವಾದ ಸಭ್ಯ ಜನಾಂಗವಾದ ಹಿಂದೂ ಜನಾಂಗವು ಶಿಷ್ಟರಾಜರ ಕಾಲದಲ್ಲೂ ದುಷ್ಟರಾಜರ ಕಾಲದಲ್ಲೂ ಸ್ವತಂತ್ರವಾಗಿ ದಿನಸು ಹುಟ್ಟುವಳಿಮಾಡಿ ಸ್ವತಂತ್ರವಾಗಿ ಮಾಡಿಕೊಳ್ಳುತ್ತಿದ್ದಿತು. ಎಲ್ಲಾ ಸಭ್ಯ ಜನಾಂಗದವರಂತೆ ಸ್ವೋಪಯೋಗಕ್ಕಾಗಿ ಐಶ್ವರ್ಯಗಳಿಸಲು ಬಯಸಿ ಕಂಪನಿಯ ನೌಕರರು ಹಿಂದೀ ಜನರ ಈ ಸ್ವಾತಂತ್ರ್ಯವನ್ನೇ ಕಳೆದು ಸಂಪದದ ಆಧಾರಗಳನ್ನೇ ನಿರ್ಮೂಲಮಾಡಲು ಆಸೆಗೊಂಡರು. ಅವರಿಗೆ ಯಾವುದಾದರೂ ಒಂದೆರಡು ದಿನಸುಗಳ ವ್ಯಾಪಾರದ ಪೂರ್ಣ ಸ್ವಾಧೀನ ಬೇಕಾಗಿರಲಿಲ್ಲ. ಎಲ್ಲಾ ದಿನಸುಗಳ ವ್ಯಾಪಾರದಲ್ಲೂ ತಮ್ಮ ವ್ಯಾಪಾರಕ್ಕೂ ದೇಶೀ ವರ್ತಕರ ವ್ಯಾಪಾರಕ್ಕೂ ವ್ಯತ್ಯಾಸವಿರುವುದು ಬೇಕಾಗಿತ್ತು. ಎಂಥ ವ್ಯತ್ಯಾಸ ! ಎಲ್ಲ ಮಾನವ ಸಮಾಜಗಳಲ್ಲೂ ಇರುವ ಒಂದು ಸಾಮಾನ್ಯ ಸ್ವಾತಂತ್ರ್ಯವು ಬಂಗಾಳದ ಜನರಿಗೆ ಕಡೆಗೂ ಇಲ್ಲದಂತೆ ಮಾಡುವ ವ್ಯತ್ಯಾಸ. ಜನಭಂತವಾದದೊಂದು ದೇಶದ ಸಮಸ್ತ ವ್ಯಾಪಾರವನ್ನೂ ಪರದೇಶೀ ವರ್ತಕರು ಕತ್ತಿಯ ಬಲದಿಂದ ತಮ್ಮ ಸ್ವಾಧೀನ ಮಾಡಿಕೊಳ್ಳುವ ಅಧಿಕಾರವನ್ನು ತೋರಿಸುವುದಕ್ಕೆ ಇದನ್ನು ಬಿಟ್ಟರೆ- ಇದು ಒಂದೇ ಒಂದನ್ನು ಬಿಟ್ಟರೆ- ಜಗತ್ತಿನ ಚರಿತ್ರೆಯಲ್ಲಿ ಮತ್ತೊಂದು ಪ್ರಸಂಗವಿಲ್ಲ. ಈ ಕೋರಿಕೆಗಳನ್ನು ನವಾಬ ಮೀರಕಾಸೀಮನು ಒಪ್ಪಲಿಲ್ಲ. ತಿರಸ್ಕರಿಸಿದ. ಯುದ್ಧ ಮಾಡಬೇಕಾಯಿತು.

ಮೀರಕಾಸಿಮನ ಆಡಳಿತದ ಮೊದಲಿಂದ ಕೊನೆಯವರೆಗೂ (೧೭೬೦-೬೫) ಕಲ್ಕತ್ತೆಯಲ್ಲಿ ಹೆನ್ರಿವಾನ್ಸಿಟಾರ್ಟನು ಗವರ್ನರನಾಗಿದ್ದ. ಆ ಕಾಲದ ಆಡಳಿತದ ಬಗ್ಗೆ ಅವನ ಅಭಿಪ್ರಾಯ ಹೀಗಿದೆ.

“ಮೀರಕಾಸಿಮನು ಪದೇಪದೇ ಪುಂಡು ಮಾಡುತ್ತಿದ್ದ ಜಮೀನುದಾರರನ್ನು ಹಣ್ಣು ಮಾಡಿದ. ಕಂಪೆನಿಯ ಸಾಲ ತೀರಿಸಿ ತನ್ನ ಫೌಜಿಗೆ ಸಂಬಳದ ಬಾಕಿ ಸಲ್ಲಿಸಿ ತನ್ನ ಕಚೇರಿಯ ವೆಚ್ಚ ಕಡಮೆ ಮಾಡಿ ತನ್ನ ಅಧಿಕಾರ ಭದ್ರಮಾಡಿದ ಇದೆಲ್ಲ ನನಗೆ ಸಂತೋಷವಾಗಿತ್ತು. ನಮ್ಮ ಸಹಾಯ ಎಷ್ಟು ಕಡಮೆ ಅವನು ಬೇಡಿದರೆ ಅಷ್ಟು ನಮಗೆ ವೆಚ್ಚ ಕಡಮೆ. ಅಷ್ಟು ನಮಗೆ ನಮ್ಮ ಕೆಲಸ ನೋಡಿಕೊಳ್ಳಲು ಅನುಕೂಲ. ಇಬ್ಬರಿಗೂ ಸಮಾನ ಶತ್ರುವಾದವನು ಬಂದರೆ ನವಾಬನು ನಂಬಿಗೆಯ ಗೆಳೆಯನೆಂದು ನಾವು ತಿಳಿಯಬಹುದಿತ್ತು. ನಾವು ನವಾಬನ ಗೋಜಿಗೆ ಹೋಗದೆ ಅವನ ಅಧಿಕಾರವನ್ನು ಭಂಗಪಡಿಸದೆ ಇದ್ದರೆ ನವಾಬನು ನಮ್ಮೊಡನೆ ಜಗಳವಾಡಲು ಬಯಸುವುದಿಲ್ಲೆಂಬುದು ನನಗೆ ದೃಢವಾಗಿ ತಿಳಿದಿತ್ತು. ಜಗಳಕ್ಕೆ ಕಾರಣ ಕೊಡದ ಹಾಗೆ ಅವನು ಬಹಳ ಜಾಗರೂಕನಾಗಿದ್ದ. ನಮಗೆ ಗಾಸಿಮಾಡಲಿಲ್ಲ. ಯಾವ ದಿನಸಿನ ವ್ಯಾಪಾರದಲ್ಲೂ ನಮಗೆ ಬಿಟ್ಟುಕೊಟ್ಟ ಪ್ರದೇಶಗಳಿಗೆ ಒಂದು ದಿನವಾದರೂ ಅಧಿಕಾರಿಗಳನ್ನು ಕಳಿಸಲಿಲ್ಲ. ನಮ್ಮ ಜನರ ಸ್ವಂತ ವ್ಯಾಪಾರದ ಗಲಾಟೆ, ಗುಮಾಸ್ತರ ಬಂಡು ಮೊದಲಾದ ಮೇಲೆ ಅವನು ಜಗಳಮಾಡಬೇಕಾಗಿ ಬಂತು. ಇಷ್ಟು ಜಗಳವಿದ್ದರೂ- ಎಲ್ಲಿಸನ ಸಾಲ್ಟ್‌ಪೀಟರ ಬಗ್ಗೆ ಒಂದೆರಡು ಉತ್ಪ್ರೇಕ್ಷೆಯ ಚಾಡಿಯ ಹೊರತು-ಕಂಪನಿಯ ಕೆಲಸಗಳಿಗೆ ಯಾವ ಕಡೆಯಲ್ಲೂ ಎಂಥ ತೊಂದರೆಯನ್ನೂ ಕೊಡಲಿಲ್ಲ. ಎಲ್ಲಾ ನಿರ್ವಿಘ್ನವಾಗಿ ನಡೆಯುತ್ತಿತ್ತು. ಅವನಿಗೆ ವಿರುದ್ಧವಾಗಿ ಪಕ್ಷ ಕಟ್ಟಿದ ಮಹನೀಯರ ಗುಣಾತಿಶಯಗಳು ಅವನ ಗುಣದಿಂದ ಎಷ್ಟು ಭಿನ್ನ ! ಅವನು ಸುಭಾದಾರಿಗೆ ಬಂದ ದಿನದಿಂದ ಕ್ಷುಲ್ಲಕ ಕ್ಷುದ್ರ ನೆವಗಳಿಂದ ಅವನ ಅಧಿಕಾರವನ್ನು ಭಂಗಗೊಳಿಸಿ ಅವನ ಅಧಿಕಾರಿಗಳನ್ನು ಕೈದುಮಾಡಿ ಬೈದು ಬೆದರಿಸಿ ಹಿಂಸಿಸದೆ ಒಂದು ದಿನವಾದರೂ ಹೊತ್ತು ಮುಳುಗಲಿಲ್ಲ. ಇದಕ್ಕೆ ನಾನು ಉದಾಹರಣೆ ಕೊಡಬೇಕಾಗಿಲ್ಲ. ಈ ಕಥನದ ಪುಟ ಪುಟದಲ್ಲೂ ಉದಾಹರಣೆಗಳಿವೆ. ”

ಈಸ್ಟ ಇಂಡಿಯಾ ಕಂಪೆನಿಯ ಯುದ್ಧ ವಿಷಯಗಳನ್ನು ವರ್ಣಿಸುವುದು ಪ್ರಕೃತ ಲೇಖನದ ಉದ್ದೇಶವಲ್ಲ. ೧೭೬೩ರಲ್ಲಿ

ಮೀರಕಾಸಿಮನೊಡನೆ ಆದ ಕದನದ ಫಲ ಮೊದಲೇ ನಿಸ್ಸಂದೇಹವಾಗಿ ತಿಳಿದಿತ್ತು. ಬಂಗಾಳದಲ್ಲಿ ಇಂಗ್ಲಿಷರೊಡನೆ ಯಾವ ಹಿಂದಿನ ಅರಸನೂ ಸೇನೆಯೂ ಕಾದಿರದ ಹಾಗೆ ಮೀರಕಾಸಿಮನು ಕಾದಿದ. ಆದರೆ ವಿಜಯಲಕ್ಷ್ಮಿ ಅವನಿಗೊಲಿಯಲಿಲ್ಲ. ಘೇರಿಯಾ ಉದಯುನಳಗಳ ಕದನದಲ್ಲಿ ಸೋತ. ಸಿಟ್ಟಿನ ಭರದಲ್ಲಿ ಪಾಟ್ನಾದಲ್ಲಿದ್ದ ಇಂಗ್ಲಿಷು ಕೈದಿಗಳನ್ನು ಕತ್ತರಿಸುವಂತೆ ಅಪ್ಪಣೆಮಾಡಿ ದೇಶಭ್ರಷ್ಟನಾಗಿ ಹೊರಟುಹೋದ. ೧೭೬೦ರಲ್ಲಿ ಮೂಲೆಗೊತ್ತಲ್ಪಟ್ಟಿದ್ದ ಮುದಿ ಮೀರಜಾಫರನಿಗೆ ನವಾಬನ ಪಟ್ಟ ಕಟ್ಟಿದರು. ಅವನು ಬೇಗನೆ ತೀರಿಹೋದ. ಅವನ ವೇಶ್ಯಾಪುತ್ರ ನಿಜಾಮುದ್ದೌಲನಿಗೆ ಅವಸರ ಅವಸರವಾಗಿ ೧೭೬೫ರಲ್ಲಿ ಪಟ್ಟ ಕಟ್ಟಿದರು.

ಹೊಸ ನವಾಬನು ಪಟ್ಟಕ್ಕೆ ಬಂದರೆ ಹಿಂದುಸ್ತಾನದ ಐಶ್ವರ್ಯವನ್ನು ಸುಲಿಯುವ ಪ್ರಸಂಗವೆಂದು ಕಂಪೆನಿಯ ನೌಕರರು ತಿಳಿದಿದ್ದರು. ಪ್ಲಾಸಿ ಕದನದನಂತರ ೧೭೫೭ರಲ್ಲಿ ಮೀರಜಾಫರನಿಗೆ ಮೊದಲು ಪಟ್ಟಕಟ್ಟಿದಾಗ ಇಂಗ್ಲಿಷ ಅಧಿಕಾರಿಗಳು ಸಿಪಾಯರು ಪೌಂಡು ೧೨,೩೮,೫೭೫ ಬಹುಮಾನವಾಗಿ ಪಡೆದರು. ಒಂದು ಶ್ರೀಮಂತ ಜಹಗೀರಿಯಲ್ಲಿದೆ. ಇದರಲ್ಲಿ ೩೧೫೦೦ ಪೌಂಡುಗಳನ್ನು ಕ್ಲೈವನೊಬ್ಬನೇ ಪಡೆದ. ೧೭೬೦ ರಲ್ಲಿ ಮೀರಕಾಸಿಮನನ್ನು ನವಾಬನನ್ನಾಗಿ ಮಾಡಿದಾಗ ಇಂಗ್ಲಿಷರಿಗೆ ಸಿಕ್ಕ ಬಹುಮಾನ ೨,೦೦,೨೬೯ ಪೌಂಡು. ಇದರಲ್ಲಿ ವಾನ್ಸಿ ಟಾರ್ಟನ ಪಾಲೇ ೫೮,೩೩೩ ಪೌಂಡು. ೧೭೬೩ ರಲ್ಲಿ ಮೀರ ಜಾಫರನು ೨ನೇ ಸಲ ನವಾಬನಾದಾಗ ಕೊಟ್ಟ ಬಹುಮಾನ ೫,೦೦,೧೬೫ ಪೌಂಡು. ಈಗ ಮತ್ತೆ ನಿಜಾಮುದ್ದೌಲನ ನವಾಬಗಿರಿಯ ಲಾಭ ೨೩೦೩೫೬ ಪೌಂಡು. ೫೮ ವರುಷದಲ್ಲಿ ಬಹುಮಾನ ಉಡುಗರೆಗಳೆಂದು ಹೋದ ೨೧,೬೯,೬೬೫ ಪೌಂಡು ಒಟ್ಟುವೆಂತ್ತ ಅಲ್ಲದೆ ೩೭೭೦೮೩೩ ಪೌಂಡುಗಳನ್ನು ಕಿತ್ತುಕೊಂಡರು. ಪೌಂಡು ಎಂದರೆ ಸವರನ್, ಸುಮಾರು ೧೪–೧೫ ರೂಪಾಯಿ ಬೆಲೆ.

ಈ ಹಣ ತೆಗೆದುಕೊಂಡುದುಂಟೆಂದು ಹೌಸ್ ಆಫ್ ಕಾಮನ್ಸ್ ಕಮಿಟಿಯು ಮುಂದೆ ಕಂಪೆನಿಯ ವಿಚಾರಣೆಯಾದಾಗ (೧೭೭೨–೭೩) ಒಪ್ಪಿದರು. ಕ್ಲೈವನು ತನ್ನ ವರ್ತನೆಯನ್ನು ಸಮರ್ಥನ ಮಾಡಿದ.

“ನವಾಬನ ಔದಾರ್ಯದಿಂದ ನನಗೆ ಸಂಪತ್ತು ಸುಲಭವಾಗಿ ಸಿಕ್ಕಿತೆಂದೂ ಕಂಪೆನಿಯ ಯೋಗಕ್ಷೇಮಕ್ಕಲ್ಲದೆ ಇಂತಿಯಾದಲ್ಲಿ ನಿಲ್ಲುವ ಅಗತ್ಯವೇ ನನಗಿಲ್ಲವೆಂದೂ ಘಂಟಾಘೋಷವಾಗಿ ಹೇಳಿದ್ದೇನೆ. ನಾನೇನು ಮುಚ್ಚಿಟ್ಟಿಲ್ಲ. ಇಂಡಿಯಾ ಡೈರೆಕ್ಟರರ ರಹಸ್ಯ ಸಭೆಗೆ ಆ ರೀತಿ ಪತ್ರ ಬರೆದೇ ಇರುವೆ. ಕಂಪೆನಿಯ ಸೇವೆಯಲ್ಲಿ ಎಷ್ಟೋ ಸಲ ನನ್ನ ಪ್ರಾಣವನ್ನೇ ಕಳೆದುಕೊಳ್ಳುವ ಪ್ರಸಂಗಗಳು ಬಂದವು. ಅಂಥ ನನಗೆ ಕಂಪೆನಿಗೆ ಲೇಶಮಾತ್ರವೂ ಲೋಪವಿಲ್ಲದೆ ಸ್ವಂತವಾಗಿ ಐಶ್ವರ್ಯಗಳಿಸುವ ಸುಸಂಧಿಯೊದಗಿದಾಗ ಗಳಿಸಬಾರದೆಂದು ಕಂಪೆನಿಗೇಕೆ ಆಕ್ರೋಶ? ನನಗೆ ಬರದಿದ್ದರೆ ಆ ಐಶ್ವರ್ಯ ಕಂಪೆನಿಗಂತೂ ಬರುತ್ತಿರಲಿಲ್ಲವಷ್ಟೆ!”

ಆ ಸಂಪತ್ತು ಕಂಪನಿಯದೂ ಅಲ್ಲ, ತನ್ನದೂ ಅಲ್ಲ. ದೇಶದ್ದು. ದೇಶದ ಜನರ ಕ್ಷೇಮಕ್ಕಾಗಿಯೇ ಅದರ ಉಪಯೋಗವಾಗಬೇಕಿತ್ತು ಎಂಬುದು ಕ್ಲೈವನಿಗೆ ತಿಳಿಯಲೇ ಇಲ್ಲ.

ಆದರೆ ಕಂಪನಿಯವರು ಇದನ್ನೊಪ್ಪಲಿಲ್ಲ. ತಮ್ಮ ನೌಕರರು ಬಂಗಾಳದಲ್ಲಿ ನಡೆಸುತ್ತಿದ್ದ ಒಳನಾಡಿನ ವ್ಯಾಪಾರವನ್ನು ಆಕ್ಷೇಪಿಸಿ ಬಹುಮಾನಗಳ ಪಡೆಯ ಕೂಡದೆಂದು ಅಪ್ಪಣೆಮಾಡಿ ೧೭೬೫ ರಲ್ಲಿ ಇದನ್ನೆಲ್ಲ ನಿಲ್ಲಿಸಲು ಕ್ಲೈವನನ್ನು ಕಳಿಸಿದರು. ಬಂಗಾಳಕ್ಕಾಗಲೇ ಅಪ್ಪಣೆಯ ಸುದ್ದಿಮುಟ್ಟಿತ್ತು. ನೌಕರರು ಸಹಿ ಮಾಡಬೇಕಾದ ಕರಾರು ಬೇಗನೆ ಬರಲಿದ್ದವು. ಏನೂ ಮಾಡಲು ಕಾಲವಿದ್ದಿಲ್ಲ. ಕಲ್ಕತ್ತೆಯ ಮಂಡಲಿಯು ಅವಸರ ಅವಸರವಾಗಿ ನವಾಬಗಿರಿಯನ್ನು ನಿಜಾಮುದ್ದೌಲನಿಗೆ ಕಟ್ಟಿ ತಮ್ಮ ಕಡೆಯ ಸುಗ್ಗಿಯನ್ನು ಸೂರೆಗೊಂಡರು.

# ಕೊಳಲು

( ಕಾವ್ಯಾವಲೋಕನ )

A book may be amusing with numerous errors, or it may be very dull without a single absurdity.

— *Goldsmith*

**ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ**

—ಶ್ರೀಕಂಠಯ್ಯನವರು

ಶ್ರೀ. ಪುಟ್ಟಪ್ಪನವರು ನಿಜವಾದ ಕವಿಗಳು. ಅವರ ಅನೇಕ ಕವನಗಳನ್ನೊಳಗೊಂಡ ಈ ಕಾವ್ಯಮಾಲೆಯು ಬಹುತರ ಎಲ್ಲರ ಪ್ರೇಮಕ್ಕೆ ಪಾತ್ರವಾಗುವದರಲ್ಲಿ ಸಂಶಯವಿಲ್ಲ. ಶ್ರೀ. ಬಿ. ಎಂ. ಶ್ರೀಕಂಠಯ್ಯನವರಂಥ ಕವಿವರ್ಯರ ಉತ್ಸಾಹಭರಿತವಾದ ಮುನ್ನುಡಿಯೇ ಇದಕ್ಕೆ ಸಾಕ್ಷಿಯಾಗಿದೆ.

ಪುಟ್ಟಪ್ಪನವರ ವಾಣಿಯಲ್ಲಿ ಅಸ್ಫುಟವಾದುದೇನೂ ಇಲ್ಲ. ಯಾವ ತರಹದ ತಡೆಯೂ ಇಲ್ಲದೆ ಅವರು ತಮಗೆ ಸ್ಫೂರ್ತಿಸಿದ್ದನ್ನು ನುಡಿದು ಬಿಡುವರು. "**ಪದಗಳೆಂಬ ಮಣಿಗಳೆಲ್ಲ ಭಾವವೆಂಬ ದಾರದಲ್ಲಿ ತಮಗೆ ತಾವೆ ಕೋದುಕೊಳ್ಳುವ**"ವೆಂದು ಅವರ ಅಭಿಪ್ರಾಯ. ಬಹ್ವಂಶವಾಗಿ ಅವರ ಕವನಗಳು ಈ ಅಭಿಪ್ರಾಯವನ್ನು ಪ್ರಮಾಣಿಸಿ ತೋರಿಸುತ್ತವೆ. ಅವರ ಕಾವ್ಯದಲ್ಲಿದ್ದ ಇನ್ನೊಂದು ಗುಣವೆಂದರೆ ಓರ್ವ ಮೋಹಕ ಶಿಶುವಿನ ಮಾತುಗಾರಿಕೆ; ಆದಿಯಂತವಿಲ್ಲದಿದ್ದರೂ ಅದಲುಬದಲಿಲ್ಲದಿದ್ದರೂ ಮನೋಹರವಾದ ವಾಚಾಳಿತನ; ಏನೆನ್ನಲಿ, ಏನು ಬಿಡಲಿ, ಎಂದು ವಿಚಾರ ಮಾಡುವಷ್ಟರಲ್ಲಿ ಎಷ್ಟು ಮಾತನಾಡಿದರೂ ಆ ಶಿಶುವಿಗೆ ಸಾಲದು ಇದರಿಂದ ಕಾವ್ಯವು ಚಿತ್ತಾಕರ್ಷಕವಾಗಿ ಪರಿಣಮಿಸಿದರೂ ಅದು ಅನೇಕಸಂದು ಕೊರತೆಗಳಿಗೆ ಗುರಿಯಾಗಬೇಕಾಗುವದು. ನೂತನವಾದ ಪ್ರತೀತಿಯನ್ನು ಹೊಂದಿದ ಕವಿಯು ತನ್ನ ಆ ಒಂದದಭರದಲ್ಲಿ ಗಾನಮಾಡಹತ್ತಲು ತಾನು ಕಂಡ ಸೊಬಗಿಗೂ ಅದನ್ನು ಬಣ್ಣಿಸುವ ತನ್ನ ವಾಣಿವೀಣೆಗಳಿಗೂ ಇರಬೇಕಾದ ನಿಕಟ ಸಂಬಂಧವನ್ನು ಅಷ್ಟು ಸೂಕ್ಷ್ಮವಾಗಿ ಲಕ್ಷಿಸುವದಿಲ್ಲ.

ಇದರಿಂದ ಎರಡು ಪ್ರಕಾರದ ಪರಿಣಾಮಗಳು ಉದ್ಭವಿಸುವವು. ಕವಿಯು ಸುಸಂಸ್ಕೃತನಾಗಿಯೇ ಇರುವದರಿಂದ ಅವನು ನಿರೀಕ್ಷಿಸಿದ ಕಾವ್ಯಭಾಗದಲ್ಲಿ ಉತ್ತಮವಾದುದೆಲ್ಲ ಅವನ ಸ್ವತಂತ್ರ ಶಕ್ತಿಯೊಡನೆ ಬೆರೆತು ಅದರಲ್ಲಿರಬಹುದಾದ ಪೂರ್ಣ ಸಾಮರ್ಥ್ಯವನ್ನು ಕುಗ್ಗಿಸುವದು. ಅನೇಕ ಕವಿಗಳ ವಿಚಾರ ತರಂಗಗಳೂ ಕಲ್ಪನೆಗಳೂ ವಾಕ್ಯಗಳೂ ಅವನ ಕವನಗಳಲ್ಲಿ ನುಗ್ಗುವವು. ಈ ಬಗೆಯೇ ಒಮ್ಮೊಮ್ಮೆ ಅತಿರೇಕಕ್ಕೆ ಹೋಗಲು ಉಳಿದ ಕಾವ್ಯಗಳಲ್ಲಿ ತಾನು ಹೊಂದಿದ ರಸಾನುಭವವು ತನ್ನದೇ ಎಂದು ಗ್ರಹಿಸಿಕೊಂಡು ಅದಕ್ಕೆ ಮೋಹಿಸಿ ಅದನ್ನು ವ್ಯಕ್ತಗೊಳಿಸಲು ಕವಿಯು ತನಗಿದ್ದ ರಸಿಕತೆಯನ್ನೂ ನಿಪುಣತೆಯನ್ನೂ ವೆಚ್ಚಮಾಡಲು ಉದ್ಯುಕ್ತನಾಗುವನು. ಅನೇಕ ಸಲ ಆ ಕವಿಯ ಆತ್ಮ ಸ್ವಾತಂತ್ರ್ಯವು ಈ ರೀತಿಯಿಂದ ಅಳಿಸಿ ಹೋಗುವದು. ಇನ್ನು ಎರಡನೆಯ ಪರಿಣಾಮವೆಂದರೆ ಈ ಕಾವ್ಯಕ್ಕೆ ಒದಗಿ ಬರುವ ಶೈಥಿಲ್ಯ. ಕವಿಯು ನಿಯಾಮಕತೆಯ ಸೀಮೆಯನ್ನು ಮೀರಿಹೋಗಲು ಕವಿತೆಯ ರೂಪವು ಒಮ್ಮೆಲೆ ಅವನ ಕಣ್ಣೆದುರಿಗೆ ನಿಲ್ಲಲಾರದು. ಅವನು ಉಪಯೋಗಿಸುವ ಚಿತ್ರಗಳೂ ಉದಾಹರಣೆಗಳೂ ಕೆಲವೆಡೆ ಅಸಂಖ್ಯಾಕವಾಗಿ ಇನ್ನು ಕೆಲವೆಡೆ ಅಸಂಬದ್ಧವಾಗುವವು. ಕವಿತೆಯೆಂದರೆ ಓರ್ವ ಸುಂದರಿಯಾದ ಕುಲವಧು. ಭಿನ್ನ ಭಿನ್ನ ಅವಯವಗಳ ಅನನುಕರಣೀಯವಾದ ಸಂಯೋಜನೆಯಲ್ಲಿಯೇ ಅವಳ ಸೌಂದರ್ಯದ ಉಗಮವಿರುವದು. ಕಾವ್ಯದಲ್ಲಿರಬೇಕಾದ ಇಂಥ ಸೌಂದರ್ಯವನ್ನು ನಿರ್ಮಿಸುವದಾದರೆ ಕವಿಗೆ ಅದರ ಪೂರ್ಣ ಪ್ರತೀತಿಯು ಬೇಕು. ಪ್ರತಿಯೊಂದು ಕವನದಲ್ಲಿಯ ಮುಖ್ಯ ಭಾವನೆಯೊಡನೆ ಅವನ ಮನಸ್ಸು ಚೆನ್ನಾಗಿ ಬೆರೆತುಕೊಳ್ಳದಿದ್ದರೆ ಅವು ಅನೇಕ ಸಲ ಬೇಸರ ಬರುವಂತೆ ಬೆಳೆದು ಅದರೊಳಗಿನ ಮೋಹಕತೆಯು ಮಾಯವಾಗುವದು. ಸ್ಫೂರ್ತಿಯು ಯಾವ ತರಗತಿಯದೇ ಇರಲಿ, ಅದನ್ನು ಪೂರ್ತಿಯಾಗಿ ವ್ಯಕ್ತಗೊಳಿಸಲು ಇಂಥ ಸಾಮರಸ್ಯವೂ ಆ ಭಾವನೆಯ ನೆಲೆಯನ್ನರಿತು ಅದಕ್ಕೆ ತಕ್ಕುದಾದ ಕಲೆಯನ್ನು ಹುಡುಕಿ ತರುವ ಜಾಣ್ಮೆಯೂ ಬೇಕು.

ಇನ್ನು ನಮಗೆ ಈ ಕವನಗಳಲ್ಲಿ ಕಂಡುಬರುವ ಮೂರನೆಯ ದೋಷವು ಶೈಲಿಗೆ ಸಂಬಂಧಿಸಿದೆ. ಈ ನೂತನ ಯುಗದಲ್ಲಿ ನಾವು ಎಷ್ಟೋ ಹಳೆಗನ್ನಡ ಶಬ್ದಗಳಿಗೆ ಜೀವಕಳೆಯನ್ನು ತುಂಬಬೇಕಾಗುವದಲ್ಲದೆ ವಿವಿಧ ಶಬ್ದ ಸಂಜ್ಞೆಗಳನ್ನೂ ಕಲ್ಪಿಸಿಕೊಳ್ಳಬೇಕಾಗುವದು. ಹೀಗೆ ಪ್ರಯತ್ನಿಸುವ ಅಧುನಿಕ ಕವಿಗಳಲ್ಲಿ ಪುಟ್ಟಪ್ಪನವರೂ ಒಬ್ಬರು. ಆದರೆ ಈ ನಿರ್ಮಾಣ

(ಕೊಳಲು— ಲೇಖಕರು ಶ್ರೀ. ಕೆ. ವ್ಹಿ. ಪುಟ್ಟಪ್ಪನವರು, ಬೆಲೆ ೧೨ ಆಣೆ. ಬೆಂಗಳೂರು ಪ್ರೆಸ್ಸ )

ಕಾರ್ಯದಲ್ಲಿ ಇನ್ನುಳಿದವರಂತೆ ಅವರೂ ಅನೇಕ ಸಲ ತಪ್ಪು ಹೆಜ್ಜೆಯನ್ನು ಒಗೆದಿದ್ದು ಅಲ್ಲಲ್ಲಿ ಕಂಡುಬರುವದು.

ಮೇಲ್ಕಾಣಿಸಿದ ಈ ಗುಣಾವಗುಣಗಳಿಗೆ ಶ್ರೀ ಪುಟ್ಟಪ್ಪನವರ ಎಲ್ಲ ತರದ ಕವಿತೆಗಳೂ ಒಳಪಟ್ಟಿವೆಯೆಂದು ಹೇಳಬಹುದು. ಅವರು ಬರೆದ ಭಕ್ತಿಪರ ಗೀತೆಗಳು, ವರ್ಣನಾತ್ಮಕ ಕವಿತೆಗಳು, ಹಾಡುಗಳು, ರಾಷ್ಟ್ರಗೀತೆಗಳು, ಶಿಶುಗೀತೆಗಳು, ಪ್ರೇಮಗೀತೆಗಳು ಹಾಗು ಸಾಮಾನ್ಯ ಜನತೆಯ ಜೀವನವನ್ನು ಅನುಲಕ್ಷಿಸಿ ಬರೆದ ಕವಿತೆಗಳು, ಇವೆಲ್ಲವುಗಳಿಂದಲೂ ನಾವು ಮೇಲೆ ಹೇಳಿದ ಗುಣದೋಷಗಳನ್ನು ಮಥಿಸಿ ತೆಗೆಯಬಹುದು. ಇವಲ್ಲದೆ 'ಕೊಳಲಿ'ನಲ್ಲಿ ಮೂರು ಅನ್ಯಭಾಷೆಯೊಳಗಿನ ಕವಿತೆಗಳ ಭಾಷಾಂತರಗಳೂ ಉಂಟು. ಮೂಲದಲ್ಲಿದ್ದ ಅಂತ್ಯಪ್ರಾಸವಿಲ್ಲದ "ಬಾರ್ಡಿಲ್ ಎಂಬ ಕವಿಯಿಂದ" ಎಂಬ ಭಾಷಾಂತರವು ಅಷ್ಟು ತೃಪ್ತಿಕರವಾಗಿಲ್ಲ.

ಇನ್ನು ಇವರ ಭಕ್ತಿಪರ ಗೀತೆಗಳನ್ನು ಅವಲೋಕಿಸುವಾ. ಇವುಗಳಲ್ಲಿ ಕೆಲವೆಡೆಗೆ ಅನ್ಯರ ವಿಚಾರ ವಿನಿಮಯವು ಹೇಗಾಗಿರುವದೆಂಬುದು ಸ್ಪಷ್ಟವಾಗಿ ಕಂಡುಬರುವವು. ಒಮ್ಮೊಮ್ಮೆ ಇದನ್ನು ಇಂತಹದೇ ಎಂದು ಕಂಡು ಹಿಡಿಯುವದು ಪೂರ್ಣವಾಗಿ ಸಾಧಿಸಲಿಕ್ಕಿಲ್ಲ; ಮತ್ತು ಇಂಥ ಊಹೆಯು ಒಂದು ವೇಳೆ ತಪ್ಪಾಗಿಯೂ ಇರಬಹುದು. ಆದರೂ ನಮಗೆ ಕಂಡ 'ತುಣುಕು-ಮಿಣುಕು'ಗಳನ್ನು ನಾವು ಇಲ್ಲಿ ಉಲ್ಲೇಖಿಸುವೆವು. ಏಕೆಂದರೆ 'ಶ್ರೀನಿವಾಸ'ರು ಹೇಳಿದಂತೆ ದೊಡ್ಡವರ ದೀಪದಿಂದ ತಮ್ಮ ದೀಪವನ್ನು ಹಚ್ಚಿಕೊಳ್ಳುವದು ಏನೂ ತಪ್ಪಲ್ಲ. ಆದರೆ ಅವರ ಕಲ್ಪನೆಗಳನ್ನೇ ಅನೇಕ ಸಲ ಕನ್ನಡಿಸಿ ಒಮ್ಮೊಮ್ಮೆ ಅವರ ಬತ್ತಿಯನ್ನೇ ತಂದು ತಮ್ಮ ಪ್ರಣತಿಯಲ್ಲಿಟ್ಟು ಅದನ್ನು ಹೊತ್ತಿಸಲು ಯತ್ನಿಸುವದು ದೋಷವೆಂದೆನಿಸದಿರದೆ ?

"ದೇಹವಿದು ನೀನಿರುವ ಗುಡಿಯೆಂದು ತಿಳಿದು
ಗುಡಿಸುವೆನು ದಿನದಿನವು ದೇವ ದೇವ"

ಎಂಬಲ್ಲಿ ಪದಮೈತ್ರಿಯು ಅತ್ಯುತ್ತಮವಾಗಿದೆ. ಆದರೆ ಇಲ್ಲಿ ಕವಿರವೀಂದ್ರರ "I will ever keep my body pure" ಎಂಬ ಕಲ್ಪನೆಯನ್ನು ತೆಗೆದುಕೊಂಡು ನಾಲ್ಕು ಶಬ್ದಗಳನ್ನು ಹೆಚ್ಚು ಹಾಕಿ ಚಿತ್ರಿಸಿದ್ದಾನೆ. "Oh, mother, the young prince is to pass by our door......show me how to braid up my hair; tell me what garment to put on" ಎಂಬ ಒಂದು ಭಾವನೆಯನ್ನೇ

"ರಸಿಕನೆನ್ನಿನಿಯನತಿ ರಸಿಕನೌ ಕೆಳದಿ;
ಕೂಡಲವನನು ಪೋಪೆ; ಬೇಗ ಸಿಂಗರಿಸು"

ಎಂಬ ಕವಿತೆಯಲ್ಲಿ ಕವಿಯು ವಿಸ್ತರಿಸಿದ್ದಾನೆ. "ಗೊಲ್ಲನ ಗಾಯತ್ರಿ"ಯಲ್ಲಿಯೂ ಈ ದೊಡ್ಡ ಗೊಲ್ಲನ ಸೊಲ್ಲಿನ ಸೋಂಕಿದೆ. "ಆತ್ಮಸ್ವಾತಂತ್ರ್ಯ" ಹಾಗು "ದೇವರು ಮತ್ತು ಜೋರ" ಇವುಗಳೊಳಗಿನ ಕಥಾನಕವಾದರೂ ರವೀಂದ್ರರ ಕವಿತೆಗಳ ಮಾದರಿಯ ಮೇಲಿದ್ದಂತೆ ತೋರುತ್ತದೆ. "ಪೂಜೆ"ಯಲ್ಲಿ ಜಗನ್ನಾಥದಾಸರ ಹರಿಪೂಜೆಯ ಛಾಯೆಯು ಕಂಡುಬರುವದು. ಹಕ್ಕಿಯಂತೆ ಹಾಡುತ್ತ ನಡೆದ ಪುಟ್ಟಪ್ಪನವರ ಸ್ಮೃತಿಪಥದಲ್ಲಿ ಈ ಭಾವನೆಗಳು ಸಹಜವಾಗಿ ಏಳಲು ಅವರು ಅದಕ್ಕೆ ವ್ಯಕ್ತಸ್ವರೂಪವನ್ನು ಕೊಟ್ಟು ಬಿಟ್ಟರು. ಹೀಗೆ ಅವರು ರೂಪಿಸಿದಲ್ಲಿ ಕೌಶಲ್ಯವಿದೆ, ಜಾಣ್ಮೆಯಿದೆ; ಆದರೆ 'ಏನಿದ್ದೇನು' ! ಒಮ್ಮೊಮ್ಮೆ ನೋಡಿಯು ಮೇಲೆ ಸ್ವಾತಂತ್ರ್ಯದ ಕಳೆಯೇ ಇರುವದಿಲ್ಲ.

ಇನ್ನು ಕೆಲವು ಗೀತೆಗಳಲ್ಲಿ ಚಿತ್ರಶಕ್ತಿಯ (Fancy) ಚಿನ್ನಾಟವನ್ನೂ ಹಾಗು ಶಬ್ದದಾಟದ ಸಂಭ್ರಮವನ್ನೂ ನಾವು ಕಾಣಬಹುದು. "ಬಡವನೆಂದು ಸುರಲತಿ ನಾಚುವೆನು ದೇವ," "ನೀನೆ ವರವಾಗಿ ಬರುವೆ," "ಇನ್ನೇನು ಬೇಕೆನಗೆ ದೇವ," "ತವರೂರು," "ಕಳಚಿ ಬೀಳುವೆನಯ್ಯಾ," "ಅಚಿಂತ್ಯ," "ಶಾಂತಿ," "ಅಪಜಯದ ಸುಖ,"–ಇವೇ ಮೊದಲಾದ ಕವಿತೆಗಳಲ್ಲಿ ಈ ವಿಧಾನವು ಕಂಡು ಬರುವದುಂಟು. "ವೇದಾಂತ ಕೇಸರಿ,"ಯು ಪಾಪಮೂಷಕವನ್ನು ಬೆನ್ನಟ್ಟುವದನ್ನು ನೋಡಿ ನಗೆಯು ಬರದಿರಲಾರದು. ಇದರಂತೆ ತರುಣ ಕವಿಗಳಾದ ಪುಟ್ಟಪ್ಪನವರು "ಎಷ್ಟೆಂದು ನಗಲೊ ದೇವ," ಎಂದು ಅರ್ಧ ಸತ್ತ ಮುದುಕರ ಹಾಗೆ ನುಡಿಯುವದೂ ಸರಿಬೀಳುವದಿಲ್ಲ. "ಮುಂದೆ ನಡೆ," ಮೊದಲಾದ ಕವಿತೆಗಳಲ್ಲಿ ತೋರಿ ಬಂದಂತೆ ವೇದಾಂತದ ಶಷ್ಪಾರಣ್ಯದಲ್ಲಿಯೂ ಪುಟ್ಟಪ್ಪನವರು ಹಣಿಕಿ ಹಾಕಿದ್ದಾರೆ.

"ಅದು ಅಲ್ಲ, ಇದು ಅಲ್ಲ ಎಂದೆಲ್ಲರೊರೆಯೆ,
ಅದು ನಾನು ಇದು ನಾನು ಎಂದು ನೀ ಮೊರೆವೆ!"

ಹೀಗೆ ಒಂದೇ ಒಂದು ಕೆಚ್ಚಿದ ರತ್ನವನ್ನು ಕೈಯಲ್ಲಿ ಹಿಡಿದು ವಿಧವಿಧವಾಗಿ ಹೊರಳಿಸಿ ನೋಡಿ ಅದನ್ನೇ ಬಣ್ಣಿಸುವದರಲ್ಲಿ ಕವಿಯು ಮಗ್ನನಾಗಿದ್ದಾನೆ.

ಈ ಮೊದಲು ಹೇಳಿದ ದ್ವಿತೀಯ ದೋಷವು- ಅಂದರೆ ಒಂದೇ ಒಂದು ಭಾವವನ್ನು ಬಲಿ-ಹಿಡಿದು ಅದನ್ನು ಸಾಧ್ಯವಿದ್ದ

ತನಕ ಸದೆಬಡೆದು ಅದು ನರಳ ಹತ್ತಲು ಕಡೆಗೆ ಅದನ್ನು ಬಿಟ್ಟು ಬಿಡುವ ಯೋಜನೆಯು– ಮೇಲೆ ಹೇಳಿದ ಅನೇಕ ಕವಿತೆಗಳಲ್ಲಿ ಕಂಡು ಬರುವದುಂಟು. "ಪ್ರಾರ್ಥನೆ" ಹಾಗು "ಅನ್ವೇಷಣ"ಯಲ್ಲಿಯೂ ಇದೇ ರೀತಿಯು ವ್ಯಕ್ತವಾಗಿದೆ. ಈ ರೀತಿಯ ಸೌಂದರ್ಯಶಿಖರವನ್ನು ನಾವು "ರತಿಯಲ್ಲಿ" ಕಾಣು ತ್ತಿದ್ದರೆ, ಅದು ಅಧೋಗತಿಗೆ ಇಳಿದುದನ್ನು "ಹಾದಿಗಾರ"ನಲ್ಲಿ ನೋಡಬಹುದು. ಎಲ್ಲಿಗೆ ಹೋಗುವಿ, ಎಂದು ಕೇಳುವದೊಂದೇ ತಡ; ಹಾದಿಗಾರನು ತನ್ನ ಗಂಟನ್ನು ಬಿಚ್ಚುತ್ತಾನೆ.

"ಕಾಣದ ಪೂಗಳ ಕೊಯ್ಯಲು ಪೋಗುವೆ ;
ನೋಡದ ನೋಟವ ನೋಡಲು ಪೋಗುವೆ ;
ಮಾಡದ ಮಾಟವ ಮಾಡಲು ಪೋಗುವೆ ;
ದಾಂಟದ ನದಿಯನು ದಾಂಟಲು ಪೋಗುವೆ ;
ಏರದ ಗಿರಿಯನು ಏರಲು ಪೋಗುವೆ ;
ಪರೊಮ್ಮನ ನೋಡಲು ಪೋಗುವೆ ;"

ಆದರೆ ನಿಜವಾದ ಭಾವನೆಗಳಿಂದ ಅಲಂಕೃತವಾದ ಗೀತೆ ಗಳೂ ಅನೇಕವಿವೆ. ಈ ಬೂದಿಯ ರಾಶಿಯಲ್ಲಿಯೂ ಕೂಡ ಕವಿಯ ಪ್ರತಿಭೆಯ ಕಿಡಿಗಳು ಒಂದೇ ಸವನೆ ಹಾರುತ್ತಿದ್ದು, ಅಲ್ಲಲ್ಲಿ ಕೆಂಡಗಳು ಪ್ರಜ್ವಲಿಸಿ, ಕೆಲವೆಡೆ ಜ್ವಾಲೆಯೂ ಕಾಣು ತ್ತಿದೆ. "ಮುಂದಕೆಲ್ಲಿಗೆ" "ಗುರಿ" "ಅಡವಿಯಲ್ಲಿ" "ಕರಿ ಯುವನು ಬಾರೆ ಸಖಿ" "ಅನಿರ್ವಚನೀಯ" "ತಾಯಿಯ ಸಾನ್ನಿಧ್ಯ" "ವನಸುಮ" "ಎಂತಿಹೆ" "ಅಭಯ" "ಕೃಪೆ" "ಏಕೆ" "ನಿನ್ನೆಡೆಗೆ ಬರುವಾಗ" "ಆಪ್ತವಾಕ್ಯ" "ದಾರಿ ತೋರೆ ನಗೆ" ಇವೇ ಮುಂತಾದವುಗಳನ್ನು ಓದಿ ಪುನಗಾಣಬಹುದು. "ಘೋರಾಂಧಕಾರದೊಳು ಕಾರ್ಮುಗಿಲ ಸಿಟ್ಟು" ಹಾಗು "ಕರೆ ಯೆಂದು ಬರುವದೋ ನಾನರಿಯೆ, ಅರಿಯೆ" ಎಂಬ ಕವಿತೆ ಗಳೂ ಸುಂದರವಾಗಿವೆ.

ಇನ್ನು ಪ್ರಕೃತಿಪರ ಗೀತೆಗಳನ್ನು ಕುರಿತು ವಿಚಾರಿಸುವಾ. ಮೇಲೆ ಹೇಳಿದ ದೋಷಗಳೇ ಇಲ್ಲಿಯೂ ಒಡೆದು ಕಾಣುತ್ತವೆ. ಟೆನಿಸನ್ ಕವಿಯು ನೆನಪಾಗಿ 'ಕಾಳ್ಪುರುವು' ಹೀಗನ್ನುತ್ತದೆ;

"ಬರುವ ಜನರು ಬರುತಲಿರಲಿ
ಮೊರೆವೆನೆಂದಿಗು !
ತೆರಳುವವರು ತೆರಳುತಿರಲಿ
ಹರಿವೆನೆಂದಿಗು !"
೭—೮೯೧೩

ಕವಿಯು ನವಿಲನ್ನು ಕಂಡು "ಯಾವ ದೇವಶಿಲ್ಪಿಯಿಂತು ನಿನ್ನ ಕೊರೆದನಃ" ಎಂದು ಉದ್ಘೋಷಿಸುವಾಗ, ಥಾಮಸನ್ ಕವಿಯು ಒಂದು ಹಿಮದ ಗಡ್ಡೆಗೆ ಕೇಳಿದ ಪ್ರಶ್ನೆಯು ಏಳುತ್ತದೆ:

" What heart could have thought you,
Past our devisal ? "

ಮುಂದೆ

" ಮಳೆಯ ಬಿಲ್ಲ ಕರಗಿಸಿಂತು
" ನಿನ್ನ ಕಡೆದನೆ ! "

ಎಂದು ಕವಿಯು ಕೇಳುವಲ್ಲಿ ನಾವು ಡ್ಯಾವ್ಹಿಸ್ ಕವಿಯ ' To a kingfisher ' ದಲ್ಲಿಯ

"It was the Rainbow gave thee birth
And left thee all her lovely hues"

ಎಂಬ ಸಾಲುಗಳನ್ನು ಸ್ಮರಿಸುತ್ತೇವೆ. "ಮೋಹಿಸುವ ಸಂಜೆ"ಯಲ್ಲಿ–

" ಗೂಡು ಬಿಡು, ಬಾ ಹೊರಗೆ,
" ಗೀತೆ"ಯಿರಲಿ.

× × ×

ಮೋಡಗಳ ಸಿರಿಗೆಂಪು
ಪಂಡಿತರ ಪಾಂಡಿತ್ಯ
ಮೆಲ್ಲಮಂ ಬೋಧಿಪುದು;
ಮೀರಿರುವದು ! "

ಎಂದು ಕವಿಯು ಬರೆಯುವಾಗ ನಮಗೆ ಮೊದಲು ಗೀತಾಂಜಲಿ ಯೊಳಗಿನ " Leave thy telling and counting of beads" ಎಂಬ ಕವನವು ನೆನಪಾಗಿ ಆ ಮೇಲೆ ವರ್ಡ್ಸ್‌ವರ್ಥ ಕವಿಯ ಈ ಶ್ಲೋಕವು ಕಣ್ಣುಟ್ಟುತ್ತದೆ :

" One impulse from the vernal wood
Will teach you more of man,
Of moral evil and of good
Than all the sages can. "

' ಮಳೆಬಿಲ್ಲಿ 'ನಲ್ಲಿಯ ಕಡೆಯ ಎರಡು ಸಾಲುಗಳು ಸ್ಕಾಟ್ ಕವಿಯಿಂದ ಬಂದಿವೆ.

" One crowded hour of glorious life
Is worth an age without a name."

ಕವಿಯು ಪ್ರತಿಭೆಯು ಸಾಕ್ಷಾತ್ಕಾರವನ್ನು ಪೂರ್ಣವಾಗಿ ಪಡೆದ "ಸುಗ್ಗಿ ಬರುತಿದೆ" ಎಂಬ ಕವಿತೆಯಲ್ಲಿಯೂ ಕೂಡ "Truth is Beauty, Beauty Truth" ಎಂಬ ಕೈಗಡದ ಆಭರಣಕ್ಕೆ ಸ್ಥಳ ಸಿಕ್ಕಿದೆ. ಇನ್ನು ಪುನರುಚ್ಚಾರಣೆಯಿಂದ ಭಾವನೆಗಳ ಸಾಮರ್ಥ್ಯವು ಹೇಗೆ ಕಡಿಮೆಯಾಗಬಲ್ಲದೆಂಬದನ್ನು ನಾವು "ಬಣ್ಣದ ಚುಕ್ಕಿ"ಯಲ್ಲಿ ನೋಡಬಹುದು. ಇದೇ ಕವಿಯ "ಹೀರೇ ಹೂ" ಎಂಬ ಕವಿತೆಯು ಚಂದ್ರನಂತಿದ್ದರೆ ಆ ಚಂದ್ರನ ವಕ್ರವಾದ ಪ್ರತಿಬಿಂಬವು ಮಾತ್ರ ಈ ಕವಿತೆಯಲ್ಲಿದೆ. ಅದೇ ತರದ ಉದಾಸೀನವೃತ್ತಿಯಲ್ಲಿದ್ದಾಗ ಕವಿಯು ಸುಮ್ಮನಿರಲಾರದೆ ಬರೆದ ಕವಿತೆಯಿದು. "ಅಂಗಳದವರೆಯು ಚಪ್ಪರದಡಿಯಲಿ" ಎಂಬ ಕವಿತೆಯಲ್ಲಿ ಬಂಧವು ಬಹಳ ಸಡಿಲಾಗಿದೆ.

ಆದರೆ ಬಹುತರವಾಗಿ ಈ ಎಲ್ಲ ಕವನಗಳಲ್ಲಿಯು ಕವಿಗಿರುವ ಪ್ರಕೃತಿ-ಪ್ರೇಮವು ವ್ಯಕ್ತವಾಗಿದೆ. ಇದಲ್ಲದೆ "ಕಾಣದ ಕಡಲಿಗೆ," "ಮಿಣಕು ಹುಳುಗಳು," "ಸಂಜೆವೆಣ್ಣು," "ಹುಣ್ಣಿಮೆ," "ಮಳೆಬಿಲ್ಲು," ಮೊದಲಾದ ಕವಿತೆಗಳು ಸುಂದರವಾಗಿಯೂ ಮೋಹಕವಾಗಿಯೂ ಇವೆ.

"ಚೆಲುವಿಕೆಯ ಚೈತನ್ಯ ಬಿಲ್ಲಾದುದೆಂಬಂತೆ,
ಮಾಯೆ ಬರೆದಿಹ ಮಧುರ ಚಿತ್ರದಂತೆ!" ಎಂದು

ಮಳೆಬಿಲ್ಲನ್ನು ನೋಡಿ ಕವಿಯು ಉದ್ಗಾರ ತೆಗೆಯುತ್ತಾನೆ.

"ಕನ್ನಡ"ವೆಂಬುದು ಭಾಷಾಪ್ರೇಮವನ್ನು ತೋರಿಸುತ್ತಿದ್ದರೆ "ಭಾರತ ಜನನಿಗೆ" ಎಂಬುದೊಂದು ಸರ್ವಸಾಧಾರಣ ರಾಷ್ಟ್ರಗೀತೆಯಾಗಿದೆ. "ಜಯಹೇ ಕರ್ಣಾಟಕ ಮಾತ" ಎಂಬಲ್ಲಿ ರವೀಂದ್ರರ "ಜಯಹೇ ಭಾರತ ಭಾಗ್ಯವಿಧಾತಾ" ಎಂಬ ಗೀತೆಯಲ್ಲಿಯ ಆವೇಶವು ಬಂದಿರುವದೆಂದು ಹೇಳಲಿಕ್ಕೆ ನಮಗೆ ಯಾವ ಆತಂಕವೂ ಕಾಣುವದಿಲ್ಲ. ಇವೆಲ್ಲ ಪ್ರಶಂಸಾತ್ಮಕವಾದ ಕವಿತೆಗಳು ಮಾತ್ರ; ಆದರೆ ಪ್ರಶಂಸನೀಯವಾದ ಆತ್ಮಾರ್ಪಣದ-ಇಲ್ಲವೆ ಪ್ರಾಣಪ್ರತಿಷ್ಠಾಪನೆಯ ಗೀತೆಗಳಲ್ಲ.

"ಕೋಳಲಿ"ನಲ್ಲಿ ನಾಲ್ಕು ಹಾಡುಗಳೂ ಇವೆ. ಇವು ನಾಟ್ಯಗೀತೆಗಳಾಗಿರುವದರಿಂದ ಅದೇ ಛಂದಸ್ಸಿನಲ್ಲಿ ಬರೆದ ಉಳಿದ ಕವಿತೆಗಳನ್ನು ಬಿಟ್ಟು ನಿಲ್ಲುತ್ತವೆ. ಅವು ಕವಿಯು ಬೇರೊಬ್ಬ ವ್ಯಕ್ತಿಯ ಇಲ್ಲವೆ ವ್ಯಕ್ತಿಗಳ ಹೃದಯವನ್ನು ಹೊಕ್ಕು ಅವರಿಂದಾಡಿಸಿದ ನಾಲ್ಕು ಮಾತುಗಳು. "ಸೋಮಾರಿಯ ಹಾಡು"ನಲ್ಲಿ ಒಂದೆರಡು ಆಂಗ್ಲ ಕವಿತೆಗಳ ಸಂಸ್ಕಾರವು ಕಂಡು ಬರುತ್ತ[illegible]ದಾದರೂ ಅದೇನು ದೋಷವಲ್ಲ; ಏಕೆಂದರೆ ಆ ಕಾವ್ಯ ಉತ್ತಮವಾಗಿದೆ. "ದೋಣಿಗನ ಹಾಡು" ಸಾಧಾರಣವಾಗಿದೆ. "ರಾಧೆಯ ಕರೆ" ಯಲ್ಲಿ ರಾಧೆಯು ಕೃಷ್ಣನನ್ನು ತನಗೋಸ್ಕರ ಕರೆಯುವದನ್ನು ಬಿಟ್ಟು ಚಕೋರ, ಪೊನ್ನಸುಮ, ಇವುಗಳ ಪರವಾಗಿ ಕರೆಯುವದರಲ್ಲಿ ವಿಶೇಷ ಅರ್ಥವೇನು ? ವಸಂತ ರಮಣಿಯರ ಹಾಡಾದರೂ ಇವೆ. ಅದರಲ್ಲಿ ಶೈಥಿಲ್ಯವಂತೂ ತುಂಬಾ ಇದೆ. ಇನ್ನು "ವಸ್ತು"ವನ್ನು ವಿಚಾರಿಸಿ ನೋಡಿದಲ್ಲಿ ವಸಂತರಮಣಿಯರು ಯಾರು ? ಅವರು ಕುಸುಮಗಳಾಗುತ್ತಾರೆ; ಪಕ್ಷಿಗಳಾಗುತ್ತಾರೆ; ಇಷ್ಟಲ್ಲದೆ ಗೋಪಾಲಕರಾಗುತ್ತಾರೆ! ಹೀಗೆ "ಅದು ನಾನು, ಇದು ನಾನು" ಎಂದು ಹೇಳುವ ಭಗವಂತನು ಕಡೆಗೆ ನಿರಾಕಾರನಾಗಿಯೇ ಉಳಿಯುವಂತೆ, ಅದರಂತೆ ಅನೇಕತ್ವದಲ್ಲಿ ಈ ರಮಣಿಯರು ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡಿರುವರು !

ಇನ್ನು ಶಿಶುಗೀತೆಗಳನ್ನು ಪರೀಕ್ಷಿಸುವಾ. ರವೀಂದ್ರರ "ಬಿದಿಗೆಯ ಚಂದ್ರನು" ಆಕಾಶದಲ್ಲಿ ಮೂಡಿದುದನ್ನು ಎಷ್ಟೋ ಮುದ್ದು ಶಿಶುಗಳು ಅದರ ಪ್ರತಿಬಿಂಬವನ್ನಾದರೂ ಸೆರೆಹಿಡಿಯಲು ಹಾತೊರೆಯುತ್ತಿದ್ದಾರೆ. ಆನಂದಕಂದರ "ಮುದ್ದಿನ ಮಾತುಗಳು" ಈ ಮಾದರಿಯನ್ನನುಸರಿಸಿದ ಕವಿತೆಗಳಲ್ಲಿ ಶ್ರೇಷ್ಠವಾಗಿವೆ. ಅನೇಕ ಕವಿತೆಗಳಲ್ಲಿ ಶಿಶುಹೃದಯವನ್ನು ಕವಿಯು ಬಿಚ್ಚಿ ತೋರಿಸಿರುವದಲ್ಲದೆ ತನ್ನ ಆತ್ಮಕ್ಕೂ ಪರಮಾತ್ಮನಿಗೂ ಇರುವ ಸಂಬಂಧವನ್ನು ಅಲ್ಲಲ್ಲಿ ಸೂಕ್ಷ್ಮವಾಗಿ ಸೂಚಿಸಿದ್ದಾನೆ. ಪುಟ್ಟಪ್ಪನವರ "ನಮ್ಮಾಟ" ವೆಂಬ ಕವಿತೆಯಲ್ಲಿಯೂ ಇದೇ ತರದ ವ್ಯಂಗ್ಯ ಭಾವವಿದೆ. ಆದರೆ "ಮೂರ್ತಿಯ ಚಂದ್ರ" ಹಾಗು "ಒಡವೆಗಳು" ಎಂಬ ಕವಿತೆಗಳನ್ನು ಮನೋಹರವಾದ ಶಿಶುಗೀತೆಗಳೆಂದು ಕರೆಯಬಹುದು. "ಸಂಜೆಯ ರವಿಯು" ಹೆಚ್ಚು ಮನೋರಂಜಕವಾಗಿದೆ. "ಹಣ"ವೆಂಬ ಗೀತೆಯು ಇಷ್ಟು ಚೆನ್ನಾಗಿಲ್ಲ. "ತಿಂಡಿ"ಯಲ್ಲಿ ಯಂತೂ ತಿಂಡಿಗೂ ಮನಸು ಮಾಡಲೆಸಗುವ ಕೆಲಸಗಳಿಗೂ ನಮಗೆ ಯಾವ ಸಂಬಂಧವೂ ಕಾಣುವದಿಲ್ಲ.

ಇನ್ನೊಂದು ವಿಶೇಷ ತೆರದ ಕವಿತಾಪ್ರಕಾರವನ್ನು ನಾವಿಲ್ಲಿ ಯೋಚಿಸಬೇಕಾಗಿದೆ:- ಸಾಮಾನ್ಯ ಜನತೆಯ ಜೀವನವನ್ನು ಲಕ್ಷಿಸಿ ಬರೆದ ಗೀತೆಗಳದು. ಒಕ್ಕಲು ಮಕ್ಕಳ ಜೀವನವನ್ನು ಬಣ್ಣಿಸುವದು ಪುಟ್ಟಪ್ಪನವರಿಗೆ ಚೆನ್ನಾಗಿ ಸಾಧಿಸಿದೆ. ಅವರ ಇವುಗಳಲ್ಲಿಯ "ನನ್ನ ಮನೆ" ಎಂಬ ಕವಿತೆಯೊಳಗಿನ ಶೈಥಿಲ್ಯತೆ

ಚೇಜಾರತೆಯುಂಟಾಗಿದೆ. ಕವಿತೆಯು ಹನುಮನ ಬಾಲದಂತೆ ಬೆಳೆಯುತ್ತಹೋಗಿದೆ. "ನೇಗಿಲ ಯೋಗಿ"ಯು ಮಾತ್ರ ಸೊಗಸಾಗಿದೆ :

" ನೇಗಿಲ ಕುಳದೊಳಡಗಿದೆ ಕರ್ಮ,
ನೇಗಿಲ ಮೇಲೆಯೆ ನಿಂತಿದೆ ಧರ್ಮ. "

ಇದೇ ಭಾವನೆಯು ಕುಣಿತದಲ್ಲಿ "ಸುಗ್ಗಿಯ ಹಾಡು" ಬಂದಿದೆ. ಆದರೆ "ಹರಿಯುವ ವರೆಗೆ ಜಗ್ಗುವ" ಚಟವು ಇಲ್ಲಿಯ ಎರಡನೆಯ ಹಾಡನ್ನು ತೀರಾ ಕೆಡಿಸಿಬಿಟ್ಟಿದೆ:

" ನಮ್ಮ ಕೈಗಳೆ ಭೂಮಿಗಿಳಿದಿಹ ಕಲ್ಪವೃಕ್ಷಗಳು,
ನಮ್ಮ ಕಾಲುಗಳಿಳೆಗೆ ಬಂದಿಹ ಕಾಮಧೇನುಗಳು;
ಕೆಸರು ದೂಳುಗಳಿಂದ ಕೆದರಿದ
ನಮ್ಮ ತಲೆ ವೈಕುಂಠವು ! "

ಇದೆಲ್ಲ ಮನೋಹರವಾಗಿದೆ. ಆದರೆ ಕಲ್ಪನೆಯನ್ನು ಹಾಗೆಯೇ ಮುಂದೆ ಸಾಗಿಸಲು ಇದೇ ಕವಿತೆಯ ಅಣಕುವಾಡಿನಂತಿದ್ದ ಶ್ಲೋಕವು ನಮ್ಮ ಕಣ್ಣಿಗೆ ಬೀಳುವವು :

" ನಮ್ಮ ತೋಟವೆ ಸಾಂಖ್ಯವು, ಮೇ
ಹೆಮ್ಮ ತಿಮ್ಮನೆ ಕಪಿಲನು !
ನಮ್ಮ ಗದ್ದೆಯೆ ಯೋಗವು ಮೇ
ಹೆಮ್ಮ ರಂಗ ಪತಂಜಲ ! "

ಇದಲ್ಲದೆ ಮೂರನೆಯ ಹಾಡಿನಲ್ಲಿ ಈ ಸಾಲುಗಳು ಅತಿ ನೀರಸವಾಗಿವೆ.

" ಮಣ್ಣಿನಿಂದ ಅನ್ನ ತೆಗೆವ ನಮ್ಮ ಕುಳಗಳು
ಸಗ್ಗವನ್ನು ದಿನವು ತೆರೆವ ಕೀಲಿಕೈಗಳು ! "

" ನನ್ನ ಬಯಕೆ "ಯಾದರೂ ಇದೇ ಜೀವನದ ವಿಷಯಕ್ಕಿದೆ. " ಸಗ್ಗದ ಬಾಗಿಲಿ "ನಲ್ಲಿ " ನೇಗಿಲ ಗೆರೆಯೇ ಸಗ್ಗದ ಹಾದಿ" ಎಂದು ಕವಿಯು ಸಾರಿದ್ದಾನೆ. ಒಕ್ಕಲು ಮಕ್ಕಳ ವಿಷಯಕ್ಕಿರುವ ಪ್ರೇಮವೇ ಹಳ್ಳಿಯ ಹುಡಿಗೆಯಲ್ಲಿ ರತಿದೇವಿಯನ್ನೂ ಅವಳು ಹೊತ್ತ ಹೊರೆಯಲ್ಲಿ ಲೀಲೆಯಲ್ಲಿರುವ ಕರ್ಮವನ್ನೂ ಕಾಣುತ್ತನೆ. ಸಾಮಾನ್ಯ ಜನತೆಯ ಜೀವನದ ಸೌಂದರ್ಯವನ್ನು ನಾವು " ಶ್ರೀನಿವಾಸ "ರ " ಮದಲಿಂಗನ ಕಣಿವೆ " ಮುಂತಾದ ಕವನಗಳಲ್ಲಿ ಸವಿವರೆ, ಅದು ತಳೆದ ಭೀಕರ ಸ್ವರೂಪವನ್ನು "ಪುತ್ತಿನಚೀಲ," '೩೩ ಕೋಟಿ," ಮೊದಲಾದ ಆಂಧ್ರಕಾಶನಮುದಪ್ಪರ ಕವಿತೆಗಳಲ್ಲಿ ನೋಡಿದರೆ, ಅದರ ಗೊತ್ತು-ಗುರಿಗಳನ್ನೂ ಅದರ ಕಾರ್ಯದ ಮಹತ್ವವನ್ನೂ ನಾವು ಪುಟ್ಟಪ್ಪನವರ ಕವಿತೆಗಳಿಂದ ಅರಿತುಕೊಳ್ಳಬಹುದು. ಹೀಗೆ ಈ ಪ್ರಕಾರವು ನೂತನವಾದುದಾಗಿದೆ.

ಇನ್ನುಳಿದವೆಂದರೆ ಪ್ರೇಮಗೀತೆಗಳು. " ತಳಿರೇಣಿ "ಯಲ್ಲಿ ನೆನಪಿನ ಒನಪಿದೆ. " ಗತಿ "ಯಲ್ಲಿ ಕವಿಗೆ ರತಿಯಲ್ಲಿ ಹುಟ್ಟಿದ ಉದಾಸೀನತೆಯು ವ್ಯಕ್ತವಾಗಿದೆ. ಆದರೆ ಪ್ರೇಮದ ಉನ್ಮಾದವು ಹಿಡಿದೊಡನೆ "-ಗೆ" ಎಂಬ ಕವಿತೆಯಲ್ಲಿ ಕವಿಯು ಮತ್ತೆ ಅದೇ ಪ್ರೇಮಕ್ಕೆ ಶರಣುಹೋಗುತ್ತಾನೆ. " ವಿರಹಿಣಿ "ಯಲ್ಲಿ ಪ್ರೇಮಕ್ಕಾಗಿ ಕೊರಗುತ್ತಿರುವ ಇತರರ ಅಂತಃಸ್ಥಿತಿಯನ್ನು ಕವಿಯು ವಿಚಾರಿಸುತ್ತಾನೆ. ಅಗಸ್ತ್ಯನಾಗಿ ತನ್ನ ನಲ್ಲೆಯನ್ನೇ ಕುಡಿದುಬಿಡುವೆನೆಂದು ಎಚ್ಚರಿಕೆಕೊಡುತ್ತಾನೆ. ಮನುಜನೊಲವಿನ ಆಳವನ್ನೂ ತನ್ನ ಇನಿಯಳ ರೂಪವನ್ನೂ ಬಣ್ಣಿಸಲು ಉದ್ಯುಕ್ತನಾಗುತ್ತಾನೆ. ಹೃದಯದಲ್ಲೆಲ್ಲ ಪ್ರೇಮಸಂಚಾರವಾಗಲು

" ಸುಂದರ ದಿನ, ಸುಂದರ ಇನ,
ಸುಂದರವನ, ನೋಡು ಬಾ ! "

ಎಂದು ಒಂದು ಮುದ್ದಾದ ಹಾಡನ್ನು ಹಾಡುವನು. ಸಿದ್ಧಿಗಿಂತ ಸಾಧನೆಯಲ್ಲಿಯೇ ಹೆಚ್ಚು ಸುಖವನ್ನು ಪಡೆಯುವನು.

" ಎಂದೋ ಎಂತೋ ಎಲ್ಲಾದರಂತೂ
ನಮ್ಮೀ ಪ್ರಣಯವು ಫಲಿಸುವದು"

ಎಂದು ಶರದೃತುವು ಬರಲು ನೆನಪಾದ ಗಿರಿಜೆಗೆ ಆಶ್ವಾಸನನ್ನೀಯುವನು. "ನಾ ನಿನ್ನ ಮರೆಯೆ"ಎಂದು ನಲ್ಲನನ್ನು ಕುರಿತು ಓರ್ವ ಅಭಾಗಿನಿಯಿಂದ ಹಾಡಿಸುವನು. ಹೀಗೆ ಕವಿಯು ಎಲ್ಲ ಕವನಗಳಲ್ಲಿ ಪೂರ್ಣವಾಗಿ ಸ್ವತಂತ್ರವೂ ಮನೋಹರವೂ ಆದವುಗಳೆಂದರೆ ಪ್ರೇಮಗೀತೆಗಳೇ ಸರಿ.

ಮತ್ತು ಮೇಲೆ ಕಾಣಿಸಿದ ದೋಷಗಳೂ ಕೂಡ ಪ್ರಾಯಶಃ ತಮಗೆ ತಾವೆ ಕಡಿಮೆಯಾಗುವ ದೋಷಗಳು. ಡ್ರಾಯ್ಡನ್ನನು ಬೆನ್ ಜಾನ್ಸನ್ನನ ವಿಷಯಕ್ಕಂದ " You can track him every where in their snow " ಎಂಬ ಮಾತು ಪುಟ್ಟಪ್ಪನವರಿಗೂ ತಕ್ಕ ಮಟ್ಟಿಗೆ ಅನ್ವಯಿಸುವದೇನೋ ನಿಜ; ಆದರೆ ಗೂಡುಬಿಟ್ಟು ಹೊರಗೆ ಬಿದ್ದ ಪಕ್ಷಿಯು ಎಷ್ಟು ದಿನ ತನ್ನ ತಾಯಿಯು ಕೊಟ್ಟ ಆಹಾರದ ಮೇಲೆ ಮಾತ್ರ ತೃಪ್ತಿಪಡುವುದು? ಶೈಥಿಲ್ಯವೂ ಕೆಲವು ಕವನಗಳಲ್ಲಿ ಕಂಡುಬರುವ ಅನೌಚಿತ್ಯವೂ ಹೀಗೆಯೇ ಹೋಗತಕ್ಕುವು.

ಇನ್ನು ಶೈಲಿಯ ವಿಷಯ. ಕವಿಯು ಅನೇಕ ಹಳೆಗನ್ನಡ ಶಬ್ದಗಳನ್ನು ಮತ್ತೆ ಉಪಯೋಗಿಸಿದ್ದಲ್ಲದೆ ಎಷ್ಟೋ ಶಬ್ದಗಳನ್ನು ಕಲ್ಪಿಸಿಕೊಂಡಿದ್ದಾನೆ. ಅವುಗಳಲ್ಲಿ ಕೆಲವು ಸುಂದರವಾಗಿದ್ದು ಇನ್ನುಳಿದವುಗಳು ಟೀಕಾಸ್ಪದವಾಗಿವೆ. ಮಳೆಬಿಲ್ಲು, ಹೊನ್ನಿನ ಸೊನ್ನೆ, ಇವೇ ಮೊದಲಾದವುಗಳಿಗೆ ಯಾರೂ ಬೇಡವೆನ್ನಲಾರರು. ಆದರೆ ನೇಗಿಲವನ್ನು 'ಮಣ್ಣಿಣಿ'ಯೆಂದೂ ರೈತರನ್ನು 'ಮಣ್ಣಿನ ಮಕ್ಕಳು' ಹಾಗು 'ಭೂಮಿಯು ಹಾಡದ ಗೀತೆಗಳೆಂ'ದೂ ಪಕ್ಷಿಗಳನ್ನು 'ರೆಕ್ಕೆಯ ರಸಿಕರು' ಹಾಗು 'ಬಣ್ಣದ ಚಕ್ಕಿ'ಯೆಂದೂ ಶಾರದೆಯನ್ನು 'ನವಿಲುವಾಹನೆ'ಯೆಂದೂ ಕರೆಯುವದು ಸರಿಯಾಗಬಹುದೆ? "ಕಬ್ಬಿಗನೆದೆಯೊಳು ಗಬ್ಬವನಾಂತಿಹ" ಎಂಬಲ್ಲಿಯ ಉಪಯೋಗವೂ ಉಚಿತವಾಗಿಲ್ಲ.

ಹೊಸ ಛಂದಸ್ಸು ಕೂಡ ಈಗ ಹಳೆಯ ಮಾತಾಗಿದೆ. ಅದರ ವೈವಿಧ್ಯವೆಲ್ಲ ಪುಟ್ಟಪ್ಪನವರ ಕವಿತೆಗಳಲ್ಲಿ ಕಂಡುಬರುತ್ತದೆ. ಅನೇಕ ಭಕ್ತಿಪರ ಗೀತೆಗಳ ರಾಗ-ತಾಳಗಳೂ ಉಳಿದ ಹಾಡುಗಳ ಇಂಪೂ "ಸುಗ್ಗಿಯ ಹಾಡಿನ" ಕುಣಿತವೂ "ಆಪ್ತವಾಕ್ಯದ" ಮಾಧುರ್ಯವೂ ಮನಸ್ಸನ್ನೆಳೆಯುವ ಹಾಗಿವೆ.

ಒಮ್ಮೆ ನನಗನಿಸಿದಾಗ ಈ ಕಾವ್ಯಮಾಲೆಯಲ್ಲಿ ಅತ್ಯುತ್ತಮ ಕವಿತೆಗಳು ಯಾವವೆಂದು ನೋಡಬೇಕೆಂಬ ಕುತೂಹಲದಿಂದ ೧೧-೨೦ ಕವಿತೆಗಳನ್ನು ಆರಿಸಿ ತೆಗೆದೆನು. ಆದರೆ ಅವುಗಳನ್ನು ಮತ್ತೆ ಬೇರೆ ದೃಷ್ಟಿಯಿಂದ ವಿಂಗಡಿಸಬೇಕಾಯಿತು. ಏಕೆಂದರೆ, "ಕರೆಯುವನು ಬಾರೆ ಸಖಿ," "ಸಂಜೆವೆಣ್ಣು" "ಮಳೆಬಿಲ್ಲು" "ಮಿಣುಕು ಹುಳಗಳು" "ಸೋಮಾರಿಯ ಹಾಡು" "ಸಗ್ಗದ ಬಾಗಿಲು" "ಗತಿ," "ಸುಂದರ ದಿನ" "ನಾ ನಿನ್ನ ಮರೆಯೆ" "ಅಗಸ್ತ್ಯ," ಮುಂತಾದ ಕವಿತೆಗಳು ಆಯಾ ಪ್ರಕಾರದ ಕವಿತೆಗಳಲ್ಲಿ ಉತ್ತಮವಾಗಿವೆ. ಆದರೆ ವಿಷಯವೇನೇ ಇರಲಿ. ಕೇವಲ ತಮ್ಮ ಕಾವ್ಯಗುಣದಿಂದ ಮನಸ್ಸನ್ನು ಮೋಹಿಸುವ ಕವಿತೆಗಳು ೮-೯ ಮಾತ್ರ ದೊರಕಿದವು. "ನಿನ್ನೆಡೆಗೆ ಬರುವಾಗ ಸಿಂಗರದ ಹೊರೆಯೇಕೆ" ಎಂಬ ಕವಿತೆಯು ಈ ಮಾಲಿಕೆಯಲ್ಲಿ ಸೇರಬಹುದಾಗಿದ್ದಾದರೂ ಅದರ ಭಾವನೆಯೇ ಅಷ್ಟು ಸ್ವತಂತ್ರವಾಗಿ ಕಾಣುವದಿಲ್ಲ. "ಘೋರಾಂಧಕಾರದೊಳು ಕಾರ್ಮುಗಿಲನುಟ್ಟು" ಎಂಬ ಕವಿತೆಗೆ ಸ್ಥಾನ ಸಿಕ್ಕಬೇಕಾಗಿದ್ದರೂ ಅದರಲ್ಲಿಯ "ಮೂರುತಿಯ ಕಂಡೆದೆಯು ಕಲ್ಲಾಗಲಿಲ್ಲ" ಎಂಬ ಸಾಲಿನ ಅರ್ಥವು ನಿಶ್ಚಿತವಾಗಿಲ್ಲ. "ಗಾನದರ್ಶನ"ದಲ್ಲಿ ಮೊದಲನೆಯ ಮೂರು ಹಾಗು ಕಡೆಯದೊಂದು ಶ್ಲೋಕವು ಮಾತ್ರ ಇದ್ದು ಬಿಟ್ಟಿದ್ದರೆ ಅವನ್ನು ಇವುಗಳೊಳಗೆ ಸೇರಿಸಬಹುದಾಗಿತ್ತು. ಹಾಗಿಲ್ಲದ್ದರಿಂದ ಈ ಹತ್ತು ಕವಿತೆಗಳು ಮಾತ್ರ ಉಳಿದಂತಾದವು. ಗೊಲ್ಲನ ಬಿನ್ನಹ, ಕವಿತೆಗೆ, ಮುಂದಕೆಲ್ಲಿಗೆ, ಆಪ್ತವಾಕ್ಯ, ಗತಿ, ರತಿ, ಗೋಮಟೇಶ್ವರ, ನಟರಾಜ, ಸತ್ಯ ಮತ್ತು ಸೌಂದರ್ಯ, ಸುಗ್ಗಿ ಬರುತಿದೆ, ಈ ಕವಿತೆಗಳಿಗೆ ಸಿದ್ಧವಾದ ಕವಿತೆಗಳೆನ್ನಬಹುದು. ಅವು ಇಂಥದೊಂದು ಗುಣದಿಂದ ಅಥವಾ ಚಮತ್ಕಾರದಿಂದ ಮನೋಹರವಾಗಿಲ್ಲ. ಆದರೆ ಕವಿತಾಕಾಮಿನಿಯ ಸುಂದರ ರೂಪವು ಅದರ ಯೋಗ್ಯತಾನುಸಾರವಾಗಿ ಪ್ರತಿಯೊಂದು ಕವಿತೆಯಲ್ಲಿ ಪೂರ್ಣವಾಗಿ ಪ್ರಕಟವಾಗಿದೆ. ಉತ್ತಮ ಕವಿತೆಗಳಿಗಿರಬೇಕಾದ ಎಲ್ಲ ಗುಣಗಳೂ ಇವುಗಳಲ್ಲಿವೆ.

(೧) ಈ ಎಲ್ಲ ಕವಿತೆಗಳ ವಸ್ತುವು ಸ್ವತಂತ್ರವಾಗಿದೆ. ಯಾವ ತರಹದ ಛಾಯೆಯು ಕೂಡ ಈ ಕವಿತೆಗಳ ಮೇಲಿಲ್ಲ. (೨) ಕವಿತೆಗಳ ವಸ್ತುವಿನ ವಿಷಯಕ್ಕೆ ಕವಿಯು ಪೂರ್ಣವಾಗಿ ಯೋಚಿಸಿದ್ದಾನೆ. ಅದರ ಆಳವನ್ನೂ ನೆಲೆಯನ್ನೂ ಅರಿತು ತನ್ನ ಕವನದ ಉದ್ದಗಲತೆಯನ್ನೂ, ಗಾಂಭೀರ್ಯವನ್ನೂ ಮಾಧುರ್ಯವನ್ನೂ ಅದಕ್ಕನುಸರಿಸಿ ಅದಕ್ಕನುರೂಪ-ತದ್ರೂಪವಾಗುವಂತೆ ಹೆಚ್ಚು ಕಡಿಮೆ ಮಾಡಿದ್ದಾನೆ. "ಸತ್ಯ ಮತ್ತು ಸೌಂದರ್ಯ"ವು ಒಂದು ಲಘು ಕವಿತೆಯಾದುದೇ ಯೋಗ್ಯ. ಮತ್ತು "ಗೋಮಟೇಶ್ವರ"ನಲ್ಲಿಯ ಭಾವನಾಲಹರಿಯ ಪ್ರಾಬಲ್ಯವನ್ನು ನೋಡಿದರೆ ಅದು ಅಷ್ಟು ದೀರ್ಘವಾದದ್ದೇ ಯೋಗ್ಯ. (೩) ವಸ್ತುವನ್ನು ರೂಪಗೊಳಿಸುವ ರೀತಿಯಲ್ಲಿ ಬಹುಶಃ ಯಾವ ಕವಿತೆಯಲ್ಲಿಯೂ ಕುಂದಿಲ್ಲ. ಒಂದೆರಡಿದ್ದರೂ ಅವು ಅಷ್ಟು ಮಹತ್ತ್ವದವಲ್ಲ. (೪) ರೀತಿಯು ಮನೋಹರವಾದುದು ವಸ್ತುವಾದರೂ ಅಸಾಮಾನ್ಯವಾದುದು. "ನಟರಾಜ"ನಲ್ಲಿ ಸೃಷ್ಟಿರಚನೆಯ ಚಿತ್ರವು ನಮ್ಮ ಮನವನ್ನು ಸೆಳೆಯುತ್ತಿದ್ದರೆ "ಗೋಮಟೇಶ್ವರ"ನಲ್ಲಿ ಅನ್ಯಾಯದ ಪರಂಪರೆಯ ಉತ್ಪ್ರೇಕ್ಷೆಯು ಹೃದಯ ಸ್ಪರ್ಶಿಯಾಗಿದೆ. "ರತಿ"ಯಲ್ಲಿ ಕಲಾನಿಪುಣತೆಯೂ ಸುಂದರವಿದ್ದದ್ದನ್ನು ಸುಂದರತರವಾಗಿ ಮಾಡುವ ರೀತಿಯೂ ಕಂಡು ಬಂದರೆ "ಸತ್ಯ ಮತ್ತು ಸೌಂದರ್ಯ"ದಲ್ಲಿಯ ಅರ್ಥಗೌರವವು ನಮ್ಮನ್ನು ಮೋಹಗೊಳಿಸುತ್ತದೆ (೫) ಅಂತೂ ಈ ಎಲ್ಲ ಕವಿತೆಗಳಲ್ಲಿಯೂ ಕವಿಯು ಆವುದೋ ಒಂದು ಮಹತ್ತರವಾದ ಸ್ಫೂರ್ತಿಯಿಂದ ಪ್ರೇರಿತನಾಗಿ ಅನೇಕ ಭಾವನಾಲಹರಿಗಳ ಸಮುದಾಯದೊಳಗಿಂದ ಪಾರಾಗಿ ವಸ್ತು ರೀತಿಗಳಲ್ಲಿ ಭಿನ್ನವಾಗಿದ್ದರೂ ಗುಣದಲ್ಲಿಯೂ ಸೌಂದರ್ಯದಲ್ಲಿಯೂ ಒಂದೇ ಸ್ಥಾನಕ್ಕೆ ಯೋಗ್ಯವಾದ ಕವನಗಳನ್ನು ಹೊರಗೆಡಹಿದ್ದಾನೆ. ಈ ಕವಿತೆಯು ಇಂಥ ವಿಷಯದ

ಮೇಲೆ ಎಂಬುದು ಇಲ್ಲಿ ಅಷ್ಟು ಮುಖ್ಯವಲ್ಲ; ಆದರೆ ಇವು ನಿಜವಾದ ಕಾವ್ಯವೆಂಬುದೇ ಇಲ್ಲಿ ಪ್ರಧಾನವಾದ ವಿಷಯ. ರೀತಿಯೇ ಜೀವಾಳವಾದ ಕೆಲವು ಕವಿತೆಗಳಿರಬಹುದು; ಇದರಂತೆ ಭಾವನಾ ಪ್ರಧಾನ ಕವಿತೆಗಳೂ ವಸ್ತು ಪ್ರಧಾನ ಕವಿತೆಗಳೂ ಇರಬಹುದು. ಆದರೆ ನಿಜವಾದ ಕವಿತೆಗಳೆಂದರೆ ಕಾವ್ಯಪ್ರಧಾನ ಕವಿತೆಗಳು. ಇವುಗಳಲ್ಲಿಯು ಕಾವ್ಯವು ಉಳಿದ ಗುಣಗಳನ್ನು ಮೀರಿ ಮೆರೆಯುವದು; ಹಾಗು ಉಳಿದ ಗುಣಗಳೆಲ್ಲ ಈ ಕಾವ್ಯದ ಗುಣವನ್ನೇ ಹೆಚ್ಚಿಸಲು ಅದರಲ್ಲಿ ಪೂರ್ಣವಾಗಿ ಬೆರೆತು ಹೋಗುವವು. ಈ ಕಾವ್ಯದ ಗುಣ ಸಂಪತ್ತೇನೆ ಕವಿತಾಕಾವಿ ನಿಯ ಮೋರೆಯು ಮೇಲಿರುವ ಕಳೆ. ಅದು ಮೇಲೆ ಹೇಳಿದಂತೆ ಭಿನ್ನ ಭಿನ್ನ ಅವಯವಗಳ ಅನನುಕರಣೀಯವಾದ ಸಂಯೋಜನೆಯಿಂದಲೆ ಬರತಕ್ಕುದು. ಅದು ಪೂರ್ಣವಾಗಿದ್ದರೆ ಮಾತ್ರ ಕವಿತೆಯು ನಿಜವಾದ ಕವಿತೆಯೆನಿಸುವದು. ಪಡುವಣದ ಬಿರುಗಾಳಿಯನ್ನು ನೋಡಿ ಶೆಲ್ಲಿಯ ಪ್ರತಿಭಾಶಕ್ತಿಯು ಅಮರವಾದ ಗಾಯನವನ್ನು ಮಾಡಿತು! ಒಂದು ಪಕ್ಷಿಯು ಗಾಯನವನ್ನು ಕೇಳಿ ಕೀಟ್ಸ ಕವಿಯು ತಾನು ಬರೆದ ಕವಿತೆಯಲ್ಲಿ ತನ್ನ ಜೀವನದ ತಿರುಳನ್ನೇ ಬೈಲಿಗಿಟ್ಟನು! ವಸ್ತುವನ್ನು ನಾವು ಅಷ್ಟು ಗಣಿಸಬೇಕಾಗಿಲ್ಲ. ಕಾವ್ಯದ ಗುಣವು ಬಹುಮಟ್ಟಿಗೆ ಆ ವಸ್ತುವನ್ನು ನಿರೀಕ್ಷಿಸುವದರಿಂದ ಕವಿಯಲ್ಲಿ ಆಗುವ ಹೃದಯಕಂಪನದ ಮೇಲೆ ಅವಲಂಬಿಸಿರುತ್ತದೆ.

ಒಟ್ಟಿನಮೇಲೆ, ಶ್ರೀಮಾನ್ ಶ್ರೀಕಂಠಯ್ಯನವರು ಹೇಳುವಂತೆ, ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ. ಪುಟ್ಟಪ್ಪನವರಿಗೆ ಕಾವ್ಯದಮೇಲೆ ನಿಜವಾಗಿ ಪ್ರೇಮವಿದೆ. ನಡು ಹಗಲಲ್ಲಿ ಮರಳಿನ ಮೇಲೆ ಕುಳಿತ ತಾರ್ಕಿಕರಿಗೆ ಮಾತ್ರ ಇವರ ಕವಿತೆಗಳು ಒಂದು ವೇಳೆ ರುಚಿಸಲಿಕ್ಕಿಲ್ಲ. ಆದರೆ ಅವರಿಗೂ ವಿಮರ್ಶಕರಿಗೂ ಕೂಡಿಯೇ ಪುಟ್ಟಪ್ಪನವರು ಹೀಗೆ ಹೇಳುವರು.

" ಉತ್ಸವದೊಳಗಿಹುದೊಂದರ್ಥ,
ಸನ್ಯಾಸಿ ಅಲ್ಲವೋ ಇದು ವ್ಯರ್ಥ "

ಹೀಗೆ ಉತ್ಸಾಹಭರಿತನಾದ ಕವಿಯು ಇನ್ನು ಇಂಥ ಅನೇಕ 'ಕೊಳಲು'ಗಳನ್ನು ನುಡಿಸುವನೆಂಬುದರಲ್ಲಿ ಸಂಶಯವಿಲ್ಲ. ಅದಕ್ಕಿಂತೇ ಈ 'ಕೊಳಲಿ'ನಲ್ಲಿರುವ ಗುಣದೋಷಗಳನ್ನು ಪೃಥಕ್ಕರಿಸಿ, ಮುಂದಿನ ನುಡಿಗಳಲ್ಲಿ ಈ ತಡೆ ಬೇಡವೆಂಬ ಬುದ್ಧಿಯಿಂದಲೇ ನಮಗೆ ತೋರಿದ ದೋಷಗಳನ್ನು ಇಲ್ಲಿ ಹೇಳಲಾಗಿದೆ. ಒಟ್ಟಾರೆ ಈ ಕಾವ್ಯಮಾಲೆಯಲ್ಲಿಯು ಗುಣಗಳು ದೋಷಾನ್ವಿತವಾಗಿದ್ದರೂ ದೋಷಾಚ್ಛಾದಿತವಾಗಿಲ್ಲವೆಂಬುದನ್ನು ಇಲ್ಲಿ ವಿವರಿಸಲಾಗಿದೆ.

—ವಿ. ಕೃ. ಗೋ.

---

## ನಗು—ಅಳು

('ಕರುಳಿನ ವಚನ'ದಿಂದ)

ನನ್ನ ಬೆಲ್ಲದಚ್ಚಿನ ಬೊಂಬೆಯೇ !
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ !

ನೀನು ನಗುತ್ತಲೆ ನಾನು ನಿನ್ನವಳೆಂದೆನಿಸುವದು !
ನೀನು ಅಳುತ್ತಲೆ ನೀನು ನನ್ನವನೆಂದೆನಿಸುವದು !
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ !

ನಿನ್ನ ಬಾಡಿದ ಮೊಗನೋಡಿ ನನ್ನ ಕಣ್ಣಲ್ಲಿ ನೀರು ನಿಲ್ಲುವವು !
ನನ್ನ ಪ್ರಸನ್ನಮುಖ ನೋಡಿ ನಿನ್ನ ತುಟಿಯಲ್ಲಿ ನಗೆಯಾಡುವದು!
ನೀನು ಅತ್ತರೊಂದು ರುಚಿ ! ನೀನು ನಕ್ಕರೊಂದು ರುಚಿ !

ನೀನು ನಕ್ಕರೆ ಬೆಳಕಿನ ಬೆಳೆ !
ನೀನು ಅತ್ತರೆ ಮುತ್ತಿನ ಮಳೆ !
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ !

—ಅಭಿಜಾತನಯದತ್ತ

ಕವಿಸಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

ಕಾದಂಬರಿಯ ಕನ್ನಡ ಅನುವಾದವು

ಅನುವಾದಕರು— ಶ್ರೀ. ಕೃ. ಶ್ರೀ. ಬೆಟಗೇರಿ, ಬೆಳಗಾಂವಿ

## ೨೩ನೆಯ ಪರಿಚ್ಛೇದ

ಕಾಕಾಸಾಹೇಬನಿಗಿಂದು ಅದೆಷ್ಟು ಆನಂದದ ದಿವಸವು! ದಿಲ್ಲೀಶ್ವರನ ರಜಪೂತ ದಳವು ವಿಜಯಗಡಕ್ಕಿಂದು ಅತಿಥಿಯಾಗಿ ಬಂದಿದೆ. ಪ್ರಬಲನೂ ಪ್ರತಾಪಿಯೂ ಆದ ಸುಜಾನು ವಿಜಯಗಡದಲ್ಲಿಂದು ಸೆರೆಸಿಕ್ಕಿರುವನು. ಕಾರ್ತವೀರ್ಯಾರ್ಜುನನಾದ ಬಳಿಕ ಇಂದಿನ ವರೆಗೂ ವಿಜಯಗಡದಲ್ಲಿ ಇಂತಹ ಸೆರೆಯಾಳುಗಳಾರೂ ಸೆರೆಗೊಂಡಿರಲಿಲ್ಲ. ಕಾರ್ತವೀರ್ಯಾರ್ಜುನನು ಸೆರೆಸಿಕ್ಕುದನ್ನು ನೆನಸಿಕೊಂಡು ನಿಟ್ಟುಸಿರನಿಕ್ಕಿ ಕಾಕಾಸಾಹೇಬನು ರಾಜಪುತ್ರಸೈನಿಕರಲ್ಲಿ ಒಬ್ಬನಾದ ಸುಚೇತ್‌ಸಿಂಹನೊಡನೆ ಮಾತನಾಡಲು ತೊಡಗಿದನು. "ಏನಯ್ಯಾ! ಇದನ್ನು ಯೋಚಿಸಿ ನೋಡು! ಕಾರ್ತವೀರ್ಯಾರ್ಜುನನ ಸಾವಿರ ಕೈಗಳಿಗೆಲ್ಲ ಚಿಲಖತ್ತನ್ನು ತೊಡಿಸುವುದಕ್ಕೆ ಆದಾವ ಉಪಾಯವನ್ನು ಮಾಡಿರಬಹುದು! ಈಗ ಕಲಿಯುಗ ಬಂದುಬಿಟ್ಟು ಇಂತಹ ಗೊಂದಲ ಗಲಾಟೆಯೆಲ್ಲಾ ಕಡಿಮೆಯಾಗಿ ಹೋಗಿದೆ. ಈಗ ನೋಡು, ದೊರೆಯ ಮಗನಿರಲಿ ಬಾದಶಹನ ಮಗನಿರಲಿ! ಪೇಟೆ ಪೇಟೆ ಸುತ್ತಿದರೂ ಮತ್ತೆರಡು ಕೈಗಳನ್ನು ಪಡೆದೇನೆಂದರೆ ಸಿಕ್ಕುವಂತಿಲ್ಲ. ಒಂದುವೇಳೆ ಸಿಕ್ಕಿದವು ಎನ್ನು. ಆ ಜೀವವಿಲ್ಲದ ಕೈಗಳನ್ನು ಕಟ್ಟಿಕೊಂಡು ಉಪಯೋಗವಾದರೂ ಏನು!"

ಸುಚೇತ್‌ಸಿಂಹನು ನಕ್ಕು ತನ್ನ ಕೈಗಳೆರಡನ್ನೂ ನೋಡಿಕೊಳ್ಳುತ್ತ ಹೇಳಿದನು. "ಈಗ ಇದ್ದ ಎರಡು ಕೈಗಳೇ ಸಾಕಲ್ಲವೆ!"

ಕಾಕಾಸಾಹೇಬನು ಕೊಂಚ ಯೋಚಿಸಿ ನುಡಿದನು. "ಅದು ಸರಿ! ಹಿಂದಣ ಕಾಲದಲ್ಲಿ ಕೆಲಸಗಳೂ ವಿಪರೀತವಾಗಿದ್ದುವು. ಈಗ ನೋಡುವುದಿಲ್ಲವೇ! ನಿಮ್ಮ ಕೆಲಸವೆಂದು ಕೇಳಿದರೆ ಈಗಿದ್ದ ಎರಡು ಕೈಗಳು ಕೂಡ ತಟ್ಟನೆ ಉತ್ತರಕೊಡಲಾರವು. ಇಷ್ಟೇನೋ ನಿಜ! ಇನ್ನೂ ಕೈಗಳಿದ್ದರೆ ಇನ್ನಿಷ್ಟು ವೀಳೆಯ ಹುರಿಹಾಕಲು ಅನುಕೂಲವಾಗುತ್ತಿದ್ದಿತು."

ಇಂದು ಕಾಕಾಸಾಹೇಬನ ವೇಷಭೂಷಣಗಳು ನೋಡತಕ್ಕವಂತಿದ್ದುವು. ಗದ್ದದ ಕೆಳಕ್ಕೆ ಹುರಿಗೊಂಡು ನಿಮಿರಿ ನಿಂತ ಬಿಳಿಯ ಗಡ್ಡಗಳು ಎರಡು ಭಾಗಗಳಾಗಿ ಕಿವಿಗಳೆರಡಕ್ಕೆ ತೊಡಗಿಕೊಂಡಿವೆ; ಸೆಡೆದುನಿಂತ ಕಲ್ಲಿಮೀಸೆಗಳು ಕಿವಿಗಳೆರಡನ್ನೂ ಮುಚ್ಚಿಬಿಟ್ಟಿವೆ; ತಲೆಗೆ ಮುರಿಗೆಯ ಮುಂಡಾಸ; ಸೊಂಟದಲ್ಲಿ ಕೊಂಕಿದ ಕಿರುಗತ್ತಿ; ಮೆಟ್ಟಿದ ಜೋಡುಗಳ ಮುಂಬದಿಗಳು ಕೊಂಬುಗಳಂತೆ ಬಾಗಿಕೊಂಡು ಸೆಟೆದು ನಿಂತಿವೆ. ಇಂದಿನ ಕಾಕಾಸಾಹೇಬನ ನಡಿಗೆಯ ಭಂಗಿಯೇ ಅದೊಂದು ಬಗೆಯದು; ವಿಜಯಗಡದ ಮಹಿಮೆಯು ಆತನ ಸರ್ವಾಂಗದಲ್ಲಿಯೂ ತರಂಗಿತವಾಗುತಿರುವುದೇನೋ ಎಂಬಂತಿದ್ದಿತು. ಇಂದು ಅಷ್ಟೊಂದು ದೊಡ್ಡ ದೊಡ್ಡ ಜನರು ವಿಜಯಗಡದ ಮಾಹಾತ್ಮ್ಯವನ್ನು ಕಂಡುಕೊಳ್ಳುವರಲ್ಲಾ! ಎಂಬ ಸಂತಸದಲ್ಲಿ ಆತನಿಗೆ ನಿದ್ದೆಯಿಲ್ಲ, ನೀರಡಿಕೆಯಿಲ್ಲ.

ಸುಚೇತ್‌ಸಿಂಹನನ್ನು ಜೊತೆಗೊಂಡು ದಿನವೆಲ್ಲವೂ ಕೋಟೆಯನ್ನು ತೋರಿಸುತ್ತ ಸುತ್ತುತ್ತಿದ್ದನು. ಸುಚೇತ್‌ಸಿಂಹನು ಕೋಟೆಯನ್ನು ನೋಡುತ್ತಿರುವಾಗ ಯಾವ ಬಗೆಯ ಆಶ್ಚರ್ಯೋದ್ಗಾರಗಳನ್ನೂ ಹೊರಪಡಿಸುತಿರಲಿಲ್ಲ. ಕಾಕಾಸಾಹೇಬನು ಕೋಟೆಯ ಬೇರೆ ಬೇರೆ ಕಡೆಗಳನ್ನು ತೋರಿಸುವನು. "ಆಹಹ! ಅದೆಷ್ಟು ಅದ್ಭುತವಿದು!" ಎಂದು ತಾನೇ ನುಡಿದು ತನ್ನ ಉತ್ಸಾಹವನ್ನು ರಜಪೂತವೀರನ ಹೃದಯದಲ್ಲಿ ತುಂಬುವುದಕ್ಕೆ ಹವಣಿಸುವನು. ಅದರಲ್ಲಿಯೂ ಕೋಟೆಯ

ಬುರುಜುಗಳ ವಿಷಯುವಾಗಿ ಹೇಳುವಾಗಲಂತೂ ಕಾಕಾ ಸಾಹೇಬನಿಗೆ ತುಂಬಾ ಶ್ರಮವನ್ನು ವಹಿಸಬೇಕಾಯಿತು. ಆದರೇನು! ಕೋಟೆಯ ಗೋಡೆಗಿಂತಲೂ ಸುಚೇತ್‌ಸಿಂಹನು ಹೆಚ್ಚು ಅವಿಚಲಿತನು. ಯಾವ ಬಗೆಯ ಭಾವವನ್ನೂ ಹೊರಕ್ಕೆ ಹೊರಡಿಸಲ್ಲಿಲ್ಲವವನು. ಕಾಕಾಸಾಹೇಬನು ಕೋಟೆಯ ಎಡಕ್ಕೊಮ್ಮೆ, ಬಲಕ್ಕೊಮ್ಮೆ, ಮೇಲಕ್ಕೊಮ್ಮೆ ಕೆಳಕ್ಕೊಮ್ಮೆ ಅವನನ್ನು ಮತ್ತೆ ಮತ್ತೆ ಕರೆಕರೆದು ತಂದು ತೋರಿಸಲು ತೊಡಗಿದನು. "ಅಬ್ಬಾ! ಎಷ್ಟೊಂದು ಚಮತ್ಕಾರವಾದ ನೋಟವಿದು ?" ಎಂದು ಮರಳಿ ಮರಳಿ ತಾನೇ ನುಡಿಯುತ್ತಿದ್ದನು. ಆದರೆ ಸುಚೇತ್‌ಸಿಂಹನ ಎದೆಗೋಟೆಯ ಅಧಿಕಾರವನ್ನು ಪಡೆದುಕೊಳ್ಳುವುದು ಯಾವುದರಿಂದಲೂ ಆಗದೆಹೋಯಿತು. ಸಾಯಂಕಾಲದ ವರೆಗೂ ಸುತ್ತಿ ಸುತ್ತಿ ಸುಚೇತ್‌ಸಿಂಹನು ಬೇಸತ್ತುಹೋದನು. ಕೊನೆಗೊಂದು ಮಾತನಾಡಿದನು "ನಾನು ಭರತಪುರದ ಕೋಟೆಯನ್ನು ನೋಡಿರುವೆನು. ಆ ಕೋಟೆಯನ್ನೊಮ್ಮೆ ನೋಡಿದರೆ ಇನ್ನಾವ ಕೋಟೆಗಳೂ ಕಣ್ಣುಗಳಿಗೆ ತುಂಬಿ ತೋರಲಾರವು."

ಕಾಕಾಸಾಹೇಬನು ಎಂದೂ ಯಾರೊಡನೆಯೂ ವಿವಾದಕ್ಕೆ ನಿಂತವನಲ್ಲ. ಆತನು ಬಾಡಿದ ಮೊಗದಿಂದ ನುಡಿದನು. "ಹೀಗೇನು! ಸರಿ! ಇರಬಹುದು!"

ನಿಡಿದಾಗಿ ಉಸಿರೊಂದನ್ನು ಹಾಕಿ ಕೋಟೆಯ ಸಂಬಂಧದ ಆಲೋಚನೆಯನ್ನೇ ಬಿಟ್ಟುಬಿಟ್ಟನು. ವಿಕ್ರಮಸಿಂಹನ ಮೊದಲಿಗನಾದ ದುರ್ಗಸಿಂಹನ ಕಥೆಯನ್ನೆತ್ತಿ ಮಾತನಾಡತೊಡಗಿದನು. "ದುರ್ಗಸಿಂಹನಿಗೆ ಮೂವರು ಮಕ್ಕಳು. ಕಿರಿಯವನ ಹೆಸರು ಚಿತ್ರಸಿಂಹನೆಂದು. ಆತನಿಗೊಂದು ವಿಚಿತ್ರವಾದ ಅಭ್ಯಾಸವಿದ್ದಿತು. ದಿನ ದಿನವೂ ಬೆಳಗಿನಲ್ಲಿ ಅರ್ಧ ಸೇರಿನಷ್ಟು ಅಕ್ಕಿಯನ್ನು ಹಾಲಿನಲ್ಲಿ ನನೆಯಿಸಿ ತಿನ್ನುತ್ತಿದ್ದನು. ಅಬ್ಬಾ! ಅವನ ದೇಹ ಹೇಗಿದ್ದಿತು ಎನ್ನುತ್ತೀಯೆ! ಬೇರೆ ಯಾವುದೂ ಇಲ್ಲ; ಬರೀ ಉಕ್ಕಿನಂತಿದ್ದಿತು. ಸರಿ! ಏನಪಾ? ನೀನು ಭರತಪುರದ ವಿಷಯಕ್ಕೆ ಹೇಳಿದೆಯಲ್ಲ! ಅದೇನೋ ಬಲವಾದ ಕೋಟೆಯಿರಬಹುದು. ಆದರೆ ಬ್ರಹ್ಮವೈವರ್ತಪುರಾಣದಲ್ಲಿ ಅದರ ಹೆಸರನ್ನೆ ಎತ್ತಿಲ್ಲವಲ್ಲ!"

ಸುಚೇತಸಿಂಹನು ಹೇಳಿದನು "ಆಯಿತು; ಅದರಿಂದ ಆಗಬೇಕಾದುದೇನು? ಕೆಲಸಕ್ಕೇನಾದರೂ ಕೊಂದರೆಯುಂಟೇ?"

ಕಾಕಾಸಾಹೇಬನು ಕೈಗಡತಂದ ನಗೆಯಿಂದ ನುಡಿದನು. "ಸರಿ ಸರಿ! ಆ ಮಾತೇನೋ ನಿಜ! ಅದೇನೋ ಆ ತ್ರಿಪುರದ ಕೋಟೆಯಿರುವುದಲ್ಲ! ಅದೂ ಬಲು ಭಾರಿಯಾದ ಕೋಟೆಯಂತೆ. ಆದರೂ ವಿಜಯಗಡದ..."

ಸುಚೇತ್‌ಸಿಂಹ "ತ್ರಿಪುರದ ಕೋಟೆ? ಅದೆಲ್ಲಿಯಪ್ಪಾ ಮತ್ತೆ! ಯಾವ ರಾಜ್ಯವದು?"

ಕಾಕಾಸಾಹೇಬ "ಅದೊಂದು ದೊಡ್ಡ ರಾಜ್ಯ. ಈಗ ಬರೀ ಬಾಯುಮಾತಿನಿಂದೇನು? ಆ ರಾಜ್ಯದಿಂದ ರಾಜಪುರೋಹಿತರು ನಮ್ಮ ಕೋಟೆಯಲ್ಲಿ ಅತಿಥಿಗಳಾಗಿ ಬಂದಿದ್ದಾರೆ. ಅವರೀಂದಲೆ ನೀನು ಏನೆಲ್ಲವನ್ನೂ ಕೇಳುವೆಯಂತೆ ನಡೆ!"

ಎಲ್ಲಿ ಹುಡುಕಿದರೂ ಆ ಬ್ರಾಹ್ಮಣನ ಸುಳಿವೇ ಸಿಕ್ಕಲಿಲ್ಲ. ಆ ಬ್ರಾಹ್ಮಣನಿಗಾಗಿ ಕಾಕಾಸಾಹೇಬನ ಹೃದಯವು ಕಳವಳಪಡಲು ತೊಡಗಿತು. ಆತನು ತನ್ನಲ್ಲಿ ತಾನೆ ಯೋಚಿಸಿದನು. "ಈ ರಜಪೂತಕುಲದ ಹುಂಬ ಹಳ್ಳಿಗರಿಗಿಂತ ನಾಗರಿಕನಾದ ಆ ಬ್ರಾಹ್ಮಣನು ಅದೆಷ್ಟೋಪಾಲು ಮಿಗಿಲು;" ರಘುಪತಿಯ ಪ್ರಶಂಸೆಯನ್ನು ಸುಚೇತ್‌ಸಿಂಹನ ಬಳಿಯಲ್ಲಿ ಒಂದಕ್ಕೆ ನೂರಾಗಿ ಮಾಡಿದನು. ಹಾಗೆಯೇ ವಿಜಯಗಡದ ವಿಷಯವಾಗಿ ರಘುಪತಿಯು ಪಟ್ಟ ಅಭಿಪ್ರಾಯವನ್ನೂ ಒಡೆದು ಹೇಳಿದನು.

## ೨೪ನೆಯ ಪರಿಚ್ಛೇದ

ಕಾಕಾಸಾಹೇಬನ ಜೊತೆಯಲ್ಲಿ ಸುತ್ತಿ ಸುತ್ತಿ ಸುಚೇತ್‌ಸಿಂಹನಿಗೆ ಸಾಕುಸಾಕಾಗಿ ಹೋಯಿತು. ಇನ್ನು ಹೆಚ್ಚಿಗೆ ಶ್ರಮವನ್ನು ಸಹಿಸುವುದೆಂದರೆ ಅವನಿಗೆ ಸಾಧ್ಯವಿರಲಿಲ್ಲ. ಸರೆಯಾಳನ್ನು ತೆಗೆದುಕೊಂಡು ಸಮ್ರಾಟನ ಸೈನ್ಯವು ನಾಳೆಯ ನಸುಕಿನಲ್ಲಿಯೆ ಹೊರಡಬೇಕೆಂದು ನಿರ್ಧರವಾಗಿದ್ದಿತು. ಸೈನಿಕರೆಲ್ಲರೂ ಪ್ರಯಾಣಕ್ಕೆ ಅಣಿಮಾಡಿಕೊಳುತಿದ್ದರು. ಸೆರೆಮನೆಯಲ್ಲಿದ್ದ ಸೂಜಾನು ಕಳವಳಗೊಂಡು ಹೋಗಿದ್ದನು. ಯಾವುದೂ ಅವನಿಗೆ ತಿಳಿಸುವಂತಾಗಿದ್ದಿತು. ತನ್ನಲ್ಲಿ ತಾನೇ ಎಂದುಕೊಳುತಿದ್ದನು "ಅಯ್ಯೋ! ಇವರೆಂತಹ ಕೃತಘ್ನಜನರು! ಶಿಬಿರದಿಂದ ನನ್ನನ್ನು ಒಮ್ಮೆಲೇ ಇಲ್ಲಿಗೆ ತಂದು ಬಿಟ್ಟಿರುವರು. ಇಷ್ಟಾದರೂ ಇವರ ಮನಸ್ಸಿಗೆ ಏನೂ ಎನಿಸಿರಲಿಕ್ಕಿಲ್ಲವೇ!"

ವಿಜಯಗಡದ ದಿಣ್ಣೆಯ ಅಡಿಯಲ್ಲಿಯೇ ಆಳವಾದ ಒಂದು ಕೊಳ್ಳವಿರುವುದು. ಆ ಕೊಳ್ಳದ ದಂಡೆಗೆ ಒಂದೆಡೆಯಲ್ಲಿ

ಸಿಡಿಲಿನ ಹೊಡೆತದಿಂದ ಸೀಳಿಹೋದ ಅರಳೆಲೆಯದೊಂದು ಪೋಟು ಮರವಿರುವುದು. ಈ ಪೋಟುಮರದ ಬಳಿಯಲ್ಲಿಯೇ ರಘುಪತಿಯು ಕೊಳ್ಳದೊಳಕ್ಕೆ ನುಗ್ಗಿದನು. ಕಣ್ಣಿಗೆ ಕಾಣದಂತಾದನು.

ಗುಟ್ಟಾಗಿ ಕೋಟೆಯಲ್ಲಿ ಹೋಗಲು ಸುರಂಗದ ದಾರಿಯೊಂದು ಇದ್ದಿತಲ್ಲವೇ ! ಅದರ ಮುಂಬಾಗಿಲು ಈ ಕೊಳ್ಳದ ತೀರ ಬುಡದಲ್ಲಿರುವುದು. ಕೊಂಚ ದಾರಿಯನ್ನು ಕೊಳ್ಳದಲ್ಲಿದ್ದ ಮಡುವಿನಲ್ಲಿ ಈಜಿ ಮುಂದೆ ಸಾಗಬೇಕಾಗುವುದು. ಹಾಗೆ ಹೋದರೆ ಸುರಂಗದ ಎಡೆಯು ಸಿಕ್ಕುವುದು. ಕೆಳಗಡಿಂದ ಬಲವಾಗಿ ಅದನ್ನು ಮೀಟಿಬಿಟ್ಟರೆ ಬಾಗಿಲ ಕಲ್ಲು ಮೇಲಕ್ಕೆ ಏಳುವುದು. ಹಾಗೆಯೇ ಮೇಲಿಂದಲೇ ಅದನ್ನು ಎತ್ತಿಡುವುದಕ್ಕೆ ಯಾರಿಂದಲೂ ಆಗುತ್ತಿರಲಿಲ್ಲ. ಕೋಟೆಯ ಒಳಗಡೆಗಿದ್ದವರಿಗೆ ಈ ಸುರಂಗದ ದಾರಿಯಿಂದ ಹೊರಕ್ಕೆ ಬರುವುದಕ್ಕೆ ಆಗುತಿರಲೇ ಇಲ್ಲ.

ಸೆರೆಮನೆಯಲ್ಲಿ ಮಂಚವೊಂದರ ಮೇಲೆ ಸೂಜಾನು ಮಲಗಿಕೊಂಡಿರುವನು. ಆ ಮಂಚವನ್ನು ಬಿಟ್ಟು ಮತ್ತಾವ ಒಡವೆಗಳೂ ಆ ಮನೆಯಲ್ಲಿರಲಿಲ್ಲ. ದೊಡ್ಡದಾಗಿ ದೀಪವೊಂದು ಬೆಳಗುತ್ತಿದ್ದಿತು. ತಟ್ಟನೆ ಸೆರೆಮನೆಯ ನೆಲಗಟ್ಟಿನಲ್ಲಿ ಕಿಂಡಿಯೊಂದು ಕಾಣಲು ತೊಡಗಿತು. ಕೊಂಚ ಕೊಂಚವಾಗಿಯೇ ತಲೆಯನ್ನು ಮೇಲಕ್ಕೆತ್ತುತ್ತ ರಘುಪತಿಯು ಪಾತಾಳದಿಂದ ಹೊರಕ್ಕೆ ಬಂದನು. ಆತನ ಮೈಯೆಲ್ಲವೂ ತೊಯ್ದು ತಪ್ಪಡಿಯಾಗಿದೆ. ಉಟ್ಟ ಒಟ್ಟೆಯಿಂದ ನೀರು ಒಸೆಯುತ್ತಲಿದೆ. ಮೆಲ್ಲಮೆಲ್ಲಗೆ ಅಡಿಯಿಡುತ್ತ ಬಂದು ರಘುಪತಿಯು ಸೂಜಾನ ಮೈಯನ್ನು ತಟ್ಟಿದನು.

ಸೂಜಾನು ಬೆಚ್ಚಿಬಿದ್ದು ಎದ್ದು ಕುಳಿತು; ಕಣ್ಣು ಕೆರಳಿಸಿ ಕೊಂಚ ವೇಳೆ ಹಾಗೆಯೇ ನೋಡಿದನು. ಬಳಿಕ ಸೋತು ಬಡವಾಗಿದ್ದ ದನಿಯಲ್ಲಿ ಮಾತನಾಡಿದನು. " ಎಂತಹ ಜನ ! ರಾತ್ರಿಯಲ್ಲಿ ನಿದ್ದೆಮಾಡಲು ಕೂಡ ನನಗೆ ಎಡೆಕೊಡಲೊಲ್ಲರಲ್ಲ ! ನಿಮ್ಮ ಈ ಬಗೆಯ ನಡೆವಳಿಕೆಗಾಗಿ ನನಗೆ ತುಂಬಾ ಆಶ್ಚರ್ಯವೆನಿಸುತ್ತಲಿದೆ. "

ರಘುಪತಿಯು ಕಿರುದನಿಯಲ್ಲಿ ನುಡಿದನು. " ಶಹಜಾದಾ! ತಮ್ಮನ್ನು ಎಬ್ಬಿಸುವುದಕ್ಕಾಗಿ ನನಗೆ ಅಪ್ಪಣೆ ದೊರೆಯಬೇಕು! ನಾನು ಆ ಬ್ರಾಹ್ಮಣನು. ನನ್ನನ್ನು ನೆನಪಿಗೆ ತಂದುಕೊಳ್ಳಿ ! ಇನ್ನು ಮುಂದೆಯೂ ನನ್ನನ್ನು ನೆನಪಿನಲ್ಲಿ ಇಟ್ಟುಕೊಳ್ಳಿ ! ಮರೆಯಬೇಡಿ ! "

ಮರುದಿನದ ಮುಂಜಾವ. ಸಮ್ರಾಟನ ಸೈನ್ಯವು ಪಯಣಕ್ಕೆ ಅನುಗೊಂಡು ನಿಂತಿತು. ಸೂಜಾನನ್ನು ಎಚ್ಚರಿಸುವುದಕ್ಕೆಂದು ರಾಜಾ ಜಯಸಿಂಹನು ತಾನೇ ಸೆರೆಮನೆಗೆ ಹೋದನು. ಒಳಹೊಕ್ಕು ನೋಡಿದನು. ಸೂಜಾನು ಇದುವರೆಗೂ ಹಾಸಿಗೆಯಿಂದ ಎದ್ದಿರಲೇ ಇಲ್ಲ. ಜಯಸಿಂಹನು ಒಳಗೆ ಹೋಗಿ ಮೈಯನ್ನು ತಟ್ಟಿದನು. ಅಲ್ಲೇನಿದೆ! ಸೂಜಾನು ಇಲ್ಲವೇ ಇಲ್ಲ. ಬರೀ ಆತನ ಬಟ್ಟೆಗಳು ಬಿದ್ದುಕೊಂಡಿವೆ. ಜಯಸಿಂಹನು ಬೆದರುಗಣ್ಣಿನಿಂದ ಸುತ್ತಲೂ ನೋಡಿದನು. ಸೂಜಾನು ಇಲ್ಲ. ಸೆರೆಮನೆಯ ನೆಲಗಟ್ಟಿನಲ್ಲಿ ಸುರಂಗದ ಕಿಂಡಿಯೊಂದು ಕಾಣುತ್ತಲಿದೆ. ಅದರ ಕಲ್ಲಿನ ಮುಚ್ಚಳು ಬಳಿಯಲ್ಲಿಯೇ ಬಿದ್ದಿರುವುದು.

ಸೆರೆಯಾಳು ತಪ್ಪಿಸಿ ಓಡಿ ಹೋಗಿರುವನೆಂಬ ಸುದ್ದಿಯು ಕೋಟೆಯಲ್ಲಿ ಎಲ್ಲೆಲ್ಲಿಯೂ ಹರಡಿತು. ಹುಡುಕಿ ಹಿಡಿಯುವುದಕ್ಕಾಗಿ ನಾಲ್ಕು ಕಡೆಗಳಲ್ಲಿಯೂ ಭಟರನ್ನು ಅಟ್ಟಲಾಯಿತು. ಕೋಟೆಯ ಒಡೆಯನಾದ ವಿಕ್ರಮಸಿಂಹನ ತಲೆಯು ಕೆಳಕ್ಕಾಯಿತು. ಸೆರೆಯಾಳು ಹೇಗೆ ತಪ್ಪಿಸಿಕೊಂಡು ಹೋಗಿರಬಹುದೆಂಬುದನ್ನು ಆಲೋಚಿಸುವುದಕ್ಕಾಗಿ ಸಭೆಯು ಸೇರಿತು.

ಕಾಕಾಸಾಹೇಬನ ಆ ಹೆಮ್ಮೆಯ—ಆ ಹಿಗ್ಗಿನ ಭಾವಭಂಗಗಳು ಇಂದು ಅದೆಲ್ಲಿ ಅಡಗಿಕೊಂಡಿರಬಹುದು ! ಆತನು ತೀರ ದುಃಖಿತನಂತೆ " ಬ್ರಾಹ್ಮಣನು ಎಲ್ಲಿ? ಎಲ್ಲಿ ಆ ಬ್ರಾಹ್ಮಣನು?" ಎಂದು ರಘುಪತಿಯನ್ನು ಅರಸುತ್ತ ಎಡೆಬಿಡದೆ ಅಲೆದಾಡುತ್ತಿದ್ದನು. ಎಲ್ಲಿ ಹುಡುಕಿದರೂ ಆ ಬ್ರಾಹ್ಮಣನು ಇಲ್ಲವೇ ಇಲ್ಲ. ಕಾಕಾಸಾಹೇಬನು ಬೇಸತ್ತನು. ತಲೆಯ ಮುಂಡಾಸನ್ನು ತೆಗೆದು ಸೆಕ್ಕಿಟ್ಟು ಕೈಗಳೆರಡನ್ನೂ ತಲೆಗೆ ಹಚ್ಚಿಕೊಂಡು ನಸುವೇಳೆ ಹಾಗೆಯೇ ಕುಳಿತುಬಿಟ್ಟನು. ಬಳಿಕ ತನ್ನಲ್ಲಿ ತಾನೇ ಗುಣುಗುಣಿಸಿದನು " ಎಂತಹ ವಿಚಿತ್ರವಾದ ಕೆಲಸವಿದು ! ಭೂತಪಿಶಾಚದ ಕೆಲಸವೇನಾದರೂ ಇರಬಹುದೇ ಇದು !" ನಸುವೇಳೆ ತಡೆದು ಕಾಕಾಸಾಹೇಬನು ವಿಲಕ್ಷಣಭಾವದಿಂದ ಒಮ್ಮೆಲೇ ನುಡಿದನು " ಇಲ್ಲ! ಇದು ಭೂತಪಿಶಾಚಗಳ ಕೆಲಸವಲ್ಲ! ಸುಚೇತ್‌ಸಿಂಹ! ಇದೆಲ್ಲವೂ ನಡೆದುದು ಅರಿವುಗೇಡಿಯಾದ ಒಬ್ಬ ಮುದುಕನಿಂದ! ನಂಬುಗೆಗೇಡಿಯಾದ ಇನ್ನೊಬ್ಬ ಕೃತಘ್ನನಿಂದ!

ಸುಚೇತ್‌ಸಿಂಹನು ಬೆರಗುವಟ್ಟು ಕೇಳಿದನು. " ಅವರಾರೆಂಬುದು ನಿನಗೆ ಗೊತ್ತಿದ್ದರೆ ನೀನೀಗ ಅವರನ್ನು ಹಿಡಿದು ಕೊಡಕೂಡದೇತಕ್ಕೆ? "

ಕಾಕಾಸಾಹೇಬನು ಹೇಳಿದನು. " ಅವರಿಬ್ಬರಲ್ಲಿ ಒಬ್ಬನು ಓಡಿಹೋಗಿರುವನು, ಇನ್ನೊಬ್ಬನನ್ನು ಸೆರೆಹಿಡಿದು ರಾಜನ

ಕೂಗಲೇ ತೆಗೆದುಕೊಂಡು ಹೋಗುವೆನು." ಎಂದು ನುಡಿದು ಮುಂಡಾಸವನ್ನು ತಲೆಗೆ ಇಟ್ಟುಕೊಂಡನು. ಓಲಗಕ್ಕೆ ಸಲ್ಲ ತಕ್ಕ ಉಡುಪುಗಳನ್ನು ಧರಿಸಿದನು.

ಆಗ ಸಭೆಯಲ್ಲಿ ಸೆರೆಮನೆಯ ಕಾವಲಗಾರರ ಸಾಕ್ಷಿಯನ್ನು ತೆಗೆದುಕೊಳ್ಳುವ ಕೆಲಸ ನಡೆದಿದ್ದಿತು. ಕಾಕಾಸಾಹೇಬನು ಬಾಗಿದ ತಲೆಯವನಾಗಿ–ಬಾಡಿದ ಮೊಗದವನಾಗಿ–ಓಲಗದೊಳಕ್ಕೆ ಬಂದನು. ಬಂದವನೇ ತನ್ನ ಒರೆಗಳಿದ ಕತ್ತಿಯನ್ನು ವಿಕ್ರಮಸಿಂಹನ ಅಡಿಗಳಮೇಲಿಟ್ಟು ಹೇಳಿದನು. "ಮಹಾರಾಜ, ನನ್ನನ್ನು ಸೆರೆಹಿಡಿಯುವಂತೆ ಅಪ್ಪಣೆಯಾಗಬೇಕು. ನಾನೊಬ್ಬ ತಪ್ಪುಗಾರ."

ವಿಕ್ರಮಸಿಂಹನು ಬೆರಗಾಗಿ ಕೇಳಿದನು. "ಕಾಕಾಸಾಹೇಬ! ಇದೇನಿದು ನಿನ್ನ ವಿಚಿತ್ರವ್ಯವಹಾರ"

ಕಾಕಾಸಾಹೇಬನು ಹೇಳಿದನು. "ಅದೇ ಆ ಬ್ರಾಹ್ಮಣನು! ಇದೆಲ್ಲ ಕೆಲಸವೂ ಆ ಬಂಗಾಲಿ ಬ್ರಾಹ್ಮಣನದು!"

ರಾಜಾ ಜಯಸಿಂಹನು ಕೇಳಿದನು. "ನೀನು ಯಾರು?"

ಕಾಕಾಸಾಹೇಬನು ಹೇಳಿದನು. "ನಾನು ವಿಜಯಗಡದವನೊಬ್ಬ ಮುದುಕ; ಕಾಕಾಸಾಹೇಬ."

ಜಯಸಿಂಹ:–"ನೀನು ಮಾಡಿರುವುದೇನು?"

ಕಾಕಾಸಾಹೇಬ:–"ನಾನು ವಿಜಯಗಡದ ಗುಟ್ಟನ್ನು ಹೊರಕ್ಕೆ ಹಾಕಿ ವಿಶ್ವಾಸಘಾತದ ಕೆಲಸ ಮಾಡಿರುವೆನು. ನಾನು ತೀರ ಕೆಟ್ಟಿಹೋಗಿದ್ದೇನೆ! ಹುಚ್ಚು ನಂಬುಗೆಯಿಂದ ಬಂಗಾಲಿ ಬ್ರಾಹ್ಮಣನೊಬ್ಬನಿಗೆ ಸುರಂಗದ ದಾರಿಯ ಸಂಗತಿಯನ್ನೆಲ್ಲ ಹೇಳಿಬಿಟ್ಟಿರುವೆನು..."

ವಿಕ್ರಮಸಿಂಹನು ಉರಿದೆದ್ದು ನುಡಿದನು. "ಖಡ್ಗಸಿಂಹ!"

ಕಾಕಾಸಾಹೇಬನು ಬೆದರಿಬಿದ್ದನು. ತನ್ನ ಹೆಸರು ಖಡ್ಗಸಿಂಹನೆಂಬುದನ್ನು ಪ್ರಾಯಶಃ ಆತನು ಮರೆತು ಬಿಟ್ಟಿರಬಹುದು.

ವಿಕ್ರಮಸಿಂಹ:–"ಖಡ್ಗಸಿಂಹ! ನಿನಗೆ ಇಷ್ಟು ದಿನಗಳು ಕಳೆದು ಹೋದುವು! ನೀನಿನ್ನೂ ಮಗುವಾಗಿಯೇ ಉಳಿದಿರುವೆಯಲ್ಲ!"

ಕಾಕಾಸಾಹೇಬನು ಬಾಗಿದ ತಲೆಯಿಂದ ಸುಮ್ಮನೆ ನಿಂತಿದ್ದನು.

ವಿಕ್ರಮಸಿಂಹ:–"ಕಾಕಾಸಾಹೇಬ! ಇಂತಹ ಕೆಲಸವನ್ನು ನೀನು ಮಾಡಿದೆಯಾ? ವಿಜಯಗಡಕ್ಕಿಂದು ನಿನ್ನ ಕೈಯಿಂದಲೇ ಅಸಮಾನದ ಕೊಳೆಯನ್ನು ಬಳಿದು ಬಿಟ್ಟೆಯಲ್ಲವೇ!"

ಕಾಕಾಸಾಹೇಬನಿಗೆ ಮಾತುಗಳೇ ಬಾರವು. ಮಿಸುಕದೆ ನಿಂತಿದ್ದನು. ಆತನ ಕೈಗಳು ಗದಗದನೆ ನಡಗಲು ತೊಡಗಿದವು. ನಡುಗುತ್ತಿರುವ ಕೈಯನ್ನೆತ್ತಿ ಹಣೆಗೆ ಹೊಡೆದುಕೊಂಡನು. ತನ್ನಲ್ಲಿ ತಾನೆ ಎಂದಂದನು. "ಅದೃಷ್ಟವೇ!"

ವಿಕ್ರಮಸಿಂಹನು ಹೇಳಿದನು. "ನೋಡು! ದಿಲ್ಲೀಶ್ವರನ ಹಗೆಯು ನಮ್ಮ ಕೋಟೆಯೊಳಗಿಂದ ಓಡಿಹೋಗಿದ್ದಾನೆ. ನೀನೀಗ ನನ್ನನ್ನು ದಿಲ್ಲೀಶ್ವರನ ಬಳಿಯಲ್ಲಿ ತಪ್ಪುಗಾರನನ್ನಾಗಿ ಮಾಡಿ ನಿಲ್ಲಿಸಿದ್ದೀಯೆ. ಗೊತ್ತಾಯಿತೇನು!"

ಕಾಕಾಸಾಹೇಬನು ನುಡಿದನು "ನಾನು ಒಬ್ಬನು ಮಾತ್ರ ತಪ್ಪುಗಾರನು! ಮಹಾರಾಜರು ತಪ್ಪುಗಾರರೆಂಬುದನ್ನು ದಿಲ್ಲೀಶ್ವರನು ಎಂದಿಗೂ ನಂಬಲಾರನು."

ವಿಕ್ರಮಸಿಂಹನು ನಿರಾಶನಾಗಿ ಮಾತನಾಡಿದನು. "ನೀನು ಯಾರು? ದಿಲ್ಲೀಶ್ವರನು ನಿನ್ನನ್ನು ತೆಗೆದುಕೊಂಡು ಮಾಡುವುದಾದರೂ ಏನು? ನೀನು ನಮ್ಮ ಮನುಷ್ಯನಲ್ಲವೇ? ನನ್ನ ಕೈಯಿಂದಲೇ ಸೆರೆಯಾಳನ್ನು ಬಿಡುಗಡೆಗೊಳಿಸಿದಂತೆ ಆಗಲಿಲ್ಲವೇ ಇದು?"

ಕಾಕಾಸಾಹೇಬನು ನಿರುತ್ತರನಾದನು. ತೆಪ್ಪಗೆ ನಿಂತು ಬಿಟ್ಟನು. ಉಕ್ಕಿಬರುತಿರುವ ಕಂಬನಿಗಳನ್ನು ತಡೆಹಿಡಿಯುವುದಕ್ಕೆ ಈಗ ಅವನಿಗೆ ಸಾಧ್ಯವಾಗಲಿಲ್ಲ.

ವಿಕ್ರಮಸಿಂಹನು ಕೇಳಿದನು "ನಿನಗೀಗ ವಿಧಿಸಬೇಕಾದ ಶಿಕ್ಷೆಯಾವುದು?"

ಕಾಕಾಸಾಹೇಬ:–"ಮಹಾರಾಜರ ಮನಸ್ಸಿಗೆ ಬಂದುದು!"

ವಿಕ್ರಮಸಿಂಹ:–"ನೀನು ಮುಪ್ಪಿನ ಮುದುಕ. ಮತ್ತಾವ ಶಿಕ್ಷೆಯನ್ನೂ ವಿಧಿಸುವುದಕ್ಕಾಗದು. ದೇಶಾಂತರವಾಸದ ಶಿಕ್ಷೆಯೇ ನಿನಗೆ ಸಾಕು!"

ಕಾಕಾಸಾಹೇಬನು ವಿಕ್ರಮಸಿಂಹನ ಅಡಿಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡನು. ಮಾತನಾಡಲು ತೊಡಗಿದನು. "ಮಹಾರಾಜ! ನಾನು ವಿಜಯಗಡವನ್ನು ಬಿಟ್ಟುಹೋಗಬೇಕೆ! ಒಡೆಯ! ನಾನು ತೀರ ಮುದುಕ; ಬುದ್ಧಿಯೆಲ್ಲವೂ ಮಸುಳಿಸಿಹೋಗಿದೆ. ಅರೆಹುಚ್ಚನಂತಾಗಿರುವೆನು. ನನ್ನ ಕೊನೆಯ ದಿನವು ವಿಜಯಗಡದಲ್ಲಿಯೇ ಆಗಲಿ! ದಯವಿಟ್ಟು ನನಗೆ ಮರಣದಂಡನೆಯ ಶಿಕ್ಷೆಯನ್ನು ಕೊಟ್ಟುಬಿಡಿ! ಈ ಮುಪ್ಪಿನ ಕಾಲದಲ್ಲಿ ನಾಯಿನರಿಗಳಂತೆ ನನ್ನನ್ನು ಈ ಕೋಟೆಯಿಂದ ಹೊರಕ್ಕೆ ಅಟ್ಟಬೇಡಿ"

ರಾಜಾ ಜಯಸಿಂಹನು ಹೇಳಿದನು. "ವಿಕ್ರಮಸಿಂಹ! ನಾನು ಹೇಳುವುದನ್ನು ಕೇಳಿ ಈತನ ತಪ್ಪಿತವನ್ನು ಕ್ಷಮಿಸಿಬಿಡಿ! ಸಮ್ರಾಟರಿಗೆ ನಾನು ಎಲ್ಲ ನಿಜಸಂಗತಿಯನ್ನೂ ಮನವರಿಕೆ ಮಾಡಿಕೊಡುವೆನು."

ಕಾಕಾಸಾಹೇಬನಿಗೆ ಬಿಡುಗಡೆಯಾಯಿತು. ಸಭೆಯಿಂದ ಹೊರಟು ಹೋಗುತಿರುವಾಗ ಗಡಗಡನೆ ನಡುಗಿ ಕೆಳಕ್ಕೆ ಬಿದ್ದುಬಿಟ್ಟನು. ಅಂದು ಮೊದಲುಗೊಂಡು ಕಾಕಾಸಾಹೇಬನನ್ನು ಯಾರೂ ಹೆಚ್ಚಾಗಿ ಕಂಡವರೇ ಇಲ್ಲ. ಆತನು ಮನೆಯಿಂದ ಹೊರಕ್ಕೆ ಹೆಜ್ಜೆಯಿಕ್ಕುತ್ತಿರಲಿಲ್ಲ. ಕೈಯ ಕೋಲು ಮುರಿದು ಹೋಗಿದ್ದ ಕುರುಡನಂತಾಗಿದ್ದನವನು.

# ಅಂಕೋಲಾ ಸತ್ಯಾಗ್ರಹದ ಮಹಿಮೆ

ಲೇಖಕರು:—ಶ್ರೀ. ದಿನಕರ ದೇಸಾಯಿ, ಅಂಕೋಲೆ

ಕಳೆದ ಎಪ್ರಿಲ್ ತಿಂಗಳ ೧೩ನೇ ತಾರೀಖಿನ ದಿವಸ ಅಖಿಲ ಭರತಖಂಡದಲ್ಲೆಲ್ಲ ಉಪ್ಪಿನ ಸತ್ಯಾಗ್ರಹದ ಸಂಗ್ರಾಮವು ಭರದಿಂದ ಸಾಗಿದೆ. ಕರ್ನಾಟಕದ ಕೆಚ್ಚೆದೆಯ ವೀರರು ಅಂಕೋಲೆಯ ಕಡಲದಡದಲ್ಲಿ ನೆರೆದಿದ್ದಾರೆ. ಕಪ್ಪವನ್ನು ಕೊಡದೆ ಉಪ್ಪನ್ನು ಮಾಡಿ ಮಾತೃಭೂಮಿಯ ಬಂಧವಿಮೋಚನೆ ಮಾಡಬೇಕೆಂಬ ಉಚ್ಚ ಗುರಿಯಿಂದ ಮುಂದೆ ಸರಿದವರು ಇವರು. ಇಂಥ ಪುಣ್ಯಾತ್ಮರನ್ನು ಆಶೀರ್ವದಿಸಲಿಕ್ಕೆ ಸಾವಿರಾರು ಜನರ ಸಮೂಹವೊಂದು. ಸತ್ಯಯುಗದ ಅರುಣೋದಯವಾಯಿತೋ ಎಂಬಂತೆ ಎಲ್ಲರ ಮುಖಗಳಲ್ಲಿ ಒಡೆದು ಕಾಣುತ್ತಿತ್ತು, ಒಂದು ಬಗೆಯ ಕಾಂತಿ. ಸತ್ಯಾಗ್ರಹಿಗಳಂತೂ ಹೊನ್ನಾವರದ ಶ್ರೀ. ನಾಡಕರಣಿಯವರ ನೇತೃತ್ವದಲ್ಲಿ ಉಪ್ಪನ್ನು ಮಾಡತೊಡಗಿದ್ದರು. ಎಲ್ಲರ ಮನಸ್ಸಿಗೂ ಒಂದು ಬಗೆಯ ಸಂತಸ. ಆದರೆ ಕೆಲವರು ಮಾತ್ರ "ಇದೆಲ್ಲ ಬರಿಯ ಹುಡುಗಾಟ! ಒಂದು ಚಿಟಿಕೆ ಉಪ್ಪಿನಿಂದ ಏನಾಗಬೇಕು ಸರಕಾರಕ್ಕೆ!" ಎಂದು ಮಾತನಾಡುತ್ತಿದ್ದರು, ಪಾಪ! ಇವರಿಗೇನು ಗೊತ್ತು? ಮಹಾತ್ಮರು ಬಡಿಸಿದ ಸ್ವಾತಂತ್ರ್ಯದ ಹಬ್ಬದೂಟದಲ್ಲಿ ಉಪ್ಪು ಮುಖ್ಯವಾದದ್ದು. ಅದೊಂದಿಲ್ಲದಿದ್ದ ಪಕ್ಷಕ್ಕೆ ಪಕ್ವಾನ್ನವೆಲ್ಲವು ಸಪ್ಪೆಯಾಗದಿರುವುದೆ? ಉಪ್ಪೊಂದರಿಂದಲೇ ಸ್ವರಾಜ್ಯವು ಸಿಗಲಾರದಾದರೂ ನಾಟಕದ ಪ್ರಾರಂಭದಲ್ಲಿ ಸೂತ್ರಧಾರನು ಹ್ಯಾಗೋ ಹಾಗೆಯೇ ಉಪ್ಪು ಈ ಸತ್ಯಾಗ್ರಹದ ನಾಟಕದಲ್ಲಿ! ಅಂತೂ ಕರ್ನಾಟಕದ ವೀರನಟರು ಆ ದಿವಸ ಅಂಕೋಲೆಯ ಸತ್ಯಾಗ್ರಹ ಗ್ರಹದಲ್ಲಿ ಉಪ್ಪಿನ ನಾಂದಿಯನ್ನು ಹಾಡಿ, ಸ್ವರಾಜ್ಯ ನಾಟಕವನ್ನಾಡಲಿಕ್ಕೆ ಪ್ರಾರಂಭ ಮಾಡಿದರು. ಮಡಿಕೆಗಳಲ್ಲಿ ನೀರು ತಂದು ತಾಲೂಕು ಕಚೇರಿಯ ಮುಂದೆ ಅದನ್ನು ಕಾಸಿ, ಸತ್ಯದ ಉಪ್ಪನ್ನು ತಯಾರಿಸಿದರು. ಸಾಯಂಕಾಲಕ್ಕೆ ಸತ್ಯಾಗ್ರಹದ ಉಪ್ಪು ಮಾರಾಟವಾಯಿತು. ಊರಿಗೆ ಊರೇ ಕೂಡಿತ್ತು. ಆ ಸಂಜೆಯಲ್ಲಿ ನನಗೆ ಗೊತ್ತಿದ್ದ ಮಟ್ಟಿಗೆ ಇಂಥ ಪ್ರಚಂಡ ಜನಸಮೂಹವು ಇವರ ಮೊದಲು ಎಂದೂ ಕೂಡಿರಲಿಲ್ಲ. ಸ್ವಾಮಿ ವಿದ್ಯಾನಂದರು ಆ ಕಾಲಕ್ಕೆ ಮಾಡಿದ ಸ್ಫೂರ್ತಿದಾಯಕ ಭಾಷಣದಲ್ಲಿ "ಇಂದಿಗೆ ಕಾಲಚಕ್ರವು ತಿರುಗಿದೆ; ಅದರ ಜೊತೆಗೆ ಬ್ರಿಟಿಷ ಸರಕಾರವೂ ಹಿಂದುಸ್ಥಾನದಿಂದ ಹಿಂದಿರುಗಬೇಕಾಗುವದು" ಎಂದು ಮುಂತಾಗಿ ಹೇಳಿದರು.

ಮಾರನೆಯ ದಿವಸವೇ ಬಲಿದಾನಕ್ಕೆ ಮೊದಲಾಯಿತು. ದೇ. ಭ. ಎವ್. ಪಿ. ನಾಡಕರ್ಣಿಯವರು ಮತ್ತು ಶ್ರೀ ಸ್ವಾಮಿ ವಿದ್ಯಾನಂದರು ಇವರುಗಳೇ ಪ್ರಥಮ ಬಲಿಗಳಾಗಿ ಪರಿಣಮಿಸಿದರು. ಇವರುಗಳ ಆಹುತಿಯಿಂದ ಸ್ವಾತಂತ್ರ್ಯ ಹೋಮದ ಜ್ವಾಲೆಯು ಇನ್ನೂ ಪ್ರಖರವಾಯಿತು. ಊರಲ್ಲೆಲ್ಲ ಉತ್ಸಾಹವು ದ್ವಿಗುಣಿತವಾಯಿತು. ಅದೇ ಕಾಲಕ್ಕೆ ಡಾ। ಹರ್ಡೀಕರರು ೩೩ ಕನ್ನಡ ಬಂಟರೊಂದಿಗೆ ಅಂಕೋಲೆಗೆ ಬಂದು ತಲುಪಿದರು. ಅಂದಿನಿಂದ ಇವರೇ ಅಂಕೋಲಾ ಸತ್ಯಾಗ್ರಹದ ಪುರೋಹಿತರಾದರು. ಪ್ರತಿದಿವಸ ಮುಂಜಾನೆ ಒಂದೆರಡು ಬಲಿದಾನಗಳನ್ನಾದರೂ ಕೊಟ್ಟೇ ತೀರಬೇಕಾಗಿತ್ತು. ಅವುಗಳನ್ನು ತಿಂದು ತಿಂದು ದಬ್ಬಾಳಿಕೆಯ ರಕ್ಕಸನು ಸೊಕ್ಕಿದನಾದರೂ, ಅವನ ಜೀರ್ಣಶಕ್ತಿಯು ಮಾತ್ರ ಕ್ಷೀಣವಾಯಿತು. ಅದರಲ್ಲಿಯೂ ಅವನು ಮೊದಲನೇ ವಾರದಲ್ಲಿ ಮುಕ್ಕಿದ ಕೌಜಲಗಿ ಹಣಮಂತರಾಯರು, ತಿಮ್ಮಣ್ಣ ನಾಯ್ಕರು, ಕಾರಖಾನೀಸರು, ಶೆಣವಿ ಶಾಮರಾಯರು, ಇವರುಗಳು ಸಾಮಾನ್ಯರಾದ ಬಲಿಗಳಾಗಿರಲಿಲ್ಲ. ಹೀಗೆ ಒಂದೇ ಒಂದು ವಾರದಲ್ಲಿ ದಬ್ಬಾಳಿಕೆಗೆ ಜೀರ್ಣಶಕ್ತಿ ಕಡಿಮೆಯಾಗಿ ಜಡ್ಡಾಯಿತು. ಆದರೂ ದೇಶಭಕ್ತರನ್ನು ಮುಕ್ಕುವ ದುರಾಶೆಯು ಇನ್ನೂ ಕಡಿಮೆಯಾಗಿರಲಿಲ್ಲ.

ಹೀಗೆ ಒಂದು ವಾರವು ಕಳೆಯಿತು. ಎಪ್ರಿಲ್ ೨೦ನೇ ತಾ. **ದಿನವು ಬೆಳಗಿತು. ಈ ದಿನವನ್ನು ಮಾತ್ರ ಅಂಕೋಲೆಯವರು ಎಂದಿಗೂ ಮರೆಯಲಿಕ್ಕಿಲ್ಲ.** ಇವರು ಇಂಥ ಪುಣ್ಯತಮವಾದ ದಿವಸವನ್ನು ಕಂಡದ್ದು ಇದೇ ಮೊದಲು. ಅಂದು ಸಾಮುದಾಯಿಕ ಶಾಸನೋಲ್ಲಂಘನದ ಸುದಿನವಾಗಿತ್ತು. ಸಾವಿರಾರು ಜನರ ಪ್ರಚಂಡ ಜನಸಮುದಾಯವು ಸಮುದ್ರಕ್ಕೆ ಹೋಗಿ ಉಪ್ಪುಮಾಡಿ ಸರಕಾರವನ್ನು ಅಲ್ಲಗಳೆಯಲಿಕ್ಕೆ ಹಾತೊರೆಯಿತು. ಹೆಂಗಸರು ಅಡಿಗೆ ಮನೆಯನ್ನು ಬಿಟ್ಟು ಸೆರಗನ್ನು ಸುತ್ತಿ ಸ್ವಾತಂತ್ರ್ಯ ಯುದ್ಧದಲ್ಲಿ ಭಾಗವಹಿಸಲು ಸಿದ್ಧರಾದರು. ಹುಡುಗರೂ ತರುಣರೂ ಅತ್ಯ

ನಂದಿನಿಂದ ಮುಂದೆ ಬಂದರು. ಮುದುಕರಾದರೂ ಹಿಂದೆ ಬೀಳಲಿಲ್ಲ. ಅಂಕೋಲಾ ತಾಲೂಕಿನ ಪ್ರತಿಯೊಬ್ಬನು ಆ ದಿವಸ ಕಾಯಿದೆ ಭಂಗವನ್ನು ಮಾಡಿದನೆಂದರೆ ಅತಿಶಯೋಕ್ತಿಯಾಗ ಲಾರದು. ಡಾ। ಹರ್ಡಿಕರರ ಸ್ವಯಂಸೇವಕರೇ ಊರಲ್ಲಿ ಶಾಂತ ತೆಯನ್ನು ಕಾಯ್ದು ಪೋಲಿಸರಿಗೆ ನಾಚಿಕೆಯನ್ನುಂಟು ಮಾಡಿ ದರು. ಎಲ್ಲಿ ಹೋದರೂ ಸ್ವಯಂಸೇವಕರೇ ಕಣ್ಣಿಗೆ ಕಾಣುತ್ತಿ ದ್ದರು. ಅಂಕೋಲೆಗೆ ಅಂದಿನಿಂದ ಅರ್ಧ ಸ್ವರಾಜ್ಯವು ದೊರೆ ಕಿದೆಯೆಂದು ಹೇಳಬಹುದು. ಸಾವಿರಾರು ಜನರು ಸರಕಾರದ ಶಾಸನವನ್ನು ಮುರಿದರೂ, ಆ ದಿವಸ ಯಾರನ್ನೂ ಸೆರೆಮನೆಗೆ ಒಯ್ಯಲಿಕ್ಕೆ ಅಸಾಧ್ಯವಾಯಿತು. ಸೆರೆ ಹಿಡಿಯುವುದಾದರೂ ಯಾರನ್ನು? ಊರಿಗೆ ಊರೇ ಉಪ್ಪು ತಯಾರಿಸಿದ ಬಳಿಕ ಸರಕಾರದ ಪ್ರತಿಷ್ಠೆಯು ಸಪ್ಪೆಯಾಗದಿರುವುದೆ?

ಅಂದಿನಿಂದ ಪ್ರತಿ ದಿವಸ ಹಳ್ಳಿಯ ಸಾವಿರಾರು ಬಡ ಜನರು ಉಪ್ಪು-ಮಣ್ಣಿನ ಮೊಟ್ಟೆಗಳನ್ನು ಕಟ್ಟಿಕೊಂಡು ಮನೆಗೆ ಬರುತ್ತಿರುವರು. ಹೊಟ್ಟೆಗೆ ಪೂರಾ ತಿನ್ನಲು ದೊರೆಯದ ಬಡ ಕಂಗಾಲರಿಗೆ ಉಪ್ಪು ಪುಕ್ಕಟೆ ದೊರೆತದ್ದು ಸ್ವರಾಜ್ಯವೇ ಸರಿ. ಅಂದಿನಿಂದ ಜನರಲ್ಲಿ ಸೆರೆಮನೆಯ ಭೀತಿಯು ಮಟಮಾಯ ವಾಯಿತು. ಸ್ವರಾಜ್ಯ ಸೌಖ್ಯವು ಗೋಚರವಾಯಿತು. ಸರ ಕಾರದ ಶಾಸನಗಳು ಸಡಿಲಾಗಿ ಕಂಡವು. ಎಷ್ಟೋ ಬಡವರಿಗೆ ಉಪ್ಪು ಮಾರಿ ಹೊಟ್ಟೆಹೊರಕೊಳ್ಳಲು ಅನುವಾಯಿತು ಅಂಕೋಲೆಯಲ್ಲಿ ವಾರಕ್ಕೊಮ್ಮೆ ಉಪ್ಪಿನ ಸಂತೆ ಕೂಡಲಿಕ್ಕೆ ಮೊದಲಾಯಿತು. ಮೊದಲನೇ ಸಂತೆ ಯಲ್ಲಿ ಸುಮಾರು ೨೧೦ ಜನರು ಉಪ್ಪನ್ನು ಮಾರಾ ಟಕ್ಕೆ ತಂದಿದ್ದರು. ಈ ಸಂತೆಯಲ್ಲಿ ನಾಡವರ ಸಮಾಜದ ಜನರೇ ಹಿರಿದಾದಭಾಗವನ್ನು ವಹಿಸಿದ್ದರು. ಆದುದರಿಂದ ಅವರ ಮುಂದಾಳುಗಳನ್ನು ಸೆರೆಹಿಡಿದರೆ, ಮಿಕ್ಕವರು ಅಂಜು ವರೆಂದು ಸರಕಾರಕ್ಕೆ ಕನಸುಬಿದ್ದಿರಬೇಕು. ಕೂಡಲೇ ಐದು ಜನ ನಾಡವರ ವೀರರನ್ನು ಸರಕಾರವು ಸೆರೆಮನೆಗೆ ಅಟ್ಟಿಯೇ ಬಿಟ್ಟಿತು. ಆದರೇನು? ತಾನು ಕಂಡ ಕನಸಿನಂತೆ ವರ್ತಿಸಿದರೆ ಅದು ನೆನಸಾಗುವುದೆ? ಕಾರ್ಯ ಸಫಲವಾಗುವುದೆ? ದಬ್ಬಾ ಳಿಕೆಯಿಂದ ಸತ್ಯಾಗ್ರಹಕ್ಕೆ ಕಳೆಯೇರಿತೇ ಹೊರತು, ಜನರು ಹಿಂದೆ ಸರಿಯಲಿಲ್ಲ. ಜನರಲ್ಲಿ ಇನ್ನಿಷ್ಟು ಉತ್ಸಾಹವು ಕಂಡು ಬಂತು. ಸರಕಾರವು ಮಾತ್ರ ಕೈಮುಚ್ಚಿಕೊಂಡು ಸುಮ್ಮನೆ ಕೂಡಬೇಕಾಯಿತು. ಅಂತೂ ಮೇ ತಿಂಗಳು ಕೊನೆಯ ವರೆಗೆ ಕರ್ನಾಟಕದ ಕಡುಗಲಿಗಳು ಅಂಕೋಲೆಯ ರಣಕ್ಷೇತ್ರದ ದಿವ್ಯಜ್ಯೋತಿಯನ್ನು ನಂದಿಸಗೊಡಲಿಲ್ಲ. ಪ್ರತಿದಿವಸವೂ ನೀರು ತಂದು ಉಪ್ಪು ಮಾಡುತ್ತಲೇ ಇದ್ದರು. ಇಷ್ಟರೊಳ ಗಾಗಿ ಅಂಕೋಲೆಯ ೪೦ ವೀರರು ಸೆರೆಮನೆಯ ಸುಖ ವನ್ನು ಕಂಡರು.

ಮುಂದೆ ಮಳೆಗಾಲವು ಪ್ರಾರಂಭವಾದ್ದರಿಂದ ಉಪ್ಪು ಮಾಡಲು ಸಾಧ್ಯವಿಲ್ಲದ್ದರಿಂದ, ಪರದೇಶಿ ಬಟ್ಟೆಗಳ ಬಹಿಷ್ಕಾ ರಕ್ಕೆ ಮೊದಲಾಯಿತು. ಹೆಂಗಳೆಯರು ಸಹ ಮನೆಗಳನ್ನು ಸುತ್ತಿ ಪರದೇಶಿ ಬಟ್ಟೆಗಳನ್ನು ಸಂಗ್ರಹಿಸಿ, ಅವುಗಳನ್ನು ತಾಲೂಕ ಕಚೇರಿಯ ಮುಂದೆಯೇ ಸುಟ್ಟು ಬೂದಿಮಾಡಿದರು. ಇತ್ತ ಸೇಂದಿಯ ಚಳವಳಿಯು ಸುರುವಾಯಿತು. ಸ್ವಯಂಸೇವ ಕರು ಹಳ್ಳಿಗಳನ್ನು ಸುತ್ತಿ, ಕಳ್ಳು ಕುಡಿಯಬಾರದೆಂದು ಜನರಿಗೆ ಉಪದೇಶ ಮಾಡತೊಡಗಿದರು. ಯಾರಾದರೂ ಕಳ್ಳು ಕುಡಿದರೆ ಅವರಿಗೆ ಪೇಟೆಯಲ್ಲಿ ವ್ಯಾಪಾರ ಸಿಗು ವದು ಅಸಾಧ್ಯವಾಯಿತು. ಅಂಕೋಲೆಯ ಜನರಲ್ಲಿ ಎಂಥ ಒಕ್ಕಟ್ಟಿದೆ ಎಂಬುದನ್ನು ಇದೊಂದು ಉದಾಹರಣೆಯಿಂ ದಲೇ ನಾವು ಕಂಡುಹಿಡಿಯಬಹುದು.

ಇಂದಿಗೆ ಅಂಕೋಲೆಯಲ್ಲಿ ಯಾರೂ ಸೇಂದಿ ಸರಾಯಿ ಗಳನ್ನು ಮುಟ್ಟುವಹಾಗಿಲ್ಲ. ಸೇಂದಿಯನ್ನು ಕುಡಿಯದಿದ್ದರೆ ನಮಗೆ ಅನೇಕ ರೀತಿಯಿಂದ ಸ್ವರಾಜ್ಯವು ಸಿಗುವುದೆಂದು ಜನರ ನಂಬಿಕೆಯಾಗಿದೆ. ಮತ್ತು ಸ್ವರಾಜ್ಯವೇ ಸತ್ಯಯುಗ ವೆಂದೂ, ಗಾಂಧಿಯೇ ಪರಮಾತ್ಮನೆಂದೂ ಅವರ ದೃಢವಿಶ್ವಾಸ. ಇಲ್ಲಿಯ ಹಳ್ಳಿಯ ಜನರು ಸರಕಾರದ ಉಪ್ಪನ್ನು ಕೊಂಡುಕೊಳ್ಳುವದಿಲ್ಲ. ಸತ್ಯಾಗ್ರಹದ ಸತ್ಯದ ಉಪ್ಪನ್ನೇ ಅವರು ಸಂಗ್ರಹಿಸಿರುವರು. ಅದನ್ನೇ ಪ್ರತಿ ನಿತ್ಯ ಉಪಯೋಗಿ ಸುತ್ತಾರೆ. ಇಂದಿಗೆ ಅಂಕೋಲೆಯ ಜನರಿಗೆ ಸರಕಾರದ ಭೀತಿ ಯಿಲ್ಲ, ಆದರ ಹಂಗಿಲ್ಲ. ಅವರು ಇಂದಿಗೆ ಸರಕಾರಕ್ಕೆ "ನೀನ್ಯಾಕೋ ನಿನ್ನ ಹಂಗ್ಯಾಕೋ ಸತ್ಯದ ಬಲವೊಂ ದಿದ್ದರೆ ಸಾಕೋ"? ಎಂದು ಹೇಳಲು ಬದ್ಧರಾಗಿದ್ದಾರೆ. ಅವರ ಪಾಲಿಗೆ ಅರ್ಧ ಸ್ವರಾಜ್ಯವು ಕಟ್ಟಿಟ್ಟದ್ದೇ. ಇದಲ್ಲವೇ ಕರ್ನಾಟಕದ ಭಾಗ್ಯ! ಅಂಕೋಲಾ ಸತ್ಯಾಗ್ರಹದ ಮಹಿಮೆ!

# ಸಾಯಮನ ಸಪ್ತಕದ ವರದಿ

ಲೇಖಕರ :-ವಾಳವೇಕರ ಗುರುರಾಯರು, ಬಿ. ಎ., ಎಲ್‌ಎಲ್. ಬಿ.

ಹಿಂದುಸ್ಥಾನ ಇಂಗ್ಲಂಡುಗಳ ಸಂಬಂಧವು ಪಾಲಕ ಮತ್ತು ಅಜ್ಞಾನಿ ಅಲ್ಪವಯಸ್ಕ ಇವರ ಸಂಬಂಧದಂತೆ ಇದೆ ಯೆಂದು ಆಳರಸರು ಸಾರುತ್ತಿರುತ್ತಾರೆ. ಅಜ್ಞಾನಿಯು ತಾನು ಸಜ್ಞಾನನಾಗಿದ್ದೇನೆ, ತನ್ನ ಆಸ್ತಿಯನ್ನು ತನಗೆ ಒಪ್ಪಿಸಬೇಕು, ತನ್ನ ಅಲ್ಪವಯದಲ್ಲಿನ ಆಸ್ತಿಯ ಸಂಬಂಧದ ಲೆಖ್ಖವನ್ನು ಕೊಡಬೇಕು, ಎಂದು ಕೇಳಿದರೆ, ಅಜ್ಞಾನಿಯು ಸಜ್ಞಾನನಾಗಿದ್ದಾನೋ, ಇಲ್ಲವೋ ಎಂಬ ಪ್ರಶ್ನೆಯನ್ನು ಮತ್ತು ಪಾಲಕನ ಆಡಳಿತವು ಯೋಗ್ಯವಿದ್ದಿತೋ, ಇಲ್ಲವೋ, ಎಂಬ ಪ್ರಶ್ನೆಯನ್ನು ನಿರ್ಣಯಿಸುವ ಕೆಲಸವನ್ನು ಯಾವ ನ್ಯಾಯಪದ್ಧತಿಯೂ ಪಾಲಕನಿಗೆ ಒಪ್ಪಿಸುವದಿಲ್ಲ. ಆದರೆ ಹಿಂದುಸ್ಥಾನದ ವಿಷಯದಲ್ಲಿ ಪಾಲಕನು ತನಗಿಂತ ಹೆಚ್ಚಿನ ನ್ಯಾಯಪ್ರಿಯ ರಿಲ್ಲೆಂದು ಈ ಪ್ರಶ್ನೆಯನ್ನು ತಾನೇ ನಿರ್ಣಯಿಸಲು ಉದ್ಯುಕ್ತನಾಗಿದ್ದಾನೆ. ಇದರ ಪರಿಣಾಮವೇನಾಗಿದೆಂಬದು ಸಾಯಮನ ಸಪ್ತಕವು ಮಾಡಿದ ಸಿಫಾರಸುಗಳಿಂದ ಸ್ಪಷ್ಟವಾಗಿ ಕಾಣುತ್ತನೆ. ಆ ಸಿಫಾರಸುಗಳ ಸಾರಾಂಶವನ್ನು ಕೆಳಗೆ ಕೊಡುತ್ತೇವೆ.

ಮೊದಲನೆಯ ಭಾಗವು ಸಾಮಾನ್ಯ ವಿಚಾರಗಳಿಂದ ತುಂಬಿಕೊಂಡಿದೆ. ಅದರಲ್ಲಿ ಸ್ವಾಭಿಮಾನಿಯಾದ ಭಾರತೀಯನಿಗೆ ಉದ್ವೇಗಬರುವಂತೆ ಅನೇಕ ವಿಧಾನಗಳು ಅಲ್ಲಲ್ಲಿ ಥಳಥಳಿಸುತ್ತವೆ. ಎರಡನೆಯ ಭಾಗದಲ್ಲಿ ಮುಖ್ಯ ಸಿಫಾರಸುಗಳು ಅಡಕವಾಗಿವೆ. ಎರಡನೆಯ ಭಾಗವು ೩೧೬ ಪುಟ ಉದ್ದವಿದ್ದು, ಇದರಲ್ಲಿ ೧೨ ಭಾಗಗಳವೆ. ಮುಖ್ಯ ಭಾಗಗಳು ಮೂರು ನಾಲ್ಕು ಮಾತ್ರ.

೧ನೆಯ ಭಾಗದಲ್ಲಿ ಹಿಂದುಸ್ಥಾನದ ಆಡಳಿತವು ಸ್ವತಂತ್ರ ಪ್ರಾಂತಗಳಿಂದ ಕೂಡಿಕೊಂಡದ್ದಿರಬೇಕು, ಸಂಯುಕ್ತ ಅಥವಾ Federal ರಾಜ್ಯಪದ್ಧತಿಯು ಬಹಳ ಯೋಗ್ಯವಾದದ್ದು ಮುಂತಾದ (ಮುಂದಿನ ಭಾಗಗಳಲ್ಲಿ ವಿಸ್ತೃತವಾಗಿ ಬರುವ ವಿಚಾರಗಳ) ಸಾಮಾನ್ಯ ವಿವೇಚನವಿದೆ. ೩ನೆಯ ಭಾಗದಲ್ಲಿ ಪ್ರಾಂತೀಯ ಸರಕಾರಗಳ ರಚನೆ, ಅವರ ಅಧಿಕಾರ, ಪ್ರಾಂತೀಯ ಕಾಯಿದೆ ಕೌನ್ಸಿಲುಗಳ ಸಭಾಸದರ ಚುನಾವಣೆ, ಅವರ ಮತದಾರ ಸಂಘ ಮುಂತಾದ ವಿಷಯಗಳಿವೆ.

ಪ್ರಾಂತಗಳ ಈಗಿನ ರಚನೆಯು ತೃಪ್ತಿಕರವಾಗಿಲ್ಲ. ಅವುಗಳ ಪುನರ್ರಚನೆಯಾಗಬೇಕು. ಆ ಬಗ್ಗೆ ಒಂದು ಕಮಿಟಿಯನ್ನು ನೇಮಿಸಬೇಕು. ಸಿಂಧಪ್ರಾಂತವನ್ನು ಮುಂಬಯಿ ಇಲಾಖೆಯಿಂದ ವಿಂಗಡಿಸುವ ಪ್ರಶ್ನೆಯು ಮಹತ್ವದ್ದಿದೆ. ಪ್ರಾಂತಗಳ ಹೊಸ ರಚನೆಯಾದಬಳಿಕ ಮತದಾರರ ಸಂಖ್ಯೆಯನ್ನು ಹೆಚ್ಚಿಸುವ ಉದ್ಯೋಗ ನಡೆಯಬೇಕು. ಈಗಿದ್ದ ಮತದಾರರ ಮೂರರಷ್ಟು ಮತದಾರರಾಗಬೇಕು. ಅಂದರೆ ೧೦ಕ್ಕೆ ೧೫ ರಷ್ಟು ಜನರಿಗೆ ಮತಕೊಡುವ ಹಕ್ಕು ದೊರೆಯಬೇಕು. ಈ ಬಗ್ಗೆ ಸಹ ಒಂದು ಕಮಿಟಿಯನ್ನು ನೇಮಿಸಬೇಕು. ಆ ಮೇಲೆ ಪ್ರಾಂತೀಯ ಕೌನ್ಸಿಲುಗಳ ಅಥವಾ ಕಾಯಿದೆ ಮಂಡಲಗಳ ಸಭಿಕರ ಸಂಖ್ಯೆಯನ್ನು ಗೊತ್ತುಪಡಿಸಬೇಕು. ಪ್ರಾಂತೀಯ ಕಾಯಿದೆ ಮಂಡಲದ ಸಭಿಕರ ಸಂಖ್ಯೆಯು ೩೦೦ ರಿಂದ ೩೫೦ರ ವರೆಗೆ ಇರಬೇಕು— ಎಂದು ಮುಂತಾಗಿ ಕಮಿಟಿಯ ಶಿಫಾರಸುಗಳುಂಟು. ಇವರಲ್ಲಿ ಯಾವ ಯಾವ ಜಾತಿಯವರೆಷ್ಟಿರಬೇಕು ಮತ್ತು ಅವರ ಚುನಾವಣೆ ಹೇಗಾಗಬೇಕು ಎಂಬ ವಿಷಯಗಳೂ ಉಂಟು. ಮುಸಲಮಾನ ಹಾಗೂ ಯುರೋಪಿಯನರಿಗಾಗಿ ಪ್ರತ್ಯೇಕ ಮತದಾರರ ಸಂಘಗಳಿರಬೇಕು; ಮದ್ರಾಸ ಇಲಾಖೆಯಲ್ಲಿ ಬ್ರಾಹ್ಮಣೇತರರಿಗೆ ಬೇರೆ ಮತದಾರ ಸಂಘಗಳ ಅವಶ್ಯಕತೆ ಇಲ್ಲ; ಮುಂಬಯಿ ಇಲಾಖೆಯಲ್ಲಿ ಮರಾಠಾ ಜನರಿಗೆ ಕೆಲವು ಸ್ಥಲಗಳನ್ನು ಕಾದಿಡುವ ಅವಶ್ಯಕತೆ ಇದೆ; ಯಾವ ಜಾತಿಯ ಸಭಾಸದರೆಷ್ಟಿರಬೇಕು ಮುಂತಾದ ಪ್ರಶ್ನೆಗಳನ್ನು ಆಯಾ ಜಾತಿಯವರು ಕೂಡಿ ನಿರ್ಣಯಿಸಿರಬೇಕು; ಎಂದು ಕಡೆಯ ಶರಾ ಇದೆ. ಯಾವ ಮಾದರಿಯ ರಾಜ್ಯ ಪದ್ಧತಿ ಹಿಂದುಸ್ಥಾನದಲ್ಲಿರಬೇಕೆಂಬದನ್ನು ನಿರ್ಣಯಿಸುವ ಹಕ್ಕು ತಮಗಿರಬೇಕೆಂದು ಭಾರತೀಯರು ಮುಕ್ತಕಂಠವಾಗಿ ಸಾರಿ ಸಾರಿ ಹೇಳುತ್ತಿರಲು, ಸ್ವಯಂಮನ್ಯ ಸಾಯಮನ ಸಪ್ತಕಕ್ಕೆ ಹಿಂದುಸ್ಥಾನದ ದುಡ್ಡು ಸುಲಿದು, ಅದರ ಆಂತರ ವ್ಯವಸ್ಥೆಯಲ್ಲಿ ಕೈಹಾಕಲು ಹೇಳಿದವರಾರು ? ಅಂತ್ಯಜರ ಬಗ್ಗೆ ಮಾಡಿದ ಸೂಚನೆಗಳಂತೂ ತೀರ ಹಾಸ್ಯಾಸ್ಪದವಾಗಿವೆ. ಅಂತ್ಯಜರಿಗೆ ಬೇರೆ ಮತದಾರ ಸಂಘಗಳನ್ನು ಕೊಡುವದು ಶಕ್ಯವಿಲ್ಲ; ಅವರಿಗಾಗಿ ಸ್ಥಳಗಳನ್ನು ಕಾದಿಟ್ಟರೆ ಸಾಕು; ಆಯಾ

ಪ್ರಾಂತಗಳ ಒಟ್ಟು ಜನಸಂಖ್ಯೆಯು ಹಾಗು ಅಸ್ಪೃಶ್ಯ ಜನರ ಪ್ರಮಾಣದ ಮೂರುನಾಲ್ಕಾಂಶದಷ್ಟು ಸ್ಥಳಗಳನ್ನು ಅವರಿಗಾಗಿ ಕಾದಿಡಬೇಕು; ಉಮೇದುವಾರರಾಗಲಿಚ್ಛಿಸುವ ಅಂತ್ಯಜರು ತಾವು ಯೋಗ್ಯರಿದ್ದ ಬಗ್ಗೆ ಗವ್ಹರ್ನರರ ಕಡೆಯಿಂದ ಸರಟಿಫಿಕೇಟನ್ನು ಪಡೆಯಬೇಕು; ಅಂತ್ಯಜರಲ್ಲಿ ಯೋಗ್ಯ ಉಮೇದುವಾರರಿಲ್ಲದಿದ್ದರೆ ಗವ್ಹರ್ನರ ಸಾಹೇಬರು ಅಂತ್ಯಜರಲ್ಲಿದ್ದಂಥವರನ್ನು ಸಹ ಅಂತ್ಯಜರ ಹಿತರಕ್ಷಣೆಗಾಗಿ ಉಮೇದುವಾರರಾಗಿ ಸೇವಿಸಬೇಕು. (ಅಂದರೆ ಕ್ರಿಶ್ಚನ ಪಾದ್ರಿಗಳು ಸಹ ಅಂತ್ಯಜರ ಪ್ರತಿನಿಧಿಗಳಾಗಬಹುದು.) ಅಗತ್ಯ ಕಂಡರೆ ಗವ್ಹರ್ನರ ಸಾಹೇಬರು ಅರ್ಧ ಪ್ರತಿನಿಧಿಗಳನ್ನು ತಾವು ನೇಮಿಸಬಹುದು. ಎಂದರೆ ೬೦೦೦ ಸಾವಿರ ಮೈಲುಗಳ ಮೇಲಿಂದ ಬಂದು ೫ ವರ್ಷಗಳವರೆಗೆ ಮಾತ್ರ ಹಿಂದುಸ್ಥಾನದಲ್ಲಿರುವ ಪರಧರ್ಮೀಯ ಗವ್ಹರ್ನರ ಸಾಹೇಬರು ಅಂತ್ಯಜರ ಕೇವಲ ಹಿತಚಿಂತಕರು, ಅವರ ಹಕ್ಕುಗಳ ರಕ್ಷಕರು! ಎಂಥ ನ್ಯಾಯವಿದು! ಆಂಗ್ಲೋ ಇಂಡಿಯನ ಸಾಹೇಬರಿಗೆ ಮದ್ರಾಸ ಮುಂಬಯಿ ಪ್ರಾಂತೀಯ ಕೌನ್ಸಿಲುಗಳಲ್ಲಿ ಎರಡು ಎರಡು ಸ್ಥಳಗಳಿರಬೇಕು; ಬೇರೆ ಪ್ರಾಂತಗಳಲ್ಲಿ ಈಗಿದ್ದ ವ್ಯವಸ್ಥೆಯೇ ಸ್ಥಿರವಾಗಿರಬೇಕು; ಮಧ್ಯಪ್ರಾಂತದಲ್ಲಿ ಮಾತ್ರ ಯುರೋಪೀಯರಿಗೆ ಮತ್ತು ಆಂಗ್ಲೋ ಇಂಡಿಯನರಿಗೆ ಒಂದೊಂದು ಪ್ರತ್ಯೇಕ ಸ್ಥಳವಿರಬೇಕು; ಹಿಂದೀ ಕ್ರಿಶ್ಚನರಿಗೆ ಪ್ರತ್ಯೇಕ ಮತದಾರ ಸಂಘವಿಲ್ಲ, ಆದರೆ ಅವರಿಗಾಗಿ ಸ್ಥಳಗಳನ್ನು ಕಾದಿಡಬೇಕು. ವ್ಯಾಪಾರ ಉದ್ಯೋಗ ಕಾರಖಾನೆದಾರರ ಸ್ಥಳಗಳಲ್ಲಿ ಏನೂ ಹೆಚ್ಚು ಕಡಿಮೆಯಾಗಬಾರದು. ಕೆಲಸಗಾರರ ಪ್ರತಿನಿಧಿಗಳ ಬಗ್ಗೆ ವ್ಹಿಟ್ಲೆ (Whitley) ಕಮಿಶನಿನ ವರದಿಯು ಹಾದಿ ಕಾಯಬೇಕು. ಜಮೀನದಾರರ (Landlords) ಪ್ರತಿನಿಧಿಗಳಿಗಾಗಿ ಬೇರೆ ವ್ಯವಸ್ಥೆ ಮಾಡುವ ಕಾರಣವಿಲ್ಲ. ಅವಶ್ಯವಿದ್ದಲ್ಲಿ ಗವ್ಹರ್ನರ ಸಾಹೇಬರು ಅವರನ್ನು ಆರಿಸಬಹುದು. ಇವುಗಳಲ್ಲದೆ ಹೆಣ್ಣುಮಕ್ಕಳ ಪ್ರತಿನಿಧಿಗಳ ವಿಚಾರವೂ ಇದೆ.

ಈ ಪ್ರಕಾರ ಆರಿಸಿಬಂದ ಹಾಗೂ ಗವ್ಹರ್ನರ ಸಾಹೇಬರು ನೇಮಿಸಿದ ಪ್ರತಿನಿಧಿಗಳು "ಸ್ವತಂತ್ರ" ಪ್ರಾಂತಗಳ ಆಡಳಿತವನ್ನು ಹೇಗೆ ನಡೆಸಬೇಕೆಂಬುದರ ದಿಗ್ದರ್ಶನವಿದೆ. ಗವ್ಹರ್ನರ ಸಾಹೇಬರೇ ಮಂತ್ರಿಗಳನ್ನು ಆರಿಸಬೇಕು; ಆದರೆ ಎಲ್ಲ ಖಾತೆಗಳು ಆರಿಸಿಬಂದ ಸಭಿಕರೊಳಗಿಂದ ಚುನಾಯಿಸಲ್ಪಟ್ಟ ಮಂತ್ರಿಗಳಿಗೆ ಒಪ್ಪಿಸಲ್ಪಡಬೇಕೆಂದು ಸಾಯುಮನ ಕಮಿಶನಿನ ಮತವಿಲ್ಲ. ಮಂತ್ರಿಮಂಡಲದಲ್ಲಿ (Cabinet) ಜನರಿಂದ ಆರಿಸಿಬಾರದೆ ಇದ್ದ ಒಬ್ಬನನ್ನು ಅಥವಾ ಒಬ್ಬನಿಗಿಂತ ಹೆಚ್ಚು ಜನರನ್ನು ಸೇರಿಸುವ ಅಧಿಕಾರವು ಗವ್ಹರ್ನರ ಸಾಹೇಬರಿಗೆ ಇದೆ. ಮಂತ್ರಿಗಳ ಸಂಬಳವನ್ನು ಕಡಿಮೆಮಾಡುವ ಅಥವಾ ಕಟ್ಟುಮಾಡುವ ಅಧಿಕಾರವು ಕಾಯಿದೆ ಮಂಡಲಕ್ಕೆ ಇಲ್ಲ. ಮಂತ್ರಿಮಂಡಳದ ಮತವು ಗವ್ಹರ್ನರರ ಮೇಲೆ ಬದ್ಧವಿಲ್ಲ. ಸ್ವಾಸ್ಥ್ಯ ಸುರಕ್ಷಿತತೆಗಳಿಗಾಗಿ ಹಾಗೂ ಯಾವದಾದರೊಂದು ಜಾತಿ ಅಥವಾ ಜಾತಿಗಳ ಹಿತರಕ್ಷಣೆಗಾಗಿ ಗವ್ಹರ್ನರ ಸಾಹೇಬರಿಗೆ ಮಂತ್ರಿಮಂಡಳದ ಮತವನ್ನು ಧಿಕ್ಕರಿಸಿ ನಡೆಯುವ ಹಕ್ಕು ಇದೆ. ಆರ್ಥಿಕ ವಿಷಯದಲ್ಲಿ ಸಹ ಗವ್ಹರ್ನರ ಸಾಹೇಬರಿಗೆ ಈ ತರದ ಹಕ್ಕು ಇದೆ. ಮಂತ್ರಿಮಂಡಲದ ಪ್ರತಿಯೊಂದು ಸಭೆಗೆ ಗವ್ಹರ್ನರ ಸಾಹೇಬರು ಅಧ್ಯಕ್ಷರು. ಯಾವುದೇ ಕಾರಣದಿಂದ ಗವ್ಹರ್ನರ ಸಾಹೇಬರಿಗೆ ಅಧ್ಯಕ್ಷಪದವನ್ನಲಂಕರಿಸುವದು ಆಗದಿದ್ದರೆ ಸಿವ್ಹಿಲ್ ಸರ್ವಂಟನೊಬ್ಬನು ಹಾಜರ ಇದ್ದು ನಡೆದ ಸಂಗತಿಯನ್ನು ಗವ್ಹರ್ನರ ಸಾಹೇಬರಿಗೆ ನಿವೇದಿಸಬೇಕು. ಮಂತ್ರಿಮಂಡಲದ ಸೆಕ್ರೆಟರಿ ಸಿವ್ಹಿಲ್ ಸರ್ವ್ಹಂಟನಿರಬೇಕು. ಮಂತ್ರಿಮಂಡಲದವರು ನಿರಾಕರಿಸಿದ ಹಣದ ಮಂಜೂರಿಮಾಡುವ ಅಧಿಕಾರವು ಗವ್ಹರ್ನರರಿಗೆ ಇದೆ. ಸರಟಿಫಿಕೇಟು ಕೊಟ್ಟು ಲೋಕಕಲ್ಯಾಣಕ್ಕಾಗಿ ಮಂತ್ರಿಮಂಡಲದ ನಿರ್ಣಯವನ್ನು ಮೂಲೆಗೊತ್ತಲಿಕ್ಕೆ ಗವ್ಹರ್ನರ ಸಾಹೇಬರನ್ನು ಕಮೀಶನದವರು ಸಮರ್ಥರನ್ನಾಗಿ ಮಾಡಿದ್ದಾರೆ. ಮಂತ್ರಿಗಳ ಸಂಖ್ಯೆಯು ನಿರ್ಣಯವಾಗಿಲ್ಲ. ಈ ತರದ ರಾಜ್ಯವ್ಯವಸ್ಥೆಗೆ ಪ್ರಾಂತೀಯ ಸ್ವರಾಜ್ಯವೆಂದು ನಾಮಕರಣಮಾಡುವ ಧಾರ್ಷ್ಟ್ಯವು ಸಾಯುಮನ ಸಾಹೇಬರಿಗೊಬ್ಬರಿಗೇ ಉಂಟು. ಸ್ವಾಭಿಮಾನವುಳ್ಳ ಸ್ವಜನಹಿತರತನಾದ ಒಬ್ಬ ಭಾರತೀಯನೂ ಇವುಗಳಿಗೆ ಸುಧಾರಣೆಗಳೆಂದು ಕರೆಯನು. ಶಬ್ದಾಡಂಬರದಿಂದ ಜೊಳ್ಳು ಆಶೀರ್ವಚನಗಳಿಂದ ಹಿಂದೀ ಜನರ ಸಮಾಧಾನವಾಗುವಂತೆ ಇಲ್ಲ. ಸ್ವಾತಂತ್ರ್ಯದ ಸೋಗು ಸಾಕು. ಪ್ರಾಂತಿಕ ಸ್ವರಾಜ್ಯದ ಡೌಲು ಬೇಡ. ಇದಲ್ಲದೆ ಪ್ರಾಂತೀಯರ ಸರಕಾರದ ಆಯವ್ಯಯ, ಪ್ರಾಂತೀಯ ಹಾಗು ವರಿಷ್ಠ ಸರಕಾರದ ಸಂಬಂಧ ಮುಂತಾದ ಅನೇಕ ವಿಷಯಗಳ ವಿಚಾರಗಳು ಸಹ ಹಿಂದೀ ಜನರಿಗೆ ತೃಪ್ತಿಕರವಾಗುವಂತೆ ಆಗಿಲ್ಲ.

ಪ್ರಾಂತೀಯ ಸರಕಾರದ ವಿಚಾರವನ್ನು ಬಿಟ್ಟು ಹಿಂದುಸ್ಥಾನ ಸರಕಾರದ ರಚನೆಯ ಕಡೆಗೆ ನೋಡಿದರೆ, ಸಾಯುಮನ ಸಾಹೇ

ಬರು ಹಿಂದುಸ್ಥಾನ ಸರಕಾರದ ಸೂತ್ರಗಳು ಸ್ವಜನರ ಕೈಬಿಡ ಬಾರದೆಂದು ಹೇಳಿದ್ದಾರೆ. ಈಗ ಹಿಂದುಸ್ಥಾನ ಸರಕಾರದ ಕಾಯದೆ ಮಂಡಲಗಳಿಗೆ ಅಂದರೆ ಲೆಜಿಸ್ಲೇಟಿವ್ಹ ಅಸೆಂಬ್ಲಿ ಹಾಗೂ ಕೌನ್ಸಿಲ್ ಆಫ್ ಸ್ಟೇಟ್ ಇವುಗಳಿಗೆ ಸಭಾಸದರನ್ನು ಮತದಾರ ಸಂಘಗಳು ಆರಿಸಿ ಕಳಿಸುತ್ತವೆ. ಇಂತಿಷ್ಟು ಭೂಕಂದಾಯದ ಅಥವಾ ಪ್ರಾಪ್ತಿಯ ಮೇಲಿನ ಕರಕೊಡುವ ಪ್ರತಿಯೊಬ್ಬನಿಗೆ ಈ ಸಭಾಸದರಾಗಲಿಚ್ಛಿಸುವ ಉಮೇದವಾರರ ಸಲುವಾಗಿ ಮತಕೊಡುವ ಹಕ್ಕು ಅದೆ. ಹೊಸ ಸುಧಾರಣೆಯಲ್ಲಿ ಈ ಹಕ್ಕು ನಷ್ಟವಾಗತಕ್ಕದ್ದು. ಮತದಾರರಿಗೂ ಅವರ ಪ್ರತಿನಿಧಿಗಳಿಗೂ ಇರುವ ಸಂಬಂಧವು ಕಡಿದು ಹೋಗುವದು ಒಳಿತೋ ? ಆಯಾ ಪ್ರಾಂತಿಕ ಕಾಯದೆ ಮಂಡಲದವರು ವರಿಷ್ಠ ಕಾಯದೆ ಮಂಡಲದ ಹಾಗೂ ಕೌನ್ಸಿಲ್ ಆಫ್ ಸ್ಟೇಟ್ಸ್ ಸಭಿಕರನ್ನು ಆರಿಸಿಕೊಡಬೇಕು. ತಮ್ಮ ತಮ್ಮ ಪ್ರಾಂತಗಳಲ್ಲಿಯ ಜನಸಂಖ್ಯೆಯ ಮಾನದಿಂದ ವರಿಷ್ಠ ಕಾಯದೆ ಮಂಡಲಕ್ಕೆ ಸಭಾಸದರನ್ನು ಆರಿಸುವ ಹಕ್ಕು ಪ್ರಾಂತೀಯ ಕೌನ್ಸಿಲುಗಳಿಗೆ ಅದೆ. ವರಿಷ್ಠ ಕಾಯದೆ ಮಂಡಲದಲ್ಲಿ ೨೫೦ ರಿಂದ ೩೦೦ ರ ವರೆಗೆ ಸಭಾಸದರಿರಬೇಕು. ವರಿಷ್ಠ ಕಾಯದೆ ಮಂಡಲದ ಸಭಾಸದನಾಗುವ ಉಮೇದುವಾರನ ಹೆಸರು ಪ್ರಾಂತೀಯ ಕೌನ್ಸಿಲದ ಮತದಾರರ ಯಾದಿಯಲ್ಲಿದ್ದರೆ ಸಾಕು. ಗವ್ಹರ್ನರ ಜನರಲ್ಲರ ಕಾರ್ಯಕಾರಿ ಮಂಡಲದ ಸಭಾಸದರು ವರಿಷ್ಠ ಕಾಯದೆ ಮಂಡಲದ ಸಭಾಸದರೆಂದು ತಿಳಿಯತಕ್ಕದ್ದು. ಇವರಲ್ಲದೆ ೧೨ ಜನರನ್ನು ವರಿಷ್ಠ ಕಾಯದೆ ಮಂಡಲದ ಸಭಿಕರನ್ನಾಗಿ ಮಾಡುವ ಅಧಿಕಾರವು ಗವ್ಹರ್ನರ ಜನರಲ್‌ರಿಗೆ ಅದೆ. ವರಿಷ್ಠ ಕಾಯದೆ ಮಂಡಲದಲ್ಲಿ ಅಂತ್ಯಜರಲ್ಲದ ಹಿಂದು ಜನರು ೧೦೦ಕ್ಕೆ ೫೦; ಅಂತ್ಯಜರು ೧೦೦ಕ್ಕೆ ೮; ಶೀಖರು ೧೦೦ಕ್ಕೆ ೩; ಹಿಂದೀ ಕ್ರಿಶ್ಚನರು ಹಾಗೂ ಆಂಗ್ಲೊ ಇಂಡಿಯನರು ೧೦೦ಕ್ಕೆ ಸುಮಾರು ೧; ಯುರೋಪೀಯರು ೧೦೦ಕ್ಕೆ ೧೦; ಮುಸಲಮಾನರು ೧೦೦ಕ್ಕೆ ೨೮; ಗವ್ಹರ್ನರ ಜನರಲ್ ಸಾಹೇಬರಲ್ಲಿ ಎಲ್ಲ ಅಧಿಕಾರಗಳು ಕೇಂದ್ರೀಭೂತವಾಗಿರಬೇಕು. ಗವ್ಹರ್ನರ ಜನರಲ್ ಸಾಹೇಬರ ಕಾರ್ಯಕಾರಿ ಮಂಡಲದ ಸಭಾಸದರ ನೇಮಿಸೋಣ ಈಗಿನಂತೆ ಬಾದಶಹರಿಂದ ಆಗದೆ, ವ್ಹಾಯಿಸರಾಯರಿಂದಾಗಬೇಕು. ಗವ್ಹರ್ನರ ಜನರಲ್‌ರು ತಮ್ಮ ಕಾರ್ಯಕಾರಿ ಕೌನ್ಸಿಲಿನ ಸಭಾಸದರಲ್ಲಿ ಕೆಲವರನ್ನಾದರೂ ಜನತೆಯಿಂದ ಆರಿಸಲ್ಪಟ್ಟ ವರಿಷ್ಠ ಕಾಯದೆ ಮಂಡಲದ ಸಭಿಕರೊಳಗಿಂದ ಆರಿಸಿಕೊಳ್ಳಬೇಕೆಂಬ ಕಟ್ಟು ಸಹ ಇಲ್ಲ. ಆರಿಸಿಕೊಳ್ಳಬಹುದೆಂದು ಮಾತ್ರ ಸಾಯಮನ ಸಾಹೇಬರ ಉದಾರ ಮತ. ಬ್ರಿಟಿಶ ಮಂತ್ರಿ ಮಂಡಲವು ಬ್ರಿಟಿಶ್ ಪಾರ್ಲಮೆಂಟಿಗೆ ಜವಾಬದಾರ ಇರುವಂತೆ ಗವ್ಹರ್ನರ ಜನರಲ್ಲರ ಕಾರ್ಯಕಾರಿ ಮಂಡಲವು ವರಿಷ್ಠ ಕಾಯದೆ ಮಂಡಲಕ್ಕೆ ಜವಾಬದಾರ ಇರಕೂಡದು; ಬ್ರಿಟಿಶ ಪಾರ್ಲಮೆಂಟ ಇದೊಂದೆ ಆದರ್ಶಭೂತವಾದ ಸಂಸ್ಥೆಯಲ್ಲ; ಫೆಡರಲ್ ಅಥವಾ ಸಂಯುಕ್ತ ರಾಜ್ಯಪದ್ಧತಿಯೆಂಬದು ಪ್ರಪಂಚದ ಬೇರೆ ಭಾಗಗಳಲ್ಲಿ ಇದೆ, ಈ ಪ್ರಮಿಂತದ ಶುಷ್ಕ ತತ್ವಜ್ಞಾನವನ್ನು ಪ್ರದರ್ಶಿಸುವ ಪಾಂಡಿತ್ಯವು ಈ ವರದಿಯ ತುಂಬಾ ಹರಡಿಕೊಂಡಿದೆ. ಫೆಡರಲ್ ಪದ್ಧತಿಯು ಸ್ತುತಿಪಾಠಕ್ಕಂತೂ ಅಳತೆ ಇಲ್ಲ ಈ ಪದ್ಧತಿ ಬ್ರಿಟಿಶ ಪಾರ್ಲಮೆಂಟನ್ನು ಎಲ್ಲ ಪಾರ್ಲಮೆಂಟಗಳ ಜನನಿಯೆಂದು ಹೊಗಳಿಕೊಂಡವರೂ ಇಂಥ ಬ್ರಿಟಿಶ್ ರಾಜ್ಯಪದ್ಧತಿಯು ನಿಜವಾದ ಸ್ವಾತಂತ್ರ್ಯದ ಕುರುಹೆಂದು ಉಪದೇಶಿಸಿದವರೂ ಬ್ರಿಟಿಶರೇ. ಆದರೆ ಈಗ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನು ಕೊಡದೆ ಕೊಟ್ಟಂತೆ ತೋರಿಸುವ ಯತ್ನದಲ್ಲಿದ್ದವರಿಗೆ ಬ್ರಿಟಿಶ ಪಾರ್ಲಮೆಂಟಿನ ಪದ್ಧತಿಯು ವಿಷವಾಯಿತು. ಇವರು ಕಮೀಶನಿನವರು ಯಾವ ಫೆಡರಲ್ ಪದ್ಧತಿಯನ್ನು ಹಾಡಿಹೊಗಳುವರೋ ಅದನ್ನಾದರೂ ಹಿಂದೀ ಜನರಿಗೆ ಕೊಟ್ಟಿರುವರೋ! ಇಲ್ಲ. ಭೂತಲದ ಮೇಲೆ ಇದ್ದ ಫೆಡರಲ್ ಪದ್ಧತಿಗೂ ಸಾಯಮನ ಸಾಹೇಬರು ಕೊಟ್ಟ ಫೆಡರಲ್ ಪದ್ಧತಿಗೂ ಅಜಗಜದಷ್ಟು ಅಂತರವಿದೆ. ಸಾಯಮನ್ ಸಾಹೇಬರು ದಯಪಾಲಿಸಿದ ಫೆಡರಲ್ ಪದ್ಧತಿಯಲ್ಲಿ ಹಿಂದೀ ಜನರಿಗೆ ನಿಜವಾದ ಅಧಿಕಾರ ಲವಲೇಶವೂ ಇಲ್ಲ. ಪದ್ಧತಿಯ ಹೆಸರಿನಲ್ಲಿ ಏನಿದೆ ! ಹಿಂದೀ ಜನರಿಗೆ ಸ್ವರಾಜ್ಯದ ಅಥವಾ ತಮ್ಮ ದೇಶದ ಆಡಳಿತವನ್ನು ತಾವು ನಡೆಸುವ ಅಧಿಕಾರವು ಉಂಟಾಗಿದೆಯೋ ಇಲ್ಲವೋ ಇದೇ ಮುಖ್ಯ ಪ್ರಶ್ನೆ. ದಂಡಿನ ವೆಚ್ಚ ದೊಡ್ಡ ದೊಡ್ಡ ಅಧಿಕಾರಿಗಳ ಸಂಬಳ ಮುಂತಾದವುಗಳನ್ನು ಕುರಿತು ವರಿಷ್ಠ ಕಾಯದೆ ಮಂಡಲದವರು ಬೇಸರಗೊಳ್ಳುವ ವರೆಗೆ ಚರ್ಚಿಸಬಹುದು ಆದರೆ ಅವುಗಳನ್ನು ಮಂಜೂರುಮಾಡುವ ಅಥವಾ ಬಿಡುವ ಅಧಿಕಾರವು ಈ ಮಂಡಳಕ್ಕೆ ಇಲ್ಲ. ವೆಚ್ಚದ ವಿಷಯದಲ್ಲಿ ಎಲ್ಲಕ್ಕೂ ದೊಡ್ಡದೆಂದರೆ ದಂಡು, ಮತ್ತು ದೊಡ್ಡ ದೊಡ್ಡ ಅಧಿಕಾರಿಗಳ ಸಂಬಳ. ಇವುಗಳಿಗೆ ಕೈ ಹಚ್ಚುವಂತೆ ಇಲ್ಲ ಯಾವದೊಂದು ಸಂಗತಿಯು ವೆಚ್ಚವನ್ನು ವರಿಷ್ಠ ಮಂಡಲದವರು

ನಿರಾಕರಿಸಿದರೂ, ಅದನ್ನು ಸರಟಫಿಕೀಟನಿಂದ ಮಂಜೂರು ಮಾಡುವ ಅಧಿಕಾರವು ವೈಸರಾಯರಿಗೆ ಇನ್ನೂ ಇದೆ. ಅನೇಕ ವರ್ಷಗಳವರೆಗೆ (at least for a long time to come) ಬ್ರಿಟಿಶ ಅಧಿಕಾರಿಗಳು ಹಾಗೂ ಬ್ರಿಟಿಶ ಸೈನಿಕರು ಹಿಂದೀ ದಂಡಿನಲ್ಲಿ ಇರುವದು ಅತ್ಯವಶ್ಯನದೆ; ಹಿಂದೀ ಜನರು ಮಾತ್ರ ಭೂತಲದ ಮೇಲಿನ ಜನಾಂಗಗಳಲ್ಲಿ ಆತ್ಮರಕ್ಷಣೆಗೆ ಕೊನೆಗೂ ಅಯೋಗ್ಯರು! ತಮ್ಮ ದೇಶದ ಸಂರಕ್ಷಣೆಗಾಗಿ ಪರಕೀಯ ಸೇನೆಯನ್ನೂ ಪರಕೀಯ ಅಧಿಕಾರಸ್ಥರನ್ನೂ ಇಷ್ಟು ವರ್ಷಗಳವರೆಗೆ ಇಟ್ಟುಕೊಂಡ ದೇಶಗಳ ಉದಾಹರಣೆಗಳು ಅಪರೂಪ. ಕರಕೂಡಿಸುವ ಅಧಿಕಾರವು ಗವ್ಹರ್ನರ ಜನರಲ್ ಸಾಹೇಬನಿಗೆ ಮತ್ತು ಅವರ ಕಾರ್ಯಕಾರಿ ಮಂಡಳಕ್ಕೆ ಇದೆ. ವೆಚ್ಚದ ಮಂಜೂರಿಯ ವಿಷಯದಲ್ಲಿ ಏನೂ ಹೆಚ್ಚು ಕಡಿಮೆ ಯಾಗಿಲ್ಲ ಈ ಕಮಿಶನಿನ ಸಿಫಾರಸುಗಳನ್ನು ಎಷ್ಟೆಂದು ಬಣ್ಣಿ ಸಬೇಕು? ಆಯ್. ಸಿ. ಎಸ್ ಮತ್ತು ಆಯ್. ಎಮ್. ಎಸ್ ಪದವೀಧರರು ಹಿಂದುಸ್ಥಾನದಲ್ಲಿ ಸುಖವಾಗಿದ್ದುಕೊಂಡು ದೊಡ್ಡ ದೊಡ್ಡ ವೇತನಗಳನ್ನು ತಿನ್ನುವ ವ್ಯವಸ್ಥೆಯಾಗಿದೆ. ದೊಡ್ಡ ಪಗಾರದ ಅಧಿಕಾರಸ್ಥರಲ್ಲಿ ಹಿಂದೀ ಜನರ ಹಾಗೂ ಯುರೋಪೀಯರ ಪ್ರಮಾಣವು ಲೀ ಕಮೀಶನಿನವರು ೧೯೩೯ ರಲ್ಲಿ ನಿರ್ಣಯಿಸಿದಷ್ಟೇ ೧೯೪೯ರ ವರೆಗೂ ಕೆಲವರ ಬಗ್ಗೆ ೧೯೪೪ರ ವರೆಗೂ ಇರತಕ್ಕದ್ದು; ಅಂದರೆ ಹಿಂದೀ ಜನರಿಗೆ ಹೆಚ್ಚಿನ ಸಂಬಳದ ನೌಕರಿಗಳು ಸಹ ದೊರೆಯುವದಿಲ್ಲ. ಯುರೋಪೀಯ ಜನರಿಗೆ ಯುರೋಪೀಯ ಡಾಕ್ಟರರ ಉಪಚಾರದ ವ್ಯವಸ್ಥೆಯಾಗಿದೆ. ಗವ್ಹರ್ನರ ಸಾಹೇಬರಿಗೆ ಬಹಳ ಕಷ್ಟವಾಗುತ್ತಿರುವದರಿಂದ ಪೆನಶನ ದೊರೆಯಬೇಕಂತೆ. ಒಟ್ಟಿನ ಮೇಲೆ ಹಿಂದೀ ಜನರು ಹಗ್ಗ ಕೊಟ್ಟು ಕೈ ಕಟ್ಟಿಸಿಕೊಂಡಂತೆ ಆಗಿದೆ. ಹಿಂದೀ ಜನರ ಭಾವೀ ರಾಜ್ಯಪದ್ಧತಿಯನ್ನು ನಿರ್ಣಯಿಸುವ ಕೆಲಸವನ್ನು ಹಿಂದೀ ಜನರ ಹೊರ್ತು ಬೇರೆ ಜನರಿಗೆ ಎಂದೂ ಒಪ್ಪಿಸಕೂಡದು. ಅದೇ ಸ್ವಯಂನಿರ್ಣಯದ ಇಂಗಿತವು. ಸ್ವರಾಜ್ಯದ ಮೊದಲನೆಯ ಮೆಟ್ಟು. ಸ್ವಾತಂತ್ರ್ಯದ ಗುಟ್ಟು.

---

## ಚಿತ್ರಪರಿಚಯ



ಈ ಚಿತ್ರವನ್ನು ಶಾಂತಿನಿಕೇತನದಲ್ಲಿ ಚಿತ್ರಕಲೆಯನ್ನು ಅಭ್ಯಾಸಿಸುತ್ತಿದ್ದ ಶ್ರೀ. ನಾರಾಯಣ ಸಂಗಮ ಅವರು ಬರೆದಿರುವರು. ಇವರು ಜಯಕರ್ನಾಟಕ ಮಂಡಲದ ಸವ ಸ್ಯರಲ್ಲೊಬ್ಬರು. ಇವರ ಇನ್ನೊಂದು ಚಿತ್ರವು 'ಪ್ರೀತಿಪೂರ' ಎಂಬುದು ಹಿಂದೊಮ್ಮೆ ಜಯಕರ್ನಾಟಕದಲ್ಲಿ ಪ್ರಕಟವಾಗಿದೆ. ಎರಡೂ ತ್ರಿವರ್ಣಚಿತ್ರಗಳಿರುವದರಿಂದ, ಛಾಯಾಚಿತ್ರಗಳಲ್ಲಿ ಮೊದಲಿನ ಅಂದವು ಬಂದಿಲ್ಲ. ಈ ಚಿತ್ರದಲ್ಲಿ ಓರ್ವ ನರ್ತಕಿ ಹೊತ್ತುಕೊಂಡ ಉತ್ತರೀಯವು ಮಯೂರಾಕೃತಿಯನ್ನು ಧರಿಸುವಂತೆ ಕುಣಿಯುತ್ತಿದ್ದಾಳೆ. ಮೇಘಗಳನ್ನು ಕಂಡು ನವಿಲು ಕುಣಿದು ಕೇಕೆ ಹಾಕುವದು ಸಹಜ. ಆದರೆ ಈ ಹೊಸ ಬಗೆಯ ನವಿಲ ಕಂಡು, ಮೋಡಗಳು ತಾವಾಗಿಯೆ ಆಕೃಷ್ಟವಾಗಿರುವವು. ಸ್ವರ್ಗವೆ ಪೃಥ್ವಿಯ ಬಳಿ ಬಂದಿದೆ. ಅಥವಾ ಈ ಚಿತ್ರದ ಅಭಿಪ್ರಾಯವನ್ನು ಬೇರೊಂದು ರೀತಿಯಲ್ಲಿ ಕಲ್ಪಿಸಬಹುದು. ವಿಶ್ವದಲ್ಲೆಲ್ಲ ನಡೆದ ಮಂಗಳವನ್ನು—ಆನಂದಸಂಭ್ರಮವನ್ನು ನೋಡಿ, ಸೃಷ್ಟಿಯ ಆತ್ಮವು (ಪ್ರ)ಕುಣಿಯುತ್ತಿದೆ. ಮಯೂರಾಕೃತಿಯು ಆ ಹಿಗ್ಗಿನ ಸಂಕೇತವು. ಹೇಗೆ ಅರ್ಥ ಮಾಡಿದರೂ ಸೈ. ಚಿತ್ರಿಕನು ಕವಿಯಂತೆ ಕೃತಿಯನ್ನು ಸವಿಗಾರರ ಎದುರಿನಲ್ಲಿ ಇಡುವನು. ಸವಿದು ನೋಡುವದು ರಸಿಕರ ಕೆಲಸ.

---

## ಸಾದರ ಸ್ವೀಕಾರ

ಕನ್ನಡಿಗರ ಕೂಟದ ೨ ನೆಯ ವಾರ್ಷಿಕ ವರದಿ

| | |
|---|---|
| ಯಾದವಕೃಷ್ಣ | ಎಮ್. ಎನ್. ಕಾಮತ |
| ಪದ್ಯ ಕಥಾವಳಿ | ,, |
| ಸೀತಾರಾಮ | ,, |
| ಭೀಷ್ಮನ ಕಥೆ | ,, |
| ಪ್ರೇಮವು ಮಾನವಧರ್ಮವಲ್ಲವೇ? | ಎಮ್. ಎಸ್. ಕೇಸರಿ |
| ಧಾರವಾಡ ಜಿಲ್ಲೆಯ ವರ್ಣನೆ | ,, |
| Rabindranath Tagore | ,, |
| Gopal Krishna Gokhale | ,, |
| दिवस कसे जातील? / मातृसेवा / शिपाई | महाराष्ट्र कुटुंबमाला |
| ದೇವದೂತರು— | ಶಿವರಾಮ ಕಾರಂತ |

# ಪ್ರಪಂಚಪರಿಚಯ

## ಶಾಸನಭಂಗವು ಯಾವಾಗ ನ್ಯಾಯ್ಯ ?

ಡಾ. ಹೊಲ್ಮಸ ಎಂಬ ಅಮೇರಿಕೆಯ ವಿಖ್ಯಾತ ಲೇಖಕರೂ ಮುಖಂಡರೂ ಹೀಗೆ ಅಭಿಪ್ರಾಯಪಡುತ್ತಾರೆ.

೧. ಪರಕೀಯ ರಾಜರು ತಮ್ಮ ಸ್ವಾತಂತ್ರ್ಯ ಹರಣಕ್ಕಾಗಿ ತಮ್ಮ ಇಚ್ಛೆಗೆ ಶೀರ ವಿರುದ್ಧವಾಗಿ ಯಾವಾಗ ಒತ್ತಾಯದ ಕಟ್ಟಳೆಗಳನ್ನು ಹೇರುವರೋ, ಆಗ ಅಂತಹ ಶಾಸನಗಳ ಭಂಗ ಮಾಡುವುದು ಯುಕ್ತವಾಗಿದೆ; ಕರ್ತವ್ಯವೂ ಇದೆ.

೨. ಯಾವ ಒತ್ತಾಯದ ಕಟ್ಟಳೆಯನ್ನು ಪಾಲಿಸುವುದರಿಂದ ಮನುಷ್ಯನು ತನಗೆ ಅನೀತಿಕರ ಅಥವಾ ಅನ್ಯಾಯದ ಕೀಳು ಕೆಲಸವನ್ನು ಮಾಡಬೇಕಾಗುವುದೆಂದೆನಿಸುವುದೋ ಅಂತಹ ಹಾಳು ಕಟ್ಟಳೆಯನ್ನು ಅದು ನೈತಿಕ ಅಥವಾ ಆಧ್ಯಾತ್ಮಿಕ ತತ್ತ್ವಗಳಿಗೆ ವಿರೋಧಿಯಾಗಿರುವುದರಿಂದ ಮುರಿಯುವುದು ಯುಕ್ತವೂ ಕರ್ತವ್ಯವೂ ಆಗಿದೆ.

ಮಹಾಯುದ್ಧದ ಕಾಲಕ್ಕೆ ಪ್ರತಿಯೊಬ್ಬ ತರುಣನು ದಂಡಿನಲ್ಲಿ ಸೇರಬೇಕೆಂಬ ಕಟ್ಟಳೆಯು ಅನ್ಯಾಯದ್ದೆಂದು ೯೪೯ ತರುಣರು ಶಾಸನಭಂಗಮಾಡಿ ಸೆರೆಮನೆಯ ಸಂಕಷ್ಟಗಳನ್ನು ಅನುಭವಿಸಿದರು.

೩. ಮೇಲ್ಕಾಣಿಸಿದ ಆವುದೇ ಕಾರಣಕ್ಕಾಗಿ ಶಾಸನ ಭಂಗಕ್ಕೆ ಪ್ರವೃತ್ತನಾದವನು ಆ ಕಟ್ಟಳೆಯನ್ನು ಮುರಿದುದಕ್ಕಾಗಿ ಆಗತಕ್ಕ ದಂಡನೆಯನ್ನು ಅನುಭವಿಸಲಿಕ್ಕೆ ಸ್ವಸಂತೋಷದಿಂದ ಸಿದ್ಧನಾಗಿರಲಿಕ್ಕೆ ಬೇಕು.

ಜಗತ್ತಿನಲ್ಲಿ ಅದ್ವಿತೀಯ ಧೈರ್ಯಶಾಲಿ ಎನಿಸಿದ ಸಾಕ್ರೆಟಿಸನಂತಹ ಶಾಸನ ಭಂಗಕ್ಕೆ ಸಿದ್ಧನಾದ ವೀರನು ದೊರಕುವುದು ಶಕ್ಯವಿಲ್ಲ. ಆತನು ಕ್ರೂರವೂ ಅನ್ಯಾಯವೂ ಆದ ಕಾಯಿದೆಯ ಭಂಗ ಮಾಡಿದುದಕ್ಕೆ ಆದ ಮರಣಾಂತಿಕ ಶಾಸನವನ್ನು ಕೂಡ ಅನುಭವಿಸಲಿಕ್ಕೆ ಸಂತೋಷದಿಂದ ಸಿದ್ಧನಾದನು.

—ಯುನಿಟಿ

## ಇಂಗ್ಲಂಡವನ್ನು ಅಮೇರಿಕೆಯು ಗೆದ್ದಿತು

ಮಿ. ಡೆನ್ನಿ ಎಂಬವರು ಈ ಪುಸ್ತಕ ಬರೆದಿರುವರು. ಅದರಲ್ಲಿ ಅವರು ಪ್ರತಿಪಾದಿಸುವುದೇನಂದರೆ.

ಇಂಗ್ಲಿಶ ಸಾಮ್ರಾಜ್ಯದ ಇಳಿಗಾಲ ಒದಗಿ ಅಮೇರಿಕೆಯ ಚಕ್ರಾಧಿಪತ್ಯವು ಪ್ರಸ್ಕೃತವಾಗುತ್ತದೆ. ಕಲ್ಲಿದ್ದಲಿಯ ಯುಗದಿಂದ ಎಣ್ಣೆಯ ಯುಗವು, ಬಳಿಕ ವಿದ್ಯುತ್ತಿನ ಯುಗವು ಇವುಗಳಲ್ಲಿ ಕ್ರಮವಾಗಿ ಅಮೇರಿಕೆಯ ಪ್ರಾಬಲ್ಯವು ಹೆಚ್ಚಾಯಿತು. ಯುದ್ಧದಿಂದಂತೂ ಮತ್ತಿಷ್ಟು ಪುಷ್ಟೀಕರಣವಾಯಿತು. ಇಂಗ್ಲಂಡದ ಸಾಮ್ರಾಜ್ಯಕ್ಕೂ ಅಮೇರಿಕೆಯ ಚಕ್ರಾಧಿಪತ್ಯಕ್ಕೂ ಒಂದಂತರವಿದೆ. ಇಂಗ್ಲಂಡವು ದೇಶಗಳನ್ನು ಗೆದ್ದು ತನ್ನ ಕೈಯೊಳಗಿಟ್ಟುಕೊಂಡಿದೆ. ಆದರೆ ಅಮೇರಿಕೆಯು ಸಾಮ್ರಾಜ್ಯವನ್ನು ನಡೆಸುವ ಹೊಸ ಯುಕ್ತಿಯನ್ನೇ ತೆಗೆದಿದೆ. ಆರ್ಥಿಕ ಸಾರ್ವಭೌಮತ್ವದ ಹೊಸ ಪ್ರಯೋಗವನ್ನು ಅಮೇರಿಕೆಯು ಆರಂಭಿಸಿದೆ. ವ್ಯಾಪಾರದ ಹಿಡಿತ, ಪತ್ತು, ಸಂಪತ್ತುಗಳ ಬಲದಮೇಲೆ ಅಮೇರಿಕೆಯು ಇಂಗ್ಲಂಡವನ್ನು ಗೆದ್ದಿದೆ,

—ವರ್ಲ್ಡ ಟುಮಾರೊ (ನ್ಯೂಯಾರ್ಕ)

## ಅಮೇರಿಕೆಯ ಗಾಂಧಿ ಫಂಡು

### ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಸತ್ಯಾಗ್ರಹಿಗಳಿಗೆ ಅಮೇರಿಕೆಯಿಂದ ಬಂದ ನೆರವು

| | | |
|---|---|---|
| ಮಿ॥ | ಆ್ಯಂಡ್ರೂ ಆ್ಯಲಿನ್ | ೧ ಡಾಲರು |
| ,, | ಜೇಮ್ಸ ಗಿಲೇಸ್ಪಿ | ೨॥ ,, |
| ಡಾಕ್ಟರ | ಸಿಡ್ನೆ ಸ್ಟ್ರಾಂಗ | ೨೫ ,, |
| ಮಿಸ್ | ಅಲ್ವಾಸ್ ಸ್ಟೋನ್ ಬ್ಲಾಕ್‍ವೆಲ್ | ೨೫ ,, |
| ,, | ಜಿನ್ ಕಾಂಕ್ಲಿನ್ | ೫ ,, |
| ,, | ರುಥ್, ಎಮ್, ಡಾಜ್ | ೩ ,, |
| ,, | ಮಾರ್ಗ್ರೆರ್‍ರ್ಯಾಟ ಎಮಿಲಿಯೊ | ೫ ,, |
| ,, | ಆ್ಯನೆಟ್ ಫಿನ್ನಿಗನ್ | ೧೦೦ ,, |
| ,, | ಆ್ಯಗ್ನೆಸ್ ವಾಲ್‍ಬರ್ಗ | ೧೦ ,, |
| ಮಿಸೆಸ್, | ಎಫ್, ಎಚ್, ಕ್ರಾಸ್ | ೨೫ ,, |
| ,, | | ೨೫ ,, |
| ಎನ್ನಾ | ಎನ್, ಡೇವಿಸ್ | ೨೫ ,, |
| | ಷ | |

—ಯುನಿಟಿ

## ಹೇಡಿತನವು ಒಂದು ಬಗೆಯ ಬೇನೆ

ಅಶಕ್ತತನವೇ ಹೇಡಿತನಕ್ಕೆ ಮೂಲಕಾರಣ. ಸಶಕ್ತನು ಧೈರ್ಯಶಾಲಿಯಾಗಿರುತ್ತಾನೆ. ಆದಕಾರಣ ಜಾಣ ವೈದ್ಯನಾಗಲಿ, ಚತುರ ಮಾನಸ ಶಾಸ್ತ್ರಿಯಾಗಲಿ ಉಪಚಾರಮಾಡಿ ಹೇಡಿತನವನ್ನು ತೆಗೆದು ಹಾಕಬಹುದು.

ಮನಸಿನ ಹೆದರಿಕೆಯು ಶರೀರದ ಮೇಲೆಯೂ ದುಷ್ಪರಿಣಾಮವನ್ನು ಮಾಡುವುದು. ಪಚನೇಂದ್ರಿಯದಲ್ಲಿ ವಿಕೃತಿಯನ್ನುಂಟುಮಾಡುವುದು. ಇದನ್ನು ಒಳ್ಳೇ ಜಾಣ್ಮೆಯಿಂದ ಗುಣಮಾಡಿದ್ದುಂಟೆಂದು ಡಾ. ಜೋನ್ಸನು ಹೇಳುತ್ತಾನೆ.

—ಪ್ರೊಫೆಸ್ಸರ ಕ್ಲಿಸ್ಟ

## ಮರಾಠಿಸಾಹಿತ್ಯದಲ್ಲಿ ಏನು ಕೊರತೆ ಇದೆ?

ಗೋವೆಯಲ್ಲಾದ ಮ. ಸಾ. ಸ. ದ ಅಧ್ಯಕ್ಷರಾದ ವಿದ್ವಾಂಸರ್ಯ ವಾಮನ ಜೋಶಿ ಅವರ ಭಾಷಣವು ಅನೇಕ ದೃಷ್ಟಿಯಿಂದ ಕನ್ನಡಿಗರಿಗೂ ಮನನೀಯವಾಗಿದೆ. ಶ್ರೀ. ಜೋಶಿ ಅವರು ವಾಙ್ಮಯದಲ್ಲಿ (೧) ಸತ್ಯಸಂಶೋಧನ ಮತ್ತು ಸತ್ಯ ಕಥನ (೨) ಸೌಜನ್ಯ ಪೃಥಕ್ಕರಣ ಮತ್ತು ಸೌಜನ್ಯಬೋಧ (೩) ಸೌಂದರ್ಯ ಮೀಮಾಂಸೆ ಮತ್ತು ಸೌಂದರ್ಯೋಪಾಸನೆ ಇವೇ ಮೂರು ಪ್ರಕಾರಗಳಿದ್ದು, ಮೊದಲನೆಯ ಅಂದರೆ ಸತ್ಯ ಸಂಶೋಧನದ ಹಾಗೂ ಸತ್ಯಕಥನಾತ್ಮಕ ವಾಙ್ಮಯವು ತಮ್ಮ ಭಾಷೆಯಲ್ಲಿ ತೀರ ಕಡಿಮೆಯೆಂದು ಹೇಳಿದ್ದಾರೆ. ಲೋ. ಟಿಳಕರು ಗೀತಾರಹಸ್ಯವೆಂಬ ನಿರುಪಮ ಗ್ರಂಥವನ್ನು ಬರೆದರು. ಆದರೆ ಅದರಲ್ಲಿ ಗೀತೆಯ ಅರ್ಥವನ್ನೇ ಹೇಳುವ ಪ್ರಯತ್ನವುಂಟು. ಇದಕ್ಕಿಂತ ತಮ್ಮ "ಶ್ರದ್ಧಾ" ವಿಷಯಗಳೇನು ? ತತ್ವಜ್ಞಾನವಾವುದು ? ತಮಗೆ ಶಾಂಕರ ವೇದಾಂತದಲ್ಲಿ ವಿಶ್ವಾಸ ವಿದೆಯೆ ? ಈ ಅಂಶಗಳು ಅದರಲ್ಲಿಲ್ಲ.

ಉಪನಿಷತ್ತು, ಗೀತೆ, ಶಾಂಕರ ಭಾಷ್ಯಗಳ ಮೇಲೆ ಹಲವರು ಟೀಕೆಟಿಪ್ಪಣಿಗಳನ್ನು ಪ್ರಕಟಿಸಿದ್ದಾರೆ. ಆದರೆ ಜಗತ್ತಿನ ನಿರೀಕ್ಷಣ ಮಾಡಿ ತನಗೆ ಜಗತ್ತಿನ ಸ್ವರೂಪದ ಬಗ್ಗೆ ಹೀಗೆ ತೋರುತ್ತದೆ, ಜಗತ್ತಿನ ಆರಂಭ ಅಂತ್ಯಗಳ ಬಗ್ಗೆ ತನ್ನ ಅಭಿಪ್ರಾಯಗಳು ಹೀಗೆ ಇವೆ ಎಂದು ಸ್ವತಂತ್ರವಿಚಾರ ಮಾಡಿ ಬರೆದವರು ತಮ್ಮಲ್ಲಿ ಇಲ್ಲದ್ದಕ್ಕೆ ವಿಷಾದಪಟ್ಟಿದ್ದಾರೆ. ಆದರೂ ಇತ್ತೀಚೆ ಹಲವರು ಮುಂದೆ ಬರುತ್ತಿರುವುದು ಸುಚಿಹ್ನೆಯೆಂದು ಅಭಿಪ್ರಾಯ ಪಟ್ಟಿರುವರು.

## ಶ್ರೇಷ್ಠ ವಾಙ್ಮಯವು ಹೇಗೆ ಹುಟ್ಟುತ್ತದೆ?

ಶ್ರೀ ಜೋಶಿ ಅವರು ಅದೇ ವ್ಯಾಖ್ಯಾನದಲ್ಲಿ ಮುಂದೆ ಹೇಳುವುದೇನೆಂದರೆ, ರಾಮ, ಕೃಷ್ಣ , ಶಿವಾಜಿ, ಅಶೋಕ ಮೊದಲಾದವರಂತೆ ಶೌರ್ಯ ಸಾಹಸಗಳನ್ನು ಮಾಡುವುದು ಕಷ್ಟ. ಆದರೆ ಮಹಾಕಾರ್ಯಗಳು ಒದಗಿದ ಬಳಿಕ ವ್ಯಾಸ ವಾಲ್ಮೀಕಿಗಳಂತಹ ಲೇಖಕರಿಂದ ವಾಙ್ಮಯಾಭಿವೃದ್ಧಿಯಾಗುವುದು ಕಠಿನವಲ್ಲ. ವಿವೇಕಾನಂದ, ಟಿಳಕ, ಗೋಖಲೆ, ಗಾಂಧಿ ಮೊದಲಾದವರಿಗೆ ತಮ್ಮ ಫೋಟೊ ಯಾರು ತಕ್ಕೊಂಡಾರು, ಅವುಗಳ ಪ್ರಸಾರವು ಹೇಗೆ ಹೆಚ್ಚಾದೀತು ಎಂಬ ವಿಚಾರವು ಬರಲಿಲ್ಲ. ಅಥವಾ ತಮ್ಮ ಚರಿತ್ರವನ್ನು ಯಾರಾದರೂ ಬರೆಯಬಹುದೊ ಇಲ್ಲವೊ ಎಂಬ ಕಲ್ಪನೆಯೂ ಸೋಂಕಲಿಲ್ಲ. ಅವರಂತಹ ಧೀರೋದಾತ್ತ ಪರಾಕ್ರಮಯುಕ್ತ ಜೀವಿಗಳ ಚರಿತ್ರಲೇಖಕರು ದೊರೆವುದು ಅಶಕ್ಯವಲ್ಲ.

ಇತಿಹಾಸವನ್ನುಂಟುಮಾಡುವವನಿದ್ದ ಬಳಿಕ ಅದನ್ನು ಬರೆಯುವವರು ಬೇಕಾದಷ್ಟು ಮಂದಿ ದೊರೆಯುವರು. ಒಂದು ವೇಳೆ ದೊರೆಯದಿದ್ದರೂ ಅಡ್ಡಿಯಿಲ್ಲ. ಏಕೆಂದರೆ ನಮಗೆ ತೇಜೋಮೂರ್ತಿಗಳೂ ಪರಾಕ್ರಮ ಶಾಲಿಗಳೂ ಆದ ಜನರು ಬೇಕು; ಅವರ ಫೋಟೊ ದೊರೆಯದಿದ್ದರೂ ಅಡ್ಡಿಯಿಲ್ಲ. ನಿಜವಾದ ಧೀರೋದಾತ್ತ ಜೀವನವು ಬೇಕು; ಅಂತಹ ಜೀವನದ ಛಾಯಾತ್ಮಕ ಚರ್ಚೆ ಬೇಡ.

ಭೀಷ್ಮನಂತಹ ಶುದ್ಧಸಾತ್ವಿಕಪರಾಕ್ರಮಮೂರ್ತಿಯ ಜೀವನವಿದ್ದ ಬಳಿಕ ಶಾಂತಿಪರ್ವದಂತಹ ಸುಂದರ ವಾಙ್ಮಯವು ಅವನಿಗೆ ಭೂಷಣಾಸ್ಪದವು. ರಾಮ ಅಥವಾ ಸೀತೆಯಂತೆ ತಮ್ಮ **ಜೀವನವೂ ಕಾವ್ಯಮಯವಾಗಲೆಂದು** ಹಾರೈಸಬೇಕು. ವಾಲ್ಮೀಕಿಯಂತೆ ತಾನು ರಾಮಾಯಣ ಬರೆಯಬೇಕೆಂದು ಗುರಿಯನ್ನಿಟ್ಟುಕೊಳ್ಳುವುದು ಅದಕ್ಕಿಂತ ಕನಿಷ್ಠತರಗತಿಯ ಧ್ಯೇಯವಾಗಿದೆ.

ತಾಯಿಗಾಗಲಿ, ಹೆಂಡತಿಗಾಗಲಿ ಮಗನು ಇಲ್ಲವೆ ಗಂಡನು ಜಗತ್ತಿನಲ್ಲಿ ಪರಾಕ್ರಮಶಾಲಿಯೆನ್ನಿಸಿಕೊಂಡರೇ ಸಂತೋಷವಾಗುವದು. ಇದೇ ಮಾತು ಸರಸ್ವತಿಯ ಪ್ರೀತಿಯನ್ನು ಬಯಸುವವರಿಗೂ ಸರಿಹೋಗುವುದು. ಆದುದರಿಂದಲೆ ಸರಸ್ವತೀಭಕ್ತರು—ಸಾರಸ್ವತರು ಇರುವೆಗಳಂತೆ ಶಬ್ದಗಳ ಹುತ್ತಿನಲ್ಲಿಯೆ ತಲೆಯನ್ನು ತುರುಕಿಕೊಂಡು ಶಾಬ್ದಿಕ ಹುತ್ತನ್ನೇ ಹುಟ್ಟಿಸುವುದಕ್ಕಿಂತಲೂ ಸತ್ಯಾನ್ವೇಷಣ, ಸೌಜನ್ಯಪೋಷಣ, ಸೌಂದರ್ಯೋಪಾಸನೆಗಳ ವಿಷಯದಲ್ಲಿ ಪೌರುಷ, ತೇಜಸ್ಸು, ಸ್ವತಂತ್ರತೆ, ಪ್ರತಿಭೆಗಳನ್ನು ತೋರಿಸಿದರೆ ಸರಸ್ವತಿಯು ನಮಗೆ ಒಲಿಯುವಳು.

ವಾಙ್ಮಯಸೇವಕನೆಂದರೆ ಶಬ್ದಜಾಲದಲ್ಲಿ ಸಿಲುಕಿದ, ಶಾಬ್ದಿಕ ಚರ್ಚೆಯಲ್ಲಿ ಮಗ್ನನಾದ ಒಬ್ಬ ಬಡಪ್ರಾಣಿ ಎಂದು ಹಲವರ ಗ್ರಹಿಕೆಯಾಗಿದೆ. ಇದನ್ನು ಬೇಗನೆ ಹೋಗಲಾಡಿಸುವುದು ಅತ್ಯವಶ್ಯ.

ತಾವು ಉಪಯೋಗಿಸುವ ಶಬ್ದಗಳಲ್ಲಿ ತಮ್ಮ ಆಚಾರ ವಿಚಾರಗಳ ಪವಿತ್ರತೇಜಸ್ಸನ್ನು ತುಂಬಿ ಹೊಳೆಯುವಂತೆ ಮಾಡಬೇಕು. ವಾಙ್ಮಯಸೇವಕನೆಂದರೆ ಸಮಾಜಕ್ಕೆ ಸಂಬಂಧವಿಲ್ಲದವನೂ ವ್ಯವಹಾರಜ್ಞಾನಶೂನ್ಯನೂ ಹೇಡಿ ಹೆದರ ಬಡಕನೂ, ಸಿರಿವಂತರ ನೆಳಲಿಗೆ ನಿಂತವನೂ, ಜನರಿಗೆ ನಿರುಪಯೋಗಿಯೂ ಆದ ನಿರುಪದ್ರವಿ ಬಡಪಾಯಿಯೆಂದು

ಜನರಲ್ಲಿ ಮನೆಮಾಡಿಕೊಂಡಿರುವ ಕಲ್ಪನೆಯು ಅಳಿದುಹೋಗು ವಂತೆ (ನಮ್ಮ ಅಭಯ, ಸತ್ಯಪ್ರೀತಿ, ಸೌಜನ್ಯ, ಸೌಂದರ್ಯೋ ಪಸನೆಗಳಿಂದ) ನಡೆದುಕೊಳ್ಳಬೇಕು. ಜನರಿಗೆ ನಮ್ಮ ಬಗ್ಗೆ ಆದರ ಪ್ರೀತಿಯುಂಟಾಗುವಂತೆ ಮಾಡಬೇಕು. ದುರ್ಜನರಿಗೆ ನಮ್ಮ ಹೆದರಿಕೆ ಹುಟ್ಟಬೇಕು.

—ಲೋಕಶಿಕ್ಷಣ

---

## ನಾವು ಉಪ್ಪು ಎಷ್ಟು ತಿನ್ನುತ್ತೇವೆ?

ಬಡತನದ ಮೂಲಕ ಭಾರತೇಯರಿಗೆ ಸಾಕಷ್ಟು ಉಪ್ಪು ಸಹ ತಿನ್ನಲಿಕ್ಕೆ ಸಿಕ್ಕದಾಗಿದೆ. ಪರದೇಶಗಳೊಡನೆ ನಾವು ಉಪ್ಪುತಿನ್ನುವ ಪ್ರಮಾಣವನ್ನು ಹೋಲಿಸಿದರೆ ಏನು ಧ್ವನಿತ ವಾಗುವುದು?

| | | | |
|---|---|---|---|
| ಇಂಗ್ಲಂಡಿನಲ್ಲಿ | ಪ್ರತಿಯೊಬ್ಬನಿಗೆ | ೪೦ | ಪೌಂಡು |
| ಪೋರ್ತುಗಾಲ | ,, | ೩೫ | ,, |
| ಪ್ರಸಿಯಾ | ,, | ೧೪ | ,, |
| ಬ್ರಿಟಿಶ ಹಿಂದುಸ್ಥಾನ | ,, | ೧೨ | ,, |
| ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ | | | |
| ಪಂಜಾಬದಲ್ಲಿ | ಪ್ರತಿಯೊಬ್ಬನಿಗೆ | ೧೦ | ,, |
| ಮುಂಬೈಯಲ್ಲಿ | ,, | ೧೪ | ,, |
| ಮದ್ರಾಸ, ಬರ್ಮಾಗಳಲ್ಲಿ | ,, | ೧೯ | ,, |

—ಮೈ. ಎ. ಜರ್ನಲ್.

---

## ಇಂಗ್ಲಂಡಿನ ಗಿರಣಿಗಳ ಗತಿ.

ಹತ್ತಿಯ ವ್ಯಾಪಾರವು ಹಾಳಾಯಿತು. ಬೇಗನೆ ಏನಾದರೂ ಉಪಾಯ ಮಾಡದಿದ್ದರೆ ೫ ವರುಷಗಳಲ್ಲಿಯೆ ಲಾಂಕೆಶಾಯರವು ಹಂಪೆಯ ಕೊಂಪೆಯಂತಾಗದೆ ಇರದು!......ಹೀಗೆ ಹೇಳು ವುದು ಸುಮ್ಮನೆ ಹೆದರಿಸಲು ಹೇಳುವ ಮಾತಲ್ಲ. ಬರ್ನ್‌ಲೆ ಎಂಬಲ್ಲಿ ಗಿರಣಿಯ ಗತಿ ಏನಾಯ್ತು? ೧೬೦೦ ಮಗ್ಗಗಳು ಳ್ಳದ್ದು; ಸಂಪೂರ್ಣ ಉತ್ಕೃಷ್ಟ ಸ್ಥಿತಿಯಲ್ಲಿದ್ದದ್ದು; ಲಿಲಾವಿ ನಲ್ಲಿ ಯಾರೂ ಕೇಳದೆಹೋಯಿತು; ೪೨೭೫ ಪೌ. ಬರಬೇಕಾ ದರೆ ಸಾಕಾಯಿತು! ಅದರ ಮೂಲ ಬೆಲೆ ೮೦೦೦೦ ಪೌ. ಗಿಂತ ಎಂದೂ ಕಡಿಮೆಯಿಲ್ಲ.

೨೩ ಸಾವಿರ ಮಗ್ಗಗಳು ಮೂಲೆಗುಂಪಾಗಿವೆ. ೫೦೦೦ ಜನರಿಗೆ ಕೂಲಿ ಇಲ್ಲದೆ ಗೋಳಾಡಬೇಕಾಗಿದೆ. ಇನ್ನೂ ಸಾವಿ ರಾರು ಜನರಿಗೆ ಪೂರಾ ಹೊತ್ತು ಕೂಲಿಯ ಕೆಲಸವೂ ಸಿಗ ದಾಗಿದೆ.

ಕಳೆದ ವರುಷ ೮ ಗಿರಣಿಗಳು ಮುಚ್ಚಲ್ಪಟ್ಟವು. ಇದು ಒಂದೂರಿನ ಕಥೆ; ಇದರಂತೆ ಇನ್ನೂ ಹಲವು ಊರುಗಳ ಹಾಡು ಇದೆ.

—ನ್ಯೂ ಸ್ಟೇಟ್ಸಮನ್.

---

## ನಮ್ಮಲ್ಲಿ ಮತ್ತು ಇಂಗ್ಲಂಡದಲ್ಲಿ ಬ್ಯಾಂಕುಗಳು!

೧೨ ಚೌರಸ ಮೈಲಿಗೆ ಒಂದರಂತೆ ಇಂಗ್ಲಂಡನಲ್ಲಿ ಬ್ಯಾಂಕಿನ ಕಚೇರಿಯದೆ. ಆದರೆ ಹಿಂದುಸ್ಥಾನದಲ್ಲಿ ೩೫೦೦ ಚೌರಸ ಮೈಲಿಗೊಂದು! ಇಂಗ್ಲಂಡಿನಲ್ಲಿ ೪ ಸಾವಿರ ಜನಕ್ಕೆ ಒಂದು ಬ್ಯಾಂಕಿನಂತೆ ಪ್ರಮಾಣವಿದೆ. ಹಿಂದುಸ್ಥಾನವಲ್ಲಿ ೬೦೦೦೦೦ ಜನರಿಗೊಂದು!! ಇಂಗ್ಲಂಡಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಸರಾಸರಿ ಠೇವು ೭೬೦ ರೂ. ಗಳಿದ್ದರೆ ಹಿಂದುಸ್ಥಾನದಲ್ಲಿ ೮ ರೂ. ಮಾತ್ರ!!!

—ಮೈಸೂರ ಎಕಾನಿಮಿಕ್ ಜರ್ನಲ್

---

'ಕಾಫೀನ'ವು ಕಾಫಿ ಹಾಗು ಚಹಾ ಇವುಗಳಲ್ಲಿರುವ ಅರ್ಕವು. ಮೊಲಗಳ ಮೇಲೆ ಮಾಡಿದ ಕಾಫೀನದ ಪ್ರಯೋಗ ದಿಂದ ಪ್ರೊ. ಶೈನ್ ಅವರು ಅನ್ನುವದೇನಂದರೆ, ಗಂಡು ಮೊಲಕ್ಕಿಂತ ಹೆಣ್ಣು ಮೊಲದ ಮೇಲೆ ಕ್ಯಾಫಿನದ ದುಷ್ಪರಿಣಾ ಮವು ಹೆಚ್ಚು ಪ್ರಮಾಣದಿಂದ ಆಗುತ್ತದೆ. ಹೆಣ್ಣು ಮೊಲ ಗಳಲ್ಲಿಯ ಬೀಜಕೋಶವೇ ಒಣಗಿದಂತಾಗುತ್ತದೆ. ಗಂಡು ಮೊಲಗಳಲ್ಲಿ ಧಾತು (Semen) ತಯಾರಾಗುವದು ನಿಂತು ಹೋಗುವದು. ಈ ಪ್ರಯೋಗಗಳಲ್ಲಿ ಉಪಯೋಗಿಸಿದ ಕ್ಯಾಫಿನದ ಪ್ರಮಾಣವು ವಾಡಿಕೆಯಾಗಿ ಮನುಷ್ಯಚಿಕಿತ್ಸೆಯಲ್ಲಿ ಕೊಡುವದಕ್ಕಿಂತಲೂ ಹೆಚ್ಚಿಗೆ ಇರುವದೇನೋ ನಿಜ. ಆದರೆ ಮನುಷ್ಯ ಪ್ರಕೃತಿಯು ಕಾಫೀನಕ್ಕೆ ಬಹಳ Sensitive ಇರುವದನ್ನು ನಾವು ಮರೆಯಕೂಡದು. ಮೊಲವನ್ನು ಕೊಲ್ಲ ಲಿಕ್ಕೆ ತಗಲುವ ೧/೧೦ ದಷ್ಟು ವಿಷವು ೪ ಇಲ್ಲವೆ ೫ ಕಪ್ಪು 'ಸ್ಟ್ರಾಂಗ' ಕಾಫಿಯಲ್ಲಿರುವದು.

ದಿನಾಲು ಸ್ಟ್ರಾಂಗ ಕಾಫಿಯನ್ನು ಸೇವಿಸುವದರಿಂದ ಜನನ ಶಕ್ತಿಯು ಕಡಿಮೆಯಾಗುವದಲ್ಲದೆ ಮನುಷ್ಯನ ಪ್ರಕೃತಿಯು ಕೆಡುವದುಂಟು. ಸುಧಾರಿಸಿದ ಕೆಲವು ಜನಾಂಗಗಳಲ್ಲಿ ಕಂಡು ಬರುವ ಬಂಜೆತನಕ್ಕೆ ಈ ಕಾಫಿಯೇ ಕಾರಣವೆಂದು ಪ್ರೊಫೆ ಸರರ ಮತ.

ಮಾನಸಿಕ ಶ್ರಮದಿಂದ Sexual iumpulse ಕಡಿಮೆ ಯಾಗುತ್ತದೆ. ಮಾನಸಿಕ ಶ್ರಮ ಪಡುವವರೇ ಸ್ಟ್ರಾಂಗ ಕಾಫಿ ಯನ್ನು ಕುಡಿಯುವರಾದ್ದರಿಂದ ಇವೆರಡನ್ನೂ ಸೇವಿಸುವಲ್ಲಿ ಬಂಜೆತನವು ಸಹಜವಾದದ್ದು.

Prof. Stiene of Halle
Indian medical Gazette

---

# ಜನಪದ ಸಾಹಿತ್ಯ



**ಸಂಗ್ರಾಹಕರು:–ಸಿಂಪಿ ಲಿಂಗಪ್ಪನವರು, ಛತ್ರಗುಣಕಿ**

ನನ್ನಯೀ ಬಡತನ ಇನ್ನಾರ ತಿಂಗಳ ।
ನನ ಬಾಲ ಬರಿಯ ಕಲಿತಾನ । ಗೋದಿಯ ।
ರಾಸುಂಟು ನನ್ನ ಮನಿಯಾಗ ೧

ಕಂದನ ಕುಡು ಶಿವನೇ, ಬಂಧನ ಬಡಲಾರೆ ।
ಹಂಗಿನ ಬೋನ ಉಣಲಾರೆ । ಮತ್ರ್ಯದಾಗ ।
ಬಂಜೆಂಬ ಶಬ್ದ ಹೊರಲಾರೆ ೨

ತೋಳುದ್ದ ತಲೆದಿಂಬ ಮಾರುದ್ದ ಹಾಸಿಗೆ ।
ಮಾಣಿಕದಂಥ ಮಗ ಮುಂದ । ಮಲಗಿಪರ ।
ಮೂರಾಯರ ಗೊಡವೆ ನನಗೇನ ೩

ಕಮಲದ ಹೂ ನಿನ್ನ ಕಾಣದೆ ಇರಲಾರೆ ।
ಮಲ್ಲೀಗಿ ಮಾಯ ಬಿಡಲಾರೆ । ಕೇದಿಗೆ ।
ಧೊರೆಯೆ ನಿನ್ನಗಲಿ ಇರಲಾರೆ ೪

ಹೆಣ್ಣ ಹಡದವ್ವನ ಹೆಮ್ಮ್ರೇನು ದೊಡ್ಡದು ।
ಹಣ್ಣ ಬಂದಾವ ತಿನಬಾರ । ಹೆಣ್ಣಿನ ।
ಹರಲಿ ಬಂದಾವ ಹೊರಬಾರ ೫

ಗಂಡಹೆಂಡರು ಜೋಡು ದುಂಡ ಮುತ್ತಿನ ಜೋಡು ।
ಗುಂಡೆರಳಿ ಜೋಡು ಅಡಿವ್ಯಾಗ । ನನಬಾಲ ।
ನೀ ಜೋಡೋ ನನ್ನ ಮನೆಯಾಗ ೬

ಹಾದರದ ಹೆಣ್ಣಿನ ಆಳವನ ಬೆಲಿ ಕಮ್ಮ ।
ಹಾದಿ ಹೊಲದಾಗ ಕಡಲೀಯ । ಹಾಕಿದರ ।
ಹಾದೆವಗ ಅರ್ಧ–ತನಗರ್ಧ ೭

ಆಸರಿಕಿ ಅಳದಿಟ್ಟ ಬ್ಯಾಸರಿಕಿ ಬಳದಿಟ್ಟ ।
ಚಿಂತಿ ಕಾಲೊಳಗ ತುಳಿದಿಟ್ಟ । ಈ ದೇಹ ।
ಶೀಲ ಮಾಡಿಟ್ಟ ಜನದಾಗ ೮

ಗರತಿ ಹೊಟ್ಟಲಿ ಹುಟ್ಟಿ ಆರತಿ ಕಾಣಲಿಲ್ಲ ।
ಜರತಾರಿ ಸೀರಿ ಉಡಲಿಲ್ಲ ! ಹಡದವ್ವ ।
ಎರವು ಆದಾವ ಮೊಲೆ ಹಾಲ ೯

ಗಂಧ ಹಚ್ಚಿದ ಮೈಯ ಹೊಂದಿ ಕಿಡಿಸುವರೇನ ।
ಒಂದಿನಕ ರಾಯ ತಡದಾನ । ಮಾಳೀಗಿ ।
ಕುಂಬಿ ಜರಿದಾಂಗ ಜರಿದಾನ ೧೦

ಇಚ್ಚ್ಯಾಳ್ಳ ಗಂಡನೆಂದು ಬಿಚ್ಚಿ ಹೇಳಲಿ ಬ್ಯಾಡ ।
ನಿಚ್ಚ ನೀರುಂಡ ಬದನಿಯ । ಕಾಯದು ।
ಹಚ್ಚಗಿದ್ದರೇನ ಹುಳುಕಾಗಿ ೧೧

ಏಳಲ ಮಾಡಿದರ ತಾಳದು ನನ ಜೀವ ।
ಬಾಳೆಲೆಗಿಂತ ಬಲುಸುಖಿ । ತಾಯ್ತಂದಿ ।
ಲೇವಳಮಾಡಿ ಸಲಹ್ಯಾರ ೧೨

ಭಾವಯ್ಯ ಮುನಿದರ ಬಲಗಾಲ ಹಿಡಿದೇನ ।
ಭಾವಯ್ಯನ ಮಡದಿ ನೆ ಣಿ । ಮುನಿದಾರ ।
ಬಾರಕ್ಕನೆಂಬು ಕರೆದೇನ ೧೩

ಅರಗಿನಂಥ ನಲ್ಲ ತಿರುಗಿ ಬಾರದೆ ಹೋದ ।
ಅರಗಿಣಿ, ಹೋಗಿ ಕರೆತಾರ । ಅಕ್ಕಲಕೋಟ !
ದರಬಾರದಾಗ ಇರತಾರ ೧೪

ಬೆಳ್ಳಾನ ಬಿಳಿ ಎತ್ತ, ಬೆಳ್ಳೀಯ ಬಾರಕೋಲ ।
ಹಳ್ಳಾದ ಹೊಲವ ಹರಗ್ಯಾನ । ಬಾಲನ ।
ತೆಳ್ಳನ ಹೊಟ್ಟೆ ಹಸಿದಾವ ೧೫

ಸ್ವರಾಜ್ಯಯಾತ್ರೆಗೆ ಹೊರಟ



ಶಾಂತಿವೀರ ಗಾಂಧಿಯುವರು

ಆಳರಸರ ಕೈಸೆರೆಯಾದ



ಪಂ. ಮೋತಿಲಾಲ ನೆಹರು
( ರಾಷ್ಟ್ರೀಯ ಸಭೆಯ ಅಧ್ಯಕ್ಷರು )

ಸೊಲ್ಲಾಪುರದ ನಾಡಗುಡಿಯ ಸತ್ಯಾಗ್ರಹದಲ್ಲಿ ಕನ್ನಡಿಗರ ಮುಡುಪು





ಸಾಲಿ ... ಶಿರೂರ

ಇಡಿ ಹಿಂದುಸ್ಥಾನದಲ್ಲಿ ನ ಭೂತೋ ನ ಭವಿಷ್ಯತಿ ಎಂದು ಹೆಸರಾದ



ಅಂಕೋಲೆಯ ಉಪ್ಪಿನ ಸಂತೆ

ಮಂಗಳೂರಿನ ವೀರ ಕನ್ನಡಿತಿ



ನಾರೀಮಣಿ ಕಮಲಾದೇವಿ ಚಟ್ಟೋಪಾಧ್ಯಾಯ
( ಮುಂಬಯಿಯಲ್ಲಿ ಇವರ ಸತ್ಯಾಗ್ರಹ ಪರಿಶ್ರಮಕ್ಕಾಗಿ
ಸರ್ಕಾರವು ಇವರಿಗೆ ವಿಶ್ರಾಂತಿಯನ್ನು ಕೊಟ್ಟಿತು )

ಮಂಗಳೂರಿನ ಸಾಮುದಾಯಿಕ ಶಾಸನಭಂಗದಲ್ಲಿ



ಹೆಣ್ಣುಮಕ್ಕಳ ಭಾಗ



ಸತ್ಯಾಗ್ರಹ ಪಥಕದ ನಾಯಕರಾದ

**ಶ್ರೀ. ಪದ್ಮನಾಭ ಕಾಮತ, ಎಂ. ಏ. ಬಿ. ಎಲ್., ಕಾರ್ಕಳ, ದಕ್ಷಿಣ ಕನ್ನಡ**

ಬಾಗಿಲುಕೋಟೆಯ ವೀರ ಕನ್ನಡಿಗರು

ಇಂಗ್ಲಂಡಿನಿಂದ ವಿದ್ಯಾಹರಣವನ್ನು ಮಾಡಿ ಬಂದ




ಶ್ರೀ. ಜೋರಾಪುರ ಗುರುರಾಯರು
( ಸೆರೆಮನೆಯ ಆತಿಥ್ಯವನ್ನು ಸ್ವೀಕರಿಸುತ್ತಿದ್ದಾರೆ )



ಶ್ರೀಮಾನ್ ಅಸುಂಡಿ ರಂಗರಾಯರು
ಎಂ. ಎಸ್. ಸಿ., ಪಿ. ಎಚ್. ಡಿ. ( ಲಂಡನ್ )
(ಇವರು ಮೊಲೆಕ್ಯೂಲ್ಸ (Molecules)ಗಳಲ್ಲಿ ಸಂಶೋಧನೆಯನ್ನು ನಡೆಸಿ, ಹೊಸ ಮಾತುಗಳನ್ನು ಕಂಡುಹಿಡಿದು, ಕಳೆದ ತಿಂಗಳಲ್ಲಿ ಮಾತೃಭೂಮಿಗೆ ಮರಳಿ ಬಂದರು)

ವಿಜಾಪುರದ ಬಲಿದಾನ







ಸೆರೆಮನೆಯಲ್ಲಿರುವ ಮೋಹರೆ ಹನುಮಂತರಾಯರು
( ಕರ್ನಾಟಕ ವೈಭವದ ಸಂಪಾದಕರು )

## ಸುಪ್ರಸಿದ್ಧ

# ಗಾಯಕರ ಹಾಡುಗಳು



ಏನೂ ತ್ರಾಸಿಲ್ಲದೆ ಕೇಳುವದಿದ್ದರೆ

## ಆನಂದಜೀ ಕಲ್ಯಾಣಜೀ ವಾರಾ

ಕಾಳಬಾದೇವಿರೋಡ ಮುಂಬೈ ನಂ. ೨

ಇವರಿಗೆ ಒಂದು ಕಾರ್ಡು ಬರೆದು ಪುಕ್ಕಟೆಯಾಗಿ ದೊರೆವ ಸರ್ವೋತ್ಕೃಷ್ಟ ಫೋನೋಗ್ರಾಫ್ಸ, ಗ್ರಾಮೋಫೋನೋ, ಪೀಆನೊ ಕೈಪೆಟ್ಟಿಗೆ, ಕಾಲ್ಪೆಟ್ಟಿ ಮತ್ತು ಗಾಮೊಫೋನೋ ರೆಕಾರ್ಡಗಳು ಇವುಗಳ ಕ್ಯಾಟಲಾಗ ತ ಕೊಳ್ಳಿರಿ. ನಿಮಗೆ ಅವಶ್ಯಕವೆನಿಸಿದವುಗಳನ್ನು ಆರಿಸಿಕೊಳ್ಳಿರಿ.

**ಹೋಮಸಿನೆಮಾ:**—ಹಳ್ಳಿಗಳಲ್ಲಿಯೂ ಸಿನೆಮಾ ತೋರಿಸಿ, ದುಡ್ಡು ದೊರಕಿಸುವುದಿದ್ದರೆ ಹೋಮಸಿನೆಮಾ ಮಾಹಿತಿ ತರಿಸಿಕೊಳ್ಳಿ.

ಪತ್ರವ್ಯವಹಾರ ಇಂಗ್ಲಿಷ ಅಥವಾ ಮರಾಠಿಯಲ್ಲಿ.

**ಪುಕ್ಕಟೆ** **ಪುಕ್ಕಟೆ**

## ತೀರ ಸ್ವಲ್ಪ ಅವಧಿ

(ಆಗಸ್ಟ ೧೫ ತಾ. ನ ವರೆಗೆ)

## ಜಯಕರ್ನಾಟಕದ ಹಳೆಯ ಸಂಚಿಕೆಗಳು

ನಮ್ಮಲ್ಲಿರುವ ಹಿಂದಿನ ಸಂಚಿಕೆಗಳನ್ನು ವಾಚನಾಭಿಲಾಷಿಗಳಾದ ಕನ್ನಡಿಗರಲ್ಲಿ ಕರ್ನಾಟಕದೊಳಗೆಲ್ಲ ಹಂಚಿ ಬಿಡಬೇಕೆನ್ನುತ್ತೇವೆ. ಆದುದರಿಂದ ಅಗಸ್ಟ ೧೫ ನೆಯ ತಾ. ನ ಒಳಗಾಗಿ ಓದುಗರು ತಮ್ಮ ಹೆಸರುಗಳನ್ನು ತಿಳಿಸಿದರೆ ಅವರಿಗೆ ಸಂಚಿಕೆಗಳನ್ನು ಕಳಿಸುವೆವು. ಅಂಚೆಯ ವೆಚ್ಚಕ್ಕೆಂದು ಪ್ರತಿ ಸಂಚಿಕೆಗೆ ಒಂದಾಣೆಯಂತೆ ಪೋಸ್ಟಲ್ ಸ್ಟಾಂಪ ಕಳಿಸಬೇಕು. ನಮ್ಮಲ್ಲಿರುವ ಅವರು ಬೇಡಿದಷ್ಟು ಸಂಚಿಕೆಗಳನ್ನು ಕಳಿಸುವೆವು. ಬೇಡಿದವುಗಳನ್ನೇ ಎಂದಲ್ಲ. (ಆದರೂ ತಮಗೆ ಇಷ್ಟವಿರುವ ಸಂಚಿಕೆ ತಿಳಿಸಬಹುದು.) ಆವುದೊಂದು ವಿಶಿಷ್ಟ ಸಂಚಿಕೆ ಬೇಕಿದ್ದರೆ,

| | | |
|---|---|---|
| ವಾಚನಾಲಯಕ್ಕೆ | ಪ್ರತಿ ಸಂಚಿಕೆಗೆ | ೨ ಆಣೆ |
| ಸಾಮಾನ್ಯರಿಗೆ | ,, ,, | ೪ ,, |

ಜಯಕರ್ನಾಟಕ ಕಾರ್ಯಾಲಯ,
ಧಾರವಾಡ




ಸಂಪುಟ ೮; ಸಂಚಿಕೆ ೧೦. ಶ್ರಾವಣ ಪೌರ್ಣಿಮೆ; ಅಗಸ್ಟ ೧೯೩೦

ಸಂಸ್ಥಾಪಕರು:- ಆಲೂರ ವೆಂಕಟರಾಯರು] [ಸಂಪಾದಕರು:- ಬೆಳಗಾಂವಿ ರಾಮಚಂದ್ರರಾಯರು ಬೀ. ಎ.

## ಮುಖ್ಯ ವಿಷಯಗಳು

ಈಗಲೇ ಸಿದ್ಧವಾಗಿದೆ! ಅಪೂರ್ವ ಗ್ರಂಥ!!

# ಶ್ರೀಮನ್ ಮಧ್ವಾಚಾರ್ಯರ ಗ್ರಂಥಗಳ ಕನ್ನಡ ಭಾಷಾಂತರಗಳು

ಆದ್ಯಂತ ಕನ್ನಡ ಲಿಪಿ ಮತ್ತು ಭಾಷೆಯಲ್ಲಿ ಮುದ್ರಿತವಾದ ಶ್ರೀ ಮಧ್ವಾಚಾರ್ಯರ ಭಾಷ್ಯ, ಪ್ರತಿಪದಾರ್ಥ, ಟೀಕಾ, ತಾತ್ಪರ್ಯಗಳಿಂದಲೂ ವಿಸ್ತಾರವಾದ ಇಂಗ್ಲಿಷ್ ಉಪೋದ್ಘಾತದಿಂದಲೂ ಕೂಡಿದ "ಅಷ್ಟೋಪನಿಷತ್ತುಗಳು, ಮತ್ತು ಸಪ್ತಪ್ರಕರಣಗಳು" ಎಂಬ ಒಂದನೇ ವೊಲ್ಯುಂ ಈಗಲೇ ತಯಾರಾಗಿದೆ. ೧೧೬೮ ಪುಟಗಳು ಇರುವ ಈ ಪುಸ್ತಕವು ಚಲೋದಾಗಿ ಬ್ಯಾಂಡ ಮಾಡಲ್ಪಟ್ಟಿದೆ. ಸಂಘಕ್ಕೆ ಸೇರುವ ಮೆಂಬರರಿಗೆ ಮಾತ್ರ ರೂಪಾಯಿ ೧೦ಕ್ಕೆ ಸಿಕ್ಕುವದು. ಕೆಲವು ಪ್ರತಿಗಳು ಮಾತ್ರವೇ ಇವೆ. ಬೇಕಾದವರು ಕೂಡಲೇ ಈ ಕೆಳಗಿನ ವಿಳಾಸಕ್ಕೆ ರೂಪಾಯಿ ೧೦ಕ್ಕೆ ರವಾನಿಸಿ ಮೆಂಬರರಾಗಿ ಸೇರಿದ್ದಲ್ಲಿ ಪುಸ್ತಕವು ದೊರೆಯುವುದು.

**Hon. Secretary, Madhwa Muni Seva Sangha, Udipi, S. K.**

---

ವಾರ್ಷಿಕ ಚಂದಾ ಹಾಸಲು ಸಮೇತ.] [ರೂ. ೧–೮–೯. ಬಿಡಿಸಂಚಿಕೆ ೩ ಆಣೆ

# ವೇದ ಸಂದೇಶ

**ಅಖಿಲ ಕರ್ನಾಟಕದಲ್ಲಿ ಏಕಮಾತ್ರ ಧಾರ್ಮಿಕ ಮಾಸ ಪತ್ರಿಕೆ**

ಸಂಪಾದಕರು:— ಪಂಡಿತ ಧರ್ಮದೇವ, ವಿದ್ಯಾವಾಚಸ್ಪತಿ

ಪ್ರತಿ ಸಂಚಿಕೆಯಲ್ಲಿಯೂ ೧. ವೇದೋಕ್ತ ಪ್ರಾರ್ಥನೆ. ೨. ವೇದೋಪದೇಶ. ೩. ಬ್ರಹ್ಮಚರ್ಯ ತತ್ವ. ೪. ಸ್ವಾಮಿ ಶ್ರದ್ಧಾನಂದರ ಆತ್ಮಕಥೆ. ೫. ಸಚಿತ್ರ ಯೋಗಸಾಧನಗಳು. ೬. ನೀತಿಕಥಾ ಕುಸುಮಾಂಜಲಿ. ೭. ಮಹಾತ್ಮರ ಮರ್ಮವಾಣಿ. ೮. ಆರ್ಯಮಹಿಳೆಯರ ಆದರ್ಶ. ೯. ಗುರುಕುಲ ಶಿಕ್ಷಣಕ್ರಮ. ೧೦. ಸಮಾಜ ಸುಧಾರಣಾ ವೃತ್ತಾಂತ ಇವೇ ಮೊದಲಾದ ವಿಷಯಗಳು ಬರುತ್ತವೆ. ಇದಲ್ಲದೆ ಆಗಾಗ ಸಾಧು ವಾಸ್ವಾನಿ (ಸಿಂಧ್), ಭಾಯಿಜೀ ಪರಮಾನಂದಜೀ (ಲಾಹೋರ್), ಸ್ವಾಮಿ ಸತ್ಯದೇವಜೀ (ಜರ್ಮನಿ), ಪ್ರೊ. ರಾಮದೇವಜೀ (ಗುರುಕುಲ–ಹರಿದ್ವಾರ), ಪ್ರೊ. ಇಂದ್ರಜೀ ವಿದ್ಯಾವಾಚಸ್ಪತಿ (ಸಂಪಾದಕರು 'ಅರ್ಜುನ', ದಿಲ್ಲಿ), ಮುಂತಾದ ಮಹನೀಯರ ಲೇಖನಗಳ ಭಾಷಾಂತರವೂ ಪ್ರಕಟವಾಗುವುದು.

ವ್ಯವಸ್ಥಾಪಕ, ವೇದ ಸಂದೇಶ
ಮಂಗಳೂರು ದ. ಕ.

---

# ಆಂಧ್ರ ಆಯುರ್ವೇದ ಫಾರ್ಮಸಿ,

**(ಲಿಮಿಟೆಡ್, ಮದರಾಸ್. ಬ್ರಾಂಚ, ಬೆಂಗಳೂರು)**

**ಚ್ಯವನಪ್ರಾಶ್ಯ ರಸಾಯನ:—**

ಈ ಲೇಹ್ಯದ ಸೇವನೆಯಿಂದ ಅನೇಕ ರೋಗಗಳು ವಾಸಿಯಾಗಿ ವಿಶೇಷ ಫಲಗಳು ಲಭಿಸುತ್ತವೆ. ಕ್ಷಯರೋಗಗಳಿಗೆ ಇದು ಅತ್ಯುತ್ತಮವಾದ ಔಷಧ. ಉಬ್ಬಸ, ಕೆಮ್ಮು, ಒಳಜ್ವರ, ಧಾತುನಷ್ಟ, ಸ್ವಪ್ನೇಂದ್ರಿಯ, ಹೃದಯ ಮತ್ತು ಶ್ವಾಸಕೋಶದ ವಿಕಾರ ಮೊದಲಾದ ಎಲ್ಲಾ ವ್ಯಾಧಿಗಳನ್ನೂ ನಾಶಮಾಡಿ, ನರಗಳ ಶಕ್ತಿಯನ್ನು ವೃದ್ಧಿಪಡಿಸುವುದಲ್ಲದೆ, ಸ್ತ್ರೀಬಾಲರಾದಿಯಾಗಿ ಎಲ್ಲರಿಗೂ ಉತ್ತಮ ಶಕ್ತಿವರ್ಧಕ (ಟಾನಿಕ್) ಔಷಧವಾಗಿದೆ. ಕ್ರಯ ೪೦ ತೊಲೆಗೆ ೩-೦-೦, ೧೦ ತೊಲೆಗೆ ೧-೦-೦

**ಸಿದ್ಧಮಕರಧ್ವಜ:—** ಇದು ಸುವರ್ಣ, ಕಸ್ತೂರಿ ಮೊದಲಾದ ಅಮೂಲ್ಯ ವಸ್ತುಗಳಿಂದ ತಯಾರಿಸಲ್ಪಟ್ಟ ರಸಾಯನ ಮತ್ತು ವಾಜೀಕರಣ, ಶಕ್ತಿಯುಳ್ಳ ಔಷಧವಾಗಿರುವುದರಿಂದ ಸಮಸ್ತ ರೋಗಗಳನ್ನೂ ನಾಶ ಮಾಡಿ ಪುಂಸ್ತ್ವಶಕ್ತಿ ಜ್ಞಾಪಕಶಕ್ತಿ, ಕಾಂತಿ, ವೀರ್ಯ, ಬಲಪ್ರದವಾಗಿದೆ. ಕ್ರಯ ೨೫ ಮಾತ್ರೆಗಳುಳ್ಳ ಬಾಟ್ಲಿ ೧ ಕ್ಕೆ ರೂ. ೫

**ಚಂದನಾದಿ ವಟಿ:—** ಈ ಮಾತ್ರೆಯು (ಗನೋರಿಯಾ) ಎಂಬ ಪೂಯಮೇಹ ಉರಿಮೂತ್ರ, ಮೂತ್ರದ್ವಾರದ ಪ್ರಮೇಹ ಮೊದಲಾದ ಮೂತ್ರಕೋಶದ ವ್ಯಾಧಿಗಳಿಗೆ ಅನುಭವಸಿದ್ಧವಾದ ಔಷಧವಾಗಿದೆ. ಕ್ರಯ ೨೫ ಮಾತ್ರೆಗಳುಳ್ಳ ಬಾಟ್ಲಿ ೧ಕ್ಕೆ ರೂ. ೨

ವಿ. ಸೂ.:— ರೋಗಿಗಳು ಪ್ರಕೃತಿ ಲಕ್ಷಣವನ್ನು ತಿಳಿಯಪಡಿಸಿದಲ್ಲಿ ತಕ್ಕ ಚಿಕಿತ್ಸಾಕ್ರಮವನ್ನು ಸೂಚಿಸಿ ಔಷಧಗಳನ್ನು ಕಳುಹಿಸಬಹುದು. ಎಲ್ಲಾ ಆಯುರ್ವೇದ ಶಾಸ್ತ್ರೀಯ ಔಷಧಗಳೂ ಸುಲಭ ಕ್ರಯಕ್ಕೆ ದೊರೆಯುವುವು.

ವಿಳಾಸ:— ಆಯುರ್ವೇದಭೂಷಣ ವಿಶಾರದ ಡಾಕ್ಟರ್, ಕೆ. ನಾರಾಯಣರಾವ್ ಎ. ಎಂ., ಎ. ಸಿ.,
ಆಂಧ್ರ ಆಯುರ್ವೇದಿಕ್ ಫಾರ್ಮಸಿ, ೮೯ ಚಿಕ್ಕಪೇಟೆ, ಬೆಂಗಳೂರು ಸಿಟಿ.



ಕೇದಿಗೆಯ ಬನದಲ್ಲಿ

ಶಿಲ್ಪಿ:-ರುದ್ರಪ್ಪ, ಶಾಂತಿನಿಕೇತನ

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

ಸಂಪುಟ ೮ | ಪ್ರಮೋದ ಸಂವತ್ಸರ, ನೂಲ ಹುಣ್ಣಿವೆ | ಸಂಚಿಕೆ ೧೦

ಚಾಲುಕ್ಯವಿಕ್ರಮ ವರ್ಷ ೮೫೫

## ಕರ್ನಾಟಕದಲ್ಲಿ ರಾಷ್ಟ್ರೀಯತ್ವದ ಬೆಳವಣಿಗೆ

(ಧಾರ್ಮಿಕ ಜಾಗ್ರತಿ)

ಲೇಖಕರು:—ಶ್ರೀ. ಆಲೂರ ವೆಂಕಟರಾಯರು, ಬೀ. ಎ., ಎಲ್‌ಎಲ್. ಬಿ., ಧಾರವಾಡ

ರಾಷ್ಟ್ರೀಯತ್ವವೆಂದರೆ "ಈ ರಾಷ್ಟ್ರವು ನನ್ನದು" ಎಂಬ ದೃಷ್ಟಿಯಿಂದ ಪ್ರತಿಯೊಂದು ವಿಷಯದ ಕಡೆಗೆ ನೋಡುವದು. ಮನುಷ್ಯನಿಗೆ ಹೇಗೆ ಶರೀರ, ಮನಸ್ಸು, ಆತ್ಮಗಳಿರುತ್ತವೆಯೊ, ಅದೇ ಪ್ರಕಾರ ರಾಷ್ಟ್ರಕ್ಕೂ ಇರುತ್ತವೆ. ಪಶುಪಕ್ಷಿಗಳಿಗೆ ಹೊರಗಿನ ಜ್ಞಾನವು ಕೆಲ ಮಟ್ಟಿಗೆ ಇದ್ದರೂ ಸ್ವಂತದ ಜ್ಞಾನವಿರುವದಿಲ್ಲ. ಅಂದರೆ "ನಾನು" ಎಂಬದರ ಕಲ್ಪನೆ ಇರುವದಿಲ್ಲ. ಮನುಷ್ಯಗೆ ಹೀಗೆ "ನಾನು" ಎಂಬುವ ಜ್ಞಾನವಿರುವದರಿಂದಲೇ ಆತನಿಗೆ ಮನುಷ್ಯನೆನ್ನುತ್ತಾರೆ. ಚಿಕ್ಕಮಕ್ಕಳಲ್ಲಿ ಈ ಆತ್ಮೀಯತ್ವದ ಜ್ಞಾನದ ಉದಯವು ಮೂರು ವರ್ಷದ ವಯಸ್ಸಿನಲ್ಲಿ ಆಗುತ್ತದೆಂದು ತಜ್ಞರ ಅಭಿಪ್ರಾಯವು. ರಾಷ್ಟ್ರಕ್ಕೆ ಆ ತರದ ಆತ್ಮದ ಜಾಗ್ರತಿಯು ಉಂಟಾಗಬೇಕಾದರೆ ಅದಕ್ಕೆ ನೂರು ವರ್ಷ ಹಿಡಿಯಬಹುದು. ಆದರೆ ಈ ತರದ ಆತ್ಮೋದಯವು ಆಗದಿದ್ದರೆ ಅದು ರಾಷ್ಟ್ರವೆಂದೆನಿಸಿಕೊಳ್ಳಲಿಕ್ಕೂ ಅರ್ಹವಾಗಲಾರದು. ಕರ್ನಾಟಕದಲ್ಲಿ ಈ ತರದ ರಾಷ್ಟ್ರೀಯತ್ವದ ಭಾವನೆಯು ಯಾವಾಗ ಹುಟ್ಟಿತು, ಅದು ಎಷ್ಟರಮಟ್ಟಿಗೆ ಈಗ ವಿಕಾಸವನ್ನು ಹೊಂದಿರುತ್ತದೆ, ಇವೇ ಮುಂತಾದ ವಿಷಯಗಳನ್ನು ಕುರಿತು ಇಲ್ಲಿ ಸಂಕ್ಷೇಪವಾಗಿ ಚರ್ಚಿಸುವೆವು. ಕೇವಲ ಹಿಂದಿನ ಇತಿಹಾಸವನ್ನು ಕೊಡುವದಷ್ಟೇ ನಮ್ಮ ಉದ್ದೇಶವಿರುವದಿಲ್ಲ. ಈ ವಿವೇಚನೆಯಿಂದ ಕರ್ನಾಟವು ಮುಂದೆ ಯಾವ ರೀತಿಯಲ್ಲಿ ಮಾರ್ಗಕ್ರಮಣ ಮಾಡುವದು ಅವಶ್ಯವಿರುತ್ತದೆಂಬ ಬಗ್ಗೆ ನಮ್ಮ ಅಭಿಪ್ರಾಯವನ್ನು ಸೂಚಿಸುವುದೂ ನಮ್ಮ ಉದ್ದೇಶವಿದೆ.

ಕರ್ನಾಟಕದಲ್ಲಿ ರಾಷ್ಟ್ರೀಯತ್ವದ ಭಾವನೆಯು ಉದಯವಾಗುವದೆಂದರೆ ಕರ್ನಾಟಕಸ್ಥರಲ್ಲಿ ಹಿಂದುಸ್ಥಾನವು ನಮ್ಮ ರಾಷ್ಟ್ರವು ಎಂಬ ಭಾವನೆಯು ಬೇರೂರುವದು. ಕರ್ನಾಟಕಸ್ಥರಲ್ಲಿ ಕರ್ನಾಟಕವು ನನ್ನದೆಂಬ ಕಲ್ಪನೆಯು ಹುಟ್ಟದಿದ್ದರೆ ಹಿಂದುಸ್ಥಾನವು ನಮ್ಮದೆಂಬ ಭಾವನೆಯು ನಿಜವಾಗಿ ಹುಟ್ಟಲಾರದು. ಅಲ್ಲದೆ ಯಾವನಲ್ಲಿ ನಿಜವಾದ ರಾಷ್ಟ್ರೀಯತ್ವವು ಅಂಕುರಿಸಿರುವದೊ ಅವನಲ್ಲಿ ಕರ್ನಾಟಕವು ನನ್ನದೆಂಬ ಭಾವನೆಯು ತಾನಾಗಿಯೇ ಉದ್ಭವಿಸುವದು. ಹೀಗೆ ಯಾರಲ್ಲಿ ಅದು ಉದಯವಾಗಿಲ್ಲವೊ ಅವರು ನಿಜವಾದ ರಾಷ್ಟ್ರೀಯತ್ವದ ಭಾವನೆಯುಳ್ಳವರಲ್ಲವೆಂದು ನಿಃಸಂದೇಹವಾಗಿ ಹೇಳಬಹುದು. ಈ ರಾಷ್ಟ್ರವು ನನ್ನದು ಎಂದು ಬರೀ ಬಾಯಿಯಿಂದ ಅಂದರೆ ಕಾರ್ಯವಾಗಲಿಲ್ಲ. ಆ ಭಾವನೆಯು ನಮ್ಮ ರಕ್ತದಲ್ಲಿ ಬೆರೆಯಬೇಕು. ಹೃದಯದಲ್ಲಿ ಇಳಿಯಬೇಕು. ಆತ್ಮದಲ್ಲಿ ಬಿಂಬಿಸಬೇಕು. ಹೀಗುಂಟಾದವರು ಕರ್ನಾಟಕವನ್ನು ದುರ್ಲಕ್ಷಿಸುವದು ಶಕ್ಯವೇ ಇಲ್ಲ.

ರಾಷ್ಟ್ರೀಯತ್ವವು ಸರ್ವವ್ಯಾಪಿಯಾದ ತತ್ವವು. ಅದು ಇಂಥದೊಂದು ವಿಷಯದಲ್ಲಿ ಮಾತ್ರವೇ ವ್ಯಕ್ತವಾಗುತ್ತದೆಂತಲ್ಲ. ಮನುಷ್ಯನ ಜೀವನಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯದಲ್ಲಿ ಅದು ವ್ಯಕ್ತವಾಗುತ್ತದೆ. ಉದಾಹರಣಾರ್ಥ, ಧರ್ಮದಲ್ಲಿ ರಾಷ್ಟ್ರೀಯ ದೃಷ್ಟಿಯೆಂದರೆ 'ಹಿಂದುಸ್ತಾನದ ಧಾರ್ಮಿಕ ಸಂಸ್ಕೃತಿಯು ನಮ್ಮ ಸಂಸ್ಕೃತಿಯು. ನನ್ನ ಕರ್ನಾಟಕವು ಆ ಸಂಸ್ಕೃತಿಯನ್ನು ಪುಷ್ಟಿಗೊಳಿಸಿ ಅದಕ್ಕೆ ಒಂದು ಬಗೆಯ ಒಪ್ಪನ್ನು ಹಾಕಿರುತ್ತದೆ.' –ಎಂಬ ದೃಷ್ಟಿಯು. ವಾಙ್ಮಯದಲ್ಲಿ ರಾಷ್ಟ್ರೀಯ ದೃಷ್ಟಿಯೆಂದರೆ ಇದು ನನ್ನ ವಾಙ್ಮಯವು ಎಂದು ಅಭಿಮಾನಶಾಲುವದು. ನಾವು ಈ ಲೇಖದಲ್ಲಿ ಧಾರ್ಮಿಕ ವಿಷಯವನ್ನೇ ಕುರಿತು ಆಲೋಚಿಸುತ್ತೇವೆ.

ಕರ್ನಾಟಕವು ಮೂಲತಃ ಧರ್ಮದ ಆಗರವು. ಆದರೆ ಹಿಂದುಸ್ತಾನದಲ್ಲಿಯ ಮಿಕ್ಕ ಎಲ್ಲ ವಿಷಯಗಳು ಜಂಗು ತಿನ್ನುತ್ತಿರುವಂತೆ ಈ ಧರ್ಮವೂ ಜಂಗುತಿನ್ನುತ್ತಿರುವದು. ಇಂಗ್ಲೀಷರು ನಮ್ಮ ರಾಜ್ಯವನ್ನು ಕೈವಶಮಾಡಿಕೊಂಡಾಗಿನಂತೂ ನಮ್ಮಲ್ಲಿ ಯಾವ ತರದ ತೇಜವೂ ಉಳಿದಿರುವದಿಲ್ಲ. ಅದೇ ಪ್ರಕಾರ ಧರ್ಮದ ಸ್ಥಿತಿಯೂ ಆಗಿರುತ್ತದೆ. ಗತಪ್ರಾಣರಾದ ನಮ್ಮ ಜನರಲ್ಲಿ ರಾಷ್ಟ್ರದ ಸಂಬಂಧವಾಗಿ ಚೈತನ್ಯವು ಮೊದಲು ಉಂಟಾದದ್ದು ೧೮೫೭ನೆಯ ಇಸ್ವಿಯ ಬಂಡಾಯ ಕಾಲದಲ್ಲಿ. ಆಗ ನಾವು ಪರಕೀಯರ ಅಳುಕಿನಲ್ಲಿ ಸಿಲ್ಕಿರುವೆವೆಂಬ ಭಾವನೆಯೂ ನಮ್ಮ ಧರ್ಮಕ್ಕೆ ಗಂಡಾಂತರ ಇರುತ್ತದೆಂಬ ಭಾವನೆಯೂ ನಮ್ಮ ಜನರಲ್ಲಿ ಒಡಮೂಡಿದವು. ೧೮೫೭ನೆಯ ಇಸ್ವಿಯ ಬಂಡು ಮುಖ್ಯತಃ ಧಾರ್ಮಿಕ ಬಂಡು. ಕರ್ನಾಟಕದಲ್ಲಿಯೂ ಆಗಿನ ಕಾಲದಲ್ಲಿಯ ಧರ್ಮ ವಿಚಾರಗಳಿಗೆ ಧಕ್ಕೆತಗಲಿದ ಕೂಡಲೇ ಕರ್ನಾಟಕದಲ್ಲಿಯೂ ಬಂಡುಗಳೆದ್ದವು. ಕಿತ್ತೂರ ಚನ್ನಮ್ಮಾ, ನರಗುಂದ ಬಾಬಾಸಾಹೇಬ, ಮುಂಡರಗಿ ಭೀಮರಾಯ, ಇವರೇ ಮುಂತಾದವರು ಆಗಿನ ಧಾರ್ಮಿಕ ಮತ್ತು ರಾಜಕೀಯ ಜಾಗೃತಿಯ ಪ್ರತಿನಿಧಿಗಳು. ಆಗಿನ ಧಾರ್ಮಿಕ ಭಾವನೆಯಲ್ಲಿ ಜೀವವಿತ್ತು, ರಾಜಕಾರಣದಲ್ಲಿ ಚೈತನ್ಯವಿತ್ತು. ಆದರೆ ಆ ಬಂಡು ನಿಷ್ಫಲವಾದೊಡನೆಯೇ ಹಿಂದೀ ಜನರು ತೀರ ಹತವೀರ್ಯರಾದರು. ಮತ್ತು ಅವರು ಕೈಕಾಲು ಸೋತವರಂತೆ ನಿದ್ದೆಹೋದರು. ಆ ಸೋಲಿನ ದುಷ್ಪರಿಣಾಮವು ನಮ್ಮ ಜೀವನದ ಪ್ರತಿಯೊಂದು ಅಂಗದ ಮೇಲೆ ಉಂಟಾಯಿತು. ಧಾರ್ಮಿಕ ಅಭಿಮಾನವು ಲುಪ್ತವಾಯಿತು. ದಾಸ್ಯದಲ್ಲಿಯೇ ಸೌಖ್ಯವೆಂದು ಬಗೆದರು. ಈ ಪರಿಸ್ಥಿತಿಯು ಮಿಕ್ಕ ಹಿಂದುಸ್ತಾನದಲ್ಲಿ ಉಂಟಾದಂತೆ ಕರ್ನಾಟಕದಲ್ಲಿ ಉಂಟಾಯಿತು. ಸರಕಾರದ ನವಕರಿಯನ್ನು ಮಾಡುವದೇ ಪರಮಪುರುಷಾರ್ಥವೆಂದು ಬಗೆದ ಜನರು "ಶ್ರೇಷ್ಠ"ರೆಂದು ತಿಳಿಯಲ್ಪಡಹತ್ತಿದರು. ಧರ್ಮಸಂಬಂಧದಿಂದ ಯಾವದೇ ತರಹದ ತೀಕ್ಷ್ಣಭಾವನೆಯನ್ನು ತಾಳುವದು ತಪ್ಪೆಂದೂ ಉದಾಸೀನತೆಯೇ ಸಹಿಷ್ಣುತೆಯೆಂದೂ ತಪ್ಪು ಕಲ್ಪನೆಗಳು ಉಂಟಾದವು. ಪರಮತಸಹಿಷ್ಣುತೆಯು ಹೆಸರಿನ ಕೆಳಗೆ ಸ್ವಮತತೀಕ್ಷ್ಣತೆಯು ಜಬ್ಬಲ್ಪಟ್ಟಿತು. ಇದು ಮಿಶನರಿಗಳು ತಮ್ಮ ಕಾಲನ್ನು ಚಾಚುವದರಲ್ಲಿ ಪರಿಣಮಿಸಿತು. ಈ ಉದಾಸೀನತೆಯ ಲಾಭವನ್ನು ತೆಗೆದುಕೊಂಡು ಪಾದ್ರಿಗಳು ನಮ್ಮ ಧರ್ಮವನ್ನು ಮನಬಂದಂತೆ ಹೀಯಾಳಿಸಲಿಕ್ಕೆ ಪ್ರಾರಂಭಿಸಿದರು. ಅದರಿಂದ ನಾವೂ ನಮ್ಮ ಧರ್ಮದಲ್ಲಿ ಅಶ್ರದ್ಧೆಯನ್ನು ಹೊಂದಿದೆವು. ನಮ್ಮದೆಲ್ಲವೂ ಕೆಟ್ಟಿದು; ಅವರದೆಲ್ಲವೂ ಚಲೋದು ಎಂದು ಬಗೆದು ಆರಂಭಿಸಿದೆವು. ಉಡಿಗೆ ತೊಡಿಗೆಗಳಲ್ಲಿಯೂ, ರೀತಿನಡಾವಳಿಗಳಲ್ಲಿಯೂ ಅವರ ಅನುಕರಣವನ್ನು ಮಾಡಲಾರಂಭಿಸಿದೆವು. ಮಿಕ್ಕ ಹಿಂದುಸ್ತಾನದಲ್ಲಿ ಈ ಕಲ್ಪನೆಯು ಬಹಳ ದಿವಸ ಬಾಳಲಿಲ್ಲ. ಮಿಶನರಿ ಜನರು ನಮ್ಮ ಜನರನ್ನು ಕುಲಗೆಡಿಸಲಿಕ್ಕೆ ಪ್ರಾರಂಭಿಸಿದ್ದರಿಂದಲೂ ಹಿಂದು ಧರ್ಮದ ವಿರುದ್ಧವಾಗಿ ಮಾತಾಡಹತ್ತಿದ್ದರಿಂದಲೂ ಜನರಲ್ಲಿ ಚೈತನ್ಯ ಉಂಟಾಯಿತು. ಅದು ಧರ್ಮಜಾಗೃತಿಯಲ್ಲಿ ಪರಿಣಮಿಸಿತು. ರಾಷ್ಟ್ರಜಾಗೃತಿಯ ಮೊದಲನೆಯ ಚಿನ್ಹವು ಅನೇಕ ಧಾರ್ಮಿಕ ಸಂಸ್ಥೆಗಳ ಉದಯವು. ಆರ್ಯಸಮಾಜ, ಬ್ರಹ್ಮೋಸಮಾಜ, ಪ್ರಾರ್ಥನಾ ಸಮಾಜ, ಥಿಯಾಸಫಿ ಇವೇ ಮುಂತಾದವುಗಳು ಈ ಪ್ರಥಮ ಜಾಗ್ರತಿಯ ಫಲಗಳು. ಆದರೆ ಇವುಗಳ ಗಾಳಿ ಉತ್ತರ ಕರ್ನಾಟಕಕ್ಕೆ ಸೋಂಕಲಿಲ್ಲ. ಮಹಾರಾಷ್ಟ್ರವು ಈ ಚಳವಳಿಗಳಿಗೆ ವಿಶೇಷವಾಗಿ ಎಡೆ ಕೊಡಲಿಲ್ಲ. ಮತ್ತು ಮಹಾರಾಷ್ಟ್ರದ ಒಂದು ಭಾಗವೆಂದೇ ಕಲ್ಪನೆಯಾದ ಉತ್ತರ ಕರ್ನಾಟಕವೂ ಈ ಚಳವಳಿಗಳನ್ನು ಪುರಸ್ಕರಿಸಲಿಲ್ಲ. ಮದ್ರಾಸ ಕರ್ನಾಟಕದಲ್ಲಿ ಥಿಯಾಸಫಿಯ ಪ್ರಾಬಲ್ಯವಾಯಿತು. ಮತ್ತು ಅಲ್ಲಿ ಅನೇಕ ಥಿಯಾಸಫಿಕಲ್ ಸೊಸಾಯಿಟಿಗಳು ಹೊರಟವು. ಆಗ ಮೈಸೂರ ಪ್ರಾಂತಕ್ಕೆ ಸ್ವತಂತ್ರವಾದ ವಿಶ್ವವಿದ್ಯಾನಿಲಯವಿರಲಿಲ್ಲ. ಮದ್ರಾಸ ಇಲಾಖೆಯ ವಿಶ್ವವಿದ್ಯಾಲಯಕ್ಕೆ ಅದು ಜೋಡಿಸಲ್ಪಟ್ಟಿತ್ತು. ಆ ಕಾರಣ ಮೈಸೂರಿನವರಲ್ಲಿ ತಾವು ಮದ್ರಾಸದ ಸಂಗಡವೆ ತಿಳುವಳಿಕೆ ಇತ್ತು. ಆದುದರಿಂದ ಮೈಸೂರ ಪ್ರಾಂತದ ಚಳವಳಿಗಳೆಲ್ಲವೂ ಮದ್ರಾಸದವರನ್ನೇ ಮಾದರಿಯಾಗಿ ಇಟ್ಟುಕೊಂಡಿದ್ದವು. ಪಶ್ಚಿಮದಲ್ಲಿ ಮಂಗಳೂರ ಪ್ರಾಂತದಲ್ಲಿ ಮಿಶನರಿಗಳ ಪ್ರಾಬಲ್ಯವಿತ್ತು. ಈ ಪ್ರಕಾರವಾಗಿ ಕರ್ನಾಟ

ಕ್ಕೆ ಪ್ರತ್ಯೇಕವಾದ ಅಸ್ತಿತ್ವವಿಲ್ಲದಿರುವದರಿಂದ ಕರ್ನಾಟಕದ ಧಾರ್ಮಿಕ ಚಳವಳಿಗಳಿಗೆ ಏಕರೂಪ ಉಂಟಾಗಲಿಲ್ಲ.

ಹೀಗೆ ಧಾರ್ಮಿಕ ಚಳವಳಿಗಳು ಕರ್ನಾಟಕದಲ್ಲಿ ಹೊರಡದಿದ್ದರೂ ಈ ಧರ್ಮದ್ದೇ ಒಂದು ಅಂಗವಾದ ಸಂಸ್ಕೃತ ವಿದ್ಯೆಗೆ ಮಾತ್ರ ಕರ್ನಾಟಕದಲ್ಲಿಯೂ ಪ್ರೋತ್ಸಾಹನವುಂಟಾಯಿತು. ಆಗಿನ ಕಾಲಕ್ಕೆ ಅಂದರೆ ೧೮೮೦ನೆಯ ಇಸ್ವಿಯ ಸುಮಾರಕ್ಕೆ ಕರ್ನಾಟಕದಲ್ಲಿ ಸಂಸ್ಕೃತ ಪಾಠಶಾಲೆಗಳು ಹೊರಟವು. ಈ ಸಂಸ್ಕೃತ ಪಾಠಶಾಲೆಗಳೆಂದರೆ ಆಗಿನ ಕಾಲದ ರಾಷ್ಟ್ರೀಯ ಶಾಲೆಗಳು. ಪಾಶ್ಚಿಮಾತ್ಯ ಶಿಕ್ಷಣದಿಂದ ಜನರು ಧರ್ಮಭ್ರಷ್ಟರಾಗುತ್ತಾರೆಂಬ ತಿಳವಳಿಕೆಯ ಮೂಲಕ ಅವು ಹೊಟವು. ಕರ್ನಾಟಕವು ಹೊಸ ಧಾರ್ಮಿಕ ಚಳವಳಿಗೆ ಎಡೆಕೊಡದಿದ್ದರೂ ಈ ಅವಧಿಯಲ್ಲಿ ಅದು ತನ್ನ ಧರ್ಮಾಭಿಮಾನವನ್ನು ಕಾಯ್ದುಕೊಳ್ಳಲಿಕ್ಕೆ ಅಲ್ಪ ಮಟ್ಟಿಗೆ ಪ್ರಯತ್ನ ಮಾಡಿರುತ್ತದೆ. ಕರ್ನಾಟಕದಲ್ಲಿ ಧರ್ಮಶ್ರದ್ಧೆ ಹೆಚ್ಚು. ಮತಗಳ ಪ್ರಾಬಲ್ಯವು ವಿಶೇಷ. ಇದರಿಂದ ಹೊಸ ಚೈತನ್ಯದಿಂದುಂಟಾಗುವ ಕರ್ತೃತ್ವವು ಕರ್ನಾಟಕಕ್ಕೆ ಪ್ರಾಪ್ತವಾಗದಿದ್ದರೂ, ಮಿಕ್ಕವರಷ್ಟು ಅದು ಶ್ರದ್ಧಾವಿಹೀನವಾಗಿರುವುದಿಲ್ಲ. ಅದು ಈಗ ಅಂಥ ಶ್ರದ್ಧಾಯುಕ್ತವಾಗಿರುವುದೇನೋ ಕೆಲವು ಮಟ್ಟಿಗೆ ನಿಜ. ಆದರೆ, ಪರಕೀಯ ಸಂಸ್ಕೃತಿಯಲ್ಲಿಯ ಕೆಟ್ಟ ಭಾಗವನ್ನು ಹೊರದೂಡಲಿಕ್ಕೆ ಅದೊಂದು ಭದ್ರವಾದ ಕೋಟೆಯಂತಿರುತ್ತದೆ. ಶ್ರೀಶಂಕರಾಚಾರ್ಯರ ಉತ್ಸವ, ಶ್ರೀಮಧ್ವಾಚಾರ್ಯರ ಉತ್ಸವ, ಮಧ್ವಸಿದ್ಧಾಂತೋತ್ತೇಜಕ ಸಭೆ— ಇವೇ ಮುಂತಾದವುಗಳು ೧೯ನೆಯ ಶತಮಾನದ ಕೊನೆಯ ಭಾಗದ ಧಾರ್ಮಿಕ ಚಳವಳಿಗಳು. ಉತ್ತರ ಕರ್ನಾಟಕದ ಬಹು ಜನಸಮಾಜವಾದ ವೀರಶೈವರಲ್ಲಿಯೂ ಸಂಸ್ಕೃತ ಕಲಿಯಬೇಕೆಂಬ ಇಚ್ಛೆಯುಂಟಾಗಿ ಕೆಲವು ಪಾಠಶಾಲೆಗಳು ಹೊರಟವು. ಬ್ರಾಹ್ಮಣರಿಂದ ಕಲಿಸಿಕೊಳ್ಳುವುದಕ್ಕೆ ಹಲವು ವೀರಶೈವರು ಪ್ರಯತ್ನ ಮಾಡಿದರು. ಇದು ಅವರಲ್ಲಾದ ಧರ್ಮಜಾಗ್ರತಿಯ ಪ್ರಥಮಾವಸ್ಥೆ. ಇಷ್ಟಾದರೂ ಉತ್ತರ ಕರ್ನಾಟಕವು ಮಹಾರಾಷ್ಟ್ರದ ಒಂದು ಭಾಗವೆಂಬ ಭಾವನೆಯು ನಮ್ಮ ಜನರಲ್ಲಿ—ವಿಶೇಷತಃ ಬ್ರಾಹ್ಮಣರಲ್ಲಿ ಇದ್ದ ಕಾರಣ ಇಲ್ಲಿಯ ಧಾರ್ಮಿಕ ಚಳವಳಿಗಳಿಗೂ ಅದು ಕೆಲಮಟ್ಟಿಗೆ ಬಾಧಿಸಿತು,—ಅಲ್ಲ—ಇನ್ನೂ ಬಾಧಿಸುತ್ತಲಿದೆ. ಉದಾ— ಧಾರವಾಡದಲ್ಲಿಯ ಶ್ರೀ ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆಯು ಈಗ ಅನೇಕ ವರ್ಷಗಳಿಂದ ಸನಾತನ ಸಂಸ್ಕೃತಿಯ ಪುನರುಜ್ಜೀವನ ಕಾರ್ಯವನ್ನು ನಡೆಸುತ್ತ ಬಂದಿದ್ದರೂ, ಇಲ್ಲಿಯ ವಿದ್ಯಾರ್ಥಿಗಳನ್ನು ಪುಣೆಗೆ ಪರೀಕ್ಷೆಗೋಸ್ಕರ ಕಳಿಸುವ ಪರಿಪಾಠವು ತಪ್ಪಿಲ್ಲ. ವಸ್ತುತಃ ಇಲ್ಲಿಯೇ ಪರೀಕ್ಷೆಗಳನ್ನು ತೆಗೆದುಕೊಳ್ಳುವ ವ್ಯವಸ್ಥೆಯನ್ನು ಅವರು ಮಾಡಬಹುದಾಗಿತ್ತು. ಆದರೆ, ಹಾಗೆ ಇನ್ನೂ ವ್ಯವಸ್ಥೆ ಆಗದಿರುವುದು ಅದರ ಚಾಲಕರ ತಪ್ಪಲ್ಲ. ಇನ್ನೂ ಪರಾವಲಂಬಿಯಾಗಿರುವ ಜನತೆಯ ಬೆಂಬಲವು ಅವರಿಗೆ ಇನ್ನೂ ಸಿಕ್ಕದಿರುವುದೇ ಮುಖ್ಯಕಾರಣ. ಕರ್ನಾಟಕದಲ್ಲಿ ಧಾರ್ಮಿಕ ವಿಷಯದಲ್ಲಿ ನವಚೈತನ್ಯವು ಏಕೆ ದೃಗ್ಗೋಚರವಾಗಿಲ್ಲವೆಂಬುದನ್ನು ನಾವು ಹೇಳಿಯೇ ಇರುವೆವು. ಕರ್ನಾಟಕದಲ್ಲಿ ಪುರಾಣ ಮತಾವಲಂಬಿಗಳು ಹೆಚ್ಚಾಗಿದ್ದು ಅವರಲ್ಲಿ ಅಂಧಶ್ರದ್ಧೆಯು ಹೆಚ್ಚಿರುತ್ತದೆಂಬುದು ನಿಜವಿದ್ದರೂ ಈ ಪುರಾತನ ಸಂಪ್ರದಾಯದಲ್ಲಿಯೇ ನವಚೈತನ್ಯವನ್ನು ತುಂಬಲೆತ್ನಿಸುವ ಕಾರ್ಯವು ಕೆಲಮಟ್ಟಿಗೆ ನಡೆದಿರುತ್ತದೆ. ೧೯೦೭ನೆಯ ಇಸ್ವಿಯಲ್ಲಿ ಧಾರವಾಡಕ್ಕೆ ಶ್ರೀ ಉತ್ತರಾದಿಮಠಾಧೀಶರು ಬಂದಾಗ ಜನತೆಯೆಲ್ಲವೂ ಒಂದಾಗಿ ಮಠದಲ್ಲಿ ಶ್ರೀಗಳವರು ಮಾಡತಕ್ಕ ಸುಧಾರಣೆಗಳನ್ನು ಮಾನಪತ್ರದ ರೂಪದಿಂದ ನಿವೇದಿಸಿತ್ತು; ಅಲ್ಲದೆ, ಈಗ ೨-೩ ವರುಷಗಳ ಹಿಂದೆ ಆ ಮಠವು ಬಂದಾಗಲೂ ದೊಡ್ಡ ಚಳವಳಿ ಎದ್ದಿತ್ತು. ಆದರೆ ಇಡೀ ಕರ್ನಾಟಕದ ದೃಷ್ಟಿಯಿಂದ ನೋಡಿದರೆ ಇದು ಅತ್ಯಲ್ಪವಾದ ಪ್ರಯತ್ನವು, ಇರಲಿ, ಈಗಿನ ಯುಗದಲ್ಲಿ ಸನಾತನ ಧರ್ಮಾಭಿಮಾನದ ಪಾರಜವು ಬಹಳೇ ಕೆಳಕ್ಕೆ ಇಳಿದಿದೆ. ಧರ್ಮದ ವಿಚಾರವೇ ಈಗಿನ ಪೀಳಿಗೆಯವರ ತಲೆಯಲ್ಲಿ ವಿಶೇಷವಾಗಿ ಬರುವದಿಲ್ಲ. ಇದಕ್ಕೆ ಹಿಂದುಸ್ಥಾನದ ರಾಜಕೀಯ ಪರಿಸ್ಥಿತಿಯು ಬಲವತ್ತರವಾದ ಕಾರಣವಾಗಿದ್ದರೂ, ಒಟ್ಟಿನಮೇಲೆ ಇದು ದೇಶಕ್ಕೆ ಹಿತದಾಯಕವಾದ ಪರಿಣಾಮವಲ್ಲ. ಕರ್ನಾಟಕಕ್ಕಂತೂ ಈ ಧಾರ್ಮಿಕ ತೀಕ್ಷ್ಣ ಭಾವನೆಯ ಅಭಾವವು ಕೆಡಕು ಪರಿಣಾಮವನ್ನುಂಟುಮಾಡದೆ ಇರದು. ಕರ್ನಾಟಕವು ಸ್ವತಂತ್ರ ರೀತಿಯಿಂದ ವಿಚಾರಮಾಡಿ, ಗತಪ್ರಾಣವಾಗಿರುವ ಸನಾತನ ಧರ್ಮ ಸಂಸ್ಕೃತಿಯ ಪುನರುಜ್ಜೀವನವನ್ನು ಮಾಡಿದರೆ ಅದು ಇಡೀ ಹಿಂದುಸ್ಥಾನಕ್ಕೇ ಮಾರ್ಗದರ್ಶಿಯಾಗಬಹುದು. ಆದರೆ, ಪ್ರವಾಹದ ಗುಂಟ ಈಸುವವರೇ ಬಹಳ ಮಂದಿ. ಅನುಕರಣಪಟುಗಳಾದ ಜನರೇ ವಿಶೇಷ. ಇಂಥವರಿಂದ ಧರ್ಮಜಾಗ್ರತಿಯಾಗದು.—ಅಲ್ಲ—ಯಾವ ಜಾಗ್ರತಿಯೂ ಆಗದು. ಸಾರಾಂಶ, ಧಾರ್ಮಿಕ ವಿಷಯದಲ್ಲಿ, ಕರ್ನಾಟಕವು ರಾಷ್ಟ್ರೀಯತ್ವದ ಭಾವನೆಯನ್ನು ಇನ್ನೂ ಪಡೆದಿಲ್ಲ. ಇದು ನನ್ನ ರಾಷ್ಟ್ರವು ಎಂಬ ಅಭಿಮಾನವಿದ್ದವರಲ್ಲಿ ಇದು ನನ್ನ ಸನಾತನ ಸಂಸ್ಕೃತಿಯು ಎಂಬ ಭಾವನೆಯುಂಟಾಗಿರದಿದ್ದರೆ, ಆ ರಾಷ್ಟ್ರೀಯತ್ವದ ಭಾವನೆಯಲ್ಲಿ ದೊಡ್ಡ ಕುಂದು ಇರುತ್ತದೆಂದು ನನ್ನ ತಿಳವಳಿಗೆ. ಒಟ್ಟಿಗೆ, ಧಾರ್ಮಿಕ ಜಾಗ್ರತಿಯು ಕರ್ನಾಟಕದಲ್ಲಿ ವಿಶೇಷವಾಗಿಲ್ಲ. ಹೊರಗಿನ ಬಿರುಗಾಳಿಗಳಿಂದ ಇಲ್ಲಿ ಹೊಸ ಚೈತನ್ಯ ಉಂಟಾಗಿಲ್ಲ. ಆದರೆ ಹಳೆಯ ಸಂಪ್ರದಾಯಕ್ಕೆ ಬಲವಾಗಿ ಅಂಟಿಕೊಂಡಿರುವ ಮೂಲಕ, ಹೊಸ [illegible] ಆಗಿವೆ

# ನರಬಲಿ

೧

ಬಲಗಾಲಲಿ ಬಿಡುಗಡೆಸುನು ಮೆಟ್ಟಿ ನಿಂತಿಹೆ ಎಲೆ ಕಾಳಿ !
ನಿನ್ನೆಡಗಾಲನು ನೆಕ್ಕುತಲಿಹುದು ಶ್ವಾನ ಶೂನ ಕಾಳಿ !
ಭಯದಾಯಕ ಬಲಗೈಯನು ಚಾಚಿಹೆ !
ಶಾಪವ ಕೊಡಲೆಡಗೈಯನು ಎತ್ತಿಹೆ ಎಲೆ ಎಲೆ ರುದ್ರಕಾಳಿ !
ಮುಂದೆ ಬೀಸಿ ದುಃಶಾಸನ ಪಾಶವ
ಹಿಂದಿರಿಸಿಹೆ ದುರ್ಯೋಧನಾಂಕುಶವ ಅಹಹ ಮಹಾಂಕಾಳಿ!
ಮುಸುಕಿತು ಮುಸುಕಿತು ಮುಸುಕಿತು ನೋಡೇ
ನಿನ್ನ ಹೊಟ್ಟೆಯುರಿಯಿಂದಲೆದ್ದ ಹೊಗೆಯಿಂದ ನಿನ್ನ ಮೈಯುು!

ಎಸೆವುದು ಎಸೆವುದು ಎಸೆವುದು ನೋಡೇ
ಧಗಿಲುಗೊಳಿಸಿ ಭುಗಿಲೆಂದು ಎದ್ದ ಮೊಗದಲ್ಲಿ ಬಿಸಿಲ ಬೇಗೆ!
ಎದ್ದೆ ಎದ್ದೆ ನೀನೆದ್ದೆ !
ಜೀವ ತಿನ್ನುವಾ ಹಸಿವೆ ಮತ್ತೆ ಆ ನೆತ್ತರ ನೀರಡಿಕೆ
ಮೈಯು ತಾಳಿ ನೆಲದೆದೆಯ ಸೀಳಿ
ಎದ್ದಂತೆ ಪ್ರಳಯ ಕಾಳಿ !
ನಾಳಿನ ಬಲಿಗಳ ಗೋಳನು ಊಹಿಸೆ
ನಿನ್ನ ನಿನ್ನ ಆ ಉದ್ದ ಕಿವಿಗಳೂ ತಾವೇ ಬತ್ತಿದವು !
ಮುಂದಿನ ಸಾವಿನ ಗೊಂದಲ ಕಲ್ಪಿಸಿ
ನಿನ್ನ ನಿನ್ನ ಆ ಬಿರಿಗಣ್ಣುಗಳನು ನೀನೆ ಕಿತ್ತುಕೊಂಡೆ !
ಆರುವೆ ಎಂದು ? ಎಂದು ಆರುವೆ ?
ನೆಲದಗಲಕೆ ಮುಗಿಲುದ್ದಕೆ ಹೊತ್ತಿಹ ಎಲೆಲೆ ಬಂಜೆ ಬೆಂಕಿ !
ಪ್ರಳಯ ಕಾಳಿ ಏ ರುದ್ರ ಕಾಳಿ ಎಲೆ ಎಲೆಲೆ ಮಹಾಂಕಾಳಿ !

೨

ನಿಂದಿಹರಿದೊ ಇಗೊ !
ಎಕ್ಕಡ ಮೆಟ್ಟಿಹ ಎಕ್ಕಲ ಬಂಟರು
ಉಕ್ಕಡ ಗಾತ್ರದ ಉಕ್ಕಡದವರು
ಕಕ್ಕಡ ಹೊತ್ತಿಸಿ ಕಣ್ಣುಗಳಲ್ಲಿ
ಮಾಡಿಸೆ ಕೆನ್ನೀರ್‌ಜಳಕವನು
ಏರಿಸೆ ರುಂಡದ ಹೂವುಗಳ
ಹಾಕಲು ಮದ್ದಿನ ಧೂಪವನು
ಬಾರಿಸೆ ಗುಂಡಿನ ಗಂಟೆಗಳ
ಬಂದಿತು ಬಂದಿತು ನೈವೇದ್ಯ
ನೀತಿಯು ಭೂತವೆ ಹೊರಡಿಲ್ಲಿಂದ
ದಯೆಯು ದೆವ್ವವೇ ನೀ ಹೊರಡು
ಕರುಳಿನ ಮರುಳೇ ಓಡಿಲ್ಲಿಂದ
ನ್ಯಾಯರಾಕ್ಷಸನೆ ನೀನೋಡು
ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು ನರಬಲಿಯೇ ಬೇಕು!

ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ !

೩

ಮುಪ್ಪಿನ ತಾಯ್ಗಳೆ, ಹೊಟ್ಟೆಯ ಡೊಳ್ಳ
ಮುದಿ ತಂದೆಗಳೇ, ಕೈ ಕೈ ತಾಳ
ಬಡೆಯಿರಿ ಬಾರಿಸಿರಿ !
ಚಿಕ್ಕ ಮಕ್ಕಳೇ, ಚೀರು ಸನಾದಿಯ
ಅಕ್ಕತಂಗಿಯರೆ, ಅಳಲಿನ ಕೊಳಲ
ಊದಿರಿ ಉಸಿರಿಸಿರಿ !
ಮುಂಡೆ ಮೋಚಿದಾ ಹೆಂಡಿರ ದಂಡೇ
ವಿವಿಧಾಲಾಪ ಪ್ರಚಂಡ ಪ್ರಲಾಪದ
ಓಲಗ ಬಾಜಿಸಿರಿ !
ಬೊಬ್ಬೆಯ ಕುಟ್ಟೆಲೆ ಕರುಣೆಗಳರಸೇ !
ಮಾನವನೆಂಬುವ ನಿನ್ನೀ ಕುನ್ನಿಯು ಮಾಡಿದ ಮಾಟಕ್ಕೆ
ಇಂತಹ ಪಾಪಿಯ ಲೋಭಿಯ ಕೋಪಿಯ ಹುಟ್ಟಿಸಿದೇತಕ್ಕೆ!

೪

"ಮುಕ್ಕಣ್ಣನ ಆ ಮೂರು ಕಣ್ಣುಗಳು
ಕುರುಡೇ ಕುರುಡೇ ?
ಭೂಶ್ರೀಪತಿಯಾ ನಾಲ್ಕೂ ಕೈಗಳು
ಮೊಂಡೇ ಮೊಂಡೇ ?
ವೇದವ್ಪುಸುರಿದನ ನಾಲ್ಕೂ ಮುಖಗಳು
ಮೂಕೇ ಮೂಕೇ ?
ಅಮರರೆಂಬುವರು ಕೊಳೆಯದ ಹೆಣಗಳೊ !
ಮುಚ್ಚದ ಕಣ್ಗಳು ಮುಚ್ಚಿದ ಕಣ್ಗಳೊ !

ಏನಿದು ಏನಿದು ಏನನ್ಯಾಯ ? "
ಶಾಂತಂ ಪಾಪಂ ಒಳಿತೋ ಒಳಿತು
ದೇವಿಯ ಪೂಜೆಗೆ ಹೆಸರಿಡಬೇಕೇ ?
ಇಂತಹನಿಂದದು ಕೆಡಬೇಕೇ ?
ನೆತ್ತರ ಹೇಡಿಯೆ ಮುಚ್ಚಲೆ ಬಾಯ !
ಬಲಗಾಲ್‌ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು !
ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ !

೫

ಬಲವೆಂಬುದು ಅದು ಬೆವರಿನ ಬಳ್ಳಿ
ಕಳಗವೆಂಬುದು ನೆತ್ತರಹೂವು
ಬಿಡುಗಡೆಯೆಂಬುದು ಸಾವಿನ ಹಣ್ಣು
ಇನ್ನೂ ಇನ್ನೂ ಇನ್ನೂ ಇನ್ನೂ
ಪಂಚಮರಾದಿ ಪಂಚವರ್ಣವೇ
ಪುಟಸು ಪಾಂಚಜನ್ಯ !
ಭೂಮಿತಾಯಿಯೇ ಜ್ವಾಲಾಮುಖದಿಂ-
ದೂದು ಶಂಖವನ್ನು !
ನಿಲ್ಲಲಿ ನಟರಾಜನ ನಾಟ್ಯ
ಭಂಗ ಪಡೆಯಲಿ ಬ್ರಹ್ಮಸಮಾಧಿ
ಹೋಗಲಿ ಹಾಲಿನ ಕಡಲಲಿ ಮಲಗಿದ
ದೇವನ ನಿದ್ದೆಯು ಹಾಳಾಗಿ
ನೋಡಲಿ ನೋಡಲಿ ನೋಡಲಿ ಅವರು
ಮೂವರು ಕೂಡಿ, ರಚಿಸಿದ ಮೂರಾಬಟ್ಟೆಯ ನಾಟಕವ !
ಬಲಗಾಲ್ ಬುಡದಿಂ ಬಿಡುಗಡೆ ಬಿಡಿಸಲು
ನರಬಲಿಯೇ ಬೇಕು !

ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕ್ಕೆ ಹುಂಬರು ಎಂಬರು ಯುದ್ಧ !

೬

" ಏನಿದು ಏನಿದು ಏನಿದು " ಎಂಬ
ದೇವರ ಜಂಗುಳಿ ಕಿರಚುವದೇಕೆ ?
ಇದು ಮಾನವತೆಯು ಮೊಳಗುವ ಕಾಲ !
ನಾಗರಿಕತೆಯೂ ಬೆಳಗುವ ಕಾಲ !
ಕ್ರೈಸ್ತನ ಬೋಧೆಯು ಉಬ್ಬಿಹ ಕಾಲ !
ಬಿಳಿಛಾಯೆಯು ತಾ ಹಬ್ಬಿಹ ಕಾಲ !
ಜೀವದಯಾಸಂಘವ ಸುಳಿಗಾಲ !
ಹಿಂಸೆಯ ಕ್ರೌರ್ಯಕೆ ಇದು ಅಳಿಗಾಲ !
ಶಾಂತಿಪುರಾಣವ ಹೇಳುವ ಕಾಲ !
ಬುದ್ಧಚರಿತೆಯನು ಕೇಳುವ ಕಾಲ !
ಕೋಳಿಯ ಕೊಯ್ದರೆ ಕೆರಳುವರುಂಟು
ಕುರಿಯನು ಕೊಂದರೆ ಕೇಳುವರುಂಟು
ಕೋಣನ ಕಡಿದರು ಕಾಯುವರುಂಟು
ಗುಬ್ಬಿಮಾನವನ,
ಕೊಯ್ದರು, ಕೊಂದರು ಕಡಿದರು ಏನು ?
ಕೊಂದನು ಆತನು ತನ್ನನೆ ತಾನು
ಸ್ವಾರ್ಥತ್ಯಾಗವಿದಾತ್ಮಾಹುತಿಯಿದು
ನರಬಲಿ ನರಮೇಧವು ಕೇಳು
ಅಶ್ವಮೇಧಕೂ ಸರಿಮೇಲು
ಇದುವೇ ಕಾಳಿಯ ಪೂಜೆಯು ಶುದ್ಧ !
ಇದಕೇ ಹುಂಬರು ಎಂಬರು ಯುದ್ಧ !

—ಅಂಬಿಕಾತನಯದತ್ತ



# ನಮ್ಮ ಸಂಗ್ರಾಮದ ಸಾಧ್ಯ

ಲೇಖಕರು:— ಕುಲಕರ್ಣಿ ಶೇಷಗಿರಿರಾಯರು

ನಮ್ಮ ಸಂಗ್ರಾಮದ ಸಮಸ್ಯೆಯನ್ನು ಕುರಿತು ಅನೇಕರು ಅನೇಕ ವಿಧವಾಗಿ ತರ್ಕಿಸುತ್ತಿದ್ದಾರೆ. ಅತ್ತ ಶಸ್ತ್ರಾಸ್ತ್ರಸುಸಜ್ಜಿತ ದಿಗಂತವ್ಯಾಪಿ ಸಾಮ್ರಾಜ್ಯ, ಇತ್ತ ಬರದೊಳಗಿನ ಹೆಣಗಳನ್ನು ಹೋಲುವ ೩೩ ಕೋಟಿ ಜನರ ಪ್ರತಿನಿಧಿಯಂತಿರುವ–ಎಲುಬಿನ ಮುರಕಲುಹಂದರ– ಗ್ಯಾಂಧಿ. ಹಿಂದೆ ಭಾರತೇಶ್ವರ ಔರಂಗಜೇಬನನ್ನು ಪುಂಡ ಶಿವಾಜಿ ಎದುರಿಸಲಿಲ್ಲವೇ ? ಶಿವಾಜಿಯ ಸಮಕಾಲೀನರು ಆತನನ್ನು ಹುಚ್ಚನೆಂದೇ ಕರೆದರು. ಕೊನೆಗೆ ಶಕ್ತಿಗಿಂತ ಯುಕ್ತಿಯೇ ಹೆಚ್ಚಾಯಿತು. ಪುಂಡ ಶಿವಾಜಿಯನ್ನೇ ಛತ್ರಪತಿಯೆಂದೂ ಶಿವಾವತಾರಿಯೆಂದೂ ಹೊಗಳಿದರು.

ಆದರೆ ಇಂದಿನ ನಮ್ಮ ಯುದ್ಧವು ಮೇಲಿನ ಮಾದರಿಯ ಯುದ್ಧವಲ್ಲ. ಇದು ಹಿಂದಿನ ಯಾವ ಮಾದರಿಯದೂ ಇಲ್ಲವೆಂದಮೇಲೆ ಅದರ ಆಧಾರದ ಮೇಲಿಂದ ಏನನ್ನೂ ತರ್ಕಿಸಲು ಬಾರದು. ಇಂದಿನ ಈ ಯುದ್ಧವು ಯಾವ ವ್ಯಕ್ತಿದ್ವಯರಲ್ಲಿ ಇರದೆ ಶಕ್ತಿದ್ವಯಗಳಲ್ಲಿದೆ ಎಂದು ಹೇಳಬಹುದು. ಮನುಷ್ಯನಲ್ಲಿ ಎರಡು ಅಸಾಧಾರಣ ಶಕ್ತಿಗಳು. ಒಂದು ಭೌತಿಕಶಕ್ತಿ (Physical force) ಎರಡನೆಯದು ಆತ್ಮಿಕಶಕ್ತಿ (Moral force or Soul force) ಎರಡೂ ಅತಿ ಪ್ರಬಲವಾದ ಶಕ್ತಿಗಳೇ ಆದ್ದರಿಂದ ಸೋಲು ಗೆಲುವುಗಳು ತರ್ಕಕ್ಕೆ ಮೀರಿದ ಮಾತುಗಳು. ಅಂದ ಮೇಲೆ Soul force ನಿಂದ ಯುದ್ಧ ಸಾಗಿಸಿರುವ ಭರತವರ್ಷವಾಗಲಿ, Pysical force ನಿಂದ ಸಾಗಿದ ನಮ್ಮ ಆಳರಸರಾಗಲಿ ಈ ಯುದ್ಧದಲ್ಲಿ ಜಯಹೊಂದುವರೆಂದು ಹೇಳಲಿಕ್ಕೆ ಬಾರದ ಮಾತು. ಆದರೂ ಇಡೀ ಜನಾಂಗದ ಹಿತವಾಗಬೇಕಾದರೆ ಈ ಎರಡೂ ಶಕ್ತಿಗಳೂ ಒಂದರಲ್ಲಿಯೇ ಮಿಲನವಾಗಬೇಕು ಅವು ಪರಸ್ಪರ ವಿರೋಧಿಯಾಗಿ ತೋರುವದರಿಂದ ಒಂದರ ಆತ್ಮಾರ್ಪಣವಾಗಿ ಬೇರೊಂದಕ್ಕೆ ಎಡೆಸಿಗಬೇಕು. ಇದೇ ಈ ಯುದ್ಧದ ಕೊನೆ.

ಇನ್ನು ಈ ಎರಡು ಶಕ್ತಿಗಳಲ್ಲಿ ಯಾವುವರ ಆತ್ಮಾರ್ಪಣವಾಗಿ ಯಾವುದಕ್ಕೆ ಬಲಬರುವದೆಂಬುವನ್ನು ನೋಡೋಣ. ಮಾನವಶಕ್ತಿಯು ಮನುಷ್ಯಸಂಪಾದಿತ. ದೈವಿಕಶಕ್ತಿಯು ದೇವದತ್ತ. ಮನುಷ್ಯನು ತನ್ನ ಪ್ರಯತ್ನದಿಂದ ಬೆಳೆಸಿಕೊಳ್ಳುವಷ್ಟು ಬೆಳೆಯುವದು ಮೊದಲನೆಯ ಶಕ್ತಿ. ದೇವನಿಂದ ಒಮ್ಮೆ ನಿರ್ಮಿತವಾಗಿ ಅಖಂಡವಾಗಿರುವದು ಎರಡನೆಯ ಶಕ್ತಿ. ಹಿಂದಿನವರಿಗಿಂತ ಇಂದಿನವರು ಹೆಚ್ಚು ಮಾನವಶಕ್ತಿಯನ್ನು ಸಂಪಾದಿಸಿಕೊಂಡಿರುವರೆಂದು ಹೇಳಬಹುದು. ಆದರೆ ದೈವಿಕಶಕ್ತಿಯನ್ನು ಸಂಪಾದಿಸಿಕೊಂಡಿರುವರೆಂದು ಹೇಳಲಿಕ್ಕೆ ಬರುವದಿಲ್ಲ. ಲೋಕಕಲ್ಯಾಣಕ್ಕಾಗಿ ಮಾನವಶಕ್ತಿಯು ಆತ್ಮಸಮರ್ಪಣವಾಗಿ ದೈವಿಕಶಕ್ತಿಗೆ ಸ್ಥಾನವು ದೊರೆಯುತ್ತ ಬಂದಿರುವದು, ಹಾಗೇ ಈಗಲೂ ಆಗುವದೆನ್ನಲಿಕ್ಕೆ ಅಭ್ಯಂತರವಿಲ್ಲ.

ಶ್ರೀ. ರವೀಂದ್ರನಾಥ ಟಾಗೋರರವರು ಇದನ್ನೇ ಒಂದು ಕಡೆ ಹೇಳಿದ್ದಾರೆ. ಅದೇನೆಂದರೆ ' But all the same, Moral Law is the Law of humanity, and the exclusive civilization which thrives upon others who are barred from its benfit, carries its own death-sentence in its moral limitaions. ' (ನೀತಿ ಧರ್ಮವೇ ಮಾನವಜಾತಿಯ ಧರ್ಮ. ಪರರ ಶೋಷಣೆಯ ಉದ್ದೇಶವುಳ್ಳ ನಾಗರಿಕತೆಗೆ ಸಾವು ಸ್ವಯಂಸಿದ್ಧವಾದುದು.) ಇದೇ ಅರ್ಥದ ವಾಕ್ಯವನ್ನು ಶ್ರೀಕೃಷ್ಣನು ಪಾರ್ಥನಿಗೆ ಹೇಳಿರುವನು. ತನ್ನ ವಿಶ್ವರೂಪ ದರ್ಶನವನ್ನು ತೋರಿಸುವ ಜೊತೆಗೆ ಕೌರವರೂ ಅವರ ಬಲವೂ ಆಗಲೇ ನಾಶವಾಗಿರುವದೆಂದು ತೋರಿಸಿ, ' ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್ ' ಎಂದು ಅರ್ಜುನನಿಗೆ ಉಪದೇಶವನ್ನಿತ್ತನು.

ಇದೆಲ್ಲ ಭವಿತವ್ಯದ ಊಹೆಯ ಮಾತು; ವಿಚಾರದ ಒರೆಗೆ ಹಚ್ಚಿ ಸಿದ್ಧಮಾಡುದಲ್ಲವೆಂದು ಹಲವರು ಅನ್ನಬಹುದು. ನಮ್ಮ ಪ್ರತಿಪಕ್ಷಿಗಳ ಸ್ಥಿತಿಗತಿಗಳನ್ನಿಷ್ಟು ವಿಚಾರಿಸುವಾ. ನಮ್ಮನ್ನು ಆಳುವವರು ಒಬ್ಬರೇ ಆಗಲಿ ಅಥವಾ ಒಂದೆ ಜನಸಮೂಹವಾಗಲಿ ಅಲ್ಲ. ಒಂದು ತರಹದ ರಾಜ್ಯಪದ್ಧತಿಯು ಆಳುತ್ತಿರುವದು. ಇವನ್ನು ನಡೆಸುವವರ ಇಚ್ಛಾಶಕ್ತಿ ಕ್ರಿಯಾಶಕ್ತಿಗಳ ಆಟವೇನೂ ಈ ಪದ್ಧತಿಯಲ್ಲಿ ಸಾಗುವಂತಿಲ್ಲ. ಅವ

ಹೇಗೆ ಹೇಳುವದೊ ಹಾಗೆ ನಡೆಸುವದಿಷ್ಟೆ. ತಮ್ಮ ಮನಸ್ಸಿನ ಹೇಳಿಕೆಯಿಂದ ಏನನ್ನೂ ಮಾಡಲಾರರು. ನಮ್ಮನ್ನು ಪಾಶ್ಚಾತ್ಯ ಅಥವಾ ಇಂಗ್ಲಿಷ ಜನಾಂಗವು ಆಳುತ್ತಿರುವದಿಲ್ಲ, ಆದರೆ ಇಂಗ್ಲೀಷ ರಾಜ್ಯಪದ್ಧತಿಯು ಆಳುತ್ತಿದೆ. ಇದನ್ನು ಶ್ರೀ ರವೀಂದ್ರರು ಹೀಗೆ ಹೇಳಿರುವರು. “It is not the British people that are ruling India, but it is the British nation, this abstract being–the nation, that is ruling India.” ಈ ನೇಶನ್ ಎಂದರೇನೆಂದು ಅವರೇ ಇನ್ನೊಂದು ಕಡೆ ಹೇಳಿ ಹೋದ್ದಾರೆ. “A nation, in the sense of the political and economic union of a people, is that aspect which a whole population assumes when organized for a mechanical purpose.” (ರಾಷ್ಟ್ರವೆಂದರೆ ರಾಜಕೀಯ ಆರ್ಥಿಕ ಉದ್ದೇಶಗಳ ಸಿದ್ಧಿಗಾಗಿ ಇಡಿ ಜನಾಂಗದ ಯಾಂತ್ರಿಕ ರೀತಿಯಲ್ಲಿ ಸಂಘಟನೆ.) ಇಂಥ ರಾಷ್ಟ್ರವಾಗಲಿ ಅಥವಾ ರಾಜ್ಯ ಪದ್ಧತಿಯಾಗಲಿ ನಮ್ಮನ್ನಾಳುತ್ತಿರುವದರಿಂದ ಆ ಪದ್ಧತಿಯೊಡನೆ ನಮ್ಮ ಯುದ್ಧವು ನಡೆದಿರುವದು. ಯಾವ ಇಂಗ್ಲೀಷ ವ್ಯಕ್ತಿಯ ವಿಷಯಕ್ಕೂ ಜನಾಂಗದ ವಿಷಯಕ್ಕೂ ನನ್ನ ದ್ವೇಷವಿಲ್ಲವೆಂದೂ ನಿಮ್ಮದೂ ಇರಕೂಡದೆಂದೂ ಮಹಾತ್ಮರು ಮೇಲಿಂದ ಮೇಲೆ ತಮ್ಮ ಜನರಿಗೆ ಹೇಳುತ್ತಿರುವದಾದರೂ ಮೇಲಿನದನ್ನು ಸ್ಪಷ್ಟೀಕರಿಸುತ್ತದೆ. ನಮ್ಮನ್ನೀಗ ಆಳುವವರು ಇಂಗ್ಲಿಷ ರಿರುವರೆಂದು ಅವರೊಡನೆ ನಮ್ಮಸಂಬಂಧ ಬಂದಿದೆ. ಜರ್ಮನಿ ಫ್ರಾನ್ಸ ಅಥವಾ ಬೇರೆ ಜನಾಂಗವ ಜನರು ಇದೇ ಪದ್ಧತಿಯಿಂ ದಿಗೆ ನಮ್ಮನ್ನಾಳುತ್ತಿದ್ದರೆ, ಅವರೊಡನೆಯೂ ಈ ತರದ ಕದ ನವು ಬರುವದು ಅಗತ್ಯವಿತ್ತು.–ಬರುತ್ತಲೂ ಇತ್ತು. ಆದುದ ರಿಂದ ಈ ನಮ್ಮ ಯುದ್ಧದಲ್ಲಿ ವೈಯಕ್ತಿಕ ವೈಷಮ್ಯಕ್ಕೆ ಎಡೆಯೇ ಇಲ್ಲ.

ಇನ್ನು ನಮ್ಮನ್ನು ಆಳುತ್ತಿರುವ ಪದ್ಧತಿಯು ‘Law and Order’ ಎಂಬ ಶಬ್ದಗಳಲ್ಲಿ ಸಮರ್ಥನೆಯನ್ನು ಮಾಡುತ್ತಿದೆ. ಸುಸಂಘಟಿತವಾಗದೆ ಇದ್ದ ಹಿಂದುಸ್ತಾನಕ್ಕೆ ಸುಸಂಘಟಿತ ವಾದ ಪಾಶ್ಚಾತ್ಯ ರಾಜ್ಯಪದ್ಧತಿಯು ಅಥವಾ ರಾಷ್ಟ್ರವು ನಮಗೆ ಕೊಟ್ಟ ಎಲ್ಲ ದಾನಗಳಲ್ಲಿ ಹೆಚ್ಚಿನ ದಾನವೆಂದರೆ Law and order ಎಂದು ಇದು ಜಂಭ ಕೊಚ್ಚಿಕೊಳ್ಳುವದು. ಆದರೆ ಇದು ಏತಕ್ಕೆ ? ತಾವು ಹಿಂದುಸ್ತಾನದಲ್ಲಿ ಕಾಲಿಟ್ಟಾಗ ಇಲ್ಲಿಯ ಈ ಜನರಲ್ಲಿ ಒಕ್ಕಟ್ಟು ಸುವ್ಯವಸ್ಥೆಗಳಾವೂ ಇದ್ದಿಲ್ಲವಾದ್ದರಿಂದ ಶಾಂತತೆಯೇ ಇದ್ದಿಲ್ಲವೆಂದೂ ಅದನ್ನೇ ತಾವು ‘Law and order’ ದ್ವಾರಾ ಕೊಟ್ಟಿರುವರೆಂದೂ ಇಂಗ್ಲಿಷರು ಹೇಳುವ ದುಂಟು. ಇದಕ್ಕೆ ನಾವು ಅನ್ನುವದಿಷ್ಟು. ನೀವು ಕೊಟ್ಟಿರುವದು ಶಾಂತತೆ ಏನೋ ನಿಜ. ಆದರೆ ಶಾಂತತೆಯ ರೀತಿ ನೀತಿಗಳನ್ನು ನಸು ನೋಡುವದು ಅಗತ್ಯವಿದೆ. ಮನುಷ್ಯರನ್ನೆಲ್ಲ ಕೈಕಾಲು ಕಟ್ಟಿ ಮೂಲೆಗೆ ಕೂಡಿಸಿ, ಈ ರಾಜ್ಯದಲ್ಲಿ ಕೊಲೆ ಸುಲಿಗೆಗಳು ಜಗಳ ರಗಳೆಗಳಾವೂ ಇಲ್ಲವೆಂದೂ ಶಾಂತತೆಯು ಇರುವ ದೆಂದೂ ಹೇಳಿದರೆ ಅದು ನಿಜವಾದ ಶಾಂತತೆಯಾಗಬಹುದೆ ? ಅದೇತರದ ಶಾಂತತೆಯು ಈಗ ಈ ಹಿಂದುಸ್ತಾನದಲ್ಲಿ ಇದೆ. ಎಲ್ಲ ಬಗೆಯಿಂದ ನಮ್ಮ ಉಸುಲು ಕಟ್ಟುವಂತೆ ಮಾಡಿದ ಈ ಶಾಂತತೆಯು ನಮ್ಮ ಜೀವವನ್ನೇ ಹೀರುವದೆಂದಮೇಲೆ ಈ ತರದ ಶಾಂತತೆಯು ಬೇಕೋ ಅಥವಾ ನವಗೆ ನಮ್ಮ ಜೀವ ಉಳಿಯು ವದು ಬೇಕೋ, ಎಂಬ ಪ್ರಶ್ನೆಯು ನಮ್ಮನ್ನು ಎದುರಿಸುತ್ತಿದೆ. ಶ್ರೀ ರವೀಂದ್ರರು ಇದಕ್ಕೆ ಹೀಗೆ ಉತ್ತರವನ್ನಿತ್ತಿರುವರು. “Peace is good, but not more so than life.” (ಶಾಂತತೆಯು ಪ್ರಿಯವು, ಆದರೆ ದೇವದತ್ತವಾದ ಈ ಜೀವದಷ್ಟು ಅಲ್ಲ.)

ಈ ಯುದ್ಧದ ಆರಂಭದಲ್ಲಿ ಮಹಾತ್ಮರು ಇರ್ವಿನ್ ದೊರೆ ಗಳಿಗೆ ಕಳುಹಿಸಿದ ಪತ್ರವು ಸುಪ್ರಸಿದ್ಧವಿದೆ. ಚಳವಳಿಯು ತಾವು Law and order ದಿಂದ ಸ್ಥಾಪಿಸಿರುವ ‘ಶಾಂತತೆ’ ಯನ್ನು ವಿರೋಧಿಸುವದೆಂದು ಅರ್ವಿನರು ಇದಿರು ಬರೆದರು. ಇದಕ್ಕೆ ಉತ್ತರವನ್ನು ಮಹಾತ್ಮರು ಒಂದೇ ಒಂದು ಮಾತಿನಲ್ಲಿ ಹೇಳಿರುವರು. “In spite of a forest of books containing rules and regulations, the one rule that is known to India is the will of the British people and the peace is that of a public prison. (ಕಾಯಿದೆ ಕಾನೂ ನಗಳು ರಾಶಿರಾಶಿಯಾಗಿದ್ದರೂ, ನಮಗೆ ಗೊತ್ತಿದ್ದ ಕಾಯಿ ದೆಯೋ– ಬ್ರಿಟಿಶ ಪ್ರಭುಗಳ ಸ್ವೇಚ್ಛೆ, ಶಾಂತತೆಯೋ– ಸೆರೆ ಮನೆಯ ಶಾಂತತೆ.)

ಇದೀಗ ಉಭಯಪಕ್ಷಗಳ ವಿಚಾರಣೆಯಾಯಿತು. ಅಂತೂ ಒಂದು ಮಾನವೀಶಕ್ತಿಯನ್ನು ಅವಲಂಬಿಸಿದ್ದರೆ ಇನ್ನೊಂದು ದೈವೀಶಕ್ತಿಯನ್ನು ಅವಲಂಬಿಸಿದೆ. ಒಂದು ತನ್ನ ತೋಳ ತಿಂಡಿ

ಯನ್ನು ತೀರಿಸಿಕೊಳ್ಳಬೇಕೆಂಬ ಲವಲವಿಕೆಯಿಂದ ಹೊರಟಿದ್ದರೆ, ಮತ್ತೊಂದು ಕೂಳಿಲ್ಲದೇ ಬಳಲುವ ಬಡವರ ಹೊಟ್ಟೆಗಿಷ್ಟು ಹಿಟ್ಟನ್ನು ಕೊಡುವದಕ್ಕಾಗಿ ಹೊರಟಿದೆ.

ಶಕ್ತಿದ್ವಯರಲ್ಲಿ ಈ ಯುದ್ಧವು ನಡೆದಿರುವದಲ್ಲದೆ ವ್ಯಕ್ತಿದ್ವಯರಲ್ಲಿ ನಡೆದಿಲ್ಲವೆಂಬುದು ಸ್ಪಷ್ಟವಾಯಿತು. ಆದುದರಿಂದ ಈ ಯುದ್ಧವು ಭಾರತೀಯರ ಉದ್ಧಾರದವುಟ್ಟಿಗೆ ಇರದೆ, ಇಡೀ ಮಾನವಜಾತಿಯ ಉದ್ಧಾರಕಲ್ಕಾಗಿ ಇರುವದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಹೀಗೆಂದೆ ಎಲ್ಲ ಸ್ವತಂತ್ರ ರಾಷ್ಟ್ರಗಳು ಇಂದು ಹಿಂದುಸ್ಥಾನಕ್ಕೆ ತಮ್ಮ ದೈವೀಶಕ್ತಿಯ ಬೆಂಬಲವನ್ನು ಕೊಡುತ್ತಿರುವವು. ಮಾನವಶಕ್ತಿಯ ಆತ್ಮಸಮರ್ಪಣವಾಗಿ ದೈವೀಶಕ್ತಿಗೆ ಎಡೆಗೊಡುವದೇ ಈ ಯುದ್ಧದ ಕೊನೆ. 'ಒಪ್ಪಂದ ಮಾತುಕತೆಯ ಮೊದಲು ಆಳರಸರಲ್ಲಿ Real change of heart (ಅಂತಃಕರಣದಲ್ಲಿ ಪರಿವರ್ತನೆ) ಆಗಬೇಕೆಂದು ಮಹಾತ್ಮರು ಹೇಳುವದರ ಅಭಿಪ್ರಾಯವೂ ಇದೆ. ಹೀಗಾಗುವದೆಂದರೆ ದೈವೀಶಕ್ತಿಗೆ ಮಾನವಶಕ್ತಿಯು ಪಶ್ಚಾತ್ತಾಪದಿಂದ ಶರಣು ಹೋದಂತಲ್ಲವೆ ? ಪಶ್ಚಾತ್ತಾಪವಾದವನು ಪುನೀತನಾಗುವದು ನಿಶ್ಚಯ. ಇದೇ ಆತ್ಮಸಮರ್ಪಣೆ. ಇಲ್ಲಿ ಗೆಲವು ಇಬ್ಬರಿಗೂ. ಸೋಲೆಂಬುದು ಇಲ್ಲವೇ ಇಲ್ಲ.

---

## ಕೊಟ್ಟರೇನೆ ಮಗಳೆ ನಿನ್ನ ಮುಪ್ಪಿನಾತಗೆ ?

" ಬೆಳ್ಳಗಾದ ಮೊಸೆಗಡ್ಡವನ್ನು ನೋಡೆನೇ ! ಅಮ್ಮ,
ಜೊಲ್ಲು ಸುರಿವ ಬಾಯಿಯೊಳಗೆ ಹಲ್ಲ ಕಾಣೆನೇ !
ಒಳ್ಳೆ ಅಡಿಕೆ ವೀಳ್ಯದೆಲೆಯ ಕುಟ್ಟಲಾರನೇ !
ತಾಯೆ ಕೇಳೆ, ಮುಪ್ಪಿನವಗೆ ಕೊಡದಿರೆಂಬೆನೇ !

ಅವನ ಮೋರೆನೀರನಿರದೆ ಒರೆಸಲಾರೆನೇ ! ಅಮ್ಮ,
ಅವನ ಕೈಯ ಕೋಲು ಕೊಟ್ಟು ನಡೆಸಲಾರನೇ !
ಮರವ ನೋಡಿ ಬಳ್ಳಿ ನೆಟ್ಟರಲ್ತೆ ಪುಣ್ಯವು ?
ಹರೆಯುದವಳ ಮೇಲೆ ಇನಿಸು ಕರುಣವಿಲ್ಲವು ? "

" ಹೂಜೆತುಂಬ ಹಣವ ನಿನಗೆ ಬರೆದು ಕೊಡುವನೌ !
ಸಾಜಮಾದ ಹೊನ್ನಿನೊಡವೆ ಮಾಡಿ ಕೊಡುವನೌ !
ಪಟ್ಟೆಮಂಚದಿಂದಲೆದ್ದು ಇಳಿಯಬೇಡೆಲೌ !
ಇಟ್ಟ ಚಿನ್ನ ತೊಡಿಗೆಯೊಂದು ತೆಗೆಯಬೇಡೆಲೌ ! "

× × ×

ಅಚ್ಚ ಅರಸಿಣವನು ತೊಡೆದು, ಬಿಚ್ಚುವಾಲೆಯ
ಕಟ್ಟಿಕೊಂಡು ಕೊರಳು ತುಂಬ ಕರಿಯ ಮಣಿಗಳ,
ಇಚ್ಛೆಯರಸ–ಶಿವನ ಮುಂದೆ ಮೊರೆಯ ಪೇಳ್ದಳು
ಕಷ್ಟದಿರುವ ನೀಗಿಸೆಂದು ಕರವ ಮುಗಿದಳು !

—ಪಿ. ಕೆ. ಶ್ರೀಧರರಾವ, ರಂಗೂನ

---

# ಆಯುಷ್ಕರ್ಮ

ಲೇಖಕರು—ಶ್ರೀ. ರಂಗನಾಥ ಮುಗಳಿ, ಎಂ. ಎ.

(೧)

ಇಂದು ಸಿರಿಯೂರ ನಾಡಗೌಡರ ಮನೆಯಲ್ಲಿ ಸಣ್ಣದೊಂದು ಸೋಗಿನಾಟ. ಉಲ್ಲಾಸಮೂರ್ತಿಯು ಇದರ ಸೂತ್ರಧಾರ, ಚಿಕ್ಕ ಚಿಕ್ಕ ಬಾಲಕರು ನಟರು. ನಾಟಕಕ್ಕೆ ಹೆಸರಿಲ್ಲ, ಕಂಪನಿಗೆ ನೆಲೆಯಿಲ್ಲ. ಸೂರ್ಯನು ಮಧ್ಯಾಹ್ನದ ಮೇರೆಯನ್ನು ಮೀರಿರಬೇಕು, ಆಟದ ಓರಣವು ನಡೆಯಿತು. ಬಂಕದ ಮೇಲಿನ ಬಿದಿರುಗಳಿಗೆ ಹಳೆಯ ಪೀತಾಂಬರಗಳು ಪರದೆಗಳಾಗಿ ಇಳಿಬಿದ್ದವು. ಮುಂದಿನ ಪರದೆಗೆ ಶಿವಪಾರ್ವತಿಯ ಚಿತ್ರವಿಲ್ಲ. ಯಾಕಂದರೆ ಇದು ಹೊಸಬಗೆಯ ರಂಗಭೂಮಿ! ತಾವೇ ಚೆಲುವಾಗಿರುವ ಬಾಲಕರಿಗೆ ಬಣ್ಣದ ಚೆಲುವು ಬೇಕಾಗಲಿಲ್ಲ. ತಾವೇ ಧಾವಿಸಿಬಂದ ಪ್ರೇಕ್ಷಕರಿಗೆ ಯಾವ ಪ್ರಕಟನೆಯೂ ಬೇಕಾಗಲಿಲ್ಲ. ಎಲ್ಲರೂ ಕುಳಿತರು, ನಾಡಗೌಡರ ಮನೆಯ ಹೆಣ್ಣುಮಕ್ಕಳಿಗೆ ಮುಂದಿನ ಸ್ಥಾನವು ವಿಶೇಷವಾಗಿ ಅಣಿಯಾಗಿತ್ತು. ಮಗ್ಗಲುಗಳಿಗೆ ಎರಡು ಕುರ್ಚಿಗಳು ಇದಿರುಬದಿರಾಗಿ ನಿಂತಿದ್ದವು. ಒಂದರಲ್ಲಿ ಎಡಕ್ಕೆ ಉಲ್ಲಾಸಮೂರ್ತಿ ಕುಳಿತನು. ಕಡೆಯ ಗಂಟೆ ಆಗುವ ಹೊತ್ತಿಗೇ ಇನ್ನೊಂದರಲ್ಲಿ ಅವನ ಸ್ನೇಹಿತ ಚಿಂತಾಮಣಿರಾಯನು ಬಂದು ಕುಳಿತನು. "ನಾಡಗೌಡರೇ ಅಪ್ಪಣೆಯಾಗಬೇಕು" ಎಂದು ಸ್ನೇಹಿತನನ್ನು ನೋಡ ನೋಡುತ್ತ ಉಲ್ಲಾಸಮೂರ್ತಿಯು ಮುಂದಣ ಪರದೆಯನ್ನು ಮೇಲಕ್ಕೆ ಏರಿಸಿದನು...... ಮೂವರು ಚೆನ್ನೆಯರು ಕೈಯಲ್ಲಿ ತಾಟುಹಿಡಿದು ನಿಂತಿದ್ದರು. ಹಾಡಿನ ಶಾಸ್ತ್ರವಾಯಿತು. ಹೂಗಳನ್ನು ಹಾರಿಸಿದರು. ಮೊದಲು ಯೋಚಿಸಿದಂದೆ ಒಂದೆರಡು ಅರಳುಗಳು ನಾಡಗೌಡರ ಮೊಗವನ್ನಡರಿದವು. ಉಲ್ಲಾಸಮೂರ್ತಿಯು ನಿರುಕಿಸಿದನು, ದಣಿಯರ ತುಟಿಯಿಂದ ನಗೆಮಲ್ಲಿಗೆ ಹೊರಬೀಳಲೇ ಇಲ್ಲ. ದೃಶ್ಯಗಳು ನಡೆದವು. ಮೊದಲನೆಯದು ಸುಖಲೋಲುಪನಾದ ಒಬ್ಬ ರಾಜನ ಸಭೆ, ವಿಕಟವೇಷಧರನಾದ ವಿದೂಷಕನು ನಿಂತಿರುವನು. ಮಂತ್ರಿಯು ರಾಜ್ಯಗೆದೆಯಲಿಕ್ಕೆ ತೆರಳುವ ಕಾಲವು ಬಂದಿತೆಂದು ದೊರೆಗೆ ಬಿನ್ನವಿಸುತ್ತಿರುವನು. ವಿದೂಷಕನು "ಮದನರಾಜ್ಯ" ಎಂದು ಅರ್ಥಮಾಡುವನು, ಹುಚ್ಚುಚ್ಚು ಮೋರೆಮಾಡಿ ನಕ್ಕುಬಿಡುವನು. ಬಾಲಸಭಿಕರೆಲ್ಲ ಬಹಳ ತೀವ್ರವಾಗಿ ಬಿದ್ದು ಬಿದ್ದು ನಗುವರು. ಹಿರಿಯ ಹೇಗಸರು ಸೆರಗಿನ ಮರೆಯಲ್ಲಿಯೇ ನಗೆಯ ತೆರೆಗಳನ್ನು ಹುಟ್ಟಿಸುವರು. ಉಲ್ಲಾಸಮೂರ್ತಿಯ ಲಕ್ಷ್ಯವು ಅತ್ತ ಇರಲೇ ಇಲ್ಲ. ಅವನು ತನ್ನ ಇದುರು ನೋಡಿಯೇ ನೋಡುತ್ತಿದ್ದನು. ಅಲ್ಲಿ ಮಾತ್ರ ಎಲ್ಲ ಸ್ತಬ್ಧತೆ, ಎಲ್ಲ ಗಾಂಭೀರ್ಯ: ಒಳಗೆ ಪ್ರಕ್ಷುಬ್ಧವಾಗಿದ್ದರೂ ಮೇಲೆ ಪ್ರಶಾಂತವಾಗಿರುವ ಮುನ್ನೀರು! ಈ ದೃಶ್ಯ ಮುಗಿಯಿತು. ಮುಂದಿನ ದೃಶ್ಯವನ್ನು ಒಳ್ಳೇ ಒಲುಮೆಯಿಂದ ನೋಡಲಿಕ್ಕೆ ಬೇರೆ ಕಾಲುಮಡಿಕೆ ಹಾಕಿ ಎಳೆಯರೆಲ್ಲ ಮುಂದೆ ಬಾಗಿದ್ದರು...... ಉಲ್ಲಾಸಮೂರ್ತಿಯು ತಟ್ಟನೆ ಕಡೆಯ ಪರದೆ ಕೆಡವಿದನು. "ನಾಳೆ ನಗಲಿಕ್ಕೆ ಹೊಟ್ಟೆ ಇರಲಿ" ಎಂದು ಎದ್ದು ಬಿಟ್ಟನು. ಇಷ್ಟಾದರೂ ತಾವು ಕೊಟ್ಟ ಮಣ್ಣಿನ ನಾಣ್ಯಕ್ಕೆ ಪ್ರತಿಫಲವು ಸಿಕ್ಕಿತಲ್ಲ ಎಂದು ಚಿಕ್ಕವರು ಎದ್ದರು. ಸಂಜೆಯ ನೆರಳು ನೋಡಿ ಸ್ತ್ರೀಯರೂ ತಮ್ಮ ತಮ್ಮ ಹೊಣೆಗಳನ್ನು ನೆನಿಸಿ "ಮುಗಿದದ್ದು ಒಳಿತಾಯಿತು" ಎಂದು ಹೊರಟರು. ಉಲ್ಲಾಸಮೂರ್ತಿಯು ಮೋರೆ ಮುದುಡಿಸಿಕೊಂಡು ತೆರೆಯಲ್ಲಿ ಹೋಗಿ ನಟರಿಗೆ ಏನೇನೊ ಗುಣುಗುಣು ಹೇಳಿ ಸ್ನೇಹಿತನೊಡನೆ ಹೊರಬಿದ್ದನು......

ಸಿರಿಯೂರು ಹಳ್ಳಿಯೂ ಅಲ್ಲ, ಹಿರಿದಾದ ಪಟ್ಟಣವೂ ಅಲ್ಲ. ತ್ರಿಶಂಕುದೊರೆಯ ರಾಜಧಾನಿ ಇದ್ದಂತೆ ಇರುವ ತಾಲೂಕಿನ ಸ್ಥಳ. ಇಲ್ಲಿ ನೆಲೆಯಾಗಿ ಹೊಲಮನೆಗಳಿದ್ದು ಹೆಸರುತಳೆದ ಮನೆತನವೆಂದರೆ ನಾಡಗೌಡರದೇ. ಉಳಿದವರೆಲ್ಲ ಊಳಿಗಕ್ಕಾಗಿ ಊರವರು; ಕೋರ್ಟಿನ ಚಾಕರರು ಇಲ್ಲವೇ ಕಚೇರಿಯವರು. ಅಲ್ಲಲ್ಲಿ ಹಾಳುಬಿದ್ದ ನಾಡಗೌಡರ ವಾಡೆಯಲ್ಲಿ ಸ್ನೇಹಿತರೀರ್ವರೂ ನಾಲ್ಕು ಹೆಜ್ಜೆ ನಡೆದ ಮೇಲೆ "ಎಲ್ಲಿಗೆ?" ಎಂದು ಉಲ್ಲಾಸಮೂರ್ತಿ ಕೇಳಿದನು. "ಎಲ್ಲಿಯಾದರೂ ತಿರುಗಲಿಕ್ಕೆ" ಎಂದು ಉತ್ತರ ಬಂದಿತು. ಇಬ್ಬರೂ ಮನೆಯ ಪ್ರಾಕಾರವನ್ನು ದಾಟಿ ಹಾದಿಗೆ ಬಂದರು. "ಇವರೇ ಆಟ ಆಡಿಸಿದವರು" ಎಂದು ಕಟ್ಟೆಯ ಮೇಲೆ ತಮ್ಮ ಆಟಹೂಡಿದ ಹುಡುಗ ಹುಡಿಗಿಯರು ಉಲ್ಲಾಸಮೂರ್ತಿಯನ್ನು ನಿಟ್ಟಿಸಿ ನೋಡುತ್ತಿದ್ದರು. ತಾವು ಆದೇ ಕೇಳಿ ಕಂಡ ಸನ್ನಿವೇಶಗಳನ್ನು

ಅಣಕಿಸತೊಡಗಿದ್ದರು. "ಅವರ ಉಲ್ಲಾಸವನ್ನು ನೋಡಿ ದಿಯಾ? ನಾವು ಆಡಿದ್ದನ್ನು ಅವರು ಮಾಡಿ ತೋರಿಸುತ್ತಿರುವರು" ಎಂದು ಉಲ್ಲಾಸಮೂರ್ತಿ ಉಸುರಿದನು. "ಅದೆಲ್ಲ ನಿನ್ನ ಆಟ!" ಎಂದಿಷ್ಟೇ ಸ್ತಬ್ಧಮೂರ್ತಿಯ ಮಾರುತ್ತರ ಬಂದಿತು. "ನಿನ್ನ ರೀತಿಯು ವಿಚಿತ್ರವಪ್ಪ, ಒಳ್ಳೇ ಸಂಯಮಿಯು!" ಇಬ್ಬರೂ ಊರ ಅಗಸಿಗೆ ಬಂದರು. ಕಡಿಕಡಿದು ನಿಂತಿರುವ ಹಳೆಯ ಹುಡೆಯೊಂದು ಚಿಂತಾಮಣಿರಾಯನ ಕಣ್ಣಿಗೆ ಬಿದ್ದಿತು. "ಇದರಂತೆ ಆಗಿದೆ ಎಲ್ಲವು, ನಮ್ಮ ಮನೆ ಮೊದಲು, ನಾಡು ಕಡೆ." "ಆಯಿತು, ಆಡಿದರೆ ಇಂಥ ಕಾಳುಮಾತು" ಎನ್ನುತ್ತ ಬಯಲಹಾದಿಗೆ ಬರಲು, ಅಂದೇ ಕೆಂಪಡರಿ ಮುಳುಗಲಿರುವ ಸೂರ್ಯನು ತುಸುವೇ ನಿಂತಿರುವಂತೆ ಕಂಡನು. "ನೋಡು, ಚಿಂತಾಮಣಿ, ನಿನ್ನ ಮೂಕತನವನ್ನು ನೋಡಿ ಮುಳುಗುವ ಸೂರ್ಯನೂ ಮುನಿದಿರುವನು." "ಹೌದು, ಹೌದು, ಇನ್ನೂ ಇಂಥ ಎಷ್ಟೋ ಸೂರ್ಯರು ಬೇಕು, ಒಬ್ಬನು ಮುಳುಗುವಾಗ ಮುನಿದು ಆಗುವದೇನು?" "ಅಬ್ಬ!" ಇಬ್ಬರೂ ಮುಂದೆ ಸಾಗಿದರು. ಕೆಲ ಹೊತ್ತು ಉಲ್ಲಾಸಮೂರ್ತಿಯೂ ಬಾಯಿಹೊಲಿದುಕೊಂಡನು. "ನಿಮ್ಮ ನಾಟಕದಿಂದ ಹಣವೆಷ್ಟಾಯಿತು?" ಚಿಂತಾಮಣಿಯೇ ಆಡಿದನು. "ಎಲ್ಲಿ, ನಾಲ್ಕು ಹಂಚೀಬಿಲ್ಲಿಗಳು."

"ಆಯಿತು, ಈಗೆಲ್ಲರ ಉತ್ಪನ್ನವೂ ಅಷ್ಟೇ!"

"ನನಗೆ ಉತ್ಪನ್ನವು ಬೇಕಾಗಿದ್ದಿಲ್ಲ"

"ಮತ್ತೇನು ಬೇಕಾಗಿತ್ತು?"

"ನೀನು ನಗುವಿಯೆಂದು?"– ಉಲ್ಲಾಸಮೂರ್ತಿಯು ಬೇರೊಂದು ಪ್ರಶ್ನೆಹಾಕಿದನು. "ಬಂದಾಗ" "ಅದು ಬರಬೇಕೆಂದು?" "ಎಂದೋ!" "ವರ್ಷಾನುವರ್ಷ ಕಲಿತು ಬಿ. ಎ., ಆದೆ. ಇದೇ ಏನು ನೀನು ಕಲಿತಿದ್ದು? ಬಿಕ್ಕೊಂಡ ಮೋರೆ!"

"ನಾನು ನಗುವದಕ್ಕೆ, ಮೂರ್ತಿ, ಇಂಥ ಸೋಗಿನಾಟವು ನಡೆಯದು"

"ಮತ್ತೆ ಎಂಥದು ಬೇಕು?" ಇದೇ ಹೊತ್ತಿಗೆ ಸರಿಯಾಗಿ ಇಬ್ಬರೂ ಊರದಿಕ್ಕಿಗೆ ಮರಳುತ್ತಿರುವರು.

"ನನಗೆ ನಿಜವಾದ ಸಂಸಾರದ ಸುಖದ ಆಟವು ಬೇಕು, ನಾಟಕದ ಆಟವು ಬೇಡ!"

"ಹು. ಹು. ಬಹು ಗಂಭೀರ ನೀನು. ಹೋದ ಹೋದಲ್ಲಿ ದುಃಖಕಾಣುವ ನಿನಗೆ ಸುಖದ ಆಟ ನೋಟವೆಲ್ಲಿ!

"ಹಾಗಾದರೆ ಜಗತ್ತಿನಲ್ಲಿ ನನಗೆ ನಗೆಯೇ ಇಲ್ಲ"

"ಕಡೆಗೊಮ್ಮೆ ನಗೆ ಬಂದರೆ?"

"ಬಂದರೆ! ಬಂದರೆ ಆಗ ಜಗತ್ತಿನಲ್ಲಿ ಸುಖವನ್ನು ನಾನು ಕಂಡೆನೆನ್ನು"

"ಇದು ನಿಶ್ಚಯವೇ?" ಉಲ್ಲಾಸಮೂರ್ತಿಯು ಕೈಹಿಡಿದು ನಿಲ್ಲಿಸಿ, ಅಲುಗಿಸಿ ಕೇಳಿದನು. "ನಿಶ್ಚಯ" ಎಂದು ಚಿಂತಾಮಣಿಯು ಹೇಳುವಷ್ಟರಲ್ಲಿ ಊರ ಅಗಸಿಯು ತಿರುಗಿ ಬಂದಿತು. "ಒಳ್ಳೇದು" ಎನ್ನುತ್ತ ಮೂರ್ತಿಯು ತನ್ನ ಮನೆಗೆ ತೆರಳಿದನು. ಒಬ್ಬನೇ ನಡೆಯುತ್ತ ವಿಚಾರಭಾರದಿಂದ ತಲೆ ಕೆಳಗೆಹಾಕಿ ಚಿಂತಾಮಣಿರಾಯನು ಹತ್ತು ಹನ್ನೆರಡು ಮನೆ ದಾಟಿದನು. ನಾಪಿತ-ನಾಗಪ್ಪನ ಮನೆಯ ಮಿಣುಕು ದೀವಿಗೆಯ ಬೆಳಕು ಕಾಲಿಗೆ ಬಿದ್ದಿತು. ತತ್‌ಕ್ಷಣವೇ ಚಿಂತಾಮಣಿಯು ವಿಚಾರದಿಂದ ಎಚ್ಚತ್ತು ಗದ್ದದ ಮೇಲೆ ಕೈಯಾಡಿಸುತ್ತ "ನಾಗಪ್ಪ, ಆಯುಷ್ಕರ್ಮ ಬೆಳೆದಿದೆ. ನಾಳೆ ಬೇಗ್ಗೆ" ಎನ್ನುವದರಲ್ಲಿ "ಬರುವೆನು ನಾಡಗೌಡರೇ" ಎಂದುತ್ತರ ಬಂದಿತು. ನಾಡಗೌಡರು ವೇಗದಿಂದ ಮನೆಯ ಸೇರಿದರು.

(೨)

ಮರುದಿವಸ ಬೆಳಿಗ್ಗೆ ಎಂಟು ಗಂಟೆ. ಬಿಸಿಲು ನಾಡಗೌಡರ ಮನೆಯ ಸಂದುಗೊಂದುಗಳನ್ನೆಲ್ಲ ಸೇರಲು ಹವಣಿಸುತ್ತದೆ. ಆದರೆ ನಾಲ್ಕೈದು ಕೋಣೆಗಳಿಗೆಲ್ಲ ಬೀಗಬಿದ್ದಿರುವ ಮೂಲಕ ನಿರಾಶವಾಗಿ ಕೆಲವು ಕಿರಣಗಳನ್ನೇ ಬೆಳಕಿಂಡಿಯ ಕೃಪೆಯಿಂದ ಚಿಂತಾಮಣಿರಾಯನ ಕೋಣೆಯಲ್ಲಿ ಕಳಿಸಿ ತಣ್ಣಗೆ ಕುಳಿತಿದೆ. ಚಿಂತಾಮಣಿಯೂ ಹಾಗೆಯೇ ಕುಳಿತಿದ್ದಾನೆ, ಅಷ್ಟೇ ನಿರಾಶ, ಅಷ್ಟೇ ಅಲ್ಪತುಷ್ಟ. ತನ್ನ ಪುಸ್ತಕಗಳ ತಿಪ್ಪೆಯನ್ನು ಹರವಿಕೊಂಡು ನಿರಾಕೃತವಾಗಿ ಬಂದ ಅನೇಕಾನೇಕ ಅರ್ಜಿಗಳನ್ನು ಮುಂದಿಟ್ಟುಕೊಂಡು ಕುಳಿತಿರುವನು. ಪ್ರಾತಃಸ್ನಾನವಿಧಿಯು ತೀರಿತ್ತು. ನಾಗಪ್ಪನು ಯಾವಾಗಲೋ ಬಂದು ಕ್ಷೌರಮಾಡಿ ಹೋಗಿದ್ದನು. ತಾಯಿಯು ಮನೆಗೆಲಸಗಳಲ್ಲಿ ತೊಡಗಿದ್ದಳು. ಸಾಲದ ಸಂಸಾರದಲ್ಲಿ ಇದ್ದುಬಿದ್ದುಳಿದ ಒಂದೆರಡು ಹೊಲಗಳನ್ನು ಸಾಗುಮಾಡಿಸುವದಕ್ಕೆ ತಂದೆ ಹಳ್ಳಿಗೆ ಹೋಗಿದ್ದರು. ಬೇರೆ ಯಾರೂ ಮನೆಯಲ್ಲಿಲ್ಲ, ಚಿಂತಾಮಣಿಗೆ ಮಾತ್ರ ಕಲ್ಪನೆ ಕಟ್ಟೆಕಟ್ಟಿ ಮನೆತುಂಬ ಚಿತ್ರಗಳು ಕಾಣುತ್ತಿದ್ದವು. ಗೋಡೆಯ

ಮೇಲೆ ಸುಣ್ಣದ ಪೆಟ್ಟಿಗೆಯು ಹಾರಿ ನಾಲ್ಕು ಕಲೆಗಳು ನಿಂತಿದ್ದರೆ, ಚಿಂತಾಮಣಿಯು ತನ್ನ ನಿಸ್ತೇಜಮುಖದ ಪಡಿನೆಳಲನ್ನೇ ಅಲ್ಲಿ ಕಾಣುವನು. ಕಂಬದ ಆಕೃತಿಯು ಅಡಗಿ ಧೂಳಿಯಿಂದ ಮುಸುಕಿ ಅದು ನಿಂತಿರಲು, ದಿಙ್ಮೂಢನಾಗಿ ನಿಂತ ತನ್ನ ಹೋಲಿಕೆಯನ್ನೆ ಅವಕ್ಕೆ ಆರೋಪಿಸುವನು. ಆದರೆ ಇಂದೇಕೋ ಒಂದೆರಡು ಕಿರಣಗಳು ಅವನಲ್ಲಿ ಮೂಡಿವೆ, ಯಾತಕ್ಕೋ ಮೊಗದ ಮೇಲಿನ ಮಡಿಕೆಗಳು ಮಾಯವಾಗಿವೆ. ಆಯುಷ್ಕರ್ಮ ಮಾಡುವಾಗ ನಾಗಪ್ಪನು ಹೇಳಿದ ಮಾತುಗಳೆಲ್ಲ ಕಿವಿಯಲ್ಲಿ ಕಟ್ಟಿವೆ. ಅವನು ಹೇಗೆ ಮೊದಲು ದೈವುಳ್ಳವರ ಮಗನಾಗಿದ್ದನು, ಅವನ ತಂದೆಯು ಹೇಗೆ ದುಶ್ಚಟಗಳಿಗೆ ಬಿದ್ದು ಎಲ್ಲವನ್ನೂ ಹಾಳುಮಾಡಿ ಹೊಟ್ಟೆಗಿಲ್ಲದೆ ಹೆಂಡತಿಯನ್ನೂ ಮಗು-ನಾಗುವನ್ನೂ ಕರೆದುಕೊಂಡು ತಿರುಪಕ್ಕೆ ಊರೂರ ತಿರುಗತೊಡಗಿದನು, ಮುಂದೆ ಅದಕ್ಕೂ ಅಸಹಾಯನಾಗಿ ಸಿರಿಯೂರಲ್ಲಿ ಎಂಟುವರ್ಷದ ನಾಗುವನ್ನು ತೊರೆದು ಎಲ್ಲಿಯೋ ಹೇಗೆ ಹೋಗಿ ಬಿಟ್ಟನು, ಅಲ್ಲಿಂದ ಮುಂದೆ ಭಿಕ್ಷೆಯ ಬೇಸನಕ್ಕೆ ಹೇಸಿ ನಾಗುವು ಮೊದಲು ದನಕಾಯುವ ಹುಡುಗನಾಗಿ, ಮುಂದೆ ಹರೆಯಕ್ಕೆ ಬರುತ್ತಲೇ ಮುದುವ ನಾಪಿತನೊಬ್ಬನಿಂದ ಆಯುಷ್ಕರ್ಮವನ್ನು ಕಲಿತುಕೊಂಡು ಈಗ ಮೊನ್ನೆ ಮೊನ್ನೆ ಮದುವೆಯಾಗಿ ಸುಖದಿಂದ ಹೇಗೆ ಬಾಳುವೆ ಮಾಡುತ್ತಿರುವನು...ಈ ಈ ಚಿತ್ರಗಳು ಬೆಳಕಿಂಡಿಯ ಧೂಳಿಮಯ ಕಿರಣಗಳಲ್ಲಿ ಅವನ ಮುಂದೆ ದೃಶ್ಯರೂಪವಾಗಿ ತೋರುತ್ತಿರಲು, ತಾಯಿಯು "ಚಿಂತ, ಚಿಂತ" ಎಂದು ಒದರಹತ್ತಿದಳು. ನಾಲ್ಕು ಸಾರೆ ಒದರಿದಳು. ಓಕಾರವೇ ಇಲ್ಲ. ತಾಯಿಯು ತಾನೇ ಅಡರಿ ಬಂದು ಒಂದು ಪೇಲೆಯನ್ನು ತಂದಿಟ್ಟಳು. "ತಿನ್ನು ಚಿಂತ" ಎಂದು ಮುಂದಿನ ಕೆಲಸಕ್ಕೆ ತರಹರಿಸಿ ಹೋದಳು. ಚಿಂತಾಮಣಿಗೆ ಅದರ ಲಕ್ಷ್ಯವೇ ಇಲ್ಲ. ಪೇಲೆಯಲ್ಲಿಯ ಖಾದ್ಯವು ಒಣಗಿತು, ಒಣಗಿ ಸಂಡಗೆಯಾಯಿತು. ಚಿಂತಾಮಣಿರಾಯನು ಅದನ್ನು ತಿನ್ನಲೇ ಇಲ್ಲ, ಅವನ ಮನಸ್ಸನ್ನು ಏನೋ ಬೇರೆ ತಿನ್ನುತ್ತಿತ್ತು. ಅದು ತಿನ್ನುವಾಗ ಇವನಿಗಾಗುವ ಸಂಕಟವು ಮೋರೆಯ ಮೇಲೆ ಇಡಿಯಾಗಿ ಮೂಡುತ್ತಿತ್ತು. ಅದು ಸ್ವಲ್ಪ ವಿಶ್ರಮಿಸಿದಂತೆ ಮಾಡಲು ಮತ್ತೆ ಶಾಂತಕಳೆಯು ಮುತ್ತುತ್ತಿತ್ತು. ಹೀಗೆ ವಿಚಾರದ ಹುಲಿಯ ಕೈಯಲ್ಲಿ ಸಿಕ್ಕ ಹುಲ್ಲೆಯಾಗಿ ಚಿಂತಾಮಣಿಯು ಹಣ್ಣಾದನು. ಹತ್ತುಹೊಡೆದು ಹೋಯಿತು. "ಆಯಿತು, ಗುಡಸ್ಯೋ ಪರಿಪೇಟಿಕ" ಯೆಂಬಾತ ಹೆಂಡತಿಯೊಬ್ಬಳಿಲ್ಲ, ಅದೊಂದಾದರೂ ಒಳಿತೆಂದು ಕೋಣೆ ಬಿಟ್ಟು ಬಂಕಕ್ಕೆ ಹೋದನು. ನಿನ್ನಿನ ಆಟನೋಡವೆಗಳ ಪಾಡು ನೋಡಲಿಕ್ಕೆ ಬಂದ ಉಲ್ಲಾಸಮೂರ್ತಿಯು ತಾನೇ ಇಂದು ವಿದೂಷಕನಾಗಿ ತನ್ನ ಸ್ನೇಹಿತರಾಜನನ್ನು ಸಂತವಿಸಬೇಕು, ಉಲ್ಲಾಸಗೊಳಿಸಬೇಕೆಂದು ಸಿದ್ಧನಾಗಿ ಬಂದಿದ್ದನು. ಅನಾಯಾಸವಾಗಿ ಚಿಂತಾಮಣಿಯು ತಾನಿದ್ದಲ್ಲಿಗೆ ಸಾರಲು, "ಸಚಿಂತರಾಜ, ನಿನಗಾವ ವಿರಹವು ಬಾಧಿಸುತ್ತಿರುವದು ? ನೌಕರಿಯೆಂಬ ಅನಾಮಧೇಯ ರಾಜಕನ್ಯೆಯ ವಿರಹವೆ ? ಹಿಂದಿನ ರಾಜರು..." ಎನ್ನುವದಕ್ಕೆ ಚಿಂತಾಮಣಿಯು ಸಂತಪ್ತನಾಗಿ "ಸಾಕು, ಮೂರ್ತೀ, ಬರಬರುತ್ತ ಮೂರ್ಖಮೂರ್ತಿಯಾಗಬೇಡ."

"ಯಾಕೆ, ನಾನೇನು ನಿನಗೆ ಬೇಡಾದ್ದನ್ನು ಮಾಡುವೆನು ?"

"ಬೇಡಾದ್ದು ? ಎಲ್ಲವೂ ಬೇಡಾದ್ದು. ಮತ್ತೆ ವೇಷ, ಮತ್ತೆ ಸೋಗು, ಮತ್ತೆ ಅಸತ್ಯ, ನನಗೆ ಈ ಜಗತ್ತೇ ಬೇಡ"

"ಬೇಡಾದರೆ ಬಿಡು" ಎಂದು ಉಲ್ಲಾಸಮೂರ್ತಿಯು ತಮ್ಮ ಮನೆಯ ಹಾದಿಹಿಡಿದನು. ಚಿಂತಾಮಣಿಯು ಈಗ ಒಬ್ಬನೇ ಆದನು. ಒಬ್ಬನೇ ಇರುವದೆಂದರೆ ಅವನಿಗೆ ಬಹು ಪ್ರೀತಿ. ಆದರೆ ತಾಯಿಯು ನಡುನಡುವೆ ಅವನ ಏಕಾಂತಕ್ಕೆ ಅಡ್ಡಿಯಾಗಿ ಅಕ್ಕರೆಯ ಮಾತು ಆಡಿಯೂ ಅವನ ಮನಸ್ಸಿಗೆ ಅತಿಶಯವಾದ ವ್ಯಥೆ ಕೊಡುತ್ತಿದ್ದಳು. ಇದೊಳ್ಳೇ ವಿಪರೀತವಲ್ಲವೇ ! ಹನ್ನೊಂದಾಯಿತು. ಮೈಗೆ ಕೋಟುತಗಲಿಸಿ ಪದವೀಧರನು ಹೊರಬಿದ್ದನು. "ಸಂಜೆಯ ಗಾಳಿತಿನ್ನಲಿಕ್ಕೆ ಸಂಜೆಯಲ್ಲಿ ತಿರುಗುವುದು, ಮಧ್ಯಾಹ್ನದ ಗಾಳಿತಿನ್ನಲಿಕ್ಕೆ ಮಧ್ಯಾಹ್ನದಲ್ಲಿ ತಿರುಗುವುದು, ಇನ್ನುಮೇಲೆ ಹೊಟ್ಟೆಯ ಉದ್ಯೋಗದ ಚಿಂತೆ ಯಾಕೆ ?" ಎನ್ನುತ್ತ ಬಿರಿಗುಂಟ ನಡೆದನು. ಹಾದಿಮನೆಗಳಲ್ಲಿರುವ ಜನರ ಹೋರೆ-ಹೊಣೆಗಳನ್ನು ಚಿಂತಿಸುತ್ತ ಹಾಗೆಯೇ ಊರ ತುದಿಗೆ ಹೋದನು. "ಇವರಲ್ಲಿ ಸುಖಿಗಳ್ಯಾರು ?" ಎನ್ನುತ್ತ ತಿರುಗಿ ಗೃಹಾಭಿಮುಖನಾದನು. ಇವರನ್ನೇ ಕೇಳಿದರೆ ಯಾರೂ ಹೇಳುವದಿಲ್ಲ. ಅಂದರೆ ಈ ಊರಲ್ಲಿ, ಅದೇಕೆ ಈ ಭೂಮಿಯಲ್ಲಿ ಯಾರೂ ಸುಖಿಗಳೇ ಇಲ್ಲವೇ ! ಸುಖವೆಂದರಾದರೂ ಏನು ?...ಇಲ್ಲಿಂದ ವಿಚಾರಚಕ್ರವು ಇಮ್ಮಡಿಯಾಗಿ ಸುತ್ತುವರಿಯಹತ್ತಿತು. ಸುಖವೆಂದರೆ ದುಡ್ಡೇ, ಸುಖವೆಂದರೆ ಚಾಕರಿಯೇ, ಸುಖವೆಂದರೆ ಹೊಲಮನೆಯೇ, ಸುಖವೆಂದರೆ ಹೆಂಡಿರುಮಕ್ಕಳೇ, ಸುಖವೆಂದರೆ ದೊಡ್ಡಸ್ತಿಕೆಯೇ ? ......

ಯಾವುದೂ ಸರಿಬೀಳಲಿಲ್ಲ. ಸುಖದ ಪ್ರತಿಯೊಂದು ವ್ಯಾಖ್ಯೆಗೆ ಅಲ್ಲ, ಅಲ್ಲೆನ್ನುವ ದೃಷ್ಟಾಂತಗಳು ಕಣ್ಣೆದುರಿಗೆ ಹಾಯ್ದುವು. ಸುಖವೆಂದರೆ ದೊಡ್ಡಸ್ತಿಕೆಯೇ ? ಎಂಬುದೊಂದು ನಿರ್ಣಯ ಸಾಗುವದಿತ್ತು. ನಾಗಪ್ಪನ ಮನೆ ಬಂದಿತು. ಕಚೇರಿಯಲ್ಲಿ ಹನ್ನೆರಡರ ಕಡೆಯ ಘಣ್ಣು ಬಡೆಯಿತು. ನಾಗಪ್ಪನು ತನ್ನ ಮನೆಯ ಕಟ್ಟೆಯ ಮೇಲೆ ಅಂಗಿರುಮಾಲ ತೆಗೆದು ಮಾಂಸ ತುಂಬಿದ ಬಿರುಸು ತೋಳು, ಹರವಾದ ಎದೆ ತೆಗೆದುಕೊಂಡು ಜಳಕಕ್ಕೆ ಕುಳಿತಿರುವನು. ಹೆಂಡತಿಯು ಒಳಗಿನಿಂದ ಬಂದು ಒಗೆದ ವಸ್ತ್ರ ಕೊಡುವಳು. ನಾಗಪ್ಪನು ಎದ್ದು ನಿಂತು ಉಟ್ಟು ಕೊಳ್ಳುತ್ತಿರುವನು. ರತ್ನವ್ವ ಇದು ನಾಗಪ್ಪನು ತಾನೇ ತನ್ನ ಹೆಂಡತಿಗಿಟ್ಟ ಹೆಸರು. ಮೆಲ್ಲಗೆ ಬಾಗಿ ಗಂಗಾಳವನ್ನೂ ಚರಿಗೆಯನ್ನೂ ಎತ್ತಿ ಅಲ್ಲಿಯೇ ನಿಂತಳು. "ಒಳಗೆ ಹೋಗು, ಬಿಸಿಲಲ್ಲಿ ನಿಲ್ಲಬೇಡ, ಬಸಿರು ಬೇರೆ" ಎಂದು ನಾಗಪ್ಪನು ಆಡಲು ಒಳಗೆ ಹೋಗಲಿಲ್ಲ. ಬಿಸಿಲಿಗೆ ಹಿಡಿದ ಮೊಗವನ್ನು ನೆಲಕ್ಕೆ ತೋರಿಸಿದಳು. "ಈ ಹೊತ್ತು ನಿಮ್ಮ ಗಳಿಕೆ ?" ಎಂದು ತಾನು ನಿಂತ ನೆವವನ್ನು ತಿಳಿಸಲಿಕ್ಕೆ ಕೇಳಿದಳು. "ಎಂಟಾಣೆ." ರತ್ನವ್ವ ಹಿಗ್ಗಿದಳು. ಒಳ್ಳೇ ಹುದ್ದೆಯಿಂದ "ಈ ಹೊತ್ತು ಸಂತೆ, ನನಗೆ ಚಲೋ ಹಸರುಬಳೆ..." "ಸೈ ಸೈ" ಎಂದುತ್ತರ ಬಂದಿತು. ಚಿಂತಾಮಣಿಯ ಕಣ್ಣಲ್ಲಿ ನೀರು ಉಗ್ಗಿದಂತೆ ನಿಂತವು. ಅಲ್ಲ, ಅಲ್ಲ, ಸುಖವೆಂದರೆ ದೊಡ್ಡಸ್ತಿಕೆಯಲ್ಲ... ಎನ್ನುತ್ತ ತೀವ್ರವೇ ಮನೆಸೇರಿದನು.

(೩)

ಸಿರಿಯೂರಲ್ಲಿ ಈಗ ತಿಂಗಳಾಯಿತು, ನೀರಿನ ಕೊರತೆ. ಹೊಕ್ಕುತುಂಬುವ ಒಂದೇ ಬಾವಿಯಲ್ಲಿ ಸಾಕಷ್ಟು ನೀರು ದೊರೆಯಬಹುದಿತ್ತು. ಆದರೆ ಅದು ಬಹಳ ಅದಿರಿದ್ದಿತ್ತು. ಹೆಣ್ಣುಮಕ್ಕಳು ಸುಲಭವಾಗಿ ಇಳಿದು ಕೊಡತುಂಬುವ ಸೌಕರ್ಯ ಇರಲಿಲ್ಲ. ಗಂಡಸರು ಹತ್ತಿ ಇಳಿದು ಆದ ಅಡ್ಡ ತಿಡ್ಡ ಮಿಟ್ಟೆಗಳೇ ಮೆಟ್ಟಲುಗಳಾಗಿದ್ದವು. ಚಿಂತಾಮಣಿರಾಯನು ಒಂದುದಿನ ಮುಂಜಾವಿನಲ್ಲಿ ಆ ಬಾವಿಯ ಕಡೆಗೆ ತಂಬಿಗೆ ತೆಗೆದುಕೊಂಡು ಹೋಗಿ ಬಾವಿಯ ಸ್ಥಿತಿಗತಿಯನ್ನು ನೋಡಲಿಕ್ಕೆ ಅಲ್ಲಿಗೆ ಬಂದನು. ಇನ್ನೂ ಉರಿಯಪ್ಪನು ಉದಿಸಿರಲಿಲ್ಲ. ನೀರುಕಾಣದೆ ಎದೆಯುರಿಸುವ ಎಷ್ಟೋ ಹೆಂಗಳೆಯರು ಬಾವಿಯ ಮೇಲ್ಬದಿಯಲ್ಲಿ ನೆರೆದಿದ್ದರು. ಒಬ್ಬಿಬ್ಬ ದಿಟ್ಟೆಯರು ತಾವೇ ಇಳಿಯುವ ಸಾಹಸಮಾಡಿ ಕಾಲುನೋಯಿಸಿಕೊಂಡು ಮೇಲೆ ಬಂದರು. ಉಳಿದವರಿಗೆ ಧೈರ್ಯ ಸಾಲಲಿಲ್ಲ. ಕೆಚ್ಚೆದೆಯ ಗಂಡುಮಕ್ಕಳು ಬಂದರು, ಎರಡೆರಡು ಕೊಡ ತುಂಬಿ ಮಾರುತಿಯು ರಾಮಲಕ್ಷ್ಮಣರನ್ನು ಹೊತ್ತಂತೆ ಹೊತ್ತುಕೊಂಡು ನಡೆದರು. ಕೈಲಾಗದ ಹೆಣ್ಣುಮಕ್ಕಳನ್ನು ಕೇಳಬೇಕಾರು ? ಸೂರ್ಯನ ತಲೆಯು ಮೇಲೆದ್ದಿತು...ನಾಗಪ್ಪನು ಬಾವಿಗೆ ಬಂದನು. ತಾಸುಹಿಂದೆ ಎಷ್ಟೋ ಕೊಡಗಳನ್ನು ಒಯ್ದು, ಹಡೆವಿರುವ ಹೆಂಡತಿಯ ಶುಶ್ರೂಷೆಮಾಡಿ ಕಡೆಯ ಕೊಡಕ್ಕೆ ಬಂದಿದ್ದನು. ಚಿಂತಾಮಣಿರಾಯನನ್ನು ನೋಡಿ ನಮಸ್ಕರಿಸಿದನು. ಬಡ ಹೆಣ್ಣುಮಕ್ಕಳು ತಮ್ಮ ಗೋಳನ್ನು ಹೇಳಿಕೊಂಡರು. ನಾಗಪ್ಪನು ತಡೆಯದೇ ಅವರೆಲ್ಲರ ಕೊಡಗಳನ್ನು ತುಂಬಿ ತಂದು ತನ್ನದರೊಡನೆ ನಡಿಗೆ ಬಿಟ್ಟನು. "ಯಾಕೆ ಇಷ್ಟು ಅವಸರ ?" ಎಂದು ಚಿಂತಾಮಣಿಯು ಕೇಳಿದನು. "ಆಯುಷ್ಕರ್ಮ, ರಾಯರೇ" ಎಂದು ಮುಂದಾದನು. ಚಿಂತಾಮಣಿಗೆ ಮನಸ್ಸಿನಲ್ಲಿ ಮಿಗಿಲಾದ ತುಷ್ಟಿಯಾಯಿತು. ನಾಗಪ್ಪನಿಗೆ ತಿಳಿಯುವ ಅರ್ಥವು ಅವನ ಮಾತುಗಳಲ್ಲಿ ತುಂಬಿಕೊಂಡಿತ್ತು. ಚಿಂತಾಮಣಿಯೊಬ್ಬನೇ ಇದನ್ನು ಕಂಡನು. ಹಾದಿಯುದ್ದಕ್ಕೂ ನಾಗಪ್ಪನ ನಾಲ್ಕು ಶಬ್ದಗಳು ಕಿವಿಯ ಕೋಣೆಯನ್ನು ಮುತ್ತಿಬಿಟ್ಟಿದ್ದವು. ಯಾವುದೋ ಒಂದು ಶಬ್ದವು ಮರೆತು ಹೋಗಿ ತಿರುಗಿ ಧ್ಯಾಸಕ್ಕೆ ಬರಲು, ಅವನ್ನು ಪಠಿಸಿ ಪಠಿಸಿ ಗಟ್ಟಿಮಾಡುವಂತೆ ಚಿಂತಾಮಣಿಯು ನಾಗಪ್ಪನ ಕಿರುನುಡಿಯನ್ನು ತಿರುತಿರುಗಿ ನೆನೆಯುತ್ತ ವಾಡೆಯನ್ನು ಮುಟ್ಟಿದನು. ನಾಗಪ್ಪನ ಧ್ಯಾಸವು ಮಾತ್ರ ಬಿಡಲಿಲ್ಲ. ಏನೇನೆ ನೆವನಮಾಡಿ ಅವನ ಮನೆಯ ಮುಂದೆ ಹಾಯ್ದನು. ತಿಳಿಯದ ಹಾಗೆ ಮನೆಯಮುಂದಿನ ಆಲದಮರಕ್ಕೆ ಆನಿಕೆಯಾಗಿ ನಿಂತುಕೊಂಡನು. ಜಗತ್ತೆಲ್ಲ ಬೇಡಾದ ಅವನಿಗೆ ನಾಗಪ್ಪನ ಮನೆಯ ಒಂದು ಕಡ್ಡಿ ಸರಿಯುವದೂ ಬೇಕಾಗಿತ್ತು. ಸದ್ಯದಲ್ಲಿ ನಾಗಪ್ಪನ ಮನೆಯೇ ಅವನ ಜಗತ್ತು, ಈ ಜಗತ್ತಿನ ಜನರೇ ಅವನ ಬಂಧುಗಳು. ಇತ್ತ ನಾಗಪ್ಪನು ಕ್ಷೌರಕ್ಕಾಗಿ ನಾಲ್ಕೈದು ಸಾಹುಕಾರರ ಮನೆಗಳಿಗೆ ಹೋಗಿಬಂದು ಪಡಸಾಲೆಯಲ್ಲಿ ಕುಳಿತಿದ್ದನು. ನಾಲ್ಕೈದು ಜನ ಸುತ್ತು ಮುತ್ತು ನೆರೆದಿದ್ದರು. ಅವರೆಲ್ಲ ರೋಗಿಗಳು; ಒಬ್ಬನಿಗೆ ನಾರು, ಇನ್ನೊಬ್ಬನಿಗೆ ತಲೆಹುಣ್ಣು, ಮತ್ತೊಬ್ಬನಿಗೆ ಮಂಗನಬಾವು...ಹೀಗೆಯೆ ಬೇನೆಗಳ ಚಿಕ್ಕ ಸಭೆಯು ಕೂಡಿತ್ತು. ಇವರೇಕೆ ಇಲ್ಲಿ? ಎಂದು ಚಿಂತಾಮಣಿಯು ಚಿಂತಿಸುವಲ್ಲಿ, ನಾಗಪ್ಪನು ಒಳಗಿನಿಂದ ಬೇರೆ ಬೇರೆ

ತೊಪ್ಪಲದ ಹಿಡಿಗಳನ್ನು ಅವರಿಗೆ ತಂದು ಕೊಟ್ಟನು. ರೋಗಿಗಳು ಎದ್ದರು. "ನಾಗಪ್ಪನು ರೋಗಚಿಕಿತ್ಸಕನೂ ಹೌದೇ?" ಎಂದು ಚಿಂತಾಮಣಿಯು ಅವನ ವಿಷಯದಲ್ಲಿ ಮತ್ತಿಷ್ಟು ನೋಹ ತಾಳಿದನು. ಅವನ ಮನೆಯನ್ನು ನೋಡುವ ಆಸೆ ಆವನಿಗೆ ಹಿರಿದಾಯಿತು. ಕಡೆಗೆ ನೆವನವೊಂದನ್ನು ಹುಡುಕಿದನು. "ನಾಗಪ್ಪ, ಕಾಲಲ್ಲಿ ಆನೆ ಬೆಳೆದದೆ...ಜಗತ್ತಿಗೆ ವೈದ್ಯನಾಗಿ ನೀನು ನಮ್ಮನ್ನೇ ಮರೆಯುವದೇನು ?" "ಬರ್‍ರಿ ನಾಡಗೌಡರೇ, ಅದಕ್ಕೇಕೆ ಔಷಧ? ಕಾಲಲ್ಲಿಯೇ ಸಿಕ್ಕ ಆನೆಯನ್ನು ತುಳಿದು ಬಿಡಿರಲ್ಲ !"

ಚಿಂತಾಮಣಿಯು ನಿಜವಾದ ಮುಗುಳ್ನಗೆಯಿಂದ ನಾಗಪ್ಪನ ಒಳಮನೆಯ ಹಸನವನ್ನು ಕಣ್ಣು ಹಿಗ್ಗಿಸಿ ನೋಡಹತ್ತಿದನು. "ನಮ್ಮ ಮನೆಯಲ್ಲಿ ಏನಿದೆ, ನಾಡಗೌಡರೇ, ನಿಮ್ಮ ವಾಡೇದ ಒಂದು ಕಂಬದಲ್ಲಿ ನನ್ನ ಮನೆಯ ತೊಲೆಗಳೆಲ್ಲ ಆಗುವವು." "ಆದರೆ, ನಾಗಪ್ಪ, ಸಾವಿರ ನಾಡಗೌಡರ ಮನೆ ಕೂಡಿಸಿದರೂ ನಿನ್ನ ಮನೆ ಬೆಲೆಬಾರದು." "ಅದು ಯಾಕೆ?" "ಯಾಕಂದರೆ ! ಇದರಲ್ಲಿ ನೀನಿರುವಿ !" "ನಾನ್ಯಾರು ದಣಿಯರೇ !" "ಹಾಗೆನ್ನಲಾಗದು, ನಾಗಪ್ಪ, ನೀನೆಂದರೆ ಆಯುಷ್ಕರ್ಮ ತಿಳಿದವನು !" ಇಷ್ಟರಲ್ಲಿ ನಾಗಪ್ಪನು ಎದ್ದುಹೋಗಿ ಹೆಂಡತಿಯ ಮಗ್ಗುಲಿಂದ ತನ್ನ ಮಗುವನ್ನು ಎತ್ತಿತಂದು ಚಿಂತಾಮಣಿಯ ತೊಡೆಯಮೇಲಿರಿಸಿ "ಇದು ನನ್ನ ಹೊಸ ಹತ್ತುಗಡೆ" ಎಂದು ಹಿಗ್ಗಿ ಹೇಳಿದನು. "ಹೌದು, ನಾಗಪ್ಪ, ನಿನ್ನ ಹೆಡೆಗೆ ಇದು ಹೆಚ್ಚಿನ ರತ್ನ ನೋಡು" ಎಂದು ಕರಿದಾದರೂ ಕಟೆದಂತಿದ್ದ ಕೂಸನ್ನು ಕಂಡು ನಲಿದು, ಚಿಂತಾಮಣಿಯು ಪುನಃ ತನ್ನ ದುಃಖದ ಬೀಡಿಗೆ ಹೋದನು. ಊಟಮಾಡಿ, ಬೇರೆ ಕೆಲಸವಿಲ್ಲದೆ ನಿದ್ದೆಮಾಡಿ ಎದ್ದು ಮೋರೆ ತೊಳೆಯುತ್ತಿದ್ದನು. ನಾಗಪ್ಪನೂ ಹಲವು ಊರ ಹಿರಿಯರೂ ಬುದುಬುದುಗಟ್ಟಿ ಬಂದರು. "ನಾಡಗೌಡರೇ ಪಟ್ಟಹಾಕಿರಿ, ನಿಮ್ಮ ದೊಡ್ಡ ಕೈ ಮುಂದೆ ಬರಲಿ" ಎಂದು ನಾಗಪ್ಪನು ಆಡಿದನು. "ಇದೇತಕ್ಕೆ?" "ಈ ಹೊತ್ತು ಬೈಲಾಟ, ಸರಕಸ್ಸು ಮಾಡುತ್ತೇವೆ, ಹಣಮಪ್ಪನ ಮುಂದೆ" 'ಹುಂ. ಕಲಿಸಿದವರಾರು?" "ನಾನು." "ಭಲೆ, ನಾಗಪ್ಪನಿಗೆ ಆಡುವದೂ ಆಡಿಸುವದೂ ಎರಡೂ ಗೊತ್ತೇನು ? ತಂದೆಯವರು ಬರಲಿ". ಎಂದು ಹೇಳಿದ್ದಕ್ಕೆ ಉಳಿದವರು ನಡೆದರು. ನಾಗಪ್ಪನೂ ಇನ್ನೊಬ್ಬ ಓರಿಗೆಯವನೂ ನಿಂತಿದ್ದರು. "ಪಟ್ಟಿ ಕೂಡಿಸಲಿಕ್ಕೆ ನಾಗಪ್ಪನೇಕೋ ?" ಎಂದು ಚಿಂತಾಮಣಿಯು ಇನ್ನೊಬ್ಬನಿಗೆ ಕೇಳಿದನು. "ಹಾಗೆಂದರೇನು, ನಾಡಗೌಡರೇ, ನಾಗಪ್ಪನಿಲ್ಲದಿದ್ದರೆ ಈ ಊರ ಪುಂಗಿಯು ಬಂದೇ !" "ಇದು ಆಯುಷ್ಕರ್ಮ, ನಿಜವಾದ ಆಯುಷ್ಕರ್ಮ" ಎನ್ನುತ್ತ ಪ್ರಫುಲ್ಲಿತ ಮುದ್ರೆಯಿಂದ ಚಿಂತಾಮಣಿಯು ತನ್ನ ಕೋಣೆಹೊಕ್ಕನು.

(೪)

ಉಲ್ಲಾಸಮೂರ್ತಿಯು ಬಹಳ ದಿವಸಗಳವರೆಗೆ ನಾಡಗೌಡರ ಮನೆಯ ಹೊಸತಿಲವನ್ನೇ ಏರಿರಲಿಲ್ಲ. ಇದರ ಕಾರಣವು ಚಿಂತಾಮಣಿಗೆ ಗೊತ್ತಿತ್ತು. ಆದರೆ ಚಿಂತೆಯ ಮೊಟ್ಟೆಯಾದ ತಾನು ಅಂಥ ತುಂಬುನಗೆಯ ತೊರೆಯನ್ನು ಯಾಕೆ ಕದಡಿಸಬೇಕೆಂದು ಚಿಂತಾಮಣಿಯು ಸುಮ್ಮನಾಗಿದ್ದನು. ಆದರೆ ನಾಗಪ್ಪನ ನಡತೆಯ ಮೋಡಿಯು ತರುಣ ನಾಡಗೌಡನ ಹೃದಯವನ್ನು ತಿರುಗಿ ತಂದಿತ್ತು. ಕಡೆಗೊಮ್ಮೆ ಅವನೇ ಹೋಗಿ ಗೆಳೆಯನನ್ನು ಕಂಡು ಮನ್ನಿಸಬೇಕೆಂದು ಕೇಳಿಕೊಂಡನು. "ಛೇ, ಗೌಡರನ್ನು ಮನ್ನಿಸಲಿಕ್ಕೆ ಒಲೆಕಾರರೆಷ್ಟು ?" ಎಂದು ಉಲ್ಲಾಸ ಮೂರ್ತಿಯು ಮೂದಲಿಸತೊಡಗಿದನು. "ಹಾಗೆನ್ನಬೇಡ, ಮೂರ್ತೀ, ಅವೆಲ್ಲ ಭೇದಗಳು ಸುಳ್ಳು, ಸ್ನೇಹವೊಂದೇ ಸತ್ಯ." ಹೂಂ ಹುಂ ಎನ್ನುತ್ತ ಮೂರ್ತಿಯು ಸ್ವಲ್ಪ ಬೇರೆಯಾದ ಸ್ನೇಹಿತನ ವೃತ್ತಿಯನ್ನು ಕಂಡು ತಿರುಗಾಡಲಿಕ್ಕೆ ಅವನ ಸಂಗಡ ಹೊರಟನು. ಹಾದಿಯಲ್ಲೆಲ್ಲ ಇಬ್ಬರೂ ತಟಸ್ಥ. ಏನೆಂದರೆ ಏನೆನ್ನುವನೋ ಎಂದು ಮೂರ್ತಿಯು ಸ್ತಬ್ಧ. ಚಿಂತಾಮಣಿಯಂತೂ ಯಾವಾಗಲೂ ವಿಚಾರಕ್ಷೇತ್ರದಲ್ಲಿ ಏನಾದರೂ ಬಿತ್ತುತ್ತಲಿರುವವ. ತಿರುಗಾಡಿಬಂದರು. "ನಾಳೆ ಕರೆಯಲಿಕ್ಕೆ ಬರುತ್ತೇನೆ, ಚಿಂತಾಮಣಿ, ನಮ್ಮ ಮನೆಗೆ ಊಟಕ್ಕೆ ಬರಬೇಕು." "ಆಗಲಿ." ಇಬ್ಬರೂ ಅಗಲಿದರು.

ಮಾರನೆಯ ದಿವಸ ಊಟದ ಹೊತ್ತಿಗೆ ಸ್ನೇಹಿತರಿಬ್ಬರೂ ಮೂರ್ತಿಯ ಮನೆಯ ಕಡೆಗೆ ನಡೆದಿದ್ದಾರೆ. ತಾನೇ ಅರಳುತ್ತಿರುವ ಗೆಳೆಯನ ಮೊಗವನ್ನು ನಗೆಯಿಂದ ಹಿಗ್ಗಿಸಿ ಬಿಡುವ ಹೊತ್ತು ಬಂದಿತೆಂದು ಮೂರ್ತಿಯು ಉಬ್ಬಿನಲ್ಲಿ ನಡೆದಿರುವನು. ಅವನ ಜತೆಗೂಡಿರುವ ಚಿಂತಾಮಣಿಯು ಯೋಚನೆಯ ಸೀಮೆಯಲ್ಲಿ ಮನಸ್ಸನ್ನು ಮೇಯಬಿಟ್ಟು ಯಂತ್ರಬದ್ಧನಾಗಿ ಕಾಲು ಹಾಕುತ್ತಿದ್ದನು. ಮೂರ್ತಿಯ ಮನೆ ಬಂದಿತು. ಪಾವಟಿಗೆ ಹತ್ತುವಾಗ ಗತಿಭೇದವಾಗಿ ಚಿಂತಾಮಣಿಗೆ ಎಚ್ಚರವಾಯಿತು. ಸುತ್ತುಮುತ್ತು ನೋಡಿದನು. ಮೂರ್ತಿಯ ಸಿಂಗಾರವಾದ ಕೋಣೆ, ಊದಬತ್ತಿಯ ಹೊಗೆಯು ಮೂಗಿನೆಡೆಗೆ ನುಸು

ಳುತ್ತ ದಂಡಿನವರಂತೆ ಸುಳಿದಾಡುತ್ತಿತ್ತು. ಅಡಿಗೆಮನೆಯ ಹೊಗೆಯು ಪ್ರತಿಸ್ಪರ್ಧಿಯಾಗಿ ಕೋಣೆಯ ಬಾಗಿಲವರೆಗೆ ಬಂದು ಬೀಡುಬಿಟ್ಟಿತ್ತು. "ಇದೆಷ್ಟು ಶ್ರಮ ನಿನಗೆ" ಎಂದು ಚಿಂತಾಮಣಿಯು ಆರಾಮ ಕುರ್ಚಿಯಮೇಲೆ ಕೂಡುತ್ತ ಆಡಿದನು. "ಛೇ, ಗೆಳೆಯನ ಸಂತೋಷಕ್ಕಾಗಿ ಇನ್ನೇನು ಬೇಕಾದರೂ ಮಾಡಬಹುದು." ಮರುಕ್ಷಣವೇ ಬಹು ಬೆಲೆಯ ತನ್ನ ಧ್ವನಿಯಂತ್ರವನ್ನು ತೆಗೆದು ಮನೋಹರವಾದ ಪ್ಲೇಟುಗಳನ್ನು ಹಚ್ಚಿದನು. "ಎಲೆಹಾಕಿ ಆಯಿತು" ಎಂದು ಹೆಂಡತಿಯ ಮೆಲ್ಲುಲಿಯು ಯಂತ್ರದ ಸ್ವರಕ್ಕಿಂತ ಮಧುರವಾಗಿ ಕೇಳಲು, ಇಬ್ಬರೂ ಊಟಕ್ಕೆ ಎದ್ದರು. ಎಲೆಯಲ್ಲಿ ಬಡಿಸಿದ ಭೋಜ್ಯರಸಕ್ಕೆ ರಂಗವಲ್ಲಿಯ ಅಲಂಕಾರವು ಸುತ್ತುಗಟ್ಟಿತ್ತು. ಊದಬತ್ತಿಯು ಇಲ್ಲಿಯೂ ತನ್ನ ಧ್ವಜಸ್ತಂಭಗಳನ್ನು ನಿಲ್ಲಿಸಿತ್ತು. ಇಬ್ಬರೂ ಕುಳಿತರು. ಮಧ್ಯದಲ್ಲಿ ಮೂರ್ತಿಯ ಮೂರುವರ್ಷದ ಚಿನ್ನ ಕುಳಿತನು. ಯಾವುದೂ ಕುಂದಿಲ್ಲದ ಅಡಿಗೆ. ಬಡಿಸುವವರು ಮೂರ್ತಿಯ ಆಕೆ. ಎಡೆಬಿಡದೆ ನಡೆದಿರುವ ಚಿನ್ನನ ನಗೆನಗಿಸುವ ತೊದಲು ಮಾತು. ಇದೆಲ್ಲವೂ ಕಡಿಮೆಯಾದರೆ, ಸಂಸ್ಥಾನಿಕರ ಕಥೆಗಳನ್ನು ಹೇಳುವ ಮೂರ್ತಿ. ಹೀಗೆ ಸೊಗಸಾಗಿ ಭೋಜನ ನಡೆದಿತು. "ಸಂಸಾರದಲ್ಲಿ ಇದ್ದಷ್ಟರಲ್ಲಿಯೇ ಸುಖಬಡಬೇಕು, ಚಿಂತಾಮಣೀ" ಎಂದು ಖೀರು ಸುರಿಯುತ್ತ ಮೂರ್ತಿಯು ಆಡಿದನು. "ಹೌದು, ಆದರೆ ಆ ಸುಖದ ಬೆಳೆಗೆ ನಮ್ಮ ಮೈಬೆವರಿನ ಮಳೆ ಬೀಳಬೇಕು," ಮೂರ್ತಿಯು ಮುಂದೆ ಆಡಲಿಲ್ಲ. ಊಟತೀರಿತು, ಲಗುಬಗೆಯಿಂದ ವೀಳ್ಯವನ್ನು ಗ್ರಹಿಸಿದ್ದಾಯಿತು, ಊದಬತ್ತಿಗಳು ಆರಿದವು, ಧ್ವನಿಯಂತ್ರವು ಮೂಕವಾಯಿತು. ಚಿಂತಾಮಣಿಯು ಕೋಟುಹಾಕಿದನು. "ಇಷ್ಟು ಅವಸರವೇಕೆ! ಚಿಂತಾಮಣೀ" ಮೂರ್ತಿಯು ಕೇಳಿದನು. "ಆಗುವದೆಲ್ಲ ಆಯಿತಲ್ಲ." "ಆಯಿತು, ಆದರೆ ಈ ಹೊತ್ತಿನ ಈ ಊಟವೂ ಸೋಗಿನಾಟವೇ?" "ಅಲ್ಲ." "ಹಾಗಾದರೆ ನೀನೇಕೆ ನಗಬಾರದು?" "ನನಗೆ ಕಾಣಬೇಕಾದ್ದಿನ್ನೂ ಕಂಡಿಲ್ಲ." "ಓಹೋ, ಮನೆಗೆ ಮೊದಲಗಿತ್ತಿ ಬಂದರೆ ಆಗ ಕಾಣುವಿ!" "ಸಾಕು ಬಿಡು, ಮೂರ್ತೀ!" ಎಂದು ಚಿಂತಾಮಣಿಯು ಹೊಸತಿಲ ದಾಟಿದನು.

"ತಿಳಿಯಿತು, ನಿನ್ನ ಲಗ್ನವಾದರೆ ನಿನಗಿನ್ನು ನಗೆ, ನಮ್ಮ ಕೈಮೀರಿತು."

"ಆಗಲಿ, ಆಗುವದಿದ್ದರೆ ಅದೂ ಬಂದೇಕೆ ಬೇಡ!"



ಚಿಂತಾಮಣಿಯು ಅನುತ್ತರನ್ನುತ್ತ ನಡಿಗೆಯ ಸೆಳವಿಗೆ ಬಿದ್ದಿದ್ದನು.

( ೫ )

ಚಿಂತಾಮಣಿರಾಯನ ಆಯುಷ್ಕರ್ಮ ಮತ್ತೆ ಬೆಳೆಯಿತು. ವಿಚಾರದ ಬೇನೆಯು ಅವನ ವೈಕೊರಗಿಸಿತ್ತು. ಮೇಲೆ ಕೂದಲುಗಳು ಮನಸ್ಸಿನ ಸಹಸ್ರಚಿಂತೆಗಳ ಪ್ರತಿಕೃತಿಗಳಂತೆ ತಲೆಗೆ ಅವಚಿಕೊಂಡಿದ್ದವು. ಅವನ್ನೆಲ್ಲ ಕಿತ್ತೊಗೆಯಬೇಕಾಗಿತ್ತು. ಆದರೆ ತನ್ನ ದುಃಖದ ಚಿತ್ರವನ್ನು ಇನ್ನಿಷ್ಟು ನೋಡಲೆಳಸಿದನು. ಏನೋ ಅವನು ಎರಡುಮೂರು ದಿವಸ ಹಾಗೆಯೇ ದಾಟಿಸಿದನು. ಇಂದುಮಾತ್ರ ಸಿರಿಯೂರ ಸಂತೆ. ಆಯುಷ್ಕರ್ಮವನ್ನು ಈದಿನ ತೀರಿಸಿಯೇ ಬಿಡಬೇಕೆಂದು ಚಿಂತಾಮಣಿಯು ಗಟ್ಟಿ ಮಾಡಿದ್ದನು. ಬೆಳಿಗ್ಗೆ ಏಳು ಹೊಡೆದರೂ ನಾಗಪ್ಪನು ಬರಲಿಲ್ಲ. ಅದೇಕೋ ಎಂದು ತಾನೇ ಕರೆಯಲಿಕ್ಕೆ ಹೋದನು. ನಾಗಪ್ಪನ ಮನೆ ಇನ್ನೂ ನಾಲ್ಕುಹೆಜ್ಜೆ ಇತ್ತು. ನಾಗಪ್ಪನು ಮನೆಯೆದುರಿರುವ ಜಾಲಿಯ ಗಿಡದ ಬುಡಕ್ಕೆ ತನ್ನ ಶಸ್ತ್ರಾಸ್ತ್ರಗಳ ಸಹಿತ ಕುಳಿತಿದ್ದನು. ಸುತ್ತುಮುತ್ತು ಹೊಲಕ್ಕೆ ಹೋಗುವ ಅವಸರವಿಡುವ ಒಕ್ಕಲಿಗರು, ತಲೆಯಲ್ಲಿ ಹುಣ್ಣು ಬೆಳೆದ ಹುಡುಗಿಯನ್ನು ಕರೆದುತಂದ ಅಡವಿಚಿಂಚೆಯೊಬ್ಬಳು, ಹೊಸ ಪದ್ಧತಿಯಿಂದ ಕೂದಲ ಕತ್ತರಿಸಿಕೊಳ್ಳಬೇಕೆಂದು ಬಯಸುವ ಚಹದಂಗಡಿಯ ಚಾಕರನು, ಹೀಗೆ ಕುಳಿತಿದ್ದರು. ಆ ಹುಣ್ಣುಳ್ಳ ಹುಡಿಗೆಯ ಕ್ಷೌರ ನಡೆದಿತ್ತು. ಅದು ಒಂದೇಸವನಾಗಿ ಹಲುಬುತ್ತಿತ್ತು. ಆದರೆ ಕೆಲಸಿಗರಲ್ಲಿ ಜಾಣನಾದ ನಾಗಪ್ಪನಿಗೆ ಅವರ ಪರಿವೆ ಇಲ್ಲ. ಅವನು ಶಾಂತಮುದ್ರೆಯಿಂದ ತನ್ನ ಕೆಲಸ ನಡೆಸಿದ್ದನು. ಅಷ್ಟರಲ್ಲಿ ಮನೆಯ ಬಾಗಿಲಿನಿಂದ ಅಂಬೆಗಾಲಿಕ್ಕುತ್ತ ಮುಂಗುಸಿಯಂತೆ ನಾಗಪ್ಪನ ಮಗು ನಾಗಪ್ಪನ ಸ್ಥಳಕ್ಕೆ ಬಂದಿತು. ಅವನ ಪೆಟ್ಟಿಗೆಯಲ್ಲಿ ಕೈಹಾಕಿ ಒಂದೊಂದೆ ಶಸ್ತ್ರಕ್ಕೆ ಕೈಯಿಕ್ಕತೊಡಗಿದನು. ನಾಗಪ್ಪನು ಮೊದಲು ಬರೀ ಜಬರಿಸಿದನು. ಕೇಳಲಿಲ್ಲ. ಕೈಯೆರಡೂ ಕೆಲಸದಲ್ಲಿ. ಕಡೆಗೆ ಕಾಲಿನಿಂದ ಕನ್ನಡಿಯನ್ನು ಕೊಟ್ಟು ನಾಗಪ್ಪನು ಮಗುವನ್ನು ತಣ್ಣಗೆ ಕೂಡಿಸಿದನು. ಅದೇ ಹೊತ್ತಿಗೆ ಹೊಂದಿ ಚಿಂತಾಮಣಿಯು ಹತ್ತರಬಂದನು. "ನಾಗಪ್ಪ, ಹಾಗೆ ಮರೆಗೆ ಹಾಕಬೇಡ. ನಿನ್ನ ಜೀವದ ರತ್ನವನ್ನು ತಲೆಯ ಮೇಲಿಟ್ಟುಕೊಂಡು ಕುಣಿಯಬೇಕು." ಹೀಗೆನ್ನುತ್ತಲೆ ಎಲ್ಲಿಂದಲೋ ಸೆಲೆಯೊಡೆದ ಝರಿಯಂತೆ ಚಿಂತಾಮಣಿಗೆ ನಗೆ ಬಂದಿತು. ಅಷ್ಟರಲ್ಲಿ ಇದುರಿಗೆ ಮೂರ್ತಿಯು ಕಂಡನು; ಅವನು

ಅತಿಶಯವಾಗಿ ಹುಚ್ಚುನಗೆ ನಕ್ಕು " ಏನು, ಚಿಂತಾಮಣೀ ನಿನ್ನ ಆ ಸುಖದ ಆಟವು ಇಂದು ನಿನ್ನ ದೃಷ್ಟಿಗೆ ಬಿದ್ದಿತಲ್ಲವೆ ! " " ಇರಬಹುದು " ಎಂದು ಚಿಂತಾಮಣಿಯು ನಾಗಪ್ಪನತ್ತ ಮೋರೆ ತಿರುವಿ "ಬೇಗ ಬಾ" ಎಂದು ಹೇಳಿದನು. ಮೂರ್ತಿಯು ತನ್ನ ಕಟುಕಿಯನ್ನು ಬಿಡದೆ " ಚಿಂತಾಮಣೀ, ಈ ಜಾಲಿಯಗಿಡದ ಬುಡದಲ್ಲಿ ನಡೆದ ಸಂಸಾರವು ನಿನ್ನ ನಿಜವಾದ ಸುಖದ ಆಟವೇ ! " ಎಂದು ಒತ್ತಿ ಒತ್ತಿ ಕೇಳಿದನು. "ಅದು ನಿನಗೀಗ ತಿಳಿಯದು " ಎಂದು ಚಿಂತಾಮಣಿಯು ವಾಡೆಯ ಕಡೆಗೆ ಸಾಗಿದನು. "ಹೋಗಲಿ, ಸಂಜೆಯಮುಂದೆ ತಿರುಗಾಡಲಿಕ್ಕೆ ಬರಲೇ !" ಓಹೋ ಎಂದು ಚಿಂತಾಮಣಿಯು ಮನೆಯ ಕಂಡನು. ನಾಗಪ್ಪನು ಹತ್ತುಗಂಟೆಗೆ ಬಂದನು. ಅವನು ಕ್ಷೌರಮಾಡಿದಂತೆ ಚಿಂತಾಮಣಿಯ ಒಂದೊಂದು ಚಿಂತೆಯು ಕರಗುತ್ತಿತ್ತು. ಒಂದೊಂದು ಮೊಗ್ಗೆಯು ಮೋರೆಯಮೇಲೆ ಮೂಡುತ್ತಿತ್ತು. ಎಲ್ಲ ಕ್ಷೌರವಾಯಿತು. ಚಿಂತಾಮಣಿಯ ಮೊಗವೆಲ್ಲ ಪ್ರಫುಲ್ಲವಾಯಿತು. ಯಾವುದೋ ಒಂದು ದೃಢನಿಶ್ಚಯದಿಂದ ಅವನು ಎದ್ದನು. ತಂದೆಯವರು ಬಂಕದಲ್ಲಿ ಕುಳಿತಿದ್ದರು. ಸಂತೆಯ ದಿನವೆಂದರೆ ಅವರು ಊರಲ್ಲಿ ಇರುವದೇ ಇಲ್ಲ. ಎಂದಾದರೂ ಇದ್ದರೆ ಸಂತೆಗೆ ಜನ ನೆರೆದಷ್ಟು ಯೋಚನೆಗಳು ಅವರ ತಲೆಯಲ್ಲಿ ನೆರೆಯುತ್ತವೆ. ಹಾಲಿನವರೂ ಮೊಸರಿನವರೂ ರೊಕ್ಕಕೇಳಿ ಹೋಗಿದ್ದರು. ನಾಗಪ್ಪನು ಬಗಲಲ್ಲಿ ಪೆಟ್ಟಿಗೆ ಸಿಗಿಸಿ ಎಡಗೈಯಲ್ಲಿ ತನ್ನ ವಸ್ತ್ರವನ್ನೂ ಬಲಗೈಯಲ್ಲಿ ಕೂದಲುಗಳ ಜೊಂಪನ್ನೂ ಹಿಡಿದು ರಾಯರಕಡೆಗೆ ಮೊಗಮಾಡಿ ನಿಂತನು. ಒಂದು ನಿಮಿಷವಾಯಿತು. ಒಳಗಿನಿಂದ ಎಣ್ಣೆ ಹಚ್ಚಿಕೊಳ್ಳುತ್ತ ಚಿಂತಾಮಣಿಯು ಬಂದನು. " ನಾಗಪ್ಪ, ಈಗ ನೀನು ಹೋಗು, ಈ ನನ್ನ ಆಯುಷ್ಕರ್ಮದ ಹಣವನ್ನು ನಾನೇ ನಿನಗೆ ಮುಟ್ಟಿಸುವೆನು. " ನಾಗಪ್ಪನು ಹೋದನು. " ಅಪ್ಪ, ನಾಳಿನಿಂದ ಎರಡು ಹೊಲಗಳನ್ನು ನನಗೆ ಬಿಟ್ಟುಕೊಡಿರಿ. ನಾನೇ ಅವುಗಳಲ್ಲಿ ದುಡಿದು ಗಳಿಸುವೆನು. " " ಆದರೆ ನಿನಗೆ ಅದರ ಅನುಭವವಿಲ್ಲ. " " ಇಲ್ಲದಿದ್ದರೆ ಸುರಿತವನೊಬ್ಬನು ಜತೆಗಾರನಾಗಲಿ, ಎರಡು ವರುಷ ಬೆಳೆಕೆಡಬಹುದು, ಮುಂದೆ ಈ ಒಕ್ಕಲಿಗನ ಕೈಹಿಡಿಯುವವರಾರು ? "

" ಅದು ಸರಿ, ಆದರೆ, ಚಿಂತಾ, ನಾವು ನಾಡಗೌಡರು..."

" ಅಷ್ಟು ಬೇಡ, ಇನ್ನುಮೇಲೆ ಈ ಹೆಸರಿನ ಶ್ರೀಮಂತಿಕೆಯು ಬೇಡ. ಮನೆಯತುಂಬೆಲ್ಲ ಬಡತನದ ಜೇಡಗಳು ಪಸರಿಸಿರುವಾಗ ಮನೆಯಹೊರಗೆ ಸುಣ್ಣದ ಪಟ್ಟೆಗಳನ್ನೆಳೆದರೆ ಅದು ನಾಡಗೌಡಿಕೆಯೇ ? " ಇಷ್ಟಕ್ಕೆ ತಾಯಿಯು ಊಟಕ್ಕೆ ಎಬ್ಬಿಸಿದಳು. ಚಿಂತಾಮಣಿಯು ಇಂದೇ ತಿಂದದ್ದು ಒಂದು ಇಡೀ ಬಕ್ಕರಿಯನ್ನು. ಊಟವಾಯಿತು. ತಾನು ಸ್ವತಃ ಹರಗಬಹುದಾದ ಹೊಲಗಳನ್ನು ಚಿಂತಾಮಣಿಯು ಗೊತ್ತುಮಾಡಿಕೊಂಡನು. ಅವು ಊರ ಸನಿಯದಲ್ಲಿಯೇ ಇದ್ದವು. ಬೇಸಿಗೆಯು ತೀರಬಂದಿತ್ತು. ಅವುಗಳಿಗೆ ಮುಂದೆಲ್ಲ ಮಾಡಬಹುದಾದ ಚಾಕರಿಯನ್ನು ತಂದೆಯ ಬಾಯಿಂದ ಕೇಳಿಕೊಂಡನು. ಸಂಜೆಗೆ ಮೂರ್ತಿಯು ಬರಲು, ಇಬ್ಬರೂ ತಿರುಗಾಡಲಿಕ್ಕೆ ಹೋದರು.

ಈಹೊತ್ತು ಚಿಂತಾಮಣಿಯು ಬಾಯತುಂಬ ಮಾತು ಆಡುತ್ತಿರುವ. ಆ ಉದ್ಯೋಗ, ಈ ಉದ್ಯೋಗ ಮುಂತಾದ ಜಗತ್ತಿನ ಇತಿಹಾಸವನ್ನೇ ಮೂರ್ತಿಗೆ ಹೇಳುತ್ತಿರುವ. ಇಬ್ಬರೂ ನಾಡಗೌಡರ ಒಂದು ಹೊಲಕ್ಕೆ ಬಂದರು. ನಿತ್ಯದಲ್ಲಿ ಇಲ್ಲಿಗೆ ತಿರುಗಾಡಲಿಕ್ಕೆ ಬರುವದಿತ್ತು. ಆದರೆ ಇಂದು ಯಾಕೋ ಯಜ್ಞಭೂಮಿಯನ್ನು ಹೊಕ್ಕಷ್ಟು ಮುದಿಮನದಿಂದ ಚಿಂತಾಮಣಿಯು ಒಡ್ಡುದಾಟಿದನು. ಹೊಲವನ್ನು ನಾಲ್ಕೂಕಡೆಗೆ ನಿಟ್ಟಿಸಿ ನೋಡಿದನು. " ಮೊದಲು ಇಲ್ಲಿ ನಟ್ಟುಕಡಿಸಬೇಕು " ಎಂದು ಮೂರ್ತಿಯು ಹೊಲಮಾಡಿದವನ ಜಾಣ್ಮೆಯಿಂದ ಹೇಳಿದನು. ಚಿಂತಾಮಣಿಯು ಅದಕ್ಕೆ ಕೆರಳಿ " ಮೂರ್ತೀ, ಇನ್ನು ಕಡಿಸಬೇಕೆಂಬ ಮಾತೇ ಬೇಡ. ಆಳುಮಕ್ಕಳೊಡನೆ ನಿಂತು ನಾನೇ ಕಡಿಯಬೇಕು, ನಾನೇ ದುಡಿಯಬೇಕು. " " ಉಂಹು. " ಇಬ್ಬರೂ ತಿರುಗಿದರು. ನಾಡಗೌಡರ ಮನೆಗೆ ಎರಡು ಮೂರು ಹಾದಿಗಳಿದ್ದರೂ ಚಿಂತಾಮಣಿಯು ಒಂದೇ ಹಾದಿಯಿಂದ ಹೋಗುತ್ತಿದ್ದನು. ಅದು ನಾಗಪ್ಪನ ಹಾದಿ. ಅದೇ ಅವನಿಗೆ ಬೇಕಾದ ಹಾದಿ.

ನಾಗಪ್ಪನು ಸಂತೆಮಾಡಿಕೊಂಡು ಬಂದು ಮಾಳಿಗೆಗೆ ಹೋಗಿ ಹೂವಿನ ಬಾನುಗಳಿಗೆ ನೀರು ತಣಿಸುತ್ತಿದ್ದನು. ಬಾನುಗಳೇನು ಬಹಳಿಲ್ಲ, ಮೂರುನಾಲ್ಕು ಕೊಡನೀರು ಸಾಕುಬೇಕಾಗುತ್ತಿತ್ತು. ನಾಲ್ಕನೆಯ ಕೊಡತಂದು ಕಡೆಯ ಗಿಡಕ್ಕೆ ನಾಗಪ್ಪನು ನೀರೆರೆಯುತ್ತಿದ್ದನು. ಮಗುವನ್ನು ಕರೆದುಕೊಂಡು ರತ್ನಮ್ಮ ಮೇಲೆ ಬಂದಳು. ನೀರೆರೆದು ಮುಗಿಸಿದ ನಾಗಪ್ಪನು ನೇಟಾಗಿ ಬೆಳೆದ

ಸುಗಂಧಿಯ ಹಸರು ದೇಟನ್ನು ಬಾಗಿಸಿ ಹೂವನ್ನು ಮೂಸಿ ನೋಡುತ್ತಿದ್ದನು. ಮಗುವು ಒಳ್ಳೇ ಪ್ರೀತಿಯಿಂದ "ಅಪ್ಪಾ" ಎಂದು ಕೂಗಿತು. ನಾಗಪ್ಪನು ಹೂವನ್ನು ಬಿಟ್ಟು "ಮಗೂ, ಒಂದು ಮುದ್ದು ಕೊಡು" ಎಂದು ಮುದ್ದು ತೆಗೆದುಕೊಳ್ಳುವ ದಕ್ಕೆ ಸರಿಯಾಗಿ ಚಿಂತಾಮಣಿಯು ಅಲ್ಲಿಗೆ ಬಂದನು. ಮಗುವಿನ ಲೀಲೆಗೆ ರತ್ನಮ್ಮ ನಕ್ಕಳು. ಮೂವರ ಲೀಲೆಗೆ ಚಿಂತಾಮಣಿಯು ನಕ್ಕನು. ಆದೇಕೆ, ಅವನು ಹಿಗ್ಗಿನ ಮೊಗ್ಗರವೇ ಆದನು. ಪ್ರತಿರೋಮವೂ ಕಣ್ಣರಳಿಸಿ ನಾಗಪ್ಪನನ್ನು ನೋಡಬೇಕೆಂದಿತು. "ಮೂರ್ತೀ, ನೋಡು, ಅಲ್ಲಿನೋಡು, ನಾನು ಹೇಳುತ್ತಿದ್ದ ಸಂಸಾರದ ನೋಟವು ಇಂದು ಇಲ್ಲಿ ಕೊನೆಗಂಡಿತು." ಮೂರ್ತಿಯು ನೋಡಿದನು. ಅವನಿಗೆ ಅರ್ಥವಾಯಿತು. ಆನಂದವಾಲಿಲ್ಲ. "ನನಗೊಂದು ಮುದ್ದು ಚಿನ್ನಾ" ಎಂದು ರತ್ನವ್ವ ಬೇಡಿದಳು. ಮುದ್ದು ದೊರೆಯಿತು, ಮೂವರು ಕೂಡಿದರು. ಬಾಳುವೆಯ ಮುಪ್ಪುರಿಯ ಮುದ್ದು ಆಯಿತು. "ಮತ್ತೆ ನೋಡು, ಮೂರ್ತೀ" ಎಂದು ಚಿಂತಾಮಣಿಯು ಇನ್ನಿಷ್ಟು ಆಸಕ್ತಿಯನ್ನು ತೋರಿಸಲು, ತಡೆಯದೆ "ನಿನ್ನ ಚಿಂತಾಮಣೀ, ಇದಕ್ಕೇಕೆ ಇಷ್ಟು ಆದರ ? ಆ ವಕೀಲರ ಮನೆಯಲ್ಲಿಯ ನಾಚಿಗೆ ನಾಡಗೌಡರನ್ನು ಕರೆದಿಲ್ಲವೆ ?" ಎಂದು ಮೂರ್ತಿ ಕರೆದನು. ಅದಕ್ಕೆ ಚಿಂತಾಮಣಿಯು ಸಂತೋಷದ ಮಧ್ಯದಲ್ಲಿ ಸಿಟ್ಟಿನ ಕಿಡಿಹಾರಿಸಿ ಆಡಿದನು "ಸುಡು ಆ ಹಾಳು ವಕೀಲನ ಬಾಳುವೆಯನ್ನು. ಇಲ್ಲಿದೆ ನೋಡು ಆಯುಷ್ಯದ ಮರ್ಮ, ತನ್ನ ಆಯುಷ್ಯದಲ್ಲಿಯೇ ಮನುಷ್ಯನು ಮಾಡಬೇಕಾದ ಕರ್ಮ, ಪಡೆಯಬೇಕಾದ ಮುಕ್ತಿ!" ಮೂರ್ತಿಯು ಶಿಲಾಮೂರ್ತಿಯಂತೆ ದಂಗುಬಡೆದು ನಿಂತನು.

---

## ಬಂದಿ

ಪಂಜರದೊಳಗಿನ ವನರಾಜನೆ
ಇನಿತೇತಕೆ ಸಿಡಿಮಿಡಿಗೊಳ್ಳುವೆಯೈ ?

× × ×

ಕವಿವರು ತಿವಿವರು
ಕೆಣಕಿ ಅಣಕಿಪರು
ಮಂದಿಯು ಮಂಡಿಯೆ ?
ಇದು ತುರುಮಂದಿಯು !
ಅದನೆಣಿಸದೆ ಧೀ-
ರೋದ್ಧತ ಗತಿಯಿಂ
ವೇಗದಿ ಸಾಗಿಸೆ
ಚಾಗಿಯ ತೆರದಲಿ...
ಸೈರಿಸದೊಮ್ಮೆಯ
ಘೋರಗರ್ಜಿತಕೆ
ನರಗುರಿಗಳು ಇವು
ಹಾರಿ ಬೀಳುವವು...

× × ×

ಗಹನಾಲೋಚನೆ-
ಯೇನೈ ? ಒಡನೆಯೆ
ಅಡಿಯಿಡುತಿಡುತಿರೆ
ನಡುವೆಯೆ ತಡೆದೈ ?

ಅರಸುಗಣ್ಣುಗಳು
ನೋಳ್ಪರ ಬಿರಿಯಿಪ
ಬಿರುಸುಗಣ್ಣುಗಳು
ಒಸರಿದವೇಕೈ ?
ಗಹನ ವಿಪಿನದಾ
ನೆನಪೇ ? ಕಾಡಿನ
ನಾಡಿನಲ್ಲಿ ಗುಡು-
ಗಾಡುತಲಿದ್ದೆಯ ?
ಹಗೆಗಳು ಮೋಸದಿ
ಹಿಡಿತಂದರೆ ? ಕಡು
ಕಡುಪಿನ ಒಡಗಾ-
ತಿಯು—ಕಾಡೊಡತಿಯು
ಕೆರಳಿ, ಕಿಚ್ಚು ಮು-
ಕ್ಕುಳಿಸುತಲೈತರೆ,
ಕೊಂದರೆ ದುರುಳರು ?
ಬಂದಿಯಾಗಿ ನೀ
ಬಂದೆಯ—ಮಂದಿಯ
ಅಂದದ ಚೆಂದದ
ಆಟಕೆ ನೋಟಕೆ ?

—ಶಾಮಣರು

# ಸತ್ಯ

ಬರೆದವ—ಮಧುರಚೆನ್ನ, ಹಲಸಂಗಿ

For me, truth is the sovereign principle, which includes numerous other principles. This truth is.........the Absolute Truth, the Eternal Principle, that is God. My uniform experience has convinced me, that there is no other God than Truth.

( ನನ್ನ ಮಟ್ಟಿಗೆ ಸತ್ಯವೊಂದೆ ಸಾರ್ವಭೌಮ ತತ್ತ್ವ; ಉಳಿದ ಹಲವು ತತ್ತ್ವಗಳನ್ನು ಇದು ಒಳಕೊಂಡಿದೆ. ಇದು ತುರೀಯ ಸತ್ಯ, ಸನಾತನ ತತ್ತ್ವ, ಇದು ದೇವ.
ಸತ್ಯವಿಲ್ಲದೆ ಬೇರೆ ದೇವರಿಲ್ಲ—ಇದು ನನ್ನ ಅಖಂಡ ಅನುಭವ. )

ಮಹಾತ್ಮಾ ಗಾಂಧಿ

ಹಿಂದಿನವರು ಕಂಡಿದ್ದೇವೆಂದು ಹೇಳಿರುವ ಆ ದಿವ್ಯ ಸತ್ಯವನ್ನು ಇಂದಿನವರು ಈಗ ಪುನಃ ಕಂಡು ಪ್ರಮಾಣಿಸಬೇಕಾಗಿದೆ. ಅದುವರೆಗೂ ಹಿಂದಿನ ಶಾಸ್ತ್ರವೆಲ್ಲಾ ಬರೇ ರಗಳೆಯಲ್ಲದೆ ಅದನ್ನು ಅಂತಃಕರಣಪೂರ್ವಕವಾಗಿ ನಂಬುವುದಕ್ಕೆ ಇಂದಿನವರಿಗೆ ಸಾಧ್ಯವಿಲ್ಲ. ಆದರೆ ಅದನ್ನು ಕಂಡುಕೊಳ್ಳುವ ಬಗೆ ಹೇಗೆ ? ಹಿಂದಿನವರು ಹೇಳಿದ ರೀತಿಯಂತೆ ಹೊರಡುವುದಕ್ಕೆ ಇಂದಿನವರಿಗೆ ಸಾಧ್ಯವಿಲ್ಲ. ಯಾಕಂದರೆ, ಭಕ್ತಿಯಿಂದ ಕಂಡುಕೊಳ್ಳಬೇಕೇ ವಿಶ್ವಾಸವಿಲ್ಲ. ಯೋಗದಿಂದ ಕಂಡುಕೊಳ್ಳಬೇಕೇ ಬಲವಿಲ್ಲ. ಲೋಕಹಿತಚಿಂತನೆಯಿಂದ ಕಂಡುಕೊಳ್ಳಬೇಕೇ ತನ್ನ ಚಿಂತೆಯೇ ತನಗೆ ಹೆಚ್ಚಾಗಿದೆ. ಸಂಶಯ, ದೌರ್ಬಲ್ಯ, ದಾರಿದ್ರ್ಯ ಮೊದಲಾದುವು ಮನೆಮಾಡಿಕೊಂಡಿರುವ ಈಗಿನ ಕಾಲದಲ್ಲಿ ಅವೆಲ್ಲಾ ಬರೇ ಓದುವ ಮಾತುಗಳೇ ಸರಿ.

ಇಂದು ಕೂಡ ಯಾರಿಗಾದರೂ ವಿಶ್ವಾಸದ ಸಂಪತ್ತಿಯಿದ್ದರೆ ಅವರು ಭಕ್ತರಾಗಲಿ. ಬಲವೂ, ನಿಶ್ಚಯವೂ, ಪ್ರಸನ್ನಚಿತ್ತವೂ ಇದ್ದವರು ಯೋಗವನ್ನು ಅವಲಂಬಿಸಲಿ. ಧನಸಂಪತ್ತಿಯುಳ್ಳವರು ದಾನಿಗಳಾಗಲಿ. ಕರುಣವುಳ್ಳವರು ಪರಹಿತ ಮಾಡಲಿ. ಮಮಕಾರವಿಲ್ಲದಿದ್ದರೆ ಸನ್ಯಾಸಿಗಳಾಗಿ ಕಾಡು ಸೇರಲಿ. ಹುರುಪುಳ್ಳವರು ಹೊಂಗೆ ಏನೇನು ನಡೆದಿದೆಯೆಂಬುದನ್ನು ಕಣ್ಣುತೆರೆದು ನೋಡಲಿ. ಆದರೆ ಇವೊಂದೂ ಇಲ್ಲದೆ ಹೋದರೆ ವೆಚ್ಚವಿಲ್ಲದ ಸತ್ಯವೊಂದನ್ನಾದರೂ ಹಿಡಿದುಕೊಳ್ಳಲಿಕ್ಕೆ ಆಗದೆ ಹೋದಿತೇ ? ಸತ್ಯವನ್ನು ಹಿಡಿದುಕೊಳ್ಳುವುದಕ್ಕೆ ನಮಗೆ ಇನ್ನೇನಾದರೂ ಹೆಚ್ಚಿನದು ಬೇಕೇ? ಇದು ಅಕ್ಕಾಬಾಯಿ ಅಮ್ಮಗಳಿಗೂ ಕೂಡ ಬಿಗಿಯಲ್ಲದ ಹಾದಿ. ಈ ಹಾದಿಯಲ್ಲಿ ನಡೆಯಲಿಕ್ಕಾಗದವರಿಂದ ಇನ್ನೇನೂ ಸಾಧ್ಯವಿಲ್ಲ. ಎಲ್ಲ ವಿಧದ ಅಬಲರಿಗೂ ಇದು ಸುಲಭವಾದ ಹಾದಿ. ಮತ್ತು ಅದ್ಭುತ ಫಲ ಸಿಗುವ ಆಶೆ ಬೇರೆ ಇದೆ. ಕರುಣೆಯ ಲವಲೇಶವೂ ಇಲ್ಲದೆ, ಬರೇ ಪರಂಪರಾ ಮೂಢರಾಗಿ, ಆಪತ್ತುಳ್ಳವರನ್ನು ಲೆಕ್ಕಿಸದೆ, ಉಂಡಾಡಿಗರಿಗೆ ಸಮಾರಾಧನೆಮಾಡಿಸಿ, ಪುಣ್ಯ ಪಡೆಯುವವರಿಗಿಂತಾ ಇದು ಶ್ರೇಷ್ಠವಾದ ಹಾಗೂ ಸುಲಭವಾದ ಹಾದಿ. ಆಶೆಬುರುಕುತನವನ್ನು ಎಳ್ಳಷ್ಟೂ ಬಿಡದೆ ಬರೇ ಹೊಳೆಹಳ್ಳಗಳಲ್ಲಿ ಮುಳುಗಿ ದಿಕ್ಕುದೇಶ ತಿರುಗಿ ಕಾಲದಂಡ ಮಾಡಿಕೊಳ್ಳುವ ಯಾತ್ರಿಕರಿಗಿಂತ ಇದು ಶ್ರೇಷ್ಠವಾದ ಹಾಗೂ ಸುಲಭವಾದ ಹಾದಿ. ಲಕ್ಷ್ಯವಿಲ್ಲದೆ ಲಕ್ಷಗಟ್ಟಲೆ ಜಪಮಾಡಿ ಹೊತ್ತು ಹಾಳುಮಾಡುವ ನಿಷ್ಠರಿಗಿಂತಾ ಇದು ಶ್ರೇಷ್ಠವಾದ ಹಾಗೂ ಸುಲಭವಾದ ಹಾದಿ. ಯಾಕಂದರೆ ಸತ್ಯದಿಂದ ಹೆಚ್ಚು ಕಷ್ಟವಿಲ್ಲದೆ ಅಂತರಂಗವು ಶುದ್ಧವಾಗುವದು. ಇದಲ್ಲದೆ ಪ್ರಾಚೀನ ಸಾಧನಗಳ ತತ್ತ್ವಗಳೆಲ್ಲಾ ಇದರಲ್ಲಿ ಸಹಜವಾಗಿಯೇ ಅಡಕವಾಗುತ್ತವೆ. ಮೇಲಾಗಿ ದೇವರ ಮೇಲೆ, ಪರಲೋಕದ ಮೇಲೆ, ಪುನರ್ಜನ್ಮದ ಮೇಲೆ ಇಂಥ ಇನ್ನಾವ ಶಾಸ್ತ್ರದಮೇಲೆಯೂ ವಿಶ್ವಾಸವಿಲ್ಲದೆ ಕೂಡ ಈ ಹಾದಿಯಮೇಲೆ ನಡೆಯಲಿಕ್ಕಾಗುತ್ತದೆ. ಇಂದಿನ ಸಂಶಯವೃತ್ತಿಯ ಜಗಕ್ಕೆ ಇದರ ಹೊರತು ಗತಿಯಿಲ್ಲ. ಇಂದು ವಿಶ್ವಾಸವಿಲ್ಲದ ಮಾತ್ರಕ್ಕೆ ಏನಾಯಿತು ? ಇಲ್ಲದ್ದನ್ನು ನಟಿಸುವುದಕ್ಕೆ ಯತ್ನಿಸಿ ಫಲವಿಲ್ಲ. ಇಲ್ಲದ್ದು ಹೋಗಲಿ. ಅದನ್ನು ಬಿಟ್ಟು ಇದ್ದದ್ದರಮೇಲೆ ಕೈಯ್ಯೂರಿ ದಾರೀ ಹಿಡಿದರೆ ಇಂದಿಲ್ಲದ್ದು ನಾಳೆ ಸಿಕ್ಕೀತು. ಅಥವಾ ಅದು ಇಲ್ಲವೇ ಇಲ್ಲವಾದರೆ ಬಿಟ್ಟೇತು. ಅದರಿಂದ ಯಾರಿಗಾದ ನಷ್ಟವೇನು ? ಸತ್ಯವೇನೆಂಬುದನ್ನರಿತುಕೊಳ್ಳುವುದಕ್ಕೆ ಸತ್ಯವೆನಿಸದನ್ನು ಕೊರಳಿಗೆ ಕಟ್ಟಿಕೊಂಡು ಹೊರಡುವದೇಕೆ ? ಇಂದು ಕೈಯ್ಯಲ್ಲೆಷ್ಟಿದೆಯೋ ಅಷ್ಟೇ ಸತ್ಯ. ನಾಳೆ ಮತ್ತೆ ಹೆಚ್ಚಿನದು ಕೈಗೆ ಬಿದ್ದರೆ ಅಂದಿಗೆ ಅದು ತಾನಾಗಿಯೇ ಸತ್ಯವಾಗಿ ಇದ್ದೇ ಇರುತ್ತದೆ. ಯಾವದೇ ಆಗಲಿ ಅದು ಇದ್ದದ್ದೇ ಆದರೆ ನಮ್ಮ ಅಪನಂಬಿಗೆಯಿಂದೇನೂ ಅದು ಇಲ್ಲದಂತೆ ಆಗುವದಿಲ್ಲ; ಅಥವಾ

ಅದು ಇಲ್ಲವೇ ಇಲ್ಲವಾದರೆ ನಾವು ಎಷ್ಟು ಕೋಟಿ ಜನಗಳು ಕೂಡಿ ಮಹಾ ಪ್ರಯಾಸದಿಂದ ನಂಬುತ್ತೇವೆಂದ ಮಾತ್ರಕ್ಕೂ ಹೊಸದಾಗಿಯೇನೂ ಅದು ಹುಟ್ಟಲಾರದು.

ಹೀಗೆಂದ ಬಳಿಕ ನಮ್ಮ ಅವಿಶ್ವಾಸವಾಗಲಿ ವಿಶ್ವಾಸವಾಗಲಿ ಅದರದೇನೂ ಕೊಂಕು ಮಾಡಲಾರದು. ಆದರೆ ಇದ್ದಕ್ಕಿದ್ದಂತೆ ನಾವು ಇಂಥಾದ್ದೇನೂ ನಂಬುವುದಿಲ್ಲವೆಂದು ಹೇಳಿಕೊಂಡು ಸತ್ಯಮಾರ್ಗವನ್ನು ಹಿಡಿದರೆ ನಮಗೆ ಹಿತವಾದೀತೇ ಹೊರತು ನಷ್ಟವೇನೂ ಆಗಲಾರದು. ನಂಬುಗೆಯಿಲ್ಲದವರಿಗೆ ಸತ್ಯವರ ಸಾಕ್ಷಿಯಿಂದ ಪ್ರಯೋಜನವಾಗುವಂತಿದೆ. ಇಂಥವರಿಗೆ ಕಿವೀ ಹಿಡಿದು ನೀರು ತೋರಿಸುವವರು ಬೇಕು. ಇಷ್ಟಾಗದಿದ್ದರೆ ತಾನಾಗಿ ನೀರು ಭೆಟ್ಟಿಯಾದಾಗಲೇ ಇವರಿಗೆ ನೀರಿನ ಪರಿಚಯ. ಅದುವರೆಗೂ ಒಣಾ ಹೇಳಿಕೆಯೆಲ್ಲಾ ವ್ಯರ್ಥವೇ ವ್ಯರ್ಥ. ಇಂಥ ವರಿಗೆ ಹಳೇ ಹಾದೀ ಹಿಡಿದು ಹೋಗಲಿಕ್ಕೆ ಬಾರದ್ದೊಂದು, ಹೊಸಾ ಹಾದೀ ಹಾಕಿ ಕೊಡುವವರು ಇಲ್ಲದ್ದೊಂದು, ಸ್ವತಃ ದಾರೀ ಮಾಡಿಕೊಳ್ಳುವ ಶಕ್ತಿ ಇಲ್ಲದ್ದೊಂದು ಹೀಗೆ ನಾನಾ ಕಷ್ಟಗಳಿರುವಾಗ ಒಣಾ ಒತ್ತಾಯದೇಟುಗಳಿಂದ ಏನು ಪ್ರಯೋಜನ? ಅಲ್ಲದೆ ಏಟು ಕೊಡುವವರೆಲ್ಲಾ ತುಂಬಾ ಉಂಡಾಡಿಗಳು. ಬರೇ ಸಮಾರಾಧನೆಯ ಊಟಾ ಹೊಡೆದು ಪರನಿಂದೆಯಲ್ಲೇ ಜನ್ಮ ಕಳೆಯುವದಕ್ಕೆ ಮೆಚ್ಚಿದ ಇವರು ತಾವು ಇನ್ನೊಬ್ಬರಿಗೆ ಬುದ್ಧೀ ಹೇಳುವ ಗುದ್ದಾಟಕ್ಕೆ ಹೋಗಿ ಉಭಯರ ಕಾಲ ಹರಣಗೊಳಿಸುವುದಕ್ಕಿಂತ ತಾವು ಹೇಳುವ ಹಳೇ ಮಾರ್ಗಗಳ ಮೇಲೆಯೇ ವಿಶ್ವಾಸದಿಂದ ಸಾಗಿ ದಿವ್ಯ ಸತ್ಯವನ್ನು ಕಂಡು ನಮ್ಮನ್ನೂ ಕರೆಯಲಿಕ್ಕೆ ಬಂದರೆ ನಾವೇನು ಒಲ್ಲೆನ್ನುವೆವೇ ? ನಮಗೆ ಬೇಕಾದ್ದದ್ದೇನು? ರೊಟ್ಟಿ ! ಅವ್ವ ಕೊಟ್ಟರೂ ಅಷ್ಟೇ, ಅಪ್ಪ ಕೊಟ್ಟರೂ ಅಷ್ಟೇ, ಕಡೆಗೆ ಹಾದಿಗೆ ಹೋಗುವವರು ಕೊಟ್ಟರೂ ಅಷ್ಟೇ. ಆದರೆ ಕೊಡುವವರೇ ಈಗ ಇಲ್ಲ. ಬರೇ ಎಲ್ಲರೂ ಆಚಾರ ಹೇಳಲಿಕ್ಕೇ ಬರುತ್ತಾರೆ. ನಮಗೇನೂ ಅವಿಶ್ವಾಸದಿಂದಲೇ ಹೊರಡಬೇಕೆಂಬ ಹಟವಿಲ್ಲ. ವಿಶ್ವಾಸವಿದ್ದವರು ಮೊದಲು ತಮಗಿದ್ದ ವಿಶ್ವಾಸವನ್ನೆಲ್ಲಾ ಕಳಕೊಂಡು ಆ ಮೇಲೆ ಸತ್ಯದ ಕಡೆಗೆ ಹೊರಳಬೇಕೆಂಬ ಅರ್ಥವೇನೂ ಅಲ್ಲ. ಆದರೆ ವಿಶ್ವಾಸವೆಂಬುದು ಇಲ್ಲವೇ ಇಲ್ಲವೆನ್ನುವವರಿಗೆ ಬರೇ ಒತ್ತಾಯಪಡಿಸಿ ನಂಬಿಸುವುದಕ್ಕಾಗುವದಿಲ್ಲವೆಂಬುದಷ್ಟೇ ಇದರ ತಾತ್ಪರ್ಯ. ವಿಶ್ವಾಸವಿಲ್ಲದ್ದು ಮೊದಲೇ ಕೇಡು, ಆ ಮೇಲೆ ಸುಳ್ಳೇ ನಂಬುತ್ತೇವೆನ್ನುವುದು ಹೆಚ್ಚಿನ ಕೇಡು. ಹೀಗಾಗಿ ಕೇಡಿಗೆ ಕೇಡು ಹೆಚ್ಚು ಗುಣಿಸುತ್ತ ಹೋದರೆ ಆತ್ಮೋನ್ನತಿಯಾದೀತೇ ? ನಮ್ಮಲ್ಲಿ ಇಲ್ಲದ ಗುಣವನ್ನು ಇಲ್ಲವೆಂತ ಒಪ್ಪಿಕೊಳ್ಳುವಷ್ಟು ನಮ್ಮ ಮನಸ್ಸು ಉದಾರವಾದರೆ ಅಷ್ಟೇ ಎಷ್ಟೋ ಸಿದ್ಧಿಸಿದಂತಾಯಿತು. ಇಂಥ ಉದಾರತನವೇ ಸತ್ಯಮಾರ್ಗದ ಆರಂಭದ ಸ್ಥಳವು.

ಈ ಸತ್ಯವನ್ನು ಆಶ್ರಯಿಸುವದರಿಂದ ಸ್ವತಃ ತನಗೆ ಸತ್ಯಜ್ಞಾನವಾಗುವದಕ್ಕೂ ಶಾಂತಿಸಿಗುವದಕ್ಕೂ ಆಶೆಯಿದೆ. ಅಲ್ಲದೆ ಎಲ್ಲ ಮೋಸಗಳಿಗೂ ಅಸತ್ಯವೇ ಮೂಲವಾದ್ದರಿಂದ ಅಂಥಾ ಮೂಲವೇ ಕಡೆದು ಹೋಗುವದರಿಂದ ಇಂಥಾ ಸತ್ಯವಂತಿಕೆಯಿಂದ ಇನ್ನೊಬ್ಬರಿಗೆ ಮೋಸದ ಕಾಟ ತಪ್ಪುವದು. ಹೆಚ್ಚಿನ ಉಪಕಾರ ಮಾಡುವದಾಗದವರು ಅಪಕಾರ ಮಾಡುವದನ್ನಾದರೂ ಬಿಟ್ಟರೆ ಎಷ್ಟೋ ಕ್ಷೇಮವಲ್ಲವೆ ? ಬರೇ ತಮ್ಮ ಪೂರ್ತಿ ತಾವು ಸತ್ಯಸತ್ಯವೆಂದು ಹೇಳಿಕೊಳ್ಳುತ್ತ ಮೂಲೆಗುಂಪಾದವರಿಗೇನು ಫಲವೆನ್ನಬಹುದು. ಮನುಷ್ಯ ಸುಲಭವಾದ ಪರಪೀಡಕ ಗುಣವೊಂದು ಇಲ್ಲದಂತಾದದ್ದೇ ಫಲವೆನ್ನಬೇಕು. ಇಂಥವರಿಂದ ಲೋಕಕ್ಕೆ ತೋರಿಕೆಯ ಉಪಕಾರವಾಗದಿದ್ದರೂ ಅಪಕಾರವಾದರೂ ಆಗುವಂತಿಲ್ಲ. ಇದು ಸತ್ಯ. ಆದರೆ ಇವರ ಸತ್ಯದ ಸಾಧನೆಯು ಸಿದ್ಧಿಸಿ ಇವರಿಗೆ ದಿವ್ಯ ಸತ್ಯದ ದರ್ಶನವಾದರೆ ಅಥವಾ ಸ್ವಕರ್ತವ್ಯವು ಸೂಚಿತವಾದರೆ ಆಗ ಇಂಥವರಿಂದ ಲೋಕಕ್ಕೆ ಮತ್ತ್ಯಾರಿಂದಲೂ ಆಗದಷ್ಟು ಉಪಕಾರವಾಗಬಹುದು. ಇದಿರಲಿ.

ಇನ್ನು ಈ ಸತ್ಯದ ಸಾಧನ ರೀತಿಯನ್ನು ವಿಚಾರಿಸುವುದಕ್ಕೆ ಮುಂಚೆ ನಮ್ಮ ಅಸತ್ಯವಂತಿಕೆಗೆ ಕಾರಣವೇನೆಂಬುದನ್ನು ವಿಚಾರಿಸುವಾ.

ದುಡಿಯದೆ ದುಃಖಪಡದೆ ಕೂತು ಉಣ್ಣುವ ಮೈಗಳ್ಳತನವು ಮನುಷ್ಯಜಾತಿಯ ಮನಸ್ಸಿನಲ್ಲೆಲ್ಲಾ ಹಣಿಕೆ ಹಾಕುತ್ತಿರುತ್ತದೆ. ಅಲ್ಲದೆ ತಾನೆಂಥವನಿದ್ದರೂ ಅನ್ಯರು ತನ್ನನ್ನು ದೂಷಿಸಬಾರದೆಂದೂ ಆಶಿಸುತ್ತಾನೆ. ಅಲ್ಲದೆ ಏನಾದರೂ ತನ್ನ ಜೀವ ಉಳಿಸಿಕೊಳ್ಳಬೇಕೆಂಬುದು ಅವನ ಸ್ವಭಾವವಾಗಿದೆ. ಯಾವನೂ ತನಗೆ ಕೇಡಾಗಲೆಂದು ಬಯಸಲಾರನು. ಹೇಗಾದರೂ ಆಗಲಿ ಆದರೆ ತನ್ನ ಹಿತವಾಗಬೇಕೆಂದು ಎಣಿಸುತ್ತಾನೆ. ಮೈಗಳ್ಳತನ ಮಾನ, ಜೀವದಾಶೆ, ಶುಭದಾಶೆ ಮುಂತಾದ ಜಾತಿ ಸ್ವಭಾವಗಳೇ ಮಾನವನ ಎಲ್ಲಾ ಓಡಾಟಗಳಿಗೂ ಮೂಲವಾಗಿವೆ. ಇನ್ನೊಬ್ಬರನ್ನು ವಂಚಿಸಿ ತನ್ನ ಕೆಲಸ ಸಾಧಿಸಬೇಕೆಂದೊಮ್ಮೆ ಸುಳ್ಳಾಡುತ್ತಾನೆ. ಭಯವಿದ್ದರೆ ಇನ್ನೊಮ್ಮೆ ಜೀವದ ಭಯದಿಂದ ಸುಳ್ಳಾಡುತ್ತಾನೆ.

ಎನಿಸಿಕೊಳ್ಳುವುದಕ್ಕೆ ಒಮ್ಮೆ ಸುಳ್ಳಾಡುತ್ತಿದ್ದರೆ ನಗಚಾಟಕೆಗೆಂದು ಇನ್ನೊಮ್ಮೆ ಸುಳ್ಳಾಡುತ್ತಿರುತ್ತಾನೆ. ತನ್ನಲ್ಲಿದ್ದ ವಸ್ತುವನ್ನು ಕಳಕೊಳ್ಳಬಾರದೆಂದೊಮ್ಮೆ ಸುಳ್ಳಾಡಿದರೆ ಇನ್ನಾವ ಕಾರಣವೂ ಇಲ್ಲದೆ ಒಮ್ಮೊಮ್ಮೆ ಸುಮ್ಮಸುಮ್ಮನೆ ಸುಳ್ಳು ಕೊಟ್ಟುಬಿಡುತ್ತಾನೆ. ಹೀಗೆ ನಾವು ಸುಳ್ಳಾಡುವುದಕ್ಕೆ ನಮ್ಮ ಮನಸ್ಸಿನ ಎಷ್ಟೋ ದೌರ್ಬಲ್ಯಗಳೂ ದುರ್ಗುಣಗಳೂ ಕಾರಣವಾಗಿವೆ. ಮೋಸಕ್ಕಾಗಿ, ಮಾನಕ್ಕಾಗಿ, ಭಯಕ್ಕಾಗಿ, ವಿನೋದಕ್ಕಾಗಿ, ರಕ್ಷಣೆಗಾಗಿ, ವಿನಾಕಾರಣವಾಗಿ, ಸ್ವಾಭಾವಿಕವಾಗಿ ಹೀಗೆ ಸುಳ್ಳು ಹೇಳುವ ರೀತಿಗಳು ಭಿನ್ನ ಭಿನ್ನವಾಗಿವೆ. ಇವುಗಳಲ್ಲಿ ಅನ್ಯರಿಗೆ ಮೋಸಮಾಡುವ ಸುಳ್ಳಂತೂ ಮಹಾ ವಿಘಾತಕವೆಂದು ಸ್ವಲ್ಪ ಬುದ್ಧಿಯುಳ್ಳವರಿಗೂ ಕೂಡ ತಿಳಿಯುತ್ತದೆ. ಇನ್ನು ಒಣಾ ಜಂಬ ಬೆಳೆಸಿಕೊಳ್ಳುವುದಕ್ಕಾಗಿ ಸುಳ್ಳು ಹೇಳುವುದು ಸ್ವಲ್ಪ ವಿಚಾರ ಬಂದವರಿಗೆ ಅನುಚಿತವಾಗಿ ತೋರುತ್ತದೆ. ಆದರೆ ಜೀವ ಭಯದಿಂದ ಆಡುವ ಸುಳ್ಳನ್ನು ತಪ್ಪಿಸುವುದಕ್ಕೆ ಜ್ಞಾನಿಯ ಹೊರತು ಇನ್ನಾರಿಗೂ ಸಾಧ್ಯವಿಲ್ಲ. ಇನ್ನು ವ್ಯವಹಾರದಲ್ಲಿ ಸಣ್ಣಪುಟ್ಟ ಕಡಕಟ್ಟುಗಳ ಸಲುವಾಗಿ ಸುಳ್ಳಾಡತಕ್ಕದ್ದನ್ನು ಬಿಡುವುದಕ್ಕೆ ನಿಸ್ಸಂಗಿಯಾದ ಬೈರಾಗಿಯ ಹೊರತು ಸಾಂಸಾರಿಕರೆಂಬುವರಿಗೆ ಸಾಧ್ಯವಿಲ್ಲ. ಫಲವಿಲ್ಲದೆ ಪ್ರಾಪ್ತಿಯಿಲ್ಲದೆ ಹೊತ್ತುಗಳೆಯುವುದಕ್ಕೆ ವಿನಾಕಾರಣವಾಗಿ ಏನಾದರೊಂದು ಹಾಳು ಸಂಗತಿಯನ್ನು ಕಲ್ಪಿಸಿ ಹರಟೆ ಹೊಡೆಯುವವರೂ ಹಲಕೆಲವರಿರುತ್ತಿರುತ್ತಾರೆ. ಆದರೆ ವಿಚಾರವಂತರಿಗಿದು ದೂರದಲ್ಲಿರುತ್ತದೆ. ಇನ್ನೇನು ! ಹೀಗೆ ನಾನಾ ಕಾರಣಗಳಿಂದ ಸುಳ್ಳಾಡಿ ಸುಳ್ಳಾಡಿ ಸುಳ್ಳುಹೇಳುವದೊಂದು ಸ್ವಭಾವವೇ ಆಗಿಬಿಡುವ ಸಂಭವವು ಹೆಚ್ಚು. ಎಲ್ಲಾ ತರದ ಸುಳ್ಳುಗಳನ್ನು ಬಿಟ್ಟರೂ ಈ ಸ್ವಭಾವದ ಸುಳ್ಳು ಎಷ್ಟೋದಿನ ನಮ್ಮ ಬೆನ್ನು ಬಿಡುವದಿಲ್ಲ. ಒಮ್ಮೊಮ್ಮೆ ಹೆರವರ ಕಲ್ಯಾಣಕ್ಕೂ ಜೀವ ಉಳಿಸುವದಕ್ಕೂ ಮನುಷ್ಯನು ಸುಳ್ಳಾಡುವದುಂಟು. ಕರುಣೆಯಿಂದಾಡುವ ಇಂಥ ಸುಳ್ಳು ಒಳ್ಳೆಯದೇ ಎಂದು ಬಾಳುವೆವಂತರಿಗೆಲ್ಲಾ ತಿಳಿದ ಮಾತಾಗಿದೆ. ಆದರೆ ಒಂದಾನೊಂದು ವಿಧದ ವ್ರತಿಗಳೂ ಶಾಸ್ತ್ರಜ್ಞರೂ ಯಾವ ಬಗೆಯಿಂದಲೂ ಸುಳ್ಳನ್ನೇ ಆಡಕೂಡದೆಂದು ಹೇಳುತ್ತಾರೆ. ಆದರೆ ಇಂಥ ನಿಯಮವನ್ನು ಪಾಲಿಸುವುದು ಸರ್ವಸಂಗಪರಿತ್ಯಾಗಿಗಳಾದ ಯತಿಗಳಿಗೆ ಸಾಧ್ಯವೇ ಹೊರತು ಬಾಳುವೆವಂತರಿಗೆ ಇದು ಸಾಧ್ಯವಲ್ಲ. ಇನ್ನೊಂದು ಬಗೆಯಿಂದ ಹೇಳುವ ಭಗವದ್ಭಕ್ತರೂ ಇದ್ದಾರೆ. ಅವರು ಹೇಳುವದೇನೆಂದರೆ, ನಮಗೆ ಸುಳ್ಳಿಗೂ ಮಹತ್ವವಿಲ್ಲ; ಸತ್ಯಕ್ಕೂ ಮಹತ್ವವಿಲ್ಲ. ನಮ್ಮ ಹಿತಾಹಿತಗಳ ಚಿಂತೆಯೂ ಇಲ್ಲ; ಪರರ ಹಿತಾಹಿತಗಳ ಹಂಗೂ ಇಲ್ಲ. ಏನಾದರೇನು, ಏನು ಹೋದರೇನು. ನಮ್ಮ ತಂದೆ ಜಗದೊಡೆಯನಿಟ್ಟಂತೆ ಇರುವೆವು. ಕುಣಿಸಿದಂತೆ ಕುಣಿಯುವೆವು. ನಮಗೆ ಸ್ವಬುದ್ಧಿವಂತಿಕೆಯ ಕಾರಣವಿಲ್ಲವೆಂದು ಘಂಟಾಘೋಷವಾಗಿ ಹೇಳುವರು. ಲೌಕಿಕರಿಗೆ ಇದು ಮಹಾ ಅನೀತಿಯೆಂದು ಕಾಣಬಹುದು. ಆದರೆ ದೇವರಿದ್ದದ್ದೇ ಆದರೆ ಇಂಥವರೂ ಕೂಡ ಧನ್ಯರೇ ಸರಿ. ಇದೇನೇ ಇರಲಿ. ಈ ಸತ್ಯ ಅಸತ್ಯ ಮುಂತಾದ ತೊಡಕೆಲ್ಲಾ ಯಾರಿಗೆ? ಇನ್ನೊಬ್ಬರ ಸಂಚಾರ ಸಹವಾಸವುಳ್ಳ ನಮ್ಮಂಥಾ ಬಾಳುವೆವಂತರಿಗೇ ಸರಿ. ಆದರೆ ಗಿರಿಕಾನನದಲ್ಲಿ ತಪೋನಿರತರಾದ ಏಕಾಂತಿಗಳಿಗೆ ಇವೆಲ್ಲಾ ತೊಡಕು ಯಾತಕ್ಕೆ ಇದ್ದೀತು? ಇನ್ನೊಬ್ಬರ ಗೂಡ ಬಳಿಕೆಯೇ ಇಲ್ಲದಿದ್ದರೆ ಸತ್ಯವೇ ಆಗಲೊಲ್ಲದೇಕೆ ಅಸತ್ಯವೇ ಆಗಲೊಲ್ಲದೇಕೆ ಅವರಿಗೆ ಇವುಗಳ ಪ್ರಸಂಗವೇ ಇಲ್ಲ. ಆದ್ದರಿಂದಲೇ ಲೌಕಿಕರ ನಡಾವಳಿಗೂ ಯತಿಗಳ ನಡಾವಳಿಗೂ ಹೀಗೆ ಮಹದಂತರವುಂಟಾಗುತ್ತದೆ. ಲೌಕಿಕದಲ್ಲಿದ್ದು ಯತಿಧರ್ಮವನ್ನು ಪಾಲಿಸುವುದಕ್ಕೆ ನಿಂತರೆ ಬಹಳೇ ಗಲಭೆಯುಂಟಾಗುತ್ತದೆ. ಬಾಳುವೆವಂತನು ಯತಿಧರ್ಮವನ್ನು ಆಶ್ರಯಿಸಿದರೆ ಅಂತರಂಗದಲ್ಲೇ ಅದನ್ನಾಶ್ರಯಿಸಿ ಹೊರಗೆ ಎಲ್ಲಾ ಲೌಕಿಕರಂತೆಯೇ ಇರಬೇಕಾಗುತ್ತದೆ. ಇಲ್ಲದಿದ್ದರೆ ಗಲಭೆಗೆ ಕಾರಣವಾಗಿ ಒಣಾ ಉಪಟಳಗಳು ಏಳುವದರಿಂದ ಇಂಥವರು ಲೌಕಿಕರ ಸಂಚಾರ ಸಹವಾಸವಿಲ್ಲದಂತೆ ವಾಸಮಾಡಬೇಕಾಗುವದು. ಇದೇನೇ ಇರಲಿ. ಸುಳ್ಳಿನಿಂದ ಅನ್ಯರಿಗೆ ಕಷ್ಟನಷ್ಟಗಳುಂಟಾಗುವದಲ್ಲದೆ ಸ್ವತಃ ತನ್ನ ಮನಸ್ಸಿಗೆ ಅಶಾಂತಿಯುಂಟಾಗುತ್ತದೆ. ಆದ್ದರಿಂದಲೇ ಇದನ್ನು ಲೌಕಿಕ ದೃಷ್ಟಿಯಲ್ಲಿ ಅನೀತಿಯೆಂದೂ ಪಾರಮಾರ್ಥಿಕ ದೃಷ್ಟಿಯಲ್ಲಿ ಅಧರ್ಮವೆಂದೂ ಹೇಳುವರು. ಆದರೆ ಧರ್ಮಾಧರ್ಮ, ಶುಭಾಶುಭ, ಪಾಪಪುಣ್ಯ ಮುಂತಾದ ದ್ವಂದ್ವಗಳನ್ನೇನೂ ಲೆಕ್ಕಿಸದ ಯತಿಗಳ ರೀತಿ ಎಂತಿದ್ದರೂ ಇರಲಿ. ಅದರಲ್ಲಿ ಕೈಹಾಕುವದಕ್ಕೆ ನಮಗೆ ಕಾರಣವಿಲ್ಲ. ನಮ್ಮದನ್ನು ನಾವು ತೊಳಕೊಂಡರೆ ಸಾಕು.

ಇನ್ನು ಸತ್ಯದ ಪರಿಗಳನ್ನು ಯೋಚಿಸುವಾ. ನಾವು ಎಂದೆಂದಿಗೂ ಯಾವ್ಯಾವ ರೀತಿಯಲ್ಲಿಯೂ ಸುಳ್ಳನ್ನೇ ಆಡಲಾರೆವೆಂದು ಪ್ರತಿಜ್ಞೆಮಾಡಿ ನಿಷ್ಠೆಯಿಂದ ಇರುವುದು ಸತ್ಯದ ವ್ರತವಾಗಿದೆ. ಆದರೆ [illegible] ಕೆಲಸ, ಎಲ್ಲರಿಗೂ ಇದು

ಸಾಧ್ಯವಿಲ್ಲ. ನಮ್ಮ ಮನಸಿನಲ್ಲಿ ಅಸತ್ಯದ ಬಗೆಗೆ ಒಲವಿಲ್ಲದಂತಾದರೆ ತೀರಿತೆಂದೂ, ಅಪ್ಪೀ ತಪ್ಪೀ ಒಮ್ಮೊಮ್ಮೆ ಸುಳ್ಳಾಡುವ ಪ್ರಸಂಗ ಬಂದರೆ ಆಗ ಸತ್ಯದ ಮಹತ್ವವನ್ನು ಮರೆಯದೆ ನಮ್ಮ ಅಂತಃಶುದ್ಧಿಗೆ ಭಂಗಬಾರದಂತೆ ನೋಡಿಕೊಂಡು ಅನ್ಯರಿಗೆ ಅಹಿತವಾಗದಂತೆಯೂ ತಾನು ಪೇಚಿನಿಂದ ಉಳಿದುಕೊಳ್ಳುವಂತೆಯೂ ಸತ್ಯವನ್ನು ಮರೆಮಾಚಿ ಮಾತಾಡಿದರೆ ತಪ್ಪೇನೆಂದೂ ಕೇಳಬಹುದು. ಹೌದು, ನಮ್ಮ ಶಕ್ತಿ ಕುಸುವಾಗಿದ್ದಾಗ ಬಹಳ ಭಾರವನ್ನು ಎತ್ತಲಿಕ್ಕಾಗುವದಿಲ್ಲ. ಇದು ಸರಿ. ಹೊರಲಿಕ್ಕಾಗದ್ದನ್ನು ಹೊರಬೇಕೆಂದು ನಿಂತರೆ ನಾಶಕ್ಕೆ ಕಾರಣವಾಗುವದು. ನಮ್ಮ ಶಕ್ತಿಯನ್ನು ಅರಿತು ನಮ್ಮ ಕೈಯಿಂದಾಗುವಷ್ಟರಲ್ಲಿ ಮಾತ್ರ ಕೊರತೆ ಬೀಳಗೊಡಬಾರದು. ಎಷ್ಟೋ ಜನ ಉಪದೇಶಕರು ಅಳತೆ ಮೀರಿ ಸಾಧನೆಗಳನ್ನು ಹೊರಿಸಿಯೇ ಕೈಗೆ ಸಿಕ್ಕುವರನ್ನು ಕೆಲಸಕ್ಕೆ ಬಾರದಂತೆ ಮಾಡುತ್ತಾರೆ. ಸಣ್ಣವರು ದೊಡ್ಡ ತುತ್ತುಗಳಿಗೆ ಬಾಯಿಹಾಕಿ ಫಲವಿಲ್ಲ. ಬೆಳೆ ಬೆಳೆದಂತೆ ದೊಡ್ಡ ದೊಡ್ಡ ಮಾತಿಗೆ ಕೈಹಾಕುತ್ತ ಹೋಗಬೇಕು. ಇದಲ್ಲದೆ ನಮ್ಮ ಬೆಲೆಯು ನಮ್ಮ ಹೊರಗಿನ ಕೃತಿಗಳನ್ನು ಅವಲಂಬಿಸಿ ಕೂತಿರಬಾರದು. ಹೊರಗೆ ಒಮ್ಮೊಮ್ಮೆ ಕಾರಣಾಂತರಗಳಿಂದಲೂ ದುರ್ಬಲತೆಯಿಂದಲೂ ಹಲಕೆಲವು ಪ್ರಮಾದಗಳು ಉಂಟಾಗಬಹುದು. ಆದರೆ ಒಳಗೆ ಮನಸ್ಸೇ ಮೂಲ ತತ್ತ್ವದಿಂದ ಭಿನ್ನವಾಗಿರಬಾರದು. ಮನದಲ್ಲಿ ನಿಷ್ಠೆ ಅಚ್ಚಳಿಯದೆ ಅಚ್ಚೊತ್ತಿರಬೇಕು. ಆದರೆ ಹೊರಗೆ ಕಾರಣಾಂತರದಿಂದ ನಿಷ್ಠೆ ಒಂದೊಂದು ಸಲ ಮುರಿದರೂ ಅಡ್ಡಿಯಿಲ್ಲ; ಅದು ಅವನ ಅಂತಃಕರಣದ ದೋಷವಲ್ಲ; ಅವನ ಹೇಡಿತನದ ದೋಷವು. ಇನ್ನು ಕೆಲವರು ತಾವು ಸತ್ಯವಂತರಾಗಿ ಇರುವುದಲ್ಲದೆ ತಮ್ಮ ಇದಿರಿಗೆ ನಡೆಯುವ ಅಸತ್ಯ ಅನ್ಯಾಯಗಳನ್ನೆಲ್ಲಾ ನಿರ್ಭಯದಿಂದ ಖಂಡಿಸುವರು. ಇದು ಎಲ್ಲಕ್ಕೂ ಮೇಲಿನ ಅವಸ್ಥೆ. ಇದು ಮೊದಮೊದಲಿಗೆ ಸತ್ಯವನ್ನು ಆಶ್ರಯಿಸಿದವರಿಗೆ ಸಾಧ್ಯವಿಲ್ಲ. ಇದು ಸತ್ಯಾಗ್ರಹವು. ಸತ್ಯದ ವ್ರತವಿಲ್ಲದವರಿಗೆ ಇದು ಸಾಧ್ಯವಿಲ್ಲ. ಆದರೆ ಅಟ್ಟದ ತುದಿಗೆ ಹೋಗಿ ನಿಂತವನನ್ನು ಕಂಡು ಅಯ್ಯೋ ಇದೆಂಥಾ ಅಸಾಧ್ಯವಪ್ಪಾ ! ಇಷ್ಟು ಎತ್ತರದು ಹೇಗೆ ಹೆಜ್ಜೆಯೆತ್ತಿ ಇಡಲಿಕ್ಕಾದೀತು ! ಎಂದು ಎದೆಗೆಡುವ ಕಾರಣವಿಲ್ಲ. ಎಷ್ಟೆತ್ತರಾದರೂ ಅವಕ್ಕೆ ಸೋಪಾನವಿಲ್ಲದೆ ಇಲ್ಲ. ಕೆಳಗೆ ನಿಂತಾಗ ಮೊದಲನೇ ಮೆಟ್ಟಲು ಹತ್ತುವುದಕ್ಕೆ ಎಷ್ಟು ಬಿಗಿಯಾಗಿ ಕಾಣುವದೋ ಅದನ್ನೇರಿದ ಮೇಲೆ ಅದರ ಮುಂದಿನ ಮೆಟ್ಟಲೂ ಅದರಷ್ಟೇ ಎತ್ತರಾಗಿ ಕಾಣುವದು. ಹೀಗೆ ಎಷ್ಟು ಮೆಟ್ಟಲುಗಳಿದ್ದರೇನು ? ಒಂದನ್ನೇರಿದ ಬಳಿಕ ಮುಂದಿನದು ತಾನೇ ಸುಲಭವಾಗುವದು. ನಮಗೀಗ ಸತ್ಯದ ವ್ರತವಾಗಲಿ ಸತ್ಯದ ಆಗ್ರಹವನ್ನಾಗಲಿ ಯೋಚಿಸಬೇಕಾಗಿಲ್ಲ. ಮೊದಲಿಗೆ ನಮಗೆ ಸತ್ಯನಿಷ್ಠೆಯುಂಟಾದರೆ ಸಾಕು. ಸತ್ಯದ ಮಹತ್ವವು ಗೊತ್ತಾಗಿ ಅದು ನಮಗೆ ಅಗತ್ಯದ್ದೆಂದು ಎನಿಸ ಹತ್ತಿ ತಪ್ಪಹೆಜ್ಜೆ ಇಡುವುದಕ್ಕಾದರೂ ನಾವು ಮೊದಲಿಗೆ ಸಿದ್ಧರಾಗುವಂತಾದರೆ ಸಾಕು.

ಸತ್ಯದ ಮಹತ್ವವನ್ನು ಚೆನ್ನಾಗಿ ಯೋಚಿಸಿ ಅರಿತುಕೊಳ್ಳುವದೇ ನಮ್ಮ ಮೊದಲನೇ ಕೆಲಸ. ಆ ಮೇಲೆ ನಮ್ಮ ಅಳವು ಎಷ್ಟೆಂಬದನ್ನೂ ಈ ಅಳವಿಗೆ ಸತ್ಯವನ್ನು ಎಷ್ಟರಮಟ್ಟಿಗೆ ಪಾಲಿಸಲಿಕ್ಕೆ ಶಕ್ಯವಿದೆಯೆಂಬದನ್ನೂ ನಿಶ್ಚಯಿಸಿಕೊಳ್ಳುವುದು ಎರಡನೆಯ ಕೆಲಸ. ಆಮೇಲೆ ತಪ್ಪುತಡೆಯಾಗಿ ನಾವು ನಿಶ್ಚಯಿಸಿದ್ದರಲ್ಲೇ ಕೊರತೆಯಾದರೆ ನಿರಾಶೆ ಪಡದೆ ಮುಂದೆ ಮತ್ತೆ ಹೀಗಾಗದಂತೆ ಎಚ್ಚರಪಡಬೇಕೆಂದು ಮೊದಲೇ ಹಂಚಿಕೆ ಹಾಕಿಟ್ಟುಕೊಂಡಿರುವುದು ಮೂರನೆಯ ಕೆಲಸ. ಇಷ್ಟಿಲ್ಲದೆ ಈ ಹಾದಿಗೆ ಹೆಜ್ಜೆಯಿಡಬಾರದು. ಆಮೇಲೆ ನಾವು ಮುಂದೆ ಮಾಡಬೇಕಾದದ್ದೇನಂದರೆ—ಸದಾ ನಾವು ಸತ್ಯವಂತರಾಗುವವರೆಂದು ನೆನಪಿನಲ್ಲಿಡುವುದು; ಮತ್ತು ವ್ಯರ್ಥವಾಗಿ ಹೋಗುವ ಜನ್ಮದಲ್ಲಿ ಇಷ್ಟಾದರೂ ಸ್ವಾರ್ಥಕವಾಯಿತಲ್ಲಾ ಎಂಬ ಹಿಗ್ಗು ಹಚ್ಚಿಕೊಳ್ಳುವುದು. ಹಿಗ್ಗಿನ ಬಲವಿಲ್ಲದೆ ಸಾಮಾನ್ಯರಿಗೆ ಏನೂ ಮಾಡುವುದಕ್ಕೆ ಆಗುವಂತೆ ಇಲ್ಲ. ಇಷ್ಟು ಅನುಸರಿಸುವುದು ನಮ್ಮ ಕೆಲಸ. ಇದರ ಮುಂದಿನದೆಲ್ಲಾ ಈ ಸಾಧನವು ಯಶಸ್ವಿಯಾದಂತೆ ಸಾಧ್ಯವಾಗುತ್ತ ಬರುತ್ತದೆ.

ಮುಖ್ಯವಾಗಿ ನಾವು ಯಾವಾಗಲೂ ಸತ್ಯಕ್ಕೆ ಪೋಷಕವಾದ ಪ್ರಸಂಗಗಳನ್ನು ತಪ್ಪಿಸಿಕೊಳ್ಳಬಾರದು. ಹೇಗಂದರೆ, ನಾವು ಏನೋ ಒಮ್ಮೆ ಅಪ್ಪೀ ತಪ್ಪೀ ಯೋಗ್ಯಕಾರಣವಿಲ್ಲದೆ ಸ್ವಭಾವದೋಷದಿಂದ ಸುಳ್ಳಾಡಿದ್ದೇವೆಂದು ತಿಳಿಯುವಾ. ಆಗ ಅದು ನಮ್ಮ ಲಕ್ಷ್ಯಕ್ಕೆ ಬಂದರೆ ಆಕ್ಷಣದಲ್ಲಿಯೇ ಅಲ್ಲಿದ್ದವರ ಮುಂದೆ ನಮ್ಮ ತಪ್ಪನ್ನು ಒಪ್ಪಿಕೊಂಡು ಸತ್ಯವಾಗಿದ್ದುದನ್ನು ಹೇಳಿಬಿಡಬೇಕು. ಅದರೆ ಆಗ ಜೀವವು ನಾಚಿ ಮತ್ತೊಮ್ಮೆ ಸುಳ್ಳಾಡದಂತೆ ಎಚ್ಚರಿದ್ದರಾಯಿತು. ಈಗ ನಗೆಗೇಡು ಮಾಡಿಕೊಳ್ಳುವುದು ಹೇಗೆ ಎಂದೆನ್ನಬಹುದು. ಆದರೆ ಇಂಥ ಪ್ರಸಂಗಗಳಲ್ಲೆಲ್ಲಾ ಇಂಥ ವಿಚಾರಕ್ಕೆ ಎಡೆಗೊಡದೆ ತಪ್ಪೊಪ್ಪಿಕೊಂಡೇ ಬಿಡಬೇಕು. ಅಂದರೆ ಬೇಗನೆ ಸಾಧ್ಯವಾಗುವದು. ಕೆಲವರಿಗೆ ಈ ರೀತಿಯು ಪ್ರಶಸ್ತವಿಲ್ಲದೆಯೂ ಇರುವ ಸಂಭವವಿದೆ. ಅಂಥವರು ಜೀವದಲ್ಲಿ ಒಮ್ಮೆ ನಾಚಿಕೆ ಪಟ್ಟದ್ದನ್ನೇ ಚೆನ್ನಾಗಿ ನೆನಪಿನಲ್ಲಿಡಬೇಕು ಪುನಃ ಅಂಥ ತಪ್ಪಾಗದಂತೆ ಹೆಚ್ಚು ಎಚ್ಚರ ಹಿಡಿಯಬೇಕಾಗುವದು. ಇದೇ ಸತ್ಯಮಾರ್ಗದ ಕೈಕೋಲು.

ಇಂಥ ಸತ್ಯಪಾಲನೆಗಿಂತ ಹೆಚ್ಚಿನ ಧರ್ಮಾಚರಣೆ ಇನ್ನೇನು ! ಸತ್ಯನಿಷ್ಠನ ನಾಸ್ತಿಕತನವು ಪರಾಂಪರಾ ಮೂಢರಾದ ಬಾಹ್ಯಾಚಾರಿಗಳ ಆಸ್ತಿಕತನಕ್ಕಿಂತ ಶ್ರೇಷ್ಠತರದ್ದಾಗಿದೆ. ಇಂಥ ನಾಸ್ತಿಕರು ಧರ್ಮವನ್ನು ಬಾಯಿಯಿಂದ ಒಪ್ಪಿಕೊಳ್ಳದಿದ್ದರೂ ಕೈಯ್ಯಿಂದ ಅದು ತಾನಾಗಿಯೇ ಆಚರಿಸಲ್ಪಡುತ್ತದೆ. ಆದರೆ ಪರಂಪರಾಮೂಢರಾದ ಆಸ್ತಿಕರು ಎಷ್ಟೇ ಧರ್ಮಮಾಹಾತ್ಮ್ಯವನ್ನು ಹೇಳಿಕೊಂಡರೂ ಅಂತಃಕರಣದ ಕೃತಿಗಳಲ್ಲಿ ಅವರು ಕಗ್ಗ ನಾಸ್ತಿಕರೇ ಇದ್ದಾರೆ. ಇಲ್ಲಿ ಸತ್ಯಸತ್ಯವಾಗಿ ನಡೆದ ಒಂದು ವಿದ್ಯಮಾನವನ್ನು ಹೇಳುತ್ತೇನೆ. ಹೆಸರು ಸ್ಥಳ ಮುಂತಾದ್ದರ ಕಾರಣವೇನೂ ಇಲ್ಲ. ಸಂಗತಿಯನ್ನು ಮಾತ್ರ ಇದ್ದಕ್ಕಿದ್ದಂತೆ ಹೇಳುತ್ತೇನೆ.

ಒಬ್ಬ ಬ್ರಾಹ್ಮಣರವನು ತನ್ನ ಗೆಳೆಯನಾದಂಥ ಒಬ್ಬ ಜೈನರವನ ಮನೆಯಲ್ಲಿ ಊಟಕ್ಕೆ ಕುಳಿತಿದ್ದಾಗ ಒಬ್ಬ ತೋರು ನಾಮದ ಆಚಾರಿಯು ಅಲ್ಲಿಗೆ ಬಂದನು. ಆಗ ಅವನು ಇದನ್ನು ನೋಡಿ ಕಿವಿಯಮೇಲೆ ಕೈಯ್ಯಿಟ್ಟುಕೊಂಡು, ಅಯ್ಯೋ ಇದೆಂಥಾ ಭ್ರಷ್ಟಾಚಾರ ! ಎಂದುಕೊಳ್ಳುತ್ತಲಿದ್ದಾಗ, ಊಟಕ್ಕೆ ಕುಳಿತವನು–ಏನಿರೀ ಸ್ವಾಮೀ ಈತ ನನ್ನ ಗೆಳೆಯ; ಮೇಲಾಗಿ ಸಾತ್ವಿಕ; ಅಲ್ಲದೆ ಸುಶೀಲ. ಪ್ರೇಮದ ಆಗ್ರಹಕ್ಕಾಗಿ ಏನೋ ನಾನು ಉಂಡೆ. ಇದು ನಿಮ್ಮಂಥವರ ದೃಷ್ಟಿಯಲ್ಲಿ ತಪ್ಪಾದರಾಗಲಿ: ಅದನ್ನೂ ನಾನು ಒಪ್ಪಿಕೊಳ್ಳುತ್ತೇನೆ. ನನ್ನದು ಭ್ರಷ್ಟಾಚಾರವಿರಲಿ. ಆದರೆ ಸ್ವತಃ ತಮ್ಮಂಥವರು ಆ ದುರಾಚಾರಿಗಳಾದ ಬಾಜಾರ ಬಸವಿಯರಲ್ಲಿ ಹೋಗಿ............ ...ನೆಕ್ಕಿ ಬರುತ್ತಿರುವುದು ಮಾತ್ರ ಶಿಷ್ಟಾಚಾರ. ನಮ್ಮ ಕೃತಿಯಿಂದ ಕುಲವು ಕೆಡುತ್ತದೆ; ನಿಮ್ಮದರಿಂದ ಅಚೂತಾ ಉಳಿಯುತ್ತದೆ. ಹೌದಲ್ರೀ ?! ಎಂದಾಗ ಪಾಪ ಅವರೇನು ಉತ್ತರ ಕೊಡಬೇಕು ! ಲೋಕದಲ್ಲಿ ಈಗ ಇಂಥ ಉದಾಹರಣೆಗಳು ಹೇರಳ. ತಾನು ಮಾಡೋದು ಹಾದರ; ಆದರೆ ದೇವರ ನೈವೇದ್ಯಕ್ಕಿಂತ ಮುಂಚೆ ಮೊಸಲು ಮುರಿದ ಮಗನಿಗೆ ಪಾಪದ ಪುರಾಣ ಹೇಳುವ ತಾಯಂದಿರನ್ನು ನೋಡಿದ್ದೇನೆ. ಗಂಟು ಗಳ್ಳತನದಿಂದ ಪರರ ಕುತ್ತಿಗೆ ಕೊಯ್ಯುವವರು ತಾವಿದ್ದರೂ ಮಡಿಯಲ್ಲಿದ್ದಾಗ ಅನ್ಯರ ಧಕ್ಕೆ ಹತ್ತಿದರೆ ಕಿಡಿಕಿಡಿಯಾಗುವ ಮೂಢರಿಗೇನೂ ಕೊರತೆಯಿಲ್ಲ.

ಕಾಡುವ ಆಚಾರಗಳಿಗೆ ಅಳತೆಗೆಟ್ಟು ಮಹತ್ವಕೊಟ್ಟು ವಿಚಾರಮನಸ್ಸುಗಳ ಆಚರಣೆಗೆ ಏನೇನೂ ಲಕ್ಷ್ಯವನ್ನೇ ಹಾಕದ ಇಂದಿನ ಧಾರ್ಮಿಕತನವು ಅಪಹಾಸ್ಯಕರವಾಗಿದೆ. ಹಾದರಿಗರನ್ನು ಕೇಳುವವರಿಲ್ಲ, ಕುತ್ತಿಗೆಗೊಯ್ಕರನ್ನು ಕೈಹಿಡಿಯುವವರಿಲ್ಲ, ಇಂಥಾದ್ದೇನಿದ್ದರೂ ಇಂದು ಮುಕ್ತದ್ವಾರ. ಆದರೆ ನೈಮಿತ್ತಿಕ ಆಚರಣೆಗಳಿಗೆ ತಪ್ಪಿದಕೂಡಲೆ ಮಾತ್ರ ನಾವುಂದು ನೀವುಂದೆಂದು ಕೆಲಸಕ್ಕೆ ಬಾರದವರೆಲ್ಲಾ ಆಚಾರ ಹೇಳಲಿಕ್ಕೆ ಬರುತ್ತಾರೆ. ಅಯ್ಯೋ ಇದೆಂಥಾ ಅವಿಚಾರ ! ಎಂಥಾ ಅಜ್ಞಾನ ! ಎಂಥಾ ಮೂಢತನ ! ಹೊಲೆಯರನ್ನು ಮುಟ್ಟಿಸಿಕೊಂಡು ಹಾಗೇ ಮನೆಯಲ್ಲಿ ಹೋದರೆ ತೀರಿತು. ಎಲ್ಲೆಲ್ಲೂ ಗಲಭೆಯೇ ಗಲಭೆ. ಇದರಲ್ಲಿ ಯಾರದೇನು ನಷ್ಟವಾಯಿತೋ, ದೇವರ ಮನೆಯೇನು ಹಾಳಾಯಿತೋ ತಿಳಿಯದು. ಆದರೆ ಪ್ರತ್ಯಕ್ಷ ಹೊಲೆಗೆಲಸಮಾಡಿದವರಿಗೆ ಕೇಳುವವರಿಲ್ಲ. ಇಷ್ಟಾದರೂ ಅವನು ತೊಳಕೋ ಬಳಕೋ ಮಾಡಿದರೆ ತೀರಿತು. ಮೇಲೆ ಮತ್ತೆ ಅವನೇ ಮಹಾ ಧಾರ್ಮಿಕಶಿರೋಮಣಿ !

ಇಂದಿನ ಇಂಥಾ ವಿಪರೀತ ಕಾಲದಲ್ಲಿ ಆತ್ಮೋನ್ನತಿಯನ್ನು ಬಯಸುವವರು, ಸಮಾಜೋನ್ನತಿಯನ್ನು ಬಯಸುವವರು, ದೇಶೋನ್ನತಿಯನ್ನು ಬಯಸುವವರು, ರಾಷ್ಟ್ರೋನ್ನತಿಯನ್ನು ಬಯಸುವವರು, ಲೋಕಕಲ್ಯಾಣವನ್ನು ಆಶಿಸುವವರು ಸತ್ಯಾಶ್ರಯರಾಗಿ ಮುಂದುವರಿವಲ್ಲದೆ ಮಾರ್ಗವಿಲ್ಲ. ಒಳಗೆ ಸತ್ಯ ಅಚ್ಚೊತ್ತಬೇಕು. ಹೊರಗಿನ ಕೃತಿಗಳೆಲ್ಲ ಆ ಸತ್ಯನಿಷ್ಠೆಗೆ ಅನುಗುಣವಾಗಿ ಅನುಸರಿಸುವುದು ಒಡೆದು ಕಾಣಬೇಕು. ಇಷ್ಟಿಲ್ಲದೆ ಹೋದರೆ ಸ್ವೋನ್ನತಿಯೂ ಇಲ್ಲ, ಪರೋನ್ನತಿಯೂ ಇಲ್ಲ. ಎಲ್ಲಾ ಬರೇ ಮಾತಿನ ಮೆರವಣಿಗೆಯಾಗಿ ಹೋಗುವದು. ತನ್ನನ್ನೇ ತಾನು ನೋಡಿಕೊಳ್ಳದೆ ಒಣಾ ಜಂಬಕೊಚ್ಚುತ್ತ ಸ್ವಸ್ವರೂಪಜ್ಞಾನವಿಲ್ಲದೆ ಮಬ್ಬಿನಿಂದ ಮೆರೆದಾಡಿ ಏನು ಫಲ ? ಇಂಥವರು ಹೂಡಿದ್ದೆಲ್ಲಾ ಹುಡುಗರ ಆಟದಂತೆ ವ್ಯರ್ಥಶ್ರಮವೇ ಸರಿ. ತನ್ನ ಹಾಡೇ ತನಗೆ ಗೊತ್ತಿಲ್ಲದ ಪ್ರಾಣಿ ಇನ್ನೊಬ್ಬರ ಪಾಡಿಗೆ ಕೈಹಾಕುವದರಿಂದ ಏನು ಪ್ರಯೋಜನವಾದೀತು ? ತಾನು ಹೇಗಿದ್ದೇನೆಂಬುದನ್ನೂ ತನ್ನನ್ನು ಅನ್ಯರು ಹೇಗೆ ತಿಳಕೊಂಡಿದ್ದಾರೆಂಬುದನ್ನೂ ಯೋಚಿಸಿ ಅವೆರಡರಲ್ಲೂ ತಾಳುಮೇಳು ಉಳಿಯುವುದರ ಕಡೆಗೆ ಲಕ್ಷ್ಯವಿಲ್ಲದೆ ಬರೇ ಬಾಯಿಗೆ ಬಂದಂತೆ ಬಡಬಡಿಸುತ್ತ ಕಂಡಂತೆ ಕುಣಿದರೆ ಲೋಕೋಪಕಾರವೂ ಇಲ್ಲ; ಸ್ವೋಪಕಾರವೂ ಇಲ್ಲ. ಇಂಥವರು ಏನು ಮಾಡಬೇಕೆಂಬುದನ್ನು ಇನ್ನೊಬ್ಬರಾರೂ ಹೇಳಿಕೊಡಬೇಕಾದ ಅಗತ್ಯವಿಲ್ಲ. ತಮ್ಮ ಸ್ಥಿತಿಗೂ ತಮ್ಮ ಕೃತಿಗೂ ಲಕ್ಷ್ಯಗೊಟ್ಟರೆ ಮುಂದೆ ಏನು ಮಾಡಬೇಕೆಂಬುದು ತನ್ನಿಂದ ತಾನೇ ಗೊತ್ತಾಗುವದು.

**ತನ್ನ ತಾ ಅರಿತರೆ**

**ತನ್ನ ಅರಿವೇ ಗುರು**

ಸತ್ಯವನ್ನು ಬಿಟ್ಟರೆ ಎಲ್ಲಾ ಅಸತ್ಯವೇ ಸರಿ

ಉದ್ಧರೇದಾತ್ಮನಾತ್ಮಾನಮ್

**ಓಂ ಶಾನ್ತಿಃ ಶಾನ್ತಿಃ ಶಾನ್ತಿಃ**

# ದಕ್ಷಿಣಹಿಂದುಸ್ತಾನದ ಕೆಲವು ಔಷಧೋಪಯುಕ್ತ ವನಸ್ಪತಿಗಳು



ಲೇಖಕರು:—ಶ್ರೀ. ಡಾ. ವ.ಎಪ್ಪಣ್ಣ ಚ. ತುವಿಮ್ಮನಕಟ್ಟಿ, ಎಂ.ಎಸ್.ಸಿ, ಪಿ.ಎಚ್.ಡಿ., (ಇಲಿನಾಯ) ಟಾಟಾ ರಿಸರ್ಚ ಇನ್‌ಸ್ಟಿಟ್ಯೂಟ, ಬೆಂಗಳೂರು

೧೯೮. Kalanchoe laciniata, Dc.; (ಹೇಮಸಾಗರ (ಸ) ಈ ವನಸ್ಪತಿಯ ಎಲೆಗಳ ಮೇಲೆ ಸ್ವಲ್ಪ ಎಂಣೆಯನ್ನು ಸವರಿ, ಬೆಚ್ಚಗೆಮಾಡಿ, ಹೊಸ ಮತ್ತು ಹಳೇ ಹುಣ್ಣುಗಳ ಮೇಲೆ ಹಾಕುವರಲ್ಲದೆ, ಈ ಎಲೆಗಳ "ಪೋಟೀಸ"ನ್ನೆ ಸಹ ಒಮ್ಮೊಮ್ಮೆ ಉಪಯೋಗಿಸುವರು.

೧೯೯. Lageneria Vulgaris, Seringe; (ಸೋರೆಕಾಯಿ ಬಳ್ಳಿ; ವಿಷ (ಈಸ) ಗುಂಬಳ ಬಳ್ಳಿ (?) ) ಇದರ ಬೀಜಗಳಲ್ಲಿ ದೇಹಕ್ಕೆ ತಂಪನ್ನು ಕೊಡುವ ಗುಣವಿರುವದು. ತಲೆನೋವಾದಾಗ ಈ ಬೀಜಗಳನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳುವರು. ಇದರ ಹಂಣುಗಳಲ್ಲಿ ಮತ್ತು ಎಲೆಗಳಲ್ಲಿ ಭೇದಿಕಾರಕ ಗುಣವಿರುವದೆಂದು ಹೇಳುತ್ತಾರೆ. ಕಾಮಣಿ (ಕಾಮಲಿ) (jaundice)ಯಾದಾಗ ಈ ವನಸ್ಪತಿಯ ಎಲೆಗಳ ಕಷಾಯವನ್ನು ತೆಗೆದುಕೊಳ್ಳುವರು.

೨೦೦. Lagerstroemia flos-reginae, Retz.; (ಮರುವಾಚಲ ಮರ (ಮೈ); ಮರುಮರ (ದ. ಕ); ಹೊಳೆದಾಸಾಲ ಮರ (ಉ. ಕ.) ) ಇದರ ಬೇರು, ತೊಗಟೆ, ಎಲೆ, ಮತ್ತು ಹೂಗಳನ್ನು ಅನೇಕ ರೋಗಗಳಿಗೆ ಉಪಯೋಗಿಸುವರು. ಇದರ ಬೀಜಗಳು ಅಮಲುಕಾರಕ (narcotic) ವಿರುವವೆಂನೂ, ಮತ್ತು ತೊಗಟೆ ಮತ್ತು ಎಲೆಗಳು ಭೇದಿಕಾರಕವಿರುವವೆಂದೂ ಹೇಳುತ್ತಾರೆ.

೨೦೧. Lawsonia alba, Lam.; ( The henna plant ; The Egyptian privet ಮದರಂಗಿ (ಗ)ಗಿಡ; ಗೋರಂಟ ಗಿಡ; ಕೋರಂಟೆ ಗಿಡ. ) ಹುಗಳು (ಅಗ್ರ) (sore-mouth) ಆದಾಗ ಈ ಗಿಡದ ಎಲೆಗಳ ಕಷಾಯವನ್ನು ಬಾಯಿಮುಕ್ಕಳಿಸುವದಕ್ಕೆ ಉಪಯೋಗಿಸುವರಲ್ಲದೆ, ಇದನ್ನು ಜಿಗಟಾಗಿಮಾಡಿ ಹುಣ್ಣುಗಳಮೇಲೆ ಹಚ್ಚುವರು. ಎಲೆಗಳನ್ನು ತಲೆನೋವಾದಾಗ, ಒಮ್ಮೊಮ್ಮೆ ಉಪಯೋಗಿಸುವರು. ತೊಗಟೆಯನ್ನು ಕುಷ್ಟರೋಗ, ಕಾಮಣಿ (ಕಾಮಲಿ), ಮತ್ತು ಅನೇಕ ತರದ ಹಳೆಹುಣ್ಣು ಮುಂತಾದ ರೋಗಗಳಿಗೆ ಉಪಯೋಗಿಸುವರು.

೨೦೨. Lepidium sativum, Linn.; (The cress–ಕುರ್ಟಿಗೆಸೊಪ್ಪಿನ ಗಿಡ ) ರಕ್ತವು ಕೆಟ್ಟು ದೇಹದ ಮೇಲೆ ಹೊರಡುವ ಬಕ್ಕೆ ಮುಂತಾದವುಗಳಿಗೂ, ಅತಿಸಾರ, ರಕ್ತಾತಿಸಾರ, ಜ್ವರ, ನೆಗಡಿ ಮುಂತಾದ ತೊಂದರೆಗಳಿಗೂ ಇದರ ಬೀಜಗಳನ್ನು ಉಪಯೋಗಿಸುವರು.

೨೦೩. Leucas linifolia, Spreng.; (ತುಂಬೆಯ ಗಿಡ ) ತಾಜಾ ಎಲೆಗಳ ರಸವನ್ನು ನೆಗಡಿ, ತಲೆನೋವು ಮುಂತಾದವುಗಳಿಗೆ ಉಪಯೋಗಿಸುವರು.

೨೦೪. Limonia acidissima, Linn.; (ನಾಯಿಬೆಳವಲ ಗಿಡ (?) ) ಇದರ ಎಲೆಗಳು ಮಲರೋಗಕ್ಕೆ ಗುಣಕಾರಿಯೆಂದು ಹೇಳುತ್ತಾರೆ. ಇದರ ಬೇರಿನಲ್ಲಿ ಭೇದಿಕಾರಕ ಮತ್ತು ಬೆವರು ಹುಟ್ಟಿಸುವ ಗುಣವಿರುವದು. ಒಣಗಿದ ಹಂಣನ್ನು ಜ್ವರಕ್ಕೂ ಮತ್ತು ಮೈಲಿ ಮುಂತಾದ ಕೆಲವು ಚರ್ಮರೋಗಗಳಿಗೂ ಉಪಯೋಗಿಸುವರು.

೨೦೫. Luffa acutangula, Roxb.; (ಹೀರೆ (ಹೀರಿ)ಕಾಯಿ ಬಳ್ಳಿ (ಮು. ಕ; ಮ. ಕ)) ಈ ಬಳ್ಳಿಯ ಬೀಜಗಳಲ್ಲಿಯೂ ಮತ್ತು ಇದೇಜಾತಿಗೆ ಸೇರಿದ ತುಪ್ಪಹೀರೆಕಾಯಿ (ಮೈ. ಕ. ಮು. ಕ.)ಯ ಬೀಜಗಳಲ್ಲಿಯೂ ವಾಂತಿಕಾರಕ ಮತ್ತು ಭೇದಿಕಾರಕ ಗುಣಗಳಿರುವವು.

೨೦೬. Malva rotundifolia, Linn.; (ರೊಟ್ಟಿ ತೆಮ್ಮಿ ಗಿಡ; ಕಾಡುಕಡಲೇಸೊಪ್ಪಿನ ಗಿಡ ( ದ. ಕ.) ) ಕೆಮ್ಮು, ಮೂಲವ್ಯಾಧಿ ಮುಂತಾದ ರೋಗಗಳಿಗೆ ಈ ವನಸ್ಪತಿಯ ಬೀಜಗಳನ್ನು ಉಪಯೋಗಿಸುವರಲ್ಲದೆ, ಚರ್ಮರೋಗಗಳಿಗೆ ಈ ಬೀಜಗಳ "ಮುಲಾಮನ್ನು" ಇಲ್ಲವೆ "ಪೋಟೀಸ"ನ್ನು ಹಾಕುವರು.

೨೦೭. Malva sylvestris, Linn.; (The common mallow-ಸಂಣಬಿಂದಿಗೆ (ಲೆ (?) )ಗಿಡ. (ಮೈ)) ಈ ವನಸ್ಪತಿಯ ತಾಜಾ ರಸವನ್ನು ಮೇಹಸಂಬಂಧದ ರೋಗಗಳಿಗೂ ಮತ್ತು ಬೇರಿನ ಕಷಾಯವನ್ನು ಜ್ವರಕ್ಕೂ ಉಪಯೋಗಿಸುವರು.

ಗಿಸುವರು. ಇದರ ಬೀಜಗಳು ಕೆಮ್ಮು ಮುಂತಾದ ಗಂಟಲದ ತೊಂದರೆಗಳಿಗೆ ಗುಣಕಾರಿಯೆಂದು ಹೇಳುತ್ತಾರೆ.

೨೦೮. Mangifera indica, Linn.; (The mango tree–ಮಾವಿನ ಮರ. ) ಈ ಗಿಡದ ಹಣ್ಣುಗಳು ದೇಹದಲ್ಲಿ ತಂಪನ್ನುಂಟುಮಾಡುವವಲ್ಲದೆ, ಇದರ ಬಲಿತ ಕಾಯಿಗಳು ರಕ್ತಪಿತ್ತರೋಗಕ್ಕೆ ಗುಣಕಾರಿಯೆಂದು ಹೇಳುತ್ತಾರೆ. ಈ ಗಿಡದ ಅಂಟನ್ನು ಬೆಚ್ಚಗೆಮಾಡಿ ಬಿರಿತ ಪಾದಗಳಿಗೆ ಹಚ್ಚುವದಲ್ಲದೆ, ಲಿಂಬೆಯ ಹಣ್ಣಿನ ರಸದೊಡನೆ ಇದನ್ನು ಕಜ್ಜಿಮುಂತಾದ ಚರ್ಮರೋಗಗಳಿಗೆ ಉಪಯೋಗಿಸುವರು, ಶ್ವಾಸಕೋಶ (lungs), ಕರಳು (intestine) ಮತ್ತು ಗರ್ಭಾಶಯದಿಂದ ರಕ್ತಸ್ರಾವವಾಗುವಾಗ ಈ ಗಿಡದ ತೊಗಟೆಯ ಚೂರ್ಣವನ್ನಾಗಲೀ ಅಥವಾ ಅದರ ಕಷಾಯವನ್ನಾಗಲೀ ಕೊಡುವರು. ಈ ಗಿಡದ ಬೀಜದೊಳಗಿನ ಪೊಪ್ಪ (ಪಪ್ಪು)ನ್ನು, ಹೊಟ್ಟೆಜಾಡಿಸೋಣ, ಆಮಶಂಕೆ (dysentery) ಮುಂತಾದವುಗಳಿಗೆ ಉಪಯೋಗಿಸುವರು.

೨೦೯. Martynia diandra, Glox.; (The devil's or tiger's claw–ಚೇಳಿನಕೊಂಡಿಯ ಗಿಡ) ಕಡಜೀರಿಗೆಯ ಹುಳ, ಚೇಳು ಮುಂತಾದವುಗಳ ಕಡಿತದಿಂದಾದ ನೋವನ್ನು ಕಡಿಮೆಮಾಡುವದಕ್ಕಾಗಿ ಈ ವನಸ್ಪತಿಯನ್ನು ಉಪಯೋಗಿಸುವರೆಂದು ಹೇಳುತ್ತಾರೆ.

೨೧೦. Melia azadirachta, Linn; (The neem or margosa tree-ಬೇವಿನ ಮರ)) ಈ ವನಸ್ಪತಿಯು ಹಿಂದೀವೈದ್ಯರಿಗೆ ಬಹಳೇ ಪುರಾತನಕಾಲದಿಂದ ಗೊತ್ತಿದ್ದಂತೆ ತೋರುತ್ತದೆ. ಇದರ ಪ್ರತಿಯೊಂದು ಭಾಗವನ್ನು ದೇಶೀ ಔಷಧಿಯಲ್ಲಿ ಒಂದಿಲ್ಲೊಂದು ರೀತಿಯಿಂದ ಉಪಯೋಗಿಸುವರು. ಇದರ ಬೇರಿನ ಮತ್ತು ಬೊಡ್ಡೆಯ ತೊಗಟೆಯ ಕಷಾಯವು ಬಿಟ್ಟು ಬಿಟ್ಟುಬರುವ ಜ್ವರಕ್ಕೆ ಬಹಳೇ ಉತ್ತಮವೆಂದು ಅನೇಕ ವೈದ್ಯರು ಅಭಿಪ್ರಾಯವನ್ನು ಕೊಟ್ಟಿರುವರು. ಬೇವಿನಕಾಯಿಯ ರಸವನ್ನು ಸಹ ಒಮ್ಮೊಮ್ಮೆ ಜ್ವರಕ್ಕೂ ಮತ್ತು ಭೇದಿಯನ್ನುಂಟುಮಾಡಲಿಕ್ಕೂ ಉಪಯೋಗಿಸುವರು. ಈ ಮರದ ಎಲೆಗಳನ್ನು, "ಮುಲಾಮು", ಇಲ್ಲವೆ "ಪೋಟೀಸಿ"ನ ರೂಪದಿಂದ ಅನೇಕ ತರದ ಚರ್ಮರೋಗಗಳಿಗೂ ಮತ್ತು ನೋಲೆಹಾಲನ್ನು ಬತ್ತಿಸುವದಕ್ಕೂ ಉಪಯೋಗಿಸುವರು. ಬೇವಿನ ಎಂಣೆಯು ಅನೇಕ ತರದ ಚರ್ಮರೋಗಗಳಿಗೂ, ಹೇನು ಮುಂತಾದ ಕ್ರಿಮಿಕೀಟಕಗಳನ್ನು ನಾಶಮಾಡುವದಕ್ಕೂ, ಸಂಧಿವಾತ, ಉಲುಕುಹಿಡಿಯೋಣ ( ನರ ತೊಡಕೋಣ ), ಕುಷ್ಟರೋಗ ಮುಂತಾದವುಗಳಿಗೂ ಉತ್ತಮವೆಂದು ಅನೇಕ ವೈದ್ಯರು ಅಭಿಪ್ರಾಯಪಟ್ಟಿರುವರು. ನೆಗಡಿ, ಕೆಮ್ಮು ಮುಂತಾದವುಗಳಿಗೆ ಈ ಮರದ ಅಂಟು ಬಹಳೇ ಗುಣಕಾರಿಯೆಂದು ಹೇಳುತ್ತಾರೆ.

೨೧೧. Melia azedarach, Linn.; ( The Persian lilac–ಅರಬೇವಿನ ಗಿಡ; ಕಾಡುಬೇವಿನ ಗಿಡ; ಬೆಟ್ಟದ ಬೇವಿನ ಗಿಡ. ) ತಲೆನೋವಾದಾಗ, ಈ ಗಿಡದ ಹೂವುಗಳ ಇಲ್ಲವೆ ಎಲೆಗಳ "ಪೋಟೀಸ"ನ್ನು ಹಣೆಗೆ ಹಾಕುವರು. ಮೂತ್ರಬದ್ಧತೆಯ ಇಲ್ಲವೆ ಸ್ತ್ರೀಯರ ಮುಟ್ಟಾಗುವಿಕೆಯ ತೊಂದರೆಯುಂಟಾದಾಗ ಈ ಗಿಡದ ಎಲೆಗಳ ರಸವನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳುವರು. ಇದರ ತೊಗಟೆ, ಎಲೆ, ಮತ್ತು ಹಣ್ಣುಗಳನ್ನು ಕುಷ್ಟರೋಗ, ಮತ್ತು ಗಂಡುಮಾಲೆಯ ಹುಣ್ಣು ಮುಂತಾದವುಗಳ ನಿವಾರಣೆಗಾಗಿ ಹೊಟ್ಟೆಯಲ್ಲಿ ತೆಗೆದು ಕೊಳ್ಳುವರು.

೨೧೨. Memecylon edule, Roxb.; (The iron-wood tree–ಲಿಂಬಪೋಲಿ (?) ಮರ ) "ಬಿಳಿಸೆರಗು", (ಕೀವಿನಂತೆ ಮಲವು ಹೋಗುವ ರೋಗ) (leucorrhea) ಪ್ರಮೇಹ ಮುಂತಾದ ರೋಗಗಳಿಗೆ ಇದರ ಎಲೆಗಳನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳುವರಲ್ಲದೆ, ಕಣ್ಣುಬೇನೆಯಾದಾಗ ಈ ಎಲೆಗಳ ಕಷಾಯದಿಂದ ಕಣ್ಣುಗಳನ್ನು ತೊಳೆಯುವರು.

೨೧೩. Mentha arvensis, Linn.; ( The march mint; ಮರುಗದ ಗಿಡ (?) ) ಈ ವನಸ್ಪತಿಯ ತಾಜಾ ಎಲೆಗಳ ರಸವನ್ನು, ತಲೆನೋವಿಗೂ, ಮತ್ತು ಒಣಗಿದ ಎಲೆಗಳ ಕಷಾಯವನ್ನು ವಾಕರಿಕೆಯಿಂದುಂಟಾದ ವಾಂತಿಯನ್ನು ನಿಲ್ಲಿಸುವದಕ್ಕೂ ಉಪಯೋಗಿಸುವರು. ಹಲ್ಲುಗಳನ್ನು ಉಜ್ಜಿ ಸ್ವಚ್ಛಮಾಡುವದಕ್ಕೆ ಇದರ ದೇಟಿನ ಚೂರ್ಣವನ್ನು ಉಪಯೋಗಿಸುವರು.

೨೧೪. Mesua ferrea, Linn.; (ನಾಗಕೇಶರದ ಗಿಡ; ನಾಗಸಂಪಿಗೆ ಗಿಡ. ) ಕೀವುಗಟ್ಟಿ ಸೋರುವ ಹಳೇ ಹುಣ್ಣುಗಳಿಗೂ ಮತ್ತು ಅನೇಕ ತರದ ಚರ್ಮರೋಗಗಳಿಗೂ ಈ ವನಸ್ಪತಿಯ ಬೀಜಗಳಿಂದ ತೆಗೆದ ಎಣ್ಣೆಯನ್ನು ಉಪಯೋ

ಗಿಸುವರು. ಇದರ ಎಲೆಗಳು ಮತ್ತು ಹೂವುಗಳು ಹಾವಿನ ಕಡಿತಕ್ಕೆ "ಉತಾರ"ವನ್ನು ಕೊಡುವವೆಂದು ಹೇಳುತ್ತಾರೆ.

೨೧೫. Michelia champaca, Linn.; (ಕೋಲಸಂಪಿಗೆ ಗಿಡ (ಮು. ಕ; ಮ. ಕ); ಸಂಪಿಗೆಹೂವಿನ ಗಿಡ ) ಈ ವನಸ್ಪತಿಯ ಎಲೆ ಮತ್ತು ಹೂಗಳನ್ನು ಅಜೀರ್ಣ, ವಾಕರಿಕೆಯಿಂದಾದ ವಾಂತಿ, ಜ್ವರ ಮುಂತಾದವುಗಳಿಗೆ ಉಪಯೋಗಿಸುವರಲ್ಲದೆ, ತಾಜಾ ಎಲೆಗಳ ರಸವು ಕ್ರಿಮಿನಾಶಕವಿರುವದೆಂದು ಹೇಳುತ್ತಾರೆ.

೨೧೬. Mimosa pudica, Linn.; ( The sensitive plant–ಮುಟ್ಟಲಮುರಿಕೆ ಗಿಡ (ಮ. ಕ.); ಮುಡುಗುದಾವರೆ ಗಿಡ (ಮೈ.) ; ಲಜ್ಜಾವತಿ ಗಿಡ) ಇದರ ಬೇರಿನ ಕಷಾಯವು ಮೂತ್ರಪಿಂಡದ (kidney) ತೊಂದರೆಗಳಿಗೆ ಗುಣಕಾರಿಯೆಂದು ಹೇಳುತ್ತಾರೆ. ಇದರ ಬೇರು ಮತ್ತು ಎಲೆಗಳನ್ನು ಸೋರುವ ಹುಣ್ಣು (fistula) ಗಳಿಗೂ ಮತ್ತು ಮೂಲವ್ಯಾಧಿಗೂ ಉಪಯೋಗಿಸುವರು.

೨೧೭. Mimusops elengi, Linn.; ( ಬಕುಳ ಪುಷ್ಪದ ಮರ; ಪಗಡೆ ಗಿಡ; ಕೇಸರದ (?) ಮರ ) ಒಸಡಿ, ಹಲ್ಲು ಮುಂತಾದವುಗಳ ತೊಂದರೆಯಾದಾಗ, ಈ ಗಿಡದ ಬಲಿತ ಕಾಯಿಗಳನ್ನು ಜಗಿಯುವರಲ್ಲದೆ, ಇದರ ತೊಗಟೆಯ ಕಷಾಯದಿಂದ ಬಾಯಿಯನ್ನು ಮುಕ್ಕಳಿಸುವರು.

೨೧೮. Mimusops kauki, Linn.; ಪಾಲೆಯ ಮರ; ಹಾಲೆಯ ಮರ ) ಇದರ ಬೀಜಗಳನ್ನು ಸಣ್ಣಾಗಿ ಪುಡಿ ಮಾಡಿ, ಕಣ್ಣುಬೇನೆಗೂ ಮತ್ತು ಜ್ವರಕ್ಕೂ ಉಪಯೋಗಿಸುವರು, ಚಿಕ್ಕಮಕ್ಕಳ ಹೊಟ್ಟೆ ಜಾಡಿಸುವಾಗ, ಇದರ ಬೇರಿನ ಇಲ್ಲವೆ ತೊಗಟೆಯ ಕಷಾಯವನ್ನು ಜೇನುತುಪ್ಪದೊಡನೆ ಕೊಡುವರು.

೨೧೯. Mirabilis jalapa, Linn.; (ಚಂದ್ರ ಮಲ್ಲಿಗೆ ಗಿಡ; ವಿಭೂತಿ ಗಿಡ (ಮೈ) ; ಮಧ್ಯಾಹ್ನಮಲ್ಲಿಗೆ ಗಿಡ) ಕುರು ಮುಂತಾದ ಬಕ್ಕೆಗಳನ್ನು ಹಣ್ಣುಮಾಡಿ ಒಡೆಯುವದಕ್ಕೆ ಇದರ ಎಲೆಗಳ "ಪೋಟೀಸ"ನ್ನು ಹಾಕುವರು.

೨೨೦. Mollugo cerviana, Seringe.; (ಪರ್ಪಾಟಕ; ಪರ್ಪಾಷ್ಟಕದ ಗಿಡ (ಮು. ಕ; ಮ. ಕ.) ) ಈ ವನಸ್ಪತಿಯನ್ನು ಜ್ವರಕ್ಕೂ ಮತ್ತು ಕೆಲವು ವನಸ್ಪತಿಗಳೊಡನೆ "ಮುಲಾಮಿ"ನ ರೂಪದಲ್ಲಿ ಕಜ್ಜಿ ಮುಂತಾದ ಚರ್ಮ ರೋಗಗಳಿಗೂ ಉಪಯೋಗಿಸುವರು.

೨೨೧. Momordica charantia, Linn.; (ಹಾಗಲಕಾಯಿಬಳ್ಳಿ (ಮ. ಕ; ಮು. ಕ) ) ಇದರ ಎಲೆಗಳನ್ನು ಮತ್ತು ಹಣ್ಣುಗಳನ್ನು, ಕುಷ್ಟರೋಗ, ಮೂಲವ್ಯಾಧಿ ಕಾಮಿಣೆ (ಕಾಮಿಲಿ) ಮುಂತಾದ ರೋಗಗಳಿಗೆ ಹೊಟ್ಟೆಯಲ್ಲಿ ಕೊಡುವರು. ಪೈತ್ಯರೋಗದ (bilious) ತೊಂದರೆಗಳಲ್ಲಿ ವಾಂತಿ-ಭೇದಿಗಾಗಿ ಎಲೆಗಳ ರಸವನ್ನು ಕೊಡುವರು. ಮಿತಿ ಮೀರಿ ಈ ರಸವನ್ನು ತೆಗೆಸುಕೊಂಡರೆ, ಅತಿ ವಾಂತಿ ಮತ್ತು ಅತಿ ಭೇದಿಯಿಂದ ದೇಹಕ್ಕೆ ಅಪಾಯವಾಗುವ ಸಂಭವವುಂಟು.

೨೨೨. Momordica dioica, Roxb; (ಮುಳ್ಳು ಹಾಗಲ ಬಳ್ಳಿ; ಮಡಿವಾಳಹಾಗಲ ಬಳ್ಳಿ; ಗಿಡಹಾಗಲ ಬಳ್ಳಿ) ಸೀನನ್ನು ಹುಟ್ಟಿಸುವದಕ್ಕಾಗಿ ಒಣಗಿದ ಹಣ್ಣಿನ ಸಣ್ಣಗೆ ಮಾಡಿದ ಪುಡಿಯನ್ನು ಸೇದುವರು. ಈ ವನಸ್ಪತಿಯ ಬೇರಿನಲ್ಲಿ ಕಫವನ್ನು ಕತ್ತರಿಸುವ ಗುಣವಿರುವದೆಂದು ಹೇಳುತ್ತಾರೆ.

೨೨೩. Morinda citrifolia, Linn.; (The Indian mulberry-ತಗಚೇಮರ; ಮಡ್ಡೀಮರ; ಹಳದಿ ಪಾಪಟೀಮರ ) ಈ ವನಸ್ಪತಿಯ ಎಲೆಗಳ ಅತಿ ಕಹಿಯಾದ ರಸವನ್ನು ಜ್ವರಕ್ಕೂ ಮತ್ತು "ಪೋಟೀಸ"ನ್ನು ಹಳೆಹುಣ್ಣುಗಳಿಗೂ ಉಪಯೋಗಿಸುವರು.

೨೨೪. Moringa pterygosperma, Goertn.; (The horsh raddish tree-ನುಗ್ಗೇ (ನುಗ್ಗೆ) ಕಾಯಿಯ ಗಿಡ (ಮು. ಕ; ಮ. ಕ )) ಇದರ ಕಾರವಾದ ಬೇರಿನ ರಸವನ್ನು ಹೊಟ್ಟೆಯಲ್ಲಿ ತೆಗೆದುಕೊಂಡರೆ ಮೂತ್ರವು ಹೆಚ್ಚುಗುವದೆಂದು ಹೇಳುತ್ತಾರೆ. ಈ ರಸವನ್ನು ಹಾಲಿನೊಡನೆ ಅಜೀರ್ಣ, ದಮ್ಮು ಮುಂತಾದವುಗಳಿಗೆ ತೆಗೆದುಕೊಳ್ಳುವರು.

೨೨೫. Mucuna pruriens, Dc.; ( The cowhage plant-ತುರಟೀ ಬಳ್ಳಿ; ನಸುಗುನ್ನಿ ಬಳ್ಳಿ (ಮು. ಕ.) ) ಜ್ವರದಿಂದಾದ ಅಶಕ್ತತೆಗೂ ಮತ್ತು ಅರ್ಧಾಂಗ ರೋಗಕ್ಕೂ ಇದರ ಬೇರನ್ನು ಉಪಯೋಗಿಸುವರೆಂದು ಹೇಳುತ್ತಾರೆ.

೨೨೬. Murraya koenigii, Spr.; ( The curry-leaf tree-ಕರಿಬೇವಿನ ಗಿಡ (ಮು. ಕ; ಮ. ಕ.))

ಅತಿಸಾರವನ್ನು ನಿಲ್ಲಿಸುವದಕ್ಕಾಗಿ ಇದರ ಎಲೆಗಳನ್ನು ತಿನ್ನುವರು. ಇವುಗಳ ಕಷಾಯವನ್ನು ವಾಂತಿಯನ್ನು ನಿಲ್ಲಿಸುವದಕ್ಕೆ ಉಪಯೋಗಿಸುವದಲ್ಲದೆ, ಬಿಟ್ಟುಬಿಟ್ಟುಬರುವ ಜ್ವರದ ನಿವಾರಣೆಗೂ ಈ ಕಷಾಯವನ್ನು ಒಮ್ಮೊಮ್ಮೆ ಉಪಯೋಗಿಸುವರೆಂದು ಹೇಳುತ್ತಾರೆ.

೨೨೭. Musa Sapientum, Linn.; (The Plantain or banana tree—ಬಾಳೆಯ ಗಿಡ. ) ಈ ಗಿಡದ ದಿಂಡು, ಬೇರು, ಮತ್ತು ಒಣಗಿದ ಹಣ್ಣಿನಲ್ಲಿ ರಕ್ತಪಿತ್ತ ನಾಶಕ ಗುಣವಿರುವದೆಂದು ಹೇಳುತ್ತಾರೆ. ಉರಿಮೂತ್ರವಾದಾಗ ಈ ಗಿಡದ ಬೇರಿನ ರಸವನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳುವರು. ದಿಂಡಿನ ಮತ್ತು ಎಲೆಗಳ ರಸವನ್ನು ಅಫುವಿನ ಅಮಲನ್ನು ಇಳಿಸುವದಕ್ಕೆ ಕೊಡುವರು. ಉತ್ತಮಜಾತಿಯ ಬಾಳೇಹಣ್ಣುಗಳು ಆಮಶಂಕೆ, ಮೇಹಸಂಬಂಧದ ರೋಗ ಮುಂತಾದವುಗಳಿಗೆ ಬಹಳೇ ಉತ್ತಮವೆಂದು ಹೇಳುತ್ತಾರೆ.

೨೨೮. Myristica malabarica, Lam.; (ಪಿಂಡೀಕಾಯಿ ಗಿಡ ) ಅತಿಸಾರ, ಆಮಶಂಕೆ ಮುಂತಾದವುಗಳನ್ನು ನಿಲ್ಲಿಸುವದಕ್ಕೆ ಇದರ ಬೀಜಗಳನ್ನು ಹುರಿದು ಪುಡಿ ಮಾಡಿ, ಹೊಟ್ಟೆಯಲ್ಲಿ ತೆಗೆದುಕೊಳ್ಳುವರು. ಇದರ ಕಾಯಿಯಲ್ಲಿಯೂ ಮತ್ತು ಇದೇ ಜಾತಿಗೆ ಸೇರಿದ ಜಾಜೀಕಾಯಿಯಲ್ಲಿಯೂ ( ಮಿತಿಮೀರಿ ಉಪಯೋಗಿಸಿದರೆ) ಅಮಲನ್ನು ಹುಟ್ಟಿಸುವ ಗುಣವಿರುವದು.

೨೨೯. Naregamia alata, W. and A.; (ನೆಲನಾರಿಂಗು (ಗ) ಗಿಡ; ನೆಲಕಂಚಿ ಗಿಡ ) ಇದರ ಬೇರಿಗೆ ಒಂದು ತರದ ಸುವಾಸನೆಯಿರುವದು. ಈ ಬೇರನ್ನು ಕಜ್ಜಿ, ವಾತರೋಗ ಮುಂತಾದವುಗಳಿಗೆ ಉಪಯೋಗಿಸುವರು. ಇದರ ದೇಟಿನ ಮತ್ತು ಎಲೆಗಳ ಕಷಾಯವು ವಾಂತಿ, ಪಿತ್ತ (ಪೈತ್ಯ), ಅತಿಸಾರ, ಕಫ ಮುಂತಾದವುಗಳ ನಿವಾರಣೆಗೆ ಬಹಳೇ ಉತ್ತಮವೆಂದು ಹೇಳುತ್ತಾರೆ.

೨೩೦. Nerium odorum, Soland.; (Sweet-scented oleander-ಕಣಗಲು ಗಿಡ (ಮು.ಕ; ಮ. ಕ.) ) ಈ ವನಸ್ಪತಿಯ ಬೇರು ಅತಿ ವಿಷವುಳ್ಳದ್ದಾಗಿರುವದು. ಇದನ್ನು ಗಂಧದಂತೆ ತೇಯಿದು, ಕಜ್ಜಿ, ಕುಷ್ಟರೋಗ ಮುಂತಾದ ಚರ್ಮರೋಗಗಳಾದ ಸ್ಥಳಗಳಮೇಲೆ ಹಚ್ಚುವರು. ಇದರ ಎಲೆಗಳ ಮತ್ತು ದೇಟಿನ ರಸವನ್ನು ಕಣ್ಣುಬೇನೆಯಾದಾಗ, ಕಣ್ಣುಗಳಲ್ಲಿ ಬಿಡುವರಲ್ಲದೆ, ಗಜಕರ್ಣಕ್ಕೂ ಉಪಯೋಗಿಸುವರು. ಇದರ ಬೇರಿನಿಂದ ತೆಗೆದ ಎಣ್ಣೆಯು ಕುಷ್ಟರೋಗಕ್ಕೆ ಬಹಳೇ ಉತ್ತಮವೆಂದು ಹೇಳುತ್ತಾರೆ.

೨೩೧. Nicotiana taba cum, Linn.; (The tobacco plant—ತಂಬಾಕದಗಿಡ (ಮು. ಕ; ಮ. ಕ); ಹೊಗೆಸೊಪ್ಪಿನ ಗಿಡ (ಮೈ.) ) ತೊಡೆವಾಳ, ವಾತ, ಮುಂತಾದವುಗಳಿಗೆ ತಂಬಾಕದ ಎಲೆಗಳ "ಪೋಟೀಸ"ನ್ನು ಹಾಕುವರು. ಇದರೆಲೆಗಳಲ್ಲಿ ಕ್ರಿಮಿನಾಶಕ ಗುಣವಿರುವದರಿಂದ, ಕಾಲರಾಬೇನೆಯ ರೋಗಿಗಳ ವಾಸಸ್ಥಳಗಳಲ್ಲಿ, ಇವುಗಳ ಹೊಗೆಯಾಡಿಸುವರು. ಇದಲ್ಲದೆ ತಂಬಾಕನ್ನು ಸೇದುವದರಿಂದ ನೆಗಡಿ ವಗೈರೆ ಇಲ್ಲದಂತಾಗುವದೆಂದು ಕೆಲವರ ಅಭಿಪ್ರಾಯವುಂಟು.

---

## ಗಾನ

ತಾಯಿ ತನ್ನೆದೆವಳ್ಳಿ ಹೊಸಹೂವ ಮೊಗವೆತ್ತಿ
ಮುದ್ದಿಸುವುದೊಂದು ಗಾನ !
ತಾಯೆಂದರೂ ಬರದೆ ಬಸವಳಿದು ಬಂಜೆ ಬಲು
ಬಿಸುಸುಯ್ಯುವುದೊಂದು ಗಾನ !

ಪೊಡವಿಯಮ್ಮಗೆ ಬಿಳಿಯ ಉಡಿಗೆಯನ್ನುಡಿಪ ಚೆಲು-
ವುಡುರಾಜನೊಂದು ಗಾನ !
ಎಡವಿ ಮುಗ್ಗರಿಪಂತೆ ಅಡಿಗಡಿಗೆ ಗೈವ ಆ
ಕಡುಗತ್ತಲೊಂದು ಗಾನ !

— ಮಂಗಳೂರು ಗೋಪಾಲಕೃಷ್ಣ

೪—೯೦೭೦

# ಹಿಂದೂ ಶಬ್ದಾರ್ಥ ನಿರ್ಣಯ

ಲೇಖಕರು:— ಶ್ರೀ. ಮಂ. ಅ. ದೊರೆಸ್ವಾಮಿ ಐಯ್ಯಂಗಾರ್, ಎಂ. ಏ., ಬಿ. ಎಲ್., ಮೈಸೂರು

## ಭಾಷಾ ಸಂಬಂಧ

ಸಂಸ್ಕೃತ ಭಾಷೆಯ ಸ್ವಾಧೀನಾನುಭೋಗಪಡೆದು ಇರತಕ್ಕವರು ಹಿಂದೂಗಳು ಎಂದು ಕೆಲವರು ಹೇಳಬಹುದು. ಲೋಕದಲ್ಲಿ ಭಾಷಾಸಂಬಂಧವು ಅತ್ಯಂತ ದೃಢವಾದ ಸಂಬಂಧವೆಂಬುದು ನಿಜ. ಆದರೆ ಸಂಸ್ಕೃತವು ಮಾತಾಡುವ ಭಾಷೆಯಲ್ಲವು. ಇದು ಹಿಂದೂ ಜನರ ಪವಿತ್ರಭಾಷೆಯು. ಅವರ ಶಾಸ್ತ್ರಸಾಹಿತ್ಯವೆಲ್ಲವೂ ಇದರಲ್ಲಿ ಅಡಗಿರುವದು. ಸಂಸ್ಕೃತದಂತೆಯೇ ಈಗ ಮಾತಾಡುವ ಭಾಷೆಯಾಗಿರದೆ ಇತರ ಜನರಿಗೆ ಪವಿತ್ರ ಭಾಷೆಗಳಾಗಿರುವ ಲ್ಯಾಟಿನ್, ಅರಬಿ, ಪಾಳಿ ಮೊದಲಾದ ಭಾಷೆಗಳು ಹಿಂದೆ ಒಂದು ಕಾಲದಲ್ಲಿ ಮಾತಾಡುವ ಭಾಷೆಗಳಾಗಿದ್ದವು. ಸಂಸ್ಕೃತವು ಮಾತ್ರ ಯಾವ ಕಾಲದಲ್ಲೂ ಮಾತಾಡುವ ಭಾಷೆಯಾಗಿದ್ದಂತೆ ತೋರುವುದಿಲ್ಲ. ಇತರ ವಿಷಯಗಳಲ್ಲಿ ಭಿನ್ನವಾಗಿರುವ ಹಿಂದೂ ಜನಾಂಗವನ್ನು ಒಂದುಗೂಡಿಸತಕ್ಕ ಸಾಧನವಾಗಿ ಇದು ಕೇವಲ ಕೃತಕವಾಗಿ ಗ್ರಂಥಸ್ಥ ಭಾಷೆಯಾಗಿ ಕಲ್ಪಿತವಾಗಿ ಪ್ರಚಾರದಲ್ಲಿರುವಂತೆ ತೋರುತ್ತದೆ.

ಈ ಲಕ್ಷಣವು ಹಿಂದೂಶಬ್ದದ ನಿರ್ವಚನಕ್ಕೆ ತೃಪ್ತಿಕರವಾಗಿಲ್ಲ. ಸಂಸ್ಕೃತವನ್ನು ಮರ್ಯಾದಿಸತಕ್ಕದ್ದು ಹಿಂದೂ ಶಾಸ್ತ್ರವಾಙ್ಮಯವು ಅದರಲ್ಲಡಗಿರುವ ಕಾರಣದಿಂದಾದರೆ, ಈ ಶಾಸ್ತ್ರಮರ್ಯಾದೆಯೇ ಹಿಂದೂತ್ವಕ್ಕೆ ತಕ್ಕ ಲಕ್ಷಣವಾಗಲಾರದೆಂದು ತೋರಿಸಿರುವಾಗ ಅವುಗಳನ್ನೊಳಕೊಂಡ ಭಾಷೆಯ ಮರ್ಯಾದೆಯು ಅಂಥಾ ಲಕ್ಷಣವಾಗಲಾರದೆಂದು ಹೇಳಬೇಕಾಗಿಯೇ ಇಲ್ಲ. ಇದಲ್ಲದೆ ಭಕ್ತಿಮತಗಳು ತಂತಮ್ಮ ಪವಿತ್ರ ಗ್ರಂಥಗಳನ್ನು ಆಯಾ ಪ್ರಾಂತ್ಯ ಭಾಷೆಗಳಲ್ಲೇ ಕಲ್ಪಿಸಲಾರಂಭಿಸಿದ್ದರಿಂದ ಈಗ ಪೂಜೆಯನ್ನು ಪಡೆಯುತ್ತಿರುವ ಹಿಂದೂ ಪವಿತ್ರ ಗ್ರಂಥರಾಶಿಯಲ್ಲಿ ಅರ್ಧಪಾಲು ಸಂಸ್ಕೃತದಲ್ಲಿ ಇರುತ್ತಿಲ್ಲ. ಬೌದ್ಧರಿಗೆ ಸಂಸ್ಕೃತಕ್ಕಿಂತಲೂ ಪಾಳಿ ತಿಬೆಟ್ಟಿ ಭಾಷೆಗಳು ಹೆಚ್ಚು ಪ್ರಿಯವಾದ ಪವಿತ್ರ ಭಾಷೆಗಳಾಗಿವೆ. ಜೈನ ಪವಿತ್ರ ಭಾಷೆಯು ಅರ್ಧಮಾಗಧಿಯು. ಇದಲ್ಲದೆ ಸಾಕ್ಷಾತ್ ಋಗ್ವೇದ ಸಂಹಿತೆಯು ಮತ್ತೊಂದು ಭಾಷೆಯಲ್ಲಿದ್ದಿತ್ತೆ. ಸಂಸ್ಕೃತದಲ್ಲಿರುವ ವಾಙ್ಮಯವು ಕಳೆದ ೧೦ ಶತಮಾನಗಳಿಂದಲೂ ಬಹುತರವಾಗಿ ಪ್ರಾಕೃತ ಭಾಷೆಗಳಿಗೆ ಪರಿವರ್ತಿಸಲ್ಪಟ್ಟು ಅವುಗಳಲ್ಲೇ ದೊರೆಯುತ್ತದೆ.

ಇದಲ್ಲದೆ ಸಂಸ್ಕೃತ ಭಾಷೆಯು ಹಿಂದೂಗಳ ಸ್ವಾಧೀನಾನುಭೋಗದಲ್ಲಿ ಮಾತ್ರ ಇದೆ ಎಂದು ಹೇಳಲಾಗುವುದಿಲ್ಲ. ಇದು ಕೇವಲ ಗ್ರಂಥಸ್ಥ ಭಾಷೆಯಾಗಿ ಹಿಂದೂಜನಕೋಟಿಯಲ್ಲಿ ಎಲ್ಲೋ ಕೆಲವರಿಗೆ ಮಾತ್ರ ಪರಿಚಯವಾಗಿದೆ. ಬ್ರಾಹ್ಮಣರಲ್ಲಿ ಸಹ ಬಹುಮಂದಿ ಇದನ್ನರಿಯರು. ಇದೇ ಹಿಂದೂಗಳಲ್ಲದವರು ಸಹ ಆದಿಕಾಲದಿಂದಲೂ ಈ ಭಾಷೆಯ ಪರಿಚಯವನ್ನು ಪಡೆದು ಇರುವರು. ಪ್ರಾಚೀನಕಾಲದಲ್ಲಿ ಬಹುಮಂದಿ ಚೀಣರು ಇದನ್ನು ಕಲಿತು ಇದರ ಗ್ರಂಥಗಳನ್ನು ತಮ್ಮ ಭಾಷೆಗೆ ಪರಿವರ್ತಿಸಿಕೊಂಡರು. ತಿಬೆಟ್ಟನವರೂ ಹೀಗೆಯೇ ಮಾಡಿರುವರು. ಮುಂದೆ ಅನೇಕಮಂದಿ ಮುಸಲ್ಮಾನರು ಸಂಸ್ಕೃತವನ್ನು ಕಲಿತು ಅರಬಿ ಪಾರಶಿ ಮೊದಲಾದ ತಮ್ಮ ಭಾಷೆಗಳಿಗೆ ಇದರ ಗ್ರಂಥಗಳನ್ನೂ ಅಭಿಪ್ರಾಯಗಳನ್ನೂ ಪರಿವರ್ತಿಸಿಕೊಂಡಿರುವರು. ವರ್ತಮಾನ ಯುಗದಲ್ಲಿ ಐರೋಪ್ಯರು ಹೀಗೆಯೇ ಮಾಡಿರುವರು. ಸದ್ಯದಲ್ಲಿ ಸಂಸ್ಕೃತವಿದ್ಯೆಯ ವ್ಯಾಸಂಗವು ಇಂಡಿಯಾದೇಶಕ್ಕಿಂತಲೂ ಅತಿಶಯವಾಗಿ ಪರದೇಶಗಳಲ್ಲಿ ನಡೆಯುತ್ತಿದೆ. ಪಾಶ್ಚಾತ್ಯರ ದೊಡ್ಡ ವಿದ್ಯಾಪೀಠಗಳೆಲ್ಲದರಲ್ಲಿ ಸಂಸ್ಕೃತ ಪ್ರವಚನಪೀಠವೂ ಅಧ್ಯಾಪಕರೂ ಇರುವರು.

ಈ ರೀತಿ ಹಿಂದೂ ಪದವು ಭಾಷಾವಾಚಿಯಾಗಿ ಸಹ ಇಲ್ಲ. ಹಿಂದೂ ಭಾಷೆ ಎಂಬ ಯಾವ ಭಾಷೆಯೂ ಇಲ್ಲ. ಹಿಂದೂಗಳು ಈಗ ೧೦೦–೨೦೦ ಭಾಷೆಗಳನ್ನಾಡುತ್ತಿರುವರು. ಇವರ ಹೆಸರನ್ನು ಧರಿಸಿರುವ ಹಿಂದೀ ಭಾಷೆಯನ್ನು ಸುಮಾರು ೧೩ಕೋಟಿ ಜನರು ಮಾತಾಡುತ್ತಾರೆ. 1 ಮುಸಲ್ಮಾನರ ಊರ್ದು

1. Statistical abstract for British India from 1914–15 to 1923-24, pp. 43-44

ಇಂಡಿಯಾ ದೇಶದಲ್ಲಿ ಲೆಕ್ಕಕ್ಕೆ ಬಂದಿರುವ ಭಾಷೆಗಳು——೨೫೧. ಹಿಂದಿಭಾಷೆಯನ್ನಾಡತಕ್ಕವರು ( ೧೯೨೧ನೇ ಗಣತಿಪ್ರಕಾರ )

| | |
|---|---|
| ಪಶ್ಚಿಮ ಹಿಂದಿ— | 96 714 369 |
| ಪಂಜಾಬಿ — | 16 233 596 |
| ರಾಜಸ್ಥಾನಿ — | 12 680 562 |
| ಪಶ್ಚಿಮ ಪಂಜಾ — | 5 652 264 |
| ಪ್ರಾಚ್ಯ ಹಿಂದಿ— | 1 399 528 |
| | 132 680 319 |

ಭಾಷೆಯು ಹಿಂದಿಯ ರೂಪಾಂತರವೇ ಆದ್ದರಿಂದ ಮುಸಲ್ಮಾನರೆಲ್ಲರಿಗೂ ಹಿಂದೀಭಾಷೆಯು ತಿಳುವಳಿಕೆ ಇದೆ ಎನ್ನಬಹುದು. ಬಂಗಾಳದಲ್ಲೂ ದ್ರಾವಿಡ ದೇಶದಲ್ಲೂ ಹಿಂದಿಯು ಜನರಿಗೆ ಚೆನ್ನಾಗಿ ತಿಳಿಯದು. ಇತರ ಕಡೆಗಳಲ್ಲೆಲ್ಲಾ ಜನರು ಬೇರೆ ಭಾಷೆಯನ್ನಾಡುತ್ತಿದ್ದರೂ ಹಿಂದಿ ಮಾತನ್ನು ಅರ್ಥಮಾಡಿಕೊಳ್ಳಬಲ್ಲರು. ವಂಗ ದ್ರಾವಿಡ ಪ್ರಾಂತ್ಯಗಳಲ್ಲಿ ಸಹ ಮುಸಲ್ಮಾನಿ ಪ್ರಾಬಲ್ಯವಿದ್ದಕಡೆ ಜನರು ಹಿಂದೂಸ್ಥಾನಿಯನ್ನು ವಿಶೇಷವಾಗಿ ತಿಳಿದುಕೊಳ್ಳಲು ಶಕ್ತರಾಗಿರುವರು. ಉದಾಹರಣೆಗಾಗಿ, ಮೈಸೂರು ದೇಶದಲ್ಲಿ ಹಿಂದಿಯನ್ನೇ ಸ್ವಭಾಷೆಯಾಗಿ ಆಡತಕ್ಕವರು ೩೩೦೯೩೯ (೧೯೨೧) ಜನರು ಮಾತ್ರವೇ ಇದ್ದರೂ ಹತ್ತುಲಕ್ಷಕ್ಕೆ ಮೇಲ್ಪಟ್ಟು ಹಿಂದೂಸ್ಥಾನಿಯನ್ನು ಅರ್ಥಮಾಡಿಕೊಳ್ಳಬಲ್ಲವರು ಇರುವರು. ಹೀಗೆಯೇ ಹೈದರಾಬಾದಿನಲ್ಲಿ ಹಿಂದಿ ಭಾಷೆಯವರು ೧೩೧೬೮೫೧ ಜನರು ಮಾತ್ರವಾದರೂ ೫೦ ಲಕ್ಷದವರೆಗೂ ಹಿಂದೂಸ್ಥಾನಿಯನ್ನು ಬಲ್ಲವರು ಅಲ್ಲಿ ದೊರೆಯುವರು. ಮೇಲೆ ಹೇಳಿದ ಕಾರಣದಿಂದ ಬಂಗಾಳದಲ್ಲಿ ಸಹ ಅರ್ಧ ಜನರು ಹಿಂದಿಯನ್ನು ಬಲ್ಲವರೆಂದು ಹೇಳಬಹುದು. 1 ಈ ರೀತಿಯಾಗಿ ಹಿಂದೂಸ್ಥಾನಿಯು ಸುಮಾರು ೨೦ಕೋಟಿ ಜನಕ್ಕೆ ತಿಳಿಯುವುದೆಂದು ಹೇಳಬಹುದು. 2 ಆದರೆ ಈ ಭಾಷೆಯನ್ನು ಶುದ್ಧವಾಗಿ ಹಿಂದೂಗಳ ಭಾಷೆಯೆಂದು ಹೇಳಿ ಹಿಂದೂಸ್ಥಾನಿ ಭಾಷೆಯವರೆಲ್ಲರೂ ಹಿಂದೂಗಳೆಂದು ನಿರ್ವಚನ ಮಾಡಲಾಗುವುದಿಲ್ಲ. ಇದು ಭಾರತ ಜನಾಂಗದ ಭಾಷೆ, ಹಿಂದೂಗಳದಲ್ಲವು. 3 ಈ ಭಾಷೆಯು ಈಚೆಗೆ ಕ್ರಿ. ಶ. ೧೨ನೆಯ ಶತಮಾನದಿಂದ ಬೆಳವಣಿಗೆಯನ್ನು ಪಡೆದಿರುವುದು. ಸಾಹಿತ್ಯಮಾಲೆಯಲ್ಲೂ ಇತಿಹಾಸ ಮಹಿಮೆಯಲ್ಲೂ ಇದನ್ನು ಮೀರಿಸಿದ ಎಷ್ಟೋ ಹಿಂದೂ ಭಾಷೆಗಳುಂಟು. ಹಿಂದೂ ಶಾಸ್ತ್ರಭಾಷೆಯಾದ ಸಂಸ್ಕೃತಕ್ಕಿಂತಲೂ ಇದು ಹಿಂದೂಗಳ ವೈಭವವನ್ನು ಪ್ರಕಟಿಸಲಾರದು.

## ಅರ್ಥ ನಿರ್ಣಯ

ಮೇಲ್ಕಂಡ ಸವಿಸ್ತಾರವಾದ ಐತಿಹಾಸಿಕ ಮತ್ತು ತಾರ್ಕಿಕ ವಿಮರ್ಶೆಯಿಂದ ಹಿಂದೂ ಶಬ್ದದ ನಿರ್ವಚನವು ದುರ್ಘಟವಾದುದೆಂದು ಸ್ಪಷ್ಟಪಡುವುದು. ಜನಸಮುದಾಯವು ದೇಶ, ಭಾಷೆ, ಕುಲ, ರಾಷ್ಟ್ರ, ಜನಾಂಗ, ವಿದ್ಯೆ, ವ್ಯವಹಾರ, ಮತ್ತು ಸಂಸ್ಕೃತಿ ಇತ್ಯಾದಿಗಳನ್ನು ವಾಚಿಸಬೇಕು. ಆದರೆ ಹಿಂದೂ ಸಮುದಾಯವು ಈ ನಿಯಮಗಳಾವುದನ್ನೂ ಪಡೆದಿಲ್ಲ. ಇದು ದೇಶವಾಚಿಯೂ ಅಲ್ಲ ಭಾಷಾವಾಚಿಯೂ ಅಲ್ಲ. ಹಿಂದೂಗಳು ಒಂದು ಜನಕುಲಕ್ಕೆ ಸೇರಿದವರಲ್ಲ. ಇದರಲ್ಲಿ ಲೋಕದ ಸಕಲ ಕುಲಗಳೂ ದೊರೆಯುವುವು. ಸರ್ವಪ್ರಕಾರವಾದ ದೇಹವರ್ಣ, ನಾಸಿಕಪ್ರಮಾಣ, ಅಂಗಸೌಷ್ಠವ, ಶಿರಃಪ್ರಮಾಣ, ರೋಮಜಾತಿಗಳೂ ಇವರ ಸ್ತೋಮದಲ್ಲಿರುವುವು. ಆರ್ಯ, ದ್ರಾವಿಡ, ಶಕ, ಕುರೇಶಿಯನ್ನ, ಸೆಮಿಟಿಕ, ನೀಗ್ರೋ ಮೊದಲಾದ ಕುಲಗಳವರೆಲ್ಲರೂ ಹಿಂದೂಗಳಾಗಿರುವರು. ಹಿಂದೂ ಶಬ್ದವು ರಾಷ್ಟ್ರವಾಚಿ ಅಲ್ಲವೆಂದು ಹೇಳಬೇಕಾಗಿಯೇ ಇಲ್ಲ. ಹಿಂದೂಗಳೆಲ್ಲರೂ ಯಾವಾಗಲೂ ಒಂದೇ ಒಂದು ರಾಷ್ಟ್ರವನ್ನು ಕಟ್ಟಿಕೊಂಡು ಇರಲಿಲ್ಲ; ಮುಂದೆಯೂ ಇರಲಾರರು. ಹೀಗೆಯೇ ಹಿಂದೂಗಳು ಯಾವಾಗಲೂ ಒಂದು ಜನಾಂಗ (Nation) ವಾಗಿರಲಿಲ್ಲ; ಮುಂದೆಯೂ ಇರಲಾರರು. ಈಗ ನಮ್ಮ ದೇಶದಲ್ಲಿ ಹಿಂದೂ ಮುಸಲ್ಮಾನ ಕ್ರೈಸ್ತಾದಿಗಳ ಸಮಷ್ಟಿಯಿಂದ ಭಾರತ ಜನಾಂಗವು ಹುಟ್ಟುತ್ತಿರುವುದು. ಹಿಂದೂ ಶಬ್ದವು ವಿದ್ಯಾವಾಚಿ ಸಹ ಆಗಿಲ್ಲ. ಹಿಂದೂ ವಿದ್ಯೆ ಎಂಬುದಾವುದೂ ಇಲ್ಲ. ಹಿಂದೂ ಶಾಸ್ತ್ರಗಳನ್ನೂ ವಿದ್ಯೆಯನ್ನೂ

---

1. Statistical Abstract etc.

P. 3. ಬಂಗಾಳದ ಜನಸಂಖ್ಯೆ — 46695536

P. 44. ಹಿಂದೂದೇಶದಲ್ಲಿ ವಂಗಭಾಷೆಯನ್ನಾಡತಕ್ಕವರು — 49294099

P. 15. ಬಂಗಾಳದ ಮುಸಲ್ಮಾನರ ಸಂಖ್ಯೆ — 25210802 (54%)

2. ಪ್ರಪಂಚದಲ್ಲಿ ಜನಸಂಖ್ಯೆಯಲ್ಲಿ ಚೀನಾಭಾಷೆಯು ಅಗ್ರಸ್ಥಾನವನ್ನು ಪಡೆಯುವುದು. ಇದನ್ನು ೩೦ಕೋಟಿಗಿಂತ ಹೆಚ್ಚು ಜನರು ಆಡುವರು. ಇದನ್ನು ಬಿಟ್ಟರೆ ಹಿಂದಿಯೇ ಅತ್ಯಂತ ಜನಸಂಖ್ಯಾಕವಾದ ಭಾಷೆ ಎನ್ನಬಹುದು. ಪ್ರಪಂಚದ ಸಕಲ ಮೂಲೆಗಳಲ್ಲೂ ಹಬ್ಬಿರುವ ಇಂಗ್ಲಿಷು ಭಾಷೆಯನ್ನು ೧೭ಕೋಟಿಗಿಂತ ಹೆಚ್ಚು ಮಂದಿ ತಿಳಿದಿಲ್ಲ.

3. ಭಾರತ ದ್ವೇಷಿಗಳಾದ ಕೆಲವು ದುರುಳರು ಹಿಂದಿಯು ಹಿಂದೂಗಳ ಭಾಷೆಯೆಂದೂ ಮುಸಲ್ಮಾನರು ಉರ್ದುವನ್ನು ಪ್ರತ್ಯೇಕವಾಗಿಟ್ಟುಕೊಂಡು ಭಾರತೀಯರ ಸಾರ್ವತ್ರಿಕ ಹಿಂದೂಸ್ಥಾನಿಯನ್ನು ಇಬ್ಭಾಗವಾಗಿ ಒಡೆಯಲು ಪ್ರಯತ್ನಿಸುತ್ತಿರುವರು. ಲಿಪಿ ಭೇದವು ಈ ಪ್ರಯತ್ನವನ್ನು ಸಹಕರಿಸುತ್ತಿದೆ.

ಹಿಂದೂಗಳೆಲ್ಲರೂ ಸಮಾನವಾಗಿ ಸೇರಿಸುವುದಿಲ್ಲ. ಹಿಂದೂ ಶಬ್ದವು ವ್ಯವಹಾರಧರ್ಮವನ್ನು ಸಹ ವಾಚಿಸದು ಎಂದು ಹಿಂದೆಯೇ ನಿರೂಪಿಸಲಾಗಿದೆ. ಇದು ಮತವಾಚಿ ಸಹ ಆಗಿಲ್ಲ ವೆಂದು ಮೇಲೆ ತಿಳಿಸಿದೆ.

ಹೀಗೆ ಹಿಂದೂ ಶಬ್ದವು ಕುಲ, ಭಾಷೆ, ದೇಶ, ಮತ, ರಾಜ್ಯ ಇವಾವುವನ್ನೂ ಏಕಾಯತ್ತವಾಗಿ ವಾಚಿಸುವುದಿಲ್ಲ. ಆದರೆ ಅದು ಇವುಗಳಲ್ಲಿ ಕೆಲವನ್ನು ಸ್ವಲ್ಪ ಸ್ವಲ್ಪ ದೂರ ಒಟ್ಟಿಗೆ ವಾಚಿಸುತ್ತಿರುವುದು. ಎಂದರೆ ಅದು ಒಂದು ಸಂಸ್ಕೃತಿ (Culture)— ನಾಗರಕತೆಯ ಪ್ರಕಾರವನ್ನು ವಾಚಿಸುತ್ತದೆಂದು ಹೇಳಬಹುದು. ಹಿಂದೂ ಎಂಬುದು ಅತಿ ಸೂಕ್ಷ್ಮವಾಗಿಯೂ ಅತ್ಯಗಾಧವಾಗಿಯೂ, ಸ್ವಾಭಾವಿಕ ವೃದ್ಧಿ ಕ್ರಮದಿಂದಲೇ ವ್ಯವಸ್ಥೆಗೊಂಡಿರುವ ಒಂದು ಮಹಾ ಸಂಸ್ಕೃತಿ ಎಂದು ಹೇಳಬಹುದು. ವಾಸ್ತವತಃ ಇದು ಒಂದು ಸಂಸ್ಕೃತಿ ಸೋಪಾನವಾಗಿರುವುದು. ಆದರೆ ಈ ವಿವಿಧಾವಸ್ಥೆಯ ಸಂಸ್ಕೃತಿಗಳೂ ಒಂದೇ ಸಂಯುಕ್ತ (Federal) ವ್ಯವಸ್ಥೆಯನ್ನು ಪಡೆದು ಒಂದೇ ಮಹಾ ಸಂಸ್ಕೃತಿಯಾಗಿ ಪರಿಣಮಿಸಿವೆ. ಈ ಸಂಸ್ಕೃತಿಗೆ ಮತಾಂಶವೇ ಮುಖ್ಯ ಲಕ್ಷಣವಾದರೂ ಅದೇ ಸರ್ವವೂ ಆಗಿ ಇಲ್ಲ. ಈಗ ಯುರೋಪು ಅಮೇರಿಕಾ ಖಂಡಗಳಲ್ಲಿ ದೇಶಗಳೂ ಜನಾಂಗಗಳೂ ರಾಜ್ಯಗಳೂ ಭಾಷೆಗಳೂ ಕುಲಗಳೂ ಮತಗಳೂ ವ್ಯವಹಾರಧರ್ಮಗಳೂ ನಾಗರಕತೆಯ ಅವಸ್ಥೆಗಳೂ ಎಲ್ಲವೂ ವಿವಿಧವಾಗಿ ಭಿನ್ನವಾಗಿದ್ದರೂ ಇವುಗಳಲ್ಲಿರುವ ಜನರೆಲ್ಲರೂ ಸಾಮಾನ್ಯವಾದ ಒಂದು ಮಹಾ ಸಂಸ್ಕೃತಿಯನ್ನು ಪಡೆದು ಒಂದು ಸಮುದಾಯವಾಗಿ ಕಾಣಿಸುವರು. ಇವರೆಲ್ಲರನ್ನೂ ನಾವು "ಪಾಶ್ಚಾತ್ಯರು" ಎಂದು ಸ್ಥೂಲವಾಗಿ ಅವರ ಸಂಸ್ಕೃತಿಯ ದೆಸೆಯಿಂದ ಕರೆಯುವೆವು. ಪಾಶ್ಚಾತ್ಯರು ಎಂದರೆ ಪಶ್ಚಿಮ ಭಾಗದಲ್ಲಿ ವಾಸಿಸತಕ್ಕವರು ಎಂದು ಮಾತ್ರ ಅರ್ಥವಲ್ಲ. ಹಾಗಿದ್ದಲ್ಲಿ ಅಮೇರಿಕದ ಕಾಡು ಜನರೆಲ್ಲರನ್ನೂ ಈ ಪಂಗಡದಲ್ಲಿ ಸೇರಿಸಿ ಸಂಬೋಧಿಸಬೇಕಾಗುವುದು. ಆದರೆ ರೂಢಿಯಲ್ಲಿ ನಾವು ಇವರನ್ನು ಪಾಶ್ಚಾತ್ಯರೆಂದು ಹೇಳುವುದಿಲ್ಲ. ಪಾಶ್ಚಾತ್ಯ ಸಮುದಾಯಕ್ಕೂ ಏಕಾಯತ್ತವಾದ ಒಂದು ಲಕ್ಷಣವು ಯಾವುದೂ ಇಲ್ಲ. ಇದೇ ರೀತಿ ಹಿಂದೂ ಸಮುದಾಯವು ಸಹ ಬಹು ಲಕ್ಷಣಲಕ್ಷಿತವಾದ ಸಂಸ್ಕೃತಿವಾಚಿಯಾದ ಕೂಟವಾಗಿದೆ. ಈ ಕೂಟದ ಸ್ವರೂಪವು ಈ ಒಂದೊಂದು ಲಕ್ಷಣದ ಆಧಾರದಿಂದ ಬೇರೆ ಬೇರೆಯಾಗಿ ಕಾಣುವುದು; ಇದಕ್ಕೆ ಸೇರತಕ್ಕವರು ಈ ಒಂದೊಂದು ಲಕ್ಷಣದ ದ್ವಾರಾ ಬೇರೆ ಬೇರೆಯಾಗಿರುವರು.

ಉದಾಹರಣೆಗಾಗಿ, ವಿದ್ಯೆಯನ್ನು ಪಲಕ್ಷಿಸಿ ಹಿಂದೂ ಸಮಾಜವನ್ನವಲೋಕಿಸಿದರೆ, ಹಿಂದೂ ಶಾಸ್ತ್ರಗಳನ್ನು ಸನಾತನ ಧರ್ಮೀಯರು ಮಾತ್ರ ಮರ್ಯಾದಿಸುತ್ತಾರಾಗಿ ಅವರು ಮಾತ್ರವೇ ಹಿಂದೂಗಳೆನ್ನಿಸಿಕೊಳ್ಳುವರು. ವ್ಯವಹಾರ ಧರ್ಮದ ದೃಷ್ಟಿಯಿಂದ ಹಿಂದೂ ಕೂಟವಲ್ಲಿ ಸನಾತನ ಧರ್ಮೀಯರು, ಭಿನ್ನ ಹಿಂದೂಗಳು (ಜೈನ ಬೌದ್ಧ ಸಿಖ ಲಿಂಗಾಯತಾದಿಗಳು) ಖೋಜ ಕಚ್ಛಿ ಮಾಮುನರೇ ಮೊದಲಾದ ಮುಸಲ್ಮಾನರು ಇವರೆಲ್ಲರೂ ಸೇರುವರು. ಮತದೃಷ್ಟಿಯಿಂದ ಸನಾತನ ಧರ್ಮೀಯರು ಮಾತ್ರ ಹಿಂದೂಗಳಾಗುವರು. ಹೀಗೆ ವಿವಿಧ ಪ್ರಕಾರವಾಗಿ ವಿಸ್ತೃತಾರ್ಥದಲ್ಲಿ ಸೂಚಿತರಾಗುವ ಹಿಂದೂ ಜನಗಳನ್ನು ಈ ರೀತಿ ವಿಂಗಡಿಸಿ ವಿವರಿಸಬಹುದು:-

1 ಬ್ರಾಹ್ಮಣ-ಹಿಂದೂಗಳು (Brahmanical Hindus)=ಸನಾತನ ಧರ್ಮೀಯರು.
   (a) ಶುದ್ಧರು-ಶುದ್ಧ ಸನಾತನ ಧರ್ಮಿಗಳು
   (b) ಅಶುದ್ಧರು-ಪತಿತರು, ಅಸ್ಪೃಶ್ಯರು, ಜಾತಿಸುಧಾರಕರು, ರಾಮಕೃಷ್ಣ ಸಿದ್ಧಾಂತಿಗಳು ಇತ್ಯಾದಿ
   (c) ಮಿಶ್ರರು-ಲಿಖಿತ ಶಾಸ್ತ್ರಾಚಾರಕ್ಕೆ ಪ್ರತಿಯಾದ ಆಚಾರವನ್ನುಳ್ಳ ಹಿಂದೂಗಳು:- ನಾಯರರು, ನಂಬೂದರಿಗಳು, ಜಾಟರು ಅಳಿಯಸಂತಾನದ ತಿಯ್ಯಾನರು, ಗೊಂಡರು, ಸಂತಾಲರು, ... ಯರು, ಗೋಸಾವಿಗಳು, ಬೈರಾಗಿಗಳು, ವೈಷ್ಣ ... ಯರು ಇತ್ಯಾದಿ.

2 ಭಿನ್ನ-ಹಿಂದೂಗಳು (Dissenting Hindus) ಹಿಂದೂ ಮತದ ಮೂಲವಾಹಿನಿಯಿಂದ ಕವಲೊಡೆದು ಹೊಸವ್ಯೂಹಗಳನ್ನು ಕಲ್ಪಿಸಿಕೊಂಡಿರುವವರು:
   (೧) ಬೌದ್ಧರು (೨) ಜೈನರು (೩) ಸಿಖರು (೪) ಕಬೀರ ಪಂಥಿಗಳು (೫) ಲಿಂಗಾಯತರು (೬) ಬ್ರಹ್ಮ ಸಮಾಜದವರು (೭) ಆರ್ಯಸಮಾಜದವರು (೮) ಭಾರತಸಮಾಜದವರು ಇತ್ಯಾದಿ.

3 ಬಾಂಧವ ಹಿಂದೂಗಳು
   (a) ಮಿತ್ರರು-ಪಾರಸಿಕರು
   (b) ಶಿಷ್ಯರು-ಸೂಫಿಗಳು ಇತ್ಯಾದಿ.

(c) ಅನ್ಯರು–ಖೋಜಾದಿಗಳು

(d) ಉಪಕೃತರು–ಒಂದು ರೀತಿಯಾಗಿ ಲೋಕವೆಲ್ಲವೂ ಈ ಪಂಗಡದಲ್ಲಿ ಅಡಗುವುದು. ಹಿಂದೂಗಳ ಎಂಜಲನ್ನು ತಿಂದು ಬದುಕದವರು ಲೋಕದಲ್ಲಿ ಯಾರೂ ಇಲ್ಲ.

ಹಿಂದೂಸ್ತೋಮದಲ್ಲಿ ಬೌದ್ಧರನ್ನು ಸೇರಿಸುವುದಾದರೆ ಚೀಣಾ, ಜಪಾನ್, ಹಿಂದೂ ಚೀಣ, ಬರ್ಮ, ಸಿಂಹಳದ್ವೀಪ ಮೊದಲಾದ ದೇಶಗಳಲ್ಲಿರುವ ಪ್ರಜೆಗಳಲ್ಲಿ ಬಹುಭಾಗದವರನ್ನು ಹಿಂದೂಗಳೆಂದು ಕರೆಯಬೇಕಾಗುತ್ತದೆ. ರೂಢಿಯಲ್ಲಿ ಸಾಧಾರಣವಾಗಿ ಹೀಗೆ ಮಾಡುವುದಿಲ್ಲ. ಭರತಖಂಡದಲ್ಲಿ ಇರತಕ್ಕ ಮೇಲ್ಕಂಡ ವಿವಿಧ ಜಾತಿಯವರನ್ನು ಮಾತ್ರ ಹಿಂದೂಕೂಟದಲ್ಲಿ ಸೇರಿಸುವುದು ವಾಡಿಕೆ. ಆದರೆ ಬರ್ಮಾ ದೇಶದ ಬೌದ್ಧರು ಭರತಖಂಡದಲ್ಲಿ ಇಲ್ಲದಿದ್ದರೂ ಅವರು ಭಾರತ ಹಿಂದೂಗಳೊಡನೆ ಸಂಪರ್ಕಿಸಲು ರಾಜಕೀಯಾವಕಾಶವಿರುವುದರಿಂದ ಅವರು ಅಖಿಲ ಭಾರತೀಯ ಹಿಂದೂ ಮಹಾ ಸಭೆ ಮುಂತಾದ ಸಂಸ್ಥೆಗಳಲ್ಲಿ ಹಿಂದೂಗಳೆಂದೇ ಪರಿಗಣಿಸಲ್ಪಡುವರು. ಎಂದರೆ, ರಾಜಕೀಯವಾದ ತಡೆಗಳಾವುವೂ ಇಲ್ಲದಿದ್ದರೆ ಚೀಣಾ ಜಪಾನ ದೇಶಗಳ ಬೌದ್ಧರೂ ಹೀಗೆ ಹಿಂದೂಕೂಟದವರೊಡನೆ ಸಹಕರಿಸಿ ಐಕ್ಯವಾಗಲು ಅಡ್ಡಿ ಇಲ್ಲ.

ಹೀಗೆ ಸಂಸ್ಕೃತಿಯ ದೃಷ್ಟಿಯಿಂದ ಹಿಂದೂಸ್ತೋಮಕ್ಕೆ ಸೇರತಕ್ಕವರಾರು? ಎಂದು ಕೇಳಿದರೆ ಎರಡು ಉತ್ತರಗಳು ದೊರೆಯುವುವು. ಸಂಕುಚಿತಾರ್ಥದಲ್ಲಿ ಭಾರತ ದೇಶದಲ್ಲಿರುವ ಅಥವಾ ಭಾರತ ದೇಶಕ್ಕೆ ಅವಿಚ್ಛಿನ್ನವಾದ ಸಂಬಂಧವನ್ನು ಪಡೆದಿರುವ ಮೇಲೆ ವಿವರಿಸಿರುವ ವಿವಿಧ ಪಂಗಡಗಳವರು ಮಾತ್ರ ಹಿಂದೂ ಕೂಟಕ್ಕೆ ಸೇರಿದವರೆಂದು ಹೇಳಬೇಕಾಗುವುದು. ವಿಸ್ತೃತಾರ್ಥದಲ್ಲಿ ಈ ಪಂಗಡಗಳವರು ಯಾವ ದೇಶದಲ್ಲಿದ್ದರೂ ಅವರೆಲ್ಲರನ್ನೂ ಹಿಂದೂಗಳು ಎಂದು ಹೇಳಬೇಕಾಗುವುದು. ಪ್ರಪಂಚದ ಭೂಪಟದಲ್ಲಿ ಸಿಂಧೂನದಿಯ ಗೆರೆಯನ್ನು ಹಾಗೆಯೇ ಉದ್ದಕ್ಕೆ ಮೇಲುಗಡೆಗೆ ಏಷ್ಯಾಖಂಡದ ಭಾಗದಲ್ಲಿ ಎಳೆದರೆ ಆ ಗೆರೆಗೆ ಪೂರ್ವಭಾಗದಲ್ಲಿರುವ ಭೂಭಾಗವೆಲ್ಲವೂ ಹಿಂದೂ ಸಂಸ್ಕೃತಿವಲಯವೆನ್ನಬೇಕಾಗುವುದು.

ಪ್ರಪಂಚದ ನಾಗರಕತೆಯ ಸ್ಥಿತಿಯನ್ನು ಅವಲೋಕಿಸಿದರೆ ಹಿಂದೂ ಸಂಸ್ಕೃತಿಯ ವಿಸ್ತೃತಾರ್ಥವು ಅಸಾಧುವಾದುದೆಂದು ಹೇಳಲವಕಾಶವಿಲ್ಲವೆಂದು ಗೊತ್ತಾಗುವುದು. ಲೋಕದಲ್ಲಿ ಈಗಿನ ಮನುಷ್ಯಜಾತಿಯ ನಾಗರಕತೆಯನ್ನೂ ಸಂಸ್ಕೃತಿಯನ್ನೂ ಸ್ಥೂಲವಾಗಿ ಮೂರು ಮಹಾಪಂಗಡಗಳಾಗಿ ಮಾಡಬಹುದು. ಈ ಕೂಟಗಳಿಗೆ ಸಂಸ್ಕೃತಿಯೇ ಮುಖ್ಯವಾದ ಪಂಗಡ ನಿಯಾಮಕವಾದರೂ ದೇಶ, ಕುಲ, ವರ್ಣ, ಮತ ಇವುಗಳೂ ಸಹ ಎರಡನೆಯ ತರದ ಉಪಲಕ್ಷಣಗಳಾಗಿವೆ. ದೇಶದೃಷ್ಟಿಯಿಂದ ಈ ಮೂರು ನಾಗರಕತೆಯ ವಿಭಾಗಗಳೂ ಪ್ರಾಚ್ಯ, ಮಾಧ್ಯಮಿಕ, ಪಾಶ್ಚಾತ್ಯ ಎಂದು ಹೆಸರುಗೊಂಡಿವೆ. ಮೊದಲನೆಯದು ಮೇಲೆ ಹೇಳಿದ ಸಿಂಧೂನದಿ ರೇಖೆಯ ಪೂರ್ವಭಾಗದಲ್ಲಿರುವ ದೇಶಗಳಲ್ಲಿ ಆಧಿಪತ್ಯಮಾಡುತ್ತಿದೆ. ಎರಡನೆಯದು ಅದಕ್ಕೆ ಪಶ್ಚಿಮವಾಗಿ ಭೂಮಧ್ಯ ಸಮುದ್ರದವರೆಗೆ ಇರತಕ್ಕ ದೇಶಗಳಲ್ಲಿ ಮೆರೆಯುತ್ತಿರುವುದು. ಮೂರನೆಯದು ಭೂಮಧ್ಯ ಸಮುದ್ರದಿಂದ ಪಶ್ಚಿಮವಾಗಿ ಶಾಂತಸಾಗರವರ್ತಿಯಾಗಿ ವಿಜೃಂಭಿಸುತ್ತಿದೆ. ಕುಲ ದೃಷ್ಟಿಯಿಂದ ನೋಡಿದರೆ ತುರೇನಿಯನ್ ಕುಲವು ( ದ್ರಾವಿಡ ಮಂಗೋಲಿಯಾ ಮಲಯ ಕುಲಗಳು ) ಪ್ರಾಚ್ಯವಲಯದಲ್ಲಿ ತಲೆಯೆತ್ತಿಕೊಂಡಿದೆ. ಮಧ್ಯವಲಯದಲ್ಲಿ ಸೆಮಿಟಿಕ ಕುಲವು ತಲೆಯೆತ್ತಿಕೊಂಡಿದೆ. ಆರ್ಯಕುಲವು ಅಲ್ಪಸ್ವಲ್ಪ (ಅಫಘಾನಿಸ್ಥಾನ, ಪರ್ಷಿಯಾ, ಕುರ್ದಸ್ಥಾನ, ಆರ್ಮೀನಿಯಾ ಪ್ರಾಂತ್ಯಗಳಲ್ಲಿ ) ಇರುತ್ತಿದೆ. ಪಾಶ್ಚಾತ್ಯವಲಯದಲ್ಲಿ ಆರ್ಯಕುಲವು ಸರ್ವಪ್ರಧಾನವಾಗಿದೆ. ವರ್ಣದೃಷ್ಟಿಯಿಂದ ನೋಡಿದರೆ ಪ್ರಾಚ್ಯವಲಯವು ಹಳದಿ ಕಂದು ಬಣ್ಣದ ಜನರಿಂದಲೂ ಮಧ್ಯವಲಯವು ಕಪ್ಪು ಕಂದು ಬಣ್ಣದವರಿಂದಲೂ ಪಾಶ್ಚಾತ್ಯವಲಯವು ಬಿಳುಪು ಕಂದು ಬಣ್ಣದವರಿಂದಲೂ ಸಮಾವೇಶವಾಗಿದೆ ಎಂದು ಗೊತ್ತಾಗುವುದು. ಮತ ದೃಷ್ಟಿಯಿಂದ ಪ್ರಾಚ್ಯವಲಯವು "ಹಿಂದು" ಖಂಡವಾಗಿಯೂ ಮಧ್ಯವಲಯವು ಮುಸಲ್ಮಾನ ಖಂಡವಾಗಿಯೂ ಪಾಶ್ಚಾತ್ಯವಲಯವು ಕ್ರಿಸ್ತ ಖಂಡವಾಗಿಯೂ ಇರುತ್ತಿವೆ. ಐತಿಹಾಸಿಕವಾಗಿ ನಾಗರಕತೆಯು ಮೊದಲು ಪೂರ್ವದೇಶಗಳಲ್ಲಿ ಹುಟ್ಟಿ ಸೂರ್ಯಚಾರಪಥದಲ್ಲಿ ಕ್ರಮವಾಗಿ ಪಶ್ಚಿಮದ ಕಡೆಗೆ ಸಾಗಿತು. ಆದಿಯಲ್ಲಿ ಪ್ರಾಚ್ಯ–ಹಿಂದೂ ನಾಗರಕತೆಯು ಲೋಕದಲ್ಲಿ ಬಹುಕಾಲ ಸಾಮ್ರಾಜ್ಯವಾಳಿತು. ಹಿಂದೂ ನಾಗರಕತೆಯ ಆಳ್ವಿಕೆಯು ಮುಗಿದು ಪಾಶ್ಚಾತ್ಯ ನಾಗರಕತೆಯು ಪಟ್ಟವೇರುವವರೆಗೂ ಮಾಧ್ಯಮಿಕ–ಮುಸಲ್ಮಾನ ನಾಗರಕತೆಯು ಮಧ್ಯಯುಗದಲ್ಲಿ (ಕ್ರಿ. ಶ. ೬೦೦–೧೭೦೦) ಅಭಿಷಿಕ್ತವಾಗಿ ಮೆರೆದು ಈಗ ಶಾಂತವಾಗಿರುವುದು, ಹೀಗೆ ಲೋಕದಲ್ಲಿ ಸ್ವಭಾವ

ಸಿದ್ಧವಾದ ಮೂರು ನಾಗರಿಕತೆಯ ವಲಯಗಳು ಏರ್ಪಟ್ಟಿರುವುವು. ಪ್ರಾಚ್ಯವಲಯವನ್ನು ವಿಸ್ತೃತಾರ್ಥದಲ್ಲಿ ಹಿಂದೂ ಸಂಸ್ಕೃತಿಯ ಖಂಡವೆಂದು ಕರೆಯುವುದರಲ್ಲಿ ತಪ್ಪೇನೂ ಇಲ್ಲ.

## ನಿರ್ವಚನ

ಹೀಗೆ ಹಿಂದೂ ಶಬ್ದದ ವಿವಿಧ ಪ್ರಯೋಗಗಳನ್ನೂ ಅರ್ಥಗಳನ್ನೂ ಸವಿಸ್ತಾರವಾಗಿ ನೋಡಿದೆವು. ಅದು ಸಂಸ್ಕೃತಿ ವಾಚಕವಾದ ಬಹು ಲಕ್ಷಣ ಲಕ್ಷಿತವಾದ ಜನಸಮುದಾಯವನ್ನು ನಿರ್ವಚಿಸುವುದು. ವಿಸ್ತೃತಾರ್ಥದಲ್ಲಿ ಈ ಸಂಸ್ಕೃತಿ ಖಂಡವು ಪ್ರಾಚ್ಯವಲಯವನ್ನೆಲ್ಲಾ ಆವರಿಸಿಕೊಂಡಿರುವುದು. ಸಂಕುಚಿತವಾದ ಮತ್ತು ನಮ್ಮಲ್ಲಿ ವಿಶೇಷ ರೂಢಿಯಲ್ಲಿರುವ ಅರ್ಥದಲ್ಲಿ ಭಾರತ ದೇಶ ವ್ಯಾಪಿಯಾದ ಮತ್ತು ಭಾರತದೇಶಕ್ಕೆ ಅವಿಚ್ಛಿನ್ನವಾಗಿ ಸಂಬಂಧವನ್ನು ಪಡೆದಿರುವ ಹಿಂದೂ ಸಂಸ್ಕೃತಿ ಸಮುದಾಯವು ಮಾತ್ರ 'ಹಿಂದೂ' ಸಮುದಾಯವೆನ್ನಿಸಿಕೊಳ್ಳುವುದು. ಎಂದರೆ ಭಾರತ ದೇಶದಲ್ಲಿರುವ ಮತ್ತು ಆ ದೇಶದೊಡನೆ ನಿರಂತರವಾದ ಸಂಬಂಧವನ್ನು ಇಟ್ಟುಕೊಂಡಿರುವ ಸನಾತನ ಧರ್ಮೀಯರು, ಬಿನ್ನ ಹಿಂದೂಗಳು, (ಸ್ವಲ್ಪ ದೂರ) ಬಾಂಧವ ಹಿಂದೂಗಳು ಇವರೆಲ್ಲರೂ ಯಾವುದಾದರೂ ಒಂದು ವಿಧವಾಗಿ ಹಿಂದೂ ಕೂಟಕ್ಕೆ ಸೇರಿದವರಾಗಿರುವರು.

ಇಷ್ಟು ಸೂಕ್ಷ್ಮಾರ್ಥವುಳ್ಳ ಹಿಂದೂ ಶಬ್ದದ ನಿರ್ವಚನವನ್ನು ಪಾರಿಭಾಷಿಕವಾಕ್ಯವಾಗಿ ಹೇಳಲು ಸಾಧ್ಯವೆ? ಕಾಶೀನಗರದ ಗೋವಿಂದ ದಾಸ ಬಾಬುವು ಹಿಂದೂ ಶಬ್ದಕ್ಕೆ ಈ ರೀತಿಯಾಗಿ ನಿರ್ವಚನವನ್ನು ನಿರೂಪಿಸುವನು (೧) ಯಾರು ತಾವು ಹಿಂದೂಗಳೆಂದು ಕರೆದುಕೊಳ್ಳುವರೋ ಅಥವಾ ಯಾರು ಹಿಂದೂ ಎಂದು ತಮ್ಮನ್ನು ಕರೆಯಕೂಡದೆಂದು ಅಡ್ಡಿ ಪಡಿಸುವುದಿಲ್ಲವೋ ಮತ್ತು (೨) ಸಾಂಕೇತಿಕವಾಗಿ ಹಿಂದೂ ಎಂದು ಪ್ರಸಿದ್ಧವಾಗಿರುವ ಅಭಿಪ್ರಾಯಗಳಲ್ಲೂ ಆಚಾರಗಳಲ್ಲೂ ಯಾವುದನ್ನಾದರೂ ಸ್ವಲ್ಪವಾದರೂ ಯಾರು ಪರಿಗ್ರಹಿಸುವರೋ ಅವರೆಲ್ಲರೂ ಹಿಂದೂಗಳೆನ್ನಿಸುವರು. (Hinduism p. 51) ಸಿಖರು, ಬ್ರಾಹ್ಮ ಆರ್ಯ ಸಮಾಜಗಳವರು ಕೆಲವೇಳೆ ತಾವು ಹಿಂದೂಗಳಲ್ಲವೆಂದು ಹೇಳಿಕೊಳ್ಳುವರು. ಆದರೆ ಇತರರೆಲ್ಲರೂ ಇವರನ್ನು ಹಿಂದೂಗಳೆಂದೇ ಪರಿಗಣಿಸಿರುವರು. ಆದ್ದರಿಂದ ಮೇಲಿನ ಲಕ್ಷಣಗಳಿಗೆ ಮತ್ತೊಂದು ಲಕ್ಷಣವನ್ನು ಸೇರಿಸುವುದು ಅವಶ್ಯಕವು. (೩) ಯಾರನ್ನು ಪರಕೀಯರೆಲ್ಲರೂ ಹಿಂದೂಗಳೆಂದು ಭಾವಿಸುವರೋ ಅವರು ಹಿಂದೂಗಳೆನ್ನಿಸುವರು. ಹಿಂದೂ ಮಹಾಸಭೆಯವರು ಮತ್ತೊಂದು ಲಕ್ಷಣವನ್ನು ಸೇರಿಸುವರು. (೪) ಭಾರತೀಯ ಮೂಲದಿಂದ ಹುಟ್ಟಿರುವ ಯಾವ ಮತವನ್ನಾದರೂ ಯಾರಾರು ಅವಲಂಬಿಸಿರುವರೋ ಅವರೆಲ್ಲರೂ ಹಿಂದೂಗಳು. ಪಾರಶಿಕರು ಸೂಫಿಗಳು ಮೊದಲಾದ ಬಾಂಧವ ಹಿಂದೂಗಳನ್ನೆಲ್ಲಾ ಈ ಕೂಟಕ್ಕೆ ಸೇರಿಸಿಕೊಳ್ಳಬೇಕಾದರೆ ಮತ್ತೊಂದು ಲಕ್ಷಣವನ್ನು ಸಹ ಹೇಳಬೇಕು (೫) ಯಾವ ಸಂಸ್ಕೃತಿಯು ಹಿಂದೂ ಸಂಸ್ಕೃತಿಗೆ ಅತಿ ಸಮೀಪಸ್ಥವಾಗಿ ತದ್ರೂಪವಾಗಿರುವುದೋ ಅಥವಾ ಯಾರು ಹಿಂದೂ ಸಂಸ್ಕೃತಿಯ ಸಂತಾನರಾಗಿರುವರೋ ಅವರೆಲ್ಲರೂ ಹಿಂದೂಗಳು.

## ಕಣ್ಣು

ಪಿಂಡಾಂಡದಾಗಸವೆ,
ಬ್ರಹ್ಮಾಂಡದಾಗಸವು
ತೋರ್ಪುದನ್ನೆ
ನೀನು ತೋರ್ಪ ಕಣ್ಣೆ !

ಬಗೆಯ ಪಡಿಮೂಡಿಸುವ
ತಿಳಿಯಾದ ಮುಕುರವೇ,
ನಿರುತ ಸೊಗದಿ
ಮಿರುಗುತಿರುವೆ ಮೊಗದಿ !

ನುಡಿಗೆ ತಪ್ಪುಗಳುಂಟು;
ನಿನ್ನ ನುಡಿಗೆಲ್ಲುಂಟು
ಆ ತಪ್ಪುಗಳ್ ?
ಎಲ್ಲ ಒಪ್ಪುಗಳ್ !

ಕಿರಿಯಿಂದೆ ಹಿರಿಯೆಡೆಗೆ,
ಬಿಡಿಯಿಂದೆ ಇಡಿಯೆಡೆಗೆ,
ಬಗೆಯನೊಯ್ವೆ,
ಶಂಕೆಗಳನು ಕೊಯ್ವೆ !

ಇರುವೆ ನೀ ತನುವಿನೊಳು,
ನೀನು ತನು ವಿಶ್ವದೊಳು;
ಈಸು ತಳದಿ
ವಿಶ್ವದಗಲನಳೆದಿ !

ನಿನ್ನ ನಿರ್ಮಿಸಿ ಮೆರೆವ
ಗನ್ನನವನೆಂತಿರುವ-
ನೆಂದು ನಿಂತೆ !
ಅಶ್ರುಬಿಂದುವಾಂತೆ !

— ಈಶ್ವರ ಸಣಕಲ್ಲ, [illegible]

# ಮಾಧವ ಗೀತೆ

ಲೇಖಕರು—ಶ್ರೀ. ದೇಶಪಾಂಡೆ ಮನೋಹರರಾಯರು, ಬೀ. ಏ.

[ ಪಾಂಡವರು ಸ್ವರಾಜ್ಯಭ್ರಷ್ಟರಾಗಿ ವನದಲ್ಲಿ ದುಃಖದಿಂದ ಕಾಲವನ್ನು ಕಳೆಯುತ್ತಲಿದ್ದರು. ಒಂದು ದಿನ ದುರ್ವಾಸಮುನಿಗಳು ತನ್ನ ಅರವತ್ತು ಸಾವಿರ ಶಿಷ್ಯರೊಡಗೂಡಿ ಅಲ್ಲಿಗೆ ಬಂದರು. ವನದಲ್ಲಿ ಅವರ ಆತಿಥ್ಯವನ್ನು ಮಾಡುವದೆಂತು? ಪಾಂಡವರು ಕಿಂಕರ್ತವ್ಯತಾಮೂಢರಾದರು. ದ್ರೌಪದಿಯು ಶುದ್ಧಾಂತರಂಗದಿಂದ ಕರೆದು ಪರಮಾತ್ಮನನ್ನು ಮೊರೆ ಹೊಕ್ಕಳು ದಯಾಘನನು ಒಲಿದದ್ದರಿಂದ ಪಾಂಡವರ ಮರ್ಯಾದೆಯುಳಿಯಿತು. ಪ್ರಮುದಿತಳಾದ ದ್ರೌಪದಿಯು ಕಂಬನಿಗಳನ್ನು ಸುರಿದಳು. ]

ದ್ರೌಪದಿ:– ಮಾಧವನೇ! ನಮಗೋಸುಗ ನಿನಗೆಷ್ಟು ಕಷ್ಟ! ಈ ವನವಾಸದ ದುಃಖವು ನಮಗಲ್ಲದೆ ನಿನಗೆಯೇ ಇದ್ದಂತೆ ತೋರುತ್ತಿದೆ.

ಶ್ರೀಕೃಷ್ಣ:– ಉಃ ಅದರಲ್ಲೇನಷ್ಟು? ಈ ಜಗತ್ತಿನಲ್ಲೆಲ್ಲ ಆನಂದವನ್ನು ಬೀರುವದೇ ನನ್ನ ಕರ್ತವ್ಯ!

ದ್ರೌ. :– ಶ್ರೀರಂಗನೇ, ಆನಂದದ ಕೊನೆ ಎಲ್ಲಿ?

ಕೃ. :— ಧರ್ಮ ದೃಷ್ಟಿಯಿಂದ ಮುಕ್ತಿಯಲ್ಲಿ; ರಾಷ್ಟ್ರದ ದೃಷ್ಟಿಯಿಂದ ಸ್ವರಾಜ್ಯದಲ್ಲಿ; ಹಾಗೂ ಸಮಾಜದ ದೃಷ್ಟಿಯಿಂದ ಸ್ವಾತಂತ್ರ್ಯದಲ್ಲಿ. ಜನಾಂಗದಲ್ಲಿಯ ಜನರೆಲ್ಲರು ಸ್ವತಂತ್ರರಾಗದ ಹೊರತು, ರಾಷ್ಟ್ರಕ್ಕೆ ಸ್ವರಾಜ್ಯವು ದೊರೆಯದ ಹೊರತು, ಧರ್ಮಾಚರಣೆಯಿಂದ ಮನುಜನು ಮುಕ್ತಿಯನ್ನು ಪಡೆಯುದ ಹೊರತು ನಿಜವಾದ ಆನಂದವು ಸಿಗಲಾರದು.

ದ್ರೌ. :— ಪರಮಾತ್ಮನೇ! ನಮ್ಮ ಸ್ವರಾಜ್ಯವು ನಮಗೆ ದೊರಕೀತೇ?

ಕೃ. :— ದೊರಕೀತೆಂಬುದರಲ್ಲೇನು ಸಂದೇಹ?

ದ್ರೌ. :— ನನಗಂತೂ ಅದು ಅಸಾಧ್ಯವೆಂದು ತೋರುತ್ತಿದೆ. ಸ್ವರಾಜ್ಯ ಸಂಪಾದನೆಯ ಸಾಧನವೇನಾದರೂ ನಿನಗೆ ಗೊತ್ತಿದ್ದರೆ ಹೇಳುವೆಯಾ?

ಕೃ.:– ನಿಜವಾದ ಸ್ವರಾಜ್ಯವು ಪ್ರಜಾಸ್ವಾಧೀನವಿದ್ದ ಮೂಲಕ ಜನಸಾಮಾನ್ಯರಲ್ಲಿ ಕೂಡಿಕೊಂಡು ಮೊದಲು ಅವರ ಪ್ರೀತಿಯನ್ನು ಪಡೆಯಬೇಕು. ಅವರಿಗೆ ಜ್ಞಾನವನ್ನು ಕೊಡಬೇಕು. ಅವರಿಗೆ ಅನ್ನವಸ್ತ್ರಗಳನ್ನು ಪೂರೈಸಬೇಕು. ಜನರಿಗೆ ಹೊಟ್ಟೆಯ ಚಿಂತೆಯು ಇರುವವರೆಗೆ ಅವರಿಂದೇನೂ ಕಾರ್ಯವಾಗುವದಸಾಧ್ಯವು. ಬಾಲ್ಯದಿಂದ ನಾನು ಕೂಡ ಇದನ್ನೇ ಮಾಡಿದೆ. ಗೋಕುಲದಲ್ಲಿ ಜನರನ್ನು ಕೂಡಿಸಿ ಅವರ ಸಹಾಯದಿಂದಲೇ ಕಂಸನನ್ನು ಸಿಂಹಾಸನದ ಮೇಲಿಂದ ಕಳದೆ.

ದ್ರೌ. :– ಇದರ ಮುಂದಿನ ದಾರಿ ಯಾವುದು?

ಕೃ. :– ಇಷ್ಟಾದ ಮೇಲೆ ಅವರಲ್ಲಿ ಒಂದೇ ಭಾವವನ್ನು ಹುಟ್ಟಿಸಿ, ಸ್ವರಾಜ್ಯದ ಕಾಳಗಕ್ಕೆ ಅವರನ್ನು ಸಮರ್ಥರನ್ನಾಗಿ ಮಾಡಬೇಕು. ಅವರ ಶರೀರವೂ ಮನಸ್ಸೂ ಬಲಶಾಲಿಯಾಗಬೇಕು.

ದ್ರೌ. :– ಮನೋಬಲವಿದ್ದ ಮೇಲೆ ದೇಹಬಲದ ಆವಶ್ಯಕತೆಯೇನು? ಮನೋಬಲವೊಂದರಿಂದಲೇ ಕಾರ್ಯವಾಗಲಿಕ್ಕಿಲ್ಲವೇ?

ಕೃ. :– ಇಲ್ಲ! ದ್ರೌಪದೀ! ಮನೋಬಲವೊಂದರಿಂದಲೇ ಕಾರ್ಯವಾಗದು. ದೇಹ– ಮನ– ಧನ– ಬಲಗಳಲ್ಲೊಂದಾದರೂ ಇಲ್ಲದಂತಾದರೆ ಸ್ವರಾಜ್ಯವು ದೊರಕದು.

ದ್ರೌ. :– ದೇವಾ! ಶರೀರಸಾಮರ್ಥ್ಯವೆಂದರೆ ಅದೊಂದು ಪಶುಶಕ್ತಿ. ಮನಃಸಾಮರ್ಥ್ಯದ ಮುಂದೆ ಅದರ ಪಾಡೇನು?

ಕೃ. :– ಈ ಬಗೆಯಾಗಿ ದೇಹಬಲವನ್ನು ಜರಿಯುವದು ಸರಿಯಲ್ಲ. ದ್ರೌಪದೀ! ಮನಸ್ಸು ಸಾರಥಿ, ಶರೀರವು ಕುದುರೆ; ಮನಸ್ಸು ಕೈ, ಶರೀರವು ಕತ್ತಿ; ಮನಸ್ಸು ವೇಗ, ಶರೀರವು ಕಾಲು. ಒಂದು ವೇಳೆ ಮನವಿಲ್ಲದ ಶರೀರವು ಕೆಲಸಮಾಡಬಲ್ಲದು. ಆದರೆ ಶರೀರವನ್ನು ತೊರೆದು ಮನಸ್ಸು ಏನನ್ನೂ ಮಾಡಲಾರದು. ದ್ರೌಪದೀ! ಪಾಂಡವರ ಮನಸ್ಸು ಹಿರಿಯದಿಲ್ಲವೇ? ಹೀಗಿರಲು ಅವರ ಪಾಡು ಹೀಗೇಕೆ? ಇದರ ಕಾರಣವೇನೆಂದರೆ ಪಾಂಡವರ ಶರೀರಗಳು ಆಲಸ್ಯವನ್ನೆಸೆದು ಕೌರವರನ್ನು ನಾಶಗೊಳಿಸಲು ಸಿದ್ಧವಾಗಿಲ್ಲ.

ದ್ರೌ. :– ಹಾಗಾದರೆ ಇಚ್ಛಾಶಕ್ತಿಯೆಂದರೇನು?

ಕೃ. :– ಅಂತರಂಗದಲ್ಲಿ ಬಲವಾದ ಬಯಕೆಯನ್ನು ಬೆಳಿಸಿ ಅದನ್ನು ಪೂರ್ತಿಗೊಳಿಸಲು ಎಡೆಬಿಡದೆ ಹೆಣಗಾಡುವದೇ ಇಚ್ಛಾಶಕ್ತಿಯು. ಈ ಬಗೆಯಾಗಿ ಯತ್ನಿಸುವವನಿಗೆ ದಿನಾಲು ಹೊಸ ಸಾಧನಗಳು ತೋಚುವವು. ಅವನೆಂದಿಗೂ ನಿರಾಶನಾಗುವದಿಲ್ಲ. ಇಂಥವನೇ ಕೊನೆಗೆ ಜಯಶಾಲಿಯಾಗುವನು.

ದ್ರೌ. :– ಕಾರ್ಯವು ಕೈಗೂಡಲು ಬೇಕಾಗುವ ಕಾಲಕ್ಕೇನಾದರೂ ಮರ್ಯಾದೆಯುಂಟೆ ?

ಕೃ. :– ಯಾವ ಬಗೆಯ ಮರ್ಯಾದೆಯೂ ಇಲ್ಲ. ಕಾರ್ಯಪೂರ್ತಿಯ ಕಾಲವು ಅದರ ಕಾಠಿನ್ಯ ಹಾಗೂ ಕರ್ತೃವಿನ ಪರಾಕ್ರಮ ಕೌಶಲ್ಯಗಳಂತೆ ಹೆಚ್ಚುಕಡಿಮೆಯಾಗುತ್ತದೆ. ಈ ಜನ್ಮದಲ್ಲಿ ಕೈಗೂಡದ ಕೆಲಸವು ಮುಂದಿನ ಜನ್ಮದಲ್ಲಾದರೂ ಕೈಗೂಡುವದು ನಿಜ. ದ್ರೌಪದೀ ! ಗೆಲುವಿನ ಕೋಟೆಗೆ ಇಳಿವಿನ ಬುರುಜಗಳಿರುವವು ! ಅಪಜಯದ ಮೆಟ್ಟಲುಗಳನ್ನೇರಿಯೇ ವಿಜಯಮಂದಿರವನ್ನು ಪ್ರವೇಶಿಸುವದು. ಇಂದು ಗೆದ್ದವರು ಹಿಂದು ಬಿದ್ದವರು. ಇಂದು ಬಿದ್ದವರು ಮುಂದು ಗೆಲ್ಲುವರು. ಇದೆಯೇ ಗೆಲುವಿನ ಸಂಭವವು ಕಾಣದಿದ್ದರೂ ಮನುಷ್ಯನು ನಿರಾಶನಾಗಕೂಡದು – ಯತ್ನವನ್ನು ಬಿಡಕೂಡದು. ಅದರಲ್ಲಿ ಪ್ರಾಣವನ್ನರ್ಪಿಸಬೇಕಾದರೂ ಅಡ್ಡಿಯಿಲ್ಲ. ದ್ರೌಪದೀ ! ಸಾವಿಗೆ ಅಂಜುವ ಕಾರಣವಿಲ್ಲ. ಹುಟ್ಟು ಸಾವುಗಳು ದೇಹಕ್ಕೆ, ಆತ್ಮನಿಗಲ್ಲ. ಸ್ವರಾಜ್ಯಕ್ಕಾಗಿ ಹೆಣಗಾಡುವಾಗ ಸತ್ತವರು– ಕೊಲ್ಲಲ್ಪಟ್ಟವರು– ಮುಂದಿನ ಜನ್ಮದಲ್ಲಿ ಹೆಚ್ಚಿನ ಬಲವನ್ನು ಗಳಿಸಿ ಅದನ್ನು ಸಂಪಾದಿಸಿಯೇ ತೀರುತ್ತಾರೆ.

ದ್ರೌ. :–ದೇವಾ! ಸ್ವರಾಜ್ಯಸಂಪಾದನೆಗೆ ಮತ್ತೇನು ಬೇಕು?

ಕೃ. :– ಮರಣದ ಸಿದ್ಧತೆಯೊಂದನ್ನು ಇದೀಗ ಹೇಳಿದ್ದಾಯಿತು. ಮೇಲಾಗಿ ಒಕ್ಕಟ್ಟು-ಸಾಹಸದ ಪ್ರೀತಿ– ಕಾರ್ಯಕೌಶಲ– ಭೌತಿಕ ವಿದ್ಯೆಗಳ ಜ್ಞಾನ– ಇವೇ ಮೊದಲಾದವು ಬೇಕಾಗಿರುತ್ತವೆ. ದ್ರೌಪದೀ ! ಕೇವಲ ಬಾಯ್ಮಾತಿನಿಂದ ಸ್ವರಾಜ್ಯವು ದೊರಕದು. ಅದಕ್ಕೆ ಇವೆಲ್ಲ ಗುಣಗಳು ಬೇಕು.

ದ್ರೌ. :– ಮಾಧವನೇ ! ಈ ಜಗತ್ತಿನಲ್ಲಿ ಸ್ವರಾಜ್ಯವನ್ನು ಗಳಿಸಲು ಅರ್ಹರಾರು ? ಸಂಸಾರಿಗಳೊ ? ವಿರಾಗಿಗಳೊ ?

ಕೃ. :– ಸಂಸಾರಿಗಳೂ ಅಲ್ಲ ! ವಿರಾಗಿಗಳೂ ಅಲ್ಲ ! ವಿರಕ್ತ ಸಂಸಾರಿಗಳು ಸ್ವರಾಜ್ಯವನ್ನು ಗೆಲ್ಲಬಲ್ಲರು! ದ್ರೌಪದೀ ! ನಾನು ಆನಂದಮಯನು. ನನ್ನ ಮಾರ್ಗವು ಆನಂದಮಯವಾದುದು. ಹುರುಪನ್ನು ಹುಟ್ಟಿಸುವಂತಹದು. ನನ್ನ ದಾರಿ ಶಕ್ತಿಯ ದಾರಿ. ನನ್ನ ದಾರಿಯಲ್ಲಿ ಸೋಲೆಂಬುದು ಇಲ್ಲ. ಹೊರಟ ಹಾದಿಯಲ್ಲಿ ಹೊರಳಬೇಕಾಗಿಲ್ಲ. ನನ್ನಲ್ಲಿ ಪ್ರವೃತ್ತಿ ನಿವೃತ್ತಿಗಳೆರಡೂ ಬೆರೆತುಕೊಂಡಿವೆ. ನನ್ನನ್ನು ಅರಸುತ್ತ ಬಂದವನೇ ಪ್ರವೃತ್ತನು. ನನ್ನ ಆದೇಶವನ್ನು ಪಡೆದು ನಡೆದವನೇ ನಿವೃತ್ತನು... ಗೃಹಸಂಸಾರವು ರಾಷ್ಟ್ರಸಂಸಾರದ ಮೇಲ್ಪಂಕ್ತಿ !! ರಾಷ್ಟ್ರಸಂಸಾರವು ವಿಶ್ವಸಂಸಾರದ –ಮುಕ್ತಿಯ ಮೆಟ್ಟಲು. ಮನೆಯನ್ನಾಳಬಲ್ಲವನೇ ನಾಡನ್ನಾಳಬಲ್ಲನು. ಆದ್ದರಿಂದ ಸಂಸಾರಸುಖವನ್ನನುಭವಿಸಲು ಬೇಕು ! ಆದರೆ ಕರ್ತವ್ಯವನ್ನು ಮರೆಯಲುಬಾರದು ! ಕರ್ತವ್ಯವನ್ನು ನೆರವೇರಿಸುವಾಗ ಜೀವಕ್ಕೆರವು ಪ್ರಸಂಗ ಬಂದರೆ, ಈ ನನ್ನ ಮನೆಯನ್ನು ಹೇಗೆ ಬಿಡಲಿ! ಎಂಬ ಯೋಚನೆಯು ಒಂದು ಅರಗಳಿಗೆಯಾದರೂ ತಲೆದೋರಕೂಡದು. ಕರ್ತವ್ಯಕ್ಷೇತ್ರದಲ್ಲಿ ಜಿಗಿಯಿರಿ! ಸಾಹಸದ ಹೋಮಕುಂಡದಲ್ಲಿ– ಸಾವಿನ ಕಿಚ್ಚಿನಲ್ಲಿ– ಒಮ್ಮೆಲೇ ಧುಮುಕಿರಿ !! ಮರಣವೆಂದರೆ ಮರೆಯಾಗೋಣ– ಅದೊಂದು ನಮ್ಮ ಶಾಶ್ವತಜೀವನಸೋಪಾನದ ಮೆಟ್ಟಲು. ಮನುಜನು ಅತ್ತು ಹುಟ್ಟಿದರೂ ನಗುತ್ತ ಸಾಯತಕ್ಕದ್ದು. ದ್ರೌಪದೀ ! ಅಳುವ ಶಾಸ್ತ್ರವನ್ನನೇಕರು ಹೇಳಿದ್ದಾರೆ. ಆದರೆ ನಾನು ನಗುವ ಶಾಸ್ತ್ರವನ್ನು–ಸಾಯುವಾಗಲೂ ನಗುವ ಶಾಸ್ತ್ರವನ್ನು–ಹೇಳಲು ಬಂದವನು! ದುಃಖವನ್ನು ಸದೆಬಡಿದು, ಸಂಸಾರವನ್ನೆಲ್ಲ ಆನಂದಮಯವನ್ನು ಮಾಡಿ, ವಿಶ್ವದಲ್ಲಿ ಹಾಸ್ಯವನ್ನು ಹರಡುವದು ನನ್ನ ಕಾರ್ಯ. "ಸರ್ವೇಪಿ ಸುಖಿನಃ ಸಂತು!" ಎಲ್ಲರೂ ಸುಖಿಗಳಾಗಲಿ– ಸ್ವತಂತ್ರರಾಗಲಿ– ಸ್ವರಾಜ್ಯವನ್ನು ಪಡೆಯಲಿ!

ಓಂ ! ಓಂ !! ಓಂ !!!



# ಕಂಪನಿ ಸರಕಾರವು ತಳವೂರಿದುದು

ಲೇಖಕರು:— ಎಸ್. ಕೃಷ್ಣಶರ್ಮ, ಹೈದರಾಬಾದ (ದಕ್ಷಿಣ)

ಹಿಂದುಸ್ಥಾನದಲ್ಲಿ ಇಂಗ್ಲಿಷರ ಚರಿತ್ರೆಯೊಳಗೆ ೧೭೬೫ರಲ್ಲಿ ಹೊಸದೊಂದು ಯುಗ ಮೊದಲಾಯಿತು.

ಕಡೆಯ ಸಲ ಕ್ಲೈವನು ಹಿಂದುಸ್ಥಾನಕ್ಕೆ ಬಂದು ಹೋದುದು ಆ ವರ್ಷದಲ್ಲಿ. ಆಗಲೇ ಮೊಗಲ ಬಾದಶಹನಿಂದ ಬಂಗಾಳದ ದಿವಾನಿಯನ್ನು ಪಡೆದುಕೊಂಡನು. ಆ ಬಗ್ಗೆ ಕಂಪೆನಿಯ ಹೆಸರಿಗೆ ಫರ್ಮ್ಯಾನಾ ಹುಟ್ಟಿತು. ಬಾದಶಹನಿಗೆ ವಾಸ್ತವವಾದ ಅಧಿಕಾರವೇನಿಲ್ಲದಿದ್ದರೂ ಹೆಸರಿಗಾದರೂ ಬಾದಶಹನಿದ್ದುದರಿಂದ ಅವನ ಫರ್ಮ್ಯಾನಾದಿಂದ ಕಂಪೆನಿಗೆ ನಾಡಿನೊಳಗೆ ಒಂದು ಅಧಿಕಾರ ಬಂದಂತಾಯಿತು.

ಕ್ಲೈವನ ಕೆಲಸ ಬಲು ಬಿಗಿಯಾಗಿತ್ತು. ಕಂಪೆನಿಯ ವ್ಯವಹಾರವೆಲ್ಲ ಹೊಲಸಾಗಿತ್ತು. ನೌಕರರೆಲ್ಲ ದುಷ್ಟರಾಗಿದ್ದರು. ಪ್ರಜೆಗಳು ಅತ್ಯಾಚಾರಕ್ಕೆ ಒಳಗಾಗಿದ್ದರು. ಇದೆಲ್ಲ ಕ್ಲೈವನು ಸರಿಮಾಡಬೇಕಾಗಿತ್ತು. ೧೭೬೫–೧೦–೩೦ರಲ್ಲಿ ಅವನು ಕಲಕತ್ತೆಯಿಂದ ಕಂಪೆನಿಯ ಡೈರೆಕ್ಟರರ ಕಚೆರಿಗೆ ಬರೆದ ಪತ್ರವು ಚಿರಸ್ಮರಣೀಯವಾಗಿದೆ. ತಾನು ಬಂದಾಗ ಹಿಂದುಸ್ತಾನದ ಸ್ಥಿತಿಯನ್ನು ಅದನ್ನು ಸರಿಮಾಡಲು ತಾನು ಮಾಡಿದ ಪ್ರಯತ್ನಗಳನ್ನು ವಿವರಿಸಿರುವನು. ಕ್ಲೈವನ ಬಾಯಿಂದಲೇ ಅದನ್ನು ಕೇಳೋಣ.

"೨. ನಾನು ಬಂದಕೂಡಲೆ ಇಲ್ಲಿನ ಸ್ಥಿತಿ ಬಹಳ ಅಸಮರ್ಪಕವಾಗಿತ್ತು. ಸ್ವಾರ್ಥಕ್ಕಾಗಿ ಸ್ವಪ್ರಯೋಜನಕ್ಕಾಗಿ ಅಲ್ಲದೆ ತನ್ನ ಧಣಿಗಳಿಗೆ ಭಕ್ತಿವಿಶ್ವಾಸವನ್ನು ಬಗೆಯುವ ಸಭ್ಯರಿಗೆ ಯಾರಿಗಾದರೂ ಗಾಬರಿ ಹುಟ್ಟುವಂತಿತ್ತು. ಆಕಸ್ಮಿಕವಾಗಿ ಅನ್ಯಾಯದಿಂದ ಕೂಡಿಬಂದ ಸಂಪತ್ತಿನಿಂದ ನೌಕರರಲ್ಲಿ ಶ್ರೀಮಂತಿಕೆ ಬೆಳೆದು ದುಷ್ಟ ರೂಪಗಳನ್ನು ತಾಳಿತ್ತು. ಈ ಎರಡು ದೊಡ್ಡ ತಪ್ಪುಗಳು ಪ್ರತಿಯೊಬ್ಬ ನೌಕರನಲ್ಲೂ ಇದ್ದವು. ತನಗಿಂತ ಮೇಲಿನವರ ಹಾಗೆ ತಾನೂ ಸ್ವೇಚ್ಛೆಯಾಗಿ ವ್ಯವಹರಿಸಲಿಕ್ಕಾಗಿಯೇ ಕೀಳು ನೌಕರರೆಲ್ಲ ಹಣ ಗಳಿಸಿದಂತೆ ಇತ್ತು. ಈ ಧನಲೋಭವು ತನ್ನ ಸಾಧನೆಯ ಹಾದಿಯನ್ನು ಸುಲಭವಾಗಿ ತುಳಿಯಲು ಅವಕಾಶ ಸಿಕ್ಕ ಹಾಗೆ ತುಳಿದುದು ಅಚ್ಚರಿಯಲ್ಲ. ಅಂದರೇನು! ಕಂಪೆನಿಯ ಬಲವನ್ನು ನೌಕರರು ತಮ್ಮ ಸುಲಿಗೆಗಾಗಿ ದುರುಪಯೋಗಪಡಿಸಿದರು. ದೊಡ್ಡವರೇ ಈ ಹಾದಿ ತುಳಿದರೆ ಉಳಿದವರು ಬಿಟ್ಟಾರೆ ! ತಮ್ಮಿಂದ ಸಾಧ್ಯವಾದಷ್ಟೂ ಅವರು ಅನುಸರಿಸಿದರು. ಇದೊಂದು ಅಂಟುರೋಗವಾಗಿತ್ತು. ಸಿವಿಲ್‌ಮಿಲಿಟರಿಯಿಂದ ಮೊದಲುಗೊಂಡು ಲೆಕ್ಕ ಬರೆಯುವ ಗುಮಾಸ್ತ ವರ್ತಕರವರೆಗೂ ಹರಡಿತ್ತು.

೯. ನನಗೆ ಎರಡು ದಾರಿಗಳಿದ್ದವು. ಆರಿಸಿಕೊಳ್ಳಲು ಸುಲಭವಾಗಿ ಸಿಗುವಂತೆ ಯಥೇಷ್ಟ ಅನುಕೂಲಗಳು ಚೆಲ್ಲಿದ್ದ ಹಾದಿ ಒಂದು. ಹೆಜ್ಜೆ ಹೆಜ್ಜೆಗೂ ವಿಘ್ನಗಳಿಂದ ತುಂಬಿ ಯಾರೂ ತುಳಿಯದಿದ್ದ ಹಾದಿಯೊಂದು. ಇದ್ದುದನ್ನು ಇದ್ದಂತೆ ಆಡಳಿತವನ್ನು ನಾನು ವಹಿಸಬಹುದಿತ್ತು. ಗವ್ಹರ್ನರ್ ಎನಿಸಿಕೊಂಡು ಗವರ್ನರನ ಪ್ರಾಮುಖ್ಯತೆ ಮರ್ಯಾದೆ ಗೌರವಗಳನ್ನು ಎಂದಿನಂತೆ ಮಣ್ಣುಪಾಲು ಮಾಡಬಹುದಾಗಿತ್ತು. ಆದರೆ ಇನ್ನೊಂದು ಹಾದಿ ನನಗೆ ತೆರೆದಿತ್ತು. ನನ್ನ ಹಾದಿಯಲ್ಲಿ ಬೇಕೆಂತಲೇ ತರಲ್ಪಟ್ಟ ಲೆಕ್ಕವಿಲ್ಲದ ಎಲ್ಲ ಲೋಭಗಳನ್ನೂ ತುಳಿದು ಅದಕ್ಕೆ ಮನಸುಗೊಡದೆ ಸುಧಾರಣೆ ಮಾಡುವವನ ಪಾಲಿಗೆ ಅನಿವಾರ್ಯವಾಗಿ ಬರುವ ಮಾತ್ಸರ್ಯಜನ್ಯ ದ್ವೇಷ ದೂಷಣೆಗಳಿಗೆ ಎದೆಗೊಟ್ಟು ನಿಲ್ಲುವಷ್ಟು ಧೂರ್ತತನವು ನನಗಿತ್ತು. ಯಾವ ಹಾದಿ ತುಳಿಯಬೇಕೆಂಬುದರ ಬಗ್ಗೆ ನನಗೆ ಒಂದು ಗಳಿಗೆಯಾದರೂ ಸಂಶಯ ಬರಲಿಲ್ಲ. ದೃಢನಿಶ್ಚಯ ಅಕುಂಠಿತ ಸಾಧನೆ ಅಧಿಕಾರ ಬಲ ಇಲ್ಲದೆ ಹೊರಲು ಅಸಾಧ್ಯವಾದ ಹೊರೆಯನ್ನು ಹೊತ್ತುಕೊಂಡೆ. ನನ್ನ ವೇಷವನ್ನು ನಿಶ್ಚಯಿಸಿದ ಮೇಲೆ ನನ್ನ ಉದ್ಯಮದ ವಿಜಯದಿಂದ ನಮ್ಮ ಜಾತಿಗೇ ಗೌರವವೆಂದು ಯೋಚಿಸಿ ನನ್ನ ಪಾತ್ರವನ್ನು ಶ್ರದ್ಧೆಯಿಂದ ನಿರ್ವಹಿಸಲು ನಿಶ್ಚಯಿಸಿದೆ.

೧೨. ಕಂಪೆನಿಯ ನೌಕರರ ಅಧಿಕಾರದ ಬಲದಿಂದ ವ್ಯವಹರಿಸುವ ಇಂಗ್ಲಿಷು ಎಜಂಟರು, ಅವರ ಆಧೀನರಾಗಿ ವ್ಯವಹರಿಸುವ ಲೆಕ್ಕವಿಲ್ಲದ ಕರೀ ಏಜೆಂಟರು, ಸಬ್ ಏಜೆಂಟರು ನಡೆಸುತ್ತಿರುವ ಅತ್ಯಾಚಾರವೂ ಪುಂಡೂ ಈ ದೇಶದಲ್ಲಿ ಇಂಗ್ಲಿಷರ ಹೆಸರಿಗೇ ಒಂದು ಕಳಂಕವಾಗಿ ನಿಂತೀತೆಂದು ಅನಿಸುತ್ತದೆ. ಆದರೆ ಇಲ್ಲಿಯವರೆಗೆ ಔಷಧಿಯೇ ಇರದ ಲೋಪಗಳನ್ನು ಕಡೆಗಾಣಿಸಿ ಅನೇಕ ವಿಧಗಳಲ್ಲಿ ಇದುವರೆಗೆ ಇರದಿದ್ದ ಅನುಕೂಲಗಳನ್ನು ಕಲ್ಪಿಸುವ ಪ್ರಸಂಗವೊಂದನ್ನು—ದಿವಾನಿಯನ್ನು ಪಡೆದುದು—

ನೋಡುವ ಭಾಗ್ಯ ನನಗೆ ಲಭಿಸಿದೆ. ಬಂಗಾಳ ಬಿಹಾರ ಉತ್ಕಲಗಳ ಭೂಮಿಗಳ ಮೇಲ್ವಿಚಾರಣೆಯೂ ಕಂದಾಯದ ವಸೂಲಿಯೂ ನಮಗೆ ಸೇರಿತು. ನಮ್ಮ ಬೊಕ್ಕಸದಿಂದ ಸೈನ್ಯದಿಂದ ನಾವು ಬಾದಶಹನಿಗೆ ಮಾಡಿದ ಸಹಾಯದ ಮೂಲಕ ಈ ಕೆಲಸವು ಸುಲಭವಾಗಿಯೇ ಕೈಗೂಡಿತು. ನಿಮ್ಮ ಮನಸಿಗೆ ಒಪ್ಪುವ ರೀತಿಯಲ್ಲೇ ಈ ಕೆಲಸ ಮಾಡಲಾಗಿದೆ. ನವಾಬನ ಮರ್ಯಾದೆ ಅಧಿಕಾರಗಳಿಗಾಗಿ ಕೊಡಬೇಕಾದ್ದನ್ನು ಬಾದಶಹನ ಕಾಣಿಕೆಯನ್ನು ತಪ್ಪದೆ ಕೊಡಬೇಕು. ಉಳಿದುದೆಲ್ಲ ಕಂಪೆನಿಗೇ ಸೇರುವುದು.

೧೩. ಬಡ್ರ್ವಾನ ಮುಂತಾದ ಹಿಂದಿನ ಸೊತ್ತುಗಳೊಡನೆ ಈ ಹೊಸ ಸಂಪಾದನೆಯು ಬರುವ ವರ್ಷ ಸುಮಾರು ೨೫೦ ಲಕ್ಷ ಸಿಕ್ಕಾ ರೂಪಾಯಿಗಳ ವರಮಾನ ಕೊಡುತ್ತದೆ. ಮುಂದೆ ಇನ್ನೂ ೨೦–೩೦ ಲಕ್ಷ ಹೆಚ್ಚಿಗೆ. ಯುದ್ಧಗಳಿಲ್ಲದಿದ್ದರೆ ನಿಮ್ಮ ಸೈನ್ಯದ ವೆಚ್ಚ ಎಂದಿಗೂ ೬೦ ಲಕ್ಷಕ್ಕೆ ಮೀರುವುದಿಲ್ಲ. ನವಾಬನ ಸಂಬಳವು ಆಗಲೇ ೪೨ ಲಕ್ಷಕ್ಕೆ ಇಳಿಸಿದೆ. ಬಾದಶಹನ ಕಾಣಿಕೆ ೨೬ ಲಕ್ಷ ಮಾತ್ರ ಕೊನೆಗೆ ಕಂಪೆನಿಗೆ ಉಳಿಯುವುದು, ೧೨೨ ಲಕ್ಷ ಸಿಕ್ಕಾ ರೂಪಾಯಿಗಳ ಲಾಭ.

೧೬. ಹಿಂದುಸ್ತಾನದಲ್ಲಡಿಯಿಟ್ಟ ಕೂಡಲೆ ಕಂಪೆನಿಯ ನೌಕರರಿಗೆ ಒಂದು ಬಾಧ್ಯತೆ ಕೊಡಬೇಕು. ಅವರವರ ಪದವಿಗೆ ತಕ್ಕಂತೆ ಅನುಕೂಲಗಳು ಕ್ರಮವಾಗಿ ಹೆಚ್ಚಿಸಬೇಕು. ಹಡಗುಗಳು, ವ್ಯಾಪಾರಾನುಕೂಲಗಳು, ಉಪ್ಪು, ಅಡಕೆ, ಹೊಗೆಸೊಪ್ಪುಗಳ ಲಾಭದ ಮೂಲಕ ಈ ಹೊಸ ಕಾನೂನು ಅನುಸರಿಸಿ ಇದು ಬರುತ್ತದೆ.

೧೯. ಸಿವಿಲ್ ಇಲಾಖೆಯ ಬಗ್ಗೆ ಇದು ನನ್ನ ಪೂರ್ಣಾಭಿಪ್ರಾಯ. ಇನ್ನು ಮಿಲಿಟರಿ ಶಾಖೆಯವರು ಸಿವಿಲ್ ಇಲಾಖೆಯವರ ಅಧೀನರಾಗಿರದೆ ಸ್ವತಂತ್ರರಾಗಿರಲು ಯತ್ನಿಸುತ್ತಿರುವುದು ದೊಡ್ಡ ತಪ್ಪೆಂದು ನಿಮಗೆ ತಿಳಿಸಲು ಬಯಸುತ್ತೇನೆ. ಸೈನ್ಯವೆಲ್ಲವೂ ಸಿವಿಲ್ ಇಲಾಖೆಗೆ ಅಧೀನವಾಗಿರಬೇಕು. ಅವರೇನಾದರೂ ಸ್ವತಂತ್ರತೆಗೆ ಹೊಡೆದಾಡಿದರೆ ಕಂಪೆನಿಯ ಈ ಪ್ರಾಂತದ ಆಡಳಿತಕ್ಕೆ ತಾವು ಜವಾಬದಾರರೆಂದೂ ಸಿವಿಲ್ ಆಡಳಿತದಲ್ಲಿ ಜನರ ಸೊತ್ತುಗಳಿಗೆ ರಕ್ಷಕರೆಂದೂ ನೆನಪಿನಲ್ಲಿಟ್ಟು ಗವರ್ನರನೂ ಮಂಡಲವೂ ಕೆಲಸಮಾಡಬೇಕು.

೨೬. ನನಗೆ ಬಹಳ ಜನ ಮಕ್ಕಳು. ಈ ಹವೆಯಲ್ಲಿ ನನ್ನ ಆರೋಗ್ಯ ಬಹಳ ಕೆಟ್ಟದೆ. ನನ್ನ ಅದೃಷ್ಟವನ್ನೇ ಕೆಣಕಿದಂತಾಗಿದೆಯೆಂದು ನಿಮಗೆ ಅರಿಕೆಮಾಡುವೆ. ನನ್ನ ವ್ಯವಹಾರ ಮಾನ್ಯವೇ. ನನ್ನ ಕಾನೂನುಗಳು ತಮಗೆ ಒಪ್ಪಿಗೆಯೇ ಎಂಬುದನ್ನು ತಿಳಿಸುವಿರೆಂದು ನಿರೀಕ್ಷಿಸುತ್ತಿರುವೆ. ತಮಗೆ ಒಪ್ಪಿಗೆಯಿದ್ದರೆ ರಹಸ್ಯ ಸಭೆಯೊಡನೆ ಸೇರಿ ಮೊದಲು ಮಾಡಿದ ಕೆಲಸವನ್ನು ಮುಗಿಸಲು ನನಗೆ ಅಪ್ಪಣೆಯಾಗಬೇಕು. ಬರುವ ವರ್ಷದ ಕೊನೆಯೊಳಗಾಗಿ ಅದು ಸಹಜವಾಗಿ ಮುಗಿದು ಹೋಗುತ್ತದೆ. ಆ ಕಾಲಕ್ಕೆ ಇಂಗ್ಲೆಂಡಿಗೆ ಹಿಂದಿರುಗಿ ಬರುವ ಸಂಕಲ್ಪವಿದೆ. ಬಂದು ಕಂಪೆನಿಯ ಏಳಿಗೆಗೆಂದು ನಾವು ಬಯಸಿದ ಎಲ್ಲ ಏರ್ಪಾಟುಗಳ ಬಗ್ಗೆ ಮಾತಾಡುವೆನು.

ಹಿಂದುಸ್ತಾನದಲ್ಲಿ ಇಂಗ್ಲಿಷರ ಪ್ರಭುತ್ವದ ಏಳಿಗೆಯ ಪ್ರಕರಣದಲ್ಲಿ ಒಂದು ಮುಖ್ಯ ಪ್ರಸಂಗವನ್ನು ಕ್ಲೈವನೇ ಹೇಳಿದ. ಇಲ್ಲಿಯವರೆಗೆ ಹಿಂದುಸ್ತಾನದಲ್ಲಿ ಇಂಗ್ಲಿಷರು ದಲಾಳಿಗಳಾಗಿದ್ದರು. ೧೭೫೭ರಲ್ಲಿ ಪ್ಲಾಸಿ ಕದನದ ಕಾಲದಿಂದ ಬಂಗಾಳಕ್ಕೆ ಇಂಗ್ಲಿಷರೇ ನಿಜವಾಗಿ ಧಣಿಗಳಾಗಿದ್ದರೂ ೧೭೬೫ರಲ್ಲಿ ಬಾದಶಹನು ದಿವಾನಿಯನ್ನು ಕೊಟ್ಟಮೇಲೆ ಕಂಪೆನಿಗೆ ಬಂಗಾಳದ ಆಡಳಿತವು ಸ್ವಾಧೀನವಾದುದು. ಕ್ಲೈವನೀ ಆಡಳಿತವನ್ನು ಹೇಗೆ ನಡೆಸಲು ಏರ್ಪಾಡು ಮಾಡಿದನೆಂಬುದು ಅವನ ಬಾಯಿಂದಲೇ ತಿಳಿದಿದೆ. ಸಿವಿಲ್ ಮಿಲಿಟರಿ ಇಲಾಖೆಗಳಲ್ಲಿ ಅವನು ಮಾಡಲೆತ್ನಿಸಿದ ಮಾರ್ಪಾಡುಗಳು ಸ್ತುತ್ಯವೇ ಸರಿ. ಆದರೆ ಅವನ ಏರ್ಪಾಡಿನಲ್ಲಿ ಇಂಗ್ಲಿಷರ ಪ್ರಯೋಜನವೇ ಇತ್ತಲ್ಲದೆ ಪ್ರಜೆಗಳ ಹಿತಚಿಂತನೆಯೇ ಇರಲಿಲ್ಲ. ಇಡೀ ಬಂಗಾಳ ಪ್ರಾಂತವೇ ಕಂಪೆನಿಯ ಜಹಗೀರಿ–ಕಂಪೆನಿಗೊಂದು ಲಾಭದ ಮಾರ್ಗ ಎಂದು ತಿಳಿದುಕೊಂಡಿದ್ದರು.

೩ ಕೋಟಿ ಜನರಿಂದ ಸಂದ ತೆರಿಗೆ ಕಂದಾಯದ ಹಣವನ್ನು ಖರ್ಚು ವೆಚ್ಚ ಕಳೆದು ಉಳಿದುದನ್ನು ಇಲ್ಲೇ ದೇಶೀ ಜನರಿಗಾಗಿ ಉಪಯೋಗಿಸುವ ಮಾತೇ ಇಲ್ಲ. ಕಂಪೆನಿಯ ವ್ಯಾಪಾರದ ಲಾಭವೆಂದು ಹೇಳಿ ಇಂಗ್ಲೆಂಡಿಗೆ ಕಳಿಸುತ್ತಿದ್ದರು. ಆದರೆ ರಾಜ್ಯವೊಂದರಿಂದ ಇಂಗ್ಲೆಂಡಿನಲ್ಲಿದ್ದ ಕಂಪೆನಿಯ ಷೇರುದಾರರಿಗೆ ವರ್ಷವರ್ಷವೂ ೧.೫ ಮಿಲಿಯನು ಪೌಂಡುಗಳು ಹೋಗಬೇಕಿತ್ತು. ದೀನದರಿದ್ರ ಜನಾಂಗವೊಂದರ ತೆರಿಗೆಗಳಿಂದ ಸಂತತವಾಗಿ ನಿರಾತಂಕವಾಗಿ ಜಗತ್ತಿನಲ್ಲೆಲ್ಲ ಐಶ್ವರ್ಯವಂತವಾದೊಂದು ಜನಾಂಗದಿಂದ ಹೊನ್ನಿನ ಹೊಳೆ ಹರಿಯತೊಡಗಿತು.

ಇಂಗ್ಲಿಷರು ಈ ದೇಶದಲ್ಲಿ ಮೊದಲನೆಯ ಸಲ ಮಾಡಿದ ರಾಜ್ಯಭಾರದ ಏರ್ಪಾಡಿನಲ್ಲಿಯೇ ಹಿಂದುಸ್ತಾನದಿಂದ ಹೊನ್ನಿನ ಮಳೆ ಇಂಗ್ಲೆಂಡಿಗೆ ಕೊಟ್ಟು ಹೋಗುವ ಹಾಗೆ ಏರ್ಪಾಡಾಯಿತು

ಈ ದುರ್ದೈವದ ಆರ್ಥಿಕ ನಷ್ಟದ ಪ್ರವಾಹವು ಹೆಚ್ಚಿ ಈಗ ಕೋಟಿಗಟ್ಟಲೆ ಸವರನ್ನುಗಳಾಗಿ ವರ್ಷವರ್ಷ ಹರಿಯುತ್ತಿದೆ. ಬ್ರಿಟಿಷರ ಸಮರಶೂರತೆ, ಆಡಳಿತದ ವ್ಯವಸ್ಥೆ, ಶಾಂತಿಸ್ಥಾಪನೆ, ನ್ಯಾಯವಿಚಾರಣೆ, ಇಂಗ್ಲಿಷು ವಿದ್ಯೆಯ ಪ್ರಸಾರ–ಇವೆಲ್ಲ ಸ್ತುತಿ ಯೋಗ್ಯವೇ ಸರಿ. ಆದರೆ ಇಂಗ್ಲೆಂಡಿಗೂ ಹಿಂದುಸ್ತಾನಕ್ಕೂ ಕೊಡತಕ್ಕೊಳ್ಳುವ ಲೆಕ್ಕಚಾರವು ಮಾತ್ರ ಮೊದಲಿಂದಲೂ ಅಯೋಗ್ಯವಾಗೇ ಇವೆ. ಅಪಾರ ಪ್ರಕೃತಿಸಂಪತ್ತುಳ್ಳ ಫಲ ವಂತಭೂಮಿಯ ಉದ್ಯೋಗಶೀಲ ಜನರ ಹಿಂದುಸ್ತಾನವು ನೂರೈವತ್ತು ವರ್ಷ ಇಂಗ್ಲಿಷರ ದೌಲತ್ತಿನ ಫಲದಿಂದ ಜಗದಲ್ಲಿ ಸಮಃಿಲ್ಲವಂಥ ಅತಿ ದರಿದ್ರ ದೇಶವಾಗಿದೆ.

ಕಂಪನಿಗೆ ವರ್ಷಂಪ್ರತಿ ೧೩ ಮಿಲಿಯ ಸವರನ್ನುಗಳ ಲಾಭ ವಾದದ್ದು ಕ್ಲೈವನಿಗೆ ತೃಪ್ತಿಯಾಗಲಿಲ್ಲ. ಅದು ಸಾಲದೆ ಒಳದೇಶದ ವ್ಯಾಪಾರವನ್ನೂ ಕಂಪೆನಿಯ ನೌಕರರ ಲಾಭಕ್ಕಾಗಿ ತಮ್ಮ ಕೈಯಲ್ಲೇ ಇಟ್ಟುಕೊಳ್ಳುವ ಏರ್ಪಾಡು ಮಾಡಿದ. ಈ ಸ್ವಂತ ವ್ಯಾಪಾರದ ದಬ್ಬಾಳಿಕೆಯ ಪರಿಹರಿಸಲು ಉಪಾಯ ಮಾಡಿದ. ಈ ಸ್ವಂತ ವ್ಯಾಪಾರದಲ್ಲಿ ಬಂಗಾಳದಲ್ಲಿದ್ದ ಇಂಗ್ಲಿಷರಿಗೆ ಒಳ್ಳೇ ಲಾಭವಿತ್ತು. ಆದ್ದರಿಂದ ಕ್ಲೈವನದನ್ನು ತಡೆಯಲಾರದೆ ಹೋದ. ತಡೆಯುವುದು ಹಾಗಿರಲಿ, ಉಪ್ಪು, ಅಡಿಕೆ, ಹೊಗೆ ಸೊಪ್ಪುಗಳ ವ್ಯಾಪಾರವನ್ನು ಕಂಪೆನಿಯವರು ಬೇಡೆಂದರೂ ಅವರ ಆಜ್ಞೆಯನ್ನು ಅಸಡ್ಡೆಮಾಡಿ ತನ್ನ ಜೊತೆಯ ನೌಕರರೊಡನೆ ಸೇರಿ ೧೮–೯–೧೭೬೫ರಲ್ಲಿ ಮಾಡದೆ ಬಿಡುವುದಿಲ್ಲೆಂದು ನಿರ್ಣಯಮಾಡಿದ.

೩೦ ನೆಯ ಸಪ್ಟಂಬರಕ್ಕೆ ಕ್ಲೈವನ ಪತ್ರ ಇಂಗ್ಲಂಡಿಗೆ ಹೋಯಿತು. ೧೭–೫–೧೭೬೬ರಲ್ಲಿ ಕಲ್ಕತ್ತೆಗೊಂದು ಕ್ಲೈವನಿಗೊಂದು ಪತ್ರ ಅಲ್ಲಿಂದ ಬಂದವು. ಕ್ಲೈವನು ಮಾಡಿದ ಸೇವೆಯನ್ನು ಹೊಗಳಿ ಬಿಹಾರ ಉತ್ಕಲ ಬಂಗಾಳದ ದಿವಾಣಿಗಳನ್ನು ಸ್ವೀಕರಿಸುದುದಕ್ಕೆ ಸಮ್ಮತಿಸಿದ್ದರು. ಆದರೆ ಕ್ಲೈವನ ಒಳದೇಶದ ವ್ಯಾಪಾರದ ಏರ್ಪಾಡನ್ನು ಮಾತ್ರ ಒಪ್ಪಲಿಲ್ಲ. ಆ ಪುಣ್ಯ ಅವರಿಗಿತ್ತು.

"ಮಂಡಲಿಗೆ ಕಳಿಸಿರುವ ನಮ್ಮ ಪತ್ರದಲ್ಲಿ ಬಹುಮಾನ ಉಡುಗರೆಗಳ ಬಗ್ಗೆ ನಮ್ಮ ಮತವನ್ನು ತಿಳಿಸಿದೆ. ಒಳದೇಶದ ವ್ಯಾಪಾರದಿಂದ ನಮ್ಮ ನೌಕರರು ಗಳಿಸಿರುವ ಸಂಪತ್ತು ಯಾವ ದೇಶದಲ್ಲೂ ಯಾವ ಕಾಲದಲ್ಲೂ ಇಲ್ಲದಂಥ ಹಿಂದೆ ಇಲ್ಲದ ಮುಂದೆ ಇರದಂಥ ಅತ್ಯಾಚಾರ ದೌರ್ಜನ್ಯಗಳ ಅಂತಿಮಾವಧಿಯ ಕೆಲಸಗಳಿಂದ ಗಳಿಸಲ್ಪಟ್ಟಿದೆ. ಇದು ನಮಗೆ ತಿಳಿದಾಗಿನಿಂದ ನಮ್ಮೆಲ್ಲರ ಮನಸೂ ಮತವೂ ಒಂದೇ ಆಗಿದೆ. ಇಷ್ಟು ದೌರ್ಜನ್ಯ ಹಿಂಸೆಗಳನ್ನು ಈ ವ್ಯಾಪಾರದಲ್ಲಿ ನೋಡಿರುವ ನಾವು ನಿಮ್ಮ ಮಂಡಲಿಯವರು ಸೂಚಿಸಿರುವ ವ್ಯವಸ್ಥಿತವಾದ ರೀತಿಯಲ್ಲಿ ಆ ವ್ಯಾಪಾರ ನಡೆಸಲಿಕ್ಕೂ ನಾವು ಒಪ್ಪಲಾರೆವು."

ಕಂಪನಿಯ ಡೈರೆಕ್ಟರರು ಒಳದೇಶದ ವ್ಯಾಪಾರದ ಬಗ್ಗೆ ಖಂಡಿತಾಭಿಪ್ರಾಯವುಳ್ಳವರಾಗಿದ್ದರು. ೮–೨–೧೭೬೫ ರಲ್ಲಿ ಈ ವ್ಯಾಪಾರವನ್ನು ನಿಷೇಧಿಸಿದ್ದರು. ೧೮–೨–೧೭೬೫ ರಲ್ಲಿ ಮತ್ತೊಮ್ಮೆ ಇನ್ನಷ್ಟು ಖಂಡಿತವಾಗಿ ನಿಷೇಧಿಸಿದರು. ಆದರೆ ನೌಕರರು ಅವರ ಅಪ್ಪಣೆಗಳನ್ನು ಉದಾಸೀನ ಮಾಡಿದ್ದರು. ೧೭–೫–೧೭೬೬ರಲ್ಲೇಗ ಕ್ಲೈವನ ವ್ಯವಸ್ಥೆಯಂತೆ ಒಳ ದೇಶದ ವ್ಯಾಪಾರ ನಡೆಸಲೂ ಸಮ್ಮತಿಸಲಿಲ್ಲ. ಆದರೆ ಈಗಲೂ ಅವರ ಆಜ್ಞೆಯು ಪಾಲಿತವಾಗಲಿಲ್ಲ. ಒಪ್ಪಂದ ಆಗಿ ಹೋಗಿದೆ, ಮುಂಗಡ ಕೊಟ್ಟಿದೆ, ಎಂದು ಸುಳ್ಳು ಹೇಳುತ್ತ ಇನ್ನೂ ೨ ವರ್ಷಕಾಲ ನೌಕರರು ಒಳದೇಶದ ವ್ಯಾಪಾರ ನಡೆಸಿಯೇ ನಡೆಸಿದರು.

೧೭೬೭ ರಲ್ಲಿ ಕ್ಲೈವನು ಇಂಗ್ಲಂಡಿಗೆ ಹೋದ. ಅವನ ತರುವಾಯ ೧೭೭೦ ರವರೆಗೆ ವೆರ್ಲ್‌ಸ್ಟ್, ೧೭೭೨ರ ವರೆಗೆ ಕಾರ್ಟಿಯರರು ಗವರ್ನರರಾಗಿದ್ದರು. ಈ ೫ ವರ್ಷ ಮತ್ತೆ ಅರಾಜಕತೆ. ಕ್ಲೈವನು ಏರ್ಪಡಿಸಿದ ರಾಜ್ಯಭಾರ ದ್ವಿದಳ ಪದ್ಧತಿಯದು. ಕಂದಾಯದ ವಸೂಲು ನವಾಬನ ಹೆಸರಿನಲ್ಲಿ. ನ್ಯಾಯ ವಿಚಾರಣೆ ಮಾಡುವವರು ನವಾಬನ ಅಧಿಕಾರಿಗಳು. ವ್ಯವಹಾರವೆಲ್ಲ ನವಾಬನ ಹೆಸರಿನಲ್ಲೇ. ಆದರೆ ದೇಶದ ಒಡೆತನ ನಿಜವಾಗಿ ಕಂಪೆನಿಯದೇ ಇತ್ತು. ಲಾಭವೆಲ್ಲ ಕಂಪೆನಿಯ ಪಾಲೇ. ಕಂಪನಿಯ ನೌಕರರು ನವಾಬನ ಆಳುಗಳನ್ನು ಬೆದರಿಸಿ ನವಾಬನ ನ್ಯಾಯದ ಕಚೇರಿಗಳನ್ನು ತಮ್ಮ ಸ್ವಾರ್ಥ ಸಾಧಿಸುವ ಆಯುಧಗಳನ್ನಾಗಿಮಾಡಿ ಸ್ವಲಾಭಕ್ಕಾಗಿ ಮಾಡಬಾರದ ದುಷ್ಟ ಕೆಲಸಗಳನ್ನೆಲ್ಲ ಮಾಡಿದರು. ಇಂಗ್ಲಿಷು ಗವರ್ನರನು ಇದನ್ನೆಲ್ಲ ನೋಡಿ ಖಂಡಿಸಿದ. ಆದರೆ ನಿಲ್ಲಿಸುವದು ಅವನಿಂದಾಗಲಿಲ್ಲ.

"ಬುದ್ಧಿಯಿಲ್ಲದೆ ನಮಗೂ ಸರಕಾರಕ್ಕೂ ನಡುವಿನ ಅಂತರವನ್ನೇ ನಾವು ಮುರಿದುಬಿಟ್ಟೆವು. ಜನರಿಗೆ ಯಾರ ದೌಲತ್ತು ಮನ್ನಿಸಬೇಕೋ ತಿಳಿಯದಾಯ್ತು. ಇಂಥ ದ್ವಿಮುಖವಾದ ತೊಡಕಿನ ಆಡಳಿತದಿಂದ ಹಿಂದೆಂದೂ ಇಲ್ಲದ ದಬ್ಬಾಳಿಕೆ ಹೆಚ್ಚಿಹೋಯಿತು. ಸರಕಾರದ ಅಧಿಕಾರಿಗಳಿಗೂ ಈ ಅಂಟು ರೋಗ ತಗುಲಿ ಅವರೂ ಇದೇ ಹಾದಿ ಹಿಡಿದರು."

ಬೇಸಾಯವೇ ಬಂಗಾಳಿಗಳ ಮುಖ್ಯೋದ್ಯೋಗ. ಜೀವನಕ್ಕೆ ಮುಖ್ಯಮಾರ್ಗ. ಕಂಪೆನಿಯ ನೌಕರರು ಹೊಸದಾಗಿ ತಂದ ಸೆಟಲ್‌ಮೆಂಟ್ ಪದ್ಧತಿಯಿಂದ ಅದೂ ಹಾಳಾಯಿತು. ಬಂಗಾಳದ ಭೂಮಿಯೆಲ್ಲ ಜಮೀನುದಾರರ ಸ್ವಾಧೀನವಿತ್ತು. ಇವರು ನವಾಬನಿಗೆ ಕಂದಾಯಕೊಡುತ್ತ ಸಂದರ್ಭ ಬಂದಾಗ ಸೈನಿಕರನ್ನೊದಗಿಸುತ್ತ ತಮ್ಮ ತಮ್ಮ ಅಧೀನ ಪ್ರದೇಶಕ್ಕೆ ಒಡೆಯರಾಗಿರುತ್ತಿದ್ದರು. ಅವರು ಪ್ರಜೆಗಳನ್ನು ರಾಜರಂತೆ ನೋಡಿಕೊಳ್ಳುತ್ತಿದ್ದರು. ಅವರು ತಪ್ಪನ್ನು ದಂಡಿಸಿ, ವ್ಯಾಜ್ಯವನ್ನು ತೀರ್ಮಾನಿಸಿ, ನಾಡಲ್ಲಿ ವ್ಯವಸ್ಥೆಯನ್ನಿಟ್ಟು, ಧರ್ಮಕ್ಕೆ ಆಶ್ರಯಕೊಟ್ಟು, ಸಾತ್ವಿಕತೆಯನ್ನು ಪುರಸ್ಕರಿಸಿ, ಕುಶಲ ಕಲೆಗಳನ್ನು ಕಾಪಾಡಿ ವಿದ್ಯಾವಿನೋದಿಗಳಾಗಿದ್ದರು. ೧೭ ನೆಯ ಶತಮಾನದಲ್ಲಿ ಮುರ್ಷಿದ್ ಕೂಲಿ ಮತ್ತು ೧೮ನೆಯ ಶತಮಾನದಲ್ಲಿ ಮೀರಕಾಸಿಮನು ಜಮೀನುದಾರರನ್ನು ಗಾಣವಾಗಿ ಹಿಂಡಿ ಹಿಪ್ಪೆಮಾಡಿದ್ದನು. ಆದರೆ ವಂಶಪಾರಂಪರ್ಯವಾಗಿ ಬಂದ ಅವರ ಸಂಸ್ಥಾನಗಳನ್ನು ಅವರಿಂದ ಕಿತ್ತುಕೊಳ್ಳಲಿಲ್ಲ. ೧೭೬೦ ರಲ್ಲಿ ಮೀರಕಾಸಿಮನಿಂದ ಮಿಡ್ನಪುರವನ್ನು ಪಡೆದೊಡನೆ ಕಂಪೆನಿಯವರು ಹೊಸಪದ್ಧತಿಗಳನ್ನು ಜಾರಿಗೆ ತಂದರು. ಜಮೀನುದಾರರ ಹಕ್ಕುಗಳು ತಿರಸ್ಕರಿಸಲ್ಪಟ್ಟವು. ಬಹಿರಂಗವಾಗಿ ಜಮೀನದಾರಿಗಳನ್ನು ಹರಾಜು ಮಾಡಿದರು.

"ಮೀರಕಾಸಿಮನಿಂದ ಕಂಪನಿಗೆ ಮಿಡ್ನಪುರ ಬದ್ರ್ವಾನ ಪ್ರಾಂತಗಳು ಬಂದಾಗ ರಾಜ್ಯವು ಮೊದಲಿನಂತೆಯೇ ಇತ್ತು. ಯಾವ ಅನುಕೂಲವೂ ಆಗಲಿಲ್ಲ. ಬದಲು ದೇಶವನ್ನು ಹಾಳು ಮಾಡುವ ರೀತಿಯೊಂದು ೧೭೬೩ರಲ್ಲಿ ಬಂತು. ಜಮೀನುಗಳು ಮೂರು ವರ್ಷದ ಅನುಭವಕ್ಕೆ ಮಾತ್ರ ಎಂದು ಹರಾಜು ಹಾಕಿದರು. ಹಣವೂ ಗುಣವೂ ಇಲ್ಲದ ಘಟಿಂಗರು ಹರಾಜುದಾರರಾದರು. ಮೊದಲಿನಿಂದ ನೆಲೆಯಾಗಿದ್ದು ಬೇಸಾಯ ಮಾಡುತ್ತಿದ್ದ ರೈತರು ತಮ್ಮ ನೆಲೆಗಳನ್ನು ಬಿಟ್ಟು ಹೋಗಲಾರದೆ ಜಮೀನುಗಳ ಯೋಗ್ಯತೆ ಮೀರಿ ಹರಾಜು ಮಾಡಿದರು. ಇಂಥ ನಷ್ಟವೇನೂ ಇರದವರು ಸದ್ಯಃ ಜಮೀನು ಸಿಗಲೆಂದು ಇನ್ನೂ ಹೆಚ್ಚಿಗೆ ಹರಾಜು ಮಾಡಿದರು. ಹೀಗಾಗಿ ಲೆಕ್ಕವಿಲ್ಲದಷ್ಟು ಮಂದಿ ಸುಲಿಗೆಗಾರರು ಸೇರಿ ಬಡವರನ್ನು ಸದೆಬಡಿದು ಸುಲಿದು ಮೊದಲ ವರ್ಷದ ಹಣ ಸಲ್ಲಿಸಿದರು."

ಕ್ರಮೇಣ ಈ ಪದ್ಧತಿಯು ವಾರನಹೇಸ್ಟಿಂಗ್ಸನ ಕಾಲಕ್ಕೆ ಇಡೀ ಬಂಗಾಳಕ್ಕೆಲ್ಲ ಹರಡಿ ಅತೃಪ್ತಿ ಅವ್ಯವಸ್ಥೆ ಅತಿದುಃಖವನ್ನುಂಟು ಮಾಡಿತು. ವೆರ್ಲ್‌ಸ್ಟ್ ಮತ್ತು ಕಾರ್ಟಿಯರರ ಕಾಲವಲ್ಲಿ ಇಸ್ಟ್ ಇಂಡಿಯಾ ಕಂಪನಿಯ ಆಸೆಯನ್ನು ಪೂರೈಸಲಿಕ್ಕಾಗಿ ಕಂದಾಯವು ಬಹಳ ಕ್ರೂರತನದಿಂದ ಸೆಳೆಯಲ್ಪಡುತ್ತಿತ್ತು.

ಗೆವರ್ನರ ವೆರ್ಲ್‌ಸ್ಟನು ಡೈರೆಕ್ಟರರ ಕಚೇರಿಗೆ ಬರೆದ:— "ನಮ್ಮ ಕೈಗೆ ದೇಶ ಬಂದ ಮೇಲೆ ಜಿಲ್ಲೆಗಳ ಕಂದಾಯವನ್ನು ಕಿಂಚಿತ್ತಾದರೂ ಹೆಚ್ಚಿಸದೆ ಕಡಿಮೆ ಮಾಡಿ ವ್ಯವಸಾಯಾಭಿವೃದ್ಧಿಗೆ ದಾರಿ ತೋರಬೇಕಿತ್ತು. ನಿಮ್ಮ ಆಧೀನದಲ್ಲಿರುವ ಅನೇಕ ಜಿಲ್ಲೆಗಳಲ್ಲಿ ರೆವಿನ್ಯೂ ಇಲಾಖೆಯಲ್ಲಿ ಕೆಲಸಮಾಡಿದ ಅನುಭವ ನನಗಿದೆ. ಈ ಅನುಭವದಿಂದ ಹೇಳುತ್ತೇನೆ. ನಿಮ್ಮ ಕಂದಾಯಕ್ಕೆ ಇನ್ನು ಒಂದು ಕಾಸೂ ಹೆಚ್ಚಿಸುವುದು ಸಾಧ್ಯವಿಲ್ಲ"

ಬಲಾತ್ಕಾರ ಏಕಛತ್ರಾಧಿಕಾರಗಳ ದೆಸೆಯಿಂದ ವ್ಯಾಪಾರ ಉದ್ಯೋಗಗಳು ಹಾಳಾದವು. ಕಂಪನಿಯ ಡೈರೆಕ್ಟರು ಮೊದಲು ನೌಕರರನ್ನು ದಂಡಿಸಿದ್ದರು ಈಗ ಅವಕ್ಕಿಂತ ಹೆಚ್ಚು ತಪ್ಪನ್ನು ತಾವೇ ಮಾಡಿದರು. ಬಂಗಾಳದ ನೇಕಾರರ ರೇಶಿಮೆ ಬಟ್ಟೆಗಳು ಇಂಗ್ಲಂಡಕ್ಕೆ ಬರುವದನ್ನು ನೋಡಿ ಇಂಗ್ಲಿಷ ನೇಕಾರರಿಗೆ ಹೊಟ್ಟೆಕಿಚ್ಚು ಎದ್ದಿತು. ಆದ್ದರಿಂದ ಬಂಗಾಳದ ನೇಕಾರರನ್ನು ಹಾಳು ಮಾಡಿದರೆ ಇಂಗ್ಲಂಡದ ಉದ್ಯೋಗಗಳು ಏಳಿಗೆಯಾದಾವೆಂದು ಕಂಪನಿಯು ತನ್ನ ಅಧಿಕಾರವನ್ನು ಬಂಗಾಳದ ಉದ್ಯೋಗಗಳ ನಾಶಕ್ಕೆ ಉಪಯೋಗಿಸಿತು. ೧೭-೩-೧೭೬೯ರಲ್ಲಿ ಬಂಗಾಳಕ್ಕೆ ಕಂಪೆನಿಯು ಬರೆದುದರಲ್ಲಿ ಹಚ್ಚು ರೇಶಿಮೆದಾರದ ಉದ್ಯೋಗವನ್ನು ಬಂಗಾಳದಲ್ಲಿ ಹೆಚ್ಚು ಮಾಡಬೇಕೆಂದೂ ರೇಶಿಮೆ ಅರಿವೆಗಳ ಉದ್ಯೋಗವನ್ನು ನುಂಗಿಬಿಡಬೇಕೆಂದೂ ಬರೆದಿರುವರು. ರೇಶಿಮೆಯನ್ನು ಕಂಡಿಕೆ ಸುತ್ತುವವರನ್ನು ಅವರ ಮನೆಯಲ್ಲಿ ಸುತ್ತುವುದನ್ನು ತಪ್ಪಿಸಿ ಕಂಪನಿಯ ಕಾರಖಾನೆಗಳಲ್ಲಿ ಸುತ್ತುವಂತೆ ಮಾಡಬೇಕೆಂತಲೂ ಬರೆದಿರುವರು.

"ಈ ಕಾನೂನಿನಿಂದ ಬಹಳೇ ಒಳ್ಳೇ ಫಲಗಳಾಗಿವೆ. ತಮ್ಮ ಮನೆಗಳಲ್ಲೇ ರೇಶಿಮೆ ಸುತ್ತುತ್ತಿದ್ದವರೆಲ್ಲರೂ ನಮ್ಮ ಕಾರಖಾನೆಗಳಲ್ಲಿ ಸುತ್ತಲಿಕ್ಕೆ ಬಂದಿರುವರು. ಹೀಗೆ ಮನೆಯಲ್ಲಿ ಸುತ್ತುವ ಪದ್ಧತಿಯೇನಾದರೂ ನಮ್ಮ ಆ ಸಾಗರೂಕತೆಯಿಂದ ನಡೆದುದು ಕಂಡುಬಂದರೆ ಕೂಡಲೇ ಅದನ್ನು ನಿಲ್ಲಿಸುವುದು ಬೇಕಾದೀತು. ಈಗ ಹಾಗೆ ನಿಲ್ಲಿಸುವುದು ಸುಲಭ; ಸಾಕ್ಷ ಕಠಿಣ ಶಿಕ್ಷೆಗಳ ಭಯವಿಟ್ಟು ಸರಕಾರದ ಮೂಲಕ ನಿಷೇಧಿಸಬಹುದು."

ಮಂಡಲಿಯು ನ್ಯಾಯವಾಗಿಯೇ ಇದರ ಮೇಲೆ ಟೀಕಿಸಿತು. "ಈ ಪತ್ರದಲ್ಲಿನ ಪ್ರೋತ್ಸಾಹ ಬಲಾತ್ಕಾರಗಳ ನೀತಿಯ ಯೋಜನೆಯಿಂದ ಬಂಗಾಳದ ಉದ್ಯೋಗಗಳು ನಾಶವಾಗುತ್ತವೆ. ಈ ಉದ್ಯೋಗಪೂರ್ಣ ದೇಶವು ಇಂಗ್ಲೆಂಡದ ಕಾರಖಾನೆಗಳಿಗೆ ಕಚ್ಚಾಮಾಲನ್ನು ಒದಗಿಸುವ ಭೂಮಿಯಾಗುತ್ತದೆ."

ಇಲ್ಲಿಂದ ೫೦-೬೦ ವರ್ಷಗಳ ವರೆಗೆ ಇಂಗ್ಲೆಂಡು ಹಿಂದುಸ್ತಾನದ ಬಗ್ಗೆ ಇದೇ ನೀತಿಯನ್ನೇ ಅವಲಂಬಿಸಿತು. ಹೌಸ್ ಆಫ್ ಕಾಮನ್ಸದ ಮುಂದೆ ಆ ನೀತಿಯನ್ನು ಬಹಿರಂಗವಾಗಿ ಸಮರ್ಥನಮಾಡಿ ೧೮೩೩ರ ವರೆಗೆ ಬಲವಾಗಿಯೇ ಅದನ್ನು ಚಲಾಯಿಸಿತು. ಇದರಿಂದ ಇಂಗ್ಲಿಷರ ಉದ್ಯೋಗಗಳಿಗೆ ಲಾಭವಾಗಿ ಹಿಂದುಸ್ತಾನದ ಅನೇಕ ಜಾತೀಯ ಉದ್ಯೋಗಗಳು ನಿರ್ನಾಮವಾದವು.

ಬಂಗಾಳವು ಇಂಗ್ಲಿಷರ ಕಾಲದಲ್ಲಿ ಅನೇಕ ಪೀಡೆಗಳಿಂದ ಬಾಡಿ ಹೋಯಿತು. ಆ ಪೀಡೆಗಳಲ್ಲಿ ಕಂಪೆನಿಯು ಜಗತ್ತಿನ ಇತರ ಖಂಡಗಳಲ್ಲಿ ಮಾಡಿಕೊಂಡ ವೆಚ್ಚಕ್ಕಾಗಿಯೋ ಕಂಪೆನಿಯ ಲಾಭವೆಂದೋ ವರ್ಷವರ್ಷವೂ ಬಂಗಾಳದಿಂದ ಕೊಚ್ಚಿ ಹೋಗುತ್ತಿದ್ದ ಹೊನ್ನಿನ ಹೊಳೆಯ ಪೀಡೆಯೇ ಬಹಳ ಉಗ್ರವಾದುದು. ದಿವಾಣಿಯು ಕಂಪೆನಿಗೆ ದತ್ತವಾದಮೇಲೆ ಬಂಗಾಳದ ಆರು ವರ್ಷದ ವರಮಾನವನ್ನೂ ವೆಚ್ಚವನ್ನೂ ನೋಡಿ.

(ಮೇಲೆ ತಿಳಿಸಿದ ಅಂಕಣದಲ್ಲಿ)

| ಸಂವತ್ಸರ ಮೇ--ಏಪ್ರಿಲ್ | ವಸೂಲಿ ಸವರನ್‌ಗಳು | ನವಾಬನ ದಕ್ಷಿಣೆ, ಬಾದಶಹನ ಕಾಣಿಕೆ, ವಸೂಲಿ ವೆಚ್ಚ ಕಳೆದು ಉಳಿದುದು | ಒಟ್ಟು ವೆಚ್ಚ ಸಿವಿಲ್ ಮಿಲಿಟರಿ ಕೋಟೆ ಕಟ್ಟಡ | ಉಳಿತಾಯ |
|---|---|---|---|---|
| ೧೭೬೫-೧೭೬೬ | ೨೨,೫೮,೨೨೭ | ೧೬, ೮೧, ೪೨೭ | ೧೨, ೧೦, ೩೬೦ | ೪,೭೧,೦೬೭ |
| ೧೭೬೬-೧೭೬೭ | ೩೮,೦೫,೮೧೭ | ೨೫, ೨೭, ೫೯೪ | ೧೨, ೭೪, ೦೯೩ | ೧೨,೫೩,೫೦೧ |
| ೧೭೬೭-೬೮ | ೩೬,೦೮,೦೦೯ | ೨೩, ೫೯, ೦೦೫ | ೧೪, ೮೭, ೩೬೩ | ೮,೭೧,೬೨೨ |
| ೧೭೬೮-೬೯ | ೩೭,೨೭,೨೦೭ | ೨೪, ೦೨, ೧೯೧ | ೧೫, ೭೩, ೧೨೯ | ೮,೨೯,೦೬೨ |
| ೧೭೬೯-೭೦ | ೩೩,೪೧,೯೭೬ | ೨೦, ೦೯, ೩೬೮ | ೧೭, ೫೨, ೫೫೬ | ೩,೩೬,೮೧೨ |
| ೧೭೭೦-೭೧ | ೩೩,೩೨,೩೪೩ | ೨೦, ೦೭, ೧೭೬ | ೧೭, ೩೨, ೦೮೮ | ೨,೭೫,೦೦೮ |
| ಒಟ್ಟು | ೨೦೧,೩೩,೫೭೯ | ೧೩೦,೬೬,೭೬೧ | ೯೦,೨೭,೬೦೯ | ೪೦,೩೯,೧೫೨ |

ಇದನ್ನು ನೋಡಿದರೆ ಬಂಗಾಳದ ನಿವ್ವಳ ಆದಾಯದಲ್ಲಿ ೧/೩ ಭಾಗವು ದೇಶದಿಂದ ಹೊರಗೆ ವರ್ಷವರ್ಷವು ಕಳಿಸಲ್ಪಡುತ್ತಿತ್ತೆಂದು ಸ್ಪಷ್ಟವಾಗುತ್ತದೆ. ನಿಜವಾಗಿ ನಷ್ಟವು ಇನ್ನೂ ಬಹಳವಾಗುತ್ತಿತ್ತು. ಫರಂಗಿ ನೌಕರರು ತಮ್ಮ ಸಂಬಳದಲ್ಲಿ ವೆಚ್ಚ ಕಳೆದು ಮಿಕ್ಕದ್ದೆಲ್ಲ ತಮ್ಮ ಮನೆಗಳಿಗೆ ಕಳಿಸುತ್ತಿದ್ದರು. ದೇಶಿ ವರ್ತಕರನ್ನು ಕತ್ತುಹಿಡಿದು ತಳ್ಳಿ ಒಳದೇಶದ ವ್ಯಾಪಾರಮಾಡಿದವರ ಅಪಾರ ಸಂಪತ್ತೆಲ್ಲ ದೇಶದಿಂದ ಹೊರಗೆ ಹೋಗುತ್ತಲೇ ಇತ್ತು. ಗವರ್ನರ್ ವೆರ್‌ಲ್‌ಸ್ಟನು ಈ ಸಂಖ್ಯೆಗಳನ್ನು ಕೂಡಿಸಿರುವ.

| ಆಮದು | ರಫ್ತು |
|---|---|
| ೬,೨೪,೩೭೫ ಸವರನ್ | ೬೩,೧೧,೨೫೦ ಸವರನ್ |

ದೇಶದೊಳಗೆ ಆಮದಾದುದರ ಹತ್ತರಷ್ಟು ರಫ್ತಾಗಿ ಹೋಗುತ್ತಿತ್ತು. ವೆರ್‌ಲ್‌ಸ್ಟನಿಗೆ ಈ ಪೀಡೆಯ ಘೋರತೆಯು ಅರ್ಥವಾಗಿ ಬಂಗಾಳದ ಜನರ ಸ್ಥಿತಿಗತಿಯಮೇಲೆ ಇದರಿಂದಾಗುವ ಕೆಟ್ಟ ಪರಿಣಾಮವನ್ನು ಬರೆದೇ ಬರೆದ,

"ಮೊದಲಿಗೆ ದೆಹಲಿಗೆ ಹೋಗುತ್ತಿದ್ದ ಹಣವೆಲ್ಲ ಬಂಗಾಳದ ಅಪರಿಮಿತ ವ್ಯಾಪಾರದಲ್ಲಿ ಹಿಂದಿರುಗಿ ಬರುತ್ತಿತ್ತು. ಆದರೆ ಈಗ ನವಾಬನ ದೇಶದ ಸ್ಥಿತಿ ಎಷ್ಟು ವ್ಯತ್ಯಾಸವಾಗಿದೆ. ದೇಶದಲ್ಲಿ ಸಿಕ್ಕ ಲಾಭಗಳಿಂದ ತಮ್ಮ ಬಂಡವಾಳವನ್ನು ಹೆಚ್ಚಿಸಿದರೂ ಯಾವ ಫರಂಗಿ ಕಂಪನಿಯೂ ದೇಶದ ಸಂಪತ್ತಿಗೆ ಬಂದು ಕುರುಡು ಕವಡೆಯನ್ನಾದರೂ ಸೇರಿಸಲಿಲ್ಲ."

"ಎಲ್ಲಾ ಕಡೆಯಿಂದ ಹಣಹಣ ಎಂದು ಕೇಳುತ್ತಿರುವಿರಿ. ಹೀಗೆ ಹಣ ಗಳಿಸಿ ಇಲ್ಲಿನ ಬೊಕ್ಕಸ ಬಹಳ ದರಿದ್ರವಾಗಿದೆ. ಹೀಗೆ ಹಣ ದೇಶವನ್ನು ಬಿಟ್ಟು ಹೊರಗೆ ಹೋಗುವುದನ್ನು ನೋಡಿ ನಮಗೆ ಮುಂದಿನ ಗತಿಯ ಬಗ್ಗೆ ಹೆದರಿಕೆಯಾಗುತ್ತದೆ.

"ವರ್ಷವರ್ಷವೂ ವರಮಾನದ ೧/೩ ಭಾಗವು ಸಾಗಿಹೋಗುತ್ತಿರುವಾಗ ಎಷ್ಟೇ ಸಿರಿವಂತವಿದ್ದರೂ ಬಲುಕಾಲ ತಲೆಯೆತ್ತಿ ಬಾಳಲಾರದು. ಏಳಿಗೆಯಂತೂ ಸಾಧ್ಯವೇ ಇಲ್ಲ. ಇದಲ್ಲದೆ ಇನ್ನೂ ಕೆಲವು ಕಾರಣಗಳಿಂದ ದೇಶದ ಸಿರಿಯೆಲ್ಲ ನಿರ್ಮೂಲವಾಗುತ್ತಿದೆ. ಬೇಗನೆ ಅದನ್ನು ಸರಿಮಾಡದಿದ್ದರೆ ನಿರ್ಮೂಲ

ವಾಗುವದು ನಿಶ್ಚಯು. ಮೊದಲಿಗೆ ಒಂದು ದೊಡ್ಡ ಅನುಕೂಲ ವಿತ್ತು. ದೇಶದ ವರಮಾನವು ಕೆಲವು ಮನೆತನಗಳಿಗೆ ಕೊಡ ಲ್ಪಡುತ್ತಿದ್ದ ಮನಸಬುಗಳಿಂದ ದೊರೆಗಳ ಶ್ರೀಮಂತಿಕೆಯ ಸಾಮಗ್ರಿಗಳ ದೆಸೆಯಿಂದ ದೇಶದಲ್ಲೇ ಹಂಚಿಹೋಗುತ್ತಿತ್ತು. ಆದರೆ ಈಗ ಎಲ್ಲಾ ವರಮಾನಕ್ಕೂ ಒಂದೇ ರಾಹು ಬಾಯಿ ತೆರೆದು ನಿಂತಿದೆ–ನಿಮ್ಮ ಬೊಕ್ಕಸವೆಂಬ ರಾಹು. ಅಗತ್ಯವಾದ ಖರ್ಚು, ನಮ್ಮ ಬಂಡವಾಳದ ಕೆಲವು ಭಾಗ ಬಿಟ್ಟರೆ ಒಂದು ಕಾಸಿಗೂ ಆ ರಾಹುವಿನಿಂದ ಮುಕ್ತಿಯಿಲ್ಲ. ”

ಈ ಬಂಡವಾಳದ ಕೆಲಸ ಎಂಥದೋ ನೋಡೋಣ.

“ ಬಂಗಾಳದ ವರಮಾನದಲ್ಲಿ ಕೆಲವೊಂದು ಭಾಗದಿಂದ ಮಾಲನ್ನು ಕೊಳ್ಳುತ್ತಿದ್ದರು. ಇಲ್ಲವೆ ಇಂಗ್ಲೆಂಡಕ್ಕೆ ಕಳಿಸು ತ್ತಿದ್ದರು. ಇದೇ ಬಂಗಾಳ ಈ ಬಂಡವಾಳ. ಎಷ್ಟೆಷ್ಟು ಹೆಚ್ಚಾಗಿದ್ದರೆ ಕಂಪೆನಿಯ ನೌಕರರ ದೊಡ್ಡಸ್ತಿಕೆಯೂ ಅಷ್ಟು ಹೆಚ್ಚು. ಹಿಂದುಸ್ತಾನದ ವಿನಾಶಕ್ಕೆ ಕಾರಣವಾದ ಈ ವ್ಯವ ಹಾರವೇ ಹಿಂದುಸ್ತಾನದ ಸಿರಿಯ ಅಳತೆಯಂತೆ. ಹಡಗುಗಳು ತುಂಬ ಬೆಲೆಬಾಳುವ ದಿನಸುಗಳನ್ನು ತುಂಬಿ ವರ್ಷ ವರ್ಷವೂ ಇಂಗ್ಲೆಂಡದಲ್ಲಿ ಲೆಕ್ಕವಿಲ್ಲದಷ್ಟು ಹಡಗುಗಳನ್ನು ತಂದು ನಿಲ್ಲಿಸಿ ಇದೆಲ್ಲ ಹಿಂದುಸ್ತಾನದ ಮಾಲೆಂದು ತೋರಿಸುತ್ತ, ವರುಷ ವರು ಷಕ್ಕೆ ಬರುವ ಹಡಗಗಳನ್ನು ಹೆಚ್ಚಿಸುತ್ತ ಬಂದರೆ ಯಾರಿಗೆ ತಾನೇ ಅನಿಸಲಿಕ್ಕಿಲ್ಲ–‘ಹಿಂದುಸ್ತಾನ ಎಂಥ ಸಿರಿವಂತ ದೇಶವಿರ ಬೇಕು, ಅಲ್ಲಿನ ಜನರೆಷ್ಟು ಸುಖವಾಗಿರಬಹುದು, ಎಷ್ಟು ಫಲ ಶಾಲಿಯಿರಬೇಕು ದೇಶ ! ಇಲ್ಲದಿರಲು ತಾವು ಬಳಸಿ ಉಳಿದ ಮಾಲು ಇಷ್ಟೊಂದು ಮಾರಲು ಹೇಗಾದೀತು !’ ಎಂತ ! ಹಿಂದು ಸ್ತಾನದ ಬಗ್ಗೆ ಇಂಗ್ಲೆಂಡವರಿಗನಿಸಿದ್ದೂ ಹಾಗೇ. ಈ ರಫ್ತು ಮಾಡಿದ ದಿನಸಿಗೆ ಬದಲಾಗಿ ಹಣ ದೇಶಕ್ಕೆ ಸೇರಿ ದೇಶದ ಹುಟ್ಟುವಳಿ ಇನ್ನಷ್ಟು ಅತಿಶಯಿಸುತ್ತದೆಂದು ಯಾರಾದರೂ ತರ್ಕಿಸಬಹುದು. ಆದರೆ ಈ ರಫ್ತೆಲ್ಲ ವ್ಯಾಪಾರಕ್ಕಾಗಿಯಲ್ಲ ಹಿಂದುಸ್ತಾನ ಕಳಿಸುತ್ತಿದ್ದುದು. ಇಂಗ್ಲಿಷರಿಗೆ ಪೊಗದಿಯನ್ನು ಕಳಿಸುತ್ತಿತ್ತು ಈ ರೂಪದಲ್ಲಿ. ”

ಈ ಆರ್ಥಿಕ ನಷ್ಟದ ನಿರಂತರ ಪ್ರವಾಹವನ್ನು ವೆಸ್ಲೆಸ್ಟನೂ ಹೌಸ್ ಆಫ್ ಕಾಮನ್ಸದ ಉಪಸಭೆಯೂ ನಿಂದಿಸಿದ್ದರು. ಇಂಗ್ಲೆಂ ಡದ ಶ್ರೇಷ್ಠ ರಾಜಕೀಯ ತತ್ವಜ್ಞಾನಿಯಾದ ಬರ್ಕನೂ ಅವರ ಹಾದಿಯನ್ನೇ ತುಳಿದ. “ಏಸಿಯಾಖಂಡದ ರಾಜರು ಹಿಂದುಸ್ತಾನ ವನ್ನು ಗೆದ್ದರೂ ಅದನ್ನೇ ತಮ್ಮ ವಾಸಸ್ಥಾನವನ್ನಾಗಿ ಮಾಡಿಕೊಂ ಡುದರಿಂದ ತಮ್ಮ ಕ್ರೂರತೆಯನ್ನು ನೀಗಿಸಿದರು. ತಾವು ನೆಲೆ ಗೊಂಡ ದೇಶದ ಉನ್ನತಿ ಅವನತಿಗಳೇ ಇವರ ಉನ್ನತಿ ಅವನತಿ ಗಳಾದವು. ತಮ್ಮ ಸಂತತಿಯ ಭಾಗ್ಯವನ್ನೆಲ್ಲ ಅಲ್ಲೇ ಕಲ್ಪಿಸಿದರು. ತಮ್ಮ ತಮ್ಮ ವಂಶದ ಅದೃಷ್ಟವನ್ನು ಇಲ್ಲೇ ಬೆಳೆಸಿದರು. ಯಾರಿಗೂ ದರಿದ್ರ ದೇಶದಲ್ಲಿ ನೆಲಸಲು ಬಯಕೆಯಿರುವುದಿಲ್ಲ; ಬಡತನ, ಬಂಜರು ಭೂಮಿ, ವಿನಾಶಗಳು ಯಾರ ಕಣ್ಣಿಗೂ ಹಿತವಲ್ಲ. ಹತಭಾಗ್ಯ ಜನರ ನಡುವೆ ಹುಟ್ಟಿ, ಬಾಳಿ ಬದುಕಲು ಯಾರಿಗೆ ತಾನೇ ಮನಸಿದ್ದೀತು. ಟಾರ್ಟರ ಪ್ರಭುಗಳು ಕಾಮ ಲೋಭ ಮದಗಳಿಂದ ಅತ್ಯಾಚಾರ ಹಿಂಸೆಗಳನ್ನು ಮಾಡಿದ್ದರೂ ಮನುಜನ ಗಳಿಗೆಯ ಬಾಳಿನಲ್ಲೇ ಅದರ ಫಲವನ್ನು ಅವರು ಭೋಗಿಸುತ್ತಿದ್ದರು. ಹಿಂಸೆ ಪೀಡೆಗಳಿಂದ ಹಣವನ್ನು ಸುಲಿದಿದ್ದರೂ ಅದು ಸುಲಿಗೆಗಾರನ ಸೊತ್ತಾಗಿದ್ದು ಇಂದಲ್ಲ ನಾಳೆ ಮನೆತನದವರ ದುಂದುಗಾರಿಕೆಯಿಂದಲೋ ಅವರಿಗಿಂತಲೂ ಬಲವಾದ ತೋಳೊಂದು ಅವರಿಂದ ಅದನ್ನು ಕಿತ್ತು ಜನರಿಗೆ ಕೊಟ್ಟುದರಿಂದಲೋ ಅಂತೂ ಜನರಿಗೆ ಹಿಂದಿರುಗಿ ಬರುತ್ತಿತ್ತು. ರಾಜ್ಯದಲ್ಲಿ ಅವ್ಯವಸ್ಥೆ. ರಾಜನಿಗಿದುರೇ ಇಲ್ಲ. ಹೀಗಿದ್ದರೂ ಸಿರಿಯ ಜಲವೇನು ಬತ್ತಿರಲಿಲ್ಲ. ದೇಶದ ಉದ್ಯೋಗ ವ್ಯಾಪಾರ ಗಳು ಬೆಳೆಯುತ್ತಲೇ ಇದ್ದವು. ಲೋಭ ಲಂಚಗಳಿಲ್ಲದೆ ಇರಲಿಲ್ಲ. ಇದ್ದರೂ ಜಾತೀಯ ಸಂಪತ್ಸಾಧನ ಶೇಖರಗಳೇ ಸಾಧಿಸುತ್ತಿದ್ದ ವು ಅದರಿಂದ. ರೈತನೂ ಕಸಬುದಾರನೂ ದಬಾರಿ ಬಡ್ಡಿಯನ್ನೇ ತರುತ್ತಿದ್ದರು. ಆದರೆ ಅದೆಲ್ಲ ಮತ್ತೆ ಇವರಿಗೇ ಸಾಲವಾಗಿ ಸಿಗುತ್ತಿತ್ತು.

“ಆದರೆ ಇಂಗ್ಲಿಷರ ಆಡಳಿತದಲ್ಲಿ ಇದೆಲ್ಲ ತಲೆ ಕೆಳಗಾಯಿತು. ಆದ ಟಾರ್ಟರರು ದಾಳಿಯಿಟ್ಟು ತುಂಟತನ ಮಾಡಿದರು. ಆದರು ನಮ್ಮ ಪರಿಪಾಲನೆಯು ದೇಶವನ್ನೇ ಹಾಳು ಮಾಡಿವೆ. ಅವರದು ಹಗೆತನ–ನಮ್ಮದೀಗ ಗೆಳೆತನ ! ಹಿಂದುಸ್ತಾನವನ್ನು ಪಡೆದು ೨೦ ವರ್ಷವಾದರೂ ನಮ್ಮ ಸ್ಥಿತಿ ಅಷ್ಟರಲ್ಲೇ ಇದೆ. ಹಿಂದಿ ಜನರಿಗೆ ಇಂಗ್ಲಿಷರ ಗುರುತೇ ಇಲ್ಲ. ಅಲ್ಲಿ ಆಡಳಿತ ನಡೆಸುವ ನಮ್ಮವರೆಲ್ಲ ಕೇವಲ ಹುಡುಗರು, ಹಿಂದು ಮುಂದರಿಯದವರು. ಹಿಂದುಸ್ತಾನದಲ್ಲಿ ಜನರೊಡನೆ ಇವರಿಗೆ ಬಳಕೆಯೇ ಇಲ್ಲ. ಹಿಂದುಸ್ತಾನದಲ್ಲಿ ದ್ದರೂ ಇಂಗ್ಲಂಡದಲ್ಲಿದ್ದಂತೆಯೇ ದುಡ್ಡುಗಳಿಸುವುದಕ್ಕೆ ಎಷ್ಟು ಬೇಕೋ ಅಷ್ಟು ಬಳಕೆ, ಅಷ್ಟು ಮಾತು ಕತೆ. ಅವರ ಹೊಂದು ಇಲ್ಲವೇ ಇಲ್ಲ. ಪ್ರಾಯದ ಮದ, ಅಕಾಲದ ಮಿತಿಮೀರಿದ ಧನ ಲೋಭಗಳಿಂದ ತುಂಬಿ ಒಬ್ಬನಾದ ಮೇಲೊಬ್ಬನು ತರಂಗಗ ಳಂತೆ ಹಿಂದುಸ್ತಾನದಲ್ಲಿ ಹೊರಳಾಡಿದರು. ಆಹಾರಕ್ಕಾಗಿ ಹಾರಿ ಬರುವ ಕೊನೆ ಮೊದಲಿಲ್ಲದ ಹದ್ದುಗಳಂತೆ ಕಾಣುವರು

ರಿವರು ಹಿಂದೀ ಜನರಿಗೆ. ಇಂಗ್ಲಿಷರ ಕಿಸೆಗೆ ಬಿದ್ದ ಲಾಭದ ಒಂದೇ ರೂಪಾಯಿಯಾದರೂ ಮತ್ತೆ ಹಿಂದುಸ್ಥಾನದ ಮೋರೆ ನೋಡಲಿಕ್ಕಿಲ್ಲ. ಎಂದಿಗೂ ಇಲ್ಲ."

ಎಡ್ಮಂಡ್ ಬರ್ಕ್, ವೆರ್ಲ್‌ಸ್ಟರ ಕಾಲಕ್ಕೂ ಈಗಿನ ಕಾಲಕ್ಕೂ ಆಡಳಿತ ಬಹಳ ಬದಲಾಗಿದೆ. ೫೦ ವರ್ಷಕ್ಕೆ ಮೇಲ್ಪಟ್ಟು ಶಾಂತಿಸುಖವನ್ನನುಭವಿಸಿದೆ. ಈಗ ಹಿಂದುಸ್ಥಾನದ ವಾಣಿಜ್ಯದಲ್ಲಿ ಮೊದಲಿನ ಅಸಹ್ಯವಾದ ತೆರಿಗೆಗಳು ಇಲ್ಲ. ನ್ಯಾಯ ಪರಿಪಾಲನೆ ಸೊತ್ತು ಪ್ರಾಣಗಳ ರಕ್ಷಣೆಯು ಈಗ ಪೂರ್ಣವಾಗಿದೆ. ಜನಗಳಲ್ಲಿ ವಿದ್ಯಾಪ್ರಾಚುರ್ಯವೂ ಹೆಚ್ಚಿದೆ. ಆದರೂ ಬರ್ಕ್ ವೆರ್ಲ್‌ಸ್ಟರು ಯಾವ ಹೊನ್ನಿನ ಹೊಳೆಯನ್ನು ಕುರಿತು ನೊರಿಯಿಟ್ಟರೋ ಆ ಹೊಳೆ ಇಮ್ಮಡಿಯಾಗಿ ಈಗಲೂ ಕೊಚ್ಚಿಕೊಂಡು ಹೋಗುತ್ತ, ಹಿಂದುಸ್ಥಾನದಲ್ಲಿ ಬಡತನ ಬರಗಳನ್ನು ಹರಡುತ್ತಿದೆ.

ಮಳೆಬಾರದಿದ್ದರೆ, ಇಲ್ಲ ಕಡಮೆಯಾದರೂ ಹಿಂದುಸ್ಥಾನಕ್ಕೆ ಕ್ಷಾಮ ಸಿದ್ಧ. ಆದರೆ ಕ್ಷಾಮಗಳಲ್ಲಿ ಆಗುವ ಪ್ರಾಣನಷ್ಟಕ್ಕೆ ಅಪರಿಮಿತ ಬಾಧೆಗೆ ಜನರ ಸದಾದಾರಿದ್ರ್ಯವೇ ಕಾರಣ. ಜನರು ನೆಮ್ಮದಿಯಾಗಿದ್ದರೆ, ಒಂದು ಸಲ ಬೆಳೆಯಾಗದಿದ್ದರೂ ಬೇರೆ ಕಡೆಯಿಂದ ಕೊಂಡು ತಂದು ಬದುಕಬಲ್ಲರು. ಪ್ರಾಣನಷ್ಟವೇನಾಗುತ್ತಿರಲಿಲ್ಲ. ಆದರೆ ಜನರಲ್ಲಿ ಗತಿಯಿರದಿದ್ದರೆ ಬೇರೆ ಕಡೆಯಿಂದ ತಂದುಕೊಳ್ಳಲಾರದೆ ಲಕ್ಷಗಟ್ಟಲೆ ಜನ ಬರ ಬಂದರೆ ಕೂಳಿಲ್ಲದೆ ಸಾಯುವರು.

೧೭೬೯ರಲ್ಲಿ ದಿನಸಿನ ಧಾರಣೆ ಹೆಚ್ಚಿ ಬರ ಬರುವ ಸೂಚನೆ ತೋರಿದವು. ಕಂದಾಯವನ್ನು ಎಂದಿಗಿಂತ ಬಿರುಸಾಗಿ ವಸೂಲು ಮಾಡಿದರು. "ಕಂದಾಯವನ್ನು ಇಷ್ಟುಮಟ್ಟಿಗೆ ಎಂದೂ ವಸೂಲು ಮಾಡಿರಲಿಲ್ಲ." ಆ ವರ್ಷ ಮಳೆ ಬರಲಿಲ್ಲ. ಕಲ್ಕತ್ತೆಯ ಮಂಡಲಿಯು ಡೈರೆಕ್ಟರರ ಕಚೇರಿಗೆ ನವಂಬರ್ ೨೩ಕ್ಕೆ ಒಂದು ಪತ್ರ ಬರೆದರು. "ಬರ ಬಂದಿದೆ, ಕಂದಾಯ ವಸೂಲಾಗಲಿಕ್ಕಿಲ್ಲ." ಆದರೆ ಕ್ಷಾಮ ನಿವಾರಣೆಯ ಮಾತೇ ಎತ್ತಲಿಲ್ಲ. ೧೭೭೦ ಮೇ ೯ ರಲ್ಲಿ ಹೀಗೆ ಬರೆದರು "ಕ್ಷಾಮದ ಹೊಡೆತ, ಪ್ರಾಣನಷ್ಟ, ಹೊಟ್ಟೆಗಿಲ್ಲದೆ ಬೀದಿ ಬೀದಿ ಅಲೆಯುವ ಭಿಕ್ಷುಕರು– ಇದೆಲ್ಲ ವರ್ಣಿಸಲು ಸಾಧ್ಯವೇ ಇಲ್ಲ. ಸಮೃದ್ಧವಾದ ಪ್ರಾಂತಗಳಲ್ಲೇ ೧/೩ ಭಾಗ ಜನರು ನಷ್ಟವಾಗಿದ್ದಾರೆ." ತಾರೀಖು ೧೧–೯–೧೭೭೦ರಲ್ಲಿ– "ಪ್ರಜೆಗಳ ಸಂಕಟವನ್ನು ಉತ್ಪ್ರೇಕ್ಷೆ ಮಾಡುವುದೇ ಸಾಧ್ಯವಿಲ್ಲ. ಎಂಥ ಉತ್ಪ್ರೇಕ್ಷೆಯೂ ವಾಸ್ತವ ಸ್ಥಿತಿಯನ್ನು ಮೀರಿಸಲಾರದು. ವಸೂಲಿಗೆ ಇದರಿಂದ ಬಹಳ ತೊಂದರೆಯಾಗಬಹುದೆಂದು ನಾವು ಎಣಿಸಿದ್ದೆವು. ಆದರೆ ನಮ್ಮ [illegible] ಅಂದಾಜಿಗಿಂತ ಚೆನ್ನಾಗಿಯೇ ನಡೆದಿದೆ ಕೆಲಸ." ೧೨-೨-೧೭೭೧ ರಲ್ಲಿ "ಕಂದಾಯದ ವಸೂಲಿ ಸಮರ್ಪಕವಾಗಿ ನಡೆಯುತ್ತಿದೆ. ಏನೂ ಲೋಪವಿಲ್ಲ."

ಜಗತ್ತಿನಲ್ಲಿ ಎಂದೂ ಇಂಥ ಬರ ಬಂದಿರಲಿಲ್ಲ. ಅಂಥ ಬರಗಾಲದಲ್ಲೂ ಹೀಗೆ ಹಟ ಹಿಡಿದಂತೆ ಬಿರುಸುತನದಿಂದ ಕಂದಾಯ ವಸೂಲು ಮಾಡಿದುದನ್ನು ಓದಿದರೆ ಮನಸಿಗೆ ನೋವಾಗುತ್ತದೆ. ಕಲ್ಕತ್ತೆಯ ಮಂಡಲಿಯೇ ದೇಶದಲ್ಲಿ ಓಡಾಡಿ, ಈ ಬರದಿಂದ ಬಂಗಾಳದಲ್ಲಿ ೧/೩ ಭಾಗ ಜನರು ಅಂದರೆ ೧ ಕೋಟಿ ಜನರು ಸತ್ತಂತೆ ನಿಶ್ಚಯಿಸಿತು. ಹಳ್ಳಿ ಹಳ್ಳಿಯಲ್ಲೂ ಪೇಟೆ ಪೇಟೆಯಲ್ಲೂ ಬೀದಿ ಬೀದಿಯಲ್ಲೇ ಹಾದಿಯಲ್ಲೇ ಜನಸತ್ತು ಬಿದ್ದಿದ್ದರು. ಇದಕ್ಕೇನಾದರೂ ನಿವಾರಣೋಪಾಯ ಮಾಡುವುದು ಹಾಗಿರಲಿ, ಕಂಪೆನಿಯವರು ತಮ್ಮ ಧಾಂದಲೆಯಿಂದ ಮತ್ತಷ್ಟು ಜನರನ್ನೂ ಸಾವಿಗೆ ನೂಕಿದರು. ಲಾಭಮಾಡಲಿಕ್ಕೆ ಇದೇ ಸಮಯವೆಂದು ಕಂಪೆನಿಯ ಗುಮಾಸ್ತರು ಧಾನ್ಯವನ್ನು ತಾವಲ್ಲದೆ ಮತ್ತಾರೂ ಮಾರದ ಹಾಗೆ ಮಾಡಿದರು. ಮುಂದಿನ ವರ್ಷದ ಬಿತ್ತನೆಗೆಂದಿರಿಸಿದ ಬೀಜವನ್ನೂ ಬಲವಂತ ಮಾಡಿಕೊಂಡರು ರೈತರಿಗೆ ಬಾಧೆಯಿಟ್ಟು. ಡೈರೆಕ್ಟರರಿಗೆ ಸಿಟ್ಟು ಬಂತು. ನಾವು ತೋರಿಸಿರುವ ಕೃಪೆಯನ್ನು ಮಣ್ಣುಮಾಡುವ ಇಂಥ ತುಂಟರನ್ನೆಲ್ಲ ಚೆನ್ನಾಗಿ ಬಲಿಹಾಕಬೇಕೆಂದು, ಜನರ ಸಂಕಟದಲ್ಲಿ ಲಾಭ ಮಾಡುವುದು ಅಯೋಗ್ಯವೆಂದು ಬರೆದರು.

ಕಂಪೆನಿಯ ಕೃಪೆಯು ಕಂದಾಯದಲ್ಲಿ ಬರಲೇ ಇಲ್ಲ. ತಮಗೆ ನಷ್ಟವಾಗುವ ಕೆಲಸಕ್ಕೆ ಯಾರಿಗೆ ತಾನೇ ಮನಸು ಬಂದೀತು? ಕಂದಾಯ ಒಂದು ಕಾಸೂ ಕಡಿಮೆ ಮಾಡಲಿಲ್ಲ. ೧/೩ ಭಾಗ ಜನರು ಸತ್ತು ಹೋದರು. ೧/೩ ಭಾಗ ಹೊಲಗಳು ಬೀಳು ಬಿದ್ದವು. ಆದರೂ ಕಂದಾಯ 'ಸಮರ್ಪಕ'ವಾಗಿ 'ಲೋಪವಿಲ್ಲ'ದೆ ವಸೂಲಾಯಿತು. ೩–೧೧–೧೭೭೨ರಲ್ಲಿ ವಾರನ್ ಹೇಸ್ಟಿಂಗ್ಸನು ಡೈರೆಕ್ಟರರಿಗೆ ಬರೆದ.

"೧/೩ ಭಾಗ ಜನರು ಸತ್ತು, ಭೂಮಿ ಅಷ್ಟುಭಾಗ ಬೀಳು ಬಿದ್ದರೂ, ೧೭೬೮ಕ್ಕಿಂತ ೧೭೭೧ರ ಕಂದಾಯವು ಹೆಚ್ಚಾಗೇ ವಸೂಲಾಗಿದೆ. ಇಂಥ ಭಯಂಕರ ವಿಪತ್ತಿನಿಂದ ಇತರ ನಷ್ಟಗಳಂತೆ ಕಂದಾಯವೂ ಕಡಿಮೆ ಬೀಳಬೇಕಿತ್ತು. ಬಲವಂತವಾಗಿ ಯಥಾಪ್ರಕಾರದಂತೆ ವಸೂಲ್ಮಾಡದಿದ್ದರೆ ಇಷ್ಟು ಕಂದಾಯದ ವಸೂಲಿ ಸಾಧ್ಯವಿರಲಿಲ್ಲ."

ಹೀಗೆ ಕಂದಾಯವು ಕಡಿಮೆಯಾಗದಂತೆ ಬಲವಂತವಾಗಿ ವಸೂಲು ಮಾಡುವುದು ಈಗಿನ ಹಿಂದುಸ್ಥಾನದ ಆಳರಸರ ನಿಘಂಟಿನಲ್ಲಿ ಹಿಂದುಸ್ಥಾನದ ಸ್ಥಿತಸ್ಥಾಪಕ ಶಕ್ತಿಯೆಂದು ಹೇಳು

## ಕಳ್ಳ ಕುರುಬ

ಜನಗಳೆಲ್ಲ ದಣಿದು ಸೋತು
ಮನೆಗಳನ್ನು ಸೇರಿ ಮಲಗಿ
ಸಿದ್ದೆಗೆಯ್ಯುತಿರಲು ಕಳ್ಳ ಕುರುಬನೊಬ್ಬನು
ಎದ್ದು ಹೊನ್ನ ಕುರಿಗಳನ್ನು ಮೇಸುತಿರುವನು !

ಒಮ್ಮೆ ಮುಂದೆ ಬಂದು ನಿಂತು
ಒಮ್ಮೆ ಮರೆಯಲಿದ್ದು ಇಂತು
ಹಾಳು ಹೊಲವಡೆಂತು ನಯದಿ ಸಾಗುತಿರುವನು
ಬೆಳೆಯ ಮೊಳಕೆಗಳನು ಬಿಡದೆ ತುಳಿಸುತಿರುವನು !

ಕೊಳಲನೂದನೆಂದು ಕಳ್ಳ
ತಿಳಿಯ ನೀರ ಕುಡಿಸಲೊಲ್ಲ
ಜನಗಳುಲಿವ ಮುಂಚೆ ಮುಗಿಲಿನಾಚೆ ಪೋಪನು
ತನಯರಳುವ ಕೇಳಿ ನಾಚಿ ಬೆಳ್ಳಗಪ್ಪನು !

ಹೊನ್ನಗಂಬಳಿಯನು ಹೊದೆಸು
ಕುನ್ನಿನಾಯಿಗಳನು ಉಳಿಸು
ಕುರಿಯ ಹಿಂಡಿನೊಳಗೆ ನಿಂತು ನಲಿಯುತಿರುವನು
ಮರಿಗಳೆಳೆದು ಕುರುಬ ಚಂದ್ರ ಕೆಲೆಯುತಿರುವನು !

## ಉಡಾಳ

ಆಡದ ಅಂಗಳವಿಲ್ಲವು ಈತನು ಓಡದ ಬಯಲಿಲ್ಲ
ಹಾಡದೆ ಮೌನದೆ ನಿಂತಿಹುದನು ನಾನೆಂಡೂ ಕೇಳಿಲ್ಲ !
ಹಗಲಿರುಳೆನ್ನದೆ ಮಳೆಬಿಸಿಲೆನ್ನದೆ ಪಿರಿಪಿರಿ ತಿರುಗುವನು
ಮುಗಿಲತನಕ ಜಿಗಿಯಲ್ಕೆ ಭರ್ರನೆ ಹೊದಿಕೆಯ ಕಸಿಯುವನು !
.ತೊಯ್ಯುವೆನೆನ್ನದೆ ಮಳೆಯಲಿ ಬಲು ಚೆಲ್ಲಾಟವನಾಡುವನು
ಒಯ್ಯನೆ ಬಿಸಿಲಿಗೆ ಬೆದರದೆ ಬಯಲಲಿ ಸಂಚರಿಸುತ್ತಿಹನು
ನಲ್ಲೆಯ ಕಯ್ಯಿಂ ಕತ್ತುರಿನಾತವ ಕಸಕೊಂಡೋಡುವನು
ಮಲ್ಲಿಗೆ ಸಂಪಗೆಯರ ಬಳಸುತ ಬಲು ಬಿನದವನಾಡುವನು !
ಶಿಲೆಗಳನೆಡವುತ ಮುಳ್ಗಳ ತುಳಿಯುತ ನೀರಲಿ ನುಸುಳುವನು
ಅಲೆಯ ಮೇಲೆ ಕುಳ್ಳಿರುತ ಕುಸುರೆಯೊಲ್ ಭರದಿಂವೋಡಿಪನು
ಮಡಿಯಿಂ ನಡೆದಿಹ ಮಡದಿಯ ಕಂಡರೆ ಹುಡಿಯ ಹಾರಿಸುವನು
ಸಡಗರದಿಂದಲಿ ನಡೆವರ ಕಣ್ಣಲಿ ಧೂಳಿಯನೆರಚುವನು !
ಮರದುಡಿವರೆಗುಂ ನೆಗೆವನು ಕಿರಿರೆಂಬೆಗಳನು ಮುರಿಯಲ್ಕೆ
ಮಿರುಗುವ ದೀಪವ ಕಂಡರೆ ಧುಮುಕುವ, ಪಟ್ಟನಾರಿಸಲ್ಕೆ
ಮನೆಮರಗಳು ಸಲೆ ಉರಿಯುತ್ತಿರಲದ ಹೆಚ್ಚಿಸಲೋಡುವನು
ಇನಿನುಡಿಯಾಡುವ ತಾಣಕೆ ಪೋಗುತ ದಾಳಿಯೆಬ್ಬಿಸುವನು !
ಯಾವ ಕೂಸು ಇದು, ಯಾವಳು ಹಡೆದಿಹಳಿದನು ಪುಣ್ಯವಂತಿ ?
ಕಾವರಿಲ್ಲವಿದು ಕರೆಯುವ ಹೆಸರಿದು ವಾಯುದೇವ ಅಂತೆ !

— ಲಿಂಗಪ್ಪ

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸತ್ಯಾಗ್ರಹ

ಕನ್ನಡ ಕುವರನು ಬರೆದುದು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸತ್ಯಾಗ್ರಹವು ಆಕಸ್ಮಿತ ವಾಗಿ ಆರಂಭವಾಯಿತು. ಮಹಾತ್ಮಾಜಿಯವರು ದಂಡಿಯ ಯಾತ್ರೆಗೆ ಹೊರಟಾಗ ಇಲ್ಲಿ ಉಪ್ಪಿನ ಕಾಯಿದೆಭಂಗದ ಯಾವ ಸುಳಿವೂ ಇಲ್ಲದಿತ್ತು. ಅದಕ್ಕಾಗಿಯೇ ಬಹುಶಃ ಇಲ್ಲಿಯ ಮುಖಂಡರಾದ **ಕಾರ್ನಾಡ ಸದಾಶಿವರಾಯರು** ಅಂಕೋಲೆಗೆ ಹೊರಟು ಹೋಗಿ, ಅಲ್ಲಿ ಸತ್ಯಾಗ್ರಹವನ್ನು ಮಾಡಲು ದ್ಯುಕ್ತರಾದರು. ಆದರೆ ರಾಷ್ಟ್ರೀಯ ವಾರದಲ್ಲಿ (ಎಪ್ರಿಲ ೬ ರಿಂದ ೧೩ ರ ವರೆಗೆ) ಇಲ್ಲಿ ಒಂದು ತರದ ವಿದ್ಯುಲ್ಲತೆಯ ಪ್ರಭಾವದಂತೆ ಚಳವಳಿಯು ಹುಟ್ಟಿಬಿಟ್ಟಿತು. ಬೇರೆ ಕಡೆಯಲ್ಲಿಯ ಜನರ ಉತ್ಸಾಹದ ಗಾಳಿಯು ಇಲ್ಲಿಯೂ ಕೂಡ ಬೀಸಿಬಿಟ್ಟಿತು.

೧೯೩೧ ರಲ್ಲಿ ಚಳವಳಿಗೆ ಸೇರಿದ **ಉಮೇಶರಾಯರು** ಕಾಸರಗೋಡಿನಲ್ಲಿ ವಕೀಲರಾಗಿದ್ದರು. ಅವರು ತಮ್ಮ ಕರ್ತವ್ಯವನ್ನು ಈಗ ಮಾಡುವ ಸಮಯವು ಬಂದಿತೆಂದು ತಿಳಿದು ಈ ಚಳವಳಿಗೂ ಸೇರಿದರು. ಮಂಗಳೂರಿನ ಮೈದಾನಿನಲ್ಲಿ ಉಪ್ಪಿನ ಕಾಯಿದೆಭಂಗಕೆಂದು ಜನರ ಮಹಾಸಭೆಗಳು ಸೇರುತ್ತ ಬಂದವು. ಎಪ್ರಿಲ ತಾರೀಖು ೧೭ ನೇ ಆದಿತ್ಯವಾರ ದಿನ ಕರ್ನಾಟಕದಲ್ಲಿಯ ಎಲ್ಲ ಭಾಗಗಳಲ್ಲಿ ಉಪ್ಪಿನ ಕಾಯಿದೆಭಂಗವಾದಂತೆಯೇ ಇಲ್ಲಿಯೂ ಸಾಯಂಕಾಲ 'ಗಾಂಧಿ' ಮೈದಾನಿನಲ್ಲಿ ಉಪ್ಪು ಮಾರಾಟವಾಯಿತು. ಈ ಸಭೆಗೆ ಮಾಜಿ ಮುಂಬಯಿ ಕ್ರಾನಿಕಲಪತ್ರದ ಉಪಸಂಪಾದಕರಾಗಿದ್ದ **ಆರ್. ಕೆ. ಪ್ರಭು** ಅವರು ಅಧ್ಯಕ್ಷರಾಗಿದ್ದರು. ಇದಕ್ಕಾಗಿ ಸೋಮವಾರ (ತಾ॥ ೧೪) ಶ್ರೀ. ಆರ್. ಕೆ. ಪ್ರಭುಗಳವರನ್ನೂ ಕೆಲ ಸತ್ಯಾಗ್ರಹಿಗಳನ್ನೂ ಶ್ರೀ. ಉಮೇಶರಾಯರನ್ನೂ ಸರಕಾರದವರು ಕೈದು ಮಾಡಿದರು. ಇದಕ್ಕಾಗಿ ಮರುದಿನ ಊರಲ್ಲಿ ಹರತಾಳವು ಇದ್ದಿತು. ಕೂಡಲೆ ಇಡೀ ಜಿಲ್ಲೆಯಲ್ಲಿ ಈ ಉಪ್ಪಿನ ಚಳವಳಿಯು ಹಬ್ಬಿತು. ಗುರುವಾರ ದಿನ ತಾ॥ ೧೭ ಕ್ಕೆ ಶ್ರೀಯುತ ಕಾರ್ನಾಡ ಸದಾಶಿವರಾಯರು ಇಲ್ಲಿಗೆ

**ಮಂಗಳೂರಿನ ಸತ್ಯಾಗ್ರಹದ ಪ್ರಥಮ ಬಲಿದಾನ**



**ಶ್ರೀ. ಆರ್. ಕೆ. ಪ್ರಭು ಮತ್ತು ಶ್ರೀ. ಉಮೇಶರಾವ, ಬಿ. ಎ., ಎಲ್. ಎಲ್. ಬಿ.**

ಬಂದು ಈ ಚಳವಳಿಯ ನಾಯಕತ್ವವನ್ನು ವಹಿಸಿಕೊಂಡರು. ಮುಂದೆ ಪ್ರತಿ ದಿನ ಉಪ್ಪಿನ ಕರದ ಶಾಸನವನ್ನು ಮೈದಾನಿನಲ್ಲಿ ಮುರಿಯಲಾಯಿತು. ಕೆಲವು ದಿನ ಉಪ್ಪು ಮಾಡುವಾಗ ಮೈದಾನಿನಲ್ಲಿ ಪೋಲೀಸರು ಅದನ್ನು ಸೆಳಕೊಂಡರು. ಆದರೂ ಜನರ ಉತ್ಸಾಹವು ಕಮ್ಮಿಯಾಗಲಿಲ್ಲ. ಇದೇ ಸಮಯದಲ್ಲಿ ಹಿಂದಿನ ಚಳವಳದಲ್ಲಿ ಸೆರೆಮನೆಯನ್ನು ಸೇರಿ ಬಂದ ಮತ್ತು 'ಸತ್ಯಾಗ್ರಹಿ' ಪತ್ರಿಕೆಯ ಸಂಪಾದಕರಾಗಿದ್ದ ಶ್ರೀಯುತ **ರಾಮರಾಯ ಮಲ್ಯರು** ಜಿಲ್ಲಾ ಪ್ರಚಾರಕ ಕಮಿಟಿಯ ಕಾರ್ಯದರ್ಶಿ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಈ ಯುದ್ಧಕ್ಕೂ ಭಾಷಣ ಮಾಡುತ್ತಾ ಮಂಗಳೂರಿಗೆ ಬಂದು ಸೇರಿತು.

ಸರಕಾರವು ಚಳವಳವನ್ನು ಅಡಗಿಸಲಿಕ್ಕೆ ಪ್ರಮುಖ ಮುಖಂಡರಾದ ದೇಶಭಕ್ತ ಕಾರ್ನಾಡ ಸದಾಶಿವರಾಯರನ್ನೂ ಶ್ರೀಯುತ ಪಣಿಯಾಡಿಗಳವರನ್ನೂ ತಾ|| ೨೨ ನೇ ಮಂಗಳವಾರ ದಸ್ತಗಿರಿ ಮಾಡಿ ೧೫ ತಿಂಗಳ ಸಾದಾ ಸಜೆಗೆ ಗುರಿಪಡಿಸಿದರು. ಮುಖಂಡರ ವಿಚಾರಣೆಯ ಸಮಯ ಕೋರ್ಟಿನ ಮುಂದೆ ಜನಸ್ತೋಮವು ಕಿಕ್ಕಿರಿದಿತ್ತು. ಕೋರ್ಟಿನಿಂದ ಪ್ರಚಂಡ ಮೆರವಣಿಗೆಯು ಅವರನ್ನು ಜೈಲಿನ ಗೇಟಿನ ವರೆಗೆ ಹಿಂಬಾಲಿಸಿ ಜಯಘೋಷದಿಂದ ಅವರನ್ನು ಬೀಳ್ಕೊಂಡಿತು.



**ಶ್ರೀ. ರಾಮರಾಯ ಮಲ್ಯ ಮತ್ತು ಶ್ರೀ. ಮಂಜುನಾಥ ನಾಯ್ಕ ಇವರ ದಸ್ತಗಿರಿ**

ಚಳವಳದಲ್ಲಿ ಉತ್ಸಾಹದಿಂದ ಕೆಲಸ ಮಾಡಲು ಇಳಿದರು. ಅವರಂತೆ ಜಿಲ್ಲೆಯ ಪ್ರಮುಖ ಜಮೀನುದಾರರಲ್ಲಿ ಒಬ್ಬರಾದ **ಕಸ್ಪಾಡಿ ಮಂಜುನಾಥ ನಾಯ್ಕರೂ** ಸೇರಿದರು. ತಾ|| ೨೦ ನೇ ರವಿವಾರ ಇವರಿಬ್ಬರಿಗೂ ೬ ತಿಂಗಳ ಸೆರೆಮನೆಯ ಆಮಂತ್ರಣವು ಕೈಸೇರಿತು. ಇದರಿಂದ ಜಿಲ್ಲೆಯ ತರುಣರಲ್ಲಿ ನವ ಉತ್ಸಾಹವು ಹುಟ್ಟಿ ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ಸತ್ಯಾಗ್ರಹದ ಶಿಬಿರಗಳು ಏರ್ಪಾಡಾಗಿ ಕೆಲಸವು ಮುಂದೆ ಸಾಗಿತು. ಅಷ್ಟರಲ್ಲಿ ಉಡಿಪಿಯಿಂದ ಶ್ರೀಯುತ **ಪಣಿಯಾಡಿಯವರ** ಶ್ರೀಕೃಷ್ಣದಳವು ಕಾಲನಡಿಯಾಗಿಯೇ ದಾರಿ

ಇದಕ್ಕೆ ಪ್ರತಿಕಾರವಾಗಿ ಜಿಲ್ಲೆಯ ಹಳ್ಳಿಗಳಲ್ಲಿಯೂ ಹರತಾಳವನ್ನು ಆಚರಿಸಲಾಯಿತು. ಆ ವಾರದಲ್ಲಿ ಜಿಲ್ಲೆಯ ಸಂತೆಗಳೆಲ್ಲಾ ನಿಲ್ಲಿಸಲ್ಪಟ್ಟಿದ್ದವು. ಮೇ ತಿಂಗಳ ಮೊದಲನೆಯ ದಿನ ಸುಮಾರಕ್ಕೆ ಚಳವಳವು ಕಳೆ ಏರಿ ಸಾಮುದಾಯಿಕ ಉಪ್ಪಿನ ಕಾಯಿದೆಭಂಗವನ್ನು ಆಚರಿಸಲಾಯಿತು. ಮಂಗಳೂರು, ಉಡಿಪಿ, ಕಾಸರಗೋಡು, ಕಾಪು, ಮುಲ್ಕಿ ಮುಂತಾದ ಜಿಲ್ಲೆಯ ಅನೇಕ ಕರಾವಳಿ ಊರುಗಳಲ್ಲಿ ಕಾಯಿದೆಯನ್ನು ವಿರೋಧಿಸಿ ಉಪ್ಪನ್ನು ಸಿದ್ಧ ಮಾಡಿದರು. ಮೊದಲು ಮೊದಲು ಮಂಗಳೂರಿನಲ್ಲಿ ಉಪ್ಪು ತಯಾರು ಮಾಡುವಾಗ



ಶ್ರೀ. ಕಾರ್ನಾಡು ಸದಾಶಿವರಾಯರು

ಭಾಷಣ ಮಾಡುವುದು

ಅವರ ಬಲಕ್ಕೆ

ಶ್ರೀ. ಎಂ. ಮಾಧವರಾಯರು, ಬಿ. ಎ. ಬಿ. ಎಲ್.

ಎಡಕ್ಕೆ

ಶ್ರೀ. ರಂಗ ಬಾಳಿಗರು



ಶ್ರೀ. ಕಾರ್ನಾಡು

ಸದಾಶಿವರಾಯರು

ಮತ್ತು

ಶ್ರೀ. ಕೊಡಗಿಯವರು

ಪೋಲೀಸರು ಅವರ ಗಡಿಗೆಗಳನ್ನು ಒಡೆದರು. ಆದರೆ ಉಪ್ಪು ಮಾಡುವುದು ಮಾತ್ರ ನಿಲ್ಲಲಿಲ್ಲ. ಇಷ್ಟರಲ್ಲಿ ಜಿಲ್ಲೆಯಲ್ಲಿ ೨೧ ಮಂದಿಯನ್ನು ಸೆರೆಮನೆಗೆ ಅಟ್ಟಿದಂತಾಯಿತು. ಕೈದು ಆದವರೇನೊ ನೂರಾರು ಮಂದಿ ಇದ್ದರು. ಆದರೆ ಪೋಲೀಸರು ಸಾಯಂಕಾಲ ಉಪ್ಪು ಮಾರುವಾಗ ಸತ್ಯಾಗ್ರಹಿಗಳನ್ನು ಹಿಡಿದು ಅದೇ ದಿನ ರಾತ್ರಿ ಅವರನ್ನು ಬಿಟ್ಟು ಬಿಡುತ್ತಿದ್ದರು. ಇದರಿಂದ ಏನೂ ಉಪಯೋಗವಾಗದೆ ಪುನಃ ಸರಕಾರದವರು ಮುಖಂಡರನ್ನು ಹಿಡಿಯಲಿಕ್ಕೆ ಆರಂಭ ಮಾಡಿದರು. ಮೇ ೨ ನೇ ತಾರೀಕು ಶುಕ್ರವಾರ ಮಂಗಳೂರಿನಲ್ಲಿ

ಇಷ್ಟಾಗುವಾಗ ಮಹಾತ್ಮಾಜಿಯವರಿಗೆ ಕೈದುಮಾಡಿದ ವರ್ತಮಾನವು ಈ ಜಿಲ್ಲೆಗೆ ಬಂದಿತು. ಇದನ್ನು ನಿಷೇಧಿಸಲಿಕ್ಕೆ ಉಡಿಪಿ ಮಂಗಳೂರಿನಲ್ಲಿ ತಾರೀಖು ೧೦ ಮತ್ತು ೧೧ ನೆ ದಿವಸಗಳಲ್ಲಿ ಪ್ರಚಂಡ ಹರತಾಳವಿತ್ತು, ಮತ್ತು ತಾ. ೧೧ಕ್ಕೆ ಜಿಲ್ಲೆಯ ಎಲ್ಲ ಕಡೆಗಳಲ್ಲಿಯೂ ಹರತಾಳವಾಗಿ ಅದೇ ದಿನ ಸಾಯಂಕಾಲ ಎರಡನೇ ಸಲ ಸಾಮುದಾಯಿಕ ಉಪ್ಪಿನ ತಯಾರಿಯೂ ಆಯಿತು. ಆದರೆ ಇದಕ್ಕೆ ಸರಕಾರದವರು ಸುಮ್ಮನೆ ಇದ್ದುಬಿಟ್ಟರು.

ಸರಕಾರವು ತಟಸ್ಥವಾಗಿದ್ದುದರಿಂದ ಚಳವಳದ ಉತ್ಸಾ



**ಮಂಗಳೂರಿನಲ್ಲಿ ಮೊದಲನೆಯ ಉಪ್ಪಿನ ಶಾಸನಭಂಗ**

ಮುಖಂಡರಾದ ಶ್ರೀಯುತ ರಂಗಬಾಳಿಗರನ್ನೂ ಕುಂದಾಪುರದಲ್ಲಿ ಶ್ರೀಯುತ ಕೊಡಗಿಯವರನ್ನೂ ಹಿಡಿದು ಜೈಲಿಗೆ ಅಟ್ಟಿದರು. ಶ್ರೀಯುತ ಕೊಡಗಿಯವರು ಕುಂದಾಪೂರ ತಾಲೂಕಿನ ಒಬ್ಬ ಪ್ರಮುಖ ಶ್ರೀಮಂತರು. ೨೦ ಸಾವಿರ ಉತ್ಪನ್ನವುಳ್ಳವರು. ಮತ್ತು ೧೯೨೧ ರಲ್ಲಿ ತಮ್ಮ ಪಟೇಲತನಕ್ಕೆ ರಾಜೀನಾಮೆಯಿತ್ತವರು. ಮಹಾತ್ಮಾಜಿಯವರ ಅನುಪಮ ಭಕ್ತರು. ರಂಗಬಾಳಿಗರೂ ದೊಡ್ಡ ಮನೆತನಕ್ಕೆ ಸೇರಿದವರಾಗಿರುವರು.

ಹವು ಕಳೆಗುಂದಿ, ಉಪ್ಪುಮಾಡುವದನ್ನು ನಿಲ್ಲಿಸಿ, ಗುತ್ತಿಗೆ ಅಂಗಡಿಗಳನ್ನು ಪಹರೆ ( picketing ) ಮಾಡುವುದನ್ನು ಆರಂಭಿಸಿದರು. ಇದು ಮೊದಲು ಉಡಿಪಿಯಲ್ಲಿ ಆರಂಭವಾಗಿ ಕಡೆಗೆ ಎಲ್ಲ ಊರುಗಳಲ್ಲಿಯೂ ಹಬ್ಬಿತು. ಮರಗಳನ್ನು ಗುತ್ತಿಗೆಗೆ ಕೊಡಬಾರದೆಂತಲೂ, ಗುತ್ತೆ ಲಿಲಾವಿಗೆ ಯಾರೂ ನಿಲ್ಲಬಾರದೆಂತಲೂ ಪ್ರಚಾರ ಮಾಡಲಾಯಿತು. ಈ ಪಹರೆಯ ಚಳವಳಿಯು ತಾ. ೧೯ಕ್ಕೆ ಸುರುವಾಯಿತು.

ಜೂನ ೧೧ಕ್ಕೆ ಮಂಗಳೂರಿನ ಸಾಹುಕಾರರ ಒಂದು ಸಭೆಯಾಗಿ ಈ ಚಳವಳಿಗೆ ತಮ್ಮ ಸಹಾನುಭೂತಿಯನ್ನು ತೋರಿ

ದರು. ಇದನ್ನು ವಿಶದಪಡಿಸಲಿಕ್ಕೆ ಮರುದಿನ ಸಾಯಂಕಾಲ ಅಂಗಡಿಗಳನ್ನೆಲ್ಲಾ ಮುಚ್ಚಿ ಒಂದು ಮೈಲು ಉದ್ದದ ಸಾಹುಕಾರರ ಪ್ರಚಂಡ ಮೆರವಣಿಗೆಯು ಊರಲ್ಲಿ ಹಾದು ಮೈದಾನಿನಲ್ಲಿ ಸಭೆ ಸೇರಿತು. ಮರುದಿನ ಶಾಲೆಯ ಹುಡುಗರ ಮೆರವಣಿಗೆಯೂ ಊರಲ್ಲಿ ತಿರುಗಿತು. ಇದಕ್ಕೆ ಪ್ರತಿಕಾರವಾಗಿ ಪಹರೆ, ಮೆರವಣಿಗೆ, ಮತ್ತು ಸಭೆಗಳ ಮೇಲೆ ೧೪೪ ಸೆಕ್ಶನ ಜಾರಿಯಾಯಿತು. ಸತ್ಯಾಗ್ರಹದ ಶಿಬಿರವನ್ನು ಜಪ್ತಿಮಾಡಿದರು. ಬಸ್ಸ ಮಾಲಿಕರಿಗೆ ಸತ್ಯಾಗ್ರಹಿಗಳಿಗೆ ಮೋಟರ ಕೊಡಬಾರದೆಂದು ಕಟ್ಟಾಜ್ಞೆಯಾಯಿತು. ಹೊಟೆಲುಗಳು ಊಟವನ್ನು ಕೊಡಬಾರದೆಂದು ಅಪ್ಪಣೆಯಾಯಿತು. ಆದರೂ ಕೆಲ ದಿನ ಇದರ ವಿರೋಧವಾಗಿ ಶೆಂದೀ ಅಂಗಡಿಯ ಎದುರು ಪಹರೆಯು ನಡೆಯಿತು. ಪಹರೆಮಾಡಿದವರನ್ನೆಲ್ಲ ಕೆಲ ದಿನ ಹಿಡಿದು ಜೈಲಿಗೆ ಹಾಕಿದರು. ತಾರೀಖು ೩೫ರ ವರೆಗೆ ಒಟ್ಟಿಗೆ ೧೪೮ ಜನರನ್ನು ಜೈಲಿಗೆ ಕಳುಹಿಸಿದಂತಾಯಿತು.

೩೬ನೇ ಆದಿತ್ಯವಾರ ಸತ್ಯಾಗ್ರಹಿಗಳ ಮೆರವಣಿಗೆಯು ಹಂಪನಕಟ್ಟೆಯಿಂದ ಹಾದು ಹೋಗುವಾಗ ಪೋಲಿಸರು ಅವರ ಮೇಲೆ ಲಾಟಿ ಪ್ರಯೋಗವನ್ನು ಮಾಡಿದರು. ಸತ್ಯಾಗ್ರಹಿಗಳು ಮಾರ್ಗದಲ್ಲಿ ಕೂತುಕೊಂಡರು. ಪೆಟ್ಟುಗಳ ಹೊಡೆತಕ್ಕೆ ಅನೇಕರು ಗಾಯಹೊಂದಿದರು. ಇದರ ಗಲಭೆಯಲ್ಲಿ ಸತ್ಯಾಗ್ರಹಿಗಳಲ್ಲದ ಅನೇಕರಿಗೆ ಪೆಟ್ಟುಬಿದ್ದಿತು. ಮರುದಿನ ಮಂಗಳೂರಿನಲ್ಲಿ ಹರತಾಳವಾದರೂ ಸಭೆ ಸೇರಲಿಕ್ಕೆ ಲಾಟಿಯು ಬಿಡಲಿಲ್ಲ. ಎರಡು ಮೂರು ದಿನಗಳ ವರೆಗೆ ಲಾಟಿಯು ಸವಿಯು ಅನೇಕರಿಗೆ ಗೊತ್ತಾಯಿತು. ಜೂಲಾಯಿ ತಿಂಗಳು ಮುಗಿಯುವುದರೊಳಗಾಗಿ ಪಹರೆಯೂ ಮುಗಿಯಿತು. ಇದೇ ತರದಲ್ಲಿ ಉಡಿಪಿಯಲ್ಲಿಯೂ ಲಾಟಿಯ ಮೂಲಕ ಪಹರೆಯು ಮುಗಿಯಿತು. ಈಗ ತೋರಿಕೆಗೆ ಚಳವಳಿಯು ನಿಂತಂತಾಗಿದೆ. ಆದರೂ ಖಾದಿಯ ಮಾರಾಟವು ನಡೆಯುತ್ತಲೇ ಇದೆ. ಅನೇಕ ಮನೆಗಳಲ್ಲಿ ಚರ್ಕಗಳು ತಿರುಗುತ್ತಿವೆ.



ದಳದ ನಾಯಕರಾದ

**ಶ್ರೀ. ಬಳಸಾವರ ಮುಕುಂದರಾಯರು**



**ಲಾಠೀ ರಾಜ್ಯದ ಕೆಲ ಬಲಿಗಳು**

## ಮಂಗಳೂರಿನ ಸತ್ಯಾಗ್ರಹ ಪಥಕ



ಕುಳಿತವರಲ್ಲಿ ಐದನೆಯವರು

**ಶ್ರೀ. ಮಹಾಶಬ್ಧೆಯವರು**

## ಮೈದಾನಿನಲ್ಲಿ ನೆರೆಯುವ ಪ್ರತಿನಿತ್ಯದ ಸಭೆಯ ಒಂದು ದೃಶ್ಯ



ಪೋಲೀಸ ಅಧಿಕಾರಿಗಳು ಸತ್ಯಾಗ್ರಹಿಗಳಿಂದ ಮಾರಾಟದ ಉಪ್ಪನ್ನು ಸೆಳೆದುಕೊಂಡಿರುವರು

( ಉಪ್ಪಿನ ಚೀಟಗಳನ್ನು, ಪೋಲೀಸ ಅಧಿಕಾರಿಯ ಎದುರಿನಲ್ಲಿ ಕಾಣಬಹುದು. )

# ತ್ಯಾಗದಲ್ಲಿಯೇ ಭೋಗವು

ಲೇಖಕರು:— ರಾಮಚಂದ್ರ ವೆಂಕಟೇಶ ಕನಗುದರಿ, ಹಿಂದುಸ್ಥಾನೀ ಸೇವಾದಲ, ಹುಬ್ಬಳ್ಳಿ

ವೇದಾಂತವವನ್ನು ಅಭ್ಯಾಸ ಮಾಡಿದವರಿಗೆ "ತ್ಯಾಗದಲ್ಲಿ ಭೋಗ" ವೆಂಬ ಮಾತು ಏನೂ ಹೊಸದಲ್ಲ. ಸರ್ವಸಾಮಾನ್ಯ ಜನರಿಗೂ ಈ ಮಾತು ಆಗಾಗ್ಗೆ ಕಿವಿಗೆ ಬೀಳುತ್ತಲೇ ಇರುತ್ತದೆ. ನಮ್ಮ ಪ್ರತಿ ದಿನದ ವ್ಯವಹಾರದಲ್ಲಿ ಸಹ ಇದರ ಸತ್ಯತೆಯು ಮೇಲಿಂದ ಮೇಲೆ ಕಂಡು ಬರುತ್ತದೆ. ಅಂದ ಬಳಿಕ ಜನರು ಈ ತತ್ವವನ್ನು ಮನಗಂಡೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಿರಬಹುದಲ್ಲವೇ ? ಇಲ್ಲ. ಎಲ್ಲರೂ ಬಹುಶಃ ವೇದಾಂತವಿಷಯದ ಪುಸ್ತಕಗಳನ್ನು ತಿರುವಿ ಹಾಕಿದವರೇ ಹೊರತು ವೇದಾಂತ ತತ್ವಗಳಂತೆ ನಡೆಯತಕ್ಕವರಲ್ಲ. ಆದ್ದರಿಂದಲೇ "कलौ वेदांतिनो भांति फाल्गुने बालका इव" ಎಂದು ಹೇಳುವುದುಂಟು. ಕಲಿಯುಗದಲ್ಲಿಯ ವೇದಾಂತಿಗಳು ಫಾಲ್ಗುಣಮಾಸದಲ್ಲಿಯ ಬಾಲಕರಂತಿರುತ್ತಾರೆ. ಫಾಲ್ಗುಣ ಮಾಸದಲ್ಲಿಯ ಬಾಲಕರೆಲ್ಲರೂ ನಾನಾವಿಧವಾದ ಬೀಭತ್ಸ ನುಡಿಗಳನ್ನಾಡುತ್ತಿರುತ್ತಾರೆ. ಆದರೆ ಅವುಗಳನ್ನು ಒಬ್ಬರನ್ನುವುದನ್ನು ಕೇಳಿಕೊಂಡು ಅನ್ನುತ್ತಾರಲ್ಲದೆ ತಮ್ಮ ಸ್ವಂತ ಅನುಭವದಿಂದಲ್ಲ.

ವೇದಾಂತವೆಂದರೆ ಅದೆಂತಹದೋ ಒಂದು ಗಹನವಾದ ವಿಷಯವೆಂತಲೂ ಅದರ ಜ್ಞಾನವನ್ನು ಮಾಡಿಕೊಳ್ಳುವುದು ಸರ್ವರಿಗೂ ಸಾಧಿಸಲಾರದೆಂತಲೂ ಸನ್ಯಾಸಿಗಳಂಥ ಕೆಲವರ ಸಲುವಾಗಿ ಮಾತ್ರ ಅದು ಮೀಸಲಾಗಿರುವದೆಂತಲೂ ಬಹು ಜನರ ಭಾವನೆಯು. ಅದರಲ್ಲಿಯೂ ಬಹಳ ಸಂಸ್ಕೃತ ಪುಸ್ತಕಗಳನ್ನು ಓದಿಕೊಂಡು, ಸಣ್ಣ ಹುಡುಗರು ಕೇಳಿದರೆ ಹೆದರಿ ಜ್ವರ ಬರುವಂತೆ ವಾದವಿವಾದವನ್ನು ಮಾಡುವವರೇ ವೇದಾಂತನಿಷ್ಣಾತರೆಂದು ವಾಡಿಕೆಯ ಕಲ್ಪನೆಯು.

ಈ ವಿದ್ವಾಂಸರು ಹೇಳುವಂಥ ವೇದಾಂತದ ತತ್ವಗಳನ್ನೇ ಓದುಬರಹವನ್ನರಿಯದ ಒಬ್ಬ ಒಕ್ಕಲಿಗನು, ಬಹಳ ಸುಲಭವಾದ ಭಾಷೆಯಲ್ಲಿ ತಿಳುಹಿಸಿ ಕೊಡುವುದನ್ನು ಎಷ್ಟೋ ಜನರು ಕಂಡಿರಬಹುದು. ಇವತ್ತಿನ ವರೆಗೆ ಆಗಿ ಹೋದ ತತ್ವಜ್ಞಾನಿಗಳಲ್ಲಿ ಎಷ್ಟೊ ಮಂದಿ ನಿರಕ್ಷರಿಗಳಿದ್ದರೆಂಬದನ್ನು ಉದಾಹರಣೆಗಳಿಂದ ಸಿದ್ಧ ಮಾಡಬಹುದು. ಅಂದ ಬಳಿಕ ನಿರಕ್ಷರರಿಗೆ ವೇದಾಂತದ ಜ್ಞಾನವೆಂತಾಯಿತು ? ಆ ವಿಷಯವು ಕೇವಲ ಪುಸ್ತಕಗಳಲ್ಲಿಲ್ಲವೆಂಬುದೇ ಈ ಪ್ರಶ್ನೆಗೆ ಸಮಾಧಾನವು.

ಮನುಷ್ಯನ ಪ್ರಯತ್ನವು ಯಾವಾಗಲೂ ಸುಖಸಂಪಾದನೆಗಾಗಿ ನಡೆದಿರುತ್ತದೆ. ಅವನು ಪಡೆಯಬಹುದಾದ ಎಲ್ಲಕ್ಕೂ ಹೆಚ್ಚಿನ ಸೌಖ್ಯವೆಂದರೆ ಮುಕ್ತಿ. ಅದನ್ನು ದೊರಕಿಸುವ ಮಾರ್ಗಗಳು ವೇದದ ಕೊನೆ ( ಅಂತ್ಯ )ಯ ಭಾಗದಲ್ಲಿ ಹೇಳಲ್ಪಟ್ಟಿವೆ. ಆದ್ದರಿಂದ ಈ ವಿಷಯಕ್ಕೆ ವೇದಾಂತವೆಂಬ ಹೆಸರು ಬಂದಿದೆ.

'ಸುಳ್ಳು ಹೇಳಬಾರದು' 'ಕಾಮ ಕ್ರೋಧಗಳನ್ನು ಜಯಿಸಿದರೆ ಮನುಷ್ಯನು ಚಿರಸುಖವನ್ನು ಪಡೆಯುವನು' ಎಂಬ ಮಾತುಗಳನ್ನು ಪ್ರತಿಯೊಬ್ಬನೂ ಬಲ್ಲನು. ಆದರೆ ಇವೇ ಮಾತುಗಳನ್ನು ಬೇರೆ ಬೇರೆಯವರು ಬೇರೆ ಬೇರೆ ವಿಧವಾಗಿ ಹೇಳುತ್ತಿರಬಹುದು. ಈ ಮೇರೆಗೆ ಬಂದ ಜನರ ಅನುಭವಗಳನ್ನೇ ಪುಸ್ತಕಗಳಲ್ಲಿ ಬರೆದಿಟ್ಟಿದ್ದಾರೆ. ಪುಸ್ತಕಗಳನ್ನು ಓದಿಕೊಂಡು ಸುಳ್ಳು ಹೇಳಬಾರದೆಂಬ ಮಾತನ್ನು ಜನರು ಅರಿತುಕೊಂಡರೆಂಬುವುದು ನಿರಾಧಾರವಾದದ್ದು. ಆ ಪುಸ್ತಕಗಳನ್ನು ಓದಿದರೆ ಈ ವಿಷಯವು ತಿಳಿಯುವದೇನೋ ನಿಜ. ಆದರೆ ಅವುಗಳ ಸಹಾಯವಿಲ್ಲದಲೆ ಕೂಡ ಈ ಜ್ಞಾನವಾಗುವುದೆಂಬದರಲ್ಲಿ ಸಂದೇಹವಿಲ್ಲ.

"ತ್ಯಾಗದಲ್ಲಿ ಭೋಗ" ವೆಂಬ ಮಾತು ನಮ್ಮ ಪ್ರತಿ ದಿನದ ವ್ಯವಹಾರದಲ್ಲಿ ಹೇಗೆ ಮೇಲಿಂದ ಮೇಲೆ ನಿದರ್ಶನಕ್ಕೆ ಬರುತ್ತದೆ; ಅದನ್ನು ನಾವು, ಕಾಲಿನಿಂದ ಅಮೌಲ್ಯ ವಸ್ತುವನ್ನು ಎಡಹಿದರೂ ಅದನ್ನು ಅರಿಯದೆ ಮುಂದೆ ಸಾಗುವ ಮೂಢರಂತೆ ಹೇಗೆ ಅರಿಯದವರಾಗಿದ್ದೇವೆ; ಒಂದು ವೇಳೆ ಅರಿತರೂ ಹೇಗೆ ಅದರ ಕಡೆಗೆ ದುರ್ಲಕ್ಷ್ಯ ಮಾಡುತ್ತೇವೆಂಬ ಮಾತುಗಳನ್ನು ಈ ಮುಂದಿನ ಉದಾಹರಣೆಗಳಿಂದ ತಿಳಿದುಕೊಳ್ಳಬಹುದು.

೧. ಒಂದು ದೇಶದಲ್ಲಿ ಬರಗಾಲವೊದಗಲು, ಅಲ್ಲಿಯ ರಾಜನು ತನ್ನ ರಾಜ್ಯದ ಎಲ್ಲ ಬಡವರಿಗೆ ಪ್ರತಿದಿವಸ ಒಂದೊಂದು ರೊಟ್ಟಿಯನ್ನು ಕೊಡುವ ವ್ಯವಸ್ಥೆ ಮಾಡಿದ್ದನು. ಒಂದು ಕೊಪ್ಪರಿಗೆಯಲ್ಲಿ ರೊಟ್ಟಿಗಳನ್ನು ತುಂಬಿ, "ಎಲ್ಲರೂ ಒಂದೊಂದು

ರೊಟ್ಟಿಯನ್ನು ತೆಗೆದುಕೊಂಡು ಹೋಗಿರಿ" ಎಂದು ಆಜ್ಞೆ ಮಾಡುತ್ತಿದ್ದನು. ಎಲ್ಲರೂ ಒಬ್ಬರ ಮೇಲೊಬ್ಬರು ಬಿದ್ದು ದೊಡ್ಡ ರೊಟ್ಟಿಗಳನ್ನು ದೊರಕಿಸಲು ಹವಣಿಸುತ್ತಿದ್ದರು. ಕೂಡಿದ ಜನರಲ್ಲಿಯ ಒಂದು ಹುಡಿಗೆಯು ಮಾತ್ರ ಪ್ರತಿ ದಿನವೂ ಕೊನೆಯ ವರೆಗೆ ಒಂದು ನಿಟ್ಟಿನಲ್ಲಿ ನಿಂತುಕೊಂಡು, ಎಲ್ಲರೂ ತೆಗೆದುಕೊಂಡು ಹೋದ ಬಳಿಕ ಉಳಿದಂಥ ಒಂದು ಸಣ್ಣ ರೊಟ್ಟಿಯನ್ನು ತೆಗೆದುಕೊಂಡು ಹೋಗುತ್ತಿದ್ದಳು. ರಾಜನು ಅವಳ ದೊಡ್ಡ ಮನಸ್ಸಿಗೆ ಮೆಚ್ಚಿ ಒಂದು ದಿವಸ, ಎಲ್ಲಕ್ಕೂ ಸಣ್ಣ ರೊಟ್ಟಿಯಲ್ಲಿ ಮುತ್ತು ರತ್ನಗಳನ್ನು ಹಾಕಿಸಿದನು. ಎಂದಿನಂತೆ ಆ ಹುಡಿಗೆಯು ಸಣ್ಣ ರೊಟ್ಟಿಯನ್ನು ಮನೆಗೆ ಒಯ್ದು ಮುರಿಯಲು ಹೊರಚಲ್ಲಿದ ಮುತ್ತು ರತ್ನಗಳನ್ನು ಕಂಡು ಗಾಬರಿಯಾದಳು. ಮತ್ತು ಅವುಗಳನ್ನು ರಾಜನಲ್ಲಿಗೆ ತೆಗೆದುಕೊಂಡು ಹೋಗಿ "ಇವು, ತಾವು ಕೊಟ್ಟ ರೊಟ್ಟಿಯಲ್ಲಿದ್ದವು. ತೆಗೆದುಕೊಳ್ಳಬೇಕು" ಎಂದು ಹೇಳಿದಳು. ಅದಕ್ಕೆ ರಾಜನು "ನಿನ್ನ ಸದ್ಗುಣಕ್ಕೆ ಮೆಚ್ಚಿ ಅವುಗಳನ್ನು ಅದರಲ್ಲಿ ಬೇಕೆಂತಲೇ ಹಾಕಿಸಿದ್ದೆನು. ಆ ಮುತ್ತು ರತ್ನಗಳು ನಿನ್ನವೇ ಆಗಿವೆ. ನಿರ್ಭಯವಾಗಿ ತೆಗೆದುಕೊಂಡು ಹೋಗು" ಎಂದು ಹೇಳಿದನು.

೩. ಒಬ್ಬನು ಸಾಹುಕಾರನಲ್ಲಿ ಕೆಲವು ಹಣವನ್ನು ಸಾಲವಾಗಿ ತಂದು ಅದಕ್ಕಾಗಿ ಕಾಗದ ಬರೆದು ಕೊಟ್ಟಿದ್ದನು. ಆದರೆ ಅದರ ಅವಧಿಯು ಗೊತ್ತಾಗದಂತೆ ಮೀರಿ ಹೋಗಿತ್ತು. ಆಗ್ಗೆ ಸಾಹುಕಾರನು ಅವನನ್ನು ಕರೆದು "ಏನಪ್ಪಾ! ಕಾಗದದ ಅವಧಿಯಂತೂ ಮೀರಿ ಹೋಗಿದೆ. ನೀನಾಗಿ ಹಣವನ್ನು ತಿಳಿದು ಕೊಟ್ಟರೆ ಸರಿ. ಇಲ್ಲದಿದ್ದರೆ ಅದನ್ನು ಕಳೆದುಕೋಡೆನೆಂಡೇ ನಾನು ತಿಳಿಯಬೇಕಾಗುವದು" ಎಂದನು. ಅದಕ್ಕೆ ಹಣ ಕೊಡಬೇಕಾದವನು "ಆದರೇನಾಯಿತು? ಅದಕ್ಕೆ ನೀನು ಎಳ್ಳಷ್ಟೂ ಚಿಂತಿಸಬೇಕಾದುದಿಲ್ಲ. ನಿನ್ನ ದುಡ್ಡನ್ನು ಕೊಟ್ಟ ದಿವಸವೇ ನಾನು ಮನಃಪೂರ್ವಕವಾಗಿ ಅನ್ನ ತಿನ್ನುವೆನೆಂಬದನ್ನು ನೀನು ಮರೆಯಬೇಡ" ಎಂದು ಹೇಳಿದನು. ಅದೇ ಪ್ರಕಾರ ಮುಂದೆ ಒಂದು ದಿವಸ ತಾನು ಕೊಡಬೇಕಾದ ಹಣವನ್ನು ಸಾಹುಕಾರನಿಗೆ ಒಯ್ದು ಮುಟ್ಟಿಸಿದನು. ಅವನ ಪ್ರಾಮಾಣಿಕತನವನ್ನು ಹೊಗಳಿ ಸಾಹುಕಾರನು ಅದರಲ್ಲಿಯ ಅರ್ಧ ಹಣವನ್ನು ಒತ್ತಾಯದಿಂದ ಅವನಿಗೆ ಪಾರಿತೋಷಕವಾಗಿ ಕೊಟ್ಟು ಕಳುಹಿಸಿದನು.

೩. ಒಬ್ಬನ ಮೇಲೆ ಆರೋಪವು ಬಂದು ಕಾರಾಗೃಹಕ್ಕೆ ಹೋಗುವ ಪ್ರಸಂಗ ಬಂದಿತ್ತು. ಅವನನ್ನು ಆ ಕಾಲದಲ್ಲಿ ಅವನ ಒಬ್ಬ ಸ್ನೇಹಿತನು, ತನ್ನಲ್ಲಿಯ ಬಂಗಾರದ ಒಡವೆಗಳನ್ನು ಮಾರಿ ಬಂದ ದುಡ್ಡಿನಿಂದ ಆ ಕುತ್ತಿನಿಂದ ಪಾರು ಮಾಡಿದನು. ಮುಂದೆ ಕೆಲವು ದಿವಸಗಳ ತರುವಾಯ ಆ ಸ್ನೇಹಿತನಿಗೆ ಧನದ ತೊಂದರೆಯುಂಟಾಯಿತು. ಆದ್ದರಿಂದ ಹಿಂದಕ್ಕೆ ಗಂಡಾಂತರದಿಂದ ಪಾರುಗಾಣಲು ತನ್ನಿಂದ ಸಹಾಯ ಹೊಂದಿದ ಗೃಹಸ್ಥನನ್ನು ತನ್ನ ದುಡ್ಡನ್ನು ತನಗೆ ತಿರುಗಿ ಕೊಡಲು ಕೇಳಲು, ಅವನು "ನಿನಗೆ ಆ ದುಡ್ಡನ್ನು ಕೊಡಲು ಯಾರು ಹೇಳಿದರು? ನಾನು ಸೆರೆಮನೆಗೆ ಹೋಗಿ ಬರಲಿಕ್ಕೆ ಸಿದ್ಧನೇ ಇದ್ದೆ" ಎಂದು ಅವನ ದುಡ್ಡನ್ನು ಕೊಡಲು, ಅಲ್ಲಗಳೆದನಿಷ್ಟೇ ಅಲ್ಲದೆ ಯಾವ ರೀತಿಯಿಂದಲೋ ಒಂದು ಆರೋಪವನ್ನು ಆ ಸ್ನೇಹಿತನ ಮೇಲೆ ತಂದು ಹಾಕಿ ಕಷ್ಟಕ್ಕೀಡು ಮಾಡಿದನು.

೪. ಕಾರಾಗೃಹದ ಒಂದು ಕೋಣೆಯಲ್ಲಿರುವ ಕೆಲವು ಆರೋಪಿಗಳಿಗೆ ಅಲ್ಲಿಯ ರಾಜನು "ನೀವೆಲ್ಲರೂ ಯಾವ ತಪ್ಪಿಗಾಗಿ ಇಲ್ಲಿ ಬಂಧಿಸಲ್ಪಟ್ಟಿರುವಿರಿ?" ಎಂದು ಕೇಳಿದನು. ಅದಕ್ಕೆ ಅವರೊಳಗಿನವನೊಬ್ಬನು "ನನಗೆ ಅನ್ಯಾಯವಾಗಿ ಶಿಕ್ಷೆಯಾಗಿರುವದು" ಎಂದೂ; ಇನ್ನೊಬ್ಬನು "ಇನ್ನೊಬ್ಬನ ತಪ್ಪಿಗಾಗಿ ನಾನು ಕಷ್ಟಪಡಬೇಕಾಗಿರುವದು" ಎಂದೂ; ಬೇರೊಬ್ಬನು "ನ್ಯಾಯಾಧೀಶರು ದುಡ್ಡು ತಿಂದು ನನಗೆ ಶಿಕ್ಷೆ ವಿಧಿಸಿದರು" ಎಂದೂ ಸರ್ವರೂ ಇದೇ ಬಗೆಯಾಗಿ ಹೇಳುತ್ತ ತಮ್ಮ ತಪ್ಪುಗಳನ್ನು ಮುಚ್ಚಿಕೊಳ್ಳಲು ಹವಣಿಸಿದರು. ಆದರೆ ಅವರೊಳಗಿನವನೊಬ್ಬನು ಮಾತ್ರ "ನಾನು ಇಂಥದೊಂದು ತಪ್ಪನ್ನು ಮಾಡಿದ್ದರಿಂದ ಇಲ್ಲಿರಿಸಲ್ಪಟ್ಟಿದ್ದೇನೆ" ಎಂದು ಹೇಳಿದನು. ಅವನು ನಿಜವಾಡಿದುದನ್ನು ಕಂಡು ರಾಜನು ಸಂತೋಷ ಪಟ್ಟು ಅವನನ್ನು ಬಂಧಮುಕ್ತನನ್ನಾಗಿ ಮಾಡಿದನು.

ಇಂತಹ ಉದಾಹರಣೆಗಳು ಲೆಕ್ಕವಿಲ್ಲದಷ್ಟು ದೊರೆಯುತ್ತವೆ. ಮಾದರಿಗಾಗಿ ಕೆಲವುಗಳು ಮಾತ್ರ ಇಲ್ಲಿ ಹೇಳಲ್ಪಟ್ಟಿವೆ.

ದುಡ್ಡು ಬೇಡ ಎನ್ನುವಂಥವರ ಪಾದದ ಮೇಲೆ ದ್ರವ್ಯದ ಮಳೆಯೇ ಸುರಿಯುತ್ತದೆ! ಹಣದಾಸೆಯಿಂದ ದುಡಿಯುವವರಿಗೆ ಹೊಟ್ಟೆ ತುಂಬುವದು ಕೂಡ ಕಠಿಣ! ಬೇಕೆಂದರೆ ದುಃಖವಾಗುತ್ತದೆ, ಬೇಡವೆಂದರೆ ಸುಖವಾಗುತ್ತದೆ. ವಿಷಯಗಳ ನಡುವಿದ್ದು, ತ್ಯಾಗಬುದ್ಧಿಯಿಂದ ನಡೆದರೆ, ಮುಕ್ತಿ (ಸದಾ ಸುಖಿ ಅವಸ್ಥೆ) ಅಸಾಧ್ಯವಲ್ಲ.

# ಉಪವನದಲ್ಲಿ

## ( ಒಂದು ಸಂಗೀತ ಗೋಷ್ಠಿ )

ಲೇಖಕರು:— ಶ್ರೀ. ಟೀ. ಭೀಮರಾವ್, ಬೀ. ಏ., ಸಾಹಿತ್ಯವಿದ್ವಾನ್, ಇಂದೂರು

ಮೂರುಸಂಜೆಯಾಗಿ ದೀಪ ಹಚ್ಚುವ ಹೊತ್ತಾಗಿದೆ. ಹುಣಿವೆಯ ಚಂದ್ರನು ಆಗಲೇ ಮೂಡಿರುವುದರಿಂದ ಕತ್ತಲೆಗೆ ಅವಕಾಶವಿಲ್ಲ. ಇಂದು ಊರ ಹೊರಗೆ ಬಹುದೂರ ತಿರುಗಾಡಲು ಹೋದುದರಿಂದ ತಿರುಗಿ ಬರುವಾಗ ದಾರಿಯಲ್ಲಿ ಒಂದು ಮಾವಿನ ಗಿಡಗಳ ತೋಪಿನೊಳಗಿಂದ ಹಾಯ್ದು ಬರುತ್ತಿರುವೆನು. ಅಭಾವರೂಪಿಯಾದ ಕತ್ತಲೆಯು ಬೆಳದಿಂಗಳಿಗೆ ಅಡ್ಡಾಗಿ ನಿಂತಿರುವ ಮಾವಿನ ಗಿಡಗಳ ಕೆಳಗೆ ಆಶ್ರಯವನ್ನು ಹೊಂದುತ್ತಲಿದೆ. ಆದರೂ ವಿಜಯಶಾಲಿಯಾದ ಚಂದ್ರನು ಹಗೆಯನ್ನು ಎಲ್ಲಿ ಹೊಕ್ಕರೂ ಬಿಡಬಾರದೆಂದು ಮಾವಿನ ತೋಪನ್ನು ಭೇದಿಸಿ ತನ್ನ ಸಾವಿರಾರು ಕಿರಣಗಳಿಂದ ಕತ್ತಲೆಯನ್ನು ಚುಚ್ಚುತ್ತಿರುವನು. ಹೀಗಾಗಿ ನನಗೆ ಕೊಂಚ ಬೆಳಕು ಕತ್ತಲೆ ಇವುಗಳಿಂದ ಹೆಚ್ಚು ಭ್ರಮೆಯೇ ಹೊರ್ತು ಬೆಳಕಿನ ಲಾಭವೇನೂ ಇಲ್ಲ. ಇದಷ್ಟು ದಾಟ ದಾರಿಗೆ ಸೇರಬೇಕೆಂದು ನಾನು ಕೊಂಚ ನಡಿಗೆಯನ್ನು ಬೆಳೆಸಿದೆನು. ಆದರೆ ಅಕಸ್ಮಾತ್ ನಿಲ್ಲಬೇಕಾಯಿತು. ಎಡಗಡೆಯಿಂದ “ ಮಾಸ್ತರ ಸಾಹೇಬ್, ಕೊಂಚ ತಾಳಿ ” ಎಂಬ ಪರಿಚಿತ ಸ್ತ್ರೀವ್ಯಕ್ತಿಯ ಧ್ವನಿಯೊಂದು ಕೇಳಿಸಿತು. ಬೆಚ್ಚು ಬಿದ್ದು ಮರಳಿ ನೋಡಿದೆ. ಸುಮತಿಯು ಹೆದರಿದಂತವಳಾಗಿ ಬೇಗ ಬೇಗನೆ ನನ್ನ ಕಡೆಗೇ ಬರುತ್ತಿರುವಳು. ಬಳಿಗೆ ಬರಲು ಕೊಂಚ ದಿಟ್ಟಿಸಿ ನೋಡಿದೆ. ಪಾಪ ! ಮುಂಗೂದಲುಗಳೆಲ್ಲ ಹಾರಿ ಮೂಗಿನ ಮೇಲಿನ ಕನ್ನಡಕದ ಮೇಲೆ ಬಿದ್ದಿವೆ. ಬೆನ್ನಮೇಲೆ ನಾಗವೇಣಿಯು ಉದ್ದವಾಗಿ ಬಹು ಸಡಿಲಾಗಿ ಬಿದ್ದದೆ. ಬಹು ಅಸ್ತವ್ಯಸ್ತವಾಗಿ ತೋರುತ್ತಿರುವಳು. ಹುಬ್ಬುಗಂಟಿಕ್ಕಿರುವದರಿಂದ ಸರಳವಾದ ಮುಖವು ಕೊಂಚ ನಿಷ್ಠುರವಾಗಿ ತೋರುತ್ತಿರುವದು.

“ ಅಬಬಾ ! ನಿಮ್ಮನ್ನೆಷ್ಟು ಸಾರೆ ಕೂಗಬೇಕರೀ ? ” ಸುಮತಿಯು ತನ್ನ ದಣಿದ ಧ್ವನಿಯಲ್ಲಿಯೇ ಕೇಳಿದಳು.

“ನನಗಂತೂ ಒಂದೇ ಕೂಗು ಕೇಳಿಸಿತು; ಅದಿರಲಿ. ನೀನು ಇಂದು ಈ ಹೊತ್ತಿನಲ್ಲಿ ಇಷ್ಟುದೂರ ಇಲ್ಲಿಗೆ ಹೇಗೆ ಬಂದೆ ? ಅದೂ ಅಲ್ಲದೆ ಜೊತೆಗೆ ಯಾರೂ ಇಲ್ಲದೆ ಒಬ್ಬಳೇ ಬಂದಿರುವ! ” ನಾನು ಕೊಂಚ ನನ್ನ ಮಾಸ್ತರತ್ವದ ದೊಡ್ಡಸ್ತಿಕೆಯನ್ನು ತೋರಿಸುತ್ತಲೇ ನುಡಿದೆ. ಸುಮತಿಯು ನನ್ನಲ್ಲಿ ಮುಖ್ಯವಾಗಿ ಸಂಗೀತವನ್ನು ಕಲಿಯುತ್ತಿದ್ದು, ತನ್ನ ಸಂಸ್ಕೃತ ಮತ್ತು ಇಂಗ್ಲಿಷ್ ಅಧ್ಯಯನದಲ್ಲಿ ಆಗಾಗ ಕೊಂಚ ನನ್ನಿಂದ ಸಹಾಯವನ್ನಪೇಕ್ಷಿಸುವಳು.

“ ಏನು ಹೇಳಲಿ, ಮಾಸ್ತರ ಸಾಹೇಬ್, ಇವತ್ತಿನ ದಿವಸ ಮಧ್ಯಾಹ್ನವೆಲ್ಲ ನಿದ್ರೆಮಾಡಿದೆ. ೫ ಘಂಟೆ ಸುಮಾರಿಗೆ ಎದ್ದು ಚಹಾ ತೆಗೆದುಕೊಂಡೆ. ಆದರೆ ಮೈತುಂಬಾ ಆಲಸ್ಯ. ಏನು ಮಾಡಬೇಕು, ತೋಚಲೊಲ್ಲದು. ಮನಸ್ಸಿನಲ್ಲಿಯೋ ಬಗೆ ಬಗೆಯ ಬಗೆಗಳು. ಬೇಜಾರವಾಗಿ ತಿರುಗಾಡಿಕೊಂಡು ಬರೋಣವೆಂದು ಈ ಕಡೆ ಬಂದೆ. ನಾನು ಇಲ್ಲಿಗೆ ಎಂದೂ ಬಂದವಳಲ್ಲ. ಅದಲ್ಲದೆ ಕತ್ತಲೆ ಬೇರೆ. ಆದ್ದರಿಂದ ಹೆದರಿದೆ. ಅಷ್ಟರಲ್ಲಿ ನೀವು ಕಂಡಿರಿ. ಬಹು ಒಳ್ಳೆಯದಾಯಿತು. ” ಕಥೆಯ ಸಾರಾಂಶವನ್ನು ಹೇಳುವವರಂತೆ ಸುಮತಿಯು ತನ್ನ ವಿಷಯವನ್ನು ಮುಗಿಸಿಬಿಟ್ಟಳು.

“ಸರಿ, ಹಾಗಾದರೆ; ನಿನ್ನನ್ನು ಮನೆಗೆ ಕಳುಹಿಸಿ ನಮ್ಮ ಮನೆಗೆ ಹೋಗುತ್ತೇನೆ. ” ಎಂದು ನಾನವಳ ಮನೆಯ ಕಡೆಯ ಮಾರ್ಗವನ್ನು ಹಿಡಿಯಲು ಸುಮತಿಯು ಏನೂ ಮಾತನಾಡದೆ ಜೊತೆಯಲ್ಲಿ ನಡೆದಳು.

“ ಏನ್ರೀ, ಇಲ್ಲೇ ಪಾರ್ಕಿನಲ್ಲಿ ಕೊಂಚ ಹೊತ್ತು ಕುಳಿತು ಆ ಮೇಲೆ ಮನೆಗೆ ಹೋಗೋಣವೇ ? ನಿಮಗೆ ಮನೆಗೆ ಬೇಗ ಹೋಗುವ ಅವಶ್ಯಕತೆಯೇನಿಷ್ಟಿಲ್ಲ ತಾನೇ ? ” ಹೀಗೆ ನುಡಿಯುತ್ತ ಸುಮತಿಯು ಪಾರ್ಕಿನ ಹಾದಿಯನ್ನು ಹಿಡಿದೇ ಬಿಟ್ಟಳು.

ಸುಮತಿಯು ತಂದೆಗೆ ಫೋನ್ ಮಾಡಿದ್ದಾಯಿತು, “ ಒಳ್ಳೆಯದು, ಏನೂ ಅಡ್ಡಿಯಿಲ್ಲ ” ಎಂದು ಉತ್ತರವೂ ಬಂದದ್ದಾಯಿತು. ಪಾರ್ಕಿನಲ್ಲಿ ಆ ಕುರ್ಚಿ ಈ ಕುರ್ಚಿ ಎನ್ನುತ್ತ ಕೊನೆಗೆ ಯಾವ ಕುರ್ಚಿಯೂ ಮನಸ್ಸಿಗೆ ಬಾರದೆ ಹೂಗಿಡಗಳ ಮಧ್ಯದಲ್ಲಿ ಹುಲ್ಲಿನ ಮೇಲೆ ಕುಳಿತೆವು. ಎದುರಿಗೆ ಮೂಡಲಲ್ಲಿ

ಚಂದ್ರನು ಮುಗಿಲನ್ನು ಬಹು ಸಡಗರದಿಂದ ಅಲಂಕರಿಸಿರುವನು. ಸುತ್ತಲೂ ಗಿಡಗಳಲ್ಲಿ ಹೂಗಳರಳಿವೆ. "ಇಲ್ಲಿ ನೋಡಿ, ಈ ಅರಳಿದ ಹೂಗಳನ್ನು; ಬೆಳದಿಂಗಳನ್ನು ತುಂಬಿಕೊಳ್ಳುವ ಬಯಕೆಯಿಂದ ಈ ಗಿಡಗಳು ಬೆಳ್ಳಿಯ ಬಟ್ಟಲುಗಳನ್ನೊಡ್ಡಿರುವಂತೆ ಕಾಣುತ್ತಿವೆ. ಅಲ್ಲವೆ?" ಸುಮತಿಯು ಕೊಂಚ ಹಸನ್ಮುಖಿಯಾಗಿ ನುಡಿದಳು.

"ಹೌದಮ್ಮ, ನೀನು ಕವಯಿತ್ರಿಯಿರುವದು ನಿಜ." ನಾನು ಚೇಷ್ಟೆಮಾಡುತ್ತ ಉತ್ತರವಿತ್ತೆ.

ಕೂಡಲೇ ಮಾತಿನ ಪ್ರವಾಹವು ಬೇರೆಕಡೆ ಹೊರಳಿತು.

"ನನಗಿವತ್ತು ಏನಾಗಿದೆಯೋ ಏನೋ ನೋಡೀ, ಮನಸ್ಸು ಬಲು ಭಾರವಾದಂತೆ ಕಾಣುತ್ತದೆ. ತುಂಬಾ ನೀರಿನಿಂದ ತುಂಬಿದ ಮಳೆಗಾಲಧ ಮೋಡವೊಂದು ತನ್ನ ನೀರಿನ ಹೊರೆಯನ್ನಿಳಿಸಲೋಸುಗ ತಂಗಾಳಿಯ ಸೋಂಕಿಗಾಗಿ ಅತ್ತಿತ್ತ ತಿರುಗುವಂತೆ, ಮನಸ್ಸು ತನ್ನ ಬಗೆಗಳನ್ನು ಹೇಗಾದರೂ ಮಾಡಿ ಹೊರಗೆಡವಲು ಹೆಣಗುತ್ತಿರುವ ಹಾಗೆ ಇದೆ. ಆದರೆ ಅವು ಎಂತಹ ವಿಚಾರಗಳೋ! ನನಗಂತೂ ಆ ವಿಚಾರಗಳಿಗೆ ತಕ್ಕ ಶಬ್ದಗಳೇ ಇದ್ದಂತೆ ತೋರದು." ಸುಮತಿಯು ಮನಸ್ಸನ್ನು ಕೊಂಚ ಸಡಿಲು ಬಿಟ್ಟು ಮಾತನಾಡಿದಂತೆ ತೋರಿತು. ನನಗೆ ಅವಳ ಭಾಷೆಯ ಶೈಲಿಯನ್ನು ಕಂಡು ಕೊಂಚ ಕೌತುಕವೂ ಉಂಟಾಯಿತು. ಅವಳ ಹೃದಯದಲ್ಲಿ ಕಾವ್ಯದ ಬೊಕ್ಕಸವಿದೆಯೆಂದಂದುಕೊಂಡೆನು. ಸ್ವಲ್ಪ ವಿಚಾರಮಾಡಿ ಅವಳಿಗೆ ಉತ್ತರ ಕೊಟ್ಟೆ. "ನೀನನ್ನುವದು ನಿಜ. ಮನುಷ್ಯನ ಸಾಮಾನ್ಯ ವಿಚಾರಗಳನ್ನು ವ್ಯಕ್ತಪಡಿಸಲು ಭಾಷೆಯು ಪರ್ಯಾಪ್ತವಾಗಿದೆ. ಆದರೆ ಮನಸ್ಸು ಅತ್ಯುಚ್ಚ ಭಾವನೆಗಳಿಂದ ತುಂಬಿ ಬರಲು ಅವುಗಳನ್ನು ಹೊರಹಾಕಲು ಭಾಷೆಯು ಅಸಮರ್ಥವಾಗುವದು. ಅಷ್ಟೇಕೆ? ನೀನು "Home they brought their warrior dead." ಎಂಬ ಕವಿತೆಯನ್ನು ಓದಿರುವೆಯಷ್ಟೇ? ಅದರಲ್ಲಿ ಆ ಹೆಂಗಸು ತನ್ನ ಮೃತಪತಿಯ ಶವವನ್ನು ನೋಡಿ ದುಃಖದ ಉದ್ರೇಕವಾಗಲು ಮಾತನಾಡದೆ ನಿಶ್ಚಲಳಾಗಿ ಕುಳಿತುಬಿಟ್ಟಿದರ ಕಾರಣವೇನು? ಮನಸ್ಸಿನಲ್ಲಿ ಹುಟ್ಟಿದ ಭಾವನೆಗಳು ಅತಿ ಗಹನವಾಗಿದ್ದು ಭಾಷೆಯ ಮೂಲಕವಾಗಿ ಅವುಗಳನ್ನು ಹೊರಪಡಿಸಲು ಅಸಾಧ್ಯವೆಂದೇ ತಾನೇ? ದುಃಖೋದ್ರೇಕದಂತೆಯೇ ಆನಂದೋದ್ರೇಕದ ಸ್ಥಿತಿಯೂ ಇರುವದು. ಹಾಗೆಯೆ ನಿನಗಾದರೂ ಅತ್ಯಾನಂದ ಇಲ್ಲವೇ ಅತಿ ದುಃಖ ಅಥವಾ ಯಾವುದಾದರೊಂದು ಘನವಿಚಾರವುಂಟಾಗಿ ನಿನ್ನ ಮನಸ್ಸು ಇಂದು ಇಷ್ಟು ಬಿಗಿದಂತೆ ಕಾಣುತ್ತಿದೆ."

ಮಾತುಮಾತಾಡುತ್ತಲೇ ಎಲ್ಲ ಕಡೆಯಲ್ಲಿಯೂ ವಿದ್ಯುದ್ದೀಪಗಳು ಪ್ರಕಾಶಿಸತೊಡಗಿದವು. ಸುಮತಿಯು "ನಿಮ್ಮ ಮಾತುಗಳೇ ನನಗೆ ಅತಿ ಗಹನವಾಗಿವೆ." ಎನ್ನುತ್ತ ವಿಚಾರಮಗ್ನಳಾದಂತೆ ಕುಳಿತಳು. ಇಷ್ಟರಲ್ಲಿ ಅರಮನೆಯ ಸಾಯಂಕಾಲದ ಓಲಗವು ಮೊಳಗತೊಡಗಿತು. "ಏನಮ್ಮ, ಈ ರಾಗವಾವುದು ಹೇಳು ನೋಡೋಣ" ನಾನು ಕೇಳಿದೆ. "ವ್ಹಾ ಇಷ್ಟೊಂದು ಪ್ರಸಿದ್ಧ ರಾಗವು ನನಗೆ ಗೊತ್ತಿಲ್ಲವೇ! ಯಮನ ಕಲ್ಯಾಣ."

ಈ ಶಬ್ದಗಳನ್ನು ಮಾತ್ರ ಸ್ಮಿತವದನೆಯಾಗಿ ಮಾತನಾಡಿ, ಕೂಡಲೇ ಸುಮತಿಯು ತನ್ನ ಪೂರ್ವ ಸ್ಥಿತಿಯನ್ನೇ ಹೊಂದಿದಳು. ಮುಖವು ಬಾಡಿತು. ವಿಷಾದಚ್ಛಾಯೆಯು ಆ ಹಾಸ್ಯರೇಖೆಯನ್ನಾವರಿಸಿತು. ಕತ್ತಲೆಯಲ್ಲಿ ಮಿಂಚು ಹೊಳೆದು ಕತ್ತಲೆಯನ್ನು ಹೆಚ್ಚಿಸಿದಂತಾಯಿತು. ಇಂದು ಅವಳನ್ನು ಯಾವುದೋ ದುಃಖವೊಂದು ಪೀಡಿಸುತ್ತಲಿದೆ ಎಂದು ನನಗೆ ನಿಶ್ಚಯವಾಯಿತು. ಆದರೆ ಆ ಕೋಮಲ ಹೃದಯವನ್ನು ಆಘಾತಿಸದಂತೆ ಯಾವರೀತಿಯಿಂದ ಅವಳ ದುಃಖದ ಗುಟ್ಟನ್ನು ತಿಳಿಯಬೇಕೆಂಬುದನ್ನು ನಾನರಿಯೆ. ಅಂತೂ ಹೇಗಾದರೂ ಮಾಡಿ ಅವಳ ಮನದ ಬಿಗುವನ್ನು ಕೊಂಚ ಸಡಿಲಿಸಬೇಕೆಂದೆನಿಸಿತು. "ಸುಮತೀ, ನಿನಗೆ ನಾನು ಯಾವಾಗಲೂ ಹೇಳುತ್ತಲೇ ಇರುತ್ತೇನೆ. ಕಲಿಸುವಾಗ ಮಾತ್ರ ನಾನು ನಿನ್ನ ಗುರುವೇ ಹೊರತು ಉಳಿದಕಾಲದಲ್ಲಿ ನಾನು ನಿನ್ನ ಗೆಳೆಯನೇ. ಇದುವರೆಗೆ ನೀನೂ ಹಾಗೆಯೇ ನಡೆಯುತ್ತಲಿರುವೆ. ಇಂದೇ ಏಕೆ ನೀನಿಷ್ಟು ನಿನ್ನ ಹೃದಯವನ್ನು ಮುಚ್ಚಿಡುತ್ತಲಿರುವೆ? "स्निग्धजनविभक्तं दुःखं सह्यवेदनं भवति." "ನಮ್ಮ ದುಃಖವನ್ನು ನಮ್ಮ ಗೆಳೆಯರಲ್ಲಿ ಹಂಚಿ ಬಿಡಬೇಕು. ಅಂದರೆ ನಮ್ಮ ಪಾಲಿಗೆ ಉಳಿದ ದುಃಖವನ್ನು ನಾವು ಹೇಗಾದರೂ ಸಹಿಸಬಹುದು" ಎಂಬುದು ನಿನಗೆ ಗೊತ್ತಿಲ್ಲವೇ?" ಮಾತನಾಡುವಾಗ ನಾನವಳ ಕಡೆ ನೋಡುತ್ತಿದ್ದೆ. ಮುಖಮುದ್ರೆಯಿಂದ ಅವಳು ಕಿವಿಗೊಟ್ಟು ಕೇಳುತ್ತಿರುವಂತೆಯೇನೊ ತೋರಿತು. ಆದರೆ ಅವಳೇನೂ ತುಟಿಯನ್ನೆರಡುಮಾಡಲಿಲ್ಲ. ಒಮ್ಮೆ ಮೆಲ್ಲಗೆ ಮುಖವನ್ನು ಮೇಲಕ್ಕೆತ್ತಿ ನನ್ನ ಕಡೆಗೆ ನೋಡಿದಳು ಮಾತ್ರ, ಆ ನೋಟದಲ್ಲಿ ಏನು ಅರ್ಥವು ಅಡಗಿತ್ತೋ ಅದು ನನಗಂತೂ ತಿಳಿಯಲಿಲ್ಲ. ಅವಳ ಕಣ್ಣುಗಳನ್ನಾದರೂ ಸರಿಯಾಗಿ ನೋಡೋಣವೆಂದರೆ ಕನ್ನಡಕವು ಅಡ್ಡವಾಗಿತ್ತು.

ನಾನು ನಿರಾಶನಾಗಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು "ನೋಡು ಆ ಓಲಗದವನು ಯಮುನ ಕಲ್ಯಾಣವನ್ನು ಶುದ್ಧವಾಗಿ ಬಾರಿಸುತ್ತಿರುವನೇ?" ಎಂದು ಕೇಳಿದೆನು. ಸುಮತಿಯ ಕಿವಿಗಳು ಚುರುಕಾದವು. ಒಮ್ಮೆಲೆ ಒಡನುಡಿದಳು "ಅಯ್ಯೋ ನೋಡಿ. 'ಪಾನಿಗಮಗಾ' ಎಂದು ಬಿಹಾಗದ ಸ್ವರ ಸಮುದಾಯವನ್ನು ಸ್ಪಷ್ಟವಾಗಿ ತೋರಿಸುತ್ತಿರುವನು."

"ಮತ್ತೆ ?" ನಾನು ಅವಳೇ ಹೆಚ್ಚು ಮಾತನಾಡಲೆಂದು ಒಂದೇ ಒಂದು ಶಬ್ದವನ್ನು ನುಡಿದೆನು.

ಸುಮತಿಯ ಮೈಯಲ್ಲಿ ಕೊಂಚ ಚೈತನ್ಯ ಸಂಚಾರವಾದಂತಾಯಿತು. ಆ ಓಲಗದವನ ಅಶುದ್ಧ ಬಾರಿಸುವಿಕೆಯು ಅವಳಿಗೆ ಸಹನವಾಗಲೊಲ್ಲದು. ಮೆಲ್ಲಗೆ "ಗರಿಸಿರಿಸಾ, ನಿರಿಗಮಪಾರೀ, ಗನೀರಿಸಾ" ಎಂದು ಯಮುನ ಕಲ್ಯಾಣದ ಶುದ್ಧ ಸ್ವರ ಸಮುದಾಯಗಳ ಆಕಾರವನ್ನು ಗುಣುಗುಣಿಸತೊಡಗಿದಳು. ನನ್ನ ಪ್ರಯತ್ನವು ಸಫಲವಾಗಬಹುದೆಂದು ನಂಬಿ ನಾನು ಏಟ್ಟಿನ್ನದೆ, ಸುಮ್ಮನೆ ಕುಳಿತೆ. ಬರಬರುತ್ತ ಸುಮತಿಯು ಯಮುನಕಲ್ಯಾಣವನ್ನು ಚೆನ್ನಾಗಿಯೇ ಆಲಾಪಿಸಲು ಪ್ರಾರಂಭಿಸಿದಳು.

ಹೊತ್ತಿಗೆ ಸರಿಯಾದ ರಾಗ. ಸರಳ ಸಂಪೂರ್ಣರಾಗ. ಸುಮತಿಯ ಶಾರೀರವು ನಿಸರ್ಗತಃ ಮಧುರ. ಅದರಲ್ಲಿ ೪–೫ ವರ್ಷಗಳವರೆಗೆ ಅಭ್ಯಾಸವನ್ನೂ ಮಾಡಿರುವಳು. ಇವೆಲ್ಲದರ ಮೇಲೆ ಸ್ವತಃ ಸ್ಫೂರ್ತಿಯಿಂದ ಹಾಡಲು ಉಪಕ್ರಮಿಸಿರುವಳು. ಅಂದ ಮೇಲೆ ಕೇಳುವದೇನು !

"When storms of wild emotion strike the ocean of the poet's soul, from each rocky fastness, in its vastness, floats some fragment of a song." "ಕವಿಯ ಆತ್ಮರೂಪಿಯಾದ ಮಹಾಸಾಗರವನ್ನು ಉತ್ಕಟಭಾವನೆಯ ಬಿರುಗಾಳಿಗಳು ಅಘಾತಿಸಲು, ಒಂದೊಂದು ಮೂಲೆಯಿಂದಲೂ ಹಾಡುಗಳು ಹೊರಚಿಮ್ಮುವವು" ಎಂಬರ್ಥದ ಆಂಗ್ಲಕವಿಯ ವಚನಗಳು ನೆನಪಾಗತೊಡಗಿದವು.

ಬರಬರುತ್ತ ಆಲಾಪನೆಯು ವಿಸ್ತೃತವಾಗುತ್ತ, ಹೃದಯಸ್ಪರ್ಶಿಯಾದ ಮಾಧುರ್ಯದಿಂದ ಹೂವಿನ ಪಕಳಿಗಳಂತೆ ವಾತಾವರಣದಲ್ಲಿ ಅರಳಿತು. ರಸವು ಮೈಗೊಂಡು ಸುತ್ತಲಿರುವ ಗಾಳಿಯನ್ನೆಲ್ಲ ಪ್ರೇಮದಿಂದ ಮುದ್ದಿಡುವಂತೆ ತೋರಿತು. ತೋಟದ ಮೇಲಿಂದ ಬೀಸುವ ಮಂದಮಾರುತನು ಹೂಗಳ ಗಂಧವನ್ನು ತನ್ನ ಝುಳುಕಿನೊಂದಿಗೆ ತೆಗೆದುಕೊಂಡು ಬರುವಂತೆ ಸುಮತಿಯು ಮಧ್ಯದ ಸ್ವರಗಳನ್ನು ಮೃದುವಾಗಿ ಸ್ಪರ್ಶಿಸುತ್ತ ಷಡ್ಜದಿಂದ ಪಂಚಮದ ವರೆಗೂ ಪಂಚಮದಿಂದ ಋಷಭದ ವರೆಗೂ ಘರ್ಷಣಾನ್ವಿತವಾದ ಗಮಕಗಳನ್ನು ಹಾಡತೊಡಗಲು ನನ್ನ ಮನಸ್ಸು ಉಯ್ಯಾಲೆಯಾಡತೊಡಗಿತು. ಇಡಿ ವಾಯುಮಂಡಲವೇ ಆ ರಾಗದ ಮೋಹಕ್ಕೆ ವಶವಾದಂತೆ ತೋರಿತು.

"When a musician improvises on one Raga the atmosphere that he creates round him becomes truly saturated with the spirit of the Raga, and the result is delicious."

"ಗಾಯಕನು ಆತ್ಮಸ್ಫೂರ್ತಿಯಿಂದ ಆಲಾಪಿಸುತ್ತಿರುವ ರಾಗಪ್ರಭಾವದಿಂದ ಆತನ ಸುತ್ತಲಿರುವ ವಾತಾವರಣವೆಲ್ಲ ತುಂಬಿಹೋಗಿ, ಪರಿಣಾಮವು ಬಹು ಮಧುರವಾಗುವದು" ಎಂದು ದಿಲೀಪಕುಮಾರರಾಯರು ನುಡಿದುದು ನನ್ನ ನೆನಪಿಗೆ ಬಂದಿತು. ಹಾಗಲ್ಲವೆ ಕೇವಲ ಪಾಂಡಿತ್ಯದ ಕಸುವಿನಲ್ಲಿ ಸವಿಗೆ ಪ್ರಾಶಸ್ತ್ಯವನ್ನು ಕೊಡದೆ 'ಫಡಫಡ' ಎಂದು ಸದ್ದು ಮಾಡುತ್ತ ಹೋಗುವ ಮೋಟರ್ ಸೈಕಲಿನಂತೆ ಕರ್ಕಶ ತಾನಗಳನ್ನೊಳಗೊಂಡ ಸಂಗೀತವು ಕೇಳುವವರಿಗೆ ಆಶ್ಚರ್ಯಜನಕವಾಗಿದ್ದರೂ ಹೃದಯವನ್ನದು ಅಲುಕಾಡಿಸಬಲ್ಲುದೇ ?

"I pant for the Music which is divine,
My heart in its thirst is a dying
flower;
Pour forth sound like enchanted wine,
Loosen the notes in a silver shower."

"ನನ್ನ ಹೃದಯಕುಸುಮವು ಆ ಸ್ವರ್ಗೀಯ ಸಂಗೀತಕ್ಕಾಗಿ ನೀರಡಿಸಿದೆ. ಮೋಹಕಮಧುವಿನಂತಿರುವ ಆ ಸಂಗೀತ ಸ್ವರಗಳ ಸವಿಮಳೆಯಾಗಲಿ" ಎಂದು ಶೆಲೆಕವಿಯು ಉದ್ಗಾರವನ್ನು ತೆಗೆದಾಗ ಇಂಥ ಭಾವನೋದ್ಭೂತ ಸಂಗೀತ ಸ್ವರಗಳೇ ಆತನ ಕಿವಿಗಳಲ್ಲಿ ಸುತ್ತುತ್ತಿರಬೇಕು. ಬೆಡಗಿನ ಮಾಟಗಾರ್ತಿ

ಯೋರ್ವಳು ನೊರೆದುಂಬಿದ, ಹೊಳೆಯುವ, ಗುಂಜಿಸುವ ದ್ರಾಕ್ಷಾರಸಭರಿತ ಬಟ್ಟಲವನ್ನು ತುಟಿಯ ವರೆಗೆ ತಂದು ತನ್ನ ಅಮೋಘ ಚುಂಬನಗಳಿಂದ ಪ್ರೇಮದೂಟಕ್ಕೆ ಔತಣವನ್ನೀಯು ವಾಗ ಮೈಮರೆತುಬಿಡುವ ಪ್ರೇಮಿಯ ಸ್ಥಿತಿಯೇ ಸಂಗೀತ ಶ್ರೋತೃವಿನ ಮನಃಸ್ಥಿತಿಯಂತೆ. ಇರಲಿ.

ಆಲಾಪದ ಅಂಗವೊಂದು ಮುಗಿಯುವ ಸಮಯದಲ್ಲಿ, " Beautiful " ಎಂದು ಮೈಮರೆತು ಒಡನುಡಿದು ಬಿಟ್ಟೆನು. ಅತ್ತ ಅವಳ ಹಾಡಿಕೆಯೂ ಒಂಮೆಲೆ ನಿಂತು ಹೋಯಿತು. ನನಗೆ ಸುಧಾರಸದ ಎರಡು ಮೂರು ಹನಿ ಗಳನ್ನು ಸವಿಯುವದರೊಳಗಾಗಿಯೇ ಬಟ್ಟಲು ಕೈಜಾರಿ ಬಿದ್ದಂತಾಯಿತು. ಅವಳನ್ನು ಹೊಗಳಿದುದು ಮೂರ್ಖತನ ವಾಯಿತೆಂದುಕೊಂಡೆನು.

" घातः किं नु विधे विधातुमुचितो धाराधराडंबरः "

" ತಿಂಗಳನು ಕಂಗೊಳಿಸೆ, ಕನ್ನೈದಿಲೆಗಳು ಅರಳಿ, ಮಾನ ವತಿಯರು ಮಾನಬಿಟ್ಟು ಪ್ರಿಯಸಂಗಮೋತ್ಸುಕರಾಗುತ್ತಿರಲು, ಹೇ ಬ್ರಹ್ಮಾ, ಆಕಾಶದಲ್ಲಿ ಮೋಡವು ಮುಸುಕುವಂತೆ ಮಾಡುವದು ನ್ಯಾಯವೇ ? " ( ಜಗನ್ನಾಥ )

ನನ್ನ ಪ್ರಶಂಸೆಯಿಂದ ಅವಳ ಮನಸ್ಸಿಗೆ ಆನಂದವಾದರೂ ಹೊರಗೆ ಮಾತ್ರ ಕೊಂಚ ರೇಗಿದವಳಂತೆ ಮೊಳಕಾಲೂರಿ ಕುಳಿತುಕೊಂಡು, ಸಣ್ಣ ಮಕ್ಕಳಂತೆ " ಹೋಗೀ ! ಸೀವು ನಾನು ಹಾಡುವಾಗೆಲ್ಲ ಹೀಗೆಯೇ ಚೇಷ್ಟೆಮಾಡುತ್ತೀರಿ, ಎಷ್ಟು ಅಶುದ್ಧವಾಗಿ ಹಾಡಿದೆನೋ ಏನೋ, ಅದನ್ನು ನೀವು ತೋರಿಸುವದೇ ಇಲ್ಲ. " ಎನ್ನುತ್ತ ನನ್ನ ಹೆಗಲಿನ ಮೇಲೆ ಮೃದುವಾಗಿ ಹೊಡೆದಳು. " ಅಯ್ಯೋ ! ಹುಚ್ಚು ಹುಡಿಗೀ, ಹೀಗೇಕೆ ಸಣ್ಣ ಮಗುವಿನಂತೆ ಕುಣಿದಾಡುತ್ತಿರುವೆ ? ನೀನು ನಿಜವಾಗಿಯೇ ಚೆನ್ನಾಗಿ ಹಾಡಿದೆ. ನಾನು ನಿನ್ನ ಮುಖಸ್ತುತಿ ಯನ್ನೇನೂ ಮಾಡಲಿಲ್ಲ. ಅದರಿಂದ ನನಗಾಗುವ ಲಾಭವೇನು?" ಎಂದು ಅವಳಿಗೆ ಸಮಾಧಾನ ಹೇಳಿದೆ.

ಅಂತೂ ಕೊನೆಗೆ ಸುಮತಿಯು ನಗುಮೊಗದವಳಾದಳು. ನನ್ನ ಪ್ರಯತ್ನವು ಸಫಲವಾಯಿತೆಂದುಕೊಂಡೆ. ಹೊತ್ತು ಬಹಳವಾಗಿತ್ತು. ಪಾರ್ಕಿನಲ್ಲಿ ನಮ್ಮಿಬ್ಬರನ್ನು ಬಿಟ್ಟು ಎಲ್ಲರೂ ಹೊರಟು ಹೋಗಿದ್ದರು. ಚಂದ್ರನೊಬ್ಬನು ಮಾತ್ರ ಮಂದ ಹಾಸದಿಂದ ಈ ನಿಷ್ಕಲ್ಮಷಭಾವದ ಲೀಲೆಯನ್ನು ನೋಡುತ್ತ ತಟಸ್ಥನಾಗಿರುವಂತೆ ತೋರಿತು. ತಡವಾಯಿತೆಂದು " ನಡೆ, ಹೊರಡೋಣ" ಎಂದೆನು. " ವ್ಹಾ ! ಹೊರಟಿರಲ್ಲಾ ! ' अब जिगर थाम कि बैठ मेरी बारी आई ' * ಎಂದು ಕೊಳ್ಳಿ, ಸ್ವಾಮೀ ! ಈಗ ನನಗೆ ಹಾಡು ಕೇಳಿಸದೆ ಬಿಟ್ಟು ಹೋಗುವದೆಂತು ? " ಎನ್ನುತ್ತ ಏಳುವದರಲ್ಲಿರುವ ನನ್ನನ್ನು ಕೂಡಿಸಿಬಿಟ್ಟಳು.

" ವಾರೇವ್ಹಾ ! ಅಲ್ಲೇ, ಇದು ವರೆಗೆ ಬಿಮ್ಮನೆ ಬಿಗಿದು ಗುಮ್ಮನಗುಸಗಳಂತೆ ಕೂತವಳು ಈಗಾಗಲೇ ಇಷ್ಟೊಂದು ಕುಣಿತ ! " ಎಂದು ನಾನು ಚೇಷ್ಟೆಮಾಡಿದೆ.

" ನಿಜಕಣ್ರೀ ! ನೀವು ಹೇಳುವುದು. ಹಾಡುತ್ತ ಹಾಡುತ್ತ ನನ್ನ ಮನಸ್ಸು ತುಂಬಾ ಹಗುರಾಗತೊಡಗಿತು. ಈಗಿನ ನನ್ನ ಮನಸ್ಸಿನ ಸ್ಥಿತಿಗೂ ಆಗಿನ ಸ್ಥಿತಿಗೂ ಇರುವ ವ್ಯತ್ಯಾಸವನ್ನು ನೋಡಿದರೆ ನನ್ನದು ನನಗೇ ತುಂಬಾ ಆಶ್ಚರ್ಯವಾಗುತ್ತದೆ" ಎಂದಳು. ನಾನು ಉತ್ತರವಿತ್ತೆ, " ಅದರ ಕಾರಣವು ನಿನಗೆ ಗೊತ್ತುಂಟೋ ? ನೀನು ಹೇಳಿದಂತೆ ಮನಸ್ಸಿನಲ್ಲಿ ತುಂಬಿದ್ದ ಭಾಷೆಯ ಮೂಲಕ ಹೊರಪಡಿಸಲು ಅಸಾಧ್ಯವಾದ ಆ ನಿನ್ನ ಘನ ವಿಚಾರಗಳು ನೀನು ಹಾಡುತ್ತಿರುವಾಗ ಸ್ವರಗಳೊಂದಿಗೆ ಹೊರಹೊರಟು ಹೋಗಿರಬೇಕು. ಅಂತೆಯೇ ಮಳೆಯ ಹೊರೆಯಿಂದ ಬಿಡುಗಡೆಯನ್ನು ಹೊಂದಿದ ಮೋಡದಂತೆ ನಿನ್ನ ಮನಸ್ಸು ಹಗುರಾಗಿ ನೀನಿಷ್ಟು ಆನಂದವನ್ನು ಹೊಂದಿ ರುವೆ. ' Music expresses what words cannot' 'ಭಾಷೆಯು ಹೇಳಲಾರದ್ದನ್ನು ಸಂಗೀತವು ಹೊರ ಪಡಿಸುತ್ತದೆ ' ಎಂಬ ರವೀಂದ್ರರ ವಾಣಿಯು ನಿನ್ನ ಅನುಭವಕ್ಕೆ ಬಂದಂತಾಯಿತೇ ? "

" ಒಳ್ಳೇ ಕಷ್ಟಕ್ಕೆ ಬಂತಲ್ಲಪ್ಪ ! ಪ್ರತಿಯೊಂದು ಮಾತಿನ ಮೇಲೆಯೂ ನಿಮ್ಮ Philosophising ಇದ್ದೇ ಇದೆಯೇ!" ಸುಮತಿಯು ಕೊಂಚ ಬೇಜಾರದಿಂದ ನುಡಿದಳು.

---

* ಸಾಕಿದ ಗಿಳಿಯೊಡನೆ ವಿನೋದಮಾಡುತ್ತ ಕುಳಿತ ಯುವತಿಯೊಬ್ಬಳು ಕೂಡಲೇ ಪತಿಯು ಮನೆಗೆ ಬರಲು, ಇದುವರೆಗೆ ತನ್ನ ವಿನೋದ ವಿಷಯ ವಾದ ಗಿಳಿಯು ಬದಲಾಗಿ ತಾನೀಗ ತನ್ನ ನಲ್ಲನ ವಿನೋದ ವಿಷಯವಾಗುವ ಪಾಳಿಯು ಬಂದಿತೆಂದು ಗಿಳಿಯನ್ನು ಬಿಟ್ಟು ಅದಕ್ಕೆ " ಈಗ ಸಾಕು ಕೂಡು, ಇನ್ನು ನನ್ನ ಪಾಳಿಯು ಬಂದಿತು " ಎನ್ನುತ್ತಾಳೆ.

"ಇಲ್ಲ, ಸುಮತೀ, ನಾನೀಗ ಚೇಷ್ಟೆಮಾಡುವುದಿಲ್ಲ. ನಾನು ಎಷ್ಟೋ ಸಾರೆ ಈ ವಿಷಯದ ಮೇಲೆ ವಿಚಾರಮಾಡಿರುವೆನು, ಓದಿರುವೆನು, ಅನುಭವಿಸಿರುವೆನು. ಇದೊಂದು ನನ್ನ ಸಿದ್ಧಾಂತವಾಗಿದೆ. ಭಾಷಾತೀತವಾದ ಮನುಷ್ಯನ ಭಾವನೆಗಳನ್ನು ವ್ಯಕ್ತಪಡಿಸಲು ಸಂಗೀತವೇ ಪರಮ ಯೋಗ್ಯ ಸಾಧನವು.

"वाचामगोचरा भावा जायन्ते ये नृचेतसि
तेषां भवत्यभिव्यक्तिः संगीते सुस्वरात्मके ॥" *

ಈ ವಿಷಯದಲ್ಲಿ ಡಾರ್ವಿನ್‌ನ ವಿಚಾರವೂ ಗ್ರಾಹ್ಯವಾಗಿದೆ.

'If mankind acquired musical notes for the sake of charming the opposite sex, musical notes would of necessity be firmly associated with some of the strongest passions an animal is capable of feeling and would consequently be used instinctively or through association when strong emotions were expressed in speech." Descent of Man, Part III, ch. XIX.

"'ತನ್ನ ಬಲವತ್ತರ ಭಾವನೆಗಳನ್ನು ಭಾಷೆಯ ಮೂಲಕ ಹೊರಪಡಿಸುವಾಗ ಮಾನವ ಜಾತಿಯಿಂದ ಸಂಗೀತ ಸ್ವರಗಳು ಉಪಯೋಗಿಸಲ್ಪಡುತ್ತವೆ' ಎಂಬ ಆತನ ಅಭಿಪ್ರಾಯವು ನನ್ನ ವಿಚಾರಕ್ಕೆ ಪುಷ್ಟಿಯನ್ನು ಕೊಡುತ್ತದೆ. ಅಂತೆಯೇ ಭಾಷಾತೀತನಾದ ಪರಮೇಶ್ವರನ ಅನಂತ ಕಲ್ಯಾಣಗುಣಗಳ ವಿಷಯವಾಗಿ ಹೃದಯವು ಉಕ್ಕೇರಿ ಬರಲು ನಮ್ಮ ಋಷಿಗಳು ವೇದಗಳನ್ನು ಹಾಡಿರುವರು; ಮಾತನಾಡಿಲ್ಲ. ಹಾಗೆಯೇ ಅತ್ಯುಚ್ಚ ತತ್ವಗಳನ್ನು ಪರಿಣಾಮಕಾರಿಯಾಗಿ ಅರ್ಜುನನಿಗೆ ಬೋಧಿಸಬೇಕೆಂದು ಶ್ರೀಕೃಷ್ಣನು ತನ್ನ ಸಂದೇಶವನ್ನು ಹಾಡಿರುವನು; ವ್ಯಾಖ್ಯಾನವನ್ನು ಕೊಟ್ಟಿಲ್ಲ. ಭಗವದ್ಗೀತೆಯೇ ಹೊರ್ತು ಭಗವದ್ವಚನವಲ್ಲ. ಸಂಗೀತದಲ್ಲಿ ಇಂಥ ಪರಿಣಾಮವಿದೆ. ಇಂಥ ಚಿತ್ರೈಕಾಗ್ರತೆಯಿದೆ. 'We can concentrate greater intensity of feeling in a single musical note than in pages of writing' ಎಂದು ಓರ್ವ ಆಂಗ್ಲನು ಯಥಾರ್ಥವಾಗಿ ಸಾರಿರುವನು." ಹೀಗೆ ನನ್ನ ಮಾತಿನ ಪ್ರವಾಹವು ತಡೆಯಿಲ್ಲದೆ ನಡೆದಿತ್ತು. ಸುಮತಿಯು ಅಷ್ಟರಲ್ಲಿಯೇ ತಡೆದು ನುಡಿದಳು. "ಸರಿ, ಸರಿ, 'यतो वाचो निवर्तन्ते अप्राप्य मनसा सह.' ಪರಮೇಶ್ವರನು ಮಾತಿಗೆ ನಿಲುಕನು. ಆತನ ವಿಷಯವಾಗಿ ಮನಸ್ಸಿನಲ್ಲಿ ಹುಟ್ಟುವ ವಿಚಾರಗಳೂ ಮಾತಿನ ಮೇರೆಯನ್ನು ಮೀರಿರಲೇ ಬೇಕು. ಸಂಗೀತವಾದರೋ ಇಂಥ ವಿಚಾರಗಳ ವ್ಯಂಜಕವು. ಅಂತೂ ಪರಮೇಶ್ವರಸಾಕ್ಷಾತ್ಕಾರರೂಪವಾದ ಧ್ಯೇಯವನ್ನು ಸಾಧಿಸಲು ಸಂಗೀತವು ಶ್ರೇಷ್ಠಸಾಧನವು. ಇದೇ ನಿಮ್ಮ Logic ಸರಿ ತಾನೆ?"

ಸುಮತಿಯ ಮಾತುಗಳನ್ನು ಕೇಳಿ ನನಗಾನಂದವಾಯಿತು. ಅವಳು ನನ್ನ ಮಾತುಗಳ ಗರ್ಭಿತಾರ್ಥವನ್ನು ಸರಿಯಾಗಿ ಕಂಡು ಹಿಡಿಯುವಷ್ಟು ಮಾತಿನ ಕಡೆಗೆ ಲಕ್ಷ್ಯಗೊಟ್ಟಿದುದು ನನಗೆ ತುಂಬಾ ಸಮಾಧಾನವನ್ನುಂಟುಮಾಡಿತು. "ಬೇಷ್. ಸರಿಯಾಗಿ ಹೇಳಿದೆ. 'तत्साधनाय गायन्त्याचार्याः' ಎಂದು ನಾರದರು ಪರಮೇಶ್ವರಭಕ್ತಿಗೆ ಸಂಗೀತವು ಸಾಧನವೆಂದುಪದೇಶಿಸಿರುವರು."

ಇಲ್ಲಿಗೆ ನನ್ನ ಮಾತುಗಳು ತಮ್ಮ ಕೊನೆಯ ಗುರಿಯನ್ನು ಕಂಡವು. ಆದರೆ ಸುಮತಿಯೇಕೋ ಅತೃಪ್ತಳಾದಂತೆ ತೋರುವಳು. "ಮಾಷ್ಟರಸಾಹೇಬ್, ನನಗೊಂದು ಸಂಶಯವಿದೆ. ಈ ವಿಷಯದಲ್ಲಿ ಭಾಷೆಯ ಉಪಯೋಗವೆಲ್ಲಿಯವರೆಗಿದೆ? ಅದರ ಸ್ಥಾನವಾವುದು? ಅಥವಾ ಭಾಷೆಯು ಬೇಡವೇ ಬೇಡವೆಂದು ಹೇಳುವಿರೋ? ಏನು ಕೇಳ್ತೀರಿ! ನೀವೆಲ್ಲ extremists ತಾನೇ?"

ಸುಮತಿಯ ವಿನೋದಯುಕ್ತ ಗಾಂಭೀರ್ಯವು ನಿಜವಾಗಿಯೂ ಹೊಗಳುವಂತಿದ್ದಿತು. ನಾನು ಆನಂದದಿಂದ ನನ್ನ ವಿಚಾರಗಳನ್ನು ಹೇಳತೊಡಗಿದೆ. "ಸುಮತೀ, ಭಾಷೆಯು ಪೂರ್ಣತಯಾ ಭಾವನಾವ್ಯಂಜಕವಲ್ಲದಿದ್ದರೂ ಭಾವನೆಗಳ ದಿಗ್ದರ್ಶನಕ್ಕಾಗಿ ಬೇಕೇಬೇಕು. ಸಂಗೀತದಲ್ಲಿರುವ ಅನಂತ ಭಾವನಾವ್ಯಂಜಕತ್ವದಿಂದ ಮನುಷ್ಯನು ದಿಕ್‌ಶೂನ್ಯನಾಗಬಾರದೆಂದೂ, ಹಾಡುವಾಗ ಯಾವ ಭಾವನೆಗೆ ಪ್ರಾಧಾನ್ಯವಿದೆಯೆಂಬುದನ್ನು ಸ್ಪಷ್ಟತಯಾ ತೋರಿಸಲೋಸ್ಕರವೂ ಸಂಗೀತದಲ್ಲಿ ಭಾಷೆಯ–ಪದಗಳ–ಹಾಡುಗಳ ಅವಶ್ಯಕತೆಯಿದೆ. ಈ

* ಇದನ್ನು ಯಾವ ಗ್ರಂಥರಾಜದಲ್ಲಿಯೂ ಹುಡುಕಲು ಹೊರಡಬಾರದು. ಈ ಸ್ವಕಪೋಲಕಲ್ಪನೆಗಾಗಿ ವಿದಗ್ಧರ ಕ್ಷಮೆಯನ್ನು ಕೋರುತ್ತೇನೆ.

ಅನಂತಾರ್ಥತೆಯನ್ನು ತಿಳಿಯದೆ ಕೆಲವರು ಅರ್ಥವಿಲ್ಲದುದು, Vague, indefinite ಎಂದು ಸಂಗೀತವನ್ನು ಹೀಯಾಳಿಸುವದುಂಟು. ಅನಂತಗುಣಾಧಾರನಾದ ಪರಮೇಶ್ವರನಿಗೆ ನಿರ್ಗುಣನೆಂದಂತೆಯೇ ಸರಿ. ಮನುಷ್ಯನು ತನ್ನ ಬುದ್ಧಿಗೆ ನಿಲುಕದ ವಿಷಯವು ಇಲ್ಲವೇ ಇಲ್ಲವೆನ್ನುವುದು ಸ್ವಾಭಾವಿಕ. ಏನೇ ಇರಲಿ; Vague and indefinite ಆಗಿರುವುದೇ ಸಂಗೀತದ ಮಹತ್ವಪೂರ್ಣವಾದ ಲಕ್ಷಣವೆನ್ನಬಹುದು. ” “ ವಹವ್ವಾ ! ಮಾತನಾಡುತ್ತಾಡುತ್ತಾ ಮತ್ತಗೆ ಅದ್ವೈತ ಮತಕ್ಕೆ ಡೋಜ್ (doze) ಕೊಡಬೇಕೆಂಬ ವಿಚಾರಮಾಡಿದಂತೆ ತೋರುತ್ತದೆ. ಇರಲಿ; ಇಂದು ನೀವು ಸಂಗೀತದ ವಿಷಯವಾಗಿ ಸಂಗ್ರಾಸು ಮಾಡಲು ಪೂರ್ಣವಾಗಿ ಅಣಿಯಾಗಿ ಬಂದಂತೆ ತೋರುತ್ತದೆ. ” ಸುಮತಿಯು ತನ್ನ ಶೈಲಿಯಲ್ಲಿ ನುಡಿದಳು.

ಕೊನೆಗೆ ಸುಮತಿಯ ಆಗ್ರಹಕ್ಕಾಗಿ ಭೂಪರಾಗವನ್ನು ಆಲಾಪಿಸಲೇಬೇಕಾಯಿತು. ಆದರೆ ಕೊಂಚ ಹೊತ್ತಿನಲ್ಲಿಯೇ ಮುಗಿಸಿ “ ಸುಮತಿ, ಏಳಿನ್ನು ಬಹಳ ಹೊತ್ತಾಯಿತು. ಹೊರಡು ಮನೆಗೆ ” ಎನ್ನುತ್ತ ನಾನೆದ್ದೆನು. ಸುಮತಿಯು ನಿರುಪಾಯಳಾಗಿ ಜೊತೆಯಲ್ಲಿ ಹೊರಟಳು.

---

## ತಾಯಿ

( ಸಂಪಾದಕರಿಗೆ:—ನನಗೆ ಹದಿಮೂರು ಹದಿನಾಲ್ಕು ವಯಸ್ಸಿನ ತಂಗಿಯೊಬ್ಬಳಿದ್ದಳು. ನಾನು ಮೈಸೂರು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ “ ಶ್ರೀ ಕಿಶೋರಚಂದ್ರವಾಣಿ ” “ ಶ್ರೀನಿವಾಸ ” ಇವರುಗಳಿಂದ ರಚಿತವಾದ ಕವಿತೆಗಳನ್ನು ಆಕೆಗೆ ಓದಲು ಕೊಡುತ್ತಿದ್ದೆನು. ಆಕೆಯು ಕನ್ನಡ ಐದನೆಯ ತರಗತಿಯಲ್ಲಿ ಓದುತ್ತಿದ್ದಳು. ಹೀಗೆ ಕೊಟ್ಟ ಕವಿತೆಗಳನ್ನು ಆಕೆಯು ಎಡಬಿಡದೆ ಓದುತ್ತಿದ್ದಳು ಆಕೆಗೆ ಪದ್ಯವೆಂದರೆ ಪ್ರಾಣ. ಜೈಮಿನಿ, ನಾರಣಪ್ಪ ಮೊದಲಾದವರ ಕಾವ್ಯಗಳನ್ನು ಕಷ್ಟಪಟ್ಟು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದಳು.

ಆದರೆ ದೇವರು ಅಮೂಲ್ಯವಾದ ವಸ್ತುಗಳನ್ನು ನಮ್ಮಲ್ಲಿ ಬಹಳ ದಿನ ಬಿಡುವುದಿಲ್ಲ. ಹೋದವರ್ಷ ಜುಲೈ ತಿಂಗಳಲ್ಲಿ ನನ್ನ ತಂಗಿಯು ಕಾಲಾಧೀನವಾದಳು. ನಮ್ಮ ಮನೆಯ ಜ್ಯೋತಿಯು ನಂದಿ ಹೋಯಿತು. ಪ್ರಪಂಚವು ಕಾಡಾಯಿತು. ಆಕೆಯ ಕವಿತೆಯ ಕಾಗದಗಳಲ್ಲಿ ಇದೊಂದು ದೊರಕಿತು.

ಇತಿ ತಮ್ಮ

—ವಿ. ಆರ್. ರತ್ನಗಿರಿ)

ಗಿರಿಗಳಾ ಎಡೆಯಲ್ಲಿ ತರುಗಳಾ ನೆರಳಲ್ಲಿ,
ತೊರೆಗಳಾ ಮರಳಲ್ಲಿ ಆಡಿಸಿದಳವಳು ;
ತಿಂಗಳಿನ ಬೆಳಕಿನಲಿ ಅಂಗಳದ ತೋಟದಲಿ,
ಮುದದಿಂದ ಜೋಗುಳವ ಪಾಡಿದವಳವಳು.

ಮುಳುಗಲಾ ದಿನದಿನಕೆ ಶೈಶವದ ಪೆಂಪು,
ಮುಸುಕಲಾ ಸರಸರನೆ ಯೌವನದ ಮಂಜು,
ಮುಸುಕಿದಾ ಮುಸುಕಿನಲಿ ನೇಸರನು ತೋರ್ದಳವಳು.

ಪುಟ್ಟಿದಾ ದಿನದಿಂದ ಇನಿತು ಕಾಲವು ಕಳೆಯೆ,
ನಂದುವೀ ಬದುಕಿನಲಿ ಮುದವೆಂದು ಕಾಣದಿರೆ,
ಶಾಂತತೆಯ ಸೀಪಾಲ ನೀಡಿದವಳವಳು.

—“ ರತ್ನಾಂಬಾ ”

---

ಕವಿಸಮ್ರಾಟ್ ರವೀಂದ್ರನಾಥ ಠಾಕೂರ ಮಹಾಶಯರು
ಬಂಗಾಳಿಯಲ್ಲಿ ಬರೆದ

# ರಾಜರ್ಷಿ

ಕಾದಂಬರಿಯ ಕನ್ನಡ ಅನುವಾದವು

ಅನವಾದಕರುಃ – ಶ್ರೀ. ಕೃ. ಶ್ರೀ. ಬೆಟಗೇರಿ, ಬೆಳಗಾಂವಿ

## ೨೫ ನೆಯ ಪರಿಚ್ಛೇದ

ಬ್ರಹ್ಮಪುತ್ರಾ ನದಿಯ ತೀರದಲ್ಲಿ ಗುಜರವಾಡವೆಂಬುದೊಂದು ಚಿಕ್ಕ ಹಳ್ಳಿಯು. ಅಲ್ಲಿ ಸಣ್ಣ ಉಂಬಳಿಗಾರನೊಬ್ಬನು ಇರುವನು. ಆತನಿಗೆ ಪೀತಾಂಬರರಾಯನೆಂದು ಹೆಸರು. ಹೆಸರಿಗೆ ಮಾತ್ರ ಉಂಬಳಿಗಾರನವನು. ಇದ್ದರೂ ಇಲ್ಲದಷ್ಟು ಆತನ ಉಂಬಳಿಯ ಹೊಲಮನೆಗಳು. ಆದರೂ ಪೀತಾಂಬರರಾಯನು ತನ್ನ ಬೀಳಲಾದ ಹಳೆಯ ಮನೆಯ ಹಜಾರದಲ್ಲಿ ಕುಳಿತುಕೊಂಡು ದೊರೆಯೆಂದು ತನ್ನನ್ನು ಕರೆಯಿಸಿಕೊಳ್ಳುತ್ತಿರುವನು. ಆತನ ದೊರೆತನದ ಮಹಿಮೆಯು ಮಾವು ಬೇವು ಬಸಿರಿ ಮರಗಳಿಂದ ಬಳಸಿದ ಆ ಕಿರಿಯ ಕಡೆವಳ್ಳಿಯಲ್ಲಿ ಮಾತ್ರ ಮೆರೆಯುತ್ತಿದ್ದಿತು. ಆತನ ಕೀರ್ತಿಯ ಗೀತವು ಆ ಹಳ್ಳಿಯ ಸುತ್ತಣ ಮರಮೆಳೆಗಳಲ್ಲಿ ಮರುದನಿಗೊಂಡು ಹಳ್ಳಿಯ ಮೇರೆಯನ್ನು ಮೀರುತಿರುವಾಗಲೆ ಮರೆಯಾಗಿ ಹೋಗುವುದು. ಜಗತ್ತಿನಲ್ಲಿಯ ದೊಡ್ಡ ದೊಡ್ಡ ದೊರೆಗಳ ಪ್ರಖರ ಪ್ರತಾಪವು ಮರಗಳ ನೆರಳಲ್ಲಿ ಮರೆಗೊಂಡಿರುವ ಈ ಗೂಡನ್ನು ಬಂದು ತಲುಪುವುದೆಂದರೆ ಅಚ್ಚರಿಯ ಮಾತಾಗಿದ್ದಿತು. ತ್ರಿಪುರದ ದೊರೆಗಳು ತೀರ್ಥಸ್ನಾನಕ್ಕೆಂದು ಬಂದಾಗ ವಾಸಮಾಡಲಿಕ್ಕೆಂದು ಕಟ್ಟಿಸಿದ ದೊಡ್ಡದೊಂದು ಅರಮನೆಯು ಮಾತ್ರ ಹೊಳೆಯ ತಡಿಯಲ್ಲಿರುವುದು. ಅದೆಷ್ಟೋ ದಿನಗಳಿಂದ ತ್ರಿಪುರದ ಯಾವ ರಾಜನೂ ತೀರ್ಥಸ್ನಾನಕ್ಕೆ ಬಂದಿರಲಿಲ್ಲ. ಆದುದರಿಂದ ತ್ರಿಪುರದ ದೊರೆಗಳನ್ನು ಕಂಡವರು ಆ ಹಳ್ಳಿಯಲ್ಲಿ ಇರಲೇ ಇಲ್ಲವೆಂದು ಹೇಳಬಹುದು. ಇದ್ದರೂ ಆ ರಾಜರ ವಿಷಯಕವಾದ ಕೇಳಿಕೆಯ ಮಾತುಗಳೆಷ್ಟೋ ಆ ಹಳ್ಳಿಗರ ಬಾಯಲ್ಲಿ ಆಡುತ್ತಿದ್ದುವು.

ಭಾದ್ರಪದ ಮಾಸವು ಬಂದಿತು. ತ್ರಿಪುರದ ರಾಜಪುತ್ರನೊಬ್ಬನು ನದಿಯ ತೀರದ ಅರಮನೆಯಲ್ಲಿರಲು ಬರುವನೆಂಬ ವಾರ್ತೆಯು ಹಳ್ಳಿಯಲ್ಲೆಲ್ಲ ಹರಡಿತು. ಕೆಲವು ದಿನಗಳ ತರುವಾಯ ದೊಡ್ಡ ದೊಡ್ಡ ಮುರಿಗೆಯ ಮುಂಡಾಸಗಳನ್ನು ತಲೆಗೆ ಕಟ್ಟಿಕೊಂಡ ಜನರನೇಕರು ಬಂದು ಅರಮನೆಯಲ್ಲಿ ತುಂಬಿಬಿಟ್ಟರು. ಒಂದು ವಾರವು ಕಳೆದು ಹೋಯಿತು. ಬಳಿಕ ಆನೆ ಕುದುರೆ ಕಾಲಾಳುಗಳನ್ನು ಕೂಡಿಕೊಂಡು ನಕ್ಷತ್ರರಾಯನೇ ಗುಜರವಾಡಕ್ಕೆ ಬಂದು ಬಿಟ್ಟನು. ಈ ವಿಜೃಂಭಣೆಯನ್ನೆಲ್ಲ ನೋಡಿ ಹಳ್ಳಿಗರು ಬೆಚ್ಚಿ ಬೆರಗುಗೊಂಡರು. ಇದುವರೆಗೆ ಪೀತಾಂಬರನೇ ರಾಜಾಧಿರಾಜನೆಂದು ಅವರೆಲ್ಲರ ಮನದೆಣಿಕೆ. ಇಂದು ಅದೆಲ್ಲವೂ ಮಾಯವಾಯಿತು. ನಕ್ಷತ್ರರಾಯನನ್ನು ನೋಡಿ ಜನರೆಲ್ಲರೂ ಒಂದೇ ದನಿಯಲ್ಲಿ ಮಾತನಾಡಿದರು. “ ಸರಿ ಸರಿ ! ರಾಜಪುತ್ರನೆಂದರೆ ಹೀಗಿರಬೇಕು. ”

ನಕ್ಷತ್ರರಾಯನ ಬರುವಿಕೆಯಿಂದ ಪೀತಾಂಬರನ ದೊರೆತನವೂ ಹಳ್ಳಿಯ ಮನೆಯ ಹಜಾರವೂ ಇದ್ದರೂ ಇಲ್ಲದಂತಾದುವು. ಆದರೂ ಪೀತಾಂಬರನ ಆನಂದಕ್ಕೆ ಅಳತೆಯಿಲ್ಲ. ನಕ್ಷತ್ರರಾಯನ ದೊರೆತನದ ಯೋಗ್ಯತೆಯನ್ನು ಯೋಚಿಸಿ ನೋಡಿದನು. ತನ್ನ ಚಿಕ್ಕದಾದ ದೊರೆತನವನ್ನು ನಕ್ಷತ್ರರಾಯನ ಅಡಿಗಳಿಗೆ ಮುಡಿಪಾಗಿ ಸಲ್ಲಿಸಿ ಕೃತಕೃತ್ಯನಾದನು. ಆನಂದಸಾಗರದಲ್ಲಿ ಆರಾಟವಾಡಿದನು. ಎಂದಾದರೂ ನಕ್ಷತ್ರರಾಯನು ಆನೆಯನ್ನೇರಿ ಹೊರಟರಾಯಿತು. ಪೀತಾಂಬರರಾಯನು ತನ್ನ ಹಳ್ಳಿಗರನ್ನು ಕೂಗಿ ಕೂಗಿ ಕರೆದು ಹೇಳುವನು. “ ನೀವು ದೊರೆಯನ್ನು ನೋಡಿದ್ದೀರೋ? ಇದು ನೋಡಿ! ಈತನೇ ದೊರೆ ! ” ಕಾಯಿಪಲ್ಲೆ, ಹಣ್ಣುಹಂಪಲಗಳನ್ನೂ ಬೇರೆ

ತಿಂಡಿ ತಿನಿಸುಗಳನ್ನೂ ಕಾಣಿಕೆಯಾಗಿ ತೆಗೆದುಕೊಂಡು ಪೀತಾಂಬರನು ನಕ್ಷತ್ರರಾಯನನ್ನು ಕಾಣಲು ಬರುವನು. ನಕ್ಷತ್ರರಾಯನ ಎಳೆಯ ಕಳೆಯ ಚೆಲುವಾದ ಬಟ್ಟಮೊಗವನ್ನು ನೋಡಿದಾಗೆಲ್ಲ ಪೀತಾಂಬರನ ಸ್ನೇಹರಸವು ಉಕ್ಕಿ ಬರುವುದು. ಈಗ ನಕ್ಷತ್ರರಾಯನೇ ಆ ಹಳ್ಳಿಗೆ ದೊರೆಯಾದನು. ಪೀತಾಂಬರನು ಪ್ರಜಾವರ್ಗದಲ್ಲಿ ಸೇರಿಹೋದನು.

ದಿನದಿನವೂ ಮೂರುಸಲ ನೌಬತ್ತು ಮೊಳಗತೊಡಗಿತು. ಹಳ್ಳಿಯ ಹಾದಿ ಬೀದಿಗಳಲ್ಲಿ ಆನೆ ಕುದುರೆಗಳ ಗುಂಪು ಅಲೆದಾಡಲಾರಂಭಿಸಿತು. ಹಳೆಯ ಅರಮನೆಯ ಹೆಬ್ಬಾಗಿಲಲ್ಲಿ ಬಿಚ್ಚುಗತ್ತಿಗಳ ಕೋಲುಮಿಂಚು ಕುಣಿಯಲು ತೊಡಗಿತು. ಅಂಗಡಿಯ ಬೀದಿಯಲ್ಲಿ ಸಂತೆ ನೆರೆಯುವುದಕ್ಕೆ ಮೊದಲಾಯಿತು. ಪೀತಾಂಬರನೂ ಆತನ ಜನರೂ ಇದನ್ನೆಲ್ಲ ನೋಡಿದರು. ಹಿಗ್ಗಿನಿಂದ ಹಾರಾಡಿದರು. ನಕ್ಷತ್ರರಾಯನು ಈ ಬೀಳು ಮನೆಯ ಹಾಳು ಹಳ್ಳಿಗೆ ದೊರೆಯಾಗಿ ತನ್ನ ದುಃಖವೆಲ್ಲವನ್ನೂ ಮರೆತು ಬಿಟ್ಟನು. ಇಲ್ಲಿ ದೊರೆತನದ ಹೊರೆಯಾವುದೂ ಇರಲಿಲ್ಲ; ಆದರೆ ದೊರೆತನದ ಸೌಖ್ಯವು ಮಾತ್ರ ಸಂಪೂರ್ಣವಾಗಿದ್ದಿತು. ನಕ್ಷತ್ರರಾಯನು ಇಲ್ಲಿ ಸರ್ವತಂತ್ರಸ್ವತಂತ್ರನು. ಸ್ವದೇಶದಲ್ಲಿ ಕೂಡ ಆತನ ಪ್ರಬಲಪ್ರತಾಪವು ಇಷ್ಟೊಂದಿರಲಿಲ್ಲ. ಇನ್ನೊಂದು ಮುಖ್ಯ ಸಂಗತಿಯೆಂದರೆ ಇಲ್ಲಿ ರಘುಪತಿಯ ನೆಳಲು ಕೂಡ ಬೀಳುವಂತಿರಲಿಲ್ಲ. ಉಲ್ಲಾಸಮಾನಸನಾದ ನಕ್ಷತ್ರನು ಈಗ ಬಗೆಬಗೆಯ ವಿಲಾಸಗಳಲ್ಲಿ ಮುಳುಗಿ ಮೈಮರೆತು ಹೋದನು. ಡಾಕಾಪಟ್ಟಣದಿಂದ ಸೂಳೆಯರ ಮೇಳಗಳು ಆಗಾಗ ಬರುತ್ತಲಿರುವವು. ನೃತ್ಯ–ಗೀತ–ವಾದನಗಳಲ್ಲಿ ನಕ್ಷತ್ರನಿಗೆ ಅಷ್ಟೊಂದು ಅರುಚಿಯೇನೂ ಇರಲಿಲ್ಲ.

ನಕ್ಷತ್ರರಾಯನು ತ್ರಿಪುರ ರಾಜ್ಯದ ಆಳಿಕೆಯ ರೀತಿಯನ್ನು ಅನುಸರಿಸಿ ನಡೆಯಲು ಹವಣಿಸಿದನು. ತನ್ನ ಊಳಿಗದವರಲ್ಲಿ ಒಬ್ಬನಿಗೆ ಮಂತ್ರಿಯೆಂದು ಹೆಸರಿಟ್ಟನು. ಇನ್ನೊಬ್ಬನಿಗೆ ಸೇನಾಪತಿಯೆಂದು ಹೆಸರಿಟ್ಟನು. ಪೀತಾಂಬರನು 'ದಿವಾನ್ ಸಾಹೇಬ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳಲು ತೊಡಗಿದನು. ವ್ಯವಸ್ಥಿತವಾಗಿ ಒಡ್ಡೋಲಗವು ನೆರೆಯುವುದು. ನಕ್ಷತ್ರರಾಯನು ಒಳ್ಳೆ ಬಡಿವಾರದಿಂದ ರಾಜ್ಯವಿಚಾರಣೆಯನ್ನು ನಡೆಯಿಸುವನು. ತಿಮ್ಮಲನು ತನಗೆ ನಾಯಿಯೆಂದು ಬೈದನೆಂದು ಹನುಮನ ದೂರು. ಈ ದೂರಿನ ವಿಚಾರಣೆ ನಡೆಯಿತು. ನಕ್ಷತ್ರರಾಯನು ಬಗೆಬಗೆಯ ಸಾಕ್ಷ–ಪ್ರಮಾಣಗಳನ್ನು ಸಂಗ್ರಹಿಸಿ ತಿಮ್ಮಲನನ್ನು ತಪ್ಪುಗಾರನೆಂದು ನಿರ್ಣಯಿಸಿದನು. ಗಂಭೀರಭಾವದಿಂದ ನ್ಯಾಯಾಸನದ ಮೇಲೆ ಕುಳಿತು ತೀರ್ಪನ್ನು ಹೇಳಿದನು. "ತಿಮ್ಮಲನು ತಪ್ಪುಗಾರ; ಅದಕ್ಕಾಗಿ ಹನುಮನು ಅವನ ಕೆನ್ನೆಗೆ ಎರಡೇಟುಕೊಟ್ಟು ಕಿವಿಹಿಂಡಬೇಕು" ಎಂದು ಈ ಬಗೆಯಾಗಿ ಸೊಗಸಿನಲ್ಲಿ ವೇಳೆಯು ಸಾಗುತ್ತಲಿದ್ದಿತು. ಎಂದಾದರೂ ಕೈಯಲ್ಲಿ ಕೆಲಸವಿಲ್ಲದಂತಾದರೆ ಅಂದು ಮನಸ್ಸನು ರಂಜಿಸುವಂತಹ ಯಾವುದಾದರೊಂದು ಲೋಕಕ್ಕೆ ಹೊರತಾದ ಆಟವನ್ನು ಕಂಡು ಹಿಡಿಯುವುದು ಮಂತ್ರಿಯ ಮುಖ್ಯವಾದ ಕೆಲಸ. ಮಂತ್ರಿಯು ಸಭಾಸದರೊಡನೆ ಕೂಡಿಕೊಂಡು ಎಷ್ಟೆಷ್ಟೋ ಆಲೋಚಿಸಿ ಹೊಸದೊಂದು ಆಟವನ್ನು ಹುಡುಕಿ ಹಿಡಿಯುವನು. ಇದಕ್ಕಾಗಿ ಅವನು ಪಡುತ್ತಿದ್ದ ತೊಂದರೆಗೆ ಕಡೆಮೊದಲು ಇರುವುದಿಲ್ಲ. ಅದೆಷ್ಟು ಯೋಚನೆ! ಅದೆಷ್ಟು ಚರ್ಚೆ! ಅದೆಷ್ಟು ವಿಮರ್ಶೆ! ಅಬ್ಬಾ ಹೇಳುವುದಕ್ಕೇ ಆಗದು.

ಒಂದುದಿನ ಸೈನ್ಯವನ್ನು ತೆಗೆದುಕೊಂಡು ಹೋಗಿ ಪೀತಾಂಬರನ ಹಳೆಯ ಮನೆಗೆ ಮುತ್ತಿಗೆ ಹಾಕಿದುದಾಯಿತು. ಸರಿ! ಆತನ ಕೆರೆಯೊಳಗಿನ ಮೀನುಗಳೂ ತೋಟದೊಳಗಿನ ತೆಂಗಿನಕಾಯಿ ಸೊಪ್ಪುಪಲ್ಲೆಗಳೂ ಸುಲಿಗೆಯ ಒಡವೆಗಳೆಂದು ಸೆರೆಗೊಂಡುದಾಯಿತು. ಆ ಸುಲಿಗೆಯ ಒಡವೆಗಳನ್ನು ಅರಮನೆಗೆ ಸಾಗಿಸಿಕೊಂಡು ಬರುವಾಗಿನ ಸಡಗರವೋ ನೋಡುವಂತಿದ್ದಿತು. ಆ ಬಿಚ್ಚುಗತ್ತಿಯವರ ಸುತ್ತುಗಾವಲೇನು! ಕುದುರೆಯಾಳುಗಳ ಬಳಸುಗಳೇನು? ರಣವಾದ್ಯಗಳ ಮೊರೆತವೇನು! ಆ ಮೆರವಣಿಗೆಯೆಂದರೆ ಮೆರವಣಿಗೆಯದು. ಇವೆಲ್ಲ ಆಟಗಳಿಂದ ನಕ್ಷತ್ರರಾಯನಲ್ಲಿ ಪೀತಾಂಬರನ ಸ್ನೇಹವು ಇನ್ನಷ್ಟು ನೆಲೆಗೊಳ್ಳಲು ತೊಡಗಿತು.

ಇಂದು ಅರಮನೆಯಲ್ಲಿ ಬೆಕ್ಕಿನ ಮರಿಯ ಮದುವೆ. ನಕ್ಷತ್ರರಾಯನದೊಂದು ಹೆಣ್ಣುಬೆಕ್ಕಿನ ಮರಿಯಿದ್ದಿತು. ಕನ್ನಯ್ಯನ ಗಂಡುಬೆಕ್ಕಿನೊಡನೆ ಅದರ ಮದುವೆಯಾಗಬೇಕಾಗಿದ್ದಿತು. ವಿವಾಹ ಘಟನೆಯ ಕಾಲದಲ್ಲಿ ಪುರೋಹಿತರು ಮುನ್ನೂರು ರೂಪಾಯಿಗಳನ್ನೂ ಮೇಲೊಂದು ಕಲಾಬತ್ತಿನ ಶಾಲನ್ನೂ ದಕ್ಷಿಣೆಯಾಗಿ ಪಡೆದಿದ್ದರು. ಮದುಮಕ್ಕಳ ಮೈಗೆ ಅರಿಸಿನ ಹಚ್ಚುವುದು, ಸುರಿಗೆಯಲ್ಲಿ ಎರೆಯುವುದು ಮೊದಲಾದ ಪ್ರಾಸ್ತಾವಿಕ ಕಾರ್ಯಗಳೆಲ್ಲವೂ ಮುಗಿದುವು. ಸಾಯಂಕಾಲದ ಶುಭಲಗ್ನದಲ್ಲಿ ಪಾಣಿಗ್ರಹಣ ವಿಧಿಯು ನೆರವೇರಬೇಕಾಗಿದ್ದಿತು.

ಅರಮನೆಯ ಜನರಿಗಿಂದು ಅರನಿಮಿಷದಷ್ಟು ಕೂಡ ತೆರವು ಇಲ್ಲ; ಅಷ್ಟೊಂದು ಕೆಲಸದ ಗೊಂದಲ.

ಸಾಯಂಕಾಲದ ಸಮಯ. ಬೀದಿಗಳೆಲ್ಲವೂ ನಿಚ್ಚಳವಾದ ದೀವಿಗೆಗಳಿಂದ ಬೆಳಗತೊಡಗಿದುವು. ಭೇರಿದುಂದುಭಿಗಳು ಮೊಳಗತೊಡಗಿದುವು. ಕನ್ನಯ್ಯನ ಮನೆಯಿಂದ ವರನ ಮೆರವಣಿಗೆಯು ಹೊರಟಿತು. ಸೊಗಸಾದ ಸಲಾಬತ್ತಿನ ಚುಕ್ಕೆಗಳುಳ್ಳ ಬಟ್ಟೆಯಿಂದಲೂ ಮುತ್ತುರತ್ನದ ತೊಡವುಗಳಿಂದಲೂ ಸಿಂಗಾರಾದ ಆ ಗಂಡುಬೆಕ್ಕು ಪಲ್ಲಕ್ಕಿಯಲ್ಲಿ ಕುಳಿತುಕೊಂಡು "ಮೆವ್ ಮೆವ್" ಎಂದು ಕಾತರಕಂಠದಿಂದ ಕೂಗುತ್ತಲಿದ್ದಿತು. ಅಳಿಯನ ಒಡನೆ ಗೆಳೆಯರಾಗಿ ಕನ್ನಯ್ಯನ ಮನೆಯ ಸಣ್ಣ ಹುಡುಗರು ಬಣ್ಣಬಣ್ಣದ ಬಟ್ಟೆಗಳನ್ನುಟ್ಟುಕೊಂಡು ಚಿನ್ನ ಬೆಳ್ಳಿಯ ಒಡವೆಗಳನ್ನಿಟ್ಟುಕೊಂಡು ಬೆಕ್ಕಿನ ಕತ್ತನ್ನು–ಮೀಸೆಯನ್ನು– ಬಾಲವನ್ನು– ಕಿವಿಯನ್ನು ಹಿಡಿದುಕೊಂಡು ನಡೆದಿದ್ದರು. ಕಹಳೆ ಶಂಖಗಳ ಸಪ್ಪುಳು ಕಿವಿಗಳನ್ನು ಕಿವುಡುಗೊಳಿಸಿತು. ಈ ಬಗೆಯ ಆಡಂಬರದಲ್ಲಿ ಮದುಮಗನು ಮದುವೆಯ ಮಂಟಪಕೆ ಬಿಜಯಮಾಡಿದನು.

ಪುರೋಹಿತನಿಗೆ ಕೇನಾರಾಮನೆಂದು ಹೆಸರು. ಆದರೆ ನಕ್ಷತ್ರರಾಯನು ಆತನಿಗೆ ರಘುಪತಿಯೆಂದು ಹೆಸರಿಟ್ಟಿದ್ದನು. ನಿಜವಾದ ರಘುಪತಿಯನ್ನು ನೋಡಿದರೆ ನಕ್ಷತ್ರನ ಕರುಳಿಗೆ ಮುಳ್ಳು ಚುಚ್ಚಿದಂತಾಗುವುದು; ಆದುದರಿಂದ ಇಲ್ಲಿ ಸೋಗಿನ ರಘುಪತಿಯನ್ನು ಮಾಡಿಕೊಂಡು ನಕ್ಷತ್ರನು ಸುಖಿಯಾಗಿದ್ದನು; ಮಾತು ಮಾತಿಗೂ ಈ ಸೋಗಿನ ರಘುಪತಿಯನ್ನು ಕಾಡಿ ಓಡಿಸಿ ನಿಜವಾದ ರಘುಪತಿಯ ಮುಯ್ಯನ್ನು ತೀರಿಸಿಕೊಳ್ಳುತ್ತಿದ್ದನು. ಪಾಪ ಕೇನಾರಾಮನು ನಕ್ಷತ್ರನ ಕಾಟವನ್ನು ಸಹಿಸಿಕೊಂಡು ಸುಮ್ಮನೆ ಇರುತ್ತಿದ್ದನು. ಇಂದಿನ ಸಭೆಗೆ ಕೇನಾರಾಮನು ಬಂದಿರಲಿಲ್ಲ. ಪ್ರಾರಬ್ಧವಾತನದು. ಮನೆಯಲ್ಲಿ ಆತನ ಮಗುವೊಂದು ಜ್ವರದಿಂದ ಬಳಲುತ್ತ ಬಿದ್ದಿತ್ತು.

ನಕ್ಷತ್ರರಾಯನು ಆತುರದಿಂದ ಕೇಳಿದನು. "ಎಲ್ಲಿರುವನು ರಘುಪತಿ ?" ಸೇವಕನು ಹೇಳಿದನು "ಆತನ ಮಗುವಿಗೆ ಅಸ್ವಾಸ್ಥ್ಯ; ಮನೆಯಲ್ಲಿದ್ದಾನೆ." ನಕ್ಷತ್ರರಾಯನು ಗಟ್ಟಿಯಾಗಿ ಹೇಳಿದನು. "ಅವನನ್ನು ಕರೆದು ತಾ !"

ಆಳುಗಳು ಓಡಿದುವು. ಕೂಡಲೆ ನೃತ್ಯಗೀತಗಳಿಗೆ ಮೊದಲಾಯಿತು. ಬೆಕ್ಕು ಎಡೆಬಿಡದೆ ಕಿರಿಚುತ್ತಲೇ ಇದ್ದಿತ್ತು.

ನಕ್ಷತ್ರರಾಯನು ಗಾಯಕರಿಗೆ ಹೇಳಿದನು. "ಭೈರವೀ ರಾಗವನ್ನು ಕೇಳಿರಿ !" ಭೈರವೀ ರಾಗವು ಪ್ರಾರಂಭವಾಯಿತು.

ಸ್ವಲ್ಪಕಾಲವಾಗುವುದರಲ್ಲಿಯೇ ಸೇವಕನೊಬ್ಬನು ಬಂದು ಅರಿಕೆ ಮಾಡಿಕೊಂಡನು. "ರಘುಪತಿ ಬಂದಿದ್ದಾನೆ."

ನಕ್ಷತ್ರರಾಯನು ಸಿಟ್ಟಿನಿಂದ ಸಿಡಿಯುತ್ತ ಹೇಳಿದನು. "ಇಲ್ಲಿಗೆ ಕರೆ ಅವನನ್ನು !"

ಕೂಡಲೆ ಪುರೋಹಿತನು ಸಭೆಯೊಳಗೆ ಬಂದನು. ಪುರೋಹಿತನನ್ನು ನೋಡಿದೊಡನೆಯೇ ನಕ್ಷತ್ರರಾಯನ ಹುಬ್ಬುಗಂಟು ಇದ್ದಲ್ಲಿಯೇ ಅಡಗಿ ಹೋಯಿತು; ಆತನ ಭಾವ ಭಂಗಿಗಳು ತೀರ ಮಾರ್ಪಟ್ಟು ಹೋದುವು. ಮುಖವು ಬಾಡಿದ ಬದನೆಕಾಯಂತಾಯಿತು. ಕೆನ್ನೆಗಳಲ್ಲಿ ಬೆವರು ಹನಿಗೊಂಡಿತು. ಭೈರವೀರಾಗವೂ ಸಾರಂಗಮೃದಂಗಗಳೂ ಇದ್ದಕ್ಕಿದ್ದ ಹಾಗೆಯೆ ನಿಂತುಬಿಟ್ಟವು. ಬೆಕ್ಕಿನ "ಮೆವ್ ಮೆವ್" ಎಂಬ ಆರ್ತಧ್ವನಿಯು ಮಾತ್ರ ನೀರವವಾದ ಆ ಅರಮನೆಯುಲ್ಲಿ ಇಮ್ಮಡಿಯಾಗಿ ಕೇಳಿಸಲು ತೊಡಗಿತು.

ಬಂದವನು ನಿಜವಾದ ರಘುಪತಿಯೆಂಬುದರಲ್ಲಿ ನಕ್ಷತ್ರನಿಗೆ ಸಂದೇಹವೇ ಉಳಿಯಲಿಲ್ಲ. ನಿಡಿದಾಗಿರುವ — ಕರುಳನ್ನು ಕುಕ್ಕುವ–ಕಿಡಿಗಳನ್ನು ಕಾರುತಿರುವ–ಹಸಿದ ನಾಯಂತೆ ಅಸ್ಥಿರವಾಗಿರುವ ಕಣ್ಣುಗಳೆರಡೂ ಉರಿಯುತ್ತಲಿವೆ. ಅಡಿಗಳೆರಡೂ ಹುಡಿಯಲ್ಲಿ ಅಡಗಿ ಹೋಗಿವೆ. ಅಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ನಿಂತುಕೊಂಡು ತಲೆಯನ್ನೆತ್ತಿ ರಘುಪತಿಯು ಬಿರುನುಡಿಗಳಿಂದ ನುಡಿದನು. "ನಕ್ಷತ್ರರಾಯಾ !"

ನಕ್ಷತ್ರನು ತುಟಿಯುಲುಗದೆ ಇದ್ದನು.

ರಘುಪತಿಯು ಮತ್ತೆ ಹೇಳಿದನು "ನೀನು ರಘುಪತಿಯನ್ನು ಕರೆದೆ. ನಾನು ಬಂದಿದ್ದೇನೆ."

ನಕ್ಷತ್ರರಾಯನು ಬಿದ್ದನಾಲಿಗೆಯಿಂದ ನುಡಿಯಲು ಹವಣಿಸಿದನು. "ಆ...ಚಾ...ರ್ಯ ! ಆ...ಚಾ...ರ್ಯ !"

ರಘುಪತಿಯೆಂದನು. "ಎದ್ದು ಬಾ ಇಲ್ಲಿ !"

ನಕ್ಷತ್ರರಾಯನು ಸಭೆಯಿಂದೆದ್ದು ಮೆಲ್ಲ ಮೆಲ್ಲಗೆ ನಡೆದನು. ಬೆಕ್ಕುಗಳ ಮದುವೆ, ಭೈರವೀರಾಗ, ಸಾರಂಗನಾದನ ಇವೆಲ್ಲವೂ ಕೂಡಲೇ ಮಾಯವಾದುವು.

# ಜನಪದಸಾಹಿತ್ಯ

## ಮಾತೃವಾತ್ಸಲ್ಯ

### (ಗೋವಿನ ಕಥೆ)

ಸಂಗ್ರಾಹಕ— ಧರಿಗೌಡಾ, ಎಸ್. ಎ.

**ಕಥೆಗಾರ:**—ಇಡೀ ಹಿಂಡುದನಕೆಲ್ಲಾ ಹೊಡಿ ಹುಲ್ಲ ಹಾಕ್ಯಾರ।
ಗೋಪ್ಯವ್ವಗ ಹಾಕ್ಯಾರ ಬಡದಂಟ ಕೋಲ ॥
ಗೋಪವ್ವಗ ಹಾಕ್ಯಾರ ಬಡದಂಟ ಗೋಪಿತಾಯಿ
ಮರುಗ್ಯಾಳ ತನ್ನ ಮನದಾಗ ಕೋಲ ।
ಹೊಟ್ಟೆಯ ಬಿಟ್ಟ್ಯಾಳು ಕೆಚ್ಚಲ ಮಾಡ್ಯಾಳು ।
ಗೋಪಿ ಚೊಚ್ಚಿಲ ಬಸರಾಳ ।
ಗೋಪೀ ಚೊಚ್ಚಿಲ ಬಸುರಾಗೀದಾಳ ।
ಕಡ್ಲಿಬಣ್ಣದ ಕರಿಯು ಹೋರೀಯಕೋಲ ॥
ಏರಲಾಗದ ಗುಡ್ಡ ಏರ್ಯಾಳು ಗೋಪೀತಾಯಿ ।
ಏರೀತಾ ಮೇದಾಳ ಹೊಡಿಹುಲ್ಲ ಕೋಲ ॥
ಏರೀತಾಮೇದಾಳ ಹೊಡಿ ಹುಲ್ಲ ಹುಲಿರಾಜ ।
ಗದ್ದರಸತಾ ಬಂದಾ ಮುರಿಲಾಕ ಕೋಲ ।

**ಗೋಪಿ:**—ಕಡ್ಲಿಬಣದಕರವ ನಿನ್ನೀದೆನೊ ಹುಲಿರಾಜಾ ।
ಇನ್ನೊಸ್ಮೆ ಮೊಲೆಯು ಕುಡಿಸಿಲ್ಲ ಕೋಲ ॥
ಇನ್ನೊಮ್ಮೆ ನಾ ಮೊಲೆಯು ಕುಡಿಸಿಲ್ಲ ಹುಲಿರಾಜ ।
ಮನೆಗಾದರ್ಹೋಗಿ ಬರುತೇನೊ ಕೋಲ ॥

**ಹುಲಿ:**— ನಿನಮೇಲೆ ವಿಶ್ವಾಸ ನನ್ನದ್ಹ್ಯಾಂಗೆ ಉಳಿಬೇಕು ।
ನೀನೇ ಹೇಳವ್ವಾ ಗೋಪ್ಯವ್ವಾ ಕೋಲ ॥
ನೀನೇ ಹೇಳವ್ವಾ ನನ ಹೊಟ್ಟೆ ।
ಬಲು ಬಲು ಹಶಿದಿದೆ ಈಗ ಕೋಲ ॥

**ಗೋಪಿ:**— ಆಡುಮಕ್ಕಳ ಆಣಿ ತೂಗು ತೊಟ್ಟಿಲಾಣಿ ।
ನನ್ನಾಣಿ ಹುಲಿರಾಜಾ ಬರುತೇನಿ ಕೋಲ ॥
ನನ್ನಾಣಿ ಹುಲಿರಾಜ ಬರುತೇನಿ ನಾನು ।
ಇನ್ನೊಮ್ಮೆ ಮೊಲೆಯಾ ಕುಡಿಸ್ಯಾದ್ರು ಕೋಲ ॥

**ಕಥೆಗಾರ:**-ಇಳಿಯಲಾಗದ ಗುಡ್ಡ ಇಳದಾಳು ಗೋಪಿತಾಯಿ ।
ಇಳಿದು ಬಂದಾಳು ಮಗನೆಡೆಗೆ ಕೋಲ ॥
ಇಳಿದು ತಾ ಬಂದಾಳು ಮಗನೆಡೆಗೆ ಗೋಪಿತಾಯಿ
ಮುಖವು ಆಕಿದು ಬಾಡಿತ್ತು ಕೋಲ ॥

**ಕರ:**—ಯಾಕ್ಯಾಕ ತಾಯವ್ವ ನಿನಗಾರೇನಂದಾರು ।
ಇಷ್ಟ್ಯಾಕೆ ಮುಖವು ಬಾಡಿದೆ ಕೋಲ ॥
ಇಷ್ಟ್ಯಾಕೆ ಮುಖವು ಬಾಡಿದೆ ನನತಾಯಿ ।
ನಿನಗಂಥಾದ್ದೇನು ಬಂದಿದೆ ಕೋಲ ॥

**ಗೋಪಿ:**— ನನಗಾರೇನಂದಿಲ್ಲ ನನಗಾರೇನಾಡಿಲ್ಲ ।
ಇನ್ನೊಮ್ಮೆ ಮೊಲೆಯಾ ಕುಡಿಬಾರೋ ಕೋಲ ॥
ಇನ್ನೊಮ್ಮೆ ನೀ ಮೊಲೆಯಾ ಕುಡಿಬಾರೊ ನನಮಗನೆ
ಕೆಚ್ಚಲು ಬಹಳೇ ಬಿಗಿದಿದೆ ಕೋಲ ॥
( ಕರವು ಕುಡಿಯುತ್ತಿರುವಾಗ ಉಪದೇಶ )
ಹುಲ್ಲಿನ ಹೊರೆಗಳು ಧಪ್ಪಂತ ಚಲ್ಲಿದರ್ ।
ಸೂಸಿ ಸೂಸ್ಯಾಡಿ ಮೆಯ್ಯಬೇಡ ಕೋಲ ॥
ಸೂಸಿನೀ ಸೂಸ್ಯಾಡಿ ಮೆಯ್ಬ್ಯೇಡ ಬಾಳಯ್ಯಾ ।
ಬೀಸ ಬಡಿಗೀಲೆ ಬಡಿದಾರು ಕೋಲ ॥
ಜಾಣ ಜಾಣರು ಕೂಡಿ ಮೊದಲೀಗೆ ಹೊಡಿದು ।
ಮುಂದೆ ಮಾರೀಮಾಡಿ ನಿಲ್ಲಬೇಡ ಕೋಲ ॥
ಮುಂದೆ ನೀ ಮುಖಮಾಡಿ ನಿಲಬೇಡ ನನಮಗನೆ ।
ಗೊಂಡಿ ಬಾರಕೋಲಿಲೆ ಬಡಿದಾರು ಕೋಲ ॥
ಹಾಕಿದ್ದು ತಿನ್ನಪ್ಪಾ ಆದಷ್ಟು ದುಡಿಯಪ್ಪ
ಕಳಗುಳ್ಳತನ ಮಾಡಬೇಡ ಕೋಲ ॥
ಕಳಗುಳ್ಳತನ ಮಾಡಬೇಡಾ ಕಂದಯ್ಯಾ ।
ಒಳಿತಾಗಿ ನಿನ್ನ ಸದಗ್ಯಾರು ಕೋಲ ॥
ಹಿಂದಿನ ಜನ್ಮದಾಗ ಏನು ಮಾಡಿದ್ದೇವೊ ।
ಪಶುಜನ್ಮವೀಗ ತಾಳಿದೆವು ಕೋಲ ॥
ಪಶುಜನ್ಮವೀಗ ತಾಳಿದೆವು ಶಿಶುವಯ್ಯ ।
ಅಶನಕ್ಕೆ ವರ್ಜವಾಗಿದೆ ಕೋಲ ॥
ಸಾಕಪ್ಪ ಸಾಕು ಮಗನೇ ಶಾಪವ ।
ಮುಂದಿನ ಜನ್ಮ ನೋಡಪ್ಪ ಕೋಲ ॥
ಮುಂದಿನ ಜನ್ಮಾ ನೋಡಪ್ಪ ನನಬಾಳ ।
ನಂದಿಯ ಸ್ಮರಣೆಯು ಮಾಡಪ್ಪ ಕೋಲ ॥

ಕರು:– ಇಷ್ಟೆಲ್ಲ ಹೇಳುತ್ತಿ ನೀ ಎಲ್ಲಿ ಹೋಗುತ್ತಿ ।
ನಾನೂ ಬರತೇನ ನಿನಕೂಡ ಕೋಲ ॥
ನಾನೂ ಬರುತೇನ ನಿನಕೂಡ ತಾಯವ್ವ
ನಿನಗೆಂಥ ಹೊತ್ತು ಬಂದೀದೆ ಕೋಲ
ತಾಯಿಗಾಗದ ಪುತ್ರ ಇದ್ದೇನು ಫಲವಮ್ಮ ।
ನಿನ್ನೋಳು ನನ್ನದು ಪಾಲಿರಲಿ ಕೋಲ ॥
ನಿನ್ನೋಳು ನನ್ನದು ಪಾಲಿರಲಿ ಹಡೆವವ್ವ ।
ನಿನ ಬಿಟ್ಟು ವ್ಯರ್ಥ ನನಜನ್ಮ ಕೋಲ ॥
ನನಗಾಗಿ ನೀನೆಷ್ಟು ಕಷ್ಟವ ಸೋಸಿದ್ದಿ ।
ನಿನ್ನುಪಕಾರ ಮರೆಲಾರೆ ಕೋಲ ॥
ನಿನ್ನುಪಕಾರ ಮರೆಲಾರೆ ನಮ್ಮವ್ವ ।
ನಿನ್ನಲಿಗೆ ನಾನೂ ಬರುವೇನ ಕೋಲ ॥

ಕಥೆಗಾರ:– ಮುಂದ್ಮುಂದೆ ಗೋಪಿ ತಾಯಿ ಹಿಂದಿಂದೆ
ಮಗರಾಜ ॥
ನಡೆದಾರ ಹುಲಿರಾಜನರಮನೆಗೆ ಕೋಲ ॥
ನಡೆದಾರ ಹುಲಿರಾಜನರಮನೆಗೆ ಅವರ ದುಃಖ
ಉಕ್ಕೇರಿ ವನರೋದನವಾಯ್ತು ಕೋಲ ॥
ಏನಲಾಗದ ಗುಡ್ಡ ಮಗತಾಯಿ
ಏರಿ ಹುಲಿರಾಜನ ಕರೆದಾರು ಕೋಲ ।
ಏರಿ ಹುಲಿರಾಜನ ಕರೆದಾರು ಹುಲಿರಾಜ ।
ಗದ್ರಸತಾ ಬಂದಾ ಮುರಿಲಾಕ ಕೋಲ ॥

ಗೋಪಿ:– ಕ್ಷಮಿಸಪ್ಪಾ ಹುಲಿರಾಜ ಬಹಳ್ಹೊತ್ತು ಆದೀತು ।
ಬಲು ಹಸಿವಿ ನಿನಗಾಗಿರಬೇಕು ಕೋಲ ।
ಬಲು ಹಸಿವಿ ನಿನಗಾಗಿರಬೇಕು ನನತಿಂದು ।
ನನಮಗನ ಜೀವಾ ಕಾಪಾಡು ಕೋಲ ॥

ಕರು:– ಹುಲಿಯಪ್ಪ ಹುಲಿರಾಜಾ ಉಳಿಸೈಯ್ಯ ತಾಯಿನ್ನ ।
ನನತಿಂದು ಶಾಂತಾಗು ಕೋಲ ॥
ನನ ತಿಂದು ನೀನು ಶಾಂತಾಗೋ ಮಹಾರಾಜಾ ।
ದ ರುನೂಡೋ ನೀನೂ ಎನಮೇಲೆ ಕೋಲ ॥
ವನರಾಜನೆನಿಸಿದಿ ಘನತೇಜ ಬೆಳಿಸಿದಿ ।
ಕನಿಕರವಿಷ್ಟು ತೋರಿಸೋ ಕೋಲ ॥
ಕನಿಕರವಿಷ್ಟು ತೋರಿಸೋ ವನಪಾಲ ।
ಕನಿಷ್ಟತನವ ಮಾಡಬ್ಯಾಡ ಕೋಲ ॥
ತಾಯಿಯಿಲ್ಲದ ಬಾಳು ನಾಯಿಗಿಂತಲೂ ಹಾಳು ।
ಪರದೇಶಿತನವ ತರಬೇಡ ಕೋಲ ।
ಪರದೇಶಿತನವ ತರಬೇಡ ರಾಜೇಂದ್ರಾ ।
ಕರುಣಿಸು ನೀನೂ ನನಮೇಲೆ ಕೋಲ ॥

ಹುಲಿ:– ಮಾತೃವಾತ್ಸಲ್ಯಕ್ಕೆ ಮೆಚ್ಚಿದೆ ಗೋಪಿಕಂದ ।
ಕಲ್ಲೆದೆ ಕರಗಿ ನೀರಾಯ್ತು ಕೋಲ ॥
ಕಲ್ಲೆದೆ ಕರಗಿ ನೀರಾಯ್ತು ನನ ಮಗುವೆ ।
ಚಲ್ಲಾಟ ಮಾಡುತ್ತ ಹೋಗು ಕೋಲ
ಆಯುಷ್ಯವಂತನಾಗು ಅಖಂಡಪದ ಹೊಂದು ।
ಮತ್ತೆ ತಾಯೀಗೆ ಮಗನಾಗು ಕೋಲ ॥
ಮತ್ತೆನೀ ತಾಯೀಗೆ ಮಗನಾಗು ಗೋಪುತ್ರ ।
ಒಕ್ಕಲೀಗರಿಗೆ ತಕ್ಕವ ಕೋಲ ॥
ಉಕ್ಕಿ ಬರುತಿದೆ ಗೋಪಿ ಸೊಕ್ಕಿನವನಪ್ರೇಮ ।
ಚಿಕ್ಕತನದಿಂದ ಬೆಳೆದಿಹೆ ಕೋಲ ॥
ಚಿಕ್ಕತನದಿಂದ ಬೆಳೆದಿಹೆ ನನತಾಯಿ ।
ಚಿಕ್ಕತನ ನನ್ನದು ಹೋಯಿತು ಕೋಲ ॥
ಆಯುಷ್ಯವಂತಳಾಗು ಅಖಂಡಪದ ಹೊಂದು
ಮತ್ತೆ ಮಗುವಿಗೆ ತಾಯಾಗು ಕೋಲ
ಮತ್ತೆ ನೀ ಮಗುವಿಗೆ ತಾಯಾಗು ಜಗದಮ್ಮ ।
ಅಕ್ಕರತನದಿಂದ ಇರಹೋಗು ಕೋಲ

ಕಥೆಗಾರ:–ಮುಂದ್ಮುಂದೆ ಗೋಪಿತಾಯಿ ಹಿಂದಿಂದೆ ಮಗರಾಜ
ಬಿಟ್ಟಾರ ಹುಲಿರಾಜನರಮನೆಯ ಕೋಲ
ಬಿಟ್ಟಾರು ಹುಲಿರಾಜನರಮನೆಯ ।
ಅವರು ಬಂದಾರು ತಮ್ಮ ಗೂಡಿಗೆ ಕೋಲ

---

# ಪ್ರಪಂಚ ಪರಿಚಯ

## ಇದು ನಿಜವೋ ?

ಗೋಮಾಂತಕದಲ್ಲಿ ಮೊನ್ನೆ ಆದ ಮಹಾರಾಷ್ಟ್ರ ಸಾಹಿತ್ಯಸಮ್ಮೇಳನದ ಸ್ವಾಗತಾಧ್ಯಕ್ಷರು ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದಾರೆ.

ಐತಿಹಾಸಿಕ ದೃಷ್ಟಿಯಿಂದ ನೋಡಲಾಗಿ ಕಂಡು ಬರುವುದೇನಂಪರೆ, ಕದಂಬ ವಂಶದ ರಾಜರ ಕಾಲದಲ್ಲಿ ಗೋಮಾಂತಕದ ಮೇಲೆ ಮೊಟ್ಟ ಮೊದಲು ಕರ್ನಾಟಕ ಸಂಸ್ಕೃತಿಯು ಹೇರಲ್ಪಟ್ಟಿತು. ಆದರೆ ರಾಷ್ಟ್ರಕೂಟದ ಯಾದವ ಮೊದಲಾದ ಮರಾಠ (!) ರಾಜರ ಕಾಲಕ್ಕೆ ಈ ( ಪರಕೀಯ ಸಂಸ್ಕೃತಿಯ ) ಭಾರವು ಕಡಿಮೆಯಾಗಿದ್ದರೂ ವಿಜಯನಗರದ ಅಧಿಕಾರ ಕಾಲದಲ್ಲಿ ಮತ್ತೆ ಮೊದಲಿನಂತೆಯೆ ಆಯ್ತು. ಈ (ಪಾರತಂತ್ರ್ಯದ) ಪರಿಣಾಮವೆಂದರೆ ಸಾರ್ವಜನಿಕ ಲಿಪಿಯು ಕನ್ನಡವಾಗಿ ಬಿಟ್ಟಿತು. ಆದರೆ ಇದರಲ್ಲಿ ನೆನಪಿಡುವುದೊಂದು ಮಾತುಂಟು. ಲಿಪಿಯು ಕನ್ನಡವಿದ್ದರೂ ಅದರೊಳಗಿನ ಭಾಷೆಯು ಮಾತ್ರ ಮರಾಠಿಯೆ ಇರುತ್ತಿತ್ತು. ಇದರಿಂದ ಗೋಮಾಂತಕವು ಕನ್ನಡದ ಭಾರದಡಿಯ ಕೆಳಗೆ ಸಿಲುಕಿದ್ದರೂ ಅದು ತನ್ನ ಮಹಾರಾಷ್ಟ್ರೀಯತ್ವವನ್ನು ಮಾತ್ರ ಬಿಡಲಿಲ್ಲ.

— ಲೋಕಶಿಕ್ಷಣ.

---

## ಇಂಗ್ಲಂಡದಿಂದ ಮೈಸೂರು ಒಂದಡಿ ಮುಂದೆ !

ಶ್ರೀ. ಜಿ. ಪಿ. ರಾಜರತ್ನಂ ಅವರು ಬರೆದುದರ ಮುಖ್ಯಾಂಶವೇನಂದರೆ– ' ಕೃತ್ರಿಮ ಉಪಾಯಗಳಿಂದ ಸಂತತಿ ನಿಯಮನ ಮಾಡಬೇಕು ' ಎಂದೊಡನೆ ಇಂಗ್ಲಂಡದ ಸರಕಾರವು ಇನ್ನೂ ವಿರೋಧಿಸುತ್ತದೆ. ಅಲ್ಲಿಯ ಮುದಿಜನಗಳು ಅವನ್ನು ಇನ್ನೂ ಪಾಪವೆಂದು ತಿಳಿಯುತ್ತಿದ್ದಾರೆ. ಹೀಗಿರುವಾಗ ಮೈಸೂರು ಮುಂದಡಿ ಇಟ್ಟಿತು. ಸೀನಿಯರ ಸರ್ಜನರ ಹೇಳಿಕೆಯ ಮೇರೆಗೆ ಮೈಸೂರ ಸರಕಾರವು ಹೆರಿಗೆಗೆ ಅಯೋಗ್ಯರಾದ ಸ್ತ್ರೀಯರಿಗೆ ಗರ್ಭಧಾರಣೆಗೆ ವಿರೋಧಕ ಕಾರಣಗಳನ್ನು ಅನುಕೂಲಿಸಿಕೊಡಬೇಕೆಂದು ಎಲ್ಲ ಆಸ್ಪತ್ರಿಗಳಿಗೂ ಅಪ್ಪಣೆಮಾಡಿದೆಯಂತೆ.

ಹೊಟ್ಟೆಬಟ್ಟೆಗಳಿಲ್ಲದೆ, ಆರೋಗ್ಯಕರ ಮನೆಮಾರಿಲ್ಲದೆ ಸುಮ್ಮನೆ ದೊಡ್ಡ ಕುಟುಂಬಗಳಾಗಿ ಶಾರೀರಿಕ ಆರ್ಥಿಕ ದೃಷ್ಟಿಯಿಂದ ಬಹಳೆ ಹೀನದೀನ ಸ್ಥಿತಿಯಲ್ಲಿರುವ ಕುಟುಂಬಗಳು ನಮ್ಮ ದೇಶದಲ್ಲಿ ಕಡಿಮೆಯಿಲ್ಲ. ಹಾಲಂಡಿನಂತಹ ಸುಧಾರಿಸಿದ ರಾಷ್ಟ್ರಗಳು ನಿಯಮಿತ ಸಂತಾನದ ಕೃತ್ರಿಮ ಉಪಾಯಗಳಿಗೆ ವಿವೇಕದಿಂದ ಪ್ರೋತ್ಸಾಹಿಸುತ್ತಿವೆ. ಮೂರು ನಾಲ್ಕೇ ಜನರ ಕುಟುಂಬಗಳಾಗುವಂತೆ ಮಾಡಿವೆ. ಇದರಿಂದ ಮನೆಯಲ್ಲಿ ಬಾಲಕರ ಸಂಗೋಪನವು ಚೆನ್ನಾಗಿ ಆಗುತ್ತದೆ. ಹೆಂಗಸರಿಗೂ ಹೆರಿಗೆಯ ಕುತ್ತಿನ ಹೆದರಿಕೆ ಇಲ್ಲದಾಗುತ್ತದೆ.

ಪ್ರತಿಯೊಬ್ಬರಿಗೆಲ್ಲ ಸಂತತಿ ನಿಯಮನದ ಕೃತ್ರಿಮ ಉಪಾಯಗಳನ್ನು ಹೇಳುವುದರ ಬಗ್ಗೆ ಮತಭೇದವಿದ್ದರೂ ವಿಶಿಷ್ಟ ಜನರಿಗೆ ಅದರಿಂದ ಲಾಭವೇ ಉಂಟೆಂದು ಸಮಾಜ ಶಾಸ್ತ್ರಜ್ಞರು ಇದನ್ನು ಅನುಕೂಲ ದೃಷ್ಟಿಯಿಂದ ನೋಡುತ್ತಿದ್ದಾರೆ.

( ಆದರೆ ಮಹಾತ್ಮಾಗಾಂಧಿಯಂತಹರು ಇದಕ್ಕೆ ವಿರೋಧಿಸುವ ಕಾರಣಗಳೂ ಅಷ್ಟೇ ವಿಚಾರಣೀಯವಾಗಿವೆ. )

— ವೈ. ಎ. ಜರ್ನಲ್

---

## ಮಲ್ಲಪ್ಪಾ ಧನಶೆಟ್ಟಿ ಸೊಲ್ಲಾಪೂರ

ಇವರು ಸೊಲ್ಲಾಪುರದಲ್ಲಿ ೧೮೯೫ರಲ್ಲಿ ಹುಟ್ಟಿದರು. ಚಿಕ್ಕ ವಯಸ್ಸಿನಲ್ಲಿಯೇ ಇವರು ಅಂಗಡಿಯಲ್ಲಿ ಕೆಲಸಮಾಡಹತ್ತಿದರು. ಇವರ ಚಟುವಟಿಕೆ, ಜಾಣತನ ವ್ಯಾಪಾರದಲ್ಲಿ ಧೈರ್ಯ ಮೊದಲಾದ ಗುಣಗಳಿಂದ ಬೇಗನೆ ಇವರು ಪಟ್ಟಣದಲ್ಲಿ ಮುಂದೆ ಬಂದರು.

ಇವರು ಸುಂದರರೂ ಸದೃಢರೂ ನಿರೋಗಿಗಳೂ ಇದ್ದಾರೆ. ಮುಖಕಾಂತಿ ತೇಜಃಪುಂಜವಿರುವದರಿಂದ ಇವರನ್ನು ನೋಡಿದೊಡನೆ ಆದರಭಾವವು ಉತ್ಪನ್ನವಾಗುವುದು.

ಇವರಲ್ಲಿ ಧರ್ಮಾಭಿಮಾನವು ಅವರ್ಣನೀಯವಾಗಿದೆ. ಎಲ್ಲರಿಗೂ ಸಹಾಯಕರಾಗಿ ವರ್ತಿಸುವದೇ ಇವರ ಗುಣವಿಶೇಷ. ಶ್ರೀಮಂತರ ದೊಡ್ಡ ದೊಡ್ಡ ಕಾರ್ಯಗಳು ಸಹ ಮಲ್ಲಪ್ಪನವರ ಸಹಾಯವಿಲ್ಲದೆ ಜರಗುತ್ತಿದ್ದಿಲ್ಲ. ಇದರಿಂದ ಇವರು ಬಡವರಿಗೂ ಶ್ರೀಮಂತರಿಗೂ ಬಹು ಪ್ರಿಯರಾಗಿದ್ದರು. ತರುಣ

ಜನರುತೂ ಇವರನ್ನು ಅತ್ಯಂತ ಪ್ರೀತಿಸುತ್ತಾರೆ. ಪ್ರೇಮದಿಂದ ಇವರಿಗೆ ಎಲ್ಲ ಸಣ್ಣದೊಡ್ಡವರು ಕಾಕಾ ಎಂದು ಕರೆಯುವದುಂಟು. ಕಾಕಾನ ಅಪ್ಪಣೆಯಾದರೆ ನಡುರಾತ್ರಿಯಲ್ಲಿ ಸಹ ನೂರಾರು ತರುಣರು ಓಡಿ ಬರುತ್ತಾರೆ.

ಹಿಂದೂ ಧರ್ಮದಲ್ಲಿ ಅತ್ಯಂತ ಭಕ್ತಿಶ್ರದ್ಧೆಯುಳ್ಳವರಾದ್ದರಿಂದ ಶ್ರೀ ಸಿದ್ಧೇಶ್ವರ ಜಾತ್ರೆ, ಏಕಾದಶೀ ರಥೋತ್ಸವ, ಗಜಾನನೋತ್ಸವ ಮೊದಲಾದ ಧಾರ್ಮಿಕ ಸಾಮಾಜಿಕ ಉತ್ಸವ ಮೆರವಣಿಗೆ ಮೊದಲಾದ ಕಾರ್ಯಗಳಲ್ಲಿ ಪ್ರಮುಖತ್ವವಹಿಸುತ್ತಿದ್ದರು. ಆಗ ಅವುಗಳನ್ನು ಶಿಸ್ತಿನಿಂದ ಸಾಗಿಸುವದು, ಶಾಂತತೆ ಕಾಯುವದು, ನೂರಾರು ತರುಣರನ್ನು ಸಹಾಯಕ್ಕೆ ಕರಕೊಂಡು ಅವರ ಮೇಲೆ ನಿಯಂತ್ರಣವಿಡುವದು ಈ ಕಾರ್ಯಗಳನ್ನು ಅವರು ಅತ್ಯುತ್ತಮ ರೀತಿಯಿಂದ ಮಾಡುತ್ತಾರೆ.

ಸೊಲ್ಲಾಪುರದಲ್ಲಿ ಹಿಂದೂ ಮುಸಲ್ಮಾನರಲ್ಲಿ ಮನಸ್ತಾಪವು ಇರುವದರಿಂದ ಯಾವಾಗ ಜಗಳವೆದ್ದೀತು ನೇಮವಿರುವದಿಲ್ಲ. ಆದರೆ ಮಲ್ಲಪ್ಪ ಇವರ ನೇತೃತ್ವದಿಂದ ಹಿಂದುಗಳ ಉತ್ಸವಗಳು ನಿರ್ವಿಘ್ನದಿಂದ ಪಾರಾಗುತ್ತಿದ್ದವು.

೮-೧೦ ವರುಷಗಳ ಮುಂಚೆ ಸೊಲ್ಲಾಪುರದ ಪುರಾತನ ಮತ್ತು ಧಾರ್ಮಿಕ ಭಾವನೆಯ ಶ್ರೀ ಸಿದ್ದೇಶ್ವರ ಕೆರೆಯ ಎಲ್ಲೆಯನ್ನು ಒಡೆದು ನೀರು ನಿಲ್ಲದಂತೆ ಮಾಡಬೇಕೆಂದು ಸರಕಾರದವರು ಸಾಹಸ ನಡೆಸಿದ್ದರು. ಆಗ ಇವರು ನೂರಾರು ತರುಣರೊಂದಿಗೆ ಎಲ್ಲೆಯ ಗೋಡೆಯ ಮೇಲೆ ಹಗಲು ರಾತ್ರಿ ಕೂತು ಸತ್ಯಾಗ್ರಹವನ್ನು ನಡಿಸಿದರು. ಆಗ ಸತ್ಯಾಗ್ರಹಿಗಳಿಗೆ ಬಹಳ ಕಷ್ಟ ಸೋಸಬೇಕಾಯಿತು. ಇದರ ಪರಿಣಾಮವು ಕಡೆಗೆ ಯಶಸ್ವಿಯಾಯಿತು. ಕೆರೆಯು ಒಡೆಯಲ್ಪಡಲಿಲ್ಲ. ಇದರಿಂದ ಜನರ ಪ್ರೇಮವು ಇವರ ಮೇಲೆ ಹೆಚ್ಚಾಯಿತು.

ಸೊಲ್ಲಾಪುರದಲ್ಲಿ ತಾಲೀಮುಖಾನೆಗಳು ೫೦ ಇರುವವು. ಅವರದೊಂದು ಸಂಘವಿದೆ. ಈ ಸಂಘದ ಅತ್ಯಂತ ಜೀವಾಳವೇ ಧನಶೆಟ್ಟಿ ಮಲ್ಲಪ್ಪನವರು. ಇದಲ್ಲದೆ ಇವರು ಸೊಲ್ಲಾಪುರದ ಮರ್ಚಂಟ್ಸ ಅಸೋಸಿಏಶನ್ನದ ಮೆಂಬರ, ಗಜಾನನ ಮೇಳಾದ ಅಧ್ಯಕ್ಷ, ಭಜನ ಸಂಘದ ಸಭಾಸದರಾಗಿದ್ದಾರೆ.

ಇವರಲ್ಲಿ ದಯಾಗುಣವು ಪ್ರಮುಖವಾಗಿದೆ. ಹಿಂದು ಮುಸಲ್ಮಾನರ ದಂಗೆಯ ಕಾಲದಲ್ಲಿ ಒಬ್ಬ ಮುಸಲ್ಮಾನ ಹುಡುಗನಿಗೆ ಜನರು ಹೊಡೆಯುತ್ತಿದ್ದರು. ಅವನು ಪ್ರಾಣಕ್ಕೆ ಎರವಾಗುವ ಸಂಭವವಿತ್ತು. ಅದನ್ನು ಮಲ್ಲಪ್ಪನವರು ಕಂಡ ಕೂಡಲೆ ಅವನನ್ನು ಬಿಡಿಸಿ ಪ್ರಾಣ ಉಳಿಸಿದರು. ದಂಗೆಯ ನಂತರ ನಿಷ್ಕಾರಣ ಇವರ ಮೇಲೆ ಖಟ್ಲೆಗಳು ಮಾಡಲ್ಪಟ್ಟವು. ಅವೆಲ್ಲವುಗಳಲ್ಲಿ ನಿರ್ದೋಷಿ ಎಂದು ಬಿಡಲ್ಪಟ್ಟರು.

ಸೊಲ್ಲಾಪುರದ ಮೊನ್ನಿನ ದೊಂಬಿಯ ಮುಂಚಿನ ಗಲಾಟೆಯಲ್ಲಿ ಕಲೆಕ್ಟರ, ಸುಪರಿಂಟೆಂಡೆಂಟ, ಸಾರ್ಜಂಟ ಮೊದಲಾದವರನ್ನು ಸುತ್ತುಗಟ್ಟಿ ಅಸಂಖ್ಯ ಜನರು ತಡೆದಿದ್ದರು. ಮಲ್ಲಪ್ಪ ಇವರು ಜನರನ್ನು ಹಿಂದಕ್ಕಟ್ಟಿ ಅಧಿಕಾರಿಗಳ ಜೀವಮಾನ ಉಳಿಸಿ ಬಿಡುಗಡೆ ಮಾಡಲು ಸಹಾಯವಾದರು. ಇಂತಹರಿಗೆ ಕಡೆಗೆ ಫಾಸಿಶಿಕ್ಷೆಯು ವಿಧಿಸಲ್ಪಟ್ಟಿತು.

೪-೬ ದಿವಸಗಳ ಹಿಂದೆ ಅವರ ಭೆಟ್ಟಿಗೆ ವಿಜಾಪುರ ಜೇಲಿನಲ್ಲಿ ಅವರ ತಂದೆ ಅಣ್ಣ ತಾಯಿ ಅಕ್ಕ ಮೊದಲಾದ ಆಪ್ತರೂ ಇಷ್ಟರೂ ಹೋದಾಗ ಅವರ ಮುಖದ ಮೇಲೆ ಯಾವ ಬಗೆಯ ಭಯಸೂಚಕ ಲಕ್ಷಣಗಳು ತೋರಲಿಲ್ಲ. ಆಪ್ತೇಷ್ಟರು ಅಳುತ್ತಿದ್ದರೂ ಅವರಿಗೆ ಸಂತೈಸುತ್ತಿದ್ದಿರು. ಆಗ ಅವರು ಅಂದದ್ದು–'ನಿರಪರಾಧಿಯು ನಾನು. ಯಾವ ಕೆಟ್ಟ ಕೆಲಸಮಾಡಿಲ್ಲ. ಫಾಸಿಯಾದರೆ ಉಪಾಯವಿಲ್ಲ. ಹುಟ್ಟಿದವರೊಮ್ಮೆ ಸಾಯಲೇಬೇಕು. ಇಂಥ ಪುಣ್ಯವು ಭಾಗ್ಯವಂತರಿಗೆ ಮಾತ್ರ ಲಭಿಸುತ್ತವೆ. ನಾನು ಮರಣದ ದೆಶೆಯಿಂದ ದುಃಖಮಾಡುವದಿಲ್ಲ. ನೀವಾದರೂ ದುಃಖಮಾಡದೆ ಸಂತೋಷಪಡತಕ್ಕದ್ದು. ದೇವರಿದ್ದಾನೆ; ಅವನನ್ನು ಸ್ಮರಿಸಿರಿ."

—ನವಕರ್ನಾಟಕ.

## ಚೀನದಲ್ಲಿ ಸ್ವಾತಂತ್ರ್ಯದ ಪ್ರಗತಿ

ಕಳೆದ ೩೦ ವರುಷಗಳಲ್ಲಿ ಚೀನ ದೇಶವು ಅದ್ಭುತ ಪ್ರಗತಿಯನ್ನು ಮಾಡಿದೆ. ೧೯೦೧ರಲ್ಲಿ ರಾಷ್ಟ್ರೀಯ ಭಾವನೆಯು ಕೇವಲ ಸುಶಿಕ್ಷಿತರಲ್ಲಿಯೂ ವಿದ್ಯಾರ್ಥಿಗಳಲ್ಲಿಯೂ ಮಾತ್ರ ಇತ್ತು; ಡಾ. ಸನ್ಯತ್‌ಸೇನನೇ ಒಬ್ಬ ಅವರ ಮುಖಂಡನಾಗಿದ್ದನು. ಪರದೇಶಗಳಲ್ಲಿದ್ದ ಚೀನೀ ವ್ಯಾಪಾರಸ್ಥರು ಇವನಿಗೆ ಉದಾರಹಸ್ತದಿಂದ ಸಹಾಯಮಾಡಿದರು. ಇದರಿಂದ ಚೀನವು ಮಾಂಚುಮನೆತದ ರಾಜರ ಬಂಧನದೊಳಗಿಂದ ಬಿಡುಗಡೆ ಹೊಂದಿತು. ಆದರೂ ಚೀನದ ವ್ಯಾಪಾರಸ್ಥರೆಲ್ಲರು ನಿಜವಾಗಿಯೂ ೧೯೧೫ರ ವರೆಗೆ ಎಚ್ಚರಾಗಲಿಲ್ಲ; ಜಪಾನದ ಇಪ್ಪತ್ತೊಂದು ಬೇಡಿಕೆಯ ಬಡಿಗೆಯು ಬೆನ್ನಮೇಲೆ ಬಿದ್ದ ಬಳಿಕ, ಶಾಟಂಗಬಂದರವನ್ನು ಪರಕೀಯರು ನುಂಗಿ ನೀರುಕುಡಿದ ಬಳಿಕ

ಚೀನದ ವ್ಯಾಪಾರಸ್ಥರ ಕಣ್ಣುಗಳು ತೆರೆದುವು. ೧೯೨೨ರಲ್ಲಿ ಹಾಂಕಾಂಗದ ಹಡಗದ ಮೇಲಿನ ಕೂಲಿಕಾರರು ಕಟ್ಟುಮಾಡಿ ಕೆಲಸನಿಲ್ಲಿಸಿದಂದಿನಿಂದಲೂ, ಶಾಂಘಾಯದಲ್ಲಿ ಮೇ ೩೦, ೧೯೨೫ರಲ್ಲಿ ಗುಂಡಿನ ಸುರಿಮಳೆಯಾಗಿ ಪ್ರಾಣಾಹುತಿಯಾದಂದಿನಿಂದಲೂ ಚೀನದ ಕೂಲಿಕಾರರ ಸಮುದಾಯವು ರಾಷ್ಟ್ರೀಯ ಚಳವಳಿಗೆ ಸೇರಿಕೊಂಡಿತು. ರಶಿಯದ ಸಮಾಜಸತ್ತಾವಾದಿಗಳು (ಕಮ್ಯುನಿಸ್ಟರು) ಮಾಡಿದ ಚಳವಳಿಯಿಂದಲೂ, ಕೊಮಿನ್‌ಟಂಗ ಪಕ್ಷದ ಮತಪ್ರಸಾರದಿಂದಲೂ, ದಕ್ಷಿಣ ಚೀನದ ಸೈನಿಕರು ಪೇಕೀನ ರಾಜಧಾನಿಯನ್ನು ಮುತ್ತಿ ಕೈವಶ ಮಾಡಿಕೊಂಡುದರಿಂದಲೂ ಹಳ್ಳಿಪಳ್ಳಿಗಳ ರೈತರೂ ಸಹ ಎಪ್ಪತ್ತು ಲಕ್ಷಾವಧಿ ಜನರು ರಾಷ್ಟ್ರೀಯ ಪಕ್ಷಕ್ಕೆ ಸೇರಿದರು. ಇಷ್ಟಾದರೂ ಚೀನದ ಜನಸಂಖ್ಯೆಯ ಮಾನದಿಂದ ನೋಡಿದರೆ ಅಲ್ಲಿಯ ಜನರಲ್ಲಿ ದೇಶಾಭಿಮಾನಿಗಳ ಸಂಖ್ಯೆಯು ಸ್ವಲ್ಪವೆಂದು ಹೇಳಬಹುದು. ಆದರೂ ರಾಷ್ಟ್ರೀಯ ವೃತ್ತಿಯ ಪ್ರಸಾರವಾಗುತ್ತಿರುವ ವೇಗವು ಎಷ್ಟು ಶೀಘ್ರಗಾಮಿಯಾಗಿದೆಯೆಂಬುದೆ ಇದರಲ್ಲಿ ಮಹತ್ವದ ಸಂಗತಿಯಾಗಿದೆ.

—ವರ್ಲ್ಡ ಟುಮಾರೊ. (ನ್ಯೂಯಾರ್ಕ).

---

## ಹಿಂದಕ್ಕೆ ಇಂಗ್ಲಂಡಿನಲ್ಲಿ ವಿದೇಶಿ ವಸ್ತುಗಳ ಬಹಿಷ್ಕಾರದ ಚಳವಳಿ ಹೇಗಾಯಿತು ?

ಇನ್ನೂರು ಇನ್ನೂರಾ ಐವತ್ತು ವರುಷಗಳ ಮೊದಲು ಹಿಂದೂ ದೇಶದ ಬಟ್ಟೆಗಳೇ ವಿಲಾಯತಿಗೆ ಹೋಗುತ್ತಿದ್ದುವು. ಅಲ್ಲಿಯ ಜನಗಳಿಗೆ ಈ ಬಟ್ಟೆಗಳನ್ನು ಉಟ್ಟು ತೊಟ್ಟುಕೊಳ್ಳುವುದರಲ್ಲಿಯೇ ಒಳ್ಳೇ ಪ್ರೀತಿ. ಆದರಿಂದ ಇಂಗ್ಲಂಡಿನಲ್ಲಿ ನೇಗಿ, ನೂಲು, ಕಟ್ಟಾಗಿ ೫೦ ಸಾವಿರ ಜನ ಕೂಲಿಕಾರರು ಕೆಲಸಗೇಡಿಗಳಾಗಿದ್ದರು. ಹೊಟ್ಟೆಗೆ ಕೂಳಿಲ್ಲದ್ದರಿಂದ ಇಷ್ಟೊಂದು ಜನಸಮುದಾಯವು ಊರಿಂದೂರಿಗೆ ಅಲೆಯಲಾರಂಭಿಸಿತು; ಎಷ್ಟೋ ಜನರು ದೇಶಾಂತರಕ್ಕೆ ಹೋದರು. "ಕೂಳು," "ಕೂಳು" ಎಂದು ಸತ್ತವರು ಎಷ್ಟೋ ! ಕುದುರೆಯ ಹಸಿ ಮಾಂಸದಿಂದ ಬದುಕಲಿಕ್ಕೆ ಹವಣಿಸಿದವರೆಷ್ಟೋ !

ಪಾರ್ಲಮೆಂಟಿನಲ್ಲಿ ಪರದೇಶದ ಸರಕಿಗೆ ಸುಂಕ ಹಾಕಬೇಕೊ, ಬಾರದೊ ಎಂದು ಚರ್ಚೆ ನಡೆದಿತ್ತು. ಪರದೇಶದ ಸರಕಿಗೆ ಸುಂಕ ಹಾಕಬಾರದು. ಅನಿರ್ಬಂಧ ವ್ಯಾಪಾರಕ್ಕೆ ಪ್ರೋತ್ಸಾಹನೆಯಿರಬೇಕು, ಎಂದು ಪ್ರತಿಪಾದಿಸುವ ಜನರಿಗೆ ಪೋಲಿಸರ ಸಹಾಯದಿಂದ ತಮ್ಮ ಜೀವವುಳಿಸಿಕೊಂಡು ಮನೆಗೆ ಹೋಗಬೇಕಾಯಿತು. ಕೂಲಿಗೇಡಾದ ಜನರ ತಂಡಗಳು, "ಬುಭುಕ್ಷಿತಃ ಕಿಂ ನ ಕರೋತಿ ಪಾಪಂ" ಎಂಬಂತೆ ಪಟ್ಟಣದಲ್ಲೆಲ್ಲ ಅತ್ಯಾಚಾರಗಳನ್ನು ನಡೆಸಿದುವು. ಈ ದೊಂಬಿಗಾರರು ಪಗಡಿಸಾಲಿನ ಪೇಟೆಯಲ್ಲಿ ಹೊಕ್ಕರು; ವಿದೇಶೀಯ ವಸ್ತುಗಳನ್ನೆಲ್ಲ ಹೊರದೆಗೆದು ಸುಟ್ಟು ಬೂದಿಮಾಡಿದರು. ವಿದೇಶೀಯ ವಸ್ತ್ರಗಳನ್ನು ಧರಿಸಿದ ಸ್ತ್ರೀಪುರುಷರ ಮೈಮೇಲೆ ಬಿದ್ದು ಹೋದರು. ಎಷ್ಟೋ ಮಂದಿಯ ಮೇಲೆ ಗಂಧಕಾಮ್ಲ (Sulfuric Acid) ಉಗ್ಗಿ ಮೈಗೂ ಬಟ್ಟೆಗೂ ಬೆಂಕಿ ಹಾಕಿದರು. ಈ ಗಲಾಟೆಯಲ್ಲಿ ಹಲವು ಹೆಂಗಸರು ಎಚ್ಚರ ತಪ್ಪಿದರು; ಬಸುರಿದ್ದವರಲ್ಲಿ ಹಲವರಿಗೆ ಗರ್ಭಪಾತವಾಯಿತು. ಇಷ್ಟೆಲ್ಲ ಅನಾಹುತ ಅತ್ಯಾಚಾರಗಳು ನಡೆದ ಮೇಲೆ ವಿದೇಶೀಯ ವಸ್ತುಗಳ ಮೇಲೆ ಜಡಿದು ಸುಂಕಹೇರುವ ಕಾಯಿದೆ ಪಾಸಾಯಿತು. ದೊಂಬೆಗಾರರಿಗೆ ಜಯವು ದೊರೆಯಿತು.

P. J. Thomas.
Marcantilism & East India
Trade 1926.

# ವಾದಭೂಮಿ



## ಶಿವಾದ್ವೈತ ದರ್ಪಣ ವಿಮರ್ಶೆಯ ಪರಾಮರ್ಶೆಯು

ಲೇಖಕರು— ಪೂವಲ್ಲಿ ಬೃಹನ್ಮಠ ಪಾಠಶಾಲಾಧ್ಯಾಪಕರಾದ ವೇ। ಬ್ರ. ಶ್ರೀ. ಸಿದ್ಧಬಸವಶಾಸ್ತ್ರಿಗಳು.

ನಮ್ಮ ಜಯಕರ್ನಾಟಕದ ಹಿಂದಿನ ಸಂಚಿಕೆಗಳಲ್ಲಿ ಶ್ರೀ. ಪಾವಟೇ ಸಿದ್ಧರಾಮಪ್ಪರೆಂಬವರು "ಶಿವಾದ್ವೈತದರ್ಪಣ ವಿಮರ್ಶೆ" ಎಂಬ ಲೇಖನವನ್ನು ಪ್ರಚಾರಪಡಿಸಿದ ವಿಷಯುವು ನಮ್ಮ ಜಯಕರ್ನಾಟಕದ ವಾಚಕರಿಗೆ ವೇದ್ಯವೇ.

೧ ಶ್ರೀ. ಪಾವಟೆಯವರು ತಮ್ಮ ವಿಮರ್ಶೆಯ ಪ್ರಾರಂಭದಲ್ಲಿ "ಶಿವಾದ್ವೈತ ದರ್ಪಣವೆಂಬ ಪ್ರಕರಣವು ಶಕ್ತಿವಿಶಿಷ್ಟಾದ್ವೈತಪ್ರತಿಪಾದಕವೆಂದು ಮುಂದುವರೆದಿದೆ" ಎನ್ನುವರು. ಆವರ ಈ ಗ್ರಂಥವು ಈ ಇಪ್ಪತ್ತನೆ ಶತಮಾನದಲ್ಲಿ ಮುಂದುವರೆದಿಲ್ಲ. ಒಂದುವರೆ ಸಾವಿರ ವರ್ಷಗಳ ಪೂರ್ವದಲ್ಲಿಯೇ ಮುಂದುವರೆದಿದದ್ದಾಗಿದೆ.

೨ "ಈ ಭೂಮಿಕೆಯು ಹಾಲಾಸ್ಯನಾಥ ಶಾಸ್ತ್ರಿಗಳಿಂದ ನಾಗರಲಿಪಿಯಲ್ಲಿ ಪ್ರಚಾರಿಸಿದ ಶ್ರೀಕಂಠ ಭಾಷ್ಯಕ್ಕೆ ಬರೆದ ಉಪೋದ್ಘಾತದಿಂದೆ ಎತ್ತಿಕೊಂಡಿದ್ದಾಗಿದೆ" ಇದು ಪ್ರಕಾಶಕರ ಹಿರಿಯತನಕ್ಕೆ ಕುಂದಕವನ್ನು ತರುವದು ಎಂದೂ ಮತ್ತೂ ಶ್ರೀಕಂಠರೇ ನೀಲಕಂಠರೆಂದು ಈ ಗ್ರಂಥದ ಭೂಮಿಕೆಯಲ್ಲಿ ನಾವು ಬರೆದಿರುವವೆಂದೂ "ಪಾವಟೇಯವರು ವಾದಿಸುವರು" ಇವನ್ನು ನೋಡಿದರೆ ನಗೆಬರುತ್ತದೆ. ನಮ್ಮ ಭೂಮಿಕೆಗೆ ಶ್ರೀಕಂಠಭಾಷ್ಯದ ಭೂಮಿಕೆಯೇ ಸಪ್ರಮಾಣ ಆಧಾರವಾಯಿತೆಂದು ತಿಳಿದು ಅದನ್ನೇ ಆಧಾರವಾಗಿಟ್ಟುಕೊಂಡಿರುವ ಸಂಗತಿಯನ್ನು ಆ ಭೂಮಿಕೆಯ ಕೆಳಭಾಗದಲ್ಲಿಯೇ ಪ್ರಸಿದ್ಧಪಡಿಸಿರುವೆವಲ್ಲದೆ ನಾವು ಎರಡನೇಯವರ ಹಿರಿಯುತನಕ್ಕೂ ಹೋಗುವವರಲ್ಲ ಮತ್ತು ಎರಡನೇಯವರ ಲೇಖಗಳನ್ನು ದೂಷಿಸುತ್ತ ಕೂಡುವವರೂ ಅಲ್ಲ. "ಶಿವಾದ್ವೈತದರ್ಪಣವು" ಶ್ರೀಭಗವತ್ಪಾದ ನೀಲಕಂಠ ಶಿವಾಚಾರ್ಯರು ಪ್ರತಿಷ್ಠಾಪಿಸಿದ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಪ್ರಕರಣ ಗ್ರಂಥವು ಎಂಬ ನಮ್ಮ ಅಭಿಪ್ರಾಯವನ್ನು ವಿಸ್ತಾರವಾಗಿ ವ್ಯಕ್ತಪಡಿಸಿ ಶ್ರೀಜಗದ್ಗುರು ಶಂಕರಾಚಾರ್ಯ— ರಾಮಾನುಜಾಚಾರ್ಯ— ಮಧ್ವಾಚಾರ್ಯರು ರಚಿಸಿದ ಅದ್ವೈತ— ವಿಶಿಷ್ಟಾದ್ವೈತ ದ್ವೈತಸಿದ್ಧಾಂತಪರಗಳಾದ ಬ್ರಹ್ಮಸೂತ್ರ ಭಾಷ್ಯಗಳನ್ನು ವ್ಯಾಖ್ಯಾಸಹಿತವಾಗಿ ತತ್ತನ್ಮತದ ಪಂಡಿತರು ಮುದ್ರಿಸಿರುವ ಸಂಗತಿಯನ್ನೂ ಶ್ರೀಕಂಠ ಶಿವಾಚಾರ್ಯರು ರಚಿಸಿದ ಬ್ರಹ್ಮಸೂತ್ರಭಾಷ್ಯವನ್ನೂ ಶ್ರೀಮತ್ ಅಪ್ಪಯ್ಯ ದೀಕ್ಷಿತರ ಶಿವಾರ್ಕಮಣಿದೀಪಿಕಾಯೆಂಬ ವ್ಯಾಖ್ಯಾಸಹಿತವಾಗಿ ಹಾಲಾಸ್ಯನಾಥ ಶಾಸ್ತ್ರಿಗಳೆಂಬವರು ಮುದ್ರಿಸಿ ಪ್ರಕಟಪಡಿಸಿದ ಸಂಗತಿಯನ್ನೂ ನಾವು ವಿಸ್ತಾರವಾಗಿ ಬರೆದು ಮುಂದೆ ಎಲ್ಲ ಭಾಷ್ಯಗಳಿಗಿಂತ ಅತ್ಯಂತ ಪ್ರಾಚೀನವಾದ ಶ್ರೀ ನೀಲಕಂಠ ಭಗವತ್ಪಾದರು ರಚಿಸಿದ ಬ್ರಹ್ಮಸೂತ್ರಭಾಷ್ಯವನ್ನು ಇನ್ನೂವರೆಗೂ ಪ್ರಕಟಿಸದೆ ಇದ್ದ ವಿಷಯವು ನಮ್ಮ ವೀರಶೈವರಿಗೆ ಅತ್ಯಂತ ಲಾಂಛನಾಸ್ಪದವೆಂದು ಸಂಸ್ಕೃತ ಭಾಷೆಯನ್ನರಿತ ಪ್ರತಿಯೊಬ್ಬ ಬಾಲಕನಿಗೂ ಕೂಡ ತಿಳಿಯುವಂತೆ ನಮ್ಮ ಭೂಮಿಕೆಯಲ್ಲಿಯೇ ನಾವು ಬರೆದಿದ್ದರೂ ಕೂಡಾ ಶ್ರೀ. ಪಾವಟೇಯವರು ಇದನ್ನು ಬಿಟ್ಟುಕೊಟ್ಟು ಶ್ರೀಕಂಠರೇ ನೀಲಕಂಠರೆಂದು ನಾವು ಬರೆದಿರುವವೆಂದು ವಾಚಕರಿಗೆ ತಪ್ಪು ತಿಳುವಳಿಕೆಯನ್ನು ಹುಟ್ಟಿಸುವ ಬರವಣಿಗೆಯನ್ನು ಮುಂದೆ ಮಾಡಿದ್ದು ನೋಡಿ ಪುನಃ ನಮ್ಮ ಭೂಮಿಕೆಯನ್ನು ನೋಡಿದವರಿಗೆ ಇದು ಚಮತ್ಕಾರದ ಬರವಣಿಗೆಯೆಂದು ತಿಳಿಯುವಲ್ಲಿ ಏನೂ ಸಂದೇಹವಿಲ್ಲ ನಾವು ಮಾತ್ರ ನಮ್ಮ ಭೂಮಿಕೆಯಲ್ಲಿ ಶ್ರೀಕಂಠರೇ ನೀಲಕಂಠರೆಂದೂ ನೀಲಕಂಠರೇ ಶ್ರೀಕಂಠರೆಂದೂ ಬರೆದಿರುವದಿಲ್ಲ.

೩ ಗುಳೇದಗುಡ್ಡದ ವಿರಕ್ತರು ನೀಲಕಂಠ ಭಾಷ್ಯವನ್ನು (೧೮೯೮)ರಲ್ಲಿ ಅಚ್ಚುಹಾಕಿಸಿ ಪ್ರಸಾರಪಡಿಸಿರುವರು. ಅದನ್ನು ಶ್ರೀಕಂಠ ಭಾಷ್ಯದೊಡನೆ ಓದಿದರೆ ವೀರಶೈವರು ಶ್ರೀಕಂಠೀಯದಲ್ಲಿ ತುಸು ಹೆಚ್ಚುಕಡಿಮೆಯನ್ನು ಮಾಡಿ ತಮ್ಮದೊಂದು ಭಾಷ್ಯವನ್ನು ಕಲ್ಪಿಸಿಕೊಂಡಂತೆ ಎದ್ದು ಕಾಣುವದೆಂದು ಬರೆದು ಮುಂದೆ ಶ್ರೀಕಂಠ ಭಾಷ್ಯವೇ ಇಲ್ಲೆಂದು ಶ್ರೀ. ಪಾವಟೇಯವರು ಹೇಳುತ್ತಿರುವರು. ಆದರೆ ಗುಳೇದಗುಡ್ಡದ ವಿರಕ್ತರು ಇವರ ಹೇಳಿಕೆಯಂತೆ ಆ ಪ್ರಕಾರ ಹೆಚ್ಚುಕಡಿಮೆ ಮಾಡಿದ್ದು ಎಷ್ಟೋ ಜನರಿಗೆ ಗೊತ್ತಿದ್ದ ಸಂಗತಿಯೇ ಅದೆ. ಹೀಗಿದ್ದ ಈ ಅಪ್ರಸ್ತುತ ವಿಷಯವನ್ನು ನಮ್ಮ "ದರ್ಪಣ" ವಿಮರ್ಶೆಯ ವಿಷಯದಲ್ಲಿ ಶ್ರೀ. ಪಾವಟೇಯವರು ತಂದದ್ದು ಹ್ಯಾಗೆ ಒಪ್ಪಿಗೆ

ಯಾಯಿತೋ ಇದು ಅವರಿಗೇಗೊತ್ತು. ಯಾವ ಭಗವತ್ಪಾದರ ಮಹಿಮೆಯಿಂದ ಶ್ರೀಶಂಕರಾಚಾರ್ಯರ ಗುರುಗಳಾದ ಗೋವಿಂದ ಗುರುಗಳೇ ಮೊದಲಾದ ಅಷ್ಟದಿಗ್ಗಜಗಳೆಂಬ ಅದ್ವಿತೀಯ ಪಂಡಿತರು ಈ ಜಗತ್ತಿನಲ್ಲಿ ಆಸ್ತಿಕ ಮತವನ್ನು ಪ್ರತಿಷ್ಠಾಪಿಸಿದರೋ ಯಾವ ಭಗವತ್ಪಾದರ ಭಾಷ್ಯವು ಇನ್ನೂ ಪ್ರಚಾರದಲ್ಲಿಲ್ಲದಿದ್ದರೂ ಪರಮತೀಯರಿಗೆ ಆ ಭಾಷ್ಯದ ಪ್ರಭಾವವು ಭಯಕಂಪನಗಳನ್ನುಂಟುಮಾಡುತ್ತಿರುವದೋ ಯಾವ ಮಹಿಮರ ಭಾಷ್ಯಾಮೃತಸೇವನೆಯಿಂದ ವೀರಶೈವ ಮತದ ಉದ್ದಾಮ ಪಂಡಿತರು ಕ್ರಿಯಾಸಾರ ಮೊದಲಾದ ಉದ್ಗ್ರಂಥಗಳನ್ನು ರಚಿಸಿ ಕೀರ್ತಿಶೇಷರಾದರೋ ಯಾವ ಶಿವಾವತಾರಿಗಳಿಂದ ಅನೇಕ ರಾಜಾಧಿರಾಜರು ವೀರಶೈವ ಮತವನ್ನು ಸ್ವೀಕರಿಸಿ ಪುನೀತರಾದರೋ ಅಂಥ ಮಹಾಮಹಿಮರು ರಚಿಸಿದ “ ಶ್ರೀ ನೀಲಕಂಠ ಭಾಷ್ಯವೇ” ಇಲ್ಲೆಂಮ ಹೇಳಿ ಆ ಮಹಿಮರ ಅಸ್ತಿತ್ವವೆಂಬ ಪರ್ವತಕ್ಕೆ ಹಗ್ಗವನ್ನು ಹಾಕಿ ಎಲ್ಲಿಯೋ ಅದನ್ನು ಬಚ್ಚಿಡಬೇಕೆಂಬುವ ನಮ್ಮ ಪಾವಟೇಯ ಆಲೋಚನೆಯು ಇಂದಿಲ್ಲ ನಾಳೆ ಆ ಶ್ರೀ ನೀಲಕಂಠ ಭಾಷ್ಯವು ಬೈಲಿಗೆ ಬಂದಾಗ್ಯೆ ಕೈಗೂಡುವದೆಂದು ಸ್ಪಷ್ಟವಾಗಿ ಹೇಳುವೆವು.

೪ “ ವ್ಯಾಸಸೂತ್ರಮಿದಂನೇತ್ರಂ ” ಎಂಬಿವೇ ಕೆಲವು ಶ್ಲೋಕಗಳನ್ನು ಪಾವಟೇಯುವರು ತೆಗೆದುಕೊಂಡು ಶ್ರೀ ನೀಲಕಂಠರ ಆಕ್ಷೇಪಗಳಿಗೆ ಕೈಹಾಕಿ ಅವು ನಿಲುಕದ್ದರಿಂದ ಕ್ರಿಯಸಾರ ನಿರ್ವಾಣಮಂತ್ರಿಗಳ ಟೀಕೆ ಇವೆರಡು ಗ್ರಂಥಗಳು ಗುಳೇದಗುಡ್ಡದ ವಿರಕ್ತರು ಮುದ್ರಿಸಿದ ಪುಸ್ತಕಕ್ಕೂ ಶ್ರೀಕಂಠ ಭಾಷ್ಯಕ್ಕೂ ಅಕ್ಷರಶಃ ಒಂದೇಯಾಗಿದೆ ಎಂದು ಇವರು ಬರೆದಿರುವರು. ಇದನ್ನು ನೋಡಿದರೆ ಕ್ರಿಯಾಸಾರವೂ ಅದರ ಟೀಕೆಯೂ ಗುಳೇದಗುಡ್ಡದ ವಿರಕ್ತರ ಪುಸ್ತಕದ ಆಧಾರದಿಂದಲೇ ಬರೆಯಲ್ಪಟ್ಟಿರುವದೆಂದು ಇವರು ಹೇಳಿದಹಾಗಾಯಿತಲ್ಲವೇ. ಹಾಗಾದರೆ “ ಕ್ರಿಯಾಸಾರ” ಕರ್ತೃಗಳಾದ ನೀಲಕಂಠ ಆಚಾರ್ಯರ ೧೨ನೇ ಶತಮಾನವೆತ್ತ ಅದಕ್ಕೆ ಟೀಕೆಯನ್ನು ಬರೆದ ನಿರ್ವಾಣ ಮಂತ್ರಿಗಳ ೧೬ನೇ ಶತಮಾನವೆತ್ತ. ಗುಳೇದಗುಡ್ಡದ ವಿರಕ್ತರ ೧೯ನೇ ಶತಮಾನವೆತ್ತ ಪಾವಟೇಯುವರು ಬರೆಯುವ ಕಾಲಮಾನ ವಿದ್ಯಮಾನವೆತ್ತ. ಈ ನಿರಾಧಾರವಾದ ವಿಷಯವನ್ನು ವಾಚಕರೇ, ನೀವೇ ವಿಚಾರಿಸಿರಿ. ಮತ್ತು ಆ ಭಗವತ್ಪಾದ ನೀಲಕಂಠ ಶಿವಾಚಾರ್ಯರನ್ನು ನಮ್ಮ ಪೂವಲ್ಲಿ ಮಠದ ಗುರು ಪರಂಪರೆಯಲ್ಲಿ ತೋರಿಸುವ ಹವಣಿಕೆಯು ನಮ್ಮದಿರುವದೋ ಅಥವಾ ಹಿಂದಿನವರು ಬರೆದಿಟ್ಟ ಉದ್ಗ್ರಂಥಗಳ ಹಾಗೂ ಪಟ್ಟಮಾಲಿಕೆ ಪಟ್ಟಾವಲೀ ಚರಿತ್ರೆ ಶ್ರೀ ನೀಲಕಂಠರ ಚರಿತ್ರೆ ಇತ್ಯಾದಿ ಗ್ರಂಥಗಳನ್ನು ರಚಿಸಿದ ಮಹನೀಯರ ಮತವಿರುವದೋ ಎಂಬ ವಿಷಯವನ್ನಷ್ಟು ಆ ಆ ಗ್ರಂಥಗಳ ಅವಲೋಕನೆಯನ್ನು ಮಾಡಿದರೆ ತಿಳಿಯುವದು. ಇದರಲ್ಲಿ ಸಂದೇಹವಿದ್ದವರು ನಮ್ಮ ಮಠಕ್ಕೆ ಬಂದು ಹಿಂದಿನವರು ಬರೆದಿಟ್ಟ ಉದ್ಗ್ರಂಥ ಕಾಗದಪತ್ರ ಶಾಸನಾದಿಗಳನ್ನು ನೋಡಿಕೊಂಡರೆ ನಮ್ಮ ಮಠವ ಪಟ್ಟಾವಲಿಯ ವಿಷಯವು ವಿಕಟಸ್ವರೂಪವೆಂದು ಹೇಳುವ ಪಾವಟೇಯುವರ ನಿಜಸ್ಥಿತಿಯೂ ಭಗವತ್ಪಾದ ನೀಲಕಂಠರ ಅಸ್ತಿತ್ವವೂ ಸ್ಪಷ್ಟವಾಗಿ ತಿಳಿಯುವದು.

೫ ಮತ್ತು ನೀಲಕಂಠ ಭಗವತ್ಪಾದರ ಮಂಗಲ ಶ್ಲೋಕಗಳಾದ ಕೆಲವು ಶ್ಲೋಕಗಳು ಗುಳೇದಗುಡ್ಡದ ವಿರಕ್ತರಿಂದ ರಚಿತವಾದವುಗಳೆಂದೂ ಅವುಗಳನ್ನು ನಾವು ಶಿವಾದ್ವೈತ ದರ್ಪಣದಲ್ಲಿ ಸಮಾವೇಶಮಾಡಿರುವೆವೆಂತಲೂ ನಮ್ಮ ಪಾವಟೇಯುವರು ಹೇಳುತ್ತಿರುವರು. ಶ್ರೀಕಂಠ ನೀಲಕಂಠ ಭಾಷ್ಯಗಳನ್ನು ಕಲಬೆರಿಕೆಮಾಡಲು ಸಾಹಸಪಟ್ಟವರು ನಮ್ಮ ಶಿವಾದ್ವೈತ ದರ್ಪಣದಂಥ ಉದ್ಗ್ರಂಥವು ಅವರ ಕೈಸೇರಿದ್ದರಿಂದ ತಮ್ಮ ಉಪೋದ್ಘಾತವೆಂಬ ಚಿಕ್ಕ ವಿಷಯದಲ್ಲಿ ತಮಗೆ ಅನುಕೂಲಗಳಾದ “ ದರ್ಪಣದ” ಕೆಲವು ಶ್ಲೋಕಗಳನ್ನು ತೆಗೆದುಕೊಳ್ಳಲು ಅವರು ಹಿಂಜರಿಯುವರೋ ವಾಚಕರೇ ಊಹಿಸಲಿ.

೬ “ ಶ್ರೀಮಚ್ಛೈತನ್ಯಸಿದ್ಧಾಂತ ” ಯೆಂಬ ಶ್ಲೋಕವನ್ನು ಜಗನ್ನಾಥ ಪಂಡಿತರ “ ಶ್ರೀಮಜ್ಞಾನೇಂದ್ರವಿಜ್ಞೋ ” ಎಂಬ ಶ್ಲೋಕಕ್ಕೆ ಹೋಲಿಸಿ ಇವೆರಡು ಶ್ಲೋಕಗಳ ಎರಡನೇ ಚರಣದಲ್ಲಿಯ ಸ್ವಲ್ಪ ಅಕ್ಷರಗಳೇ ಒಂದೇ ಇದ್ದ ಮಾತ್ರಕ್ಕೆ ಶ್ರೀ ಶಿವಾದಿತ್ಯ ಶಿವಾಚಾರ್ಯರ ವಿಷಯವನ್ನು ಪಾವಟೇಯವರು ತಕ್ಕೊಂಡದ್ದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಯಾಕೆಂದರೆ ಇದು ಹಿಂದಿನ ಮಹಾ ಕವಿಗಳು ಒಬ್ಬರನ್ನೊಬ್ಬರು ಅನುಸರಿಸುವ ಕ್ರಮಕ್ಕನುಸಾರವಾಗಿದೆ.

೭ ನಮ್ಮ ಮಠದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಶ್ರೀ ಸಿದ್ಧನಂಜೇಶ ಆಚಾರ್ಯರ ವಿಷಯದಲ್ಲಿ ಅನೇಕ ಆಧಾರಗಳಿದ್ದು ಅವುಗಳನ್ನು ಸರಿಪಡಿಸಿ ನೋಡಿದರೆ ಪರತಃಪ್ರಮಾಣ್ಯದಿಂದೆ ಅಂದರೆ ಕರ್ನಾಟಕ ಕವಿಚರಿತ್ರೆಕಾರರ ಉಕ್ತಿಯನ್ನು ಮುಂದೆಮಾಡಿ ಕವಿಚರಿತ್ರೆಯಲ್ಲಿ ಉಲ್ಲೇಖಿಸಿದ ಸಿದ್ಧನಂಜೇಶ ಕವಿಗಳೇ ನಮ್ಮ ಮಠದ ಮೂಲ ಪುರುಷರೆಂದು ಇವರು

ಬಸವಶತಕ— ಭಾವರತ್ನಾಭರಣ— ಗುರುರಾಜ ಚರಿತ್ರೆ— ರಾಘವಾಂಕನ ಚರಿತ್ರೆ ಇತ್ಯಾದಿ ಗ್ರಂಥಗಳನ್ನು ರಚಿಸಿರುವ ರೆಂದು ಸಿದ್ಧಮಾಡಲಿಕ್ಕೆ ತೊಡಗಿರುವರು. ಕವಿಚರಿತ್ರೆಕಾರರು ಗುರುರಾಜ ಚರಿತ್ರೆಯ ಕೆಲವು ಶ್ಲೋಕ ಮತ್ತು ರಾಘವಾಂಕನ ಕಾವ್ಯದೊಳಗೆ ಕವಿಯು ಆ ಕಾವ್ಯದ ಅಂತ್ಯಭಾಗದಲ್ಲಿ ತನ್ನ ಗುರುಗಳನ್ನು ಸ್ತುತಿಸಿದ ಅರ್ಧ ಶ್ಲೋಕ ಒಂಡನ್ನೇ ಮಾತ್ರ ತೆಗೆದುಕೊಂಡು ಗುರುರಾಜ ಚರಿತ್ರೆಯನ್ನು ರಚಿಸಿದ ಸಿದ್ಧ ನಂಜೇಶಕವಿಯೂ ರಾಘವಾಂಕನ ಕಾವ್ಯವನ್ನು ರಚಿಸಿದ ಚಿಕ್ಕನಂಜೇಶ ಕವಿಯೂ ಒಬ್ಬನೇ ಆಗಿರುವನೆಂದು ಪ್ರಕಟ ಗೊಳಿಸಿರುವರು. ಈ ಪ್ರಕಾರ ಹೇಳುವ ಅವರ ತಿಳುವಳಿಕೆಯು ಮಾತ್ರ ತಪ್ಪು ಇರುವದೆಂದು ಖಂಡಿತವಾಗಿ ನಾವು ಹೇಳದೆ ಇರಲಾರೆವು. ಹೇಗೆಂದರೆ ಗುರುರಾಜ ಚರಿತ್ರೆಯನ್ನು ಬರೆದವರು ಶ್ರೀಶೈಲದ ಹತ್ತರ ಇರುವ ನಂದ್ಯಾಲ ಕ್ಷೇತ್ರದ ಸಿಂಹಾಸನಾಧಿ ಪತಿಯಾದ ಸಿದ್ಧನಂಜೇಶಕವಿಯು ಆಗಿದ್ದು ಇವರು ಪೂವಲ್ಲಿ ಚಿಕ್ಕನಂಜಾಚಾರ್ಯರು ಬರೆದ ರಾಘವಾಂಕದ ಕಾವ್ಯದೊಳ ಗಿದ್ದ ಕೆಲವು ವಿಷಯವನ್ನು ಸಮಾವೇಶಮಾಡಿಕೊಂಡು ಗುರುರಾಜ ಚರಿತ್ರೆ— ರಾಘವಾಂಕನ ಚರಿತ್ರೆ— ಬಸವಶತಕ— ಭಾವರತ್ನಾಭರಣ ಇತ್ಯಾದಿ ಗ್ರಂಥಗಳನ್ನು ಬರೆದಿರುವರು. ಈ ನಂದ್ಯಾಲ ಸಿದ್ಧನಂಜೇಶ ಕವಿಗೂ ರಾಘವಾಂಕನ ಕಾವ್ಯ ರಚಿಸಿದ ಪೂವಲ್ಲಿ ಚಿಕ್ಕನಂಜಾಚಾರ್ಯ ಕವಿಗೂ ಒಂದು ಶತ ಮಾನ ಅಂತರವಿದ್ದು ಇವರಿಬ್ಬರು ಕವಿಗಳು ಒಂದು ಮಠದ ಅಧಿಕಾರವನ್ನಾಗಲಿ ಒಂದೇ ಸಮಯದ ಸ್ಥಿತಿಯನ್ನಾಗಲಿ ಹೊಂದಿದವರಲ್ಲವೆಂಬುವದು ಅವರವರು ಬರೆದ ಕಾವ್ಯಗ ಳಿಂದಲೇ ಸ್ಪಷ್ಟವಾಗುತ್ತದೆ. ಚಿಕ್ಕನಂಜೇಶ ಕವಿಗಳು ರಚಿಸಿದ ರಾಘವಾಂಕನ ಕಾವ್ಯದಲ್ಲಿ.

ಶ್ಲೋ|— ಆಚಾರ್ಯರೇವಣಾ ಸಿದ್ಧೇಶ ಮರುಳಸಿ ।
ದ್ಧಾಚಾರ್ಯರಾಮಿ ದೇವಾಚಾರ್ಯ ಗುರುಪಂಡಿ ॥
ತಾಚಾರ್ಯ ಚೌಕಮಧ್ಯದಿ ನಿಂದ ಪಂಚವಣ್ಣಿಗಿ
ಸಿದ್ಧನಂಜೇಶ್ವರ ॥
ಸ್ವಾಚಾರ್ಯಪದ ಸರಸಿರುಹ ಮಧುಪ ಚಿಕ್ಕನಂಜಾ
ಚಾರ್ಯ ರಚಿತನಹ ಹಂಪಿಯ ಹರೀಶ್ವರ ಶಿವಾ ।
ಚಾರ್ಯಸುತ ರಾಘವಾಂಕನ ಕಾವ್ಯದೊಳು ಪ್ರಥಮ
ಸಂಧಿ ಸುವಚೋನುಬಂಧಿ ॥

ಹೀಗೆ ತನ್ನ ಹೆಸರನ್ನು ಚಿಕ್ಕ ನಂಜೇಶ್ವರನೆಂದೂ ತಾನು ಪಂಚವಣ್ಣಿಗಿ ಸಿದ್ಧನಂಜೇಶ್ವರ ಪದ ಸರಸಿರುಹ ಮಧುಪ (ಕರಸಂಜಾತ) ನೆಂದೂ ಸ್ಪಷ್ಟವಾಗಿ ಉಲ್ಲೇಖಿಸಿರುವನು ಮತ್ತು ನಂದ್ಯಾಲ ಸಿದ್ಧನಂಜೇಶ ಕವಿಗಳು ತಾವು ರಚಿಸಿದ ಗುರು ರಾಜ ಚರಿತ್ರೆಯ ಪ್ರತಿಯೊಂದು ಸಂಧಿಯ ಅಂತ್ಯದಲ್ಲಿ

ಶ್ಲೋ|— ಧಾತ್ರಿಗುತ್ತಮವೆನಿಪ ಪೂವಲ್ಲಿ ಪುರಗಧಿಪ ।
ಚಿತ್ರಗುರು ಪಂಚವಣ್ಣಿಗಿ ಸಿದ್ಧನಂಜೇಶ ।
ಪುತ್ರ ಸತ್ಕವಿಕುಲ ಸ್ತೋತ್ರ ಶ್ರೀಶೈಲ ನೈಋತ್ಯ
ಭಾಗದೊಳುಪ್ಪುವ ।
ಕ್ಷೇತ್ರ ನವನಂದಿ ಮಂಡಲದ ಸಿಂಹಾಸನಕೆ ।
ಚೈತ್ರ ಶಿವಕವಿ ಸಿದ್ಧನಂಜೇಶಕೃತ ದಿವ್ಯ ।
ಸ್ತೋತ್ರ ಗುರುರಾಜ ಚಾರಿತ್ರದೊಳು ದೀಕ್ಷಾ ವಿಧಾನಕ್ಕೆ
ಪ್ರಥಮ ಸಂಧಿ ॥

ಹೀಗೆಂದು ಕವಿಯು ಬರೆದುಕೊಂಡಿರುವನು. ಮತ್ತು ಇವ ರಿಬ್ಬರ ನಿಜಸ್ಥಿತಿಯನ್ನು ಸ್ವಲ್ಪ ಹೇಳಿ ಪಾವಟೆಯವರ ಆಕ್ಷೇಪ ವನ್ನು ದೂರಮಾಡೋಣ. ನಮ್ಮ ಮಠದಲ್ಲಿ ಶ್ರೀ ಸಿದ್ಧ ನಂದೀಶ ಅಥವಾ ಸಿದ್ಧನಂಜೇಶರೆಂಬವರು ಆರು ಜನ ಗುರು ಗಳು ಆಗಿರುವರು. ಇವರಲ್ಲಿ ಆನೆಯವರು ೧೩೬೦—೧೪೪೧ ವರೆಗೆ ತಮ್ಮ ತಮ್ಮ ಅಧಿಕಾರವನ್ನು ನಡೆಸಿರುವರು. ರಾಘ ವಾಂಕನ ಕಾವ್ಯವನ್ನು ಬರೆದ ಚಿಕ್ಕ ನಂಜಾಚಾರ್ಯ ಕವಿಗಳು ಈ ಆನೇ ಸಿದ್ಧನಂಜಾಚಾರ್ಯರ ಕರಸಂಜಾತರು.

ನಮ್ಮ ಮಠದಲ್ಲಿ ಎಲ್ಲ ಗುರುಗಳಿಗಿಂತ ಸಿದ್ಧನಂಜೇಶರೆಂಬ ಹೆಸರಿನ ಗುರುಗಳೇ ಹೆಚ್ಚು ಪ್ರಸಿದ್ಧಿಗೆ ಬಂದಿಹರು. ಕಾಶೀಪೀಠ ದಲ್ಲಿ ಶ್ರೀ ವಿಶ್ವಾರಾಧ್ಯರ ಹೆಸರಿಗಿಂತ ಗಾಧಿ ಸ್ವಾಮಿ (ಮಲ್ಲಿ ಕಾರ್ಜುನ ಸ್ವಾಮಿ)ಯ ಹೆಸರು. ಚಿತ್ರದುರ್ಗದ ಮುರಗೀ ಮಠ ದಲ್ಲಿ ಅವರ ಮೂಲಪುರುಷನಾದ ಅಲ್ಲಮ ಇಲ್ಲನೇ ತೋಟದ ಸಿದ್ಧೇಶ್ವರರ ಹೆಸರುಗಳು ಪ್ರಸಿದ್ಧಿಗೆ ಬರದೆ ಮುರಿಗಿ ಸ್ವಾಮಿ ಗಳ ಹೆಸರೇ ಪ್ರಸಿದ್ಧಿಗೆ ಬಂಡಂತೆ ನಮ್ಮ ಮಠದ ಹಿಂದಿನ ಸಿದ್ಧ ಚೈತನ್ಯ ಶಿವಾದಿತ್ಯರ ಹೆಸರುಗಳಿಗಿಂತ ಸಿದ್ಧ ನಂಜೇಶ್ವರರ ಹೆಸರೇ ಪ್ರಸಿದ್ಧಿಗೆ ಬಂದಿರುವಲ್ಲಿ ಯಾವ ಸಂದೇಹವೂ ಇಲ್ಲ.

೮. "ನಮ್ಮ ಮಠದ ಪೂರ್ವಾಚಾರ್ಯರಾದ ಸಿದ್ಧ ಚೈತನ್ಯ ರನ್ನೂ ಶಿವಾದಿತ್ಯರನ್ನೂ ನೀಲಕಂಠರನ್ನೂ ಸ್ವಮತ—ಪರಮತ ಕವಿಗಳು ಯಾರೂ ಸ್ತೋತ್ರಮಾಡಿಲ್ಲ"ವೆಂದು ಪಾವಟೇಯವರು ತಮ್ಮ ಆಕ್ಷೇಪಕ್ಕೆ ಪುಷ್ಟಿಯನ್ನು ಕೊಟ್ಟು ತುಷ್ಟರಾಗಿರುವರು; ಆದರೆ ಶಿವಾದ್ವೈತದರ್ಪಣಕಾರರಂಥ ಸಂಪ್ರದಾಯದ ಆಚಾರ್ಯರೂ ಪಟ್ಟಾವಲಿ ಚರಿತ್ರಕಾರರೂ— ಲಿಂಗಧಾರಣ

ಚಂದ್ರಿಕಾಕಾರರೂ– ನ್ಯಾಯಶಾಸ್ತ್ರಕಾರರೂ ವರ್ಣಿಸಿ ಬರೆದದ್ದನ್ನು ಅದೇ ಭೂಮಿಕೆಯಲ್ಲಿಯೇ ನಾವು ಪ್ರಕಟಿಸಿ ತೋರಿಸಿದ್ದೇವೆ.

೯. "ಶಿವಾದಿತ್ಯ ಶಿವಾಚಾರ್ಯರ ಮತವನ್ನು ಗಂಗೇಶೋಪಾಧ್ಯಾಯರು ಖಂಡಿಸಿದ್ದು, ಅಂಥ ಶಿವಾದಿತ್ಯ ಶಿವಾಚಾರ್ಯರನ್ನು ತಮ್ಮ ಗುರುಪರಂಪರೆಯಲ್ಲಿ ಸೇರಿಸಿದ್ದದ್ದು ಹ್ಯಾಗೆ ಗೌರವವೆನಿಸಿತೋ ತಿಳಿಯದು" ಎಂದು ಬರೆದಿರುವ ಪಾವಟೀಯವರಿಗೆ ಉತ್ತರವನ್ನು ಏನಂತ ಕೊಡಬೇಕು ?– ಸಾಕ್ಷಾತ್ ಈಶಸಂಕಲ್ಪದಂತೆ ಶಿವಾದಿತ್ಯ ಶಿವಾಚಾರ್ಯರು ಪೂವಲ್ಲಿ ಪಟ್ಟಮಾಲಿಕೆಯಲ್ಲಿ ಜನ್ಮವೆತ್ತಿ ತಮ್ಮ ಪಾಂಡಿತ್ಯವನ್ನು ಜಗತ್ತಿಗೆ ಪ್ರಸಾರಮಾಡಿದ್ದನ್ನು ತೆಗೆದುಹಾಕಬಹುದೋ ? ಹಾಗಾದರೆ ಶ್ರೀಬಸವಣ್ಣನವರು ಬಿಜ್ಜಳನ ಮಗನಿಗೆ ಅಂಜಿ ಓಡಿ ಹೋದರೆಂದಾಕ್ಷಣಕ್ಕೆ ಅವರನ್ನು ನಮ್ಮ ವೀರಶೈವರಲ್ಲೆಂದು ನಿಷೇಧಿಸಬಹುದೊ ಇದನ್ನಷ್ಟು ಪಾವಟೆಯವರೇ ಹೇಳಿಬಿಡಲಿ. ನ್ಯಾಯ ಶಾಸ್ತ್ರದಲ್ಲಿ ಗಂಗೇಶೋಪಾಧ್ಯಾಯರಿಗಿಂತ ಪೂರ್ವದ ಪಂಡಿತರಿಗೆ ಪ್ರಾಚೀನರೆಂತಲೂ ಗಂಗೇಶೋಪಾಧ್ಯಾಯರಿಂದೀಚೆಗೆ ಆಗಿಹೋದ ಪಂಡಿತರಿಗೆ ನವೀನರೆಂತಲೂ ವಿಭಾಗ ಮಾಡಿರುವರು. ನವೀನ ಪಂಡಿತರಿಗೆ ಪ್ರಾಚೀನ ಪಂಡಿತರ ಉಕ್ತಿಗಳು ಸರಿಬಾರದ್ದರಿಂದ ಅವುಗಳನ್ನು ಖಂಡಿಸಿ ತಮ್ಮ ಅಭಿಪ್ರಾಯವನ್ನು ಹೇಳುವ ಸಾಂಪ್ರದಾಯದಂತೆ ಪ್ರಾಚೀನಪಂಡಿತರಾದ "ಶಿವಾದಿತ್ಯರ ಉಕ್ತಿಗಳನ್ನು" ಗಂಗೇಶೋಪಾಧ್ಯಾಯರು ಖಂಡಿಸಿದ್ದದ್ದು ಅಗೌರವವಲ್ಲವು. ಇದು ಪ್ರಾಚೀನ ನವೀನ ಮತಭೇದಗಳೆಂದು ತಿಳಿಯತಕ್ಕದ್ದು.

೧೦. ಪಾವಟೀಯವರು ಸಿದ್ಧಚೈತನ್ಯ, ಶಿವಾದಿತ್ಯರ ವಿಷಯವನ್ನು ಎತ್ತಿಕೊಂಡು ಈ ಹೆಸರುಗಳು ವೀರಶೈವರಲ್ಲಿ ವಾಡಿಕೆಯಾದ ಹೆಸರುಗಳೇ ಅಲ್ಲ ಎಂದು ಬರೆದುಕೊಂಡಿರುವರು. ಹಾಗಾದರೆ ನಮ್ಮ ವೀರಶೈವರಲ್ಲಿ ನನ್ನಯ್ಯ, ಕಾಳಿಮೆಯ್ಯ, ರವಿಕಿಮೆಯ್ಯ, ಕಲಿಕೇತಿಮಯ್ಯ, ದೇವರ ದಾಸ್ಮಯ್ಯ, ಶಿವ ದಾಸ್ಮಯ್ಯ, ಶಂಕರ ದಾಸ್ಮಯ್ಯ, ಇತ್ಯಾದಿ ಹಿಂದೆ ಆಗಿಹೋದವರ ಹೆಸರುಗಳನ್ನೂ ವಿಠೋಬಾ, ಕರೆಣ್ಣ ಮಾಯಪ್ಪ, ಫಕೀರಪ್ಪ ವೆಲ್ಲಪ್ಪ, ಹುಲಿಗೆಪ್ಪ, ಮಾರ್ತಂಡಪ್ಪ, ಸಂಕಪ್ಪ, ಬಾಳಪ್ಪ, ರಾಮನಗೌಡ, ಲಕ್ಷ್ಮಣಗೌಡ, ಇತ್ಯಾದಿ ಸದ್ಯಃ ಇರುವ ಹೆಸರುಗಳಾದರೂ ನಮ್ಮ ವೀರಶೈವರ ವಾಡಿಕೆಯಾದ ಹೆಸರುಗಳೇ ? ವಾಚಕರೇ! ಶ್ರೀಕಂಠಭಾಷ್ಯದ ಅಭಿಪ್ರಾಯಕ್ಕೂ ಶಿವಾದ್ವೈತ ದರ್ಪಣದ ಅಭಿಪ್ರಾಯಕ್ಕೂ ಸರಿನೋಡಿ ಶ್ರೀಕಂಠ ಭಾಷ್ಯವು ವೀರಶೈವ ಸಿದ್ಧಾಂತವನ್ನು ಬೋಧಿಸುವದಿಲ್ಲೆಂದು ಪಾವಟೀಯವರು ವಾಸ್ತವ್ಯ ರೀತಿಯಿಂದ ಬರೆದು ಪುನಃ "ಶಿವಾದ್ವೈತ ದರ್ಪಣದ" "ಅಥಾತೋಽಬ್ರಹ್ಮಜಿಜ್ಞಾಸಾ" ಎಂಬ ಸೂತ್ರಾರ್ಥವನ್ನು ಎತ್ತಿಕೊಂಡು ಅದಕ್ಕೆ ಕನ್ನಡದಲ್ಲಿ ಅರ್ಥವನ್ನು ಬರೆದಿರುವರು. ಈ ಅರ್ಥವು ಸಮಂಜಸವಾಗಿ "ಶಿವಾದ್ವೈತ ದರ್ಪಣದ" ಆಶಯವನ್ನು ಪ್ರಕಟಿಸಲಾರದೆಂದು ಹೇಳಬಹುದು. "ಪತಿಧರ್ಮ ಪ್ರಾಪ್ತ್ಯನಂತರಂ ಯತೋಽಧಿಕಾರಪೂರ್ಣತ್ವರೂಪ ಪತಿಧರ್ಮಪ್ರಾಪ್ತಿಃ ಅತೋ ಹೇತೋಃ ಬ್ರಹ್ಮಣೋ ಜಿಜ್ಞಾಸಾ ಕರ್ತವ್ಯೇತಿ ಶೇಷಃ" ಎಂಬ ವಾಕ್ಯಕ್ಕೆ ಪತಿಧರ್ಮಪ್ರಾಪ್ತಿಯು ಆಗುವದಾದ ಕಾರಣ ಬ್ರಹ್ಮಜಿಜ್ಞಾಸೆಯು ಮಾಡಲ್ಪಡತಕ್ಕದ್ದು ಎಂಬಷ್ಟೇ ಅರ್ಥವನ್ನು ತೋರಿಸಿರುವರು. ಪಾವಟೆಯವರ ಈ ಅರ್ಥವನ್ನು ನೋಡಿ ಪಂಡಿತರು ನಗುವಂತಿದೆ. ಶಾಸ್ತ್ರದ ವಾಕ್ಯಗಳಿಗೆ ಶಾಸ್ತ್ರದ ಮರ್ಯಾದೆಯಿಂದಲೇ ಅರ್ಥವನ್ನು ಮಾಡಬೇಕಾಗುವದು. ಇದಂತಿರಲಿ. ಪಾವಟೀಯವರು "ದರ್ಪಣದಲ್ಲಿಯ" ಕೆಲವು ತಪ್ಪು ತೋರಿಸಿರುವರು. ಆ ವಾಕ್ಯಗಳು ಮುದ್ರಿತವಾದ "ದರ್ಪಣ" ಪುಸ್ತಕದಲ್ಲಿ ಆ ಪ್ರಕಾರ ಬರೆಯಲ್ಪಡುವದಿಲ್ಲ. ಇವು ಪಾವಟೀಯವರಿಂದಲೇ ವ್ಯತ್ಯಸ್ತ ಮಾಡಿ ಬರೆಯಲ್ಪಟ್ಟಿರುವವೆಂದು ಮುದ್ರಿತವಾದ "ಶಿವಾದ್ವೈತದರ್ಪಣ" ವನ್ನು ನೋಡಿದರೆ ತಿಳಿಯುವದು– ಮುಂದೆಪಾವಟೀಯವರು "ಪತಿಧರ್ಮ ಪ್ರಾಪ್ತ್ಯನಂತರಂ" ಎಂಬ ವಾಕ್ಯವು ಅಸಂಭವಾರ್ಥವುಳ್ಳದ್ದೆಂದು ಹೇಳಿ ಈ ವಾಕ್ಯವನ್ನು ತೆಗೆಯಬೇಕೆಂದು ಹೇಳುವರು. ಪಾವಟೀಯವರಿಗೆ ಸೂತ್ರಾರ್ಥದ ವಿವೇಚನವೇ ಇಲ್ಲವೆಂದ ಮೇಲೆ ಹೇಳುವದೇನು! "ದರ್ಪಣಕಾರರು" ಮೊದಲು "ಅಥ" "ಅತಃ" ಎಂಬ ಶಬ್ದಗಳ ವಿಸ್ತಾರವಾದ ಅರ್ಥವನ್ನು ಬರೆದು ಮುಂದೆ "ಜಿಜ್ಞಾಸಾ" ಎಂಬ ಪದಕ್ಕೆ ಮೊದಲಿನ ಎರಡು ಶಬ್ದಗಳ ಅರ್ಥವನ್ನು ಸಂಬಂಧಮಾಡುವದರ ದೆಸೆಯಿಂದ "ಅಥ" ಶಬ್ದದ ಸಾಮಾನ್ಯಾರ್ಥವಾದ "ಪತಿಧರ್ಮಪ್ರಾಪ್ತ್ಯನಂತರಂ" ಎಂಬದನ್ನೂ "ಅತಃ" ಶಬ್ದದ ಸಾಮಾನ್ಯಾರ್ಥ "ಯತೋಽಧಿಕಾರ ಪೂರ್ಣತ್ವರೂಪ ಪತಿಧರ್ಮ ಪ್ರಾಪ್ತಿಃ ಅತೋ ಹೇತೋಃ" ಎಂಬ ಯತ್ತತ್ಪದ ಸಂಬಂಧಾರ್ಥವನ್ನು ಬರೆದು "ಜಿಜ್ಞಾಸಾ" ಪದಕ್ಕೆ ಕರ್ತವ್ಯೇತಿ ಪದಶೇಷದಿಂದ ಸೂತ್ರಾರ್ಥವನ್ನು ಸಂಗತ ಮಾಡಿದ್ದು ಹ್ಯಾಗೆ ತಿಳಿದೀತು ! ಎಂದೂ ತಿಳಿಯಲಾರದು. ಶಾಸ್ತ್ರವನ್ನು ಬಲ್ಲೆನೆಂಬ ಅಭಿಮಾನಿಗಳಿಗೆ ಸದ್ಬುದ್ಧಿ ಇರುವದು ಶ್ರೇಯಸ್ಕರವಲ್ಲವೇ ?

# ಶಬ್ದಸಾಮ್ರಾಜ್ಯ

ಲೇಖಕರು— ಶಂ. ಬಾ. ಜೋಶಿ

[ಈ ತಿಂಗಳಿಂದ 'ಶಬ್ದ ಸಾಮ್ರಾಜ್ಯ'ವೆಂಬ ಹೊಸದೊಂದು ಚರ್ಚಾವಿಷಯುವಿಭಾಗವನ್ನು ಪ್ರಾರಂಭಿಸಿದ್ದೇವೆ. ಈ ವಿಭಾಗದಲ್ಲಿ ಶಬ್ದಗಳ ವ್ಯುತ್ಪತ್ತಿ, ಹೊಸ ಶಬ್ದಗಳನ್ನು ರಚಿಸುವ ವಿಧಾನ, ಶಬ್ದಗಳ ಮತ್ತು ಗಾದೆ-ಮಾತುಗಳ ಇತಿಹಾಸ, ಪರ ಭಾಷೆಯಿಂದ ನಮ್ಮ ಪ್ರಚಲಿತ ಭಾಷೆಯಲ್ಲಿ ಬಂದ ಹಾಗು ನಮ್ಮ ಭಾಷೆಯಿಂದ ಪರಭಾಷೆಯಲ್ಲಿ ಹೋದ ಶಬ್ದಗಳ ಚರಿತ್ರ, ನಮ್ಮ ನವಜೀವನಕ್ಕೆ ನವೀನ ಸಾಹಿತ್ಯಕ್ಕೆ ನೂತನ ಶಾಸ್ತ್ರಗಳಿಗೆ ಬೇಕಾಗುವ ಶಬ್ದಗಳನ್ನು ಕಲ್ಪಿಸಿಕೊಳ್ಳುವ ಬಗೆ, ಹಳೆಯ ಸಾಹಿತ್ಯದಲ್ಲಿ ಹುದುಗಿರುವ, ನಮ್ಮ ಅಲಕ್ಷ್ಯ ದುರ್ಲಕ್ಷ್ಯಗಳಿಂದ ಬಳಕೆಯನ್ನು ಕಾಣದಿರುವ ರತ್ನದಂಥ ಶಬ್ದಗಳ ಅರ್ಥ ಸಂಪತ್ತಿ— ಇವೇ ಮೊದಲಾದ ವಿಷಯುಗಳನ್ನು ಚರ್ಚಿಸಿ ಸಂಗ್ರಹಿಸಲಾಗುವವು.

ಕಾಲಕಾಲಕ್ಕೆ ಕರ್ನಾಟಕದಲ್ಲಿ ವ್ಯಾಕರಣಕಾರರು ಹುಟ್ಟಿ ಕನ್ನಡವನ್ನು ಸಂಸ್ಕಾರಸಂಪನ್ನಭಾಷೆಯನ್ನಾಗಿ ಮಾಡಿದ್ದರೂ ನೈರುಕ್ತಿಕರು ಹುಟ್ಟದಿದ್ದ ಮೂಲಕ ಕನ್ನಡವು ಪೂರ್ಣ ವ್ಯುತ್ಪನ್ನ ಭಾಷೆಯಾಗಿಲ್ಲ. ಕನ್ನಡವು ಹುಟ್ಟಾ ವ್ಯುತ್ಪನ್ನ ಭಾಷೆಯು. ಕನ್ನಡ ಕವಿಗಳೂ ವಚನಕಾರರೂ ಕನ್ನಡ ಮಾತುಗಳ ಅರ್ಥಸಂಪತ್ತಿಯನ್ನೂ ಭಾವಗರ್ಭವನ್ನೂ ಚೆನ್ನಾಗಿ ಕಂಡುಹಿಡಿದಿದ್ದರು. ನಮ್ಮ ಈ ಇಳಿಗಾಲದಲ್ಲಿ 'ಜೀವನ್ ಭದ್ರಾಣಿ ಪಶ್ಯತಿ'— ಬದುಕಿ ಬಾಳಿದವನು ಒಳ್ಳೆ ಕಾಲವನ್ನು ಕಾಣುವನು— ಎಂದುಕೊಂಡು ಹಾಗೂ ಹೀಗೂ ಬಾಳಲು ಹವಣಿಸಿದ್ದಾಯಿತು. ಕರ್ನಾಟಕದಲ್ಲಿ ನವಜೀವನವು ಮೈದೋರುತ್ತಲಿದೆ; ನವೀನ ಸಾಹಿತ್ಯವು ತಲೆದೋರುತ್ತಲಿದೆ; ಕನ್ನಡ ನುಡಿಯು ಅರಸುಬೆಡಗಿಗೆ, ತಾನಾಗಿ ಉಳ್ಳ ಇಂಪಿಗೆ ಹೆಡಸುಳ್ಳ ಬಗೆಗೆ, ಅದರ ಮೀಸಲಾಗಿರುವ ಜೀವಾಳಕ್ಕೆ ಬಾಧೆ ಬರದಂತೆ ನೋಡಿಕೊಳ್ಳುವದು ಈಗಿನವರ ಕರ್ತವ್ಯ.

ಯಾಸ್ಕಾಚಾರ್ಯರು ವೈದಿಕಶಬ್ದಗಳ ನಿರುಕ್ತವನ್ನು ಬರೆದರು. ಆರ್. ಸೀ. ಟ್ರೆಂಚರೆಂಬ ಆಂಗ್ಲ ಪಂಡಿತರು 'On the study of words' ಮೊದಲಾದ ಪುಸ್ತಕಗಳಲ್ಲಿ ಆಂಗ್ಲ ಭಾಷೆಯೊಳಗಿನ ಶಬ್ದಗಳ ಚರಿತ್ರೆಯನ್ನು ಬರೆಯಲುಪಕ್ರಮಿಸಿದರು. ಇತಿಹಾಸಾಚಾರ್ಯ ರಾಜವಾಡೆಯವರು ಮರಾಠೀ ಶಬ್ದಗಳ ನಿರುಕ್ತವನ್ನು ಬರೆದಿಟ್ಟಿರುವರೆಂದು ಕೇಳಿದ್ದೇವೆ. ಕನ್ನಡದಲ್ಲಿಯೂ ಅಲ್ಲಲ್ಲಿ ಭಾಷಾಭ್ಯಾಸದ ಕುತೂಹಲವು ಕಂಡು ಬರುವದು. ಆದಕಾರಣ ಈ ಬಗೆಯ ಚರ್ಚೆಯಿಂದ ಕನ್ನಡ ನುಡಿಯ ಗೌರವವು ಸಾಮಾನ್ಯರಿಗೂ ಕಂಡುಬರಲು ಆಸ್ಪದವಾಗುವದೆಂದೂ ಪಂಡಿತ ಪಾಮರರಿಬ್ಬರಲ್ಲಿಯೂ ಕನ್ನಡ ನುಡಿಯನ್ನು ನೋಡುವ ಹೊಸ ನೋಟವುಂಟಾಗುವದೆಂದೂ ಆಶೆಯಿದೆ. ಈ ವಿಭಾಗದ ಉಪಯೋಗವನ್ನು ಎಲ್ಲರೂ ಮಾಡಿಕೊಳ್ಳಬೇಕಾಗಿಯೂ, ಈ ವಿಭಾಗಕ್ಕೆ ವಿಚಾರಿಗಳು ವಿಷಯುವನ್ನು ಸಂಗ್ರಹಿಸಿ, ವಿಮರ್ಶಿಸಿ ಕಳುಹಬೇಕಾಗಿಯೂ ಪ್ರಾರ್ಥಿಸುತ್ತೇವೆ. ಈ ವಿಷಯುವನ್ನು ಕುರಿತು ತಕ್ಕ ಸಲಹೆ ಸೂಚನೆ ಸಂಶಯಾದಿಗಳನ್ನು ತಿಳಿಸಿದಲ್ಲಿ ಅವುಗಳಿಗೆ ತಕ್ಕ ಎಡೆಯು ಕೊಡಲಾಗುವದು.

—ಸಂಪಾದಕ ಜಯಕರ್ನಾಟಕ ]

ಶಬ್ದ ಸಾಮ್ರಾಜ್ಯದ ಚರ್ಚೆಯಲ್ಲಿ ಸಾಧಾರಣವಾಗಿ ನಾಲ್ಕು ಭಾಗಗಳನ್ನು ಕಲ್ಪಿಸಬಹುದು.

(೧) ಈಗಾಗಲೆ ಬಳಕೆಯಲ್ಲಿರುವ ಶಬ್ದಗಳ ಉತ್ಪತ್ತಿಯನ್ನು ಕಂಡು ಹಿಡಿಯಲೆತ್ನಿಸುವುದು.

(೨) ಹಳೆಯ ಶಬ್ದಗಳನ್ನು ಉಚಿತಾರ್ಥಗಳಲ್ಲಿ ಮತ್ತೆ ಎತ್ತಿ ಹೇಳುವುದು.

(೩) ಹೊಸಕಾಲದ ಹೊಸ ವಿಚಾರಗಳನ್ನೂ, ಪರಭಾಷೆಯೊಳಗಿನ ಸಮಾನಾರ್ಥಕ ಶಬ್ದಗಳನ್ನೂ ಹೇಳಲು ಅವಶ್ಯಕವಾದ ಹೊಸ-ಶಬ್ದಗಳನ್ನು ಹುಟ್ಟಿಸುವುದು;

ಬೇರೆ ಬೇರೆ ವಿದ್ವಾಂಸರು ಈಗಾಗಲೆ ಸಿದ್ಧಪಡಿಸಿದ ಶಬ್ದಗಳನ್ನು ಒಂದೆಡೆಗೆ ತಂದು ಅವುಗಳ ಗುಣವಿಮರ್ಶೆ ಮಾಡುವುದು.

(೪) ಅಥವಾ ಇದೇಬಗೆಯ ಬೇರಿನ್ನಾವ ಚರ್ಚೆಯನ್ನು ಮಾಡುವುದು.

(೧) ಉತ್ಪತ್ತಿ

**ಹೋರಿ**— ಹೋರುವ ಅಂದರೆ ಕಾದಾಡುವ ಸ್ವಭಾವವುಳ್ಳುದು ಎಂದು ಸೂಚಿಸುವ ಶೀಲಾರ್ಥಕ 'ಇ' ಪ್ರತ್ಯಯ ಸೇರಿ ಈ ನಾಮವಾಗಿದೆ.

ಎತ್ತು— ಹೋರುವ ಸ್ವಭಾವವು ಹೋಗಿ ಎತ್ತುವ ಕೆಲಸಕ್ಕೆ ಉಪಯುಕ್ತವಾಗುವಂತೆ ಮಾಡಿದಂತಹ ಪ್ರಾಣಿ. ಧಾತುವನ್ನೇ ನಾಮದಂತೆ ರೂಢಿಸಿದ್ದಾಗಿದೆ.

ಆಡು—ಆಡುವ ಹಾರಾಡುವ ಸ್ವಭಾವವುಳ್ಳುದು: ಧಾತುವೇ ನಾಮದಂತೆ ಬಳಿಸಲ್ಪಟ್ಟಿದೆ. ಕುರಿಯು ಮತ್ತು ಆಡಿನ ಸ್ವಭಾವ ಭೇದವನ್ನು ನೋಡಿರಿ.

ಗೂಳಿ— (ಕೂಳಿ) ಕ=ಗ; ಬರಿ ಕೂಳನ್ನು ತಿಂದು ತಿರುಗುವ ಪ್ರಾಣಿ.

ಕುರಿ— 'ಕುರ್' ಎಂಬ ಕನ್ನಡ ಮೂಲ ಶಬ್ದಕ್ಕೆ ಚಿಕ್ಕ, ಸಣ್ಣ ಎಂಬ ಅರ್ಥವಿದೆ. (ಕುರ್ ದೊಳಗಿನ ರ್ ಕಾರವು ಡ್, ಳ್, ಱ್ ಮೊದಲಾದ ಪಾಠಗಳನ್ನು ಹೊಂದುವುದು.) ಆದುದರಿಂದ ಕುರಿ= ಚಿಕ್ಕ ಪ್ರಾಣಿ.

ಇಣಚಿ— ಇಣಿಕಿ, ಇಣಿಕಿ ನೋಡುವ ಪ್ರಾಣಿ; ಕ=ಚ. ಉದಾ— ಕೆನ್=ಚೆನ್

ತೊನಸೆ— ತೊನೆ=ಹಾರು; ತೊನೆಯುವುದು ತೊನಸೆ.

(೩) ಎಷ್ಟೋ ಉಚಿತ ಶಬ್ದಗಳು, ಗಾದೆಮಾತು ಮೊದಲಾದುವುಗಳು ಸಾವಿರಾರು ವರುಷಗಳಿಂದ ಉಪಯೋಗದಲ್ಲಿದ್ದಂತಹವು ಮಧ್ಯಯುಗದಲ್ಲಿ ನಮ್ಮ ಪರಂಪರಾವಿಚ್ಛೇದದ ಕಾಲದಲ್ಲಿ ರೂಢಿಯಿಂದ ಸ್ವಲ್ಪ ಹಿಂದೆ ಬಿದ್ದಿವೆ. ಆದರೆ ಅವುಗಳನ್ನು ಮತ್ತೆ ಹೊಸ ಒಪ್ಪ ಹಾಕಿಯಾದರೂ ಬಳಕೆಯಲ್ಲಿ ತರುವ ಎತ್ತುಗಡೆಯನ್ನು ಮಾಡುವುದು ಅವಶ್ಯವಿದೆ.

ಉದಾಹರಣಾರ್ಥವಾಗಿ 'ಅಂಕ' ಎಂಬ ಶಬ್ದವನ್ನು ತಕ್ಕೊಳ್ಳುವ; ಆದಿಪಂಪನು ಈ ಶಬ್ದವನ್ನು 'ಸುಪ್ರಸಿದ್ಧ' 'ನೆನಪಿಡತಕ್ಕ' ಎಂಬರ್ಥದಲ್ಲಿ ಉಪಯೋಗಿಸಿದ್ದಾನೆ. ಅಂಕ=ಗುರ್ತಿಸು, to mark. ಅಂಕದ ವೀರ ಎಂದು ಪಂಪನು ಒಂದೆಡೆಗೆ ಹೇಳಿರುವಲ್ಲಿ Remarkable ಎಂದು ಇಂಗ್ಲಿಷ ಶಬ್ದಕ್ಕೆ ಸರಿಯಾಗಿ ಎಷ್ಟು ಸಮರ್ಪಕ ಪದವನ್ನು ಉಪಯೋಗಿಸಿದ್ದಾನೆ!

(೪) ಈಗ ಪತ್ರಿಕಾಕಾರರಿಗೂ ಶಾಸ್ತ್ರೀಯ ವಿಷಯದ ಲೇಖಕರಿಗೂ ಅಡಿಗಡಿಗೂ ಹೊಸ ಶಬ್ದಗಳ ಅವಶ್ಯಕತೆಯೆನಿಸುವುದು. ಪ್ರತಿಯೊಬ್ಬರೂ ತಮತಮಗೆ ಯುಕ್ತಕಂಡ ಶಬ್ದಗಳನ್ನು ಸರಿಪಡಿಸಿಕೊಂಡು ಕೆಲಸ ಸಾಗಿಸುವರು, ಈ ಬಗೆಯ ಎಲ್ಲ ಶಬ್ದಗಳೂ ಆಯಾ ದೃಷ್ಟಿಯಿಂದ ಸಮರ್ಪಕವೇ ಇವೆ. ಆದರೂ ಅವುಗಳಲ್ಲಿ ಯಾವುದು ಹೆಚ್ಚು ಲೋಕಪ್ರಿಯವಾಗುವುದೊ ಅದು ನಿಲ್ಲುವುದು.

ಈಗ ರೌಂಡಟೇಬಲ್ ಕಾನಫರನ್ಸ ಎಂಬುದಕ್ಕೆ ಇಷ್ಟು ಶಬ್ದಗಳು ಸಿದ್ಧವಾಗಿವೆ; ಚಕ್ರಗೋಷ್ಠಿ, ಬಂಡಿಗಾಲಿ ಪರಿಷತ್ತು, ದುಂಡು ಮೇಜಿನ ಪರಿಷತ್ತು, ಸೊನ್ನೆ(ಶೂನ್ಯ=ದುಂಡು) ಕೂಟ.

News (ನ್ಯೂಜ) ಎಂಬುದಕ್ಕೆ ಕನ್ನಡದಲ್ಲಿ ಬಹಳ ಸಮರ್ಪಕ ರೀತಿಯಲ್ಲಿ ಹೊಸದೊಂದು ಶಬ್ದವನ್ನು ಸಿದ್ಧಪಡಿಸಿಕೊಳ್ಳಲು ಬರುವಂತಿದೆ. New (ನ್ಯೂ) ಅಂದರೆ ಹೊಸ; ನ್ಯೂಜ=ಹೊಸತು. ಇಂದಿನ ಹೊಸತು ಏನು? ಅಂದರೆ ಇಂದಿನ ಬಿಸಿ ಸುದ್ದಿ ಏನು ಎಂಬುವಷ್ಟು ಅರ್ಥವು ಅದರಲ್ಲಿ ಒಳಗೊಳ್ಳುತ್ತದೆ.

(೫) ಕನ್ನಡದಲ್ಲಿ ಈಗ ತೀರ ಸಮಾನಾರ್ಥಕವೆಂದು ಭಾಸವಾಗುವ ಅನೇಕ ಶಬ್ದಗಳಲ್ಲಿ ಸೂಕ್ಷ್ಮವಾದ ಅರ್ಥವ್ಯತ್ಯಾಸವು ಬೇಕಾದಷ್ಟಿದೆ. ಆದರೆ ಈ ಸೂಕ್ಷ್ಮಾರ್ಥಭೇದವನ್ನು ನೆನಪಿಟ್ಟು ಶಬ್ದಗಳನ್ನು ಉಪಯೋಗಿಸುವ ರೂಢಿಯೆ ಇಲ್ಲದುದರಿಂದ ಕನ್ನಡ ಭಾಷೆಯ ಹಾನಿಯು ಅಷ್ಟಿಷ್ಟಾಗಿಲ್ಲ.

ಕಳವು ಮತ್ತು ತುಡುಗು ಇವೆರಡೂ ಶಬ್ದಗಳಲ್ಲಿ ಈಗ ಭೇದವೇ ಎಣಿಸಲ್ಪಡುವದಿಲ್ಲ. ತಮಗೆ ಅರಿಯದಂತೆ (ಕಳೆದು) ಹೋದುದು ಕಳವು; ತುಡುಕಿ—ಮೈಮೇಲೆ ಏರಿ ಅಡರಿ ಬಂದು, ದೋಚಿಕೊಂಡು ಹೋದುದು ತುಡುಗು.

* * *

ಚಿತ್ರಪರಿಚಯ— ಮುಖಚಿತ್ರವನ್ನು ಚಿತ್ರಿಸಿದವರು ಮೈಸೂರು ಸಂಸ್ಥಾನದ ತರಿಕೆರೆಯ ಶ್ರೀ. ಹಂಜಿ ರುದ್ರಪ್ಪನವರು. ಶಾಂತಿನಿಕೇತನದಲ್ಲಿ ಚಿತ್ರಕಲಾಭ್ಯಾಸವನ್ನು ನಡೆಸಿರುವರು. ಮೃಣ್ಮೂರ್ತಿಕರ್ಮ (Plaster work) ವನ್ನೂ ವ್ಯಾಸಂಗಿಸುತ್ತಿರುವರು... ಸಾಹಿತ್ಯದಲ್ಲಿ 'ವಸ್ತು'ವಿನ ಹೊಸತನಕ್ಕೆ ಮಹತ್ತ್ವವಿದ್ದಂತೆ ಚಿತ್ರಶಿಲ್ಪದಲ್ಲಿಯೂ ಇದೆ. ಕೇದಿಗೆ, ಜಾಜಿಮಲ್ಲಿಗೆ, ಪಾರಿಜಾತ ಇವುಗಳ ಬಗೆಗೆ ಸಾಹಿತ್ಯದಲ್ಲಿ ಹಾಡಿ ಹರಸಿದುದುಂಟು. ಅವು ಚಿತ್ರವಿಷಯಗಳಾಗಲು ಯೋಗ್ಯವೆಂದು ಚಿತ್ರಕರಿಗೆ ಹೊಳೆದುದು ಕಡಿಮೆ. ಈ ಚಿತ್ರದಲ್ಲಿ ವಸ್ತುವಿನ ನಾವಿನ್ಯವನ್ನು ನೋಡತಕ್ಕುದು. ಅಲ್ಲದೆ ತಟ್ಟನೆ ಎದೆವುಗುವ ಮುಗ್ಧಮಧುರಭಾವ. ಕೇದಿಗೆಯನ್ನು ಮೂಸಿ ನೋಡುತ್ತಾ ನೋಡುತ್ತಾ ಸ್ವಮಾಕ ಹೆಣ್ಣುಮಗಳ ಬಣ್ಣನೆ ನಮ್ಮಲ್ಲಿಯೂ ಆ ಆಸೆಯನ್ನು ಹುಟ್ಟಿಸುತ್ತಿದೆ. ಭಾವದ ಋಜುತೆಗೆ ತಕ್ಕುದಾದ ಸರಲ ಸನ್ನಿವೇಶವೂ ಇದೆ. ದೂರದಲ್ಲಿ ಮಾಯವಾಗುತ್ತಲಿರುವ ಗದ್ದೆಗಳು. ಆಳಿಗೆ ಬಾರದ ವ್ಯಕ್ತಿ.

" ಪರದೇಶಿ ವಸ್ತ್ರಕ್ಕೆ ಬಹಿಷ್ಕಾರ!! "



ಧಾರವಾಡದಲ್ಲಿ ವಕೀಲರ ಮೆರವಣಿಗೆ

ಮರಣದಂಡನೆಗೆ ಗುರಿಯಾದ



ಸೊಲ್ಲಾಪುರದ ಶ್ರೀ. ಮಲ್ಲಪ್ಪ ಧನಶೆಟ್ಟಿ

ಸೊಲ್ಲಾಪುರ ಸತ್ಯಾಗ್ರಹದಲ್ಲಿ ಭಾಗವಹಿಸಿದ
ಕರ್ನಾಟಕ ಪಥಕದ ನಾಯಕರು



ಶ್ರೀ. ಆರ್. ಚಂದ್ರಶೇಖರರಾವ
ಬೆಂಗಳೂರು
( ೧೨ ತಿಂಗಳ ಸಶ್ರಮಶಿಕ್ಷೆಯನ್ನು
ಅನುಭವಿಸುತ್ತಿರುವರು )

---




ಸಂಪುಟ ೮; ಸಂಚಿಕೆ ೧೧. ಭಾದ್ರಪದ ಪೌರ್ಣಿಮೆ; ಸಪ್ಟಂಬರ ೧೯೩೦

ಸಂಸ್ಥಾಪಕರು:- ಆಲೂರ ವೆಂಕಟರಾಯರು ] [ ಸಂಪಾದಕರು:- ಬೆಳಗಾಂವಿ ರಾಮಚಂದ್ರರಾಯರು ಬೀ. ಎ.

## ಮುಖ್ಯ ವಿಷಯಗಳು



ಶ್ರೀಮದಾದ್ಯ ಶಂಕರಾಚಾರ್ಯರು

# ಜಯಕರ್ನಾಟಕ



ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

ಸಂಪುಟ ೮ | ಪ್ರಮೋದ ಸಂವತ್ಸರ, ಅನಂತನ ಹುಣ್ಣಿವೆ | ಚಾಲುಕ್ಯವಿಕ್ರಮ ವರ್ಷ ೮೫೫ | ಸಂಚಿಕೆ ೧೧

# ಯೋಗೀಶ್ವರ ಗುರು ಅರವಿಂದರ ಜ್ಞಾನಸಂದೇಶ

ಲೇಖಕರು—ಶ್ರೀ: ಬೇಂದ್ರೆ ದತ್ತರಾಯರು

"I have traversed the earth, seeking for the sons of Heaven. Among those I have met one was a homeless wanderer......... Another a prophet ........Another greater than all, a solitary, the chosen of the future."

—Paul Richard

"ನಾನು ಜಗತ್ತನ್ನು ಸುತ್ತಾಡಿದ್ದೇನೆ, ಸುತ್ತಾಡುತ್ತಲಿರುವೆನು — ಅಮೃತಪುತ್ರರನ್ನು ಹುಡುಕಾಡುವುದಕ್ಕಾಗಿ. ನನಗೆ ಭೆಟ್ಟಿಯಾದವರಲ್ಲೊಬ್ಬನು ಮನೆಯಿಲ್ಲದ ತಿರುಗುಳಿ...ಇನ್ನೊಬ್ಬ ಧರ್ಮಪ್ರಣೇತಾರನು...ಮತ್ತೊಬ್ಬ ಎಲ್ಲರಿಗಿಂತ ಹೆಚ್ಚಿನವನು, ಏಕಾಕಿ, ಆದರೆ ಭವಿಷ್ಯತ್ಕಾಲದ ಸ್ವಯಂವೃತ ಗುರುವು" ಎಂದು ಪಾಲ್ ರಿಶಾರರೆಂಬ ತತ್ತ್ವಜ್ಞಾನಿಗಳು ಗುರು ಅರವಿಂದರ ಬಗ್ಗೆ ಜಗತ್ತಿಗೆ ಸಾರಿರುವರು. ಧರ್ಮಸಮನ್ವಯವನ್ನು ಕಂಡ ರಾಮಕೃಷ್ಣ ಪರಮಹಂಸರ, ಭಾರತದ ವೇದಾಂತಸಂದೇಶವನ್ನು ಭೂಮಿಯಲ್ಲೆಲ್ಲ ಬೀರಿದ ವಿವೇಕಾನಂದರ, ತಮ್ಮ ಕಾವ್ಯಾಮೃತವನ್ನು ಕುಡಿಸಿ ನಮ್ಮನ್ನು ಆನಂದಸಾಮ್ರಾಜ್ಯದಲ್ಲಿ ಹೊಗಿಸುವ ರವೀಂದ್ರರ, ವನಸ್ಪತಿ ಸೃಷ್ಟಿಯೊಳಗಿನ ಜೀವಕಳೆಯನ್ನು ತಮ್ಮ ಶಾಸ್ತ್ರಚಕ್ಷುವಿನಿಂದ ಕಂಡುಹಿಡಿದ ಜಗದೀಶಚಂದ್ರರ ಮಾಲಿಕೆಯಲ್ಲಿಯೆ ಮೆರೆಯಲರ್ಹರಾದ ಯೋಗೀಶ್ವರ ಅರವಿಂದ ಗುರುಗಳ ತತ್ತ್ವಗಳು ಇಂದು ಭಾರತೀಯರ ಕಣ್ಮುಂದೆ ಕಟ್ಟಿರದಿದ್ದರೂ, ಮಹಾತ್ಮರಾದ ಮೋಹನದಾಸರ ಸತ್ಯಧರ್ಮದಿಂದ ಜಾಗೃತರಾದ ಭಾರತವಾಸಿಗಳು ಜಗತ್ತಿಗೆ ಮಾರ್ಗದರ್ಶಕರಾಗುವಂತೆ ಜೀವಿಸಬೇಕಾದರೆ ಅರವಿಂದರ ಮಾರ್ಗವನ್ನು ತುಳಿಯುವದು ಅತ್ಯಗತ್ಯವಾಗುವದರಿಂದ ಅವರ ತತ್ತ್ವಗಳಾವವೆಂಬುದನ್ನು ತಿಳಿದುಕೊಳ್ಳುವದುಚಿತವಾಗಿದೆ. ಕರ್ನಾಟಕವು ಧರ್ಮಕಾರಣದಲ್ಲಿ ಹೆಸರಾದದ್ದು. ಕನ್ನಡಿಗರೆಂಬ ಜನಾಂಗದಲ್ಲಿ ಧರ್ಮಸಂಸ್ಕಾರವು ಹೆಚ್ಚು. ಅದಕಾರಣ ಕನ್ನಡಿಗರಂತೂ ಅರವಿಂದರ ಧರ್ಮತತ್ತ್ವಗಳನ್ನು ಅರಿತುಕೊಳ್ಳಲೇಬೇಕು.

'Humanity is moving to a great change of its life.'

ಮಾನವ ಕುಟುಂಬದ ಜೀವನದಲ್ಲೊಂದು ದೊಡ್ಡದಾದ ಬದಲಾವಣೆಯಾಗುವ ಸಂಧಿಕಾಲವು ಸಮೀಪಿಸುತ್ತಲಿದೆ. ಎಂದು ಅರವಿಂದರು ಸಾರಿರುತ್ತಾರೆ. 'ಅದು ಏಕೆ?' ಎಂದು ಕೇಳುವಿರೋ? ಯುರೋಪ ಪ್ರಮುಖ ಪಾಶ್ಚಾತ್ಯ ರಾಷ್ಟ್ರದವರು ತಮ್ಮ ಬುದ್ಧಿ ಸಾಮರ್ಥ್ಯದಿಂದ ಭೌತಿಕ ಶಾಸ್ತ್ರಗಳನ್ನು ಬೆಳೆಸಿ ಜಗತ್ತಿಗೆ ಸುಖವನ್ನು ನೀಡಲು ಹವಣಿಸಿದರು. ಆದರೆ

ಅವರ ಬಂಡವಲು ತೀರಿ ಈಗ ಅವರು ಬುಡಮೇಲಾಗಲಿದ್ದಾರೆ. ಭಾರತ ಪ್ರಮುಖ ಪೌರ್ವಾತ್ಯ ರಾಷ್ಟ್ರದವರೂ ತಮ್ಮ ಆತ್ಮ ಸಾಮರ್ಥ್ಯದಿಂದ ಯೋಗಶಾಸ್ತ್ರಗಳನ್ನು ಬೆಳಸಿ ಮಾನವನಿಗೆ ಶಾಶ್ವತಾನಂದವನ್ನು ದೊರಕಿಸಲು ಯತ್ನಿಸಿದರೂ ಅವರೂ ಕುಂಠಿತಗತಿಗಳಾಗಿ ದಿಗ್ಭ್ರಾಂತರಾಗಿದ್ದಾರೆ. ಹಾಗಾದರೆ, ಹಾದಿ ಯಾವುದು? ಮಾನವಜೀವಿತದ ಆಧ್ಯಾತ್ಮಿಕ ಧ್ಯೇಯವನ್ನು ಯುರೋಪದವರು ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಅವರು ತಮ್ಮನ್ನು ತಾವೇ ಹಾಳು ಮಾಡಿಕೊಳ್ಳುವರು. ಏಸಿಯಾ ಖಂಡದವರು, ದೇಹ ಮನಸ್ಸುಗಳ ಸಾಮರ್ಥ್ಯವನ್ನೂ ಮಾನವ ಜನ್ಮದ ಮತ್ತು ಐಹಿಕ ಜೀವನದ ಮಹತ್ವವನ್ನೂ ಒಪ್ಪಿಕೊಳ್ಳಲೇಬೇಕು. ಹಾಗಾಗದಿದ್ದರೆ ಇವರು ನಿರಾಶರಾಗಿ ನಾಶಹೊಂದುವರು. "Only by finding himself can man be saved" ಆತ್ಮಜ್ಞಾನವಿಲ್ಲದೆ ಮುಕ್ತಿಯಿಲ್ಲವೆಂಬ ಪೂರ್ವದವರ ಸಂದೇಶವನ್ನು ಪಶ್ಚಿಮದವರೂ, "Man also is God........Life also is Divine" ಮಾನವನೂ ದೇವಾಂಶನು, ಇಹಜೀವನವೂ ದಿವ್ಯವು ಎಂಬ ಪಶ್ಚಿಮದವರ ಸಂದೇಶವನ್ನು ಪೂರ್ವದವರೂ ಸ್ವೀಕರಿಸಲೇಬೇಕು. ತತ್ವಗಳ ಬರಿಯ ಕಲೆಬೆರಿಕೆಯಿಂದ ಕೆಲಸವಾಗದು. ಪರಸ್ಪರರ ತತ್ವಗಳನ್ನು ಪರಸ್ಪರರು 'ಆತ್ಮಸಾತ್' ಮಾಡಿಕೊಳ್ಳಬೇಕು. ಸಣ್ಣ ಪುಟ್ಟ ಬದಲಾವಣೆಗಳನ್ನು ಮಾಡಿದರೆ ಕೆಲಸವು ಸಾಗಲಾರದೇ? ಇಲ್ಲ. ಭೌತಿಕ ಬದಲಾವಣೆಗಳಿಗಿಂತ ನೈತಿಕ ಮತ್ತು ಬೌದ್ಧಿಕ ಬದಲಾವಣೆಗಳು ಮೇಲು — ಅದಕ್ಕೂ ಮೇಲು ಆಧ್ಯಾತ್ಮಿಕ ಬದಲಾವಣೆಯು. ಆಧ್ಯಾತ್ಮಿಕ ಬದಲಾವಣೆಯೇ ಬೇಕು. ಇದು ಸಾಧ್ಯವೇ? The sense of impossibility is the beginning of possibilities. Souls that do not aspire are God's failures. ಆಗಲಾರದಲ್ಲಾ! ಎಂದೆನಿಸಲಾರಂಭಿಸಿದೊಡನೆಯೆ ಆಗುವ ಹೊತ್ತು ಬಂದಂತೆಯೆ. ಆಕಾಂಕ್ಷಿಸಲಾರದವರು ಹದಗೆಟ್ಟ ಜೀವರು. ಹಾಗಾದರೆ ಪ್ರಾರಂಭ?

Philosophy and religious thought must be the beginning and foundation of any such attempt.

ಈ ಪ್ರಯತ್ನಕ್ಕೆ ಪ್ರಾರಂಭದಲ್ಲಿಯೆ ತತ್ವಶಾಸ್ತ್ರ ಮತ್ತು ಆಚಾರ ಧರ್ಮಗಳ ತಳಹದಿಯು ಬೇಕು. ಆಚಾರವಿಲ್ಲದ ವಿಚಾರವು ಕುರುಡು; ವಿಚಾರವಿಲ್ಲದ ಆಚಾರವು ಹೆಳವ,

In Indian civilization, philosophy and religion, philosophy made dynamic by religion and religion enlightened by philosophy have led; the rest follow as best as they can.

ಭಾರತೀಯ ನಾಗರಿಕತೆಯ ಮಟ್ಟಿಗಂತೂ, ಆಚಾರ ಧರ್ಮದಿಂದ ವೀರ್ಯವತ್ತಾದ ತತ್ತ್ವಶಾಸ್ತ್ರವೂ, ತತ್ತ್ವಶಾಸ್ತ್ರದಿಂದ ಉದ್ದೀಪಿತವಾದ ಆಚಾರಶಾಸ್ತ್ರವೂ, ಕಲೆ ವಿಜ್ಞಾನ, ಸಾಹಿತ್ಯ, ಸಮಾಜ, ರಾಜನೀತಿ, ಮೊದಲಾದ್ದವುಗಳಿಗೆ ಮಾರ್ಗದರ್ಶಕಗಳಾಗಿವೆ. ಆಚಾರವಿಚಾರಶಾಸ್ತ್ರಗಳು ಮಾನವರ ಆತ್ಮವಿದ್ದಂತೆ; ಕಲಾಸಾಹಿತ್ಯಗಳು ಮನಸ್ಸಿದ್ದಂತೆ. ಸಮಾಜನೀತಿ ರಾಜನೀತಿಗಳು ದೇಹವಿದ್ದಂತೆ ಜಗತ್ತಿನ ಇಡಿ ಮಾನವ ಜಾತಿಯನ್ನೆ ಆಧ್ಯಾತ್ಮ ಮಾರ್ಗದಿಂದ ಉನ್ನತಿಗೊಯ್ಯಬೇಕಾದರೆ ಹೊಸ ಧರ್ಮವೇ ಬೇಕಾಗಬಹುದಲ್ಲವೇ?

All religions have saved a number of souls but none has as yet been able to spiritualise mankind. For that there is needed not cult and creed, but a sustained and all-comprehending effort at spiritual self-evolution.

ಎಲ್ಲ ಧರ್ಮಗಳು ಕೆಲ ಕೆಲವರನ್ನು ಮುಕ್ತರನ್ನಾಗಿ ಮಾಡಿದ್ದರೂ ಇಡೀ ಮಾನವಜಾತಿಗೆ ಇನ್ನೂ ಯಾವ ಧರ್ಮವೂ ಆಧ್ಯಾತ್ಮದೀಕ್ಷೆಯನ್ನು ಕೊಡಲು ಸಮರ್ಥವಾಗಿಲ್ಲ. ಮತ್ತು ಹೀಗೆ ಮಾಡಲು ಯಾವ ಹೊಸ ಮತವೂ ಪಂಥವೂ ಬೇಡ; ಆದರೆ ಆತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಸರ್ವರಿಂದಲೂ ಸತತವಾದ, ಸಮಗ್ರವಾದ, ಉತ್ಸಾಹಭರಿತವಾದ ಹೆಸೆಯದ, ಪ್ರಯತ್ನವು ಅವಶ್ಯವಾಗಿದೆ. ಇದರ ಹೆಸರು Religion of Humanity, ಮಾನವ್ಯ ಧರ್ಮ. A Spiritual Religion of Humanity is the hope of the future. ಮಾನವಜಾತಿಯ ಆಧ್ಯಾತ್ಮಮತ ಮಾರ್ಗದಲ್ಲಿಯೇ ಭವಿಷ್ಯತ್ ಕಾಲದ ಆಶೆಯ ಚಿಹ್ನವಿದೆ. ವಸುಧೈವ ಕುಟುಂಬಕ ವೃತ್ತಿಯು ಬರಿಯ ಬಾಯ ವೇದಾಂತವಲ್ಲ, ಆದರೆ ಪ್ರತಿಯೊಬ್ಬನ ದಿನದ ಆಚರಣೆಯ ಮಾತಾಗಬೇಕು. —Only in the life of his fellowman is his life complete—ತನ್ನ ಮಾನವ ಬಂಧುವಿನ ಜೀವನದಲ್ಲಿಯೆ ತನ್ನ ಜೀವನ ಸಂಪೂರ್ತಿಯನ್ನು ಕಾಣಲು ಕಲಿಯಬೇಕು. ಸರ್ವಭೂತಹಿತರತಿಯು, ಮಮಾತ್ಮಾ ಸರ್ವಭೂತಾತ್ಮಾ ಎಂಬ ಅನು

ಭವವು ಪ್ರತಿ ಕ್ಷಣದ ಮಾತಾಗಬೇಕು. ಮಂಗ ಮನಸ್ಸು ಇರುವ ವರೆಗೆ ಇದು ಆಗುವ ಮಾತೇ ? ಇಲ್ಲ. ಆ ಮಂಗ ಮನಸ್ಸಿನ ಮರ್ಕಟ ಚೇಷ್ಟೆಗಳಲ್ಲಿಯೆ. ಮಾನವಜಾತಿಯು ಪುನರಪಿ ಜನನಂ ಪುನರಪಿ ಮರಣಂ ಎನ್ನುತ್ತ, ಕೃತಯುಗದಿಂದ ಕಲಿಯುಗಕ್ಕೂ ಕಲಿಯುಗದಿಂದ ಕೃತಯುಗಕ್ಕೂ ಹೊಯ್ದಾಡುತ್ತ, ಯುಗಾನುಯುಗಗಳ ವರೆಗೆ ತೊಳಲಾಡಿತು ! ಆ ಮನಸ್ಸನ್ನು ದಾಟುವದಗತ್ಯ. ದಾಟುವ ಬಗೆಯೇನು ? ಯೋಗದಿಂದ. ಯಾವ ಯೋಗದಿಂದ ?– ಕರ್ಮ, ಜ್ಞಾನ, ಭಕ್ತಿ, ಲಯ, ಹಠ. ಮುಂತ್ರ ಇವುಗಳಲ್ಲಿ ಏತರಿಂದ ?– ಇವೆಲ್ಲವುಗಳಿಂದ. ಇವೆಲ್ಲವುಗಳು ಹೊಂದುಗೂಡಿ ಒಂದಾದ ಪೂರ್ಣ ಯೋಗದಿಂದ. All Yoga is in its nature a new hirth. ಯಾವ ಯೋಗವೂ ಕೂಡ ಒಂದು ಪುನರ್ಜನ್ಮವಿದ್ದಂತೆ.

The method we have to persue is to put our whole conscious being into relation and contact with the Divine and to call Him in to transform our entire being into his, so that in a sense God himself, the real Person in us becomes the Sadhak of the Sadhan as well as the Master of Yoga by whom the lower personality is used as the centre of a divine transfiguration and the instrument of its own perfection.

ನಮ್ಮ ಸಮಗ್ರ ಜೀವನವನ್ನು ನಮ್ಮ ಅಂತರಾತ್ಮನ ಸಾಮೀಪ್ಯ ಸಾಯುಜ್ಯದಲ್ಲಿ ತಂದು ನಮ್ಮನ್ನು ತನ್ನನ್ನಾಗಿ ಮಾಡಿಕೊಳ್ಳಲು ಪ್ರಾರ್ಥಿಸಿ, ಆತ್ಮನಿಂದಲೇ ಆತ್ಮವನ್ನು ಉದ್ಧರಿಸುವಂತೆ ಮಾಡಿ, ನಮ್ಮ ಅಂತರ್ಯಾಮಿಯಾದ ದೇವಪುರುಷನು ನಮ್ಮ ಉದ್ಧಾರಕ್ಕಾಗಿ ಸಾಧನಮಾಡುವಂತೆ ಮಾಡುವದೇ ಪೂರ್ಣ ಯೋಗದ ಹಾದಿ. ಈ ಹಾದಿಯಿಂದ ನಮ್ಮ ಅಂತರ್ಯಾಮಿಯಾದ ಯೋಗೀಶ್ವರನು ನಮ್ಮ ಅನ್ನಪ್ರಾಣ ಮನಃಕೋಶಗಳ ಸಾಧನದಿಂದಲೇ ಅವುಗಳನ್ನು ಪರಿಪೂರ್ಣಗೊಳಿಸುವನು. ಇಲ್ಲಿ ಮೂರು ಅವಸ್ಥೆಗಳುಂಟು. ನಮ್ಮ ಅಹಂಕಾರವು ದೇವನ ನಿತ್ಯ ಸಂಸರ್ಗದಲ್ಲಿರುವಂತೆ ಮಾಡುವದು ಮೊದಲನೆಯದು. ನಮ್ಮ ಅಪರಾಪ್ರಕೃತಿಯು ದೇವನ ಸಂಪರ್ಕದಿಂದ ಬರಬರುತ್ತ ಪರಾಪ್ರಕೃತಿಯಾಗುವದು ಎರಡನೆಯದು. ಮಾನವಜನ್ಮವು ದೇವಜನ್ಮವಾಗುವದು ಮೂರನೆಯದು. ಈ ಅವಸ್ಥೆಗಳಲ್ಲಿ ಕೊನೆಯದೊಂದೇ ತೀವ್ರವೂ ಆನಂದದಾಯಕವೂ ಆಗುವದು. ಮುಂಚಿನೆರಡು ಮಂದ ಮತ್ತು ಕಷ್ಟಕರವಾದವುಗಳು. ಈ ಮಾರ್ಗದ ಕೆಲವು ವಿಶಿಷ್ಟ ಲಕ್ಷಣಗಳನ್ನು ನಾವು ನೆನಪಿಡುವದಗತ್ಯ. Each man in this path has his own method of Yoga. ಈ ಮಾರ್ಗದಲ್ಲಿ ಪ್ರತಿಯೊಬ್ಬನ ಯೋಗ್ಯತೆಯ ಪ್ರಕಾರ ಅವನವನ ಯೋಗಾಭ್ಯಾಸದ ರೀತಿಯು ಬೇರೆಯಾಗುತ್ತದೆ. ನಮ್ಮ ಮಹತ್ತ್ವದ ಒಂದೂ ಶಕ್ತಿಯನ್ನು ಬಿಡಬೇಕಾಗುವದಿಲ್ಲ. ಎಲ್ಲ ಶಕ್ತಿಗಳನ್ನು ಇಡಿಗಿಡಿಯಾಗಿಯೇ ಮಾರ್ಪಾಟುಗೊಳಿಸಲಾಗುತ್ತದೆ The divine Power in us uses all life as the means of this integral Yoga. ನಮ್ಮೊಳಗಿನ ದಿವ್ಯ ಶಕ್ತಿಯು ಸಂಪೂರ್ಣ ಸಂಸಾರವನ್ನೆ ತನ್ನ ಪೂರ್ಣ ಯೋಗದ ಸಾಧನದಲ್ಲಿ ಉಪಯೋಗಿಸಿಕೊಳ್ಳುತ್ತದೆ. ಉಳಿದ ಯೋಗಗಳಂತೆ ಇಲ್ಲಿಯೂ ಏಕಾಗ್ರತೆಯಿಲ್ಲದೆ ಏನೂ ಪ್ರಾರಂಭವೇ ಆಗುವಂತಿಲ್ಲ. ಆದರೆ ಇಲ್ಲಿಯ ಏಕಾಗ್ರತೆಯು ಒಂದು ವಿಧದ ಸಮಗ್ರತೆಯೆನ್ನಬಹುದು. ಪೂರ್ಣವನ್ನು ಪೂರ್ಣದಲ್ಲಿ ಲೀನಗೊಳಿಸಬೇಕು. ಸಮಗ್ರ ಏಕಾಗ್ರತೆಯನ್ನು ಸಾಧಿಸಲು ರೀತಿಯೇನು ? ಯಾಕೆಂದರೆ ನಮ್ಮ ಆಶಾಪಾಶವು ನಮ್ಮನ್ನು ಎಲ್ಲಿ ಹೋದರೂ ಬಿಡಲಾರದು. ಹಾಗಾದರೆ ಈ ಆಶೆಯನ್ನೆ ಉಪಯೋಗಿಸಿಕೊಳ್ಳಬೇಕು; ಎಲ್ಲ ಆಶೆಗಳನ್ನು ಬಿಟ್ಟು ದೇವಜೀವನದಾಶೆಯನ್ನು ಬಲವತ್ತರಗೊಳಿಸಬೇಕು. ತನಗಾಗಿಯಲ್ಲ -ಆದರೆ ಜಗತ್ತಿಗಾಗಿ ಮಾನವತೆಗಾಗಿ ದೇವಜೀವನವನ್ನಾಶಿಸಬೇಕೆಂಬದನ್ನು ಮನಸ್ಸಿಗೆ ಕಲಿಸಬೇಕು. ಕೊನೆಗೆ, ದೇವರ ಚಿತ್ತಕ್ಕೆ ಬಂದ ರೀತಿಯಲ್ಲಿ ಕೊನೆಗಾಣಲಿ, ಇದೆಲ್ಲವನ್ನು ದೇವರಿಗೇ ಬಿಟ್ಟುಕೊಟ್ಟದ್ದಾಗಿದೆ ಎಂಬ ಅರಿವನ್ನು ದೃಢಗೊಳಿಸಿದರಾಯಿತು. ಹೀಗೆ ಮಾಡುತ್ತ ಹೋದಲ್ಲಿ ಕಾಲಾಂತರದಿಂದ ವಿಜ್ಞಾನಸೂರ್ಯೋದಯವಾಗುವದು. ನಮ್ಮ ಈಗಿನ ಸಂಸಾರವೆಲ್ಲ ಮನಶ್ಚಂದ್ರನ ಬೆಳಕಿನಲ್ಲಿ ಸಾಗಿದೆ. ಆ ವಿಜ್ಞಾನಸೂರ್ಯನಿಂದಲೇ ನಮ್ಮ ಮನಶ್ಚಂದ್ರನು ಬೆಳಗುತ್ತಿರುವನು. ಸಾಮಾನ್ಯವಾಗಿ ವೇದಾಂತ ಗ್ರಂಥಗಳಲ್ಲಿ ಪಂಚಕೋಶಗಳ ಬಗ್ಗೆ ಹೇಳುವದುಂಟು. ಅನ್ನ, ಪ್ರಾಣ, ಮನಃಕೋಶಗಳನ್ನು ಈ ಜೀವನು ಧರಿಸಿರುವನು. ಆದರೆ ಮನಃಕೋಶವನ್ನು ಮಿಕ್ಕಿ ವಿಜ್ಞಾನವನ್ನು ಧರಿಸಿ, ಆ ವಿಜ್ಞಾನದ ಬಲದಿಂದ ದೇಹ, ಪ್ರಾಣ, ಮನಸ್ಸುಗಳನ್ನು ಅದಕ್ಕೆ ಸರಿಯಾಗುವಂತೆ ಮಾರ್ಪಡಿಸಿಕೊಂಡದ್ದಾದರೆ ಭೂಮಿಯೆ ಕೈಲಾಸವಾಗಿ ಇಹಲೋಕದಲ್ಲಿಯೆ ಆನಂದಸಾಮ್ರಾಜ್ಯವನ್ನು ಅನುಭವಿಸಬಹುದು. ವಿಷಯ

ಗಿಂತ ಇಂದ್ರಿಯಗಳೂ, ಅವುಗಳಿಗಿಂತ ಮನಸ್ಸೂ, ಅದಕ್ಕಿಂತ ಬುದ್ಧಿಯೂ, (ಇಲ್ಲಿ ವಿಜ್ಞಾನಾರ್ಥದಿಂದ) ಬುದ್ಧಿಗಿಂತ ದೇವನೂ ಮಿಗಿಲಾದವನೆಂದು ಗೀತೆಯು ಹೇಳಿದೆ. ಕ್ಷಯವೃದ್ಧಿ ಹೊಂದುವ ಚಂದ್ರನಂತೆ ಮನಸ್ಸು ಯಾವಾಗಲೂ ದ್ವಿಧಾ ವೃತ್ತಿಯುಳ್ಳದ್ದು. ಮನಸ್ಸಿನ ಬಳಕೆಯು ನಿಶ್ಚಯಾತ್ಮಕವಾದ ಬುದ್ಧಿಯು ಅನುಭವಾಂತದಲ್ಲಿ ಹೊಳೆಮಿಂಚಿನದೆಂದು ಕಂಡು ಬರುವದು. ಅದರ ಅನುಮಾನಾದಿ ಪ್ರಮಾಣ ಶಾಸ್ತ್ರವು ಎರಡು ನಾಲಿಗೆಯುಳ್ಳದ್ದಾಗಿ ಮೇಲಿಂದ ಮೇಲೆ ಕಂಡುಬರುವದು. ಆದರೆ ವಿಜ್ಞಾನದ ಮಾತು ಹಾಗಲ್ಲ. ಸೂರ್ಯನು ಸ್ವಯಂಪ್ರಕಾಶನಿದ್ದು ಚಂದ್ರನು ಪರಪ್ರಕಾಶನಿದ್ದಂತೆ ಮನಸ್ಸು ವಿಜ್ಞಾನಗಳ ಮಾತು. ವಿಜ್ಞಾನದ ಜ್ಞಾನವು ತಾದಾತ್ಮ್ಯ ಸಂಭೂತವು. All its knowledge is originally a knowledge by identity. ಇದೂ ಅಲ್ಲದೆ — its knowledge is a real because a total knowledge. ಅದು ಸ್ವಯಮೇವ ಸತ್ಯವು– ಸತ್ಯಾಂಶವಲ್ಲ. It is directly truth-conscious. ಅದು ಸ್ವಯಂಜ್ಯೋತಿ. ತನ್ನದು ಸತ್ಯವು ಅಹುದೋ ಅಲ್ಲವೋ ಎನ್ನಲು ಅದಕ್ಕೆ ಬೇರೆ ಬಾಹ್ಯ ಪ್ರಮಾಣಗಳು ಬೇಡ. ವಿಜ್ಞಾನವೇ ಆತ್ಮಜ್ಞಾನ. ಮನುಷ್ಯನ ಆಕಾಂಕ್ಷೆಗೂ ಅವನ ಸಿದ್ಧಿಗೂ ಭೂಮ್ಯಾಕಾಶಾಂತರವಿರುತ್ತದೆ. ಇದರಿಂದಲೆ ಮನುಷ್ಯನ ಜೀವನದಲ್ಲಿ ದುಃಖವು ತುಂಬಿಕೊಂಡಿದೆ. ದೈವ, ಪೂರ್ವಕರ್ಮ ಮೊದಲಾದ ವಾದಗಳೂ ಮನುಷ್ಯನ ಮನಸ್ಸಿನ ಅಪೂರ್ಣ ಶಕ್ತಿಯ ಮೂಲಕವಾಗಿಯೆ ಉಂಟಾಗಿವೆ. ವಿಜ್ಞಾನಿಯಲ್ಲಿ ಈ ತೊಡಕಿಲ್ಲ, ತೊಂದರೆಯಿಲ್ಲ, ತೊಳಲಾಟವಿಲ್ಲ. There is no contradiction between will and knowledge. ವಿಜ್ಞಾನಿಯ ಇಚ್ಛೆಯೆ ಅವನ ಜ್ಞಾನ, ಅವನ ಜ್ಞಾನವೇ ಅವನ ಇಚ್ಛೆ. ಆದರೂ, It must be remembered that there is always a difference between the supreme supermind of the Ommiscient and Ommipotent and that which can be attained by the Jiva. ಜೀವರ ವಿಜ್ಞಾನಕ್ಕೂ ಸರ್ವತಂತ್ರಸ್ವತಂತ್ರನಾದ ಪರಮೇಶ್ವರನ ಸರ್ವಜ್ಞನ ಚಿಚ್ಛಕ್ತಿಗೂ ಅಂತರವು ಇರತಕ್ಕದ್ದೆ.

ಈ ಪೂರ್ಣಯೋಗದಿಂದ ದೊರಕಿಸಬಹುದಾದ ವಿಜ್ಞಾನದಿಂದ ಪ್ರಯೋಜನವಾದರೂ ಏನು ? " ವಿಜ್ಞಾನಭೂಮಿಯನ್ನು ಆರೂಢರಾದಂಥವರಿಗೆ ಆನಂದವು ಸಹಜವಾಗಿ ಪ್ರಾಪ್ತವಾಗುವದು. ಅಖಂಡ ಮತ್ತು ಅನಂತವಾದ ಆನಂದದಲ್ಲಿ ಸ್ಥಿರವಾಗುವೆವು. ಕೇವಲ ತ್ರಿಕಾಲಾತ್ಮಕವಾದ ಪರಬ್ರಹ್ಮದಲ್ಲಿಯಷ್ಟೆ ಅಲ್ಲದೆ ಪರದೇಹದಲ್ಲಿಯೂ ಸಂಸಾರದಲ್ಲಿಯೂ ಜೀವನಾಂತಸ್ಥಿರತೆಯನ್ನು ಹೊಂದುವೆವು. ಪೂರ್ಣ ಸತ್ ಸ್ಥಿತಿ, ಪೂರ್ಣ ಚಿತ್‌ಶಕ್ತಿ ಮತ್ತು ಪೂರ್ಣಾನಂದ ಇವುಗಳು ಜೀವನದಲ್ಲಿ ವಿಕಾಸ ಹೊಂದುವವಲ್ಲದೆ ಮೂರ್ತಿಮತ್ತಾಗಿ ಸ್ವರೂಪವನ್ನು ಕೂಡ ಧಾರಣ ಮಾಡುವವು. ಇದೇ ಪೂರ್ಣ ಯೋಗ ಮಾರ್ಗದ ತಿರುಳು, ಒಳಕೀಲ" ಎಂದು ಗುರು ಅರವಿಂದರೇ ತಮ್ಮ ತಮ್ಮನಾದ ವಾರೀಂದ್ರನಿಗೆ ಬರೆದ ಪತ್ರದಲ್ಲಿ ಕಾಣಿಸಿದ್ದರು.

'Only by this Ananda at once transcedent and universal that man can be free in his soul and yet live in the world with the full active life of the Lord in his universe of movement.'

ಎಂದು ತಮ್ಮ 'ದಿವ್ಯ ಜೀವನ' ವೆಂಬ ಗ್ರಂಥದಲ್ಲಿಯೂ ಹೇಳಿದ್ದಾರೆ. ಸಂಸಾರವೊಂದು ಭಗವಂತನ ಸನಾತನ ಲೀಲೆಯು. ಇಡೀ ಮಾನವ ಜಾತಿಯೆ ಒಂದಿಲ್ಲೊಂದು ದಿನ ದೇವಜೀವನಕ್ಕೆ ಮೊದಲು ಮಾಡುವದರಲ್ಲಿ ಸಂದೇಹವಿಲ್ಲೆಂದು ಗುರು ಅರವಿಂದರು ನೆರೆನಂಬಿದ್ದಾರೆ. ಅರವಿಂದರದೇನು ದ್ವೈತವೋ, ಅದ್ವೈತವೋ ಎಂದು ಕೇಳಿದರೆ Comprehensive Adwaita (ಸಮ್ಯಗದ್ವೈತ) ಎಂದು ಅರವಿಂದರ ಶಬ್ದ ದಲ್ಲಿಯೆ ಹೇಳಬಹುದು.

ದೇವನೆಂದರೇನು ? ಎಂದರೆ ಅವರು ಕಾವ್ಯಮಯವಾಗಿ– An eternal child playing an eternal game in an eternal garden. ಶಾಶ್ವತಾನಂದದಲ್ಲಿ ಅನಂತಲೀಲೆಯನ್ನಾಡುವ ಸನತ್ಕುಮಾರ—ಎಂದು ಹೇಳಿರುವರು. ಹಾಗಾದರೆ ಮನುಷ್ಯನೆಂದರೇನು ? An uncreated and in-destructible soul that has housed itself in a mind and body made of its own elements. ತನ್ನ ಪಂಚಭೂತಗಳಿಂದಲೇ ಆದ ತನುಮನಗಳಲ್ಲಿ ವಾಸಿಸುವ ನಾಶರಹಿತನಾದ ಮತ್ತು ಅಭವನಾದ ಆತ್ಮನೆಂದು ನುಡಿದಿರುವರು. All life is yoga of nature seeking to manifest God within itself. ತನ್ನಲ್ಲಿದ್ದ ದೇವನನ್ನು ಪ್ರಕಟೀಕರಿಸುವ ಪ್ರಕೃತಿಯ ಯೋಗವು ಈ ಜೀವನವು ಎಂದು ಸಾರಿದ್ದಾರೆ. ಇವೆಲ್ಲ ಸರಿ— ಈ ಪೂರ್ಣಯೋಗದಿಂದ ಅಳವಡಿಸಿಕೊಂಡ ವಿಜ್ಞಾನದಿಂದ ಉಂಟಾದ ಆನಂದದಿಂದಾದರೂ ಈ ಇಹಲೋಕದಲ್ಲಿ ನಾವು ಮಾಡತಕ್ಕದ್ದೇನು ? ಸಾಧಿಸಬೇಕಾದದ್ದಾದರೂ ಏನು!

What is there new that we have yet to accomplish? Love! for as yet we have only hatred and self-pleasing; Knowledge, for as yet we have only accomplished error and perception and conceiving; Bliss, for as yet we have accomplished pleasure and pain and difference; Power, for as yet we have only accomplished weakness and effort and defeated victory; Life, for as yet birth and growth and dying; Unity, for as yet we have only accomplished war and association.

ಪ್ರೇಮವನ್ನು ಭೋಗಿಸಬೇಕಾಗಿದೆ, ನಾವು ಇದುವರೆಗೂ ರಾಗದ್ವೇಷಗಳನ್ನಷ್ಟೆ ಸಾಧಿಸಿರುವೆವು; ಜ್ಞಾನವನ್ನು ಭೋಗಿಸಬೇಕಾಗಿದೆ, ನಾವು ಇದು ವರೆಗೂ ತಪ್ಪು ಗ್ರಹಿಕೆ, ಇಂದ್ರಿಯಜ್ಞಾನ, ಅನುಮಾನ, ಊಹೆಗಳನ್ನಷ್ಟೆ ಸಾಧಿಸಿರುವೆವು; ಆನಂದವನ್ನು ಅನುಭವಿಸಬೇಕಾಗಿದೆ, ನಾವು ಇದುವರೆಗೂ ಸುಖ ದುಃಖ ಔದಾಸೀನ್ಯಾದಿಗಳನ್ನಷ್ಟೆ ಅನುಭವಿಸಿರುವೆವು; ಶಕ್ತಿಯನ್ನು ಗಳಿಸಬೇಕಾಗಿದೆ, ನಾವು ಇದುವರೆಗೂ ದೌರ್ಬಲ್ಯ, ಪ್ರಯತ್ನ, ಮತ್ತು ಬಾಳದ ಗೆಲವನ್ನಷ್ಟೆ ಸಾಧಿಸಿರುವೆವು; ಜೀವನವನ್ನು ಕಾಣಬೇಕಾಗಿದೆ, ನಾವು ಇದುವರೆಗೂ ಹುಟ್ಟು, ಬೆಳಗೆ, ಸಾವುಗಳನ್ನಷ್ಟೆ ಕಂಡಿರುವೆವು; ಐಕ್ಯವನ್ನು ಆಳವಡಿಸಬೇಕಾಗಿದೆ, ನಾವು ಇದುವರೆಗೂ ಸಂಧಿವಿಗ್ರಹಗಳನ್ನಷ್ಟೆ ಅಳವಡಿಸಿರುವೆವು. ಬೇರೊಂದು ಕಡೆಗೆ ಈ ಸಾಧ್ಯವನ್ನೆ ಸಂಗೀತದ ರೂಪಕದಲ್ಲಿ ಹೇಳಿರುವರು. ಪ್ರೀತಿಯೇ ರಾಗ, ಆನಂದವೇ ಮಟ್ಟು, ಶಕ್ತಿಯೇ ಆಲಾಪ, ಜ್ಞಾನವೇ ಗಾಯಕ, ಅನಂತವೇ ಜೀವನದ ಅಮರಗೀತವನ್ನು ಕಟ್ಟುವದು ಕೇಳುವದು ಎಂದು.

ಈ ಮಾರ್ಗದ ಗುರುವು ಎಂಥವನು ಬೇಕು ?— ಎಂದು ಇನ್ನೊಂದು ಮಾತು. The seer who is able to execute his vision ಯಾವ ಯೋಗೀಶ್ವರನು ತಾನೇ ತನ್ನ ಧನುರ್ಧರನಾಗಬಲ್ಲನೋ ಅವನೇ ಈ ಧರ್ಮದ ಗುರುವು, ಅವತಾರ. ಇವನು ಜನರನ್ನು ಹಾದಿಗೆ ಹಚ್ಚಬೇಕು ಹೇಗೆ? Help men but do not pauperise them of their energy; lead and instruct men but see that their initiative and originality remain intact; take others into thyself but give them in return the full godhead of their nature. He who can do this is the leader and the guru. ಸಾಹಾಯ್ಯ ಕೊಟ್ಟರೂ ಉತ್ಸಾಹವನ್ನು ಕುಂದಿಸಬಾರದು; ಹಾದಿ ತೋರಿಸಿ ಕೊಟ್ಟರೂ ಸ್ವಯಂಭು ಶಕ್ತಿಯನ್ನು ಕೆಡಿಸಬಾರದು; ತನ್ನ ಹಾದಿಯಿಂದೊಯ್ದರೂ, ಅವರವರ ದೇವತ್ವವನ್ನೆ ಪ್ರಕಟೀಕರಿಸಬೇಕು. ಇವನೇ ಗುರು, ಇವನೇ ಮುಂದಾಳು.

---

# ವಿಲಾಯತಿಯಲ್ಲಿಯ ಪ್ರಾಥಮಿಕ ಶಿಕ್ಷಣ

[ಡಾ. ರಂಗರಾವ ಅಸುಂಡಿ, ಎಮ್. ಎಸ್. ಸಿ., ಪಿ. ಎಚ್. ಡಿ. (ಲಂಡನ್), ಇವರು ಗದಗಿನ ಸ್ಕೂಲಬೋರ್ಡ ಎಡ್ಮಿನಿಸ್ಟ್ರೇಟಿವ್ಹ ಆಫೀಸರರಾದ ಶ್ರೀ. ಪಿ. ಎಮ್. ಉಮಡಿ ಇವರ ಅಧ್ಯಕ್ಷತೆಯಲ್ಲಿ ತಾ. ೨೫-೬-೧೯೩೦ನೇ ದಿವಸ ಗದಗ ಸೆಂಟ್ರಲ್ ಸ್ಕೂಲಿನಲ್ಲಿ "ವಿಲಾಯತಿಯಲ್ಲಿಯ ಪ್ರಾಥಮಿಕ ಶಿಕ್ಷಣ" ಈ ವಿಷಯವಾಗಿ ಮಾಡಿದ ಭಾಷಣ.]

ಅಧ್ಯಕ್ಷರೇ, ಬಂಧು ಭಗಿನಿಯರೇ,

ನನಗೆ ಶಿಕ್ಷಣದ ವಿಷಯವಾಗಿ ಮೊದಲಿನಿಂದಲೂ ಅಭಿರುಚಿಯು ಬಹಳ. ನಾನು ಇಂಗ್ಲಂಡದಲ್ಲಿ ಸುಮಾರು ೨॥ ವರ್ಷಗಳನ್ನು ಕಳೆದೆನು. ಆ ಕಾಲಕ್ಕೆ ಅಲ್ಲಿಯ ಪ್ರಾಥಮಿಕ ಶಿಕ್ಷಣದ ವ್ಯವಸಾಯವು ಹೇಗೆ ಸಾಗುತ್ತಿತ್ತೆಂಬುದನ್ನು ಒಳ್ಳೇ ಕಳಕಳಿಯಿಂದ ನೋಡುತ್ತಲಿದ್ದೆನು. ನಾನು ಗದಗಿಗೆ ಬಹಳ ಪರಿಚಯಸ್ಥನು. ನಾನು ಈ ಊರು ಬಿಟ್ಟು ೩೦–೩೨ ವರ್ಷಗಳಾದವು. ನನ್ನ ಪ್ರಾಥಮಿಕ ಶಿಕ್ಷಣದ ಪೂರ್ತಿಯು ಇದೇ ಊರಲ್ಲಿ ಆಯಿತು. ಇಲ್ಲಿಯ ಆಗಿನ ಕಾಲದ ಪ್ರಾಥಮಿಕ ಶಿಕ್ಷಣಕ್ಕೂ ಈಗಿನ ಪ್ರಾಥಮಿಕ ಶಿಕ್ಷಣಕ್ಕೂ ಬಹ್ವಂಶದಿಂದ ಅಂತರವಾಗಿರುವದನ್ನು ನೋಡಿ ನನಗೆ ವಿಶೇಷಾನಂದವೆನಿಸುತ್ತದೆ. ಆಗ ಶಾಲೆಗಳಲ್ಲಿ ಚಿತ್ರಗಳು ಇನ್ನೂ ಬಳಕೆಯಲ್ಲಿ ಬಂದಿದ್ದಿಲ್ಲ. ರೂಲುಕಟ್ಟಿಗೆಯ ಜಡಿತ, ಮೂಗುದಂಡಿಗೆ ಹಾಕೋಣ, ಕುರ್ಚಿ ಕೂಡಿಸೋಣ ಮೊದಲಾದ ಶಿಕ್ಷೆಗಳು ವಿದ್ಯಾರ್ಥಿಗಳ ಮೇಲೆ ಪ್ರಬಲವಾದ ದಬ್ಬಾಳಿಕೆಯನ್ನು ನಡೆಯಿಸುತ್ತಿದ್ದವು. ವಿದ್ಯಾರ್ಥಿಗಳು ಆಗ ಶಾಲೆಯೆಂದರೆ ಒಂದು ದೊಡ್ಡ ಸಂಕಟದ ಸ್ಥಳವೆಂದು ಭಾವಿಸುತ್ತಿದ್ದರು. ಇಂಥ ಸ್ಥಿತಿಯಲ್ಲಿಯೇ ನಾನು ಅಧ್ಯಯನಮಾಡಿ ಪಾರಾದೆನು.

ಹಿಂದುಸ್ಥಾನದ ಪ್ರಾಥಮಿಕ ಶಿಕ್ಷಣಕ್ಕೂ ವಿಲಾಯತಿಯ ಪ್ರಾಥಮಿಕ ಶಿಕ್ಷಣಕ್ಕೂ ಒಂದು ಸಂಗತಿಯಲ್ಲಿ ಬಹು ವ್ಯತ್ಯಾಸವಾಗಿದ್ದುದು ನನಗೆ ಕಂಡುಬರುತ್ತದೆ. ಅವರು ತಮ್ಮ ಶಿಕ್ಷಣಕ್ರಮದಲ್ಲಿ ಕಣ್ಣು ಕಿವಿಗಳಿಗೆ ಹೆಚ್ಚು ಮಹತ್ವವನ್ನು ಕೊಟ್ಟಿರುತ್ತಾರೆ. ನಾವು ಮಾತ್ರ ಹಾಗಲ್ಲ. ನಾಲಿಗೆ ಮೂಗುಗಳಿಗೆ ಪ್ರಾಧಾನ್ಯವನ್ನು ಕೊಟ್ಟಿರುವೆವು. ನಾವು ಒಂದು ಹೂವನ್ನು ತೆಗೆದುಕೊಂಡ ಕೂಡಲೆ ಅದನ್ನು ಮೂಸಿನೋಡಲು ಹಾತೊರೆಯುತ್ತೇವೆ. ಅದು ತಿನ್ನತಕ್ಕುದಿದ್ದರೆ ತಿನ್ನಲಿಕ್ಕೂ ಪ್ರಯತ್ನಿಸುತ್ತೇವೆ. ಆದರೆ ಅವರು ಹಾಗಲ್ಲ. ಅದನ್ನು ನಿರೀಕ್ಷಿಸಿ ಅದರ ವಿಶೇಷ ಧರ್ಮವನ್ನು ಕಂಡುಹಿಡಿಯಲು ಯತ್ನಿಸುತ್ತಾರೆ. ಅವರ ಆರ್ಕೆಸ್ಟ್ರಾ (Orchestra) ಎಂಬ ಸಂಗೀತದಲ್ಲಿಯ ನಾನಾತರದ ಮಧುರ ಸ್ವರಗಳ ಜೋಡಣೆಯನ್ನು ನೋಡಿದರೆ ಅವರ ಶ್ರವಣೇಂದ್ರಿಯವು ಎಷ್ಟು ಸೂಕ್ಷ್ಮವಿಕಾಸದ ಪರಿಪೂರ್ಣತೆಯನ್ನು ಹೊಂದಿರುವದೆಂಬುದು ಕಂಡುಬರುವಂತಿದೆ.

ಅಲ್ಲಿಯ ಪ್ರಾಥಮಿಕ ಶಿಕ್ಷಣವು ಬಾಲಕ ಬಾಲಿಕೆಯರ ೫ನೇ ವರ್ಷಕ್ಕೆ ಪ್ರಾರಂಭಿಸಲ್ಪಡುತ್ತದೆ. ಜನ್ಮವೆತ್ತಿದ ಪ್ರತಿಯೊಂದು ಕೂಸು ತನ್ನ ಐದನೇ ವರ್ಷಕ್ಕೆ ಶಾಲೆಗೆ ಹೋಗಲೇಬೇಕು. ಇಲ್ಲವಾದರೆ ಆ ಕೂಸಿನ ಪಾಲಕರಿಗೆ ಸರಕಾರದಿಂದ ಶಿಕ್ಷೆಯು ವಿಧಿಸಲ್ಪಡುತ್ತದೆ. ಪ್ರಾಥಮಿಕ ಶಿಕ್ಷಣವು ವಿದ್ಯಾರ್ಥಿಯ ೫ನೇ ವರ್ಷದಿಂದ ೧೪ನೇ ವರ್ಷದವರೆಗೆ ಸಾಗುತ್ತದೆ. ಈ ಅವಧಿಯಲ್ಲಿ ವಿದ್ಯಾರ್ಥಿಯು ತಾನು ಜಗತ್ತಿನಲ್ಲಿ ಮನುಷ್ಯತ್ವವನ್ನು ಪಡೆದು ಬಾಳಲಿಕ್ಕೆ ಬೇಕಾದ ಪೂರ್ವಸಿದ್ಧತೆಯು ಸರ್ವಸಾಮರ್ಥ್ಯವನ್ನು ಹೊಂದಿಯೇ ತೀರುವನು. ಯಾಕಂದರೆ ಧಾರಾಳವಾಗಿ ನಿರೀಕ್ಷಿಸಿದರೆ ಶಿಕ್ಷಣವು ಸ್ವಭಾವಸಿದ್ಧವಾದದ್ದಿರುತ್ತದೆಂದು ಕಂಡುಬರುತ್ತದೆ. ಈ ಜಗತ್ತಿನಲ್ಲಿ ಉದ್ಭಿಜ ಪ್ರಾಣಿಕೋಟಿಗಳು ತಮ್ಮ ಸಂತತಿಗೆ ತಮ್ಮ ಆನುವಂಶಿಕ ಜೀವನ ಕ್ರಮದ ವ್ಯವಹಾರವನ್ನು ಕಲಿಸುವದು ಸ್ವಭಾವಸಿದ್ಧವಾದುದು. ಬೆಕ್ಕು ತನ್ನ ಮರಿಗೆ ಇಲಿಯನ್ನು ಹಿಡಿಯಲು ಹೇಗೆ ಕಲಿಸುವದೋ ಹಾಗೆ ಶಿಕ್ಷಕರು ತಮ್ಮ ವಿದ್ಯಾರ್ಥಿಗಳಿಗೆ ಸೃಷ್ಟಿಯ ಹಾಗು ವ್ಯವಹಾರದ ಗೂಢತತ್ವಗಳನ್ನು ಕಂಡು ಹಿಡಿಯಲು ಕಲಿಸುವದು ಯೋಗ್ಯವಲ್ಲವೆ? ಹೊಸ ಹಾದಿಯನ್ನು ಕಂಡುಹಿಡಿಯುವದು ಮಾಧ್ಯಮಿಕ ಶಿಕ್ಷಣದ ಮುಖ್ಯ ಲಕ್ಷಣವು. ಆದರೆ ಇದ್ದ ಹಾದಿಯನ್ನೆ ಚೆನ್ನಾಗಿ ತಿಳಿದುಕೊಳ್ಳುವದೇ ಪ್ರಾಥಮಿಕ ಶಿಕ್ಷಣದ ಹೆಗ್ಗುರುತು.

ಆಸ್ಟ್ರಿಯಾದ ಫ್ರಾಯಿಡ (Freud) ನೆಂಬ ಸುಪ್ರಸಿದ್ಧ ಮಾನಸ ಶಾಸ್ತ್ರಾಧಿಕಾರಿಯು ಶಿಶುವಿನ ಮೊದಲಿನ ೫ ವರ್ಷಗಳಲ್ಲಿಯೇ ಅದರ ಭಾವೀ ಗುಣಧರ್ಮಗಳ ತಳಹದಿಯು ಮಾರ್ಪಡುತ್ತದಾದ್ದರಿಂದ ಮನುಷ್ಯನ ಜೀವನದಲ್ಲಿ ಈ ವರ್ಷಗಳಿಗೆ ಬಹಳ ಮಹತ್ವವು ಕೊಡಲ್ಪಡಬೇಕೆಂದು ಅಭಿಪ್ರಾಯಪಟ್ಟ ಮೇರೆಗೆ ಪಾಶ್ಚಿಮಾತ್ಯದೇಶದ ಶಿಕ್ಷಕರು ಚಿಕ್ಕ ವಯಸ್ಸಿನ ಬಾಲಕರಿಗೆ ಯಾವ ಪ್ರಕಾರದ ಶಿಕ್ಷಣವನ್ನು ಹೇಗೆ ಕೊಡಬೇಕೆಂಬದನ್ನು ಕಂಡು ಹಿಡಿದು ಆ ತರದ ಶಾಲೆಗಳನ್ನು ತೆಗೆದಿದ್ದಾರೆ. ಆ ಶಾಲೆಗಳಿಗೆ ಕಿಂಡರಗಾರ್ಟನ್ ಎಂಬ ಹೆಸರು. ಈ ಶಾಲೆಗಳು ಅಲ್ಪಸಂಖ್ಯಾಕವಾಗಿ ಅಲ್ಲಲ್ಲಿ ಸ್ಥಾಪಿಸಲ್ಪಡಹತ್ತಿವೆ. ಈ ಶಾಲೆಗಳು ಇನ್ನು ಸ್ವಲ್ಪ ದಿವಸಗಳಲ್ಲಿಯೇ ಸಾರ್ವತ್ರಿಕವಾಗಿ ಸ್ಥಾಪಿಸಲ್ಪಡಬಹುದೆಂದು ನನಗೆ ಅನಿಸುತ್ತದೆ. ನಮ್ಮ ದೇಶದಲ್ಲಿ ಮುಂಬೈಯಲ್ಲಿ ಇಂಥದೊಂದು ಶಾಲೆಯನ್ನು ನಾನು ನೋಡಿದೆನು, ಇಂಗ್ಲಂಡದಲ್ಲಿಯ ಇಂಥ ಶಾಲೆಗಳು ಸುಮಾರು ೯॥ ಘಂಟೆಗೆ ಸುರುವಾಗಿ ೩॥ ಘಂಟೆಗೆ ಮುಗಿಯುತ್ತವೆ. ಶಿಶುಗಳನ್ನು ಯೋಗ್ಯವ್ಯವಸ್ಥೆಯಿಂದ ತರಲು ಕಳಿಸಲು ಉತ್ತಮ ತರಹದ ಸಾಧನಗಳನ್ನು ಏರ್ಪಡಿಸಿರುವರು. ಇಂಥ ಶಾಲೆಗಳನ್ನು ನೋಡಲು ವಿಲಾಯತಿಯ ಉನ್ನತಿಯ ಕಾರಣವನ್ನು ಸಹಜವಾಗಿ ಊಹಿಸಲು ಬರುತ್ತದೆ.

ಇಂಗ್ಲಂಡದಲ್ಲಿಯ ಕೆಲವು ಪ್ರಾಥಮಿಕ ಶಾಲೆಗಳು ಅಲ್ಲಿಯ ದೊಡ್ಡ ದೊಡ್ಡ ಶ್ರೀಮಂತ ಹಾಗೂ ವಿದ್ವಜ್ಜನರಿಂದ ಸ್ವತಂತ್ರವಾಗಿ ಸ್ಥಾಪಿಸಲ್ಪಟ್ಟವೆ. ಇವುಗಳಿಗೆ ಖಾಸಗೀ ಶಾಲೆಗಳೆನ್ನುವರು. ಈ ಶಾಲೆಗಳಿಗೆ ಹೋಗುವ ವಿದ್ಯಾರ್ಥಿಗಳು ಫೀ ಕೊಡಬೇಕಾಗುತ್ತದೆ. ಧಾರ್ಮಿಕ ಶಿಕ್ಷಣವು ಸಾರ್ವತ್ರಿಕವಾಗಿದ್ದರೂ ಇಂಥ ಶಾಲೆಗಳಲ್ಲಿ ಆ ಶಿಕ್ಷಣವು ಆಯಾ ಶಾಲೆಗಳ ಸ್ಥಾಪಕರ ಒಲವನ್ನು ಅವಲಂಬಿಸಿರುತ್ತದೆ. ಧಾರ್ಮಿಕ ಶಿಕ್ಷಣವು ಮಹತ್ವದ್ದೆಂದರಿತ ಸ್ಥಾಪಕರ ಶಾಲೆಗಳಲ್ಲಿ ಆ ಶಿಕ್ಷಣವು ಕೊಡಲ್ಪಡುವದು. ಮಹತ್ವವನ್ನು ಕಲ್ಪಿಸದವರ ಶಾಲೆಗಳಲ್ಲಿ ಇಲ್ಲ. ಹೀಗಾಗಿ ಇಂಥ ಶಾಲೆಗಳಲ್ಲಿ ಧಾರ್ಮಿಕ ಶಿಕ್ಷಣಕ್ಕೆ ಅಷ್ಟೊಂದು ಪ್ರಾಧಾನ್ಯವಿಲ್ಲ. ಇನ್ನು ಧರ್ಮಸಂಸ್ಥೆಗಳಿಗೆ ಸಂಬಂಧಿಸಿದ ಕೆಲವು ಶಾಲೆಗಳಿರುವವು. ಇವುಗಳಿಗೆ ಗ್ರಾಮರ ಸ್ಕೂಲುಗಳೆನ್ನುವರು. ಈ ಶಾಲೆಗಳಲ್ಲಿ ಫೀ ತಕ್ಕೊಳ್ಳುವದಿಲ್ಲ. ಧಾರ್ಮಿಕ ಶಿಕ್ಷಣಕ್ಕೆ ವಿಶೇಷ ಪ್ರಾಧಾನ್ಯ. ಶಾಲೆ ಸುರುವಾದೊಡನೆಯೇ ಮೊದಲು ದೇವತಾಸ್ತವನ. ಅದು ಇಂಪಾದ ತಂತುವಾದ್ಯರವ ಮಿಶ್ರಗಾನರೂಪದಿಂದ ಅರ್ಧತಾಸಿಗಿಂತಲೂ ಹೆಚ್ಚು ವೇಳೆ ನಡೆಯುವದು. ಮುನಿಸಿಪಾಲಟಿಯವರು ಸಾರ್ವಜನಿಕ ಉಪಯೋಗಕ್ಕಾಗಿ ಕೆಲವು ಶಾಲೆಗಳನ್ನು ತೆಗೆದಿರುವರು. ಈ ಶಾಲೆ

ಗಳಿಗೆ ಮುನಿಸಿಪಾಲಿಟಿ ಶಾಲೆಗಳೆನ್ನುವರು. ಈ ಶಾಲೆಗಳಲ್ಲಿಯೂ ಪುಕ್ಕಟೆಯಾದ ಶಿಕ್ಷಣವು ಕೊಡಲ್ಪಡುವದು. ಅಂತು ಹೀಗೆ ಮೂರು ಪ್ರಕಾರದ ಶಾಲೆಗಳಿದ್ದರೂ ಇವುಗಳ ಉಚ್ಚ ಧ್ಯೇಯವು ಅಂದರೆ ಹುಡುಗರನ್ನು ತಕ್ಕವರನ್ನಾಗಿ ಮಾಡಿ ತೀವ್ರ ಪ್ರಪಂಚದಲ್ಲಿ ತೊಡಗಿಸಬೇಕೆಂಬುದು ಮಾತ್ರ ಏಕರೂಪವಾಗಿದೆ.

ಈ ದೇಶದಲ್ಲಿ ಸಹ ಕೆಲವರು ಹೆಣ್ಣು ಮತ್ತು ಗಂಡು ಹುಡುಗರನ್ನು ಒತ್ತಟ್ಟಿಗೆ ಕೂಡಿಡಬಾರದೆಂಬ ಅಭಿಪ್ರಾಯದವರು ಇರುವರು ಇಂಥವರ ಸಲುವಾಗಿ ಬಾಲಬಾಲಿಕೆಯರ ಶಾಲೆಗಳು ಬೇರೆ ಬೇರೆ ಇರುವವು. ಇಂಥಲ್ಲಿ ಶಿಕ್ಷಕರು ಸಹ ಗಂಡು ಹುಡುಗರ ಶಾಲೆಗೆ ಗಂಡಸರೂ ಹೆಣ್ಣು ಹುಡಗೆಯರ ಶಾಲೆಗೆ ಹೆಂಗಸರೂ ಇರುವರು. ನವಯುಗದ ಸುಧಾರಕರ ಮತದಂತೆ ಕೆಲವು ಶಾಲೆಗಳಲ್ಲಿ ಹೆಣ್ಣು ಗಂಡು ಹುಡುಗರು ಕೂಡಿಯೇ ಕಲಿಯುವರು. ಇಂಥ ಮಿಶ್ರ ಶಾಲೆಗಳಲ್ಲಿ ಶಿಕ್ಷಕರೂ ಮಿಶ್ರ ರೂಪದಲ್ಲಿರುವರು. ಇನ್ನು ಕಿಂಡರ ಗಾರ್ಟನ್ ಶಾಲೆಗಳಲ್ಲಿ ಮಾತ್ರ ಬರೇ ಹೆಂಗಸರೇ ಶಿಕ್ಷಿಕೆಯರಿರುವರು. ಶಾಲೆಗಳು ಸುರುವಾಗುವ ವೇಳೆಯು ೧೦ ಘಂಟೆ. ಮುಗಿಯುವ ವೇಳೆ ಮೂರು ಘಂಟೆ. ಮೊದಲು ಧಾರ್ಮಿಕ ಶಿಕ್ಷಣ. ನಂತರ ೩ ತಾಸು ಅಭ್ಯಾಸ. ಉಳಿದ ವೇಳೆಯು ಮನೋಹರವಾದ ಮತ್ತು ಶಿಸ್ತಿನಿಂದ ಕೂಡಿದ ಆಟಗಳಲ್ಲಿ ಕಳೆಯಲ್ಪಡುವದು. ಶಾಲೆಯ ಆಟದ ಬೈಲುಗಳು ಹುಡುಗರಿಗೆ ಸಾಲದಿದ್ದರೆ ದೊಡ್ಡವರಿಗಾಗಿ ತಯಾರಿಸಲ್ಪಟ್ಟ ಮುನಿಸಿಪಾಲಿಟಿಯ ಆಟದ ಬೈಲುಗಳು ಸ್ವಲ್ಪ ಫೀಯಿಂದ ವಿದ್ಯಾರ್ಥಿಗಳಿಗೆ ಕೊಡಲ್ಪಡುತ್ತವೆ. ಅಂತು ವಿದ್ಯಾರ್ಥಿಗಳಿಗೆ ಶಾಲೆಯ ವೇಳೆಯು ಆನಂದದಾಯಕವಾಗಿ ಪರಿಣಮಿಸುವದಾಗಿದೆ. ಯಾವ ವಿದ್ಯಾರ್ಥಿಗೂ ಅಸಮಾಧಾನವೆನಿಸದ ಹಾಗೆ ಶಿಕ್ಷಣ ಕ್ರಮದ ಏರ್ಪಾಡು ಇರುವದು. ೧೦ ವರ್ಷದ ವರೆಗಿನ ವಯಸ್ಸಿನ ಹುಡುಗರು ಮನೆಗೆ ಪುಸ್ತಕಗಳನ್ನು ಒಯ್ಯುವ ಅವಶ್ಯವಿಲ್ಲ. ಶಾಲೆಯಲ್ಲಿ ಅಭ್ಯಾಸವಾದರೆ ತೀರಿತು. ಆದರೆ ಮೇಲಿನ ವಯಸ್ಸಿನ ಹುಡುಗರು ಮನೆಗೆ ಪುಸ್ತಕಗಳನ್ನು ಒಯ್ಯಬೇಕಾಗುವದು. ಯಾಕಂದರೆ ಅವರು ಸಾರ್ವಜನಿಕ ಪರೀಕ್ಷೆಗೆ ಕೂಡುವ ತಯಾರಿಯನ್ನು ಮಾಡಿಕೊಳ್ಳತಕ್ಕದ್ದಿರುತ್ತದೆ.

ಅಲ್ಲಿಯ ಪ್ರಾಥಮಿಕ ಶಾಲೆಗಳ ಶಿಕ್ಷಕರು ಎಲ್ಲರೂ ಟ್ರೇಂಡರೇ ಇರುವರು. ಅವರಲ್ಲಿ ಬಹು ಜನರು ಮಾಧ್ಯಮಿಕ ಶಿಕ್ಷಣವನ್ನು ಹೊಂದಿ ಟ್ರೇನಿಂಗ ಆದವರಿರುವರು. ಶಿಕ್ಷಕರ ವಿದ್ಯಾಯೋಗ್ಯತೆಯು ವಿಶೇಷ ಹೆಚ್ಚುಕಡಿಮೆಯಾಗಿರುವದಿಲ್ಲ. ಎಲ್ಲರೂ ಸಮಾನ ಪದವೀಧರರು. ಆದರೆ ಕೆಲವು ವಿಶ್ವವಿದ್ಯಾಲಯದ ಪದವೀಧರರು ಸಹ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರಾಗಿರುವರು. ಪ್ರಾಥಮಿಕ ಶಾಲಾ ಶಿಕ್ಷಣದ ಉದ್ಯೋಗವು ಅತೀವ ಮಹತ್ತ್ವದ್ದಾದುದೆಂದೂ ಸನ್ಮಾನವುಳ್ಳದೆಂದೂ ಭಾವಿಸುವರು. ಆ ದೇಶದಲ್ಲಿ ಈ ಉದ್ಯೋಗವು ಪವಿತ್ರ ಹಾಗೂ ಶ್ರೇಷ್ಠತಮವೆಂದು ಎಣಿಸಲ್ಪಡುತ್ತದೆ. ಆತ್ಮೋನ್ನತಿ, ದೇಶೋನ್ನತಿ, ಮೇಲಾದ ಸನ್ಮಾನ ಇವುಗಳನ್ನು ಬಯಸುವ ಪ್ರತಿಯೊಬ್ಬನು ಪ್ರಾಥಮಿಕ ಶಾಲಾಶಿಕ್ಷಕವೃತ್ತಿಯನ್ನು ಕೈಕೊಳ್ಳುತ್ತಾನೆ. ಅಲ್ಲಿಯ ಶಿಕ್ಷಕರು ಸದೈವ ಇಂಥ ಉದಾತ್ತ ವಿಚಾರ ಗೌರವಾನ್ವಿತರಾಗಿರುವರು. ಶಿಕ್ಷಕನೆಂದರೆ ಅಲ್ಲಿಯ ಜನರು ಬಲು ಮರ್ಯಾದೆಯನ್ನು ಕೊಡುವದು; ಅದರಲ್ಲಿಯೂ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ವಿಶೇಷ. ಶಿಕ್ಷಕರ ಪಗಾರವು ಇನ್ನುಳಿದ ನೌಕರರ ಪಗಾರಕ್ಕಿಂತ ಕಡಿಮೆ ತರಹದ್ದಿರುವದಿಲ್ಲ. ಒಹುತರ ಅಲ್ಲಿ ಎಲ್ಲ ನೌಕರರ ಸಂಬಳವು ಅಷ್ಟಷ್ಟೆ ಇರುತ್ತದೆ. ಶಾಲಾ ಹೆಡ್‌ಮಾಸ್ತರರ ಪಗಾರಕ್ಕೂ ಅಸಿಸ್ಟಂಟರ ಪಗಾರಕ್ಕೂ ಸಹ ಅಷ್ಟೊಂದು ಹೆಚ್ಚು ಕಡಿಮೆ ಇರುವದಿಲ್ಲ. ಗ್ರಾಜುಯೇಟ ಮಾಸ್ತರರ ಪಗಾರ ವಾರವೊಂದಕ್ಕೆ ೫ ಪೌಂಡು. ಬಿನ್ ಗ್ರ್ಯಾಜುಯೇಟ ಮಾಸ್ತರರ ಪಗಾರ ೪ ಪೌಂಡು.

ಅಲ್ಲಿಯ ಪ್ರಾಥಮಿಕ ಶಾಲಾಶಿಕ್ಷಕರ ಪಾಂಡಿತ್ಯದ ಯೋಗ್ಯತೆಯು ಇಲ್ಲಿಯ ವಿಶ್ವವಿದ್ಯಾಲಯದ ಎಷ್ಟೋ ಪ್ರೊಫೆಸರರಿಗಿಂತಲೂ ಅಧಿಕವಾದದ್ದಿರುತ್ತದೆ. ಸರ್ವ ಶಿಕ್ಷಕರೂ ಮಾನಸಶಾಸ್ತ್ರವನ್ನು ಬಲ್ಲವರಿರುತ್ತಾರೆ. ಮಾನಸಶಾಸ್ತ್ರವೆಂದರೆ ಸಾಮಾನ್ಯ ಶಾಸ್ತ್ರವಲ್ಲವೆಂದು ನಾನು ಬೇರೆ ಹೇಳಬೇಕಾದುದಿಲ್ಲ. ಆ ಶಾಸ್ತ್ರದ ಸಹಾಯದಿಂದೇ ಶಿಕ್ಷಣದ ಧ್ಯೇಯವು ಕಡೆಗಾಣುವದು. ಈ ಶಾಸ್ತ್ರವನ್ನರಿಯದವರು ಶಿಕ್ಷಕರೇ ಅಲ್ಲ. ಅಲ್ಲಿಯ ಶಿಕ್ಷಕರು ಬಹು ಮೃದು ಸ್ವಭಾವದವರಿರುವರು. ಶಾಲಾಧಿಕಾರಿಗಳು ಇವರೊಡನೆ ಬಹು ಪ್ರೀತಿಯಿಂದಲೂ ಆದರದಿಂದಲೂ ವರ್ತಿಸುತ್ತಾರೆ. ಬೇರೆ ಬೇರೆ ಶಾಲೆಗಳ ಶಿಕ್ಷಕರಲ್ಲಿಯ ಶಿಕ್ಷಣ ಕಲಾಚತುರತೆಯನ್ನು ನೋಡಿ ಅದನ್ನು ಪರಸ್ಪರರಲ್ಲಿ ವಿನಿಮಯ ಮಾಡುವದೇ ಇವರ ಆದ್ಯಕರ್ತವ್ಯವಾಗಿರುತ್ತದೆ.

ಹುಡುಗರ ವಯೋಮಾನಕ್ಕನುಸರಿಸಿ ಶಾಲೆಗಳಲ್ಲಿ ಕ್ಲಾಸುಗಳು ಮಾಡಲ್ಪಟ್ಟಿರುತ್ತವೆ. ೫ನೇ ೬ನೇ ........೧೩ನೇ ವಯಸ್ಸಿನ ಹುಡುಗರ ಕ್ಲಾಸುಗಳು ಬೇರೆಬೇರೆಯಾಗಿರುತ್ತವೆ.

ಇವರು ಪರೀಕ್ಷೆಗೆ ತಿಲಮಾತ್ರವೂ ಮಹತ್ತ್ವಗೊಡದೆ ಹುಡುಗರ ವಯೋಮಾನಕ್ಕನುಗುಣವಾದ ಶಿಕ್ಷಣವನ್ನು ಕೊಡುವರು. ಅಲ್ಲದೆ ಹುಡುಗರ ಗುಣಭೇದಗಳಿಂದಲೂ ಕ್ಲಾಸುಗಳ ವರ್ಗೀಕರಣ ಮಾಡಿರುವರು. ಉದ್ಧತ ಹುಡುಗರಿದ್ದರೆ ಅವರನ್ನು ಪ್ರತ್ಯೇಕಿಸಿ ಅವರ ಶಿಕ್ಷಣ ಕ್ರಮವು ಬೇರೆ ರೀತಿಯಿಂದಲೇ ಸಾಗಿಸಲ್ಪಡುವದು. ಅರ್ಧಮರ್ಧ ಹುಚ್ಚು ಇಲ್ಲವೆ ತಲೆತಿರುಕರಾಗಿದ್ದ ಹುಡುಗರಿಗೆ ಬೇರೆ ಬೇರೆ ಏರ್ಪಾಡು ಇರುವವು. ಏನೇ ಆಗಲಿ, ಆ ಭೂಮಿಯಲ್ಲಿ ಜನ್ಮವೆತ್ತಿದ ಪ್ರತಿಯೊಬ್ಬ ವ್ಯಕ್ತಿಯು ಪ್ರಾಥಮಿಕಶಿಕ್ಷಣವನ್ನು ಹೊಂದಿಯೇ ತೀರಬೇಕು' ಮುಂದಿನ ಮಾಧ್ಯಮಿಕ ಶಿಕ್ಷಣವು ಅವನ ಒಲವಿನ ಮೇಲೆ ಅವಲಂಬಿಸಿರುವದು.

ಪ್ರಾಥಮಿಕ ಶಿಕ್ಷಣವು ಮುಗಿದನಂತರ ಶಾಲೆ ಬಿಟ್ಟ ಎಷ್ಟೋ ಉಡಾಳ ಹುಡುಗರು ತಮ್ಮ ಚರಿತಾರ್ಥಕ್ಕಾಗಿ ನೌಕರಿಯನ್ನು ಕೈಕೊಂಡು ಮುಂದೆ ತಮಗೆ ಸಿಗತಕ್ಕ ಅಲ್ಪ ವೇತನದಿಂದ ತೃಪ್ತರಾಗದೆ ರಾತ್ರಿಶಾಲೆಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡಿ ದೊಡ್ಡ ದೊಡ್ಡ ಪದವೀಧರರಾದದ್ದು ಕಂಡುಬರುತ್ತದೆ. ಪದಾರ್ಥವಿಜ್ಞಾನಶಾಸ್ತ್ರದ ಪ್ರಯೋಗಶಾಲೆಯಲ್ಲಿ ಸಿಪಾಯಿಯು ಆಗಿದ್ದು ಮುಂದೆ ಅದೇ ಪ್ರಯೋಗ ಶಾಲೆಯ ಪ್ರೊಫೆಸರರಾಗಿದ್ದವರನ್ನು ನಾನು ಕಣ್ಮುಟ್ಟ ನೋಡಿದ್ದೇನೆ. ಅಲ್ಲಿಯ ಮಾಧ್ಯಮಿಕ ಶಿಕ್ಷಣದ ಸೌಕರ್ಯಗಳಾದರೂ ಚೆನ್ನಾಗಿವೆ.

ಇನ್ನು ಪ್ರಾಥಮಿಕ ಶಾಲೆಯಲ್ಲಿ ಶಿಸ್ತು ಕಾಯ್ದುಕೊಳ್ಳುವದಕ್ಕಾಗಿ ಒಂದು ಬೆತ್ತವನ್ನು ಎಲ್ಲ ಹುಡುಗರಿಗೂ ಕಾಣುವಂತೆ ಕಾಯ್ದಿಟ್ಟಿರುತ್ತಾರೆ. ಸಹಸಾ ಅದರ ಉಪಯೋಗವನ್ನು ಎಂದೂ ಮಾಡುವದಿಲ್ಲ. ಶಾಲೆಯ ಶಿಸ್ತಿಗೆ ಯಾವನಾದರೂ ಓರ್ವ ವಿದ್ಯಾರ್ಥಿಯು ಭಂಗ ತಂದರೆ ಅವನನ್ನು ಬಹುರೀತಿಯಿಂದ ವಿಚಾರಪೂರ್ವಕ ಪರೀಕ್ಷಿಸಿ ಕಾರಣವನ್ನು ಗೊತ್ತು ಹಿಡಿದು ಸರಿಪಡಿಸಿಕೊಳ್ಳುವರು. ಹುಡುಗನ ಲಕ್ಷ್ಯವು ವಿಷಯದ ಕಡೆಗೆ ಹತ್ತದಿದ್ದರೆ, ಆತನ ಮನಸ್ಸಿನ ಸ್ಥಿತಿಯನ್ನರಿತು ಆ ಕಾಲದಲ್ಲಿ ಅವನಿಗೆ ಜುಲುಮೆ ಮಾಡದೆ ಹಾಗೇ ಬಿಡುತ್ತಾರೆ. ಇದಕ್ಕಾಗಿ ಅಲ್ಲಿಯ ಪ್ರಾಥಮಿಕ ಶಾಲೆಯಲ್ಲಿ ಕೆಲಸಮಾಡುತ್ತಿದ್ದ ನನ್ನ ಓರ್ವ ಮಿತ್ರನ ಅನುಭವವನ್ನು ನಿಮ್ಮ ಮುಂದೆ ಹೇಳುತ್ತೇನೆ. ಒಂದು ದಿವಸ ಗಣಿತ ಕಲಿಸುವಾಗ ಒಬ್ಬ ವಿದ್ಯಾರ್ಥಿಯು ವಿಷಯದ ಕಡೆಗೆ ಲಕ್ಷ್ಯಗೊಡದೆ, ವಿಮಾನವನ್ನು ಮಾಡಿ ಹಾರಿಸುವದರಲ್ಲಿಯೇ ತೊಡಗಿದ್ದನಂತೆ. ಯಾಕೆ ವಿಷಯದ ಕಡೆಗೆ ಲಕ್ಷ್ಯಗೊಡಲೊಲ್ಲೆಯೆಂದು ನಮ್ಮ ಮಿತ್ರನು ಕೇಳಿದೊಡನೆಯೇ ( Look it flies )ಎಂದು ಆ ಹುಡುಗನು ಉತ್ತರವನ್ನು ಕೊಟ್ಟನಂತೆ. ಆ ಮೇಲೆ ಆ ಹುಡುಗನನ್ನು ಹಾಗೇ ಬಿಡಬೇಕಾಯಿತೆಂದು ಹೇಳಿದರು. ಯಾಕಂದರೆ ಆ ಕಾಲದಲ್ಲಿ ಹೊಸದಾಗಿ ವಿಮಾನಗಳ ಸಂಚಲನವು ಬಹಳವಾಗಿ ನಡೆದಿತ್ತು. ಆ ಹುಡುಗನು ಕಾಗದದಿಂದ ವಿಮಾನಗಳನ್ನು ಮಾಡುವದು ಹಾರಿಸುವದು ಇದೇ ಉದ್ಯೋಗವನ್ನು ಎಂಟಾನೆಂಟು ದಿವಸ ಮಾಡಿದ ಬಳಿಕ ವಿಷಯದ ಕಡೆಗೆ ಲಕ್ಷ್ಯವನ್ನು ತಾನೇ ಕೊಡಹತ್ತಿದನಂತೆ. ಹೇಳಲಿಕ್ಕೆ ಕಾರಣವಿಷ್ಟೆ, ಅಲ್ಲಿಯ ಶಿಕ್ಷಣವು ಹುಡುಗರ ಒಲವನ್ನರಿತು ಸಾಗಿಸಲ್ಪಡುವದು.

ಪ್ರತಿಯೊಂದು ಶಾಲೆಯ ಯಾವತ್ತೂ ಜವಾಬದಾರಿಯು ಆಯಾ ಶಾಲೆಯ ಹೆಡ್‌ಮಾಸ್ತರ ಮೇಲೆಯೇ ಇರುವದು. ತಪಾಸಿಸುವ ಅಧಿಕಾರಿಗಳು ಅವರ ಸಂಗಡ ಬಹಳೇ ಸೌಮ್ಯತೆಯಿಂದ ನಡೆದುಕೊಳ್ಳುವರು. ಶಾಲೆಯಲ್ಲಿ ಅಂಕಗಣಿತ, ಭೂಮಿತಿ, ಜಮಾಖರ್ಚು, ಇತಿಹಾಸ, ಭೂಗೋಲ, ಭಾಷೆ ಮೊದಲಾದ ವಿಷಯಗಳು ಕಲಿಸಲ್ಪಡುವವಲ್ಲದೆ ಬೀಜಗಣಿತವು ಸಹ ಕಲಿಸಲ್ಪಡುತ್ತದೆ. ನೃತ್ಯಗಾನಗಳು ಅವರ ಶಿಕ್ಷಣಕ್ರಮದಲ್ಲಿ ಪ್ರಾಮುಖ್ಯತೆಯನ್ನು ಹೊಂದಿರುವವು. ಒಟ್ಟಿನಮೇಲೆ ಆ ದೇಶದ ಶಿಕ್ಷಣವು ಪ್ರತಿಯೊಬ್ಬ ವಿದ್ಯಾರ್ಥಿಯು ೧೪ನೇ ವರ್ಷಕ್ಕೆ ಆತನ ಸ್ವಂತದ ಪ್ರಪಂಚಜ್ಞಾನ ಶಕ್ತಿಗಳ ಪರಿಪೂರ್ಣತೆಯನ್ನೀಯುತ್ತದೆ.

ನಮ್ಮ ದೇಶದ ಪ್ರಾಥಮಿಕ ಶಾಲಾಶಿಕ್ಷಕರೇ, ನೀವು ಪವಿತ್ರ ಉದ್ಯೋಗವನ್ನು ಕೈಕೊಂಡಿರುವಿರಿ. ನಮ್ಮ ದೇಶ ಕಾಲ ಸ್ಥಿತಿಗೆ ತಕ್ಕಂತೆ ನಿಮ್ಮ ಉದ್ಯೋಗವನ್ನು ಊರ್ಜಿತಾವಸ್ಥೆಗೆ ತಂದು ಯಶೋಭಾಗಿಗಳಾಗುವಿರೆಂದು ಹಾರೈಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಬೂದಿಯ ಗಂಟು



ಕತೆಗಾರರು:— ಕುಮಾರಿ ಪದ್ಮಾವತಿ, ಕನ್ಯಾಗುರುಕುಲ, ದೆಹರಾದೂನ

"ಹಾ ಹಾ! ಎಂತಹ ದುಷ್ಟ ಹುಡುಗರು ! ಯಾವಾಗಲೂ ಹೊಸ ಹೊಸ ಆರೋಪಣೆಗಳನ್ನು ಹೊರಿಸುತ್ತಾ ಬರುತ್ತಾರೆ. ಏನು ನಾವು ಇವರ ಬಲೆಗಳಲ್ಲಿ ಸಿಕ್ಕುವುದುಂಟೆ" ಎಂದು ಒಬ್ಬನು ಮೇಜಿನ ಮೇಲಿದ್ದ ತಟ್ಟೆಯಿಂದ ಕೆಲವು ಅಂಜೂರಗಳನ್ನು ಬಾಯಿಗೆ ಹಾಕುತ್ತಾ ಹೇಳಿದನು.

ಇನ್ನೊಬ್ಬನು ಸ್ವಲ್ಪ ಗಂಭೀರ ಮತ್ತು ವ್ಯಂಗಯುಕ್ತವಾದ ಸ್ವರದಿಂದ ಹೇಳಿದನು. ಈ ಹುಚ್ಚರು ನಮ್ಮ ಹಿಂದೆ ಯಾಕೆ ಹಿಡಿದಿದ್ದಾರೆಂದು ಗೊತ್ತಾಗುವುದಿಲ್ಲ.

ಇವರಲ್ಲಿ ಒಬ್ಬನ ಹೆಸರು ಸುರೇಶ ಮತ್ತೊಬ್ಬನ ಹೆಸರು ಸತೀಶರೆಂಬದಾಗಿತ್ತು. ಇವರಿಬ್ಬರೂ ಒಂದೇ ಕಾಲೇಜಿನ ಮತ್ತು ಒಂದೇ ಕಕ್ಷದ ವಿದ್ಯಾರ್ಥಿಯರಾಗಿದ್ದರು. ಅವರಿಬ್ಬರೂ ಅನನ್ಯ ಮಿತ್ರರಾಗಿದ್ದರು. ಹೋಸ್ಟಲಿನ ಅನ್ಯ ವಿದ್ಯಾರ್ಥಿಗಳು ಇವರೀ ಮಿತ್ರತ್ವವನ್ನು ನೋಡಿ ಒಳಗೊಳಗೆ ಉರಿಯುತ್ತಿದ್ದರು ಅವರು ಇವರ ಪವಿತ್ರವಾದ ಮಿತ್ರತ್ವವನ್ನು ನಿರ್ಮೂಲ ಮಾಡುವುದಕ್ಕಾಗಿ ಯಾವಾಗಲೂ ಒಂದೊಂದು ಪ್ರಕಾರದ ಉಪಾಯವನ್ನು ಹುಡುಕುತ್ತಿದ್ದರು ಆದರೆ ಇವರಿಬ್ಬರಿಗೆ ಪರಸ್ಪರ ಬಹಳ ವಿಶ್ವಾಸವಿದ್ದಕಾರಣ ಯಾರ ಮನದಲ್ಲಿಯೂ ಯಾವ ವಿಧವಾದ ಸಂಶಯವೂ ಹುಟ್ಟುವುದಕ್ಕೆ ಕಾರಣವಿರಲಿಲ್ಲ. ಈ ವಿಶ್ವಾಸವೇ ಇವರೀ ಅಭಿನ್ನಹೃದಯಮಿತ್ರತ್ವದ ರಹಸ್ಯವಾಗಿತ್ತು.

ಮೂರು ದಿನಗಳ ಹಿಂದೆ ಸುರೇಶನ ಪಾದುಕೆಯನ್ನು ಯಾರೋ ಕದ್ದು ಬಿಟ್ಟಿದ್ದರು. ಅವನು ಇಂದು ತನ್ನ ಎಕ್ಕಡವನ್ನು ಸತೀಶನ ಕೋಣೆಯಲ್ಲಿ ನೋಡಿದ್ದನು. ಆ ಎಕ್ಕಡವು ಸತೀಶನ ಟ್ರಂಕಿನ ಹಿಂದೆ ಅಡಗಿಸಲ್ಪಟ್ಟದ್ದಿತ್ತು. ಸತೀಶನು ಕಾಲೇಜಿನಿಂದ ಹಿಂತಿರುಗಿದಾಗ ಪಾದುಕೆಗಳನ್ನು ಕಂಡನು. ಕೂಡಲೆ ಸುರೇಶನನ್ನು ಕರೆದು ತೋರಿಸಿದನು.

ಸುರೇಶನು ಪೇಟೆಯಿಂದ ತನ್ನ ಸಂಗಡ ಸ್ವಲ್ಪ ಅಂಜೂರಗಳನ್ನು ತಂದಿದ್ದನು. ಇವುಗಳನ್ನು ಪೂರೈಸುವುದಕ್ಕಾಗಿ ಸಹಾಯವನ್ನು ಕೊಡುತ್ತಾ ಸುರೇಶನು ಉಪಯುಕ್ತವಾಕ್ಯಗಳನ್ನು ನುಡಿದಿದ್ದನು.

ಸುರೇಶನು ಸ್ವಭಾವದಲ್ಲಿ ಚಂಚಲನಾಗಿದ್ದನು. ಮತ್ತು ಬಹಳ ಹಸನ್ಮುಖಿಯಾಗಿರುತ್ತಿದ್ದನು. ಅವನು ನಗುತ್ತಾ ಹೇಳಿದನು. —ಮಿತ್ರ, ನಿನ್ನ ಹೇಳಿಕೆಯ ಮೇರೆಗೆ ನಾನು ಇಷ್ಟು ದಿವಸಗಳವರೆಗೆ ಸುಮ್ಮಗಿದ್ದೆನು. ಇಲ್ಲದಿದ್ದರೆ ನಾನು ಅವರಿಗೆ ಚೆನ್ನಾಗಿ ಬುದ್ಧಿ ಕಲಿಸುತ್ತಿದ್ದೆನು.

ಸತೀಶ—ಇದರಲ್ಲೇನು ಮಡಗಿದೆ, ಮತ್ತು ಹೆದರುವ ಮಾತೇನಿದೆ. ಅವರ ಮನವು ಇದರಿಂದ ಆನಂದವನ್ನು ಹೊಂದುವುದಾದರೆ ಹಾಗೆಯೇ ಮಾಡಲಿ. ಆದರೆ ನಾವು ನಮ್ಮ ಹೃದಯವನ್ನು ಶುದ್ಧವಾಗಿಟ್ಟಿರಬೇಕು.

ಸುರೇಶ ಬೇಗನೆ ಹೇಳ ತೊಡಗಿದನು— ಈ ಮನುಷ್ಯರ ಈ ಪ್ರಕಾರವಾದ ಏಟುಗಳನ್ನು ತಿನ್ನುತ್ತಾ ನಮ್ಮ ಮನವು ಆನೆಯ ಬೆನ್ನಿನಂತೆ ಕಠೋರವಾಗಿಬಿಟ್ಟಿದೆ. ಆದರೆ ನಾವು ಅವರನ್ನು ಸ್ವಲ್ಪ ಹೆದರಿಸಬೇಕಾಗಿದೆ. ಇಲ್ಲದೆ ಹೋದರೆ ನಮ್ಮ ಈ ಅಮೃತಮಯವಾದ ಮಿತ್ರತ್ವಕ್ಕೆ ಹಾನಿಯನ್ನು ತಲಪಿಸಿಬಿಟ್ಟಾರು.

ಸತೀಶ— ಈ ದೈನಿಕ ಆಪತ್ತಿಗಳಿಂದ ಪಾರಾಗಬೇಕಾದರೆ ನಾವು ಅವರ ಸಂಗಡ ಮಾತಾಡುವುದನ್ನೇ ತ್ಯಜಿಸಬೇಕು.

ಸುರೇಶ— ಅವರು ಶಠರು. ನಮ್ಮ ಸತ್ಯಾಗ್ರಹದಿಂದ ಅವರು ತಮ್ಮ ಮಾರ್ಗವನ್ನು ಬಿಡಲಿಕ್ಕಿಲ್ಲ. ನನ್ನ ಕೋರಿಕೆ ಏನೆಂದರೆ ಇಂದು ಸಾಯಂಕಾಲದಲ್ಲಿ ಅವರು ಯಾವಾಗ ತಿರುಗಾಡಲಿಕ್ಕೆ ಹೋಗುತ್ತಾರೋ ಆವಾಗ ತೊಟ್ಟಿಯಲ್ಲಿ ಗಾಢವಾದ ರಂಗನ್ನು ತುಂಬಿ, ಪಿಚಕಾರಿಯ ಮೂಲಕ ಎಲ್ಲರ ಮಸ್ತಕಗಳ ಮೇಲೆ ಎರಚುವೆನು.

ಹೇಗೆ? ಎಂದು ಸತೀಶನು ಕೇಳಿದನು.

ಹೇಗೆಂದರೇನು ?

ಕೋಣೆಗೆ ಬೀಗ ಹಾಕುತ್ತಾರೆ.

ಕಿಟಕಿಗಳು ತೆರೆದಿರುತ್ತವೆ,

ಹಾ. ಹಾ. ನೀನು ನಿಜವಾಗಿಯೂ ಹುಚ್ಚನು ಎಂದು ಸತೀಶನು ಗಟ್ಟಿಯಾಗಿ ನಗುತ್ತಾ ಹೇಳಿದನು. "ನೀನು ಎಂತಹ ನಿಷ್ಪ್ರಯೋಜಕವಾದ ಹಾಳು ಉಪಾಯವನ್ನು ಕಂಡು ಹಿಡಿದಿರುವೆ ಒಳ್ಳೇದು. ಅವರಿಗೆ ಇನ್ನೂ ಮೂರು ಚಾನ್ಸ್‌ಗಳನ್ನು ದಯಪಾಲಿಸು. ಅದರ ನಂತರ ಅವರ ಪ್ರತೀಕಾರಕ್ಕಾಗಿ ಉಪಾಯವನ್ನು ಯೋಚಿಸೋಣ.

ಸುರೇಶನು ಸತೀಶನ ಆಧೀನನಾದನೋ ಎಂಬಂತೆ ಮುಗುಳು ನಗೆ ನಗುತ್ತಾ "ತಥಾಸ್ತು ಭಗವನ್"

೩

ಈಗ ಸುರೇಶ ಮತ್ತು ಸತೀಶರು ಹೊಸ್ಟೆಲಿನ ಅನ್ಯ ವಿದ್ಯಾರ್ಥಿಯರೊಡನೆ ಎಳ್ಳಷ್ಟಾದರೂ ಮಾತನಾಡುತ್ತಿರಲಿಲ್ಲ. ಅವರ ವಿರೋಧಿಗಳ ಸರದಾರನು ಫೋರ್ಥ ಇಯರಿನ ಉಮೇಶನಾಗಿದ್ದನು. ಅವನು ಮನದೊಳಗೆ ಉರಿಯುತ್ತಿದ್ದರೂ ಮೊದಲು ಧಾರಾಳವಾಗಿ ಸುರೇಶನ ಸಂಗಡ ಮಾತಾಡುತ್ತಿದ್ದನು. ಆದರೆ ಈಗ ಸುರೇಶನು ಅವನ ಸಂಗಡ ಮಾತಾಡುವದಕ್ಕೆ ಹಿಂದೆಗೆಯುತ್ತಿದ್ದನು. ಮತ್ತು ಮುಖದಿಂದ ಯಾವದಾದರು ಶಬ್ದವನ್ನು ಹೊರಡಿಸಿದರೂ ಅದು ಬೇಸರಯುಕ್ತವಾಗಿದ್ದಿತ್ತು. ಉಮೇಶನಿಗೆ ಸುರೇಶನು ಅಸುಂತುಷ್ಟನಾಗಿದ್ದಾನೆಂದು ವಿದಿತವಾಯಿತು. ಅವನು ಸಾಧುಪ್ರಕೃತಿಯಾದ ಸತೀಶ ಮತ್ತು ನಿಷ್ಕಲಂಕನಾದ ಸುರೇಶನ ಸಂಗಡ ನಡೆಸಿದ ವ್ಯವಹಾರಗಳನ್ನು ಜ್ಞಾಪಿಸಿದಕೂಡಲೇ ಅವನಿಗೆ ಬಹಳ ದುಃಖವಾಯಿತು. ಅವನು ಸುರೇಶನಿಂದ ಕ್ಷಮಾಪ್ರಾರ್ಥನೆಗಾಗಿ ನಿಶ್ಚಯಿಸಿದನು. ಅದಕ್ಕಾಗಿ ಸಂದರ್ಭವನ್ನು ನೋಡತೊಡಗಿದನು. ಆದರೆ ಬಹಳ ದಿನಗಳವರೆಗೆ ಅಂತಹ ಸುಸಂದರ್ಭವು ಬರಲಿಲ್ಲ. ಮತ್ತು ಸುರೇಶನೂ ಒಬ್ಬೊಂಟಿಗನಾಗಿ ಸಿಕ್ಕಲಿಲ್ಲ.

ಉಮೇಶನು ಸುರೇಶ ಮತ್ತು ಸತೀಶನ ಸಂಗಡ ಮಿತ್ರತ್ವವನ್ನು ಬೆಳಿಸಿಕೊಳ್ಳುವುದು ಅವರಿಗೆ ಸರ್ವಥಾ ಉಚಿತವೆಂದ್ಹೇಳಿಬಿಟ್ಟನು.

ಸತೀಶನು ಸುರೇಶನ ಕೈಯನ್ನು ತಟ್ಟುತ್ತಾ—ನೋಡು ! ಎಂತಹ ಒಳ್ಳೇ ಉಪಾಯುವಾಗಿತ್ತು.

ನಿಜ. ಎಂದು ಸುರೇಶನು ನಗುತ್ತಾ ಉತ್ತರವನ್ನು ಕೊಟ್ಟನು ಆದರೆ ಪ್ರಿಯ ಸತೀಶ, ಇದರಲ್ಲಿ ನಮ್ಮ ಪವಿತ್ರವಾದ ಮಿತ್ರತ್ವದ ಪ್ರಭಾವವೂ ಸಮ್ಮಿಲಿತವಾಗಿದೆ.

೪

ಒಂದುದಿನ ಸತೀಶನು ಮೆಲ್ಲಮೆಲ್ಲಗೆ ಸುರೇಶನ ಕೋಣೆಯನ್ನು ಪ್ರವೇಶಿಸಿದನು. ಅವನು ಬಾಗಿಲದ ಕಡೆಗೆ ಬೆನ್ನುಮಾಡಿ ಕುರ್ಚಿಯಲ್ಲಿ ಕುಳಿತುಕೊಂಡು ಯಾವುದೋ ಬರೆಯುವುದರಲ್ಲಿ ಮಗ್ನನಾಗಿರುವ ಸುರೇಶನನ್ನು ಕಂಡನು. ಸತೀಶನು ಮೆಲ್ಲಗೆ ಸುರೇಶನ ಕುರ್ಚಿಯ ಹಿಂದೆ ನಿಂತು ನೋಡಿದನು. ಒಂದು ತೆರೆದಿಟ್ಟದ್ದ ಮಾಸಪತ್ರಿಕೆಯು ಸುರೇಶನ ಮುಂದೆ ಇಡಲ್ಪಟ್ಟದ್ದಿತು ; ಮತ್ತು ಅವನು ಕಾಗದದಮೇಲೆ ಬೇಗ ಬೇಗನೆ ಫೌಂಟನ್‌ಪೆನ್ನನ್ನು ನಡೆಸುತ್ತಿದ್ದನು.

ಮಾಸಿಕಪತ್ರದ ತೆರೆದಿಟ್ಟದ್ದ ಪುಟದಲ್ಲಿ ಒಂದು ಲೇಖನವು ಆರಂಭವಾಗಿದ್ದಿತ್ತು. ಸತೀಶನು ಅದರ ಕಡೆಗೆ ನೋಡಿದನು. 'ಅಸ್ತಾಚಲ ಮತ್ತು ಅದರ ಲೇಖಕನು ಶ್ರೀಯುತ ಸುರೇಶ ಕುಮಾರ ಶರ್ಮಾ.' ಸತೀಶನು ಪುನಃ ಸುರೇಶನು ಬರೆಯುತ್ತಿದ್ದ ಕಾಗದದ ಮೇಲೆ ಮುಖವನ್ನು ತಿರುಗಿಸಿದನು. ಇಷ್ಟರಲ್ಲಿ ಸುರೇಶನು ಚಕಿತನಾಗಿ ಮುಖ ತಿರುಗಿಸಿ ಹಿಂದೆ ನೋಡಿದನು- ಒಹೋ! ಈ ಕಳ್ಳನು ಯಾವಾಗ ಇಲ್ಲಿ ಅಡಿಗಿಕೊಂಡಿದ್ದಾನೆ!

ಸುರೇಶನು ಕೈಯಿಂದ ಮೇಜಿನಮೇಲೆ ಹೊಡೆಯುತ್ತಾ-ಹೇ ನನ್ನ ಪ್ರಾಣಸಖಾ, ನನ್ನನ್ನು ಕ್ಷಮಿಸು. ನಿಜವಾಗಿಯೂ ನಾನು ನಿನಗೆ ಹೇಳದೆಯೋ ಮಾಡಿಬಿಟ್ಟೆನು. ಆದರೆ ನಿನಗೇಕೆ ಹೇಳಲಿಲ್ಲವೆಂದರೆ ನೀನು ನನ್ನ ಲೇಖನವನ್ನು ಅಸ್ವೀಕಾರ ಮಾಡುವಿಯೆಂಬ ಭಯದಿಂದ ಮತ್ತು ಇದರಿಂದ ನಿನ್ನ ಮತ್ತು ಇತರರ ಉಪಹಾಸಕ್ಕೆ ಬಲಿಯಾಗುವೆನೆಂಬ ಭಯದಿಂದ ತೋರಿಸಲಿಲ್ಲ.

ಒಳ್ಳೇದು ಕ್ಷಮೆಯನ್ನು ಪ್ರದಾನಿಸುವೆನು. ಎಂದು ಸತೀಶನು ಕುರ್ಚಿಯಮೇಲೆ ಕುಳಿತುಕೊಂಡು ಮಾಸಿಕ ಪತ್ರಿಕೆಯಲ್ಲಿದ್ದ ಸುರೇಶನ ಲೇಖನವನ್ನು ಓದುತ್ತಾ— ಏನ್ರಿ ಬಹಳ ಚೆನ್ನಾಗಿ ಬರೆದಿರುತ್ತಿಯೋ ಸುರೇಶ ನೀನು ಧನ್ಯನು. ಎಂದು ಹೇಳಿದನು.

ಹೌದು, ಎಂದು ಸುರೇಶನು ಗರ್ವಪೂರ್ಣವಾದ ನಗುವಿನಿಂದ ಉತ್ತರವನ್ನು ಕೊಟ್ಟನು. ಹೇ ಸತೀಶ ನೀನು ನನ್ನನೇಕೆ ಈ ಪ್ರಕಾರವಾಗಿ ಹೊಗಳುತ್ತಿ ಎಂದು ಪ್ರಶ್ನಿಸಿದನು.

ಸತೀಶನು ಲೇಖನವನ್ನು ಪೂರೈಯಿಸಿದ ನಂತರ ಎಂತಹ ಸುಂದರವಾದ ಪ್ಲಾಟ್ ! ಎಂತಹ ಲಲಿತವಾದ ಭಾಷೆ ಎಂದಿನಿಂದ ಬರೆಯುತ್ತಿ ಇರುವೆಯೆಂದು ಕೇಳಿದನು.

ಸುರೇಶನು ಗರ್ವಯುಕ್ತವಾದ ಪ್ರಸನ್ನತೆಯಿಂದ ಶಿರವನ್ನು ತಗ್ಗಿಸಿ ಇದೇ ನನ್ನ ಮೊದಲನೆಯ ಕತೆಯು ಎಂದು ಉತ್ತರವನ್ನು ಕೊಟ್ಟನು.

ಸತೀಶನು ಸುರೇಶನ ಬೆನ್ನನ್ನು ಬಲವಾಗಿ ತಟ್ಟಲು ಆರಂಭಿಸಿದನು.

೪

ಸುರೇಶನ ಕತೆಯನ್ನು ಓದಿ ಸತೀಶನಿಗೂ ಬರೆಯುವುದಕ್ಕೆ ಉತ್ಸಾಹವು ಹುಟ್ಟಿತು. ಕೆಲವು ಘಂಟೆಗಳನಂತರ ಅವನು ಭೋಜನವನ್ನು ಸಮಾಪ್ತಮಾಡಿದನು. ಅವನು ಮಾರನೇದಿನ ಯಾವುದಾದರೂ ಲೇಖನವನ್ನು ಬರೆಯುವೆನೆಂದು ನಿಶ್ಚಯಿಸಿದ್ದನು. ನಿಯಮದಂತೆ ಕಾಲೇಜಿನ ಇಂಗ್ಲಿಷ್ ಬುಕ್ಕನ್ನು ತೆಗೆದುಕೊಂಡು ಕುಳಿತನು. ಆದರೆ ಅವನು ಅದರಲ್ಲಿ ಸ್ವಲ್ಪವೂ ಗಮನವನ್ನು ಕೊಡಲಿಲ್ಲ. ಆ ದಿನ ಬಹಳ ಉತ್ಸಾಹಿತನಾಗಿದ್ದನು. ಅವನಿಗೆ ಬಾರಿ ಬಾರಿಗೂ ಸುರೇಶನ ಅಸ್ತಾಚಲವು ನೆನಪಾಗುತಿತ್ತು. ಸುರೇಶನ ಲೇಖನದ ಶೈಲಿಯಮೇಲೆ ವಾಸ್ತವವಾಗಿ ಮುಗ್ಧನಾಗಿಬಿಟ್ಟಿದ್ದನು. ಆದರೆ ಅವನ ಹೃದಯದಲ್ಲಿ ಈರ್ಷೆ ಅಥವಾ ಸ್ಪರ್ಧೆಯ ಭಯವು ಎಳ್ಳಷ್ಟಾದರೂ ಇರಲಿಲ್ಲ. ಪ್ರಯತ್ನವನ್ನು ಮಾಡಿ ಒಂದು ಕತೆಯನ್ನು ಬರೆದು ಅದನ್ನು ಸುರೇಶನಿಂದ ತಿದ್ದಿಸಿ, ಯಾವದಾದರೊ ಪತ್ರಿಕೆಗೆ ಕಳುಹಿಸುವುದೆಂದು ಯೋಚಿಸಿದ್ದನು. ಅವನ ಉತ್ಸಾಹವು ಹೆಚ್ಚಾಗತೊಡಗಿತು. ಅವನು ಪುಸ್ತಕವನ್ನು ತೆಗೆದು ಬೇರೊಂದೆಡೆ ಇಟ್ಟನಂತರ ಕಾಗದವನ್ನು ಮೇಜಿನ ಮೇಲಿಟ್ಟು ಏನನ್ನು ಬರೆಯಲಿ ಎಂದು ಆಲೋಚಿಸತೊಡಗಿದನು.

ಅವನು ಕಾಗದದಮೇಲೆ ಸಣ್ಣದಾಗಿಯೂ ಉದ್ದವಾಗಿಯೂ ಇರುವ ಬಹಳ ಗೆರೆಗಳನ್ನು ಎಳೆದನು. ನಂತರ ಬಹಳ ಹೆಸರುಗಳನ್ನು ಬರೆಯಲಾರಂಭಿಸಿದನು. ಒಂದುಸಲ ಕಾಗದದ ಮೇಲೆ ಲೇಖನಿಯಿಂದ ಒಂದು ದೊಡ್ಡ ಮಸಿಯ ಬಿಂದು ಬಿತ್ತು. ಅವನು ಆ ಬಿಂದುವಿನ ಸುತ್ತಲೂ ಸಣ್ಣ ಗೆರೆಗಳನ್ನು ಎಳೆದು ಸೂರ್ಯನನ್ನು ಚಿತ್ರಿಸಿದನು. ಅನಂತರ ಅದರ ಕೆಳಗೆ ಆಕಾಶವನ್ನು ಚಿತ್ರಿಸಿ, ಸೂರ್ಯನನ್ನು ಉದಯಿಸುವಂತೆ ಮಾಡಿದನು. ಅನಂತರ ನಿರುದ್ದೇಶದಿಂದ ಅದರ ಕೆಳಗೆ ಉದಯಿಸುವ ಸೂರ್ಯನೆಂಬದಾಗಿ ಬರೆದನು. ಅದರನಂತರ ಅದನ್ನು ಹೊಡೆದು "ಸೂರ್ಯೋದಯು"ವೆಂಬದಾಗಿ ಬರೆದನು.

ಸತೀಶನ ಆನಂದಕ್ಕೆ ಮೇರೆಯೇ ಇಲ್ಲದಾಯಿತು. ಅವನು ಕಪ್ಪಿನಿಂದ ಕೆಟ್ಟುಹೋಗಿದ್ದ ಕಾಗದವನ್ನು ಹರಿದುಬಿಟ್ಟು, ಬೇರೊಂದು ಸ್ವಚ್ಛ ಕಾಗದದ ಮೇಲೆ ಕಥೆಯನ್ನು ಬರೆಯಲು ಸುರುಮಾಡಿದನು. ಆ ಕಥೆಗೆ ಸೂರ್ಯೋದಯವೆಂಬದಾಗಿ ನಾಮವನ್ನಿಟ್ಟನು.

ಸತೀಶನು ತನ್ನ ಬುದ್ಧಿಯನ್ನು ವಿಸ್ತರಿಸತೊಡಗಿದನು. ಸ್ವಲ್ಪ ಹೊತ್ತಾದ ಮೇಲೆಯೇ ಅವನು ಸೂರ್ಯೋದಯಕ್ಕೆ ಸರಿಯಾಗಿ ಒಪ್ಪುವ, ಬಹಳ ಸುಂದರವಾದ ಒಂದು ಪ್ಲಾಟನ್ನು ತಯಾರು ಮಾಡಿದನು. ಅನಂತರ ಬೇಗನೆ ಬರೆಯಲು ಸುರುಮಾಡಿದನು.

ಸತೀಶನು ಎಷ್ಟು ಹೊತ್ತಿನ ವರೆಗೆ ಬರೆಯುತ್ತಿದ್ದನೆಂಬದು ಗೊತ್ತಾಗುವದಿಲ್ಲ. ಆದರೆ ನಾವು ಅವನ ಕೋಣೆಯಲ್ಲಿ ರಾತ್ರಿಯೆಲ್ಲಾ ದೀಪವು ಉರಿಯುತ್ತಿದ್ದದ್ದನ್ನು ನೋಡಿದೆವು.

೫

ಹೊತ್ತಾರೆ ಎಂಟು ಘಂಟೆಗೆ ಸುರೇಶನು ಓದುತ್ತಿದ್ದನು. ಇಷ್ಟರಲ್ಲಿ ಸತೀಶನು ಅವನ ಕೋಣೆಯನ್ನು ಪ್ರವೇಶಿಸಿದನು. ಸುರೇಶನು ಪೆನ್ಸಿಲನ್ನು ಪುಸ್ತಕದ ಮಧ್ಯದಲ್ಲಿ ಮುಚ್ಚಿಬಿಟ್ಟು ಗುಡ್‌ಮಾರ್ನಿಂಗ ಸತೀಶ ಇಷ್ಟು ಹೊತ್ತಾರೆ ಏನು ?

ಸತೀಶನು ಸುರೇಶನ ಗುಡ್‌ಮಾರ್ನಿಂಗಿಗೆ ಉತ್ತರವನ್ನು ವನ್ನು ಕೊಡದೆ, ತನ್ನ ಅಭಿಪ್ರಾಯವನ್ನು ಹೇಳಲಿಚ್ಛಿಸಿದನು–ನಿನ್ನ ಅಸ್ತಾಚಲವು ನನಗೆ ಬಹಳ ಆನಂದವನ್ನು ಕೊಟ್ಟಿದೆ.

ಸುರೇಶನು ಹುಬ್ಬನ್ನು ಹುಬ್ಬಿಸುತ್ತಾ ಉತ್ತರವನ್ನು ಕೊಟ್ಟನು. ಏನು ಇದಕ್ಕಾಗಿಯೇ ನೀನು ಇಲ್ಲಿಗೆ ಬಂದಿದು . ಒಂದು ಸಲ, ಎರಡುಸಲ, ನಾಲ್ಕುಸಲ ಹೊಗಳಿಯೂ ನಿನಗೆ ಸಾಲಲಿಲ್ಲ. ಏನು ರಾತ್ರಿಯೆಲ್ಲಾ ಈ ವಿಷಯವನ್ನು ಯೋಚಿಸುತ್ತಿದ್ದಂತೆ ಕಂಡುಬರುತ್ತದೆ. ಕಣ್ಣುಗಳು ಕೆಂಬಣ್ಣವಾಗಿವೆ.

ಸತೀಶನಿಗೆ ಬಹಳ ನಾಚಿಕೆಯಾಯಿತು. ತಡೆಯುತ್ತಾ ತಡೆಯುತ್ತಾ ಹೇಳಿದನು.– ಅಂತಹದೇನು ಇಲ್ಲ. ನನ್ನ ಹೇಳಿಕೆಯ ಅಭಿಪ್ರಾಯವೇನಂದರೆ, ನಿನ್ನ ಅಸ್ತಾಚಲವು ಬಹಳ ಲಲಿತ, ಬಹಳ.................

ಸುರೇಶನು ಒಬ್ಬ ಪ್ರಖ್ಯಾತ ಲೇಖಕನೋ ಎಂಬಂತೆ ಸತೀಶನ ಈ ಪ್ರಶಂಸೆಯನ್ನು ನಿರರ್ಥಕವೆಂದು ತೋರ್ಪಡಿಸುವದಕ್ಕಾಗಿ ಹೇಳಿದನು– ಒಳ್ಳೇದು, ಸುಂದರವಾಗಿತ್ತು, ಲಲಿತವಾಗಿತ್ತು, ಸುಂದರವಾಗಿತ್ತು, ಮತ್ತೇನು ?

ಸತೀಶನು– ನಾನೂ ಒಂದು ಕತೆಯನ್ನು ಬರೆದಿದ್ದೇನೆ ಎಂದು ತಟ್ಟನೆ ಉತ್ತರವನ್ನು ಕೊಟ್ಟನು. ಸುರೇಶನು ಉತ್ಸಾಹದಿಂದ ಕೇಳಿದನು– ಎಲ್ಲಿದೆ ತೋರಿಸು.

ಆದರೆ ಒಂದು ಶರ್ತಿನಲ್ಲಿ, ಎಂದು ಸತೀಶನು ಜೇಬಿನಿಂದ ಕಾಗದವನ್ನು ತೆಗೆಯುತ್ತಾ ಹೇಳಿದನು.–ಓದಿದನಂತರ ನನ್ನನ್ನು ಹಾಸ್ಯ ಮಾಡಬೇಡ.

ಸುರೇಶನು ಸತೀಶನ ಹಸ್ತದಿಂದ ಕಾಗದವನ್ನು ಕಿತ್ತು ಬಿಟ್ಟನು. ವಾಹ್ವಾ! ಸೂರ್ಯೋದಯ ! ಅಸ್ತಾಚಲ ಮತ್ತು ಸೂರ್ಯೋದಯ ಇಬ್ಬರಿಗೂ ಜೋಡಿ. ಎಂದು ನುಡಿದನು.

ಸುರೇಶನು ಸತೀಶನ ಲೇಖನವನ್ನು ಓದಲು ತೊಡಗಿದನು. ಅದನ್ನೆಲ್ಲಾ ಸಾಂಗವಾಗಿ ಪೂರಯಿಸಿದ ನಂತರ "ಸತೀಶ, ವೆಲಡನ್ ಬಹಳ ಚನ್ನಾಗಿ ಬರೆದಿದ್ದಾನೆ. ಅದರಂತೆಯೇ ನೀನೂ ಬರೆಯಲಾರಂಭಿಸಿರುವೆ. ನಾನು ಇಂದೇ ಇದನ್ನು "ಶಶಿ"ಗೆ ಕಳುಹಿಸುತ್ತೇನೆ.

ಸುರೇಶನು ಸತೀಶನ ಲೇಖನವನ್ನು ಓದಿ ಬಹಳ ಪ್ರಸನ್ನತೆಯನ್ನು ಹೊಂದಿದನು. ಅವನು ಆ ಲೇಖನವನ್ನು ಆ ದಿನವೇ "ಶಶಿ"ಗೆ ಕಳುಹಿಸಿದನು.

ಆ ಲೇಖವು ಯಥಾಸಮಯದಲ್ಲಿ ಶಶಿಯಲ್ಲಿ ಪ್ರಕಟಿಸಲ್ಪಟ್ಟಿತು. ಆ ಅಂಕದ ಸಂಗಡಲೇ ಸತೀಶನಿಗೆ ಧನ್ಯವಾದಗಳನ್ನು ಅರ್ಪಿಸುತ್ತಾ, ಇನ್ನು ಬೇರೆ ಲೇಖನಗಳನ್ನು ಬರೆದು ಕಳುಹಿಸುವಂತೆ ಬರೆದಿದ್ದ "ಶಶಿ" ಸಂಪಾದಕರವರ ಪತ್ರವೂ ಬಂತು.

ಇದರಿಂದ ಸತೀಶನ ಉತ್ಸಾಹವೂ ಹೆಚ್ಚಿತು. ಅವನ ಲೇಖನಿಯು ಬಹಳ ಲಲಿತವಾದ ಸಾಹಿತ್ಯಗಳನ್ನು ಚಲ್ಲತೊಡಗಿತು.

೬

ಇತ್ತಲಾಗಿ ಸತೀಶನ ಉತ್ಸಾಹವು ಹಬ್ಬುತ್ತ ಹೋದಾಗಲೆಲ್ಲಾ, ಸುರೇಶನ ಪ್ರಸನ್ನತೆಯು ಕುಗ್ಗುತ್ತಾ ಬರುತ್ತಿತ್ತು. ಸತೀಶನು ತನ್ನ ಲೇಖನವನ್ನು ಸದಾ ಸುರೇಶನಿಗೆ ತೋರಿಸುತ್ತಿದ್ದನು. ಅದರ ನಂತರ ಅವನ ಸಮ್ಮತಿಯಂತೆ ಯಾವುದಾದರೂ ಮಾಸಿಕಪತ್ರಿಕೆಗೆ ಕಳುಹಿಸುತ್ತಿದ್ದನು. ಇಂದು ಸುರೇಶನು ಸತೀಶನ ಕತೆಯನ್ನು ನೋಡಲು ಹೇಸುತ್ತಿದ್ದನು. ಸತೀಶನ ಹಲವು ಕತೆಗಳು ಅವನ ಹತ್ತಿರ ಬಿದ್ದಿದ್ದವು. ಆದರೆ ಹಲವು ಸಪ್ತಾಹಗಳು ವ್ಯತೀತವಾದರೂ, ಅವನಿಂದ ಅವುಗಳನ್ನು ಓದಲಿಕ್ಕಾಗಲಿಲ್ಲ. ಯಾವಾಗಲಾದರೂ ಒಂದು ಲೇಖನವನ್ನು ನೋಡಿದರೂ ಅದರಲ್ಲಿ ಸಾವಿರಾರು ತಪ್ಪುಗಳನ್ನು ಕಂಡುಹಿಡಿಯುತ್ತಿದ್ದನು. "ಸತೀಶ ಇಂತಹ ದೊಡ್ಡ ತಪ್ಪುಗಳನ್ನು ಮಾಡಿ ಕನ್ನಡ ಸಾಹಿತ್ಯಕ್ಕೇಕೆ ಕಲಂಕವನ್ನು ಹಚ್ಚುವಿ. ಇದಕ್ಕಿಂತಲೂ ನೀನು ಬರೆಯದಿರುವುದೇ ಮೇಲು"

ಆದರೆ ಸತೀಶನು ನಿರುತ್ಸಾಹಿಯಾಗಲಿಲ್ಲ. ಅವನು ಸುರೇಶನಿಗೆ ತಿಳಿಸದೆಯೇ ಮಾಸಪತ್ರಿಕೆಗಳಲ್ಲಿ ಲೇಖನಗಳನ್ನು ಕಳುಹಿಸಲಾರಂಭಿಸಿದನು. ಅವನ ಕತೆಗಳು ನಿರಂತರವೂ ಪ್ರಕಟಿಸಲ್ಪಡುತ್ತಿದ್ದವು ಅವುಗಳಲ್ಲಿ ಒಂದಾದರೂ ವಾಪಸು ಮಾಡಲ್ಪಟ್ಟಿರಲಿಲ್ಲ.

ಸುರೇಶನು ಇದನ್ನು ಕೇಳಿ ಬಹಳ ಅಸಂತುಷ್ಟನಾದನು. ಈ ಹುಡುಗನಿಗೆಷ್ಟು ಸಾಹಸ ಇವನಿಗೆ ಚೆನ್ನಾಗಿ ಬುದ್ಧಿ ಕಲಿಸುವೆನು ಎಂದು ಹೇಳತೊಡಗಿದನು.

ಈಗ ಸುರೇಶನು ಕಾಲೇಜು ಮತ್ತು ಹೊಸ್ಟಲಿನಲ್ಲಿ ಸತೀಶನ ಲೇಖನಗಳನ್ನು ಕುರಿತು ನಿಂದಿಸತೊಡಗಿದನು. ಉಮೇಶನೆಂದೋ ತನ್ನ ಪದವಿಗೆ ಮೊದಲೇ ರಾಜಿನಾಮೆಯನ್ನು ಕೊಟ್ಟಿದ್ದನು. ಯಾವ ಸತೀಶನ ಕಾರಣದಿಂದ ಉಮೇಶನ ಸಂಗಡ ಮಾತಾಡುತ್ತಿರಲಿಲ್ಲವೋ, ಅದೇ ಉಮೇಶನ ಸಂಗಡ ಸುರೇಶನು ಸತೀಶನ ಕತೆಗಳನ್ನು, ಅವನ ಸ್ವಭಾವವನ್ನು ಮತ್ತು ಅವನ ವ್ಯಕ್ತಿತ್ವವನ್ನು ಕುರಿತು ಹಳಿಯಲಾರಂಭಿಸಿದನು.

ಒಂದು ದಿನ ಪ್ರಾತಃಕಾಲ ಸತೀಶನು ಬಹಳ ಆಗ್ರಹಮಾಡಿ ತನ್ನದೊಂದು ಕತೆಯನ್ನು ಓದಿದನು. ಸುರೇಶನು ಕಿವಿಗೊಟ್ಟು ಕೇಳಿದನು. ಆ ಕತೆಯು ಅತ್ಯುತ್ತಮವಾಗಿತ್ತು. ಈ ಸಲ ಸುರೇಶನಿಂದ ಸಹಿಸಲಾಗಲಿಲ್ಲ. ಸತೀಶನ ಕತೆಯಲ್ಲಿ ವಿವಿಧವಾದ ತಪ್ಪುಗಳನ್ನು ಕಂಡುಹಿಡಿಯಲು ಪ್ರಯತ್ನಿಸಿದನು. ಅನಂತರ–ಇದನ್ನು ಎಲ್ಲಿಗೆ ಕಳುಹಿಸಲು ನಿಶ್ಚಯಿಸಿರುವೆ ಎಂದು ಕೇಳಿದನು.

ನೀನು ಎಲ್ಲಿಗೆ ಹೇಳುವೆಯೋ, ಅಲ್ಲಿಗೆ ಎಂದು ಸತೀಶನು ದೀನಭಾವದಿಂದ ಉತ್ತರವನ್ನು ಕೊಟ್ಟನು. ಸುರೇಶನು ಗದರಿಸಿಕೊಂಡು– ನೀನೆಲ್ಲಿಗೆ ಕಳುಹಿಸಲು ಕೋರಿರುತ್ತಿ ಎಂದು ಪ್ರಶ್ನೆಮಾಡಿದನು. "ನನ್ನದು..." ಸತೀಶನು ಹೆದರುತ್ತ ಉತ್ತರವನ್ನು ಕೊಟ್ಟನು. "ನಾನು ಉನ್ನತಿಗೆ ಕಳುಹಿಸುವ ವಿಚಾರವನ್ನು ಮಾಡಿದ್ದೇನೆ"

ಉನ್ನತಿಯು ಆ ಸಮಯದ ಸರ್ವಶ್ರೇಷ್ಠವಾದ ಮಾಸಪತ್ರಿಕೆಯಾಗಿತ್ತು. ನಿಶ್ಚಯವಾಗಿಯೂ ಕಳುಹಿಸು. ಚನ್ನಾಗಿ ಪ್ರಕಟವಾದೀತು ಉನ್ನತಿಯಲ್ಲಿ ಎಂದು ಸುರೇಶನು ವ್ಯಂಗದಿಂದ ನುಡಿದನು.

ಹಾಗಾದರೆ ನಾನು ಇನ್ನೆಲ್ಲಿಗೆ ಕಳುಹಿಸಲಿ ಎಂದು ದುಃಖಪೂರ್ಣವಾದ ಸ್ವರದಿಂದ ಕೇಳಿದನು. ಏನು ? ಇದೊಂದು ಲೇಖನವೇ ! ಇದರಲ್ಲಿ ಚಿತ್ರಶಕ್ತಿಯಿಲ್ಲ. ಮಾನಸಿಕ ಮನೋ

ಭಾವಗಳ ಶುದ್ಧ ವರ್ಣನೆಗಳಿಲ್ಲ. ಯಾವುದಾದರೂ ವಾರಪತ್ರಿಕೆಗೆ ಕಳುಹಿಸಿ ಎಂದು ಸುರೇಶನು ಹೇಳಿದನು.

ಸತೀಶನು ದುಃಖಿತನಾಗಿ ಹೊರಟುಹೋದನು.

ಕಾಲೇಜಿಗೆ ಹೋಗಲಿಕ್ಕೆ ಇನ್ನು ಎರಡೇ ಘಂಟೆಗಳು ಉಳಿದಿದ್ದವು. ಸುರೇಶನಿಂದ ಒಂದಿಷ್ಟಾದೂ ಓದಲಾಗಲಿಲ್ಲ. ಅವನು ಸತೀಶನ ಲೇಖನವನ್ನು ಪ್ರಕಟಿಸಲು ಬಯಸುತ್ತಿರಲಿಲ್ಲ. ಇದನ್ನು ಪ್ರಕಟಿಸಿದ ಕೂಡಲೇ ಸತೀಶನ ನಾಮವು ಸಾಹಿತ್ಯಾಕಾಶದಲ್ಲಿ ಜಾಜ್ವಲ್ಯಮಾನವಾದೀತೆಂಬ ನಿಶ್ಚಯವಿತ್ತು. ಅವನು ಬಹಳ ಹೊತ್ತಿನ ವರೆಗೆ ನಿಶ್ಚಯಮಾಡಿ, ಕಟ್ಟಕಡೆಗೆ ಒಂದು ನೀಚವಾದ ಉಪಾಯವನ್ನು ಅವಲಂಬಿಸಲು ನಿಶ್ಚಯಿಸಿದನು.

ಆ ಉಪಾಯವೇನು ?

ಸುರೇಶನು ಆ ದಿನ ಹೋಸ್ಟೆಲಿನಲ್ಲಿಯೇ ಇದ್ದನು. ಕಾಲೇಜಿಗೆ ಹೋಗಲಿಲ್ಲ.

೭

ಎರಡು ತಾಸು ಹೊಡೆದಿತ್ತು. ಎಲ್ಲಾ ವಿದ್ಯಾರ್ಥಿಗಳು ಕಾಲೇಜಿನಲ್ಲಿ ಪಠಿಸುತ್ತಿದ್ದರು. ಈ ಸಮಯದಲ್ಲಿ ಮೆಲ್ಲಗೆ ಸುರೇಶನು ತನ್ನ ಕೋಣೆಯಿಂದ ಹೊರಗೆ ಹೊರಟನು. ಅವನ ಬೀಗದ ಕೈಯಿಂದ ಸತೀಶನ ಕೋಣೆಯ ಬೀಗವು ತೆರೆಯಲ್ಪಡುತ್ತಿತ್ತು. ಅವನು ತೀಕ್ಷ್ಣ ದೃಷ್ಟಿಯಿಂದ ಹೊಸ್ಟಲಿನ ನಾಲ್ಕು ಕಡೆಗಳನ್ನು ನೋಡಿದನು. ಮತ್ತು ಬೀಗವನ್ನು ತೆರೆದು ಸತೀಶನ ಕೋಣೆಗೆ ನುಗ್ಗಿದನು.

ಅವನು ಮೇಜಿನ ಮೇಲೆಯೇ ತನ್ನ ಇಚ್ಛಿತವಾದ ವಸ್ತುವನ್ನು ಕಂಡನು. ಕಂಪಿತಹಸ್ತದಿಂದ ಅವನು ಸತೀಶನ ಲೇಖನವನ್ನೆತ್ತಿದನು. ಅನಂತರ ತನ್ನ ಕೋಣೆಗೆ ಬೇಗನೆ ಹಿಂತಿರುಗಿದನು. ಸುರೇಶನು ಒಳಗಿನಿಂದ ಬಾಗಿಲನ್ನು ಮುಚ್ಚಿಬಿಟ್ಟು ಆಯಾಸದಿಂದ ಕುರ್ಚಿಯ ಮೇಲೆ ಕುಳಿತನು. ಸತೀಶನ ಕತೆಯನ್ನೆತ್ತಿಕೊಂಡು ಸ್ವಲ್ಪ ಹೊತ್ತಿನ ವರೆಗೆ ಏನನ್ನೋ ಯೋಚಿಸಿಕೊಂಡು ಬೆಂಕಿಕಡ್ಡಿಯನ್ನು ಹೊತ್ತಿಸಿದನು. ಮತ್ತು ಆ ಲೇಖನದ ಮೇಲೆ ತಗಲಿಸಿದನು. ಸ್ವಲ್ಪ ಹೊತ್ತಾದ ಮೇಲೆ ಆ ಲೇಖನವು ಒಂದು ಬೂದಿಯ ಗುಡ್ಡೆಯಾಯಿತು.

ಸುರೇಶನು ನಿರ್ನಿಮೇಷವಾದ ದೃಷ್ಟಿಯಿಂದ ಬೂದಿಯಾಗಿದ್ದ ಕಾಗದಗಳನ್ನು ನೋಡತೊಡಗಿದನು. ಸಿಟ್ಟಿನಿಂದ ತನ್ನ ಗೆಳೆಯನನ್ನು ಮುರಿಯುವ ಮಗುವಿನೋಪಾದಿಯಲ್ಲಿ, ಅವನ ಹೃದಯದಲ್ಲಿ ಭಾವನೆಗಳು ಅಚ್ಚಾಗಿದ್ದವು. ಅವನು ಒಂದು ನಿಧಾನವಾದ ಪಶ್ಚಾತ್ತಾಪವನ್ನನುಭವಿಸುತ್ತಿದ್ದನು. ಕಾರಣ,

ಅವನು ಈ ಪ್ರಕಾರವಾಗಿ ಕಂಣುಗಳನ್ನು ತೆರೆದು ಕುಳಿತಿದ್ದನು; ಬಹಳ ಹೊತ್ತಾಯಿತು. ಅವನ ಕಂಣುಗಳಿಂದ ಅಶ್ರುಗಳಮಾಲೆಯು ಹೊರಡಲು ಶುರುವಾಯಿತು. ಅವನು ತನ್ನ ನಿರ್ಮಲಹೃದಯದ ಮಿತ್ರನ ಅಮೂಲ್ಯ ಪರಿಶ್ರಮವನ್ನು ನಷ್ಟಮಾಡಿದುದಕ್ಕೆ ತನ್ನ ಮೂರ್ಖತೆಯನ್ನು ಕುರಿತು ಧಿಕ್ಕಾರ ಮಾಡತೊಡಗಿದನು.

ಕಟುಕ ಲೇಖಕನು ಈಗ ಮನುಷ್ಯತ್ವಕ್ಕೆ ತಲಿಪಿದ್ದನು.

ಸುರೇಶನು ಗಡಿಯಾರವನ್ನು ನೋಡಿದನು. ನಾಲ್ಕು ಹೊಡೆದಿತ್ತು. ಅವನು ತನ್ನ ರೇಶ್ಮೆಯ ಕೈವಸ್ತ್ರದಲ್ಲಿ ಸತೀಶನ ಬೂದಿಯಾಗಿದ್ದ ಲೇಖನವನ್ನು ಯಾವ ಪ್ರಕಾರ ಪ್ರೇಮಿಯು ತನ್ನ ಪ್ರೇಮಿಕೆಯ ಮೂಳೆಯನ್ನು ಕಟ್ಟುವನೋ, ಹಾಗೆಯೇ ಆ ವಸ್ತ್ರವನ್ನು ಬೂದಿಯಿಂದ ತುಂಬಿಸಿದನು. ಅನಂತರ ಅದನ್ನು ಗಂಟುಕಟ್ಟಿ ಎತ್ತಿಕೊಂಡು ಸತೀಶನ ಕೋಣೆಯ ಕಡೆಗೆ ಹೊರಟನು.

ಸತೀಶನು ತಲೆಗೆ ಕೈಯನ್ನು ಕೊಟ್ಟು ಕುಳಿತಿದ್ದನು. ಲೇಖನಿಯು ಅವನ ಕೈಯಲ್ಲಿತ್ತು; ಮತ್ತು ಅವನ ಮುಂದೆ ಒಂದು ಕಾಗದವು ಇಡಲ್ಪಟ್ಟಿದ್ದಿತು. ಸುರೇಶನು ಅವನ ಹೆಗಲಿನ ಮೇಲೆ ಕೈಯನ್ನಿಟ್ಟು " ಸತೀಶ " ಎಂದು ಕರೆದನು.

ಸತೀಶನು ಸುರೇಶನ ಕಡೆಗೆ ನೋಡಿದನು. ಸುರೇಶನು—ಪ್ರಿಯ ಮಿತ್ರ, ನನ್ನನ್ನು ಕ್ಷಮಿಸು ಎಂದ್ಹೇಳಿದನು. ಏಕೆ ಎಂದು ಸತೀಶನು ಆಶ್ಚರ್ಯಾನ್ವಿತವಾದ ಕಂಠದಿಂದ ಕೇಳಿದನು.

ಆ ಬೂದಿಯ ಗಂಟನ್ನು ಮೇಜಿನ ಮೇಲಿಟ್ಟು—ನಾನು ನಿನ್ನ ಲೇಖನವನ್ನು ಸುಟ್ಟುಬಿಟ್ಟೆನು. ಅದು ಇದರಲ್ಲಿ ತುಂಬಿದೆ ಎಂದು ಗದ್ಗದಸ್ವರದಿಂದ ಉತ್ತರವನ್ನು ಕೊಟ್ಟನು. ಸತೀಶನು ಗಟ್ಟಿಯಾಗಿ ನಕ್ಕುಬಿಟ್ಟನು. ' ಅದು ಉನ್ನತಿಯ ಹತ್ತಿರಕ್ಕೆ ಹೋಯಿತು. ಇದು ಅದರದೊಂದು ಪ್ರತಿಯು. '

ಸುರೇಶನ ಆನಂದಕ್ಕೆ ಮೇರೆಯೇ ಇಲ್ಲದಾಯಿತು. ಅವನು ಸುಮ್ಮನಿದ್ದನು. ಸತೀಶನು ಗಟ್ಟಿಯಾಗಿ ನಕ್ಕು ಹೇಳಿದನು. ಹೆ ಮಿತ್ರದ್ರೋಹಿ ಸುರೇಶ ! ನಿನಗೆ ನಾನು ಈ ವಿಶ್ವಾಸಘಾತಕ್ಕೆ ಈ ಶಿಕ್ಷೆಯನ್ನು ವಿಧಿಸುತ್ತೇನೆ. ಸುರೇಶನು ನೋಡಿದನು. ಸತೀಶನು ತಾನು ಬರೆಯಲಾರಂಭಿಸಿದ್ದ ಕತೆಗೆ " ಬೂದಿಯ ಗಂಟು " ಎಂಬ ನಾಮವನ್ನಿಟ್ಟಿದ್ದನು.

ಇಬ್ಬರು ಮಿತ್ರರು ನಗಲು ಸುರುಮಾಡಿದರು. ಮತ್ತು ತಮ್ಮ ಗೂಢವಾದ ಪವಿತ್ರ ಸ್ನೇಹಾಲಿಂಗನದಲ್ಲಿ ತಲ್ಲೀನರಾದರು.

# ಗ್ರೀಕರಲ್ಲಿ ಸಾಮೂಹಿಕ ಸ್ವಾತಂತ್ರ್ಯವೂ ವ್ಯಕ್ತಿಸ್ವಾತಂತ್ರ್ಯವೂ

ಲೇಖಕರು — ಶ್ರೀ. ನಾರಾಯಣಶರ್ಮಾ, ಬೆಳಗಾವಿ

ಸ್ವಾತಂತ್ರ್ಯವೆಂಬುವ ತೇಜವಾಗಲಿ, ಮಿಂಚಾಗಲಿ, ಯಾವದೊಂದು ಜನಾಂಗದಲ್ಲಿದ್ದರೆ ಆಯಿತು. ಆ ಜನಾಂಗವು ಎಷ್ಟೇ ಚಿಕ್ಕದಿರಲಿ, ಅದರ ಮೈಗೆ ಕೈಹಚ್ಚುವ ಎದೆಗಾರಿಕೆಯು ನಾನಾ ಎಂದೆನ್ನುವ ಸಾರ್ವಭೌಮರಿಗೂ ಆಗದು; ಗ್ರೀಸ ಇತಿಹಾಸದೊಳಗಿನ ಬಹು ಬಿಕ್ಕಟ್ಟಿನ ಪ್ರಸಂಗವೆಂದರೆ, ಇರಾಣದ ಬಾದಶಹನೊಡನೆ ಬಹುಕಾಲದವರೆಗೆ ನಡೆದ ಸ್ವಾತಂತ್ರ್ಯಯುದ್ಧವು; ಗ್ರೀಸದಂಥ ಅತಿಚಿಕ್ಕ ಜನಾಂಗದವರು ಬಲಾಢ್ಯವಾದ ಇರಾಣ ಬಾದಶಹನೊಡನೆ ಹೋರಾಡಿ ಕೊನೆಗೆ ಅವನನ್ನೇ ಮಣ್ಣು ಮುಕ್ಕಲಿಕ್ಕೆ ಹಚ್ಚಿದ ಉದಾಹರಣೆಯು ಇಂದಿಗೂ ಚರಿತ್ರೆಯಲ್ಲಿ ಅಪೂರ್ವವೇ ಸೈ. ಹಿರೋಡೋಟಸನು ವರ್ಣಿಸಿರುವಂತೆ, ಈ ಸಂದರ್ಭದೊಳಗೆ ಜ್ಞಾಪಕವಿಡತಕ್ಕ ಸಂಗತಿಯೆಂದರೆ, ಈ ತುಮುಲ ಸಂಗರದೊಳಗೆ ಅಥೇನ್ಸದವರು ತಮ್ಮ ಮೈಯೊಳಗಿರುವ ಜಿಗಟನ್ನು ತೋರ್ಪಡಿಸಿದ್ದು. "ಅಥೀನಿಯುನರಿಗೆ ಈ ಅಸಾಧ್ಯವಾದ ಸಂಗ್ರಾಮದೊಳಗೆ ಗೆಲುವಾದದ್ದು ಭಗವದನುಗ್ರಹವಂತೂ ನಿಜವೇ! ಆದರೆ, ಈ ಗೆಲುವಿಗೆ ದೇವರ ಅನುಗ್ರಹದ ತರುವಾಯ ಸಾಧಕವಾದಂಥ ಯಾವುದೊಂದು ಕಾರಣವಿದ್ದರೆ ಅದು ಅಥೀನಿಯನ್ನರ ಮೈಯಲ್ಲಿರುವ ಮುಂದಾಳುತನವೇ!" ಎಂದು ಒಂದೆಡೆಯಲ್ಲಿ ಹೆರೋಡೋಟಸನು ಮನಸು ಬಿಚ್ಚಿ ಒಪ್ಪಿಕೊಂಡಿರುವನು. ಇರಾಣದ ಅರಸನೊಡನೆ ಹೋರಾಡಿ ಗೆದ್ದದರಿಂದಲೇ ಆನಂದ ಹಾಗು ಅಭಿಮಾನಸೂಚಕವೆಂದು ಮುಂದೆ ಅಥೀನಿಯದ ರಾಜತಂತ್ರಧುರೀಣನಾದ ಅರಿಸ್ಟಾಯಡೀಜನು 'ಪ್ಲಾಟಯಾ' ಎಂಬಲ್ಲಿ ಪ್ರತಿವಾರ್ಷಿಕ ಮಲ್ಲಾಟದ ಜೂಜಿನ ಸಂಭ್ರಮವನ್ನು ನಡೆಯಿಸಿದನು. ಗ್ರೀಕರ ಈ ಸ್ವಾತಂತ್ರ್ಯಕಲ್ಪನೆಯು ಬರುಬರುತ್ತ ಎಷ್ಟು ವಿಕಾಸಗೊಂಡು ಸರ್ವಾಂಗಸುಂದರವಾಗಿ ಮೆರೆಯುತ್ತಿತ್ತೆಂಬುದು ಅರಿಸ್ಟಾಟಲ್ಲನ ಅಭಿಮಾನೋಕ್ತಿಯಿಂದ ಹೊಳೆಯುವಂತಿದೆ. ಅವನು ಒಂದು ಕಡೆಯಲ್ಲಿ ಗ್ರೀಕರ ಸ್ವಾತಂತ್ರ್ಯ ಸವಿಯು ಎಷ್ಟು ಬಲವಾಗಿತ್ತೆಂಬುದನ್ನು ಹೇಳುವಾಗ್ಗೆ, "ದಾಸ್ಯವೆಂಬುದು ಪರದೇಶದ ಗುಡ್ಡಗಾಡು ಜನರಿಗೋಸ್ಕರ ಇರುವದೇ ಹೊರ್ತು ಗ್ರೀಕರಿಗೆ ಅದು ಸೋಂಕ"ದೆಂದು ಹೇಳಿದ್ದರ ಮೇಲಿಂದ ಸ್ಪಷ್ಟವಾಗುತ್ತಿದೆ; ಇದಾದಮೇಲೆ ಕೆಲ ದಿವಸಗಳ ನಂತರ, ಗ್ರೀಕರ ಸ್ವಾತಂತ್ರ್ಯವನ್ನು ಮುಳಗಿಸುವ ಪೆಲೊಪೋನೆಸಿಯುವ ಅಂತಃಕಲಹದೊಳಗೂ ಅಥೆನ್ಸದ ರಕ್ಷಣೆಗಾಗಿ ಗ್ರೀಕರೆಷ್ಟು ಹೆಣಗಿ ಹೆಣಾದರೋ ಅಷ್ಟು ಯಾರೂ ಕಷ್ಟಪಡಲಿಲ್ಲ. ಮ್ಯಾಸಿಡೋನಿಯಾದವರ ಆಳಿಕೆಗೆ ಎದುರಾಗಿ ಕ್ಷಣಹೊತ್ತಾದರೂ ಸಡ್ಡುಹೊಡೆದು ನಿಂತು ಅವರ ಮೈನೀರು ಇಳಿಸಿಬಿಡಿರೆಂದು ಬರಿಯ ಮಾತಿನ ಮಾಟದಿಂದಲೇ ಎಲ್ಲರಿಗೆ ಹುಚ್ಚು ಹಿಡಿಸಿದ ಡಿಮಾಸ್ಥೆನಿಸನ ಮಾತುಗಾರಿಕೆಗೂ ಅಥೀನಿಯುನರ ಸ್ವಾತಂತ್ರ್ಯ ಧ್ಯೇಯವೇ ಜನ್ಮ ಕೊಟ್ಟಿತು. ಬರಿಯ ಜೀವದಿಂದಿರಲಿಕ್ಕೆ ಏನಾದರೂ ದುಡಿದು ಗಳಿಸುವದಷ್ಟೇ ಮನುಷ್ಯ ಪ್ರಾಣಿಯ ಜೀವಮಾನದ ಸಾಧ್ಯವೆಂದು ತಿಳಿಯುವಷ್ಟು ಅಥೀನಿಯನ್ನರ ಬಾಳ್ವೆಯು ನಾಯಿಯ ಬಾಳ್ವೆಯಾಗಿರಲಿಲ್ಲ; ಮನುಷ್ಯನ ಬಾಳ್ವೆಯನ್ನು ಮೇಲ್ಮೆಗೊಯ್ಯಲಿಕ್ಕೆ ಸಾಧಕವಾಗಿರುವಂಥ ಪ್ರತಿಯೊಂದು ಕಾರ್ಯವನ್ನು ಅತ್ಯಂತ ಆಸ್ಥೆಯಿಂದಲೂ ಅಭಿಮಾನದಿಂದಲೂ ಮಾಡಿ ಅದನ್ನು ಪಡೆದು ಧನ್ಯರಾದರು.

ಚೇಟು ಹೊಟ್ಟೆಯ ಪಾಡಿಗಾಗಿ ಬಾಳುವದೆಂದರೆ, ಸಾವಿಗೂ ಕಡೆಯೆಂದು ಮನಸಿಗೆ ಮನದಟ್ಟಿದ್ದರಿಂದ ಮನುಷ್ಯನ ಜೀವಮಾನವನ್ನು ಸಾರ್ಥಕಪಡಿಸಲಿಕ್ಕೆ ಅವಶ್ಯವಿರುವ ಸೌಂದರ್ಯ, ಶ್ರೇಷ್ಠತ್ವಾದಿ ಗುಣಗಳೇ ಕಾರಣವೆಂದರಿತು, ಅವುಗಳನ್ನು ಬೆಳಿಸಲಿಕ್ಕೆ ಅವರು ವಿದ್ಯೆ, ಕಲಾಕೌಶಲ್ಯಾದಿಗಳಿಗೇ ವಿಶೇಷವಾಗಿ ತಮ್ಮ ಮನಸು ನೀಡಿಕೊಂಡರು. ಅರ್ಥಾತ್ ಮನುಷ್ಯನ ಪ್ರಯತ್ನದಿಂದ ಕೈವಶವಾಗುವ ಪ್ರತಿಯೊಂದು ಸಾಧ್ಯ ವಸ್ತುವನ್ನು ಅಥೀನಿಯನ್ನರು ತಮ್ಮ ಗುಣವಿಕಾಸಬಲದಿಂದ ಪಡೆದರೆನ್ನಲಿಕ್ಕೇನೂ ಪ್ರತಿಬಂಧವಿಲ್ಲ. ಇದರಿಂದ ನಾಗರೀಕತೆಯು ವೈಭವಶಾಲಿಯಾದ ಶಿಖರಕ್ಕೇರಬೇಕೆಂದು ಹೆಣಗಾಡುವ ಜನಾಂಗದವರಿಗೆ ಅಥೇನ್ಸದ ಸ್ಫೂರ್ತಿದಾಯಕವಾದ ಚರಿತ್ರೆಯು ದೀಪಗಂಬದಂತೆ ಮಾರ್ಗದರ್ಶಕ

ನಾಗುವದರಲ್ಲೇನು ಸೋಜಿಗ! ಯಾವುದೊಂದು ರಾಷ್ಟ್ರವು ಆಯಾಯ ಜನಾಂಗದೊಳಗಿನ ಜನರ ಶೀಲ, ಧೈರ್ಯ, ಆತ್ಮತ್ಯಾಗ, ದೇಶಭಾಷೆಯ ಬಗ್ಗೆ ಸಾತ್ವಿಕ ಅಭಿಮಾನ, ಮೊದಲಾದವುಗಳ ಸಮ್ಮತಿಯಿಂದಲೇ ಜೀವಂತವಾಗಿರುವದು.

೨

ರಾಜನೀತಿಯ ದೃಷ್ಟಿಯಿಂದ ಅಥೇನ್ಸದವರ ಹೆಸರು ಇತಿಹಾಸದೊಳಗೆ ಚಿರಕಾಲ ಬಾಳುವಂಥ ಕಾರ್ಯವಿಶೇಷಗಳೇನಾದರೂ ಇದ್ದರೆ, ಮೊದಲಿನ ಅರಸರ ಕ್ರೂರ ಹಾಗೂ ಬಲುಮೆಯ ಆಳಿಕೆಯನ್ನೂ, ಅಲ್ಪಸಂಖ್ಯಾಕರ ಉರವಣಿಗೆಯನ್ನೂ ನಿರ್ನಾಮಗೊಳಿಸಿ, ಅದಕ್ಕೆ ಬದಲಾಗಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದ್ದೇ! ಇಷ್ಟಾದರೂ ಅಥೇನ್ಸದವರಿಂದ ಮುಂದೆ ಪ್ರಜಾಧಿಪತ್ಯದ ಶಾಸನಸಂಸ್ಥೆಗಳನ್ನು ಬಹುಕಾಲ ಬಾಳುವಂಥ ಸಂಸ್ಥೆಗಳನ್ನಾಗಿ ಮಾಡುವದು ಬಹು ಕಷ್ಟಸಾಧ್ಯವಾಯಿತು; ಅದರೂ ಈ ಕಾರ್ಯವೆಂದರೆ, ಹೊಸದೂ, ಹಳೇ ಪರಂಪರೆಗೆ ವಿರುದ್ಧವೂ ಆಗುವದರಿಂದ ಅದು ಕೊನೆಯ ವರೆಗೂ ಅವರ ಹಿತಕ್ಕೆ ಸಾಧಕವಾಗದೆ, ಹಾಗೇ ಉಳಿದು ತಿರಿಗಿ ಇದ್ದುದನ್ನೆಲ್ಲ ಕಳೆದುಕೊಂಡು ಕುಳ್ಳಿರಬೇಕಾಯಿತೆಂಬುದು ನಿಜವಿದ್ದರೂ, ಗ್ರೀಕರು ಎಡವಿಬಿದ್ದುದೇ ಆಧುನಿಕ ಯುರೋಪಿಯ ಜನಾಂಗದವರಿಗೆ ಜಾಗರೂಕತೆಯಿಂದ ಹೆಜ್ಜೆಯಿಡಲು ಎಚ್ಚರಿಕೆಕೊಟ್ಟಂತಾಗಿವೆಂಬದನ್ನು ಮರೆಯಲಾಗದು. ವ್ಯಕ್ತಿಸ್ವಾತಂತ್ರ್ಯದ ಮಬ್ಬಿಗೆ ಬಿದ್ದು ಅದರ ಬಲದಿಂದಲೇ ಶಾಸನಸಂಸ್ಥೆಗಳನ್ನು ಹೊರಡಿಸಿದ್ದರಿಂದ ಅವರ ಹಾಡು ಏನಾಯಿತೆಂಬುದು ಈಗಿನ ಜನಾಂಗದವರಿಗೆ ಬುದ್ಧಿಕಲಿಸಲಿಕ್ಕೆ ದೊಡ್ಡ ಸಾಧನವಾಗಿದೆ; ರಾಜನೀತಿಯೊಳಗಿನದೊಂದು ವಿಶೇಷ ಲಕ್ಷಣವೇನಂದರೆ, ತನಗೆ ಸರಿದೋರುವ ಮತ್ತು ಇನ್ನೂ ಮನಗಾಣದಿರುವ ಹಲವು ನಾಗರಿಕತೆಯ ಪ್ರಯೋಗಗಳನ್ನು ಆಯಾ ಜನಾಂಗದವರು ಮೊದಲು ತಮ್ಮ ಅನುಭವಕ್ಕೆ ತಂದುಕೊಳ್ಳಬೇಕಾಗುತ್ತ; ಅಂದರೆ ಒಂದು ವೇಳೆ ಈ ರಾಜಕೀಯ ಸುಧಾರಣೆಗಳನ್ನು ಹುಡುಕಿದವರಿಗೆ ಆ ಸುಧಾರಣೆಯ ಸವಿಯಾದ ಹಣ್ಣುಗಳನ್ನು ಸವಿಯುವ ಭಾಗ್ಯವು ಅದೃಷ್ಟದಲ್ಲಿ ಬರೆಯದಿದ್ದರೂ, ಅದರಿಂದ ಮುಂದಿನವರಿಗೆ ಖಂಡಿತವಾಗಿಯೂ ಮಾರ್ಗದರ್ಶಕವಾಗಿಯೇ ತೀರುವದೆಂಬುದು ಯಾರಾದರೂ ಒಪ್ಪುವಂಥ ಮಾತಾಗಿದೆ, ಅಥೆನ ದವರ ಹಾಡಾದರೂ ಹೀಗೇ ಆಯಿತು,

ಪ್ರತಿಯೊಬ್ಬರೂ ತನಗೆ ಸಂಬಂಧಪಟ್ಟ ಕಾರ್ಯಭಾರವನ್ನು ತಾನೇ ನೀಗಿಸಿಕೊಳ್ಳಬೇಕೇಹೊರ್ತು, ಅದರಲ್ಲಿ ತಲೆಹಾಕಲಿಕ್ಕೆ ಇನ್ನೊಬ್ಬನಿಗೆ ಬಾಧ್ಯತೆಯಿಲ್ಲವೆಂಬುದೊಂದು ವ್ಯಕ್ತಿಸ್ವಾತಂತ್ರ್ಯದ ವಿಷಯವಾಗಿ ಅಥೀನಿಯರ ನಿಯಮವೇ ಆಗಿದ್ದಿತು; ವ್ಯಕ್ತಿಗೆ ಸಂಬಂಧಿಸಿದ ಯಾವದೊಂದು ವ್ಯವಹಾರದೊಳಗೆ ಸರಕಾರದವರಾಗಲಿ, ಜಾತಿಮತದವರಾಗಲಿ, ಕೈಹಾಕುವದು ಅಥೀನಿಯನರಿಗೆ ಸೇರಿಬರುತ್ತಿರಲಿಲ್ಲ; ವಸ್ತುತಃ ತತ್ಕಾಲೀನ ಅರಸರು, ಅಲ್ಪಸಂಖ್ಯಾಕರಾದ ಅಧಿಕಾರಿಗಳು ಸುಮ್ಮನಿರದೆ, ಇಲ್ಲದ ಕೀಟಲೆತೆಗೆದು ಜನರ ವ್ಯವಹಾರದೊಳಗೆ ತಮ್ಮ ಕೈಯೊಂದನ್ನು ಸೇರಿಸಿಕ್ಕೊಂಡೇ ಹೊಂಚುಹಾಕಿಕೊಂಡು ಕುಳ್ಳಿರುತ್ತಿದ್ದರು; ಈ ಕ್ರಮವು ಅಥೀನಿಯರಿಗೆ ಅಸಹ್ಯವಾಗಿ ಪ್ರತಿಯೊಬ್ಬನಿಗೆ ಅವರವರ ಮನಸಿಗೆ ಬಂದಂತೆ ಕೆಲಸ ನಡೆಸುವ ಹಕ್ಕು ದೊರೆಯಲಿಕ್ಕೆ ಏನು ಉಪಾಯ ಯೋಚಿಸಬೇಕೆಂದು ಬಹು ದಿವಸಗಳ ವರೆಗೆ ಯೋಚನೆ ನಡೆದು ಕೊನೆಗೆ **ಸಾರ್ವಜನಿಕ ಕಾರ್ಯಭಾರದೊಳಗೆ ಪ್ರತಿಯೊಬ್ಬರ ಕೈ ಇರಲಿಕ್ಕಬೇಕು;** ಪ್ರತಿಯೊಬ್ಬನ ಕಾರ್ಯದೊಳಗೆ ಇನ್ನೊಬ್ಬನಿಗೆ ಸೇರಗೊಡದಿದ್ದರೂ ಇಲ್ಲ; ಸಾರ್ವಜನಿಕ ಕಾರ್ಯಭಾರದೊಳಗೆ ಪ್ರತಿಯೊಬ್ಬನು ತಲೆಹಾಕಲಿಕ್ಕೇಬೇಕೆಂದರು; ಯಾಕಂದರೆ, ಬಲ್ಲಂಥ ಹಾಗೂ ವ್ಯವಹಾರದೊಳಗೆ ನುರಿತಂಥ ಪ್ರತಿಯೊಬ್ಬ ಮನುಷ್ಯನು ಯಾವಾಗಲೂ ಅನ್ಯರ ಹೇಳಿಕೆಯಂತೆ ನಡೆದು ಬಾಳ್ವೆಮಾಡುವದೆಂದರೆ ಅನಿಷ್ಟವಾದ ಕೆಲಸವೇ! ಒಂದೊಂದು ವೇಳೆ ತಾನು ಕೈಕೊಂಡ ಕಾರ್ಯದೊಳಗೆ ತನ್ನ ನಷ್ಟವಾಗುತ್ತಿದ್ದರೂ ಅಡ್ಡಿಯಿಲ್ಲ: ಪರರ ಒಪ್ಪಿಗಿಂತ ತನ್ನ ತಪ್ಪೇ ಲೇಸೆಂದು ತಿಳಿದು ಅವನು ನಡೆಯುತ್ತಿರುತ್ತಾನೆ; ಮತ್ತು ತನ್ನ ತಪ್ಪುತಿಳುವಳಿಕೆಗಾಗಿ ಆಗುವ ತಪ್ಪುದಂಡವನ್ನು ಅನುಭವಿಸಲಿಕ್ಕೆ ಸಿದ್ಧನೇ ಇರುತ್ತಾನೆ; ಹೀಗೆ ದಿನದ ವ್ಯವಹಾರದೊಳಗೆ ಮನುಷ್ಯನ ಅನುಭವವಿದ್ದರೂ ಇದೊಂದೇ ಭಾವನೆಗೆ ಬಲಿಬಿದ್ದೇ ಜನರು ಸಹಸಾ ಒಬ್ಬರಾಳಿಕೆಯು ಬೇಡೆಂದೆನ್ನುವದಿಲ್ಲ; ಆದರೆ ಒಬ್ಬರಾಳಿಕೆ, ಅಥವಾ ಅಲ್ಪಸಂಖ್ಯಾಕರ ಆಳಿಕೆಗಿಂತ ಬಹುಸಂಖ್ಯಾಕರಾಳಿಕೆಯೇ ವ್ಯಕ್ತಿಯ ಹಾಗೂ ಸಮಾಜದ ಹಿತಕ್ಕೆ ಸಾಧಕವೆಂಬುದು ಈಗ ಸಿದ್ಧವಾದ ಮಾತಾಗಿದೆ; ಈ ಮೇರೆಗೆ, ಪ್ರಜಾಧಿಪತ್ಯದ ಆಳಿಕೆಯ ಬುಡಕ್ಕೆ ಬರಿಯ ಸ್ವಾತಂತ್ರ್ಯದ ಅಪೇಕ್ಷೆಯೊಂದೇ ಕಾರಣವಿರದೆ, ಪ್ರಯೋಜನದೃಷ್ಟಿಯಿಂದಲೂ ಅದು ಮಹತ್ವದ್ದಾಗಿದೆಂಬುದನ್ನು ಜ್ಞಾಪಕದಲ್ಲಿಡತಕ್ಕದ್ದು. ಸರಕಾರದವರು

ವ್ಯಕ್ತಿಯು ಕಾರ್ಯಭಾರದೊಳಗೆ ಮನಬಂದಂತೆ ತಮ್ಮ ತಲೆ ಹಾಕಬಾರದೆಂದರೂ, ಪ್ರತಿಯೊಬ್ಬನು ಸರಕಾರದವರ ಕಾರ್ಯ ಕಲಾಪಗಳ ಕಡೆಗೆ ಲಕ್ಷ ಪೂರೈಸಲೇಬೇಕೆಂಬು ಅಥಿನಿಯನ್ನರ ಅಭಿಪ್ರಾಯವಾಗಿತ್ತು; ಇದರಿಂದ ಅಥೀನಿಯರ ವ್ಯಕ್ತಿಸ್ವಾತಂತ್ರ್ಯವೆಂದರೆ, ಸಾಮಾಜಿಕ ಕಟ್ಟುಗಳನ್ನು ಕಡಿದು ಸಡಿಲಿಸಬೇಕೆಂದರ್ಥವಲ್ಲದೆ, ಅವನ್ನು ಬಿಗಿಪಡಿಸುವದೇ ಅವರ ಉದ್ದಿಷ್ಟವಾಗಿತ್ತೆಂಬುದು ತಿಳಿದುಬರುವಂತಿದೆ; ಅದೇಕೆಂದರೆ, ಸ್ವಾತಂತ್ರ್ಯವೆಂದರೆನೇ ಪ್ರಜಾಧಿಪತ್ಯವೆಂದು ಅವರದೊಂದು ಕಟ್ಟಿಟ್ಟ ಸಿದ್ಧಾಂತವಿರುವ ಮೂಲಕ ಸಾರ್ವಜನಿಕ ಕಾರ್ಯವು ನನಗೆ ಬೇಡವೆಂದು ಯಾರಿಗೂ ಅನ್ನಲಿಕ್ಕೇಬರುವಂತಿರಲಿಲ್ಲ; ಹಕ್ಕು ಅಥವಾ ಹೊಣೆಗಾರಿಕೆ ಅವೆರಡರಲ್ಲಿರುವ ಸೂಕ್ಷ್ಮವಾದ ಸಂಬಂಧವನ್ನು ಅಥೀನಿಯರು ಅರಿತವರಾದ್ದರಿಂದ ಪ್ರತಿಯೊಬ್ಬನಿಗೆ ತನ್ನಿಷ್ಟದಂತೆ ಕಾರ್ಯ ನಿರ್ವಹಿಸುವ ಹಕ್ಕು ಇರುವಂತೆ, ಸಾರ್ವಜನಿಕ ಕಾರ್ಯದೊಳಗೆ ಕೈಹಾಕುವದೂ ಅತನ ಹೊಣೆಯಾಗಿದೆ; ಬರಿಯ ಬಾಯಿಂದ ಬಂದಂತೆ, ಅಧಿಕಾರನಡಿಸಲುಬೇಕು; ಅಂದರೆ, ಮೈಮುರಿದು ಕೆಲಸಮಾಡಲಿಕ್ಕೆಬೇಡವೆಂಬೀತರದ ಮೈಗಳ್ಳತನವನ್ನೂ ಇಚ್ಛೆಯನ್ನೂ ಅಥೀನಿಯರು ನಡೆಗೊಡುತ್ತಿರಲಿಲ್ಲ. ಇದರ ಮೇಲಿಂದ, ಅಥೀನಿಯರಿಗೆ ಮೇಲಿನ ಅಧಿಕಾರಿಗಳ ಮಾತು ಕೇಳದಿರುವದೂ, ಅಥವಾ ಕಟ್ಟಳೆಗೆ ಕಿವಿಗೊಡದಿರುವದೂ ರವೆಯಷ್ಟು ಸೇರಬರುತ್ತಿರಲಿಲ್ಲವೆಂದು ತಿಳಿಯಬಾರದು. ಅದಕ್ಕೆ ಪ್ರತಿಯಾಗಿ ಕಟ್ಟಳೆಯೆಂದರೆ ಆಯಿತು. ಅದನ್ನು ಪ್ರತಿಯೊಬ್ಬನೂ ಶಿರಬಾಗಿ ಮನ್ನಿಸಿಯೇ ತೀರಲಿಕ್ಕೆಬೇಕೆಂಬುದೊಂದು ಅಥೀನಿಯನ್ ಸ್ವಾತಂತ್ರ್ಯದಲ್ಲಿಯ ಮುಖ್ಯ ಗುಟ್ಟಾಗಿದ್ದಿತು. ಪ್ಲೇಟೋ ಮಹಾತ್ಮನು ಒಂದೆಡೆಯಲ್ಲಿ ಗ್ರೀಕರ ಕಟ್ಟಳೆಯ ಮೇಲ್ಮೆಯನ್ನು ಕುರಿತು ಬಣ್ಣಿಸುವಾಗ 'ಕಟ್ಟಳೆಗಳು ಸಾಕ್ರೇಟೀಸನನ್ನು ಮಗನೆಂದೂ, ಶಿಷ್ಯನೆಂದೂ ತಿಳಿದು ಅವನಿಗೆ ಬೋಧಿಸಿದವೆಂದು'ಕಾವ್ಯಮಯವಾಗಿ ಹೇಳಿದ್ದಾನೆ. ಮೇಲಾಗಿ ಗ್ರೀಸದ ಮೇಲಾದ ವಾತುಗಾರನಾದ ಡಿಮಾಸಥೆನಿಸನು ಹಲವು ಸಂದರ್ಭಗಳಲ್ಲಿ ಕಟ್ಟಳೆಯ ಬಗ್ಗೆ ಆತ್ಯಾದರವನ್ನು ವ್ಯಕ್ತಪಡಿಸಿದ್ದಾನೆ. ಈ ಮೇರೆಗೆ ಕಟ್ಟಳೆಗಳ ಮನ್ನಣೆಯಿಂದ ಕಾಣುವದೆಂದರೆ, ನಮ್ಮಲ್ಲಿ ಎಷ್ಟೋ ದುರ್ಭಾವನೆಗಳಡಗಿಕೊಂಡಿದ್ದರೂ, ಶ್ರೇಷ್ಠಭಾವನೆಗಳಿಗೆ ಉಚ್ಚಸ್ಥಾನವನ್ನೇ ಕೊಡುವಂತೆ ಇರುವದೆಂಬುವದನ್ನು ಅಥೀನಿಯನ್‌ರು ಅರಿತವರಾಗಿದ್ದರು. ಮತ್ತು ಇದೇ ಅರ್ಥವನ್ನೇ ಅಭಿಪ್ರೇತವಾಗಿಟ್ಟುಕೊಂಡು ಪ್ಲೇಟೋ ಮಹಾತ್ಮನು ಒಂದೆಡೆಯಲ್ಲಿ "ಮನುಷ್ಯನು ತನ್ನ ನೀಚ ಮನೋವೃತ್ತಿಗಳನ್ನು ಹಿಂಬಾಲಿಸಿ ನಡೆಯುತ್ತಿರುವಾಗ್ಗೆ ಅವನಿಗೆ ದಾಸನೆಂದೂ, ಒಳ್ಳೇ ಮನೋವೃತ್ತಿಗಳನ್ನು ಮುಂದೆ ಮಾಡಿಕೊಂಡು ನಡೆಯುತ್ತಿರುವಾಗ್ಗೆ ಸ್ವತಂತ್ರನೆಂದೂ ತಿಳಿಯಬೇಕೆ"ಂದಿರುವನು.

---

## ಗಡಿಯಾರ

ಗಂಟೆಯ ನೆಂಟನೆ, ಓ ಗಡಿಯಾರ !
ಬೆಳ್ಳಿಯ ಬಣ್ಣದ ಗೋಲಾಕಾರ,
ವೇಳೆಯ ತಿಳಿಯಲು ನೀನಾಧಾರ !
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಹಗಲೂ ಇರುಳೂ ಒಂದೇ ಬಾಳು !
ನೀನಾವಾಗಲು ದುಡಿಯುವ ಆಳು !
ಕಿವಿಯನು ಹಿಂಡಲು ನಿನಗದು ಕೂಳು !
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ಮುಖವೊಂದಾದರು ದ್ವಾದಶ ನೇತ್ರ ;
ಎರಡೇ ಕೈಗಳು ಏನು ವಿಚಿತ್ರ !
ಯಂತ್ರಪುರಾಣದ ರಕ್ಕಸಪುತ್ರ !
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್

'ಟಿಕ್ ಟಿಕ್' ಎನ್ನುತ ಹೇಳುವೆಯೇನು !
ನಿನ್ನೀ ಮಾತಿನ ಒಳಗುಟ್ಟೇನು ?
'ಕಾಲವು ನಿಲ್ಲದು' ಎನ್ನುವೆಯೇನು ?
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ನಿನಗೆಲ್ಲಿರುವಳು ಸಖಿ ವಿಶ್ರಾಂತಿ !
ಆದರು ಮೊಗದಲಿ ಹೊಳೆಯುವುದು ಕಾಂತಿ !
ಇದುವೇ ಕರ್ಮರಹಸ್ಯದ ಶಾಂತಿ !
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

ದುಡಿಯುವುದೊಂದೇ ನಿನ್ನಯ ಕರ್ಮ !
ದುಡಿಸುವುದೊಂದೇ ನಮ್ಮಯ ಧರ್ಮ !
ಇಂತಿರುವುದು ಕಲಿಯುಗದೀ ಮರ್ಮ !
ಟಿಕ್ ಟಿಕ್ ಗೆಳೆಯಾ ಟಿಕ್ ಟಿಕ್ ಟಿಕ್.

—ದಿನಕರ ದೇಸಾಯಿ

# ಚೌಂಡರಸನ ಕಾಲವಿಚಾರ

ಲೇಖಕರು—ಶ್ರೀ. ಡಿ. ಎಲ್. ನರಸಿಂಹಾಚಾರ್ಯರು, ಎಮ್. ಎ., ಮೈಸೂರು

ಅಭಿನವ ದಶಕುಮಾರ ಚರಿತೆಯನ್ನು ಬರೆದಿರುವ ಚೌಂಡರಸನ ಕಾಲವಿಚಾರದಲ್ಲಿ ಕವಿಚರಿತಕಾರರು ಹೀಗೆ ಬರೆದಿರುತ್ತಾರೆ.

"ಪೂರ್ವ ಕವಿಗಳಲ್ಲಿ ರುದ್ರಭಟ್ಟನನ್ನು (ಸು. ೧೧೮೦) ಸ್ತುತಿಸಿರುವುದರಿಂದ ಕವಿ ಆವನ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗಿದೆ. ಎಷ್ಟುಕಾಲ ಈಚೆ ಇದ್ದನು ಎಂದು ನಿರ್ಧರಿಸುವುದಕ್ಕೆ ಸಾಕಾದ ಆಧಾರವು ದೊರೆತಿಲ್ಲ. ಸು. ೧೩೦೦ ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ." (ಕವಿಚರಿತೆ ೧. ಪುಟ ೪೦೩).

ಯಾವನಾದರೂ ಒಬ್ಬ ಕವಿಯ ಕಾಲವನ್ನು ನಿರ್ಣಯಿಸುವುದಕ್ಕೆ ಇರುವ ಅಮೂಲ್ಯವಾದ ಸಾಧನಗಳಲ್ಲಿ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಂತಹ ಗ್ರಂಥಗಳು ಬಹಳ ಸಹಾಯವನ್ನು ಮಾಡುತ್ತವೆ. ಮಲ್ಲಿಕಾರ್ಜುನನು ಈ ಗ್ರಂಥದಲ್ಲಿ ಅನೇಕ ಕವಿಗಳ ಕಾವ್ಯಗಳಿಂದ ಪದ್ಯಗಳನ್ನು ಉದ್ಧರಿಸಿರುತ್ತಾನೆ. ಇವುಗಳಲ್ಲಿ ಕೆಲವು ಪದ್ಯಗಳ ಕರ್ತೃಗಳನ್ನು ಕಂಡು ಹಿಡಿಯಬಹುದು. ಇನ್ನು ಉಳಿದ ಪದ್ಯಗಳನ್ನು ಬರೆದವರು ಯಾರು ಅವು ಯಾವ ಯಾವ ಗ್ರಂಥದಲ್ಲಿ ಸಿಕ್ಕುತ್ತವೆ ಎಂಬುದನ್ನು ಹೇಳಲಾಗುವುದಿಲ್ಲ. ಏಕೆಂದರೆ ಆ ಪದ್ಯಗಳನ್ನು ಒಳಕೊಂಡಿರುವ ಕಾವ್ಯಗಳು ಇದುವರೆಗೆ ಬೆಳಕಿಗೆ ಬಂದಿಲ್ಲ. ಪ್ರಕೃತದಲ್ಲಿ ಮಲ್ಲಿಕಾರ್ಜುನನು ಪಂಪರನ್ನಾದಿ ಕವಿಗಳಿಂದ ಪದ್ಯಗಳನ್ನು ಹೇಗೆ ಅನುವದಿಸಿರುವನೊ ಹಾಗೆಯೇ ಅಭಿನವ ದಶಕುಮಾರ ಚರಿತೆಯಿಂದಲೂ ಪದ್ಯಗಳನ್ನು ಉದ್ಧರಿಸಿರುತ್ತಾನೆ. ಅವು ಯಾವುವೆಂದರೆ—

ಕುಜಮೆಲ್ಲಂ ಬಗೆಯುಲ್ ತಮಾಲಮುಗಮೆಲ್ಲಂ
ನೀಲಶೈಲಂನದೀ ।
ವ್ರಜಮೆಲ್ಲಂ ಯಮುನಾಜಲಂ ಕಮಲಮೆಲ್ಲಂ
ಕೋಮಲೇಂದೀವರಂ ॥
ಪ್ರಜೆಯೆಲ್ಲರ್ ಪುರುಷೋತ್ತಮರ್ ದೆಸೆಗಳೆಲ್ಲಂ
ಕೃಷ್ಣವರ್ತ್ಮಾಶೆಯಂ ।
ದುಜಗಂ ಬಣ್ಣಿಸಲುರ್ವಿ ಮರ್ವಿಪದೆಪಿಂ ಪರ್ವಿತ್ತು
ಸರ್ವೋರ್ವಿಯಂ ॥

(ಆ. ೨. ಪ. ೪೮)

ಬಗಿದು ಪುಗಲರಿದು ನೋಡಲ್ ।
ಬಗೆಯಲ್ ಕಣ್ಸಲ್ಲದೊಯ್ಯ ನಡಿಯಿಡೆ ಚಿತ್ರ ॥
ಕ್ಕೊಗೆಗುಮತಿ ಭೀತಿಯೆನಲು ।
ರ್ವಿಗೆ ದಟ್ಟೈಸಿರ್ದುದಂಧಕಾರಾಕಾರಂ ॥

(ಆ. ೨, ಪ. ೪೨)

ಭುವನಕ್ಕೆ ಲೋಚನೇಂದ್ರಿಯ ।
ವಿವಿಧ ವ್ಯಾಪಾರಮಿನ್ನದೇಕೆನಲಾಕಾ ।
ಶವನವನಿಯನೆಣ್ದೆಸೆಯಂ ।
ಕವಿದೆಸೆದತ್ತಂಧಕಾರಮದ್ಭುತಘೋರಂ ॥

(ಆ. ೨. ಪ. ೪೩)

ದಿನಯಾತ್ರಾ ನಿಗಮಕ್ರಮಕ್ಕೆ ವಿಷಮಂ ಸಪ್ತಾಶ್ವ
ಮಿನ್ನೊಂದು ವಾ
ಹನಮಂ ತಂದುಸಮಂ ಕುರುಂಗಮೆನಿಪಂತಾಂಮಾಳ್ಪೆ
ನೆಂಬೊಂದು ಭಾ ॥
ವನೆಯಿಂದುತ್ಸವ ರಾಗಮಂ ತಳೆದು ಸೂರ್ಯಂ
ಪಶ್ಚಿಮಾಂಭೋಧಿಯಂ
ಮನವೊಲ್ದೈದಿದನೆಂದು ಬಣ್ಣಿಸೆ ಜಗಂ ಚೆಲ್ವಾಯ್ತು
ಸಂಧ್ಯಾಗಮಂ ॥

(ಆ. ೩. ಪ. ೨೦)

ಮೂಡಣ ವಾರ್ಧಿಯೊಳೊಪ್ಪುವ
ಬಾಡಬಶಿಖಿ ಪಶ್ಚಿಮಾಬ್ಧಿಗೂರ್ವಾನಳನಂ ॥
ನೋಡಲ್ ಬರ್ಪಂತಿರ್ದುದು
ನೀಡುಂ ಕೆಂಪಡರ್ದು ಸಂಜೆಯೊಳ್ ರವಿಬಿಂಬಂ ॥

(ಆ. ೩. ಪ. ೨೨)

ಪದೆಪಿಂದಂಬರ ಲಕ್ಷ್ಮಿಯೆಚ್ಚಿಕೆಗಳೆಲೆಂದೌತ್ಸುಕ್ಯದಿಂ
ಕಂಜ್ಜಳಂ
ಪ್ರದಿದೊಪ್ಪಿರ್ದ ಕರಂಡವಂ ತೆಗೆದು ತನ್ಮನ್ಮಥಸಾರಿಂ
ಮುಚ್ಚುಳಂ ।
ಮಧುಪದಿಂದಂ ತೆಗೆಯುತ್ತುಮಿರ್ಪ ಪದದೊಳ್ ಕೈತಪ್ಪಿ
ಬಿಳ್ದಂ ಜನಂ
ಕಿಡಿದರೆತ್ತೆಂಬಿನಮುರ್ಬಿಮುರ್ಬಿ ಪರಿದತ್ತೆತ್ತಂ ದಿಶಾ
ಭಿತ್ತಿಯೊಳ್ ॥ *

(ಆ. ೩. ಪ. ೩೩)

ಸೂಕ್ತಿ ಸುಧಾರ್ಣವವನ್ನು ಸಂಕಲಿಸಿದ ಮಲ್ಲಿಕಾರ್ಜುನನ ಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಕವಿಚರಿತ ಕಾರರ ಮತವನ್ನು ಅನುಸರಿಸಿದರೆ ಅವನ ಕಾಲವು ಸು. ೧೨೪೫ (ಕ್ರಿ. ಶ.) ಆಗುತ್ತದೆ. ಡಾ॥ ವೆಂಕಟ ಸುಬ್ಬಯ್ಯನವರ ಕಾಲ ನಿರ್ಣಯವನ್ನು ಒಪ್ಪುವುದಾದರೆ ಅವನ ಕಾಲವು ಕ್ರಿ. ಶ. ೧೨೬೩ ಆಗುತ್ತದೆ. ಚೌಂಡರಸನ ಕಾವ್ಯದಿಂದ ಮಲ್ಲಿಕಾರ್ಜುನನು ಪದ್ಯಗಳನ್ನು ಎತ್ತಿ ಬರೆದಿರುವದರಿಂದ ಚೌಂಡರಸನು ಮಲ್ಲಿ ಕಾರ್ಜುನನಿಗಿಂತಲೂ ಹಿಂದೆ ಇರಬೇಕು. ಇವನು ಪೂರ್ವ ಕವಿಗಳಲ್ಲಿ ರುದ್ರಭಟ್ಟನನ್ನು ಸ್ಮರಿಸಿರುವುದರಿಂದ ಆ ಕವಿಯ ಕಾಲವಾದಮೇಲೆ ಚೌಂಡರಸನು ಇದ್ದಿರಬೇಕು. ರುದ್ರಭಟ್ಟನ ಕಾಲದ ವಿಷಯವಾಗಿಯೂ ಭಿನ್ನಾಭಿಪ್ರಾಯಗಳಿವೆ. ಕವಿಚರಿತ ಕಾರರು ಅವನು ಸು. ೧೧೮೦ರಲ್ಲಿ ಇದ್ದಿರಬೇಕೆಂದು ಹೇಳುತ್ತಾರೆ. ಡಾ॥ ವೆಂಕಟಸುಬ್ಬಯ್ಯನವರು ರುದ್ರಭಟ್ಟನು ತನ್ನ ಗ್ರಂಥವನ್ನು ಕ್ರಿ. ಶ. ( ೧೨೧೮-೧೯ ) ರಲ್ಲಿ ಬರೆದಿರಬೇಕೆಂದು ನಿರ್ಣಯಿ ಸಿರುತ್ತಾರೆ. ಇವೆರಡರಲ್ಲಿ ಯಾವುದಾದರೂ ಒಂದು ನಿಜ ವಾಗಿರಬೇಕು. ಕವಿಚರಿತಕಾರರ ಊಹೆಯು ಸರಿಯಾದ ಪಕ್ಷಕ್ಕೆ ಚೌಂಡರಸನು ೧೧೮೦ರಿಂದ ೧೨೪೫ರ ವರೆಗೆ ಇರುವ ಅಂತರದಲ್ಲಿ ಜೀವಿಸಿರಬೇಕು. ಹೀಗಾದರೆ ಅವನ ಕಾಲವು ಸು. ೧೨೧೦ ಆಗಬಹುದು. ಡಾ॥ ವೆಂಕಟಸುಬ್ಬಯ್ಯನವರ ಊಹೆಯು ಸರಿಯೆನ್ನುವುದಾದರೆ ಚೌಂಡರಸನು ೧೨೧೮ರಿಂದ ೧೨೬೩ರ ವರೆಗೆ ಇರುವ ಮಧ್ಯಭಾಗದಲ್ಲಿ ಜೀವಿಸಿರಬೇಕು. ಎಂದರೆ ಚೌಂಡರಸನು ಸು. ೧೨೪೦ರಲ್ಲಿ ಅಭಿನವದಶಕುಮಾರ ಚರಿತೆಯನ್ನು ಬರೆದಿರಬೇಕು. ಅಂತು ಚೌಂಡರಸನು ಸು. ೧೩೦೦ರಲ್ಲಿ ಜೀವಿಸಿದ್ದನು ಎಂಬ ಕವಿಚರಿತಕಾರರ ಊಹೆಯು ಎಂದಿಗೂ ನಿಜವಾಗಲಾರದು.

ಮಲ್ಲಿಕಾರ್ಜುನನಲ್ಲದೆ ಕಾವ್ಯಸಾರದ ಕರ್ತೃವಾದ ಅಭಿನವ ವಾದಿ ವಿದ್ಯಾನಂದನೂ (೧೫೩೩) ಅಭಿನವದಶಕುಮಾರ ಚರಿತೆಯಿಂದ × ಪದ್ಯಗಳನ್ನು ಉದಾಹರಿಸಿರುತ್ತಾನೆ.

---

* ಈ ಪದ್ಯಗಳೆಲ್ಲವೂ ಸೂಕ್ತಿಸುಧಾರ್ಣವದ ೮ನೆ ಆಶ್ವಾಸವಾದ ಮೈಸೂರು ಗವರ್ನ್ಮೆಂಟ್ ಓರಿಯಂಟಲ್ ಲೈಬ್ರರಿ M. S. ನಂ. K. 40 ಎಂಬುದರಲ್ಲಿ ಕ್ರಮವಾಗಿ ೧೦೪, ೯೪, ೯೫, ೪೦, ೧೨, ೧೦೩, ಆಗಿವೆ.

× ಕಾವ್ಯಸಾರ ೨೧೦೬ ( ಅಭಿನವದಶಕುಮಾರ ಚರಿತೆ ಆ. ೨ ಪ. ೧೧೮ )

### ಪ್ರಸಿದ್ಧ ರಸಾಯನ ಶಾಸ್ತ್ರಜ್ಞರಾದ

# ಡಾ. ಕೊಕಟನೂರ ವಾಮನರಾಯರು

[ ಡಾ. ವಾಮನರಾಯರು ಕುಟುಂಬದೊಡನೆ ಅಮೇರಿಕೆಯಿಂದ ತಾಯ್ನಾಡಿಗೆ ಕ್ಷಿಪ್ರದಲ್ಲಿಯೇ ಬರಲಿದ್ದಾರೆಂದು ತಿಳಿಸಲು ಅತ್ಯಾನಂದವಾಗುತ್ತದೆ. ಕಾಠೇವಾಡದೊಳಗಿನ ಧ್ರಾಂಗಧ್ರಾ ಸಂಸ್ಥಾನದ ದೇಶಪ್ರೇಮಿಗಳೂ, ವಿದ್ಯಾಪಕ್ಷಪಾತಿಗಳೂ ಆದ ಮಹಾರಾಜರು ತಿಂಗಳಿಗೆ ೨೫೦೦ ರೂ. ಸಂಬಳ ಗೊತ್ತುಪಡಿಸಿ, ಇವರನ್ನು ತಮ್ಮ ಸಂಸ್ಥಾನದೊಳಗಿನ Shakti Alkali Works ನಡೆಸಲು ಕರೆಸಿಕೊಂಡಿದ್ದಾರೆ. ಇದರ ಪೂರ್ವಸಿದ್ಧತೆಗಾಗಿ ಅಮೇರಿಕೆಯಲ್ಲಿ ಪ್ರವಾಸವನ್ನು ಮಾಡಲೆಂದು ವೆಚ್ಚವನ್ನೂ ಕೊಟ್ಟಿದ್ದಾರೆ. ಕನ್ನಡಿಗರಾದ ಧನಿಕರೂ ಸಂಸ್ಥಾನಿಕರೂ ಇಲ್ಲದಿದ್ದರೂ ಸರಿ, ರಾಜಪುತ್ರಕುಲದ ರಾಜರೊಬ್ಬರಾದರೂ ಇವರನ್ನು ಬರಮಾಡಿಕೊಂಡುದು ಆನಂದದ ವಿಷಯವೇ.

ಇವರ ವಿಷಯವಾಗಿ ನ್ಯೂಯಾರ್ಕನೀಗ್ರೋ ಟೈಮ್ಸು ಪತ್ರಿಕೆಯ ಸಂಪಾದಕ ವರ್ಗದಲ್ಲಿನ ಶ್ರೀ. ಹು. ಗು. ಮುದ್ಗಲ ಅವರು ಬರೆದ ಲೇಖವನ್ನು ಮತ್ತೆ ಮುದ್ರಿಸುತ್ತೇವೆ.

—ಸಂ. ಜ. ಕ. ]

ಡಾ. ವಾಮನರಾವ ಕೊಕಟನೂರ (M. Sc; Ph. D.) ರು ಹಿಂದುಸ್ಥಾನದಿಂದ ಅಮೇರಿಕೆಗೆ ಭೌತಿಕ ಶಾಸ್ತ್ರದ ಅಭ್ಯಾಸಕ್ಕಾಗಿ ಬಂದ ವಿದ್ಯಾರ್ಥಿಗಳಲ್ಲಿ ಅತ್ಯಂತ ಯಶಸ್ವಿಯಾದವರಲ್ಲಿ ಒಬ್ಬರು. ವಿಶೇಷತಃ ಅಮೇರಿಕೆಯಲ್ಲಿಯ ಭವ್ಯವಾದ ರಸಾಯನಿಕ ಕಾರಖಾನೆಗಳಲ್ಲಿ ಮುಖ್ಯ ಚಾಲಕತ್ವವನ್ನು ವಹಿಸಿ ಪ್ರತ್ಯಕ್ಷ ಅನುಭವವನ್ನು ಪಡೆದವರಲ್ಲಿ ಇವರು ಅಗ್ರಗಣ್ಯರು. ಅಮೇರಿಕೆಯ ರಸಾಯನ ಶಾಸ್ತ್ರಜ್ಞರ ಮೇಲುಪಂಕ್ತಿಯಲ್ಲಿ ಡಾ. ಕೊಕಟನೂರರು ಮೆರೆಯುವದು ಸಾಧಾರಣವಾಗಿ ಇಡೀ ಹಿಂದುಸ್ಥಾನಕ್ಕೆ ವಿಶೇಷತಃ ನಮ್ಮ ಕರ್ನಾಟಕಕ್ಕೆ ಅತ್ಯಂತ ಗೌರವಾಸ್ಪದವಾದ ಸಂಗತಿಯು.

ಡಾ. ವಾಮನರಾವ ಇವರು ಬೆಳಗಾಂವಿ ಜಿಲ್ಲೆಯಲ್ಲಿಯ ಅಥಣಿಯ ವತನದಾರರಾದ ಶ್ರೀ. ರಾಮಚಂದ್ರರಾವ ಕೊಕಟನೂರರ ಹಿರಿಯ ಪುತ್ರರು. ಇವರ ಜನ್ಮವು ೧೮೯೬ನೇ ಇಸ್ವಿಯ ದಿಸೆಂಬರ ತಿಂಗಳಲ್ಲಾಯಿತು. (ಶ್ರೀ. ರಾಮಚಂದ್ರರಾಯರ ಎರಡನೆಯ ಪುತ್ರರಾದ ಗುಂಡೋ ಎಂಬವರು ಕೂಡ ಅಮೇರಿಕೆಗೆ ಹೋಗಿ ವೈದ್ಯಕೀಯ ಅಭ್ಯಾಸವನ್ನು ಮುಗಿಸಿ ಅಲ್ಲಿಯ ಔಷಧಾಲಯಗಳಲ್ಲಿ ಜವಾಬ್ದಾರಿಯ ಕೆಲಸಗಳನ್ನು ದೊರಕಿಸಿದರು. ಇವರು M. D. ಪದವಿಯನ್ನು ೧೯೩೧ರಲ್ಲಿ ಪಡೆದರು. ಕಳೆದ ೨ವರ್ಷಗಳಿಂದ ಇವರು ಬೆಳಗಾಂವಿಯಲ್ಲಿ ನೆಲಿಸಿ ಸಮಾಜಸೇವೆಯನ್ನು ಮಾಡುತ್ತಿರುವರು.)

ಡಾ. ವಾಮನರಾಯರವರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವು ಅಥಣಿಯಲ್ಲಿ ಆಯಿತು. ಅವರು ತಮ್ಮ ಪ್ರವೇಶ ಪರೀಕ್ಷೆಯಲ್ಲಿ ಪುಣೆಯ 'ನ್ಯೂ ಇಂಗ್ಲಿಷಸ್ಕೂಲ'ದಿಂದ ತೇರ್ಗಡೆ ಹೊಂದಿದರು. ಅವರು ಮುಂದೆ ತಮ್ಮ ಅಭ್ಯಾಸವನ್ನು ಪುಣೆಯ ಫರ್ಗೂಸನ್ ಕಾಲೇಜದಲ್ಲಿಯೂ ನಡೆಸಿದರು. ೧೯೧೧ರಲ್ಲಿ ವಿಲ್‌ಸನ್ ಕಾಲೇಜದಿಂದ ಅವರು B. Sc. ಪದವಿಯನ್ನು ಪಡೆದರು. ಪದವಿಯನ್ನು ಪಡೆದ ಬಳಿಕ ಶ್ರೀ. ಕೊಕಟನೂರರು ಪುಣೆಯಲ್ಲಿ ಸ್ಥಾಪಿಸಿದ ರಾನಡೆಯವರ ಔದ್ಯೋಗಿಕ ಸಂಘ (Ranade Industrial Institute) ದಲ್ಲಿ ರಸಾಯನಿಕ

ಕೆಲಸವನ್ನು ಕೈಕೊಂಡರು. ಅದೇ ಕಾಲದಲ್ಲಿ ಅಮೇರಿಕೆಯಲ್ಲಿಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಅಭ್ಯಾಸಮಾಡುವದಕ್ಕಾಗಿ ಗುರುಗೋವಿಂದಸಿಂಗ ಸ್ಕಾಲರಸಿಪ್ ಎಂಬ ಬಹುಮಾನದ ವಿದ್ಯಾರ್ಥಿ ವರ್ಷಾಶನವು ಅವರಿಗೆ ಸಿಕ್ಕಿತು. ಬೇಗನೆ ಅವರು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಿಗೆ ಬರುವದಕ್ಕಾಗಿ ೧೯೧೩ರಲ್ಲಿ ಹಿಂದುಸ್ಥಾನವನ್ನು ಬಿಟ್ಟರು.

ಮಾರ್ಗದಲ್ಲಿ ಅವರು ಅರಬಸ್ಥಾನ, ಇಜಿಪ್ತ, ಆಸ್ಟ್ರಿಯಾ, ಇಟಲಿ, ಸ್ವಿಸ್‌ಭೂಮಿ, ಜರ್ಮನಿ, ಫ್ರಾನ್ಸ ಮತ್ತು ಇಂಗ್ಲಂಡಗಳ ಮುಖ್ಯ ಮುಖ್ಯ ಸ್ಥಳಗಳಿಗೆ ಹೋಗಿ ಅಲ್ಲಿಯ ಸ್ಥಿತಿಗತಿಗಳ ಅಭ್ಯಾಸಮಾಡುತ್ತ ಬಂದರು. ಈ ಪ್ರಯಾಣದಿಂದ ತಮ್ಮ ಈಗೀಗ ತೆರೆದ ಕಣ್ಣುಗಳು ದೂರದೃಷ್ಟಿಯ ಬೆಳಕಿನಲ್ಲಿ ಈಸಾಡಹತ್ತಿದವು ಎಂದು ಶ್ರೀ. ಕೊಕಟನೂರರು ಲೇಖಕರಿಗೆ ಒಳ್ಳೇ ಗಾಂಭೀರ್ಯದಿಂದ ಹೇಳಿರುವರು. ಅವರ ಈಗಿನ ಉದಾರವಾದವೂ, ವಿಶಾಲದೃಷ್ಟಿಯೂ, ದೊಡ್ಡಮನಸ್ಸೂ, ದೇಶಸೇವೆ ಮಾಡುವ ಲವಲವಿಕೆಯೂ, ಹಿಂದುಸ್ಥಾನದ ಶಿಕ್ಷಣ ಕ್ರಮದ ಮೂರ್ಖತನಕ್ಕಾಗಿ ಮಾತೃಭಾಷೆಯ ಸೇವೆ ಮಾಡಲು ಅಸಮರ್ಥರಾದದ್ದಕ್ಕಾಗಿ ಹಳಹಳಿಸುವದೂ ಅವರ ಆ ಗಂಭೀರತೆಯ ಸಾಕ್ಷಿಗಳು ಎಂದು ಧಾರಾಳವಾಗಿ ಹೇಳಬಹುದು.



ಅಮೇರಿಕೆಗೆ ಬಂದನಂತರ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಒಂದೇ ವರ್ಷ ನಿಂತು ಮುಂದೆ ಶ್ರೀ. ಕೊಕಟನೂರರು ಮಿನೆಸೋಟಾ ವಿಶ್ವವಿದ್ಯಾಲಯವನ್ನು ಸೇರಿದರು. ಈ ಕೊನೆಯ ವಿದ್ಯಾಲಯದಿಂದ ೧೯೧೪ರಲ್ಲಿ ರಸಾಯನ ಶಾಸ್ತ್ರದಲ್ಲಿ M. Sc ಪದವಿಯನ್ನೂ ಮತ್ತು ೧೯೧೬ ರಲ್ಲಿ ಭೂರಚನಾ ಶಾಸ್ತ್ರದಲ್ಲಿ Ph. D. ಪದವಿಯನ್ನೂ ಪಡೆದರು. ರಸಾಯನ ಶಾಸ್ತ್ರದಲ್ಲಿ ಇವರು ಶೆಲ್ವಿನ್ ಫೆಲೋ (Shelvin fellow) ಆಗಿ ಆರಿಸಲ್ಪಟ್ಟರು.

ಕೂಡಲೇ ಅವರು ತಮ್ಮ (ಮಿನೆಸೋಟಾ) ವಿಶ್ವವಿದ್ಯಾಲಯದಲ್ಲಿ ಶಿಕ್ಷಕರಾಗಿ ನಿಯಮಿಸಲ್ಪಟ್ಟರು. ಒಂದು ವರ್ಷದವರೆಗೆ ಇವರು 'ಸೀನಿಯರ' ವಿದ್ಯಾರ್ಥಿಗಳಿಗೆ "ರಸಾಯನಶಾಸ್ತ್ರದಲ್ಲಿ ಪರಿಶೋಧನ"ವೆಂಬ ವಿಷಯವನ್ನು ಒಳ್ಳೇ ದಕ್ಷತೆಯಿಂದಲೂ, ಯಶಸ್ವಿಯಾಗಿಯೂ ಕಲಿಸಿದರು. ಇವರ ವರ್ಗದಲ್ಲಿ ೧೨೦ ವಿದ್ಯಾರ್ಥಿಗಳಿದ್ದರು. ಇವರ ಈ ಕಲಿಸುವ ಸಾಮರ್ಥ್ಯವನ್ನು ನೋಡಿ ಒಂದು ಹೆಣ್ಣುಮಕ್ಕಳ ಕಾಲೇಜವು ರಸಾಯನ ಶಾಸ್ತ್ರದ ಖಾತೆಯ ಮುಖ್ಯ ಪಂಡಿತರಾಗಲಿಕ್ಕಾಗಿ ಇವರನ್ನು ಕೇಳಿಕೊಂಡಿತು. ಅಲ್ಲದೆ ಇಲ್ಲಿಯ ವಿಶ್ವವಿದ್ಯಾಲಯಗಳಲ್ಲಿ ಒಳ್ಳೇ ಹೆಸರಿಗೆ ಬಂದ ಕೋಲಂಬಿಯಾ ಸಿರೆಕ್ಯೂಜ ಮೇನ ಮೊದಲಾದ ವಿಶ್ವವಿದ್ಯಾಲಯಗಳು ತಮ್ಮಲ್ಲಿ ರಸಾಯನ ಶಾಸ್ತ್ರದ ಪಂಡಿತರಾಗಲಿಕ್ಕಾಗಿ ಇವರನ್ನು ಆಗ್ರಹಪೂರ್ವಕವಾಗಿ ಕೇಳಿಕೊಂಡವು. ಆದರೆ ಔದ್ಯೋಗಿಕ ಜ್ಞಾನದ ಕಡೆಗೆ ಇವರ ಲಕ್ಷ್ಯವು ತಿರುಗಿದ್ದರಿಂದ ಇವರು ಇಂಥ ಬಹುಮಾನಪೂರ್ವಕವಾದ ಸ್ಥಳಗಳನ್ನು ನಿರಾಕರಿಸಿದರು.

೧೯೧೭ರಲ್ಲಿ ಹರಿತ್ಪೀತ (Chlorine) ಮತ್ತು ಅವರ ಹುಟ್ಟುವಳಿಗಳು, ಬಣ್ಣ ಮತ್ತು ಜಡ ರಸಾಯನ (Heavy Chemicals) ಗಳ ಉದ್ಯೋಗಗಳಲ್ಲಿ ಎಲ್ಲಕ್ಕೂ ದೊಡ್ಡದಾದ 'ಮ್ಯಾಥಿಸನ್ ಅಲ್ಕಲಿ ವರ್ಕ್ಸ್' (Mathieson Alkali Works) ಎಂಬ ಕಾರಖಾನೆಯಲ್ಲಿ ಡಾ. ಕೊಕಟನೂರರು ಸಂಶೋಧಕ ರಸಾಯನಜ್ಞರಾಗಿ ನಿಯಮಿಸಲ್ಪಟ್ಟರು. ಮುಂದೆ ಅವರು 'ನಾಯಗರಾ ಅಲ್ಕಲಿ ವರ್ಕ್ಸ್‌ದಲ್ಲಿ' ಸಂಶೋಧಕ ಖಾತೆಯ ಮುಖ್ಯ (Chief, Research Department) ರಾಗಿ ಹೋದರು. ಈ ಕಾರಖಾನೆಗಳಲ್ಲಿ ಅವರು ನಾಲ್ಕು ವರ್ಷ ಕೆಲಸಮಾಡಿದರು. ತಾವು ಗೊತ್ತುಹಚ್ಚಿದ ಹೊಸ ಶೋಧಗಳನ್ನು ದುಡ್ಡು ಬೇಡದೆ ತಮಗೆ ಒಪ್ಪಿಸಬೇಕೆಂದು ಅವರ ಕಾರಖಾನೆಯವರು ಹಟ ಹಿಡಿದದ್ದ

ಬಿದ ಡಾ. ಕೊಕಟನೂರರರು ತಮ್ಮ ಉಪಸಂಶೋಧಕರ ಸಹಿತ ವಾಗಿ ಕಡೆಯ ಕಾರಖಾನೆಗೆ ೧೯೨೧ರಲ್ಲಿ ರಾಜೀನಾಮೆಯನ್ನು ಕೊಟ್ಟರು.

ಮುಂದೆ ಒಂದು ವರ್ಷ (೧೯೨೧–೨೨) 'By Products Steel Corp' ಎಂಬ ಕಾರಖಾನೆಯಲ್ಲಿ ಮುಖ್ಯ ಸಂಶೋಧಕರೂ (Chief Researc), ಪ್ರಚಾಲಕ ರಸಾಯನಜ್ಞರೂ (Operating Chemist) ಆಗಿ ಸಂಯುಕ್ತ ಸಂಸ್ಥಾನಗಳ ದಕ್ಷಿಣ ಭಾಗದಲ್ಲಿ ಕೆಲಸಮಾಡಿದರು.



ತರುವಾಯ ಡಾ. ಕೊಕಟನೂರರು ನ್ಯೂಯಾರ್ಕದಲ್ಲಿ ಒಂದು ದೊಡ್ಡ ರಸಾಯನ ಕಾರಖಾನೆಯ ವಿಚಾರಕ ರಸಾಯನಜ್ಞ (Consulting Chemist) ರಾಗಿ ಕೆಲಸಮಾಡಿದರು. ಈ ಬಗೆಯಾಗಿ ರಸಾಯನಿಕ ಉದ್ಯೋಗಗಳಲ್ಲಿ ಇವರಿಗೆ ಹೇರಳವಾಗಿ ಪ್ರತ್ಯಕ್ಷ ಅನುಭವವು ದೊರಕಿದೆ. ಅಮೇರಿಕೆಯಲ್ಲಿ ಜೀವಿಸುವ ದೊಡ್ಡ ರಸಾಯನಜ್ಞರಲ್ಲಿ ಡಾ. ಕೊಕಟನೂರರು ಒಬ್ಬರು ಎಂದು ಇವರ ಗಣನೆಯಾಗುತ್ತದೆ.

ಡಾ. ಕೊಕಟನೂರರು The American Chemical Society ಮತ್ತು The American Electro-Chemical Society ಗಳ ಸಭಾಸದರಾಗಿ ಆರಿಸಲ್ಪಟ್ಟಿರುವರು. ರಾಷ್ಟ್ರಾಭಿಮಾನದಿಂದ ತಮ್ಮ ಪ್ರಸಿದ್ಧ ಭೌತಿಕಶಾಸ್ತ್ರಜ್ಞರ ಜೀವನ ಚರಿತ್ರೆಗಳನ್ನು ಅಮೇರಿಕೆಯವರು ಪುಸ್ತಕರೂಪವಾಗಿ ಪ್ರಸಿದ್ಧ ಮಾಡಿರುವರು. ಇಂಥ ಪ್ರಸಿದ್ಧವಾದ 'The American Men of Science' ಎಂಬ ಪುಸ್ತಕದಲ್ಲಿ ಡಾ. ವಾಮನರಾವ ಕೊಕಟನೂರರ ಜೀವನಚರಿತ್ರೆಯು ಬರೆಯಲ್ಪಟ್ಟಿದೆ.

ಅಮೇರಿಕೆಯ ರಸಾಯನಿಕ ಸಂಘಸದರ ಮುಂದೆ ಇವರು ಹೊಸ ವಿಷಯಗಳಮೇಲೆ ಅತ್ಯಂತ ಮಹತ್ವವಾದ ಏಳು ನಿಬಂಧಗಳನ್ನು ಓದಿರುವರು. ಅವೆಲ್ಲವೂ ಅಮೇರಿಕೆಯ ಭೌತಿಕ ಶಾಸ್ತ್ರದ ಮಾಸಿಕಗಳಲ್ಲಿ ಆ ಆ ಕಾಲದಲ್ಲಿ ಪ್ರಸಿದ್ಧವಾಗಿವೆ. ಅಲ್ಲದೆ ಇವರು ಯುದ್ಧಕಾಲದಲ್ಲಿ ಹೊಸದಾಗಿ ಗೊತ್ತುಹಚ್ಚಿದ ಎರಡು ಶೋಧಗಳು ಅಮೇರಿಕೆಯ ಸರಕಾರಕ್ಕೆ ಒಳ್ಳೇ ಸಹಾಯ ಮಾಡಿದವು. ಆ ಎರಡು ಶೋಧಗಳೆಂದರೆ (ಅ) Higher Chlorinated Mustard Gases, (ಇ) Homologues of Chloropicrin. ಸರಕಾರದಿಂದ ಆ ಕಾಲದಲ್ಲಿ ಇವರಿಗೆ ಯೋಗ್ಯ ಉಪಕಾರವಾಯಿತು. ಡಾ. ಕೊಕಟನೂರರ ಒಳ್ಳೇ ಪ್ರೀತಿಯ ವಿಷಯಗಳೆಂದರೆ ಬಣ್ಣಗಳೂ ಮತ್ತು Electro-lytic Alkaloid ಇವುಗಳಲ್ಲಿ ಅವರ ಕೈ ಹಿಡಿಯುವವರು ತೀರ ವಿರಳ. ಈ ವಿಷಯಗಳಲ್ಲಿ ಅವರು ಅತ್ಯಂತ ತಜ್ಞರಾಗಿರುವರು

ಇತ್ತೀಚೆ ಅಮೇರಿಕೆಯ ಪ್ರಖ್ಯಾತ ವೈಜ್ಞಾನಿಕರ ಸಭೆಯ ಎದುರಿನಲ್ಲಿ ಹೈಡ್ರೋಜೆನ್, ಆಕ್ಸಿಜೆನ್‌ಗಳ ಘಟಕಗಳು ನೀರಿನಲ್ಲಿವೆಯೆಂಬ ಮಾತನ್ನು ಆರ್ಯಾವರ್ತದ ಪ್ರಾಚೀನ ಋಷಿಗಳು ತುಂಬಾ ಬಲ್ಲವರಾಗಿದ್ದರೆಂದು ಒಂದು ಮಾತೃಕೆಯ (Manuscript) ಆಧಾರದಿಂದ ಸಿದ್ಧಮಾಡಿದುದನ್ನು ಕೇಳಿ ಆ ಸಭೆಯವರು ಅವರನ್ನು ಅತ್ಯಾನಂದದಿಂದ ಕೊಂಡಾಡಿ, ಅವರನ್ನು ತಮ್ಮ ಸಂಘದ ಗೌರವ ಸಭಾಸದರನ್ನಾಗಿ ಮಾಡಿಕೊಂಡರು.

ಡಾ. ಕೊಕಟನೂರರು ೧೯೨೨ರಲ್ಲಿ ಕುಮಾರೀ ಹೆಲೆನ್ ಗ್ರೇಬರ (Miss Helen Graber) ಎಂಬ ಅಮೇರಿಕೆಯ ವಿದುಷಿಯೊಡನೆ ಲಗ್ನಮಾಡಿಕೊಂಡರು. ಮದುವೆಯಾದಬಳಿಕ ಕುಮಾರೀ ಹೆಲೆನ್ ಇವರು ತಾರಾಬಾಯಿ ಎಂಬ ಹೆಸರನ್ನಿಟ್ಟುಕೊಂಡಿರುವರು.

ಶ್ರೀ ತಾರಾಬಾಯಿಯ ತಾಯಿ ತಂದೆಗಳಿರ್ವರೂ ಜರ್ಮನ ವಂಶಸ್ಥರು. ಅವರಿಬ್ಬರೂ ಪದವೀಧರರಿದ್ದು ಮಿನೆಸೋಟಾ ಸಂಸ್ಥಾನದ ಮುಖ್ಯ ಪಟ್ಟಣವಾದ ಮಿನಿಯಾ ಪೋಲಿಸದಲ್ಲಿ ಒಳ್ಳೇ ಹೆಸರಾದ ಮನೆತನದವರು, ಅವರು ತಮ್ಮ ಎಲ್ಲ ಮಕ್ಕಳಿಗೂ ಉಚ್ಚ ಶಿಕ್ಷಣವನ್ನು ಕೊಟ್ಟಿರುವರು. ಅದರಂತೆಯೇ ಶ್ರೀ ತಾರಾಬಾಯಿ (ಕು. ಹೆಲೆನ್) ಯವರು ಮಾನಸ ಶಾಸ್ತ್ರವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಬಿ. ಏ. ಪದವಿಯನ್ನು ಪಡೆದಿರುವರು.

ಶ್ರೀ ತಾರಾಬಾಯಿಯವರು ಸುಶಿಕ್ಷಿತರಿರುವರಲ್ಲದೆ ಸುಶೀಲರೂ, ಸುಂದರರೂ ಮತ್ತು ವಿನಯಪೂರ್ಣರೂ ಆಗಿರುವರು. ಹಿಂದೂ ಸ್ತ್ರೀಯರ ಸ್ವಭಾವದ ತೇಜವು ಅವರಲ್ಲಿ ಉಕ್ಕೇರಿ ತೋರುವದು ಒಳ್ಳೇ ಆಶ್ಚರ್ಯದ ಸಂಗತಿಯು. ಉಳಿದ ಅಮೇರಿಕೆಯ ತರುಣಿಯರಿಗಿಂತ ಅವರು ಬೇರೆಯಾಗಿರುವರೆಂದು ಬೇರೆ ಹೇಳಬೇಕಾಗಿಲ್ಲ. ಅವರು ಕ್ರಿಸ್ತಧರ್ಮದ ತ್ಯಾಗಮಾಡಿರುವರು. ಬಹುಶಃ ಅವರ ಮನೆತನದವರೇ ಕ್ರಿಸ್ತಧರ್ಮದಲ್ಲಿ ವಿಶ್ವಾಸಹೀನರಾಗಿರುವರು.

---

# ಯಾರು ಯಾರು ?

ಲೇಖಕರು—ಶ್ರೀಮತಿ ಸುಮತಿಬಾಯಿ, ಬಿ ಏ. ಎಲ್. ಟಿ., ಭಿಷಗ್ರತ್ನ, ಪ್ರೇಮಾಯತನ, ತುಂಗಭದ್ರಾ

ಸಾವಿರಾರು ಕಟ್ಟುಕಥೆಗಳಿಂದಲೂ ಕುರುಡು ನಂಬಿಕೆಗಳಿಂದಲೂ ತುಂಬಿದ ನಮ್ಮೀ ದೇಶದಲ್ಲಿ ಪುರಾತನವಾದ ಯಾವದಾದರೊಂದು ವಿಷಯವನ್ನು ನಿಷ್ಕರ್ಷಿಸಬೇಕಾದರೆ ಹೆಚ್ಚಿನ ಜಾಗರೂಕತೆಯು ಬೇಕು. ಇಲ್ಲವಾದರೆ ಇತಿಹಾಸದ ಶೋಧಕ್ಕೆಂದು ಭೂತದ ಅರಣ್ಯವನ್ನು ಹೊಕ್ಕಿದಾಗ ಪುರಾಣಗಳ ಪೊದೆಗಳಲ್ಲಿ ಸಿಕ್ಕು ಬೆಳಕಿಗೆ ಬದಲಾಗಿ ಕತ್ತಲೆಯನ್ನು ಕಾಣುವ ಸಂಭವವು ಹೆಚ್ಚಾಗಿದೆ. ಪ್ರತಿಯೊಂದಕ್ಕೂ ಪುರಾಣಗಳ ಆಧಾರವನ್ನು ಹುಡುಕಿ ಕೊಡುವ ಬಹುಕಾಲದ ನಮ್ಮ ಅಭ್ಯಾಸವೇ ಇದಕ್ಕೆ ಕಾರಣ. ಇಂತಹ ಮನೋಗತಿಯಿಂದ ಜನತೆಯು ಬಹು ದುರ್ಬಲವಾಗಿದೆ. ಸಾಮಾಜಿಕ ಭೇದ ಖೇದಗಳು ಮರೆಯಾಗಬೇಕಾದರೆ ಜನತೆಗೆ ಈಗ ಬೇಕಾದುದು ಸಹೇತುಕ ಸಂದೇಹವೇ ಇಲ್ಲದೆ ಅಂಧ ಶ್ರದ್ಧೆಯು ಅವಶ್ಯಕತೆಯಿಲ್ಲ. ಅದಕ್ಕಾಗಿ ನಾನಿಲ್ಲಿ ನನ್ನಿಂದಾದ ಮಟ್ಟಿಗೆ ಶೋಧ ಸಂವೀಕ್ಷಣ ಯುಕ್ತಿಗಳಿಂದೇರ್ಪಟ್ಟ ಕೆಲವು ವಿಚಾರಗಳನ್ನು ಸುರ, ಅಸುರ ದೇವ ಮುಂತಾದ ನಾಮಗಳ ವಿಷಯವಾಗಿ ಕೊಡುತ್ತೇನೆ.

ಪುರಾಣಗಳೂ ಅವುಗಳ ಆಧಾರಗಳಾಗಿರುವ ಪುರೋಹಿತರೂ ನಮಗೆ ದೇವರು ಎಂದರೆ ಸ್ವರ್ಗವಾಸಿಗಳಾಗಿರುವವರೆಂದೂ, ಅಸುರರು ಎಂದರೆ ನರಕಕ್ಕೇ ಅರ್ಹರಾದ ದುರಾಚಾರಪ್ರವರ್ತಕರೆಂದೂ ನಂಬುವಂತೆ ಹೇಳುವರು. ಆದರೆ ವೇದಕಾಲದ ಮತ್ತು ಅದರ ಹಿಂದಿನ ಇತಿಹಾಸವನ್ನು ಶೋಧಿಸಿ ನೋಡಿದ್ದಲ್ಲಿ ಕಥೆಯು ಬೇರೆಯಾಗಿಯೇ ತೋರುತ್ತದೆ. ಆರ್ಯರು ಜರದುಷ್ಟ್ರನ (Zaratushtra) ನ ಹಿಂಬಾಲಕರಾಗಿ ಒಂದು ತಂಡದವರಾದರು. ಆ ತಂಡವು ಇರಾಣ (Persia) ದಲ್ಲಿ ಮನೆಮಾಡಿಕೊಂಡಿತು, ಆರ್ಯರ ಎರಡನೆಯ ತಂಡವೆಂದರೆ ಇಲ್ಲಿ ಭರತವರ್ಷದಲ್ಲಿ ನೆಲೆಗೊಂಡದ್ದು. ಎರಡು ತಂಡಗಳಲ್ಲಿಯೂ ಪರಸ್ಪರ ಭೇದವೂ ದ್ವೇಷವೂ ಧಾರಾಳವಾಗಿ ಕಂಡು ಬರುತ್ತದೆ. ಇದಕ್ಕೆ ಪರಸ್ಪರ ವಿರುದ್ಧವಾದ ಇರಾಣದವರ "ಜಂದವಸ್ತಾ" ಗ್ರಂಥ ಮತ್ತು ಭಾರತೀಯರ ವೇದಗಳೇ ಸಾಕ್ಷಿ. ಇವರು ಇಬ್ಬರೂ ಎರಡಾಗುವದಕ್ಕೆ ಮೊದಲು ಒಂದಾಗಿದ್ದು ಕೊಂಡಿರುವಾಗಲೇ ಇವರಿಬ್ಬರಲ್ಲಿಯೂ ಒಂದೇ ಪ್ರಕಾರವಾದ ರೂಢಿಗಳೂ ನಂಬಿಕೆಗಳೂ ಇದ್ದವೆಂದು ಪ್ರಸಿದ್ಧ ಪೂರ್ವೇತಿಹಾಸ ಸಂಶೋಧಕನಾದ ಸರ್ ವಿಲಿಯಮ್ ರೋಲಿನ್‌ಸನ್‌ನು ಹೇಳುತ್ತಾನೆ. ಅವನ ವಿಚಾರಗಳು ಹೀಗಿವೆ– ಇಬ್ಬರೂ ಅಸುರ ಅಥವಾ ಅಹುರ ಎಂಬ ಹೆಸರಿನ ಅನೇಕ ಶಕ್ತಿಗಳನ್ನು (!) ಪೂಜಿಸುತ್ತಿದ್ದರು. ಇವುಗಳಿಗೆ ದೇವತೆಗಳೆಂದೂ ಕರೆಯುತ್ತಿದ್ದರು. ಇವುಗಳಲ್ಲೊಂದೊಂದು ಸ್ವತಂತ್ರ ದೇವತೆಯೆಂಬದೇ ಇವರ ಭಾವ. ಮತ್ತಿವೆಲ್ಲವೂ ನಿಸರ್ಗದ ವಿವಿಧ ಉತ್ಪಾತಗಳೇ ಎಂದು ತೋರುತ್ತವೆ–ಶಬ್ದಾರ್ಥ ಮಾತ್ರವನ್ನೇ ನೋಡಿದರೆ ಇವುಗಳಲ್ಲಿ ಪ್ರಮುಖವೆಂದರೆ– ಇಂದ್ರ ಅಂದರೆ ಗುಡುಗು, ಮಿತ್ರ ಸೂರ್ಯ, ವಾಯು ಗಾಳಿ, ಅಗ್ನಿ ಬೆಂಕಿ, ಮುಂತಾದವು. ಆದರೆ ಹೆಸರುಮಾತ್ರದಿಂದ ದೇವತೆಗಳೆಂದು ಭಾವಿಸಲಾಗದು, ಯಾಕಂದರೆ ವೇದಕಾಲದ ಮೊದಲನೆಯ

ಭಾಗದಲ್ಲಿ ದೇವತೆಗಳಿಗೆ ಅಸುರ ಎಂಬ ಶಬ್ದವೂ ಉಪಯೋಗಿಸಲ್ಪಟ್ಟಿದೆ. ಋಗ್ವೇದದ ಮೊದಲನೆಯ ಭಾಗದಲ್ಲಿ ( ಋಕ್ ೧-೨ ) ವರುಣ, ಅಗ್ನಿ, ರುದ್ರರಿಗೆ ಅಸುರ ಎಂಬ ಸಂಬೋಧನೆಯು ಉಪಯೋಗಿಸಲ್ಪಟ್ಟಿದೆ. ಬರಬರುತ್ತ ಅದೇ ವೇದದ ಕೊನೆಯಲ್ಲಿಯೂ ಅಥರ್ವಣದಲ್ಲಿಯೂ ಅಸುರ ಎಂಬ ಪದವು ಕೆಟ್ಟ ಅರ್ಥದಲ್ಲಿ ಭಾವಿಸಲ್ಪಟ್ಟಿದೆ.

ವೇದಗಳನ್ನೂ ಜಂದವಸ್ತಾವನ್ನೂ ಹೋಲಿಸಿ ನೋಡಿದರೆ ಪಾರ್ಸಿಗಳಿಗೂ ಭಾರತೀಯರಿಗೂ ( ಇಬ್ಬರೂ ಆರ್ಯರೇ ) ಲೌಕಿಕ ವಿಷಯಗಳಲ್ಲಿ ದ್ವೇಷವು ಹುಟ್ಟಿದಂತೆ ಅವರ ಪಾರಮಾರ್ಥಿಕ ಭಾವನೆಗಳಲ್ಲಿಯೂ ದ್ವೇಷವು ಪ್ರತಿಬಿಂಬಿಸಿತು ಎಂಬುದು ಒಡೆದು ಕಾಣುತ್ತದೆ. ಅವರ ಪವಿತ್ರ ಗ್ರಂಥವಾಗಿರುವ ಯಶ್ನ ಹಫ್ತನ ಹೈತಿಯಲ್ಲಿ ( xll—l, 4 ) ಹೀಗಿದೆ:— "ನಾನು ದೇವಪೂಜಕನಲ್ಲ ಇನ್ನು ಮುಂದೆ ನಾನು ಇಂದಿನಿಂದ ಜರದುಷ್ಟ್ರಮತಾವಲಂಬಿಯು. ದೇವತೆಗಳಿಗೆ ವೈರಿಯು; ಅಸುರರಿಗೆ ಭಕ್ತನು; ಅಸುರೋದ್ಧಾರಕರ ಸ್ತುತಿಪ್ರಿಯನು.— ದುಷ್ಟ ಜೀವಿಗಳಾದ ದೇವತೆಗಳನ್ನು ನಾನು ಬಿಟ್ಟುಬಿಡುತ್ತೇನೆ. ನಾನು ದೇವತೆಗಳನ್ನೂ ಅವರಂಥ ಇತರ ಜೀವಿಗಳನ್ನೂ ಅವುಗಳಿಗೆ ಸಂಬಂಧಪಟ್ಟ ಪೂಜೆ ಪೂಜಾರಿಕ ದುಷ್ಟ ಆಚಾರಗಳನ್ನೂ ಇಂದು ತ್ಯಜಿಸುತ್ತೇನೆ." ಎರಡು ಗ್ರಂಥಗಳಲ್ಲಿಯೂ ಇರುವ ದೇವತೆಗಳಿಗೂ ಅವುಗಳ ಹೆಸರುಗಳಿಗೂ ಸಂಖ್ಯೆಗಳಿಗೂ ಉತ್ತಮವಾದ ಹೊಂದಿಕೆಯು ಎಲ್ಲ ವಿಷಯಗಳಲ್ಲಿಯೂ ಕಂಡುಬರುತ್ತದೆ; ಆದರೊಂದು ದೊಡ್ಡ ವ್ಯತ್ಯಾಸವಿದೆ. ಅದೇನೆಂದರೆ **ಪಾರ್ಸಿಗಳ ಗ್ರಂಥದಲ್ಲಿ ಎಲ್ಲೆಲ್ಲಿಯೂ 'ದೇವ' ಎಂಬ ಶಬ್ದಕ್ಕೆ ದುಷ್ಟ ಶಕ್ತಿಗಳೆಂದೂ 'ಅಸುರ' ಎಂಬುದಕ್ಕೆ ಶುಭ ಶಕ್ತಿಗಳೆಂದೂ ಅರ್ಥವು ಕೊಡಲಾಗಿದೆ.** ಇದನ್ನು ನೋಡುವಾಗ ಒಂದು ವಿಷಯವು ಸ್ಪಷ್ಟವಾಗಿ ಹೊಳೆಯುತ್ತದೆ. ಪಾರ್ಸಿಗಳಿಗೆ ದೇವತೆಗಳಲ್ಲಿ ತುಚ್ಛಭಾವವೂ ಭಾರತೀಯ ಆರ್ಯರಿಗೆ ಅಸುರರಲ್ಲಿ ತುಚ್ಛಭಾವವೂ ಬರಲಿಕ್ಕೆ ಅವರ ಇತಿಹಾಸದಲ್ಲಿಯೇ ಏನೋ ಕಾರಣವಿತ್ತು. ಅವರಿಗೆ ಪ್ರಿಯವಾದುದಿವರಿಗೆ ಅಪ್ರಿಯ. ಇವರಿಗೆ ಮಾನ್ಯವಾದುದವರಿಗೆ ತುಚ್ಛ. ಈ ಭೇದಕ್ಕೆ ಕಾರಣವು ಜ್ಞಾನವೆಂದು ಹೇಳಬೇಕೋ ? ದ್ವೇಷವೆಂದು ಹೇಳಬೇಕೋ ?

**ಇಬ್ಬರೂ ಶಕ್ತಿಗಳಲ್ಲ, ಮೊದಲು ವ್ಯಕ್ತಿಗಳೇ.** ಈ ಎರಡೂ ತಂಡಗಳ ಮೂಲ ಗ್ರಂಥಗಳನ್ನು ಪರಿಶೀಲಿಸಿದವರಿಗೆ ದೇವರೂ ಅಸುರರೂ ಮೊದಲು ಒಂದೇ ಮೂಲಕ್ಕೆ ಸೇರಿಕೊಂಡಿದ್ದು ಕೂಡಿಕೊಂಡು ಬಾಳಿದ ಜನರು **ಅಲ್ಲದೆ** ಶಕ್ತಿಗಳಲ್ಲ ಎಂಬುದು ಚನ್ನಾಗಿ ತೋರುತ್ತದೆ. ಬರಬರುತ್ತ ದೇವರಿಗೂ ಅಸುರರಿಗೂ ಜಗಳವಾಗಿ ಅಸುರರು ದೇವತೆಗಳಿಂದ ಸೋಲಿಸಲ್ಪಟ್ಟಿರಬೇಕು. ಜಗಳದಿಂದಾದ ಭೇದವೇ ಅವರಲ್ಲಿ ಬೆಳೆದ ದ್ವೇಷಕ್ಕೆ ಕಾರಣವಾಗಿರಬೇಕು. ಬರಬರುತ್ತ ಇತಿಹಾಸಕ್ಕೆ **ಅದೃಶ್ಯದ ಬಣ್ಣವೇರಿ ಕುರುಡು ನಂಬಿಗೆಯಿಂದ ಈ ಜನರು ಶಕ್ತಿಗಳಾಗಿ ಭಾವಿಸಲ್ಪಟ್ಟಿರಬೇಕು.** ಪಾರ್ಸಿಗಳ ತಂಡವು ಅಸುರರದೂ ಭಾರತೀಯರದು ದೇವರದೂ ಆಗಿದ್ದಿರಬೇಕು. ಹೀಗಿರುವಾಗ ನ್ಯಾಯವಾಗಿ ಇವರಲ್ಲಿ ಒಬ್ಬರು ಹೆಚ್ಚು ಇನ್ನೊಬ್ಬರು ಕಡಿಮೆ, ಎಂದು ಹೇಳಲಾಗುವದಿಲ್ಲ.

ಶಬ್ದಗಳನ್ನು ಒಳಹೊಕ್ಕು ನೋಡಿದರೆ 'ಅಸು' ಗಳಲ್ಲಿ ರಮಿಸುವವನೇ ಅಸುರನು ಎಂದು ತಜ್ಞರ ಮತ, ಈ ಜೀವಿತವೇ ಸರ್ವಸ್ವವೆಂದು ಭಾವಿಸಿ ಸುಖಿಸುವವರೇ ಅಸುರರು; ಮಾಡತಕ್ಕದ್ದೆಲ್ಲವನ್ನೂ ಇಲ್ಲಿಯೇ ಮುಗಿಸಲು ಯತ್ನಿಸುವವರವರು; ಹೀಗೆಂದು ಕೆಲವರು ವ್ಯುತ್ಪತ್ತಿಯನ್ನು ತೋರಿಸುತ್ತಾರೆ. ಮತ್ತೆ ಕೆಲವರು ಅಸುರರೆಂದರೆ ಸುರಾಪಾನ ಮಾಡದಿರುವವರು ಎಂದು ತೋರಿಸುತ್ತಾರೆ. ಸಾಕಷ್ಟು ಆಧಾರವು ಇಬ್ಬರಲ್ಲಿಯೂ ಇದೆ. ಆದರೆ ನಿಷ್ಕರ್ಷೆಗೆ ಮೂಲವಾವುದು ? ಅವರ ಇತಿಹಾಸವನ್ನು ನೋಡಬೇಕು. ಅಸುರರು ಯಜ್ಞಯಾಗಾದಿಗಳಿಗೆ ಕೇವಲ ವಿರುದ್ಧರು. ಸುರಾಪಾನವು ಇವುಗಳಿಗೆ ಮುಖ್ಯವಾಗಿರೋಣದರಿಂದ ಇವರದನ್ನು ಕುಡಿಯುತ್ತಿದ್ದಿಲ್ಲವೆಂಬುದು ಸ್ಪಷ್ಟವಾಗುತ್ತದಷ್ಟೇ ? ಇವರಿಬ್ಬರಿಗೂ ಭೇದವು ಬರಲಿಕ್ಕೆ ಕಾರಣವು ಇಲ್ಲಿದೆ. ಅಸುರರು ಸಂಶಯಾಪನ್ನರು. ಇಹದಲ್ಲಿಯೇ ಕಂಡುಬರುವ ಶಕ್ತಿ, ವ್ಯಕ್ತಿ, ಉತ್ಪಾತಗಳ ಸಂಶೋಧಕರು, ಭೌತಿಕ ವಿಜ್ಞಾನ ಪ್ರಿಯರು. ಇವರಿಗೆ ಅಗೋಚರ ವಿಷಯಗಳಲ್ಲಿ ಅಷ್ಟು ನಂಬಿಕೆಯಿಲ್ಲ. ವೇದಗಳ ಆರ್ಯರಿಗೋ ಯಜ್ಞಯಾಗಾದಿಗಳಲ್ಲಿ ಬಹಳ ಶ್ರದ್ಧೆಯೆಂದು ಮೇಲೆಯೇ ಹೇಳಿದೆಯಷ್ಟೇ ? ಸ್ವರ್ಗ ನರಕ ಮುಂತಾದವುಗಳ ಫಲಗಳಲ್ಲಿಯೂ ಇವರಿಗೆ ಸಹಜವಾಗಿಯೇ ತುಂಬಾ ನಂಬಿಕೆ. ಮತ್ತು ಇವರ ನಂಬಿಕೆಗಳಿಗೆ ಕಣ್ಣುಮುಚ್ಚಿ ಕೈ ಹಾಕುವವರಿಗೇ ಇವರು ತಮ್ಮವರನ್ನಾಗಿ ಮಾಡಿಕೊಳ್ಳುತ್ತಿದ್ದರು. ಮತ್ತು ತಾವು ಅಂಥ ಅದೃಶ್ಯದ ರಹಸ್ಯವನ್ನು ತಿಳಿದಿಟ್ಟುಕೊಂಡವರೆಂದೂ ಅದರ ಅನುಭವವನ್ನು ಇತರರಿಗೆ ಕೊಡುವವರು ತಮ್ಮ ಕೈಯಲ್ಲಿದೆಯೆಂದೂ ಇತರರಲ್ಲಿ

ನಂಬಿಕೆಯನ್ನು ಹುಟ್ಟಿಸುತ್ತಿದ್ದರು. ಈ ರೀತಿಯಾಗಿ ತಾವು ಅಧಿಕಾರಿಗಳಾಗುತ್ತ ಬಂದರು. ಇತರರನ್ನು ಅದೃಶ್ಯದ ಬಲೆಗೆ ಸಿಕ್ಕಿಸಿ ತಮ್ಮ ಯಜಮಾನತೆಗೆ ಅಧೀನರನ್ನಾಗಿಟ್ಟುಕೊಂಡರು. ಇದು ವಿಜ್ಞಾನಪ್ರಿಯರಾದ ಅಸುರರಿಗೆ ಅಸಹ್ಯವೇ ಆಯಿತು. ಯಾಕಂದರೆ ಭೌತಿಕ ಜ್ಞಾನವು ತನ್ನನ್ನು ಹಬ್ಬಿಸುವದರಲ್ಲಿ ಬಹಳ ಕುತೂಹಲವುಳ್ಳದ್ದಾಗಿರುತ್ತದೆ. ಅದಕ್ಕೆ ಅಧಿಕಾರ ಅನಧಿಕಾರಗಳಲ್ಲಿ ನಂಬಿಕೆಯಿಲ್ಲ. ವಿದ್ಯೆಯೂ ಫಲವೂ ಪ್ರತ್ಯಕ್ಷ ಭೂಮಿಯಲ್ಲಿದ್ದದ್ದೇ ಆದರೆ ಇವನು ನೋಡಬಹುದು ಅವನು ನೋಡಕೂಡದು ಎಂದೆನ್ನುವದು ಶುದ್ಧ ಅವಿವೇಕವೇ ಎಂದಿವರ ಮತ. ಇದು ದೃಶ್ಯವನ್ನು ಅರಿಯಲು ಯತ್ನಿಸದೆ ಅದೃಶ್ಯ ಶ್ರೋತ್ರದಲ್ಲಿಯೇ ತಲೆ ಹಾಕುವ ಮತ್ತು ಹಾಕಿಸುವ ಆರ್ಯರಿಗೆ ಅಸಮ್ಮತವಾಗಿತ್ತು. ಒಬ್ಬರ ಮತವು ಇನ್ನೊಬ್ಬರಿಗೆ ಮೃತ್ಯುವಾಯಿತು. ಇದೇ ದ್ವೇಷಕ್ಕೆ ಕಾರಣ.

## ರಾಕ್ಷಸರು

ಈಗ ಇವರನ್ನು ಕುರಿತು ಶೋಧ ನಡೆಸುವಾಗ ಇತಿಹಾಸಕಾರರಲ್ಲಿ ಅಭಿಪ್ರಾಯ ವ್ಯತ್ಯಾಸವು ಕಂಡುಬರುತ್ತದೆ. ಕೆಲವರು ಈ ರಾಕ್ಷಸರು ಬಹುಕಾಲಕ್ಕೆ ಹಿಂದೆ ಬೇರೆಯಾದ ಅಸುರರ ಸಂತಾನವೇ ಎಂದೆನ್ನುತ್ತಾರೆ. ಮತ್ತೆ ಕೆಲವರು ಅವರಿಗೂ ಎರಡು ತಂಡಗಳ ಆರ್ಯರಿಗೂ ಸಂಬಂಧವೇ ಇಲ್ಲವೆಂದೂ ಅವರು ದ್ರಾವಿಡರೆಂದೂ ಹೇಳುತ್ತಾರೆ. ಅದೇನೇ ಆಗಲಿ– ರಾಮಾಯಣದಲ್ಲಿ ಅವರ ವರ್ಣನೆಯನ್ನು ನೋಡುವಾಗ ಅವರು ತಮ್ಮ ವೈರಿಗಳಾಗಿದ್ದ ಆರ್ಯರಿಗಿಂತ ಬಹಳ ನಾಗರಿಕರಾಗಿದ್ದರೆಂದು ಒಡೆದು ತೋರುತ್ತದೆ. ಲಂಕೆಯಲ್ಲಿಯ ಕಲಾಧನಗಳ ಸುಗತಿ ಪ್ರಗತಿಗಳೇ ಇದಕ್ಕೆ ಪ್ರಮಾಣ. ರಾಕ್ಷಸರು ಸಮುದ್ರಯಾನ ಮತ್ತು ಯುದ್ಧಕ್ಕೆ ಸಂಬಂಧಪಟ್ಟ ಕಲೆಗಳಲ್ಲಿ ಬಹಳ ಪ್ರವೀಣರಾಗಿದ್ದರೆಂದೂ– ಅಷ್ಟೇ ಏಕೆ– ವಾಯು ವಿಮಾನಗಳನ್ನು ಸಹ ಕಂಡು ಹಿಡಿದಿದ್ದರೆಂದೂ ರಾಮಾಯಣವೇ ತೋರಿಸುತ್ತದೆ. ಸೀತೆಯನ್ನು ರಾವಣನು ಆಕಾಶ ಮಾರ್ಗವಾಗಿ ಒಯ್ದನು ಎಂಬದು ಸಾಮಾನ್ಯವಾಗಿ ತಿಳಿದ ಮಾತೇ. ಹೀಗಿರುವಾಗ ಇಂಥ ನಾಗರಿಕರಾದ ರಾಕ್ಷಸರಿಗೆ ಪುರಾಣೇತಿಹಾಸಗಳಲ್ಲಿ ನಿಂದೆ ಮಾತ್ರವೇ ಏಕೆ ಪಾಲಿಗೆ ಬಿತ್ತು ಎಂಬ ಪ್ರಶ್ನೆಯು ಸಹಜವಾಗಿಯೇ ಏಳುತ್ತದಲ್ಲದೆ ಅದರ ಕಾರಣಗಳನ್ನು ಹುಡುಕುವದಕ್ಕೆ ಕಷ್ಟ ಪಡಬೇಕಾಗಿಲ್ಲ. ಅವು– ೧. ಯುದ್ಧದಲ್ಲಿ ಅವರು ತಮ್ಮ ವೈರಿಗಳಿಗಿಂತ ಬಲಾಢ್ಯರೂ ಚತುರರೂ ಆಗಿದ್ದು ಆರ್ಯರಿಗೆ ಬಲವಾಗಿ ಇದಿರಾಗಿದ್ದರೋಣದರಿಂದ ಆ ಆರ್ಯರು ಅವರ ನಿಜವಾದ ದೊಡ್ಡಸ್ತಿಕೆಯನ್ನು ಸಹ ಹೀಯಾಳಿಸಿದರು. ೨ ಆರ್ಯ ಋಷಿಗಳಿಗೆ ರಾಕ್ಷಸರಲ್ಲಿ ಸುತರಾಂ ಅಭಿಮಾನವಿದ್ದಿಲ್ಲ. ಏಕೆಂದರೆ ರಾಕ್ಷಸರು ಯಜ್ಞಯಾಗಾದಿಗಳಿಗೆ ಕೇವಲ ವಿರುದ್ಧರು ಎಂದು ಮೇಲೆಯೇ ತೋರಿಸಿದೆಯಷ್ಟೆ. ಈ ಋಷಿಗಳಿಗೆ ಇವರು ದ್ವೇಷಿಗಳು. ಏತಕ್ಕೆಂದರೆ ರಾಕ್ಷಸರಿಗೆ ಸೇರಿದ ಫಲವತ್ತಾದ ದಕ್ಷಿಣದಲ್ಲಿ ಇವರಿಗೆ ತಮ್ಮ ಯಜ್ಞಯಾಗಾದಿಗಳನ್ನು ನಡೆಸಿ ತಮ್ಮ ಉಪದೇಶದಿಂದ ಸಮಾಜದಲ್ಲಿ ಉಚ್ಚನೀಚಭಾವ ಅಧಿಕಾರ ಅನಧಿಕಾರ ವಾದಗಳ ಗಾಳಿಯನ್ನು ಸಹ ಸುಳಿದಾಡಲಿಕ್ಕೆ ಇವರು ಬಿಡುತ್ತಿದ್ದಿಲ್ಲ. ಋಷಿಗಳ ರೀತಿ ನೀತಿಗಳಿಂದ ತಮ್ಮ ಸಂಘದಲ್ಲಿ ಭೇದವು ಹುಟ್ಟಿ ಅದು ದುರ್ಬಲವಾದಂತೆ ಆರ್ಯರಿಗೆ ಬಲವು ಹೆಚ್ಚುವದೆಂಬ ಭೀತಿಯು ರಾಕ್ಷಸರಿಗುಂಟಾಗುವದು ಸಹಜವೇ, ಅಷ್ಟೇ ಅಲ್ಲದೆ ಈ ಋಷಿಗಳು ತಮ್ಮ ವೈರಿಗಳಾದ ಆರ್ಯರ ಗೂಢಾಚಾರಿಗಳೆಂಬ ಸಂದೇಹವು ರಾಕ್ಷಸರಲ್ಲಿ ನೆಲೆಗೊಂಡಿತ್ತು. ಅದಕ್ಕಾಗಿ ಇವರನ್ನು ದೂರಗೊಳಿಸುವ ಪ್ರಯತ್ನವನ್ನು ರಾಕ್ಷಸರು ಸದಾ ನಡೆಸಿದ್ದರು. ಅದಕ್ಕೆ ಸರಿಯಾಗಿ ಅನೇಕ ಋಷಿಗಳು ರಾಕ್ಷಸರನ್ನು ಬಹು ತುಚ್ಛವಾಗಿ ನಿರೂಪಿಸಿದರು. ೩. ಇಬ್ಬರ ಸಂಸ್ಕೃತಿಗಳೂ ಪರಸ್ಪರ ವಿರುದ್ಧ. ಇದನ್ನು ತಕ್ಕಮಟ್ಟಿಗೆ ಹಿಂದೆ ತೋರಿಸಲಾಗಿದೆ. ರಾಕ್ಷಸರಲ್ಲಿ ಜಾತಿಭೇದಗಳಿಲ್ಲ. ಅವರ ಸಂಘವೆಲ್ಲವೂ ಒಂದೇ. ಮಾತೃಪ್ರಧಾನವಾದ ಸಂಸ್ಕೃತಿಯವರದು. ಆಸ್ತಿಯ ಹಕ್ಕು ಹೆಂಗಸರದು. ಹೆಚ್ಚಾಗಿ ಆರ್ಯರು ಇದಕ್ಕೆದಿರು. ೪. ಕ್ರಮೇಣ ಇನ್ನೊಂದು ಮುಖ್ಯ ಕಾರಣವುಂಟಾಯಿತು. ರಾಕ್ಷಸರು ಶೈವರು. ದಕ್ಷಿಣಕ್ಕೆ ಬಂದ ಆರ್ಯರಲ್ಲನೇಕರು ವೈಷ್ಣವರು. ಶಿವಪೂಜಕರನ್ನೆಲ್ಲ ಅಮಾನುಷಕೃತ್ಯಪ್ರಿಯರೆಂದು ಇವರು ಬಣ್ಣಿಸಿದರು. ರಾಕ್ಷಸರನ್ನು ಕುರಿತು ಬರೆದಲ್ಲನೇಕ ಕಡೆಗಳಲ್ಲಿ ಶೈವ ವೈಷ್ಣವ ಭೇದದ ಧ್ವನಿಯು ಬೇಕಾದಷ್ಟಿದೆ. ದೃಷ್ಟಾಂತಕ್ಕೆ ಹಿರಣ್ಯಕಶಿಪುವಿನ ಮರಣಕ್ಕೆ ಆತನ ಶಿವಭಕ್ತಿಯೇ ಆತನಿಗಿದ್ದ ವಿಷ್ಣುದ್ವೇಷವೇ ಮೂಲವೆಂಬದನ್ನು ಪುರಾಣವು ಒಡೆದು ತೋರಿಸಲಿಲ್ಲವೇ! ವಾಮನನು ಮಹಾಬಲಿಯನ್ನು ಪಾತಾಳಕ್ಕೆ ಕಳಿಸಿದ್ದನ್ನು ತಕ್ಕೊಳ್ಳಿ. ಮತ್ತೆ ಹೀಗೆ ಅನೇಕ ಕಡೆಗಳಲ್ಲಿ ವಿಷ್ಣು ಸರ್ವೋತ್ತಮನೆಂಬದು ಪುರಾಣಗಳಲ್ಲಿ ಧ್ವನಿತವಾಗುವದಿಲ್ಲವೆ? ಶೈವ ಮತವನ್ನು ನಾಶಮಾಡುವ ಪ್ರಯತ್ನವು ಆರ್ಯರ ಈ ಭಾಗದಲ್ಲಿ ಧಾರಾಳವಾಗಿ ಕಾಣುತ್ತದೆ.

ಇತಿಹಾಸ ಕರ್ತರು ಶಿವನು ಬಹು ಪ್ರಾಚೀನಕಾಲದಿಂದ ದ್ರಾವಿಡರ 'ಇಷ್ಟ'ವೆಂಬದು ಹೇಳುತ್ತಾರೆ. ಈ ವಿಷಯು ಶ್ರೀ ಬಾಬು ಗೋವಿಂದ ದಾಸರು ತಮ್ಮ ಹಿಂದೂ ಧರ್ಮ (Hinduism) ಎಂಬ ಪುಸ್ತಕದಲ್ಲಿ ಹೀಗೆಂದು ಬರೆದಿರುತ್ತಾರೆ– "ದ್ರಾವಿಡರು ಈಗ ವಿಶೇಷವಾಗಿ ದಕ್ಷಿಣ ಹಿಂದೂಸ್ಥಾನದಲ್ಲಿಯೇ ಇದ್ದರು. ಈ ದೇಶದ ಪ್ರಾಚೀನ ಇತಿಹಾಸದಲ್ಲಿ ಅವರು ದೇಶದಲ್ಲೆಲ್ಲಾ ಹಬ್ಬಿಕೊಂಡಿದ್ದರೆಂಬದು ಸ್ಪಷ್ಟವಾಗಿದೆ. ಈಶಾನ್ಯಕ್ಕೆ ಬಲುಚಿಸ್ತಾನದವರೆಗೆ ಅವರು ಹಬ್ಬಿದ್ದರು. ಅಲ್ಲಿಯ ದೊಡ್ಡ ಬ್ರಾಹೊಯಿ ಜನಾಂಗವು ದ್ರಾವಿಡರದೇ ಆಗಿತ್ತು. ದ್ರಾವಿಡರು ಈಗ ಮುಖ್ಯವಾಗಿ ಹಿಂದೂಸ್ಥಾನದ ದ್ವೀಪಕಲ್ಪಸ್ಥ ಭಾಗದಲ್ಲಿಯೇ. ಇರೋಣದವರಿಂದ ಅವರ ಸಂಸ್ಕೃತಿಯ ಪ್ರಭಾವವು ಸಮಗ್ರ ಭಾರತೀಯ ಸಂಸ್ಕೃತಿಯ ಮೇಲೆ ಹಿಂದಿನಿಂದ ಎಷ್ಟರಮಟ್ಟಿಗೆ ಬಿದ್ದಿದೆ ಎಂಬದು ಸಾಮಾನ್ಯಬುದ್ಧಿಗೆ ತೋರುವದಿಲ್ಲ" ದೊಡ್ಡ ಪಂಡಿತರೂ ಇತಿಹಾಸ ಸಂಶೋಧಕರೂ ಆದ ಗೋವಿಂದದಾಸರ ಅಭಿಪ್ರಾಯವು ಹೀಗಿದೆ. ದ್ರಾವಿಡರು ದಕ್ಷಿಣಕ್ಕಿಳಿದಂತೆ ಶೈವಮತವು ವಿಶೇಷವಾಗಿ ದಕ್ಷಿಣದಲ್ಲಿಯೇ ಕೇಂದ್ರಿತವಾಯಿತು. ಈಚೆಗೆ ಹಿಂದಿನ ಹೆಚ್ಚುಕಡಿಮೆ ಎಂಟುನೂರು ವರ್ಷಗಳಲ್ಲಿ ಅದು ಉತ್ತರದಲ್ಲಿಯೂ ಹಬ್ಬುತ್ತ ಹೋಯಿತು. ಹಾಗಾದರೂ ವೈಷ್ಣವ ಮತದ ಪ್ರಾಬಲ್ಯವು ಅಲ್ಲಿದ್ದಂತೆ ಶೈವಮತದ್ದಿಲ್ಲವೇ ಇಲ್ಲ. ಈ ವಿಮರ್ಶೆಯಾದನಂತರ ಸ್ವರಾಜ್ಯಪ್ರಸರಣಪ್ರಿಯರೂ ಶೈವಮತದ್ವೇಷಿಗಳೂ ಆದ ಆರ್ಯರು ತಮ್ಮ ಪುರಾಣಗಳಲ್ಲಿ ಮಾಡಿದ ರಾಕ್ಷಸರ ನಿಂದೆಗೆ ಅವರ ದುರ್ಗುಣಕ್ಕಿಂತಲೂ ತಮ್ಮ ದುಃಸ್ವಾರ್ಥವೇ ಹೆಚ್ಚಾಗಿ ಕಾರಣವಾಗಿತ್ತು ಎಂಬದು ಇತಿಹಾಸಸಂಶೋಧನದಿಂದ ಸ್ಪಷ್ಟವಾಗುವದಿಲ್ಲವೇ ?

ಪೌರೋಹಿತ್ಯ ಉಪಾಧ್ಯಾಯವೃತ್ತಿಯಿಂದಲೇ ಇಂಥ ಭೇದಗಳು ಅಂಕುರಿಸಿ, ಸಮಾಜದಲ್ಲಿ ಉಚ್ಚನೀಚ ಭಾವಗಳು ಮೂಡಿ ಮನೆಮಾಡಿದ್ದುಕೊಂಡು ಸಮಾಜವು ಶಿಥಿಲವಾಯಿತು. ಜಾತಿಗಳ ಭೇದವೇ ಅಲ್ಲದೆ ನೀತಿಗಳ ಭೇದವೂ ಉಂಟಾಯಿತು. ಜಾತಿಗೆ ತಕ್ಕ ಅಧಿಕಾರ, ನೀತಿ, ಧರ್ಮ, ಶಾಸನಗಳಂತೆ! ಅವರು ಅಂದು ಹಚ್ಚಿದ ಬೆಂಕಿಯು ಈಗಲೂ ಆರಲಿಲ್ಲ. ಮತಮತಾಂತರಗಳ ಜಗಳಗಳೂ ಬ್ರಾಹ್ಮಣ ಬ್ರಾಹ್ಮಣೇತರರ ಕಾದಾಟಗಳೂ ಈ ಪ್ರಾಚೀನ ವೃಕ್ಷದ ಕೊಂಬೆಗಳೇ ! ಇಂತಹ ಸಂಘವಿಚ್ಛೇದಕ ವೃತ್ತಿಗತಿಕರ್ಮಗಳಿಗೆ ನಮ್ಮಲ್ಲಿಯ ಅನೇಕ ಕಪೋಲನಿರ್ಮಿತ ಗುರುಗಳೂ ಪಂಡಿತಮನ್ಯರೂ ಇನ್ನೂ ಬಹಳ ಅನುಕೂಲರೇ ! ಅಜ್ಞಾನ ಸ್ವಾರ್ಥಗಳಿಂದ ಒಂದಕ್ಕೆ ನೂರಾದ ಜನಾಂಗಗಳೂ ದೇವದೇವತೆಗಳೂ ಜ್ಞಾನ ಪ್ರೇಮಗಳ ಉಪಯದಿಂದ ಎಂದು ಒಂದು ಆಗುವರೋ ಅಂದೇ ನಮ್ಮ ಉದ್ಧಾರ; ಅಲ್ಲದೆ ಮಾನವನಿಗೆ ಮಾನವ್ಯವೂ ಬರುವದು ಜಗತ್ತಿಗೂ ಕಲ್ಯಾಣವಾಗುವದು.

---

## ಗೀತಾಪತಿಗೆ !

ಪತ್ರಂ ಪುಷ್ಪಂ
ಫಲಂ ತೋಯಂ '
ಇತ್ತರೆ ಬೇಡವೆನು
ಹತ್ತಿರವೇ ಎಂ-
ದತ್ತೂ ಕರೆದೂ
ಭಿಡೆಗಿಡೆಯಿಲ್ಲದೆ
ನಯಭಯವಿಲ್ಲದೆ
ಭಿಕ್ಷೆಯು ಬೇಡುವ
ಭಿಕಾರಿ ಭೋ ಪ್ರಭು !
ಭಗವದ್ಗೀತಾ
ಕರ್ತೃವೆ ನೇತೃವೆ !

ಎಲ್ಲೆಯು ಇಲ್ಲದೆ
ಎಲೆ ಎಲೆ ದೇವಾ !
ಎಲೆಯೂ ಇಲ್ಲದೆ
ತೊಳಲುತ ಬಳಲು-
ತ್ತಲೆಯುವ ಈ ಗಾ-
ವಿಲನಾಗಿಹ ದೇ-
ವಿಲಿಯಾದೆನ್ನಯು
ಬಳಿಯಲಿ ನೀನೇ
ಬಳಿಸಾರುವದಿಲ್ಲೇನಯ್ಯಾ
ಕುಲುಕುಲು ನಗುತಲಿ ಕನ್ನಯ್ಯಾ!

—ಪ್ರಲ್ಹಾದ

# ಧರ್ಮಶಾಸ್ತ್ರಕಾಲದಲ್ಲಿನ ವರ್ಣಾಶ್ರಮವ್ಯವಸೆ

ಲೇಖಕರು— ಶ್ರೀ. ಮಹಾಬಲ ಶಂಕರ ಹೆಗಡೆ, ಎಂ. ಎ., ಎಲ್ಎಲ್ ಬಿ., ಹೊನ್ನಾವರ

ವರ್ಣಾಶ್ರಮ ವ್ಯವಸ್ಥೆಯು ಹಿಂದೂಧರ್ಮದ ಹೆಗ್ಗುರುತಾಗಿರುತ್ತದೆ. ಧರ್ಮಶಾಸ್ತ್ರಕಾರರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಭೇದಗಳನ್ನು ಕಲ್ಪಿಸಿರುತ್ತಾರೆ. ಈ ಸಮಾಜ ವಿಭಾಗವು ಹಿಂದೂ ಧರ್ಮದ ವೈಶಿಷ್ಟ್ಯವನ್ನು ತೋರಿಸುತ್ತದೆ. ಚತುರ್ವರ್ಣಗಳೂ ಸಮಾಜದ ಹಿತಕ್ಕೆ ಸಹಕಾರಿಗಳಾಗಿರಬೇಕು. ಬ್ರಾಹ್ಮಣನು ವೇದಾಭ್ಯಾಸವನ್ನು ಮಾಡಿ ಸಕಲ ವಿದ್ಯೆಗಳಲ್ಲಿ ನುರಿತು ಇತರರಿಗೂ ಅವುಗಳನ್ನು ಕಲಿಸಬೇಕು. ಯಜ್ಞಗಳನ್ನು ಮಾಡಿಸಬೇಕು. ಲೋಕಹಿತದ ಬಗ್ಗೆ ಯಜ್ಞಯಾಗಾದಿಗಳನ್ನು ಮಾಡಬೇಕು. ಕ್ಷತ್ರಿಯನು ದೃಢಕಾಯನಾಗಿದ್ದು ಅರಸನ ಹಿಂಬಾಲಕನಾಗಿ ಯುದ್ಧಕಲೆಯಲ್ಲಿ ಪ್ರವೀಣನಾಗಬೇಕು. ಪರದೇಶದ ಜನರು ದಾಳಿ ಮಾಡಿದರೆ ಇಲ್ಲವೆ ರಾಜ್ಯದಲ್ಲಿಯೇ ಅಂತಃಕಲಹಗಳು ಹುಟ್ಟಿದರೆ ಕ್ಷತ್ರಿಯನ ಸಹಾಯವು ಬೇಕು. ವೈಶ್ಯನು ವ್ಯಾಪಾರೋದ್ದಿಮೆಗಳಲ್ಲಿ ಪ್ರವೃತ್ತನಾಗಿ ಜನರಿಗೆ ಬೇಕಾದ ಸಲಕರಣೆಗಳನ್ನು ಪೂರೈಸತಕ್ಕದ್ದು. ಶೂದ್ರನು ಕಾಯಕಷ್ಟವನ್ನು ಮಾಡತಕ್ಕದ್ದು. ಶ್ರಮವಿಭಾಗ ದೃಷ್ಟಿಯಿಂದ ಈ ವರ್ಣವ್ಯವಸ್ಥೆಯು ಉತ್ತಮವಾದದ್ದು.

ಈ ಚತುರ್ವರ್ಣಗಳಲ್ಲದೆ ಸ್ಮೃತಿಕಾಲದಲ್ಲಿ ನಿಷಾದ, ಉಗ್ರ, ಚಾಂಡಾಲ ಮೊದಲಾದ ಹೀನ ತರಗತಿಯ ಜನರೂ ಇದ್ದರೆಂದು ತೋರುತ್ತದೆ. ಇವರು ಊರ ಹೊರಗೆ ಇರುತ್ತಿದ್ದದರಿಂದ ಇವರನ್ನು ಬಾಹ್ಯಾಃ ಎಂದು ಕರೆಯುತ್ತಿದ್ದರು. ಅವರು ಊರೊಳಗೆ ಬಂದಾಗ ಬ್ರಾಹ್ಮಣ ವಟುಗಳು ತಮ್ಮ ಅಧ್ಯಯನವನ್ನು ತಡೆಯಿಡಬೇಕು. (तदहरागतेषु च ग्रामं बाह्येषु । अपि सत्सु । ಆಪಸ್ತಂಭ ೧, ೩, ೧೮, ೧೯ बाह्याः श्वनिषादादयः ಹರದತ್ತ) (ಮನುಸ್ಮೃತಿ ೧೦, ೨೯–೩೦) ಚಂಡಾಲನನ್ನು ಮುಟ್ಟಿದರೆ ಇಲ್ಲವೆ ನೋಡಿದರೆ ಇಲ್ಲವೆ ಅವನೊಡನೆ ಮಾತಾಡಿದರೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ. (ಆಪಸ್ತಂಭ ೨, ೧, ೯) ಅಸ್ಪೃಶ್ಯತೆಯ ಮೂಲವು ಇದೇ ಇರಬಹುದು. ಚಾಂಡಾಲ, ನಿಷಾದ ಮೊದಲಾದ ಜಾತಿಯವರು ತಮ್ಮ ಉಡಿಗೆತೊಡಿಗೆಗಳಿಂದಲೂ ಆಚಾರಗಳಿಂದಲೂ ಅಸ್ಪೃಶ್ಯರಿದ್ದದರಿಂದ ಈ ಭೇದಕ್ಕೆ ಕಾರಣವಾಯಿತು. ಚಾಂಡಾಲರು ವೇದಾಧ್ಯಯನವನ್ನು ಮಾಡುತ್ತಿದ್ದಿಲ್ಲ. ಹಿಂಸೆಯಿಂದ ಹೊಟ್ಟೆ ಹೊರಕೊಳ್ಳುತ್ತಿದ್ದರು. ಆದುದರಿಂದ ಅವರು ಸ್ಪರ್ಶಕ್ಕೆ ಅಯೋಗ್ಯರೆಂದು ಅವರನ್ನು ಊರ ಹೊರಗೆ ತಳ್ಳಿಬಿಟ್ಟದ್ದರೆಂದು ತೋರುತ್ತದೆ.

ಚತುರ್ವರ್ಣಗಳ ಮೂಲವನ್ನು ತಿಳಿಯುವದು ದುಸ್ತರವಾದದ್ದು. चातुर्वर्ण्यं मया सृष्टं गुणकर्मविभागशः । ಎಂಬ ಭಗವದುಕ್ತಿಯಂತೆ ಗುಣಕರ್ಮಗಳಿಂದಲೇ ಚತುರ್ವರ್ಣಗಳನ್ನು ವಿಭಾಗಿಸತಕ್ಕದ್ದು. ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಾತ್ರದಿಂದಲೇ ವಿಪ್ರತ್ವವು ಬರುವದಿಲ್ಲ. जन्मना जायते शूद्रः । ಹುಟ್ಟುವಾಗ ಎಲ್ಲರೂ ಒಂದೇ ವರ್ಣಕ್ಕೆ ಸೇರಿದವರು. ಆದರೆ ಅನುರೂಪವಾದ ಸಂಸ್ಕಾರಗಳಿಂದಲೂ ಆಚಾರಗಳಿಂದಲೂ ಅಧ್ಯಯನದಿಂದಲೂ ಬ್ರಾಹ್ಮಣನು ನಿಜವಾದ ದ್ವಿಜನಾಗುತ್ತಾನೆ. ಸಂಸ್ಕಾರವಿಹೀನನಾದವನು ಸಮಾಜಬಾಹ್ಯನು. ಅವನು ದ್ವಿಜವರ್ಣಕ್ಕೆ ಸೇರಿದವನಲ್ಲ. ಈ ಜನ್ಮದಲ್ಲಿ ತನ್ನ ವರ್ಣಕ್ಕೆ ವಿಹಿತವಾದ ಧರ್ಮವನ್ನು ಪಾಲಿಸಿದರೆ ಮುಂದಿನ ಜನ್ಮದಲ್ಲಿ ಅವನು ಮೇಲಣ ವರ್ಣವನ್ನು ಸೇರಲಿಕ್ಕೆ ಅರ್ಹನು ಎಂದು ಆಪಸ್ತಂಭನು ಹೇಳುತ್ತಾನೆ. ಆದರೆ ಸ್ವಧರ್ಮವನ್ನು ತ್ಯಜಿಸಿದರೆ ಮುಂದಿನ ಜನ್ಮದಲ್ಲಿ ಅದಕ್ಕೂ ಕೀಳಾದ ವರ್ಣದಲ್ಲಿಯೇ ಹುಟ್ಟುತ್ತಾನೆ. ಆಪಸ್ತಂಭ ೨, ೫, ೧೦–೧೧ (धर्मचर्यया जघन्यो वर्णः पूर्वं पूर्वं वर्णमापद्यते जातिपरिवृत्तौ । अधर्मचर्यया पूर्वो वर्णो जघन्यं जघन्यमापद्यते जातिपरिवृत्तौ) ಕ್ಷತ್ರಿಯನು ಈ ಜನ್ಮದಲ್ಲಿ ಕ್ಷತ್ರಿಯ ಧರ್ಮದಂತೆ ನಡೆದರೆ ಮುಂದಿನ ಜನ್ಮದಲ್ಲಿ ಅವನು ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಅದಕ್ಕೆ ವಿರೋಧವಾಗಿ ವರ್ತಿಸಿದರೆ ವೈಶ್ಯ ಇಲ್ಲವೆ ಶೂದ್ರನಾಗಿ ಹುಟ್ಟುತ್ತಾನೆ.

ಉದ್ಯೋಗದ ಬದಲಾವಣೆಯಿಂದ ವರ್ಣಾಂತರವಾಗುವ ಉದಾಹರಣೆಯು ಸ್ಮೃತಿಗಳಲ್ಲಿ ಕಾಣುತ್ತದೆ. ಬ್ರಾಹ್ಮಣನು ಕ್ಷತ್ರಿಯ ವೃತ್ತಿಯನ್ನು ಕೈಕೊಂಡರೆ ಕ್ಷತ್ರಿಯರೊಡನೆ ಬೆರೆಯುತ್ತಿದ್ದನು. ಆಪತ್ಕಾಲದಲ್ಲಿ ಯಾವ ವರ್ಣದವರ ವೃತ್ತಿ

ಯನ್ನಾದರೂ ಅನುಸರಿಸಬಹುದು. (ಮನು. ೧೦, ೮೧-೧೭೭) ಬ್ರಾಹ್ಮಣನು ಶೂದ್ರನ ಧರ್ಮವನ್ನು ಅನುಸರಿಸಿದರೆ ಅವನಿಗೆ ಪಾಪವು ತಗಲುವದಿಲ್ಲ. ಆದರೆ ಮನಸ್ವಿಯಾಗಿ ಕೀಳು ಧರ್ಮವನ್ನು ಅಂದರೆ ತನ್ನ ವರ್ಣಕ್ಕಿಂತಲೂ ಕಡಿಮೆ ವರ್ಣದವರ ಉದ್ಯೋಗವನ್ನು ಬಹಳ ವರ್ಷಗಳ ವರೆಗೆ ಮಾಡಿದರೆ ಅವನು ೫ ನೆಯ ಪೀಳಿಗೆಯಲ್ಲಿ ಆ ಕೀಳು ವರ್ಣಕ್ಕೆ ಇಳಿಯು ತ್ತಾನೆ ಬ್ರಾಹ್ಮಣ ಕುಟುಂಬವು ಕ್ಷತ್ರಿಯ ವೃತ್ತಿಯನ್ನು ಅನುಸರಿಸಿದರೆ ಆ ಕುಟುಂಬದ ಐದನೆಯ ಪೀಳಿಗೆಯು ಕ್ಷತ್ರಿಯ ವರ್ಣಕ್ಕೆ ಇಳಿಯುತ್ತದೆ.

जात्युत्कर्षो युगे ज्ञेयः पंचमे सप्तमेऽपि वा ।
व्यत्यये कर्मणां साम्यं पूर्ववच्चाधरोत्तमम् ॥

ಯಾಜ್ಞವಲ್ಕ್ಯ ೧,೯೬

ಬ್ರಾಹ್ಮಣನು ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯ ಹೆಣ್ಣನ್ನು ಮದುವೆಯಾಗಬಹುದು. ಅದರಂತೆಯೇ ಕ್ಷತ್ರಿಯನು ವೈಶ್ಯ ಶೂದ್ರರನ್ನು ಮದುವೆಯಾಗಬಹುದು. ಆದರೆ ಕ್ಷತ್ರಿಯನು ಬ್ರಾಹ್ಮಣ ಹೆಂಗಸನ್ನು ವಿವಾಹಮಾಡಿಕೊಳ್ಳುವದು ನಿಷಿದ್ಧವು. ಉತ್ತಮ ವರ್ಣದ ಪುರುಷನೊಡನೆ ಕೀಳು ಜಾತಿಯ ಸ್ತ್ರೀಯ ಸಂಬಂಧವು ಅನುಲೋಮ ವಿವಾಹವು. ಅದನ್ನು ಸ್ಮೃತಿಕಾರರು ಸಮರ್ಥಿಸುತ್ತಾರೆ. ಆದರೆ ಉತ್ತಮ ವರ್ಣದ ಸ್ತ್ರೀಯು ಕೀಳುಜಾತಿಯವನೊಡನೆ ಬೆರೆತರೆ ಅದು ಪ್ರತಿಲೋಮ ವಿವಾಹವು. ಅದು ನಿಂದ್ಯವಾದದ್ದು. ಅನುಲೋಮ ವಿವಾಹದಿಂದ ಹುಟ್ಟಿದ ಮಕ್ಕಳೊಳಗೆ ಸ್ಮೃತಿಕಾರರು ಭೇದವನ್ನು ಮಾಡುತ್ತಾರೆ. ಇರಲಿ.

ಚಾತುರ್ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣರು ತಮ್ಮ ಉಗ್ರವಾದ ತಪೋಬಲದಿಂದಲೂ ನಿಃಸ್ವಾರ್ಥತೆಯಿಂದಲೂ, ಸದಾಚಾರದಿಂದಲೂ, ವೀರ್ಯದಿಂದಲೂ ಅಗ್ರಸ್ಥಾನವನ್ನು ಪಡೆದಿರುತ್ತಾರೆ. ಸ್ಮೃತಿಕಾರರು ವ್ಯರ್ಥವಾಗಿ ಬ್ರಾಹ್ಮಣ ಪಕ್ಷಪಾತಿಗಳೆಂದು ಹೇಳುವದು ಸರಿಯಲ್ಲ. ಬ್ರಾಹ್ಮಣರು ತಮ್ಮ ತೇಜಸ್ಸಿನಿಂದ ಇತರ ವರ್ಣದವರನ್ನು ಹಿಂದೆ ಹಾಕಿದುದರಿಂದ ಸ್ಮೃತಿಕಾರರು ಅವರಿಗೆ ಗೌರವವನ್ನು ಕೊಟ್ಟಿರುವರು. ಬ್ರಾಹ್ಮಣನು ಅರಸನಿಗೆ ಮಾನ್ಯನು. ಶ್ರೋತ್ರಿಯನಿಗೆ ಕೆಲವು ತೆರಿಗೆಗಳ ವಿನಾಯತಿ(Exemption from taxation) ಇತ್ತು. (सदा श्रोत्रियवर्ज्यानि शुल्कान्याहु: प्रजानता । गृहं प्रोषि इತ್ಯಾದಿ ನಾರದ ೩-೨೪.)

ಅವನು ಏನಾದರೂ ಅಪರಾಧ ಮಾಡಿದರೆ ಅವನಿಗೆ ಇತರ ವರ್ಣದವರಿಗಿಂತಲೂ ಕಡಿಮೆ ಶಿಕ್ಷೆ. ಎಂಥ ಅಪರಾಧ ಮಾಡಿದರೂ ಬ್ರಾಹ್ಮಣನು ದೇಹಾಂತ ಶಿಕ್ಷೆಗೆ ಪಾತ್ರನಲ್ಲ.

अविशेषेण सर्वेषामेष दण्डविधिः स्मृतः ।
वधादृते ब्राह्मणस्य न वधं ब्राह्मणोऽर्हति ॥

ನಾರದ ೧೭. ೯,೧೦

ಬ್ರಾಹ್ಮಣನನ್ನು ಬುದ್ಧ್ಯಾ ಕೊಂದವನಿಗೆ ಯೋಗ್ಯವಾದ ಪ್ರಾಯಶ್ಚಿತ್ತವೇ ಇಲ್ಲ. ಚತುರಾಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಮಿಗಿಲಾದದ್ದೆಂದು ಮನುವು ಹೇಳುತ್ತಾನೆ. ಗೃಹಸ್ಥನು ಇತರ ಆಶ್ರಮದಲ್ಲಿದ್ದ ಜನರಿಗೆ ಆಶ್ರಯವನ್ನು ಕೊಡುತ್ತಾನೆ. ಆದುದರಿಂದ ಗೃಹಸ್ಥಾಶ್ರಮವೇ ಶ್ರೇಷ್ಠವಾದದ್ದೆಂದು ಮನುವಿನ ಮತವು. ( ಮನುಸ್ಮೃತಿ ೩, ೭೮ ) ಮನುಷ್ಯನು ಹುಟ್ಟುವಾಗಲೇ ಮೂರು ತೆರದ ಋಣಗಳಿಗೆ ಪಾತ್ರನಾಗುತ್ತಾನೆ. 'जायमानो वै ब्राह्मणस्त्रिभिर् ऋणेर्जायते' ಎಂಬದು ಶ್ರುತಿವಾಕ್ಯವು. ಬ್ರಹ್ಮಚರ್ಯಾಶ್ರಮದಲ್ಲಿ ಅಧ್ಯಯನವನ್ನು ಸಾಂಗಗೊಳಿಸಿ ಋಷಿಗಳ ಋಣವನ್ನು ತೀರಿಸಬೇಕೆಂದೂ ಯಜ್ಞಗಳನ್ನು ಮಾಡಿ ದೇವತೆಗಳ ಋಣವನ್ನು ತೀರಿಸಬೇಕೆಂದೂ ಪ್ರಜೋತ್ಪಾದನೆಯಿಂದ ಪಿತೃಗಳ ಋಣದಿಂದ ಬಿಡುಗಡೆಹೊಂದಬೇಕೆಂದೂ ಸ್ಮೃತಿಕಾರರ ಅಭಿಪ್ರಾಯವು. ಹೀಗಿದ್ದು ಈ ಎಲ್ಲ ಸಾಲಗಳನ್ನು ತೀರಿಸಿ ಮೋಕ್ಷವನ್ನು ಗಳಿಸಲಿಕ್ಕೆ ಯತ್ನಿಸಬೇಕೆಂದು ಮನುವು ಹೇಳುತ್ತಾನೆ. (ಮನುಸ್ಮೃತಿ ೬-೩೫) ಯಾವ ಹೊತ್ತಿನಲ್ಲಿ ವಿರಕ್ತಿಯುತ್ಪನ್ನವಾಗುತ್ತದೆಯೋ ಆಗಲೇ ಸನ್ಯಾಸವನ್ನು ಸ್ವೀಕರಿಸಬೇಕೆಂದು ಶಂಕರಾಚಾರ್ಯರ ಮತವು (यदहरेव विरजेत् तदहरेव प्रव्रजेत्). ಶಂಕರಾಚಾರ್ಯರ ಮತಕ್ಕೂ ಸ್ಮೃತಿಕಾರರ ಮತಕ್ಕೂ ಈ ವಿಷಯದಲ್ಲಿ ಭೇದವಿರುವದು. ಬ್ರಹ್ಮಚರ್ಯಾಶ್ರಮವಾದನಂತರ ಸನ್ಯಾಸವನ್ನು ಸ್ವೀಕರಿಸಬಹುದೆಂದು ಶ್ರೀಮದಾಚಾರ್ಯರ ಹೇಳಿಕೆಯು. ಆದರೆ ಗ್ರುಹಸ್ಥಾಶ್ರಮವನ್ನು ಮುಗಿಸಿದ ಹೊರತು ಚತುರ್ಥಾಶ್ರಮವನ್ನು ಕೈಕೊಳ್ಳಬಾರದೆಂದು ಮನು ಮೊದಲಾದ ಸ್ಮೃತಿಕಾರರು ಹೇಳುತ್ತಾರೆ. ಅರಣ್ಯಕ್ಕೆ ಹೊರಟು ಹೋಗುವಾಗ ಹೆಂಡತಿಯನ್ನು ಕರೆದುಕೊಂಡು ಹೋಗಬಹುದು.(ಮನುಸ್ಮೃತಿ ೬,೩) ಆದುದರಿಂದ ಶ್ರೀಮಚ್ಛಂಕರಾಚಾರ್ಯರು ಪ್ರತಿಪಾದಿಸುವ ಸನ್ಯಾಸಕ್ರಮವು ಸ್ಮೃತಿಗಳಿಗೆ ವಿರೋಧವಾದದ್ದೆಂದೂ ಸ್ಮೃತಿಕಾರರ ಅಭಿಪ್ರಾಯದಂತೆ ಗೃಹಸ್ಥಾಶ್ರಮವೇ ಉತ್ತಮವಾದದ್ದೆಂದೂ ಹೇಳಬಹುದು.

# * ದಿಳ್ಳಿ-ಹಳ್ಳಿ



೧

ತಲೆಯೆತ್ತಿ ಹೆಮ್ಮೆಯಿಂಬಾಂಬರಂ ನಿಡುಬೆಳೆಸು
ಹಸಿದ ಹಳ್ಳಿಯು ನೋಡಿ ನಗುವರಾರು ?
ಎನ್ನೊಡಲು ತುಂಬಿಹುದು, ಎನಗೆ ಚೆಲುವಿಕೆಯಿಹುದು
ಎಂದು ಹೆರವರ ನೋಡಿ ಹಳಿವರಾರು ?
　　ಬಲ್ಲೆ ಬಲ್ಲೆನು ನೀನು ದಿಳ್ಳಿ ! ದಿಳ್ಳಿ !!
ಹಳ್ಳಿಗರ ಹೊನ್ನಧೂಳೆಬ್ಬಿಸುತ ಮತ್ತವರ
ಕಣ್ಣೀರಿನಿಂ ಮಾಣ್ಬ ಬೀದಿಯೆಲ್ಲಿ ?
ಬೈರ ಬೀರರ ಬೆವರಿನಿಂದ ಕಲಸಿಸ ಗಚ್ಚ
ಮುಗಿಲ ಮುಟ್ಟುವ ಮನೆಗಳಂದವೆಲ್ಲಿ ?
ಹಳ್ಳಿಗರ ರಕುತವನು ಹೀರಿ ಕೊಬ್ಬಿದ ಜಿಗಣೆ
ಸೆಟ್ಟ ಜಗ್ಗನು ಹಾಕಿ ನಡೆವುದೆಲ್ಲಿ ?
ಹಳ್ಳಿಗರ ಹೊಟ್ಟೆಯೊಳಗುರಿವ ಹಸಿವಿನ ಕಿಚ್ಚ
ಬೆಳಗಿನಂತುರಿವ ದೀಪಗಳದೆಲ್ಲಿ ?
ಬಡ ಮಕ್ಕಳಳುವಿನೊಲು ಕಿರುಚುತ್ತ ಸಂಚರಿಪ
ವಾಹನದ ಗಡಿಬಿಡಿಗಳೆಲ್ಲಿ ಎಲ್ಲಿ ?
ಕೂಲಿಗಳ ನಿಡುಸುಯ್ಲ್ಲಿ ನಾವಿಯಿಂ ನಡೆಯುತಿಹ
ಯಂತ್ರಗಳ ತುಚ್ಛ ಚೀತ್ಕಾರವೆಲ್ಲಿ ?
ಹೆರರ ವಂಚಿಸಿ ತನ್ನ ಡೊಳ್ಳು ಹೊಟ್ಟೆಯ ಬೆಳಸಿ
ಕಷ್ಟಕಾಗದ ಜನರ ಸಾರವೆಲ್ಲಿ ?
　　　　ದಿಳ್ಳಿಯುಲ್ಲಿ !
　　　　　　ನಮ್ಮ
　　　　　　　ದಿಳ್ಳಿಯುಲ್ಲಿ !!
　　ಹಳ್ಳಿ ಹಲವನು ತುಳಿದು,
　　ಹಳ್ಳಿ ಮಕ್ಕಳನಳಿದು,
　　ಮಯ್ಯನುಬ್ಬಿಸಿ ಬೆಳೆದು,
ಕಣ್ಮನವ ಸೆಳೆಯುತಿಹ ದಿಳ್ಳಿಯುಲ್ಲಿ !!
ದಿಳ್ಳಿ ಸೊಗಸಿನ ಮಧುವ ಕುಡಿಯುತಿಹ ಕಂಗಳಿಗೆ
ಅಳಿದ ಹಳ್ಳಿಯು ಜೇನು ನೊಣ ಕಾಂಬುದೆ !

೨

ತಲೆಗುಸಿದು ದುಃಖದಿಂ ನೆಲಕಿಳಿದು ಭಾರದಿಂ
ನಗುವ ದಿಳ್ಳಿಯು ನೋಡಿ ಸುಯ್ವರಾರು ?
ಹಸಿದ ಹೊಟ್ಟೆಯ ತೋರಿ, ದೈನ್ಯಕಣ್ಣಲಿ ಬೀರಿ
ಬಿಕ್ಕೆ ಬೇಡುವಳಂತೆ ಕಾಂಬಳಾರು
ತಿಳಿದೆ ತಿಳಿದೆನು ಹಳ್ಳಿ ! ಎನ್ನಹಳ್ಳಿ !!
ಗುಡ್ಡಗಳ ಬಾಡದಲ್ಲಿ ತೆರೆಸುತ್ತಿ ಮೊರೆವಲ್ಲಿ
ಹುಲ್ಲಗುಡಿಲಲ್ಲಲ್ಲಿ ಕಾಂಬುದೆಲ್ಲಿ ?
ಭಾನು ಮೇಲೇರುತಿರೆ, ವನವೆಲ್ಲ ಬೆಳಗುತಿರೆ
ಉಳುವ ರೈತನ ಹಾಡಿನಿಂಪದೆಲ್ಲಿ ?
ಗದ್ದೆ ತೋಟಗಳಲ್ಲಿ ದುಡಿದು ಬೆವರನು ಸುರಿಸಿ
ಮಧ್ಯಾಹ್ನದಲಿ ಬೀಡ ಸೇರ್ವುದೆಲ್ಲಿ ?
ಬೈಗಿನಲಿ ದನಗಳೊಡವೆರೆದು ಮನೆಯನು ಕಂಡು
ಹಿಟ್ಟುಂಡು ಕತೆಹೇಳಿ ಕೇಳ್ವುದೆಲ್ಲಿ ?
ಹಕ್ಕಿಗಳ ಹಾಡುಗಳ ತುಂಬಿಗಳ ಬಂಬಲದ
ಹಸುರಿನಾಡುಂಬೊಲದ ಸೀಮೆಯೆಲ್ಲಿ ?
ರಾಮಾಯಣಾದಿಗಳ ನಿಚ್ಚದಲಿ ಸಂಜೆಯೊಳು
ಪಾರಾಯಣವ ಮಾಳ್ಪ ತಾಣವೆಲ್ಲಿ ?
ಮಾತು ಬಿನ್ನಣಗಳನು ನಟನೆ ವಂಚನೆಗಳನು
ತಿಳಿಯದಿಹ ತ್ಯಾಗಿಗಳು ಬಡವರೆಲ್ಲಿ ?
　　　　ಹಳ್ಳಿಯುಲ್ಲಿ !
　　　　　　ಎನ್ನ
　　　　　　　ಹಳ್ಳಿಯುಲ್ಲಿ !!
　　ದಿಳ್ಳಿಯೆನಿತನೊ ನಲಿಸಿ,
　　ತಾನು ಬಡತನ ಸಹಿಸಿ,
　　ಕಣ್ಣೀರ ಕಾಲ್ವೆಗಾಸಿ,
ಕೊರಗಿ ಕರಗುತಲಿರುವ ಹಳ್ಳಿಯುಲ್ಲಿ !!
ಸಾವ ಹಳ್ಳಿಯ ಜೇನ ನೋಡುತಿಹ ಕಣ್ಣುಗಳು
ದಿಳ್ಳಿಮಧುವಿದರಿಂದಲೆಂದರಿವುವೆ ?

— ಹುಲಿಮನೆ ಕಾಳೆತಿಮ್ಮಪ್ಪ, ಹೊಸಮನೆ

* “ದಿಳ್ಳಿ” ಎಂದರೆ ದೊಡ್ಡ ಪಟ್ಟಣವೆಂದು ಗ್ರಾಹ್ಯವು.

# ಪ್ರಪಂಚದ ಆದಿ ಮತ್ತು ಅಂತ್ಯ

## (ವಿಜ್ಞಾನದೃಷ್ಟಿಯಿಂದ)

ಲೇಖಕರು:—ಶ್ರೀ ಎಸ್. ರಾಮಕೃಷ್ಣನ್ ಎಂ, ಎಸ್., ಸಿ., ಬಿ. ಟಿ.

ಜೀವರಾಶಿಗಳ ಜನ್ಮಸ್ಥಾನವಾದ ಭೂಮಿಯನ್ನೊಳಗೊಂಡು ಯಾವುದು ಅಸಂಖ್ಯಾತ ನಕ್ಷತ್ರಗಳಿಂದಲೂ ಮತ್ತು ಗ್ರಹೋಪಗ್ರಹಗಳಿಂದಲೂ ಕೂಡಿರುವದೋ, ಮತ್ತು ಯಾವುದರ ನಿಜಸ್ಥಿತಿಯನ್ನು ಕಂಡು ಹಿಡಿಯಲು ಮಾನವನ ಜಾಣತನವು ಅತಿಸಾಹಸ ಪಟ್ಟದ್ದರೂ ಸೋತು ಹೋಗಿದೆಯೋ ಅಂತಹ ಪ್ರಪಂಚದ ಆದಿ ಮತ್ತು ಅಂತ್ಯಗಳ ವಿಷಯದಲ್ಲಿ ಪ್ರತ್ಯಕ್ಷ ಜ್ಞಾನಿಗಳಾದ ವರಕವಿಗಳೂ, ತತ್ವವಿಚಾರಿಗಳೂ ಮತ್ತು ಇತ್ತೀಚೆಗೆ ವಿಜ್ಞಾನಕಾರರೂ ವಿಧವಿಧವಾಗಿ ಅಭಿಪ್ರಾಯಗೊಂಡಿರುವರು. ಒಂದು ಗುಂಪಿನವರ ತತ್ವಗಳನ್ನು ಮತ್ತೊಂದು ಗುಂಪಿನವರು ಅಲ್ಲಗಳೆಯುತ್ತಿರುವರು. ಹಿಂದೂ ಜನಾಂಗದವರು ವೇದಾಂತ, ಉಪನಿಷತ್ತುಗಳೆಂಬ ಪವಿತ್ರ ಗ್ರಂಥಗಳಲ್ಲಿ ಹೇಳಿರುವಂತೆ ಜಗದೀಶ್ವರನ ಇಚ್ಛೆಯ ಪ್ರಕಾರ ಲೀಲಾಮಾತ್ರದಲ್ಲಿ ಪ್ರಪಂಚವು ಸೃಷ್ಟಿಸಲ್ಪಟ್ಟಿತೆಂದೂ, ಬೈಬಲ್ಲನ್ನೇ ಪ್ರಮಾಣವಾಗಿ ಉಳ್ಳವರು ಕೂಡ ಏಳೆಂಟು ದಿವಸಗಳಲ್ಲಿ ಪ್ರಪಂಚವೂ, ಭೂಮಿಯೂ, ಅದರ ಮೇಲಿರುವ ಚರಾಚರಗಳೂ ಮನುಷ್ಯನೂ ಸೃಷ್ಟಿಸಲ್ಪಟ್ಟರೆಂದೂ ನಂಬಿರುವರು.

ವಿಜ್ಞಾನಕಾರರಾದರೋ ಈ ವಿಷಯಗಳನ್ನು ನಂಬುವುದಿಲ್ಲ. ಸೃಷ್ಟಿಯು ವೇದಾಂತ ಬೈಬಲ್ಲುಗಳಲ್ಲಿ ಹೇಳಿರುವಂತೆ ಕೆಲವು ದಿವಸಗಳಲ್ಲಿ ಮುಗಿಯಲಿಲ್ಲವೆಂದೂ ಮತ್ತು ಸೃಷ್ಟಿಯ ವಿಧಾನವು ಅಷ್ಟು ಸರಳವಲ್ಲವೆಂದೂ ಹೇಳುವರು. ಸರ್, ಆಲಿವರ್ ಲಾಡ್ಜ್‌ರವರು ಹೇಳಿರುವಂತೆ—"ಭೌತಿಕ ಶಾಸ್ತ್ರದ ದೃಷ್ಟಿಯಿಂದ ಮಾತ್ರ ಪ್ರಪಂಚವನ್ನವಲೋಕಿಸಿದರೆ ಸೃಷ್ಟಿಯ ಮಹಾತ್ಮೆಯು ನಮ್ಮನ್ನು ತಲ್ಲಣಿಸುವದು. ಪ್ರತಿಕ್ಷಣದಲ್ಲಿಯೂ ಸೃಷ್ಟಿಯಾಗುತ್ತಲೇ ಇರುವುದು. ಆ ವಿಧಾನವನ್ನು ನಮ್ಮ ಚರ್ಮಚಕ್ಷುಸ್ಸುಗಳಲ್ಲಲ್ಲದೆ ಜ್ಞಾನಚಕ್ಷುಸ್ಸುಗಳಲ್ಲಿಯೂ ನೋಡುತ್ತಿರುವೆವು. ಈ ಭೂಮಿಯ ಚರಿತ್ರೆಯಾದರೋ ಬ್ರಹ್ಮಾಂಡದ ಸೃಷ್ಟಿಯ ಚರಿತ್ರೆಯಲ್ಲಿ ಕೇವಲ ಒಂದು ಪರಿಚ್ಛೇದವೆಂದೆಣಿಸಬೇಕಾಗಿದೆ." ಹೊಸಹೊಸದಾಗಿ ಇತರ 'ಭೂಮಿ'ಗಳು ಸೃಷ್ಟಿಯಾಗುತ್ತಿರುವುದನ್ನು ಆಧುನಿಕ ಜ್ಯೋತಿಷ ಶಾಸ್ತ್ರಜ್ಞರು (Astronomers) ಅತಿ ಚಮತ್ಕೃತಿಯಿಂದ ಮಾಡಲ್ಪಟ್ಟ ದೂರದರ್ಶಕಗಳ (Tlescopes) ಮತ್ತು ರಶ್ಮಿವರ್ಣಮಾಪಕಗಳ (Spectrometers) ಸಹಾಯದಿಂದ ಕಂಡು ಹಿಡಿಯುತ್ತಿರುವರು. ಅಲ್ಲದೆ ಇದ್ದ ಪ್ರಪಂಚಗಳ ಕ್ಷೀಣವಾಗುತ್ತಿರುವುವನ್ನು ತೋರಿಸಿಕೊಡುವರು. ರಶ್ಮಿವರ್ಣ ಮಾಪಕ ಯಂತ್ರದಿಂದ ಶಕ್ತಿಯುಡಿಗಿದ ಮತ್ತು ರಶ್ಮಿಯನ್ನು ಚೆಲ್ಲಿದ ಕಪ್ಪು ನಕ್ಷತಗಳು (dark Stars) ಇವೆಯೆಂದು ಕಂಡು ಹಿಡಿದಿದ್ದಾರೆ. ಒಂದು ಮಿಣಿಗುಟ್ಟುವ ನಕ್ಷತ್ರದ ಸುತ್ತಲೂ ಇನ್ನೊಂದು ಕಪ್ಪುನಕ್ಷತ್ರವು ಸುತ್ತುತ್ತಿದ್ದರೆ, ಪ್ರಕಾಶಮಾನವಾದ ನಕ್ಷತ್ರದ ರಶ್ಮಿವರ್ಣ ಪಟದಲ್ಲಿರುವ (Spectrum) ಕಪ್ಪು ಗೆರೆಗಳು (Dark lines) ತಮ್ಮ ಸ್ಥಾನವನ್ನು ಕಾಲಕಾಲಕ್ಕೆ ಬದಲಾಯಿಸುತ್ತಿರುವುವು. ಈ ಸ್ಥಾನಪಲ್ಲಟನವು ಯಾವುದಾದರೊಂದು ನಕ್ಷತ್ರದ ರಶ್ಮಿವರ್ಣ ಪಟವನ್ನು ಪರಿಶೋಧಿಸುತ್ತಿದ್ದಾಗ ಕಂಡುಬಂದರೆ ಆಗ ಒಂದು ಕಪ್ಪು ನಕ್ಷತ್ರವಿದೆಯೆಂದು ಹೇಳಬಹುದು. ಆದರೆ ಈ ಕಪ್ಪು ನಕ್ಷತ್ರಗಳು ಮುಂದೇನಾಗುವುವೋ ಎಂಬುದು ಗೊತ್ತಾಗಿಲ್ಲ. ಹೀಗೆ ಶಕ್ತಿಯುಡಿಗಿದ ನಕ್ಷತ್ರವು ತಿರುಗಿ ನವಚೈತನ್ಯವನ್ನು ಹೊಂದಿ ಪೂರ್ವದಲ್ಲಿದ್ದಂತೆ ಮಿಣುಗುಟ್ಟುವುದಕ್ಕೆ ಅವಕಾಶವುಂಟೇ ಎಂಬ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರವನ್ನು ವಿಜ್ಞಾನಿಗಳು ಹೇಳಿಲ್ಲ.

ಆದುದರಿಂದ ಪ್ರಪಂಚದ ಆದಿ ಮತ್ತು ಅಂತ್ಯಗಳ ವಿಷಯದಲ್ಲಿ ವಿಜ್ಞಾನ ಶಾಸ್ತ್ರವು ಕಟ್ಟುನಿಟ್ಟಾಗಿ ಹೀಗೆಯೇ ಎಂದು ತಿಳಿಸಲು ಶಕ್ತಿಯನ್ನು ಹೊಂದಿಲ್ಲ. ಆರ್ಥರ್ ಥಾಂಸನ್‌ರವರು ಕೂಡ—"ವಿಜ್ಞಾನಶಾಸ್ತ್ರವು ಪ್ರಪಂಚದ ಮೂಲವನ್ನು ಕಂಡುಹಿಡಿಯಲು ಪ್ರಯತ್ನ ಪಡುತ್ತಿರುವುದು. ಆದರೆ ಆ ಮೂಲವನ್ನು ಎಟಕಿಸಿಕೊಳ್ಳಲು ಅದಕ್ಕೆ ಎಂದಿಗೂ ಆಗುವುದಿಲ್ಲ" ಎಂದಿರುವರು. ವಿಜ್ಞಾನಶಾಸ್ತ್ರದ ಧ್ಯೇಯವನ್ನು ವಿವರಿಸುತ್ತಾ, ಸರ್ ಆಲಿವರ್ ಲಾಡ್ಜ್‌ಯೆಂಬ ಸುಪ್ರಸಿದ್ಧ ಭೌತಿಕ ಶಾಸ್ತ್ರಕಾರರು ಅಭಿಪ್ರಾಯಪಟ್ಟಿರುವುದೇನೆಂದರೆ—"ವಿಜ್ಞಾನವು ಶಾಸ್ತ್ರೀಯ (ಅಥವಾ ಈಗ ನಡೆಯುತ್ತಿರುವ) ಪ್ರಪಂಚದ

ಸ್ಥಿತಿಗತಿಗಳನ್ನು ವಿಮರ್ಶಿಸುವುದು ಮತ್ತು ಹೊಸಹೊಸದಾಗಿ ಇದುವರೆವಿಗೆ ತಿಳಿಯದ ಸೃಷ್ಟಿ ವೈಚಿತ್ರ್ಯವನ್ನು ಹೊರ ಗೆಡುಹುವುದು." ಸಧ್ಯದಲ್ಲಿ ಇದುವರೆವಿಗೂ ನಡೆದ ಉತ್ಕೃಷ್ಟ ಪರಿಶೋಧನೆಗಳಿಂದ ತಿಳಿದು ಬಂದಿರುವ ಮಹತ್ವಾದ ವೈಜ್ಞಾನಿಕ ಸಂಗತಿಗಳ ಆಧಾರದ ಮೇಲೆ ಪ್ರಪಂಚವು 'ಆದಿ' ಯಲ್ಲಿ ಹೇಗಿತ್ತೆಂಬುವನ್ನು ಜಾಣತನದಿಂದ ಊಹಿಸಬಹುದು. ಬಹಳ ಮಟ್ಟಿಗೆ ಆ ಊಹನೆಯೇ ನಿಜವಿರಬಹುದೆಂದು ಶಾಸ್ತ್ರಜ್ಞರು ಹೇಳುವರು. ಅಂತಹ ವಿಷಯಗಳು ಯಾವುವೆಂಬುದನ್ನು ಮುಂದೆ ಸೂಕ್ಷ್ಮವಾಗಿ ತಿಳಿಸುವೆವು.

ಇಡೀ ಬ್ರಹ್ಮಾಂಡದ ಮತ್ತು ಇತರ ಅಸಂಖ್ಯಾತ ನಕ್ಷತ್ರಗಳ ಸೃಷ್ಟಿ ಸ್ಥಿತಿಗಳನ್ನು ವಿವರಿಸುವುದಕ್ಕೆ ಮೊದಲು ನಮ್ಮ ಭೂಗೋಳವ ಜನ್ಮದ ವಿಷಯದಲ್ಲಿ ಭೂಗರ್ಭಶಾಸ್ತ್ರಜ್ಞರು (Geologists) ಮತ್ತು ಜ್ಯೋತಿಷ್ಕರು ನಿರ್ಧರಿಸಿರುವ ಅಂಶಗಳನ್ನು ಹೇಳಬೇಕಾಗಿರುವುದು. ಭೂಮಿಯ ಮೇಲ್ಮೈಯು ವರ್ಷವರ್ಷಕ್ಕೂ ಮಾರ್ಪಡುತ್ತಿರುವುದು. ಈಗ ಯಾವ ಪ್ರದೇಶವು ಫಲವತ್ತಾಗಿಯೂ ಹೆಚ್ಚು ಜನವಸತಿಯುಳ್ಳದಾಗಿಯೂ ಇದೆಯೋ ಆ ಪ್ರದೇಶವು ಹಿಂದೆ ಮಹಾಸಾಗರದ ಭಾಗವಾಗಿದ್ದಿರಬಹುದು. ಈಗ ಯಾವ ಪ್ರದೇಶವು ಜೀವಿಗಳ ಇರುವಿಕೆಗೆ ಬಾಧಕವಾಗಿದೆಯೋ ಆ ಪ್ರದೇಶವು ಹಿಂದೆ ಮಾನುಷ ಸಸ್ಯ ಮತ್ತು ಪ್ರಾಣಿಗಳೆಂಬ ಜೀವರಾಶಿಗಳಿಂದ ತುಂಬಿ ತುಳುಕುತ್ತಿದ್ದುದೆಂದು ಪುರಾತನ ಗ್ರಂಥಗಳ ಕೆಲವುಗಳಿಂದ ತಿಳಿದು ಬಂದಿದೆ. ದೃಷ್ಟಾಂತವಾಗಿ ಉತ್ತರ ಧ್ರುವ ಪ್ರದೇಶವು ಒಂದಾನೊಂದು ಕಾಲದಲ್ಲಿ 'ಆರ್ಯ' ಜನಾಂಗದ ತವರುಮನೆಯಾಗಿತ್ತೆಂದು, ಭೂಗರ್ಭಶಾಸ್ತ್ರಕೋವಿದರು ಮತ್ತು ನಿಪುಣ ಜ್ಯೋತಿಷ್ಕರುಗಳು ಕಂಡು ಹಿಡಿದಿರುವ ಮತ್ತು ಯಥಾರ್ಥವಾದ ಸಂಗತಿಗಳ ಆಧಾರದ ಮೇಲೆ, ವೇದಗಳ ಸರಿಯಾದ ಅರ್ಥವನ್ನು ಹೊಂದಿಸಿ ಲೋಕಮಾನ್ಯ ತಿಲಕರು ಒಂದು ದೊಡ್ಡ ಗ್ರಂಥವನ್ನೇ ಬರೆದಿರುವರು. ( Arctic home in the Vedas)

ಭೂಗರ್ಭಶಾಸ್ತ್ರಜ್ಞರು ಜೀವಿಗಳ ಸೃಷ್ಟಿಯೇ ಮೊದಲುಗೊಂಡು ಇದುವರೆವಿಗೂ ನಡೆದಿರುವ ಮಹತ್ವಾದ ವಿಷಯಗಳನ್ನು ಕುರಿತು ಹೇಳಬಲ್ಲರೇ ವಿನಹ, ಜೀವಸೃಷ್ಟಿಗಿಂತ ಮುಂಚೆ ಭೂಮಿಯ ಸ್ಥಿತಿಯು ಹೇಗಿತ್ತೆಂಬುದನ್ನು ತಿಳಿಸಲಾರರು. ಭೂಗರ್ಭಶಾಸ್ತ್ರಜ್ಞರು ಬಿಟ್ಟ ಸರಣಿಯನ್ನು ಭೌತಿಕ ಶಾಸ್ತ್ರಕಾರರು ಮತ್ತು ಜ್ಯೋತಿಷಕಾರರು ಮುಂದುವರಿಸುವರು. ಭೂಮಿಯೊಳಗೆ ತೋಡಿಕೊಂಡು ಹೋಗುತ್ತಿದ್ದ ಹಾಗೆಲ್ಲಾ ಉಷ್ಣಪರಿಮಾಣವು ಹೆಚ್ಚುವುದೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಉಷ್ಣಾಂಶವು ಯಾವ ಪ್ರಕಾರ ಹೆಚ್ಚುತ್ತದೆಂಬುದನ್ನೂ, ಸೂರ್ಯನ ತಾಪದಿಂದ ಭೂಮಿಯ ಮೇಲ್ಮೈಯ ಉಷ್ಣಾಂಶವು ಮಾರ್ಪಡುವ ವಿಧಾನವನ್ನೂ ಚನ್ನಾಗಿ ಶೋಧನೆ ಮಾಡಿ, ಮೊದಲು ಭೂಮಿಯು ಕೆಂಪಗೆ ಕಾದ ಕಬ್ಬಿಣದಷ್ಟು ಶಾಖವಾಗಿದ್ದಿತೆಂದು ಇಟ್ಟುಕೊಂಡು, ಭೂಮಿಯ ವಯಸ್ಸು ೧೦೦೦೦೦ ವರ್ಷಗಳಿಗಿಂತ ಕಡಿಮೆಯಾಗಿರಲಾರ ದೆಂದು ಕಂಡುಹಿಡಿಯಲ್ಪಟ್ಟಿದೆ. ಜೀವಾಣುವು ಭೂಮಿಯ ಮೇಲೆ ತಲೆದೋರುವುದಕ್ಕಿಂತ ಮುಂಚೆ ಅದರ ಉಷ್ಣಪರಿಮಾಣವು (Temperature) 3000° c ಗಿಂತ ಹೆಚ್ಚಾಗಿದ್ದಿರಬಹುದೆಂದೂ, ಆವಾಗ ಭೂಮಿಯು ದ್ರವರೂಪದಲ್ಲಿರುವ ವಸ್ತುಗಳಿಂದ ಕೂಡಿ ಕೆಂಪಗೆ ಪ್ರಕಾಶಮಾನವಾಗಿ ಇದ್ದಿರಬಹುದೆಂದೂ ವೈಜ್ಞಾನಿಕರು ಸರ್ವಾನುಮತರಾಗಿರುವರು. ಇದಕ್ಕೆ ಆಗಾಗ್ಗೆ ಉಂಟಾಗುತ್ತಿರುವ ಭೂಕಂಪ ಜ್ವಾಲಾಮುಖಿಗಳೇ ನಿದರ್ಶನ. ಜೀವರಾಶಿಗಳು ಭೂಮಿಯ ಮೇಲೆ ಉತ್ಪತ್ತಿಯಾಗುವದಕ್ಕಿಂತ ಮುಂಚೆ ಭೂಮಿಯು ಯಾವರೀತಿಯಲ್ಲಿದ್ದಿತೆಂಬುದನ್ನು ಚಿತ್ರಿಸುವದು ಅಷ್ಟು ಕಷ್ಟವಲ್ಲ. "ಎಲ್ಲಿ ನೋಡಿದರೂ ಹೊಗೆಯುಗುಳುತ್ತಿರುವ ಬೆಂಗಾಡು. ಅಲ್ಲಲ್ಲಿ ಕಾದ ಮರಳ ದಿಣ್ಣೆಗಳು. ಕಾಲುಕಾಲಿಗೆ ಕಪ್ಪನೆಯ ಇದ್ದಿಲು. ಅಲ್ಲಲ್ಲಿ ಬಿರುಕು ಬಿಟ್ಟ ಕಡೆ ದ್ರವರೂಪದಲ್ಲಿ ಬಂಡೆಗಳು ಭೂಮಿಯೊಳಗಡೆಯಿಂದ 'ಟಾರ್' ಎಣ್ಣೆಯಂತೆ ಹೊರಹೊರಡುತ್ತಿರುವುವು. ಆ ದ್ರವವು ಆರುತ್ತ ಬಂದ ಹಾಗೆಲ್ಲ ಬೊಬ್ಬೆಯೆದ್ದು ಘನೀಭೂತವಾಗುತ್ತಿರುವುವು. ಹಗಲಿನಲ್ಲಿ ಸೂರ್ಯನಿಲ್ಲ, ರಾತ್ರಿಯಲ್ಲಿ ಚಂದ್ರನಿಲ್ಲ, ನಕ್ಷತ್ರಗಳೂ ಇಲ್ಲ. ಏಕೆಂದರೆ ದಟ್ಟನಾದ ಆವಿಯು ಮೇಲೆ ಇದ್ದು ಭೂಮಿಯನ್ನು ಪೂರ್ಣವಾಗಿ ಆಚ್ಛಾದಿಸಿರುವುದರಿಂದ ಆಕಾಶವನ್ನು ನೋಡುವುದಕ್ಕಾಗುವುದಿಲ್ಲ. ಉಸಿರಾಡುವುದಕ್ಕೆ ಯೋಗ್ಯವಾದ ಗಾಳಿ ಇಲ್ಲ. ಇಂಗಾಲಾಮ್ಲ (carbondioxide) ಮತ್ತು ಸಸಾರಜನಕವೇ (nitrogen) ವಾಯುವಿನಲ್ಲಿ ಜಾಸ್ತಿಯಾಗಿರುವುದು. ಮುಖ್ಯವಾದ ಆಮ್ಲಜನಕ (Oxygen) ದ ಭಾಗವು ಇಲ್ಲವೇ ಇಲ್ಲ. (ಸಸ್ಯಾದಿಗಳು ಸೃಷ್ಟಿಸಲ್ಪಟ್ಟಮೇಲೆಯೇ ಆಮ್ಲಜನಕವು ವಾಯುವಿನಲ್ಲಿ ಬೆರೆಯಲು ಪ್ರಾರಂಭಿಸುವುದು) ಸುಯ್ ಎಂಬ ಶಬ್ದವೇ ವಿನಹ ಮತ್ತು ಸಿಡಿತ (explorion) ದಿಂದ ಆಗುವ ಶಬ್ದ

ಇನ್ನಾವುದೂ ಕೇಳಿಬರುವುದಿಲ್ಲ. ಈ ಸ್ಥಿತಿಯು ೧೦೦೦೦೦೦೦೦೦ ವರ್ಷಕ್ಕಿಂತ ಹಿಂದೆ ಇದ್ದಿರಬಹುದು." ಭೂಮಿಯು ದ್ರವ ರೂಪದಲ್ಲಿದ್ದರೂ ಅದರಲ್ಲಿದ್ದ ಪದಾರ್ಥಗಳಿಗೆ ಸ್ವತಃ ಭೂಮಿಯ ಅಂತರ್ಯದಲ್ಲಿಯೇ ತಿರುಗುವ ಶಕ್ತಿಯಿದ್ದುದರಿಂದಲೂ, ಸೂರ್ಯನ ಆಕರ್ಷಣ ಶಕ್ತಿಗೆ ಒಳಪಟ್ಟಿದ್ದುದರಿಂದಲೂ ಅದು ಚೆಲ್ಲಾಗಿ ಒಡೆದು ಹೋಗಲಿಲ್ಲ. ಉಷ್ಣಾಂಶವು ಕುಗ್ಗಿದ ಹಾಗೆಲ್ಲಾ ಘನೀಭೂತವಾಗುತ್ತ (Solidify) ಬಂದು ಈಗಿನ ಸ್ಥಿತಿಯನ್ನು ಹೊಂದಿತು.

ಅನಿಲ ಮತ್ತು ದ್ರವರೂಪದಿಂದ ಕೂಡಿದ ಭೂಮಿಯು ಉತ್ಪತ್ತಿಯಾದುದು ಹೇಗೆ? ಈ ಪ್ರಶ್ನೆಗೆ ಉತ್ತರವಾಗಿ, ಸೂರ್ಯನು ಈಗಿರುವುದಕ್ಕಿಂತಲೂ ಹೆಚ್ಚು ಶಾಖವಾಗಿಯಿದ್ದ ನಿಂದೂ ಆಕಾಶದಲ್ಲಿ ಇನ್ನೊಂದು ದೊಡ್ಡದಾದ ನಕ್ಷತ್ರವು ತನ್ನ ಪಥದಲ್ಲಿ ತಿರುಗುತ್ತಿರುವಾಗ ಸೂರ್ಯನ ಹತ್ತಿರ ಬರಲು ನಕ್ಷತ್ರದ ಆಕರ್ಷಣ ಶಕ್ತಿಯು ಹೆಚ್ಚಿ, ಅನಿಲರೂಪದಲ್ಲಿರುವ ಸೂರ್ಯ ಮಂಡಲದಿಂದ ಕೆಲವು ಭಾಗಗಳು ಹೆಪ್ಪು ಹೆಪ್ಪಾಗಿ ಕಿತ್ತುಕೊಂಡು (ಎಳೆದುಕೊಂಡು) ಬಂದು; ಕ್ರಮೇಣ ಸಾಂದ್ರೀಕರಣ (condensation) ವಾಗುತ್ತ ಬಂದಿತು. ಕಿತ್ತುಕೊಂಡು ಬಂದ ಭಾಗಗಳಲ್ಲಿ ಭೂಮಿಯೇ ಒಂದು. ಇತರ ಹೆಪ್ಪುಗಳು ಇತರ ಗ್ರಹಗಳಾಗಿ ಸಾಂದ್ರೀಕರಣವಾದವು. ಮೊದಲು ಭೂಮಿಗೆ ಇನ್ನೊಂದು ಚಿಕ್ಕ ಹೆಪ್ಪು ಸ್ವಲ್ಪ ಅಂಟಿಕೊಂಡಿದ್ದಿತು. ಕ್ರಮೇಣ ಭೂಮಿಯ ಶಾಖ ಪರಿಮಾಣವು ಕುಗ್ಗುತ್ತ ಬಂದು ಘನೀಭೂತವಾದಾಗ ಅಂಟಿಕೊಂಡಿದ್ದ ಚಿಕ್ಕ ಹೆಪ್ಪು ತಪ್ಪಿಸಿಕೊಂಡು ಭೂಮಿಯ ಸುತ್ತಲೂ ತಿರುಗುವುದಕ್ಕೆ ಪ್ರಾರಂಭಿಸಿತು. ಇದೇ ಚಂದ್ರ.

ಮೇಲೆ ಹೇಳಿದುದು ಬರೀ ಕಟ್ಟು ಕಥೆಯೆಂದು ಭಾವಿಸಬಾರದು. ಹೇಗೆಂದರೆ ಈಗಲೂ ಕೂಡ ಸೂರ್ಯಮಂಡಲದಿಂದ ಆಗಾಗ್ಗೆ ಅಂದರೆ ಸಂಪೂರ್ಣ ಸೂರ್ಯಗ್ರಹಣ ಕಾಲ (Total Eclipse) ದಲ್ಲಿ ೧೦೦೦೦೦ ಮೈಲಿ ಎತ್ತರವುಳ್ಳ ಮಹತ್ತಾದ ಅನಿಲ ಪ್ರವಾಹವು ಹಾರಿ ಹೊರಬಿದ್ದಿರುವುದನ್ನು ದೂರದರ್ಶಕಗಳ ಮೂಲಕ ನೋಡಿರುವರು. ಪೃಥ್ವಿಯು ಹೀಗೆ ಉಂಟಾಯಿತೋ ಅದೇ ರೀತಿಯಲ್ಲಿ ಸೂರ್ಯನ ಹತ್ತಿರಿರುವ ಶುಕ್ರ ಮತ್ತು ಬುಧ ಗ್ರಹಗಳು ಸೂರ್ಯನಿಗೆ ಮೇಲೆ ಹೇಳಿದ ಗ್ರಹಗಳಿಗಿಂತ ಬಹಳ ದೂರದಲ್ಲಿ ಗುರು, ಶನಿ, ಯೂರನಸ್ ಮತ್ತು ನೆಪ್ಚೂನ್ ಎಂಬ ಗ್ರಹಗಳೂ ಉತ್ಪತ್ತಿಯಾದುವು. ಇವುಗಳಲ್ಲದೆ ಶನಿ ಮತ್ತು ಯೂರನಸ್ ಗ್ರಹಗಳ ಪಥಗಳ ನಡುವೆ ಅನೇಕ ಬಹಳ ಸಣ್ಣ ಗ್ರಹಗಳು ಇವೆಯೆಂದೂ ಕಂಡು ಹಿಡಿದಿದ್ದಾರೆ. ಅವುಗಳಿಗೆ ಆಸ್ಟಿರಾಯ್ಡ್ಸ (Ostereids) ಗಳೆಂದು ಹೆಸರು.

ಈ ಸಂದರ್ಭದಲ್ಲಿ ಒಂದು ಮುಖ್ಯ ವಿಷಯವನ್ನು ನೆನಪಿನಲ್ಲಿಡಬೇಕು. ೧೯೩೦ ನೇ ಇಸವಿಗಿಂತ ಮುಂಚೆ ನಮಗೆ ತಿಳಿದಿದ್ದ ಗ್ರಹಗಳು ಇಷ್ಟೇ. ನೆಪ್ಚ್ಯೂನ್ ಗ್ರಹದ ಪಥಕ್ಕಿಂತ ದೂರವಾಗಿ ಇನ್ನಾವ ಗ್ರಹವೂ ಇಲ್ಲವೆಂದು ನಂಬಿದ್ದರು. ಆದರೂ ನೆಪ್ಚ್ಯೂನ್ ಗ್ರಹದ ಪಥವು ಪಾಶ್ಚಾತ್ಯ ಜ್ಯೋತಿಷ್ಕರು ಗುಣಿಸಿದ ಲೆಕ್ಕದ ಪ್ರಕಾರ ಸರಿಯಾಗಿರದೆ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತಿತ್ತು. ಈ ವ್ಯತ್ಯಾಸಕ್ಕೆ ಕಾರಣವು, ನೆಪ್ಚ್ಯೂನ್ ಗ್ರಹದ ಹತ್ತಿರವಿರುವ ಇನ್ನಾವುದಾದರೂ ಒಂದು ಗ್ರಹದ ಆಕರ್ಷಣ ಶಕ್ತಿಯೇ (attraction) ಎಂದು ಕೆಲವರು ಸಂಶಯ ಪಡಹತ್ತಿದರು. ಸಂಶಯ ನಿವೃತ್ತಿಗಾಗಿ ಎಷ್ಟೋ ಜ್ಯೋತಿಷ್ಕರು ಆಕಾಶದ ಎಲ್ಲಾ ಭಾಗಗಳಲ್ಲಿಯೂ ಹುಡುಕುತ್ತಿದ್ದರು. ಕೊನೆಗೆ ೧೯೩೦ನೇ ಮಾರ್ಚ ತಿಂಗಳಲ್ಲಿ ಲೋವೆಲ್ ಆಬ್ಸರ್‌ವೇಟರಿಯವರು ನೂತನ ಗ್ರಹವು ಇರಬೇಕಾದ ಸ್ಥಾನವನ್ನು ನಿರ್ದೇಶಿಸಿ, ಹುಡುಕಿ ಕೊನೆಗೆ ಆ ಗ್ರಹದ ಫೋಟೋವನ್ನು ಕೂಡ ತೆಗೆದರು. ಈಚಿಗೆ ಆ ಗ್ರಹಕ್ಕೆ 'ಇಕಾರಸ್' ಎಂಬ ಹೆಸರನ್ನಿಟ್ಟಿರುವರು. ಇದರಿಂದ ನಮಗೆ ತಿಳಿದು ಬರುವುದೇನಂದರೆ ಯಾವ ಕಾಲದಲ್ಲಿಯಾಗಲೀ, ಎಷ್ಟು ಉದ್ದಂಡ ವಿಜ್ಞಾನಿಗಳಾಗಲಿ ತಮಗೆ ಸೃಷ್ಟಿಯ ಸರ್ವಸ್ವವೂ ಗೊತ್ತೆಂದು ಹೇಳುವುದಕ್ಕಾಗುವುದಿಲ್ಲವಲ್ಲದೆ ಅಂಥವರು ಸೃಷ್ಟಿಯ ವೈಚಿತ್ರ್ಯವನ್ನು ತೋರಿಸುವುದರಲ್ಲಿಯೂ ಮತ್ತು ಒಗಟೆಯನ್ನು ಬಿಡಿಸುವುದರಲ್ಲಿಯೂ ಸಂಪೂರ್ಣ ಮಗ್ನರಾಗಿರುವರು. ಹೊಸ ಹೊಸ ವಿಷಯಗಳನ್ನು ಕಂಡುಹಿಡಿದ ಹಾಗೆಲ್ಲಾ ವಿಜ್ಞಾನಿಗಳ ತತ್ವವೂ ಬದಲಾಯಿಸುತ್ತ ಬರುವುದು. ಈ ವಾಕ್ಯದ ವಿವರಣೆಯನ್ನು ಇನ್ನೊಂದು ಸಂದರ್ಭದಲ್ಲಿ ಕೊಡುವೆವು.

ಸೂರ್ಯನ ಶರೀರದಿಂದಲೇ ಅವನ ಸುತ್ತಲೂ ಸುತ್ತುವ ಗ್ರಹೋಪಗ್ರಹಗಳು ಉಂಟಾದುವೆಂದು ತಿಳಿಸಿದುದಾಯಿತು. ಈ ಗ್ರಹಗಳ ಉತ್ಪತ್ತಿಗಿಂತ ಮುಂಚೆ ಇದ್ದ ಸೂರ್ಯನ ಆಕಾರವು ಸಿಂಬಿಯಂತೆ ಸುರಳಿಸುತ್ತಿಕೊಂಡು ಮಂಡಲದ ತುಂಬ ಅನಿಲ ಪದಾರ್ಥವಿದ್ದು, ಈಗ ಇರುವುದಕ್ಕಿಂತಲೂ ದೇದೀಪ್ಯಮಾನವೂ

ಮತ್ತು ಉಷ್ಣಪ್ರಮಾಣವೂ ಹೆಚ್ಚಾಗಿ ಇದ್ದಿತು. ಹೀಗೆಯೇ ಇದ್ದಿತೆಂದು ಹೇಳುವುದಕ್ಕೆ ಪ್ರತ್ಯಕ್ಷ ಪ್ರಮಾಣಗಳು ಸಾಕಾದಷ್ಟು ಸಿಕ್ಕಿವೆ. ಸೂರ್ಯನ ಆ ಕಾಲದ ಸ್ಥಿತಿಗೆ ಸಿಂಬಿಯಂತಿರುವ ಅಥವ ಕುಂಡಲಾಕಾರದ ನೆಬುಲೆಯೆಂದು (Spinal Nebula) ಹೆಸರು. ಈಗಲೂ ಬಹಳ ಸಾಮರ್ಥ್ಯವುಳ್ಳ (ಅಂದರೆ ಆಕಾಶದೊಳಗಿನ ಕೋಟ್ಯಾಂತರ ಮೈಲುಗಳಲ್ಲಿರುವ ಪ್ರಕಾಶಮಾನವಾದ ಪದಾರ್ಥಗಳನ್ನು ನೋಡಬಹುದಾದ) ದೂರದರ್ಶಕಗಳ ಮೂಲಕ ಆಕಾಶವನ್ನು ಹುಡುಕಿದರೆ ಅಲ್ಲಲ್ಲಿ ನಕ್ಷತ್ರಗಳ ಮಧ್ಯೆ, ಮಧ್ಯಾಹ್ನಕಾಲದ ಸ್ವಚ್ಛ ಆಕಾಶದಲ್ಲಿ ಎಲ್ಲೋ ಒಂದು ಮೋಡವು ಬೆಳ್ಳಗೆ ಕಾಣುವ ತೆರದಲ್ಲಿ, ಕೆಲವು ಕುಂಡಲಾಕಾರದ ಅಥವ ಸಿಂಬಿಯಂತಿರುವ ಪದಾರ್ಥಗಳನ್ನು ನೋಡಬಹುದು. ಇವೇ ನೆಬುಲೆಗಳು (Nebula). ಈ ನೆಬುಲೆಗಳಲ್ಲಿರುವ ಅನಿಲ ಸಂಬಂಧ ಪದಾರ್ಥಗಳಿಗೆ ಶಾಶ್ವತವಾಗಿ ಸುತ್ತುತ್ತಿರುವ ಶಕ್ತಿಯಿದೆ. ನೆಬುಲೆಗಳ ಶರೀರದಲ್ಲಿ ಎಲ್ಲಾದರೂ ಸಾಂದ್ರೀಕರಣವು ಪ್ರಾರಂಭವಾಯಿತೆಂದರೆ ಒಂದು ನಕ್ಷತ್ರವು ಸೃಷ್ಟಿಯಾಗಬೇಕೆಂದು ತಿಳಿಯಬೇಕು. ಒಂದು ನಕ್ಷತ್ರವೆಂದರೆ ಒಂದು ಸೂರ್ಯ. ಸೂರ್ಯನೂ ಒಂದು ಪುಟ್ಟ ನಕ್ಷತ್ರವೇ. ಪ್ರತಿಯೊಂದು ನಕ್ಷತ್ರಕ್ಕೂ ನಮ್ಮ ಸೂರ್ಯನಿಗಿರುವಂತೆಯೇ ಗ್ರಹೋಪಗ್ರಹಗಳಿರಬಹುದು. ಅವುಗಳ ಯಾವುದಾದರೊಂದು ಗ್ರಹದಲ್ಲಿ ನಮ್ಮಂಥಹ ಮನುಷ್ಯರಿದ್ದರೆ ಅವರಿಗೆ ನಮ್ಮ ಸೂರ್ಯನು ಒಂದು ಸಣ್ಣ ನಕ್ಷತ್ರದಂತೆ ಕಾಣುವನು. ಸಾಮಾನ್ಯವಾಗಿ ಯಾರಾದರೂ ಆಕಾಶದಲ್ಲಿರುವ ನಕ್ಷತ್ರ ಸಮೂಹಗಳನ್ನು ಕೆಲವು ದಿವಸಗಳು ನೋಡುತ್ತಿದ್ದರೆ ಒಂದು ಪ್ರದೇಶದಲ್ಲಿ ನಕ್ಷತ್ರಗಳ ಸಂಖ್ಯೆಯು ಇತರ ಭಾಗಗಳಲ್ಲಿರುವುದಕ್ಕಿಂತ ಹೆಚ್ಚಾಗಿಯೂ ಅವುಗಳು ಒತ್ತು ಒತ್ತಾಗಿಯೂ, ಹಾಲು ಚೆಲ್ಲಿದಹಾಗೆ ಕಾಣುವುದು. ಈ ಪ್ರದೇಶಕ್ಕೆ ಇಂಗ್ಲೀಷಿನಲ್ಲಿ ಮಿಲ್ಕೀವೇ (Milky way) ಅಂದರೆ 'ಹಾಲ ದಾರಿ' ಯೆಂದು ಕರೆಯುವರು. ಜ್ಯೋತಿಷ ಶಾಸ್ತ್ರಜ್ಞರು 'ಹಾಲು ದಾರಿ'ಯಲ್ಲಿರುವ ಅಸಂಖ್ಯಾಕ ನಕ್ಷತ್ರಗಳಿಗೆಲ್ಲಾ ಒಂದೇ ಒಂದು ನೆಬುಲೆಯು ಮಾತ್ರವೆಂದೂ, ನಮ್ಮ ಸೂರ್ಯನು ಕೂಡ ಆ ನೆಬುಲೆಯಿಂದಲೇ ಉಂಟಾದನೆಂದೂ ಸಕಾರಣವಾಗಿ ತೋರಿಸಿಕೊಡುವರು.

ಅಂದರೆ ನಕ್ಷತ್ರಗಳಿಗಿಂತ ಮುಂಚೆ ನೆಬುಲೆಗಳಿದ್ದವೆಂದು ಹೇಳಿದಂತಾಯಿತು. ನೆಬುಲೆಗಳಿಗಿಂತ ಮುಂಚೆ ಏನಿದ್ದಿತು? ಈ ಪ್ರಶ್ನೆಗೆ ಉತ್ತರ ಹೇಳಲಾಗುವುದಿಲ್ಲವೆಂದು ಕೆಲವು ಪ್ರಸಿದ್ಧ ವಿಜ್ಞಾನಿಗಳು ಅಭಿಪ್ರಾಯಪಟ್ಟಿರುವರು. ಏಕೆಂದರೆ ಮರ್ಮವನ್ನು ಭೇದಿಸಲು ಸ್ವಲ್ಪವೂ ಸುಳಿವು ಸಿಕ್ಕಿಲ್ಲ. ಇನ್ನು ಕೆಲವರು ಈಗ ಹೇಗೆ ಪ್ರಪಂಚವಿದೆಯೋ ಹಾಗೆಯೇ ನೆಬುಲೆಗಳ ಕಾಲಕ್ಕಿಂತ ಮುಂಚೆ ಇದ್ದಿತೆಂದೂ; ಮತ್ತಿನ್ನು ಕೆಲವರು ಬ್ರಹ್ಮಾಂಡ ಮೇಘವೆಂಬುದು (Cosmic cloud) ಪ್ರಪಂಚದ ಎಲ್ಲಾ ಕಡೆಯಲ್ಲಿಯೂ ಒಂದೇಸಮನಾಗಿ ಹರಡಿಕೊಂಡಿದ್ದಿತೆಂದೂ ಅಭಿಪ್ರಾಯಪಡುವರು. "ಬ್ರಹ್ಮಾಂಡ ಮೇಘ"ವೇನೆಂಬುದನ್ನು ತಿಳಿಯಬೇಕಾದರೆ, ನಕ್ಷತ್ರಗಳ ಒಳಗಡೆ ಅನಿಲಸಂಬಂಧವಾದ ಪದಾರ್ಥಗಳು ಯಾವ ಸ್ಥಿತಿಯಲ್ಲಿವೆಯೆಂಬುದನ್ನು ನಕ್ಷತ್ರದ ರಶ್ಮಿಯನ್ನು ಭೇದಿಸಿ ವರ್ಣಪರಿವರ್ತನವನ್ನು ಕಂಡುಹಿಡಿಯುವುದರ ಮೂಲಕ ತಿಳಿಯಬೇಕು. ಬಹಳ ಅಮೂಲ್ಯವಾದ ಮತ್ತು ಯಥಾರ್ಥವನ್ನು ಚಾಚೂ ತಪ್ಪದೆ ತಿಳಿಸುವ (Very accurate) ಸಲಕರಣೆಗಳ ಮೂಲಕ ನಕ್ಷತ್ರದ ರಶ್ಮಿವರ್ಣಪಟವನ್ನು ತೆಗೆದು ನೋಡಿದುದರಿಂದ ಅದರಲ್ಲಿರುವ ಮಾಲಿಕ್ಯೂಲ್‌ಗಳ ಮತ್ತು ಆಟಂ (Atom) ಗಳ ರಚನೆಯು ಸಾಮಾನ್ಯ ಸ್ಥಿತಿಯಲ್ಲಿರುವುದಕ್ಕಿಂತ ಬಹಳ ಬದಲಾಯಿಸಿದೆಯೆಂದು ತಿಳಿಯುವುದು. ಸರ್ ಆಲಿವರ್ ಲಾಡ್ಜ್‌ರವರು ಲೆಖ್ಖಹಾಕಿ ಹೇಳಿರುವದೇನಂದರೆ:– "ಪ್ರಪಂಚದಲ್ಲಿರುವ ಸರ್ವ ಪದಾರ್ಥಗಳನ್ನು (all matter) ಬೇರೆ ಬೇರೆ ಮಾಲಿಕ್ಯೂಲ್‌ಗಳನ್ನಾಗಿ ಒಡೆದು ಪ್ರಪಂಚದ ಎಲ್ಲಾ ಪ್ರದೇಶದಲ್ಲಿಯೂ ಒಂದೇಸಮನಾಗಿ ಹರಡಿದರೆ ಒಂದು ಮಾಲಿಕ್ಯೂಲಿನಿಂದ ಇನ್ನೊಂದು ಮಾಲಿಕ್ಯೂಲಿಗೆ ೫ ಗಜಗಳ ದೂರವಾಗುವುದೆಂದೂ; ಸಾಮಾನ್ಯ ಸ್ಥಿತಿಯಲ್ಲಿ ಒಂದು ಘನ ಅಂಗುಲ ವಾಯುವಿನಲ್ಲಿ ೧೮ರ ಮುಂದೆ ೧೮ ಸೊನ್ನೆಗಳನ್ನು ಹಾಕಿದರೆ ಎಷ್ಟು ಲೆಖ್ಖವಾಗುವುದೋ ಅಷ್ಟು ಮಾಲಿಕ್ಯೂಲುಗಳಿವೆಯೆಂದೂ ತಿಳಿಸಿರುವರು". ಆದರೆ ಈ ಮಾಲಿಕ್ಯೂಲ್‌ಗಳೆಲ್ಲವೂ ಒಂದೇ ಸಮನಾಗಿ ಪ್ರಪಂಚದಲ್ಲೆಲ್ಲಾ ಹರಡಿದ್ದುದು ಯಾವುದೋ ಒಂದು ಕಾರಣದಿಂದ ಕ್ರಮತಪ್ಪಿ ಕೆಲವೆಡೆಗಳಲ್ಲಿ ಹೆಚ್ಚುಹೆಚ್ಚು ಮಾಲಿಕ್ಯೂಲ್‌ಗಳು ಗಂಟುಕಟ್ಟಿಕೊಂಡವು. ಈ ಸ್ಥಿತಿಯೇ ನೆಬುಲೆಗಳಲ್ಲಿ ಇರುವುದು.

ಮೇಲೆ ವಿವರಿಸಿರುವುದು ನಿಜವಾಗಬೇಕಾದರೆ ಮೊದಲು ಬ್ರಹ್ಮಾಂಡದಲ್ಲಿ (Cosmos) ಇಷ್ಟೇ ಮಾಲಿಕ್ಯೂಲ್‌ಗಳವೆಯೆಂದು ಲೆಕ್ಕಾಚಾರಮಾಡಲು ಒಂದು ಬಗೆಯಿರಬೇಕು. ಅಲ್ಲದೆ ಪ್ರಪಂಚದ ಪ್ರದೇಶವನ್ನು ಒಟ್ಟು ಅಳತೆಮಾಡಿ ಹೇ

ಬಹುದೆಂದು ಒಪ್ಪಿಕೊಳ್ಳಬೇಕಾಗುವುದು. ಸಾಮಾನ್ಯರು ಇದು ಬುಡವಿಲ್ಲದ ಬುರುಡೆಯೆನ್ನುವರು. ಬ್ರಹ್ಮಾಂಡದ ಒಟ್ಟಳತೆಯನ್ನು ಹೇಳಲಾಗುವುದಿಲ್ಲವೆಂದು ಮೂವತ್ತು ನಾಲ್ವತ್ತು ವರ್ಷಗಳ ಹಿಂದೆ ಇದ್ದ ವಿಜ್ಞಾನಿಗಳು ನಂಬಿದ್ದರು. ಈಚೆಗೆ ಸುಪ್ರಸಿದ್ಧ ಗಣಿತ ಮತ್ತು ಭೌತಿಕ ಶಾಸ್ತ್ರ ವಿಶಾರದರಾದ ಆಲ್ಬರ್ಟ್ ಐನ್‌ಸ್ಟೀನ್‌ರವರು ಪ್ರಪಂಚವನ್ನು ಅಳತೆ ಮಾಡಬಹುದೆಂದೂ, ಆದರೆ ಬ್ರಹ್ಮಾಂಡಕ್ಕೆ ಅಳತೆಯಿಲ್ಲವೆಂದೂ ಹೊಸರೀತಿ ಗಣಿತ ಶಾಸ್ತ್ರದ ಪ್ರಕಾರ ವಿಶದವಾಗಿ ತೋರ್ಪಡಿಸಿರುವರು. ಎಲ್ಲೆ ಇಲ್ಲದಿರುವುದನ್ನು ಒಟ್ಟಳತೆ ಮಾಡಲಾಗುವುದೇ? ಎಲ್ಲೆಯಿಲ್ಲದಿರುವಿಕೆ ಮತ್ತು ಒಟ್ಟಳತೆ ಮಾಡುವಿಕೆ ಇವೆರಡೂ ಪರಸ್ಪರ ವಿರೋಧವಲ್ಲವೇ? ಎಂದು ಪ್ರಶ್ನಿಸಬಹುದು. ಈ ಪ್ರಶ್ನೆಗೆ ತಕ್ಕ ಉತ್ತರವನ್ನು ಕೊಡುವುದು ಸಾಮಾನ್ಯರಿಗೆ ಬಹಳ ಕಷ್ಟ. ಒಂದು ತರಹ ವಿವರಿಸಿದಗೂ ಯಥಾರ್ಥವು ಗೊತ್ತಾಗುವುದು ಸುಲಭಸಾಧ್ಯವಲ್ಲ. ಆದುದರಿಂದ ಹೆಚ್ಚು ವಿವರಿಸಲು ಪ್ರಯತ್ನಪಡದೆ ಒಂದು ಸಾಮ್ಯವನ್ನು ಕೊಟ್ಟು ಮುಗಿಸಬೇಕಾಗಿದೆ.

ಒಂದು ಸಮ ಭೂಮಿಯ ಮೇಲೆ ಉದ್ದ ಮತ್ತು ಅಗಲ ಮಾತ್ರವುಳ್ಳ ಪ್ರಾಣಿಯು ಜೀವಿಸುತ್ತಿರುವುದೆಂದು ತಿಳಿದುಕೊಳ್ಳೋಣ. ಆ ಪ್ರಾಣಿಯು ಉದ್ದ ಮತ್ತು ಅಗಲವುಳ್ಳ ಅಳತೆಕಡ್ಡಿಯನ್ನುಪಯೋಗಿಸಿ ತಾನಿರುವ ಸಮಭೂಮಿಯ ವಿಸ್ತೀರ್ಣವನ್ನು ಅಳೆಯಬಲ್ಲುದು. ಸಮಭೂಮಿಯಾದುದರಿಂದ ಎಲ್ಲೆಯಿಲ್ಲದಿದ್ದರೆ ಆ ಭೂಮಿಯ ವಿಸ್ತೀರ್ಣವು ಅಪಾರವಾದುದು ( infinite ). ಈ ಪ್ರಾಣಿಯು ಜೀವಿಸಿರುವ ಪ್ರಪಂಚವು ಎಲ್ಲೆ ಇಲ್ಲದಾಗಿಯೂ ಮತ್ತು ಅಪಾರ (infinite) ವಿಸ್ತೀರ್ಣವುಳ್ಳುದಾಗಿಯೂ ಆಯಿತು. ಆದರೆ ಇದೇ ಪ್ರಾಣಿಯು ಒಂದು ಚೆಂಡಿನ ಮೇಲ್ಮೈಯ (surface of a sphere) ಮೇಲೆ ಜೀವಿಸುತ್ತಿರುವುದೆಂದು ತಿಳಿದುಕೊಳ್ಳೋಣ. ಅದು ಉದ್ದ ಮತ್ತು ಅಗಲ ಮಾತ್ರವುಳ್ಳ ಅಳತೆಕಡ್ಡಿಯನ್ನು ಹಿಡಿದು ಒಂದು ಸ್ಥಾನದಿಂದ ಪ್ರಾರಂಭಿಸಿ ಅಳತೆ ಕಡ್ಡಿಯನ್ನು ನೇರವಾಗಿಡುತ್ತ ಬಂದರೆ ತಿರುಗಿ ಹೊರಟ ಸ್ಥಾನಕ್ಕೆ ಬಂದು ಸೇರುವುದು. ಅಲ್ಲದೆ ತಾನಿರುವ ಗೋಳದ ಪರಿಮಾಣವನ್ನು ತಿಳಿದು ಮೇಲ್ಮೈಯ ವಿಸ್ತೀರ್ಣವನ್ನು ಕಂಡುಹಿಡಿಯಬಲ್ಲುದು. ಈ ಎರಡನೆಯ ಪ್ರಪಂಚಕ್ಕೂ ಕೊನೆ ಮೊದಲಿಲ್ಲವಾದುದರಿಂದ ಎಲ್ಲೆಯಿಲ್ಲದುದಂತಾಯಿತು. ( unlimited ) ಇಂಥಹ ಪ್ರಪಂಚವು ಅಳತೆ ಮಾಡುವದಕ್ಕಾದರೂ ಎಲ್ಲೆಯಿಲ್ಲದುದಾಯಿತು. ಇದೇ ರೀತಿಯಲ್ಲಿ ನಾವು ನಮ್ಮ ಪ್ರಪಂಚದಲ್ಲಿದ್ದುಕೊಂಡಿರುವೆವು. ನಮಗೆ ಉದ್ದ, ಅಗಲ, ಮತ್ತು ದಪ್ಪವೆಂಬ, ಮೂರು ಅಳತೆಗಳುಂಟು ( Three dimensional ). ನಮ್ಮ ಪ್ರಪಂಚವೆಂದರೋ ನಾಲ್ಕು ಅಳತೆಗಳುಳ್ಳದು ( Four dimensional ). ನಾಲ್ಕನೆಯ ಅಳತೆಯೇ 'ಕಾಲ' (Time) ಎಂಬುದು. ಈ ಸಿದ್ಧಾಂತವನ್ನು ಬೆಳೆಸಿದವರೇ ಆಲ್ಬರ್ಟ ಐನ್‌ಸ್ಟೀನ್‌ರವರು. ಹಿಂದೆ ಕೊಟ್ಟ ಸಾಮ್ಯದಲ್ಲಿ ಎರಡು ಅಳತೆಯ ( Two dimensional ) ಪ್ರಾಣಿಗಳು ಮೂರು ಅಳತೆಯ ಪ್ರಪಂಚದಲ್ಲಿದ್ದರೆ ( ಅಂದರೆ ಗೋಳದಮೇಲೆ ) ಆ ಪ್ರಪಂಚವು ಒಟ್ಟಳತೆಯುಳ್ಳುದು ಮತ್ತು ಎಲ್ಲೆಯಿಲ್ಲದುದು ( limitless ). ಅದೇ ರೀತಿಯಲ್ಲಿಯೇ ನಾಲ್ಕು ಅಳತೆಯ ನಮ್ಮ ಪ್ರಪಂಚವು ಒಟ್ಟಳತೆಯುಳ್ಳದು ಮತ್ತು ಎಲ್ಲೆ ಇಲ್ಲದುದು ( finite but unbounded ).

ಅಳತೆ ಮಾಡಬಹುದಾದ ಮತ್ತು ಎಲ್ಲೆಯಿಲ್ಲದ ಪ್ರಪಂಚದಲ್ಲಿರುವ ನಕ್ಷತ್ರಗಳು ಗ್ರಹೋಪಗ್ರಹಗಳೇ ಮೊದಲಾದುವುಗಳ ಆದಿ ಮತ್ತು ಅಂತ್ಯಗಳನ್ನು ಇದುವರಿವಿಗೂ ತಿಳಿದು ಬಂದಿರುವ ವೈಜ್ಞಾನಿಕ ವಿಷಯಗಳ ಆಧಾರದ ಮೇಲೆ ಚರ್ಚಿಸಿದುದರ ಸಾರಾಂಶವನ್ನು ಸರ್ ಆಲಿವರ್ ಲಾಡ್ಜ್‌ರವರು ಹೀಗೆಂದು ಕೊಟ್ಟಿರುವರು:—

ಮೊದಲು 'ಬ್ರಹ್ಮಾಂಡ ಮೇಘ' (Cosmic Cloud), ಮತ್ತು ಅದಕ್ಕೆ ಸ್ವತಃ ತಿರುಗುವ ಶಕ್ತಿ. ಆ ಮೇಲೆ ಕೆಲವೆಡೆಗಳಲ್ಲಿ ಬ್ರಹ್ಮಾಂಡ ಮೇಘದ ಅಣುಗಳು ಗುಂಪು ಸೇರಿ ನೆಬುಲೆಗಳುಂಟಾಗುವುವು. ನೆಬುಲೆಗಳಲ್ಲಿ ತುಂಬಿರುವ ಅನಿಲ ಸಂಬಂಧ ಪದಾರ್ಥಗಳಿಗೆ ಸ್ವಯಂ ಗಿರ್ರನೆ ತಿರುಗುವ ಶಕ್ತಿಯಿದ್ದು, ಕ್ರಮೇಣ ತಿರುಗುವ ವೇಗವು ಹೆಚ್ಚುತ್ತ ಬರುವುದು ಮತ್ತು ಆ ಕಾರಣದಿಂದ ನಕ್ಷತ್ರಗಳು ಉತ್ಪತ್ತಿಯಾಗುವುವು. ನಕ್ಷತ್ರಗಳ ಶಾಖ ಪರಿಮಾಣವು ಒಂದೊಂದಕ್ಕೆ ವ್ಯತ್ಯಾಸವಿರುವುದರಿಂದ ರಶ್ಮಿ ಪ್ರವಾಹವುಂಟಾಗುವುದು (Radiation). ರಶ್ಮಿಯು ನಕ್ಷತ್ರದಿಂದ ಹೊರಚೆಲ್ಲಿದರೆ ಅದರ ಶಾಖಪರಿಮಾಣವು ಕಡಿಮೆಯಾಗುತ್ತ ಬಂದು ನಕ್ಷತ್ರದಲ್ಲಿರುವ ಅನಿಲ ಸಂಬಂಧ ಪದಾರ್ಥಗಳು ಸಾಂದ್ರೀಕರಣವಾಗುವುವು. ಸಾಂದ್ರೀಕರಣವಾಯಿತೆಂದರೆ, ಅಥವಾ ಇನ್ನೊಂದು ನಕ್ಷತ್ರ ಆಕರ್ಷಣ ಶಕ್ತಿ ಒಡೆಯಲ್ಪಟ್ಟಿತೆಂದರೆ ಗ್ರಹಗಳು ಜನ್ಮವೆತ್ತುವುವು. ಆ ಗ್ರಹಗಳು

ಆರುತ್ತ ಬಂದು ಸುತ್ತಲಿರುವ ಅನಿಲ ಪದಾರ್ಥಗಳಲ್ಲಿ ಕೆಲವು ಭಾಗವು ಒಟ್ಟುಗೂಡಿ ನೀರು ಉಂಟಾಗುವುದು. ಕೊನೆಗೆ ಅವುಗಳಲ್ಲಿ ಜೀವಾಣುಗಳು ಉತ್ಪತ್ತಿಯಾಗುವುವು.

ನಕ್ಷತ್ರಗಳು ಬೆಳಕನ್ನು ಹೊರಚೆಲ್ಲುತ್ತಲಿದ್ದರೆ ಅವುಗಳ ಶಕ್ತಿಯೂ ಮತ್ತು ಶಾಖವೂ ಕಡಿಮೆಯಾಗುವುದಲ್ಲದೆ; ಅವುಗಳಲ್ಲಿರುವ ಅನಿಲ ಸಂಬಂಧ ಪದಾರ್ಥಗಳೂ ಕೊಂಚವಾಗುತ್ತ ಬರುವುವು. ( ಏಕೆಂದರೆ ಪದಾರ್ಥ ಮತ್ತು ಶಕ್ತಿ ಇವೆರಡರ ಪರಸ್ಪರ ರೂಪ ಬದಲಾವಣೆಗೆ ಅವಕಾಶವುಂಟು) ಕೊನೆಗೆ ನಕ್ಷತ್ರವು ಮಿಣುಗುಟ್ಟುವ ಶಕ್ತಿಯನ್ನು ಕಳೆದುಕೊಳ್ಳುವುದು. ಅದರಲ್ಲಿದ್ದ ಪದಾರ್ಥಗಳೆಲ್ಲಾ ಶಕ್ತಿರೂಪದಲ್ಲಿ ( Energy) ಹರಡುವುವು. ಆದುದರಿಂದ ಬ್ರಹ್ಮಾಂಡದ ಅಂತ್ಯಕಾಲವಿದ್ದರೆ ಆ ಕಾಲದಲ್ಲಿ ಬರೀಶಕ್ತಿಯೇ ಹೊರತು ಪದಾರ್ಥಗಳಿರುವುದಿಲ್ಲ. ಹಾಗೆಂದರೆ "ಶಕ್ತಿಮಯಾ ಜಗತ್" ಎಂಬ ವಾಕ್ಯವು ಸತ್ಯವಾದಂತಾಯಿತು. ಶಕ್ತಿಯಿಂದ ಬ್ರಹ್ಮಾಂಡ ಮೇಘವು ಯಾವುದೋ ಕಾರಣದಿಂದ ಉಂಟಾಗಬಹುದು. ಹಾಗಾದರೆ ಪುನಃಪ್ರಪಂಚದ ರಚನೆಯು ಪ್ರಾರಂಭಿಸುವುದು.

—o—

# "ಹಳ್ಳಿಗಳ ಪುನರುಜ್ಜೀವನ"



ಲೇಖಕರು:— ಶ್ರೀ. ಮು. ಪು. ಲಕ್ಷ್ಮೀನೃಸಿಂಹಶಾಸ್ತ್ರೀ, ಗೌ. ಕಾರ್ಯದರ್ಶಿ, ಬಾಲಕರ್ನಾಟಕ ಸಂಘ, ಬೆಂಗಳೂರು.

ನಮ್ಮ ಇಂಡಿಯಾ ದೇಶದಲ್ಲಿ ಹಳ್ಳಿಯೆಂದರೆ ಆರ್ಥಿಕ, ಸಾಮಾಜಿಕ ಸ್ಥಿತಿಗಳನ್ನು ಸಂಪೂರ್ಣವಾಗಿ ಪಡೆದಿರುವ ಸ್ವಾಭಾವಿಕ ಸಂಸ್ಥೆಯೆಂದೆನ್ನಬೇಕು. ಹಳ್ಳಿಗಳೇ ನಮ್ಮ ಭರತಖಂಡದ ಸಾಮ್ರಾಜ್ಯ ಸಂಪತ್ತಿಗೆ ಆವಾಸಸ್ಥಾನ, ಹಳ್ಳಿಗಳೇ ಆಂತರಿಕ ಜನಜೀವನದ ರಂಗಸ್ಥಾನ, ಹಳ್ಳಿಗಳೇ ಶಾರೀರಕ, ನೈತಿಕ, ಸಾಂಪತ್ತಿಕಾಭಿವೃದ್ಧಿಗೆ ಕೆಲಸ ಮಾಡಬೇಕಾಗಿರುವ ಕಾರ್ಯಸ್ಥಾನ.

ನಮ್ಮ ಇಂಡಿಯಾದಲ್ಲಿರುವ ಪಟ್ಟಣಗಳು ಅವು ಹೊಸವೇ ಆಗಲೀ ಹಳೆಯವೇ ಆಗಲೀ, ಕೆಲವು ಹಳ್ಳಿಗಳು ನಾಶವಾಗಿ ಕೋಟೆ ಕೊತ್ತಳಗಳಿಂದಲೂ ವ್ಯಾಪಾರವೀಥಿಗಳಿಂದಲೂ ದೇವಾಲಯಗಳಿಂದಲೂ, ಕಣ್ಣಿಗೆ ಆನಂದವನ್ನು ಕೊಡುವಂತಹ ಕೃತಕಪುರಿಗಳೇ ಹೊರತು ಸ್ವಾಭಾವಿಕವಾದ ಜೀವನವನ್ನು ತೋರ್ಪಡಿಸುವಂತಹ ನಿವಾಸಸ್ಥಾನಗಳಲ್ಲ. ಒಂದು ಪಟ್ಟಣದ ಸೊಬಗು ಬಹಳ ಮನೋರಂಜಕವಾಗಿದೆಯೆಂದರೆ ಆ ಪಟ್ಟಣದ ರಂಜನೆಗಾಗಿ, ಅನೇಕ ಹಳ್ಳಿಗಳು ನಾಶವಾಗಿವೆಯೆಂದರ್ಥ. ಹಳ್ಳಿಗಳು ತಮ್ಮ ವ್ಯಕ್ತಿತ್ವವನ್ನಿಂದು ನೀಗಿಕೊಂಡಿವೆ, ಪಟ್ಟಣಗಳು ತಮ್ಮ ವ್ಯಕ್ತಿತ್ವವನ್ನಿನ್ನೂ ಬಹಿರಾಡಂಬರದಲ್ಲಿಯಾದರೂ ಉಳಿಸಿಕೊಂಡಿವೆ. ಉದಾಹರಣೆಗಾಗಿ ಬೆಂಗಳೂರು ಪಟ್ಟಣವನ್ನು ತೆಗೆದುಕೊಳ್ಳುವ. ನಾನಾವಿಧವಾದ ವಸ್ತುವಿಶೇಷಗಳೂ, ಸಹಾಯಸೌಕರ್ಯಗಳೂ, ಶಾರೀರಕ ಉನ್ನತಿಯೂ, ಎಡೆಯಲ್ಲಿಯೇ ಇದ್ದರೂ, ಆ ಪಟ್ಟಣದ ಸ್ವಾಭಾವಿಕತೆಯನ್ನು ಅಲ್ಲಿ ವಾಸಿಸುವ ಜನಗಳ ಸಂಖ್ಯೆಯಿಂದ, ಯಥಾರ್ಥಿಸಲು ನಮಗೆ ಸಾಧ್ಯವಾಗಲಾರದು. ಕಾರಣಾಂತರಗಳಿಂದ, ಕಾರ್ಯಾಂತರ ವರ್ತಿಗಳಾಗಿ ಎಲ್ಲೆಲ್ಲಿಂದಲೋ ಬಂದು ಕೆಲವು ಕಾಲ ವಾಸಿಸುವ ಜನಗಳನ್ನು ಪಟ್ಟಣದ ನಿರಂತರ ವಾಸಿಗಳೆಂದೆಂತು ಊಹಿಸಬಲ್ಲೆವು ?

ನಗರಗಳನ್ನು ಬಿಟ್ಟು ತಾಲೂಕು, ಜಿಲ್ಲೆಗಳನ್ನು ತೆಗೆದುಕೊಂಡರೆ ಅವು ಇನ್ನೂ ಕೃತ್ರಿಮ ಲಕ್ಷಣಗಳಿಂದ ಯುಕ್ತವಾಗಿವೆ. ರಾಜ್ಯಭಾರನಿರ್ವಾಹಕತೆಯ ಅನುಕೂಲಕ್ಕಾಗಿ, ಒಂದು ದೇಶವನ್ನು ಜಿಲ್ಲೆ, ತಾಲೂಕು, ಹೋಬಳಿ, ಹಳ್ಳಿ ಎಂಬುದಾಗಿ ಭಾಗ ವಿಭಾಗ ಮಾಡಿದ್ದಾರೆ. ಇವುಗಳಿಗೆ ಸಕರಣ (organic) ಜೀವನವಿಲ್ಲ. ಇವುಗಳಲ್ಲಿ ವಾಸಿಸುವ ಪ್ರಜೆಗಳಿಗೆ ತಾವುಗಳೆಲ್ಲರೂ ಒಂದು ಸಾರ್ವಲೌಕಿಕೋದ್ಯೋಗದಲ್ಲಿ ಸೇರಿರುವರೆಂದೂ, ಸಾಮಾನ್ಯ ಲಕ್ಷ್ಯಸಂಪತ್ತುಗಳಿಗಾಗಿ ಕೆಲಸಮಾಡಬೇಕಾಗಿರುಪವರೆಂದೂ ಅಭಿಪ್ರಾಯಪಡುವ ಭಾವನೆಯು ಮರೆತು ಹೋಗುತ್ತ ಬಂದಿದೆ. ಚಿಕ್ಕ ಚಿಕ್ಕ ಊರುಗಳಲ್ಲಿಯೇ ಇಂತಹ ಸ್ಥಿತಿಯಾಗಿರುವಾಗ, ಜಿಲ್ಲೆಯಲ್ಲಿ ನಾಡಿನಲ್ಲಿ ಒಟ್ಟಾಗಿ ದೇಶದಲ್ಲಿ ಐಕ್ಯತೆಯೂ, ಸೋದರತೆಯೂ ಉತ್ಪನ್ನವಾಗುವದೆಂತು ? ಹಳ್ಳಿಗಳನ್ನು ಕಾರ್ಯಕ್ಷೇತ್ರಗಳನ್ನಾಗಿ ಮಾಡಿಕೊಂಡು ಹಳ್ಳಿಗಳನ್ನು ಸೊಬಗಿನ, ಸಂಪತ್ತಿನ, ಮನೆಗಳನ್ನಾಗಿ ಮಾಡಲು

ಯತ್ನಿಸಿದ ಹೊರತು, ದೇಶಮಾತೆಯ ಪುನರುಜ್ಜೀವನದ ಕಾರ್ಯವು ಸಮರ್ಪಕವಾಗಿ ನಡೆಯಲಾರದು. ಆದ್ದರಿಂದಲೇ ಹಳ್ಳಿಗಳ ಪುನರುಜ್ಜೀವನಕಾರ್ಯವು ಮೊದಲು ನಡೆಯ ಬೇಕಾದುದು.

## ದಕ್ಷಿಣ ಇಂಡಿಯದ ಹಳ್ಳಿಗಳ ಕ್ಷೀಣತೆ.

ಒಂದು ಶತಮಾನಕ್ಕಿಂತ ಹೆಚ್ಚಾದ ದಿನಗಳಿಂದ ನಮಗೆ ಲಭಿಸಿರುವ ರಾಜಕೀಯ, ಸಾಮಾಜಿಕ ದುರವಸ್ಥೆಗಳಿಗೆ, ನಮ್ಮಲ್ಲಿದ್ದ ಏಕಚಿತ್ತತೆಯ, ಸೋದರತೆಯ, ನಾಶವೇ ಮುಖ್ಯ ಕಾರಣವೆನ್ನಬೇಕು. ಹಳ್ಳಿಗಳ ಸಂಪೂರ್ಣ ನಾಶಕ್ಕೆ ರೇಲ್ವೆ, ಟೆಲಿಗ್ರಾಂ ಮುಂತಾದವುಗಳ ನಿರ್ಮಾಣವೂ, ಪಾಶ್ಚಿಮಾತ್ಯಾನುಕರಣದ ಹೈಸ್ಕೂಲ, ಕಾಲೇಜ ಮೊದಲಾದ ಆಂಗ್ಲ ವಿದ್ಯಾಲಯಗಳ ಸ್ಥಾಪನೆಯೂ, ವ್ಯಕ್ತಿಸೌಖ್ಯಾನುಕರಣಕಾರ್ಯೋದ್ಯಮ ರೂಪವೂ, ಕಾರಣವಾದವು. ಮೊದಮೊದಲು ಈಸ್ಟ ಇಂಡಿಯಾ ಕಂಪನಿಯ ನೌಕರರನ್ನು ಆಶ್ಚರ್ಯದಿಂದ ತಲ್ಲಣಗೊಳಿಸುತ್ತಿದ್ದ ನಮ್ಮ ನಾಡಿನ ಹಳ್ಳಿಗಳ ಜನರ ಒಗ್ಗಟ್ಟಿನ, ಸಂಪತ್ತಿನ ಸೊಬಗು ಇಂದು ಜಾತೀಯ ಪ್ರಸವವೇದದ ದುಃಖದಲ್ಲಿ ಸಿಕ್ಕಿ ನರಳಾಡುವ ಕಾಲಬಂದಿದೆ. ಇಂದಿನ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಸರಿಯಾದ ದೇವಾಲಯವು ಕಾಣಬರದು, ಒಂದು ಶಾಲೆಯು ಶೋಭಿಸದು, ಬಾರಾಬಲೂತೆಯರ ಮಾತಂತೂ ಮಾಯವಾಗಿಯೇ ಹೋಗಿದೆ. ಇತಿಹಾಸ ಪುರಾಣ ಪ್ರಸಿದ್ಧವಾದ ನಮ್ಮ ಭರತಖಂಡದ ಹಳ್ಳಿಗಳು ಇಂದು ಕಂಗೆಟ್ಟು ಬೆಂಗಾಡಾಗಿ ಹೋಗಿವೆ.

## ಹಳ್ಳಿಯ ಜೀವನದಲ್ಲಿನ ನ್ಯೂನತೆಗಳು.

ದಕ್ಷಿಣ ಹಿಂದುಸ್ಥಾನದಲ್ಲಿನ ಹಳ್ಳಿಗಳ ಜೀವನವನ್ನು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿದರೆ ಅದರ ನ್ಯೂನತೆಗಳನ್ನು ಎರಡು ದೊಡ್ಡ ಭಾಗಗಳನ್ನಾಗಿ ವಿಂಗಡಿಸಬಹುದೆಂದು ತೋರಿ ಬರುವುದು. ಸಾಮಾಜಿಕ ಸಂಬಂಧವಾದುದೊಂದು. ಆರ್ಥಿಕ ರೂಪವಾದುದು ಮತ್ತೊಂದು. ಹಿಂದೆ ಬೆಳೆಯುತ್ತಿದ್ದ ಐಕ್ಯತೆಯು ಇಂದಿನ ಹಳ್ಳಿಗಳಲ್ಲಿ ಕಾಣಬರದಿರುವುದು ಸಾಮಾಜಿಕ ಸಂಬಂಧವಾದ ದೊಡ್ಡ ಕೊರತೆಯೆನ್ನಬೇಕು. ಒಟ್ಟಿನಲ್ಲಿ ಹೆಚ್ಚಾಗಿ ಹಳ್ಳಿಗಳ ಜನರು ವಿಷಣ್ಣವೂ, ನಿಶ್ಚಲವೂ, ಅವಗುಂಠನವೂ, ಸ್ಫೂರ್ತಿರಹಿತವೂ ಆದ ಜೀವನವನ್ನು ಅನುಭವಿಸುತ್ತಿದ್ದಾರೆನ್ನುವುದು ವಿಷಾದವಿಷಯವೇ ಸರಿ. ಬುದ್ಧಿಯಲ್ಲಾಗಲೀ, ವಿದ್ಯೆಯಲ್ಲಾಗಲೀ, ಐಶ್ವರ್ಯದಲ್ಲಾಗಲೀ, ನಾಗರಿಕತೆಯಲ್ಲಾಗಲೀ ಹಳ್ಳಿಯವರಿಗಿಂತ ಸ್ವಲ್ಪ ಹೆಚ್ಚಿನ ಸ್ಥಿತಿಯಲ್ಲಿ ಕಾಣಬರುವವನು, ತನ್ನ ಹಳ್ಳಿಯವರೊಂದಿಗೆ, ಒಡ್ಯಾಡಿ, ಮಾತಾಡಿ, ಅವರ ಪ್ರೀತಿಗೆ ಪಾತ್ರನಾಗುವುದು ತನ್ನ ಯೋಗ್ಯತೆಗೆ ಅವಮಾನಕರವೆಂದು ಭಾವಿಸುವನು. ಇದೊಂದು ವ್ಯಾಧಿಯೆನ್ನಬೇಕು. ಆತನು ತನ್ನ ಹಳ್ಳಿಯಲ್ಲಿರಲಪೇಕ್ಷಿಸದೆ ಸ್ವಲ್ಪ ದೂರದಲ್ಲಿ ವಾಸಿಸಲು ಯತ್ನಿಸುವನು.

ಆರ್ಥಿಕ ದೃಷ್ಟಿಯಿಂದ ನೋಡಿದರೂ ಇಂತಹ ನ್ಯೂನತೆಗಳು ಎಷ್ಟೋ ಕಂಡುಬರುವವು. ಹಳ್ಳಿಗಳಲ್ಲಿ ವಾಸಿಸುವ ಹೆಚ್ಚು ಜನರು ಹಗಲಿರುಳೂ ಕಷ್ಟಪಟ್ಟು ಜೀವನ ಮಾಡತಕ್ಕವರು. ತಾವು ದುಡಿದು, ತಿಂದು, ಉಳಿದ ಅಲ್ಪಕಾಲದಲ್ಲಿಯಾದರೂ ಸುಖವಾಗಿರಲವರಿಗವಕಾಶವು ದೊರೆಯದು. ಅವರು ತಮ್ಮ ಮನಶ್ಶರೀರಗಳನ್ನು ಒಂದು ಘಳಿಗೆಯಾದರೂ ಬಂದು ಮಾಡಿ ಕುಳಿತಿರಲು ಯತ್ನಿಸರು. ತಾವು ಅನಿಶವೂ ದೇಹ ಶ್ರಮಪಡದೆ ಇದ್ದರೆ ಯತ್ನವಿಲ್ಲವೆಂಬುದನ್ನು ಸಂಪೂರ್ಣವಾಗಿ ನಂಬಿಕೊಂಡುಬಿಟ್ಟಿದ್ದಾರೆ. ಮುಂದೆ ತಮಗೆ ಸ್ವಲ್ಪವಾದರೂ ಸುಖವುಂಟೆಂಬ ಭರವಸೆಯವರಿಗಿಲ್ಲ. ಹಣಕಾಸುಗಳುಳ್ಳ ಕೆಲವು ಧನಿಕರು ಇಂತಹ ಕೀಳು ಸ್ಥಿತಿಯಲ್ಲಿರುವ ತಮ್ಮೂರಿನ ಜನರಿಗೆ ಸಹಾಯ ಮಾಡುವುದಿಲ್ಲ.

ತಮ್ಮ ಹಳ್ಳಿಯ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಪ್ರಯತ್ನಿಸುವ ಮಹನೀಯರು ಕೆಲವರಲ್ಲಲ್ಲಿರಬಹುದು. ಧನಿಕರಾದವರು ಹೆಚ್ಚಾದ ಆಶೆಗಳ ಕಡೆಗೆ ಮನವೀಯದೆ, ಸಾಧ್ಯವಾದಷ್ಟು ನಿಷ್ಕಾಪಟ್ಯಯುಕ್ತವಾದ ಜೀವನವನ್ನು ಅನುಸರಿಸಲು ಯತ್ನಿಸಿದರೆ ಸ್ವಲ್ಪ ಸಹಾಯಮಾಡಿದಂತಾಗುವದು. ಮದುವೆ, ತಮಾಷೆ, ಉಪಹಾರ, ಇತ್ಯಾದಿಗಳಲ್ಲಿ ದುಡ್ಡನ್ನು ದುಂದುಗಾರಿಕೆಯಿಂದ ವೆಚ್ಚಮಾಡದೆ, ಆ ಹಣವನ್ನು ಬಡಬಗ್ಗರ ಸಹಾಯಾರ್ಥವಾಗಿ ಧನವಂತರುಪಯೋಗಿಸುತ್ತಾ ಬಂದರೆ ಹಳ್ಳಿಯ ಜೀವನವು ಸ್ವಲ್ಪ ಉತ್ತಮವಾಗುವುದೆನ್ನಬಹುದು. ಮಾಧ್ಯಮಿಕ ಸ್ಥಿತಿಯಲ್ಲಿರುವ ರೈತರಾದರೋ ಜಮೀನ ಬಿತ್ತಿಗೆಗೆ ಬೇಕಾದ ಕಾಳುಗಳನ್ನು ಕೊಂಡುಕೊಳ್ಳುವದಕ್ಕೂ, ಗೊಬ್ಬರ ಮುಂತಾದವುಗಳನ್ನು ವ್ಯಾಪಾರಮಾಡುವದಕ್ಕೂ ತಾವು ಬೆಳೆದ ಧಾನ್ಯವನ್ನು ಸರಿಯಾದ ಖರೀದಿಗೆ ಮಾರುವುದಕ್ಕೂ ಬೇಕಾದ, ಸಲಕರಣೆಗಳನ್ನೂ ಅನುಕೂಲಗಳನ್ನೂ ಪಡೆದಿಲ್ಲ.

## ಪುನರುಜ್ಜೀವನ ಕಾರ್ಯ

ಹಳ್ಳಿಗಳಲ್ಲಿನ ಕುಂದುಕೊರತೆಗಳೂ, ಪುನರುಜ್ಜೀವನ ಕಾರ್ಯವೂ ಸೂಕ್ಷ್ಮವಾಗಿ ಮೇಲೆ ಸೂಚಿಸಲ್ಪಟ್ಟವು. ಆ ಧ್ಯೇಯ

ವನ್ನು ಸಾಧಿಸಲು ನಾವು ಹೋಗಬೇಕಾದ ಮಾರ್ಗವೇನೆಂಬುದನ್ನು ನಾವೀಗ ಅರಿಯಬೇಕು. ಬ್ರಿಟಿಷರ ಆಳ್ವಿಕೆಯಿಂದಲೂ ಬ್ರಿಟಿಷ ಸರಕಾರದ ವ್ಯವಸ್ಥಾಕ್ರಮದಿಂದಲೂ ಹಳ್ಳಿಗಳು ತಮ್ಮ ವ್ಯಕ್ತಿತ್ವವನ್ನು ಹಾಳುಮಾಡಿಕೊಂಡಿವೆಯೆಂದು ಕೆಲವರ ಮತ. ಇದು ನಿಜವಾದರೂ ಒಂದೆರಡು ಶತಮಾನಗಳ ಹಿಂದೆ ಸಮರ್ಪಕವಾಗಿದ್ದ ಹಳ್ಳಿಯ ರೀತಿಯು ಇಂದಿನ ಸ್ಥಿತಿಗತಿಗಳಿಗೆ ಸರಿಹೋಗುತ್ತಿರಲಿಲ್ಲವೆಂಬದನ್ನು ಎಲ್ಲರೂ ಒಪ್ಪುವರು.

ಬ್ರಿಟಿಷರ ಪ್ರಭಾವವು ಅಲ್ಪವಾಗಿದ್ದ ೧೮ನೆಯ ಶತಮಾನದಲ್ಲಿಯೇ ಹಳ್ಳಿಯ ಸ್ಥಿತಿಯು ದಕ್ಷಿಣ ಹಿಂದುಸ್ಥಾನದಲ್ಲಿ ಕೆಟ್ಟು ಹೋಗಿತ್ತು.

ಒಂದು ಕಡೆ ನಾಯಕ ರಾಜರೂ, ಪಾಳ್ಯೇಗಾರರೂ ಮತ್ತೊಂದು ಕಡೆ ಮಹಮ್ಮದೀಯರೂ ಮರಾಠಾ ಅಧಿಕಾರಿಗಳೂ ರಾಜ್ಯಭಾರ ಮಾಡುತ್ತಿದ್ದಾಗಲೇ ಹೆಚ್ಚಿನ ಕಂದಾಯುಗಳಿಗೂ, ಸುಲಿಗೆಗಳಿಗೂ, ಹಳ್ಳಿಯವರು ಅಧೀನರಾದುದರಿಂದ, ಹಳ್ಳಿಗಳ ಬಲವೂ, ಸ್ವಾತಂತ್ರ್ಯವೂ ಅಂದೇ ಕುಗ್ಗಿ ಹೋಗುವದಕ್ಕಾರಂಭವಾಯಿತೆನ್ನಬಹುದು. ಅಂದಿನಿಂದೀಚೆಗೆ ರೇಲ್ವೆ, ಟೆಲಿಗ್ರಾಂ, ಟಪಾಲು ಮುಂತಾದವುಗಳು ಹಳ್ಳಿಯ ಜನರನ್ನು ಸಾಮಾನ್ಯ ಜೀವನದಲ್ಲಿರಿಸಲು ಅವಕಾಶಕೊಡದೆ ಬಹಿರಾಡಂಬರಗಳಿಗೆ ಗುರಿಮಾಡಿಬಿಟ್ಟವು. ಆರ್ಥಿಕ ಮಾರ್ಗದಲ್ಲಿ ಅರ್ಥಶಾಸ್ತ್ರಜ್ಞರ ಬೋಧನೆಗಳನುಸಾರವಾದ ಹಣದ ಬೆಲೆಯ ಉಬ್ಬರವಿಳತಗಳಿಗೆ, ಅರಿಯದ ಬಡ ಹಳ್ಳಿಯವರು ಗುರಿಯಾಗಬೇಕಾಗಿ ಬಂತು. ತಮ್ಮ ಮನೆಗಳನ್ನು ಹುಲ್ಲುಸೊಪ್ಪುಗಳಿಂದ ಕಟ್ಟುವುದನ್ನು ಬಿಟ್ಟು ಪಟ್ಟಣದವರನ್ನನುಕರಿಸಬೇಕಾಗಿ ಬಂತು. ಗ್ರಾಮ ಪುನುರುಜ್ಜೀವನ ಕಾರ್ಯದಲ್ಲಿ ಈ ವಿಷಯುಗಳನ್ನೂ ಪರಿಸ್ಥಿತಿಗಳನ್ನೂ ಆಲೋಚಿಸಬೇಕಾಗುವುದು. ನಿಧಾನವಾಗಿ ಆಗಬೇಕಾದ ಕಷ್ಟಸಾಧ್ಯವಾದ ಕೆಲಸವಿದು. ಈ ಕಾರ್ಯಕ್ಕೆ ತಳಹದಿಯು ಬಲವಾಗಿ ಹಾಕಲ್ಪಡಬೇಕು. ಪ್ರತಿಷ್ಠಾಪನಾಕಾರ್ಯವು ರಾಜ್ಯಾಧಿಕಾರಿಗಳ ಮಧುರ ಹಸ್ತಗಳಿಂದಾಯಿತೆಂದರೆ ಸಾಲದು— ಅತಂದ್ರಿತ ರಾಜನೀತಿಶಾಸ್ತ್ರಜ್ಞನ ಚಂಚಲಯುಕ್ತವಾದ ಕೈಗಳಿಂದ ತಳಹದಿಯ ಕಲ್ಲು ನೆಡಲ್ಪಟ್ಟರೂ ಸಾಲದು. ವಿವೇಕಶಾಲಿಯಾದ ಉತ್ತಮ ಸಮಾಜಸುಧಾರಕನ ದೃಢ ಹಸ್ತದಿಂದ ಈ ಕೆಲಸವು ನೆರವೇರಿಸ್ಪಡಬೇಕು.

### ವಿದ್ಯಾಭ್ಯಾಸದ ಉನ್ನತಿಗೆ ಸಾಧನೆಗಳು

ದೃಢತರವಾದ ಹಳ್ಳಿಯ ಅಭಿವೃದ್ಧಿಕಾರ್ಯಕ್ಕೆ ಸಾಮಾನ್ಯ ಮತ್ತು ವಿಶೇಷ ರೀತಿಗಳ ವಿದ್ಯಾಭ್ಯಾಸವು ಅತ್ಯಗತ್ಯವಾದುದು. ಹಳ್ಳಿಯ ಶಾಲೆಯು ಪುನರುಜ್ಜೀವನಕಾರ್ಯದಲ್ಲಿ ಹೆಚ್ಚಿನ ಕೆಲಸವನ್ನು ಮಾಡಬೇಕು. ಇಂದಿನ ಹಳ್ಳಿಗಳ ಶಾಲೆಯ ರೀತಿಯು ಬದಲಾಯಿಸಲ್ಪಡಬೇಕು. ಬೋಧನಾಕ್ರಮವು ಬದಲಾಯಿಸಲ್ಪಡಬೇಕು. ಹೊಸ ಸಾಮಾಜಿಕ ಜೀವನಕ್ಕೆ ಸರಿಹೋಲುವ ಭಾವನೆಗಳನ್ನು ಜನರ ಮನಸ್ಸಿನಲ್ಲಿರಿಸಲು ಹಳ್ಳಿಯ ಶಾಲೆಯು ಯೋಗ್ಯತೆಯನ್ನು ಪಡೆಯಬೇಕು. ಅಲ್ಲಿನ ಉಪಾಧ್ಯಾಯನೂ ನವಚೈತನ್ಯಯುತನಾಗಿ, ಹಳ್ಳಿಯ ವಿದ್ಯಾರ್ಥಿಗಳಿಗೆ ನೂತನ ಸ್ಫೂರ್ತಿಯನ್ನು ಕೊಡುವಂತಹನಾಗಬೇಕು. ಹುಡುಗರಿಗೆ ಮಾತ್ರವಲ್ಲ, ವಿದ್ಯಾಭ್ಯಾಸವು ಕೊಡಲ್ಪಡಬೇಕಾದುದು; ವಯಸ್ಕರಿಗೂ ಕೂಡ ನೂತನ ಜೀವನದ ವಿದ್ಯಾಭ್ಯಾಸದ ಮಹತ್ವವೂ, ಮಾರ್ಗವೂ, ತಿಳುಹಲ್ಪಡಬೇಕು. ಉಪನ್ಯಾಸಕಾರರು ಆಗಾಗ ಹಳ್ಳಿಗಳ ಕಡೆ ಹೋಗಿ ಉತ್ತಮ ವಿಷಯುಗಳ ಮೇಲೆ ವ್ಯಾಖ್ಯಾನಗಳನ್ನು ಕೊಟ್ಟು ಅವರಿಗೆ ವಿಷಯಸಂಗ್ರಹ ಮಾಡಿಕೊಡಬೇಕು. ತಮ್ಮ ವಿರಾಮಕಾಲವನ್ನು ಸುಖವಾಗಿ ಕಳೆಯುವದಕ್ಕೂ, ದೇಶವಿದೇಶಗಳ ವರ್ತಮಾನಗಳನ್ನು ತಿಳಿದುಕೊಳ್ಳುವುದಕ್ಕೂ, ರಾಜಕೀಯ ವಿಚಾರಗಳನ್ನರಿಯುವದಕ್ಕೂ ಸುಲಭವಾಗಿ ಅನುಕೂಲವಾಗುವಂತಹ ಒಂದು ವಾಚನಾಲಯವೂ, ಒಂದು ಪುಸ್ತಕ ಭಂಡಾರವೂ ಪ್ರತಿಯೊಂದು ಹಳ್ಳಿಯಲ್ಲಿಯೂ ಸ್ಥಾಪಿಸಲ್ಪಡಬೇಕು.

ಹಳ್ಳಿಯವರಿಗೆ ಕೊಡಲ್ಪಡುವ ವಿದ್ಯಾಭ್ಯಾಸವು ಅವರ ಸಂಸ್ಕೃತಿಯ ಅಭಿವೃದ್ಧಿಗೂ ದ್ರವ್ಯಾರ್ಜನೆಗೂ ಸಹಾಯವಾಗುವಂತಹುದಾಗಿರಬೇಕು. ಒಂದು ಕಡೆ ಸಾಂಸ್ಕೃತಿಕಾಭಿವೃದ್ಧಿಯೂ ಇನ್ನೊಂದು ಕಡೆ ಆರ್ಥಿಕೋನ್ನತಿಯೂ ಆಗುತ್ತ ಹೋಗಬೇಕು. ಸುಮಾರು ೨೦೦ ಜನ ಸಂಖ್ಯೆಯುಳ್ಳ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದೊಂದು ಪ್ರಾಥಮಿಕ ಶಾಲೆಯು ಸ್ಥಾಪಿಸಲ್ಪಡಬೇಕು. ಅಲ್ಲಿ ಆರು ವರ್ಷದಿಂದ ಹತ್ತುವರ್ಷಗಳೊಳಗಿರುವ ಹುಡುಗ ಹುಡಿಗಿಯರಿಗೆ ಒಟ್ಟಿಗೆ ಶಿಕ್ಷಣವು ಕೊಡಲ್ಪಡಬೇಕು. ವಿದ್ಯಾಭ್ಯಾಸವು ಬಲಾತ್ಕಾರ ಮಾಡಲ್ಪಡಲು ಯತ್ನವಿಲ್ಲದಿದ್ದರೆ ಉಚಿತವಾದುದಾಗಿರಬೇಕು. ಶಾಲಾಕಾರ್ಯದ ಕಾಲವೂ ಬೋಧಿಸಲ್ಪಡಬೇಕಾದ ವಿಷಯುಗಳೂ ಹಳ್ಳಿಗಳವರ ಅಭಿಪ್ರಾಯದಂತಿರಬೇಕು. ಹಳ್ಳಿಗಳ ಶಾಲೆಗಳ ನಿರ್ವಾಹಕತೆಯ ವಿಷಯವಲ್ಲಿ ಇತರರ ಅಧಿಕಾರವು ಹೆಚ್ಚಾಗಿರಕೂಡದು.

ಇನ್ನೂ ಹೆಚ್ಚಿನ ಔತ್ಸರ್ಗಿಕ (General) ವಿದ್ಯಾಭ್ಯಾಸವನ್ನು ಕೊಡುವುದಕ್ಕೂ, ವ್ಯವಸಾಯ ಮತ್ತು ಕೈಗಾ

೧ಕೆ ಮೊದಲಾದವುಗಳನ್ನು ಬೋಧಿಸುವುದಕ್ಕೂ ೧೫–೨೦ ವಯಸ್ಸಿನ ವಿದ್ಯಾರ್ಥಿಗಳು ಬರುವಂತಹ ಪಾಠಶಾಲೆಯು ೨೦–೩೫ ಹಳ್ಳಿಗಳಿಗೊಂದೊಂದಿರಬೇಕು. ಕಲ್ಪನಾವಿಧಾನವಾಗಿಯೂ (theory) ಅಭ್ಯಾಸವಿಧಾನವಾಗಿಯೂ (Practice) ವ್ಯವಹಾರವನ್ನು ಬೋಧಿಸುವಂತಹ ಶಾಲೆಗಳು ಪ್ರತಿಯೊಂದು ತಾಲೂಕಿನಲ್ಲಿಯೂ ಒಂದೊಂದಿರಬೇಕು. ಅದೇ ಶಾಲೆಯಲ್ಲಿಯೇ ಚಿತ್ರವಿಧಾನವನ್ನು ( Drawing ) ಭೂಪರಿಮಾಣವನ್ನು (Mensuration) ಕ್ಷೇತ್ರಾವಲೋಕನ ಕ್ರಮವನ್ನು ( Surveying ) ವಾಸ್ತುವಿದ್ಯೆ ಮತ್ತು ಯಂತ್ರ ಶಾಸ್ತ್ರಗಳನ್ನು (Engineering) ಬೋಧಿಸಬೇಕು.

ಹಾಗೆಯೆ ಹಳ್ಳಿಯ ರೈತರಿಗೆ ನೂತನ ವ್ಯವಸಾಯ ಮಾರ್ಗವನ್ನು ತಿಳಿಸಬೇಕು. ಸುಲಭ ಕೈಗಾರಿಕೆಗಳಾದ ನೂಲುವುದು ನೇಯುವುದು ಬಣ್ಣ ಹಾಕುವುದು ಇತ್ಯಾದಿ ವಿಧಾನಗಳನ್ನು ಅಭ್ಯಾಸ ಮಾಡಿಸಿ ಕೊಡಬೇಕು. ಸಾಧ್ಯವಾದರೆ ಇವುಗಳನ್ನು ಉಪನ್ಯಾಸಗಳ ಮೂಲಕವೂ, ವಸ್ತುಪ್ರದರ್ಶನಾದಿಗಳ ಮೂಲಕವೂ ಸಾಧಿಸುವುದು ಒಳ್ಳೆಯದಾಗಿ ಕಾಣಬರುವುದು.

## ಸಹಕಾರತೆ

ಒಂದೊಂದು ಹಳ್ಳಿಯಲ್ಲಿ ಒಂದೊಂದು ಶಾಲೆಯು ಒಂದೊಂದು ವಾಚನಾಲಯದ ಜತೆಗೆ ಒಂದೊಂದು ಪರಸ್ಪರ ಸಹಾಯ ಸಂಘವೂ ಇರಬೇಕು. ಪರಸ್ಪರ ಸಹಾಯ ಸಂಘಗಳು ನಮ್ಮ ದೇಶದ ಹಳ್ಳಿಗಳಲ್ಲಿ ಆಗಲೇ ಅಲ್ಲಲ್ಲಿ ಸ್ಥಾಪಿಸಲ್ಪಟ್ಟಿದ್ದರೂ, ಇನ್ನೂ ಹೆಚ್ಚಾದ ಸಂಘಗಳ ನಿರ್ಮಾಣದಿಂದ ಬಹಳೇ ಉಪಯೋಗವುಂಟು. ಈಗಿರುವ ಸಹಾಯ ಸಂಘಗಳು ಸಾಲ ಸೋಲಗಳನ್ನು ಮಾಡುವುದಕ್ಕೆ ಮಾತ್ರ. ಅದೊಂದು ಹೆಚ್ಚಿನ ಸಹಕಾರತೆಯೂ, ಹೆಚ್ಚಿನ ಉಪಯೋಗವೂ ದೊರಕಿಲ್ಲವೆನ್ನಬೇಕು. ಸಹಾಯ ಸಂಘಗಳ ಕಾರ್ಯಕಾರಿತ್ವವು ಇನ್ನೂ ಹೆಚ್ಚಾಗುತ್ತ ಹೋಗಬೇಕು. ಬಡ ರೈತರು ತಮ್ಮ ಸಾಲಗಳನ್ನು ಹೆಚ್ಚಿಸಿಕೊಳ್ಳುವುದರ ಬದಲಾಗಿ, ಸಾಲಗಳನ್ನು ನೀಗಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಡಬೇಕು. ಪ್ರತಿಯೊಂದು ಹಳ್ಳಿಯ ಧನಸಹಾಯ ಸಂಘವೂ, ವ್ಯಾಪಾರವನ್ನು ಹೆಚ್ಚಿಸಬೇಕು. ರೈತನು ಬಿತ್ತಿಗೆಯ ಕಾಳುಗಳನ್ನೂ, ಗೊಬ್ಬರಗಳನ್ನೂ ಸುಲಭವಾಗಿ ಕೊಂಡುಕೊಳ್ಳುವದಕ್ಕೂ ತಾನು ಬೆಳೆದ ಧಾನ್ಯವನ್ನು ಸರಿಯಾದ ಬೆಲೆಗೆ ಮಾರುವದಕ್ಕೂ ಸಹಾಯಮಾಡುವಂತಹುದಾಗಿರಬೇಕು. ದುರಾದೃಷ್ಟದಿಂದ ಇಂದಿನ ರೈತರ ಸ್ಥಿತಿಯು ತಾವು ಕೊಳ್ಳುವ ಪದಾರ್ಥಗಳನ್ನು ಬಹಳ ಬೆಲೆಯಿಂದ ಪಡೆಯಬೇಕಾಗಿದೆ. ಮಾರುವ ಪದಾರ್ಥಗಳನ್ನು ಬಹಳ ಅಗ್ಗವಾಗಿ ಕೊಡಬೇಕಾಗಿದೆ. ಇದು ಸಹಾಯ ಸಂಘದ ಸಹಾಯದಿಂದ ನೆರವೇರಬೇಕಾಗಿದೆ.

ಸರಿಯಾದ ಇನ್ನು ಕೆಲವು ಸ್ಥಳಗಳಲ್ಲಿ ಕುರುಬರ, ದನಗಾಹಿಗಳ ನೇಯ್ಗೆಯವರ ಸಂಸ್ಥೆಗಳನ್ನು ಸ್ಥಾಪಿಸುವುದೂ ಸಹ ಅವಶ್ಯಕವಾಗಿದೆ. ಹಳ್ಳಿಯವರ ಬೆಳೆಯು ಇದರಿಂದ ಹೆಚ್ಚಿನ ಬೆಲೆಪಡೆಯುವುದು ಮಾತ್ರವಲ್ಲದೆ, ಸಹಕಾರದಿಂದ, ದನಗಳ ಖಾಯಿಲೆ ಮತ್ತು ಮರಣಗಳನ್ನು ಕಡಿಮೆಮಾಡಲು ಸಾಧ್ಯವಾಗುವುದು. ಇದರಿಂದ ಹೆಚ್ಚಿನ ಮಟ್ಟಿಗೆ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಿದಂತಾಗುವುದು.

ಈ ಸಹಕಾರ ಸಂಸ್ಥೆಗಳಿಂದ ಹಳ್ಳಿಯವರ ಆರ್ಥಿಕ ಪರಿಸ್ಥಿತಿಯು ಸ್ವಲ್ಪ ಉತ್ತಮವಾಗುವುದು ಮಾತ್ರವಲ್ಲ. ಹಳ್ಳಿಗಳಲ್ಲಿ ಇಂದು ನೆಲಸಿರುವ ರಾಕ್ಷಸರೂಪಿ ಜಾತಿದ್ವೇಷವು ನಿರ್ಮೂಲವಾಗಿ ಹಳ್ಳಿಯ ಜನರು ನಿಷ್ಕಲ್ಮಷಮನಸ್ಕರೂ, ವಿಶಾಲಹೃದಯರೂ, ಉದಾತ್ತಗುಣಯುತರೂ ಆಗಲವಕಾಶವಾಗುವುದು. ಸಮಾಜವು ಒಕ್ಕಟ್ಟಾಗಿರಲು ಪ್ರಾರಂಭವಾಗುವುದು. ಹಿಂದಿನ ಹಳ್ಳಿಗಳ ರೀತಿಗಳನ್ನು ನಾವು ಇಂದು ತುದಿಡಲು ಸಾಧ್ಯವಿಲ್ಲ. ಆದರೆ ಅದರ ಶಕ್ತಿಯನ್ನು ಪುನರುಜ್ಜೀವಿಸಿ ಪರಸ್ಪರ ಸಹಾಯ ಸಂಘಗಳ ಮೂಲಕ ಕೆಲಸಮಾಡಬಹುದು.

## ಸ್ವಾನುಶಾಸನ

ಮುಂದಿನ ಕಾರ್ಯವು ಹಳ್ಳಿಗಳಲ್ಲಿ ಪೌರನೀತಿಯನ್ನನುಸರಿಸುವಂತೆ ಮಾಡುವುದು. ಇಂದು ಹಳ್ಳಿಯವರು ಮಾಡುತ್ತಿರುವ ರಾಜಕೀಯ ಕೆಲಸವಾವುದೆಂದರೆ ಕಂದಾಯಗಳನ್ನು ಕೊಡುವುದು ಮಾತ್ರ. ಹಳ್ಳಿಯವರು ಸರಕಾರವೆಂದರೆ ಒಂದು ದೊಡ್ಡ ದಯಾಹೃದಯರಹಿತವಾದ ಧನಾರ್ಜನಾಯಂತ್ರವೆಂದು ನಂಬಿದ್ದಾರೆ. ತಾನು ಒಂದು ದೊಡ್ಡ ದೇಶದಲ್ಲಿನ, ಹಕ್ಕು ಬಾಧ್ಯತೆಗಳುಳ್ಳ ಒಬ್ಬ ವ್ಯಕ್ತಿಯ ಅಭಿಪ್ರಾಯವಿಲ್ಲ. ತನ್ನ ಹಳ್ಳಿಯು ಅಂತಹ ಒಂದು ಗೊಡ್ಡ ನಾಡಿನ ಒಂದು ಚಿಕ್ಕ ಭಾಗವೆಂಬಾಲೋಚನೆ ಇವರಿಗಿಲ್ಲ. ಪಟ್ಟಣಗಳ ಮತ್ತು ನಗರಗಳ ಶೃಂಗಾರಗಳ ದೆಸೆಯಿಂದ ಇಂದಿನ ಹಳ್ಳಿಗಳಿಗೆ ದುರವಸ್ಥೆಯು ಹೆಚ್ಚಾಗುತ್ತ ಬಂದಿದೆ. ಹಳ್ಳಿಗಳು ಮಾಡತಕ್ಕ ಕೆಲವು ಕೆಲಸಗಳನ್ನು ನಿಯಮ ಮಾಡಬೇಕು. ಆಯಾ ಹಳ್ಳಿಯ ಪುರೋಭಿವೃದ್ಧಿ ವಿಷಯದಲ್ಲಿ ಹಳ್ಳಿಯವರು ಕೆಲಸ ಮಾಡುವಂತಹ ಸಹಕಾರೋದ್ಯಮವನ್ನು ಸರಕಾರದವರು ಕಲ್ಪಿಸಿಕೊಡಬೇಕು. ಈಗ ಹಳ್ಳಿಗಳಲ್ಲಿ ವಿಲೇಜ ಪಂಚಾಯ್ತ ಕ್ರಮವನ್ನಾರಂಭಿಸಿ ಗ್ರಾಮ ಪಂಚಾಯ್ತಿಗಳನ್ನು ಸ್ಥಾಪನೆ ಮಾಡಿರುವುದೊಂದು ಶುಭೋದಯವೇ ಹೌದು. ಹಾಗೆಯೇ ಹಳ್ಳಿಯ ದೇವಾಲಯದ, ಶಾಲೆಯ, ಕೆರೆಯ, ದುರಸ್ತಿ ನೋಡಿಕೊಳ್ಳುವದಕ್ಕಾಗಿಯೂ ಸಮಿತಿಗಳೇ ಪ್ರತ್ಯೇಕವಾಗಬೇಕು. ಗ್ರಾಮನಿರ್ಮಲೀಕರಣಕಾರ್ಯಕ್ಕಾಗಿ ಹಳ್ಳಿಯವರು ಹೆಚ್ಚಿನ ಲಕ್ಷ್ಯ ಕೊಡಬೇಕು.

ಈ ಎಲ್ಲಾ ಕೆಲಸಗಳಿಗೂ ಧನ ಸಹಾಯವು ಬೇಕು. ಹಣ ವಿಲ್ಲದೆ ಈ ಕೆಲಸಗಳನ್ನು ಮಾಡೆಂದರೆ ಹೇಗೆ ಮಾಡ್ಯಾರು! ಅದೊಂದು ಬರಿಯ ಮಾತಾಗುವದು. ಈ ಕೆಲಸಗಳು ಸಮರ್ಪಕವಾಗಿ ನಡೆಯುವುದಕ್ಕಾಗಿ ಸರಕಾರದವರು ದ್ರವ್ಯ ಸಹಾಯ ಮಾಡಬೇಕು. ಅವರಿಗೆ ಬೇಕಾದರೆ ಕಂದಾಯವನ್ನು ಹೆಚ್ಚಿಸಿಕೊಂಡು ಮಾಡಿರೆನ್ನುವುದಲ್ಲ. ಇದುವರೆವಿಗೆ ಅವರು ಸಂಪಾದಿಸಿದ ಹಣವು ದೊಡ್ಡ ದೊಡ್ಡ ಅಧಿಕಾರಿಗಳು, ವ್ಯಾಪಾರಿಗಳು, ಲಾಯರುಗಳು. ಇವರ ಕಿಸೆಗಳಿಗೆ ಹೋಗುತ್ತಿ ದೆಯೇ ಹೊರತು ಅವರಿಗೇನೇನೂ ಪ್ರತಿಫಲರೂಪವಾಗಿ ದೊರೆಯುತ್ತಿಲ್ಲ. ಹಗಲಿರುಳು ದಣಿದು ದುಡಿದು ಸಂಪಾದಿಸಿದ ಹಣದಿಂದ ಅವರಿಗೆ ಸುಖಶಾಂತಿಗಳು ದೊರೆಯಬೇಕಾದುದೂ, ಅವರಿಂದ ಅವರು ಲಾಭ ಪಡೆಯಬೇಕಾದುದೂ ನ್ಯಾಯವಲ್ಲವೇ? ಗ್ರಾಮಾಭಿವೃದ್ಧಿಕಾರ್ಯಗಳಿಗಾಗಿ ಸರಕಾರದವರು ಕಂದಾಯದ ಮೂಲಕ ಬರುವ ಹಣದಲ್ಲಿ ಶೇಕಡಾ ೧೫-೨೦ ರೂಪಾಯಿಗಳನ್ನು ಹಳ್ಳಿಯವರಿಗೆ ಕೊಡಬೇಕು. ಹೀಗೇ ಮಾಡಿದರೇನೇ ಹಳ್ಳಿಯವರಲ್ಲಿ ಪೌರಸಾಮಾಜಿಕ ವ್ಯಕ್ತಿತ್ವವುದಯಿಸಿ ತಾವೂ ದೇಶದ ಒಂದು ಭಾಗಕ್ಕೆ ಸಂಬಂಧಪಟ್ಟವರೆಂಬ ಭಾವನೆಯು ಅವರಲ್ಲಂಕುರಿಸುವದು.

ಇಂಡಿಯಾ ದೇಶದ ಸ್ವಾನುಶಾಸಕ (self government) ಕ್ರಮವೊಂದು ಕಠಿಣವಾದ ಪ್ರಶ್ನೆ. ಇದರ ಸಮಸ್ಯೆಯು ಅತಿ ಕ್ಲಿಷ್ಟವಾದುದು. ಅಸೆಂಬ್ಲಿ, ಪಾರ್ಲಿಮೆಂಟಗಳ ತೀರ್ಮಾನಗಳಿಂದಾಗಲೀ, ಕಾನ್‌ಫರನ್ಸುಗಳ ಮೀಟಿಂಗುಗಳ ಸಂಯೋಗದಿಂದಾಗಲೀ, ರಾಜಾಜ್ಞಾಪತ್ರಗಳಿಂದಾಗಲೀ ಈ ಸಮಸ್ಯಾನಿರಸನವಾಗಲಾರದು. ಹಳ್ಳಿಯನ್ನು ಒಂದು ಒಗ್ಗಟ್ಟಿನ ಸಂಸ್ಥೆಯನ್ನಾಗಿ ಮಾಡಿ, ಹಳ್ಳಿಯವರು ಪೌರಸಾಮಾಜಿಕ ಸೌಕರ್ಯಾದಿಗಳನ್ನು ಪಡೆದು, ಸ್ವಾನುಶಾಸನ ಕ್ರಮವನ್ನರಿತ ಜನರನ್ನನುಸರಿಸಿದ ಹೊರತು ಸುಖವಿಲ್ಲ.

ನಮ್ಮ ದೇಶದಲ್ಲಿನ ಗ್ರಾಮಪುನರುಜ್ಜೀವನಕಾರ್ಯಕ್ಕವು ಕೆಲವು ಮಾರ್ಗಗಳು. ವಿದ್ಯಾಭ್ಯಾಸ, ಸಹಕಾರತೆ, ಸ್ವಾನುಶಾಸನ ಪರಿಪಾಲನಕ್ರಮ ಇವೇ ಮುಖ್ಯವಾದುವು. ಇವು ಇಂದು ನಮ್ಮ ನಾಡಿನ ಹಳ್ಳಿಗಳಲ್ಲಿ ತಲೆದೋರಿರುವ ಸಾಮಾಜಿಕ, ರಾಜಕೀಯ, ಆರ್ಥಿಕ ದುರವಸ್ಥೆಗಳನ್ನು ನೀಗುವುವು. ಈ ರೀತಿ ಹಳ್ಳಿಗಳ ಪುನರುಜ್ಜೀವನಕಾರ್ಯವು ಚಟುವಟಿಕೆಯಿಂದ ನಡೆಸಲ್ಪಟ್ಟಿತೆಂದರೆ ನಮ್ಮ ದೇಶದ ಸ್ಥಿತಿಯು ನಾಗರಿಕತೆಯಲ್ಲಿ ಮತ್ತೊಂದು ಸಮಾನ ದೇಶದ ಜೊತೆಯಲ್ಲಿ ಕೂಡಲು ಯೋಗ್ಯತೆಯನ್ನು ಪಡೆಯಲನುವಾಗುವುದು.

## ಸುಧಾರಣಾ ಸಂವಿಧಾನ

ಈ ಕಾರ್ಯೋದ್ಯಮವು ಸುಲಭವಾದುದೇ ಹೌದು- ಮೇಲೆ ಹೇಳಿದಂತೆ ಹಳ್ಳಿಗಳಲ್ಲಿನ ನಾನಾ ಸಂಸ್ಥೆಗಳಲ್ಲದೆ ಪ್ರತಿಯೊಂದು ತಾಲೂಕಿನಲ್ಲಿಯೂ ಕೆಲಸ ಮಾಡಿ, ಚಿಕ್ಕ ಸಂಘಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ, ಸುಸ್ಥಿತಿಗಳನ್ನೊಳಗೊಂಡ ಪ್ರಧಾನ ಸಂಸ್ಥೆಗಳು ಈ ಕಾರ್ಯಕಾರಿತ್ವಕ್ಕಾಗಿಯೇ ಪ್ರತಿಯೊಂದು ಜಿಲ್ಲೆಯಲ್ಲಿಯೂ ನಿರ್ಮಾಣವಾಗಬೇಕು. ಇಂಥವುಗಳನ್ನು ಒಟ್ಟುಗೂಡಿಸುವ ಒಂದು ಪ್ರಾಂತಿಕ ಸಂಸ್ಥೆಯಿರಬೇಕು. ಇನ್ನುಮುಂದೆ ಇಡೀ ಹಿಂದುಸ್ಥಾನದ ಕ್ಷೇಮಕ್ಕಾಗಿ ಇವುಗಳೆಲ್ಲದರ ಕೇಂದ್ರಸ್ಥಾನವಾಗಿ ದಕ್ಷಿಣ ಹಿಂದುಸ್ಥಾನ ಗ್ರಾಮ ಪುನರುಜ್ಜೀವನ ಸಂಸ್ಥೆಯೆಂದು ದೊಡ್ಡ ಸಮಿತಿಯನ್ನೇರ್ಪಡಿಸಿದರೂ ಏರ್ಪಡಿಸಬಹುದು. ಸದ್ಯಕ್ಕೆ ನಮ್ಮ ನಾಡಿಗೆ ಅನುಕೂಲವಾಗುವಂತಹ ಎಲ್ಲಾ ಉಪಶಾಖೆಗಳನ್ನು ಕೇಂದ್ರೀಕರಿಸುವ ಒಂದು ಸಂಸ್ಥೆಯಿದ್ದರೆ ಸಾಕೆನ್ನಬಹುದು. ಈ ಸಂಸ್ಥೆಗೆ ಪ್ರಜಾಸತ್ತಾತ್ಮಕವಾದ, ರಾಜಕೀಯ ಚಳವಳಿಯ ಸಂಬಂಧವಿರಬೇಕೆಂಬ ಆವಶ್ಯಕತೆಯಿಲ್ಲ. ಸರಕಾರೀ ನೌಕರರೂ ಪ್ರಜಾಮುಖಂಡರೂ ಇದರ ಸದಸ್ಯರಾಗಿದ್ದು, ಅನ್ಯೋನ್ಯವಾಗಿ ಕೆಲಸ ಮಾಡಬೇಕು. ಜಿಲ್ಲಾ ಸಂಸ್ಥೆಗಳೂ ಪ್ರಾಂತಿಕ ಸಂಸ್ಥೆಯೂ ಸಾಧ್ಯವಾದರೆ ಹಣಕೊಟ್ಟು ಇದೇ ಕೆಲಸಕ್ಕಾಗಿ ನೌಕರರನ್ನು ನೇಮಿಸಿಕೊಳ್ಳಬೇಕು. ದೇಶದಲ್ಲಿನ ವಿದ್ಯಾವಂತರೂ, ವಿಶ್ವವಿದ್ಯಾಲಯದ ಪದವೀಧರರೂ, ತರುಣರೂ, ಗ್ರಾಮಮುಖಂಡರೂ ಉಚಿತವಾಗಿ ಇಂತಹ ಸಮಿತಿಗಳಲ್ಲಿ ಕೆಲಸ ಮಾಡಲು ಹಿಂದೆಗೆಯಬಾರದು. ಅಂತಹವರಿಗೆ ಸರಕಾರದವರು ಆದಷ್ಟು ಅನುಕೂಲಗಳನ್ನು ಕಲ್ಪಿಸಿಕೊಡಬೇಕು.

## ಉಪಸಂಹಾರ

ಇಂದಿನ ಹಳ್ಳಿಗಳ ಸ್ಥಿತಿಯು ಬಹಳ ಶೋಚನೀಯವಾದುದಾಗಿದೆ. ಪುನರುಜ್ಜೀವನಕಾರ್ಯವು ಬಹಳ ಜಾಗ್ರತೆಯಾಗಿ ನಡೆಯಬೇಕಾಗಿದೆ.

ಸರಕಾರದವರು ಸಂಪೂರ್ಣ ಮನಸ್ಸಿನಿಂದ, ಸಹಕರಿಸಿ, ಸಹಾಯ ಮಾಡಬೇಕು. ಕೆಲಸವು ನಿಧಾನವಾಗಿ ಜರುಗುತ್ತ ಹೋದಮಾತ್ರಕ್ಕೆ ಬೇಜಾರುಪಡಬಾರದು. ಇದಕ್ಕಿಂತ ಹೆಚ್ಚಿನ ಪವಿತ್ರಕಾರ್ಯವುಂಟೆ? ಹಳ್ಳಿಗಳನ್ನು ಮತ್ತೊಮ್ಮೆ ನಾಡಿನ ಸೌಭಾಗ್ಯದ, ಸಂಪತ್ತಿನ, ವಿದ್ಯೆಯ, ನಾಗರಿಕತೆಯ, ಆನಂದದ ತೌರುಮನೆಗಳನ್ನಾಗಿ ಮಾಡಲು ಯತ್ನಿಸುವ ನಾಡಿನ ನಮ್ಮ ಸೋದರ–ಸೋದರಿಯರಿಗೆ ಉತ್ಸಾಹ ಉಂಟಾಗಿ ದೇಶಾಭಿಮಾನವು ಹೆಚ್ಚಾಗಿ ಕಾರ್ಯರಂಗದಲ್ಲಿಳಿಯುವಂತೆ ಜಗದೀಶನನುಗ್ರಹಿಸಲಿ.

# ಖಾದಿಯ ಕಾರ್ಯದಲ್ಲಿ ಕರ್ನಾಟಕದ ಸ್ಥಾನ.



ಲೇಖಕ:— ದಿನಕರ ದೇಸಾಯಿ.

ಕರ್ನಾಟಕವು ಹರಿದು ಹಂಚಿಹೋದ ನಾಡು. ಅದಕ್ಕೊಂದು ಪ್ರತ್ಯೇಕ ಪ್ರಾಂತವಿಲ್ಲ; ಅಸ್ತಿತ್ವವಿಲ್ಲ. ವಿಶ್ವವಿದ್ಯಾಲಯವಿಲ್ಲ. ಬಂದರಗಳಿಲ್ಲ. ದೊಡ್ಡ ಪಟ್ಟಣಗಳು ಸಹ ಸಮೀಪದಲ್ಲಿ ಇಲ್ಲವೇ ಇಲ್ಲ. ಆದುದರಿಂದ ಕರ್ನಾಟಕವು ಅನೇಕ ರೀತಿಯಿಂದ ಹಿಂದೆ ಬೀಳಲಿಕ್ಕೆ ಕಾರಣಗಳುಂಟು. ಒಂದು ವೇಳೆ ರಾಜಕಾರಣ ಚಳವಳಿಯಾದರೋ ಅಷ್ಟು ಭರದಿಂದ ಸಾಗದಿದ್ದರೂ, ಅದು ಕನ್ನಡಿಗರ ತಪ್ಪಾಗಲಾರದು. ಕರ್ನಾಟಕವು ತುಂಡು ತುಂಡಾಗಿ ಹೋದದ್ದೇ ಇದಕ್ಕೆ ಕಾರಣ. **ಹೀಗಿದ್ದೂ, ಕನ್ನಡ ನಾಡು ಸ್ವಾತಂತ್ರ್ಯಯುದ್ಧದಲ್ಲಿಯಾಗಲಿ ಖಾದಿಯ ಕಾರ್ಯದಲ್ಲಾಗಲಿ ಮಿಕ್ಕ ಎಷ್ಟೋ ಪ್ರಾಂತಗಳಿಗಿಂತ ಮುಂದೆಬಂದಿದೆ.** ಇದರಿಂದ ಕನ್ನಡಿಗರ ದೇಶಭಕ್ತಿಯು ಒಡೆದು ಕಾಣುವಂತಿದೆ. ಸದ್ಯಕ್ಕೆ ನಾನು ಖಾದಿಯನ್ನೇ ಕುರಿತು ವಿಚಾರಿಸುವೆನು. ಕರ್ನಾಟಕವು ಖಾದಿಯ ಕೆಲಸದಲ್ಲಿ ಯಾವ ಸ್ಥಾನವನ್ನು ಪಡೆದಿದೆ ಎಂದು ತೋರಿಸುವದೇ ಈ ಚಿಕ್ಕ ಲೇಖನದ ಗುರಿ.

ಅಖಿಲ ಭಾರತೀಯ ಚರಕಾ ಸಂಘದ ಕಾರ್ಯದರ್ಶಿಗಳು ಹಿಂದೂ ದೇಶದ ಬೇರೆ ಬೇರೆ ಪ್ರಾಂತಗಳಲ್ಲಿಯ ಖಾದಿಯ ಹುಟ್ಟುವಳಿಯನ್ನೂ ಮಾರಾಟವನ್ನೂ ಕುರಿತು ಈ ಕೆಳಗಿನ ಸಂಖ್ಯೆಗಳನ್ನು ಪ್ರಕಟಿಸಿರುತ್ತಾರೆ;

**ಹುಟ್ಟುವಳಿ (೧೯೨೯–೩೦)**

| ಪ್ರಾಂತದ ಹೆಸರು. | ಹುಟ್ಟುವಳಿ. |
|---|---|
| ಆಂಧ್ರ | ೨, ೮೯, ೭೫೫ |
| ಬಿಹಾರ್ | ೧, ೮೭, ೬೫೯ |
| ಬಂಗಾಲ್ | ೧, ೫೯, ೭೮೦ |
| ಮುಂಬಯಿ | ... ... ... |
| ಬ್ರಹ್ಮದೇಶ | ... ... ... |
| ದಿಲ್ಲಿ | ೧, ೧:, ೧೧೮ |
| ಗುಜರಾತ್ | ೧೬, ೧೪೫ |
| ಕರ್ನಾಟಕ | ೩೬, ೮೬೮ |
| ಕಾಶ್ಮೀರ್ | ೫೪, ೪೮೫ |
| ಮಹಾರಾಷ್ಟ್ರ | ೩೧, ೨೯ |
| ಪಂಜಾಬ | ೧, ೧೧, ೪೮೭ |
| ರಾಜಸ್ಥಾನ | ೧, ೪೧, ೩೪೨ |
| ಸಿಂಧ | ... ... ... |
| ತಮಿಳುನಾಡು | ೭, ೪೩, ೧೯೫ |
| ಸಂಯುಕ್ತ ಪ್ರಾಂತ | ೧, ೬೯, ೭೯೪ |
| ಉತ್ಕಲ್ | ೩೩, ೨೨೦ |
| ಒಟ್ಟು | ೨೦, ೯೨, ೦೬೭ |

ಮೇಲಿನ ಸಂಖ್ಯೆಗಳಂತೆ, ೧೬ ಪ್ರಾಂತಗಳಲ್ಲಿ ಕರ್ನಾಟಕವು ೧೦ ನೇ ಸ್ಥಾನವನ್ನು ಹೊಂದುತ್ತದೆ. ಆದರೆ ಕರ್ನಾಟಕದ ನಿಜವಾದ ಸ್ಥಾನವು ಇದಲ್ಲ. ಜನಸಂಖ್ಯೆ ಹೆಚ್ಚಾಗಿದ್ದ ಪ್ರಾಂತಗಳಲ್ಲಿ ಖಾದಿ ಹೆಚ್ಚು ಹುಟ್ಟುವುದು ಸ್ವಾಭಾವಿಕವು. ಕರ್ನಾಟಕದ ನಿಜವಾದ ಸ್ಥಾನವನ್ನು ತಿಳಕೊಳ್ಳಬೇಕಾದರೆ ಖಾದಿಯ ಹುಟ್ಟುವಳಿಯನ್ನು ಆ ಆ ಪ್ರಾಂತದ ಜನಸಂಖ್ಯೆಗೆ ಹೋಲಿಸಿ ನೋಡಬೇಕು. ಅಂದರೆ ಕರ್ನಾಟಕದ ನಿಜವಾದ ಶಕ್ತಿಯು ಹೊರಬೀಳುವುದು. ಉದಾಹರಣೆಗಾಗಿ, ಆಂಧ್ರದ ಜನಸಂಖ್ಯೆಯು ಕರ್ನಾಟಕದ ಎರಡಷ್ಟರಾದರೆ, ಖಾದಿಯ ಹುಟ್ಟುವಳಿಯು ಎರಡಷ್ಟಕ್ಕಿಂತ ಹೆಚ್ಚಿದೆ. ಆದುದರಿಂದ ಆಂಧ್ರವು ಕರ್ನಾಟಕಕ್ಕಿಂತ ಮುಂದೆ ಸಾಗಿದೆ. ಈ ರೀತಿಯಿಂದ ನೋಡಿದರೆ, ಆಂಧ್ರ, ಬಿಹಾರ್, ದಿಲ್ಲಿ, ಕಾಶ್ಮೀರ್, ಪಂಜಾಬ, ರಾಜಸ್ಥಾನ, ತಮಿಳುನಾಡು, ಮತ್ತು ಸಂಯುಕ್ತ ಪ್ರಾಂತ ಈ ಎಂಟು ಪ್ರಾಂತಗಳು ಕರ್ನಾಟಕವನ್ನು ಮೀರಿವೆ. ಬಂಗಾಲ, ಮುಂಬಯಿ, ಗುಜರಾತ್, ಬ್ರಹ್ಮದೇಶ, ಮಹಾರಾಷ್ಟ್ರ, ಸಿಂಧ, ಮತ್ತು ಉತ್ಕಲ ಈ ಏಳು ಪ್ರಾಂತಗಳನ್ನು ಕರ್ನಾಟಕವು ಮೀರಿದೆ. ಅಂದರೆ ಹೆಚ್ಚು ಕಡಿಮೆ **ಕರ್ನಾಟಕವು ಮಧ್ಯಮ ಸ್ಥಾನವನ್ನು ಪಡೆದಿರುತ್ತದೆ.** ಇದು ಕರ್ನಾಟಕಕ್ಕೆ ಅಷ್ಟೇನು ಭೂಷಣವಲ್ಲದಿದ್ದರೂ, ಅಗೌರವವೂ ಅಲ್ಲ.

ಈಗ ಖಾದಿಯ ಮಾರಾಟವನ್ನು ಕುರಿತು ನೋಡುವಾ. ಮಾರಾಟದ ಸಂಖ್ಯೆಗಳ ವಿವರವು ಹೀಗಿದೆ;

ಮಾರಾಟ ( ೧೯೩೯—೩೦ )

| ಪ್ರಾಂತಗಳ ಹೆಸರು | ಮಾರಾಟ |
|---|---|
| ಆಂಧ್ರ | ೩, ೩೬, ೩೦೫ |
| ಬಿಹಾರ್ | ೨, ೫೪, ೨೭೬ |
| ಬಂಗಾಲ್ | ೩, ೬೧, ೨೭೯ |
| ಮುಂಬಯಿ | ೨, ೩೧, ೫೩೧ |
| ಬ್ರಹ್ಮದೇಶ | ೧೬, ೨೯೭ |
| ದಿಲ್ಲಿ | ೭೪, ೭೦೨ |
| ಗುಜರಾತ್ | ೮೭, ೪೭೫ |
| ಕರ್ನಾಟಕ | ೧, ೮೧, ೩೦೯ |
| ಕಾಶ್ಮೀರ್ | ೨೩, ೧೨೮ |
| ಮಹಾರಾಷ್ಟ್ರ | ೧, ೭೦, ೫೬೮ |
| ಪಂಜಾಬ | ೧, ೩೦, ೮೧೬ |
| ರಾಜಿಸ್ಥಾನ | ೮೪, ೩೧೨ |
| ಸಿಂಧ | ೩೩, ೦೨೨ |
| ತಮಿಳುನಾಡು | ೫, ೦೨, ೩೧೫ |
| ಸಂಯುಕ್ತ ಪ್ರಾಂತ | ೨, ೭೧, ೯೪೬ |
| ಉತ್ಕಲ | ೫೧, ೯೭೧ |
| ಒಟ್ಟು | ೨೮, ೦೪, ೬೮೨ |

ಈ ಸಂಖ್ಯೆಗಳಂತೆ ಮೇಲಿನ ೧೬ ಪ್ರಾಂತಗಳಲ್ಲಿ ಕರ್ನಾಟಕದ ಸ್ಥಾನವು ಆರನೇದು. ಆದರೆ ಜನಸಂಖ್ಯೆಯಂತೆ ನೋಡಿದರೆ ಬಿಹಾರ್, ಮುಂಬಯಿ, ದಿಲ್ಲಿ ಮತ್ತು ತಮಿಳುನಾಡು ಈ ನಾಲ್ಕು ಪ್ರಾಂತಗಳು ಮಾತ್ರ ಕರ್ನಾಟಕವನ್ನು ಮೀರಿವೆ. **ಆಂಧ್ರ, ಬಂಗಾಲ್, ಬ್ರಹ್ಮದೇಶ, ಗುಜರಾತ್, ಕಾಶ್ಮೀರ್, ಮಹಾರಾಷ್ಟ್ರ ಪಂಜಾಬ, ರಾಜಸ್ಥಾನ, ಸಿಂಧ, ಸಂಯುಕ್ತ ಪ್ರಾಂತ, ಮತ್ತು ಉತ್ಕಲ ಈ ೧೧ ಪ್ರಾಂತಗಳನ್ನು ನಮ್ಮ ಕನ್ನಡ ನಾಡು ಮೀರಿದೆ. ಅಂದರೆ ಖಾದಿಯ ಮಾರಾಟದಲ್ಲಿ ೧೬ ಪ್ರಾಂತಗಳಲ್ಲಿ ಕರ್ನಾಟಕವು ೫ ನೇ ನಂಬರನ್ನು ಪಡೆದಿರುತ್ತದೆ.** ಇದು ಕರ್ನಾಟಕಕ್ಕೆ ಭೂಷಣವಲ್ಲದೆ ಮತ್ತೇನು!

ಕರ್ನಾಟಕವು ಹರಿದು ಹಂಚಿಹೋದ ನಾಡಾದರೂ, ಖಾದಿಯ ಕಾರ್ಯದಲ್ಲಿ ತನ್ನ ಕರ್ತವ್ಯವನ್ನು ಚೆನ್ನಾಗಿ ಮಾಡಿದೆ ಎಂದು ಧಾರಾಳವಾಗಿ ಹೇಳಬಹುದು. ಆದರೆ ಖಾದಿಯ ಹುಟ್ಟುವಳಿಯಲ್ಲಿ ನಾವು ಇನ್ನೂ ಹೆಚ್ಚಿಗೆ ಕೆಲಸ ಮಾಡಬೇಕು. ನಮಗೆ ಪ್ರತ್ಯೇಕ ಪ್ರಾಂತವಿದ್ದ ಪಕ್ಷದಲ್ಲಿ ಕರ್ನಾಟಕವು ಇನ್ನು ಎಷ್ಟೋ ಮುಂದೆ ಬರದೆ ಇರುತ್ತಿದ್ದಿಲ್ಲ. ಆದರೇನು ನಮ್ಮ ದುರ್ದೈವವು ಅಡ್ಡ ಬಂದಿದೆಯಲ್ಲ!

# ಹಸಿದ ನಾಯಿ



## ( ಭಗವಾನ್ ಬುದ್ಧದೇವನು ಹೇಳಿದ ಒಂದು ಕತೆ)

ಹಿಂದಕ್ಕೊಮ್ಮೆ ರಾಜನೊಬ್ಬನು ಪ್ರಜೆಗಳನ್ನು ಪರಿಪರಿಯಿಂದ ಪೀಡಿಸುತ್ತಿದ್ದನು. ಹೀಗಿರುತ್ತಿರಲು ಇಂದ್ರನು ಬೇಡರವನ ವೇಷಧರಿಸಿ ಮಾತಲಿಯೆಂಬ ದೈತ್ಯನಿಗೆ ನಾಯಿಯಾಗಲು ಹೇಳಿ ಆತನೊಂದಿಗೆ ಭೂಲೋಕಕ್ಕೆ ಬಂದನು. ಆ ಬೇಡನು ನಾಯಿಯೊಂದಿಗೆ ನೆಟ್ಟಗೆ ಅರಮನೆಗೆ ಬಂದನು. ಆಗ ಆ ನಾಯಿಯು ಬಹು ಆರ್ತಸ್ವರದಿಂದ ಬೊಗಳಹತ್ತಿತು. ಆ ಆರ್ತತೆಯು ಬಲುಭೀಕರವಾಗಿತ್ತು. ಅದರಿಂದ ಅರಮನೆಗೆ ಅರಮನೆಯೇ ನಡುಗತೊಡಗಿತು. ಇದನ್ನು ನೋಡಿ ರಾಜನು ಅದೇನೆಂದು ವಿಚಾರಿಸಲು ಸೇವಕರು ಆ ಕಾಡುಬೇಡನನ್ನೂ ನಾಯಿಯನ್ನೂ ದೊರೆಯ ಸಿಂಹಾಸನದೆದುರಿಗೆ ತಂದು ನಿಲ್ಲಿಸಿದರು. 'ನಿನ್ನ ನಾಯಿ ಹೀಗೇಕೆ ಬೊಗಳುತ್ತದೆ? ' ಎಂದು ಕೇಳಲಾಗಿ 'ಅದು ಹಸಿದಿದೆ ಜೀಯಾ' ಎಂದು ಉತ್ತರ ದೊರೆಯಿತು. ಆ ನಾಯಿಯ ಆ ಸ್ವರ ಕೇಳಿ ರಾಜನೂ ಗಾಬರಿಗೊಂಡಿದ್ದನು; ಕೂಡಲೇ ನಾಯಿಗಾಗಿ ಆಹಾರವು ಬಂತು. ಬಂದದ್ದನ್ನೆಲ್ಲ ಅದು ಗಪಗಪನೆ ತಿಂದು ಬಿಟ್ಟಿತು. ಮತ್ತಿಷ್ಟು ಅನ್ನವನ್ನು ರಾಜನು ತರಿಸಿದನು. ಅದನ್ನೂ ಅದು ನೆಕ್ಕಿ ಬಿಟ್ಟಿತು. ಇಷ್ಟಾದರೂ ಅದರ ಆರ್ತಧ್ವನಿಯೇನೂ ನಿಲ್ಲಲಿಲ್ಲ. ಅದರ ಬೊಗಳಿಕೆಯನ್ನು ಕೇಳಿ ರಾಜನು ಅರಮನೆಯ ಅನ್ನಭಾಂಡಾರದಿಂದ ಇದ್ದುಬಿದ್ದದ್ದನ್ನೆಲ್ಲಾ ತರಿಸಿ ಅದಕ್ಕೆ ಹಾಕಿಸಿದನು. ಅಂದರೂ ಅದೆಲ್ಲಾ ವ್ಯರ್ಥವೇ ಆಯಿತು. ನಾಯಿಯು ಮತ್ತೆ ಕೂಗತೊಡಗಿತು. ರಾಜನು ನಿರಾಶೆಗೊಂಡು 'ಏನನ್ನೂ ಯಾತರಿಂದಲೂ ಇದರ ಹಸಿವೆ ಹಿಂಗುವದಿಲ್ಲವೇ? ' ಎಂದು ವ್ಯಾಧನನ್ನು ವಿಚಾರಿಸಿದನು. "ಇಲ್ಲ ಮಹಾಸ್ವಾಮೀ, ಯಾತರಿಂದಲೂ ಹಿಂಗಲಿಕ್ಕಿಲ್ಲ. ಆದರೆ ಅದರ ವೈರಿಗಳ ಮಾಂಸವನ್ನು ಹಾಕಿದರೇನೋ ಒಂದೊಪ್ಪತ್ತು ಹಿಂಗಿದರೂ ಹಿಂಗಬಹುದು " ಎಂದು ಬೇಡನು ಹೇಳಿದನು. "ವೈರಿಗಳೆಂದರೆ! ಅದರ ವೈರಿಗಳಾರು?" ಎಂದು ರಾಜನು ಕೌತುಕದಿಂದ ಕೇಳಿದನು. "ಮಹಾರಾಜನೇ ! ಎಲ್ಲಿಯವರೆಗೆ ರಾಜ್ಯದಲ್ಲಿ ಹಸಿದು ಕಕ್ಕಾಂತರಾಗಿಯೂ ಕೂಳು ಸಿಗದ ಕಂಗಾಲ ಜನರು ಹೊಟ್ಟೆ ಹೊಟ್ಟೆಯೆಂದು ಬಡಕೊಳ್ಳುತ್ತಿರುವರೋ ಅಲ್ಲಿಯವರೆಗೂ ಇದು ಕೂಗುತ್ತಿರುವದು. ಆ ಕಂಗಾಲ ಜನರಿಗೆ ಕೂಳು ಸಿಗದಂತೆ ಯಾರು ಪೀಡನೆ ನಡೆಸಿರುವರೋ ಅವರೇ ಇದಕ್ಕೆ ವೈರಿಗಳು " ಎಂದಾಗಿ ವ್ಯಾಧನು ಉತ್ತರಕೊಟ್ಟನು. ಪ್ರಜಾಪೀಡಕನಾದ ರಾಜನಿಗೆ ತನ್ನೆಲ್ಲ ದುಷ್ಟಕರ್ಮಗಳ ನೆನಪಾಯಿತು. ಆಗ ಅವನಿಗೆ ಪಶ್ಚಾತ್ತಾಪವಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸತೊಡಗಿದನು.

# ಇಬ್ಬರು ರನ್ನರು

ಲೇಖಕರು:—ಅರ್ಥಶಾಸ್ತ್ರ ವಿಶಾರದ ಮಹಾಮಹೋಪಾಧ್ಯಾಯ ರಾವಬಹಾದ್ದೂರ್ ಡಾ. ಆರ್. ಶಾಮಾಶಾಸ್ತ್ರಿಗಳು, ಎಂ. ಎ., ಪಿ. ಎಚ್. ಡಿ., ಎಮ್. ಆರ್. ಎ. ಎಸ್., ಮೈಸೂರು

[ವಾದಾಸ್ಪದವಾದ ಈ ವಿಷಯವು ಈಗಾಗಲೇ 'ವಿಶ್ವಬಂಧು' 'ವಿಶ್ವಕರ್ನಾಟಕ' ವಾರಪತ್ರಿಕೆಗಳಲ್ಲಿ ಶ್ರೀ. ಶ್ರೀನಿವಾಸ ರಂಗಾಚಾರ್ಯರಿಂದ ಬರೆಯಲ್ಪಟ್ಟು ಪ್ರಕಟವಾಗಿದೆ. ಇದುವೆ ಮೊನ್ನಿನ 'Mythic Society gournal' ದಲ್ಲಿ ಶ್ರೀ. ಶಾಮಾಶಾಸ್ತ್ರಿಗಳಿಂದ ಬರೆಯಲ್ಪಟ್ಟು ಇಂಗ್ಲಿಷ ಭಾಷೆಯಲ್ಲಿಯೂ ಪ್ರಕಟವಾಗಿದ್ದು ಬೇಗನೆ ಬೆಳಕಿಗೆ ಬರಲಿರುವ ಧಾರವಾಡದ ಇತಿಹಾಸಮಂಡಲದ ಪತ್ರಿಕೆಯಲ್ಲಿಯೂ ಅಚ್ಚಾಗಲಿದೆಯೆಂದೂ ಕೇಳುತ್ತೇವೆ. ಜಯಕರ್ನಾಟಕದ ಮುಖಾಂತರವಾಗಿಯೂ ವಿದ್ವಜ್ಜನರಲ್ಲಿ ಈ ವಿಷಯದ ಚರ್ಚೆಯಾಗಬೇಕೆಂದು ಹಿರಿಯರಾದ ಶಾಮಾಶಾಸ್ತ್ರಿಗಳು ಈ ವಿಷಯವನ್ನು ನಮ್ಮೆಡೆಗೆ ಕಳುಹಿದ್ದಾರೆ. ಶ್ರೀ. ಶ್ರೀನಿವಾಸ ರಂಗಾಚಾರ್ಯರಂಥ ವಿದ್ವಾಂಸರಿಂದ ಪುರಸ್ಕೃತವಾಗಿ ಡಾ. ಶಾಮಾಶಾಸ್ತ್ರಿಗಳಂಥವರಿಂದ ಸಮರ್ಥಿಸಲ್ಪಟ್ಟ ಈ ವಿಷಯವು ಕೂಲಂಕಷವಾಗಿ ಚರ್ಚಿಸಲ್ಪಟ್ಟು ಸತ್ಯಾಂಶವು ಹೊರಬೀಳಲೆಂದಾಶಿಸುತ್ತೇವೆ.

—ಸಂ. ಜ. ಕ.]

ಪ್ರಬಲೇನ ದುರ್ಬಲಸ್ಯ ಬಾಧಃ ಎಂಬ ಗಾದೆಯು ಎಲ್ಲರಿಗೂ ತಿಳಿದದ್ದಾಗಿರುವದು. ಲೋಕದಲ್ಲಿ ಪ್ರಬಲನಾದ ರಾಜನು ದುರ್ಬಲನನ್ನು ಜಯಿಸಿ ಅವನ ರಾಜ್ಯವನ್ನು ಆಕ್ರಮಿಸುವನು. ವಿದ್ಯೆಯಲ್ಲಿ ಪ್ರೌಢನಾದವನು ಅಲ್ಪಜ್ಞನನ್ನು ಮೂಗನನ್ನಾಗಿ ಮಾಡುವನು. ಶಾಸ್ತ್ರದಲ್ಲಿಯೂ ಮತ್ತು ಕಾವ್ಯಮೊದಲಾದ ಸಾಹಿತ್ಯ ವಾಙ್ಮಯದಲ್ಲಿಯೂ ಈ ನ್ಯಾಯವು ಪ್ರವರ್ತಿಸಿರುವದು. ಇದಕ್ಕೊಂದು ಉದಾಹರಣೆ ಇರುವದು. ಹದಿನೆಂಟು ಪುರಾಣಗಳನ್ನು ರಚಿಸಿದ ವ್ಯಾಸರು ಲೋಕಪ್ರಸಿದ್ಧರು. ಪತಂಜಲಿಯು ಬರೆದ ಯೋಗಸೂತ್ರಕ್ಕೆ ಭಾಷ್ಯವನ್ನು ಮಾಡಿದ ವ್ಯಾಸರು ಮತ್ತೊಬ್ಬರಿದ್ದರು. ಕ್ರಿಸ್ತಶಕಾರಂಭವಾದ ಕಾಲಕ್ಕಿಂತ ಸಹಸ್ರ ವರ್ಷಗಳ ಹಿಂದೆ ಪುರಾಣಕರ್ತೃಗಳಾದ ವ್ಯಾಸರಿದ್ದರೆಂದು ತಿಳಿದು ಬಂದಿರುವದು. ಪತಂಜಲಿಯು ಕ್ರಿಸ್ತಶಕ ಕಾಲಾರಂಭಕ್ಕಿಂತ ೧೫೦ ವರ್ಷಗಳ ಹಿಂದೆ ಇದ್ದರೆಂದು ಚರಿತ್ರೆಯಿಂದ ತಿಳಿದು ಬಂದಿರುವದು. ಆದುದರಿಂದ ಯೋಗಸೂತ್ರಕ್ಕೆ ಭಾಷ್ಯವಂ ಮಾಡಿದ ವ್ಯಾಸರು ಪುರಾಣಕರ್ತೃಗಳಾದ ವ್ಯಾಸರಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಆದಾಗ್ಯೂ ಪುರಾಣಕರ್ತೃಗಳಾದ ವ್ಯಾಸರ ಪ್ರಸಿದ್ಧಿಯು ಪತಂಜಲಿಯೋಗಸೂತ್ರಕ್ಕೆ ವ್ಯಾಖ್ಯಾನವಂ ಮಾಡಿದ ವ್ಯಾಸರಿಗೆ ಲಭಿಸಲಿಲ್ಲವಾದ್ದರಿಂದ ಜನರು ಯೋಗಸೂತ್ರಭಾಷ್ಯವೂ ಪುರಾಣಕರ್ತೃಗಳಾದ ವ್ಯಾಸರಿಂದಲೆ ರಚಿತವಾಗಿರುವದೆಂದು ನಂಬಿ ಪ್ರಸಿದ್ಧ ವ್ಯಾಸರಿಂದ ಅಪ್ರಸಿದ್ಧರಾದ ಎರಡನೆ ವ್ಯಾಸರಿಗೆ [illegible] ಮಾಡಿರುವದು. ಇದೇರೀತಿಯಲ್ಲಿ ಕನ್ನಡ ವಾಙ್ಮಯದಲ್ಲಿಯೂ ಅಜಿತನಾಥಪುರಾಣ ಮೊದಲಾದ ಕಾವ್ಯಗಳನ್ನು ಮಾಡಿ ಕವಿರತ್ನನೆಂದು ಪ್ರಸಿದ್ಧಿಯನ್ನೈದಿದ ಜೈನ ಮಹಾಕವಿಯೇ ಗದಾಯುದ್ಧವೆಂಬ ಕನ್ನಡ ಕಾವ್ಯಕ್ಕೂ ಕರ್ತೃವೆಂದು ನಂಬಿ ಎರಡನೆ ಕವಿರತ್ನನೊಬ್ಬನಿರಲಿಲ್ಲವೆಂದು ನಂಬಿ ವಿದ್ವಾಂಸರೂ ಕೂಡ ನಿಶ್ಚಿಂತರಾಗಿರುವರು. ಸಂದೇಹವು ಚಿಂತಾ ವಿಮರ್ಶೆಗಳಿಗೆ ಕಾರಣವಾಗಿರುವದು. ಸಂದೇಹವಿಲ್ಲದಿರುವಾಗ ಚಿಂತಾ ವಿಮರ್ಶೆಗಳು ಎಂದಿಗೂ ತಲೆದೋರುವದಿಲ್ಲ.

ಇಂಥಾ ಸಂದೇಹವು ಸಂಸ್ಕೃತ ಕರ್ಣಾಟಕೋಭಯ ವಿದ್ಯಾವಿಶಾರದರಾಗಿ ಈಗ ಮೈಸೂರಿನಲ್ಲಿ ಟ್ರೇನಿಂಗ್ ಕಾಲೇಜಿನಲ್ಲಿ ಕನ್ನಡದಲ್ಲಿ ಉಪಾಧ್ಯಾಯರಾಗಿರುವ ಮ|| ಶ್ರೀನಿವಾಸ ರಂಗಾಚಾರ್ಯರಿಗುಂಟಾಗಿ ಅವರು ಅಜಿತನಾಥಪುರಾಣ ಮತ್ತು ಗದಾಯುದ್ಧ ಎಂಬ ಕಾವ್ಯಗಳಲ್ಲಿ ಕಂಡುಬರುವ ಕವಿಪ್ರಶಸ್ತಿ ಮೊದಲಾದ ವಿಷಯಗಳನ್ನು ವಿಮರ್ಶೆಮಾಡಲು ಕಾರಣವಾಯಿತು. ಇವರ ವಿಮರ್ಶೆಯಿಂದ ಗದಾಯುದ್ಧದಲ್ಲಿ ಗೂಢವಾಗಿ ದುರ್ಗಮಾರ್ಥವಾದ ಪದ್ಯಗಳು ಸ್ಪಷ್ಟಾರ್ಥವಾಗುವವು. ಈ ವಿಮರ್ಶೆಯು ಸಕಾರಣವಾಗಿರುವದಲ್ಲದೆ ಕನ್ನಡ ಕವಿಚರಿತ್ರೆಯ ರಹಸ್ಯವನ್ನೂ ಹೊರಪಡಿಸುವದು. ಆದುದರಿಂದ ಈ ವಿಮರ್ಶೆಯ ಸಾರವನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಲು ವಿದ್ವಜ್ಜನರ ಅನುಜ್ಞೆಯನ್ನು ಪ್ರಾರ್ಥಿಸುವೆನು.

ಗದಾಯುದ್ಧಕರ್ತೃವಾದ ಕವಿರತ್ನನೂ ಮತ್ತು ಅಜಿತನಾಥ ಪುರಾಣಕರ್ತೃವಾದ ಕವಿರನ್ನನೂ ಬೇರೆ ಬೇರೆ ಕವಿಗಳೆಂದು ಹೇಳಲು ಅನೇಕ ಕಾರಣಗಳು ಅವರವರ ಕಾವ್ಯಗಳಲ್ಲಿಯೇ ಸೂಚಿಸಲ್ಪಟ್ಟಿರುವವು. ಅದೆಂತೆಂದೊಡೆ—

೧ ಅಜಿತನಾಥ ಪುರಾಣಕರ್ತೃವಾದ ರನ್ನನು ಅಜಿತನಾಥ ಪುರಾಣ, ಚಕ್ರೇಶ್ವರ ಚರಿತ, ಪರಶುರಾಮ ಚರಿತಗಳನ್ನು ತಾನು ರಚಿಸಿದುದಾಗಿ ಹೇಳಿಕೊಂಡಿರುವಂತೆ ಗದಾಯುದ್ಧವನ್ನು ತಾನು ಮಾಡಿರುವದಾಗಿ ಹೇಳಿಕೊಂಡಿಲ್ಲ. ಈ ವಿಷಯವು ಅಜಿತನಾಥ ಪುರಾಣದ ೧೨ನೆ ಅಧ್ಯಾಯದ ೪೭ನೆ ಪದ್ಯದಿಂದ ಸ್ಪಷ್ಟವಾಗುವದು.

೨ ಅಜಿತರನ್ನನೇ ಅಜಿತನಾಥ ಪುರಾಣದಲ್ಲಿ(ಅ. ೧. ಪ. ೪೪) ತನ್ನಂತೆ ಇರುವ ಕವಿರತ್ನನೆನಿಸಿದ ಇತರನನ್ನು ತಿರಸ್ಕರಿಸುವದರಿಂದಲೇ ಮತ್ತೊಬ್ಬ ಕವಿರತ್ನನಿದ್ದನೆಂದು ಒಪ್ಪಿಕೊಂಡಿರುವನು.

೩ ಗದಾಯುದ್ಧದ ರನ್ನನು ಅಜಿತರನ್ನನನ್ನು "ಚಾರಿತ್ರಮಣಿ ವಿಭೂಷಣ ರತ್ನ" ನೆಂದೂ ಆತನು 'ವೇದರಮಣೀಯ' ನಲ್ಲವೆಂದೂ ಜಿನಸಮಯಸಿದ್ಧವಾದ ಶ್ರುತದಿಂದ ರಮಣೀಯನೆಂದೂ ಕವಿತೆಯಲ್ಲಿ ಚತುರನಲ್ಲವೆಂದೂ ತನ್ನಂತೆ ಸೇನಾಪತಿಯಾಗಿ ಕುದುರೆಯ ಲಗಾಂ ಹಿಡಿದು ಅಶ್ವಧಾಟಿಯ ನೂತನ ಕ್ರಮವನ್ನರಿತವನಲ್ಲವೆಂದೂ ಹೇಳುವನು.

ಮತ್ತು ತನ್ನನ್ನು "ಚಾರಿತ್ರ ರತ್ನ ಜಲಧಿಯ ರತ್ನ"ನೆಂದೂ ತಾನು ವೇದ (ಶ್ರುತ) ರಮಣೀಯನೆಂದೂ ರಸಭಾವ ಪ್ರಧಾನವಾದ ಕವಿತೆಯಲ್ಲಿ ಮಹಾ ನಿಪುಣನೆಂದೂ "ಅಶ್ವಧಾಟೀ ನವೀಕರಣ ಕರಣ ನಿಪುಣ"ನೆಂದೂ (ಅ. ೧. ಪ. ೪) ಹೇಳಿಕೊಳ್ಳುವನು.

೪ ಅಜಿತರನ್ನನು (ಅ ಅ ೧. ಪ ೮೪) ಕವಿರತ್ನ ಬಿರುದನ್ನು ತನ್ನ ಮುಂದೆ ಮತ್ತೊಬ್ಬ ಹೊಂದಲು ಅರ್ಹತೆಯೇ ಇಲ್ಲವೆಂದು ಹೇಳಿಕೊಂಡಂತೆ ಗದಾಯುದ್ಧದ ವೈದಿಕರನ್ನನು "ತಾನು ಚಕ್ರವರ್ತಿ ತೈಲಪರಾಜನಿಂದ ಮಹೋನ್ನತಿಯನ್ನು ಪಡೆದು ಕವಿಚಕ್ರವರ್ತಿ ಬಿರುದನ್ನು ಪಡೆದವನು, ಅಜಿತರನ್ನನಂತೆ ಪಡೆವಳ ತೈಲಪ, ಪಡೆವಳ ಚಾಮುಂಡರಾಯ ಎಂಬಾ ಪಡೆಯೆಡೆಯ ಕಡುಬಡುವರಲ್ಲಿ ಮಹೋನ್ನತಿಯನ್ನೂ ಬಿರುದು ಬಂಕಗಳನ್ನೂ ಕವಿಚಕ್ರವರ್ತಿ ಪೆಸರನ್ನೂ ಪಡೆದವನಲ್ಲ, ತನಗೆ ಅವನು ಸರಿಯಲ್ಲ" ಎಂದು ಹೇಳಿಕೊಂಡಿರುವನು.

೫ ಪಡೆವಳ ತೈಲಪನು ನಾಗದೇವ (ಒರಟರ ಮಲ್ಲ)ನ ಸತೀಮಣಿಯಾದ ದಾನಚಿನ್ನಾಮಣಿಯ ಔರಸಪುತ್ರನು. ಈತನು ಆಹವಮಲ್ಲ ತೈಲಪ ಚಕ್ರವರ್ತಿಯ ಸೈನ್ಯದಲ್ಲಿ ಒಬ್ಬ ಯೋಧಪತಿಯು. ಚಾವುಂಡರಾಯನು ಚಕ್ರವರ್ತಿ ತೈಲಪನ ಶತ್ರು ಪಕ್ಷದ ಸೇನಾಪತಿಯು. ತನ್ನ ಈ ಪೂರ್ವಾಶ್ರಯನು ಖಿಲವಾದ ಕಾರಣ ಅಜಿತರನ್ನನು ದಾನಚಿನ್ನಾಮಣಿಯ ಆಶ್ರಯವನ್ನು ಹೊಂದಿರುತ್ತಾನೆ. ಚಕ್ರವರ್ತಿ ತೈಲಪನ ಆಶ್ರಯಕ್ಕೆ ತತ್ಪ್ರತಿಪಕ್ಷಾಶ್ರಯದಲಿದ್ದ ಕಾರಣ ಹೋಗಲಿಲ್ಲ. ಶತ್ರುಪಕ್ಷಾಶ್ರಿತನಾದ ಕಾರಣ ಚಕ್ರವರ್ತಿಯೂ ಆಶ್ರಯಕೊಟ್ಟಿಲ್ಲವೆಂದು ತೋರುತ್ತೆ. ಗದಾಯುದ್ಧದ ರನ್ನನು ಚಕ್ರವರ್ತಿ ತೈಲಪನಲ್ಲಿ 'ಕಟಕೋತ್ತಮ ನಾಯಕ' ಅಂದರೆ ಪ್ರಧಾನ ಸೇನಾಪತಿಯೂ ಆ ಸ್ಥಾನದ ಮುಖ್ಯ ಕವಿಚಕ್ರವರ್ತಿಯೂ ಆಗಿ ತೈಲಪನ ಆಶ್ರಿತನಾಗಿದ್ದನು. (ಗ. ಆ. ೧ ಪ ೩೯, ೪೦, ೪೧) ಈ ತೈಲಪ ಚಕ್ರವರ್ತಿಯು ಚಾಲುಕ್ಯವಿಕ್ರಮಾದಿತ್ಯನಿಗೆ ಬೊಂಕಾದೇವಿಯಲ್ಲಿ ಜನಿಸಿದ ಪುತ್ರರತ್ನನು.

೬ ಅಜಿತ ರನ್ನನು 'ಜಿನೇಂದ್ರ ವಚೋವಿಭವನು', 'ಶಬ್ದಾನುಶಾಸನ ಪ್ರಭವ ವಚೋವಿಭವನು'; ಮತ್ತು ಉಭಯ ವ್ಯಾಕರಣ ಪಂಡಿತನು. ಕವಿತಾ ಮಾರ್ಗದಲ್ಲಿ ಒಕ್ಕಣಿಸುವದು, ಛಂದೋಗಣಿತಗಳನ್ನು ಮಾಡುವದು, ಇವುಗಳಲ್ಲಿ ನಿಪುಣನು. (ಅ. ಅ. ೧ ಪ. ೮೩; ಅ ೧೨, ಪ. ೪೧) ವಾಚ್ಯಾರ್ಥ ಪ್ರಧಾನವಾದ ಕವಿತಾಶಕ್ತಿಯುಳ್ಳವನು. (ಅ ೧ ಪ. ೯೩) ಮತ್ತು ಕೇವಲ ಶ್ರುತಜ್ಞನು. (ಅ. ಅ ೧, ೧೧, ೧೨) ಗದಾಯುದ್ಧದ ರನ್ನನು ರಸಭಾವಪ್ರಧಾನವಾದ ಕವಿತಾ ನಿಪುಣನು. ಶ್ಲೇಷಯಮಕಾದಿ ಕ್ಲಿಷ್ಟ ಕವಿತ್ವದಲ್ಲೂ ದಕ್ಷನು. ವ್ಯಾಸಗುಟ್ಟನಂತೆ ಪೂರ್ವೋತ್ತರ ಸಂಬಂಧಗಳನ್ನು ಇಟ್ಟುಮಾಡುವ ಕುಣಿಕೆ ಗಬ್ಬದ ಕಬ್ಬಿಗನು. ಎರಡರುನೂರು ನಾಡು ಕನ್ನಡದ ತಿರುಳನ್ನರಿತ ಪಂಡಿತೋತ್ತಮನು. ಮಧುರಮ್ಯೋತ್ಪನ್ನ ಸಂಸ್ಕೃತವಾಣೀವಿಲಸಿತನು. ಉಭಯ ಕವಿತಾ ವಿಶಾರದನು(ಗದಾ. ೮೧ ಪ ೩೯ ೪೦—೪೧, ೪೨) ವೇದ ರಮಣೀಯನು (ಗ ೧, ೪೪).

೭ ಅಜಿತರನ್ನನು ಜಿನಶಾಸನವನ್ನು ಬೆಳಗುವ ಚಕ್ರೇಶ್ವರ ಮಂಡಲೇಶ್ವರರ ಅಪ್ಪಣೆಯಂತೆ ಜಿನಶಾಸನವನ್ನು ಬೆಳಗಾರರ ಕುಲದಲ್ಲಿ ಬೆಳಗತಕ್ಕ ಅಧಿಕಾರದಲ್ಲಿದ್ದನು. (ಅ ೧೨ ಪ. ೪೪) ಗದಾಯುದ್ಧದ ರನ್ನನು ತೈಲಪ ಚಕ್ರವರ್ತಿಯ ಆಸ್ಥಾನದ ಮುಖಂಡರಿಂದ ಪರೀಕ್ಷಿಸಲ್ಪಟ್ಟು ಆ ಚಕ್ರವರ್ತಿಯ ಪ್ರಧಾನ ಸೇನಾಪತಿಯಾಗಿ ನಿಯಮಿಸಲ್ಪಟ್ಟನು. ಮತ್ತು ಕವಿಚಕ್ರವರ್ತಿ

ಯೂಸುದರಿಂದ ರತ್ನಕಟಕದ ಬಹುಮಾನವನ್ನೂ ಹೊಂದಿದನು. ೮ ಕಾಲದಲ್ಲಿ ಸೇನೆಯನ್ನು ಉತ್ತಮವರ್ಣದ ಸೈನಿಕರು ಅಧಮ ವರ್ಣದ ಸೈನಿಕರೆಂಬ ರೀತಿಯಲ್ಲಿ ವಿಂಗಡಿಸುತ್ತಿದ್ದರಾದ ಕಾರಣ ಉತ್ತಮವರ್ಣದ ಸೈನಿಕರ ನಡುವೆ ತನ್ನನ್ನು ಮಹಾರತ್ನ ದಂತೆಯೂ ಅನರ್ಘ ರತ್ನದಂತೆಯೂ ಸುವರ್ಣ ಮಧ್ಯದಲ್ಲಿ ಸೇರಿಸಿದಂತೆ ಸೇರಿಸಿದರೆಂದು ಹೇಳಿರುತ್ತಾನೆ. (ಗ. ಆ ೧ ಪ. ೪೦-೪೧)

೮ ಆಶ್ವಾಸಾಂತಗಳಲ್ಲಿ ಅಂಕಿತ ಪದ್ಯಗಳು ಏಕಪ್ರಕಾರವೂ ಅಲ್ಲ. ಏಕಾರ್ಥಗಳೂ ಅಲ್ಲ. ಅಜಿತದಲ್ಲಿ "ಇದು ಸಕಲ ಮುನೀಂದ್ರವೃಂದಬೃಂದಾರಕ ಶ್ರೀಮದಜಿತಭಟ್ಟಾರಕ ಶ್ರೀಪಾದ ಪದ್ಮಪ್ರಸಾದಾನಂದಿತ ರತ್ನತ್ರಯಾಲಂಕೃತ ಶ್ರೀಮದಭಿನವ ಕವಿಚಕ್ರವರ್ತಿವಿರಚಿತ ಶ್ರೀದಾನಚಿಂತಾಮಣಿ ವಿನಿರ್ಮಾಪಿತ ಶ್ರೀಮದಜಿತತೀರ್ಥಂಕರಪುರಾಣಪುರಾಣತಿಲಕಂ" ಎಂದಿರುವದು—

ಗದಾಯುದ್ಧದಲ್ಲಿ "ಇದು ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಶ್ರೀಸತ್ಯಾಶ್ರಯಕುಲತಿಲಕ ಶ್ರೀಮದಾಹವಮಲ್ಲದೇವಶ್ರೀಪಾದ ಕಲ್ಪಪಾದಪಾಶ್ರಯಾಶ್ರಯಾಸನ್ನವರ್ತಿ ಕವಿರನ್ನ ವಿರಚಿತಮಪ್ಪ ಚಾಳುಕ್ಯ ಚಕ್ರವರ್ತಿ ಶ್ರೀಸಾಹಸಭೀಮ ವಿಜಯಂ" ಎಂದಿರುವದು.

೯ ಅಜಿತರನ್ನನು ಜೈನಮತದವನು. ಅವನ ಗುರುಗಳು ಅಜಿತಸೇನಾಚಾರ್ಯರು. (ಅ. ಆ. ೧೨, ೪೮) ವೇದಮತದ ಗದಾಯುದ್ಧದ ರನ್ನನು ಗುರುವನ್ನು ಹೇಳಿಕೊಂಡಿರುವದಿಲ್ಲ.

೧೦ ಗದಾಯುದ್ಧದ ರನ್ನನು ಆಹವಮಲ್ಲನ ಮಗ ಸತ್ಯಾಶ್ರಯ ಚಕ್ರವರ್ತಿ "ಇರಿವಬೆಡಂಗ"ನ ವಿಷಯವಾಗಿ ಗದಾಯುದ್ಧವನ್ನು ರಚಿಸಿರುವನು. ಅಜಿತರನ್ನನಾದರೊ ದಾನಚಿಂತಾಮಣಿ ಪಡೆವಳತೈಲಪರ ಕೊಂಡಾಟಕ್ಕಾಗಿ, ಈತನ ಆಶ್ರಯದಾತರ ಚಕ್ರವರ್ತಿತೈಲಪ ಆಹವಮಲ್ಲನ ಪ್ರಸಕ್ತಿಯನ್ನು ತನ್ನ ಗ್ರಂಥದಲ್ಲಿ ಮಾಡಿರುವನೇ ಹೊರತು ತನಗೆ ಚಕ್ರವರ್ತಿಯ ಆಶ್ರಯವಿದ್ದಂತೆ ಎಲ್ಲಿಯೂ ಹೇಳಿಲ್ಲ. (ಅ. ಆ. ೧, ೫೫-೨೬ ಮತ್ತು ಅಧ್ಯಾ ೧೨ ೬--೧೮)ಲ್ಲಿ ದಾನಚಿಂತಾಮಣಿ ಸ್ತುತಿಯಿರುವದು. (೧೨ ನೇ ಅಧ್ಯಾಯ ೨೦ ರಿಂದ ೨೫ ಮತ್ತು ೧ ನೇ ಅಧ್ಯಾಯ ೪೨—೪೧, ೪೭, ೫೧ ರಲ್ಲಿ ಪಡೆವಳ ತೈಲಪನ ಸುದ್ದಿ ಮೂರುಕಡೆ ಮಿಂಚುತ್ತಿದೆ, (ಅ ೧೨ ಅ ೨೦, ೫೫, ೧೨ ನೆ ಅ. ೨೬)

೧೧ ಅಜಿತನಾಥಪುರಾಣದ ಕಾಲದಲ್ಲೇ ಸುಪ್ರಸಿದ್ಧನಾಗಿ ಯುವರಾಜನಾಗಿ ಯುದ್ಧವೀರನೆನಿಸಿದ ಸತ್ಯಾಶ್ರಯ ಇರಿವ ಬೆಡಂಗನು ಬೆಳಗುತಿದ್ದರು ಈತನ ಹೆಸರು ಕೂಡ ಜೈನ ರನ್ನನಿಂದ ಹೇಳಲ್ಪಟ್ಟಿಲ್ಲ. ಗದಾಯುದ್ಧದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆ ಮೊದಲಾದವರ ಹೆಸರೇ ಇಲ್ಲ.

೧೨ ಜೈನರನ್ನನಿಗೆ ಆಶ್ರಯದಾತರೂ ದಾನಿಗಳೂ ಮರುಳ, (ನಗರದ ಶಾಸನ ೩೫) ಬೂತುಗ, ನೊಳಂಬಾಂತಕ, ಚಾವುಂಡರಾಯ, ಶಂಕರಗಂಡ, ಅತ್ತಿಮಬ್ಬೆ, ಪಡೆವಳತೈಲಪ. (ಅ. ಆ. ೧೨ ಪದ್ಯ ೩೩, ೪೮, ೪೮) ಗದಾಯುದ್ಧದ ರನ್ನನಿಗೆ ಚಕ್ರವರ್ತಿ ತೈಲಪ, ಇರಿವಬೆಡಂಗರು ಆಶ್ರಯದಾತರು, ದಾನಿಗಳು.

೧೩ ಅಜಿತನಾಥಪುರಾಣ ಹುಟ್ಟಿದ್ದು ಕ್ರಿ. ಶ. ೯೯೩ರಲ್ಲಿ. ಇದಕ್ಕೆ ಹಿಂದಿನ ಸೌಮ್ಯಸಂವತ್ಸರದಲ್ಲಿ ಹುಟ್ಟಿದ ಅಜಿತ ರನ್ನನಿಗೆ ಆಗ ೪೪ ವಯಸ್ಸು. ಗದಾಯುದ್ಧದ ರನ್ನನು ಸತ್ಯಾಶ್ರಯನನ್ನು ಭೀಮನಿಗೂ ಚೋಳರಾಜನನ್ನು ದುರ್ಯೋಧನನಿಗೂ ಸರಿಹೋಲಿಸಿದ್ದಾನೆ. ಸತ್ಯಾಶ್ರಯನಿಗೂ ರಾಜರಾಜನಿಗೂ ಕ್ರಿ. ಶ. ೧೦೦೭ ರಲ್ಲಿ ಯುದ್ಧವಾಗಿ ರಾಜರಾಜನಿಗೆ ಸೋಲಾಯ್ತು. ಕ್ರಿ. ಶ. ೧೦೦೭—ಅರಲ್ಲಿ ಗದಾಯುದ್ಧವು ರಚಿತವಾಯಿತು. ಆಗ ರನ್ನನಿಗೆ ಒಳ್ಳೆ ಯೌವನ. (ಗ. ಆ ೧ ಪ ೪೬) ಮತ್ತು ಅಜಿತರನ್ನನಿಗೆ ೬೦ ವಯಸ್ಸು.

೧೪ ರನ್ನನ ಗದಾಯುದ್ಧವನ್ನು ಕೇಶಿದಂಡನಾಯಕನು ತಿದ್ದಿರುತ್ತಾನೆ. ಅಜಿತರನ್ನನಾದರೊ ಅಸಹಾಯ (ಅ. ಆ. ೧ ಪ ೮೫).

೧೫ ಗದಾಯುದ್ಧದ ರನ್ನನು ವೇದಧರ್ಮಿಗಳಾದ ವ್ಯಾಸ ವಾಲ್ಮೀಕಿಗಳನ್ನು ಸ್ಮರಿಸುತ್ತಾನೆ. ಅಜಿತರನ್ನನಾದರೋ ಪಂಪ ಪೊನ್ನರನ್ನು ಅಭಿನಂದಿಸುತ್ತಾನೆ. (ಅ. ಆ ೧೨ ಪ ೩೫—೪೦)

೧೬ ಗದಾಯುದ್ಧದ ರನ್ನನು ಯಾಜ್ಞಿಕಮತದವನು ಬ್ರಾಹ್ಮಣನು; ಅದ್ವೈತಿ(ಆ ೧, ಪ ೧—೫; ೧೫; ೪೩; ಆ ೮, ಪ ೬೦; ೬೧; ೬೫. ಆ ೭ ಪ ೬೦-೬೫; ಆ ೫ ಪ. ೧೧; ಆ ೯, ಪ ೪—೬೧; ೧೭) ಅಜಿತರನ್ನನಾದರೊ ಅರ್ಹತ್ಸಿದ್ಧಾದಿ ಪಂಚಾಚಾರ್ಯರನ್ನು ಜೈನಸಂಪ್ರದಾಯವಿಶುದ್ಧಿಯಿಂದ ಸ್ತುತಿಸಿ ಸ್ವಮತಾಗಮಗಳನ್ನು ಕೀರ್ತಿಸಿ ಅನ್ಯಮತಾದಿಗಳೆಲ್ಲ ಪ್ರಚಂಡ ವಿಷಬೀಜಗಳೆಂದು (ತನ್ನ ಮತಾಗಮ ಹಾಲು ಅನ್ಯಮತಾಗಮ ನಾಯಿ

ಹಾಲು—ಇತ್ಯಾದಿ) ಎಂದು ಖಂಡಿಸಿ ತಿರಸ್ಕಾರ ಮಾಡಿರುವನು. (ಆ೨. ೧ ಪ. ೧, ೧೨, ೧೮, ೯೩-೯೪; ಆ ೨, ಪ ೭೭; ಆ ೧೨, ಪ. ೨೭, ೨೮, ೩೦)—

೧೭ ಗದಾಯುದ್ಧದ ಪ್ರಥಮಾಶ್ವಾಸದ ೭ ನೆಯ ಪದ್ಯವು ಪ್ರಕ್ಷಿಪ್ತವೆಂದು ಸ್ಪಷ್ಟ.

೧೮ ಅಜಿತರನ್ನನು ಕೊಂಡಾಡುವ ಸತ್ಯಚಕ್ರೇಶ್ವರನನ್ನು ಗದಾಯುದ್ಧದ ರನ್ನನು ತನ್ನ ನಾಯಕನಾದ ಸತ್ಯಾಶ್ರಯನಿಗೆ ಸಮನಲ್ಲವೆಂದು ಹೇಳಿರುವನು.

೧೯ ಗದಾಯುದ್ಧದ ರನ್ನನು ಉದ್ಧೃತಕವಿ. ಪಂಪಾದಿಗಳನ್ನು ಲಕ್ಷ್ಯಮಾಡುವದಿಲ್ಲ. (ಗ. ಆ. ೧ ಪ ೩೮) ಶುದ್ಧ ವೈದಿಕ ಬ್ರಾಹ್ಮಣರ ಕರ್ನಾಟಕ ಗ್ರಂಥಕ್ಕೆ ತಾನೆ ಮೂಲಪುರುಷನೆಂಬ ಭಾವವು ಹೊರಬೀಳುತ್ತದೆ. ಆದಿಪಂಪನು ಜಿನದೀಕ್ಷೆ ವಹಿಸಿ ಆದಿಪುರಾಣವನ್ನು ಬರೆದನು; ಭಾರತವನ್ನು ಬರೆಯುವಾಗ ಬ್ರಾಹ್ಮಣನಾಗಿದ್ದನೆಂದು ಹೇಳಬಹುದು. - ವೈದಿಕ ರನ್ನನು ಜೈನಪಂಪನಲ್ಲಿ ಭಿಕ್ಷೆ ಮಾಡಿರುವನೆ? ಇಬ್ಬರ ಮೂಲವೂ ಭಾರತವೇ.

೨೦ ಇಬ್ಬರು ರನ್ನರ ಹೃದಯಾಕರ್ಷಕಗಳಾದ ತಾಯ್ನಾಡುಗಳು ಬೇರೆ. ಗದಾಯುದ್ಧದವನಿಗೆ ಎರಡರುನೂರರ ಕನ್ನಡನಾಡು ಪ್ರೀತಿಪಾತ್ರವಾದುದು. ಅಜಿತರನ್ನನಿಗೆ ಮುದುವೊಳಲು ಜನ್ಮಭೂಮಿಯು ಪ್ರೀತಿಪಾತ್ರವಾದುದು.

೨೧ ಗದಾಯುದ್ಧದ ರನ್ನನು ಅನೇಕ ಸಾಮಂತರು, ಒಬ್ಬ ಮಂಡಲೇಶ್ವರ, ಒಬ್ಬ ಚಕ್ರವರ್ತಿಯಿಂದ ಕ್ರಮವಾಗಿ ಅಭ್ಯುದಯ ಪರಂಪರೆ ಹೊಂದಿದನು. (ಗ. ಆ. ೧ ಪ ೩೪) ಅಜಿತರನ್ನನು ಅನೇಕ ಸಾಮಂತರು, ಅನೇಕ ಮಂಡಲೇಶ್ವರರು, ಅನೇಕ ಚಕ್ರೇಶ್ವರರು—ಇವರ ಸಭಾಮಂಡಲಗಳಲ್ಲಿ ಕವಿಮುಖಖಂಡನಾಗಿದ್ದನು. (ಅ. ಆ. ೧. ಪ ೮೨)

೨೨ ಗದಾಯುದ್ಧದ ರನ್ನನಿಗೆ ಕವಿರತ್ನ ಕವಿಚಕ್ರವರ್ತಿ ಕವಿಕುಂಜರಾಂಕುಶ ಕವಿಚತುರ್ಮುಖ—(ಆ. ೧, ಪ ೪೦ ೩೬, ೩೭, ೩೯); ಅಜಿತರನ್ನನಿಗೆ ಕವಿಮುಖಚಂದ್ರ ಕವಿಚಕ್ರವರ್ತಿ, ಕವಿರಾಜ, ಕವಿಜನಚೂಡಾರತ್ನ, ಕವಿತಿಲಕ, ಕವಿಚತುರ್ಮುಖ, ಕವಿರತ್ನ—ಎಂದು ಬಿರುದುಗಳಿದ್ದವು.

ಈ ಕಾರಣಗಳಿಂದ ಈ ಇಬ್ಬರು ಕವಿಗಳು ಬೇರೆ ಬೇರೆ ಮತದ ಕವಿಗಳಾಗಿದ್ದರೆಂದು ಸ್ಪಷ್ಟವಾಗಿ ತೋರಿಬರುವದು. ಆದಾಗ್ಯೂ ಜೈನಕವಿಯು ಪ್ರಸಿದ್ಧನಾಗಿ ಅಪ್ರಸಿದ್ಧನಾದ ಬ್ರಾಹ್ಮಣ ಕವಿರನ್ನನನ್ನು ಜನರು ಮರೆಯುವಂತೆ ಪ್ರಕಾಶಿಸಿದನು. ಆದುದರಿಂದ ಗದಾಯುದ್ಧವೂ ಅವನ ಕೃತಿಯೇ ಎಂದು ವಿದ್ವಾಂಸರೂ ಭ್ರಮಿಸಲು ಅವಕಾಶವುಂಟಾಯಿತು. ಈಗ ಪಂಡಿತ ಶ್ರೀನಿವಾಸ ರಂಗಾಚಾರ್ಯರು ವಿಮರ್ಶೆ ಮಾಡದಿದ್ದಲ್ಲಿ ಈ ಭ್ರಮೆಯು ಇನ್ನೂ ಬಹುಕಾಲವಿರುತ್ತಿತ್ತು. ಇಂಥಾ ಭ್ರಮೆಯನ್ನು ತಮ್ಮ ವಿಮರ್ಶೆಯಿಂದ ನಿರ್ಮೂಲ ಮಾಡಿದ್ದಕ್ಕಾಗಿ ಕರ್ನಾಟಕ ವಿದ್ವನ್ಮಂಡಲಿಯು ಅವರಿಗೆ ಕೃತಜ್ಞರಾಗಿರಬೇಕಾಗಿರುವದು.



# ಬಂಗಾರದ ಡಾಬು *

ಕತೆಗಾರರು— ಶ್ರೀ. ಕೆ. ಗೋಪಾಲಕೃಷ್ಣರಾಯರು, ಬಿ. ಎ., ಬೆಂಗಳೂರು

೧

"ಬಂಗಾರದ ಡಾಬೊಂದಾದರೂ ಮಾಡಿಸದೇ ಹೋದರೆ ಹ್ಯಾಗಪ್ಪ"

"ನಿನಗೆ ಬೇಕಾದ್ದನೆಲ್ಲ ಮಾಡಿಸಮ್ಮ, ನಾನು ಬೇಡ ಅಂದನೆ"

"ಅಲ್ಲ ಶೇಷಾ, ಈಗ ನಾವು ಅವಳಿಗೆ ಮಾಡಿಸಿರೋದು ತಾನೆ ಏನು. ವಜ್ರದ ಓಲೆ ಅಂತೂ ನಂಬೇ ಇತ್ತು, ಇನ್ನು ಆ ಭಂಗಾರದ ಬಳೆಗಳು ತಾನೆ"

"ನೋಡಮ್ಮ ನಾನು ಹೇಳೋದು ಇಷ್ಟೇ; ನಮ್ಮ ಹಾಸಿಗೆ ಯಿದ್ದಷ್ಟು ಕಾಲು ಚಾಚಬೇಕು. ಆದರೆ ನಿನ್ನ ಮನಸ್ಸನ್ನು ಸ್ವಲ್ಪವೂ ನೋಯಿಸಬಾರದಂತ ನೆನೆದುಕೊಂಡು ಬರುತ್ತಿದ್ದೀನಿ."

"ಎಲ್ಲಾ ನನಗೋಸ್ಕರವೇ ಅಲ್ವೇ, ಹೌದಪ್ಪ—ನಾನೀಗ ನಿನ್ನ ಮದುವೆಗೆ ಏರ್ಪಾಟು ಮಾಡಿದ್ದೇ ತಪ್ಪಾಯಿತು. ನೀನು ಹೇಳುವ ಹಾಗೆ ಇನ್ನೂ ಐದಾರು ವರ್ಷ ಬಿಡಬೇಕಾಗಿದ್ದಿತಲ್ವೇ. ಈಗಾಗಲೇ ನಿನಗೆ ಇಪ್ಪತ್ತು ವರ್ಷ ಆಗಿ ಹೋಗಿದೆ. ಅವರಿದ್ದಿದ್ರೇ......ಇನ್ನು ನಾನೋ ಇವತ್ತೋ ನಾಳೇನೋ ಕಣ್ಣು ಮುಚ್ಚಿಕೊಳ್ತೀನಿ" ಎಂದು ಕಣ್ಣಲ್ಲಿ ನೀರು ತಂದರು.

ಮಾತೆತ್ತಿದರೆ ಕಣ್ಣೀರು. ಮಹಾತ್ಮ ಗಾಂಧಿಯವರು ಅಸಹಕಾರವೋ ಯಾವುದೋ ಬಹಳ ಭಾರಿ ಆಯುಧವೆಂದು ಸಾರುತ್ತಿದ್ದಾರೆ. ಇಲ್ಲಿ ಈ ಆಯುಧದ ಮುಂದೆ ಮತ್ತಾವ ಭಾರಿ ಆಯುಧವೂ ಇಲ್ಲ. ಹೆಂಗಸರಿಗೆ ಒಪ್ಪುವ ಆಯುಧ. ಶೇಷಗಿರಿ ತಾಯಿ ಹೀಗೆ ಮಾಡಿಯೇ ಶೇಷಗಿರೀನ ಈ ಮದುವೆಗೆ ಒಪ್ಪುವಂತೆ ಮಾಡಿದ್ದು.

"ನೀನು ಹೀಗೆಲ್ಲಾ ಅನ್ನಬೇಡಮ್ಮ. ಈಗೇನು ಅಪ್ಪನ ಜೀವ ವಿಮೆ ಹಣದಲ್ಲಿ ಸಾಲ ಕಳೆದು ಉಳಿದಿರುವುದು ಮದುವೆ ಖರ್ಚಿಗೆ ಆಗಿಹೋಗುತ್ತೆ. ಬಂಗಾರದ ಡಾಬೊಂದು ತಾನೆ. ಈ ಮನೆ ಆಧಾರಮಾಡಿ ಇನ್ನೂರೈವತ್ತು ರೂಪಾಯಿ ತರುತ್ತೇನೆ, ಅಷ್ಟಾದರೆ ಆಗಿಹೋಯ್ತು"

"ಕಾಲಿಗೆ ಅಂದಿಗೆ...ಅವೆಲ್ಲಾ"

"ಅಂದಿಗೆ, ಗೊಲಸು, ಇನ್ನೂ ಏನೇನು ಬೇಕು ಹೇಳು; ಹೋಗಿ ನಿಮ್ಮ ಬೀಗರನ್ನೂ ಕೇಳಿಕೊಂಡು ಬಾ"

"ಅವರನ್ನೇನು ಕೇಳೋದು 'ಕಿವಿಗೆ ಓಲೆ ಸೊಂಟಕ್ಕೆ ಡಾಬು ಇಟ್ಟರೆ ಸಾಕು' ಎಂದಿದ್ದಾರೆ."

"ಆ ಮೇಲೆ ಒಂದು ಮಾತೂ ಬರಕೂಡದಮ್ಮ; ನೋಡಿಕೊ ಅದನ್ನು"

"ಅವರದು ಏನೋ ಮಾತು. ಇಂಥವರನು ಸಿಕ್ಕಿರುವಾಗ ದಮ್ಮಯ್ಯ ಗುಡ್ಡೆಹಾಕಿ ಕಾಲುತೊಳೆದು ಕನ್ಯಾದಾನ ಮಾಡೋದು ಬಿಟ್ಟು ಎರಡೂವರೆ ಸೇರು ಬಂಗಾರಕೊಟ್ಟು, ಎರಡು ಖರ್ಚೂ ಇಟ್ಟು ಮದುವೆಮಾಡ್ತೀವಿ ಎಂಬ ದಾವಣಗೇರಿಯಿಂದ ಬಂದಿರಲಿಲ್ಲವೇ! ಮುಂದೆ ಮದ್ರಾಸಿನಲ್ಲಿ ಓದಿಸುತ್ತೇವೆ; ಇಲ್ಲದೇ ಇದ್ದರೆ ಕಲ್ಕತ್ತಾದಲ್ಲಿ ಓದಿಸುತ್ತೇವೆ ಎಂದು ಕೃಷ್ಣಶಾಸ್ತ್ರಿಗಳ ಮನೆಯವರು ಬಂದಿರಲಿಲ್ಲವೇ!"

"ಇದೇ ಬೇಡ ಅನ್ನೋದು ..."

"ಹೋಗಲಪ್ಪ ಇವನ್ನ ತೆಗೆದುಕೊಂಡು ಬಾ ಸಾಕು. ಮೇಲಿನ ಸೀರೆ ಮಟ್ಟಿಗೆ ಮೇಘವರ್ಣವಿದ್ದರಲಿ; ಪಟ್ಟೆ ಅಂಚಿದ್ದು. ಸರಪಳೀನೊ, ಅದೇನೋ ಅಂತರಲ್ಲಾ, ಸುಬ್ಬೂಗೆ ತಂದಿದೆ ನೋಡು ಅದು ದುಡ್ಡು ಜಾಸ್ತಿ ಅಂತ ಸಣ್ಣ ಸರಿಗೆ ಅಂಚಿಂದು ತಂದು ಬಿಟ್ಟೀಯಾ"

"ಆಗಲಮ್ಮ"

"ಮಾಂಗಲ್ಯ ತಾಳಿ! ಅದು ಹೇಳೋದು ಮರತೆ; ಅರ್ಧ ಸವರನ್ ತೆಗೆದುಕೊಂಡು ದೊಡ್ಡ ತಾಳೀನ ಮಾಡಿಸಿಕೊಂಡು

---

* ಬೆಂಗಳೂರಿನ ಕರ್ಣಾಟಕ ಸಂಘದ ಈ ವರ್ಷದ ಕತೆಗಳ ಮೇಲಾಟದಲ್ಲಿ ಮೊದಲನೆಯ ಮೆಚ್ಚು ಈ ಕತೆಗೆ ದೊರಕಿದೆ. ಡಾಬಿಗೆ ಧಾರವಾಡ ಪ್ರಾಂತ್ಯದ ಕನ್ನಡಿಗರು ಪಟ್ಟಿಯೆಂದು ಹೇಳುತ್ತಾರೆ. —ಸಂ, ಜ, ಕ,

ಬಾ. ಸುತ್ತಲೂ ಕುಸರಿ ಇಟ್ಟು ನಡುವೆ ಕೆಂಪು ಹರಳು ಹಾಕಿರಲಿ. ನಮ್ಮ ಕಾಲದ್ದ ಹಾಗೆ ಸುಮ್ಮನೆ ಕಟ್ಟಿಸಿ ತಂದು ಬಿಟ್ಟೀಯಾ ಈಗಿನ ಕಾಲದವರು ಅವನ್ನೆಲ್ಲಾ ಮೆಚ್ಚೋದಿಲ್ಲ. ಡಾಬು ಅದೂ ಅಷ್ಟೇ ದಪ್ಪವಾಗಿ ಅಗಲವಾಗಿ ಇರಲಿ. ಚೇಣೀ ಪಟ್ಟೆ ಹೊಡಿಸಿ ಬಿಟ್ಟೀಯಾ"

ಶೇಷಗಿರಿ ಎಲ್ಲಕ್ಕೂ ಒಪ್ಪಿಕೊಂಡು ತಾಯಿಯ ಇಷ್ಟದಂತೇ ಎಲ್ಲವನ್ನೂ ತಂದನು. ಮುಂದೇವರಿಗೆ ಸೀರೆ ಎಣ್ಣೆಗೆಂಪಿನ್ದೊ ಅಥವ ದೊಡ್ಡ ಬಳ್ಳಾಪುರದ್ದೋ ಬಿಟ್ಟು ರೇಶ್ಮೆದು ರುದ್ರಾಕ್ಷಿ ಅಂಚಿಂದೇ ತಂದನು. ಇನ್ನು ತಾಯಿಯ ಹಲುಬು ತಪ್ಪಿತು. ಇವನ ಸೋದರಮಾವಂದಿರು ಯಜಮಾನ್ಯವನ್ನು ವಹಿಸಲು ವರಪೂಜೆಯ ದಿವಸವೇ ಬಂದರು. ಹಣಕಾಸು ಬೇಕಾದಾಗ ಒಬ್ಬರೂ ಇಲ್ಲ, ಎಲ್ಲವೂ ಒದಗಿದಮೇಲೆ ಯಾರು ತಾನೇ ಇಲ್ಲ. ಮದುವೆಯು ಅದ್ದೂರಿಯಾಗಿಯೇ ನಡೆಯಿತು. ಬೇಕಾದ ಹಾಗೆ ನೆಂಟರು ಇಷ್ಟರು ಬಂದಿದ್ದರು. "ಎಷ್ಟಾದರೂ ಹುಡುಗ, ಅವನಿಗೆ ಇದು ತಿಳಿಯದು, ಅದು ತಿಳಿಯದು" ಎಂದು ಚೆನ್ನಾಗಿ ಅವನ ಮನೆಯನ್ನು ತೊಳೆದರು. ಆಗ ಅವನ ಅಭಿಪ್ರಾಯ ವನ್ನು ಅಂಗೀಕರಿಸುವವರ್‍ಯಾರು ?

ಬೀಗರ ಕಡೆಯಿಂದ ಯಾವ ಆಕ್ಷೇಪಣೆಯೂ ಬರಲಿಲ್ಲ. ಅಷ್ಟೇನು ಆಸ್ತಿವಂತರಲ್ಲದೇ ಇದ್ದರೂ ದೊಡ್ಡ ಮನೆತನದವರು; ಕಷ್ಟ ಸುಖಗಳನ್ನು ಚೆನ್ನಾಗಿ ಅರಿತವರು. ಅವರ ಮನೆಗೆ ಯಾರೊ ಬಾದರಾಯಣ ಸಂಬಂಧದವರೊಬ್ಬರು ಬಂದಿದ್ದವರು ಮಟ್ಟಿಗೆ "ನಮ್ಮ ರತ್ನದಂಥ ಹುಡುಗೀನ ಎಂಥ ವರನಿಗೆ ಕೊಟ್ಟಿದ್ದಾಯಿತು. ಕತ್ತಿಗೊಂದು ಚೈನಾದರೂ ಬೇಡವೇ? " ಎಂದು ಎತ್ತಿದ್ದರಂತೆ; ಅದಕ್ಕೆ ಯಾರೋ ಇದ್ದು ಕೊಂಡು "ಅವನೇನು ಕಮ್ಮಿ ಮಾಡಿಸಿರೋದು–ಬಂಗಾರದ ಡಾಬು, ಬೊಂಬಾಯಿ ಬಳೆ, ವಜ್ರದ ಓಲೆ ಇವೆಲ್ಲಾ ಇಟ್ಟಿದ್ದಾರಲ್ಲಾ " ಎಂದೆಂದರಂತೆ. ಅದಕ್ಕೆ ಅವರು "ಏನು ಯಾರೂ ಮಾಡಿಸದೇ ಇರೋದೋ ಅದೂ ಮಾಡಿಸದೇ ಇದ್ದಿದ್ದರೆ ಚೆನ್ನಾಗೇ ಇತ್ತು " ಎನ್ನಲು ಶೇಷಗಿರಿಯ ಅತ್ತೆಯವರು " ಇದಿಲ್ಲದಿದ್ದರೆ ನಾಳೆ ಮಾಡಿಸಿಕೊ ತಾಳೆ. ಅವಳಿಗೇನು ಕಡಿಮೆಯಾಗಿರೋದು. ಅವರಮೇಲೆ ಯಾರೂ ಯಾವ ಆಕ್ಷೇಪಣೇನ ತರಬೇಡಿ. ಇಗೋ ಈಗ ನನ್ನ ಚೈನನ್ನೇ ಕೊಟ್ಟು ಬಿಡುತ್ತೇನೆ " ಎಂದು ತನ್ನ ಕೊರಳಿನಲ್ಲಿದ್ದ ಹಾರವನ್ನು ತೆಗೆದು ಮಗಳಿಗೆ ಹಾಕಿದರಂತೆ.

"ನನ್ನ ಮೇಲೆ ಅಷ್ಟು ಸಿಟ್ಟುಮಾಡೋದಕ್ಕೆ ನಾನೇನು ಇಲ್ಲದ ಆಕ್ಷೇಪಣೆ ಮಾಡಿದ್ದು. ಯಜಮಾನೀನೆ ಹೀಗೆಂದಮೇಲೆ ನಾನಿನ್ನು ಈ ಮದುವೆ ಮನೇಲಿ ಒಂದು ಘಳಿಗೆಯೂ ನಿಲ್ಲುವುದಿಲ್ಲ" ವೆಂದು ಹೊರಟರಂತೆ. ಆಗ ಅವರನ್ನು ಸಮಾಧಾನ ಪಡಿಸಿ ಇಟ್ಟುಕೊಳ್ಳುವುದಕ್ಕೆ ಒಂದು ದೊಡ್ಡ ರಾದ್ಧಾಂತವಾಯಿತಂತೆ. ಸಧ್ಯಕ್ಕೆ ಅದೊಂದೂ ಶೇಷಗಿರಿಯ ಕಿವಿಗೆ ಬೀಳಲಿಲ್ಲ. ಇಲ್ಲದೇ ಇದ್ದರೆ ಆಗಲೇ ಅವನೂ ವಾದಿಸಿಬಿಡುತ್ತಿದ್ದನೇನೋ.

ಏನಿದ್ದರೂ ಇವನ ಕಡೆಯುವರ ಸ್ವಲ್ಪ ಆಕ್ಷೇಪಣೆ ಇವನು ಹೊರಬೇಕಾಯಿತು. ಯಾರಿಗೋ ಸರಿಯಾಗಿ ಫಲಹಾರ ದೊರಿಯಲಿಲ್ಲವಂತೆ; ಅವರದಕ್ಕೆ ಊಟವನ್ನೇ ಬಿಟ್ಟರಂತೆ ! ಅತ್ತೆಯವರು ಸೊಸೆಯ ಕೈಯಲ್ಲಿ ಮರದ ಬಾಗಿನ ಕೊಡಿಸುವಾಗ ಇವರ ಕಡೆಯವರಾರನ್ನೋ ಮರೆತುಬಿಟ್ಟರಂತೆ; ಅವರದಕ್ಕೆ ಮಡಿಯನ್ನೇ ಉಟ್ಟುಕೊಳ್ಳಲಿಲ್ಲವಂತೆ ! ಏನು ಹೇಳುವುದು ಇವಕ್ಕೆಲ್ಲಾ.

ದುಡ್ಡಿಗವನೇನೂ ಬಿಗಿ ಹಿಡಿಯಲಿಲ್ಲ. ಏನು ಇನ್ನೂರು ರೂಪಾಯಿ ಹೋಗಿ ಮನೆಯಮೇಲೆ ಐನೂರು ರೂಪಾಯಿ ಸಾಲವಾಯಿತಂತಾನೆ. ಕತ್ತೆಬಾಲ ಹೋಯ್ತು ಎಂದುಕೊಂಡು ಸುಮ್ಮನಾದನು.

ಇವನ ತಾಯಿ — ಅರವತ್ತು ವರ್ಷಕ್ಕೆ ಅರಳು ಮರಳು ಎಂಬಂತೆ " ಏನೋ ಶೇಷಾ , ಆ ಹಾಳಾದ್ದು ಬಂಗಾರದ ಡಾಬಿಗೋಸ್ಕರ ಮನೆಯಮೇಲೆ ಇಷ್ಟು ಸಾಲವಾಗಿ ಹೋಯ್ತಲ್ಲೋ " ಎಂದು ರಾಗವನ್ನು ತೆಗೆಯುತ್ತಿದ್ದರು.

"ಡಾಬು ಮಾಡಿಸದೇ ಹೋಗಿದ್ದರೆ ಇದು ನಿಂತು ಹೋಗುತ್ತಿತ್ತೇನು ಅಗೋ ಖರ್ಚು ಎಂದಿದ್ದರೂ ತಪ್ಪಿದ್ದಲ್ಲ. ಆ ದುಡ್ಡೂ ನೂ ಖರ್ಚಾಗುತ್ತಿತ್ತು. ಈಗ ಇದಾದರೂ ಒಂದು ಗಟ್ಟಿ ಒಡವೆ ಉಳಿದುಕೊಂಡ ಹಾಗಾಯು " ಎಂದು ಹೇಳುತಿದ್ದನು.

೨

ಮದುವೆಯಾದ ಮೇಲೆ ಒಂದೊಂದಾಗಿ ಖರ್ಚಿಗೆ ಪ್ರಾರಂಭವಾಯಿತು. ಶ್ರಾವಣಮಾಸ ಬಂತು. ಆಮೇಲೆ ಮಂಗಳಗೌರಿ ವ್ರತ. ಅದಾದಮೇಲೆ ಗೌರಿಬಾಗಿನ. ದೀಪಾವಳಿ ಬರಲು ಮಾವನ ಮನೆಗೆ ಅಳಿಯ ಹೋಗಿ ಜೋಕು ಮಾಡುವುದಿರಲಿ, ಹೋಗುವಾಗ ಒಂದು ಸೀರೆಯನ್ನು ತೆಗೆದುಕೊಂಡು ಹೋಗಬೇಕು. ಅದು ಭಾರಿ ಸೀರೆಯೇ ಆಗಿರಬೇಕು. ಇಲ್ಲದೇ ಹೊಸದಾಗಿ ಬಂಧಿರುವ ಹೋಳಿದರೆ ಕಾಳಿಕೆ ತಟ್ಟುವುದಿಲ್ಲ.

ಸೀರೆಗಳನ್ನು ತೆಗೆದುಕೊಂಡು ಹೋಯ್ತೆಂದರೆ ' ಇದೇನು ಜಪಾನು ರೇಷ್ಮೇದು ' ಎಂದು ಬಿಡುತ್ತಾರೆ. ಧರ್ಮಾವರದ ಸೀರೇನೇ ಆಗಬೇಕು. ಅದಕ್ಕೆ ಯೋಚನೆ.

ಇಂದಿನವರಿಗೆ ತಾಯಿಮಕ್ಕಳಿಬ್ಬರೂ ಮರದ ಮೇಲಿನ ಹಕ್ಕಿಗಳಂತೆ ಮಗನಿಗೆ ಬರುತ್ತಿದ್ದ ವಿದ್ಯಾರ್ಥಿ ವೇತನದಲ್ಲಿ ಸುಖವಾಗಿ ಕಾಲಹಾಕುತ್ತಿದ್ದರು. ಈಗಲೋ ಎಲ್ಲಾ ವಿಧದ ತಾಪತ್ರಯಗಳೂ ಒಂದೊಂದಾಗಿ ತಲೆಹಾಕತೊಡಗಿದವು. ಶೇಷಗಿರಿ 'ಮುಂದೆ ನಾನು ಹಾಗೆ ಮಾಡುತ್ತೇನೆ ಹೀಗೆ ಮಾಡುತ್ತೇನೆ ' ಎಂದು ಹೊಸ ಹುರುಪಿನಲ್ಲಿದ್ದವನು ಮುಂದಿನ ಯೋಚನೆಯನ್ನು ಚಿಂತಿಸುವುದರಲ್ಲಿ ಅರ್ಧಕ್ಕೇ ಇಳಿದು ಹೋದನು.

ಪರೀಕ್ಷೆಯಲ್ಲೇನೋ ಗೌರವಾರ್ಹನಾಗಿಯೇ ತೇರ್ಗಡೆ ಹೊಂದಿದನು. ಎಲ್ಲರೂ " ಅದೃಷ್ಟವತೀನ ಕೈಹಿಡಿದ ಅದಕ್ಕೇ ಆಯಿತು " ಎಂದು ಹಾಡತೊಡಗಿದರು. ಹೋಗಿದ್ದರೇ ! 'ಕಟ್ಟ ಮೋರೆಯುವಳಾವಳನ್ನು ಕೈಹಿಡಿದನೋ' ಎನ್ನುತ್ತಿದ್ದರು 'ಪಾಸಾ'ಗುವುದೂ,'ಫೈಲಾ'ಗುವುದೂ ಕೈಹಿಡಿದವಳ ಯತ್ನವೇ!

ಅವನನ್ನು ಕಂಡವರೆಲ್ಲಾ "ನಿನಗೇನಪ್ಪ ಮದುವೆಯಾಯಿತು. ಪರೀಕ್ಷೆಯಾಯಿತು. ಸುಖಪುರುಷ ' ಎನ್ನುತ್ತಿದ್ದರು. ಆ ಸುಖ ಅವನಿಗೇ ಗೊತ್ತು.

ಇಲ್ಲಿಯವರಿಗೆ ಕಾಲಕ್ಷೇಪ (Scholar-ship ಎಂಬುದರ ಅಪಭ್ರಂಶ)ವಾದರೂ ಬರುತ್ತಿತ್ತು. ಇನ್ನು ಮುಂದೆ ಅದಕ್ಕೂ ಕಲ್ಲು ಬಿತ್ತು ಸರಿ, ಕೆಲಸಕ್ಕೋಸ್ಕರ ಆಫೀಸರ ಮನೆಗಳಿಗೆ ಅಲೆಯಲು ಆರಂಭಿಸಿದ. ಈಗ ಬ್ರಾಹ್ಮಣರಿಗೆ ಕೆಲಸ ಯಾರು ಕೊಡುತ್ತಾರೆ. ಬ್ರಾಹ್ಮಣನೆಂದಮೇಲೆ ಇವನ 'ಫಸ್ಟ್ ಕ್ಲಾಸು, ಗಿಸ್ಟ್ ಕ್ಲಾಸು' ಯಾವುದೂ ಚಲಾವಣೆಗೆ ಬರುವುದಿಲ್ಲ. ಹೋಗಿ ಆಫೀಸರುಗಳನ್ನು ಪೀಡಿಸಿದರೆ ಎಲ್ಲಾದರೂ ಒಂದು ಬದಲಿ ಕೆಲಸವಾದರೂ ಸಿಕ್ಕುತ್ತೆ. ರೈಲ್ವೇ ಸ್ಟೇಷನ್ ಬಳಿ ನೀವು ನೋಡಿರಬಹುದು, ಯಾಕೆ ನೀವೇ ಎಷ್ಟೋಸಲ ಮಾಡಿದ್ದೀರಿ. ಯಾವನಾದರೂ ಭಿಕ್ಷುಕ ನಿಮ್ಮನ್ನೇನಾದರೂ ಕಂಡುಬಿಟ್ಟನೆಂದರೆ "ಸ್ವಾಮೀ ಸ್ವಾಮೀ" ಎಂದು ನಿಮ್ಮನ್ನು ಎಡಬಿಡದೆ ಅನುಸರಿಸುತ್ತಾ ಬೇಜಾರು ಹುಟ್ಟಿಸಿ ಕೊನೆಗೆ ಹಾಳಾಗಿ ಹೋಗು ಎಂದು ನೀವು ಮೂರು ಕಾಸಿನ ಬಿಲ್ಲೆಯನ್ನು ಎಸೆದರೆ ಅದನ್ನು ತೆಗೆದುಕೊಂಡು ಹೋಗುವಂತೆ ಆ ಆಫೀಸರುಗಳನ್ನು ಅನು

ಸರಿಸಬೇಕು. ಆದಾಗದು ಅವನಿಗೆ. ಸ್ವಾತಂತ್ರ್ಯ ಪ್ರಿಯನವನು. ಮೊದಲಿನಿಂದಲೂ ಅವನಿಷ್ಟ 'ಬೊಂಬಾಯಿಗೆ ಹೋಗಿ ಬರಬೇಕು; ಮನೆಗೆ ಬೋರ್ಡು ಹಾಕಬೇಕು ' ಎಂದು. ಅದು ಅವನಿಗೆ ಸರಿಯಾದ ಕೆಲಸ. ಮದುವೆ ಮಾಡಿಕೊಳ್ಳದೇ ಇದ್ದಿದ್ದರೆ ಹಾಗೆಯೇ ಮಾಡುತ್ತಿದ್ದನು. ಈಗ ಹಣವನ್ನೆಲ್ಲಿಂದ ತರಬೇಕು ?

ಮನೆಯ ಮೇಲಿನ್ನು ಸಾಲತೆಗೆಯುವ ಹಾಗಿಲ್ಲ. ಹಿಂದಿಂದೇ ಹೊರೆಯಾಗಿ ಕುಳಿತಿದೆ. ಇನ್ನು ಇವನಿಗೆ ಕೊಡುವವರಾರು ? "ಮಾವ ಅವರನ್ನು ಕೇಳು" ಎಂದು ಯಾರೋ ಸೂಚಿಸಿದರು. ಆಗ ಅವರೊಡನೆ ಕಿಡಿಕಿಡಿಯಾದನು. 'ಮಾವ ಕೊಡುವ ಹಣ ಮಣ್ಣಿಗೆ ಸಮಾನ' ಆ ಹಣವನ್ನು ಸ್ವೀಕರಿಸಿ ಹೆಂಡತಿಗೆ ದಾಸನಾಗಲೆಂದು ನಿಮ್ಮ ಅಭಿಪ್ರಾಯವೋ ಎಂದುಬಿಟ್ಟ.

ವರಮಹಾಲಕ್ಷ್ಮೀ ವ್ರತ ಬಂತು. ಶೇಷಗಿರಿಯ ಅತ್ತೆ ಮನೆಯಲ್ಲಿ ಆ ವ್ರತದ ಆಚರಣೆಯಿಲ್ಲ. ಅದಕ್ಕೋಸ್ಕರ ಅವನ ಹೆಂಡತಿಯನ್ನು ಇವರ ಮನೆಗೆ ಕರತಂದಿದ್ದರು. ಬೆಳಿಗ್ಗೆ ಪೂಜೆಯೆಲ್ಲಾ ಸಾಂಗವಾಗಿ ನಡೆಯಿತು. ಅವಧಾನಿ ರಾಮಾಭಟ್ಟರೇ ಬಂದು ಮಾಡಿಸಿ ಹೋದರು. ಸಾಯಂಕಾಲ ಸೊಸೆಯು ಸಾಲಂಕೃತಳಾಗಿ ಬಂದ ಮುತ್ತೈದೆಯುವರಿಗೆಲ್ಲಾ ಬಾಗಿನಗಳನ್ನು ಕೊಟ್ಟಳು. ಎಲ್ಲರೂ ಹೊರಟುಹೋದಮೇಲೆ ಅತ್ತೆ ಸೊಸೆಯರಿಬ್ಬರೇ ಶೇಷಗೀರೀಗೋಸ್ಕರ ಕಾದುಕೊಂಡು ಕುಳಿತಿದ್ದರು. ಅವನು ನಾಳೆವೆಚ್ಚಕ್ಕೆ ಹಣವನ್ನು ಹವಣಿಸಿಕೊಂಡು ಬರಲು ಹೊರಗೆ ಹೋಗಿದ್ದ. ಆಗ ಅವನ ತಾಯಿ ಸುಮ್ಮನೆ ಇರಬೇಕೋ ಬೇಡವೋ—ಸೊಸೆಯ ಸೊಂಟದಲ್ಲಿದ್ದ ಆ ಬಂಗಾರದ ಡಾಬನ್ನು ನೋಡಿ 'ಅಯ್ಯೋ ಈ ಡಾಬಿಗೋಸ್ಕರ ನಮ್ಮ ಹುಡುಗ ಮುಂದಕ್ಕೆ ಓದಲಾಗದೇ ಹೋದ. ಆ ದುಡ್ಡಿದ್ದರೆ ಬೊಂಬಾಯಿಗೆ ಹೋಗಿ ಅಡ್ವೋಕೇಟಾಗಿ ಆದರೂ ಬರಬಹುದಾಗಿತ್ತು' ಎಂದು ಬಿಟ್ಟಳು. ಒಡಕು ಬಾಯಿ ! ಪಾಪ, ಶೇಷಗಿರಿ ಹೆಂಡತಿ ಸಾವಿತ್ರಿ, ಏನೂ ಅರಿಯದವಳು, ಡಾಬಿಗೋಸ್ಕರ ತನ್ನ ಗಂಡನ ವ್ಯಾಸಂಗ ನಿಂತು ಹೋಯಿತೇ ಎಂದು ಬಹಳ ಪೇಚಾಡಲಾರಂಭಿಸಿದಳು. ಇವರ ಮನೆಗೆ ಬಂದಾಗಿನಿಂದ ಗಂಡನ ಆಗಿನ ಸ್ಥಿತಿಯನ್ನು ಕಣ್ಣಾರೆ ನೋಡುತ್ತಿದ್ದಳು. ಆ ಎರಡು ದಿವಸಕ್ಕೆ ಅನೇಕ ವರ್ಷದ ಅನುಭವಸ್ಥಳಂತೆ ಆಗಿ ಹೋಗಿದ್ದಳು. ಗಂಡನ ವಿದ್ಯೆಯು ಹೆಚ್ಚೋ ತನ್ನ ಆಭರಣಗಳು ಹೆಚ್ಚೋ ತನ್ನ ಆಭರಣಗಳನ್ನೆಲ್ಲಾ ತೆಗೆದುಕೊಟ್ಟು ಬಿಡ್ತೀನಿ; ಇವರು ಓದಿ ಉತ್ತೀರ್ಣ

ರಾಗಿ ಬಂದರೆ ಅದೇ ನನಗೆ ಆಭರಣ ಎಂದು ಮನಸ್ಸಿನಲ್ಲಿ ಮಾಡಿಕೊಂಡಳು. ಅದನ್ನು ಯಾರಲ್ಲಿ ಹೇಳುವುದು ?

ಅತ್ತೆಯವರಿಗೆ ಅವಿಚಾರವನ್ನು ಹೇಳುವುದೇ ? ಅತ್ತೆಯರು ದೊಡ್ಡವರು, ಅವರೊಂದಿಗೆ ಒಂದು ಮಾತೂ ಹೊರಡದು. ಹಾಗೂ ಸಾಹಸಪಟ್ಟು ಹೇಳಿದಳೆಂದರೆ ಅವರು ಅವಳನ್ನೇ ಬಯ್ದು ಬಿಡುವವರೇನೋ ಎಂಬ ಶಂಕೆ.

ಗಂಡನೊಂದಿಗೆ ಹೇಳುವುದೇ ? ಮದುವೆಯಾಗಿ ಇನ್ನೂ ಒಂದು ವರ್ಷವಾಗಿಲ್ಲ. ಅವರೊಂದಿಗೆ ಹೇಗೆ ಮಾತನಾಡುವುದು ? ಇದೇ ಮೊದಲನೆ ಸಲ ಅವರೊಂದಿಗೆ ಮಾತನಾಡಬೇಕಾಗಿರುವುದು. ಅವರು ಮಾತನಾಡದೇ ಹೋದರೋ ? ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಅವರಿಗೆ ಹೇಗೆ ತಿಳಿಸುವುದು. ಅದದ್ದಾಗಲಿ ಅತ್ತೆಯವರಿಗೆ ಹೇಳುವುದಕ್ಕಿಂತ ಇವರಿಗೆ ತಿಳಿಸುವುದೇ ಮೇಲು ಎಂದು ಗಟ್ಟಿ ಮನಸ್ಸು ಮಾಡಿಕೊಂಡು ವರಮಾಹಾಲಕ್ಷ್ಮೀನ "ಅವರಿಗೆ ಇದನ್ನರುಹಲು ಸುಸಮಯವನ್ನೊದಗಿಸಿ ಅವರಿದಕ್ಕೆ ಒಪ್ಪುವಂತೆ ಕರುಣಿಸು ದೇವಿ "ಎಂದು ಪ್ರಾರ್ಥಿಸುತ್ತಿದ್ದಳು.

"ಇನ್ನೂ ಅವನು ಬರುವುದು ಎಷ್ಟು ಹೊತ್ತಾಗುತ್ತೋ ನೀನು ಊಟಮಾಡಿಬಿಡು "ಎಂದು ಅತ್ತೆಯವರವಳಿಗೆ ಹೇಳಿದರು.

"ಆಗಲಿ "ಎಂದು ಹೇಳಿ ಹಾಗೇ ಕುಳಿತಿದ್ದಳು. ಅಷ್ಟು ಹೊತ್ತಿಗೆ ಶೇಷಗಿರಿ ಬಂದ.

"ಕಾಲುತೊಳಕೊ. ಹೆಸರುಬೇಳೆ ಕೋಸಂಬರಿ ಕೊಡಲೇ" ಎಂದವನ ತಾಯಿ ಅವನನ್ನು ಕೇಳಿದರು.

"ಈಗೇನೂ ಬೇಡ. ಊಟಕ್ಕೆ ಕೂಡುತ್ತೇನೆ ಒಳಗೆ ಬಡಿಸು "ಎಂದು ಹೇಳಿ ಮಡಿ ಉಟ್ಟುಕೊಂಡು ಸಂಧ್ಯಾವಂದನೆ ಮಾಡಲು ಹೋದ.

ಮನೆ ಚಿಕ್ಕದಾದರೂ ಅಚ್ಚುಕಟ್ಟಾಗಿತ್ತು. ಮನೆ ಮುಂದೆ ಅಂಗಳ. ಅಲ್ಲಿ ಬೃಂದಾವನದ ಕಟ್ಟೆ. ಶೇಷಗಿರಿ ಯಾವಾಗಲೂ ಬೃಂದಾವನದ ಕಟ್ಟೆಯ ಮೇಲೆ ಕುಳಿತು ಸಂಧ್ಯಾವಂದನೆಯನ್ನು ಮಾಡುವ ಪದ್ಧತಿ. ಹಾಗೆ ಅಲ್ಲಿಗೆ ಹೋಗಿ ಮಾಡುತ್ತಾ ಕುಳಿತುಕೊಂಡ. ತಾಯಿಯವರು ಒಳಕ್ಕೆ ಎದ್ದು ಹೋಗಿ ಮಣೆಯನ್ನು ಹಾಕಿ ಊಟಕ್ಕೆ ಸಜ್ಜುಗೊಳಿಸುತ್ತಿದ್ದರು. ಸಾವಿತ್ರಮ್ಮ ಹಾಲಿ ( Hall ) ನಲ್ಲಿಯೇ ಕಂಬದ ಆರುಗಿನಲ್ಲಿ ಕುಳಿತಿದ್ದಳು.

ಇದೇ ಸರಿಯಾದ ಸಮಯವೆಂದು ತೋರಿತವಳಿಗೆ. ಹೊರಗೆ ಹೋಗಿ ಮಾತನಾಡಿಸಬಹುದು. ಏನೆಂದು ಮಾತನಾಡಿಸುವುದು ? ಮೊದಲು ಹೇಗೆ ಆರಂಭಿಸಬೇಕು ? ಅಂತೂ ತನ್ನ ಹೃದಯದಲ್ಲಿರುವುದನ್ನು ಹೇಳಿ ಬಿಡಬೇಕು. ಅದು ಮೇಲಕ್ಕೆ ಉಕ್ಕಿ ಬರುತ್ತಿದೆ. ಹಾಲುಕ್ಕುವಂತೆ. ಹಾಲಾದರೂ ತಣ್ಣೀರನ್ನದರ ಮೇಲೆ ಹಾಕಿದರೆ ತಣ್ಣಗಾಗುತ್ತದೆ. ಇಲ್ಲಿ ಇದನ್ನು ಅವಳು ಅವನಿಗೆ ಹೇಳಿದ ಹೊರತೂ ಶಮನವಾಗುವುದಿಲ್ಲ.

ಅಲ್ಲಿಂದ ಎದ್ದಳು. ಕಾಲನ್ನು ಎತ್ತಲುಹೋದರೆ ಅದು ಮೇಲಕ್ಕೆ ಬರದು. ಕಬ್ಬಿಣದ ಮೊಳೆಗಳನ್ನು ಹೊಡೆದು ಬಂಧಿಸಿದ ಹಾಗಿದೆ. ಹಾಗೂ ಹೀಗೂ ಮಾಡಿ ತಲೆಬಾಗಿಲವರೆಗೂ ಹೋದಳು. ಬಾಗಿಲನ್ನು ದಾಟಲಾಗಲಿಲ್ಲ.

ಹೊರಗೆ ಎಲ್ಲವೂ ನಿಶ್ಶಬ್ದವಾಗಿದೆ. ಬೃಂದಾವನದ ಕಟ್ಟೆ. ಅಲ್ಲಿ ತನ್ನ ಯಜಮಾನರು ಜಪವನ್ನು ಮಾಡುತ್ತ ಕುಳಿತಿದ್ದಾರೆ. ಬೃಂದಾವನದಲ್ಲಿ ತುಳಸೀದೇವಿ. ಕಟ್ಟೆಯ ಮೇಲೆ ತನ್ನ ಯಜಮಾನರು. ಇವರನ್ನು ಬಿಟ್ಟರೆ ಇನ್ನು ಯಾರೂ ಇಲ್ಲ. ಚಂದಿರನೂ ಮುಗಿಲಿನಲ್ಲಿ ಮರೆಯಾಗಿ ಹೋಗಿದ್ದಾನೆ. ಮಾರುತನ ಸುಳಿವೂ ಇಲ್ಲ. ಅವಳು ಶೇಷಗಿರಿಯನ್ನು ತುಂಬಿದ ಕಣ್ಣುಗಳಿಂದ ನೋಡತೊಡಗಿದಳು. ತನ್ನ ಯಜಮಾನರು ! ತನ್ನವರು !! ಆ ಕೋಮಲಶರೀರವದರಲಾರಂಭಿಸಿತು. ಬಾಗಿಲನ್ನು ಹಿಡಿದುಕೊಂಡು ಹಾಗೆಯೇ ನಿಂತುಬಿಟ್ಟಳು.

ಶೇಷಗಿರಿ ಸಂಧ್ಯಾವಂದನೆಯನ್ನು ಪೂರೈಸಿದ. ಎದ್ದು ಒಳಕ್ಕೆ ಹೋಗಬೇಕು. ಹೊಟ್ಟೆ ಹಸಿವು; ಬೆಳಗಿನಿಂದಲೂ ಊಟವಿಲ್ಲ. ಅಲ್ಲಿ ನೋಡಿದರೆ ತನ್ನ ಅರ್ಧಾಂಗಿ ! ಹಾಗೆಯೇ ಸ್ತಂಭೀಭೂತನಾಗಿ ನಿಂತು ಬಿಟ್ಟ. ಆ ಮೇಲೆ ಎಳೆನಗೆಯನ್ನು ಸೂಸುತ್ತಾ "ದಾರೀಬಿಡೂ "ಎಂದ.

ಅವನ ಹೆಂಡತಿ ತಲೆಯನ್ನು ತಗ್ಗಿಸಿಕೊಂಡು ಬಲಗಾಲಿನ ಹೆಬ್ಬೆರಳಿನಿಂದ ಹೊಸ್ತಿಲನ್ನು ಒತ್ತುತ್ತಾ ಯೋಚನೆಯಲ್ಲಿ ಮಗ್ನಳಾಗಿದ್ದಳು. "ದಾರಿಬಿಡೂ "ಎಂಬ ಅವನ ಮಾತನ್ನು ಕೇಳಿದೊಡನೆಯೆ ಎಚ್ಚರಗೊಂಡಳು. ಏನೋ ಯೋಚಿಸುತ್ತಿದ್ದ ಹುಲ್ಲಿಗೆ ಕುದುರೆಯ ಖುರಪುಟ ದನಿಯು ಕೇಳಿಸಿದಂತಾಯ್ತು. ಆ ಮಾತನ್ನು ಅವನು ಬಹಳ ಮೆಲ್ಲಗೆ ನುಡಿದಿದ್ದನು. ಆದರೂ ಅದು ಅವಳಿಗೆ ರೋಮಾಂಚನವನ್ನುಂಟು ಮಾಡಿತು.

ಯಾತಕ್ಕೆ ಇವಳು ಬಾಗಿಲಿಗೆ ಅಡ್ಡಕಟ್ಟಿ ನಿಂತಿದ್ದಾಳೆ ಇವನಿಗೆ ಗೊತ್ತಾಗಲಿಲ್ಲ.

ಶೇಷಗಿರೀನೆ ಇದ್ದುಕೊಂಡು "ಇವತ್ತು ಪೂಜೆಯೆಲ್ಲಾ ಸಾಂಗವಾಗಿ ಆಯಿತೆ" ಎಂದನು.

"ಆ—ಯಿ—ತು" ಎಂದಳು. ಮೂರು ಅಕ್ಷರಗಳನ್ನು ನುಡಿಯಲು ಮೂರು ಘಂಟೆಯನ್ನೇ ತೆಗೆದುಕೊಂಡಳು.

"ಊಟ ಆಯಿತಾ ನಿಂದು" ಎಂದು ಕೇಳಿದನು. ಊಟ ವಿನ್ನೂ ಮಾಡಿರುವುದಿಲ್ಲವೆಂಬುದು ಅವನಿಗೆ ಚೆನ್ನಾಗಿ ಗೊತ್ತು; ಆದರೆ ಏನನ್ನು ತಾನೆ ಅವಳೊಡನೆ ಮಾತನಾಡುವುದು!

"ಇನ್ನೂ ಇಲ್ಲ" ಎಂದಳು.

"ಹಾಗಾದರೆ ನಾನು ಬೇಗ ಊಟಮಾಡುತ್ತೇನೆ. ನೀನು ಕೂಡೀವಂತೆ. ನನಗೋಸ್ಕರ ಯಾತಕ್ಕೆ ಸುಮ್ಮನೆ ಕಾದಿದ್ದು" ಎಂದು ದಾರಿ ಬಿಡಿಸಿಕೊಂಡು ಹೋಗಲು ಹೋದನು. ಅವನಿಗೆ ತನ್ನ ತಾಯಿ ಎಲ್ಲಿ ಕಾಣುತ್ತಾಳೋ ಎಂಬ ಭಯ. ಇವಳಿಗಾದರೊ ಕರ್ತವ್ಯನಿರತಳಾಗಿದ್ದುದರಿಂದ ಅದು ತೋರಿರಲಿಲ್ಲ. ಬಾಗಿಲಿಗೆ ಅಡ್ಡವಾಗಿ ಹಾಗೇ ನಿಂತಿದ್ದಾಳೆ.

"ಏನೂ" ಎಂದು ಕೇಳಿದ.

ಅವಳ ತುಟಿಯಗಲಿತೇ ವಿನಾ ಒಂದು ನುಡಿಯೂ ಹೊರಬೀಳಲಿಲ್ಲ.

"ಏನದು ಹೇಳು" ಎಂದು ಮೃದುವಾಗಿ ಕೇಳಿದ. ಇವಳಿಗೆ ನುಡಿಯಲು ಬಾಯೇ ಬರಲಿಲ್ಲ. ಸೊಂಟದಲ್ಲಿದ್ದ ಡಾಬನ್ನು ಹಾಗೇ ಕಳಚಿದಳು. ಕೈಗೆ ತೆಗೆದುಕೊಂಡಳು. ಇವನ ಮುಂದೆ ಹಿಡಿದಳು.

"ಡಾಬೇನಾದರೂ ಮುರಿದು ಗಿರಿದು ಹೋಯಿತೆ?"

"ಇಲ್ಲ"

"ಅಳತೆ ಸರಿಹೋಗಲಿಲ್ಲವೇ ಸರಿಮಾಡಿಸಬೇಕೇನು."

"ಇಲ್ಲ...ಇದನ್ನು..."

"ಊಂ ಹೇಳು"

"ನೀವು ಮಾರಬೇಕು"

"ಯಾಕೆ?" ಎಂದು ಆಶ್ಚರ್ಯದಿಂದ, ಕೌತುಕದಿಂದ ಕೇಳಿದ.

"ಈ ಒಡವೆಗಳನ್ನೂ ತೆಗೆದುಕೊಡುತ್ತೇನೆ. ಅವನ್ನೂ ಮಾರಿ ಮುಂದಕ್ಕೆ ಓದಲು ಹೋಗಬೇಕು."

"ಅಯ್ಯೋ ಹುಚ್ಚಿ, ನಿನ್ನ ಒಡವೆ ಮಾರಿ ನಾನು ಓದಬೇಕೇ?"

"ನೀವು ಬೊಂಬಾಯಿಗೆ ಹೋಗೋದಕ್ಕೆ ದುಡ್ಡು?"

"ದುಡ್ಡೆಲ್ಲಾ ಇದೆ. ಇವತ್ತು ಹಬ್ಬದ ದಿವಸ. ಮೈಮೇಲಿನ ಒಡವೆ ತೆಗೆಯಬಾರದು. ಹಾಗೆ ಇಟ್ಟುಕೊ" ಎಂದು ಹೇಳಿದ. ಆಗಿನ ಅವಳ ನಡವಳಿಕೆ ಅವನ ಹೃದಯವನ್ನು ಕಲುಕಿ ಬಿಟ್ಟಿತ್ತು. ಅಷ್ಟರಲ್ಲಿ "ಆಯ್ತೇನೋ ಶೇಷಾ, ಎಷ್ಟು ಹೊತ್ತು ಸಂಧ್ಯಾವಂದನೆ" ಎಂದು ಕೂಗಿದಳು.

"ಆಯ್ತು ಬಂದೆ" ಎಂದು ಒಳಕ್ಕೆ ಹೊರಟು ಹೋದನು.

ಶೇಷಗಿರಿ ಬೊಂಬಾಯಿನಲ್ಲಿ ಯಾವುದಾದರೂ ಒಂದು ಕೆಲಸ ಸಿಕ್ಕಿದರೆ ಅದನ್ನು ಹಾಗೆಯೇ ನೋಡಿಕೊಂಡು ಎಲ್. ಎಲ್. ಬಿ. ಗೆ ಓದಿ ಬರುವುದು. ಇಲ್ಲಿ ತಾಯಿಗೆ ಒಂದು ಕೊತಡಿಯಿಟ್ಟುಕೊಂಡು ಮನೇನ ಬಾಡಿಗ್ಗೆ ಕೊಟ್ಟರೆ ಅದರ ಬಾಡಿಗೆಯಲ್ಲಿ ಅವಳ ಕಥೆ ಕಳೆಯುತ್ತಿರುತ್ತದೆ. ಎಷ್ಟಾದರೂ ಮಡೀ ಹೆಂಗಸು, ಒಂದೊತ್ತು ಊಟ, ಎಂದು ಮಾಡಿಕೊಂಡಿದ್ದನು. ಅದರಂತೆಯೆ ಅಲ್ಲಿದ್ದ ತನ್ನ ಸ್ನೇಹಿತರಿಗೆ ಕಾಗದ ಬರೆದಿದ್ದನು. ಮಾರನೆಯ ದಿನ ಅಲ್ಲಿಂದ ಕಾಗದವೂ ಬಂತು. ಅಲ್ಲಿನ ಪೋಸ್ಟಾಫೀಸಿನಲ್ಲಿ ಒಂದು ಕೆಲಸ ಖಾಲಿ ಇದೆ ಎಂದು ಬರೆದಿದ್ದಿತು.

ಬೊಂಬಾಯಿಗೆ ಹೋಗಬೇಕು. ಕೆಲಸವೂ ಸಿಕ್ಕಿದೆ, ದುಡ್ಡನ್ನೊದಗಿಸಿಕೊಳ್ಳಲು ಪ್ರಯತ್ನಿಸತೊಡಗಿದನು. ಯಾರು ಯಾರನ್ನು ಕೇಳಬಹುದಾಗಿತ್ತೋ ಅವರೆಲ್ಲರಿಂದಲೂ ಸಾಲ ತೆಗೆದು ಕೊಂಡಿದ್ದಾನೆ. ಒಬ್ಬ ಶೆಟ್ಟರ ಮನೆಯಲ್ಲಿ ಪಾಠ ಹೇಳುತ್ತಿದ್ದ. ಅವರಲ್ಲಾಗಲೇ ಒಂದು ನೂರು ರೂಪಾಯಿ ಸಾಲ ಮಾಡಿದ್ದಾನೆ. ಗುರುತಿಲ್ಲ, ಪರಿಚಯವಿಲ್ಲ; ಹೇಳಿದಲ್ಲಿ ಮೂರು ತಿಂಗಳು ಪಾಠ, ಇವನ ಗುಣವನ್ನು ಕಂಡು ಸಾಲವನ್ನಾಗ ಕೊಟ್ಟರು. ಇನ್ನೂ ಕೊಡಿ ಎಂದು ಕೇಳಲಾಗುತ್ತೆಯೆ.

ಇವನ ಹೆಂಡತಿಯಾಗಲೇ "ಒಡವೆಯನ್ನು ಮಾರಿ ಹಣವನ್ನು ಒದಗಿಸಿಕೊಳ್ಳಿ" ಎಂದು ಹೇಳಿದ್ದಳಲ್ಲಾ. ಹಾಗೆ ಯಾತಕ್ಕೆ ಮಾಡಬಾರದಾಗಿತ್ತು ಎಂದು ನೀವು ಕೇಳಬಹುದು. ಕೊನೆಗೆ ಹಾಗೇ ಮಾಡಬೇಕಾಯಿತು. ಆ ಬಂಗಾರದ ಡಾಬನ್ನು ನೂರೈವತ್ತು ರೂಪಾಯಿಗೆ ಅಡವಿಟ್ಟು ಹಣವನ್ನು ತರಬೇಕಾಯಿತು. ಅವನ ಹೆಂಡತಿಯ ಕೈಯಿಂದ ಆಭರಣವನ್ನು ತೆಗೆದುಕೊಂಡಾಗ ಅವನ ಮನಸ್ಸಿನಲ್ಲಿ ನಡೆಯುತ್ತಿದ್ದುದನ್ನು ವರ್ಣ

ಸಲಸಾಧ್ಯ. ಆಕೆಯಾದರೋ ನಿಸ್ಸಂಕೋಚವಾಗಿ ಒಂದೇ ಮನಸ್ಸಿನಿಂದ ತೆಗೆದುಕೊಟ್ಟಳು.

“ನೋಡು ನೀನು ಸ್ವಲ್ಪವೂ ನೊಂದುಕೊಳ್ಳಬಾರದು. ಹಾಗಿದ್ದರೆ ಕೊಡು” ಎಂದನು.

ಅವಳು “ನನ್ನ ಮೇಲೆ ಸಂಶಯವೇ” ಎಂದಳು.

ಹದಿನಾಲ್ಕು ವರ್ಷದ ಹುಡುಗಿ. ಇನ್ನೂ ಸಂಸಾರದ ಹೊಸ್ತಿಲನ್ನು ಮೆಟ್ಟುವುದಕ್ಕಿಲ್ಲ. ಅವಳ ಆಗಿನ ಮಾತು ಯಾರ ಎದೆಯನ್ನಾದರೂ ನೀರಾಗಿ ಮಾಡಿಬಿಡುವುದು. ಆ ಅಂತರಂಗವೆಂತಹದು. ಆಸ್ಥೈರ್ಯವೋ ಕಲಿಯುಗದಲ್ಲಿ ಇಷ್ಟಾದರೂ ಮಳೆಬೆಳೆಗಳಾಗುವುದು ಈ ಮಹಿಳೆಯರಿರುವುದರಿಂದಲೇ ಎಂದು ಶಾಸ್ತ್ರಗಳು ಹೇಳುವುದು ಈ ಸಂದರ್ಭಗಳಲ್ಲಿ ನಮಗೂ ನಿಶ್ಚಯವೆಂದು ತೋರುತ್ತೆ.

೩

ಶೇಷಗಿರಿ ಬೊಂಬಾಯಲ್ಲಿ ನೆಲಸಿ ಆಗಲೇ ಒಂದು ವರ್ಷದ ಹತ್ತಿರಕ್ಕೆ ಬಂತು. ಕೆಲಸವೇನೋ ಸುಲಭ. ಆದರೆ ಯಂತ್ರದಂತೆ ದುಡಿಯಬೇಕು. ಇದರ ಜೊತೆಗೆ ವ್ಯಾಸಂಗ. ಕಾಲೇಜು ಸಾಯಂಕಾಲವಾದ್ದರಿಂದ ಕೆಲಸವನ್ನೂ ನೋಡಿಕೊಂಡು ವ್ಯಾಸಂಗವನ್ನೂ ಮಾಡಲಾಗುತ್ತಿತ್ತು. ಯಾವುದು ಹೇಗಿದ್ದರೂ ದೇಹವೊಂದನ್ನು ಸರಿಯಾಗಿ ನೋಡಿಕೊಂಡು ಬರಬೇಕಲ್ಲ. ಆರೋಗ್ಯವೊಂದಿದ್ದರೆ ಸಕಲ ಸೌಭಾಗ್ಯ. ಅದಕ್ಕೋಸ್ಕರವೇ ತನ್ನ ಮನೆಯನ್ನು ಮಾತುಂಗದಲ್ಲಿ ಮಾಡಿದ್ದನು. ದಿನಾಗಲೂ ಬೊಂಬಾಯಿ ಷಹರಿಗೆ ಬಂದು ಹೋಗಬೇಕು. ಅವನಿಗಲ್ಲಿ ಖರ್ಚು ಬಹಳವಾಗಿತ್ತು; ಆದರೆ ಪ್ರತಿ ತಿಂಗಳೂ ಹಣವನ್ನು ಸ್ವಲ್ಪವಾದರೂ ಉಳಿಸಿ ಶೇಖರಿಸುತ್ತಿದ್ದನು. ಮೊದಲು ಆ ಬಂಗಾರದ ಡಾಬನ್ನು ಅಡವಿನಿಂದ ಬಿಡಿಸಿ ತನ್ನ ಹೆಂಡತಿಗೆ ಕೊಟ್ಟು ಬಿಡಬೇಕು. ಅಲ್ಲಿಯ ವರೆಗೂ ಅವನ ಮನಸ್ಸು ಮುಳ್ಳಿನ ಪೊದೆಯ ಮೇಲಿದ್ದ ಹಾಗೆಯೇ.

ಕಣ್ಣು ಮುಚ್ಚಿತೆಂದರೆ ತನ್ನ ಹೆಂಡತಿಯ ಅಂದಿನ ಆಕೃತಿ ತನ್ನೆದುರಿಗೆ ಬಂದು ನಿಲ್ಲುವುದು. ಕೋಮಲಕಿಶೋರಿ. ಕಿಶೋರಿಯಾದರೂ ನವಲಜ್ಜೆಯಲ್ಲಿ ತೊಯ್ದು ಲಾವಣ್ಯಮೂರ್ತಿ. ಆಗ ಅವೆಲ್ಲವನ್ನೂ ಒತ್ತೊಟ್ಟಿಗಿಟ್ಟು ಪತಿಯ ವ್ಯಾಸಂಗಕ್ಕೋಸ್ಕರ ತನ್ನಾಭರಣಗಳೆಲ್ಲವನ್ನೂ ಅವನ ಚರಣತಲದಲ್ಲಿ ಅರ್ಪಿಸಲು ಸಿದ್ಧವಾಗಿ ನಿಂತಿರುವ ಆ ನಿಲುಭಂಗಿ.

ಇವನು ತನ್ನನ್ನು ತಾನೇ ಹಳಿದುಕೊಳ್ಳುವನು. ತಾನು ಆ ದೇವಿಗೆ ತಕ್ಕ ವರನೇ ಎಂದುಕೊಳ್ಳುವನು. ತನ್ನ ಸೌಭಾಗ್ಯಕ್ಕೆ ಮಿತಿಯಿಲ್ಲವೆಂದು ಉಬ್ಬಿಹೋಗುವನು. ಹೀಗಿರಲು ಅವನ ಭಾವಮೈದುನನ ಮದುವೆಯೆಂದವನಿಗೆ ಕಾಗದ ಬಂತು.

ಶೇಷಗಿರಿಗೆ ಇದ್ದವನೊಬ್ಬನೇ ಭಾವಮೈದುನ. ಇವನೊಬ್ಬನೇ ಅವನಿಗೆ ಭಾವ; ಇನ್ನು ಇವನು ಹೋಗದೇ ಇರುವುದಕ್ಕೆ ಆಗುತ್ತದೆಯೇ ? ಅಲ್ಲಿ ರಜ ದೊರೆಯುವುದು ಬಹಳ ಕಷ್ಟವಾಯಿತು. ತನ್ನ ಆಫೀಸರಿಗೆ ಇದನ್ನೆಲ್ಲಾ ಬಿಚ್ಚಿ ಹೇಳಿದರೆ ತಾನೆ ಕರುಣಿಸುವರೇ ? ಜೇಲಿಯ ಮುಂದೆ ಬೇಡಿಕೊಂಡ ಹಾಗೆ. ಕೊನೆಗೆ “ಕೊಟ್ಟರೆ ಕೊಡಲಿ ಬಿಟ್ಟರೆ ಬಿಡಲಿ” ಎಂದು ರಜಾಕ್ಕೆ ಬರೆದು ಹಾಕಿ ಹೊರಟು ಬಂದ.

ಭಾವಮೈದುನನ ಮದುವೆ. ಅಳಿಯ ದೇವರಿಗೆ ಎಲ್ಲೆಲ್ಲಿಯೂ ಮರ್ಯಾದೆ. ಇವನನ್ನು ಕರೆದುಕೊಂಡು ಹೋಗಿ ಉಚ್ಚಸ್ಥಾನದಲ್ಲಿ ಕೂಡಿಸಿದ್ದಾರೆ. “ಉಚ್ಛಸ್ಥಾನೇಷು ಪೂಜ್ಯಂತೇ”

ಇವನ ಹೆಂಡತಿಯಿನ್ನೂ ಇವನ ಕಣ್ಣಿಗೆ ಬಿದ್ದಿರಲಿಲ್ಲ. ಬೆಳಿಗ್ಗೆ ಬಂದವನು ಬಿಡದಿಯ ಮನೆಯಲ್ಲಿಯೇ ಸ್ನಾನ, ಸಂಧ್ಯಾವಂದನೆ, ಫಲಹಾರಾದಿಗಳನ್ನು ತೀರಿಸಿಕೊಂಡ ಮೇಲೆ ಲಗ್ನದ ಮನೆಗೆ ಬಂದ.

ಆಕೆಯಲ್ಲಿದ್ದಳು. ಅಣ್ಣನ ಮದುವೆಯಲ್ಲಿ ಅಲ್ಲಿಂದಿಲ್ಲಿಗೆ ಓಡಾಡಬೇಕಾದವಳು ಅವಳು ತಾನೆ. ಶೇಷಗಿರಿ ಈಗ ತನ್ನ ಪ್ರೇಯಸಿಯನ್ನು ನೋಡಿದ. ಆಕೆ ತನ್ನಿನಿಯರು ಬರುವರೋ ಇಲ್ಲವೋ ಎಂದು ಅಲ್ಲಿಯವರಿಗೂ ಎದುರು ನೋಡಿ ನಿರಾಶಳಾಗಿದ್ದಳು. ಅಲ್ಲಿ ಹಸೆಯ ಜಗುಲಿಯ ಬಳಿ ಓಡಾಡುತ್ತಿದ್ದವಳು ಅವನನ್ನು ಕಂಡೊಡನೆಯೆ ಸಂತೋಷದುದ್ವೇಗದಿಂದ ಉಬ್ಬಿ ಚಲಿಸಲಾರದೆ ಹಾಗೆ ನಿಂತುಬಿಟ್ಟಳು.

ಶೇಷಗಿರಿ ಅವಳನ್ನು ಎವೆಯಿಕ್ಕದೆ ನೋಡುತ್ತಿದ್ದಾನೆ. ಅದೇ ಗಾಂಭೀರ್ಯಮೂರ್ತಿ, ಕಿಶೋರಿ. ಆದರೆ ಒಂದು ವರ್ಷಕ್ಕಾಗಲೇ ಎಷ್ಟು ಬೆಳೆದಿದ್ದಾಳೆ! ಇಲ್ಲಿ ಅವಳನ್ನು ವರ್ಣಿಸಬೇಕು. ಆದರೆ ನಾನು 'ಶ್ರೀನಿವಾಸ'ನೆ ಅಥವ 'ಶ್ರೀಪತಿ'ಯೇ! ಕುದುರೆಯನ್ನು ವರ್ಣಿಸುವುದಕ್ಕೆ ಹೋಗಿ ಅದು ಕತ್ತೆಯಾಗಿ ಬಿಡಬಹುದು. ಆದರೂ ನೀವೂ ಕುದುರೆಯೆಂದೇ ತಿಳಿಯುತ್ತೇವೆ ವರ್ಣನೆಯ ಜೊತೆಗೆ ನಿಮ್ಮ ಭಾವನೆಯನ್ನೂ ಕಲ್ಪಿಸಿಕೊಳ್ಳುತ್ತೇವೆ ಎನ್ನುವ ಹಾಗಿದ್ದರೆ ವರ್ಣಿಸುತ್ತೇನೆ.

ಅವಳದು ಅಗಲವಾದ ಗುಂಡು ಮುಖ. ತುಂಬಿದ ಕಣ್ಣುಗಳು. ಆ ಕಣ್ಣುಗಳು ಅವನನ್ನಾಗಲೇ ಸೆಳೆದಿವೆ. ತಿದ್ದಿದ

ಹುಬ್ಬು. ಚಂಪಕದಂತಿರುವ ಎಳಸಾದ ನಾಸಿಕ. ಅದರಲ್ಲಿ ನಿಂತಿರುವ ಮಂಜಿನ ಹನಿ, ಬಿಳಿಯ ನತ್ತು. ತನ್ನ ಮದುವೆಯಲ್ಲಿ ತನ್ನೊಡನೆ ಅವಳನ್ನು ಕೂಡಿಸಿ, ಆರತಿ ಅಕ್ಷತೆ ಮಾಡಿ ಆ ಸೊಂಪಾದ ಮೂಗನ್ನು ಮುಳ್ಳಿನಿಂದ ಚುಚ್ಚಿದರು. ಆಗ ಆ ನೋವನ್ನು ಸಹಿಸಲಾರದೇ ಇದ್ದ ಅವಳ ಮುಖವನ್ನು ಕಂಡು "ಅಯ್ಯೋ ದೇವರೆ ಯಾತಕ್ಕೆ ಅವಳಿಗೆ ಆ ಹಿಂಸೆ ಕೊಡುವರಪ್ಪ" ಎಂದಿದ್ದ. ಈಗ ಅದರಲ್ಲಿ ಆ ಬಿಳಿಯ ನತ್ತು ರಾಜಿಸುತ್ತಿದೆ. ಅವನ ಮೆಚ್ಚುಗೆಗೇ ಪಾತ್ರವಾಗಿದೆ. ಸ್ವಲ್ಪ ಅಗಲವಾದ ಬಾಯವಳದು. ತುಟಿಗಳೂ ದಪ್ಪ; ತೊಂಡೆಯ ಹಣ್ಣನ್ನು ಹಾಗೆ ತಂದಿಟ್ಟಂತಿದೆ. ಅದನ್ನು ಅಣಕಿಸುವ ಗಲ್ಲ. ಅವಳ ಹಣೆಯು ಅಷ್ಟು ದೊಡ್ಡದೂ ಅಲ್ಲ; ಅಷ್ಟು ಸಣ್ಣದೂ ಅಲ್ಲ. ಸಮವಾದ ಹಣೆ. ಅದರಲ್ಲಿ ಕಂಗೊಳಿಸುತ್ತಿರುವ ಪುಟ್ಟದಾಗಿ ತಿದ್ದಿಟ್ಟ ಕುಂಕುಮದ ಬೊಟ್ಟು. ಹಣೆಯ ಮೇಲೆ ಆ ಅಲಕಾವಳಿಗಳೋ; ಹಿಂದುಗಡೆ ಆ ಭಾರವಾದ ಹೆರಳೋ! ಆಗ ತಾನೆ ಬಾಚಿಕೊಂಡು ಜಡೆಯನ್ನು ಹಾಕಿಕೊಂಡಿದ್ದಳು. ಅದು ಕೃಷ್ಣಸರ್ಪವನ್ನು ಅಣಕಿಸುತ್ತ ಅವಳ ತೊಡೆಯವರಿಗೂ ನಲಿದಾಡುತ್ತಿದೆ. ಅವಳ ಅಂದವನ್ನು ಇಮ್ಮಡಿಗೊಳಿಸುತ್ತಿದೆ.

ತಾನಿಟ್ಟ ವಜ್ರದ ಓಲೆಗಳು ಅವಳ ಕಿವಿಯಲ್ಲಿವೆ. ತಾನು ತಂದ ಪಟ್ಟೆಯಂಚಿನ ಸೀರೆಯನ್ನೇ ಉಟ್ಟದ್ದಾಳೆ. ಅವನವಳ ಕಡದಿಂದ ನಖದವರಿಗೂ ನೋಡಿದ. ತನ್ನವಳು. ತಾನು ಮಾಡಿಸಿದ ಒಡವೆಗಳು. ಕಾಲಿನ ಗೊಲಸು ಮೊದಲುಗೊಂಡು ಹಾಗೆಯೇ ನೋಡಿಕೊಂಡು ಬಂದ. ಅವಳ ಸೊಂಟದಲ್ಲಿ ಬಂಗಾರದ ಡಾಬು! ಹೊಸದೆಂದು ಅದರ ಮೆರಗು ಸಾರುತಿದೆ. ಅವಳ ಡಾಬನ್ನು ಅಡವಿಟ್ಟದ್ದಾಗಿದೆ ಇದು ಎಲ್ಲಿಂದ ಬಂತು. ಇತರರದೇ? ಛೆ! ಇತರರದನ್ನು ಇಟ್ಟುಕೊಂಡಾಳೇ ಒಡವೆಯ ಪ್ರಿಯಳಲ್ಲ. ಅಣ್ಣನ ಮದುವೆ; ಅಪ್ಪನು ಮಾಡಿಸಿರಬಹುದು ಎಂದುಕೊಂಡ.

"ಹಾಗಾದರೆ ತಾನು ಅಡವಿಟ್ಟಿರುವುದು ಅವರ ಕಿವಿಗೂ ಮುಟ್ಟಿತೇ. ಇಲ್ಲದಿದ್ದರೆ ಅವಳಿಗೆ ಹೊಸದೊಂದನ್ನು ಹೇಗೆ ಮಾಡಿಸುವರು? ನಾನವಳನ್ನು "ನಿನ್ನ ಡಾಬೆಲ್ಲೆಂದು ನಿನ್ನ ತಾಯ್ತಂದೆಗಳು ಕೇಳಿದರೆ ಏನು ಹೇಳುತ್ತಿ" ಎನ್ನಲು ಅದರ ಬೆಸುಗೆ ಬಿಟ್ಟು ಹೋಯ್ತು. ಸರಿಮಾಡಿಸಲು ತೆಗೆದುಕೊಟ್ಟೆ ಎನ್ನುವುದಾಗಿ ಹೇಳುವೆನೆಂದಿದ್ದಳು. ಆದುದರಿಂದಲೇ ಆದಷ್ಟು ಜಾಗ್ರತೆ ಅದನ್ನವರಿಗೆ ಬಿಡಿಸಿಕೊಡಬೇಕೆಂದು ಹಣವನ್ನು ಶೇಖರಿಸುತ್ತಿದ್ದನು. ಹಾಗೆ ಶೇಖರಿಸಿದ ಹಣ ಭಾವಮೈದುನನ ಮದುವೆಯ ಖರ್ಚಿಗೆ ಆಗಿಹೋಯ್ತು. ವಧೂ–ವರರಿಗೆ ಉಡುಗರೆ ಬೊಂಬಾಯಿಯಿಂದ ಬರಬೇಕಾದರೆ ಅಲ್ಲಿನ ಹೆಚ್ಚುಗೆ ಪದಾರ್ಥಗಳನಿಲ್ಲಿಯವರಿಗೆ ತಂದುಕೊಡಬೇಕಾದುದು ಬೇರೆ. ಇದರ ಮೇಲೆ ಹೋಗುತಾ ಬರುತಾ ರೈಲು ಚಾರ್ಜು. ಹಣ ಉಳಿಯುವದೆಲ್ಲಿ?

ಇವರೇ ಅದನ್ನು ಬಿಡಿಸಿಕೊಂಡಿರುವರೇನು! ಅಲ್ಲ, ಇದು ಹೊಸ ಡಾಬು. ತಾನು ಮಾಡಿಸಿದ್ದಲ್ಲ. ಅದಿನ್ನೂ ಅಗಲವಾಗಿದ್ದಿತು. ಇದೇ ಅವನಿಗಾಗ ದೊಡ್ಡ ಸಮಸ್ಯೆಯಾಗಿ ಕುಳಿತಿತ್ತು. ಇನ್ನೊಂದು ಸಲ ಅದು ಯಾವುದು ನೋಡೋಣವೆಂದು ಕಣ್ಣೆತ್ತಿದನು. ಅಲ್ಲಿಂದವಳಾಗಲೇ ತನ್ನ ಅಚಾತುರ್ಯವನ್ನರಿತು ನಾಚಿಕೆಗೊಂಡು ಇತರರು ನೋಡಿದರೆ ಏನೆಂದುಕೊಂಡಾರೋ ಎಂದು ತನ್ನ ಕೈಯಲ್ಲಿದ್ದ 'ಅವಲಕ್ಕಿಯ' ಮರವನ್ನಲ್ಲಿ ಇರಿಸಿ ಅಲ್ಲಿಂದೊಮ್ಮೆಯೇ ಚಿಮ್ಮಿದಳು.

ಇನ್ನು ಮಾಂಗಲ್ಯಧಾರಣೆಯಾಗಬೇಕು. ಮಾಂಗಲ್ಯದೊಂದಿಗೆ ಇತರ ಆಭರಣಗಳನ್ನೂ ಅಕ್ಕಿಯ ಮೇಲೆ ಬೆಳ್ಳಿಯ ತಟ್ಟೆಯಲ್ಲಿರಿಸಿ ಗುರುಹಿರಿಯರೆಲ್ಲರಿಂದಲೂ ಮುಟ್ಟಿಸಿ ತರುವಾಯ ಸಭೆಯವರ ಅಪ್ಪಣೆ ಪಡೆದು ಅನಂತರ ಮಾಂಗಲ್ಯ ಪೂಜೆ. ಆ ಮೇಲೆ ಧಾರಣೆ. ಪುರೋಹಿತರು "ಮಾಂಗಲ್ಯವಜ್ರಸಮಿತಂ" ಎಂದು ಮಂತ್ರವನ್ನುಚ್ಚರಿಸುತ್ತಾ ಶೇಷಗಿರಿಯ ಬಳಿಗೆ ತಂದು "ಅಳಿಯದೇವರೇ ಅಪ್ಪಣೆಯೇ" ಎಂದರು. ಇವನು ಆ ಸಮಸ್ಯೆಯನ್ನು ಭೇದಿಸುವುದರಲ್ಲಿ ನಿರತನಾಗಿದ್ದ — ಎಚ್ಚತ್ತನು. ತಟ್ಟೆಯನ್ನು ಮುಟ್ಟಿದನು. ಅಲ್ಲಿರಿಸಿದ್ದ ಒಡವೆಗಳನ್ನೆಲ್ಲಾ ನೋಡತೊಡಗಿದನು. ಬಂಗಾರದ ಡಾಬನ್ನವರೂ ಮಾಡಿಸಿದ್ದಾರೆ!

ಹೆಂಗಸರ ಕಡೆಗೆ ಹಾಗೆಯೆ ಕಣ್ಣು ಹೋಯಿತು. ಇವನ ಹೆಂಡತಿ ಹೆಂಗಸರ ಗುಂಪಿನಲ್ಲಿ ಕುಳಿತಿದ್ದವಳು ಕ್ಷಣಕಾಲ ಎದ್ದು ನಿಂತು ಹಾಗೆಯೇ ಕುಳಿತಳು. ಅವಳ ಸೊಂಟದಲ್ಲಿ ಡಾಬಿರಲಿಲ್ಲ. ಸಮಸ್ಯೆಯು ಈಗ ಬಗೆ ಹರಿಯಿತು. ತನ್ನ ಅತ್ತಿಗೆಯ ಡಾಬನ್ನು ತಾನಿಟ್ಟುಕೊಂಡಿದ್ದಳು.

ಶೇಷಗಿರಿಯ ಹೃದಯವು ಕುದಿಯಲಾರಂಭಿಸಿತು. ಆಗ ಒಂದೇ ಮನಸ್ಸಿನಿಂದ ಆಭರಣವನ್ನು ಕಳಚಿಕೊಟ್ಟಿದ್ದೇನು; ಈಗ ತನ್ನನ್ನು ಅಣಕಿಸುವುದೇನು? ಎಷ್ಟಾದರೂ ಹೆಣ್ಣು

ಜನ್ಮ ಎಂದುಕೊಂಡನು. "ತನ್ನ ಹೆಂಡತಿಯೋರ್ವಳೇ ಸಿಕ್ಕಿದಾಗ ಮಾತನಾಡಿಸಬೇಕು, ಅವಳಿಗೆ ತಾನು ಬೊಂಬಾಯಿಯಲ್ಲಿ ನೋಡಿದ್ದನೆಲ್ಲಾ ವರ್ಣಿಸಬೇಕು. 'ನೀವು ನೋಡಿದರೆಲ್ಲಾ ಅದೇ ಸಾಕು' ಎಂದವಳೇದರೆ 'ಹಾಗಾದರೆ ನಾನು ಊಟಮಾಡಿದರೆ ಅದೇ ಸಾಕು ಎಂದು ನೀನು ಸುಮ್ಮನೆಯಿರುತ್ತಿಯೇನು' ಎಂದಣಕಿಸಿ 'ಇಂದು ನಿನ್ನ ಹಣದಿಂದ ನಾನು ಅವನ್ನು ಹೋಗಿ ನೋಡಿದೆ. ಮುಂದೆ ನನ್ನ ಹಣದಿಂದ ನಾವಿಬ್ಬರೂ ಹೋಗಿ ನೋಡೋಣ. ನೀನು ನೋಡಬೇಕಾದ್ದು ಇದು ಇದೆ; ಅದು ಇದೆ' ಎಂದವನ್ನೆಲ್ಲಾ ಅವಳೆದುರಿಗೆ ಚಿತ್ರಿಸಬೇಕು" ಎಂಬುದಾಗಿ ಉತ್ಸಾಹದಿಂದ ಬಂದವನಿಗೆ ನಲಿದಾಡುತ ಇಳೆಗೆ ಬೆಳದಿಂಗಳನ್ನು ಬೀರಲೆತ್ನಿಸಿದ್ದ ಚಂದಿರನ ಮುಂದೆ ಮುಗಿಲೊಂದು ಮುಸುಕಿದಂತಾಯ್ತು. ರೈಲಿನಲ್ಲಿ ಕಂಡ ಸವಿಗನಸುಗಳೆಲ್ಲವೂ ಸರಿದು ಹೋದವು. 'ಮನದೊಳೆ ಮಂಡಿಗೆಯನುಂಡಂತಾಯಿತು.'

ಲಗ್ನವು ಮುಗಿದ ಮೇಲೆ ರಜವಿಲ್ಲವೆಂದು ಹೇಳಿ ಅಲ್ಲಿಂದಾಗಲೇ ಹೊರಟುಬಿಡಬೇಕೆಂದು ಮಾಡಿಕೊಂಡನು. ಯೋಚಿಸುತ್ತಾ ಕುಳಿತ ಹಾಗೆಲ್ಲಾ ಅವಳದು ಅವನಿಗೆ ದೊಡ್ಡದೊಂದು ಅಪರಾಧವಾಗಿ ಭಾಸವಾಗತೊಡಗಿತು.

ಆಕೆ ಮಾಡಿದ್ದೇನು ಅಂಥ ಅಪರಾಧ. ತನ್ನ ಅತ್ತಿಗೆಯ ಡಾಬನ್ನು ತಾನಿಟ್ಟುಕೊಂಡಿದ್ದು ತಪ್ಪೇ. ಏನೋ ಚಪಲ ಹೆಂಗಸಿಂದ ಮೇಲೆ ಒಡವೆಯ ಮೇಲೆ ಆಶೆಯಿಲ್ಲದೇ ಇರುತ್ತೆಯೇ. ಅದೂ ಅಲ್ಲದೆ ಮದುವೆ ಮೊದಲಾದ ಮುಹೂರ್ತ ದಿನಗಳಲ್ಲಿ ಅಲ್ಲದೆ ಮತ್ತೆ ಯಾವಾಗ ಒಡವೆಗಳನ್ನು ಇಟ್ಟುಕೊಳ್ಳಬೇಕು.

ಆಗ ಎದ್ದು ನಿಂತಿದ್ದು ಅಪರಾಧವೇನು. ಅಯ್ಯೋ ಪಾಪ! ಅವಳು ತನ್ನ ಗಂಡನು ತನ್ನ ಸೊಂಟದಲ್ಲಿ ಇಲ್ಲದೇ ಇರುವುದನ್ನು ನೋಡಲಿ ಎಂದು ಎದ್ದು ನಿಂತಳೇ. ಯಾತಕ್ಕೋ ನಿಂತಳು. ಒಂದುವೇಳೆ ಹಾಗೆ ನಿಂತಿದ್ದರೆ ತಾನೆ ಏನು ಕೆಟ್ಟು ಹೋಗಿದ್ದು?

\+ \+ \+ \+ \+ \+

ಸಾಯಂಕಾಲ ಎಲ್ಲರಿಗೂ ಬಿಡುವಾಗಿದ್ದಿತು. ಮದುವೆ ದಿನ ದೀಪ ಹಚ್ಚಬೇಕಲ್ಲ ಊಟಕ್ಕೆ! ಅಲ್ಲಿ ಹೆಂಗಸರೆಲ್ಲ ಒಟ್ಟುಗೂಡಿ ಮಾತು ಕತೆ ಜರಗಿಸುತ್ತಿದ್ದರು. ಮದುವೆ ಮನೆಗಳಲ್ಲಿ ಅವರ ಮಾತುಕತೆಗಳು ಏನೆಂಬುದು ಗೊತ್ತೇ ಇದೆಯಲ್ಲ. ಯಾರಿಗೆ ಯಾವ ಒಡವೆ ಇಟ್ಟಿದಾರೆ. ಎಂಥ ಸೀರೆ ತಂದಿದ್ದಾರೆ ಎಂಬುದು ತಾನೆ. ಹುಡುಗಿಯರಿಗಾದರೋ ಗುಬ್ಬಿ ಹೊಡಿಸುವದು, ಈ ಗದ್ದಲ ಇರುತ್ತೆ. ಶೇಷಗಿರಿ ಹೆಂಡತಿಗೆ ಯಾವಾಗ ಉರುಟಣೆಗೆ ಕೂಡಿಸಿ ಅತ್ತಿಗೆಯು ಕೈಯಲ್ಲಿ ಅಣ್ಣನ ಹೆಸರನ್ನು ಹೇಳಿಸಲಿ ಎಂಬ ಉತ್ಸಾಹ. 'ಅವಪಾಸನೇ'ನ ಮಾಡಿಸುತ್ತಿದ್ದ ಪುರೋಹಿತರನ್ನು ಅವಸರಿಸಲು ಈ ಕಡೆ ಬಂದಳು. ಅಲ್ಲಿ ಒಬ್ಬರು ಅವಳನ್ನು ಕುರಿತು:—

"ಏನೇ ನಿನಗೆ ಏನೇನು ಒಡವೆ ಮಾಡಿಸಿದ್ದಾರೆಯೆ" ಎಂದು ಕೇಳಿದರು. ಅವಳಿಗೆ ಅಲ್ಲಿ ನಿಂತು ಉತ್ತರ ಕೊಡಲು ಬಿಡುವಿಲ್ಲ.

"ನಿಲ್ಲೇ ಇಲ್ಲಿ. ಅಣ್ಣನ ಮದುವೆ ಅಂತ ಏನು ಜಂಬಪ್ಪೋ! ಏನೇನು ಮಾಡಿಸಿದ್ದಾರೆ ಹೇಳಬಾರದೇ?"

"ಇಗೋ ನಾನಿಟ್ಟು ಕೊಂಡಿರುವುದೆಲ್ಲಾ ಅವರು ಮಾಡಿಸಿದ್ದೇ"

ಸೊಂಟದಲ್ಲಿ ಡಾಬಿಲ್ಲದೇ ಇರಲು 'ಬಂಗಾರದ ಡಾಬನ್ನು ಮಾಡಿಸಿಲ್ಲವೇನೇ' ಎಂದು ಕೇಳಿದರು.

"ಅದನ್ನೂ ಮಾಡಿಸಿದ್ದಾರೆ"

"ಯಾಕೆ ಇಟ್ಟುಕೊಂಡಿಲ್ಲ ಹಾಗಾದರೆ?"

"ಕೆಟ್ಟುಹೋಗಿತ್ತು; ಸರಿಮಾಡಿಸೋದಕ್ಕೆ ಕೊಟ್ಟದಾರೆ"

"ಕೆಟ್ಟು ಹೋಗೋದು ಎಂದರೇನೆ! ಮಾಡಿಸಿದ್ದಾರೆಯೋ ಇಲ್ಲವೇ?"

"ಸತ್ಯವಾಗಿಯೂ ಮಾಡಿಸಿದ್ದಾರೆ. ಸುಳ್ಳು ಯಾಕೆ ಹೇಳಬೇಕು?" ಎಂದು ಹೇಳಿ ಹೊರಟು ಹೋದಳು.

ಈ ಮಾತುಗಳು ಹತ್ತಿರದಲ್ಲಿದ್ದ ಶೇಷಗಿರಿಯ ಕಿವಿಗೆ ಬಿದ್ದವು. ಬೆಂದ ಮನಸ್ಸಿಗೆ ನೀರೆರೆದಂತಾಯ್ತು. ಒಡನೆಯೇ ಹೊರಡಬೇಕೆಂದಿದ್ದ ಸಂಕಲ್ಪವನ್ನು ಬಿಟ್ಟು ಬಿಟ್ಟನು.

ಆದರೆ ಮೂರನೆಯ ದಿನವೇ ಅವನು ಹೊರಟು ಬಿಡಲು ಮತ್ತೊಂದು ಪ್ರಸಂಗ ಒದಗಿತು. ಮರುದಿನ ಬೆಳಿಗ್ಗೆ ಬಿಡಿದಿಯ ಮನೆಯಲ್ಲಿ ಇವನ ಅತ್ತೆ ಮತ್ತು ಇವನ ತಾಯಿಯವರು ಮಾತನಾಡುತ್ತಿದ್ದುದು ಕೇಳಿಸಿತು. ಇವರ ತಾಯಿಯು ಮಾತು ಯಾವಾಗಲೂ ಜೋರು. ಇವನ ಅತ್ತೆಯವರೋ ಇವನ ಹೆಂಡತಿಯ ಹಾಗೆ ಸೌಮ್ಯ ಮೂರ್ತಿಗಳು, ಒಂದು ಮಾತನ್ನು ಆಡುವವರಲ್ಲ. ಅಂಥವರು ಬೀಗಿತ್ತಿಯೊಂದಿಗೆ "ಡಾಬನ್ನು ತಂದಿದ್ದರೆ ಚೆನ್ನಾಗಿತ್ತು. ಹುಡುಗರು ಈಗಲ್ಲದೇ ಮತ್ತೆ ಯಾವಾಗ ಇಟ್ಟು ಕೊಳ್ಳಬೇಕು. ದೊಡ್ಡವರಾದಮೇಲೆ ಇವೆಲ್ಲಾ ಯಾರಿಗೆ ಬೇಕಾಗುತ್ತೆ" ಎಂದು ಹೇಳುತ್ತಿದ್ದರು.

ಇವನು ಇವರ ಮಾತನ್ನು ಆಲಿಸಿದ. ಇನ್ನು ಅಲ್ಲಿ ಇರಲು ಸಂಬೀಳಲಿಲ್ಲ, ಇಲ್ಲದ ನೆವ ಹೇಳಿ ಆದಿನ ಮಧ್ಯಾಹ್ನವೇ ಬೊಂಬಾಯಿಗೆ ಹೊರಟು ಬಿಟ್ಟ.

ಸಾಧ್ಯವಾದರೆ ತಾನಾದರೂ ಇರುವಂತೆ ಹೇಳೋಣವೆಂದು ಇವನ ಹೆಂಡತಿ ಹೊಂಚು ಹಾಕಿಕೊಂಡಿದ್ದು ಹೇಳಲು ಹೋದರೆ ಅವಳನ್ನೂ ದೃಷ್ಟಿಸದೇ ಹೊರಟು ಹೋದನು.

೪

ಬೊಂಬಾಯನ್ನು ಮುಟ್ಟಿದ್ದೂ ಆಯಿತು. ಕೆಲಸದಮೇಲೆ ಹಾಜರಾದದ್ದೂ ಆಯಿತು. ಹಿಂದೆ ಪ್ರತಿವಾರವೂ ತಪ್ಪದೆ ಭಾವಮೈದುನನಿಗೆ ಕಾಗದಬರೆಯುತ್ತಿದ್ದ. ಹೆಂಡತಿಗೆ ಬರೆಯುವ ಪದ್ಧತಿಯಿನ್ನೂ ಅವನಿಗಿರಲಿಲ್ಲ. ಆದರೇನು ಹೆಸರಿಗೆ ಭಾವ ಮೈದುನನಿಗೆ ಬರೆಯುವುದು. ಅದರಲ್ಲಿ ಬರೆಯುತ್ತಿದ್ದುದ್ದೆಲ್ಲಾ ಅವನ ಹೆಂಡತಿಗೇ ಅನ್ವಯಿಸುತ್ತಿತ್ತು. ಕಾಗದ ಬಂದೊಡನೆಯೆ ಅಣ್ಣನು ಓದಲಿ ಓದದೇ ಹೋಗಲಿ ಅವಳು ತೆಗೆದು ತನ್ನ ಪೆಟ್ಟಿಗೆಯಲ್ಲಿಟ್ಟುಕೊಂಡು ಬಿಡುತ್ತಿದ್ದಳು. ಈಗ ಶೇಷಗಿರಿ ಕಾಗದ ಬರೆಯುವುದನ್ನು ನಿಲ್ಲಿಸಿದ. ಮಾತುಂಗವನ್ನು ಬಿಟ್ಟು ಬೊಂಬಾಯಿಯಲ್ಲೇ ಯಾವುದೋ ಒಂದು ಕೊಸೇ ಅಂತಸ್ಥಿನಲ್ಲಿ ಕಮ್ಮಿ ಬಾಡಿಗ್ಗೆ ಕೊಠಡಿಯೊಂದನ್ನು ತೆಗೆದುಕೊಂಡು ತಾನೇ ಅಡಿಗೆ ಮಾಡಿಕೊಳ್ಳಲಾರಂಭಿಸಿದ. ರೈಲಿಗೆ ಕೊಡುತ್ತಿದ್ದ ಹಣ, ಹೊಟೇಲಿಗೆ ತೆರುತ್ತಿದ್ದ ದುಡ್ಡು ಎಲ್ಲವನ್ನೂ ನಿಲ್ಲಿಸಿ ಕೂಡಿಡಲಾರಂಭಿಸಿದ. ಮೊದಲು ಡಾಬನ್ನು ಅಡವಿನಿಂದ ಬಿಡಿಸಿಕೊಂಡು ಬಿಡಬೇಕು. ತನ್ನ ಹೆಂಡತಿಗೆ ಕೊಟ್ಟು ಬಿಡಬೇಕು....

ಇದು ಎಲ್. ಎಲ್. ಬಿಗೆ ಎರಡನೆಯ ವರ್ಷ. ಚೆನ್ನಾಗಿ ಬೇರೆ ಓದಬೇಕು....

ಪರೀಕ್ಷೆ ಹತ್ತಿರಕ್ಕೆ ಬಂತು. ಸರಿಯಾದ ಹೊತ್ತಿಗೆ ತಿಂಡಿ ತೀರ್ಥವಿಲ್ಲ. ಮಾಡಿಕೊಂಡರೆ ಮಾಡಿಕೊಂಡ. ಇಲ್ಲದಿದ್ದರೆ ಉಪವಾಸ. ಹಗಲು ದುಡಿಯಬೇಕು. ರಾತ್ರಿಯೆಲ್ಲಾ ಪಾಠಗಳನ್ನು ಉರು ಹಚ್ಚಬೇಕು.

ಸದ್ಯಕ್ಕೆ ಪರೀಕ್ಷೆಯೂ ಹತ್ತಿರಕ್ಕೆ ಬಂತು. ಜಾಗ್ರತೆಯೂ ಮುಗಿದು ಹೋಯ್ತು. ಆ ಎಂಟು ದಿನಗಳೂ ನಿರಾಹಾರ. ಕೊನೆಯ ದಿವಸ ಅರ್ಧ ಬರೆದಿದ್ದಾನೆ. ಚೈತನ್ಯ ತಪ್ಪಿತು. ಪರೀಕ್ಷೆಯ ಮಂದಿರದಲ್ಲಿಯೇ ಕುರ್ಚಿಯಿಂದ ಕೆಳಕ್ಕೆ ಬಿದ್ದುಬಿಟ್ಟ.

ಇವನ ಸ್ನೇಹಿತರು ಇವನನ್ನು ಮನೆಗೆ ಕರೆದುಕೊಂಡು ಹೋದರು. ಊರಿಗೆ ಬರೆಯೋಣವೇ ಎನ್ನಲು "ಬೇಡಿ ಅಲ್ಲಿ ದಿಗಲು ಬಿದ್ದು ಬಿಡುತ್ತಾರೆ" ಎಂದು ಹೇಳಿದನು. ಔಷಧೋಪಚಾರಕ್ಕೆ ಅಲ್ಲಿಯೇ ಏರ್ಪಾಡು ಮಾಡಿದ್ದಾಯಿತು. ಅವನು ಕೂಡಿಸಿಟ್ಟಿದ್ದ ಹಣ ದಿನದಿನಕ್ಕೆ ಅದೃಶ್ಯವಾಗತೊಡಗಿತು. ಔಷಧಿಗೆ ದುಡ್ಡು, ವೈದ್ಯರಿಗೆ ದುಡ್ಡು, ಮಾತೆತ್ತಿದರೆ ದುಡ್ಡು. ಕೂಡಿಟ್ಟ ಹಣವೆಷ್ಟು ದಿನ ಸರಿದು ಬರುವುದು.

ಅಲ್ಲಿ ಇಂಜಿನಿಯರಾಗಿದ್ದ ರಾವಬಹದ್ದೂರು ರಾಮಸ್ವಾಮಿ ಅಯ್ಯನವರು ಇವನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಮೈಸೂರಿನವರು. ನಮ್ಮ ದೇಶದವರೆಂದರೆ ಪಂಚಪ್ರಾಣವವರಿಗೆ. ಹೊರಗಡೆಯಿರುವಾಗ ನಮ್ಮ ದೇಶದವನಾವನೇ ಆಗಲಿ ಅವನನ್ನು ಕಂಡಾಗ ನಮ್ಮ ಭ್ರಾತೃವನ್ನೇ ಕಂಡಂತೆ ಭಾವನೆಯುಂಟಾಗುತ್ತೆ.

ಇವನು ಆಗಾಗ "ಡಾಬನ್ನು ಬಿಡಿಸಿಕೊಳ್ಳಲು ಇಲ್ಲವೇ ! ಏನಾಯಿತೋ ಡಾಬು!" ಎಂದು ಮುಂತಾಗಿ ಮಾತನಾಡಿಕೊಳ್ಳುವನು. ಅವರು ಏನಾದರು ಕೇಳಿದರೆ "ಏನೂ ಇಲ್ಲ"ವೆಂದು ಬಿಡುವನು.

ಇವನ ಕಾಯಿಲೆಯ ವಿಚಾರ ಬೆಂಗಳೂರಿಗೂ ತಿಳಿದು ಬಂತು. ಪರೀಕ್ಷೆ ಮುಗಿದಮೇಲೆ ಹುಡುಗರು ತಮ್ಮ ತಾಯ್ತಂದೆಗಳನ್ನು ಬಿಟ್ಟು ಬೊಂಬಾಯಿಯಲ್ಲಿಯೇ ಯಾಕೆ ಇರುವರು? ಬಂದವರು ಇವನ ತಾಯಿಗೆ ತಿಳಿಸಿದರು. ಅಯ್ಯೋ! ಆಕೆಯ ಗೋಳನ್ನು ಹೇಳಲಾಗದು. "ಇದ್ದವನು ಒಬ್ಬ ಮಗ. ಅವನಿಗೂ ಈ ಗತಿ ಬಂತೇ! ಬೊಂಬಾಯಿಗೆ ಯಾತಕ್ಕೆ ಹೋದನೋ ! ಲಾಯರಾಗದಿದ್ದರೆ ಏನು ಕೆಲಸ ನಿಂತು ಹೋಗುತ್ತಿತ್ತು ! ಕಣ್ಣು ಮುಂದೆ ಎಲ್ಲಾದರೂ ಕೂಲಿಮಾಡಿಕೊಂಡಿದ್ದರೆ ಸಾಕಾಗಿತ್ತಲ್ಲ." ಎಂದು ಪೇಚಾಡ ತೊಡಗಿದಳು.

ಅಲ್ಲಿಗೆ ಅವಳೊಬ್ಬಳೇ ಹೋಗಿ ನೋಡಿಕೊಂಡು ಬರಲಾಗುತ್ತದೆಯೇ ? ಅವನನ್ನಲ್ಲಿಂದ ಕರೆದುಕೊಂಡು ಬರಲಾಗುತ್ತೆಯೇ ಅವಳ ಕೈಯಲ್ಲಿ ? ಹೆಣ್ಣು ಹೆಂಗಸು.

ತನ್ನ ಬೀಗರ ಮನೆಗೆ ಹೋದಳು. ಆ ದಿನ ಮದುವೆಯಲ್ಲಿ ಮಾತಿಗೆ ಮಾತು ಬೆಳೆದು ಜಗಳವಾಡಿಕೊಂಡು ಬಂದಿದ್ದಳು. ಅಂದಿನಿಂದ ಅವರ ಮನೆಗೇ ಹೋಗಿರಲಿಲ್ಲ. ಈ ದಿನ ಹೋದಾಗ ಮನೆಯಲ್ಲಿ ಗಂಡಸರಾರೂ ಇರಲಿಲ್ಲ. ಬೀಗಿತ್ತಿಯೂ ಎಲ್ಲಿಯೋ

ಹೊರಗೆ ಹೋಗಿದ್ದಳು. ಇವಳು ಈ ವಿಚಾರವನ್ನು ತನ್ನ ಸೊಸೆಗೆ ತಿಳಿಸಿ ಇಬ್ಬರೂ ಕಂಬನಿಗರೆದು ಕೊನೆಗೆ ಒಬ್ಬರ ನ್ನೊಬ್ಬರು ಸಮಾಧಾನಪಡಿಸಿಕೊಂಡು " ಹೇಗಾದರೂ ಮಾಡಿ ಅವನನ್ನಲ್ಲಿಂದ ಕರೆದುಕೊಂಡು ಬರುವಂತೆ ಮಾಡಮ್ಮಾ" ಎಂದು ಹೇಳಿ ಹೊರಟು ಬಂಪಳು.

ಸಾವಿತ್ರಮ್ಮ ತನ್ನ ಅಣ್ಣ ಯಾವಾಗ ಬರುವನೋ ಎಂದು ಎದುರು ನೋಡುತ್ತಿದ್ದಳು ಅವಳಿಗೆ ಆಗ ಪ್ರತಿಕ್ಷಣವೂ ಒಂದೊಂದು ಯುಗವಾಗಿ ಪರಿಣಮಿಸಿತ್ತು. ಅವಳಣ್ಣ ಬಂದೊ ಡನೆಯೇ ಈ ಸಂಗತಿಯನ್ನರುಹಿ ಒಡನೆಯೇ ಕರೆದುಕೊಂಡು ಬರುವಂತೆ ಕೇಳಿಕೊಂಡಳು. ಭಾವ ಮಾವಂದಿರಿಗೆ ಎದೆ ಡಸ್ ಎಂದಿತು. ಒಡನೆಯೆ ಬೊಂಬಾಯಿಗೆ ತೆರಳಿ ಅವನನ್ನು ಹುಡಿಕಿ ಕರೆತಂದು ತಮ್ಮ ಮನೆಯಲ್ಲಿಯೇ ಉಪಚರಿಸ ತೊಡಗಿದರು.

ಕರೆತಂದ ದಿನ ಸಾಯಂಕಾಲ ಇವನ ಕೊಠಡಿಯಲ್ಲಿ ಇವನ ತಾಯಿ, ಅತ್ತೆ ಭಾವಮೈದುನರೆಲ್ಲಾ ಇದ್ದರು. ಶೇಷಗಿರಿ ಮಂಚದ ಮೇಲೆ ಮಲಗಿದ್ದಾನೆ, ಚೆನ್ನಾಗಿ ಹೊದ್ದಿಸಿದ್ದಾರೆ. ಔಷದಿ ಶೀಷೆಗಳೋ ಆಗಲೇ ಕೊಠಡಿ ತುಂಬಿಹೋಗಿದೆ. ಅಳಿಯನಿಗೆ ಶುಶ್ರೂಷೆ. ಸಾವಿತ್ರಮ್ಮ ತಲೆಯನ್ನು ತಗ್ಗಿಸಿಕೊಂಡು ಬಾಗಿ ಲನ್ನು ಒರಗಿಕೊಂಡು ನಿಂತಿದ್ದಾಳೆ.

ಅವನು ಸುತ್ತಲೂ ನೋಡಿದ. ಅವನ ದೃಷ್ಟಿ ಹಾಗೇ ಬಾಗಿಲ ಬಳಿ ನಿಂತಿದ್ದ ತನ್ನ ಹೆಂಡತಿಯ ಕಡೆಗೆ ಹೋಯಿತು. ಅದ ನ್ನರಿತು ಕೊಠಡಿಯಲ್ಲಿದ್ದವರೆಲ್ಲರೂ ಎದ್ದು ಒಳಕ್ಕೆ ಹೊರಟು ಹೋದರು. ಅವನ ಹೆಂಡತಿ ಮೆಲ್ಲನೆ ಸರಿದು ಹಾಸಿಗೆಯ ಬಳಿ ಬಂದು ನಿಂತಳು. ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿದ. ಮಂಚ ದಮೇಲೆ ಕುಳಿತುಕೊಂಡಳು. ಇಬ್ಬರೂ ಮಾತನಾಡಲೆತ್ನಿಸಿದರು. ತುಟಿಗಳು ಕೂಡ ಅಲುಗಲಿಲ್ಲ. ಇವನು ಮೆಲ್ಲಗೆ ತನ್ನ ಕೈಯನ್ನು ತೆಗೆದು ಅವಳ ಬೆನ್ನಮೇಲೆ ಸವರಿದ. ಅವಳು ಮತ್ತಷ್ಟು ಮುಂದ ಕ್ಕೆ ಬಂದು ಕುಳಿತಳು. ಅವಳ ತಲೆಯನ್ನು ಸವರುತ್ತಾ ಮುಂಗೂ ದಲುಗಳನ್ನು ತಿದ್ದಿದ. ಅವಳಿಗೆ ಹಿಡಿಸಲಾರದಷ್ಟು ದುಃಖ ಬಂದು ಬಿಟ್ಟಿತು.

ಇಬ್ಬರೂ ಕಾಲುಗಂಟೆ ಹಾಗೇ ಕುಳಿತಿದ್ದರು. ಕೊನೆಗೆ ದುಃಖ ವನ್ನು ನುಂಗಿಕೊಳ್ಳುತ್ತಾ " ನನ್ನ ದುರದೃಷ್ಟ ಇದು. ನಾನೇ ಇದಕ್ಕೆಲ್ಲಾ ಕಾರಣಳಾದೆ " ಎಂದಳು.

ಅವನೊಂದುತ್ತರವನ್ನೂ ಕೊಡಲಿಲ್ಲ.

" ನಾನು ನಿಮ್ಮನ್ನು ಬೊಂಬಾಯಿಗೆ ಹೋಗಿ ಎಂದು ಒತ್ತಾಯಪಡಿಸಿದ್ದಕ್ಕೆ ಇಷ್ಟು ಅನಾಹುತ ಆಗಿದ್ದು "

" ಇಷ್ಟು ಅನಾಹುತಕ್ಕೆ ಕಾರಣ ನೀನಲ್ಲ. ಆ ಬಂಗಾರದ ಡಾಬು. ಕೊನೆಗೂ ಆ ಡಾಬನ್ನು ಬಿಡಿಸಿ ನಿನಗೆ ಕೊಡಲಿಲ್ಲ" ಎಂದು ಕಣ್ಣಲ್ಲಿ ನೀರು ತಂದನು.

"ಅಳಬೇಡಿ ನಿಮ್ಮ ಕಣ್ಣಲ್ಲಿ ಒಂದುಹನಿ ಕಂಡೆನೆಂದರೆ ನನ್ನ ಹೃದಯ ತಲ್ಲಣಿಸಿ ಹೋಗುತ್ತೆ. ಆ ಡಾಬು ಯಾರಿಗೆ ಬೇಕು; ನಾನು ಅಪೇಕ್ಷಿಸಿದೆನೇ? " ಎಂದಳು

ಶೇಷಗಿರಿ ತನ್ನ ಹೊಟ್ಟೆಯಲ್ಲಿದ್ದುದನೆಲ್ಲಾ ಹೇಳಿಬಿಟ್ಟ. ತನ್ನದು ತಪ್ಪು ತಿಳುವಳಿಕೆಯೆಂದು ಈಗರಿತುಕೊಂಡ. ಇಬ್ಬರೂ ಏನೋ ಮಾಡುವುದಕ್ಕೆ ಹೋಗಿ ಏನೋ ಆಗಿಹೋಯ್ತು ಎಂದುಕೊಂಡರು. ಬಹಳವಾಗಿ ಅತ್ತರು. ಸಂಸಾರದಲ್ಲಿ ಒಡಕು ಗಳು ಬರುವುದು, ಗಂಡ ಹೆಂಡಿರಲ್ಲಿ ಅವಿಶ್ವಾಸ ಹುಟ್ಟುವುದು ಎಲ್ಲಾ ಇಂಥ ಸಣ್ಣ ವಿಷಯಗಳಿಂದ. ತಪ್ಪು ತಿಳುವಳಿಕೆಗಳಿಂದ. ಅದನ್ನು ಸರಿಪಡಿಸಿಕೊಳ್ಳಲು ಇಬ್ಬರಿಗೂ ಆಗ ಅವಕಾಶ ದೊರೆ ಯುವುದಿಲ್ಲ. ದೊರೆತರೂ ತೋರುವುದಿಲ್ಲ. ಅದು ಒಂದಕ್ಕೊಂದು ಬೆಳೆದು ಬಂದು ಇಬ್ಬರ ನಡುವೆ ದೊಡ್ಡ ಬೆಟ್ಟವಾಗಿ ಕುಳಿತು ಕೊಳ್ಳುತ್ತದೆ. ಇಬ್ಬರನ್ನೂ ಪ್ರತ್ಯೇಕಿಸುತ್ತದೆ. ಪುನಸ್ಸಮಾಗಮ ಹೊಂದಬೇಕಾದರೆ ಈತನಾದರೂ ಬಳಸಿ ಆ ಕಡೆಗೆ ಹೋಗ ಬೇಕು. ಇಲ್ಲದಿದ್ದರೆ ಆಕೆಯಾದರೂ ಬಳಸಿ ಈ ಕಡೆಗೆ ಬರ ಬೇಕು. ಬೆಟ್ಟವನ್ನು ಕರಗಿಸಿ ಈರ್ವರೂ ಸೇರುವುದು ಅಪರೂಪ.

ಆಗ ಇಬ್ಬರೂ ಬಹಳ ಅತ್ತರು. "ಆಗಿದ್ದು ಆಗಿ ಹೋಯ್ತು ಯಾತಕ್ಕೆ ನೀನು ಅಳೋದು " ಎಂದು ಶೇಷಗಿರಿ ಹೇಳಿದನು. ತಾನೂ ಅತ್ತಿದ್ದು ತನಗೆ ಪ್ರಜ್ಞೆಯಿಲ್ಲ. ಇವಳು ಅವನ ಕಣ್ಣನ್ನು ಒರಸಿ "ದೇವರೇ ಜಾಗ್ರತೆ ವಾಸಿಮಾಡಪ್ಪ ಇವರೇ ನನಗೆ ಎಲ್ಲಾ ಭಾಗ್ಯ " ಎಂದು ಪ್ರಾರ್ಥಿಸಿದಳು.

## ಪರಿಶಿಷ್ಟ

ಲಾಯರಾಗಿ ಪ್ರಬುದ್ಧಮಾನಕ್ಕೆ ಬರಬೇಕಾದರೆ ಅವರಲ್ಲಿ ಮುಖ್ಯವಾಗಿ ಶ್ರದ್ಧೆ ಮತ್ತು ಘನತೆ ಇರಬೇಕು. ಪರರ ಒಡವೆ ನಮಗೆ ದಕ್ಕಬೇಕಾದರೆ ನಾವು ಶ್ರದ್ಧೆಯಿಂದ ಅವರ ಕೆಲಸವನ್ನು ಮಾಡಿದರಲ್ಲವೇ. ಈಗ ಲಾಯರುಗಳಾಗಿ ಮೂರು ಕಾಸೂ ಹುಟ್ಟದೆ ಬೋರ್ಡುಗಳನ್ನು ಎತ್ತುತ್ತಿರುವುದು ಇದಕ್ಕೆ. ಇವರಿಗೆ ಕ್ಲಬ್ಬುಗಳು ಬೇಕು; ಕ್ಯಾಂಪುಗಳು ಬೇಕು. ಸ್ನೇಹ

ತರು ಬಂದೊಡನೆಯೇ ಕೆಲಸವನ್ನೇ ಬಿಟ್ಟುಬಿಡುತ್ತಾರೆ. ಕಾಲ ವೆಲ್ಲಾ ಕಾಡುಹರಟೆಯಲ್ಲಿ ಕಳೆದುಹೋಗುತ್ತೆ. ಕೇಳಿದರೆ "ಲಾಯರುಗಳೆಂದರೇನು. ನಾವು ಸ್ವಾತಂತ್ರ್ಯ ಪ್ರಿಯರು. ರಾಜಕೀಯ ವಿಚಾರ ನಮ್ಮದು. ದೇಶೋದ್ಧಾರಕರು ನಾವು." ಎಂದು ಕೊಚ್ಚಿಕೊಳ್ಳುತ್ತಾರೆ. ದೇಶೋದ್ಧಾರ ಮಾಡುವು ದಿರಲಿ; ಇವರು ತಮ್ಮ ತಮ್ಮ ಮನೆಗಳನ್ನು ಉದ್ಧಾರ ಮಾಡಿ ಕೊಂಡರೆ ಸಾಕಾಗಿದೆ.

ಸಂಪಾದನೆಯಿಲ್ಲ. ಇನ್ನು ಕಕ್ಷಿಗಳು "ಸ್ಟಾಂಪು" ಖರ್ಚು ಗೋಸ್ಕರ ಕೊಟ್ಟಿದ್ದ ದುಡ್ಡುಗಳನ್ನೂ ತಿಂದುಹಾಕಿ ಬಿಡು ತ್ತಾರೆ. ಇನ್ನವರು ಘನತೆಯನ್ನು ಏನುಳಿಸಿಕೊಂಡ ಹಾಗಾ ಯಿತು? ಹಳ್ಳಿಯವರು ಅವರನ್ನು ನಂಬಿಯಾರೆ? .

ಹೊಸದಾಗಿ ಆಗುವ ಲಾಯರುಗಳಿಗೆ ಶ್ರದ್ಧೆ ಮತ್ತು ಘನತೆ ಎರಡು ಆವಶ್ಯಕ– ಬೇರೂರಿದವರ ಮಾತು ಹಾಗಿರಲಿ. ಅವರು ಹೇಗೆ ನಡೆದುಕೊಂಡರೂ ಅವು ಅವರ ಹೆಸರಿನ ಬಲಿಯ ದಿಂದ ತಳ್ಳಿ ಬರುತ್ತೆ– ಮೊದಲು ಒಂದೆರಡು ವರ್ಷ ಕಷ್ಟವಾ ಗುತ್ತೆ. ತಾಳ್ಮೆಯಿಂದ ತಡೆದು ಬರಬೇಕು. ಹೀಗೆ ತನ್ನ ದೇಹ ವನ್ನು ಅರೆದು ಕೆಲವು ದಿವಸಗಳಲ್ಲಿಯೇ ಶೇಷಗಿರಿ ಗಣ್ಯರಾದ ಲಾಯರುಗಳ ಗುಂಪಿಗೆ ಸೇರಿದ.

ಈಗ ಅವನಿಗೆ ದುಡ್ಡಿಗೇನು ಕಮ್ಮಿಯಿಲ್ಲ. ದೊಡ್ಡ ಬಂಗಲೆ, ಮನೆಯ ತುಂಬ ಆಳುಗಳು, ಮೋಟಾರು. ಇಷ್ಟಾದರೂ ಹೆಂಡ ತಿಯ ಆ ಬಂಗಾರದ ಡಾಬನ್ನು ಬಿಡಿಸಿಕೊಡಲಾಗಲಿಲ್ಲ. ಇವನು ಸ್ವಲ್ಪ ಕುದುರಿಕೊಳ್ಳುವ ಹೊತ್ತಿಗೆ ಅದರ ಬಡ್ಡಿ ಸೇರಿ ಒಡವೆಯ ಬೆಲೆಗಿಂತ ಹೆಚ್ಚಾಗಿಯೇ ಆಯಿತು. ಅದರಿಂದ ಬಿಟ್ಟು ಬಿಟ್ಟ. ಬೇರೆ ಮಾಡಿಸೋಣವೆನ್ನುವುದರಲ್ಲಿಯೇ ಇಲ್ಲಿಯವರಿಗೂ ತಳ್ಳಿ ಬಂತು.

ಈ ದಿನ ಬೈರಶೆಟ್ಟಹಳ್ಳಿ ನಂಜೇಗೌಡರು ತಮ್ಮ ಸಿವಿಲ್ ಸೂಟೊಂದನ್ನು ಗೆದ್ದು ಕೊಟ್ಟಿದ್ದಕ್ಕೋಸ್ಕರ ಮುನ್ನೂರು ರೂಪಾಯಿಗಳವರಿಗೆ ಮರ್ಯಾದೆ ಮಾಡಿದರು. ಅವರನ್ನು ಕಳು ಹಿಸಿ ಕೊಡಲು ಬಾಗಿಲವರಿಗೂ ಬಂದ.

ಮನೆಯ ಮುಂದೆ ದೊಡ್ಡ ಕಾಂಪೊಂಡು. ಅಲ್ಲಿ ಚೆನ್ನಾಗಿ ಗಿಡಬಳ್ಳಿಗಳನ್ನೂ ಬೆಳಸಿದ್ದರು. ಸಾವಿತ್ರಮ್ಮನವರು ಹೂ ತೋಟದಲ್ಲಿದ್ದವರು ಅಲ್ಲಿಗೆ ಬಂದರು. ಶೇಷಗಿರಿ– ಶೇಷಗಿರಿ ರಾಯರು! ಅದು ಇದು ಮಾತು ಎತ್ತಿ "ಏನೇ ನಮ್ಮ ಗೌಡರು ಈಗ ಮುನ್ನೂರು ರೂಪಾಯಿಗಳನ್ನು ಕೊಟ್ಟು ಹೋಗಿದ್ದಾರೆ. ಬಂಗಾರದ ಡಾಬನ್ನು ಮಾಡಿಸಿ ಬಿಡೋಣ" ಎಂದು ಕೈಯಲ್ಲಿ ಹಾಗೆ ಹಿಡಿದುಕೊಂಡು ಬಂದಿದ್ದ ನೋಟುಗಳನ್ನು ತೋರಿಸಿದರು.

ಆಗ ಅವನ ಮಗಳು, ಮೂರುವರ್ಷದ ಹುಡುಗಿ, ತೋಟ ದಲ್ಲಿ ಆಡುತ್ತಿದ್ದವಳು, ಅಲ್ಲೊಂದು ಹೂವನ್ನು ಕಿತ್ತು ತಂದು "ಅಮ್ಮ ನೋಡೆ ಇದನ್ನು" ಎಂದು ತನ್ನ ತಾಯಿಗೆ ಕೊಟ್ಟು ಅವರ ಸೊಂಟವನ್ನಪ್ಪಿ ನಿಂತಿತು.

ಅವರು ಆ ಹೂವನ್ನು ತನ್ನ ಕುವರಿಗೆ ಮುಡಿಸಿ ತಲೆಯನ್ನು ಸವರುತ್ತಾ "ನನಗೆ ಯಾಕೆ ಬಂಗಾರದ ಡಾಬು, ನೋಡಿ ಈ ಡಾಬಿರುವಾಗ" ಎಂದು ಸೊಂಟಕ್ಕೆ ಬಿಗಿದಿದ್ದ ತನ್ನ ಕುವರಿಯನ್ನು ತೋರಿಸುತ್ತಾ "ಅಲ್ಲವೇನೋ ಬಂಗಾರ" ಎಂದು ತನ್ನ ಮುದ್ದು ಮಗಳ ಮುಖಕ್ಕೆ ಒಂದು ಮುತ್ತುಕೊಟ್ಟರು.

ಶೇಷಗಿರಿರಾಯರು ತಮ್ಮ ಪ್ರೇಯಸಿಯ ಕಡೆ ಹಾಗೆ ಈಕ್ಷಿಸಿ ದರು. ಆನಂದವುಕ್ಕಿ ಬಂತು. ಅದರ ಭರದಲ್ಲಿ ತಾವೂ ತಮ್ಮ ಪ್ರಾಣೇಶ್ವರಿಗೆ ಒಂದು ಮುತ್ತು ಕೊಡಲು ಹೋದರು. ಅವರ ಮಗುವಿದ್ದುಕೊಂಡು, "ಅಣ್ಣ ನಂಗೆ–ನಂಗೇ" ಎಂದಿತು. ಶೇಷಗಿರಿ ರಾಯರು ತಮ್ಮ ಹೆಂಡತಿಯನ್ನು ಹಾಗೆ ಬಿಟ್ಟು "ಬಂಗಾರ ನೀನೇ ಅಲ್ವೇ ನಿಂಗೇ ಕೊಡ್ತೀನಮ್ಮ" ಎಂದು ಮುದ್ದಿಸುತ್ತಾ "ನಿನಗೇ ಡಾಬು ಮಾಡಿಸುತ್ತೇನೆ, ಎಲ್ಲಾ ಮಾಡಿಸುತ್ತೇನೆ" ಎನ್ನುತ್ತಾ ಸಾವಿತ್ರಮ್ಮನವರನ್ನು ನೋಡಿದರು.

ಸಾವಿತ್ರಮ್ಮನವರು ಆನಂದ ಬಾಷ್ಪಗಳನ್ನು ಕರೆಯುತ್ತಾ "ಇನ್ನು ಮೇಲೆ ಎಲ್ಲಾ ನಿನಗೇ ಮಗೂ" ಎನ್ನುತ್ತಾ ಅವಳನ್ನು ಎತ್ತಿಕೊಂಡು ಒಳಕ್ಕೆ ಹೊರಟರು. ಇವರೂ ಹಿಂದಿನಿಂದ ಮಾತನಾಡಿಸುತ್ತಾ ಹಿಂಬಾಲಿಸಿದರು. ಇನ್ನು ನಾವೂ ...

——೦——

# ಜನಪದ ಸಾಹಿತ್ಯ



## ಬೀಸುವ ಹಾಡುಗಳು

ಸಂಗ್ರಾಹಕರು—ಪ್ರಲ್ಹಾದ ನರೇಗಲ್ಲ

ಕರಿಯ ಕಂಬಳಿ ಬ್ಯಾಡ ಬೆರಳಿಗುಂಗರ ಬ್ಯಾಡ ।
ಬೆಳದಿಂಗಳದಾಗ ಬರಬ್ಯಾಡ । ನನ ಗೆಣೆಯ ।
ನನ್ನಿಂದ ಹರಲಿ ಹೊರಬ್ಯಾಡ ॥೧॥

\+ + + +

ನೀರಾಗ ನಿಂತಿರುವ ನೀಲಿ ಪಾವಡದಣ್ಣ ।
ನೀರ ಕೆಟ್ಟ್ಯಾವ ಬದಿಲಿ ಹಾಯೊ। ಗುಂಡುಳ್ಳ ।
ಬಾಲಿ ಕೆಟ್ಟ್ಯಾಳ ನಿನಗಾಗಿ ॥೨॥

\+ + + +

ತೋಟಕ ಹೋದಣ್ಣ ಊಟಕ ಬರಲಿಲ್ಲ ।
ತೋಟದ ಹೂ ತಲಿತುಂಬ । ಇಟಗೊಂಡ ।
ಊಟದ ಹಂಬಲ ಮರತಾನ ॥೩॥

\+ + + +

ಗರಡೀಯ ಮನೀಗೆ ಗಂಭೀರ ಹೋಗ್ಯಾನ ।
ಗಂಧದ ಲೋಡ ತಿರಿವ್ಯಾನ । ನನ ತಮ್ಮ ।
ಖಂಬೀರಗ ಮಗಳ ಕೊಡಬೇಕೋ ॥೪॥

\+ + + +

ಯಾಲಕ್ಕಿ ಮಾಟದ ಎರಡಂಗಿ ತೊಟ್ಟ್ಯಾನ ।
ಎಲಿಬಳ್ಳ್ಯಾಗ ಸುಳದಾನ । ನನ ತಮ್ಮ
ಎಲಿಗೊಂಡ ಮಾತ ಒಗದಾನ ॥೫॥

\+ + + +

ಎತ್ತು ಕಾಯುವ ಅಣ್ಣಾ ನನ್ನೆತ್ತ ಕಂಡೀರೇ ।
ಮುತ್ತಿನ ಹಗ್ಗ ಮುಗದಾಣ । ನನ ಸಂಕ್ಯಾ
ತಪ್ಪಿಸಿಕೊಂಡ ಪವಳ್ಯಾಗ ॥೬॥

ಎಮ್ಮಿ ಕಾಯುವ ಗೆಣತಿ ನನ್ನೆಮ್ಮಿ ಕಂಡ್ಯೇನ ।
ಕೊಕ್ಕರಿಕೋಡು ಹಣಚಿಕ್ಕಿ । ಎಮ್ಮವ್ವ ।
ಕಂಡೀರಿ ಏನ ಹಳದಾಗ ॥೭॥

ತುಂಬಿದಾ ಹೊಳ್ಯಾಗ ಕೊಂಬ ಕಾಣಿಸತಾವ
ಬಂಗಾರದಣಿಯ ಬಸವಣ್ಣ । ಬರುವಾಗ
ರಂಭೇರು ಆರುತಿಯ ಬೆಳಗ್ಯಾರು ॥೮॥

\+ + + +

ಏಸನು ಬೀಸಿದರ ಬ್ಯಾಸರ ನಮಗಿಲ್ಲ।
ದೇಸಾಯರಣ್ಣನ ಮನೆಯಾಗ । ಖಂಡಗದ ।
ರಾಶಿ ಬೀಸಿದರ ದಣವಿಲ್ಲ ॥೯॥

ಆದಾವ ನಿಮ ಜೋಳ ಉಳದಾವ ನಮ ಹಾಡ।
ಸಾಕವ್ವ ಈಗ ನಿನ ಕಲ್ಲಾ । ಕೈಯನ್ನ ।
ಸೀಕೋದುಂಗುರ ಸವದಾವ ॥೧೦॥

\+ + + +

ಹಾಡ ಬರತಾವಂತ ಏರೇರಿ ಬರಬ್ಯಾಡ ।
ಏರಿದಾ ಗರ್ವ ಇಳಿಸೇನ । ಸೊರಟೂರ ।
ಅಗಸ್ಯಾಗ ನಿನ್ನ ಹುಗಿಸೇನ ॥೧೧॥

ಮೂರ ಹಾಡಿನ ಮೂಳಾ ಮುಕ್ಕಟ್ಟ ಬರಬೇಡ।
ಮೂಗಿನಾಗ ಕವಡಿ ಪೋಣಿಸೇನ। ಕಡೆಗೆ
ಊರಾಗ ನಿನ್ನ ಮೆರಸೇನ ॥೧೨॥

---

## ಹಂತಿಯ ಹಾಡುಗಳು

ಸಂಗ್ರಾಹಕರು—ಶ್ರೀ ಅಂಕಲಗಿ ವಿಶ್ವಪ್ಪನವರು, ಛತ್ತ್ರಗುಣಿ

ಪರ್ವತವೆಂಬುದು ಅರ್ವತ್ತು ಗಾವುದ ।
ಬರಲಾರೆನಯ್ಯ ಗಿರಿ ದೂರೋ । ಮಲ್ಲೇಶ।
ಇಲ್ಲಿಂದೆ ಕೈಯ ಮುಗಿದೇನೋ ॥೧॥

ಹೊತ್ತ ಮುಳುಗಿದರೇನೊ ಕತ್ತಲ್ಯಾದರೇನೋ ।
ಅಪ್ಪಾ ನಿನ್ನ ಗುಡಿಗೆ ಬರುವೇನೋ । ಬಸಪ್ಪಯ್ಯ ।
ಮುತ್ತಿನ ಬಾಗಿಲ ತೆರೆದಿಡೋ ॥೨॥

\+ + + +

ಡೊಂಕ ಮಾರಿಯ ಹನುಮಾ ಲಂಕಾಕ ಬಲು ಚಲುವ।
ಟೊಂಕದ ಮ್ಯಾಲೆ ಬಲಗೈಯ್ಯೋ । ಇಟಕೊಂಡ
ಲಂಕಾಕ ಲಾಗಾ ಒಗೆದಾನೋ ॥೩॥

\+ + + +

ನಲ್ಲಗ ಕರಕೊಂಡು ಮೆಲ್ಲಗ ಹೊರಟಾಳೊ ।
ಎಲ್ಲಿತ್ತೊ ಕಾಡಕೊನಿ ಮುಳ್ಳು । ಮುರಿದರ ।
ನಲ್ಲ ಬೆಳತಾನ ನೆಳ್ಯಾನೋ ॥೪॥



ಛಾಯಾಚಿತ್ರಿಗಳು: ಶ್ರೀಯುತ ಪದಕಿ, ಬಾಗಿಲುಕೋಟೆ

ಬಿಸನಾಳದಲ್ಲಿ ಉಪ್ಪಿನ ಸತ್ಯಾಗ್ರಹ



ಸಂಪಗಾವಿಯ ಸತ್ಯಾಗ್ರಹಿಗಳು

## ಆದರ್ಶದಂಪತಿ

**ಶ್ರೀಯುತ**
**ಆರ್. ಕೆ. ಪ್ರಭುಗಳವರು**
**ಸೆರೆಮನೆಯ ಆತಿಥ್ಯವನ್ನು**
**ಸ್ವೀಕರಿಸುತ್ತಿದ್ದಾರೆ.**



**ಶ್ರೀಮತಿ**
**ಸೌ. ಪ್ರಭುಗಳವರು**
**ಮಂಗಳೂರಿನಲ್ಲಿ ರಾಷ್ಟ್ರ**
**ಕಾರ್ಯವನ್ನು ನಡೆಸಿದ್ದಾರೆ.**

## ಗದುಗಿನ ಬಲಿದಾನ



ಶ್ರೀ. ರಂಗರಡ್ಡಿ ಶ್ರೀ. ಭೀಮರಡ್ಡಿ ಶ್ರೀ. ಅನಂತರಾವ ಸಾವಕಾರ ಶ್ರೀ. ಲಕ್ಷ್ಮಣರಾವ ಅಸುಂಡಿ ಶ್ರೀ. ಮೂಡಲಗಿರೆಪ್ಪಾ ಕುಲಕರ್ಣಿ

# ಅಖಿಲ ಕರ್ನಾಟಕ ರಾಷ್ಟ್ರೀಯ ಸಭೆ, ಮುಂಬಯಿ

ಲೇಖಕರು:— ಶ್ರೀ. ಯು. ಜಿ. ಪುತಳಿ, ಮುಂಬೈ

ಈ ಸಭೆಯು ಅಸ್ತಿತ್ವದಲ್ಲಿ ಬರುವ ಮೊದಲು ಒಂದೊಂದು ಜಿಲ್ಲೆಯ ಪರವಾಗಿಯಾಗಲಿ, ಒಂದು ವಿಶಿಷ್ಟ ಉದ್ದೇಶಕ್ಕಾಗಲಿ ಕೆಲಸ ಮಾಡುವ ಹಲವು ರಾಜಕೀಯ ಸಂಸ್ಥೆಗಳು ಮುಂಬಯಿಯಲ್ಲಿದ್ದುವು. ಅವುಗಳಲ್ಲಿ Karnatak congress Workers' League, Kanara Satyagraha Samiti, The South Kanara national Workers' League ಎಂಬವು ಪ್ರಮುಖವಾಗಿದ್ದುವು. ಇವೆಲ್ಲ ಸಂಸ್ಥೆಗಳ ಸಭೆ ಸೇರಿ, **ಅಖಿಲ ಕರ್ನಾಟಕ ರಾಷ್ಟ್ರೀಯ ಸಭೆ** ಎಂಬ ಒಂದು ಕೇಂದ್ರಸಂಸ್ಥೆಯನ್ನು ಏರ್ಪಡಿಸಿ, ಅದಕ್ಕೆ ಇವೆಲ್ಲವುಗಳನ್ನು ಕೂಡಿಸಬೇಕೆಂದು ನಿರ್ಣೀತವಾಯಿತು. ಈ ವಿವಿಧ ಸಂಸ್ಥೆಗಳ ಸದಸ್ಯರ ಸಂಖ್ಯೆಯ ಪ್ರಮಾಣದ ಮೇಲಿಂದ ಪ್ರತಿಸಿಧಿಗಳನ್ನು ಆರಿಸಿ, ಒಂದು ಸಂಚಾಲಕ ಮಂಡಲವನ್ನು ಸ್ಥಾಪಿಸಲಾಯಿತು. ಈ ಮಂಡಲದಲ್ಲಿ ೭ ಪ್ರತಿನಿಧಿಗಳಿದ್ದು, ಡಾ. ಸಾಂಸಿಯವರು ಅಧ್ಯಕ್ಷರೂ, ಶ್ರೀ. ಮಣೇಕರ ಅವರು ಉಪಾಧ್ಯಕ್ಷರೂ, ಶ್ರೀಯುತರಾದ ಪುತಳಿ, ನಾಡಕರ್ಣಿಯವರು ಕಾರ್ಯದರ್ಶಿಗಳೂ ಆಗಿರುವರು. ಈ ಸಭೆಯ ಪ್ರಧಾನ ಹೇತುವು ವಿವಿಧ ಕರ್ನಾಟಕ ರಾಷ್ಟ್ರೀಯ ಸಂಸ್ಥೆಗಳ ಕಾರ್ಯವು ಸುಗಮವಾಗಿ ಸಾಗಬೇಕೆಂದೂ, ಅವುಗಳು ಏಕಮುಖವಾಗಿ ವ್ಯವಹರಿಸಿ, ಕಾಂಗ್ರೆಸಿಗೆ ಒಳಿತಾಗಿ ಬೆಂಬಲವನ್ನೀಯಬೇಕೆಂದೂ ಇದೆ. ಸಭೆಯ ಸದಸ್ಯರ ಸಂಖ್ಯೆ ಸದ್ಯಕ್ಕೆ ಸು. ೧೦೦೦ ಇದೆ. ಈ ಸಭೆಯು ಜನ್ಮವೆತ್ತಿ ಒಂದು ತಿಂಗಳೊಪ್ಪತ್ತು ಮಾತ್ರವಾಗಿದ್ದು ಈ ಅವಧಿಯಲ್ಲಿ ಕರ್ನಾಟಕಸ್ಥರ ನಾಲ್ಕು ದೊಡ್ಡ ಸಭೆಗಳು ನಗರದ ವಿವಿಧ ಭಾಗಗಳಲ್ಲಿ ಜರುಗಿಸಲ್ಪಟ್ಟವು. ಮೊದಲನೆಯ ಸಭೆಯು ಬ್ಲಾವಾಟ್‌ಸ್ಕಿ ಮಂದಿರದಲ್ಲಿ ಪ್ರೊ. ಧರ್ಮಾನಂದ ಕೋಸಾಂಬಿಯವರ ಅಧ್ಯಕ್ಷತೆಯಲ್ಲಿ ನೆರೆದು, ಶ್ರೀ. ಆರ್. ಎಸ್ ಪಡುಬಿದ್ರಿ. ಡಾ. ಸಾಂಸಿ, ಶ್ರೀಯುತರಾದ ನಾಡಕರ್ಣಿ, ನಗರಕರ, ಪುತಳಿ ಮೊದಲಾದವರು ಕಾಂಗ್ರೆಸಿನ ಕಾರ್ಯಕ್ರಮಕ್ಕೆ ತುಂಬಾ ಬೆಂಬಲವನ್ನಿತ್ತು, ಸಂಪೂರ್ಣ ಸ್ವಾತಂತ್ರ್ಯವನ್ನು ಪುರಸ್ಕರಿಸಿ, ಶಾಂತಿಸನ್ನಾಹ( Peace-move )ವನ್ನು ಧಿಕ್ಕರಿಸಿ, ಶ್ರೀ. ಧನಸೆಟ್ಟಿ ಮೊದಲಾದ ಸೊಲ್ಲಾಪುರದ ನಾಲ್ವರು ಆಪಾದಿತರಿಗೆ ಕೊಟ್ಟ ಮರಣದಂಡನೆಯನ್ನು ನಿಷೇಧಿಸಿ, ಅವರ ಬಲಿದಾನವನ್ನು ಅಭಿನಂದಿಸಿ ಆವೇಶಪೂರ್ಣವಾಗಿ ಭಾಷಣಗಳನ್ನು ಮಾಡಿದರು. ಮಾತುಂಗ, ಸಾಂತಾಕ್ರುಝ, ಕೋಟೆ ಮೊದಲಾದ ಭಾಗಗಳಲ್ಲಿಯೂ ಸಭೆಗಳು ಸೇರಿ ಶ್ರೀಮತಿ ಸೌ. ಕಸ್ತೂರಿಬಾಯಿ ಗಾಂಧಿ, ಶ್ರೀ. ಮೋರಾರಜಿ ದೇಸಾಯಿ (ಅಹಮದಾಬಾದಿನ ಅ. ಕಲೆಕ್ಟರಿಕೆಯನ್ನು ಧಿಕ್ಕರಿಸಿದವರು), ಶ್ರೀ. ರಾಜಾರಾವ ( ಎ. ಆಯ್. ಸಿ. ಸಿ. ಯ ನಿರಂತರ ಕಾರ್ಯದರ್ಶಿಗಳು), ಶ್ರೀಯುತರಾದ ತಯ್ಯಬಜಿ, ಜಯರಾಮ ಪಾಟೀಲ ಮೊದಲಾದವರ ಭಾಷಣಗಳಾದವು. ಶ್ರೀ. ಜಯರಾಮ ಪಾಟೀಲರು ಇದೀಗ ಕರ್ನಾಟಕದಲ್ಲೆಲ್ಲ ಅಗತ್ಯಬಿದ್ದಾಗ ಕೆಲಸ ಮಾಡಲಿಕ್ಕೆಂದು ಸ್ವಯಂಸೇವಕರ ಪಥಕಗಳನ್ನು ಏರ್ಪಡಿಸುತ್ತಿದ್ದಾರೆ. ಮುಂಬಯಿಯಲ್ಲಿನ ಕನ್ನಡಿಗರದೊಂದು ಸ್ವಯಂಸೇವಕ ದಲವನ್ನು ಸಜ್ಜುಗೊಳಿಸಲು ಡಾ. ಸಾಂಸಿಯವರ ನೇತೃತ್ವದಲ್ಲಿ ಒಂದು ಉಪಸಭೆಯನ್ನು ನಿಯಮಿಸಲಾಗಿದೆ.

Karnatak Congress Workers League ಮತ್ತು S. K. National Workers' League ಇವುಗಳ ಪರವಾಗಿ ಎರಡು ಪ್ರಾತಃಸಂಕೀರ್ತನ ಮಂಡಲಗಳು ಏರ್ಪಟ್ಟವೆ. ಮೊದಲನೆಯ ಸಂಸ್ಥೆಯು (K. C. W. L.) ಸೆರೆಮನೆ ಕಂಡ ಸತ್ಯಾಗ್ರಹಿಗಳ ಕುಟುಂಬಗಳಿಗೆ ೩೧೦ ರೂ. ಗಳ ವರೆಗೆ ಸಹಾಯವನ್ನು ಮಾಡಿದೆ, ಮತ್ತು ತಿಂಗಳಿಗೆ ೧೦೦ ರೂ. ಗಳಂತೆ ಪೂರೈಸುತ್ತಲಿದೆ. ಅಲ್ಲದೆ ಕನ್ನಡ ಜಿಲ್ಲೆಗೆ ೧೦ ಕಾಲಾಳುಗಳನ್ನು ಕಳಿಸಿದೆ. ಅವರನ್ನು ಸಂಥರಪುರದಲ್ಲಿ ನಾಡಗುಡಿಯನ್ನು ಕಾಯ್ದ ತಪ್ಪಿಗಾಗಿ ಸೆರೆ ಹಿಡಿದರು. ಎರಡೂ ಸಂಸ್ಥೆಗಳಿಂದ ನೂಲುವವರ ದೆಸೆಯಿಂದ ೩೦ ರಾಟೆಗಳು ಧರ್ಮಾರ್ಥವಾಗಿ ಪೂರೈಸಲಾಗಿದೆ. ಮುಂಬಯಿಯಲ್ಲಿ ಹರಿದು ಹಂಚಿದ ಕನ್ನಡಿಗರನ್ನು ಕಲೆಹಾಕಬೇಕೆಂದೂ, ಗಿರಣಿಗಳೊಳಗಿನ ಕನ್ನಡ ಕೂಲಿಕಾರರನ್ನು ಎಳೆದುಕೊಳ್ಳಬೇಕೆಂದೂ, ಕಾಂಗ್ರೆಸ ಕಾರ್ಯವನ್ನು ( ವಿಶೇಷತಃ ಕರ್ನಾಟಕದೊಳಗಿನದನ್ನು ) ಕಸುವಿನಿಂದ ಸಾಗಿಸಬೇಕೆಂದೂ ಈ ಸಭೆಯು ವಿಶ್ವಪ್ರಯತ್ನವನ್ನು ಮಾಡುತ್ತಲಿದೆ. ಮುಂಬಯಿ

ಯಲ್ಲಿನ ಕನ್ನಡಿಗರಲ್ಲಿ ಕೀರ್ತಿಬರುವಂತೆ ಕೆಲಸಮಾಡಿ ಸೆರೆಮನೆ ಯನ್ನು ಕಂಡವರಲ್ಲಿ ಶ್ರೀಮತಿ ಸೌ. ಕಮಲಾದೇವಿ ಚಟ್ಟೋ ಪಾಧ್ಯಾಯ ಮತ್ತು ಶ್ರೀ. ಆರ್. ಎಸ್. ಪಡುಬಿದ್ರಿಯವರು. ಶ್ರೀ. ಪಡುಬಿದ್ರಿಯವರು ಮುಂ. ಪ್ರಾಂ. ಕಾಂ. ಕ. ಯ ಸಹ ಕಾರ್ಯದರ್ಶಿಗಳಲ್ಲೊಬ್ಬರಾಗಿದ್ದರು. ಶ್ರೀಮತಿ ಕಮಲಾದೇವಿ ಯವರು ಮುಂಬಯಿ ಪ್ರಾಂತದಿಂದಲೇ ಸೆರೆಮನೆಗೆ ಹೋದ ಮೊದಲನೆಯ ಪೆಣ್ಮಣಿ. ದೇಶಸೇವಿಕೆಯರಲ್ಲಿಯೂ, ಹಿಂ. ಸೇವಾದಲದಲ್ಲಿಯೂ ಹಲವು ಮಂದಿ ಕನ್ನಡಿತಿಯರಿದ್ದಾರೆ. ಕನ್ನಡಿಗರೆಲ್ಲರೂ ಈ ಸಭೆಗೆ ಪ್ರತ್ಯಕ್ಷಪರೋಕ್ಷವಾಗಿ ನೆರವಾಗುವ ರೆಂದು ನೆರೆನಂಬಿದ್ದೇವೆ.

[ ಮೇಲಣ ವೃತ್ತಾಂತವನ್ನೋದಿ ರಾಷ್ಟ್ರಕಾರ್ಯಲಾಲಸರಾದ ಕನ್ನಡಿಗರೆಲ್ಲರು, ವಿಶೇಷತಃ ಮುಂಬಯಿ ನಿವಾಸಿಗ ಳಾದ ಕನ್ನಡಿಗರು ಈ ಸಭೆಗೆ ಕೈಲಾದಮಟ್ಟಿಗೂ ಸಹಾಯಮಾಡುವರೆಂದು ವಿಶ್ವಾಸವಿದೆ. ಮುಂಬಯಿಯಂತಹ ಪಡೆ ಮೂಲೆಯ ಪಟ್ಟಣದಲ್ಲಿ ಇಂತಹ ಸಂಸ್ಥೆಯ ಅಗತ್ಯವು ಹೆಚ್ಚಾಗಿ ಇದ್ದಿತು. ಆ ಕೊರತೆಯನ್ನು ದೂರಮಾಡಿದುದಕ್ಕಾಗಿ ಈ ಸಭೆಯ ಸ್ಥಾಪಕರನ್ನು ಎಷ್ಟುಕೊಂಡಾಡಿದರೂ ಕಡಿಮೆಯೇ. ಮುಂಬಯಿಯಲ್ಲಿನ ಕನ್ನಡಿಗರೆಲ್ಲರೂ ಈ ಸಭೆಯ ಸದಸ್ಯ ರಾಗುವರೆಂದು ನಮ್ಮ ದೃಢವಾದ ವಿಶ್ವಾಸವಿದೆ. —ಸಂ. ಜ. ಕ. ]

—o—

## ಕಾಮನ ಬಿಲ್ಲು

೧

ಬಲ್ಲೆ ! ಬಲ್ಲೆ ! ಕಾಮನ ಬಿಲ್ಲೆ !
ಬಲ್ಲೆನು ನಿನ್ನನು ಬಣ್ಣದ ಬಿಲ್ಲೆ !
ಸಾಗರ-ತಾಯಿಯ
ಮುಗಳಿನ ಮುಗಳೆ !
ದಿನಕರ ಜನಕನ
ಬೆಳಗುವ ತರಳೆ !
ಚಂದ್ರನ ಹೆಮ್ಮೆಯನಿಕ್ಕಿಹ ತರುಣಿ !
ಇಂದ್ರನ ಬಯಸಿಹ ಸೊಬಗಿನ ರಮಣಿ !
ಬಲ್ಲೆ ! ಬಲ್ಲೆ ! ಮೋಹನಸುಧೆಯೆ !
ಬಲ್ಲೆನು ನಿನ್ನನು ನೂತನವಧುವೆ !

೨

ಇನಿಯನು ಕ್ಷಾಮ:ದ ಬಾಧೆಯ ನೀಗಿಸಿ,
ಗಮಿಸುವದಿಲ್ಲೆಂದೆನುತಲಿ ಭಾವಿಸಿ,
ಎದುರನು ಕೊಳ್ಳಲು
ಸದಮಲ ಹರುಷದಿ
ಬಳುಕುವ ಲತೆಯೊಲು
ಬಳಸಿಹ ನಿನ್ನೊಳು
ಮುಗಿಲಿನ ಬಳಗವು ಪಂಪಂ ತೆರದೊಳು
ಪೂಗಳ ಸರದೊಲು ಅಲೆಯುತಲಿಹುದು !
ಬಲ್ಲೆ! ಬಲ್ಲೆ ! ಮನ್ಮಥನೇತ್ರ !
ಬಲ್ಲೆನು ನಿನ್ನನು ಸಲೆ ಶುಭಗಾತ್ರ !

೩

ಚಲುವಿನ ಗೊಂಬೆಯೆ ! ಅರಸುತ ಬಂದೆಯೆ !
ಬಲುಬಗೆ ಜಗಳವು ನಡೆವುದು, ನಡೆ, ನಡೆ!
ಎನ್ನುವ ರಮಣನ
ಸನ್ನೆಯನರಿಯುತ,
ಅಡಿಗಡಿಗಾಗುವ
ಗುಡುಗಿನ ರಭಸಕೆ
ಕಡುಸಿರಿಯುಡುಗೆಯ ಬಗೆಬಗೆ ಬಣ್ಣವು
ಕಡೆಯದು ಎನ್ನುತ ಕಣ್ಮರೆಯಾಗುವೆ !
ಬಲ್ಲೆ ! ಬಲ್ಲೆ ! ಸುಸ್ಮಿತವದನೆ !
ಬಲ್ಲೆನು ನಿನ್ನನು ರಂಜಿತರದನೆ !

೪

ಎನ್ನನು ನಿಮ್ಮನು ಎಲ್ಲರ ಗೈದಿಹ
ಉನ್ನತರೂಪನ ಸನ್ನುತಿ ಮಾಡುವ
ಕುರುಡರ ಬಡವರ
ತಿರುಕರ ಪೊರೆಯುವ
ಸತ್ಯವ್ರತರಿಗೆ
ಸೇತುವೆಯಂದದಿ
ಇಳೆಯನು ಗಗನಕೆ ಸಲ್ಲಿಸಿ ಬಾಲೆ !
ಬಳುಕುವೆಯಲ್ಲವೆ ಭೂಮಿಯ ಮೇಲೆ ?
ಬಲ್ಲೆ ! ಬಲ್ಲೆ ! ಮರ್ತ್ಯರ ಮಿತ್ರೆ !
ಬಲ್ಲೆನು ನಿನ್ನನು ಪರಮ ಪವಿತ್ರೆ !

ಟಿ. ಎ. ಎಸ್.

# ಪ್ರಪಂಚ ಪರಿಚಯ



## ಅಮೇರಿಕೆಯು ಇಂಗ್ಲಂಡವನ್ನು ಗೆಲ್ಲುವುದು.

ಮಿ. ವಾಡ್ವೆಲ್ ಡೆನ್ನಿ ಎಂಬವರು ಈ ಪುಸ್ತಕವನ್ನು ಬರೆದಿದ್ದು ಅದರೊಳಗಿನ ಕೆಳಗೆ ಕೊಟ್ಟ ಅವತರಣಿಕೆಯಿಂದ ಅಮೇರಿಕೆಯು ಎಷ್ಟೊಂದು ಅಗಾಧ ಶಕ್ತಿಸಾಮರ್ಥ್ಯವುಳ್ಳದಿದೆ ಎಂಬ ಕಲ್ಪನೆಯು ಬಾರದೆ ಇರದು.

ಜಗತ್ತಿನ ಜನಸಂಖ್ಯೆಯ ಮಾನದಿಂದ ೧೦೦ ಕ್ಕೆ ೭ ಕ್ಕಿಂತ ಕಡಿಮೆಯ ಜನಸಂಖ್ಯೆಯು ಅಮೇರಿಕೆಯಲ್ಲಿದೆ. ಆದರೂ ೪೯% ರಂತೆ ಕಲ್ಲಿದ್ದಲಿಯು ಇಲ್ಲಿಯೆ ಹೊರಡುತ್ತದೆ. ೩೫% ರಂತೆ ವಿದ್ಯುತ್‌ಶಕ್ತಿ, ಬಹುತರ ಎಲ್ಲ ಸ್ವಾಭಾವಿಕ ಗ್ಯಾಸುಗಳು, ೭೧% ರಂತೆ ಕಲ್ಲೆಣ್ಣೆ, ೬೦% ರಂತೆ ಗೋದಿ ಮತ್ತು ಹತ್ತಿ, ೫೫% ರಂತೆ ಇಮಾರತಿ ಕಟ್ಟಿಗೆ, ೩೮% ರಂತೆ ಸೀಸು, ಫೋಸಫಲಗಳು, ೫೦% ತಾಮ್ರ, ಕಬ್ಬಿಣ, ಉಕ್ಕುಗಳು; ಜಗತ್ತಿನಲ್ಲಿ ಹುಟ್ಟುವ ಪದಾರ್ಥಗಳಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಮೇಲಿನ ಮಹತ್ವದ ವಸ್ತುಗಳು ಅಮೇರಿಕೆಯಲ್ಲಿಯೇ ಸಿಕ್ಕುತ್ತವೆ !

—ಮ್ಯಾ. ಎ. ಜರ್ನಲ್.

---

## ಬಹಿಷ್ಕಾರ ಚಳವಳಿಯ ಪರಿಣಾಮವು
## ( ಮ್ಯಾಂಚೆಸ್ಟರದ ಸ್ಥಿತಿ )

ಇಲ್ಲಿ ಎಲ್ಲ ದಿಕ್ಕಿನಿಂದಲೂ ನಿರಾಶಾಜನಕ ಸುದ್ದಿಗಳೇ ಬರುತ್ತವೆ. ಹಿಂದೂ ದೇಶದ ಸ್ಥಿತಿಯೂ, ಲಂಕೆಶಾಯರ ವ್ಯಾಪಾರದ ಮೇಲಾಗುವ ಅದರ ಪರಿಣಾಮಗಳೂ ಎಂಬಿವೆ ಮಾತುಗಳೇ ಮಾರ್ಕೇಟನಲ್ಲಿ ಎಲ್ಲೆಲ್ಲೂ ಕಿವಿಗೆ ಬೀಳುತ್ತವೆ. ಕಾರಖಾನೆದಾರರಿಗೆ ಈಗಲೆ ಅದರ ದುಷ್ಪರಿಣಾಮಗಳ ಅನುಭವವು ದೊರಾರಂಭಿಸಿದೆ. ............ಚೀನದಿಂದಲೂ ಉತ್ಸಾಹಕರ ವರ್ತಮಾನವಿಲ್ಲ.

—ಮ್ಯಾ. ಎ. ಜರ್ನಲ್.

---

## ಇಂಗ್ಲಂಡಿನಲ್ಲಿ ತಲೆದಂಡದ ಏರಿಕೆ

| | ೧೯೧೩-೧೪ | ೧೯೨೬-೨೭ |
|---|---|---|
| | ಪೌ. ಶಿ. ಪೇ. | ಪೌ. ಶಿ. ಪೇ. |
| ಗ್ರೇಟಬ್ರಿಟನ್ | ೩-೧೧-೪ | ೧೪-೧೧-೪ |
| ಅಮೇರಿಕಾ | ೧-೪-೦ | ೬-೦-೦ |
| ಫ್ರಾನ್ಸ | ೩-೭-೦ | ೭-೭-೦ |
| ಇಟಲಿ | ೨-೨-೦ | ೪-೪-೦ |

ಇದೇನು ಇಂಗ್ಲಂಡಿನ ಆರ್ಥಿಕ ಸುಸ್ಥಿತಿಯ ಲಕ್ಷಣವಲ್ಲ.

—ಟ್ರೊಪಿಕಲ್ ಲೈಫ್.

---

## ಸಾಲದಲ್ಲಿ ಮುಳುಗಿರುವ ಹಿಂದೀ ರೈತನು !

೧೦೦ ಕ್ಕೆ ೬೦ ರಿಂದ ೩೦೦ ರೂ. ಗಳ ವರೆಗೆ ಬಡ್ಡೀ ದರವು ಹಳ್ಳಿಕೊಂಪೆಗಳಲ್ಲಿ ! ಪಂಜಾಬದ ರೈತನು ತನ್ನ ಹುಟ್ಟುವಳಿಯ ೧/೩ ಭಾಗವನ್ನು ಸರಕಾರಕ್ಕೆ ತೆತ್ತುತ್ತಾನೆ; ೧/೩ ಭಾಗವನ್ನು ಬಡ್ಡಿಯ ಸಲುವಾಗಿ ಸಾವುಕಾರನಿಗೆ ಕೊಡುತ್ತಾನೆ. ಇನ್ನುಳಿದ ೧/೩ ದಲ್ಲಿ ರೈತನು ವರ್ಷಾವಧಿ ತನ್ನ ಕುಟುಂಬ ಪೋಷಣೆ ಮಾಡಬೇಕು ! ಮತ್ತೆ ಕೂಲಿಕುಂಬಳಿ, ಎತ್ತು ಬಿತ್ತುವುದಕ್ಕಾಗಿ ರೈತನು ಸಾಲಮಾಡದೆ ಗತಿಯಿಲ್ಲ ! ಇಂತು ಆಜನ್ಮ ಸಾಲ ! ಪಂಜಾಬಿ ರೈತನು ಹುಟ್ಟುವಾಗ ಸಾಲ; ಮಡಿವಾಗ ಸಾಲ ! ಮುಂಬೈ ಇಲಾಖೆಯಲ್ಲಿ ೫ ಜನ ರೈತರಲ್ಲಿ ನಾಲ್ವರು ಸಾಲಿಗರು ! ಹಿಂದುಸ್ಥಾನದ ರೈತರ ಸಾಲದ ಲೆಕ್ಕ ಮಾಡಿದರೆ ಸುಮಾರು ೬೭೫ ಕೋಟಿ ರೂ. ಆಗುವದು.

—ನೇಶನ್ ಎಂಡ ಎಥೀನಂ.

---

## ಹಿಂದಿನ ಕಿಂತಲೂ ಇಂದು ವ್ಯಕ್ತಿಸ್ವಾತಂತ್ರ್ಯವು ಹೆಚ್ಚಿದೆಯೆ ?

ಮಿ. ಜಿ. ಕೆ. ಚೆಸ್ಟರಟನ್ನರು ವಿಖ್ಯಾತ ಲೇಖಕರು. ಟೀಕಾಕಾರರು, ವಿನೋದಿಗಳು. ಈ ಗೃಹಸ್ಥರು ಹೀಗೆ ವಿನೋದಕರವಾಗಿ ಹೇಳುತ್ತಾರೆ.

ಪಾಶ್ಚಾತ್ಯರು ವ್ಯಕ್ತಿಸ್ವಾತಂತ್ರ್ಯವು ಹೆಚ್ಚು ಸಿಗಬೇಕೆಂದು ನಿರ್ಮಿಸಿದ ಪ್ರಜಾಪ್ರಭುತ್ವವು (democracy) ಪ್ರಜೆಗಳ ಸಾತಂತ್ರ್ಯಹರಣಕ್ಕೆ ಕಾರಣವಾಗಿದೆ ! ಪ್ರಾಚೀನ ಕಾಲದ ಕ್ರೂರರೂ ಒತ್ತಾಯ ಬಲುವೆಯವರೂ ಎಂದೆನಿಸುತ್ತಿದ್ದ ಅರಸರೂ ರಾಜರು ಸಾಮಾನ್ಯ ಪ್ರಜೆಗಳ ಅದುವ ಮಾತಿನಲ್ಲಿ ಕೈ

ಹಾಕದೆ ಅವರನ್ನು ಸ್ವತಂತ್ರವಾಗಿರಗೊಡುತ್ತಿದ್ದರೊ ಅಂತಹ ಹಲವು ವಿಷಯುಗಳಲ್ಲಿ ಈಗಿನ ಪ್ರಜಾಪ್ರಭುತ್ವವು ವ್ಯಕ್ತಿ ಸ್ವಾತಂತ್ರ್ಯವನ್ನು ಹರಣಮಾಡಿಬಿಟ್ಟದೆ. ಇಂತಹ ಬಲಾತ್ಕಾರವು—ಒತ್ತಾಯವು ಏಶಿಯದ ಹಿಂದಿನ ಕಠೋರ ರಾಜರಲ್ಲಿದ್ದಿಲ್ಲ. ಯುರೋಪದ ಅರಸರಲ್ಲಿಯೂ ಕಾಣಬರುತ್ತಿದ್ದಿಲ್ಲ. ಈಗಿನ ಮನುಷ್ಯನಿಗೆ ಧರ್ಮಬಾಹ್ಯನೆಂದೂ ತನ್ನ ಲೇಖನ ಅಥವಾ ಮತಸ್ವಾತಂತ್ರ್ಯಕ್ಕಾಗಿ ಜೀವಂತ ಸುಡಿಸಿಕೊಳ್ಳುವ ಪ್ರಸಂಗವು ಬರುವದಿಲ್ಲೆಂಬದು ನಿಜ. ಆದರೆ ಆತನು ಬರಿ ಸೆರೆ ಅಥವಾ ಸಿಂದಿಯನ್ನು(ಸಿದ್ಧಪಡಿಸಿ) ಕುಡಿದರೆ—ಇಂಥ ನಿರುಪದ್ರವಿಯಾದ ಸಣ್ಣ ಮಾತು ಸಂಭವಿಸಿದರೆ ದಂಡಕ್ಕೊಳಗಾಗುವನು. ಸೆರೆಮನೆಯು ಆಳಾಗುವನು. ಒಮ್ಮೊಮ್ಮೆ ಪೋಲೀಸರ ಪಿಸ್ತೂಲಿನ ಗುಂಡಿಗೂ ತುತ್ತಾಗುವನು. ಇದರಂತೆಯೆ ಈಗಿನ ಒತ್ತಾಯದ ಶಿಕ್ಷಣದ ಕಟ್ಟಳೆಯ ಬಲಾತ್ಕಾರದ ಕಾಲದಲ್ಲಿ ಒಬ್ಬ ಬಡ ರೈತನು ಬಡತನವನ್ನು ಹಿಂಗಿಸಿಕೊಳ್ಳುವುದಕ್ಕಾಗಿ ತನ್ನ ಮಗನನ್ನು ಸಾಲೆಗೆ ಕಳುಹದೆ ತನ್ನ ಕೆಲಸಕ್ಕೆ ನೆರವಾಗಲು ಮನೆಯಲ್ಲಿಯೆ ಇಟ್ಟುಕೊಂಡರೆ ಮೇಲೆ ಹೇಳಿದಂತೆಯೆ ಅವನ ಹಾಡು ಆಗುವುದು. ಇತ್ತೀಚೆ ಹೊಸದಾಗಿ ಆಗಲಿರುವ ಕಾಯಿದೆಯಂತೆ ಮತದಾನದ ( Voting Paper ) ಕಾಗದವನ್ನು ಕೊಟ್ಟಾಗ ಮತದಾರನು ತುಂಬಿಕೊಡದಿದ್ದರೂ ಇದೇ ಗತಿಯಾಗುವುದು !!

—ಫೋರಮ್ ( ನ್ಯೂಯಾರ್ಕ )

---

## ಪಾಶ್ಚಾತ್ಯರ ಪ್ರಗತಿಯ ಮೂಲ ಕಾರಣವಾವುದು ?

ವಿ. ಚೆಸ್ಟರಟನ್ನರು ಅದೇ ಲೇಖನದಲ್ಲಿ ಮುಂದೆ ಹೀಗೆ ಬರೆದಿರುವರು.

ಪಡುವಣರು ಪ್ರಗತಿಯನ್ನು ಹೊಂದುತ್ತಿರುವುದಕ್ಕೆ, ಇಷ್ಟು ಕಾರ್ಯನಿರತರಾಗಿರುವುದಕ್ಕೆ ಕಾರಣವು ಅವರ ಪ್ರಗತಿ ತತ್ವದಲ್ಲಿಯ ನಿಷ್ಠೆಯಲ್ಲ. ( ಒಂದು ದೃಷ್ಟಿಯಿಂದ ಅವರಿಗೆ ದಿನೇದಿನೇ ಜಗತ್ತಿನ ಪ್ರಗತಿಯೇ ಆಗುವುದೆಂಬ ಬಗ್ಗೆ ಎಳ್ಳಷ್ಟೂ ವಿಶ್ವಾಸವಿಲ್ಲ.) ‘ ಜಗತ್ತು ಕೆಡುತ್ತ ಹೋಗುವುದು ’ ಎಂಬ ಕ್ರಿಸ್ತೀ ತತ್ವವೇ ಪಾಶ್ಚಾತ್ಯರ ಪ್ರಗತಿಗೆ ಮುಖ್ಯ ಕಾರಣವು. ಕ್ರಮಕ್ರಮವಾಗಿ ಜಗತ್ತು ಪ್ರಗತಿಯನ್ನು ಹೊಂದುವದೆಂಬ ನಂಬುಗೆಗಿಂತಲೂ ಇದು (ಜಗತ್ತು) ಕೈಕಾಲು ಅಲುಗಾಡಿಸದೆ ಹಾಗೇ ಬಿಟ್ಟರೆ ಕೆಡುತ್ತ ಹೋಗುವುದು, ಹೀನಸ್ಥಿತಿಗೆ ಬರುವುದು ಎಂಬ ವಿಚಾರವೇ ಪಾಶ್ಚಾತ್ಯರನ್ನು ಕೆಲಸಕ್ಕೆ ಅಣಿಮಾಡಲು ಕಾರಣವಾಗಿದೆ. ಈ ದೃಷ್ಟಿಯಿಂದ ಏಶಿಯದ ನಿಯಮನಡೆವಳಿಕೆಗಳೆಲ್ಲ ಮಿತಿಮೀರಿ ಧಾರ್ಮಿಕವಾಗಿವೆ. ಅವ್ಯದೊಂದು ನಿಯಮ, ಪದ್ಧತಿಯನ್ನು ಉದಾತ್ತ ವಿಚಾರದಿಂದಲೆ ಉಂಟುಮಾಡಿದ್ದರೂ ಅದು ಕಾಲಾಂತರದಿಂದ ದೋಷಯುಕ್ತವಾಗುವುದು; ಅದರಲ್ಲಿ ಕುಂದುಕೊರತೆಗಳು ( ಕಾಲಪರಿಸ್ಥಿತಿಯು ಬದಲಾಗುವುದರಿಂದ ) ತಲೆದೋರುವವು ಎಂಬ ಮಾತನ್ನು ನಂಬಲಿಕ್ಕೂ ಇವರು ( ಏಶಿಯದವರು ) ಸಿದ್ಧರಿಲ್ಲ.

‘ ಧರ್ಮಸ್ಥಾಪಕರು, ’ ‘ ಮತಸ್ಥಾಪಕರು, ’ ಬೇರೊಂದು ‘ ಸ್ಮೃತಿಕಾರರು ’ ಎಂಬೀ ಬಗೆಯ ಮಾತುಗಳಿಂದಲೆ ಹುಳಿತು ಹೋದ ಹಳೆಯದರ ಬದಲು ಹುರುಳುಳ್ಳ ಹೊಸಮತವನ್ನೊ, ಪಂಥವನ್ನೊ, ಪದ್ಧತಿಯನ್ನೊ ನಿರ್ಮಿಸಿದರು ಎಂಬ ಮಾತು ಸಿದ್ಧವಾಗುವದಿಲ್ಲವೇ ? ಈ ಎಷ್ಟೋ ಜನರು ತಮ್ಮಲ್ಲಿ ಧರ್ಮಸ್ಥಾಪಕರುಂಟೆಂದು ಹೇಳುವುದಿಲ್ಲ; ಏಕೆಂದರೆ ಹಾಗೆ ಹೇಳುವುದರಿಂದ ತಮ್ಮ ಧರ್ಮವು ಹೊಸತಾಗಿ ಬಂದಿತು, ಅನಾದಿಕಾಲದ ಶಾಶ್ವತವಾದ ಧರ್ಮವು ತಮ್ಮದಲ್ಲವೆಂಬ ಅರ್ಥವು ಬಂದೀತೆಂದು ಹೆದರಿಕೆ, ಆದುದರಿಂದ ಈ ಜನರಿಗೆ ಹಳೆಯದೆಲ್ಲ ಹೊನ್ನು. ಅದರಲ್ಲಿಯೇ ಮಿತಿಮೀರಿ ನಂಬುಗೆ. ಹಿಂದಿನದನ್ನೆ ಒಳ್ಳೇ ಸ್ಥಿತಿಯಲ್ಲಿ ಉಳಿಸಿಕೊಳ್ಳಬೇಕಾಗಿದ್ದರೆ ಕಾಲಕಾಲಕ್ಕೆ ತಕ್ಕ ಮಾರ್ಪಾಟುಗಳನ್ನು ಮಾಡುವುದು ಅವಶ್ಯಗತ್ಯವೆಂಬುದನ್ನು ಈ ಜನರು ಮರೆತುಬಿಟ್ಟಿದ್ದಾರೆ.

—ಫೋರಮ್ ( ನ್ಯೂಯಾರ್ಕ )

---

## ಹವಾಮಾನದಂತೆ ಗುಣಸ್ವಭಾವ

ಮೇರಿ ಬೋರ್ಡೆನ್ ಎಂಬವಳು ತನ್ನ ನಾಡಿನ ಮೇಲ್ಮೆಯ ಮೂಲಕಾರಣವು ಅದರ ಹವಾಮಾನದಲ್ಲಿಯೆ ಇದೆಯೆಂದು ತೋರಿಸುವಂತೆ ಒಂದು ಲೇಖನವನ್ನು ಬರೆದಿರುವಳು. ಅದರಲ್ಲಿ ಮುಂದೆ ಅಮೇರಿಕೆಯ ಮಾತನ್ನೂ ಎತ್ತಿರುವಳು. ಅಮೇರಿಕೆಯ ಹವೆಗೂ ಹಿಂದುಸ್ತಾನದ ಹವೆಗೂ ಬಹಳ ಹೋಲಿಕೆಯಿರುವುದರಿಂದ ಈ ಭಾಗವು ನಮ್ಮ ಗುಣಸ್ವಭಾವಗಳನ್ನು ಹೋಲಿಸಿಕೊಂಡು ವಿಚಾರಮಾಡಲಿಕ್ಕೆ ಬಹಳ ಚೆನ್ನಾಗಿದೆ. ಆದ್ದರಿಂದ ಅದನ್ನಿಲ್ಲಿ ಕೊಟ್ಟಿದೆ.

ಇಂಗ್ಲಂಡದ ಹವೆಯು ಹಾಳು ಎಂದು ವಿಖ್ಯಾತಿಯಿದೆ. ಇಲ್ಲಿ ಹವೆಯು ಸುಂದರವಾದದ್ದೆಂದು ಹೇಳುವವರನ್ನು ಒಬ್ಬರನ್ನೂ ನಾನು ಕಾಣೆ, ಜಗತ್ತಿನಲ್ಲಿ ಇದು ಬಹಳ ಕಾಡು ಹವೆಯೆಂದು ನಾನೂ ಒಪ್ಪಿಕೊಳ್ಳುತ್ತೇನೆ. ಇದೇ ಸರ್ವೋತ್ಕೃಷ್ಟವೆಂದು ನನ್ನ ಮನವರಿಕೆಯಾಗಿದೆ. ಈ ಹವೆಯು ಮನಸ್ಸನ್ನು ಕುಗ್ಗಿಸುವುದು ನಿಜ; ಆದರೆ ಇದರಿಂದ ಇಬ್ಬಗೆಯ ಲಾಭಗಳಾಗಿವೆ; ಮನುಷ್ಯನಲ್ಲಿರುವ ಉತ್ಸಾಹಶಕ್ತಿಯನ್ನು ತಾಳಗೆಟ್ಟು ಹೆಚ್ಚಾಗಗೊಡುವದಿಲ್ಲೆಂಬದು ಒಂದು ಲಾಭ; ಜೀವನ ಜ್ಯೋತಿಯು ಧುಗುಧುಗಿಲ್ಲೆಂದು ಒಮ್ಮೆಲೆ ಹೊತ್ತಿಕೊಳ್ಳದೆ ಶಾಂತವಾಗಿ ನಿಧಾನವಾಗಿ ಉರಿಯುವಂತೆ ತಡೆಯನ್ನುಂಟುಮಾಡಿದೆ.

ಇಂಗ್ಲಂಡದ ಹವೆಯು ಉತ್ತೇಜಕವಿಲ್ಲ. ಹುಚ್ಚು ಬೆಳೆ ಇಲ್ಲಿಲ್ಲ. ಬಣ್ಣಬಣ್ಣದ ಹೂಗಿಡಗಳು ಹಕ್ಕಿ ಪಕ್ಷಿಗಳಿಲ್ಲ, ಅದ್ವಿತಿಯ ಪ್ರತಿಭಾಶಕ್ತಿಯ ಜನರಿಲ್ಲ. ಈ ಮಂಜಿನಿಂದ ಮುಸುಕಿದ ಮಂದವಾದ ಹವೆಯ ನಾಡಿನಲ್ಲಿ ಹೊಳೆ ಹೊಳೆವುದೇನಿಲ್ಲ. ಆದರೆ ಆರೋಗ್ಯಕರವಾದ ಶಾಂತಿ ಸಮಾಧಾನದ ಯಾವ ಉದ್ದನೀರಿಗೂ ಹೋಗದ ನಡತೆ-ನಡೆವಳಿಕೆಯ ಜೀವನವೇ ಬೇರು ಹಿಡಿದಿರುತ್ತದೆ.

## ಅಮೇರಿಕೆ

ಈ ನಾಡು ಬಿಳಿಜನರ ಬಾಳ್ವೆಗೆ ತಕ್ಕದಿಲ್ಲ. ಇಲ್ಲಿ ಹುಟ್ಟಿದ್ದೇನು ! ಮುಗಿಲಿಗೆ ಮುದ್ದುಕೊಡುವ ಮನೆಗಳು; ಯಂತ್ರಗಳು, ಕೆಲಸ ಕಡಿಮೆಯಾಗುವಂತೆ ಮೈಯುಳಿಸಿಕೊಳ್ಳಲು ಅನುಕೂಲವಾಗುವಂತಹ ಯುಕ್ತಿಗಳು; ತಲೆತಿರುಕ ಧರ್ಮಾಭಿಮಾನಿಗಳು, ಮಾನಸ ಶಾಸ್ತ್ರಿಗಳು, ತೀವ್ರ ಭಾವನಾ ಪ್ರಧಾನರು, ಕಿಸುಕರು, ಪೇಟೆಂಟ ಔಷಧಿಗಳು, ಜೂದುಗಾರರು, ಸಮತಾವಾದಿಗಳು ಇಂತಿವೆಲ್ಲ ಹೆಚ್ಚು ಹೆಚ್ಚಾಗಿ ತಲೆಯೆತ್ತುತ್ತಲಿವೆ. ಇಲ್ಲಿ ಏನೇ ತಲೆದೋರಲಿ ಅದು ಅಳತೆಕಟ್ಟು ಮೀರಿ. ರಮ್ಯವಾದ, ಉತ್ತೇಜಕವಾದ, ಚಿತ್ತಾಕರ್ಷಕವಾದ ಹವಾಮಾನವೇ ಈ ಬಗೆಯ ಹುಚ್ಚು ಬೆಳವಿಗೆ ಕಾರಣವು. ಇಲ್ಲಿಯ ಹವೆಯಲ್ಲಿಯೇ ಗಡಿಬಿಡಿಯ ಒಂದು ಗುಣವಿದೆ. ಕೂಡಲೆ ಸಿರಿನಂತಿಕೆ ಪಟ್ಟನೆ ಏಳುವುದು, ಛಕ್ಕನೆ ಪಯಣ, ಭೋಂಕನೆ ಮುದ್ದು, ಪಟ್ಟನೆ ಮದುವೆ, ಪಟ್ಟನೆ ಬಿಡುಗಡೆ, ಸರ್ರನೆ ಬೆಳೆಗೆ, ಸಟ್ಟನೆ ಮುಪ್ಪು. ( ತನಗೆ ಬೇಡವಾದುದನ್ನು ಹೇಗೆ ಚಮತ್ಕಾರವಾಗಿ ಹೇಳುವರು ! ಸಂ. ಜ. ಕ. )

—ಹಾರ್ಪರ್ಸ ಮ್ಯಾಗೆಝಿನ್ (ಇಂಗ್ಲಂಡ)

## ತೀರ್ಥದಿಂದ ರೋಗ ನಿವಾರಣೆ

ಮಧ್ಯಯುಗದಲ್ಲಿ ಇಂಗ್ಲಂಡಿನಲ್ಲಿ ರೋಗಿಯನ್ನು ವಾಸಿ ಮಾಡುವುದೊಂದು ವಿಚಿತ್ರ ಪದ್ಧತಿಯಿದ್ದಿತು. ರೋಗಿಯನ್ನು ಚರ್ಚ ಮಂದಿರಕ್ಕೆ ಒಯ್ದು ಅಲ್ಲಿ ಸುಪ್ರಸಿದ್ಧ ಪುರಾತನ ಸಾಧುವಿನ ಗೋರಿಯ ಬದಿಯಲ್ಲಿ ಕುಳ್ಳಿರಿಸಿ, ರೋಗ ನಿವಾರಣೆಗಾಗಿ ಅತನಿಂದ ಪಾರಾಯಣ, ಪ್ರಾರ್ಥನೆಗಳನ್ನು ಮಾಡಿಸುತ್ತಿದ್ದರು. ಮತ್ತು ಪಾದ್ರಿ ಭಟ್ಟರು ಆ ಸಾಧುವಿನ ಎಲುಬು ( ಮೂಳೆ )ಗಳನ್ನು ಹಾಕಿ ಪವಿತ್ರಮಾಡಿದ ತೀರ್ಥವನ್ನು ಔಷಧದಂತೆ ಕುಡಿಯಲಿಕ್ಕೆ ಕೊಡುತ್ತಿದ್ದರು. ಇದಕ್ಕಾಗಿ ಕಾಂಟರ್ಬರಿ ಮತ್ತು ಡರಹಾಂಗಳ ತೀರ್ಥವು ನಾಡಿನಲ್ಲೆಲ್ಲ ಪ್ರಖ್ಯಾತವಾಗಿತ್ತು.

—ಕಾಟೇಜೂರಿ ರಿವ್ಯೂ (ಇಂಗ್ಲಂಡ)

## ಮಂಗಳೂರ ಜಲಯುದ್ಧ !

ಹೈದರ ಅಲ್ಲಿಯು ಬಹು ದೂರದರ್ಶಿಯಾಗಿದ್ದು ಅವನು ನೆಲದ ಮೇಲಿನ ಕಾಳಗಗಳಲ್ಲಿ ಬ್ರಿಟಿಶರನ್ನು ಹಣ್ಣುಮಾಡಿದಂತೆ ಜಲಯುದ್ಧದಲ್ಲಿಯೂ ಪ್ರತಿಭಟಿಸಬೇಕೆಂದು ನೌಕಾಸೇನೆಯನ್ನು ಸಜ್ಜುಗೊಳಿಸುತ್ತಲಿದ್ದನು. ಆದರೆ ಅನೇಕ ಕಾರಣಗಳಿಂದ ಈ ಭಾಗಕ್ಕೆ ಸಾಕಷ್ಟು ಗಮನಕೊಡಲಿಕ್ಕೆ ಆಗದ್ದರಿಂದ ಅದರಲ್ಲಿ ಅವನಿಗೆ ಯಶಸ್ಸು ದೊರೆಯದಿದ್ದರೆ ಸೋಜಿಗವಿಲ್ಲ. ಈ ಹೈದರಾಲಿಯ ನೌಕಾಸೇನೆಗೂ ಇಂಗ್ಲಿಷರ ಹಡಗುಪಡೆಗೂ ಆದ ಒಂದು ಯುದ್ಧದ ವರ್ಣನೆಯು ಹೀಗಿದೆ.

ಕ್ರಿ. ಶ. ೧೭೮೦ರಲ್ಲಿ ಪಶ್ಚಿಮ ಕರಾವಳಿಯಲ್ಲಿ ಸರ್. ಎಡ್ವರ್ಡ ಹ್ಯೂಸ್ ಎಂಬವನು ಹೈದರಾಲಿಯ ಬಲಿಷ್ಠವಾಗುತ್ತ ನಡೆದ ಹಡಗುಪಡೆಯನ್ನು ಬಗ್ಗುಬಡೆದನು. ಮಂಗಳೂರು ಹೈದರಾಲಿಯ ನೌಕಾಸೈನ್ಯದ ಠಾಣ್ಯವಾಗಿತ್ತು. ಡಿಸೆಂಬರ ೮ನೆಯ ತಾ. ಗೆ ಬ್ರಿಟಿಶ ಜಲಸೇನಾಪತಿಯ ಕಣ್ಣಿಗೆ ಮಂಗಳೂರಲ್ಲಿ ಹೈದರಾಲಿಯ ಹಡಗುಪಡೆಯು ಕಣ್ಣಿಗೆ ಬಿತ್ತು. ಯುದ್ಧಕ್ಕೆ ಆರಂಭಮಾಡಿ, ಇಪ್ಪತ್ತೆಂಟು ಹಡಗುಗಳಲ್ಲಿ ಒಂದನ್ನು ನಾಶ ಮಾಡಿದನು. ೧೨ ತೋಫುಗಳುಳ್ಳ ಒಂದು ನೌಕೆಯನ್ನು ಮುಳುಗಿಸಿದನು. ಇಂತು ಮೈಸೂರ ಹಡುಗುಪಡೆಯು ತನ್ನ ಬಾಲ್ಯದಲ್ಲಿಯೆ ಜಲಸಮಾಧಿಯನ್ನು ಹೊಂದಿತು.

—ಇಂಡಿಯನ್ ಹಿಸ್ಟೋರಿಕಲ್ ಕಾರ್ಟರ್ಲಿ, ಕಲಕತ್ತೆ

## ರಾಕ್ಷಸರೂ ಪಿಶಾಚಿಗಳೂ ಯಾರು ?

ರಾಕ್ಷಸ ಮತ್ತು ಪಿಶಾಚಿ ಎಂಬ ಶಬ್ದಗಳ ಅರ್ಥದ ಮೇಲಿಂದ ಈ ವರ್ಗದ ಜನರು ಮಾಂಸಾಹಾರಿಗಳಿದ್ದರೆಂದೂ ನರ

ಮಾಂಸಕ್ಕೆ ಹಂಬಲಿಸಿದವರೆಂದೂ ವ್ಯಕ್ತವಾಗುತ್ತಿದೆ. 'ಕುಯಿ' ತಂಡದ ಜನಾಂಗದವರು ಹಿಂದಕ್ಕೆ ಲಂಕೆಯ ರಾಕ್ಷಸರು ಪಾಲಿಸುತ್ತಿದ್ದ ನಡತೆ ನಡೆವಳಿಗಳನ್ನೇ ಇಂದಿಗೂ ಆಚರಿಸುತ್ತಿದ್ದಾರೆ. 'ಕುಯಿ' ಜನರು ೧೮೮೦ನೆಯ ಇಸವಿಯವರೆಗೂ ನರಬಲಿಯನ್ನು ಕೊಡುತ್ತಿದ್ದರೆಂದು ಇತಿಹಾಸವು ಹೇಳುತ್ತಿದೆ.

ಈ ಮಾತಿಗೆ ರಾಮಾಯಣದೊಳಗಿನ ಹಲವು ಉಲ್ಲೇಖಗಳು ಪೋಷಕವಾಗಿವೆ. ವಿರಾಧನು ತನ್ನ ಬಾಯಿಂದಲೆ ತಾನು ಜನಸ್ಥಾನ ನಿವಾಸಿಗಳ ಮಾಂಸಾಹಾರದ ಮೇಲೆ ಜೀವಿಸುತ್ತೇನೆಂದು ಹೇಳಿದ್ದಾನೆ (೩-೨-೧೨). ಸೀತೆಯು ಕಾಣದಾಗುತ್ತಲೆ ಅವಳು ರಾಕ್ಷಸರ ಬಾಯಿಗೆ ತುತ್ತಾಗಿರಬೇಕೆಂದು ರಾಮನು ತರ್ಕಿಸಿದನು (೩-೬೦-೩೦). ಸೀತೆಯು ತನ್ನ ಗುಣರೂಪಗಳಿಗಾಗಲಿ, ಕಾರ್ಯರ್ಕ್ಕಾಗಲಿ, ಸಂಪತ್ತಿಗಾಗಲಿ ಮನಸೋತು ಮದುವೆಯಾಗಲು ಒಪ್ಪದ್ದರಿಂದ "ನನ್ನ ಅಡಿಗೆಯವರು ನಿನ್ನನ್ನು ಕತ್ತರಿಸಿ ನನ್ನ ಮುಂಜಾವಿನ ಊಟಕ್ಕೆ ಪಕ್ವಾನ್ನವಾಗಿ ಮಾಡಬಹುದು," ಎಂದು ಅವಳಿಗೆ ಹೇಳಿದ್ದಾನೆ. (೩-೫೬-೨೯) ಇತ್ಯಾದಿ. — ಇಂಡಿಯನ್ ಹಿಸ್ಟಾರಿಕಲ್ ಕ್ವಾರ್ಟರ್ಲಿ (ಕಲಕತ್ತೆ)

---

## ಈಗಿನ ರಾಮಾಯಣವು ಎಂದು ಬರೆಯಲ್ಪಟ್ಟಿತು?

ವಾಲ್ಮೀಕಿ ಬರೆದನೆಂದೆನಿಸಿಕೊಳ್ಳುವ ರಾಮಾಯಣವು ಈಗ ಕಾಣುವ ರೂಪದಲ್ಲಿ ಎಂದಿನಿಂದ ರೂಢವಾಗಿದೆ? ಎಂಬ ಪ್ರಶ್ನೆಯನ್ನು ರಾಮಾಯಣದಲ್ಲಿಯೇ ಸಿಕ್ಕುವ ಐತಿಹಾಸಿಕ ಆಧಾರಗಳಿಂದಲೂ, ಆಗಿನ ಗ್ರಹ ನಕ್ಷತ್ರಾದಿಗಳ ಸ್ಥಿತಿಗತಿಗಳ ವರ್ಣನೆಯಿಂದಲೂ ಫಲಜ್ಯೋತಿಷದ ಉಲ್ಲೇಖಗಳಿಂದಲೂ ವಿಮರ್ಶಿಸಿದರೆ ಕ್ರಿಸ್ತಾಬ್ದ ೪೩೦ನೆಯ ಇಸವಿಯ ಸುಮಾರಿಗೆ ಬರೆಯಲ್ಪಟ್ಟಿರಬೇಕೆಂದು ಸಿದ್ಧವಾಗುತ್ತದೆ. ಈ ರಾಮಾಯಣದ ಲೇಖಕನು ಭಾರತೀಯ ಜ್ಯೋತಿಷಶಾಸ್ತ್ರದ ಜನಕನೆಂದೆನಿಸುವ ಆರ್ಯಭಟ್ಟನ ನಂತರದವನಾಗಿರಬೇಕು.

— ಜರ್ನಲ್ ಆಫ್. ದಿ. ಡಿಪಾರ್ಟಮೆಂಟ ಆಫ್ ಲೆಟರ್ಸ್

---

## ಸುಶಿಕ್ಷಿತ ಸ್ತ್ರೀಯೂ ಕನ್ಯಾದಾನವೂ

ಮದುವೆಯ ಮುನ್ನಾದಿನ ಒಬ್ಬ ಪದವೀಧರ ಸ್ತ್ರೀಯ ಅಂತಃಕರಣದಲ್ಲಿ ಎದ್ದ ಅನೇಕಾನೇಕ ವಿಚಾರಗಳ ಸುಂಟರಗಾಳಿಯ ಸ್ವಲ್ಪಾಂಶವನ್ನಿಲ್ಲಿ ಅವತರಿಸಿದೆ.

ನನ್ನ ತಾಯ್ತಂದೆಗಳು ಕೆಡಕುಮಾಡಲಿಕ್ಕಿಲ್ಲೆಂಬುದು ನಿಜ. ನಾನಂತೂ ಅವರ ಬಿ. ಎ., ಆದ ಮಗಳು. ನನಗೆ ತಕ್ಕ ವರನನ್ನೇ ನೋಡುವರೆಂದು ನನ್ನ ಮನಸು ಹೇಳುತ್ತಿತ್ತು. ಆದರೆ ನನ್ನ ತಾಯಿಗಾಗಲಿ, ನನ್ನ ತಂದೆಗಾಗಲಿ ಅವರ ದೈವಲಿಖಿತವು ತಿಳಿದ ಬಗೆ ಎಲ್ಲಿ! ಸುರೂಪಿ, ಬುದ್ಧಿವಂತ, ಧನವಂತನೆಂದು ಅವರು ಪರೀಕ್ಷಿಸಬಹುದು. ಆದರೆ ಆ ಬುದ್ಧಿ, ಮತ್ತು ದುಡ್ಡಿನ ವಿಚಾರವು ಸಂದಿಯ ಹೇಳಿಕೆಯಿಂದಲೆ ಇವರಿಗೆ ಗೊತ್ತಾಗಬೇಕಲ್ಲವೆ? ಸಿರಿವಂತರ ಸಾಲದ ಬಾಲವು ಮುಚ್ಚಿರುತ್ತದೆ; ವಿದ್ವಾಂಸರ ಮನಸ್ಸು ಅವಿದ್ವಾಂಸವಾಗಿರುತ್ತದೆಂದು ನನ್ನ ಇನ್ನೊಂದು ಮನಸ್ಸು ಹೆದರಿಸುತ್ತಿತ್ತು. ಇದಕ್ಕಿಂತಲೂ ಇನ್ನೂ ಒಂದು ಹೆದರಿಕೆಯಿತ್ತು. ಅವರು ನನ್ನ ಪತಿಯಾಗತಕ್ಕವರಿಗೆ ನನ್ನ ಮನಸ್ಸು ಒಂದುಗೂಡಬಹುದೊ! ಈ ವರೆಗೆ ನಾನು ಸ್ವಾತಂತ್ರ್ಯದಿಂದ ಬೆಳೆದ ಹೆಣ್ಣು ಮಗಳು. ನಾಳೆ ಒಮ್ಮೆಲೆ ಒಬ್ಬರ ಅಂಕಿತಳು ಆಗಬೇಕೆ? ಒಬ್ಬನ ಕೈಗೊಂಬೆ! ಆಗ ನನ್ನ ಹಣೇಬರಹದ ಬ್ರಹ್ಮದೇವರು ಅವರು ಈ ವರೆಗೂ ನನ್ನವು ನನ್ನವು ಎಂದು ಆಳವಾದ ವಿಚಾರದಿಂದ ನಿರ್ಧರಿಸಿದ್ದ ಕಲ್ಪನೆ ನಿರ್ಣಯಗಳನ್ನೆಲ್ಲ ಒಂದು ಕ್ಷಣಾರ್ಧದಲ್ಲಿ ಅಳಿಸಿಬಿಟ್ಟು ಅಂತರ್ಬಾಹ್ಯವನ್ನೆಲ್ಲ ಅವರ ವಶಕ್ಕೊಪ್ಪಿಸಬೇಕೆ? ಹೀಗಿದ್ದರೆ ಸ್ತ್ರೀಯರಿಗೆ ಈ ವಿಚಾರಶಕ್ತಿ, ಮನಸ್ಸುಗಳನ್ನೇತಕ್ಕೆ ಕೊಟ್ಟೆಯಾ ದೇವ! ಕನ್ಯೆಯಿದ್ದಾಗ ಅವಳ ದಾನಮಾಡುವುದೆಂದರೆ ಅದೇನೊ ಸ್ವಲ್ಪ ಸಹ್ಯವಾದ ಕಲ್ಪನೆ; ಆದರೆ ಮನಸ್ಸು ಬುದ್ಧಿಗಳಿಗೆ ಒಂದು ಮೂರ್ತಿಮತ್ತ್ವವು ಬಂದಬಳಿಕ ಸಹ ದಾನವೆ? ದಾನವು ಆರದು? ನಿರ್ಜೀವ ವಸ್ತುವಿನದು; ಪಶುಪಕ್ಷಿಗಳದು; ಸ್ತ್ರೀಯರದು! ಇತರ ಪ್ರಸಂಗದಲ್ಲಿ ಸ್ತ್ರೀ, ವೈಶ್ಯ, ಶೂದ್ರರನ್ನು ಒಂದೇ ಪಂಕ್ತಿಯಲ್ಲಿ ಸೇರಿಸುವುದು; ಅವಳ ಆಯುಷ್ಯದ ಮಹತ್ವದ ಸಂಕ್ರಮಣಕಾಲದಲ್ಲಿ ನಿರ್ಜೀವವಸ್ತುವಿನಂತೆ ಅವಳ ದಾನಮಾಡುವುದು! ಅದನ್ನು ಎಂಥಲ್ಲಿ? ಆದಾವನ ಅಂತಃಸ್ವರೂಪದ ಸ್ವಲ್ಪ ಕಲ್ಪನೆಯೂ ಕೂಡ ಆಗಿಲ್ಲವೊ ಅವನಿಗೆ!

—ಮನೋರಮಾ

---

## ಪರದೇಶದಲ್ಲಿ ಕನ್ನಡ ಚಿತ್ರಕಾರನಿಗೆ ಸನ್ಮಾನ

ಈ ವರ್ಷ ಸಿಂಹಳದ್ವೀಪದಲ್ಲಿ ಜರುಗಿದ ಚಿತ್ರಕಲಾ ಪ್ರದರ್ಶನದಲ್ಲಿ ಸನ್ಮಾನವನ್ನು ಹೊಂದಿದ ಚಿತ್ರಕಾರರಲ್ಲಿ ಶಾಂತಿನಿಕೇತನದಲ್ಲಿ ವ್ಯಾಸಂಗವನ್ನು ಮಾಡುತ್ತಿದ್ದ ಗೆಳೆಯರ ಗುಂಪಿನ ಶ್ರೀ. ನಾರಾಯಣ ಸಂಗಮ ಇವರೂ ಒಬ್ಬರಾಗಿದ್ದಾರೆ. ಸಿಲೋನ ಡೇಲಿ ನ್ಯೂಜ ಪತ್ರಿಕೆಯಲ್ಲಿ ಆ ಪ್ರದರ್ಶನಕ್ಕೆ ಒಂದ ಪ್ರಮುಖ ಚಿತ್ರಗಳಲ್ಲಿ ಆರಿಸಿ ಆರಿಸಿ ಕೆಲವುಗಳನ್ನು ಪ್ರಕಟಿಸಿ ಒಂದು ಲೇಖನವು ಪ್ರಕಟವಾಗಿದೆ. ಅವುಗಳಲ್ಲಿ ಶ್ರೀ. ಸಂಗಮ ಇವರ "ಪ್ರೀತಿಪೂರ"ವು ಮಹತ್ವದ ಸ್ಥಾನವನ್ನು ಹೊಂದಿದೆ. ಈ ಚಿತ್ರವು ಜಯಕರ್ನಾಟಕದ ಈ ವರ್ಷದ ೩ನೆಯ ಸಂಚಿಕೆಯಲ್ಲಿ ಅಚ್ಚಾಗಿದೆಯೆಂಬದನ್ನು ನಮ್ಮ ವಾಚಕರಿಗೆ ಬೇರೆಯಾಗಿ ಹೇಳಬೇಕಾಗಿಲ್ಲ.

---

## ಕೆಪ್ಟನ್ ಎನ್. ಆರ್. ಉಭಯರ ಅಕಾಲ ಮರಣ.

ದಕ್ಷಿಣ ಕನ್ನಡಿಗರಾಗಿದ್ದು ಮದ್ರಾಸಿನಲ್ಲಿ ಸಾರ್ವಜನಿಕ ಆರೋಗ್ಯಖಾತೆಯ ಡೈರೆಕ್ಟರರಾಗಿದ್ದ ಕೆಪ್ಟನ್ ಎನ್. ಆರ್. ಉಭಯರು ಕಳೆದ ತಾ. ೨೬ನೇ ಬೆಳಿಗ್ಗೆ ಹೃದ್ರೋಗದಿಂದ ಅಕಸ್ಮಾತ್ತಾಗಿ ಮೃತಹೊಂದಿರುವರೆಂದು ತಿಳಿಸಲು ಅತ್ಯಂತ ವಿಷಾದವೆನಿಸುತ್ತದೆ. ತಾ. ೨೬ನೇ ಬೆಳಿಗ್ಗೆ ೩ ಘಂಟೆಯ ವರೆಗೆ ಕೆಪ್ಟನ್ ಉಭಯರು ಸುಖವಾಗಿದ್ದು ಸ್ನಾನಕ್ಕಾಗಿ ಅಣಿ ಮಾಡುತ್ತಿದ್ದಾಗ ಹಠಾತ್ತಾಗಿ ಹೃದಯಪ್ರದೇಶದಲ್ಲಿ ನೋವುಂಟಾಗಿ ತಲೆ ತಿರುಗಿತು. ಕೆಲವು ನಿಮಿಷಗಳನಂತರ ವೈದ್ಯರು ಬಂದು ಚಿಕಿತ್ಸೆ ನಡಿಸುವ ಮೊದಲೇ ಮೃತರಾದರು. ಇವರು ೧೮೮೦ರಲ್ಲು ಮಂಗಳೂರಲ್ಲಿ ಹುಟ್ಟಿ ವಿದ್ಯೆಪಡೆದು ಮದ್ರಾಸ್ ಮಡಿಕಲ್ ಕೊಲೆಜಿಗೆ ಸೇರಿ ಅಲ್ಲಿಂದ ಎಡಿನ್‌ಬರೋ ಮೆಡಿಕಲ್ ಇನ್‌ಸ್ಟಿಟ್ಯೂಟಗೆ ಹೋಗಿ ಎಲ್. ಆರ್. ಸಿ. ಪಿ., ಡಿ. ಪಿ. ಎಚ್. ಮೊದಲಾದ ಮೂರು ಬಗೆಯ ಪದವಿ ಪಡೆದು ೧೯೧೩ರಲ್ಲು ಹಿಂದುದೇಶಕ್ಕೆ ಬಂದು ಮದ್ರಾಸ್ ಕೊರ್ಪರೇಶನಿನಅಸಿಸ್ಟಾಂಟ್ ಹೆಲ್ಥ ಆಫೀಸರರಾಗಿ ನೇಮಕ ಹೊಂದಿದರು. ಯುರೋಪಿನ ಮಹಾ ಯುದ್ಧವಾರಂಭವಾದಾಗ ಮೆಸಪೊಟೋಮಿಯಕ್ಕೆ ಹೋಗಿ ಅಲ್ಲಿ ಕಮಿಶನ್‌ಂಡ್ ಅಧಿಕಾರಿಯಾಗಿ ಕೆಲಸ ಮಾಡಿದರು. ಯುದ್ಧದಲ್ಲಿ ಟರ್ಕಿಯವರ ಕೈದಿಯಾಗಿ ೨ತ್ತಿ ವರ್ಷ ಕಾರಾಗ್ರಹವನ್ನನುಭವಿಸಿದರು. ಒಪ್ಪಂದದ ನಂತರ ಬಿಡುಗಡೆ ಹೊಂದಲ್ಪಟ್ಟು ಮುಲ್ತಾನಿಗೆ ಬಂದು ಅಲ್ಲೊಂದು ಸೇನಾದಳದಲ್ಲಿದ್ದರು. ನಂತರ ೧೯೨೦ರಲ್ಲು ಮದ್ರಾಸಿನ ಡಿಪ್ಯೂಟಿ ಸೆನಿಟರಿ ಕಮಿಶನರಾಗಿ ನೇಮಿಸಲ್ಪಟ್ಟು ೧೯೨೩ರಲ್ಲು ಸಾರ್ವಜನಿಕ ಆರೋಗ್ಯ ಖಾತೆಯ ಅಸಿಸ್ಟೆಂಟ್ ಡೈರೆಕ್ಟರರ ಹುದ್ದೆ ಪಡೆದರು. ಕರ್ನಲ್ ರಸ್ಸೆಲರ ನಂತರ ಕೆಪ್ಟನ್ ಉಭಯರು ಸಾರ್ವಜನಿಕ ಆರೋಗ್ಯ ಖಾತೆಯ ಡೈರೆಕ್ಟರರಾಗಿ ದಿವಂಗತರಾಗುವನಕ ಕೆಲಸ ಮಾಡಿರುವರು. ಶ್ರೀ। ಎನ್. ಆರ್. ಉಭಯರು ಉದಾರಿಯೂ, ಸಹಾನುಭೂತಿಪರರೂ, ವಿನಯಪರರೂ ಸಹವಾಸ ಪ್ರಿಯ ಅಧಿಕಾರಿಯೂಗಿದ್ದು ಎಲ್ಲವರ ಪ್ರೀತಿಗೂ ಪಾತ್ರರಾಗಿದ್ದರು. ದಿವಂಗತರ ಪತ್ನಿ ಮತ್ತು ಇಬ್ಬರು ಸಹೋದರರಿರುವರಲ್ಲದೆ ಮಕ್ಕಳಿರುವದಿಲ್ಲ.

—ನವಯುಗ

**ಕೈ. ವಾ. ಶ್ರೀಮಾನ್ ಸಕ್ಕರಿ ಶಂಕರಪ್ಪನವರು**

ಬಾಗಿಲುಕೋಟೆಯ ಸುಪ್ರಸಿದ್ಧ ನಾಗರಿಕರು. ಇಳಕಲ್ಲ, ಬಾಗಿಲುಕೋಟೆಗಳ ಪ್ರಖ್ಯಾತ ವ್ಯಾಪಾರಸ್ಥರು. ಇವರ ನಿಧನದಿಂದ ದೇವಾಂಗ ಸಮಾಜದ್ದಷ್ಟೇ ಅಲ್ಲ, ಉತ್ತರಕರ್ನಾಟಕದ ಸಾರ್ವಜನಿಕ ಚಳವಳಿಗಳಿಗೇ ದೊಡ್ಡ ಹಾನಿ ತಟ್ಟಿದಂತೆ ಆಗಿದೆ. ಉದಾರ ಸ್ವಭಾವದವರೂ ಲೋಕೋಪಕಾರದ ಬುದ್ಧಿಯುಳ್ಳವರೂ ಆದುದರಿಂದ ಇವರು ಅನೇಕ ಸಂಸ್ಥೆಗಳಿಗೆ ಚನ್ನಾಗಿ ಧನ ಸಹಾಯ ಮಾಡಿದ್ದಾರೆ. ಕನ್ನಡದ ವಿಶೇಷ ಅಭಿಮಾನಿಗಳು. ಕರ್ನಾಟಕ ವರ್ತಕಸಂಘದ ಆಧಾರಸ್ತಂಭಗಳಲ್ಲಿ ಒಬ್ಬರು. ಜಯಕರ್ನಾಟಕದ ಬಗ್ಗೆ ಇವರಿಗೆ ಚಿರಪ್ರೀತಿ ಇತ್ತು. ಇಂತಹರನ್ನು ಕರ್ನಾಟಕದ ಈಗಿನ ಪರಿಸ್ಥಿತಿಯಲ್ಲಿ ಅಗಲಬೇಕಾದುದರಿಂದ ಇನ್ನಿಷ್ಟು ದುಃಖದ ಸಂಗತಿಯಾಗಿದೆ. ಆದರೂ ಇವರ ಚಿರಂಜೀವರು ಸುಶಿಕ್ಷಿತರಾಗಿದ್ದು ತಮ್ಮ ಪೂಜ್ಯ ತಂದೆಯವರ ಸಾರ್ವಜನಿಕ ಕಾರ್ಯದ ಪರಂಪರೆಯನ್ನು ಒಂದು ತೂಕ ಹೆಚ್ಚಿಗೆ ಮಾಡಿ ಮುಂದಕ್ಕೆ ಸಾಗಿಸುವರೆಂದು ನಂಬಿದ್ದೇವೆ.

**ನವಿಲುಗುಂದದ ಶ್ರೀ ಬಮ್ಮಿಗಟ್ಟಿ ರಾಮರಾಯರು**



ಹೋದ ತಿಂಗಳು ದಿವಂಗತರಾದರೆಂದು ತಿಳಿಸಲು ವಿಷಾದವಾಗುತ್ತದೆ. ಊರ ಹಿರಿಯರಲ್ಲೊಬ್ಬರಾದ ಇವರ ಮರಣದಿಂದ ನವಲಗುಂದದ ಸಾರ್ವಜನಿಕ ಕಾರ್ಯಕರ್ತೃಗಳೊಬ್ಬರು ಇಲ್ಲದಂತಾಯಿತು. ನವಿಲುಗುಂದದ ಲಾಲಗಡಿ ಹನುಮಂತ ದೇವಸ್ಥಾನದ ಜೀರ್ಣೋದ್ಧಾರದ ಕಾರ್ಯದಲ್ಲಿ ಇವರು ಬಹಳ ಶ್ರಮ ವಹಿಸಿದ್ದರು. ಇವರ ಆತ್ಮಕ್ಕೆ ದೇವರು ಶಾಂತಿಯನ್ನೀಯಲಿ.

# ಸಾಹಿತ್ಯಲೋಕ

"ಶ್ರೀ ಶಾಂಕರ ಭಾಷ್ಯ ಸಮೇತವಾದ ಶ್ರೀಮ ದ್ಭಗವದ್ಗೀತೆಯು"—ಅಧ್ಯಾಯ ೧–೩. ಅನುವಾದಕರು, ಶ್ರೀ ವೈ. ಸುಬ್ಬರಾಯರು, ಬೆಂಗಳೂರು. ಕ್ರೌನ್ ಆಕಾರದ ೧೫೦ ಪುಟಗಳು. ಬೆಂಗಳೂರು ನಗರದ ಅಧ್ಯಾತ್ಮ ಗ್ರಂಥಾ ವಳಿಗೆ ಸೇರಿಮದು. ಬೆಲೆ ೧ ರೂಪಾಯಿ. ಶಿಷ್ಯಸಮೇತ ಶಂಕರಾಚಾರ್ಯರ ಚಿತ್ರವಿದೆ. ಶ್ಲೋಕಗಳು ಕನ್ನಡದಲ್ಲಿಯೇ ಇವೆ. ಮೂಲಭಾಷ್ಯವಿದರಲ್ಲಿಲ್ಲ. ಧಾಳವಾದ ಅಕ್ಷರಗಳಲ್ಲಿ ಮುದ್ರಿಸಿದ ವಿಷಯವಿಭಾಗಗಳೂ, ಹಿತವೂ ಮಿತವೂ ಆದ ಟಿಪ್ಪಣಿಗಳೂ ಇದರಲ್ಲಿವೆ. ಗ್ರಂಥವು ಅನುವಾದವಾಗಿರದೆ ಮೂಲವೇ ಆಗಿದೆಯೆಂಬುವಷ್ಟು ಓಜಸ್ವಿಯೂ ಪರಿಣಾಮಕಾ ರಿಯೂ ಆಗಿದೆ. ಆದರೆ ಮೂಲಭಾಷ್ಯದ ಮೇರೆಯನ್ನು ಮೀರಿಲ್ಲ. ಈ ಮಾತಿಗೆ ೨೩, ೩೧, ೪೩, ೫೨, ೫೩, ೭೧, ೧೦೪, ೧೧೬, ೧೪೩ ಪುಟಗಳಲ್ಲಿಯ ಅನುವಾದವೇ—ಅದು ಅಕ್ಷರಶಃ ಅನುವಾದವಾಗಿ ಕ್ಲಿಷ್ಟವಾಗಿದ್ದರೂ—ಸ್ವತಃ ಸಾಕ್ಷಿ ಯಾಗಿದೆ. ಕೃತಿಯು ಸ್ತೋತ್ರಾರ್ಹವಾಗಿದೆ.

ವಿವಿಧ ವಿಷಯುಗಳನ್ನು ವಿಂಗಡಿಸಿ ದಪ್ಪ ಅಕ್ಷರಗಳಿಂದ ಎದ್ದು ಕಾಣುವಂತೆ ಮಾಡಿರುವುದರಿಂದ ವಿಷಯ ವಿವೇಚನವು ಸುಲಭಗಮ್ಯವಾಗಿದೆ. ಪೂರ್ವಪಕ್ಷವಾವುದು ಉತ್ತರಪಕ್ಷವಾವು ದೆಂದು ತಿಳಿಯದೆ ಗೊಂದಲದಲ್ಲಿ ಬೀಳುವ ಅಗತ್ಯವಿಲ್ಲ. ಉದ್ದುದ್ದವಾದ ಸಂಸ್ಕೃತವಾಕ್ಯಗಳನ್ನು ಒಡೆದು ಚಿಕ್ಕ ಚಿಕ್ಕ ವಾಕ್ಯರೂಪದಿಂದ ಪ್ರಶಸ್ತವಾಗಿಟ್ಟಿದ್ದು ಉಪಕಾರವೇ ಸರಿ. ಅನುವಾದಕರು ಅಚ್ಚಗನ್ನಡ ಶಬ್ದಗಳನ್ನೇ ಆದಷ್ಟು ಉಪ ಯೋಗಿಸಿ ಕ್ಲಿಷ್ಟವಾದ ಕಠಿಣ ತತ್ತ್ವಜ್ಞಾನದ ವಿಷಯವನ್ನು ಸಹ ನಿಚ್ಚಳವಾಗುವಂತೆ ಮಾಡಲೆತ್ನಿಸಿದ್ದು ಯೋಗ್ಯವೇ ಆಗಿದೆ.

ಕಠಿಣ ವಿಷಯಪ್ರತಿಪಾದಕವೂ, ಅನುವಾದಕರ ಅಭಿಪ್ರಾಯ ಬೋಧಕವೂ ನವೀನವಿಷಯಸೂಚಕವೂ ಆದ ಟಿಪ್ಪಣಿಯ ಅಂಶಗಳು ಯೋಗ್ಯ ಸಲಹೆಗಳನ್ನು ಕೊಡುವವಲ್ಲದೆ ಮತಾಂ ತರದವರ ಅಭಿಪ್ರಾಯಗಳಿಗೆ ಮಾರ್ಗದರ್ಶಕವಾಗಿರುವವು. ಭಾಷ್ಯದೊಳಗಿನ ವಿರೋಧಾಭಾಸಗಳನ್ನು ಪರಿಹರಿಸುವಂಥವು ಗಳಾಗಿವೆ. ಆದರೂ ಕೆಲವೆಡೆಗೆ ಓದುಗರ ಸಮಾಧಾನವಾಗು ವಂತಿಲ್ಲ.

ಗೀ. ಅ. ೨, ೧೬ ದ ಅನುವಾದದಲ್ಲಿ (ಪುಟ ೩೮, ೩೯) ಯ ಟಿಪ್ಪಣಿಗಳು ಅಮೂಲ್ಯವಾಗಿದ್ದರೂ ಅಪೂರ್ಣವಾಗಿವೆ. "ಸಮಾ ನಾಧಿಕರಣ" ಮತ್ತು "ವಿಶೇಷಣ ವಿಷಯ ಸದ್ಬುದ್ಧಿ"ಗಳು ಸದ್ಯದ ಗ್ರಂಥದಲ್ಲಿದ್ದಕ್ಕಿದ್ದ ಹಾಗೆ ಸಾಮಾನ್ಯರಿಗೆ ತಿಳಿಯವು! ೩೭ನೇ ಪುಟದ "ಸದಸದ್ವಾದ"ದ ಮೇಲೆ ಇನ್ನೂ ಹೆಚ್ಚು ಬೆಳಕು ಬೀಳಬೇಕು. ಏಕೆಂದರೆ ಆಚಾರ್ಯರ ಮಹತ್ತ್ವದ ಭಾಗಗಳಲ್ಲಿ ಅದು ಒಂದಾಗಿದ್ದು, ತಿಳಿಯಲು ಕಠಿಣವೇ ಆಗಿದೆ. ಆದರೆ ಪರಿಶಿಷ್ಟ ನೋಡಿರೆಂದು ಅನುವಾದಕರೇ ಹೇಳಿರುವುದರಿಂದ ಈಗ ಸುಮ್ಮನಿರಬೇಕಾಗಿದೆ. ೪೯ನೇ ಪುಟದ "ಆ ಪುರುಷನು ತಿಳಿಯಬೇಕು." ಎಂಬದು ಸಹಜವಾಗಿ ತಿಳಿಯದು. ಅಕ್ಷರಶಃ ಭಾಷಾಂತರ ಮಾಡಹೋಗಿರುವುದರಿಂದ ಈ ದೋಷವಾದಂತೆ ತೋರುತ್ತದೆ. ಅದಕ್ಕೆ ವಿವೇಚಕ ಟಿಪ್ಪಣಿಗಳು ಬೇಕು. ೫೦ನೇ ಪುಟದ ಕಡೆಯ ವಾಕ್ಯದೊಳಗಿನ ಅನುವಾದವು ಸರಲವಾಗಿಲ್ಲೆಂ ಬುದು ನಿಜ. ಆದರೆ ಅದರ ಟಿಪ್ಪಣಿಗಳು ಚೆನ್ನಾಗಿವೆ. "ಜ್ಞಾನ ಸನ್ಯಾಸ ಲಕ್ಷಣಂ" ಎಂಬದೂ ಸಂದಿಗ್ಧವೇ ಆಗಿದೆ. ಜ್ಞಾನವು ಸರ್ವಕರ್ಮತ್ಯಾಗಜನ್ಯವೋ ಅಥವಾ ಸರ್ವಕರ್ಮತ್ಯಾಗ ಜನಕವೋ ?

೨ನೇ ಪುಟ ೩ನೇ ಸಾಲು "ತತೋಽನ್ಯಾನ್" ಎಂಬುದಕ್ಕೆ "ಆ ಮೇಲೆ ಬೇರೆಯವರನ್ನು" ಎಂಬ ಅರ್ಥವು ತಪ್ಪಾಗುತ್ತ ದೆಂದು ನಮ್ಮ ಮತ. ಅದು "ಅವರಿಂದ ಭಿನ್ನರಾದವರನ್ನು" ಎಂದಾಗಬೇಕು. ಅನುವಾದದ ಅರ್ಥದಂತೆ ದೇವರು ಸನಕಾದಿ ಗಳನ್ನು ಮರೀಚ್ಯಾದಿಗಳನಂತರ ಹುಟ್ಟಿಸಿದನೆಂದಾಗುವುದು. ಆದರೆ ಪುರಾಣಾದಿಗಳಲ್ಲಿ ತಿರಗುಮುರಗು ವರ್ಣನೆಯಿದೆ. ಅಗ್ರೇ ಎಂಬುದಕ್ಕೆ "ಸೃಷ್ಟಿಕಾಲದಲ್ಲಿ" ಎಂದರ್ಥ ಮಾಡಿದರೆ ಭಾಷ್ಯ ದೋಷಪರಿಹಾರವಾಗುವುದು. ಇನ್ನೂ ಒಂದೆರಡು ಚಿಕ್ಕಪುಟ್ಟ ದೋಷಗಳಿವೆ. ಆದರೆ ಅವು ಅಷ್ಟು ಮಹತ್ತ್ವದವಲ್ಲ. ಒಟ್ಟಾರೆ ಅತ್ಯಲ್ಪ ಅಚ್ಚಿನ ದೋಷಗಳಿದ್ದು ಸರಲವೂ ಸುಗಮವೂ ಆದ ವಿವೇಚನೆಯೊಂದಿಗೆ ಕೂಡಿದ ಈ ಶಾಂಕರ ಭಾಷ್ಯಾನುವಾದ ವನ್ನು ಕನ್ನಡಿಗರು ಅಗತ್ಯ ಸಂಗ್ರಹಿಸಿ ಓದಬೇಕು. ಕರ್ನಾಟ ಕದ ಹಿತೇಚ್ಛುಗಳು ಶ್ರೀಮಾನ್ ಸುಬ್ಬರಾಯರ ಈ ಕಾರ್ಯದಲ್ಲಿ ತುಂಬಾ ನೆರವಾಗುವರೆಂದು ನಂಬುತ್ತೇವೆ.

**ರಹಸ್ಯೋಪದೇಶ:**—ಲೇಖಕರು, ಶ್ರೀ ವೈ. ಸುಬ್ಬರಾವ; ಪ್ರಕಾಶಕರು ಅಧ್ಯಾತ್ಮ ಕಾರ್ಯಾಲಯ ಬೆಂಗಳೂರು. ಅರೇಬಿಯನ್ ನೈಟ್ಸನ ಕಥೆಯಂತೆನಿಸುತ್ತದೆ. ವೇದಾಂತ ತತ್ವಗಳನ್ನುಪದೇಶಿಸಲು ಉಳಿದ ಮಾರ್ಗಗಳನ್ನು ಅವಲಂಬಿಸುವದು ಈ ಕಾಲದಲ್ಲಿ ಹಿತ. ದೇಹಾಭಿಮಾನವನ್ನು ತೊರೆಯಬೇಕೆಂಬದೇ ಇದರ ಮುಖ್ಯ ಬೋಧ. ಪಾರಮಾರ್ಥಿಕ ವಿಷಯಗಳನ್ನು ವ್ಯಾವಹಾರಿಕ ಉದಾಹರಣೆಗಳಿಂದ ಬೋಧಿಸುವದು ಪರಿಣಾಮಕರ. ಭಾಗವತದಲ್ಲಿಯ ೨೪ ಗುರುಗಳ ಕಥೆಗಳು ಮನದಲ್ಲಿ ಬಿಂಬಿಸುವಷ್ಟು ಇನ್ನೂ ಯಾವವೂ ಇಲ್ಲೆಂದು ಹೇಳಬಹುದು. ಆ ಶೈಲಿಯನ್ನು ಹಿಡಿದರೊಳಿತು.

**ಪ್ರಬೋಧಕ (ಮಾಸಪತ್ರಿಕೆ):**— ಬೊಂಬಾಯಿನ ಕನ್ನಡ ಮಿತ್ರ ಮಂಡಲಿಯಿಂದ ಪ್ರಕಟವಾಗುವ ಈ ಮಾಸಪತ್ರಿಕೆಯ ಜುಲೈ, ಅಗಸ್ಟ ತಿಂಗಳುಗಳ ಸಂಚಿಕೆಗಳು ಕೈಸೇರಿವೆ. ನೂತನ ಬಂಧುವಿಗೆ ಸುಸ್ವಾಗತವು. ಮುಂಬಯಿಯಂಥ ಊರಿನಲ್ಲಿ ಈ ಕನ್ನಡ ಮಾಸಪತ್ರಿಕೆಯು ಅನೇಕ ಜನರ ಪ್ರೋತ್ಸಾಹನದೊಂದಿಗೆ ಮುಂದೆ ಬಂದಿದೆ. ಅಲ್ಲಿಯ ಕನ್ನಡಿಗರೆಲ್ಲರಿಗೂ ಒಂದು ಮುಖಪತ್ರವಾಗಿ ಪ್ರಬೋಧಕವು ಪ್ರಕಟವಾದುದಕ್ಕೆ ನಮಗೆ ಆನಂದವಾಗುತ್ತದೆ. ಮೊದಲನೆಯ ಸಂಚಿಕೆಯ ಅವಲೋಕನದಿಂದ ಕಥಾ ಸಾಹಿತ್ಯದಂಥ ರಂಜಕ ವಿಷಯಗಳೂ ಆರೋಗ್ಯ ವಿಜ್ಞಾನಗಳಂಥ ಉಪಯುಕ್ತ ವಿಷಯಗಳೂ ತಿಳಿಯಾದ ಭಾಷೆಯಲ್ಲಿ ಪ್ರಕಟವಾಗುತ್ತಿವೆಯೆಂದು ಕಂಡುಬರುವದು. ಶ್ರೀ ಬಿ. ಸಿ. ಎಸ್ ಶರ್ಮರಂಥ ಸ್ವತಂತ್ರ ಶೈಲಿಯ ರಸಿಕ ಕತೆಗಾರರ ಕತೆಗಳೂ ಶ್ರೀ. ಕೆ. ವ್ಹಿ. ಪುಟ್ಟಪ್ಪನವರಂಥವರ ನಾಟಕ ಕವಿತೆಗಳೂ ಈಗ ಬಿಡ್ಡಾಗಿವೆ. ಟಾಲಸ್ಟಾಯರ ರಶಿಯನ್ ವಾಙ್ಮಯದಿಂದಲೂ ಮೋಪಸಾಂತ್ ಎಂಬವರ ಫ್ರೆಂಚ ವಾಙ್ಮಯದಿಂದಲೂ ಕತೆಗಳು ಅನುವಾದಿಸಲ್ಪಟ್ಟಿದ್ದು ಕನ್ನಡ ಸಾಹಿತ್ಯಕ್ಕೇ ಒಂದು ಹೊಸ ಆಭರಣವಾಗಿದೆ. ಕರ್ನಾಟಕದ ನವಜೀವನದ ಕುರುಹೆಂದು ಮುಂದೆ ಬಂದ ನವಬಂಧುವಿಗೆ ಶ್ರೇಯೋಭಿವೃದ್ಧಿಯುಂಟಾಗಲೆಂದು ಆಶಿಸುವೆವು. ಡೆಮ್ಮೈ ಆಕಾರದ ೭೨ ಪುಟಗಳು; ಚಂದಾ ೪ ರೂ. ವಿಳಾಸ—

ಪ್ರಬೋಧಕ ಕಾರ್ಯಾಲಯ

C/o

ಮೈಸೂರ ಅಸೋಶಿಯೇಶನ್

ಮಾತುಂಗಾ, ಬೊಂಬೆ

**ವೀರ ಮುಸ್ಲಿಂ**— (ಮಾಸಪತ್ರಿಕೆ) ಸಂಪಾದಕರು ಶ್ರೀ ಇಮಾಮುದ್ದೀನ್. ಆರ್. ಕಿಲ್ಲೆದಾರ್, ಹಳ್ಯಾಳ (ಉ. ಕ.), ಚಂದಾ ೨-೮-೦ ಡೆಮಿ ಆಕಾರದ ೩೨ ಪುಟಗಳು.

ಮುಸಲ್ಮಾನ ಬಾಂಧವರಿಂದ ಹೊರಟ ಕನ್ನಡ ಪತ್ರಿಕೆಯೆಂದರೆ ಇದೇ ಮೊದಲನೆಯದು. ಕರ್ನಾಟಕದ ಮುಸಲ್ಮಾನರೂ ಕ್ರಿಶ್ಚನರೂ ಕನ್ನಡದ ಮುಖಾಂತರ ತಮ್ಮ ವಿಚಾರಗಳನ್ನು ಹೇಳುವದು ಕರ್ನಾಟಕ ಏಕೀಕರಣದ ದೃಷ್ಟಿಯಿಂದ ಒಂದು ಶುಭ ಲಕ್ಷಣವೇ ಸರಿ. ಅಗಸ್ಟದ ಮೊದಲನೇ ಸಂಚಿಕೆಯಲ್ಲಿ ಪೈಗಂಬರರ ಸತ್ಯೋಪದೇಶ, ನಮಾಜು, ಕರ್ನಾಟಕದ ಮುಸ್ಲಿಂ ಮಹಿಳೆಯರ ಶಿಕ್ಷಣ ಮೊದಲಾದ ಲೇಖಗಳು ಬಹಳೇ ಉಪಯುಕ್ತವಾಗಿವೆ. ಭಾಷೆಯಲ್ಲಿ ಒಂದು ಬಗೆಯ ಧೀರತೆಯುಂಟು. ಕೆಲವು ಹಾಸ್ಯಲಹರಿಗಳೂ ಇವೆ. ಹಳ್ಯಾಳದಂಥ ಹಳ್ಳಿಯ ಊರಿಂದ ಹೊರಟು ಬಡವರಿಂದ ಮುಂದೆ ಬಂದ ಈ ಪತ್ರಿಕೆಗೆ ಸಹಾಯ ಮಾಡಬೇಕೆಂದು ಸಂಪಾದಕರು ವಿಜ್ಞಾಪನೆ ಮಾಡಿಕೊಂಡದ್ದನ್ನು ನಾವೂ ಸಮರ್ಥಿಸುತ್ತೇವೆ. ವೀರ ಮುಸ್ಲಿಂ ಬಂಧುವಿಗೆ ಸುಸ್ವಾಗತವು. ಈ ಬಂಧುವಿನ ಅಭಿವೃದ್ಧಿಯು ಕನ್ನಡಿಗರನ್ನೇ ಕೂಡಿದೆ. ಅದನ್ನವರು ಮಾಡಿಯಾರೆಂದು ನಮಗೆ ಭರವಸೆಯದೆ.

**श्रीरामायणांक** ಹಾಗೂ **श्रीरामायणपरिशिष्टांक** ಎಂಬ ಹಿಂದೀ ಭಾಷೆಯ ಪುಸ್ತಕಗಳು **कल्याण कार्यालय, गोरखपुर** ಎಂಬಲ್ಲಿಂದ ನಮಗೆ ಬಂದಿವೆ. ಪ್ರತಿವರ್ಷವೂ ಇಂಥ ವಿಶಿಷ್ಟ ಅಂಕಗಳನ್ನು ಕಲ್ಯಾಣ ಪತ್ರಿಕೆಯವರು ಹೊರಡಿಸುತ್ತಿರುವರು. ಎರಡೂ ಪುಸ್ತಕಗಳೂ ಕೂಡಿ ಜಯಕರ್ನಾಟಕ ಆಕಾರದ ೬೦೦ ಪುಟಗಳಿವೆ; ಬೆಲೆ ೪ ರೂ. ಮಾತ್ರ; ರಾಮಾಯಣದ ವಿಷಯಕವಾದ ಎಲ್ಲ ಬಗೆಯ ಮಾಹಿತಿಯು ಇದರಲ್ಲಿ ದೊರೆಯುವದು. ೧೯ ಬಣ್ಣದ ಚಿತ್ರಗಳೂ ೧೪೧ ಸಾದಾ ಚಿತ್ರಗಳೂ ಇವೆ. ಅನೇಕಾನೇಕ ವಿದ್ವಾಂಸರಿಂದ ಲೇಖನಗಳು ಬರೆಯಲ್ಪಟ್ಟಿವೆ. ಅದ್ದರಿಂದ ಹಿಂದೀ ಬಲ್ಲ ಸಕಲ ಕರ್ನಾಟಕಸ್ಥರೂ ಈ ಪುಸ್ತಕಗಳನ್ನು ತರಿಸಿ ಓದಬೇಕೆಂದು ನಾವು ಆಗ್ರಹಪೂರ್ವಕವಾಗಿ ಸೂಚಿಸುತ್ತೇವೆ.

**ಪುರಂದರ ದಾಸರು**— (ದೃಶ್ಯ) ಲೇಖಕರು ವರವಣಿ ರಾಜಾರಾವ ಬಿ. ಎ., ಪ್ರಕಾಶಕರು ಸುಬೋಧ ಪ್ರಕಟನಾಲಯ, ಬೆಂಗಳೂರು. ಬೆಲೆ ೮ ಆಣೆ. ದಾಸವರ್ಯರ ಚರಿತ್ರೆಯು ಮೊದಲೇ ರಮ್ಯ. ನಾಟಕರೂಪದಲ್ಲಿ ವಿಶೇಷ ಮನೋಹರವಾಗುವದರಲ್ಲಿ ಸಂದೇಹವಿಲ್ಲ. ಭಾಷೆಯು ಸುಲಭವಾಗಿ.

ಟ್ರ್ಯಾನ್ಸಫರ ಸಿನರಿಗಳಿವೆ. ಮಧುರವಾದ ಪದಗಳಿವೆ. ಇಷ್ಟೆಲ್ಲ ಇದ್ದರೂ ಅಂಗಡಿಯಲ್ಲಿಯ ದೊಡ್ಡ ಗೊಂಬೆಗಳಂತೆ ಅಸಹಚರ್ಯ ( uncompanionable ). ಲೇಖಕರ ಕಲ್ಪಕತಾಮಾನವು ಶೂನ್ಯಾಂಶದ ಮೇಲೆ ವಿಶೇಷವೇನೂ ಇಲ್ಲ. ನಾಟ್ಯದ ಜೀವಾಳವಾದ ಸ್ವಭಾವ ಪರಿಪೋಷವಿಲ್ಲ. ನಾಟ್ಯ ಸಂಭಾಷಣೆಯಲ್ಲಿರಬೇಕಾದ ಚತುರತೆ ( pique ) ಇಲ್ಲ. ಬಂಧವು ತೀರ ಶಿಥಿಲ, ನಾಟಕದಲ್ಲಿಯ ಏಕ ಸೂತ್ರತೆಯೊಂದನ್ನು ಹುಡುಕಲು ಯತ್ನಿಸಿದೆವು. ಬಹುಜನರ ಬಾಯಲ್ಲಿರುವ ದಾಸರ ಪದಗಳನ್ನು ಕೆಲೆಹಾಕುವದೊಂದೇ ಎಂದೆನಿಸಿತು. ಉದಾಹರಣೆಗಾಗಿ ತಾಳಿಯ ಹರಿದು ಬಿಸಾಟ, ಕದವನಿಕ್ಕಿದಳಿದಕೋ, ಪಾಪೋಸು ಹೋದವಲ್ಲ, ಗುಡಗುಡಿಯ ಸೇದಿ ನೋಡೋ ಮುಂತಾದವೆಲ್ಲವನ್ನೂ ಈ ನಾಟಕದಲ್ಲಿ ಸೇರಿಸಿದ್ದಾರೆ. ಇದಕ್ಕಿಂತಲೂ 'ದಾಸರ ಪದಗಳೂ ಕೆಲವು ಆಖ್ಯಾಯಿಕೆಗಳೂ' ಎಂದು ಪ್ರಸಿದ್ಧಿಸಿದ್ದರೆ ಒಳಿತು. ಅಂತರವೇನೂ ವಿಶೇಷವಿರುತಿರಲಿಲ್ಲ. ಸಂಭಾಷಣ ಪದ್ಧತಿಯಲ್ಲಿ ಹೇಳಿದ್ದನ್ನು ನಿರೂಪಣ ಪದ್ಧತಿಯಲ್ಲಿ ಹೇಳುವದು. ಎಲ್ಲ ಪದಗಳನ್ನು ಎಳೆದು ತರುವ ಮೋಹವಂತೂ ಅನಿವಾರ್ಯವಾದಂತೆ ತೋರುವದು. ದಾಸರ ಏಕಾಂತದ ದೃಶ್ಯದಲ್ಲಿ ಈ ಸಂಗತಿಯು ಒಡೆದು ಕಾಣುವದು. ಮೊದಲು ೩-೪ ಪದಗಳನ್ನು ಸೇರಿಸಿ ಇನ್ನೂ ಹೆಚ್ಚಾದರೆ ಜನರು ಸೈರಿಸಲಾರರೆಂದು ಮನಗಂಡರೂ ಉಳಿದ ಪದಗಳ ಸಾರಾಂಶವನ್ನು ಗದ್ಯ ರೂಪದಲ್ಲಿ ಸೇರಿಸದೆ ಇರುವದಾಗಿಲ್ಲ. ಅದ್ಭುತ ರಸದ ಮೇಲೆ ಲೇಖಕರ ಭಾರ ಹೆಚ್ಚು. ಬದಲಾವಣೆಯ ನೋಟ, ಗುಡಿಸಲು ಉಪ್ಪರಿಗೆಯಾಗುವದು, ಸತ್ತವನು ಬದುಕುವದು, ವೈಕುಂಠದ ನೋಟ ಇವು ಈಗಿನಸಭ್ಯರಿಗೆ ರುಚಿಸುವವೆಂತೋಹೇಳಲಾರೆವು.

# ಸಾದರಸ್ವೀಕಾರ

| | | |
|---|---|---|
| ನಾಗರಿಕ | ... | ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು, ಬೆಂಗಳೂರು |
| ಹರಿಹರಕೃತ ಬಸವರಾಜದೇವರ ರಗಳೆ | ... | ,, ಟಿ. ಎಸ್. ವೆಂಕಣ್ಣಯ್ಯನವರು, ಮೈಸೂರು |
| ಮಹಮದ ಪೈಗಂಬರರು | ... | ,, ಸಿ. ಕೆ. ವೆಂಕಟರಾಮಯ್ಯನವರು, ಮೈಸೂರು |
| ಹಳ್ಳಿಯ ಕತೆಗಳು | ... | ,, " " |
| ನನ್ನ ಮತಾಂತರ | ... | ,, ಜ್ಞಾನೇಂದ್ರ ಪ್ರಭು, ತೀರ್ಥಹಳ್ಳಿ |
| ಎಲ್ಲೆಲ್ಲೂ ಹೀಗಾಗಬೇಕೇ? | ... | ಶ್ರೀಮತಿ ಶಾರದಾ, ಬೆಂಗಳೂರು |

**ಚಿತ್ರಪರಿಚಯ:**— ಶ್ರೀಶಂಕರಾಚಾರ್ಯರ ಮೃತ್ಪ್ರತಿಮೆಯನ್ನು ಸಿದ್ಧಪಡಿಸಿದವರು ರಾಣೆಬೆನ್ನೂರಿನ ಶ್ರೀ. ಎನ್. ಎಸ್. ಹಂಪಸಾಗರರು. ಇವರು ಮುಂಬಯಿಯಲ್ಲಿ ಪ್ರಖ್ಯಾತ ಶಿಲ್ಪಕಲಾವಿಶಾರದರಾದ ಶ್ರೀ. ವಾಘರವರ ಬಳಿಯಲ್ಲಿ ವ್ಯಾಸಂಗವನ್ನು ಮಾಡಿರುವರು. ಜೆ. ಜೆ. ಸ್ಕೂಲ ಆಫ ಆರ್ಟನಲ್ಲಿ ಮೇಲ್ತರಗತಿಯ ಶಿಕ್ಷಣಕ್ರಮವನ್ನು ಮುಗಿಸಿರುವರು. ಅಲ್ಲಿ ಸ್ಕಾಲರಶಿಪ್ಪುಗಳನ್ನು ಸಂಪಾದಿಸಿದರು. Plaster of Paris ದಲ್ಲಿಯಷ್ಟೆ ಅಲ್ಲದೆ ತಾಮ್ರದಲ್ಲಿಯೂ ಶಿಲೆಯಲ್ಲಿಯೂ ಮೂರ್ತಿಗಳನ್ನು ಮಾಡಬಲ್ಲರು. ಫೋಟೋಗ್ರಾಫಿಯ ವ್ಯವಸಾಯವನ್ನೂ ಚೆನ್ನಾಗಿ ಬಲ್ಲರು. ಇವರು ಮನೆತನದಿಂದ ಬಡವರಿದ್ದು, ಕನ್ನಡಿಗರ ಆಶ್ರಯ ಪ್ರೋತ್ಸಾಹಗಳಿಗೆ ಪಾತ್ರರಿದ್ದಾರೆ.



ಮುದ್ರಕರು: — ಖಂ. ರಾ. ಭಿಸೆ, ಕ. ಪ್ರಿಂ. ವರ್ಕ್ಸ, ಧಾರವಾಡ. ೬೨೦೦,೩೦.

ಬಂಕಾಪುರದ

## ಶ್ರೀ ಸ. ಸ್ವ. ಶಿವಾನಂದಸ್ವಾಮಿಗಳು



ಇವರ ಜನ್ಮಸ್ಥಾನವು ಬಂಕಾಪುರ. ವಾಸಸ್ಥಾನವು ಹುಬ್ಬಳ್ಳಿ. ಇವರ ಷಷ್ಠ್ಯಬ್ದಿಪೂರ್ತಿಯು ಮೊನ್ನೆಮೊನ್ನೆ ಆಯಿತು. ಅನುಭವಶಾಲಿ ತತ್ತ್ವಜ್ಞಾನಿಗಳೆಂದು ಇವರ ಪ್ರಸಿದ್ಧಿ. ಇವರ ಭಕ್ತಸಂಪ್ರದಾಯವು ಕರ್ನಾಟಕದ ತುಂಬೆಲ್ಲ ಇದೆ.

## ಹೊಸ ವರ್ಷದ

# ಜಯಕರ್ನಾಟಕ

**( ೯ನೆಯ ವರುಷದ ೧ನೆಯ ಸಂಚಿಕೆ )**

ಕಾರ್ತಿಕ ಪೌರ್ಣಿಮೆ ( ತಾ. ೬-೧೧-೩೦ )ಗೆ ಹೊರಡುವುದು.

**ವಿವಿಧ ವಿಷಯಗಳು !** **ಮನೋಹರ ಚಿತ್ರಗಳು !**

ಅನೇಕ ವಿದ್ವಾಂಸರು ಬರೆದ ಮಹತ್ವದ ವಿಚಾರಗಳಿಂದ ತುಂಬಿತುಳುಕುವ ಲೇಖಗಳು ಬರುವವು.

ಪ್ರಾಕ್ತನ ವಿಮರ್ಶಾ ವಿಚಕ್ಷಣ ರಾವಬಹಾದ್ದೂರು ಆರ್. ನರಸಿಂಹಾಚಾರ್ಯ ಎಂ. ಎ., ಪ್ರೊ. ಬಿ. ವೆಂಕಟ ನಾರಾಯಣಪ್ಪನವರು ಎಂ. ಎ., ಮಹಾಮಹೋಪಾಧ್ಯಾಯ ಡಾಕ್ಟರ ಆರ್. ಶಾಮಾಶಾಸ್ತ್ರಿಗಳು ಬಿ. ಎ., ಪಿ. ಎಚ್. ಡಿ., ಪ್ರೊ. ಆರ್. ಎ. ಜಹಾಗೀರದಾರ ಎಂ. ಎ., (ಲಂಡನ್), ಡಾ. ಮು. ಚ. ತಮ್ಮಿನಕಟ್ಟಿ ಎಂ. ಎಸ್. ಸಿ., ಪಿ. ಎಚ್. ಡಿ., (ಅಮೇರಿಕಾ), ಡಾ. ಕೃಷ್ಣಾಬಾಯಿ ಪಾಟೀಲ, ಎಂ. ಬಿ. ಬಿ. ಎಸ್, ಎಂ. ಆರ್. ಸಿ. ಪಿ. ಎಫ್ (ಎಡಿನ್‌ಬರೋ), ಆರ್. ಎಸ್. ಪಾಟೀಲ, ಬಿ. ಎಸ್. ಸಿ., ಪ್ರಭೃತಿಗಳ ಮಹತ್ವದ ಲೇಖನಗಳು ಬರತಕ್ಕವಿವೆ.

ಅಲ್ಲದೆ ಮುಂದಿನ ವರುಷದಿಂದ ಜಯಕರ್ನಾಟಕದ ಅಂತರಂಗ ಬಹಿರಂಗದಲ್ಲಿ ಅನೇಕ ಸುಧಾರಣೆಗಳಾಗತಕ್ಕವಿವೆ.

ಜಯಕರ್ನಾಟಕದ ಚಂದಾದಾರರಿಗೆ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಪುಸ್ತಕಗಳನ್ನು ಕಡಿಮೆ ಬೆಲೆಗೆ ಕೊಡುವ ಏರ್ಪಾಟಾಗತಕ್ಕದ್ದಿದೆ.

ಹೊಸ ವರ್ಷಕ್ಕೆ ಚಂದಾದಾರರಾಗತಕ್ಕವರು ಈಗಿನಿಂದ ತ್ವರೆಮಾಡಬೇಕು.

## ನಮ್ಮ ಚಂದಾದಾರರಲ್ಲಿ ಪ್ರಾರ್ಥನೆ

ಈ ಸಂಚಿಕೆಗೆ ೮ನೆಯ ಸಂಪುಟದ ೧೧ ಸಂಚಿಕೆಗಳು ಹೊರಟಂತಾಯಿತು. ಇನ್ನೊಂದು ಸಂಚಿಕೆಗೆ ಈ ಸಂಪುಟವು ಮುಗಿಯುವದು. ಪ್ರಾರಂಭದಿಂದ ಅಂದರೆ ೧ನೆಯ ಸಂಚಿಕೆಯಿಂದ ಚಂದಾದಾರರಾದವರು ಮುಂದೆಯೂ ನಮಗೆ ಆಶ್ರಯ ಕೊಡುವರೆಂದು ನಂಬಿದ್ದೇವೆ. ಬೇಡಾದವರು ತಿಳಿಸಬೇಕೆಂದು ೧ ತಿಂಗಳ ಮುಂಚೆಯೇ ಸೂಚನೆ ಕೊಡಲಾಗಿದೆ. ೧೨ನೆಯ ಸಂಚಿಕೆಗೆ ಚಂದಾಮುಗಿಯುವವರೆಲ್ಲ ರೂ. ೫-೮-೦ ಹಣವನ್ನು ಮುಂಗಡವಾಗಿ ಕಳಿಸಬೇಕೆಂದು ಪ್ರಾರ್ಥಿಸುತ್ತೇವೆ. ಮುಂಗಡವಾಗಿ ಮನಿಆರ್ಡರದಿಂದ ಕಳಿಸಿದರೆ ವ್ಹಿ. ಪಿ ವೆಚ್ಚವು ಅವರಿಗುಳಿದು ನಮಗೂ ಅನುಕೂಲವಾಗುವದು.

ವ್ಯವಸ್ಥಾಪಕ,

ಜಯಕರ್ನಾಟಕ ಕಾರ್ಯಾಲಯ, ಧಾರವಾಡ

---

## ದೇಶಭಕ್ತರ ಚರಿತ್ರೆ ಗೊತ್ತಿಲ್ಲದೆ ದೇಶಸೇವೆ ಸಾಧ್ಯವಿಲ್ಲ

ಆದಕಾರಣ ಒಂದಿಲ್ಲೊಂದು ರೀತಿಯಿಂದಾದರೂ ತಮ್ಮಿಂದ ದೇಶಸೇವೆಯಾಗಬೇಕೆಂದು ಇಚ್ಛೆಯಿಪ್ಪರೆ ಒಮ್ಮೆಯಾದರೂ ಓದಿರಿ ಮಝ್ಝಿನಿ, ಮ್ಯಾಕ್ಸ್ವಿನಿ, ಟಾಲಸ್ಟಾಯ, ನೆಪೋಲಿಯನ್, ಲೆನಿನ್, ದಾದಾಭಾಯಿ, ಗೋಖಲೆ, ಝಾಂಸಿ ಲಕ್ಷ್ಮೀಬಾಯಿ, ಅಹಲ್ಯಾಬಾಯಿಗಳವರ ಚರಿತ್ರೆಗಳನ್ನು. ಪ್ರತಿಯೊಂದಕ್ಕೂ ಬೆಲೆ ೪ ಆಣೆ ಮಾತ್ರ.

ಎಂ. ಗೋವರ್ಧನರಾಯರು,

ಜಯಕರ್ನಾಟಕ ಕಾರ್ಯಾಲಯ, ಧಾರವಾಡ

ಚಂದಾ ಸಣವು ಮುಗಿಯಿತು.
ಮುಂದಿನ ... ಕಳಿಸುತ್ತದೆ,
ದಯವಿಟ್ಟು ...




ಸಂಪುಟ ೮; ಸಂಚಿಕೆ ೧೨. ಆಶ್ವಯುಜ ಪೌರ್ಣಿಮೆ; ಅಕ್ಟೋಬರ ೧೯೩೦

ಸಂಸ್ಥಾಪಕರು:- ಆಲೂರ ವೆಂಕಟರಾಯರು] [ಸಂಪಾದಕರು:- ಬೆಳಗಾಂವಿ ರಾಮಚಂದ್ರರಾಯರು ಬೀ. ಎ.

## ಮುಖ್ಯ ವಿಷಯಗಳು

ಹೊಸ ವರ್ಷದ **ಜಯಕರ್ನಾಟಕ** ಹೊಸ ಸಂಚಿಕೆ

ವಿವಿಧ ವಿಷಯಗಳು ! ಮನೋಹರ ಚಿತ್ರಗಳು !

## ಕೆಲವು ಲೇಖಗಳು

ದ್ರಾವಿಡ ಸಂಸ್ಕೃತಿಃ—ಅರ್ಥಶಾಸ್ತ್ರ ವಿಶಾರದ ಮಹಾಮಹೋಪಾಧ್ಯಾಯ ಡಾ. ಆರ್. ಶಾಮಶಾಸ್ತ್ರಿಗಳು, ಬಿ. ಎ., ಪಿ. ಎಚ್. ಡಿ.; ಎ. ಆರ್. ಎ. ಎಸ್., ಮೈಸೂರು. ಪ್ರಭುಗಳೂ ಕನ್ನಡ ಕವಿಗಳೂಃ—ಪ್ರಾಕ್ತನ ವಿಮರ್ಶಾವಿಚಕ್ಷಣ ರಾವಬಹಾದ್ದೂರು ಆರ್. ನರಸಿಂಹಾಚಾರ್ಯರು ಎಂ. ಎ.; Retd. Director of Archaeological Department, ಬೆಂಗಳೂರು. ಬಾಲಗ್ರಹಪೀಡೆಯೂ, ಅದರ ನಿವಾರಣೋಪಾಯಗಳೂಃ—ಡಾ. ಬಿ ವಿ. ವೆಂಕಟೇಶಯ್ಯ, ಬಿ. ಎ., ಎಂ. ಬಿ. ಬಿ. ಎಸ್. House Surgeon, Krishnarajendra Hospital, ಮೈಸೂರು. ಬಾರ್ಗಸನ (Bergson) ತತ್ವಜ್ಞಾನಿಯ ಪರಿಚಯಃ—ಪ್ರೊ. ಗಜೇಂದ್ರಗಡ ಕೃಷ್ಣರಾಯರು, ನಾಶಿಕ. ಕೈವಲ್ಯಧಾಮದ ವಿದ್ಯಾಕ್ರಮಃ—ಶ್ರೀ ಸ್ವಾಮಿ ಕುವಲಯಾನಂದರು, ಲೋಣಾವಳಿ. ಇದಲ್ಲದೆ ಪ್ರೊ. ಬಿ. ವೆಂಕಟನಾರಾಯಣಪ್ಪನವರು ಎಂ. ಎ., ಪ್ರೊ. ಆರ್. ಎ. ಜಹಾಗಿರದಾರ ಎಂ. ಎ. (ಲಂಡನ್), ಡಾ. ಮು. ಚ. ತುಮ್ಮಿನಕಟ್ಟಿ ಎಂ. ಎಸ್. ಸಿ., ಪಿ. ಎಚ್. ಡಿ. (ಅಮೆರಿಕಾ), ಡಾ. ಕೃಷ್ಣಾಬಾಯಿ ಪಾಟೀಲ ಎಂ. ಬಿ. ಬಿ. ಎಸ್, ಎಂ. ಆರ್. ಸಿ. ಪಿ. ಎಸ್. (ಎಡಿನ್‌ಬರೊ), ಆರ್. ಎಸ್. ಪಾಟೀಲ, ಬಿ. ಎಸ್. ಸಿ. ಎಂ. ಎನ್. ಕಾಮತ, ಕಡೆಂಗೋಡ್ಲು ಶಂಕರಭಟ್ಟರು, ಬಿ. ಎನ್. ಶ್ರೀನಿವಾಸಯ್ಯ ಎಂ.ಎಸ್. ಸಿ, ಆಗ್ರಾ; ಪ್ರಭೃತಿಗಳ ಮಹತ್ವದ ಲೇಖನಗಳು ಬರತಕ್ಕವಿವೆ.

---

ಈಗಲೇ ಸಿದ್ಧವಾಗಿದೆ ! ಅಪೂರ್ವ ಗ್ರಂಥ !!

# ಶ್ರೀಮನ್ ಮಧ್ವಾಚಾರ್ಯರ ಗ್ರಂಥಗಳ ಕನ್ನಡ ಭಾಷಾಂತರಗಳು

ಆದ್ಯಂತ ಕನ್ನಡ ಲಿಪಿ ಮತ್ತು ಭಾಷೆಯಲ್ಲಿ ಮುದ್ರಿತವಾದ ಶ್ರೀ ಮಧ್ವಾಚಾರ್ಯರ ಭಾಷ್ಯ, ಪ್ರತಿಪದಾರ್ಥ, ಟೀಕಾ, ತಾತ್ಪರ್ಯಗಳಿಂದಲೂ ವಿಸ್ತಾರವಾದ ಇಂಗ್ಲಿಷ್ ಉಪೋದ್ಘಾತದಿಂದಲೂ ಕೂಡಿದ "ಅಷ್ಟೋಪನಿಷತ್ತುಗಳು, ಮತ್ತು ಸಪ್ತಪ್ರಕರಣಗಳು" ಎಂಬ ಒಂದನೇ ವೊಲ್ಯುಂ ಈಗಲೇ ತಯಾರಾಗಿದೆ. ೧೧೬೮ ಪುಟಗಳು ಇರುವ ಈ ಪುಸ್ತಕವು ಚಲೋದಾಗಿ ಬ್ಯಾಂಡ ಮಾಡಲ್ಪಟ್ಟಿದೆ. ಸಂಘಕ್ಕೆ ಸೇರುವ ಮೆಂಬರರಿಗೆ ಮಾತ್ರ ರೂಪಾಯಿ ೧೦ಕ್ಕೆ ಸಿಕ್ಕುವದು. ಕೆಲವು ಪ್ರತಿಗಳು ಮಾತ್ರವೇ ಇವೆ. ಬೇಕಾದವರು ಕೂಡಲೇ ಈ ಕೆಳಗಿನ ವಿಳಾಸಕ್ಕೆ ರೂಪಾಯಿ ೧೦ಕ್ಕೆ ರವಾನಿಸಿ ಮೆಂಬರರಾಗಿ ಸೇರಿದ್ದಲ್ಲಿ ಪುಸ್ತಕವು ದೊರೆಯುವುದು.

**Hon. Secretary, Madhwa Muni Seva Sangha, Udipi, S. K.**

---

# ಆಂಧ್ರ ಆಯುರ್ವೇದ ಫಾರ್ಮಸಿ,

## (ಲಿಮಿಟೆಡ್, ಮದರಾಸ್. ಬ್ರಾಂಚ, ಬೆಂಗಳೂರು)

**ಚ್ಯವನಪ್ರಾಶ್ಯ ರಸಾಯನಃ—**

ಈ ಲೇಹ್ಯದ ಸೇವನೆಯಿಂದ ಅನೇಕ ರೋಗಗಳು ವಾಸಿಯಾಗಿ ವಿಶೇಷ ಫಲಗಳು ಲಭಿಸುತ್ತವೆ. ಕ್ಷಯರೋಗಗಳಿಗೆ ಇದು ಅತ್ಯುತ್ತಮವಾದ ಔಷಧ. ಉಬ್ಬಸ, ಕೆಮ್ಮು, ಒಳಜ್ವರ, ಧಾತುನಷ್ಟ, ಸ್ವಪ್ನೇಂದ್ರಿಯ, ಹೃದಯ ಮತ್ತು ಶ್ವಾಸಕೋಶದ ವಿಕಾರ ಮೊದಲಾದ ಎಲ್ಲಾ ವ್ಯಾಧಿಗಳನ್ನೂ ನಾಶಮಾಡಿ, ನರಗಳ ಶಕ್ತಿಯನ್ನು ವೃದ್ಧಿಪಡಿಸುವುದಲ್ಲದೆ, ಸ್ತ್ರೀಬಾಲರಾದಿಯಾಗಿ ಎಲ್ಲರಿಗೂ ಉತ್ತಮ ಶಕ್ತಿವರ್ಧಕ (ಟಾನಿಕ್) ಔಷಧವಾಗಿದೆ. ಕ್ರಯ ೪೦ ತೊಲೆಗೆ ೩-೦-೦, ೧೦ ತೊಲೆಗೆ ೧-೦-೦.

**ಸಿದ್ಧಮಕರಧ್ವಜಃ—** ಇದು ಸುವರ್ಣ, ಕಸ್ತೂರಿ ಮೊದಲಾದ ಅಮೂಲ್ಯ ವಸ್ತುಗಳಿಂದ ತಯಾರಿಸಲ್ಪಟ್ಟ ರಸಾಯನ ಮತ್ತು ವಾಜೀಕರಣ, ಶಕ್ತಿಯುಳ್ಳ ಔಷಧವಾಗಿರುವುದರಿಂದ ಸಮಸ್ತ ರೋಗಗಳನ್ನೂ ನಾಶ ಮಾಡಿ ಪುಂಸ್ತ್ವಶಕ್ತಿ, ಜ್ಞಾಪಕಶಕ್ತಿ, ಕಾಂತಿ, ವೀರ್ಯ, ಬಲಪ್ರದವಾಗಿದೆ. ಕ್ರಯ ೨೫ ಮಾತ್ರೆಗಳುಳ್ಳ ಬಾಟ್ಲ ೧ ಕ್ಕೆ ರೂ. ೫

**ಚಂದನಾದಿ ವಟಿಃ—** ಈ ಮಾತ್ರೆಯು (ಗನೋರಿಯಾ) ಎಂಬ ಪೂಯಮೇಹ ಉರಿಮೂತ್ರ, ಮೂತ್ರದ್ವಾರದ ಪ್ರಣ ಮೊದಲಾದ ಮೂತ್ರಕೋಶದ ವ್ಯಾಧಿಗಳಿಗೆ ಅನುಭವಸಿದ್ಧವಾದ ಔಷಧವಾಗಿದೆ. ಕ್ರಯ ೨೫ ಮಾತ್ರೆಗಳುಳ್ಳ ಬಾಟ್ಲ ೧ಕ್ಕೆ ರೂ. ೧

ವಿ. ಸೂ.:— ರೋಗಿಗಳು ಪ್ರಕೃತಿ ಲಕ್ಷಣವನ್ನು ತಿಳಿಯಪಡಿಸಿದಲ್ಲಿ ತಕ್ಕ ಚಿಕಿತ್ಸಾಕ್ರಮವನ್ನು ಸೂಚಿಸಿ ಔಷಧಗಳನ್ನು ಕಳುಹಿಸಬಹುದು. ಎಲ್ಲಾ ಆಯುರ್ವೇದ ಶಾಸ್ತ್ರೀಯ ಔಷಧಗಳೂ ಸುಲಭ ಕ್ರಯಕ್ಕೆ ದೊರೆಯುವುವು.

ವಿಳಾಸಃ—ಆಯುರ್ವೇದಭೂಷಣ ವಿಶಾರದ ಡಾಕ್ಟರ್, ಕೆ. ನಾರಾಯಣರಾವ್ ಎ. ಎಂ., ಎ. ಸಿ., ...ಪೇಟೆ, ಬೆಂಗಳೂರು ಸಿಟಿ.

# ಜಯಕರ್ನಾಟಕ

ॐ सहनाववतु सहनौ भुनक्तु । सह वीर्यं करवावहै ॥
तेजस्विनावधीतमस्तु मा विद्विषावहै ॥ ॐ शान्तिः ॥ ३ ॥

— श्रुतिः

| ಸಂಪುಟ ೮ | ಪ್ರಮೋದ ಸಂವತ್ಸರ, ಶೀಗಿಯ ಹುಣ್ಣಿವೆ<br>ಚಾಲುಕ್ಯವಿಕ್ರಮ ವರ್ಷ ೮೫೫ | ಸಂಚಿಕೆ ೧೨ |
|---|---|---|

## ಭೂಮಿತಾಯಿಯ ಚೊಚ್ಚಿಲಮಗ

ಭೂಮಿತಾಯಿಯಾ
ಚೊಚ್ಚಿಲಮಗನನು
ಕಣ್ತೆರೆದೊಮ್ಮೆ
ನೋಡಿಹಿರೇನು ?
+ +
ಮುಗಿಲೆಂಬುವದು
ಕಿಸಿದಿತು ಹಲ್ಲು !
ಬಂದಾ ಬೆಳೆಯೂ
ಮಿಡಿಚಿಯ ಮೇವು;
ಬಿತ್ತಿದ್ದಾಯಿತು
ಉತ್ತಿಹ ಮಣ್ಣು !
ದಿನವೂ ಸಂಜೆಗೆ
ಬೆವರಿನ ಜಳಕ,
ಉಸುರಿನ ಕೂಳಿಗೆ
ಕಂಬನಿ ನೀರು !
ಹೊಟ್ಟೆಯು ಹತ್ತಿತು
ಬೆನ್ನಿನ ಬೆನ್ನು !
ಎದೆಯ ಗೂಡಿನೊಳು
ಚಿಂತೆಯು ಗೂಗಿ !
ಮಿಂದುಳಿನ ಮೂಲೆಗೆ
ಲೊಟಲೊಟ ಹಲ್ಲಿ !
ಮೋರೆಯು ಸಾವನು
ಅಣಕಿಸುತಿಹುದು !
ಕೊರಳಿಗೆ ಹತ್ತಿದೆ
ಸಾಲದ ಶೂಲಾ

ಆದರು ಬರದೋ
ಯಮನಿಗು ಕರುಣಾ
ಉಸಿರಿಗೆ ಒಮ್ಮೆ
ಜನನಾ ಮರಣಾ !
+ +
ನರಗಳ ನೂಲಿನ
ಪರಿಪರಿ ಚೀಲಾ
ತೆರಿತೆರಿಯಾಗಿದೆ
ಜಿಂಜಿರಿಯಾಗಿದೆ;
ಅದರೊಳಗೊಂದು
ಎಲುಬಿನ ಬಲೆಯು !
ಟುಕುಟುಕು ಡುಗುಡುಗು
ಉಲಿಯುವ ನರಳುವ
ಜೀವದ ಜಂತುವು
ಹೊರಳುತ ಉರುಳುತ
ಜನುಮವೆಂಬುವಾ
ಕತ್ತಲೆಯಲ್ಲಿ
ಬಿದ್ದಿದೆ ಒಳಗೆ
ಹೇಗೋ ಬಂದು !
ಸಾವಿನ ಬೆಳಕದು
ಕಾಣುವದೆಂದು ?
ಎಂದೋ ಎಂದೋ
ಎಂದೋ ಎಂದು
ಕನಕರಿಸುವದು
ತಳಮಳಿಸುವದು !

— ಅಂಬಿಕಾತನಯದತ್ತ

# ಜಯಂ ಭದ್ರಂ ಶುಭಂ ಮಂಗಳಂ



ಈ ವರ್ಷ ಭಾರತದ ರಂಗಭೂಮಿಯು ರಣಾಂಗಣವಾಗಿ ಬಿಟ್ಟಿತು. ಎಲ್ಲಿ ಕೇಳಿದಲ್ಲಿ ರುದ್ರವೀಣೆಯ ಸೊಲ್ಲು! ಎಲ್ಲಿ ನೋಡಿದಲ್ಲಿ ತಾಂಡವನೃತ್ಯ! ಮಹಾತ್ಮಗಾಂಧಿಯವರು ತಮ್ಮ ಶಿವರೂಪದೊಳಗಿನ ರುದ್ರ ಸ್ವರೂಪವನ್ನು ಪ್ರಕಟಿಸಿದಮೇಲೆ ನಿರ್ಜೀವ ಶಾಂತಿಗೆ ನೆಲೆದೊರೆಯಬಹುದೇ? ಕನ್ನಡಿಗರೂ ಕನ್ನಡಿತಿಯರೂ ರಣಧುರಂಧರರಾಗಿ ರಾಷ್ಟ್ರಸಮುದ್ರಮಂಥನದಲ್ಲೊಗೆದ ನಂಜನ್ನು ತಟಕು ತಟಕಾದರೂ ಸವಿದಿರುವರು. ಅವರಿಗೂ ಅವರವರ ಕುಟುಂಬದವರಿಗೂ ಸಹಾನುಭೂತಿಯನ್ನು ವ್ಯಕ್ತಪಡಿಸುವ ಯೋಗ್ಯತೆಯು ನಮ್ಮದಲ್ಲ. ಆ ಮಹಾಜನರ ಆಶೀರ್ವಾದವನ್ನು ಬೇಡುವ ಪಾಮರರು ನಾವು.

ಕನ್ನಡಿಗರ ತೇಜಸ್ಸಿನೊಡನೆ ಕನ್ನಡದ ಓಜಸ್ಸು ಹೆಚ್ಚು ಹೆಚ್ಚು ಪ್ರಜ್ವಲಿಸಲಾರಂಭಿಸಿದೆ. ಈ ವರ್ಷ, ಕನ್ನಡವು ಸಾಹಿತ್ಯದ ಗುಡಿಕಟ್ಟಿದೆ. ಅಪೂರ್ವ ಕಾವ್ಯನಾಟಕ ಕಥಾಕಾದಂಬರಿ ತತ್ತ್ವಜ್ಞಾನ ಗ್ರಂಥಗಳು ಪ್ರಕಟವಾಗಿವೆ. ಕರ್ನಾಟಕದ ಕೀರ್ತಿನಾಮಾವಲಿಯು ಭಾರತಮಾಲೆಯ ಬಿರುದಾವಳಿಯಲ್ಲಿ ಸೇರಿಕೊಂಡಿದೆ. ವಿಶಾಲ ಕರ್ನಾಟಕವು ಕಣ್ತೆರೆಯುತ್ತಿದೆ. ಮುಂಬಯಿ ಬಡೋದಾ ಕಲ್ಕತ್ತಾ ಲಖನೌ ಲಾಹೋರದ ಕನ್ನಡಿಗರಿರಲಿ ರಂಗೂನ ಆಫ್ರಿಕಾ ಇಂಗ್ಲಂಡದೊಳಗಿನ ಕನ್ನಡಿಗರೂ ತಾಯಿಯ ಸ್ಮರಣೆಯನ್ನು ಮಾಡುತಲಿದ್ದಾರೆ. ಅನಂತಪೂರ ಸೇಲಂ ಕೊಯಿಮುತ್ತೂರಿನ ಸೀಮೆಯ ಕನ್ನಡಿಗರೂ ಹೈದರಾಬಾದು ಮೊದಲಾದ ಕರ್ನಾಟಕ ಸಂಸ್ಥಾನಗಳೊಳಗಿನ ಕನ್ನಡಿಗರೂ ತಾವೆಲ್ಲರೂ ಒಂದೆಂಬ ಭಾವನೆಯನ್ನು ಅನುಭವಿಸುತ್ತಲಿದ್ದಾರೆ. ಕನ್ನಡಿಗರ ವರ್ಧಮಾನವಾದ ಐಕ್ಯಕ್ಕೆ ಸತ್ಯಾಗ್ರಹ ಸಂಗ್ರಾಮದಲ್ಲಿ ಸೇರಿದ ಮೈಸೂರು ಕೊಡಗು ನಾಡಿನ ಅಜ್ಞಾತವೀರರೇ ಸಾಕ್ಷಿ. ಮುಂಬಯಿಯೊಳಗಿನ ಅಖಿಲ ಕರ್ನಾಟಕ ರಾಷ್ಟ್ರೀಯ ಸಭೆಯೇ ಸಾಕ್ಷಿ. ಜಯಕರ್ನಾಟಕ ಮಂಡಲದವರಾದರೂ ಕೈಕೊಂಡ ಸಾಹಿತ್ಯಸೇವೆಯನ್ನು ತನು-ಮನ-ಧನದಿಂದ ಮಾಡಿದ್ದಾರೆ. ಹಾಗು ಹೀಗು ಪತ್ರಿಕೆಗಳು ಜೀವದಿಂದುಳಿದರೆ ಸಾಕು ಎಂದೆನ್ನುವ ಕಾಲದಲ್ಲಿ ನಾವು ಜಯಕರ್ನಾಟಕದ ಮೂರು ನಾಲ್ಕು ಸಾವಿರದ ಸಾಲವನ್ನು ಹೊತ್ತು ನಮ್ಮ ಚಂದಾದಾರರು ನಮಗೆ ಕೊಡುವ ಚಂದಾದ್ರವ್ಯದ ಮಾನದಿಂದ ನೋಡಲಾಗಿ ಕರ್ನಾಟಕದೊಳಗಿನ ಬೇರೆ ಯಾವ ಪತ್ರಿಕೆಗಳಿಗಿಂತಲೂ ಹೆಚ್ಚು ಪ್ರತಿಫಲವನ್ನು ಅವರಿಗೆ ಒದಗಿಸಿಕೊಡುತ್ತಿರುವೆವೆಂಬುದನ್ನು ನಾವು ಒತ್ತಿ ಹೇಳಬೇಕಾಗಿಲ್ಲ. ಮಂಡಲದೊಳಗಿನ ಪ್ರತಿಯೊಬ್ಬ ಕೆಲಸಗಾರರು ತಮ್ಮ ತಮ್ಮ ಹೊಟ್ಟೆಕಟ್ಟಿ ಸಾಲದ ಶೂಲವನ್ನು ಕುತ್ತಿಗೆಯಿಂದ ಕ್ರಮವಾಗಿ ತೆಗೆದೊಗೆಯುವ ಕಾರ್ಯದಲ್ಲಿ ತೊಡಗಿರುವಾಗ್ಗೆಯೂ 'ಜಯಕರ್ನಾಟಕ'ವನ್ನು ಸರ್ವತೋಪರಿಯಾಗಿ ಪಂಡಿತಪಾಮರರಂಜಕವಾಗಿ ಮಾಡಲು ಅಖಂಡಾತ್ಮನಾ ಹೆಣಗಿದ್ದಾರೆ. ಒಂದು ಕನ್ನಡ ಶಿಲ್ಪಿಗಳ ಚಿತ್ರಗಳೇ, ಒಂದು ಜನಪದ ಸಾಹಿತ್ಯವೇ, ಒಂದು ಕರ್ನಾಟಕನ ವಿದುಷಿಯರಿಂದ ಬರೆಸಿದ ವಿವಿಧ ಲೇಖನಗಳೇ, ಒಂದು ನವೀನ ಸಾಹಿತ್ಯ ವಿಮರ್ಶೆಗಳೇ, ಒಂದು ಇತಿಹಾಸಸಂಶೋಧನದ ಲೇಖಗಳೇ—ಒಂದೇ ಎರಡೇ— ಅನೇಕವಿಧದಿಂದ 'ಜಯಕರ್ನಾಟಕ'ವನ್ನು ಹಿಗ್ಗಿಸಿದ್ದೇವೆ. 'ಜಯಕರ್ನಾಟಕ'ವನ್ನು ಎಂಟು ಫಾರ್ಮಿನಿಂದ ಒಂಬತ್ತು ಒಂಬತ್ತುವರೆ ಫಾರ್ಮಿನವರೆಗೆ ಕಾಲಕಾಲಕ್ಕೆ ಬೆಳೆಸಿದ್ದೇವೆ; ಅನೇಕಾನೇಕ ಚಿತ್ರಗಳನ್ನು ಹಾಕಿದ್ದೇವೆ. ಇಷ್ಟಿದ್ದು ನಮ್ಮ ಕೊರತೆಗಳೇನೆಂಬುದನ್ನು ನಾವು ಪೂರಾ ಅರಿತಿರುವೆವು. ಆದರೆ ಎಲ್ಲ ಕೊರತೆಗಳಿಗೂ ದುಡ್ಡಿನ ಕೊರತೆಯೇ ಮುಖ್ಯವಾದ ಕಾರಣವೆಂಬುದನ್ನು ನಮ್ಮ ಚಂದಾದಾರರೂ ಸಹಾಯಕರೂ ಅರಿತು ಎಂಥ ಕಷ್ಟಗಳಿದ್ದರೂ ಈಗಿದ್ದ ಚಂದಾದಾರರು ಒಬ್ಬರೂ ಬಿಡದೆ, ಹೆಚ್ಚು ಜನರನ್ನು ಕೂಡಿಸಿಕೊಡಬೇಕೆಂದು ಹೇಳುವ ಅಧಿಕಾರವು ನಮಗಿದೆಯೆಂದು ನಾವು ಭಾವಿಸಿದ್ದೇವೆ. ನೂರು ರೂಪಾಯಿ ಕೊಟ್ಟು ಆಜೀವ ಚಂದಾದಾರರಾಗುವ ನೂರು ಇನ್ನೂರು ಜನರು ಇಡೀ ಕರ್ನಾಟಕದಲ್ಲಿ ಸಿಗಲಾರರೇ? ಮಂಡಲವು ವ್ಯಕ್ತಿಗಳ ಲಾಭಕ್ಕೆ ಹೊರಟಿಲ್ಲ. ಸಾಲಕ್ಕೆ ವ್ಯಕ್ತಿಗಳು ಹೊಣೆಯಾಗಿ ನಿಂತು ಲಾಭವಾದರೆ ಮಂಡಲಕ್ಕಿದೆ ಎಂಬ ಭಾವದಿಂದ ಮಂಡಲದ ಸದಸ್ಯರು ಕಾರ್ಯವನ್ನು ಪ್ರಾರಂಭಿಸಿದ್ದಾರೆ. ಇಂಥ ಸಾಹಿತ್ಯ ಸಂಸ್ಥೆಯು ಕರ್ನಾಟಕದಲ್ಲಿ ಇದೊಂದೇ ಎಂಬುದನ್ನು ಅರಿತು ನಾ ಮುಂದೆ ನೀ ಮುಂದೆ ಎಂದು ನೂರು ರೂಪಾಯಿ ಕೊಡುವ ಆಜೀವ ಚಂದಾದಾರರು ಬರುವರೆಂದು ನಂಬಿದ್ದೇವೆ. ಈಗಾಗಲೆ ತಾವಾಗಿಯೆ ಆಜೀವ ಚಂದಾದಾರರಾದ ಗುಪ್ತದಾನಿಗಳಿಗೆ ನಮ್ಮ ವಂದನೆಗಳು.

ನಮ್ಮ ಈ ಪಾಡಿನಲ್ಲಿ ಸುಖದ ಅಂಶವೂ ಇದೆ. ಏಳು ನೂರರಿಂದ ಸಾವಿರಕ್ಕೆ ಚಂದಾದಾರರ ಸಂಖ್ಯೆಯು ಏರಲಿದೆ. ಸಾವಿರದಿದ್ದರೆ ಸಾಮಾನ್ಯ ಜೀವನಕ್ಕೆ ಇದು ಸಾಕಿದ್ದಿತು. ಜಯಕರ್ನಾಟಕ ಮಂಡಲವು ಚಿರಸ್ಥಾಯಿಯಾದ ಸಾರ್ವಜನಿಕ ಸಂಸ್ಥೆಯಾಗಿ ಕರ್ನಾಟಕದ ಸಾಹಿತ್ಯ ಸಂಸ್ಕೃತಿಗಳ ಪೋಷಣೆ ಮಾಡಿ ಜೀರ್ವರಿಸು ಬಾಳಬೇಕಾದರೆ ಏನಿಲ್ಲೆಂದರೂ ಅದರ ಪ್ರತ್ಯೇಕ ಕಾರ್ಯಾಲಯವೂ ಪ್ರತ್ಯೇಕ ಮುದ್ರಣಾಲಯವೂ ಬೇಕು. ಧನಬಲವಷ್ಟೆ ಜನಬಲವೂ ಬೇಕು. ನಮ್ಮ ಅನೇಕಾನೇಕ ಗೆಳೆಯರು ಮಿತ್ರರು ದೇಶಬಾಂಧವರು ಸಾಹಿತ್ಯ ರಸಿಕರು ಸಾವಿರಾರು ಕೈಗಳಿಂದ ನಮಗೆ ಸಹಾಯಮಾಡುತ್ತಲಿರುವರು ಎಂದೆ ಈ ಕಾರ್ಯವು ಹೀಗೆ ಸಾಗಿದೆ. ಅವರ ಉಪಕಾರ ವನ್ನುಚ್ಚರಿಸಲು ನಮಗೆ ಸಾವಿರ ಬಾಯಿಯಿಲ್ಲ. ಮುದ್ರಣಾಲಯದವರ ದಕ್ಷತೆ, ಚಿತ್ರಪಡಿಯಚ್ಚಿನವರ ಜಾಗರೂಕತೆ, ಚಿತ್ರಗಳನ್ನು ಕಳುಹುವರ ಸ್ನೇಹಭಾವ, ಲೇಖಕರ ಆತ್ಮೀಯತೆ, ಚಂದಾದಾರರ ಕ್ಷಮಾಶೀಲತೆ ಇವೆಲ್ಲವುಗಳು ನಮ್ಮ 'ಆನೆ'ಯ ಕೆಲಸವನ್ನು ಆಟವನ್ನಾಗಿ ಮಾಡಿವೆ.

ಮುಂದಿನ ವರ್ಷ ಇದಕ್ಕೂ ಹೆಚ್ಚು ಕೆಲಸಮಾಡಬೇಕೆಂಬ ಹಂಬಲವು ನಮಗಿದೆ. ಜಯಕರ್ನಾಟಕ ಗ್ರಂಥಮಾಲೆಯ ಮೊದಲನೆಯ ಪುಸ್ತಕವಾದ 'ಹಕ್ಕಿ ಹಾರುತಿದೆ' ಎಂಬ ಕವಿತಾಗುಚ್ಛವು ಪ್ರಕಟವಾಗಿ ರಸಿಕರ ಮನ್ನಣೆಯನ್ನು ಪಡೆದಿದೆ. ಇನ್ನು ಇದೇ ಗ್ರಂಥಮಾಲೆಯಲ್ಲಿ ಕಥೆ, ಕಾದಂಬರಿ, ನಾಟಕ, ಪ್ರಹಸನ, ಹರಟೆ, ನಿಬಂಧ, ಚರಿತ್ರೆ, ಕಾವ್ಯಗಳನ್ನು ಪ್ರಸಿದ್ಧಪಡಿಸಿ ಸುಲಭ ಕ್ರಯಕ್ಕೆ ಕೊಡಬೇಕೆಂದು ಗೊತ್ತು ಮಾಡಿದ್ದೇವೆ. ಅದಕ್ಕಾಗಿ ವಾಚನಾಲಯದವರೂ, ಶಾಲೆಗಳವರೂ, ವಿದ್ಯಾರ್ಥಿಗಳೂ ಅದನ್ನು ಪೋಷಿಸಬೇಕು. ಜಯಕರ್ನಾಟಕದ ಚಂದಾದಾರರಿಗೂ ಸಹಾಯಕರಿಗೂ ಜೇರೆಯವರಿಗಿಂತ ಅನುಕೂಲ ದರದಿಂದ ಪುಸ್ತಕಗಳನ್ನು ಕೊಡಲಾಗುವದು. ಅದರ ಪ್ರಕಟನೆಯನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆಗೆ ನೋಡಬೇಕು.

ಕನ್ನಡಿಗರ ಅಂತಃಕರಣವೆ ನಮಗೆ ಪ್ರತ್ಯಕ್ಷ ದೈವತವು. ಆ ಅಂತರ್ಯಾಮಿಯೆ ನಮಗೆ ಸೂತ್ರಧಾರಕನು. ಅವನ ಮೆಚ್ಚಿಗೆ ಪಡೆಯುವದೇ ನಮ್ಮ ಮಾರ್ಗ. ಭಕ್ತನ ಕಾರ್ಯವು ನಮ್ಮಿಂದಾದರೆ ಭಗವಂತನ ಕಾರ್ಯವು ಅವನಿಂದಾಗುವದೆಂಬ ಶ್ರದ್ಧೆಯಿಂದಲೇ ಕೆಲಸದ ಜಟ್ಟವನ್ನು ಹೊತ್ತಿದ್ದೇವೆ. 'ಜಯಕರ್ನಾಟಕ'ವೆಂಬ ಜಪವೆ ಆ ಭಾರವನ್ನು ಹಗುರು ಮಾಡಲು ಸಮರ್ಥವಿದೆ. ಏಕೆಂದರೆ ಆ ಕೂಗು ನಮ್ಮದಲ್ಲ ನಿಮ್ಮದಲ್ಲ ಒಬ್ಬಿಬ್ಬರದಲ್ಲ. ಕನ್ನಡಿಗರು ಕನ್ನಡದಿಂದ ಕರ್ನಾಟಕಕ್ಕಾಗಿ ನಡಿಸಿರುವ ರಾಷ್ಟ್ರಯಜ್ಞದೊಳಗಿನ ಕೊನೆ ಮೊದಲಿನ ಮಂತ್ರವದು. ಜಯಕರ್ನಾಟಕ!

ದತ್ತಾತ್ರೇಯ ಬೇಂದ್ರೆ

ಬೆಳಗಾಂವಿ ರಾಮಚಂದ್ರ

---

# ಚಿತ್ರಪರಿಚಯ

ಈ ಸಲದ ಮುಖಚಿತ್ರವನ್ನು ಬರೆದ ಶ್ರೀಮತಿ ಸಾವಿತ್ರಿನೇವಿಯವರು ಬಂಗಳೂರಿನ ಕನ್ನಡತಿಯರು. ಶಾಂತಿನಿಕೇತನದಲ್ಲಿ ಚಿತ್ರಕಲಾಭ್ಯಾಸವನ್ನಲ್ಲದೆ ಸಂಗೀತ ಸಾಹಿತ್ಯ ಮೊದಲಾದ ಉಳಿದ ವಿಷಯಗಳನ್ನೂ ವ್ಯಾಸಂಗಿಸುತ್ತಿರುವರು. ಇವರ ಕಲಾಗುರುಗಳಾದ ಶ್ರೀಮಾನ್ ನಂದಲಾಲ ಬಸುಗಳವರು ಈ ಚಿತ್ರವನ್ನು ಜಯಕರ್ನಾಟಕಕ್ಕಾಗಿ ಆರಿಸಿ ಕಳುಹಿದುದಕ್ಕಾಗಿ ಮಂಡಲವು ಅವರಿಗೆ ಉಪಕೃತವಾಗಿದೆ.

ಈ ಚಿತ್ರದಲ್ಲಿ ನಿರೀಕ್ಷಿಸಬೇಕಾದ ಅಂಶವೆಂದರೆ **ಬಣ್ಣಗಾರಿಕೆಯ** ಮತ್ತು ಸನ್ನಿವೇಶದ ವಿಶೇಷ **ಸರಲತೆ**. ಸರಲತೆ ಎನ್ನುವುದಕ್ಕಿಂತ **ನಿರಲಂಕಾರತೆ** ಎಂದರೆ ಚೆನ್ನು. ಒಮ್ಮೆ ಬಣ್ಣದಲ್ಲಿ ಅದ್ದಿದ ಕುಂಚದಿಂದ ಇಡಿ ಚಿತ್ರವನ್ನು ಮುಗಿಸಿದಂತಿದೆ. ಮರಗಳು, ಮನೆಗಳು, ಮರಡಿಗಳು, ಮೋಡಗಳು—ಎಲ್ಲವುಗಳೂ ಬಣ್ಣದ ತೊಟ್ಟು ಬಿದ್ದು ತಾವೇ ರೂಪುಗೊಂಡಂತಿವೆ.

ಸನ್ನಿವೇಶವೂ ಅತಿ ಸರಲ. ಬಟ್ಟಬೈಲು. ನಡುವೆ ಒಂದು ಸರಸ್ಸು. ಹಸಿ ನೋಡಿ ಸ್ವಲ್ಪ ಹಸಿರು—ನಾಲ್ಕಾರು ಗಿಡ ಗಂಟಿ. ಹತ್ತಿರ ನೀರೆಂದ್ದು ನಾಲ್ಕಾರು ಮನೆಗಳು. ಉಳಿದುದೆಲ್ಲಾ ಬಣಬಣ......ಕಲೆಯಲ್ಲಿ ಈ ತೆರದ ಸರಲತೆಯನ್ನು ಸಾಧಿಸುವದೇ ಬಲು ಬಿಗಿ.

# ಶ್ರೀಮಾನ್ ಆಲೂರ ವೆಂಕಟರಾಯರ ಸ್ವಭಾವಚಿತ್ರ

( ನಿರೀಕ್ಷಕನಿಂದ )

ಶ್ರೀ. ಆಲೂರರವರು ಈ ಸಲದ ಸಾಹಿತ್ಯಸಂಮೇಲನದ ಅಧ್ಯಕ್ಷರು. ಮಿಲ್ ಸ್ಪೆನ್ಸರರ ತತ್ವಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸುವದರಿಂದ ಇವರ ವಾಙ್ಮಯಸೇವೆಗೆ ಪ್ರಾರಂಭ ವಾಯಿತು. ಆಗ್ಗೆ ಇವರಿಗೆ ಕನ್ನಡ ಸಾಹಿತ್ಯದ ಪರಿಚಯವೇ ಇಲ್ಲ. ಉತ್ಕಟವಾದ ನೈಜ ಪ್ರೀತಿಯು ಎಷ್ಟು ಅಮೋಘವಾಗಿ ಕಾರ್ಯವನ್ನು ಮಾಡಿಸಬಲ್ಲದೆಂಬುದಕ್ಕೆ ಇವರು ನಿದರ್ಶನರಾಗಿದ್ದಾರೆ. ಇವರ ರಾಜಕಾರಣವೆ ಇವರಿಗೆ ಕರ್ನಾಟಕದಲ್ಲಿ ದೃಷ್ಟಿಯನ್ನು ನಾಟಿಸಿತು. ಅಂತೆಯೆ ಇವರು ಗ್ರಂಥಕರ್ತನೆಂಬ ಕೀರ್ತಿಯ ರಾಜಮಾರ್ಗವನ್ನು ಬಿಟ್ಟು, 'ವಿದ್ಯಾರಣ್ಯ' 'ಭ್ರಮನಿರಸನ'ದಂಥ ಹತ್ತಿಪ್ಪತ್ತು ಪುಟದ ಸಣ್ಣ ಪುಸ್ತಕಗಳನ್ನು ಬರೆಯಲು ಧೈರ್ಯ ಮಾಡಿದರು. ಅವುಗಳ ಮಹತ್ವವು ಅವುಗಳ ಪರಿಣಾಮದಲ್ಲಿದೆ. ಕನ್ನಡಿಗರ ಭ್ರಮನಿರಸನವಾಗಿ ಅವರಿಗೆ ವಿದ್ಯಾರಣ್ಯರ ದರ್ಶನವಾಯಿತು. ಇದೇನು ಸಣ್ಣ ಕೆಲಸವಲ್ಲ. ಕರ್ನಾಟಕದ 'ಗತವೈಭವ'ವನ್ನು ಇವರು ಕಂಡಿದ್ದೂ ಕನ್ನಡಿಗರಿಗೆ ತೋರಿಸಿದ್ದೂ ತದನಂತರದಲ್ಲಿಯೆ ಇದರಿಂದುಂಟಾದ ಜಾಗೃತಿಯೇ ' ಜಯ ಕರ್ನಾಟಕದ ' ಹಾದಿಯನ್ನು ಇವರಿಗೆ ತೋರಿಸಿತು. ಜಯ ಕರ್ನಾಟಕದಿಂದ ' ನವಜೀವನ ಗ್ರಂಥ ' ಮಾಲೆಗೆ ಇವರು ಹಾರಿದುದು ಹಿರಿದಲ್ಲ. ಇವರ ಗತಿಯು ಗಾಳಿಯಂತಿದೆ. ಬಂದರು ಬಂದರು ಎಂಬಷ್ಟರಲ್ಲಿ ಇವರು ಮುಂದೆ ಹೋಗಿಬಿಡುವರು. ಕರ್ನಾಟಕದ ಪ್ರಾಣೋಪಾಸಕರಾದ ಇವರು ವಾಯುಸಂಚಲನಚಂಚಲರಾಗಿ ತೋರುವದು ಸೋಜಿಗವಲ್ಲ.

ಕರ್ನಾಟಕದ ಹಿರಿಯರಲ್ಲಿ ಆಲೂರರ ಹೆಸರು ಅದ್ವಿತೀಯವಾಗಿದೆ. ಕಣ್ಣಲ್ಲಿ ತುಂಬುವ ಆಕೃತಿವಿಶೇಷವಾಗಲಿ, ಮನಸ್ಸಿನಲ್ಲಿ ತುಂಬುವ ಮಾತುಗಾರಿಕೆಯಾಗಲಿ ಇವರದಲ್ಲ. ರಾಜಕೀಯ ರಣಾಂಗಣದಲ್ಲಿಯೂ ಇತಿಹಾಸದ ಕ್ಷೇತ್ರದಲ್ಲಿಯೂ ಸಾಹಿತ್ಯಲೋಕದಲ್ಲಿಯೂ ಇವರಿಗೂ ಮಿಗಿಲಾಗಿ ಕೆಲಸ ಮಾಡುವವರಿದ್ದಾರೆ; ಕೈಕೊಂಡ ಕಾರ್ಯಕ್ಕೆ ಧನವನ್ನೂ ಕಾಲವನ್ನೂ ಇವರಿಗಿಂತ ಹೆಚ್ಚು ವೆಚ್ಚ ಮಾಡಿದವರು ಇಲ್ಲವೆಂದಲ್ಲ. ತಮ್ಮ ಆಚಾರದ ಬಲದಿಂದಲೂ ವಿಚಾರದ ತೇಜದಿಂದಲೂ ಇವರಿಗಿಂತಲೂ ಆದರವನ್ನುಂಟುಮಾಡುವವರೂ, ಜಾತಿಯ ಮೂಲಕ ದೊಡ್ಡ ಮುಂದಾಳೆನಿಸಿಕೊಂಡವರೂ ಪದವಿಯ ಮೂಲಕ ಮಹಾಗೌರವಸ್ಥರೆನಿಸಿಕೊಂಡವರೂ ಉಂಟು. ಆಲೂರರವರಲ್ಲಿ ಸಂಘಟನೆಯ ಶಕ್ತಿಯಾಗಲಿ, ಚಳವಳಿಯ ವೃತ್ತಿಯಾಗಲಿ, ಜನಸಂದೋಹನಾಯಕನ ಸ್ವಭಾವವಾಗಲಿ– ಯಾವುದೂ ಇಲ್ಲ. ಏಕಮುಖವಾಗಿಯೂ ಬಹುಮುಖವಾಗಿಯೂ ತಾತ್ಕಾಲಿಕ ತೀವ್ರಾವೇಶದಿಂದಲೂ, ಏಕನಿಷ್ಠೆಯಿಂದಲೂ ಕಾರ್ಯ ಮಾಡುವ ಹಲ ಕೆಲವರು ಇವರಿಗಿಂತಲೂ ಹೆಸರಾಗಿದ್ದಾರೆ. ಆದರೆ ಬಹು ಮುಖವಾಗಿಯೂ ಏಕನಿಷ್ಠೆಯಿಂದಲೂ, ಅನನ್ಯಬುದ್ಧಿಯಿಂದಲೂ, ಸತತ ಅನುಸಂಧಾನದಿಂದಲೂ ಕರ್ನಾಟಕದ ಸಲುವಾಗಿ ವಿಚಾರ ಮಾಡುವವರೂ ತದನುಸಾರವಾಗಿಯೆ ಆಚರಿಸಲು ಪ್ರಯತ್ನಿಸುವವರೂ ಹಿರಿಯರಾದ ಕನ್ನಡಿಗರಲ್ಲಿ ಇನ್ನೂ ಇವರೊಬ್ಬರೇ ! ಅದೇ ಇವರ ತಪಸ್ಸು. ಇವರ ಅದ್ವಿತೀಯವಾದ ಹೆಸರು ಅದರ ಫಲವು.

ಆಲೂರರವರು ಬಾಯಿ ಹಾಕದ ಮಾತಿಲ್ಲ. ಕೈ ಹಾಕದ ಕೆಲಸವಿಲ್ಲ. ಇವರಿಗೆ ತನ್ನದೆನ್ನುವ ಕಾರ್ಯವಿಲ್ಲ. ಕರ್ನಾಟಕದ ಸರ್ವಾಂಗ ಪೋಷಣೆಗೆ ಬೇಕಾಗುವ ಎಲ್ಲ ಮಾತು ಎಲ್ಲ ಕೆಲಸಗಳೂ ಇವರಿಗೆ ಬೇಕಾದವುಗಳೆ. ಎಲ್ಲವನ್ನೂ ಇವರು ಮಾಡಿ ಮಾಡಿಸಿರುವರು. ಆಡಿ ಆಡಿಸಿರುವರು. ಕರ್ನಾಟಕದ ಕುಲಪುರೋಹಿತರೆಂದು ಒಬ್ಬರು ಇವರಿಗೆ ಪರಿಹಾಸದಲ್ಲಾಡಿದುದು ಈಗ ಪರಮಾರ್ಥವಾಗಿದೆ. ಪುರೋಹಿತರಂತೆಯೆ ಇವರೂ ಕೆಲಸವನ್ನು ಪ್ರಾರಂಭ ಮಾಡಿಸಿ ಬೇರೆ ಯಜಮಾನರಿಗೆ ಕೆಲಸ ಬಿಟ್ಟು ಕೊಡುವರು. ಇವರ ಕಾರ್ಯಪ್ರವೃತ್ತಿಯೊಡನೊಡನೆಯೆ ನಿವೃತ್ತಿಯು ಮಾತೂ ಪ್ರಾರಂಭವಾಗುವವು. ನಾಲ್ಕು ಜನರು ಒಂದು ಕಡೆಗೆ ಕೂಡಿದ ಕೂಡಲೆ ಇವರು ಮತ್ತೊಂದು ಕಡೆಗೆದ್ದು ಹೋಗುವರು. ಇತಿಹಾಸ ಮತ್ತು ಸಾಹಿತ್ಯ ಇವುಗಳು ಜೀವನಮಂಡಲದ ದಕ್ಷಿಣೋತ್ತರ ಧ್ರುವಗಳು. ರಾಜಕಾರಣ ಮತ್ತು ಪತ್ರಿಕಾಸಂಚಾಲನ ಇವುಗಳು ಅವುಗಳ ಪ್ರಯೋಗಶಾಲೆಗಳು. ಈ ಪ್ರಯೋಗಶಾಲೆಯಲ್ಲಿ ಸಿದ್ಧ

ಪಡಿಸಿದ ರಸಾಯನವನ್ನು ಇವರು ತಮ್ಮ ಕರ್ನಾಟಕೋದ್ಯಮದಲ್ಲಿ ಕಾಲಕಾಲಕ್ಕೆ ಉಪಯೋಗಿಸಿರುವರು. ಈ ಪಾಠವನ್ನವರು ಲೋಕಮಾನ್ಯರಿಂದ ಕಲಿತರು. ಯಾವುದಕ್ಕೂ ಧರ್ಮವೂ ತತ್ವಜ್ಞಾನವೂ ಜೀವ ಳವೆಂಬುದನ್ನು ಅರವಿಂದರಿಂದ ತಿಳಿಸುಕೊಂಡು ರಾಷ್ಟ್ರಜೀವನವನ್ನು ಯಾವಾಗಲೂ ಇವರು ತತ್ವಶಾಸ್ತ್ರದ ಪರಿಭಾಷೆಯಲ್ಲಿಯೇ ಹೇಳುವರು. ಲೋಕಮಾನ್ಯರೂ ಅರವಿಂದರೂ ಅದ್ವೈತ ಸಿದ್ಧಾಂತಗಳನ್ನು ರಾಷ್ಟ್ರೀಯತ್ವದಲ್ಲಿ ಅನ್ವಯಿಸಿ ತೋರಿಸುವಂತೆ ಇವರು ತಮ್ಮ ದ್ವೈತಸಿದ್ಧಾಂತಗಳನ್ನೂ ಆ ವ್ಯಾಪಕಾರ್ಥದಲ್ಲಿ ಅನ್ವಯಿಸುವರು. ಅಂತೆಯೇ ಇವರು ಕರ್ನಾಟಕಾಂತರ್ಗತ ಭಾರತಮಾತೆಯನ್ನು ಪೂಜಿಸುವರು. ಇವರ ದೇಶಭಕ್ತಿಯು ರಾಷ್ಟ್ರಭಕ್ತಿಯ ಉಪಸಿದ್ಧಾಂತವು.

ಆದರೆ, ಇವರಲ್ಲಿ ಬುದ್ಧಿಯ ಏಕಾಗ್ರವೃತ್ತಿಗಿಂತ ವ್ಯಾಪಕವೃತ್ತಿಯು ಹೆಚ್ಚು; ಮೂರ್ತಿಪೂಜೆಗಿಂತ ತತ್ವ ಪೂಜೆಯು ಅಧಿಕ; ಆಚಾರನಿಷ್ಠೆಗಿಂತ ವಿಚಾರನಿಷ್ಠೆಯು ಬಹಳ. ರಾಷ್ಟ್ರೀಯದೃಷ್ಟಿ ಹೆಚ್ಚು; ರಾಷ್ಟ್ರದರ್ಶನ ಕಡಿಮೆ. ಜನೋದ್ದೀಪನಶಕ್ತಿ ಹೆಚ್ಚು; ಜನನಿರ್ವಹಣಶಕ್ತಿ ಕಡಿಮೆ. ಸಣ್ಣ ಪುಟ್ಟ ಕೊರತೆಯಿಂದ ಅತೃಪ್ತಿ ಹೆಚ್ಚು. ಅಲ್ಪ ಕಾರ್ಯದಿಂದ ಸಂತುಷ್ಟಿ ಕಡಿಮೆ. ವಿಚಾರಸ್ವಾತಂತ್ರ್ಯದ ಆಡಂಬರಕ್ಕಿಂತ ನಾವೀನ್ಯಪ್ರೀತಿ ಹೆಚ್ಚು. ಪ್ರತಿಯೊಂದು ಮಾತಿನಲ್ಲಿಯೂ ಇವರಲ್ಲೊಂದು ಪ್ರತ್ಯೇಕಾಭಿಪ್ರಾಯವು ಇದ್ದೇ ಇರುವುದು. ಯಾರು ಯಾವ ಮಾತಿನಲ್ಲಿ ಇವರ ಸಲಹೆ ಕೇಳಿದರೂ ನವೀನವಾದುದೊಂದನ್ನು ಇವರು ಹೇಳೇ ಹೇಳುವರು. ಇವರ ವಿಚಾರದಲ್ಲಿ ಪ್ರಗತಿ ಹೆಚ್ಚು. ಇವರು ನೂತನಪಕ್ಷಗಳನ್ನು ನಿರ್ಮಿಸಿದರೂ ಪಕ್ಷಪಾತ ಕಡಿಮೆ. ಇವರು ಎಲ್ಲ ವಿಚಾರಗಳಿಗೂ ಬೆಂಬಲ ಕೊಟ್ಟರೂ ಯಾವ ವಿಚಾರಕ್ಕೂ ಮುಂಬಲ ಕೊಡುವದು ಕಡಿಮೆ. ಇವರು ಜನರ ನಾಯಕರಾಗದೆ ನೇತ್ರವಾಗಿದ್ದಾರೆ, ಮುಂದಾಳಾಗದೆ ಪ್ರತಿನಿಧಿಗಳಾಗಿದ್ದಾರೆ.

---

# ಗ್ರೀಕರಲ್ಲಿ ಬೌದ್ಧಿಕಸ್ವಾತಂತ್ರ್ಯ

ಲೇಖಕರು :— ಶ್ರೀ. ನಾರಾಯಣಶರ್ಮ, ಬೆಳಗಾಂವಿ

ಪರರಾಯರ ಆಳಿಕೆ ನಡೆಯದಿರುವದು, ಮತ್ತು ವ್ಯಕ್ತಿಯ ಸ್ವಂತ ಕಾರ್ಯಭಾರದೊಳಗೆ ಸರಕಾರದವರು ಕೈಹಾಕದಿರುವದು ಇಷ್ಟಕ್ಕೇ ಅಥೀನಿಯರು ಸ್ವಾತಂತ್ರ್ಯವೆಂದರ್ಥಮಾಡುತ್ತಿರಲಿಲ್ಲ. ಇವೆರಡಕ್ಕಿಂತ ಉದಾತ್ತವೂ ಅಮೂರ್ತವೂ ಆದದ್ದೊಂದು ಸ್ವಾತಂತ್ರ್ಯವು ಅವರ ಕಣ್ಮುಂದೆ ನಲಿದಾಡುತ್ತಿತ್ತು; ಅದನ್ನೇ ಅವರು ತಮ್ಮ ಆದರ್ಶವನ್ನಾಗಿ ಇಟ್ಟುಕೊಂಡಿದ್ದರು; ಮ್ಯಾಥ್ಯೂ ಅರನಾಲ್ಡರು ಅಂದಿರುವಂತೆ, ನಮಗೆ ಪ್ರಾಪ್ತವಾಗಿರುವ ಸ್ವಾತಂತ್ರ್ಯದಿಂದ ಹೇಗೆ ಪ್ರಯೋಜನ ಪಡೆಯಬೇಕೆಂಬುದು ಯಾರಿಗೆ ಹೊಳೆಯುವದಿಲ್ಲವೋ ಅವರಿಗೆ ಸ್ವಾತಂತ್ರ್ಯವಿದ್ದರೂ ಅಷ್ಟೇ ! ಇಲ್ಲದಿದ್ದರೂ ಅಷ್ಟೇ! ಇಷ್ಟಪಡಂತೆ ನಡೆಯಲಿಕ್ಕೆ ಯಾರದು ಅಡ್ಡಿಯಿರದಿದ್ದರೂ ಯಾವ ಮಾರ್ಗದಿಂದ ನಡೆದರೆ, ಹಿತವಾಗುವದೆಂಬುದನ್ನು ತಿಳಿದು ನಡೆಯುವ ಬುದ್ಧಿಯಿದ್ದರಲ್ಲವೇ ಅದರ ಪ್ರಯೋಜನವು ! ಆದ್ದರಿಂದ ಸ್ವಾತಂತ್ರ್ಯವೆಂಬುದು ಸಾಧನವಷ್ಟೇ ಹೊರತು ಸಾಧ್ಯವಲ್ಲ; ಇತಿಹಾಸದ ಓಲೆಗಳನ್ನು ತಿರುವಿಹಾಕಿದರೆ, ಸ್ವಾತಂತ್ರ್ಯಕ್ಕಾಗಿ ಹೆಣಗಾಡಿ ಅವರಲ್ಲಿ ನಾನಾ ಎಂಬುವಂಥ ಜನಾಂಗರತ್ನಗಳನ್ನು ಕಳೆದುಕೊಂಡು ಸ್ವಾತಂತ್ರ್ಯ ಪಡೆದವರೇ, ಸ್ವಾತಂತ್ರ್ಯವು ಕೈಸೇರಿದ ಮೇಲೆ ಅದನ್ನು ಉಪಯೋಗಿಸುವದರಲ್ಲಿ ಬಹು ಹೇಡಿತನವನ್ನು ತೋರಿಸಿದ್ದು ಕಂಡುಬರುತ್ತದೆ; ಹಾಗೆ ಅಥೀನಿಯರ ಸ್ವಾತಂತ್ರ್ಯ ಕಲ್ಪನೆಯು ಬರಿ ಬಂಜೆ ಭಾವನೆಯಾಗಿರಲಿಲ್ಲ; ಅದು ಅಥೀನಿಯರಲ್ಲಿ ಮೊಳಕೆಯೊಡೆಯುವದೊಂದೆ ತಡ, ವಿದ್ಯೆ ಕಲೆಗಳ ವಿಷಯವಾಗಿ ಇನ್ನೂವರೆಗೆ ಎಲ್ಲಿಯು ಕಾಣಿಸದಂಥ ಅಪೂರ್ವ ಕಲಾಭಿರುಚಿಯನ್ನುಂಟುಮಾಡಿ ತಮ್ಮ ದೀಪ್ತಿಯಿಂದ ಜನಾಂಗಗಳ ಕಣ್ಣು ಮಂಜುಗೊಳಿಸಿದ್ದು ಈಗ್ಯೂ ಇತಿಹಾಸದಲ್ಲಿ ಅಮರವಾಗಿದೆ; ಮತ್ತು ಅದಕ್ಕಿಂತ ಮುಂದೆಹೋಗುವ ಎದೆಗಾರಿಕೆಯು ಈಗಿನ ನಾಗರೀಕತೆಯು ಶತಮಾನದಲ್ಲಿ ಕೂಡ ಎಲ್ಲಿಯೂ ಕೇಳಬರುವದಿಲ್ಲ. ಪೆರಿಕ್ಲೀಜನು ತನ್ನ ಪ್ರಖ್ಯಾತಿಗೊಂಡ ಭಾಷಣದೊಳಗೆ ಅನ್ನುವದೇನಂದರೆ, ' ನಾವು ಕಲಾಕೌಶಲ್ಯಗಳನ್ನು ಪ್ರೋತ್ಸಾಹಿಸುತ್ತೇವೆ; ಆದರೆ ಮರ್ಯಾದೆ

ವೀರಿ ನಡೆಯುವದಿಲ್ಲ; ವಿದ್ಯೆಯನ್ನು ಕಲಿಸಿ ಪ್ರೋತ್ಸಾಹಿಸುವಾಗಲೂ ನಮ್ಮ ಪೌರುಷಕ್ಕೆ ಹಾನಿ ತಟ್ಟದಂತೆ ನಾವು ಯಾವಾಗಲೂ ಜಾಗರೂಕರಾಗಿರುತ್ತೇವೆ.' ಮೇಲಿನ ಗೂಢವಾಕ್ಯದಿಂದ ಈಗಣ ಅಧುನಿಕ ಸುಧಾರಣೆಯ ಭಕ್ತರು ಬೇಕಾದಷ್ಟು ಕಲಿತುಕೊಳ್ಳಬಹುದು; ಅಥೀನಿಯರ ನಾಗರೀಕತೆಯು ಬರಿಯ ಪೊಳ್ಳು ಶಸ್ತ್ರಾಸ್ತ್ರಗಳನ್ನೇ ಅವಲಂಬಿಸಿರಲಿಲ್ಲ. ಶಸ್ತ್ರಾಸ್ತ್ರ, ದಂಡುದಳಗಳಲ್ಲದೆ ಮತ್ತೊಂದು ಯಾವುದೋ ವಿಶೇಷವಾಗಿ ಎಲ್ಲವನ್ನು ಆಳುವಂಥ ಶಕ್ತಿಯು ತಮ್ಮ ಜನಾಂಗದಲ್ಲಿ ವಾಸವಾಗಿರುವದೆಂದು ಅವರ ದೃಢವಾದ ಮನವರಿಕೆಯಿತ್ತು. ಚಿಕ್ಕ ಜನಾಂಗಗಳನ್ನು ತಮ್ಮ ದಂಡಿನ ಬಲದಿಂದಲೂ ವಿನಾಶಕವಾದ ಶಸ್ತ್ರಾಸ್ತ್ರಗಳ ಬಲದಿಂದಲೂ ಮಣ್ಣುಗಾಣಿಸುವದು ನಾಗರೀಕತೆಯೆಂದು ಇವರೆಂದೂ ಬಗೆಯಲಿಲ್ಲ; ದುರ್ದೈವವಶಾತ್, ಅಥೀನಿಯನ್ನರ ಸ್ವಾತಂತ್ರ್ಯವು ಶಿರಾಳಶೆಟ್ಟಿಯ ಆಳಿಕೆಯಂತೆ ಕಾಲುಗಳಿಗೆಯ ರಾಜ್ಯವಾದರೂ, ಅಷ್ಟರಲ್ಲಿ ಅವರು ಮನಸ್ಸು, ಬುದ್ಧಿಗಳೆಲ್ಲವನ್ನು ವಿದ್ಯೆಕಲೆಗಳ ಅಭಿವೃದ್ಧಿಗಾಗಿಯೇ ಸೂರೆಗೊಂಡು ತನ್ಮಯರಾಗಿಹೋಗಿದ್ದರು, ಸಾಲಾಮೀಸದ ಯುದ್ಧದೊಳಗೆ ಗ್ರೀಕರಿಗಾದ ಅನ್ಯಾದೃಶವಾದ ಗೆಲುವಿನಿಂದ ಅವರ ಸ್ವಾತಂತ್ರ್ಯದ ಬೇರು ಹೆಚ್ಚು ಗಟ್ಟಿಮುಟ್ಟ ಆಯಿತು; ಆದರೆ ಈ ಸಂದರ್ಭದಲ್ಲಿ ವಾಚಕರಿಗೆ ಹೇಳಬೇಕಾದ ಸ್ಮರಣೀಯವಾದ ಸಂಗತಿಯೊಂದರಿಂದ ಅತ್ಯಂತಾಶ್ಚರ್ಯವಾಗುವದು; ಅದೇನಂದರೆ, ಅಥೇನ್ಸದ ವಿಖ್ಯಾತ ನಾಟಕಕಾರರಾದ ಅಸ್ಕೈಲೀಜ, ಸೋಫೊಕ್ಲೀಜ, ಯುರಿಪಿಡೀಜ ಎಂಬ ಮೂವರೂ ಈ ಯುದ್ಧದೊಳಗೆ ಮನಸ್ಸಿನಿಂದ ಮೈಗೊಂಡಿದ್ದರೆಂಬುದೇ ! ಸ್ವತಂತ್ರವಾದ ಅಥೆನ್ಸದೊಳಗೆ ಸ್ವಚ್ಛಂದವಾಗಿ ಹರಿದಾಡುವ ಪ್ರತಿಭೆಗೆ ಹೇಗೆ ಸ್ವಾತಂತ್ರ್ಯವೂ ಅವಕಾಶವೂ ದೊರೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತಿದೆ; ಅಥೇನ್ಸನೊಳಗೆ ವಿದ್ಯೆಕಲೆಗಳ ವಿಷಯದಲ್ಲಿ ಈ ತೆರನಾದ ಆಸ್ಥೆಯು ನಾಲ್ಕಾರು ಬಿಳೆ ಬಟ್ಟೆಗಳನ್ನುಡುವ ಜನರಲ್ಲಿಯೇ ಹುದುಗಿಕೊಂಡಿರದೆ, ಅದು ಇಡೀ ಜನಾಂಗದೊಳಗೇನೇ ಹರಡಿಕೊಂಡು ಹರಿದಾಡುತ್ತಿತ್ತು; ಪ್ಲೇಟೋ ಅಥವಾ ಝೆನೋಫೋನ ಮೊದಲಾದವರ ಗ್ರಂಥದೊಳಗೆ ವಿಷಯಾಂತರಗಳನ್ನು ಕುರಿತು ದೃಗ್ಗೋಚರವಾಗುವ ಸಂವಾದಗಳೂ, ಅವುಗಳೊಳಗಿನ ಪಾತ್ರಗಳೂ ಬರಿಯ ಸುಶಿಕ್ಷಿತರೂ, ಸುಖವಸ್ತುಗಳೂ ಆಗಿರದೆ, ವರ್ತಕರೂ, ಶಿಲ್ಪಿಗರೂ, ಇದ್ದರೆಂಬುದರ ಮೇಲಿಂದ ಅಥೀನಿಯರ ನಾಗರೀಕತೆಯ ಬೇರುಗಳು ಎಷ್ಟು ಆಳವಾಗಿ ಬಿಟ್ಟುಕೊಂಡಿದ್ದವೆಂಬುದರ ಅನುಮಾನವಾಗುವಂತಿದೆ. ಅಥೀನಿಯರು ದೇವರು ತಮ್ಮ ಪಾಲಿಗೆ ಕೊಟ್ಟ ದೈವವನ್ನು ತಮ್ಮ ಬುದ್ಧಿ ಹರಿದ ಮಟ್ಟಿಗೆ ಪ್ರಯತ್ನಪೂರ್ವಕವಾಗಿ ಸರ್ವಾಂಗಮನೋಹರವೂ, ದೈವಿಕವೂ, ಆಗಿ ಮಾರ್ಪಡಿಸಲಿಕ್ಕೆ ಹೆಣಗಿದರು. ಮತ್ತು ಅದರೊಳಗೆ ಅವರಿಗೆ ಚೆನ್ನಾಗಿಯೇ ಜಯ ದೊರೆಯಿತು.

---

# ರಾಜಕೀಯ ಸಮಾಚಾರ

(ಶ್ರೀ ಉದ್ವರವರು ಸಂಗ್ರಹಿಸಿದುದು)

## ಗಾಂಧಿ ಸಂಸ್ಥೆ

ಅಮೇರಿಕದ ನ್ಯೂಯಾರ್ಕ ಪಟ್ಟಣದ ರೈನಕ್ಲಿಫ್ ಎಂಬಲ್ಲಿ ಜೋನ ಹೋಮ್ಸ್, ಸಂಡರಲೇಂಡ್, ವೋನ್ ಬ್ಲೋಮಬರ್ಗ, ಕೆದಾರ ನಾಥದಾಸ ಗುಪ್ತ ಮೊದಲಾದವರು ಗಾಂಧಿ ಸಂಸ್ಥೆಯನ್ನು ಸ್ಥಾಪಿಸಿರುವರು. ಅದರ ಮುಖ್ಯ ಆಫೀಸು ನ್ಯೂಯಾರ್ಕ ಪಟ್ಟಣದ 1286 Fifth Avenue ಎಂಬ ಮುಖ್ಯ ಮಾರ್ಗದಲ್ಲಿರುವದು. ನ್ಯೂಯಾರ್ಕ ಪಟ್ಟಣದ ೯೦ ಮೈಲು ದೂರದಲ್ಲಿ ಇದು ಇರುತ್ತದೆ. ಈ ಸಂಸ್ಥೆಯು ೪೦ ಎಕ್ರೆ ವಿಸ್ತೀರ್ಣವಾಗಿದ್ದು ೧೪ ಸಣ್ಣ ಮನೆ ಮತ್ತು ಒಂದು ದೊಡ್ಡ (mansion) ಮಹಾಲು ಇರುವ ಸ್ಥಳದಲ್ಲಿರುವದು. ೧೯೧೪ರಲ್ಲಿ ಗಾಂಧಿಯವರು ಸ್ಥಾಪಿಸಿದ ಎಂಬುಲೆನ್ಸ ಸೈನ್ಯದಲ್ಲಿದ್ದ ದಾಸಗುಪ್ತರು ಗಾಂಧಿಯವರ ಮುಖ್ಯ ಸೂತ್ರಗಳಾದ ಬ್ರಹ್ಮಚರ್ಯ ಮೊದಲಾದ ಸೂತ್ರಗಳನ್ನು ನ್ಯೂಯಾರ್ಕಿನಲ್ಲಿಯೂ ಅಮೇರಿಕದಲ್ಲಿಯೂ ಪ್ರಚಾರಮಾಡುತ್ತಿರುವರು.

— ಹಿಂದು ಪತ್ರಿಕೆ

## ವಿಲಾಯತಿಯ ವ್ಯಾಪಾರದ ಕ್ಷೀಣತೆ

ಬರ್ನಲಿ (Burnley) ಎಂಬ ಪಟ್ಟಣದಲ್ಲಿ ೨೩ ಸಾವಿರ ಮಗ್ಗಗಳನ್ನು ತೆಗೆದು ಹಾಕಿರುತ್ತಾರೆ. ೨೩ ಸಾವಿರ ಮಗ್ಗಗಳಲ್ಲಿ ಕೆಲಸವು ನಡೆಯುವದಿಲ್ಲ. ಈ ಪಟ್ಟಣದಲ್ಲಿ ೯೭ ಸಾವಿರ ಜನರು ವಾಸವಾಗಿರುವರು. ಅವರಲ್ಲಿ ೫೦೦೦ ಜನರು ಕೆಲಸವಿಲ್ಲದೆ ಇರುವರು. ಉಳಿದ ಕೆಲವು ಸಾವಿರ ಜನರಿಗೆ ಸಾಕಷ್ಟು ಕೆಲಸವಿರುವದಿಲ್ಲ. ಅರ್ಧ ದಿವಸವೇ ಅವರಿಗೆ ಕೆಲಸ. ನೆಲ್ಸನ್ ಎಂಬ ೪೨ ಸಾವಿರವಿರುವ ಪಟ್ಟಣದಲ್ಲಿ ೧೮ ಸಾವಿರ ಮಗ್ಗಗಳಿಗೆ ಕೆಲಸವಿಲ್ಲ. ೮೦ ಸಾವಿರ ಪವನು ಮೌಲ್ಯದ ಒಂದು ದೊಡ್ಡ ಅರಳೆ ಕಾರಖಾನೆಯನ್ನು ಬಹಿಷ್ಕಾರದ ಸಂಬಂಧವಾಗಿ ... ಅವರು ಮಾರಬೇಕಾಯಿತು,

# ಬಟ್ಟೆಯ ಬಹಿಷ್ಕಾರದ ಫಲ

( ಇಂಡಿಯಾಕ್ಕೆ ಇಂಗ್ಲಂಡದಿಂದ ಆಮದು )

| | ೧೯೨೯ ಎಪ್ರಿಲ್ | ೧೯೩೦ ಎಪ್ರಿಲ್ |
|---|---|---|
| ಬೊಂಬಯಿ ಬಂದರ ಮುಖಾಂತರ ಆಮದು (ಕರಾಚಿ ಮಾರ್ಗ)– | ೬೭ ಮಿಲಿಯ ಗಜ<br>ಇದಕ್ಕೆ ೪೭೬ ಸಾವಿರ ಪವನಿನ ಮೌಲ್ಯ | ೧೯ ಮಿಲಿಯ ಗಜ<br>೩೧೨ ಸಾವಿರ ಪವನು |
| ಬೇರೆ ಬಂದರಗಳು (ಬೊಂಬಯಿ ಬಂದರದಿಂದ ) | ೨೯ ಮಿಲಿಯ ಗಜ<br>೬೨೯ ಮಿಲಿಯ ಪವನು ಮೌಲ್ಯ | ೧೫ ಮಿಲಿಯ ಗಜ<br>೩೨೦ ಸಾವಿರ ಪವನು ಮೌಲ್ಯ |
| ಮದ್ರಾಸು ಬಂದರ | ೧೦ ಮಿಲಿಯ ಗಜ<br>೧೮೫ ಸಾವಿರ ಪವನಿನ ಮೌಲ್ಯದ್ದು | ೬ ಮಿಲಿಯ ಗಜ<br>೧೦೩ ಪವನಿನ ಮೌಲ್ಯದ್ದು |
| ಬಂಗಾಳ ಆಸ್ಸಾಮು ಬಿಹಾರ ಒರಿಸಾ | ೮೮ ಮಿಲಿಯಗಳು<br>೧೪೫೫ ಸಾವಿರ ಪವನಿನ ಮೌಲ್ಯದ್ದು | ೪೨ ಮಿಲಿಯ ಗಜ<br>೬೪೯ ಸಾವಿರ ಪವನಿನ ಮೌಲ್ಯ |
| ಬರ್ಮಾ | ೬ ಮಿಲಿಯ ಗಜ<br>೧೫೭ ಸಾವಿರ ಪವನು ಮೌಲ್ಯ | ೩ ಮಿಲಿಯ ಗಜ<br>೮೩ ಸಾವಿರ ಪವನಿನ ಮೌಲ್ಯ |

—ಮೋಡರ್ನರಿವ್ಯು

## ಹಿಂದುಸ್ತಾನವು ಇಂಗ್ಲಂಡಕ್ಕೆ ಯಾಕೆ ಅಗತ್ಯ!

ಮಿಸ್‌ಕೌಂಟ ರೊದರ್‌ಮಿಯರರು ಇಂಗ್ಲಂಡದ ೧೯೩೦ನೆ ಇಸ್ವಿ ಜೂನ್ ತಾ|| ೩ ರ " ಡೈಲಿ ಮೈಲ" ಪತ್ರಿಕೆಯಲ್ಲಿ ಬರೆದದ್ದು–

"ಇಂಗ್ಲಂಡಿನ ಹುಚ್ಚ ಜನರು, ನಮ್ಮ ಸಾಮ್ರಾಜ್ಯದಿಂದ ಹಿಂದುದೇಶವನ್ನು ಬಿಡುವದರಿಂದ ಬ್ರಿಟಿಷ ಗಯಾನವನ್ನು ಬಿಟ್ಟ ಹಾಗೆ ನಮ್ಮ ಸಂಪತ್ತಿಗೆ ಏನೂ ಹಾನಿಯಿಲ್ಲವಾಗಿ ಅಭಿಪ್ರಾಯ ಪಡುತ್ತಾರೆ.

ಆಲೋಚನೆಯಿಲ್ಲದೆ ಅವರು ಹೇಳುವ ಮೇರೆಗೆ ನಡೆದರೆ ಬ್ರಿಟಿಷರ ಮಹತ್ವವು ಕೊನೆಗಾಣುವದು. ಭೂಲೋಕದಲ್ಲಿ ಪ್ರಬಲವಾಗಿರುವ ನಮ್ಮ ಮಹತ್ವವು ಇದರಿಂದ ನಾಶವಾಗಿ ನಮ್ಮ ದೇಶಕ್ಕೆ ಬಡತನವು ಬರುವದು. ಈಗ ನಮ್ಮಲ್ಲಿ ೨ ಮಿಲಿಯ ಜನರು ಕೆಲಸವಿಲ್ಲದೆ ಇರುವರು. ನಂತರ ೪ ಮಿಲಿಯ ಜನರಾಗುವರು. ಅವರ ಹಸಿವೆಯನ್ನು ನಿವಾರಿಸಲಿಕ್ಕೆ ಯಾವ ಪ್ರಯತ್ನವೂ ನಮ್ಮಿಂದ ಸಾಧ್ಯವಾಗದು.

ಬ್ರಿಟಿಷ ಸಾಮುಗ್ರಿಗಳು ಹಿಂದುಸ್ಥಾನಕ್ಕೆ ರಫ್ತು ಆಗುವಷ್ಟು ಯಾವ ರಾಜ್ಯಕ್ಕೂ ಆಗುವದಿಲ್ಲ, ಅಮೇರಿಕದಿಂದ ನಮಗೆ ಆಮದು ಆಗುವದಕ್ಕಿಂತ ಸ್ವಲ್ಪ ಕಡಿಮೆ ಸಾಮುಗ್ರಿಗಳು ಹಿಂದುಸ್ಥಾನದಿಂದ ಅಂಗ್ಲಾಳಕ್ಕೆ ಆಮದಾಗಿ ಬರುತ್ತವೆ.

ಇಂಗ್ಲಂಡವು ಹಿಂದುದೇಶವನ್ನು ಬಿಟ್ಟರೆ ಪ್ರಾಯಹೋದವರಿಗೆ ಕೊಡುವ ಪೆನ್ಸನು, ಕೆಲಸವಿಲ್ಲದವರಿಗೆ ನಾವು ಕೊಡುವ ದ್ರವ್ಯ ಸಹಾಯ, ವಿದ್ಯಾಭ್ಯಾಸಕ್ಕೆ ನಾವು ಕೊಡುವ ಗ್ರಾಂಟು, ಹಾಗೂ ನಮ್ಮ ಕಜಾನೆಯಿಂದ ಹೊರಗೆ ಸಲ್ಲುವ ಹಣ ಇವನ್ನು ಕೊಡಲಿಕ್ಕೆ ಸಾಧ್ಯವಿಲ್ಲ. ಇಂಡಿಯಾ ದೇಶದೊಡನೆ ನಾವು ನಡಿಸುವ ವ್ಯಾಪಾರದಿಂದಲೂ ನಮಗೆ ಸಿಕ್ಕುವ ಲಾಭದಿಂದಲೂ ನಮ್ಮ ಈ ಜೀವನಕ್ರಮಗಳೆಲ್ಲ ಸರಾಗವಾಗಿ ನಡೆಯುವವು.

ಈ ಎಲ್ಲ ಅನುಕೂಲತೆಗಳು ಬೇರೆ ಯಾವ ಜನಾಂಗಕ್ಕೂ ಇಲ್ಲ. ೩೨೦ ಮಿಲಿಯ ಇಂಡಿಯದ ಜನರು ನಮ್ಮ ಸಾಮಾನನ್ನು ಕೊಂಡುಕೊಳ್ಳುವದರಿಂದ ಇದೆಲ್ಲ ಸಾಧ್ಯ.

ಬ್ರಿಟಿಷ ಜನಾಂಗದ ಪ್ರತಿಒಬ್ಬ ವ್ಯಕ್ತಿಯ ಆದಾಯದ ಪ್ರತಿ ಒಂದು ಪವನಿನ ೧/೬ನೇ ಅಂಶವು ನಮ್ಮ ಹಿಂದುದೇಶದ ವ್ಯಾಪಾರದಿಂದ ಹುಟ್ಟುವದು.

– ಮೋಡರ್ನರಿವ್ಯು

# ಕರ್ನಾಟಕ ಮಹಿಳೆಯರು

ಬಳ್ಳಾರಿಯ ರಾಷ್ಟ್ರೀಯ ಸಭೆಯ ಉಪಾಧ್ಯಕ್ಷರಾದ



ಸೌಭಾಗ್ಯವತಿ ಕೆ. ಲಕ್ಷ್ಮಮ್ಮನವರು

ಶ್ರೀಮತಿ ಲಕ್ಷ್ಮಮ್ಮನವರು ಬಳ್ಳಾರಿ ಜಿಲ್ಲೆಯ ರಾಷ್ಟ್ರೀಯ ಕಾರ್ಯಗಳಿಗೆ ಮಾತೃಸ್ವರೂಪರಾಗಿದ್ದಾರೆ. ಬಳ್ಳಾರಿಯ ವಕೀಲರಾದ ಎನ್, ಮೃತ್ಯುಂಜಯಶಾಸ್ತ್ರಿಗಳ ಸಹಧರ್ಮಿಣಿಯರು. ಇವರು ಮುಂಬಯಿಯ ಎಲ್. ಸಿ. ಪಿ. ಎಸ್ (ವೈದ್ಯಕ) ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದು ಹೆಚ್ಚಿನ ಶಿಕ್ಷಣಕ್ಕಾಗಿ ಇಂಗ್ಲಂಡಕ್ಕೆ ಹೋಗುವವರಿದ್ದರು, ಆದರೆ ದೇಶದ ಗಭೀರ ಗಂಭೀರ ರಾಜಕೀಯ ಪರಿಸ್ಥಿತಿಯನ್ನು ಕಂಡು ಆ ಶಿಕ್ಷಣಕ್ಕೆ ಶರಣು ಹೊಡೆದು ರಾಷ್ಟ್ರಕಾರ್ಯದಲ್ಲಿ ಧುಮ್ಮಿಕ್ಕಿರುವರು. ಮೊನ್ನಿನ ಬಳ್ಳಾರಿ ಜಿಲ್ಲೆಯ ಕೌನ್ಸಿಲ್ ಬಹಿಷ್ಕಾರ ಕಾರ್ಯದಲ್ಲಿ ಸತತ ಪರಿಶ್ರಮ ವಹಿಸಿ ಕಾರ್ಯಮಾಡಿದರು. ಸಾಮಾಜಿಕ ಕಾರ್ಯರಂಗದಲ್ಲಿಯೂ ಇವರು ಭಾಗವಹಿಸುವರು. ಅಂತ್ಯಜೋದ್ಧಾರದ ಕಾರ್ಯಕ್ಕೆ ಇವರು ಬಹು ಮಹತ್ತ್ವವನ್ನು ಕೊಡುತ್ತಿರುವರು.

ಬಳ್ಳಾರಿಯ ಪ್ರಸಿದ್ಧ ಸಮಾಜಸೇವಿಕೆಯರಾದ

ಬಳ್ಳಾರಿಯಲ್ಲಿ ಸಾಮಾಜಿಕ ಕಾರ್ಯವನ್ನು ಮನಮುಟ್ಟಿ ಮಾಡುವವರಲ್ಲಿ ಶ್ರೀಮತಿ ವ್ಹಾ. ವೆಂಕಟೇಶ್ವರಮ್ಮನವರು ಮುಂದಾಗಿರುವರು. ಇವರು ಉದಾರಹೃದಯರೂ ವ್ಯವಸಾಯ ಖಾತೆಯಲ್ಲಿ ಅಸಿಸ್ಟಂಟ ಡೈರೆಕ್ಟರರೂ ಆದ ಶ್ರೀ ನಾಯುಡು ಕೃಷ್ಣರಾಯರ ಧರ್ಮಪತ್ನಿಯವರು. ಇವರು ಬಹು ಕೋಮಲ ಸ್ವಭಾವದವರಿದ್ದು ಸಾಮಾಜಿಕ ಸೇವೆಗಾಗಿ ತಮ್ಮ ತನುಮನಧನಗಳನ್ನು ಕೊಟ್ಟು ಬಿಟ್ಟಿದ್ದಾರೆ. ಮದ್ರಾಸ ಯುನಿವ್ಹರ್ಸಿಟಿಯ ಅಂಡರ ಗ್ರ್ಯಾಜುಯೇಟರಿದ್ದು ಸ್ತ್ರೀಯರ ಹಾಗೂ ಅಸ್ಪೃಶ್ಯರ ಸಂಬಂಧವಾದ ಚಟುವಟಿಕೆಗಳಲ್ಲಿ ಯಾವಾಗಲೂ ಸೇರಿರುವರು. ಮೊನ್ನೆ ಮೊನ್ನೆ ಆದ ಆರೋಗ್ಯ ಶಿಶು ಸಪ್ತಾಹದಲ್ಲಿ ಇವರ ಪರಿಶ್ರಮದಿಂದಲೇ ಅಂತ್ಯಜರನ್ನು ಸೇರಿಸಿಕೊಳ್ಳಲಾಗಿತ್ತು.



ಸೌಭಾಗ್ಯವತಿ ವೆಂಕಟೇಶ್ವರಮ್ಮನವರು

# ಇದು ನಿಮ್ಮ ಮತವೋ ?



ಕತೆಗಾರರು:— ಇ. ಎ. ಭಾಸ್ಕರರಾವ್, ಪಾಣೆಯೂರ

"ಬೇಡಿ, ಇನ್ನೂ......ದಯವಿಟ್ಟು......"

ತರುಣನು ಆಕೆಯ ಕೈಗಳನ್ನು ಬಿಟ್ಟು ಬಿಟ್ಟು, ಹಳೇ ಕಬ್ಬಿಣದ ಪೆಟ್ಟಿಗೆಯ ಮೇಲೆ ಕಾಲೊಂದನ್ನೂರಿ ಆಕೆಯ ಮುಖವನ್ನೇ ಗಮನಿಸುತ್ತ ನಿಂತನು.

"ಚಾ ಕುಡಿದು ಬೇರೆ ಬಟ್ಟೆಗಳನ್ನು ಹಾಕಿಕೊಳ್ಳಿ. ದೇವಾರಾಧನೆಗೆ ಹೋಗಿ ಬರೋಣ. ಈ ಹೊತ್ತು ಭಾನುವಾರವಲ್ಲವೆ ?

ಆಕೆಯ ಮುಖವು ಬಾಡಿತು.

"ದೇವಾಲಯದ ಹುಚ್ಚು ನಿನಗಿನ್ನೂ ಬಿಟ್ಟಿಲ್ಲವೆ ಗ್ರೇಸಿ ? ದೇವಾಲಯವೆಲ್ಲಿದೆ ? ಎಲ್ಲವೂ ದೆವ್ವಾಲಯಗಳೇ. ನಾನು ಬರೋದಿಲ್ಲ; ಬೇಕಾದರೆ ನೀನೇ ಹೋಗಿ ಬಾ."

"ಹಾಗನ್ನಬೇಡಿ. ಮನುಷ್ಯರು ಬಾಯಿಗೆ ಬಂದಂತೆ ಆಡಿಕೊಂಡರೂ ದೇವರು ದೂಡಿಬಿಡುವುದಿಲ್ಲ ನಮ್ಮನ್ನು; ಬನ್ನಿ."

"ನಾವಿಲ್ಲಿಗೆ ಬಂದು ಇನ್ನೂ ಮೂರು ಗಂಟೆಯಾಗಿಲ್ಲ. ಸಾಮಾನುಗಳೆಲ್ಲಾ ಬಿದ್ದಿರುವುದನ್ನು ನೋಡು. ಇವನ್ನೆಲ್ಲಾ ನಾನು ಸರಿಯಾಗಿ ಎತ್ತಿಟ್ಟು, ಸ್ನಾನಮಾಡಿಕೊಂಡು, ಕಾರ್ಖಾನೆಯ ಯಜಮಾನರನ್ನು ನೋಡಿಕೊಂಡು ಬರಬೇಕು. ಹೊತ್ತಿಲ್ಲ."

"ಸಾಮಾನುಗಳಿಗೇನು ? ಹೀಗೇ ಬಿದ್ದಿರಲಿ. ಎತ್ತಿಡುವುದಕ್ಕೆ ನಾನೂ ಸಹಾಯ ಮಾಡುತ್ತೇನೆ – ಯಾರ ಯಾರ ಮೇಲಿನ ಕೋಪವನ್ನೆಲ್ಲ ದೇವರ ಮೇಲೆ ಬಿಡುವುದು ಸರಿಯೆ ? ನನಗಾಗಿ ..."

"ಬರುತ್ತೇನೆ."

ತಟ್ಟನೆ ಬಂದ ಈ ಮರುತ್ತರವು ನೈಜವಾದುದೋ ಅಲ್ಲವೋ ಎಂಬುದನ್ನು ಗಮನಿಸಿ, ಕಾಠಿಣ್ಯವಿಲ್ಲವೆಂಬುದನ್ನರಿತುಕೊಂಡು, ಗೆಲುವಿನಿಂದ ಆಕೆ ಕೇಳಿದಳು. "ಚಾ ತಣ್ಣಗಾಯಿತೇನೋ ! ಬಿಸಿ ಮಾಡಿ ಕೊಡಲೆ ?" ಎಂದು.

---

ಕಥಾವಸ್ತುವಿನಲ್ಲಿ ಕ್ರಿಸ್ತಮತೀಯರ ನಡತೆ ನಡಾವಳಿಗಳ ಉಲ್ಲೇಖವು ಬಹಳ ಇರುವುದರಿಂದ, ಎಲ್ಲರಿಗೂ ಸುಗಮವಾಗಬೇಕೆಂದು ಪಾರಿಭಾಷಿಕವಾಗಿ ಉಪಯೋಗಿಸಿದ ಶಬ್ದಗಳ ಇಂಗ್ಲಿಷ ಮೂಲವನ್ನು ಕೆಳಗೆ ಕೊಟ್ಟಿದೆ.

ಪಾಲಕರು = Paster of the Church. ದೇವಾಲಯದ ಹಿರೀ ಪುರೋಹಿತರು.

ದೇವಾಲಯ = Church

ಸತ್ಯವೇದ, ಈಸಾಯಿವೇದ, ವೇದ = Bible

ಕೀರ್ತನೆ = ದೇವರ ನಾಮಗಳ ಪುಸ್ತಕ Book of Lyrics. Psalms ಎಂದೂ ಒಮ್ಮೊಮ್ಮೆ ಅರ್ಥವಾಗುತ್ತದೆ.

ಪೂಜ್ಯ = Reverend

ಗ್ರೇಸ ಬೆಂಗರಸನ್ ಸತಿ = Mrs. Grace Bengerson

ಬೈಬಲ್ ವುಮನ್ = Bible Women; Women who go from house to house propagat-ingthe Gospels among women.

ಮಿಸಮ್ಮ = ಅವಿವಾಹಿತರಾದ ಆಂಗ್ಲ ಸ್ತ್ರೀಯರನ್ನು ಈಸಾಯಿಗಳು ಮಿಸಮ್ಮನವರೆಂದು ಕರೆಯುವುದು ಸಾಮಾನ್ಯ ಪದ್ಧತಿ 'Miss+ಅಮ್ಮ'

ರೊಟ್ಟಿ = Bread

ತ್ಯಾಗಪತ್ರ = Divorce deed.

ಕರ್ತನ ಸಹಪಂಕ್ತಿ ಭೋಜನ = Holy communion, ಯೇಸು ಕ್ರಿಸ್ತನು ಲೋಕವಿಮೋಚನೆಗಾಗಿ ಶಿಲುಬೆಯ ಮೇಲೆ ರಕ್ತವನ್ನು ಸುರಿಸಿ, ದೇಹವನ್ನು ದಂಡಿಸಿಕೊಂಡು, ಪ್ರಾಣಬಿಟ್ಟುದನ್ನು ನೆನಸಿಕೊಳ್ಳುವುದಕ್ಕೋಸ್ಕರ, ತಿಂಗಳಿಗೊಂದಾವರ್ತಿ ಒಂದು ಚೂರು ರೊಟ್ಟಿಯನ್ನು ತಿಂದು ಒಂದು ಗುಟುಕು ದ್ರಾಕ್ಷಾರಸವನ್ನು ಕುಡಿಯುವ ಪದ್ಧತಿಯಿದೆ. ಸಕಾರಣಗಳನ್ನು ತಿಳಿಸದೆ ಇದಕ್ಕೆ ಬಾರದೇ ಹೋದಲ್ಲಿ, ಮಾಡಬಾರದ ಕೆಲಸವನ್ನು ಮಾಡಿ ಮನೋಧೈರ್ಯವಿಲ್ಲದೆ ಹಿಂದುಳಿದಿರಬಹುದೆಂದು ಈಸಾಯಿಗಳು ಶಂಕಿಸುವರು. ಮತ್ತು ಈಸಾಯಿಗಳಲ್ಲಿ ಬಹಿಷ್ಕಾರವಾದರೆ ಈ ಸಹಪಂಕ್ತಿ ಭೋಜನಕ್ಕೆ ಸೇರಿಸುವುದಿಲ್ಲ ಎಂಬುದು.

ತಂದೆ ಮಗ ಪರಿಶುದ್ಧಾತ್ಮಸಾಕ್ಷಿಯಾಗಿ God the father God the son, God the Holy Ghost as witnesses. ಈಸಾಯಿ ಮದುವೆಗಳಲ್ಲಿ ಮೇಲ್ಕಾಣಿಸಿರುವಂತೆ ತಂದೆ ಮಗ ಪರಿಶುದ್ಧಾತ್ಮಸಾಕ್ಷಿಯಾಗಿ ಮದುವೆಯಾಗಿದೆ ಎಂದರೆ, ಶಾಸ್ತ್ರೋಕ್ತವಾಗಿ 'ಅಗ್ನಿ ಸಾಕ್ಷಿಯಾಗಿ' ಮದುವೆಯಾಗಿದೆ ಎಂಬರ್ಥ.

ತರುಣನು ಕೈಮೇಲಿದ್ದ ಧೂಳವನ್ನೊರಸಿಕೊಂಡು, ಕೊಂಚ 'ಚಾ' ಕುಡಿದು, "ಬಹಳ ಚೆನ್ನಾಗಿದೆ; ಪರವಾ ಇಲ್ಲ; ಬಿಸಿ ಯಾಗಿಯೇ ಇದೆ — ಕೊಂಚವೂ ಸುಧಾರಿಸಿಕೊಳ್ಳದೆ ಈಗ ನೀನೇಕೆ ಮಾಡಿದೆ ಇದನ್ನು? ಎನ್ನುತ್ತಾ ಎಲ್ಲವನ್ನೂ ಕುಡಿದ ಮೇಲೆ ಬಟ್ಟಲನ್ನು ಪೆಟ್ಟಿಗೆಯ ಮೇಲಿಟ್ಟು, ಅವಳ ಸೊಂಟಕ್ಕೆ ಕೈ ಹಾಕಿ ಮೆಲ್ಲನೆ ತನ್ನ ಬಳಿಗೆ ಸೆಳೆದುಕೊಳ್ಳಲೆತ್ನಿಸಿದನು.

ಗ್ರೇಸ್ ಬೆಂಗರಸನ್ ಸತಿಯು ಮೆಲ್ಲನೆ ಆತನ ಹಿಡಿತ ದಿಂದ ಬಿಡಿಸಿಕೊಂಡು, "ಬಿಡ್ರಿ — ಕೋಪಿಸಿಕೊಳ್ಳಬೇಡಿ. ನಾನು ಬೇರೆ ಬಟ್ಟೆ ಹಾಕಿಕೊಂಡು ಬರುತ್ತೇನೆ; ಅಷ್ಟರಲ್ಲಿ ನೀವೂ ಸಿದ್ಧವಾಗಿರ್ರಿ" ಎನ್ನುತ್ತಾ ಒಳಕ್ಕೆ ಹೋದಳು.

ಈತನು ಹಸರು ಕಾಲುಚೀಲಗಳನ್ನು ಹಾಕಿಕೊಂಡು, ತೇಪೆ ಹಾಕಿದ್ದ 'ಖಾಕಿ' ಷರಾಯಿ ತೊಟ್ಟು, ರೂಪಾಯಿ ಅಗಲದ ಎರಡು ಮೂರು ಬಿಲ್ಲೆಗಳನ್ನು ಹೊಲೆದಿದ್ದರೂ ಕೊಂಚ ಕೊಂಚ ಸೀಳು ಬಿಟ್ಟದ್ದ ಕರೇ ಮೋಚೆಗಳನ್ನು ಮೆಟ್ಟಿ, ಗುಂಡಿಗಳಿಲ್ಲದ ಬಿಳೀ ಅಂಗಿಯನ್ನು ಹಾಕಿಕೊಂಡು ಆಕೆಗಾಗಿ ಕಾದಿದ್ದನು. ಆಕೆಯು ಬಿಳೀ ಸೀರೆಯನ್ನೂ ಗುಲಾಬಿ ಬಣ್ಣದ ಜಪಾನ ರೇಷ್ಮೆ ಕುಬಸವನ್ನೂ ತೊಟ್ಟು ನಗುನಗುತ್ತಾ ಹೊರಗೆ ಬಂದಳು. ಉಡುಪಿನ ಈ ಆಡಂಬರ ವನ್ನು ನೋಡಿ ಬೆರಗಾಗಿ ನಿಂತನು, ಆತನು. "ಈ ಸಣ್ಣ ಮೋಸವನ್ನು ಕ್ಷಮಿಸಿರಿ. ಬೇಕಂತ ಇದನ್ನು ಮರೆಸಿಟ್ಟದ್ದೆ. ಏಳು ರೂಪಾಯಿ ನಾನು ಕೂಡಿಸಿಟ್ಟಿದ್ದೆ; ಅದರಲ್ಲಿ ಈ ಸೀರೆ ಕೊಂಡುಕೊಂಡೆ. ನನ್ನ ಸ್ನೇಹಿತಿ ನುಸಾನ ಈ ಜಾಕೆಟ್ ತೆಗೆದುಕೊಟ್ಟಳು. ಕೋಪವೇನು? ಹೇಳ್ರಿ — ಕೋಪವೆ?"

ಆಕೆಯ ಮಾತುಗಳಿಗಿಂತಲೂ, ಕಣ್ಣುಗಳನ್ನು ಗಮನಿಸು ತ್ತಿದ್ದ ಆತನು "ನಿನ್ನ ಮೇಲೆ ಕೋಪವೆ? ಗ್ರೇಸ್, ಆ ಚಂಡಾಳನ ಮೇಲಲ್ಲದೆ, ಮತ್ಯಾರಮೇಲೂ ಕೋಪವಿಲ್ಲ" ಅಂದನು.

ಕೊಂಚ ಬಾಡಿದ ಮುಖವನ್ನು ಮರೆಸಿಕೊಳ್ಳಲು ಈಸಾಯಿ ವೇದವನ್ನು ಹುಡುಕುವಂತೆ ನಟಿಸಿ, ಅಟ್ಟೆ ಕಿತ್ತು ಹೋಗಿದ್ದ ವೇದವನ್ನೂ, ಕೊನೆಗಳು ಮುದುರಿ ಹೋಗಿದ್ದ ಕೀರ್ತನೆಗಳ ಪುಸ್ತಕವನ್ನೂ ಆತನ ಕೈಗೆ ಕೊಟ್ಟು, ತಾನು ಮನೆಯ ಬಾಗಿ ಲಿಗೆ ಬೀಗವನ್ನು ಹಾಕಿ, ದೇವಾಲಯಕ್ಕೆ ಹೊರಟಳು.

'— ದೇವಾಲಯವು' ಸಣ್ಣದು. ಅದರಲ್ಲಿಯೂ ಅನೇಕ ಬೆಂಚುಗಳು ಬರಿದಾಗಿದ್ದುವು! ಕಡೆಯ ಸಾಲಿನ ಒಂದು ಬೆಂಚಿನ ಕೊನೆಯಲ್ಲೀತನೂ, ಈತನಿಗೆ ಸಮೀಪವಾಗಿದ್ದ ಕೊನೆಯಲ್ಲಿ ಹೆಂಗಸರು ಕುಳಿತುಕೊಳ್ಳುವಂತೆ ಆಕೆಯೂ, ಕುಳಿತುಕೊಂಡರು.

ವ್ಯಭಿಚಾರಿಣಿಯಾದೊಬ್ಬಳನ್ನು ಕಲ್ಲೆಸೆದು ಕೊಲ್ಲಲಪ್ಪಣೆ ಯನ್ನು ಕೊಡಬೇಕೆಂದು ಯೇಸುಕ್ರಿಸ್ತನ ಬಳಿಗೆ ಬಂದಿದ್ದ ಶಾಸ್ತ್ರಿಗಳಿಗೆ ಆತನು ಕೊಟ್ಟ ಉತ್ತರವನ್ನೂ, ಆ ವ್ಯಭಿಚಾರಿಣಿಗೆ ಸ್ವಾಮಿಯು ತೋರಿಸಿದ ಕರುಣೆಯನ್ನೂ ಕುರಿತು ಆ ದೇವಾ ಲಯದ ಪಾಲಕರಾದ ಪೂಜ್ಯ ಶಾಂತಪ್ಪ ಇಟ್ಟಂಗಿಯವರು ಉಪ ದೇಶ ಮಾಡಿದರು. ಈ ವಿಷಯವನ್ನೆತ್ತುತ್ತಲೇ ಇವರೊಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಉಪದೇಶ ಮಾಡುತ್ತಿದ್ದಾಗಲೇ ಪಾಲಕರು ಹೊಸಬರನ್ನು ಗಮನಿಸಿ, ಆರಾಧನೆಯು ಮುಗಿದ ಬಳಿಕ ಅವರನ್ನು ಮಾತನಾಡಿಸಬೇ ಕೆಂದಿದ್ದರು. ಆದರೆ ಅದು ಮುಗಿಯುತ್ತಲೇ, 'ಕರ್ತನ ಸಹಪಂಕ್ತಿ ಭೋಜನ' ಕ್ಕೆ ಅವರಿಬ್ಬರೂ ನಿಲ್ಲದೇ ಹೊರಟು ಹೋಗಿದ್ದುದರಿಂದ ಅವರನ್ನು ಮಾತನಾಡಿಸಲಾಗಲಿಲ್ಲ. ಪಾಲ ಕರು ಹೊಸಬರ ಪರಿಚಯವು ತಪ್ಪಿತೆಂದು ವ್ಯಸನಪಡುತ್ತಾ, ಹೊರಗಿದ್ದವರಿಗೆ ಇವರ ವಿಷಯವೇನಾದರೂ ತಿಳಿದಿರುವು ದೇನೋ ವಿಚಾರಿಸಲು ಬಂದರು. ಇವರ ಪ್ರಶ್ನೆಗೆ ದೇವಾಲ ಯದ ಪರಿಚಾರಕನು ಮುಂದೆ ಬಂದು ಉತ್ತರ ಕೊಟ್ಟನು.

"ಅವರು ಮೈಸೂರು ಕಡಿಯವರೆಂದು ಕಾಣ್ತದ್ರೀಯ್ಯಾ. ಆ ಯಪ್ಪನು ಮೊನ್ನೇನೆ ಬಂದು '— ಕೇರಿ' ಯಲ್ಲಿ ಇಮ್ಮಾ ನುಯೇಲ್ ಮಾಸ್ತರ್ ಮನೆಯ ಕೊಟ್ಟಗೆಯನ್ನು ಬಾಡಿಗ್ಗೆ ಗೊತ್ತು ಮಾಡಿಕೊಂಡು ಓದ. ದೇವಪ್ರಿಯಪ್ಪನಂತೆ ಎಸರು. ಏನು ಕೆಲ್ಸ ಮಾಡ್ತಾನೋ ತಿಳೀದ್ರಯ್ಯ" ಎಂದು.

ತಮ್ಮ ಕೆಲಸಗಳನ್ನೆಲ್ಲ ತೀರಿಸಿಕೊಂಡು, ಪಾಲಕರು ಮನೆಗೆ ಹೋಗುವಾಗ್ಗೆ, ಅಂಚೆಯಾಳು ಕಾಗದಗಳನ್ನು ತಂದುಕೊಟ್ಟಿ ದ್ದನು. ಅವುಗಳಲ್ಲೊಂದನ್ನು '—' ಊರಿನ ಅಪರಿಚಿತ ರಾದ ಪಾಲಕರು ಬರೆದಿದ್ದರು.

"— ನ ಕನ್ನಡ ಸಭೆಯ ಪಾಲಕರಾದ ಪೂಜ್ಯ ಶಾಂತಪ್ಪ ಇಟ್ಟಂಗಿ ಇವರಿಗೆ:—

"ಪೂಜ್ಯರೆ,

ತಮಗೊಂದು ವಿಷಯವನ್ನು ತಿಳಿಸಲೇಬೇಕಾಗಿದೆ. ಬಹಳ ವ್ಯಸನದಿಂದ ಇದನ್ನು ಬರೆಯುತ್ತಿರುವೆನು. ಮದುವೆಯಾಗಿ

ಯುವ ಗ್ರೇಸ್ ಬೆಂಗರಸನ್ ಎಂಬ ಹೆಂಗಸಿನ ಕೂಡ — ಅವಳ ಗಂಡನು ಜೀವಂತನಾಗಿದ್ದರೂ — ನಮ್ಮ ಸಭೆಯ ಸದಸ್ಯನಾದ ದೇವಪ್ರಿಯಪ್ಪನೆಂಬ ಮದುವೆಯಾಗದ ಕಬ್ಬಿಣ ಕೆಲಸಗಾರನೊಬ್ಬನು ನಿಮ್ಮೂರಿಗೆ ಹೊರಟಿರುವನೆಂದು ಸುದ್ದಿ ಬಂದಿರುತ್ತದೆ. ಆತನೂ ಆಕೆಯೂ ಮದುವೆಯಾಗಬೇಕೆಂದು ಇದ್ದುದೇನೋ ನಿಜ. ಆದರೆ ಗ್ರೇಸಮ್ಮನು ಸುಮಾರು ಒಂದು ವರ್ಷಕ್ಕೆ ಹಿಂದೆ, '—ಸಭೆಗೆ' ಸೇರಿದ ಭಂಗಿ ಅರಸಪ್ಪನ ಮಗ ಸಾಮುವೇಲ್ ಬೆಂಗರಸನ್ ಎಂಬಾತನನ್ನು ದೈವನಿಯಾಮಕವಾಗಿದ್ದಂತೆ, ತಂದೆ ಮಗ ಪರಿಶುದ್ಧಾತ್ಮ ಸಾಕ್ಷಿಯಾಗಿ ಮದುವೆಯಾದಳು. ಆಮೇಲೆ ಸತಿಪತಿಗಳಿಗೆ ಯಾವುದೋ ಕಾರಣದಿಂದ ಪರಸ್ಪರ ಅನ್ಯೋನ್ಯವು ತಪ್ಪಿ ಹೋಗಿ, ಬೆಂಗರಸನ್ನನು ಸುಮಾರು ೨ ತಿಂಗಳ ಹಿಂದೆ ಎಲ್ಲಿಗೋ ಓಡಿ ಹೋದನಂತೆ; ಅನಂತರ ಯಾವುದೋ ತಪ್ಪಿಗಾಗಿ ಎರಡು ವರ್ಷ ಕಠಿಣ ಶಿಕ್ಷೆಯಾಗಿ ಕಾರಾಗೃಹದಲ್ಲಿರುವನಂತೆ. ಇದು ಹೇಳಿಕೆಯ ಮಾತು; ನಿಶ್ಚಯಾಂಶವು ತಿಳಿಯದು.

"ಆತನು ಓಡಿ ಹೋದಾಗ ಗ್ರೇಸಮ್ಮನು ಆಸ್ಪತ್ರೆಯಲ್ಲಿ ನರಳುತ್ತಿದ್ದಳು. ದೇವಪ್ರಿಯನು ಪ್ರತಿದಿನವೂ ಬಂದು ನೋಡಿಕೊಂಡು ಹೋಗುತ್ತಿದ್ದುದಲ್ಲದೆ, ಹಣ್ಣು ಹಂಪಲುಗಳನ್ನು ಆಕೆಗೆ ಕೊಡುತ್ತಲೂ ಅಲ್ಲಿನ ದಾದಿಯರಿಗೆ ಹಣಕೊಟ್ಟು ಆಕೆಗೆ ಚೆನ್ನಾಗಿ ಆರೈಕೆ ಮಾಡಬೇಕೆಂದು ಹೇಳುತ್ತಲೂ ಇದ್ದನು. ಕರ್ತನ ಪ್ರೀತಿಯಲ್ಲಿ ಐಕ್ಯವಾದ ಸೋದರಿಗೆ ಸೋದರ ಪ್ರೀತಿಯಿಂದ ಹೀಗೆ ಮಾಡುತ್ತಿರುವನೆಂದು ನಾವು ತಿಳಿದುಕೊಂಡಿದ್ದೆವು. ಆದರೆ ಆಕೆ ಆಸ್ಪತ್ರೆಯಿಂದ ಹೊರಗೆ ಬಂದಮೇಲೆ, ಆಕೆಯ ಮನೆಯಲ್ಲಿಯೇ ತಾನೂ ವಾಸಮಾಡಹತ್ತಿದನು. ಇದನ್ನು ನಾವು ಪ್ರೀತಿಯಿಂದ ಪ್ರತಿಭಟಿಸಲು ನಮ್ಮನ್ನೇ ನಿಂದಿಸಿ, ದೇವಾಲಯದ ನೇಮಗಳನ್ನುಲ್ಲಂಘಿಸಲಾರಂಭಿಸಿದನು; ಅಲ್ಲದೆ ಅವನ ಹೇಳಿಕೆಯಿಂದ ತಪ್ಪು ಹಾದಿಗಿಳಿದ ಗ್ರೇಸಮ್ಮನೂ ಹಾಗೆಯೇ ಮಾಡಲಾರಂಭಿಸಿದಳು. ಈ ಕಾರಣದಿಂದ ಬಹಳ ಆಲೋಚಿಸಿ, ಕೊನೆಗೆ ಬಹಿಷ್ಕಾರ ಹಾಕಿದೆವು; ಮತ್ತು ದೇವಪ್ರಿಯಪ್ಪನಿಗೆ ಕೆಲಸವನ್ನೂ ತಪ್ಪಿಸಿದೆವು.

"ಇದನ್ನೆಲ್ಲ ಪ್ರತಿಭಟಿಸಿ, ಈಗ '—ನಲ್ಲಿ' ಕೆಲಸ ಖಾಲಿ ಇದೆಯೆಂದು ತಿಳಿದು, ಆ ಕೆಲಸವನ್ನು ದೊರಕಿಸಿಕೊಂಡು ಅಲ್ಲಿ ಮನೆ ಮಾಡಿ ಗ್ರೇಸಮ್ಮನನ್ನು ತನ್ನ ಹೆಂಡತಿಯೆಂದು ಹೇಳಿಕೊಂಡು, ಜೀವಿಸಬೇಕೆಂದಿರುವನಂತೆ. ಈ ವಿಚಾರವೊಂದನ್ನು ಒಟ್ಟಿಗೆ ಅವರಿಬ್ಬರೂ ತೀರ ಒಳ್ಳೆಯವರೆಂದೇ ಹೇಳಬೇಕು. ಬೇರೆ ಯಾವ ದುರಭ್ಯಾಸವಾಗಲಿ, ಕೆಟ್ಟತನವಾಗಲಿ ಅವರಲ್ಲಿ ಕುಡು ಬಂದಿರುವದಿಲ್ಲ. ಹೀಗಿರುವುದರಿಂದ ನಿಮ್ಮ ಕೈಲಾದಮಟ್ಟಿಗೆ ಅವರಿಬ್ಬರನ್ನೂ ಬೇರೆ ಮಾಡಿ, ದೇವರ ಮಕ್ಕಳೆನಿಸಿಕೊಂಡು ಬದುಕುವಂತೆ ಪ್ರಾರ್ಥನೆ ಸದ್ಬೋಧನೆಗಳ ಮೂಲಕ ಮಾಡಲು ಯತ್ನಿಸಬೇಕೆಂದು ವಿಜ್ಞಾಪನೆ.

'—ಸಭೆ'ಯ ಪಾಲಕ
೨೬—೫—೧೯

ಹೀಗೆ ಕರ್ತನಲ್ಲಿ
ನಿಮ್ಮವನಾದ
ಸಾಮುವೆಲ್ ಸಾಧು."

ಈ ಕಾಗದವನ್ನೋದಿ, ಮುಂದೇನು ಮಾಡಬೇಕೆಂಬ ಯೋಚನೆಯಲ್ಲಿ ಅವರ ಸತಿ ಸತ್ಯಮ್ಮನು, "ಊಟ ನೀಡಿದ್ದೇನ್ರಿ" ಎಂದು ಹೇಳಿದುದನ್ನೂ ಗಮನಿಸಲಿಲ್ಲ!

೨

ದೇವಪ್ರಿಯನೂ ಗ್ರೇಸಮ್ಮನೂ ದಾರಿಯಲ್ಲಿ ಒಂದು ಮಾತನ್ನಾದರೂ ಆಡದೆ ಮನೆಯನ್ನು ಸೇರಿದರು. ಗ್ರೇಸಮ್ಮನ ಮುಖವು ಬಾಡಿದ್ದಿತು. "ಏಕೆ ಗ್ರೇಸಾ, ಹೀಗಿರುವೆ?"

"ನೋಡಿ, ನನ್ನಿಂದ ನಿಮಗೂ ಬಹಿಷ್ಕಾರ! ನನ್ನ ಪಾಪದ ಫಲ ನೀವೂ ಉಣ್ಣಬೇಕಾಗಿರುತ್ತದೆ. ನನ್ನನ್ನು ಉದ್ಧಾರ ಮಾಡಲು ಹೀಗೆ ಓಡಿಬಾರದೆ, ಬೇರೆ ಇನ್ನೊಬ್ಬಳನ್ನು ಮದುವೆಯಾಗಿದ್ದರೆ ಈ ಹೊತ್ತು ಸಂತೋಷವಾಗಿ 'ಸಹ ಪಂಕ್ತಿ ಭೋಜನ'ಕ್ಕೆ ನೀವೂ ಸೇರಬಹುದಾಗಿತ್ತು."

"ಅದನ್ನು ಹೇಳಬೇಡ, ಚಿನ್ನ. ನಿನ್ನ ಪಾಪವಾದರೂ ಏನು? ಆ ಚಂಡಾಳನಿಂದ ಹೊಡೆಸಿಕೊಂಡು ಒದೆಸಿಕೊಂಡು ಚಿತ್ರಹಿಂಸೆಗೊಳಗಾಗಿದ್ದುದೆ? ನಿನ್ನಿಂದ ನನಗೇನು ಕೊರತೆ? ಅನೇಕ ವರ್ಷಗಳಿಂದ ಬಚ್ಚಿಟ್ಟುಕೊಂಡಿದ್ದ ಪ್ರೀತಿ ಈಗ ಹೊರಬಿದ್ದಿರುವುದೆ? ಹುಚ್ಚಿ, ಇದಕ್ಕೇ ನಿನಗೆ ಬುದ್ಧಿ ಕಡಿಮೆ ಎನ್ನುವುದು."

"ಹೌದು, ಬುದ್ಧಿ ಕಡಿಮೆಯೇ ಸರಿ. ನಾನು... ಅವರನ್ನು ನಂಬಿ...ಊಟಮಾಡಿಡುತ್ತಿದ್ದುದೇ ತಪ್ಪಾಯಿತು...ನಂಬಿ... ಮೋಸಹೋದೆ. ಆ ಮೇಲೆ...'ಮಿಸಮ್ಮನವರು'...ಮದುವೆ ಮಾಡಿಕೊಳ್ಳಲೇಬೇಕೆಂದು......"

ಕಣ್ಣಿನಲ್ಲಿ ನೀರು ಹರಿಯಲಾರಂಭಿಸಿತು. ದೇವಪ್ರಿಯನು ಆಕೆಯ ಸೊಂಟಕ್ಕೆ ಕೈಹಾಕಿ, ಅಪ್ಪಿಕೊಂಡು, ಕಣ್ಣೀರನ್ನು ತೊಡೆಯುತ್ತ ಸಮಾಧಾನಮಾಡಿದನು.

“ಇದನ್ನೆಲ್ಲಾ ಯಾರು ಕೇಳಿದ್ರೆ, ಹುಡುಗಿ ? ನೀನು ನನ್ನನ್ನು ಪ್ರೀತಿಸುತ್ತಿದ್ದಾಗ ನಿನ್ನ ಮನಸ್ಸು ಕೊಂಚ ಚಂಚಲವಾಯಿತು, ಜನರು ನನ್ನನ್ನು ಒರಟ–ಪೋಲಿ ಎಂದು ಏನೇನೋ ಆಡುತ್ತಿದ್ದುದರಿಂದ ಆ ಸಮಯವನ್ನೇ ಕಾದು, ಆವನು……ಆ… ಪಾಷಂಡನು ನಿನಗೆ ಮೋಸಮಾಡಿದ. ಇದನ್ನು ನಾನು ಬಲ್ಲೆ. ಹಾಗಿಲ್ಲದಿದ್ದರೆ ಅವನು ಪಾಲ್ಕಾರಯ್ಯನ ಹೆಂಡತಿಯನ್ನೆತ್ತಿಕೊಂಡು ಓಡಿಹೋಗುತ್ತಲೇ, ನಿನ್ನ ಸಹಾಯಕ್ಕೆ ನಾನು ಬರುತ್ತಿದ್ದೆನೇನು? ಹೋಗಲಿ, ಬಿಡು. ಅದನ್ನೆಲ್ಲಾ ನೆನಸಿಕೊಳ್ಳಬೇಡ.

ದೇವಾಲಯದಲ್ಲಿ ನಾವು ಪಾಪದರಿಕೆ ಮಾಡಿಕೊಂಡಾಗಲೇ ದೇವರು ನಮ್ಮನ್ನು ಕ್ಷಮಿಸಿ ಬಿಟ್ಟಿರುತ್ತಾನೆ. ಇದು ಹೊಸ ಬಾಳು. ಕಳಂಕವಿಲ್ಲದ ಬಾಳನ್ನು ಇಂದಿನಿಂದ ಬಾಳೋಣ. ದೇವರು ಇದನ್ನು ಖಂಡಿಸಲಾರ. ಅಳಬೇಡ, ಗ್ರೇಸ. ಇಂದಿನಿಂದ ನಿನಗೆ, ನಾನು; ನನಗೆ, ನೀನು; ನಮ್ಮಿಬ್ಬರಿಗೆ ದೇವರು.”

“ನನಗೂ, ನೀವು; ನಿಮಗೂ, ನಾನು. ದೇವರೇ ! ಇದನ್ನು ನಡಿಸಿಕೊಂಡು ಬರುವ ಭಾರ ನಿನ್ನದು”

ಆಕೆಯು ಮೊರೆಯಿಟ್ಟ ದನಿಯಲ್ಲಡಕವಾಗಿದ್ದ ತಿಳಿಯೊಲವಿನ ಅನುಸ್ವರವು ದೇವಪ್ರಿಯನೊಲವನ್ನೂ ಸೆಳೆಯಲು, ಮೈಮರೆತಳ ಕೆನ್ನೆಗಳಿಗೆ ಮುದ್ದಿಟ್ಟನು.

ಇದರಿಂದ ಕೊಂಚ ಸಮಾಧಾನವಾಗಿ, ಆಕೆಯು ಅಡಿಗೆ ಮಾಡಲು ಹೋದಳು. ದೇವಪ್ರಿಯನು ಸಾಮಾನುಗಳನ್ನೆಲ್ಲಾ–ಒಡಕಾಗಿದ್ದರೂ, ಹಳೆಯವಾಗಿದ್ದರೂ–ನಾಜೋಕಾಗಿ ಎತ್ತಿಟ್ಟು ‘ಸ್ನಾನ ಊಟಮಾಡಿಕೊಂಡು ‘ಕಾರ್ಖಾನೆ’ಯ ಯಜಮಾನನನ್ನು ನೋಡಿಕೊಂಡು ಬರಲು ಹೊರಟನು.

ಸಾಯಂಕಾಲದಾರಾಧನೆಯು ಮುಗಿದ ಮೇಲೆ ಪೂಜ್ಯ ಶಾಂತಪ್ಪನವರ ಮನಸ್ಸು ನಿಲ್ಲದೆ, ಮನೆಯಲ್ಲಿದ್ದರೆ ಮಾತನಾಡಿಸಿಕೊಂಡು ಬರೋಣ, ಇಲ್ಲವಾದರೆ ಮನೆಯನ್ನಾದರೂ ಗೊತ್ತುಹಚ್ಚಿಕೊಂಡು ಬರೋಣ ಎಂದು ಹೊರಟರು.

ಇಮಾನ್ಯುಯೆಲ್ ಮಾಸ್ತರ ಮನೆಯು ಅವರಿಗೆ ತಿಳಿದಿದ್ದುದರಿಂದ ಅಲ್ಲಿಗೆ ನೆಟ್ಟಗೆ ಹೋಗಿ ಅಂಗಳದಲ್ಲಿ ನಿಲ್ಲಲ್ಲು, ಗ್ರೇಸಮ್ಮನೇ ಹಿಂದಿನಂಗಳದಿಂದ ಹೊರಗೆ ಬಂದು “ ಸಲಾಂರಯ್ಯ, ಮಾಸ್ತರ್ ಮನೆಯವರೆಲ್ಲರೂ ಊರಿಗೆ ಹೋಗಿದ್ದಾರೆ.” ಎಂದಳು.

“ನಂಗೆ ಗೊತ್ತದಮ್ಮ. ನಿಮ್ಮ……ನಿಮ್ಮ … ..ದೇವಪ್ರಿಯಪ್ಪನು ಮನೆಯಲ್ಲಿದ್ದಾರೇನು ? ”

“ ಇಲ್ಲ ; ಕಾರ್ಖಾನೆ ಯಜಮಾನರನ್ನು ಕಂಡುಬರಲಿಕ್ಕೆ ಹೋಗಿದ್ದಾರೆ. ಒಳಗೆ ಬಂದು ಕೂತುಕೊಳ್ಳಯ್ಯ ”

ಒಂದು ಸಣ್ಣ ಮೂರುಕಾಲು ಮಣೆಯನ್ನು ಹಾಕಿ, “ ಕೂತ್ಕೊಳ್ಳಿ–ಬಡವರು ನಾವ್ರ; ಒಳ್ಳೇ ಕುರ್ಚಿಗಳಿಲ್ರಯ್ಯ ” ಅಂದಳು.

“ಸಾಕಮ್ಮ ತಂಗಿ! ಸಾಕು. ನೀವು ನಿನ್ನೇನೆ ಬಂದಿರೋ ಇಲ್ಲಿಗೆ ? ”

“ ಹೌದ್ರಿ ”

“ಈಗ ದೇವಪ್ರಿಯಪ್ಪನಿಗೆ ಕೆಲಸ ಸಿಕ್ಕಿರುವುದು ಚಲೋ ಆಯಿತು. ಪಗಾರ ಎಷ್ಟಂತೆ ? ”

“ಏನಂಪ್ರಯ್ಯ ? ”

“ ಪಗಾರ–ಸಗಾರ– ಹಣ ಎಷ್ಟು ಕೊಡ್ತಾರೆ ? ”

“ದಿನಗೂಲೀನ್ರಯ್ಯ– ಹತ್ತಾಣೆ ಅಂತೆ. ಮುಂಪಕ್ಕೆ ಹೆಚ್ಚಿಸಬಹುದು. ಭಾನುವಾರಗಳಲ್ಲಿ ಕೆಲಸವಿಲ್ಲ; ಕೂಲಿಯೂ ಇಲ್ಲ.

“ಹದಿನೈದು ರೂಪಾಯಿ ತಿಂಗಳಿಗೆ ಅಂತ ಇಟ್ಟುಕೊಂಡರೂ ಕಷ್ಟ ಆಗ್ತದಲ್ಲಮ್ಮ. ಬಾಡಿಗೆ ಏನು ಕೊಡ್ತೀರಿ? ”

“ಮಾಸ್ತರ್‌ರವರು ಮೂರು ತಿಂಗಳು ಬರೋದಿಲ್ಲವಂತೆ. ಅವರು ಬರೋತನಕ ಮನೆ ಉಸ್ತುವಾರಿ ನೋಡಿಕೊಂಡಿರುತ್ತೇವೆ; ಅದಕ್ಕೆ ಬದಲು ಈ ಎರಡು ಕೊಠಡಿಗಳನ್ನು ಕೊಟ್ಟಿರುತ್ತಾರೆ.”

“ಚಲೋ ಅದೆ, ಬಹಳ ಚಲೋ ಅದೆ. ಆದರೂ ಹದಿನೈದು ರೂಪಾಯಿ ಸಾಕಾಗ್ತದೇನು ? ನೀವೇನೂ ಕೆಲಸ ಮಾಡ್ತೀರಲ್ಲವೆ ? ”

“ಇರೋದು ನಾವಿಬ್ಬರೇ. ಹೇಗೋ ಕಾಲತಳ್ಳಿಕೊಂಡು ಹೋಗ್ತೇವೆ. ”

“ನೀವೇನೂ ಕೆಲಸಮಾಡುತ್ತಿರಲಿಲ್ಲವೆ ? ”

“ಬೈಬಿಲ್ ಉಮನ್ ಕೆಲಸ ಮಾಡ್ತಿದ್ದೆ; ತೆಗೆದುಹಾಕಿಬಿಟ್ಟರು. ಆ ಮೇಲೆ ಇಲ್ಲಿಗೆ ಬಂದು ಬಿಟ್ಟೆವು. ”

“ ತೆಗೆದು ಹಾಕಿಬಿಟ್ಟರು ! ಯಾಕೆ ತಂಗೀ ? ”

“ ಮಿಸಮ್ಮನವರು ಹೇಳಿದಂತೆ ಒಂದು ವಿಚಾರದಲ್ಲಿ ನಡೆದುಕೊಳ್ಳಲಾಗಲಿಲ್ಲ. ಆದುದರಿಂದ– ”

“ಹಾಗಾದರೆ ಆ…ವಿಷಯ…ನಿಜವೆನ್ನುವಿರೇನು ! ”

“ ಯಾವ ವಿಷಯ ? ”

ಗ್ರೇಸಮ್ಮನು ಚಕಿತಳಾಗಿ ಕೇಳಿದಳು. ಪಾಲಕರು ಹೇಳಲು ಬಾಯಿಲ್ಲದೆ ಕುಳಿತರು. ಈ ಸಮಯಕ್ಕೆ ಸರಿಯಾಗಿ ದೇವಪ್ರಿಯನು ಬಂದನು.

"ದೇವರ ದಯು ಗ್ರೇಸಾ...ನೋಡಲಿಲ್ಲ ಕ್ಷಮಿಸಿರಯ್ಯ, ಸಲಾಂ."

"ಸಲಾಂ ದೇವಪ್ರಿಯಪ್ಪ. ಸೌಖ್ಯವೋ ? ಹೋದ ಕೆಲಸ ಚಲೋ ಆಯಿತೋ ? "

ಊರಿನ ಪಾಲಕರು ಇವರಿಗೆ ಪತ್ರಬರೆದು ಎಲ್ಲಾ ವಿಷಯ ಗಳನ್ನು ತಿಳಿಸಿರಲೇಬೇಕೆಂದು ಪೂಜ್ಯ ಶಾಂತಪ್ಪ ಇಟ್ಟಂಗಿಯವರ ಮಾತಿನಿಂದ ಊಹಿಸಿದನು. ಈ ಕಾರಣದಿಂದ ಅವನ ಮುಖವು ಕೊಂಚ ಕಪ್ಪೇರಿತು.

"ದೇವರ ದಯವೊಂದಿದ್ದರೆ ಎಲ್ಲವೂ ನೆಟ್ಟಗಾಗುತ್ತ್ರಯ್ಯ. ನಾಳೆಯಿಂದಲೆ ಹನ್ನೆರಡಾಣೆ—ಮುಂಚೆ ಹತ್ತಾಣೆ ಅಂತ ಹೇಳಿದ್ದರೂ—ಕೆಲಸ ಸಿಕ್ಕಿದೆ. "

"ಬಹಳ ಸಂತೋಷ. ಬಹಳ ಸಂತೋಷ. ದೇವರು ಪಾಪಿಷ್ಟರ ಪಕ್ಷಪಾತಿ— ನಾವೆಲ್ಲರೂ ಪಾಪಿಷ್ಟರೇ ದೇವರೆದುರಿನಲ್ಲಿ."

" ನೀವು ಮಾತಾಡುತ್ತಾ ಇರ್ರಿ; ಅಯ್ಯಾವರಿಗೂ ನಿಮಗೂ ಚಾ ಮಾಡಿಕೊಡುತ್ತೇನೆ. "

"ಬೇಡಮ್ಮ. ನಿಮಗೆ ಅನೇಕ ತೊಂದರೆಗಳಿರಬಹುದು. ಚಾ ಗೋಜಿಗೆ ಕೈಹಚ್ಚ ಬೇಡಿ."

"ನೀವು ನಮ್ಮ ಮನೆಗೆ ಬರುವುದು ಹೆಚ್ಚೋ ನಾವು ಮಾಡುವುದು ಹೆಚ್ಚೋ ? ಕಷ್ಟಗಳಿಗೇನು, ಇದ್ದೇ ಇರುತ್ತವೆ" ಎಂದು ಮುಗುಳ್ನಗೆಯಿಂದ ಒಳಕ್ಕೆ ಹೋದಳು.

ಪಾಲಕರು ವಿಷಯುಗಳನ್ನು ತಾನು ತಿಳಿದುಕೊಂಡು ಸಹಾಯ ಮಾಡಬೇಕೆಂದು ತವಕಪಡುತ್ತಿದ್ದುದರಿಂದ, ಕೊಂಚ ಹೊತ್ತು ಯೋಚಿಸಿ, ಕೊನೆಗೆ " ಎಷ್ಟು ಮಕ್ಕಳಪ್ಪ, ತಮ್ಮ ? " ಎಂದು ಕೇಳಿದರು. "ಮಕ್ಕಳಿಲ್ಲ" ಎಂದು ದೇವಪ್ರಿಯಪ್ಪನು ಹೇಳಿದನು.

"ಮದುವೆಯಾಗಿ ಎಷ್ಟುದಿನಗಳಾದುವು ? "

"ನಮ್ಮ ಲೆಕ್ಕದ ಪ್ರಕಾರ ಈ ದಿವಸ ಬೆಳಿಗ್ಗೆ ಮದುವೆಯಾಯಿತು."

"ಏನು ? ಹಾಗಂದರೆ......"

" ಏನೂ ತಿಳಿಯದವರಂತೆ ಏಕೆ ನಟಿಸುತ್ತೀರ್‍ರಯ್ಯ ? ನಿಮಗಾಗಲೇ ನನ್ನ ವಿಚಾರ ಕಾಗದ ಬಂದಿರಬೇಕು,...ಊರಿನ ಪಾಲಕರಿಂದ. ಇಲ್ಲದಿದ್ದರೆ ನಮ್ಮ ಮನೆ ಹುಡುಕಿಕೊಂಡು ನೀವೇಕೆ ಬರುತ್ತಿದ್ದಿರಿ ? ನಾಳೆ ನಮ್ಮ ಕಾರ್ಖಾನೆಗೆ ಹೋಗಿ ಮೇನೇಜರ ಹತ್ತಿರ ಇದನ್ನೆಲ್ಲಾ ಹೇಳಿ, ಅಲ್ಲಿ ಕೆಲಸಕೊಡದಂತೆ ಮಾಡುತ್ತೀರಿ ತಾನೆ ? ಆಗಲಿ, ನಿಮ್ಮ ಕೈಲಾದುದನ್ನು..."

"ತಮ್ಮ! ಸಿಟ್ಟುಮಾಡಿಕೊಳ್ಳಬೇಡಪ್ಪ ಪತ್ರವೇನೋ ಬಂದದೆ; ಇಲ್ಲವೆನ್ನೋದಿಲ್ಲ. ಆದರೆ ನಿಮ್ಮ ಮೇನೇಜರವರಲ್ಲಿ ಇದನ್ನೆಲ್ಲಾ ಹೇಳಿ, ಕೆಲಸ ತಪ್ಪಿಸುತ್ತೇನೆಂದು ತಿಳೀಬೇಡಿ, ಕಾಲಕ್ಕೂ ತಿಳೀಬೇಡ. ಪ್ರೀತಿಯಿಂದ ಒಂದೆರಡು ಮಾತಾಡಿ ಹೋಗೋಣ ಎಂದು ಬಂದಿದ್ದೇನು, ಅಷ್ಟೆ."

"ನಿಮ್ಮ ಪ್ರೀತಿಯ ಮಾತುಗಳೇನು, ಹೇಳಿ ? "

"ಹಾಂಗೆ ಸವಾಲು ಮಾಡಬಾರದು, ತಮ್ಮ. ಇಂಥಾ ಬಾಳು ಬಾಳೋದಾದರೆ ಅದರ ಪರಿಣಾಮವೇನಾದೀತೆಂದು ಯೋಚಿಸಿದ್ದೀ ಏನು ? "

" ಪರಿಣಾಮವೇನು ? ತಿಳಿದೇ ಇದೆ. ನೀವು ಕರ್ತನ ಸಹ-ಪಂಕ್ತಿ ಭೋಜನಕ್ಕೆ ಸೇರಿಸೋದಿಲ್ಲ. ನಮ್ಮ ಮನೆಗೆ ನೀವ್ಯಾರೂ ಬರೋದಿಲ್ಲ. ಹಾದಿಯಲ್ಲಿ ಹೋಗುತ್ತಿರುವಾಗ ನನ್ನ ಕಡೆ, ಇಲ್ಲವೇ ನನ್ನ ಹೆಂಡತಿಯ ಕಡೆ ಬೊಟ್ಟುತೋರಿಸಿ ಹಾಸ್ಯ ಮಾಡುತ್ತಾರೆ. "

" ಛೆ! ಛೆ! ಇಷ್ಟು ಸುಲಭವಾಗಿ ಇದನ್ನೆಲ್ಲಾ ಹೇಳಬೇಡ, ತಮ್ಮ. ಮಂದಿ ಬೇಕಾದುದನ್ನು ಹೇಳಿಕೊಳ್ಳಲಿ; ಅದು ನಮಗೆ ಬೇಡ. ನಮ್ಮ ಮನಸ್ಸಿಗೇ ನಾವು ಪಾಪಿಷ್ಟರೆಂದು ತೋರುವಂತೆ ಇರಬಾರದು. "

"ನನ್ನ—ನವಿ್ಮಬ್ಬರ ಮನಸ್ಸಿಗೇನೋ ನಾವು ಪಾಪಿಷ್ಟರೆಂದು ತೋರುವುದಿಲ್ಲ. ಮಂದಿ ಬೇಕಾದುದನ್ನು ಹೇಳಿಕೊಳ್ಳಲಿ; ಅದರಿಂದ ನಮ್ಮಿಬ್ಬರಿಗೇನು ? "

"ತೋರದೇ ಏನು— ತೋರುತ್ತದೆ. ಆದರೆ ಹೇಳುವುದಿಲ್ಲ. ನೋಡು, ತಮ್ಮ! ಗಂಡನು ಬದುಕಿದ್ದರೂ, ಅವನ ಹೆಂಡತಿಯು ನ್ನೆತ್ತಿಕೊಂಡು ಬಂದು ಅವಳೊಂದಿಗೆ..."

"ಹೌದ್ರಯ್ಯ. ಹೆಂಡಕುಡುಕ ವ್ಯಭಿಚಾರಿಯಾದ ಗಂಡನು ಎಲ್ಲಿಗೋ ಓಡಿ ಹೋದರೂ, ತನ್ನ ಹೆಂಡತಿ ಸತ್ತರೂ ಸಾಯಲಿ ಎಂದು ಬಿಟ್ಟರೆ ಪಾಪವಲ್ಲ ! ಆದರೆ ದಿಕ್ಕುಗಾಣದಿರುವವಳಿಗೆ, ಹಿಂದಿನ ಪ್ರೇಮದ ಸಲುವಾಗಿ, ಸಹಾಯ ಮಾಡುವುದು ಪಾಪ. ಆಕೆಯ ಹೊಟ್ಟೆಯಲ್ಲಿ ಹುಟ್ಟುವುದಕ್ಕಿರುವ ಮಗುವಿನ ತಂದೆಯೆನಿಸಿಕೊಳ್ಳುವವನಿಗೆ ಅದನ್ನು ಸಾರುವ ಯೋಗ್ಯತೆಯಿಲ್ಲದಿದ್ದರೂ 'ನಮಗೇಕೆ ?' ಎಂದು ಸುಮ್ಮನಿದ್ದರೆ ಪಾಪವಿಲ್ಲ ! ಆದರೆ ಅದನ್ನೂ ಕಟ್ಟಿಕೊಂಡು ಹೊಟ್ಟೆಯಲ್ಲಿ ಹುಟ್ಟಿದ ಮಗುವಿನಂತೆ ನೋಡಿಕೊಳ್ಳಬೇಕೆಂದು

ಮನಸ್ಸು ಮಾಡಿಕೊಂಡರೆ ಅದು ಪಾಪ. ಪಾಪಿಗಳನ್ನು ಉದ್ಧಾರ ಮಾಡುವುದಕ್ಕೋಸ್ಕರ ದೇವರು ತನ್ನ ಮಗನನ್ನು ಕಳುಹಿಸಿ ಕೊಟ್ಟದ್ದೂ ಪಾಪವಲ್ಲವೆ, ನಿಮ್ಮ ಮತದ ಪ್ರಕಾರ ?"

ಪಾಲಕರಿಗೆ ಯೋಚನೆಗಳು ಹುಟ್ಟಲಾರಂಭಿಸಿದುವು. ಅವರು ಮಕ್ಕಳೊಂದಿಗರು; ಅವುಗಳಲ್ಲಿ ಬಹಳ ಪ್ರೀತಿಯನ್ನಿಟ್ಟುಕೊಂಡಿದ್ದರು. ಅನಾಥಳಾದ ಹೆಣ್ಣುಮಗಳೊಬ್ಬಳಿಗೆ ಆಶ್ರಯವನ್ನಿತ್ತು, ಅವಳ ಮಗುವನ್ನೂ ಸಾಕಲು ಸಿದ್ಧನಾಗಿರುವುದನ್ನು ನೋಡಿ, ಅವರ ಹೃದಯವು ಹಿಗ್ಗಲಾರಂಭಿಸಿದರೂ, ಮದುವೆಯಾಗದ ಹೆಂಗಸಿನೊಂದಿಗೆ ಸಹವಾಸಮಾಡಿರುವನೆಂಬುದನ್ನು ನೆನಸಿಕೊಂಡು ಕುಗ್ಗುತ್ತಿದ್ದಿತು. ಇಂತಹ ಮನೋಚಂಡಮಾರುತದಲ್ಲಿ ಅವರು ಮೂಕರಂತೆ ಕುಳಿತುಬಿಟ್ಟರು. ಕೊನೆಗೆ "ಅಯ್ಯೋ, ದೇವಪ್ರಿಯಪ್ಪ, ನಾನು ಹೊರಡುತ್ತೇನೆ. ಮತ್ತೆ ಭೆಟ್ಟಿಯಾಗಿ ಇದನ್ನು ಮಾತನಾಡೋಣ. ಗ್ರೇಸಮ್ಮನಿಗೂ ಸಲಾಂ ಹೇಳಿ ಬಿಡು" ಎಂದು, ಹೊರಗೆ ಬರುತ್ತಾ, ಕರವಸ್ತ್ರದಿಂದ ಕಣ್ಣೊರಿಸಿಕೊಂಡು, ಮನೆಯ ಹಾದಿಯನ್ನು ಹಿಡಿದರು.

ದೇವಪ್ರಿಯನು ಕೊಂಚ ಹೊತ್ತು ಕೈಮೇಲೆ ತಲೆಯನ್ನಿಟ್ಟುಕೊಂಡು ಚಿಂತಿಸುತ್ತಿದ್ದವನು, ತಟ್ಟನೆದ್ದು ಒಳಗಿನ ಕೊಠಡಿಗೆ ಹೋದನು.

"ಗ್ರೇಸಾ, ಪಾಲಕರಿಗೆ ಟೀ —————"

ಮಾತು ಅರ್ಧದಲ್ಲಿಯೇ ನಿಂತಿತು. ಒಲೆಯ ಮುಂದೆ ಕುಳಿತಿದ್ದ ಆಕೆಯು ಅಳುತ್ತಿದ್ದಳು ! ಒಲೆಯಾರಿ ಹೋಗಿದ್ದಿತು. ಒಲೆಯ ಮೇಲಿದ್ದ ಪಾತ್ರೆಯೂ ತಣ್ಣಗಾಗಿದ್ದಿತು.

"ಏನಿದು ಗ್ರೇಸಾ ! ಕೆಲಸಕ್ಕೆ ಬಾರದ್ದನ್ನೆಲ್ಲಾ ಹಚ್ಚಿಕೊಂಡು, ಅತ್ತತ್ತು ಮೈ ಕೆಡಿಸಿಕೊಳ್ಳುತ್ತೀಯೇನು ? ಅಳುವುದೇಕೆ ?"

"ನೋಡಿ, ಅವಮಾನವು ಇಲ್ಲಿಗೆ ಬಂದರೂ ತಪ್ಪಿಲ್ಲ. ಎಲ್ಲಿ ತಾನೇ ಮರೆಸಿಕೊಳ್ಳುವುದು ? ನನ್ನಿಂದ ನೀವಿಷ್ಟು........."

"ಆ ಮಾತನ್ನಾಡಬೇಡ. ನಾನು ನನ್ನ ಮನಸ್ಸೊಪ್ಪಿದ್ದನ್ನಲ್ಲದೆ ಬೇರೆ ಯಾವುದನ್ನೂ ಎಂದೂ ಮಾಡಲಾರೆ."

"ನಿಮ್ಮಲ್ಲಾವ ತಪ್ಪೂ ಇಲ್ಲ. ತಪ್ಪು ನನ್ನದು."

"ಏನು ಹುಚ್ಚು ಮಾತುಗಳನ್ನಾಡುವೆ ?"

"ನೋಡಿ......... ಅವರನ್ನು...ಮದುವೆಯಾದಾಗ ದೇವಾಲಯದಲ್ಲಿ ಕೊಟ್ಟ ಮಾತಿನಂತೆ ನಾನು ನಡೆದಿಲ್ಲ."

"ಆ ಸುದ್ದಿಯನ್ನೇ ಬಿಟ್ಟುಬಿಡು, ಗ್ರೇಸ."

"ಹೇಗೆ ಬಿಡಲಾಗುವುದು ? 'ಎಲ್ಲಾ ಕಷ್ಟ ಸುಖಗಳಲ್ಲಿಯೂ, ಮೇಲು ಕೀಳುಗಳಲ್ಲಿಯೂ, ಮರಣವು ನಮ್ಮಿಬ್ಬರನ್ನಗಲಿಸುವತನಕ' ಒಟ್ಟಿಗಿರುವುದಾಗಿ ನಾನು ಮದುವೆಯಾದಾಗ ಮಾತು ಕೊಡಲಿಲ್ಲವೆ ? ಈಗ ಹಾಗೆ ಮಾಡದಿರುವುದು ತಪ್ಪಲ್ಲವೇ ?"

"ಹಾಗಾದರೆ ನೀನೂ ಕಳ್ಳತನ ಮಾಡಿ, ಪೋಲೀಸಿನವರ ಕೈಗೆ ಸಿಕ್ಕಿ ಬಿದ್ದು, ಜೈಲಿಗೆ ಹೋಗಿ, ಆ......ಆ......ಚಂಡಾಳನ ಕೂಡ ಇರು ಹೋಗು."

ಗ್ರೇಸಮ್ಮನು ನಡುಗಿ, ತಲೆಯೆತ್ತಿ ನೀರವವಾಗಿ ದೇವಪ್ರಿಯನನ್ನು ನೋಡಿದಳು. ಆಕೆಯ ತಲೆಯನ್ನು ತನ್ನೆರಡು ಕೈಗಳಿಂದಲೂ ಹಿಡಿದು, ತನ್ನ ತೊಡೆಯ ಮೇಲಿಟ್ಟುಕೊಂಡು, ಮುಂಗುರುಳನ್ನು ಸರಿಮಾಡುತ್ತಾ, ಹೇಳತೊಡಗಿದನು;

"ಕೇಳು ಗ್ರೇಸ — ಅವನೂ ಕೊಟ್ಟ ಮಾತನ್ನು ನಡಿಸಿಕೊಂಡು ಬಂದಿದ್ದರೆ, ನೀನು ನಿನ್ನ ಮಾತನ್ನು ನಡಿಸಲಿಲ್ಲವೆಂತ ಕೊರಗಬಹುದಾಗಿತ್ತು. ಅಂದರೆ ಅವನು ತಪ್ಪು ಮಾಡಿದರೆ ನೀನೂ ತಪ್ಪು ಮಾಡಬೇಕೆಂದಲ್ಲ. ಆದರೆ ಯಾವಾಗ 'ಈಕೆಯೊಬ್ಬಳೊಂದಿಗೆ ಮಾತ್ರ ಬದುಕುವೆನೆಂದು ಮಾತುಕೊಡುತ್ತೇನೆ' ಎಂಬುದನ್ನು ಮರೆತು, ಬೇರೆ ಸಂಸಾರಗಳನ್ನು ಮುರಿದನೋ, ಅಂದಿಗೇ ಅವನು ಆತ್ಮದಲ್ಲಿ ಸತ್ತ. ಮರಣವೆಂದರೆ ದೇಹಕ್ಕೆ ಮಾತ್ರ ಎಂದು ಸತ್ಯವೇದದಲ್ಲಿ ಎಲ್ಲಿ ಹೇಳಿದೆ ? ಆದುದರಿಂದ ಅವನು ಸತ್ತ. ಅಲ್ಲಿಗೆ ನಿನ್ನ ಮಾತೂ ಮುಗಿಯಿತು. ಈಗ ಹೊಸದಾಗಿ ನಾವಿಬ್ಬರೂ ಒಬ್ಬರಿಗೊಬ್ಬರು ಮಾತು ಕೊಟ್ಟುಕೊಂಡಿರುತ್ತೇವೆ. ಇದನ್ನು ನಡಿಸೋಣ."

"ನಡಿಸಲು ಯಾವ ಅಡ್ಡಿಯೂ ಬರದಂತೆ ಮಾಡಬೇಕೆಂದು ಯಾವಾಗಲೂ ದೇವರಿಗೆ ಬೇಡುತ್ತೇನೆ. ನನಗೇನೋ ಮತ್ತೆ... ಅವರೊಂದಿಗೆ...ವಾಸಮಾಡುವುದಕ್ಕೆ ಮನಸ್ಸಿಲ್ಲ. ನೆನಸಿಕೊಂಡರೇನೇ ಹೆದರಿಕೆಯಾಗುತ್ತದೆ. ಆದರೆ ನೀವು ಹೇಳುವಂತೆ ...ಅವರು... ಆತ್ಮದಲ್ಲಿ ಸತ್ತಿದ್ದರೆ, ನಮಗೇಕೆ ಗುಡಿಯಲ್ಲಿ... ಮದುವೆಯಾಗುವುದಕ್ಕೆ ... ಬಿಡುವುದಿಲ್ಲ ?"

"ಅಯ್ಯೋ ಹುಚ್ಚಿ !— ಈ ಫರಂಗಿ ಪಾದ್ರಿಗಳೆಲ್ಲರೂ ಕಳ್ಳರು ! ಈ ದೇಶೀಯ ಪಾಲಕರೂ ಉಪದೇಶಿಗಳೂ ಹೊಟ್ಟೆಗಾಗಿ ಅವರು ಹೇಳಿದಂತೆ ಕುಣಿಯುವವರು ! ಇಂಥವರಿಂದ ನಮಗೆ ನ್ಯಾಯವು ಸಿಕ್ಕೀತೇ ?"

“ ಹಾಗಾದರೆ ನಮ್ಮ ಗತಿ ? ”

“ ದೇವರೇ ನಮ್ಮ ಗತಿ. ”

ಮಾತುಗಳು ಬಹಳ ಹೊತ್ತು ನಡೆದವು. ಪಕ್ಕದ ಠಾಣೆಯಲ್ಲಿ ಗಂಟೆ ಹೊಡೆಯಲಾರಂಭಿಸಿತು.

“......ಏಳು, ಎಂಟು, ಒಂಭತ್ತು ! ಚೆನ್ನಾಯಿತು !! ಇನ್ನೂ ಅಕ್ಕೀ ಹಾಕಲಿಲ್ಲ. ಒಲೆಯ ಮೇಲೆ.........”

ಆಕೆ ಏಳುವುದರಲ್ಲಿದ್ದಳು.

“ ಬೇಡ, ಗ್ರೇಸ ಈಗ ಮಾಡುವುದಂದರೇನು ! ಅಂಗಡಿಗೆ ಹೋಗಿ ರೊಟ್ಟಿ–ಬಾಳೆಹಣ್ಣು ತರುತ್ತೇನೆ. ಅದನ್ನು ತಿಂದು, ಒಲೆಯ ಮೇಲಿನ ನೀರನ್ನೇ ಮತ್ತೆ ಮರಳಿಸಿ, ಚಾ ಮಾಡಿ, ಕುಡಿದು ಮಲಗಿ ಬಿಡೋಣ. ”

ದೇವಪ್ರಿಯನು ಅಂಗಡಿಗೆ ಹೋದನು. ಆಕೆ ಅಡಿಗೆ ಮನೆಗೆ ಹೋದಳು.

೩.

ಶನಿವಾರ ಸಾಯಂಕಾಲ ದೇವಪ್ರಿಯನು ಅರ್ಧದಿನದ ಕೆಲಸ ತೀರಿಸಿಕೊಂಡು ಬಂದು ಸ್ನಾನ ಮಾಡಿ, ಅಂಗಳದಲ್ಲಿ ಮೈ ಒರಸಿ ಕೊಳ್ಳುತ್ತಿದ್ದನು, ಪಾಲಕರಾದ ಪೂಜ್ಯ ಶಾಂತಪ್ಪ ಇಟ್ಟಂಗಿಯವರು ಬಂದಾಗ.

“ಏನು ದೇವಪ್ರಿಯಪ್ಪನವರೆ, ಹ್ಯಾಂಗಿದ್ದೀರಿ ?—ಓಹೊ ! ಸ್ನಾನ ಮಾಡ್ತಿದ್ದೀರೇನು ? ಗೊತ್ತಾಗ್ಲಿಲ್ರಿ. ”

“ ಪರವಾಯಿಲ್ಲ ಬನ್ರಯ್ಯ. ಏನು ಮಾಡೋದು, ಬಚ್ಚಲ ಮನೆ ಬೇರೆಯಿಲ್ಲ. ”

“ಮಾಸ್ತರ್ ಮನಿಯೊಳಗೆ ಒಂದು ಇರಬೇಕಲ್ರಿ ! ”

“ ಅವರು ನಮಗೆ ಈ ಎರಡು ಕೊಠಡಿ ಬಿಟ್ಟುಕೊಟ್ಟ ರೋದು. ಬೀಗ ಇದೆ ಅಂತ ಅವರ್ನ ಕೇಳ್ದೇ ಮಾಡ್ದೇ ಉಪ ಯೋಗಿಸಲಾಗುವುದೇನು ? ”

“ ಚೆಂದ ಕಾಣೋದಿಲ್ಲ. ಅದಿರಲಿ. ತಮ್ಮಯ್ಯ ...... ಆ ಹೊತ್ತು ನಾವು ಮಾತಾಡ್ತಿದ್ದೆವಲ್ಲಾ, ಆ ವಿಷಯ, ಅದರ ವಿಚಾರ ಒಂದು ಮಾತದೆ. ಕೊಂಚಕಾಲ ಈಕೆಯನ್ನ ನಮ್ಮ ಹೆಣ್ಣುಮಕ್ಕಳ ಶಾಲೆಯಲ್ಲಿ ಬಿಟ್ಟಿದ್ದರೆ ಒಳ್ಳೇದಂತ ನಂಗೆ ಕಾಣ ತ್ತದೆ. ”

“ಅಯ್ಯಾ, ನಿಮ್ಮ ಮಿಷನೆರಿಗಳ ಸಹಾಯ ಸಾಕು, ಸಲಾಂ.”

“ ಏಕೆ ತಮ್ಮಯ್ಯ ಹಾಂಗಂತೀ ? ”

“ ನಾವು ಮಿಷನೆರಿಗಳ ಕೈಕೆಳಗೆ ಅದರಲ್ಲೂ ಅಮೆರಿಕನ್ ಮಿಷನ್‌ರಿಗಳ ಕೈಕೆಳಗೆ ಕೆಲಸ ಮಾಡಿದವರು. ಆ ಸುಖ ಗೊತ್ತಿದೆ. ”

“ ಇಲ್ಲ, ಹಾಗನ್ನಬೇಡ; ಅವರು ತುಂಬಾ ದಯಾಳು ಗಳು.........”

“ನಾ ಬಲ್ಲೆ ಅವರ ದಯವನ್ನು. ಹಿಂದಿನ ಕಾಲದಲ್ಲಿ ಮುದ್ರೆ ಯೊತ್ತಿಸಿಕೊಂಡ ಗುಲಾಮರಿಗೆ ತೋರಿಸಿದ ದಯೆಯನ್ನೇ, ಮುದ್ರೆಯೊತ್ತಿಸಿಕೊಳ್ಳದ ಗುಲಾಮರೆಂದು ನಮ್ಮನ್ನೆಣಿಸಿ ಕೊಂಡು, ನಮಗೂ ತೋರಿಸುತ್ತಾರೆ. ಅದರಲ್ಲೂ ಅಮೇರಿಕ ದೇಶದಲ್ಲಿ ಮನಸ್ವಿ ಗುಲಾಮ ವ್ಯಾಪಾರವನ್ನು ಮಾಡಿದವರ ಸಂತತಿಯವರಾದುದರಿಂದ ಈ ಅಮೆರಿಕನ್ ಮಿಷನೆರಿಗಳಲ್ಲಿ ಆ ಗುಲಾಮರಿಗೆ ತೋರಿಸುತ್ತಿದ್ದ ದಯೆಯು ಅವರ ರಕ್ತದಲ್ಲಿ ಈಗಲೂ ಹರಿಯುತ್ತಿದೆಯಲ್ಲವೆ ? ”

“ ಹೀಗೆಲ್ಲಾ ಬಾಯಿಗೆ ಬಂದಂತೆ ಅನ್ನಬಾರದು, ತಮ್ಮ. ಒಂದು ವೇಳೆ ಆಕೆಯ ಗಂಡ ಇದ್ದಕ್ಕಿದ್ದ ಹಾಂಗೆ ಬಂದು, ತನ್ನ ಹೆಂಡತಿಯನ್ನು.........”

“ ಹೆಂಡತಿ ? ಹೆಂಡತಿ ! ಅವನಿಗೆ ಹೆಂಡತಿ ! ನನ್ನ ಬಾಗಿ ಲಿಗೆ ಬರಲಿ, ಅವನನ್ನು ಕೆಳಕ್ಕೆ ಕೆಡವಿ, ಅವನ ಗೋವನಾಳೆ ಕಡಿದು ರಕ್ತವನ್ನು ಹೀರಿಬಿಡುವೆನು. ಹೆಂಡತಿಯಂತೆ, ಆ ಹೆಂಡ ಕುಡುಕನಿಗೆ ! ”

“ ಇಂಥ ರೌದ್ರ ಭಾವವು ಸರಿಯಲ್ಲ ತಮ್ಮಯ್ಯ. ದೇವರ ಮಕ್ಕಳಿಗೆ ಇಂಥಾ ಕೋಪವಿರಬಾರದು. ಅದರಲ್ಲೂ ತಪ್ಪಿರು ವಾಗ.........”

ಮನೆಯ ಮುಂದೆ ಮೋಟರೊಂದು ಬಂದು ನಿಂತ ಶಬ್ದವಾ ಯಿತು. ಪಾಲಕರು ಮೆಲ್ಲನೆ ದೇವಪ್ರಿಯನಿಗೆ ‘ ಇದೇ ವಿಚಾರ ವನ್ನು ಮಾತನಾಡುವುದಕ್ಕೆ ಬರುವುದಾಗಿ ಹೇಳಿದ್ದರು; ಅವರೇ ಅಂತ ಕಾಣುತ್ತೆ ’ ಎಂದು ಹೇಳುವುದರೊಳಗಾಗಿ ಪೂಜ್ಯ ಸ್ಪಿಯರ್ಸ್ ಸಾಹೇಬರು ಬಂದರು.

ಅಂಗಳದಲ್ಲಿ ಕಾಲುಮಣೆಯನ್ನು ಹಾಕಿ ಅದರ ಮೇಲೆ ಅವ ರನ್ನು ಕೂಡಿಸಿದ ಮೇಲೆ ಮಾತು ಮುಂದರಿಯಿತು. ಹೆಚ್ಚಿನ ಗುಣವೇನೂ ಕಂಡು ಬರಲಿಲ್ಲ.

“ ಗ್ರೇಸ ನನ್ನ ವಶದಲ್ಲಿರುವಳು. ನಾನು ನಿಮ್ಮ ಸಭೆಗೆ ಸೇರಿಲ್ಲ. ನೀವು ಹೇಗೆ ಅಧಿಕಾರವನ್ನು ನನ್ನ ಮೇಲೆ ಚಲಾಯಿ ಸುತ್ತೀರಿ ! ” ಎಂದು ಕೂಗಿಬಿಟ್ಟ, ದೇವಪ್ರಿಯನು.

" ನಿನ್ನ ವಶದಲ್ಲಿರುವಳೆಂದರೇನು ? ನೀವಿಬ್ಬರೂ ಪಾಪದ ವಶದಲ್ಲಿರುವಿರಿ. "

"ಸಾಹೇಬರೆ, ಪ್ರೀತಿಯು ಎಂದೂ ಪಾಪ ಮಾಡುವುದಿಲ್ಲ ಎಂಬುದು ನಿಮಗೆ ತಿಳಿಯದೆ ? ಪ್ರೀತಿಯು ಪಾಪವಾಗಿದ್ದಲ್ಲಿ ಯೇಸು ಕ್ರಿಸ್ತನಿಗಿಂತ ಹೆಚ್ಚು ಪಾಪಿ ಮತ್ತೊಬ್ಬನಿರಲಾರನು."

" ನಿನ್ನನ್ನೇ ನೀನು ಮೋಸಪಡಿಸಿಕೊಳ್ಳುತ್ತಿದ್ದೀಯ. ಪ್ರೀತಿ ನಿನ್ನಲ್ಲಿರುವುದಾದರೆ ಆಕೆಗೆ ಹಣ ಕೊಡು, ಬೇಡವೆನ್ನುವದಿಲ್ಲ."

" ಹೌದು, ಹಣ ಕೊಟ್ಟು, ಜೀವಾವಧಿ ನರಳುತ್ತಿರು ಎಂದು ಹೇಳಿದರೆ ಪುಣ್ಯ; ನನ್ನ ಮನೆಯಲ್ಲಿಟ್ಟುಕೊಂಡು ಆರೈಕೆ ಮಾಡಿ, ನೊಂದು ಬೆಂದಿರುವ ಜೀವಕ್ಕೆ ಆನಂದ ವನ್ನುಂಟು ಮಾಡಿದರೆ ಪಾಪ. ಇದು ನಿಮ್ಮ ಮತವೋ?"

" ಆಕೆ ಮದುವೆಯಾಗಿರುವವಳು ...... "

"ಮದುವೆ? ಎಂಥಾ ಮದುವೆ? ಹೆಂಡಕುಡುಕನು ಕಾಮಾಂಧನಾಗಿ ಕೊಟ್ಟ ಮಾತನ್ನು ಜೀವಾವಧಿ ಪಾಲಿಸಬೇಕೇನು ? ಅದನ್ನು ಮದುವೆಯೆನ್ನುವಿರಾ ? ಅದು ಪವಿತ್ರವೆ ?"

"ನೀನು ಇಷ್ಟು ಹಠಮಾಡುವುದು ಸರಿಯಲ್ಲ, ದೇವಪ್ರಿಯ. ಬೇಕಾದರೆ, ನಿಧಾನವಾಗಿ ತ್ಯಾಗಪತ್ರವನ್ನು ಆಕೆ ತೆಗೆದುಕೊಳ್ಳಲಿ."

"ತ್ಯಾಗಪತ್ರದಿಂದೇನು ಫಲ ? ಆ ಮೇಲೆ ಕೂಡ ನಮಗೆ ದೇವಾಲಯದಲ್ಲಿ ಮದುವೆಯಾಗುವುದಿಲ್ಲವಲ್ಲ! ನಿಮ್ಮಲ್ಲಿ ಬೇಕಾದಾಗ ತ್ಯಾಗಪತ್ರ ತೆಗೆದುಕೊಂಡು ಬೇರೆ ಮದುವೆಯಾಗಬಹುದು. ಆದರೆ ನಮಗಾಗುವುದಿಲ್ಲವಂತೆ, ನನಗೊಬ್ಬರು ಹೇಳಿದರು."

ಮಾತನಾಡಿ ಸುಖವಿಲ್ಲವೆಂದರಿತು, ಪೂಜ್ಯ ಸ್ಪಿಯರ್ಸ ಬೋಧಕರು " ಅವರನ್ನು ಕರೆದುಕೊಂಡು ಬಾ " ಎನ್ನಲು, ಪೂಜ್ಯ ಇಟ್ಟಂಗಿಯವರು ಕರೆದುಕೊಂಡು ಬಂದರು. ಸ್ಪಿಯರ್ಸ ಸತಿಯವರು; ಠಾಣೇದಾರನು; ...... ಬೆಂಗರಸನ್ನನು ! ಬೆಂಗರಸನ್ನನು !!

ದೇವಪ್ರಿಯನ ರಕ್ತವು ಕುದಿಯಲಾರಂಭಿಸಿತು. ಠಾಣೇದಾರನು ಅವನ ಪಕ್ಕದಲ್ಲಿ ನಿಂತನು. ಕರ್ಕಶ ಧ್ವನಿಯಲ್ಲಿ " ಅವಳೆಲ್ಲಿ ? ಲೇ ಗ್ರೇಸ್, ಹೊರಗೆ ಬಾ. " ಎಂದು ಬೆಂಗರಸನ್ನನು ಕೂಗಿದನು. ಕಿಟಕಿಯಿಂದ ಇದೆಲ್ಲವನ್ನೂ ನೋಡುತ್ತಿದ್ದ ಗ್ರೇಸಳ ಕೈಕಾಲು ನಡುಗಿ ನಿಂತುಕೊಳ್ಳಲಾಗದೆ ಕುಳಿತುಬಿಟ್ಟಳು.

ಶಾಸ್ತ್ರೋಕ್ತವಾಗಿ ಗಂಡನೆನಿಸಿಕೊಂಡವನ ಮುಂದೆ ದೇವಪ್ರಿಯನ ಹಠವು ನಡಿಯಲಿಲ್ಲ. ಗ್ರೇಸಳನ್ನು ಸ್ಪಿಯರ್ಸ ಸತಿಯವರು ಕೈಹಿಡಿದುಕೊಂಡು ಹೋಗಿ ಮೋಟರಿನಲ್ಲಿ ಕುಳ್ಳಿರಿಸಿ, ಬೆಂಗರಸನ್ನನೊಂದಿಗೆ ಹೊರಟುಹೋದರು. ದೇವಪ್ರಿಯನು ಹುಚ್ಚನಂತೆ ನಿಂತಿದ್ದನು.

ಮೂರನೆಯ ದಿನ ದೇವಾಲಯದ ಪಂಚಾಯತಿಯಲ್ಲಿ ವಿಚಾರಣೆಯಾಗಬೇಕಾಗಿದ್ದಿತು, ಆದರೆ ಬೆಂಗರಸನ್ನನು ಪರಾರಿ! " ತಪ್ಪಿಸಿಕೊಂಡು ಹೋದ ಕೈದಿ " ಎಂದು ವೃತ್ತಪತ್ರಗಳಲ್ಲಿ ಅವನ ಭಾವಚಿತ್ರವು ಬಂದಿದ್ದುದೇ ಅದಕ್ಕೆ ಕಾರಣ! ಗ್ರೇಸಮ್ಮನು ಮಿಷನೆರಿಗಳ ಅಧೀನಳಾದಳು. ದೇವಪ್ರಿಯನು ಒಬ್ಬೊಂಟಿಗನಾದ.

೪

ಕೆಲವು ದಿನಗಳು ಕಳೆದವು. ದೇವಪ್ರಿಯನಿಗೆ ಯಾವುದರಲ್ಲಿಯೂ ಉತ್ಸಾಹವಿಲ್ಲ. ಈ ಮಧ್ಯೆ ಆತನನ್ನು ಕೆಲಸದಿಂದ ತೆಗೆದುಹಾಕಿದ್ದುದೂ ಅವನಿಗೆ ಲಕ್ಷ್ಯವಿರಲಿಲ್ಲ. ಒಂದು ದಿನ ರಾತ್ರಿ, ಸುಮಾರು ಹತ್ತು ಗಂಟೆಯಲ್ಲಿ, ಮಿಷನ್ ಹೆಂಗೆ ಆಸ್ಪತ್ರೆಗೆ ಹೋದನು.

ಒಂದು ಹಾಸಿಗೆಯ ಮೇಲೆ ಗ್ರೇಸಮ್ಮನು ಮಲಗಿದ್ದಳು. ಬಾಗಿಲಿನಲ್ಲಿ ನಿಂತು 'ಗ್ರೇಸಾ' ಎಂದನು. ತಟ್ಟನೆದ್ದು ಕುಳಿತಳು. ಮೆಲ್ಲನೆ ಅವಳ ಬಳಿಗೆ ಸರಿದು ಅವಳ ಹಣೆಗೆ ಮುದ್ದಿಟ್ಟನು. ಇಬ್ಬರೂ ಅತ್ತರು; ಮನದಣಿಯುವಂತೆ ಅತ್ತರು. ದೇವಪ್ರಿಯನನ್ನು ಒಳಕ್ಕೆ ಬಿಡಬಾರದೆಂಬ ಅಪ್ಪಣೆಯನ್ನು ಸಿರಾಕರಿಸಿ ಇವನನ್ನು ಒಳಕ್ಕೆ ಬಿಟ್ಟಿದ್ದ ದಾದಿಯ ಕಣ್ಣಿನಲ್ಲಿಯೂ ನೀರು ಹನಿಯಿತು. ತಿಳಿಯೊಲವಿನ ಗಮನವರಿತವರಾರು ? ಇವರಿಗೆ ಸಮಾಧಾನವನ್ನು ಮಾಡುವುದಕ್ಕೇನೋ, ಆ ದಾದಿ ಮುದ್ದು-ಮುದ್ದಾದ ಮೂರು ದಿನದ ಗಂಡು ಮಗುವೊಂದನ್ನು ತಂದು ಅವರ ಮುಂದಿಟ್ಟಳು. ದೇವಪ್ರಿಯನು ಅದನ್ನೆತ್ತಿ, ಎದೆಗಪ್ಪಿ ಮುದ್ದಿಟ್ಟನು.

" ಗ್ರೇಸಾ ! ಈ ಮಗುವಿನ ಬಾಳು ಬಹಳ ಕಷ್ಟ" ಅಂದನು.

" ನೀವಿರುವಾಗ ನನಗೇನು ಕೊರತೆ " ಎಂದಳು ಆಕೆ.

# ಕರ್ನಾಟಕದ ಬಲಿದಾನ



ಇವರು ಮುಂಬಯಿಯಲ್ಲಿ ಕ್ರಾನಿಕಲ್ ಪತ್ರದ ಸಂಪಾದಕ ವರ್ಗದಲ್ಲಿದ್ದುಕೊಂಡು, ಅಲ್ಲಿಯ ಸತ್ಯಾಗ್ರಹ ಸಮರದಲ್ಲಿ ಒಳಿತಾಗಿ ಭಾಗವಹಿಸಿದುದಕ್ಕೋಸುಗ, ಆಳರಸರಿಂದ ಆಮಂತ್ರಿತರಾಗಿ, ಕಾರಾಗೃಹವಾಸವನ್ನನುಭವಿಸುತ್ತಿರುವರು. ಹಿಂದಿನ ಅಸಹಕಾರ ಚಳವಳಿಯಲ್ಲಿ ಅಲ್ಲಿಯ ರಾಷ್ಟ್ರೀಯ ಕಾಲೇಜಿನ ಮುಖ್ಯಾಧ್ಯಾಪಕರಾಗಿದ್ದರು. ಮುಂಬಯಿಯೊಳಗಿನ ಕನ್ನಡ ಸಾರಸ್ವತ ಸಮಾಜದ ಮುಂದಾಳುಗಳಾಗಿರುವರಲ್ಲದೆ, ಅಲ್ಲಿಯ ಅಖಿಲ ಕರ್ನಾಟಕ ರಾಷ್ಟ್ರೀಯ ಸಭೆಯ ಪ್ರಸ್ಥಾಪಕರಲ್ಲೊಬ್ಬರೂ ಇರುವರು.

ಶ್ರೀಮಾನ್ ಆರ್. ಎಸ್. ಪಡಬಿದ್ರಿ, ಎಂ. ಎ.

ಶಿರ್ಶಿಯಲ್ಲಿ ಅನ್ಯಾದೃಶವಾಗಿ ಸಾಗಿದ ಕಾನನಶಾಸನಭಂಗದ ಸತ್ಯಾಗ್ರಹವನ್ನು ಏರ್ಪಡಿಸಿದವರಲ್ಲಿ ಇವರೊಬ್ಬರು.



ಶ್ರೀ ವೆಂಕಟರಾಮಯ್ಯನವರು



**ಶ್ರೀ. ಎಂ. ಸಿ. ಮಾತಂಡೆ**

ಹಿಂದುಸ್ತಾನೀ ಸೇವಾದಲದಲ್ಲಿ ಕಾರ್ಯಕರ್ತರೊಬ್ಬರು. ಕಾರವಾರದ ಕಾಡಿನ ಸತ್ಯಾಗ್ರಹದಲ್ಲಿ ೧ ತಿಂಗಳ ಸಶ್ರಮಶಿಕ್ಷೆಯನ್ನು ಪಡೆದರು.



**ಶ್ರೀ ಗುರ್ಪುರ ವೆಂಕಟರಾಯರು**

ಮಂಗಳೂರಿನ ಪ್ರಮುಖ ವ್ಯಾಪಾರಿಗಳಲ್ಲೊಬ್ಬರಾದ ಇವರಿಗೆ ಸತ್ಯಾಗ್ರಹಿಗಳಿಗೆ ಧನ ಸಹಾಯವನ್ನು ಮಾಡಿರುವದಕ್ಕಾಗಿ ೬ ತಿಂಗಳ ಶಿಕ್ಷೆಯನ್ನು ಕೊಡಲಾಯಿತು.

# * ಗೋಮಾಂತಕವೂ ನಾಡಿನ ಹಾಡುಗಳೂ

ಲೇಖಕರು:—ಶ್ರೀ. ಮಲ್ಲೇಶ ಪ್ರಭು ವಾಲಿ, ಎಮ್. ಎ., ಬೆಳಗಾಂವಿ

ನಾಡಿನ ಹಾಡುಗಳೆಂದರೆ ಹಳ್ಳಿಯ ಸಾಹಿತ್ಯವು. ಪ್ರತಿಯೊಂದು ನಾಡಿನಲ್ಲಿಯೂ ಇಂಥ ಸಾಹಿತ್ಯವು ಇದ್ದೇ ಇರುವದು. ಮನುಷ್ಯನ ಅಂತರಂಗದೊಳಗೆ ಸ್ವಾಭಾವಿಕವಾಗಿಯೇ ಸ್ಫುರಣ ಹೊಂದುವ ಭಾವನೆಗಳು ಇಂಥ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಒಡೆದು ಕಾಣುವ ಹಾಗೆ ಬಹು ಶ್ರಮಬಟ್ಟು ರಚಿಸಿದ ಗಡಚಾದ ಕಾವ್ಯಗಳಲ್ಲಿ ತಲೆದೋರವು. ಈ ಸಾಹಿತ್ಯವು ವಿಶೇಷತಃ ಹಾಡಿನ ರೂಪದಲ್ಲಿಯೇ ಇರುವದು. ಮತ್ತು ಹಾಗೆ ಇರುವುದಾದರೂ ಸಹಜವಾಗಿದೆ ಯಾಕೆಂದರೆ ಮನುಷ್ಯನ ಹೃದಯದೊಳಗಿನ ಬಲವಾದ ಭಾವನೆಗಳು ಆತನ ಮುಖದಿಂದ ಹೊರಬೀಳುವಾಗ್ಯೆ ಅವು ಹಾಡಿನ ರೂಪದಿಂದಲೇ ಬರುವವು. ವೇದಕಾಲೀನ ಋಷಿಗಳ ಹೃದಯದೊಳಗೆ ಅಗ್ನಿ, ಸೂರ್ಯ, ಚಂದ್ರ ಮೊದಲಾದ ನಿಸರ್ಗದೇವತೆಗಳ ವಿಷಯಕ್ಕೆ ದೃಢವಾಗಿ ಮೂಡಿದ ಭಾವನೆಗಳು ಋಕ್ಕಿನ ರೂಪದಿಂದಲೇ ಹೊರಬಿದ್ದವು. ಪುರಂದರದಾಸ, ಕನಕದಾಸ, ತುಕಾರಾಮ, ಏಕನಾಥ ಮೊದಲಾದ ಸಾಧುಸಂತರ ಹೃದಯಗಳು ಪರಮೇಶ್ವರನ ಗುಣಗಳ ವಿಷಯವಾಗಿ ಉಕ್ಕೇರಿ ಬರಲು ಅವರ ಭಾವನೆಗಳು ಪದ್ಯಗಳಲ್ಲಿಯೇ ಮಾರ್ಪಟ್ಟವು. ಅದರಂತೆಯೇ ಹಳ್ಳಿಗರೊಳಗಿನ ನಿಸರ್ಗಸಿದ್ಧವಾದ ಸೊಬಗನ್ನು ನಿರರ್ಗಲವಾಗಿ ಅನುಭವಿಸುವ ಹಳ್ಳಿಗರ ಭಾವನೆಗಳೆಲ್ಲವೂ ಅವರ ಹಾಡುಗಳಲ್ಲಿಯೇ ಮಡುಗಟ್ಟಿ ತುಂಬಿರುವವು. ಎಲ್ಲ ನಾಡುಗಳೊಳಗೆ ಗೋಮಾಂತಕವು ನಾಡಿನ ಹಾಡುಗಳೊಳಗೆ ಮಿಗಿಲಾದದ್ದು. ಅಲ್ಲಿ ಪ್ರತಿಯೊಂದು ಹಳ್ಳಿಯಲ್ಲಿ ಮನೆಮನೆಗೂ ಸ್ತ್ರೀ-ಪುರುಷರ ಮುಖಗಳಿಂದ ಸಾವಿರಗಟ್ಟಲೆ ಹಾಡುಗಳನ್ನು ಕೇಳಬಹುದು. ಅವರಲ್ಲಿಯೂ ಫೇಸ್ತ ಮೊದಲಾದ ಕ್ರಿಶ್ಚನ್ ಹಬ್ಬಗಳಲ್ಲಿ ಸ್ತ್ರೀ-ಪುರುಷರು ಕೂಡಿ ನೃತ್ಯದೊಡನೆ ಮಂಜುಳವಾಗಿ ಹಳ್ಳಿಯ ಹಾಡುಗಳನ್ನು ಅನ್ನುವದನ್ನು ಕೇಳುವದು ಬಲು ಸೊಗಸಾಗಿರುವದು. ಮೊದಲೇ ನಿಸರ್ಗ ದೇವತೆಯಿಂದ ಅಖಂಡವಾಗಿ ಮನ್ನಿಸಲ್ಪಟ್ಟ ದೇಶವು. ಎಲ್ಲಿ ನೋಡಿದಲ್ಲೆಲ್ಲ ಜುಡುಪು ಜುಡುಪಾಗಿ ಗೊಂಚಲುಗಟ್ಲೆ ಕಾಯಿಗಳನ್ನು ಹೊತ್ತುಕೊಂಡು ನಿಂತಿರುವ ತೆಂಗಿನ ಗಿಡಗಳು, ಆ ಗಿಡಗಳ ಎಲೆಗಳ ಮಧ್ಯದೊಳಗಿಂದ ದೂರದಲ್ಲಿ ನೋಡಲು ಬೆಳ್ಳಿಯ ಗುಡ್ಡದಂತೆ ಸೂರ್ಯ ಪ್ರಕಾಶದಲ್ಲಿ ಲಕಲಕಿಸುವ ಸಮುದ್ರದ ತೆರೆಗಳು. ಕೇದಗೆಯ ಬಣ್ಣದಿಂದೊಪ್ಪುವ ಮಂಜುಳ ದನಿಯ ಸೊಬಗಿನ ಮುಗುದೆಯರು ಪ್ರತಿಯೊಂದು ಹಳ್ಳಿಯಲ್ಲಿಯೂ ಮಿನುಗುವರು. ಅದರಲ್ಲಿಯೂ ಅಲ್ಲಿಯ ಭಾಷೆಯ ಮಾಧುರ್ಯವೇ ಬೇರೆ ತರದ್ದು. ಆ ಮಾಧುರ್ಯವನ್ನು ಸವಿಯಬೇಕಾದರೆ ಅಲ್ಲಿಯ ವಿಲಾಸಿನಿಯರು ಹಾವಭಾವಗಳೊಡನೆ ಮಾತನಾಡುವಾಗಲೇ ಕೇಳಬೇಕು. ಇಂಥ ಪ್ರದೇಶದಲ್ಲಿ ಶ್ರುತಿ ಮನೋಹರವಾದ ಹಳ್ಳಿಯ ಸಾಹಿತ್ಯವು ಯಥೇಚ್ಛವಾಗಿ ಇರುವುದರಲ್ಲೇನಾಶ್ಚರ್ಯ ! ಈ ಸಾಹಿತ್ಯವನ್ನು ಒಟ್ಟು ಗೂಡಿಸಿ ಸಾಹಸಿಗರು ಪ್ರಸಿದ್ಧ ಪಡಿಸಿದರೆ ಅದು ಬಹು ಮನರಂಜಕವಾಗಿ ಮೆರೆಯಬಹುದು. ಇರಲಿ. ಇದರ ಸವಿಯನ್ನು ಸ್ವಲ್ಪಮಟ್ಟಿಗಾದರೂ ಕನ್ನಡಿಗರಿಗೆ ತೋರಿಸಿಕೊಡುವುದೇ ನನ್ನ ಉದ್ದೇಶವಾಗಿರುವುದರಿಂದ ಕೆಲವು ಹಾಡುಗಳನ್ನು ಕನ್ನಡ ಅನುವಾದದೊಂದಿಗೆ ಇದರಡಿಯಲ್ಲಿ ಕೊಡುವೆನು.

೧

ಪಾಶ್ಚಿಮಾತ್ಯ ಸುಧಾರಣೆಯನ್ನು ಸಂಪೂರ್ಣವಾಗಿ ಅನುಕರಿಸಿದ ಗೋಮಾಂತಕದೊಳಗಿನ ಕ್ರಿಶ್ಚನ್ ಸಮಾಜದಲ್ಲಿ ಸುಧಾರಣಾಸಹಜವಾದ ಪ್ರೇಮಗೀತೆಗಳೂ, ವಿರಹಗೀತೆಗಳೂ, ಪ್ರೇಮಬಂಧನ— ಮಧ್ಯೇತ್ರೋಟನ— ಅಂತ್ಯಸಂಘಟನ ಇವೇ ಮೊದಲಾದ ಪ್ರೇಮದ ಅನೇಕ ಸ್ವರೂಪಗಳ ವಿಷಯವಾದ ಗೀತೆಗಳೂ ಹೇರಳವಾಗಿ ಕಂಡುಬರುವದರಲ್ಲಿ

* ಈ ಲೇಖದೊಳಗಿನ ಕೊಂಕಣೀ ಭಾಷೆಯ ಹಾಡುಗಳನ್ನು ನನ್ನ ಮಿತ್ರರಾದ ಶ್ರೀಯುತ ವಿಶ್ರಾಮಕರಾವ ಸದಾಶಿವರಾವ ಕುಖಟಣಕರ ಪಣಜಿ (ಗೋವಾ) ಇವರು ನನಗೆ ಹೇಳಿಕೊಟ್ಟು ಅವುಗಳ ಅರ್ಥವನ್ನು ವಿಶದಿಸಿ ಹೇಳಿದ್ದಕ್ಕಾಗಿ ನಾನು ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.
—ಲೇಖಕ.

ಸಂದೇಹವಿಲ್ಲ. ಈ ಕೆಳಗಿನ ಪದ್ಯವು ಒಬ್ಬ ಸ್ತ್ರೀಯಳ ಮುಖದಿಂದ ಬಂದಿದೆ. ಅವಳು ಚಿಕ್ಕವಳಿದ್ದಾಗ್ಯೆ ಆಕೆಯ ಪ್ರೇಮವು ಒಬ್ಬ ತರುಣನ ಮೇಲೆ ಕೂತಿದ್ದಿತು. ಆದರೆ ಅನೇಕ ವಿಘ್ನಗಳಿಗೋಸುಗ ಅವರೀರ್ವರ ಲಗ್ನದ ಸುಯೋಗವು ಕೂಡಿ ಬರಲಿಲ್ಲ. ಮುಂದೆ ಸಂಪೂರ್ಣ ೧೩ ವರುಷಗಳ ವರೆಗೆ ಅವರಿಬ್ಬರೂ ಲಗ್ನವಾಗದೆ ಇದ್ದರು. ಆ ಮೇಲೆ ಸುದೈವದಿಂದ ಅನುಕೂಲ ಪರಿಸ್ಥಿತಿಯು ಬಂದೊದಗಲು ಅವರೀರ್ವರ ಲಗ್ನವಾಯಿತು. ಆನಂತರ ಅವರು ತಮ್ಮ ಆಯುಷ್ಯದಲ್ಲಿ ಸಂಘಟಿಸಿದ ಈ ಪ್ರಸಂಗವನ್ನು ಸ್ಮರಿಸಿ ಸಂವಾದ ರೂಪದಿಂದ ಆಡಿದ ಮಾತುಗಳು ಈ ಹಾಡಿನಲ್ಲಿವೆ.

(ಮೂಲ ಕೊಂಕಣೀ ಹಾಡು)

ಶೀ:— ಬಾರಾ ತೇರಾ ವೋರ್ಸಾ ಜಾಲೀ ॥
ಬಾರಾ ದಿಸೋಲೆ ನಾಯರೆ ದಿಸೋ ! ॥
ವಾರೀ ವಾತೋಡ ಆಣಿ ಮೋಡ ದೇಖುನ ಮಾಲ್ಲೇ, ॥
ಓಶೇ ಆಸ್ತಾನಾ ಆಬಾಲಾರ ನಾರೇ ಜಾಲೀ ! ॥೧॥
ಯೋ, ಯೋ, ಯೋ ರೇ ಮೋಗಾ, ಉತ್ರೀ ಕೇಲ್ಯಾ ತುಕಾ ॥ಪಲ್ಲ॥

ತುಜ್ಯಾ ಉತರಾರ ರೇ ಪಾತಯೋನೂ ॥
ಆಜಿಸಾನ ಆಂಕವಾರ ರಾವಲೀ ಆವು ॥
ಜಾಯತೆ ಕೋಷ್ಟ ಆಂವೇ ಭೋಗೀಲೆ ॥
ಜಾಯತೆ ದೊಗೋದ ಆಂವೇ ಸೋಶಿಲೆ ॥
ಆರ್ಯ್‌ಜ ದೇವಾನು ಚುರಚುರೆ ಆಮುಚೇ ಕೇಲ್ಲೆ ॥೨॥
ಯೋ, ಯೋ, ಯೋರೇ ಮೋಗಾ, ಉತ್ರೀ ಕೇಲ್ಯಾ ತುಕಾ॥

ಶೋ— ನೊವ್ಹೆಂಬ್ರಾಚೆ ಬಾರಾವೆರೂ ಮೋಗಾ ॥
ತೂ ಹಾಂಸಲೇಲೇ ಮುಂಗೋ ಮಾಕಾ ॥
ತ್ಯಾ ತುಜ್ಯಾ ಹಾಂಶಾಕು ಲಾಗೋನೂ ॥
ತ್ಯಾ ತುಜ್ಯಾ ಬೋಂಚ್ಯಾಕು ಚೋವನೂ ॥
ತುಕಾ ಆಡಚೆ ಕೇಲೆ ಮೋಗಾ ॥೩॥
ಯೋ, ಯೋ, ರೇ ಮೋಗಾ,
ಮೋಗಾಚೊ ಬೇಯರ್ಝು ದಿಂವಚ್ಯಾ ಮಾಕಾ ॥

(ಕನ್ನಡ ಅನುವಾದ)

ಆಕೆಯು— ಸಂದಿದವು ಹನ್ನೆರಡು ಹದಿಮೂರು ವರುಷಗಳು
ಹನ್ನೆರಡು ದಿನ ಗತಿಸಿದಂತೆನಿಸಲಿಲ್ಲೆನಗೆ
ಗುಡುಗು ಗದರಿಸಿದವೆನಿತು ಮಿಂಚು ಮಿಂಚಿದವೆನಿತು;
ಎನ್ನೆದೆಯು ಅಣಿಯಲಿಲ್ಲವಕೆ ॥೧॥
ಬಾ, ಬಾರ, ಬಾ, ಬಾ ಎನ್ನೆರೆಯಾ ।
ಎನ್ನ ಸೊತ್ತೆಲ್ಲ ನೀನೇ ಬಾ ! ।ಪಲ್ಲ॥
ನೀ ನುಡಿದ ಮಾತುಗಳ ನಂಬಿ, ಇದೊ !
ಕನ್ನಿಕೆಯ ಉಳಿದಿಹೆನು ಇದುವರೆಗು,
ಕಷ್ಟವನು ಸೋಸಿದೆನೆಷ್ಟೊ,
ದುಃಖಗಳ ಭೋಗಿಸಿದೆನೆಷ್ಟೊ,
ದೇವನಿಂದೆನ್ನ ಕರುಣಿಸಿದನಲ್ಲೇ ? ॥೨॥
ಬಾ, ಬಾರ, ಬಾ, ಬಾ...ಇತ್ಯಾದಿ.

ಅವನು— ನವ್ಹಂಬರದ ಹನ್ನೆರಡನೆಯ ದಿವಸ
ನೀನಲ್ಲವೇ ನಕ್ಕೆ! ಎನ್ನನ್ನು ನೋಡಿ !
ಆ ನಿನ್ನ ಹಾಸವನು ಕಂಡು,
ಅಹಹ! ಆ ನಿನ್ನ ಮೊಗವನು ನೋಡಿ,
ಮನಸು ಮಾಡಿದೆನು ನಿನ್ನ ತರುವುದಕೆ ॥೩॥
ಬಾ, ಬಾರೆ, ಬಾ, ಬಾ ಎನ್ನರಸಿಯೇ !
ಪ್ರೇಮದಿಂದೆನಗೆ ಚುಂಬನವನೊಂದು ನೀಡು ಬಾ॥

೨

ಪಾಶ್ಚಿಮಾತ್ಯ ವಿವಾಹ ಶಾಸ್ತ್ರದ ಪ್ರಕಾರ ವಿವಾಹದ ಪೂರ್ವದಲ್ಲಿ ವರನು ಪ್ರಿಯಾರಾಧನೆ ( Courting ) ಎಂಬ ಪೂರ್ವರಂಗದಲ್ಲಿ ಜಯಶೀಲನಾಗಬೇಕಾಗುವದು. ಆ ಸಮಯದಲ್ಲಿ ಅವನು ತನ್ನ ಭಾವೀ ಪತ್ನಿಯ ಕಣ್ಣೆದುರಿಗೆ ತಾನು ಮುಂದೆ ಸಜ್ಜುಗೊಳಿಸತಕ್ಕ ಇಂದ್ರಭವನದ ಚಿತ್ರವನ್ನೇ ತಂದಿರಿಸುವನು. ಅನೇಕ ಪ್ರಕಾರದ ವಸ್ತ್ರಾಲಂಕಾರಗಳ ವಚನಗಳಿಗೆ ಕೊರತೆಯೇ ಇಲ್ಲ. ವರನ ರಸಿಕತೆಯ ಮೇರೆಗೆ ಆತನ ಭಾವೀ ಪತ್ನಿಯು ಆಗಲೇ ಪ್ಯಾರಿಸ ಮಾರ್ಕೆಟನೊಳಗಿನ ಅತಿ ಸೂಕ್ಷ್ಮವಾದ ನಿಲುವಂಗಿಯು (Frock) ಮತ್ತು ಕಂಠವಸ್ತ್ರದ (Scarf) ಸ್ವಪ್ನಗಳನ್ನು ಕಾಣಹತ್ತುವಳು. ಮನೋಹರವಾದ ಮುತ್ತಿನ ಮಾಲೆಯನ್ನು ಆಗಲೇ ಹಾಕಿಕೊಂಡಿರುವಳೋ ಎಂಬಂತೆ ಕೊರಳ ಮೇಲೆ ಕೈಯಾಡಿಸಿಕೊಳ್ಳುವಳು. ತನ್ನ ಪ್ರಿಯನು ತಂದು ಕೊಡಬಹುದಾದ ಪಚ್ಚೆ ದುಂಗುರವನ್ನಿಡುವ ಬೆರಳಿನ ಕಡೆಗೆ ಸಸ್ಮಿತವಾಗಿ ಓರೆಗಣ್ಣಿನಿಂದ ನೋಡುವಳು. ಚಿಕ್ಕದಾದ ಮುಂಗೈ ಗಡಿಯಾರದ ಚಿತ್ರವನ್ನು ಧ್ಯಾನಿಸಿ ಕಣ್ಣುಗಳನ್ನು

ಅರಳಿಸುವಳು. ಉಚ್ಚತಮವಾದ ಸುಗಂಧ ದ್ರವ್ಯದ Scents ಕುಪ್ಪಿಯನ್ನು ಒಂದು ಕೈಯಲ್ಲಿ ಹಿಡಿದಂತೆಮಾಡಿ ಬೇರೊಂದು ಕೈಯಲ್ಲಿ ತನ್ನ ಭಾವೀ ಪತಿಯು ತಂದು ಕೊಡಬಹುದಾದ ಸುಸೂಕ್ಷ್ಮವಾದ ರೇಶಿಮೆಯ ಕರವಸ್ತ್ರವನ್ನು ಹಿಡಿದಂತೆ ಭಾವಿಸಿ ಕೊಂಡು ಅದರಮೇಲೆ ಆ ಸ್ವಪ್ನಮಯ ಸುಗಂಧದ್ರವ್ಯವನ್ನು ಸಿಂಪಡಿಸಿ ಸುಮ್ಮಸುಮ್ಮನೆ ಆಘ್ರಾಣಿಸಿ ದೀರ್ಘವಾದ ಶ್ವಾಸವನ್ನು ಬಿಡುವಳು. ಇಂಥ ಪ್ರಿಯಾರಾಧನೆಯನ್ನು ಒಬ್ಬನೇ ಧೈವವಂತನು ಮಾಡತಕ್ಕದ್ದೆಂಬ ಬಗ್ಗೆ ಕಟ್ಟಳೆಯೇನೂ ಇರುವದಿಲ್ಲ. ಬೇಕಾದಷ್ಟು ಯುವಕರು ನಿರ್ಬಾಧವಾಗಿ ಆರಾಧನೆಯನ್ನುಮಾಡಿ ಬೇಕಾದಂಥ ಸ್ವಪ್ನಸಾಮ್ರಾಜ್ಯಗಳನ್ನು ನಿರ್ಮಿಸಿಕೊಂಡು ಹೋಗಬಹುದು. ಇಂಥವರೊಳಗೆಲ್ಲ ಒಬ್ಬ ಅತ್ಯಂತ ರಸಿಕ ಶ್ರೀಮಂತನೊಬ್ಬನು ಗಂಟು ಬಿದ್ದರೆ ತೀರಿತು, ಮೊದಲು ಬಂದು ಸಾಷ್ಟಾಂಗವೆರಗಿ ಹೋದ ತರುಣರೆಲ್ಲರೂ ರಸಾತಲವನ್ನು ಸೇರಿದರೆಂದೇ ತಿಳಿಯತಕ್ಕದ್ದು. ಅವರೆಲ್ಲರನ್ನೂ ಒಂದೇ ಏಟ್ಟಿಗೆ ಆ ತರುಣಿಯು ತಿರಸ್ಕಾರದ ಮಡುವಿನಲ್ಲಿ ದೂಡಿ ಬಿಡುವಳು. ಇಂಥ ಒಬ್ಬ ಪತಿತನಾದ ಪ್ರೇಮಿಯ ಮುಖದಿಂದ ಹೊರಟ ಉದ್ಗಾರಗಳು ಈ ಕೆಳಗಿನ ಪದ್ಯದಲ್ಲಿವೆ.

( ಮೂಲ ಕೊಂಕಣೀ ಹಾಡು )

ಸಂಸಾರ ಚಾರೀಚ ಗೋ ದಿಸಾಂಚೋ ! ॥
ಉಗಡಾಸ ವೊಚನಾ ಮೊತೀಂತಲೋ, ॥
ಕೇಲೇಲ್ಯಾ ಕೋರಣ್ಯಾಂಚೊ, ॥
ಆಣಿ ಭೋಗಲೆಲ್ಯಾ ಸುಖಾಚೋ
ಸೆಗ್ರೆದಾನು ಕೇಲೊ ತಪ್ರುತು, ॥
ಮೋದೆ ಪಾವಚ್ಯಾಕ ಕೇಲೊ ತುಂವೆ ಘಾತು ! ॥
ಕಾಳಜಾಕ ಮಾರೊನು ಭಾಲೆ ಸಾತು, ॥
ತುಟ್ಟಲೊ ತುಂವೆ ಸಾಂಗಾತು ॥
ಆದೆವುಶ್ ! ಆದೆವುಶ್ ! ಮೋರ್ರ್ಯೊ ಮೋಗಾ ॥
ದೇವ ಬೋರೆ ಕೋರೂ ರೇ ತುಕಾ ॥
ಕೋಷ್ಟ ಭೋಗತೋಡಿ ಮಾಕಾ, ॥
ಸೂಖ ಭೋಗುಗೋ ತುಕಾ ॥

( ಕನ್ನಡ ಅನುವಾದ )

ನಾಲ್ಕು ದಿನದ ಬಾಳು ಈ ಸಂಸಾರದ ಬಾಳು,
ನೆನಪು ಹಾರದು ಎನ್ನ ಮನದೊಳಗಣೆಂಪ,
ಏಸು ಆಟಗಳ ಮಾಡಿ,
ಏಸು ಸೊಗಗಳ ನೀಡಿ,
ತುಡುಗನಿಂದೇಸು ಸಲ ಕೂಡಿ ಮಾತಾಡಿ,
ಮುಂದೆ ಗಡ ಘಾತ ಮಾಡಿದೆಯೆ !
ಭಾಲೆಗಳನೇಳು ಹೃದಯದಲಿ ಇರಿದು,
ಮಧ್ಯದಲೆ ಸಹವಾಸವನ್ನುಡಿದೆಯೆ !
ಕ್ಷೇಮಮಕ್ಕೆ ಸಖಿ, ನಿನಗೆ ಕ್ಷೇಮವೆಂದಿಗು ಇರಲಿ,
ಒಳ್ಳೆಯದನೆಂದಿಗು ದೇವ ನೀಡಲಿ ನಿನಗೆ
ದುಃಖ ಭೋಗಿಪುದು ಉಂಟೆನಗೆ ಆವಗಂ,
ಸೌಖ್ಯ ಭೋಗವು ನಿನಗೆ ಇರಲೆಂದಿಗು ॥

೩ ಮತ್ತು ೪

ಗೋಮಾಂತಕದೊಳಗಿನ ಕ್ರಿಸ್ತೀ ಸಮಾಜದಲ್ಲಿ ವಧೂವರರು ತಮ್ಮ ಲಗ್ನಸಮಾರಂಭದಲ್ಲಿ ಸಮಯಾನುರೂಪವಾದ ಪದ್ಯಗಳನ್ನು ಒಬ್ಬರನ್ನೊಬ್ಬರುದ್ದೇಶಿಸಿ ಜನಸಮುದಾಯದ ಮುಂದೆ ಅನ್ನುವ ಪದ್ಧತಿಯುಂಟು. ಈ ಪದ್ಯಗಳು ಪರಸ್ಪರರಲ್ಲಿ ದೃಢವಾದ ಪ್ರೇಮ ಮತ್ತು ವಿಶ್ವಾಸಗಳನ್ನು ಸೂಚಿಸುತ್ತವೆ. ಈ ಕೆಳಗಿನ ಎರಡು ಪದ್ಯಗಳು ಇಂಥವೇ ಇರುವವು.

( ಮೂಲ ಕೊಂಕಣೀ ಹಾಡು )

ನೋಕ್ಷೊತ್ರಾಂಚೊ ಪೊರಜೋಳರೆ ಆಜೀ ॥
ಪೇಟೊಲಾ ಯಾ ಕಾಜರಾ ಘಾರಾರೀ ॥
ಏಕವೋಟ ಜಾಲೊ ಸೊಬೆಮಾಜಾರೀ ॥
ಆಣಿ ದೇವಾಚ್ಯಾ ಮುಖಾರೀ ॥೧॥
ದಿಸೋ ಆಮೀ ಕಾಡಿಯಾ ವೋಗಾನು ॥
ಸೊದಾಕಾಳ ಸುಖಸಂತೋಷಾನು ॥ಪಲ್ಲ॥
ಸಾಕ್ರಾಮೆಂತೂ ಘೇತಲೊ ಖೊಶೇನು ॥
ಸ್ವೋರ್ಗಿಚ್ಯಾ ಉಜವಾಡಾನು ॥
ಘೋಟಾಯ ದಿಲೀ ಆಗ್ಸ್ವಬೇಂತಾನು ॥
ಆಣಿ ದೇವಾಲೆ ವಿನಿಶ್ರಾನು ॥೨॥
ದಿಸೋ ಆಮಿ: ಕಾಡಿಯಾ...ಇತ್ಯಾದಿ.

( ಕನ್ನಡ ಅನುವಾದ )

ತಾರೆಗಳ ಹೊಳಪಿನಲಿ ಇಂದು,
ಹೊಳೆದಿಹುದು ಮದುವೆ ಮನೆ ತಾನು,
ಒಂದಾದೆವಿಂದು ಜನರ ಸಭೆಯೊಳಗೆ
ದೇವನನ್ನೆ ಸಾಕ್ಷಿಯಾಗಿಟ್ಟು ॥೧॥

ದಿನಗಳನು ಕಳೆಯುವಾ ಪ್ರೇಮುದಲೆ ನಾವಿನ್ನು
ಸರ್ವಕಾಲದಲಿ ಸೌಖ್ಯ ಸಂತೋಷವನು ಪಡೆದು॥ಪಲ್ಲ॥
ತುಷ್ಟನಾಗಿಹನು ಬಿದಿ ಇಂದು,
ಸಗ್ಗದ ಬೆಳಕು ಮಿನುಗುತಲಿ,
'ಆಗ್ವಾಬ'ದಲಿ ಶಕ್ತಿಯನು ನೀಡಿ,
ಪ್ರಭುವೆ, ಗಡ ! ನಮ್ಮ ಅಯ್ಯನಾಗಿಹನು ॥೨॥
ದಿನಗಳನು ಕಳೆಯುವಾ... ಇತ್ಯಾದಿ.

ಟೀಪು - ಆಗ್ವಾಬ=ರೋಮನ್ ಕ್ಯಾಥೊಲಿಕ್ ಜನರ ವಿವಾಹ ಪದ್ಧತಿಯೊಳಗಿನ ಒಂದು ಮಹತ್ವದ ವಿಧಿಯ ಹೆಸರು

( ಮೂಲ ಕೊಂಕಣೀ ಹಾಡು )

ಚೋಯರೆ ಮೋಗಾ, ಚೋಯರೆ ಮೋಗಾ ॥
ಮೋಗಾಚೆ ಡೋಳೇ ಲಾಯರೆ ಮಾಕಾ ॥ಪಲ್ಲ॥
ದೋರ್ಯಾಚೆ ಲ್ಹಾರೀ ।
ಚೋಂದ್ರಿಯಾಚ್ಯಾ ಉಜವಾಡಾರೀ ।
ತ್ಯಾ ತುಝ್ಯಾ ಕೇಂಸಾಂಚ್ಯಾ ಫಾಂತಯೇರೀ ।
ಜುರಾರ ಜಾತಾ ತುಝೇ ಮುಖಾರೀ ೧॥
ಚೋಯರೆ ಮೋಗಾ ॥

( ಕನ್ನಡ ಅನುವಾದ )

ನೋಡು ಪ್ರಿಯೆ, ನೋಡು ನೋಡೆನ್ನ ಕಡೆಗಿಷ್ಟು
ತಿರುಗಿಸೆನ್ನಯ ಕಡೆಗೆ ಪ್ರೇಮದೃಷ್ಟಿಯನಿನಿತು ॥ಪಲ್ಲ॥
ಇದೊ, ಈ ಮುನ್ನೀರ ತೆರೆಗಳನು ।
ಆ ಚಂದ್ರಮನ ಬೆಳಕನ್ನು– ಅದೇಕೆ !
ಈ ನಿನ್ನ ಕೇಶಪಾಶವನೆ,
ಒಡನೆ ಆಣೆಯಾಗಿರಿಸುವೆನು ನಿನ್ನೆದುರಿನೊಳು ॥೧॥

ಪಾಶ್ಚಿಮಾತ್ಯ ಸುಧಾರಣಾಸಹಜವಾದ ಪ್ರೇಮಿಗಳ ಪರಸ್ಪರ ವಿರಹಸಂತಾಪದ ಪ್ರಸಂಗಗಳು ಗೋಮಾಂತಕದಲ್ಲಿ ವಿಶೇಷವಾಗಿರುವವೆಂದು ಮೇಲೆಹೇಳಿದೆಯಷ್ಟೆ ! ಅನೇಕ ಕಾರಣಗಳಿಗಾಗಿ ಪ್ರೇಮೀಯುಗಲವು ಒಬ್ಬರನ್ನೊಬ್ಬರು ಅಗಲಿ ಬಹು ಕಾಲದ ವರೆಗೆ ದೂರ ದೂರ ಅಂತರದಲ್ಲಿ ವಾಸಿಸುವದುಂಟು. ಸಂಸ್ಕೃತ ಕವಿಗಳು ಚಂದ್ರಕಾಂತ ಶಿಲೆಯೂ ಹುಣ್ಣಿಮೆಯ ಬೆಳದಿಂಗಳೂ ವಿರಹತಾಪವನ್ನು ಶಾಂತಗೊಳಿಸುವವೆಂದು ಕವಿಸಮಯವನ್ನು ಮಾಡಿಟ್ಟುಕೊಂಡಂತೆ ಗೋಮಾಂತಕದಲ್ಲಿ 'ರುಮಡಿ' ಎಂಬ ಹೆಸರಿನ ಒಂದು ಪ್ರವಾಹದಲ್ಲಿ ಸ್ನಾನ ಮಾಡಿದರೆ ವಿರಹತಾಪವು ಶಾಂತವಾಗುವದೆಂದು ನಂಬುಗೆಯಿದ್ದಂತೆ ತೋರುತ್ತದೆ.

( ಮೂಲ ಕೊಂಕಣೀ ಹಾಡು )

ಅತೊಸ್ಕೋರಣಾಚ್ಯಾ ಮೋರ್ಝ್ಯಾ ಸುಖಾ ।
ಕಾಳಜಾಚ್ಯಾ ಮೇರ್ಝ್ಯಾ ಗೋಂಡ್ಯಾ ।
ಜಾಯತೋ ತೇಂಪ ಮೋಗಾ ಜಾಲೋ ।
ತುಝ್ಯೋ ಮೋಗ ರಿಗಲ್ಯಾರ ಮಾಕಾ ।
ತೋ ಸೋಸೂ ನೋಜೋ ಮಾಣಕಾ ।
ರುಮಡೇ ಝೊರೀಚೋ ಬಾಂಜ ಘೇನದಿಸ್ತಾ ।
ಆಯ ! ಆಯು ! ರಾಬೀ ನೋಜೋ ।
ಫುಲಾ, ಉಗಡಾಸ ಯೇತಾ ತುಜೋ ॥

( ಕನ್ನಡ ಅನುವಾದ )

ಎನ್ನಂತರಂಗದ ನಿಜಸುಖವೆ,
ಎನ್ನೆದೆಯ ಮಧುರಿಮವೆ,
ಎನಿತು ಕಾಲವು ಕಳೆದು ಹೋಯಿತು ರಮಣ,
ಇಂಗಿಹುದು ಮನದಲ್ಲಿ ಪ್ರೇಮದ ರಸವು
ಸಹಿಸಲಾರೆನ್ನ ಮಾಣಿಕವೆ, ಈ ವಿರಹವನು ನಾನು
ಎಳೆಯುವುದು ಮನವು 'ರುಮಡಿ' ನೀರಿನ ಜಳಕಕ್ಕೆ
ಅಕಟಕಟ ! ಜೀವಿಸೆನು ಹಾ ! ನಾನು,
ಓ ಎನ್ನ ಕುಸುಮ, ನಿನ್ನ ಸ್ಮರಣೆಯಾದೊಡನೆ.

೬.

ಈ ಕೆಳಗಿನ ಪದ್ಯದಲ್ಲಿ ಪೋರ್ತುಗಾಲ ದೇಶಕ್ಕೆ ಹೊರಟ ಒಬ್ಬ ತರುಣನು ತನ್ನ ಪ್ರಿಯ ಪತ್ನಿಯ ನಿರೂಪವನ್ನು ತೆಗೆದುಕೊಳ್ಳುತ್ತಿರುವನು.

( ಮೂಲ ಕೊಂಕಣೀ ಹಾಡು )

ಆವೋರೇಚ್ಯಾ ವೇಳಾರೇ ಮೋಗಾ,
ಮೋಗ:ಳಿಕ ಫುಲತಾರೇ ಕೋಳೇ,
ತೋಸಲೇ ತುಝೇ ಡೋಳೇರೇ ಮೋಗಾ,
ಚೋಯತಾತ್ ಮುಝೇ ಕೋಡೇ.
ಪುರ್ತುಗಾಲಾಕ ವೋಯತಾ ರೇ ಮೋಗಾ,
ಏಕತೀ ದೋವರೂನ ತುಕಾ,
ಮೋಯನ್ಯಾನ ಚಿಠೀ ಪಾವಾನಾ ಜಾಲ್ಯಾರ ತುಕಾ,
ಸೇಂತೀರ ಮಾತ ತೂ ಜಾಂಯ ನಾಕಾ ॥

( ಕನ್ನಡ ಅನುವಾದ )

ಮೂರು ಸಂಜೆಯ ಹೊತ್ತಿನಲಿ, ಸುಂದರಿ,
ಮೊಗ್ಗುಗಳು ಅರಳುವುವು ಮಲ್ಲಿಗೆಯ ಬಳ್ಳಿಯೊಳು,
ಅಂತಹವು ಈ ನಿನ್ನ ಕಣ್ಣುಗಳು,

ಬಿಟ್ಟೆಸಿಯೆ ನೋಡಲಿಗುವುವೆನ್ನನು ಈಗ.
ಪೋರ್ತುಗಾಲಕೆ ಸಖಿಯೆ ! ಹೊರಟಹೆನು ನಾನೀಗ,
ನಿನ್ನೊಬ್ಬಳನೆ ಬಿಟ್ಟು ಬಿಟ್ಟಲ್ಲಿ.
ತಿಂಗತಿಂಗಳಿಗೊಮ್ಮೆ ಪತ್ರವೆನ್ನದು ಮುಟ್ಟದಿರೆಯು
ಖಿನ್ನಳಾಗಲು ಬೇಡ ನೀನದಕಾಗಿ

೭.

ಹಿಂದುಸ್ತಾನೀ ಭಾಷೆಯಲ್ಲಿ ಠುಸುರಿ ಎಂಬ ಹೆಸರಿನ ಎರಡು ನೂರು ಸಾಲುಗಳ ಚಿಕ್ಕ ಚಿಕ್ಕ ಪದ್ಯಗಳಿರುವವು. ಇವು ಪದ್ಯಕರ್ತರ ಅಂತರಂಗದ ಭಾವನೆಗಳನ್ನು ಸ್ಪುಟವಾಗಿ ಬಿಂಬಿಸಿ ಕೊಡುತ್ತವೆ. ಇಂಥ ಚಿಕ್ಕ ಚಿಕ್ಕ ಪದ್ಯಗಳು ಗೋಮಾಂತಕದಲ್ಲಿ ಕೊಂಕಣೀ ಭಾಷೆಯಲ್ಲಿಯೂ ಕಂಡುಬರುತ್ತವೆ. ಈ ಕೆಳಗಿನ ಚಿಕ್ಕ ಪದ್ಯದಲ್ಲಿ ಒಬ್ಬ ತಾಯಿಯು ತನ್ನ ಪುಟ್ಟ ಮಗುವಿನ ಅಕಾಲಮರಣಕ್ಕಾಗಿ ಶೋಕಗೈಯುತ್ತಿರುವಳು.

( ಮೂಲ ಕೊಂಕಣೀ ಹಾಡು )

ಉಸ್ಕಿಂತ ಮೋರೂನ ಗೇಲೋ ತೂ ಪೂತಾ !
ಝಾಡಾರ ಸೋವಣೀ ರೋಟ್ಯಾಯು ತುಕಾ,
ಏಕಟ್ಯಾಚ ಮೋರ್ಝ್ಯಾ ಪೂತಾ.

( ಕನ್ನಡ ಅನುವಾದ )

ವ್ಯರ್ಥ ನೀ ಮಡಿದು ಪೋದೆಯೆ ! ಬಾಳಾ ॥
ಗಿಡಗಳೊಳು ಪಕ್ಕಿಗಳು ಅಳುತಿಹವು ನಿನಗಾಗಿ
ನೀನೊಬ್ಬನೆಯೆ ಆಗಿರ್ದೆ ಮಗುವೆನಗೆ ಬಾಳಾ.

೮.

ಗೋಮಾಂತಕೀಯ ರೋಮನ್ ಕೆಥೋಲಿಕ್ ಜನರು ಹಿಂದೂ ಜನರಂತೆಯೇ ಭಾವಿಕರಿರುತ್ತಾರೆ. ನಮ್ಮಲ್ಲಿ ಹಳ್ಳಿಗಳೊಳಗೆ ಜನರು ದೊಡ್ಡಾಟ, ರೂಪಸೇನನ ಆಟ ಮೊದಲಾದ ಬೈಲಾಟಗಳನ್ನಾಡುವಂತೆ ಗೋಮಾಂತಕದಲ್ಲಿಯೂ ಹಳ್ಳಿಗಳೊಳಗೆ ಬೇರೆ ಬೇರೆ ಪ್ರಕಾರದ ಧಾರ್ಮಿಕ ಮತ್ತು ಸಾಮಾಜಿಕ ಉತ್ಸವಗಳನ್ನು ಮಾಡುವದುಂಟು. ಆ ಸಮಯದಲ್ಲಿ ಹಳ್ಳಿಯ ಹುಡುಗರು ಜನರನ್ನು ನಗಿಸುವದಕ್ಕಾಗಿ ಏನೂ ಅರ್ಥವಾಗದ ಚಿಕ್ಕ ಚಿಕ್ಕ ಪದಗಳನ್ನು ಅನ್ನುವದುಂಟು. ಈ ಕೆಳಗಿನ ಪದ್ಯವು ಇಂಥದೊಂದಾಗಿದೆ.

( ಮೂಲ ಕೊಂಕಣೀ ಹಾಡು )

ಸಾಷ್ಟೀ ಬಾರದೇಸಾಕ ದೇಖೂನ ಸೋಗಳ್ಯಾಕ ನಾಂವ
ಘಾವಮೂದ ಮಾಜೇ ।
ಮೋನ ಪಾರಖೂಂಕ ಭೋಂವತಾ ಆಂವ ಆಂಕವಾರ
ಚೋಲಯಾಂಚೇ ॥
ಓಸೋತೀ ಬಾಯೆ ಕಾಸು ಮೋರ್ಝೆ, ಕಾಂಯಚೀ
ವಾಕಾ ನಾಕಾ ತುಜೇ ।
ಪೋರನೇ ಜುನೇ ದಿಸೂತ ಬಾಯೆ ತುಮುಚ್ಯಾ ಆಂಗಾಚೇ ॥

( ಕನ್ನಡ ಅನುವಾದ )

ಸಾಷ್ಟಿ ಬಾರ್ದೇಶದೊಳಗೆಲ್ಲ ತುಂಬಿಹುದೆನ್ನ ಮಂಗಲನಾಮವು
ತಿರುಗುತಿಹೆ ನಾನು ಎಲ್ಲೆಲ್ಲಿ, ಹುಡುಗೆಯರ ಮನದ
ಗುಟ್ಟು ಹೇಳುತಲಿ ॥
ಇಂತಹದು ತಾಯೆ ! ಇಹುದೆನ್ನ ಕೆಲಸ ಹೆಚ್ಚಿಗೇನನು ಬೇಡೆ, ।
ಹಳೆಯದೊಂದು ಹರಕು ಬಟ್ಟೆಯನು ಕುಡೆ ಹೊರಟೆನಿದೆಕೊ!॥

ಟೀಪು:—(೧) ಸಾಷ್ಟಿ=ಅರುವತ್ತು ಚಿಕ್ಕ ಚಿಕ್ಕ ಹಳ್ಳಿಗಳು ಕೂಡಿದ ಒಂದು ಗುಂಪಿನ ಹೆಸರು. ಇವುಗಳಲ್ಲೆಲ್ಲ ಮಡಗಾಂವ ಎಂಬುದೇ ಈಗ ದೊಡ್ಡ ಶಹರವಾಗಿದೆ.

(೨) ಬಾರ್ದೇಶ=ಹನ್ನೆರಡು ಹಳ್ಳಿಗಳ ಒಂದು ಗುಂಪಿನ ಹೆಸರು. ಇವುಗಳಲ್ಲೆಲ್ಲ ಮ್ಹಾಪಶೆ ಎಂಬುದೇ ದೊಡ್ಡ ಊರು.

೯.

ಗೋವೆಯೊಳಗಿನ ಕ್ರಿಶ್ಚನ್ ಸಮಾಜದಲ್ಲಿ ಪ್ರೌಢವಿವಾಹ ಮತ್ತು ಪ್ರೇಮ ವಿವಾಹದ ಪದ್ಧತಿಯು ಹೆಚ್ಚಿಗೆ ಪ್ರಚಲಿತವಾಗಿದ್ದರೂ ಕೇವಲ ವರದಕ್ಷಿಣೆಯ ಆಶೆಯಿಂದಲೂ ಇನ್ನೂ ಬೇರೆ ರೀತಿಯಿಂದ ಹೆಂಡತಿಯ ಕಡೆಯಿಂದ ಹಣವು ದೊರೆಯುವದೆಂಬ ಲೋಭದಿಂದಲೂ ಲಗ್ನವಾಗುವ ಪುರುಷರಾದರೂ ಹೆಚ್ಚಾಗಿರುವರು. ಆದುದರಿಂದಲೇ, ಲಗ್ನವಾದ ನಂತರ ಹಣವು ದೊರೆಯದಿದ್ದರೆ ಗಂಡಹೆಂಡಿರಲ್ಲಿ ಜಗಳಾಟವಾದಂಥ ಅನೇಕ ಪ್ರಸಂಗಗಳು ಕಂಡುಬರುವವು. ಈ ಕೆಳಗಿನ ಪದ್ಯವು ಇಂಥದೇ ಒಂದು ಪ್ರಸಂಗವನ್ನನುಸರಿಸಿ ಇರುವದು.

( ಮೂಲ ಕೊಂಕಣೀ ಹಾಡು )

ನವರಾ:—

"ಆಂವ ಮೋಜೇ ಖೋಶೀನ ಜಾಲೇಲೋ ಇಚೆಕಾಂಡೇ
ಕಾಜಾರ ।
ಮೇವತೋಲೊ ಮೋಣೂನ ತಿಚೋ ಮಾಕಾ ಆಧಾರ ॥
ಕಿತೇ ಸಾಂಗಚೆ ! ಗೇಯನಾ ತೀ ಇಲ್ಲೋಚ ಪುಣೂನ
ಭಾರ ।
ಆಣೀ ಕೂರತನ ಘೋರುದಾರಾಚೋ ಇಭಾಡ "

**ಬಾಯುಕೋ:—**

"ಮಾಕಾ ಗೊರೋಜ ನಾ ತುಜೀ ಬುದ ಆಂಯಕೂಂಚೀ ।
ಘೋರಾ ವೋಯತಾ ಆಂವ ದೋ:ತ ಪೋರತೂನ ದೀ ವೋಜೀ ।
ವೋಜೀ ಕುಸ್ತಾರ ಗಿರೇಸ್ತಕಾಯು ಸೋದಿಶಾ ಜೊಡೋ ವಂಕ ತುಜೀ ।
ಓಸಲೀ ದೇಖ ನೀರೇ ಆಮುಚ್ಯಾ ಗಾಂವಾಂಚೀ " ॥

( ಕನ್ನಡ ಅನುವಾದ )

**ಗಂಡನು: –**

ಮಂದಮತಿ ನಾನು ಇವಳೊಡನೆ ಮದುವೆಯಾದೆನು ಖುಷಿಯಿಂದ
ಮನಸಿನೊಳು ಮಾಡಿರ್ದೆ ಮಂಡಿಗೆಯ ದೊರೆವು ದಿವಳಿಂದ ಧನವೆಂದು,
ಏನು ಹೇಳಲಿ ದೈವ ! ಮನೆತನದ ಹೊರೆಯ ಚಿಂತೆಯಲ್ಲಿ ವಳಿಗೆಳ್ಳನಿತು,
ಮನೆಮಾರು ಮುಗ್ಗಿದವು ಕುಗ್ಗಿದವು ಹಾಯ್ ! ಈ ಶಟವಿಯಿಂದ.

**ಹೆಂಡತಿ:—**

ನಿನ್ನ ಬುದ್ಧಿವಾದವ ಕೇಳೆ ಗರಜಿಲ್ಲವೆನಗೆ
ಕೊಡು ನನ್ನ ದ್ರವ್ಯವನು ಇದೊ ಹೊರಟೆ ತವರೂರ್ಗೆ ಇದುವೆ,
ಇಹುದು ನಿನ್ನಯ ಪಣವು ನನ್ನಿಂದೆ ಸಿರಿತನವ ಬೆಳೆಯಿಸಲು,
ಇಂಥವನ ನಾನೆಂದು ಕಂಡಿರಲಿಲ್ಲಿ ನಮ್ಮೂರಲ್ಲಿ.

೧೯.

ಸುಧಾರಣಾಯುಗಕ್ಕೆ ಅನುರೂಪವಾಗಿ, ದಿನಾಲು ಪ್ಯಾರಿಸ ಪಟ್ಟಣದಲ್ಲಿ ಹೊಸದಾಗಿ ಹೊರಡುವ 'ಫ್ಯಾಶನ್'ದ ಮಾದರಿಗಳು ಮೊದಲು ಪೋರ್ತುಗಾಲ ದೇಶಕ್ಕೆ ಹೋಗಿ ಅಲ್ಲಿಂದ ಗೋಮಾಂತಕಕ್ಕೆ ಬಂದು ಅಲ್ಲಿ ಹಳ್ಳಿಸಳ್ಳಿಗಳಲ್ಲಿಯೂ ಪಸರಿಸುತ್ತವೆ. ಇಂಥ ಫ್ಯಾಶನ್‌ಗಳಿಗೆ ಅಲ್ಲಿಯ ಸ್ತ್ರೀಯರು ವಿಶೇಷವಾಗಿ ಬಲಿಬಿದ್ದಿರುವದರಿಂದ ಅವರ ಗಂಡಂದಿರು ಹೆಚ್ಚಿನ ವೆಚ್ಚಕ್ಕೆ ಸಿಲುಕಿ ಬಲು ಕಂಗೆಟ್ಟಿದ್ದಾರೆ. ಈ ಕೆಳಗಿನ ಪದ್ಯದಲ್ಲಿ ಒಬ್ಬ ಗಂಡನು ತನ್ನ ಹೆಂಡತಿಗೆ ಹೊಸ ಹೊಸ ಫ್ಯಾಶನ್‌ದ ನಿಲುವಂಗಿಗಳನ್ನು ಕೊಡಿಸಿ ಕೊಡಿಸಿ ದಿವಾಳಿತೆಗೆದು ಬಲು ಕಂಗಾಲಾಗಿದ್ದಾನೆ.

( ಮೂಲ ಕೊಂಕಣೀ ಹಾಡು )

ಬಾಯೆ! ತುಂವೆ ಖೋಂಯು ಗಾಲೆ ತೇ ವೆಸ್ತಿದ ಕಾಜರಾ ಕೋಡಚೇ ?
ವೋಡ್ಲೆ ವೋಡ್ಲೆ, ಸೇದ:ಚೆ ಆಡಲೇಲೇ ಪಾರೀಸಾಚೇ ॥
ವೋದಾ ಯೇತಾಯ ತ್ಯಾ ಪೋರಮಾಣೇ ವೇಸ್ತಿದ ಕೋರಚೇ,
ತೋಸಲೇ ಲೂಶ ಆಮಕಾ ದುಬಳ್ಯಾಂಕ ಕೋಂಯುಚ? ॥
ದೀಸ ಆಯಲೇ ಆತಾ ಆಂವೆ ಕಾಷ್ಟೀ ಲಾಂವಚೇ,
ಆಣೀ ತುಕಾ ನೋವೆ ವೇಸ್ತೀದ ಆಡಚೇ ॥

( ಕನ್ನಡ ಅನುವಾದ )

ಎಲ್ಲಿ ಚಲ್ಲಿದೆಯೆ ಮದುವೆಯಲ್ಲಿ ತಂದಿರ್ದ ಆ ಝುಗೆಗಳನು?
ಪಾರಿಸನಗರದಿಂದ ತರಿಸಿರ್ದ ಉಚ್ಚ ರೇಶಿಮೆ ವಸ್ತ್ರಗಳೆಲ್ಲಿ ?
ಹೊಸ ತರದ 'ಫ್ಯಾಶನ್'ಗಳಂತೆ ಹೊಸತರದ ಝುಗೆಗಳನು ಮಾಡಿಸುವ
ಡೌಲು ಥಾಟನ ರೀತಿಯಿರಲಿಲ್ಲವೆಂದೆಂದು ನಮ್ಮ ಬಡತನದ ಮನೆಯಲ್ಲಿ,
ಇಂದು ಬಂದಿಹುದೆನಗೆ ಕೌಪೀನ ಧರಿಸುವ ಸಮಯ,
ನಿನಗೆ ಬಂದಿರೆ ಹೊಸತರದ ಝುಗೆಗಳನು ಧರಿಸುವ ಮೋಹ!

೧೧

ಮೇಲೆ ಹೇಳಿದಂತೆ ಗೋಮಾಂತಕದಲ್ಲಿ ಫ್ಯಾಶನ್‌ವು ಹಳ್ಳಿಹಳ್ಳಿಗಳಲ್ಲಿಯೂ ಪಸರಿಸಿದ್ದರೂ ಇಂಥ ಫ್ಯಾಶನ್‌ವನ್ನು ಕಡೆಗಣಿಸುವ ಒಬ್ಬಿಬ್ಬರು ಹಳೇಪದ್ಧತಿಯ ಪತಿವ್ರತಾ ಗೃಹಿಣಿಯರೂ ಅಲ್ಲಿ ಕಂಡುಬರುವರು. ಇಂಥ ಒಬ್ಬ ಗೃಹಿಣಿಯು ಈ ಕೆಳಗಿನ ಪದ್ಯವನ್ನು ಅನ್ನುವಳು.

( ಮೂಲ ಕೊಂಕಣೀ ಹಾಡು )

ಘೋವಾಕ ದುಬೋರ್ಳಕಾಯು ಆಯಲೀ ವೋಣೂನ ಕೋಸಲೀಚ ಪೋರವಾನಾ,
ಆಮೀ ಮಾಣೂಸಕೀ ವೋಗಡಾಂವಚ್ಯಾಕ ಸೆರ್ವಿರ ಪೋಡನಾ ॥
ನೋವ್ಯಾ ವೋದಾಂಚೋ ಏಕ ಪೋಣು ಮುಕೋಡೆ ವೇಸ್ತಿದನಾ ।
ದೇಖೂನ ಮಾಂಯಗೇರ ಲೇಗೂನ ಆಂವ ವೋಚನಾ ॥

( ಕನ್ನಡ ಅನುವಾದ )

ಗಂಡನಿಗೆ ಬಡತನವು ಬಂದಿರೆಯು ಎಳ್ಳನಿತು ಎರವಿಲ್ಲ,
ಉಚಿತವಲ್ಲೆ ಮಗೆ ಪೆಣ್ತನವ ಕಡೆಗಣಿಸುವುದು,

ಹೊಸತರದ ಝುಗೆಯು ಎನಗೀಗ ಒಂದಿಲ್ಲವಾದರೆಯು,
ತವರೂರ್ಗೆ ಅಕ್ಕ ! ಪೋಗೆನೆಂದಿಗು ನಾನು

೧೨

ಗೋಮಾಂತಕದೊಳಗಿನ ಕ್ರಿಸ್ತೀ ಸಮಾಜದಲ್ಲಿ ಆಜನ್ಮ ಅವಿವಾಹಿತರಾಗಿಯೇ ಉಳಿದಂಥ ಅನೇಕ ವೃದ್ಧ ಕುಮಾರಿಕೆಯರಿರುತ್ತಾರೆ. ಈ ಕೆಳಗಿನ ಪದ್ಯದಲ್ಲಿ ಇಂಥ ಒಬ್ಬ ಕುಮಾರಿಕೆಯು ವಿವಾಹಿತೆಯರ ಪಾರತಂತ್ರ್ಯವನ್ನು ತಿರಸ್ಕರಿಸಿ ಕೌಮಾರ್ಯ ಭಾವವನ್ನೇ ಸ್ತುತಿಸುತ್ತಾಳೆ.

(ಮೂಲ ಕೊಂಕಣೀ ಹಾಡು)

ಸಂತಾಪ ದಿಸ್ತಾರೇ ಕಾಜರ್ಯಾಂಚೋ,
ಮಿಡಮಿಡೆ ಭೋಗತಾರೇ ರಾಂಡಾಂಚೇ ॥
ಫೆಲೀಜ ದಿಸು ಆಂಕವಾರಾಂಚೇ,
ಲಿಬೆರ್ದಾದೀನ ಖುಶಾಲ ಭೋಂವಚೇ ॥೧॥
ಕಾಜಾರ ನಾಕಾ, ಸಾಂಗಾತ ನಾಕಾ,
ಆಂಕವಾರಪೋಣ ಬೊರೇ ದಿಸೋತಾ ಮಾಕಾ ॥ಪಲ್ಲ॥
ಆಂಕವಾರ ಪೊಣಾಚ್ಯಾ ಮೋಜಾ ಸುಖಾ,
ಮೋಜ್ಯಾನ ಸೋಡೂ ನೋಜೋ ಶುಕಾ ॥
ಮಾಜೆ ಠಾಯೀ ಇಂಗ್ರಾತ ತೂ ಜಾಯ ನಾಕಾ,
ತುಜೆವೀಣ ಸಂಸಾರ ನಾಕಾ ಮಾಕಾ ನಾಕಾ...ಇತ್ಯಾದಿ

( ಕನ್ನಡ ಅನುವಾದ )

ಮದುವೆಯಾದವರ ಕಂಡು ಸಂತಾಪವಾಗುವುದೆನಗೆ,
ಆ ವಿಧವೆಯರ ನೋಡಿ ಕಳವಳಿಪುದೆನ್ನ ಮನ ಹಾಯ್ !
ಕನ್ಯೆಯರೆ ಗಡ ಭಾಗ್ಯವತಿಯರು ಅಹುದು,
ಸ್ವಚ್ಛಂದದಲಿ ವಿಹರಿಸುವರವರು ಮನಬಂದಂತೆ ॥೧॥
ಬೇಡೆನಗೆ ಮದುವೆ, ಜೋಡು ಬೇಡೆನಗೆ,
ಬೇಕು ಬೇಕೆನಗೆ ಕನ್ನಿಕೆಯ ಬಾಳೆ ಎಂದಿಗು ॥ಪಲ್ಲ॥
ಕುಮಾರಿಕೆಯ ನಿಜ ಸೌಖ್ಯವೆ !
ಬಿಡಲಾರೆ ನಿನ್ನಯ ಸಂಗ ನಾನೆಂದಿಗು,
ನಂಬಿಗೆಯನಿಷ್ಟು ಬಿಡಬೇಡ ಎನ್ನಲ್ಲಿ,
ನೀನಿಲ್ಲದೊಡೆ ಬೇಡೆನಗೆ ಜೀವಿತವು ಕೂಡ ॥೨॥
ಬೇಡೆನಗೆ ಮದುವೆ...ಇತ್ಯಾದಿ.

೧೩

ಗೋವೆಯೊಳಗಿನ ಎಷ್ಟೋ ಹಳ್ಳಿಗಳಲ್ಲಿ ಹಿಂದೂ ಜನರ ನೆರೆಯಲ್ಲಿಯೇ ಕ್ರಿಶ್ಚನ್ನರೂ ಇರುತ್ತಿದ್ದರೂ ಕೂಡ ಅವರವರ ಸಾಮಾಜಿಕ ಮತ್ತು ಧಾರ್ಮಿಕ ರೀತಿ ನಡತೆಗಳಲ್ಲಿ ಮಹದಂತರವು ಕಂಡುಬರುವದು. ಹಿಂದೂ ಜನರ ಅನೇಕ ಆಚರಣೆಗಳು ಕ್ರಿಶ್ಚನ್ನರಿಗೆ ಹಾಸ್ಯಾಸ್ಪದವಾಗಿ ತೋರುವವು. ಗೋಮಾಂತಕೀಯ ಹಿಂದೂ ಜನರ ಹಬ್ಬಗಳೊಳಗೆಲ್ಲ ಬಹು ದೊಡ್ಡ ಹಬ್ಬವೆಂದರೆ ಗಣೇಶ ಚತುರ್ಥಿಯು. ಆ ಸಮಯದಲ್ಲಿ ಗಣಪತಿ ಪೂಜೆಯ ವಿಷಯವಾಗಿ ಸ್ವಲ್ಪ ಹಾಸ್ಯವನ್ನು ತೋರಿಸುವ ಈ ಕೆಳಗಿನ ಪದ್ಯವನ್ನು ಕ್ರಿಶ್ಚನ್ನರು ಅನ್ನುವದುಂಟು.

( ಮೂಲ ಕೊಂಕಣೀ ಹಾಡು )

ಗೊಣೆಸ್ಪೊತಿರಾಯಾ ಆಮೀ ಸಾಲಾಮು ತಾಕಾ ಕೋರಯಾ
ಪೋತಾವೋಳೀ ಮಾಂಡೂನ ದಾದಾ ಜೇವೋಣ
ತಾಕಾ ದಿವಯಾ ॥
ಆಳವಾಂತಾಲ್ಯಾನ ಗೇಲೋರೆ ಗೋಣೇಸ ! ಖೋಂಯು
ಗೇಲೊ ತೋ ಪೊಳೌಯಾ ।
ಭೇಟಕಲಾಗೂನ ಪೊಳೂನ ಗೇಲೊ, ಹೊರೀಲೆ ಬಾಂಯು
ಸೋದೀಯಾ ॥
ಸೋದೂನ ತಾಕಾ ಆಡೂನ ಯೇಕ ಜೇವೋಣ ನಿಬಾರ
ದಿವಯಾ ।
ಲಕ್ಷ್ಮಣಾಕ ಸಾಂಗೂನ ಸಾಂಜೇ ವಾಜೋಪ ನಿಬೋರ
ಧೋರೂಂಯಾ ॥
ಆಂಗವಣ ಗೋಣೇಸಾಕ ಕೋರೂನ ಏಕ ಆಬಾಕ ಬಾಯಲ
ಮಾಗಯಾ ।
ಆತ ದಿಸು ಪಾಸೂನ ದಾದಾ ದಿವಟಿಯೊ ತಾಕಾ
ಜೋಳಯಾ ॥

( ಕನ್ನಡ ಅನುವಾದ )

ಗಣಪತಿರಾಯಗೆ ವಂದನೆಗೈಯುವ, ನಡೆಯಿರಿ ಪೋಗುವ
ನಾವೀಗ,
ಎಲೆಯನು ಮಂಡಿಸಿ ಅಣ್ಣ ಗೆ ಊಟಕೆ ನೀಡುವ ಬಲುಬೇಗ
ಗಣೇಶನಿದೊ! ಪೋಗಿಹನೆಲ್ಲಿಗೊ ! ಎಲ್ಲಿಗೆ ಪೋಗಿಹ
ನೋಡುವ ಬನ್ನಿ,
ಉಂಡೆಗಳೆಲ್ಲೆಂದೋಡಿದನೇನೊ, ಕೃಷ್ಣನ ಭಾವಿಲಿ
ಹುಡುಕಾಡುವ ಬನ್ನಿ
ಕರೆತಂದಾತಗೆ ಕುತ್ತಿಗೆಮಟ ಊಟಕೆ ಹಾಕುವ ಬನ್ನಿ,
ರಾತ್ರಿಲಿ ವಾದ್ಯವ ಬಾರಿಸೆ ಲಕುಮಣನಿಗೆ ಹೇಳುವ ಬನ್ನಿ
ಗಣಪತಿವ್ರತವನು ಮಾಡಿಯೆ ಅಣ್ಣಗೆ ಹೆಂಡತಿ ಬೇಡುವ
ಬನ್ನಿ,
ಎಂಟು ದಿನದವರೆಗೂ ಆತಗೆ ದೀಪವನುರಿಸುವ ಬನ್ನಿ.

# ಕರ್ನಾಟಕ ವಿಶ್ವವಿದ್ಯಾಲಯವು

ಲೇಖಕರು—ಶ್ರೀ. ಕಾಶೀನಾಥ ಗ. ವರ್ಟಿ, ಎಂ. ಎ., ಬಿ. ಟಿ., ಮುಂಬೈ ವಿಶ್ವವಿದ್ಯಾಲಯದ ಸದಸ್ಯರು, ಪ್ರಿನ್ಸಿಪಾಲ, ಗೋಕಾವಿ ಹಾಯಸ್ಕೂಲ.

ಮುಂಬಯಿ ವಿಶ್ವವಿದ್ಯಾಲಯದ ಕಳೆದ ಪದವೀದಾನ ಸಮಾರಂಭದ ಕಾಲಕ್ಕೆ ನ್ಯಾಯಿಸ ಚಾನ್ಸಲರರಾದ ಶ್ರೀ. ನ್ಯಾಯಮೂರ್ತಿ ಮಿರ್ಝಾ ಅಲ್ಲಿ ಅಕಬರ ಖಾನರವರು ಮಾಡಿದ ಉಪನ್ಯಾಸವು ಒಂದು ದೃಷ್ಟಿಯಿಂದ ವಿಶೇಷ ಮಹತ್ವದ್ದಾಗಿರುತ್ತದೆ. ಏಕೆಂದರೆ ಈ ವಿಶ್ವವಿದ್ಯಾಲಯದ ಇತಿಹಾಸದಲ್ಲಿ ಅಧಿಕೃತ ಜನರು ಸ್ವಭಾಷೆಯ ಮಹತ್ವವನ್ನು ಪ್ರತಿಪಾದಿಸಿದ್ದು ಇದೇ ಮೊದಲನೇ ಪ್ರಸಂಗವೆಂದೆನ್ನಲು ಅಡ್ಡಿಯಿಲ್ಲ. ರಾಷ್ಟ್ರೀಯ ಶಿಕ್ಷಣಕ್ರಮದಲ್ಲಿ ದೇಶೀಯ ಭಾಷೆಯ ಸ್ಥಾನವು ಉಚ್ಚತರದ್ದಾಗಿರುತ್ತದೆ. ಮತ್ತು ಶಿಕ್ಷಣದ ನಿಜವಾದ ಪ್ರತಿಫಲವನ್ನನುಭವಿಸಬೇಕಾದರೆ ದೇಶೀಯ ಭಾಷೆಯೇ ಶಿಕ್ಷಣದ ಮಾಧ್ಯಮ (Medium) ವಾಗುವುದವಶ್ಯವಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದಲ್ಲಿ ಮಾಧ್ಯಮವೆಂದು ದೇಶೀಯ ಭಾಷೆಯನ್ನುಪಯೋಗಿಸುವದರಿಂದುಂಟಾದ ಸುಪರಿಣಾಮಗಳನ್ನು ನಾವು ನಿರೀಕ್ಷಿಸುತ್ತಿದ್ದೇವೆ. ನಮಗೆ ದೊರೆಯುವ ಶಿಕ್ಷಣದ ಯೋಗ್ಯವಾದ ಉಪಯೋಗವನ್ನು ಸ್ವೋನ್ನತಿಯಲ್ಲಿಯೂ ರಾಷ್ಟ್ರೋನ್ನತಿಯಲ್ಲಿಯೂ ಮಾಡುವದಕ್ಕೋಸ್ಕರ ಉಚ್ಚತರದ ಶಿಕ್ಷಣವನ್ನು ಸಹ ದೇಶೀಯ ಭಾಷೆಯ ಮುಖಾಂತರವಾಗಿಯೇ ಪಡಕೊಳ್ಳುವುದು ಶ್ರೇಯಸ್ಕರವೆಂಬಭಿಪ್ರಾಯವು ಈಗ ನೆಲಗೊಳ್ಳಹತ್ತಿದೆ. ಈ ವಿಷಯದ ಬಗ್ಗೆ ತಮ್ಮ ಉಪನ್ಯಾಸದಲ್ಲಿ ಶ್ರೀ. ಮಿರ್ಝಾರವರು ಚರ್ಚೆಯನ್ನು ಮಾಡಿ ನಮ್ಮ ರಾಷ್ಟ್ರೀಯ ಭಾವನೆಗೆ ಚಾಲನೆಯನ್ನೀಯುವ ಶ್ರೇಯಸ್ಸನ್ನು ಪಡಕೊಂಡಿದ್ದಾರೆ.

ಕಳೆದ ೭೦ ವರುಷಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿತವಾದಂದಿನಿಂದ ನಾವು ಸಂಪಾದಿಸಿದ ಶಿಕ್ಷಣವನ್ನು ಪರೀಕ್ಷಿಸಲಾಗಿ ನಮ್ಮ ಶಿಕ್ಷಣ ಪ್ರಗತಿಯು ನಿಜವಾದ ಪ್ರಗತಿಯೆಂದೆನಿಸಿಕೊಳ್ಳಲಿಕ್ಕೆ ತಕ್ಕುದ್ದು ಮತ್ತು ಅದು ನಮ್ಮ ರಾಷ್ಟ್ರೀಯತ್ವಕ್ಕೆ ಪೋಷಕವಾಗಿದೆಯೋ ಎಂಬ ಬಗ್ಗೆ ಸಂದೇಹವುಂಟಾಗುವುದು. ಖಾನಸಾಹೇಬರು ಹೇಳಿದ ಪ್ರಕಾರ ನಮ್ಮ ಶಿಕ್ಷಣದ ಪದ್ಧತಿಯು ಮತ್ತು ವಿಶ್ವವಿದ್ಯಾಲಯಗಳು ಆಂಗ್ಲ ದೇಶದೊಳಗಿನ ಪದ್ಧತಿಯ ಮತ್ತು ಸಂಸ್ಥೆಗಳ ಬರೇ ಅನುಕರಣಗಳೇ ಹೊರ್ತಾಗಿ ನಮ್ಮ ದೇಶಕಾಲಗಳಿಗೆ ಅನುಗುಣವಾಗಿ ಮತ್ತು ರಾಷ್ಟ್ರೀಯ ಭಾವನೆಗೆ ಪೋಷಕವಾಗಿ ಸ್ಥಾಪಿಸಲ್ಪಟ್ಟ ಸಂಸ್ಥೆಗಳಲ್ಲ. ಸ್ವಂತ ಮಾತೃಭಾಷೆಯ ಹೊರ್ತಾಗಿ ಪರರ ಭಾಷೆಯಿಂದ ನಮ್ಮ ವಿಚಾರವೃಕ್ಷವು ಸಿಂಚಿತಜಲವಾಗಿ ಪೋಷಿತವಾದರೆ ನಮ್ಮ ವಿಶಿಷ್ಟವಾದ ರಾಷ್ಟ್ರೀಯತ್ವವನ್ನು ಪೂರ್ಣವಾಗಿ ವ್ಯಕ್ತ ಮಾಡುವದಕ್ಕೆ ಸಂಧಿಯೇ ಸಿಕ್ಕುವದಿಲ್ಲ. ಜಗತ್ತಿನಲ್ಲಿರುವ ಅರ್ವಾಚೀನ ರಾಷ್ಟ್ರಗಳ ಪ್ರಗತಿಗೆ ಅವರವರ ಸ್ವಂತ ದೇಶಭಾಷೆಯೇ ಕಾರಣೀಭೂತವಾಗಿದೆಂಬದು ಈಗ ನಮಗೆ ತಿಳಿದುಬರಹತ್ತಿದೆ. ಇದಕ್ಕಾಗಿ ನಮ್ಮ ಭಾಷೆಯ ವೃದ್ಧಿಯನ್ನು ಮಾಡುವುದು ನಮ್ಮ ಆದ್ಯ ಕರ್ತವ್ಯವಾಗಿದೆ.

ಭರತಖಂಡದ ಬೇರೆ ಬೇರೆ ಪ್ರಾಂತಗಳಲ್ಲಿ ಪ್ರಚಲಿತವಿರುವ ಭಾಷೆಗಳಿಗನುಸಾರವಾಗಿ ಬೇರೆಬೇರೆ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವ ಅವಶ್ಯಕತೆಯನ್ನು ಶ್ರೀ. ಖಾನಸಾಹೇಬರು ಉತ್ತಮ ರೀತಿಯಿಂದ ಸ್ಪಷ್ಟೀಕರಿಸಿದ್ದಾರೆ. ಮಹಾರಾಷ್ಟ್ರ ಗುಜರಾಥ ಪ್ರಾಂತಗಳಲ್ಲಿ ಮತ್ತು ಸಿಂಧದಲ್ಲಿ ಸಹ ಪ್ರತ್ಯೇಕವಾಗಿ ವಿಶ್ವವಿದ್ಯಾಲಯದ ಸಂಸ್ಥೆಗಳನ್ನು ಸ್ಥಾಪಿಸುವ ಅವಶ್ಯಕತೆಯನ್ನು ತೋರಿಸಿದಾಗ ನಮ್ಮ ಕರ್ನಾಟಕ ನಾಡಿನ ಸ್ಮರಣೆ ಸಹ ಖಾನಮಹಾಶಯರಿಗೆ ಆಗದ್ದಕ್ಕೆ ನಾವು ವಿಷಾದಪಡುತ್ತೇವೆ. ಗುಜರಾಥಿ ಅಥವಾ ಮರಾಠಿ ಭಾಷೆಗಳಿಗಿಂತ ನಮ್ಮ ಭಾಷೆಯು ಪುರಾತನದ್ದಿದ್ದು, ವಾಙ್ಮಯದಲ್ಲಿಯೂ ಭಾಷಾಸೌಷ್ಠವದಲ್ಲಿಯೂ, ಭಾಷಾಮಾಧುರ್ಯ, ಪದಲಾಲಿತ್ಯ ಮುಂತಾದ ಭಾಷಾಲಂಕಾರಗಳಲ್ಲಿಯೂ ಯಾವದೇ ವಿಧದಿಂದ ಆ ಭಾಷೆಗಳಿಗಿಂತ ಕೊರತೆಯುಳ್ಳದ್ದಾಗಿರಲು ಈ ನಮ್ಮ ಭಾಷೆಯ ನಾಮನಿರ್ದೇಶವನ್ನು ಸಹ ತಮ್ಮ ಉಪನ್ಯಾಸದಲ್ಲಿ ಅವರು ಮಾಡದಿರುವ ಕಾರಣವೇನಿದ್ದೀತೆಂಬದನ್ನು ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ. ಇದಕ್ಕೆ ಕೆಲವೊಂದು ರೀತಿಯಿಂದ ನಾವೇ ಕಾರಣರೂ ಆಗಿದ್ದೇವೆ. ಏಕೆಂದರೆ ನಮ್ಮ ನಾಡಿನ ವಿಷಯವಾಗಿ, ನಮ್ಮ ಭಾಷೆಯ ಬಗ್ಗೆ, ಮತ್ತು ನಮ್ಮ ಶಿಕ್ಷಣವನ್ನು ಕುರಿತು ನಮ್ಮಲ್ಲಿರತಕ್ಕ ಅಭಿಮಾನದ ಮತ್ತು ದಕ್ಷತೆಯ ಅಭಾವವೇ ಈ ದುರ್ಲಕ್ಷದ ಮುಖ್ಯ ಕಾರಣವಿರಬಹುದೆಂದು ನಮಗೆ ತೋರುವದು.

ಐದ್ವಾರು ವರ್ಷಗಳ ಹಿಂದೆ ನೇಮಿಸಿದ ಯುನಿವ್ಹರ್ಸಿಟಿ ಸುಧಾರಣೆಕಮಿಟಿಯವರು ತಮ್ಮ ರಿಪೋರ್ಟಿನಲ್ಲಿ ಈ ಇಲಾಖೆಯೊಳಗೆ ಆಗತಕ್ಕ ತದಿತರ ವಿಶ್ವವಿದ್ಯಾಲಯಗಳ ಬಗ್ಗೆ ವಿಚಾರ ಮಾಡಿದ್ದಾರೆ. ಈ ಇಲಾಖೆಯಲ್ಲಿ ಭಾಷಾನುಗುಣದಂತೆ ನಾಲ್ಕು ಯುನಿವ್ಹರ್ಸಿಟಿಗಳು ಸ್ಥಾಪನವಾಗುವ ಸಂಭವವನ್ನು ಅವರು ತೋರಿಸಿದ್ದಾರೆ. ಆದರೂ ಮಹಾರಾಷ್ಟ್ರದ ಹೊರ್ತು ಮತ್ತಾವ ಪ್ರಾಂತದಲ್ಲಿ ಸ್ವತಂತ್ರ ವಿಶ್ವವಿದ್ಯಾಲಯಕ್ಕನುಕೂಲವಾದ ಪರಿಸ್ಥಿತಿಯು ಇನ್ನೂ ಪ್ರಾಪ್ತವಾಗಿಲ್ಲೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರಷ್ಟೇ. ವಿಶ್ವವಿದ್ಯಾಲಯಕ್ಕೆ ಅನುಕೂಲ ಪರಿಸ್ಥಿತಿಯನ್ನುಂಟುಮಾಡಲಿಕ್ಕೆ ಆಯಾಪ್ರಾಂತದಲ್ಲಿ ಹಲವು ಸಂಗತಿಗಳ ಪೂರ್ವಸಿದ್ಧತೆಯಿರುವದನಶ್ಯವಾಗಿದೆ. ಇವುಗಳಲ್ಲಿ ಜನರಲ್ಲಿರತಕ್ಕ ಶಿಕ್ಷಣ ಪ್ರಗತಿಯ ಪ್ರೇಮವು ಮೊದಲನೆಯದು. ನಮ್ಮಲ್ಲಿ ಉಚ್ಚ ಶಿಕ್ಷಣ ಹೊಂದಿದ ಜನರು ಬಹಳ ಇದ್ದರೂ ಬೌದ್ಧಿಕ ಚೈತನ್ಯದ (Intellectual activity) ದೃಷ್ಟಿಯಿಂದ ನಾವು ಹಿಂದುಳಿದಿರುವೆವೆಂದೆನ್ನಬೇಕಾಗುತ್ತದೆ. ಕಾರಣ, ಸ್ವತಂತ್ರ ವಿಶ್ವವಿದ್ಯಾಲಯಸ್ಥಾಪನೆಗೆ ಅತ್ಯವಶ್ಯವಾದ ಲೋಕಮತವನ್ನುಂಟುಮಾಡುವ ಪ್ರಯತ್ನಗಳು ನಮ್ಮಿಂದಾಗಿಲ್ಲೆನ್ನುವದನ್ನು ಒಪ್ಪಬೇಕಾಗಿದೆ. ಶಿಕ್ಷಣವಿಷಯದಲ್ಲಿ ಅವಶ್ಯವಿದ್ದಷ್ಟು ಮನಸು ಹಾಕಿ ಅದರ ಆಳವಾದ ಅಭ್ಯಾಸಮಾಡಿದವರು ನಮ್ಮಲ್ಲಿ ತೀರ ಕಡಿಮೆಯಿಲ್ಲದಿದ್ದರೂ, ತಮ್ಮ ಅಸ್ತಿತ್ವವನ್ನು ಲೋಕನಿದರ್ಶನಕ್ಕೆ ತರುವ ಪ್ರಯತ್ನಗಳಲ್ಲಿ ಮಾತ್ರ ಅವರ ದಾಕ್ಷಿಣ್ಯವು ಅವರಿಗೆ ಅಡ್ಡ ಬಂದಿದೆಯೆನ್ನಬೇಕಾಗುತ್ತದೆ. ಆದುದರಿಂದ ಕರ್ನಾಟಕದಲ್ಲಿ ಶಿಕ್ಷಣ ವಿಷಯಕ ಆತ್ಯಂತಿಕ ಲೋಕಜಾಗೃತಿಯಿದೆಯೋ ಏನೋ ಎಂಬ ಸಂದೇಹವು ಇತರ ಜನರ ಮನಸ್ಸಿನಲ್ಲಿ ಹುಟ್ಟುವದು ಸಹಜ.

ವಿಶ್ವವಿದ್ಯಾಲಯದಂಥ ಮಹತ್ವದ ಶಿಕ್ಷಣ ಸಂಸ್ಥೆಯು ದ್ರವ್ಯಸಹಾಯದ ಹೊರತು ಅವ್ಯಾಹತವಾಗಿಯೂ ಸುಲಭವಾಗಿಯೂ ನಡೆಯಲಾರದೆಂಬ ಮಾತು ನಿಜವಾದುದಷ್ಟೇ. ಆದರೆ ಈ ಕಾರ್ಯದಲ್ಲಿ ಶ್ರೀಮಂತರಾದ ಕನ್ನಡಿಗರು ಉಳಿದ ಪ್ರಾಂತದವರಿಗಿಂತ ಹಿಂದೆ ಬೀಳುವರೆಂದೆನ್ನುವುದು ಯೋಗ್ಯ ಕಾಣುವುದಿಲ್ಲ. ಏಕಂದರೆ ಧಾರವಾಡದ ಕಾಲೇಜದ ಪ್ರಾರಂಭ ನಡೆದಾಗ ಸರಕಾರದವರು ಹಾಕಿದ ದ್ರವ್ಯದ ಶರ್ತುಗಳನ್ನು ಅವರು ಅಲ್ಪ ಕಾಲದಲ್ಲಿಯೇ ಪೂರೈಸಿದರು. ಕರ್ನಾಟಕ ಶಿಕ್ಷಣಸಂಸ್ಥೆ, ಲಿಂಗಾಯತ ಶಿಕ್ಷಣ ಸಂಸ್ಥೆ, ಕಾನಡಾ ಶಿಕ್ಷಣ ಸಂಸ್ಥೆ ಮೊದಲಾದ ಶಿಕ್ಷಣ ಸಂಸ್ಥೆಗಳು ಲೋಕಾಶ್ರಯದಿಂದಲೇ ನಡೆದಿರುವವು. ಮೇಹರಬಾನ ಅರ್ತಾಳ ಸಾಹೇಬ, ವಂಟಮೂರಿಯ ಸರದೇಸಾಯಿಯವರು, ಶಿರ್ಸಿಯ ಪ್ರಸಿದ್ಧ ವಕೀಲರಾದ ರಾವಸಾಹೇಬ ಪಂಡಿತರಂತಹ ಶಿಕ್ಷಣಪ್ರೇಮಿಗಳಾದ ಎಷ್ಟೋ ಜನರು ದ್ರವ್ಯಸಹಾಯವನ್ನು ಮಾಡುವ ಸದಿಚ್ಛೆಯುಳ್ಳವರು ನಮ್ಮಲ್ಲಿರುವರು. ಆದರೆ **ನಮ್ಮ ಮುಖ್ಯ ಕೊರತೆಯೆಂದರೆ ನಮ್ಮ ಮುಂದಾಳುಗಳಲ್ಲಿ ಪ್ರಾಂತದ ಶಿಕ್ಷಣ ಪ್ರಗತಿಯ ಸಲುವಾಗಿ ಒಮ್ಮನಸಿನಿಂದ ಪ್ರಯತ್ನ ನಡಿಸುವ ಮತ್ತು ಶಿಕ್ಷಣ ಶಾಸ್ತ್ರಜ್ಞರ ಅಸ್ತಿತ್ವವನ್ನು ವ್ಯಕ್ತಪಡಿಸುವ ಚಟುವಟಿಕೆಗಳ ಅಭಾವ.**

ವಿಶ್ವವಿದ್ಯಾಲಯವು ಯಶಸ್ವಿಯಾಗಬೇಕಾದರೆ ಆವಶ್ಯಕವಾದ ಸಂಗತಿಗಳಲ್ಲಿ ಪ್ರಾಚೀನ ಸಂಶೋಧನೆಯ ಕಾರ್ಯದ ವ್ಯಾಪಕತೆಯೊಂದಿರುವದು. ಈ ಸಂಶೋಧನ ಕ್ಷೇತ್ರದಲ್ಲಿ ಕಾರ್ಯಮಾಡಲಿಚ್ಛಿಸುವವರಿಗೆ ಕಾರ್ಯಕ್ಷೇತ್ರವು ಬಲು ದೊಡ್ಡದಿರುವದೆಂದು ಕಂಡು ಬರುವದು. ಕರ್ನಾಟಕದ ಪ್ರಾಚೀನೇತಿಹಾಸವನ್ನು ಸಂಶೋಧಿಸುವ ಕಾರ್ಯವನ್ನು ಇನ್ನೂ ಯಾರೂ ಕೈಕೊಂಡಿಲ್ಲೆಂದು ಹೇಳಲು ಪ್ರತ್ಯವಾಯವಿಲ್ಲ. ಕರ್ನಾಟಕ ಇತಿಹಾಸಸಂಶೋಧನ ಮಂಡಲವೆಂಬ ಒಂದು ಸಂಸ್ಥೆಯು ಸ್ಥಾಪಿತವಾಗಿದ್ದರೂ ಅದರ ವಾರ್ಷಿಕ ಸಂಗತಿಯು ತಿಳಿಯುವದು ಸಹ ನಮಗೆ ದುಷ್ಕರವಾಗಿದೆ. ನಮ್ಮ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಪರಪ್ರಾಂತಸ್ಥರು ನಮ್ಮ ಕನ್ನಡ ಭಾಷೆಯ ವ್ಯಾಪ್ತಿಯ ಬಗ್ಗೆ ತೋರಿಸುವ ಅಜ್ಞಾನವು ನಿಜವಾಗಿ ಶೋಚನೀಯವಾಗಿದೆ. ಇನ್ನೂ ಕೆಲ ಕಾಲದ ವರೆಗೂ ಕನ್ನಡ ಭಾಷೆಯು ಬೇರೆ ದೇಶೀಯ ಭಾಷೆಗಳನ್ನು ಸರಿಗಟ್ಟುವ ಭಾಷೆಯಾದೀತೆಂದೆನ್ನಲು ಸಹ ಅವರ ಸಿದ್ಧತೆ ತೋರುವದಿಲ್ಲ. ನಮ್ಮ ಪೂರ್ವೇತಿಹಾಸ, ವಾಙ್ಮಯ ಮತ್ತು ನಮ್ಮ ಸರ್ವಾಂಗಗಳ ಪ್ರಗತಿಯನ್ನು ಕುರಿತು ನಮ್ಮಲ್ಲಿ ವಾಸಿಸುವ ಅನಾಸ್ಥೆಯೇ ಈ ಸಂಗತಿಯ ಮುಖ್ಯ ಕಾರಣವು.

ವಿಶ್ವವಿದ್ಯಾಲಯವು ಸ್ಥಾಪಿತವಾದ ಪಕ್ಷಕ್ಕೆ ಅದರ ಲಾಭವನ್ನು ಪಡಕೊಂಡು ಕಲಿಯುವ ವಿದ್ಯಾರ್ಥಿಗಳ ಸಂಖ್ಯೆಯು ಸಹ ಸಾಕಷ್ಟು ದೊಡ್ಡದಿರಬೇಕಾಗುವದು. ಆದರೆ ವಿದ್ಯಾ

ರ್ಥಿಗಳ ಸಂಖ್ಯೆಯನ್ನು ಈಗಲೇ ಅನುಮಾನಿಸುವದವಶ್ಯಕವಿಲ್ಲ. ಏಕೆಂದರೆ ವಿದ್ಯಾಲಯವು ಸಮೀಪವಿದ್ದಲ್ಲಿ ಕಲಿಯುವ ಹುಡುಗ ಹುಡುಗಿಯರ ಸಂಖ್ಯೆಯು ದಿನೇ ದಿನೇ ಹೆಚ್ಚಾಗುತ್ತ ಹೋಗುವದೆಂಬದು ಎಲ್ಲರ ಅನುಭವದ ಮಾತು.

ಕರ್ನಾಟಕಸ್ಥರಲ್ಲಿ ಶಿಕ್ಷಣಶಾಸ್ತ್ರಜ್ಞರೂ, ಕಾರ್ಯಕ್ಷಮ ಪುರುಷರೂ ಇರುವರು. ವಿಶ್ವವಿದ್ಯಾಲಯವು ಸ್ಥಾಪಿತವಾದಲ್ಲಿ ಅದು ಉತ್ತಮ ರೀತಿಯಿಂದ ನಡಿಸಲ್ಪಡುವದೆಂಬ ಬಗ್ಗೆ ಸಹ ಸಂದೇಹವಿಲ್ಲ. ಉಳಿದೆಲ್ಲ ಸಂಗತಿಗಳು ಅನುಕೂಲವಿದ್ದು ಒಂದು ಸುಲಭವಾದರೂ ಮಹತ್ವದ ಸಂಗತಿಯ ಅಭಾವವು ನಮ್ಮ ಪ್ರಗತಿಯ ದಾರಿಯಲ್ಲಿ ನಿಲ್ಲುವದು. ಅದಾವುದೆಂದರೆ ನಾವು ತೋರಿಸುವ ಶಿಕ್ಷಣ ವಿಷಯಕ ಅನಾದರವು. ಅಥವಾ ಶಿಕ್ಷಣದ ಬಗ್ಗೆ ನಮ್ಮಲ್ಲಿರುವ ಉತ್ಕಟ ಅಭಿಲಾಷೆಯನ್ನು ವ್ಯಕ್ತ ಗೊಳಿಸುವ ಸಂಧಿಗಳ ಅನುಪಯೋಗವು. ನಮ್ಮಲ್ಲಿ ಅವಶ್ಯಕವಾದ ಸ್ವಪ್ರತಿಪಾದನೆಯ ಹಂಬಲವು ( the urge ) ನಮ್ಮಲ್ಲಿ ಅತ್ಯಗತ್ಯವಾಗಿ ಬೇಕಾಗಿದೆ. ಈ ಮಾತನ್ನು ಸದ್ಯಕ್ಕಂತೂ ದೂರೀಕರಿಸುವದು ಶಕ್ಯವಿಲ್ಲ. ನಮ್ಮ ತಾಯ್ನುಡಿಯ ಬಗ್ಗೆ ನಮ್ಮಲ್ಲಿರತಕ್ಕ ಅಭಿಮಾನವು ನಮ್ಮಲ್ಲಿರಬಹುದು. ಆದರೆ ಕನ್ನಡ ಸಾಹಿತ್ಯವನ್ನು ಬೆಳೆಸುವ ಪ್ರಯತ್ನಗಳು ನಮ್ಮಲ್ಲೆನಿತೊಂದಿರುವವೆಂಬ ಬಗ್ಗೆ ನಾವು ಸ್ವಪರೀಕ್ಷೆ ಮಾಡಿ ನೋಡಬೇಕಾಗಿದೆ. ಮುಂಬಯಿ ವಿಶ್ವವಿದ್ಯಾಲಯದವರು ತೋರಿಸಿದ ಸಣ್ಣಪುಟ್ಟಅನುಕೂಲತೆಗಳನ್ನವಲಂಬಿಸಿ ಅವುಗಳಪೂರ್ಣಲಾಭವನ್ನೂ ಕನ್ನಡ ಹುಡುಗರು ತಕ್ಕೊಳ್ಳುವದಿಲ್ಲೆಂಬ ಖೇದಜನಕ ಮಾತನ್ನು, ಪ್ರಸಿದ್ಧವಾದ ಅಂಕೆಗಳು ಸಿದ್ಧಪಡಿಸುತ್ತವೆ. ಉದಾಹರಣೆಗಾಗಿ ಪ್ರವೇಶ ಪರೀಕ್ಷೆಯಲ್ಲಿ ಇತಿಹಾಸ ಮತ್ತು ಸಂಸ್ಕೃತ ಇವೆರಡು ವಿಷಯಗಳನ್ನು ದೇಶೀಯ ಭಾಷೆಯಲ್ಲಿ ಕಲಿಸಲಿಕ್ಕೂ ಪರೀಕ್ಷೆಯ ಪ್ರಶ್ನೆಗಳನ್ನುತ್ತರಿಸಲಿಕ್ಕೂ ಅನುಕೂಲ ಮಾಡಿಕೊಟ್ಟಿರಲು ನಮ್ಮ ವಿದ್ಯಾಲಯಗಳಲ್ಲಿ ಎಷ್ಟು ಶಿಕ್ಷಕರು ಮತ್ತು ಹುಡುಗರು ಕನ್ನಡದ ಉಪಯೋಗವನ್ನು ಮಾಡುತ್ತಿರುವರು ? ಹೋದವರ್ಷ ಇತಿಹಾಸದ ಪ್ರಶ್ನೆಗಳನ್ನುತ್ತರಿಸಿದ ೧೨೫೦೦ ಹುಡುಗರಲ್ಲಿ ೪೧೦೦ ಹುಡುಗರು ಮರಾಠಿಯಲ್ಲಿ, ೨೫೦೦ ಗುಜರಾಥಿಯಲ್ಲಿ ಮತ್ತು ಕೇವಲ ೩೫೦ ಹುಡುಗರು ಕನ್ನಡದಲ್ಲಿ ಬರೆದಿರುವರು. ಕರ್ನಾಟಕದ ಹಾಗೆಯೇ ಹಿಂದಿರುವ ಸಿಂಧಪ್ರಾಂತದಲ್ಲಿ ಸಹ ೧೩೦೦ ಹುಡುಗರಲ್ಲಿ ಅರ್ಧಕ್ಕಿಂತ ಹೆಚ್ಚು ಹುಡುಗರು ತಮ್ಮ ಸ್ವಂತ ಭಾಷೆಯ ಮುಖಾಂತರವಾಗಿಯೇ ಉತ್ತರಗಳನ್ನು ಬರೆದಿರುವಲ್ಲಿ ಕನ್ನಡ ಹುಡುಗರ ಪ್ರಮಾಣವು ಮಾತ್ರ ಒಂದು ಮೂರಾಂಶಕ್ಕಿಂತ ಕಡಿಮೆ ಬೀಳುತ್ತದೆ ! ನಮ್ಮ ಸುಶಿಕ್ಷಿತ ಜನರಲ್ಲಿ ಸಹ ಶಿಕ್ಷಣ ವಿಷಯಕ ಎಷ್ಟು ಅನಾಸ್ಥೆಯಿರುವದೆಂಬ ಬಗ್ಗೆ ಮತ್ತೊಂದು ಉದಾಹರಣೆಯನ್ನು ಕೊಡಬಹುದು. ಮುಂಬಯಿ ವಿಶ್ವವಿದ್ಯಾಲಯದ ಹೊಸಕಾಯದೆಯ ಪ್ರಕಾರ ಹೋದ ವರ್ಷದ ಸೀನೇಟದ ಹೊಸ ಚುನಾವಣೆಯಲ್ಲಿ ಪರಪ್ರಾಂತಸ್ಥರು ಅದರ ಪೂರ್ಣ ಲಾಭವನ್ನು ಪಡಕೊಂಡಾಗ ಕರ್ನಾಟಕದಲ್ಲಿ ೫೦೦ಕ್ಕಿಂತ ಹೆಚ್ಚು ಪದವೀಧರ ಮತದಾರರಿದ್ದರೂ, ಕನಿಷ್ಠ ಪಕ್ಷಕ್ಕೆ ೫ದು ಮಂದಿ ಸಭಾಸದರನ್ನಾರಿಸಿ ಕೊಡುವದು ಶಕ್ಯವಿದ್ದಿದ್ದರೂ ಈ ದೃಷ್ಟಿಯಿಂದ ಯಾರೂ ಪ್ರಯತ್ನ ಮಾಡಿಲ್ಲೆಂಬದು ನಿಜವಾಗಿ ಶೋಚನೀಯವು. ಈಗಿನ ೧೪೪ ಸಭಾಸದರ ಸೀನೇಟದಲ್ಲಿ ಬಹುತರ ಸಭಾಸದರು ಮುಂಬಯಿ, ಮಹಾರಾಷ್ಟ್ರ ಮತ್ತು ಗುಜರಾಥ ಪ್ರಾಂತಗಳಿಂದಿದ್ದು ಸಿಂಧ ಪ್ರಾಂತದಿಂದ ೧೩ ಮತ್ತು ಕರ್ನಾಟಕದಿಂದ ಕೇವಲ ಆರು ಸಭಾಸದರಿರುವರು. ಈ ಆರಲ್ಲಿ ಓರ್ವರು ಕರ್ನಾಟಕ ಕಾಲೇಜದ ಮುಖ್ಯಾಧ್ಯಾಪಕರಾದ ಯುರೋಪಿಯನ್ನರು ಮತ್ತೊಬ್ಬರು ಅದೇ ಕಾಲೇಜದಲ್ಲಿ ವಿದ್ಯಾನಿಧಿ (ಪ್ರೊಫೆಸರ) ಗಳಿರುವ ಮಹಾರಾಷ್ಟ್ರೀಯರು. ಈ ಸಂಗತಿಯು ಖೇದಜನಕವಲ್ಲವೇ ?

ಸ್ವತಂತ್ರ ವಿಶ್ವವಿದ್ಯಾಲಯದ ಸ್ಥಾಪನೆಗೆ ಅವಶ್ಯಕವಾದ ಸಂಗತಿಗಳನ್ನೆಲ್ಲ ಪೂರೈಸುವ ಕಾರ್ಯವು ಕರ್ನಾಟಕ-ಪ್ರಾಂತಸ್ಥರಿಗೆ ಸುಲಭ ಮತ್ತು ಶಕ್ಯವಿದ್ದರೂ ನಮ್ಮೀ ನಾಡಿನಗೋಸ್ಕರ ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಮಾತನ್ನು ಯಾರೂ ಮುಂದರಿಸುವದಿಲ್ಲ. ಧಾರವಾಡದಲ್ಲಿ ಅಥವಾ ಇಡೀ ಕರ್ನಾಟಕದಲ್ಲಿ ಇದರ ಬಗ್ಗೆ ಸಾಕಷ್ಟು ಲೋಕಮತವೂ ಜನರ ಕಡೆಯಿಂದ ಬೇಡಿಕೆಯೂ ಇರುವದಿಲ್ಲೆಂಬದೇ ನಮ್ಮೀ ಸ್ಥಿತಿಯ ಮುಖ್ಯ ಕಾರಣವು. ಈ ಲೋಕಮತಾಭಾವದಿಂದ ನಮ್ಮ ಅಸ್ತಿತ್ವವು ಬೇರೆ ಜನರಿಗೆ ಕಂಡು ಬರುವದಿಲ್ಲಾದ್ದರಿಂದ ಪ್ರತಿಯೊಬ್ಬ ಕನ್ನಡಿಗನು ಪರಿಸ್ಥಿತಿಯನ್ನು ಪರಿಶೀಲಿಸಿ ನಮ್ಮ ಕರ್ನಾಟಕ ನಾಡಿನ ಬಗ್ಗೆ ಮತ್ತು ನಮಗೆ ಅವಶ್ಯವಾದ ವಿಶ್ವವಿದ್ಯಾಲಯದ ಸ್ಥಾಪನೆಯ ಬಗ್ಗೆ ಲೋಕಮತವನ್ನುಂಟು ಮಾಡುವ ಪ್ರಯತ್ನಗಳನ್ನು ನಡಿಸಬೇಕಾಗಿದೆ.

# ಹಿಂದೂ ದೇಶದ "ಅಸಂಖ್ಯ ಭಾಷೆಗಳೂ" ಸ್ವರಾಜ್ಯವೂ

ಲೇಖಕ:—ದಿನಕರ ದೇಸಾಯಿ

ಹಿಂದೂ ದೇಶವು ನಾನಾ ಭಾಷೆಗಳ ಪ್ರದರ್ಶನ ಶಾಲೆಯೆಂದೂ, ಆದುದರಿಂದ ಸ್ವರಾಜ್ಯಕ್ಕೆ ಅಯೋಗ್ಯವೆಂದೂ ಆಂಗ್ಲರು ತಿರುತಿರುಗಿ ಹೇಳುವುದುಂಟು. ಅವರು ಹೇಳಿದ ಮಾತನ್ನು ಎಷ್ಟೋ ಮಂದಿ ಭಾರತೀಯರು ನಂಬಿ 'ಹೌದು, ನಾವು ಸ್ವರಾಜ್ಯಕ್ಕೆ ಅಯೋಗ್ಯವೇ ಸರಿ' ಎಂದು ಉದಾಸೀನರಾಗುತ್ತಾರೆ. ಜಗತ್ತಿನ ಮಿಕ್ಕ ದೇಶಗಳಲ್ಲಿ ಭಾಷಾ ಪ್ರಶ್ನೆಯು ಇಲ್ಲವೆಂದೇ ನಮ್ಮ ಭಾವನೆ. ಆದುದರಿಂದ ಈ ವಿಷಯವನ್ನು ಇಲ್ಲಿ ಚರ್ಚಿಸಿ, ಹಿಂದೀಯರು ಸ್ವರಾಜ್ಯಕ್ಕೆ ಯೋಗ್ಯರೇ ಹೇಗೆ ಎಂದು ತೋರಿಸುವದೇ ಈ ಲೇಖನದ ಗುರಿ.

ಅಸಂಖ್ಯ ಭಾಷೆಗಳು ಪ್ರಚಾರದಲ್ಲಿದ್ದೂ, ಸ್ವಾತಂತ್ರ್ಯವನ್ನು ಅನುಭವಿಸುವ ರಾಷ್ಟ್ರಗಳು ಈ ಜಗತ್ತಿನಲ್ಲಿ ಉಂಟೇ ಇಲ್ಲವೇ ಎಂಬುದನ್ನು ಮೊದಲು ನೋಡಬೇಕು. ಸಂಯುಕ್ತ ಅಮೇರಿಕಾ (United States of America) ದೇಶವನ್ನು ತೆಗೆದುಕೊಳ್ಳುವಾ. ಈ ರಾಷ್ಟ್ರದ ಭಾಷೆಗಳನ್ನು ಕುರಿತು ರಮಾನಂದ ಚತ್ತರಜಿಯವರು ತಮ್ಮ ಪತ್ರಿಕೆಯಲ್ಲಿ (Modern Review) ಹೀಗೆ ಬರೆಯುತ್ತಾರೆ:—

"It (U. S. A.) has more languages and more notionalities than India... A recent census of New Bedford in Massachusetts shows that in that American town alone 58 languages are spoken"

(ಸಾರಾಂಶ:—ಸಂಯುಕ್ತ ಅಮೇರಿಕೆಯಲ್ಲಿ ಹಿಂದುಸ್ಥಾನದಲ್ಲಿರುವುದಕ್ಕಿಂತ ಹೆಚ್ಚು ಭಾಷೆಗಳು ಪ್ರಚಾರದಲ್ಲಿವೆ. ಅಲ್ಲಿಯ ಒಂದು ಪಟ್ಟಣದಲ್ಲಿ ೫೮ ಭಾಷೆಗಳನ್ನಾಡುವ ಜನರು ವಾಸವಾಗಿದ್ದಾರೆ.)

ಆದರೆ ಹಿಂದೂ ದೇಶದ ದೊಡ್ಡ ಪಟ್ಟಣಗಳಾದ ಕಲಕತ್ತೆ, ಮುಂಬಯಿ ಮುಂತಾದ ಸ್ಥಳಗಳಲ್ಲಿ ಕೂಡ ೫೮ ಭಾಷೆಗಳು ಪ್ರಚಾರದಲ್ಲಿ ಇಲ್ಲವೆಂದು-ಎಲ್ಲರಿಗೂ ತಿಳಿದ ವಿಷಯು. ಅಮೇರಿಕಾ ದೇಶದಲ್ಲಿ ಎಷ್ಟೋ ವರುಷ ವಾಸವಾಗಿದ್ದು ಅಲ್ಲಿಯ ಸ್ಥಿತಿಗತಿಗಳನ್ನು ಚೆನ್ನಾಗಿ ಬಲ್ಲ ದಿವಂಗತ ಲಾಲಾ ಲಜಪತರಾಯರು ಅಲ್ಲಿಯ ಭಾಷೆಗಳನ್ನು ಕುರಿತು,

"Look at the number of languages spoken in the United States—in their schools and in their factories." ಎಂದು ಹೇಳುತ್ತಾರೆ.

(ಸಾರಾಂಶ:—ಸಂಯುಕ್ತ ಅಮೇರಿಕೆಯ ಸಾಲೆಗಳಲ್ಲಿ ಕಾರಖಾನೆಗಳಲ್ಲಿ ಜನರು ಮಾತನಾಡುವ ಆ ಭಾಷೆಗಳೆಷ್ಟು!)

ಅಮೇರಿಕಾ ದೇಶದಲ್ಲಿ ಬಹಳ ಭಾಷೆಗಳು ಪ್ರಚಾರದಲ್ಲಿದ್ದುದರಿಂದ ಆ ದೇಶವು ಸ್ವರಾಜ್ಯಕ್ಕೆ ಅಯೋಗ್ಯವೆಂದು ಯಾವ ಆಂಗ್ಲನು ಹೇಳಬಲ್ಲನು!

ರಸಿಯಾ ದೇಶದ ಕಡೆಗೆ ನಮ್ಮ ದೃಷ್ಟಿ ತಿರುಗಿಸಿದರೂ ಇದೇ ಹಾಡು. ಡಾ. ಶೆರ್‌ವುಡ್ ಎಡಿ (Sherwood Eddy) ಯವರು ಹೇಳುವಂತೆ ಆ ರಾಷ್ಟ್ರದಲ್ಲಿ ೧೪೯ ಭಾಷೆಗಳಿವೆ.

"Her population embraces 149 different languages ... ... Some of thes peoples are more primitive and much less civilized than those of Egypt and Babylon six thousand years ago. Some of their languages are now reduced to writing for the first time."

ಭಾರತೀಯರು ಈ ಜನರಿಗಿಂತ ನಾಗರಿಕತೆಯಲ್ಲಿ ಮುಂದುವರಿದವರೆಂದು ಬೇರೆ ಹೇಳಬೇಕಾಗಿಲ್ಲ. ಅಂದ ಮೇಲೆ ನಾವು ಇವರಿಗಿಂತ ಹೆಚ್ಚು ಚೆನ್ನಾಗಿ ರಾಜ್ಯನಾಳಲಿಕ್ಕೆ ಸಮರ್ಥರಿದ್ದೇವೆಂದು ಸಿದ್ಧವಾಗುತ್ತದೆ. ಬರೇ ೮೦ ಲಕ್ಷ ಜನವಸ್ತಿಯುಳ್ಳ—ಅಂದರೆ ಕರ್ನಾಟಕಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ—ಕೆನಡಾ ದೇಶದಲ್ಲಿ ೧೭೬ ಭಾಷೆಗಳು ಪ್ರಚಾರದಲ್ಲಿವೆ. ಈ ಪ್ರಮಾಣದಿಂದ ನೋಡಿದರೆ ಭರತಖಂಡದಲ್ಲಿದ್ದ ಭಾಷೆಗಳ ಸಂಖ್ಯೆಯು ಕಿರಿದೆಂದೇ ಹೇಳಬೇಕಾಗುತ್ತದೆ. ಕೆನಡಾ ದೇಶವು ಸಾಮಂತ ಸ್ವರಾಜ್ಯವನ್ನು (Dominion Status) ಅನುಭವಿಸುತ್ತಿರುವ ರಾಷ್ಟ್ರವೆಂದು ಎಲ್ಲರಿಗೂ ತಿಳಿದ ಮಾತು. ಹಿಂದುಸ್ಥಾನಕ್ಕಿಂತ ಹೆಚ್ಚಿಗೆ 'ಸ್ವಾತಂತ್ರ್ಯ' ವನ್ನು ಪಡೆದ ಫಿಲಿಪಾಯನ್ಸ ದ್ವೀಪದಲ್ಲಿ (Phillipines Islands) ೮೭ ಭಾಷೆಗಳು ಪ್ರಚಾರದಲ್ಲಿವೆ. ಈ ದ್ವೀಪದ ಜನಸಂಖ್ಯೆಯಾವತೋ ಬರೇ ೧ ಕೋಟಿ.

ಸ್ವತಂತ್ರ ರಾಷ್ಟ್ರವಾದ ಸ್ವಿಝರ್‌ಲಂಡಿನ ವಿಷಯ ಬರೆಯುವಾಗ ಜೇಮ್ಸ್ ಬ್ರಾಯ್ಸರು ( James Bryce ) ಅಲ್ಲಿಯ ಭಾಷೆಗಳನ್ನು ಕುರಿತು ಒಂದೆಡೆ ಹೀಗೆ ಬರೆಯುತ್ತಾರೆ:—

"In fifteen cantons ( of Switzerland ) German is the language almost exclusively spoken, in three (cantons) French, in one (canton) Italiau, in two each tongue claims about the half of the inhabitants while in Bern Geaman predominates, as does French in Fribourg."

(ಸಾರಾಂಶ:—ಸ್ವಿಝರ್‌ಲಂಡಿನ ೧೫ ಪ್ರಾಂತಗಳಲ್ಲಿ ಜರ್ಮನ್ ಭಾಷೆಯೂ, ೩ ಪ್ರಾಂತಗಳಲ್ಲಿ ಫ್ರೆಂಚ್ ಭಾಷೆಯೂ, ಒಂದರಲ್ಲಿ ಇಟಾಲಿ ಭಾಷೆಯೂ, ಹೀಗೆ ಪ್ರಚಾರದಲ್ಲಿವೆ.)

ಸ್ವಿಝರ್‌ಲಂಡಿನ ಜನಸಂಖ್ಯೆಯು ಬರೇ ೩೮ ಲಕ್ಷ. ಅಂದರೆ ಒಂದೇ ಭಾಷೆಯಾದ ಕನ್ನಡವನ್ನಾಡುವ ಧಾರವಾಡ, ಬೆಳಗಾಂವಿ, ವಿಜಾಪುರ ಮತ್ತು ಮಂಗಳೂರು ಈ ನಾಲ್ಕು ಜಿಲ್ಹೆಗಳ ಜನವಸ್ತಿಯಷ್ಟು! ಹೀಗಿದ್ದೂ ಸ್ವಿಝರ್‌ಲಂಡಿನಲ್ಲಿ ಮೂರು ಭಾಷೆಗಳು! ಅಲ್ಲದೆ, ಸ್ವಿಝರ್‌ಲಂಡ್ ಜನಾಂಗವು ಪ್ರಜಾಪ್ರಭುತ್ವವಿದ್ದ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ ಹೆಸರಾದದ್ದು. ರಾಜಕಾರಣಶಾಸ್ತ್ರದಲ್ಲಿ ನುರಿತ ಲೇಖಕರಾದ ಜೇಮ್ಸ ಬ್ರಾಯ್ಸರು ತಮ್ಮ "Modern Democracies" ಎಂಬ ಪುಸ್ತಕದ ಮೊದಲನೇ ಭಾಗದ ೫೦೫ ನೇ ಪುಟದಲ್ಲಿ, ಸ್ವಿಸ್ ಜನರ ಸ್ವತಂತ್ರ ಸರಕಾರದ ಮೇಲ್ಮೆಯನ್ನು ಹೊಗಳಿ ಹೀಗೆ ಹೇಳುತ್ತಾರೆ:—

"To have established and worked such a Government······is to have rendered a real service to mankind."

( ಸಾರಾಂಶ:— ಇಂಥ ಉತ್ಕೃಷ್ಟವಾದ ಸರಕಾರವನ್ನು ಸ್ಥಾಪಿಸಿ, ಅದನ್ನು ನಡೆಸುವುದೆಂದರೆ, ಇಡೀ ಮಾನವ ಜಾತಿಯ ಸೇವೆ ಮಾಡಿದಂತೆಯೇ ಸರಿ. )

೩೮ ಲಕ್ಷ ಜನ ಸಂಖ್ಯೆಯುಳ್ಳ ಸ್ವಿಝರ್‌ಲಂಡಿನಲ್ಲಿ ಮೇಲೆ ಹೇಳಿದ ೩ ಭಾಷೆಗಳು ಪ್ರಚಾರದಲ್ಲಿದ್ದರೆ, ೩೩ ಕೋಟಿ ಜನ ಸಮುದಾಯವುಳ್ಳ ಹಿಂದುಸ್ಥಾನದಲ್ಲಿ ೨೬೩ ಭಾಷೆಗಳು ಇದ್ದರೆ ಬೇಕಾಗಿತ್ತು. ಆದರೆ ೧೯೧೧ ನೇ ಇಸವಿಯ ಖಾನೇಸುಮಾರಿಯಂತೆ ( census ) ಹಿಂದೂ ದೇಶದಲ್ಲಿ ೨೨೦ ಭಾಷೆಗಳಿವೆಯೆಂದು ತಿಳಿದು ಬರುತ್ತದೆ. ನಿಜವಾಗಿ ನೋಡಿದರೆ ನಮ್ಮ ದೇಶದಲ್ಲಿ ಇಷ್ಟು ಭಾಷೆಗಳು ಇಲ್ಲವೇ ಇಲ್ಲವೆಂದು ನಿಃಸಂದೇಹವಾಗಿ ಹೇಳಬಹುದು. ಆಳರಸರು ಇಲ್ಲದ ಸಲ್ಲದ ಒಳನುಡಿಗಳನ್ನೂ ( dielects ) ಪ್ರತ್ಯೇಕ ಭಾಷೆಗಳೆಂದು ಸಾಧಿಸಿ, ಹಿಂದೂ ದೇಶದ ಭಾಷೆಗಳ ಸಂಖ್ಯೆಯನ್ನು ಹೆಚ್ಚಿಸುತ್ತಾರೆಂಬುದಕ್ಕೆ ಯಾವ ಅಭ್ಯಂತರವೂ ಇಲ್ಲ. ಇದಕ್ಕೆ ೧೯೧೧ ನೇ ಇಸವಿಯ ಖಾನೇಸುಮಾರಿಯೇ ಸಾಕ್ಷಿ. ಈ ಖಾನೇಸುಮಾರಿಯ ಲೆಕ್ಕದಂತೆ ನಮ್ಮ ದೇಶದಲ್ಲಿ ೨೨೨ ಭಾಷೆಗಳಿವೆಯೆಂದು ಮೇಲೆ ಹೇಳಿದೆ. ಅದೇ ೧೯೦೧ ನೇ ಇಸವಿಯ ಖಾನೇಸುಮಾರಿಯ ಪ್ರಕಾರ ೧೪೭ ಭಾಷೆಗಳಿದ್ದವೆಂದು ತಿಳಿದು ಬರುತ್ತದೆ. ಅಂದರೆ ಹತ್ತು ವರುಷಗಳ ಅವಧಿಯಲ್ಲಿ ೭೫ ಹೊಸ ಭಾಷೆಗಳು ಹುಟ್ಟಿದವೆಂದು ಅರ್ಥ! ಹೀಗೆ ಅನ್ನುವುದು ಶುದ್ಧ ಅವಿವೇಕವನ್ನು ಹೊರಗೆಡವಿದಂತೆಯೇ ಸರಿ. ಇನ್ನು ಕೆಲವು ವರುಷಗಳು ಹೋದರೆ, ಕನ್ನಡದಲ್ಲಿಯ 'ಧಾರವಾಡ ಕನ್ನಡ' 'ಮೈಸೂರು ಕನ್ನಡ' ಈ ಭೇದಗಳನ್ನೇ ಮುಂದೆ ಚಾಚಿ "ಧಾರವಾಡೀ ಭಾಷೆ" "ಮೈಸೂರೀ ಭಾಷೆ" ಎಂಬ ಬೇರೆ ಬೇರೆ ಭಾಷೆಗಳಿವೆಯೆಂದು ಹೇಳಲು ಸಹ ಹಿಂಜರಿಯುವ ಹೇಡಿಗಳು ನಮ್ಮ ಆಳರಸರಲ್ಲ! ಇದೇ ವಿಷಯವನ್ನು ಲಾಲಾ ಲಜಪತರಾಯರು ಬಹು ಸುಂದರವಾಗಿ ತಮ್ಮ 'ಯಂಗ ಇಂಡಿಯಾ' ಪುಸ್ತಕದಲ್ಲಿ ಹೇಳಿದ್ದಾರೆ:—

"The number of religions, sects and languages in India has been grossly exaggerated. With every census the number goes up by hundreds *though the country and the people are the same.*"

( ಸಾರಾಂಶ:— ಹಿಂದೂ ದೇಶವೂ ಹಿಂದೀಯರೂ ಒಂದೇ ಆಗಿದ್ದರೂ, ಹಿಂದುಸ್ಥಾನದಲ್ಲಿಯ ಧರ್ಮಗಳ ಪಂಥಗಳ ಮತ್ತು ಭಾಷೆಗಳ ಸಂಖ್ಯೆಯು ಮಾತ್ರ ದಿನೇ ದಿನೇ ಸರಕಾರದ ಖಾನೇ ಸುಮಾರಿಯ ಪ್ರಕಾರ ಬೆಳೆಯುತ್ತ ಹೋಗುತ್ತದೆ!)

ಈ ೨೨೦ ಭಾಷೆಗಳಾದರೋ ಎಂಥ ಮಾದರಿಯವು? ಎಂದು ವಿಚಾರಿಸಲಿಕ್ಕೆ ಹೋದರೆ ಅದೊಂದು ವಿನೋದವಾಗಿಯೇ ಪರಿಣಮಿಸುವುದು. ಸ್ವಿಝರ್‌ಲಂಡಿನಲ್ಲಿ ಜರ್ಮನ್, ಫ್ರೆಂಚ್ ಮತ್ತು ಇಟಲಿಯನ್ ಈ ಮೂರು ಭಾಷೆಗಳು ಪ್ರಚಾರದಲ್ಲಿವೆ ಎಂದು ಮೊದಲೇ ಹೇಳಿದೆ; ಇವು ಪ್ರತ್ಯೇಕವಾದ ಮತ್ತು

ಸ್ವತಂತ್ರವಾದ ಭಾಷೆಗಳು. ನಮ್ಮ ದೇಶದಲ್ಲಿಯಾದರೊ ಇಂಥ ಪ್ರತ್ಯೇಕ ಭಾಷೆಗಳ ಸಂಖ್ಯೆಯು ಹೆಚ್ಚೆಂದರೆ ೨೦ ಇರಬಹುದು. ಹಿಂದಿ, ಬಂಗಾಲಿ, ಬಿಹಾರಿ, ಉರಿಯಾ, ಆಸಾಮಿ, ರಾಜಸ್ಥಾನಿ, ಮರಾಠಿ, ಗುಜರಾಥಿ, ಪಂಜಾಬಿ, ಸಿಂಧಿ, ಪಸ್ತು, ಪಹಾರಿ, ತಮಿಳು, ತೆಲುಗು, ಕನ್ನಡ, ಮಲೆಯಾಳ ಮತ್ತು ಉರ್ದು ಇವಿಷ್ಟೇ ಹಿಂದುಸ್ಥಾನದ ೧೭ ಪ್ರತ್ಯೇಕ ಭಾಷೆಗಳು. ಜನಗಣನೆಯಂತೆ ವಿಚಾರಿಸಿದಲ್ಲಿ ಸಂಯುಕ್ತ ಅಮೇರಿಕಾ ರಶಿಯಾ, ಕೆನಡಾ, ಮುಂತಾದ ಸ್ವತಂತ್ರರಾಷ್ಟ್ರಗಳಲ್ಲಿಯಕಿಂತ ಹಿಂದುಸ್ಥಾನದಲ್ಲಿ ಭಾಷೆಗಳು ಕಡಿಮೆಯೆಂದು ವ್ಯಕ್ತವಾಗುತ್ತದೆ. ಹೀಗೆಂದ ಮೇಲೆ ಭಾರತೀಯರ ಸ್ವರಾಜ್ಯದ ಹಾದಿಯಲ್ಲಿ ಮಾತೃಭಾಷಾಪ್ರಶ್ನೆಯು ಹೇಗೆ ಅಡ್ಡ ಬರುತ್ತದೆಯೋ ದೇವರೇ ಬಲ್ಲ !

ಹಿಂದೂ ದೇಶದಲ್ಲಿ ಸಾವಿರಾರು ಭಾಷೆಗಳು ಪ್ರಚಾರದಲ್ಲಿವೆಯೆಂದು ಒಂದು ವೇಳೆ ತಿಳಿಯುವಾ. ಬ್ರಿಟಿಶರು ಇಲ್ಲದ್ದ ಮಾತ್ರಕ್ಕೆ ಈ ಎಲ್ಲ ಭಾಷೆಗಳು ನಾಶ ಹೊಂದುತ್ತವೆಯೇ ಎಂಬುದೊಂದು ವಿಚಾರ ! ನಮಗೆ ಸ್ವರಾಜ್ಯ ದೊರೆತರೆ ಈ ಭಾಷೆಗಳು ಬಸುರಾಗಿ ಮರಿ ಹಾಕುವವೋ ಹೇಗೆ ಎಂಬುದು ಇನ್ನೊಂದು ವಿಚಾರ ! ಎರಡೂ ವಿಚಾರಗಳು ಮೂರ್ಖತನದ ಪರಮಾವಧಿಗಳೇ ಹೊರತು, ಅವುಗಳಲ್ಲಿ ಹುರುಳಿಲ್ಲ. ಬ್ರಿಟಿಶರು ನಮ್ಮ ದೇಶಕ್ಕೆ ಬರುವ ಮೊದಲು ನಮ್ಮಲ್ಲಿ ಈ ಭಾಷೆಗಳು ಇರಲಿಲ್ಲವೋ ಅಥವಾ ನಮಗೆ ಸ್ವರಾಜ್ಯವು ಇರಲಿಲ್ಲವೋ ! ಎರಡೂ ಇದ್ದುವು. ಅಶೋಕ ಮಹಾರಾಜನ ಕಾಲದಲ್ಲಿ ಅನೇಕ ಪ್ರಾಕೃತ ಭಾಷೆಗಳಿದ್ದುವೆಂದು ಶಿಲಾಶಾಸನಗಳಿಂದ ಗೊತ್ತಾಗುತ್ತದೆ. ಅಕಬರನ ಕಾಲದಲ್ಲಿ ಬಹುಶಃ ಈಗಿನ ಎಲ್ಲ ಭಾಷೆಗಳು ಪ್ರಚಾರದಲ್ಲಿ ಇದ್ದೇ ಇದ್ದುವು. ಸ್ವಾತಂತ್ರ್ಯದ ತವರುಮನೆಯಾದ ವಿಜಯನಗರದ ಸಾಮ್ರಾಜ್ಯದಲ್ಲಿ ದಕ್ಷಿಣ ಹಿಂದುಸ್ಥಾನದ ಈಗಿನ ಕನ್ನಡ, ತೆಲುಗು, ತಮಿಳು, ಮಲೆಯಾಳ ಈ ಪ್ರತ್ಯೇಕ ಭಾಷೆಗಳೂ ಕೊಂಕಣಿ, ತುಳು, ಕೊಡಗಿ, ಬಡಗ ಮುಂತಾದ ಒಳನುಡಿಗಳೂ ವಿಜಯನಗರವನ್ನು ಬಿಟ್ಟು ಚೀನಾದೇಶಕ್ಕೆ ಓಡಿ ಹೋಗಿರಲಿಲ್ಲ. ಇದೇ ವಿಷಯವನ್ನು ಕುರಿತು ಘನ ಪಂಡಿತ ಲಾಲಾಜಿಯವರು ಹೀಗೆ ಬರೆಯುತ್ತಾರೆ.

"Those who plead that the Indians are too hopelessly divided by religions communities, sects, castes and *languages* to be able to form a government of their own, forget that the English have been in India only for the last century and a half and that before India governed itself."

( ಸಾರಾಂಶ: — ಹಿಂದೂ ದೇಶದಲ್ಲಿ ಅಸಂಖ್ಯ ಜಾತಿಗಳೂ, ಪಂಗಡಗಳೂ, ಭಾಷೆಗಳೂ ಇರುವುದರಿಂದ, ಭಾರತೀಯರು ಸ್ವರಾಜ್ಯಕ್ಕೆ ಅಯೋಗ್ಯರೆಂದು ಕೆಲವರು ತಿಳಿಯುತ್ತಾರೆ. ಆದರೆ, ಬರೇ ಒಂದೂವರೆ ಶತಮಾನಕ್ಕೆ ಹಿಂದೆ ಅಂದರೆ ಆಂಗ್ಲರು ಇಲ್ಲಿ ಬರುವ ಮೊದಲು, ಹಿಂದುಸ್ಥಾನವು ಸ್ವತಂತ್ರವಾಗಿತ್ತೆಂಬುದನ್ನು ಈ ಮಹಾನುಭಾವರು ಮರೆತಂತೆ ಕಾಣುತ್ತದೆ ! )

ಹಿಂದುಸ್ಥಾನದಲ್ಲಿ ಅನೇಕ ಭಾಷೆಗಳಿರುವುದರಿಂದ ಇಲ್ಲಿ ರಾಜ್ಯವಾಳುವುದು ಹಿಂದೀಯರಿಗೆ ಕಷ್ಟಕರವಾದದ್ದೆಂದು ಒಂದು ವೇಳೆ ಒಪ್ಪಿಕೊಳ್ಳೋಣ. ತಮ್ಮ ಭಾಷೆಗಳನ್ನು ಚೆನ್ನಾಗಿ ಅರಿತ ಭಾರತೀಯರಿಗೇ ಹಿಂದೂ ದೇಶವನ್ನು ಆಳುವುದು ಕಷ್ಟಸಾಧ್ಯವಾದ ಕೆಲಸವಾಗಿದ್ದ ಪಕ್ಷದಲ್ಲಿ; ಹಿಂದೂದೇಶದ ಒಂದೂ ಭಾಷೆಯನ್ನು ಎಳ್ಳಷ್ಟಾದರೂ ಬಾರದ ಆಂಗ್ಲರಿಗೆ ಅದು ಹೇಗೆ ಸಾಧ್ಯವೋ ಆ ಪುಣ್ಯಾತ್ಮರಿಗೇ ಗೊತ್ತು !

ಒಟ್ಟಿನಲ್ಲಿ ಹೇಳಬೇಕಾದರೆ, ಸ್ವರಾಜ್ಯಕ್ಕೂ ಭಾಷಾವಿವಿಧತೆಗೂ ಏನೂ ಸಂಬಂಧವಿಲ್ಲ. ದೇಶವು ವಿಸ್ತಾರವಾಗಿದ್ದರೆ, ಹೆಚ್ಚು ಭಾಷೆಗಳು ಪ್ರಚಾರದಲ್ಲಿರುವುದು ಪ್ರಪಂಚದ ಒಂದು ನಿಯಮ. ಜಗತ್ತಿನ ಎಲ್ಲ ಜನಾಂಗಗಳು ಸ್ವತಂತ್ರವಾಗಿರಬೇಕೆಂಬುದು ಮಾನವಜಾತಿಯ ಜನ್ಮಸಿದ್ಧ ಹಕ್ಕು ! ಇಂಗ್ಲಂಡಿನಂಥ ಚಿಕ್ಕದಾದ—ಒಂದು ಭಾಷೆಯಿರುವ—ರಾಷ್ಟ್ರದಲ್ಲಿ 'ಐಕ್ಯ ಸರಕಾರ' ಪದ್ಧತಿ (Unitary government) ಯಿದ್ದರೆ ಸಾಕು ಸ್ವರಾಜ್ಯವನ್ನು ಸಾಗಿಸಬಹುದು. ಸಂಯುಕ್ತ ಅಮೇರಿಕೆಯಂಥ ದೊಡ್ಡದಾದ—ಅನೇಕ ಭಾಷೆಗಳಿರುವ—ರಾಷ್ಟ್ರದಲ್ಲಿ 'ಸಾಂಘಿಕ ಸರಕಾರ' ಪದ್ಧತಿ (Federal government) ಯಿದ್ದರೆ ಸಾಕು. ಸ್ವರಾಜ್ಯವನ್ನು ನಡೆಸಬಹುದು. ಆಯಾ ದೇಶಗಳ ವಿಸ್ತಾರ, ಭಾಷಾವಿವಿಧತೆಗಳಿಗನುಸರಿಸಿ, ಸರಕಾರ ಪದ್ಧತಿಯು ಬೇರೆಯಾಗಬಹುದೇ ಹೊರತು ಸ್ವರಾಜ್ಯವು ( National independence ) ಮಾತ್ರ ಎಂದಿಗೂ ಅಸಾಧ್ಯವಾಗಲಾರದು; ಇದು ಖಂಡಿತ.

# ನನ್ನ ನಲ್ಲ

( ಗೆಳೆಯರ ಗುಂಪಿನಲ್ಲಿ ಮಧುರಚೆನ್ನನು ಬರೆದುದು )

" ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ।
ಸುಳಿಯಲಿಲ್ಲ, ಸುಳಿದು ಶೃಂಗಾರವ ಮಾಡಲಿಲ್ಲ।
ತನ್ನೊಳಗೇ ಎನ್ನ ಬಚ್ಚಿಟ್ಟನಲ್ಲಾ ॥ "

—ಬಸವಣ್ಣ

೧ನೇ ಎಸಳು

॥ ಕುಸುಮ ಷಟ್ಪದಿ ॥

ಏನಮ್ಮ ಪ್ರತಿಭೆ ನೀನೀಸುದಿನವೆಲ್ಲಿದ್ದಿ ?
ಮತ್ತೆ ಹೇಗಿಲ್ಲಿಗೇ ಮರುಳಿ ಬಂದೇ।
ದಾನಮ್ಮ ನೀನೊಲಿಯೆ ಕೊರಡು ಕೊನರುವದೆಂದೆ
ಬರಡು ಹಯನಾಗಲೂ ಬಲ್ಲದೆಂದೆ ॥ ೧ ॥

ಹಾಡಬೇಕೆಂದೇಸೊ ದಿನ ಬಯಸಿ ಬೇಡಿದರೆ
ಒಂದು ನುಡಿಯೂ ಕೂಡ ಮೂಡಲಿಲ್ಲ।
ಹಾಡಿ ಮುಗಿಸೇನೆಂದರಿಂದು ನುಡಿ ನಿಲ್ಲದಿದೆ
ನಿನ್ನೊನಪಿನೊಯ್ಯಾರ ತಿಳಿಯುದಲ್ಲಾ ॥ ೨ ॥

ಹಿಂದೆ ಬಹುದಿನ ಹಿಂದೆ ನಾನಾಗಿ ಬಂದಿದ್ದೆ
ನಿನ್ನ ಬಾಗಿಲತನಕ ಹಂಬಲಾಗಿ।
ಅಂದು ನಿನ್ನುಬ್ಬಿನಲಿ ನೀನಿದ್ದಿ ಲೆಕ್ಕಿಸದೆ
ಇಂದು ನೀನೇ ಬಂದಿ ಯಾತಕಾಗಿ ॥ ೩ ॥

ಈಸುದಿನಗಳ ಬೆಂಕಿ ಈಗಾರಿತೆಂದಿಲ್ಲಿ
ಮತ್ತೆ ನೀನಡಿಯಿಟ್ಟ ಹೌದೆ ಜಾಣೀ।
ಲೇಸಿನೊಡತಿಯು ನೀನು ಹಿಗ್ಗಿನಾ ಹಾಲುಂಡು
ಹೂವಿನಾ ಹಾಸಿಗೆಯು ತುಳಿವ ರಾಣೀ ॥ ೪ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಣನ್ನೆ ಕಾಣೋ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೫ ॥

ಹನ್ನೆರಡು ತುಂಬಿಲ್ಲ ಕನ್ನಕ್ಕಿ ನಾನಂದು
ನನ್ನ ನಲ್ಲನ ಕತೆಗೆ ಮರುಳುಗೊಂಡೆ।
ಇನ್ನೇನು ಹೇಳುವೆನು ಇಂದಿಗಿಪ್ಪತ್ತಾರು
ಈಸೊಂದು ದಿನ ಕೊರಗಿ ಗೊತ್ತುಗಂಡೆ ॥ ೬ ॥

ಹದಿನಾಲ್ಕು ವರುಷದಾ ರಾಮರಾ ವನವಾಸ
ಗರ್ಭಿಣಿಯು ನವಮಾಸ ಮೃತ್ಯುಹಾಸ।
ಕುದಿಕುದಿದು ಜೀಯುವಾ ಬರಗಾಲದುಪವಾಸ
ಮರುಗುವಾ ವಿರಹಿಣಿಯು ಊರ್ಧ್ವಶ್ವಾಸ ॥ ೭ ॥

ಜೊತೆಯಿಲ್ಲದೇ ಬೆಳೆಯೆ ಜೊತೆಯಿಲ್ಲದೇ ಉಳಿಯೆ
ಜೊತೆಯಿಲ್ಲದಾ ಬಾಳು ಗೋಳುಗೋಳು।
ಜೊತೆಯಿಲ್ಲದಾಹೊತ್ತು ನೀಗಲಾರದ ಕುತ್ತು
ಜೊತೆಯಿಲ್ಲದಿರಲೆಲ್ಲ ಹಾಳುಹಾಳು ॥ ೮ ॥

ಜೊತೆಯಿಂದಲೇ ಜಗದ ಕುಡಿಯು ಕೊನರುತಲಿಹುದು
ಜೊತೆಯಿಂದಲೇ ಮಮತೆ ಮೊಳೆಯುತಿಹುದು।
ಜೊತೆಯಾಶೆ ಜೀವರಿಗೆ ಸೃಷ್ಟಿಸಮ್ಮತ ವಿಧಿಯು
ಜೊತೆಯಿಂದಲೇ ಭಾವ ಬೆಳೆಯುತಿಹುದು ॥ ೯ ॥

ಕನ್ನಕ್ಕಿಯಿರುವನಕ ಹೆಸರುಹೇಳುವ ಹಿಗ್ಗು
ಕಂಡು ಕಾಣದ ಕತೆಯ ಕೇಳಿ ಹಿಗ್ಗು।
ಹೊನ್ನಶೂಲದ ಹರೆಯ ಹೊಮ್ಮಿ ಹೊರಚೆಲ್ಲಿದರೆ
ನಲ್ಲನಗಲಿಕೆಯಾಗ ಮನಕೆ ಕುಗ್ಗು ॥ ೧೦ ॥

ಹರೆಯ ಬಾರದ ಮುನ್ನ ಹಾಗು ಹೀಗೂ ಇದ್ದೆ
ಕರುಳು ಹಸಿಯದ ಮುನ್ನ ಕೆರಳದಿದ್ದೆ।
ಕರುಣವಿಲ್ಲದ ಬೆಂಕಿ ಕರುಳು ಕೆದರಿತು ಮುಂದೆ
ಮಂಜುಳಿದು ಮಳೆನೀರಿಗಾಶೆಗೈದೆ ॥ ೧೧ ॥

ಬಣ್ಣದಾ ಹಣ್ಣುಗಳ ತಿಂದು ತೇಗಲುಬಹುದೆ
ಚಿತ್ರದಾಮಲ್ಲಿಗೆಯ ಮೂಸಬಹುದೇ? ।
ಮಣ್ಣುಗೊಂಬೆಯ ಮೆಚ್ಚಿ ಮಾತನಾಡಿಸಬಹುದೆ
ಹೊಗೆಯುಹೊಳೆ ಯಾರ್ಯಾರೆ ಈಸಬಹುದೇ ? ॥ ೧೨ ॥

ದೇವರಾಯನ ಹೆಸರನೇಕೆ ಕೇಳಿದೆನಮ್ಮ
ನಾನೇಕೆ ನಂಜು ನುಂಗಿದೆನೆ ತಾಯಿೂ ।
ಯಾವ ಕಡೆಗೂ ಮಗ್ಗಲೂರಗುಡದಮ್ಮಯ್ಯ
ಈ ನೋವ ನಾ ತಾಳಲೆಂತೆ ತಾಯಿೂ ॥ ೧೩ ॥

ಮನೆಹತ್ತಿ ಉರಿದಲ್ಲಿ ದೂರ ಸರಿಯಲುಬಹುದು
ಮನಹತ್ತಿ ಉರಿದರೆಲ್ಲೋಡಬಹುದೋ ।
ತನುತಾಪವಿದ್ದಲ್ಲಿ ತಂಪು ತೊಡೆಯಲುಬಹುದು
ಮನದ ಕಿಚ್ಚಿನ್ನೆಂತು ನೊಂದಬಹುದೋ ॥ ೧೪ ॥

ನನ್ನ ನಲ್ಲನ ನೆನವು ಮನವ ಮುಚ್ಚಿಕ್ಕಿರಲು
ಹಗಲು ಇರುಳಾಗುವದು ತಾನೆ ಅರಿದೇ ।
ನನ್ನ ರಾಯನ ಚಿಂತೆ ಎವೆಯಿಕ್ಕಗುಡದಿರಲು
ನನಗಾಗ ಇರುಳು ಹಗಲಾಗದಿರದೇ ॥ ೧೫ ॥

ಬೇಯುವೆನು ಬಾರೆಂದೆ ನೋಯುವೆನು ಬಾರೆಂದೆ
ಸಾಯುವೆನು ಸಲುಹಬಾರೆಂದು ಕರೆದೆ ।
ತಾಯಿ ನೀ ಬಾರೆಂದೆ ತಂದೆ ನೀ ಬಾರೆಂದೆ
ಪರದೇಶಿಯನು ಪಾಲಿಸೆಂದು ಮೊರೆದೆ ॥ ೧೬ ॥

ಹಲುಬುವೆನು ಬಾರೆಂದೆ ಹಂಬಲಿಸುತಿಹೆನೆಂದೆ
ಹೊಲಬುಗೆಟ್ಟೆನು ಹೊರಳಿ ದಿಟ್ಟಿಸೆಂದೆ ।
ನೆಲೆಗೆಟ್ಟೆ ಬಾರೆಂದೆ ಬಲಗೆಟ್ಟೆ ಬಾರೆಂದೆ
ಛಲಗೆಟ್ಟೆ ಕುಲಗೆಟ್ಟೆ ರಕ್ಷಿಸೆಂದೆ ॥ ೧೭ ॥

ಮರುಗುವೆನು ಬಾರೆಂದೆ ಸೊರಗುವೆನು ಬಾರೆಂದೆ
ಕೊರಗುವೆನು ಕಾಯಬಾರೆಂದು ಕರೆದೆ ।
ನೆರಳುವೆನು ಬಾರೆಂದೆ ಹೊರಳುವೆನು ಬಾರೆಂದೆ
ಕೊರಳಾಣೆಯಿಟ್ಟಿಟ್ಟು ಚೆಲ್ಲವರಿದೆ ॥ ೧೮ ॥

ಕಲ್ಲೆದೆಯ ಕಣಿಯೆಂದೆ ಕೊರಳುಕೊಯ್ವವನೆಂದೆ
ಕರುಳು ಕರಗದ ಕುಟಿಲ ಕಟುಕನೆಂದೆ ।
ಸೊಲ್ಲಡಗಿತೇನೆಂದೆ ಛೀ ಸತ್ತೆಯೇನೆಂದೆ
ಬಲ್ಲಂತೆ ಬಾಯ್ಬಿಟ್ಟೆ ಬೈದೆ ಅಂದೆ । ೧೯ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನಲೀಲೆ
ದೇವದೇವನ ಗೂಢವಿಧಿಯು ಕಾಣೋ ॥ ೨೦ ॥

## ೨ನೇ ಎಸಳು

ನೆಲಬಗಿದು ಹುಡುಕುವೆನೆ ಮುಗಿಲೇರಿ ನೋಡುವೆನೆ
ನನ್ನ ಕರುಳಿನ ಕಿಚ್ಚು ಹೇಳಲಾರೆ ।
ಚೆಲುವ ಚೆನ್ನಿಗರಾಯನೆಲ್ಲಿ ಸಿಗಬಹುದಮ್ಮ
ಅವನ ಕಾಣದೆ ಇನ್ನು ತಾಳಲಾರೆ ॥ ೧ ॥

ಯಾವ ದೇಶಾಂತರದೊಳೆಲ್ಲಿ ನಲ್ಲನ ವಾಸ
ಕಂಡವರನೆಲ್ಲಾ ್ಯರೆ ಕಾಣಬಹುದೇ ।
ಯಾವ ಪುಣ್ಯಾತ್ಮರಾ ಕಾಲು ಹಿಡಿಯಲೆ ತಾಯಿ
ಹೇಗಾರೆ ದೊರೆಯೆನಗೆ ದೊರೆಯಬಹುದೇ ॥ ೨

ಯಕ್ಷ ರಾಕ್ಷಸರಿರಲಿ ಭೂತಬೇತಾಳರವಿರಲಿ
ದೇವಗಂಧರ್ವರ್ಯಾರಾರೆ ಇರಲಿ ।
ಲಕ್ಷಿಸಲಿ ಲಕ್ಷಿಸಲಿ ನನ್ನಮೊರೆ ಲಕ್ಷಿಸಲಿ
ರಕ್ಷಕನ ಸುದ್ದಿ ಯಾರಾರೆ ತರಲಿ ॥ ೩ ॥

ಕಣಿಯ ಕೇಳಲೆ ಮತ್ತೆ ಹೊತ್ತಿಗೆಯ ಕೇಳಲೇ
ದಿಗ್ದೇಶ ದೇಶಿಕರ ಕೇಳಲೇನೇ ? ।
ಗಣಿತಿಗಳ ಕೇಳಿದರೆ ಗುಣಿಸಿ ಹೇಳ್ಯಾರೇನೆ
ಯಾರ ಮೊರೆಹೊಗಲಿನ್ನು ಮಾಡಲೇನೇ ? ॥ ೪ ॥

ಬರುವನೆಂಬರು ಕೆಲರು ಬಾರನೆಂಬರು ಕೆಲರು
ಅಹುದು ಬಹುದೆಂದು ನೆರಳುವರು ಕೆಲರು ।
ಅರಿಯೆವೆಂಬರು ಕೆಲರು ಅರಿತೆವೆಂಬರು ಕೆಲರು
ತುಟಿಮುಚ್ಚಿ ತಲೆತೂಗುವವರು ಕೆಲರು ॥ ೫ ॥

ಇರುವನೆಂಬರು ಕೆಲವರು ಇಲ್ಲವೆಂಬರು ಕೆಲರು
ಸತ್ತು ಬಹುದಿನವಾಯಿತೆಂಬ ಕೆಲರು ।
ಬೆರಗುಬಡುವರು ಕೆಲರು ಬೆರಳುಮುರಿವರು ಕೆಲರು
ಬಲ್ಲಂತೆ ಬಾಯಿಬಡಿವವರು ಕೆಲರು ॥ ೬ ॥

ಮೇಲೆ ಕೈಮಾಡುವರು ಒಳಗೆ ಕೈತೋರುವರು
ಒಳಹೊರಗು ಬೆಳಸುತ್ತುವರು ಕೆಲರು ।
ಕಾಲುತುರಿಸುವ ಕೆಲರು ನೆಲವ ಬರೆಯುವ ಕೆಲರು .
ಎದೆಗೆ ಕೈಯಿಟ್ಟಿಟ್ಟು ಕುಣಿವ ಕೆಲರು ॥ ೭ ॥

ಗಲ್ಲಹಿಡಿಯುವ ಕೆಲರು ಗಲ್ಲಹಿಂಡುವ ಕೆಲರು
ಬೆಸನಿಸುವ ಕೆಲರು ಬೆಸರಿಸುವ ಕೆಲರು ।
ಕಲ್ಲುಗೊಳ್ಳುವ ಕೆಲರು ಹಲ್ಲುಕಿಸಿಯುವ ಕೆಲರು
ಬಲ್ಲವರು ಬಲ್ಲಂತೆ ಬಣಗುತಿಹರು ॥ ೮ ॥

ತಾಳ್ಮೆಕಲಿಸುವ ಕೆಲ್ಲರು ತಪ್ಪುಹೊರಿಸುವ ಕೆಲರು
ತಿರುತಿರುಗಿ ತಿವಿತಿವಿದು ಬಯ್ವ ಕೆಲರು ।
ತಾಳುತಪ್ಪೀರೀತಿ ಬೇತಾಳದಂತೆನ್ನ
ಗಾಳಿಸುವ ಗೋಳಿಸುವ ಖಲರು ಕೆಲರು ॥ ೯ ॥

ಆಶೆಹಚ್ಚುವ ಕೆಲರು ಆಶೆಹರಿಯುವ ಕೆಲರು
ಆಶೆತೋರಿಸಿ ಅಡ್ಡ ಎಳೆವ ಕೆಲರು ।
ಆಸರಾಗುವ ಕೆಲರು ಆಶೆಬುರುಕರು ಕೆಲರು
ಮುಖ ತಿರುವಿ ಮೂಗುಮುರಿಯುವವರು ಕೆಲರು ॥೧೦॥

ಅಣಕವಾಡುವ ಕೆಲರು ಅಣಗಿಸ್ಯಾಡುವ ಕೆಲರು
ಅನುವುಹೇಳುವ ಕೆಲರು ಅಳುವ ಕೆಲರು ।
ಕೆಣಕಿ ಕೇಳುವ ಕೆಲರು ಗುಣಿಸಿ ಗುಣುಗುವ ಕೆಲರು
ಹಣಿಕೆ ಹಾಕದೆ ಹಾದುಹೋಹ ಕೆಲರು ॥ ೧೧ ॥

ಧೈರ್ಯಹೇಳುವ ಕೆಲರು ದಿಕ್ಕುಗೆಡಿಸುವ ಕೆಲರು
ದಂಗುಬಡಿಸುವ ದಂಭದವರು ಕೆಲರು ।
ಶೌರ್ಯಕಲಿಸುವ ಕೆಲರು ಶಾನ್ತಗೊಳಿಸುವ ಕೆಲರು
ಸಾಕುಬಿಡು ಸುಮ್ಮನಿರುವೆಂಬ ಕೆಲರು । ೧೨ ॥

ಸತ್ತವರ ಮನೆಯಲ್ಲಿ ಸಂತೆ ನೆರೆಯುವ ತೆರದೆ
ಬಲ್ಲವರು ಬಲ್ಲಂತೆ ರಂಬಿಸಿದರು ।
ಸತ್ತವನ ಬದುಕಿಸುವ ಸಾಮರ್ಥ್ಯದವರಾರು
ಮಾತುಕತೆಹೇಳಿ ಮನೆಗೇಳುವವರು ॥ ೧೩ ॥

ಯಾರ ಕೇಳಿದರಿಲ್ಲ ಯಾರು ಹೇಳಿದರಿಲ್ಲ
ಯಾರ ಬಳಿಯಲಿ ಅತ್ತುಕರೆದರಿಲ್ಲ ।
ಯಾರ ಕಡೆಗೇನುಂಟು ಮೀರಿಮಿಕ್ಕಿದ ಮಾತು
ಯಾರ್ಯಾರ ಬಳಿಗು ನೆಲೆಕಾಣಲಿಲ್ಲ ॥ ೧೪ ॥

ಶಕುನಕ್ಕೆ ಸಿಕ್ಕಿಲ್ಲ ಹೊತ್ತಿಗೆಗೆ ಹೊಳೆದಿಲ್ಲ
ದಿಗ್ದೇಶಯಾತ್ರಿಗಳು ಕಾಣಲಿಲ್ಲ ।
ಅಕಟಕಟ ಗತಿಯೇನು ಮುಂದಿನ್ನು ದಿಕ್ಕೇನು
ಎಲ್ಲಿ ಮೊರೆಯಿಡಲಿನ್ನು ತಿಳಿಯದಲ್ಲಾ ॥ ೧೫ ॥

ಹರಣ ಹಾರುವ ರೋಗಿ ಕಂಡಕಸ ತಿನುವಂತೆ
ಕಂಡಕಂಡವರ ಕಾಲ್ಗೆರಗುವಂತೆ ।
ಮರಣಸಂಕಟಬಟ್ಟು ತಿರುತಿರುಗಿ ಬೇಸತ್ತೆ
ಸಿಕ್ಕುನವರು ಸಿಕ್ಕದ್ದು ಹೇಳಿದಂತೆ ॥ ೧೬ ॥

ತಿರುಗಿ ಸೊರಗಿದರಿಲ್ಲ ಮರುಗಿ ಮಿಡುಕಿದರಿಲ್ಲ
ಹುಡುಹುಡುಕಿ ಹೈರಣಿಸಿ ದಣಿದರಿಲ್ಲ ।
ಬೆರಗಾದೆ ಬೆಪ್ಪಾದೆ ಹೊಲ್ಲಾದೆ ಕುಚ್ಚಾದೆ
ನಲ್ಲನಿಲ್ಲದೆ ಜೀವ ನಿಲ್ಲದಲ್ಲಾ ॥೧೭॥

ಮಾವು ಬೇವಾಯ್ತೆನಗೆ ಸವಿಯು ಕಹಿಯಾಯ್ತೆನಗೆ
ಕೊಳು ನೀರೆನಗೆ ನಂಜಾಯ್ತೆ ತಾಯಿ ।
ಜೀವ ಸಾಕಾಯ್ತೆನಗೆ ಸಾವು ಬೇಕಾಯ್ತೆನಗೆ
ಜಗವು ಕಿಚ್ಚಿನ ಕೊಂಡವಾಯ್ತೆ ತಾಯಿ ॥೧೮॥

ನನ್ನರಸ ನನ್ನೊಡೆಯ ನನ್ನ ಜೀವದ ಜೀವ
ನನ್ನ ಮೊರೆಯಿನ್ನಾರು ಕೇಳಬಹುದೋ ।
ನಿನ್ನ ನಂಬಿದ ಬಳಿ ನಿನ್ನಾಸರಿಲ್ಲದಿರೆ
ಭವದಲ್ಲಿ ನಾನೆಂತು ಬಾಳಬಹುದೋ ॥೧೯॥

ಯಾವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥೨೦॥

## ೩ನೇ ಎಸಳು.

ನಿಲ್ಲು ನಿಲ್ಲೆಲೆ ನವಿಲೆ ನಿನ್ನ ಕಣ್ಣುಗಳೇಸು
ಕಂಣ ಬಂಣಗಳೇಸು ಎಣಿಸಲಾರೆ ।
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
ತಾಳಲಾರದು ಜೀವ ಹೇಳಬಾರೇ ॥೧॥

ಪಿಳುಕಿಸದ ಸಿರಿಗಂಣು ಸುತ್ತು ಚಿನ್ನದ ರೇಖೆ
ಬೆಳ್ಳಿಮಿರುಗಿನ ಮೈಯ ಕಾಂತಿ ನಿನಗೆ ।
ತಿಳಿಗಂಗೆ ನಿಮ್ಮವ್ವ ಮೀನಮೂರುತಿ ಹೇಳೊ
ನನ್ನೊಡೆಯನಡಗಿರುವನಾವ ಕಡೆಗೆ ॥೨॥

ಆರದಾರತಿ ಹಿಡಿದು ಹಾರುತಿರುವವಳಾರೆ
ಹೊನ್ನಿ ಏ ಹೊನ್ನಿ ನೀನಾರೆ ಬಾರೇ ।
ಯಾರಿಗಾರತಿ ಒಯ್ವಿ ಹೇಳೆ ನಾನೂ ಬರುವೆ
ನನ್ನರಸನಿದ್ದಾನು ಅಲ್ಲಿಯಾರೇ ॥೩॥

ಸಂಣದನಿಯವಳಾರೆ ನುಂಣುದನಿಯವಳಾರೆ
ಹೆಂಣುದನಿಗೈವ ಕೋಗಿಲೆಯೆ ಬಾರೇ ।
ಕಂಣು ತಪ್ಪಿಸಿದವನ ಕುರುಹು ಹೇಳೇ ತಾಯಿ
ಬನದವನು ನೀನ್ಯಾರೆ ಕರುಣ ತೋರೇ ॥೪॥

ಮಾಣಿಕದ ಮೂಗಿನವ ಮೈ ಪಚ್ಚರತ್ನದವ
ಹುಣು ಕುಕ್ಕುತ ಹಾರುವಂಣ ಬಾರೆಲೋ ।
ಜಾಣ ರಂಗಯ್ಯ ತಾ ಕಾಣದಡಗಿವನೆಲ್ಲಿ
ಗಿಣಿರಾಮ ನೀನಾರೆ ಸುದ್ದಿ ಬೀರೋ ॥೫॥

ಬೆಳದಿಂಗಳಿರುಳಲ್ಲಿ ನಟ್ಟನಡುರಾತ್ರಿಯಲಿ
ಸಪ್ಪಳಿಲ್ಲದ ಗಪ್ಪುಗಾರಿನಲ್ಲಿ ।
ಕೊಳದ ಬಾಂದಳದಲ್ಲಿ ಟುಂವ್‌ಗುಡುವ ಟಿಂವಕ್ಕಿ
ನೀನಾರೆ ಬಲ್ಲೆಯಾ ನಲ್ಲನೆಲ್ಲಿ ॥೬॥

ಬಿರುಗಂಣ ಮಲ್ಲಿಗೆಯೆ ಸರಿಯೆ ನಿನಗೀ ಮೌನ
ಕಂಣಿಲ್ಲದವರು ಕಂಡಿಲ್ಲದಿರಲಿ ।
ಸಿರಿವಂತರಾವುಗಳು ಸೊರಗಿ ಸಾಯುತಲಿರುವೆ
ಪುರುಷನೆಡೆ ಹೇಳಮ್ಮ ಪುಣ್ಯಬರಲಿ ॥೭॥

ಬಹುರಸದ ಮೊಲೆಯುಣಿಸಿ ಜೀವ ತಣಿಸುವ ತಾಯಿ
ಸರ್ವಾಧಾರ ಭೂದೇವಿ ತಾಯಿ ।
ಬಹಳ ಬೇಡುವಳಲ್ಲ ನನ್ನ ರಾಯನ ಸೊಲ್ಲ
ನೀನಾರೆ ಹೇಳಿಕೊಡಬಾರೆ ತಾಯಿ ॥೮॥

ಇಲ್ಲಿಯೂ ಮುಗಿಯದವ ಅಲ್ಲಿಯೂ ಮುಗಿಯದವ
ಎಲ್ಲಿಯೂ ಮುಗಿಯದಾಕಾಶ ತಂದೇ ।
ಎಲ್ಲಿ ನನ್ನರಸನಿಹನೆಲ್ಲಿ ನನ್ನಾಶ್ರಯವು
ಕೈವಶಗಿವೆ ಹೇಳೆನ್ನನಂತ ತಂದೇ ॥೯॥

ಎಂದಿಗೂ ಇದ್ದವನು ಎಂದಿಗೂ ಇರುವವನು
ಜ್ಯೇಷ್ಠನೇ ಶಾಶ್ವತನೆ ಕಾಲನಟನೇ ।
ಹಿಂದು ಮುಂದರಿಯದಲೆ ಕುಣಿಯುವೆನು ನಿನ್ನೊಡನೆ
ನನ್ನ ರಾಯನ ನೆಲೆಯ ತೋರು ಗಡನೇ ॥೧೦॥

ಹರಳು ಮುತ್ತಿನ ರಾಶಿ ಸೆರೆಸೂರೆ ಮುಗಿಲಲ್ಲಿ
ಅಂತರದೊಳೆತ್ತಿ ತೇಲಿಸುವ ಶಕ್ತೀ ।
ಹೊರಳಿ ನೋಡೆನ್ನ ಸ್ಥಿತಿ ಸೂರ್ಯಚಂದ್ರರ ಕಂಣು
ತೆರೆದು ನೋಡೆನ್ನ ಗತಿ ಹೇಳೆ ಯುಕ್ತಿ ॥೧೧॥

ತೀರ ಸನಿಯೆಂದರೂ ತೀರ ದೂರದೊಳಿರುವಿ
ಸಾವಿರಬ್ಜದ ಗಾವುದಂಗಳಾಚೆ ।
ತೋರಿ ನಗೆಬೀರಿ ನೀನೇನು ಹೇಳುವಿ ಚಿಕ್ಕೆ
ಏನೆಂದು ಭಾವಿಸಲಿದೇನು ಸೂಚೇ ? ॥೧೨॥

ತೋರಲಾರದ ಗಾಳಿ ತಟ್ಟಿ ತಿಳಿಸುವಿಯೇನು
ಯಾವ ನಾಡಿನ ಸೀಮೆ ತುಳಿದು ಬಂದೆ ? ।
ಮೊರಿತೆನ್ನಯ ತಾಪ ಆರಿಸೆನ್ನಯ ತಂದೆ
ನನ್ನ ರಾಯನ ಸುದ್ದಿ ಸಾರು ಇಂದೇ ॥೧೩॥

ಹಗಲು ನೆರಳಿನ ನಾರಿ ಮುಗಿಲು ಮುಚ್ಚಿದ ನಾರಿ
ಇರುಳಲ್ಲಿ ಕಗ್ಗ ಕತ್ತಲೆಯು ನಾರಿ ।
ಮಿಗಿಲು ಮಾಟದ ನಾರಿ ತೋರಿ ನಲ್ಲನ ದಾರಿ
ಕಾಳಿ ಕಿಂಕಾಳಿ ನೀ ಮರುಕುವೋ ॥೧೪॥

ನಿದ್ರಿಸುವ ಕತ್ತಲೆಯೆ ಕನಸಿಡುವ ತಿಳಿಬೆಳಕೆ
ಜಾಗೃತದ ಕಿಚ್ಚೆ ನೀನಾರೆ ಹೇಳು ।
ನಿದ್ರೆಬಾರದೆ ನಿಂತು ಸೋತು ಸಂಣಾಗಿಹೆನು
ರಾಜರಾಜನ ಠಾವ ತೋರಿಸೇಳು ॥೧೫॥

ಕಂಣು ಮುಚ್ಚಲು ಮುಂಣು ಕಂಣು ತೆರೆಯಲು ಬಂಣ
ಕಂಣಿನಾಚೆಯು ನಿನ್ನ ರೂಪವರಿಯೆ ।
ಹಂಣಾದೆ ಸುಣ್ಣಾದೆ ಸಂಣಾದೆ ಕಳವಳಿಸಿ
ಮರೆತು ಮಲಗಿದ ದೊರೆಯು ತೋರೆ ಸಿರಿಯೇ ॥೧೬॥

ಕಂಣ ಕಿಂಡಿಯ ಒಳಗೆ ಹಣಿಕೆ ಹಾಕುವ ಜಾಣೆ
ಒಳಗೆ ಜೀವದ ಬೆನ್ನುಬಡಿವ ಜಾಣೇ ।
ಕಣ್ಣುಗಾಣದೆ ನಾನು ಕೊರಗಿ ಸಂಕಟಬಡುವೆ
ಚೆಲುವ ಚೆನ್ನಿಗನೆಡೆಯ ತೋರೆ ರಾಣೀ ॥೧೭॥

ತರುವೆ ನೀ ಹೇಳೆನಗೆ ಮರವೆ ನೀ ಹೇಳೆನಗೆ
ಕಲ್ಲೆ ಕೊರಡೇ ನೆಲೆಯ ಹೇಳಿರೆನಗೆ ।
ಮೊರೆವೆ "ಕಾಮಾರ್ತಾ ಹಿ ಪ್ರಕೃತಿ ಕೃಪಣಾಶ್ಚೇತ-
ನಾಚೇತನೇಷು"ವೆಂಬಂತೆ ನಿಮಗೆ ॥೧೮॥

ನನ್ನ ಕಂಣೀರಿನಲಿ ಕಲ್ಲು ಕರಗುತಲಿಹುದು
ನನ್ನೊಡನೆ ದಿಕ್ಕು ದನಿಗುಡುತಲಿಹುದು ।
ನನ್ನ ನಿಟ್ಟುಸುರಿನಲಿ ಬನವು ಬಾಡುತಲಿಹುದು
ಕರುಳೆಂಬ ಕರುಳೇಕೆ ಕರಗದಿಹುದು ॥೧೯॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥೨೦॥

## ೪ನೇ ಎಸಳು

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥೧॥

ಬಂತು ಬಂತಲೆ ಬಂತು ಬಂತು ಘನಸಿರಿ ಬಂತು
ಬಂತೆಂದರೂ ಇದ್ದುದಿದ್ದೆಯಿತ್ತು ।
ಬಂತು ಬೆಳಗೆಂಬಂತೆ ಬಂತು ಹೊಳೆ ಬಂದಂತೆ
ಇದ್ದದ್ದು ತುಂಬಿ ತುಳುತುಳುಕುತಿತ್ತು ॥೨॥

ತುಂಬಿ ಬಂದಿತು ಕಾಂತಿ ತುಂಬಿ ಬಂದಿತು ಶಾಂತಿ
ತುಂಬಿ ದ್ಯಾವಾ ಪೃಥಿವಿ ಜೀವ ತುಂಬಿ ।
ತುಂಬಿ ತುಳುಕಿತು ಪೊಳ್ಳು ತುಂಬಿ ತುಳುಕಿತು ಜೊಳ್ಳು
ಚಡದೊಡಲ ಜಗ ಜೀವ ಜ್ಯೋತಿ ತುಂಬಿ ॥೩॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ !
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥೪॥

ದಣಿದು ಮಲಗಿದ ಗಾಳಿ ಮಿಸುಕಲಾರದ ನಸುಕು
ದಣಿವಾರಿ ಜೀವ ತಣಿದೇಳ್ವ ನಸುಕು ।
ಕುಣಿದಪ್ಪಿ ಮರಬಳ್ಳಿ ಬಿಂಕು ಬೀರುವ ನಸುಕು
ಒಳಹೊರಗೆ ಶಾನ್ತಿ ಸುರಿಸುರಿವ ನಸುಕು ॥೫॥

ನಿದ್ದೆ ಹರಿಯುವ ಹೊತ್ತು ನಸುಕು ಹರಿಯುವ ಹೊತ್ತು
ರಸವಂತಿ ಹೊಳೆಯಾಗಿ ಹರಿವ ಹೊತ್ತು ।
ಮುದ್ದು ಬೀರುವ ಹೊತ್ತು ಬೇಸರಾರುವ ಹೊತ್ತು
ಬಾಸಿಗದ ಸಿಂಗಾರಿ ಬರುವ ಹೊತ್ತು ॥೬॥

ನಸುಬಂಣದಾ ನೆಲವು ಕಿಸುಬಂಣದಾ ದಿಕ್ಕು
ನೊರೆಬಂಣ ಮುಗಿಲಸಿರಿಗೇನು ಅಲ್ಲಿ ! ।
ಹಸುಕು ಕಸುಕಿನ ಹಸುರು ಹಣ್ಣಿನಾ ಹೊಸಹಳದಿ
ನಸುಕಿನಾ ನೀಲಿ ಮುಂಜಾವಿನಲ್ಲಿ ॥೭॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥ ॥

ಬಂಣದಾ ಹಂಣುಗಳ ತಿಂದು ತೇಗಲುಬಹುದು
ಚಿತ್ರದಾ ಮಲ್ಲಿಗೆಯ ಮೂಸಬಹುದು ।
ಮಂಣುಗೊಂಬೆಯ ಮೆಚ್ಚಿ ಮಾತನಾಡಿಸಬಹುದು
ಹೊಗೆಯ ಹೊಳೆ ಈವಾಗ ಈಸಬಹುದು ॥೯॥

ಮನದ ಮಂದಾರವನು ಮೂಸಲಾರೆವು ನಾವು
ಕನಸಿನಾ ಕಲ್ಹಾರ ಮೂಸದಿಹೆವೇ ।
ಮನದ ಮಂಜಿನ ಮಡುವ ಕನಸು ಕಲ್ಲಾಗಿಸದೆ
ಮನಸು ಕನಸಾದಲ್ಲಿ ಮುಸುಕಿನಿರವೇ ? ॥೧೦॥

ಹಗಲುಗನಸಿನ ಸವಿಯು ಇರುಳುಗನಸಿಗೆ ಬಹುದೆ
ಇರುಳಿನದು ಇಲ್ಲದಾ ಸಂತೆ ಕಾಣೋ ।
ನಗುನಗುತಲೂ ಕನಸು ನೋಡನೋಡುತೆ ಕನಸು
ಬಿಸಿಲಲ್ಲೆ ಬೆಳತಿಗೆಯ ಗುಂತಿ ಕಾಣೋ ॥೧೧॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥೧೨॥

ಸುತ್ತು ಮುತ್ತೂ ಸ್ಪರ್ಶ ಒಳಗು ಹೊರಗೂ ಸ್ಪರ್ಶ
ಕೆಳಗು ಮೇಲೂ ಸ್ಪರ್ಶ ಮಧುರಸ್ಪರ್ಶ ।
ಅತ್ತ ಹೊರಳಲು ಸ್ಪರ್ಶ ಇತ್ತ ಹೊರಳಲು ಸ್ಪರ್ಶ
ಎತ್ತೆತ್ತಲೂ ಸ್ಪರ್ಶ ದಿವ್ಯಸ್ಪರ್ಶ ॥೧೩॥

ಹೇಳಿ ತಿಳಿಯದ ಸ್ಪರ್ಶ ಕೇಳಿ ತಿಳಿಯದ ಸ್ಪರ್ಶ
ಉಂಡು ಉಸುರುವ ಸ್ಪರ್ಶ ಕಂಡ ಸ್ಪರ್ಶ ।
ಗೋಳಿಡುವ ಜೀವಕ್ಕೆ ಸಂಜೀವನದ ಸ್ಪರ್ಶ
ರಂಜನೆಯ ಕತೆಯಲ್ಲ ರೋಮಹರ್ಷ ॥೧೪॥

ಸಾಲದಾಯಿತು ಚಿತ್ತ ತುಂಬಿ ರಸ ತುಳುಕಿತ್ತು
ಸಾಕು ಸಾಕಾಯಿತ್ತು ಸ್ಪರ್ಶಪಾನ ।
ತೇಲಿ ನಡೆಯಿತು ಜೀವ ಮೇಲ ಮೇಲಕೆ ಮತ್ತೆ
ಕೇಳಕೇಳುತೆ ದಿವ್ಯಸ್ಪರ್ಶತಾನ ॥೧೫॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥೧೬॥

ಜೀವ ದೇಹದೊಳೆಲ್ಲಿ ಮೈಬಗಿದು ನೋಡಿದರೆ ?
ಅಲ್ಲೇನು ಅಸ್ಥಿಮಾಂಸಗಳ ಗೂಡು ।
ದೇವ ಜಗದೊಳಗೆಲ್ಲಿ ಮುಗಿಲೇರಿ ನೋಡಿದರೆ ?
ಅಲ್ಲೇನು ಗ್ರಹತಾರಕೆಗಳ ಬೀಡು ॥ ೧೭ ॥

ಜಗದ ಜೀವವೆ ದೇವ ಜಗವೆ ದೇವನ ದೇಹ
ಜೀವವಿರದಲ್ಲಿ ಜೀವನದ ಸೆಲೆಯೇ ? ।
ಜಗದಾತ್ಮ ಜಗದೀಶ ಆತ್ಮಗಳ ಮೂಲಾತ್ಮ
ಪರಮಾತ್ಮ ನಿನಗೊಂದು ಬೇರೆ ನೆಲೆಯೇ ? ॥ ೧೮ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥ ೧೯ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಣಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೨೦ ॥

೫ ನೇ ಎಸಳು

ತಿದೆ ನೀ ಕಣ್ತೆರೆದರಂದಿಗರುಣೋದಯವು
ಮುಂದೆ ಸೂರ್ಯೋದಯದ ಚಿಂತೆಯಿಲ್ಲ ।
ಹಿಂದೆ ಕತ್ತಲೆಯಲ್ಲಿ ಕಂಗೆಟ್ಟು ಕೊರಗಿದೆನು
ಇಂದೊಳಗು ಹೊರಗು ಬೆಳಗಾಯಿತಲ್ಲ ॥ ೧ ॥

ಈಸುದಿನ ಕಂಡಿದ್ದೆ ಬಾಗಿಲಿಲ್ಲದ ಕೋಟೆ
ಇಂದು ಬಾಗಿಲುಕೋಟೆಯಾಯಿತಲ್ಲ ।
ಈಸೀಸಿ ದಣಿದಣಿದು ಕೊನೆಗೆ ದಂಡೆಯ ಕಂಡೆ
ಇಂತು ದೇವನ ರಾಜ್ಯ ಲಭಿಸಿತಲ್ಲ ॥ ೨ ॥

ತಲೆಯ ಮೇಲಿನ ಗುಡ್ಡ ತೆಳಗೆ ತಾನಿಳಿಯಿತ್ತು
ಕಂಗೆಡಿಸುವಾ ಕಾಡು ಕಿತ್ತಿತಯ್ಯಾ ।
ಬಲು ದಿನದ ಕಾಲ್ತೊಡಕು ಕಳಚಿ ಹೋಯಿತ್ತಯ್ಯ
ಹರಸಿದಾ ಹರಕೆ ಕೈಗೂಡಿತಯ್ಯಾ ॥ ೩ ॥

ಉರಿವ ಕಿಚ್ಚಿನ ಕೊಂಡ ಹರಿವ ಹೊಳೆಯಾಯಿತ್ತು
ಕೊರೆವ ಕರಗಸ ಕೊರಳಸರವಾಯಿತು ।
ಪರಿಪರಿಯ ಬಸುರ ಬೇನೆಯು ತಪತಡಿಯೆಲ್ಲ
ಹಡೆವ ಹಿರಿಹಿಗ್ಗಿನಲಿ ಮರವಾಯಿತು ॥ ೪ ॥

ನಟ್ಟ ಮುಳ್ಳಿಂತೊಮ್ಮೆ ಕಿತ್ತಿ ಹೋಯಿತ್ತಯ್ಯ
ಪಟ್ಟ ಪರಿಪರಿ ಕಷ್ಟ ಫಲಿಸಿತಯ್ಯಾ ।
ಬೆಟ್ಟಕ್ಕೆ ಕಲ್ಲು ಹೊತ್ತಂತಿತ್ತು ಬಾಳುವೆಯು
ಕೊರಡಿನೊಳೆ ಕೊನರು ಫಲಫಲಿಸಿತಯ್ಯಾ ॥ ೫ ॥

ಜೀವದಲ್ಲೆನಿಸಿದ್ದು ಬುದ್ಧಿಗೊಡಮೂಡಿದ್ದೆ
ಭಾವಯೋಗದ ಸಿದ್ಧಿ ಬೇರೆಯಿಹುದೇ ।
ಮಾವುತನ ಗೋಚರಣೆ ಮದಗಜನ ಆಚರಣೆ
ಮೇಳವಿಸದಿರೆ ಗೊತ್ತುಗಾಣಬಹುದೇ ? ॥ ೬ ॥

ಮನವು ಕುಣಿದೇನು ಫಲ ತನುವು ನೆಲ ಹಿಡಿದಿರಲು
ಹೋಗಬೇಕೆಂದಲ್ಲಿ ಹೋಗಬಹುದೇ ? ।
ಅನಿಸಿಕೆಗೆ ಫಲವುಂಟೆ ಎಣಿಕೆಗೊಪ್ಪುವ ತನಕ
ಸಾಗಬೇಕೆಂದಂತೆ ಸಾಗಬಹುದೇ ? ॥ ೭ ॥

ಒಲವು ತಾನೊಂದು ಕಡೆ ಓಟವಿನ್ನೊಂದು ಕಡೆ
ನೋಟವೆಲ್ಲಾ ಬಿಟ್ಟು ಬೇರೆ ಕಡೆಗೇ ।
ಗೆಲವು ತಾನೆಲ್ಲಿಯದೊ ನೆಲೆಯೆ ಹತ್ತದ ಬಳಿಕ
ಪ್ರಾಣಸಂಕಟವೊಂದೆ ಕಟ್ಟಕಡೆಗೆ ॥ ೮ ॥

ಒಂದು ಕಾಲೊಂದು ಕಡೆಗಿನ್ನೊಂದು ಬೇರೆ ಕಡೆ-
ಗಿಂಥ ಪರಿಯಲಿ ಹೆಜ್ಜೆ ಹಾಕಬಹುದೇ ? ।
ಒಂದಾಗಿ ಭಾವಬುದ್ಧಿಗಳು ಮುಂದರಿವನಕ
ಜೀವನಕೆ ಜೀವ ಜೀವಾಳವಿಹುದೇ ॥ ೯ ॥

ಅನಿಸಿದನಿಸಿಕೆಯನ್ನೆ ದಿಟವೆಂದು ನಂಬುವರೆ
ಅನಿಸಿಕೆಯ ತಳಹದಿಯೆ ಗಟ್ಟಿಯಲ್ಲ ।
ಮನದ ಮನನದ ಸೂಕ್ಷ್ಮ ಸಂಸ್ಕಾರವನಿಸಿಕೆಯು
ಮನನಕ್ಕೆ ಸತ್ಯದಾ ಭೆಟ್ಟಿಯಿಲ್ಲ ॥ ೧೦ ॥

ಸತ್ಯವೋ ಮಿಥ್ಯವೋ ಯಾವದೂ ಅರಿಯದಲೆ
ಕೇಳಿಕೆಯ ನೆರೆನಂಬಿ ನೆನೆಯುತಿರಲು ।
ಸತ್ಯವೆಂದನಿಸುವದು ಸತ್ಯವಲ್ಲದ ಮಾತು
ಶ್ರದ್ಧೆಯಾ ಸತ್ಯಕ್ಕೆ ಇಷ್ಟೆ ಹುರುಳು ॥ ೧೧ ॥

ತರ್ಕಿಸಿದ ಕಲ್ಪನೆಯು ದಿಟವೆಂದು ನಂಬುವರೆ
ತರ್ಕಕ್ಕೆ ನಿಶ್ಚಯಾ ನೆಲೆಯೆ ಇಲ್ಲ ।
ತರ್ಕಕ್ಕೆ ಹೊಸ ತರ್ಕ ಹೊಡೆದೋಡಿಸುವದಯ್ಯ
ತರ್ಕಾತೀತ ಸತ್ಯಕ್ಕೆ ತೋರೆಯಿಲ್ಲ ॥ ೧೨ ॥

ಭಾವಬುದ್ಧಿಗಳೆರಡೆ ತಿಳುವಳಿಕಾಧಾರ
ಭಾವಕ್ಕೆ ಬುದ್ಧಿಯೇ ಬಾಹ್ಯನೇತ್ರ ।
ಭಾವಕೊಲಿಯದ ಬುದ್ಧಿ ಬುದ್ಧಿಗೊಲಿಯದ ಭಾವ
ಇಲ್ಲಿ ಕಾಣಯ್ಯ ಸಂದೇಹಸೂತ್ರ ॥ ೧೩ ॥

ಯುಕ್ತಿಗದು ಯುಕ್ತವೆಂದೆನಿಸಿದ್ದೆ ಅನಿಸಿಕೆಯು
ಅನಿಸಿಕೆಗೆ ಯುಕ್ತವಾದದ್ದೆ ಯುಕ್ತಿ ।
ಶಕ್ತಿಯಿಲ್ಲೆರಡರೊಳಗೊಂದು ಬಿಟ್ಟೊಂದಕ್ಕೆ
ನೆರೆತು ಬೆರೆತಲ್ಲೆ ಜೀವನದ ಶಕ್ತಿ ॥ ೧೪ ॥

ಬೀಜದಿಂದಲೆ ಬಳ್ಳಿ ಬಳ್ಳಿಯಿಂದಲೆ ಬೀಜ
ಭಾವಬುದ್ಧಿಗಳ ಪರಿಯಿಂಥದಯ್ಯಾ ।
ಸೋಜಿಗದ ಮಾತೇನು ? " ತಿಳಿಯುವುದು ತೀರುತಲೆ
ತಿಳಿವು ಮೈದಾಳುವದು " ಸತ್ಯವಯ್ಯಾ ॥ ೧೫ ॥

ಬಗೆಬಗೆಯ ಘಟನೆಗಳನೊಂದೊಂದೆ ನಿಶ್ಚಯಿಸಿ
ಒಂದೊಂದಕೊಂದೊಂದು ಅರ್ಥಯಿಸುತಾ ।
ಜಗದ ನಿಚ್ಚಣಿಕೆಯನು ತತ್ತರಿಸುತೇರುವೆವು
ಒಂದರಿಂದೆತ್ತಿಯಡಿಯೊಂದಕಿಡುತಾ ॥ ೧೬ ॥

ಅನಿಸಿಕೆಯ ಮರ್ಯಾದೆ ಗುಣಿಸುತ್ತ ಸಾಗುವುದೆ
ಅನುಭವದ ಅಧ್ಯಾತ್ಮಯೋಗವಯ್ಯಾ ।
ಎಣಿಸಿಕೆಯ ಹರಿಗಡಿದು ಅನಿಸಿಕೆಯ ಝರಿಯೊಡೆದು
ಶಾಂತಿಯೊಡನೂಡಿದ್ದೆ ಸಿದ್ಧಿಯಯ್ಯಾ ॥ ೧೭ ॥

ಬುದ್ಧಿ ಭಾವದ ಸೀಮೆ ಇಲ್ಲಿಗಾಯಿತ್ತಯ್ಯ
ಮುಂದೆ ದೇವನ ದಿವ್ಯ ರಾಜ್ಯವಯ್ಯಾ ।
ಇದ್ದಷ್ಟು ಹಮ್ಮೆಲ್ಲ ಹಂಬು ಹಂಣಾಗುತಲೆ
ಕೈಮುಗಿದು ಶರಣು ಶರಣೆಂಬುದಯ್ಯಾ ॥ ೧೮ ॥

" ಬುದ್ಧಿಯೇ ಬಾಧಕವು ಬುದ್ಧಿಯೇ ಸಾಧಕವು "
ಬುದ್ಧಿಯೇ ಮಾನವನ ಭಿತ್ತಿಯಯ್ಯಾ ।
ಬುದ್ಧಿಯಿಂದಲೆ ಭಾವ ಬೀಳುತೇಳುತೆ ಸಾಗಿ
ನಿಷ್ಠೆ ನಿಬ್ಬೆರಗಾಗಿ ನಿಲುವದಯ್ಯಾ ॥ ೧೯ ॥

" ಆದಿಯಾಧಾರ ಘನ ಘನ ವೇಧಿಸುವುದೆ ಮನ
ಮನವು ಮಹದಲ್ಲಿ ನಿಂತದ್ದೆ ಭಕ್ತಿ । "
ಓದುವಾದಗಳೆಲ್ಲ ಶಕ್ತಿಯುಕ್ತಿಗಳೆಲ್ಲ
ಮುಗಿದು ನಿಜ ನಿಂತದ್ದೆ ಭಾವಮುಕ್ತಿ ॥ ೧೦೦ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಣನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೧೦೧ ॥

## ಕೊನೆಯ ನುಡಿ

" ಮೊಲೆಯ ಮೇಲಿರ್ದ ಯೋಗಿಗಳುಂಟು ಲೋಕದಲಿ
ಶಿಲೆಯ ಮೇಲಿರುತಿರುವ ಮೋಹಿಯುಂಟು । "
" ಬಳಸಿದಾ ಬ್ರಹ್ಮಚಾರಿತ್ವ ಉಂಡುಪವಾಸ "
ನಮಗಿದೇ ಇಂದು ಬೇಕಾದ ಗಂಟು ॥

ಓಂ

ಶಾನ್ತಿಃ ಶಾನ್ತಿಃ ಶಾನ್ತಿಃ

---

## ಮೈಲನ

ನೀನೆನ್ನ ಕರೆದ ನುಡಿ
ಬಾನುದ್ದ ನೆಗೆದೋಡಿ
ಗಾನಪೂರದಿ ಸಿಡಿದು ಹೋಯ್ತು

ವೇದಾಂತ ಗುಳುಗುಳಿಸಿ
ವಾದಾಂತ ಬೊಬ್ಬುಳಿಸಿ
ಬೋಧವದೊ ಎದೆಗೊಳ್ಳದಿಹುದು

ಓರೆ ನೋಟದಿ ನೀನು
ಬಾರೆಂಬ ಸನ್ನೆಯನು
ತೋರುತಿರೆ ಹೊಸಚಿಗುರ ಸುಗ್ಗಿ

ಗವಸಣಿಸಿ ಮರೆಮಾಡಿ .
ಕವಿದು ಹುಸಿಯನು ಕೂಡಿ
ಜವಗೆಡಿಪುದೆನ್ನೆದೆಯ ಮುಸುಕಿ

ಚುಂಬನಕೆ ನೀ ಮೊಗವ
ಮುಂಬರಿಸಿ ರಸದೊಸರ
ಕೊಂಬೆಯೆಂಬಾಸೆ ಯರಳಿಡರೆ

ಮೂಡಣಾಗಸದತ್ತ
ಓಡಿಕೊಂಬುದು ಮುತ್ತ
ಬೀಡುಂಟೆ ನಮ್ಮ ಮೇಳನಕೆ !

ನೀನು ದೂರದೆ ನಿಂತು
ಮೌನದೊಳೆ ಮುನಿಸಾಂತು
ಕೋರಿಸುವೆ ಸಂಜೆಗೆಂಪುಗಳ

ಬಳಕು ತಳುಕುತೆ ಬಂದು
ಇಳೆಯ ನೆಳಲಲಿ ನಿಂದು
ಕಳುಹಿಸಿಹೆ ನಿನ್ನಪಡಿ ನೆಳಲ

— ಕಡೆಂಗೋಡ್ಲು ಶಂಕರಭಟ್ಟ

# ತರುಣ ಕರ್ನಾಟಕ



**ಪ್ರೊ. ನಂದೀಮಠ,**
**M. A., P. H. D., ಅವರು**

ಶ್ರೀ ನಂದೀಮಠರವರು ಇದೇ ತಿಂಗಳ ಇಂಗ್ಲಂಡಿನಲ್ಲಿ ಭಾಷೆಗಳಲ್ಲಿ P. H. D. (London) ಪದವಿಯನ್ನು ದೊರಕಿಸಿಕೊಂಡು ಮಾತೃಭೂಮಿಗೆ ಬಂದಿದ್ದಾರೆ. ಇವರು ಧಾರವಾಡದ ಕರ್ನಾಟಕಕಾಲೇಜಿನಿಂದ M.A. ಆಗಿ ಕೆಲ ದಿವಸ ಕೊಲ್ಹಾಪುರದ ರಾಜಾ ರಾಮ ಕಾಲೇಜದಲ್ಲಿ ಪ್ರೊಫೆಸರರಿದ್ದರು. ಮುಂದೆ ಉಚ್ಚ ಶಿಕ್ಷಣಕ್ಕಾಗಿ ಇಂಗ್ಲಂಡಕ್ಕೆ ಹೋಗಿ ಇದೇ ಮರಳಿದ್ದಾರೆ. ಇವರು ವೀರಶೈವ ತತ್ವಜ್ಞಾನದ ಅಭ್ಯಾಸವನ್ನು ಚೆನ್ನಾಗಿ ಮಾಡಿದವರಿದ್ದಾರೆ. ಕರ್ನಾಟಕ ಮಾತೆಯು ಈ ಸುಪುತ್ರರಿಗೆ ಸುಸ್ವಾಗತವು.

ಈ ವಿದ್ಯಾರ್ಥಿಗಳು ನೈಜಾಂ ಕರ್ನಾಟಕದ ಯಾದಗಿರಿಯಲ್ಲಿನ ಸಂಸ್ಕೃತದ ಕಾಲೇಜಿನ ವತಿಯಿಂದ ಈ ವರ್ಷ ಕಲಕತ್ತಾ ವಿಶ್ವವಿದ್ಯಾಲಯದ ಸಂಸ್ಕೃತ ಪಂಡಿತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿದ್ದಾರೆ. ನಡುವೆ ಕುಳಿತವರು ಅವರ ಗುರುಗಳಾದ ಹಾಗೂ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ. ಚಂದ್ರಶೇಖರ ಶಾಸ್ತ್ರಿಗಳವರು.



**ಯಾದಗಿರಿಯ ಸಂಸ್ಕೃತ ಕಾಲೇಜದ ಗುರುಸಹಿತ ವಿದ್ಯಾರ್ಥಿವೃಂದವು**

# 'ಆಕಾಶವಾಣಿ'



## (Wireless Telephony)

ಲೇಖಕರು— ಶ್ರೀ. ಎಚ್. ಸಂಜೀವರಾಯರು, ಬೆಂಗಳೂರು

ಕಳೆದ ೫೦ ವರ್ಷಗಳಲ್ಲಿಯು ದೈನಿಕ ಜೀವನಕ್ರಮದಲ್ಲಿ ಪ್ರಚಾರಕ್ಕೆ ಬಂದಿರುವ ವಿಜ್ಞಾನವೈಚಿತ್ರ್ಯಗಳು ಜನರ ಸೌಕರ್ಯಗಳನ್ನು ಎಷ್ಟರಮಟ್ಟಿಗೆ ಹೆಚ್ಚಿಸಿವೆಯೆಂದರೆ ಹಿಂದಿನ ಕಾಲದ ಸಾರ್ವಭೌಮರೂ ಕೂಡ ಪಡೆದ ದೈನಿಕ ಸುಖಗಳಿಗಿಂತ ಈಗಿನ ಓರ್ವ ಸಾಮಾನ್ಯ ವ್ಯಕ್ತಿಯು ಸುಖಜೀವನವೇ ಮಿಗಿಲು. ಈ ನವಶೋಧನಗಳಲ್ಲಿ ಆಕಾಶವಾಣಿಯೂ ಒಂದು. ಅಮೇರಿಕಾ, ಅಂಗ್ಲಾಳ, (ಇಂಗ್ಲಂಡ) ಮತ್ತಿನ್ನಿತರ ನಾಗರೀಕ ದೇಶಗಳಲ್ಲಿ ಕೋಟಿಗಟ್ಲೆ ಜನರು ತಮ್ಮ ಗೃಹಗಳಲ್ಲೇ ಕುಳಿತು ಆಕಾಶವಾಣಿಯನ್ನು ಕೇಳಿಸುವ ಯಂತ್ರಗಳ (Wireless Receiving set) ಸಹಾಯದಿಂದ ದಿಗ್ದೇಶಗಳ ಉತ್ಕೃಷ್ಟ ಗಾಯಕರ ಇಂಪಾದ ಹಾಡುಗಳನ್ನೂ ವಿಶ್ವವಿದ್ಯಾಲಯ ಪಂಡಿತರ ಅರ್ಥಗರ್ಭಿತ ಭಾಷಣಗಳನ್ನೂ ನಿತ್ಯ ಕೇಳುತ್ತಿರುವರು. ಹಗಲೆಲ್ಲಾ ಬಳಲಿ ಬಂದವರ ದಣುವನ್ನಾರಿಸಲಿಕ್ಕೂ ಅವರ ಮಾನಸಿಕ ವಿಕಾಸವನ್ನಭಿವೃದ್ಧಿ ಸಲಿಕ್ಕೂ ಈ ಗಾಯನಗಳು ಎಷ್ಟೊಂದು ಸಹಕರಿಸುತ್ತಲಿವೆಯೆಂದು ನಾವೇ ಊಹಿಸಬಹುದು. ಸದ್ಯದಲ್ಲಿಯೇ ಹೀಗೆ ಬರೇ ಕಿವಿಗೊಡುವದಲ್ಲದೇ ಅಲ್ಲಲ್ಲಿ ಜರಗುವ ದೃಶ್ಯಗಳೂ ಕೂಡಾ ಕಣ್ಣಿಗೆ ಗೋಚರವಾಗುವ ದಿನಗಳೂ ಬರಲಿವೆ.

**ನಮ್ಮ ದೇಶದ ವಿಚಾರ:**—ನಮ್ಮ ಹಿಂದೂ ದೇಶದಲ್ಲಿ ಮಾತ್ರ ನಾವು ಈ ವಿಷಯದಲ್ಲಿ ಹಿಂದುಳಿದಿದ್ದೇವೆ. ಬೊಂಬಾಯಿ, ಕರಾಚಿ, ಕಲಕತ್ತಾ, ಮದರಾಸು ಮೊದಲಾದ ದೊಡ್ಡ ನಗರಗಳಲ್ಲಿ ಪರದೇಶಗಳೊಡನೆಯೂ ಸಮುದ್ರದಲ್ಲಿ ಚಲಿಸುತ್ತಿರುವ ಹಡಗಗಳೊಡನೆಯೂ ಸಮಾಚಾರ ವ್ಯವಹಾರವನ್ನು ಬೆಳೆಸುವರೇ ಅಲೆಯಂಚೆಯ ಕಾರ್ಯಾಲಯಗಳನ್ನು (Wireless Telegraph Stations) ಸರಕಾರದವರು ಸ್ಥಾಪಿಸಿರುವರು. ಇವಲ್ಲದೇ ದಿನಂಪ್ರತಿ ವಾಧ್ಯರವಾದ ದೇಶೀಯ ಮತ್ತು ಇಂಗ್ಲಿಷ ಹಾಡುಗಳನ್ನು ವಾತಾವರಣದಲ್ಲಿ ಪ್ರಸರಿಸಲಿಕ್ಕೆ ಕಲ್ಕತ್ತೆ ಮತ್ತು ಬೊಂಬಾಯಿಯಲ್ಲಿ "Indian Broadcasting Company" ಎಂಬ ಸಂಘದವರು ತಮ್ಮ ಕಾರ್ಯಾಲಯಗಳನ್ನು ಕೆಲವು ವರ್ಷಗಳ ಹಿಂದೆ ಸ್ಥಾಪಿಸಿದರು. ಆದರೆ ದೇಶದಲ್ಲಿ ಬರೇ ೮೦೦೦ ಮಂದಿ ಈ ಕೇಳಿಸುವ ಯಂತ್ರಗಳನ್ನು ಪಡೆದುದರಿಂದ ಜನತೆಯ ಸಹಾನುಭೂತಿಯ ಕೊರತೆಯಿಂದ ಸಂಘದವರಿಗೆ ಬಹಳ ನಷ್ಟವಾದುದರಿಂದ ಕಳೆದವರ್ಷದಿಂದ ಸರಕಾರದವರೇ ಈ ಎರಡೂ ಕಾರ್ಯಾಲಯಗಳನ್ನು ನಡೆಸಿಕೊಂಡು ಬಂದಿರುವರು. ಇನ್ನೂ ಆಕಾಶವಾಣಿಯು ನಮ್ಮಲ್ಲಿ ಪೂರ್ಣ ಪ್ರಚಾರದಲ್ಲಿ ಬರಲಿಲ್ಲ. ಅದರ ತತ್ವವನ್ನು ಅರಿತವರೂ ವಿರಳ.

**ಅಲೆಗಳು:**—ಶಬ್ದವು ಒಂದೆಡೆಯಿಂದ ಇನ್ನೊಂದೆಡೆಗೆ ಅಲೆಗಳ ರೂಪದಲ್ಲಿ ಹೇಗೆ ಚಲಿಸುತ್ತದೊ ಅದೇ ತರದಲ್ಲಿ ಆಕಾಶವಾಣಿಯೂ ತರಂಗಗಳಲ್ಲಿ ಚಲಿಸಿ ಸರಿಗೆ (Wire ತಂತಿ)ಯ ಸಂಬಂಧವಿಲ್ಲದೆ ಬೇಕಾದಕಡೆ ಚಲಿಸಬಲ್ಲದು. ಪ್ರಶಾಂತವಾದ ಸರೋವರದ ನಡುವೆ ಕಲ್ಲುಗಳನ್ನು ಒಂದರಮೇಲೊಂದೆಸೆದರೆ ನೀರಿನಲ್ಲಿ ತೆರೆಗಳು ಹುಟ್ಟಿ ದಡದ ಕಡೆಗೆ ವರ್ತುಲಾಕಾರದಲ್ಲಿ ಹಬ್ಬಿ ಚಲಿಸುತ್ತವೆ. ಇದೇ ತರದಲ್ಲಿ ಒಂದು ಗಂಟೆಯನ್ನು ಬಾರಿಸಿದಾಗ ಅದರ ಕಂಚಿನ ಬದಿಗಳು ಹೊಡೆತದಿಂದ ಕಂಪಿಸಿ, ಗಾಳಿಯಲ್ಲೂ ಇದೇ ತರದ ತರಂಗಗಳನ್ನು ಹುಟ್ಟಿಸುತ್ತವೆ. ಗಾಳಿಯು ಅಗೋಚರವಾದುದರಿಂದ ಈ ಅಲೆಗಳು ನಮಗೆ ಕಾಣಿಸುವುದಿಲ್ಲ. ಅಲೆಗಳು ನಿಮಿಷಕ್ಕೆ ೧೧೭೦ ಗಜಗಳ ವೇಗದಿಂದ ಎಲ್ಲಾ ದಿಕ್ಕುಗಳಿಗೂ ಗೋಲಾಕೃತಿಯಲ್ಲಿ ಹಬ್ಬುತ್ತವೆ. ಗಂಟೆಯ ಬದಿಗಳು ನಿಮಿಷಕ್ಕೆ ೪೦೦ ಬಾರಿ ಕಂಪಿಸಿ ೪೦೦ ಅಲೆಗಳನ್ನು ಹುಟ್ಟಿಸುವುದಾದರೆ ಎರಡೆರಡು ಅಲೆಗಳ ನಡುವೆ ೧೧೭೦/೪೦೦ ಗಜಗಳ ಉದ್ದವಿರಬೇಕು. ಈ ಉದ್ದವನ್ನು ತರಂಗಾಂತರವೆಂದು (Wave length) ಕರೆಯುವರು. ಗಂಟೆಯು ಹೆಚ್ಚು ಬಾರಿ ಕಂಪಿಸಿದರೆ ಅಲೆಗಳ ತರಂಗಾಂತರವೂ ಕಡಿಮೆಯಾಗಿ ಸ್ವರದ ತಾಳವು (Pitch) ಏರುತ್ತದೆ. ಆದುದರಿಂದ ಒಂದೊಂದು ತರಂಗಾಂತರದ ಅಲೆಗಳ ಶಬ್ದಕ್ಕೆ ಒಂದೊಂದು ತಾಳವಿರುವುದರಿಂದ ಬೇರೆ ಬೇರೆ ತರಂಗಾಂತರಗಳ ಧ್ವನಿಗಳ ಗುರುತನ್ನು ಮಾಡಿಕೊಳ್ಳಬಹುದು.

**ಕೇಂದ್ರೋದ್ಭವ ತರಂಗ:— Radio Waves.** ಈ ಭೂಗೋಳದ ಸುತ್ತಲಿರುವ ಅನಂತವಾದ ಆಕಾಶದಲ್ಲಿ ಪದಾರ್ಥಶೂನ್ಯ ( Ether ) ವೆಂಬುದೊಂದು ವ್ಯಾಪಿಸಿ ಕೊಂಡಿದೆ. ವಿದ್ಯುತ್ಶಕ್ತಿಯಿಂದ ಪದಾರ್ಥಶೂನ್ಯದಲ್ಲಿ ಒಂದು ಬಗೆಯ ಕೇಂದ್ರೋದ್ಭವ ತರಂಗಗಳನ್ನು ಹುಟ್ಟಿಸಿ ಇವುಗಳ ಮೂಲಕ ಧ್ವನಿಯನ್ನು ಒಂದು ಕಡೆಯಿಂದ ಇನ್ನೊಂದೆಡೆಗೆ ಸಾಗಿಸಲಿಕ್ಕೆ ಸಾಧ್ಯವಿದೆ. ಒಂದು ವಿದ್ಯುದ್ಘಟಮಾಲೆಯ ವರ್ತುಲದಲ್ಲಿ ( In the circuit of an electric battery) ನಡುವೆ ಒಂದು ಎಡೆಯಿದ್ದರೆ (gap) ವಿದ್ಯುಚ್ಛಕ್ತಿಯು ಪ್ರವಹಿಸುತ್ತಿರುವಾಗ ಎಡೆಯ ಮೇಲಿಂದ ವಿದ್ಯುತ್ಕಣಗಳು ( Electric spark ) ಹಾರುತ್ತವೆ. ಪ್ರವಾಹದ ದಿಕ್ಕನ್ನು ಪ್ರತಿಕ್ಷಣ ಬದಲಾಯಿಸಿದರೆ ಕಣಗಳು ಸರ್ತಿಯ ಮೇಲೆ ಮುಂದೊಮ್ಮೆ ಹಿಂದೊಮ್ಮೆಯಾಗಿ ಹಾರುತ್ತವೆ. ಕಣಗಳ ಈ ಕಂಪನದಿಂದ ಪದಾರ್ಥಶೂನ್ಯದಲ್ಲಿ ಕೇಂದ್ರೋದ್ಭವ ತರಂಗಗಳುಂಟಾಗಿ ಎಲ್ಲಾ ದಿಕ್ಕುಗಳಿಗೂ ಹಬ್ಬುತ್ತವೆ. ಹಬ್ಬುವ ವೇಗವು ಸೆಕುಂಡಿಗೆ ೧೮೬೦೦೦ ಮೈಲಿಗಳು ಅಂದರೆ ಭೂಸುತ್ತಳತೆಯ ಏಳರಷ್ಟು. ಕಣಗಳು ಸೆಕುಂಡಿಗೆ ೩೭೨೦೦೦ ಬಾರಿ ಕಂಪಿಸಿದರೆ ಅಲೆಗಳ ತರಂಗಾಂತರವು $\frac{372000}{186000} = \frac{1}{2}$ ಮೈಲು ಯಾ ಮೆಟ್ರಿಕ್ ಕ್ರಮದಲ್ಲಿ 800 ಮೀಟರುಗಳಾಗುತ್ತವೆ. ಹೀಗೆ ಕಣಗಳ ಕಂಪನವೇಗದಿಂದ ಅಲೆಗಳ ತರಂಗಾಂತರವನ್ನು ಇಷ್ಟವಿದ್ದಂತೆ ಬದಲಾಯಿಸಬಹುದು. ಒಂದೊಂದು ಅಲೆಯಂಚೆ ಅಥವಾ ಆಕಾಶವಾಣಿ ಇವುಗಳ ಕಾರ್ಯಾಲಯಗಳು ಒಂದೊಂದು ತರಂಗಾಂತರವನ್ನಿಟ್ಟುಕೊಂಡಿರುವದರಿಂದ ಕೇಳುವ ಅಲೆಗಳು ಯಾವ ಕಾರ್ಯಾಲಯದವುಗಳೆಂದು ತಿಳಕೊಳ್ಳಬಹುದು. ಆಯಾ ತರಂಗಾಂತರಗಳ ಅಲೆಗಳನ್ನೇ ಆಕರ್ಷಿಸಿ ಬೇಕಾದ ಕಾರ್ಯಾಲಯದ ಕಾರ್ಯಕ್ರಮಕ್ಕೆ ಕಿವಿಗೊಡಬಹುದು.

**ಸೂತ್ರ—** ಈ ಚಿಕ್ಕ ಲೇಖದಲ್ಲಿ ಆಕಾಶವಾಣಿಯಂತ್ರದಲ್ಲಿ ಅಡಗಿರುವ ಸಂಪೂರ್ಣ ಸೂತ್ರಗಳನ್ನು ವಿವರಿಸಲಿಕ್ಕೆ ಸಾಧ್ಯವಿಲ್ಲ. ಆದರೂ ಸ್ವಲ್ಪಮಟ್ಟಿಗೆ ಅವುಗಳನ್ನು ತಿಳಕೊಳ್ಳುವದು ಅಗತ್ಯವಿದೆ. ಬೊಂಬಾಯಿಯಲ್ಲಿ ಹಾಡಿದ ಸಂಗೀತವನ್ನು ಧಾರವಾಡದಲ್ಲಿ ಕೇಳಿಸಬೇಕೆಂದಿದ್ದರೆ ಆ ಸ್ವರದಿಂದ ಹುಟ್ಟುವ ಶಬ್ದತೆರೆಗಳಿಂದ ಕೇಂದ್ರೋದ್ಭವತರಂಗಗಳನ್ನುಂಟುಮಾಡಲಿಕ್ಕೆ ಮಾಯ್‌ಕ್ರೊಫೋನ್ ( Microphone ) ಯಂತ್ರ ಮತ್ತು ಅದಕ್ಕೆ ಸಂಬಂಧಪಟ್ಟ ವಿದ್ಯುದ್ಘಟಮಾಲೆ ಇತ್ಯಾದಿಗಳೂ, ಈ ತರಂಗಗಳನ್ನು ಪದಾರ್ಥಶೂನ್ಯದಲ್ಲಿ ಬೀರಲಿಕ್ಕೆ ಎತ್ತರವಾದ ಎರಡು ಖಂಬಗಳ ನಡುವೆ ಸಾಧಾರಣ ೧೦೦ ಗಜಗಳ ಉದ್ದಕ್ಕೆ ಚಾಚಿಕೊಂಡಿರುವ ಏರಿಯಲ್ ( Aerial ) ಸರಿಗೆಯೂ ಬೇಕಾಗುತ್ತವೆ. ಈ ಎಲ್ಲ ಉಪಕರಣಗಳನ್ನು ಕೂಡಿಸಿಟ್ಟ ಪ್ರಸರಣಾ ಕಾರ್ಯಾಲಯಗಳಲ್ಲೇ ( Broadcasting stations) ಗಾಯನವು ನಡೆಯಬೇಕು. ಹಾಡಿದ್ದುದನ್ನು ಕೇಳಿಸಬೇಕಾದುದಲ್ಲಿ ಇಡೀ ವಾತಾವರಣದಲ್ಲಿ ಹಬ್ಬಿದ ಕೇಂದ್ರೋದ್ಭವ ತರಂಗಗಳಲ್ಲಿ ಕೆಲವನ್ನು ಆಕರ್ಷಿಸಲಿಕ್ಕೆ ಚಿಕ್ಕದೊಂದು ಏರಿಯಲ್ ಸರಿಗೆ, ಈ ತರಂಗಗಳಿಂದ ಸರಿಗೆಯಲ್ಲಿ ಹುಟ್ಟುವ ವಿದ್ಯುತ್ಪ್ರವಾಹವು ಕಂಪಿಸದೆ ಒಂದೇ ದಿಕ್ಕಿನಲ್ಲಿ ಪ್ರವಹಿಸಲಿಕ್ಕೆ ಎಡೆಗೊಡುವ ಒಂದು ಬಗೆಯ ಸ್ಫಟಿಕ ಯಾ ನಿರ್ವಾತ ನಳಿಗೆ ( Thermionic valve or Vaccumi tubes) ಮತ್ತು ಈ ವಿದ್ಯುತ್ಪ್ರವಾಹದಿಂದ ಪುನಃ ಶಬ್ದ ತೆರೆಗಳನ್ನು ಹುಟ್ಟಿಸಲಿಕ್ಕೆ Phones ಇವುಗಳ ಅಗತ್ಯವಿರುತ್ತದೆ. ಏರಿಯಲ್ ಸರಿಗೆಯನ್ನು ಬಿಟ್ಟು ಉಳಿದುವನ್ನು ಸೇರಿಸಿ ನಿರ್ಮಿಸಿದ ಚಿಕ್ಕ ಪೆಟ್ಟಿಗೆಗಳಿಗೆ ಕೇಳಿಸುವ ಯಂತ್ರ ( Receiving set ) ವೆನ್ನುವರು. ಇವು ನಮ್ಮ ದೇಶದಲ್ಲೂ ಬೆಲೆಗೆ ಸಿಗುತ್ತವೆ. ಸರಕಾರಕ್ಕೆ ರೂ. ೧೦ ವರ್ಷಾವಧಿ ತೆರಿಗೆಯಾಗಿ ತೆತ್ತು ಇಂಥದೊಂದು ಕೇಳಿಸುವ ಯಂತ್ರವನ್ನು ನಮ್ಮಲ್ಲಿರಿಸಿಕೊಂಡರೆ ವಾತಾವರಣದಲ್ಲಿ ಅನೇಕ ಕಾರ್ಯಾಲಯಗಳಿಂದ ದಿನಂಪ್ರತಿ ಕಳುಹಿಸಲ್ಪಡುವ ಧ್ವನಿಗಳನ್ನಾಲಿಸಬಹುದು. ಯೋಗ್ಯಸಾಧನಗಳಿಂದ ನಮಗೆ ಇಷ್ಟವಿರುವ ತರಂಗಾಂತರಗಳ ಅಲೆಗಳಿಗೇನೇ ನಮ್ಮ ಕೇಳಿಸುವ ಯಂತ್ರಗಳಲ್ಲಿ ಪ್ರವೇಶಿಸಬಿಟ್ಟು ಬೇಕಾದ ಕಾರ್ಯಾಲಯಗಳಿಗೇನೇ ಕಿವಿಗೊಡಬಹುದು.

ಎಲ್ಲಾ ನೌಕಾಕಾರ್ಯಾಲಯಗಳ ತರಂಗಾತರವು ೬೦೦ ಮೀಟರ್. ಕಳುಹಿಸುವ ಕಾರ್ಯಾಲಯದಲ್ಲಿ ಮೊತ್ತಕ್ಕೆ ಅತಿ ಕಂಪನದ ( High frequency alternating current ) ವಿದ್ಯುತ್ಪ್ರವಾಹವನ್ನು ದೊರಕಿಸಿಕೊಳ್ಳಲಿಕ್ಕೆ ಬಲವಾದುದೊಂದು ವಿದ್ಯುದ್ಘಟಮಾಲೆಯು ಬೇಕಾಗುತ್ತದೆ. ಈ ಮಾಲೆಯ ಪ್ರವಾಹವು ಒಂದೇ ದಿಕ್ಕಿನಲ್ಲಾದುದರಿಂದ ಅದನ್ನು ಕಂಪನಪ್ರವಾಹವನ್ನಾಗಿ (Alternating current)ಮಾಡಲು Thermionic valve ಎಂಬ ನಿರ್ವಾತ ನಳಿಗೆಯನ್ನು ಉಪಯೋಗಿಸುತ್ತಾರೆ. ಈ ನಳಿಗೆಯು ಸಾಮಾ

ನ್ಯ ವಿದ್ಯುದ್ದೀಪಗಳಂತೆ ತೋರುತ್ತದೆ. ಅದರೊಳಗೆ ಟಂಗಸ್ಟನ್ (Tungstan) ಲೋಹದೊಂದು ಸರಿಗೆಯೂ ಅದರ ಸುತ್ತಲೂ ಸುರುಳಿಯಾಗಿ ಸುತ್ತಿದ ಗ್ರಿಡ್ (Grid) ಎಂಬ ಸರಿಗೆಯೂ ಮತ್ತು ಇವೆರಡರ ಸುತ್ತಲು ನಿಕ್ಕಲ್ ಲೋಹದ ತಗಡಿನದೊಂದು ಸಿಲಿಂಡರೂ ಇವೆ. ಈ ನಳಿಗೆಗೆ ವಿದ್ಯುತ್ಪ್ರವಾಹವನ್ನು ಕಂಪಿಸುವ ಗುಣವಿದೆ. ಆದುದರಿಂದ ವಿದ್ಯುದ್ಘಟದ ವರ್ತುಲದಲ್ಲಿ ಈ ತರದ ನಳಿಗೆಯನ್ನೂ ಒಂದು ಸೂಕ್ಷ್ಮವಾಣೀಯಂತ್ರವನ್ನೂ ಸೇರಿಸತಕ್ಕದ್ದು. (Microphone) ಸೂಕ್ಷ್ಮವಾಣೀ ಯಂತ್ರದಲ್ಲಿ ಕೊಂಬಿನಾಕೃತಿಯ ನಳಿಗೆಯ ಬುಡದಲ್ಲಿ ಒಂದು ತೆಳುವಾದ ಉಕ್ಕಿನ ತಗಡು ಜೋಡಿಸಿದೆ. ಕೊಂಬಿನಲ್ಲಿ ಮಾತನಾಡಿದರೆ ಶಬ್ದ ತೆರೆಗಳು ತಗಡಿನ ಮೇಲೆ ಬಡಿದು ತಗಡಿನಲ್ಲಿ ಅದೇ ಬಗೆಯ ಕಂಪನವಾಗುವದು. ಈ ತಗಡಿಗೆ ಅದರ ಹಿಂಬದಿಯಲ್ಲಿ ಮೆಲ್ಲನೆ ಒತ್ತುವ ಒಂದು ತಟ್ಟೆಯಿದೆ. ತಟ್ಟೆಯಲ್ಲಿ ತುಂಬಾ ಅಂಗಾರದ ಹುಡಿಯು ಇರುತ್ತದೆ. ತಟ್ಟೆಯ ಬುಡವನ್ನೂ ಉಕ್ಕಿನ ತಗಡನ್ನೂ ವಿದ್ಯುತ್ ವರ್ತುಲದಲ್ಲಿ ಸೇರಿಸಿರುವುದರಿಂದ ತಗಡು ಅಲುಗಾಡಿ ಒಮ್ಮೆ ಬಲವಾಗಿ ಮತ್ತೊಮ್ಮೆ ಮೆಲ್ಲನೆ ತಟ್ಟೆಯನ್ನು ಒತ್ತುವುದರಿಂದ ವಿದ್ಯುಚ್ಛಕ್ತಿಯೂ ಅದೇ ಪ್ರಕಾರವಾಗಿ ಬಲವಾಗಿಯೂ ಮೆಲ್ಲನೆಯೂ ಪ್ರವಹಿಸುತ್ತದೆ. ಈ ಪ್ರವಾಹವು ನಿರ್ವಾತ ನಳಿಗೆಯೊಳಗಿಂದ ಹಾದು ಹೋಗುವಾಗ ಅದರಿಂದ ಕೇಂದ್ರೋದ್ಭವ ತರಂಗಗಳಾಗುತ್ತವೆ. ಕೂಡಲೇ ಈ ತರಂಗಗಳನ್ನು ಎತ್ತರದಲ್ಲಿರುವ ಏರಿಯಲ್ (Aerial) ಸರಿಗೆಯಲ್ಲಿ ಹರಿಯಬಿಟ್ಟರೆ ಅಲ್ಲಿಂದ ಅವು ಪದಾರ್ಥಶೂನ್ಯದಲ್ಲಿ ಹಬ್ಬುತ್ತವೆ.

**ಏರಿಯಲ್ ಸರಿಗೆ**— ಏರಿಯಲ್ ಸರಿಗೆಯೆಂದರೆ ಬಹಳ ಎತ್ತರವಾದ ಎರಡು ಕಂಬಗಳ ನಡುವೆ ಚಾಚಿಕೊಂಡಿರುವ ಸರಿಗೆ. ಕೇಂದ್ರೋದ್ಭವ ತರಂಗಗಳು ತಮ್ಮ ಪಥದಲ್ಲಿರುವ ಗುಡ್ಡ ಕಟ್ಟಡ ಮೊದಲಾದವುಗಳನ್ನು, ಪ್ರಕಾಶವು ಗಾಜನ್ನು ದಾಟಿಹೋಗುವ ರೀತಿಯಲ್ಲಿ, ಹಾದು ಹೋಗಬಲ್ಲುದಾದರೂ ಹೋಗುವಾಗ ಅವುಗಳ ಬಲವು ಕಳೆಗುಂದುತ್ತದೆ. ಆದುದರಿಂದ ಏರಿಯಲ್ ಸರಿಗೆಯನ್ನು ಎತ್ತರಿಸಿದಷ್ಟಕ್ಕೆ ಉತ್ತಮ. ಬಹಳ ದೂರದಲ್ಲಿ ಕೇಳಿಸಬೇಕಾದರೆ ವಿದ್ಯುತ್ಪ್ರವಾಹವು ಬಹಳ ಬಲವಾಗಿರಬೇಕು. ಏರಿಯಲ್ ಸರಿಗೆಯೂ ಉನ್ನತವಾಗಿರಬೇಕು. ಇದಲ್ಲದೆ ಕಳುಹಿಸುವ ಯಂತ್ರಗಳಲ್ಲಿ ಅಲೆಗಳ ತರಂಗಾಂತರವನ್ನು ಬದಲಾಯಿಸುವ ಉಪಕರಣಗಳು ಇರುತ್ತವೆ.

**ಕೇಳಿಸುವ ಯಂತ್ರ**— ವಾತಾವರಣದಲ್ಲಿ ಚಲಿಸುವ ತರಂಗಗಳಲ್ಲಿ ಕೆಲವನ್ನು ಆಕರ್ಷಿಸಿ ಕೇಳಿಸಲಿಕ್ಕೆ ಬೇಕಾದ ಏರಿಯಲ್ ಸರಿಗೆಯು ಬಹಳ ಉನ್ನತವಿರಬೇಕೆಂತಿಲ್ಲ. ಮನೆಯ ಮಾಡಿನ ಮೇಲೆ ಎರಡು ಚಿಕ್ಕ ಕೋಲುಗಳನ್ನು ಕಟ್ಟಿ, ಅವುಗಳ ನಡುವೆ ಉದ್ದವಾದೊಂದು ಸರಿಗೆಯನ್ನು ಚಾಚಿ, ಆಕರ್ಷಿಸಲ್ಪಟ್ಟ ತರಂಗಶಕ್ತಿಯನ್ನು ಒಳಗಿರುವ ಯಂತ್ರಕ್ಕೆ ಕಳುಹಿಸಲಿಕ್ಕೆ ಸರಿಗೆಯಿಂದ ಕೇಳಿಸುವ ಯಂತ್ರವನ್ನೂ ಏರಿಯಲ್ ಸರಿಗೆಯನ್ನೂ ಜೋಡಿಸಬೇಕು. ಈ ಯಂತ್ರದಲ್ಲಿ ಶಕ್ತಿಯನ್ನು ಒಂದೇ ದಿಕ್ಕಿನಲ್ಲಿ ಪ್ರವಹಿಸಬಿಡುವ ನಿರ್ವಾತ ನಳಿಗೆಗಳೂ, ಶಕ್ತಿಯಿಂದ ಶಬ್ದ ತೆರೆಗಳನ್ನು ಹುಟ್ಟಿಸುವ ಸೂಕ್ಷ್ಮವಾಣೀ ಯಂತ್ರವೂ ಇರುತ್ತವೆ. ಒಂದು ವೆರಿಯೋ ಮೀಟರ ಎಂಬ (Variometer) ಉಪಕರಣವು ಬೇಕಾದ ತರಂಗಗಳ ಅಲೆಗಳನ್ನೇ ಒಳಗೆ ಬಿಡುತ್ತದೆ. ಸಾಧಾರಣವಾಗಿ ಸೂಕ್ಷ್ಮವಾಣೀ ಯಂತ್ರಗಳು ಎರಡಿರುತ್ತವೆ. ಇವುಗಳನ್ನು ಜೋಡಿಸಿ ಹಿಡಿಯಲಿಕ್ಕೆ ಅರ್ಧ ವರ್ತುಲಾಕಾರದ್ದೊಂದು ತಗಡಿನ ಪಟ್ಟಿಯಿರುವುದರಿಂದ ಅದನ್ನು ತಲೆಯಮೇಲೆ ಸಿಕ್ಕಿಸುವಾಗ ಯಂತ್ರಗಳು ಕಿವಿಗಳ ಮೇಲೆ ಹಿಡಿಯುವುದರಿಂದ ಅವುಗಳಲ್ಲುಂಟಾಗುವ ಧ್ವನಿಯು ಸ್ಪಷ್ಟವಾಗಿ ಕೇಳಿಸುತ್ತದೆ.

ಕೆಲವರು ಧ್ವನಿಯನ್ನು ಗಟ್ಟಿಯಾಗಿ ಕೇಳಲಿಚ್ಛಿಸುವದರಿಂದ ಈ ಯಂತ್ರಗಳ ಬದಲಾಗಿ ಕೇಂದ್ರೋದ್ಭವ ತರಂಗಗಳನ್ನು ಗಟ್ಟಿಮಾತನಾಡುವ ಯಂತ್ರಕ್ಕೆ (Loud speaker) ಕಳುಹಿಸುವರು. ಈ ಯಂತ್ರದಲ್ಲಿ ನಿರ್ವಾತ ನಳಿಗೆಗಳ ಸಹಾಯದಿಂದ ಶಕ್ತಿಯನ್ನು ಪುಷ್ಟೀಕರಿಸಿ ಧ್ವನಿಯನ್ನು ಬಲಗೊಳಿಸುವ ಏರ್ಪಾಡಿರುತ್ತದೆ. ಧ್ವನಿ ಪೆಟ್ಟಿಗೆಗೆ (Gramaphone) ಇರುವಂತೆ ಇದಕ್ಕೂ ಒಂದು ಕೊಂಬು ಇರುತ್ತದೆ. ಈಚೆಗೆ ಕೊಂಬಿಲ್ಲದ ಯಂತ್ರಗಳೂ ತಯಾರಾಗುತ್ತವೆ.

**ಚರಿತ್ರೆ:** – ಆಕಾಶವಾಣಿಯ ಪರಿಚಯವು ಲೋಕಕ್ಕೆ ಆದದ್ದು ೧೮೮೭ರಲ್ಲಿ ಹರ್ಡ್ಸ (Hertz) ಎಂಬ ಜರ್ಮನ ಶಾಸ್ತ್ರಜ್ಞನೊಬ್ಬನು ಮೇಲೆ ವಿವರಿಸಿದ ರೀತಿಯಲ್ಲಿ ವಿದ್ಯುತ್ ಘಟದಿಂದ ವಿದ್ಯುತ್ ಕಣಗಳನ್ನು (electric sparks) ಹಾರಿಸುತ್ತಿರುವಾಗ ಪಕ್ಕದಲ್ಲಿದ್ದ ಒಂದು ಸಂದು ಬಿಟ್ಟ ಉಂಗುರಾಕೃತಿಯ ಸರಿಗೆಯ ಸಂದಿನ ಮೇಲೂ ಈ ಕಣಗಳು ಕಾಣಿಸಿಕೊಂಡುದನ್ನು ನೋಡಿ ಅವನಿಗೆ ಆಶ್ಚರ್ಯವೆನಿಸಿತು. ಆದರೆ ಹತ್ತು ವರ್ಷಗಳ ಹಿಂದೆಯೇ ಕ್ಲಾರ್ಕ ಮೆಕ್ಸ್ವೆಲ (Clarke Maxwell) ಎಂಬಾತನು ಕೇಂದ್ರೋದ್ಭವ ತರಂಗಗಳ ವಿಷಯ

ಮಾಡಿದ ಕೆಲವು ಊಹನೆಗಳನ್ನು ನೆನಪಿಗೆ ತಂದು ಈ ಘಟನೆಯು ಆ ತರಂಗಗಳಿಂದಲೇ ಉಂಟಾಗಿರಬೇಕೆಂಬುದಾಗಿ ಅವನು ತಿಳಿಪಡಿಕೊಂಡನು. ವಿಷಯವನ್ನು ಮುಂದರಿಸುವದರೊಳಗಾಗಿ ಅವನು ದಿವಂಗತನಾದನು. ಆದುದರಿಂದ ಕೆಲಕಾಲ ವಿದ್ವಾಂಸರು ಇದೊಂದು ವಿಜ್ಞಾನದ ಆಟದ ವೈಚಿತ್ರ್ಯವೇ ಹೊರತು ಇದರಿಂದ ಯಾವ ಉಪಯೋಗವೂ ಆಗಲಾರದೆಂಬದಾಗಿ ಭಾವಿಸಿದರು. ಆದರೂ ಆಂಗ್ಲಾಳದಲ್ಲಿ ವಿಲಿಯಮ ಪಿಯರ್ಸ, ಒಲಿವರ ಲೊಡ್ಜ ಮೊದಲಾದ ಪಂಡಿತರು ಇದರ ವಿಮರ್ಶೆಯಲ್ಲಿಯೇ ಇದ್ದರು.

ಈ ಶೋಧನೆಗಳಾಗುವಾಗ ಇಟಲಿ ದೇಶದಲ್ಲಿ ಗಗ್ಲಿ ಎಲ್ಮೊ ಮಾರ್ಕೊನಿ ಎಂಬಾತನು ಬರೆಯ ೧೨ ವರ್ಷದ ಹುಡುಗನು. ಅವನಿಗೂ ಅವನ ಗುರುವಾದ ಪ್ರೊಫೆಸರ ರಿಗ್ಹಿ ಎಂಬಾತನಿಗೂ ವಿದ್ಯುತ್ ವಿಚಾರಗಳಲ್ಲಿ ತುಂಬಾ ಆಸಕ್ತಿ. ಗುರುವು ತನ್ನ ಶಿಷ್ಯನಿಗೆ ಹರ್ಟ್ಜನು ಮಾಡಿದ ಶೋಧನೆಗಳನ್ನು ಸವಿಸ್ತಾರವಾಗಿ ಹೇಳಿ ಕೊಟ್ಟಿದ್ದರಿಂದ ಮಾರ್ಕೊನಿಯು ತನ್ನ ತಂದೆಯ ತೋಟದಲ್ಲಿ ಅಲೆಯಂಚೆಯು ಚಿಕ್ಕದೊಂದು ಕಳುಹಿಸುವ ಮತ್ತು ಕೇಳುವ (Transmitting and receiving) ಯಂತ್ರಗಳನ್ನು ನಿರ್ಮಿಸಿ ಇಟ್ಟನು. ಇವನ ಯಂತ್ರದಲ್ಲಿ ಮೋರ್ಸ ಸಂಜ್ಞೆ (Mars Code) ಗಳನ್ನು ೧೦೦ ಗಜ ಉದ್ದಕ್ಕೆ ಸರಿಗೆಗಳ ಸಹಾಯವಿಲ್ಲದೆ ಕಳುಹಿಸುವರೆ ಸಾಧ್ಯವಾಯಿತು. ಇದನ್ನು ನೋಡಿ ಹುಡುಗನಲ್ಲಿ ಉತ್ಸಾಹವೂ ನವಶೋಧನೆ ಮಾಡುವ ಆತುರವೂ ಬೆಳೆಯಿತು. ಆ ಸಮಯದಲ್ಲಿ ವಿಜ್ಞಾನಶಾಸ್ತ್ರಕ್ಕೆ ಆಂಗ್ಲಾಳವೇ ಕೇಂದ್ರವಾದುದರಿಂದ ಮಾರ್ಕೊನಿಗೆ ೨೧ ವರ್ಷ ಪ್ರಾಯವಾದಾಗ ಅವನು ಲಂಡನಿಗೆ ಹೋಗಿ ಇದೇ ವಿಚಾರದಲ್ಲಿದ್ದ ವಿಲಿಯಮ ಪಿಯರ್ಸನಿಗೆ ಭೆಟ್ಟಿಯಾದನು. ಅವನ ಸಹಾಯದಿಂದ ಮಾರ್ಕೊನಿಗೆ ಲಂಡನ ನಗರದ ಮುಖ್ಯ ಅಂಚೆಯ ಕಟ್ಟೆಯಲ್ಲಿ (Post office) ತನ್ನ ಯಂತ್ರವನ್ನು ನಡಿಸಲಿಕ್ಕೆ ಪರವಾನಿಗೆ ದೊರೆಯಿತು. ಸರಿಗೆಗಳ ಸಹಾಯವಿಲ್ಲದೆ ಆ ಕಟ್ಟೋಣದ ಅಖಂಡವಾದ ಗೋಡೆಯ ಒಳಗಿಂದ ಇವನ ಯಂತ್ರದ ಕೇಂದ್ರೋದ್ಭವ ತರಂಗಗಳು ಹೊರ ಹೊರಡ ಬಲ್ಲುವೆಂದು ಅವನು ವಿದ್ವಾಂಸರಿಗೆ ವಿದಿತ ಮಾಡಿದನು.

ಇದಾದ ಕೆಲ ಸಮಯದಲ್ಲಿ (೧೮೯೯) ಉತ್ತರ ಸಮುದ್ರದಲ್ಲಿ ಗಂಡಾಂತರಕ್ಕೀಡಾದ ಒಂದು ಹಡಗವನ್ನು ರಕ್ಷಿಸಲಿಕ್ಕೆ ಇವನ ಯಂತ್ರವು ಸಮಾಚಾರವನ್ನು ದೇಶಕ್ಕೆ ತಿಳಿಸಿ ಬಹಳ ಸಹಾಯಮಾಡಿತು. ಆಗ ಈ ಶೋಧನೆಯ ನಿಜವಾದ ಬೆಲೆಯು ಲೋಕಕ್ಕೆ ತಿಳಿಯಿತು. ಇಂಗ್ಲೀಷ ಸರಕಾರದವರು ಕೂಡಲೆ ಅವನ ಯಂತ್ರಗಳನ್ನು ತಮ್ಮ ನೌಕಾಪಡೆಗಳಲ್ಲಿ ಇರಿಸುವ ಹಕ್ಕನ್ನು ೩ ಲಕ್ಷ ರೂಪಾಯಿಗಳಿಗೆ ಪಡಕೊಂಡುದರಿಂದ ಮಾರ್ಕೊನಿಯ ಹೆಸರು ಜಗತ್ಪ್ರಸಿದ್ಧವಾಯಿತು. ಹೇರಳ ಹಣವೂ ಅವನ ಕೈಸೇರಿತು.

ಆದರೂ ಮಾರ್ಕೊನಿಯು ತನ್ನ ಯಂತ್ರವನ್ನು ಇನ್ನೂ ಹೆಚ್ಚು ಸುಧಾರಿಸುವ ಪ್ರಯತ್ನದಲ್ಲಿಯೇ ಇದ್ದನು. ತರಂಗಗಳನ್ನು ಪ್ರಸರಿಸುವ ಏರಿಯಲ್ ಸರಿಗೆ(Ariel)ಯನ್ನು ಎತ್ತರಕ್ಕೆ ಏರಿಸಿದಷ್ಟಕ್ಕೆ ತರಂಗಗಳು ದೂರಕ್ಕೆ ಹೋಗುವವೆಂಬ ಶೋಧನೆಯನ್ನು ಮಾಡಿ ೧೯೦೦ರಲ್ಲಿ ಆಂಗ್ಲಾಳದಲ್ಲಿ ಪೊಲ್ಡು (Poldu) ಎಂಬಲ್ಲಿಂದ ಎಟ್ಲಾಂಟಿಕ ಸಾಗರದಾಚೆ ನ್ಯೂಫೌಂಡಲೆಂಡಿನಲ್ಲಿ ಸೈಂಟಜೊನ ಎಂಬಲ್ಲಿಗೆ ತನ್ನ ಯಂತ್ರಗಳಿಂದ ಸಂಜ್ಞೆಗಳನ್ನು ಕಳುಹಿಸಿದುದರಿಂದ ಸಮುದ್ರಗಾಮಿ ತಂತಿ ವಾರ್ತೆ (submarine cables) ಯವರಿಗೆ ದಿಗಿಲು ಬಡೆಯಿತು. ತಮ್ಮ ವ್ಯಾಪಾರಕ್ಕೆ ಕುಂದು ಬರುವುದೆಂದು ಅವರು ಮಾರ್ಕೊನಿಯು ಸಹಾಯಕರನ್ನು ನ್ಯೂಫೌಂಡಲೆಂಡಿನಿಂದ ಓಡಿಸಿದರು. ಅದೇವರ್ಷ ದಶಂಬರ ೧೯ ರಲ್ಲಿ ನ್ಯುಯೊರ್ಕ ದಲ್ಲಿ ದೊಡ್ಡದೊಂದು ಅಲೆಯಂಚೆಯು ಕಾರ್ಯಾಲಯವನ್ನು ಕಟ್ಟಿ ಅಲ್ಲಿಂದ ಇಂಗ್ಲಾಂಡಿನಲ್ಲಿ ಎಡ್ವರ್ಡ ಚಕ್ರವರ್ತಿಗಳವರಿಗೆ message (ಸಂದೇಶ) ನ್ನು ಕಳುಹಿಸಿದನು. ಅಂದಿನಿಂದ ಎಲ್ಲಾ ದೇಶಗಳಿಗೆ ಸಮಾಚಾರವ್ಯವಹಾರಗಳು ಆಕಾಶವಾಣಿ ಯಂತ್ರದ ಸಹಾಯದಿಂದಲೇ ಹೆಚ್ಚಾಗಿ ನಡೆಯಲಿಕ್ಕೆ ಆರಂಭವಾದವು. ಅದಕ್ಕಾಗಿ ೧೯೩೧ರಲ್ಲಿ ರಗ್ಬಿ ಎಂಬಲ್ಲಿ ೮೨೦ ಅಡಿ ಎತ್ತರದ ಗೋಪುರಗಳ ಮೇಲೆ ಏರಿಯಲ ಸರಿಗೆಯನ್ನಿರಿಸಿ ಲೋಕದ ಅತಿ ದೊಡ್ಡದಾದ ಅಲೆಯಂಚೆಯು ಕಾರ್ಯಾಲಯವನ್ನು ಇಂಗ್ಲಿಷರು ನಿರ್ಮಿಸಿದರು.

ಆದರೂ ಆಕಾಶವಾಣಿಯು ಜನರ ದಿನವಹಿ ಜೀವನದಲ್ಲಿ ಹೆಚ್ಚಿನ ಮಟ್ಟಿಗೆ ಪ್ರವೇಶಿಸಲಿಲ್ಲ. ಅಷ್ಟರಲ್ಲಿ ಸೂಕ್ಷ್ಮವಾಣಿ ಯಂತ್ರ (microphone) ಮತ್ತು ದೂರವಾಣಿ ಯಂತ್ರ (telephone) ಇವುಗಳ ಶೋಧನೆಗಳೂ ಆದುದರಿಂದ ಜನರು ತಮ್ಮ ಮಾತಿನ ಸ್ವರವನ್ನೇ ಆಕಾಶವಾಣಿಯಿಂದಲೂ ಕೇಳಲಿಚ್ಛಿಸಿದರು. ಮಾರ್ಕೊನಿಯೂ ಈ ವಿಚಾರಕ್ಕೂ ಕೈ ಹಚ್ಚಿದನು. ಅವನು ೧[illegible]ರಲ್ಲಿ ಈ ಸ್ವರದ ಯಂತ್ರವನ್ನು

ನಿರ್ಮಿಸಿ ಲೆಬ್ರೆಡೊರ ( Labrador, Canada ) ದಲ್ಲಿ ಇರಿಸಿ ಒಬ್ಬ ಅಂಬಿಗನಿಗೆ ಅಂಗ್ಲಾಳದಿಂದ ಕೇಳಿಸುವ ಇಂಪಾದ ಗಾನಕ್ಕೆ ಕಿವಿಗೊಡಲು ಹೇಳಿದನು. ವೃದ್ಧ ಅಂಬಿಗನು ಕೆಲ ಸಮಯ ಕೇಳಿ ತಲೆದೂಗಿ ಇದೊಂದು ಮಾಟಗಾರಿಕೆಯೆಂದು ತನ್ನ ನಿಶ್ಚಿತ ಅಭಿಪ್ರಾಯವನ್ನು ಕೊಟ್ಟನು. ಅಂಬಿಗನು ಒಂದು ಪಿಯಾನೊವನ್ನು ಕೂಡ ಎಂದೂ ನೋಡಿದವನಲ್ಲ ಅಂದಮೇಲೆ ಆ ಧ್ವನಿಯನ್ನು ಅಮಾನುಷವೆಂದು ತಿಳಿಯುದರಲ್ಲಿ ಅವನ ತಪ್ಪೇನು ?

ಮರುವರುಷ ಡಾಕ್ಟರ ಫ್ಲೆಂಮಿಂಗ ಎಂಬಾತನು ನಿರ್ವಾತ ನಳಿಗೆಗಳನ್ನು ( Thermionic Valves or Vaccume tubes ) ನಿರ್ಮಿಸಿ ಮಾರ್ಕೊನಿಯ ಯಂತ್ರದಲ್ಲಿ ಸ್ಫಟಿಕದ ಬದಲು ಇದನ್ನು ಉಪಯೋಗಿಸಿದುದರಿಂದ ಸ್ವರವು ಚೆನ್ನಾಗಿ ಕೇಳಿಸಹತ್ತಿತ್ತು. ಕೂಡಲೆ ಅಂಗ್ಲಾಳದಲ್ಲಿ ಒಂದು ಪ್ರಸರಣಾ ಕಂಪೆನಿಯವರು ( Broadcasting Company ) ಅಲ್ಲಲ್ಲಿ ತಮ್ಮ ಕಾರ್ಯಾಲಯಗಳನ್ನು ಏರ್ಪಡಿಸಿ ದೇಶದಲ್ಲಿ ಕೋಟಿಗಟ್ಟಲೆ ಜನರು ತಮ್ಮಲ್ಲಿ ಕೇಳಿಸುವ ಯಂತ್ರಗಳನ್ನು ಇಟ್ಟು ಗಾಯನ ಭಾಷಣ ಮೊದಲಾದವುಗಳಿಂದ ಸಂತೋಷಗೊಳ್ಳುವ ಅನುಕೂಲತೆಗಳನ್ನು ಮಾಡಿಕೊಟ್ಟರು. ಈಗ ನಾಗರೀಕ ದೇಶಗಳಲ್ಲಿ ಇಂತಹ ಯಂತ್ರಗಳಿಲ್ಲದ ಮನೆಗಳೇ ಇಲ್ಲವೆನ್ನಬಹುದು.

ಇತ್ತಲಾಗಿ ಅಮೇರಿಕಾ ದೇಶದಲ್ಲಿ ಶೋಧನೆಗಳು ಮುಂದುವರಿದು ಮಂಗಳ ಗ್ರಹಕ್ಕೂ ಸಂಜ್ಞೆಗಳನ್ನು ಕಳುಹಿಸುವ ಯತ್ನಗಳು ನಡಿಯುತ್ತಲಿವೆ. ಏನೊ ಕೆಲವು ಸಂಜ್ಞೆಗಳು ಆಗಾಗ ಕೇಳಿಸುತ್ತವೆ. ನಮ್ಮಂತೆ ನಾಗರೀಕ ವಸತಿಯು ಆ ಗ್ರಹದಲ್ಲಿ ಇರುವುದು ಒಂದು ವೇಳೆ ನಿಜವಾಗಿದ್ದರೆ ಅವರು ನಮ್ಮೊಡನೆ ಮಾತನಾಡಲು ಪ್ರಯತ್ನಿಸುತ್ತಿರುವರೊ ಎಂಬುದನ್ನು ಈಗ ಊಹಿಸಲಿಕ್ಕೂ ಅಸಾಧ್ಯ. ಆದರೂ ಈಗಿನ ಪರಿಸ್ಥಿತಿಯನ್ನು ನೋಡಿದರೆ ಅದು ಸಾಧ್ಯವಾಗುವುದು ಬರೇ ಸಮಯದ ಮಾತಾಗಿ ತೋರುತ್ತದೆ.

# ಎರಡು ಕವಿತೆಗಳು

ಕವಿಗಳು:—ಶ್ರೀ ಗೋವಿಂದ ಪೈ, ಮಂಜೇಶ್ವರ

## ೧
## ' ಜೀವನದೀ ಮಧುಮಾಸಂ '

ಜೀವನದೀ ಮಧುಮಾಸಂ
ಬತ್ತುತ ಬಂತು,
ಮನಸಿನ ಮಧುರ ವಿಕಾಸಂ
ನನೆಯೊಳೆ ಸಂತು;
ಮುಸುರಿದ ಮಕರಂದ ಪಾನ
ಮೊದವದೆದೆಯ ಭ್ರಮರಗಾನ
ಮೆಚ್ಚರಲೆಂತು ?
ಮನೆಗೆಯ್ದುಕ್ಕರೆಯ ಪಿಕಂ
ಪಾರಿದುದೆಲ್ಲಿ ?
ಗೂಡುಗೊಂಡ ಹಿಂಡು ಶುಕಂ
ಕಾಣಿಸವಿಲ್ಲಿ !
ಅಳಲ ಕಣಜವಿನ್ನು ಸಾಗೆ,
ಹಗಲುದ್ದಕೆ ಮರುಗೆ ಗೂಗೆ,
ಚೀರ್ವುದು ಹಲ್ಲಿ.

ನಡುಚೈತ್ರದಿ ಮಸಗೆ ಗ್ರೀಷ್ಮ,
ಬೇಯುದೆ ಮನಸು ?
ಮುಗಚದೆ ಮೃಗಜಲದೊಳೂಷ್ಮ
ಕಡಸಿದ ಕನಸು ?
೧ಪಾತೆಯೆಲರ ೨ಪಾತಿಯಿಲ್ಲ,
ತರಗೆಲೆಗಳ ೩ಬಟ್ಟೆಯೊಲ್ಲ
ದೇವುದೊ ನೆನಸು ?

ತೆರೆಯಿಲ್ಲದ ಕಡಲೊಳಿಲ್ಲಿ
ದಾವ ದಾವರಂ ?
ಮರಳಿಲ್ಲದ ಮರುವೊಳಲ್ಲಿ
ಕಾವ ಕಾವರಂ !
ಮುಗಿಲಲಿ ರವಿಶಶಿಯ ಕೀಸೆ
ಸಿಡಿವ ಕಿಡಿಯೊ ೪ಕೆಲವೆ ಸೂಸೆ
ಸೀವ ಸೀವರಂ ?

೧ ಪಾತೆ=ಬಟ್ಟೆ. ೨ ಪಾತಿ=ದೋಣಿ. ೩ ಬಟ್ಟೆ=ದಾರಿ. ೪ ಕೆಲವೆ=ಕೆಲವು ಸಾರಿ.

ಬೇಗೆ ಮುಸುಕಲಿಂತು ತಾನೆ
  ದೂರವೆ ವೃಷ್ಟಿ ?
ತಂಬನಿಗಿಂ ಬಾಗೆ ಶಾನೆ
  ಮೊಳೆಯದೆ ಸೃಷ್ಟಿ ?
ಹಸುರು ಹಗಲು ಹೊರಳೆ, ಹೊಂಚು
ಹಾಕದೆ ನೂರಾರು ಮಿಂಚು
  ಹುಳಗಳ ದೃಷ್ಟಿ ?
ಒಮ್ಮೆ ಮುಗಿಯಲದೆ ವಸಂತ
  ಮಿನ್ನಹುದಳವೆ ?
ಒಮ್ಮೆ ಮುಗಿದ ತನುವನಂತ
  ರಂ ನವುಗೊಳವೆ ?
ಸುಗ್ಗಿ ಮುಗಿದೆ ಮಳೆಯಲ್ಲವೆ ?—
ತನು ಮುಗಿದಡೆ ಕೆಳೆಯಿಲ್ಲವೆ ?
  ಕೆಳೆಗೇನಳಿವೆ ?

೩

## ' ಬಲ್ಲುದೆ ಲತೆ ಫಲಂ ತನ್ನ '

ಬಲ್ಲುದೆ ಲತೆ ಫಲಂ ತನ್ನ
ಸಿಹಿಯೊ ಕಹಿಯೊ ಎಂಬುದನ್ನ ?
ಒಗೆದಂತೊದಗಿಸಲು ಬನ್ನ
  ಮೇನೊ ? ಬಳ್ಳಿಯಾ
ಹಲವೊ ಕೆಲವೊ ಸವಿದು ಹಣ್ಣ,
ಸಿಹಿಯಾದೊಡೆ ಕೊಳುವುದುಣ್ಣ
ಕಹಿಯಾದೊಡೆ ಕಳೆವುದಣ್ಣ
  ಲತೆಯ ತಳ್ಳಿಯಾ.
ಪ್ರಕೃತಿವಶಮೆ ಫಲಿಸ ಬಲ್ಲ
ಲತೆಗೆ ರುಚಿಯು ಗೊಡವೆ ಸಲ್ಲ—
ರುಚಿಯರಿಯದೆ ಸಸ್ಯಮೆಲ್ಲ
  ಫಲಿಸಲಾರವೆ ?
ರುಚಿಯೊ ? ರಸಿಕರೊಡವೆ ! ಮುನ್ನ
ಸವಿದೆ ಪೊಗಳಿ ತೆಗಳಿದನ್ನ—
ಸವಿದೊಲ್ಲಡೆ, ಲತೆಗೆ ತನ್ನ
  ಫಲಂ ಭಾರವೆ ?
ತಾನೆ ತನ್ನ ಫಲಮನುಂಬ
ಬಳ್ಳಿ ಫಲಿಸಲುಂಟೆ ? ಕೊಂಬ
ರಿಲ್ಲದಂತೆನಿತೊ ಫಲಂ ಬ
  ಳ್ಳುಂಕಲಡಿಯಲಿ,
ಬಗೆಯು ಬಳ್ಳಿಗದುವೆ ಗೊಬ್ಬ
ರಾಗದೆ ? ಮರುವೆಳಸಲಿ ಕೊಬ್ಬ
ದಿಹವೆ ? ಹೊಸತೆ ಬಳ್ಳಿ ಹಬ್ಬ
  ವೆನಿತೊ ಮಡಿಯಲಿ ?
ಇಂದಿಗರಿದನೊಲ್ಲ ಡೆಂದೊ
ಬರುವರಾರೊ ಸವಿವರೆಂದೊ
ಕಾವ ಲತೆಯೊಳಾವ ಕುಂದೊ ?
  ನಾಳೆಯು ನಂಬಿ,
ಇಂದಿನೇಕೆ ವೃಥಾ ತಂಟೆ ?—
ನಂಬಿಕೆ ಬರಡಾಗಲುಂಟೆ ?
ಬರಿಯ ನಿರಾಶೆಗೆ ಮುರುಂಟೆ,
  ಫಲಿಸುವ ಹಂಬೆ ?
ಮುಂಬಿಗರಿದನಂತೆ ನೂಕೆ,
ಬಳ್ಳಿ ಬರಿದೆ ಕೊರಗಲೇಕೆ ?—
ಹೆತ್ತಳೈಸೆ ಫಲಮನಾಕೆ
  ಕಡು ಸಾಜತೆಗೆ ?
ಯಾರೊಲ್ಲಡೆ, ಗಾಳಿ ಬೀಸೆ
ತನ್ನುದುರಿದ ಫಲದ ಸೇಸೆ
ಭೂಮಾತೆಯ ಮುಡಿಗೆ ಸೂಸೆ
  ಸಾಲದೆ ಲತೆಗೆ ?
ಅಥವಾ ಪೊಗಳಿಕೆಗೆ ಹಿಗ್ಗ
ಲೊಲ್ಲಡೆ, ತೆಗಳಿಕೆಗೆ ಕುಗ್ಗ
ಲಾರಡೆ, ಲತೆ ಫಲಕೆ ಸಿಗ್ಗ
  ಲೇಕೆ ? ಕಾಲದೆ
ಫಲಿಸುವಂತೆ ಫಲಿಸಿ ಹೆಚ್ಚೆ—
ಕೊಳುವುದುಳಿವುದನ್ಯರಿಚ್ಚೆ—
ತನ್ನ ಗೆಯ್ಮೆಗೆಯ್ದು ನಚ್ಚೆ
  ಲತೆಗೆ ಸಾಲದೆ ?
ಮೆಚ್ಚಿಸದೊಡಿದಾರನೆಂದಿ
ಗೀ ಲತೆಗೀ ಫಲಮನೊಂದಿ
ಸಿದ ಸೃಷ್ಟಿಯ ಕರ್ಮಬಂದಿ
  ಗಿದೇನೊಪ್ಪದೆ ?
ಲತೆಯಿದನನ್ಯಥಾ ಫಲಿಸೆ,
ಫಲಮಿದನನ್ಯಥಾ ಮೆಲಿಸೆ—
ಪ್ರಕೃತಿಯನನ್ಯಥಾ ಸಲಿಸೆ
  ಅವನಿಗಪ್ಪುದೆ ?

# ಭೂಲೋಕದ ಪರ್ವಕಾಲಗಳು

ಲೇಖಕರು:— ಶ್ರೀ. ಕೆ. ಎಲ್. ಕುಡ್ವ

ಇಂಗ್ಲಾಳ (England)ದ ಮಂತ್ರಿ ಲೊಯ್ಡಿ ಜೊರ್ಜರು (Lloyd George) ತಮ್ಮ ಒಂದು ಭಾಷಣದಲ್ಲಿ ಭೂಲೋಕವು ೧೯೧೪–೧೯೧೮ನೇ ಯುದ್ಧದ ಸಂಬಂಧವಾಗಿ ಬೇಗನೆ ಮುನ್ನಡೆಯಲ್ಲಿ ಹೆಜ್ಜೆಯಿಟ್ಟಿತೆಂತಲೂ ಶತಮಾನಗಳಲ್ಲಿ ಆಗುವ ಅಭಿವೃದ್ಧಿಯೂ ಬದಲಾವಣೆಗಳೂ ಈ ೪ ವರುಷಗಳಲ್ಲಿ (Treaty of Versailles June ೨೮–೧೯೧೯) ಆದವೆಂತಲೂ ಹೇಳಿರುವರು. ಈ ರೀತಿಯಲ್ಲಿಯೇ ಹಿಂದಿನ ಶತಮಾನಗಳಲ್ಲಿಯೂ ಕೆಲವು ಸಮಯದಲ್ಲಿಯೇ ಶತಮಾನಗಳ ಅಭಿವೃದ್ಧಿಯನ್ನು ಹೊಂದಿ ಹಿಂದಿನ ಮಾರ್ಗಗಳನ್ನು ಬಿಟ್ಟು ಭೂಲೋಕವು ಹೊಸ ಮಾರ್ಗಗಳಲ್ಲಿ ತನ್ನ ಹೆಜ್ಜೆಯನ್ನಿಟ್ಟು ಚೇತನಗೊಂಡಿದೆ.

ಈ ರೀತಿಯ ಪರ್ವಕಾಲಗಳಲ್ಲಿ ೧೮ನೇ ಶತಮಾನದ ಕಡೆಯ ೧೦ ವರುಷಗಳೂ ೧೯ನೇ ಶತಮಾನದ ಪ್ರಥಮ ೧೦ ವರುಷಗಳೂ ಮುಖ್ಯವೆನ್ನಬಹುದು. ಫ್ರೆಂಚರ ಅರಸು ೧೫ನೇ ಲುಇಸ್ ಎಂಬವನು ಮೃತಪಟ್ಟನು. ಈ ಅರಸನು ೧೭೭೪ರಲ್ಲಿ ಫ್ರೆಂಚ ಸಿಂಹಾಸನವನ್ನು ಏರುವಾಗ್ಯೆ ಫ್ರೆಂಚ ರಾಜ್ಯದ ಖಜಾನೆಯು ಬಂದಾಗಿತ್ತು. ಅಮೇರಿಕದ ಸ್ವಾತಂತ್ರ್ಯಯುದ್ಧಕ್ಕೆ ಫ್ರೆಂಚರು ಕೊಟ್ಟ ಸಹಾಯದಿಂದ ಫ್ರೆಂಚರು ಇನ್ನಿಷ್ಟು ಹಣವನ್ನು ಕಳಕೊಂಡರು. ಫ್ರೆಂಚ ರಾಜ್ಯವು ಐಶ್ವರ್ಯವಂತವಾಗಿತ್ತು; ಆದರೆ ಆರ್ಥಿಕತ್ರಾಣವಿದ್ದವರಿಂದ ಸರ್ಕಾರದವರು ತಮ್ಮ ತೆರಿಗೆಗಳನ್ನು ವಸೂಲಮಾಡುತ್ತಿದ್ದಿಲ್ಲ. ಹಳ್ಳಿಗಳಲ್ಲಿರುವ ಬಡಬಗ್ಗರಿಂದಲೂ ಒಕ್ಕಲಿಗರಿಂದಲೂ ಸರ್ಕಾರಿ ತೀರ್ವೆಯು ವಸೂಲು ಆಗುತ್ತಿತ್ತು. ಶ್ರೀಮಂತರ ಗೌರವವು ಹೆಚ್ಚಿತ್ತು. ಬಡವರೂ ಒಕ್ಕಲಿಗರೂ ಈ ಐಶ್ವರ್ಯವಂತರ ಗುಲಾಮರು. ಈ ಹಣದ ಪೇಚಾಟದ ಸಂಬಂಧವಾಗಿ, ೧೬೧೪ರಿಂದ ತೆರೆಯಲ್ಪಡದ ಫ್ರೆಂಚರ ಪಾರ್ಲಿಮೆಂಟಾದ "Estates Genrral ಎಂಬ ಸಭೆಯನ್ನು ಹೊಸ ತೀರ್ವೆಯನ್ನು ಹೊರಿಸುವ ಬಗ್ಗೆ ೧೬ನೇ ಲುಯಿಸ್ ಅರಸನು ಕರೆದನು. ಹೊಸ ಕಾನೂನನ್ನು ಜಾರಿಗೆ ತರುವೆನೆಂತ ಅರಸನು ಜನರಿಗೆ ಅಭಯಕೊಡಬೇಕಾಯಿತು. ಈ ಸಂಸ್ಥೆಯ ಪ್ರಭುತ್ವವು ಅರಸನಲ್ಲಿರಲಿಲ್ಲ. ಇಂಗ್ಲಿಷರ ರಾಜಶಾಸನದ ಸೂತ್ರದ ಮೇರೆಗೆ ಪ್ರಾತಿನಿಧ್ಯ ಸಂಸ್ಥೆಗಳಲ್ಲಿ ಸರ್ಕಾರಿ ತೀರ್ವೆಯ ವಸೂಲುಮಾಡುವ ಹಕ್ಕು ಉಂಟೆಂದು ಕಾದಾಡಿದರು. ಈ ಸಂಬಂಧವಾಗಿ ಆದ ಹೋರಾಟದಲ್ಲಿ ಪಾರಿಸಿನಲ್ಲಿ ಜನರು ದಂಗೆ ಎದ್ದರು. ಅರಸನು ಜನರ ಪ್ರತಿನಿಧಿಗಳನ್ನು ಸೆರೆಯಿಟ್ಟ ಬೆಸ್ಟಿಲ್ ಎಂಬ ಜೈಲನ್ನು ೧೭೮೯ ಜುಲೈ ೧೪ರಲ್ಲಿ ನಾಶಮಾಡಿ ಅರಸನನ್ನು ವಾರ್ಸೆಲಿಸಿನಿಂದ ತಂದು ೧೭೯೩ರಲ್ಲಿ ಅವನನ್ನು ಗಲ್ಲಿಗೆ ಹಾಕಿದರು. ಪಾರ್ಲಿಮೆಂಟಿನವರು ಇಷ್ಟರ ಒಳಗೆ ಮನುಷ್ಯರ ಪ್ರಾಮುಖ್ಯ ಹಕ್ಕಿನ ಶಾಸನವನ್ನು (Reghts of Man) ಪ್ರಕಟಗೊಳಿಸಿದರು. ಐಶ್ವರ್ಯವಂತರಿಗೆ ಹೆಚ್ಚಿನ ಹಕ್ಕಿಲ್ಲ. ಕಾನುನುಮಟ್ಟಿಗೆ ಎಲ್ಲರು ಸರಿಸಮಾನರು. ಯೋಗ್ಯ ಬುದ್ಧಿವಂತರಿಗೆ ಪ್ರತಿ ಒಂದು ಸರ್ಕಾರಿ ಹುದ್ದೆಯನ್ನು ಪಡೆಯಲು ಅಧಿಕಾರವಿರಬೇಕು. ನಿರಂಕುಶಪ್ರಭುತ್ವವನ್ನು ನಾಶಪಡಿಸಿ ಪ್ರತಿ ಒಬ್ಬ ವ್ಯಕ್ತಿಗೆ ತಮ್ಮ ಸೇರಿಕೆಯಿದ್ದಂತೆ ಸುರಕ್ಷಿತವಾಗಿ ಜೀವನವನ್ನು ನಡೆಯಿಸಲಿಕ್ಕೂ ತಮ್ಮ ನ್ಯಾಯವಾದ ಸಂಪಾದನೆಯನ್ನೂ ಸೊತ್ತುಗಳನ್ನೂ ಅನುಭವಿಸಲಿಕ್ಕೂ ಹಕ್ಕು ಉಂಟೆಂದು ಸ್ಥಾಪಿತವಾಯಿತು. ಈ ರೀತಿ ಫ್ರೆಂಚರು ಸ್ಥಾಪಿಸಿದ Equality (ಸರಿಸಮಾನತ್ವ), Fraternity (ಸಹೋದರತ್ವ) Liberty (ಸ್ವಾತಂತ್ರ್ಯ) ಎಂಬ ಸೂತ್ರಗಳು ಯುರೋಪದಲ್ಲಿ ಪ್ರಸರಿಸಿದವು. ಈ ಫ್ರೆಂಚ ಉತ್ಕ್ರಾಂತಿಯ ಸಮಯದಲ್ಲಿ ಇಂಗ್ಲಾಳದ ಶ್ರೀಮಂತರೂ ಅರಸರೂ ತಮ್ಮ ಪ್ರಭುತ್ವಕ್ಕೆ ಲೋಪ ಬರಬಹುದೆಂಬದಾಗಿ ಸಂಶಯಪಟ್ಟು ಈ ಉತ್ಕ್ರಾಂತಿಯನ್ನು ದ್ವೇಷಿಸಿದರೂ ಅದು ಎಲ್ಲೆಲ್ಲಿಯೂ ರಾಷ್ಟ್ರೀಯತೆಯನ್ನು ಜನರಲ್ಲಿ ಹುಟ್ಟಿಸಿ ಸಾಧಾರಣ ವ್ಯಕ್ತಿಗಳನ್ನು ಚೇತನಗೊಳಿಸಿತು.

೧೯೧೪ನೇ ಇಸವಿ ಅಗೋಸ್ತು ತಾ. ೧ರಲ್ಲಿ ಜರ್ಮನಿಯವರು ರುಷ್ಯ (Russia)ಕ್ಕೆ ಕೊಟ್ಟ (Ultimatum) ಜಾಹಿರಾತಿನಿಂದ ಉದ್ಭವಿಸಿದ ಯುದ್ಧವು ನಮ್ಮ ಏಶ್ಯಾ ಖಂಡದಲ್ಲಿರುವ ಜನರನ್ನು ಜಾಗರೂಕಗೊಳಿಸಿ ಇಲ್ಲಿಯ ರಾಷ್ಟ್ರೀಯತೆಯನ್ನು ಹುಟ್ಟಿಸಿದೆ. ಫ್ರೆಂಚ ಉತ್ಕ್ರಾಂತಿಯು ಯುರೋಪವನ್ನು ಚೇತನಗೊಳಿಸಿತು. ಈ ಯುದ್ಧವು ರುಷ್ಯದ

ನಿರಂಕುಶಪ್ರಭುತ್ವವನ್ನು ನಾಶಪಡಿಸಿ ಐಗುಪ್ತ, ಇರಾಕು, ಪರ್ಶಿಯಾ, ಟರ್ಕಿ ಮೊದಲಾದ ದೇಶಗಳಲ್ಲಿ ರಾಷ್ಟ್ರೀಯತೆಯನ್ನು ಉಂಟುಮಾಡಿದೆ. ರೋಮಿನ ಸಾಮ್ರಾಜ್ಯವು ನಾಶವಾದ ನಂತರ ಇತ್ತೀಚಿಗೆ ಈ ಯುದ್ಧದಷ್ಟು ಕಠಿಣ ವೇದನೆಯು ನಮ್ಮ ಭೂಲೋಕಕ್ಕೆ ಆಗಲಿಲ್ಲ. ಈ ಯುದ್ಧದ ಕಾಲಕ್ಕೆ ( Western Front ) ಫ್ರಾನ್ಸಿನಲ್ಲಿ ನಡೆದ ಯುದ್ಧದೊಳಗೆ ಜನರು ಸಹಿಸಲಾರದಷ್ಟು ಕಷ್ಟವನ್ನು ಅನುಭವಿಸಿದರು. ಇತ್ತಲಾಗಿ ಯುದ್ಧಸಾಹಿತ್ಯವೇ ಪ್ರತ್ಯೇಕವಾಗಿ ಆಗುವಂತಿದೆ. ಗೆಲ್ಲಿಪೊಲ್ಲಿ, ಗೆಲಿಸಿಯಾ, ಸಿರಿತ್, ಕುಟ್ ಮೊದಲಾದ ಸ್ಥಳಗಲ್ಲಿ ೧೦ ಲಕ್ಷ ಜನರು ಕೊಲ್ಲಲ್ಪಟ್ಟರು. ಸಮುದ್ರಕ್ಕೆ ಇನ್ನಷ್ಟು ಜನರು ತುತ್ತಾದರು. ಗ್ರೀಕ, ರೋಮ ನಾಗರೀಕತನದಿಂದ ಉದ್ಭವಿಸಿದ ವಿಲಾಯತಿಯವರ ನಾಗರೀಕತನವು ಭೂಲೋಕದ ಧುರೀಣತನವನ್ನು ಕಳಕೊಂಡು ನಾಶವಾಗುವ ಸಂದರ್ಭ ಒದಗಿತು.

ಈ ಯುದ್ಧದ ಸಂಬಂಧದಿಂದ ೧೯೧೭ರಲ್ಲಿ ಋಷ್ಯದಲ್ಲಿ ಉತ್ಕ್ರಾಂತಿಯಾಯಿತು. ಫ್ರೆಂಚ ಉತ್ಕ್ರಾಂತಿಯಲ್ಲಿ ನಡೆದಂತೆ ಝಾರನಿಕೋಲಸ ಎಂಬ ಅರಸನನ್ನು ಜನರು ಗಲ್ಲಿಗೆ ಹಾಕಿದರು. ಋಷ್ಯದ ಉತ್ಕ್ರಾಂತಿಯು ೬ ತಿಂಗಳೊಳಗೆ ಅಂದರೆ ೧೯೧೭ ಮಾರ್ಚಿಯಿಂದ ಒಕ್ಟೋಬರದ ಒಳಗೆ ಸ್ಥಾಪಿತವಾಯಿತು. ಕ್ರೈಸ್ತ ದೇವಾಲಯಗಳನ್ನು ಮುಚ್ಚಿಸಿ ನಾಸ್ತಿಕ ಧರ್ಮವನ್ನು ಋಷ್ಯದ ಸರ್ಕಾರವು ಸ್ವೀಕರಿಸಿದರೂ ಅದು ಸಾಧಾರಣ ವ್ಯಕ್ತಿಯ ಅಭಿವೃದ್ಧಿಯನ್ನು ಮುಂದರಿಸಿತು. ಫ್ರೆಂಚ ಉತ್ಕ್ರಾಂತಿಯಲ್ಲಿ ಮಧ್ಯಮತರಗತಿಯ ಜನರೇ ಮುಖಂಡರು. ಋಷ್ಯದಲ್ಲಿ ( proletariat ) ಕನಿಷ್ಠ ಸ್ಥಿತಿಯ (ಆರ್ಥಿಕ) ಜನದಾದ ಕೆಲಸಗಾರರೇ ಮುಖಂಡರು. ಋಷ್ಯದ ಉತ್ಕ್ರಾಂತಿಯಿಂದ ವ್ಯಕ್ತಿಗಳ ಸ್ವಾತಂತ್ರ್ಯವು ಹೆಚ್ಚಾಗಿ ಗೌರವವು ಇನ್ನೂ ಹೆಚ್ಚುತ್ತಲಿರುವದು. ಮನುಷ್ಯರ ಹಕ್ಕುಗಳನ್ನು ಸ್ಥಾಪಿಸಿ ಈ ಮೂಲಕ ನಾವು ದೇವರನ್ನು ಆರಾಧಿಸುತ್ತೇವೆ ಎಂಬದಾಗಿ ಫ್ರೆಂಚ ಉತ್ಕ್ರಾಂತಿಯ ಮುಖಂಡರು ಹೇಳಿದರು. ಕೆಲಸವೇ ದೇವರ ಆರಾಧನೆ ಎಂಬದಾಗಿ ಋಷ್ಯದ ಮುಖಂಡರ ಧ್ಯೇಯ- ೧೯೧೭ರ ಲಾಗಾಯ್ತು ತಮ್ಮ ದೇಶದಿಂದ ಬಡತನವನ್ನು ದೂರಮಾಡಿ ತಮ್ಮ ದೇಶವನ್ನು ಉನ್ನತಿಗೆ ತರಬೇಕೆಂದು ಋಷ್ಯದ ಜನರು ಇಡೀ ದಿವಸ ಎಡೆಬಿಡದೆ ಏಕಾಗ್ರಚಿತ್ತದಿಂದ ಕೆಲಸಮಾಡುತ್ತಲಿರುವರು.

ಯುದ್ಧವು ಒಂದು ದೊಡ್ಡ ಭ್ರಮೆ. ಅದರಿಂದ ನಾಗರೀಕತನವು ನಾಶವಾಗುವದು. ಅದರಲ್ಲಿ ಯೋಗ್ಯರಾದವರು ಹೆಚ್ಚಾಗಿ ಮೃತಪಡುವರು. ಅದರಲ್ಲಿ ಉಂಟಾಗುವ ಕಷ್ಟಕ್ಕೆ ಸರಿಯಾದ ಪ್ರಯೋಜನವಿಲ್ಲವೆಂಬ ಭಾವನೆಯು ಈಗ ಪಾಶ್ಚಾತ್ಯ ಜನರಲ್ಲಿ ಹುಟ್ಟಿ ಯುದ್ಧವನ್ನು ತಾವು ಒಂದು ಶಾಪವೆಂದೆಣಿಸಿ ಅದನ್ನು ತೆಗೆದುಹಾಕುವಂತೆಯೂ ಮುಂದಕ್ಕೆ ಯುದ್ಧವಾಗದಂತೆ ಮಾಡಬೇಕೆಂಬದಾಗಿಯೂ " League of Nations " ಜನಾಂಗಗಳ ಒಂದು ಸಂಸ್ಥೆಯು ಏರ್ಪಾಡಾಗಿರುದೆ. ನೌಕಾಸೈನ್ಯದ ಪರಿಷತ್ತು ನಡೆಯಿತು. ಅದರಲ್ಲಿ ಇಂಗ್ಲಾಂಡ ಅಮೇರಿಕ ಜಪಾನದವರು ಸೇರಿ ನೌಕಾಸೈನ್ಯವನ್ನು ಹೆಚ್ಚಿಸಬಾರದಾಗಿ ಮಾಡಿದ ನಿರ್ಣಯವು ಫ್ರೆಂಚ ಮತ್ತು ಇಟಲಿಯವರ ಪರಸ್ಪರ ಹಗೆಯಿಂದ ನಿಷ್ಫಲವಾಯಿತು. ವಿಲಾಯತಿಯ ಎಲ್ಲಾ ರಾಜ್ಯಗಳು ಒಂದು (Federation) ಸಂಯುಕ್ತ ಸಂಸ್ಥೆಯಲ್ಲಿ ಐಕ್ಯವಾಗಬೇಕೆಂಬ ಭಾವನೆಯು ಅಲ್ಲಿ ಎದ್ದಿದೆ. ಜನಾಂಗಗಳ ವಿವಾದವನ್ನು ಈ " League of Nations " ಎಂಬ ಸಂಸ್ಥೆಯು ಪಂಚಾಯ್ತಿಯ ಮುಂದೆ ಇಡಬೇಕು ಎಂಬೀ ಪ್ರಯತ್ನಗಳು ನಡೆಯುತ್ತಲಿವೆ.

ನಮ್ಮ ಈ ಬಡ ದೇಶದಲ್ಲಿ ಯುದ್ಧವನ್ನು ನಿಲ್ಲಿಸುವದಕ್ಕೋಸ್ಕರ ಅದಕ್ಕೆ ಸರಿಸಮಾನವಾಗಿರುವ ಹಾಗೂ ಸ್ವಾತಂತ್ರ್ಯವನ್ನು ದೊರಕಿಸಲು ಅದರಷ್ಟೆ ಪ್ರಯೋಜನಕರವಾಗುವ ( Moral Equivalent of war ) ಉತ್ಕ್ರಾಂತಿಯ ಒಂದು ನವೀನ ವಿಧಾನವನ್ನು ಮಹಾತ್ಮಾಜಿಯವರು ಕಂಡುಹಿಡಿದರು. ಅದು ಅಹಿಂಸಾತತ್ವ ಅದನ್ನು ಸ್ವಯಂಸೇವಕರು ಜಾರಿಗೆ ತರುತ್ತಿದ್ದಾರೆ. ಅವರ ( Disciplined self-sacrifice ) ಶಿಸ್ತುಳ್ಳ ತ್ಯಾಗವೂ ದೇಹದಂಡನೆಯೂ ಅತಿ ಅದ್ಭುತ. ಯುದ್ಧದಲ್ಲಿ ಹೆಂಗಸರು ಹೋಗಲು ಸಾಧ್ಯವಿಲ್ಲವಾದರೂ ಈ ಹೊಸ ವಿಧಾನದಲ್ಲಿ ಹೆಂಗಸರು ತಮ್ಮ ಅದ್ಭುತವಾದ ಆತ್ಮಶಕ್ತಿಯನ್ನು ತೋರಿಸುತ್ತಲಿರುವರು. ಈ ಆಯುಧದ ಪ್ರಯೋಜನವು ಮುಂದಕ್ಕೆ ತಿಳಿಯುವದು.

ಐಗುಪ್ತದ ಚಳವಳ, ಇರಾಣಿನ ಸಂಗಡ ಆದ ಒಪ್ಪಂದ, ಚೀನಾದೇಶದಲ್ಲಿ ನಡೆಯುವ ಯುದ್ಧಗಳು, ಪರರಾಜ್ಯದವರಿಗೆ ಚೀನದಲ್ಲಿದ್ದ ಹಕ್ಕಿನ ನಾಶ, ಪರ್ಶಿಯಾ ದೇಶದಲ್ಲಿ ಆಗುವ ಯುದ್ಧ, ಪೆಲಿಸ್ಟೈನ ಮೊದಲಾದ ಪ್ರಾಂತ್ಯಗಳ ಅಸಮಾಧಾನ ಇವೇ ಮೊದಲಾದವು ೧೯೧೮–೧೯೨೮ಲನೇ ಯುದ್ಧದಲ್ಲಿ ಜನ್ಮವೆತ್ತಿದ ಹೊಸ ರಾಷ್ಟ್ರೀಯತೆಯ ಕುರುಹುಗಳು.

# ಕೋಪಣನಗರ



(೧)

ನೃಪತುಂಗದೇವನಾಳಿಕೆಯಲ್ಲಿ ನನ್ನ—
ಕೋಪಣವೆ ! ನೀನಾಗ ನಗರವಾಗಿದ್ದೆ.
ಕಾಣುವುದು ನಿನ್ನ ಅತ್ಯಾನ್ನತ್ಯವಿಂದು—
ಅಲ್ಲವೇನೋ —
ಆ ತುಂಗ ಗಿರಿಶಿಖರದೆಡೆಯಲ್ಲಿ !
ಕೋಪಣವೆ ! ಓ ! ನನ್ನ ತಿರುಳಗನ್ನಡನಾಡೆ !
ಎಲ್ಲಿಹುದು ನಿನ್ನಲ್ಲಿ ಈಗ ಆ ತಿರುಳು ?
ನೃಪತುಂಗ ತನ್ನ ತುಂಗಸ್ವನದಿ ಹಾಡಿವನು
ನಿನ್ನ ಆ ತಿರುಳ ಮಹಿಮೆ
ಹಿಂಸೆಯೆಲ್ಲವನಳಿಸಿ ಬಿಡಲು ಅವತರಿಸಿರ್ದ
ತೀರ್ಥಂಕರರ ಪುಣ್ಯಪಾದಧೂಳಿಗಳಿಂದೆ
ಸುಪವಿತ್ರವಾಗಿರ್ದ ಪುಣ್ಯತೀರ್ಥವು ನೀನು !
ಆ ಮಹಿಮ ಪುಣ್ಯಕ್ಷೇತ್ರವು ನೀನು !!
ಎಲ್ಲಿಹುದು ? ಆ ಕುರುಹು ಎಲ್ಲಿಹುದು ಆ ಮಹಿಮೆ ?
ಇಂದೊಡುಗುತಿಹುದಿಲ್ಲಿ ಬಹುವಾಗಿ ಹತ್ಯೆ !!
ಅಲ್ಲಲ್ಲಿ ಗಿರಿಶಿಲೆಗಳಲ್ಲಿ—
ಕಾಣುತಿಹುದೊಂದು ಕುರುಹು !
ಮತ್ತೊಂದು ಆ ತುಂಗಗಿರಿಶಿಖರದೆಡೆಯಲ್ಲಿ !!

(೨)

ಮತ್ತೊಮ್ಮೆ ಹೊರಳು ಆ ಕೋಟಕೊತ್ತಲ ಕಡೆಗೆ
ಕಾಣಿಸರು ಒರೆಗಳೆದ ಖಡ್ಗದಾ ವೀರರು.
ನೋಡಲ್ಲಿ ! ಕುಳಿತಿಹರು ನೋವನೆಲ್ಲವ ನುಂಗಿ
ಹಿಂಸೆಗಿದು ಎಡೆಯಲ್ಲವೆಂದು ಬೋಧಿಪ—
ದಿಗಂಬರಸಿದ್ಧರು.
ಕಾಣಿಪುದು ನೋಡಿಲ್ಲಿ ಇಂದಿನೀ ಜಗವು
ಹೀನವಾಗೆನಿತು ಈ ಹೇಡಿ ಜೀವನದಿ !
ಇಂದೀಗ:—
ಆ ಮಹಿಮೆ ಆ ತಿರುಳು ಆ ಪುಣ್ಯಗಳ ನಡುವೆ
ಅಂಥ ಕಾಳದ ತೆರೆಯ—ಪರೆಯು ಒಂದು,
ಕಾಣುತಿರುವುದು ನೋಡು !
ಮತ್ತಲ್ಲಿ ಕಾಣುವುದು ಆ ತೆರೆಯ ಹಿಂದೇ
ಕಾಳನಟ ರಾಜನಾ ಭೀಕರದ ನೃತ್ಯ!
ವೀರರೆನ್ನದೆ ಮುಪ್ಪು ಮಕ್ಕಳುಗಳೆನ್ನದೇ
ಆತನಾ ನೃತ್ಯಲೀಲೆಯು ಅವರ ಬೆನ್ನಮೇಲೇ
ಹಗಲೆಲ್ಲ ನಡೆದೆ ಇಹುದು.

—'ನಾ. ಭಾ'

---

# ಮೂಕಮಗು

ಬಾಳು ವೊದಲಿಗೆ ಬತ್ತಿಬಂದಿರುವ ವಾಣಿ !
ಕಾಲು ಬುದರೆ ಕಾಣಬಹುದೆಂದೆ ನನ್ನಿ !
ಬಾಲ್ಯ ಬಯಲಾಗಿ ಈ ಬಾಳು ಅರಿಯನಾಯ್ತು;
ಲಾಲಪಾಲನೆ ಎಂದಿಗೋ ನಿಂತು ಹೋಯ್ತು;
ಕಾಯ ಕೊನರಿಕೆಗು ಆ ಕಾಯ ಕಾಣಿಕೆಗು !
ತಾಲಕಲೆಯುವುದೆಂತು ವಾತರಿದು ಬರದು !
ಹೆತ್ತ ಕರುಳಿದುವೆ ದೇವ !— ಮಾತರಿಯೆ !
ಚಿತ್ರಿಸುವೆ ಹಾವ ! ಭಾವ !!

ಇದ್ದ ಆರ್ಯರ ನಡತೆ ಗಿಳಿಗಾಣ ನೀಡಿ,
ಬುದ್ಧಿಗಳೆದುವ ಅನ್ಯರಾಚರಣೆಗೂಡಿ,
ತನ್ನ ತೇಜಸ್ಸನಿಂ ಶೂನಿರವೆಮಾಗಿ,
ಅನ್ಯತೇಜೋದಾಸ್ಯದೊಳು ಬಾಳೆ, ಬಾಗಿ,
ಬಾಳು ಕಳವಳಗೊಂಡು ತಾ ಬಳಲುವುದನು
ಕಾಳು ಸೆರೆ ಕಾಣದಿಹ ಒಡಲ ದೈನ್ಯವನು
ಹೇಳಿ ಕನಿಕರ ಬಡಿಸೆ ಬಾಯಿಲ್ಲವಲ್ಲ !
ಹೆತ್ತ ಕರುಳಿದುವೆ ದೇವ !— ಮಾತರಿಯೆ !
ಚಿತ್ರಿಸುವೆ ಹಾವ ! ಭಾವ !!

ಪೂರ್ವ ಪ್ರತಿಭಾ ಪುತ್ಥಲಿಗಳಂತೆ ಆಗಿ
ತೋರ್ವ ಶಕ್ತಿಯು ಇಲ್ಲ ಎದೆಯೊಲವ ಕೂಗಿ
ಬಾಹ್ಯಬಂಧನೆ ಬೆಳೆದ ಈ ಬಾಳಿನಲ್ಲಿ !
ಶಿಕ್ಷಣವು ಸಲೆ ದೊರಕದಿಹ ಗಾಳಿಯಲ್ಲಿ !
ಅತಿಥಿಗಾಳಾಗಿ ಸಿದ ಕಾಡಾಟದಲ್ಲಿ

ಬಟ್ಟೆ ಬಳಲಿಕೆ ನೀಗೆ ಆವ ಕಡೆಗೆಂದು ?
ತಟ್ಟುವೊಲು ನಿನ್ನೆದೆಯು ಕೇಳೆ ಬಾಯ್ಬರಿದು—
ಹೆತ್ತ ಕರುಳಿದುವೆ ದೇವ !— ಮಾತರಿಯೆ !
ಚಿತ್ರಿಸುವೆ ಹಾವ ! ಭಾವ !!

ಜಗದ ಜಗಲಿಯನೊಂದು ಅಡಿಯಿಂದಲಳಿದು
ಮುಗಿ ಮುಟ್ಟದಿಹ ಕಡಲುಗಳ ಕೂಡಿ ತಳೆದು
ನೆಗೆದು ಮೇಲಕ್ಕೇರಿ ಮತ್ತೆ ನೀ ಬೆಳೆದು
ಮುಗಿಲಿನೊಳು ಮುಗಿಗಾಣದಂತಾಗಿ ಉಳಿದು
ಎಳೆಗೂಸ ಕೂಸಾಗಿ ತಳಿರೊಳಗೆ ಆಡಿ
ಕಳೆಯುವನ ಪರಸುಖವನದರೊಳಗೆ ತೀಡಿ
ಮೂಡಿಸುವ ' ಕಲೆ 'ಯು ಬಾಯ್ಬಳಸಿನಾನಾಡೆ !

ಹೆತ್ತ ಕರುಳಿದುವೆ ದೇವ !— ಮಾತರಿಯೆ ?
ಚಿತ್ರಿಸುವೆ ಹಾವ ! ಭಾವ !!
ಬುದ್ಧಿ ಬೆಳೆಯಿಸಿ ತಿದ್ದಿ ತೋರಿಸಿದ ರೂಪ !
ಎದ್ದುಗಾಣಲು ಕಲ್ಪನೆಗೆ ಕಣ್ಣೆ ಲೋಪ !
ತಲ್ಪಗೆದೆಗೊಟ್ಟೆ ಶ್ರೀ. ಸಿರಿ ಹೃದಯ ತಲ್ಪ,
ಶಿಲ್ಪಿ ನಾ ಚಿತ್ರಿಸುವೆ ನಿನ್ನ ಅತ್ಯಲ್ಪ,
ಕಲ್ಪನೆಯ ಕೂಡಿ ಕಳೆಗೊಟ್ಟು ಅಡಿವಳಿರ !
ತಲ್ಪಿಯಾಗಿರುವಂತೆ ಬಗೆ ದೈನ್ಯದೋರಿ !
ಇದಕಿರಲಿ ಹರಿಕೆ ಇದೆ ಬಾಳ ಬೇಡಿಕೆಯೊ
ಹೆತ್ತ ಕರುಳಿದುವೆ ದೇವ !— ಮಾತರಿಯೆ !
ಚಿತ್ರಿಸುವೆ ಹಾವ ! ಭಾವ !!

—ಶಿಲ್ಪಿ ಶಿವರಾಮ

# ಜನಪದ ಸಾಹಿತ್ಯ

## ಬೀಸುವ ಹಾಡುಗಳು

ಸಂಗ್ರಾಹಕರು—ಶ್ರೀ ಗೋ. ಮ. ದೇಶಪಾಂಡೆ, (ತುಂಟರತಂಡ) ಬೆಳಗಾವಿ

### ಒಬ್ಬ ರಮಣಿಯ ಹಾರೈಕೆ

ಲಿಂಗಯ್ಯ ಒಳಗಿನ ಲಿಂಗ ಮೂರುತಿ ಸ್ವಾಮಿ ।
ಮಂಗಲಾರುತಿ ನಾ ಬೆಳಗಿ । ಬೇಡುವೆನು
ಮಾರಾಯರ ಮುಂದೆ ಮರಣವ ॥

### ಮಕ್ಕಳ ಮಹಿಮೆ

ಬಡತಾನ ಬಂದರ ಬಡಿಬ್ಯಾಡ ಮಕ್ಕಳನು ।
ಆಡ್ಯಾಡಿಬಂದು ತೊಡೀಮ್ಯಾಲೆ । ಕೂತರ
ಬಂದ ಬಡತಾನ ಮರೆಯುವದು ॥

ಯಾಲಕ್ಕಿ ಕಾಯ್‌ಸುಲಿದು ಯಾವಡಿಗಿ ಮಾಡಲಿ ।
ಊರೀಗೆ ಹೋಗ್ಯಾರ ರಾಯರು । ಬಾರದೇ
ಯಾವಡಿಗಿ ಮಾಡಿ ಫಲವೇನ ॥

### ಬಡವನೊಬ್ಬನ ಹೆಂಡತಿಯ ವಿಚಾರ

ಚಿಂತಾಕ ಇಡಲಿಲ್ಲ; ಚಿಂತೀಯ ಬಿಡಲಿಲ್ಲ ।
ಎಂಥಲ್ಲಿ ಕೊಟ್ಟ ಹಡೆದವ್ವ । ನಿನ್ನಮನಿ
ಚಿಂತಿ ಜರದ್ಹಾಂಗ ಜರದೇನ ॥

### ಭಕ್ತಿ

ದಾರಾಶಿ ನನಗಿಲ್ಲ; ಭಾಗ್ಯದ ಬಲವಿಲ್ಲ ।
ಕಲ್ಲೊಳ್ಳಿ ಊರೀನ ಕರಿರಂಗ । ವೆಂಕೋಬ ।
ನಿನ್ನಾಶಿ ನನಗ ಅನುಗಾಲ

ಸಂಗ್ರಾಹಕರು— ಶ್ರೀ ದತ್ತು ಮುದೇನಕೊಪ್ಪ

ಸೊಸಿ ಬರತಾಳಂತ ಖುಸಿ ಬಾಳ ಮನದಾಗ
ಸೊಸಿ ಬಂದು ಮಗನ ಕಸಗೊಂಡು । ಬಾಳ್ವಾಗ ।
ಮುಗಿಲಿಗೆ ಬಾಯಿ ತೆಗೆದಾಳ ॥

## ಕುಟ್ಟುವ ಹಾಡುಗಳು

ಸಂಗ್ರಾಹಕರು— ಶ್ರೀ ಶಿ. ಲಿಂ. ಕುಲಕರ್ಣಿ, ಕಾಲವಾಡ

ಕುಟ್ಟೀ ಕುಟ್ಟೀ ನನ್ನ ರಟ್ಟೆಲ್ಲ ನೊಂದಾವ ।
ಶೆಟ್ಟಿ ನಿಂಭತ್ತಾ ನುರಿಯಾವ ॥೧॥
ಶೆಟ್ಟಿ ನಿಂಭತ್ತಾ ನುರಿಯಾವ ತವರಲಿಂದಾ ।
ಕುಟ್ಟದಕ್ಕೀಯ ಕಳಿಸ್ಯಾರ ॥೨॥

\+ + +

ನಾನಾರಕುಟಲಾರೆ ಕೂಲೀನ ಕೊಡಲಾರೆ ।
ಯಾರಿಗೂ ದೈನಾಸ ಬಿಡಲಾರೆ ॥೧॥
ಯಾರಿಗೂ ದೈನಾಸ ಬಿಡಲಾರೆ ಅಣ್ಣಯ್ಯಾ ।
ಮರ್ರ್ಯಾದಿಯೂ ನಿನಮಗಳ ಕಳುಹಂದೆ ॥೨॥

## ಸಂಗಮೇಶನ ತೇರಿನ ಹಾಡು

ಸಂಗ್ರಾಹಕರು ಶ್ರೀ. ಫ. ಕೋ. ಕಲ್ಯಾಣಶ್ರೆಷ್ಠಿ, ಗದಗ

ಕರಿಜಾಲಿಯ ಮರವ । ಅದರಾಗ ಸಂಗಮನತೇರ । ಬಂಗಾರದ ಕಳಸ ತಂದಿಟ್ಟ ಹುನಗುಂದದ ಧೊರಿಯು ॥ ಪಲ್ಲ ॥

ಸಂಗಣ್ಣ ನಿನ್ನತೇರ । ಯಾವಣ್ಣ ಕಟ್ಟಿಸ್ಯಾನ ।
ಬಾಳುಳ್ಳಬಗುತ ಬಣಜಿಗ ಬಸವಲಿಂಗಣ್ಣ ।
ತೇರಕಟ್ಟಿಸಿ ಹೆಸರಾದಾ ॥೧॥

ಕಪ್ಪಡಿಸಂಗಣ್ಣ ಒಪ್ಪುಳ್ಳ ಭಂಗಾರ ।
ಇಟ್ಟಬಂಗಾರ ಪುಟವೇರಿ ಕೂಡಲ ಸಂಗ ।
ಕೃಷ್ಣಾನದಿಯನ್ನು ನೆನೆದಾನೆ ॥೨॥

ಬಂಗಾರದ ಕಳಸ ತಡದಾವ ।
ರಂಭೇರು ಕಳಸ ಹಿಡದರ ಕೂಡಲ ಸಂಗ ।
ಚಂದಿರ ಸಾಲ್ಯಾಗ ಇಳಿವ್ಯಾರ ॥೩॥

ಮಲ್ಲಿಗ್ಹೂವ್ವಿನದಂಡಿ । ಅಲ್ಲಿಟ್ಟೆ ಇಲ್ಲಿಟ್ಟೆ ।
ಕಲ್ಲಮೇಲಿಟ್ಟೆ ಕೈಬಿಟ್ಟೆ ಸಂಗಣ್ಣನ ।
ಪಲ್ಲಕ್ಯಾಗಿಟ್ಟೆ ಹಿಡಿಹೊನ್ನ ॥೪॥

ಧನ್ನೂರು ಚಂದ, ಧನ್ಯೇಶನ ಗುಡಿಚಂದ ।
ಹೊನ್ನನತನಡಿಗೆ ಹೊಳೀಚಂದ ಮುಂದಿರುವ ।
ತಂಗಿನೀಲವ್ವನ ಗುಡಿಚಂದ ॥೫॥

ಹೊನ್ನಿಯ ಹುಳದಂತೆ ಮುನ್ನೂರುದೀವಟಿಗೆ ।
ಚೆನ್ನ ಸಂಗಮದ ಬೈಲಾಗ ಹಿರಿಹೊಳಿ ಸಂಗ ।
ಬನ್ನಿಯ ಮುಡದು ಬರತಾನ ॥೬॥

ಆಗುವ ಮುಕ್ಕಿಗೆ ಶರಣು । ಗೋದಿಯ ಕಲ್ಲಿಗೆ ಶರಣು ।
ನಾಲ್ಕುಮುಕ್ಕಿಗೆ ಶಿವಶರಣು । ಕರಿಜಾಲಿಯಮರವ ॥೭॥

## ಬಾಗಿಲ ತಡೆದ ಹಾಡು

ಸಂಗ್ರಾಹಕರು— ಸೌ. ರಾಧಾದೇವಿ ಟೀಂಗಸೆ (ಸುರತ)

ನಾಗವೇಣಿಯೆ ನೀನು ಸಾಗಿ ಮುಂದಕೆ ಬಂದು
ಬಾಗಿಲನ್ನು ನೀ ತೆರೆ ಬೇಗ ॥೧॥

ಯಾರು ಬಂದವರೆಂದು ಪೇಳದೆ ನಿಮ್ಮ ಪೆಸರ
ಹ್ಯಾಂಗೆ ತೆಗೆಯಲಿ ಕದವನು ॥೨॥

ಕೇಳ ಯೆನ್ನಯ ಜಾಣೆ ಹೆಸರು ಮಾಧವನೆಂದು
ಬಾಗಿಲನ್ನಿನ್ನು ತೆಗೆ ಬೇಗ ॥೩॥

ಹೇಳಿ ಮಾಧವನಾರು ಬಾಲವಸಂತನೇನು
ಹ್ಯಾಂಗೆ ತೆಗೆಯಲಿ ಕದವನು ॥೪॥

ಮಾನವಂತಳೆ ನಾನು ಚಕ್ರಿ, ವಸಂತನಲ್ಲೆ
ಬಾಗಿಲನ್ನಿನ್ನು ತೆಗೆ ಬೇಗ ॥೫॥

ಚಕ್ರಿಯೆಂದರೆ ನೀವು ಹೇಳಿ ಕುಂಬಾರರೇನು
ಹ್ಯಾಂಗೆ ತೆಗೆಯಲಿ ಕದವನು ॥೬॥

ಚಲುವೆ ಕುಂಬಾರನಲ್ಲೆ ನೆಲವ ಹೊತ್ತನ ನಾನು
ಬಾಗಿಲನ್ನಿನ್ನು ತೆರೆಬೇಗ ॥೭॥

ನೆಲವ ಹೊತ್ತವರಾರು ನಾಗರಾಜರೆ ನೀವು
ಹ್ಯಾಂಗೆ ತೆಗೆಯಲಿ ಕದವನು ॥೮॥

ನಾಗರಾಜನು ಅಲ್ಲೆ ನಾಗಮರ್ದಿಯು ನಾನು
ಬಾಗಿಲನ್ನಿನ್ನು ತೆಗೆ ಬೇಗ ॥೯॥

ನಾಗಮರ್ದಿಯು ನೀವು ವಿಹಗರಾಜರೆ ಹೇಳಿ
ಹ್ಯಾಂಗೆ ತೆಗೆಯಲಿ ಕದವನು ॥೧೦॥

ವಿಹಗರಾಜನು ಅಲ್ಲೆ ಹರಿಯು ಯೆನ್ನಯ ಹೆಸರು
ಬಾಗಿಲನ್ನಿನ್ನು ತೆರೆ ಬೇಗ ॥೧೧॥

ಹರಿಯು ಯೆಂದರೆ ಯಾರು ಮಂಗನೇನಯ್ಯಾ ನೀವು
ಹ್ಯಾಂಗೆ ತೆಗೆಯಲಿ ಕದವನು ॥೧೨॥

ಅಲ್ಲ ಮಂಗನು ನಾನು ನಲ್ಲೆ ನಿನ್ನಯ ನಲ್ಲ
ನೆಂದು ನನ್ನನ್ನು ಕರೆವರು ॥೧೩॥

ಯೋಗಿಮಾನಸರಾಜಹಂಸ ಕೃಷ್ಣನು ನಾನು
ಕರೆವರೆನ್ನನ್ನು ಹರಿ ಯೆಂದು ॥೧೪॥

ಸೋತೆ ಜಾಣೆಯೆ ನಾನು ಮಾತಿಗೇತಕೆ ಮಾತು
ಬಾಗಿಲನ್ನು ನೀ ತೆರೆ ಬೇಗ ॥೧೫॥

ಕೇಳಿ ನಲ್ಲನ ಮಾತ ಜಾಣೆ ರುಕ್ಮಿಣಿ ನಗುತ
ಬಾಗಿಲನ್ನೀಗ ತೆರೆದಳು ॥೧೬॥





೧೭ನೆಯ ಸಾಹಿತ್ಯಸಮ್ಮೇಲನದ ಸ್ವಾಗತಾಧ್ಯಕ್ಷರಾದ

**ಶ್ರೀಮಾನ್ ಬಿ. ಎಂ. ಶ್ರೀ ಕಂಠಯ್ಯನವರು**



೧೬ನೆಯ ಸಾಹಿತ್ಯಸಮ್ಮೇಲನದ ಅಧ್ಯಕ್ಷರಾದ

**ಶ್ರೀಮಾನ್ ಆಲೂರ ವೆಂಕಟರಾಯರು**

## ೫-೧೦-೩೦ನೆಯ ದಿನ ಮೈಸೂರಲ್ಲಿ ನೆರೆದ
## ೧೬ನೆಯ ಕರ್ನಾಟಕ ಸಾಹಿತ್ಯಸಮ್ಮೇಲನದ ಅಧ್ಯಕ್ಷರಾದ
# ಶ್ರೀ ಆಲೂರ ವೆಂಕಟರಾಯರ ಭಾಷಣವು

**नाहं कर्ता हरिः कर्ता तत्पूजा कर्म चाखिलम् ॥**

ಸ್ವಸ್ತಿಶ್ರೀಮತ್ಕರ್ನಾಟಕ ವಾಙ್ಮಯ ದೇವತಾಪೂಜೆಗೆ ಸನ್ನದ್ಧರಾದ ಮಹಾಜನಗಳ ಚರಣ ಸನ್ನಿಧಿಯಲ್ಲಿ— ಸರಸ್ವತಿಯ ಪಾದಪದ್ಮಾರಾಧಕನಾದ ನಾನು ತಮ್ಮೆಲ್ಲರಿಗೆ ಸಹಸ್ರ ವಂದನೆಗಳನ್ನು ಸಮರ್ಪಿಸಿ ಅರಿಕೆಮಾಡಿಕೊಳ್ಳುವುದೇನೆಂದರೆ—

ನಾನು ಮಾತೃಭಾಷಾಪುತ್ರರಲ್ಲೊಬ್ಬನೆಂಬ ಪ್ರೇಮದಿಂದ ತಾವೆಲ್ಲರೂ ನನ್ನನ್ನು ಈ ಸಮ್ಮೇಲನದ ಪ್ರಾಣಪ್ರತಿಷ್ಠಾಚಾರ್ಯನಾಗಲು ಆಜ್ಞಾಪಿಸಿರುವಿರಿ. ಆ ಮಹಾಪದವಿಗೆ ನಾನು ತೀರ ಅಯೋಗ್ಯ ನಿರುವೆನೆಂಬುದು ನನಗೆ ಗೊತ್ತಿದ್ದರೂ, ತಮ್ಮ ಅಪ್ಪಣೆಯನ್ನು ಮೀರಲು ಮನಸ್ಸಿಲ್ಲದ್ದರಿಂದ ಅದನ್ನು ಅಂಗೀಕರಿಸಿರುವೆನು. ಹಿಂದಕ್ಕೆ ಈ ಪೀಠವನ್ನಲಂಕರಿಸಿದವರು ಅನೇಕ ವಿಧವಾಗಿ ಅವಳ ಪೂಜೆ ಯನ್ನು ಕಟ್ಟಿರುತ್ತಾರೆ. ಕೆಲವರು ಜ್ಞಾನದೀಪದಿಂದ ಅವಳಿಗೆ ಆರತಿಯನ್ನೆತ್ತಿರುತ್ತಾರೆ. ಕೆಲವರು ಅನನ್ಯವಾದ ಭಕ್ತಿಯಿಂದ ಅವಳ ಗುಣಗಳನ್ನು ಗಾನಮಾಡಿ ಅವಳ ಪ್ರಸಾದವನ್ನು ಪಡೆದಿರುತ್ತಾರೆ. ಕೆಲವರು ತಮ್ಮ ಸ್ನಿಗ್ಧಮಧುರಕಾವ್ಯಮಯವಾಣಿಯಿಂದ ಅವಳಿಗೆ ಪಂಚಾಮೃತಾಭಿಷೇಕ ಮಾಡಿರು ತ್ತಾರೆ. ಕೆಲವರು ಸಂಶೋಧನದ ನಂದಾದೀಪಗಳನ್ನಿಟ್ಟು ಅವಳ ಮೂರ್ತಿಯನ್ನು ಪ್ರಕಾಶಮಾನವಾಗಿ ಮಾಡಿರುತ್ತಾರೆ. ಮತ್ತೆ ಕೆಲವರು, ಶ್ರೀಮನ್ಮಹಾರಾಜರವರ ಕೃಪಾಜಲ ಪೋಷಿತವಾದ ಸುಂದರ ವಾದ ಉದ್ಯಾನಗಳಿಂದ ಸುಗಂಧಪುಷ್ಪಗಳನ್ನು ತೆಗೆದುಕೊಂಡು ಅವಳನ್ನು ಪೂಜಿಸಿರುತ್ತಾರೆ. ನಾನಾ ದರೋ, ಇವುಗಳಲ್ಲೊಂದನ್ನೂ ಮಾಡಲಾರೆ. ಗಾನದಿಂದ ಹೃದಯವನ್ನು ಸೆಳೆಯಲರಿಯೆ, ಜ್ಞಾನ ದಿಂದ ಬಗೆಯನ್ನರಳಿಸಲರಿಯೆ, ಸಂಶೋಧನದೀಪದಿಂದ ಬೆಳಗಲರಿಯೆ. ಕರ್ನಾಟಕ ಸಾಹಿತ್ಯಸಾಗರ ದಲ್ಲಿ ಸ್ನಾನಮಾಡಿ ಶುಚಿರ್ಭೂತನಾದವನೂ ನಾನಲ್ಲ. ಆದಕಾರಣ, ಪಾವನತರವಾದ ಅವಳ ಮೂರ್ತಿ ಯನ್ನು ಮುಟ್ಟಿ, ಅವಳನ್ನು ಭ್ರಷ್ಟಗೊಳಿಸಲಿಚ್ಛಿಸುವುದಿಲ್ಲ. ಸುಗಂಧಪುಷ್ಪಗಳನ್ನಾದರೂ ಏನು ಬೇಕೆಂದರೆ, ಸಹಾನುಭೂತಿಯ ದ್ರವವೂ ಕೂಡ ಇಲ್ಲದ ಮರುಭೂಮಿಯಲ್ಲಿ ಹುಟ್ಟಿದ ನನ್ನ ಬಳಿಯಲ್ಲಿ ಹೂವುಗಳೆಲ್ಲಿಂದ ಬರಬೇಕು ? ಆದರೆ, ನನಗೆ ಪೂಜೆಮಾಡಲಿಕ್ಕೆ ಬೇರೊಂದು ಬಗೆಯ ಅಧಿಕಾರವಿದೆ. ನಾನು ಆರ್ತಭಕ್ತನು. ಆದುದರಿಂದ ಆರ್ತಧ್ವನಿಯಿಂದ ಕೂಗಿಕೊಂಡು, ದೂರದಿಂದಲೇ ನಾಲ್ಕು ದೂರ್ವಾಪತ್ರಗಳನ್ನೇರಿಸಿ ಅವಳ ಪೂಜೆಮಾಡುವೆನು.

ಆದರೆ, ಹೀಗೆ ವಾಗ್ದೇವತೆಯ ಪೂಜೆ ಮಾಡುವ ಮುಂಚೆ, ನಾವು ಅವಳ ನಿಜಸ್ವರೂಪವನ್ನರಿತು ಕೊಳ್ಳಬೇಕಲ್ಲವೆ ? ದೇವತಾಸಮುದಾಯದಲ್ಲಿ ಆಕೆಯ ಸ್ಥಾನವಾವುದು ? ಅವಳು ಬ್ರಹ್ಮನ ಮಗಳೂ ಅಹುದು, ಪಟ್ಟದ ರಾಣಿಯೂ ಅಹುದು. ಇಡೀ ಸೃಷ್ಟಿಯನ್ನು ಹುಟ್ಟಿಸಿದಾತನು ಬ್ರಹ್ಮನು. ಇಡೀ ಸೃಷ್ಟಿಯನ್ನು ಹುಟ್ಟಿಸುವಾಗ ಆತನು ಅರ್ಥಾತ್ ವಾಣಿಯನ್ನೂ ಹುಟ್ಟಿಸಿದನು. ಆದುದರಿಂದ ಅವಳು ಆತನ ಮಗಳು. ಆದರೆ, ಮುಂದೆ ಸೃಷ್ಟಿಯೊಳಗಿನ ಸರ್ವ ವಾಚನಿಕ ವ್ಯವಹಾರಕ್ಕೆ ಅವಳ ಅವಶ್ಯಕತೆಯುಂಟಾದುದರಿಂದ, ಅವಳಿಗೂ ಬ್ರಹ್ಮನಿಗೂ ನಿತ್ಯ ಸಂಬಂಧವುಂಟಾಯಿತು, ಎಂದರೆ

ಆವಳು ಆತನ ಪಟ್ಟದ ರಾಣಿಯಾದಳು. ಇದನ್ನೇ ಈಗ ರೂಢವಾಗಿರುವ ಅಚೈತನ್ಯ ಭಾಷೆಯಲ್ಲಿ ಕೇಳುವುದಾದರೆ, ಮನುಷ್ಯನ ಮನಸ್ಸಿನಲ್ಲಿ ಹುಟ್ಟುವ ಯಾವತ್ತು ವಿಕಾರಗಳಿಗೂ ವಿಚಾರಗಳಿಗೂ ವಾಣಿಯ ಆವಶ್ಯಕತೆಯುಂಟು. ಇಲ್ಲದಿದ್ದರೆ, ವ್ಯವಹಾರವೆಲ್ಲವೂ ಕಟ್ಟಾಗುವುದು. ಮನದೊಳಗೆ ಜನಿಸಿದ ಹೊಸ ಭಾವನೆ, ಹೊಸ ಕಲ್ಪನೆ, ಹೊಸ ವಿಚಾರ–ಇವುಗಳಿಗೆಲ್ಲಕ್ಕೂ ಮೂರ್ತಸ್ವರೂಪ ವನ್ನು ಕೊಡುವುದು ವಾಣಿಯು. ಈ ಕಾರ್ಯವನ್ನು ಉತ್ಕೃಷ್ಟವಾಗಿ ನೆರವೇರಿಸುವ ವಾಙ್ಮಯವೇ ಉಜ್ವಲ ವಾಙ್ಮಯವು.

ವಾಙ್ಮಯದ ಈ ಧರ್ಮದ ಮೂಲಕವೇ, ಜನಾಂಗಕ್ಕೂ ವಾಙ್ಮಯಕ್ಕೂ ನಿತ್ಯವಾದ ಸಂಬಂಧ ವುಂಟಾಗುತ್ತದೆ. ಮನುಷ್ಯನು ಯಾವಾಗಲೂ ಸಮಾಜದಲ್ಲಿ ವಿಹರಿಸುವ ಪ್ರಾಣಿಯಾದುದರಿಂದ, ಅವನ ವಾಙ್ಮಯವು ಜನಜೀವನವನ್ನು ಪ್ರತಿಬಿಂಬಿಸುತ್ತದೆ. ಆದುದರಿಂದ, ನಿರ್ಜೀವವಾದ ಜನಾಂಗ ದಲ್ಲಿ ಸಜೀವವಾದ ವಾಙ್ಮಯವು ಹುಟ್ಟಲಾರದು. ಭರತಖಂಡದ ಜನತೆಯ ಜೀವನ, ಅಭ್ಯುದಯ, ಉತ್ಕರ್ಷ ಇವೆಲ್ಲವುಗಳ ಮೇಲೆ ನಮ್ಮ ವಾಙ್ಮಯವು ಅವಲಂಬಿಸಿರುತ್ತದೆ. ಕರ್ನಾಟಕದ ವಾಙ್ಮಯ ವೆಂದರೆ ಭರತಭೂಮಿಯ ಜನಜೀವನವನ್ನು ಒಂದು ವಿಶಿಷ್ಟವಾದ ಎರಕದಲ್ಲಿ ಹಾಕಿ ಮಾಡಿದ ಮೂರ್ತಿ. ಆದುದರಿಂದ, ಕರ್ನಾಟಕದ ವಾಙ್ಮಯದಲ್ಲಿ ಇವೆರಡೂ ಸಂಸ್ಕೃತಿಗಳು ಎಂದರೆ ಭರತಖಂಡ ಮತ್ತು ಕರ್ನಾಟಕ ಇವೆರಡೂ ಸಂಸ್ಕೃತಿಗಳು ಪ್ರತಿಫಲಿತವಾಗಿರಬೇಕು. ನಮ್ಮ ರೋಮ ರೋಮಗಳಲ್ಲಿ ರಾಷ್ಟ್ರೀಯತ್ವವೂ ಕರ್ನಾಟಕತ್ವವೂ ತುಂಬಿದ್ದರೆ ಮಾತ್ರವೇ ನಮ್ಮಿಂದ ಅತ್ಯಂತ ಉಜ್ವಲವಾದ ವಾಙ್ಮ ಯವು ಹುಟ್ಟಬಹುದು. ಇಲ್ಲದಿದ್ದರೆ ಎಂದೂ ಹುಟ್ಟಲಾರದು. ಸಾರಾಂಶವೇನೆಂದರೆ– ನಾವು ವಿಶ್ವ ಸಂಸ್ಕೃತಿಯನ್ನೊಳಕೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಯಾವಾಗಲೂ ಅನುಸಂಧಾನ ಮಾಡಿಕೊಂಡೇ ವಾಙ್ಮಯವನ್ನು ಹುಟ್ಟಿಸುವುದಕ್ಕೆ ಪ್ರವೃತ್ತರಾಗಬೇಕು.

## ೧ ವಾಙ್ಮಯದ ಅಂತಃಪ್ರಭಾವ

### ವಾಙ್ಮಯದ ಯಜ್ಞ, ದಾನ ತಪ

ಈ ರೀತಿಯ ಅನುಸಂಧಾನವನ್ನು ನಾವು ಮೂರು ವಿಧವಾಗಿ ಮಾಡಬಹುದು. ಅವು ಯಾವು ವೆಂದರೆ ವಾಙ್ಮಯಯಜ್ಞ, ವಾಙ್ಮಯದಾನ ಮತ್ತು ವಾಙ್ಮಯತಪ. ವಾಙ್ಮಯವನ್ನು ಹುಟ್ಟಿಸು ವಾಗ, ನಮ್ಮ ಮನಸ್ಸಿನಲ್ಲಿ ಯಾವ ತರಹದ ಪ್ರಯೋಜನಾಪೇಕ್ಷೆಯೂ ಇರದೆ, ಅದು ಕೇವಲ ಪರಮಾತ್ಮನ ಪೂಜೆಯೆಂದೂ ಅದರಿಂದಲೇ ಆತನು ತೃಪ್ತನಾಗುತ್ತಾನೆಂದೂ ಭಾವನೆಯನ್ನು ತಾಳಿ, ನಮಗೆ ದೇವರು ಕೊಟ್ಟಿರುವ ಸಕಲವಿಧಶಕ್ತಿಗಳನ್ನೂ ವಾಗ್ದೇವತೆಯ ಪಾದಾರವಿಂದದಲ್ಲಿ ಸಮರ್ಪಿಸು ವುದೇ ವಾಙ್ಮಯಯಜ್ಞ. ಈ ತರಹದ ವಿಶುದ್ಧ ಬುದ್ಧಿಯಿಲ್ಲದೆ, ಯಾವುದೊಂದು ಪ್ರಯೋಜನಾ ಪೇಕ್ಷೆಯಿಂದ ಹುಟ್ಟಿದ ವಾಙ್ಮಯವು ನಿಜವಾದ ವಾಙ್ಮಯವಾಗಲಾರದು. ಆದುದರಿಂದ, ಗ್ರಂಥಕರ್ತರು ಮತ್ತು ಲೇಖಕರು ವಾಗ್ದೇವತೆಯ ಸೇವೆಯೆಂದೇ ಗ್ರಂಥಗಳನ್ನು ಅಥವಾ ಲೇಖಗಳನ್ನು ಬರೆಯುವು ದಕ್ಕೆ ಪ್ರವೃತ್ತರಾಗಬೇಕು. ಹೀಗೆ ಮಾಡಿದರೆ ಮಾತ್ರ, ಅವರ ವಾಙ್ಮಯವು ತೇಜೋವಂತವಾಗುವುದು. ವಾಙ್ಮಯದಾನವೆಂದರೆ ನಾವು ಸಂಪಾದಿಸಿದ ಜ್ಞಾನವನ್ನು ಅನ್ಯರಿಗೆ ಕೊಡುವುದು, ಎಂದರೆ ಜ್ಞಾನ ಪ್ರಸಾರವು. ವಾಙ್ಮಯತಪವೆಂದರೆ ಆ ಜ್ಞಾನವನ್ನು ಗಳಿಸುವುದಕ್ಕೆ ಮಾಡಬೇಕಾದ ಸ್ವಾಧ್ಯಾಯ ಮತ್ತು ಅಭ್ಯಾಸ. ಈ ಬಗೆಯಾಗಿ, ನಾವು ವಿಶುದ್ಧವಾದ ಬುದ್ಧಿಯಿಂದ ಅಧ್ಯಯನಾದಿಗಳನ್ನು ಮಾಡಿ ಜ್ಞಾನ ಸಂಪಾದಿಸಿ ಜ್ಞಾನ ಪ್ರಸಾರವನ್ನು ಮಾಡಬೇಕು.

## ಕರ್ನಾಟಕದ ಪಂಚಕೋಶಗಳ ವಿಕಾಸ

ಈ ಪ್ರಕಾರದ ಯಜ್ಞದಾನ ತಪಗಳಿಂದ ವಾಙ್ಮಯದ ಮುಖಾಂತರವಾಗಿ ನಾವು ಕರ್ನಾಟಕದ ಪಂಚಕೋಶಗಳನ್ನೂ ವಿಕಾಸಗೊಳಿಸಬೇಕು. ಆ ಪಂಚಕೋಶಗಳು ಯಾವುವೆಂದರೆ—ಕರ್ನಾಟಕದ ಶರೀರ ಪ್ರಾಣ, ಮನಸ್ಸು, ವಿಜ್ಞಾನ ಮತ್ತು ಆನಂದ. ಇದರಿಂದ ನಮ್ಮ ವಾಙ್ಮಯದಲ್ಲಿ ಯಾವತ್ತು ತರಹದ ಗ್ರಂಥಗಳು ಹುಟ್ಟುವವು. ಕರ್ನಾಟಕದ ಭೂಗೋಲ, ಜನಸಂಖ್ಯೆ ಭೂಗುಣ, ಖನಿಜ ಸಂಪತ್ತು ಇವೇ ಮುಂತಾದವುಗಳು ಹುಟ್ಟಿದರೆ ಕರ್ನಾಟಕದ ಭೌತಿಕ ಶರೀರದ ವಿಕಾಸವಾಗುವುದು. ಆದರೆ, ಇಂಥ ವಾಙ್ಮಯದಲ್ಲಿ ಪ್ರಾಣಶಕ್ತಿಯು ಸಂಚಾರವು ಸಾಕಷ್ಟು ಇರದಿದ್ದರೆ, ಈಗಿನ ನಮ್ಮ ನಿರ್ಜೀವಪಠ್ಯಪುಸ್ತಕಗಳಂತೆ ಅವು ನಿಃಸತ್ವವಾಗುವವು. ಯಾವತ್ತು ವಾಙ್ಮಯಕ್ಕೆ ಪ್ರಾಣವೇ ಮುಖ್ಯ. ಆದಕಾರಣ ನಮ್ಮ ಯಾವತ್ತು ತರಹದ ವಾಙ್ಮಯದಲ್ಲಿ ಪ್ರಾಣಸಂಚಾಲನವಾಗುವಂತೆ ನಾವು ಎಚ್ಚರಪಡಬೇಕು. ಆದರೆ ಮನುಷ್ಯನು ಪ್ರಾಣವನ್ನಷ್ಟೆ ಹಿಡಿದುಕೊಂಡು ಜೀವಿಸಿದರೆ, ಅದು ಹೇಗೆ ಉಚ್ಚ ಜೀವನವಾಗುವುದಿಲ್ಲವೋ ಹಾಗೆ, ವಾಙ್ಮಯದಲ್ಲಿ ಮನಸ್ಸಿನ ವಿಕಾಸಕ್ಕೆ ಎಡೆಯಿರದಿದ್ದರೆ ಅದು ಉಚ್ಚ ವಾಙ್ಮಯವೆನಿಸುವುದಿಲ್ಲ. ಆದುದರಿಂದ ವಾಙ್ಮಯದ ಉನ್ನತಿಯನ್ನು ಬಯಸುವವರು ಸಮಾಜದ ಮನಸ್ಸನ್ನು ಸಂಪೂರ್ಣವಾಗಿ ವಿಕಾಸಗೊಳಿಸುವುದಕ್ಕೆ ತಕ್ಕ ಗ್ರಂಥಗಳನ್ನು ಬರೆಯಬೇಕು. ಇದರಿಂದ ನಮ್ಮ ವಾಙ್ಮಯದಲ್ಲಿ ಮಾನಸಶಾಸ್ತ್ರ, ಚರಿತ್ರೆ, ಇತಿಹಾಸ, ಕಥೆ ಕಾದಂಬರಿ, ನಾಟ್ಯಶಾಸ್ತ್ರ, ಅಭಿನಯಶಾಸ್ತ್ರ, ಸಂಗೀತಶಾಸ್ತ್ರ ಮುಂತಾದ ಗ್ರಂಥಗಳು ಹುಟ್ಟುವವು. ಕರ್ನಾಟಕದ ವಿಜ್ಞಾನಮಯ ಕೋಶದ ವಿಕಾಸವಾಯಿತೆಂದರೆ, ನಮ್ಮಲ್ಲಿ ಕಾವ್ಯಗಳು, ನಾಟಕಗಳು, ಪದಗಳು ವಿಶೇಷವಾಗಿ ಹುಟ್ಟುವವು. ಆನಂದ ಕೋಶವು ವಿಕಾಸವಾಯಿತೆಂದರೆ, ಶ್ರುತಿಸ್ಮೃತ್ಯಾದಿ ಧಾರ್ಮಿಕ ವಾಙ್ಮಯವು ವಿಶೇಷವಾಗಿ ಬೆಳೆಯುವುದು. ವಾಙ್ಮಯದಲ್ಲಿ ಯಾವ ಗ್ರಂಥಗಳು ವಿಪುಲವಾಗಿರುವವೆಂಬುದರ ಮೇಲಿಂದ ಆ ಸಮಾಜದ ಸುಧಾರಣೆಯು ಎಷ್ಟರ ಮಟ್ಟಿಗೆ ಆಗಿರುವುದೆಂಬುದನ್ನು ತಿಳಿಯಬಹುದು. ಸಾರಾಂಶವೇನಂದರೆ—ವಾಙ್ಮಯವು ಸುಧಾರಣೆಯನ್ನಳೆಯುವ ಉಷ್ಣತಾಮಾಪಕ ಯಂತ್ರವು. ಯಾವ ಸಮಾಜದಲ್ಲಿ ಉದಾತ್ತವಾದ ವಾಙ್ಮಯವಿಲ್ಲವೋ ಆ ಸಮಾಜವು ಹೀನ ಸಮಾಜವೆಂದು ತಿಳಿಯಬೇಕು. ಮತ್ತು ಅದರಲ್ಲಿರುವ ಗ್ರಂಥಗಳ ಮೇಲಿಂದ ಅದರ ಮಟ್ಟನ್ನು ಗೊತ್ತುಪಡಿಸಬಹುದು.

## ವಾಙ್ಮಯದಲ್ಲಿ ಸಾತ್ವಿಕ, ರಾಜಸ, ತಾಮಸಗಳೆಂಬ ಭೇದ

ಇಲ್ಲಿಯ ವರೆಗೆ ನಾವು ಹೇಳಿದುದು ಶುದ್ಧ ವಾಙ್ಮಯದ ವಿಷಯವು. ಆದರೆ ಸಮಾಜದಲ್ಲಿ ಯಾವಾಗಲೂ ಶುದ್ಧ ವಾಙ್ಮಯವೇ ರಚಿತವಾಗುತ್ತಿರುವುದಿಲ್ಲ. ಏಕೆಂದರೆ ಈ ಜಗತ್ತು ಸಾತ್ವಿಕ ರಾಜಸ ತಾಮಸರೆಂಬ ತ್ರಿವಿಧವಾದ ಜೀವರುಗಳಿಂದ ತುಂಬಿದೆ. ಆಯಾ ಜನರು ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಗ್ರಂಥ ಬರೆಯುವರು. ಆದುದರಿಂದ ಅವರವರ ಸ್ವಭಾವಕ್ಕನುಸರಿಸಿ, ವಾಙ್ಮಯದಲ್ಲಿಯೂ ಸಾತ್ವಿಕರು ರಾಜಸರು ಮತ್ತು ತಾಮಸರುಗಳೆಂಬ ತ್ರಿವಿಧ ಭೇದಗಳುಂಟಾಗುವವು. ತಾಮಸ ವೃತ್ತಿಯುಳ್ಳವನು ಭೂವಿವರಣೆಯನ್ನೇ ಬರೆಯಲಿ, ಇತಿಹಾಸವನ್ನೇ ಬರೆಯಲಿ ಅಥವಾ ಮತ್ಯಾವ ಗ್ರಂಥವನ್ನೇ ಬರೆಯಲಿ, ಆತನ ಗ್ರಂಥಗಳಲ್ಲಿ ಆತನ ತಾಮಸ ವೃತ್ತಿಯು ಒಡಮೂಡದೆ ಉಳಿಯುವದಿಲ್ಲ. ನಮ್ಮ ಕನ್ನಡ ವಾಙ್ಮಯದ ಕ್ಷೇತ್ರವನ್ನವಲೋಕಿಸಿದರೆ, ಅದರಲ್ಲಿ ಈ ಬಗೆಯಾಗಿ ಮೂರೂ ವಿಧದ ವಾಙ್ಮಯವಿದ್ದುದು ಕಂಡು ಬರುವುದು. ತಾಮಸ ವಾಙ್ಮಯವು ನಮ್ಮನ್ನು ಯಾವಾಗಲೂ ಅಧಃಪಾತಕ್ಕೆ ಒಯ್ಯುವುದರಿಂದ, ಅದನ್ನು ಹುಡುಕಿ ತೆಗೆದು ಅದಕ್ಕೆ ನಾವು ಶಾಶ್ವತವಾದ ಸಮಾಧಿಯನ್ನು ಕಾಣಿಸಬೇಕು. ರಾಜಸ ವಾಙ್ಮಯದೊಳಗಿನ ಸಾತ್ವಿಕ ಭಾಗಕ್ಕೆ ಪ್ರೋತ್ಸಾಹನ ಕೊಡಬೇಕು. ವಾಙ್ಮಯವನ್ನು ವಿಂಗಡಿಸುವ ರೀತಿಗಳು ಅನೇಕ ವಿಧವಾಗಿವೆ.

ಉದಾಹರಣಾರ್ಥವಾಗಿ—(೧) ಸ್ವತಂತ್ರ ವಾಙ್ಮಯ, ಅಸ್ವತಂತ್ರವಾಙ್ಮಯ (೨) ಹಳಗನ್ನಡ ಹೊಸಗನ್ನಡ (೩) ಗದ್ಯವಾಙ್ಮಯ-ಪದ್ಯವಾಙ್ಮಯ (೪) ಲಘುವಾಙ್ಮಯ ಉದಾತ್ತವಾಙ್ಮಯ (೫) ಜನಪದಸಾಹಿತ್ಯ ಮಹಾಜನಸಾಹಿತ್ಯ (೬) ಜ್ಞಾನವಾಙ್ಮಯ ಭಕ್ತಿವಾಙ್ಮಯ (೭) ಇವೇ ಮೊದಲಾಗಿ ನಾವು ವಾಙ್ಮಯದ ಕಡೆಗೆ ಅನೇಕ ದೃಷ್ಟಿಗಳಿಂದ ನೋಡಬಹುದು. ಅನೇಕರು ಆ ದೃಷ್ಟಿಯಿಂದ ವಿಭಾಗ ಮಾಡಿ ಪ್ರತಿಯೊಂದು ಬಗೆಯ ವಾಙ್ಮಯವನ್ನು ವಿಸ್ತಾರಗೊಳಿಸುವುದಕ್ಕೆ ಅನೇಕ ಉಪಾಯಗಳನ್ನು ಈ ಮೊದಲೇ ಸೂಚಿಸಿರುವುದರಿಂದ, ನಾನು ಆ ವಿವರಗಳನ್ನು ಇಲ್ಲಿ ಹೇಳುವ ಕಾರಣವಿಲ್ಲ. ಆದರೆ ವಾಙ್ಮಯದಲ್ಲಿ ಇವಕ್ಕೂ ಮಹತ್ವದ ವಿಭಾಗವೆಂದರೆ ಸಾತ್ವಿಕ ರಾಜಸ ಮತ್ತು ತಾಮಸ ಎಂಬುದೇ ಎಂದು ನನ್ನ ಅಭಿಪ್ರಾಯ. ಏಕೆಂದರೆ, ಮನುಷ್ಯನ ಅಥವಾ ಸಮಾಜದ ಶಾಶ್ವತ ಸುಖಕ್ಕೆ ಅಥವಾ ದುಃಖಕ್ಕೆ ಕಾರಣವಾಗುವುದು ಈ ತರಹದ ವಿಭಾಗವೇ.

ಮೇಲಿನ ವಿವೇಚನೆಯಿಂದ ವಾಙ್ಮಯದ ಅಂತಃಪ್ರಭಾವವು ಬೆಳೆಯಬೇಕಾದರೆ ಯಾವ ಯಾವ ಸಂಗತಿಗಳ ಅವಶ್ಯಕತೆಯಿರುತ್ತದೆಂಬುದು ಗೊತ್ತಾಗುವುದು. ಆ ಸಂಗತಿಗಳು ಯಾವುವೆಂದರೆ, (೧) ವಾಙ್ಮಯವನ್ನು ಹುಟ್ಟಿಸುವವರು ವಿಶ್ವಸಂಸ್ಕೃತಿಯನ್ನೊಳಕೊಂಡ ರಾಷ್ಟ್ರೀಯತ್ವವನ್ನೂ ಕರ್ನಾಟಕತ್ವವನ್ನೂ ಅನುಸಂಧಾನಮಾಡಿ ಗ್ರಂಥಗಳನ್ನು ಬರೆಯಬೇಕು. (೨) ವಿಶುದ್ಧವಾದ ಮನಸ್ಸಿನಿಂದ ಗ್ರಂಥಬರೆಯುವುದೂ ಒಂದು ಪ್ರಕಾರವಾಗಿ ಪರಮಾತ್ಮನ ಸೇವೆಯೆಂಬ ಭಾವನೆಯಿಂದ ಪ್ರೇರಿತರಾಗಿ ತಾವು ಬರೆಯುವ ಗ್ರಂಥದ ವಿಷಯವನ್ನು ಸತತವಾಗಿ ಅಭ್ಯಾಸಮಾಡಿ ಗ್ರಂಥ ಬರೆದು ಜ್ಞಾನಪ್ರಸಾರವನ್ನು ಮಾಡಬೇಕು. (೩) ಗ್ರಂಥಗಳನ್ನು ಬರೆಯುವವರು ಕರ್ನಾಟಕ ಪುರುಷನ ಶರೀರ, ಮನಸ್ಸು ಮತ್ತು ಆತ್ಮ ಇವು ಚೆನ್ನಾಗಿ ವಿಕಾಸಹೊಂದಲಿಕ್ಕೆ ಅನುಕೂಲವಾಗುವಂಥ ಗ್ರಂಥಗಳನ್ನು ಬರೆಯಬೇಕು. (೪) ಈ ಜಗತ್ತು ತ್ರಿವಿಧವಾದ ಜೀವರುಗಳಿಂದ ತುಂಬಿರುವುದರಿಂದ, ಯಾವಾಗಲೂ ಶುದ್ಧ ವಾಙ್ಮಯವು ಹೊರಡುತ್ತಿರುವುದು ಶಕ್ಯವಿಲ್ಲವಾದುದರಿಂದ, ಸಮಾಜವು ತಾಮಸವಾಙ್ಮಯವನ್ನು ಹುಡುಕಿತೆಗೆದು ಅದನ್ನು 'ಹೋಳೀ'ಮಾಡಬೇಕು. ಹೀಗೆ ಮಾಡುವುದರಿಂದ, ವಾಙ್ಮಯದ ಅಂತಃಪ್ರಭಾವವು ಬೆಳೆಯುತ್ತದೆ.

ಇನ್ನು ಇಂತಹ ಅಂತಃಪ್ರಭಾವವುಳ್ಳ ವಾಙ್ಮಯದಲ್ಲಿ ನಾವು ನಾಲ್ಕು ಸ್ಥೂಲಭಾಗಗಳನ್ನು ಮಾಡಬಹುದು. ಅವಾವವೆಂದರೆ (೧) ಪ್ರಾಣವಂತವಾಙ್ಮಯ (೨) ವೀರ್ಯವಂತ ವಾಙ್ಮಯ (೩) ಓಜಸ್ವಿವಾಙ್ಮಯ ಮತ್ತು (೪) ಸ್ವಾನಂದವಾಙ್ಮಯವೆಂದರೆ ಸತ್ವರಜತಮೋಗುಣಗಳಿಂದ ಮೀರಿದ ತ್ರಿಗುಣಾತೀತನಿಂದ ಅಥವಾ ಅಪರೋಕ್ಷಜ್ಞಾನಿಯಿಂದ ಹುಟ್ಟಿದ ವಾಙ್ಮಯ, ಇಂಥವನು ಕೇವಲ ವಾಙ್ಮಯಭಕ್ತನಿರುವುದಿಲ್ಲ- ಗ್ರಂಥಗಳನ್ನು ಬರೆಯಬೇಕೆಂದು ಆತನು ಗ್ರಂಥಗಳನ್ನು ಬರೆಯುವುದಿಲ್ಲ. ಪರಮಾತ್ಮನಾದವನು ಹೇಗೆ ಲೀಲೆಯಿಂದ ನೃತ್ಯಗಾಯನಗಳನ್ನು ಮಾಡುತ್ತಿರುತ್ತಾನೋ ಹಾಗೆ ಈ ಅಪರೋಕ್ಷಜ್ಞಾನಿಯು— ಈ ವಾಙ್ಮಯಯೋಗಿಯು ಲೀಲೆಗೋಸ್ಕರ ಗ್ರಂಥಗಳನ್ನು ಬರೆಯುತ್ತಾನೆ. ಈ ತರದ ಸ್ವಾನಂದವಾಙ್ಮಯದಲ್ಲಿಯೂ ತಾರತಮ್ಯಗಳಿವೆ. ಅವುಗಳಲ್ಲಿ ಸ್ಥೂಲವಾಗಿ ಮೂರು ವಿಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ (೧) ಸ್ವಯಂಭೂ ಅಂದರೆ ಉದ್ಭವ ಅಥವಾ ಒಡಮೂಡಿದ ವಾಙ್ಮಯ (೨) ಹೃದಯಾಕಾಶವಾಣಿಯಿಂದುದ್ಭವಿಸಿದ ವಾಙ್ಮಯ ಅಥವಾ ಆತ್ಮಪ್ರೇರಿತ ವಾಙ್ಮಯ (೩) ಮತ್ತು ಅಪೌರುಷೇಯ ವಾಙ್ಮಯ ಅಥವಾ ಪರಮಾತ್ಮಪ್ರೇರಿತ ವಾಙ್ಮಯ. ಈ ತರಹದ ಅತ್ಯಂತ ಉನ್ನತಶಿಖರಕ್ಕೇರಿದ ವಾಙ್ಮಯವು ಮೊದಲಿನ ಮೂರು ಕೋಶಗಳನ್ನು ದಾಟಿ ವಿಜ್ಞಾನ ಅಥವಾ ಆನಂದಮಯಕೋಶಗಳಲ್ಲಿ ಸೇರಿ ಆನಂದಪಡುತ್ತಿರುವವರಿಂದಲೇ ಹೊರಬೀಳುತ್ತದೆ. ಏಕೆಂದರೆ ಅಲ್ಲಿ ಒಣ ಬುದ್ಧಿಯ ಅಥವಾ ತರ್ಕದ ಆಟವು ಸಾಗುವುದಿಲ್ಲ. "ಬುದ್ಧಿ ವಿದ್ಯಾಬಲದಿ

ಪೇಳಿದ ಶುದ್ಧ ಕಾವ್ಯವಿದಲ್ಲ ತತ್ವಸುಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ । ಮಧ್ವವಲ್ಲಭ ತಾನೆ ಹೃದಯದೊಳಿದ್ದು ನುಡಿಸುವ ತೆರದಿ ನುಡಿದೆನಪದ್ಧಗಳನು....." ಎಂದು ಜಗನ್ನಾಥದಾಸರು ಉಸುರಿದ ಉಚ್ಚವಾದ ವಾತಾವರಣದಲ್ಲಿ ನಮ್ಮ ಶರಣರ ದಾಸರ ಸಾಹಿತ್ಯವೂ 'ಭರತೇಶವೈಭವ' 'ಶೂನ್ಯಸಂಪಾದನೆ'ಗಳಂಥ ಗ್ರಂಥಗಳೂ ಹುಟ್ಟಿರುವವು.

## ವಾಙ್ಮಯದಲ್ಲಿ ವಿಧಿಭಂಗ

ವಾಙ್ಮಯಲ್ಲಿ ನಾವು ಪುರಾತನರು ಹಾಕಿ ಕೊಟ್ಟ ಕಟ್ಟುಗಳನ್ನು ಎಷ್ಟರ ಮಟ್ಟಿಗೆ ಪಾಲಿಸಬೇಕೆಂಬ ಪ್ರಶ್ನೆಯು ಪದೇ ಪದೇ ಚರ್ಚಿಸಲ್ಪಡುತ್ತದೆ. ವ್ಯಾಕರಣಾದಿಗಳ ಕಟ್ಟನ್ನು ತಿಲಪ್ರಾಯವೂ ಸಡಲಿಸದೆ, ಅವರು ಅಂಗೀಕರಿಸಿದ ಅಪವಾದಗಳ ಕ್ಷೇತ್ರವನ್ನು ತುಸುವಾದರೂ ವಿಸ್ತಾರಗೊಳಿಸದೆ, ಅವುಗಳನ್ನು ಅಕ್ಷರಶಃ ಪಾಲಿಸಬೇಕೆಂದು ಒಂದು ಪಕ್ಷ. ಇದಕ್ಕೆ ವಿರುದ್ಧವಾಗಿ, ವ್ಯಾಕರಣ ಛಂದಸ್ಸು ಮುಂತಾದವುಗಳ ಕಟ್ಟನ್ನು ಚಟ್ಟನೆ ಕಿತ್ತೊಗೆದು ಯಥೇಚ್ಛವಾಗಿ ಸ್ವಾತಂತ್ರ್ಯಸುಖವನ್ನು ಅನುಭವಿಸಬೇಕೆಂಬ ಮತ್ತೊಂದು ಪಕ್ಷ. ಈ ಎರಡೂ ಪಕ್ಷಗಳು ಅಂಶತಃ ನಿಜವಿರುತ್ತವೆ. ಶಾಸನಭಂಗ ಅಥವಾ ವಿಧಿಭಂಗವನ್ನು ಮಾಡುವುದು ಪಾಪವೇನೂ ಅಲ್ಲ. ಆದರೆ, ಅದನ್ನು ಮಾಡುವವರಿಗೆ ಒಂದು ಬಗೆಯ ಅಧಿಕಾರವು ಬೇಕಾಗುತ್ತದೆ. ಅಲ್ಲದೆ ಕೊನೆಯ ಉಪಾಯವೆಂದೇ ನಾವು ಅದನ್ನು ಸ್ವೀಕರಿಸಬೇಕು. ಆ ತರಹದ ಅಧಿಕಾರವು ಮನೋಮಯ ಕೋಶವನ್ನು ದಾಟಿ ವಿಜ್ಞಾನ ಅಥವಾ ಆನಂದಮಯ ಕೋಶದಲ್ಲಿ ಇರುವವನಿಗೆ ಮಾತ್ರವೇ ಇರುತ್ತದೆ. ಅಂಥವರಿಗೆ ವಿಧಿ ಬಂಧನವಿಲ್ಲ. ಅಂಥವರು ಶಬ್ದಬ್ರಹ್ಮನನ್ನು ಅತಿವರ್ತಿಸಿದವರಾಗಿರುತ್ತಾರೆಂದರೆ ಸಲ್ಲುವುದು. ಸಾಮಾನ್ಯರು ಕಾರ್ಯಾಕಾರ್ಯವನ್ನು ನಿರ್ಣಯಿಸುವಾಗ ಶಾಸ್ತ್ರವನ್ನು ಪ್ರಮಾಣವಾಗಿ ಹಿಡಿದೇ ನಡೆಯಬೇಕು. ಆ ತರಹದ ಅಧಿಕಾರವಿಲ್ಲದೆ ಅಧಿಕಾರವಿರುತ್ತದೆಂದೂ ತಿಳಿಯುವುದು ಆತ್ಮವಂಚನೆಯು. ಸಾರಾಂಶವೇನೆಂದರೆ ಯಾವನೂ ಬುದ್ಧಿಪೂರ್ವಕವಾಗಿ ಯಾವುದೊಂದು ಉದ್ದೇಶವನ್ನಿಟ್ಟುಕೊಂಡು ವಿಧಿಭಂಗವನ್ನು ಮಾಡಲಿಕ್ಕೆ ಹೊರಡಬಾರದು. ಆತನು ತನ್ನ ವಿಷಯದಲ್ಲಿ ತನ್ಮಯನಾದಾಗ ವಿಧಿಭಂಗವು ತಾನಾಗಿಯೇ ಆದರೆ ಅಡ್ಡಿ ಇಲ್ಲ. ಇಂಥ ವಾಙ್ಮಯವೇ ಆದರ್ಶ ವಾಙ್ಮಯವು. ಇಂಥ ಪುರುಷರೇ ಆದರ್ಶ ಪುರುಷರು.

ವಾಙ್ಮಯದ ಅಭಿವೃದ್ಧಿಯ ಮೂಲ ತತ್ವಗಳಾವುವೆಂಬುದನ್ನು ಇಲ್ಲಿಯ ವರೆಗೆ ವಿವೇಚಿಸಿದ್ದಾಯಿತು. ಈ ಮೂಲ ತತ್ವಗಗಳನ್ನು ನಾನು ಇಷ್ಟು ವಿಸ್ತಾರವಾಗಿ ಹೇಳುವ ಕಾರಣವೇನೆಂದರೆ, ಇವುಗಳ ಅಜ್ಞಾನದ ಮೂಲಕ ಕನ್ನಡ ವಾಙ್ಮಯದ ವಿಮರ್ಶೆಯನ್ನು ಮಾಡುವುದರಲ್ಲಿ ಅನೇಕ ತಪ್ಪುಗಳುಂಟಾಗುತ್ತವೆ. ವಾಙ್ಮಯವೆಂದರೆ ಕೇವಲ ಭಾಷೆಯೆಂದು ಹಲವರ ತಿಳವಳಿಕೆ. ವಿಷಯಕ್ಕೆ ಇಂಥ ಜನರು ಮಹತ್ವವನ್ನು ಕೊಡದೆ ಭಾಷೆಗೆ ಮಹತ್ವವನ್ನು ಕೊಡುತ್ತಾರೆ. ಇದು ತಪ್ಪು. ಬ್ರಹ್ಮ ಸರಸ್ವತಿಯರ ಲಗ್ನವಾಗಬೇಕು, ಎಂದರೆ ವಿಷಯ ಮತ್ತು ಭಾಷೆ ಇವುಗಳ ಸಮ್ಮಿಶ್ರಣವಾಗಬೇಕು.

## ಕನ್ನಡ ವಾಙ್ಮಯದ ವಿಮರ್ಶೆ

ಇನ್ನು ನಾನು ಕನ್ನಡ ವಾಙ್ಮಯದ ಭೂತ ಮತ್ತು ವರ್ತಮಾನಗಳ ಕಡೆಗೆ ಹೊರಳುತ್ತೇನೆ. ಭೂತಕಾಲದ ವಾಙ್ಮಯಕ್ಕೂ ವರ್ತಮಾನಕಾಲದ ವಾಙ್ಮಯಕ್ಕೂ ಎಂದರೆ ಹಳಗನ್ನಡಕ್ಕೂ ಹೊಸಗನ್ನಡಕ್ಕೂ ಅತ್ಯಂತ ಭೇದವಿರುತ್ತದೆಂಬುದನ್ನು ನಾವು ಮೊದಲು ಲಕ್ಷ್ಯದಲ್ಲಿಡಬೇಕು. ಭೂತಕಾಲದ ವಾಙ್ಮಯವೇ ಒಂದು ವಿಧದಿಂದ ರೂಪಾಂತರವನ್ನು ಹೊಂದುತ್ತ ಹೊಂದುತ್ತ ಈಗಿನ ಹೊಸಗನ್ನಡ ರೂಪವನ್ನು ತಾಳಿರುತ್ತದೆಂಬುದು ಅಂಶತಃ ನಿಜವೇನೋ ಅಹುದು. ಆದರೂ, ಕನ್ನಡದಲ್ಲಿ ಅವೆರಡು ತರಹದ ಭಾಷೆಗಳ ನಡುವೆ ದೊಡ್ಡದೊಂದು ಕೊನ್ನಾರವು ಬಿದ್ದಿರುವುದೆಂಬುದನ್ನು ನಾವು ಅಲ್ಲ

ಗಳಿದು ಫಲವಿಲ್ಲ. ಭೂತಕಾಲದ ವಾಙ್ಮಯದ ಮುಖ್ಯಭಾಗವು ಬಹುಶಃ ಪದ್ಯರೂಪದಲ್ಲಿ ಇರುವುದೇ ಇದಕ್ಕೆ ಕಾರಣವಾಗಿರಬಹುದು. ಅದು ಏನೇ ಇರಲಿ, ವರ್ತಮಾನ ಕಾಲದ ಗದ್ಯ ವಾಙ್ಮಯವನ್ನು ಹುಟ್ಟಿಸುವುದಕ್ಕೆ ಹಳಗನ್ನಡವು ಬಲು ಮಟ್ಟಿಗೆ ನೆರವಾಗಲಾರದೆಂದು ನನ್ನ ಅಭಿಪ್ರಾಯ. ಇದರಿಂದ, ಹಳಗನ್ನಡವನ್ನು ನಾನು ನಿಂದಿಸುತ್ತೇನೆಂದು ತಾವು ಸರ್ವಥಾ ಭಾವಿಸಕೂಡದು. ಅದರ ಯೋಗ್ಯತೆಯನ್ನು ನಾನು ಅಲ್ಲಗಳೆಯುವುದಿಲ್ಲ. ಈಗ ನಾನು ಅದನ್ನು ಒಂದೇ ಒಂದು ದೃಷ್ಟಿಯಿಂದ ವಿಚಾರ ಮಾಡುತ್ತೇನೆ. ಅದಾವುದೆಂದರೆ ಭೂತಕಾಲದ ವಾಙ್ಮಯವು ವರ್ತಮಾನಕಾಲದ ಗದ್ಯ ವಾಙ್ಮಯವನ್ನು ಎಷ್ಟು ಮಟ್ಟಿಗೆ ವಿಕಾಸಗೊಳಿಸಬಹುದೆಂಬ ದೃಷ್ಟಿಯಿಂದ ಹಾಗೆ ವಿಚಾರ ಮಾಡಿದರೆ, ಹೊಸ ಗದ್ಯ ಶೈಲಿಗೆ ಅದು ವಿಶೇಷವಾಗಿ ಪ್ರಯೋಜನಕಾರಿಯಾಗಲಾರದು. ಹೊಸ ಗದ್ಯಶೈಲಿಯನ್ನು ನಾವು ಹೊಸತಾಗಿ ಹುಟ್ಟಿಸಬೇಕಾಗಿದೆ. ಹಳಗನ್ನಡದಲ್ಲಿಯ ಉತ್ಕೃಷ್ಟವಾದ ಮತ್ತು ಅರ್ಥಪೂರ್ಣವಾದ ಶಬ್ದಗಳು, ಶಬ್ದಸಂಯೋಜನೆಗಳು ನಮಗೆ ಉಪಯೋಗವಾಗುವವು. ಕನ್ನಡ ನುಡಿಯ ಜಾತಿ, ಕುಲಗೋತ್ರಗಳನ್ನು ನಾವು ಕಂಡುಹಿಡಿಯಬಹುದು. ಅದಕ್ಕೋಸ್ಕರ ಕೆಲವು ಪಂಡಿತರು ಹಳಗನ್ನಡದೊಳಗಿರುವ ಉತ್ಕೃಷ್ಟವಾದ ಗ್ರಂಥಗಳ ಸಾರಸರ್ವಸ್ವವೆಲ್ಲವನ್ನೂ ಹೀರಿ ಅದರ ಸಹಾಯದಿಂದ ಆ ಗ್ರಂಥಗಳನ್ನು ರಸವತ್ತಾಗಿ ಹೊಸಗನ್ನಡಕ್ಕೆ ಮಾರ್ಪಡಿಸಬೇಕು. ಹಳಗನ್ನಡವು ಕವಿಗಳಿಗೆ ಬಲು ಮಟ್ಟಿಗೆ ಸಹಾಯಕವಾಗುವದು. ಆದರೆ ಇಲ್ಲಿಯೂ ನಾವು ಒಂದು ಗಡಚಾದ ಪ್ರಶ್ನೆಯನ್ನು ಬಿಡಿಸಬೇಕಾಗಿದೆ. ಅದಾವುದೆಂದರೆ, ದಿನದಿನಕ್ಕೆ ಹೆಚ್ಚುಹೆಚ್ಚಿಗೆ ವಿಸ್ತಾರವಾಗುತ್ತ ನಡೆದಿರುವ ಹೊಸಗನ್ನಡದ ಶೈಲಿಗೆ ಹಳಗನ್ನಡದ ಪದ್ಯ ಶೈಲಿಯನ್ನು ಆದಷ್ಟು ಸಮೀಪಕ್ಕೆ ತರಬೇಕು. ನಾನೇನೂ ಕವಿಯಲ್ಲ. ಆದರೆ, ಇಷ್ಟು ಮಾತ್ರ ನಾನು ಹೇಳಬಲ್ಲೆ. ಏನೆಂದರೆ, ಕವಿಗಳ ಈ ಪ್ರಶ್ನೆಯನ್ನು ತೃಪ್ತಿಕರವಾಗಿ ಬಿಡಿಸದಿದ್ದರೆ, ವರ್ತಮಾನಕಾಲದ ಗದ್ಯಪದ್ಯಗಳಲ್ಲಿರುವ ಅಂತರವು ದಿನದಿನಕ್ಕೆ ಬೆಳೆಯುವುದು.

ವರ್ತಮಾನ ಕಾಲದ ವಾಙ್ಮಯದ ಮುಖ್ಯದೋಷವೇನಂದರೆ— ನಮ್ಮ ವಾಙ್ಮಯವು ಮುಂದೆ ಇಂಥದೊಂದು ವಿಶಿಷ್ಟವಾದ ಮಾರ್ಗವನ್ನು ಹಿಡಿದು ಸಾಗತಕ್ಕದ್ದಿರುತ್ತದೆಂಬ ವಿಷಯದಲ್ಲಿ ಐಕಮತ್ಯವಿಲ್ಲದಿರುವುದು. ಇದರ ಮೂಲಕ, ಮನ ಬಂದವರು ಮನಬಂದಂತೆ ಬರೆಯುತ್ತಾರೆ. ಕನ್ನಡ ನಾಡಿನಲ್ಲಿ ಜಾಗ್ರತಿಯುಂಟಾಗಿರುವುದೇ ಇದಕ್ಕೆ ಕಾರಣ. ಗ್ರಂಥಕರ್ತರೂ ಗ್ರಂಥಕರ್ತರಾಗತಕ್ಕವರೂ ಒಂದೆಡೆಗೆ ಸೇರಿ, ಗದ್ಯಪದ್ಯ ವಾಙ್ಮಯದ ಧ್ಯೇಯವನ್ನು ನಿಶ್ಚಯಿಸುವುದು ಬಹಳ ಅವಶ್ಯವಿದೆ. ಪ್ರತಿಯೊಂದು ವಿಷಯದಲ್ಲಿ ಆದರ್ಶ ಪುರುಷರು ಹುಟ್ಟಿ, ಆದರ್ಶ ಗ್ರಂಥಗಳನ್ನು ಬರೆದರೆ ಸಾಮಾನ್ಯ ಜನರು ಅವರನ್ನು ತಾವಾಗಿಯೇ ಹಿಂಬಾಲಿಸುವರೆಂಬುದು ನಿಜ. ಆದರೆ ಅಲ್ಲಿಯ ವರೆಗೆ ನಾವು ಕೆಲವು ಸಾಮಾನ್ಯ ನಿಯಮಗಳನ್ನಿಟ್ಟುಕೊಂಡು ನಡೆದರೆ ಒಳ್ಳೆಯದು.

## ವಿಚಾರ ಮಾಡತಕ್ಕ ಪ್ರಶ್ನೆಗಳು

ಕನ್ನಡ ವಾಙ್ಮಯ ಭಕ್ತರು ಒಟ್ಟುಗೂಡಿ ಬಿಡಿಸತಕ್ಕ ಪ್ರಶ್ನೆಗಳು ಅನೇಕವಾಗಿವೆ. (೧) ನಾಟಕದಲ್ಲಿಯ ಭಾಷೆಯು ಎಂಥದಿರಬೇಕು ? (೨) ಪುಸ್ತಕಗಳನ್ನು, ಮಾತಾಡುವ ಪದ್ಧತಿಯಲ್ಲಿ ಮುದ್ರಿಸಬೇಕೋ ಹೇಗೆ ? (೩) ಕವಿತೆಗಳಲ್ಲಿ ಪ್ರಾಸ, ಛಂದಸ್ಸು ಇವುಗಳ ವಿಷಯವಾಗಿ ಉದ್ಭವಿಸಿದ ಮತಭೇದದ ತೊಡಕನ್ನು ಹೇಗೆ ಬಿಡಿಸಬೇಕು ? (೪) ಪ್ರೌಢ ಗ್ರಂಥಗಳಲ್ಲಿ ಸ್ತ್ರೀಯರ ಮತ್ತು ಹಳ್ಳಿನಾಡದವರ ಭಾಷೆಯನ್ನು ಹೇಗೆ ಉಪಯೋಗಿಸಬೇಕು ? (೫) ಅಂಕಿತನಾಮಗಳನ್ನು ಬರೆಯುವುದರಲ್ಲಿ ಏಕರೂಪತೆ. (೬) ಸಂಸ್ಕೃತ ಅವತರಣಿಕೆಗಳನ್ನು ಯಾವ ಲಿಪಿಯಲ್ಲಿ ಬರೆಯಬೇಕು ? (೭) ಶಾಸ್ತ್ರೀಯ ಪರಿಭಾಷೆಯನ್ನು ನಿಶ್ಚಯಿಸುವುದು. (೮) ವ್ಯಾಕರಣ ವಿಷಯಗಳನ್ನು ಸಿದ್ಧಪಡಿಸುವುದು; ಬರಹಕ್ಕಾರ

ಗಳಲ್ಲಿ ಏಕರೂಪತೆ. (೯) ನಾಮಲೇಖನದಲ್ಲಿ ಏಕರೂಪತೆ. (೧೦) ಪಠ್ಯಪುಸ್ತಕಗಳ ವಿಚಾರ. ಇವೇ ಮುಂತಾದ ವಿಷಯುಗಳನ್ನು ನಾವು ಸಹಜವಾಗಿ ನಿರ್ಣಯಿಸಿ ಆಚರಣೆಯಲ್ಲಿ ತರಲಿಕ್ಕೆ ಪ್ರಯತ್ನಿಸಬಹುದು. ಇವಲ್ಲದೆ (೧) ಟಾಯಿಪ ರಾಯಟಿಂಗ ಯಂತ್ರಕ್ಕೆ ತಕ್ಕ ಲಿಪಿ (೨) ಮುದ್ರಣಾಲಯಗಳಿಗೆ ಅನುಕೂಲವಾಗುವಂತೆ ಟಾಯಿಪುಗಳಲ್ಲಿ ಬದಲಾವಣೆ (೩) ಬರಹಕ್ಕರಗಳಲ್ಲಿ ಸುಧಾರಣೆ (೪) ಲಘುಲೇಖನ ಪದ್ಧತಿ (೫) ಮೂದರಿಯ ಅಕ್ಷರಗಳ ಲೇಖನಪುಸ್ತಕವಿಲಿ. ಇವೇ ಮುಂತಾದ ಹೊಸ ಪ್ರಶ್ನೆಗಳ ವಿಷಯವಾಗಿಯೂ ವಿಚಾರವು ಅವಶ್ಯವಿದೆ.

## ೨ ಬಹಿರ್ವ್ಯಾಪ್ತಿ

ಇದು ವರೆಗೆ ಕನ್ನಡ ವಾಙ್ಮಯವನ್ನು ನಾನು ಅಂತರ್ದೃಷ್ಟಿಯಿಂದ ಯೋಚಿಸಿದೆನು. ಆದರೆ ವಾಙ್ಮಯದ ಪೂರ್ಣ ವಿಕಾಸಕ್ಕೆ ಇಷ್ಟೇ ಸಾಲದು. ಅದರ ವ್ಯಾಪಕತೆಯನ್ನು ಕುರಿತು ನಾವು ಯೋಚಿಸಲೇ ಬೇಕು. ಕರ್ನಾಟಕಕ್ಕಂತೂ ಈ ವ್ಯಾಪಕತೆಯ ಪ್ರಶ್ನೆಯ ಮಹತ್ವವು ಬಹಳವಿದೆ. ಕರ್ನಾಟಕವು ಎಲ್ಲ ಕಡೆಯಲ್ಲಿಯೂ ಕರಗುತ್ತ ನಡೆದಿದೆ. ನಾಲ್ಕೂ ದಿಕ್ಕುಗಳಲ್ಲಿ ನಮ್ಮ ಪ್ರದೇಶವು ಸಂಕುಚಿತವಾಗುತ್ತ ನಡೆದಿದೆ. ಗಡಿನಾಡಿನ ಗೋಳನ್ನು ನಾವು ಅಲಿಸಬಾರದೊ ? ಕರ್ನಾಟಕವೆಂಬುದೊಂದು ಜನಾಂಗವು, ಅದಕ್ಕೆ ಒಂದೇ ಒಂದು ಶರೀರ ಮನಸ್ಸು ಮತ್ತು ಆತ್ಮಗಳಿರುತ್ತವೆಂಬ ಭಾವನೆಯು ಎಲ್ಲಿಯ ವರೆಗೆ ನಮ್ಮಲ್ಲಿ ಉತ್ಪನ್ನವಾಗಿಲ್ಲವೋ ಅಲ್ಲಿಯ ವರೆಗೆ ನಮ್ಮ ಕನ್ನಡ ನುಡಿಯ ಅಭಿವೃದ್ಧಿಯು ಭರದಿಂದ ಸಾಗಲಾರದು. ಮನುಷ್ಯನ ಬಾಯಿಯಲ್ಲಿ ನಾಲಿಗೆಯಿರುವದೇನೋ ನಿಜ ಆದರೆ ನಾಲಿಗೆಯು ಬಾಯಿಯ ಸೊತ್ತಲ್ಲ. ಕಾಲಿಗೂ ನಾಲಿಗೆಯಿರುವುದು, ಕೈಗೂ ನಾಲಿಗೆಯಿರುವುದು, ಕಿವಿಗೂ ನಾಲಿಗೆಯಿರುವದು, ತಲೆಗೂ ನಾಲಿಗೆಯಿರುವುದು. ಬಾಯಿಯೊಳಗಿನ ನಾಲಿಗೆಯೇ ಇವುಗಳ ನಾಲಿಗೆ. ಅದಕಾರಣ, ಅವೆಲ್ಲ ಅವಯವಗಳಲ್ಲುಂಟಾವ ದುಃಖಗಳನ್ನು ನಾಲಿಗೆಯು ಉಸುರಲೇ ಬೇಕು. ಶರೀರದ ಯಾವ ಭಾಗದಲ್ಲಿಯೇ ದುಃಖವಾಗಿರಲಿ, ಅದು ನನ್ನ ದುಃಖವು ಎಂಬುವಷ್ಟು ನಮ್ಮ ಸಂವೇದನಾ ಶಕ್ತಿಯು ತೀಕ್ಷ್ಣವಾಗಬೇಕು. ಹೀಗೆ ಅದು ಈಗ ನಮ್ಮಲ್ಲಿ ಉಂಟಾಗಿರುವದೋ ? ಇಲ್ಲ. ನಾವು ಪಂಪರನ್ನರ ಉತ್ಸವಗಳನ್ನು ಮಾಡುತ್ತೇವೇನೋ ನಿಜ. ಆದರೆ ಪಂಪರನ್ನರ ವಾಸಸ್ಥಳಗಳು ಕನ್ನಡಿಗರ ಕೈಬಿಟ್ಟು ಹೋಗುತ್ತವೆಂಬುದರ ಅರಿವು ನಮಗಿರುವುದಿಲ್ಲ. ಇದು, ಗೋವುಗಳನ್ನು ಅನ್ಯರು ಸೆಳೆಯುತ್ತಿರುವಾಗ, ಅವುಗಳನ್ನು ಸಂರಕ್ಷಿಸಿಕೊಳ್ಳುವುದಕ್ಕೆ ತಿಲಪ್ರಾಯವೂ ಪ್ರಯತ್ನ ಪಡದೆ, ಮನೆಯಲ್ಲಿ ಬಂಗಾರದ ಗೋವುಗಳನ್ನು ಮಾಡಿ ಪೂಜೆಯನ್ನು ಮಾಡುತ್ತ ಕುಳಿತಂತೆ ಅಲ್ಲವೆ ?

ಗಡಿನಾಡುಗಳ ವಿಷಯವಾಗಿ ಎಂದಿಗೂ ಈ ತರಹದ ಜಗಳಗಳು ಇರತಕ್ಕವೇ. ಹಿಂದಕ್ಕೆ ತುರುಗಾಳಗಗಳಲ್ಲಿ ತುರುಗಳನ್ನು ಸಂರಕ್ಷಿಸುವವಕ್ಕೋಸ್ಕರ ವೀರಗಲಿಗಳ ಸಲುವಾಗಿ ವೀರಗಲ್ಲುಗಳು ನೆಡಿಸಲ್ಪಟ್ಟವೆ. ಈಗಿನ ದಿವಸಗಳಲ್ಲಿ, ಗಡಿನಾಡುಗಳಲ್ಲಿಯ ನಮ್ಮ ಗ್ರಾಮಗಳೆಂಬ ಗೋವುಗಳನ್ನು ಬದುಕಿಸುವ ಕಲಿಗಳು ಹುಟ್ಟಬಾರದೇ ?

ಉದಾಹರಣಾರ್ಥವಾಗಿ ಅನಂತಪುರ ಜಿಲ್ಲೆಯಲ್ಲಿಯ ಗುತ್ತಿ ಮತ್ತು ಹಿಂದೂಪೂರ ತಾಲೂಕಿನಲ್ಲಿಯ ೧) ಗುತ್ತಿ ೨) ಕೊನಕೊಂಡಲ ೩) ಬಿಚನಾಗಪಳ್ಳಿ ೪) ಚೌಲೂರು ೫) ಚೋಳಸಮುದ್ರ ೬) ಗೊರೇಪಲ್ಲಿ ೭) ಹಿಂದುಪೂರ ೮) ಕಗ್ಗಲ್ಲು ೯) ಕಿಡಕೇರಿ ೧೦) ಕೊಡಗೇಪಲ್ಲಿ ೧೧) ಕೊಟ್ನೂರ ೧೨) ಲೇಪಾಕ್ಷಿ ೧೩) ಮೂಗೂರ ೧೪) ಮಾನೇಪಲ್ಲಿ ೧೫) ಮಾನಸಾಂದ್ರ ೧೬) ಪರಲಿ ೧೭) ಪುಲಿಗುಂಟ ೧೮) ವನವೋಳು; ಕದಿರಿ ತಾಲೂಕನಲ್ಲಿಯ: — ೧) ಕದಿರಿ ೨) ಎರಡುಕೇರಿ ೩) ಕಂಬದೂರು ೪ ಮೊಲಕಲೇಡ; ಪೆನಗುಂಡ ತಾಲೂಕಿನಲ್ಲಿಯ:— ೧) ಬುಕ್ಕಪಟ್ಟಣ ೨) ಪೆನಗೊಂಡ ೩) ಮಡಕಶಿರ್ರ ತಾಡಪತ್ರಿತಾಲೂಕ:— ೧) ತಾಡಪತ್ರಿ ಧರ್ಮಾವರ ತಾಲೂಕ:— ೧) ದಾದಲೂರು

ಚಿತ್ತೂರ ಜಿಲ್ಹೆಯಲ್ಲಿ ಮದನಪಲ್ಲಿ ತಾಲೂಕಿನಲ್ಲಿ ಚಿಪ್ಪಲಿ, ಮೆದನಪಲ್ಲಿ, ಮಲ್ಲೆಳ, ಪೆದ್ದತಿಪ್ಪ ಸಮುದ್ರ, ಆಲೇತಿಪಳ್ಳಿ ಎಂಬವೂ ಪಲ್ಮನೇರ ತಾಲೂಕಿನಲ್ಲಿ ದಂಡಪಲ್ಲಿ ಕಳಕಟ್ಟೂರು ಎಂಬವೂ ಪುಂಗನೂರು ತಾಲೂಕಿನಲ್ಲಿ ಚಲಮುಂಗಲ, ಬುಡಿದಪಳ್ಳಿ, ಎಂಬಾಡಿ, ಕರ್ಷಣಿಪಳ್ಳಿ, ಮುದುಗಲ್ಲಪಳ್ಳಿ ಮೂಗವಾಡಿ, ನೆಲ್ಲಾಳ, ಪುದುಪಟ್ಲ, ಪುಂಗನೂರು ಎಂಬ ಗ್ರಾಮುಗಳೂ ಕೊಯಿಮುತ್ತೂರದ ಅವನಾಸಿ ತಾಲೂಕಿನಲ್ಲಿ ಅವನಾಸಿ ಮುಂತಾದ ಗ್ರಾಮುಗಳೂ ಗೋಬಿಚೆಟ್ಟಿಪಾಳ್ಯದಲ್ಲಿ ದಣ್ಣಾಯಕನಕೊಟ್ಟೂರು; ಶಿಪಾಳ್ಯ ಮುಂತಾದವುಗಳೂ ಕೊಳೆಗಾಲ ತಾಲೂಕೂ, ಕಡಪಾ ಜಿಲ್ಹೆಯಲ್ಲಿ ಬೆಂತಲ ಪತ್ತೂರು, ಗೋಟೂರು, ಗುರಪಾಂಡ, ಪುಷ್ಪಗಿರಿ ಜಮ್ಮಲಮಡಗು ತಾಲೂಕಿನಲ್ಲಿ ಡಾನವುಲಪಾಡ, ದೇವಗುಡಿ ಪೆದ್ದಮುದಿಯೂರು ಕಮಲಾಪುರ ತಾಲೂಕಿನಲ್ಲಿ ಚೌಡೂರು ಮುಂತಾದವುಗಳೂ ಪ್ರೊದಟೂರ ತಾಲೂಕಿನಲ್ಲಿ ರಾಮೇಶ್ವರ ತಂಗಟೂರು ಮುಂತಾದವುಗಳೂ ಇವುಗಳಲ್ಲದೇ ಸೇಲಂ ಜಿಲ್ಹೆಯಲ್ಲಿಯೂ, ಕೊಲ್ಲಾಪೂರ ಮಿರಜಿ ಮುಂತಾದ ಸಂಸ್ಥಾನಗಳಲ್ಲಿಯೂ ನೂರಾರು ಗ್ರಾಮುಗಳು ಅಚ್ಚಗನ್ನಡಗ್ರಾಮುಗಳಿದ್ದು ನಮ್ಮ ಔದಾಸೀನ್ಯದಿಂದ ಇವುಗಳಲ್ಲಿ ಅನೇಕ ಗ್ರಾಮುಗಳು ಈಗಾಗಲೇ ನಮ್ಮ ಕೈಬಿಟ್ಟಿವೆ, ಮತ್ತು ಅನೇಕ ಗ್ರಾಮುಗಳು ಕೈಬಿಟ್ಟು ಹೋಗುತ್ತಲಿವೆ, ಇದನ್ನು ಕೇಳಿ ಯಾವ ಕರ್ನಾಟಕಾಭಿಮಾನಿಯ ಹೃದಯುವು ಜರ್ರನೇ ಜರಕೊಳ್ಳಲಿಕ್ಕಿಲ್ಲ !

ವಾಙ್ಮಯವನ್ನು ಬೆಳಿಸುವುದೆಂದರೆ ಉತ್ಕೃಷ್ಟವಾದ ಗ್ರಂಥಗಳನ್ನು ಬರೆದರೆ ತೀರಿತೆಂದು ಕೆಲವರ ತಿಳುವಳಿಕೆ. ಇದು ತಪ್ಪು. ಪೂಜಾರಿಯು ಪರಿವಾರಸಮೇತನಾಗಿಯೇ ಪೂಜೆಯನ್ನು ಸಾಂಗಗೊಳಿಸುವಂತೆ ನಾವು ನಮ್ಮ ಪರಿವಾರಸಮೇತರಾಗಿಯೇ ವಾಗ್ದೇವತೆಯ ಪೂಜೆಯನ್ನು ಸಾಂಗಗೊಳಿಸಬೇಕಾಗುತ್ತದೆ. ಮುದ್ರಕರು, ಪುಸ್ತಕಮಾರುವವರು, ಇವರೇ ಮುಂತಾದವರು ನಮ್ಮ ಪರಿವಾರ. ಲಘುಪುಸ್ತಕಮಾಲೆ, ಮಧ್ಯಮ ಪುಸ್ತಕಮಾಲೆ, ಉದಾತ್ತಗ್ರಂಥಮಾಲೆ ಮುಂತಾದವುಗಳನ್ನು ಹೊರಡಿಸಿ ನಾವು ವಾಙ್ಮಯದ ಪ್ರಕಾಶವನ್ನು ಮಾಡಬೇಕು. ಕರ್ನಾಟಕವನ್ನೆಲ್ಲ ವಾಚನಾಲಯುಗಳ ಜಾಳಿಗೆಯಿಂದ ತುಂಬಿಬಿಡಬೇಕು. ವಾಚನಾಲಯುಗಳೆಂದರೆ ಕರ್ನಾಟಕತ್ವದ ವಿದ್ಯುಚ್ಛಕ್ತಿಯನ್ನೊಯ್ಯುವ ತಂತಿಗಂಬಗಳು. ಆದರೆ ಇವೆಲ್ಲ ಕಾರ್ಯಗಳು ಜರುಗಬೇಕಾದರೆ, ನಾವು ಮುಂದೆ ಅಭಿಮಾನವನ್ನು ಜಾಗ್ರತಪಡಿಸಬೇಕು. ಅದಕ್ಕೋಸ್ಕರ ಪ್ರಚಾರಕರು ಸತತವಾಗಿ ಕರ್ನಾಟಕವನ್ನು ಸುತ್ತುತ್ತಿರಬೇಕು.

ಚತುರ್ಮುಖವಾದ ಕರ್ನಾಟಕವು ಏಕಮುಖವಾಗಬೇಕಾಗಿದೆ. ಈಗ ಅದರ ನಾಲ್ಕುಮೋರೆಗಳನ್ನು ಏಕಮುಖವಾಗಿ ಮಾಡುವುದಕ್ಕೋಸ್ಕರ ಅಖಿಲಕರ್ನಾಟಕ ವಿಶ್ವವಿದ್ಯಾಲಯುವು ಅವಶ್ಯವಾಗಿ ಬೇಕಾಗಿದೆ. ಈಗ ನಮ್ಮ ಪ್ರಾಂತವು ನಾಲ್ಕು ವಿಶ್ವವಿದ್ಯಾಲಯುಗಳಿಗೆ ಅಧೀನವಾಗಿದೆ. ನಾಲ್ಕುಕಡೆಗೆ ನಾಲ್ಕು ತರಹದ ಪಠ್ಯಪುಸ್ತಕಗಳು, ನಾಲ್ಕುತರಹದ ಶೈಲಿಗಳು. ಈ ಪರಿಸ್ಥಿತಿಯು ಎಲ್ಲಿಯವರೆಗೆ ದೂರವಾಗಿಲ್ಲವೋ ಅಲ್ಲಿಯವರೆಗೆ ನಮ್ಮ ವಾಙ್ಮಯಕ್ಕೆ ಗಂಡಾಂತರವು ತಪ್ಪಿಲ್ಲ. ಈ ಗಂಡಾಂತರದ ಕಲ್ಪನೆಯು ನಮ್ಮ ವಾಙ್ಮಯಭಕ್ತರಲ್ಲಿ ಸಾಕಷ್ಟು ಇಲ್ಲದಿರುವುದು ಶೋಚನೀಯುವಾದ ಸಂಗತಿ. ಕರ್ನಾಟಕದ ಸಂಸ್ಕೃತಿಯುಲ್ಲಿ ಏಕರೂಪತೆಯುಂಟಾಗಬೇಕಾದರೆ ನಾವು ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸದೆ ಗತ್ಯಂತರವಿಲ್ಲ. ಅದು ಸ್ಥಾಪಿತವಾಗುವವರೆಗೆ ನಮ್ಮಕನ್ನಡ ವಾಙ್ಮಯದ ಅಭಿವೃದ್ಧಿಯು ಕುಂಟುತ್ತಲೆ' ಸಾಗುವುದು. ಆದುದರಿಂದ ಕನ್ನಡಿಗರೇ ಏಳಿರಿ, ಅಖಿಲ ಕರ್ನಾಟಕ ವಿಶ್ವವಿದ್ಯಾಲಯುವನ್ನು ಸ್ಥಾಪಿಸುವದಕ್ಕೋಸ್ಕರ ಟೊಂಕಕಟ್ಟಿರಿ. ಏಕೆಂದರೆ ಅದೆ ನಮ್ಮ ಸಾಹಿತ್ಯದೇವತೆಯ ಮುಖ್ಯ ಪೀಠ. ಅಖಂಡ ಕರ್ನಾಟಕವಿಶ್ವವಿದ್ಯಾಲಯುವಿಲ್ಲದವರೆಗೆ ನಮ್ಮ ಸಾಹಿತ್ಯದೇವತೆ ಪದಭ್ರಷ್ಟೆ. ಅದಾದ ಮೇಲೆಯೆ ಅವಳ ಪ್ರಾಣಪ್ರತಿಷ್ಠೆ.

॥ ಜಯಕರ್ನಾಟಕ ಮಾತೆ ॥

# ಪ್ರಪಂಚಪರಿಚಯ



## ಅಭಾಗ್ಯ ಒಕ್ಕಲಿಗ ?

ಹಿಂದುಸ್ಥಾನವು ಯಾವ ಶಸ್ತ್ರವನ್ನು ಹಿಡಿದು ಕಾದಿದರೆ ಬ್ರಿಟಿಶರ ದವಡೆಯೊಳಗಿಂದ ಪಾರಾಗಿ ಸಂಪೂರ್ಣ ಸ್ವತಂತ್ರವಾಗುವದು ಎಂಬುದನ್ನು ತೋರಿಸಿಕೊಟ್ಟ ಬಾರಡೋಲಿಯ **ಸರದಾರ ವಲ್ಲಭಭಾಯಿ ಪಟೇಲರು** ಹೀಗೆ ಬರೆದಿರುವರು:—

ಒಕ್ಕಲಿಗನು ಸಂಸಾರಕ್ಕೆಲ್ಲ ಅನ್ನದಾನವನ್ನು ಮಾಡುವ ದೊರೆಯು. ಅವನು ನಿರುದ್ಯೋಗಿಯಾದರೆ ಸಮಸ್ತ ಸಂಸಾರವೇ ಹಸಿವೆಯಿಂದ ಬಳಲಿ ಸಾಯುವದು. ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಆತನು ಜಗತ್ತಿನಲ್ಲೆಲ್ಲ ಪವಿತ್ರತಮನಾದ ಆತ್ಮನು. ಯಾವನಾದರೊಬ್ಬನ ಚರಿತ್ರವನ್ನು ತಿಳಿದುಕೊಳ್ಳಬೇಕಾದ ಪಕ್ಷದಲ್ಲಿ ಅವನು ತನ್ನ ಹೊಟ್ಟೆಯ ಪಾಡಿಗಾಗಿ ದುಡಿಯುತ್ತಿರುವನೋ ಅಥವಾ ಅನ್ಯರ ಅನ್ನಕ್ಕಾಗಿ ಕಾರ್ಯ ಮಾಡುತ್ತಿರುವನೋ ಎಂಬುದನ್ನು ನೋಡಬೇಕು; ಒಕ್ಕಲಿಗನು ಮಾನವಜಾತಿಯಲ್ಲಿ ಎಲ್ಲರಿಗಿಂತಲೂ ಕಡಿಮೆಯಾಗಿ ಎರಡನೆಯವರ ಮೇಲೆ ಅವಲಂಬಿಸಿರುವನು. ನಾನು ಒಕ್ಕಲಿಗರಿಗೆ **'ಬಡ ಅಭಾಗ್ಯ ಒಕ್ಕಲಿಗ'** ರೆಂದು ಅನ್ನಲು ಇಚ್ಛಿಸುವದಿಲ್ಲ. ಇಲ್ಲಿ ಪೃಥ್ವಿಯ ಮೇಲೆ ಕತ್ತನ್ನು ಎತ್ತಿಕೊಂಡು ಸಂಚರಿಸುವ ಹಕ್ಕು ಇರುವದಾದರೆ ಅದು ಒಕ್ಕಲಿಗರಿಗೆ ಮಾತ್ರ ಉಂಟು. ಅನ್ಯರಿಗಿಲ್ಲ. ಆತನು ಅನ್ಯರ ಎದುರಿಗೆ ಏಕೆ ಡೊಗ್ಗಾಲು ಊರಬೇಕು ? ಜಮೀನದಾರರೇ ಇರಲಿ ಅಥವಾ ಸರಕಾರವೇ ಇರಲಿ ಅವರೆದುರಿಗೆ ಏಕೆ ತಲೆ ಬೊಗ್ಗಿಸಬೇಕು ? ಅವನ ಎದುರಿಗೇ ಅವರೆಲ್ಲರೂ ತಲೆ ಬಾಗಿಸಿ ಸಲಾಮು ಮಾಡುವದು ಒಳಿತು. ಯಾಕಂದರೆ ಅವನ ವಿನಾ ಸರ್ವರೂ ಸ್ವರ್ಗದ ದಾರಿಯನ್ನು ಹಿಡಿಯಲಾರಂಭಿಸುವರು.

—ಯುವಕ (ಹಿಂದೀ)

---

## ಮುಸಲ್ಮಾನ ಯುಗದ ದಾನ

ಹಿಂದೂ, ಬೌದ್ಧ, ಮುಸಲ್ಮಾನ ಹಾಗೂ ಇಂಗ್ರೇಜೀ ಆಧಿಪತ್ಯದ ನಾಲ್ಕು ಯುಗಗಳು ಪೂರ್ಣವಾಗಿ ಭಿನ್ನವಾಗಿರುವವೆಂದೂ, ಹಿಂದಿನ ಯುಗದ ಚಿನ್ಹಗಳನ್ನು ಅಳಿಸಿ ಮುಂದಿನ ಯುಗವು ನೆಲೆಗೊಂಡಿತೆಂದೂ, ಭಾರತ ರಾಷ್ಟ್ರವು ಪ್ರತ್ಯೇಕ ಯುಗದ ಕೊನೆಗೆ ಮೃತವಾಗಿ ಮತ್ತೆ ಹುಟ್ಟಿತೆಂದೂ ಸರ್ವಸಾಧಾರಣವಾಗಿ ನಾವು ಎಣಿಸಿದ್ದೇವೆ. ಆದರೆ ಇದು ಸರಿಯಲ್ಲ. ಯುಗಯುಗಗಳಲ್ಲಿಯೂ ಭಾರತದ ಅದೇ ಪ್ರಾಣವು, ಅದೇ ಜಾತೀಯ ವಿಶೇಷತ್ವವು, ಧರ್ಮದ ಭಾಷೆಯು ರಾಜರ ಹಾಗೂ ರಾಜ್ಯಪದ್ಧತಿಯ ಅನೇಕ ಪರಿವರ್ತನೆಗಳಾದರೂ ಸಜೀವವಾಗಿದ್ದು ಮುಂದೆ ಸಾಗಿದೆ. ಬಾಹ್ಯವೇಷವು ಬದಲಾಗಿದ್ದರೂ ಆತ್ಮವಿಸ್ಮೃತಿಯಾಗಿಲ್ಲ.

ಹಿಂದಿನ ಯುಗದ ದಾನಗಳೇನು ? ಅದರಿಂದ ಮುಂದಿನ ಯುಗಕ್ಕೆ ಆದ ಲಾಭಗಳೇನು ? ಅವುಗಳ ಸಾಮಂಜಸ್ಯವು ಹೇಗಾಯಿತು ? ಜನಸಂಘದ ( Nationality ) ಚಾರಿತ್ರ್ಯದ ವಿಶೇಷತ್ವ ಹಾಗೂ ಗುಣ, ಸಂಸ್ಕೃತಿ, ವಿಚಾರ ಇವುಗಳ ಕ್ರಮವಿಕಾಸವು ಹೇಗಾಯಿತು ? ಇವೆಲ್ಲವನ್ನು ವಿಮರ್ಶಿಸುವದೇ ಇತಿಹಾಸದ ಕೆಲಸವಾಗಿದೆ.

ಪ್ರವಾಸಿ ( ಬಂಗಾಲೀ ಪ್ರಮುಖ ಮಾಸಿಕ ಪತ್ರಿಕೆ )ಯಲ್ಲಿ ವಿಖ್ಯಾತ ಇತಿಹಾಸಕಾರರಾದ ಸರ್ ಯದುನಾಥ ಸರಕಾರ ಇವರು ಮೇಲ್ಕಂಡ ವಿಚಾರವನ್ನು ಪ್ರದರ್ಶಿಸಿ ಮುಸಲ್ಮಾನ ಯುಗದ ದಾನದ ಬಗ್ಗೆ ಹೀಗೆ ಬರೆಯುತ್ತಾರೆ:—

ಮುಸಲ್ಮಾನ ಯುಗದಿಂದ ಹಿಂದುಸ್ಥಾನಕ್ಕೆ ಹತ್ತು ಲಾಭಗಳಾದವು. ಅವು ಇಂತು:—

(೧) ಪರದೇಶಗಳೊಡನೆ ಸಂಬಂಧವು ಸ್ಥಾಪಿತವಾಗಿ ಅವುಗಳೊಡನೆ ವ್ಯಾಪಾರವು ಪ್ರಾರಂಭವಾಯಿತು. ಭಾರತೀಯ ನೌಕಾಸೇನೆಯು (Navy) ನಿರ್ಮಿಸಲ್ಪಟ್ಟಿತು.

(೨) ಏಕಚ್ಛತ್ರ ರಾಜತ್ವದ ಮೂಲಕ ಎಲ್ಲಕಡೆಗೂ ಶಾಂತಿಯು ಹಬ್ಬಿತು. ವಿಶೇಷತಃ ವಿಂಧ್ಯಾದ್ರಿಯ ಉತ್ತರದಲ್ಲಿ.

(೩) ದೇಶದಲ್ಲಿ ಒಂದೇ ಶಾಸನ ಪದ್ಧತಿಯು ಮತ್ತು ಒಬ್ಬನೇ ರಾಜನ ಅಧಿಕಾರದ ಮೂಲಕ ಸರ್ವಸಾಧಾರಣವಾಗಿ ಜನರ ವ್ಯವಸಾಯ ಹಾಗೂ ವ್ಯಾಪಾರಗಳಲ್ಲಿ, ಬಾಹ್ಯ ಜೀವನದಲ್ಲಿ, ಸ್ವಲ್ಪ ಮಟ್ಟಿಗೆ ವಿಚಾರಧಾರೆಯಲ್ಲಿ ಸಹ ಏಕತೆಯ ಸ್ಥಾಪನೆಯಾಯಿತು.

(೪) ಉಚ್ಚಕುಲದ ಹಿಂದೂ ಮುಸಲ್ಮಾನರ ಸಾಮಾಜಿಕ ಆಚಾರವಿಚಾರಗಳಲ್ಲಿ, ಪೋಷಾಕಿನಲ್ಲಿ, ರೀತಿಯಲ್ಲಿ ಒಂದೇ ಪದ್ಧತಿಯ ಅನುಕರಣೆ

(೫) ಮೊಗಲ ಚಿತ್ರಕಲೆಯ ಉದ್ಭವ. ಪ್ರಾಚೀನ ಹಿಂದೂ (ಅರ್ಥಾತ್ ಅಜಂತೆಯ) ಚಿತ್ರಪ್ರಣಾಲಿ (ಚಿತ್ರ ರೀತಿ) ಹಾಗೂ ಹೊಸದಾಗಿ ಮೊಗಲರೊಡನೆ ಬಂದ ಚೀನದ ಚಿತ್ರಪ್ರಣಾಲಿ ಇವೆರಡೂ ಕೂಡಿ, ಅವುಗಳ ಸಮಾವೇಶ ಹಾಗೂ ಪರಸ್ಪರ ಪ್ರತ್ಯಾಘಾತದಿಂದ ಮತ್ತೊಂದು ರಮಣೀಯವಾದ ಚಿತ್ರಕಲೆಯು ಮುಂದೆ ಬಂದಿತು. ಇದೇ ಮೊಗಲ ಚಿತ್ರಕಲೆ. ಹಿಂದೂ ವಸ್ತುವನ್ನಿಟ್ಟುಕೊಂಡು ಮೊಗಲ ಚಿತ್ರಕಲೆಯ ರೀತಿಯನ್ನನುಸರಿಸಿ ಬರೆದ ಚಿತ್ರಗಳು ರಜಪೂತ ಪದ್ಧತಿಯವು.

ವಾಸ್ತುಶಿಲ್ಪದಲ್ಲಿ ಮುಸಲ್ಮಾನಯುಗದ ಕೀರ್ತಿಯು ಅಮರವಾಗಿದೆ. ಹಿಂದೂ ರಾಜರು ಸಹ ಇದರ ಅನುಕರಣೆಯನ್ನು ಮಾಡಿರುವರು.

ಮಲಮಲ್ಲು ರತ್ನಗಂಬಳಿಗಳನ್ನು ನೇಯುವದು, ಹರಳುಗಳನ್ನು ಕೂಡಿಸುವದು, ಬಂಗಾರದ ಮಲಮು ಮಾಡುವದು ಇವೇ ಮೊದಲಾದ ಶಿಲ್ಪಗಳು ಪ್ರಾರಂಭವಾದವು.

(೬) ಸಾಧಾರಣವಾಗಿ ವ್ಯವಹಾರಕ್ಕೆ ಉಪಯುಕ್ತವಾದ ಉರ್ದು ಭಾಷೆಯು ಪ್ರಚಾರದಲ್ಲಿ ಬಂದಿತು. ತುರ್ಕೀ ಹಾಗೂ ಪಠಾಣ ಸೈನಿಕರು ಭಾರತೀಯ ಅಂಗಡಿಕಾರರೊಡನೆ, ದೂತರೊಡನೆ, ಸೇವಕರೊಡನೆ ಈ ಭಾಷೆಯಲ್ಲಿ ಮಾತನಾಡುತ್ತಿದ್ದರು. ಫಾರಸಿಯಲ್ಲಿ ಇದಕ್ಕೆ "ಹಿಂದವೀ" ಅರ್ಥಾತ್ "ಭಾರತೀಯ" ಭಾಷೆಯೆಂದು ಹೆಸರು. ಇದಕ್ಕೆ ಈಗ ಹಿಂದುಸ್ಥಾನೀ ಎನ್ನುವರು. ದಕ್ಷಿಣದಲ್ಲಿ "ರೇಖತಾ" ಅರ್ಥಾತ್ ಪತಿತ ಅಪಭ್ರಷ್ಟ ಭಾಷೆಯೆನ್ನುವರು. ಆದರೆ ಈ ಭಾಷೆಯಲ್ಲಿ ಅನೇಕ ಶತಾಬ್ದಗಳವರೆಗೆ ಸಾಹಿತ್ಯವು ರಚಿಸಲ್ಪಡಲಿಲ್ಲ. ಫಾರಸಿ ಭಾಷೆಯೇ ರಾಜಕೀಯ ಭಾಷೆಯಾಗಿತ್ತು. ಎಲ್ಲ ಹಿಂದೂ ಮುಸಲ್ಮಾನ ಸರಕಾರೀ ನೌಕರರು, ಇಷ್ಟೇ ಅಲ್ಲ ಹಿಂದೂ ರಾಜರು ಕೂಡ ಫಾರಸೀ ಭಾಷೆಯಲ್ಲಿಯೇ ವ್ಯವಹರಿಸುತ್ತಿದ್ದರು. ಇದೂ ಒಂದು ರಾಷ್ಟ್ರೀಯ ಐಕ್ಯದ ಕಾರಣವಾಯಿತು.

(೭) ಸಂಸ್ಕೃತ ಭಾಷೆಯ ವ್ಯವಹಾರವು ಪ್ರಾಯಃ ಕಡಿಮೆಯಾಗುತ್ತ ನಡೆದದ್ದರಿಂದ, ಶಾಂತಿ ಐಶ್ವರ್ಯಗಳು ನೆಲೆಗೊಂಡಿದ್ದರಿಂದ ಹಿಂದೀ, ಬಂಗಾಲೀ, ಮರಾಠೀ ಮೊದಲಾದ ಪ್ರಾಂತೀಯ ಭಾಷೆಗಳಲ್ಲಿ ಸಾಹಿತ್ಯ ಸೃಷ್ಟಿಯು ಪ್ರಾರಂಭವಾಯಿತು.

(೮) ಹಿಂದೂ ಸಮಾಜದಲ್ಲಿ ಏಕೇಶ್ವರವಾದಿ ಧರ್ಮ ಸಂಪ್ರದಾಯದ ಉದ್ಭವವಾಯಿತು. ವೈದಾಂತಿಕ ಸುಫಿ ಧರ್ಮದ ಪ್ರಚಾರವಾಯಿತು.

(೯ ಇತಿಹಾಸವನ್ನು ಬರೆಯುವ ಪದ್ಧತಿಯು ಪ್ರಾರಂಭವಾಯಿತು. ಈ ಮೊದಲು ಈ ವಿಷಯದ ಕಡೆಗೆ ಹಿಂದುಗಳು ಲಕ್ಷ್ಯಕೊಟ್ಟದ್ದಿಲ್ಲ. ಈ ಕಾಲಕ್ಕಿಂತ ಮೊದಲು ಬರೆದ ಇತಿಹಾಸಗಳು ಅತಿಶಯೋಕ್ತಿಯಿಂದ ಕೂಡಿವೆ. ಅವುಗಳಿಗೆ ಪುರಾಣವೆಂದರೇ ಸಲ್ಲುವದು.

(೧೦) ಯುದ್ಧವಿದ್ಯೆಯ ಹಾಗೂ ಸಭ್ಯತೆಯು ( Civilisation ) ಅನೇಕ ಅಂಗಗಳಲ್ಲಿ ಉನ್ನತಿಯಾಯಿತು.

—ಪ್ರವಾಸಿ (ಬಂಗಾಲಿ)

---

## ವೈವಾಹಿಕ ಜೀವನವು ಹೇಗೆ ಸುಖಕರವಾದೀತು ?

### ೧ ಪರಸ್ಪರರಲ್ಲಿ ಸಹಾನುಭೂತಿಯು ಬೇಕು

ಸಿರಿವಂತರಿದ್ದು ಹೆಂಡತಿಗೆ ಪುರಾಣಕ್ಕೂ ಕೂಡ ಒಂದು ಬಿಲ್ಲಿಯನ್ನು ಕೊಡದ, ಹೆಂಡತಿ ಮಾಡಿದ ಒಳ್ಳೆ ಮನೆಯೂಟವನ್ನು ಬಿಟ್ಟು ಹಾಟೇಲುಗಳಲ್ಲಿ ನಾಲಗೆ ತಿಂಡಿಗಾಗಿ ಹೋಗುವ ಗಂಡಸರು ಹಲವರಿದ್ದಾರೆ.

ಹೆಂಡತಿಯು ತನ್ನ ಸುಖೋಪಭೋಗಗಳನ್ನು ಹೆಚ್ಚಿಸುವ ಒಂದು ವಸ್ತುವೆಂದೇ ಈ ಜನರ ಭಾವನೆ. ಹೆಂಗುಸರಿಗೂ ಒಂದು ವ್ಯಕ್ತಿತ್ವವಿದೆಯೆಂಬ ಅರಿವು ಕೂಡ ಇವರಿಗಿರುವದಿಲ್ಲ.

ರಾತ್ರಿಶಾಲೆಗಳನ್ನು ಆರಂಭಿಸಿ ಅಥವಾ ಬೇರಿನ್ನಾವ ಹಲವು ಬಗೆಗಳಿಂದ ಜನಾಂಗದ ಸುಧಾರಣೆಯನ್ನು ಮಾಡಲು ಯತ್ನಿಸಿ ಕೀರ್ತಿ ಪ್ರಸಿದ್ಧಿಗಳನ್ನು ಬಯಸುವವರು ಮೊದಲು ತಮ್ಮ ಹೆಂಡಂದಿರಿಗೆ ಕಲಿಸಿ ಸುಶಿಕ್ಷಿತರನ್ನಾಗಿ ಮಾಡುವುದು ಹೆಚ್ಚು ಫಲದಾಯಕವಾಗಿದೆ.

### ೨ ಮನಬಿಚ್ಚಿ ಮಾತುಕಥೆ

ಪರಸ್ಪರರು ತಮ್ಮ ತಮ್ಮ ಅಂತಃಕರಣದೊಳಗಿನ ವಿಚಾರಗಳನ್ನು ಮನಸು ಬಿಚ್ಚಿ ಹೇಳಿ ಕೇಳಿದರೆ ಸಂಸಾರವು ಎಷ್ಟೋ ಸುಖಕರವಾಗುವುದು.

### ೩ ಧೈರ್ಯ ಹೇಳಿ ಉತ್ತೇಜನ ಕೊಡುವುದು

ಸಂಸಾರದಲ್ಲಿ ಅವಶ್ಯವಿದೆ. ೪ ಅದರಂತೆ ಹೆಂಡತಿಯು ಗಂಡನ ನಡೆವಳಿಕೆಯ ನಿರೀಕ್ಷಣೆಯನ್ನೂ ಅಗತ್ಯವಾಗಿ ಮಾಡು

ತ್ತಿರಬೇಕು. ೫ ಮತ್ತು ಹೆಂಡಂದಿರು ಮಿತವ್ಯಯದಿಂದ ಶಕ್ಯವಿದ್ದಲ್ಲಿ ದುಡ್ಡು ಉಳಿಸಿ, ಯೋಗ್ಯ ಕೆಲಸಕ್ಕೆ ಅದನ್ನು ಇಸಿದುಕೊಳ್ಳಬೇಕು. ೬ ಸಂಸಾರವು ಸುಖಕರವಾಗಲಿಕ್ಕೆ ಗಂಡಹೆಂಡಿರಿಬ್ಬರೂ ಸುಸಂಸ್ಕೃತರಾಗಿರಬೇಕು. ಜಗತ್ತಿನ ಸ್ಥಿತಿಗತಿಯ ಜ್ಞಾನವುಳ್ಳವರಿರಬೇಕು. ಉಚ್ಚವಿಚಾರ, ಉದಾತ್ತ ಧ್ಯೇಯದ ವಾತಾವರಣದಲ್ಲಿ ಉಸುರಾಡಿಸುತ್ತಿರಬೇಕು.

—'ಸ್ತ್ರೀ' (ಮರಾಠಿ)

---

## ಹಿಂದಿನ ಕಾಲದ 'ಶುದ್ಧಿ' ಚಳವಳಿ

ಈಲಿಯಟ ಮತ್ತು ಡೌಸನ್ ಎಂಬ ಲೇಖಕರು ಬರೆದುದೇನೆಂದರೆ, ಸಿಂಧಪ್ರಾಂತದಲ್ಲಿ ೮ನೆಯ ಶತಮಾನದಲ್ಲಿ ಮುಹಮ್ಮದೀ ಧರ್ಮಕ್ಕೆ ಇಳಿಗಾಲವು ಪ್ರಾಪ್ತವಾಗಿ ಅಲ್ಲಿಯ ಮುಸಲ್ಮಾನರೆಲ್ಲ ಮತ್ತೆ ಮೂರ್ತಿ ಪೂಜಕರಾದರು. ಅಲ್ ಉತಬಿ ಎಂಬ ಇನ್ನೊಬ್ಬ ಲೇಖಕನು ತಾನು ಬರೆದ ಗಝುನಿ ಮುಹಮ್ಮದನ ಚರಿತ್ರೆಯಲ್ಲಿ ಬಹಳ ಮೋಜಿನ ಒಂದು ಪ್ರಸಂಗವನ್ನು ವರ್ಣಿಸಿದ್ದಾನೆ. ನವಾಸ ಶಹಾ ಎಂಬ ಮಾಂಡಲಿಕನನ್ನು ಮುಸಲ್ಮಾನಿ ಧರ್ಮವನ್ನು ಸ್ವೀಕರಿಸಿದ್ದಕ್ಕಾಗಿ ಗಝುನಿ ಮುಹಮ್ಮದನು ಒಂದು ಜಿಲ್ಲಾಧಿಕಾರಿಯನ್ನಾಗಿ ಮಾಡಿದನು. ಆದರೆ ನವಾಸ ಶಹನಿಗೆ ಮತ್ತೆ ಸೈತಾನಿ ಬುದ್ಧಿಯುಂಟಾಗಿ, ಹಲವು ದೇವರ ಪೂಜೆಯ ಮಡುವಿನ ಕಡೆಗೆ ಓಡತೊಡಗಿದನು. ಇಸ್ಲಾಮಿ ಧರ್ಮವನ್ನು ತ್ಯಜಿಸುವದಕ್ಕಾಗಿ ಮೂರ್ತಿಪೂಜಕರ ಧರ್ಮಗುರುಗಳೊಡನೆ ಸಂಧಾನವನ್ನು ನಡೆಸುತ್ತಲೆ ಗಿಝುನಿಯು ಬಂದು ಆತನನ್ನು ಪಟ್ಟದಿಂದ ತಳ್ಳಿದನು.

ಈ ವಿಷಯಕ್ಕೆ ಅಲ್ಬೆರುನಿಯು ಬರೆಯುವದೇನಂದರೆ, ಮುಸಲ್ಮಾನ ದೇಶಗಳಲ್ಲಿ ಗುಲಾಮರಾಗಿ ಮಾರಲ್ಪಟ್ಟ ಹಿಂದೂ ಜನರು ಏನಾದರೂ ಯುಕ್ತಿಪ್ರಯುಕ್ತಿಗಳಿಂದ ಮರಳಿ ಬಂದರೆ ಅವರನ್ನು ಹಿಂದೂ ಜನರು ತಮ್ಮ ಧರ್ಮದಲ್ಲಿ ತಕ್ಕೊಳ್ಳುತ್ತಿದ್ದರು. ಮರಳಿ ಬಂದವರನ್ನು ಕೆಲದಿನ ಗೋಮಯದಲ್ಲಿ ಕುಳ್ಳಿರಿಸುತ್ತಿದ್ದರು! ಬಳಿಕ ಗೋಮೂತ್ರದಿಂದ ಶುದ್ಧೀ ಕರಿಸಿಕೊಳ್ಳುತ್ತಿದ್ದರು. ಆದರೆ ಅಲ್ಬೆರುನಿಗೆ ಈಬಗ್ಗೆ ಸಂಶಯವುಂಟಾಗಿ ಕೆಲ ಬ್ರಾಹ್ಮಣರನ್ನು ಕೇಳಲಾಗಿ ಅವರು ಮುಸಲ್ಮಾನನಾದವನಿಗೆ ಪ್ರಾಯಶ್ಚಿತ್ತವೇ ಇಲ್ಲವೆಂದರು.

ಆಗಿನ ಕಾಲದಲ್ಲಿ ಅಂತರ್ಜ್ಞಾತಿ ವಿವಾಹಗಳೂ ರೂಢವಾಗಿದ್ದವು. ಕಾಶ್ಮೀರಿನ ಗೋವಿಂದ ಮನೆತನದ ಕೊನೆಯ ರಾಜನು ತನ್ನ ತಂಗಿಯನ್ನು ಒಬ್ಬ ಕಾಯಸ್ಥನಿಗೆ ಕೊಟ್ಟನು. (ರಾಜತರಂಗಿಣಿ ೪,೪೮೯). ಬಾಣಕವಿಯ ತಂದೆಯು ಒಬ್ಬ ಶೂದ್ರ ಸ್ತ್ರೀಯನ್ನು ಮದುವೆಯಾಗಿದ್ದನು. ಬಾಣಕವಿಯ ಬ್ರಾಹ್ಮಣ ತಾಯಿ ಮತ್ತು ಶೂದ್ರ ತಾಯಂದಿರಿಬ್ಬರೂ ಒಂದೆಡೆಗೇ ಇರುತ್ತಿದ್ದರೆಂದೂ ತಿಳಿದು ಬರುತ್ತದೆ. (ಹರ್ಷಚರಿತ್ರ ದ್ವಿತೀಯ ಉಚ್ಛ್ವಾಸ). ಪ್ರತಿಹಾರಬಾಹುಕನು ಬ್ರಾಹ್ಮಣ ಮತ್ತು ಕ್ಷತ್ರಿಯ ಕನ್ನಿಕೆಯರಿಬ್ಬರನ್ನೂ ಕೈಹಿಡಿದಿದ್ದನು. (J. R. S. 1894) ಇಂತಹ ಇನ್ನೂ ಹಲವು ಉಲ್ಲೇಖಗಳುಂಟು.

—ಭಾ. ಇ. ಸು. ಮಂಡಲ ಪತ್ರಿಕೆ. (ಮರಾಠಿ)

---

## ಆದರ್ಶಭೂತವಾದ ಒಂದು ಚಿಕ್ಕಮಕ್ಕಳ ಕಲಾಶಾಲೆ

ಶ್ರೀ. ಡಿ. ಬಿ. ಕರ್ವೆ. B. Sc. M. Ed. (ಲೀಡ್ಸ) ಎಂಬವರು ಬರೆದುದರ ಮುಖ್ಯಾಂಶಗಳು ಹೀಗಿವೆ:—

ಪ್ರೊ. ಸೆಝೆಕ್ ಎಂಬವರು ೧೮೯೬ರಲ್ಲಿ ವಿಯನ್ನಾ ಪಟ್ಟಣದಲ್ಲಿ ಚಿಕ್ಕಮಕ್ಕಳಿಗಾಗಿ ಒಂದು ಕಲಾಶಾಲೆಯನ್ನು ಸ್ಥಾಪಿಸಿದರು. ಇಲ್ಲಿ ಮಕ್ಕಳಿಗೆ ಚಿತ್ರಗಳನ್ನು ಹಾಗೆ ಬರೆಯಿರಿ, ಹೀಗೆ ಬರೆಯಿರಿ ಎಂದು ಏನೂ ಹೇಳುವದಿಲ್ಲ. ಮಕ್ಕಳಲ್ಲಿರುವ ಸಹಜ ಸ್ವಾಭಾವಿಕವಾದ ಕಲಾಶಕ್ತಿಯು ವಿಕಾಸವಾಗುವದಕ್ಕೆ ಆ ವಿದ್ಯಾರ್ಥಿಗಳು ಬಂದು ತಾವಾಗಿ ಕೇಳಿದಾಗ ನೆರವಾಗುವುದಷ್ಟೇ ತಮ್ಮ ಕರ್ತವ್ಯವೆಂದು ಶಿಕ್ಷಕರು ತಿಳಿಯುತ್ತಾರೆ. ಇಲ್ಲಿ ೫ ವರುಷದ ಚಿಕ್ಕಮಗುವಿಗೂ ಪ್ರವೇಶವಿದೆ. ೫ರಿಂದ ೯, ಮತ್ತು ೯ರಿಂದ ೧೪ ವಯಸ್ಸಿನ ಮಕ್ಕಳ ಎರಡು ವಿಭಾಗಗಳುಂಟು. ವಾರಕ್ಕೆ ನಾಲ್ಕು ತಾಸುಮಾತ್ರ ಪ್ರತಿಯೊಬ್ಬ ವಿದ್ಯಾರ್ಥಿಯು ಕಲಿಯಲಿಕ್ಕೆ ಬರುವನು.

ಚಿಕ್ಕಮಕ್ಕಳು ಕೈಯಲ್ಲಿ ದೊರೆತುದನ್ನು ತಕ್ಕೊಂಡು ಗೀಚಲಾರಂಭಿಸುವರು; ಇದೇ ಇವರ ಚಿತ್ರಕಲೆಯ ಮೊದಲನೆಯ ಪಾಠ; ಈ ಬಗೆಯಲ್ಲಿ ತೆಗೆದ ಮಕ್ಕಳ ಚಿತ್ರಗಳನ್ನು ಹಿರಿಯರ ಚಿತ್ರಗಳಿಗೆ ಸರಿಹೋಲಿಸಿ ಪರಿಕಿಸಲಾಗದು. ಈಗಿನ, ಅರ್ಥವಿಹೀನ ಕಲಾಸಾಂಪ್ರದಾಯಗಳಲ್ಲಿ ಜೀವವು ಇಲ್ಲದಾಗಿದೆ. ಆದುದರಿಂದ ಚಿಕ್ಕಮಕ್ಕಳಿಗೆ ಅನುಕರಿಸಲಿಕ್ಕೆಂದು ಪ್ರಾಚೀನ

ಅಥವಾ ಅರ್ವಾಚೀನ ಆದಾವ ಪ್ರಸಿದ್ಧ ಚಿತ್ರಕಾರನ ಚಿತ್ರಗಳನ್ನು ತೋರಿಸುವದಿಲ್ಲ. ಶಾಲೆಯಲ್ಲಿ ಆ ಬಗೆಯ ಮಾದರಿಯ ಚಿತ್ರಗಳನ್ನು ತೂಗುಬಿಟ್ಟಿಲ್ಲ. ಹುಡುಗರು ತಮ್ಮಷ್ಟಕ್ಕೆ ತಾವೇ ತಮ್ಮ ಸಾಂಪ್ರದಾಯವನ್ನು—ಪದ್ಧತಿಯನ್ನು ಹುಡುಕಿಕೊಳ್ಳುವರು. ಈ ತೆರನಾಗಿ ಬರೆದ ಚಿತ್ರಗಳು ಸಿಜವಾಗಿಯೂ ಬಹಳ ಮನೋಹರವಾಗಿವೆ. ಹುಡುಗರಿಗೆ ಶಾಲೆಗೆ ಬಂದೊಡನೆ ಅವರಿಗೆ ಬಣ್ಣ, ಕಾಗದ, ಪೆನ್ಸಿಲು, ಕುಂಚ ಮೊದಲಾದುದೆಲ್ಲವೂ ಬೇಡಿದಂತೆ ಕೊಡಲ್ಪಡುವುದು. ವಿದ್ಯಾರ್ಥಿಗಳು ಸೃಷ್ಟಿನಿರೀಕ್ಷಣೆಯಿಂದ ತಮ್ಮ ಚಿತ್ರಗಳನ್ನು ತಾವೇ ಬರೆಯುವರು.

ಈ ಶಾಲೆಯು ವಿದ್ಯಾರ್ಥಿಗಳು ಚಿತ್ರಕಾರರಾಗಬೇಕೆಂದು ಸಿಜಕರ ಅಭಿಪ್ರಾಯವಿಲ್ಲ. ಸೌಂದರ್ಯೋಪಾಸಕರಾಗಿ ರಸಿಕತನದಿಂದ ಜಗತ್ತನ್ನು ಅರಿಯುವ ಶಕ್ತಿ ಬಂದರಾಯಿತು. ಈಗಿನ ಅನೇಕ ನಿಯಮಬದ್ಧವಾದ 'ಶಾಸ್ತ್ರೀಯ' ಚಿತ್ರಕಲೆಯಿಂದ ಸೃಷ್ಟಿಸೌಂದರ್ಯವನ್ನು ಅರಿತುಕೊಳ್ಳುವ ಶಕ್ತಿಯೆ ನಷ್ಟವಾಗಿದೆ. ಈ ದೋಷವನ್ನು ದೂರಮಾಡುವುದೇ ಈ ಶಾಲೆಯ ಉದ್ದೇಶನು.

—ಪ್ರೊಗ್ರೆಸ ಆಫ್ ಎಜ್ಯುಕೇಶನ್

## ಕರುಳಿನೊಳಗೆ ಉಳಿವ ಸಿಲುಕು

ಅಮೇರಿಕೆಯ ಸರ್ ಲೇನ ಎಂಬವನು ಈ ಬಗ್ಗೆ ಹೀಗೆ ಹೇಳಿದ್ದಾನೆ—" ಪ್ರಾಚೀನ ಕಾಲದ ಸಮರ್ಥವಾದ ಜನಾಂಗಗಳು ಹಣ್ಣು ಹಾಲುಗಳ ಮೇಲೆಯೇ ಸಂಪೂರ್ಣವಾಗಿ ಜೀವಿಸುತ್ತಿದ್ದುದರಿಂದ ಅವರಿಗೆ ಕರುಳಿನ ಬೇನೆಯ ವಿಕಾರಗಳೇ ಇದ್ದಿಲ್ಲ. ಊಟವಾದೊಡನೆ ಬಹಿರ್ದಶೆಗೂ ಆಗಿ ಕರುಳುಗಳು ಸ್ವಚ್ಛವಾಗಿ ಉಳಿಯುತ್ತಿದ್ದುವು. ಅದರಿಂದ ಈಗಿನ ಸುಸಂಸ್ಕೃತರಿಗೆ ಆಗುವ ಬೇನೆಗಳಿಂದ ಅವರು ದೂರವಿದ್ದರು. ಈಗಿನ ತಾಯಂದಿರ ಹಾಲಿನಲ್ಲಿಯೆ ಕೆಲವೊಂದು ಅವಶ್ಯಕ ದ್ರವ್ಯಗಳು ಕಡಿಮೆಯಾಗಿರುವುದರಿಂದ ಚಿಕ್ಕಮಕ್ಕಳ ಕರುಳಿನೊಳಗಿನ ಹೊಲಸು ಹೊರಬೀಳುವ ಶಕ್ತಿಯೂ ಕುಂದಿದೆ. ಅದರಿಂದ ಹೊಲಸು ಕರುಳಿನೊಳಗೇ ಉಳಿಯುವುದು. ಅವ್ಯವಸ್ಥಿತವಾಗಿ ಆಗೊಮ್ಮೆ ಈಗೊಮ್ಮೆ ಹೊರಬೀಳುವುದು. ಅಂತೂ ಇಂತೂ ಮಗುವಿಗೆ ದಿನಕ್ಕೆ ಒಂದು ಸಲವಾದರೂ ಶೌಚಕ್ಕೆ ಆಗುವಂತೆ ಕಲಿಸಲಾಗುವುದು. ಆಹಾರ ಪದಾರ್ಥಗಳನ್ನು ಅಡಕವಾಗಿಟ್ಟುಕೊಳ್ಳುವುದಕ್ಕಾಗಿ ಇರುವ ದೊಡ್ಡ ಕರುಳಿಗೆ ಈ ಸಿಲುಕುಳಿದ ಹೊಲಸನ್ನು ಹೊರುವ ಕೆಲಸವನ್ನೆ ಮಾಡಬೇಕಾಗುವುದು. ಈ ಬಗೆಯಾಗಿ ಸಿಲುಕುಳಿವ ಹೊಲಸಿನಿಂದ ಅನೇಕಾನೇಕ ರೋಗಗಳು— ಕರುಳಿನ ಬೇನೆಗಳು— ಹುಟ್ಟುವುದು ಸಹಜ.

—ಲಾನ್ಸೆಟ್ (ಅಮೇರಿಕಾ)

## ಅಮೇರಿಕದ ಅದ್ಭುತ ಕಟ್ಟಡಗಳು

ನ್ಯೂಯಾರ್ಕಿನಲ್ಲಿ ಕ್ಲೆಸ್ಲರ ಕಟ್ಟಡವು ಈ ಕಳೆದ ಆಗೋಸ್ತಿನಲ್ಲಿ ಕಟ್ಟಲ್ಪಟ್ಟಿದೆ. ಇವರಲ್ಲಿ ೭೮ ಅಂತಸ್ತುಗಳು. ಸಣ್ಣ ಪಟ್ಟಣದಲ್ಲಿರುವಷ್ಟು ಜನರು ಇದರಲ್ಲಿ ವಾಸಮಾಡಬಹುದು. ಸದ್ಯದಲ್ಲಿ ೮೫ ಅಂತಸ್ತುಗಳಿರುವ ಎಂಪಾಯರ್ ಬ್ಯಾಂಕಿನ ಕಟ್ಟಡವು ಅದೇ ಪಟ್ಟಣದಲ್ಲಿ ಸದ್ಯಕ್ಕೆ ಕಟ್ಟಲ್ಪಡುವದು.

" ಹಿಂದೂ ಪತ್ರಿಕೆ "

# ಸಾಹಿತ್ಯ ಲೋಕ

**ಕರ್ನಾಟಕ ವೀರ ರತ್ನಗಳು:** — ಕರ್ನಾಟಕ ಗತ ವೈಭವವನ್ನು ಕನ್ನಡಿಗರ ಕಣ್ಣಿದಿರಿಗಿಟ್ಟು ತಾಯ್ನಾಡಿನ ದೀರ್ಘ ಸ್ವರೂಪವನ್ನು ಬೆಳಕಿಗೆ ತಂದ ಮೊದಲನೆಯ ಮನ್ನಣೆಯ ಮೀಸಲನ್ನುಂಡ ಶ್ರೀ ಆಲೂರ ವೆಂಕಟರಾಯರನ್ನು ಅರಿಯದ ಕನ್ನಡಿಗರುಂಟೆ ? ಕತ್ತಲುಗವಿದಿದ್ದ ಕನ್ನಡ ಸಾಹಿತ್ಯದಲ್ಲಿ ದೀವಳಿಗೆಯ ದೀಪಾವಳಿಯನ್ನು ನೋಡಬಯಸಿ ಅದಕ್ಕಾಗಿ ಹಗಲಿರುಳೂ ಹೆಣಗುತ್ತ ಬಂದ ಇವರ ಹರಕೆ ಇಂದಿಗೆ ಕೈಗೂ ಡುತ್ತಲಿದ್ದುದನ್ನು ಕಣ್ಣಿಂಡ ಇವರ ವೃದ್ಧಾತ್ಮವು ಇಮ್ಮಡಿ ನಾಲ್ಮಡಿ ನೂರ್ಮಡಿ ಹುರುಪಿನಿಂದ ಕನ್ನಡ ಮರಿಯಾನೆಗಳ ಮುಂದೆ ತಮ್ಮ ಪೂರ್ವಿಕರ ಬೀರ ಸಿರಿಯನ್ನು ಕತೆಮಾಡಿ ಬಣ್ಣಿಸುವುದಕ್ಕೆ ತೋಳು ಚಪ್ಪರಿಸಿ ಮುಂದೆ ಬಂದು ನಿಂತಿರು ವುದನ್ನು ನೆನೆದರೆ ಹೆಣವು ಕೂಡ ಕುಣಿಯಬೇಕು !

ಮೇಲೆ ಕಾಣಿಸಿದ ಇವರ ಪುಸ್ತಕದಲ್ಲಿ ಧುರಧೀರನಾದ ಧ್ರುವ, ನಿಜ ಭುಜ ಚಕ್ರವರ್ತಿಯಾದ ಮೂರ್ಮಡಿ ತೈಲಪ, ಚಕ್ರೇಶ್ವರ ಚೂಡಾಮಣಿಯಾದ ಚಾಲುಕ್ಯ ವಿಕ್ರಮ, ರಣರಂಗ ಸಿಂಗನಾದ ಕುಮಾರ ರಾಮ, ರಣಭೈರವಿಯಾದ ಅಕ್ಕಾದೇವಿ, ಇವರೇ ಮೊದಲಾದ ಇಪ್ಪತ್ತೊಂದು ವೀರ ರತ್ನಗಳ ಬೆಳಕು ಬಿತ್ತರಿಸಿದೆ. ಪ್ರತಿಯೊಬ್ಬ ಕನ್ನಡಿಗನೂ ತನ್ನ ಪೂರ್ವಿಕರ ಈ ಯಶೋಗೀತವನ್ನು ಆಲಿಸುವುದಕ್ಕೆ ತವಕಿಸಬೇಕು. ಇದರಲ್ಲಿ ಇತಿಹಾಸವಿದೆ, ಕಥೆಯಿದೆ, ಕಥಾಸಾಮಗ್ರಿಯಿದೆ. ಬೇಕಾ ದವರು ಕಂಡುಂಡು ತಣಿಯಲಿ.

ಇದರಲ್ಲಿಯ ಒಂದು ಹೊಸ ಮಾತೇನೆಂದರೆ ಕನ್ನಡದಲ್ಲಿ ವೀರಭಾಷೆಯನ್ನು ಹುಟ್ಟಿಸುವುದಕ್ಕೆ ವೀರ ಕನ್ನಡಿಗರ ಕಾಲದ ಬೀರನುಡಿಗಳನ್ನು ಬಳಕೆಯಲ್ಲಿ ತರುವುದಕ್ಕೆ ಲೇಖಕರು ಹಿರಿ ದಾಗಿ ಹವಣಿಸಿದ್ದಾರೆ. ಈ ಹವಣಿಕೆಯು ಇದರಲ್ಲಿ ಸಂಪೂರ್ಣ ವಾಗಿ ಸಾಧಿಸಿರದಿದ್ದರೂ ಮುಂದಿನವರಿಗೆ ಸಾಧಿಸಿಕೊಳ್ಳು ವುದಕ್ಕೆ ಹಾದಿಹಾಕಿ ಕೊಟ್ಟಂತಾಗಿದೆ. ಪ್ರಾಚೀನ ವೀರಶಾಸನ ಗಳಲ್ಲಿ ಕಂಡುಬರುವ ವೀರ ಶಬ್ದಗಳನ್ನಷ್ಟೇ ಇದರಲ್ಲಿ ಸೇರಿಸಿ ಕೊಂಡಿರುವ ಈ ಲೇಖಕರು ಜೈಮಿನಿ ಭಾರತದೊಳಗಿನ—ಹೆದ ರಿತು, ಕೆದರಿತು, ಬೆದರಿತು, ಒದರಿತು, ಉದುರಿತು, ಕದಡಿತು, ಕವಲಿತು, ಹುದುಗಿತು, ಹದಗಿತು, ಹವಿದು, ತಿವಿದು, ಹಾರಿ, ತೂರಿ, ಸಿರಿ, ಚೀರಿ, ಸವರಿ, ಜಡಿದು, ಜಗ್ಗಿ, ನುಗ್ಗಿ, ಮುಂತಾದ ನಡುವಣ ಕಾಲದ ಸಹಜ ಶಬ್ದಗಳನ್ನು ಬಳಸಿಕೊಂಡಿದ್ದರೆ ಭಾಷೆಯಲ್ಲಿ ವೀರದ ಬಿಗಿತವು ಇನ್ನೂ ಹೆಚ್ಚಬಹುದಾಗಿತ್ತು. ಮುಂದಿನ ಮುದ್ರಣದಲ್ಲಿಯಾದರೂ ಹೀಗೇ ಮಾಡಿಯಾರೆಂಬ ಆಶೆ.

ಕಥೆಗಳ ಸಂಗ್ರಹವೆಂಬ ಬಳಿಕ ವಿವಿಧತೆಯು ಬೇಕೇ ಬೇಕು. ಆದರೆ ಲೇಖಕರಿಗೆ ಈ ವಿಷಯದಲ್ಲಿಯೂ ತುಸು ಅವಸರವಾಗದೆ ಬಿಟ್ಟಿಲ್ಲ. ಪ್ರಸ್ತುತ ಪುಸ್ತಕದಲ್ಲಿ ವೈರಿರಾಜ ರನ್ನು ಸದೆಬಡಿಯುವದಕ್ಕಿಂತ ಹೆಚ್ಚಿನ ವಿವಿಧ ಚಮತ್ಕೃತಿ ಗಳಿಲ್ಲದ ಕತೆಗಳೇ ಮುಕ್ಕಾಲು ಮೂರು ಪಾಲಿಗಿರುವವರಿಂದ ಕೊನೆಕೊನೆಯ ಭಾಗಕ್ಕೆ ಓದುತ್ತ ಬಂದಂತೆ ತುಸು ಬೇಸರಾ ಗುತ್ತದೆ. ಚಾಲುಕ್ಯ, ರಾಷ್ಟ್ರಕೂಟ, ಗಂಗ, ಹೊಯಿಸಳರ ಕತೆಗಳನ್ನೋದಿ ತದ್ರೂಪವಾಗಿ ಅವುಗಳಂತೆ ಇರುವ ವಿಜಯ ನಗರದವರ ಕಥೆಗಳನ್ನು ಓದಲಿಕ್ಕೆ ಜೀವಕ್ಕೆ ಒಲ್ಲೆನಿಸು ತ್ತದೆ. ವಾಸ್ತವಿಕವೆಂದರೆ ವಿಜಯನಗರದ ಇತಿಹಾಸವು ಅರ್ವಾಚೀನವಾಗಿರುವದರಿಂದ ನಮಗೆ ಸಮೀಪದ್ದೆನಿಸಿ ಹೆಚ್ಚು ಅಭಿಮಾನವುಂಟಾಗಬೇಕು.

ಕುವರಲಕ್ಷ್ಮ, ಕುಮಾರರಾಮ, ಹೊಯ್ಸಳ, ಅಕ್ಕಾದೇವಿ, ಓಬವ್ವ ಮುಂತಾದವರ ಕತೆಗಳು ಈ ಪುಸ್ತಕದಲ್ಲಿ ವಿವಿಧತೆ ಯನ್ನು ವಿಶೇಷವಾಗಿ ಅಲಂಕರಿಸಿವೆ. ಇವುಗಳ ಜೊತೆಗೆ ಬೆಳವಡಿಯ ಮಲ್ಲಮ್ಮ, ಕಿತ್ತೂರ ಚನ್ನಮ್ಮ ಮುಂತಾದ ವಿಖ್ಯಾತ ವೀರನುಹಿಳೆಯರ ಕಥೆಗಳು ಸೇರಿದ್ದರೆ ಹೆಚ್ಚು ಸೊಗಸಾಗುತ್ತಿತ್ತು.

ಲೇಖಕರು ಪುಸ್ತಕದ ಕೊನೆಗೆ ಸುಮಾರು ನೂರಾ ಐವತ್ತು ಪ್ರಾಚೀನ ವೀರಶಬ್ದಗಳ ಕೋಶವೊಂದನ್ನು ಜೋಡಿಸಿದ್ದು ಬಹಳ ಒಳಿತಾಗಿದೆ. ೧೫೦ ಪುಟದ ಈ ಪುಸ್ತಕಕ್ಕೆ ಒಂದು ರೂಪಾಯಿ ಬೆಲೆಯು ಅಷ್ಟೇನು ಹೆಚ್ಚಲ್ಲ. ಇದನ್ನು ಧಾರವಾ ಡದ ಶಿಕ್ಷಣ ಸಮಿತಿಯು ಪ್ರಸಿದ್ಧಿಸಿದೆ. ಸ್ತುತ್ಯ.

**ನನ್ನ ಗೋಪಾಲ-(ನಾಟಕ)** ಬರೆದವರು ಕೆ. ವ್ಹಿ. ಪುಟ್ಟಪ್ಪ ನವರು ಎಮ್. ಎ; ಪ್ರಕಟನಾಸ್ಥಳ ಮೈಸೂರು ಮಕ್ಕಳು ಕಚೇರಿ ಮೈಸೂರು. (ಮೇಲ್ಸಂಚಿಕೆ) ಬೆಲೆ ೪ ಆಣೆ.

ಇದು ಶ್ರೀ ಪುಟ್ಟಪ್ಪನವರು ಚಿಕ್ಕಮಕ್ಕಳಿಗಾಗಿ ಬರೆದುದೊಂದು ಚಿಕ್ಕನಾಟಕ. ನಾಟ್ಯವಿಷಯು—ಚಿಕ್ಕಮಕ್ಕಳ ಪರಿಶುದ್ಧವಾದ ಭಾವನೆಗಳ ಗೋಪಾಲಬಾಲನ ಭಕ್ತಿ, ವಾತ್ಸಲ್ಯ ಹಾಗೂ ಲೀಲೆಗಳ ಆವಿಷ್ಕರಣ ! ನಾಟಕಕಾರರು—ಯಮುನ ಸೋಲು ಬರೆದು ಮುದಿಯ ಮನ ಸೋಲ ಹಚ್ಚಿದ, 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' ಬರೆದು ಎಳೆಮಕ್ಕಳನ್ನು ಮರುಳು ಗೊಳಿಸಿದ ಕವಿಗಳು ! ಕೇಳುವದೇನಿದೆ ? ಹುವ್ವಿಗೆ ತಕ್ಕ ಹೂಗಾರ ! ನಾಟಕದಲ್ಲಿ ಆದರ್ಶಜೀವನದ ಚೆಲುವನ್ನು ಹರಡಿ ಸಾಧನವನ್ನೂ ಸೂಚಿಸಿರುವರು. ಆದರೆ ಇಲ್ಲೊಂದು ಮಾತು; 'ಶ್ರೀನಿವಾಸ 'ರಂದರಂತೆ ಮಗುವಿನ ಮಾತಿನಲ್ಲಿಯ ಸೊಗಸು ಅದರ ವಿಷಯವನ್ನು ಮಾತ್ರವಲ್ಲ, ರೀತಿಯನ್ನೂ ಅವಲಂಬಿಸಿರಬೇಕಾಗಿತ್ತು.

ಗೋಪಾಲನೆಂಬೊಬ್ಬ ಚಿಕ್ಕಹುಡುಗ, ಆತನ ತಾಯಿ ತೀರ ಬಡವೆ, ದಿನವೂ ವೇಣುಗೋಪಾಲನನ್ನು ಪೂಜಿಸಿ ಆತನನ್ನೇ ನೆರೆನಂಬಿ ದಿನದ ಕಷ್ಟನಿಷ್ಠುರಗಳನ್ನು—ತಾಯಿ ತನ್ನ ಹಿರಿಯ ಮಗನೆದುರಿಗೆ ಆಡಿಕೊಳ್ಳುವಂತೆ ಅಡಿಕೊಳ್ಳುವಳು. ಆವಳ ಭಾವನೆಯುಂತೆ ನಟಿಸಲು ಆ 'ಕಪಟನಾಟಕ ಸೂತ್ರಧಾರ'ನೂ ಸಿದ್ಧ! ಗೋಪಾಲ (ಹುಡುಗ) ತನ್ನ ಹಿರಿಯಣ್ಣನಂತೆ ಆತನನ್ನು ಕಾಣುವನು, ತಾಯಿಯ ಭಾವನೆಯಲ್ಲಿ ತಿಲಮಾತ್ರವಾದರೂ ಅಶ್ರದ್ಧೆಯಿರಬಹುದು ಈತನ ಭಾವನೆ ಅಶ್ರದ್ಧೆಯ ಗಾಳಿ ಕೂಡ ತಾಕದಂತಹದು. ತಿಳಿವಿಗೆ ಸಿಲುಕದ ಶ್ರೀಕೃಷ್ಣನು ಒಲವಿಗೆ ಅಡಿಯಾಳು ! 'ಬನದ ಗೋಪಾಲ 'ನ ತಾಯಿಯ 'ಆತ್ಮನಿವೇದನ ' ಹಾಗು ಗೋಪಾಲನ 'ಸಖ್ಯ' (ಸಲಿಗೆ) ಇವುಗಳಿಗೆ ಮೆಚ್ಚಿ ಕಾಣುವನೇ ಹೊರತು ಗೋಪಾಲನ ತಿಳಿವುಳ್ಳ ಗುರುವಿಗೆ ಕಾಯ್ದುಕೋಡಿರಲು ಹೇಳುವನು. ಅಂತೂ ವಿಷಯವು ಬಹಳ ಚನ್ನಾಗಿ ಚಿತ್ರಿತವಾಗಿದೆ.

'ಸಾವಿರ ಮಳೆಬಿಲ್ಲುಗಳು ಕುಣಿದಾಡಿದಂತೆ ' ಕಂಡ ಬನಸಿರಿ, 'ಬಣ್ಣದಕಣ್ಣು' ತಲೆಯಲ್ಲಿಟ್ಟ ಬನದ ಗೋಪಾಲ, 'ನಿಂತ ನದಿ' 'ಕುಣಿದ ಕಲ್ಮರ' 'ಕಿವಿ ನಿಮಿರಿ ನಿಂತ ಜಿಂಕೆಗಳು ' 'ಕಟೆದ ಕಲ್ಲಿನಂತಿರುವ ತುರುವೃಂದ' 'ಮಲಯದೆಲರು ತಳಿರ ನಡುವೆ ಮೆಲಮೆಲನೆ ಸುಳಿಸುಳಿದು ನಲಿದಾಡುವ ' ಬೃಂದಾವನ ಇವೆಲ್ಲವುಗಳನ್ನು ಬಣ್ಣಿಸುವಾಗ ಕವಿಯ ಪ್ರಕೃತಿ ಪ್ರೇಮ ಕಾವ್ಯಪ್ರತಿಭೆಗಳು ಹೊರಹೊಮ್ಮಿವೆ.

ತಮ್ಮ ಕಿಟ್ಟು (?) ವಿಗೆ ಕೊಟ್ಟ ಈ ಅಂದವಾದ ತಿಂಡಿಯಲ್ಲಿ ಅಲ್ಲಲ್ಲಿ ಸಣ್ಣ ಹರಳುಗಳೂ ಇವೆ, ಹಲ್ಲಿಗೆ ಸಿಕ್ಕಾಗ ಬಲು ಆಯಾಸ ! ೧ನೆಯ ನೋಟದಲ್ಲಿ ಗೋಪಾಲನಾಡುವನು 'ಮನೆಗಿಂತ ಬನವೆ ಸೊಗಸಮ್ಮ, ನೀನಿಲ್ಲಿದ್ದರೆ(!)'; ಹೀಗೆ ಆಡುವಾಗ ಮನೆಯಲ್ಲಿರುವನು ! ಇಲ್ಲಿ ಅರ್ಥ ತಿಳಿಯುವದು ಬಲುಕಷ್ಟ ! ಇದೇ ನೋಟದ ಮತ್ತೊಂದೆಡೆಯಲ್ಲಿ ತಾಯಿಯಾಡಿದ ' ಪರಮಾತ್ಮ ! ನಾನು ಇದುವರೆಗೆ ಬಡವೆಯೆಂದು ತಿಳಿದಿರಲಿಲ್ಲ.... ಅವನಿಗೆ ಬಡತನದ ಸುದ್ದಿಯನ್ನು ತಿಳಿಸದೇ ಇದ್ದೆ ' ಎಂಬಲ್ಲಿ ಒಂದೇ ಮಾತಿನಲ್ಲಿ ಪರಸ್ಪರ ವಿರೋಧಾರ್ಥಗಳು ಕಂಡು ಬರುವವು. ೩ ನೇ ನೋಟದಲ್ಲಿ ತಾಯಿಯ ಪ್ರಾರಂಭದ ಮಾತಿನಲ್ಲಿಯ ನಿಪಾತಗಳ ಸುರಿಮಳೆಯು ಕೇಳುವವರನ್ನು ಕಿವುಡುಗೊಳಿಸುವಷ್ಟಿದೆ. ನಿಪಾತಗಳಿಲ್ಲದಿದ್ದರೂ ನಡೆಯುತ್ತಿತ್ತಲ್ಲವೇ ? ೫ ನೇ ನೋಟದಲ್ಲಿ ಗುರುಗಳು 'ತಾಯಿಯ ಮೇಲ್ಮೆ'ಯ ಬಗ್ಗೆ ವಿದ್ಯಾರ್ಥಿಗಳಿಗೆ ಮಾಡಿದ ಬೋಧನೆಯು ಚಿಕ್ಕಮಕ್ಕಳಿಗೆ ತಿಳಿಯಬಹುದೋ ಇಲ್ಲವೋ ಸಂಶಯ.

ಒಟ್ಟಾರೆ ಪುಸ್ತಕವು ಬಹಳ ಚೆನ್ನಾಗಿದೆ. ಚಿಕ್ಕಮಕ್ಕಳಿಗಾಗಿ ಹೆಚ್ಚಾಗಿ ನಾಟಕಗಳಿಲ್ಲದಿರುವಾಗ ಪುಟ್ಟಪ್ಪನವರು ತಮ್ಮ ಕಿರಿಯ ತಮ್ಮಂದಿರನ್ನು ಮೆಚ್ಚಿಸಲು ಬರೆದಿರುವರು. ಹೀಗೆಯೇ ಅವರು ಕಿರಿಯರ ಸೇವೆಗೆ ಆಗಾಗ ಮನಸ್ಸು ಹಾಕುತ್ತಿರಲೆಂದು ಬೇಡಿಕೆ. ಎಲ್ಲ ಹಿರಿಯರೂ ತಮ್ಮ ಕಿರಿಯರಿಗೆ ಈ ಪುಸ್ತಕವನ್ನು ಅಗತ್ಯವಾಗಿ ಓದಲು ಕೊಡಬೇಕು.

——o——

" ಎಲ್ಲೆಲ್ಲೂ ಹೀಗಾಗಬೇಕೇ ! " —( ಒಂದು ಸಣ್ಣ ಕಥೆ ) 'ಕಥಾಂಜಲಿ 'ಯಲ್ಲಿ ಪ್ರಕಟವಾದುದು. ಬರೆದವರು 'ಶಾರದಾ ' ಎಂಬವರು. ಜಯ ಕರ್ನಾಟಕದ ವಾಚಕರಿಗೆ ಪರಿಚಿತರಾದ ಕತೆಗಾರ ಕೆ. ಗೋಪಾಲಕೃಷ್ಣರಾಯರ ಸಹಧರ್ಮಿಣಿಯವರು. 'ವೆಂಕಮ್ಮನವರು ಗಂಡನನ್ನು ಪ್ಲೇಗಿನಲ್ಲಿ ಕಳಕೊಂಡ ಮೇಲೆ ಅವರ ಒಬ್ಬಳೇ ಒಬ್ಬ ಮಗಳ ಮದುವೆಯನ್ನು ಅವರ ಭಾವನವರು ( ಕತೆಗಾರ್ತಿಯ ಮಾವನವರು ) ಮಾಡುವರು. ಆದರೆ ಅಳಿಯನಿಗೆ ಉಡುಗರೆ ಚೆನ್ನಾಗಿ ಕೊಡಲಿಲ್ಲವೆಂದು ಭಾವನವರ ಮೇಲೆ ವೆಂಕಮ್ಮನವರು ಕೋಪಿಸಿಕೊಂಡರು. ಒಬ್ಬಂಟಿಗರಾದ ಅವರು ಎಲ್ಲಿಯೂ ಹೊಂದಿಕೊಂಡಿರದ ಚಂಚಲ ಸ್ವಭಾವದವರು. ಮುಂದೆ ಬೀಗರ ಮನೆಯಲ್ಲಿಯೂ ಇರಲಾರದೆ ಹೊರಟೆದ್ದು ಹೋಗುವರು. ಒಬ್ಬೊಂಟಿಗರಾದ ಇವರ ತಪ್ಪುಗಳೇನಿದ್ದರೂ ಅವನ್ನು ಮನ್ನಿಸಿ ಮುಂದಕ್ಕೆ ಕರೆಯುವ ಬಂಧುಗಳೊಬ್ಬರೂ ಇಲ್ಲ. ಇಂಥ ಹೊತ್ತಿನಲ್ಲಿ ಪುಣ್ಯಾತ್ಮರೊಬ್ಬರ ಸಹಾಯದಿಂದ ಅಮಲದಾರರೊಬ್ಬರ

ಮನೆಯಲ್ಲಿ ಅಡಿಗೇ ಮಾಡುವರು. ಆದರೆ ಇವರ ಹುಟ್ಟುಗುಣಕ್ಕನುಸರಿಸಿ ಅಲ್ಲಿಯೂ ಕೆಲಸ ಬಿಟ್ಟುಕೊಟ್ಟು ಕೈಯಲ್ಲಿ ಬಂದ ನಾಲ್ಕು ದುಡ್ಡಿನ ದಮ್ಮಿನ ಮೇಲೆ ಮಗಳನ್ನು ಊರಿಗೆ ಕರದೊಯ್ಯುವದಕ್ಕೆ ಅವಳ ಮನೆಗೆ ಹೋಗುವರು. ಒಳ್ಳೇ ಹೇವದ ಹೆಣ್ಣು ಮಗಳು. ಮಾತಿಗೆ ಮಾತು ಬೆಳೆದು ಅಳಿಯನೊಡನೆಯೂ ಅಳಿಯನ ಅಣ್ಣನೊಡನೆಯೂ ಅತ್ತಿಗೆಯೊಡನೆಯೂ ವಾದಿಸಿ ಊಟವನ್ನು ಮಾಡದೆ ಅಲ್ಲಿಂದ ಎದ್ದು ಹೋಗುವರು. ಮತ್ತೊಮ್ಮೆ ಮಗಳ ಮನೆಗೆ ಹೋಗುವರು. ಆದರೆ ಮಗಳನ್ನು ಮಾತನಾಡಿಸದೆ ಊರಿಗೆ ಹೊರಟು ಹೋಗುವರು. ಅಲ್ಲಿ ಕತೆಗಾರ್ತಿಗೂ ಇವರಿಗೂ ಭೆಟ್ಟಿಯಾದಾಗ ಸ್ವಾಭಿಮಾನದ ಮೂಲಕ ಏನೇನೋ ಸುಳ್ಳು ಹೇಳಿ ತಮಗೆ ಬೀಗರಲ್ಲಿ ಆದರಾತಿಥ್ಯವಾಯಿತೆಂದೂ ೨೦೦ ರೂ. ಗಳಿಸಿ ಮಗಳಿಗೆ ಚೈನು ಮಾಡಿಸಿಕೊಟ್ಟು ಬಂದೆವೆಂದೂ ಹೇಳುವರು. ಆದರೆ ನಿಜಸ್ಥಿತಿ ಮಾತ್ರ ಯಾರೂ ಅವರನ್ನು ಮುಂದಕ್ಕೆ ಕರೆಯಲಿಲ್ಲ; ಅವರು ಕರೆಯುವಂತೆ ಇವರ ಸ್ವಭಾವವಿರಲಿಲ್ಲ.' ಇದು ಕಥಾವಸ್ತು. ಡೆಮ್ಮೈ ೮ ಪುಟಗಳ ಇಷ್ಟು ಚಿಕ್ಕ ಕತೆಯಲ್ಲಿ ಕಥಾನಾಯಕಿ ವೆಂಕಮ್ಮ, ಕತೆಗಾರ್ತಿ, ವೆಂಕಮ್ಮನ ಅಳಿಯ ಅಳಿಯನ ಅಣ್ಣ ಮತ್ತು ಅತ್ತಿಗೆ ಹಾಗೂ ಒಬ್ಬ ಪೋಸ್ಟಮಾಸ್ತರ ಇಷ್ಟು ಪಾತ್ರಗಳು ಬಂದಿವೆ. ಕಥಾವಸ್ತುವಿನಲ್ಲಿ ನಡೆದ ಸಂಗತಿಗಳ ವರ್ಣನೆಯಿಂದಲೇ ಕಥಾಪಾತ್ರಗಳ ಸ್ವಭಾವ ಚಿತ್ರದ ರೂಪರೇಷೆಯನ್ನು ಬರೆಯುವದರಲ್ಲಿ ಶ್ರೀಮತಿಯವರ ಕೌಶಲ್ಯವಿದೆಯೆಂದು ಕಂಡು ಬರುವದು. ಈ ಕಥೆಯಲ್ಲಿ ಅದು ಗರ್ಭಿತವಾಗಿದ್ದರೂ ಅದು ಮುಂದೆ ಅಭಿವೃದ್ಧಿಯನ್ನು ಹೊಂದುವದರಲ್ಲಿ ಸಂದೇಹವಿಲ್ಲ.

**ಗೀರ್ವಾಣಭಾಷಾಪ್ರವೇಶ ಅಥವಾ ಗೀರ್ವಾಣ ವಾಣಿಯ ಗುರುತು:**— ಮಾಡಿಕೊಡುವವರು, ಶ್ರೀ. ವ. ಶ್ರೀ. ದೇಶಪಾಂಡೆ, ಅಥಣಿ. ಕ್ರೌನ ಸು. ೧೨೫ ಪುಟಗಳು ಬೆಲೆ ೧೨ ಆಣೆ.

ಸಂಸ್ಕೃತ ಭಾಷೆಯನ್ನು ಕಲಿಸುವ ಪುಸ್ತಕಗಳನ್ನು ಕನ್ನಡಿಗರು ಇದುವರೆಗೂ ಬರೆದಿರಲಿಲ್ಲವೆನ್ನಬಹುದು. ಮುಂಬೈ ಕರ್ನಾಟಕದಲ್ಲಿ ಭಾಂಡಾರಕರರ ಇಂಗ್ಲಿಷ ಪುಸ್ತಕದ ಕನ್ನಡ ಅನುವಾದವೇ ಇದುವರೆಗೆ ಇದ್ದ ಒಂದೇ ಒಂದು ಪುಸ್ತಕ. ಮೈಸೂರ ಮೊದಲಾದ ಕರ್ನಾಟಕದ ಇತರ ಭಾಗಗಳಲ್ಲಿಯೂ ಅದದ್ದು ನಮಗಂತೂ ಕಂಡುಬಂದಿಲ್ಲ. ಈ ಕೊರತೆಯನ್ನು ಕಳೆದುದಕ್ಕಾಗಿ ಶ್ರೀ. ದೇಶಪಾಂಡೆಯವರಿಗೆ ಕನ್ನಡಿಗರು ಕೃತಜ್ಞರಾಗಿರಬೇಕಾಗಿದೆ.

ವ್ಯಾಕರಣಪ್ರಧಾನವಾದ ಭಾಂಡಾರಕರರ ಕ್ಲಿಷ್ಟ ಪದ್ಧತಿಯನ್ನು ತ್ಯಜಿಸಿ ಸುಭಾಷಿತಗಳ ಸಹಾಯದಿಂದ ಇವರು ತಮ್ಮ ಹೊಸ ಪದ್ಧತಿಯನ್ನು ಏರ್ಪಡಿಸಿರುತ್ತಾರೆ. ತಮ್ಮ ಶಾಲೆಯಲ್ಲಿ ಇದರ ಪ್ರಯೋಗ ಮಾಡಿ ವಿದ್ಯಾರ್ಥಿಗಳಿಗೆ ರುಚಿಸುವಂತೆ ಆಯಿತೆಂದು ತಮ್ಮ ಅನುಭವವನ್ನು ಮುನ್ನುಡಿಯಲ್ಲಿ ಹೇಳಿದುದು ಯುಕ್ತವಾಗಿಯೇ ಇದೆ. 'ಮೊದಲು ಭಾಷೆ; ತರುವಾಯ ವ್ಯಾಕರಣ' ಎಂಬ ತತ್ವವನ್ನನುಸರಿಸಿ ಪುಸ್ತಕವು ಬರೆಯಲ್ಪಟ್ಟಿದೆ.

ಈ ಪುಸ್ತಕವು ಮೊದಲನೆಯ ವಿಭಾಗವಿದ್ದು ಇಂಗ್ಲಿಷ ೪ ನೆಯ ಇಯತ್ತೆಗೆ ಯೋಗ್ಯವಾಗಿದೆ. ಹೀಗೆಯೆ ಇನ್ನು ಮೂರು ಪುಸ್ತಕಗಳನ್ನು ೫-೬-೭ ನೆಯ ತರಗತಿಗಳಿಗಾಗಿ ಬರೆಯಬೇಕೆಂದಿರುವೆನೆಂದು ವಚನಕೊಟ್ಟಿದ್ದಾರೆ. ಸಕಲ ಕರ್ನಾಟಕಸ್ಥರು ಇದರ ಉಪಯೋಗ ಮಾಡಿಕೊಂಡರೆ ಮುಂದಿನ ೩ ಪುಸ್ತಕಗಳಿಗೆ ಅವಕಾಶವುಂಟಾಗುವದು. ಭಾಂಡಾರಕರ ಪುಸ್ತಕದ ವ್ಯಾಕರಣವೂ ಇದರಲ್ಲಿರುವದಲ್ಲದೆ ಸುಭಾಷಿತದ ಬೆಣ್ಣೆಯೂ ಇದರಲ್ಲಿದೆ.

ಬರೀ ಸುಭಾಷಿತಗಳೇ ಆದ್ದರಿಂದ ಬಾಲಕರಿಗೆ ಬೇಸರವಾಗಬಹುದೆಂದು ಕಡೆಗೆ ೨ ಕಥೆಗಳನ್ನೂ ಕೊಟ್ಟಿದ್ದಾರೆ. ಆದರೆ ಈ ಕಥಾಪ್ರಮಾಣವು ತೀರ ಸ್ವಲ್ಪವೇ ಸರಿ. ಮುಂದಿನ ಆವೃತ್ತಿಯಲ್ಲಿ ಪ್ರತಿಪಾಠಕ್ಕೂ ಒಂದೊಂದು ಪುಟ್ಟ ಕಥೆಯನ್ನು ಸೇರಿಸಬೇಕೆಂದು ಸೂಚಿಸುತ್ತೇವೆ.

ಪ್ರತಿಯೊಂದು ಪಾಠವನ್ನು ೧ ಸುಭಾಷಿತಗಳು. ೨ ಶಬಗಳು. ೩ ವ್ಯಾಕರಣ ವಿಶೇಷ. ೪ ಪರೀಕ್ಷೆ ಎಂದು ನಾಲ್ಕು ವಿಭಾಗಗಳಲ್ಲಿ ಕಲಿಸಿದುದು ಸಮಂಜಸವೇ ಸರಿ. 'ಪರೀಕ್ಷೆ'ಯ ವಿಭಾಗದಲ್ಲಿದ್ದ ಪ್ರಶ್ನೆಗಳಿಗೆ ಉತ್ತರಗಳನ್ನು ಪರಿಶಿಷ್ಟದಲ್ಲಿ ಕೊಟ್ಟರೆ ಮನೆಯಲ್ಲಿ ಸ್ವಸಹಾಯದಿಂದಲೇ ಕಲಿಯುವವರಿಗೂ ಉಪಯೋಗವಾಗುವದಾದ್ದರಿಂದ ಮುಂದೆ ಹಾಗೆ ಮಾಡಬೇಕೆಂದೂ ಸೂಚಿಸುತ್ತೇವೆ.

ಮುದ್ದಾದ ಬೆಂಗಳೂರಿನ ಮುದ್ರಣ. ಬೆಲೆಯು ಕಡಿಮೆಯೇ ಸರಿ. ಆದ್ದರಿಂದ ಎಲ್ಲ ಶಾಲೆಯವರೂ ಈ ಹೊಸ ಪದ್ಧತಿಯ ಪುಸ್ತಕವನ್ನು ತರಿಸಿ ಲೇಖಕರಂತೆ ಅನುಭವ ಪಡೆಯುವರೆಂದು ನಂಬಿದ್ದೇವೆ.

**ರಾಷ್ಟ್ರೀಯ ಧರ್ಮ ಪದ್ಯ ರತ್ನಾವಳಿ:**— ಶ್ರೀ. ವ್ಹಿ. ಸತ್ಯಾರ್ಥಿ, ಸಿದ್ಧಾಂತ ವಿಶಾರದ ಮುಂಬಯಿ ಇವರಿಂದ

ರಚಿತವಾದುದು. ಕಾಲೋಚಿತವಾದ ನಾಡಿನ ಹಾಡುಗಳು ಇದರಲ್ಲಿವೆ. ಶ್ರೀ. ಸತ್ಯಾರ್ಥಿಯವರಂಥ ಸಾಹಸಿಗಳ ಈ ಹಾಡುಗಳನ್ನು ದೇಶಪ್ರೇಮಿಗಳು ಒಮ್ಮೆಯಾದರೂ ಓದಬೇಕು. ನಗರ ಸಂಕೀರ್ತನಕ್ಕಾಗಿಯೂ ಇವುಗಳಲ್ಲಿ ಕೆಲವನ್ನು ಉಪಯೋಗಿಸಬಹುದು.

**ನಗರ ಸಂಕೀರ್ತನೆಯ ಪದ್ಯಗಳು**—ಬೆಲೆ ೧ ಆಣೆ, ಕನ್ನಡಿಗರ ಕೂಟದ ಸಾಹಿತ್ಯಶಾಖೆಯ ೩ನೆಯ ಪುಸ್ತಕವು. ೧೧ ಪದ್ಯಗಳಿದ್ದು ಕರ್ನಾಟಕದ ಹಾಗೂ ಭಾರತಮಾತೆಯ ವಿಷಯಕವಾಗಿ ಪ್ರೀತಿ, ಅಭಿಮಾನ, ವೀರಾವೇಶ ಮೊದಲಾದವುಗಳನ್ನು ಉದ್ದೀಪನೆ ಮಾಡುವ ಒಳ್ಳೇ ಹಾಡುಗಳಿವು. ಈಗಿನ ಕಾಲಕ್ಕೆ ಕಾಂಗ್ರೆಸ್ಸಿನವರು ಕೈಕೊಂಡ ನಗರ ಸಂಕೀರ್ತನೆಗಾಗಿ ಉಪಯುಕ್ತವಾದ ಹಾಡುಗಳಿವು. ಸಾಹಿತ್ಯ ಹಾಗೂ ರಾಷ್ಟ್ರ ಸಭೆಯ ಭಕ್ತರೆಲ್ಲರೂ ಈ ಹಾಡಿನ ಪುಸ್ತಕವನ್ನು ತರಿಸುವರೆಂದು ಆಶಿಸುತ್ತೇವೆ.

**ಪತಿವ್ರತೆ** ಲೇಖಕರು:—ಶ್ರೀ ವೆಂಕಟೇಶ ನರಸಿಂಗರಾವ ತಲವಾಯಿ, ಹೆಬ್ಬಳ್ಳಿ. ಪಾತಿವ್ರತ್ಯ ಪ್ರಭಾವದಲ್ಲಿ ನಮ್ಮ ತಾತ್ವಿಕ ವಿಶ್ವಾಸವಿದ್ದರೂ ಈ ಕಥೆಯು ನಮ್ಮ ನಂಬಿಗಸ್ತತನದ ಪರೀಕ್ಷೆಯನ್ನು ತಕ್ಕೊಳ್ಳುವದು. ಮಗನ ಜೀವ-ಗಂಡನ ನಿದ್ರೆ ಇವೆರಡರ ನಡುವೆ ಪ್ರಸಂಗಬಂದಾಗ ನಿದ್ದೆಗಾಗಿ, ಮಗನು ಬೆಂಕಿಯಲ್ಲಿ ಬೀಳುವದನ್ನು ಕಣ್ಣಾರೆ ಕಂಡು ಸುಮ್ಮನಿರುವವಳು ಅಮಾನುಷಳೇಸರಿ. ಆಹುತಿಯ ಯೋಗ್ಯತೆಗೆ ಒಪ್ಪುವಂತೆ ಧ್ಯೇಯವು ಸಾಧ್ಯವು ಉಚ್ಚವಾಗಿರಬೇಕು. ಇಲ್ಲವಾದರೆ ಯಜ್ಞವು ಮೂರ್ಖತನವೇ ಸರಿ.

**ಆಧುನಿಕ ಕನ್ನಡ ಕವಿತೆ** ಲೇಖಕರು:—ಸಂಗಪ್ಪ ಸಾಸನೂರ ಬಿ. ಎ., ಲಾ ಕಾಲೇಜ ಪುಣೆ. ಬೆಲೆ ೪ ಆಣೆ. ಡೆಕ್ಕನ್ ಕಾಲೇಜಿನ ನಿಬಂಧಸ್ಪರ್ಧೆಯಲ್ಲಿ ಬಹುಮಾನವನ್ನು ಪಡೆದ ಈ ಪ್ರಬಂಧವು ಶ್ರೀ ಬೇಂದ್ರೆಯವರ ಮುನ್ನುಡಿಯಿಂದಲೂ ಅಲಂಕೃತವಾಗಿದೆ. ಈ ಮುನ್ನುಡಿಯಲ್ಲಿ ಶ್ರೀ ಬೇಂದ್ರೆಯವರು ವಿಹಂಗಮದೃಷ್ಟಿಯಿಂದ ಆಧುನಿಕ ಕಾವ್ಯವನ್ನು ಅವಲೋಕಿಸಿದ್ದಲ್ಲದೆ ಈ ನಿಬಂಧದ ವಿಮರ್ಶೆಯನ್ನೂ ಅಲ್ಲಿಯೇ ಸೂಚಿಸಿದ್ದಾರೆ. ಈಗಿನ ಎಲ್ಲ ಕವಿಗಳ ವಿಚಾರವು ಇದರಲ್ಲಿ ಆಗಿಲ್ಲ. ಆದರೆ ಇಲ್ಲಿದ್ದ ಅನೇಕರ ಕಾವ್ಯ ನಿರೀಕ್ಷಣೆಯು ಲೇಖಕರಲ್ಲಿ ಸಹಜವಾಗಿದ್ದ ವಿಮರ್ಶಾಶಕ್ತಿಯನ್ನು ಸೂಚಿಸುತ್ತದೆ. ಅವರ ಕೆಲವು ಅಭಿಪ್ರಾಯಗಳು ಸರ್ವರಿಗೂ ಸಮ್ಮತವಾಗಲಾರವು. "Lead kindly light" ಇದನ್ನು "ದಾರಿದೋರು ಕರುಣಾಳು ಬೆಳಕೆ" ಎಂದು ಭಾಷಾಂತರಿಸುವದರಲ್ಲಿ ನಮಗಂತೂ ಏನೂ ನ್ಯೂನತೆ ಕಂಡು ಬರುವದಿಲ್ಲ. ಆದರೆ ವಿಮರ್ಶಕನು ನಿಜವಾಗಿ ತನಗೆ ಹೊಳೆದದ್ದನ್ನೇ ಹೇಳಿರುವನಲ್ಲದೆ ಕಲುಷಿತ ಮನಸ್ಸಿನಿಂದ ಅದನ್ನು ಹೇಳಿರುವದಿಲ್ಲ. ಇದೇ ದೃಷ್ಟಿಯಿಂದ ಅವರು ಮಾಡಿದ ಶ್ರೀನಿವಾಸ, ಅಂಬಿಕಾತನಯ ದತ್ತ, ಆನಂದಕಂದ, ಶ್ರೀ ಡಿ. ವ್ಹಿ. ಗುಂಡಪ್ಪ ಮುಂತಾದವರ ಕವಿತೆಗಳ ವಿಮರ್ಶೆಯು ಮನನೀಯವಾಗಿದೆ.

**ಭಾರ್ಗವಿ**:—ಲೇ. ದೇವಡು ನರಸಿಂಹಶಾಸ್ತ್ರಿ. ಪ್ರಕಾಶಕರು ತುಂಟರ ತಂಡ ಬೆಳಗಾಂವಿ. ಬೆಲೆ ೧ ಆಣೆ.

ಇದೊಂದು ಮನೋಹರವಾದ ಸಣ್ಣ ಕಥೆ. ಮಾಹಿಷ್ಮತಿ ಕುಮುದ್ವತಿ ನಗರಗಳ ವೈರವು ವಿಕ್ರಮನ ಪ್ರಾಣಾಹುತಿಯಿಂದ ಹೇಗೆ ಶಾಂತವಾಯಿತೆಂಬದು ಇಲ್ಲಿ ವರ್ಣಿತವಾಗಿದೆ. ಶಾಸ್ತ್ರಿಗಳ ಕಥಾನಕದಲ್ಲಿರುವ ಚಿತ್ತಾಕರ್ಷತೆಯೂ ಶೈಲಿಯಲ್ಲಿರುವ ಸರಳತನವೂ ಇಲ್ಲಿಯೂ ಇವೆ. ಆದರೆ ವಿಕ್ರಮನು ಭಾರ್ಗವಿಯನ್ನು 'ಭಾಗು' ಎಂದು ಕರೆಯುವದು ಸರಿಬೀಳುವದಿಲ್ಲ. ಕಥೆಯು ಕೊನೆಯಾದರೂ ಅಷ್ಟು ತೃಪ್ತಿಕರವಾಗಿಲ್ಲ.

**ಸತ್ಯಾಗ್ರಹ ವಿಜಯ**:—ಈ ಚಿಕ್ಕ ನಾಟಕವು ಕರ್ನಾಟಕ ಶಾರದಾ ಪುಷ್ಪಮಾಲೆಯ ೧ ನೇ ಪುಷ್ಪವು. ಇದರ ಲೇಖಕರು ಶೇಷಶರ್ಮಾ ಹೆಬ್ಬಾಳಕರ ಸುರಪುರ (ನಿಜಾಮ ಕರ್ನಾಟಕ) ಕಾರ್ಯದರ್ಶಿ ಕರ್ನಾಟಕ ಶಾರದಾ ವಾಚನಾಲಯ. ಲೇಖಕರ ಮೊದಲನೆ ಪ್ರಯತ್ನವು. ಇದರಲ್ಲಿ ಸತ್ಯಾಗ್ರಹದ ವಿಜಯವು ಹೇಗಾಗಿದೆಂಬ ಮಾತನ್ನು ಪ್ರಲ್ಹಾದನ ಚರಿತ್ರೆಯಿಂದ ಚಿಕ್ಕ ದೃಶ್ಯದ ರೂಪದಲ್ಲಿ ಹೇಳಿದೆ. "ನಿಃಶಸ್ತ್ರ ಜನಾಂಗಗಳ ಮೇಲೆ ಆಗುವ ಘೋರ ಅನ್ಯಾಯಗಳನ್ನು ತಡೆಯಲಿಕ್ಕೆ ಸತ್ಯಾಗ್ರಹದ ಹೊರ್ತು ಇನ್ನೊಂದು ಮಾರ್ಗವೇ ಇಲ್ಲ." ಎಂಬ ಮುನ್ನುಡಿಕಾರರಾದ ದಿವಾಕರರ ವಚನವನ್ನು ಈ ಚಿಕ್ಕ ನಾಟಕವು ಯಥಾರ್ಥಗೊಳಿಸಲು ಹವಣಿಸಿದೆ. ಇದರಲ್ಲಿ ೫ ನೋಟಗಳಿವೆ. ಸರಳ ಶೈಲಿಯಲ್ಲಿ ಬರೆದಿದೆ. ಬೆಲೆ ೧ ಆಣೆ.

**ಆನಂದಮಾಲೆಯ ೨ನೇ ಹೂವು**:— ಲೇಖಕರು ಆನಂದಕವಿ, ಕುರುಗುಂದ. ಪುಸ್ತಕ ದೊರೆಯುವ ಸ್ಥಳ ಅಜ್ಜಪ್ಪ ಮಂತ್ರಪ್ಪ ಮಂತ್ರಣ್ಣವರ. ಬುಕ್‌ಶೇಲರ. ಮುರಗೋಡ ಜಿಲ್ಹಾ ಬೆಳಗಾಂವ:—೨೨ ಪುಟಗಳುಳ್ಳ ಈ ಚಿಕ್ಕ ಪುಸ್ತಕದಲ್ಲಿ "ಚಹಾ ಚುಟ್ಟಾ ಮೊದಲಾದ ಕೆಟ್ಟ ಚಟಗಳ ಮೇಲೆ"

ಕವಿಯು ಸುಲಭ ಶೈಲಿಯಲ್ಲಿ ಕೆಲವು ನುಡಿಗಳನ್ನು ಬರೆದಿದ್ದಾನೆ. ಇದರಲ್ಲಿ ಕವಿಗೆ ತನ್ನ ಕವಿತಾಶಕ್ತಿಯನ್ನು ತೋರಿಸಲಿಕ್ಕೆ ಆಸ್ಪದ ವಿಲ್ಲ. ಕೆಲಕೆಲವು ಕವನಗಳ ಗಾನವೂ, ಪದಜೋಡಣಿಯೂ ಸುಲಭವಾಗಿಯೂ ಇಂಪಾಗಿಯೂ ಇವೆ. "ನಮ್ಮ ಊರು" ಎಂಬ ಪದ್ಯವು ಮನೋಹರವಾಗಿದೆ.

**ಗುಜರಾಥದ ಇತಿಹಾಸ ೧ನೇ ಭಾಗ:**— ಲೇಖಕರು: ರಾವಸಾಹೇಬ ಆರ್. ಕೆ. ಇನಾಮತಿ, ಜವಿೂನದಾರ ಅಣ್ಣಿಗೇರಿ. ಸಿಗುವ ಸ್ಥಳ:—ಶ್ರೀ ಶೇಷಾಚಲ ಗ್ರಂಥಮಾಲಾ, ಆನಂದವನ. ೮೦ ಪುಟಗಳುಳ್ಳ ಈ ಪುಸ್ತಕವು ಕೈ. ವಾ. ಸರದಾರ ರಾ. ಬ. ಗೋಪಾಳರಾವ ದೇಶಮುಖ ಇವರ ಮರಾಠಿ ಗ್ರಂಥದ ಕನ್ನಡ ರೂಪಾಂತರವು. ಗುಜರಾಥದ ಪ್ರಾಚೀನ ಇತಿಹಾಸವು ಉಜ್ವಲವೂ ಮನೋಹರವೂ ಆಗಿದೆ. ಅಲ್ಲದೆ ಈ ದೇಶವು ಕೆಲವು ಕಾಲದವರೆಗೆ ನಮ್ಮ ಕರ್ನಾಟಕದ ಚಾಲುಕ್ಯ ಸಮ್ರಾಟರ ವಶಕ್ಕೊಳಪಟ್ಟಿತ್ತಾದ್ದರಿಂದ ಇದರಲ್ಲಿ ಕನ್ನಡಿಗರ ಕೆಲವು ಶೌರ್ಯಸಾಹಸಗಳ ಕೃತ್ಯಗಳನ್ನೂ ಕಾಣಬಹುದು. ೭ನೇ ಶತಕದಿಂದ ೧೨ನೇ ಶತಮಾನದವರೆಗೆ ಗುಜರಾಥದಲ್ಲಿ ನಡೆದ ಚಾವಡಾ ಮುಂತಾದ ರಾಜಮನೆತನಗಳ ಇತಿಹಾಸವೂ ಚಾಲುಕ್ಯ ರಾಜನಾದ ಭೂವರನ ಕೂಡ ಬಂದ ಇವರ ಸಂಬಂಧವೂ ಇದರಲ್ಲಿ ವರ್ಣಿತವಾಗಿವೆ. ಕೆಲಕೆಲವು ಕಥೆಗಳ ಸಂಗತಿಗಳಂತೂ ಮೈಮೇಲೆ ರೋಮಾಂಚವನ್ನೇ ಹುಟ್ಟಿಸುವವು. ಭಾಷಾಂತರವಾದರೂ ಸುಲಭ ಮತ್ತು ಸರಳವಾದ ಶೈಲಿಯಲ್ಲಿಯೇ ಇರುವದು. ಇದರ ಬೆಲೆ ೬ ಆಣೆ.

**ಭೂಮಂಡಲದ ಸಹಕಾರೀ ಇತಿಹಾಸ:**— ಬರಹಗಾರ:— ಗೋವಿಂದ ಹಣಮಂತ ಚಂದರಗಿ ಧಾರವಾಡ. ಸಿಗುವ ಸ್ಥಳ:— ಕರ್ನಾಟಕ ಡಿವ್ಹಿಜನರಲ್ ಕೋ-ಆಪರೇಟಿವ್ಹ ಇನ್‌ಸ್ಟಿಟ್ಯೂಟ ಧಾರವಾಡ. ಬೆಲೆ ೦-೨-೦ ಈ ಚಿಕ್ಕ ಪುಸ್ತಕದಲ್ಲಿ ಯುರೋಪಖಂಡದ ಹತ್ತು ರಾಷ್ಟ್ರಗಳಲ್ಲಿ ಸಹಕಾರೀ ಚಳವಳಿಯು ಹೇಗೆ ಹುಟ್ಟಿತೆಂಬ ಸಂಗತಿಗಳನ್ನು ಸಂಕ್ಷಿಪ್ತದಲ್ಲಿ ಹೇಳಿದೆ. ಸಹಕಾರೀ ತತ್ವಗಳು ನಮ್ಮ ಕರ್ನಾಟಕದಲ್ಲಿಯಾದರೂ ಹಬ್ಬಬೇಕೆಂದು ಲೇಖಕರು ಹವಣಿಸುತ್ತಿರುವರು.

**'ರಂಗಭೂಮಿ':**—ಮುಖ್ಯಸಂಪಾದಕರು ಶ್ರೀ. ದ. ಕೃ. ಭಾರದ್ವಾಜ, ಬೆಂಗಳೂರು. ಚಂದಾ ಹಣ ೩-೮-೦ ಮಾತ್ರ. ಇದೀಗ ಪ್ರಾರಂಭವಾದ ೬ ನೆಯ ವರ್ಷದ ಮೊದಲಿನ ಎರಡು ಸಂಚಿಕೆಗಳು ಕೈಸೇರಿದಾಕ್ಷಣವೆ ಕಣ್ಣಿಗೆ ಸಂತೋಷವಾಯಿತು. ಬಹು ಮನೋಹರವಾದ ಮುದ್ರಣ. ಪ್ರತಿ ಪುಟಕ್ಕೂ ಬಣ್ಣದ ಅಂಚಿನ ಸುತ್ತುವಳಿ. ಎಂದಿನಂತೆ ಪ್ರತಿ ಸಲವೂ ಒಂದು ತ್ರಿವರ್ಣದ ಚಿತ್ರ. ೨ ನೆಯ ಸಂಚಿಕೆಯಲ್ಲಿ ಮಾತ್ರ ಕರ್ನಾಟಕದ ಶ್ರೇಷ್ಠಚಿತ್ರಕಾರರಾದ ವೆಂಕಟಪ್ಪನವರ 'ಮಹಾ ಶಿವರಾತ್ರಿ' ಎಂಬ ಒಂದೇ ವರ್ಣದ ಚಿತ್ರವಿದ್ದರೂ ಕನ್ನಡ ಚಿತ್ರಕಾರರ ಚಿತ್ರವಿದೆಯಲ್ಲಾ ಎಂದು ನಮಗೆ ಅತ್ಯಾನಂದವಾಯಿತು. ಭರತನ ನಾಟ್ಯಶಾಸ್ತ್ರವು ಕನ್ನಡದಲ್ಲಿ ಪರಿವರ್ತನವಾಗುತ್ತಿರುವುದು ಈ ವರ್ಷದ ವೈಶಿಷ್ಟ್ಯ. ರಂಗಭೂಮಿ ಹಾಗೂ ಲಲಿತ ಕಲೆಗಳ ವಿಚಾರಕ್ಕಾಗಿಯೇ ಮೀಸಲಾಗಿರುವ ಈ ಪತ್ರಿಕೆಯನ್ನು ಅಖಿಲ ಕರ್ನಾಟಕದವರೂ ಮುದ್ದಾಡುವದರಲ್ಲಿ ಸಂಶಯವಿಲ್ಲ. ಭಾರದ್ವಾಜರು ತಾವು ಕೈಕೊಂಡ ಯಾವ ಕೆಲಸವನ್ನೂ ಚಿತ್ತಾಕರ್ಷಕವಾಗಿ ಮಾಡುವದರಲ್ಲಿ ಜಾಣರು. ಇವರ ಸಂಪಾದಕತ್ವದಲ್ಲಿ 'ರಂಗಭೂಮಿ'ಯು ದಿನದಿನವೂ ಅಭಿವೃದ್ಧಿ ಹೊಂದಲೆಂದು ಬಂಧುವಿನ ನೂತನ ವರ್ಷಾರಂಭದ ನಿಮಿತ್ತವಾಗಿ ಆಶಿಸುತ್ತೇವೆ. ಬರುವ ದೀಪಾವಳಿಯಿಂದ ಇಂಗ್ಲಿಷ ಆವೃತ್ತಿಯೂ ಹೊರಡಲಿರುವದೆಂದೂ ಓದಿ ಇನ್ನಿಷ್ಟು ಸಂತೋಷವಾಯಿತು. ಕಡೆಗೊಂದೇ ಸೂಚನೆ. ನಟಶ್ರೇಷ್ಠರ ಭಾವಚಿತ್ರಗಳನ್ನು ಕೊಡುವ ಕಾಲಕ್ಕೆ ಅಭಿನಯದಲ್ಲಿ ಕೌಶಲ್ಯವಿದ್ದಂಥವುಗಳನ್ನೇ ಕೊಡಬೇಕು. ೧ ನೆಯ ಸಂಚಿಕೆಯಲ್ಲಿದ್ದ 'ಶ್ರೀ. ನಾಗೇಂದ್ರರಾಯರು (ಅಭಿಮನ್ಯು ಭೂಮಿಕೆಯಲ್ಲಿ)' ಈ ಭಾವಚಿತ್ರದಲ್ಲಿಯ ಅಭಿಮನ್ಯುವಿನ ಅಭಿನಯಕೌಶಲ್ಯವದೇನೋ ತಿಳಿಯದು. ಯಾವ ರಾಜಪುತ್ರನ ಹೆಸರೂ ಆ ಚಿತ್ರಕ್ಕೆ ನಡೆಯುವಂತಿದೆ.

1 The Results of years Shukla & Pramoduta; price As 8.

2 Astrological Mirror; price Re 1 by R. Suryanarayanrao, B.A., M.R.A.S. etc

ಇವೆರಡು ಪುಸ್ತಕಗಳು ಜ್ಯೋತಿಷ ಶಾಸ್ತ್ರದ ವಿಷಯವಾಗಿ ಪುರಾಣ ಪದ್ಧತಿಯಿಂದ ಹೇಳಬಯಸುತ್ತವೆ; ಆದರೆ ಭಾಷೆ ಮಾತ್ರ ಹೊಸದು. ೧ನೆಯ ಪುಸ್ತಕವು ಶುಕ್ಲ ಪ್ರಮೋದೂತ ಸಂವತ್ಸರಗಳ ಭವಿಷ್ಯವನ್ನೂಹಿಸಿ ಹೇಳಿದೆ. ಚಿಕ್ಕ ಪುಸ್ತಕವಾದರೂ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಹಣೇಬರಹವನ್ನು ಹೇಳಿದ್ದಾಗಿದೆ. ೨ನೆಯದರಲ್ಲಿ ದೈನಂದಿನ ಕರ್ತವ್ಯ ಕರ್ಮಗಳ ಬಗ್ಗೆ ಮಾಹಿತಿಯನ್ನು ಲೇಖಕರು ಹೇಳಿದ್ದಾರೆ. ಪ್ರವಾಸ್ಯ

ಕ್ಷೌರ ಮೊದಲಾದವುಗಳನ್ನು ಯಾವಾಗ ಕೈಕೊಳ್ಳಬೇಕೆಂಬು ದನ್ನು ಶಾಸ್ತ್ರೀಯ ರೀತಿಯಿಂದ ಹೇಳಬಹುದೆಂಬದನ್ನು ಲೇಖ ಕರು ತೋರಿಸಿದ್ದಾರೆ. ಸಂಸ್ಕೃತವನ್ನೋದಲು ಆಗದವರು ಈ ಪುಸ್ತಕಗಳನ್ನವಲೋಕಿಸಿ ಜ್ಯೋತಿಷ್ಯಶಾಸ್ತ್ರದಲ್ಲಿ ಅನುಭವಿಕ ರಾದ ಶ್ರೀ. ಸೂರ್ಯನಾರಾಯಣರಾಯರು ಇಂಗ್ಲಿಷ ಬಲ್ಲ ಜನ ರಿಗೆ ಆ ವಿಷಯವಾಗಿ ತಿಳಿಸಿದ್ದನ್ನು ವಿಚಾರಿಸಬೇಕು.

3 Description of the city of Vijayanagar; ಇದನ್ನಾದರೂ ಸೂರ್ಯನಾರಾಯಣರಾಯರು ಬರೆದಿದ್ದಾರೆ. Never-to-be-forgotten Empire (ಎಂದೂ ಮರೆಯದ ಹಿಂದೂ ಸಾಮ್ರಾಜ್ಯ) ಎಂಬ ಪುಸ್ತಕವನ್ನು ಬರೆದು ವಿಖ್ಯಾತರಾದವರು ಇದನ್ನು ಬರೆದಿರುವರೆಂದಮೇಲೆ ಬೇರೆ ಮಾತೇಕೆ ! ಅನೇಕ ಶಾಸ್ತ್ರಗಳಲ್ಲಿ ಪಾರಂಗತರಾದ ಈ ಜ್ಞಾನವೃದ್ಧರ ವಯೋವೃದ್ಧರ ಪುಸ್ತಕಗಳನ್ನು ಕನ್ನಡಿಗರು ಅವಲೋಕಿಸಬೇಕೆಂದು ನಮ್ಮ ಪ್ರಾರ್ಥನೆ. ಹಂಪೆಯನ್ನು ನೋಡುವವರಿಗೆ ಇದು ಬಹು ಬೆಲೆಯುಳ್ಳ ಕೈದೀವಿಗೆಯಾಗಿದೆ.

4 Rabindanath Tagore ಲೇಖಕರು ಶ್ರೀ. ಕೇಸರಿ ವಕೀಲ, ಧಾರವಾಡ. 'Great Indian Series' ದ ಮೊದಲನೇ ಪುಷ್ಪ. ಸ್ಫೂರ್ತಿಯನ್ನುಂಟು ಮಾಡುವ ಈ ಚಿಕ್ಕ ಚರಿತ್ರವು ಹುಡುಗರಿಗೆ ತಿಳಿಯುವ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಈ ಪುಷ್ಪ ಮಾಲಿಕೆಯ ಪುಷ್ಪಗಳು ತಮ್ಮ ಉದ್ದೇಶವನ್ನು ತುಂಬಾ ಸಾಧಿಸುತ್ತಲಿವೆ. ಇದರ ಬೆಲೆ ೦-೨-೦

5 Gopal Krishna Gokhale. ಲೇಖಕರು ಎಮ್. ಎಸ್. ಕೇಸರಿ ವಕೀಲ ಧಾರವಾಡ. Great Indian Series ದ ಎರಡನೇ ಪುಷ್ಪ. ಗೋಖಲೆಯವರ ಚರಿತ್ರವನ್ನು ಸುಲಭವಾದ ಶೈಲಿಯಲ್ಲಿ ಹುಡುಗರಿಗೆ ತಿಳಿಯುವದರ ಉದ್ದೇಶದಿಂದ ಬರೆದದ್ದು. ಈ ಚಿಕ್ಕ ಚರಿತ್ರೆಯಲ್ಲಿ ಅವರ ಜೀವನದ ಮುಖ್ಯ ಮಾತುಗಳೆಲ್ಲವೂ ಒಳಗೊಂಡಿರುವವು. ಇದರ ಬೆಲೆ ೦-೨-೦

6 Mahatma Gaudhi. ಲೇಖಕರು ಎಚ್. ವ್ಹಿ. ಶರ್ಮಾ ಬೆಲೆ ೦-೨-೦ ಸಿಗುವ ಸ್ಥಳ ಎಚ್. ದಾಸಪ್ಪಾ ಬ್ರದರ್ಸ 2/33 ಚಿಕ್ಕಪೇಟೆ ಬೆಂಗಳೂರ ಸಿಟಿ. ಸುಲಭವಾದ ಇಂಗ್ಲಿಷ ಭಾಷೆಯಲ್ಲಿ ಬರೆದ ಚರಿತ್ರೆಯ ಪುಸ್ತಕವಿದು.

# ಸಾದರ ಸ್ವೀಕಾರ

| | | |
|---|---|---|
| ಮಾನವನ ಕೈಪಿಡಿ ಅಥವಾ ಶಕ್ತಿಯ ಸಾಧನೆ. | ... | ಶ್ರೀ. ಶಂಕರ ನಾರಾಯಣ ಕಾರಂತ, ಮಂಗಳೂರು ಬೆಲೆ ( ೧-೪-೦ ) |
| | | ಭಕ್ತ ( ಕಿರಿಯರ ಪ್ರಪಂಚ ) ಮಂಗಳೂರು (೦-೨-೬) |
| ಸ್ವತಂತ್ರ ಜೀವನೋಪಾಯ | ... | ಶ್ರೀ. ಹರ್ಡೇಕರ ಮಂಜಪ್ಪನವರು, ಆಲಮಟ್ಟಿ (೦-೨-೦) |
| ವೀರಶೈವ ಮತಬೋಧೆ | ... | ,, ( ೦-೧-೬ ) |
| ಅಕ್ಕಮಹದೇವಿಯ ಕಥೆ | ... | ,, ( ೦-೧-೬ ) |
| ಏಕಲವ್ಯನ ಕಥೆ | ... | ,, ( ೦-೧-೬ ) |
| ಲಜಪತರಾಯರ ಚರಿತ್ರೆ | ... | ಶ್ರೀ. ಬ್ಯಾಳಿ ಕಲ್ಯಾಣಪ್ಪನವರು, ಆಲಮಟ್ಟಿ ( ೦-೧-೬ ) |
| ಪುಲಿಕೇಶಿಯ ಚರಿತ್ರೆ | ... | ಶ್ರೀ. ಬಂಡೆಪ್ಪ ಕೌಜಲಗಿ, ಧಾರವಾಡ ( ೦-೧-೦ ) |
| ಎಂ. ಎ. ( ಕಥೆ ) | ... | ಶ್ರೀ. ತುಕಾರಾಮ ಕೋಪರಡೆ, ಬನಹಟ್ಟಿ (೦-೧-೬) |
| ಅಸ್ಪೃಶ್ಯತೆಯು ( ಕವಿತೆ ) | ... | |
| ವಿನೋದರಂಜಿನಿ ಸಂಪುಟ ೧ ಸಂಚಿಕೆ ೮ ( ನವರಾತ್ರಿಯ ಸಂಚಿಕೆ ) | ... | ಸಂಪಾದಕರು ಶ್ರೀ. ಎಸ್. ವ್ಹಿ. ರಂಗರಾವ್, ಬೆಂಗಳೂರು ( ಚಂದಾ ೧ ರೂ. ಅಂಚೆ ಸಹಿತ) |

☞ ತಪ್ಪು ಒ — 'ಕರ್ನಾಟಕ ವಿಶ್ವವಿದ್ಯಾಲಯವು' ಎಂಬ ಲೇಖದಲ್ಲಿ (ಪುಟ ೭೮೦, ೨ನೆಯ ಅಂಕಣ, ಕೆಳಗಿನಿಂದ ೯ನೆಯ ಸಾಲು) 'ಕೆ... ಯುಳ್ಳದ್ದಾಗಿರಲು' ಎಂಬುದನ್ನು 'ಕೊರತೆಯುಳ್ಳದ್ದಾಗದಿರಲು' ಎಂದು ಓದಬೇಕು.

—ಸಂ. ಜ. ಕ.




Block No. ಜಾ. ೧.

# ಶ್ರೀ ಕಲ್ಯಾಣ.

## ಇದೊಂದು ಶೇಂಗಾ ಒಡೆ ಯುವ ಪಾವರ ಯಂತ್ರವು

## ಒಂದು ತಾಸಿನಲ್ಲಿ ೭೫ರಿಂದ ೮೦ ಚೀಲಗಳ ವರೆಗೆ ಶೇಂಗಾಗಳನ್ನು ಒಡೆಯುವುದು.

**ಈ ಯಂತ್ರದಲ್ಲಿಯ ವೈಶಿಷ್ಟ್ಯವು:—**

೧. ಕಾಳುಗಳನ್ನು ಒಡೆಯುವ ಮೊದಲು ಅವುಗಳಲ್ಲಿಯ ಹರಳು ಕಲ್ಲುಗಳನ್ನು ಹಸನಮಾಡುವದು

೨. ಕಾಳುಗಳು ಅಂಗೈಯಲ್ಲಿ ತಿಕ್ಕಿ ಒಡೆಯಲ್ಪಡುವಂತೆ ಒಡೆಯುವವು.

೩. ಇಂಜನ ಶಕ್ತಿ ಎರಡೂ ಯಂತ್ರಕ್ಕೂ ಕೂಡಿ ೭॥೮ ಅಶ್ವಶಕ್ತಿ ಸಾಕು.

ಇತ್ಯಾದಿ! ಇತ್ಯಾದಿ! ಇದೇ ಹಂಗಾಮಕ್ಕೆ!!

ಈ ಯಂತ್ರವನ್ನು ತರಿಸಿ ಅಖಂಡ ಲಾಭಮಾಡಿಕೊಳ್ಳಬಹುದು.

## ಕಿರ್ಲೋಸ್ಕರ ಬಂಧುಗಳು, ಲಿಮಿಟೆಡ್,

ಕಿರ್ಲೋಸ್ಕರವಾಡಿ ಜಿ. ಸಾತಾರಾ

